# ಋಗ್ವೇದಸಂಹಿತಾ

ಭಾಗ ೩೦

ಎಂಟನೆಯ ಅಷ್ಟಕದಲ್ಲಿ ಅಧ್ಯಾಯಗಳು– ೫–೮

ಹತ್ತನೆಯ ಮಂಡಲದ ಸೂಕ್ತಗಳು—೯೫–೧೯೧



ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೩೦

# RIG-VEDA

ಸಾ ಯ ಣ ಭಾ ಷ್ಯ ಸ ಮೇ ತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೩೦

ಎಂಟನೆಯ ಅಷ್ಟಕದ ಅಧ್ಯಾಯಗಳು —೫-೮

ಹತ್ತನೆಯ ಮಂಡಲದ ಸೂಕ್ತಗಳು—೯೫-೧೯೧



*Translated with Exhaustive and Critical Notes and Explanations*

*by*

**Asthana Mahavidwan**

**H. P. VENKATA RAO.**

***Editor.***



*Printed at*

SREE SHARADA PRESS,

MYSORE.

1955

Published by the gracious permission of

His Highness
Sri Jayachamarajendra Wadiyar Bahadur,
G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ. ಸಿ. ಎಸ್. ಐ ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ

Translator & Editor :

ಆಸ್ಥಾನ ಮಹಾವಿದ್ವಾನ್, H. P. ವೆಂಕಟರಾವ್

**ಸಹಾಯಕ ವಿದ್ವನ್ಮಂಡಲಿ**

1. ಬ್ರ॥ ಶ್ರೀ॥ G. N. **ಚಕ್ರವರ್ತಿ,** M. A.,
   Professor of Sanskrit. St. Philomina's College, Mysore.
2. ಬ್ರ॥ ಶ್ರೀ॥ G. **ವಿಷ್ಣುಮೂರ್ತಿಭಟ್ಟರು,** ಸಾಹಿತ್ಯ ವ್ಯಾಕರಣ ವಿದ್ವಾನ್,
   ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ, ಮೈಸೂರು.
3. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. **ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್
   ಮತ್ತು ಕರ್ಣಾಟಕ ಭಾಷಾಪಂಡಿತರು.
4. ಬ್ರ॥ ಶ್ರೀ॥ **ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
5. ಬ್ರ॥ ಶ್ರೀ॥ **ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತವಿದ್ವಾನ್.
6. ಬ್ರ॥ ಶ್ರೀ॥ M. S. **ವೆಂಕಟರಮಣಾಚಾರ್,** M.A., B.T., ಸಾಹಿತ್ಯವಿದ್ವಾನ್.
7. ಬ್ರ॥ ಶ್ರೀ॥ S. **ರಂಗನಾಥನ್,** ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ.
8. ಬ್ರ॥ ಶ್ರೀ॥ **ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯವಿದ್ವಾನ್,
   Govt. Oriental Research Institute, Mysore.
9. ಬ್ರ॥ ಶ್ರೀ॥ S. **ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು.
   Govt. Oriental Research Institute, Mysore.

## ಸಂಕೇತಾಕ್ಷರಗಳ ವಿವರಣೆಯು.

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ ಸೂ.—ಆಪಸ್ತಂಬಧರ್ಮಸೂತ್ರ
ಆಪ ಪ. ಸೂ—ಆಪಸ್ತಂಬಪರಿಭಾಷಾಸೂತ್ರ
ಆ. ಸೂ. ಅಥವಾ ಆ—ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ ಸಂ—ಋಗ್ವೇದಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಸೂ—ಜೈಮನೀಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ ಸಂ.—ತೈತ್ತಿರೀಯಸಂಹಿತಾ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ ಸೂ.—ಫಿಟ್‌ಸೂತ್ರ
ಬ್ರ. ಸೂ.—ಬ್ರಹ್ಮಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನುಸ್ಮೃತಿ
ಮೈ ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯಸ್ಮೃತಿ
ವಾ. ಸಂ.—ವಾಜಸನೇಯಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದಸಂಹಿತಾ
ಬೃ. ದೇ.—ಬೃಹದ್ದೇವತಾ

# ಪೀಠಿಕೆ



ಈ ಭಾಗದಲ್ಲಿ ಋಗ್ವೇದ ಸಂಹಿತೆಯ ಕೊನೆಯ ನಾಲ್ಕು ಅಧ್ಯಾಯಗಳು ಮುಗಿದು ಗ್ರಂಥವು ಸಮಾಪ್ತಿಯಾಗಿರುವುದು. ಮೊದಲನೆಯ ಭಾಗದ ಪೀಠಿಕೆಯಲ್ಲಿ ನಾವು ಸೂಚಿಸಿದ್ದಂತೆ ಈ ಮಹಾಗ್ರಂಥವು 25 ಸಾವಿರ ಪುಟಗಳನ್ನೊಳಗೊಂಡ ಮೂವತ್ತು ಭಾಗಗಳಲ್ಲಿ ಅಡಕವಾಗಿರುವುದು. ಸಮಸ್ತ ಸಂಸ್ಕೃತಿಗಳಿಗೂ, ಸಂಗೀತ ಸಾಹಿತ್ಯ ಮೊದಲಾದ ನಾನಾ ಶಾಸ್ತ್ರಗಳಿಗೂ, ವೇದಾಂತ ತತ್ತ್ವಗಳಿಗೂ ತಳಹದಿಯೆನಿಸಿರುವ ಈ ಋಗ್ವೇದದ ಪ್ರಾಧಾನ್ಯತೆಯು ಎಂತಹುದು ಎಂಬುದನ್ನು ಭಾರತೀಯರಾದ ನಮಗಿಂತಲೂ ಪಾಶ್ಚಾತ್ಯವಿದ್ವಾಂಸರೂ, ಸಂಶೋಧಕರೂ ಆದ ಬಹುಮಂದಿ ವಿದ್ಯಾಪರಿಣತರು ಚೆನ್ನಾಗಿ ಅರಿತಿರುವರೆಂದರೆ ಅತಿಶಯೋಕ್ತಿಯಲ್ಲ. ಪ್ರಪಂಚದಲ್ಲಿಯೇ ಅತಿಪ್ರಾಚೀನ ಗ್ರಂಥವೆಂದು ಪರಿಗಣಿಸಲ್ಪಟ್ಟಿರುವ ಋಗ್ವೇದವೂ ಮತ್ತು ಇತರವೇದಗಳೂ, ವೇದಸಾಹಿತ್ಯವೂ, ಉಪನಿಷತ್ತುಗಳೂ ಪ್ರಪಂಚದ ಸಮಸ್ತ ನಾಗರಿಕ ದೇಶಗಳ ಮನ್ನಣೆಯನ್ನೂ ಗೌರವವನ್ನೂ ಪಡೆದಿವೆ. ಆದರೆ ಇಂತಹ ಅಪೂರ್ವ ಮತ್ತು ಉಪಯುಕ್ತ ಗ್ರಂಥಗಳ ಸಂಶೋಧನೆ, ಪ್ರಕಟಣೆ ಮತ್ತು ಪ್ರಚಾರಗಳಲ್ಲಿ ಪಾಶ್ಚಾತ್ಯರಿಗಿಂತಲೂ ನಾವು ಮುಂದುವರೆದಿಲ್ಲ. ಇದಕ್ಕೆ ಮುಖ್ಯ ಕಾರಣವೇನೆಂದರೆ, ಈ ಪ್ರೌಢಗ್ರಂಥಗಳು ಸಂಸ್ಕೃತಭಾಷೆಯಲ್ಲಿದ್ದು ಸಾಮಾನ್ಯ ಜನರಿಗೆ—ಸಂಸ್ಕೃತಪಂಡಿತರಿಗೂ ಸಹ—ತಿಳಿದುಕೊಳ್ಳುವುದು ಕಷ್ಟವಾಗಿದೆ ಇದಕ್ಕೆ ಸರಿಯಾಗಿ ಈ ಗ್ರಂಥಗಳನ್ನು ದೇಶಭಾಷೆಗಳಲ್ಲಿ, ಸರಳಶೈಲಿಯಲ್ಲಿ ವಿಮರ್ಶಾತ್ಮಕವಾಗಿಯೂ, ಆಧುನಿಕವಿಜ್ಞಾನ ಮತ್ತು ಸಾಹಿತ್ಯಕ್ಕೆ ಅನುಸಾರವಾಗಿಯೂ ಅರ್ಥಾನುವಾದ ಸಹಿತವಾಗಿರುವ ಗ್ರಂಥಗಳ ಅಭಾವವೇ ಮುಖ್ಯಕಾರಣವೆಂದು ಬೇರೆ ಹೇಳಬೇಕಾಗಿಲ್ಲ.

ಈ ಋಗ್ವೇದದ ಪ್ರಾಚೀನ ಕೈಬರಹದ ಪ್ರತಿಗಳನ್ನು ಚೆನ್ನಾಗಿ ಪರಿಶೋಧಿಸಿ ದೇವನಾಗರಿಲಿಪಿಯಲ್ಲಿ ಸರ್ವರಿಗೂ ಉಪಯೋಗವಾಗುವಂತೆ ಇಂಗ್ಲೆಂಡ್ ದೇಶದಲ್ಲಿ ಮೊದಲು ಮುದ್ರಿಸಿದವರು ಜರ್ಮನೀದೇಶದ Pro. Maxmuller ಎಂಬ ಪಾಶ್ಚಾತ್ಯ ಘನವಿದ್ವಾಂಸರು ಈ ಗ್ರಂಥವು ದೇವನಾಗರೀ ಲಿಪಿಯಲ್ಲಿದ್ದು ಸ್ವರಸಹಿತವಾದ ಸಂಹಿತಾ ಮತ್ತು ಪದಪಾಠಗಳನ್ನೂ, ಪ್ರತಿ ಋಕ್ಕಿಗೂ ಪ್ರತ್ಯೇಕವಾಗಿ ಸಾಯಣಭಾಷ್ಯವನ್ನೂ ಒಳಗೊಂಡಿದೆ. ಶುದ್ಧಪಾಠವನ್ನೊಳಗೊಂಡ ಈ ಪ್ರತಿಯ ಆಧಾರದಿಂದಲೇ ಇತರ ಪಾಶ್ಚಾತ್ಯ ವಿದ್ವಾಂಸರೂ, ಭಾರತೀಯ ವಿದ್ವಾಂಸರೂ ಅನೇಕ ಸಂಶೋಧನೆಗಳನ್ನು ನಡೆಸಿದಾರೆ. ಅಲ್ಲಿಂದೀಚೆಗೆ ಬೊಂಬಾಯಿನಲ್ಲಿಯೂ, ಕಲ್ಕತ್ತಾನಗರದಲ್ಲಿಯೂ ಸಾಯಣಭಾಷ್ಯಸಹಿತವಾದ ಋಗ್ವೇದವು ಅಚ್ಚಾಗಿದೆ. ಆದರೆ ಅವು ಬಹುಕಾಲದ ಹಿಂದೆ ಅಚ್ಚಾಗಿ ಪ್ರತಿಗಳು ತೀರಿಹೋಗಿರುವುದರಿಂದ ಅವು ಈಗ ದೊರೆಯುವುದಿಲ್ಲ. ಈಚೆಗೆ ಎಂದರೆ 1933 ನೇ ಇಸವಿಯಲ್ಲಿ ಪೂನಾ ನಗರದ ವೈದಿಕ ಸಂಶೋಧನಾ ಮಂಡಲದವರು ಸಾಯಣಭಾಷ್ಯಸಹಿತವಾದ ಋಗ್ವೇದವನ್ನು ಮುದ್ರಿಸಲು ಪ್ರಾರಂಭಮಾಡಿ 1946 ರಲ್ಲಿ ನಾಲ್ಕು ಭಾಗಗಳಲ್ಲಿ ಮುಗಿಸಿರುವರು ಈಗ ಸಾಧಾರಣವಾಗಿ ದೊರೆಯುವುದೇ ಈ ಗ್ರಂಥವು. ಈ ನಾಲ್ಕು ಭಾಗಗಳ ಕ್ರಯವು ಸುಮಾರು 100 ರೂಪಾಯಿಗಳು

ಮೇಲೆ ಹೇಳಿದ ಗ್ರಂಥಗಳಲ್ಲಿ ಸ್ವರಸಹಿತವಾಗಿ ಋಗ್ವೇದಸಂಹಿತೆಯೂ, ಪದಪಾಠವೂ, ಸಾಯಣಭಾಷ್ಯವೂ ಮುದ್ರಿತವಾಗಿವೆ. ಇವುಗಳಲ್ಲಿ ವಿಮರ್ಶೆಯಾಗಲಿ, ಅರ್ಥವಿವರಣೆಯಾಗಲಿ ಇರುವುದಿಲ್ಲ. Wilson ಎಂಬ ಪಾಶ್ಚಾತ್ಯಪಂಡಿತನು ಸಾಯಣಭಾಷ್ಯವನ್ನೇ ಅನುಸರಿಸಿ ಆಂಗ್ಲಭಾಷೆಯಲ್ಲಿ ಮೂಲವನ್ನು ಮಾತ್ರ ಭಾಷಾಂತರ

ಮಾಡಿದಾನೆ. ಅಲ್ಲಲ್ಲಿ ಕೆಲವು ಟೀಕಾಟಿಪ್ಪಣಿಗಳನ್ನು ಬಿಟ್ಟರೆ ವಿಸ್ತಾರವಾದ ವಿವರಣೆಯಾಗಲಿ, ವಿಮರ್ಶೆಯಾಗಲಿ ಇರುವುದಿಲ್ಲ. ಆದರೂ ಈ ಗ್ರಂಥವು ವಿದ್ಯಾರ್ಥಿಗಳಿಗೂ ಇತರರಿಗೂ ಉಪಯುಕ್ತವಾಗಿದೆ. ಪೂನಾನಗರದಲ್ಲಿ ಅನೇಕ ವರ್ಷಗಳ ಹಿಂದೆ ಕೆಲವರು ವೇದಾರ್ಥಯತ್ನವೆಂಬ ಹೆಸರಿನಲ್ಲಿ ಋಗ್ವೇದವನ್ನು ಸಂಹಿತಾ, ಪದಪಾಠ, ಮರಾಠೀ ಭಾಷೆಯಲ್ಲಿ ವಿವರಣೆ ಸಹಿತವಾಗಿ ಮುದ್ರಿಸಿರುತ್ತಾರೆ. ಆದರೆ ಈ ಗ್ರಂಥವು ಪೂರ್ತಿಯಾಗದೆ ಮೂರನೇ ಅಷ್ಟಕದವರೆಗೆ ಮಾತ್ರ ಪ್ರಿಂಟಾಗಿ ನಿಂತುಹೋಗಿರುತ್ತೆ. ಈ ಗ್ರಂಥದಲ್ಲಿ ಪ್ರತಿ ಋಕ್ಕಿನ ವಿವರಣೆ ವಿಮರ್ಶೆಗಳು ಸ್ವಲ್ಪಮಟ್ಟಿಗೆ ಇದ್ದರೂ ಅವು ಸಾಲದೆಂದೇ ಹೇಳಬೇಕು. ಕಲ್ಕತ್ತಾನಗರದಲ್ಲಿ ಸತೀಶ ಚಂದ್ರಸೀಲ್, M.A., B.L, ಎಂಬುವರ ನೇತೃತ್ವದಲ್ಲಿ ಋಗ್ವೇದವು, ಸಂಹಿತೆ, ಪದಪಾಠ, ಸಾಯಣಭಾಷ್ಯ, ಸಂಸ್ಕೃತಭಾಷೆಯಲ್ಲಿಯೂ, ಆಂಗ್ಲ ಭಾಷೆಯಲ್ಲಿಯೂ ವಿಸ್ತಾರವಾಗಿ ವಿವರಣೆ, ವಿಮರ್ಶೆ, ಹಿಂದೀ ಮತ್ತು ಬಂಗಾಲೀ ಭಾಷಾಂತರ ಇತ್ಯಾದಿ ನಾನಾ ಉಪಯುಕ್ತ ವಿಷಯಗಳ ಸಹಿತವಾಗಿ ಸರ್ವ ಜನೋಪಯುಕ್ತವಾಗಿರುವಂತೆ ಸಂಚಿಕೆಗಳಲ್ಲಿ ಮುದ್ರಿಸಲ್ಪಟ್ಟಿದೆ. ಆದರೆ ಈ ಗ್ರಂಥದ ಮುದ್ರಣವೂ ಸಹ ೫ ಸಂಚಿಕೆಗಳಲ್ಲಿಯೇ (೧ ಅಧ್ಯಾಯ ಸಹ ಪೂರ್ತಿಯಾಗಿಲ್ಲ) ನಿಂತುಹೋಗಿದೆ. ಈರೀತಿ ಗ್ರಂಥಗಳ ಮುದ್ರಣವು ನಿಂತುಹೋಗಬೇಕಾದರೆ ದ್ರವ್ಯಾಭಾವವೇ ಕಾರಣವೆಂದು ಊಹಿಸಬಹುದು. ಈ ಗ್ರಂಥಗಳನ್ನು ಬಿಟ್ಟರೆ ದೇಶಭಾಷೆಗಳಲ್ಲಿ ವೇದವನ್ನು ಭಾಷಾಂತರ ಮತ್ತು ವಿಮರ್ಶಾತ್ಮಕವಾಗಿ ಮುದ್ರಿಸುವ ಪ್ರಯತ್ನವು ನಡೆದಿಲ್ಲವೆಂದೇ ಹೇಳಬೇಕು. ಇದಲ್ಲದೆ ಇಂಗ್ಲಿಷ್ ಭಾಷೆಯಲ್ಲಿ Pro. Maxmuller ರವರ ನೇತೃತ್ವದಲ್ಲಿ Sacred Books of the East ಎಂಬ ಗ್ರಂಥಮಾಲೆಯಲ್ಲಿ ಪಾಶ್ಚಾತ್ಯ ಪಂಡಿತರಿಂದ ವೇದಸಾಹಿತ್ಯಕ್ಕೆ ಸಂಬಂಧಪಟ್ಟ ಅನೇಕ ಗ್ರಂಥಗಳೂ ಅವುಗಳ ಭಾಷಾಂತರಗಳೂ ಮುದ್ರಿತವಾಗಿವೆ. ಅಮೇರಿಕದ Harward University Series ಎಂಬ ಗ್ರಂಥಮಾಲೆಯಲ್ಲಿಯೂ, Oxford University Press Series ಎಂಬ ಗ್ರಂಥಮಾಲೆಯಲ್ಲಿಯೂ, ಪಾಶ್ಚಾತ್ಯ ವಿದ್ವಾಂಸರಿಂದ ಪ್ರಕಟಿತವಾದ ಅನೇಕ ವೈದಿಕ ಗ್ರಂಥಗಳೂ, ಸಾಹಿತ್ಯ ಗ್ರಂಥಗಳೂ ಇರುವವು. ಜರ್ಮನ್ ಮತ್ತು ಫ್ರೆಂಚ್ ಭಾಷೆಯಲ್ಲಿಯೂ ಸಹ ವಿಮರ್ಶೆ, ವಿವರಣೆ ಸಹಿತವಾದ ಅನೇಕ ವೇದಗ್ರಂಥಗಳು ಪ್ರಕಟವಾಗಿವೆ.

ಈ ವಿಧವಾದ ವೇದಗ್ರಂಥಗಳ ಅಥವಾ ಪ್ರೌಢಗ್ರಂಥಗಳ ಭಾಷಾಂತರ ಮತ್ತು ಪ್ರಕಟನೆಗಳು ಸರ್ಕಾರದವರ ಅಥವಾ ವಿಶ್ವವಿದ್ಯಾನಿಲಯಗಳ ಉದಾರವಾದ ಪ್ರೋತ್ಸಾಹ ಮತ್ತು ಸಹಾಯವಿಲ್ಲದೆ ಸಾಧ್ಯವಿಲ್ಲವೆಂಬ ವಿಷಯವು ಎಲ್ಲರಿಗೂ ತಿಳಿದೇ ಇದೆ. Pro. Maxmuller ರವರು ಮೊದಲು ಪ್ರಕಟಿಸಿದ (First Edition) ಭಾಷ್ಯಸಹಿತವಾದ ಋಗ್ವೇದಕ್ಕೆ East India Company ಯವರ ಉದಾರವಾದ ದ್ರವ್ಯಸಹಾಯವು ದೊರೆಯಿತು. ಎರಡನೇ ಆವೃತ್ತಿ ಮುದ್ರಣಕ್ಕೆ (Second Edition) ವಿಜಯನಗರದ ಮಹಾರಾಜರವರ ಉದಾರಾಶ್ರಯವು ದೊರೆತಿತ್ತು. ಅಮೇರಿಕ, ಜರ್ಮನಿ ಮೊದಲಾದ ಪಾಶ್ಚಾತ್ಯದೇಶಗಳಲ್ಲಿಯೂ ಇಂತಹ ಗ್ರಂಥಮುದ್ರಣಕ್ಕೆ ಸರ್ಕಾರದವರ ಸಹಾಯ ಇದ್ದೇ ಇದೆ. ಈ ದೇಶದಲ್ಲೂ ಅನೇಕಸಂಸ್ಥಾನಗಳ ರಾಜಮಹಾರಾಜರುಗಳು ಸಂಸ್ಕೃತಗ್ರಂಥಪ್ರಕಟನೆಗೆ ಮಾಡಿರುವ ಸಹಾಯವೂ ಪ್ರೋತ್ಸಾಹವೂ ಕಡಿಮೆಯೇನಲ್ಲ. ಬರೋಡ, ಇಂದೂರು, ಕಾಶ್ಮೀರ, ಕಾಶಿ, ತಿರುವಾಂಕೂರು ಮೊದಲಾದ ಸಂಸ್ಥಾನಗಳ ಮಹಾರಾಜರುಗಳೂ ಮತ್ತುಅವರ ಸರಕಾರಗಳೂ ತಮ್ಮದೇ ಆದ ಗ್ರಂಥಮಾಲೆಗಳಲ್ಲಿ ಅನೇಕ ಗ್ರಂಥಗಳ ಪ್ರಕಟನೆಗೆ ಅವಕಾಶಕೊಟ್ಟು ಸಂಸ್ಕೃತಗ್ರಂಥಗಳ ಅಭಿವೃದ್ಧಿಗೆ ಬಹಳವಾಗಿ ಸಹಾಯಮಾಡಿರುವರು. ಮೈಸೂರು ದೇಶದಲ್ಲಿಯೂ ಓರಿಯಂಟಲ್ ಲೈಬ್ರರಿ (ಈಗ Oriental Research Institute) ಎಂಬ ಸಂಸ್ಥೆಯ ಮೂಲಕ, ಭಟ್ಟಭಾಸ್ಕರಮಿಶ್ರಭಾಷ್ಯ ಸಹಿತವಾದ ತೈತ್ತಿರೀಯಸಂಹಿತಾ ಎಂಬ ಕೃಷ್ಣಯಜುರ್ವೇದವನ್ನೂ ಇತರ ಸೂತ್ರಗ್ರಂಥಗಳನ್ನೂ ಪ್ರಕಟಿಸಿದಾರೆ. ಆದರೆ ಆ ಕಾರ್ಯವು ಈಗ ಮಂದಗತಿಯಿಂದ ಸಾಗುತ್ತಿದೆ.

ಆವಗೆ ಹತ್ತು ವರ್ಷಗಳಿಂದೀಚೆಗೆ ನಮ್ಮನ್ನಾಳುವ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ.** ಪ್ರಭುವರ್ಯರವರ ನೇತೃತ್ವದಲ್ಲಿ ಅವರ ಉದಾರವಾದ ಪ್ರೋತ್ಸಾಹ ಸಹಾಯಗಳಿಂದ ಇದುವರೆಗೂ ಸಂಸ್ಕೃತದಲ್ಲಿ ಮಾತ್ರವಿದ್ದು ಕರ್ಣಾಟಕ ಮತ್ತು ಇತರ ದೇಶಭಾಷೆಗಳಲ್ಲಿ ಪ್ರಕಟವಾಗದಿದ್ದ ಅನೇಕ ಉತ್ಕೃಷ್ಟಗ್ರಂಥಗಳು ಕರ್ನಾಟಕಭಾಷೆಗೆ ಭಾಷಾಂತರಿಸಲ್ಪಟ್ಟು ಶ್ರೀಜಯಚಾಮರಾಜೇಂದ್ರಗ್ರಂಥಮಾಲಾ ಎಂಬ ಅಭಿಧಾನದಿಂದ ಪ್ರಕಟಿಸಲ್ಪಟ್ಟಿರುವುದು ಅತ್ಯಂತ ಪ್ರಶಂಸನೀಯವಾದ ಸಂಗತಿಯಾಗಿದೆ. ಈ ಗ್ರಂಥಮಾಲೆಯಲ್ಲಿ ೧೮ ಪುರಾಣಗಳೂ, ೧೮ ಉಪಪುರಾಣಗಳೂ, ವಾಸಿಷ್ಠರಾಮಾಯಣ, ಅದ್ಭುತರಾಮಾಯಣ, ಶಂಕರಸಂಹಿತೆ, ಹಾಲಾಸ್ಯ ಮಾಹಾತ್ಮ್ಯೆಮುಂತಾದ ಗ್ರಂಥಗಳೂ, ಅರ್ಥಾನುವಾದಸಹಿತವಾದ ಋಗ್ವೇದಸಂಹಿತಾ,ಮಹಾಪೂಜಾಕಲ್ಪ,ಗಾಯತ್ರೀ-ಜಪವಿಧಿ, ಶಿವಪೂಜಾವಿಧಿ, ದಕ್ಷಿಣಾಮೂರ್ತಿಜಪವಿಧಾನ, ರುದ್ರಮಹನ್ಯಾಸ, ಮುಂತಾದ ಅನೇಕವೈದಿಕಗ್ರಂಥಗಳೂ, ಶಂಕರಾಚಾರ್ಯಕೃತ ಅನೇಕ ಸ್ತೋತ್ರಗಳೂ, ಇನ್ನೂ ಇತರ ನೂರಾರು ಗ್ರಂಥಗಳೂ ಅರ್ಥಸಹಿತ ಮುದ್ರಿಸಲ್ಪಟ್ಟಿವೆ. ಸುಮಾರು ೫೦ ವರ್ಷಗಳಲ್ಲಿಯೂ ಸಾಧಿಸಲಾಗದ ಅಸಂಖ್ಯಾತ ಗ್ರಂಥಗಳ ಭಾಷಾಂತರ ಮತ್ತು ಮುದ್ರಣ ಕಾರ್ಯಗಳನ್ನು ಮಹಾಪ್ರಭುವರ್ಯರ ನೇತೃತ್ವದಲ್ಲಿ ಕೇವಲ ೧೦ ವರ್ಷಗಳ ಅವಧಿಯೊಳಗೆ ಮುಗಿಸಲಾಗಿದೆ. ಪ್ರಭುವರ್ಯರಿಗೆ ವೈದಿಕಗ್ರಂಥಗಳಲ್ಲಿಯೂ ಸಾಹಿತ್ಯದಲ್ಲಿಯೂ, ವೇದಾಂತಗ್ರಂಥಗಳಲ್ಲಿಯೂ ಇರುವ ಅತಿಶಯವಾದ ಆಸಕ್ತಿಯೂ, ಪಾಂಡಿತ್ಯವೂ, ಈ ಸದ್ಗ್ರಂಥಗಳ ಪ್ರಯೋಜನವು ಇತರರಿಗೂ ಆಗಲೆಂಬ ಘನವಾದ ಸದುದ್ದೇಶವೂ ಈ ವಿಧವಾದ ಕಾರ್ಯಸಾಧನೆಗೆ ಸಹಾಯವಾಗಿದೆ. ಈ ಕಾರ್ಯಗಳೆಲ್ಲವೂ ಅನೇಕ ಆಸ್ಥಾನವಿದ್ವಾಂಸರ ಮತ್ತು ಇತರ ಪಂಡಿತರ ಸಹಾಯದಿಂದ ನಡೆದರೂ ಪ್ರಭುವರ್ಯರ ಅದ್ವಿತೀಯವಾದ ಪಾಂಡಿತ್ಯವೂ ಅಮೂಲ್ಯವಾದ ಸಲಹೆಯೂ, ತಮ್ಮ ಆಶ್ರಯದಿಂದ ಅಚ್ಚಾದ ಸಮಸ್ತ ಗ್ರಂಥಗಳನ್ನು ಆಮೂಲಾಗ್ರವಾಗಿ ಓದಿ ವಿಮರ್ಶೆಮಾಡಿ ಯಾವ ವಿಷಯಗಳನ್ನು ಎಲ್ಲಿ ಹೇಗೆ ಸೇರಿಸಿ ಯಾವರೀತಿ ಬರೆಯಬೇಕೆಂಬ ಸಲಹೆಗಳನ್ನು ಕೊಡುವ ಆಸಕ್ತಿಯೂ ಮನೋಭಾವವೂ, ಗ್ರಂಥಗಳು ಬೇಗನೆ ಪ್ರಕಟವಾಗಲು ಮುಖ್ಯಕಾರಣವಾಗಿದೆ. ಇದೇ ರೀತಿ ಪ್ರಭುವರ್ಯರ ಉದಾರಾಶ್ರಯದಲ್ಲಿ ಉಳಿದ ಮೂರು ವೇದಗಳೂ ಇತರ ಅಮೂಲ್ಯಗ್ರಂಥಗಳೂ ಬೇಗನೆ ಪ್ರಕಟವಾಗುವುದೆಂಬ ನಿರೀಕ್ಷೆಯು ವ್ಯರ್ಥವಾಗಲಾರದು. ಇದೇ ಸಂದರ್ಭದಲ್ಲಿ ನಮ್ಮಘನಸರ್ಕಾರದವರು ನೀಡಿದ ನೆರವೂ ಸ್ತುತ್ಯವಾದ ಅಂಶವಾಗಿದೆ.

ಪ್ರಕೃತ ಗ್ರಂಥವಾದ ಋಗ್ವೇದಸಂಹಿತೆಯ ಅರ್ಥಾನುವಾದಕ್ರಮವನ್ನು ನಾವು ಹೇಗೆ ಬರೆದಿದ್ದೇವೆ ಎಂಬುದನ್ನು ಇಲ್ಲಿ ಸೂಕ್ಷ್ಮವಾಗಿ ಪ್ರಸ್ತಾಪಿಸುವುದು ಅಪ್ರಕೃತವಾಗಲಾರದು. ಮೊದಲನೆಯ ಭಾಗದಲ್ಲಿ ಪೀಠಿಕಾ ರೂಪವಾಗಿ ವೇದಗಳಿಗೆ ಸಂಬಂಧಪಟ್ಟ ಅನೇಕವಿಷಯಗಳನ್ನು ವಿವರಿಸಲಾಗಿದೆ; ವೇದಗಳು, ವೇದಗಳ ಪ್ರಾಧಾನ್ಯತೆ, ಅವುಗಳ ಉಪಯೋಗ, ವೇದವಿಭಾಗಗಳು, ವೇದಭಾಷ್ಯಗಳು, ವೇದಭಾಷ್ಯಕರ್ತೃಗಳು, ಪ್ರತಿವೇದಕ್ಕೂ ಇರುವ ಬ್ರಾಹ್ಮಣ ಗ್ರಂಥ, ಆರಣ್ಯಕ, ಉಪನಿಷತ್ತು, ಪದಪಾಠ, ಅನುಕ್ರಮಣಿಕೆ, ಋಷಿಗಳು, ಛಂದಸ್ಸುಗಳು, ನಿರುಕ್ತ ನಾನಾ ದೇವತೆಗಳು, ಆ ದೇವತೆಗಳ ವಿಷಯ, ವೇದಾರ್ಥಜ್ಞಾನದಿಂದ ಉಂಟಾಗುವ ಪ್ರಯೋಜನ ಮೊದಲಾದ ಅನೇಕ ವಿಷಯಗಳನ್ನು ವಿವರಿಸಲಾಗಿದೆ.

ಅನಂತರ ಪ್ರತಿಸೂಕ್ತಕ್ಕೆ ಋಷಿದೇವತಾಛಂದಸ್ಸುಗಳನ್ನೂ ವಿನಿಯೋಗವನ್ನೂ ಅದಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನೂ ಹೇಳಿ ಪ್ರತಿಋಕ್ಕಿಗೂ ಮೊದಲು ಸಂಹಿತಾಪಾಠ ಪದಪಾಠಗಳನ್ನು ಸ್ವರಸಹಿತನಾಗಿ ಬರೆಯಲಾಗಿದೆ. ಬಳಿಕ ಪ್ರತಿಋಕ್ಕಿಗೂ ಸಾಯಣಭಾಷ್ಯವನ್ನು ಅಲ್ಲಿಯೇ ಸೇರಿಸಲಾಗಿದೆ. ಋಗ್ವೇದಕ್ಕೆ ಸ್ಕಂದಸ್ವಾಮಿಭಾಷ್ಯ, ವೆಂಕಟ ಮಾಧವಭಾಷ್ಯ, ಉದ್ಗೀಥಭಾಷ್ಯ ಮುದ್ಗಲಭಾಷ್ಯ ಮೊದಲಾದ ಅನೇಕಭಾಷ್ಯಗಳಿದ್ದರೂ ಅವುಗಳು ಈಗ

ಪೂರ್ತಿಯಾಗಿ ದೊರೆಯುವುದಿಲ್ಲ. ಅಲ್ಲಲ್ಲಿ ಕೆಲವು ಭಾಗಗಳು ಮಾತ್ರ ದೊರೆಯುವವು ಇದಲ್ಲದೆ ಸ್ಕಂದಸ್ವಾಮಿ ಭಾಷ್ಯವು ಸಾಯಣಭಾಷ್ಯದಂತೆ ಪ್ರತಿಋಕ್ಕಿಗೂ ಅರ್ಥವಿವರಣೆ ಸಂದರ್ಭಾನುಸಾರವಾಗಿ ಅವಶ್ಯಕವಾದ ಉಪಾಖ್ಯಾನ ಇತಿಹಾಸ, ವ್ಯಾಕರಣ ಮೊದಲಾದ ವಿಷಯಗಳಿಂದ ಕೂಡಿದ್ದರೂ ಗ್ರಂಥವು ಪೂರ್ತಿ ದೊರೆಕುವುದಿಲ್ಲವಾದ್ದರಿಂದ, ದೊರೆಯುವ ೧–೨ ಅಷ್ಟಕಗಳಲ್ಲಿ ಉಪಯುಕ್ತವಾದ ವಿಷಯಗಳನ್ನು ಸಂಗ್ರಹಿಸಿ ವಿಶೇಷವಿಷಯಗಳೆಂಬ ಶೀರ್ಷಿಕೆಯಲ್ಲಿ ಸೇರಿಸಲಾಗಿದೆ. ವೆಂಕಟಮಾಧವಭಾಷ್ಯವು ಪೂರ್ತಿಯಾಗಿ ಪ್ರಿಂಟಾಗಿದ್ದರೂ ಅದರಲ್ಲಿ ಸಾಯಣಭಾಷ್ಯದಲ್ಲಿರುವಂತೆ ವಿಶದವಾದ ವಿವರಣೆಯಾಗಲಿ, ಅನ್ವಯಾನುಸಾರ ಅರ್ಥವಾಗಲಿ ಇರುವುದಿಲ್ಲ ಕೆಲವು ಕ್ಲಿಷ್ಟಶಬ್ದಗಳಿಗೆ ಅರ್ಥ, ಟೀಕಾ ಟಿಪ್ಪಣಿಮಾತ್ರವಿರುತ್ತೆ. ಆದರೂ ಈ ಭಾಷ್ಯವೂ ಸ್ಕಂದಸ್ವಾಮಿಭಾಷ್ಯವೂ ಸಾಯಣಭಾಷ್ಯಕ್ಕಿಂತ ಪ್ರಾಚೀನವಾಗಿ ರುವುದರಿಂದ ಈ ಭಾಷ್ಯಕಾರರ ಮತಗಳನ್ನೂ ಅಭಿಪ್ರಾಯಗಳನ್ನೂ ಕಡೆಗಣಿಸುವಂತಿಲ್ಲ. ಆದ್ದರಿಂದ ಅವುಗಳನ್ನು ಅಲ್ಲಲ್ಲಿ ಸೇರಿಸಿದೇವೆ. ಉದ್ಗೀಥ, ಮುದ್ಗಲ ಮೊದಲಾದ ಭಾಷ್ಯಗಳೂ ಇದೇರೀತಿ ಅಲ್ಲಲ್ಲಿ ಕೆಲವು ಭಾಗಗಳು ಮಾತ್ರ ದೊರೆಯುವುದರಿಂದ ಅವುಗಳ ಪೂರ್ತ ಉಪಯೋಗವನ್ನು ಪಡೆಯಲಾಗುವುದಿಲ್ಲ ಸಾಯಣ ಭಾಷ್ಯಮಾತ್ರ (ನಾಲ್ಕು ವೇದಗಳಿಗೂ) ಪೂರ್ತ ದೊರೆಯುವುದರಿಂದಲೂ ಇದರಲ್ಲಿ ಪ್ರತಿಋಕ್ಕಿನ ಅರ್ಥಾನುವಾದ, ವಿವರಣೆ ನಿರುಕ್ತ, ಪೂರ್ವೇತಿ-ಹಾಸ ಇತ್ಯಾದ್ಯುಪಯುಕ್ತವಿಷಯಗಳಿಂದ ಕೂಡಿರುವುದರಿಂದಲೂ ನಾವು ಸಾಯಣಭಾಷ್ಯವನ್ನೇ ಅನುಸರಿಸಿದೇವೆ ಇತರರೂ ಹಾಗೆಯೇ ಮಾಡಿದಾರೆ ಮುಖ್ಯವಾಗಿ ಸಾಯಣಭಾಷ್ಯವನ್ನು ಬಿಟ್ಟರೆ ವೇದಗಳನ್ನು ಸರಿಯಾಗಿ ತಿಳಿದುಕೊಳ್ಳಲು ಈಗಿನಕಾಲದಲ್ಲಿ ಬೇರೆ ಸಾಧನವೇ ಇಲ್ಲವೆಂದರೆ ಅತಿಶಯೋಕ್ತಿಯಲ್ಲ. ಈ ಸಾಯಣಭಾಷ್ಯವನ್ನು ವಾಲೆಪ್ರತಿಗಳಲ್ಲಿಯೂ, ಕೈಬರಹದ ಪ್ರತಿಗಳಲ್ಲಿಯೂ ಇದ್ದುದನ್ನು Pro Maxmuller ಪಂಡಿತರು ಬಹುಶ್ರಮ ದಿಂದ ಸಂಗ್ರಹಿಸಿ ಪಂಡಿತರ ಸಹಾಯದಿಂದ ಚೆನ್ನಾಗಿ ಪರಿಶೋಧಿಸಿ ದೇವನಾಗರೀಲಿಪಿಯಲ್ಲಿ ಮುದ್ರಿಸಿದಾರೆ ಈ ಗ್ರಂಥದ ಮೊದಲನೇ ಮುದ್ರಣಕ್ಕಿಂತ ಎರಡನೇ ಮುದ್ರಣವು (Second edtion) ಅಶುದ್ಧರಹಿತವಾಗಿಯೂ ಆಕರ್ಷಕವಾಗಿಯೂ ಇದೆ. ಇದನ್ನೇ ಅನುಸರಿಸಿ ನಾವು ಸಾಯಣಭಾಷ್ಯವನ್ನು ಈ ಗ್ರಂಥದಲ್ಲಿ ಅಳವಡಿಸಿದೇವೆ.

ಬಳಿಕ ಪ್ರತಿ ಋಕ್ಕಿಗೂ ಪ್ರತಿಪದಾರ್ಥವನ್ನೂ, ಭಾವಾರ್ಥವನ್ನೂ, ಇಂಗ್ಲಿಷ್ ಭಾಷಾಂತರವನ್ನೂ ಸೇರಿಸಿದೇವೆ ಇವೆಲ್ಲವೂ ಸಾಯಣಭಾಷ್ಯವನ್ನೇ ಅನುಸರಿಸಿವೆ. ಅನಂತರ ವಿಶೇಷವಿಷಯವೆಂಬ ವಿಭಾಗದಲ್ಲಿ ಆಯಾ ಋಕ್ಕಿಗೆ ಸಂಬಂಧಪಟ್ಟ ವಿಶೇಷಸಂಗತಿ ಎಂದರೆ—ದೇವತೆಗಳ ವಿಷಯ, ನಿರುಕ್ತ, ಶಬ್ದದ ರೂಪನಿಷ್ಪತ್ತಿ ಮತ್ತು ನಾನಾರ್ಥ, ಉಪಾಖ್ಯಾನ, ಪೂರ್ವೇತಿಹಾಸ, ಋಷಿಗಳ ವಿಷಯ, ಪೌರ್ವಾತ್ಯ ಮತ್ತು ಪಾಶ್ಚಾತ್ಯ ಪಂಡಿತರ ಅಭಿಪ್ರಾಯಗಳು, ಇತರ ವೇದ ಮತ್ತು ಗ್ರಂಥಗಳಲ್ಲಿ ಹೇಳಿರುವ ಸಂಬಂಧಪಟ್ಟ ವಿಷಯಗಳು (ಸಪ್ರಮಾಣವಾಗಿ) ವಿಷಯವಿಮರ್ಶೆ ಇತ್ಯಾದಿ ಸಂಗತಿಗಳು ಎಲ್ಲರಿಗೂ ಸುಲಭವಾಗಿ ತಿಳಿಯುವಂತೆ ವಿವರಿಸಲ್ಪಟ್ಟಿವೆ. ಕೊನೆಯದಾಗಿ ಪ್ರತಿಋಕ್ಕಿನ ಪ್ರತಿಪದಕ್ಕೂ ವ್ಯಾಕರಣಪ್ರಕ್ರಿಯೆಯನ್ನು ಬರೆಯಲಾಗಿದೆ. ಒಂದಾವರ್ತಿ ಬಂದಿರುವ ಶಬ್ದಗಳೇ ಪುನಃ ಪುನಃ ಆವರ್ತಿತವಾಗಿರುವುದರಿಂದ ಪ್ರಥಮಮಂಡಲದ ಅಂತ್ಯದವರೆಗೆ (12 ಭಾಗಗಳು) ಮಾತ್ರ ವ್ಯಾಕರಣ ಪ್ರಕ್ರಿಯೆಯನ್ನು ಬರೆಯಲಾಗಿದೆ ಗ್ರಂಥವನ್ನು ಮೂವತ್ತು ಭಾಗಗಳಲ್ಲಿ ಮುಗಿಸಬೇಕಾದ ಸಂದರ್ಭವು ಒದಗಿದು ದರಿಂದ ಅದನ್ನು ಅಲ್ಲಿಗೇ ಬಿಟ್ಟುಬಿಡಲಾಗಿದೆ. ಈ ವಿಷಯಗಳಲ್ಲದೆ ಋಗ್ವೇದಾರ್ಥವಿವರಣೆಗೆ ಅತ್ಯವಶ್ಯಕವೆನಿಸಿದ ಅನೇಕ ವಿಷಯಗಳನ್ನು ಸಂಗ್ರಹಿಸಿ ಅಲ್ಲಲ್ಲಿ ಸೇರಿಸಲಾಗಿದೆ ಋಗ್ವೇದ ಮತ್ತು ಇತರ ವೇದಗಳಲ್ಲಿ ಕಂಡುಬರುವ ನಾನಾದೇವತೆಗಳ ವಿಸ್ತಾರವಾದ ವಿವರಣೆಯನ್ನು 5 ನೇ ಭಾಗದ ಕೊನೆಯಲ್ಲಿ ಸೇರಿಸಲಾಗಿದೆ. ಹಾಗೆಯೇ ಶೌನಕ ಮಹರ್ಷಿಪ್ರೋಕ್ತವಾದ ಬೃಹದ್ದೇವತಾ ಎಂಬ ಬಹುಮುಖ್ಯವಾದ ಗ್ರಂಥವನ್ನೂ ಅರ್ಥಾನುವಾದ ಮತ್ತು ಇಂಗ್ಲಿಷ್

ಭಾಷಾಂತರಸಹಿತವಾಗಿ 28 ನೇ ಭಾಗದ ಅಂತ್ಯದಲ್ಲಿ ಸೇರಿಸಲಾಗಿದೆ ಋಗ್ವೇದಾರ್ಥವಿವರಣೆಯಲ್ಲಿ ಪ್ರಥಮ ಪ್ರಯತ್ನವೆನಿಸಿರುವ ಮತ್ತು ಷಡಂಗಗಳಲ್ಲಿ ಒಂದಾದ ನಿರುಕ್ತವೆಂಬ ಯಾಸ್ಕಮಹರ್ಷಿಪ್ರೋಕ್ತವಾದ ಪ್ರಾಚೀನ ಗ್ರಂಥದ ನಾನಾ ಭಾಗಗಳನ್ನು ವಿವರಣೆಸಹಿತವಾಗಿ ಆಯಾಸಂದರ್ಭಗಳಲ್ಲಿ ಅಲ್ಲಲ್ಲಿ ಸೇರಿಸಲಾಗಿದೆ. ಈ ಗ್ರಂಥವು ಮೂರುಸಾವಿರ ವರ್ಷಗಳಿಗಿಂತಲೂ ಪುರಾತನಗ್ರಂಥವಾಗಿರುವುದಲ್ಲದೆ ಬಹುಮುಖ್ಯವಾದ ಪ್ರಮಾಣ (Authority) ಗ್ರಂಥವಾಗಿದೆ. ಇದರ ಸಹಾಯವಿಲ್ಲದೆ ವೇದಾರ್ಥವನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ ಇದಲ್ಲದೆ ನಾನಾವಿಷಯ ಗಳಲ್ಲಿ ಪಾಶ್ಚಾತ್ಯಪಂಡಿತರ ವಿವರಣೆಗಳನ್ನೂ ಅಭಿಪ್ರಾಯಗಳನ್ನೂ ಆಯಾಸಂದರ್ಭಗಳಲ್ಲಿ ಸೇರಿಸಲಾಗಿದೆ.

ಇಷ್ಟು ವಿಸ್ತಾರವಾದ ವಿಷಯವಿಮರ್ಶೆಗಳಿಂದ ಸಹಿತವಾದ ಋಗ್ವೇದಸಂಹಿತೆಯು ಇಂಡಿಯಾ ದೇಶದ ಯಾವ ಭಾಷೆಯಲ್ಲಿಯೂ ಇದುವರೆಗೆ ಪ್ರಕಟವಾಗಿಲ್ಲ. ಕರ್ನಾಟಕಭಾಷೆಯಲ್ಲಿ ಇಂತಹ ಗ್ರಂಥವಿರುವುದು ಸಾಹಿತ್ಯಾಭಿವೃದ್ಧಿಗೆ ತುಂಬಾ ಸಹಾಯಕವಾಗಿರುವುದೆಂದು ಧಾರಾಳವಾಗಿ ಹೇಳಬಹುದು. ಋಗ್ವೇದಸಂಹಿತೆಯು ಇಲ್ಲಿಗೆ ಮುಗಿದರೂ ಇದಕ್ಕೆ ಸೇರಿದಂತಿರುವ ಐತರೇಯಬ್ರಾಹ್ಮಣ, ಐತರೇಯಾರಣ್ಯಕ, ಮತ್ತು ಉಪನಿಷತ್ತು, ನಿರುಕ್ತ, ನಾನಾವಿಷಯಗಳ ಅಕ್ಷರಾನುಕ್ರಮಣಿಕೆ(Index)ಇತ್ಯಾದಿ ವಿಷಯಗಳನ್ನೊಳಗೊಂಡ ಆರೇಳು ಭಾಗಗಳನ್ನು ಮುದ್ರಿಸುವ ಕಾರ್ಯವು ಇನ್ನೂ ಉಳಿದಿದೆ. ಈ ವಿಷಯದಲ್ಲಿ ಸರ್ಕಾರದವರ ಮಂಜೂರಾತಿಯು ದೊರೆತನಂತರ ಈ ಕಾರ್ಯವನ್ನು ಕೈಗೊಳ್ಳಲಾಗುವುದು.

ಈ ಗ್ರಂಥರಚನೆಯಲ್ಲಿ ಭಾಗವಹಿಸಿದ ವಿದ್ವಾಂಸರುಗಳ ಪಾತ್ರವನ್ನು ಇಲ್ಲಿ ಸೂಚಿಸುವುದು ನಮ್ಮ ಕರ್ತವ್ಯ ವಾಗಿದೆ. ಈ ಗ್ರಂಥ ಪ್ರಕಟನಕ್ಕಾಗಿ ನಿಯಮಿತವಾದ ವೇದವಿಮರ್ಶನವಿದ್ವನ್ಮಂಡಲಿ ಎಂಬ ಸಮಿತಿಯ ಅಧ್ಯಕ್ಷರಾದ ಮೈಸೂರು ನಾಗಲಿಂಗಮಠದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು ಈ ಕಾರ್ಯದಲ್ಲಿ ಬಹಳವಾದ ಶ್ರದ್ಧೆವಹಿಸಿ ತಮ್ಮ ಅಮೂಲ್ಯವಾದ ಸಲಹೆಯನ್ನೂ, ಸಹಾಯವನ್ನೂ ನೀಡಿರುವರು ಇವರ ಪ್ರಯತ್ನದಿಂದಲೇ ಈ ಕಾರ್ಯವು ಪ್ರಾರಂಭವಾಯಿತೆನ್ನಬಹುದು. ಆದರೆ ಈ ಮಹನೀಯರು ಸುಮಾರು ಎರಡುವರ್ಷಗಳ ಕೆಳಗೆ ಶಿವೈಕ್ಯರಾದುದರಿಂದ ತಮ್ಮ ಪ್ರಯತ್ನದ ಫಲವು ಪೂರ್ಣವಾಗಿರುವುದನ್ನು ನೋಡಲಾಗಲಿಲ್ಲ ಇದರಂತೆಯೇ ಸಮಿತಿಯ ಮತ್ತೊಬ್ಬ ಸದಸ್ಯರೂ ಮೀಮಾಂಸಾದರ್ಶನಪಂಡಿತರೂ ಆದ ದೇವರ ಭಟ್ಟರೆಂಬುವರೂ ದೈವಾಧೀನರಾಗಿರುವರೆಂಬ ವಿಷಯವನ್ನು ಅತ್ಯಂತ ವಿಷಾದದಿಂದ ಸೂಚಿಸಬೇಕಾಗಿದೆ.

ಬೆಂಗಳೂರು ವಿಶ್ವೇಶ್ವರಪುರದಲ್ಲಿರುವ ಶ್ರೀ|| ದೇವಡು ನರಸಿಂಹಶಾಸ್ತ್ರಿ M.A. ಯವರು ಈ ಋಗ್ವೇದಭಾಷ್ಯ ಭೂಮಿಕೆಯಲ್ಲಿರುವ ಕೆಲವು ಮೀಮಾಂಸಾಸೂತ್ರಗಳ ವಿಮರ್ಶೆಯನ್ನು ಬರೆದಿದಾರೆ ಮೈಸೂರಿನ ಸೆಂಟ್ ಫಿಲೋಮಿನಾ ಕಾಲೇಜಿನ ಸಂಸ್ಕೃತಾಧ್ಯಾಪಕರಾದ ಶ್ರೀ G. N. ಚಕ್ರವರ್ತಿ, M A. ಯವರು ಈ ಗ್ರಂಥದಲ್ಲಿ ಬಹುಭಾಗ ಪ್ರತಿಪದಾರ್ಥವೆಂಬ ಭಾಗವನ್ನೂ ಶತಪಥಬ್ರಾಹ್ಮಣ ಇತ್ಯಾದಿ ಗ್ರಂಥಗಳ ಪ್ರಮಾಣಪುರಸ್ಸರವಾದ ವಿಷಯವನ್ನು ವಿಶೇಷವಿಷಯವೆಂಬ ಭಾಗದಲ್ಲಿ ಕೆಲವನ್ನೂ ಬರೆದಿದಾರೆ. ಸಾಹಿತ್ಯವಿದ್ವಾಂಸರೂ, ಹಿಂದೀಭಾಷಾವಿಶಾರದರೂ ಆದ ಶ್ರೀ ವೆಂಕಟರಮಣಾಚಾರ್, M.A. B.T. ಎಂಬುವರು ಇಂಗ್ಲೀಷ್ ಮತ್ತು ಹಿಂದೀಭಾಷೆಗಳಲ್ಲಿರುವ ವೇದಕ್ಕೆ ಸಂಬಂಧ ಪಟ್ಟ ಅನೇಕ ವಿಷಯಗಳನ್ನು ಭಾಷಾಂತರ ಮಾಡಿದಾರೆ. ಆಸ್ಥಾನವಿದ್ವಾನ್ ಬ್ರ|| ಶ್ರೀ|| ಲಕ್ಷ್ಮಣಾಚಾರ್ಯ ಎಂಬ ವ್ಯಾಕರಣಪಂಡಿತರೂ ಮತ್ತು ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲೆಯ ವ್ಯಾಕರಣವಿದ್ವಾಂಸರೂ ಆದ ಬ್ರ|| ಶ್ರೀ|| ಜಿ ವಿಷ್ಣುಮೂರ್ತಿಭಟ್ಟರೆಂಬುವರೂ ಸಹ ವ್ಯಾಕರಣಭಾಗವನ್ನು ಬರೆದಿದ್ದಾರೆ ಗೌ|| ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ರಿಟೈರ್ಡ್ ಪಂಡಿತರಾದ ಬ್ರ|| ಶ್ರೀ|| ಎಸ್ ಸೀತಾರಾಮಶಾಸ್ತ್ರಿಗಳು ವಿಶೇಷವಿಷಯವೆಂಬ

ಭಾಗದಲ್ಲಿ ಕೆಲವುಭಾಗವನ್ನು ಬರೆದಿದಾರೆ. ಅರಮನೆಯ ಸರಸ್ವತೀಭಂಡಾರದಲ್ಲಿರುವ ಸಾಹಿತ್ಯವಿದ್ವಾನ್ ಬ್ರ|| ಶ್ರೀ ರಂಗನಾಥನ್ ಎಂಬುವರು ಈ ಗ್ರಂಥವು ಪ್ರಿಂಟಾಗುವಾಗ proof-reading ಮತ್ತು ಇತರ ಕಾರ್ಯಗಳಲ್ಲಿ ಬಹಳವಾಗಿ ಸಹಾಯಮಾಡಿದಾರೆ. ಇವರಲ್ಲದೆ ಇನ್ನೂ ಅನೇಕ ವಿದ್ವಾಂಸರು ನಾನಾವಿಧವಾದ ಸಲಹೆಯನ್ನೂ ಸಹಾಯವನ್ನೂ ನೀಡಿದಾರೆ. ಇವರ ಸಹಾಯಗಳಲ್ಲದೆ ಶ್ರೀಮನ್ಮಹಾರಾಜರವರ ಹುಜೂರ್ ಸೆಕ್ರೆಟರಿಗಳವರೂ, ಅಸಿಸ್ಟೆಂಟ್ ಸೆಕ್ರೆಟರಿಗಳವರೂ, ಅವರ ಸಹಾಯಕರಾದ ನೌಕರವರ್ಗದವರೂ ಈ ಗ್ರಂಥಪ್ರಕಟನೆಯಲ್ಲಿ ಅವಶ್ಯಕವಾದ ಸಹಾಯ ಸಹಕಾರಗಳನ್ನು ನೀಡಿದಾರೆ. ಈ ಮಹನೀಯರುಗಳ ಸಹಕಾರದಿಂದಲೇ 30 ಭಾಗಗಳ ಇಷ್ಟು ದೊಡ್ಡ ಗ್ರಂಥವು ಇಷ್ಟುಬೇಗನೆ ಮುದ್ರಿಸಲು ಸಾಧ್ಯವಾಯಿತು. ಇವರು ಮಾಡಿರುವ ಸಹಾಯಕ್ಕಾಗಿ ಇವರೆಲ್ಲರನ್ನೂ ಅತ್ಯಂತ ಕೃತಜ್ಞತೆಯಿಂದ ಸ್ಮರಿಸುವುದು ನಮ್ಮ ಕರ್ತವ್ಯವಾಗಿದೆ.

ಇದಲ್ಲದೆ, ಈ ಕಾರ್ಯಕ್ಕೆ ಬೇಕಾದ ಅನೇಕ ಪುಸ್ತಕಗಳನ್ನು ಒದಗಿಸಿಕೊಟ್ಟು ಸಹಾಯಸಹಕಾರಗಳನ್ನು ನೀಡಿರುವವರಲ್ಲಿ, ಮೈಸೂರು ಅರಮನೆಯ ಸರಸ್ವತೀ ಭಂಡಾರ, ಗ|| ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು ಯೂನಿವರ್ಸಿಟಿ ಮತ್ತು ಕಾಲೇಜ್ ಲೈಬ್ರರಿ, ಪ್ಯಾಲೇಸ್ ಲೈಬ್ರರಿ, ಮದ್ರಾಸ್ ಮತ್ತು ಬಾಂಬೆ ಯೂನಿವರ್ಸಿಟಿ ಲೈಬ್ರರಿ ಎಂಬ ಸಂಸ್ಥೆಗಳು ಮುಖ್ಯವಾದವು. ಈ ಗ್ರಂಥವು ಬೇಗನೆ ಮುದ್ರಿತವಾಗುವುದಕ್ಕಾಗಿ ಏಕಕಾಲದಲ್ಲಿ ಕೆಲಸಮಾಡುವಂತೆ ಮೈಸೂರಿನ ಮೂರು ಪ್ರಮುಖ ಪ್ರೆಸ್‌ಗಳಿಗೆ ವಹಿಸಲಾಗಿತ್ತು. ಮೈಸೂರಿನ ಹನುಮಂತರಾವ್ ಸ್ಟ್ರೀಟ್‌ನಲ್ಲಿರುವ ಶ್ರೀ ಶಾರದಾ ಪ್ರೆಸ್ಸಿನ ಮಾಲೀಕರಾದ ಶ್ರೀ|| ಆರ್. ಕೃಷ್ಣಶೆಟ್ಟರೂ, ಮೈಸೂರು ರಾಮಚಂದ್ರ ಅಗ್ರಹಾರದಲ್ಲಿರುವ ವಿನಾಯಕ ಪ್ರಿಂಟಿಂಗ್ ವರ್ಕ್ಸ್ ಎಂಬ ಪ್ರೆಸ್ಸಿನ ಮಾಲೀಕರಾದ ಶ್ರೀ ಕೆ. ವೆಂಕಟಸುಬ್ಬಯ್ಯನವರೂ ಮೈಸೂರು ನೂರಡಿ ರಸ್ತೆಯಲ್ಲಿರುವ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ (ಹಿಂದಿನ ಶ್ರೀ ಚಾಮುಂಡೇಶ್ವರಿ ಎಲೆಕ್ಟ್ರಿಕ್ ಪ್ರೆಸ್) ಮಾಲೀಕರಾದ, ಶ್ರೀ ವೈ. ಆರ್ ರಂಗರಾವ್ ಎಂಬುವರೂ ಸಹ ಈ ಗ್ರಂಥದ 30 ಭಾಗಗಳನ್ನು ಪ್ರಿಂಟ್ ಮಾಡುವುದರಲ್ಲಿ ಅತ್ಯಂತ ಆಸಕ್ತಿಯನ್ನು ವಹಿಸಿ, ಹಗಲುರಾತ್ರಿಯೆನ್ನದೆ ನುರಿತ ಅನೇಕ ಕೆಲಸಗಾರರ ಸಹಾಯದಿಂದ ಮುದ್ರಣ ಕಾರ್ಯವನ್ನು ಶೀಘ್ರವಾಗಿಯೂ ಅಂದವಾಗಿಯೂ ಸಮರ್ಪಕವಾಗಿಯೂ ಮಾಡಿ ಮುಗಿಸಿರುತ್ತಾರೆ. ಇವಕ್ಕೆ ಬೇಕಾದ ಕಾಗದವನ್ನು ಭದ್ರಾವತಿಯ ಮೈಸೂರು ಪೇಪರ್ ಮಿಲ್ಸ್ ನವರು ಆಯಾ ಕಾಲಕ್ಕೆ ಬೇಕಾದಂತೆ ತ್ವರಿತವಾಗಿ ಒದಗಿಸಿ ಸಹಾಯ ಮಾಡಿರುತ್ತಾರೆ. ಇವರುಗಳಿಗೆಲ್ಲಾ ನಮ್ಮ ಕೃತಜ್ಞತೆ ಸಲ್ಲಬೇಕಾಗಿದೆ.

ಈ ಮಹಾಗ್ರಂಥದ ಭಾಷಾಂತರ ಮತ್ತು ಪ್ರಕಟನೆಯು ಬಹುದ್ರವ್ಯಸಾಧ್ಯವಾದುದರಿಂದ ಇಂತಹ ಕಾರ್ಯವನ್ನು ರಾಜಮಹಾರಾಜರುಗಳ ಮತ್ತು ಸರಕಾರದವರ ಸಹಾಯಸಹಕಾರಗಳಿಲ್ಲದೆ ನಿರ್ವಹಿಸಲು ಸಾಧ್ಯವಿಲ್ಲ. ಹಿಂದೆ East India Company ಯವರೂ, ವಿಜಯನಗರದ ಮಹಾರಾಜರೂ Pro. Maxmuller ರವರಿಗೆ ಉದಾರವಾದ ಧನಸಹಾಯವನ್ನು ನೀಡಿ ಋಗ್ವೇದವನ್ನು ಸಂಸ್ಕೃತಭಾಷೆಯಲ್ಲಿ ಪ್ರಕಟಿಸಲು ನೆರವಾದಂತೆ, ಕರ್ನಾಟಕ ಭಾಷೆಯನ್ನಾಡುವ ಸಮಸ್ತಜನರ ಶ್ರೇಯೋಭಿವೃದ್ಧಿಗಾಗಿಯೂ, ಸಾಹಿತ್ಯಾಭಿವೃದ್ಧಿಗಾಗಿಯೂ ಈ ಮಹಾಕಾರ್ಯದಲ್ಲಿ ಪ್ರಜಾನುರಾಗಿಗಳೂ, ಸ್ವಯಂಪಂಡಿತರೂ ವೇದವಿದ್ಯಾಭಿಮಾನಿಗಳೂ ದೈವಭಕ್ತಿತತ್ಪರರೂ ಕರ್ನಾಟಕಸಿಂಹಾಸನಾಧೀಶ್ವರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್, ಐ.** ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಅತ್ಯಂತ ಆಸಕ್ತಿಯನ್ನು ವಹಿಸಿ ತಮ್ಮ ಅಮೋಘವಾದ ಸಲಹೆ ಮತ್ತು ಪ್ರೋತ್ಸಾಹದಿಂದಲೂ, ಸಹಾಯಸಹಕಾರಗಳಿಂದಲೂ ಈ ಕಾರ್ಯವನ್ನು ನಿರ್ವಿಘ್ನವಾಗಿ ಸಮಾಪ್ತಿಗೊಳ್ಳುವಂತೆ

ಮಾಡಿರುವರು. ಇದರಂತೆ ಯಜುರ್ವೇದ ಮೊದಲಾದ ಇತರ ವೇದಗಳ ಮತ್ತು ೧೦೮ ಉಪನಿಷತ್ತುಗಳ ಭಾಷಾಂತರ ಮತ್ತು ಪ್ರಕಟನ ಕಾರ್ಯದಲ್ಲಿಯೂ ಪ್ರಭುವರ್ಯರ ಮತ್ತು ಅವರ ಸರ್ಕಾರದವರ ಉದಾರಾಶ್ರಯವು ದೊರೆಯುವುದರಲ್ಲಿ ಸಂದೇಹವಿಲ್ಲ. ಇಂತಹ ಉದಾರಮತಿಗಳಾದವರೂ ಪ್ರಜಾಹಿತಕಾರ್ಯಗಳಲ್ಲಿ ಸರ್ವದಾ ಆಸಕ್ತರಾದವರೂ ಆದ ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ.. ಜಿ.ಸಿ.ಎಸ್.ಐ.** ಪ್ರಭುವರ್ಯರವರಿಗೂ, ಅವರ ಕುಟುಂಬಕ್ಕೂ, **ಶ್ರೀ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್** ಎಂಬ ಶುಭ ನಾಮಾಂಕಿತರಾದ ರಾಜಕುಮಾರರಿಗೂ, ರಾಜಕುಮಾರಿಯರಿಗ ಮತ್ತು ರಾಜಮಾತೆಯರಿಗೂ, ಸಮಸ್ತ ಪ್ರಜಾವರ್ಗಕ್ಕೂ ಸಹ ಸರ್ವೇಶ್ವರನಾದ ವೇದಪುರುಷನು ಆಯುರಾರೋಗ್ಯಾದಿ ಸಮಸ್ತಸನ್ಮಂಗಳಗಳನ್ನೂ, ಐಶ್ವರ್ಯಾದಿ ಸಂಪತ್ತನ್ನೂ ದೇಶದಲ್ಲಿ ಸುಭಿಕ್ಷವನ್ನೂ ಅನುಗ್ರಹಿಸಲೆಂದು ಆ ಸರ್ವೇಶ್ವರನನ್ನು ಅನನ್ಯಭಕ್ತಿಯಿಂದಪ್ರಾರ್ಥಿಸುತ್ತೇವೆ.

ಇತಿ ಸಜ್ಜನವಿಧೇಯರಾದ,

ಆಸ್ಥಾನಮಹಾವಿದ್ವಾನ್ **ಹೆಚ್. ಪಿ. ವೆಂಕಟರಾವ್,**
Editor & Translator
ಮತ್ತು
ವೇದವಿಮರ್ಶನ ವಿದ್ವನ್ಮಂಡಲಿಯ ಸದಸ್ಯರು

ಮೈಸೂರು
ಮನ್ಮಥನಾಮ ಸಂ॥ ನಿಜಭಾದ್ರಪದ
ಶುಕ್ಲ ಚತುರ್ದಶೀ ಶುಕ್ರವಾರ
ತಾ॥ 30—9—1955

॥ ಶ್ರೀಃ ॥

# ವಿಷಯಾನುಕ್ರಮಣಿಕೆ.



## ಹತ್ತನೆಯ ಮಂಡಲದ ಸೂಕ್ತಗಳು.

### ಎಂಟನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯ.

ಎಂಟನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು ಸಮಾಪ್ತವು.

---

## ಆರನೆಯ ಅಧ್ಯಾಯವು

ಎಂಟನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು ಸಮಾಪ್ತವು.

—— ——

## ಏಳನೆಯ ಅಧ್ಯಾಯವು

ಇಲ್ಲಿಗೆ ಎಂಟನೇ ಅಷ್ಟಕದಲ್ಲಿ ಏಳನೆಯ ಅಧ್ಯಾಯವು ಸಮಾಪ್ತವು—

## ಎಂಟನೆಯ ಅಧ್ಯಾಯವು

ವಿಷಯಾನುಕ್ರಮಣಿಕೆ ಸಮಾಪ್ತವು



॥ ಶ್ರೀಃ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್॥
ಅಥಾಷ್ಟಮಾಷ್ಟಕೇಽಧ್ಯಾಯಶ್ಚತುರ್ಥಃ ಸಂಪ್ರದರ್ಶಿತಃ ।
ಧೀಮತಾ ಸಾಯಣಾರ್ಯೇಣ ಪಂಚಮೋಽಥ ಪ್ರದರ್ಶ್ಯತೇ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಭಾಗ-- ೩೦

## ॥ ಅಥಾಷ್ಟಮಾಷ್ಟಕೇ ಪಂಚಮೋಽಧ್ಯಾಯಃ ॥

## ಎಂಟನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು



## ಹತ್ತನೆಯ ಮಂಡಲದ ಸೂಕ್ತಗಳು

## ತೊಂಭತ್ತೈದನೆಯ ಸೂಕ್ತವು

### ಪೀಠಿಕೆ.

### ಉರ್ವಶೀ ಮತ್ತು ಪುರೂರವಾಃ

ಉರ್ವಶೀ ಮತ್ತು ಪುರೂರವಸ್ಸಿನ ಸಂಭಾಷಣರೂಪವಾದ ಈ ಪ್ರಕರಣವು ಲೌಕಿಕವಾದ ಪ್ರೇಮ ಮತ್ತು ವಿರಹಗಳನ್ನು ಪ್ರಕಾಶಪಡಿಸುವುದರ ಮೂಲಕ ಅಲೌಕಿಕವಾದ ತತ್ತ್ವವನ್ನು ಪ್ರತಿಪಾದಿಸುವ ಆಖ್ಯಾನಗಳಲ್ಲಿ ಒಂದಾಗಿದೆ. ಒಂದು ಇತಿಹಾಸವನ್ನು ಉದಾಹರಿಸಿ ಸಾಯಣರು ಈ ಕಥಾಸಂದರ್ಭವನ್ನು ಈ ರೀತಿ ತಿಳಿಸಿದ್ದಾರೆ.

**ಐಳೋರ್ವಶೀತಿಹಾಸೋಽತ್ರ ವೈಶದ್ಯಾಯ ಪ್ರವರ್ಣ್ಯತೇ ।**

**............................................ .. ....................**

**ಇತ್ಯುರ್ವಶ್ಯೈಳಸಂವಾದಮಿಮನ್ವೇಷೋಽಸ್ಯ ಸೂಚಯದಿತಿ ॥**

(ಸಾಯಣಭಾಷ್ಯಪೀಠಿಕಾ ಋ ಸಂ. ೧೦-೯೫)

ಉರ್ವಶಿಯ ಸೌಂದರ್ಯಕ್ಕೆ ಮೋಹಿತರಾದ ಮಿತ್ರಾವರುಣರು ತಮ್ಮ ವೀರ್ಯಸ್ಖಲನದಿಂದ ಅಗಸ್ತ್ಯನ ಜನ್ಮಕ್ಕೆ ಕಾರಣರಾದರೂ, ಅವಳನ್ನು ಮಾತ್ರ ಶಪಿಸದೆ ಬಿಡಲಿಲ್ಲ. ಪೃಥ್ವಿಯಲ್ಲಿ ಅವಳು ಹುಟ್ಟಿ ಮಾನವನ ಜೊತೆಯಲ್ಲಿ ಸಮಾಗಮವನ್ನು ಹೊಂದಬೇಕು ಎಂದು ದಿವ್ಯಕನ್ನಿಕೆಯಾದ ಅವಳನ್ನು ಶಪಿಸಿದರು.

ಮನುವಿನ ಪುತ್ರರೊಡಗೂಡಿ ಮೃಗಯಾರ್ಥವಾಗಿ (ಬೇಟೆಯಾಡಲು) ಇಳ ಎಂಬ ರಾಜನು ವನದಲ್ಲಿ ಸಂಚರಿಸುತ್ತಿದ್ದ ಕಾಲದಲ್ಲಿ, ಶಿವನನ್ನು ಅನನ್ಯ ಭಕ್ತಿಯಿಂದ ಆರಾಧಿಸುತ್ತಿದ್ದ ಪರ್ವತರಾಜನ ಪುತ್ರಿಯಾದ ಉಮೆಯು ಇದ್ದಲ್ಲಿಗೆ ಪ್ರವೇಶಿಸಿದನು ಆ ತಪ್ಪಿನ ಫಲವಾಗಿ ಅವನು ಒಡನೆಯೇ ಸ್ತ್ರೀಯಾಗಿ ಪರಿವರ್ತಿತನಾದನು. ಆಗ ಶಿವನನ್ನು ಪ್ರಾರ್ಥಿಸಲು ಶಿವನು ಆ ತಪ್ಪನ್ನು ಕ್ಷಮಿಸಲು ಪಾರ್ವತಿಗೆ ಮಾತ್ರ ಅಧಿಕಾರವಿದೆಯೆಂದು ತಿಳಿಸಿದನಂತರ ಇಳನು ಪಾರ್ವತಿಯ ಮರೆಹೊಕ್ಕನು. ಅವನ ಪಶ್ಚಾತ್ತಾಪದ ಫಲವಾಗಿ ಪಾರ್ವತಿಯ ಕ್ಷಮೆಯು ದೊರೆತು ಅವನು ಪ್ರತಿಸಂವತ್ಸರದಲ್ಲಿಯೂ ಆರುತಿಂಗಳು ಸ್ತ್ರೀಯಾಗಿಯೇ ಇರಬೇಕೆಂದೂ ಉಳಿದ ಇನ್ನಾರು ತಿಂಗಳು ಮಾತ್ರ ಅವನ ನಿಜ ಸ್ವರೂಪವನ್ನು ಹೊಂದಬಹುದೆಂದೂ ಪಾರ್ವತಿಯು ಅನುಗ್ರಹಿಸಿದಳು. ಅವನು ಸ್ತ್ರೀರೂಪವನ್ನು ಹೊಂದಿದ್ದ ಕಾಲದಲ್ಲಿ ಸೋಮಪುತ್ರನಾದ ಬುಧನು ಅವಳನ್ನು ಮೋಹಿಸಿ ಅವಳ ಸಂಗವನ್ನು ಹೊಂದಿದನು ಅದರ ಫಲವಾಗಿ ಒಬ್ಬ ಪುತ್ರನು ಜನಿಸಿದನು. ಅವನೇ ಪ್ರತಿಷ್ಠಾನಪುರಕ್ಕೆ ರಾಜನಾದ ಪುರೂರವಾಃ ಎಂದು ಪ್ರಸಿದ್ಧನಾದನು.

ಮಿತ್ರಾವರುಣರಿಂದ ಶಪ್ತಳಾದ ಉರ್ವಶಿಯು ಆ ಶಾಪದ ಫಲವಾಗಿ ಪೃಥ್ವಿಗಿಳಿದು ಸಂಚರಿಸುತ್ತಿದ್ದಾಗ ಪುರೂರವನನ್ನು ನೋಡಿದಳು. ಪುರೂರವನೂ ಅವಳ ಸೌಂದರ್ಯಕ್ಕೆ ಬೆರಗಾಗಿ ಅವಳನ್ನು ಮೋಹಿಸಿದನು. ಅವಳ ಸಂಗವನ್ನು ಬಯಸಿದಾಗ ಅವಳು ಒಂದು ನಿರ್ಬಂಧದ ಮೇಲೆ ಒಪ್ಪಿಕೊಂಡಳು. " ಪುರೂರವನು ಹಾಸಿಗೆಯಲ್ಲಿದ್ದಾಗ ಮಾತ್ರ ಅವನು ನಗ್ನನಾಗಿರುವುದನ್ನು (ಬೆತ್ತಲೆಯಾಗಿ) ಉರ್ವಶಿಯು ನೋಡಿ ಸಹಿಸಬಹುದು. ಉಳಿದ ವೇಳೆಯಲ್ಲಿ ಅವನು ನಗ್ನಾವಸ್ಥೆಯಲ್ಲಿರುವುದನ್ನು ನೋಡಿದರೆ ಆ ಒಡನೆಯೇ ಅವಳು ಪುನಃ ಹಿಂತಿರುಗಿ ತನ್ನ ಸ್ವಸ್ಥಾನಕ್ಕೆ ಹೋಗುವಳು ಎಂಬುದು ಮೊದಲನೆಯ ನಿಯಮ, ಎರಡನೆಯದಾಗಿ, ಅವಳಲ್ಲಿದ್ದ ಎರಡು ಕುರಿಮರಿಗಳನ್ನು ಪುರೂರವನು ತನ್ನ ವಶದಲ್ಲಿಟ್ಟು ರಕ್ಷಿಸತಕ್ಕದ್ದು " _ ಎಂಬುದೇ ಎರಡನೇ ನಿಯಮ. ಪುರೂರವನು ಆ ನಿಯಮಕ್ಕೊಪ್ಪಿದನು.

ಇಬ್ಬರೂ ಜೊತೆಯಲ್ಲಿ ಸೇರಿ ನಾಲ್ಕು ವರ್ಷಗಳ ಕಾಲ ಸುಖಜೀವನವನ್ನನುಭವಿಸಿದರು. ನಾಲ್ಕುವರ್ಷಗಳಾದನಂತರ ಒಂದುದಿನ ರಾತ್ರಿ ಇದ್ದಕ್ಕಿದ್ದಂತೆಯೇ ಕುರಿಮರಿಗಳು ಅರಚುವುದು ಕೇಳಿಬಂದಿತು. ಪುರೂರವನು ಎದ್ದುನೋಡಲಾಗಿ ಅವನ್ನು ದೇವತೆಗಳು ಅಪಹರಿಸುತ್ತಿದ್ದುದನ್ನು ಕಂಡನು ಹಾಗೆಯೇ ಅವರನ್ನು ಅಟ್ಟಿಸಿಕೊಂಡು ಓಡುತ್ತಿರುವಾಗ ಒಡನೆಯೇ ಮಿಂಚಿನ ಪ್ರಕಾಶವಾಯಿತು. ಆಗ ನಗ್ನನಾಗಿದ್ದ ಪುರೂರವಸ್ಸಿನ ಬೆತ್ತಲೆ ದೇಹವು ಉರ್ವಶಿಗೆ ಗೋಚರವಾಯಿತು. ತತ್‌ಕ್ಷಣವೇ ಅವನನ್ನು ಬಿಟ್ಟು ತನ್ನ ದಾರಿಯನ್ನು ಹಿಡಿದಳು. ಪುರೂರವನು

ಹುಚ್ಚುಹಿಡಿದಂತಾಗಿ ಅವಳನ್ನೇ ಹುಡುಕುತ್ತಾ ಹೊರಟನು. ಮನೋವ್ಯಾಕುಲದಿಂದ **ಅಲೆಯುತ್ತಿರುವಾಗ ಅವಳು** ತನ್ನ ಸಂಗಾತಿಗಳೊಡನೆ ವಿಹರಿಸುತ್ತಿರುವುದನ್ನು ಕಂಡನು ಅವಳು ಹಿಂತಿರುಗಿ ತನ್ನನ್ನು ಸೇರುವಂತೆ **ಪ್ರಾರ್ಥಿಸಿದಾಗ** ಅವಳು ಕಠಿನವಾದ ವಾಕ್ಯಗಳನ್ನು ಪ್ರಯೋಗಿಸಿ ಅವನ ಪ್ರಾರ್ಥನೆಯನ್ನು ತಿರಸ್ಕರಿಸಿದಳು. **ಇವರಿಬ್ಬರ ಈ** ಸಂಭಾಷಣವೇ ಪ್ರಕೃತದ ಕಥಾಸಂದರ್ಭನೆಂದು ಸಾಯಣರು ತಿಳಿಸಿದ್ದಾರೆ. ಇದೇ ಪ್ರಕರಣವನ್ನು **ಬೃಹದ್ದೇವತೆ** ಯಲ್ಲಿ ಈ ರೀತಿ ತಿಳಿಸಿದೆ

**ಪುರೂರವಸಿ ರಾಜರ್ಷಾವಪ್ಸರಾಸ್ತೂರ್ವಶೀ ಪುರಾ ।**
**ನ್ಯವಸತ್ಸಂವಿದಂ ಕೃತ್ವಾ ತಸ್ಮಿನ್ ಧರ್ಮಂ ಚಚಾರ ಚ ॥**

(ಬೃ. ದೇ. ೭-೧೪೭)

ಹಿಂದೆ ಊರ್ವಶಿಯು ಪುರೂರವನಲ್ಲಿ ಪ್ರೇಮವನ್ನು ಬೆಳೆಸಿ ಅವನೊಡನೆ ಒಂದು ಒಪ್ಪಂದವನ್ನು **ಗೊತ್ತುಮಾಡಿ** (condition), ಅವನ ಜೊತೆಯಲ್ಲಿ ಸೌಖ್ಯವನ್ನನುಭವಿಸುತ್ತಿದ್ದಳು (ಆ ಒಪ್ಪಂದವು **ಏನು ಎಂದು ತಿಳಿಸಿಲ್ಲ.** ಇಲ್ಲಿನ ವಿವರಣವು ಮೇಲೆ ಹೇಳಿದುದಕ್ಕಿಂತ ವ್ಯತ್ಯಸ್ತವಾಗಿದೆ).

**ತಯಾ ತಸ್ಯ ಚ ಸಂವಾಸಮಸೂಯನ್ ಪಾಕಶಾಸನಃ ।**
**ಪ್ರೈತಾಮಹಂ ಚಾನುರಾಗಮಿಂದ್ರವಜ್ಞಾಪಿ ತಸ್ಯ ತು ॥**

(ಬೃ. ದೇ. ೭-೧೪೮)

ಪುರೂರವನು ಮರ್ತ್ಯನಾಗಿದ್ದು ದೇವಕನ್ನಿಕೆಯಾದ ಊರ್ವಶಿಯ ಜೊತೆಯಲ್ಲಿ **ಸೌಖ್ಯವನ್ನನುಭವಿಸುವುದನ್ನು** ಇಂದ್ರನು ಸಹಿಸಲಿಲ್ಲ ಇಂದ್ರನ ಸ್ಥಾನದಲ್ಲಿದ್ದು ಇಂದ್ರನು ಅನುಭವಿಸಬೇಕಾದ ಪದವಿಯನ್ನು ಪುರೂರವನು **ಅನುಭವಿ** ಸುತ್ತಿರುವುದನ್ನು ಕಂಡು ಅಸೂಯೆಯಿಂದ ಅದಕ್ಕೆ ವಿಘ್ನವನ್ನುಂಟುಮಾಡಬೇಕೆಂದಿಚ್ಛಿಸಿದನು.

**ಸ ತಯೋಽಸ್ತು ವಿಯೋಗಾರ್ಥಂ ಪಾರ್ಶ್ವಸ್ಥಂ ವಜ್ರಮಬ್ರವೀತ್ ।**
**ಪ್ರೀತಿಂ ಭಿಂಧಿ ತಯೋರ್ವಜ್ರ ಮಮ ಚೇದಿಚ್ಛಸಿ ಪ್ರಿಯಂ ॥**

**(ಬೃ. ದೇ. ೭-೧೪೯)**

ಆಗ ಇಂದ್ರನು ತನ್ನ ಸಮೀಪಸ್ಥವಾದ ವಜ್ರಾಯುಧವನ್ನು ಕುರಿತು "ಎಲೈ ವಜ್ರಾಯುಧವೇ, **ನೀನು ನನ್ನ ವಿಷಯ** ದಲ್ಲಿ ಅಭಿಮಾನವನ್ನಿಟ್ಟು ನನಗೆ ಹಿತವಾಗಬೇಕೆಂದು ಅಪೇಕ್ಷಿಸಿದ್ದೇ ಆದರೆ, ನಿನ್ನ ಶಕ್ತಿಯನ್ನು **ಪಯೋಗಿಸಿ ಊರ್ವಶಿ** ಮತ್ತು ಪುರೂರವನ ಪ್ರೇಮಕ್ಕೆ ಭಂಗವನ್ನುಂಟುಮಾಡು" ಎಂದು ತಿಳಿಸಿದನು.

**ತಥೇತ್ಯುಕ್ತ್ವಾ ತಯೋಃ ಪ್ರೀತಿಂ ವಜ್ರೋಽಭಿನತ್ಸ್ವಮಾಯಯಾ ।**
**ತತಸ್ತಯಾ ವಿಹೀನಸ್ತು ಚಚಾರೋನ್ಮತ್ತವನ್ನೃಪಃ ॥**

(ಬೃ. ದೇ. ೭-೧೫೦)

ಇಂದ್ರನ ಆಜ್ಞೆಯನ್ನು ಪಾಲಿಸುವುದಾಗಿ ವಜ್ರಾಯುಧವು ಇಂದ್ರನಿಗೆ ಮಾತನ್ನು ಕೊಟ್ಟು ತನ್ನ **ಅಸಾಧಾರಣವಾದ ಶಕ್ತಿ**ಯಿಂದ ಊರ್ವಶಿ ಮತ್ತು ಪುರೂರವನ ಪ್ರೇಮಕ್ಕೆ ಭಂಗವನ್ನುಂಟುಮಾಡಿತು. ಊರ್ವಶಿಯಿಂದ **ವಿಯುಕ್ತನಾದ ಪುರೂರವನು** ಹುಚ್ಚು ಹಿಡಿದವದಂತೆ ಅಲೆದಾಡುತ್ತಿದ್ದನು.

**ಚರನ್ ಸರಸಿ ಸೋಽಪಶ್ಯದಭಿರೂಪಾಮಿವೋರ್ವಶೀಂ ।**
**ಸಖೀಭಿರಭಿರೂಪಾಭಿಃ ಪಂಚಭಿಃ ಪಾರ್ಶ್ವತೋ ವೃತಾಂ ॥**

(ಬೃ. ದೇ ೭-೧೫೧)

ಹೀಗೆ **ಅಲೆದಾಡುತ್ತಿದ್ದಾಗ** ಒಂದು ಸರಸ್ಸಿನಲ್ಲಿ ವಿಹರಿಸುತ್ತಿದ್ದ ಉರ್ವಶಿಯನ್ನು ಕಂಡನು. **ತನ್ನ ದಿವ್ಯ ಸೌಂದರ್ಯಕ್ಕೆ ಅನುರೂಪವಾದ** ದೇಹಸಂಪತ್ತುಳ್ಳ ಐದು ಜನ ಸಖಿಯರೊಡನೆ ಕೂಡಿ ಅವಳು ವಿಹರಿಸುತ್ತಿದ್ದುದರಿಂದ **ಉರ್ವಶಿಯ ರೂಪವು** ಇನ್ನೂ ಅಧಿಕವಾಗಿ ಕಂಗೊಳಿಸುತ್ತ ಅವಳು ಚಿತ್ತಾಕರ್ಷಕಳಾಗಿದ್ದಳು.

**ತಾಮಾಹ ಪುನರೇಹೀತಿ ದುಃಖಾತ್ತ್ವಾ ಕ್ವೈಬ್ರವೀನ್ನೃಪಂ ।**
**ಅಪ್ರಾಪ್ಯಾಹಂ ತ್ವಯಾದ್ಯೇಹ ಸ್ವರ್ಗೇ ಪ್ರಾಪ್ಸ್ಯಸಿ ಮಾಂ ಪುನಃ ॥**

(ಬೃ ದೇ ೭-೧೫೨)

**ಅವಳನ್ನು ನೋಡಿದೊಡನೆಯೇ** ಪುರೂರವನು ಅವಳನ್ನು ಸಂಬೋಧಿಸಿ ಪುನಃ ತನ್ನಲ್ಲಿಗೆ ಬಂದು ತನ್ನ ಸವಾಗವು **ಸುಖವನ್ನು ಕೊಡುವಂತೆ ಕೇಳಿಕೊಂಡನು.** ಅವಳು ಅವನ ಆಹ್ವಾನವನ್ನು ಮನ್ನಿಸಲಾಗದೆ ಬಹಳ ದುಃಖದಿಂದ **ಕೂಡಿ ಈ ರೀತಿ ತಿಳಿಸಿದಳು.** "ಎಲೈ ಪುರೂರವನೇ, ನೀನು ನನ್ನನ್ನು ಈಗ ಪುನಃ ಪಡೆಯಲಾರೆ. ನಾವಿಬ್ಬರೂ **ಪುನಃ ಸ್ವರ್ಗದಲ್ಲಿ** ಸೇರಿದಾಗ ಸುಖವನ್ನನುಭವಿಸೋಣ"

**ಆಹ್ವಾನಂ ಪ್ರತಿ ಚಾಖ್ಯಾನಮಿತರೇತರಯೋರಿದಂ ।**
**ಸಂವಾದಂ ಮನ್ಯತೇ ಯಾಸ್ಕ ಇತಿಹಾಸಂ ತು ಶೌನಕಃ ॥**

(ಬೃ ದೇ. ೭-೧೫೩)

**ಈ ರೀತಿ ಉರ್ವಶೀ**ಪುರೂರವಸ್ಸುಗಳ ಸಂಭಾಷಣೆಯಲ್ಲಿ ಪರ್ಯವಸಾನವನ್ನು ಹೊಂದಿದ ಈ ಆಖ್ಯಾನವನ್ನು **ಯಾಸ್ಕರು ಸಂವಾದ**ವೆಂದು ಕರೆಯುತ್ತಾರೆ. ಶೌನಕರು ಇದೇ ಪ್ರಕರಣವನ್ನು ಒಂದು ಇತಿಹಾಸ (ಕಥೆ)ವೆಂದು ಹೇಳುತ್ತಾರೆ **ಪುರೂರವಾಃ** ಎಂಬ ಪದಕ್ಕೆ ನಿರುಕ್ತಕಾರರು ನಿರ್ವಚನವನ್ನು ತಿಳಿಸುತ್ತ—

**ಪುರೂರವಾಃ ಬಹುಧಾ ರೋರೂಯತೇ । ತಸ್ಯೈಷಾ ಭವತಿ ।** (ನಿ ೧೦-೪೬)

**ಅತ್ಯಧಿಕವಾಗಿ** ಶಬ್ದಮಾಡುತ್ತ ಕೂಗಿಕೊಂಡುದರಿಂದ "**ಪುರೂರವಾಃ**" **ಅಧಿಕವಾಗಿ** ಶಬ್ದಮಾಡುವವನು **ಎಂದು ಹೆಸರು ಪ್ರಸಿದ್ಧವಾಯಿತು** ಎಂದು ವಿವರಿಸಿ ಋಕ್ಸಂಹಿತೆಯಿಂದ ೧೦ ೯೫. ೭ ನೇ **ಋಕ್ಕನ್ನು** ಉದಾಹರಿಸಿ **ಪುರೂರವಸ್ಸಿನ ವಿಷಯವನ್ನು ತಿಳಿಸಿದ್ದಾರೆ** ಈ ಪ್ರಕರಣವು ಕೇವಲ ಕಥಾಭಾಗವಲ್ಲದೇ **ಇನ್ನೂ ಅಧಿಕವಾಗಿ** ವಿಷಯವನ್ನು **ತಿಳಿಸುವುದರಿಂದ** ನಿರುಕ್ತಕಾರರು **ಉದಾಹರಿಸಿರುವ ಈ** ಮಂತ್ರದ ತಾತ್ಪರ್ಯವನ್ನು **ಮುಂದೆ ತಿಳಿಸಲಾಗುತ್ತದೆ. ಸಾಯಣರು ಶತಪಥಬ್ರಾಹ್ಮಣದ ಕಥೆಯನ್ನು** ಸೂಕ್ಷ್ಮವಾಗಿ ತಿಳಿಸಿ ಆ ಕಥಾಸಂದರ್ಭಕ್ಕೂ **ಪ್ರಕೃತವಾದ ಪ್ರಕರಣಕ್ಕೂ ಇರುವ** ಸಂಬಂಧವನ್ನು **ತಿಳಿಸಿದ್ದಾರೆ.** ಆ ಕಥಾ ವಿವರವನ್ನು ತಿಳಿಯುವ **ಮೊದಲು ಪ್ರಥಮತಃ ಉರ್ವಶೀ ಪುರೂರವಸ್ಸುಗಳ ಕಥೆಯು ಯಾವ ಯಾವ ಕಡೆಗಳಲ್ಲಿ** ಉಕ್ತವಾಗಿದೆಯೆಂಬುದನ್ನು ತಿಳಿಯುವುದು **ಅವಶ್ಯವಾಗಿದೆ.**

ಈ ಕಥೆಯು ಒಟ್ಟು ಋಕ್ಸಂಹಿತೆಯಲ್ಲಲ್ಲದೆ ಎಂಟು ಬೇರೆ ಬೇರೆ ಪ್ರಕರಣಗಳಲ್ಲಿ ತಿಳಿಸಲ್ಪಟ್ಟಿದೆ **ಆ ಎಂಟು** ಸನ್ನಿವೇಶಗಳೂ ಯಾವುವೆಂದರೆ—

೧. ಶತಪಥಬ್ರಾಹ್ಮಣ. ೧೧.೫ ೧—೧೫
೨. ಕಾಠಕ. (ಯ. ವೇ) ೮-೧೦-೩.
೩. ಸರ್ವಾನುಕ್ರಮಣಿಯ ಷಡ್ಗುರುಶಿಷ್ಯರ ವ್ಯಾಖ್ಯಾನದಲ್ಲಿ.
೪. ವಾಯುಪುರಾಣದ ಕ್ರಮವನ್ನೇ ಅನುಸರಿಸಿರುವ ಹರಿವಂಶದ ಕಥಾಭಾಗ.
೫. ವಿಷ್ಣುಪುರಾಣ. ೪-೬-೧೯.
೬. ಬೃಹದ್ದೇವತಾ (ಈ ವಿವರವನ್ನು ಮೇಲೆ ತಿಳಿಸಿದೆ).
೭. ಮಹಾಭಾರತ. ಆದಿಪರ್ವ (೭೯.೨೦-೨೭)
೮. ಕಥಾಸರಿತ್ಸಾಗರ. ೧೭-೪.

ಇವುಗಳಲ್ಲಿ ಮುಖ್ಯವಾಗಿ ಮಹಾಭಾರತ, ಶತಪಥಬ್ರಾಹ್ಮಣ ಮತ್ತು ಬೃಹದ್ದೇವತೆಗಳಲ್ಲಿ ಉಕ್ತವಾಗಿರುವ ಕಥಾ ವಿವರವು ಪ್ರಕೃತವಾದ ಕಥೆಗೆ ಸಂಬಂಧಿಸಿರುತ್ತದೆ. ಮಹಾಭಾರತದ ಕಥೆಯು ಕೊಂಚ ವ್ಯತ್ಯಸ್ತವಾಗಿದೆ. ಅದರ ವಿವರವೇನೆಂದರೆ,

ಪುರೂರವಸ್ತತೋ ವಿದ್ವಾನಿಲಾಯಾಂ ಸಮಪದ್ಯತ ।
ಸಾ ವೈ ತಸ್ಯಾಭವನ್ಮಾತಾ ಪಿತಾ ಚೈವೇತಿ ನಃ ಶ್ರುತಂ ॥
ತ್ರಯೋದಶ ಸಮುದ್ರಸ್ಯ ದ್ವೀಪಾನಶ್ನನ್ಪುರೂರವಾಃ ।
ಅಮಾನುಷೈರ್ವೃತಃ ಸತ್ತ್ವೈರ್ಮಾನುಷಃ ಸನ್ಮಹಾಯಶಾಃ ॥
ವಿಪ್ರೈಃ ಸ ವಿಗ್ರಹಂ ಚಕ್ರೇ ವೀರ್ಯೋನ್ಮತ್ತಃ ಪುರೂರವಾಃ ।
ಜಹಾರ ಚ ಸ ವಿಪ್ರಾಣಾಂ ರತ್ನಾನ್ಯುತ್ಕ್ರೋಶತಾಮಪಿ ॥
ಸನತ್ಕುಮಾರಸ್ತಂ ರಾಜನ್ಬ್ರಹ್ಮಲೋಕಾದುಪೇತ್ಯ ಹ ।
ಅನುದರ್ಶಂ ತತಶ್ಚಕ್ರೇ ಪ್ರತ್ಯಗೃಹ್ಣಾನ್ನ ಚಾಪ್ಯಸೌ ॥
ತತೋ ಮಹರ್ಷಿಭಿಃ ಕ್ರುದ್ಧೈಃ ಸದ್ಯಃ ಶಪ್ತೋ ವ್ಯನಶ್ಯತ ।
ಲೋಭಾನ್ವಿತೋ ಬಲಮದಾನ್ನಷ್ಟಸಂಜ್ಞೋ ನರಾಧಿಪಃ ।
ಸ ಹಿ ಗಂಧರ್ವಲೋಕಸ್ಥಾನುರ್ವಶ್ಯಾ ಸಹಿತೋ ವಿರಾಟ್ ।
ಆನಿನಾಯ ಕ್ರಿಯಾರ್ಥೇಽಗ್ನೀನ್ಯಥಾವದ್ವಿಹಿತಾಂಸ್ತ್ರಿಧಾ ॥
ಷಟ್ ಸುತಾ ಜಜ್ಞಿರೇ ಚೈಲಾದಾಯುರ್ಧೀಮಾನಮಾವಸುಃ ।
ದೃಢಾಯುಶ್ಚ ವನಾಯುಶ್ಚ ಶತಾಯುಶ್ಚೋರ್ವಶೀಸುತಾಃ ॥
(ಮಹಾಭಾರತ ಆದಿಪರ್ವ. ಅಧ್ಯಾಯ. ೭೯. ೨೦-೨೭)

ಇಳಾ ಎಂಬುವಳ ಹೊಟ್ಟೆಯಲ್ಲಿ ಪುರೂರವಸ್ಸು ಉತ್ಪನ್ನನಾದನು ಇಳೆಯೇ ಇವನಿಗೆ ತಂದೆ ತಾಯಿಗಳ ಸ್ವರೂಪ ದಲ್ಲಿದ್ದಳು. ನಮಗೆ ತಿಳಿದಿರುವ ಮಟ್ಟಿಗೆ ಪುರೂರವನ ಮಾತಾಪಿತೃಗಳಿಬ್ಬರೂ ಇಳೆಯ ರೂಪದಲ್ಲಿಯೇ ಇದ್ದರು ಎಂದಿರುತ್ತದೆ. ಇಂತಹ ಅಸಾಧಾರಣವಾದ ರೂಪವನ್ನು ಹೊಂದಿದ್ದ ಇವಳಲ್ಲಿ ಉತ್ಪನ್ನನಾದ ಪುರೂರವನು ಸಮುದ್ರದ ಮಧ್ಯೆ ಇರುವ ಹದಿಮೂರು ದ್ವೀಪಗಳಿಗೆ ಒಡೆಯನಾಗಿ ಆಳುತ್ತಿದ್ದನು. ಇವನು ಯಾವಾಗಲೂ ವಿಜಯವನ್ನೇ ಪಡೆಯು

ತ್ತಿದ್ದುದರಿಂದ ಇವನ ಪರಾಕ್ರಮಕ್ಕೆ ಮೆಚ್ಚಿದ ದಿವ್ಯಪುರುಷರು ಮಾನವನಾದ ಇವನನ್ನು ಸುತ್ತುವರಿದು ಸೇವಿಸು ತ್ತಿದ್ದರು. ಇವನು ತನ್ನ ಪರಾಕ್ರಮದ ಪ್ರಭಾವದಿಂದ ಹೆಮ್ಮೆಯನ್ನು ಹೊಂದಿ ಮೆರೆಯುತ್ತಿದ್ದನು. ಆ ಹೆಮ್ಮೆ ಯಿಂದಲೇ, ಸಾಧುಸಂತರನ್ನು ಲಕ್ಷಿಸದೇ ಅವರನ್ನು ಹಿಂಸಿಸುತ್ತಿದ್ದನು ಅನೇಕ ಸಲ ಅವರು ಪ್ರತಿಭಟಿಸಿದರೂ ಅವರನ್ನು ಸದೆಬಡಿದು ಅವರ ಸ್ವತ್ತನ್ನೆಲ್ಲ ತನ್ನ ವಶಪಡಿಸಿಕೊಳ್ಳುತ್ತಿದ್ದನು. ಈ ಹಾವಳಿಯನ್ನು ತಪ್ಪಿಸಬೇಕೆಂಬ ಉದ್ದಿಶ್ಯದಿಂದ ಒಂದು ಸಲ ಸನತ್ಕುಮಾರನು ದಿವ್ಯಲೋಕದಿಂದ ಬಂದು ಇವನಿಗೆ ವಿವೇಕವನ್ನು ಹೇಳಿದನು. ಆದರೆ ಪುರೂರವನು ತನ್ನ ಮಾರ್ಗವನ್ನು ಬದಲಾಯಿಸಲಿಲ್ಲ ಹೀಗೆಯೇ ಸಾಧುಜನರನ್ನು ಹಿಂಸಿಸುತ್ತಿದ್ದುದರಿಂದ ಅವರು ಕೋಪಗೊಂಡು ಇವನನ್ನು ತೀವ್ರವಾಗಿ ಶಪಿಸಿದರು. ಇವನ ಶಕ್ತಿಯೆಲ್ಲವೂ ನಾಶವಾಯಿತು ಪ್ರಜ್ಞಾರಹಿತನಾದನು ಆದರೂ ಸಹ ಗಂಧರ್ವಲೋಕದಿಂದ ಯಜ್ಞಾರ್ಥವಾಗಿ ಅಗ್ನಿಯನ್ನು ತಂದು ಪೂಜಿಸಿದನು. ಮೂರು ವಿಭಾಗಾತ್ಮಕ ವಾದ ಈ ಅಗ್ನಿಯೊಡನೆ ಗಂಧರ್ವಲೋಕದಿಂದ ಉರ್ವಶಿಯನ್ನು ಕರೆತಂದನು. ಅವಳಲ್ಲಿ ಆರು ಮಂದಿ ಮಕ್ಕಳನ್ನು ಪಡೆದನು. ೧ ಆಯು, ೨ ಧೀಮರ್ಾ, ೩ ಅಮಾವಸು, ೪ ದೃಢಾಯು, ೫ ವನಾಯು ಮತ್ತು ೬ ಶ್ರುತಾಯು ಎಂಬುವರೇ ಈ ಆರು ಮಂದಿ ಪುತ್ರರು.

ಹೀಗೆ ಆಯು, ದೃಢಾಯು, ವನಾಯು, ಶ್ರುತಾಯು ಎಂಬ ಹೆಸರುಗಳು ಈ ಸಂತತಿಯಾದನಂತರ ಉತ್ಪನ್ನರಾದ ಆಯುವೆಂಬ ಗುಂಪಿನವರೆಲ್ಲರೂ ಉರ್ವಶೀಪುರೂರವಸ್ಸಿನಿಂದ ಉತ್ಪನ್ನವಾದ ಸಂತತಿಯವರೆಂದೇ ತಿಳಿಸುತ್ತದೆ ವಾಯುಪುರಾಣವೂ ಇದರಂತೆಯೇ ಪುರೂರವಸ್ಸಿನ ದೌಷ್ಟ್ಯವನ್ನು ವರ್ಣಿಸಿ ಅದರ ಫಲವಾಗಿ ಅವನ ನಾಶವು ಸಂಭವಿಸಿದುದನ್ನು ತಿಳಿಸುತ್ತದೆ. ಬ್ರಹ್ಮಾಂಡಪುರಾಣದ ವಿವರಣವೂ ಇವನ್ನೇ ಅನುಸರಿಸಿದೆ. ಈ ವಿವರಣವು ಈ ರೀತಿಯಿರುತ್ತದೆ.

"ಪುರೂರವನ ಧನದಾಸೆಯು ಅತ್ಯಧಿಕವಾಗಿದ್ದಿತು. ಎಷ್ಟು ಸಂಪತ್ತನ್ನು ಗಳಿಸಿದರೂ ಅವನಿಗೆ ತೃಪ್ತಿ ಯೆಂಬುದೇ ಇರಲಿಲ್ಲ. ಒಂದು ಸಲ ಅವನು ಮೃಗಯಾ ವಿಹಾರಕ್ಕಾಗಿ (ಬೇಟೆಗಾಗಿ) ಸಂಚರಿಸುತ್ತಿದ್ದಾಗ ನೈಮಿಷಾರಣ್ಯ ವನ್ನು ಪ್ರವೇಶಿಸಿದನು ಆ ಅರಣ್ಯದ ಆಶ್ರಮದಲ್ಲಿ ಋಷಿಗಳು ತಪಸ್ಸನ್ನು ಆಚರಿಸುತ್ತಿದ್ದರು ಅವರ ಯಜ್ಞಾರ್ಥ ವಾಗಿ ವಿಶ್ವಕರ್ಮನು ಸುವರ್ಣದಿಂದ ಯಜ್ಞವೇದಿಯನ್ನು ನಿರ್ಮಿಸಿದ್ದನು. ಪುರೂರವನು ಆ ಸುವರ್ಣವೇದಿಯನ್ನು ಎಡಕಿದನು ಅದನ್ನು ಕಸಿದುಕೊಳ್ಳಬೇಕೆಂಬ ಆಸೆಯುಂಟಾಯಿತು. ಆಗ ಕುಪಿತರಾದ ಋಷಿಗಳು ತಮ್ಮ ದರ್ಭ ಕೂರ್ಚಗಳಿಂದ ಅವನನ್ನು ಹೊಡೆದರು. ಅವೇ ವಜ್ರಾಯುಧದ ಏಟಿನಂತೆ ತೀವ್ರವಾಗಿದ್ದು ಅವನು ಕುಸಿದುಬಿದ್ದು ಮೃತಿಯನ್ನು ಹೊಂದಿದನು" ಎಂಬ ಈ ಪ್ರಕರಣವೂ ಸಹ ಪುರೂರವನ ದುಷ್ಟತನವನ್ನು ತೋರಿಸುತ್ತದೆ ಆದರೆ, ಈ ದುಷ್ಟತನವು ವೈದಿಕಭಾಗಗಳಲ್ಲೆಲ್ಲೂ ವರ್ಣಿತವಾಗಿಲ್ಲ. ಈ ಎಲ್ಲಾ ಭಾಗಗಳಿಗಿಂತಲೂ ಶತಪಥ ಬ್ರಾಹ್ಮಣದ ವಿವರಣವು ಋಕ್ಸಂಹಿತೆಯ ಕಥಾಭಾಗಕ್ಕೆ ನೇರವಾದ ಸಂಬಂಧವನ್ನು ತೋರಿಸುತ್ತದೆ. ಬ್ರಾಹ್ಮಣದ ಮೂಲವನ್ನು ಸಾಯಣರು ತಮ್ಮ ಭಾಷ್ಯದಪೀಠಿಕೆಯಲ್ಲಿ ಉದಾಹರಿಸಿರುತ್ತಾರೆ. ಅದರ ತಾತ್ಪರ್ಯವನ್ನು ಇಲ್ಲಿ ಕೊಡಲಾಗಿದೆ.

ಅಪ್ಸರಸ್ತ್ರೀಯಾದ ಉರ್ವಶಿಯು ಇಡಾಪುತ್ರನಾದ ಪುರೂರವಸ್ಸನ್ನು ಮೋಹಿಸಿದಳು. ಅನಂತರ ಅವ ನನ್ನು ವರಿಸಿ " ಎಲೈ ಪುರೂರವನೇ, ನನ್ನನ್ನು ನೀನು ದಿನಕ್ಕೆ ಮೂರು ಸಲ ಆಲಂಗಿಸಬಹುದು. ಆದರೆ, ನನ್ನ ಅನುಮತಿಯಿಲ್ಲದೆ ನನ್ನೊಂದಿಗೆ ಶಯನದಲ್ಲಿರಬಾರದು ನನ್ನೆದುರಿಗೆ ಮಾತ್ರ ನೀನು ಬೆತ್ತಲೆಯಾಗಿ ಕಾಣಿಸಿಕೊಳ್ಳ

ಕೂಡದು. ಆ ರೀತಿ ಕಾಣಿಸಿಕೊಳ್ಳುವುದು ಹೆಂಗಸರ ಮರ್ಯಾದೆಗೆ ಉಚಿತವಾಗಿರುವುದಿಲ್ಲ '' ಎಂದು ನಿಯಮ ವನ್ನು ಹಾಕಿದಳು.

(ಶ ಬ್ರಾ ೧೧-೫-೧-೧)

ಅದೇ ರೀತಿಯಲ್ಲಿ ಅವನೊಂದಿಗೆ ಬಹಳ ಕಾಲ ವಾಸಿಸುತ್ತಿದ್ದಳು ಅವನ ಜೊತೆಯಲ್ಲಿ ವಾಸಿಸುವಾಗಲೇ ಒಂದು ಮಗುವನ್ನೂ ಪಡೆದಳು. ಅವಳು ಬಹಳಕಾಲ ಅವನ ಜೊತೆಯಲ್ಲಿದ್ದುದರಿಂದ ಗಂಧರ್ವರು ಅವಳ ವಿಷಯದಲ್ಲಿ ಚಿಂತೆಯುಳ್ಳವರಾಗಿ " ಉರ್ವಶಿಯು ಬಹಳ ಕಾಲ ಮಾನವರ ನಡುವೆ ಇದ್ದುಬಿಟ್ಟಿದ್ದಾಳೆ, ಅಲ್ಲಿಂದ ನಮ್ಮಲ್ಲಿಗೆ ಅವಳು ಬರುವಂತೆ ಮಾಡಲು ಯಾವುದಾದರೂ ಒಂದುಪಾಯವನ್ನು ಹುಡುಕಬೇಕು." ಎಂದು ಯೋಚಿಸಿದರು. ಆಗ ಎರಡು ಮರಿಗಳ ಜೊತೆಯಲ್ಲಿ ಒಂದು ಕುರಿಯನ್ನು ತಂದು ಅವಳ ಮಂಚದ ಕಾಲಿಗೆ ಕಟ್ಟಿದರು. ಅನಂತರ ಆ ಮರಿಗಳಲ್ಲಿ ಒಂದನ್ನು ಅಪಹರಿಸಿದರು.

(ಶ. ಬ್ರಾ. ೧೧-೫-೧-೨.)

ಆಗ ಉರ್ವಶಿಯು ದುಃಖಗೊಂಡವಳಾಗಿ " ಯಾರೋ ನನ್ನ ಪ್ರೀತಿಪಾತ್ರವಾದ ಮರಿಯನ್ನು ಅಪಹರಿಸು ತ್ತಿದ್ದಾರೆ. ನನ್ನ ಮರಿಯನ್ನು ರಕ್ಷಿಸುವ ವೀರರಾರೂ ಇಲ್ಲಲ್ಲವೇ ? ಇದು ಅನಾಯಕ ಪಾಳ್ಯವೇ ? '' ಎಂದು ಅರಚಿಕೊಂಡಳು. ಅಷ್ಟರೊಳಗೆ ಅವರು ಎರಡನೆಯ ಮರಿಯನ್ನು ಅಪಹರಿಸಿಕೊಂಡು ಓಡಿದರು ಪುನಃ ಅವಳು ಅದೇ ರೀತಿ ದೈನ್ಯದಿಂದ ಕೂಗಿಕೊಂಡು ಸಹಾಯಕ್ಕಾಗಿ ಯಾಚಿಸಿದಳು.

(ಶ ಬ್ರಾ ೧೧-೫-೧-೩ )

ಈ ಆರ್ತನಾದವನ್ನು ಕೇಳಿದೊಡನೆಯೇ ಪುರೂರವನು ಎದ್ದು " ಈ ಪ್ರದೇಶದಲ್ಲಿ ನಾನಿರುವಾಗ ಇದು ಹೇಗೆ ಅನಾಯಕಪಾಳ್ಯವಾಗುತ್ತದೆ ? ನಾನು ವೀರನಲ್ಲವೇ ?'' ಎಂದು ಅವಸರದಿಂದ ತಾನು ಬೆತ್ತಲೆಯಾಗಿರು ವಾಗಲೇ ಅಲ್ಲಿಂದ ಹಾರಿದನು. ತಾನು ಬಟ್ಟೆಯನ್ನು ಹಾಕಿಕೊಳ್ಳುವುದು ಸಾವಕಾಶವಾಗುವುದೆಂದು ಯೋಚಿಸಿ ವೈಗೆ ಬಟ್ಟೆಯನ್ನೇ ಹಾಕಿಕೊಳ್ಳಲಿಲ್ಲ. ಅದೇ ಸಮಯವನ್ನು ಕಾಯುತ್ತಿದ್ದ ಗಂಧರ್ವರು ಮಿಂಚಿನ ಪ್ರಕಾಶ ವನ್ನುಂಟುಮಾಡಿದರು ಹಗಲಿನಂತೆಯೇ ಪ್ರಕಾಶವನ್ನುಂಟುಮಾಡಿದ ಆ ಪ್ರಕಾಶವು ಕಾಣಿಸಿದೊಡನೆಯೇ ನಗ್ನ ನಾಗಿದ್ದ ಪುರೂರವನನ್ನು ಉರ್ವಶಿಯು ನೋಡಿಬಿಟ್ಟಳು. ಒಡನೆಯೇ ಅದೃಶ್ಯಳಾದಳು. ಆಗ ಪುರೂರವನು ಇದೋ ನಾನೂ ಬಂದು ಬಿಟ್ಟೆನು " ಎಂದು ಹೇಳುವುದರೊಳಗೆ ಅವಳು ಕಣ್ಣಿಗೆ ಕಾಣದೆ ದೂರಕ್ಕೆ ಹೊರಟೇ ಹೋದಳು. ಪುರೂರವನು ದುಃಖದಿಂದ ಪರಿತಪಿಸುತ್ತ ಕುರುಕ್ಷೇತ್ರವನ್ನೆಲ್ಲ ಸುತ್ತಿ ಅಲೆದಾಡಿದನು. ಹಾಗೆಯೇ ಅಲೆದಾಡುತ್ತಿರುವಾಗ ಅಲ್ಲೇ ಅನ್ಯತಃಪ್ಲಕ್ಷನೆಂಬ ಸರೋವರದ ದಡದಲ್ಲಿ ಸುತ್ತುತ್ತಿದ್ದನು. ಕಮಲಪುಷ್ಪದಿಂದ ತುಂಬಿದ್ದ ಅದೇ ಸರೋವರದಲ್ಲಿ ಉರ್ವಶಿಯೂ ಅವಳ ಸಖಿಯರೂ ಹಂಸ ರೂಪದಿಂದ ವಿಹರಿಸುತ್ತಿದ್ದರು.

(ಶ. ಬ್ರಾ. ೧೧-೫-೧-೪)

ಆಗ ಉರ್ವಶಿಯು ಅವನನ್ನು ಗುರ್ತಿಸಿ " ಇವನೇ ಪುರೂರವನು " ಎಂದು ತನ್ನ ಸಖಿಯರಿಗೆ ತಿಳಿಸಿದಳು. " ಅವನಿಗೆ ನಾವು ಕಾಣಿಸಿಕೊಳ್ಳೋಣ " ಎಂದು ಅವರು ತಿಳಿದನಂತರ ಉರ್ವಶಿಯು ತನ್ನ ಸಖಿಯರೊಂದಿಗೆ ಪುರೂರವನಿಗೆ ಕಾಣಿಸಿಕೊಂಡಳು.

(ಶ. ಬ್ರಾ. ೧೧-೫-೧-೫)

ಇದೇ ಋಕ್ಸಂಹಿತೆಯ ಪ್ರಕರಣಕ್ಕೆ ಪೀಠಿಕೆ. ಋಕ್ಸಂಹಿತೆಯ ಸಂಭಾಷಣವು ಈ ಸಂದರ್ಭದಲ್ಲಿಯೇ ಆರಂಭವಾಗುತ್ತದೆ. ಇದೇ ಋಕ್ಸಂಹಿತಾ ವಾಕ್ಯಗಳೇ ಶತಪಥಬ್ರಾಹ್ಮಣದಲ್ಲಿಯೂ ಪಠಿತವಾಗಿ ಇವರ ಸಂಭಾಷಣವನ್ನು ಮುಂದುವರಿಸಿದೆ. ಆದರೆ ಕೆಲವಂಶಗಳನ್ನು ಮಾತ್ರ ಋಕ್ಸಂಹಿತೆಯ ಈ ಸೂಕ್ತದ ೧, ೨, ೧೪, ೧೫ ಮತ್ತು ೧೬. ನೇ ಮಂತ್ರಗಳಲ್ಲಿ ಉಕ್ತವಾಗಿರುವ ಸಂಭಾಷಣವನ್ನು ಬ್ರಾಹ್ಮಣವಾಕ್ಯಗಳು ತಿಳಿಸುತ್ತವೆ. ಆದುದರಿಂದ, ಋಕ್ಸಂಹಿತೆಯಲ್ಲಿ ಸಂಭಾಷಣದ ಸಾರಾಂಶವೇನೆಂಬುದನ್ನು ಸೂಕ್ಷ್ಮವಾಗಿ ಇಲ್ಲಿ ತಿಳಿಸಲಾಗುತ್ತದೆ.

ಇದ್ದಕ್ಕಿದ್ದಂತೆಯೇ ತನ್ನನ್ನು ಬಿಟ್ಟು ಹೊರಟುಹೋದುದರಿಂದ ಪುರೂರವನು ಉರ್ವಶಿಯನ್ನು '' ಎಲೈ ಘೋರೆಯೇ (ಎಲೈ ಕ್ರೂರ ಹೃದಯಳೇ)'' ಎಂದು ಸಂಬೋಧಿಸಿ ಕೊಂಚಕಾಲ ಅವಳೊಂದಿಗೆ ಸಂಭಾಷಣ ಸೌಖ್ಯವನ್ನು ಹೊಂದಬೇಕೆಂದಪೇಕ್ಷಿಸುವನು ಆದಕ್ಕುತ್ತರವಾಗಿ ಅವಳೂ ಸಹ ತನ್ನ ಕಾಠಿನ್ಯವನ್ನೇ ತೋರ್ಪಡಿಸುತ್ತ "ಎಲೈ ಪುರೂರವನೇ '' ಈ ಸಂಭಾಷಣದಿಂದ ನಿನಗೆ ಆಗ ಬೇಕಾದುದು ತಾನೆ ಏನು? ಪ್ರಥಮೋತ್ಪನ್ನಳಾದ ಉಷಸ್ಸಿನಂತೆ ನಾನು ನಿನ್ನನ್ನು ಬಿಟ್ಟು ದೂರ ಸರಿದು ಬಂದಿದ್ದೇನೆ ನಾನು ನಿನಗೆ ಸಿಕ್ಕುವವಳಲ್ಲ ನೀನು ಮನೆಗೆ ಹಿಂತಿರುಗು'' ಎಂದು ತಿಳಿಸುತ್ತಾಳೆ. ಪುನಃ ಪುರೂರವನು ತನ್ನ ಮನೋಯಾತನೆಯನ್ನು ವರ್ಣಿಸುತ್ತ ಉರ್ವಶಿಯ ಸಂಗವಿಲ್ಲದಿದ್ದರೆ ತನ್ನ ಪರಾಕ್ರಮವೆಲ್ಲವೂ ಕುಂದಿಹೋಗುವುದೆಂದೂ, ಶತ್ರುಗಳ ಮೇಲೆ ಬಾಣವನ್ನು ಪ್ರಯೋಗಿಸಲು ಸಹ ಶಕ್ತಿಯಿರುವುದಿಲ್ಲವೆಂದೂ, ಶತ್ರುಗಳನ್ನು ಬೆದರಿಸಲು ಸಹ ಸಾಧ್ಯವಿಲ್ಲವೆಂದೂ ತನ್ನ ದೌರ್ಬಲ್ಯವನ್ನು ತೋರ್ಪಡಿಸುತ್ತ ಅವಳ ಸಂಗಕ್ಕಾಗಿ ಪುನಃ ಯಾಚಿಸುತ್ತಾನೆ.

"ಎಲೈ ಪುರೂರವನೇ, ನೀನು ನನ್ನೊಡನೆ ಸ್ವತಂತ್ರವಾಗಿದ್ದು ಸಕಲ ಸೌಖ್ಯಗಳನ್ನು ಅನುಭವಿಸಿರುವೆ. ನೀನು ಪೃಥ್ವಿಯನ್ನು ರಕ್ಷಿಸುವ ಸಲುವಾಗಿ ಉತ್ಪನ್ನನಾಗಿದ್ದೀಯೆ. ಮತ್ತು ನನ್ನಲ್ಲಿ ನಿನ್ನ ವೀರ್ಯವನ್ನು ಸ್ಥಾಪಿಸಿದ್ದೀಯೆ. ಭವಿಷ್ಯವನ್ನು ತಿಳಿದವಳಾಗಿ ನಿನ್ನ ಕರ್ತವ್ಯವೇನು ಎಂಬುದನ್ನು ನಾನು ಆಗಲೇ ನಿನಗೆ ತಿಳಿಸಿದ್ದೇನೆ. ಆದರೆ ನೀನು ಮಾತ್ರ ನನ್ನ ಹಿತವಚನವನ್ನು ಪಾಲಿಸಲಿಲ್ಲ ನನ್ನ ಮಾತನ್ನು ಉಲ್ಲಂಘಿಸಿ ಈಗ ಮಾತ್ರ ಏತಕ್ಕಾಗಿ ಮೊರೆಯಿಡುತ್ತಿರುವೆ?'' ಎಂದು ಮೂದಲಿಸುತ್ತಾಳೆ.

ಹೀಗೆಯೇ ಕೊಂಚಕಾಲ ಉತ್ತರ ಪ್ರತ್ಯುತ್ತರಗಳು ನಡೆದ ನಂತರ ಅವಳು ಅವನಿಗೆ ತನ್ನ ಸಂಗವನ್ನು ಸ್ವರ್ಗದಲ್ಲಿ ಲಭಿಸುವುದಾಗಿ ಭರವಸೆಯನ್ನಿತ್ತು ಅಂತರ್ಧಾನಳಾಗುತ್ತಾಳೆಂದು ಋಕ್ಸಂಹಿತೆಯ ವಾಕ್ಯವಿರುತ್ತದೆ. ಆದರೆ ಶತಪಥಬ್ರಾಹ್ಮಣದಲ್ಲಿ ಇನ್ನೂ ಅಧಿಕವಾದ ವಿಷಯವು ತಿಳಿಸಲ್ಪಟ್ಟಿದೆ.

> "ಸಾ ಹೋವಾಚ, ಸಂವತ್ಸರತಮೀಗ್ಂ ರಾತ್ರಿಮಾಗಚ್ಛತಾತ್ತನ್ಮ ಏಕಾಗ್ಂ ರಾತ್ರಿಮಂತೇ ಶಯಿತಾಸೇ ಜಾತ ಉ ತೇಽಯಂ ತರ್ಹಿ ಪುತ್ರೋ ಭವಿತೇತಿ ಸ ಹ ಸಂವತ್ಸರತಮೀಗ್ಂ ರಾತ್ರಿಮಾಜಗಾಮೇದ್ಧಿರಣ್ಯವಿಮಿತಾನಿ ತತೋ ಹೈನಮೇಕಮೂಚುರೇತತ್ಪ್ರಪದ್ಯಸ್ವೇತಿ ತದ್ಧಾಸ್ಮೈ ತಾಮುಪಪ್ರಜಿಘ್ಯುಃ॥
>
> (ಶ. ಬ್ರಾ. ೧೧-೫-೧-೧೧)

ಪುರೂರವನ ದೈನ್ಯವನ್ನು ನೋಡಿ ಉರ್ವಶಿಯ ಹೃದಯವು ಕರಗಿ ಈ ರೀತಿ ತಿಳಿಸುತ್ತಾಳೆ. "ಎಲೈ, ಪುರೂರವನೇ, ನೀನು ಸಂವತ್ಸರದ ಕೊನೆಯ ದಿನ ನನಲ್ಲಿಗೆ ಬಂದು ನನ್ನ ಸಂಗವನ್ನು ಹೊಂದು ಒಂದು ರಾತ್ರಿ

ಮಾತ್ರ ನನ್ನ ಜೊತೆಯಲ್ಲಿರಬಹುದು. ನಿನಗೆ ಓರ್ವ ಪುತ್ರನು ನನ್ನಲ್ಲಿ ಉತ್ಪನ್ನನಾಗುತ್ತಾನೆ.'' ಅದೇ ರೀತಿ ಅವನು ನಿರ್ದಿಷ್ಟವಾದ ದಿನ ಅವಳ ಸ್ಥಾನಕ್ಕೆ ಹೋದನು. ಅಲ್ಲಿ ಸುವರ್ಣಾಸನದ ಮೇಲೆ ಕುಳಿತಿದ್ದಾಗ ಉರ್ವಶಿಯ ಸಖಿಯರು ಬಂದು ಅವನನ್ನು ಮೇಲಕ್ಕೆ ಕಳುಹಿಸಿ ಅವನಲ್ಲಿಗೆ ಉರ್ವಶಿಯನ್ನೂ ಕಳುಹಿಸಿದರು.

ಸಾ ಹೋವಾಚ । ಗಂಧರ್ವಾ ವೈ ತೇ ಪ್ರಾತರ್ವರಂ ದಾತಾರಸ್ತಂ ವೃಣಾಸಾ ಇತಿ ತಂ ವೈ ಮೇ ತ್ವಮೇವ ವೃಣೀಷ್ವೇತಿ ಯುಷ್ಮಾಕಮೇವೈಕೋಽಸಾನೀತಿ ಬ್ರೂತಾದಿತಿ ತಸ್ಮೈ ಹ ಪ್ರಾತರ್ಗಂಧರ್ವಾ ವರಂ ದದುಃ ಸ ಹೋವಾಚ ಯುಷ್ಮಾಕಮೇವೈಕೋಽಸಾನೀತಿ ॥

(ಶ. ಬ್ರಾ ೧೧-೫-೧-೧೨)

ಉರ್ವಶಿಯು ಪುರೂರವನಲ್ಲಿಗೆ ಬಂದು " ಗಂಧರ್ವರು ಬೆಳಿಗ್ಗೆ ನಿನಗೆ ಒಂದು ವರವನ್ನು ಅನುಗ್ರಹಿಸುತ್ತಾರೆ. ಅದನ್ನು ನೀನು ಸ್ವೀಕರಿಸು ಮತ್ತು ನಿನ್ನಿಷ್ಟಬಂದ ವರವನ್ನು ಕೇಳಿಕೊ" ಎಂದಳು. " ಆ ವರವೇನೆಂದಿರಬೇಕೆಂದು ನೀನೇ ತಿಳಿಸು '' ಎಂದು ಪುರೂರವನು ಕೇಳಲಾಗಿ " ನಾನೂ ನಿಮ್ಮೊಂದಿಗೆ ಒಬ್ಬ ಗಂಧರ್ವನಾಗಿರುವಂತೆ ಅನುಗ್ರಹಿಸಿ ಎಂದು ಕೇಳಿಕೊ'' ಎಂದಳು ಹಾಗೆಯೇ ಮಾರನೆಯ ದಿನಬೆಳಿಗ್ಗೆ ಗಂಧರ್ವರು ಬಂದು ಪುರೂರವನಿಗೆ ವರವನ್ನು ಅನುಗ್ರಹಿಸಿದಾಗ '' ನಾನೂ ನಿಮ್ಮೊಡನೆ ಗಂಧರ್ವನಾಗಿರುವಂತೆ ನನಗೆ ವರವನ್ನು ಕೊಡಿ '' ಎಂದು ಯಾಚಿಸಿದನು.

ತೇ ಹೋಚುಃ । ನ ವೈ ಸಾ ಮನುಷ್ಯೇಷ್ವಗ್ನೇರ್ಯಜ್ಞಿಯಾ ತನೂರಸ್ತಿ ಯಯೇಷ್ಟ್ವಾಸ್ಮಾಕಮೇಕಃ ಸ್ಯಾದಿತಿ ತಸ್ಮೈ ಹ ಸ್ಥಾಲ್ಯಾಮೋಪ್ಯಾಗ್ನಿಂ ಪ್ರದದುರನೇನೇಷ್ಟ್ವಾಸ್ಮಾಕಮೇಕೋ ಭವಿಷ್ಯಸೀತಿ ತಂ ಚ ಹ ಕುಮಾರಂ ಚಾದಾಯಾವವ್ರಾಜ ಸೋಽರಣ್ಯ ಏವಾಗ್ನಿಂ ನಿಧಾಯ ಕುಮಾರೇಣೈವ ಗ್ರಾಮಮೇಯಾಯ ಪುನರ್ಹೈಮೀತ್ಯೇತ್ತಿರೋಭೂತಂ ಯೋಽಗ್ನಿರಶ್ವತ್ಥಂ ತಂ ಯಾ ಸ್ಥಾಲೀ ಶಮೀಂ ತಾಗ್ಂ ಸ ಹ ಪುನರ್ಗಂಧರ್ವಾನೇಯಾಯ ॥

(ಶ. ಬ್ರಾ ೧೧-೫-೧-೧೩)

ಎಲೈ ಪುರೂರವನೇ, ದೇವತೆಗಳನ್ನು ಆರಾಧಿಸಿ ಉತ್ತಮವಾದ ದಿವ್ಯತ್ವವನ್ನು ಪಡೆಯಲು ಸಾಧಕವಾದ ಯಾವ ಯಜ್ಞತತ್ತ್ವವಿದೆಯೋ ಅದು ಮಾನವರಿಗೆ ಇನ್ನೂ ಗೊತ್ತಿಲ್ಲ ಆದುದರಿಂದ ನೀನು ಆ ಜ್ಞಾನವನ್ನು ಹೊಂದಿದ ಹೊರತು ನಮ್ಮ ಗುಂಪಿಗೆ ಸೇರಲಾಗುವುದಿಲ್ಲ, ಆದುದರಿಂದ ಈ ಯಜ್ಞತತ್ವವನ್ನು ನಿನಗೆ ಉಪದೇಶಿಸುತ್ತೇವೆ ಎಂದು ಅವನಿಗೆ ಅದನ್ನು ಉಪದೇಶಿಸಿದರು. ಆ ಜ್ಞಾನವನ್ನು ಪಡೆದ ಪುರೂರವನು ದಿವ್ಯತ್ವವನ್ನು ಪಡೆದು ಅವರೊಂದಿಗೆ ಸೇರಿಕೊಂಡನು. ಇದೇ ಬ್ರಾಹ್ಮಣದ ಕಥೆ

ಈ ಸೂಕ್ತದಲ್ಲಿ ಯಾವ ದೇವತೆಯನ್ನೂ ಸ್ತುತಿಸಿರುವುದಿಲ್ಲ ಋಗ್ವೇದದ ಸೂಕ್ತಗಳಲ್ಲೆಲ್ಲಾ ಪ್ರಾಯಶಃ ಯಾವುದಾದರೂ ಒಂದು ದೇವತೆಯನ್ನು ಸ್ತುತಿಸಿರುವ ಪ್ರಾರ್ಥನೆಯೇ ವಿಶೇಷವಾಗಿ ಕಂಡುಬರುವುದು. ಆದರೂ ಜಗತ್ಸೃಷ್ಟಿ, ತತ್ತ್ವನಿರೂಪಣೆ, ರಾಜರ ದಾನಸ್ತುತಿ, ಇತರ ವಿಷಯಗಳ ನಿರೂಪಣೆ ಮೊದಲಾದ ಇತರ ವರ್ಣನೆಗಳೂ ಅಲ್ಲಲ್ಲಿ ಇರುವವು. ಇವುಗಳ ಜತೆಗೆ ಸ್ತ್ರೀಪುರುಷರ ರತಿಕ್ರೀಡೆಗೆ ಸಂಬಂಧಪಟ್ಟ ಸಂಭಾಷಣೆಗೆ ಮೊದಲಾದುವು ಕೆಲವು ಇರುವವು. ಇವುಗಳಲ್ಲಿ, ಯಮಯಮಿಯರ ಸಂವಾದ, ಅಗಸ್ತ್ಯಲೋಪಾಮುದ್ರೆಯರ ಸಂವಾದ, ಸ್ವನಯನ ವೃತ್ತಾಂತ, ಪುರೂರವಸ್ಸು ಮತ್ತು ಉರ್ವಶೀ ಎಂಬುವರ ಪರಸ್ಪರಸಂಭಾಷಣೆ, ಇವುಗಳು ಮುಖ್ಯವಾದುವು. ರತಿಕ್ರೀಡೆಗೆ

ಸಂಬಂಧಪಟ್ಟ ಸಂಭಾಷಣೆಯನ್ನೊಳಗೊಂಡ ಇಂತಹ ಸೂಕ್ತಗಳು, ದೇವತೆಗಳ ಸ್ತುತಿಯನ್ನು ಮಾತ್ರ ಒಳಗೊಂಡಿರುವ ಸೂಕ್ತಗಳ ಮಧ್ಯದಲ್ಲಿ ಹೇಗೆ ಸೇರಿ ಹೋಗಿರುವವು ಎಂಬುದು ಆಶ್ಚರ್ಯಕರವಾದ ವಿಷಯವೇಸರಿ. ಈ ಮಂತ್ರಗಳಿಗೆ ಮೇಲೆ ತೋರುವ ಅರ್ಥವಲ್ಲದೆ ಬೇರೆ ವಿಧವಾದ ಗೂಡಾರ್ಥವಿರಬಹುದು. ಅಥವಾ ಒಂದು ನಿರ್ದಿಷ್ಟವಾದ ನೀತಿಯನ್ನು ಬೋಧಿಸುವ ಸಲುವಾಗಿ ಇಲ್ಲಿ ಸೇರಿರಬಹುದು. ಅತಿ ಪ್ರಾಚೀನಕಾಲದಲ್ಲಿ ಎಂದರೆ, ಋಗ್ವೇದಸೂಕ್ತಗಳು ಈಗಿರುವಂತೆ ವಿಂಗಡಿಸಲ್ಪಡದೆ ಇದ್ದಕಾಲದಲ್ಲಿ ಇಂತಹ ಸೂಕ್ತಗಳೂ ಇತರವಿಧವಾದ (ದೇವತಾಸ್ತುತಿ ಇರುವ ಮತ್ತು ಇಲ್ಲದಿರುವ) ಇನ್ನೂ ಅನೇಕಸೂಕ್ತಗಳೂ ರೂಢಿಯಲ್ಲಿದ್ದಿರಬಹುದು. ಋಗ್ವೇದ ಸೂಕ್ತಗಳನ್ನೆಲ್ಲಾ ಒಂದು ನಿರ್ದಿಷ್ಟ ಕ್ರಮದಲ್ಲಿ ವಿಂಗಡಿಸುವಾಗ ಅದರ ಕಾರ್ಯಕರ್ತರು ಇಂತಹ ಅನೇಕ ಸೂಕ್ತಗಳನ್ನು ಋಗ್ವೇದದಲ್ಲಿ (ಅನವಶ್ಯಕವಿಲ್ಲವೆಂಬ ಕಾರಣದಿಂದ) ಸೇರಿಸದೆ ಕೈಬಿಟ್ಟಿರಬಹುದು. ಆದ್ದರಿಂದ ಆ ಕಾಲದಲ್ಲಿ ಬಳಕೆಯಲ್ಲಿದ್ದ ಸೂಕ್ತಗಳೆಲ್ಲಾ ಈಗಿರುವ ಋಗ್ವೇದದಲ್ಲಿ ಸೇರಿರುವುದಿಲ್ಲ ಎಂಬ ವಾದಕ್ಕೆ ಅನೇಕ ಆಧಾರಗಳನ್ನು ಕೊಡಬಹುದು ಈ ವಿಷಯವನ್ನು ನಾವು ಬೇರೆ ಸಂದರ್ಭದಲ್ಲಿ ವಿಮರ್ಶೆಮಾಡುವುದರಿಂದ ಇಲ್ಲಿ ಈ ಸಂಬಂಧವಾದ ವಿವರಣೆಯು ಅವಶ್ಯಕವಿಲ್ಲ. ಪ್ರಕೃತಸೂಕ್ತದಲ್ಲಿ ಹೇಳಿರುವ ವಿಷಯುವನ್ನು ಅಲ್ಲಿರುವಂತೆಯೇ ಸಂಭಾಷಣೆಯ ರೂಪದಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇವೆ.

1. ಪುರೂರವ—ಎಲೈ ಕಠಿನಹೃದಯಳಾದ ಪತ್ನಿಯೇ, ನಮ್ಮಲ್ಲಿ ಪರಸ್ಪರ ಅನುರಾಗವನ್ನು ಸೂಚಿಸುವ ಮನಸ್ಸನ್ನು ಪ್ರದರ್ಶಿಸುತ್ತಾ ಇಲ್ಲಿ ಸ್ವಲ್ಪಕಾಲ ನಿಲ್ಲು ಏಕೆಂದರೆ, ನಮ್ಮ ಮನಸ್ಸಿನಲ್ಲಿರುವ ಭಾವಗಳನ್ನು ಪರಸ್ಪರ ಸಂಭಾಷಣೆಯ ಮೂಲಕ ವ್ಯಕ್ತಪಡಿಸೋಣ ಹಾಗೆ ನಾವು ಮನಸ್ಸನ್ನು ಬಿಚ್ಚಿ ಮಾತನಾಡದೆ ನಮ್ಮ ಆಲೋಚನೆಗಳು ಹಾಗೆಯೇ ಉಳಿದಲ್ಲಿ ಕೊನೆಯವರೆಗೂ ನಮಗೆ ಸುಖವನ್ನುಂಟುಮಾಡುವುದಿಲ್ಲ.

2. ಉರ್ವಶೀ—ಎಲೈ ಪುರೂರವನೇ, ನಾವು ಪರಸ್ಪರ ಸಂಭಾಷಣೆ ಮಾಡುವುದರಿಂದ ಏನು ಉಪಯೋಗ? ಸೂರ್ಯೋದಯಾನಂತರ ಕಳೆದುಹೋದ ಉಷಃಕಾಲವು ಪುನಃ ದೊರಕದಿರುವಂತೆ ನಾನು ನಿನ್ನನ್ನು ಬಿಟ್ಟು ದೂರ ಸರಿದುಬಂದಿದ್ದೇನೆ, ನೀನು ನಿನ್ನ ಗೃಹಕ್ಕೆ ಹಿಂತಿರುಗು. ಗಾಳಿಯನ್ನು ಕೈಯ್ಯಲ್ಲಿ ಹಿಡಿಯಲು ಹೇಗೆ ಸಾಧ್ಯವಿಲ್ಲವೋ ಅದರಂತೆ ನಾನು ನಿನಗೆ ಸಿಕ್ಕುವವಳಲ್ಲ

3 ಪುರೂರವ— ಎಲೈ ಉರ್ವಶಿಯೇ, (ನಿನ್ನ ವಿರಹವ್ಯಥೆಯಿಂದ ನಾನು ಬಳಲಿ ಬೆಂಡಾಗಿದೇನೆ. ನನ್ನ ಸಾಮರ್ಥ್ಯವು ಕುಗ್ಗಿಹೋಗಿದೆ) ವಿಜಯಾರ್ಥವಾಗಿ ನಾನು ಯುದ್ಧಮಾಡುವಾಗ ನನ್ನ ಬತ್ತಳಿಕೆಯಿಂದ ಬಾಣವನ್ನು ಎಸೆಯಲಾಗುವುದಿಲ್ಲ. ಯುದ್ಧದಲ್ಲಿ ಶತ್ರುಗಳ ಮೇಲೆ ವೇಗವಾಗಿ ಮುನ್ನುಗ್ಗುತ್ತಿದ್ದ ನಾನು ಶತ್ರುಗಳ ಗೋವುಗಳನ್ನು ಗೆದ್ದು ತರಲು ಅಸಮರ್ಥನಾಗಿದ್ದೇನೆ. ಶತ್ರುಗಳ ಧನಾದಿಗಳನ್ನು ಗೆಲ್ಲಲು ನನ್ನಿಂದ ಸಾಧ್ಯವಿಲ್ಲವಾಗಿದೆ, ನಾನು ನೆರವೇರಿಸುವ ಇತರ ರಾಜಕಾರ್ಯಗಳಲ್ಲಿಯೂ ನನ್ನ ಶಕ್ತಿ ಸಾಮರ್ಥ್ಯಗಳು ಪ್ರಕಾಶಿಸುವುದೇ ಇಲ್ಲ ಎಂದರೆ ಎದ್ದು ಕಾಣುವುದಿಲ್ಲ, ಯುದ್ಧಗಳಲ್ಲಿ ಶತ್ರುಗಳನ್ನು ಭಯದಿಂದ ನಡಗುವಂತೆ ಮಾಡಬಲ್ಲ ನನ್ನ ಯುದ್ಧಭಟರು ನನ್ನ ಆಜ್ಞಾರೂಪವಾದ ಶಬ್ದವನ್ನು ಗಮನಿಸುವುದೇ ಇಲ್ಲ.

4. ಉರ್ವಶೀ—(ತನ್ನ ಆತ್ಮಗತವನ್ನು ಉಷೋದೇವಿಯೊಡನೆ ಹೇಳಿಕೊಳ್ಳುತ್ತಾ) ಎಲೈ ಉಷೋದೇವಿಯೇ, ನಾನು ಹಿಂದೆ ಪುರೂರವಸ್ಸಿನ ತಂದೆಯಾದ ನನ್ನ ಮಾವನಿಗೆ ವಸ್ತ್ರವನ್ನೂ ಅನ್ನಾದ್ಯಾಹಾರಗಳನ್ನೂ ಸಿದ್ಧಪಡಿಸಿಕೊಟ್ಟು ಉಪಚರಿಸುತ್ತಾ ಅವನ ಗೃಹದಲ್ಲಿ ವಾಸವಾಗಿದ್ದೆನು. ನಾನು ಪತಿಯನ್ನು ಅಪೇಕ್ಷಿಸುವಾಗ ನನ್ನ

ಮಾವನ ಭೋಜನಗೃಹದಿಂದ ಹೊರಟು ನನ್ನ ಪತಿಗೃಹವನ್ನು ಸೇರುತ್ತಿದ್ದೆನು. ಅಲ್ಲಿ ನನ್ನ ಪತಿಯು ಹಗಲು ರಾತ್ರಿಯೆನ್ನದೆ ನನ್ನನ್ನು ಪ್ರೀತಿಯಿಂದ ಆಲಂಗಿಸುತ್ತಾ ತನ್ನ ಪುರುಷಲಿಂಗದಿಂದ ನನ್ನನ್ನು ಹಿತಕರವಾಗುವಂತೆ ತಾಡಿಸುತ್ತಿದ್ದನು.

5. (ಪುರೂರವನನ್ನುದ್ದೇಶಿಸಿ ಮಾತನಾಡುತ್ತಾ) ಎಲೈ ಪುರೂರವನೇ, ಹಿಂದೆ (ನಾನು ನಿನ್ನ ಮನೆಯಲ್ಲಿದ್ದಾಗ) ನೀನು ದಿನಕ್ಕೆ ಮೂರುಸಲ ಆಲಿಂಗನಾದಿಗಳಿಂದಲೂ, ಪುರುಷಾಂಗವಾದ ಲಿಂಗದ ತಾಡನೆಯಿಂದಲೂ ನನ್ನನ್ನು ಸಂತೋಷಪಡಿಸುತ್ತಿದ್ದೆ. ಮತ್ತು ನನಗೆ ಅಲ್ಲಿ ಸಪತ್ನಿಯರ ಎಂದರೆ ಸವತಿಯರ ಬಾಧೆಯೂ ಇರಲಿಲ್ಲ ಈರೀತಿ ನಿನ್ನ ಗೃಹದಲ್ಲಿ ನಾನು ಸುಖವಾಗಿ ವಾಸಮಾಡಿಕೊಂಡಿದ್ದೆನು. ಎಲೈ ವೀರನೇ, ಆ ಕಾಲದಲ್ಲಿ ನನ್ನ ಶರೀರಕ್ಕೂ ಸುಖಾದಿಗಳಿಗೂ ನೀನೇ ಒಡೆಯನಾಗಿದ್ದೆಯಲ್ಲವೇ.

6. ಪುರೂರವ—ಎಲೈ ಉರ್ವಶಿಯೇ, ಸುಜೂರ್ಣಿ, ಶ್ರೇಣಿ, ಸುಮ್ನಆಪಿ, ಹ್ರದೇಚಕ್ಷು, ಗ್ರಂಥಿನೀ, ಚರಣ್ಯು ಎಂಬ ಆರುಮಂದಿ ಅಪ್ಸರಸ್ತ್ರೀಯರು ಸರ್ವಾಭರಣಗಳನ್ನೂ ಧರಿಸಿ ಹೊಂಬಣ್ಣದ ಶರೀರ ಕಾಂತಿಯಿಂದ ಶೋಭಿಸುತ್ತಾ ನಿನ್ನೊಡನೆ ಬಂದಿದ್ದಾರೆ. ಅವರು ಹಿಂದಿನಂತೆ ಓಡಿಹೋಗುವುದಿಲ್ಲ ಮತ್ತು ಹೊಸದಾಗಿ ಕರುಹಾಕಿದ ಗೋವುಗಳು ಆಶ್ರಯಾರ್ಥವಾಗಿ ಶಬ್ದಮಾಡುವಂತೆ (ಕೂಗುವಂತೆ) ಶಬ್ದಮಾಡುವುದಿಲ್ಲ.

7. ಉರ್ವಶೀ—ಈ ಪುರೂರವನು ಹುಟ್ಟಿದಕೂಡಲೇ ಅಪ್ಸರಸ್ತ್ರೀಯರು ಅಥವಾ ದೇವತಾಸ್ತ್ರೀಯರು ಇವನನ್ನು ಸುತ್ತುವರಿದು ಪೋಷಿಸಿದರು. ಸ್ವಯಂ ಪ್ರವಹಿಸುವ ನದಿಗಳು ಇವನನ್ನು ಆಹಾರಾದಿಗಳಿಂದ ಪುಷ್ಟಿಗೊಳಿಸಿದವು. ಎಲೈ ಪುರೂರವನೇ, ಶತ್ರುಗಳೊಡನೆ ಯುದ್ಧಮಾಡುವುದಕ್ಕಾಗಿಯೂ ಆ ಯುದ್ಧದಲ್ಲಿ ದಸ್ಯು ಜನರನ್ನು ಸಂಹಾರಮಾಡುವುದಿಕ್ಕಾಗಿಯೂ ದೇವತೆಗಳು ನಿನ್ನನ್ನು ಬೆಳೆಸಿ ಸಾಕಿ ಸಲಹಿದರು.

8. ಪುರೂರವ—(ಉರ್ವಶಿಯನ್ನೂ ಇತರ ಅಪ್ಸರಸ್ತ್ರೀಯರನ್ನು ಸಂಬೋಧಿಸುತ್ತಾ) ದೇವತಾರೂಪದಿಂದಿರುವ ಈ ಅಪ್ಸರಸ್ತ್ರೀಯರ ಎದುರಿಗೆ ಮನುಜನಾದ ಈ ಪುರೂರವನು (ತಾನು) ತನ್ನ ಮಾನುಷರೂಪವನ್ನು ಪ್ರಕಾಶಪಡಿಸಿದಾಗ ಎಂದರೆ ಅವರ ಬಳಿಸಾರಿದಾಗ ಆ ಸ್ತ್ರೀಯರೆಲ್ಲಾ ರಥಕ್ಕೆ ಹೂಡಿದ ಅಶ್ವಗಳು ವೇಗವಾಗಿ ಓಡಿಹೋಗುವಂತೆ ನನ್ನನ್ನು ಬಿಟ್ಟು ದೂರ ಓಡಿಹೋದರು.

9. ಅಮರ್ತ್ಯರಾದ (ಮರಣಧರ್ಮರಹಿತರಾದ) ಈ ಅಪ್ಸರಸ್ತ್ರೀಯರೊಡನೆ ಮನುಷ್ಯನಾದ ಪುರೂರವನು ಯಾವಾಗ ಸಂದರ್ಭೋಚಿತವಾದ ಮಾತುಗಳಿಂದಲೂ, ಇತರ ಕಾರ್ಯಗಳಿಂದಲೂ ಸಂಪರ್ಕವನ್ನು ಬೆಳೆಸಲಿಚ್ಛಿಸುವನೋ ಆಗ ಆ ಸ್ತ್ರೀಯರು ತಮ್ಮ ರೂಪವನ್ನು (ಶರೀರಗಳನ್ನು) ತೋರಗೊಡವುದಿಲ್ಲ, ಮತ್ತು ಹುಲ್ಲನ್ನು ಮೇಯುತ್ತಾ ವಿಹರಿಸುತ್ತಿರುವಅಶ್ವಗಳು ಸಾರಥಿಯ ಅಧೀನಕ್ಕೆ ಒಳಗಾಗದೆ ತಮಗೆ ಇಷ್ಟಬಂದಕಡೆ ಓಡಿಹೋಗುವಂತೆ ಓಡಿಹೋಗುತ್ತಾರೆ.

10. (ಉರ್ವಶಿಯನ್ನು ಮಾತ್ರ ಸಂಬೋಧಿಸುತ್ತಾ) ಈ ಉರ್ವಶಿಯು ವಿದ್ಯುತ್ತಿನಂತೆ (ಮಿಂಚಿನಂತೆ) ಪ್ರಕಾಶಿಸುತ್ತಾ ಅಂತರಿಕ್ಷದಿಂದ ಕೆಳಕ್ಕೆ ಇಳಿದು ಬಂದು ಎಲ್ಲರಿಗೂ ಬೇಕಾದ ಉದಕಗಳನ್ನು ತಂದೊದಗಿಸುತ್ತಾಳೆ. ಕರ್ಮನಿರತನೂ, ಮಾನವರಿಗೆ ಹಿತಕರನೂ, ಉತ್ತಮವಾದ ಜನ್ಮವುಳ್ಳವನೂ ಆದ ಪುತ್ರನು ಅವಳಿಂದ ಉತ್ಪನ್ನನಾಗುತ್ತಾನೆ. ಉರ್ವಶಿಯು ನನ್ನ ಆಯುಸ್ಸನ್ನು ದೀರ್ಘಕಾಲ ಜೀವಿಸಿರುವಂತೆ ಹೆಚ್ಚಿಸುತ್ತಾಳೆ.

11. ಉರ್ವಶೀ—ಎಲೈ ಪುರೂರವನೇ, ಪೃಥ್ವಿಯನ್ನು ಪಾಲಿಸುವುದಕ್ಕಾಗಿ ನೀನು ಪುತ್ರರೂಪದಲ್ಲಿ ಉತ್ಪನ್ನನಾಗಿದ್ದೀಯೆ. ಎಂದರೆ ಪುತ್ರರೂಪವಾದ ನಿನ್ನ ವೀರ್ಯವನ್ನು ನನ್ನ ಉದರದಲ್ಲಿ ಸ್ಥಾಪಿಸಿದ್ದೀಯೆ. ಮುಂದೆ ಮಾಡಬೇಕಾದ ಕಾರ್ಯವನ್ನು ನಾನು ನಿನಗೆ ಮೊದಲೇ ತಿಳಿಸಿದ್ದೇನೆ. ಆದರೂ ನೀನು ನನ್ನ ಮಾತನ್ನು ಕೇಳಲಿಲ್ಲ. ನನ್ನ ಹಿತವಚನವನ್ನು ಪಾಲಿಸದಿದ್ದಮೇಲೆ ಏತಕ್ಕಾಗಿ ನನ್ನೊಡನೆ ಮಾತನಾಡುತ್ತಿರುವೆ?

12. ಪುರೂರವ—ಎಲೈ ಉರ್ವಶಿಯೇ, ನಿನ್ನ ಉದರದಲ್ಲಿ ಜನಿಸುವ ಪುತ್ರನು ಯಾವಾಗ ನನ್ನನ್ನು ತಂದೆಯೆಂದು ನನ್ನ ಬಳಿಗೆ ಬರುವನು ? ಮತ್ತು ನನ್ನನ್ನು ತಂದೆಯೆಂದು ಗುರುತಿಸಿ ಹತ್ತಿರ ಬರಬೇಕೆಂದು ಅಳ್ಳುವನು ? ಇದಲ್ಲದೆ ಯಾವ ಪುತ್ರನು ತಾನೆ ಒಂದೇ ಮನಸ್ಸುಳ್ಳ ಎಂದರೆ ಪರಸ್ಪರ ಪ್ರೀತಿಯುಕ್ತರಾದ ಗಂಡಹೆಂಡಿರನ್ನು (ತಂದೆ ತಾಯಿಗಳನ್ನು) ಎಂದರೆ ನನ್ನನ್ನೂ ನಿನ್ನನ್ನೂ ಅಗಲುವಂತೆ ಮಾಡುವನು? ನಿನ್ನ ಉದರದಲ್ಲಿರುವ ತೇಜೋರೂಪವಾದ ಗರ್ಭವು (ಪುತ್ರನಾಗಿ ಜನಿಸಿ) ಯಾವಾಗ (ನಿನ್ನ) ಅತ್ತೆಮಾವಂದಿರನ್ನು ಸಂತೋಷಪಡಿಸುವನು?

13. ಉರ್ವಶೀ—ಎಲೈ ಪುರೂರವನೇ, ನೀನು ಕೇಳಿದ ಪ್ರಶ್ನೆಗೆ ಪ್ರತ್ಯುತ್ತರವನ್ನು ಹೇಳುತ್ತೇನೆ. ಸರಿಯಾದ ಕಾಲವು ಬಂದೊಡನೆಯೇ ನಿನ್ನ ಪುತ್ರನು ಕಣ್ಣೀರನ್ನು ಸುರಿಸುತ್ತಾ ನಿನ್ನನ್ನು ತಂದೆಯೆಂದು ಕರೆಯುತ್ತಾ ನಿನ್ನಲ್ಲಿಗೆ ಬರುತ್ತಾನೆ. ನನ್ನಲ್ಲಿ ಸ್ಥಾಪಿತವಾಗಿರುವ ಶಿಶುವನ್ನು ನಿನಗೆ ಕಳುಹಿಸಿಕೊಡುತ್ತೇನೆ. ನಿನ್ನ ಮನೆಗೆ ಹಿಂತಿರುಗಿ ಹೋಗು. ಎಲೈ ಮೂಢನೇ, ನೀನು ನನ್ನನ್ನು ಪುನಃ ಹೊಂದಲಾರೆ.

14. ಪುರೂರವ— (ದುಃಖದಿಂದ ಪ್ರಲಾಪಿಸುತ್ತಾ) ಇದುವರೆಗೆ ನಿನ್ನೊಡನೆ ಕ್ರೀಡಿಸುತ್ತಿದ್ದ ನಿನ್ನ ಪತಿಯು (ಪತಿಯಾದ ನಾನು) ಇಲ್ಲಿಯೇ (ಮೂರ್ಚ್ಛಾಕ್ರಾಂತನಾಗಿ) ಬಿದ್ದುಬಿಡಲಿ. ಅಥವಾ ಎಂದಿಗೂ ಹಿಂತಿರುಗಿ ಬರದಂತೆ ದೂರದೇಶಕ್ಕೆ ಹೊರಟುಹೋಗಲಿ ಅಥವಾ ನಿರ್ಋತಿಯೆಂಬ ಪಾಪದೇವತೆಯ (ಮೃತ್ಯುವಿನ) ತೊಡೆಯ ಮೇಲೆ ಮಲಗಲಿ ಎಂದರೆ ಮೃತನಾಗಲಿ ಅಥವಾ ಆಹಾರಾರ್ಥವಾಗಿ ವೇಗದಿಂದ ಮುನ್ನುಗ್ಗಿ ಬರುವ ತೋಳಗಳು ಅವನನ್ನು ಭಕ್ಷಿಸಲಿ.

15. ಉರ್ವಶೀ— ಎಲೈ ಪುರೂರವನೇ, (ನೀನು ಈ ರೀತಿ ಏಕೆ ಪ್ರಲಾಪಿಸುವೆ ? ) ನೀನು ಕೆಳಗೆ ಬೀಳಲೂ ಬೇಡ, ಸಾಯಲೂ ಬೇಡ, ಭಯಂಕರಗಳಾದ ತೋಳಗಳು ನಿನ್ನನ್ನು ಭಕ್ಷಿಸದಿರಲಿ. ಸ್ತ್ರೀಯರೊಡನೆ ಸಖ್ಯ (ಸ್ನೇಹ, ಪ್ರೀತಿ) ವೆಂಬುದೇ ಇರುವುದಿಲ್ಲ, ಆ ಸ್ತ್ರೀಯರ ಹೃದಯಗಳು ನರಿಗಳ ಹೃದಯಗಳಂತೆ ಕೇವಲ ಸ್ವಾರ್ಥಪೂರಿತವಾದವು.

16. ಎಲೈ ಪುರೂರವನೇ ನನ್ನ ನಿಜರೂಪವಾದ ದೇವತಾರೂಪವನ್ನು ಬಿಟ್ಟು ಮನುಷ್ಯರೂಪದಿಂದ ಮನುಷ್ಯನಾದ ನಿನ್ನೊಡನೆ ನಾಲ್ಕುವರ್ಷಗಳಕಾಲ ರಾತ್ರಿಕಾಲದಲ್ಲಿ ವಿಹರಿಸುತ್ತಾ ನಿನ್ನ ಜತೆಯಲ್ಲಿ ವಾಸಿಸುತ್ತಿದ್ದೆನು. ಆ ಕಾಲದಲ್ಲಿ ಒಂದು ಸಲ ಮಾತ್ರ ಸ್ವಲ್ಪ ಘೃತವನ್ನು ಆಹಾರವನ್ನಾಗಿ ಸೇವಿಸಿದೆನು. ಅದರಿಂದಲೇ ನನಗೆ ತೃಪ್ತಿಯುಂಟಾಯಿತು ಈಗ ನಿನ್ನನ್ನು ಬಿಟ್ಟು ಹೊರಟು ಬಂದಿದ್ದೇನೆ.

17. ಪುರೂರವ—ತನ್ನ ತೇಜಸ್ಸಿನಿಂದ ಅಂತರಿಕ್ಷವನ್ನೆಲ್ಲಾ ತುಂಬಿ ಬೆಳಗುತ್ತಿರುವವಳೂ ಉದಕಕ್ಕೆ ನಿರ್ಮಾಪಕಳೂ ಆದ ಉರ್ವಶಿಯನ್ನು ಭೂಮಿಯಲ್ಲಿ ವಾಸಿಸುವ ಜನರಲ್ಲಿ ಶ್ರೇಷ್ಠನಾದ ನಾನು ನನ್ನ ಸಮೀಪಕ್ಕೆ

ಕರೆತಂದು ನನ್ನ ವಶಳಾಗುವಂತೆ ಮಾಡುತ್ತೇನೆ ಉತ್ತಮ ಕರ್ಮಕರ್ತೃವಾದ ಈ ಪುರೂರವನು ನಿನ್ನ (ಉರ್ವಶಿಯ) ಸಮೀಪದಲ್ಲಿರುತ್ತಾ ಸೌಖ್ಯವನ್ನನುಭವಿಸಲಿ. ಎಲೈ ಉರ್ವಶಿಯೇ, ನಿನಗಾಗಿ ನನ್ನ ಹೃದಯವು (ಮನಸ್ಸು) ಪರಿತಪಿಸುತ್ತದೆ. ಬೇಗನೆ ಹಿಂತಿರುಗು.

18. ಉರ್ವಶೀ—ಎಲೈ ಪುರೂರವನೇ, ಇಳಾಪುತ್ರನಾದ ನೀನು ಮಾನವನಾದ್ದರಿಂದ ಮೃತ್ಯುವಶನಾಗಲೇಬೇಕು. ಇದು ದೇವತೆಗಳು ಮಾಡಿರುವ ನಿಯಮವು (ದೇವತೆಗಳೇ ಹೀಗೆ ಹೇಳುತ್ತಾರೆ). ನಿನ್ನ ಪುತ್ರನು (ಪುತ್ರರೂಪದಿಂದ ಹುಟ್ಟುವ ನೀನು) ದೇವತೆಗಳನ್ನು ಹವಿರಾದಿಗಳಿಂದ ತೃಪ್ತಿಪಡಿಸುತ್ತಾನೆ. ಅವರ ಫಲವಾಗಿ ನೀನು ಸ್ವರ್ಗದಲ್ಲಿ ನಮ್ಮೊಡನೆ ಸೇರಿ ಸುಖವನ್ನನುಭವಿಸುವೆ. ಈ ಸಂಭಾಷಣೆಯೇ ಈ ಸೂಕ್ತದ ಸಾರಾಂಶವು.

ಈ ಸೂಕ್ತದ ಹಿನ್ನೆಲೆಯಿಂದ ರಚಿತವಾಗಿರುವ ಮಹಾಭಾರತದ ಕಥೆಯನ್ನನುಸರಿಸಿ ಮಹಾ ಕವಿಯೆಂದು ಪ್ರಸಿದ್ಧನಾದ ಕಾಳಿದಾಸನು **ವಿಕ್ರಮೋರ್ವಶೀಯ** ವೆಂಬ ಒಂದು ನಾಟಕವನ್ನು ರಚಿಸಿದಾನೆ. ಆದರೆ ಅದು ಆಧುನಿಕಸಾಹಿತ್ಯಕ್ಕೆ ಸೇರಿರುವುದರಿಂದ ಅದರ ವಿಮರ್ಶೆಯು ಇಲ್ಲಿ ಅಪ್ರಕೃತ.

ಈ ಸೂಕ್ತದ ವಿಷಯದಲ್ಲಿ ಪಾಶ್ಚಾತ್ಯ ಪಂಡಿತರ ಅಭಿಪ್ರಾಯವು ನಾನಾವಿಧವಾಗಿವೆ. Wilson ಎಂಬ ಪಂಡಿತನು ಈರೀತಿ ಬರೆಯುತ್ತಾನೆ—

According to the legend narrated by Sayana, Mitra and Varuna, excited by the charms of Urvashi, gave birth to Agastya, pronoucing at the same time an imprecation upon the nymph and condemning her to descend to earth and cohabit with a mortal. Ila, a Raja, having gone out hunting with the sons of Manu, came to a place where Uma, the daughter of the mountain, with her attendant nymph, was worshipping Shiva. In punishment for his intrusion he was changed into a woman. Having prayed to Shiva to be restored to manhood, he was referred to Devi who allowed him to be alternately male and female, six months at a time. In the latter condition Budha, the son fo Soma, became enamoured of her, and had a son by her, who was called Pururavas and was Raja of pratishthana. Pururavas became enamoured of Urvashi, who became his mistress on condition that if he should be ever naked in her sight except in bed she should return to heaven ; he was also to take charge of two pet rams belonging to her. They lived together four years, when one night, hearing the bleating of the rams as they were being carried off by the gods, Pururavas sprang from the bed in pursuit, when a flash of lightning exhibited him to Urvashi naked. She consequently left

him. Pururvas went in quest of her, and wandered about like one distracted. until he at length discovered her sporting with her fellow-nymphs. He impolored her to return, but she refused, calling him by various oppobrious names, as horse, brute, and the like (Sayana merely says Vajra.) This is the occasion of the dialogue of the Sukta, in which, however, Urvashi does not express herself in such unlady-like language, nor are the other particulars of the legend adverte] to, beyond an allusion to the past cohabitation of the Raja and the nymph, and the unwillingness of the former to let his mistress depart. Sayana's story is that of the Puranas, which is evidently different from that of the Veda. The story also of the drama, the Vikramorvashi differs from the Pauranik (being itseif derived from the Mahabharata, Vol I, p. 113; see Professor Cowell's Translation of the Vikramorvashi, Introd. p. iv, note). Sayana quotes tne Vajasaneyaka, or White Yajush, for the story which varies apparently in some particulars, they not essenially. No Sukta, or portions of a Sukta, corresponding with the present, are found in the Vajasaneyi Samhita.

ಈ ಸೂಕ್ತದಲ್ಲಿ ಮುಖ್ಯ ಪಾತ್ರವನ್ನು ವಹಿಸಿರುವ **ಪುರೂರವಾಃ** ಮತ್ತು **ಉರ್ವಶೀ** ಎಂಬುವರ ವಿಷಯದಲ್ಲಿ ಯಾಸ್ಕರು ವಿವರಿಸಿರುವ ನಿರ್ವಚನವನ್ನು ಇಲ್ಲಿ ಹೇಳಲಾಗಿದೆ.

ಪುರೂರವಾಃ । ಪುರೂರವಾ ಬಹುಧಾ ರೋರೂಯತೇ । ತಸ್ಯೈಷಾ ಭವತಿ ।
**ಸಮಸ್ಮಿಞ್ಜಾಯಮಾನ..................ದೇವಾಃ** ॥

(ನಿ, ೧೦–೪೬, ೪೭)

ನಿರುಕ್ತವ್ಯಾಖ್ಯಾನಕರ್ತರಾದ ದುರ್ಗಾಚಾರ್ಯರು ಈ ಪುರೂರವಾಃ ಎಂಬುದು ಮಧ್ಯಮಸ್ಥಾನದೇವತೆಯೆಂದೂ, (ಸಿಡಿಲು) ಬಹಳವಾಗಿ ಶಬ್ದಮಾಡುವುದರಿಂದ (ಪುರು–ಬಹಳ, ರವ–ಶಬ್ದ) ಈ ಹೆಸರು ಬಂದಿದೆಯೆಂದೂ ಅರ್ಥ ವಿವರಣೆ ಮಾಡಿದ್ದಾರೆ. ಈ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ **ಸಮಸ್ಮಿಞ್ಜಾಯಮಾನ** ಎಂಬ ೭ ನೇ ಋಕ್ಕನ್ನು ಉದಹರಿಸಿ ಅದಕ್ಕೆ ನಿರ್ವಚನವನ್ನು ಹೇಳಿದ್ದಾರೆ. ಅದನ್ನು ಆ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಲಾಗಿದೆ.

**ಉರ್ವಶೀ**— ಉರ್ವಶೀ ಮತ್ತು ಅಪ್ಸರಾಃ ಎಂಬ ಶಬ್ದಗಳ ನಿಷ್ಪತ್ತಿವಿಚಾರದಲ್ಲಿ ಯಾಸ್ಕರು ಹೇಳಿರುವ ನಿರ್ವಚನವನ್ನು ಇಲ್ಲಿ ಉದಾಹರಿಸಲಾಗಿದೆ—

**ಉರ್ವಶೀ । ಉರ್ವಶ್ಯಪ್ಸರಾ ಉರ್ವಭ್ಯಶ್ನುತೇ ಉರುಭ್ಯಾಮಶ್ನುತೇ ಉರುರ್ವಾ ವಶೋಽಸ್ಯಾಃ ।
ಅಪ್ಸರಾ ಅಪ್ಸಾರಿಣ್ಯಪಿ ವಾಪ್ಸ ಇತಿ ರೂಪನಾಮಾಪ್ಸಾತೇರಪ್ಸಾನೀಯಂ ಭವತ್ಯಾದರ್ಶನೀ-
ಯಂ ವ್ಯಾಪನೀಯಂ ವಾ ಸ್ಪಷ್ಟಂ ದರ್ಶನಾಯೇತಿ ಶಾಕಪೂಣಿಃ । ಯದಪ್ಸ ಇತ್ಯಭಕ್ಷಸ್ಯ ।**

**ಅಪ್ಸೋ ನಾಮೇತಿ ವ್ಯಾಪಿನಃ । ತದ್ರಾ ಭವತಿ ರೂಪವತೀ ತದನಯಾತ್ತಮಿತಿ ವಾ ತದಸ್ಯೈ ದತ್ತಮಿತಿ ವಾ। ತಸ್ಯಾ ದರ್ಶನಾನ್ಮಿತ್ರಾವರುಣಯೋ ರೇತಶ್ಚಸ್ಕಂದ ತದಭಿವಾದಿನ್ಯೇಷರ್ಗ್ಭವತಿ ॥**

(ನಿ. ೫-೧೩)

ಉರ್ವಶೀ ಎಂಬುವಳು ಓರ್ವ ಅಪ್ಸರಾಂಗನೆಯು. ಉರ್ವಶೀ ಎಂಬ ಹೆಸರು ಈ ಸ್ತ್ರೀಗೆ ಬರಲು ಕಾರಣವೇನೆಂದರೆ—

(೧) **ಉರ್ವಭ್ಯಶ್ನುತೇ । ಉರು ಮಹತ್ ಯಶೋಽಭಿವ್ಯಾಪ್ನೋತೀತಿ ।** ಉರು ಎಂದರೆ ಬಹಳವಾದ ಯಶಸ್ಸನ್ನು ಅಥವಾ ಕೀರ್ತಿಯನ್ನು (ಪ್ರಸಿದ್ಧಿಯನ್ನು) ಅಭ್ಯಶ್ನುತೇ ಹೊಂದಿರುತ್ತಾಳೆ. ಈ ಸ್ತ್ರೀಯು ತನ್ನ ಮಹತ್ತಾದ ಯಶಸ್ಸಿನಿಂದ (ಯಶಸ್ಸೆಂದರೆ ಇಲ್ಲಿ ರೂಪಲಾವಣ್ಯಾದಿಗಳು) ಬಹಳವಾಗಿ ಪ್ರಸಿದ್ಧಳಾಗಿರುವಳು, ಆದ್ದರಿಂದ ಇವಳಿಗೆ **ಉರ್ವಶೀ** ಎಂಬ ಹೆಸರು ಬರಲು ಕಾರಣವು.

(೨) **ಊರುಭ್ಯಾಂ ಮೈಥುನೇ ಧರ್ಮೇ ಪುರುಷಂ ಅಶ್ನುತೇ ವ್ಯಾಪ್ನೋತೀತಿ ಉರ್ವಾಶಿನೀ ಸತೀ ಉರ್ವಶೀತ್ಯುಚ್ಯತೇ ।** ಊರೂ ಎಂದರೆ ತೊಡೆಗಳು ಈ ಸ್ತ್ರೀಯು ಆಕರ್ಷಕವಾದ ತನ್ನ ತೊಡೆಗಳಮೂಲಕ ಸಂಭೋಗಕ್ರಿಯೆಯಲ್ಲಿ ಪುರುಷನನ್ನು ಆಲಿಂಗನಾದಿಗಳಿಂದ ವ್ಯಾಪಿಸಿ ಸಂತೋಷಪಡಿಸುವಳು. ಆದ್ದರಿಂದ ಈ ಸ್ತ್ರೀಗೆ. **ಉರ್ವಾಶಿನೀ** ಅಥವಾ ಉರ್ವಶೀ ಎಂಬ ಹೆಸರು ಬಂದಿದೆ.

(೩) **ಅಥವಾ ಉರುಃ ಮಹಾನ್ ಅಸ್ಯಾಃ ವಶಃ ಕಾಮಃ ಸೇಯಮುರುವಶಿನೀ ಸತೀ ಉರ್ವಶೀತ್ಯುಚ್ಯತೇ ।** ಉರು ಎಂದರೆ ಬಹಳವಾದ, ದೊಡ್ಡದಾದ ಎಂದರ್ಥವು. **ವಶಃ** ಎಂದರೆ ಕಾಮಾಭಿಲಾಷೆಯು ಈ ಸ್ತ್ರೀಗೆ ಅತಿಹೆಚ್ಚಾದ ಕಾಮಾಭಿಲಾಷೆ ಇರುವುದರಿಂದ ಇವಳಿಗೆ **ಉರ್ವಶಿನೀ** ಅಥವಾ **ಉರ್ವಶೀ** ಎಂಬ ಹೆಸರು ಬಂದಿದೆ ಎಂದು ಉರ್ವಶೀಶಬ್ದಕ್ಕೆ ಮೂರು ವಿಧವಾದ **ನಿರ್ವಚನವನ್ನು** ಹೇಳಿದ್ದಾರೆ.

ಈಗ ಅಪ್ಸರಾಃ ಎಂಬ ಶಬ್ದಾರ್ಥವನ್ನು ವಿವರಿಸುವುದಕ್ಕಾಗಿ ಇದರ ನಿರ್ವಚನವನ್ನು ಹೇಳುವರು. ಈ ಶಬ್ದವು ಈ ಋಕ್ಕಿನಲ್ಲಿ ಪಠಿತವಾಗಿಲ್ಲದಿದ್ದರೂ ಉರ್ವಶೀಶಬ್ದಕ್ಕೆ ಅರ್ಥವಿವರಣೆ ಮಾಡುವ ಸಂದರ್ಭದಲ್ಲಿ ಪ್ರಸಂಗವಶದಿಂದ ಹೇಳಬೇಕಾಗಿ ಬಂದಿದೆ. ಆದ್ದರಿಂದ ಈ ಶಬ್ದದ ನಿರ್ವಚನವನ್ನು ಇಲ್ಲಿ ಹೇಳಿದ್ದಾರೆ.

(೧) **ಅಪ್ಸರಾಃ । ಸಾ ಹಿ ಅಪ್ಸಾರಿಣೀ ಭವತಿ । ಅಪಃ ಪತತಿ ನಿತ್ಯಮೇವ ಸರತಿ । ತತ್ಪ್ರಭವತ್ವಾತ್ ತದೇವ ತಸ್ಯಾಃ ಪ್ರಿಯಮುದಕಂ ತಸ್ಮಾದಪ್ಸರಾಃ** ಎಂದರೆ ಅಪ್ಸಾರಿಣೀ ಎಂದು ಅರ್ಥವು. ಅಪಃ ಎಂದರೆ ನೀರು. ನೀರಿನಮೇಲೆ ಸಂಚರಿಸುವವಳು. ಆದ್ದರಿಂದ ನೀರು ಈ ಸ್ತ್ರೀಗೆ ಅತ್ಯಂತ ಪ್ರಿಯವಾಗಿರುವುದು ಆದ್ದರಿಂದ ಅಪ್ಸರಾಃ ಎಂದು ಹೆಸರು ಬಂದಿದೆ.

(೨) **ಅಥವಾ ಅದ್ಭ್ಯಃ ಸೃತೇತ್ಯಪ್ಸರಾಃ । ಅಪಿ ಚೈವಮನ್ಯಥಾ ಸ್ಯಾತ್ । ಅಪ್ಸ ಇತಿ ಏತತ್ ರೂಪನಾಮ । ಅಪ್ಸಾತೇಃ ಪ್ರತಿಷೇಧಪೂರ್ವಸ್ಯ ಪ್ಸಾತೇಃ ಭಕ್ಷಣಾರ್ಥಸ್ಯ । ತದ್ಧಿ ಅಪ್ಸಾನೀಯಂ ಅದನೀಯಂ ಭವತಿ । ನ ಹಿ ತದ್ಭಕ್ಷ್ಯತೇ । ಕಿಂ ತರ್ಹಿ । ಆದರ್ಶನೀಯಂ ತದಾಭಿಮುಖ್ಯೇನ ಸ್ಥಿತ್ವಾ ದ್ರಷ್ಟವ್ಯಮೇವ ಭವತಿ ಚಕ್ಷುಷಾ ನ ಪುನರ್ಮುಖೇನ ಭಕ್ಷಯಿತವ್ಯಮಿತ್ಯರ್ಥಃ !** ಅಪ್ಸಃ ಎಂದರೆ ರೂಪಕ್ಕೆ ಹೆಸರು. ಪ್ಸಾ ಎಂಬ ಧಾತುವಿಗೆ ಭಕ್ಷಣಮಾಡು ಎಂದರ್ಥವು. ಅಪ್ಸಾ ಎಂದರೆ ಭಕ್ಷಣಯೋಗ್ಯವಲ್ಲದ ಎಂದರ್ಥವು. ಆದ್ದ

ರಿಂದ ಈಸ್ತ್ರೀಯಲ್ಲಿರುವ ರೂಪವು ಭಕ್ಷಣಯೋಗ್ಯವಲ್ಲದ್ದು. ಆದರೆ ಕಣ್ಣುಗಳಿಂಗ ಚೆನ್ನಾಗಿ ನೋಡುವುದಕ್ಕೆ ಅರ್ಹವಾದುದು. ಎಂದರೆ ಈ ಸ್ತ್ರೀಯ ರೂಪು ಬಹಳ ಆಕರ್ಷಕವಾಗಿರುವುದು ಎಂದಭಿಪ್ರಾಯವು.

**(೩) ವ್ಯಾಪನೀಯಂ ವಾ । ವ್ಯಾಪನಮರ್ಹತಿ । ಅಪ್ಲೃ ವ್ಯಾಪ್ತೌ ತಸ್ಯ ವಾ ಅಪ್ಸಃ, ತದ್ಧಿ ನಾಯನೇನ ರಶ್ಮಿನಾ ಆತ್ಮನಃ ಪ್ರತ್ಯಯಾಧಾನಾರ್ಥಂ ವ್ಯಾಪಯಿತವ್ಯಂ ಭವತಿ । ಸ್ಪಷ್ಟಂ ದರ್ಶನಾಯೇತಿ ಶಾಕಪೂಣಿಃ** ॥ ಆಪ್ಲೃ ವ್ಯಾಪ್ತೌ ಎಂಬ ಧಾತುವಿನಿಂದ ಅಪ್ಸಃ ಎಂಬ ಶಬ್ದವು ನಿಷ್ಪನ್ನವಾಗಿ ವ್ಯಾಪಿಸಿರುವುದು ಎಂಬರ್ಥವನ್ನು ಕೊಡುವುದು. ಎಂದರೆ ಸ್ಪಷ್ಟವಾಗಿ ಎಲ್ಲರಿಗೂ ಕಾಣಿಸುವಂತೆ ರೂಪವು ವ್ಯಾಪಿಸಿ ಪ್ರತ್ಯಕ್ಷವಾಗಿ ಗೋಚರಿಸುತ್ತಿರುವುದು ಎಂದಭಿಪ್ರಾಯವು.

ಈ ಮೇಲಿನ ಅರ್ಥಭೇದಗಳೆಲ್ಲವೂ ಶಾಕಪೂಣಿಯೆಂಬ ಆಚಾರ್ಯಮತಾನುಸಾರವಾಗಿದೆ. ಇನ್ನು **ಅಪ್ಸರಾ** ಎಂಬ ಶಬ್ದಕ್ಕೆ ಇನ್ನೊಂದು ವಿಧವಾದ ಅರ್ಥವನ್ನು ಹೇಳುವರು. **ಅಪ್ಸಃ** ಎಂದರೆ ರೂಪವೆಂದು ಅರ್ಥವನ್ನು-ಹಿಂದೆಯೇ ಹೇಳಿರುವುದಷ್ಟೆ. **ಈಗ ರಾ ದಾನೇ** ಎಂಬ ಧಾತುವಿನಂತೆ ರಾ ಶಬ್ದಕ್ಕೆ ಕೊಡುವುದು ಅಥವಾ ಈ ರೂಪವು (ಸೌಂದರ್ಯವು) ಬ್ರಹ್ಮನಿಂದ ಈಕೆಗೆ ಕೊಡಲ್ಪಟ್ಟಿರುವುದರಿಂದ ಅಪ್ಸರಾ ಎಂಬ ಹೆಸರು ಬಂದಿದೆ ಎಂದೂ ಅರ್ಥವು.

ಈ ಶಬ್ದಗಳ ಅರ್ಥವನ್ನು ವಿಶದಪಡಿಸುವುದಕ್ಕಾಗಿ ಯಾಸ್ಕರು ಈ ಸೂಕ್ತದ **ವಿದ್ಯುನ್ನಯಾ ಪತಂತೀ** ಎಂಬ ೧೦ ನೇ ಋಕ್ಕಿನ ನಿರ್ವಚನವನ್ನು ಹೇಳಿದಾರೆ. ಅದನ್ನು ಆ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗಿದೆ.

॥ ಸಾಯಣಭಾಷ್ಯಂ ॥

**ತತ್ರ ಹಯೇ ಜಾಯ ಇತ್ಯಷ್ಟಾದಶರ್ಚಂ ಪಂಚಮಂ ಸೂಕ್ತಂ ತ್ರೈಷ್ಟುಭಂ । ಅತ್ರಾನುಕ್ರಮಣಿಕಾ । ಹಯೇ ಧ್ಯೂನೋರ್ವಶೀನ್ಯೈಳಃ ಪುರೂರವಾಃ ಪೂರ್ವೋಷಿತಾತ್ಮಾಮಾತ್ಪನರಾಸಾದ್ಯಾವರೋ-ದ್ಧುಮೈಚ್ಛತ್ಸಾ ತಮನಿಚ್ಛಂತೀ ಪ್ರತ್ಯಾಚಷ್ಟೇ ಹಯ ಇಷುರ್ನ ಕದಾ ಸುದೇವೋಽಂತರಿಕ್ಷಪ್ರಾಂ ಸಚೇತಿ ತಿಸ್ರಶ್ಚೈಳವಾಕ್ಯಂ ಶಿಷ್ಟಾ ಉರ್ವಶ್ಯಾ ಇತಿ। ಹಯೇ ಜಾಯ ಇಷುರ್ನ ಶ್ರಿಯೇ ಯಾ ಸುಜೂರ್ಣಿಃ ಕದಾ ಸೂನುಃ ಸುದೇವೋ ಅದ್ಯಾಂತರಿಕ್ಷಪ್ರಾಂ ಸಚಾ ಯದಾಸು ಜಹತೀಷ್ವಿತ್ಯಾದ್ಯಾಸ್ತಿಸ್ರಶ್ಚೇತಿ ನವರ್ಚ ಐಳಸ್ಯ ಪುರೂರವಸೋ ವಾಕ್ಯಾನಿ । ಅತಸ್ತಾಸಾಂ ಸ ಋಷಿಃ । ಶಿಷ್ಟಾ ನವೋರ್ವಶ್ಯಾ ವಾಕ್ಯಾನಿ । ಅತಸ್ತಾಸು ಸರ್ಷಿಕಾ । ಉಭಯೋರ್ವಾಕ್ಯೇಷು ಯೋಽರ್ಥಃ ಪ್ರತಿಪಾದ್ಯತೇ ಸಾ ದೇವತಾ ॥ ಗತೋ ವಿನಿಯೋಗಃ ॥**

**ಐಳೋರ್ವಶೀತಿಹಾಸೋಽತ್ರ ವೈಶದ್ಯಾಯ ಪ್ರವರ್ಣ್ಯತೇ ।**
**ಮಿತ್ರಶ್ಚ ವರುಣಶ್ಚೋಭೌ ದೀಕ್ಷಿತೌ ಪ್ರೇಕ್ಷ್ಯ ಚೋರ್ವಶೀಂ** ॥ ೧ ॥

**ರೇತಃ ಸಿಷಿಚತುಃ ಸದ್ಯಸ್ತತ್ಕುಂಭೇ ನ್ಯದಧುಸ್ತದಾ ।**
**ತಾಂ ಶಪ್ತವಂತೌ ಮನುಜಭೋಗ್ಯಾ ಭೂಮ್ಯಾಂ ಭವೇತಿ ತೌ** ॥ ೨ ॥

**ಅತ್ರಾಂತರ ಇಳೋ ರಾಜಾ ಮನೋಃ ಪುತ್ರೈಶ್ಚ ಸಂಯುತಃ ।**
**ಮೃಗಯಾಂ ಸಂಚರನ್ ಸಾಶ್ವೋ ದೇವೀಕ್ರೀಡಂ ವಿವೇಶ ಹ** ॥ ೩ ॥

ಯತ್ರ ದೇವಂ ಗಿರಿಸುತಾ ಸರ್ವೈರ್ಭಾವೈರತೋಷಯತ್ ।
ಅತ್ರಾವಿಶನ್ಪುಮಾನ್ ಸ್ತ್ರೀ ಸ್ಯಾದಿತ್ಯುಕ್ತ್ವಾ ತತ್ರ ಚಾವಿಶತ್ ॥ ೪ ॥
ಸ್ತ್ರೀಭೂತ್ವಾ ವ್ರೀಡಿತಃ ಸೋಽಗಾಚ್ಛರಣಂ ಶಿವಮಂಜಸಾ ।
ಇಯಂ ಪ್ರಸಾದ್ಯತಾಂ ರಾಜನ್ನಿತ್ಯುಕ್ತಃ ಶಂಭುನಾ ನೃಪಃ ॥ ೫ ॥
ಜಗಾಮ ಶರಣಂ ದೇವೀಮಾತ್ಮನಃ ಪುಂಸ್ತ್ವಸಿದ್ಧಯೇ ।
ಅಕರೋತ್ಸಾ ನೃಪಂ ದೇವೀ ಷಣ್ಮಾಸಾತ್ಪ್ರಾಪ್ತಪುಂಸ್ತ್ವಕಂ ॥ ೬ ॥
ತತಃ ಕದಾಚಿತ್ಸ್ತ್ರೀಕಾಲೇ ಬುಧಃ ಸೌಂದರ್ಯಮೋಹಿತಃ ।
ಅಪ್ಸರೋಭ್ಯೋ ವಿಶಿಷ್ಟಾಂ ತಾಮಿಳಾಂ ಸಂಗತವಾನ್ಮುದಾ ॥ ೭ ॥
ತದೇಳಾಯಾಂ ಸೋಮಸುತಾಜ್ಜಾತೋ ರಾಜಾ ಪುರೂರವಾಃ ।
ತಮುರ್ವಶೀ ತು ಚಕಮೇ ಪ್ರತಿಷ್ಠಾನಪುರೇ ಸ್ಥಿತಂ ॥ ೮ ॥
ತಲ್ಪಾದನ್ಯತ್ರ ನಗ್ನಂ ತ್ವಾಂ ದೃಷ್ಟ್ವಾ ಯಾಮಿ ಯಥಾಗತಂ ।
ಸುತಾ ಉರಣಕೌ ತ್ವಂ ಚ ಸಮೀಪಂ ಕುರು ಮೇ ಧೃತಂ ॥ ೯ ॥
ಇತಿ ಸಾ ಸಮಯಂ ಕೃತ್ವಾ ರಮಯಾಮಾಸ ತಂ ನೃಪಂ ।
ಚತುರಬ್ದೇ ಗತೇ ರಾತ್ರೌ ದೇವೈರುರಣಕದ್ವಯಂ ॥ ೧೦ ॥
ಹೃತಂ ತಸ್ಯ ಧ್ವನಿಂ ಶ್ರುತ್ವಾ ನಗ್ನ ಏವ ಸ ಭೂಪತಿಃ ।
ಉತ್ಥಾಯ ಜಿತ್ವಾ ತಾವಾಗಚ್ಛೇತ್ಯೇವಂ ಜಲ್ಪಕೋಽನ್ಯತಃ ॥ ೧೧ ॥
ವಿದ್ಯುತಾ ದರ್ಶಿತೋಽಸ್ಯೈ ಸ ನಗ್ನ ಏವ ಪುರೂರವಾಃ ।
ಅಥ ಸಾಪೃಷ್ಟಸಮಯಾ ಹ್ಯುರ್ವಶೀ ತು ದಿವಂ ಯಯೌ ॥ ೧೨ ॥
ತತ ಉನ್ಮತ್ತವದ್ರಾಜಾ ದಿದೃಕ್ಷುಸ್ತಾಮಿತಸ್ತತಃ ।
ಕುರ್ವನ್ನನ್ವೇಷಣಂ ತೀರೇ ಸರಸೋ ಮಾನಸಸ್ಯ ತಾಂ ॥ ೧೩ ॥
ವಿಹರಂತೀಮಪ್ಸರೋಭಿಃ ಸಹಾಪಶ್ಯತ್ಪುರೂರವಾಃ ।
ಪುನಃ ಸ ಚಕಮೇ ಭೋಕ್ತುಮುರ್ವಶೀಂ ಚ ಪುರೂರವಾಃ ॥ ೧೪ ॥
ಸಾಶ್ರಂ ಸಾಪಶ್ಯದುಕ್ತಾ ಚ ಪ್ರತ್ಯಾಚಷ್ಟೇ ವ್ರಜೇತಿ ತಂ ।
ಇತ್ಯುರ್ವಶ್ಯೈಳಸಂವಾದಮಿಮಮೇಷೋಽಪ್ಯಸೂಚಯದಿತಿ ॥ ೧೫ ॥

ಅತ್ರ ವಾಜಸನೇಯಕಂ । ಉರ್ವಶೀ ಹಾಪ್ಸರಾಃ ಪುರೂರವಸಮೈಳಂ ಚಕಮೇ ತಗ್ಂ ಹ ವಿಂದಮಾನೋವಾಚ ತ್ರಿಃ ಸ್ಮ ಮಾಹ್ನೋ ವೈತಸೇನ ದಂಡೇನ ಹತಾದಕಾಮಾಂ ಸ್ಮ ಮಾ ನಿಪದ್ಯಾಸೈ ಮೋ ಸ್ಮ ತ್ವಾ ನಗ್ನಂ ದರ್ಶಮೇಷ ವೈ ನ ಸ್ತ್ರೀಣಾಮುಪಚಾರ ಇತಿ ಸಾ ಹಾಸ್ಮಿಞ್ಜ್ಯೋಗುವಾಸಾಪಿ ಹಾಸ್ಮಾದ್ಗರ್ಭಿಣ್ಯಾಸ ತಾವಜ್ಜ್ಯೋಗ್ಘಾಸ್ಮಿನ್ನುವಾಸ । ತತೋ ಹ ಗಂಧರ್ವಾಃ ಸಮೂದಿರೇ ಜ್ಯೋಗ್ವಾ ಇಯಮುರ್ವಶೀ

**ಮನುಷ್ಯೇಷ್ವವಾತ್ಸೀದುಪಜಾನೀತೆ ಯಥೇಯಂ ಪುನರಾಗಚ್ಛೇದಿತಿ ತಸ್ಯೈ ಹಾವಿರ್ದ್ವ್ಯುರಣಾ ಶಯನ ಉಪಬದ್ಧಾಸ ತತೋ ಹ ಗಂಧರ್ವಾ ಅನ್ಯತರಮುರಣಂ ಪ್ರಮೇಥುಃ । ಸಾ ಹೋವಾಚಾವೀರ ಇವ ಬತ ಮೇಽಜನ ಇವ ಪುತ್ರಗ್‌ಂ ಹರಂತೀತಿ ದ್ವಿತೀಯಂ ಪ್ರಮೇಥುಃ ಸಾ ಹ ತಥೈವೋವಾಚಾಥ ಹಾಯಮೀಕ್ಷಾಂ ಚಕ್ರೇ ಕಥಂ ನು ತದವೀರಂ ಕಥಮಜನಗ್ಂ ಸ್ಯಾದ್ಯತ್ರಾಹಗ್ಂ ಸ್ಯಾಮಿತಿ ಸ ನಗ್ನ ಏವಾನೂತ್ಪಪಾತ ಚಿರಂ ತನ್ಮೇನೇ ಯದ್ವಾಸಃ ಪರ್ಯಧಾಸ್ಯತ ತತೋ ಹ ಗಂಧರ್ವಾ ವಿದ್ಯುತಂ ಜನಯಾಂ ಚಕ್ರುಸ್ತಂ ಯಥಾ ದಿವೈವಂ ನಗ್ನಂ ದದರ್ಶ ತತೋ ಹೈವೇಯಂ ತಿರೋಬಭೂವ ಪುನರೈಮೀತ್ಯೇತ್ತಿರೋ ಭೂತಾಗ್‌ಂ ಸ ಆಧ್ಯಾ ಜಲ್ಪನ್ಕುರುಕ್ಷೇತ್ರಗ್‌ಂ ಸಮಯಾ ಚಚಾರಾನ್ಯತಃಪ್ಲಕ್ಷೇತಿ ಬಿಸವತೀ ತಸ್ಯೈ ಹಾಧ್ಯಂತೇನವವ್ರಾಜ ತದ್ಧ ತಾ ಅಪ್ಸರಸ ಆತಯೋ ಭೂತ್ವಾ ಪರಿಪುಪ್ಲುವಿರೇ ತಗ್‌ಂ ಹೇಯಂ ಜ್ಞಾತ್ವೋವಾಚ ಅಯಂ ವೈ ಸ ಮನುಷ್ಯೋ ಯಸ್ಮಿನ್ನಹಮವಾತ್ಸಮಿತಿ ತಾ ಹೋಚುಸ್ತಸ್ಮೈ ವಾ ಆವಿರಸಾಮೇತಿ ತಥೇತಿ ತಸ್ಮೈ ಹಾವಿರಾಸುಸ್ತಾಗ್‌ಂ ಹಾಯಂ ಜ್ಞಾತ್ವಾಭಿಪರೋವಾದ ಹಯೇ ಜಾಯೇ ಮನಸೇತ್ಯಾದಿ ।** ಶತ. ಬ್ರಾ. ೧೧-೫-೧ ॥

ಅನುವಾದವು—ಋಗ್ವೇದಸಂಹಿತೆಯ ಹತ್ತನೆಯ ಮಂಡಲದ ಎಂಟನೆಯ ಅನುವಾಕದಲ್ಲಿ ನಾಲ್ಕು ಸೂಕ್ತಗಳು ಹಿಂದಿನ ಅಧ್ಯಾಯದಲ್ಲಿ ಮುಗಿದಿರುವವು. ಈಗ ಐದನೆಯ ಅಧ್ಯಾಯದ ಪ್ರಾರಂಭಸೂಕ್ತವಾದ **ಹಯೇ ಜಾಯೇ** ಎಂಬ ಈ ಸೂಕ್ತವು ಎಂಟನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹದಿನೆಂಟು ಋಕ್ಕುಗಳು ಇರುವವು. ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಹಯೇ ದ್ವ್ಯೂನೋರ್ವಶೀನ್ಸೈಳಃ ಪುರೂರವಾಃ ಪೂರ್ವೋಕ್ಷಿತಾತ್ಮಾಮಾತ್ ಪುನರಾಸಾದ್ಯಾವರೋದ್ಧುಮೈಚ್ಛತ್ಸಾ ತಮನಿಚ್ಛಂತೀ ಪ್ರತ್ಯಾಚಷ್ಟೇ ಹಯೇ ಇಷುರ್ನಾ ಕದಾ ಸುದೇವೋಽನ್ತರಿಕ್ಷಪ್ರಾಂ ಸಚೇತಿ ತಿಸ್ರಶ್ಚೈಳವಾಕ್ಯಂ ಶಿಷ್ಟಾ ಉರ್ವಶ್ಯಾಃ** ಎಂದು **ಹೇಳಿರುವುದು.** ಈ ಸೂಕ್ತದ **ಹಯೇ ಜಾಯೇ** (೧ನೇ ಋಕ್ಕು) **ಇಷುರ್ನ ಶ್ರಿಯೇ** (೩ನೇ ಋಕ್ಕು) **ಯೋಸು ಜೂರ್ಣಿಃ** (೬ನೇ ಋಕ್ಕು) **ಕದಾ ಸೂನುಃ** (೧೨ನೇ ಋಕ್ಕು) **ಸುದೇವೋ ಅದ್ಯ** (೧೪ನೇ ಋಕ್ಕು) **ಅಂತರಿಕ್ಷಪ್ರಾಂ** (೧೭ನೇ ಋಕ್ಕು) **ಸಚಾ ಯದಾಸು ಜಹತೀಷು** ಎಂದು ಮೊದಲಾಗುವ ಮೂರು ಋಕ್ಕುಗಳು **(೮-೧೦ ಋಕ್ಕುಗಳು)** ಒಟ್ಟು ಈ ಒಂಭತ್ತು ಋಕ್ಕುಗಳೂ ಇಳಾಪುತ್ರನಾದ ಪುರೂರವನ ವಾಕ್ಯವಾದ್ದರಿಂದ ಈ ಋಕ್ಕುಗಳಿಗೆ ಪುರೂರವನೇ ಋಷಿಯು, ಉಳಿದ ಒಂಭತ್ತು ಋಕ್ಕುಗಳೂ ಊರ್ವಶಿಯ ವಾಕ್ಯವಾದ್ದರಿಂದ ಆ ಋಕ್ಕುಗಳಿಗೆ ಊರ್ವಶಿಯೇ ಋಷಿಯು. ಇವರಿಬ್ಬರ ವಾಕ್ಯಗಳಲ್ಲಿ ಯಾವ ವಿಷಯವು ಪ್ರತಿಪಾದಿಸಲ್ಪಟ್ಟಿರುವುದೋ **ಆಯಾ** ಋಕ್ಕುಗಳಿಗೆ ಅದೇ ದೇವತೆಯು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

ಇಲ್ಲಿ ಭಾಷ್ಯಕಾರರು ಇಳಾಪುತ್ರನಾದ ಪುರೂರವಾಃ ಮತ್ತು ಊರ್ವಶೀ ವಿಚಾರವಾಗಿ ಒಂದು ಉಪಾಖ್ಯಾನವನ್ನು **ಹೇಳಿದ್ದಾರೆ—**

ಇಳಾ ಪುತ್ರನಾದ ಪುರೂರವ ಮತ್ತು ಊರ್ವಶಿಯ ವಿಷಯದಲ್ಲಿ ಒಂದು ಇತಿಹಾಸವಿರುವುದು. ಅದನ್ನು ಇಲ್ಲಿ ವಿಶದವಾಗಿ ತಿಳಿಸಲಾಗುವುದು. ಪೂರ್ವದಲ್ಲಿ ಮಿತ್ರಾವರುಣರು ಯಜ್ಞಭೂಮಿಯಲ್ಲಿ ದೀಕ್ಷೆಯಿಂದಿರುವಾಗ ಅಲ್ಲಿದ್ದ ಊರ್ವಶಿಯೆಂಬ ಅಪ್ಸರಸ್ತ್ರೀಯನ್ನು ನೋಡಿದರು. ಅವಳ ದರ್ಶನಮಾತ್ರದಿಂದ ಮಿತ್ರಾವರುಣರ ವೀರ್ಯ ಸ್ಖಲನವಾಗಿ ಅದು ಅಲ್ಲಿದ್ದ ಒಂದು ಕುಂಭದಲ್ಲಿ (ಪಾತ್ರೆ ಅಥವಾ ವಸತೀವರೀ ಎಂಬ ಉದಕವಿದ್ದ ಪಾತ್ರೆ) ಬಿದ್ದಿತು.

ತಮ್ಮ ವೀರ್ಯಸ್ಖಲನಕ್ಕೆ ಕಾರಣವಾದ ವ್ಯಕ್ತಿಯು ಎಂದರೆ ಉರ್ವಶಿಯು ಭೂಮಿಯಲ್ಲಿ ಮನುಷ್ಯರೂಪದಿಂದ ಉತ್ಪನ್ನವಾಗಿ ಮನುಷ್ಯರಿಗೆ ಸಹಜವಾದ ಸುಖದುಃಖಾದಿಗಳನ್ನು ಅನುಭವಿಸಲೆಂದು ಶಾಪವಿತ್ತರು.

ಈ ಮಧ್ಯದಲ್ಲಿ ಇಳನೆಂಬ ರಾಜನು ಮನುವಿನ ಪುತ್ರರಿಂದದೊಡಗೂಡಿ ಅರಣ್ಯದಲ್ಲಿ ಬೇಟೆಯಾಡುತ್ತಿರುವಾಗ ದೇವೀಕ್ರೀಡಂ ಎಂಬ ವನವನ್ನು ಪ್ರವೇಶಿಸಿದನು ವನದಲ್ಲಿ ಪಾರ್ವತಿಯು ಈಶ್ವರನೊಡನೆ ರತಿಕ್ರೀಡೆಯನ್ನೆಸಗುತ್ತಾ ನಾನಾಭಾವಗಳಿಂದ ಆ ದೇವನನ್ನು ಸಂತೋಷಗೊಳಿಸುತ್ತಿದ್ದಳು ದೇವಿಯು (ಪಾರ್ವತಿಯು) ಈಶ್ವರನೊಡನೆ ಕೂಡಿ ಕ್ರೀಡಿಸುತ್ತಿದ್ದುದರಿಂದ ಈ ವನಕ್ಕೆ ದೇವೀಕ್ರೀಡವೆಂಬ ಹೆಸರಾಯಿತು ಈ ವನದಲ್ಲಿ ಪಾರ್ವತೀಪರಮೇಶ್ವರರು ರಹಸ್ಯಕ್ರೀಡೆಯಲ್ಲಿದ್ದಾಗ ಯಾರೂ ಅಲ್ಲಿಗೆ ಬರಬಾರದೆಂಬ ಅಪೇಕ್ಷೆಯಿಂದ ಈ ವನವನ್ನು ಯಾವ ಪುರುಷನೇ ಆಗಲಿ ಪ್ರವೇಶಿಸಿದಲ್ಲಿ ಅವನು ಕೂಡಲೆ ಸ್ತ್ರೀಯಾಗುವಂತೆ ಪಾರ್ವತಿಯು ಶಾಪವಿತ್ತಿದ್ದಳು. ಆದ್ದರಿಂದ ಆ ವನವನ್ನು ಪ್ರವೇಶಿಸಿದ ಇಳನೆಂಬ ರಾಜನು ತಕ್ಷಣವೇ ಸ್ತ್ರೀಯಾಗಿ ಲಜ್ಜೆಯಿಂದ ಅಲ್ಲಲ್ಲಿ ಸಂಚರಿಸುತ್ತಾ ತನ್ನನ್ನು ಈ ಸ್ಥಿತಿಯಿಂದ ಕಾಪಾಡಬೇಕೆಂದು ಶಿವನನ್ನು ಮರೆಹೊಕ್ಕನು. ಶಿವನು—ಈ ಕಾರ್ಯವನ್ನು ದೇವಿಯೇ ಮಾಡಬೇಕಾಗಿರುವುದು. ಆದ್ದರಿಂದ ಅವಳನ್ನೇ ಸಂತೋಷಪಡಿಸಿ ವರವನ್ನು ಬೇಡುಎಂದು ರಾಜನಿಗೆ ಹೇಳಲು, ಅದರಂತೆ ರಾಜನು ದೇವಿಯ ಮರೆಹೊಕ್ಕು ತನಗೆ ಹಿಂದಿನಂತೆ ಪುಂಸತ್ವವನ್ನು ಅನುಗ್ರಹಿಸಬೇಕೆಂದು ಬೇಡಿಕೊಂಡನು ದೇವಿಯು ಕನಿಕರದಿಂದ, ವರ್ಷದಲ್ಲಿ ಆರುತಿಂಗಳವರೆಗೆ ಸ್ತ್ರೀಯಾಗಿಯೂ ಮತ್ತೆ ಆರುತಿಂಗಳವರೆಗೆ ಪುರುಷನಾಗಿಯೂ ಇರುವಂತೆ ಆ ರಾಜನನ್ನು ಅನುಗ್ರಹಿಸಿದಳು ಈ ರೀತಿ ನಡೆಯುತ್ತಿರುವಾಗ ಆ ರಾಜನು ಸ್ತ್ರೀರೂಪದಿಂದ ತನ್ನ ಜೊತೆಗಾರ್ತಿಯರಾದ ಅಪ್ಸರಸ್ತ್ರೀಯರಿಂದ ಕೂಡಿ ವನವಿಹಾರ ಮಾಡುತ್ತಿರಲು ಅಲ್ಲಿಗೆ (ಚಂದ್ರಪುತ್ರನಾದ) ಬುಧನು ಕಾರಣಾಂತರದಿಂದ ಬಂದು ಈ ಇಳಾ ಎಂಬ ಸುಂದರಸ್ತ್ರೀಯನ್ನು ನೋಡಿ ಮೋಹಪರವಶನಾದನು. ಅನಂತರ ಆ ಬುಧನಿಂದ ಇಳೆಯಲ್ಲಿ ಪುರೂರವನೆಂಬ ರಾಜನು ಉತ್ಪನ್ನನಾದನು. ಪ್ರತಿಷ್ಠಾನಪುರದಲ್ಲಿ ರಾಜ್ಯಭಾರಮಾಡುತ್ತಿದ್ದ ಈ ಪುರೂರವರಾಜನನ್ನು ಉರ್ವಶಿಯು ನೋಡಿ ಅವನಲ್ಲಿ ಅನುರಕ್ತಳಾದಳು. ಆಗ ಪುರೂರವನಿಗೂ ಉರ್ವಶಿಗೂ ಒಂದು ವಿಧವಾದ ಒಪ್ಪಂದವೇರ್ಪಟ್ಟಿತು ಹಾಸಿಗೆಯಲ್ಲಿ ಮಲಗಿದ್ದಾಗ ಹೊರತು ಇತರ ಕಾಲದಲ್ಲಿ ನಗ್ನಾವಸ್ಥೆಯಲ್ಲಿರುವ ರಾಜನನ್ನು ತಾನು ನೋಡದಂತೆಯೂ, ತನ್ನ ಎರಡು ಆಡಿನ ಮರಿಗಳನ್ನು ರಾಜನು ತನ್ನ ವಶದಲ್ಲಿಟ್ಟುಕೊಂಡು ಕಾಪಾಡುವಂತೆಯೂ, ಇದಕ್ಕೆ ವಿರೋಧವಾಗಿ ನಡೆದರೆ ತಾನು ತಕ್ಷಣವೇ ಅವನನ್ನು ಬಿಟ್ಟು ಹೊರಟುಹೋಗುವಂತೆಯೂ ಉರ್ವಶಿಯು ರಾಜನೊಡನೆ ಒಪ್ಪಂದ ಮಾಡಿಕೊಂಡುಅದರಂತೆ ಅವರಿಬ್ಬರೂ ನಾಲ್ಕು ವರ್ಷಗಳ ಕಾಲ ಪರಸ್ಪರ ಕ್ರೀಡಿಸುತ್ತಾ ಸುಖವಾಗಿದ್ದರು ನಾಲ್ಕು ವರ್ಷಗಳು ಕಳೆದನಂತರ ಒಂದುದಿನ ರಾತ್ರೆ ದೇವತೆಗಳು ರಾಜನ ವಶದಲ್ಲಿದ್ದ ಆಡಿನ ಮರಿಗಳನ್ನು ಅಪಹರಿಸಿದರು. ಆ ಮರಿಗಳು ಅರಚುತ್ತಿರುವ ಶಬ್ದವನ್ನು ಕೇಳಿ ರಾಜನು ಅವುಗಳನ್ನು ಅಪಹರಿಸುತ್ತಿರುವ ಕಳ್ಳರಿಂದ ಅವನ್ನು ಬಿಡಿಸಿಕೊಂಡು ಬರುತ್ತೇನೆಂದು ಹೇಳಿ ಹಾಸಿಗೆಯಿಂದೆದ್ದು ಬಟ್ಟೆಗಳನ್ನು ಹಾಕಿಕೊಳ್ಳದೆ ಅವಸರದಿಂದ ನಗ್ನ (ಬತ್ತಲೆ) ಯಾಗಿಯೇ ಹೊರಟನು. ಆ ಸಮಯದಲ್ಲಿ ಒಂದು ಮಿಂಚು ಅತಿ ಪ್ರಕಾಶಮಾನವಾಗಿ ಹೊಳೆಯಲು, ಉರ್ವಶಿಯು ನಗ್ನನಾಗಿದ್ದ ರಾಜನನ್ನು ನೋಡಿದಳು. ಆದರಿಂದ ತಾವು ಪೂರ್ವದಲ್ಲಿ ಮಾಡಿಕೊಂಡಿದ್ದ ಒಪ್ಪಂದಕ್ಕೆ ಭಂಗ ಬಂದಿತೆಂದು ಹೇಳಿ ಉರ್ವಶಿಯು ಅಲ್ಲಿಂದೆದ್ದು ಸ್ವರ್ಗಕ್ಕೆ ಹೊರಟುಹೋದಳು.

ಇತ್ತ ರಾಜನು ಹಿಂತಿರುಗಿ ಬಂದು ಹಾಸಿಗೆಯಲ್ಲಿ ಉರ್ವಶಿಯನ್ನು ಕಾಣದೆ ಅವಳನ್ನು ಎಲ್ಲೆಲ್ಲೂ ಹುಡುಕುತ್ತಾ ಮಾನಸ ಸರೋವರದ ತೀರಕ್ಕೆ ಬಂದನು. ಆಗ ಆ ಸರೋವರ ಮಧ್ಯದಲ್ಲಿ ತನ್ನ ಸಖಿಯರಾದ ಅಪ್ಸರಸ್ತ್ರೀಯರೊಡನೆ ಜಲಕ್ರೀಡೆಯಲ್ಲಿ ವಿಹರಿಸುತ್ತಿದ್ದ ಉರ್ವಶಿಯನ್ನು ರಾಜನು ನೋಡಿ ಪುನಃ ಅವಳೊಡನೆ ಕ್ರೀಡಿಸಲು

ಇಚ್ಛಿಸಿ, ಅಶ್ರುಪೂರ್ಣವಾಗಿ ಅವಳನ್ನು ನಾನಾವಿಧವಾಗಿ ಪ್ರಾರ್ಥಿಸಿದನು. ಆದರೆ ಉರ್ವಶಿಯು ರಾಜನ ಮಾತಿಗೊಪ್ಪದೆ—ನೀನು ಹೇಳುವುದನ್ನು ನಡೆಸಲು ಸಾಧ್ಯವಿಲ್ಲ ಆದ್ದರಿಂದ ನೀನು ನನ್ನ ಮೇಲಿನ ಆಶೆಯನ್ನು ಬಿಟ್ಟು ಹಿಂತಿರುಗಿ ಹೋಗು ಎಂದು ಹೇಳಿದಳು. ಈ ರೀತಿ ಪುರೂರವ ರಾಜನಿಗೂ ಉರ್ವಶಿಗೂ ನಡೆದ ಸಂಭಾಷಣೆಯ ವಿಷಯವೇ ಈ ಸೂಕ್ತದಲ್ಲಿ ಉಕ್ತವಾಗಿರುವುದು.

ಶುಕ್ಲಯಜುರ್ವೇದದ ಶತಪಥಬ್ರಾಹ್ಮಣದಲ್ಲಿಯೂ ಈ ವಿಷಯದಲ್ಲಿ ಈ ರೀತಿ ಹೇಳಿದೆ--

**ಉರ್ವಶೀ ಹಾಪ್ಸರಾಃ........................ತಾಗ್ಂ ಹ ಯಂ ಜ್ಞಾತ್ವಾಭಿಪರೋವಾದ ಹಯೇ ಜಾಯೇ ಮನಸಾ ॥**

(ಶ ಬ್ರಾ. ೧೧-೫-೧ ಇತ್ಯಾದಿ)

ಈ ಬ್ರಾಹ್ಮಣವಾಕ್ಯಗಳ ಅರ್ಥಾನುವಾದವನ್ನು ನಾವು ಈ ಸೂಕ್ತದ ಪೀಠಿಕೆಯ 7-9ನೇ ಪುಟಗಳಲ್ಲಿ ಮಾಡಿರುವುದರಿಂದ ಮತ್ತೆ ಅದನ್ನು ವಿವರಿಸುವ ಅವಶ್ಯಕತೆ ಇಲ್ಲ.

---

॥ ಓಂ ॥

## ಸೂಕ್ತ—೯೫

ಮಂಡಲ—೧೦ ॥ ಅನುವಾಕ—೮ ॥ ಸೂಕ್ತ—೯೫ ॥

ಅಷ್ಟಕ—೮ ॥ ಅಧ್ಯಾಯ—೫ ॥ ವರ್ಗ—೧, ೨, ೩, ೪. ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೮ ॥

॥ ಋಷಿಃ—೧, ೨, ೬, ೮—೧೦, ೧೨, ೧೪, ೧೭. ಪುರೂರವಾ ಐಳಃ । ೨, ೪, ೫, ೭, ೧೧, ೧೩, ೧೫, ೧೬, ೧೮,. ಉರ್ವಶೀ ॥

॥ ದೇವತಾ--೧, ೩, ೬, ೮--೧೦, ೧೨, ೧೪, ೧೭. ಉರ್ವಶೀ । ೨, ೪, ೫, ೭, ೧೧, ೧೩, ೧೫, ೧೬, ೧೮. ಪುರೂರವಾ ಐಳಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಹಯೇ ಜಾಯೇ ಮನಸಾ ತಿಷ್ಠ ಘೋರೇ ವಚಾಂಸಿ ಮಿಶ್ರಾ ಕೃಣವಾವಹೈ ನು ।
ನ ನೌ ಮಂತ್ರಾ ಅನುದಿತಾಸ ಏತೇ ಮಯಸ್ಕರನ್ಪರತರೇ ಚನಾಹನ್ ॥ ೧ ॥

॥ ಪದಪಾಠಃ ॥

ಹಯೇ । ಜಾಯೇ । ಮನಸಾ । ತಿಷ್ಠ । ಘೋರೇ । ವಚಾಂಸಿ । ಮಿಶ್ರಾ । ಕೃಣವಾವಹೈ । ನು ।

ನ । ನೌ । ಮಂತ್ರಾಃ । ಅನುದಿತಾಸಃ । ಏತೇ । ಮಯಃ । ಕರನ್ । ಪರೇಽತರೇ । ಚನ । ಅಹನ್ ॥ ೧ ॥

॥ ಸಾಯಣಭಾಷ್ಯಂ ॥

ಪುರೂರವಸೋ ವಾಕ್ಯಂ। ಜಾಯಾಂ ಪಶ್ಯನ್ವದತಿ। ಹಯೇ ಹೇ ಘೋರೇ। **ಅಸ್ಮಾಕಂ ದುಃಖಜನಕತ್ವಾತ್** । ಘೋರಕಾರಿಣಿ ಜಾಯೇ ಮನಸಾಸ್ಮದುಪರ್ಯನುರಾಗವತಾ ಮನಸಾ **ಯುಕ್ತಾ ಸತೀ ತಿಷ್ಠ** । ಕ್ಷಣಮಾತ್ರಂ ಸಂನಿಧಾವೇವ ನಿವಸ ॥ ಹಯ ಇತ್ಯಸ್ಯ ನಿಘಾತಾಭಾವಶ್ಛಾಂದಸಃ ॥ **ಕಿಮರ್ಥಂ ಸಂಸ್ಥಾನಮಿತಿ** ತತ್ರಾಹ। ವಚಾಂಸಿ ವಾಕ್ಯಾನಿ ಮಿಶ್ರಾಣ್ಯುಕ್ತಿಪ್ರತ್ಯುಕ್ತಿರೂಪಾಣಿ ನ್ವದ್ಯ ಕ್ಷಿಪ್ರಂ **ವಾ ಕೃಣವಾವಹೈ** ಕರವಾವಹೈ ॥ ಕೃವಿ ಹಿಂಸಾಕರಣಯೋಃ। ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯ**ಯಃ** ॥ **ಕಿಮರ್ಥಂ ವಚಸಃ ಕರಣಮಿತಿ ಚೇತ್ ಉಚ್ಯತೇ**। ನಾವಾವಯೋರ್ಮಂತ್ರಾ ರಹಸ್ಯಾರ್ಥಾ **ಏತೇ ವಿವಕ್ಷಿತಾ** ಅನುದಿತಾಸೋಽವ್ಯಾಹ್ರಿಯಮಾಣಾಃ ಪರಸ್ಪರಮಸಂಭಾಷ್ಯಮಾಣಾ ಗುಂಫಿತಾಃ ಸಂತಃ **ಪರತರೇ ಚನಾಹನ್** । ಚನೇತಿ ನಿಪಾತಸಮುದಾಯಶ್ಚಾರ್ಥೇ। ಅನೇಕೇಷು ದಿವಸೇಷು ಚರಮೇಽಪ್ಯಹನಿ **ಮಯಃ ಸುಖನಾಮೈತತ್** । ಸುಖಂ ನ ಕರನ್ । ಕುರ್ವಂತಿ। ಅತಃ ಕೃಣವಾವಹಾ ಇತಿ ॥

॥ ಪ್ರತಿಪದಾರ್ಥ ॥

**ಹಯೇ ಘೋರೇ ಜಾಯೇ**—ಕಠಿನವಾದ ಹೃದಯವುಳ್ಳ ಎಲೈ ಪತ್ನಿಯೇ। **ಮನಸಾ**—ನನ್ನ **ಮೇಲೆ ಅನುರಾಗವನ್ನು** ತೋರಿಸುವ ಮನಸ್ಸಿನಿಂದ ಕೂಡಿ। **ತಿಷ್ಠ**—ಸ್ವಲ್ಪನಿಲ್ಲು। **ವಚಾಂಸಿ**—ಸಂಭಾಷಣರೂ**ಪವಾದ ವಾಕ್ಯಗಳನ್ನು** । **ನು**—ಈಗ। **ಮಿಶ್ರಾ**—ನಾವಿಬ್ಬರೂ ಸೇರಿ। **ಕೃಣವಾವಹೈ**—ವ್ಯವಹರಿಸೋಣ। **ನೌ—ನಮ್ಮ ಏತೇ ಮಂತ್ರಾಃ**—ಹೃದಯದೊಳಗೆ ಅಡಗಿರುವ ಭಾವಗಳು। **ಅನುದಿತಾಸಃ**—ಬಹಿರಂಗವಾಗಿ ಹೇಳಲ್ಪ**ಡದಿದ್ದರೆ। ಪರತರೇ ಚನ್ ಅಹನ್**—ಕೊನೆಯ ದಿವಸಗಳಲ್ಲಿಯೂ ಕೂಡ। **ಮಯಃ** - ಸುಖವನ್ನು। **ನ ಕರನ್—ಉಂಟುಮಾಡುವುದಿಲ್ಲ.**

॥ ಭಾವಾರ್ಥ ॥

ಪುರೂರವ—ಕಠಿನವಾದ ಹೃದಯವುಳ್ಳ ಎಲೈ ಪತ್ನಿಯೇ, ನನ್ನ ಮೇಲೆ ಅನುರಾಗವನ್ನು **ತೋರಿಸುವ** ಮನಸ್ಸಿನಿಂದ ಕೂಡಿ ಸ್ವಲ್ಪ ನಿಲ್ಲು. ನಾವು ಈಗ ಸೇರಿ ಸಂಭಾಷಣರೂಪವಾದ ವಾಕ್ಯಗಳನ್ನು ವ್ಯವಹರಿಸೋಣ. **ನಮ್ಮ ಹೃದಯದೊಳಗೆ** ಅಡಗಿರುವ ಭಾವಗಳು ಬಹಿರಂಗವಾಗಿ ಹೇಳಲ್ಪಡದಿದ್ದರೆ, ಕೊನೆಯ ದಿವಸಗಳಲ್ಲಿಯೂ **ಸುಖವನ್ನುಂಟುಮಾಡುವುದಿಲ್ಲ.**

## English Translation.

(Pururavas speaks :) Ho indignant wife, with mind (relenting) **stay awhile**, let us now interchange discourse. These, our secret thoughts, **whilst unspoken**, did not yield us happiness even at the last day.

॥ ವಿಶೇಷವಿಷಯಗಳು ॥

**ಹಯೇ**—ಈ ಶಬ್ದವು ಹೇ (ಎಲೈ) ಎಂಬರ್ಥದಲ್ಲಿ ಸಂಬೋಧನೆ ಮಾಡುವುದಕ್ಕಾಗಿ ಇಲ್ಲಿ ಉಪಯೋಗಿಸಲ್ಪಟ್ಟಿದೆ. ಈ ಶಬ್ದವು ಈ ಋಕ್ಕಿನಲ್ಲಲ್ಲದೆ—

**ಹಯೇ ದೇವಾ ಯೂಯಮಿದಾಪಯಃ ಸ್ಥ ತೇ ಮೃಳತ ನಾಧಮಾನಾಯ ಮಹ್ಯಂ ।**

(ಋ. ಸಂ. ೨-೨೯-೪)

**ಹಯೇ ನರೋ ಮರುತೋ ಮೃಳತಾ ನಸ್ತುವೀಮಘಾಸೋ ಅಮೃತಾ ಋತಜ್ಞಾಃ ॥**

(ಋ. ಸಂ. ೫-೫೭-೮)

ಎಂಬ ಋಕ್ಕುಗಳಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಇನ್ನೆಲ್ಲಿಯೂ ಇಲ್ಲ.

**ಘೋರೇ**—ಪುರೂರವನಾದ ನನ್ನ ವಿಷಯದಲ್ಲಿ ನಿನ್ನ ಮನಸ್ಸು ಕನಿಕರವನ್ನು ವ್ಯಕ್ತಪಡಿಸಿದೆ, ಬಹಳ ಕ್ರೂರಸ್ವಭಾವದ್ದಾಗಿದೆ ಎಂದು ಸೂಚಿಸುವುದಕ್ಕಾಗಿ **ಘೋರೇ** ಎಂಬ ಶಬ್ದದಿಂದ ಊರ್ವಶಿಯನ್ನು ಸಂಬೋಧನೆಮಾಡಿದಾನೆ.

**ವಚಾಂಸಿ ಮಿಶ್ರಾ ಕೃಣವಾವಹೈ ನು**—ಈಗ ನಾವು ಮಾತುಗಳನ್ನು ಮಿಶ್ರಮಾಡೋಣ ಎಂದರೆ ನಾವು ಪರಸ್ಪರ ಮಾತನಾಡುತ್ತಾ ನಮ್ಮ ಮನಸ್ಸಿನಲ್ಲಿರುವ ಅಭಿಪ್ರಾಯಗಳನ್ನು ವಿನಿಮಯಮಾಡಿಕೊಳ್ಳೋಣ. ನನ್ನ ಮನಸ್ಸಿನಲ್ಲಿರುವುದನ್ನು ನಾನು ಹೇಳುತ್ತೇನೆ, ನಿನ್ನ ಮನಸ್ಸಿನಲ್ಲಿರುವುದನ್ನು ನೀನು ಹೇಳು ಎಂದಭಿಪ್ರಾಯವು.

**ಮನಸಾ ತಿಷ್ಠ**—ಎಲೈ ಸ್ತ್ರೀಯೇ, ನನ್ನ ಮೇಲೆ ಅನುರಾಗವಿಟ್ಟು (ಪ್ರೀತಿಯಿಂದ) ಮಾತನಾಡುವುದಕ್ಕಾಗಿ ಸ್ವಲ್ಪ ಕಾಲ ನಿಲ್ಲು.

**ನ ನೌ ಮಂತ್ರಾ ಅನುದಿತಾಸಃ**—ನಾವು ಮಾತನಾಡಬೇಕಾದ ರಹಸ್ಯ ವಿಷಯಗಳು ಮಾತನಾಡದೆ ಹಾಗೆಯೇ ಉಳಿದಿವೆ. ಬಹುಕಾಲ ನಾವು ಒಬ್ಬರನ್ನೊಬ್ಬರು ನೋಡಿರುವುದಿಲ್ಲವಾದ್ದರಿಂದ ರಹಸ್ಯಸಂಭಾಷಣೆ ನಡೆಸಲು ಸಾಧ್ಯವಾಗಿಲ್ಲ. ಆದ್ದರಿಂದ ಪರಸ್ಪರ ಹೇಳಬೇಕಾದ ವಿಷಯವನ್ನು ಹೇಳಲಾಗಿಲ್ಲ.

**ಏತೇ ಮಯಸ್ಕರನ್ ಪರತರೇ ಚನಾಹನ್**—ಈ ರಹಸ್ಯಸಂಭಾಷಣೆಯು ನಮಗೆ ಸುಖಕರವಾದದ್ದಾದರೂ ಅವುಗಳನ್ನು ಕೊನೆಯವರೆಗೂ (ಇದುವರೆಗೂ) ನಡೆಸಲು ಅವಕಾಶವಿಲ್ಲದ್ದರಿಂದ ಅದು ನಮಗೆ ಸುಖದಾಯಕವಾಗಿಲ್ಲ.

॥ ಸಂಹಿತಾಪಾಠಃ ॥

ಕಿಮೇತಾ ವಾಚಾ ಕೃಣವಾ ತವಾಹಂ ಪ್ರಾಕ್ರಮಿಷಮುಷಸಾಮಗ್ರಿಯೇವ ।
ಪುರೂರವಃ ಪುನರಸ್ತಂ ಪರೇಹಿ ದುರಾಪನಾ ವಾತ ಇವಾಹಮಸ್ಮಿ ॥ ೨ ॥

॥ ಪದಪಾಠಃ ॥

ಕಿಂ । ಏತಾ । ವಾಚಾ । ಕೃಣವ । ತವ । ಅಹಂ । ಪ್ರ । ಅಕ್ರಮಿಷಂ । ಉಷಸಾಂ । ಅಗ್ರಿಯಾಽಇವ ।
ಪುರೂರವಃ । ಪುನಃ । ಅಸ್ತಂ । ಪರಾ । ಇಹಿ । ದುಃಽಆಪನಾ । ವಾತಃಽಇವ । ಅಹಂ । ಅಸ್ಮಿ ॥ ೨ ॥

॥ ಸಾಯಣಭಾಷ್ಯಂ ॥

**ಅನಯಾ ತಮುರ್ವಶೀ ಪ್ರತ್ಯುವಾಚ । ಏತ್ಯೈತಯಾ ವಾಚಾ ಕೇವಲಯಾ ಪುನಃಸಂಭೋಗರಹಿತಯಾ ಕಿಂ ಕೃಣವ । ಕಿಂ ಕರವಾವ । ಅಹಂ ತ್ವಿದಾನೀಂ ತ್ವತ್ಸಕಾಶಾತ್ಪ್ರಾಕ್ರಮಿಷಂ । ಅತಿಕ್ರಾಂತವತ್ಯಸ್ಮಿ। ಅತಿಕ್ರಮೇ ದೃಷ್ಟಾಂತಃ । ಉಷಸಾಮುಗ್ರಿಯೇವ । ಬಹ್ವೀನಾಮುಷಸಾಂ ಮಧ್ಯೇಽಗ್ರ್ಯಾಗ್ರೇ ಭವಾ ಪೂರ್ವೋಷಾಃ ಪ್ರಾಕ್ರಮಿದ್ಯಥಾಹಮುಷೀತಿ । ಯಸ್ಮಾದೇವಂ ತಸ್ಮಾದ್ಧೇ ಪುರೂರವಃ ತ್ವಂ ಪುನರಸ್ಮತ್ಸಕಾಶಾದಸ್ತಂ ಗೃಹಂ ಪರೇಹಿ । ಪರಾಗಚ್ಛ । ಮಾ ಮಮಾಭಿಲಾಷಂ ಕಾರ್ಷೀಃ । ತಸ್ಯಾ ದುಗ್ರಹತ್ವಮಾಹ । ಅಹಂ ವಾತ ಇವ ವಾಯುರಿವ ದುರಾಪನಾ ದುಷ್ಪ್ರಾಪಾ ದುರಾಪಾ ವಾಸ್ಮಿ। ದುರಾಪಾ ವಾ ಅಹಂ ತ್ವಯೈತದ್ಯಸ್ಮಿ ಪುನರ್ಗೃಹಾನಿಹೀತಿ ಹೈನ್ಮೈನಂ ತದುವಾಚೇತಿ ವಾಜಸನೇಯಕಂ । ಶ.ಕ. ೧೧-೫-೧-೭ ॥**

॥ಪ್ರತಿಪದಾರ್ಥ॥

(ಎಲೈಪುರೂರವನೇ) **ಏತಾ ವಾಚಾ**-ನಮ್ಮ ಈ ಸಂಭಾಷಣೆಯಿಂದ । **ಕಿಂ ಕೃಣವ**-ನಾವು ಏನನ್ನು ಸಾಧಿಸಬಲ್ಲೆವು? । **ಉಷಸಾಂ ಅಗ್ರಿಯಾ ಇವ**— ಪ್ರಥಮೋತ್ಪನ್ನಳಾದ ಉಷಸ್ಸು ಯಾರಿಗೂ ಸಿಲುಕದ ರೀತಿಯಲ್ಲಿ ಸರಿದು ಹೋದಂತೆ । **ಅಹಂ**— ನಾನೂ ಸಹ । **ತವ** -- ನಿನ್ನಿಂದ । **ಪ್ರಾಕ್ರಮಿಷಂ**—ದೂರಸರಿದು ನಿನ್ನ ಹಿಡಿತಕ್ಕೆ ಸಿಕ್ಕದಂತೆ ಬಂದಿರುವೆನು । **ಪುರೂರವಃ** -- ಎಲೈ ಪುರೂರವನೇ । **ಪುನಃ** —ತಿರುಗಿಯೂ (ನನ್ನನ್ನು ಹಿಂಬಾಲಿಸದೆ) । **ಅಸ್ತಂ**—ಗೃಹಕ್ಕೆ । **ಪರೇಹಿ** —ಹಿಂತಿರುಗು । **ಅಹಂ**— ನಾನು । **ವಾತಇವ**— ವಾಯುವಿನಂತೆ । **ದುರಾಪನಾ**-ನಿನ್ನ ಹಿಡಿತಕ್ಕೆ ಸಿಕ್ಕದವಳಾಗಿ । **ಅಸ್ಮಿ**—ಆಗಿದ್ದೇನೆ

॥ ಭಾವಾರ್ಥ ॥

ಉರ್ವಶಿ—ಎಲೈ ಪುರೂರವನೇ, ನಮ್ಮ ಈ ಸಂಭಾಷಣೆಯಿಂದ ನಾವು ಏನನ್ನು ಸಾಧಿಸಬಲ್ಲೆವು? ಪ್ರಥಮೋತ್ಪನ್ನಳಾದ ಉಷಸ್ಸು ಯಾರಿಗೂ ಸಿಲುಕದ ರೀತಿಯಲ್ಲಿ ಸರಿದುಹೋದಂತೆ ನಾನು ಸಹ ನಿನ್ನಿಂದ ದೂರಸರಿದು ನಿನ್ನ ಹಿಡಿತಕ್ಕೆ ಸಿಕ್ಕದಂತೆ ಬಂದಿರುವೆನು. ಎಲೈ ಪುರೂರವನೇ, ತಿರುಗಿಯೂ ನನ್ನನ್ನು ಹಿಂಬಾಲಿಸದೆ ಗೃಹಕ್ಕೆ ಹಿಂತಿರುಗು. ನಾನು ವಾಯುವಿನಂತೆ ನಿನ್ನ ಹಿಡಿತಕ್ಕೆ ಸಿಕ್ಕದೆ ತಪ್ಪಿಸಿಕೊಂಡು ಬಂದಿದ್ದೇನೆ.

## English Translation.

(Urvashi :) What can we accomplish through such discourse ? I have passed away from you like the first of the dawns. Return, pururavns, to your dwelling. I am as hard to catch as the wind

॥ ವಿಶೇಷವಿಷಯಗಳು ॥

ಇದು ಉರ್ವಶೀವಾಕ್ಯವು—ಎಲೈ ಪುರೂರವನೇ ನಾವು ಪುನಃ ಪರಸ್ಪರ ಸಂಭೋಗವಮಾಡುವಂತಿಲ್ಲವಾದ್ದರಿಂದ ನೀನು ಸೂಚಿಸುತ್ತಿರುವ ಪರಸ್ಪರಸಂಭಾಷಣೆಯಿಂದ ಏನು ಉಪಯೋಗ? ಕಳೆದು ಹೋದ ಉಷಃಕಾಲವು ಅದೇ ದಿನದಲ್ಲಿ ಪುನಃ ಬರುವುದೇ? ಎಂದಿಗೂ ಸಾಧ್ಯವಿಲ್ಲ. ಬೀಸುತ್ತಿರುವ ಗಾಳಿಯನ್ನು ಹಿಡಿಯಲು ಹೇಗೆ ಸಾಧ್ಯವಿಲ್ಲವೋ

ಹಾಗೆ ನಾನು ನಿನಗೆ ದೊರೆಯುವವಳಲ್ಲ. ಆದ್ದರಿಂದ ನನ್ನ ಮೇಲಿನ ಅಭಿಲಾಷೆಯನ್ನು ತೊರೆದು ನಿನ್ನ ಮನೆಗೆ ಹಿಂತಿರುಗು ಎಂದು ಮುಖ್ಯಾಭಿಪ್ರಾಯವು.

|| ಸಂಹಿತಾಪಾಠಃ ||

ಇಷುರ್ನ ಶ್ರಿಯ ಇಷುಧೇರಸನಾ ಗೋಷಾಃ ಶತಸಾ ನ ರಂಹಿಃ ।
ಅವೀರೇ ಕ್ರತೌ ವಿ ದವಿದ್ಯುತನ್ನೋರಾ ನ ಮಾಯುಂ ಚಿತಯಂತ ಧುನಯಃ ॥ ೩ ॥

|| ಪದಪಾಠಃ ||

ಇಷುಃ । ನ । ಶ್ರಿಯೇ । ಇಷುऽಧೇಃ । ಅಸನಾ । ಗೋऽಸಾಃ । ಶತऽಸಾಃ । ನ । ರಂಹಿಃ ।
ಅವೀರೇ । ಕ್ರತೌ । ವಿ । ದವಿದ್ಯುತತ್ । ನ । ಉರಾ । ನ । ಮಾಯುಂ । ಚಿತಯಂತ । ಧುನಯಃ ॥ ೩ ॥

|| ಸಾಯಣಭಾಷ್ಯಂ ||

ಅನಯಾ ಪುರೂರವಾಃ ಸ್ವಸ್ಯ ವಿರಹಜನಿತಂ ವೈಕ್ಲವ್ಯಂ ತಾಂ ಪ್ರತಿ ಬ್ರೂತೇ । ಇಷುಧೇಃ । ಇಷವೋ ಧೀಯಂತೇऽತ್ರೇತೀಷುಧಿರ್ನಿಷಂಗಃ । ತತಃ ಸಕಾಶಾದಿಷುರಸನಾಸನಾಯೈ ಪ್ರಕ್ಷೇಪ್ತುಂ ನ ಭವತಿ ಶ್ರಿಯೇ ವಿಜಯಾರ್ಥಂ । ತ್ವದ್ವಿರಹಾದ್ಯುದ್ಧಸ್ಯ ಬುದ್ಧಾವಪ್ಯನಿಧಾನಾತ್ । ತಥಾ ರಂಹಿರ್ವೇಗವಾನಹಂ ಶತ್ರುಸಕಾಶಾದ್ಗೋಷಾಸ್ತೇಷಾಂ ಶತ್ರೂಣಾಂ ಗವಾಂ ಸಂಭಕ್ತಾ ನಾಭವಂ । ತಥಾ ಶತಸಾಃ ಶತಾನಾಮಪರಿಮಿತಾನಾಂ ಶತ್ರುಧನಾನಾಂ ಸಂಭಕ್ತಾ ನಾಭವಂ । ಕಿಂಚಾವೀರೇ ವೀರವರ್ಜಿತೇ ಕ್ರತೌ ರಾಜಕರ್ಮಣಿ ಸತಿ ನ ವಿ ದವಿದ್ಯುತತ್ । ನ ವಿದ್ಯೋತತೇ । ನ ಮತ್ಸಾಮರ್ಥ್ಯಂ । ಕಿಂಚ ಧುನಯಃ ಕಂಪಯಿತಾರೋऽಸ್ಮದೀಯಾ ನರಾ ಉರೋರಾ ॥ ಸುಪಾಂ ಸುಲುಗಿತಿ ಸಪ್ತಮ್ಯಾ ಡಾದೇಶಃ ॥ ವಿಸ್ತೀರ್ಣೇ ಸಂಗ್ರಾಮೇ ಮಾಯುಂ । ಮಿಮಾಯತೇ ಪ್ರಕ್ಷಿಪ್ಯತ ಇತಿ ಮಾಯುಃ ಶಬ್ದಃ ॥ ಕೃವಾಪಾಜೀತ್ಯಾದಿನೋಣ್ ॥ ಸಿಂಹನಾದಂ ನ ಚಿತಯಂತ । ನ ಬುಧ್ಯಂತೇ ॥ ಚಿತೀ ಸಂಜ್ಞಾನೇ । ಅಸ್ಮಾಣ್ಣಿಚಿ ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾಲ್ಲಘೂಪಧಗುಣಾಭಾವಃ । ಛಾಂದಸೋ ಲಙ್ ॥

|| ಪ್ರತಿಪದಾರ್ಥ ||

ಇಷುಧೇಃ—ಬತ್ತಳಿಕೆಯಿಂದ । ಇಷುಃ—ಬಾಣವು । ಶ್ರಿಯೇ—ಜಯವನ್ನು ಪಡೆಯಲು । ಅಸನಾ—ಪ್ರಯೋಗಿಸಲು । ನ—ಸಾಧ್ಯವಿಲ್ಲ । ಗೋಷಾಃ—ಶತ್ರು ಗೋವುಗಳನ್ನು ಪಡೆಯಲು । ರಂಹಿಃ ನ—ನಾನು ವೇಗವಾಗಿ ಮುನ್ನುಗ್ಗಲಾಗುವುದಿಲ್ಲ । ಶತಸಾಃ—ಅವರ ಅನೇಕ ಸಂಪತ್ತುಗಳನ್ನು ಪಡೆಯಲಾಗುವುದಿಲ್ಲ । ಅವೀರೇ—ಶಕ್ತಿವರ್ಜಿತವಾದ । ಕ್ರತೌ—ನನ್ನ ಕರ್ಮಗಳಲ್ಲಿ । ನ ವಿ ದವಿದ್ಯುತತ್—ನನ್ನ ಸಾಮರ್ಥ್ಯವು

ಶೋಭಿಸುವುದೇ ಇಲ್ಲ | **ಧುನಯಃ**—ನನ್ನ ಶತ್ರುಗಳನ್ನು ಕಂಪಿಸುವಂತೆ ಮಾಡುವ ನನ್ನ ಕಡೆಯ ಯೋಧರು | **ಉರಾ**—ವಿಸ್ತೃತವಾದ ಸಂಗ್ರಾಮದಲ್ಲಿ | **ಮಾಯುಮ್**—ನನ್ನ ನಿರ್ದೇಶರೂಪವಾದ ಶಬ್ದವನ್ನು | **ನ ಚಿತೆಯಂತ**—ಅರಿಯುವುದೇ ಇಲ್ಲ

|| ಭಾವಾರ್ಥ ||

ಪುರೂರವ—ಜಯವನ್ನು ಪಡೆಯಲು ನನ್ನ ಬತ್ತಳಿಕೆಯಿಂದ ಬಾಣವನ್ನು ಪ್ರಯೋಗಿಸಲು ಸಾಧ್ಯವೇ ಇಲ್ಲ. ಶತ್ರು ಗೋವುಗಳನ್ನು ಪಡೆಯಲು ನಾನು ಮುನ್ನುಗ್ಗಲು ಸಾಧ್ಯವೇ ಇಲ್ಲ. ಅವರ ಅನೇಕ ಸಂಪತ್ತುಗಳನ್ನು ಹೊಂದಲಾಗುವುದಿಲ್ಲ. ಶಕ್ತಿವರ್ಜಿತವಾದ ನನ್ನ ಕರ್ಮಗಳಲ್ಲಿ ನನ್ನ ಸಾಮರ್ಥ್ಯವು ಶೋಭಿಸುವುದೇ ಇಲ್ಲ. ನನ್ನ ಶತ್ರುಗಳನ್ನು ಕಂಪಿಸುವಂತೆ ಮಾಡುವ ನನ್ನ ಕಡೆಯ ಯೋಧರು ವಿಸ್ತೃತವಾದ ಯುದ್ಧದಲ್ಲಿ ನನ್ನ ನಿರ್ದೇಶರೂಪವಾದ ಶಬ್ದವನ್ನು (ಆಜ್ಞೆ) ಅರಿಯುವುದೇ ಇಲ್ಲ.

## English Translation.

(Pururavas:) The arrow is not to be cast from the quiver for glory. I am no longer the Impetuous despoiler of the cattle (of the enemy), nor of their hundred fold (riches). My prowess having lost its strength, (my might) no longer flashes forth; (my warriors) the terrifiers (of the foe) hear not my shout in battle.

|| ವಿಶೇಷವಿಷಯಗಳು ||

ಮುಖ್ಯಾಭಿಪ್ರಾಯವು—ಇದು ಪುರೂರವನ ವಾಕ್ಯವು. ಪುರೂರವನು ಉರ್ವಶಿಯ ವಿರಹದಿಂದ ದುಃಖಸಂತಪ್ತನಾಗಿ ಯಾವಕಾರ್ಯವನ್ನು ಮಾಡಲು ಅಸಮರ್ಥನಾಗಿರುವನೆಂದು ಇಲ್ಲಿ ತನ್ನ ಅಸಹಾಯಕಸ್ಥಿತಿಯನ್ನು ವರ್ಣಿಸಿದ್ದಾನೆ. ಶತ್ರುಗಳನ್ನು ಯುದ್ಧದಲ್ಲಿ ಗೆದ್ದು ಅವರ ಸಂಪತ್ತುಗಳನ್ನು ದೋಚಿತರಬೇಕೆಂದರೆ ನನ್ನ ಬತ್ತಳಿಕೆಯಲ್ಲಿರುವ ಬಾಣಗಳನ್ನು ತೆಗೆದು ಉಪಯೋಗಿಸಲು ನನ್ನ ಕೈಯಲ್ಲಾಗದು. ಏಕೆಂದರೆ ನನ್ನ ಮನಸ್ಸು ಸ್ಥಿಮಿತವಾಗಿಲ್ಲ. ಶತ್ರುಗಳಲ್ಲಿರುವ ಗೋವುಗಳನ್ನು ಜಯಿಸಿತರಲು ಮುನ್ನುಗ್ಗಿ ಹೋಗುವುದಕ್ಕೆ ನನಗೆ ಬೇಡವಾಗಿದೆ. ವೀರರಾದ ಸೈನಿಕರೊಡನೆ ಆಲೋಚಿಸಿ ಮಾಡಬೇಕಾದ ಇತರ ರಾಜಕಾರ್ಯಗಳಲ್ಲಿಯೂ ನನ್ನ ಮನಸ್ಸು ಸ್ಥಿರವಾಗಿ ನಿಲ್ಲುವುದಿಲ್ಲ. ಆ ಕಾರ್ಯಗಳನ್ನು ಮಾಡಲು ನನಗೆ ಸಾಮರ್ಥವೂ ಇಲ್ಲ. ಶತ್ರುಗಳನ್ನು ನಡುಗಿಸುವ ಸಾಮರ್ಥ್ಯವುಳ್ಳ ನನ್ನ ಯುದ್ಧಭಟರು ಅವರ ನಾಯಕನಾದ ನನ್ನ ಸಿಂಹನಾದವನ್ನು ಕೇಳುವುದಕ್ಕವಕಾಶವಿಲ್ಲವಾಗಿದೆ. ಇವೆಲ್ಲಕ್ಕೂ ನನ್ನ ಮನಸ್ಸಿಗೆ ಉತ್ಸಾಹವಿಲ್ಲದಿರುವುದೇ ಕಾರಣವು. ಆ ನನ್ನ ಮನಸ್ಸು ನಿನ್ನನ್ನಗಲಿರುವ ವಿರಹದಿಂದ ಅತ್ಯಂತ ದುಃಖಿತವಾಗಿದೆ.

|| ಸಂಹಿತಾಪಾಠಃ ||

ಸಾ ವಸು ದಧತೀ ಶ್ವಶುರಾಯ ವಯ ಉಷೋ ಯದಿ ವಷ್ಟ್ಯಂತಿಗೃಹಾತ್ |
ಅಸ್ತಂ ನನಕ್ಷೇ ಯಸ್ಮಿಞ್ಚಾಕನ್ದಿವಾ ನಕ್ತಂ ಶ್ನಥಿತಾ ವೈತಸೇನ || ೪ ||

|| ಪದಪಾಠಃ ||

ಸಾ | ವಸು | ದಧತೀ | ಶ್ವಶುರಾಯ | ವಯಃ | ಉಷಃ | ಯದಿ | ವಷ್ಟಿ | ಅಂತಿsಗೃಹಾತ್ |
ಅಸ್ತಂ | ನನಕ್ಷೇ | ಯಸ್ಮಿನ್ | ಚಾಕನ್ | ದಿವಾ | ನಕ್ತಂ | ಶ್ನಥಿತಾ | ವೈತಸೇನ || ೪ ||

|| ಸಾಯಣಭಾಷ್ಯಂ ||

ಇದಮುತ್ತರಂ ಚೋರ್ವಶೀವಾಕ್ಯಂ | ಆದ್ಯೇನ ಪುರಾತ್ಮನಾ ಕೃತಮುಷಸೇ ನಿವೇದಯತಿ | ಹೇ ಉಷಃ ಸೇಯಮುರ್ವಶೀ ವಸು ವಾಸಕಂ ವಯೋsನ್ನಂ ಶ್ವಶುರಾಯ ಭರ್ತುಃ ಪುರೂರವಸಃ ಪಿತ್ರೇ ದಧತೀ ಪ್ರಯಚ್ಛಂತೀ ತತ್ರ ಗೃಹೇ ಸ್ಥಿತಾ ಯದಿ ಪತಿಂ ವಷ್ಟಿ ಕಾಮಯತೇ ತದಾಂತಿಗೃಹಾತ್ | ಸ್ವಭರ್ತೃಭೋಗಗೃಹಾಂತಿಕೇ ಯಚ್ಛ್ವಶುರಸ್ಯ ಭೋಜನಗೃಹಂ ತದಂತಿಗೃಹಂ | ತಸ್ಮಾದ್ಗೃಹಾತ್ಸೋರ್ವಶ್ಯಸ್ತಂ ಪತಿಗೃಹಂ ನನಕ್ಷೇ | ವ್ಯಾಪ್ನೋತಿ | ಯಸ್ಮಿನ್ಗೃಹೇ ಚಾಕನ್ ಕಾಮಯತ ಉರ್ವಶೀ | ಸಾ ಚೋರ್ವಶೀ ದಿವಾ ನಕ್ತಮಹನಿ ರಾತ್ರೌ ಚ ವೈತಸೇನ | ಶೇಪೋ ವೈತಸ ಇತಿ ಪುಂಸ್ಪ್ರಜನನಸ್ಯೇತಿ ನಿರುಕ್ತಂ | ೩–೨೧ | ಪುಂಸ್ಪ್ರಜನನೇನ ಶ್ನಥಿತಾ ತಾಡಿತಾ ಚ ಭವತಿ | ಏವಮುರ್ವಶ್ಯಾತ್ಮಾನಂ ಪರೋಕ್ಷೇಣ ನಿರ್ದಿದೇಶ ||

|| ಪ್ರತಿಪದಾರ್ಥ ||

**ಉಷಃ**—ಎಲೈ ಉಷೋದೇವಿಯೇ | **ಸಾ**—ಉರ್ವಶಿಯು | **ವಸು**—ಸಂಪತ್ತನ್ನೂ | **ವಯಃ**—ಅನ್ನವನ್ನೂ | **ಶ್ವಶುರಾಯ**—ಅವಳ ಪತಿಯ ತಂದೆಗೆ | **ದಧತೀ**—ಕೊಡುತ್ತಾ | **ಯದಿ**—ಒಂದು ವೇಳೆ | **ವಷ್ಟಿ**—ಪತಿಯನ್ನು ಇಚ್ಛಿಸುವಳೋ ಆಗ | **ಅಂತಿಗೃಹಾತ್**—ಸಮೀಪದ ಮಾವನ ಗೃಹದಿಂದ | **ಅಸ್ತಂ**—ಪತಿ ಗೃಹವನ್ನು | **ನನಕ್ಷೇ**—ಪ್ರವೇಶಿಸುತ್ತಾಳೆ | **ಯಸ್ಮಿನ್**—ಯಾವ ಗೃಹದಲ್ಲಿ | **ಚಾಕನ್**—ಪತಿಯನ್ನಪೇಕ್ಷಿಸುವಳೋ ಅಲ್ಲಿ | **ದಿವಾ ನಕ್ತಂ**—ಅಹೋ ರಾತ್ರವೂ | **ವೈತಸೇನ**—ಪುರುಷಲಿಂಗದಿಂದ | **ಶ್ನಥಿತಾ**—ಸುಖ ಪ್ರಾಪ್ತಿಗಾಗಿ ತಾಡಿತಳಾಗುತ್ತಾಳೆ | [**ವೈತಸೇನ ಶ್ನಥಿತಾ**—ಎಂದರೆ ಜನಕಾಂಗದಿಂದ ನನ್ನನ್ನು ಪ್ರಹರಿಸಿ ನನಗೆ ಆನಂದವನ್ನುಂಟುಮಾಡುತ್ತಾನೆ ಎಂದು ತಾತ್ಪರ್ಯ.]

|| ಭಾವಾರ್ಥ ||

(ಉರ್ವಶೀ) ಎಲೈ ಉಷೋದೇವಿಯೇ, ಉರ್ವಶಿಯು ಪತಿಯ ಜೊತೆಯಲ್ಲಿರಲಿಚ್ಛಿಸಿ ಅವಳ ಪತಿಯ ತಂದೆಗೆ ಅನ್ನವನ್ನೂ ಉಳಿದ ಅಪೇಕ್ಷಿತವಸ್ತುಗಳನ್ನೂ ಕೊಡುತ್ತ ಒಂದು ವೇಳೆ ಪತಿಯ ಸಮಾಗಮವನ್ನು ಇಚ್ಛಿಸಿದರೆ, ಆಗ ಸಮೀಪದ ಮಾವನ ಮನೆಯಿಂದ ಪತಿಗೃಹವನ್ನು ಪ್ರವೇಶಿಸುತ್ತಾಳೆ ಯಾವ ಗೃಹದಲ್ಲಿ ಪತಿಯನ್ನು ಅಪೇಕ್ಷಿಸುವಳೋ ಅಲ್ಲಿ ಅಹೋರಾತ್ರವೂ ಪತಿಯ ಪುರುಷಜನಕಾಂಗದಿಂದ ತಾಡಿತಳಾಗಿ ಸುಖವನ್ನನುಭವಿಸುತ್ತಾಳೆ.

English Translation

(Urvashi :) If, Ushas, this Urvashi, offering food and wealth to her father-iu-law, loves (her husband), she has repaired from the neighbouring house to her husband's home, where she loved (her lord), being delighted night and day by his embraces.

॥ ವಿಶೇಷವಿಷಯಗಳು ॥

ಈ ಋಕ್ಕೂ ಮುಂದಿನ ಋಕ್ಕೂ ಉರ್ವಶಿಯ ವಾಕ್ಯಗಳು. ಈ ಋಕ್ಕಿನಲ್ಲಿ ಉರ್ವಶಿಯು ಪುರೂರವನೊಡನೆ ತನ್ನ ಮಾವನ ಮನೆಯಲ್ಲಿದ್ದಾಗ ತಾನು ಹೇಗೆ ವರ್ತಿಸುತ್ತಿದ್ದಳೆಂಬುದನ್ನು ಉಷೋದೇವಿಯೊಡನೆ ಹೇಳಿಕೊಳ್ಳುತ್ತಾಳೆ. ಎಲೈ ಉಷೋದೇವಿಯೇ, ಉರ್ವಶಿಯು (ತಾನು) ಹಿಂದೆ ಪತಿಗೃಹದಲ್ಲಿದ್ದಾಗ ತನ್ನ ಮಾವನಿಗೂ, ತನ್ನ ಪತಿಯಾದ ಪುರೂರವನಿಗೂ ಅನ್ನಾದ್ಯಾಹಾರಗಳನ್ನೂ ವಸ್ತ್ರಾದಿಗಳನ್ನೂ ಕಾಲಕಾಲಕ್ಕೆ ತಂದುಕೊಡುತ್ತಾ ಉಪಚರಿಸುತ್ತಿದ್ದಳು. ತನಗೆ ಕಾಮಸುಖವು ಬೇಕೆನಿಸಿದಾಗ ಮಾವನ ಮನೆಯಿಂದ ಹೊರಟು ಸಮೀಪದಲ್ಲಿಯೇ ಇದ್ದ ಪತಿಗೃಹಕ್ಕೆ ಬಂದು ಅಲ್ಲಿ ಪುರೂರವನೊಡನೆ ಹಗಲು ರಾತ್ರಿಯನ್ನದೆ ಸರ್ವಕಾಲದಲ್ಲಿಯೂ ಪತಿಯ ಪುರುಷಲಿಂಗ ಸ್ಪರ್ಶಾದಿಗಳಿಂದ ತನಗೆ ಬೇಕಾದ ಸುಖವನ್ನನುಭವಿಸುತ್ತಿದ್ದಳು.

**ಶ್ನಥಿತಾ ವೈತಸೇನ**—ಈ ಶಬ್ದಗಳ ವಿವರಣೆಗಾಗಿ ಮುಂದಿನ ಋಕ್ಕಿನ ವಿಶೇಷ ವಿಷಯಗಳನ್ನು ನೋಡಿ.

॥ ಸಂಹಿತಾಪಾಠಃ ॥

ತ್ರಿಃ ಸ್ಮ ಮಾಹ್ನಃ ಶ್ನಥಯೋ ವೈತಸೇನೋತ ಸ್ಮ ಮೇಽವ್ಯತ್ಯೈ ಪೃಣಾಸಿ ।
ಪುರೂರವೋಽನು ತೇ ಕೇತಮಾಯಂ ರಾಜಾ ಮೇ ವೀರ ತನ್ವ೧ಸ್ತದಾಸೀಃ ॥

॥ ಪದಪಾಠಃ ॥

ತ್ರಿಃ । ಸ್ಮ । ಮಾ । ಅಹ್ನಃ । ಶ್ನಥಯಃ । ವೈತಸೇನ । ಉತ । ಸ್ಮ । ಮೇ । ಅವ್ಯತ್ಯೈ । ಪೃಣಾಸಿ ।
ಪುರೂರವಃ । ಅನು । ತೇ । ಕೇತಂ । ಆಯಂ । ರಾಜಾ । ಮೇ । ವೀರ । ತನ್ವಃ । ತತ್ । ಆಸೀಃ ॥ ೫ ॥

॥ ಸಾಯಣಭಾಷ್ಯಂ ॥

ಅನೇನ ಪುರೂರವಸಮೇವ ಸಂಬೋಧ್ಯೋಕ್ತವತೀ । ಹೇ ಪುರೂರವಃ ತ್ವಂ ಮಾ ಮಾಮಹ್ನೋಽಹನಿ ವೈತಸೇನ ದಂಡೇನ ಪುಂವ್ಯಂಜನೇನ ತ್ರಿಸ್ತ್ರಿವಾರಂ ॥ ದ್ವಿತ್ರಿಚತುರ್ಭ್ಯಃ ಸುಚ್ । ಪಾ. ೫-೪-೧೮ ॥ ಶ್ನಥಯಃ ಸ್ಮ । ಅಶ್ನಥಯಃ । ಅತಾಡಯಃ ॥ ಕೃತ್ವೋಽರ್ಥಪ್ರಯೋಗೇ । ಪಾ. ೨-೩-೬೪ । ಇತಿ ಕಾಲವಾಚಿನೋಽಹಃಶಬ್ದಾದಧಿಕರಣೇ ಷಷ್ಠೀ ॥ ಉತಾಪಿ ಚ । ಸ್ಮೇತಿ ಪೂರಣಃ । ಅವ್ಯತ್ಯೈ । ಸಪತ್ನೀಭಿಃ ಸಹ ಪರ್ಯಾಯೇಣ ಪತಿಮಾಗಚ್ಛತಿ ಸಾ ವ್ಯತೀ । ನ ತಾದೃಶ್ಯವ್ಯತೀ । ತಸ್ಯೈ ಮೇ ಮಹ್ಯಂ ಪೃಣಾಸಿ । ಪೂರಯಸಿ । ಏವಂ ಬುದ್ಧ್ವಾ ಹೇ ಪುರೂರವಃ ತೇ ತವ ಕೇತಂ ಗೃಹಮನ್ವಾಯಂ । ಅನ್ವಗಮಂ ಪೂರ್ವಂ । ಹೇ ವೀರ ರಾಜಾ ತ್ವಂ ಚ ಮೇ ಮಮ ತನ್ವಃ ಶರೀರಸ್ಯ ತತ್ತದಾಸೀಃ । ಅಭವಃ । ಸುಖಯಿತೇತಿ ಶೇಷಃ । ಪರಮಪ್ಯೇವಂ ಮಂತವ್ಯಂ ಕಿಮಿತಿ ಕಾತರೋ ಭವಸೀತ್ಯುವಾಚ ॥

॥ ಪ್ರತಿಪದಾರ್ಥ ॥

(ಎಲೈ ಪುರೂರವನೇ) | **ಮಾ**—ನನ್ನನ್ನು | **ಅಹ್ನಃ**—ಅಹಸ್ಸುಗಳಲ್ಲಿ | **ತ್ರಿಃ**—ಮೂರು ಸಲ | **ವೈತಸೇನ**—ನಿನ್ನ ಜನಕಾಂಗದಿಂದ | **ಶ್ನಥಯಃ ಸ್ಮ**—ನನ್ನನ್ನು ತಾಡಿಸಿ ನನಗೆ ಆನಂದವನ್ನುಂಟುಮಾಡಿದ್ದೀಯೆ | **ಉತ**—ಅಲ್ಲದೇ | **ಅವ್ಯತ್ಯೈ**—ಸಪತ್ನೀರಹಿತಳಾದ | **ಮೇ**—ನನಗೆ | **ಪೃಣಾಸಿ**—ತೃಪ್ತಿಯನ್ನುಂಟುಮಾಡಿದ್ದೀಯೆ | **ಪುರೂರವಃ**—ಎಲೈ ಪುರೂರವನೇ | **ತೇ**—ನಿನ್ನ | **ಕೇತಂ**—ಗೃಹಕ್ಕೆ | **ಅನ್ವಾಯಂ**—ನಿನ್ನನ್ನು ಹಿಂಬಾಲಿಸಿ ಬಂದೆನು | **ವೀರ**—ಎಲೈ ವೀರನೇ | **ತತ್**—ಆಗ | **ತ್ವಂ**—ನೀನು | **ಮೇ**—ನನ್ನ **ತನ್ವಃ**—ಶರೀರಕ್ಕೆ | **ಆಸೀಃ**—ಪ್ರಭುವಾಗಿಯೂ ಸುಖಕಾರಕನಾಗಿಯೂ ಇದ್ದೆ.

॥ ಭಾವಾರ್ಥ ॥

**(ಉರ್ವಶೀ)** ವೀರನಾದ ಎಲೈ ಪುರೂರವನೇ, ಹಿಂದೆ ನೀನು ನನ್ನನ್ನು ಅಹಸ್ಸುಗಳಲ್ಲಿ ಮೂರುಸಲ ಆಲಂಗಿಸಿ ಪುರುಷಲಿಂಗದ ತಾಡನದಿಂದ ಸುಖವನ್ನುಂಟುಮಾಡುತ್ತಿದ್ದೆ. ಸಪತ್ನೀರಹಿತಳಾದ ನನಗೆ ತೃಪ್ತಿಯನ್ನುಂಟುಮಾಡಿದ್ದೀಯೆ. ನಿನ್ನನ್ನು ಹಿಂಬಾಲಿಸಿ ನಿನ್ನ ಗೃಹಕ್ಕೆ ಬಂದೆನು ಆಗ ನೀನು ನನಗೆ ಪ್ರಭುವಾಗಿ ನನಗೆ ಸುಖಕಾರಕನಾಗಿದ್ದೆ.

English Translation

Thirce a day, Pururavas, have you embraced me, you have loved me without a rival ; I have followed (you) to your dwelling, you, hero, have been the sovereign of my person.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಉರ್ವಶಿಯು ಪುರೂರವನನ್ನೇ ಸಂಬೋಧಿಸಿ ಮಾತನ್ನಾಡುತ್ತಾಳೆ—

**ತ್ರಿಃ ಸ್ಮ ಮಾಹ್ನಃ ಶ್ನಥಯೋ ವೈತಸೇನ**—ಎಲೈ ಪುರೂರವನೇ. ಹಿಂದೆ ನಾನು ನಿನ್ನೊಡನೆ ವಾಸಿಸುತ್ತಿದ್ದಾಗ ನೀನು ನಿನ್ನ ಪುರುಷಾಂಗದಿಂದ ನನ್ನನ್ನು ಎಂದರೆ ನನ್ನ ಯೋನಿಪ್ರದೇಶವನ್ನು ದಿನಕ್ಕೆ ಮೂರಾವರ್ತಿ ತಾಡನಮಾಡುತ್ತಿದ್ದಿಯಲ್ಲವೇ?

ಇಲ್ಲಿ ವೈತಸಶಬ್ದವನ್ನು ವಿವರಿಸುವುದಕ್ಕಾಗಿ ಯಾಸ್ಕರು ನಿರ್ವಚನವನ್ನು ಹೇಳಿದ್ದಾರೆ. ಒಂದೇ ಅರ್ಥವುಳ್ಳ ಎರಡು ಶಬ್ದವನ್ನು ಹೇಳುವಾಗ (ನಿ. ೩-೨೦) ಎಂದರೆ ಪ್ರಪಿತ್ವೇ -ಅಭೀಕೆ, ದಭ್ರಂ-ಅರ್ಭಕಂ ಇತ್ಯಾದಿ ದ್ವಿಶನಾಮುಗಳ ಮಧ್ಯದಲ್ಲಿ ಶೇಪಃ-ವೈತಸಃ ಎಂಬ ಎರಡು ಶಬ್ದಗಳನ್ನು ಹೇಳಿದಾರೆ ಇವೆರಡು ಶಬ್ದಗಳಿಗೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಅರ್ಥವು.

> **ಶೇಪೋ ವೈತಸ ಇತಿ ಪುಂಸ್ಪ್ರಜನನಸ್ಯ | ಶೇಪಃ ಶಪತೇಃ ಸ್ಪೃಶತಿಕರ್ಮಣಃ | ವೈತಸೋ ವಿತಸ್ತಂ ಭವತಿ | ಯಸ್ಯಾಮುಶಂತಃ ಪ್ರಹರಾಮ ಶೇಪಂ | ತ್ರಿಃ ಸ್ಮ ಮಾಹ್ನಃ ಶ್ನಥಯೋ ವೈತಸೇನ ಇತ್ಯಪಿ ನಿಗಮೌ ಭವತಃ ||**

(ನಿ. ೩-೨೧)

ಪುರುಷಲಿಂಗದ ದಂಡದಂತಿರುವ ಭಾಗಕ್ಕೆ (penis) ಶೇಪ ಅಥವಾ ವೈತಸವೆಂದು ಹೆಸರು. ಶಪ್-ಸ್ಪರ್ಶಮಾಡು ಎಂಬ ಧಾತುವಿನಿಂದ ಶೇಪಶಬ್ದವು ನಿಷ್ಪನ್ನವಾಗಿದೆ ಸ್ತ್ರೀಸಂಗಮಾಡುವಾಗ ಈ ಶೇಪವೆಂಬ ಪುರುಷಾಂಗದಿಂದ ಸ್ತ್ರೀಯೋನಿಯನ್ನು ಸ್ಪರ್ಶಮಾಡುವುದರಿಂದ ಈ ಅಂಗಕ್ಕೆ ಶೇಪವೆಂದು ಹೆಸರು ಬಂದಿದೆ ವೈತಸಶಬ್ದವು ವಿತಸ್ತವಾಗಿರುವುದು, ಕ್ಷೀಣದೆಶೆಯಲ್ಲಿರುವುದು ಎಂಬರ್ಥದಿಂದ ಈ ಶಬ್ದಕ್ಕೆ ಈ ಅರ್ಥವಿದೆ ಸ್ತ್ರೀಸ್ಪರ್ಶಮಾಡುವುದಕ್ಕಿಂತ ಮೊದಲು ಈ ಪುರುಷಾವಯವು ಕ್ಷೀಣಾವಸ್ಥೆಯಲ್ಲಿರುವುದರಿಂದ ಇದಕ್ಕೆ ವೈತಸವೆಂದು ಹೆಸರು. ಸ್ತ್ರೀಸಂಗಮಾಡುವಾಗ ಈ ಅಂಗವು ಉದ್ರಿಕ್ತಾವಸ್ಥೆಯಲ್ಲಿರುವುದು. ಇತರ ಕಾಲದಲ್ಲಿ ವಿತಸ್ತಾವಸ್ಥೆ ಎಂದರೆ ಕ್ಷೀಣವಾದ ಅವಸ್ಥೆಯಲ್ಲಿರುವುದು. ಆದ್ದರಿಂದ ಈ ದಂಡದಂತಿರುವ ಪುರಷಾಂಗಕ್ಕೆ ವೈತಸವೆಂದು ಹೆಸರು ಎಂದು ಯಾಸ್ಕರು ಅರ್ಥವಿವರಣೆ ಮಾಡಿದಾರೆ. ಇದಕ್ಕೆ ಉದಾಹರಣೆಗಾಗಿ **ಯಸ್ಯಾಮುಶಂತಃ ಪ್ರಹರಾಮ ಶೇಪಂ** (ಋ. ಸಂ ೧೦-೮೫-೩೭) ಮತ್ತು **ತ್ರಿಃ ಸ್ಮ ಮಾಹ್ನಃ ಶ್ನಥಯೋ ವೈತಸೇನ** (ಋ. ಸಂ ೧೦-೯೫-೫) ಎಂಬ ಎರಡು ಶ್ರುತಿವಾಕ್ಯಗಳನ್ನು ಕೊಟ್ಟಿದ್ದಾರೆ.

|| ಸಂಹಿತಾಪಾಠಃ ||

**ಯಾ ಸುಜೂರ್ಣಿಃ ಶ್ರೇಣಿಃ ಸುಮ್ನಆಪಿರ್ಹ್ರದೇ ಚಕ್ಷುರ್ನ ಗ್ರಂಥಿನೀ ಚರಣ್ಯುಃ ।**
**ತಾ ಅಂಜಯೋಽರುಣಯೋ ನ ಸಸ್ರುಃ ಶ್ರಿಯೇ ಗಾವೋ ನ ಧೇನವೋಽನವಂತ ॥ ೬ ॥**

|| ಪದಪಾಠಃ ||

**ಯಾ । ಸುऽಜೂರ್ಣಿಃ । ಶ್ರೇಣಿಃ । ಸುಮ್ನೇऽಆಪಿಃ । ಹ್ರದೇऽಚಕ್ಷುಃ । ನ । ಗ್ರಂಥಿನೀ । ಚರಣ್ಯುಃ ।**
**ತಾಃ । ಅಂಜಯಃ । ಅರುಣಯಃ । ನ । ಸಸ್ರುಃ । ಶ್ರಿಯೇ । ಗಾವಃ । ನ । ಧೇನವಃ । ಅನವಂತ ॥ ೬ ॥**

|| ಸಾಯಣಭಾಷ್ಯಂ ||

**ಪುರೂರವಸೋ ವಾಕ್ಯಂ । ಯಾ ಸುಜೂರ್ಣಿಃ ಸುಜನ್ವೈತನ್ನಾಮಿಕಾಸ್ತಿ ತಥಾ ಯಾ ಶ್ರೇಣಿರ್ಯಾ ಸುಮ್ನಆಪಿರ್ಯಾ ಹ್ರದೇಚಕ್ಷುಃ । ನಕಾರಃ ಸಮುಚ್ಚಯೇ । ತಾಭಿಶ್ಚ ತಸ್ಯಭಿರಾಲಿಭೂತಾಭಿರ್ಮಾನಿನೀಭಿಃ ಸಹಿತಾ ಗ್ರಂಥಿನೀ ಗ್ರಂಥನವತೀ ಸಂದರ್ಭವತೀ ಚರಣ್ಯುಶ್ಚರಣಶೀಲೋರ್ವಶ್ಯಾಜಗಾಮ । ಯದ್ವಾ । ಗ್ರಂಥಿನೀತ್ಯೇತತ್ಸಖಿಭೂತಾಪ್ಸರೋನಾಮಧೇಯಂ । ಯಾ ಸುಜೂರ್ಣಿಃ ಸುಜವೋರ್ವಶೀ ಸಾ ತಾಭಿಃ ಸಹ ಜಗಾಮ । ತಾ ಅಪ್ಸರಸೋಽಂಜಯ ಆಭರಣೋಪೇತಾ ಅರುಣಯೋಽರುಣವರ್ಣಾ ನ ಸಸ್ರುಃ । ಪೂರ್ವವನ್ನಗಚ್ಛಂತಿ । ಶ್ರಿಯೇ ಶ್ರಯಣಾಯ ಧೇನವೋ ನವಪ್ರಸೂತಾ ಗಾವೋ ನ ಗಾವ ಇವ । ಆಶ್ರಯಾರ್ಥಂ ಯಥಾ ಗಾವೋಽನವಂತ ಶಬ್ದಾಯಂತೇ ತಥಾ ನ ಶಬ್ದಯಂತೀತಿ ವ್ಯತಿರೇಕೇ ದೃಷ್ಟಾಂತಃ ॥**

॥ ಪ್ರತಿಪದಾರ್ಥ ॥

**ಯಾ ಸುಜೂರ್ಣಿಃ**—ಸುಜೂರ್ಣಿಯೆಂಬ ಯಾವ ಸಖಿಯಿರುವಳೊ ಅವಳೊಡನೆಯೂ । **ಶ್ರೇಣಿಃ**—ಶ್ರೇಣಿಯೊಡನೆಯೂ । **ಸುಮ್ನಆಪಿಃ**— ಸುಮ್ನಆಪಿಯೆಂಬುವಳೊಡನೆಯೂ । **ಹ್ರದೇಚಕ್ಷುಃ**— ಹ್ರದೇಚಕ್ಷುಃ ಎಂಬುವಳೊಡನೆಯೂ । **ಗ್ರಂಥಿನೀ**—ಗ್ರಂಥಿನೀ ಎಂಬುವಳೊಡನೆಯೂ । **ಚರಣ್ಯುಃ**—ಉತ್ತಮವಾದ ಸಂಚಾರವುಳ್ಳ ಉರ್ವಶಿಯು ಬಂದಿದ್ದಾಳೆ । **ತಾಃ**—ಆ ಎಲ್ಲಾ ಅಪ್ಸರಸ್ತ್ರೀಯರೂ । **ಅಂಜಯಃ** - ಆಭರಣಗಳೊಡಗೂಡಿದವರಾಗಿಯೂ । **ಅರುಣಯಃ**—ಆಕರ್ಷಕವಾದ ಹೊಂಬಣ್ಣವುಳ್ಳವರಾಗಿಯೂ ಇದ್ದು । **ನ ಸಸ್ರುಃ**—ಹಿಂದಿನಂತೆ ಓಡಿಹೋಗುವುದಿಲ್ಲ । **ಧೇನವಃ**—ಹೊಸದಾಗಿ ಕರುವನ್ನು ಹಾಕಿದ । **ಗಾವೋ ನ**—ಗೋವುಗಳಂತೆ । **ಶ್ರಿಯೇ**—ಆಶ್ರಯಕ್ಕಾಗಿ । **ಅನವಂತ**—ಶಬ್ದಮಾಡುತ್ತಾರೆ.

॥ ಭಾವಾರ್ಥ ॥

(ಪುರೂರವ) ಸುಜೂರ್ಣಿ, ಶ್ರೇಣಿ, ಸುಮ್ನಆಪಿ, ಹ್ರದೇಚಕ್ಷುಃ ಮತ್ತು ಗ್ರಂಥಿನೀ ಎಂಬ ಈ ಸಕಲ ಸಖಿಯರೊಡನೆಯೂ ಉತ್ತಮವಾದ ಸಂಚಾರಶೀಲಳಾದ ಉರ್ವಶಿಯು ಬಂದಿದ್ದಾಳೆ. ಆ ಎಲ್ಲಾ ಅಪ್ಸರಸ್ತ್ರೀಯರೂ ಆಭರಣಗಳೊಡಗೂಡಿದವರಾಗಿಯೂ, ಆಕರ್ಷಕವಾದ ಹೊಂಬಣ್ಣವುಳ್ಳವರಾಗಿಯೂ ಇದ್ದು ಹಿಂದಿನಂತೆ ಓಡಿಹೋಗುವುದಿಲ್ಲ. ಹೊಸದಾಗಿ ಕರುವನ್ನು ಹಾಕಿದ ಗೋವುಗಳಂತೆ ಆಶ್ರಯಕ್ಕಾಗಿ ಶಬ್ದವನ್ನು ಮಾಡುತ್ತಾರೆ.

## English Translation.

(Pururavas) Sujurni, Shreni, Sumna-api, Hradechakshus, Granthini and the swift-moving (Urvashi who arrived) they, decorated and purple-tinted did not go first, they lowed like milch-cows for protection.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವುದು ಪುರೂರವನ ವಾಕ್ಯವೆಂದು ಸಾಯಣರು ಹೇಳುವರು. ಇಲ್ಲಿ ಸುಜೂರ್ಣಿಃ ಶ್ರೇಣಿಃ ಸುಮ್ನಆಪಿಃ ಹ್ರದೇಚಕ್ಷುಃ ಗ್ರಂಥಿನೀ ಚರಣ್ಯುಃ ಎಂಬ ಆರುಮಂದಿ ಅಪ್ಸರಸ್ತ್ರೀಯರ ಹೆಸರುಗಳನ್ನು ಸೂಚಿಸಲಾಗಿದೆ. ಇವರೆಲ್ಲರೂ ಆಭರಣಗಳಿಂದ ಅಲಂಕೃತರಾಗಿಯೂ ಅರುಣ ವರ್ಣದಿಂದ (ಕೆಂಪು) ಶೋಭಿಸುತ್ತಲೂ ಇರುವರು. ಆದರೆ ಇವರು ಹಿಂದಿನಂತೆ ಓಡಿಹೊಗುವುದಿಲ್ಲ. ಈ ಆರು ಜನರಲ್ಲಿ ಉರ್ವಶಿಯೂ ಸೇರಿರುವಳು ಅಥವಾ ಉರ್ವಶಿಯೊಡನೆ ಈ ಆರುಮಂದಿಯೂ ಇರುವರು. ಇವರು ಘಟ್ಟಿಯಾಗಿ ಶಬ್ದಮಾಡುವುದಿಲ್ಲ ಎಂದರೆ ಮಾತನಾಡುವುದಿಲ್ಲ. ಇದಕ್ಕೆ ಒಂದು ದೃಷ್ಟಾಂತವನ್ನು ಕೊಟ್ಟಿರುವರು. ಹೊಸದಾಗಿ ಕರು ಹಾಕಿದ ಗೋವುಗಳು ರಕ್ಷಣಾರ್ಥವಾಗಿ ಕೂಗಿಕೊಳ್ಳುವುದು ಸಹಜವು. ಅದರಂತೆ ಇವರು ಶಬ್ದಮಾಡುವುದಿಲ್ಲ ಎಂದರೆ ಘಟ್ಟಿಯಾಗಿ ಕೂಗದೆ ಮೆತ್ತಗೆ ಮಾತನಾಡುವರು ಎಂದಭಿಪ್ರಾಯವು.

ಈ ಋಕ್ಕಿನ ಅರ್ಥವು ಸ್ಪಷ್ಟವಾಗಿಲ್ಲ, ಇಲ್ಲಿ ಹೇಳಿರುವ ಆರು ಮಂದಿ ಅಪ್ಸರಸ್ತ್ರೀಯರ ಹೆಸರುಗಳಿಗೂ, ಇವರು ಹೊರಟುಹೋಗುವ ಅಥವಾ ಶಬ್ದ ಮಾಡುವ ವಿಷಯಕ್ಕೆ ಸೂಕ್ತದಲ್ಲಿರುವ ಸಂಭಾಷಣೆಗೂ ಯಾವ ಸಂಬಂಧವಿರುವುದೆಂದು ತಿಳಿಯುವುದು ಕಷ್ಟವಾಗಿದೆ. ಆದರೆ ಭಾಷ್ಯಕಾರರು ಮುಂದಿನ ಋಕ್ಕಿನ ಭಾಷ್ಯದಲ್ಲಿ—**ಅನಯೈತಾಭಿಃ**

**ಸಹ ಸಂಸರ್ಗಸ್ತ್ವಯಾನುಭೂತ ಇತ್ಯುರ್ವಶೀ ವದತಿ**—ಹಿಂದೆ ಹೇಳಿದ ಈ ದೇವತಾಸ್ತ್ರೀಯರೊಡನೆ ಪುರೂರವನಿಗೆ ಯಾವವಿಧವಾದ ಸಂಬಂಧವಿತ್ತು ಎಂಬುದನ್ನು ಉರ್ವಶಿಯು ಈ ಋಕ್ಕಿನಲ್ಲಿ (೨ನೇ ಋಕ್ಕಿನಲ್ಲಿ) ಹೇಳುತ್ತಾಳೆ. **ಅಥವಾ ಜಾಯಮಾನೇ ಯಜ್ಞಾರ್ಥಂ ಪ್ರವರ್ಧಮಾನೇ ಸತಿ ಗ್ನಾ ದೇವಪತ್ನ್ಯೋಽಪಿ ಸಮಾಸತ ಸಮಭವನ್**—ಅಥವಾ ಯಜ್ಞಾರ್ಥವಾಗಿ ಈ ದೇವತಾಸ್ತ್ರೀಯರು ಇಲ್ಲಿ ಎಲ್ಲರೂ ಒಟ್ಟಿಗೆಸೇರಿದರು ಎಂದೂ ಹೇಳಬಹುದು ಎಂದು ಅರ್ಥವಿವರಣೆಮಾಡಿದಾರೆ.

|| ಸಂಹಿತಾಪಾಠಃ ||

**ಸಮಸ್ಮಿಞ್ಜಾಯಮಾನ ಆಸತ ಗ್ನಾ ಉತೇಮವರ್ಧನ್ನದ್ಯಃ ಸ್ವಗೂರ್ತಾಃ ।**
**ಮಹೇ ಯತ್ತ್ವಾ ಪುರೂರವೋ ರಣಾಯಾವರ್ಧಯನ್ದಸ್ಯುಹತ್ಯಾಯ ದೇವಾಃ ॥ ೭ ॥**

|| ಪದಪಾಠಃ ||

**ಸಂ । ಅಸ್ಮಿನ್ । ಜಾಯಮಾನೇ । ಆಸತ । ಗ್ನಾಃ । ಉತ । ಈಂ । ಅವರ್ಧನ್ । ನದ್ಯಃ । ಸ್ವಽಗೂರ್ತಾಃ। ಮಹೇ । ಯತ್ । ತ್ವಾ । ಪುರೂರವಃ । ರಣಾಯ । ಅವರ್ಧಯನ್ । ದಸ್ಯುಽಹತ್ಯಾಯ । ದೇವಾಃ ॥ ೭ ॥**

|| ಸಾಯಣಭಾಷ್ಯಂ ||

**ಅನಯೈತಾಭಿಃ ಸಹ ಸಂಸರ್ಗಸ್ತ್ವಯಾನುಭೂತ ಇತ್ಯುರ್ವಶೀ ವದತಿ । ಅಸ್ಮಿನ್ಪುರೂರವಸಿ ಜಾಯಮಾನೇ ಸತಿ ಗ್ನಾ ಅಪ್ಸರಸೋ ದೇವವೇಶ್ಯಾ ಅಪಿ ಸಮಾಸತ । ಸಂಗತಾ ಅಭವನ್ । ಅಥವಾ ಜಾಯಮಾನೇ ಯಜ್ಞಾರ್ಥಂ ಪ್ರವರ್ಧಮಾನೇ ಸತಿ ಗ್ನಾ ದೇವಪತ್ನ್ಯೋಽಪಿ ಸಮಾಸತ । ಸಮಭವನ್। ಉತಾಪಿ ಚೇಮೇನಂ ಪುರೂರವಸಂ ಸ್ವಗೂರ್ತಾಃ ಸ್ವಯಂಗಾಮಿನ್ಯೋ ನದ್ಯಸ್ತಾಸಾಮಾಶ್ರಯಭೂತಾ ಅವರ್ಧಯನ್ । ಕಿಂಚ ಹೇ ಪುರೂರವಃ ಯದ್ಯಸ್ಮಾತ್ತ್ವಾ ತ್ವಾಂ ಮಹೇ ಮಹತೇ ರಣಾಯ ರಮಣೀಯಾಯ ಸಂಗ್ರಾಮಾಯ ದಸ್ಯುಹತ್ಯಾಯ ದಸ್ಯುಹನನಾಯ ದೇವಾಸ್ತ್ವಾಮವರ್ಧಯನ್ ॥**

|| ಪ್ರತಿಪದಾರ್ಥ ||

**ಅಸ್ಮಿನ್**—ಈ ಪುರೂರವನು । **ಜಾಯಮಾನೇ**—ಉತ್ಪನ್ನನಾದೊಡನೆಯೇ । **ಗ್ನಾಃ**—ದೇವತಾಸ್ತ್ರೀಯರು । **ಸಮಾಸತ**—ಇವನನ್ನು ಸುತ್ತುವರಿದರು । **ಉತ**—ಮತ್ತು। **ಈಂ**—ಇವನನ್ನು। **ಸ್ವಗೂರ್ತಾಃ**—ಸ್ವಯಂಗಾಮಿಗಳಾದ । **ನದ್ಯಃ**—ನದಿಗಳು । **ಅವರ್ಧನ್**—ಪುಷ್ಟಿಗೊಳಿಸಿದವು । **ಪುರೂರವಃ**—ಎಲೈ ಪುರೂರವನೇ । **ಯತ್**—ಯಾವ ಅದೇ ಕಾರಣಕ್ಕಾಗಿ (ಎಂದರೆ) । **ಮಹೇ**—ಮಹತ್ತಾದ । **ರಣಾಯ**—

ಯುದ್ಧಾರ್ಥವಾಗಿಯೂ । **ದಸ್ಯುಹತ್ಯಾಯ**—ದಸ್ಯುಗಳ ನಾಶಕ್ಕಾಗಿಯೂ । **ತ್ವಾ**—ನಿನ್ನನ್ನು । **ದೇವಾಃ**—ದೇವತೆಗಳು । **ಅವರ್ಧನ್**— ಪುಷ್ಟನಾಗಿ ಬೆಳೆಯುವಂತೆ ಮಾಡಿದರು.

|| ಭಾವಾರ್ಥ ||

(ಉರ್ವಶೀ) ಈ ಪುರೂರವನು ಉತ್ಪನ್ನನಾದೊಡನೆಯೇ, ದೇವತಾಸ್ತ್ರೀಯರು ಇವನನ್ನು ಸುತ್ತುವರಿದರು. ಸ್ವಯಂಗಾಮಿಗಳಾದ ನದಿಗಳು ಇವನನ್ನು ಪುಷ್ಟಿಗೊಳಿಸಿದವು. ಎಲೈ ಪುರೂರವನೇ, ಮಹತ್ತಾದ ಯುದ್ಧಕ್ಕಾಗಿಯೂ, ದಸ್ಯುಜನರ ನಾಶಕ್ಕಾಗಿಯೂ ನಿನ್ನನ್ನು ದೇವತೆಗಳು ಪುಷ್ಟನಾಗಿ ಬೆಳೆಯುವಂತೆ ಮಾಡಿದರು.

English Translaton

(Urvashi :) As soon as he was born the wives (of the gods) surrounded him, the spontaneously flowing rivers nourished him, for the gods reared you, Pururavas, for a mighty conflict, for the slaughter of the Dasyus.

|| ವಿಶೇಷವಿಷಯಗಳು ||

ಪುರೂರವಾಃ ಎಂಬ ಶಬ್ದದ ಪ್ರಯೋಗವಿರುವ ಋಕ್ಕಿನ ಉದಾಹರಣೆಗಾಗಿ ಈ ಋಕ್ಕಿನಲ್ಲಿ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಸಮಾಸತಾಸ್ಮಿಞ್ಜಾಯಮಾನೇ ಗ್ನಾ ಗಮನಾದಾಪಃ । ದೇವಪತ್ನ್ಯೋ ವಾಪಿ ಚೈನಮವರ್ಧಯನ್ನದ್ಯಃ ಸ್ವಗೂರ್ತಾಃ ಸ್ವಯಂಗಾಮಿನ್ಯೋ ಮಹತೇ ಚ ಯತ್ತ್ವಾ ಪುರೂರವೋ ರಣಾಯ ರಮಣೀಯಾಯ ಸಂಗ್ರಾಮಾಯಾವರ್ಧಯನ್ ದಸ್ಯುಹತ್ಯಾಯ ಚ ದೇವಾ ದೇವಾಃ ||**

(ನಿ. ೧೦–೪೭)

ಈ ಪುರೂರವನು ಹುಟ್ಟಿದಕೂಡಲೆ ದೇವಪತ್ನಿಯರೆಲ್ಲರೂ ಒಟ್ಟಿಗೆ ಒಂದು ಕಡೆ ಸೇರಿ ಇವನನ್ನು ವೃದ್ಧಿಗೊಳಿಸಿದರು (ಬೆಳಸಿದರು) ಅಥವಾ ಗ್ನಾ ಎಂಬ ಶಬ್ದಕ್ಕೆ **ಗಮನಾದಾಪಃ** ಹರಿಯುವ ಸ್ವಭಾವವಿರುವುದರಿಂದ ಉದಕಗಳಿಗೆ ಗ್ನಾ ಎಂದು ಹೆಸರು (ಮೇಲೆ ದೇವಪತ್ನಿಯರೆಂದು ಅರ್ಥಮಾಡಿದೆ) ಇಂತಹ ಉದಕಗಳಿಂದ ಪೂರ್ಣವಾದ ಮತ್ತು ಸ್ವಯಂ ಪ್ರವಹಿಸುವ ನದಿಗಳು ಈ ಪುರೂರವನನ್ನು ವೃದ್ಧಿಗೊಳಿಸಿದವು ಎಂದು ಇಲ್ಲಿ ಹೇಳಿದೆ ಈ ಸಂದರ್ಭದಲ್ಲಿ ಪುರೂರವ ಶಬ್ದಕ್ಕೆ ಬಹಳವಾದ ಶಬ್ದಮಾಡುವ ಸಿಡಿಲು ಎಂದರೆ ಮಧ್ಯಮಾಗ್ನಿಯೆಂದು ಅರ್ಥವನ್ನು ಹೇಳಬೇಕಾಗುವುದು. ಇಂತಹ ಈ ಮಧ್ಯಮಾಗ್ನಿಯನ್ನು ನದಿಗಳು ಎಂದರೆ ಉದಕಗಳು (ನದನಾ ಆಪಃ) ವರ್ಷಾಕಾಲದಲ್ಲಿ ವೃದ್ಧಿಯಾಗುವಂತೆ ಮಾಡಿದವು ಎಂದು ಅರ್ಥವನ್ನು ಹೇಳಬಹುದು.

ಇನ್ನು ಉತ್ತರಾರ್ಧದಲ್ಲಿ ಸೂಚಿತವಾಗಿರುವ ವಿಷಯದಲ್ಲಿಯೂ ಎರಡು ವಿಧವಾದ ಅರ್ಥವನ್ನು ಹೇಳಬಹುದು ದೇವತಾಸ್ತ್ರೀಯರು ನದಿಗಳು ಮತ್ತು ದೇವತೆಗಳು ಆಗತಾನೆ ಹುಟ್ಟಿದ ಈ ಪುರೂರವನನ್ನು ರಮಣೀಯವಾದ ಯುದ್ಧಗಳಲ್ಲಿ ಶತ್ರುಗಳೊಡನೆ ಹೋರಾಡುವುದಕ್ಕೂ ದಸ್ಯುಜನರನ್ನು ಸಂಹರಿಸುವುದಕ್ಕೂ ಪೋಷಿಸಿ ಬೆಳಸಿದರು ಎಂದು ಒಂದು ವಿಧವಾದ ಅರ್ಥವು.

ಪುರೂರವ ಎಂದರೆ ಅಧಿಕವಾದ ಶಬ್ದವನ್ನು ಮಾಡುವ ಸಿಡಿಲು ಮಿಂಚು (ಮಧ್ಯಮಾಗ್ನಿ) ಯೆಂಬ ಅರ್ಥದಲ್ಲಿ ಈ ಪುರೂರವನನ್ನು ಮೇಘಗಳೊಡನೆ ಘರ್ಜನೆಮಾಡಿ ಯುದ್ಧಮಾಡುವುದಕ್ಕೂ, ಮೇಘ (ದಸ್ಯು) ವಧಕ್ಕಾಗಿಯೂ ದೇವತೆಗಳು ವೃದ್ಧಿಯನ್ನೈದುವಂತೆ ಮಾಡಿದರು ಎಂದು ಇನ್ನೊಂದು ವಿಧವಾದ ಅರ್ಥವು.

ಮುಖ್ಯಾಭಿಪ್ರಾಯವೇನೆಂದರೆ— ಈ ಋಕ್ಕಿನಲ್ಲಿ ಪುರೂರವಶಬ್ದಕ್ಕೆ ಎರಡುವಿಧವಾದ ಅರ್ಥವನ್ನು ಹೇಳ ಲಾಗಿದೆ: ಪುರೂರವ ಎಂಬ ರಾಜನು ಮತ್ತು ಅಂತರಿಕ್ಷದಲ್ಲಿರುವ ಮಿಂಚು ಅಥವಾ ಮಧ್ಯಮಾಗ್ನಿಯು. ಈ ಮಧ್ಯ. ಮಾಗ್ನಿಯು (ಸಿಡಿಲು) ಬಹಳವಾಗಿ ಶಬ್ದಮಾಡುವುದರಿಂದ ಇದನ್ನು ಪುರು–ಬಹಳ ರವ–ಶಬ್ದಮಾಡುವ ಎಂಬ ಹೆಸರಿನಿಂದ ಇಲ್ಲಿ ಕರೆಯಲಾಗಿದೆ.

ಪುರೂರವನು ರಾಜನೆಂಬ ಅರ್ಥದಲ್ಲಿ— ಈ ರಾಜನು ಹುಟ್ಟಿದ ಕೂಡಲೆ ಇವನನ್ನು ದೇವತಾಸ್ತ್ರೀಯರು, ನದ್ಯಭಿಮಾನಿದೇವತೆಗಳೂ ಎಲ್ಲರೂ ಒಟ್ಟಾಗಿ ಸೇರಿ ಇವನು ಮುಂದೆ ರಾಜನಾಗಿ ಯುದ್ಧದಲ್ಲಿ ಶತ್ರುಗಳನ್ನು ಜಯಿಸು ವುದಕ್ಕೂ ದಸ್ಯುಜನರನ್ನು ಸಂಹರಿಸುವುದಕ್ಕೂ ಅನುಕೂಲವಾಗಲೆಂದು ಇವನನ್ನು ಪೋಷಿಸಿ ಬೆಳೆಸಿದರು ಎಂದಭಿ ಪ್ರಾಯವು.

ಪುರೂರವನು ಮಧ್ಯಮಾಗ್ನಿಯೆಂಬ ಅರ್ಥದಲ್ಲಿ— ವರ್ಷಾಕಾಲದಲ್ಲಿ ಮೇಘರೂಪದಲ್ಲಿರುವ ಉದಕಗಳು (ಗ್ನಾಃ ಮತ್ತು ನದ್ಯಃ) ಬಹಳ ಶಬ್ದಮಾಡುತ್ತಾ ಮೇಘಗಳನ್ನು ಪ್ರಹರಿಸುತ್ತಾ ಇರುವ ಈ ಮಧ್ಯಮಾಗ್ನಿಯನ್ನು ವೃದ್ಧಿಯಾಗುವಂತೆ ಮಾಡಿದರು ಎಂದರೆ ವರ್ಷಾಕಾಲದಲ್ಲಿ ಮೇಘಗಳ ಮಧ್ಯೆ ಕಾಣಿಸಿಕೊಳ್ಳುವ ಮಿಂಚು ಅಥವಾ ಮಧ್ಯಮಾಗ್ನಿಯು ಆಗಾಗ ಘರ್ಜನೆಮಾಡುತ್ತಾ ಮೇಘಗಳನ್ನು ಪ್ರಹರಿಸುತ್ತಾ (ಯುದ್ಧಮಾಡುತ್ತಾ) ವೃದ್ಧಿಯ ನ್ನೈದುತ್ತಿರುವುದು ಎಂದಭಿಪ್ರಾಯವು.

|| ಸಂಹಿತಾಪಾಠಃ ||

ಸಚಾ ಯದಾಸು ಜಹತೀಷ್ವತ್ಕಮಮಾನುಷೀಷು ಮಾನುಷೋ ನಿಷೇವೇ ।
ಅಪ ಸ್ಮ ಮತ್ತರಸಂತೀ ನ ಭುಜ್ಯುಸ್ತಾ ಅತ್ರಸನ್ರಥಸ್ಪೃಶೋ ನಾಶ್ವಾಃ ||೮||

|| ಪದಪಾಠಃ ||

ಸಚಾ । ಯತ್ । ಆಸು । ಜಹತೀಷು । ಅತ್ಕಂ । ಅಮಾನುಷೀಷು । ಮಾನುಷಃ । ನಿऽಸೇವೇ ।
ಅಪ । ಸ್ಮ । ಮತ್ । ತರಸಂತೀ । ನ । ಭುಜ್ಯುಃ । ತಾಃ । ಅತ್ರಸನ್ । ರಥऽಸ್ಪೃಶಃ । ನ । ಅಶ್ವಾಃ || ೮ ||

|| ಸಾಯಣಭಾಷ್ಯಂ ||

ಇದಮಾದಿತ್ರೀಣ್ಯೈಳವಾಕ್ಯಾನಿ । ತತ್ರಾದಿತೋ ದ್ವಾಭ್ಯಾಮುರ್ವಶೀಮನ್ಯಾಶ್ಚ ಸಹ ಸ್ತೌತಿ । ಯದ್ಯದಾ ಸಚಾ ಸಹಾಯಭೂತಃ ಪುರೂರವಾ ಅತ್ಕಂ ಸ್ವಕೀಯಂ ರೂಪಂ । ಅತ್ಕ ಇತಿ ರೂಪನಾಮ । ಜಹತೀಷು ಪರಿತ್ಯಜಂತೀಷ್ವಮಾನುಷೀಷು ದೇವತಾಭೂತಾಸ್ವಪ್ಸರಃಸು ಮಾನುಷಃ ಸನ್ನಿಷೇವೇ ಅಭಿಮುಖಂ ಗಚ್ಛತಿ ತದಾನೀಂ ತಾ ಅಪ್ಸರಸೋ ಮನ್ಮತ್ತೋऽಪಾಪಸ್ಯತ್ಯಾತ್ರಸನ್ । ತ್ರಸತಿರ್ಗತಿಕರ್ಮಾ।

**ಗಚ್ಛಂತಿ । ಪಲಾಯನೇ ದೃಷ್ಟಾಂತಃ । ತರಸಂತೀ ಭುಜ್ಯುರ್ನ । ತರಸನ್ನಾಮ ಮೃಗಃ । ತಸ್ಯ ಸ್ತ್ರೀ ಭುಜ್ಯುರ್ಭೋಗಸಾಧನಭೂತಾ ಸ್ತ್ರೀ ಮೃಗೀ । ಸಾ ಯಥಾ ವ್ಯಾಧಾದ್ಭೀತಾ ಪಲಾಯತೇ । ಕಿಂಚ ರಥಸ್ಪೃಶೋ ನಾಶ್ವಾ ರಥೇ ನಿಯುಕ್ತಾ ಅಶ್ವಾ ಇವ । ಯಥಾ ತೇ ಪಲಾಯಂತೇ ತದ್ವತ್ಪಲಾಯಂತ ಇತಿ । ಉರ್ವಶ್ಯಾನೇಕಾಭಿರಸ್ಮಾಭಿಃ ಸಹ ಭೋಗಮನುಭುಕ್ತವಾನಸೀತ್ಯುಕ್ತಃ ಪ್ರತ್ಯಾಚಷ್ಟೇ ॥**

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಮಾನುಷಃ**— ಮನುಷ್ಯರೂಪನಾದ ಪುರೂರವನು । **ಅತ್ಕಂ** – ತಮ್ಮ ರೂಪ ವನ್ನು । **ಜಹತೀಷು**- ತ್ಯಾಗಮಾಡಿದ । **ಆಸು ಅಮಾನುಷೀಷು** – ಈ ದಿವ್ಯ ಸ್ತ್ರೀಯರೊಡನೆ । **ಸಚಾ**— **ಕೂಡಿ** । **ನಿಷೇವೇ**—ಅವರಿಗೆ ಅಭಿಮುಖನಾದನೋ ಆಗ । **ತಾಃ**—ಆ ದೇವತಾ ಸ್ತ್ರೀಯರು । **ಮತ್**— ನನ್ನನ್ನು ಬಿಟ್ಟು । **ತರಸಂತಿ ಭುಜ್ಯುಃ ನ**—ಬೆದರಿದ ಹೆಣ್ಣು ಜಿಂಕೆಯಂತೆಯೂ । **ರಥಸ್ಪೃಶಃ ಅಶ್ವಾಃ ನ**— ರಥಕ್ಕೆ ಕಟ್ಟಿದ ಅಶ್ವಗಳಂತೆಯೂ । **ಅಪ ಅತ್ರಸನ್** — ಬೆದರಿ ಓಡಿಹೋದರು.

॥ ಭಾವಾರ್ಥ ॥

(ಪುರೂರವ) ಮನುಷ್ಯರೂಪನಾದ ಪುರೂರವನು, ತಮ್ಮ ದೇಹವನ್ನು ತ್ಯಾಗಮಾಡಿದ ಈ ದಿವ್ಯಸ್ತ್ರೀಯರೊ ಡನೆ ಕೂಡಿ ಯಾವಾಗ ಅವರಿಗೆ ಅಭಿಮುಖನಾದನೋ, ಆಗ ಆ ದೇವತಾಸ್ತ್ರೀಯರು ನನ್ನನ್ನು ಬಿಟ್ಟು, ಬೆದರಿದ ಹೆಣ್ಣು ಜಿಂಕೆಯಂತೆಯೂ, ರಥಕ್ಕೆ ಕಟ್ಟಿದ ಅಶ್ವಗಳಂತೆಯೂ, ಬೆದರಿ ಓಡಿಹೋದರು.

## English Translation.

(Pururavas ) When, becoming there companion, (Pururavas) the mortal associated with these immortal (nymphs) who had abandoned their bodies, they fled from me like a timid doe, like horses harnessed to a chariot.

॥ ವಿಶೇಷವಿಷಯಗಳು ॥

ಈ ಋಕ್ಕೂ ಮುಂದಿನ ಎರಡು ಋಕ್ಕುಗಳೂ ಇಳಾಪುತ್ರನಾದ ಪುರೂರವನ ವಾಕ್ಯವು. ಮೊದಲಿನ ಎರಡು ಋಕ್ಕುಗಳಿಂದ (೮-೯ ಋಕ್ಕುಗಳು) ಪುರೂರವನು ಊರ್ವಶಿಯನ್ನೂ ಇತರ ಅಪ್ಸರಸ್ತ್ರೀಯರನ್ನೂ ಕುರಿತು ಹೇಳುತ್ತಾನೆ.

ಮನುಷ್ಯರಲ್ಲದ ಎಂದರೆ ದೇವತಾ ಸಂಭೂತರಾದ ಆ ದೇವತಾಸ್ತ್ರೀಯರೆಲ್ಲರೂ ಒಟ್ಟಿಗಿರುವಾಗ ಮನುಷ್ಯ ನಾದ ನಾನು (ಪುರೂರವನು) ನನ್ನ ಸ್ವಶರೀರವನ್ನು ಅವರಿಗೆ ಪ್ರದರ್ಶಿಸುತ್ತಾ ಅವರ ಅಭಿಮುಖವಾಗಿ ಹೋಗಲು, ಆಗ ಆ ಅಪ್ಸರಸ್ತ್ರೀಯರೆಲ್ಲರೂ ನನ್ನಿಂದ ದೂರ ಸರಿದು ಓಡಿಹೋದರು. ಹೇಗೆ ಓಡಿಹೋದರು ಎಂದರೆ ತರಸತ್ ಎಂಬ ಜಾತಿಗೆ ಸೇರಿದ ಹೆಣ್ಣು ಜಿಂಕೆಯು ಬೇಡನನ್ನು ಕಂಡು ಭಯದಿಂದ ಹೇಗೆ ಓಡಿಹೋಗುವುದೋ ಅಥವಾ ರಥಕ್ಕೆ ಹೂಡಿದ ಅಶ್ವಗಳು (ಸಾರಥಿಯ ಪ್ರೇರಣೆಯಿಂದ) ಯಾವರೀತಿ ವೇಗವಾಗಿ ಓಡಿಹೋಗುವವೋ ಅದರಂತೆ

ಈ ಅಪ್ಸರಸ್ತ್ರೀಯರೂ ನನ್ನನ್ನು ಬಿಟ್ಟು ದೂರ ಸರಿದು ಓಡಿಹೋದರು. ಮನುಷ್ಯನಾದ **ನನ್ನನ್ನು ಕಂಡಕೂಡಲೇ** ದೇವತಾಶರೀರಸಂಭೂತರಾದ **ಈ** ಅಪ್ಸರಸ್ತ್ರೀಯರು ಬೇಗನೆ ಅಲ್ಲಿಂದ ಓಡಿಹೋದರು **ಎಂದು** ಪುರೂರವನು ಹೇಳಿದಾನೆ.

**ಅತ್ಕಂ— ಅತ್ಕಂ ಇತಿ ರೂಪನಾಮ ।** ಅತ್ಕ ಎಂದರೆ ರೂಪ, ಆಕಾರ **ಇಲ್ಲಿ ದೇವತಾಸ್ತ್ರೀಯರ ಶರೀರ** ಎಂದರ್ಥವು.

**ಆಸು ಜಹತೀಷು ಅಮಾನುಷೀಷು**— ಮನುಷ್ಯರಲ್ಲದ ಈ ಅಪ್ಸರಸ್ತ್ರೀಯರು **ಮಾನುಷೋ ನಿಷೇವೇ** ಮನುಷ್ಯನು (ಪುರೂರವನು) ತಮಗೆ ಅಭಿಮುಖವಾಗಿ ಬರುತ್ತಿರುವುದನ್ನು ಕಂಡು ಆ ಸ್ಥಳವನ್ನು **ತ್ಯಜಿಸಿ ಹೊರಟು** ಹೋದರು ಎಂದಭಿಪ್ರಾಯವು.

**ತರಸಂತೀ ನ ಭುಜ್ಯುಃ— ಭುಜ್ಯುರ್ಭೋಗಸಾಧನಭೂತಾ ಸ್ತ್ರೀಮೃಗೀ। ಭುಜ್ಯುವೆಂದರೆ ಭೋಗಸಾಧನ** ಭೂತವಾದ ಸ್ತ್ರೀ. ಇಲ್ಲಿ ತರಸಂತೀ ಎಂಬ ಜಾತಿಯ ಹೆಣ್ಣು ಜಿಂಕೆಯು. ಈ ಹೆಣ್ಣು ಜಿಂಕೆಯು **ಬೇಡನನ್ನು ಕಂಡ** ಕೂಡಲೇ ಅವನು ತನ್ನನ್ನು ಕೊಲ್ಲುವನೆಂಬ ಭಯದಿಂದ ಯಾವರೀತಿ ಓಡಿಹೋಗುವುದೋ **ಅದರಂತೆ ಈ** ಅಪ್ಸರಸ್ತ್ರೀಯರು ಮಾನವನಾದ ಪುರೂರವನನ್ನು ನೋಡಿ ಓಡಿಹೋದರೆಂದು ಋಷಿಯು **ದೃಷ್ಟಾಂತ ಮೂಲಕ** ವರ್ಣಿಸಿದಾನೆ.

**ರಥಸ್ಪೃಶೋ ನ ಅಶ್ವಾಃ**— ಓಡಿಹೋಗುವ ವಿಚಾರದಲ್ಲಿ ಇನ್ನೂ ಒಂದು ದೃಷ್ಟಾಂತವನ್ನು ಇಲ್ಲಿ ಹೇಳಲಾಗಿದೆ. ರಥಕ್ಕೆ ಹೂಡಿರುವ ಅಶ್ವಗಳು ಸಾರಥಿಯ ಚಾವಟಿಯ ಏಟನಿಂದ ಪ್ರೇರಿಸಲ್ಪಟ್ಟು **ಯಾವರೀತಿ** ವೇಗವಾಗಿ ಓಡುವವೋ ಅದರಂತೆ ಈ ಅಪ್ಸರಸ್ತ್ರೀಯರೂ ಪುರೂರವನ ಸಮೀಪದಿಂದ ಓಡಿಹೋದರು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಯದಾಸು ಮರ್ತೋ ಅಮೃತಾಸು ನಿಸ್ಪೃಕ್ಸಂ ಕ್ಷೋಣೀಭಿಃ ಕ್ರತುಭಿರ್ನ ಪೃಂಕ್ತೇ ।
ತಾ ಆತಯೋ ನ ತನ್ವಃ ಶುಂಭತ ಸ್ವಾ ಅಶ್ವಾಸೋ ನ ಕ್ರೀಳಯೋ ದಂದಶಾನಾಃ ॥ ೯ ॥

॥ ಪದಪಾಠಃ ॥

ಯತ್ । ಆಸು । ಮರ್ತಃ । ಅಮೃತಾಸು । ನಿಽಸ್ಪೃಕ್ । ಕ್ಷೋಣೀಭಿಃ । ಕ್ರತುಽಭಿಃ । ನ । ಪೃಂಕ್ತೇ ।
ತಾಃ । ಆತಯಃ । ನ । ತನ್ವಃ । ಶುಂಭತ । ಸ್ವಾಃ । ಅಶ್ವಾಸಃ । ನ । ಕ್ರೀಳಯಃ । ದಂದಶಾನಾಃ ॥ ೯ ॥

॥ ಸಾಯಣಭಾಷ್ಯಂ ॥

**ಯದ್ಯದಾಸ್ವಮೃತಾಸ್ವಪ್ಸರಃಸು ಮರ್ತೋ ಮನುಷ್ಯಃ ಪುರೂರವಾ ನಿಸ್ಪೃಕ್ ನಿಃಶೇಷೇಣ ಸ್ಪೃಶನ್ ಕ್ಷೋಣೀಭಿರ್ವಾಗ್ಭಿಃ ಕ್ರತುಭಿರ್ನ ಕರ್ಮಭಿಶ್ಚ ಸಂ ಪೃಂಕ್ತೇ ಸಂಪರ್ಕಂ ಕರೋತಿ । ನಕಾರಃ ಸಮುಚ್ಚಯಾರ್ಥಃ । ತಾ ಅಪ್ಸರಸ ಆತಯ ಆತಿಭೂತಾಸ್ತದಾನೀಂ ಸ್ವಾಸ್ತನ್ವ ಆತ್ಮೀಯಾನಿ ರೂಪಾಣಿ ನ ಶುಂಭತ । ನ ಪ್ರಕಾಶಯಂತಿ । ಅಶ್ವಾಸೋ ನಾಶ್ವಾ ಇವ ಕ್ರೀಳಯಃ ಸಂಕ್ರೀಡಮಾನಾ ದಂದಶಾನಾ ದಂದಶೂಕಾ ಜಿಹ್ವಾಭಿರಾತ್ಮೀಯಾಃ ಸೃಕ್ವಾ ಭಕ್ಷಯಂತಃ । ತೇ ಯಥಾ ಚಾಪಲ್ಯೇನ ಧಾವಂತಃ ಸ್ವರೂಪಂ ನ ಪ್ರಯಚ್ಛಂತಿ ರಥಿಕಾಯ ತದ್ವದಿತಿ ದುಃಖಾದ್ಬ್ರೂತೇ ॥**

॥ ಪ್ರತಿಪದಾರ್ಥ ॥

**ಯತ್**— ಯಾವಾಗ । **ಅಮೃತಾಸು**— ಮರಣಧರ್ಮರಹಿತರಾದ । **ಆಸು— ಈ** ಅಪ್ಸರಸ್ತ್ರೀಯರೊಂದಿಗೆ । **ಮರ್ತಃ**— ಮಾನವನಾದ ಪುರೂರವನು । **ನಿಸ್ಪೃಕ್**— ಸೇರಿ । **ಕ್ಷೋಣೀಭಿಃ**— ವಾಕ್ಕುಗಳಿಂದಲೂ । **ಕ್ರತುಭಿಃ ನ**— ಕರ್ಮಗಳಿಂದಲೂ ಕೂಡ । **ಸಂ ಪೃಂಕ್ತೇ**— ಸಂಪರ್ಕವನ್ನು ಹೊಂದುವನೋ ಆಗ । **ತಾಃ ಇದೇ** ಅಪ್ಸರಸ್ತ್ರೀಯರು । **ಆತಯಃ**— ನೀರುಕೋಳಿಗಳ ರೂಪದಲ್ಲಿ । **ಸ್ವಾಃ ತನ್ವಃ**— ತಮ್ಮ ಶರೀರಗಳನ್ನು । **ಕ್ರೀಳಯಃ**— ಆಟವಾಡುತ್ತಿರುವುವೂ । **ದಂದಶಾನಾಃ**— ದವಡೆಗಳಲ್ಲಿ ಹುಲ್ಲನ್ನು ಅಡಗಿಸಿ ಕೊಂಡು ಮೇಯುತ್ತಿರುವವೂ ಆದ । **ಅಶ್ವಾಸೋ ನ**— ಅಶ್ವಗಳು ಯಜಮಾನನ ಹಿಡಿತಕ್ಕೆ ಸಿಕ್ಕದೆ ಓಡಿಹೋಗುವಂತೆ । **ನ ಶುಂಭತ**— ತಮ್ಮ ರೂಪವನ್ನು ತೋರಿಸದೆ ಓಡಿಹೋಗುತ್ತಾರೆ.

॥ ಭಾವಾರ್ಥ ॥

(ಪುರೂರವ) ಮರಣಧರ್ಮರಹಿತರಾದ ಈ ಅಪ್ಸರಸ್ತ್ರೀಯರೊಂದಿಗೆ ಮಾನವನಾದ ಪುರೂರವನು ಸೇರಿ ವಾಕ್ಕುಗಳಿಂದಲೂ ತನ್ನ ಕರ್ಮಗಳಿಂದಲೂ ಯಾವಾಗ ಸಂಪರ್ಕವನ್ನು ಹೊಂದಲಿಚ್ಛಿಸುವನೋ, ಆಗ ಇದೇ ಅಪ್ಸರಸ್ತ್ರೀಯರು ನೀರುಕೋಳಿಗಳ ರೂಪದಲ್ಲಿ ತಮ್ಮ ಶರೀರವನ್ನು ಹುಲ್ಲು ಮೇಯುತ್ತಾ ಕ್ರೀಡಿಸುತ್ತಿರುವ ಅಶ್ವಗಳು ಯಜಮಾನನ ಹಿಡಿತಕ್ಕೆ ಸಿಕ್ಕದೆ ಓಡಿ ಹೋಗುವಂತೆ, ತಮ್ಮ ರೂಪವನ್ನು ಮರೆಮಾಚುತ್ತಾ ಓಡಿಹೋಗುತ್ತಾರೆ.

## English Translation.

When a mortal mixing with these immortal nymphs has converse with them with words and actions, they (becoming) ducks do not show their bodies like playful horses champing (the bit).

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಷಯವನ್ನೇ ಪುರೂರವನು ಪ್ರಕಾರಾಂತರದಿಂದಲೂ ಬೇರೆ ಉಪಮಾನದಿಂದಲೂ ವಿವರಿಸಿದ್ದಾನೆ. ಇಲ್ಲಿ **ಮರ್ತಃ** ಎಂದರೆ ಮಾನವನಾದ ಪುರೂರವನು. **ಅಮೃತಾಸು** ಎಂದರೆ ಮರಣರಹಿತರಾದ ದೇವಜಾತಿಗೆಸೇರಿದ ಅಪ್ಸರಸ್ತ್ರೀಯರು. ಮನುಜನಾದ ಪುರೂರವನು ಮರಣರಹಿತರಾದ ಅಪ್ಸರಸ್ತ್ರೀಯರೊಡನೆ

ಸಂಪರ್ಕವನಿಚ್ಛಿಸಿ ಮಾತುಗಳಿಂದಲೂ, ಕರ್ಮ (ಚೇಷ್ಟೆ) ಗಳಿಂದಲೂ ಅವರನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದಾಗ ಆ ಸ್ತ್ರೀಯರು ತಮ್ಮ ಶರೀರಗಳನ್ನು ಇವನಿಗೆ ತೋರಗೊಡಲಿಲ್ಲ ಎಂದರೆ ಅವರು ಇವನಲ್ಲಿ ಅನುರಕ್ತರಾಗದೆ ಮತ್ತು ಇವನ ಕೈಗೆ ಸಿಕ್ಕದೆ ಬಾತುಕೋಳಿಗಳ ಅಥವಾ ಹಂಸಪಕ್ಷಿಗಳ ರೂಪವನ್ನು ಧರಿಸಿ ಓಡಿಹೋದರು. ಹೇಗೆ ಓಡಿ ಹೋದರು ಎಂದರೆ, ಕಡಿವಾಣವನ್ನು ಕಡಿಯುತ್ತಾ ಓಡಿಹೋಗಬೇಕೆಂಬ ಚಪಲಸ್ವಭಾವದಿಂದಿರುವ ಜಾತ್ಯಶ್ವಗಳು ರಥಿಕನ ಮನಸ್ಸಿನಂತೆ ವರ್ತಿಸದೆ ತಮಗೆ ಬೇಕಾದಕಡೆ ಓಡಿಹೋಗುವಂತೆ ಈ ಅಪ್ಸರಸ್ತ್ರೀಯರೂ ಓಡಿಹೋದರು ಎಂದು ಪುರೂರವನು ದುಃಖಾರ್ತನಾಗಿ ಪ್ರಲಾಪಿಸಿದಾನೆ.

॥ ಸಂಹಿತಾಪಾಠಃ ॥

ವಿದ್ಯುನ್ನ ಯಾ ಪತಂತೀ ದವಿದ್ಯೋದ್ಭರಂತೀ ಮೇ ಅಪ್ಯಾ ಕಾಮ್ಯಾನಿ ।
ಜನಿಷ್ಠೋ ಅಪೋ ನರ್ಯಃ ಸುಜಾತಃ ಪ್ರೋರ್ವಶೀ ತಿರತ ದೀರ್ಘ-
ಮಾಯುಃ ॥ ೧೦ ॥

॥ ಪದಪಾಠಃ ॥

ವಿऽದ್ಯುತ್ । ನ । ಯಾ । ಪತಂತೀ । ದವಿದ್ಯೋತ್ । ಭರಂತೀ । ಮೇ । ಅಪ್ಯಾ । ಕಾಮ್ಯಾನಿ ।

ಜನಿಷ್ಟೋ ಇತಿ । ಅಪಃ । ನರ್ಯಃ । ಸುऽಜಾತಃ । ಪ್ರ । ಉರ್ವಶೀ । ತಿರತೆ । ದೀರ್ಘಂ । ಆಯುಃ ॥೧೦॥

॥ ಸಾಯಣಭಾಷ್ಯಂ ॥

ಅನಯೋರ್ವಶೀಂ ಸ್ತೌತಿ । ಯೋರ್ವಶೀ ವಿದ್ಯುನ್ನ ವಿದ್ಯುದಿವ ಪತಂತೀ ಗಚ್ಛಂತೀ ದವಿದ್ಯೋತ್ ದ್ಯೋತತೇ । ಕಿಂ ಕುರ್ವತೀ । ಅಪ್ಯಾ । ಅಪ ಇತ್ಯಂತರಿಕ್ಷನಾಮ । ತತ್ಸಂಬಂಧೀನಿ ವ್ಯಾಪ್ತಾನಿ ವಾ ಕಾಮ್ಯಾನ್ಯಸ್ಮದಭಿಮತಾನ್ಯುದಕಾನಿ ವಾ ಮೇ ಮಹ್ಯಂ ಭರಂತೀ ಸಂಪಾದಯಂತೀ । ಯದಾಗತಾಯಾಸ್ತಸ್ಯಾಃ ಸಕಾಶಾದಪೋ ವ್ಯಾಪ್ತಃ ಕರ್ಮಸು ನರ್ಯೋ ನರೇಭ್ಯೋ ಹಿತಃ ಸುಜಾತಃ ಸುಜನನಃ ಪುತ್ರೋ ಜನಿಷ್ಟೋ ಅಜನಿಷ್ಟ ಉತ್ಪದ್ಯತೇ ತದಾನೀಂ ಮನೋರ್ವಶೀ ದೀರ್ಘಮಾಯುಃ ಪ್ರ ತಿರತೆ । ಪ್ರವರ್ಧಯತಿ । ಪ್ರಜಾಮನು ಪ್ರಜಾಯಸೇ ತದು ತೇ ಮರ್ತ್ಯಾಮೃತಂ । ತೈ. ಬ್ರಾ. ೧-೫-೫-೬ ಇತಿ ಹಿ ಮಂತ್ರಃ ॥

॥ ಪ್ರತಿಪದಾರ್ಥ ॥

ಯಾ— ಯಾವ ಉರ್ವಶಿಯು । ಅಪ್ಯಾ— ಅಂತರಿಕ್ಷಸ್ಥವಾದುದೂ । ಕಾಮ್ಯಾನಿ— ಅಪೇಕ್ಷಿತವಾದುದೂ ಆದ ಉದಕಗಳನ್ನು । ಮೇ— ನನಗೆ । ಭರಂತೀ— ತಂದೊದಗಿಸುವಳೋ ಅವಳು ಅಥವಾ । ಯಾ— ಯಾವ ಉರ್ವಶಿಯು । ಅಪ್ಯಾ— ನನ್ನಿಂದ ಅಪೇಕ್ಷಿತವಾದ ಅಥವಾ ನನಗೆ ಬೇಕಾದ । ಮೇ - ನನ್ನ । ಕಾಮ್ಯಾನಿ—

**ಕಾಮಾಭಿಲಾಷೆಗಳನ್ನು ಪೂರೈಸುವಳೋ** ಅಂತಹ ಉರ್ವಶಿಯು । **ವಿದ್ಯುನ್ನ**—ವಿದ್ಯುತ್ತಿನಂತೆ । **ಪತಂತೀ**—ದ್ಯುಲೋಕದಿಂದ ಕೆಳಗಿಳಿದು ಬರುತ್ತಾ । **ದವಿದ್ಯೋತ್**—ಪ್ರಕಾಶಿಸುತ್ತಾಳೆ । **ಅಪಃ**—ಕರ್ಮನಿರತನೂ । **ನರ್ಯಃ**—ಮಾನವರಿಗೆ ಹಿತಕರನೂ । **ಸುಜಾತಃ**—ಉತ್ತಮವಾದ ಜನ್ಮವುಳ್ಳವನೂ ಆದ ಪುತ್ರನು । **ಜನಿಷ್ಟೋ**—**ಯದಾ**ವಾಗ ಉತ್ಪನ್ನನಾಗುತ್ತಾನೆ ಆಗ । **ಉರ್ವಶೀ**—ಉರ್ವಶಿಯು । **ಆಯುಃ**—ನನ್ನ ಆಯುಸ್ಸನ್ನು । **ದೀರ್ಘಂ**—ದೀರ್ಘವಾಗಿ । **ಪ್ರ ತಿರತೆ**—ಬೆಳಸುತ್ತಾಳೆ

॥ ಭಾವಾರ್ಥ ॥

(ಪುರೂರವನವಾಕ್ಯ) ಯಾವ ಉರ್ವಶಿಯು ಅಂತರಿಕ್ಷಸ್ಥವಾದುದೂ, ನಮಗೆ ಅಪೇಕ್ಷಿತವಾದುದೂ ಆದ ಉದಕಗಳನ್ನು ನನಗೆ ತಂದೊದಗಿಸುವಳೋ ಅಥವಾ ನನ್ನ ಕಾಮಾಭಿಲಾಷೆಗಳನ್ನು ಈಡೇರಿಸುವಳೋ ಅವಳು ವಿದ್ಯುತ್ತಿನಂತೆ ಕೆಳಗಿಳಿದು ಬರುತ್ತ ಪ್ರಕಾಶಿಸುತ್ತಾಳೆ. ಕರ್ಮನಿರತನೂ, ಮಾನವರಿಗೆ ಹಿತಕರನೂ, ಉತ್ತಮವಾದ ಜನ್ಮವುಳ್ಳವನೂ ಆದ ಪುತ್ರನು ಅವಳಿಂದ ಉತ್ಪನ್ನನಾಗುತ್ತಾನೆ. ಉರ್ವಶಿಯು ನನ್ನ ಆಯುಸ್ಸನ್ನು ದೀರ್ಘವಾಗಿ ಬೆಳಸುತ್ತಾಳೆ.

## English Translation.

(Urvashi) who shone like flashing lightning, bringing me the desirable dews (of heaven, has appeared); a son able in act and friendly to man has been born; Urvashi has prolonged my lengthened existence.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಪುರೂರವನು ಉರ್ವಶಿಯೊಬ್ಬಳನ್ನು ಮಾತ್ರ ಸಂಬೋಧಿಸಿ ಅವಳನ್ನು ಪ್ರಶಂಸೆಮಾಡಿದಾನೆ. ಆರು ಮಂದಿ ಅಪ್ಸರಸ್ತ್ರೀಯರೂ ತನ್ನನ್ನು ನೋಡಿದ ಕೂಡಲೆ ಓಡಿಹೋದರೂ ಉರ್ವಶಿಯು ಮಾತ್ರ ತಾನಿದ್ದೆಡೆಗೆ ಅಂತರಿಕ್ಷದಿಂದ ಮಿಂಚಿನಂತೆ ಎರಗಿಬಂದು ತನ್ನ ಜೊತೆಯಲ್ಲಿದ್ದು ಪ್ರಕಾಶಿಸುತ್ತಾಳೆ. ಮತ್ತು ನನ್ನ ಕಾಮಾಭಿಲಾಷೆಗಳನ್ನು ಪೂರಯಿಸುತ್ತಾಳೆ. ಅವಳಲ್ಲಿ ಕರ್ಮನಿಷ್ಠನೂ ಜನರಿಗೆ ಹಿತವನ್ನುಂಟುಮಾಡುವವನೂ ಆದ ಸುಪುತ್ರನೊಬ್ಬನು ಜನಿಸುತ್ತಾನೆ. ಈ ಉರ್ವಶಿಯು ನನಗೆ ದೀರ್ಘಾಯುಸ್ಸನ್ನು ಉಂಟುಮಾಡಲಿ ಎಂಬ ಆಶ್ವಾಸನೆಯನ್ನು ಪುರೂರವನು ಈ ಋಕ್ಕಿನಲ್ಲಿ ವ್ಯಕ್ತಪಡಿಸಿದಾನೆ.

ಈ ಉರ್ವಶೀಶಬ್ದ ಪ್ರಯೋಗವಿರುವ ಋಕ್ಕಿನ ಉದಾಹರಣೆಗಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

> **ವಿದ್ಯುದಿವ ಯಾ ಪತಂತ್ಯದ್ಯೋತತ ಹರಂತೀ ಮೇ ಅಪ್ಯಾ ಕಾಮ್ಯಾನ್ಯುದಕಾನ್ಯಂತರಿಕ್ಷಲೋಕಸ್ಯ ಯದಾ ನೂನಮಯಂ ಜಾಯೇತಾದ್ಭ್ಯೋಽಧ್ಯಪ ಇತಿ । ನರ್ಯೋ ಮನುಷ್ಯೋ ನೃಭ್ಯೋ ಹಿತೋ ನರಾಪತ್ಯಮಿತಿ ವಾ । ಸುಜಾತಃ ಸುಜಾತತರೋಽಥೋರ್ವಶೀ ಪ್ರವರ್ಧಯತೇ ದೀರ್ಘಮಾಯುಃ ॥**

(ನಿ. ೧೧-೩೬)

ಈ ನಿರ್ವಚನಕ್ಕೆ ಎರಡುವಿಧ ಅರ್ಥವನ್ನು ಹೇಳಬಹುದು. ಒಂದು—ಪುರೂರವನೆಂದರೆ ಅಂತರಿಕ್ಷಸ್ಥವಾದ ಮಿಂಚು ಮತ್ತು ಸಿಡಿಲು (ಪುರು-ಬಹಳ, ರವ-ಶಬ್ದ) ಆದರೆ ಇಲ್ಲಿ ಪುರೂರವನೆಂದರೆ (ಸಿಡಿಲಿನ) ಶಬ್ದವೆಂದೂ ಉರ್ವಶಿ ಎಂದರೆ ಮಿಂಚೆಂದೂ ಹೇಳಿದೆ ಅಂತರಿಕ್ಷಸ್ಥವಾದ ಮೇಘದಲ್ಲಿ ಈ ಮಿಂಚು (ಉರ್ವಶೀ) ಪುನಃ ಪುನಃ ಸಂಚಾರಮಾಡುತ್ತಾ ಎಂದರೆ ಪದೇ ಪದೇ ಪ್ರಕಾಶಿಸುತ್ತಾ ಅಂತರಿಕ್ಷಲೋಕದ ಎಲ್ಲರಿಗೂ ಬೇಕಾದ ಉದಕಗಳನ್ನು ಒದಗಿಸುವಳು, (ಹರಂತೀ) ಎಂದರೆ ಸಿಡಿಲು ಮಿಂಚು, ಇವುಗಳಿಂದ ಕೂಡಿದ ಮೇಘಮಂಡಲದಿಂದ ವೃಷ್ಟಿಯು ಸುರಿಯುವುದು. ಈ ವೃಷ್ಟಿಯ ಫಲವಾಗಿ ಜನರಿಗೆ ಹಿತಕರವಾದ ಕಾರ್ಯವು ಎಂದರೆ ಸಸ್ಯಾಭಿವೃದ್ಧಿಯು (ಅನ್ನಾದ್ಯಾಹಾರಸಂಪತ್ತಿಯು) ಉಂಟಾಗುವುದು ಇಂತಹ ಉರ್ವಶಿಯು (ಸಿಡಿಲುಮಿಂಚುಗಳಿಂದ ಕೂಡಿದ ಮೇಘವು) ಜನರಿಗೆ ಅನ್ನಪ್ರದಾನಾದಿ ಗಳಿಂದ ಅವರ ಆಯುಸ್ಸನ್ನು ಅಭಿವೃದ್ಧಿಮಾಡಲಿ.

ಇನ್ನೊಂದು ವಿಧವಾದ ಅರ್ಥವು—ಇದು ಐತಿಹಾಸಿಕಪಕ್ಷವು—ಈ ಉರ್ವಶಿಯೆಂಬ ಅಪ್ಸರಸ್ತ್ರೀಯು ತನ್ನ ಸ್ವಸ್ಥಾನವಾದ ಅಂತರಿಕ್ಷ (ಸ್ವರ್ಗ) ದಿಂದ ಇಳಿದು ಬಂದು ಪುರೂರವನಾದ ನನ್ನ ಕಾಮಾಭಿಲಾಷೆಗಳನ್ನು ಪೂರೈಸುತ್ತಾ ನನ್ನ ಜೊತೆಯಲ್ಲಿದ್ದು ಪ್ರಕಾಶಿಸುತ್ತಿದ್ದಳು. ನನ್ನಿಂದ ಇವಳಲ್ಲಿ ಸತ್ಕರ್ಮನಿಷ್ಠನೂ, ಜನರಿಗೆ ಹಿತಕಾರಿಯೂ, ಉತ್ತಮ ಜನ್ಮವುಳ್ಳವನೂ ಆದ ಪುತ್ರನೊಬ್ಬನು ಜನಿಸುತ್ತಾನೆ. ಇಂತಹ ಉರ್ವಶಿಯು ನನಗೆ ಸುಖ ಸಂತೋಷಗಳನ್ನು ಒದಗಿಸಿ ಬಹುಕಾಲ ಜೀವಿಸಿರುವಂತೆ ದೀರ್ಘಾಯುಸ್ಸನ್ನು ಕೊಡಲಿ ಎಂದಭಿಪ್ರಾಯವು.

ಅಪಃ—ಎಂದರೆ ಉದಕಗಳು ಅಥವಾ ಕರ್ಮಗಳು.

**ನರ್ಯಃ— ಮನುಷ್ಯೋ ನೃಭೋ ಹಿತೋ ನರಾಪತ್ಯಮಿತಿ ವಾ** ॥ ನರಃ ಎಂದರೆ ಮನುಷ್ಯನು. ನರ್ಯಃ ಎಂದರೆ ಮನುಷ್ಯರಿಗೆ ಹಿತಕರವಾದವನು ಅಥವಾ ನರನಿಂದ (ಮನುಷ್ಯನಿಂದ) ಉತ್ಪನ್ನನಾದವನು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

**ಜಜ್ಞಿಷ ಇತ್ಥಾ ಗೋಪೀಥ್ಯಾಯ ಹಿ ದಧಾಥ ತತ್ಪುರೂರವೋ ಮ ಓಜಃ ।**

**ಅಶಾಸಂ ತ್ವಾ ವಿದುಷೀ ಸಸ್ಮಿನ್ನಹನ್ನ ಮ ಆಶೃಣೋಃ ಕಿಮಭುಗ್ವದಾಸಿ ॥**

॥ ಪದಪಾಠಃ ॥

ಜಜ್ಞಿಷೇ । ಇತ್ಥಾ । ಗೋಽಪೀಥ್ಯಾಯ । ಹಿ । ದಧಾಥ । ತತ್ । ಪುರೂರವಃ । ಮೇ । ಓಜಃ ।

ಅಶಾಸಂ । ತ್ವಾ । ವಿದುಷೀ । ಸಸ್ಮಿನ್ । ಅಹನ್ । ನ । ಮೇ । ಆ । ಅಶೃಣೋಃ । ಕಿಂ । ಅಭುಕ್ । ವದಾಸಿ ॥ ೧೧ ॥

|| ಸಾಯಣಭಾಷ್ಯಂ ||

**ಇತ್ಥೇತ್ಥಂ ಗೋಪೀಥ್ಯಾಯ । ಗೌಃ ಪೃಥಿವೀ । ಪೀಥಂ ಪಾಲನಂ ॥ ಸ್ವಾರ್ಥಿಕಸ್ತದ್ಧಿತಃ ॥ ಭೂರಕ್ಷಣಾಯ ಜಜ್ಞಿಷೇ ಹಿ । ಜಾತೋಽಸಿ ಖಲು ಪುತ್ರರೂಪೇಣ । ಆತ್ಮಾ ವೈ ಪುತ್ರನಾಮಾಸೀತಿ ಶ್ರುತೇಃ । ಪುನರ್ದೇವ್ಯಾಹ । ಹೇ ಪುರೂರವಃ ಮೇ ಮಮೋದರೇ ಮಯ್ಯೋಜೋಽಪತ್ಯೋತ್ಪಾದನ-ಸಾಮರ್ಥ್ಯಂ ದಧಾಥ । ಮಯಿ ನಿಹಿತವಾನಸಿ । ತತ್ತಥಾಸ್ತು । ಅಥಾಪಿ ಸ್ಥಾತವ್ಯಮಿತಿ ಚೇತ್ ತತ್ರಾಹ ಅಹಂ ವಿದುಷೀ ಭಾವಿ ಕಾರ್ಯಂ ಜಾನತೀ ಸಸ್ಮಿನ್ನಹನ್ ಸರ್ವಸ್ಮಿನ್ನಹನಿ ತ್ವಯಾ ಕರ್ತವ್ಯಂ ತ್ವಾ ತ್ವಾಮಶಾಸಂ । ಶಿಕ್ಷಿತವತ್ಯಸ್ಮಿ । ತ್ವಂ ಮೇ ಮಮ ವಚನಂ ನಾಶೃಣೋಃ । ನ ಶೃಣೋಷಿ । ಕಿಂ ತ್ವಮಭುಗಭೋಕ್ತಾಪಾಲಯಿತಾ ಪ್ರತಿಜ್ಞಾತಾರ್ಥಮಪಾಲಯನ್ನದಾಸಿ ಹಯೇ ಜಾಯ ಇತ್ಯಾದಿಕರೂಪಂ ಪ್ರಲಾಪಂ ॥ ವದೇರ್ಲೇಟ್ಯಡಾಗಮಃ ॥ ದಿವಸೇ ತ್ರಿವಾರಂ ಯಭಸ್ವ ಏಡಕಬಾಲಕಮಸ್ಮಾಕಂ ಪುತ್ರತ್ವೇನ ಪರಿಕಲ್ಪಯ ಅಪತ್ಯೋತ್ಪಾದನಪರ್ಯಂತಂ ವಸಾಮಿ ನಗ್ನಂ ತ್ವಾಂ ಯದಾದ್ರಾಕ್ಷಂ ತದಾ ಗಚ್ಛಾಮೀ-ತ್ಯೇವಂರೂಪೋ ಮಿಥಃಸಮಯ ಉರ್ವಶೀ ಹಾಪ್ಸರಾಃ ಪುರೂರವಸಮೈಳಂ ಚಕಮೇ ತಗ್ಂ ಹ ವಿಂದಮಾ-ನೋವಾಚ ತ್ರಿಃ ಸ್ಮ ಮಾಹ್ನೋ ವೈತಸೇನ ದಂಡೇನೇತ್ಯಾದಿ ವಾಜಸನೇಯಕಮುದಾಹೃತಂ ॥**

|| ಪ್ರತಿಪದಾರ್ಥ ||

**ಪುರೂರವಃ**—ಎಲೈ ಪುರೂರವನೇ । **ಇತ್ಥಾ**—ಈ ರೀತಿಯಲ್ಲಿ (ಪುತ್ರರೂಪದಲ್ಲಿ) ।**ಗೋಪೀಥ್ಯಾಯ**—ಪೃಥ್ವಿಯ ರಕ್ಷಣಾರ್ಥವಾಗಿ । **ಜಜ್ಞಿಷೇ ಹಿ**—ಉತ್ಪನ್ನನಾಗಿದ್ದೀಯೆ । **ಮೇ**— ನನ್ನ ಉದರದಲ್ಲಿ । **ತತ್ ಓಜಃ**— ಪುತ್ರರೂಪವಾದ ವೀರ್ಯವನ್ನು । **ದಧಾಥ**—ಸ್ಥಾಪಿಸಿದ್ದೀಯೆ । **ವಿದುಷೀ**—ಭವಿಷ್ಯವನ್ನು ತಿಳಿದ ನಾನು । **ಸಸ್ಮಿನ್ನಹನ್**—ಸಕಲದಿನಗಳಲ್ಲಿಯೂ ನೀನು ಮಾಡಬೇಕಾದ ಕಾರ್ಯವನ್ನು । **ತ್ವಾ**—ನಿನಗೆ । **ಅಶಾಸಂ**—ತಿಳಿಸಿದ್ದೇನೆ । **ತ್ವಂ**—ನೀನು । **ಮೇ**—ನನ್ನ ವಚನವನ್ನು । **ನ ಅಶೃಣೋಃ**—ಕೇಳಲಿಲ್ಲ । **ಅಭುಕ್**—ನನ್ನ ಹಿತವಚನವನ್ನು ಪಾಲಿಸದಿದ್ದ ಮೇಲೆ । **ಕಿಂ**—ಏತಕ್ಕೋಸ್ಕರ । **ವದಾಸಿ**—ನನ್ನನ್ನು ನಿರ್ದೇಶಿಸಿ ಮಾತನಾಡು ತ್ತೀಯೆ ?

|| ಭಾವಾರ್ಥ ||

(ಉರ್ವಶಿಯ ವಾಕ್ಯವು) ಎಲೈ ಪುರೂರವನೇ, ನೀನು ಈ ರೀತಿ ಪುತ್ರರೂಪದಲ್ಲಿ ಪೃಥ್ವಿಯ ರಕ್ಷಣಾರ್ಥವಾಗಿ ಉತ್ಪನ್ನನಾಗಿದ್ದೀಯೆ. ನನ್ನ ಉದರದಲ್ಲಿ ಪುತ್ರರೂಪವಾದ ವೀರ್ಯವನ್ನು ಸ್ಥಾಪಿಸಿದ್ದೀಯೆ. ಭವಿಷ್ಯವನ್ನು ತಿಳಿದ ನಾನು ಸಕಲ ದಿನಗಳಲ್ಲಿಯೂ ನೀನು ಮಾಡಬೇಕಾದ ಕಾರ್ಯವನ್ನು ನಿನಗೆ ತಿಳಿಸಿದ್ದೇನೆ. ಆದರೂ ನೀನು ನನ್ನ ವಚನ ವನ್ನು ಕೇಳಲಿಲ್ಲ. ನನ್ನ ಹಿತವಚನವನ್ನು ಪಾಲಿಸದಿದ್ದ ಮೇಲೆ ಏತಕ್ಕೋಸ್ಕರ ನನ್ನನ್ನು ನಿರ್ದೇಶಿಸಿ ಮಾತನಾಡುತ್ತೀಯೆ?

## English Translation.

(Urvashi :) You have been born thus to protect the earth ; you have deposited this vigour in me, knowing (the future) I have instructed you

what to do) every day; you have not listened to me; why do you now address me, neglectful (of my instruction)?

॥ ವಿಶೇಷವಿಷಯಗಳು ॥

**ವಿದುಷೀ ಸಸ್ಮಿನ್ನಹನ್ ತ್ವಾ ಅಶಾಸಂ— ಅಹಂ ಭಾವಿಕಾರ್ಯಂ ಜಾನತೀ ಸರ್ವಸ್ಮಿನ್ನಹನಿ ತ್ವಯಾ ಕರ್ತವ್ಯಂ ತ್ವಾಂ ಶಿಕ್ಷಿತವತ್ಯಸ್ಮಿ ।** ನಾನು ಮುಂದೆ ನಡೆಯುಬಹುದಾದ ಕಾರ್ಯವನ್ನು ತಿಳಿದವಳಾದ್ದರಿಂದ ನೀನು ನನ್ನ ವಿಷಯದಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ಹಿಂದೆಯೇ ಅನೇಕವೇಳೆ ತಿಳಿಸಿದ್ದೇನೆ.

**ನೋ ನ ಅಶೃಣೋಃ— ಮಮ ವಚನಂ ನ ಶೃಣೋಷಿ ।** ನೀನು ನನ್ನ ಮಾತನ್ನು ಕೇಳಲಿಲ್ಲ. ಇಲ್ಲಿ ಉರ್ವಶಿಯು ಪುರೂರವನಿಗೆ ಹೇಳಿದ ಮಾತು ಯಾವುದು? ಅವನು ಅವಳ ಮಾತನ್ನು ಹೇಗೆ (ಯಾಕೆ) ಕೇಳಲಿಲ್ಲ ಎಂದರೆ—ಅಪತ್ಯೋತ್ಪಾದನಪರ್ಯಂತಂ ವಸಾಮಿ । ನಗ್ನಂ ತ್ವಾಂ ಯದಾದ್ರಾಕ್ಷಂ ತದಾ ಗಚ್ಛಾಮೀತ್ಯೇವಂರೂಪೋ ಮಿಥಃಸಮಯಃ । ಹಿಂದೆ ಪುರೂರವನಿಗೂ ಉರ್ವಶಿಗೂ ಒಂದು ಒಪ್ಪಂದವಾಗಿ ಅದರಂತೆ ಉರ್ವಶಿಯು ಪುರೂರವನ ಜತೆಯಲ್ಲಿ ಅವನ ಪತ್ನಿಯಂತೆ ವಾಸಮಾಡುತ್ತಿದ್ದಳು. ಆಗ ಉರ್ವಶಿಯು—ಎಲೈ ಪುರೂರವನೇ, ನಿನಗೆ ನನ್ನಲ್ಲಿ ಓರ್ವಪುತ್ರನು ಉತ್ಪತ್ತಿಯಾಗುವವರೆಗೂ ನಿನ್ನೊಡನೆ ವಾಸಮಾಡಿಕೊಂಡಿರುತ್ತೇನೆ. ಆದರೆ ನೀನು ನಗ್ನನಾಗಿರುವಾಗ (ಬೆತ್ತಲೆ) ನಾನು ನಿನ್ನನ್ನು ನೋಡಲು ಅವಕಾಶವಿತ್ತದ್ದೇ ಆದರೆ ನಾನು ಆಕೂಡಲೇ ನಿನ್ನನ್ನು ಬಿಟ್ಟು ಹೊರಟು ಹೋಗುತ್ತೇನೆ ಎಂದು ಒಪ್ಪಂದಸಮಯದಲ್ಲಿ ಹೇಳಿದ್ದಳು. ಅದನ್ನೇ ಇಲ್ಲಿ ಪ್ರಸ್ತಾಪಮಾಡಿ ನನ್ನ ಮಾತನ್ನು ನೀನು ಕೇಳಲಿಲ್ಲ ಎಂದು ಪುರೂರವನಿಗೆ ಹೇಳಿರುವುದು ಇಲ್ಲಿ ಉಕ್ತವಾಗಿದೆ. ಈ ವಿಷಯದಲ್ಲಿ—**ಉರ್ವಶೀ ಹ್ಯಪ್ಸರಾಃ ಪುರೂರವಸಮೈಳಂ ಚಕಮೇ ತಗ್ಂ ಹ ವಿಂದಮಾನೋವಾಚ ತ್ರಿಃ ಸ್ಮ ಮಾಹ್ನೋ ವೈತಸೇನ ದಂಡೇನ** (ಶ. ಬ್ರಾ. ೧೧-೫-೧) ಇತ್ಯಾದಿ ಶತಪಥ ಬ್ರಾಹ್ಮಣ ವಾಕ್ಯವನ್ನು ಭಾಷ್ಯಕಾರರು ಉದಾಹರಿಸಿರುವರು.

॥ ಸಂಹಿತಾಪಾಠಃ ॥

ಕದಾ ಸೂನುಃ ಪಿತರಂ ಜಾತ ಇಚ್ಛಾಚ್ಚಕ್ರನ್ನಾಶ್ರು ವರ್ತಯದ್ವಿಜಾನನ್ ।
ಕೋ ದಂಪತೀ ಸಮನಸಾ ವಿ ಯೂಯೋದಧ ಯದಗ್ನಿಃ ಶ್ವಶುರೇಷು
ದೀದಯತ್ ॥

॥ ಪದಪಾಠಃ ॥

ಕದಾ । ಸೂನುಃ । ಪಿತರಂ । ಜಾತಃ । ಇಚ್ಛಾತ್ । ಚಕ್ರನ್ । ನ । ಅಶ್ರು । ವರ್ತಯತ್ । ವಿऽಜಾನನ್ ।

ಕಃ । ದಂಪತೀ ಇತಿ ದಂऽಪತೀ । ಸऽಮನಸಾ । ವಿ । ಯೂಯೋತ್ । ಅಧ । ಯತ್ । ಅಗ್ನಿಃ । ಶ್ವಶುರೇಷು । ದೀದಯತ್ ॥ ೧೨ ॥

॥ ಸಾಯಣಭಾಷ್ಯಂ ॥

ಇದಂ ಪುರೂರವಸೋ ವಾಕ್ಯಂ। ಕದಾ ಕಸ್ಮಿನ್ಕಾಲೇ ಸೂನುಸ್ತವೋದರಜಾತಃ ಸನ್ ಪಿತರಂ ಮಾಮಿಚ್ಛಾತ್। ಇಚ್ಛೇತ್॥ ಇಷು ಇಚ್ಛಾಯಾಂ। ಲೇಟಿ ಶಪೀಷುಗಮಿಯಮಾಂ ಛ ಇತಿ ಛಾದೇಶಃ। ಲೇಟೋಽಡಾಟಾವಿತ್ಯಡಾಗಮಃ॥ ಕದಾ ವಾ ವಿಜಾನನ್ಪಿತರಂ ಮಾಮಧಿಗಚ್ಛಂಶ್ಚಕ್ರನ್ ಕ್ರಂದಮಾನೋ ನಾಶ್ರು ವರ್ತಯತ್। ನೇತಿ ಚಾರ್ಥೇ। ಕಿಂಚ ಕಃ ಕಿಂವಿಧಃ ಸನ್ ಸೂನುಃ ಸಮನಸಾ ಸಮನಸೌ ಸಮನಸ್ಕೌ ದಂಪತೀ ಜಾಯಾಪತೀ ತ್ವಾಂ ಮಾಂ ಚ ವಿ ಯೂಯೋತ್। ವಿಶ್ಲೇಷಯೇತ್॥ ಯು ಮಿಶ್ರಣಾಮಿಶ್ರಣಯೋಃ। ಯೌತೇಶ್ಛಾಂದಸಃ ಶಪಃ ಶ್ಲುಃ। ತುಜಾದಿತ್ವಾದಭ್ಯಾಸಸ್ಯ ದೀರ್ಘಃ॥ ಅಥಾಧುನಾ ಯದ್ಯದಾಗ್ನಿಸ್ತವ ಹೃದಯಸ್ಥಿತಸ್ತೇಜೋರೂಪೋ ಗರ್ಭಃ ಶ್ವಶುರೇಷು ದೀದಯತ್ ದೀಪ್ಯತೇ। ದೀದಯತಿರ್ದೀಪ್ತಿಕರ್ಮೇತಿ ನೈರುಕ್ತೋ ಧಾತುಃ॥

॥ ಪ್ರತಿಪದಾರ್ಥ ॥

(ಎಲೈ ಉರ್ವಶಿಯೇ) **ಕದಾ**—ಯಾವಾಗ। **ಸೂನುಃ**—ನಿನ್ನ ಉದರದಲ್ಲಿ ಉತ್ಪನ್ನನಾದ ಪುತ್ರನು। **ಪಿತರಂ**—ಅವನ ತಂಡೆಯಾದ ನನ್ನನ್ನು। **ಇಚ್ಛಾತ್**—ಪ್ರೀತಿಸುವನು। (**ಕದಾ**— ಯಾವಾಗ)। **ವಿಜಾನನ್**—ಅವನ ತಂಡೆಯೇ ನಾನೆಂದು ತಿಳಿದು। **ಚಕ್ರನ್**—ಕೂಗುತ್ತ। **ನ ಅಶ್ರು ವರ್ತಯತ್**— ಕಣ್ಣೀರನ್ನು ಸುರಿಸುತ್ತಾನೆ। **ಅಥ**— ಈ ಸನ್ನಿವೇಶದಲ್ಲಿ। **ಯತ್**—ಯಾವಾಗ। **ಅಗ್ನಿಃ**—ನಿನ್ನ ಹೃದಯಸ್ಥವಾದ ತೇಜೋರೂಪವಾದ ಗರ್ಭವು। **ಶ್ವಶುರೇಷು** ನಿನ್ನ ಪತಿಯ ಮಾತಾಪಿತೃಗಳಲ್ಲಿ। **ದೀದಯತ್** —ಪ್ರಕಾಶಿಸುವುದೋ ಆ ಕಾಲದಲ್ಲಿ। **ಕಃ**—ಯಾವ ರೀತಿಯ ಪುತ್ರನು। **ಸಮನಸಾ**—ಒಂದುಗೂಡಿದ ಮನಸ್ಸುಳ್ಳವರೂ। **ದಂಪತೀ**—ಜಾಯಾಪತಿಗಳೂ ಆದ ನನ್ನನ್ನೂ ಮತ್ತು ನಿನ್ನನ್ನೂ। **ವಿ ಯೂಯೋತ್**—ಬೇರೆಮಾಡಬಲ್ಲನು?

॥ ಭಾವಾರ್ಥ ॥

(ಪುರೂರವನ ವಾಕ್ಯ) ಎಲೈ ಉರ್ವಶಿಯೇ, ಯಾವಾಗ ನಿನ್ನ ಉದರದಲ್ಲಿ ಉತ್ಪನ್ನನಾದ ಪುತ್ರನು ಅವನ ತಂದೆಯಾದ ನನ್ನನ್ನು ಪ್ರೀತಿಸುವನು? ಅವನ ತಂದೆಯೇ ನಾನೆಂದು ತಿಳಿದು ಕೂಗುತ್ತ ಯಾವಾಗ ಕಣ್ಣೀರನ್ನೂ ಸುರಿಸುತ್ತಾನೆ. ಈ ಸನ್ನಿವೇಶದಲ್ಲಿ, ನಿನ್ನ ಹೃದಯಸ್ಥವಾದ ತೇಜೋರೂಪದಿಂದ ಗರ್ಭವು ಯಾವಾಗ ನಿನ್ನ ಪತಿಯ ಮಾತಾಪಿತೃಗಳಲ್ಲಿ ಪ್ರಕಾಶಿಸುವುದು ಎಂದರೆ ಮಾತಾಪಿತೃಗಳನ್ನು ಸಂತೋಷಪಡಿಸುವುದು ? ಯಾವ ಪುತ್ರನು ತಾನೇ ಒಂದುಗೂಡಿದ ಮನಸ್ಸುಳ್ಳವರೂ, ಜಾಯಾಪತಿಗಳೂ ಆದ ನಮ್ಮನ್ನು ಬೇರೆ ಬೇರೆ ಮಾಡಬಲ್ಲನು?

## English Translation.

(Pururavas:) When shall a son (born of you) claim me as a father, and, crying, shed a tear on recognizing (me) ? What son shall sever husband and wife who are of one mind, now that the fire shines apon your husband's parents ?

॥ ಸಂಹಿತಾಪಾಠಃ ॥

ಪ್ರತಿ ಬ್ರವಾಣಿ ವರ್ತಯತೇ ಅಶ್ರು ಚಕ್ರನ್ನ ಕ್ರಂದದಾಧ್ಯೇ ಶಿವಾಯೈ ।
ಪ್ರ ತತ್ತೇ ಹಿನವಾ ಯತ್ತೇ ಅಸ್ಮೇ ಪರೇಹ್ಯಸ್ತಂ ನಹಿ ಮೂರ ಮಾಪಃ ॥೧೩॥

॥ ಪದಪಾಠಃ ॥

ಪ್ರತಿ । ಬ್ರವಾಣಿ । ವರ್ತಯತೇ । ಅಶ್ರು । ಚಕ್ರನ್ । ನ । ಕ್ರಂದತ್ । ಆऽಧ್ಯೇ । ಶಿವಾಯೈ ।
ಪ್ರ । ತತ್ । ತೇ । ಹಿನವ । ಯತ್ । ತೇ । ಅಸ್ಮೇ ಇತಿ । ಪರಾ । ಇಹಿ । ಅಸ್ತಂ । ನಹಿ । ಮೂರ ।
ಮಾ । ಆಪಃ ॥ ೧೩ ॥

॥ ಸಾಯಣಭಾಷ್ಯಂ ॥

ಇದಮುರ್ವಶೀವಾಕ್ಯಂ । ಹೇ ಪುರೂರವಃ ತ್ವಾಂ ಪ್ರತಿ ಬ್ರವಾಣಿ । ಪ್ರತಿವಚ್ಮಿ । ತ್ವದಪತ್ಯಮಶ್ರು ಬಾಷ್ಪಂ ವರ್ತಯತೇ । ವರ್ತಯಿಷ್ಯತಿ । ಆಧ್ಯ ಆಧ್ಯಾತೇ ವಸ್ತುನಿ ಶಿವಾಯೈ ಶಿವೇ ಕಲ್ಯಾಣೇ ಸಮುಪಸ್ಥಿತೇ ಸತಿ ಚಕ್ರನ್ರುದನ್ನಶ್ರೂಣಿ ವಿಮುಂಚನ್ನ ಕ್ರಂದತ್ । ನಕಾರಶ್ಚಾರ್ಥೇ । ರೋತ್ಸ್ಯತಿ ಚೇತ್ಯರ್ಥಃ । ತತ್ತ್ವದಪತ್ಯಂ ತೇ ತುಭ್ಯಂ ಹಿನವ ಪ್ರಹಿಣೋಮಿ ಯದಪತ್ಯಂ ತೇ ತವ ಸಂಬಂಧ್ಯಸ್ಮೇ ಅಸ್ಮಾಸು ನಿಹಿತಂ । ತ್ವಂ ಪರೇಹ್ಯಸ್ತಂ । ಅಸ್ತಮಿತಿ ಗೃಹನಾಮ । ಸ್ವಗೃಹಂ ಪ್ರತಿಗಚ್ಛ । ಹೇ ಮೂರ ಮೂಢ ವಾ ಮಾಂ ನ ಹ್ಯಾಪಃ । ನ ಪ್ರಾಪ್ನೋಷಿ ॥ ಹಿನವೇತ್ಯತ್ರ ಹಿನೋತೇಶ್ಛಂದಸಿ ಲುಙ್‌ಲಙ್‌ಲಿಟ ಇತಿ ಭವಿಷ್ಯದರ್ಥೇ ಲಙ್ ಮಿಪ ಅಮಾದೇಶಃ । ಗುಣಃ । ಅಂತ್ಯಲೋಪಶ್ಛಾಂದಸಃ । ಬಹುಲವಚನಾ-ದಡಭಾವಃ । ಆಪಃ । ಆಪ್ಲೃ ವ್ಯಾಪ್ತೌ । ಲಿಟಿ ತಿಙಾಂ ತಿಙೋ ಭವಂತೀತಿ ಥಲೋ ಣಲ್ ॥

॥ ಪ್ರತಿಪದಾರ್ಥ ॥

(ಎಲೈ ಪುರೂರವನೆ) **ಪ್ರತಿ ಬ್ರವಾಣಿ**—ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ. (ನಿನ್ನ ಪುತ್ರನು) । **ಅಶ್ರು**—ಕಣ್ಣೀರನ್ನು । **ವರ್ತಯತೇ** - ಸುರಿಸುತ್ತಾನೆ । **ಆಧ್ಯೇ**—ಅಪೇಕ್ಷಿಸಿದ । **ಶಿವಾಯೈ**—ಮಂಗಳ ಕರವಾದ ಆ ಕಾಲವೂ ಪ್ರಾಪ್ತವಾದಾಗ । **ಚಕ್ರನ್**—ಕಣ್ಣೀರನ್ನು ಸುರಿಸುತ್ತಾ । **ನ ಕ್ರಂದತ್**—ಅಳುತ್ತಾನೆ । **ಯತ್ ತೇ**—ಯಾವ ನಿನ್ನ ಶಿಶುವು । **ಅಸ್ಮೇ**—ನನ್ನಲ್ಲಿ ಸ್ಥಾಪಿತವಾಗಿದೆಯೋ । **ತತ್**—ಅದನ್ನು । **ತೇ**—ನಿನಗೆ । **ಪ್ರ ಹಿನವ**—ಕಳುಹಿಸಿ ಕೊಡುತ್ತೇನೆ । **ಅಸ್ತಂ**—ನಿನ್ನ ಗೃಹಕ್ಕೆ । **ಪರೇಹಿ**—ಹಿಂತಿರುಗು । **ಮೂರ**—ಎಲೈ ಮೂಢನೆ । **ಮಾ**—ನನ್ನನ್ನು । **ನಹಿ ಆಪಃ**—ಸಮೀಪಿಸಲಾರೆ.

॥ ಭಾವಾರ್ಥ ॥

(ಉರ್ವಶಿಯ ವಾಕ್ಯ) ಎಲೈ ಪುರೂರವನೇ, ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ. ಸರಿಯಾದುದೂ ಕಲ್ಯಾಣಾತ್ಮಕವೂ ಆದ ಕಾಲವು ಸಮೀಪಿಸಿದೊಡನೆಯೇ ನಿನ್ನ ಪುತ್ರನು ಕಣ್ಣೀರನ್ನು ಸುರಿಸುತ್ತಲೂ, ನಿನ್ನನ್ನು ಪಿತೃವೆಂದು ಸಂಬೋಧಿಸುತ್ತಲೂ ನಿನ್ನಲ್ಲಿಗೆ ಬರುತ್ತಾನೆ. ನನ್ನಲ್ಲಿ ಸ್ಥಾಪಿತವಾಗಿರುವ ಗರ್ಭಸ್ಥ ಶಿಶುವನ್ನು ಹುಟ್ಟಿದ ಕೂಡಲೇ ನಿನಗೆ ಕಳುಹಿಸಿಕೊಡುತ್ತೇನೆ. ನಿನ್ನ ಗೃಹಕ್ಕೆ ಹಿಂತಿರುಗು. ಎಲೈ ಮೂಢನೇ, ನನ್ನನ್ನು ಸಮಿಪಿಸಲಾರೆ

English Translation

(Urvashi :) Let me reply. (Your son) will shed tears, crying out and calling aloud when the expected auspicious time arrives; I will send you that (child) which is yours in me, depart to your house, you cannot, simpleton, detain me.

॥ ಸಂಹಿತಾಪಾಠಃ ॥

ಸುದೇವೋ ಅದ್ಯ ಪ್ರಪತೇದನಾವೃತ್ಪರಾವತಂ ಪರಮಾಂ ಗಂತವಾ ಉ ।

ಅಧಾ ಶಯೀತ ನಿರ್ಋತೇರುಪಸ್ಥೇಽಧೈನಂ ವೃಕಾ ರಭಸಾಸೋ ಅದ್ಯುಃ॥೧೪॥

॥ ಪದಪಾಠಃ ॥

ಸುಽದೇವಃ । ಅದ್ಯ । ಪ್ರಽಪತೇತ್ । ಅನಾವೃತ್ । ಪರಾಽವತಂ । ಪರಮಾಂ । ಗಂತವೈ ।
ಊಂ ಇತಿ ।

ಅಧ । ಶಯೀತ । ನಿಃಽಋತೇಃ । ಉಪಽಸ್ಥೇ । ಅಧ । ಏನಂ । ವೃಕಾಃ । ರಭಸಾಸಃ । ಅದ್ಯುಃ ॥ ೧೪ ॥

॥ ಸಾಯಣಭಾಷ್ಯಂ ॥

ಅಥ ಪರಿದೂನಃ ಪುರೂರವಾ ಉವಾಚ । ಸುದೇವಸ್ತ್ವಯಾ ಸಹ ಸುಕ್ರೀಡಃ ಪತಿರದ್ಯ ಪ್ರಪತೇತ್ । ಅತ್ರೈವ ಪ್ರಪತತು । ಅಥವಾನಾವೃದನಾವೃತ್ತಃ ಸನ್ ಪರಮಾಂ ಪರಾವತಂ ದೂರಾದಪಿ ದೂರದೇಶಂ ಗಂತವೈ ಗಂತುಂ ಮಹಾಪ್ರಸ್ಥಾನಗಮನಂ ಕುರ್ಯಾತ್ । ಅಥಾಥವಾ ಯತ್ರಕುತ್ರಾಪಿ ಗಂತುಂ ಸಮರ್ಥೋ ನಿರ್ಋತೇಃ ಪೃಥಿವ್ಯಾ ಉಪಸ್ಥೇ ಶಯೀತ । ಶಯನಂ ಕುರ್ಯಾತ್ । ಯದ್ವಾ। ನಿರ್ಋತಿಃ ಪಾಪದೇವತಾ । ತಸ್ಯಾ ಉಪಸ್ಥ ಉತ್ಸಂಗೇ ಸಂನಿಧೌ ಮ್ರಿಯತಾಮಿತ್ಯರ್ಥಃ । ಅಥಾಥವೈನಂ ವೃಕಾ ಆರಣ್ಯಾಃ ಶ್ವಾನೋ ರಭಸಾಸೋ ವೇಗವಂತೋಽದ್ಯುಃ । ಭಕ್ಷಯಂತು । ಅತ್ರ ವಾಜಸನೇಯಕಂ । ಸುದೇವೋಽದ್ಯೋದ್ವಾ ಬಧ್ನೀತ ಪ್ರ ವಾ ಪತೇತ್ತದೇನಂ ವೃಕಾ ವಾ ಶ್ವಾನೋ ವಾದ್ಯುರಿತಿ ಹೈವ ತದುವಾಚ । ಶತ. ೧೧-೫-೧-೮ । ಇತಿ ॥

|| ಪ್ರತಿಪದಾರ್ಥ ||

**ಸುದೇವಃ**—ನಿನ್ನೊಡನೆ ಕ್ರೀಡಿಸುತ್ತಿದ್ದ ನಿನ್ನ ಪತಿಯು | **ಅದ್ಯ**—ಈಗಲೇ | **ಪ್ರಪತೇತ್**—ನೆಲದ ಮೇಲೆ ಬಿದ್ದುಹೋಗಲಿ (ಅಥವಾ) | **ಅನಾವೃತ್**—ಹಿಂತಿರುಗಿ ಬರದಂತೆ | **ಪರಮಾಂ ಪರಾವತಂ**—ಅತ್ಯಧಿಕವಾದ ದೂರದೇಶಕ್ಕೆ | **ಗಂತ ವೈ**— ಮರೆಯಾಗಿ ಹೋಗಲಿ (ಅಥವಾ ಐಹಿಕವನ್ನೇ ತ್ಯಜಿಸಿಹೋಗಲಿ) | **ಅಥ**—ಅಥವಾ | **ನಿರ್ಋತೇಃ**—ನಿರ್ಋತಿಸಂಜ್ಞಕಳಾದ ಪಾಪದೇವತೆಯ | **ಉಪಸ್ಥೇ**—ತೊಡೆಯಮೇಲೆ | **ಶಯೀತ**—ಬಿದ್ದುಕೊಳ್ಳಲಿ | **ಅಥ**—ಅಥವಾ | **ಏನಂ**—ಇವನನ್ನು | **ರಭಸಾಸಃ**—ವೇಗಗಾಮಿಗಳಾದ | **ವೃಕಾಃ**—ತೋಳಗಳು | **ಅದ್ಯುಃ**—ಭಕ್ಷಿಸಲಿ.

|| ಭಾವಾರ್ಥ ||

(ಪುರೂರವನ ವಾಕ್ಯ) ಎಲೈ ಉರ್ವಶಿಯೇ, ನಿನ್ನೊಡನೆ ಕ್ರೀಡಿಸುತ್ತಿದ್ದ ನಿನ್ನ ಪತಿಯು ಈಗಲೇ ನೆಲದ ಮೇಲೆ ಬಿದ್ದುಹೋಗಲಿ. ಅಥವಾ ಹಿಂದಿರುಗಿ ಬಾರದಂತೆ ಅತ್ಯಧಿಕವಾದ ದೂರದೇಶಕ್ಕೆ (ಐಹಿಕವನ್ನು ತ್ಯಜಿಸಿ ಮರೆಯಾಗಿ ಹೋಗಲಿ ಅಥವಾ ನಿರ್ಋತಿಸಂಜ್ಞಕಳಾದ ಪಾಪದೇವತೆಯ ತೊಡೆಯಮೇಲೆ ಬಿದ್ದುಕೊಳ್ಳಲಿ. ಅಥವಾ ಇವನನ್ನು ವೇಗಗಾಮಿಗಳಾದ ತೋಳಗಳು ಭಕ್ಷಿಸಲಿ.

## English Translation.

(Pururavas :) (Your husband) who sports with you may now depart) never to return (depart) to proceed to a distant region. Either let him sleep upon the lap of Nirriti, or let the swift-moving wolves devour him.

### ವಿಶೇಷ ವಿಷಯಗಳು

ಪುರೂರವನು ಉರ್ವಶಿಯ ವಿರಹದುಃಖವನ್ನು ತಡೆಯಲಾರದೆ ದುಃಖಸಂತಪ್ತನಾಗಿ ಜೀವಿಸುವುದಕ್ಕಿಂತಲೂ ನಾನಾಸಂಕಟಗಳಿಗೆ ಗುರಿಯಾಗಿ ಪ್ರಾಣವನ್ನು ತ್ಯಜಿಸುವುದೇ ಒಳ್ಳೆಯದೆಂದು ಸೂಚಿಸುತ್ತಾ, ನಾನಾವಿಧ ಪ್ರಲಾಪಗಳಿಂದ ತನ್ನ ವಿಷಾದವನ್ನು ಸೂಚಿಸುವನು. ಅದನ್ನೇ ಈ ಋಕ್ಕಿನಲ್ಲಿ ಹೃದಯಂಗಮವಾಗಿ ಹೇಳಿಕೊಂಡಿದ್ದಾನೆ. ಯಾಸ್ಕರು ಈ ಋಕ್ಕನ್ನು ವಿಷಾದ ಅಥವಾ ದುಃಖವನ್ನು ಸೂಚಿಸುವ ಋಕ್ಕಿಗೆ ಉದಾಹರಣೆಯನ್ನಾಗಿ ಹೇಳಿರುವರು (ನಿ. ೭-೩ )

ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಉರ್ವಶಿಯೇ, ಇದುವರೆಗೂ ನಿನ್ನೊಡನೆ ಕ್ರೀಡಿಸುತ್ತಿದ್ದ ನಾನು ನಿನ್ನನ್ನಗಲಿ ವಿರಹವ್ಯಥೆಯಿಂದ ಬಳಲಿ ಹೇಗೆತಾನೆ ಜೀವಿಸಲಿ ? ಈ ನನ್ನ ಶರೀರವು ನೆಲದಮೇಲೆ ನಿಶ್ಚೇಷ್ಟಿತವಾಗಿ ಬಿದ್ದುಹೋಗಬಾರದೇ ? ಅಥವಾ ಹಿಂದಕ್ಕೆ ಬರದಿರುವಂತೆ ಅತ್ಯಂತ ದೂರದೇಶಕ್ಕಾದರೂ ಹೋಗಲೇ ? ಅಥವಾ ಮೃತ್ಯುಶಯ್ಯೆಯಲ್ಲಿ ಮಲಗಿ ಮರಣಕ್ಕೆ ವಶವಾಗಲೇ ? ಅಥವಾ ನನ್ನನ್ನು ತೋಳಗಳಾದರೂ ತಿನ್ನಬಾರದೇ ?

ಈ ರೀತಿ ಪ್ರಲಾಪಿಸುತ್ತಿರುವ ಪುರೂರವನಿಗೆ ಉರ್ವಶಿಯು ಮುಂದಿನ ಋಕ್ಕನಲ್ಲಿ ಇದೇ ವಿಧವಾದ ವಾಕ್ಯಗಳಿಂದ ಪ್ರತ್ಯುತ್ತರವನ್ನು ಹೇಳಿ ಸಮಾಧಾನಮಾಡುವಳು.

|| ಸಂಹಿತಾಪಾಠಃ ||

ಪುರೂರವೋ ಮಾ ಮೃಥಾ ಮಾ ಪ್ರ ಪಪ್ತೋ ಮಾ ತ್ವಾ ವೃಕಾಸೋ ಅಶಿ-
ವಾಸ ಉ ಕ್ಷನ್ ।
ನ ವೈ ಸ್ತ್ರೈಣಾನಿ ಸಖ್ಯಾನಿ ಸಂತಿ ಸಾಲಾವೃಕಾಣಾಂ ಹೃದಯಾನ್ಯೇತಾ ||೧೫||

|| ಪದಪಾಠಃ ||

ಪುರೂರವಃ । ಮಾ । ಮೃಥಾಃ । ಮಾ । ಪ್ರ । ಪಪ್ತಃ । ಮಾ । ತ್ವಾ । ವೃಕಾಸಃ । ಅಶಿವಾಸಃ । ಊಂ ಇತಿ ।
ಕ್ಷನ್ ।
ನ । ವೈ । ಸ್ತ್ರೈಣಾನಿ । ಸಖ್ಯಾನಿ । ಸಂತಿ । ಸಾಲಾವೃಕಾಣಾಂ । ಹೃದಯಾನಿ । ಏತಾ || ೧೫ ||

|| ಸಾಯಣಭಾಷ್ಯಂ ||

ತಮಿತರಾ ಪ್ರತ್ಯುವಾಚ । ಹೇ ಪುರೂರವಃ ತ್ವಂ ಮಾ ಮೃಥಾಃ । ಮೃತಿಂ ಮಾ ಪ್ರಾಪ್ನುಹಿ || ಮ್ರಿಯತೇರ್ಲುಙಿ ಥಾಸಿ ಹ್ರಸ್ವಾದಂಗಾದಿತಿ ಸಿಚೋ ಲೋಪಃ || ತಥಾ ಮಾ ಪ್ರ ಪಪ್ತಃ । ಅತ್ರೈವ ಪತನಂ ಮಾ ಕಾರ್ಷೀಃ || ಪತೇರ್ಲುಙಿ ಲೃದಿತ್ತ್ವಾತ್ಪುಷಾದೀತ್ಯಾದಿನಾ ಚ್ಲೇರಙ್ । ಪತಃ ಪುಮಿತಿ ಪುಮ್|| ತಥಾ ತ್ವಾ ತ್ವಾಮಶಿವಾಸೋಽಶುಭಾ ವೃಕಾಸೋ ವೃಕಾ ಮಾ ಉ ಕ್ಷನ್। ಉ ಇತ್ಯೇವಕಾರಾರ್ಥೇ। ಅಕ್ಷನ್ । ಮಾಭ್ಯವಹಾರಯಂತು । ಕಿಮಿತ್ಯೇವಮಸ್ಮದುಪರ್ಯಾಗ್ರಹಂ ಕರೋಷಿ । ಮಾ ಕಾರ್ಷೀರಿ-ತ್ಯರ್ಥಃ || ಅದೇರ್ಲುಙಿ ಲುಙ್‍ಸನೋರ್ಘಸ್ಲೃ । ಪಾ. ೨-೪-೩೭ । ಇತಿ ಘಸ್ಲಾದೇಶಃ । ಮಂತ್ರೇ ಘಸೇತಿ ಚ್ಲೇರ್ಲುಕ್ । ಗಮಹನೇತ್ಯಾದಿನೋಪಧಾಲೋಪಃ । ಶಾಸಿವಸೀತ್ಯಾದಿನಾ ಷತ್ವಂ । ಖರಿ ಚೇತಿ ಚರ್ತ್ವಂ । ಬಾಹುಲಕಾದಡಭಾವಃ || ಅಥ ಸ್ವಸ್ನೇಹಸ್ಯಾಸಾರತಾಮಾಹ । ಸ್ತ್ರೈಣಾನಿ ಸ್ತ್ರೀಣಾಂ ಕೃತಾನಿ ಸಖ್ಯಾನಿ ನ ವೈ ಸಂತಿ । ನ ಸಂತಿ ಖಲು । ಅಭಾವೇ ಕಾರಣಮಾಹ । ಏತಾನಿ ಸಖ್ಯಾನಿ ಸಾಲಾವೃಕಾಣಾಂ ಹೃದಯಾನಿ ಯಥಾ ವತ್ಸಾದೀನಾಂ ವಿಶ್ವಾಸಾಪನ್ನಾನಾಂ ಘಾತುಕಾನಿ ತದ್ವತ್ । ಅತ್ರ ವಾಜಸನೇಯಕಂ। ಮೈತದಾದೃಥಾ ನ ವೈ ಸ್ತ್ರೈಣಗ್ಂ ಸಖ್ಯಮಸ್ತಿ ಪುನರ್ಗೃಹಾನಿಹೀತಿ ಹೈವೈನಂ ತದುವಾಚ । ಶತ. ೧೧-೫-೧-೯ । ಇತಿ ||

|| ಪ್ರತಿಪದಾರ್ಥ ||

**ಪುರೂರವಃ**—ಎಲೈ ಪುರೂರವನೇ । **ಮಾ ಮೃಥಾಃ**—ಮರಣವನ್ನು ಹೊಂದಬೇಡ । **ಮಾ ಪ್ರ ಪಪ್ತಃ**—ಕೆಳಕ್ಕೆ ಬೀಳಲೂ ಬೇಡ । **ತ್ವಾ**—ನಿನ್ನನ್ನು ।**ಅಶಿವಾಸಃ**—ಅಮಂಗಳಕರಗಳಾದ । **ವೃಕಾಸಃ**—ತೋಳಗಳು । **ಮಾ ಉಕ್ಷನ್**—ಕಬಳಿಸದಿರಲಿ । **ಸ್ತ್ರೈಣಾನಿ**—ಸ್ತ್ರೀಯರೊಡನೆ ಮಾಡುವ । **ಸಖ್ಯಾನಿ**—ಮಿತ್ರತ್ವವು । **ನ ವೈ ಸಂತಿ**—ಶಾಶ್ವತವಾಗಿರುವುದಿಲ್ಲ । **ಏತಾ**—ಇವು । **ಸಾಲಾವೃಕಾಣಾಂ**—ಸಾಲಾವೃಕವೆಂಬ ಮೃಗಗಳ । **ಹೃದಯಾನಿ**—ಹೃದಯದಂತೆ ಕ್ರೂರವಾದವು (ನಂಬಿಕೆಗೆ ಅರ್ಹವಲ್ಲವು).

|| ಭಾವಾರ್ಥ ||

(ಉರ್ವಶಿಯ ವಾಕ್ಯ) ಎಲೈ ಪುರೂರವನೇ, ನೀನು ಮೃತಿಯನ್ನೂ ಹೊಂದಬೇಡ ಕೆಳಕ್ಕೆ ಬೀಳಲೂ ಬೇಡ. ನಿನ್ನನ್ನು ಅಮಂಗಳಕರಗಳಾದ ತೋಳಗಳು ಕಬಳಿಸದಿರಲಿ. ಸ್ತ್ರೀಯರೊಡನೆ ಮಾಡುವ ಮಿತ್ರತ್ವವು ಶಾಶ್ವತ ವಾಗಿರುವುದಿಲ್ಲ. ಇವು ಸಾಲಾವೃಕವೆಂಬ ಮೃಗಗಳ (ನರಿಗಳ) ಹೃದಯದಂತೆ ಕ್ರೂರವೂ ನಂಬಿಕೆಗೆ ಅರ್ಹವಲ್ಲದವೂ ಆಗಿವೆ.

English Translation

(Uruashi :) Die not, Pururavas, fall not, let not the hideous wolves devour you. Female friendships do not exist, their hearts are the hearts of jackals.

|| ಸಂಹಿತಾಪಾಠಃ ||

ಯದ್ವಿರೂಪಾಚರಂ ಮರ್ತ್ಯೇಷ್ವವಸಂ ರಾತ್ರೀಃ ಶರದಶ್ಚತಸ್ರಃ ।
ಘೃತಸ್ಯ ಸ್ತೋಕಂ ಸಕೃದಹ್ನ ಆಶ್ನಾಂ ತಾದೇವೇದಂ ತಾತೃಪಾಣಾ ಚರಾಮಿ ||

|| ಪದಪಾಠಃ ||

ಯತ್ । ವಿऽರೂಪಾ । ಅಚರಂ । ಮರ್ತ್ಯೇಷು । ಅವಸಂ । ರಾತ್ರೀಃ । ಶರದಃ । ಚತಸ್ರಃ ।
ಘೃತಸ್ಯ । ಸ್ತೋಕಂ । ಸಕೃತ್ । ಅಹ್ನಃ । ಆಶ್ನಾಂ । ತಾತ್ । ಏವ । ಇದಂ । ತತೃಪಾಣಾ । ಚರಾಮಿ ||೧೬||

|| ಸಾಯಣಭಾಷ್ಯಂ ||

ಯದ್ಯದಾ ವಿರೂಪಾ ಮನುಷ್ಯಸಂಪರ್ಕಾದ್ವಿಗತಸಹಜಭೂತದೇವರೂಪಾಪತ್ಯಾನುಕೂಲ್ಯೇನ ನಾನಾರೂಪಾ ವಾ ಮರ್ತ್ಯೇಷು ಮನುಷ್ಯೇಷ್ವಚರಂ ತದಾನೀಂ ರಾತ್ರೀಃ ಪೂರಯಿತ್ರೀಶ್ಚತಸ್ರಃ ಶರದೋऽವಸಂ । ನ್ಯವಸಂ ॥ ಅತ್ಯಂತಸಂಯೋಗೇ ದ್ವಿತೀಯಾ ॥ ತದಾನೀಂ ಘೃತಸ್ಯ ಸ್ತೋಕಂ ಸಕೃದಹ್ನ ಆಶ್ನಾಂ । ತಾದೇವ ತೇನೈವ ಸ್ತೋಕೇನಾಹಮಿದಂ ಸಂಪ್ರತಿ ತಾತೃಪಾಣಾ ತೃಪ್ತಾ ಸತೀ ಚರಾಮಿ ॥

|| ಪ್ರತಿಪದಾರ್ಥ ||

ಯತ್-ಯಾವಾಗ । ವಿರೂಪಾ— ನಾನು ನನ್ನ ಸ್ವಾಭಾವಿಕವಾದ ದೇವರೂಪವನ್ನು ಬಿಟ್ಟು। ಮರ್ತ್ಯೇಷು- ಮಾನವರ ನಡುವೆ । ಅಚರಂ—ಸಂಚರಿಸಿದೆನೋ ಆಗ । ರಾತ್ರೀಃ—ಸಂತೋಷಜನಕಗಳಾದ । ಚತಸ್ರ

**ಶರದಃ**—ನಾಲ್ಕು ವರ್ಷಗಳನ್ನು | **ಅವಸಂ**—ನಿನ್ನೊಡನೆಕಳೆದೆನು | **ಸಕೃತ್ ಅಹ್ನಃ**—ಅಹಸ್ಸಿನಲ್ಲಿ ಒಂದುಸಲ ಮಾತ್ರ | **ಘೃತಸ್ಯ ಸ್ತೋಕಂ**—ಕೊಂಚ ಭಾಗ ಘೃತವನ್ನು | **ಆಶ್ನಾಂ**—ತಿಂದೆನು | **ತಾದೇವ**—ಅಷ್ಟರಿಂದಲೇ | **ತಾತೃಪಾಣಾ**—ತೃಪ್ತಳಾಗಿ | **ಇದಂ**—ಈಗ | **ಚರಾಮಿ**—ಚಲಿಸುತ್ತೇನೆ.

|| ಭಾವಾರ್ಥ ||

(ಉರ್ವಶಿಯ ವಾಕ್ಯ) ನಾನು ನನ್ನ ಸ್ವಾಭಾವಿಕವಾದ ದೇವರೂಪವನ್ನು ಬಿಟ್ಟು ನನಗೆ ಹರ್ಷವನ್ನು ಕೊಟ್ಟ ನಾಲ್ಕು ಸಂವತ್ಸರಗಳನ್ನು ಮಾನವರ ನಡುವೆ ಕಳೆದೆನು. ಅಹಸ್ಸಿನಲ್ಲಿ ಒಂದು ಸಲ ಮಾತ್ರ ಕೊಂಚಭಾಗ ಘೃತವನ್ನು ತಿಂದೆನು. ಅಷ್ಟರಿಂದಲೇ ತೃಪ್ತಳಾಗಿ ಈಗ ಚಲಿಸುತ್ತೇನೆ.

## English Translation.

When changed in form I wandered amongst mortals, I dwelt (with them) four delightful years. I ate once a day a small quantity of butter; satisfied with that I now depart.

|| ಸಂಹಿತಾಪಾಠಃ ||

ಅಂತರಿಕ್ಷಪ್ರಾಂ ರಜಸೋ ವಿಮಾನೀಮುಪ ಶಿಕ್ಷಾಮ್ಯುರ್ವಶೀಂ ವಸಿಷ್ಠಃ |
ಉಪ ತ್ವಾ ರಾತಿಃ ಸುಕೃತಸ್ಯ ತಿಷ್ಠಾನ್ನಿ ವರ್ತಸ್ವ ಹೃದಯಂ ತಪ್ಯತೇ ಮೇ ||

|| ಪದಪಾಠಃ ||

ಅಂತರಿಕ್ಷಽಪ್ರಾಂ | ರಜಸಃ | ವಿಽಮಾನೀಂ | ಉಪ | ಶಿಕ್ಷಾಮಿ | ಉರ್ವಶೀಂ | ವಸಿಷ್ಠಃ |
ಉಪ | ತ್ವಾ | ರಾತಿಃ | ಸುಽಕೃತಸ್ಯ | ತಿಷ್ಠಾತ್ | ನಿ | ವರ್ತಸ್ವ | ಹೃದಯಂ | ತಪ್ಯತೇ | ಮೇ || ೧೭ ||

|| ಸಾಯಣಭಾಷ್ಯಂ ||

ಅಂತರಿಕ್ಷಪ್ರಾಂ ಸ್ವತೇಜಸಾಂತರಿಕ್ಷಸ್ಯ ಪೂರಯಿತ್ರೀಂ ತಥಾ ರಜಸೋ ರಂಜಕಸ್ಯೋದಕಸ್ಯ ವಿಮಾನೀಂ ನಿರ್ಮಾತ್ರೀಮುರ್ವಶೀಂ ವಸಿಷ್ಠಃ ಸಮಾನಾನಾಂ ಮಧ್ಯೇಽತಿಶಯೇನ ವಾಸಯಿತಾಹಮುಪ ಶಿಕ್ಷಾಮಿ | ವಶಂ ನಯಾಮಿ | ಸುಕೃತಸ್ಯ ಶೋಭನಕರ್ಮಣೋ ರಾತಿರ್ದಾತಾ ಪುರೂರವಾಸ್ತ್ವಾ ತ್ವಾಮುಪ ತಿಷ್ಠಾತ್ | ಉಪತಿಷ್ಠತು | ಮೇ ಹೃದಯಂ ತಪ್ಯತೇ | ಅತೋ ನಿ ವರ್ತಸ್ವ | ಏವಂ ರಾಜೋವಾಚ ||

|| ಪ್ರತಿಪದಾರ್ಥ ||

**ಅಂತರಿಕ್ಷಪ್ರಾಂ**—ತನ್ನ ತೇಜಸ್ಸಿನಿಂದ ಅಂತರಿಕ್ಷವನ್ನೆಲ್ಲಾ ತುಂಬುವವಳೂ। **ರಜಸಃ**—ಉದಕಕ್ಕೆ। **ವಿಮಾನೀಂ**—ನಿರ್ಮಾಪಕಳೂ ಆದ। **ಉರ್ವಶೀಂ** ಉರ್ವಶಿಯನ್ನು। **ವಸಿಷ್ಠಃ**—ಶ್ರೇಷ್ಠಮಾನವನಾದ ನಾನು ಅಥವಾ (ಸಂಗಡಿಗರ ಜೊತೆಯಲ್ಲಿ ಉತ್ತಮವಾದ ಜೀವನವುಳ್ಳ ನಾನು)। **ಉಪ ಶಿಕ್ಷಾಮಿ**—ನನ್ನ ವಶಕ್ಕೆ ತೆಗೆದುಕೊಳ್ಳುತ್ತೇನೆ **ಸುಕೃತಸ್ಯ**—ಉತ್ತಮವಾದ ಕರ್ಮಕ್ಕೆ। **ರಾತಿಃ**—ದಾತೃವಾದ (ಕರ್ಮಕರ್ತೃವಾದ)।**ತ್ವಾ**—ನಿನ್ನನ್ನು। **ಉಪತಿಷ್ಠಾತ್**—ಸಮೀಪಿಸಿ ನಿನ್ನೊಡನೆ ಕುಳ್ಳಿರಲಿ। **ಮೇ**- ನನ್ನ। **ಹೃದಯಂ**—ಹೃದಯವು। **ತಪ್ಯತೇ**—ದಹಿಸುತ್ತಿದೆ (ಆದ್ದರಿಂದ ಎಲೈ ಉರ್ವಶಿಯೇ)। **ನಿ ವರ್ತಸ್ವ**—ಹಿಂತಿರುಗು

|| ಭಾವಾರ್ಥ ||

(ಪುರೂರವನ ವಾಕ್ಯ) ತನ್ನ ತೇಜಸ್ಸಿನಿಂದ ಅಂತರಿಕ್ಷವನ್ನೆಲ್ಲ ತುಂಬುವವಳೂ, **ಉದಕಕ್ಕೆ ನಿರ್ಮಾಪಕಳೂ** ಆದ ಉರ್ವಶಿಯನ್ನು ಶ್ರೇಷ್ಠಮಾನವನಾದ ನಾನು ನನ್ನ ವಶಕ್ಕೆ ತೆಗೆದುಕೊಳ್ಳುತ್ತೇನೆ. (ನನಗೆ **ವಶಳಾಗುವಂತೆ** ಮಾಡುತ್ತೇನೆ) ಉತ್ತಮವಾದ ಕರ್ಮಕರ್ತೃವಾದ ಪುರೂರವನು ನಿನ್ನನ್ನು ಸಮೀಪಿಸಿ ನಿನ್ನ **ಸಹಸೌಖ್ಯವನ್ನು ಅನುಭವಿಸಲಿ** ನಿನ್ನ ವಿರಹದಿಂದ ನನ್ನ ಹೃದಯವು ತಪಿಸುತ್ತಿದೆ. ಹಿಂತಿರುಗು.

English Translation

(Pururavas·) I, Vasistha, bring under subjection Urvashi who fills the firmament (with lustre) and measures out the rain. May (Pururavas), the bestower of the auspicious rite, abide near you; come back—my heart is burning.

|| ಸಂಹಿತಾಪಾಠಃ ||

**ಇತಿ ತ್ವಾ ದೇವಾ ಇಮ ಆಹುರೈಳ ಯಥೇಮೇತದ್ಭವಸಿ ಮೃತ್ಯುಬಂಧುಃ।**
**ಪ್ರಜಾ ತೇ ದೇವಾನ್ಹವಿಷಾ ಯಜಾತಿ ಸ್ವರ್ಗ ಉ ತ್ವಮಪಿ ಮಾದಯಾಸೇ ॥**

|| ಪದಪಾಠಃ

**ಇತಿ। ತ್ವಾ। ದೇವಾಃ। ಇಮೇ। ಆಹುಃ। ಐಳ। ಯಥಾ। ಈಂ। ಏತತ್। ಭವಸಿ। ಮೃತ್ಯುऽಬಂಧುಃ।**
**ಪ್ರऽಜಾ। ತೇ। ದೇವಾನ್। ಹವಿಷಾ। ಯಜಾತಿ। ಸ್ವಃऽಗೇ। ಊಂ ಇತಿ। ತ್ವಂ। ಅಪಿ। ಮಾದಯಾಸೇ॥**

|| ಸಾಯಣಭಾಷ್ಯಂ ||

**ಹೇ ಐಳ ಪುರೂರವಃ ತ್ವಾ ತ್ವಾಮಿಮೇ ದೇವಾ ಇತ್ಯಾಹುಃ। ಮೃತ್ಯುಬಂಧುರ್ಮೃತ್ಯೋ-ರ್ಬಂಧಕೋ ಮೃತ್ಯೋರ್ಬಂಧುಭೂತೋ ವಾ ಮೃತ್ಯುವಶಮಪ್ರಾಪ್ನುವಂಸ್ತ್ವಂ ಯಥೇಂ ಯಥೈತ-**

ದ್ಭವಸಿ ಭವಿಷ್ಯಸಿ ಪ್ರಜಾ ಪ್ರಕರ್ಷೇಣ ಜಾಯಮಾನಸ್ತ್ವಂ ತೇ ತವ ಸಂಬಂಧಿನೋ ಯಷ್ಟವ್ಯಾನ್ದೇವಾ-ನ್ಹವಿಷಾ ಯಜಾಸಿ । ಯಜಸಿ । ಸ್ವರ್ಗ ಉ ಸ್ವರ್ಗ ಏವ ತ್ವಮಪಿ ಮಾದಯಾಸೇ । ಮಾದಯಸೇಽಸ್ಮಾಭಿಃ ಸಹ। ಏವಮಾಹುರಿತ್ಯರ್ಥಃ। ಯಸ್ಮಾದೇವಂ ಕರೋಷಿ ತಸ್ಮಾದಭಿಲಾಷಂ ಹಿತ್ವಾ ಸುಖೀ ಭವೇತಿ ಸೇಯಂ ಪುರೂರವಸಂ ಪ್ರತ್ಯುವಾಚ ॥

॥ ಪ್ರತಿಪದಾರ್ಥ ॥

ಐಳ—ಇಳಾಪುತ್ರನಾದ ಎಲೈ ಪುರೂರವನೇ । ತ್ವಾ—ನಿನಗೆ । ಇಮೇ ದೇವಾಃ—ಈ ದೇವತೆಗಳು । ಇತಿ—ಈ ರೀತಿ । ಆಹುಃ—ಹೇಳಿದ್ದಾರೆ । ಯಥೇಂ—ಏತಕ್ಕೆಂದರೆ । ಮೃತ್ಯುಬಂಧುಃ—ನೀನು ಮೃತ್ಯುವಿಗೆ ವಶನಾಗಿ । ಭವಸಿ—ಆಗಿದ್ದೀಯೆ । ಏತತ್—ಇದು ಖಂಡಿತ । ತೇ—ನಿನ್ನ । ಪ್ರಜಾ—ಪುತ್ರನು (ಪುತ್ರ ರೂಪದಿಂದ ಹುಟ್ಟುವ ನೀನು) । ದೇವಾನ್—ದೇವತೆಗಳನ್ನು । ಹವಿಷಾ—ಹವಿಸ್ಸಿನಿಂದ । ಯಜಾತಿ—ಪೂಜಿಸುತ್ತಾನೆ (ಪೂಜಿಸು) । ತ್ವಂ ಅಪಿ—ನೀನಾದರೋ । ಸ್ವರ್ಗೇ—ಸ್ವರ್ಗದಲ್ಲಿ । ಮಾದಯಾಸೇ—ನಮ್ಮೊಡನೆ ಸೇರಿ ಹರ್ಷವನ್ನು ಅನುಭವಿಸುವೆ.

॥ ಭಾವಾರ್ಥ ॥

(ಉರ್ವಶಿಯವಾಕ್ಯ) "ಎಲೈ ಪುರೂರವನೇ, (ಎಂದಾದರೊಂದುದಿನ) ನೀನು ಮೃತ್ಯುವಿಗೆ ವಶನಾಗುತ್ತೀಯೆ. ಇದು ಖಂಡಿತ. ನಿನ್ನ ಪುತ್ರನು ದೇವತೆಗಳನ್ನು ಹವಿಸ್ಸಿನಿಂದ ಪೂಜಿಸುತ್ತಾನೆ. ನೀನು ಸ್ವರ್ಗದಲ್ಲಿ ನಮ್ಮೊಡನೆ ಸೇರಿ ಹರ್ಷವನ್ನು ಅನುಭವಿಸುವೆ" ಎಂದು ದೇವತೆಗಳು ನಿನಗೆ ತಿಳಿಸಿದ್ದಾರೆ.

English Translation.

(Urvashı :) These gods said to you, Aıla, since you are indeed subject to death, let your progeny propitiate your gods with oblations, you shal· rejoice (with me) in heaven.

॥ ವಿಶೇಷವಿಷಯಗಳು ॥

ಕೆಲವು ಪಾಶ್ಚಾತ್ಯಪಂಡಿತರು ಋಗ್ವೇದದಲ್ಲಿ ಸ್ವರ್ಗದ ವಿಷಯವು ಸ್ಪಷ್ಟವಾಗಿ ಎಲ್ಲಿಯೂ ಹೇಳಿರುವುದಿಲ್ಲವೆಂದೂ ಮನುಷ್ಯರಿಗೂ ಸ್ವರ್ಗಕ್ಕೂ ಏನು ಸಂಬಂಧವಿದೆಯೆಂಬುದನ್ನು ವಿವರಿಸಿಲ್ಲವೆಂದೂ ಹೇಳುತ್ತಾರೆ. ಆದರೆ ಈ ಋಕ್ಕಿನಲ್ಲಿ ಸ್ವರ್ಗ ಉ ತ್ವಮಪಿ ಮಾದಯಾಸೇ । ನೀನು ಸ್ವರ್ಗದಲ್ಲಿ ಸಂತೋಷವನ್ನನುಭವಿಸುವೆ ಎಂದು ಸ್ಪಷ್ಟವಾಗಿ ಹೇಳಿದೆ ಮತ್ತು ಭವಸಿ ಮೃತ್ಯುಬಂಧುಃ ಎಂದು ಹೇಳಿರುವುದರಿಂದ ಸತ್ಕರ್ಮನಿಷ್ಠನಾದ ಮನುಷ್ಯನು ಮೃತ್ಯುವಶನಾಗಿ ಈ ಪಾರ್ಥಿವ ದೇಹವನ್ನು ತ್ಯಜಿಸಿದನಂತರ (ಬೇರೆ ಶರೀರವನ್ನು ಧರಿಸಿ) ಸ್ವರ್ಗದಲ್ಲಿ ಸುಖವನ್ನನುಭವಿಸುವನು ಎಂಬ ವಿಷಯವು ಸ್ಪಷ್ಟವಾಗಿ ಉಕ್ತವಾಗಿದೆ.

## ತೊಂಬತ್ತಾರನೆಯ ಸೂಕ್ತವು

॥ಸಾಯಣಭಾಷ್ಯಂ ॥

ಅಥ ಪ್ರ ತೇ ಮಹ ಇತಿ ತ್ರಯೋದಶರ್ಚಂ ಷಷ್ಠಂ ಸೂಕ್ತಂ । ಬರುರ್ನಾಮಾಂಗಿರಸ ಋಷಿಃ ಇಂದ್ರಸ್ಯ ಪುತ್ರಃ ಸರ್ವಹರಿರ್ವಾ ನಾಮ । ದ್ವಾದಶೀತ್ರಯೋದಶ್ಯೌ ತ್ರಿಷ್ಟುಭೌ ಶಿಷ್ಟಾ ಏಕಾದಶ ಜಗತ್ಯಃ ।

**ಇಂದ್ರಸ್ಯಾಶ್ವೌ ಹರೀ । ತಯೋರತ್ರ ಸ್ತೂಯಮಾನತ್ವಾತ್ತದ್ದೇವತಾಕಮಿದಂ । ತಥಾ ಚಾನುಕ್ರಾಂತಂ । ಪ್ರ ತೇ ಸಪ್ತೋನಾ ಬರುಃ ಸರ್ವಹರಿರ್ವೈಂದ್ರೋ ಹರಿಸ್ತುತಿರ್ದ್ವಿತ್ರಿಷ್ಟುಬಂತಂ ॥ ಅತಿರಾತ್ರೇ ತೃತೀಯೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿನ ಏತತ್ಸೂಕ್ತಂ । ಸೂತ್ರಿತಂ ಚ । ಪ್ರ ತೇ ಮಹ ಊತೀ ಶಚೀವಸ್ತ್ವವ ವೀರ್ಯೇಣೇತಿ ಯಾಜ್ಯಾ। ಆ. ೬-೪ । ಇತಿ ॥ ಷೋಡಶಿಶಸ್ತ್ರೇಽಸ್ಯಾದ್ಯಸ್ತ್ರ್ಯೃಚಃ ಶಂಸನೀಯಃ । ಸೂತ್ರಿತಂ ಚ । ಪ್ರ ತೇ ಮಹೇ ವಿದಥೇ ಶಂಸಿಷಂ ಹರೀ ಇತಿ ತಿಸ್ರೋ ಜಗತ್ಯಃ । ಆ. ೬-೨ । ಇತಿ ॥**

ಅನುವಾದವು--- **ಪ್ರ ತೇ ಮಹೇ** ಎಂಬ ಈ ಸೂಕ್ತವು ಎಂಟನೆಯ ಅನುವಾಕದಲ್ಲಿ ಆರನೆಯ **ಸೂಕ್ತವು**. ಇದರಲ್ಲಿ ಹದಿಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಂಗಿರಸಗೋತ್ರದವನಾದ ಬರು ಎಂಬುವನು **ಋಷಿಯು** ; ಅಥವಾ ಇಂದ್ರನ ಪುತ್ರನಾದ ಸರ್ವಹರಿ ಎಂಬುವನು ಋಷಿಯು , ಈ ಸೂಕ್ತದ ಹನ್ನೆರಡು ಮತ್ತು ಹದಿಮೂರನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಉಳಿದ ಹನ್ನೊಂದು ಋಕ್ಕುಗಳು ಜಗತೀಛಂದಸ್ಕವು. **ಈ ಸೂಕ್ತದಲ್ಲಿ ಇಂದ್ರನ** ಹರೀ ಎಂಬ ಎರಡು ಕುದುರೆಗಳನ್ನು ಸ್ತುತಿಸಿರುವುದರಿಂದ ಈ ಸೂಕ್ತಕ್ಕೆ ಆ ಇಂದ್ರನ **ಅಶ್ವಗಳೇ ದೇವತೆಯು.** ಅನುಕ್ರಮಣಿಕೆಯಲ್ಲಿ— **ಪ್ರ ತೇ ಸಪ್ತೋನಾ ಬರುಃ ಸರ್ವಹರಿರ್ವೈಂದ್ರೋ ಹರಿಸ್ತುತಿರ್ದ್ವಿತ್ರಿಷ್ಟುಬಂತಂ** ಎಂದು ಹೇಳಿರುವುದು. ಅತಿರಾತ್ರವೆಂಬಯಾಗದ ತೃತೀಯ ಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ **ಋತ್ವಿಜನು** ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಪ್ರ ತೇ ಮಹ ಊತೀ ಶಚೀವಸ್ತ್ವವ ವೀರ್ಯೇಣೇತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು ಮತ್ತು ಷೋಡಶಿ ಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಪ್ರ ತೇ ಮಹೇ ವಿದಥೇ ಶಂಸಿಷಂ ಹರೀ ಇತಿ ತಿಸ್ರೋ ಜಗತ್ಯಃ** ಎಂಬ ಸೂತ್ರದಿಂದ (ಆ. ೬-೨) ವಿವೃತವಾಗಿರುವುದು.

## ಸೂಕ್ತ—೯೬

ಮಂಡಲ—೧೦ ॥ ಅನುವಾಕ—೮ ॥ ಸೂಕ್ತ—೯೬ ॥
ಅಷ್ಟಕ—೮ ॥ ಅಧ್ಯಾಯ—೫ ॥ ವರ್ಗ—೫, ೬, ೭ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ॥
॥ ಋಷಿಃ—ಬರುಃ ಸರ್ವಹರಿರ್ವೈಂದ್ರಃ ॥
॥ ದೇವತಾ—ಹರಿಸ್ತುತಿಃ ॥
॥ ಛಂದಃ— ೧-೧೧. ಜಗತೀ । ೧೨, ೧೩ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಪ್ರ ತೇ ಮಹೇ ವಿದಥೇ ಶಂಸಿಷಂ ಹರೀ ಪ್ರ ತೇ ವನ್ವೇ ವನುಷೋ ಹರ್ಯತಂ ಮದಂ ।**

**ಘೃತಂ ನ ಯೋ ಹರಿಭಿಶ್ಚಾರು ಸೇಚತ ಆ ತ್ವಾ ವಿಶಂತು ಹರಿವರ್ಪಸಂ ಗಿರಃ ॥ ೧ ॥**

|| ಪದಪಾಠಃ ||

ಪ್ರ | ತೇ | ಮಹೇ | ವಿದಥೇ | ಶಂಸಿಷಂ | ಹರೀ ಇತಿ | ಪ್ರ | ತೇ | ವನ್ವೇ | ವನುಷಃ | ಹರ್ಯತಂ |
ಮದಂ |

ಘೃತಂ | ನ | ಯಃ | ಹರಿsಭಿಃ | ಚಾರು | ಸೇಚತೇ | ಆ | ತ್ವಾ | ವಿಶಂತು | ಹರಿsವರ್ಪಸಂ | ಗಿರಃ ||

| ಸಾಯಣಭಾಷ್ಯಂ ||

ಹೇ ಇಂದ್ರ ತೇ ತವ ಹರೀ ಅಶ್ವೌ ಮಹೇ ಮಹತಿ ವಿದಥೇ ಯಜ್ಞೇ ಪ್ರ ಶಂಸಿಷಂ | ಅಶಂಸಿಷಂ| ಅಸ್ತಾವಿಷಂ | ತಥಾ ವನುಷಃ || ವನು ಹಿಂಸಾಯಾಂ || ಹಿಂಸಕಸ್ಯ ತೇ ತವ ಹರ್ಯತಂ || ಹರ್ಯ ಗತಿಕಾಂತ್ಯೋಃ | ತಸ್ಯಾಣಾದಿಕೋಽತಚ್ | ಚಿತ್ಸ್ವರೇಣಾಂತೋದಾತ್ತಃ || ಕಮನೀಯಂ ಮದಂ ಪ್ರ ವನ್ವೇ | ಪ್ರಯಾಚೇಽಸ್ಮದಭಿಮತಂ || ವನು ಯಾಚನೇ || ಯ. ಇಂದ್ರೋ ಹರಿಭಿರ್ಹರಿತವರ್ಣೈರಶ್ವೈರ್ಮದ್ಯಾಗಂ ಗತ್ವಾ ಚಾರು ಚರಣೀಯಂ ಘೃತಂ ನ ಘೃತಮಿವ ಸುಪೂತಮುದಕಂ ಸೇಚತೇ ವರ್ಷತಿ ತಂ ತಾದೃಶಂ ಹರಿವರ್ಪಸಂ | ವರ್ಪ ಇತಿ ರೂಪನಾಮ | ಹರಿತರೂಪಂ ತ್ವಾ ತ್ವಾಮಾ ವಿಶಂತು ಗಿರೋಽಸ್ಮದೀಯಾಃ ಸ್ತುತಿವಾಚಸ್ತವ ಮದಾಯ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) ತೇ—ನಿನ್ನ | ಹರೀ—ಅಶ್ವಗಳನ್ನು | ಮಹೇ—ಮಹತ್ತಾದ | ವಿದಥೇ—ಯಜ್ಞದಲ್ಲಿ | ಪ್ರ ಶಂಸಿಷಂ— ಪ್ರಶಂಸಿಸುತ್ತೇನೆ | ವನುಷಂ— ಶತ್ರುಹಿಂಸಕನಾದ | ತೇ— ನಿನ್ನಿಂದ | ಹರ್ಯತಂ—ಆಕರ್ಷಕವಾದ | ಮದಂ—ಹರ್ಷವನ್ನು | ಪ್ರವನ್ವೇ—ಯಾಚಿಸುತ್ತೇನೆ | ಯಃ—ಯಾವ ನೀನು | ಹರಿಭಿಃ—ನಿನ್ನ ಅಶ್ವಗಳೊಡನೆ | ಚಾರು—ಹಿತಕರವಾದ | ಘೃತಂ ನ—ಘೃತದಂತೆ ಇರುವ ಉದಕವನ್ನು | ಸೇಚತೇ—ಸುರಿಸುವಯೋ ಅಂತಹ | ಹರಿವರ್ಪಸಂ— ಹೊಂಬಣ್ಣದರೂಪವುಳ್ಳ| ತ್ವಾ—ನಿನ್ನನ್ನು| ಗಿರಃ—ನಮ್ಮ ಸ್ತುತಿಗಳು | ಆ ವಿಶಂತು—ಪ್ರವೇಶಿಸಲಿ.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ಅಶ್ವಗಳನ್ನು ಮಹತ್ತಾದ ಯಜ್ಞದಲ್ಲಿ ಪ್ರಶಂಸಿಸುತ್ತೇನೆ. ಶತ್ರುಹಿಂಸಕನಾದ ನಿನ್ನಿಂದ ಆಕರ್ಷಕವಾದ ಹರ್ಷವನ್ನು ಯಾಚಿಸುತ್ತೇನೆ. ನಿನ್ನ ಅಶ್ವಗಳೊಡನೆ ಕೂಡಿ ಘೃತದಂತೆ ಹಿತಕರವಾದ ಉದಕವನ್ನು ಸುರಿಸುವ ಹೊಂಬಣ್ಣದ ನಿನ್ನನ್ನು ನಮ್ಮ ಸ್ತುತಿಗಳು ಪ್ರವೇಶಿಸಲಿ.

## English Translaton

I glorified your bay horses, Indra, at the great sacrifiee, I solicit the agreeable exhilaration of you, the destroyer of foes. May my praises attain to you, whose form is yellow, who, with your horses, shower (water) like beautiful butter.

॥ ವಿಶೇಷವಿಷಯಗಳು ॥

ಇಂದ್ರನ ಅಶ್ವಗಳನ್ನು ಸ್ತುತಿಸುವ ಋಕ್ಕುಗಳು ಅಲ್ಲಲ್ಲಿ ಕೆಲವಿದ್ದರೂ ಈ ಸೂಕ್ತದಲ್ಲಿ ಪೂರ್ತಿಯಾಗಿ ಇಂದ್ರಾಶ್ವಗಳನ್ನೇ ಸ್ತುತಿಸಲಾಗಿದೆ. ಶೈಲಿಯು ಉತ್ತಮ ಮಟ್ಟದ್ದಾಗಿದೆ. ಪ್ರತಿ ಋಕ್ಕಿನ ಪ್ರತಿ ಪಾದದಲ್ಲಿಯೂ ಹರಿಶಬ್ದದ ಪ್ರಯೋಗವಿದ್ದು ಮಂತ್ರ ಪಠನವು ಪ್ರಾಸಬದ್ಧವಾಗಿ ಕೇಳುವುದಕ್ಕೆ ಶ್ರಾವ್ಯವಾಗಿರುವುದು ಈ ಸೂಕ್ತದ ವೈಶಿಷ್ಟ್ಯವು.

॥ ಸಂಹಿತಾಪಾಠಃ ॥

ಹರಿಂ ಹಿ ಯೋನಿಮಭಿ ಯೇ ಸಮಸ್ವರನ್ಹಿನ್ವಂತೋ ಹರೀ ದಿವ್ಯಂ ಯಥಾ ಸದಃ ।
ಆ ಯಂ ಪೃಣಂತಿ ಹರಿಭಿರ್ನ ಧೇನವ ಇಂದ್ರಾಯ ಶೂಷಂ ಹರಿವಂತಮರ್ಚತ ॥ ೨ ॥

॥ ಪದಪಾಠಃ ॥

ಹರಿಂ । ಹಿ । ಯೋನಿಂ । ಅಭಿ । ಯೇ । ಸಂऽಅಸ್ವರನ್ । ಹಿನ್ವಂತಃ । ಹರೀ ಇತಿ । ದಿವ್ಯಂ । ಯಥಾ । ಸದಃ ।
ಆ । ಯಂ । ಪೃಣಂತಿ । ಹರಿऽಭಿಃ । ನ । ಧೇನವಃ । ಇಂದ್ರಾಯ । ಶೂಷಂ । ಹರಿऽವಂತಂ । ಅರ್ಚತ ॥೨॥

॥ ಸಾಯಣಭಾಷ್ಯಂ ॥

ಯೇ ಪೂರ್ವೇ ಸ್ತೋತಾರ ಋಷಯೋ ಯೋನಿಮಿಂದ್ರಸ್ಯ ಸ್ಥಾನಭೂತಂ ಹರಿಮಶ್ವಮಭಿ ಸಮಸ್ವರನ್ ॥ ಸ್ವೃ ಶಬ್ದೋಪತಾಪಯೋಃ ॥ ಅಭಿಸಂಸ್ತುವಂತಿ । ಕಿಂ ಕುರ್ವಂತಃ । ದಿವ್ಯಂ ದೇವಸಂಬಂಧಿ ಸದೋ ಯಾಗಗೃಹಂ ಯಥಾ ಪ್ರೇರಯಂತೀಂದ್ರಂ ತಥಾ ಹರೀ ಅಶ್ವೌ ಹಿನ್ವಂತಃ ಪ್ರೇರಯಂತಃ। ಸೋಮೇಽಭಿಷುತೇ ಸತಿ ಸ್ವಯಮೇವೇಂದ್ರೋ ರಥೇಽಶ್ವೌ ಪ್ರೇರಯತಿ ಅತಃ ಸ್ತೋತೄಣಾಂ ಹರಿಪ್ರೇರಣತ್ವಂ । ಯದ್ವಾ । ದಿವ್ಯಂ ಸದ ಇಂದ್ರಃ ಪ್ರಾಪ್ನುಯಾದ್ಯಥಾ ತಥಾ ಹರೀ ಸ್ತುತಿಭಿರ್ಹಿನ್ವಂತಃ ಪ್ರೇರಯಂತಃ । ಯಮಿಂದ್ರಂ ಧೇನವೋ ನವಪ್ರಸೂತಿಕಾ ಗಾವೋ ಯಥಾ ಪೃಣಂತಿ ಕ್ಷೀರಾದಿಭಿಃ । ಅತ್ರ ಪುರಸ್ತಾದುಪಚಾರೋಽಪಿ ನಕಾರ ಉಪಮಾರ್ಥೀಯಃ । ಹರಿಭಿರ್ಹರಿತವರ್ಣೈಃ ಸೋಮೈರಾ ಪೃಣಂತಿ ಪೂರಯಂತಿ ಚ । ತಥಾ ಯೂಯಮಪೀಂದ್ರಾಯೇಂದ್ರಸ್ಯ ಹರಿವಂತಂ ಶೂಷಂ ಬಲಮರ್ಚತ। ಪೂಜಯತ ಹೇ ಸ್ತೋತಾರಃ ಸ್ತುತಿಭಿಃ ॥

|| ಪ್ರತಿಪದಾರ್ಥ ||

**ಯೇ**—ಸ್ತುತಿಕರ್ತರಾದ ಋಷಿಗಳು । **ದಿವ್ಯಂ ಸದಃ**—ಪೂಜ್ಯವಾದ ಯಾಗ ಗೃಹಕ್ಕೆ । **ಯಥಾ**—ಇಂದ್ರನನ್ನು ಕರೆತರುವ ರೀತಿಯಲ್ಲಿ । **ಹರೀ**—ಅಶ್ವಗಳನ್ನು । **ಹಿನ್ವಂತಃ**—ಪ್ರೇರಿಸುತ್ತಾ । **ಯೋನಿಂ**—ಇಂದ್ರನಿಗೆ ಸ್ಥಾನವಾದ । **ಹರಿಂ**—ಅಶ್ವವನ್ನು । **ಅಭಿ ಸಮಸ್ವರನ್**—ಪ್ರಶಂಸಿಸಿದ್ದಾರೆ । **ಧೇನವಃ ನ**—ಧೇನುಗಳು ಕ್ಷೀರಾದಿಗಳಿಂದ ತೃಪ್ತಿಪಡಿಸುವಂತೆ । **ಯಂ**—ಯಾವ ಇಂದ್ರನನ್ನು । **ಹರಿಭಿಃ**—ಪಚ್ಚೆ ವರ್ಣಗಳುಳ್ಳ ಸೋಮಗಳಿಂದ । **ಆ ಪೃಣಂತಿ**—ತುಂಬಿಸಿ ತೃಪ್ತಿಪಡಿಸುವರೋ । **ಇಂದ್ರಾಯ**—ಅದೇ ಇಂದ್ರನ । **ಹರಿವಂತಂ**—ಅಶ್ವ ಯುಕ್ತವಾದ । **ಶೂಷಂ**—ಬಲವನ್ನು । **ಅರ್ಚತ**—ಪೂಜಿಸಿರಿ.

|| ಭಾವಾರ್ಥ ||

ಸ್ತುತಿಕರ್ತರಾದ ಋಷಿಗಳು ಪೂಜ್ಯವಾದ ಯಾಗ ಗೃಹಕ್ಕೆ ಇಂದ್ರನನ್ನು ಕರೆತರುವ ರೀತಿಯಲ್ಲಿ ಅಶ್ವಗಳನ್ನು ಪ್ರೇರಿಸುತ್ತ ಇಂದ್ರನಿಗೆ ವಾಹಕವಾದ ಅಶ್ವವನ್ನು ಪ್ರಶಂಸಿಸಿದ್ದಾರೆ. ಧೇನುಗಳು ಕ್ಷೀರಾದಿಗಳಿಂದ ತೃಪ್ತಿಪಡಿಸುವಂತೆ ಯಾವ ಇಂದ್ರನನ್ನು ಪಚ್ಚೆವರ್ಣಗಳುಳ್ಳ ಸೋಮರಸಗಳಿಂದ ತುಂಬಿಸಿ ತೃಪ್ತಿಪಡುವರೋ ಅದೇ ಇಂದ್ರನ ಅಶ್ವಯುಕ್ತವಾದ ಬಲವನ್ನು ಪೂಜಿಸಿರಿ. (ಪ್ರಶಂಸೆಮಾಡಿರಿ)

## English Translation.

You, who have praised the horses, the seat of Indra, urging the horses so that (Indra may reach) the divine assembly, do you worship the horse-possessing might of Indra, whom men delight with the golden-tinted Soma juices as milch cows (with their milk.)

|| ಸಂಹಿತಾಪಾಠಃ ||

ಸೋ ಅಸ್ಯ ವಜ್ರೋ ಹರಿತೋ ಯ ಆಯಸೋ ಹರಿರ್ನಿಕಾಮೋ ಹರಿರಾ ಗಭಸ್ತ್ಯೋಃ ।
ದ್ಯುಮ್ನೀ ಸುಶಿಪ್ರೋ ಹರಿಮನ್ಯುಸಾಯಕ ಇಂದ್ರೇ ನಿ ರೂಪಾ ಹರಿತಾ ಮಿಮಿಕ್ಷಿರೇ || ೩ ||

|| ಪದಪಾಠಃ ||

ಸಃ । ಅಸ್ಯ । ವಜ್ರಃ । ಹರಿತಃ । ಯಃ । ಆಯಸಃ । ಹರಿಃ । ನಿऽಕಾಮಃ । ಹರಿಃ । ಆ । ಗಭಸ್ತ್ಯೋಃ ।
ದ್ಯುಮ್ನೀ । ಸುऽಶಿಪ್ರಃ । ಹರಿಮನ್ಯುऽಸಾಯಕಃ । ಇಂದ್ರೇ । ನಿ । ರೂಪಾ । ಹರಿತಾ । ಮಿಮಿಕ್ಷಿರೇ || ೩ ||

|| ಸಾಯಣಭಾಷ್ಯಂ||

ಅಸ್ಯೇಂದ್ರಸ್ಯ ಸ ವಜ್ರೋ ಹರಿತೋ ಹರಿತವರ್ಣೋ ಯ ಆಯಸೋಽಯಃಸಾರಭೂತೋಽಸ್ತಿ ನಿರ್ಮಿತಃ । ಸ ಚ ಹರಿರ್ಹರಿತವರ್ಣೋ ವಜ್ರೋ ನಿಕಾಮೋ ನಿತರಾಂ ಕಮನೀಯಃ । ಸ ಆ ಹಂತಾ ಶತ್ರೂಣಾಂ । ತಾದೃಶೋ ವಜ್ರೋ ಗಭಸ್ತ್ಯೋರ್ಹಸ್ತಯೋರ್ವರ್ತತೆ ಇತಿ ಶೇಷಃ । ಅಯಮಿಂದ್ರೋ ದ್ಯುಮ್ನೀ । ದ್ಯುಮ್ನಂ ದ್ಯೋತಮಾನಂ ಧನಂ । ತದ್ವಾನ್ ಸುಶಿಪ್ರಃ ಶೋಭನಹನುರ್ಹರಿಮನ್ಯುಸಾಯಕಃ । ಯಸ್ಯ ಮನ್ಯುಃ ಸಾಯಕಃ ಶತ್ರುಹಂತಾಭಿಗಂತಾ ವಾ ಭವತಿ । ಯದ್ವಾ । ಶತ್ರುಹಂತಾ ಕೋಪಃ ಸಾಯಕಶ್ಚ ಯಸ್ಯ ಸ ತಾದೃಶೋ ಭವತಿ । ಕಿಂ ಬಹುನಾ । ಇಂದ್ರೇ ರೂಪಾ ರೂಪಾಣಿ ಹರಿತಾ ಹರಿತಾನಿ ನಿ ಮಿಮಿಕ್ಷಿರೇ । ನಿಷಿಕ್ತಾನಿ ಬಭೂವುಃ ॥ ಮಿಹೇಃ ಸನಂತಾತ್ಕರ್ಮಣಿ ಲಿಟಿ ರೂಪಂ ॥

|| ಪ್ರತಿಪದಾರ್ಥ ||

ಅಸ್ಯ—ಇಂದ್ರನ । ಯಃ ವಜ್ರಃ—ಯಾವ ವಜ್ರಾಯುಧವು । ಹರಿತಃ—ಪಚ್ಚೆ ವರ್ಣವುಳ್ಳದ್ದಾಗಿಯೂ । ನಿಕಾಮಃ—ಅತ್ಯಂತ ಆಕರ್ಷಕವಾಗಿಯೂ । ಆಯಸಃ—ಉಕ್ಕಿನಿಂದ ನಿರ್ಮಿತವೂ ಆಗಿರುವುದೋ । ಸಃ—ಆ ವಜ್ರಾಯುಧವು । ಅಸ್ಯ—ಇಂದ್ರನ । ಗಭಸ್ತ್ಯೋಃ—ಹಸ್ತಗಳಲ್ಲಿದ್ದು । ಆ (ಹಂತಾ)—ಶತ್ರುನಾಶಕವಾಗಿರುತ್ತದೆ । ಇಂದ್ರಃ—ಇಂದ್ರನು । ದ್ಯುಮ್ನೀ—ಧನವಂತನಾಗಿಯೂ । ಸುಶಿಪ್ರಃ—ಉತ್ತಮವಾದ ಕೆನ್ನೆಯುಳ್ಳವನಾಗಿಯೂ । ಹರಿಮನ್ಯುಸಾಯಕಃ— ಶತ್ರುನಾಶಕವಾದ ಕ್ರೋಧ ಮತ್ತು ಬಾಣಗಳುಳ್ಳವನಾಗಿಯೂಇದ್ದಾನೆ. । ಹರಿತಾ ರೂಪಾ—ಹೊಂಬಣ್ಣದ ಅನೇಕವಿಧವಾದ ರೂಪಗಳು । ಇಂದ್ರೇ— ಇಂದ್ರನಲ್ಲಿ । ನಿ ಮಿಮಿಕ್ಷಿರೇ—ಸೇರಿಕೊಂಡಿವೆ.

|| ಭಾವಾರ್ಥ ||

ಇಂದ್ರನ ಯಾವ ವಜ್ರಾಯುಧವು ಪಚ್ಚೆವರ್ಣವುಳ್ಳದ್ದಾಗಿಯೂ, ಅತ್ಯಂತ ಆಕರ್ಷಕವಾಗಿಯೂ, ಉಕ್ಕಿನಿಂದ ನಿರ್ಮಿತವೂ ಆಗಿರುವುದೋ ಆ ವಜ್ರಾಯುಧವು ಇಂದ್ರನ ಹಸ್ತಗಳಲ್ಲಿದ್ದು ಶತ್ರುನಾಶಕವಾಗಿರುತ್ತದೆ ಇಂದ್ರನು ಧನವಂತನಾಗಿಯೂ, ಉತ್ತಮವಾದ ಕೆನ್ನೆಯುಳ್ಳವನಾಗಿಯೂ, ಶತ್ರುನಾಶಕವಾದ ಕ್ರೋಧ ಮತ್ತು ಬಾಣಗಳುಳ್ಳವನೂ ಆಗಿದ್ದಾನೆ ಹೊಂಬಣ್ಣದ ಅನೇಕವಿಧವಾದ ರೂಪಗಳು ಇಂದ್ರನಲ್ಲಿ ಸೇರಿಕೊಂಡಿವೆ.

## English Translation

That is his thunderbolt, yellow, made of iron, the destroyer (of foes) desirable, it is in his hands; (he is) possessed of riches handsome-jawed, possessed of a shaft and anger which destroyes (his foes)-many golden-tinted forms are mixed in Indra.

॥ ಸಂಹಿತಾಪಾಠಃ ॥

ದಿವಿ ನ ಕೇತುರಧಿ ಧಾಯಿ ಹರ್ಯತೋ ವಿವ್ಯಚದ್ವಜ್ರೋ ಹರಿತೋ ನ ರಂಹ್ಯಾ ।

ತುದದಹಿಂ ಹರಿಶಿಪ್ರೋ ಯ ಆಯಸಃ ಸಹಸ್ರಶೋಕಾ ಅಭವದ್ಧರಿಂಭರಃ ॥

॥ ಪದಪಾಠಃ ।

ದಿವಿ । ನ । ಕೇತುಃ । ಅಧಿ । ಧಾಯಿ । ಹರ್ಯತಃ । ವಿವ್ಯಚತ್ । ವಜ್ರಃ । ಹರಿತಃ । ನ । ರಂಹ್ಯಾ ।

ತುದತ್ । ಅಹಿಂ । ಹರಿऽಶಿಪ್ರಃ । ಯಃ । ಆಯಸಃ । ಸಹಸ್ರऽಶೋಕಾಃ । ಅಭವತ್ । ಹರಿಂऽಭರಃ ॥ ೪ ॥

॥ ಸಾಯಣಭಾಷ್ಯಂ ॥

ದಿವ್ಯಂತರಿಕ್ಷೇ ಕೇತುಃ ಪ್ರಕಾಶೇನ ಸರ್ವಸ್ಯ ಪ್ರಜ್ಞಾಪಕ ಆದಿತ್ಯ ಇವ ಸ ಯಥಾಧಿ ನಿಹಿತಃ ಏವಮಯಮಿಂದ್ರೋऽಧಿ ಧಾಯಿ । ಅಧ್ಯಧಾಯಿ । ಸ್ತೋತೃಭಿರಧಿ ನಿಹಿತಃ । ಕಿಂಚೇಂದ್ರಸ್ಯ ವಜ್ರೋ ಹರ್ಯತಃ ಸ್ಪೃಹಣೀಯಃ ಸನ್ ವಿವ್ಯಚತ್। ವ್ಯಾಪ್ನೋತಿ ವ್ಯಾಪ್ತವ್ಯಂ ಶತ್ರುಸಂಘಂ। ತತ್ರ ದೃಷ್ಟಾಂತಃ। ಹರಿತೋ ನ ಹರಿತವರ್ಣಾ ಅಧ್ಯಾಹರ್ತಾರೋ ವಾಶ್ವಾ ಆದಿತ್ಯಸಂಬಂಧಿನಃ । ತೇ ಯಥಾ ರಂಹ್ಯಾ ರಂಹಣೇನ ವೇಗೇನ ವ್ಯಾಪ್ನುವಂತಿ ವ್ಯಾಪ್ತವ್ಯಂ। ಯೋऽಸ್ಯ ವಜ್ರ ಆಯಸೋऽಯೋವಿಕಾರೋऽಹಿಂ ವೃತ್ರಂ ಮೇಘಂ ವಾ ತುದತ್ ಹಿನಸ್ತಿ । ಯೋऽಯಂ ಮಹಾನುಭಾವೋ ಹರಿಶಿಪ್ರಃ ಸೋಮಪಾನರಭಸೇನ ಹರಿತವರ್ಣನಾಸಿಕಸ್ತದ್ವರ್ಣಹನುರ್ವಾ ಹರಿಂಭರೋ ಹರ್ಯೋರ್ಭರ್ತೇಂದ್ರಃ ಸಹಸ್ರಶೋಕಾ ಅಭವತ್ ॥ ಶುಚ ದೀಪ್ತೌ ॥ ಅಪರಿಮಿತದೀಪ್ತಿರ್ಭವತಿ ॥

॥ಪ್ರತಿಪದಾರ್ಥ॥

**ದಿವಿ**—ಅಂತರಿಕ್ಷದಲ್ಲಿ । **ಕೇತುಃ ನ**—ಧ್ವಜರೂಪನಾದ ಆದಿತ್ಯನಂತೆ । **ಅಧಿ ಧಾಯಿ**—ಇಂದ್ರನೂ ಸ್ಥಾಪಿತನಾಗಿದ್ದಾನೆ । **ರಂಹ್ಯಾ**—ತಮ್ಮ ವೇಗದಿಂದ । **ಹರಿತೋ ನ**—ಆದಿತ್ಯನ ಅಶ್ವಗಳು ತಮ್ಮ ಗುರಿಯನ್ನು ಮುಟ್ಟುವಂತೆ । **ಹರ್ಯತಃ**—ಆಕರ್ಷಕವಾದ । **ವಜ್ರಃ**—ವಜ್ರಾಯುಧವು । **ವಿವ್ಯಚತ್**—ಶತ್ರುಸಂಘವನ್ನು ಸವಿಾಪಿಸುತ್ತದೆ । **ಯಃ**—ಯಾವ ಇಂದ್ರನ । **ಆಯಸಃ**—ಉಕ್ಕಿನಿಂದ ನಿರ್ಮಿತವಾದ ವಜ್ರಾಯುಧವು । **ಅಹಿಂ**—ಶತ್ರುವನ್ನು । **ತುದತ್**—ಹಿಂಸಿಸುವುದೋ ಅಂತಹ । **ಹರಿಶಿಪ್ರಃ**—ಸೋಮಪಾನದಿಂದ ಪಚ್ಚೆವರ್ಣವುಳ್ಳ ಕೆನ್ನೆಯುಳ್ಳವನೂ । **ಹರಿಂಭರಃ**—ಅಶ್ವಗಳ ಒಡೆಯನೂ ಆದ ಇಂದ್ರನು । **ಸಹಸ್ರಶೋಕಾಃ**—ಅನೇಕ ವಿಧವಾದ ಕಾಂತಿಯುಳ್ಳವನಾಗಿ । **ಅಭವತ್**—ಆಗಿದ್ದಾನೆ

॥ ಭಾವಾರ್ಥ ॥

ಧ್ವಜರೂಪನಾಗಿ ಲೋಕಪ್ರಕಾಶಕನಾದ ಆದಿತ್ಯನು ಅಂತರಿಕ್ಷದಲ್ಲಿ ಸ್ಥಾಪಿತನಾಗಿರುವಂತೆ ಇಂದ್ರನೂ ಸ್ಥಾಪಿತ ನಾಗಿದ್ದಾನೆ. ತಮ್ಮ ವೇಗದಿಂದ ಆದಿತ್ಯನ ಅಶ್ವಗಳು ತಮ್ಮ ಗುರಿಯನ್ನು ಮುಟ್ಟುವಂತೆ ಆಕರ್ಷಕವಾದ ವಜ್ರಾಯುಧವು ಶತ್ರುಸಂಘವನ್ನು ಸಮೀಪಿಸುತ್ತದೆ. ಯಾವ ಇಂದ್ರನ ಉಕ್ಕಿನಿಂದ ನಿರ್ಮಿತವಾದ ವಜ್ರಾಯುಧವು ಶತ್ರುವನ್ನು ಹಿಂಸಿಸುವುದೋ ಅಂತಹ ಸೋಮಪಾನದಿಂದ ಪಚ್ಚೆವರ್ಣವುಳ್ಳ ಕೆನ್ನೆಯುಳ್ಳವನೂ, ಅಶ್ವಗಳ ಒಡೆ ಯನೂ ಆದ ಇಂದ್ರನು ಅನೇಕ ವಿಧವಾದ ಕಾಂತಿಯುಳ್ಳವನಾಗಿದ್ದಾನೆ.

## English Translation.

He has been placed (by his worshippers) in the sky, like the banner (of light, the sun). His desirable bolt reaches (the foe) as bay horses (of the sun reach their aim) through speed. The iron (thunderbolt), of indra with yellow jaws, which smote Ahi, (the Indra), lord of horses, shone with a thousand lustres.

॥ ಸಂಹಿತಾಪಾಠಃ ॥

ತ್ವಂತ್ವಮಹರ್ಯಥಾ ಉಪಸ್ತುತಃ ಪೂರ್ವೇಭಿರಿಂದ್ರ ಹರಿಕೇಶ ಯಜ್ವಭಿಃ ।
ತ್ವಂ ಹರ್ಯಸಿ ತವ ವಿಶ್ವಮುಕ್ಥ್ಯಮಸಾಮಿ ರಾಧೋ ಹರಿಜಾತ ಹರ್ಯತಂ ॥ ೫ ॥

॥ ಪದಪಾಠಃ ॥

ತ್ವಂऽತ್ವಂ । ಅಹರ್ಯಥಾಃ । ಉಪऽಸ್ತುತಃ । ಪೂರ್ವೇಭಿಃ । ಇಂದ್ರ । ಹರಿऽಕೇಶ । ಯಜ್ವऽಭಿಃ ।
ತ್ವಂ । ಹರ್ಯಸಿ । ತವ । ವಿಶ್ವಂ । ಉಕ್ಥ್ಯಂ । ಅಸಾಮಿ । ರಾಧಃ । ಹರಿऽಜಾತ । ಹರ್ಯತಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಹೇ ಹರಿಕೇಶ ಹರಿತರೋಮವದಶ್ವ ತ್ವಂತ್ವಂ ತ್ವಮೇವ ಸರ್ವತ್ರ ಯಜ್ಞೇऽಹರ್ಯಥಾಃ । ಅಕಾಮಯಥಾಃ ಸ್ತೋತ್ರಂ ಹವಿರ್ವಾ । ಕೀದೃಶಸ್ತ್ವಂ । ಪೂರ್ವೇಭಿಃ ಪೂರ್ವತನೈರ್ಯಜ್ವಭಿರ್ಯಜಮಾನೈರುಪಸ್ತುತಃ ಸನ್ । ಹೇ ಹರಿಜಾತ ಹರಿತವರ್ಣಃ ಸನ್ಪ್ರಾದುರ್ಭೂತ ಹಾರಕಪ್ರಾದುರ್ಭಾವ ವಾ । ಶತ್ರುವಧಾರ್ಥಂ ಪ್ರಾದುರ್ಭೂತೇತ್ಯರ್ಥಃ । ಹೇ ತಾದೃಶೇಂದ್ರ ತ್ವಂ ತವ । ಸ್ವಭೂತಮಿತಿ ಶೇಷಃ । ವಿಶ್ವಂ ವ್ಯಾಪ್ತಂ ಸೋಮಚರುಪುರೋಡಾಶಾದಿರೂಪಂ ಸರ್ವಂ ವಾ । ಯದ್ವಾ। ಯತ್ರ ಯಾನಿ ಯಾನಿ ಹವೀಂಷಿ ದೀಯಂತೇ ತತ್ಸರ್ವಂ ವಾ । ತಥೋಕ್ಥ್ಯಂ ಪ್ರಶಸ್ಯಮಸಾಮ್ಯಸಾಧಾರಣಮಸಮಂ ಕೃತ್ಸ್ನಂ ಹರ್ಯತಂ ಕಾಂತಂ ರಾಧೋऽನ್ನಂ ಹವಿರ್ಲಕ್ಷಣಂ ಹರ್ಯಸಿ । ಕಾಮಯಸೇ ॥

॥ ಪ್ರತಿಪದಾರ್ಥ ॥

**ಹರಿಕೇಶ** – ಹೊಂಬಣ್ಣದ ಕೂದಲುಳ್ಳ ಅಶ್ವಗಳುಳ್ಳ । **ಇಂದ್ರ**— ಎಲೈ ಇಂದ್ರನೇ । **ಪೂರ್ವೇಭಿಃ**— ಪುರಾತನರಾದ । **ಯಜ್ವಭಿಃ**— ಯಜಮಾನರಿಂದ । **ಉಪಸ್ತುತಃ** - ಪ್ರಶಂಸಿತನಾದ । **ತ್ವಂ ತ್ವಂ**— ನೀನೊಬ್ಬನೇ । **ಅಹರ್ಯಥಾಃ**— ಪ್ರತಿಯಜ್ಞದಲ್ಲಿಯೂ ಹವಿಸ್ಸನ್ನಪೇಕ್ಷಿಸುತ್ತೀಯೆ । **ಹರಿಜಾತ**— ಹೊಂಬಣ್ಣದ ರೂಪದಿಂದ ಆವಿರ್ಭೂತನಾದ ಎಲೈ ಇಂದ್ರನೇ । **ತ್ವಂ**— ನೀನು । **ತವ**— ನಿನಗೆ ಅರ್ಪಿತವಾಗಬೇಕಾದ । **ವಿಶ್ವಂ**— ಸಮಸ್ತವಾದ । **ಉಕ್ಥ್ಯಂ**— ಸ್ತೋತ್ರವನ್ನೂ । **ಅಸಾಮಿ**— ಅಸಾಧಾರಣವೂ । **ಹರ್ಯತಂ**— ಆಕರ್ಷಕವೂ ಆದ । **ರಾಧಃ**— ಹವಿಸ್ಸನ್ನೂ । **ಹರ್ಯಸಿ**— ಅಪೇಕ್ಷಿಸುತ್ತೀಯೆ.

॥ ಭಾವಾರ್ಥ ॥

ಹೊಂಬಣ್ಣದ ಕೂದಲುಳ್ಳ ಅಶ್ವಗಳಿಗೆ ಒಡೆಯನಾದ ಎಲೈ ಇಂದ್ರನೇ, ಯಜಮಾನರಿಂದ ಪ್ರಶಂಸಿತನಾದ ನೀನೊಬ್ಬನೇ ಪ್ರತಿಯಜ್ಞದಲ್ಲಿಯೂ ಹವಿಸ್ಸನ್ನಪೇಕ್ಷಿಸುತ್ತೀಯೆ. ಹೊಂಬಣ್ಣದ ರೂಪದಿಂದ ಆವಿರ್ಭೂತನಾದ ಎಲೈ ಇಂದ್ರನೇ, ನಿನಗೆ ಅರ್ಪಿತವಾಗಬೇಕಾದ ಸಕಲ ಸ್ತುತಿಗಳನ್ನೂ, ಅಸಾಧಾರಣವೂ ಆಕರ್ಷಕವೂ ಆದ ಸಕಲ ಹವಿಸ್ಸುಗಳನ್ನೂ ಅಪೇಕ್ಷಿಸುತ್ತೀಯೆ

## English Translation.

Indra, with horses of yellow locks, when praised by ancient worshippers, you desired the oblation, you who are manifested of a golden hue desire your universal praise, your peculiar and delightful (sacrificial) food.

॥ ಸಂಹಿತಾಪಾಠಃ ॥

ತಾ ವಜ್ರಿಣಂ ಮಂದಿನಂ ಸ್ತೋಮ್ಯಂ ಮದ ಇಂದ್ರಂ ರಥೇ ವಹತೋ ಹರ್ಯತಾ ಹರೀ ।
ಪುರೂಣ್ಯಸ್ಮೈ ಸವನಾನಿ ಹರ್ಯತ ಇಂದ್ರಾಯ ಸೋಮಾ ಹರಯೋ ದಧನ್ವಿರೇ ॥ ೬ ॥

॥ ಪದಪಾಠಃ ॥

ತಾ । ವಜ್ರಿಣಂ । ಮಂದಿನಂ । ಸ್ತೋಮ್ಯಂ । ಮದೇ । ಇಂದ್ರಂ । ರಥೇ । ವಹತಃ । ಹರ್ಯತಾ । ಹರೀ ಇತಿ ।
ಪುರೂಣಿ । ಅಸ್ಮೈ । ಸವನಾನಿ । ಹರ್ಯತೇ । ಇಂದ್ರಾಯ । ಸೋಮಾಃ । ಹರಯಃ । ದಧನ್ವಿರೇ ॥ ೬ ॥

॥ ಸಾಯಣಭಾಷ್ಯಂ ॥

**ತಾ ತೌ ಪ್ರಸಿದ್ಧೌ ಹರ್ಯತಾ ಹರ್ಯತೌ ಗಂತಾರೌ ಕಾಂತೌ ವಾ ಹರೀ ಹರಿತವರ್ಣಾವಶ್ವೌ ಮಂದಿನಂ ಮೋದಮಾನಂ ಸ್ತೋಮ್ಯಂ ಸ್ತುತ್ಯರ್ಹಂ ವಜ್ರಿಣಮಿಂದ್ರಂ ಮದೇ ನಿಮಿತ್ತೇ ರಥೇ ವಹತಃ । ಧಾರಯತಃ । ಯಜ್ಞಮಸ್ಮದೀಯಂ ಪ್ರಾಪಯತಃ । ಅಸ್ಮೈ ಹರ್ಯತೇ ಕಾಂತಾಯೇಂದ್ರಾಯ ಪುರೂಣಿ ಬಹೂನಿ ಸವನಾನಿ ಪ್ರಾತರಾದೀನಿ ಹರಯೋ ಹರಿತವರ್ಣಾಃ ಸೋಮಾ ದಧನ್ವಿರೇ । ನಿಧೀಯಂತೇ ॥**

॥ ಪ್ರತಿಪದಾರ್ಥ ॥

**ತಾ**—ಪ್ರಸಿದ್ಧವೂ । **ಹರ್ಯತಾ**—ಆಕರ್ಷಕವೂ । **ಹರೀ**—ಹರಿತವರ್ಣವುಳ್ಳವೂ ಆದ ಅಶ್ವಗಳು । **ಮಂದಿನಂ**—ಹರ್ಷಯುತನೂ । **ಸ್ತೋಮ್ಯಂ**—ಪ್ರಶಂಸಾರ್ಹನೂ । **ವಜ್ರಿಣಂ**—ವಜ್ರಾಯುಧವುಳ್ಳವನೂ ಆದ । **ಇಂದ್ರಂ**—ಇಂದ್ರನನ್ನು । **ಮದೇ**—ಹರ್ಷಾರ್ಥವಾಗಿ । **ರಥೇ**—ರಥದಲ್ಲಿ । **ವಹತಃ**—ವಹಿಸಿಕೊಂಡು ಬರುತ್ತವೆ । **ಹರ್ಯತೇ**—ಆಕರ್ಷಕವಾದ ರೂಪವುಳ್ಳ । **ಅಸ್ಮೈ ಇಂದ್ರಾಯ**—ಈ ಇಂದ್ರನಿಗಾಗಿ **ಪುರೂಣಿ**—ಪ್ರಭೂತವಾದವೂ । **ಹರಯಃ**—ಪಚ್ಚೆವರ್ಣವುಳ್ಳವೂ । **ಸವನಾನಿ**—ಯಜ್ಞಯೋಗ್ಯವಾದವೂ ಆದ । **ಸೋಮಾಃ**—ಸೋಮರಸಗಳು । **ದಧನ್ವಿರೇ**—ಶೇಖರಿಸಲ್ಪಡುತ್ತವೆ.

॥ ಭಾವಾರ್ಥ ॥

ಪ್ರಸಿದ್ಧವೂ, ಆಕರ್ಷಕವೂ, ಹರಿತವರ್ಣವುಳ್ಳವೂ ಅದ ಅಶ್ವಗಳು ಹರ್ಷಯುತನೂ, ಪ್ರಶಂಸಾರ್ಹನೂ, ವಜ್ರಾಯುಧವುಳ್ಳವನೂ ಆದ ಇಂದ್ರನನ್ನು ಹರ್ಷಾರ್ಥವಾಗಿ ರಥದಲ್ಲಿ ವಹಿಸಿಕೊಂಡು ಬರುತ್ತವೆ. ಆಕರ್ಷಕವಾದ ರೂಪವುಳ್ಳ ಇಂದ್ರನಿಗಾಗಿ ಪ್ರಭೂತವಾದವೂ, ಪಚ್ಚೆವರ್ಣವುಳ್ಳವೂ, ಯಜ್ಞಯೋಗ್ಯವಾದವೂ ಆದ ಸೋಮರಸಗಳು ಶೇಖರಿಸಲ್ಪಡುತ್ತವೆ.

## English Translation.

These two delightful bay horses bring the thunderer, the rejoicing and laudable Indra, in his car to the exhilaration (of the soma); for him the beloved one, many libations of the yellow-tinted Soma-juices are stored up.

॥ ಸಂಹಿತಾಪಾಠಃ ॥

ಅರಂ ಕಾಮಾಯ ಹರಯೋ ದಧನ್ವಿರೇ ಸ್ಥಿರಾಯ ಹಿನ್ವನ್ಹರಯೋ ಹರೀ ತುರಾ ।

ಅರ್ವದ್ಭಿರ್ಯೋ ಹರಿಭಿರ್ಜೋಷಮೀಯತೇ ಸೋ ಅಸ್ಯ ಕಾಮಂ ಹರಿವಂತಮಾನಶೇ ॥ ೭ ॥

॥ ಪದಪಾಠಃ ॥

ಅರಂ । ಕಾಮಾಯ । ಹರಯಃ । ದಧನ್ವಿರೇ । ಸ್ಥಿರಾಯ । ಹಿನ್ವನ್ । ಹರಯಃ । ಹರೀ ಇತಿ । ತುರಾ।

ಅರ್ವತ್ऽಭಿಃ । ಯಃ । ಹರಿऽಭಿಃ । ಜೋಷಂ । ಈಯತೇ । ಸಃ । ಅಸ್ಯ । ಕಾಮಂ । ಹರಿऽವಂತಂ।

ಆನಶೇ ॥ ೭ ॥

॥ ಸಾಯಣಭಾಷ್ಯಂ ॥

ಅರಮಲಂ ಪರ್ಯಾಪ್ತಂ ಕಾಮಾಯೇಂದ್ರಕಾಮನಾಯ ಹರಯೋ ಹರಿತವರ್ಣಾಃ ಸೋಮಾ ದಧನ್ವಿರೇ । ತೇ ಚ ಹರಯಃ ಸ್ಥಿರಾಯ ಯುದ್ಧೇऽಪಲಯಿತಾಯೇಂದ್ರಾಯ ತುರಾ ತುರೌ ತ್ವರಮಾಣೌ ಹರೀ ಅಶ್ವೌ ಹಿನ್ವನ್ । ಪ್ರೇರಯಂತಿ । ಯೋऽರ್ವದ್ಭಿರರಣಕುಶಲೈರ್ಹರಿಭಿರಶ್ವೈರ್ಜೋಷಂ ಶೂರೈಃ ಸೇವ್ಯಂ ಸಂಗ್ರಾಮಮೀಯತೇ ಗಚ್ಛತಿ ಸ ರಥೋऽಸ್ಯೇಂದ್ರಸ್ಯ ಸ್ವಭೂತಂ ಕಾಮಂ ಕಮನೀಯಂ ಹರಿವಂತಂ ಸೋಮವಂತಂ ಯಜ್ಞಮಾನಶೇ । ವ್ಯಾಪ್ನೋತಿ ॥

॥ ಪ್ರತಿಪದಾರ್ಥ ॥

**ಅರಂ**—ಸಂಪೂರ್ಣವಾದ । **ಕಾಮಾಯ**—(ಇಂದ್ರನ) ಸಂತುಷ್ಟಿಗಾಗಿ । **ಹರಯಃ**—ಹರಿತವರ್ಣವುಳ್ಳ ಸೋಮರಸಗಳು । **ದಧನ್ವಿರೇ**—ಶೇಖರಿಸಲ್ಪಡುತ್ತವೆ । **ಹರಯಃ**—ಅದೇ ಸೋಮರಸಗಳು । **ಸ್ಥಿರಾಯ**—ಯುದ್ಧದಲ್ಲಿ ದೃಢನಾಗಿ ನಿಂತರುವ ಇಂದ್ರನನ್ನು ವಹಿಸಲು । **ತುರಾ**—ವೇಗಗಾಮಿಗಳಾದ । **ಹರೀ**—ಅಶ್ವಗಳನ್ನು । **ಹಿನ್ವನ್**—ಪ್ರೇರಿಸುತ್ತವೆ । **ಯಃ**—ಯಾವ ಇಂದ್ರನ ರಥವು । **ಅರ್ವದ್ಭಿಃ**—ಶೀಘ್ರಗಾಮಿಗಳಾದ । **ಹರಿಭಿಃ**—ಅಶ್ವಗಳೊಡನೆ ಕೂಡಿ । **ಜೋಷಂ**—ಶೂರರಿಂದ ಸೇವಿತವಾದ ಸಂಗ್ರಾಮಕ್ಕೆ । **ಈಯತೇ**—ಹೋಗುವುದೋ । **ಸಃ**—ಅದೇ ರಥವು । **ಅಸ್ಯ**—ಇಂದ್ರನಿಗೆ । **ಕಾಮಂ**—ಅಪೇಕ್ಷಿತವಾದುದೂ । **ಹರಿವಂತಂ**—ಸೋಮಯುಕ್ತವಾದುದೂ ಆದ ಯಜ್ಞಕ್ಕೆ । **ಆನಶೇ**—ಪ್ರವೇಶಿಸುತ್ತದೆ.

॥ ಭಾವಾರ್ಥ ॥

ಇಂದ್ರನಿಗೆ ಪೂರ್ಣವಾದ ತುಷ್ಟಿಗಾಗಿ ಹರಿತವರ್ಣವುಳ್ಳ ಸೋಮರಸಗಳು ಶೇಖರಿಸಲ್ಪಡುತ್ತವೆ. ಅದೇ ಸೋಮರಸಗಳು ಯುದ್ಧದಲ್ಲಿ ಸ್ಥಿರನಾದ ಇಂದ್ರನನ್ನು ವಹಿಸಲು ಅಶ್ವಗಳನ್ನು ಪ್ರೇರಿಸುತ್ತವೆ. ಯಾವ ಇಂದ್ರನ ರಥವು ಶೀಘ್ರಗಾಮಿಗಳಾದ ಅಶ್ವಗಳೊಡನೆ ಕೂಡಿ ಶೂರರಿಂದ ಸೇವಿತವಾದ ಸಂಗ್ರಾಮಕ್ಕೆ ಹೋಗುವುದೋ ಅದೇ ರಥವು ಇಂದ್ರನಿಗೆ ಅಪೇಕ್ಷಿತವಾದುದೂ, ಸೋಮಯುಕ್ತವಾದುದೂ ಆದ ಯಜ್ಞಕ್ಕೂ ಪ್ರವೇಶಿಸುತ್ತದೆ.

## English Translation

Yellow-tinted (Soma-juices) are stored up sufficient for his desire, the yellow-tinted juices urge his two swift bay horses for the stalwart (Indra). His (chariot) which rushes with spirited bay horses to the conflict, has reached his desire (the sacrifice) in which the Soma is presented.

|| ಸಂಹಿತಾಪಾಠಃ ||

ಹರಿಶ್ಮಶಾರುರ್ಹರಿಕೇಶ ಆಯಸಸ್ತುರಸ್ಪೇಯೇ ಯೋ ಹರಿಪಾ ಅವರ್ಧತ |
ಅರ್ವದ್ಭಿರ್ಯೋ ಹರಿಭಿರ್ವಾಜಿನೀವಸುರತಿ ವಿಶ್ವಾ ದುರಿತಾ ಪಾರಿಷದ್ಧರೀ ||

|| ಪದಪಾಠಃ ||

ಹರಿಽಶ್ಮಶಾರುಃ | ಹರಿಽಕೇಶಃ | ಆಯಸಃ | ತುರಃಽಪೇಯೇ | ಯಃ | ಹರಿಽಪಾಃ | ಅವರ್ಧತ |
ಅರ್ವತ್ಽಭಿಃ | ಯಃ | ಹರಿಽಭಿಃ | ವಾಜನೀಽವಸುಃ | ಅತಿ | ವಿಶ್ವಾ | ದುಃಽಇತಾ | ಪಾರಿಷತ್ |
ಹರೀ ಇತಿ || ೮ ||

|| ಸಾಯಣಭಾಷ್ಯಂ ||

ಹರಿಶ್ಮಶಾರುರ್ಹರಿತವರ್ಣಶ್ಮಶ್ರುರ್ಹರಿಕೇಶೋ ಹರಿತವರ್ಣಕೇಶ ಆಯಸೋಽಯೋಮಯಹೃದಯಃ | ಶತ್ರೂಣಾಂ ಘಾತಕ ಇತ್ಯರ್ಥಃ | ಏತಾದೃಶೋ ಯ ಇಂದ್ರಸ್ತುರಸ್ಪೇಯೇ ತೂರ್ಣಂ ಪಾತವ್ಯೇ ಸೋಮೇ ಹರಿಪಾ ಹರಿತವರ್ಣಸೋಮಪಾ ಅವರ್ಧತ ವರ್ಧತೇ ಯಶ್ಚಾರ್ವದ್ಭಿರ್ಗಂತೃಭಿರ್ಹರಿಭಿರಶ್ವೈಃ ಸೋಮೈರ್ವಾ ವಾಜಿನೀವಸುಃ | ವಾಜಿನಮನ್ನಂ ಹವಿರ್ಲಕ್ಷಣಂ | ತದಸ್ಯಾ ಅಸ್ತೀತಿ ವಾಜಿನೀ ಕ್ರಿಯಾ | ಸೈವ ವಸು ಧನಂ ಯಸ್ಯ ಸ ತಥೋಕ್ತಃ | ಯಜ್ಞಧನ ಇತ್ಯರ್ಥಃ | ಯದ್ವಾ | ವಾಜಿನಮೇವ ವಾಜಿನೀ | ತದೇವ ಧನಂ ಯಸ್ಯ | ಸ ಏವಮುಕ್ತಲಕ್ಷಣ ಇಂದ್ರೋ ಹರೀ ರಥೇ ಯೋಜಯಿತ್ವಾ ವಿಶ್ವಾ ವಿಶ್ವಾನಿ ಸರ್ವಾಣಿ ದುರಿತಾಸ್ಮಾಕಂ ದುರಿತಾನಿ ಪಾರಿಷತ್ | ಪಾರಯತು || ಪಾರಯತೇರ್ಲೇಟಿ ಸಿಪ್ಯಡಾಗಮಃ ||

|| ಪ್ರತಿಪದಾರ್ಥ ||

**ಆಯಸಃ**— ಶತ್ರುಗಳ ವಿಷಯದಲ್ಲಿ ಕಠಿನವಾದ ಹೃದಯವುಳ್ಳವನೂ | **ಹರಿಶ್ಮಶಾರುಃ**— ಹೊಂಬಣ್ಣದ ಮುಖರೋಮವುಳ್ಳವನೂ | **ಹರಿಕೇಶಃ** — ಹೊಂಬಣ್ಣದ ಕೂದಲುಳ್ಳವನೂ ಆದ | **ಯಃ**— ಯಾವ ಇಂದ್ರನು | **ತುರಸ್ಪೇಯೇ**— ಶೀಘ್ರವಾಗಿ ಸೋಮವನ್ನು ಪಾನಮಾಡುವ ಕಾಲದಲ್ಲಿ | **ಹರಿಪಾಃ**— ಹರಿತವರ್ಣವುಳ್ಳ ಸೋಮವನ್ನು ಪಾನಮಾಡುತ್ತ | **ಅವರ್ಧತ** — ಪುಷ್ಟಿಯನ್ನು ಹೊಂದುವನೋ | **ಯಃ** — ಯಾರು | **ಅರ್ವದ್ಭಿಃ**— ಶೀಘ್ರಗಾಮಿಗಳಾದ | **ಹರಿಭಿಃ**— ಅಶ್ವಗಳ ಸಹಾಯದಿಂದ | **ವಾಜಿನೀವಸುಃ**— ಹವಿಸ್ಸಿನರೂಪದ ಧನವುಳ್ಳವನಾಗಿರುವನೋ ಆ ಇಂದ್ರನು | **ಹರೀ**— ತನ್ನ ಅಶ್ವಗಳನ್ನು ರಥಕ್ಕೆ ಯೋಜಿಸಿ | **ವಿಶ್ವಾ ದುರಿತಾ**— ಸಕಲ ದುಃಖಮಾರ್ಗಗಳನ್ನೂ | **ಪಾರಿಷತ್**— ದಾಟಿಸಲಿ

|| ಭಾವಾರ್ಥ ||

ಶತ್ರುಗಳ ವಿಷಯದಲ್ಲಿ ಕಠಿನವಾದ ಹೃದಯವುಳ್ಳವನೂ, ಹೊಂಬಣ್ಣದ ಮುಖರೋಮವುಳ್ಳವನೂ, ಹೊಂಬಣ್ಣದ ಕೂದಲುಳ್ಳವನೂ ಆದ ಯಾವ ಇಂದ್ರನು ಶೀಘ್ರವಾಗಿ ಸೋಮವನ್ನು ಪಾನಮಾಡುವ ಕಾಲದಲ್ಲಿ ಹರಿತವರ್ಣವುಳ್ಳ ಸೋಮವನ್ನು ಪಾನಮಾಡುತ್ತಾ ಪುಷ್ಟಿಯನ್ನು ಹೊಂದುವನೋ, ಯಾರು ಶೀಘ್ರಗಾಮಿಗಳಾದ ಅಶ್ವಗಳ ಸಹಾಯದಿಂದ ಹವಿಸ್ಸಿನರೂಪದ ಧನವುಳ್ಳವನಾಗಿರುವನೋ ಆ ಇಂದ್ರನು ತನ್ನ ಅಶ್ವಗಳನ್ನು ರಥಕ್ಕೆ ಯೋಜಿಸಿ, ನಮ್ಮ ದುಃಖ ಮಾರ್ಗಗಳನ್ನೂ ದಾಟಿಸಲಿ.

## English Translation.

The yellow-bearded, the yellow-haired, iron-hearted Indra, the drinker of the yellow (Soma-juice), who has been invigorated by the Soma which has to be quickly quaffed, who is rich in sacrificial food through his swift bay horses, may he drive his two bay horses safe through all difficulties.

|| ಸಂಹಿತಾಪಾಠಃ ||

ಸ್ರುವೇವ ಯಸ್ಯ ಹರಿಣೀ ವಿಪೇತತುಃ ಶಿಪ್ರೇ ವಾಜಾಯ ಹರಿಣೀ ದವಿಧ್ವತಃ।
ಪ್ರ ಯತ್ಕೃತೇ ಚಮಸೇ ಮರ್ಮೃಜದ್ಧರೀ ಪೀತ್ವಾ ಮದಸ್ಯ ಹರ್ಯತ-
ಸ್ಯಾಂಧಸಃ ॥ ೯ ॥

|| ಪದಪಾಠಃ ||

ಸ್ರುವಾಽಇವ । ಯಸ್ಯ । ಹರಿಣೀ ಇತಿ । ವಿಽಪೇತತುಃ । ಶಿಪ್ರೇ ಇತಿ । ವಾಜಾಯ । ಹರಿಣೀ ಇತಿ । ದವಿಧ್ವತಃ ।
ಪ್ರ । ಯತ್ । ಕೃತೇ । ಚಮಸೇ । ಮರ್ಮೃಜತ್ । ಹರೀ ಇತಿ । ಪೀತ್ವಾ । ಮದಸ್ಯ । ಹರ್ಯತಸ್ಯ । ಅಂಧಸಃ ॥ ೯ ॥

|| ಸಾಯಣಭಾಷ್ಯಂ ||

ಯಸ್ಯೇಂದ್ರಸ್ಯ ಹರಿಣೀ ಹರಿತವರ್ಣಾವಶ್ವೌ ವಿಪೇತತುಃ ರಥ ಇಂದ್ರಮಾರೋಪ್ಯ ವಿಪತತೋ ಯಜ್ಞಮಸ್ಮದೀಯಂ । ಯದ್ವಾ। ಯಸ್ಯ ಹರಿಣೀ ಹರಿತವರ್ಣೇ ಕನೀನಿಕೇ ವಿಪೇತತುಃ ಸೋಮಂ ಪ್ರತಿ ವಿಪತತಃ । ತತ್ರ ದೃಷ್ಟಾಂತಃ । ಸ್ರುವೇವ । ಯಥಾ ಸ್ರುವಾ ಸ್ರುವೌ ಹವಿಷಾ ಪೂರ್ಣೌ ಪಾತ್ರವಿಶೇಷೌ ಹೋಮಾರ್ಥಂ ವಿಪತತಃ ತದ್ವತ್ । ತಥಾ ಯಸ್ಯ ಚ ಹರಿಣೀ ಹರಿತವರ್ಣೇ ಶಿಪ್ರೇ ಹನೂ ವಾಜಾಯ

**ಸೋಮಲಕ್ಷಣಾಯಾಽನ್ನಾಯ ದವಿಧ್ವತಃ ಕಂಪಯತಃ ಭುರತಃ ಪ್ರತ್ತಸ್ಯ ಸೋಮಸ್ಯ ಪ್ರೀತ್ಯಾ ಚಲತಃ। ತಥಾ ಯದ್ಯದಾ ಕೃತೇ ಸಂಸ್ಕೃತೇ ಚಮಸೇ ವರ್ತಮಾನಂ ಮದಸ್ಯ ಮದಕರಂ ಹರ್ಯತಸ್ಯ ಕಾಂತಮಂಧಸೋಽನ್ನಂ ಸೋಮಂ ಪೀತ್ವಾ ಹರೀ ಅಶ್ವೌ ಪ್ರ ಮರ್ಮೃಜತ್ ಪ್ರಮಾರ್ಷ್ಟಿ। ತದಾನೀಂ ಸ್ತುತ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಸ್ರುವೇವ**—ಹವಿಸ್ಸಿನಿಂದಪೂರ್ಣವಾದ ಪಾತ್ರೆಗಳನ್ನು ಹವಿಸ್ಸನ್ನರ್ಪಿಸಲು ಆತುರದಿಂದ ಸುರಿಯುವಂತೆ। **ಯಸ್ಯ**—ಯಾವ ಇಂದ್ರನ। **ಹರಿಣೀ**—ಹರಿತವರ್ಣವುಳ್ಳ ಅಶ್ವಗಳು। **ವಿಪೇತತುಃ**—ಯಜ್ಞಾಭಿಮುಖವಾಗಿ ಓಡಿಬರುವುವೋ। (**ಯಸ್ಯ**—ಯಾವ ಇಂದ್ರನ)। **ಹರಿಣೀ**—ಹೊಂಬಣ್ಣದ। **ಶಿಪ್ರೇ**—ದವಡೆಗಳು। **ವಾಜಾಯ**—ಹವಿಸ್ಸನ್ನು ಭಕ್ಷಿಸಲು। **ದವಿಧ್ವತಃ**—ಕಂಪಿಸುವುವೋ ಆ ಇಂದ್ರನು। **ಯತ್**—ಯಾವಾಗ। **ಕೃತೇ**—ಸುಸಂಸ್ಕೃತವಾದ। **ಚಮಸೇ**—ಚಮಸ ಪಾತ್ರೆಯಲ್ಲಿರುವುದೂ। **ಮದಸ್ಯ**—ಮದಕರವಾದುದೂ। **ಹರ್ಯತಸ್ಯ**—ಆಕರ್ಷಕವಾದುದೂ ಆದ। **ಅಂಧಸಃ**—ಅನ್ನವನ್ನು (ಸೋಮವನ್ನು)। **ಪೀತ್ವಾ**—ಪಾನಮಾಡಿ। **ಹರೀ**—ತನ್ನ ಅಶ್ವಗಳನ್ನು। **ಪ್ರ ಮರ್ಮೃಜತ್**—ಸವರುವನೋ ಆಗ (ಪ್ರಶಂಸಿತನಾಗುತ್ತಾನೆ).

॥ ಭಾವಾರ್ಥ ॥

ಹವಿಸ್ಸಿನಿಂದ ಪೂರ್ಣವಾದ ಪಾತ್ರೆಗಳು ಹವಿಸ್ಸನ್ನರ್ಪಿಸಲು ಆತುರದಿಂದ ಸುರಿಯಲ್ಪಡುವಂತೆ ಯಾವ ಇಂದ್ರನ ಹರಿತವರ್ಣವುಳ್ಳ ಅಶ್ವಗಳು ಯಜ್ಞಾಭಿಮುಖವಾಗಿ ಓಡಿಬರುವುವೋ, ಯಾವ ಇಂದ್ರನ ಹೊಂಬಣ್ಣದ ದವಡೆಗಳು ಹವಿಸ್ಸನ್ನು ಭಕ್ಷಿಸಲು ಕಂಪಿಸುವುವೋ ಆ ಇಂದ್ರನು ಸುಸಂಸ್ಕೃತವಾದ ಚಮಸ ಪಾತ್ರೆಯಲ್ಲಿರುವುದೂ, ಮದಕರವಾದುದೂ, ಆಕರ್ಷಕವಾದುದೂ ಆದ ಅನ್ನವನ್ನು (ಸೋಮವನ್ನು) ಪಾನಮಾಡಿ (ಸಂತುಷ್ಟನಾಗಿ) ತನ್ನ ಅಶ್ವಗಳನ್ನು ಸವರುವಾಗ ಪ್ರಶಂಸಿತನಾಗುತ್ತಾನೆ.

**English Translation.**

He whose bay horses alight (upon the soma) like two ladles, whose yellow jaws tremble (with eagerness) for the sacrificial food, (is praised) when having drunk of the delicious exhilarating beverage in the prepared cup, he rubs down his bay horses.

॥ ಸಂಹಿತಾಪಾಠಃ ॥

**ಉತ ಸ್ಮ ಸದ್ಮ ಹರ್ಯತಸ್ಯ ಪಸ್ತ್ಯೋಃ ರತ್ಯೋ ನ ವಾಜಂ ಹರಿವಾಂ ಅಚಿಕ್ರದತ್ ।**

**ಮಹೀ ಚಿದ್ಧಿ ಧಿಷಣಾಹರ್ಯದೋಜಸಾ ಬೃಹದ್ವಯೋ ದಧಿಷೇ ಹರ್ಯತಶ್ಚಿದಾ ॥ ೧೦ ॥**

|| ಪದಪಾಠಃ ||

ಉತ | ಸ್ಮ | ಸದ್ಮ | ಹರ್ಯತಸ್ಯ | ಪಸ್ತ್ಯೋಃ | ಅತ್ಯಃ | ನ | ವಾಜಂ | ಹರಿऽವಾನ್ | ಅಚಿಕ್ರದತ್ |
ಮಹೀ | ಚಿತ್ | ಹಿ | ಧಿಷಣಾ | ಅಹರ್ಯತ್ | ಓಜಸಾ | ಬೃಹತ್ | ವಯಃ | ದಧಿಷೇ | ಹರ್ಯತಃ |
ಚಿತ್ | ಆ || ೧೦ ||

|| ಸಾಯಣಭಾಷ್ಯಂ ||

**ಉತಾಪಿ ಚ ಹರ್ಯತಸ್ಯ ಕಮನೀಯಸ್ಯೇಂದ್ರಸ್ಯ ಸದ್ಮ ಸದನಂ ಪಸ್ತ್ಯೋರ್ದ್ಯಾವಾಪೃಥಿವ್ಯೋಃ ಸಂಬಂಧಿ | ಸೋಽಯಮತ್ಯೋ ನಾಶ್ವ ಇವ ವಾಜಂ ಸಂಗ್ರಾಮಂ ಹರಿವಾನಶ್ವವಾನಚಿಕ್ರದತ್ | ಗಚ್ಛತಿ | ತಥಾ ಹಿ ಯಸ್ಮಾದ್ಧೇ ಇಂದ್ರ ತ್ವಾಂ ಮಹೀ ಮಹತೀ ಧಿಷಣಾ ಸ್ತುತಿರೋಜಸಾ ಬಲೇನ ಯುಕ್ತಮಿಂದ್ರಮಹರ್ಯತ್ ಕಾಮಯತೇ | ಚಿದಿತಿ ಪೂರಣಃ | ಅತೋ ವಾಜಮಚಿಕ್ರದತ್ | ತಥಾ ಸತಿ ಹರ್ಯತಃ ಕಾಮಯಮಾನಸ್ಯ ಯಜಮಾನಸ್ಯ ಬೃಹನ್ಮಹದ್ವಯೋಽನ್ನಮಾ ದಧಿಷೇ | ಧಾರಯಸಿ | ಆಪ್ರಯಚ್ಛಸಿ | ಚಿದಿತಿ ಪೂರಣಃ ||**

|| ಪ್ರತಿಪದಾರ್ಥ ||

**ಉತ**—ಮತ್ತು | **ಹರ್ಯತಸ್ಯ**—ಆಕರ್ಷಕವಾದ ರೂಪವುಳ್ಳ ಇಂದ್ರನ | **ಸದ್ಮ**—ವಾಸಸ್ಥಾನವು | **ಪಸ್ತ್ಯೋಃ**—ದ್ಯಾವಾಪೃಥಿವಿಗಳೆರಡಕ್ಕೂ ಸಂಬಂಧಿಸಿದೆ. | **ಹರಿವಾನ್**—ಅಶ್ವವಂತನಾದ ಅದೇ ಇಂದ್ರನು | **ಅತ್ಯೋ ನ**—ಅಶ್ವದಂತೆ | **ವಾಜಂ**—ಯುದ್ಧಕ್ಕೆ | **ಅಚಿಕ್ರದತ್**—ಮುನ್ನುಗ್ಗಿ ಹೋಗುತ್ತಾನೆ. | **ಮಹೀ**—ಮಾಹಾತ್ಮ್ಯದಿಂದ ಕೂಡಿದ | **ಧಿಷಣಾ**—ಸ್ತುತಿಯು | **ಓಜಸಾ**—ಶಕ್ತಿಯಿಂದ ಕೂಡಿದ ಇಂದ್ರನನ್ನು | **ಅಹರ್ಯತ್**—ಅಪೇಕ್ಷಿಸುತ್ತದೆ | (ಎಲೈ ಇಂದ್ರನೇ) **ಹರ್ಯತಃ**—ನಿನ್ನ ಭಕ್ತನಾದ ಯಜಮಾನನಿಗೆ | **ಬೃಹತ್**—ಮಹತ್ತಾದ | **ವಯಃ**—ಅನ್ನವನ್ನು | **ಆ ದಧಿಷೇ**—ಒದಗಿಸಿ ಕೊಡುತ್ತೀಯೆ.

|| ಭಾವಾರ್ಥ ||

ಆಕರ್ಷಕವಾದ ರೂಪವುಳ್ಳ ಇಂದ್ರನ ವಾಸಸ್ಥಾನವು ದ್ಯಾವಾಪೃಥಿವಿಗಳೆರಡಕ್ಕೂ ಸಂಬಂಧಿಸಿದೆ. ಅಶ್ವವಂತನಾದ ಅದೇ ಇಂದ್ರನು ಅಶ್ವದಂತೆ ಯುದ್ಧಕ್ಕೆ ಮುನ್ನುಗ್ಗಿ ಹೋಗುತ್ತಾನೆ. ಮಾಹಾತ್ಮ್ಯದಿಂದ ಕೂಡಿದ ಸ್ತುತಿಯು ಶಕ್ತಿಯುತನಾದ ಇಂದ್ರನನ್ನು ಅಪೇಕ್ಷಿಸುತ್ತದೆ. ಎಲೈ ಇಂದ್ರನೇ, ನಿನ್ನ ಭಕ್ತನಾದ ಯಜಮಾನನಿಗೆ ನೀನು ಮಹತ್ತಾದ ಅನ್ನವನ್ನು ಒದಗಿಸಿಕೊಡುತ್ತೀಯೆ.

## English Translation.

The dwelling of the gracious (Indra) is in heaven and earth; exhilarated by the Soma he rushes impetuously as a charger to battle. The earnest prayer desires (Indra endowed) with might; you bestow ample food on the devout (worshipper).

॥ ಸಂಹಿತಾಪಾಠಃ ॥

ಆ ರೋದಸೀ ಹರ್ಯಮಾಣೋ ಮಹಿತ್ವಾ ನವ್ಯಂನವ್ಯಂ ಹರ್ಯಸಿ ಮನ್ಮ ನು ಪ್ರಿಯಂ ।

ಪ್ರ ಪಸ್ತ್ಯಮಸುರ ಹರ್ಯತಂ ಗೋರಾವಿಷ್ಕೃಧಿ ಹರಯೇ ಸೂರ್ಯಾಯ ॥

॥ ಪದಪಾಠಃ ॥

ಆ । ರೋದಸೀ ಇತಿ । ಹರ್ಯಮಾಣಃ । ಮಹಿऽತ್ವಾ । ನವ್ಯಂऽನವ್ಯಂ । ಹರ್ಯಸಿ । ಮನ್ಮ । ನು । ಪ್ರಿಯಂ ।

ಪ್ರ । ಪಸ್ತ್ಯಂ । ಅಸುರ । ಹರ್ಯತಂ । ಗೋಃ । ಆವಿಃ । ಕೃಧಿ । ಹರಯೇ । ಸೂರ್ಯಾಯ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಹರ್ಯಮಾಣಃ ಕಾಮಯಮಾನೋ ಮಹಿತ್ವಾ ಮಹತ್ತ್ವೇನ ರೋದಸೀ ದ್ಯಾವಾಪೃಥಿವ್ಯಾವಾ । ಪೂರಯಸೀತಿ ಶೇಷಃ । ತಥಾ ನವ್ಯಂನವ್ಯಂ ನವತರಂ ಪ್ರಿಯಂ ಪ್ರಿಯಕರಂ ಮನ್ಮ ಮನನೀಯಂ ಸ್ತೋತ್ರಂ ನು ಕ್ಷಿಪ್ರಂ ಹರ್ಯಸಿ । ಕಾಮಯಸೇ । ಹೇ ಅಸುರ ಬಲವನ್। ಅಸುಃ ಪ್ರಾಣಃ। ತದ್ವನ್ ॥ ಮತ್ವರ್ಥೀಯೋ ರಃ ॥ ತಾದೃಶೀಂದ್ರ ಗೋಃ । ಜಾತ್ಯೇಕವಚನಂ । ಗವಾಂ ಹರ್ಯತಂ ಸ್ಪೃಹಣೀಯಂ ಪಸ್ತ್ಯಂ ಗೃಹಂ ಗೋರುದಕಸ್ಯೋಕ್ತಗುಣಕಂ ಸ್ಥಾನಂ ವಾ ಹರಯೆ ಉದಕಸ್ಯ ಹರ್ತ್ರೇ ಸೂರ್ಯಾಯ ಪ್ರ ಪ್ರಕರ್ಷೇಣಾವಿಷ್ಕೃಧಿ । ಪ್ರಕಟೀಕುರು ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಹರ್ಯಮಾಣಃ**—ಆಕರ್ಷಕವಾದ ರೂಪವುಳ್ಳ ನೀನು । **ಮಹಿತ್ವಾ**—ನಿನ್ನ ಮಹತ್ತ್ವದಿಂದ । **ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ । **ಆ (ಪೂರಯಸಿ)** —ತುಂಬುತ್ತೀಯೇ । **ನು**—ಯಾವಾಗಲೂ । **ನವ್ಯಂ ನವ್ಯಂ**— ಹೊಸಹೊಸದಾದುದೂ । **ಪ್ರಿಯಂ**—ಹಿತಕರವಾದದೂ ಆದ । **ಮನ್ಮ**—ಸ್ತುತಿಯನ್ನು । **ಹರ್ಯಸಿ**—ಅಪೇಕ್ಷಿಸುತ್ತಿಯೇ । **ಅಸುರ**—ಶಕ್ತಿಯುತನಾದ ಎಲೈ ಇಂದ್ರನೇ । **ಹರಯೇ**—ಉದಕವನ್ನು ಹೀರುವ । **ಸೂರ್ಯಾಯ**--ಸೂರ್ಯನಿಗೆ । **ಗೋಃ**—ಉದಕಗಳ । **ಹರ್ಯತಂ**—ಆಕರ್ಷಕವಾದ । **ಪಸ್ತ್ಯಂ**—ಗೃಹವನ್ನು(ಅಥವಾ ಸ್ಥಾನವನ್ನು) । **ಪ್ರ**--ಅತಿಶಯವಾಗಿ । **ಆವಿಷ್ಕೃಧಿ**—ಪ್ರಕಾಶಪಡಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಆಕರ್ಷಕವಾದ ರೂಪವುಳ್ಳ ನೀನು ನಿನ್ನ ಮಹತ್ತ್ವದಿಂದ ದ್ಯಾವಾಪೃಥಿಗಳೆರಡನ್ನೂ ತುಂಬುತ್ತೀಯೇ. ಯಾವಾಗಲೂ ಹೊಸಹೊಸದಾದುದೂ, ಹಿತಕರವಾದುದೂ ಆದ ಸ್ತುತಿಯನ್ನು ಅಪೇಕ್ಷಿಸುತ್ತೀಯೆ.

ಶಕ್ತಿಯುತನಾದ ಎಲೈ ಇಂದ್ರನೇ, ಉದಕವನ್ನು ಹೀರುವ ಸೂರ್ಯನಿಗೆ ಉದಕಗಳ ಆಕರ್ಷಕವಾದ ಗೃಹವನ್ನು ಅಥವಾ ಸ್ಥಾನವನ್ನು ಪ್ರಕಾಶಪಡಿಸು.

English Translation

You (Indra) who are the object of desire (fill) heaven and earth with your greatness, you desire greatful praise new and new, O powerful one, make manifest the desirable dwelling of the water to the water-seizing sun.

॥ ಸಂಹಿತಾಪಾಠಃ ॥

ಆ ತ್ವಾ ಹರ್ಯಂತಂ ಪ್ರಯುಜೋ ಜನಾನಾಂ ರಥೇ ವಹಂತು ಹರಿಶಿಪ್ರ-
ಮಿಂದ್ರ ।
ಪಿಬಾ ಯಥಾ ಪ್ರತಿಭೃತಸ್ಯ ಮಧ್ವೋ ಹರ್ಯನ್ಯಜ್ಞಂ ಸಧಮಾದೇ
ದಶೋಣಿಂ ॥ ೧೨ ॥

॥ ಪದಪಾಠಃ ॥

ಆ । ತ್ವಾ । ಹರ್ಯಂತಂ । ಪ್ರऽಯುಜಃ । ಜನಾನಾಂ । ರಥೇ । ವಹಂತು । ಹರಿऽಶಿಪ್ರಂ । ಇಂದ್ರ ।
ಪಿಬ । ಯಥಾ । ಪ್ರತಿऽಭೃತಸ್ಯ । ಮಧ್ವಃ । ಹರ್ಯನ್ । ಯಜ್ಞಂ । ಸಧऽಮಾದೇ । ದಶऽಓಣಿಂ ॥೧೨॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಹರಿಶಿಪ್ರಂ ಹರಿತವರ್ಣಶಿಪ್ರಂ ತ್ವಾ ತ್ವಾಂ ಹರ್ಯಂತಂ ಯಜ್ಞಂ ಕಾಮಯಮಾನಂ ಪ್ರಯುಜೋ ರಥೇ ಪ್ರಯುಕ್ತಾ ಅಶ್ವಾ ರಥೇ ಸ್ಥಾಪಯಿತ್ವಾ ಜನಾನಾಮೃತ್ವಿಗ್ಯಜಮಾನಾನಾಮಂತಿಕಂ ವಹಂತು । ಪ್ರಾಪಯಂತು । ಪ್ರವಹಂತಿ । ಯಥಾ ಯೇನ ಪ್ರಕಾರೇಣ ಪ್ರತಿಭೃತಸ್ಯ ಗ್ರಹಾದಿಷು ಸಂಭೃತಂ ಮಧ್ವೋ ಮಧು ಸೋಮರಸಂ ಯಜ್ಞಂ ಯಾಗಸಾಧನಂ ದಶೋಣಿಂ । ಓಣಯೋऽಂಗುಲಯಃ । ದಶಭಿರಂಗುಲಿಭಿಃ ಸಂಪಾದಿತಂ ಸೋಮಂ ಹರ್ಯನ್ ಕಾಮಯಮಾನಃ ಸನ್ ಪಿಬ ಪಿಬಸಿ ಸಧಮಾದೇ ಸಂಗ್ರಾಮೇ ಜಯಾರ್ಥಂ ತಥಾವಹಂತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ, । ಹರಿಶಿಪ್ರಂ—ಹೊಂಬಣ್ಣದ ಕೆನ್ನೆಯುಳ್ಳವನೂ । ಹರ್ಯತಂ—ಯಜ್ಞವನ್ನು ಅಪೇಕ್ಷಿಸುವವನೂ ಆದ । ತ್ವಾ—ನಿನ್ನನ್ನು । ರಥೇ—ರಥದಲ್ಲಿ ಕುಳ್ಳಿರಿಸಿ । ಪ್ರಯುಜಃ—ರಥಕ್ಕೆ

ಯೋಜಿತವಾದ ಅಶ್ವಗಳು । **ಜನಾನಾಂ**— ಯಜ್ಞಕರ್ತರ ಸಮೀಪಕ್ಕೆ । **ವಹಂತು**— ಕರೆತರಲಿ । **ದಶೋಣಿಂ**— ಹತ್ತು ಬೆರಳುಗಳಿಂದ ಸಿದ್ಧಪಡಿಸಿದುದೂ । **ಪ್ರತಿಭೃತಸ್ಯ**— ಪಾತ್ರೆಗಳಲ್ಲಿ ಶೇಖರಿಸಲ್ಪಟ್ಟದ್ದೂ । **ಮಧ್ವಃ**— ಮಧುರವಾದುದೂ । **ಯಜ್ಞಂ**— ಯಜ್ಞಸಾಧಕವಾದುದೂ ಆದ ಸೋಮರಸವನ್ನು । **ಹರ್ಯನ್**— ಅಪೇಕ್ಷಿಸುತ್ತ **ಯಥಾ**— ಯಾವ ರೀತಿ । **ಪಿಬ**— ಪಾನಮಾಡುವೆಯೋ ಹಾಗೆ । **ಸಧಮಾಧೇ**— ಸಂಗ್ರಾಮದ ಜಯಕ್ಕಾಗಿ ನಿನ್ನನ್ನು ಅಶ್ವಗಳು ಕರೆತರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಹೊಂಬಣ್ಣದ ಕೆನ್ನೆಯುಳ್ಳವನೂ ಯಜ್ಞವನ್ನು ಅಪೇಕ್ಷಿಸುವವನೂ ಆದ ನಿನ್ನನ್ನು ರಥದಲ್ಲಿ ಕಳ್ಳಿರಿಸಿ ರಥಕ್ಕೆ ಯೋಜಿತವಾದ ಅಶ್ವಗಳು ಯಜ್ಞಕರ್ತರ ಸಮೀಪಕ್ಕೆ ಕರೆತರಲಿ. ಹತ್ತು ಬೆರಳುಗಳಿಂದ ಸಿದ್ಧಪಡಿಸಿದುದೂ ಪಾತ್ರೆಗಳಲ್ಲಿ ಶೇಖರಿಸಲ್ಪಟ್ಟದ್ದೂ ಮಧುಕರವಾದುದೂ ಯಜ್ಞಸಾಧಕವಾದುದೂ ಆದ ಸೋಮರಸವನ್ನು ಅಪೇಕ್ಷಿಸುತ್ತಾ ಯಾವ ರೀತಿ (ಯಾವಾಗ) ಪಾನಮಾಡುವೆಯೋ ಹಾಗೆ (ಆಗ) ಯುದ್ಧದ ಜಯಕ್ಕಾಗಿ ನಿನ್ನನ್ನು ಅಶ್ವಗಳು ಕರೆತರಲಿ. .

## English Translation.

Let your horses yoked to the chariot bring you, Indra, the yellow-jawed, desiring (the sacrifice), to (the vicinity) of the worshippers; when you desiring the sacrifice, prepared by the ten fingers, drink of the collected sweet-flavoured Soma, (Let them bring you) to the battle.

॥ ಸಂಹಿತಾಪಾಠಃ ॥

ಅಪಾಃ ಪೂರ್ವೇಷಾಂ ಹರಿವಃ ಸುತಾನಾಮಥೋ ಇದಂ ಸವನಂ ಕೇವಲಂ ತೇ।
ಮಮದ್ಧಿ ಸೋಮಂ ಮಧುಮಂತಮಿಂದ್ರ ಸತ್ರಾ ವೃಷಞ್ಜಠರ ಆ
ವೃಷಸ್ವ ॥ ೧೩ ॥

॥ ಪದಪಾಠಃ ॥

ಅಪಾಃ । ಪೂರ್ವೇಷಾಂ । ಹರಿऽವಃ । ಸುತಾನಾಂ । ಅಥೋ ಇತಿ । ಇದಂ । ಸವನಂ । ಕೇವಲಂ । ತೇ ।
ಮಮದ್ಧಿ । ಸೋಮಂ । ಮಧುऽಮಂತಂ । ಇಂದ್ರ । ಸತ್ರಾ । ವೃಷನ್ । ಜಠರೇ । ಆ । ವೃಷಸ್ವ ॥ ೧೩ ॥

|| ಸಾಯಣಭಾಷ್ಯಂ ||

**ಅಪಾಃ ಪೂರ್ವೇಷಾಮಿತ್ಯೇಷಾ ಷೋಡಶಿಶಸ್ತ್ರಸ್ಯ ಯಾಜ್ಯಾ । ಸೂತ್ರಿತಂ ಚ । ಏವಾ ಹಿ ಶಕ್ರೋ ವಶೀ ಹಿ ಶಕ್ರ ಇತಿ ಜಪಿತ್ವಾಪಾಃ ಪೂರ್ವೇಷಾಂ ಹರಿವಃ ಸುತಾನಾಮಿತಿ ಯಜತಿ । ಅ. ೬-೨ । ಇತಿ ||**

**ಹೇ ಇಂದ್ರ ಸುತಾನಾಮಭಿಷುತಾನಾಂ ಪೂರ್ವೇಷಾಂ ಪ್ರಾತಃಸವನಸಂಪಾದಿತಾನಾಂ । ಕರ್ಮಣಿ ಷಷ್ಠ್ಯೇವೇತೇ । ಅಭಿಷುತಾನ್ಪ್ರಾತಃಸವನಿಕಾನ್ಸೋಮಾನಿತ್ಯರ್ಥಃ । ತಾನಪಾಃ । ಅಪಿಬಃ । ಹೇ ಹರಿವ ಇತೀಂದ್ರಸಂಬೋಧನಂ । ಹರಿಭ್ಯಾಮಶ್ವಾಭ್ಯಾಂ ತದ್ವನ್ । ಯದ್ವಾ । ಋಕ್ಸಾಮಾತ್ಮಕಾಭ್ಯಾಂ ಹರಿಭ್ಯಾಂ ಯುಕ್ತ । ಋಕ್ಸಾಮೇ ವಾ ಇಂದ್ರಸ್ಯ ಹರೀ । ಐ. ಬ್ರಾ. ೨-೨೪ । ತೈ. ಸಂ. ೬-೫-೯-೨ ತಾಭ್ಯಾಮೇಷ ಹರತೀತಿ ಬ್ರಾಹ್ಮಣಂ । ಅಥೋ ಅಪಿ ಚೇದಂ ಮಾಧ್ಯಂದಿನಂ ಸವನಂ ಕೇವಲಂ ತೇ ತವೈವಾಸಾಧಾರಣಂ । ಮಾಧ್ಯಂದಿನಂ ಸವನಂ ಕೇವಲಂ ತೇ । ಋ. ೪-೩೫-೭ । ಇತಿ ಹಿ ಮಂತ್ರಾಂತರಂ । ತಸ್ಮಿನ್ಸವನೇ ಹೇ ಇಂದ್ರ ಮಧುಮಂತಂ ಮಾಧುರ್ಯೋಪೇತಂ ಸೋಮಂ ಮಮದ್ಧಿ । ಪಿಬ । ಆಸ್ವಾದಯೇತ್ಯರ್ಥಃ । ಮದಿರತ್ರಾಸ್ವಾದನಕರ್ಮಾ । ಪಿಬಂತು ಮದಂತು ವಿಯಂತ್ವಿತಿ ಚ ಮಂತ್ರಃ । ಸತ್ರಾ ವೃಷನ್ । ಸತ್ರಾಶಬ್ದೋ ಭೂಯಿಷ್ಠವಚನಃ । ಹೇ ಭೂಯಿಷ್ಠ ವರ್ಷಿತರಿಂದ್ರ ಜಠರ ಆ ವೃಷಸ್ವ । ಆಸಿಂಚಸ್ವ ||**

|| ಪ್ರತಿಪದಾರ್ಥ ||

**ಹರಿವಃ**—ಅಶ್ವಯುಕ್ತನಾದ ಎಲೈ ಇಂದ್ರನೇ | **ಪೂರ್ವೇಷಾಂ**—ಹಿಂದೆ ಪ್ರಾತಃಸವನಾರ್ಥವಾಗಿ ಸಂಪಾದಿಸಲ್ಪಟ್ಟ | **ಸುತಾನಾಂ**—ಹಿಂಡಲ್ಪಟ್ಟ ಸೋಮರಸಗಳನ್ನು | **ಅಪಾಃ**—ಪಾನಮಾಡಿರುವೆ | **ಅಥೋ**—ಹಾಗೆಯೇ | **ಇದಂ ಸವನಂ**—ಈ ಮಾಧ್ಯಂದಿನ ಸವನಾರ್ಥವಾಗಿ ಹಿಂಡಿರುವ ರಸಗಳೂ ಸಹ | **ಕೇವಲಂ ತೇ**—ನಿನ್ನನ್ನುದ್ದೇಶಿಸಿಯೇ ಹಿಂಡಲ್ಪಟ್ಟವೆ | **ಇಂದ್ರ**—ಎಲೈ ಇಂದ್ರನೇ | **ಮಧುಮಂತಂ**—ರುಚಿಕರವಾದ | **ಸೋಮಂ**—ಸೋಮರಸವನ್ನು | **ಮಮದ್ಧಿ**—ಪಾನಮಾಡಿ ಹರ್ಷವನ್ನು ಹೊಂದು | **ಸತ್ರಾ**—ಅತ್ಯಧಿಕವಾಗಿ | **ವೃಷನ್**—ವೃಷ್ಟಿಯನ್ನು ಸುರಿಸುವ ಎಲೈ ಇಂದ್ರನೇ | **ಜಠರೇ**—ನಿನ್ನ ಉದರದಲ್ಲಿ | **ಆ ವೃಷಸ್ವ**—ಇದನ್ನು ಸುರಿದುಕೋ.

|| ಭಾವಾರ್ಥ ||

ಅಶ್ವಯುಕ್ತನಾದ ಎಲೈ ಇಂದ್ರನೇ, ಹಿಂದೆ ಪ್ರಾತಃಸವನಾರ್ಥವಾಗಿ ಸಂಪಾದಿಸಲ್ಪಟ್ಟ ಹಿಂಡಲ್ಪಟ್ಟ ಸೋಮರಸಗಳನ್ನು ಪಾನಮಾಡಿರುವೆ. ಹಾಗೆಯೇ, ಈ ಮಾಧ್ಯಂದಿನ ಸವನಾರ್ಥವಾಗಿ ಹಿಂಡಿರುವ ರಸಗಳೂ ನಿನ್ನನ್ನುದ್ದೇಶಿಸಿಯೇ ಹಿಂಡಲಟ್ಟವೆ. ಎಲೈ ಇಂದ್ರನೇ, ರುಚಿಕರವಾದ ಸೋಮವನ್ನು ಪಾನಮಾಡಿ ಹರ್ಷವನ್ನು ಹೊಂದು. ಅತ್ಯಧಿಕವಾಗಿ ವೃಷ್ಟಿಯನ್ನು ಸುರಿಸುವ ಎಲೈ ಇಂದ್ರನೇ, ನಿನ್ನ ಉದರದಲ್ಲಿ ಇದನ್ನು ಸುರಿದುಕೊ.

## English Translation.

Lord of horses, you drank of previous libations, this sacrifice is for you alone; exhilarate yourself, Indra, with sweet Soma; showerer of copious rain, shower it into your belly.

॥ ವಿಶೇಷವಿಷಯಗಳು ॥

**ಅಪಾ॥ ಪೂರ್ವೇಷಾಂ** ಎಂಬ ಈ ಋಕ್ಕನ್ನು ಷೋಡಶಿಶಸ್ತ್ರದ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಏವಾ ಹಿ ಶಕ್ರೋ ವಶೀ ಹಿ ಶಕ್ರ ಇತಿ ಜಪಿತ್ವಾಪಃ ಪೂರ್ವೇಷಾಂ ಹರಿವಃ ಸುತಾನಾಮಿತಿ ಯಜತಿ** ಎಂಬಸೂತ್ರದಿಂದ (ಆ ೬-೨) ವಿವೃತವಾಗಿರುವುದು.

## ತೊಂಭತ್ತೇಳನೆಯ ಸೂಕ್ತವು

### ಪೀಠಿಕೆ.

ಈ ಸೂಕ್ತದಲ್ಲಿ ರೋಗಾದಿಗಳನ್ನು ನಾಶಮಾಡುವುದಕ್ಕಾಗಿ ಉಪಯೋಗಿಸುವ ಓಷಧಿವನಸ್ಪತಿಗಳನ್ನು ಎಂದರೆ, ಸಣ್ಣಗಿಡ, ಲತೆ, ಮೂಲಿಕೆ, ಬಳ್ಳಿ ಮೊದಲಾದವುಗಳನ್ನೂ ಅಶ್ವತ್ಥ, ಪಾಲಾಶ ಮೊದಲಾದ ಕೆಲವು ದೊಡ್ಡ ವೃಕ್ಷಗಳನ್ನು ಸ್ತುತಿಸಲಾಗಿದೆ. ಇವೇ ಸೂಕ್ತವು ಕೆಲವು ವ್ಯತ್ಯಾಸ (ಪಾಠಾಂತರ) ಗಳೊಡನೆ ತೈತ್ತಿರೀಯ ಸಂಹಿತೆಯಲ್ಲಿಯೂ (ತೈ ಸಂ. ೪-೨-೬) ಪಠಿತವಾಗಿವೆ. ಈ ಮೂಲಿಕೆಗಳು ರೋಗಗಳನ್ನು ವಾಸಿಮಾಡುವ ಔಷಧಾರ್ಥವಾಗಿಮಾತ್ರವಲ್ಲದೆ ಸ್ವಾಯು ಪಾಟ, ವಶೀಕರಣ, ಶತ್ರುಗಳಿಗೆ ಕೆಡಕನ್ನುಂಟುಮಾಡುವುದು ಮೊದಲಾದ ಆಭಿಚಾರಿಕಕರ್ಮಗಳಲ್ಲಿಯೂ ಉಪಯೋಗಿಸಲ್ಪಡುತ್ತಿದ್ದವೆಂದು ಈ ಸೂಕ್ತದ ಕೆಲವು ಋಕ್ಕುಗಳಿಂದಲೂ ಇದೇ ಮಂಡಲದ **ಇಮಾಂ ಖನಾಮ್ಯೋಷಧಿಂ** ಎಂಬ ೧೪೫ ನೇ ಸೂಕ್ತದ ಮಂತ್ರಗಳಿಂದಲೂ ತಿಳಿದುಬರುವುದು. ಈ ಓಷಧಿವನಸ್ಪತಿಗಳ ಪ್ರಭಾವವು ಬಹಳವಾಗಿರುವುದೆಂದು ಋಷಿಗಳ ನಂಬಿಕೆ. ಸೋಮನು ಅಥವಾ ಸೋಮಲತೆಯು ಈ ಓಷಧಿವನಸ್ಪತಿಗಳಿಗೆ ರಾಜನೆಂದು ಹೇಳಲ್ಪಟ್ಟಿರುವುದು. ಆದ್ದರಿಂದಲೇ ಸೋಮನನ್ನು ರಾಜಾ ಎಂಬ ಶಬ್ದದಿಂದ ಕರೆಯುವುದು ರೂಢಿಯಾಗಿದೆ. ಇತರ ಓಷಧಿಗಳನ್ನೂ ವನಸ್ಪತಿಗಳನ್ನೂ (ವೃಕ್ಷಗಳನ್ನು) ಅಲ್ಲಲ್ಲಿ ವರ್ಣಿಸಿ ಸ್ತುತಿಸಿದ್ದರೂ ಈ ಓಷಧಿಗಳನ್ನೇ ಮುಖ್ಯವಾಗಿ ಸ್ತುತಿಸಿರುವ ಸೂಕ್ತವು ಇದೊಂದು ಮಾತ್ರ. ಸೋಮಲತೆಯನ್ನೂ ಅದಕ್ಕೆ ಅಭಿಮಾನಿದೇವತೆಯಾದ ಸೋಮನನ್ನೂ ಸ್ತುತಿಸುವುದಕ್ಕಾಗಿಯೇ ಋಗ್ವೇದದಲ್ಲಿ ೯ ನೆಯ ಮಂಡಲವೇ ಮೀಸಲಾಗಿದೆ ಸಂದರ್ಭಾನುಸಾರ ಅನೇಕಸೂಕ್ತಗಳ ಹಲವು ಋಕ್ಕುಗಳಲ್ಲಿಯೂ ಸೋಮದೇವತೆಯ ಸ್ತುತಿ ಇದೆ. ೯ ನೇ ಮಂಡಲದ ಪೀಠಿಕೆಯಲ್ಲಿ (ಋ ಸಂ. ಭಾಗ ೨೬ ಪುಟಗಳು ೧-೯೪) ಸೋಮದೇವತೆಯ ಮತ್ತು ಸೋಮಲತೆಯ ವಿಸ್ತಾರವಾದ ವಿವರಣೆ ಇದೆ. ಈ ಸೂಕ್ತದ ಋಕ್ಕುಗಳಲ್ಲಿ ಅನೇಕಕಡೆ ನಿರ್ಜೀವವಸ್ತುವೆಂದು ಪರಿಗಣಿಸಲ್ಪಡುವ ಎಂದರೆ ಮನುಷ್ಯರಂತೆ ಮಾತನಾಡಲು ಶಕ್ತಿಯಿಲ್ಲದಿರುವ ಲತಾದಿಗಳನ್ನು ಮನುಷ್ಯರಂತೆ ಸಂಬೋಧಿಸಿರುವುದೂ ಅವುಗಳು ಮನುಷ್ಯರಂತೆ ಮಾತನಾಡಿರುವುದು ಕಂಡುಬರುವುದು. ಆದರೆ ಭಾಷ್ಯಕಾರರು ಋಗ್ವೇದಭಾಷ್ಯಭೂಮಿಕೆಯಲ್ಲಿ ಹೇಳಿರುವಂತೆ **ಓಷಧೇ ತ್ರಾಯಸ್ವೈನಂ** । ಎಲೈ ಓಷಧಿಯೇ ಈ ಪುರುಷನನ್ನು ರಕ್ಷಿಸು ಇತ್ಯಾದಿವಾಕ್ಯಗಳಲ್ಲಿಯೂ ಪ್ರಕೃತ ಸೂಕ್ತದ ಮಂತ್ರಗಳಲ್ಲಿಯೂ ಓಷಧಿವನಸ್ಪತಿಗಳನ್ನು ಕೇವಲ ಲತೆಗಳೆಂದು ಮಾತ್ರ ಭಾವಿಸದೆ ಅವುಗಳ ಅಭಿಮಾನಿ ದೇವತೆ ಗಳೆಂದೂ ಭಾವಿಸಿ ಸ್ತುತಿಸಲಾಗಿದೆ ಎಂದು ತಿಳಿಯಬೇಕು.

ಓಷಧಿಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾ ಯಾಸ್ಕರು— **ಓಷಧಯಃ । ಓಷದ್ಧಯಂತೀತಿ ವಾ । ಓಷತ್ಯೇನಾ ಧಯಂತೀತಿ ವಾ । ದೋಷಂ ಧಯಂತೀತಿ ವಾ** (ನಿ. ೯-೨೭) ಎಂದು ಹೇಳಿದಾರೆ. ಎಂದರೆ— ಇಲ್ಲಿ ಓಷತ್, ಧಯಂತಿ ಎಂಬ ಎರಡು ಶಬ್ದಗಳು ಸೇರಿ ಓಷಧಯಃ ಎಂಬ ಶಬ್ದವಾಗಿವೆ ಓಷತ್ ಎಂದರೆ ಶರೀರದಲ್ಲಿ

ವ್ಯಾಪಿಸಿರುವ ಜ್ವರದತಾಪ ಮೊದಲಾದ ರೋಗ. ಧಯಂತಿ ಎಂದರೆ ಪಾನಮಾಡುವುದು ಅಥವಾ ನಾಶಮಾಡುವುದು. ದೇಹದಲ್ಲಿ ಉತ್ಪನ್ನವಾಗುವ ರೋಗಗಳನ್ನು ಪಾನಮಾಡಿ (ನಾಶಮಾಡಿ) ಧ್ವಂಸಮಾಡುವುದರಿಂದ ಇದಕ್ಕೆ ಓಷಧಯಃ ಎಂಬ ಹೆಸರು ಬಂದಿದೆ. ಅಥವಾ ಹೊಟ್ಟೆಯೊಳಗೆ ಹೋಗುವಂತೆ ಇವನ್ನು ಪಾನಮಾಡುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಅಥವಾ ದೇಹದಲ್ಲಿರುವ ದೋಷಗಳನ್ನು ಎಂದರೆ ವಾತಪಿತ್ತಾದಿ ದೋಷಗಳನ್ನು ಇದು ನಾಶಮಾಡುವುದರಿಂದ ಇದಕ್ಕೆ ಓಷಧಿ ಎಂಬ ಹೆಸರು ಬಂದಿದೆ ಎಂದು ಮೂರುವಿಧ ಅರ್ಥವನ್ನು ಹೇಳಿದಾರೆ.

॥ ಸಾಯಣಭಾಷ್ಯಂ ॥

**ಯಾ ಓಷಧೀರಿತಿ ತ್ರಯೋವಿಂಶತ್ಯೃಚಂ ಸಪ್ತಮಂ ಸೂಕ್ತಂ। ಅಥರ್ವಣಃ ಪುತ್ರಸ್ಯ ಭಿಷಗ್ನಾಮ್ನ ಆರ್ಷಂ। ಅನುಷ್ಟುಭಮೋಷಧಿದೇವತಾಕಂ। ತಥಾ ಚಾನುಕ್ರಾಂತಂ। ಯಾ ಓಷಧೀ. ಸ್ತ್ರ್ಯಧಿಕಾಥರ್ವಣೋ ಭಿಷಗೋಷಧಿಸ್ತುತಿರಾನುಷ್ಟುಭಮಿತಿ॥ ದೀಕ್ಷಿತಾನಾಂ ಜ್ವರಾದ್ಯುಪಸಂತಾಪೇ ಸಂಜಾತೇಽನೇನ ಸೂಕ್ತೇನ ಮಾರ್ಜಯೇತ್। ಸೂತ್ರಿತಂ ಚ। ಓಷಧಿಸೂಕ್ತೇನ ಚಾಪ್ಲಾವ್ಯಾನುಮೃಜೇತ್। ಆ. ೬-೯। ಇತಿ॥**

ಅನುವಾದವು—**ಯಾ ಓಷಧೀಃ** ಎಂಬ ಈ ಸೂಕ್ತವು ಎಂಟನೆಯ ಅನುವಾಕದಲ್ಲಿ ಏಳನೆಯ ಸೂಕ್ತವು-ಇದರಲ್ಲಿ ಇಪ್ಪತ್ತಮೂರು ಋಕ್ಕುಗಳಿರುವವು ಈ ಸೂಕ್ತಕ್ಕೆ ಅಥರ್ವಣಪುತ್ರನಾದ ಭಿಷಕ್ (ವೈದ್ಯ) ಎಂಬ ಹೆಸರಿನವನು ಋಷಿಯು; ಈ ಸೂಕ್ತಕ್ಕೆ ಓಷಧಿಗಳೇ ದೇವತೆಯು, ಅನುಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯಾ ಓಷಧೀಸ್ತ್ರ್ಯಧಿಕಾಥರ್ವಣೋ ಭಿಷಗೋಷಧಿಸ್ತುತಿರಾನುಷ್ಟುಭಂ** ಎಂದು ಹೇಳಿರುವುದು, ಯಜ್ಞಾದಿ ಕರ್ಮಗಳಲ್ಲಿ ದೀಕ್ಷೆಯನ್ನು ಕೈಗೊಂಡವರು ಕರ್ಮನಡೆಯುತ್ತಿರುವಾಗ ಮಧ್ಯದಲ್ಲಿ ಜ್ವರಾದ್ಯುಪದ್ರವಗಳಿಂದ ಪೀಡಿತರಾದರೆ ಆಗ ಅವರನ್ನು ಈ ಸೂಕ್ತದ ಮಂತ್ರಗಳಿಂದ ಮಾರ್ಜನೆ (ಪ್ರೋಕ್ಷಣೆ) ಮಾಡಬೇಕೆಂದು ಆಶ್ವಲಾಯನಶ್ರೌತ ಸೂತ್ರದ—ಓಷಧಿಸೂಕ್ತೇನ **ಚಾಪ್ಲಾವ್ಯಾನುಮೃಜೇತ್** ಎಂಬ ಸೂತ್ರದಿಂದ (ಆ. ೬-೯) ವಿವೃತವಾಗಿರುವುದು

## ॥ ಓಂ ॥

## ಸೂಕ್ತ—೯೭

ಮಂಡಲ—೧೦ ॥ ಅನುವಾಕ—೮ ॥ ಸೂಕ್ತ—೯೭ ॥

ಅಷ್ಟಕ—೮ ॥ ಅಧ್ಯಾಯ—೫ ॥ ವರ್ಗ—೮, ೯, ೧೦, ೧೧.

ಸೂಕ್ತದಲ್ಲಿರುವ ಋಕ್ಸಂಖ್ಯೆ—೨೩ ॥

ಋಷಿಃ—ಭಿಷಗಾಥರ್ವಣಃ ॥

ದೇವತಾ—ಓಷಧೀಸ್ತುತಿಃ ॥

ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ ॥
ಮನ್ನೈ ನು ಬಭ್ರೂಣಾಮಹಂ ಶತಂ ಧಾಮಾನಿ ಸಪ್ತ ಚ ॥ ೧ ॥

॥ ಪದಪಾಠಃ ॥

ಯಾಃ । ಓಷಧೀಃ । ಪೂರ್ವಾಃ । ಜಾತಾಃ । ದೇವೇಭ್ಯಃ । ತ್ರಿಽಯುಗಂ । ಪುರಾ ।
ಮನ್ನೈ । ನು । ಬಭ್ರೂಣಾಂ । ಅಹಂ । ಶತಂ । ಧಾಮಾನಿ । ಸಪ್ತ । ಚ ॥ ೧ ॥

॥ ಸಾಯಣಭಾಷ್ಯಂ ॥

ಯಾ ಓಷಧಯಃ ಪೂರ್ವಾಃ ಪುರಾತನ್ಯೋ ಜಾತಾ ಉತ್ಪನ್ನಾಃ । ಕೇಭ್ಯಃ ಸಕಾಶಾತ್ । ದೇವೇಭ್ಯೋ ಜಗನ್ನಿರ್ಮಾತೃಭ್ಯಃ । ಯದ್ವಾ । ದೇವಾ ದ್ಯೋತಮಾನಾ ಋತವಃ । ತೇಭ್ಯಃ । ಕಸ್ಮಿನ್ಕಾಲೇ । ತ್ರಿಯುಗಂ ತ್ರಿಷು ಯುಗೇಷು ವಿಶೇಷೇಣ ಪ್ರಾದುರ್ಭಾವಾಪೇಕ್ಷಯಾ ಕೃತಾದಿಯುಗತ್ರಯಮುಕ್ತಂ ಕಲೌ ತ್ವತ್ಯಂತಾಲ್ಪತ್ವಾದುಪೇಕ್ಷಿತಂ । ಅಥವಾ ತ್ರಿಷು ಯುಗೇಷು ವಸಂತೇ ಪ್ರಾವೃಷಿ ಶರದಿ ಚೇತ್ಯರ್ಥಃ । ಅಹಂ ಬಭ್ರೂಣಾಂ ಬಭ್ರುವರ್ಣಾನಾಂ ಸೋಮಾದ್ಯೋಷಧೀನಾಂ ಶತಂ ಸಪ್ತ ಚ ಧಾಮಾನ್ಯನುಲೇಪಮಾರ್ಜನಾಭಿಷೇಕಾದಿರೂಪೇಣಾಶ್ರಯಭೂತಾನಿ ಸ್ಥಾನಾನಿ ನು ಕ್ಷಿಪ್ರಂ ಮನೈ। ಮನ್ಯೇ । ಸಂಭಾವಯಾಮೀತ್ಯರ್ಥಃ । ಅತ್ರ ವಾಜಸನೇಯಕಂ । ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರೇತ್ಯೃತವೋ ವೈ ದೇವಾಸ್ತೇಭ್ಯ ಏತಾಸ್ತ್ರಿಃ ಪುರಾ ಜಾಯಂತೇ ವಸಂತೇ ಪ್ರಾವೃಷಿ ಶರದಿ ಮನೈ ನು ಬಭ್ರೂಣಾಮಹಮಿತಿ ಸೋಮೋ ವೈ ಬಭ್ರುಃ ಸೌಮ್ಯಾ ಔಷಧಯ ಔಷಧಃ ಪುರುಷಃ ಶತಂ ಧಾಮಾನೀತಿ ಯದಿದಗ್ಂ ಶತಾಯುಃ ಶತಾರ್ಘಃ ಶತವೀರ್ಯ ಏತಾನಿ ಹಾಸ್ಯ ತಾನಿ ಶತಂ ಧಾಮಾನಿ ಸಪ್ತ ಚೇತಿ ಯ ಏವೇಮೇ ಸಪ್ತ ಶೀರ್ಷನ್ಪ್ರಾಣಾಸ್ತಾನೇತದಾಹ । ಶತ. ೭-೨-೪-೨೬ । ಇತಿ । ಅತ್ರ ನಿರುಕ್ತಂ ಚ । ಯಾ ಓಷಧಯಃ ಪೂರ್ವಾ ಜಾತಾ ದೇವೇಭ್ಯಸ್ತ್ರೀಣಿ ಯುಗಾನಿ ಪುರಾ ಮನ್ಯೇ ನು ತದ್ಬಭ್ರೂಣಾಮಹಂ ಬಭ್ರುವರ್ಣಾನಾಂ ಭರಣಾನಾಂ ಹರಣಾನಾಮಿತಿ ವಾ ಶತಂ ಧಾಮಾನಿ ಸಪ್ತ ಚೇತಿ । ಧಾಮಾನಿ ತ್ರಯಾಣಿ ಭವಂತಿ ಸ್ಥಾನಾನಿ ನಾಮಾನಿ ಜನ್ಮಾನೀತಿ । ಜನ್ಮಾನ್ಯತ್ರಾಭಿಪ್ರೇತಾನಿ ಸಪ್ತಶತಾನಿ ಸಪ್ತಶತಂ ಪುರುಷಸ್ಯ ಮರ್ಮಣಾಂ ತೇಷ್ವೇನಾ ದಧತಿ । ನಿ. ೯-೨೮ । ಇತಿ ॥

॥ ಪ್ರತಿಪದಾರ್ಥ ॥

**ದೇವೇಭ್ಯಃ**—ದೇವತೆಗಳಿಗಿಂತ । **ಪುರಾ ತ್ರಿಯುಗಂ**—ಮೂರು ಯುಗಗಳ ಹಿಂದೆ । **ಅಥವಾ ತ್ರಿಯುಗಂ**—ವಸಂತಋತು, ವರ್ಷರ್ತು ಮತ್ತು ಶರದೃತುಗಳಲ್ಲಿ । **ಪುರಾ**—ಹಿಂದೆ । **ಜಾತಾಃ**—

**ಉತ್ಪನ್ನ**ವಾದವೂ | **ಪೂರ್ವಾಃ**—ಪುರಾತನವಾದವೂ ಆದ | **ಯಾ ಓಷಧೀಃ**—ಯಾವ ಯಾವ ಓಷಧಿಗಳಿವೆಯೋ ಅಂತಹ | **ಬಭ್ರೂಣಾಂ**—ಹೊಂಬಣ್ಣದ ಸೋಮವೇ ಮುಂತಾದ ಓಷಧಿಗಳ | **ಶತಂ ಸಪ್ತ ಚ**—ನೂರೇಳು ಸಂಖ್ಯೆಗಳುಳ್ಳ | **ಧಾಮಾನಿ**—ಸ್ಥಾನಗಳನ್ನು (ಅನುಲೇಪನವನ್ನು ಅಥವಾ ಪ್ರತಿಕ್ರಿಯೆಗಳನ್ನು | **ಅಹಂ** -ನಾನು | **ನು**—ಕ್ಷಿಪ್ರವಾಗಿ | **ಮನ್ಯೇ**—ತಿಳಿದಿದ್ದೇನೆ.

|| ಭಾವಾರ್ಥ ||

ಕೃತ, ತ್ರೇತಾ, ದ್ವಾಪರಗಳೆಂಬ ಮೂರು ಯುಗಗಳ ಹಿಂದೆ ಅಥವಾ ವಸಂತಋತು, ವರ್ಷರ್ತು ಮತ್ತು ಶರದೃತುಗಳಲ್ಲಿ ಹಿಂದೆ ಉತ್ಪನ್ನವಾದವೂ, ಪುರಾತನವೂ ಆದ ಯಾವ ಯಾವ ಓಷಧಿಗಳಿವೆಯೋ, ಅಂತಹ ಹೊಂಬಣ್ಣದ ಸೋಮವೇ ಮುಂತಾದ ಓಷಧಿಗಳ ನೂರೇಳು ಸಂಖ್ಯೆಗಳುಳ್ಳ (ವಿಧವಾದ) ಸ್ಥಾನಗಳನ್ನು (ಉಪಯೋಗಗಳನ್ನು) ನಾನು ಕ್ಷಿಪ್ರವಾಗಿ ತಿಳಿದಿದ್ದೇನೆ.

## English Translation.

I think of the hundred and seven applications of the brown-tinted plants, which are ancient, being generated for the gods before the three ages.

ವಿಶೇಷ ವಿಷಯಗಳು

**ಯಾ ಓಷಧೀಃ ಪೂರ್ವಾ ಜಾತಾಃ ದೇವೇಭ್ಯಃ ತ್ರಿಯುಗಂ ಪುರಾ**– ಇಲ್ಲಿ **ತ್ರಿಯುಗಂ** ಎಂಬ ಶಬ್ದಕ್ಕೆ ಭಾಷ್ಯಕಾರರು ಎರಡು ವಿಧವಾದ ಅರ್ಥವನ್ನು ಹೇಳಿದಾರೆ—**ತ್ರಿಯುಗಂ ತ್ರಿಷು ಯುಗೇಷು | ವಿಶೇಷೇಣ ಪ್ರಾದುರ್ಭಾವಾಪೇಕ್ಷಯಾ ಕೃತಾದಿಯುಗತ್ರಯಮುಕ್ತಂ ಕಲೌ ತ್ವತ್ಯಂತಾಲ್ಪತ್ವಾದುಪೇಕ್ಷಿತಂ |** ಎಂದರೆ, **ಕೃತ**, ತ್ರೇತಾ, ದ್ವಾಪರಗಳೆಂಬ ಮೂರು ಯುಗಗಳಲ್ಲಿ ಎಂದರ್ಥವು ಕಲಿಯುಗದ ಕಾಲಪರಿಮಾಣವು ಅತ್ಯಲ್ಪವಾದುದರಿಂದ ಅದನ್ನು ಇಲ್ಲಿ ಉಪೇಕ್ಷಿಸಲಾಗಿದೆ (ಎಂದರೆ ಗಣನೆಗೆ ಅರ್ಹವಾಗಿಲ್ಲ). ಈ ಮೂರು ಯುಗಗಳಲ್ಲಿ ಪೂರ್ವದಲ್ಲಿ (**ಪುರಾ**) ಎಂದರೆ ಕಲಿಯುಗಕ್ಕಿಂತ ಪೂರ್ವಕಾಲವಾದ ಕೃತಾದಿ ಮೂರು ಯುಗಗಳಲ್ಲಿ ಉತ್ಪನ್ನವಾದ ಓಷಧಿಗಳು ಎಂದು ಒಂದು ವಿಧವಾದ ಅರ್ಥವು.

**ಅಥವಾ ತ್ರಿಷು ಯುಗೇಷು ವಸಂತೇ ಪ್ರಾವೃಷಿ ಶರದಿ ಚೇತ್ಯರ್ಥಃ |** ಅಥವಾ ಒಂದು ವರ್ಷದಲ್ಲಿ ಪ್ರಾಪ್ತವಾಗುವ ವಸಂತಋತು (ಬೇಸಿಗೆ ಕಾಲ) ವರ್ಷರ್ತು (ಮಳೆಗಾಲ) ಶರದೃತು (ಚಳಿಗಾಲ) ಎಂಬ ಕಾಲತ್ರಯಗಳಲ್ಲಿ ಉತ್ಪನ್ನವಾಗುವ ಓಷಧಿಗಳನ್ನು ಎಂದು ಇನ್ನೊಂದು ವಿಧವಾದ ಅರ್ಥವು. ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಭಾಷ್ಯಕಾರರು ಶತಪಥ ಬ್ರಾಹ್ಮಣದ– **ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರೇತ್ಯೃತವೋ ವೈ ದೇವಾಸ್ತೇಭ್ಯ ಏತಾಸ್ತ್ರಿಃ ಪುರಾ ಜಾಯಂತೇ ವಸಂತೇ ಪ್ರಾವೃಷಿ ಶರದಿ ಮನ್ಯೈ ನು ಬಭ್ರೂಣಾಮಹಮಿತಿ ಸೋಮೋ ವೈ ಬಭ್ರುಃ ಸೋಮ್ಯಾ ಓಷಧಯಃ ಔಷಧಃ ಪುರುಷಃ ಶತಂ ಧಾಮಾನೀತಿ ಯದಿದಗ್ಂ ಶತಾಯುಃ ಶತಾರ್ಘಃ ಶತವೀರ್ಯ ಏತಾನಿ ಹಾಸ್ಯ ತಾನಿ ಶತಂ ಧಾಮಾನಿ ಸಪ್ತ ಚೇತಿ | ಯ ಏವೇಮೇ ಸಪ್ತ ಶೀರ್ಷನ್ಪ್ರಾಣಾಸ್ತಾನೇತದಾಹ |** ಎಂಬ ವಾಕ್ಯವನ್ನು ಉದಾಹರಿಸಿರುವರು.

ಈ ಶ್ರುತಿವಾಕ್ಯದಂತೆ ತ್ರಿಯುಗಂ ಎಂದರೆ, ವಸಂತ, ಪ್ರಾವೃಟ್, ಶರತ್ ಎಂಬ ಮೂರು ಋತುಗಳು ; ಈ ಮೂರು ಋತುಗಳಲ್ಲಿಯೂ ಈ ಓಷಧಿಗಳು ದೇವತೆಗಳಿಂದ ಉತ್ಪನ್ನವಾದವು. ಇವು ಸೋಮಲತೆಯಂತೆ ಬಭ್ರುವರ್ಣವುಳ್ಳವು. ಈ ಓಷಧಿಗಳು ಪುರುಷನ ರೋಗಾದಿಗಳನ್ನು ನಾಶಮಾಡಿ ಅವನು ನೂರು ವರ್ಷಗಳವರೆಗೆ ಬದುಕುವಂತೆಯೂ, ಅನೇಕ ವಿಧವಾದ ವೀರ್ಯಾದಿ(ಶಕ್ತಿ ಸಾಮರ್ಥ್ಯಾದಿ) ಗಳಿಂದ ಯುಕ್ತನಾಗುವಂತೆಯೂ, ಏಳು ವಿಧಪ್ರಾಣ(ವಾಯು) ಗಳಿಂದ ಕೂಡಿ ಆರೋಗ್ಯವಂತನಾಗಿರುವಂತೆಯೂ ಮಾಡುವವು ಎಂದು ಇದರ ಮುಖ್ಯಾಭಿಪ್ರಾಯವು.

ಯುಗಶಬ್ದಾರ್ಥವನ್ನು ನಾವು ಹಿಂದೆಯೇ ಎಂದರೆ ೧೦ ನೇ ಮಂಡಲದ ೭೨ ನೆಯ ಸೂಕ್ತದಲ್ಲಿ ವಿವರಿಸಿದೇವೆ **ದೇವೇಭ್ಯಸ್ತ್ರಿಯುಗಂ ಪುರಾ ಜಾತಾಃ** ಎಂಬ ವಾಕ್ಯಕ್ಕೆ ಭಾಷ್ಯಕಾರರು ಕೃತಾದಿ ಮೂರು ಯುಗಗಳಲ್ಲಿ ಅಥವಾ ವಸಂತಾದಿ ಮೂರು ಋತುಗಳಲ್ಲಿ ಈ ಓಷಧಿಗಳು ದೇವತೆಗಳಿಂದ ಉತ್ಪನ್ನವಾದವು ಎಂದರೆ ಸೃಷ್ಟಿಸಲ್ಪಟ್ಟವು ಎಂದು ಅರ್ಥ ವಿವರಣೆ ಮಾಡಿದಾರೆ. ಆದರೆ ಯಾಸ್ಕರು **ದೇವೇಭ್ಯಸ್ತ್ರಿಯುಗಂ ಪುರಾ ಜಾತಾಃ** ಎಂಬ ವಾಕ್ಯಕ್ಕೆ ದೇವತೆಗಳ ಸೃಷ್ಟಿಗಿಂತ ಮೂರು ಯುಗಗಳ ಕಾಲ ಪೂರ್ವದಲ್ಲಿಯೇ ಓಷಧಿಗಳ ಉತ್ಪತ್ತಿಯಾಯಿತು ಎಂದರೆ ಮೊದಲು ಓಷಧಿಗಳ ಉತ್ಪತ್ತಿಯಾದವು. ಅನಂತರ ಮೂರು ಯುಗಗಳವರೆಗಿನ ಕಾಲವು ಕಳೆದುಹೋದಮೇಲೆ ದೇವತೆಗಳ ಉತ್ಪತ್ತಿ ಯಾಯಿತು ಎಂದು ಅರ್ಥವಿವರಣೆ ಮಾಡಿದಾರೆ. ಈ ಅರ್ಥವೇ ಸಾಧುವೂ ಸಮಂಜಸವೂ ಆಗಿರುವುದೆಂದು ಕಾಣು ತ್ತದೆ. ಏಕೆಂದರೆ ಸಮಸ್ತ ಪ್ರಾಣಿವರ್ಗಕ್ಕೆ ಆಹಾರಭೂತವಾದ ಸಸ್ಯವರ್ಗವು ಮೊದಲೇ ಉತ್ಪನ್ನವಾಗಿರಬೇಕು. ಅನಂತರ ಪ್ರಾಣಿಗಳ ಉತ್ಪತ್ತಿಯು. ಹಾಗಿಲ್ಲದೆ ಮೊದಲೇ ಪ್ರಾಣಿಗಳು ಉತ್ಪತ್ತಿಯಾದಲ್ಲಿ ಅವುಗಳು ಆಹಾರಾರ್ಥವಾಗಿ ಏನನ್ನು ತಿನ್ನಬೇಕು ? ಈ ಕಾರಣದಿಂದಲೂ ಓಷಧಿವನಸ್ಪತಿಗಳ (ಸಸ್ಯವರ್ಗದ) ಸೃಷ್ಟಿಯು ದೇವತೆಗಳಿಗಿಂತ ಎಷ್ಟೋ ಪೂರ್ವದಲ್ಲಿ ಎಂದರೆ ಮೂರು ಯುಗಕಾಲ ಪೂರ್ವದಲ್ಲಿ ಆಯಿತೆಂದು ಹೇಳುವುದೇ ಸಮಂಜಸವೂ ಯುಕ್ತಿ ಯುಕ್ತವೂ ಆಗಿದೆ.

ಈ ಋಕ್ಕಿಗೆ ಯಾಸ್ಕರ ನಿರುಕ್ತವು ಈ ರೀತಿ ಇದೆ

**ಯಾ ಓಷಧಯಃ ಪೂರ್ವಾ ಜಾತಾ ದೇವೇಭ್ಯಸ್ತ್ರೀಣಿ ಯುಗಾನಿ ಪುರಾ ಮನ್ಯೇ ನು ತದ್ಬ- ಭ್ರೂಣಾಮಹಂ ಬಭ್ರೂವರ್ಣಾನಾಂ ಹರಣಾನಾಂ ಭರಣಾನಾಮಿತಿ ವಾ । ಶತಂ ಧಾಮಾನಿ ಸಪ್ತ ಚ । ಧಾಮಾನಿ ತ್ರಯಾಣಿ ಭವಂತಿ ಸ್ಥಾನಾನಿ ನಾಮಾನಿ ಜನ್ಮಾನೀತಿ । ಜನ್ಮಾನ್ಯತ್ರಾ- ಭಿಪ್ರೇತಾನಿ ಸಪ್ತಶತಂ ಪುರುಷಸ್ಯ ಮರ್ಮಣಾಂ ತೇಷ್ವೇನಾ ದಧತೀತಿ ವಾ ॥**

(ನಿ. ೯೨೮)-

ಈ ನಿರುಕ್ತವನ್ನು ವಿವರಿಸುವಾಗ ಈ ಋಕ್ಕಿನಲ್ಲಿರುವ ಪ್ರತಿಯೊಂದು ವಾಕ್ಯವನ್ನೂ ಪ್ರತ್ಯೇಕವಾಗಿ ತೆಗೆದು ಕೊಂಡು ವಿವರಿಸುವುದು ಅವಶ್ಯಕವಾಗಿದೆ.

**ಯಾ ಓಷಧಯಃ ಪೂರ್ವಾ ಜಾತಾ ದೇವೇಭ್ಯಸ್ತ್ರೀಣಿ ಯುಗಾನಿ ಪುರಾ ಮನ್ಯೇ** — ಓಷಧಿಗಳು ಎಂದರೆ ಸಣ್ಣಗಿಡಗಳು, ಲತೆಗಳು, ಬಳ್ಳಿಗಳು ಮೊದಲಾದ ಸಸ್ಯವರ್ಗಗಳು ದೇವತೆಗಳು ಸೃಷ್ಟಿಸಲ್ಪಡುವುದಕ್ಕಿಂತ ಮೂರು ಯುಗಗಳಕಾಲ ಪೂರ್ವದಲ್ಲಿಯೇ ಉತ್ಪನ್ನವಾದುವು ಎಂದರೆ ಸೃಷ್ಟಿಸಲ್ಪಟ್ಟವು ಎಂದು ನಾನು ತಿಳಿದಿದ್ದೇನೆ ಎಂದು ಋಷಿಯು ಇಲ್ಲಿ ಹೇಳಿದಾನೆ ದೇವತೆಗಳಾಗಲಿ ಮನುಷ್ಯರಾಗಲಿ ಇತರ ಪ್ರಾಣಿಗಳಾಗಲಿ ಈ ಭೂಮಿಯಮೇಲೆ ಹುಟ್ಟುವುದಕ್ಕಿಂತ ಎಷ್ಟೋ ಮೊದಲೇ ( ಮೂರುಯುಗ ಮೊದಲೇ ) ಇವುಗಳಿಗೆ ಆಹಾರವಾದ ಸಸ್ಯವರ್ಗದ ಉತ್ಪತ್ತಿ ಯಾಗಬೇಕು. ಏಕೆಂದರೆ ಆಹಾರವಿಲ್ಲದೆ ಯಾವ ಪ್ರಾಣಿಗಳೂ ಬದುಕುವಂತಿಲ್ಲ. ಆಹಾರವನ್ನು ಮೊದಲು

ಸಿದ್ಧಪಡಿಸಿ ಅನಂತರ ಪ್ರಾಣಿಗಳನ್ನು ಸೃಷ್ಟಿಸುವುದು ಭಗವಂತನ ನಿಯಮವಾಗಿದೆ. ಮನುಷ್ಯರಿಗಿಂತಲೂ, ಪ್ರಾಣಿಗಳಿಗಿಂತಲೂ ಮೊದಲೇ ದೇವತೆಗಳ ಉತ್ಪತ್ತಿಯಾದ್ದರಿಂದ ಆ ದೇವತೆಗಳಿಗಿಂತಲೂ ಮೊದಲೇ ಎಂದರೆ ಎಲ್ಲರಿಗಿಂತಲೂ ಮೊದಲೇ ಸಸ್ಯವರ್ಗದ ಅಥವಾ ಓಷಧಿಗಳ ಉತ್ಪತ್ತಿಯಾಯಿತು ಎಂದು ಇಲ್ಲಿ ಹೇಳಲಾಗಿದೆ.

**ತೇಭ್ಯಬಭ್ರೂಣಾಮಹಂ ಶತಂ ಧಾಮಾನಿ ಸಪ್ತ ಚ**—ಬಭ್ರೂಣಾಂ ಎಂಬ ಶಬ್ದಕ್ಕೆ ಯಾಸ್ಕರು ಹರಣಾನಾಂ ಅಥವಾ ಭರಣಾನಾಂ ಎಂದು ಎರಡುವಿಧ ಅರ್ಥವನ್ನು ಹೇಳಿದ್ದಾರೆ. **ಹರಣಾನಾಂ** ಎಂದರೆ **ತಾ ಹಿ ಕ್ಷುದಾದಿ ಹರಂತಿ** ಈ ಓಷಧಿಗಳು ಆಹಾರರೂಪದಿಂದ ಪ್ರಾಣಿಗಳ ಹಸಿವನ್ನು ಪರಿಹರಿಸುತ್ತವೆ. ಅಥವಾ **ಬಭ್ರೂಣಾಂ ಭರಣಾನಾಂ**—ಬಭ್ರುವರ್ಣದಿಂದಿರುವ ಈ ಓಷಧಿಗಳು **ಭರ್ತ್ರ್ಯಸ್ತಾಃ ಸರ್ವಸ್ಯ ಭೂತಗ್ರಾಮಸ್ಯ ವಾ** । ಸಮಸ್ತವಾದ ಪ್ರಾಣಿಸಮೂಹವನ್ನು ಭರಿಸುವವು ಎಂದರೆ ಆಹಾರವನ್ನು ಒದಗಿಸುವುದರ ಮೂಲಕ ಅವುಗಳಿಗೆ ಪುಷ್ಟಿಯನ್ನುಂಟುಮಾಡಿ ಜೀವಿಸಲು ಸಾಧ್ಯವಾಗುವಂತೆ ಮಾಡುವವು ಎಂದಭಿಪ್ರಾಯವು. **ಶತಂ ಧಾಮಾನಿ ಸಪ್ತ ಚ**— ಎಂಬ ವಾಕ್ಯದಲ್ಲಿ **ಧಾಮಾನಿ** ಎಂಬ ಶಬ್ದಕ್ಕೆ ಯಾಸ್ಕರು— **ಧಾಮಾನಿ ತ್ರಯಾಣಿ ಭವಂತಿ ಸ್ಥಾನಾನಿ ನಾಮಾನಿ ಜನ್ಮಾನೀತಿ** । **ಧಾಮಾನಿ** ಎಂದರೆ ಸ್ಥಾನಗಳು. ಅವು ಮೂರು. ಸ್ಥಾನಗಳು, ಹೆಸರುಗಳು, ಜನ್ಮಗಳು ಎಂದು. ಎಂದರೆ ಓಷಧಿಗಳು ನೂರು ಏಳು ಸ್ಥಾನಗಳಲ್ಲಿ ಅಥವಾ ಪ್ರದೇಶಗಳಲ್ಲಿ ಹುಟ್ಟುವವು. **ಶತಂ ಸಪ್ತ ಚ** ಎಂದರೆ ನೂರ ಏಳು ಎಂಬ ನಿರ್ದಿಷ್ಟ ಸಂಖ್ಯೆಯಾದರೂ ಆಗಬಹುದು. ಅಥವಾ ಶತ ಶಬ್ದಕ್ಕೆ ಅನೇಕವೆಂಬ ಅರ್ಥವನ್ನಾದರೂ ಹೇಳಬಹುದು ಅನೇಕ ಸ್ಥಳಗಳಲ್ಲಿ (ಭೂಮಿ, ಪರ್ವತ, ನದೀತೀರ ಇತ್ಯಾದಿ ಅನೇಕ ಪ್ರದೇಶಗಳಲ್ಲಿ) ಈ ಓಷಧಿಗಳು ಹುಟ್ಟಿ ಬೆಳೆಯುವವು. ಅದರಂತೆ ಈ ಓಷಧಿಗಳ ಹೆಸರುಗಳೂ ನೂರ ಏಳು ಅಥವಾ ಅನೇಕ ಪ್ರಕಾರವಾಗಿರುವವು. ಜನ್ಮಗಳು ಎಂದರೆ ಹುಟ್ಟುವ ಅಥವಾ ಬೆಳೆಯುವ ವಿಧವೂ ಅನೇಕಪ್ರಕಾರವಾಗಿರುವವು. ಎಂದರೆ ಕೆಲವು ಸಣ್ಣವಾಗಿರುವವು, ಕೆಲವು ದೊಡ್ಡವು. ಕೆಲವು ಬಳ್ಳಿಯ ರೂಪದಲ್ಲಿ ಹಬ್ಬಿ ಬೆಳೆಯುವವು. ಕೆಲವು ನಿಧಾನವಾಗಿ ಬೆಳೆಯುವವು. ಕೆಲವು ಶೀಘ್ರವಾಗಿ ಬೆಳೆಯುವವು ಇತ್ಯಾದಿ. ಆಕಾರದಲ್ಲಿಯೂ ಗುಣದಲ್ಲಿಯೂ ಬೆಳೆಯುವ ವಿಧಾನದಲ್ಲಿಯೂ ಅನೇಕವಿಧವಾಗಿರುವವು ಎಂದಭಿಪ್ರಾಯವು ಅಥವಾ **ಶತಂ ಧಾಮಾನಿ ಸಪ್ತ ಚ** ಎಂಬ ವಾಕ್ಯಕ್ಕೆ ಯಾಸ್ಕರು ಹೇಳಿರುವಂತೆ **ಜನ್ಮಾನ್ಯತ್ರಾಭಿಪ್ರೇತಾನಿ ಸಪ್ತಶತಂ ಪುರುಷಸ್ಯ ಮರ್ಮಣಾಂ ತೇಷ್ವೇನಾ ದಧತೀತಿ ವಾ** ಎಂದೂ ಅರ್ಥವು. ಓಷಧಿಗಳ ಉತ್ಪತ್ತಿಯಲ್ಲಿಯೂ, ಬೆಳವಣಿಗೆಯಲ್ಲಿಯೂ ಅನೇಕವಿಧವಿರುವುದಲ್ಲದೆ, ಇವುಗಳನ್ನು ಉಪಯೋಗಿಸುವ ವಿಧಾನದಲ್ಲಿಯೂ ಅನೇಕವಿಧವಿರುವುದು. ಈ ಓಷಧಿಗಳನ್ನು ಪುರುಷರ (ಪುರುಷ ಶರೀರದಲ್ಲಿರುವ) ಏಳುನೂರು ಮರ್ಮಸ್ಥಳ ಅಥವಾ ಸಂಧಿಸ್ಥಳಗಳಲ್ಲಿ ಲೇಪನಮಾಡಿ ಚಿಕಿತ್ಸೆಯನ್ನು ಮಾಡುವುದರಿಂದ ಇವುಗಳಿಗೆ **ಶತಂ ಧಾಮಾನಿ ಸಪ್ತ ಚ** ಏಳನೂರು ಏಳು ಅಥವಾ ಅನೇಕವಿಧ ಚಿಕಿತ್ಸಾದಿಗಳಲ್ಲಿ ಉಪಯೋಗವಿದೆಯೆಂದು ಋಷಿಯು ವರ್ಣಿಸಿರುವನು.

॥ ಸಂಹಿತಾಪಾಠಃ ॥

**ಶತಂ ವೋ ಅಂಬ ಧಾಮಾನಿ ಸಹಸ್ರಮುತ ವೋ ರುಹಃ ।**

**ಅಧಾ ಶತಕ್ರತ್ವೋ ಯೂಯಮಿಮಂ ಮೇ ಅಗದಂ ಕೃತ ॥ ೨ ॥**

॥ ಪದಪಾಠಃ ॥

ಶತಂ । ವಃ । ಅಂಬ । ಧಾಮಾನಿ । ಸಹಸ್ರಂ । ಉತ । ವಃ । ರುಹಃ ।

ಅಧ । ಶತಽಕ್ರತ್ವಃ । ಯೂಯಂ । ಇಮಂ । ಮೇ । ಅಗದಂ । ಕೃತ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಂಬ ಮಾತರ ಓಷಧಯಃ ವೋ ಯುಷ್ಮಾಕಂ ಧಾಮಾನಿ ಸ್ಥಾನಾನಿ ಜನ್ಮಾನಿ ವಾ ಶತಮಪರಿಮಿತಾನಿ । ಉತಾಪಿ ಚ ವೋ ಯುಷ್ಮಾಕಂ ರುಹಃ ಪ್ರರೋಹಃ ಪ್ರೋದ್ಗಮಃ ಸಹಸ್ರಮಪರಿಮಿತಃ । ಅಧಾಪಿ ಚ ಹೇ ಶತಕ್ರತ್ವಃ ಶತಕರ್ಮಾಣಃ ಯೂಯಮಿಮಂ ಮೇ ಮಾಂ ಮದೀಯಂ ವಾ ಜನಮಾಮಯಗ್ರಸ್ತಮಗದಂ । ಗದೋ ರೋಗಃ । ತದ್ರಹಿತಂ ಕೃತ । ಕುರುತ ॥

॥ ಪ್ರತಿಪದಾರ್ಥ ॥

**ಅಂಬ**—ಮಾತೃರೂಪರಾದ ಎಲೈ ಓಷಧಿಗಳೇ । **ವಃ**—ನಿಮ್ಮ । **ಧಾಮಾನಿ**—ಜನ್ಮಸ್ಥಾನಗಳು (ಅಥವಾ ಉಪಯೋಗಗಳು) । **ಶತಂ**—ಅಪರಿಮಿತವಾಗಿವೆ. । **ಉತ**—ಮತ್ತು । **ವಃ**—ನಿಮ್ಮ । **ರುಹಃ**—ಬೆಳವಣಿಗೆಯೂ । **ಸಹಸ್ರಂ**— ಅತ್ಯಧಿಕವಾಗಿರುತ್ತದೆ. । **ಶತಕ್ರತ್ವಃ**— ನಾನಾ ಕರ್ಮಗಳುಳ್ಳ ಎಲೈ ಓಷಧಿಗಳೇ । **ಯೂಯಂ**—ನೀವು । **ಮೇ**—ನನ್ನ । **ಇಮಂ**—ಈ ಪುತ್ರಾದಿಗಳನ್ನು । **ಅಗದಂ**—ರೋಗರಹಿತವಾಗಿರುವಂತೆ । **ಕೃತ**—ಮಾಡಿರಿ.

॥ ಭಾವಾರ್ಥ ॥

ಮಾತೃರೂಪರಾದ ಎಲೈ ಓಷಧಿಗಳೇ, ನಿಮ್ಮ ಜನ್ಮಸ್ಥಾನಗಳು ಅಪರಿಮಿತವಾಗಿವೆ. ನಿಮ್ಮ ಬೆಳವಣಿಗೆಯೂ ಅತ್ಯಧಿಕವಾಗಿರುತ್ತದೆ. ನಾನಾ ಕರ್ಮಗಳಲ್ಲಿ ಉಪಯೋಗಿಸಲ್ಪಡುವ ಎಲೈ ಓಷಧಿಗಳೇ, ನೀವು ನನ್ನ ಪುತ್ರಾದಿ ಜನರನ್ನು ರೋಗರಹಿತರಾಗಿರುವಂತೆ ಮಾಡಿರಿ.

## English Translation.

Mothers (of mankind), a hundred are your applications, a thousandfold is your growth; do you who fulfil a hundred functions make this my (people) free from disease.

॥ ವಿಶೇಷವಿಷಯಗಳು ॥

**ಶತಕ್ರತ್ವಃ**—ಶತ ಎಂದರೆ ಅನೇಕ, ಕ್ರತು ಎಂದರೆ ಕರ್ಮ, ಕೆಲಸ. ಆದ್ದರಿಂದ ಶತಕ್ರತ್ವಃ ಎಂದರೆ ಈ ಓಷಧಿಗಳು ಅನೇಕ ಕೆಲಸಗಳಿಗೆ ಉಪಯೋಗಕ್ಕೆ ಬರುತ್ತವೆ. ಇವುಗಳನ್ನು ನಾನಾ ಕಾರ್ಯಗಳಲ್ಲಿ ಉಪಯೋಗಿಸುತ್ತಾರೆ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಓಷಧೀಃ ಪ್ರತಿ ಮೋದಧ್ವಂ ಪುಷ್ಪವತೀಃ ಪ್ರಸೂವರೀಃ ।
ಅಶ್ವಾ ಇವ ಸಜಿತ್ವರೀರ್ವೀರುಧಃ ಪಾರಯಿಷ್ಣ್ವಃ ॥ ೩ ॥

॥ ಪದಪಾಠಃ ॥

ಓಷಧೀಃ । ಪ್ರತಿ । ಮೋದಧ್ವಂ । ಪುಷ್ಪಽವತೀಃ । ಪ್ರಽಸೂವರೀಃ ।
ಅಶ್ವಾಃಽಇವ । ಸಽಜಿತ್ವರೀಃ । ವೀರುಧಃ । ಪಾರಯಿಷ್ಣ್ವಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಓಷಧೀರೋಷಧಯಃ ಪ್ರತಿ ಮೋದಧ್ವಂ । ಇಮಂ ರುಗ್ಣಂ ಪ್ರತಿ ಮುದಿತಾ ಹೃಷ್ಟಾ ಭವತ । ಕೀದೃಶ್ಯೋ ಯೂಯಂ । ಪುಷ್ಪವತೀಃ ಪುಷ್ಪವತ್ಯಃ ಪ್ರಸೂವರೀಃ । ಪ್ರಕರ್ಷೇಣ ಸೂಯಂತ ಉಪಭೋಗಾಯೇತಿ ಪ್ರಸವಾಃ ಫಲಾನಿ । ತದ್ವತ್ಯಃ ಕಿಂಚಾಶ್ವಾ ಇವಾಶ್ವನಾನಾ ಹಯಾ ಇವ ಸಜಿತ್ವರೀಃ ಸಹ ರೋಗಂ ಜಯಂತ್ಯಃ ವೀರುಧೋ ವಿರೋಹಂತ್ಯಃ ಪಾರಯಿಷ್ಣ್ವೋ ರುಗ್ಣಂ ಪುರುಷಂ ಪಾರಯಂತ್ಯೋ ರೋಗಾತ್ ॥

॥ ಪ್ರತಿಪದಾರ್ಥ ॥

**ಓಷಧೀಃ**—ಎಲೈ ಓಷಧಿಗಳೇ । **ಪುಷ್ಪವತೀಃ**—ಪುಷ್ಪಗಳಿಂದ ಕೂಡಿದವರೂ । **ಪ್ರಸೂವರೀಃ**—ಅತ್ಯಧಿಕವಾದ ಫಲಯುಕ್ತರೂ ಆದ ನೀವು । **ಅಶ್ವಾಇವ**—ಅಶ್ವಗಳಂತೆ । **ಸಜಿತ್ವರೀಃ**—ರೋಗವನ್ನು ಜಯಿಸು ವವರಾಗಿಯೂ । **ವೀರುಧಃ**—ಅನೇಕ ಕೊಂಬೆಗಳ ಬೆಳೆವಣಿಗೆಗಳುಳ್ಳವರಾಗಿಯೂ । **ಪಾರಯಿಷ್ಣ್ವಃ**—ಎಲ್ಲ ರನ್ನೂ ರೋಗದಿಂದ ದಾಟಿಸುವವರಾಗಿಯೂ ಇದ್ದು । **ಪ್ರತಿ ಮೋದಧ್ವಂ**—ಹರ್ಷದಾಯಕರಾಗಿರಿ.

॥ ಭಾವಾರ್ಥ ॥

ಎಲೈ ಓಷಧಿಗಳೇ, ಪುಷ್ಪಗಳಿಂದ ಕೂಡಿದವರೂ, ಅತ್ಯಧಿಕವಾದ ಫಲಯುಕ್ತರೂ ಆದ ನೀವು ಅಶ್ವಗಳಂತೆ ರೋಗವನ್ನು ಜಯಿಸುವವರಾಗಿಯೂ, ಅನೇಕ ಕೊಂಬೆಗಳ ಬೆಳವಣಿಗೆಯುಳ್ಳವರಾಗಿಯೂ, ಎಲ್ಲರನ್ನೂ ರೋಗ ದಿಂದ ದಾಟಿಸುವವರಾಗಿಯೂ ಇದ್ದು ಹರ್ಷದಾಯಕರಾಗಿರಿ

## English Translation.

Rejoice, plants, bearing abundant flowers and fruit, triumphing together (over disease) like (victorious) horses, sprouting forth, bearing (men safe) beyond (disease).

॥ ವಿಶೇಷವಿಷಯಗಳು ॥

**ಪುಷ್ಪವತೀ ಪ್ರಸೂವರೀಃ**—ಹೂವುಗಳನ್ನು ಬಿಡುವವೂ, ಫಲಗಳನ್ನು ಬಿಡುವವೂ ಆದ ಓಷಧಿಗಳೆಂದರ್ಥವು.

**ಅಶ್ವಾ ಇವ ಸಜಿತ್ವರೀಃ**—ಯುದ್ಧಗಳಲ್ಲಿ ಅಶ್ವಗಳು ಯಾವ ರೀತಿ ಜಯವನ್ನು ಸಾಧಿಸಿಕೊಡುವವೋ ಅದರಂತೆ ಈ ಓಷಧಿಗಳು ರೋಗಾದ್ಯುಪದ್ರವಗಳನ್ನು ಜಯಿಸುವವು ಎಂದರೆ ಪರಿಹಾರಮಾಡುವವು ಎಂದಭಿಪ್ರಾಯವು.

ವೀರುಧಃ—ವೀರುಧ ಶಬ್ದಕ್ಕೆ ಯಾಸ್ಕರು **ವೀರುಧ ಓಷಧಯೋ ಭವಂತಿ ವಿರೋಹಣಾತ್। ವೀರುಧಃ ಪಾರಯಿಷ್ಣವಃ ಇತ್ಯಪಿ ನಿಗಮೋ ಭವತಿ ।** ಎಂದು ನಿರ್ವಚನವನ್ನು ಹೇಳಿದಾರೆ. ವೀರುಧಃ ಎಂದರೆ ಓಷಧಿಗಳು. ಇವು ಭೂಮಿಯಲ್ಲಿ ಹುಟ್ಟಿ ಬೆಳೆಯುವುದರಿಂದ ಇವಕ್ಕೆ ವೀರುಧಃ ಎಂದರೆ ಓಷಧಿಗಳೆಂಬ ಹೆಸರು ಎಂದು ವೀರುಧ ಶಬ್ದಕ್ಕೆ ಅರ್ಥವಿವರಣೆ ಮಾಡಿದಾರೆ. (ನಿ. ೬–೩).

॥ ಸಂಹಿತಾಪಾಠಃ ॥

**ಓಷಧೀರಿತಿ ಮಾತರಸ್ತದ್ವೋ ದೇವೀರುಪಬ್ರುವೇ ।**

**ಸನೇಯಮಶ್ವಂ ಗಾಂ ವಾಸ ಆತ್ಮಾನಂ ತವ ಪೂರುಷ ॥ ೪ ॥**

॥ ಪದಪಾಠಃ ॥

**ಓಷಧೀಃ । ಇತಿ । ಮಾತರಃ । ತತ್ । ವಃ । ದೇವೀಃ । ಉಪ । ಬ್ರುವೇ ।**

**ಸನೇಯಂ । ಅಶ್ವಂ । ಗಾಂ । ವಾಸಃ । ಆತ್ಮಾನಂ । ತವ । ಪೂರುಷ ॥ ೪ ॥**

॥ ಸಾಯಣಭಾಷ್ಯಂ ॥

**ಹೇ ಓಷಧೀರೋಷಧಯೋ ದೇವೀರ್ದೇವ್ಯೋ ದ್ಯೋತನಾದಿಗುಣಕಾ ಹೇ ಮಾತರೋ ಜನಾನಾಂ ಮಾತೃಭೂತಾಃ । ಮಾತೃವದ್ಧಿತಕಾರಿತ್ವಾನ್ಮಾತೃತ್ವೋಪಚಾರಃ । ಅಥವಾ ಮಾತರ ಆರೋಗ್ಯನಿರ್ಮಾತ್ರ್ಯಃ ವೋ ಯುಷ್ಮಾಕಂ ಸಂಬಂಧಿನಂ ಭಿಷಜಂ ತದ್ವಕ್ಷ್ಯಮಾಣಮಿತೀತ್ಥಮುಪ ಬ್ರುವೇ । ಉಪಬ್ರವೀಮಿ । ಕಿಂ ತದಿತಿ ಚೇತ್ ಉಚ್ಯತೇ । ಓಷಧ್ಯರ್ಥಮಹಮಶ್ವಂ ಗಾಂ ವಾಸೋಽಂಶುಕಂ ಕಿಂ ಬಹುನಾತ್ಮಾನಮಪಿ ಹೇ ಪುರುಷ ಚಿಕಿತ್ಸಕ ತವ ತುಭ್ಯಂ ಸನೇಯಂ । ದದಾಮಿ ॥**

॥ ಪ್ರತಿಪದಾರ್ಥ ॥

**ದೇವೀಃ**—ದೇವತಾತ್ಮರೂ । **ಮಾತರಃ**-ಜನರಿಗೆ ಮಾತೃಪ್ರಾಯರೂ ಆದ। **ಓಷಧೀಃ**-ಎಲೈ ಓಷಧಿಗಳೇ। **ವಃ**—ನಿಮ್ಮ ಮಹತ್ತ್ವವನ್ನು । **ತತ್ ಇತ್**—ಮುಂದೆ ಹೇಳವಂತೆ । **ಉಪ ಬ್ರುವೇ**—ಪ್ರಶಂಸಿಸುತ್ತೇನೆ । **ಪುರುಷ**—ಎಲೈ ವೈದ್ಯನೇ । **ತವ**—ನಿನಗೆ । **ಅಶ್ವಂ**—ಅಶ್ವವನ್ನೂ । **ಗಾಃ**—ಗೋವುಗಳನ್ನೂ । **ವಾಸಃ**—ವಸ್ತ್ರಗಳನ್ನೂ । **ಆತ್ಮಾನಂ**—ನನ್ನ(ಸೇವೆಯ)ನ್ನೂ ಕೂಡ । **ಸನೇಯಂ**—ಅರ್ಪಿಸುತ್ತೇನೆ ।

॥ ಭಾವಾರ್ಥ ॥

ದೇವತಾತ್ಮರೂ, ಜನರಿಗೆ ಮಾತೃಪ್ರಾಯರೂ ಆದ ಎಲೈ ಓಷಧಿಗಳೇ, ನಿಮ್ಮ ಮಹತ್ತ್ವವನ್ನು ಮುಂದೆ ಹೇಳುವಂತೆ ಪ್ರಶಂಸಿಸುತ್ತೇನೆ. ಎಲೈ ವೈದ್ಯನೇ, ನಿನಗೆ ಅಶ್ವವನ್ನೂ, ಗೋವುಗಳನ್ನೂ, ವಸ್ತ್ರಗಳನ್ನೂ ಕೊನೆಗೆ ನನ್ನ ಸೇವೆಯನ್ನೂ ಸಹ ಅರ್ಪಿಸುತ್ತೇನೆ.

## English Translation.

Plants! thus I hail you, the mothers (of mankind). I will give to you, oh physician, a horse, a cow, a garment—even myself.

॥ ಸಂಹಿತಾಪಾಠಃ ॥

ಅಶ್ವತ್ಥೇ ವೋ ನಿಷದನಂ ಪರ್ಣೇ ವೋ ವಸತಿಷ್ಕೃತಾ ।
ಗೋಭಾಜ ಇತ್ಕಿಲಾಸಥ ಯತ್ಸನವಥ ಪೂರುಷಂ ॥ ೫ ॥

॥ ಪದಪಾಠಃ ॥

ಅಶ್ವತ್ಥೇ । ವಃ । ನಿऽಸದನಂ । ಪರ್ಣೇ । ವಃ । ವಸತಿಃ । ಕೃತಾ ।
ಗೋऽಭಾಜಃ । ಇತ್ । ಕಿಲ । ಅಸಥ । ಯತ್ । ಸನವಥ । ಪುರುಷಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಓಷಧಿದೇವತಾಃ ವೋ ಯುಷ್ಮಾಕಮಶ್ವತ್ಥೇ ನಿಷದನಂ ನಿತರಾಂ ವರ್ತನಂ । ತಥಾ ವೋ ಯುಷ್ಮಾಕಂ ಪರ್ಣೇ ಪಲಾಶೇ ವಸತಿರ್ನಿವಾಸಃ ಕೃತಾ । ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ತಂ ಗಾಯತ್ರ್ಯಾಹರತ್ತಸ್ಯ ಪರ್ಣಮಚ್ಛಿದ್ಯತ ತತ್ಪರ್ಣೋऽಭವತ್ ತತ್ಪರ್ಣಸ್ಯ ಪರ್ಣತ್ವಮಿತಿ । ತೈ. ಬ್ರಾ. ೧-೧-೩-೧೦ । ಬ್ರಾಹ್ಮಣಾತ್ಪಲಾಶಸ್ಯ ಪರ್ಣತ್ವಪ್ರಸಿದ್ಧಿಃ । ಅಶ್ವತ್ಥಪಲಾಶಯೋರ್ಯಜ್ಞಯೋಗ್ಯತ್ವ-ಪ್ರಾಧಾನ್ಯಾಪೇಕ್ಷಯೋಪಾದಾನಂ । ಕಿಂಚ ಗೋಭಾಜ ಇತ್ಕಿಲ ಗವಾಂ ಭಾಜಯಿತ್ರ್ಯ ಏವಾಸಥ । ಭವಥ ಖಲು । ಯದ್ಯದಿ ಸನವಥ ಸಂಭಜಥ್ಯೇ ಪುರುಷಂ ತರ್ಹ್ಯೇವಂ ಭವಥೇತಿ ॥ ವನ ಷಣ ಸಂಭಕ್ತೌ । ಲೇಟ್ಯಡಾಗಮಃ । ವ್ಯತ್ಯಯೇನೋಪ್ರತ್ಯಯಃ । ಯದ್ವಾ । ಔತ್ಸರ್ಗಿಕಃ ಶಪ್ಛೇತಿ ದ್ವಿವಿಕರಣತಾ ॥

॥ ಪ್ರತಿಪದಾರ್ಥ ॥

(ಎಲೈ ಓಷಧಿ ದೇವತೆಗಳೇ) ವಃ—ನಿಮ್ಮ । ನಿಷದನಂ—ವಸತಿಯು । ಅಶ್ವತ್ಥೇ—ಅಶ್ವತ್ಥವೃಕ್ಷದಲ್ಲಿಯೂ । ವಃ—ನಿಮ್ಮ । ವಸತಿಃ—ವಾಸಸ್ಥಾನವು । ಪರ್ಣೇ—ಪಲಾಶದಲ್ಲಿಯೂ । ಕೃತಾ—ನಿಯಮಿತ

ವಾಗಿದೆ. | **ಯತ್**—ಯಾವಾಗ | **ಪುರುಷಂ**—ನಮ್ಮನ್ನು ಆಶ್ರಯಿಸುವ ವೈದ್ಯನಿಗೆ | **ಸವನಥ**—ನೀವು ಅನುಗ್ರಹಿಸುವಿರೋ ಆಗ | **ಗೋಭಾಜ ಇತ್ ಕಿಲ**—ಅವನಿಗೆ ಗೋವುಗಳನ್ನು ದಾನಮಾಡುವವರಾಗಿಯೇ | **ಅಸಥ**—ಆಗಿರುತ್ತೀರಿ.

|| ಭಾವಾರ್ಥ ||

ಎಲೈ ಓಷಧಿದೇವತೆಗಳೇ, ನಿಮ್ಮ ವಸತಿಯು ಅಶ್ವತ್ಥವೃಕ್ಷದಲ್ಲಿಯೂ, ನಿಮ್ಮ ವಾಸಸ್ಥಾನವು ಪಲಾಶದ (ಮುತ್ತುಗದ) ಲ್ಲಿಯೂ ಸ್ಥಾಪಿತವಾಗಿದೆ. ಯಾವಾಗ ನಿಮ್ಮನ್ನು ಆಶ್ರಯಿಸುವ ವೈದ್ಯನನ್ನು ನೀವು ಅನುಗ್ರಹಿಸುವಿರೋ, ಆಗ ಅವನಿಗೆ ಗೋವುಗಳನ್ನು ದಾನಮಾಡುವವರೇ ಆಗಿರುತ್ತೀರಿ.

English Translation

Your abode is in the Ashwatha, your dwelling is established in the Palasa, you are assuredly the distributors of cattle, insmuch as you bestow them on the physician.

|| ಸಂಹಿತಾಪಾಠಃ ||

ಯತ್ರೌಷಧೀಃ ಸಮಗ್ಮತ ರಾಜಾನಃ ಸಮಿತಾವಿವ |
ವಿಪ್ರಃ ಸ ಉಚ್ಯತೇ ಭಿಷಗ್ರಕ್ಷೋಹಾಮೀವಚಾತನಃ || ೬ ||

|| ಪದಪಾಠಃ ||

ಯತ್ರ | ಓಷಧೀಃ | ಸಂऽಅಗ್ಮತ | ರಾಜಾನಃ | ಸಮಿತೌऽಇವ |
ವಿಪ್ರಃ | ಸಃ | ಉಚ್ಯತೇ | ಭಿಷಕ್ | ರಕ್ಷಃऽಹಾ | ಅಮೀವऽಚಾತನಃ || ೬ ||

|| ಸಾಯಣಭಾಷ್ಯಂ ||

**ಯತ್ರ ಯಸ್ಮಿನ್ದೇಶ ಓಷಧೀರೋಷಧಯಃ ಸಮಗ್ಮತ ಸಂಗಚ್ಛಂತೇ | ರಾಜಾನಃ ಸಮಿತಾವಿವ ಸಂಗ್ರಾಮೇ ಯಥಾ ಸಂಗತಾ ಭವಂತಿ ತದ್ವತ್ | ತಾಸಾಂ ನಾನಾವಿಧಾನಾಮೋಷಧೀನಾಂ ಸಂಗಮನಂ ಯಸ್ಮಿನ್ದೇಶೇऽಸ್ತಿ ತತ್ರ ವಿಪ್ರಃ ಪ್ರಾಜ್ಞೋ ಬ್ರಾಹ್ಮಣೋ ಭಿಷಗುಚ್ಯತೇ ರಕ್ಷೋಹಾ ರಕ್ಷೋಹಂತಾ | ಅಮೀವಚಾತನಃ | ಅಮೀವಾ ವ್ಯಾಧಿಃ | ತಸ್ಯ ಚಾತನಶ್ಚಾತಯಿತಾ ನಾಶಯಿತಾ ಚ ಭವತಿ ತದಾನೀಂ ||**

|| ಪ್ರತಿಪದಾರ್ಥ ||

**ಸಮಿತೌ**—ಯುದ್ಧದಲ್ಲಿ | **ರಾಜಾನ ಇವ**—ರಾಜರು ಸೇರಿಕೊಂಡಿರುವಂತೆ | **ಯತ್ರ**—ಯಾವ ಪ್ರದೇಶದಲ್ಲಿ | **ಓಷಧೀಃ**—ಓಷಧಿಗಳು | **ಸಮಗ್ಮತ**—ಒಟ್ಟಿಗೆ ಸೇರಿಕೊಂಡಿರುವುವೋ ಅಲ್ಲಿರುವ | **ವಿಪ್ರಃ**—ಪ್ರಾಜ್ಞನಾದ ಪುರುಷನು | **ಭಿಷಕ್**—ವೈದ್ಯನೆಂಬುದಾಗಿ | **ಉಚ್ಯತೇ**—ಕರೆಯಲ್ಪಡುತ್ತಾನೆ | **ಸಃ**—ಅವನು | **ರಕ್ಷೋಹಾ**—ರಾಕ್ಷಸರನ್ನು ನಾಶಮಾಡುವವನಾಗಿಯೂ | **ಅಮೀವಚಾತನಃ**—ರೋಗನಾಶಕನಾಗಿಯೂ ಇರುತ್ತಾನೆ.

|| ಭಾವಾರ್ಥ ||

ಯುದ್ಧದಲ್ಲಿ ರಾಜರು ಒಟ್ಟಾಗಿ ಒಂದುಕಡೆ ಸೇರಿಕೊಂಡಿರುವಂತೆ ಯಾವ ಪ್ರದೇಶದಲ್ಲಿ ಓಷಧಿಗಳು ಒಟ್ಟಿಗೆ ಸೇರಿಕೊಂಡಿರುವುವೋ ಅಲ್ಲಿರುವ ವಿಪ್ರನು ಪ್ರಾಜ್ಞನಾದ ವೈದ್ಯನೆಂದು ಕರೆಯಲ್ಪಡುತ್ತಾನೆ. ಆ ಪುರುಷನು ರಾಕ್ಷಸರನ್ನು ನಾಶಮಾಡುವವನಾಗಿಯೂ ರೋಗನಾಶಕನಾಗಿಯೂ ಇರುತ್ತಾನೆ.

## English Translation.

Where, plants, you are congregated like princes (assembled) in battle there the sage is designated a physician, the destroyer of evil spirits, the extirpator of disease.

|| ಸಂಹಿತಾಪಾಠಃ ||

ಅಶ್ವಾವತೀಂ ಸೋಮಾವತೀಮೂರ್ಜಯಂತೀಮುದೋಜಸಂ |
ಆವಿತ್ಸಿ ಸರ್ವಾ ಓಷಧೀರಸ್ಮಾ ಅರಿಷ್ಟತಾತಯೇ || ೭ ||

|| ಪದಪಾಠಃ ||

ಅಶ್ವಽವತೀಂ | ಸೋಮಽವತೀಂ | ಊರ್ಜಯಂತೀಂ | ಉತ್ಽಓಜಸಂ |
ಆ | ಅವಿತ್ಸಿ | ಸರ್ವಾಃ | ಓಷಧೀಃ | ಅಸ್ಮೈ | ಅರಿಷ್ಟಽತಾತಯೇ || ೭ ||

|| ಸಾಯಣಭಾಷ್ಯಂ ||

ಅಶ್ವಾವತ್ಯಾದಯಃ ಪ್ರಧಾನಭೂತಾ ಓಷಧಯಶ್ಚತಸ್ರಃ | ತಾಃ ಸರ್ವಾ ಓಷಧೀರಾವಿತ್ಸಿ | ಆಜಾನೇ | ಸ್ತೌಮೀತ್ಯರ್ಥಃ | ಅಸ್ಮಾ ಅರಿಷ್ಟತಾತಯೇ | ಅಮುಂ ರೋಗಂ ವಿನಾಶಯಿತುಮಿತ್ಯರ್ಥಃ ||

|| ಪ್ರತಿಪದಾರ್ಥ ||

**ಅಶ್ವಾವತೀಂ**— ಅಶ್ವಾವತೀಸಂಜ್ಞಕವೂ | **ಸೋಮವತೀಂ**— ಸೋಮವತಿಯೆಂಬ ಹೆಸರುಳ್ಳದ್ದೂ **ಊರ್ಜಯಂತೀಂ**—ಊರ್ಜಯಂತೀನಾಮಕವಾದುದೂ | **ಉದೋಜಸಂ**— ಉದೋಜಸ್ ಎಂದು ಪ್ರಸಿದ್ಧವಾದುದೂ ಆದ | **ಸರ್ವಾ ಓಷಧೀಃ**—ಸಕಲ (ನಾಲ್ಕು) ವಿಧವಾದ ಓಷಧಿಗಳನ್ನೂ | **ಅಸ್ಮೈ ಅರಿಷ್ಟತಾತಯೇ**— ಈ ರೋಗನಾಶಾರ್ಥವಾಗಿ | **ಆವಿತ್ಸಿ**—ಸ್ತುತಿಸುತ್ತೇನೆ.

|| ಭಾವಾರ್ಥ ||

ಅಶ್ವಾವತಿಯೆಂಬ ಹೆಸರುಳ್ಳದ್ದೂ, ಸೋಮವತಿಯೆಂಬ ಹೆಸರುಳ್ಳದ್ದೂ, ಊರ್ಜಯಂತೀನಾಮಕವಾದುದೂ, ಉದೋಜಸ್ ಎಂದು ಪ್ರಸಿದ್ಧವಾದುದೂ ಆದ ಸಕಲ (ನಾಲ್ಕುವಿಧ) ಓಷಧಿಗಳನ್ನೂ ಈ ರೋಗನಾಶಾರ್ಥವಾಗಿ ಸ್ತುತಿಸುತ್ತೇನೆ.

## English Translation.

The Ashwavathi, the Somavathi, the Urjayanti, the Udojasa—all these plants I praise for the purpose of overcoming this disease.

॥ ಸಂಹಿತಾಪಾಠಃ ॥

**ಉಚ್ಛುಷ್ಮಾ ಓಷಧೀನಾಂ ಗಾವೋ ಗೋಷ್ಠಾದಿವೇರತೇ ।**

**ಧನಂ ಸನಿಷ್ಯಂತೀನಾಮಾತ್ಮಾನಂ ತವ ಪೂರುಷ ॥ ೮ ॥**

॥ ಪದಪಾಠಃ ॥

**ಉತ್ । ಶುಷ್ಮಾಃ । ಓಷಧೀನಾಂ । ಗಾವಃ । ಗೋಸ್ಥಾತ್ಽಇವ । ಈರತೇ ।**

**ಧನಂ । ಸನಿಷ್ಯಂತೀನಾಂ । ಆತ್ಮಾನಂ । ತವ । ಪುರುಷ ॥ ೮ ॥**

॥ ಸಾಯಣಭಾಷ್ಯಂ ॥

**ಓಷಧೀನಾಂ ಶುಷ್ಮಾ ಬಲಾನ್ಯುದೀರತೇ । ಉದ್ಗಚ್ಛಂತಿ । ರುಗ್ಣೇ ಸ್ವವೀರ್ಯಂ ಪ್ರೋದ್ಗಮಯಂತೀತ್ಯರ್ಥಃ । ಗಾವೋ ಗೋಷ್ಠಾದಿವ । ತಾ ಯಥಾ ತತಃ ಸಕಾಶಾದುದೀರತೇ ತದ್ವತ್ । ಕೀದೃಶೀನಾಮೋಷಧೀನಾಂ । ಉಚ್ಯತೇ । ಧನಂ ಸ್ವಸಾಮರ್ಥ್ಯಲಕ್ಷಣಂ ಸನಿಷ್ಯಂತೀನಾಂ ದಾತುಮಿಚ್ಛಂತೀನಾಂ। ಕಿಂ ಪ್ರತೀತಿ ಉಚ್ಯತೇ । ಪೂರುಷ ಪುರುಷ ರೋಗಗ್ರಸ್ತ ತವಾತ್ಮಾನಂ ಶರೀರಂ ಪ್ರತಿ । ಯದ್ವಾ। ಪ್ರರೋಹಂತೀರೋಷಧೀರ್ದೃಷ್ಟ್ವಾ ವದತಿ । ಹೇ ಪುರುಷ ಪ್ರಿಯಂಗ್ವಾದ್ಯೋಷಧಿಸ್ವಾಮಿನ್ ತವಾತ್ಮಾನಂ ವರ್ಧಯಿತುಂ ಧನಂ ಸನಿಷ್ಯಂತೀನಾಂ ವ್ರೀಹ್ಯಾದ್ಯೋಷಧೀನಾಂ ಶುಷ್ಮಾ ಉದೀರತೇ ॥**

॥ ಪ್ರತಿಪದಾರ್ಥ ॥

**ಪುರುಷ**—ಎಲೈ ರೋಗಗ್ರಸ್ತನಾದ ಪುರುಷನೇ । **ಗೋಷ್ಠಾತ್**—ಕೊಟ್ಟಿಗೆಯಿಂದ । **ಗಾವ ಇವ**—ಗೋವುಗಳು ಹೊರ ಹೊರಟು ಬರುವಂತೆ । **ಧನಂ**-ತಮ್ಮ ರಸಸಂಪತ್ತನ್ನು । **ಸನಿಷ್ಯಂತೀನಾಂ**—ಒದಗಿಸಲಿಚ್ಛಿಸುವ । **ಓಷಧೀನಾಂ**—ಈ ಓಷಧಿಗಳ । **ಶುಷ್ಮಾಃ**—ಶಕ್ತಿಗಳು । **ತವ**—ನಿನ್ನ । **ಆತ್ಮಾನಂ**—ಶರೀರಾಭಿಮುಖವಾಗಿ । **ಉದೀರತೇ**—ಹೊರಕ್ಕೆ ಆವಿರ್ಭೂತವಾಗಿ ಬರುತ್ತವೆ.

॥ ಭಾವಾರ್ಥ ॥

ಎಲೈ ರೋಗಗ್ರಸ್ತನಾದ ಪುರುಷನೇ, ಕೊಟ್ಟಿಗೆಯಿಂದ ಗೋವುಗಳು ಹೊರಹೊರಟುಬರುವಂತೆ ತಮ್ಮ ರಸ ಸಂಪತ್ತನ್ನು ಒದಗಿಸಲಿಚ್ಛಿಸುವ ಈ ಓಷಧಿಗಳ ಶಕ್ತಿಗಳು ನಿನ್ನ ಶರೀರಾಭಿಮುಖವಾಗಿ ಆವಿರ್ಭೂತವಾಗಿ ಬರುತ್ತವೆ.

## English Translation

The virtues of the plants which are desirous of bestowing wealth issue from them, man, (towards) your body like cattle from the pen.

॥ ಸಂಹಿತಾಪಾಠಃ ॥

ಇಷ್ಕೃತಿರ್ನಾಮ ವೋ ಮಾತಾಥೋ ಯೂಯಂ ಸ್ಥ ನಿಷ್ಕೃತೀಃ ।
ಸೀರಾಃ ಪತತ್ರಿಣೀಃ ಸ್ಥನ ಯದಾಮಯತಿ ನಿಷ್ಕೃಥ ॥ ೯ ॥

॥ ಪದಪಾಠಃ ॥

ಇಷ್ಕೃತಿಃ । ನಾಮ । ವಃ । ಮಾತಾ । ಅಥೋ ಇತಿ । ಯೂಯಂ । ಸ್ಥ । ನಿಃऽಕೃತೀಃ ।
ಸೀರಾಃ । ಪತತ್ರಿಣೀಃ । ಸ್ಥನ । ಯತ್ । ಆಮಯತಿ । ನಿಃ । ಕೃಥ ॥ ೯ ॥

॥ ಸಾಯಣಭಾಷ್ಯಂ ॥

**ಹೇ ಓಷಧಯಃ ವೋ ಮಾತಾ ಜನನೀಷ್ಕೃತಿರ್ನಾಮ । ಸರ್ವೇಷಾಂ ರುಗ್ಣಾನಾಂ ನಿಷ್ಕರ್ತ್ರೀತಿ ಪ್ರಸಿದ್ಧಾ ಯಸ್ಮಾತ್ಸಾ ರುಗ್ಣಂ ನಿಷ್ಕರೋತಿ । ಅಥಾತೋ ಯೂಯಮಪಿ ನಿಷ್ಕೃತೀರ್ನಿಷ್ಕೃತಯಃ ಸ್ಥ । ಭವಥ । ಕಿಂಚ ಯೂಯಂ ಸೀರಾಃ ಸರಣಶೀಲಾಃ ಪತತ್ರಿಣೀಃ ಪತನವತ್ಯಶ್ಚ ಸ್ಥನ । ಭವಥ ॥ ತಪ್ತನಬಿತಿ ತನಾದೇಶಃ ॥ ಕಿಂಚ ಪುರುಷೋ ಯದ್ಯದ್ಯಾಮಯತಿ ವ್ಯಾಧಿತೋ ಭವತಿ ತಂ ನಿಷ್ಕೃಥ । ಸಂಸ್ಕುರುಥ ॥**

॥ ಪ್ರತಿಪದಾರ್ಥ ॥

(ಎಲೈ ಓಷಧಿಗಳೇ) **ವಃ**—ನಿಮ್ಮ । **ಮಾತಾ** - ಜನನಿಯು । **ಇಷ್ಕೃತಿಃ ನಾಮ**—ಸಕಲ ರೋಗಗಳನ್ನೂ ನಿವಾರಿಸುವುದರಿಂದ ಇಷ್ಕೃತಿಯೆಂದು ಪ್ರಸಿದ್ಧಳಾಗಿದ್ದಾಳೆ । **ಅಥ**—ಆದ್ದರಿಂದ । **ಯೂಯಂ**—ನೀವೂ ಸಹ । **ನಿಷ್ಕೃತೀಃ ಸ್ಥ**—ಆ ಕಾರಣದಿಂದಲೇ ನಿಷ್ಕೃತಿಗಳೆಂದು ಪ್ರಸಿದ್ಧರಾಗಿದ್ದೀರಿ. । **(ಯೂಯಂ**—ನೀವು) । **ಪತತ್ರಿಣೀಃ**—ಹಾರಲು ಸಾಮರ್ಥ್ಯವುಳ್ಳವರೂ । **ಸೀರಾಃ**— ಸಂಚಾರಾತ್ಮಕರೂ । **ಸ್ಥನ**—ಆಗಿದ್ದೀರಿ. । **ಯತ್**—ಒಂದು ವೇಳೆ । **ಆಮಯತಿ**—ಪುರುಷನು ರೋಗಗ್ರಸ್ತನಾದರೆ । **ನಿಷ್ಕೃಥ**—ಅವನನ್ನು ಗುಣಪಡಿಸಿರಿ.

॥ ಭಾವಾರ್ಥ ॥

ಎಲೈ ಓಷಧಿಗಳೇ, ನಿಮ್ಮ ಜನನಿಯು ಸಕಲ ರೋಗಗಳನ್ನೂ ನಿವಾರಿಸುವುದರಿಂದ ಇಷ್ಕೃತಿಯೆಂದು ಪ್ರಸಿದ್ಧಳಾಗಿದ್ದಾಳೆ. ಆದ್ದರಿಂದ ನೀವೂ ಸಹ ಈ ಕಾರಣದಿಂದಲೇ ನಿಷ್ಕೃತಿಗಳೆಂದೂ ಪ್ರಸಿದ್ಧರಾಗಿದ್ದೀರಿ. ನೀವು ಹಾರಲು ಸಾಮರ್ಥ್ಯವುಳ್ಳವರೂ ಆಗಿದ್ದೀರಿ. ಒಂದು ವೇಳೆ ಪುರುಷನು ವ್ಯಾಧಿ ಪೀಡಿತನಾದರೆ ಅವನನ್ನು ಗುಣಪಡಿಸಿರಿ.

## English Translation.

Verily Ishkriti is your mother, therefore are you (also)Nishkritis; you are flying streams; if (aman) is ill you cure him.

॥ ಸಂಹಿತಾಪಾಠಃ ॥

ಅತಿ ವಿಶ್ವಾಃ ಪರಿಷ್ಠಾಃ ಸ್ತೇನ ಇವ ವ್ರಜಮಕ್ರಮುಃ ।
ಓಷಧೀಃ ಪ್ರಾಚುಚ್ಯವುರ್ಯತ್ಕಿಂ ಚ ತನ್ವೋ೩ರಪಃ ॥ ೧೦ ॥

॥ ಪದಪಾಠಃ ॥

ಅತಿ । ವಿಶ್ವಾಃ । ಪರಿಽಸ್ಥಾಃ । ಸ್ತೇನಃಽಇವ । ವ್ರಜಂ । ಅಕ್ರಮುಃ ।
ಓಷಧೀಃ । ಪ್ರ । ಅಚುಚ್ಯವುಃ । ಯತ್ । ಕಿಂ । ಚ । ತನ್ವಃ । ರಪಃ ॥ ೧೦ ॥

॥ ಸಾಯಣಭಾಷ್ಯಂ ॥

ವಿಶ್ವಾ ವ್ಯಾಪ್ತಾಃ ಪರಿಷ್ಠಾಃ ಪರಿತಃ ಸ್ಥಿತಾ ಓಷಧಯೋಽತ್ಯಕ್ರಮುಃ । ವ್ಯಾಧೀನತಿಕ್ರಾಂತವತ್ಯಃ। ಸ್ತೇನ ಇವ ವ್ರಜಂ । ಯಥಾ ಸ್ತೇನೋ ವ್ರಜಮತ್ಯಕ್ರಮೀತ್ ತದ್ವತ್ । ತಥಾ ಕೃತ್ವೌಷಧೀರೋಷಧಯಃ ಪ್ರಾಚುಚ್ಯವುಃ ಪ್ರಚ್ಯಾವಯಂತಿ ಯತ್ಕಿಂ ಚ ತನ್ವೋ ರುಗ್ಣಶರೀರಸ್ಯ ರಪಃ ಪಾಪಂ ವ್ಯಾಧಿಲಕ್ಷಣಮಸ್ತಿ ತದಿತಿ ॥

॥ ಪ್ರತಿಪದಾರ್ಥ ॥

ಸ್ತೇನಃ—ಕಳ್ಳನು । ವ್ರಜಂ ಇವ—ಕೊಟ್ಟಿಗೆಯನ್ನು ಹೊಕ್ಕು ಹಸುಗಳನ್ನೆಲ್ಲಾ ಅಪಹರಿಸುವಂತೆ । ಪರಿಷ್ಠಾಃ—ಸುತ್ತಲೂ ವ್ಯಾಪಿಸಿರುವ । ವಿಶ್ವಾಃ ಓಷಧೀಃ ಸಕಲ ಓಷಧಿಗಳೂ । ಅತ್ಯಕ್ರಮುಃ—ವ್ಯಾಧಿಯನ್ನು ಮುತ್ತುತ್ತವೆ । ತನ್ವಃ—ಶರೀರ ಸಂಬಂಧಿಯಾದ । ಯತ್ಕಿಂ ಚ ರಪಃ—ಯಾವ ದೋಷವಿದ್ದರೂ ಅದನ್ನು । ಪ್ರಾಚುಚ್ಯವುಃ—ಓಡಿಸುತ್ತವೆ.

॥ ಭಾವಾರ್ಥ ॥

ಕಳ್ಳನು ಕೊಟ್ಟಿಗೆಯನ್ನು ಹೊಕ್ಕು ಹಸುಗಳನ್ನೆಲ್ಲ ಅಪಹರಿಸುವಂತೆ ಸುತ್ತಲೂ ವ್ಯಾಪಿಸಿರುವ ಸಕಲ ಓಷಧಿಗಳೂ ವ್ಯಾಧಿಯನ್ನು ಮುತ್ತಿ ಅವನ್ನು ಅಪಹರಿಸುತ್ತವೆ. ಶರೀರ ಸಂಬಂಧಿಯಾದ ಯಾವ ದೋಷವಿದ್ದರೂ ಅದನ್ನು ಓಡಿಸುತ್ತವೆ.

## English Translation

The universal all-pervading plants assail (diseases) as a thief (attacks) a cow-shed; they drive out whatever infirmity of body there may be.

॥ ಸಂಹಿತಾಪಾಠಃ ॥

ಯದಿಮಾ ವಾಜಯನ್ನಹಮೋಷಧೀರ್ಹಸ್ತ ಆದಧೇ ।
ಆತ್ಮಾ ಯಕ್ಷ್ಮಸ್ಯ ನಶ್ಯತಿ ಪುರಾ ಜೀವಗೃಭೋ ಯಥಾ ॥ ೧೧ ॥

॥ ಪದಪಾಠಃ ॥

ಯತ್ । ಇಮಾಃ । ವಾಜಯನ್ । ಅಹಂ । ಓಷಧೀಃ । ಹಸ್ತೇ । ಆಽದಧೇ ।
ಆತ್ಮಾ । ಯಕ್ಷ್ಮಸ್ಯ । ನಶ್ಯತಿ । ಪುರಾ । ಜೀವಽಗೃಭಃ । ಯಥಾ ॥ ೧೧ ॥

॥ ಸಾಯಣಭಾಷ್ಯಂ ॥

ಅಹಂ ಯದ್ಯದೀಮಾ ಓಷಧೀರ್ಹಸ್ತ ಆದಧೇ ಆಧಾರಯಾಮಿ । ಕಿಂ ಕುರ್ವನ್ । ವಾಜಯನ್ ರುಗ್ಣಂ ಬಲಿನಂ ಕುರ್ವನ್। ತತಃ ಪುರಾ ಯಕ್ಷ್ಮಸ್ಯ ರೋಗಸ್ಯಾತ್ಮಾ ನಶ್ಯತಿ ನಷ್ಟೋ ಭವತಿ ಜೀವಗೃಭೋ ಯಥಾ । ಜೀವಾನಾಂ ಶಕುನಾದೀನಾಂ ಗ್ರಾಹಕಾದ್ವ್ಯಾಧಾದ್ಯಥಾ ಜೀವಾ ನಶ್ಯಂತಿ ತದ್ವತ್ । ಯದ್ವಾ। ಜೀವಗೃಭೋ ಮೃತ್ಯೋಃ ಸಕಾಶಾಜ್ಜೀವೋಽಪಹ್ರಿಯತೇ । ತದ್ವತ್ ॥

॥ ಪ್ರತಿಪದಾರ್ಥ ॥

**ಜೀವಗೃಭೋ ಯಥಾ**— ಬೇಡನು ಹಿಡಿದೊಡನೆಯೇ ಪಕ್ಷ್ಯಾದಿಗಳ ಪ್ರಾಣವು ಹಾರಿಹೋಗುವಂತೆ। **ಅಹಂ**—ನಾನು । **ಯತ್**—ಯಾವಾಗ । **ವಾಜಯನ್**—ರೋಗಿಯನ್ನು ಬಲಿಷ್ಠನನ್ನಾಗಿ ಮಾಡುತ್ತಾ । **ಇಮಾಃ ಓಷಧೀಃ**—ಈ ಓಷಧಿಗಳನ್ನು । **ಹಸ್ತೇ**—ಕೈಯಲ್ಲಿ । **ಆದಧೇ**—ಹಿಡಿಯುವೆನೋ ಆಗ । **ಪುರಾ**— ಅದನ್ನು ಪ್ರಯೋಗಿಸುವುದಕ್ಕೆ ಮೊದಲೇ । **ಯಕ್ಷ್ಮಸ್ಯ** ರೋಗದ । **ಆತ್ಮಾ**—ಶಕ್ತಿಯು । **ನಶ್ಯತಿ**—ನಾಶ ವಾಗುತ್ತದೆ.

॥ ಭಾವಾರ್ಥ ॥

ಬೇಡನು ಹಿಡಿದೊಡನೆಯೇ, ಪಕ್ಷ್ಯಾದಿಗಳ ಪ್ರಾಣವು ಹಾರಿಹೋಗುವಂತೆ, ನಾನು ಯಾವಾಗ ರೋಗಿಯನ್ನು ಬಲಿಷ್ಠನನ್ನಾಗಿ ಮಾಡುವುದಕ್ಕಾಗಿ ಈ ಓಷಧಿಗಳನ್ನು ಕೈಯಲ್ಲಿ ಹಿಡಿಯುವೆನೋ ಆಗ ಅದನ್ನು ಪ್ರಯೋಗಿಸುವುದಕ್ಕೆ ಮೊದಲೇ, ರೋಗದ ಶಕ್ತಿಯು ನಾಶವಾಗುತ್ತದೆ.

## English Translation.

As soon as I take these plants in my hand making (the sick man) strong, the soul of the malady perishes before (their application) as (life is driven away from the persence) of the seizer of life.

‖ ವಿಶೇಷವಿಷಯಗಳು ‖

**ಯಥಾ** ಎಂಬ ನಿಪಾತಶಬ್ದಕ್ಕೆ ಇರುವ ಉಪಮಾರ್ಥವನ್ನು ವಿವರಿಸುವಾಗ ಯಾಸ್ಕರು **ಈ ಋಕ್ಕಿನ** ಉತ್ತರಾರ್ಧವನ್ನು ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರ್ವಚನವನ್ನು ಹೇಳಿದ್ದಾರೆ—

**ಆತ್ಮಾ ಯಕ್ಷ್ಮಸ್ಯ ನಶ್ಯತಿ ಪುರಾ ಜೀವಗೃಭೋ ಯಥಾ | ಆತ್ಮಾತತೇರ್ವಾಪ್ತೇರ್ವಾಪಿ ವಾಪ್ತ ಇವ ಸ್ಯಾತ್ ಯಾವದ್ವ್ಯಾಪ್ತಿಭೂತ ಇತಿ ||**

(ನಿ. ೩-೧೫)

ಬೇಡನು ಹಕ್ಕಿಯನ್ನು ಕೈಯಲ್ಲಿ ಭದ್ರವಾಗಿ ಹಿಡಿಯುವುದಕ್ಕೆ ಮೊದಲೇ ಭಯದಿಂದ ಯಾವರೀತಿ ಅದು ಸತ್ತು ಹೋಗುವುದೋ ಅದರಂತೆ ಓಷಧಿಯನ್ನು ನಾನು ಕೈಯಲ್ಲಿ ಹಿಡಿದ ಕೂಡಲೇ ಎಂದರೆ ಅದನ್ನು ಶರೀರದ ಮೇಲೆ ಪ್ರಯೋಗಿಸುವುದಕ್ಕೆ ಮುಂಚೆಯೇ ಯಕ್ಷ್ಮರೋಗದ ಆತ್ಮವು ಎಂದರೆ ಮೂಲವು (ಕಾರಣವು) ತಕ್ಷಣ ನಾಶವಾಗುತ್ತದೆ. ಆ ರೋಗವು ತಿರುಗಿ ಬರದಂತೆ ಅದರ ಮೂಲವೇ ನಾಶವಾಗುತ್ತದೆ ಎಂದಭಿಪ್ರಾಯವು.

ಹೋಗು ಎಂಬರ್ಥವುಳ್ಳ ಅತ್ ಎಂಬ ಧಾತುವಿನಿಂದಾಗಲಿ, ವ್ಯಾಪಿಸಿ ಇರಡು ಎಂಬರ್ಥವುಳ್ಳ ಆಪ್ಲೃ ವ್ಯಾಪ್ತೌ ಎಂಬ ಧಾತುವಿನಿಂದಾಗಲಿ ಆತ್ಮಾ ಎಂಬ ಶಬ್ದದ ನಿಷ್ಪತ್ತಿಯಾಗಿದೆ. ಹೇಗೆಂದರೆ ಸರ್ವಪ್ರಾಣಿಗಳಲ್ಲಿಯೂ, ಸರ್ವಸ್ಥಳಗಳಲ್ಲಿಯೂ ಈ ಆತ್ಮವಿರುವುದರಿಂದ ಇದಕ್ಕೆ ಆತ್ಮಾ ಎಂಬ ಹೆಸರು ಬಂದಿದೆ ಅಥವಾ ಸರ್ವವನ್ನು ವ್ಯಾಪಿಸಿರುವುದರಿಂದ ಇದಕ್ಕೆ ಆತ್ಮಾ ಎಂದೂ ಹೆಸರು. ಅಥವಾ ಕೇವಲ ನಿರ್ದಿಷ್ಟಸ್ಥಾನವನ್ನ ಎಂದರೆ ಪ್ರಾಣಿಯ ಶರೀರವನ್ನು (ಮಾತ್ರ) ವ್ಯಾಪಿಸಿರುವುದೆಂದು ಹೇಳುವ ರೂಢಿ ಇರುವುದರಿಂದ ಇದಕ್ಕೆ ಆತ್ಮಾ ಎಂಬ ಹೆಸರು. **ಆತ್ಮವು** ಸಮಸ್ತವಾದ ವಿಶ್ವದಲ್ಲಿಯೂ ಸಮಷ್ಟಿರೂಪದಿಂದ ವ್ಯಾಪಿಸಿದ್ದರೂ ಪ್ರಾಣಿಗಳ ಶರೀರದಲ್ಲಿ ವ್ಯಷ್ಟಿರೂಪದಿಂದ (ಭಿನ್ನ ಭಿನ್ನವಾಗಿರುವಂತೆ) ಇರುವುದೆಂದು ಹೇಳಲ್ಪಡುವುದು. ಆದ್ದರಿಂದಲೇ ಆಪ್ತಿ ವ್ಯಾಪ್ತಿ ಎಂಬ ಎರಡುವಿಧವಾದ ವ್ಯಾಪ್ತಿಗೆ ಒಳಪಟ್ಟಿರುವುದು. ಆಪ್ತಿ ಎಂದರೆ ಸಮಸ್ತವಿಶ್ವದಲ್ಲಿಯೂ ಇದರ ವ್ಯಾಪ್ತಿ ಸಮಷ್ಟಿರೂಪದಿಂದ ಇದೆ. ವ್ಯಾಪ್ತಿ ಎಂದರೆ ಒಂದು ನಿರ್ದಿಷ್ಟವಾದ ಪ್ರಾಣಿಯ (ಅಥವಾ ಪುರುಷನ) ಶರೀರದಲ್ಲಿ ವ್ಯಾಪಿಸಿ (ಸೇರಿಸಿ) ಇರುವುದೆಂದೂ ಹೇಳುವುದು ರೂಢಿಯಲ್ಲಿದೆ. ಈ ಎರಡುವಿಧವಾದ ವ್ಯಾಪ್ತಿಗೆ ಒಳಪಟ್ಟಿರುವುದರಿಂದ ಇದಕ್ಕೆ ಆತ್ಮಾ ಎಂಬ ಹೆಸರು ಬಂದಿದೆ ಎಂದು ನಿರ್ವಚನಾಭಿಪ್ರಾಯವು.

|| ಸಂಹಿತಾಪಾಠಃ ||

ಯಸ್ಯೌಷಧೀಃ ಪ್ರಸರ್ಪಥಾಂಗಮಂಗಂ ಪರುಷ್ಪರುಃ |
ತತೋ ಯಕ್ಷ್ಮಂ ವಿ ಬಾಧಧ್ವ ಉಗ್ರೋ ಮಧ್ಯಮಶೀರಿವ || ೧೨ ||

|| ಪದಪಾಠಃ ||

ಯಸ್ಯ | ಓಷಧೀಃ | ಪ್ರಸರ್ಪಥ | ಅಂಗಂಽಅಂಗಂ | ಪರುಃಽಪರುಃ |
ತತಃ | ಯಕ್ಷ್ಮಂ | ವಿ | ಬಾಧಧ್ವೇ | ಉಗ್ರಃ | ಮಧ್ಯಮಶೀಃಽಇವ || ೧೨ ||

॥ ಸಾಯಣಭಾಷ್ಯಂ ॥

ಹೇ ಓಷಧೀರೋಷಧಯಃ ಯಸ್ಯ ರುಗ್ಣಸ್ಯಾಂಗಮಂಗಂ ಯದ್ಯದಂಗಂ ಪರುಃಪರುರ್ಯದ್ಯತ್ಪರ್ವ ಪ್ರಸರ್ಪಥ ಪ್ರಕರ್ಷೇಣಾಶ್ರಯಥ ತತೋಽಂಗಾತ್ಪರ್ವಣಶ್ಚ ಯಕ್ಷ್ಮಂ ವ್ಯಾಧಿಂ ವಿ ಬಾಧಧ್ವೇ । ಉಗ್ರ ಉದ್ಗೂರ್ಣಬಲೋ ಮಧ್ಯಮಶೀರ್ಮಧ್ಯಮಸ್ಥಾನೇ ವರ್ತಮಾನೋ ರಾಜಾ ಯಥೋಪದ್ರವಕಾರಿಣಃ ಸಮನಂತರಂ ಶತ್ರೂನ್ಸ್ವದೇಶದೇ ವಿಬಾಧತೇ ತದ್ವತ್ ॥

॥ ಪ್ರತಿಪದಾರ್ಥ ॥

**ಓಷಧೀಃ**—ಎಲೈ ಓಷಧಿಗಳೇ । **ಉಗ್ರಃ**—ಬಲಶಾಲಿಯಾದ । **ಮಧ್ಯಮಶೀಃ ಇವ**—ತನ್ನ ಸೇನೆಯ ಮಧ್ಯದಲ್ಲಿ ನಿಂತು ಹೋರಾಡುವ ರಾಜನು ಶತ್ರುಗಳನ್ನೆಲ್ಲ ನಾಶಪಡಿಸುವಂತೆ । **ಯೂಯಂ**—ನೀವು । **ಯಸ್ಯ**—ಯಾವ ರೋಗಿಯ । **ಅಂಗಂಅಂಗಂ**—ಪ್ರತಿಯೊಂದು ಅಂಗದ । **ಪರುಃ ಪರುಃ**—ಎಲ್ಲಾ ಪರ್ವ (ಸಂಧಿ) ಪ್ರದೇಶಗಳನ್ನೂ । **ಪ್ರಸರ್ಪಥ**—ಪ್ರವೇಶಿಸಿ ಪ್ರಸರಿಸುವಿರೋ ಆಗ । **ತತಃ**— ಆ ಎಲ್ಲ ಪ್ರದೇಶಗಳಿಂದಲೂ । **ಯಕ್ಷ್ಮಂ**—ವ್ಯಾಧಿಯನ್ನು । **ವಿ ಬಾಧಧ್ವೇ**—ಪೂರ್ಣವಾಗಿ ನಾಶಪಡಿಸಿರಿ ।

॥ ಭಾವಾರ್ಥ ॥

ಎಲೈ ಓಷಧಿಗಳೇ, ಬಲಶಾಲಿಯೂ, ತನ್ನ ಸೇನೆಯ ಮಧ್ಯದಲ್ಲಿ ನಿಂತು ಹೋರಾಡುವವನೂ ಆದ ರಾಜನು ತನ್ನ ಶತ್ರುಗಳನ್ನೆಲ್ಲ ನಾಶಪಡಿಸುವಂತೆ ನೀವು ಯಾವ ರೋಗಿಯ ಪ್ರತಿಯೊಂದು ಅಂಗದ ಎಲ್ಲ ಪ್ರದೇಶಗಳನ್ನೂ ಪ್ರವೇಶಿಸಿ ಪ್ರಸರಿಸುವಿರೋ, ಆಗ ಆ ಎಲ್ಲ ಪ್ರದೇಶಗಳಿಂದಲೂ ಅವನ ವ್ಯಾಧಿಯನ್ನು ಪೂರ್ಣವಾಗಿ ನಾಶಮಾಡಿರಿ.

**English Translation.**

From him, oh plants, in whom you creep from limb to limb, from joint to joint, you drive away disease like a mighty (prince) stationed in the midst of his host.

॥ ಸಂಹಿತಾಪಾಠಃ ॥

ಸಾಕಂ ಯಕ್ಷ್ಮ ಪ್ರ ಪತ ಚಾಷೇಣ ಕಿಕಿದೀವಿನಾ ।
ಸಾಕಂ ವಾತಸ್ಯ ಧ್ರಾಜ್ಯಾ ಸಾಕಂ ನಶ್ಯ ನಿಹಾಕಯಾ ॥ ೧೩ ॥

॥ ಪದಪಾಠಃ ॥

ಸಾಕಂ । ಯಕ್ಷ್ಮ । ಪ್ರ । ಪತ । ಚಾಷೇಣ । ಕಿಕಿದೀವಿನಾ ।
ಸಾಕಂ । ವಾತಸ್ಯ । ಧ್ರಾಜ್ಯಾ । ಸಾಕಂ । ನಶ್ಯ । ನಿಽಹಾಕಯಾ ॥ ೧೩ ॥

|| ಸಾಯಣಭಾಷ್ಯಂ ||

ಹೇ ಅಸ್ಮದೀಯಸ್ಯ ಪುರುಷಸ್ಯ ಶರೀರಾಧಿಷ್ಠಾಯಿನ್ಯಕ್ಷ್ಮ ವ್ಯಾಧೇ ತ್ವಂ ಸಾಕಂ ಸಹೈವ ಪ್ರ ಪತ । ಪ್ರಕರ್ಷೇಣ ಶೀಘ್ರಂ ಗಚ್ಛ । ಕೇನ ಸಾಕಮಿತಿ ಉಚ್ಯತೇ । ಚಾಷೇಣಾತಿಶೀಘ್ರಂ ಪತತಾ ಚಾಷಾಖ್ಯೇನ ಪಕ್ಷಿಣಾ ಸಹ । ತಥಾ ಕಿಕಿದೀವಿನಾ ಪಕ್ಷಿಣಾ ಚ ಸಹ । ತಥಾ ವಾತಸ್ಯ ಶೀಘ್ರಂ ಗಚ್ಛತೋ ವಾಯೋರ್ಧ್ರಾಜ್ಯಾ ॥ ಧ್ರಜ ಗತೌ ॥ ಗತಿವೇಗೇನ ಸಹ ಗಚ್ಛ । ತಥಾ ನಿಹಾಕಯಾ ಗೋಧಿಕಯಾ ಸಾಕಂ ನಶ್ಯ । ನಾಶಂ ಪ್ರಾಪ್ನುಹಿ ॥

|| ಪ್ರತಿಪದಾರ್ಥ ||

**ಯಕ್ಷ್ಮ**—ಎಲೈ ವ್ಯಾಧಿಯೇ । **ಸಾಕಂ**—ಒಂದೇ ಬಾರಿಗೆ । **ಪ್ರಪತ**—ಹಾರಾಗಿ ಹೋಗು । **ಚಾಷೇಣ**—ಚಾಷ ಪಕ್ಷಿಯ ವೇಗದಲ್ಲೂ । **ಕಿಕಿದೀವಿನಾ ಸಾಕಂ**—ಕಿಕಿದೀವಿಪಕ್ಷಿಯೊಂದಿಗೂ ಹೊರಟು ಹೋಗು । **ವಾತಸ್ಯ**—ವಾಯುವಿನ । **ಧ್ರಾಜ್ಯಾ**—ವೇಗವೊಡನೆಯೂ । **ನಿಹಾಕಯಾ ಸಾಕಂ**—ಬಿರುಗಾಳಿಯೊಂದಿಗೂ । **ನಶ್ಯ**—ಮರೆಯಾಗಿ ಹೋಗು ।

|| ಭಾವಾರ್ಥ ||

ಎಲೈ ವ್ಯಾಧಿಯೇ, ನೀನು ಶೀಘ್ರವಾಗಿ ಹಾರುವ ಚಾಷಪಕ್ಷಿಯೊಡನೆಯೂ ಹೊರಟುಹೋಗು. ಕಿಕಿದಿವಿಪಕ್ಷಿಯೊಡನೆಯೂ ಹೊರಟುಹೋಗು. ವಾಯುವಿನ ವೇಗವೊಡನೆಯೂ, ಬಿರುಗಾಳಿಯೊಂದಿಗೂ ಮರೆಯಾಗಿ ಹೋಗು.

## English Translation.

Fly forth, sickness, with the jay, with the blue jay, with the velocity of the wind, persh along with the iguana.

|| ಸಂಹಿತಾಪಾಠಃ ||

ಅನ್ಯಾ ವೋ ಅನ್ಯಾಮವತ್ವನ್ಯಾನ್ಯಸ್ಯಾ ಉಪಾವತ ।
ತಾಃ ಸರ್ವಾಃ ಸಂವಿದಾನಾ ಇದಂ ಮೇ ಪ್ರಾವತಾ ವಚಃ ॥ ೧೪ ॥

|| ಪದಪಾಠಃ ||

ಅನ್ಯಾ । ವಃ । ಅನ್ಯಾಂ । ಅವತು । ಅನ್ಯಾ । ಅನ್ಯಸ್ಯಾಃ । ಉಪ । ಅವತ ।
ತಾಃ । ಸರ್ವಾಃ । ಸಂಽವಿದಾನಾಃ । ಇದಂ । ಮೇ । ಪ್ರ । ಅವತ । ವಚಃ ॥ ೧೪ ॥

|| ಸಾಯಣಭಾಷ್ಯಂ ||

ಹೇ ಓಷಧಯಃ ವೋ ಯುಷ್ಮಾಕಂ ಮಧ್ಯೇಽನ್ಯೌಷಧಿರನ್ಯಾಮೋಷಧಿಮವತು । ಪ್ರಾಪ್ನೋತು । ಅವತಿರತ್ರ ಗತ್ಯರ್ಥಃ । ತಥಾನ್ಯಾನ್ಯಸ್ಯಾಃ ಸಮೀಪಮುಪಾವತ । ಉಪಗಚ್ಛತ । ಏವಂ ಯಾಃ ಸಂತಿ

ಕ್ಷಿತ್ಯಾಮೋಷಧಯಃ ತಾಃ ಸರ್ವಾಃ ಸಂವಿದಾನಾಃ ಪರಸ್ಪರಮೈಕಮತ್ಯಂ ಪ್ರಾಪ್ತಾಃ ಸತ್ಯ ಇದಂ ಮೇ ಮದೀಯಂ ವಚಃ ಪ್ರಾರ್ಥನಾಲಕ್ಷಣಂ ವಚನಂ ಪ್ರಾವತ । ಪ್ರರಕ್ಷತ ॥

॥ ಪ್ರತಿಪದಾರ್ಥ ॥

(ಎಲೈ ಓಷಧಿಗಳೇ) **ವಃ**—ನಿಮ್ಮಲ್ಲಿ । **ಅನ್ಯಾ**—ಒಂದು ಓಷಧಿಯು । **ಅನ್ಯಾಂ**—ಇನ್ನೊಂದನ್ನು । **ಅವತು**—ಸಮೀಪಿಸಲಿ । **ಅನ್ಯಾನ್ಯಸ್ಯಾಃ**—ಪರಸ್ಪರ ಒಂದರ ಸಮೀಪದಲ್ಲಿ ಇನ್ನೊಂದು । **ಉಪಾವತ**—ಹೋಗಿ ಸೇರಲಿ । **ತಾಃ ಸರ್ವಾಃ**—ಈ ರೀತಿ ಎಲ್ಲ ಓಷಧಿಗಳೂ । **ಸಂವಿದಾನಾಃ**—ಪರಸ್ಪರ ಒಟ್ಟಿಗೆ ಸೇರಿ । **ಮೇ**—ನನ್ನ । **ಇದಂ ವಚಃ**—ಈ ಪ್ರಾರ್ಥನಾವಾಕ್ಯವನ್ನು । **ಪ್ರಾವತ**—ಪಾಲಿಸಿರಿ.

॥ ಭಾವಾರ್ಥ ॥

ಎಲೈ ಓಷಧಿಗಳೇ, ನಿಮ್ಮಲ್ಲಿ ಒಂದು ಓಷಧಿಯು ಇನ್ನೊಂದನ್ನು ಸಮೀಪಿಸಲಿ. ನೀವೆಲ್ಲರೂ ಪರಸ್ಪರ ಒಟ್ಟಿಗೆ ಸೇರಿಕೊಂಡು ನನ್ನ ಈ ಪ್ರಾರ್ಥನಾವಾಕ್ಯವನ್ನು ಪಾಲಿಸಿರಿ.

English Translation

Let each of you, plants, go to the other, approach the one (to the vicinity) of the other; thus being all mutually joined together, attend to this my speeeh.

॥ ಸಂಹಿತಾಪಾಠಃ ॥

ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ ।
ಬೃಹಸ್ಪತಿಪ್ರಸೂತಾಸ್ತಾ ನೋ ಮುಂಚಂತ್ವಂಹಸಃ ॥ ೧೫ ॥

॥ ಪದಪಾಠಃ ॥

ಯಾಃ । ಫಲಿನೀಃ । ಯಾಃ । ಅಫಲಾಃ । ಅಪುಷ್ಪಾಃ । ಯಾಃ । ಚ । ಪುಷ್ಪಿಣೀಃ ।
ಬೃಹಸ್ಪತಿऽಪ್ರಸೂತಾಃ । ತಾಃ । ನಃ । ಮುಂಚಂತು । ಅಂಹಸಃ ॥ ೧೫ ॥

॥ ಸಾಯಣಭಾಷ್ಯಂ ॥

ಯಾಃ ಫಲಿನೀಃ ಫಲವತ್ಯೋ ಯಾ ಅಫಲಾಃ ಫಲವರ್ಜಿತಾ ಯಾ ಅಪುಷ್ಪಾಃ ಪುಷ್ಪರಹಿತಾ ಯಾಶ್ಚ ಪುಷ್ಪಿಣೀಃ ಪುಷ್ಪವತ್ಯೋ ಬೃಹಸ್ಪತಿಪ್ರಸೂತಾಃ । ಬೃಹಸ್ಪತಿರ್ಮಂತ್ರಾಭಿಮಾನೀ ದೇವಃ । ತೇನಾನುಜ್ಞಾತಾಃ । ತಾ ನೋऽಸ್ಮಾನಂಹಸೋ ಮುಂಚಂತು । ಮೋಚಯಂತು ॥

|| ಪ್ರತಿಪದಾರ್ಥ ||

**ಬೃಹಸ್ಪತಿಪ್ರಸೂತಾಃ**—ಬೃಹಸ್ಪತಿಯ ಅನುಗ್ರಹಕ್ಕೆ ಪಾತ್ರವಾದ ಓಷಧಿಗಳಲ್ಲಿ | **ಯಾಃ**—ಯಾವುವು | **ಫಲಿನೀಃ**—ಫಲವುಳ್ಳವಾಗಿವೆಯೋ | **ಯಾಃ**—ಯಾವುವು | **ಅಫಲಾಃ**—ಫಲರಹಿತವಾಗಿವೆಯೋ | **ಅಪುಷ್ಪಾಃ**—ಯಾವುವು ಪುಷ್ಪರಹಿತವಾಗಿವೆಯೋ | **ಯಾಶ್ಚ**—ಯಾವುವು | **ಪುಷ್ಪಿಣೀಃ**—ಪುಷ್ಪವನ್ನು ಹೊಂದಿವೆಯೋ | **ತಾಃ**—ಅವೆಲ್ಲವೂ | **ನಃ**—ನಮ್ಮನ್ನು | **ಅಂಹಸಃ**—ರೋಗರೂಪವಾದ ಪಾಪದಿಂದ | **ಮುಂಚಂತು**—ಬಿಡುಗಡೆ ಮಾಡಲಿ.

|| ಭಾವಾರ್ಥ ||

ಬೃಹಸ್ಪತಿಯ ಅನುಗ್ರಹಕ್ಕೆ ಪಾತ್ರವಾದ ಓಷಧಿಗಳಲ್ಲಿ ಯಾವುವು ಫಲವುಳ್ಳವಾಗಿವೆಯೋ, ಯಾವುವು ಫಲರಹಿತವಾಗಿವೆಯೋ, ಯಾವುವು ಪುಷ್ಪರಹಿತವಾಗಿವೆಯೋ, ಯಾವುವು ಪುಷ್ಪವನ್ನು ಹೊಂದಿವೆಯೋ, ಅವೆಲ್ಲವೂ ನಮ್ಮನ್ನು ರೋಗರೂಪವಾದ ಪಾಪದಿಂದ ಬಿಡುಗಡೆ ಮಾಡಲಿ.

### English Translation.

Whether bearing fruit or barren, whether flowering or flowerless, may they, the progeny of Brihaspathi, liberate us from sin.

|| ವಿಶೇಷವಿಷಯಗಳು ||

**ಫಲಿನೀಃ ಅಫಲಾಃ ಪುಷ್ಪಿಣೀಃ ಅಪುಷ್ಪಾಃ**—ಓಷಧಿಗಳಲ್ಲಿ ಅನೇಕ ಜಾತಿಗಳಿರುವುದು ಪ್ರಸಿದ್ಧವಾಗಿದೆ ಕೆಲವು ಜಾತಿಯಲ್ಲಿ ಹಣ್ಣನ್ನು ಬಿಡುವುದು, ಕೆಲವುಜಾತಿಯಲ್ಲಿ ಹಣ್ಣುಗಳಿರುವುದಿಲ್ಲ. ಅದರಂತೆ ಕೆಲವುಜಾತಿಯಲ್ಲಿ ಹೂವುಗಳಿರುವವು. ಕೆಲವು ಜಾತಿಯಲ್ಲಿ ಹೂವುಗಳೂ ಇರುವುದಿಲ್ಲ. ಎಂದಭಿಪ್ರಾಯವು.

|| ಸಂಹಿತಾಪಾಠಃ

ಮುಂಚಂತು ಮಾ ಶಪಥ್ಯಾ೩ದಥೋ ವರುಣ್ಯಾದುತ |
ಅಥೋ ಯಮಸ್ಯ ಪಡ್ಬೀಶಾತ್ಸರ್ವಸ್ಮಾದ್ದೇವಕಿಲ್ಬಿಷಾತ್ || ೧೬ ||

|| ಪದಪಾಠಃ ||

ಮುಂಚಂತು | ಮಾ | ಶಪಥ್ಯಾತ್ | ಅಥೋ ಇತಿ | ವರುಣ್ಯಾತ್ | ಉತ |
ಅಥೋ ಇತಿ | ಯಮಸ್ಯ | ಪಡ್ಬೀಶಾತ್ | ಸರ್ವಸ್ಮಾತ್ | ದೇವಽಕಿಲ್ಬಿಷಾತ್ || ೧೬ ||

|| ಸಾಯಣಭಾಷ್ಯಂ ||

**ಮಾ ಮಾಮೋಷಧಯಃ ಶಪಥ್ಯಾಚ್ಛಪಥಸಂಜಾತಾದೇನಸಃ ಸಕಾಶಾನ್ಮುಂಚಂತು । ಅಥೋ ಅಪಿ ಚ ವರುಣ್ಯಾದ್ವರುಣಸಂಭವಾನ್ಮಾಂ ಮುಂಚಂತು । ವರುಣೋಽಪಿ ಸ್ವಪಾಶೇನ ಜಾತಮಾತ್ರಂ ಪುರುಷಂ ಬಧ್ನಾತಿ । ಉತೇತಿ ಪೂರಣಃ । ಅಥೋ ಅಪಿ ಚ ಯಮಸ್ಯ ಪಡ್ವೀಶಾತ್ಪಾದಬಂಧನಾನ್ನಿಗಡಾನ್ಮುಂಚಂತು । ನ ಕೇವಲಂ ವರುಣಾದೇಃ ಪಾಪಾತ್ ಕಿಂತು ಸರ್ವಸ್ಮಾದ್ದೇವಕಿಲ್ಬಿಷಾದ್ದೇವೈಃ ಕೃತಾತ್ಪಾಪಾನ್ಮುಂಚಂತು ||**

|| ಪ್ರತಿಪದಾರ್ಥ ||

(**ಓಷಧಯಃ**—ಓಷಧಿಗಳು) । **ಮಾ**—ನನ್ನನ್ನು । **ಶಪಥ್ಯಾತ್**—ಶಾಪದಿಂದ ಉತ್ಪನ್ನವಾದ ಪಾಪದಿಂದ । **ಮುಂಚಂತು**–ಬಿಡಿಸಲಿ । **ವರುಣ್ಯಾತ್**—ವರುಣನಿಂದ ಸಂಭವಿಸಿದ ತೊಂದರೆಯಿಂದ (ಪಾಶದಿಂದ) **ಮಾಂ**—ನನ್ನನ್ನು ಬಿಡಿಸಲಿ । **ಅಥೋ**—ಅಲ್ಲದೇ । **ಯಮಸ್ಯ**—ಯಮನ । **ಪಡ್‌ಬೀಶಾತ್**—ಪಾದಬಂಧಕವಾದ ಪಾಶದಿಂದ ಬಿಡಿಸಲಿ । **ಸರ್ವಸ್ಮಾತ್**—ಸಕಲವಾದ । **ದೇವಕಿಲ್ಬಿಷಾತ್**—ದೇವಸಂಬಂಧಿಯಾದ ದೋಷದಿಂದಲೂ ಬಿಡಿಸಲಿ.

|| ಭಾವಾರ್ಥ ||

ಓಷಧಿಗಳು ನನ್ನನ್ನು ಶಾಪದಿಂದ ಉತ್ಪನ್ನವಾದ ಪಾಪದಿಂದ ಮುಕ್ತನನ್ನಾಗಿ ಮಾಡಲಿ. ವರುಣನ ಪಾಶದಿಂದ ಬಿಡಿಸಲಿ. ಯಮನ ಪಾದಬಂಧಕವಾದ ಪಾಶದಿಂದ ಬಿಡಿಸಲಿ. ಸಕಲವಾದ ದೇವಸಂಬಂಧಿಯಾದ ದೋಷದಿಂದಲೂ ಬಿಡಿಸಲಿ.

## English Translation.

May they liberate me from the sin produced by curse, from the sin caused by Varuna, from the fetters of Yama, from all guilt caused by the gods.

|| ಸಂಹಿತಾಪಾಠಃ ||

ಅವಪತಂತೀರವದನ್ದಿವ ಓಷಧಯಸ್ಪರಿ ।
ಯಂ ಜೀವಮಶ್ನವಾಮಹೈ ನ ಸ ರಿಷ್ಯಾತಿ ಪೂರುಷಃ || ೧೭ ||

|| ಪದಪಾಠಃ ||

ಅವಽಪತಂತೀಃ । ಅವದನ್ । ದಿವಃ । ಓಷಧಯಃ । ಪರಿ ।
ಯಂ । ಜೀವಂ । ಅಶ್ನವಾಮಹೈ । ನ । ಸಃ । ರಿಷ್ಯಾತಿ । ಪುರುಷಃ || ೧೭ ||

॥ ಸಾಯಣಭಾಷ್ಯಂ ॥

ದಿವೋ ದ್ಯುಲೋಕಾದವಪತಂತೀರವಪತಂತ್ಯ ಓಷಧಯ ಇತ್ಥಂ ಪರ್ಯವದನ್ । ಕಿಮಿತಿ ಉಚ್ಯತೇ । ಯಂ ಜೀವಂ ಜೀವಂತಮಶ್ನವಾಮಹೈ ವ್ಯಾಪ್ನುವಾಮ ನ ಸ ಪೂರುಷಃ ಪುರುಷೋ ರಿಷ್ಯಾತಿ । ರಿಷ್ಯತಿ । ವಿನಶ್ಯತಿ ॥

॥ ಪ್ರತಿಪದಾರ್ಥ ॥

**ದಿವಃ**—ದ್ಯುಲೋಕದಿಂದ । **ಅವಪತಂತೀಃ**—ಭೂಮಿಗೆ ಇಳಿದು ಬರುವ । **ಓಷಧಯಃ**—ಓಷಧಿಗಳು । **ಪರ್ಯವದನ್**—ಈ ರೀತಿ ಹೇಳಿವೆ । **ಜೀವಂ**—ಜೀವಿಸಿರುವ । **ಯಂ**—ಯಾವ ಪುರುಷನನ್ನು । **ಅಶ್ನವಾಮಹೈ**—ನಾವು ಪ್ರವೇಶಿಸುವೆವೋ । **ಸಃ ಪೂರುಷಃ**—ಆ ಪುರುಷನು । **ನ ರಿಷ್ಯತಿ**—ನಾಶವನ್ನು ಹೊಂದುವುದಿಲ್ಲ.

॥ ಭಾವಾರ್ಥ ॥

ದ್ಯುಲೋಕದಿಂದ ಭೂಮಿಗೆ ಇಳಿದುಬರುವ ಓಷಧಿಗಳು ಈ ರೀತಿ ಭರವಸೆಯನ್ನು ಕೊಟ್ಟಿವೆ. "ನಾವು ಜೀವಂತನಾಗಿರುವ ಯಾವ ಪುರುಷನನ್ನು ಪ್ರವೇಶಿಸುವೆವೋ ಅವನಿಗೆ ಖಂಡಿತ ನಾಶವಿಲ್ಲ" ಎಂದು ಹೇಳಿವೆ.

English Translation

The plants, falling from heaven, said, "The man whom living we pervade, will not perish."

॥ ಸಂಹಿತಾಪಾಠಃ ॥

ಯಾ ಓಷಧೀಃ ಸೋಮರಾಜ್ಞೀರ್ಬಹ್ವೀಃ ಶತವಿಚಕ್ಷಣಾಃ ।
ತಾಸಾಂ ತ್ವಮಸ್ಯುತ್ತಮಾರಂ ಕಾಮಾಯ ಶಂ ಹೃದೇ ॥ ೧೮ ॥

॥ ಪದಪಾಠಃ ॥

ಯಾಃ । ಓಷಧೀಃ । ಸೋಮऽರಾಜ್ಞೀಃ । ಬಹ್ವೀಃ । ಶತऽವಿಚಕ್ಷಣಾಃ ।
ತಾಸಾಂ । ತ್ವಂ । ಅಸಿ । ಉತ್ऽತಮಾ । ಅರಂ । ಕಾಮಾಯ । ಶಂ । ಹೃದೇ ॥ ೧೮ ॥

॥ ಸಾಯಣಭಾಷ್ಯಂ ॥

ಯಾ ಓಷಧೀರೋಷಧಯಃ ಸೋಮರಾಜ್ಞೀಃ ಸೋಮೋ ರಾಜಾ ಸ್ವಾಮೀ ಯಾಸಾಂ ತಾಸ್ತಥೋಕ್ತಾ ಬಹ್ವೀರಸಂಖ್ಯಾತಾಃ ಶತವಿಚಕ್ಷಣಾ ಬಹುದರ್ಶನಾ ಹೇ ಸೋಮಾಖ್ಯ ಓಷಧೇ ತಾಸಾಮೋಷಧೀನಾಂ ತ್ವಮುತ್ತಮಾಸಿ । ಯಸ್ಮಾದೇವಂ ತಸ್ಮಾದರಮಲಮತ್ಯರ್ಥಂ ಕಾಮಾಯ ಕಾಂತಾಯ ಹೃದೇ ಹೃದಯಾಯ ಶಂ ಸುಖಕರೀ ಭವೇತಿ ಶೇಷಃ ॥

|| ಪ್ರತಿಪದಾರ್ಥ ||

( ಎಲೈ ಸೋಮಸಂಜ್ಞಕವಾದ ಓಷಧಿಯೇ) ಬಹ್ವೀಃ—ಬಹುಸಂಖ್ಯಾಕವೂ | ಶತವಿಚಕ್ಷಣಾಃ—ಬಹುವಿಧವಾದ ದರ್ಶನ ಸಾಮರ್ಥ್ಯವುಳ್ಳವೂ ಆದ | ಯಾ ಓಷಧೀಃ—ಯಾವ ಓಷಧಿಗಳು |ಸೋಮರಾಜ್ಞೀಃ—ಸೋಮನನ್ನೇ ರಾಜನನ್ನಾಗಿ ಹೊಂದಿರುವುವೋ | ತಾಸಾಂ—ಅವುಗಳಲ್ಲಿ | ತ್ವಂ—ನೀನು | ಉತ್ತಮಾ ಅಸಿ—ಉತ್ತಮವಾಗಿದ್ದೀಯೆ (ಆದುದರಿಂದ) | ಅರಂ—ಪೂರ್ಣವಾಗಿ | ಕಾಮಾಯ—ನಮ್ಮ ಇಷ್ಟಾರ್ಥಪ್ರದಳಾಗಿಯೂ ಹೃದೇ—ನಮ್ಮ ಹೃದಯಕ್ಕೆ | ಶಂ—ಸುಖಕಾರಕಳಾಗಿಯೂ ಇರು.

|| ಭಾವಾರ್ಥ ||

ಎಲೈ ಸೋಮಸಂಜ್ಞಕವಾದ ಓಷಧಿಯೇ, ಬಹುಸಂಖ್ಯಾಕವೂ, ಬಹುವಿಧವಾದ ದರ್ಶನಸಾಮರ್ಥ್ಯವುಳ್ಳವೂ ಆದ ಯಾವ ಓಷಧಿಗಳು ಸೋಮನನ್ನೇ ರಾಜನನ್ನಾಗಿ ಹೊಂದಿರುವುವೋ ಅವುಗಳಲ್ಲಿ ನೀನು ಉತ್ತಮವಾಗಿದ್ದೀಯೆ. ಆದುದರಿಂದ ನೀನು ಪೂರ್ಣವಾಗಿ ನಮ್ಮ ಇಷ್ಟಾರ್ಥಪ್ರದಳಾಗಿಯೂ ನಮ್ಮಹೃದಯಕ್ಕೆ ಸುಖಕಾರಕಳಾಗಿಯೂ ಇರು

English Translation

The plants which have the Soma for their king, and are numerous and all-seeking, of them you (O Soma-plant) are the best; be very bountiful to the affectionate heart.

|| ಸಂಹಿತಾಪಾಠಃ ||

ಯಾ ಓಷಧೀಃ ಸೋಮರಾಜ್ಞೀರ್ವಿಷ್ಠಿತಾಃ ಪೃಥಿವೀಮನು |
ಬೃಹಸ್ಪತಿಪ್ರಸೂತಾ ಅಸ್ಯೈ ಸಂ ದತ್ತ ವೀರ್ಯಂ || ೧೯ ||

|| ಪದಪಾಠಃ ||

ಯಾಃ | ಓಷಧೀಃ | ಸೋಮಽರಾಜ್ಞೀಃ | ವಿಽಸ್ಥಿತಾಃ | ಪೃಥಿವೀಂ | ಅನು |
ಬೃಹಸ್ಪತಿಽಪ್ರಸೂತಾಃ | ಅಸ್ಯೈ | ಸಂ | ದತ್ತ | ವೀರ್ಯಂ || ೧೯ ||

|| ಸಾಯಣಭಾಷ್ಯಂ ||

ಯಾ ಓಷಧೀರೋಷಧಯಃ ಸೋಮರಾಜ್ಞೀಃ ಪೃಥಿವೀಮನು ವಿಷ್ಠಿತಾ ವಿವಿಧಂ ಸ್ಥಿತಾಃ ದಿವಃ ಸಕಾಶಾದಾಗತ್ಯ ಪೃಥಿವ್ಯಾಂ ನಾನಾಭೇದೇನ ಸ್ಥಿತಾಃ ಬೃಹಸ್ಪತಿಪ್ರಸೂತಾ ಬೃಹಸ್ಪತಿನಾನುಜ್ಞಾತಾಃ ಸತ್ಯೋ ಯೂಯಮಸ್ಯೈ ರುಗ್ಣತನ್ವೇ ವೀರ್ಯಂ ಸಂ ದತ್ತ | ಸಂಧತ್ತ ||

॥ಪ್ರತಿಪದಾರ್ಥ॥

**ಓಷಧೀಃ**—ಎಲೈ ಓಷಧಿಗಳೇ | **ಯಾಃ**—ಯಾವ ನೀವು | **ಸೋಮರಾಜ್ಞೀಃ**—ಸೋಮನನ್ನೇ ರಾಜನನ್ನಾಗಿ ಹೊಂದಿದವರಾಗಿಯೂ | **ಪೃಥಿವೀಂ**—ಪೃಥ್ವಿಯನ್ನು | **ಅನು ವಿಷ್ಠಿತಾಃ**—ವ್ಯಾಪಿಸಿರುವವರಾಗಿಯೂ | **ಬೃಹಸ್ಪತಿಪ್ರಸೂತಾಃ**—ಬೃಹಸ್ಪತಿಯ ಅನುಗ್ರಹವನ್ನು ಪಡೆದವರಾಗಿಯೂ ಇರುವಿರೋ ಅಂತಹ ನೀವು | **ಅಸ್ಯೈ**—ಈ ರೋಗಿಗೆ | **ವೀರ್ಯಂ**—ಶಕ್ತಿಯನ್ನು | **ಸಂ ದತ್ತ**—ಒದಗಿಸಿರಿ.

॥ ಭಾವಾರ್ಥ ॥

ಸೋಮನನ್ನು ರಾಜನನ್ನಾಗಿ ಹೊಂದಿರುವವರೂ, ಪೃಥ್ವಿಯನ್ನು ವ್ಯಾಪಿಸಿರುವವರೂ, ಬೃಹಸ್ಪತಿಯ ಅನುಗ್ರಹವನ್ನು ಪಡೆದವರೂ ಆದ ಎಲೈ ಓಷಧಿಗಳೇ, ಈ ರೋಗಿಗೆ ಶಕ್ತಿಯನ್ನು ತುಂಬಿರಿ.

## English Translation.

Plants, which have the Soma for your king, who are scattered over the earth, the offspring of Brihaspathi, give vigour to this (infirm body.)

॥ ಸಂಹಿತಾಪಾಠಃ ॥

ಮಾ ವೋ ರಿಷತ್ಖನಿತಾ ಯಸ್ಮೈ ಚಾಹಂ ಖನಾಮಿ ವಃ ।
ದ್ವಿಪಚ್ಚತುಷ್ಪದಸ್ಮಾಕಂ ಸರ್ವಮಸ್ತ್ವನಾತುರಂ ॥ ೨೦ ॥

॥ ಪದಪಾಠಃ ॥

ಮಾ । ವಃ । ರಿಷತ್ । ಖನಿತಾ । ಯಸ್ಮೈ । ಚ । ಅಹಂ । ಖನಾಮಿ । ವಃ ।
ದ್ವಿऽಪತ್ । ಚತುಃऽಪತ್ । ಅಸ್ಮಾಕಂ । ಸರ್ವಂ । ಅಸ್ತು । ಅನಾತುರಂ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಓಷಧಯಃ ವೋ ಯುಷ್ಮಾನ್ಮಾ ರಿಷತ್ । ಮಾ ಹಿಂಸ್ಯಾತ್ । ಕಃ । ಖನಿತಾ ಭೂಮೇಃ ಖನನಕರ್ತಾ । ಯಸ್ಮೈ ರುಗ್ಣಾಯ ಚಾಹಂ ಖನಾಮಿ ವೋ ಯುಷ್ಮಾನ್ । ಕಿಂಚಾಸ್ಮಾಕಂ ಸಂಬಂಧಿ ದ್ವಿಪತ್ ಪುತ್ರಭೃತ್ಯಾದಿಕಂ ಚತುಷ್ಪದ್ಗೋಮಹಿಷ್ಯಾದಿಕಂ ಚ ಯದಸ್ತಿ ತತ್ಸರ್ವಮನಾತುರಮರೋಗಮಸ್ತು ॥

॥ ಪ್ರತಿಪದಾರ್ಥ ॥

(ಎಲೈ ಓಷಧಿಗಳೇ) **ಖನಿತಾ**—ನಿಮಗಾಗಿ ಭೂಮಿಯನ್ನು ಅಗೆಯುವವನು | **ವಃ**—ನಿಮ್ಮನ್ನು | **ಮಾ ರಿಷತ್**—ಹಿಂಸಿಸದಿರಲಿ | **ಯಸ್ಮೈ**—ಯಾವ ರೋಗಿಗೋಸ್ಕರ | **ಅಹಂ**—ನಾನು | **ಖನಾಮಿ**—

ಅಗೆಯುವೆನೋ ಆಗಲೂ ಸಹ । ವಃ—ನಿಮ್ಮನ್ನು ಹಿಂಸಿಸದಂತಾಗಲಿ । ಅಸ್ಮಾಕಂ—ನಮಗೆ ಸೇರಿದ । ದ್ವಿಪತ್—ಪುತ್ರಾದಿಗಳೂ । ಚತುಷ್ಪಾತ್—ಪಶ್ವಾದಿಗಳೂ । ಸರ್ವಂ—ಸಕಲ ಪ್ರಾಣಿಗಳೂ । ಅನಾತುರಂ—ರೋಗರಹಿತವಾಗಿ । ಅಸ್ತು—ಇರಲಿ ।

॥ ಭಾವಾರ್ಥ ॥

ಎಲೈ ಓಷಧಿಗಳೇ, ನಿಮ್ಮನ್ನು ಪಡೆಯಲು ಭೂಮಿಯನ್ನು ಅಗೆಯುವವನು ನಿಮ್ಮನ್ನು ಹಿಂಸಿಸದಿರಲಿ, ರೋಗಿಗೋಸ್ಕರ ಅಗೆಯುವಾಗ ನಾನೂ ನಿಮ್ಮನ್ನು ಹಿಂಸಿಸದಂತಾಗಲಿ. ನಮಗೆ ಸೇರಿದ ಪುತ್ರಾದಿಗಳೂ, ಪಶ್ವಾದಿಗಳೂ, ಸಕಲ ಪ್ರಾಣಿಗಳೂ ರೋಗರಹಿತವಾಗಿರಲಿ.

## English Translation.

Let not the digger hurt you, nor (the sick person) for whom I dig you up; may all my bipeds and quardrupeds be free from disease.

॥ ಸಂಹಿತಾಪಾಠಃ ॥

ಯಾಶ್ಚೇದಮುಪಶೃಣ್ವಂತಿ ಯಾಶ್ಚ ದೂರಂ ಪರಾಗತಾಃ ।
ಸರ್ವಾಃ ಸಂಗತ್ಯ ವೀರುಧೋಽಸ್ಯೈ ಸಂ ದತ್ತ ವೀರ್ಯಂ ॥ ೨೧ ॥

॥ ಪದಪಾಠಃ ॥

ಯಾಃ । ಚ । ಇದಂ । ಉಪಽಶೃಣ್ವಂತಿ । ಯಾಃ । ಚ । ದೂರಂ । ಪರಾಽಗತಾಃ ।
ಸರ್ವಾಃ । ಸಂಽಗತ್ಯ । ವೀರುಧಃ । ಅಸ್ಯೈ । ಸಂ । ದತ್ತ । ವೀರ್ಯಂ ॥ ೨೧ ॥

॥ ಸಾಯಣಭಾಷ್ಯಂ ॥

ಯಾ ಓಷಧಯ ಇದಂ ಸ್ತೋತ್ರಮುಪಶೃಣ್ವಂತಿ ಯಾ ಓಷಧಯೋ ದೂರಂ ಪರಾಗತಾಃ ಸರ್ವಾ ವೀರುಧಃ ಸಂಗತ್ಯ ಸಂಗತಾಃ ಸತ್ಯೋ ಹೇ ವೀರುಧಃ ಅಸ್ಯೈ ರುಗ್ಣತನ್ವೇ ವೀರ್ಯಂ ಸಂ ದತ್ತ ॥

॥ ಪ್ರತಿಪದಾರ್ಥ ॥

ವೀರುಧಃ—ಎಲೈ ಓಷಧಿಗಳೇ, (ನಿಮ್ಮಲ್ಲಿ) । ಯಾಃ—ಯಾವ ಓಷಧಿಗಳು । ಇದಂ—ಈ ಸ್ತೋತ್ರವನ್ನು । ಉಪಶೃಣ್ವಂತಿ—ಕೇಳಬಲ್ಲವೋ । ಯಾಃ ಚ—ಯಾವುವು । ದೂರಂ ಪರಾಗತಾಃ—ದೂರದೇಶದಲ್ಲಿ ಮರೆಯಾಗಿರುವುವೋ । ಸರ್ವಾಃ (ವೀರುಧಃ)—ಆ ಸೀವೆಲ್ಲರೂ । ಸಂಗತ್ಯ—ಒಟ್ಟಿಗೆ ಸೇರಿ । ಅಸ್ಯೈ—ಈ ರೋಗಿಯ ಶರೀರಕ್ಕೆ । ವೀರ್ಯಂ—ಶಕ್ತಿಯನ್ನು । ಸಂ ದತ್ತ—ಒದಗಿಸಿರಿ.

॥ ಭಾವಾರ್ಥ ॥

ಎಲೈ ಓಷಧಿಗಳೇ, ನಿಮ್ಮಲ್ಲಿ ಯಾವ ಓಷಧಿಗಳು ಹತ್ತಿರದಲ್ಲಿದ್ದು ಈ ಸ್ತೋತ್ರವನ್ನು ಕೇಳಬಲ್ಲವೋ, ಯಾವುವು ದೂರದೇಶದಲ್ಲಿ ಮರೆಯಾಗಿರುವುವೋ, ಅವೆಲ್ಲವೂ ಒಟ್ಟಿಗೆ ಸೇರಿ ಈ ರೋಗಿಯ ಶರೀರಕ್ಕೆ ಶಕ್ತಿಯನ್ನು ಒದಗಿಸಿರಿ.

**English Translation.**

Both the plants that hear this (prayer), and those which are removed far off, all comming together, give vigour to this (infirm body).

॥ ಸಂಹಿತಾಪಾಠಃ ॥

**ಓಷಧಯಃ ಸಂ ವದಂತೇ ಸೋಮೇನ ಸಹ ರಾಜ್ಞಾ ।**

**ಯಸ್ಮೈ ಕೃಣೋತಿ ಬ್ರಾಹ್ಮಣಸ್ತಂ ರಾಜನ್ಪಾರಯಾಮಸಿ ॥ ೨೨ ॥**

॥ ಪದಪಾಠಃ ॥

ಓಷಧಯಃ । ಸಂ । ವದಂತೇ । ಸೋಮೇನ । ಸಹ । ರಾಜ್ಞಾ ।

ಯಸ್ಮೈ । ಕೃಣೋತಿ । ಬ್ರಾಹ್ಮಣಃ । ತಂ । ರಾಜನ್ । ಪಾರಯಾಮಸಿ ॥ ೨೨ ॥

॥ ಸಾಯಣಭಾಷ್ಯಂ ॥

ಓಷಧಯಃ ಸರ್ವಾಃ ಸೋಮೇನ ರಾಜ್ಞಾ ಸಹ ಸಂ ವದಂತೇ । ಸಂವಾದಂ ಕುರ್ವಂತಿ । ಕಿಮಿತಿ ಉಚ್ಯತೇ । ಯಸ್ಮೈ ರುಗ್ಣಾಯ ಬ್ರಾಹ್ಮಣ ಓಷಧಿಸಾಮರ್ಥ್ಯಜ್ಞೋ ಬ್ರಾಹ್ಮಣೋ ವೈದ್ಯಃ ಕೃಣೋತಿ ಕರೋತಿ ಚಿಕಿತ್ಸಾಂ ತಂ ರುಗ್ಣಂ ಹೇ ರಾಜನ್ ಪಾರಯಾಮಸಿ । ಪಾರಯಾಮಃ ॥ ಇದಂತೋ ಮಸಿಃ ॥

॥ ಪ್ರತಿಪದಾರ್ಥ ॥

ಓಷಧಯಃ—ಸಕಲ ಓಷಧಿಗಳೂ । ರಾಜ್ಞಾ—ಪ್ರಭುವಾದ । ಸೋಮೇನ ಸಹ—ಸೋಮದೇವನೊಡನೆ । ಸಂ ವದಂತೇ—ಈ ರೀತಿ ಹೇಳುತ್ತವೆ । ರಾಜನ್—ಎಲೈ ಪ್ರಭುವೇ । ಯಸ್ಮೈ—ಯಾವ ರೋಗಿಗೆ । ಬ್ರಾಹ್ಮಣಃ—ಓಷಧಿಗಳ ಸ್ವರೂಪವನ್ನು ತಿಳಿದ ವೈದ್ಯನು । ಕೃಣೋತಿ—ಚಿಕಿತ್ಸೆಯನ್ನು ಮಾಡುವನೋ । ತಂ—ಆ ರೋಗಿಯನ್ನು । ಪಾರಯಾಮಸಿ—ನಾವು ಗುಣಪಡಿಸುವೆವು.

॥ ಭಾವಾರ್ಥ ॥

ಸಕಲವಾದ ಓಷಧಿಗಳೂ ಒಟ್ಟಿಗೆ ಸೇರಿ ತಮ್ಮ ಪ್ರಭುವಾದ ಸೋಮದೇವನೊಡನೆ ಈ ರೀತಿ ಹೇಳುತ್ತವೆ—ಎಲೈ ಪ್ರಭುವೇ, ಯಾವ ರೋಗಿಗೆ ಓಷಧಿಗಳ ಸ್ವರೂಪವನ್ನು ತಿಳಿದ ವೈದ್ಯನು ಚಿಕಿತ್ಸೆಯನ್ನು ಮಾಡುವನೋ, ಆ ರೋಗಿಯನ್ನು ನಾವು ಗುಣಪಡಿಸುವೆವು.

## English Translation.

All the plants, together with Soma their king, declare, " We save him, O king, to whom the brahman administers (us)".

॥ ವಿಶೇಷವಿಷಯಗಳು ॥

**ಬ್ರಾಹ್ಮಣಃ**—ಬ್ರಹ್ಮವೆಂದರೆ ಮಂತ್ರವು. ಅದನ್ನು ತಿಳಿದವನು ಬ್ರಾಹ್ಮಣನು. ಇಲ್ಲಿ ಮಂತ್ರಸ್ವರೂಪವನ್ನೂ ತಿಳಿದ ವೈದ್ಯನು ಅಥವಾ ಬ್ರಾಹ್ಮಣನು ಎಂದು ಬ್ರಾಹ್ಮಣಶಬ್ದಕ್ಕೆ ಎರಡುವಿಧವಾದ ಅರ್ಥವನ್ನು ಹೇಳಬಹುದು:

॥ ಸಂಹಿತಾಪಾಠಃ ॥

ತ್ವಮುತ್ತಮಾಸ್ಯೋಷಧೇ ತವ ವೃಕ್ಷಾ ಉಪಸ್ತಯಃ ।
ಉಪಸ್ತಿರಸ್ತು ಸೋಽಸ್ಮಾಕಂ ಯೋ ಅಸ್ಮಾँ ಅಭಿದಾಸತಿ ॥ ೨೩ ॥

॥ ಪದಪಾಠಃ ॥

ತ್ವಂ । ಉತ್ಽತಮಾ । ಅಸಿ । ಓಷಧೇ । ತವ । ವೃಕ್ಷಾಃ । ಉಪಸ್ತಯಃ ।
ಉಪಸ್ತಿಃ । ಅಸ್ತು । ಸಃ । ಅಸ್ಮಾಕಂ । ಯಃ । ಅಸ್ಮಾನ್ । ಅಭಿಽದಾಸತಿ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಓಷಧೇ ಸೋಮಾಖ್ಯೇ ತ್ವಮೋಷಧೀನಾಮನ್ಯಾಸಾಮುತ್ತಮಾಸಿ । ತವ ವೃಕ್ಷಾಃ ಸರ್ವ ಉಪಸ್ತಯಃ । ಅಧಃ ಶಾಯಿನ ಏವ । ತಥಾ ಸತಿ ಸ ಉಪಸ್ತಿರಸ್ತು ಅಧಃಶಾಯೀ ಭವತು ಯೋಽಸ್ಮಾನಭಿದಾಸತಿ ಹಿನಸ್ತಿ । ಭ್ರಾತೃವ್ಯ ಇತಿ ॥

॥ ಪ್ರತಿಪದಾರ್ಥ ॥

**ಓಷಧೇ**—ಸೋಮರೂಪವಾದ ಎಲೈ ಓಷಧಿಯೇ । **ತ್ವಂ**—ನೀನು । **ಉತ್ತಮಾ ಅಸಿ**—ಓಷಧಿಗಳಲ್ಲೆಲ್ಲ ಅತ್ಯುತ್ತಮವಾಗಿದ್ದೀಯೆ. । **ತವ**—ನಿನ್ನ ಮುಂದೆ । **ವೃಕ್ಷಾಃ**—ಸಕಲ ವೃಕ್ಷಗಳೂ । **ಉಪಸ್ತಯಃ**—ತಲೆಬಾಗಿರುತ್ತವೆ. । **ಯಃ**—ಯಾರು । **ನಃ**—ನಮ್ಮನ್ನು । **ಅಭಿದಾಸತಿ**—ಹಿಂಸಿಸುವನೋ । **ಸಃ**—ಅವನು । **ಅಸ್ಮಾಕಂ**—ನಮಗೆ । **ಉಪಸ್ತಿಃ**—ತಲೆಬಾಗುವವನಾಗಿ । **ಅಸ್ತು**—ಆಗಿರಲಿ.

॥ ಭಾವಾರ್ಥ ॥

ಸೋಮರೂಪವಾದ ಎಲೈ ಓಷಧಿಯೇ, ನೀನು ಓಷಧಿಗಳಲ್ಲೆಲ್ಲ ಅತ್ಯುತ್ತಮವಾಗಿದ್ದೀಯೆ. ನಿನ್ನ ಮುಂದೆ ಸಕಲ ವೃಕ್ಷಗಳೂ ತಲೆಬಾಗಿರುತ್ತವೆ. ಯಾರು ನಮ್ಮನ್ನು ಹಿಂಸಿಸುವನೋ, ಅವನು ನಮಗೆ ತಲೆಬಾಗುವಂತೆಯೂ ನಮ್ಮ ಅಧೀನವಾಗಿಯೂ ಇರಲಿ.

English Translation

You (soma) are the best of the plants, to you (all) trees are prostrate; may he be prostrate to us, who attacks us.

## ತೊಂಭತ್ತೆಂಟನೆಯ ಸೂಕ್ತವು

### ಪೀಠಿಕೆ.

ಈ ಸೂಕ್ತದ ವಿಷಯದಲ್ಲಿ ನಿರುಕ್ತಕಾರರಾದ ಯಾಸ್ಕರು ಒಂದು ಪೂರ್ವೇತಿಹಾಸವನ್ನು ಹೇಳಿದಾರೆ—

**ಅತ್ರೇತಿಹಾಸಮಾಚಕ್ಷತೇ । ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ । ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ॥**

(ನಿ. ೨-೧೧)

ಪೂರ್ವಕಾಲದಲ್ಲಿ ಕುರುವಂಶದಲ್ಲಿ ಋಷ್ಟಿಷೇಣನೆಂಬ ರಾಜನಿಗೆ ದೇವಾಪಿ, ಶಂತನು ಎಂಬ ಈರ್ವರು ಪುತ್ರರಿದ್ದರು. ಅವರಲ್ಲಿ ದೇವಾಪಿಯೆಂಬುವನು ಹಿರಿಯವನು, ಶಂತನು ಕಿರಿಯವನು. ಇವರ ತಂದೆಯಾದ ಋಷ್ಟಿಷೇಣನು ಮೃತನಾದ ಬಳಿಕ ಅವನ ಹಿರಿಯಮಗನಾದ ದೇವಾಪಿ ಎಂಬುವನು ರಾಜನಾಗಬೇಕೆಂದು ಇಚ್ಛಿಸಿದನು. ಆದರೆ ಇವನ ತಮ್ಮನಾದ ಶಂತನುವು ಅದಕ್ಕೆ ಅವಕಾಶಕೊಡದೆ ತಾನೇ ರಾಜ್ಯಕ್ಕೆ ದೊರೆಯಾಗಬೇಕೆಂದು ಬಯಸಿ ಅಣ್ಣನಾದ ದೇವಾಪಿಯನ್ನು ಓಡಿಸಿ ತಾನೇ ರಾಜ್ಯವಾಳಲು ವೊದಲು ಮಾಡಿದನು. ಅಣ್ಣನಾದ ದೇವಾಪಿಯು ವ್ಯಾಕುಲವುಳ್ಳವನಾಗಿ ಕಾಡಿಗೆ ಹೋಗಿ ತಪ್ಪಸ್ಸನ್ನು ಮಾಡುತ್ತಾ ಕಾಲಕಳೆಯುತ್ತಿದ್ದನು. ಹೀಗಿರಲು ಇವನ ದೇಶದಲ್ಲಿ ೧೨ ವರ್ಷಗಳವರಿಗೆ ಮಳೆಯೇ ಬರದೆ ಮಹಾಕ್ಷಾಮವು ಪ್ರಾಪ್ತವಾಯಿತು. ಆಗ ರಾಜನಾದ ಶಂತನುವು ಇದಕ್ಕೆ ಏನು ಮಾಡಬೇಕೆಂದು ಆಲೋಚಿಸಿ ಬ್ರಾಹ್ಮಣರ ಸಲಹೆಯನ್ನು ಕೇಳಿದನು. ಅದಕ್ಕೆ ಬ್ರಾಹ್ಮಣರು ರಾಜನನ್ನು ಕುರಿತು ಧರ್ಮಶಾಸ್ತ್ರದ ಪ್ರಕಾರ ರಾಜನ ಹಿರಿಯಮಗನೇ ರಾಜ್ಯಕ್ಕೆ ಅಧಿಕಾರಿಯು. ಆದುದರಿಂದ ರಾಜ್ಯಭಾರವನ್ನು ನಿನ್ನ ಅಣ್ಣನಾದ ದೇವಾಪಿಯೇ ಮಾಡಬೇಕಾಗಿದ್ದಿತು. ಆದರೆ ನೀನು ಅದಕ್ಕವಕಾಶಕೊಡದೆ ಅವನನ್ನು ಓಡಿಸಿ ರಾಜ್ಯವನ್ನು ಆಕ್ರಮಿಸಿರುವೆ. ಹೀಗೆ ನೀನು ಅಧರ್ಮವನ್ನು ಆಚರಿಸುತ್ತಿರುವುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಗರೆಯುವುದಿಲ್ಲ ಎಂದು ಹೇಳಿದರು. ಶಂತನುರಾಜನು ತಾನು ಮಾಡಿದ ಅನ್ಯಾಯಕ್ಕೆ ಪಶ್ಚಾತ್ತಾಪಪಟ್ಟು ವನದಲ್ಲಿ ತಪಸ್ಸುಮಾಡುತ್ತಿದ್ದ ತನ್ನ ಅಣ್ಣನಾದ ದೇವಾಪಿಯನ್ನು ಕರೆಸಿ ಅವನಿಗೆ ರಾಜ್ಯವನ್ನು ಒಪ್ಪಿಸಿದನು. ಆದರೆ ದೇವಾಪಿಯು ರಾಜ್ಯವು ತನಗೆ ಬೇಡವೆಂದೂ ತಾನು ವನದಲ್ಲಿ ತಪಸ್ಸನ್ನು ಮಾಡುತ್ತಾ ನಿವೃತ್ತಿಮಾರ್ಗವನ್ನು ಆಶ್ರಯಿಸುವೆನೆಂದೂ ಹೇಳಿ, ರಾಜ್ಯದಲ್ಲಿ ಉಂಟಾಗಿರುವ ಅನಾವೃಷ್ಟಿಪರಿಹಾರಾರ್ಥವಾಗಿ ಶಂತನುವು ಯಜ್ಞಮಾಡಬೇಕೆಂದೂ ಅದರಲ್ಲಿ ತಾನು ಪೌರೋಹಿತ್ಯವನ್ನು ವಹಿಸಿ ವೃಷ್ಟಿಯಾಗಲು ಸಹಾಯಮಾಡುವೆನೆಂದೂ ಹೇಳಿದನು. ಅದಕ್ಕೆ ರಾಜನು ಒಪ್ಪಲು ದೇವಾಪಿಯು ಅವನ ಯಜ್ಞದಲ್ಲಿ ಹೋತೃವೆಂಬ ಋತ್ವಿಜನ ಪಾತ್ರವನ್ನು ವಹಿಸಿದನು.

ಬೃಹಸ್ಪತಿಯು ಬ್ರಹ್ಮನೆಂಬ ಋತ್ವಿಜನಾದನು ವೃಷ್ಟಿವರ್ಷಕ್ಕಾಗಿ ಮಾಡುತ್ತಿರುವ ಆ ಯಜ್ಞದಲ್ಲಿ ಹೋ
ದೇವಾಪಿಯು ಬ್ರಹ್ಮನಾದ ಬೃಹಸ್ಪತಿಯನ್ನು ಕುರಿತು ಎಲೈ ಬೃಹಸ್ಪತಿಯೇ, ನಿನಗೆ ದೇವತೆಗಳ ಮನಸ್ಸಿನ
ಬಹಳವಾದ ಪ್ರಭಾವವಿರುವುದು. ಆದುದರಿಂದ ಅವರನ್ನು ಒಲಿಸಿಕೊಳ್ಳುವ ಮಂತ್ರಗಳನ್ನು ನನಗೆ ತಿಳಿ
ಎಂದು ಪ್ರಾರ್ಥಿಸಲಾಗಿ ಬೃಹಸ್ಪತಿಯು ಹಾಗೇ ಆಗಲೆಂದು ವೃಷ್ಟಿವರ್ಷಣಕ್ಕೆ ಬೇಕಾದ ದೇವತೆಗಳ ಪ್ರಾರ್ಥ
ನ್ನೊಳಗೊಂಡ ಮಂತ್ರಗಳನ್ನು ಹೋತೃವಾದ ದೇವಾಪಿಗೆ ಹೇಳಿಕೊಟ್ಟನು. ಆ ಮಂತ್ರಗಳಿಂದ ದೇವತೆಗಳನ್ನು
ಹೋಮಮಾಡಲು ಯಥೇಚ್ಛವಾಗಿ ವೃಷ್ಟಿಯಾಯಿತು ಎಂದು ಹೇಳಿದೆ. ಆದುದರಿಂದ ಈ ಸೂಕ್ತಕ್ಕೆ ವೃಷ್ಟಿ
ಸೂಕ್ತವೆಂದೂ ಹೆಸರು. ಈ ವಿಷಯವು ಕೆಲವುವ್ಯತ್ಯಾಸಗಳೊಡನೆ ವಿಷ್ಣುಪುರಾಣ ೪-೨೦-೭ ; ಮಹಾ
ಆದಿಪರ್ವ ; ಭಾಗವತಪುರಾಣ ೯-೨೨-೧೪ ರಿಂದ ೧೭; ಇತ್ಯಾದಿ ಪುರಾಣಗ್ರಂಥಗಳಲ್ಲಿಯೂ ಉಕ್ತವ

ಬೃಹದ್ದೇವತಾ ಎಂಬ ಗ್ರಂಥದಲ್ಲಿಯೂ ಶೌನಕಮಹರ್ಷಿಗಳು ಈ ಸೂಕ್ತದ ವಿಚಾರದಲ್ಲಿ ಈ
ತಿಳಿಸಿದಾರೆ—

ಆರ್ಷ್ಟಿಷೇಣಸ್ತು ದೇವಾಪಿಃ ಕೌರವ್ಯಶ್ಚೈವ ಶಂತನುಃ ।
ಭ್ರಾತರೌ ಕುರುಷು ತ್ವೇತೌ ರಾಜಪುತ್ರೌ ಬಭೂವತುಃ ॥ ೧

155. ಪೂರ್ವದಲ್ಲಿ ಕುರವಂಶದ ಋಷ್ಟಿಷೇಣನೆಂಬುವನಿಗೆ ದೇವಾಪಿ ಎಂಬ ಪುತ್ರನಿದ್ದನು. ಕುರು
ರಾಜರಲ್ಲಿ ಶಂತನು ಎಂಬ ರಾಜಪುತ್ರನಿದ್ದನು. ಕುರವಂಶದ ರಾಜಪುತ್ರರಾದ ಇವರಿಬ್ಬರೂ ಸಹೋದರರಾಗಿ
ಅವರಲ್ಲಿ,

ಜ್ಯೇಷ್ಠಸ್ತಯೋಸ್ತು ದೇವಾಪಿಃ ಕನೀಯಾಂಶ್ಚೈವ ಶಂತನುಃ ।
ತ್ವಗ್ದೋಷೀ ರಾಜಪುತ್ರಸ್ತು ಋಷ್ಟಿಷೇಣಸುತೋಽಭವತ್ ॥ ೧

156. ದೇವಾಪಿ ಎಂಬುವನು ಹಿರಿಯವನು, ಶಂತನು ಎಂಬುವನು ಕಿರಿಯವನು. ಋಷ್ಟಿಷ
ಪುತ್ರನಾದ ದೇವಾಪಿಗೆ ಚರ್ಮರೋಗವಿದ್ದಿತು.

ರಾಜ್ಯೇನ ಛಂದಯಾಮಾಸುಃ ಪ್ರಜಾಃ ಸ್ವರ್ಗಂ ಗತೇ ಗುರೌ ।
ಸ ಮುಹೂರ್ತಮಿವ ಧ್ಯಾತ್ವಾ ಪ್ರಜಾಸ್ತಾಃ ಪ್ರತ್ಯಭಾಷತ ॥ ೧

॥ ಇತಿ ಸಪ್ತಮೋಽಧ್ಯಾಯಃ ॥

157. ತಂದೆಯು ಮೃತನಾದ ಮೇಲೆ ಆ ದೇಶದ ಪ್ರಜೆಗಳು ದೇವಾಪಿಗೆ ರಾಜ್ಯಭಾರವನ್ನು ವಹಿಸಿ

1. ಎಲೈ ಪ್ರಜೆಗಳಿರಾ, ನಾನು (ತ್ವಗ್ದೋಷಯುತನಾಗಿರುವುದರಿಂದ) ರಾಜ್ಯವನ್ನಾಳಲು ಅರ್ಹನಲ್ಲ. ಆದ್ದರಿಂದ ನಿಮಗೆ ಶಂತನುವೇ ರಾಜನಾಗಲಿ ಎಂದನು. ಹಾಗೆಯೇ ಆಗಲೆಂದು ಹೇಳಿ ಪ್ರಜೆಗಳು ಶಂತನುವನ್ನು ರಾಜ್ಯಾಭಿಷಿಕ್ತನನ್ನಾಗಿ ಮಾಡಿದರು.

ತತೋಽಭಿಷಿಕ್ತೇ ಕೌರವ್ಯೇ ವನಂ ದೇವಾಪಿರಾವಿಶತ್ ।
ನ ವವರ್ಷಾಥ ಪರ್ಜನ್ಯೋ ರಾಜ್ಯೇ ದ್ವಾದಶ ವೈ ಸಮಾಃ ॥ ೨ ॥

2. ಕುರುವಂಶದ ಶಂತುನುವು ರಾಜ್ಯಾಭಿಷಿಕ್ತನಾದ ಮೇಲೆ ದೇವಾಪಿಯು ತಪಸ್ಸನ್ನು ಮಾಡಲು ವನಕ್ಕೆ ಹೊರಟುಹೋದನು. ಆಗ ಶಂತನುವಿನ ರಾಜ್ಯದಲ್ಲಿ ಹನ್ನೆರಡು ವರ್ಷಗಳವರೆಗೆ ಪರ್ಜನ್ಯನು ಮಳೆಯನ್ನು ಸುರಿಸಲಿಲ್ಲ.

ತತೋಽಭ್ಯಗಚ್ಛದ್ದೇವಾಪಿಂ ಪ್ರಜಾಭಿಃ ಸಹ ಶಂತನುಃ ।
ಪ್ರಸಾದಯಾಮಾಸ ಚೈನಂ ತಸ್ಮಿನ್ಧರ್ಮವ್ಯತಿಕ್ರಮೇ ॥ ೩ ॥

3. ಆದ್ದರಿಂದ ಶಂತನುರಾಜನು ತನ್ನ ಪ್ರಜೆಗಳೊಡನೆ ಹೊರಟು ದೇವಾಪಿಯು ತಪಸ್ಸುಮಾಡುತ್ತಿದ್ದ ವನಕ್ಕೆ ಬಂದು ತಾನು ಧರ್ಮವನ್ನು ಅತಿಕ್ರಮಿಸಿ (ಎಂದರೆ ಅಣ್ಣನಿಗೆ ರಾಜ್ಯವನ್ನು ಕೊಡದೆ ತಾನೇ ರಾಜನಾಗಿ) ರಾಜನಾಗಿರುವುದಕ್ಕೆ ಪಶ್ಚಾತ್ತಾಪವನ್ನು ಪ್ರದರ್ಶಿಸಿ ಅವನನ್ನು ನಾನಾ ವಿಧವಾಗಿ ಸಮಾಧಾನಮಾಡಿದನು.

ಶಿಶಿಕ್ಷ ಚೈನಂ ರಾಜ್ಯೇನ ಪ್ರಜಾಭಿಃ ಸಹಿತಸ್ತದಾ ।
ತಮುವಾಚಾಥ ದೇವಾಪಿಃ ಪ್ರಹ್ವಂ ತು ಪ್ರಾಂಜಲಿಸ್ಥಿತಂ ॥ ೪ ॥

4. ಬಳಿಕ ಪ್ರಜೆಗಳಿಂದ ಸಹಿತನಾದ ಆ ಶಂತನುವು ತನ್ನ ಜ್ಯೇಷ್ಠಸಹೋದರನಾದ ದೇವಾಪಿಗೆ ರಾಜ್ಯವನ್ನು ಒಪ್ಪಿಸಿದನು. ಆಗ ತನ್ನ ಎದುರಿಗೆ ಕೈಮುಗಿದುಕೊಂಡು ವಿನಯಾನ್ವಿತನಾಗಿ ನಿಂತಿರುವ ಶಂತನುವನ್ನು ನೋಡಿ ದೇವಾಪಿಯು ಇಂತೆಂದನು.

ನ ರಾಜ್ಯಮಹಮರ್ಹಾಮಿ ತ್ವಗ್ದೋಷೋಪಹತೇಂದ್ರಿಯಃ ।
ಯಾಜಯಿಷ್ಯಾಮಿ ತೇ ರಾಜನ್ ವೃಷ್ಟಿಕಾಮೇಜ್ಯಯಾ ಸ್ವಯಂ ॥ ೫ ॥

5. ಎಲೈ ರಾಜನೇ, ನಾನು ಚರ್ಮರೋಗದಿಂದ ನರಳುತ್ತಿರುವುದರಿಂದ ನಾನು ರಾಜ್ಯಭಾರಮಾಡಲು ಅರ್ಹನಲ್ಲ. ಆದರೆ ನಿನ್ನ ರಾಜ್ಯದಲ್ಲಿ ವೃಷ್ಟಿವರ್ಷಣದಿಂದ ಸುಭಿಕ್ಷವಾಗುವುದಕ್ಕಾಗಿ ನಾನೇ ಸ್ವತಃ ನಿಂತುಕೊಂಡು (ಪೌರೋಹಿತ್ಯವನ್ನು ವಹಿಸಿ) ನಿನ್ನಿಂದ ಯಜ್ಞವನ್ನು ಮಾಡಿಸುವೆನು ಎಂದು ಹೇಳಿದನು.

ತತಸ್ತಂ ತು ಪುರೋಽಧತ್ತ ಆರ್ತ್ವಿಜಾಯ ಸ ಶಂತನುಃ ।
ಸ ಚಾಸ್ಯ ಚಕ್ರೇ ಕರ್ಮಾಣಿ ವಾರ್ಷಿಕಾಣಿ ಯಥಾವಿಧಿ ॥ ೬ ॥

6. ಬಳಿಕ ಶಂತನು ರಾಜನು ಹಾಗೆಯೇ ಆಗಲೆಂದು ಸಂಮತಿಸಿ ತಾನುಮಾಡುವ ಯಜ್ಞದಲ್ಲಿ ದೇವಾಪಿಯು ಪೌರೋಹಿತ್ಯವನ್ನು ವಹಿಸಿ ಋತ್ವಿಕ್ಪಾತ್ರವನ್ನು ಕೈಗೊಳ್ಳಬೇಕೆಂದು ಪ್ರಾರ್ಥಿಸಿ ಅವನನ್ನು ಮುಖ್ಯಪುರೋಹಿತನನ್ನಾಗಿ ಮಾಡಿದನು. ಪೌರೋಹಿತ್ಯವನ್ನು ವಹಿಸಿದ ದೇವಾಪಿಯು ವೃಷ್ಟಿವರ್ಷಣಕರ್ಮಕ್ಕಾಗಿ ಮಾಡಬೇಕಾದ ಕಾರ್ಯಕಲಾಪಗಳನ್ನು ವಿಧ್ಯುಕ್ತವಾಗಿ ನೇರವೇರಿಸಿದನು.

ಬೃಹಸ್ಪತೇ ಪ್ರತೀತ್ಯೃಗ್ಭಿರೀಜೇ ಚೈವ ಬೃಹಸ್ಪತಿಂ ।
ದ್ವಿತೀಯಯಾಸ್ಯ ಸೂಕ್ತಸ್ಯ ಬೋಧಿತೇ ಜಾತವೇದಸಾ ॥ ೭ ॥

7. ಅನಂತರ ದೇವಾಪಿಯು ಬೃಹಸ್ಪತೇ ಪ್ರತಿ ಮೇ ಎಂಬ ೯೮ ನೇ ಸೂಕ್ತದ ಮೂರು ಋಕ್ಕುಗಳಿಂದ (೧-೩) ಬೃಹಸ್ಪತಿಯನ್ನು ಆರಾಧಿಸಿದನು. ಈ ಸೂಕ್ತದ ಎರಡನೇ ಋಕ್ಕಿನಲ್ಲಿ ಜಾತವೇದಾಗ್ನಿಯು ದೇವಾಪಿಯನ್ನುದ್ದೇಶಿಸಿ—

ಆಸ್ಯೇ ತೇ ದ್ಯುಮತೀಂ ವಾಚಂ ದಧಾಮಿ ಸ್ತುಹಿ ದೇವತಾಃ ।
ತತಃ ಸೋಽಸ್ಮೈ ದದೌ ಪ್ರೀತೋ ವಾಚಂ ದೇವಿಂ ತಯಾ ಚ ಸಃ ॥ ೮ ॥

8. ಎಲೈ ದೇವಾಪಿಯೇ, ನಿನ್ನ ಮುಖದಲ್ಲಿ (ಬಾಯಿಯಲ್ಲಿ) ಬಹಳ ಪ್ರಕಾಶಮಾನವಾದ (ಅತಿಶಯವಾದ ಶಕ್ತಿಸಾಮರ್ಥ್ಯಗಳುಳ್ಳ) ವಾಕ್ಯವನ್ನು (ಮಂತ್ರವನ್ನು) ಇಡುವೆನು (ಎಂದರೆ ನಿನಗೆ ಉಪದೇಶಿಸುವೆನು) ಅದರಿಂದ ನೀನು ದೇವತೆಗಳನ್ನು ಸ್ತುತಿಸು ಎಂದನು ಬೃಹಸ್ಪತಿಯು ಸಂತುಷ್ಟನಾಗಿ ದೇವಾಪಿಗೆ ವೃಷ್ಟಿವರ್ಷಣಕ್ಕೆ ಸಾಧಕವಾದ ಮಂತ್ರಗಳನ್ನು ಅನುಗ್ರಹಿಸಿದನು. ಆ ಮಂತ್ರಸಾಮರ್ಥ್ಯದಿಂದ,

ಋಗ್ಭಿಶ್ಚತಸೃಭಿರ್ದೇವಾನ್ ಜಗೌ ವೃಷ್ಟ್ಯರ್ಥಮೇವ ತು ।

9. ದೇವಾಪಿಯು ನಾಲ್ಕು ಋಕ್ಕುಗಳಲ್ಲಿ (೯೮ ನೇ ಸೂಕ್ತದ ೪-೭ ಋಕ್ಕುಗಳು) ದೇವತೆಗಳನ್ನು ವೃಷ್ಟಿವರ್ಷಣಕ್ಕಾಗಿ (ಮಳೆ ಬರುವುದಕ್ಕಾಗಿ) ಪ್ರಾರ್ಥಿಸಿದನು. ಮತ್ತು ಸೂಕ್ತದ ಉಳಿದ ಮುಂದಿನ ಋಕ್ಕುಗಳಲ್ಲಿ(೮-೧೨) ಅಗ್ನಿಯನ್ನು ಸ್ತುತಿಸಿದನು ಎಂದಿದೆ. Wilson ಎಂಬ ಪಾಶ್ಚಾತ್ಯ ಪಂಡಿತನು ಈ ರೀತಿ ಬರೆಯುತ್ತಾನೆ—

The origin of this Sukta is a legend quoted by Sayana from the Nirukata (II. 10.) Devapi and Shantanu were sons of Rishtishena of the Kuru family: the younger Shantanu became Raja, Devapi having made choice of a life of penance. In Shantanu's kingdom there was no rain for twelve years—the consequence, according to the Brahmans who were consulted, of Shantanu's having improperly assumed the government while his elder brother, the more legitimate Raja, was living. He was desirous of resigning his authority, but Devapi declined to accept the throne, saying "Let me be your Purohita, and conduct your religious rites." The story is told in the Vishnu Purana, iv. 20. 7; Wilson, pp. 457, 458; in the Mahabharata (Adi Parva, 3750), in Bhagavata Purana, IX. 22. 14—17; and other Puranas, sometimes with the addition that Devapi had disqualified himself from ascending the throne by the adaption of doctrines contrary to the Vedas, and consequently Shantanu remained Raja. According to the Bhagavata and

Matsya Puranas, Devapi is still alive at a place called Kalapagrama. This Sukta is remarkable as representing one of two brothers, both of the Kshatriya caste, becoming the Purohita, or family priest, and Hotri or sacrificing priest, of the other who is the Raja. (See Muir's Sanskrit Texts, vol, ii. pp. 143-150. Muir gives a translation of this hymn, verses 1—9)

॥ ಸಾಯಣಭಾಷ್ಯಂ ॥

**ಬೃಹಸ್ಪತೇ ಪ್ರತೀತಿ ದ್ವಾದಶರ್ಚಮಷ್ಟಮಂ ಸೂಕ್ತಂ ತ್ರೈಷ್ಟುಭಂ ಬೃಹಸ್ಪತಿಮಿತ್ರಾದಿಸರ್ವದೇವತಾಕಂ । ಋಷ್ಟಿಷೇಣಪುತ್ರೋ ದೇವಾಪಿರ್ನಾಮರ್ಷಿಃ । ತಥಾ ಚಾನುಕ್ರಾಂತಂ । ಬೃಹಸ್ಪತೇ ದ್ವಾದಶಾರ್ಷ್ಟಿಷೇಣೋ ದೇವಾಪಿರ್ವೃಷ್ಟಿಕಾಮೋ ದೇವಾಂಸ್ತುಷ್ಟಾವ ॥ ಗತಃ ಸೂಕ್ತವಿನಿಯೋಗಃ ॥ ಅಸ್ಯ ಸೂಕ್ತಸ್ಯಾಖ್ಯಾನಂ ನಿರುಕ್ತಕಾರಃ ಪ್ರದರ್ಶಯತಿ । ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ । ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋ ರಾಜ್ಯೇ ದ್ವಾದಶ ವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾ ಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ । ತಸ್ಯೈತದ್ವರ್ಷಕಾಮಸೂಕ್ತಂ । ನಿ. ೨-೧೦ । ಇತಿ ॥**

ಅನುವಾದವು—ಬೃಹಸ್ಪತೇ ಪ್ರತಿ ಎಂಬ ಈ ಸೂಕ್ತವು ಎಂಟನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಋಷ್ಟಿಷೇಣನ ಪುತ್ರನಾದ ದೇವಾಪಿ ಎಂಬುವನು ಋಷಿಯು; ಈ ಸೂಕ್ತಕ್ಕೆ ಬೃಹಸ್ಪತಿ, ಮಿತ್ರ ಮೊದಲಾದವರು ದೇವತೆಗಳು. ಅನುಕ್ರಮಣಿಕೆಯಲ್ಲಿ—**ಬೃಹಸ್ಪತೇ ದ್ವಾದಶಾರ್ಷ್ಟಿಷೇಣೋ ದೇವಾಪಿರ್ವೃಷ್ಟಿಕಾಮೋ ದೇವಾಂಸ್ತುಷ್ಟಾವ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ ಈ ಸೂಕ್ತದ ವಿಷಯದಲ್ಲಿ ನಿರುಕ್ತಕಾರರಾದ ಯಾಸ್ಕರು ಒಂದು ಉಪಾಖ್ಯಾನವನ್ನು ಹೇಳಿರುವರು. ಕುರುವಂಶದ ರಾಜನಾದ ಋಷ್ಟಿಷೇಣನೆಂಬುವನಿಗೆ ದೇವಾಪಿ, ಶಂತನು ಎಂಬಿಬ್ಬರು ಪುತ್ರರಿದ್ದರು. ಅವರಲ್ಲಿ ದೇವಾಪಿ ಎಂಬುವನು ಹಿರಿಯವನೂ, ಶಂತನು ಎಂಬುವನು ಕಿರಿಯವನೂ ಆಗಿದ್ದರು. ಆದರೆ ಕಿರಿಯವನಾದ ಶಂತನುವೇ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ರಾಜ್ಯವನ್ನಾಳತೊಡಗಿದನು. ಹಿರಿಯವನಾದ ದೇವಾಪಿಯು ವನಕ್ಕೆ ಹೋಗಿ ತಪಸ್ಸನ್ನು ಮಾಡುತ್ತಿದ್ದನು. ಶಂತನುವಿನ ರಾಜ್ಯದಲ್ಲಿ ಪರ್ಜನ್ಯನು ಹನ್ನೆರಡುವರ್ಷಪರ್ಯಂತರ ಮಳೆಯನ್ನು ಸುರಿಸಲಿಲ್ಲ. ಆಗ ಬ್ರಾಹ್ಮಣರು ಇದರ ಕಾರಣವನ್ನು ತಿಳಿದು ಶಂತನು ರಾಜನನ್ನು ಕುರಿತು ಇಂತೆಂದರು— ಎಲೈ ರಾಜನೇ, ನಿನ್ನ ಜ್ಯೇಷ್ಠ ಸಹೋದರನಾದ ದೇವಾಪಿಗೆ ರಾಜ್ಯವನ್ನು ಕೊಡದೆ ಕಿರಿಯವನಾದ ನೀನೇ ರಾಜ್ಯಾಭಿಷಿಕ್ತನಾಗಿ ರಾಜ್ಯವನ್ನಾಳುತ್ತಿರುವೆ. ಇದು ಅಧರ್ಮವು. ಇಂತಹ ಅಧರ್ಮಾಚರಣೆಯು ನಿನ್ನಿಂದ ನಡೆದಿದ್ದರಿಂದಲೇ ನಿನ್ನ ರಾಜ್ಯದಲ್ಲಿ ಮಳೆಯಾಗಲಿಲ್ಲ ಎಂದರು. ಆಗ ಶಂತನುವು ವನದಲ್ಲಿದ್ದ ದೇವಾಪಿಯ ಬಳಿಗೆ ಹೋಗಿ ರಾಜ್ಯವನ್ನು ಸ್ವೀಕರಿಸಬೇಕೆಂದು ಬೇಡಿಕೊಂಡನು. ಆದರೆ ದೇವಾಪಿಯು ಆದಕ್ಕೊಪ್ಪದೆ—ನನಗೆ ರಾಜ್ಯವು ಬೇಡ ಆದರೆ ನಿನ್ನ ರಾಜ್ಯದಲ್ಲಿ ವೃಷ್ಟಿಯಾಗುವುದಕ್ಕಾಗಿ ನಾನೇ ಪೌರೋಹಿತ್ಯವನ್ನು ವಹಿಸಿ ನಿನ್ನಿಂದ ಯಜ್ಞವನ್ನು ಮಾಡಿಸುತ್ತೇನೆ ಎಂದನು. ಆದ್ದರಿಂದ ಈ ಸೂಕ್ತಕ್ಕೆ ವರ್ಷಕಾಮಸೂಕ್ತವೆಂದು ಹೆಸರಾಯಿತು (ನಿ. ೨-೧೦) ಎಂದು ಹೇಳಿದಾರೆ.

## ಸೂಕ್ತ—೯೮

ಮಂಡಲ—೧೦ ॥ ಅನುವಾಕ—೮ ॥ ಸೂಕ್ತ—೯೮ ॥
ಅಷ್ಟಕ—೮ ॥ ಅಧ್ಯಾಯ—೫ ॥ ವರ್ಗ—೧೨, ೧೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
॥ ಋಷಿಃ—ದೇವಾಪಿರಾರ್ಷ್ಟಿಷೇಣಃ ॥
॥ ದೇವತಾ—ದೇವಾಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಬೃಹಸ್ಪತೇ ಪ್ರತಿ ಮೇ ದೇವತಾಮಿಹಿ ಮಿತ್ರೋ ವಾ ಯದ್ವರುಣೋ ವಾಸಿ ಪೂಷಾ ।
ಆದಿತ್ಯೈರ್ವಾ ಯದ್ವಸುಭಿರ್ಮರುತ್ವಾನ್ತ್ಸ ಪರ್ಜನ್ಯಂ ಶಂತನವೇ ವೃಷಾಯ ॥ ೧ ॥

॥ ಪದಪಾಠಃ ॥

ಬೃಹಸ್ಪತೇ । ಪ್ರತಿ । ಮೇ । ದೇವತಾಂ । ಇಹಿ । ಮಿತ್ರಃ । ವಾ । ಯತ್ । ವರುಣಃ । ವಾ । ಅಸಿ । ಪೂಷಾ।
ಆದಿತ್ಯೈಃ । ವಾ । ಯತ್ । ವಸುಽಭಿಃ । ಮರುತ್ವಾನ್ । ಸಃ । ಪರ್ಜನ್ಯಂ । ಶಂಽತನವೇ । ವೃಷಯ ॥೧॥

॥ ಸಾಯಣಭಾಷ್ಯಂ ॥

ತತ್ರ ಬೃಹತ್ಸ್ವೇ ಪ್ರವೃತ್ತೋ ಬೃಹಸ್ಪತಿಮನುಧಾವತಿ । ಹೇ ಬೃಹಸ್ಪತೇ ಮೇ ಮಮ ವೃಷ್ಟ್ಯರ್ಥಂ ಪ್ರತಿ ದೇವತಾಂ ಪ್ರತೀಹಿ । ಪ್ರತಿಗಚ್ಛ । ಯಷ್ಟವ್ಯಾ ದೇವತಾಃ ಪ್ರತಿಗಚ್ಛ । ಯದಿ ತ್ವಂ ಮಿತ್ರೋ ವಾಸಿ ಅಥವಾ ವರುಣೋಽಸಿ ಯದ್ವಾ ಪೂಷಾಸಿ ಅಥವಾದಿತ್ಯೈರ್ದ್ವಾದಶಾದಿತ್ಯೈರರುಣಾದಿಭಿರ್ವಸುಭಿರ್ವಾಸಕೈರಷ್ಟವಸುಭಿರ್ಧರಧ್ರುವಾದಿಭಿಃ ಸಹ ಮರುತ್ವಾನ್ । ಮರುತೋ ದೇವಾಃ । ತದ್ವಾನಸಿ । ಸ ತ್ವಂ ಪರ್ಜನ್ಯಂ ತರ್ಪಯಿತಾರಂ ಮೇಘಂ ಶಂತನವೇ ರಾಜ್ಞೇ ವೃಷಾಯ । ವರ್ಷಯ ॥ ಛಂದಸಿ ಶಾಯಜಪೀತಿ ವ್ಯತ್ಯಯೇನ ಶಪೋಽಪಿ ಶಾಯಜಾದೇಶಃ ॥

॥ ಪ್ರತಿಪದಾರ್ಥ ॥

ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಮೇ—ನನಗೆ ವೃಷ್ಟ್ಯರ್ಥವಾಗಿ । **ದೇವತಾಂ ಪ್ರತಿ ಇಹಿ**—ದೇವತೆಗಳಲ್ಲಿ ಹೋಗಿ ಪ್ರಾರ್ಥಿಸು. । **ಯತ್**—ಒಂದುವೇಳೆನೀನು । **ಮಿತ್ರಃ**—ಮಿತ್ರರೂಪನಾಗಿ । **ಅಸಿ**—ಆಗಿದ್ದರೂ, । **ವರುಣಃ**— ವರುಣರೂಪದಲ್ಲಿದ್ದರೂ । **ಪೂಷಾ ವಾ ಅಸಿ**— ಪೂಷನಾಗಿದ್ದರೂ । (ಅಥವಾ)

**ಆದಿತ್ಯೈಃ**—ಆದಿತ್ಯರೊಡನೆಯೂ | **ವಸುಭಿಃ**—ವಸುಗಳೊಡನೆಯೂ ಕೂಡಿದ | **ಮರುತ್ವಾನ್**— ಮರುತ್ತುಗಳಿಂದ ಯುಕ್ತನಾಗಿದ್ದರೂ | **ಸಃ**—ಅಂತಹ ನೀನು | **ಶಂತನವೇ**—ಶಂತನುಸಂಜ್ಞಕನಾದ ರಾಜನಿಗಾಗಿ | **ಪರ್ಜನ್ಯಂ**—ಪರ್ಜನ್ಯದೇವನನ್ನು ಪ್ರೇರಿಸಿ | **ವೃಷಯ**—ವೃಷ್ಟಿಯನ್ನು ಸುರಿಸುವಂತೆ ಮಾಡು.

|| ಭಾವಾರ್ಥ ||

ಎಲೈ ಬೃಹಸ್ಪತಿಯೇ, ನನಗೆ ವೃಷ್ಟಿಯನ್ನು ಒದಗಿಸಬೇಕೆಂದು ದೇವತೆಗಳಲ್ಲಿ ಹೋಗಿ ಪ್ರಾರ್ಥಿಸು. ಒಂದು ವೇಳೆ ನೀನು ಮಿತ್ರರೂಪದಲ್ಲಿದ್ದರೂ, ಅಥವಾ ವರುಣನಾಗಿದ್ದರೂ, ಅಥವಾ ಪೂಷನಾಗಿದ್ದರೂ, ಅಥವಾ ಆದಿತ್ಯರೊಡನೆಯೂ, ವಸುಗಳೊಡನೆಯೂ ಕೂಡಿದ ಮರುದ್ಯುಕ್ತನಾಗಿದ್ದರೂ ಸಹ ಶಂತನುಸಂಜ್ಞಕನಾದ ರಾಜನಿಗಾಗಿ ಪರ್ಜನ್ಯನನ್ನು ಪ್ರೇರಿಸಿ ವೃಷ್ಟಿಯನ್ನು ಸುರಿಸುವಂತೆ ಮಾಡು.

English Translation

Repair, Brihaspathi, on my behalf to the gods, whether you are Mitra, or Varuna, or Pushan, or are associated with the Adityas, the Vasus, or the Maruts—do you cause Parjanya to send down rain for Shantanu.

|| ಸಂಹಿತಾಪಾಠಃ ||

ಆ ದೇವೋ ದೂತೋ ಅಜಿರಶ್ಚಿಕಿತ್ವಾನ್ತ್ವದ್ದೇವಾಪೇ ಅಭಿ ಮಾಮಗಚ್ಛತ್ |
ಪ್ರತೀಚೀನಃ ಪ್ರತಿ ಮಾಮಾ ವವೃತ್ಸ್ವ ದಧಾಮಿ ತೇ ದ್ಯುಮತೀಂ ವಾಚಮಾಸನ್ || ೨ ||

|| ಪದಪಾಠಃ ||

ಆ | ದೇವಃ | ದೂತಃ | ಅಜಿರಃ | ಚಿಕಿತ್ವಾನ್ | ತ್ವತ್ | ದೇವಽಆಪೇ | ಅಭಿ | ಮಾಂ | ಅಗಚ್ಛತ್ |
ಪ್ರತೀಚೀನಃ | ಪ್ರತಿ | ಮಾಂ | ಆ | ವವೃತ್ಸ್ವ | ದಧಾಮಿ | ತೇ | ದ್ಯುಽಮತೀಂ | ವಾಚಂ | ಆಸನ್ ||೨||

|| ಸಾಯಣಭಾಷ್ಯಂ ||

ದೇವ ಕಶ್ಚಿದ್ದೂತೋಽಜಿರೋ ಗಮನಶೀಲಶ್ಚಿಕಿತ್ವಾಂಶ್ಚೇತನಾವಾನ್ ಹೇ ದೇವಾಪೇ ತ್ವತ್ ತ್ವತ್ತಃ ಸಕಾಶಾತ್ತ್ವಯಾ ಪ್ರೇಷಿತಃ ಸನ್ ಮಾಮಭ್ಯಾಗಚ್ಛತ್ | ಅಭ್ಯಾಗಚ್ಛತು | ಹೇ ಬೃಹಸ್ಪತೇ ಪ್ರತೀಚೀನೋಽಸ್ಮದಭಿಮುಖೋ ಮಾಂ ಪ್ರತ್ಯಾ ವವೃತ್ಸ್ವ | ಮಾಂ ಪ್ರತ್ಯಾಗಚ್ಛ | ತೇ ತುಭ್ಯಂ ತ್ವದರ್ಥಂ ದ್ಯುಮತೀಂ ದೀಪ್ತಿಯುಕ್ತಾಂ ವಾಚಂ ಸ್ತುತಿರೂಪಾಂ ದಧಾಮ್ಯಾಸನ್ನಾಸ್ಯೇಽಸ್ಮದೀಯೇ ||

|| ಪ್ರತಿಪದಾರ್ಥ ||

**ದೇವಾಪೇ**— ಎಲೈ ದೇವಾಪಿಯೇ, | **ಅಜಿರಃ**— ಶೀಘ್ರಗಾಮಿಯೂ, | **ಚಿಕಿತ್ವಾನ್**— ಪ್ರಾಜ್ಞನೂ ಆದ | **ದೇವಃ ದೂತಃ**—ಯಾವನಾದರೂ ದೇವದೂತನು | **ತ್ವತ್**—ನಿನ್ನಿಂದ ಕಳುಹಲ್ಪಟ್ಟವನಾಗಿ | **ಮಾಂ**— ನನ್ನಲ್ಲಿಗೆ | **ಅಭ್ಯಾಗಚ್ಛತ್**—ಬರಲಿ. | (ಎಲೈ ಬೃಹಸ್ಪತಿಯೇ) **ಪ್ರತೀಚೀನಃ**—ನನಗಭಿಮುಖವಾಗಿ ತಿರುಗಿ | **ಮಾಂ ಪ್ರತಿ**—ನನ್ನಲ್ಲಿಗೆ | **ಆ ವವೃತ್ಸ್ವ**—ಹಿಂತಿರುಗಿ ಬಾ. | **ತೇ**—ನಿನ್ನನ್ನುದ್ದೇಶಿಸಿ | **ದ್ಯುಮತೀಂ**— ಕಾಂತಿಯುತವಾದ | **ವಾಚಂ**—ಸ್ತುತಿಯನ್ನು | **ಆಸನ್**—ಮುಖದಲ್ಲಿ | **ದಧಾಮಿ**—ಧರಿಸಿದ್ದೇನೆ.

|| ಭಾವಾರ್ಥ ||

ಎಲೈ ದೇವಾಪಿಯೇ, ಶೀಘ್ರಗಾಮಿಯೂ, ಪ್ರಾಜ್ಞನೂ ಆದ ಯಾವನಾದರೂ ದೇವದೂತನು ನಿನ್ನಿಂದ ಕಳುಹಲ್ಪಟ್ಟವನಾಗಿ ನನ್ನಲ್ಲಿಗೆ ಬರಲಿ. ಎಲೈ ಬೃಹಸ್ಪತಿಯೇ, ನನಗಭಿಮುಖನಾಗಿ ತಿರುಗಿ ನನ್ನಲ್ಲಿಗೆ ಹಿಂತಿರುಗಿ ಬಾ ನಿನ್ನನ್ನುದ್ದೇಶಿಸಿ ಕಾಂತಿಯುತವಾದ ಸ್ತುತಿಯನ್ನು ಮುಖದಿಂದ ಪಠಿಸುತ್ತೇನೆ.

## English Translation.

Let a divine messenger quick and intelligent sent, Devapi, by you come to me. Come, Brihaspati, to me, turning towards me; I have in my mouth a brilliant eulogium for you.

|| ಸಂಹಿತಾಪಾಠಃ ||

ಅಸ್ಮೇ ಧೇಹಿ ದ್ಯುಮತೀಂ ವಾಚಮಾಸನ್ಬೃಹಸ್ಪತೇ ಅನಮೀವಾಮಿಷಿರಾಂ।
ಯಯಾ ವೃಷ್ಟಿಂ ಶಂತನವೇ ವನಾವ ದಿವೋ ದ್ರಪ್ಸೋ ಮಧುಮಾँ ಆ ವಿವೇಶ || ೩ ||

|| ಪದಪಾಠಃ ||

ಅಸ್ಮೇ ಇತಿ | ಧೇಹಿ | ದ್ಯುऽಮತೀಂ | ವಾಚಂ | ಆಸನ್ | ಬೃಹಸ್ಪತೇ | ಅನಮೀವಾಂ | ಇಷಿರಾಂ | ಯಯಾ | ವೃಷ್ಟಿಂ | ಶಂऽತನವೇ | ವನಾವ | ದಿವಃ | ದ್ರಪ್ಸಃ | ಮಧುऽಮಾನ್ | ಆ | ವಿವೇಶ || ೩ ||

|| ಸಾಯಣಭಾಷ್ಯಂ ||

ಹೇ ಬೃಹಸ್ಪತೇ ತ್ವಮಸ್ಮೇ ಅಸ್ಮಾಸು ದ್ಯುಮತೀಂ ದೀಪ್ತಿಮತೀಂ ವಾಚಂ ಸ್ತೋತ್ರಾತ್ಮಿಕಾಮಾ- ಸನ್ನಾಸ್ಯೇऽಸ್ಮದೀಯೇ ಧೇಹಿ | ಸ್ಥಾಪಯ | ಕೀದೃಶೀಂ ವಾಚಂ | ಅನಮೀವಾಮಮೀವಾರಹಿತಾಂ |

ವಾಚೋಽನಮೀವಾ ನಾಮ ಗದ್ಗದಾದಿದೋಷಃ । ತಥೇಷಿರಾಂ ಗಮನಶೀಲಾಂ । ಯಯಾ ವಾಚಾ ಸ್ತುತ್ಯಾತ್ಮಿಕಯಾ ದೇವಾನಿಷ್ಟ್ವಾ ಶಂತನವೇ ವೃಷ್ಟಿಕಾಮಾಯ ವನಾವ ಸಂಭಜೇವಹಿ ವೃಷ್ಟಿಂ ಶ್ವಂ ಚಾಹಂ ಚ ದಿವೋ ದ್ಯುಲೋಕಾತ್ । ತ್ವಯಾಧಿಷ್ಠಿತೋ ದ್ರಪ್ಸ ಉದಕಸ್ಯಂದೋ ಮಧುಮಾನ್ ಮಾಧುರ್ಯೋಪೇತ ಆ ವಿವೇಶ । ಆವಿಶತಿ ವಾಚಮಿತಿ ಸಮನ್ವಯಃ ॥

॥ ಪ್ರತಿಪದಾರ್ಥ ॥

ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಯಯಾ—ಯಾವ ಸ್ತುತಿಯಿಂದ । ಶಂತನವೇ—ಶಂತನುವಿಗಾಗಿ । ವೃಷ್ಟಿಂ—ವೃಷ್ಟಿಯನ್ನು । ವನಾವ—ನಾವು ಆಶಿಸುವೆವೋ (ಯಾವುದರ ಫಲವಾಗಿ) । ಮಧುಮಾನ್—ಮಾಧುರ್ಯಯುಕ್ತವಾದ । ದ್ರಪ್ಸಃ—ಉದಕಧಾರೆಯು । ದಿವಃ—ದ್ಯುಲೋಕದಿಂದ ಪ್ರವಹಿಸಿ । ಆ ವಿವೇಶ—(ನಮ್ಮಲ್ಲಿ) ಪ್ರವೇಶಿಸುವುದೋ ಅಂತಹ । ಅನಮೀವಾಂ—ದೋಷರಹಿತವಾದುದೂ । ಇಷಿರಾಂ—ಶೀಘ್ರವಾಗಿ ದೇವತೆಗಳಲ್ಲಿ ಹೋಗತಕ್ಕದ್ದೂ । ದ್ಯುಮತೀಂ—ಕಾಂತಿಯುತವೂ ಆದ । ವಾಚಂ—ಸ್ತುತಿಯನ್ನು । ಅಸ್ಮೇ—ನಮ್ಮ । ಆಸನ್—ಮುಖದಲ್ಲಿ । ಧೇಹಿ—ಸ್ಥಾಪಿಸು ।

॥ ಭಾವಾರ್ಥ ॥

ಎಲೈ ಬೃಹಸ್ಪತಿಯೇ, ಯಾವ ಸ್ತುತಿಯಿಂದ ಶಂತನುವಿಗಾಗಿ ನಾವು ವೃಷ್ಟಿಯನ್ನು ಆಶಿಸುವೆವೋ, ಯಾವುದರ ಫಲವಾಗಿ ಮಾಧುರ್ಯಯುಕ್ತವಾದ ಉದಕಧಾರೆಯು ದ್ಯುಲೋಕದಿಂದ ಪ್ರವಹಿಸಿ ನಮ್ಮಲ್ಲಿ ಪ್ರವೇಶಿಸುವುದೋ, ಅಂತಹ ದೋಷರಹಿತವೂ, ಶೀಘ್ರವಾಗಿ ದೇವತೆಗಳನ್ನು ಸಮೀಪಿಸುವುದೂ ಕಾಂತಿಯುತವೂ ಆದ ಸ್ತುತಿಯನ್ನು ನಮ್ಮಮುಖದಲ್ಲಿ ಸ್ಥಾಪಿಸು. (ನಮಗೆ ಹೇಳಿಕೊಡು)

**English Translation.**

Put, Brihaspati, in my mouth a brilliant eulogium, prompt and free from defect, by which we two may obtain rain from heaven for Shantanu' the sweet drop (sent by you) has entered (our voice).

॥ ಸಂಹಿತಾಪಾಠಃ ॥

ಆ ನೋ ದ್ರಪ್ಸಾ ಮಧುಮಂತೋ ವಿಶಂತ್ವಿಂದ್ರ ದೇಹ್ಯಧಿರಥಂ ಸಹಸ್ರಂ ।
ನಿ ಷೀದ ಹೋತ್ರಮೃತುಥಾ ಯಜಸ್ವ ದೇವಾನ್ದೇವಾಪೇ ಹವಿಷಾ ಸಪರ್ಯ ॥

॥ ಪದಪಾಠಃ ॥

ಆ । ನಃ । ದ್ರಪ್ಸಾಃ । ಮಧುऽಮಂತಃ । ವಿಶಂತು । ಇಂದ್ರ । ದೇಹಿ । ಅಧಿऽರಥಂ । ಸಹಸ್ರಂ ।
ನಿ । ಸೀದ । ಹೋತ್ರಂ । ಋತುऽಥಾ । ಯಜಸ್ವ । ದೇವಾನ್ । ದೇವऽಆಪೇ । ಹವಿಷಾ । ಸಪರ್ಯ ॥೪॥

॥ ಸಾಯಣಭಾಷ್ಯಂ ॥

ನೋಽಸ್ಮಾನ್ದ್ರಪ್ಸಾ ವೃಷ್ಟಿಸಂಸ್ತ್ಯಾಯಾ ಮಧುಮಂತೋ ಮಾಧುರ್ಯೋಪೇತಾ ಆ ವಿಶಂತು । ಹೇ ಇಂದ್ರ ಪರಮೇಶ್ವರ ಬೃಹಸ್ಪತೇ ಅಧಿರಥಂ ರಥಸ್ಯಾಧ್ಯುಪರಿ ವರ್ತಮಾನಂ ಸಹಸ್ರಂ ಸಹಸ್ರಸಂಖ್ಯಾಕಂ ಧನಂ ದೇಹಿ । ಧೇಹಿ । ಯದ್ವಾ । ರಥಮಧಿಕಂ ಯಸ್ಯ ಸಹಸ್ರಸ್ಯ ತಾದೃಶಂ ಗೋಸಹಸ್ರಂ । ಹೇ ದೇವಾಪೇ ನಿ ಷೀದ ಹೋತ್ರಂ । ಆರ್ತ್ವಿಜ್ಯೇ ನಿಷೀದ । ನಿಷಣ್ಣಶ್ಚ ತ್ವಮೃತುಥಾ ಕಾಲೇ ಕಾಲೇ ಯಜಸ್ವ ಯಷ್ಟವ್ಯಾನ್ದೇವಾನ್ ಸ್ತುತ್ಯಾ ಹವಿಷಾ ಚ ಸಪರ್ಯ । ಪರಿಚರ ॥

॥ ಪ್ರತಿಪದಾರ್ಥ ॥

ಮಧುಮಂತಃ—ಮಾಧುರ್ಯದಿಂದ ಕೂಡಿದ । ದ್ರಪ್ಸಾಃ—ಉದಕಧಾರೆಗಳು (ಬಿಂದುಗಳು) । ನಃ—ನಮ್ಮನ್ನು । ಆ ವಿಶಂತು—ಪ್ರವೇಶಿಸಲಿ । ಇಂದ್ರ—ಪ್ರಭುವಾದ ಎಲೈ ಬೃಹಸ್ಪತಿಯೇ । ಅಧಿರಥಂ—ರಥದ ಮೇಲಿರುವ । ಸಹಸ್ರಂ—ಸಹಸ್ರಸಂಖ್ಯಾಕವಾದ ಧನವನ್ನು । ಧೇಹಿ—ನಮ್ಮಲ್ಲಿ ಸ್ಥಾಪಿಸು । ದೇವಾಪೇ—ಎಲೈ ದೇವಾಪಿಯೇ । ಹೋತ್ರಂ—ಹೋತೃಸ್ಥಾನದಲ್ಲಿ । ನಿ ಷೀದ—ಕುಳಿತುಕೊ । ಋತುಥಾ—ಅಯಾಕಾಲಾನುಗುಣವಾಗಿ । ದೇವಾನ್—ದೇವತೆಗಳನ್ನು । ಯಜಸ್ವ—ಪೂಜಿಸು । ಹವಿಷಾ –ಹವಿಸ್ಸುಗಳಿಂದ । ಸಪರ್ಯ—ಉಪಚರಿಸು. ।

॥ ಭಾವಾರ್ಥ ॥

ಮಾಧುರ್ಯದಿಂದ ಕೂಡಿದ ಉದಕಧಾರೆಗಳು ಬಂದು ನಮ್ಮಲ್ಲಿ ಪ್ರವೇಶಿಸಲಿ. ಪ್ರಭುವಾದ ಎಲೈ ಬೃಹಸ್ಪತಿಯೇ, ರಥದ ಮೇಲಿರುವ ಸಹಸ್ರಸಂಖ್ಯಾಕವಾದ ಧನವನ್ನು ನಮ್ಮಲ್ಲಿ ಸ್ಥಾಪಿಸು. ಎಲೈ ದೇವಾಪಿಯೇ, ಹೋತೃಸ್ಥಾನದಲ್ಲಿ ಕುಳಿತುಕೊ. ಅಯಾಕಾಲಾನುಗುಣವಾಗಿ ದೇವತೆಗಳನ್ನು ಪೂಜಿಸು. ಹವಿಸ್ಸುಗಳಿಂದ ಉಪಚರಿಸು.

English Translation

May the sweet drops of rain fall upon us : grant us, Indra, a thousand chariot-loads. Sit down, Devapi, to your duties as Hotri ; in due season sacrifice to the gods, worship them with oblations.

॥ ಸಂಹಿತಾಪಾಠಃ ॥

ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ದೇವಾಪಿರ್ದೇವಸುಮತಿಂ ಚಿಕಿತ್ವಾನ್ ।
ಸ ಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ॥ ೫ ॥

॥ ಪದಪಾಠಃ ॥

ಆರ್ಷ್ಟಿಷೇಣಃ । ಹೋತ್ರಂ । ಋಷಿಃ । ನಿಽಸೀದನ್ । ದೇವಽಆಪಿಃ । ದೇವಽಸುಮತಿಂ । ಚಿಕಿತ್ವಾನ್ ।
ಸಃ । ಉತ್ಽತರಸ್ಮಾತ್ । ಅಧರಂ । ಸಮುದ್ರಂ । ಅಪಃ । ದಿವ್ಯಾಃ । ಅಸೃಜತ್ । ವರ್ಷ್ಯಾಃ । ಅಭಿ ॥೫॥

॥ ಸಾಯಣಭಾಷ್ಯಂ ॥

ಆರ್ಷ್ಟಿಷೇಣ ಋಷ್ಟಿಷೇಣಸ್ಯ ಪುತ್ರೋ ದೇವಾಪಿರ್ಋಷಿರ್ದೇವಸುಮತಿಂ ದೇವಾನಾಂ ಕಲ್ಯಾಣೀಂ ಮತಿಂ ಸ್ತುತಿಂ ಚಿಕಿತ್ವಾಞ್ಜಾನನ್ ಹೋತ್ರಂ ಹೋತೃಕರ್ಮ ಕರ್ತುಂ ನಿಷೀದನ್ ನಿಷಣ್ಣೋ ಭವತಿ । ಸ ಉತ್ತರಸ್ಮಾದುಪರಿ ವರ್ತಮಾನಾದಂತರಿಕ್ಷಾಖ್ಯಾತ್ಸಮುದ್ರಾದಧರಮಧೋ ವರ್ತಮಾನಂ ಪಾರ್ಥಿವಂ ಸಮುದ್ರಮಭಿ ದಿವ್ಯಾ ದಿವಿ ಭವಾ ವರ್ಷ್ಯಾ ವರ್ಷಭವಾ ಅಪೋಽಸೃಜತ್ । ಸೃಜತು । ಅತ್ರಾರ್ಷ್ಟಿಷೇಣ ಋಷ್ಟಿಷೇಣಸ್ಯ ಪುತ್ರ ಇತ್ಯಾದಿ ನಿರುಕ್ತಂ । ೨-೧೧ । ದ್ರಷ್ಟವ್ಯಂ ॥

॥ ಪ್ರತಿಪದಾರ್ಥ ॥

**ಆರ್ಷ್ಟಿಷೇಣಃ**—ಋಷ್ಟಿಷೇಣನ ಪುತ್ರನೂ । **ದೇವಾಪಿಃ**—ದೇವಾಪಿಸಂಜ್ಞಕನೂ ಆದ । **ಋಷಿಃ**—ಋಷಿಯು । **ದೇವಸುಮತಿಂ**—ದೇವತೆಗಳ ಅನುಗ್ರಹವನ್ನು ಉಂಟುಮಾಡುವ ಸ್ತುತಿಯನ್ನು । **ಚಿಕಿತ್ವಾನ್**—ಅರಿತವನಾಗಿ । **ಹೋತ್ರಂ**—ಹೋತೃಸ್ಥಾನದಲ್ಲಿ (ಸ್ತುತಿಸಲು) । **ನಿಷೀದನ್**—ಕುಳಿತಿದ್ದಾನೆ । **ಸಃ**—ಅವನು । **ಉತ್ತರಸ್ಮಾತ್**—ಅಂತರಿಕ್ಷಸ್ಥವಾದ ಸಮುದ್ರದಿಂದ । **ಅಧರಂ ಸಮುದ್ರಂ ಅಭಿ**—ಪೃಥ್ವಿಯ ಮೇಲಿರುವ ಸಮುದ್ರಕ್ಕೆ । **ದಿವ್ಯಾಃ**—ದ್ಯುಲೋಕೋತ್ಪನ್ನವೂ । **ವರ್ಷ್ಯಾಃ**—ವೃಷ್ಟ್ಯುತ್ಪನ್ನವೂ ಆದ । **ಅಪಃ**—ಉದಕಗಳನ್ನು । **ಅಸೃಜತ್**—ಸುರಿಸಲಿ.

॥ ಭಾವಾರ್ಥ ॥

ಋಷ್ಟಿಷೇಣನ ಪುತ್ರನೂ, ದೇವಾಪಿಸಂಜ್ಞಕನೂ ಆದ ಋಷಿಯು ದೇವತೆಗಳ ಅನುಗ್ರಹವನ್ನು ಉಂಟುಮಾಡುವ ಸ್ತುತಿಯನ್ನು ಅರಿತವನಾಗಿ ಹೋತೃಸ್ಥಾನದಲ್ಲಿ ಸ್ತುತಿಸಲು ಕುಳಿತಿದ್ದಾನೆ. ಅವನು ಅಂತರಿಕ್ಷಸ್ಥವಾದ ಸಮುದ್ರದಿಂದ ಎಂದರೆ ಮೇಘಮಂಡಲದಿಂದ ಪೃಥ್ವಿಯ ಮೇಲಿರುವ ಸಮುದ್ರಕ್ಕೆ ದ್ಯುಲೋಕೋತ್ಪನ್ನವೂ, ವೃಷ್ಟ್ಯುತ್ಪನ್ನವೂ ಆದ ಉದಕಗಳನ್ನು ಸುರಿಸಲಿ.

## English Translation.

The Rishi Devapi, the son of Rishtishena, knowing how to propitate the gods has sat down to his functions as Hotri. He has brought down from the upper to the lower ocean the rain waters of heaven.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನೂ ಕೆಲವು ಶಬ್ದಗಳ ರೂಪನಿಷ್ಪತ್ತಿಯನ್ನೂ ಹೇಳಿದಾರೆ—

**ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ದೇವಾಪಿರ್ದೇವಸುಮತಿಂ ಚಿಕಿತ್ವಾನ್ । ಸ ಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ॥ ಆರ್ಷ್ಟಿಷೇಣ ಋಷ್ಟಿಷೇಣಸ್ಯ ಪುತ್ರ ಇಷಿತಸೇನಸ್ಯೇತಿ ವಾ । ಸೇನಾ ಸೇಶ್ವರಾ ಸಮಾನಗತಿರ್ವಾ । ಪುತ್ರಃ ಪುರು ತ್ರಾಯತೇ ನಿಪರಣಾದ್ವಾ ಪುನ್ನರಕಂ ತತಸ್ತ್ರಾಯತ ಇತಿ ವಾ । ಹೋತ್ರಮೃಷಿರ್ನಿಷೀದನ್ । ಋಷಿರ್ದರ್ಶನಾತ್ ಸ್ತೋಮಾನ್ ದದರ್ಶೇತ್ಯೌಪಮನ್ಯವಃ ತದ್ಯದೇನಾಂಸ್ತಪಸ್ಯಮಾನಾನ್ ಬ್ರಹ್ಮ ಸ್ವಯಂಭ್ವಭ್ಯಾನರ್ಷತ್ತ ಋಷಯೋಽಭವಂಸ್ತದೃಷೀಣಾಮೃಷಿತ್ವಮಿತಿ ವಿಜ್ಞಾಯತೇ । ದೇವಾಪಿರ್ದೇವಾನಾಮಾಪ್ತ್ಯಾ ಸ್ತುತ್ಯಾ ಚ ಪ್ರದಾನೇನ ಚ । ದೇವಸುಮತಿಂ ದೇವಾನಾಂ ಕಲ್ಯಾಣೀಂ ಮತಿಂ । ಚಿಕಿತ್ವಾಂಶ್ಚೇತನಾವಾನ್ । ಸ ಉತ್ತರಸ್ಮಾದಧರಂ ಸಮುದ್ರಂ ಉತ್ತರ ಉದ್ಧತತರೋ ಭವತಿ। ಅಧರೋಽಧೋರಃ। ಅಧೋ ನ ಧಾವತೀತ್ಯೂರ್ಧ್ವಗತಿಃ ಪ್ರತಿಷಿದ್ಧಾ॥**

(ನಿ ೨-೧೧)

**ಆರ್ಷ್ಟಿಷೇಣಃ**—ಋಷ್ಟಿಷೇಣನೆಂಬುವನ ಪುತ್ರನಿಗೆ ಆರ್ಷ್ಟಿಷೇಣನೆಂದು ಹೆಸರು. **ಋಷ್ಟಿಷೇಣಃ**—ಋಷ್ಟಿ ಎಂದರೆ ಭರ್ಜಿಯಂತಿರುವ ಆಯುಧ ವಿಶೇಷವು. ಅಂತಹ ಭರ್ಜಿಗಳು ಅನೇಕವಿರುವ ಸೇನೆಯಿಂದ ಯುಕ್ತನಾದವನಿಗೆ ಋಷ್ಟಿಷೇಣನೆಂದು ಹೆಸರು. **ಅಥವಾ ಇಷಿತಸೇನೋ ವಾ ನಿತ್ಯಮೇವ ಪ್ರೇಷಿತಸೇನಃ ಶತ್ರೂನ್ ಪ್ರತಿ**—ಯಾವಾಗಲೂ ಶತ್ರುಗಳ ಮೇಲೆ ಮುನ್ನುಗ್ಗಿ ಹೋಗುವಂತೆ ತನ್ನ ಸೇನೆಗಳನ್ನು ಕಳುಹಿಸುವವನಾದ್ದರಿಂದ ಇವನಿಗೆ **ಇಷಿತಸೇನ** ಅಥವಾ **ಋಷ್ಟಿಷೇಣ** ಎಂಬ ಹೆಸರು ಬಂದಿದೆ.

**ಸೇನಾ ಸೇಶ್ವರಾ ಸಮಾನಗತಿರ್ವಾ**—ಸೇನಾ ಎಂಬ ಶಬ್ದಕ್ಕೆ ಅರ್ಥವೇನೆಂದರೆ— ಇನ ಎಂದರೆ ಈಶ್ವರ, ಒಡೆಯ. ಸೇನಾ ಎಂದರೆ ಒಡೆಯ ಅಥವಾ ಅಧಿಪತಿಯಿಂದ ಕೂಡಿದ ಯುದ್ಧಭಟರ ಸಮೂಹ. ಎಂದರೆ ಸೇನಾಧಿಪತಿಯಿಂದ ಕೂಡಿದ ಯೋಧರ ಸಮೂಹಕ್ಕೆ ಸೇನಾ ಎಂದು ಹೆಸರು. **ಅಥವಾ ಸಮಾನಗತಿರ್ವಾ** ಒಂದೇ ವಿಧವಾದ **ಗತಿಯಿಂದ ನಡೆಯತಕ್ಕವರು** (Marching in formation) ಎಂದರೆ ಸೇನೆಯ ಯೋಧರು ನಡೆಯುವಾಗ ಒಂದೊಂದು ಲೈನಿಗೆ ನಾಲ್ಕು ಅಥವಾ ಐದು ಜನರಂತೆ ಸಾಲುಸಾಲಾಗಿ ಒಂದೇ ಸಮನಾಗಿ ಹೆಜ್ಜೆ ಹಾಕುತ್ತಾ ನಡೆಯುವ ಅಥವಾ ಜಯವನ್ನು ಗಳಿಸಬೇಕೆಂಬ ಒಂದೇ ಉದ್ದೇಶದಿಂದ ಹೋಗುತ್ತಿರುವ ಯೋಧರ ಸಮೂಹಕ್ಕೆ ಸೇನಾ ಎಂದು ಹೆಸರು.

**ಪುತ್ರಃ ಪುರು ತ್ರಾಯತೇ ನಿಪರಣಾದ್ವಾ । ಪುನ್ನರಕಂ ತತಸ್ತ್ರಾಯತ ಇತಿ ವಾ**— ಪುತ್ರನಿಗೆ ಪುತ್ರನೆಂಬ ಹೆಸರು ಹೇಗೆ ಬಂದಿತು ಎಂದರೆ, ಪಿತೃಗಳಿಗೆ (ಶ್ರಾದ್ಧಕಾಲದಲ್ಲಿ) ಪಿಂಡಾದಿಗಳನ್ನು ಇಡುವುದರಿಂದ ಪುತ್ರನೆಂದು ಹೆಸರು ಅಥವಾ **ಪುತ್** ಎಂಬುದು ಒಂದು ನರಕದ ಹೆಸರು. ಪುತ್ರನಾದವನು ತನ್ನ ಪಿತೃಗಳನ್ನು ಉದ್ದೇಶಿಸಿ ಮಾಡುವ ಪಿಂಡಪ್ರದಾನಾದಿಕರ್ಮಗಳಿಂದಲೂ ಇತರ ಸತ್ಕರ್ಮಾನುಷ್ಠಾನದಿಂದಲೂ ತನ್ನ ಪಿತೃಗಳನ್ನು **ತ್ರಾಯತೇ** ಆ **ಪುತ್** ಎಂಬ ನರಕಕ್ಕೆ ಬೀಳದಂತೆ ಕಾಪಾಡುವವನಾದ್ದರಿಂದ ಪುತ್ರನೆಂದು ಹೆಸರು. ಪುತ್ರನು ಮಾಡುವ

ಸತ್ಕರ್ಮಾನುಷ್ಠಾನದಿಂದ ತಂದೆಗೆ ಪ್ರಾಪ್ತವಾಗಬಹುದಾದ ಪುತ್ ಮೊದಲಾದ ನರಕಪ್ರಾಪ್ತಿಯು ತಪ್ಪಿ ಉತ್ತಮವಾದ ಪದವಿಯು ಪ್ರಾಪ್ತವಾಗುವುದು. ಆದ್ದರಿಂದ ಪುನ್ನರಕದಿಂದ ತಂದೆಯನ್ನು ಕಾಪಾಡುವವನಿಗೆ ಪುತ್ರನೆಂದು ಹೆಸರು.

**ಹೋತ್ರಮೃಷಿರ್ನಿಷೀದನ್**— ಈ ದೇವಾಪಿಯು ಶಂತನುವಿಗೆ ವೃಷ್ಟಿಪ್ರದವಾದ ಯಜ್ಞವನ್ನು ಮಾಡಿಸುವುದಕ್ಕಾಗಿ ಹೋತೃವೆಂದು ಋತ್ವಿಕ್ಕಾಗಿ ಎಂದರೆ ಹೋತೃಕರ್ಮವನ್ನು ಮಾಡುವುದಕ್ಕಾಗಿ ಯಜ್ಞವೇದಿಯಲ್ಲಿ ಕುಳಿತು ಎಂದಭಿಪ್ರಾಯವು.

**ಋಷಿರ್ದರ್ಶನಾತ್ ಸ್ತೋಮಾನ್ ದದರ್ಶೇತ್ಯೌಪಮನ್ಯವಃ ತದ್ಯದೇನಾಂಸ್ತಪಸ್ಯಮಾನಾನ್ ಬ್ರಹ್ಮ ಸ್ವಯಂಭ್ವಭ್ಯಾನರ್ಷತ್ತ ಋಷಯೋಽಭವಸ್ತದೃಷೀಣಾಮೃಷಿತ್ವಮಿತಿ ವಿಜ್ಞಾಯತೇ**— ಋಷಿ ಶಬ್ದಕ್ಕೆ ನಿರ್ವಚನವನ್ನೂ ರೂಪನಿಷ್ಪತ್ತಿಯನ್ನೂ, ಹೇಳಲಾಗುವುದು. ಋಷಿ ಎಂದರೆ ನೋಡಬಲ್ಲವನಾದ್ದರಿಂದ ಎಂದರೆ ಸಾಧಾರಣ ಮನುಷ್ಯರಿಗೆ ಗೋಚರವಾಗದಿರುವ ಭೂತಭವಿಷ್ಯತ್ಸಂಗತಿಗಳನ್ನು ತನ್ನ ಅತೀಂದ್ರಿಯ ಜ್ಞಾನದಿಂದ ನೋಡಿ ತಿಳಿಯಬಲ್ಲವನಿಗೆ ಋಷಿಯೆಂದು ಹೆಸರು. ಸ್ತೋಮಗಳನ್ನು ಅಥವಾ ಸ್ತೋತ್ರಗಳನ್ನು (ಮಂತ್ರಗಳನ್ನು) ತನ್ನ ಅತೀಂದ್ರಿಯಜ್ಞಾನದಿಂದ ತಿಳಿದುಕೊಳ್ಳುವುದರಿಂದ ಋಷಿಯೆಂಬ ಹೆಸರು ಬಂದಿದೆ ಎಂದು **ಔಪಮನ್ಯವಃ** ಎಂಬ ಆಚಾರ್ಯರ ಮತವು. ಈ ವಿಷಯದಲ್ಲಿ ಯಾಸ್ಕರು - **ತದ್ಯದೇನಾಂಸ್ತಪಸ್ಯಮಾನಾನ್ ಬ್ರಹ್ಮ ಸ್ವಯಂಭ್ವಭ್ಯಾ-ನರ್ಷತ್ತ ಋಷಯೋಽಭವಸ್ತದೃಷೀಣಾಮೃಷಿತ್ವಮಿತಿ ವಿಜ್ಞಾಯತೇ** ಎಂಬ ಬ್ರಾಹ್ಮಣ (ಶ್ರುತಿ) ವಾಕ್ಯವನ್ನು ದಾಹರಿಸಿದ್ದಾರೆ. ತಪಸ್ಸುಮಾಡುತ್ತಿರುವ ಋಷಿಗಳಿಗೆ ಸ್ವಯಂಭುಬ್ರಹ್ಮನೇ ಎಂದರೆ ಅಪೌರುಷೇಯವಾದ ವೇದ ಮಂತ್ರವೇ ಸಮೀಪಕ್ಕೆ ಬಂದು ಗೋಚರವಾಯಿತು ಎಂದು ಶ್ರುತಿವಾಕ್ಯದಿಂದ ತಿಳಿಯಬರುತ್ತದೆ ಎಂದು ಹೇಳಿದಾರೆ ಋಷಿಗಳು ತಮ್ಮ ಮಂತ್ರಗಳನ್ನು ಅಧ್ಯಯನ ಮಾಡದಿದ್ದರೂ ತಮ್ಮ ತಪಸ್ಸಾಮರ್ಥ್ಯದಿಂದ ಸಾಕ್ಷಾತ್ಕರಿಸುವರು. ಆದ್ದರಿಂದಲೇ ಋಷಿಶಬ್ದಕ್ಕೆ ಈ ವಿಧವಾದ ರೂಪನಿಷ್ಪತ್ತಿಯು ಉಂಟಾಗಿದೆ.

**ದೇವಾಪಿರ್ದೇವಾನಾಮಾಪ್ತ್ಯಾ ಸ್ತುತ್ಯಾ ಚ ಪ್ರದಾನೇನ ಚ— ದೇವಾಪಿ ಎಂದರೆ ದೇವಾನಾಮಾಪ್ತ್ಯಾ ಸ ಹಿ ಸ್ತುತಿಭಿಃ ಹವಿಃಸಂಪ್ರದಾನೇ ಚ ದೇವಾನಾಪ್ನೋತಿ** । ಸ್ತೋತ್ರಾದಿಗಳಿಂದಲೂ, ಹವಿರಾದಿಗಳನ್ನು ಅರ್ಪಿಸುವುದರಿಂದಲೂ ದೇವತೆಗಳನ್ನು ಪಡೆಯುವುದರಿಂದ (ಆಪ್ತ್ಯಾ) ಎಂದರೆ ಬರಮಾಡುವುದರಿಂದ ಇವನಿಗೆ ದೇವಾಪಿಯೆಂದು ಹೆಸರು.

**ದೇವಸುಮತಿಂ ದೇವಾನಾಂ ಕಲ್ಯಾಣೀಂ ಮತಿಂ**— ದೇವತೆಗಳ ಉತ್ತಮವಾದ ಅಥವಾ ಶುಭಪ್ರದವಾದ ಬುದ್ಧಿಯನ್ನು; ದೇವತೆಗಳ ಅನುಗ್ರಹಾತ್ಮಕವಾದ ಬುದ್ಧಿಯನ್ನು ಹೇಗೆ ಸಂಪಾದಿಸಬೇಕೆಂದು ತಿಳಿದಿರುವವನು.

**ಚಿಕಿತ್ವಾನ್— ಚೇತನಾವಾನ್** । ತಿಳಿದಿರುವವನು.

**ಸ ಉತ್ತರಸ್ಮಾದಧರಂ ಸಮುದ್ರಂ । ಉತ್ತರ ಉದ್ಧತತರೋ ಭವತಿ । ಅಧರೋಽಧೋರಃ । ಅಧೋ ನ ಧಾವತೀತ್ಯೂರ್ಧ್ವಗತಿಃ ಪ್ರತಿಷಿದ್ಧಾ** ॥ ಮೇಲಿನ ಸಮುದ್ರದಿಂದ ಕೆಳಗಿನ ಸಮುದ್ರಕ್ಕೆ; ಸಮುದ್ರ ಶಬ್ದಕ್ಕೆ ಅಂತರಿಕ್ಷವೆಂದೂ ಅರ್ಥವಿರುವುದರಿಂದ ಮೇಲಿರುವ ಅಂತರಿಕ್ಷದಿಂದ ಕೆಳಗಿರುವ ಸಮುದ್ರಕ್ಕೆ ಎಂದರ್ಥವು. ಮಳೆಯು ಸುರಿಯುವಾಗ ಮೇಲಿರುವ ಅಂತರಿಕ್ಷದ ಮೇಘಗಳಲ್ಲಿರುವ ಉದಕಗಳು ಕೆಳಗಿನ ಭೂಮಿಯ ಮೇಲೆ ಬಿದ್ದು

ನದಿಯಾಗಿ ಹರಿದು ಕೊನೆಗೆ ಸಮುದ್ರವನ್ನು ಸೇರುವವು. ಆದ್ದರಿಂದ ವೃಷ್ಟ್ಯುದಕಗಳು ಮೇಲಿನ ಸಮುದ್ರದಿಂದ (ಅಂತರಿಕ್ಷಸ್ಥ ಮೇಘಗಳಿಂದ) ಕೆಳಗಿನ ಸಮುದ್ರಕ್ಕೆ ಹೋಗಿ ಬೀಳುವವು ಎಂದು ವರ್ಣಿಸಿದೆ. ಉತ್ತರ ಎಂದರೆ— ಉದ್ಧತತರ, ಮೇಲೆ, ಇನ್ನೂ ಎತ್ತರದಲ್ಲಿರುವ; ಅಧರ ಎಂದರೆ ಅಧೋರಃ ಕೆಳಗಡೆ ಕೆಳಗಡೆ ಇರುವ ನೀರಿಗೆ ಪುನಃ ಊರ್ಧ್ವಗತಿ ಎಂದರೆ ಮೇಲಕ್ಕೆ ಹರಿದು ಹೋಗಲು ಸಾಧ್ಯವಿಲ್ಲವಾದ್ದರಿಂದ ಅಧೋರಃ ಅಥವಾ ಅಧರಃ (ಕೆಳಗಡೆ) ಎಂದು ಹೆಸರು.

|| ಸಂಹಿತಾಪಾಠಃ ||

ಅಸ್ಮಿನ್ತ್ಸಮುದ್ರೇ ಅಧ್ಯುತ್ತರಸ್ಮಿನ್ನಾಪೋ ದೇವೇಭಿರ್ನಿವೃತಾ ಅತಿಷ್ಠನ್ ।
ತಾ ಅದ್ರವನ್ನಾರ್ಷ್ಟಿಷೇಣೇನ ಸೃಷ್ಟಾ ದೇವಾಪಿನಾ ಪ್ರೇಷಿತಾ ಮೃಕ್ಷಿಣೀಷು ॥

॥ ಪದಪಾಠಃ ॥

ಅಸ್ಮಿನ್ । ಸಮುದ್ರೇ । ಅಧಿ । ಉತ್ಽತರಸ್ಮಿನ್ । ಆಪಃ । ದೇವೇಭಿಃ । ನಿಽವೃತಾಃ । ಅತಿಷ್ಠನ್ ।
ತಾಃ । ಅದ್ರವನ್ । ಆರ್ಷ್ಟಿಷೇಣೇನ । ಸೃಷ್ಟಾಃ । ದೇವಽಆಪಿನಾ । ಪ್ರಽಇಷಿತಾಃ । ಮೃಕ್ಷಿಣೀಷು ॥ ೬ ॥

||ಸಾಯಣಭಾಷ್ಯಂ ||

ಅಸ್ಮಿನ್ಪಾರ್ಥಿವೇ ಸಮುದ್ರೇ ಪೂರಣೀಯೇ ಸತಿ । ಅಧೀತಿ ಸಪ್ತಮ್ಯರ್ಥಾನುವಾದೀ । ಉತ್ತರಸ್ಮಿನ್ಸಮುದ್ರೇಽಂತರಿಕ್ಷಾಖ್ಯೆ ಆಪ ಉದಕಾನಿ ದೇವೇಭಿರ್ದ್ಯೋತಮಾನೈರ್ನಿವೃತಾ ನಿರುದ್ಧಾ ಅತಿಷ್ಠನ್ ತಾ ಆಪ ಆರ್ಷ್ಟಿಷೇಣೇನಷ್ಟಿಷೇಣಸ್ಯ ಪುತ್ರೇಣ ದೇವಾಪಿನಾ ಸೃಷ್ಟಾಃ ಪ್ರೇಷಿತಾಃ ಪ್ರಕರ್ಷೇಣೇಚ್ಛಾಂ ಪ್ರಾಪ್ತಾಃ ಕಾಂಕ್ಷಿತಾ ಮೃಕ್ಷಿಣೀಷು ಮೃಷ್ಟವತೀಷು ಪರಿಮೃಷ್ಟಾಸು ಸ್ಥಲೀಷ್ವದ್ರವನ್ । ಸ್ರವಂತಿ ॥

|| ಪ್ರತಿಪದಾರ್ಥ ||

**ಅಸ್ಮಿನ್ ಸಮುದ್ರೇ ಅಧಿ**— ಈ ಪಾರ್ಥಿವ ಸಮುದ್ರವು ತುಂಬಬೇಕಾದ ಕಾಲದಲ್ಲಿ | **ಉತ್ತರಸ್ಮಿನ್**— ಅಂತರಿಕ್ಷಸ್ಥವಾದ ಸಮುದ್ರದಲ್ಲಿ | **ಆಪಃ**— ಉದಕಗಳು | **ದೇವೇಭಿಃ**— ದೇವತೆಗಳಿಂದ | **ನಿವೃತಾಃ**— ತಡೆಯಲ್ಪಟ್ಟು | **ಅತಿಷ್ಠನ್**— ಅಲ್ಲೇ ನಿಂತವು. | **ಆರ್ಷ್ಟಿಷೇಣೇನ**— ಋಷ್ಟಿಷೇಣನ ಪುತ್ರನಾದ | **ದೇವಾಪಿನಾ**— ದೇವಾಪಿಯಿಂದ | **ಸೃಷ್ಟಾಃ**— ಸುರಿಸಲ್ಪಟ್ಟವೂ | **ಪ್ರೇಷಿತಾಃ**— ಪೃಥ್ವಿಗೆ ಕಳುಹಲ್ಪಟ್ಟವೂ ಆದ | **ತಾಃ**— ಅದೇ ಉದಕಗಳು | **ಮೃಕ್ಷಿಣೀಷು**— ಫಲವತ್ತಾದ ತಪ್ಪಲು ಪ್ರದೇಶಗಳಲ್ಲಿ | **ಅದ್ರವನ್**— ಪ್ರವಹಿಸಿ ನೆಲವನ್ನು ತೋಯಿಸುತ್ತವೆ.

|| ಭಾವಾರ್ಥ ||

ಈ ಪಾರ್ಥಿವ ಸಮುದ್ರವು ತುಂಬಬೇಕಾದ ಕಾಲದಲ್ಲಿ ಅಂತರಿಕ್ಷದ ಮೇಘಮಂಡಲಗಳ ಉದಕಗಳು ದೇವತೆಗಳಿಂದ ತಡೆಯಲ್ಪಟ್ಟು ಅಲ್ಲೇ ನಿಂತವು. ಆದರೆ ಋಷ್ಟಿಷೇಣನ ಪುತ್ರನಾದ ದೇವಾಪಿಯಿಂದ ಸುರಿಸಲ್ಪಟ್ಟವೂ,

ಪೃಥ್ವಿಗೆ ಕಳುಹಲ್ಪಟ್ಟವೂ ಆದ ಅದೇ ಉದಕಗಳು ಫಲವತ್ತಾದ ತಪ್ಪಲು ಪ್ರದೇಶಗಳಲ್ಲಿ ಪ್ರವಹಿಸಿ ನೆಲವನ್ನು ತೋಯಿಸುತ್ತವೆ.

**English Translation.**

In this upper ocean the waters stood dammed up by the gods; set free by Devapi, the son of Rishthishena, they were sent forth over the plains

॥ ಸಂಹಿತಾಪಾಠಃ ॥

ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ ।
ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿರ್ವಾಚಮಸ್ಮಾ ಅಯಚ್ಛತ್ ॥

॥ ಪದಪಾಠಃ ॥

ಯತ್ । ದೇವಽಆಪಿಃ । ಶಂಽತನವೇ । ಪುರಃಽಹಿತಃ । ಹೋತ್ರಾಯ । ವೃತಃ । ಕೃಪಯನ್ । ಅದೀಧೇತ್ ।
ದೇವಽಶ್ರುತಂ । ವೃಷ್ಟಿಽವನಿಂ । ರರಾಣಃ । ಬೃಹಸ್ಪತಿಃ । ವಾಚಂ । ಅಸ್ಮೈ । ಅಯಚ್ಛತ್ ॥ ೭ ॥

॥ ಸಾಯಣಭಾಷ್ಯಂ ॥

ಯದ್ಯದಾ ದೇವಾಪಿರಾರ್ಷ್ಟಿಷೇಣಃ ಶಂತನವೇ ಸ್ವಭ್ರಾತ್ರೇ ಕೌರವ್ಯಾಯ ಪುರೋಹಿತಃ ಸನ್ ಹೋತ್ರಾಯ ಹೋತ್ರಾರ್ಥಂ ವೃತಃ ಸನ್ ದೇವಶ್ರುತಂ । ದೇವಾ ಏನಂ ಶೃಣ್ವಂತೀತಿ ದೇವಶ್ರುತ್ । ತಂ ತಥಾ ವೃಷ್ಟಿವನಿಂ ವೃಷ್ಟಿಯಾಚಿನಂ ಬೃಹಸ್ಪತಿಮದೀಧೇತ್ ಅನ್ವಧ್ಯಾಯತ್ ಸ ಚ ರರಾಣೋ ರಮಮಾಣೋ ಬೃಹಸ್ಪತಿರ್ದೇವೋಽಸ್ಮೈ ದೇವಾಪಯೇ ವಾಚಮಯಚ್ಛತ್ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ದೇವಾಪಿಃ**—ದೇವಾಪಿಯು । **ಶಂತನವೇ**—ಶಂತನುವಿಗಾಗಿ । **ಪುರೋಹಿತಃ**—ಪುರೋಹಿತನಾಗಲೂ । **ಹೋತ್ರಾಯ**—ಹೋತೃವಾಗಿರಲೂ । **ವೃತಃ**—ಪ್ರಾರ್ಥಿಸಲ್ಪಟ್ಟು । **ಕೃಪಯನ್**—ತನ್ನ ಸ್ತುತಿಕರ್ಮವನ್ನು ನೆರವೇರಿಸುತ್ತ । **ದೇವಶ್ರುತಂ**—ದೇವತೆಗಳನ್ನು (ತನ್ನ ಪ್ರಾರ್ಥನೆಯನ್ನು) ಕೇಳುವಂತೆ ಮಾಡುವವನೂ । **ವೃಷ್ಟಿವನಿಂ**—ಮಾನವರಿಗಾಗಿ ವೃಷ್ಟಿಯನ್ನು ಯಾಚಿಸುವವನೂ ಆದ ಬೃಹಸ್ಪತಿಯನ್ನು । **ಅದೀಧೇತ್**—ಧ್ಯಾನಿಸಿ ಸ್ತುತಿಸಿದನೋ, ಆಗ । **ರರಾಣಃ**—ಈ ಸ್ತುತಿಯಿಂದ ಹರ್ಷಿಸಿದ । **ಬೃಹಸ್ಪತಿಃ**—ಬೃಹಸ್ಪತಿಯು । **ಅಸ್ಮೈ**—ಈ ದೇವಾಪಿಗೆ । **ವಾಚಂ**—ಮಂತ್ರರೂಪವಾದ ವಾಕ್ಯವನ್ನು । **ಅಯಚ್ಛತ್**—ಕೊಟ್ಟನು. ((ಉಪದೇಶಿಸಿದನು)

॥ ಭಾವಾರ್ಥ ॥

ಶಂತನುವಿಗೆ ಪುರೋಹಿತನಾದ ದೇವಾಪಿಯು, ಹೋತೃವಾಗಿರಲು ಪ್ರಾರ್ಥಿತನಾಗಿ ತನ್ನ ಹೋತೃಕರ್ಮವನ್ನು ನೆರವೇರಿಸುತ್ತ ದೇವತೆಗಳನ್ನು ತನ್ನ ಪ್ರಾರ್ಥನೆಯನ್ನು ಕೇಳುವಂತೆ ಮಾಡುವವನೂ, ಮಾನವರಿಗಾಗಿ ವೃಷ್ಟಿಯನ್ನು ಯಾಚಿಸುವವನೂ ಆದ ಬೃಹಸ್ಪತಿಯನ್ನು ಯಾವಾಗ ಧ್ಯಾನಿಸಿ ಸ್ತುತಿಸಿದನೋ ಆಗ ಇವನ ಸ್ತುತಿಯಿಂದ ಹರ್ಷಿಸಿದ ಬೃಹಸ್ಪತಿಯು ದೇವಾಪಿಗೆ ವೃಷ್ಟಿವರ್ಣಮಂತ್ರವನ್ನು ಉಪದೇಶಿಸಿದನು.

## English Translation.

When Devapi, the Purohita for Shantanu, engaged in his functions of Hotri, compassionating (him), solicited Brihaspati, to whom the gods listen, who begs for rain, (Brihaspati) being pleased gave him a voice.

॥ ವಿಶೇಷವಿಷಯಗಳು ॥

ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ—

**ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ । ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿರ್ವಾಚಮಸ್ಮಾ ಅಯಚ್ಛತ್ ॥ ಶಂತನುಃ ಶಂ ತನೋಽಸ್ತ್ವಿತಿ ವಾ ಶಮಸ್ಮೈ ತನ್ವಾ ಅಸ್ತ್ವಿತಿ ವಾ । ಪುರೋಹಿತಃ ಪುರಃ ಏನಂ ದಧತಿ । ಹೋತ್ರಾಯ ವೃತಃ ಕೃಪಾಯಮಾಣೋಽನ್ವಧ್ಯಾಯತ್ । ದೇವಶ್ರುತಂ ದೇವಾ ಏನಂ ಶೃಣ್ವಂತಿ । ವೃಷ್ಟಿವನಿಂ ವೃಷ್ಟಿಯಾಚಿನಂ । ರರಾಣೋ ರಾತಿರಭ್ಯಸ್ತೋ ಬೃಹಸ್ಪತಿ ರ್ಬ್ರಹ್ಮಾಸೀತ್ ಸೋಽಸ್ಮೈ ವಾಚಮಯಚ್ಛತ್ ಬೃಹದುಪವ್ಯಾಖ್ಯಾತಂ ॥**

(ನಿ. ೨-೧೨)

**ಶಂತನುಃ ಶಂ ತನೋಽಸ್ತ್ವಿ ವಾ ಶಮಸ್ಮೈ ತನ್ವಾ ಅಸ್ತ್ವಿತಿ ವಾ**— ಈ ರಾಜನಿಗೆ ಶಂತನುಃ ಎಂಬ ಹೆಸರು, ಬರಲು ಕಾರಣವೇನೆಂದರೆ, ರೋಗದಿಂದ ನರಳುತ್ತಿರುವ ಒಬ್ಬ ಪುರುಷನನ್ನು ನೋಡಿ ಅವನ ಶರೀರವನ್ನುದ್ದೇಶಿಸಿ ಎಲೈ ರೋಗಾರ್ತವಾದ ಶರೀರವೇ, ನಿನಗೆ ಸುಖವಾಗಲಿ ಎಂದು ಹೇಳಿದ್ದರಿಂದ ಶಂತನುವೆಂಬ ಹೆಸರಾಯಿತು. ಅಥವಾ ಶಂ ಎಂದರೆ ಸುಖ, ತನು ಎಂದರೆ ಶರೀರ. ಈ ಶರೀರಕ್ಕೆ ಯಾವಾಗಲೂ ಸುಖವುಂಟಾಗಲಿ ಎಂದು ಹಾರೈಸುವ ನಾದ್ದರಿಂದ ಶಂತನುವೆಂಬ ಹೆಸರು.

**ಪುರೋಹಿತಃ ಪುರ ಏನಂ ದಧತಿ**— ಯಜ್ಞಾದಿಕರ್ಮಗಳಲ್ಲಿಯೂ ಇತರ ವಿಧವಾದ ಗೃಹ್ಯಕರ್ಮ ಗಳಲ್ಲಿಯೂ ಯಜಮಾನರು ಇವನನ್ನು ಎಲ್ಲರಿಗಿಂತಲೂ ಮುಂದೆ ಕೂಡಿಸುವರು. ಕರ್ಮನಿರ್ವಹಣಾರ್ಥವಾಗಿ ಎಲ್ಲರ ಮುಂದೆ (ಅಥವಾ ಅಗ್ನಿಯ ಮುಂದೆ) ಕೂಡಿಸುವುದರಿಂದ ಪುರೋಹಿತನೆಂಬ ಹೆಸರು ಬಂದಿದೆ.

**ಹೋತ್ರಾಯ ವೃತಃ ಕೃಪಾಯಮಾಣೋಽನ್ವಧ್ಯಾಯತ್**— ಈ ದೇವಾಪಿಯು ವೃಷ್ಟಿಕರ್ಮಕ್ಕಾಗಿ ನೆರವೇರಿಸಲ್ಪಡುವ ಯಜ್ಞದಲ್ಲಿ ಹೋತೃವೆಂಬ ಋತ್ವಿಜನ ಪಾತ್ರವನ್ನು ನಿರ್ವಹಿಸಲು ಪ್ರಾರ್ಥಿಸಲ್ಪಟ್ಟು, ಯಜ್ಞಾಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದನು ಮತ್ತು ಸ್ತೋತ್ರಾದಿಗಳಿಂದ ಸ್ತುತಿಸಿದನು.

ದೇವಶ್ರುತಂ ದೇವಾ ಏನಂ ಶೃಣ್ವಂತಿ—ದೇವತೆಗಳನ್ನು ಉದ್ದೇಶಿಸಿ ಸ್ತೋತ್ರಗಳನ್ನು ಪಠಿಸುತ್ತಿರುವ ಈ ದೇವಾಪಿಯನ್ನು ಎಂದರೆ ದೇವಾಪಿಯ ಸ್ತುತಿಯನ್ನು ದೇವತೆಗಳು ಕೇಳುತ್ತಾರೆ

ರರಾಣಃ ರಾತಿರಭ್ಯಸ್ತಃ—ರಾ ದಾನೇ ಎಂಬ ಧಾತುವಿನಿಂದ ರರಾಣಶಬ್ದವು ನಿಷ್ಪನ್ನವಾಗಿದೆ. ರ ಎಂಬ ಅಕ್ಷರವು ಎರಡಾವರ್ತಿ ಪಠಿತವಾಗಿದೆ (ಅಭ್ಯಸ್ತ) ರರಾಣಃ ಎಂದರೆ ಕೊಡುವ, ವೃಷ್ಟಿಯನ್ನು ಕೊಡುವ.

ಬೃಹಸ್ಪತಿರ್ಬ್ರಹ್ಮಾಸೀತ್ ಸೋಽಸ್ಮೈವಾಚಮಯಚ್ಛತ್ ಬೃಹದುಪವ್ಯಾಖ್ಯಾತಂ ॥ ದೇವಾಪಿಯು ವೃಷ್ಟ್ಯರ್ಥವಾಗಿ ನೆರವೇರಿಸುತ್ತಿದ್ದ ಯಜ್ಞದಲ್ಲಿ ಬೃಹಸ್ಪತಿಯು ಬ್ರಹ್ಮನೆಂಬ ಋತ್ವಿಕ್ಕಾಗಿದ್ದನು. ಆದ್ದರಿಂದ ವೃಷ್ಟ್ಯರ್ಥವಾಗಿ ದೇವತೆಗಳನ್ನು ಪ್ರಾರ್ಥಿಸುವ ಮಂತ್ರವನ್ನು (ವಾಚಂ) ದೇವಾಪಿಗೆ ಉಪದೇಶಿಸಿದನು. ದೇವಾಪಿಯು ಕ್ಷತ್ರಿಯನಾದ್ದರಿಂದ ಹೋತೃವು ಪಠಿಸಬೇಕಾದ ಮಂತ್ರಗಳು ಅವನಿಗೆ ತಿಳಿಯದಿರಬಹುದು. ಅವುಗಳನ್ನು ಬೃಹಸ್ಪತಿಯು ಅವನಿಗೆ ಹೇಳಿಕೊಟ್ಟನು ಎಂದಭಿಪ್ರಾಯವು. ಬೃಹತ್ ಎಂಬ ಶಬ್ದದ ನಿರ್ವಚನವನ್ನು ಹಿಂದೆಯೇ ಹೇಳಲಾಗಿದೆ.

॥ ಸಂಹಿತಾಪಾಠಃ ॥

ಯಂ ತ್ವಾ ದೇವಾಪಿಃ ಶುಶುಚಾನೋ ಅಗ್ನ ಆರ್ಷ್ಟಿಷೇಣೋ ಮನುಷ್ಯಃ-
ಸಮೀಧೇ ।
ವಿಶ್ವೇಭಿರ್ದೇವೈರನುಮದ್ಯಮಾನಃ ಪ್ರ ಪರ್ಜನ್ಯಮೀರಯಾ ವೃಷ್ಟಿಮಂತಂ ॥

॥ ಪದಪಾಠಃ ॥

ಯಂ । ತ್ವಾ । ದೇವऽಆಪಿಃ । ಶುಶುಚಾನಃ । ಅಗ್ನೇ । ಆರ್ಷ್ಟಿಷೇಣಃ । ಮನುಷ್ಯಃ । ಸಂऽಈಧೇ ।
ವಿಶ್ವೇಭಿಃ । ದೇವೈಃ । ಅನುऽಮದ್ಯಮಾನಃ । ಪ್ರ । ಪರ್ಜನ್ಯಂ । ಈರಯ । ವೃಷ್ಟಿऽಮಂತಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯಂ ತ್ವಾ ತ್ವಾಂ ಶಶುಚಾನಃ ಸ್ತೋತ್ರೇಣ ಜ್ವಲನ್ ಮನುಷ್ಯ ಆರ್ಷ್ಟಿಷೇಣೋ ದೇವಾಪಿಃ ಸಮೀಧೇ ಸಮ್ಯಗ್ದೀಪಯತಿ ಸ ತ್ವಂ ವಿಶ್ವೇಭಿಃ ಸರ್ವೈರ್ದೇವೈರನುಮದ್ಯಮಾನೋऽನುಮಾದ್ಯ-ಮಾನಃ ಸನ್ ಪರ್ಜನ್ಯಂ ಮೇಘಂ ವೃಷ್ಟಿಮಂತಂ ವರ್ಷಣವಂತಂ ಪ್ರೇರಯ । ಗಮಯ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಯಂ ತ್ವಾ—ಯಾವ ನಿನ್ನನ್ನು । ಶುಶುಚಾನಃ—ತನ್ನ ಸ್ತುತಿಯಿಂದ ಪ್ರಕಾಶಿಸುವಂತೆ ಮಾಡುವವನೂ । ಮನುಷ್ಯಃ—ಮಾನವನೂ । ಆರ್ಷ್ಟಿಷೇಣಃ—ಋಷ್ಟಿಷೇಣನ ಪುತ್ರನೂ ಆದ ।

**ದೇವಾಪಿಃ**—ದೇವಾಪಿಯು । **ಸಮೀಧೇ**—ಪ್ರಜ್ವಲಿಸುವಂತೆ ಮಾಡಿದನೋ ಆ ನೀನು । **ವಿಶ್ವೇಭಿಃ ದೇವೈಃ**—ಸಕಲ ದೇವತೆಗಳೊಡನೆಯೂಕೂಡಿ । **ಅನುಮದ್ಯಮಾನಃ**—ಹರ್ಷಿಸುತ್ತ । **ಪರ್ಜನ್ಯಂ**—ಪರ್ಜನ್ಯನನ್ನು । **ವೃಷ್ಟಿಮಂತಂ**—ಮಳೆಯನ್ನು ಸುರಿಸುವಂತೆ । **ಪ್ರ ಈರಯ**—ಪ್ರೇರಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ನಿನ್ನನ್ನು ತನ್ನ ಸ್ತುತಿಯಿಂದ ಪ್ರಕಾಶಿಸುವಂತೆ ಮಾಡುವವನೂ, ಮಾನವನೂ, ಋಷ್ಟಿಷೇಣನ ಪುತ್ರನೂ ಆದ ದೇವಾಪಿಯು ಪ್ರಜ್ವಲಿಸುವಂತೆ ಮಾಡಿದನೋ. ಅಂತಹ ನೀನು ಸಕಲದೇವತೆಗಳೊಡನೆಯೂ ಕೂಡಿ ಹರ್ಷಿಸುತ್ತ, ಪರ್ಜನ್ಯನನ್ನು ಮಳೆಯನ್ನು ಸುರಿಸುವಂತೆ ಪ್ರೇರಿಸು.

## English Translation.

Agni, whom the mortal Devapi, the son of Rishtishena, lighting you, has kindled, do you, being propitiated with all the gods, send down the rain laden cloud.

॥ ಸಂಹಿತಾಪಾಠಃ ॥

ತ್ವಾಂ ಪೂರ್ವ ಋಷಯೋ ಗೀರ್ಭಿರಾಯನ್ತ್ವಾಮಧ್ವರೇಷು ಪುರುಹೂತ ವಿಶ್ವೇ ।
ಸಹಸ್ರಾಣ್ಯಧಿರಥಾನ್ಯಸ್ಮೇ ಆ ನೋ ಯಜ್ಞಂ ರೋಹಿದಶ್ವೋಪ ಯಾಹಿ ॥೯॥

॥ ಪದಪಾಠಃ ॥

ತ್ವಾಂ । ಪೂರ್ವೇ । ಋಷಯಃ । ಗೀಃऽಭಿಃ । ಆಯನ್ । ತ್ವಾಂ । ಅಧ್ವರೇಷು । ಪುರುऽಹೂತ । ವಿಶ್ವೇ ।
ಸಹಸ್ರಾಣಿ । ಅಧಿऽರಥಾನಿ । ಅಸ್ಮೇ ಇತಿ । ಆ । ನಃ । ಯಜ್ಞಂ । ರೋಹಿತ್ऽಅಶ್ವ । ಉಪ । ಯಾಹಿ ॥೯॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಾಂ ಪೂರ್ವ ಋಷಯೋ ಗೀರ್ಭಿಃ ಸ್ತುತಿಭಿರಾಯನ್ । ಆಗಚ್ಛನ್ । ತಥಾ ಹೇ ಪುರುಹೂತ ಬಹುಭಿರಾಹೂತಾಗ್ನೇ ವಿಶ್ವೇ ಸರ್ವೇऽಪೀದಾನೀಂತನಾ ಯಜಮಾನಾ ಅಧ್ವರೇಷು ಯಜ್ಞೇಷು ಸ್ತುತಿಭಿರ್ಗಚ್ಛಂತೀತಿ ಶೇಷಃ । ಕಿಂಚ ಸಹಸ್ರಾಣಿ ಸಹಸ್ರಸಂಖ್ಯಾಕಾನಿ ಗೋಯೂಥಾನ್ಯಧಿ-ರಥಾನಿ ರಥಾಧಿಕಾನ್ಯಸ್ಮೇ ಅಸ್ಮಾಕಂ ಶಂತನುನಾ ದಕ್ಷಿಣಾತ್ವೇನ ಸಂಕಲ್ಪಿತಾನಿ ಭವಂತ್ವಿತಿ ಶೇಷಃ । ಹೇ ರೋಹಿದಶ್ವ ನೋ ಯಜ್ಞಮುಪ ಯಾಹಿ । ಉಪಾಗಚ್ಛ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ತ್ವಾಂ**—ನಿನ್ನನ್ನು । **ಪೂರ್ವೇ ಋಷಯಃ**—ಹಿಂದಿನ ಋಷಿಗಳೆಲ್ಲರೂ । **ಗೀರ್ಭಿಃ**—ಸ್ತುತಿಗಳಿಂದ । **ಆಯನ್**—ಆಶ್ರಯಿಸಿದ್ದಾರೆ. । **ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಅಗ್ನಿಯೇ, । **ವಿಶ್ವೇ**—ಈಗಿನ ಸಕಲ ಯಜಮಾನರೂ ಸಹ । **ಅಧ್ವರೇಷು**—ಯಜ್ಞಗಳಲ್ಲಿ ನಿನ್ನನ್ನೇ ಆಶ್ರಯಿಸುತ್ತಾರೆ. । **ರೋಹಿದಶ್ವ**—ಹೊಂಬಣ್ಣದ ಅಶ್ವವುಳ್ಳ ಎಲೈ ಅಗ್ನಿಯೇ, । **ಸಹಸ್ರಾಣಿ**—ಸಹಸ್ರಸಂಖ್ಯಾಕವಾದ ಗೋವುಗಳನ್ನೂ । **ಅಧಿರಥಾನಿ**—ರಥದಲ್ಲಿ ತುಂಬಿದ ಸಂಪತ್ತುಗಳನ್ನೂ । **ಅಸ್ಮೇ**—ನಮಗೆ ಕೊಡು. । **ನಃ**—ನಮ್ಮ । **ಯಜ್ಞಂ**—ಯಜ್ಞಕ್ಕೆ । **ಉಪ ಯಾಹಿ**—ದಯಮಾಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನು ಹಿಂದಿನ ಋಷಿಗಳೆಲ್ಲರೂ ತಮ್ಮ ಸ್ತುತಿಗಳಿಂದ ಆಶ್ರಯಿಸಿದ್ದಾರೆ. ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಅಗ್ನಿಯೇ, ಈಗಿನ ಸಕಲ ಯಜಮಾನರೂ ಸಹ ಯಜ್ಞಗಳಲ್ಲಿ ನಿನ್ನನ್ನೇ ಆಶ್ರಯಿಸುತ್ತಾರೆ. ಹೊಂಬಣ್ಣದ ಅಶ್ವವುಳ್ಳ ಎಲೈ ಅಗ್ನಿಯೇ, ಸಹಸ್ರಸಂಖ್ಯಾಕವಾದ ಗೋವುಗಳನ್ನೂ, ರಥದಲ್ಲಿ ತುಂಬಿದ ಸಂಪತ್ತುಗಳನ್ನೂ ನಮಗೆ ಕೊಡು. ನಮ್ಮ ಯಜ್ಞಕ್ಕೆ ದಯಮಾಡು.

English Translation

You have ancient sages approached, with hymns; you, O invoked of many, all worshippers (address) at sacrifices; (gives) us thousands of chariot-oads, come to our sacrifice, lord of red horses

॥ ಸಂಹಿತಾಪಾಠಃ ॥

ಏತಾನ್ಯಗ್ನೇ ನವತಿರ್ನವ ತ್ವೇ ಆಹುತಾನ್ಯಧಿರಥಾ ಸಹಸ್ರಾ ।
ತೇಭಿರ್ವರ್ಧಸ್ವ ತನ್ವಃ ಶೂರ ಪೂರ್ವೀರ್ದಿವೋ ನೋ ವೃಷ್ಟಿಮಿಷಿತೋ ರಿರೀಹಿ ॥ ೧೦ ॥

॥ ಪದಪಾಠಃ ॥

ಏತಾನಿ । ಅಗ್ನೇ । ನವತಿಃ । ನವ । ತ್ವೇ ಇತಿ । ಆऽಹುತಾನಿ । ಅಧಿऽರಥಾ । ಸಹಸ್ರಾ ।
ತೇಭಿಃ । ವರ್ಧಸ್ವ । ತನ್ವಃ । ಶೂರ । ಪೂರ್ವೀಃ । ದಿವಃ । ನಃ । ವೃಷ್ಟಿಂ । ಇಷಿತಃ । ರಿರೀಹಿ ॥ ೧೦ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಗವಾಂ ನವತಿರ್ನವ ಚ ತೇಭ್ಯೈತಾನ್ಯಧಿರಥಾನಿ ಸಹಸ್ರಾ ಸಹಸ್ರಾಣಿ ಚ ರಥಾಧಿಕಾನಿ ಗವಾಂ ಸಹಸ್ರಾಣಿ ಚ ತ್ವೇ ತ್ವಯ್ಯಾಹುತಾನಿ ತ್ವಯಿ ಪ್ರೀಣಯಿತವ್ಯೇ ಸತ್ಯಾಹುತಾನಿ । ಯದ್ವಾ । ತ್ವೇ ತ್ವಯ್ಯಾಹುತಾನಿ ಸಮರ್ಪಿತಾನೀತ್ಯರ್ಥಃ । ತೇಭಿಸ್ತೈಃ ಪ್ರತ್ತೈಃ ಪೂರ್ವೀರ್ಬಹ್ವೀಸ್ತನ್ವಸ್ತನೂರ್ಯುಷ್ಮದೀಯಾ ವರ್ಧಸ್ವ । ವರ್ಧಯ । ನೋಽಸ್ಮದರ್ಥಂ ದಿವೋ ದ್ಯುಲೋಕಾದ್ವೃಷ್ಟಿಮಿಷಿತಃ ಪ್ರಾರ್ಥಿತಃ ಸನ್ ರಿರೀಹಿ । ಪೂರಯ ॥**

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯಾದ । **ಅಗ್ನೇ**—ಎಲೈ ಅಗ್ನಿಯೇ, । **ನವತಿಃ ನವ ಏತಾನಿ ಅಧಿರಥಾ**—ತೊಂಭತ್ತೊಂಭತ್ತು ರಥಗಳಲ್ಲಿ ತುಂಬಿದ ಆಹುತಿಗಳೂ । **ಸಹಸ್ರಾ**—ಸಹಸ್ರಸಂಖ್ಯಾಕವಾದ ಪಶ್ವಾದಿಗಳೂ । **ತ್ವೇ**—ನಿನ್ನಲ್ಲಿ । **ಆಹುತಾನಿ**—ಅರ್ಪಿತವಾಗಿವೆ. । **ತೇಭಿಃ**—ಅವುಗಳಿಂದ । **ಪೂರ್ವೀಃ**—ನಿನ್ನ ಬಹುವಿಧವಾದ । **ತನ್ವಃ**—ಶರೀರಗಳನ್ನು । **ವರ್ಧಸ್ವ**—ಬೆಳೆಸಿಕೋ । **ಇಷಿತಃ**—ನಮ್ಮಿಂದ ಪ್ರಾರ್ಥಿತನಾಗಿ । **ನಃ**—ನಮಗೆ **ದಿವಃ**—ದ್ಯುಲೋಕದಿಂದ । **ವೃಷ್ಟಿಂ**—ವೃಷ್ಟಿಯನ್ನು । **ರಿರೀಹಿ**—ಸುರಿಸು.

॥ ಭಾವಾರ್ಥ ॥

ಎಲೈ ಪರಾಕ್ರಮಿಯಾದ ಅಗ್ನಿಯೇ, ತೊಂಭತ್ತೊಂಭತ್ತು ರಥಗಳಲ್ಲಿ ತುಂಬಿದ ಆಹುತಿಗಳೂ, ಸಹಸ ಸಂಖ್ಯಾಕವಾದ ಪಶ್ವಾದಿಗಳೂ, ನಿನ್ನಲ್ಲಿ ಅರ್ಪಿತವಾಗಿವೆ. ಅವುಗಳಿಂದ ನಿನ್ನ ಬಹುವಿಧವಾದ ಶರೀರಗಳನ್ನು ಬೆಳೆಸಿಕೋ. ನಮ್ಮಿಂದ ಪ್ರಾರ್ಥಿತನಾಗಿ ನಮಗೆ ದ್ಯುಲೋಕದಿಂದ ವೃಷ್ಟಿಯನ್ನು ಸುರಿಸು.

## English Translation.

These ninety-and-nine thousands of chariot-loads have been offered, Agni, to you ; with them, O hero, nourish yonr many bodies ; and thus solicited send us rain from heaven.

॥ ಸಂಹಿತಾಪಾಠಃ ॥

ಏತಾನ್ಯಗ್ನೇ ನವತಿಂ ಸಹಸ್ರಾ ಸಂ ಪ್ರ ಯಚ್ಛ ವೃಷ್ಣ ಇಂದ್ರಾಯ ಭಾಗಂ ।
ವಿದ್ವಾನ್ಪಥ ಋತುಶೋ ದೇವಯಾನಾನಪ್ಯೌಲಾನಂ ದಿವಿ ದೇವೇಷು ಧೇಹಿ ॥ ೧೧ ॥

॥ ಪದಪಾಠಃ ॥

ಏತಾನಿ । ಅಗ್ನೇ । ನವತಿಂ । ಸಹಸ್ರಾ । ಸಂ । ಪ್ರ । ಯಚ್ಛ । ವೃಷ್ಣೇ । ಇಂದ್ರಾಯ । ಭಾಗಂ ।
ವಿದ್ವಾನ್ । ಪಥಃ । ಋತುಽಶಃ । ದೇವಽಯಾನಾನ್ । ಅಪಿ । ಔಲಾನಂ । ದಿವಿ । ದೇವೇಷು । ಧೇಹಿ ॥ ೧೧ ॥

|| ಸಾಯಣಭಾಷ್ಯಂ ||

**ಹೇ ಅಗ್ನೇ ಗವಾಮೇತಾನಿ ನವತಿಂ ಸಹಸ್ರಾ ಸಹಸ್ರಾಣಿ ಚ ವೃಷ್ಣೇ ವರ್ಷಿತ್ರೆ ಇಂದ್ರಾಯ ಭಾಗಂ ಸಂ ಪ್ರ ಯಚ್ಛ । ತತ್ಪ್ರೀತ್ಯರ್ಥಮೃತ್ವಿಗ್ಭ್ಯೋ ದೇಹಿ । ಕಿಂಚ ದೇವಯಾನಾನ್ಪಥೋ ದೇವಯಾನಾನ್ಮಾರ್ಗಾನ್ವಿದ್ವಾಂಸ್ತ್ವಮೃತುಶಃ ಕಾಲೇ ಕಾಲ ಔಲಾನಮಪಿ ಕುರುಕುಲಜಾತಮಪಿ ಶಾಂತನವಂ ದೇವೇಷು ಮಧ್ಯೇ ಧೇಹಿ । ನಿಧೇಹಿ । ಸ್ಥಾಪಯ ||**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ನವತಿಂ**—ತೊಂಭತ್ತು ಸಂಖ್ಯೆಯುಳ್ಳವೂ । **ಸಹಸ್ರಾ**—ಅಪರಿಮಿತವೂ ಆದ । **ಏತಾನಿ**—ಈ ಆಹುತಿಗಳನ್ನು । **ವೃಷ್ಣೇ**—ಇಷ್ಟಾರ್ಥಪ್ರದನಾದ । **ಇಂದ್ರಾಯ**—ಇಂದ್ರನಿಗೆ । **ಭಾಗಂ**—ಅವನಿಗೆ ಸೇರುವ ಭಾಗವಾದುದರಿಂದ । **ಸಂ ಪ್ರಯಚ್ಛ**—ಅರ್ಪಿಸು । **ದೇವಯಾನಾನ್**—ದೇವತೆಗಳು ಸಂಚರಿಸುವ । **ಪಥಃ**—ಮಾರ್ಗಗಳನ್ನು । **ವಿದ್ವಾನ್**—ಅರಿತಿರುವ ನೀನು । **ಋತುಶಃ**—ಆಯಾ ಕಾಲಕ್ಕನುಸಾರವಾಗಿ । **ಔಲಾನಮಪಿ**—ಕುರುಕುಲೋತ್ಪನ್ನನಾದ ಶಂತನುವನ್ನು । **ದಿವಿ**—ದ್ಯುಲೋಕದಲ್ಲಿ । **ದೇವೇಷು**—ದೇವತೆಗಳ ನಡುವೆ **ಧೇಹಿ**—ಸ್ಥಾಪಿಸು.

|| ಭಾವಾರ್ಥ ||

ಎಲೈ ಅಗ್ನಿಯೇ, ಇಷ್ಟಾರ್ಥಪ್ರದನಾದ ಇಂದ್ರನ ಭಾಗವಾದ ತೊಂಭತ್ತು ಸಂಖ್ಯೆಯ ಗೋವುಗಳನ್ನೂ, ಅಪರಿಮಿತವಾದ ಆಹುತಿಗಳನ್ನೂ ಅವನಿಗೆ ಅರ್ಪಿಸು. ದೇವತೆಗಳು ಸಂಚರಿಸುವ ಮಾರ್ಗಗಳನ್ನು ಅರಿತಿರುವ ನೀನು ಆಯಾ ಕಾಲಕ್ಕನುಸಾರವಾಗಿ ಕುರುಕುಲೋತ್ಪನ್ನನಾದ ಶಂತನುವನ್ನು ದ್ಯುಲೋಕದಲ್ಲಿ ದೇವತೆಗಳ ನಡುವೆ ಸ್ಥಾಪಿಸು.

English Translation

Give, Agni, these nienty thousands to the showerer, Indra, as his share; knowing the paths traversed by the gods in due season place the Aulana (Shantanu) in heaven amongst the gods.

|| ಸಂಹಿತಾಪಾಠಃ ||

ಅಗ್ನೇ ಬಾಧಸ್ವ ವಿ ಮೃಧೋ ವಿ ದುರ್ಗಹಾಪಾಮೀವಾಮಪ ರಕ್ಷಾಂಸಿ ಸೇಧ ।

ಅಸ್ಮಾತ್ಸಮುದ್ರಾದ್ಬೃಹತೋ ದಿವೋ ನೋಽಪಾಂ ಭೂಮಾನಮುಪ ನಃ ಸೃಜೇಹ || ೧೨ ||

॥ ಪದಪಾಠಃ ॥

ಅಗ್ನೇ । ಬಾಧಸ್ವ । ವಿ । ಮೃಧಃ । ವಿ । ದುಃऽಗಹಾ । ಅಪ । ಅಮೀವಾಂ । ಅಪ । ರಕ್ಷಾಂಸಿ । ಸೇಧ । ಅಸ್ಮಾತ್ । ಸಮುದ್ರಾತ್ । ಬೃಹತಃ । ದಿವಃ । ನಃ । ಅಪಾಂ । ಭೂಮಾನಂ । ಉಪ । ನಃ । ಸೃಜ ಇಹ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ದುರ್ಗಹಾ ದುರ್ಗಹಾಣಿ ದುಃಖೇನ ಗಾಹಿತವ್ಯಾನಿ ಶತ್ರುಪುರಾಣಿ ವಿ ಬಾಧಸ್ವ। ತಥಾಮೀವಾಂ ರೋಗಮುಪ ಸೇಧ । ತಥಾ ರಕ್ಷಾಂಸ್ಯಪ ಸೇಧ । ಅಪವಾರಯ । ಅಸ್ಮಾತ್ಸಮುದ್ರಾತ್ ಸಮುದ್ದ್ರವಣಸಾಧನಾದ್ಬೃಹತೋ ಮಹತೋ ದಿವೋ ದ್ಯುಲೋಕಾದಂತರಿಕ್ಷಾದ್ವಾಪಾಮುದಕಾನಾಂ ಭೂಮಾನಂ ಬಹುಭಾವಂ ವೃಷ್ಟಿಸಂಸ್ತ್ಯಾಯಮಿಹಾಸ್ಮಿಲ್ಲೋಕ ಉಪ ಸೃಜ । ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ದುರ್ಗಹಾ**—ಇತರರಿಂದ ಪ್ರವೇಶಿಸಲಸಾಧ್ಯವಾದ ಶತ್ರುಪಟ್ಟಣಗಳನ್ನು । **ವಿ ಬಾಧಸ್ವ**—ನಾಶಪಡಿಸು । **ಅಮೀವಾಂ**—ರೋಗವನ್ನು । **ಅಪ ಸೇಧ**—ನಾಶಪಡಿಸು । **ರಕ್ಷಾಂಸಿ**—ರಾಕ್ಷಸರನ್ನು । **ಅಪ (ಸೇಧ)**—ದೂರಕ್ಕೆ ಓಡಿಸು । **ಮೃಧಃ**—ಹಿಂಸಕರಾದ ಶತ್ರುಗಳನ್ನು ನಾಶಪಡಿಸು । **ಸಮುದ್ರಾತ್**—ಜಲಪ್ರವಾಹವನ್ನು ಒದಗಿಸುವುದೂ । **ಬೃಹತಃ**—ಮಹತ್ತಾದುದೂ ಆದ । **ಅಸ್ಮಾತ್ ದಿವಃ**—ದ್ಯುಲೋಕದಿಂದ । **ಅಪಾಂ**—ಉದಕಗಳ । **ಭೂಮಾನಂ**—ಪ್ರಭೂತವಾದ ಪ್ರವಾಹಗಳನ್ನು । **ನಃ**—ನಮಗಾಗಿ । **ಇಹ**—ಈ ಲೋಕಕ್ಕೆ । **ಉಪ ಸೃಜ**—ಒದಗಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಇತರರಿಂದ ಪ್ರವೇಶಿಸಲಸಾಧ್ಯವಾದ ಶತ್ರುಪಟ್ಟಣಗಳನ್ನು ನಾಶಪಡಿಸು ರೋಗವನ್ನು ನಾಶಪಡಿಸು. ಜಲಪ್ರವಾಹವನ್ನು ಒದಗಿಸುವುದೂ, ಮಹತ್ತಾದುದೂ ಆದ ದ್ಯುಲೋಕದಿಂದ ಉದಕ ಪ್ರವಾಹವನ್ನು ನಮಗಾಗಿ ಈ ಲೋಕಕ್ಕೆ ಪ್ರಭೂತವಾಗಿ ಒದಗಿಸು.

## English Translation.

Demolish, Agni, our enemies, demolish their strongholds, drive away disease, drive away the Rakshasas: from this ocean, from vast heaven, send down upon us here abundance of rain.

## ತೊಂಬತ್ತೊಂಬತ್ತನೆಯ ಸೂಕ್ತವು

|| ಸಾಯಣಭಾಷ್ಯಂ ||

**ಕಂ ನ ಇತಿ ದ್ವಾದಶರ್ಚಂ ನವಮಂ ಸೂಕ್ತಂ । ವೈಖಾನಸಸ್ಯ ವಮ್ರಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ತಥಾ ಚಾನುಕ್ರಾಂತಂ । ಕಂ ನೋ ವಮ್ರೋ ವೈಖಾನಸ ಇತಿ । ಗತೋ ವಿನಿಯೋಗಃ ||**

ಅನುವಾದವು—**ಕಂ ನಃ** ಎಂಬ ಈ ಸೂಕ್ತವು ಎಂಟನೆಯ ಅನುವಾಕದಲ್ಲಿ ಒಂಭತ್ತನೆಯ **ಸೂಕ್ತವು. ಇದರಲ್ಲಿ** ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಖನಸಋಷಿಯ ಪುತ್ರನಾದ ವಮ್ರನೆಂಬುವನು **ಋಷಿಯು. ಇಂದ್ರನು** ದೇವತೆಯು ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಕಂ ನೋ ವಮ್ರೋ ವೈಖಾನಸಃ ಎಂದು ಹೇಳಿರುವುದು.** ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೯೯

ಮಂಡಲ—೧೦ || ಅನುವಾಕ—೮ || ಸೂಕ್ತ—೯೯ ||
ಅಷ್ಟಕ—೮ || ಅಧ್ಯಾಯ—೫ || ವರ್ಗ—೧೪, ೧೫.
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ||
ಋಷಿಃ—ವಮ್ರೋ ವೈಖಾನಸಃ ||
ದೇವತಾ—ಇಂದ್ರಃ ||
ಛಂದಃ—ಅನುಷ್ಟುಬ್ ||

|| ಸಂಹಿತಾಪಾಠಃ ||

ಕಂ ನಶ್ಚಿತ್ರಮಿಷಣ್ಯಸಿ ಚಿಕಿತ್ವಾನ್ಪೃಥುಗ್ಮಾನಂ ವಾಶ್ರಂ ವಾವೃಧಧ್ಯೈ
ಕತ್ತಸ್ಯ ದಾತು ಶವಸೋ ವ್ಯುಷ್ಟೌ ತಕ್ಷದ್ವಜ್ರಂ ವೃತ್ರತುರಮಪಿನ್ವತ್ || ೧ ||

|| ಪದಪಾಠಃ ||

**ಕಂ । ನಃ । ಚಿತ್ರಂ । ಇಷಣ್ಯಸಿ । ಚಿಕಿತ್ವಾನ್ । ಪೃಥುऽಗ್ಮಾನಂ । ವಾಶ್ರಂ । ವವೃಧಧ್ಯೈ ।**
**ಕತ್ । ತಸ್ಯ । ದಾತು । ಶವಸಃ । ವಿऽಉಷ್ಟೌ । ತಕ್ಷತ್ । ವಜ್ರಂ । ವೃತ್ರಂऽತುರಂ । ಅಪಿನ್ವತ್ || ೧ ||**

|| ಸಾಯಣಭಾಷ್ಯಂ ||

**ಹೇ ಇಂದ್ರ ನೋಽಸ್ಮಾಕಂ ಚಿತ್ರಂ ಚಾಯನೀಯಂ ಕಂ ಧನವಿಶೇಷಮಿಷಣ್ಯಸಿ । ಪ್ರೇರಯಸಿ । ಚಿಕಿತ್ವಾನ್ ಸರ್ವಥಾ ಪ್ರೇರಣೀಯಮಿತಿ ಜಾನನ್ । ಕೀದೃಶಂ ತಂ । ಪೃಥುಗ್ಮಾನಂ ಪೃಥುಭಾವಂ**

ಪ್ರಾಪ್ನುವಂತಂ ವಾಕ್ರಂ ಶಬ್ದನೀಯಂ ಸ್ತುತ್ಯಂ । ಕಿಮರ್ಥಂ ಚ । ವವೃಧಧ್ಯಾ ಅಸ್ಮಾಕಂ ವರ್ಧನಾಯ । ಕಿಂಚ ತಸ್ಯೇಂದ್ರಸ್ಯ ಶವಸೋ ಬಲಸ್ಯ ವ್ಯುಷ್ಟೌ ವ್ಯುಚ್ಛನೇ ಸತಿ ಕದ್ದಾತು ಕಿಂ ದಾನಮಸ್ಮಾಕಂ ಭವತೀತಿ ಶೇಷಃ । ಯಂ ವಜ್ರಂ ವೃತ್ರತುರಂ ವೃತ್ರಸ್ಯಾವರಕಸ್ಯ ಪಾಪಸ್ಯ ಹಿಂಸಕಂ ತ್ವಷ್ಟಾ ತಕ್ಷತ್ ಅತಕ್ಷತ್ ಸಾಧು ಸಂಪಾದಿತವಾನ್ ಅಪಿನ್ವತ್ ಅಸಿಂಚಚ್ಚ। ತಸ್ಯ ಶವಸೋ ವ್ಯುಷ್ಟಾವಿತಿ ಸಂಬಂಧಃ । ಯದ್ವಾ। ಹೇ ಇಂದ್ರ ಕತ್ಕಿಂ ತಸ್ಯ ವಜ್ರಸ್ಯ ದಾನಂ ಭವತಿ ಯಂ ವಜ್ರಮಿಂದ್ರಾರ್ಥಂ ತಕ್ಷದಿತಿ ಯೋಜನಾ। ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ । ಋ. ೧೦-೪೮-೩ । ಇತಿ ಮಂತ್ರಾಂತರಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಚಿಕಿತ್ವಾನ್**—ನಮ್ಮ ಸ್ಥಿತಿಯನ್ನು ತಿಳಿದ ನೀನು | **ನಃ**—ನಮಗೆ | **ಪೃಥುಗ್ಮಾನಂ**—ಅನೇಕ ರೂಪವನ್ನು ತಾಳಿರುವುದೂ । **ವಾಶ್ರಃ**—ಪ್ರಶಂಸನೀಯವೂ | **ಚಿತ್ರಂ**—ಆಕರ್ಷಕವೂ ಆದ | **ಕಂ**—ಧನವನ್ನು | **ವವೃದಧ್ಯೈ**—ನಮ್ಮ ಅಭಿವೃದ್ಧಿಗಾಗಿ | **ಇಷಣ್ಯಸಿ**—ಒದಗಿಸುತ್ತೀಯೆ | **ತಸ್ಯ**—ಇಂದ್ರನ **ಶವಸಃ**—ಶಕ್ತಿಯ | **ವ್ಯುಷ್ಟೌ**—ಪ್ರಕಾಶಕಾಲದಲ್ಲಿ | **ಕತ್ ದಾತು**—ನಮಗೆ ಯಾವ ವಿಧವಾದ ದಾನವು ಲಭಿಸುತ್ತದೆ | **ವೃತ್ರತುರಂ**—ವೃತ್ರನಾಶಕವಾದ | **ವಜ್ರಂ**—ವಜ್ರಾಯುಧವನ್ನು | **ತಕ್ಷತ್**—ಅವನು, ಸಂಸ್ಕರಿಸಿದನು | **ಅಪಿನ್ವತ್**—ವೃಷ್ಟಿಯನ್ನು ಸುರಿಸಿದನು.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮ ಸ್ಥಿತಿಯನ್ನು ತಿಳಿದ ನೀನು ನಮಗೆ ಅನೇಕವಿಧವಾದುದೂ, ಪ್ರಶಂಸನೀಯವೂ! ಆಕರ್ಷಕವೂ ಆದ ಧನವನ್ನು ನಮ್ಮ ಅಭಿವೃದ್ಧಿಗಾಗಿ ಒದಗಿಸುತ್ತೀಯೆ. ಅವನು ವಜ್ರಾಯುಧವನ್ನು ಸಂಸ್ಕರಿಸಿ ವೃಷ್ಟಿಯನ್ನು ಸುರಿಸುತ್ತಾನೆ. ಅದರ ಶಕ್ತಿಯ ಪ್ರಕಾಶನದ ಕಾಲದಲ್ಲಿ ನಮಗೆ ಯಾವ ವಿಧವಾವ ದಾನವು ಲಭಿಸುತ್ತದೆ ?

## English Translation.

What marvellous (wealth), comprehensive and laudable, do you, Indra knowing (what is needed), bestow upon us for our advantage? What gift (has been made to us) upon the development of his strength? He fabricated the Vritra-slaying thunderbolt, and let the waters flow.

॥ ಸಂಹಿತಾಪಾಠಃ ॥

ಸ ಹಿ ದ್ಯುತಾ ವಿದ್ಯುತಾ ವೇತಿ ಸಾಮ ಪೃಥುಂ ಯೋನಿಮಸುರತ್ವಾ ಸಸಾದ।
ಸ ಸನೀಳೇಭಿಃ ಪ್ರಸಹಾನೋ ಅಸ್ಯ ಭ್ರಾತುರ್ನ ಋತೇ ಸಪ್ತಥಸ್ಯ ಮಾಯಾಃ॥

॥ ಪದಪಾಠಃ ॥

ಸಃ । ಹಿ । ದ್ಯುತಾ । ವಿಽದ್ಯುತಾ । ವೇತಿ । ಸಾಮ । ಪೃಥುಂ । ಯೋನಿಂ । ಅಸುರಽತ್ವಾ । ಆ । ಸಸಾದ ।
ಸಃ । ಸಽನೀಳೇಭಿಃ । ಪ್ರಽಸಹಾನಃ । ಅಸ್ಯ । ಭ್ರಾತುಃ । ನ । ಋತೇ । ಸಪ್ತಥಸ್ಯ । ಮಾಯಾಃ ॥ ೨ ॥

॥ ಸಾಯಣಭಾಷ್ಯಂ ॥

ಸ ಹಿ ಸ ಖಲ್ವಿಂದ್ರೋ ದ್ಯುತಾ ದ್ಯೋತಮಾನೇನ ವಿದ್ಯುತ್ವೈತನ್ನಾಮಕೇನಾಯುಧೇನ ಯುಕ್ತಃ ಸನ್ ಸಾಮ ಸ್ತೋತ್ರಾತ್ಮಕಂ ಯಜ್ಞಸಂಬಂಧಿ ವೇತಿ । ಗಚ್ಛತಿ । ತಥಾಸುರತ್ವಾಸುರತ್ವೇನ ಬಲೇನ ಯುಕ್ತಃ ಸನ್ ಪೃಥುಂ ವಿಸ್ತೀರ್ಣಂ ಯೋನಿಂ ಫಲಸ್ಯೋತ್ಪಾದಕಂ ಯಜ್ಞಂ ಸಸಾದ । ಸಂಗತೋ ಭವತಿ । ಸ ಇಂದ್ರಃ ಸನೀಳೇಭಿಃ । ನೀಡಂ ವಿಮಾನಂ । ಸವಿಮಾನೈರ್ಮರುದ್ಭಿರ್ಯುಕ್ತಃ ಪ್ರಸಹಾನೋಽಭಿಭವನ್ಭವತಿ । ತಸ್ಯ ಸಪ್ತಥಸ್ಯಾದಿತ್ಯಾನಾಂ ಧಾತ್ರಾದೀನಾಂ ಮಧ್ಯೇ ಸಪ್ತಮಸ್ಯೇಂದ್ರಸ್ಯ ಭ್ರಾತುರ್ಭಾಗೈರ್ಭಕ್ತವ್ಯಸ್ಯ ಮಾಯಾಸುರ್ಯೃತೇ ಯಜ್ಞೇ ನ ಸಂಭವತೀತಿ ಶೇಷಃ ॥

॥ ಪ್ರತಿಪದಾರ್ಥ ॥

ಸ ಹಿ—ಅದೇ ಇಂದ್ರನು । **ದ್ಯುತಾ**—ಪ್ರಕಾಶಮಾನವಾದ । **ವಿದ್ಯುತಾ**—ವಿದ್ಯುತ್ಸಂಜ್ಞಕವಾದ ಆಯುಧದೊಡನೆ ಕೂಡಿ । **ಸಾಮ**—ಸ್ತುತಿಯುಕ್ತವಾದ ಯಜ್ಞಪ್ರದೇಶಕ್ಕೆ । **ವೇತಿ**—ಹೋಗುತ್ತಾನೆ । **ಅಸುರತ್ವಾ**—ಶಕ್ತಿಯೊಡಗೂಡಿ । **ಪೃಥುಂ**—ವಿಸ್ತೃತವಾದ । **ಯೋನಿಂ**—ಯಜ್ಞಸ್ಥಾನದಲ್ಲಿ । **ಸಸಾದ**—ಕುಳಿತುಕೊಳ್ಳುತ್ತಾನೆ । **ಸಃ**—ಅವನು । **ಸನೀಳೇಭಿಃ**—ಸಹಗಾಮಿಗಳಾದ ಮರುತ್ತುಗಳೊಡಗೂಡಿ । **ಪ್ರಸಹಾನಃ**—ಶತ್ರುಗಳನ್ನು ಸೋಲಿಸುವ ಬಲವುಳ್ಳವನಾಗುತ್ತಾನೆ । **ಸಪ್ತಥಸ್ಯ**—ಆದಿತ್ಯರಲ್ಲಿ ಏಳನೆಯವನಾದ ಇಂದ್ರನೊಡನೆ । **ಭ್ರಾತುಃ**—ಭಾಗವಹಿಸುವ । **ಮಾಯಾ**—ಆಸುರೀ ಶಕ್ತಿಯು । **ಋತೇ**—ಯಜ್ಞದಲ್ಲಿ । **ನ**—ಯಾವುದೂ ಇರುವುದಿಲ್ಲ.

॥ ಭಾವಾರ್ಥ ॥

ಇಂದ್ರನು ಪ್ರಕಾಶಮಾನವಾದ ವಿದ್ಯುತ್ಸಂಜ್ಞಕವಾದ ಆಯುಧದೊಡನೆ ಕೂಡಿ ಸ್ತುತಿಯುಕ್ತವಾದ ಯಜ್ಞಪ್ರದೇಶಕ್ಕೆ ಹೋಗುತ್ತಾನೆ. ಶಕ್ತಿಯೊಡಗೂಡಿ ಯಜ್ಞಸ್ಥಾನದಲ್ಲಿ ಕುಳಿತುಕೊಳ್ಳುತ್ತಾನೆ. ಅವನು ತನ್ನ ಸಹಗಾಮಿಗಳಾದ ಮರುತ್ತುಗಳೊಡಗೂಡಿ ಶತ್ರುಗಳನ್ನು ಸೋಲಿಸುವ ಬಲವುಳ್ಳವನಾಗುತ್ತಾನೆ. ಅದಿತಿಪುತ್ರರಲ್ಲಿ ಏಳನೆಯವನಾದ ಇಂದ್ರನೊಡನೆ ಯಜ್ಞದಲ್ಲಿ ಭಾಗವಹಿಸುವ ಆಸುರೀಶಕ್ತಿಯಾವುದೂ ಇರಲಾರದು.

## English Translation

Armed with the bright lightning he repairs to the (scene of) adoration; endowed with might he has seated himself on the spacious place (of sacrifice). He (is) triumphant with his companions (the Maruts); the wiles of his seventh brother do not (prevail) at the rite.

|| ಸಂಹಿತಾಪಾಠಃ ||

ಸ ವಾಜಂ ಯಾತಾಪದುಷ್ಪದಾ ಯನ್ತ್ಸ್ವರ್ಷಾತಾ ಪರಿ ಷದತ್ಸನಿಷ್ಯನ್ ।
ಅನರ್ವಾ ಯಚ್ಛತದುರಸ್ಯ ವೇದೋ ಘ್ನಞ್ಛಿಶ್ನದೇವಾँ ಅಭಿ ವರ್ಪಸಾ ಭೂತ್ ॥ ೩ ॥

|| ಪದಪಾಠಃ ||

ಸಃ । ವಾಜಂ । ಯಾತಾ । ಅಪದುಃಽಪದಾ । ಯನ್ । ಸ್ವಃಽಸಾತಾ । ಪರಿ । ಸದತ್ । ಸನಿಷ್ಯನ್ ।
ಅನರ್ವಾ । ಯತ್ । ಶತಽದುರಸ್ಯ । ವೇದಃ । ಘ್ನನ್ । ಶಿಶ್ನಽದೇವಾನ್ । ಅಭಿ । ವರ್ಪಸಾ । ಭೂತ್॥೩॥

|| ಸಾಯಣಭಾಷ್ಯಂ ||

ವಾಜಂ ಶೂರೈರ್ಗಂತವ್ಯಂ ಸಂಗ್ರಾಮಂ ಯಾತಾ ಸ ಇಂದ್ರಃ ॥ ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ॥ ಅಪದುಷ್ಪದಾಪಗತದುಷ್ಪಪತನೇನ ಯನ್ ಗಚ್ಛನ್ ಸನಿಷ್ಯಂಸ್ತತ್ರ ಶತ್ರುಧನಾನಿ ಸಂಭಕ್ತುಮಿಚ್ಛನ್ ಪರಿ ಷದತ್ । ಪರಿಷೀದತಿ । ಕುತ್ರೇತಿ ಉಚ್ಯತೇ । ಸ್ವರ್ಷಾತಾ ಸ್ವರ್ಷಾತೌ ಸರ್ವಲಾಭೋಪೇತೇ ಸಂಗ್ರಾಮೇ । ಕಿಂಚಾನರ್ವಾ ಯುದ್ಧೇಽಪ್ರತ್ಯೃತ ಇಂದ್ರಃ ಶತದುರಸ್ಯ ಶತ್ರುಪುರಸ್ಯಾಂತರ್ನಿಹಿತಂ ಯದ್ವೇದೋ ಧನಮಸ್ತಿ ತದ್ಧನಂ ವರ್ಪಸಾವರಕೇಣ ಬಲೇನಾಭಿ ಭೂತ್ । ಅಭಿಭವತಿ । ಕಿಂ ಕುರ್ವನ್ । ಶಿಶ್ನದೇವಾನಬ್ರಹ್ಮಚರ್ಯಾ ಇತ್ಯತದ್ವಾರೇಷು ಶತ್ರುಪುರಸಂಬಂಧಿಷು ವರ್ತಮಾನಾನ್ ಘ್ನನ್ ಹಿಂಸನ್ ॥

|| ಪ್ರತಿಪದಾರ್ಥ ||

**ವಾಜಂ**—ಯುದ್ಧಕ್ಕೆ । **ಯಾತಾ**—ಹೋಗತಕ್ಕ । **ಸಃ**—ಇಂದ್ರನು । **ಅಪದುಷ್ಪದಾ**—ಶುದ್ಧವಾದ ಗಮನವುಳ್ಳವನಾಗಿ । **ಯನ್**—ಹೋಗುತ್ತಲೂ । **ಸನಿಷ್ಯನ್**—ಶತ್ರುಧನವನ್ನು ಪಡೆಯಲಿಚ್ಛಿಸುತ್ತಲೂ । **ಸ್ವರ್ಷಾತಾ**—ಯುದ್ಧದಲ್ಲಿ । **ಪರಿಷದತ್**—ಹೋಗಿಕುಳಿತುಕೊಳ್ಳುತ್ತಾನೆ । **ಅನರ್ವಾ**—ಯುದ್ಧದಲ್ಲಿ ಅಪ್ರತಿಹತನಾದ ಇಂದ್ರನು । **ಶಿಶ್ನದೇವಾನ್**—ಪುರುಷಾಂಗವನ್ನು ಪೂಜಿಸುವ ಅಸುರರನ್ನು । **ಘ್ನನ್**—ನಾಶಪಡಿಸುತ್ತ । **ಶತದುರಸ್ಯ**—ನೂರಾರು ಬಾಗಿಲುಗಳುಳ್ಳ ಶತ್ರುಪಟ್ಟಣಗಳಲ್ಲಿ । **ಯತ್ ವೇದಃ**—ಯಾವ ಧನವು ಗುಪ್ತವಾಗಿದೆಯೋ ಅದನ್ನು । **ವರ್ಪಸಾ**—ವ್ಯಾಪಕವಾದ ತನ್ನ ಶಕ್ತಿಯಿಂದ । **ಅಭಿಭೂತ್**—ವಶಮಾಡಿಕೊಳ್ಳುತ್ತಾನೆ.

|| ಭಾವಾರ್ಥ ||

ಯುದ್ಧಕ್ಕೆ ಹೋತಕ್ಕ ಇಂದ್ರನು ಶುದ್ಧವಾದ ಗಮನವುಳ್ಳವನಾಗಿ ಹೋಗುತ್ತಲೂ, ಶತ್ರುಧನವನ್ನು ಪಡೆಯಲಿಚ್ಛಿಸುತ್ತಲೂ ಯುದ್ಧಕ್ಕೆ ಹೋಗಿ ಭಾಗವಹಿಸುತ್ತಾನೆ. ಯುದ್ಧದಲ್ಲಿ ಅಪ್ರತಿಹತನಾದ ಇಂದ್ರನು ಪುರುಷಾಂಗವನ್ನು ಪೂಜಿಸುವ ಅಸುರರನ್ನು ನಾಶಪಡಿಸುತ್ತಾ ನೂರಾರು ಬಾಗಿಲುಗಳುಳ್ಳ ಶತ್ರುಪಟ್ಟಣಗಳಲ್ಲಿ ಗುಪ್ತವಾಗಿರುವ ಧನವನ್ನು ತನ್ನ ವ್ಯಾಪಕವಾದ ಶಕ್ತಿಯಿಂದ ವಶಪಡಿಸಿಕೊಳ್ಳುತ್ತಾನೆ.

## English Translation.

Going to the battle, marching with easy gait, desiring the spoil, he set himself to the acquisition of all (wealth). Invincible, destroying the Phallus-worshippers, he won by his prowess whatever wealth (was concealed in the city) with the hundred gates.

॥ ಸಂಹಿತಾಪಾಠಃ ॥

ಸ ಯಹ್ವ್ಯೋ೩ಽವನೀರ್ಗೋಷ್ವರ್ವಾ ಜುಹೋತಿ ಪ್ರಧನ್ಯಾಸು ಸಸ್ರಿಃ ।
ಅಪಾದೋ ಯತ್ರ ಯುಜ್ಯಾಸೋಽರಥಾ ದ್ರೋಣ್ಯಶ್ವಾಸ ಈರತೇ ಘೃತಂ ವಾಃ ॥ ೪ ॥

॥ ಪದಪಾಠಃ ॥

ಸಃ । ಯಹ್ವ್ಯಃ । ಅವನೀಃ । ಗೋಷು । ಅರ್ವಾ । ಆ । ಜುಹೋತಿ । ಪ್ರಽಧನ್ಯಾಸು । ಸಸ್ರಿಃ ।
ಅಪಾದಃ । ಯತ್ರ । ಯುಜ್ಯಾಸಃ । ಅರಥಾಃ । ದ್ರೋಣಿಽಅಶ್ವಾಸಃ । ಈರತೇ । ಘೃತಂ । ವಾರಿತಿ ವಾಃ ।

॥ ಸಾಯಣಭಾಷ್ಯಂ ॥

ಸ ಇಂದ್ರೋಽರ್ವಾ ಮೇಘೇಷ್ವಭಿಗಂತಾ ಸಸ್ರಿಃ ಸರಣಕುಶಲಃ ಪ್ರಧನ್ಯಾಸು ಪ್ರಕೃಷ್ಟಧನನಿಮಿತ್ತಾಸು ಗೋಷು ಭೂಮಿಷು ಯಹ್ವ್ಯಃ । ಮಹನ್ನಾಮೈತತ್ । ಮಹತೀರವನೀಃ । ಅವಂತೀತ್ಯವನಯ ಆಪಃ । ತಾ ಆ ಜುಹೋತಿ । ಆಕ್ಷಿಪತಿ । ಯತ್ರ ಯಾಸು ಭೂಮಿಷ್ವಪಾದಃ ಪಾದರಹಿತಾ ಅರಥಾ ರಥವರ್ಜಿತಾಃ । ಪಾದರಹಿತಾಃ ಕೇಚನ ರಥೇನ ಗಚ್ಛಂತಿ । ಕೇನಾಪಿ ಶೂನ್ಯಾ ದ್ರೋಣ್ಯಶ್ವಾಸೋ ದ್ರುತವ್ಯಾಪನಾ ಯುಜ್ಯಾಸೋ ಯುಜ್ಯಾ ಇಂದ್ರಸ್ಯ ಸಖ್ಯೋ ನದ್ಯೋ ವಾರ್ವಾರಕಂ ಘೃತಮುದಕಮೀರತೇ ಪ್ರೇರಯಂತಿ ತತ್ರಾಜುಹೋತಿ ॥

॥ ಪ್ರತಿಪದಾರ್ಥ ॥

**ಯತ್ರ**—ಯಾವ ಭೂಪ್ರದೇಶಗಳಲ್ಲಿ । **ಅಪಾದಃ**—ಪಾದರಹಿತವೂ । **ಅರಥಾಃ** — ರಥ ರಹಿತವೂ । **ದ್ರೋಣ್ಯಶ್ವಾಸಃ**—ಶೀಘ್ರವಾದ ಗಮನವುಳ್ಳವೂ । **ಯುಜ್ಯಾಸಃ**—ಇಂದ್ರನಿಗೆ ಮಿತ್ರಭೂತವೂ ಆದ ನದಿಗಳು । **ವಾಃ**—ಪ್ರವಹಿಸುವ । **ಘೃತಂ**—ಉದಕವನ್ನು । **ಈರತೇ**—ಹರಿಸುವವೋ ಅಂತಹ । **ಗೋಷು**—ಭೂಪ್ರದೇಶಗಳಲ್ಲಿ । **ಅರ್ವಾ**—ಮೇಘಗಳಲ್ಲಿ ಸಂಚರಿಸುವವನೂ । **ಸಸ್ರಿಃ**—ಉತ್ತಮವಾದ ಸಂಚಾರವುಳ್ಳವನೂ ಆದ । **ಸಃ**—ಇಂದ್ರನು । **ಪ್ರಧನ್ಯಾಸು**—ಉತ್ತಮವಾದ ಸಂಪತ್ಪ್ರಾಪ್ತಿಗಾಗಿ । **ಯಹ್ವ್ಯಃ**—ಮಹತ್ತಾದ । **ಅವನೀಃ**—ಉದಕಗಳನ್ನು । **ಆ ಜುಹೋತಿ**—ಒದಗಿಸುತ್ತಾನೆ.

|| ಭಾವಾರ್ಥಃ ||

ಯಾವ ಭೂಪ್ರದೇಶಗಳಲ್ಲಿ ನಡೆಯಲು ಮತ್ತು ರಥಸಂಚಾರಕ್ಕೆ ಸಾಧ್ಯವಿಲ್ಲದುದೂ ಶೀಘ್ರಗಾಮಿಗಳೂ, ಇಂದ್ರನಿಗೆ ಮಿತ್ರಭೂತವೂ ಆದ ನದಿಗಳು ಉದಕಗಳನ್ನು ಹರಿಸುವುವೋ ಅಂತಹ ಭೂಪ್ರದೇಶಗಳಲ್ಲಿ, ಮೇಘಗಳಲ್ಲಿ ಸಂಚರಿಸುವ ಇಂದ್ರನು ಉತ್ತಮವಾದ ಸಂಪತ್ಪ್ರಾಪ್ತಿಗಾಗಿ ಮಹತ್ತಾದ ಉದಕಗಳನ್ನು ಒದಗಿಸುತ್ತಾನೆ.

## English Translation.

The Victorious Indra, Coming amongst the clouds quickly moving, offers the abundant waters on the rich (plains) where his associates (the rivers) footless, and without conveyances, having pitchers for horses pour out water like ghi.

|| ಸಂಹಿತಾಪಾಠಃ ||

ಸ ರುದ್ರೇಭಿರಶಸ್ತವಾರ ಋಭ್ವಾ ಹಿತ್ವೀ ಗಯಮಾರೇಅವದ್ಯ ಆಗಾತ್ |
ವಮ್ರಸ್ಯ ಮನ್ಯೇ ಮಿಥುನಾ ವಿವವ್ರೀ ಅನ್ನಮಭೀತ್ಯಾರೋದಯನ್ಮುಷಾಯನ್ || ೫ ||

|| ಪದಪಾಠಃ ||

ಸಃ | ರುದ್ರೇಭಿಃ | ಅಶಸ್ತಽವಾರಃ | ಋಭ್ವಾ | ಹಿತ್ವೀ | ಗಯಂ | ಆರೇಽಅವದ್ಯಃ | ಆ | ಅಗಾತ್ |
ವಮ್ರಸ್ಯ | ಮನ್ಯೇ | ಮಿಥುನಾ | ವಿವವ್ರೀ ಇತಿ ವಿಽವವ್ರೀ | ಅನ್ನಂ | ಅಭಿಽಇತ್ಯ | ಅರೋದಯತ್ | ಮುಷಾಯನ್ || ೫ ||

|| ಸಾಯಣಭಾಷ್ಯಂ ||

ಸ ಇಂದ್ರೋ ರುದ್ರೇಭೀ ರುದ್ರಪುತ್ರೈರ್ಮರುದ್ಭಿಃ ಸಹಿತ ಆಗಾತ್ | ಆಗಚ್ಛತು | ಕೀದೃಶಃ | ಅಶಸ್ತವಾರಃ. ಸ್ತೋತೃಭಿರಪ್ರಾರ್ಥಿತಧನಃ | ಸ್ವಯಮೇವ ಪ್ರದಾತೇತ್ಯರ್ಥಃ | ತಥರ್ಭ್ವಾ ಮಹಾನ್ ಗಯಂ ಹಿತ್ವೀ ಹಿತ್ವಾ ಸ್ವಸ್ಥಾನಂ ತ್ಯಕ್ತ್ವಾ ಗಾತ್ | ಆಗಚ್ಛತು | ತತ್ರ ಸಂಬಂಧಃ | ಆರೇಅವದ್ಯೋ ದೂರೀಕೃತಗರ್ಹ್ಯಃ | ಕಿಂಚ ವಮ್ರಸ್ಯೈತನ್ನಾಮಕಸ್ಯರ್ಷೇರ್ಮಮ ಮಿಥುನಾ ಮಿಥುನೌ ಮಾತಾಪಿತರೌ ವಿವವ್ರೀ ವಿಗತಚ್ಛರೌ ಮನ್ಯೇ | ಅವಗಚ್ಛಾಮಿ | ಅಯಂ ವಮ್ರೋಽನ್ನಂ ಶತ್ರುಸಂಬಂಧ್ಯಭೀತ್ಯಾಭಿಪ್ರಾಪ್ಯ ಮುಷಾಯನ್ಮುಷ್ಣನ್ನರೋದಯತ್ | ರೋದಯತಿ || ಛಂದಸಿ ಶಾಯಜಪೀತ್ಯಹಾವಪಿ ಮುಷೇಃ ಶ್ನಃ ಶಾಯಜಾದೇಶಃ ||

॥ ಪ್ರತಿಪದಾರ್ಥ ॥

ಅಶಸ್ತವಾರಃ—ಅಪ್ರಾರ್ಥಿತವಾಗಿಯೇ ಧನವನ್ನು ಕೊಡತಕ್ಕವನೂ । **ಋಭ್ವಾ**—ಮಹಾತ್ಮನೂ । **ಅರೇಅವದ್ಯಃ**—ನಿಂದೆಯಿಂದ ದೂರವಿರತಕ್ಕವನೂ ಆದ । **ಸಃ**—ಇಂದ್ರನು । **ಗಯಂ ಹಿತ್ವೀ**—ತನ್ನ ಗೃಹವನ್ನು ಬಿಟ್ಟು । **ರುದ್ರೇಭಿಃ**—ರುದ್ರ ಪುತ್ರರಾದ ಮರುತ್ತುಗಳೊಡಗೂಡಿ । **ಆಗಾತ್**—ಬರಲಿ । **ವಮ್ರಸ್ಯ**—ವಮ್ರಸಂಜ್ಞಕನಾದ ನನ್ನ । **ಮಿಥುನಾ**—ಮಾತಾಪಿತೃಗಳನ್ನೂ । **ವಿವವ್ರೀ**—ಜ್ವರರಹಿತರಾಗಿರುವರೆಂದು । **ಮನ್ಯೇ**—ತಿಳಿಯುತ್ತೇನೆ । **ಅನ್ನಂ**—ಶತ್ರು ಸಂಬಂಧಿಯಾದ ಅನ್ನವನ್ನು । **ಅಭೀತ್ಯ**—ಹೊಂದಿ । **ಮುಷಾಯನ್**—ಅದನ್ನು ಕದಿಯುತ್ತ । **ಅರೋದಯತ್**—ಗಟ್ಟಿಯಾಗಿ ಶಬ್ದಮಾಡುತ್ತಾನೆ ।

॥ ಭಾವಾರ್ಥ ॥

ಭಕ್ತರಿಗೆ ಅಪ್ರಾರ್ಥಿತವಾಗಿಯೇ ಧನವನ್ನು ಕೊಡತಕ್ಕವನೂ, ಮಹಾತ್ಮನೂ, ದೋಷರಹಿತನೂ ಆದ ಇಂದ್ರನು ಗೃಹವನ್ನು ಬಿಟ್ಟು ರುದ್ರಪುತ್ರರಾದ ಮರುತ್ತುಗಳೊಡಗೂಡಿ ನಮ್ಮಲ್ಲಿಗೆ ಬರಲಿ. ವಮ್ರಸಂಜ್ಞಕನಾದ ನನ್ನ ಮಾತಾಪಿತೃಗಳು ಜ್ವರರಹಿತರಾಗಿರುವರೆಂದು ತಿಳಿಯುತ್ತೇನೆ. ಇಂದ್ರನು ಶತ್ರುಸಂಬಂಧಿಯಾದ ಅನ್ನವನ್ನು ಅಪಹರಿಸಿ ಹರ್ಷದಿಂದ ಗಟ್ಟಿಯಾಗಿ ಶಬ್ದಮಾಡುತ್ತಾನೆ.

## English Translation.

May he, our unsolicited benefactor, the mighty one, from whom blame is far removed, come with the Rudras, having quitted his dwelling. I think of the two (parents) of Vamra, who are free from fever. Having obtained (the enemy's) food, he called aloud whilst stealing it.

॥ ಸಂಹಿತಾಪಾಠಃ ॥

**ಸ ಇದ್ದಾಸಂ ತುವೀರವಂ ಪತಿರ್ದನ್ಷಳಕ್ಷಂ ತ್ರಿಶೀರ್ಷಾಣಂ ದಮನ್ಯತ್ ।**
**ಅಸ್ಯ ತ್ರಿತೋ ನ್ವೋಜಸಾ ವೃಧಾನೋ ವಿಪಾ ವರಾಹಮಯೋಅಗ್ರ-**
**ಯಾ ಹನ್ ॥ ೬ ॥**

॥ ಪದಪಾಠಃ ॥

**ಸಃ । ಇತ್ । ದಾಸಂ । ತುವಿಽರವಂ । ಪತಿಃ । ದನ್ । ಷಟ್ಽಅಕ್ಷಂ । ತ್ರಿಽಶೀರ್ಷಾಣಂ । ದಮನ್ಯತ್ ।**
**ಅಸ್ಯ । ತ್ರಿತಃ । ನು । ಓಜಸಾ । ವೃಧಾನಃ । ವಿಪಾ । ವರಾಹಂ । ಅಯಃಽಅಗ್ರಯಾ । ಹನ್ನಿತಿ ಹನ್ ॥೬॥**

॥ ಸಾಯಣಭಾಷ್ಯಂ ॥

ಸ ಇತ್ ಸ ಏವೇಂದ್ರಃ ಪತಿಃ ಸರ್ವಸ್ಯ ಸ್ವಾಮೀ ದಾಸಮುಪಕ್ಷಪಯಿತಾರಂ ತುವೀರವಂ ಬಹುಶಬ್ದಂ ಸಂಗ್ರಾಮೇ ಭಯಂಕರಂ ಶಬ್ದಂ ಕುರ್ವಾಣಂ ವೃತ್ರಂ ದನ್ ದಮಯನ್ ಷಳಕ್ಷಮಕ್ಷಿಷಟ್ಕೋಪೇತಂ ತ್ರಿಶೀರ್ಷಾಣಂ ತ್ರಿಶಿರಸ್ಕಂ ತ್ವಷ್ಟುಃ ಪುತ್ರಂ ವಿಶ್ವರೂಪಂ ದಮನ್ಯತ್ । ದಮಿತಂ ಪ್ರಹರ್ತುಮೈಚ್ಛತ್ । ಅವಧೀದಿತ್ಯರ್ಥಃ । ಯದ್ವಾ । ದಮಯತೀತಿ ದಮನಃ ॥ ನಂದ್ಯಾದಿತ್ವಾಲ್ಲ್ಯುಃ ॥ ಸ ಇವಾಚರತಿ ॥ ಉಪಮಾನಾದಾಚಾರೇ । ಪಾ. ೩-೧-೧೦ । ಇತಿ ಕ್ಯಚ್ಯಂತ್ಯಲೋಪಶ್ಛಾಂದಸಃ । ತತೋ ಲಙ್ ಬಹುಲಂ ಛಂದಸೀತ್ಯಡಭಾವಃ ॥ ಕಿಂಚ ತ್ರಿತ ಏತನ್ನಾಮಾ ಮಹರ್ಷಿರಸ್ಯೇಂದ್ರಸ್ಯೌಜಸಾ ಬಲೇನ ವೃಧಾನೋ ವರ್ಧಮಾನೋ ವಿಪಾಂಗುಲ್ಯಾ । ಕೀದೃಶ್ಯಾ । ಅಯೋಅಗ್ರಯಾಯೋವತ್ಕಠಿನನಖಯಾ ವರಾಹಂ ವರಾಹಾರಮುದಕವಂತಂ ಮೇಘಂ ವ್ಯಹನ್ । ವಿಹತವಾನ್ ॥

॥ ಪ್ರತಿಪದಾರ್ಥ ॥

**ಪತಿಃ**—ಎಲ್ಲರಿಗೂ ಸ್ವಾಮಿಯಾದ । **ಸ ಇತ್**—ಅದೇ ಇಂದ್ರನು । **ದಾಸಂ**—ಹಿಂಸಕನೂ । **ತುವೀರವಂ**—ಅಧಿಕವಾಗಿ ಶಬ್ದಮಾಡುವವನೂ ಆದ ವೃತ್ರನನ್ನು । **ದನ್**—ಅಡಗಿಸುತ್ತ । **ಷಳಕ್ಷಂ**—ಆರು ಕಣ್ಣುಳ್ಳವನೂ । **ತ್ರಿಶೀರ್ಷಾಣಂ**—ಮೂರು ತಲೆಯುಳ್ಳವನೂ ಆದ ವಿಶ್ವರೂಪನನ್ನು । **ದಮನ್ಯತ್**—ನಾಶಪಡಲಿಚ್ಛಿಸಿದನು । **ತ್ರಿತಃ**—ಮೂರುಲೋಕಗಳನ್ನು ಆಕ್ರಮಿಸಿದ ಇಂದ್ರನು । **ಅಸ್ಯ**—ತನ್ನ । **ಓಜಸಾ**—ಬಲದಿಂದ । **ವೃಧಾನಃ**—ಅಧಿಕವಾಗಿ ಬೆಳೆದು । **ಅಯೋಅಗ್ರಯಾ**—ಉಕ್ಕಿನಂತಿರುವ ಉಗುರುಗಳುಳ್ಳ । **ವಿಪಾ**—ಬೆರಳಿನಿಂದ । **ವರಾಹಂ**—ಉದಕಯುಕ್ತವಾದ ಮೇಘವನ್ನು । **ಹನ್**—ಭೇದಿಸಿದನು.

॥ ಭಾವಾರ್ಥ ॥

ಎಲ್ಲರಿಗೂ ಸ್ವಾಮಿಯಾದ ಇಂದ್ರನು ಹಿಂಸಕನೂ ಅಧಿಕವಾಗಿ ಶಬ್ದ ಮಾಡತಕ್ಕವನೂ ಆದ ವೃತ್ರನನ್ನು ಅಡಗಿಸುತ್ತ ಆರುಕಣ್ಣುಗಳುಳ್ಳವನೂ, ಮೂರು ತಲೆಗಳುಳ್ಳವನೂ ಆದ ವಿಶ್ವರೂಪನನ್ನು ನಾಶಪಡಿಸಲಿಚ್ಛಿಸಿದನು. ಮೂರು ಲೋಕಗಳನ್ನೂ ಆಕ್ರಮಿಸುವ ಇಂದ್ರನು ತನ್ನ ಬಲದಿಂದ ಅಧಿಕವಾಗಿ ಬೆಳೆದು ಉಕ್ಕಿನಂತಿರುವ ಉಗುರುಗಳುಳ್ಳ ಬೆರಳಿನಿಂದ ಉದಕಯುಕ್ತವಾದ ಮೇಘವನ್ನು ಭೇದಿಸಿದನು.

English Translation.

The sovereign Indra attacking him overcame the loud-shouting, six-eyed, three-headed Dasa, and Trita, invigorated by his strength, smote the water-laden (cloud) with his iron-tipped finger.

॥ ಸಂಹಿತಾಪಾಠಃ ॥

ಸ ದ್ರುಹ್ವಣೇ ಮನುಷ ಊರ್ಧ್ವಸಾನ ಆ ಸಾವಿಷದರ್ಶಸಾನಾಯ ಶರುಂ ।
ಸ ನೃತಮೋ ನಹುಷೋಽಸ್ಮತ್ಸುಜಾತಃ ಪುರೋಽಭಿನದರ್ಹನ್ದಸ್ಯುಹತ್ಯೇ ॥೭॥

॥ ಪದಪಾಠಃ ॥

ಸಃ । ದ್ರುಹ್ವಣೇ । ಮನುಷೇ । ಊರ್ಧ್ವಸಾನಃ । ಆ । ಸಾವಿಷತ್ । ಅರ್ಶಸಾನಾಯ । ಶರುಂ ।

ಸಃ । ನೃಽತಮಃ । ನಹುಷಃ । ಅಸ್ಮತ್ । ಸುಽಜಾತಃ । ಪುರಃ । ಅಭಿನತ್ । ಅರ್ಹನ್ । ದಸ್ಯುಽಹತ್ಯೇ॥

॥ ಸಾಯಣಭಾಷ್ಯಂ ॥

ಸ ಇಂದ್ರೋ ದ್ರುಹ್ವಣೇ ದ್ರುಹ್ವಣಾಯ ದೃಢಂ ಶತ್ರುಭಿರ್ಹಿಂಸಿತವ್ಯಾಯ ಮನುಷೇ ಮನುಷ್ಯಾಯ ಯೋದ್ಧ್ರೇ ಸ್ವಭಕ್ತಾಯೋರ್ಧ್ವಸಾನಃ । ಊರ್ಧ್ವ ಉಚ್ಛ್ರಿತಃ ಶೌರ್ಯಾದಿಭಿರ್ಗುಣೈರಧಿಕಃ ಸನ್ ಸ್ಯತಿ ಶತ್ರೂಣಾಮಂತಂ ಕರೋತೀತ್ಯೂರ್ಧ್ವಸಃ । ಸ ಇವಾಚರನ್॥ ಊರ್ಧ್ವಸಶಬ್ದಾದಾಚಾರಾರ್ಥೇ ಕ್ವಿಬಂತಾಚ್ಛಾನಚ್ ॥ ಅರ್ಶಸಾನಾಯ ಶತ್ರೂಣಾಂ ಹಿಂಸಿತ್ರೇ ಶರುಂ ಹಿಂಸಕಮಾಯುಧಮಾ ಸಾವಿಷತ್। ಆಭಿಮುಖ್ಯೇನ ಪ್ರಸೌತಿ । ಯುಚ್ಛತಿ । ಯದ್ವಾ। ದ್ರುಹ್ವಣೇ ಮನುಷೇ ದ್ರೋಗ್ಧವ್ಯಾಯ ಮನುಷ್ಯಾಯಾರ್ಶಸಾನಾಯ ಸ್ವಭಕ್ತಹಿಂಸಿತ್ರೇ ತಸ್ಯ ವಧಾರ್ಥಮೂರ್ಧ್ವಸಾನಃ ಸಞ್ಛರುಮಾ ಸಾವಿಷತ್ । ವಜ್ರಂ ಪ್ರೇರಯತಿ । ಸ ಏವೇಂದ್ರೋ ನಹುಷೋ ಮನುಷ್ಯಾನ್ನೃತಮೋ ಮನುಷ್ಯಾಣಾಂ ನೇತೃತಮಃ ಸಂಗ್ರಾಮೇ ಶೂರಾಣಾಂ ಗಮಯಿತೃತಮಃ । ಯದ್ವಾ । ನೃತನೋ ನಹುಷೋ ಬಂಧಕಶ್ಚ । ಅಸ್ಮದಸ್ಮದರ್ಥಂ ಸುಜಾತಃ ಸುಷ್ಠು ಪ್ರಾದುರ್ಭೂತೋಽರ್ಹನ್ ಪೂಜ್ಯಃ ಸನ್ ದಸ್ಯುಹತ್ಯೇ । ದಸ್ಯವ ಉಪಕ್ಷಪಯಿತಾರಃ ಶತ್ರವಃ । ತೇಷಾಂ ಹತ್ಯಂ ಹನನಂ ಯಸ್ಮಿನ್ ತಾದೃಶೇ ಸಂಗ್ರಾಮೇ ಪುರಃ ಶತ್ರೂಣಾಂ ಶರೀರಾಣ್ಯಭಿನತ್ । ಭಿನ್ನವಾನ್ ॥

॥ ಪ್ರತಿಪದಾರ್ಥ ॥

**ಸಃ**— ಇಂದ್ರನು । **ದ್ರುಹ್ವಣೇ**—ಶತ್ರುಗಳಿಂದ ಗಟ್ಟಿಯಾಗಿ ಸೆಳೆಯಲ್ಪಡುವ । **ಮನುಷೇ**—ತನ್ನ ಭಕ್ತನಿಗಾಗಿ । **ಊರ್ಧ್ವಸಾನಃ**—ಅತ್ಯಧಿಕವಾದಶೌರ್ಯಾದಿ ಗುಣಗಳನ್ನು ಹೊಂದಿ । **ಅರ್ಶಸಾನಾಯ**—ಶತ್ರುನಾಶಕ್ಕಾಗಿ । **ಶರುಂ**—ಹಿಂಸಕವಾದ ಆಯುಧವನ್ನು । **ಆ ಸಾವಿಷತ್**—ಪ್ರಯೋಗಿಸುತ್ತಾನೆ। **ನಹುಷಃ**—ಮಾನವರಿಗಿಂತಲೂ । **ನೃತಮಃ**—ಅತ್ಯಂತಶ್ರೇಷ್ಠವಾದ ಮಾರ್ಗದರ್ಶಕನಾದ । **ಸಃ**— ಇಂದ್ರನು । **ಅಸ್ಮತ್**—ನಮಗಾಗಿ । **ಸುಜಾತಃ**—ಉತ್ತಮವಾದ ಜನ್ಮವುಳ್ಳವನಾಗಿಯೂ । **ಅರ್ಹನ್**—ಪೂಜ್ಯನಾಗಿಯೂ । **ದಸ್ಯುಹತ್ಯೇ**—ರಾಕ್ಷಸರನ್ನು ನಾಶ ಮಾಡುವ ಯುದ್ಧದಲ್ಲಿ। **ಪುರಃ**—ಶತ್ರುಗಳ ಶರೀರಗಳನ್ನು । **ಅಭಿನತ್**—ಸೀಳಿಹಾಕುತ್ತಾನೆ.

॥ ಭಾವಾರ್ಥ ॥

ಶತ್ರುಗಳಿಂದ ಗಟ್ಟಿಯಾಗಿ ಸೆಳೆಯಲ್ಪಡುವ ತನ್ನ ಭಕ್ತನಿಗಾಗಿ ಅತ್ಯಧಿಕವಾದ ಶೌರ್ಯಾದಿಗುಣಗಳನ್ನು ಹೊಂದಿ ಶತ್ರುನಾಶಕ್ಕಾಗಿ ಹಿಂಸಕವಾದ ಆಯುಧವನ್ನು ಪ್ರಯೋಗಿಸುತ್ತಾನೆ. ಮಾನವರಿಗಿಂತಲೂ ಅತ್ಯಂತ ಶ್ರೇಷ್ಠವಾದ ಮಾರ್ಗದರ್ಶಕನೂ ಉತ್ತಮವಾದ ಜನ್ಮವುಳ್ಳವನೂ, ಪೂಜ್ಯನೂ, ಆದ ಇಂದ್ರನು ನಮಗಾಗಿರಾಕ್ಷಸರನ್ನು ನಾಶ ಮಾಡುವ ಯುದ್ಧದಲ್ಲಿ ಶತ್ರುಗಳ ಶರೀರಗಳನ್ನು ಸೀಳಿಹಾಕುತ್ತಾನೆ.

## English Translation.

Raising himself on high, he launched his arrow against the malignant aggressive foe. He, the chief leader of men, manifested favourably for our (aid), laudable, slew the bodies (of enemies) in the slaughter of the Dasyus.

|| ಸಂಹಿತಾಪಾಠಃ ||

ಸೋ ಅಭ್ರಿಯೋ ನ ಯವಸ ಉದನ್ಯನ್ಕ್ಷಯಾಯ ಗಾತುಂ ವಿದನ್ನೋ ಅಸ್ಮೇ ।

ಉಪ ಯತ್ಸೀದದಿಂದುಂ ಶರೀರೈಃ ಶ್ಯೇನೋಽಯೋಽಪಾಷ್ಟಿರ್ಹಂತಿ ದಸ್ಯೂನ್ ॥ ೮ ॥

|| ಪದಪಾಠಃ ||

ಸಃ । ಅಭ್ರಿಯಃ । ನ । ಯವಸೇ । ಉದನ್ಯತ್ । ಕ್ಷಯಾಯ । ಗಾತುಂ । ವಿದತ್ । ನಃ । ಅಸ್ಮೇ ಇತಿ ।

ಉಪ । ಯತ್ । ಸೀದತ್ । ಇಂದುಂ । ಶರೀರೈಃ । ಶ್ಯೇನಃ । ಅಯಃಽಅಪಾಷ್ಟಿಃ । ಹಂತಿ । ದಸ್ಯೂನ್ ॥೮॥

|| ಸಾಯಣಭಾಷ್ಯಂ ||

ಸ ಇಂದ್ರೋಽಭ್ರಿಯೋ ನ । ನ ಭ್ರಾಜಂತೇಽಪೋ ಬಿಭ್ರತೀತಿ ವಾಭ್ರಾಣಿ ಮೇಘಾಃ । ತೇಷಾಂ ಸಂಘೋಽಭ್ರಿಯಃ । ಸ ಇವ ಯವಸೇ ಗವಾದಿಭಕ್ಷಣಸಾಧನಾಯ ತೃಣಾಯೋದನ್ಯನ್ನುದಕಂ ದಾತುಮಿಚ್ಛನ್ । ತಥಾ ಕ್ಷಯಾಯ ಗಮನಾಯ ನಿವಾಸಾಯ ವಾಸ್ಮೇ ಅಸ್ಮಾಕಂ ಗಾತುಂ ಮಾರ್ಗಂ ವಿದಲ್ಲಂಭಯನ್ । ನ ಇತಿ ಪೂರಣಃ । ತಾದೃಶಃ ಸನ್ ಯದ್ಯದೇಂದುಂ ಸೋಮಂ ಶರೀರೈಃ ಸ್ವಶರೀರಾವಯವೈರಂಗೈರುಪ ಸೀದತ್ ಉಪಗಚ್ಛತಿ ॥ ಯಚ್ಛಬ್ದಯೋಗಾದನಿಘಾತಃ ॥ ತದಾನೀಂ ಶ್ಯೇನಃ । ಸಾದೃಶ್ಯಪ್ರಧಾನೋಽಯಂ ನಿರ್ದೇಶಃ । ಶ್ಯೇನಸದೃಶಃ ಶ್ಯೇನವಚ್ಛಂಸನೀಯ-ಗಮನೋಽಯೋಽಪಾಷ್ಟಿಃ । ಅಪಯಷ್ಟಿರ್ವ್ಯಾಪ್ತಿರ್ಯಸ್ಯ ಸ ಪ್ರದೇಶೋಽಪಾಷ್ಟಿಃ ಪಾರ್ಷ್ಣಿಃ । ಅಯೋ-ಮಯೋಽಪಾಷ್ಟಿಃ ಪಾರ್ಷ್ಣಿರ್ಯಸ್ಯ ಸಃ । ದಸ್ಯೂಞ್ಛತ್ರೂನ್ಹಂತಿ । ಹಿನಸ್ತಿ ।

॥ಪ್ರತಿಪದಾರ್ಥ॥

ಯವಸೇ—ನಮ್ಮ ಗೋವಿಗೆ ಆಹಾರವಾದ ಹುಲ್ಲಿಗೆ । ಉದನ್ಯತ್—ಉದಕವನ್ನು ಕೊಡಲಿಚ್ಛಿಸುವ । ಅಭ್ರಿಯೋನ—ಮೇಘಗಳ ಗುಂಪಿನಂತೆ । ಸಃ—ಇಂದ್ರನು । ಅಸ್ಮೇ—ನಮ್ಮ । ಕ್ಷಯಾಯ—ಗೃಹಕ್ಕೆ ಬರಲು । ಗಾತುಂ—ಮಾರ್ಗವನ್ನು । ವಿದತ್—ತಿಳಿದಿದ್ದಾನೆ । ಯತ್—ಯಾವಾಗ । ಇಂದುಂ—

**ಸೋಮವನ್ನು** | **ಶರೀರೈಃ**---ತನ್ನ ಶರೀರದಿಂದಲೇ | **ಉಪಸೀದತ್**—ಸಮೀಪಿಸುವನೋ ಆಗಲೇ |**ಶ್ಯೇನಃ**—ಶ್ಯೇನಪಕ್ಷಿಯಂತೆ ಗಮನವುಳ್ಳವನೂ | **ಆಯೋಪಾಷ್ಟಿಃ**—ಉಕ್ಕಿನಿಂದ ಮಾಡಿದ (ಉಕ್ಕಿನಂತೆ **ಘಟ್ಟಿಯಾಗಿರುವ)** ಹಿಮ್ಮಡಿವುಳ್ಳವನೂ ಆದ ಇಂದ್ರನು | **ದಸ್ಯೂನ್**—ಶತ್ರುಗಳನ್ನು | **ಹಂತಿ**—ನಾಶಪಡಿಸುತ್ತಾನೆ.

|| ಭಾವಾರ್ಥ ||

ನಮ್ಮ ಗೋವುಗಳಿಗೆ ಭಕ್ಷಣಯೋಗ್ಯವಾದ ತೃಣಕ್ಕೆ ಉದಕವನ್ನು ಕೊಡಲಿಚ್ಛಿಸುವ ಮೇಘಗಳ ಗುಂಪಿನಂತೆ ಇಂದ್ರನು ನಮ್ಮ ಗೃಹಕ್ಕೆ ಬರಲು ಮಾರ್ಗವನ್ನು ತಿಳಿಯುತ್ತಾನೆ. ಯಾವಾಗ ಸೋಮವನ್ನು ತನ್ನ ಶರೀರದಿಂದಲೇ ಸಮೀಪಿಸುವನೋ, ಆಗಲೇ ಶ್ಯೇನ ಪಕ್ಷಿಯಂತೆ ಗಮನವುಳ್ಳವನೂ, ಉಕ್ಕಿನಂತೆ ದೃಢವಾದ ಹಿಮ್ಮಡಿಯುಳ್ಳವನೂ ಆದ ಇಂದ್ರನು ಶತ್ರುಗಳನ್ನು ನಾಶಪಡಿಸುತ್ತಾನೆ.

## English Translation.

Like the aggregated cloud desiring to pour water on the pasturage, he found the way to our dwelling : when he approaches the Soma with his limbs like a hawk with heel of iron he smites the Dasyus.

|| ಸಂಹಿತಾಪಾಠಃ ||

**ಸ ವ್ರಾಧತಃ ಶವಸಾನೇಭಿರಸ್ಯ ಕುತ್ಸಾಯ ಶುಷ್ಣಂ ಕೃಪಣೇ ಪರಾದಾತ್ ।**
**ಅಯಂ ಕವಿಮನಯಚ್ಛಸ್ಯಮಾನಮತ್ಕಂ ಯೋ ಅಸ್ಯ ಸನಿತೋತ ನೃಣಾಂ ॥**

|| ಪದಪಾಠಃ ||

**ಸಃ । ವ್ರಾಧತಃ । ಶವಸಾನೇಭಿಃ । ಅಸ್ಯ । ಕುತ್ಸಾಯ । ಶುಷ್ಣಂ । ಕೃಪಣೇ । ಪರಾ । ಅದಾತ್ ।**
**ಅಯಂ । ಕವಿಂ । ಅನಯತ್ । ಶಸ್ಯಮಾನಂ । ಅತ್ಕಂ । ಯಃ । ಅಸ್ಯ । ಸನಿತಾ । ಉತ । ನೃಣಾಂ ॥ ೯ ॥**

|| ಸಾಯಣಭಾಷ್ಯಂ ||

**ಸ ಇಂದ್ರೋ ವ್ರಾಧತಃ । ಮಹನ್ನಾಮೈತತ್ । ಮಹತೋಽಪಿ ಶತ್ರೂಞ್ಛವಸಾನೇಭಿರ್ಬಲಮಾಚರದ್ಭಿರಾಯುಧೈರಸ್ಯ । ಅಸ್ಯತು ॥ ಅಸು ಕ್ಷೇಪಣೇ । ವ್ಯತ್ಯಯೇನ ಮಧ್ಯಮಃ ॥ ಕುತ್ಸಾಯೈತನ್ನಾಮಕಾಯ ಕೃಪಣೇ ಸ್ತೋತ್ರೇ । ಕೃಪತಿಃ ಸ್ತುತಿಕರ್ಮಾ । ಶುಷ್ಣಂ ಶೋಷಕಮೇತನ್ನಾಮಕಮಸುರಂ ಪರಾದಾತ್ । ಪರಾಭೂಯ ಖಂಡಿತವಾನ್ । ಕುತ್ಸಾಯ ಶುಷ್ಣಮಶುಷಂ ನಿ ಬರ್ಹೀಃ । ಋ. ೪-೧೬-೧೨ । ಇತಿ ಮಂತ್ರಾಂತರಂ । ಕಿಂಚಾಯಮಿಂದ್ರಃ ಕವಿಮುಶನಸಂ । ಕವಿರಿತಿ ಪಿತೃನಾಮ್ನಾ ಪುತ್ರಸ್ಯಾಪಿ ವ್ಯವಹಾರ ಉಪಚಾರಾತ್ । ಶಸ್ಯಮಾನಂ ಸ್ತುವಂತಮನಯತ್ । ವಶಂ ಪ್ರಾಪಯತ್ತಸ್ಯ**

**ವಿರೋಧಿನಂ । ಯದ್ವಾ । ಕವಿಂ ಭಾರ್ಗವಮೇವ ಸ್ತೋತೃಭಿಃ ಶಸ್ಯಮಾನಂ ಸ್ವವಶಮನಯತ್ । ಯಃ ಕವಿರಸ್ಯೇಂದ್ರಸ್ಯಾತ್ಕಂ ರೂಪಂ ಸನಿತಾ ಸಂಭಕ್ತಾ ಭವತಿ ॥ ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ॥ ಉತಾಪಿ ಚ ನೃಣಾಂ ವೃಷ್ಟ್ಯಾದಿನೇತೄಣಾಮಿಂದ್ರಾನುಚರಾಣಾಂ ಮರುತಾಂ ಯಃ ಕವಿಃ ಸನಿತಾ । ತಮನಯದಿತಿ ॥**

॥ ಪ್ರತಿಪದಾರ್ಥ ॥

**ಸಃ**— ಇಂದ್ರನು । **ವ್ರಾಧತಃ**— ಶಕ್ತಿಯುತರಾದ ಶತ್ರುಗಳನ್ನೂ ಸಹ । **ಶವಸಾನೇಭಿಃ**— ಶಕ್ತಿಯುತವಾದ ಆಯುಧಗಳಿಂದ । **ಅಸ್ಯ** - ಕೆಳಕ್ಕೆ ಬೀಳಿಸುತ್ತಾನೆ । **ಕೃಪಣೇ** — ಸ್ತುತಿಕರ್ತನಾದ । **ಕುತ್ಸಾಯ**— ಕುತ್ಸನಿಗಾಗಿ । **ಶುಷ್ಣಂ**— ಶೋಷಕನಾದ ಶುಷ್ಣಾಸುರನನ್ನು । **ಪರಾದಾತ್**— ಸೀಳಿಹಾಕಿದನು । **ಯಃ**— ಯಾವ ಉಶನಸ್ಸು । **ಅಸ್ಯ**— ಇಂದ್ರನ । **ಉತ**— ಮತ್ತು । **ನೃಣಾಂ**— ಮರುತ್ತುಗಳ । **ಅತ್ಕಂ**— ರೂಪವನ್ನು । **ಸನಿತಾ**— ಸ್ತುತಿಗಳಿಂದ ಸತ್ಕರಿಸಿದನೋ ಅಂತಹ । **ಶಸ್ಯಮಾನಂ**— ಸ್ತುತಿಕರ್ತನಾದ । **ಕವಿಂ**— ಉಶನಸ್ಸಿಗೆ । **ಅಯಂ**— ಇಂದ್ರನು । **ಅನಯತ್**— ಶತ್ರುಗಳನ್ನು ವಶವಾಗುವಂತೆ ಮಾಡಿದನು

॥ ಭಾವಾರ್ಥ ॥

ಇಂದ್ರನು ಶಕ್ತಿಯುತರಾದ ಶತ್ರುಗಳನ್ನೂ ಸಹ ತನ್ನ ಶಕ್ತಿಯುತವಾದ ಆಯುಧಗಳಿಂದ ಕೆಳಕ್ಕೆ ಬೀಳಿಸುತ್ತಾನೆ. ಸ್ತುತಿಕರ್ತನಾದ ಕುತ್ಸನಿಗಾಗಿ ಶೋಷಕನಾದ ಶುಷ್ಣಾಸುರನನ್ನು ಸೀಳಿಹಾಕಿಸಿದನು. ಯಾವ ಉಶನಸ್ಸು ಇಂದ್ರನ ಮತ್ತು ಅವನ ಅನುಚರರಾದ ಮರುತ್ತುಗಳ ರೂಪವನ್ನು ತನ್ನ ಸ್ತುತಿಗಳಿಂದ ಸಂಸ್ಕರಿಸಿದನೋ ಅಂತಹ ಸ್ತುತಿಕರ್ತನಾದ ಉಶನಸ್ಸಿಗೆ ಇಂದ್ರನು ಶತ್ರುಗಳೆಲ್ಲ ವಶವಾಗುವಂತೆ ಮಾಡಿದನು.

English Translation

Let him overthrow the migthy with powerful (weapons); he destroyed Shushna for the sake of the liberal Kutsa; he humiliated Kavi, who praised him, who was the giver of form to Indra and his men.

॥ ಸಂಹಿತಾಪಾಠಃ ॥

ಅಯಂ ದಶಸ್ಯನ್ನರ್ಯೇಭಿರಸ್ಯ ದಸ್ಮೋ ದೇವೇಭಿರ್ವರುಣೋ ನ ಮಾಯೀ ।
ಅಯಂ ಕನೀನ ಋತುಪಾ ಅವೇದ್ಯಮಿಮೀತಾರರುಂ ಯಶ್ಚತುಷ್ಪಾತ್ ॥೧೦॥

॥ ಪದಪಾಠಃ ॥

[illegible] ನರ್ಯೇಭಿಃ । ಅಸ್ಯ । ದಸ್ಮಃ । ದೇವೇಭಿಃ । ವರುಣಃ । ನ । ಮಾಯೀ ।
ಅಯಂ । ಕನೀನಃ । ಋತುऽಪಾಃ । ಅವೇದಿ । ಅಮಿಮೀತ । ಅರರುಂ । ಯಃ । ಚತುಃऽಪಾತ್ ॥ ೧೦ ॥

॥ ಸಾಯಣಭಾಷ್ಯಂ ॥

**ಅಯಮಿಂದ್ರೋ ದಶಸ್ಯನ್ ಸ್ತೋತೃಭ್ಯೋ ಧನಂ ಪ್ರಯಚ್ಛನ್ । ದಶಸ್ಯತಿರ್ದಾನಕರ್ಮಾ । ನರ್ಯೇಭಿರ್ನರ್ಯೈರ್ನೃಹಿತೈರ್ಮರುದ್ಭಿರಸ್ಯ ಅಸ್ಯತಿ ॥ ಛಾಂದಸಸ್ತಿಪೋ ಲೋಪಃ । ಯದ್ವಾ । ವ್ಯತ್ಯಯೇನ ಲೋಣ್ಮಧ್ಯಮಃ ॥ ತಥಾ ದೇವೇಭಿರ್ದ್ಯೋತಮಾನೈಃ ಸ್ವತೇಜೋಭಿರ್ದಸ್ಮೋ ದರ್ಶನೀಯೋ ವರುಣೋ ನ ವರುಣ ಇವ । ವರುಣಸ್ತಮೋವಾರಕ ಆದಿತ್ಯೋ ವರುಣ ಏವ ವಾ । ಸ ಇವ ಮಾಯೀ ಮಾಯಾವಾನ್ । ತಥಾಯಂ ಕನೀನಃ ಕಮನೀಯ ಋತುಪಾ ಋತೌ ಪಾತಾವೇದಿ । ಅಜ್ಞಾಯಿ । ತಥಾರರುಮಸುರಮೇತನ್ನಾಮಾನಮಮಿಮೀತ । ಅಮಿನಾತ್ । ಯೋಽರರುಶ್ಚತುಷ್ಪಾತ್ ಪಾದಚತುಷ್ಟಯೋಪೇತಃ ॥ ಮೀಙ್ ಹಿಂಸಾಯಾಂ । ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ ॥**

॥ ಪ್ರತಿಪದಾರ್ಥ ॥

**ಅಯಂ**— ಈ ಇಂದ್ರನು । **ದಶಸ್ಯನ್**—ಸ್ತೋತೃಗಳಿಗೆ ಧನವನ್ನು ಕೊಡಲಿಚ್ಛಿಸುತ್ತ । **ನರ್ಯೇಭಿಃ**—ಮರುತ್ತುಗಳೊಡನೆ । **ಅಸ್ಯ**—ಬರುತ್ತಾನೆ । **ದೇವೇಭಿಃ**—ತನ್ನ ಪ್ರಭೆಗಳೊಡನೆ । **ದಸ್ಮಃ**—ದರ್ಶನೀಯನಾಗಿ । **ವರುಣೋ ನ**—ವರುಣನಂತೆ । **ಮಾಯೀ**—ಶಕ್ತಿಯುತನಾದ । **ಅಯಂ**—ಇಂದ್ರನು । **ಕನೀನಃ**—ಆಕರ್ಷಕವಾದ ರೂಪವುಳ್ಳವನಾಗಿ । **ಋತುಪಾಃ**—ಆಯಾ ಋತುಗಳಲ್ಲಿ ರಕ್ಷಿಸತಕ್ಕವನೆಂಬುದಾಗಿ । **ಅವೇದಿ**—ತಿಳಿಯಲ್ಪಡುತ್ತಾನೆ । **ಯಃ**—ಯಾವ ಅರರುವು । **ಚತುಷ್ಪಾತ್**—ನಾಲ್ಕು ಕಾಲುಗಳುಳ್ಳವನೋ ಅಂತಹ । **ಅರರುಂ**—ಅರರುವೆಂಬ ಅಸುರನನ್ನು । **ಅಮಿಮೀತ**—ಹಿಂಸಿಸಿದ್ದಾನೆ.

॥ ಭಾವಾರ್ಥ ॥

ಈ ಇಂದ್ರನು ಸ್ತೋತೃಗಳಿಗೆ ಧನವನ್ನು ಕೊಡಲಿಚ್ಛಿಸುತ್ತ ಮರುತ್ತುಗಳೊಡನೆ ಬರುತ್ತಾನೆ. ತನ್ನ ಪ್ರಭೆಗಳೊಡನೆ ದರ್ಶನೀಯನಾಗಿ ವರುಣನಂತೆ ಶಕ್ತಿಯುತನಾದ ಇಂದ್ರನು ಆಕರ್ಷಕವಾದ ರೂಪವುಳ್ಳವನಾಗಿ ಆಯಾ ಋತುಗಳಲ್ಲಿ ರಕ್ಷಿಸತಕ್ಕವನೆಂಬುದಾಗಿ ಜನರಿಂದ ತಿಳಿಯಲ್ಪಡುತ್ತಾನೆ. ನಾಲ್ಕುಕಾಲುಗಳುಳ್ಳ ಅರರುವೆಂಬ ಅಸುರನನ್ನು ಇಂದ್ರನು ಹಿಂಸಿಸಿದ್ದಾನೆ.

## English Translation.

Bountiful (to his worshippers) with his (Maruts) friendly to men wonderful with his brilliancies, having magical power liko Varuna, he was known as desirable, protecting the seasons, he destroyed Araru, who was four-footed.

॥ ಸಂಹಿತಾಪಾಠಃ ॥

**ಅಸ್ಯ ಸ್ತೋಮೇಭಿರೌಶಿಜ ಋಜಿಶ್ವಾ ವ್ರಜಂ ದರಯದ್ವೃಷಭೇಣ ಪಿಪ್ರೋಃ ।**

|| ಪದಪಾಠಃ ||

ಅಸ್ಯ | ಸ್ತೋಮೇಭಿಃ | ಔಶಿಜಃ | ಋಜಿಶ್ವಾ | ವ್ರಜಂ | ದರಯತ್ | ವೃಷಭೇಣ | ಪಿಪ್ರೋಃ |

ಸುತ್ವಾ | ಯತ್ | ಯಜತಃ | ದೀದಯತ್ | ಗೀಃ | ಪುರಃ | ಇಯಾನಃ | ಅಭಿ | ವರ್ಪಸಾ | ಭೂತ್||೧೧||

|| ಸಾಯಣಭಾಷ್ಯಂ ||

ಅಸ್ಯೇಂದ್ರಸ್ಯ ಸ್ತೋಮೇಭಿಃ ಸ್ತೋತ್ರೈರೌಶಿಜ ಉಶಿಜಃ ಪುತ್ರ ಋಜಿಶ್ವೈತನ್ನಾಮಾ ವೃಷಭೇಣ ವಜ್ರೇಣ ವೃಷಭೇಣ ವಾ ಯುಕ್ತಂ ವ್ರಜಂ ಗೋಷ್ಠಂ ಪಿಪ್ರೋರೇತನ್ನಾಮಕಸ್ಯಾಸುರಸ್ಯ ಸಂಬಂಧಿನಂ ತೇನಾಪಹೃತ್ಯ ಪಾಲಿತಂ ದರಯತ್ | ಅದಾರಯತ್ | ಯದ್ಯದಾ ಸುತ್ವಾ ಸೋಮಸ್ಯ ಸೋತಾ || ಸುಯಜೋರ್ಙ್ವನಿಬಿತಿ ವನಿಪ್ | ಹ್ರಸ್ವಸ್ಯ ಪಿತೀತಿ ತುಕ್ || ಯಜತೋ ಯಷ್ಟಾಶಿಜೋ ಗೀಃ ಸ್ತುತಿವಾಚೋ ದೀದಯತ್ ದೀಪಿತವಾನ್ | ತಥಾ ಯದ್ಯದೇಯಾನೋ ಗಚ್ಛನ್ ಪುರಃ ಶತ್ರುಪುರಾಣಿ | ಯದ್ವಾ | ಪುರಃ ಪುರ ಇವ ಸಂಘೀಭೂತಾನಿ ಪಾಪಾನಿ | ಅಭಿ ಭೂತ್ | ಅಭಿಭವತಿ | ಕೇನ ಸಾಧನೇನ | ವರ್ಪಸಾ | ರೂಪನಾಮೈತತ್ | ರೂಪೇಣೇಂದ್ರಾನುಗೃಹೀತೇನ | ಯದ್ಯೈವಮಕರೋತ್ ತದಾ ವ್ರಜಂ ದರಯದಿತಿ ಸಂಬಂಧಃ ||

|| ಪ್ರತಿಪದಾರ್ಥ ||

ಅಸ್ಯ—ಇಂದ್ರನ | ಸ್ತೋಮೇಭಿಃ—ಸ್ತೋತ್ರಗಳಿಂದ | ಔಶಿಜಃ—ಉಶಿಜಪುತ್ರನಾದ |ಋಜಿಶ್ವಾ-ಋಜಿಶ್ವನು | ವೃಷಭೇಣ—ಶಕ್ತಿಯುತವಾದ ವಜ್ರಾಯುಧದಿಂದ | ಪಿಪ್ರೋಃ—ಪಿಪ್ರುವಿನ | ವ್ರಜಂ—ಕೊಟ್ಟಿಗೆಯನ್ನು | ದರಯತ್—ಸೀಳಿಹಾಕಿದನು | ಸುತ್ವಾ—ಸೋಮವನ್ನು ಹಿಂಡುವವನೂ | ಯಜತಃ—ಯಜ್ಞಕರ್ತನೂ ಆದ ಋಜಿಶ್ವನು | ಯತ್—ಯಾವಾಗ | ಗೀಃ—ಸ್ತುತಿವಾಕ್ಯಗಳನ್ನು | ದೀದಯತ್—ಪ್ರಕಾಶಗೊಳಿಸಿದನೋ ಆಗ | ಇಯಾನಃ—ಮುಂದುವರಿಯುತ್ತ | ಪುರಃ—ಶತ್ರುಪಟ್ಟಣಗಳನ್ನು | ವರ್ಪಸಾ—ಇಂದ್ರನಿಂದ ಅನುಗ್ರಹೀತವಾದ ತನ್ನ ರೂಪದಿಂದ | ಅಭಿಭೂತ್—ವಶಪಡಿಸಿಕೊಂಡನು.

|| ಭಾವಾರ್ಥ ||

ಉಶಿಜಪುತ್ರನಾದ ಋಜಿಶ್ವನು ಇಂದ್ರನನ್ನು ಸ್ತುತಿಸಿ ಅವನ ವಜ್ರಾಯುಧದ ಸಹಾಯದಿಂದ ಪಿಪ್ರುವಿನ ಕೊಟ್ಟಿಗೆಯನ್ನು ಸೀಳಿಹಾಕಿದನು. ಯಾವಾಗ ಸೋಮವನ್ನು ಹಿಂಡುವವನೂ, ಯಜ್ಞಕರ್ತನೂ ಆದ ಋಜಿಶ್ವನು ಸ್ತುತಿವಾಕ್ಯಗಳಿಂದ ಇಂದ್ರನನ್ನು ಸ್ತುತಿಸಿದನೋ, ಆಗ ಮುಂದುವರೆಯುತ್ತ ಇಂದ್ರನಿಂದ ಅನುಗ್ರಹೀತನಾದ ತನ್ನ ರೂಪದಿಂದ ಶತ್ರುಪಟ್ಟಣಗಳನ್ನು ತನ್ನ ವಶಪಡಿಸಿಕೊಂಡನು.

## English Translation

Rijishwan, the son of Ushija with Indra's praises shattered the cow-pen of Pipru with the thunderbolt; when having expressed (the Soma), the

venerable sage recited his praises, (Indra) proceeding against the cities (of the enemy) triumphed with his body.

॥ ಸಂಹಿತಾಪಾಠಃ ॥

ಏವಾ ಮಹೋ ಅಸುರ ವಕ್ಷಥಾಯ ವಮ್ರಕಃ ಪಡ್ಭಿರುಪ ಸರ್ಪದಿಂದ್ರಂ ।
ಸ ಇಯಾನಃ ಕರತಿ ಸ್ವಸ್ತಿಮಸ್ಮಾ ಇಷಮೂರ್ಜಂ ಸುಕ್ಷಿತಂ ವಿಶ್ವಮಾಭಾಃ ॥

॥ ಪದಪಾಠಃ ॥

ಏವ । ಮಹಃ । ಅಸುರ । ವಕ್ಷಥಾಯ । ವಮ್ರಕಃ । ಪಟ್ಽಭಿಃ । ಉಪ । ಸರ್ಪತ್ । ಇಂದ್ರಂ ।
ಸಃ । ಇಯಾನಃ । ಕರತಿ । ಸ್ವಸ್ತಿಂ । ಅಸ್ಮೈ । ಇಷಂ । ಊರ್ಜಂ । ಸುಽಕ್ಷಿತಿಂ । ವಿಶ್ವಂ । ಆ । ಅಭಾರಿತ್ಯಭಾಃ ॥ ೧೨ ॥

॥ ಸಾಯಣಭಾಷ್ಯಂ ॥

ಅನಯಾ ಸ್ತುತಿಮುಪಸಂಹೃತ್ಯಾಭಿಮತಂ ವಮ್ರಕಃ ಪ್ರಾರ್ಥಯತೇ । ಹೇ ಅಸುರ ಬಲವನ್ನಿಂದ್ರ ತ್ವಾಮೇವೈವಮುಕ್ತಪ್ರಕಾರೇಣ ಮಹೋ ಮಹತೋ ಹವಿಷಃ ಸ್ತೋತ್ರಸ್ಯ ವಾ ವಕ್ಷಥಾಯ ವಹನಾಯ ಮಹತಃ ಸ್ವರ್ಗಾದೇಃ ಪ್ರಾಪಣಾಯ ವಾ ಪಡ್ಭಿಃ ಪಾದೈರುಪ ಸರ್ಪತ್ । ಉಪಾಗಮತ್ । ಸ ಇಯಾನಃ ಉಪಾಗಮ್ಯಮಾನಃ ಸನ್ ಕರತಿ ಕರೋತು ಸ್ವಸ್ತಿಮವಿನಾಶಮಸ್ಮೈ ವಮ್ರಕಾಯ । ತಥೇಷಮನ್ನಮೂರ್ಜಂ ರಸಂ ಸುಕ್ಷಿತಿಂ ಸುನಿವಾಸಂ ಸಮ್ಯಗ್ವಿಶ್ವಂ ಸರ್ವಮಾಭಾಃ । ಆಹರತು ॥

॥ ಪ್ರತಿಪದಾರ್ಥ ॥

**ಅಸುರ**—ಶಕ್ತಿಯುತನಾದ ಎಲೈ ಇಂದ್ರನೇ । **ಏವ** – ಈ ರೀತಿ । **ವಮ್ರಕಃ**—ವಮ್ರಕನು । **ಮಹಃ**—ಮಹತ್ತಾದ ಹವಿಸ್ಸಿನ । **ವಕ್ಷಥಾಯ** – ಪ್ರಾಪ್ತಿಗಾಗಿ । **ಪಡ್ಭಿಃ**—ಪಾದಗಳಿಂದ । **ಇಂದ್ರಂ**—ಇಂದ್ರನನ್ನು । **ಉಪ ಸರ್ಪತ್**—ಸಮೀಪಿಸುತ್ತಾನೆ । **ಸಃ**—ಇಂದ್ರನು । **ಇಯಾನಃ**—ಸಮೀಪಿಸಲ್ಪಟ್ಟವನಾಗಿ । **ಅಸ್ಮೈ**—ಈ ವಮ್ರಕನಿಗೆ । **ಸ್ವಸ್ತಿಂ**—ಮಂಗಳವನ್ನು । **ಕರತಿ**—ಉಂಟುಮಾಡಲಿ । **ವಿಶ್ವಂ** – ಸಕಲವಾದ । **ಇಷಂ**—ಅನ್ನವನ್ನೂ । **ಊರ್ಜಂ**—ರಸವನ್ನೂ । **ಸುಕ್ಷಿತಿಂ** – ಉತ್ತಮವಾದ ವಾಸಸ್ಥಾನವನ್ನೂ । **ಆಭಾಃ**—ಒದಗಿಸಲಿ.

॥ ಭಾವಾರ್ಥ ॥

ಶಕ್ತಿಯುತನಾದ ಎಲೈ ಇಂದ್ರನೇ ಈ ರೀತಿ ವಮ್ರಕನು ಮಹತ್ತಾದ ಹವಿಸ್ಸಿನ ಪ್ರಾಪ್ತಿಗಾಗಿ ಪ್ರಭುವಾದ ನಿನ್ನನ್ನು ಪಾದಗಳಿಂದ ಸಮೀಪಿಸುತ್ತಾನೆ. ಈ ರೀತಿ ಸಮೀಪಿಸಲ್ಪಟ್ಟ ಇಂದ್ರನು ವಮ್ರಕನಿಗೆ ಮಂಗಳವನ್ನುಂಟುಮಾಡಲಿ. ಅವನಿಗೆ ಸಕಲವಾದ ಅನ್ನವನ್ನೂ, ರಸವನ್ನೂ, ಉತ್ತಮವಾದ ವಾಸಸ್ಥಾನವನ್ನೂ ಒದಗಿಸಲಿ.

## English Translation.

In this manner, O mighty (Indra), Vamraka approached Indra on foot, to bring an ample oblation. May he, being approached, grant us prosperity, may he bring us food, drink, a secure dwelling and all (good things).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ ಪದ್ಭಿಃ ಎಂಬ ಶಬ್ದಕ್ಕೆ ಸಾಯಣರು ಪಾದೈಃ—ಪಾದಗಳಿಂದ ಎಂದು ಅರ್ಥಮಾಡಿದ್ದಾರೆ. ಆದರೆ ಯಾಸ್ಕರು—

ಪದ್ಭಿಃ । ವಮ್ರಕಃ ಪದ್ಭಿರುಪಸರ್ಪದಿಂದ್ರಂ । ಪಾನೈರಿತಿ ವಾ ಸ್ಪಾಶನೈರಿತಿ ವಾ (ಸ್ಪಶನೈರಿತಿ ವಾ) ॥
(ನಿ. ೫-೩)

ಎಂದು ಹೇಳಿದ್ದಾರೆ ಎಂದರೆ ಸೋಮರಸವೇ ಮೊದಲಾದ ಪಾನಗಳಿಂದ ಅಥವಾ ಸ್ತೋತ್ರಗಳಿಂದ ಋಷಿಯು ಇಂದ್ರನನ್ನು ಸಮೀಪಿಸುವನು ಎಂದರೆ ಇಂದ್ರನನ್ನು ಪ್ರಾರ್ಥಿಸಿ ಕರೆಯುವನು ಎಂದಭಿಪ್ರಾಯವು. ಇಂದ್ರನು ಪ್ರತ್ಯಕ್ಷಗೋಚರನಲ್ಲದ ದೇವತೆಯಾದ್ದರಿಂದ ಪಾದಗಳಿಂದ ಇಂದ್ರನನ್ನು ಸಮೀಪಿಸುವನು ಎಂದು ಹೇಳುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಪಾನಯೋಗ್ಯವಾದ ಸೋಮರಸದಿಂದ ಅಥವಾ ಸ್ತೋತ್ರಗಳಿಂದ ಇಂದ್ರನನ್ನು ಪ್ರಾರ್ಥಿಸಿ ಕರೆಯುವನು ಎಂಬ ಯಾಸ್ಕರ ಅಭಿಪ್ರಾಯವೇ ಹೆಚ್ಚು ಗ್ರಾಹ್ಯವಾಗಿರುವುದು.

## ನೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

ನವಮೇಽನುವಾಕೇ ತ್ರಯೋದಶ ಸೂಕ್ತಾನಿ । ತತ್ರೇಂದ್ರ ದೃಹ್ಯೇತಿ ದ್ವಾದಶರ್ಚಂ ಪ್ರಥಮಂ ಸೂಕ್ತಂ ವಂದನಪುತ್ರಸ್ಯ ದುವಸ್ಯೋರಾರ್ಷಂ ವೈಶ್ವದೇವಂ । ದ್ವಾದಶೀ ತ್ರಿಷ್ಟುಪ್ । ಶಿಷ್ಟಾ ಜಗತ್ಯಃ । ತಥಾ ಚಾನುಕ್ರಾಂತಂ । ಇಂದ್ರ ದುವಸ್ಯುರ್ವಾಂದನೋ ವೈಶ್ವದೇವಂ ತ್ವಂತ್ಯಾ ತ್ರಿಷ್ಟುಬಿತಿ ॥ ಗತೋ ವಿನಿಯೋಗಃ ॥

ಅನುವಾದವು—೧೦ನೇ ಮಂಡಲದ ಒಂಭತ್ತನೆಯ ಅನುವಾಕದಲ್ಲಿ ಹದಿಮೂರು ಸೂಕ್ತಗಳಿರುವವು. ಅವುಗಳಲ್ಲಿ ಇಂದ್ರ ದೃಹ್ಯ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಂದನಋಷಿಯ ಪುತ್ರನಾದ ದುವಸ್ಯು ಎಂಬುವನು ಋಷಿಯು. ವಿಶ್ವೇದೇವತೆಗಳು ದೇವತೆಯು. ಈ

## ಸೂಕ್ತ—೧೦೦

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ— ೧೦೦ ॥
ಅಷ್ಟಕ—೮ ॥ ಅಧ್ಯಾಯ—೫ ॥ ವರ್ಗ—೧೬,೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೧೨ ॥
॥ ಋಷಿಃ—ದುವಸ್ಯುರ್ವಾಂದನಃ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—೧-೧೧. ಜಗತೀ । ೧೨-ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಂದ್ರ ದೃಹ್ಯ ಮಘವನ್ತ್ವಾವದಿದ್ಭುಜ ಇಹ ಸ್ತುತಃ ಸುತಪಾ ಬೋಧಿ ನೋ ವೃಧೇ ।

ದೇವೇಭಿರ್ನಃ ಸವಿತಾ ಪ್ರಾವತು ಶ್ರುತಮಾ ಸರ್ವತಾತಿಮದಿತಿಂ ವೃಣೀಮಹೇ॥

॥ ಪದಪಾಠಃ ॥

ಇಂದ್ರ । ದೃಹ್ಯ । ಮಘ್ಽವನ್ । ತ್ವಾಽವತ್ । ಇತ್ । ಭುಜೇ । ಇಹ । ಸ್ತುತಃ । ಸುತ್ಽಪಾಃ । ಬೋಧಿ । ನಃ । ವೃಧೇ ।

ದೇವೇಭಿಃ । ನಃ । ಸವಿತಾ । ಪ್ರ । ಅವತು । ಶ್ರುತಂ । ಆ । ಸರ್ವಽತಾತಿಂ । ಅದಿತಿಂ । ವೃಣೀಮಹೇ ॥೧॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮಘವನ್ಧನವನ್ ತ್ವಂ ತ್ವಾವದಿತ್ ತ್ವತ್ಸದೃಶಮೇವ ಶತ್ರುಬಲಂ ದೃಹ್ಯ ಮಾರಯ । ಕಿಮರ್ಥಂ। ಭುಜೇಽಸ್ಮಾಕಂ ಭೋಗಾಯ। ತದರ್ಥಮಿಹಾಸ್ಮಿನ್ಯಜ್ಞೇ ಸ್ತುತಃ ಸನ್ ಸುತಪಾಃ ಸುತಸ್ಯಾಭಿಷುತಸ್ಯ ಸೋಮಸ್ಯ ಪಾತಾ ಬೋಧಿ । ಬುಧ್ಯಸ್ವ। ಭವೇತ್ಯರ್ಥಃ । ಕಿಮರ್ಥಂ । ನೋಽಸ್ಮಾಕಂ ವೃಧೇ ವರ್ಧನಾಯ । ಕಿಂಚ ದೇವೇಭಿರ್ದೇವೈಃ ಸಹ ನೋಽಸ್ಮಾಕಂ ಶ್ರುತಂ ವಿಶ್ರುತಂ ಯಜ್ಞಂ ಸವಿತಾ ಸರ್ವಸ್ಯ ಸ್ವಸ್ವಕರ್ಮಸು ಪ್ರೇರಕೋ ದೇವಃ ಪ್ರಾವತು । ಪ್ರರಕ್ಷತು । ಕಿಂಚ ಸರ್ವತಾತಿಂ ॥ ಸ್ವಾರ್ಥಿಕಸ್ತಾತಿಲ್ ॥ ಸರ್ವಾಂ ಸರ್ವಾತ್ಮಿಕಾಂ। ಯದ್ವಾ। ಸರ್ವೇ ತಾಯಂತೇಽಸ್ಯಾಮಿತಿ ಸರ್ವತಾತಿಃ ॥ ಛಾಂದಸೋ ದೀರ್ಘಃ ॥ ತಾದೃಶೀಮದಿತಿಮಖಂಡನೀಯಾಂ ದೇವಮಾತರಮಾ ವೃಣೀಮಹೇ ॥

॥ ಪ್ರತಿಪದಾರ್ಥ ॥

ಮಘವನ್—ಧನವಂತನಾದ । ಇಂದ್ರ—ಎಲೈ ಇಂದ್ರನೇ । ತ್ವಾವದಿತ್—ನಿನ್ನಂತೆಯೇ ಶಕ್ತಿಯುತನಾದ ಶತ್ರುವನ್ನು । ಭುಜೇ—ನಮ್ಮ ಸುಖಕ್ಕಾಗಿ । ದೃಹ್ಯ—ನಾಶಪಡಿಸು । ಇಹ — ಈ ಯಜ್ಞದಲ್ಲಿ ।

**ಸ್ತುತಃ**—ಪ್ರಶಂಸಿತನಾದ ನೀನು | **ಸುತಪಾಃ**—ಸೋಮದ ಪಾಲಕನಾಗಿರುವುದಾಗಿ | **ನಃ**— ನಮ್ಮ | **ವೃಧೇ**—ಬೆಳವಣಿಗೆಗಾಗಿ | **ಬೋಧಿ**—ತಿಳಿ | **ಸವಿತಾ**— ಸವಿತೃವು | **ದೇವೇಭಿಃ**— ಇತರ ದೇವತೆಗಳೊಂದಿಗೆ | **ನಃ**—ನಮ್ಮ | **ಋತಂ**—ಪ್ರಸಿದ್ಧವಾದ ಯಜ್ಞವನ್ನು | **ಪ್ರಾವತು** - ರಕ್ಷಿಸಲಿ | **ಸರ್ವತಾತಿಂ**—ಸರ್ವತ್ರ ವ್ಯಾಪಿಸಿರುವ | **ಅದಿತಿಂ**—ಅದಿತಿಯನ್ನು | **ಆ ವೃಣೀಮಹೇ**—ಆದರದಿಂದ ಅಪೇಕ್ಷಿಸಿ ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ನಿನ್ನಂತೆಯೇ ಶಕ್ತಿಯುತನಾಗಿರುವ ಶತ್ರುವನ್ನು ನಮ್ಮ ಸುಖಕ್ಕಾಗಿ ನಾಶಪಡಿಸು. ಈ ಯಜ್ಞದಲ್ಲಿ ಪ್ರಶಂಸಿತನಾದ ನೀನು ಸೋಮಪಾಲಕನಾಗಿರುವುದಾಗಿ ನಮ್ಮ ವೃದ್ಧಿಗಾಗಿ ತಿಳಿ. ಸವಿತೃವು ಇತರ ದೇವತೆಗಳೊಂದಿಗೆ ಕೂಡಿ ನಮ್ಮ ಪ್ರಸಿದ್ಧವಾದ ಯಜ್ಞವನ್ನು ರಕ್ಷಿಸಲಿ ಸರ್ವತ್ರ ವ್ಯಾಪಿಸಿರುವ ಅದಿತಿಯನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

Consume, affluent Indra, (the foe that is) like you (in might); praised on this occasion, do you who are the drinker of the libation be favourable to our advancement. May Savitri, with the gods, defend our sacrifice; we long for the universal Aditi.

॥ ಸಂಹಿತಾಪಾಠಃ ॥

ಭರಾಯ ಸು ಭರತ ಭಾಗಮೃತ್ವಿಯಂ ಪ್ರ ವಾಯವೇ ಶುಚಿಪೇ ಕ್ರಂದ-
ದಿಷ್ಟಯೇ |
ಗೌರಸ್ಯ ಯಃ ಪಯಸಃ ಪೀತಿಮಾನಶ ಆ ಸರ್ವತಾತಿಮದಿತಿಂ ವೃಣೀಮಹೇ॥

॥ ಪದಪಾಠಃ ॥

ಭರಾಯ | ಸು | ಭರತ | ಭಾಗಂ | ಋತ್ವಿಯಂ | ಪ್ರ | ವಾಯವೇ | ಶುಚಿಽಪೇ | ಕ್ರಂದತ್ಽಇಷ್ಟಯೇ |
ಗೌರಸ್ಯ | ಯಃ | ಪಯಸಃ | ಪೀತಿಂ | ಆನಶೇ | ಆ | ಸರ್ವಽತಾತಿಂ | ಅದಿತಿಂ | ವೃಣೀಮಹೇ ॥ ೨ ॥

॥ ಸಾಯಣಭಾಷ್ಯಂ ॥

ಭರಾಯ ಸಂಗ್ರಾಮಕಾರಿಣೇ ಸರ್ವೇಷಾಂ ಪೋಷಕಾಯ ವೇಂದ್ರಾಯರ್ತ್ವಿಯಂ ಕಾಲೇ ಜಾತಂ ಪ್ರಾಪ್ತಕಾಲಂ ಭಾಗಂ ಸು ಭರತ | ಸುಷ್ಠು ಸಂಪಾದಯತ ಹೇ ಋತ್ವಿಜಃ | ತಥಾ ಶುಚಿಪೇ

ಶುದ್ಧಸ್ಯ ಸೋಮಸ್ಯ ಪಾತ್ರೇ ಕ್ರಂದದಿಷ್ಟಯೇ ಶಬ್ದಿತಗಮನಾಯ । ವಾಯೋಃ ಶೀಘ್ರಗಮನೇ ಹಿ ಶಬ್ದಃ ಪ್ರತ್ಯಕ್ಷಃ । ತಾದೃಶಾಯ ವಾಯವೇ ದೇವಾಯ ಪ್ರ ಭರತ ಭಾಗಮಿತಿ ಶೇಷಃ । ಯೋ ದೇವೋ ಗೌರಸ್ಯ ಗೌರವರ್ಣಸ್ಯ ಪಶೋಃ ಪಯಸಃ ಪೀತಿಂ ಪಾನಮಾನಶೇ ಪ್ರಾಪ್ನೋತಿ ತಸ್ಮೈ ವಾಯವೇ । ಶಿಷ್ಟಮುಕ್ತಂ ॥

॥ ಪ್ರತಿಪದಾರ್ಥ ॥

ಭರಾಯ—ಎಲ್ಲರಿಗೂ ಪೋಷಕನಾದ ಇಂದ್ರನಿಗೆ । ಋತ್ವಿಯಂ—ಆಯಾ ಕಾಲಕ್ಕೆ ಯೋಗ್ಯವಾದ । ಭಾಗಂ—ಯಜ್ಞಭಾಗವನ್ನು । ಸು—ಅತಿಶಯವಾಗಿ । ಭರತ—ಸಂಪಾದಿಸಿ ಅರ್ಪಿಸಿರಿ । ಯಃ—ಯಾವ ವಾಯುವು । ಗೌರಸ್ಯ—ಗೌರವರ್ಣದ ಗೋವಿನ । ಪಯಸಃ—ಕ್ಷೀರದ । ಪೀತಿಂ—ಪಾನವನ್ನು । ಆನಶೇ—ಹೊಂದುವನೋ ಅಂತಹ । ಶುಚಿಪೇ—ಶುದ್ಧವಾದ ಸೋಮವನ್ನು ಪಾನಮಾಡುವವನೂ । ದೇವಾಯ—ದೇವತಾತ್ಮನೂ । ಕ್ರಂದದಿಷ್ಟಯೇ—ಶಬ್ದಮಾಡುವ ಗಮನವುಳ್ಳವನೂ ಆದ । ವಾಯವೇ—ವಾಯುವಿಗೆ । ಪ್ರ (ಭರತ)—ಯಜ್ಞಭಾಗವನ್ನು ಅರ್ಪಿಸಿರಿ । ಸರ್ವತಾತಿಂ—ಸರ್ವ ವ್ಯಾಪಕಳಾದ । ಅದಿತಿಂ—ಅದಿತಿಯನ್ನು । ಆ ವೃಣೀಮಹೇ—ಅಪೇಕ್ಷಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲ್ಲರಿಗೂ ಪೋಷಕನಾದ ಇಂದ್ರನಿಗೆ ಆಯಾಕಾಲಕ್ಕೆ ಯೋಗ್ಯವಾದ ಯಜ್ಞಭಾಗವನ್ನು ಅತಿಶಯವಾಗಿ ಅರ್ಪಿಸಿರಿ. ಯಾವ ವಾಯುವು ಗೌರವರ್ಣದ ಗೋವಿನ ಕ್ಷೀರದ ಪಾನವನ್ನು ಬಯಸುವನೋ, ಅಂತಹ ಶುದ್ಧವಾದ ಸೋಮವನ್ನು ಪಾನಮಾಡುವವನೂ, ದೇವತಾತ್ಮನೂ, ಶಬ್ದಮಾಡುವ ಗಮನವುಳ್ಳವನೂ ಆದ ವಾಯುವಿಗೆ ಯಜ್ಞಭಾಗವನ್ನು ಅರ್ಪಿಸಿರಿ. ಸರ್ವವ್ಯಾಪಕಳಾದ ಅದಿತಿಯನ್ನು ಅಪೇಕ್ಷಿಸಿ ಕರೆಯುತ್ತೇವೆ.

## English Translation.

Offer to (Indra) the cherisher (all) the share suited to the season; (offer it) to Vayu, the drinker of the pure (Soma), who clamours as he travels, who obtains a draught of white milk; we long for the universal Aditi.

॥ ಸಂಹಿತಾಪಾಠಃ ॥

ಆ ನೋ ದೇವಃ ಸವಿತಾ ಸಾವಿಷದ್ವಯ ಋಜೂಯತೇ ಯಜಮಾನಾಯ ಸುನ್ವತೇ ।

ಯಥಾ ದೇವಾನ್ಪ್ರತಿಭೂಷೇಮ ಪಾಕವದಾ ಸರ್ವತಾತಿಮದಿತಿಂ ವೃಣೀಮಹೇ ॥ ೩ ॥

॥ ಪದಪಾಠಃ ॥

ಆ । ನಃ । ದೇವಃ । ಸವಿತಾ । ಸಾವಿಷತ್ । ವಯಃ । ಋಜುಽಯತೇ । ಯಜಮಾನಾಯ । ಸುನ್ವತೇ ।

ಯಥಾ । ದೇವಾನ್ । ಪ್ರತಿಽಭೂಷೇಮ । ಪಾಕ್ಯವತ್ । ಆ । ಸರ್ವಽತಾತಿಂ । ಅದಿತಿಂ । ವೃಣೀಮಹೇ॥೩॥

॥ ಸಾಯಣಭಾಷ್ಯಂ ॥

ಸವಿತಾ ಸರ್ವಸ್ಯ ಪ್ರೇರಕಃ ಸೂರ್ಯೋಽ ನೋಽಸ್ಮಾಕಂ ಸಂಬಂಧಿನ ಋಜೂಯತ ಋಜುಕಾಮಾಯ ಸುನ್ವತೇಽಭಿಷವಂ ಕುರ್ವತೇ ಯಜಮಾನಾಯ ವಯೋಽನ್ನಂ ಪಾಕವತ್ ಪಾಕೋಪೇತಂ । ವ್ಯವಹಿತಮಪ್ಯೇತದತ್ರ ಸಂಬಧ್ಯತೇ । ಆ ಸಾವಿಷತ್ । ಅಭಿಮುಖ್ಯೇನ ಪ್ರಸೌತಿ ॥ ಸೌತೇರ್ಣ್ಯಂತಾಲ್ಲೇಟಿ ರೂಪಂ ॥ ಯಥಾ ಯೇನ ಪ್ರಕಾರೇಣ ದೇವಾನ್ಪ್ರತಿಭೂಷೇಮ ಪ್ರತಿಭವೇಮ ॥ ಭವತೇರ್ಲಿಙಿ ಸಿಪ್ಯಪಾ । ದ್ವಿವಿಕರಣತಾ ॥ ಯದ್ವಾ ॥ ಭೂಷ ಅಲಂಕಾರೇ । ಭೌವಾದಿಕಃ ॥ ಭೂಷಯೇಮೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಥಾ**—ಯಾವ ಪ್ರಕಾರವಾಗಿ । **ದೇವಾನ್**—ದೇವತೆಗಳನ್ನು । **ಪ್ರತಿಭೂಷೇಮ**—ನಾವು ಅಲಂಕರಿಸುವೆವೋ ಹಾಗೆ (ಅಥವಾ ಅವರ ಅನುಗ್ರಹಕ್ಕೆ ಪಾತ್ರರಾಗುವೆವೋ ಹಾಗೆ) । **ದೇವಾಃ**—ದೇವತಾತ್ಮನಾದ । **ಸವಿತಾ**—ಸವಿತೃದೇವನು । **ಋಜೂಯತೇ**—ಉತ್ತಮವಾದ ವ್ಯವಹಾರವುಳ್ಳವನೂ । **ಸುನ್ವತೇ**—ಸೋಮವನ್ನು ಹಿಂಡುವವನೂ । **ನಃ**—ನಮಗೆ ಸೇರಿದವನೂ ಆದ । **ಯಜಮಾನಾಯ**—ಯಜಮಾನನಿಗೆ । **ಪಾಕವತ್**—ಪಕ್ವವಾದ (ರಸಾದಿಗಳಿಂದ ಅಲಂಕೃತವಾದ) । **ವಯಃ**—ಅನ್ನವನ್ನು । **ಆ ಸಾವಿಷತ್**—ಒದಗಿಸಲಿ । **ಸರ್ವತಾತಿಂ**—ಸರ್ವಾತ್ಮಕಳಾದ । **ಅದಿತಿಂ**—ಅದಿತಿಯನ್ನು । **ಆ ವೃಣೀಮಹೇ**—ಅಪೇಕ್ಷಿಸಿ ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಯಾವ ಪ್ರಕಾರವಾಗಿ ನಾವು ದೇವತೆಗಳ ಅನುಗ್ರಹಕ್ಕೆ ಪಾತ್ರರಾಗುವೆವೋ, ಹಾಗೆ ದೇವತಾತ್ಮನಾದ ಸವಿತೃದೇವನು ಉತ್ತಮವಾದ ವ್ಯವಹಾರವುಳ್ಳವನೂ, ಸೋಮವನ್ನು ಹಿಂಡುವವನೂ, ನಮಗೆ ಸೇರಿದವನೂ ಆದ ಯಜಮಾನನಿಗೆ ಪಕ್ವವಾದ ಮತ್ತು ರಸಾದಿಗಳಿಂದ ಅಲಂಕೃತವಾದ (ಸಿದ್ಧವಾದ) ಅನ್ನವನ್ನು ಒದಗಿಸಲಿ. ಸರ್ವಾತ್ಮಿಕೆಯಾದ ಅದಿತಿಯನ್ನು ನಾವು ಅಪೇಕ್ಷಿಸಿ ಪ್ರಾರ್ಥಿಸಿಕರೆಯುತ್ತೇವೆ

## English Translation.

May the divine Savitri generate well-dressed food for our sincere yajamana as he offers the libation, so that we may be in good favour with the gods; we long for the universal Aditi.

॥ ಸಂಹಿತಾಪಾಠಃ ॥

ಇಂದ್ರೋ ಅಸ್ಮೇ ಸುಮನಾ ಅಸ್ತು ವಿಶ್ವಹಾ ರಾಜಾ ಸೋಮಃ ಸುವಿತ-
ಸ್ಯಾಧ್ಯೇತು ನಃ ।
ಯಥಾಯಥಾ ಮಿತ್ರಧಿತಾನಿ ಸಂದಧುರಾ ಸರ್ವತಾತಿಮದಿತಿಂ ವೃಣೀ-
ಮಹೇ ॥ ೪ ॥

॥ ಪದಪಾಠಃ ॥

ಇಂದ್ರಃ । ಅಸ್ಮೇ ಇತಿ । ಸುಽಮನಾಃ । ಅಸ್ತು । ವಿಶ್ವಹಾ । ರಾಜಾ । ಸೋಮಃ । ಸುವಿತಸ್ಯ । ಅಧಿ ।
ಏತು । ನಃ ।

ಯಥಾಽಯಥಾ । ಮಿತ್ರಽಧಿತಾನಿ । ಸಂಽದಧುಃ । ಆ । ಸರ್ವಽತಾತಿಂ । ಅದಿತಿಂ । ವೃಣೀಮಹೇ ॥ ೪ ॥

॥ ಸಾಯಣಭಾಷ್ಯಂ ॥

ಇಂದ್ರೋ ದೇವೋಽಸ್ಮೇ ಅಸ್ಮಾಕಂ ಸುಮನಾಃ ಸುಮನಸ್ಕೋಽನುಗ್ರಹಚೇತಾ ಅಸ್ತು। ಭವತು।
ವಿಶ್ವಹಾ ಸರ್ವೇಷ್ವಪ್ಯಹಃಸು । ರಾಜಾ ಸೋಮಶ್ಚ ನೋಽಸ್ಮಾಕಂ ಸುವಿತಸ್ಯ ಸುವಿತಂ ಸ್ತೋತ್ರಮಧ್ಯೇತು
ಅಧಿಗಚ್ಛತು । ಯಥಾಯಥಾ ಯೇನ ಯೇನ ಪ್ರಕಾರೇಣಾಸ್ಮಾಕಂ ಮಿತ್ರಧಿತಾನಿ ಮಿತ್ರನಿಹಿತಾನಿ ಧನಾನಿ
ಸಂದಧುಃ ತಥಾಧಿಗಚ್ಛತು ಸೋಮಃ । ತಥೇಂದ್ರೋಽಪಿ ಸುಮನಾ ಅಸ್ತ್ವಿತಿ ಸಮನ್ವಯಃ ॥

॥ ಪ್ರತಿಪದಾರ್ಥ ॥

ಯಥಾಯಥಾ--ಯಾವಯಾರೀತಿಯಲ್ಲಿ (ದೇವತೆಗಳು) । ಮಿತ್ರಧಿತಾನಿ—ಮಿತ್ರರಂತೆ ಹಿತಕರವಾದ
ಧನಗಳನ್ನು । ಸಂದಧುಃ—ಒದಗಿಸುವರೋ ಹಾಗೆ । ಇಂದ್ರಃ—ಇಂದ್ರನು । ಅಸ್ಮೇ—ನಮ್ಮಲ್ಲಿ । ವಿಶ್ವಹಾ—
ಸಕಲದಿನಗಳಲ್ಲಿಯೂ । ಸುಮನಾಃ—ಅನುಗ್ರಹಬುದ್ಧಿಯುಳ್ಳವನಾಗಿ । ಅಸ್ತು—ಇರಲಿ । ರಾಜಾ—ಪ್ರಭುವಾದ।
ಸೋಮಃ—ಸೋಮನೂ । ನಃ—ನಮ್ಮ । ಸುವಿತಸ್ಯ—ಸ್ತೋತ್ರವನ್ನು । ಅಧ್ಯೇತು—ಸ್ವೀಕರಿಸಲಿ ।
ಸರ್ವತಾತಿಂ—ಸರ್ವಾತ್ಮಕಳಾದ । ಅದಿತಿಂ—ಅದಿತಿಯನ್ನು । ಆ ವೃಣೀಮಹೇ—ಅಪೇಕ್ಷಿಸುತ್ತೇವೆ ।

॥ ಭಾವಾರ್ಥ ॥

ಯಾವ ರೀತಿಯಲ್ಲಿ ನಮಗೆ ಮಿತ್ರರಂತೆ ಹಿತಕರವಾದ ಧನಗಳನ್ನು ಇಂದ್ರ ಸೋಮದೇವರು ಒದಗಿಸುವರೋ,
ಹಾಗೆ ಇಂದ್ರನು ನಮ್ಮಲ್ಲಿ ಸಕಲದಿನಗಳಲ್ಲಿಯೂ ಅನುಗ್ರಹಬುದ್ಧಿಯುಳ್ಳವನಾಗಿರಲಿ. ಪ್ರಭುವಾದ ಸೋಮನೂ
ನಮ್ಮ ಸ್ತುತಿಯನ್ನು ಸ್ವೀಕರಿಸಲಿ. ಸರ್ವಾತ್ಮಕಳಾದ ಅದಿತಿಯನ್ನು ನಾವು ಅಪೇಕ್ಷಿಸುತ್ತೇವೆ.

English Translation

May Indra be favourably disposed towards us every day, may the royal Soma accept our praise, so that they may bestow upon us friendly treasures; we long for the universal Aditi.

॥ ಸಂಹಿತಾಪಾಠಃ ॥

ಇಂದ್ರ ಉಕ್ಥೇನ ಶವಸಾ ಪರುರ್ದಧೇ ಬೃಹಸ್ಪತೇ ಪ್ರತರೀತಾಸ್ಯಾಯುಷಃ ।
ಯಜ್ಞೋ ಮನುಃ ಪ್ರಮತಿರ್ನಃ ಪಿತಾ ಹಿ ಕಮಾ ಸರ್ವತಾತಿಮದಿತಿಂ ವೃಣೀಮಹೇ ॥ ೫ ॥

॥ ಪದಪಾಠಃ ॥

ಇಂದ್ರಃ । ಉಕ್ಥೇನ । ಶವಸಾ । ಪರುಃ । ದಧೇ । ಬೃಹಸ್ಪತೇ । ಪ್ರऽತರೀತಾ । ಅಸಿ । ಆಯುಷಃ ।
ಯಜ್ಞಃ । ಮನುಃ । ಪ್ರऽಮತಿಃ । ನಃ । ಪಿತಾ । ಹಿ । ಕಂ । ಆ । ಸರ್ವऽತಾತಿಂ । ಅದಿತಿಂ । ವೃಣೀಮಹೇ ॥ ೫ ॥

॥ ಸಾಯಣಭಾಷ್ಯಂ ॥

ಅಯಮಿಂದ್ರ ಉಕ್ಥೇನ ಶವಸಾ ಸ್ತುತ್ಯೇನ ಬಲೇನ ಪರುಃ ಪರ್ವ ಯಜ್ಞಿಯಮಸ್ಮದೀಯಂ ವಾ ದಧೇ । ಧಾರಯತಿ । ಹೇ ಬೃಹಸ್ಪತೇ ಆಯುಷೋ ಮಮಾಯುಷ್ಯಸ್ಯ ಪ್ರತರೀತಾ ಪ್ರವರ್ಧಯಿತಾಸಿ। ಭವ । ತಥಾ ಯಜ್ಞೋ ಮನುರ್ಮಂತಾ ಪ್ರಮತಿಃ ಪ್ರಕೃಷ್ಟಾ ಮತಿರ್ಯಸ್ಯ ಸ ನಃ ಪಿತಾ ಪಾಲಕಃ ಸನ್ ಕಂ ಸುಖಂ ಪ್ರಯಚ್ಛತು । ಯದ್ವಾ। ಯಜ್ಞೋ ಮಂತ್ರೋ ಬುದ್ಧಿಶ್ಚ ಪ್ರತ್ಯೇಕಂ ಸುಖಂ ಪ್ರಯಚ್ಛತು ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । ಉಕ್ಥೇನ—ಪ್ರಶಸ್ಯವಾದ । ಶವಸಾ—ಬಲದಿಂದ । ಪರುಃ—ನನ್ನ ಸಕಲ ಅವಯವಗಳನ್ನೂ । ದಧೇ—ಧರಿಸಿದ್ದಾನೆ । ಬೃಹಸ್ಪತೇ—ಎಲೈ ಬೃಹಸ್ಪತಿಯೇ । ಆಯುಷಃ—ನನ್ನ ಆಯುಸ್ಸಿನ । ಪ್ರತರೀತಾ—ವೃದ್ಧಿಕಾರಕನಾಗಿ । ಅಸಿ—ಆಗಿರು । ಯಜ್ಞಃ—ಯಜ್ಞವೂ । ಮನುಃ—ಮನುವೂ । ಪ್ರಮತಿಃ—ಉತ್ಕೃಷ್ಟವಾದ ಬುದ್ಧಿಯೂ । ನಃ—ನಮ್ಮ । ಪಿತಾ—ಪಾಲಕರಾಗಿದ್ದು । ಕಂ—ಸುಖವನ್ನು ಒದಗಿಸಲಿ । ಸರ್ವತಾತಿಂ—ಸರ್ವಾತ್ಮಕಳಾದ । ಅದಿತಿಂ—ಅದಿತಿಯನ್ನು । ಆ ವೃಣೀಮಹೇ—ಪ್ರಾರ್ಥಿಸಿ ಕರೆಯುತ್ತೇವೆ.

|| ಭಾವಾರ್ಥ ||

ಇಂದ್ರನು ತನ್ನ ಪ್ರಶಸ್ಯವಾದ ಬಲದಿಂದ ನನ್ನ ಸಕಲ ಅವಯವಗಳಿಗೂ ಶಕ್ತಿಯನ್ನು ತುಂಬಿದ್ದಾನೆ. ಎಲೈ ಬೃಹಸ್ಪತಿಯೇ, ನನ್ನ ಆಯುಸ್ಸಿನ ವೃದ್ಧಿಕಾರಕನಾಗಿರು. ಯಜ್ಞವೂ, ಮನುವೂ, ಉತ್ಕೃಷ್ಟವಾದ ಬುದ್ಧಿಯೂ ನಮ್ಮ ಪಾಲಕರಾಗಿದ್ದು ನಮಗೆ ಸುಖವನ್ನು ಒದಗಿಸಲಿ. ಸರ್ವಾತ್ಮಿಕೆಯಾದ ಅದಿತಿಯನ್ನು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

By his laudable strength Indra supports my limb; you, Brihaspati, are the prolonger of my life. May the sacrifice, the sage Manu, (being) our protector, grant us happiness. We long for the Uuiversal Aditi.

|| ಸಂಹಿತಾಪಾಠಃ ||

ಇಂದ್ರಸ್ಯ ನು ಸುಕೃತಂ ದೈವ್ಯಂ ಸಹೋಽಗ್ನಿರ್ಗೃಹೇ ಜರಿತಾ ಮೇಧಿರಃ ಕವಿಃ|
ಯಜ್ಞಶ್ಚ ಭೂದ್ವಿದಥೇ ಚಾರುರಂತಮ ಆ ಸರ್ವತಾತಿಮದಿತಿಂ ವೃಣೀಮಹೇ || ೬ ||

|| ಪದಪಾಠಃ ||

ಇಂದ್ರಸ್ಯ | ನು | ಸುಽಕೃತಂ | ದೈವ್ಯಂ | ಸಹಃ | ಅಗ್ನಿಃ | ಗೃಹೇ | ಜರಿತಾ | ಮೇಧಿರಃ | ಕವಿಃ |
ಯಜ್ಞಃ | ಚ | ಭೂತ್ | ವಿದಥೇ | ಚಾರುಃ | ಅಂತಮಃ | ಆ | ಸರ್ವಽತಾತಿಂ | ಅದಿತಿಂ | ವೃಣೀಮಹೇ||

||ಸಾಯಣಭಾಷ್ಯಂ ||

ದೈವ್ಯಂ ದೇವಾನಾಂ ಹಿತಂ ಸಹೋ ಬಲಂ ಯದಸ್ತಿ ತದಿಂದ್ರಸ್ಯ ಸುಕೃತಂ | ಇಂದ್ರೇಣ ಖಲು ಸುಷ್ಠು ಸಂಪಾದಿತಂ | ಯದ್ವಾ | ಯತ್ಸುಕೃತಂ ದೈವ್ಯಂ ಸಹೋ ಬಲಂ ಮರುತ್ಸಂಜ್ಞಕಮಸ್ತಿ ತದಿಂದ್ರಸ್ಯ ನು | ಇಂದ್ರಸ್ಯ ಸಂಬಂಧಿ ಖಲು | ಅಥವಾ | ಇಂದ್ರಸ್ಯ ನು ಸಂಬಂಧಿ ಸುಕೃತಂ ದೈವ್ಯಂ ಸಹೋ ದೇವಾರ್ಹಂ ಬಲಮಗ್ನಿರ್ಗೃಹೇಽಸ್ಮದೀಯೇ ಯಾಗಗೃಹೇ ವರ್ತತ ಇತಿ ಶೇಷಃ | ಇಂದ್ರಸ್ಯ ಸಂಬಂಧೀ ಸುಷ್ಠು ಸಂಪಾದಿತೋ ದೇವಾನಾಂ ಬಲಭೂತೋಽಗ್ನಿರ್ಗಾರ್ಹಪತ್ಯಃ ಸೇನ್ ವರ್ತತ ಇತ್ಯರ್ಥಃ | ಸ ಚಾಗ್ನಿರ್ಜರಿತಾ ದೇವಾನಾಂ ಸ್ತೋತಾ ಮೇಧಿರಃ | ಮೇಧೋ ಯಜ್ಞೋ ಹವಿರ್ವಾ | ತದ್ವಾನ್ ಕವಿಃ ಕ್ರಾಂತಪ್ರಜ್ಞೋ ಯಜ್ಞೋ ಯಷ್ಟವ್ಯಶ್ಚ ಭೂತ್ | ಭವತಿ | ಕುತ್ರ | ವಿದಥೇ ಯಜ್ಞೇ | ಕಿಂಚ ಸೋಽಗ್ನಿಶ್ಚಾರುಶ್ಚರಣೀಯೋಽಂತಮೋಽಸ್ಮಾಕಮಂತಿಕತಮಶ್ಚ ||

|| ಪ್ರತಿಪದಾರ್ಥ ||

ದೈವ್ಯಂ—ದೇವತೆಗಳಿಗೆ ಹಿತಕರವಾದ | ಇಂದ್ರಸ್ಯ—ಇಂದ್ರನ | ಸಹಃ—ಶಕ್ತಿಯು | ಸುಕೃತಂ—ಉತ್ತಮವಾಗಿ ಸಂಪಾದಿತವಾಗಿದೆ | ಜರಿತಾ—ದೇವತೆಗಳನ್ನು ಸ್ತುತಿಸುವವನೂ | ಮೇಧಿರಃ—ಪ್ರಾಜ್ಞನೂ ಕವಿಃ—ಮೇಧಾವಿಯೂ | ಯಜ್ಞಃ—ಪೂಜಾರ್ಹನೂ | ಚಾರುಃ—ಆಕರ್ಷಕವಾದ ರೂಪವುಳ್ಳವನೂ | ಅಂತಮಃ—ನಮ್ಮ ಸಮೀಪಸ್ಥನೂ ಆದ | ಅಗ್ನಿಃ—ಅಗ್ನಿಯು | ಗೃಹೇ—ನಮ್ಮ ಗೃಹದಲ್ಲಿ | ವಿದಥೇ—ಯಜ್ಞಪ್ರದೇಶದಲ್ಲಿ | ಭೂತ್—ಸ್ಥಾಪಿತನಾಗಿದ್ದಾನೆ | ಸರ್ವತಾತಿಂ—ಸರ್ವಾತ್ಮಿಕೆಯಾದ | ಅದಿತಿಂ—ಅದಿತಿಯನ್ನು | ಆ ವೃಣೀಮಹೇ—ಆದರದಿಂದ ಅಪೇಕ್ಷಿಸಿ ಕರೆಯುತ್ತೇವೆ.

|| ಭಾವಾರ್ಥ ||

ದೇವತೆಗಳಿಗೆ ಹಿತಕರವಾದ ಇಂದ್ರನ ಶಕ್ತಿಯು ಉತ್ತಮವಾಗಿ ಸಂಪಾದಿತವಾಗಿದೆ. ದೇವತೆಗಳನ್ನು ಸ್ತುತಿಸುವವನೂ, ಪ್ರಾಜ್ಞನೂ, ಮೇಧಾವಿಯೂ, ಪೂಜಾರ್ಹನೂ, ಆಕರ್ಷಕವಾದ ರೂಪವುಳ್ಳವನೂ, ನಮ್ಮ ಸಮೀಪಸ್ಥನೂ, ಆದ ಅಗ್ನಿಯು ನಮ್ಮ ಗೃಹದಲ್ಲಿ ಯಜ್ಞಪ್ರದೇಶದಲ್ಲಿ ಸ್ಥಾಪಿತನಾಗಿದ್ದಾನೆ. ಸರ್ವಾತ್ಮಿಕೆಯಾದ ಅದಿತಿಯನ್ನು ನಾವು ಆದರದಿಂದ ಅಪೇಕ್ಷಿಸಿ ಕರೆಯುತ್ತೇವೆ.

English Translation

The divine force of Indra is well constructed; Agni (abides) in ou dwelling, the praiser of the gods, the reciever of oblations, the sage, and is worthy of sacrifice at the altar, beautiful, and most nigh (to us). We long for the universal Aditi.

|| ಸಂಹಿತಾಪಾಠಃ ||

ನ ವೋ ಗುಹಾ ಚಕೃಮ ಭೂರಿ ದುಷ್ಕೃತಂ ನಾವಿಷ್ಟ್ಯಂ ವಸವೋ ದೇವ-
ಹೇಳನಂ||
ಮಾಕಿರ್ನೋ ದೇವಾ ಅನೃತಸ್ಯ ವರ್ಪಸ ಆ ಸರ್ವತಾತಿಮದಿತಿಂ-
ವೃಣೀಮಹೇ || ೭ ||

|| ಪದಪಾಠಃ ||

ನ | ವಃ | ಗುಹಾ | ಚಕೃಮ | ಭೂರಿ | ದುಃऽಕೃತಂ | ನ | ಆವಿಃऽತ್ಯಂ | ವಸವಃ | ದೇವऽಹೇಳನಂ |
ಮಾಕಿಃ | ನಃ | ದೇವಾಃ | ಅನೃತಸ್ಯ | ವರ್ಪಸಃ | ಆ | ಸರ್ವऽತಾತಿಂ | ಅದಿತಿಂ | ವೃಣೀಮಹೇ || ೭ ||

॥ ಸಾಯಣಭಾಷ್ಯಂ ॥

ಹೇ ದೇವಾಃ ವೋ ಯುಷ್ಮಾಕಂ ಗುಹಾ ಗುಹಾಯಾಂ ಪ್ರಚ್ಛನ್ನೇ ದೇಶೇ ಭೂರಿ ಪ್ರಭೂತಂ ದುಷ್ಕೃತಂ ಪಾಪಂ। ದ್ರೋಹಮಿತ್ಯರ್ಥಃ। ನ ಚಕೃಮ। ತಥಾವಿಷ್ಟ್ಯಮಾವಿಃ ಸಂಭೂತಂ ದೇವಹೇಳನಂ ದೇವಾನಾಂ ಕ್ರೋಧನಂ ತನ್ನಿಮಿತ್ತಂ ದ್ರೋಹಂ ನ ಚಕೃಮ ಹೇ ವಸವೋ ವಾಸಕಾ ದೇವಾಃ। ಕಿಂಚ ಹೇ ದೇವಾಃ ನೋಽಸ್ಮಾಕಮನೃತಸ್ಯ ವರ್ಪಸೋ ರೂಪಸ್ಯ ಪ್ರಾಪ್ತಿರ್ಮಾಕಿಃ। ಮಾ ಭೂತ್। ಇತಃ ಪರಂ ಮಾನುಷಂ ರೂಪಂ ಮಾ ಭೂದಿತ್ಯರ್ಥಃ। ಶಿಷ್ಟಮುಕ್ತಂ॥

॥ ಪ್ರತಿಪದಾರ್ಥ ॥

ವಸವಃ—ಧನಪ್ರದರಾದ। ದೇವಾಃ—ಎಲೈ ದೇವತೆಗಳೇ। ವಃ—ನಿಮ್ಮ ವಿಷಯದಲ್ಲಿ। ಗುಹಾ—ರಹಸ್ಯವಾಗಿ। ಭೂರಿ—ಪ್ರಭೂತವಾದ। ದುಷ್ಕೃತಂ—ಪಾಪವನ್ನು। ನ ಚಕೃಮ—ನಾವು ಆಚರಿಸುವುದಿಲ್ಲ। ದೇವಹೇಳನಂ—ದೇವತೆಗಳ ಕ್ರೋಧಕ್ಕೆ ಪಾತ್ರವಾಗುವಂತೆ। ಆವಿಷ್ಟ್ಯಂ—ಬಹಿರಂಗವಾಗಿಯೂ। ನ—ಯಾವ ತಪ್ಪನ್ನೂ ಮಾಡುವುದಿಲ್ಲ। ನಃ—ನಮಗೆ। ಅನೃತಸ್ಯ—ಅಸತ್ಯಾತ್ಮಕವಾದ। ವರ್ಪಸಃ—ರೂಪದ ಪ್ರಾಪ್ತಿಯು। ಮಾಕಿಃ—ಸಂಭವಿಸದಿರಲಿ। ಸರ್ವತಾತಿಂ—ಸರ್ವಾತ್ಮಿಕೆಯಾದ। ಅದಿತಿಂ—ಅದಿತಿಯನ್ನು। ಆ ವೃಣೀಮಹೇ—ನಾವು ಆದರದಿಂದ ಅಪೇಕ್ಷಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಧನಪ್ರದರಾದ ಎಲೈ ದೇವತೆಗಳೇ, ನಿಮ್ಮ ವಿಷಯದಲ್ಲಿ ರಹಸ್ಯವಾದ ತಪ್ಪನ್ನು ಏನೂ ನಾವು ಅಧಿಕವಾಗಿ ಮಾಡಿಲ್ಲ. ನಿಮ್ಮ ಕ್ರೋಧಕ್ಕೆ ಪಾತ್ರವಾಗುವಂತೆ ಬಹಿರಂಗವಾಗಿಯೂ ನಾವು ಯಾವ ತಪ್ಪನ್ನೂ ಮಾಡಿಲ್ಲ ನಮಗೆ ಅಸತ್ಯಾತ್ಮಕವಾದ ರೂಪದ ಪ್ರಾಪ್ತಿಯು ಸಂಭವಿಸದಿರಲಿ. ಸರ್ವಾತ್ಮಿಕೆಯಾದ ಅದಿತಿಯನ್ನು ನಾವು ಆದರದಿಂದ ಪ್ರಾರ್ಥಿಸಿ ಕರೆಯುತ್ತೇವೆ.

## English Translation.

We have not done any great evil in secret from you, nor any open (action) causing the anger of the gods O you givers of wealth; let not, O gods, (the possession) of an unreal form be our (lot). We long for the universal Aditi.

॥ ಸಂಹಿತಾಪಾಠಃ ॥

ಅಪಾಮೀವಾಂ ಸವಿತಾ ಸಾವಿಷನ್ನ್ಯ೧ಗ್ವರೀಯ ಇದಪ ಸೇಧಂತ್ವದ್ರಯಃ॥
ಗ್ರಾವಾ ಯತ್ರ ಮಧುಷುದುಚ್ಯತೇ ಬೃಹದಾ ಸರ್ವತಾತಿಮದಿತಿಂ ವೃಣೀಮಹೇ ॥ ೮ ॥

|| ಪದಪಾಠಃ ||

ಅಪ । ಅಮೀವಾಂ । ಸವಿತಾ । ಸಾವಿಷತ್ । ನ್ಯಕ್ । ವರೀಯಃ । ಇತ್ । ಅಪ । ಸೇಧಂತು । ಅದ್ರಯಃ ॥

ಗ್ರಾವಾ । ಯತ್ರ । ಮಧುsಸುತ್ । ಉಚ್ಯತೇ । ಬೃಹತ್ । ಆ । ಸರ್ವsತಾತಿಂ । ಅದಿತಿಂ । ವೃಣೀಮಹೇ ॥೮॥

|| ಸಾಯಣಭಾಷ್ಯಂ ||

ಸವಿತಾ ಸರ್ವಸ್ಯ ಪ್ರೇರಕಃ ಸವಿತೃದೇವತಾಸ್ಮಾಕಂ ಸಂಬಂಧಿನಮಮೀವಾಂ ರೋಗಮಪ ಸಾವಿಷತ್ । ಅಪಪ್ರೇರಯತು । ಅಪಗಮಯತ್ವಿತ್ಯರ್ಥಃ । ತಥಾ ವರೀಯ ಇದುರುತರಮಪಿ ಪಾಪಂ ನ್ಯಗ್ನೀಚೀನಮಪ ಸೇಧಂತ್ವದ್ರಯಃ ಪರ್ವತಾಭಿಮಾನಿನೋ ದೇವಾ ಅಭಿಷವಾಶ್ಮಾನೋ ವಾ । ಏತತ್ಸರ್ವಂ ಕುತ್ರ ಭವತ್ವಿತಿ ಚೇತ್ ॥ ಉಚ್ಯತೇ । ಯತ್ರ ಯಸ್ಮಿನ್ಪ್ರದೇಶೇ ಯಸ್ಮಿನ್ಯಾಗೇ ವಾ ಮಧುರಸ್ಯ ಸೋಮಸ್ಯ ಸೋತಾ ಗ್ರಾವಾ ಬೃಹತ್ಪ್ರವೃದ್ಧಮುಚ್ಯತೇ ಸ್ತೂಯತೇ ತತ್ರ ॥

|| ಪ್ರತಿಪದಾರ್ಥ ||

**ಸವಿತಾ**—ಸವಿತೃದೇವನು । **ಅಮೀವಾಂ**—ನಮ್ಮ ರೋಗವನ್ನು । **ಅಪ ಸಾವಿಷತ್**—ನಾಶಪಡಿಸಲಿ । **ಯತ್ರ**—ಯಾವ ಯಾಗಪ್ರದೇಶದಲ್ಲಿ । **ಮಧುಸುತ್**—ಮಧುರವಾದ ಸೋಮವನ್ನು ಹಿಂಡುವ । **ಗ್ರಾವಾ**—ಕಲ್ಲು । **ಬೃಹತ್**—ಅಧಿಕವಾಗಿ । **ಉಚ್ಯತೇ**—ಪ್ರಶಂಸಿಸಲ್ಪಡುವುದೋ(ಅಲ್ಲಿ) । **ಅದ್ರಯಃ**—ಪರ್ವತಾಭಿಮಾನಿದೇವತೆಗಳು । **ನ್ಯಕ್**—ನಮ್ಮ ಪಾಪವನ್ನು । **ವರೀಯ ಇತ್**—ಅಧಿಕವಾಗಿದ್ದರೂ । **ಅಪ ಸೇಧಂತು**—ದೂರಕ್ಕೆ ಓಡಿಸಿ ನಾಶಪಡಿಸಲಿ । **ಸರ್ವತಾತಿಂ**—ಸರ್ವಾತ್ಮಿಕೆಯಾದ । **ಅದಿತಿಂ**—ಅದಿತಿಯನ್ನು । **ಆ ವೃಣೀಮಹೇ**—ಆದರದಿಂದ ಪ್ರಾರ್ಥಿಸಿ ಕರೆಯುತ್ತೇವೆ.

|| ಭಾವಾರ್ಥ ||

ಸವಿತೃದೇವನು ನಮ್ಮ ರೋಗವನ್ನು ನಾಶಪಡಿಸಲಿ. ಯಾವ ಯಾಗಪ್ರದೇಶದಲ್ಲಿ ಮಧುರವಾದ ಸೋಮವನ್ನು ಹಿಂಡುವ ಗ್ರಾವವು (ಕಲ್ಲು) ಅಧಿಕವಾಗಿ ಪ್ರಶಂಸಿಸಲ್ಪಡುವುದೋ ಅಲ್ಲಿ ಪರ್ವತಾಭಿಮಾನಿದೇವತೆಗಳು ನಮ್ಮ ಅಧಿಕವೂ ಹೇಯವೂ ಆದ ಪಾಪವನ್ನು ನಾಶಪಡಿಸಲಿ. ಸರ್ವವ್ಯಾಪಿಯಾದ ಅದಿತಿಯನ್ನು ನಾವು ಆದರದಿಂದ ಪ್ರಾರ್ಥಿಸಿ ಕರೆಯುತ್ತೇವೆ.

## English Translation

May Savitri drive away our disease, may the mountains keep off our most heinous (sin), where the stone (the effuser) of the sweet juice is abundantly praised. We long for the universal Aditi.

|| ಸಂಹಿತಾಪಾಠಃ ||

ಊರ್ಧ್ವೋ ಗ್ರಾವಾ ವಸವೋಽಸ್ತು ಸೋತರಿ ವಿಶ್ವಾ ದ್ವೇಷಾಂಸಿ-
ಸನುತರ್ಯುಯೋತ ||

ಸ ನೋ ದೇವಃ ಸವಿತಾ ಪಾಯುರೀಡ್ಯ ಆ ಸರ್ವತಾತಿಮದಿತಿಂ ವೃಣೀ-
ಮಹೇ || ೯ ||

|| ಪದಪಾಠಃ ||

ಊರ್ಧ್ವಃ | ಗ್ರಾವಾ | ವಸವಃ | ಅಸ್ತು | ಸೋತರಿ | ವಿಶ್ವಾ | ದ್ವೇಷಾಂಸಿ | ಸನುತಃ | ಯುಯೋತ |

ಸಃ | ನಃ | ದೇವಃ | ಸವಿತಾ | ಪಾಯುಃ | ಈಡ್ಯಃ | ಆ | ಸರ್ವಽತಾತಿಂ | ಅದಿತಿಂ | ವೃಣೀಮಹೇ ||೯||

|| ಸಾಯಣಭಾಷ್ಯಂ ||

ಹೇ ವಸವೋ ದೇವಾಃ ಸೋತರಿ ಸೋಮಾಭಿಷವಕರ್ತರಿ ಮಯಿ ಗ್ರಾವೋರ್ಧ್ವ ಉನ್ನತೋಽಸ್ತು | ತೇನೋಚ್ಛ್ರಿತೇನ ವಿಶ್ವಾ ದ್ವೇಷಾಂಸಿ ಸರ್ವಾನಪಿ ದ್ವೇಷ್ಟ್ರೄನ್ಸನುತರ್ನಿಗೂಢಾನ್ಯುಯೋತ | ಪೃಥಕ್ಕುರುತ | ಸ ಸವಿತಾ ದೇವೋ ನೋಽಸ್ಮಾಕಂ ಪಾಯುಃ ಪಾಲಯಿತಾ || ಕೃಪಾಪಾಜೀತ್ಯಾದಿನೋಣ್ | ಪ್ರತ್ಯಯಸ್ವರಃ || ಸ ಈಡ್ಯಃ ಸ್ತೋತವ್ಯಶ್ಚ |

|| ಪ್ರತಿಪದಾರ್ಥ ||

ವಸವಃ—ವಸತಿದಾಯಕರಾದ ಎಲ್ಲೆ ದೇವತೆಗಳೇ | ಸೋತರಿ—ನಾನು ಸೋಮವನ್ನು ಹಿಂಡುವಾಗ | ಗ್ರಾವಾ—ಹಿಂಡುವ ಕಲ್ಲು | ಊರ್ಧ್ವಃ ಅಸ್ತು—ಮೇಲಕ್ಕೇಳಲಿ | ಸನುತಃ—ರಹಸ್ಯವಾಗಿ ಅಡಗಿರುವ | ವಿಶ್ವಾ ದ್ವೇಷಾಂಸಿ—ನಮ್ಮ ಸಕಲ ಶತ್ರುಗಳನ್ನೂ | ಯುಯೋತ—ನಾಶಪಡಿಸಿರಿ | ಸಃ—ಪ್ರಸಿದ್ಧನಾದ | ಸವಿತಾ ದೇವಃ—ಸವಿತೃದೇವನು | ನಃ—ನಮ್ಮ | ಪಾಯುಃ—ಪಾಲಕನಾಗಿಯೂ | ಈಡ್ಯಃ—ಪೂಜೆಗೆ ಯೋಗ್ಯನಾಗಿಯೂ ಇದ್ದಾನೆ | ಸರ್ವತಾತಿಂ—ಸರ್ವಾತ್ಮಿಕೆಯಾದ | ಅದಿತಿಂ—ಅದಿತಿಯನ್ನು | ಆ ವೃಣೀಮಹೇ—ಆದರದಿಂದ ಪ್ರಾರ್ಥಿಸಿ ಕರೆಯುತ್ತೇವೆ.

|| ಭಾವಾರ್ಥ ||

ವಸತಿದಾಯಕರಾದ ಎಲ್ಲೈ ದೇವತೆಗಳೇ, ನಾನು ಸೋಮವನ್ನು ಹಿಂಡುವಾಗ ಜಜ್ಜುವ ಕಲ್ಲು ಮೇಲಕ್ಕೇಳಲಿ. ರಹಸ್ಯವಾಗಿ ಅಡಗಿರುವ ನಮ್ಮ ಶತ್ರುಗಳನ್ನು ನಾಶಪಡಿಸಿರಿ. ಪ್ರಸಿದ್ಧನಾದ ಸವಿತೃದೇವನು ನಮ್ಮ ಪಾಲಕನಾಗಿಯೂ, ಪೂಜೆಗೆ ಯೋಗ್ಯನಾಗಿಯೂ ಇದ್ದಾನೆ. ಸರ್ವಾತ್ಮಿಕೆಯಾದ ಅದಿತಿಯನ್ನು ನಾವು ಆದರದಿಂದ ಪ್ರಾರ್ಥಿಸಿ ಕರೆಯುತ್ತೇವೆ.

## English Translation.

May the stone be uplifted, gods, when I make the libation; disperse all my secret adversaries; the god Savitri is our adorable protector. We long for the universal Aditi.

॥ ಸಂಹಿತಾಪಾಠಃ ॥

ಊರ್ಜಂ ಗಾವೋ ಯವಸೇ ಪೀವೋ ಅತ್ತನ ಋತಸ್ಯ ಯಾಃ ಸದನೇ
ಕೋಶೇ ಅಂಗ್ಧ್ವೇ ॥

ತನೂರೇವ ತನ್ವೋ ಅಸ್ತು ಭೇಷಜಮಾ ಸರ್ವತಾತಿಮದಿತಿಂ ವೃಣೀ-
ಮಹೇ ॥ ೧೧ ॥

॥ ಪದಪಾಠಃ ॥

ಊರ್ಜಂ । ಗಾವಃ । ಯವಸೇ । ಪೀವಃ । ಅತ್ತನ । ಋತಸ್ಯ । ಯಾಃ । ಸದನೇ । ಕೋಶೇ । ಅಂಗ್ಧ್ವೇ ।

ತನೂಃ । ಏವ । ತನ್ವಃ । ಅಸ್ತು । ಭೇಷಜಂ । ಆ । ಸರ್ವಽತಾತಿಂ । ಅದಿತಿಂ । ವೃಣೀಮಹೇ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಗಾವ ಆಶಿರಾರ್ಥಾಃ ಯೂಯಂ ಯವಸೇ ತೃಣವತಿ ದೇಶೇ ಪೀವಃ ಪ್ರವೃದ್ಧಮೂರ್ಜಂ ರಸಮತ್ತನ । ಅತ್ತ । ಯಾ ಋತಸ್ಯ ಯಜ್ಞಸ್ಯ ಸದನೇ ಗೃಹೇ ಕೋಶೇ ಗೋಷ್ಠೇ ದೋಹನಸ್ಥಾನೇಽಙ್ಗ್ಧ್ವೇ ವ್ಯಂಜಯಥ ತಾ ಅತ್ತನ । ತನೂರೇವ । ಜನ್ಯೇ ಜನಕಶಬ್ದಃ । ತನೂರೇವ ಕ್ಷೀರಮೇವ ತನ್ವಃ ಸೋಮರಸಸ್ಯ ಭೇಷಜಮಸ್ತು । ಯದ್ವಾ । ಪೃಥಗೇವ ವಾಕ್ಯಂ । ಅಸ್ಮಾಕಂ ತನ್ವೋ ಭೇಷಜಮಸ್ತು । ಕಿಂಚ ತನೂರೇವ ಪಶುಶರೀರಮೇವ । ಪಶುನಾ ಯಾಗೇ ಸತಿ ಸ್ವರ್ಗಸ್ಯ ಸಂಪಾದಯಿತುಂ ಶಕ್ಯತ್ವಾತ್ ॥

॥ ಪ್ರತಿಪದಾರ್ಥ ॥

ಗಾವಃ—ಎಲೈ ಗೋವುಗಳೇ । ಯಾಃ—ಯಾವ ನೀವು । ಋತಸ್ಯ ಸದನೇ—ಯಜ್ಞಗೃಹದ ಭಾಗವಾದ । ಕೋಶೇ—ಕೊಟ್ಟಿಗೆಯಲ್ಲಿ । ಅಙ್ಗ್ಧ್ವೇ—ಅಂಜನಾದಿಗಳಿಂದ ಅಲಂಕೃತರಾಗಿದ್ದೀರೋ, ಅಂತಹ ನೀವು । ಯವಸೇ—ತೃಣವಿರುವ ಪ್ರದೇಶದಲ್ಲಿ । ಪೀವಃ—ಪ್ರವೃದ್ಧವಾಗಿರುವ । ಊರ್ಜಂ—ರಸವನ್ನು (ಉದಕವನ್ನು) । ಅತ್ತನ—ಕುಡಿಯಿರಿ । ತನೂಃ ಏವ—ನಿಮ್ಮ ದೇಹದಿಂದ ಉತ್ಪನ್ನವಾದ ಕ್ಷೀರವೇ । ತನ್ವಃ—

ಸೋಮರಸಕ್ಕೆ (ಅಥವಾ ನಮ್ಮ ದೇಹಕ್ಕೆ) | **ಭೇಷಜಂ**—ಔಷಧ ರೂಪವಾಗಿ | **ಅಸ್ತು**—ಆಗಿರಲಿ | **ಸರ್ವತಾತಿಂ**—ಸರ್ವಾತ್ಮಿಕೆಯಾದ | **ಅದಿತಿಂ**—ಅದಿತಿಯನ್ನು | **ಆ ವೃಣೀಮಹೇ**—ನಾವು ಪ್ರಾರ್ಥಿಸಿ ಕರೆಯುತ್ತೇವೆ.

|| ಭಾವಾರ್ಥ ||

ಎಲೈ ಗೋವುಗಳೇ, ಯಜ್ಞಗೃಹದ ಭಾಗವಾದ ಕೊಟ್ಟಿಗೆಯಲ್ಲಿ ಅಂಜನಾದಿಗಳಿಂದ ಅಲಂಕೃತರಾಗಿ ನಿಂತಿರುವ ನೀವು ತೃಣವಿರುವ ಪ್ರದೇಶದಲ್ಲಿ ಪ್ರವೃದ್ಧವಾದ ನೀರವನ್ನು ಕುಡಿಯಿರಿ. ನಿಮ್ಮ ದೇಹದಿಂದ ಉತ್ಪನ್ನವಾದ ಕ್ಷೀರವೇ ನಮ್ಮ ದೇಹಕ್ಕೆ ಔಷಧಿರೂಪವಾಗಿರಲಿ. ಸರ್ವಾತ್ಮಿಕೆಯಾದ ಅದಿತಿಯನ್ನು ನಾವು ಆದರದಿಂದ ಪ್ರಾರ್ಥಿಸಿ ಕರೆಯುತ್ತೇವೆ.

## English Translation

Eat abundant fodder in the pasture, O cows, who are anointed in the hall of sacrifice in the cow stall; may (your) body be the remedy for (our) body. We long for the universal Aditi.

|| ಸಂಹಿತಾಪಾಠಃ ||

ಕ್ರತುಪ್ರಾವಾ ಜರಿತಾ ಶಶ್ವತಾಮವ ಇಂದ್ರ ಇದ್ಭದ್ರಾ ಪ್ರಮತಿಃ ಸುತಾವತಾಂ।
ಪೂರ್ಣಮೂಧರ್ದಿವ್ಯಂ ಯಸ್ಯ ಸಿಕ್ತಯ ಆ ಸರ್ವತಾತಿಮದಿತಿಂ ವೃಣೀ-
ಮಹೇ || ೧೧ ||

|| ಪದಪಾಠಃ ||

ಕ್ರತುಽಪ್ರಾವಾ | ಜರಿತಾ | ಶಶ್ವತಾಂ | ಅವಃ | ಇಂದ್ರಃ | ಇತ್ | ಭದ್ರಾ | ಪ್ರಽಮತಿಃ | ಸುತಽವತಾಂ | ಪೂರ್ಣಂ | ಊಧಃ | ದಿವ್ಯಂ | ಯಸ್ಯ | ಸಿಕ್ತಯೇ | ಆ | ಸರ್ವಽತಾತಿಂ | ಅದಿತಿಂ | ವೃಣೀಮಹೇ||೧೧||

|| ಸಾಯಣಭಾಷ್ಯಂ ||

ಕ್ರತುಪ್ರಾವಾ ಕರ್ಮಣಾಂ ಪೂರಕಃ || ಪ್ರಾ ಪೂರಣೇ | ಆತೋ ಮನಿನ್ನಿತ್ಯಾದಿನಾ ವನಿಪ್ || ಜರಿತಾ ಸ್ತೋತಾ | ಯಜಮಾನಂ ಸಾಧು ಸೋಮಃ ಕೃತ ಇತಿ ಸ್ತೌತಿ | ಯದ್ವಾ ಶಶ್ವತಾಂ ಸರ್ವೇಷಾಂ ಜರಯಿತೇಂದ್ರ ಇದಿಂದ್ರ ಏವ ಸುತಾವತಾಂ ಸೋಮವತಾಂ ಯಜಮಾನಾನಾಮವೋ ರಕ್ಷಕೋ ಭದ್ರಾ ಭದ್ರಯಾ ಸ್ತುತ್ಯಾ ಪ್ರಮತಿಃ | ಯಸ್ಯೇಂದ್ರಸ್ಯ ಸಿಕ್ತಯೇ ಸೇಕಾಯ ಪಾನಾಯೋಧರುದ್ಧೃತೇತರಂ ದ್ರೋಣಕಲಶಂ ಪೂರ್ಣಂ ಸೋಮೇನ ಪೂರ್ಣಂ ಭವತಿ ಸ ಏವಾವಃ ಸ ಏವ ಪ್ರಮತಿರಿತಿ ||

‖ ಪ್ರತಿಪದಾರ್ಥ ‖

**ಯಸ್ಯ**—ಯಾವ ಇಂದ್ರನ | **ಸಿಕ್ತಯೇ**—ಪಾನಾರ್ಥವಾಗಿ | **ದಿವ್ಯಂಕೋಶಃ**—ದ್ರೋಣಕಲಶವು | **ಪೂರ್ಣಂ**—ಸೋಮರಸದಿಂದ ತುಂಬಲ್ಪಡುವುದೋ ಅಂತಹ | **ಕ್ರತುಪ್ರಾವಾ**—ಕರ್ಮವನ್ನು ಪೂರ್ಣ ಮಾಡುವವನೂ | **ಶಶ್ವತಾಂ**—ಸಕಲ ಯಜಮಾನರನ್ನೂ | **ಜರಿತಾ**—ಪ್ರಶಂಸಿಸುವವನೂ ಆದ | **ಇಂದ್ರ ಇತ್**—ಇಂದ್ರನೇ | **ಸುತಾವತಾಂ**—ಸೋಮವಂತರಾದ ಯಜಮಾನರಿಗೆ | **ಅವಃ**—ರಕ್ಷಕನೂ | **ಭದ್ರಾ**—ಕಲ್ಯಾಣಾತ್ಮಕವಾದ | **ಪ್ರಮತಿಃ**—ಪ್ರಜ್ಞಾರೂಪನೂ ಆಗಿದ್ದಾನೆ | **ಸರ್ವತಾತಿಂ**—ಸರ್ವಾತ್ಮಿಕೆಯಾದ | **ಅದಿತಿಂ**—ಅದಿತಿಯನ್ನು | **ಆ ವೃಣೀಮಹೇ**—ಆದರದಿಂದ ಪ್ರಾರ್ಥಿಸಿ ಕರೆಯುತ್ತೇವೆ.

‖ ಭಾವಾರ್ಥ ‖

ಯಾವ ಇಂದ್ರನ ಪಾನಾರ್ಥವಾಗಿ ದ್ರೋಣಕಲಶವು ಸೋಮರಸದಿಂದ ತುಂಬಲ್ಪಡುವುದೋ, ಅಂತಹ ಕರ್ಮವನ್ನು ಪೂರ್ಣಮಾಡುವವನೂ, ಸಕಲ ಯಜಮಾನರನ್ನೂ ಪ್ರಶಂಸಿಸುವವನೂ ಆದ ಇಂದ್ರನೇ, ಸೋಮವಂತರಾದ ಯಜಮಾನರಿಗೆ ರಕ್ಷಕನೂ, ಕಲ್ಯಾಣಾತ್ಮಕವಾದ ಪ್ರಜ್ಞಾರೂಪನೂ ಆಗಿದ್ದಾನೆ. ಸರ್ವಾತ್ಮಿಕೆಯಾದ ಅದಿತಿಯನ್ನು ನಾವು ಆದರದಿಂದ ಪ್ರಾರ್ಥಿಸಿ ಕರೆಯುತ್ತೇವೆ.

## English Translation.

Indra is the fulfiller of pious acts, the glorifier of all, the guardian of the offerers of libations, the auspicious forethought, for his libation the divine pitcher is filled (with Soma). We long for the universal Aditi.

‖ ಸಂಹಿತಾಪಾಠಃ ‖

ಚಿತ್ರಸ್ತೇ ಭಾನುಃ ಕ್ರತುಪ್ರಾ ಅಭಿಷ್ಟಿಃ ಸಂತಿ ಸ್ಪೃಧೋ ಜರಿಣಿಪ್ರಾ ಅಧೃಷ್ಟಾಃ |
ರಜಿಷ್ಠಯಾ ರಜ್ಯಾ ಪಶ್ವ ಆ ಗೋಸ್ತೂತೂರ್ಷತಿ ಪರ್ಯಗ್ರಂ ದುವಸ್ಯುಃ ‖

‖ ಪದಪಾಠಃ ‖

ಚಿತ್ರಃ | ತೇ | ಭಾನುಃ | ಕ್ರತುऽಪ್ರಾಃ | ಅಭಿಷ್ಟಿಃ | ಸಂತಿ | ಸ್ಪೃಧಃ | ಜರಣಿऽಪ್ರಾಃ | ಅಧೃಷ್ಟಾಃ |
ರಜಿಷ್ಠಯಾ | ರಜ್ಯಾ | ಪಶ್ವಃ | ಆ | ಗೋಃ | ತೂತೂರ್ಷತಿ | ಪರಿ | ಅಗ್ರಂ | ದುವಸ್ಯುಃ ‖ ೧೨ ‖

‖ ಸಾಯಣಭಾಷ್ಯಂ ‖

ಹೇ ಇಂದ್ರ ತೇ ಭಾನುಃ ಪ್ರಕಾಶಶ್ಚಿತ್ರ ಆಶ್ಚರ್ಯಭೂತಶ್ಚಾಯನೀಯೋ ವಾ | ತಥಾ ಕ್ರತುಪ್ರಾಃ ಸ ಭಾನುರಸ್ಮಾಕಂ ಕರ್ಮಣಾಂ ಪೂರಕೋऽಭಿಷ್ಟಿರಭ್ಯೇಷಣೀಯಃ | ಹೇ ಇಂದ್ರ ತೇ ಜರಣಿಪ್ರಾಃ

**ಸ್ತೋತೄಣಾಂ ಧನಸ್ಯ ಪೂರಯಿತ್ರ್ಯೋಽಧೃಷ್ಟಾ ಅನ್ಯೈರಪ್ರಧೃಷ್ಯಾಃ ಸ್ಪೃಧಃ ಸ್ಪರ್ಧಾಃ ಸಂತಿ । ಯಸ್ಮಾದೇವಂ ತಸ್ಮಾದ್ರಜಿಷ್ಠಯರ್ಜುತಮಯಾ ರಜ್ಜ್ವಾ ರಜ್ಜ್ವಾ ಗೋಃ ಪಶ್ವಃ ಪಶೋರಗ್ರಂ ದುವಸ್ಯುಃ ಪರಿಚರಣಮಿಚ್ಛನ್ನೇತನ್ನಾಮರ್ಷಿಃ ಪರಿ ತೂತೂರ್ಷತಿ । ಅಭಿತ್ವರಯತಿ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ,) **ತೇ**—ನಿನ್ನ । **ಭಾನುಃ**—ಪ್ರಕಾಶವು । **ಚಿತ್ರಃ**—ಆಶ್ಚರ್ಯಕಾರಕವಾಗಿದೆ । **ಕ್ರತುಪ್ರಾಃ**—ನಮ್ಮ ಕರ್ಮಪಾಲಕವಾಗಿಯೂ । **ಅಭಿಷ್ಟಿಃ**—ಇಷ್ಟಾರ್ಥಪ್ರದವಾಗಿಯೂ ಇರುತ್ತದೆ । **ಸ್ಪೃಧಃ**—ನಿನ್ನ ಪ್ರಯತ್ನಗಳು । **ಅಧೃಷ್ಟಾಃ**—ಅಪ್ರತಿಹತಗಳಾಗಿಯೂ । **ಜರಣಿಪ್ರಾಃ**—ಸ್ತುತಿಕರ್ತರಿಗೆ ಧನಗಳನ್ನು ತುಂಬಿಕೊಡುವುದಾಗಿಯೂ । **ಸಂತಿ**—ಇರುತ್ತವೆ । (ಆದುದರಿಂದಲೇ) **ದುವಸ್ಯುಃ**—ದುವಸ್ಯುವೆಂಬ ಋಷಿಯು । **ರಜಿಷ್ಠಯಾ**—ನೇರವಾಗಿರುವ । **ರಜ್ವಾ**—ಹಗ್ಗದಿಂದ ಹಿಡಿದಿರುವ । **ಪಶ್ವಃ**—ಯಜ್ಞಪಶುವಾದ । **ಗೋಃ**—ಗೋವಿನ । **ಅಗ್ರಂ**—ಮುಂಭಾಗಕ್ಕೆ । **ಪರಿ ತೂತೂರ್ಷತಿ**—ಆತುರದಿಂದ ಹೋಗುತ್ತಿದ್ದಾನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಪ್ರಕಾಶವು ಅತ್ಯಾಶ್ಚರ್ಯಕಾರಕವಾಗಿದೆ, ನಮ್ಮ ಕರ್ಮಪಾಲಕವಾಗಿಯೂ, ಇಷ್ಟಾರ್ಥಪ್ರದವಾಗಿಯೂ ಇರುತ್ತದೆ. ನಿನ್ನ ಪ್ರಯತ್ನಗಳು ಅಪ್ರತಿಹತವಾಗಿಯೂ, ಸ್ತುತಿಕರ್ತರಿಗೆ ಧನವನ್ನು ತುಂಬಿಕೊಡುವುದಾಗಿಯೂ ಇರುತ್ತವೆ. ಆದುದರಿಂದಲೇ ದುವಸ್ಯುವೆಂಬ ಋಷಿಯು ನೇರವಾದ ಹಗ್ಗದಿಂದ ಹಿಡಿದಿರುವ ಯಜ್ಞಪಶುವಾದ ಗೋವಿನ ಮುಂಭಾಗಕ್ಕೆ ಆತುರದಿಂದ ಹೋಗುತ್ತಿದ್ದಾನೆ. (ಯಜ್ಞಕ್ಕಾಗಿ ಅದನ್ನು ಸಿದ್ಧಪಡಿಸುತ್ತಿದ್ದಾನೆ).

## English Translation.

Your splendour, Indra, is wonderful, fulfilling our pious acts, desirable; your efforts replenishing the wealth of your worshippers are irresistible; (therefore Duvasyu hastens in front of the victim cow, (leading it) with a straight cord.

## ನೂರ ಒಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಉದ್ಬುಧ್ಯಧ್ವಮಿತಿ ದ್ವಾದಶರ್ಚಂ ದ್ವಿತೀಯಂ ಸೂಕ್ತಂ । ಸೋಮಪುತ್ರಸ್ಯ ಬುಧಸ್ಯಾರ್ಷಂ । ಆ ವೋ ಧಿಯಮಿತಿ ನವಮೀ ಕಪ್ಯನ್ನರ ಇತ್ಯಂತಾ ಚ ದ್ವೇ ಜಗತ್ಯೌ । ಚತುರ್ಥೀಷಷ್ಠ್ಯೌ ಗಾಯತ್ರ್ಯೌ । ನಿರಾಹಾವಾನಿತಿ ಪಂಚಮೀ ಬೃಹತೀ । ಶಿಷ್ಟಾಸ್ತ್ರಿಷ್ಟುಭಃ । ವಿಶ್ವೇ ದೇವಾ ದೇವತಾ । ಋತ್ವಿಕ್ಸ್ತುತಿರೂಪತ್ವಾತ್ತದ್ರೂಪೋ ವಾ ದೇವತಾ । ತಥಾ ಚಾನುಕ್ರಾಂತಂ । ಉದ್ಬುಧ್ಯಧ್ವಂ ಬುಧಃ ಸೌಮ್ಯ ಋತ್ವಿಕ್ಸ್ತುತಿರ್ವಾ ನವಮ್ಯಂತ್ಯೇ ಜಗತ್ಯೌ ಗಾಯತ್ರ್ಯೌ ಮಧ್ಯೇ ಪಂಚಮೀ ಬೃಹತೀತಿ ॥ ಗತಃ ಸೂಕ್ತವಿನಿಯೋಗಃ ॥**

ಅನುವಾದವು—**ಉದ್ಬುಧ್ಯಧ್ವಂ** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಸೋಮಪುತ್ರನಾದ ಬುಧನೆಂಬುವನು ಋಷಿಯು.

**ಸೂಕ್ತದಲ್ಲಿ ಆ ವೋ ಧಿಯಂ** ಎಂಬ ಒಂಭತ್ತನೆಯ ಋಕ್ಕೂ **ಕಪೃನ್ನರಃ** ಎಂಬ ಕೊನೆಯ(೧೨ನೇ) ಋಕ್ಕೂ ಜಗತೀ ಛಂದಸ್ಸಿನವು. ನಾಲ್ಕು ಮತ್ತು ಆರನೆಯ ಋಕ್ಕುಗಳು ಗಾಯತ್ರೀ ಛಂದಸ್ಸಿನವು. ನಿರಾಹಾವಾನ್ ಎಂಬ ಐದನೆಯ ಋಕ್ಕು ಬೃಹತೀ ಛಂದಸ್ಸಿನವು. ಉಳಿದ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ವಿಶ್ವೇದೇವತೆಗಳು ದೇವತೆಯು, ಅಥವಾ ಋತ್ವಿಕ್ಕುಗಳನ್ನು ಇಲ್ಲಿ ಸ್ತುತಿಸಲಾಗಿರುವುದು ಎಂದರೆ ಋತ್ವಿಕ್ಕುಗಳ ಪ್ರಶಂಸೆಯೇ ದೇವತೆಯು. ಅನು ಕ್ರಮಣಿಕೆಯಲ್ಲಿ—**ಉದ್ಬುಧ್ಯಧ್ವಂ ಬುಧಃ ಸೌಮ್ಯ ಋತ್ವಿಕ್ಸ್ತುತಿರ್ವಾ ನವಮ್ಯಂತ್ಯೇ ಜಗತ್ಯೌ ಗಾಯತ್ರ್ಯೌ ಚತುರ್ಥೀಷಷ್ಠ್ಯೌ ಪಂಚಮೀ ಬೃಹತೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೧

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ—೧೦೧ ॥
ಅಷ್ಟಕ—೮ ॥ ಅಧ್ಯಾಯ—೫ ॥ ವರ್ಗ—೧೮, ೧೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೧೨ ॥
॥ ಋಷಿಃ—ಬುಧಃ ಸೌಮ್ಯಃ ॥
॥ ದೇವತಾ—ವಿಶ್ವೇದೇವಾ ಋತ್ವಿಜೋ ವಾ ॥
॥ ಛಂದಃ—೧-೩, ೭, ೮, ೧೦, ೧೧. ತ್ರಿಷ್ಟುಪ್ । ೪, ೬. ಗಾಯತ್ರೀ । ೫. ಬೃಹತೀ । ೯, ೧೨. ಜಗತೀ ॥

॥ ಸಂಹಿತಾಪಾಠಃ ॥

**ಉದ್ಬುಧ್ಯಧ್ವಂ ಸಮನಸಃ ಸಖಾಯಃ ಸಮಗ್ನಿಮಿಂಧ್ವಂ ಬಹವಃ ಸನೀಳಾಃ ।**
**ದಧಿಕ್ರಾಮಗ್ನಿಮುಷಸಂ ಚ ದೇವೀಮಿಂದ್ರಾವತೋಽವಸೇ ನಿ ಹ್ವಯೇ ವಃ ॥**

॥ ಪದಪಾಠಃ ॥

ಉತ್ । ಬುಧ್ಯಧ್ವಂ । ಸಽಮನಸಃ । ಸಖಾಯಃ । ಸಂ । ಅಗ್ನಿಂ । ಇಂಧ್ವಂ । ಬಹವಃ । ಸಽನೀಳಾಃ ।
ದಧಿಽಕ್ರಾಂ । ಅಗ್ನಿಂ । ಉಷಸಂ । ಚ । ದೇವೀಂ । ಇಂದ್ರಽವತಃ । ಅವಸೇ । ನಿ । ಹ್ವಯೇ । ವಃ ॥ ೧ ॥

॥ ಸಾಯಣಭಾಷ್ಯಂ ॥

ಅಗ್ನಿಂ ಚೇಷ್ಯಮಾಣಾ ಋತ್ವಿಜೋ ವದಂತಿ । ಹೇ ಸಖಾಯಃ ಸಖಿಭೂತಾ ಋತ್ವಿಜಃ ಸಮನಸಃ ಸಮಾನಮನಸ್ಕಾಃ ಪರಸ್ಪರಮದ್ರೋಗ್ಧಾರಃ । ಅನ್ಯೋನ್ಯಂ ಕರ್ಮಾನುಕೂಲಾ ಇತ್ಯರ್ಥಃ । ತಾದೃಶಾ ಯೂಯಮುದುತ್ಕೃಷ್ಟಂ ಬುಧ್ಯಧ್ವಂ । ಜಾನೀಧ್ವಂ । ಉತ್ತರತ್ರ ಯುಷ್ಮಾಕಂ ಕರ್ತವ್ಯಮೇವೋಪದಿಶತಿ । ತಥಾಗ್ನಿಂ ಸಮಿಂಧ್ವಂ । ಸಮ್ಯಗ್ದೀಪಯಧ್ವಂ ॥ ಞಿಇಂಧೀ ದೀಪ್ತೌ ರೌಧಾದಿಕಃ । ಲೋಟಿ ಶ್ನಸೋರಲ್ಲೋಪ ಇತ್ಯಲ್ಲೋಪಃ ॥ ಬಹವೋಽನೇಕೇ ಸನೀಳಾಃ ಸಮಾನನಿವಾಸಾ ಏಕಸ್ಯಾಮೇವ

**ಶಾಲಾಯಾಂ ನಿವಸಂತಃ । ಅಹಂ ಚ ದಧಿಕ್ರಾಮೇತನ್ನಾಮಿಕಾಂ ದೇವತಾಮಗ್ನಿಮುಷಸಂ ಚ ದೇವೀಮೇತಾಂಸ್ತ್ರೀನ್ದೇವಾನಿಂದ್ರಾವತ ಇಂದ್ರೇಣ ಯುಕ್ತಾನ್ವೋ ಯುಷ್ಮಾನವಸೇಽಸ್ಮಾಕಂ ರಕ್ಷಣಾಯ ನಿ ನಿತರಾಂ ಹ್ವಯೇ । ಆಹ್ವಯಾಮಿ ॥**

॥ ಪ್ರತಿಪದಾರ್ಥ ॥

**ಸಖಾಯಃ**—ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ । **ಸಮನಸಃ**—ಒಂದೇ ಮನಸ್ಸುಳ್ಳವರಾಗಿ । **ಉತ್**—ಉತ್ಕೃಷ್ಟವಾದ ನಿಮ್ಮ ಕರ್ತವ್ಯಗಳನ್ನು । **ಬುಧ್ಯಧ್ವಂ**—ಅರಿಯಿರಿ । **ಬಹವಃ**—ಬಹುಸಂಖ್ಯಾಕರಾದ ನೀವು । **ಸನೀಳಾಃ**—ಒಂದೇ ಗೃಹದಲ್ಲಿ ವಾಸಿಸುತ್ತ । **ಅಗ್ನಿಂ**—ಅಗ್ನಿಯನ್ನು । **ಸಮಿಧ್ವಂ**—ಪ್ರಜ್ವಲಿಸುವಂತೆ ಮಾಡಿರಿ । (ಎಲೈ ದೇವತೆಗಳೇ) **ಇಂದ್ರಾವತಃ**-ಇಂದ್ರನೊಡಗೂಡಿದ । **ದಧಿಕ್ರಾಂ**—ದಧಿಕ್ರಾ ಎಂಬ ದೇವತೆಯನ್ನೂ । **ಅಗ್ನಿಂ**—ಅಗ್ನಿಯನ್ನೂ । **ದೇವೀಂ ಉಷಸಂ**—ದೇವತಾತ್ಮಳಾದ ಉಷಸ್ಸನ್ನೂ । **ವಃ**—ನಿಮ್ಮೆಲ್ಲರನ್ನೂ । **ಅವಸೇ**—ರಕ್ಷಣಾರ್ಥವಾಗಿ । **ನಿ ಹ್ವಯೇ**—ಕರೆಯುತ್ತೇನೆ.

॥ ಭಾವಾರ್ಥ ॥

ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ, ಒಂದೇ ಮನಸ್ಸುಳ್ಳವರಾದ ನೀವು ನಿಮ್ಮ ಉತ್ಕೃಷ್ಟವಾದ ಕರ್ತವ್ಯಗಳನ್ನು ಅರಿಯಿರಿ. ಬಹುಸಂಖ್ಯಾಕರಾದ ನೀವು ಒಂದೇ ಗೃಹದಲ್ಲಿ ವಾಸಿಸುತ್ತ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿರಿ. ಎಲೈ ದೇವತೆಗಳೇ, ಇಂದ್ರನೊಡನೆ ಕೂಡಿದ ದಧಿಕ್ರಾದೇವತೆಯನ್ನೂ, ಅಗ್ನಿಯನ್ನೂ, ದೇವತಾತ್ಮಳಾದ ಉಷಸ್ಸನ್ನೂ, ನಿಮ್ಮೆಲ್ಲರನ್ನೂ ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇನೆ.

## English Translation.

Awake, friends, being all agreed; many in number, abiding in one dwelling, kindle Agni. I invoke you, Dhadhıkra, Agnı and the dıvıne Ushas, who are associated with Indra, for our protection.

॥ ವಿಶೇಷವಿಷಯಗಳು ॥

ಈ ಸೂಕ್ತದ ಕೆಲವು ಋಕ್ಕುಗಳಲ್ಲಿ ನೇಗಿಲಿಗೆ ಎತ್ತುಗಳನ್ನು ಹೂಡುವುದು, ಭೂಮಿಯನ್ನು ಉಳುವುದು ಭೂಮಿಗೆ ನೀರನ್ನು ಹಾಯಿಸುವುದು ಪೈರನ್ನು ಕೊಯ್ಯುವುದು ಮುಂತಾದ ಕೃಷಿಸಂಬಂಧವಾದ ವಿಷಯಗಳ ಪ್ರಸ್ತಾಪವಿದೆ. ಕೆಲವು ಋಕ್ಕುಗಳಿಗೆ ಯಜ್ಞಸಂಬಂಧವಾದ ಅರ್ಥವನ್ನೂ ಹೇಳಬಹುದು.

॥ ಸಂಹಿತಾಪಾಠಃ ॥

ಮಂದ್ರಾ ಕೃಣುಧ್ವಂ ಧಿಯ ಆ ತನುಧ್ವಂ ನಾವಮರಿತ್ರಪರಣೀಂ ಕೃಣುಧ್ವಂ।
ಇಷ್ಕೃಣುಧ್ವಮಾಯುಧಾರಂ ಕೃಣುಧ್ವಂ ಪ್ರಾಂಚಂ ಯಜ್ಞಂ ಪ್ರಣಯತಾ ಸಖಾಯಃ ॥ ೨ ॥

|| ಪದಪಾಠಃ ||

ಮಂದ್ರಾ । ಕೃಣುಧ್ವಂ । ಧಿಯಃ । ಆ । ತನುಧ್ವಂ । ನಾವಂ । ಅರಿತ್ರಽಪರಣೀಂ । ಕೃಣುಧ್ವಂ ।
ಇಷ್ಕೃಣುಧ್ವಂ । ಆಯುಧಾ । ಅರಂ । ಕೃಣುಧ್ವಂ । ಪ್ರಾಂಚಂ । ಯಜ್ಞಂ । ಪ್ರ । ನಯತ । ಸಖಾಯಃ ॥೨॥

|| ಸಾಯಣಭಾಷ್ಯಂ ||

ಮಂದ್ರಾ ಮಂದ್ರಾಣಿ ಮದಕರಾಣಿ ಸ್ತೋತ್ರಾಣಿ ಕೃಣುಧ್ವಂ । ಕುರುಧ್ವಂ ಹೇ ಸಖಾಯಃ ॥ ಕೃವಿ ಹಿಂಸಾಕರಣಯೋಃ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಅಕಾರಶ್ಚಾಂತಾದೇಶಃ । ಯದ್ವಾ । ಕರೋತೇರ್ವ್ಯತ್ಯಯೇನ ಶ್ನುಃ ॥ ತಥಾ ಧಿಯಃ ಕರ್ಮಾಣಿ ಚಯನಪ್ರದೇಶಕರ್ಷಣಾದೀನ್ಯಾತನುಧ್ವಂ । ವಿಸ್ತಾರಯತ । ತಥಾರಿತ್ರಪರಣೀಂ ಕರ್ಷಣಾದಿರೂಪೇಣಾರಿತ್ರೇಣ ಪಾರಯಿತವ್ಯಾಂ ನಾವಂ ಚಯನಾಖ್ಯಾಂ ಕೃಣುಧ್ವಂ । ಕುರುಧ್ವಂ । ತಥಾಯುಧಾಯುಧಾನಿ ಸೀರಯುಗಾದೀನ್ಯರಮಲಂ ಕೃಣುಧ್ವಂ। ಹೇ ಸಖಾಯ ಋತ್ವಿಜಃ ಪ್ರಾಂಚಂ ಪ್ರಾಗಂಚನಂ ಯಜ್ಞಂ ಯಷ್ಟವ್ಯಮಗ್ನಿಂ ಪ್ರ ಣಯತ । ಪ್ರಕರ್ಷೇಣ ನಯತ । ಆದೌ ಕರ್ಷಣಂ ಪ್ರಾಂಚಂ ಕುರುತೇತ್ಯರ್ಥಃ ॥

॥ಪ್ರತಿಪದಾರ್ಥ॥

**ಸಖಾಯಃ**—ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ । **ಮಂದ್ರಾ**—ಹರ್ಷಕಾರಕವಾದ ಸ್ತುತಿಗಳನ್ನು । **ಕೃಣುಧ್ವಂ**—ನಿರ್ಮಿಸಿರಿ । **ಧಿಯಃ**—ನಿಯಮಿತವಾದ ಕರ್ಮಗಳನ್ನು । **ಆ ತನುಧ್ವಂ**—ವಿಸ್ತರಿಸಿರಿ । **ಅರಿತ್ರಪರಣೀಂ**—ಕರ್ಷಣಾದಿಗಳಿಂದ ನಡೆಸತಕ್ಕ । **ನಾವಂ**—ಚಯನರೂಪವಾದ ದೋಣಿಯನ್ನು । **ಕೃಣುಧ್ವಂ**—ನಿರ್ಮಿಸಿರಿ । **ಆಯುಧಾ**—ಆಯುಧಗಳನ್ನು । **ಇಷ್ಕೃಣುಧ್ವಂ**—ಸಿದ್ಧಪಡಿಸಿರಿ । **ಅರಂ ಕೃಣುಧ್ವಂ**—ಅಲಂಕರಿಸಿರಿ । **ಪ್ರಾಂಚಂ**—ಅಂಜನದಿಂದ ಅಲಂಕೃತನೂ । **ಯಜ್ಞಂ**—ಪೂಜಾರ್ಹನೂ ಆದ ಅಗ್ನಿಯನ್ನು । **ಪ್ರಣಯತ**—ಕರೆದೊಯ್ಯಿರಿ.

॥ ಭಾವಾರ್ಥ ॥

ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ, ಹರ್ಷಕಾರಕವಾದ ಸ್ತುತಿಗಳನ್ನು ನಿರ್ಮಿಸಿರಿ. ನಿಯಮಿತವಾದ ಕರ್ಮಗಳನ್ನು ವಿಸ್ತರಿಸಿರಿ. ಕರ್ಷಣಾದಿಗಳಿಂದ (ಉಳುಮೆಯಿಂದ) ನಡೆಸತಕ್ಕ ಅಗ್ನಿಚಯನರೂಪವಾದ ದೋಣಿಯನ್ನು ನಿರ್ಮಿಸಿರಿ. ಆಯುಧಗಳನ್ನು ಸಿದ್ಧಪಡಿಸಿರಿ. ಅಲಂಕರಿಸಿರಿ. ಅಂಜನದಿಂದ ಅಲಂಕೃತನೂ, ಪೂಜಾರ್ಹನೂ ಆದ ಅಗ್ನಿಯನ್ನು ಕರೆದೊಯ್ಯಿರಿ. ಈ ಯಜ್ಞಸಿದ್ಧತೆಗಳನ್ನೆಲ್ಲಾ ಮಾಡಿರಿ.

## English Translation.

Construct exhilarating (hymns), spread forth praises, construct the ship which is propelled by oars, prepare your weapons, make ready, lead forth, O friends, the herald, the adorable (Agni).

|| ಸಂಹಿತಾಪಾಠಃ ||

ಯುನಕ್ತ ಸೀರಾ ವಿ ಯುಗಾ ತನುಧ್ವಂ ಕೃತೇ ಯೋನೌ ವಪತೇಹ ಬೀಜಂ | ಗಿರಾ ಚ ಶ್ರುಷ್ಟಿಃ ಸಭರಾ ಅಸನ್ನೋ ನೇದೀಯ ಇತ್ಸೃಣ್ಯಃ ಪಕ್ವಮೇಯಾತ್ || ೩ ||

|| ಪದಪಾಠಃ ||

ಯುನಕ್ತ | ಸೀರಾ | ವಿ | ಯುಗಾ | ತನುಧ್ವಂ | ಕೃತೇ | ಯೋನೌ | ವಪತ | ಇಹ | ಬೀಜಂ | ಗಿರಾ | ಚ | ಶ್ರುಷ್ಟಿಃ | ಸಽಭರಾಃ | ಅಸತ್ | ನಃ | ನೇದೀಯಃ | ಇತ್ | ಸೃಣ್ಯಃ | ಪಕ್ವಂ | ಆ | ಇಯಾತ್ ||

|| ಸಾಯಣಭಾಷ್ಯಂ ||

ಹೇ ಸಖಾಯಃ ಯೂಯಂ ಸೀರಾ ಸೀರಾಣಿ ಯುನಕ್ತ | ಯುಂಗ್ಧ್ವಮನಡುದ್ಭಿಃ ಸಹ || ಯುಜೇರ್ಲೋಟಿ ತಪ್ತನಪ್ತನಥನಾಶ್ಚೇತಿ ತಬಾದೇಶಃ | ಅತ ಏವಾಜಾಂತ್ವಾಚ್ಛ್ನಸೋರಲ್ಲೋಪ ಇತ್ಯಲ್ಲೋಪಾಭಾವಃ || ತದರ್ಥಂ ಯುಗಾ ಯುಗಾನಿ ವಿ ತನುಧ್ವಂ | ವಿಸ್ತಾರಯಧ್ವಂ | ಕೃತೇ ಚ ಯೋನಾವಿಹ ಸೀತಾಯಾಂ ಬೀಜಂ ಗ್ರಾಮ್ಯಮಾರಣ್ಯಂ ಚ ವಪತ ನಿಧತ್ತ | ತಿಲಮಾಷವ್ರೀಹ್ಯಾದಿಕಂ ಗ್ರಾಮ್ಯಸಪ್ತಕಂ ವೇಣುಶ್ಯಾಮಾಕನೀವಾರಾದಿಕಮಾರಣ್ಯಬೀಜಸಪ್ತಕಂ ಚ [ಕೃಷ್ಟಾಕೃಷ್ಟಯೋರ್ನಿವಪತೇತ್ಯರ್ಥಃ | ಸಪ್ತ ಗ್ರಾಮ್ಯಾಃ ಕೃಷ್ಟೇ ಸಪ್ತಾರಣ್ಯಾ ಅಕೃಷ್ಟ ಇತ್ಯಾಪಸ್ತಂಬಃ | ತಥಾ ನೋಽಸ್ಮಾಕಂ ಗಿರಾ ಸ್ತುತ್ಯಾ ಪ್ರಶಸ್ತ್ಯಾ ಸಹಾಸ್ಮಾಕಂ ಶ್ರುಷ್ಟಿರನ್ನಂ ಸಭರಾಃ ಸಭರಮಸತ್ | ಭವತಿ | ಭವತು | ತಥಾ ನೇದೀಯ ಇದಂತಿಕಮೇವ ಸೃಣ್ಯಃ | ಸೃಣಿರಂಕುಶಃ | ಅಂಕುಶವದ್ವಕ್ರೋ ಲವಿತ್ರಃ | ಪಕ್ವಂ ಸ್ತಂಬಮೇಯಾತ್ | ಅಭಿಮುಖ್ಯೇನ ಗಚ್ಛತು || ಶ್ರುಷ್ಟಿಃ ಸಭರಾ ಅಸತ್ ಸೃಣ್ಯಃ ಪಕ್ವಮೇಯಾದಿತಿ ಚಶಬ್ದಾನುವೃತ್ತೇಶ್ಚವಾಯೋಗೇ ಪ್ರಥಮೇತಿ ಪ್ರಥಮಸ್ಯ ನಿಘಾತಾಭಾವಃ ||

|| ಪ್ರತಿಪದಾರ್ಥ ||

(ಮಿತ್ರರಾದ ಎಲೈ ಋತ್ವಿಕ್ಕುಗಳೇ) | ಸೀರಾ—ಉಳುವ ನೇಗಿಲುಗಳನ್ನು | ಯುನಕ್ತ—ಎತ್ತುಗಳೊಡನೆ ಸೇರಿಸಿರಿ | ಯುಗಾ—ನೊಗಗಳನ್ನು | ವಿ ತನುಧ್ವಂ—ವಿಸ್ತರಿಸಿರಿ | ಕೃತೇ ಚ ಯೋನೌ—ಕ್ಷೇತ್ರವು ಸಿದ್ಧವಾದೊಡನೆಯೇ | ಇಹ—ಉತ್ತಿರುವ ಈ ಪ್ರದೇಶದಲ್ಲಿ | ಬೀಜಂ—ಬೀಜವನ್ನು | ವಪತ—ಬಿತ್ತಿರಿ | ಗಿರಾ—ಸ್ತುತಿಯಿಂದ | ಶ್ರುಷ್ಟಿಃ—ನಮ್ಮ ಅನ್ನವು | ಸಭರಾಃ—ಪುಷ್ಕಲವಾಗಿ | ಅಸತ್—ಬೆಳೆಯಲಿ | ನಃ ಸೃಣ್ಯಃ—ನಮ್ಮ ಕುಡುಗೋಲುಗಳು | ನೇದೀಯ ಇತ್—ಹತ್ತಿರದಲ್ಲಿಯೇ | ಪಕ್ವಂ—ಪಕ್ವವಾದ ಹೊಡೆಯನ್ನು | ಆ ಇಯಾತ್—ಸಮೀಪಿಸಲಿ.

|| ಭಾವಾರ್ಥ ||

ಮಿತ್ರರಾದ ಎಲೈ ಋತ್ವಿಕ್ಕುಗಳೇ, ಉಳುವ ನೇಗಿಲುಗಳಿಗೆ ಎತ್ತುಗಳನ್ನು ಹೂಡಿರಿ. ನೊಗಗಳನ್ನು ರಿಸಿರಿ. ಕ್ಷೇತ್ರವು ಸಿದ್ಧವಾದೊಡನೆಯೇ, ಉತ್ತಿರುವ ಪ್ರದೇಶದಲ್ಲಿ ಬೀಜವನ್ನು ಬಿತ್ತಿರಿ. ಸ್ತುತಿಯಿಂದ ನಮ್ಮ ವು (ಧಾನ್ಯವು) ಪುಷ್ಕಲವಾಗಿ ಬೆಳೆಯಲಿ. ನಮ್ಮ ಕುಡುಗೋಲಿಗೆ ಪಕ್ವವಾದ ಹೊಡೆಯು ಸಿಕ್ಕಲಿ.

## English Translation

Harness the ploughs, fit on the yokes, now that the womb of earth is dy, sow the seed therein, and through our praise may there be abundant d; may (the gain) fall ripe towards the sikle.

|| ವಿಶೇಷವಿಷಯಗಳು ||

**ಸೃಣ್ಯಃ**—ಸೃಣಿಃ ಎಂಬ ಶಬ್ದವನ್ನು ವಿವರಿಸುವಾಗ ಯಾಸ್ಕರು ಇದಕ್ಕೆ ನಿರ್ವಚನವನ್ನು ಹೇಳಿದ್ದಾರೆ—

**ಸೃಣಿರಂಕುಶೋ ಭವತಿ ಸರಣಾತ್ । ಅಂಕುಶೋಽಞ್ಚತೇರಾಕುಚಿತೋ ಭವತೀತಿ ವಾ । ನೇದೀಯ ಇತ್ಸೃಣ್ಯಃ ಪಕ್ವಮೇಯಾತ್ ಇತ್ಯಪಿ ನಿಗಮೋ ಭವತಿ । ಅಂತಿಕತಮಮಂಕುಶಾದಾಯೋತ್ಸಕ್ವಮೌಷಧಮಾಗಚ್ಛೇತ್ಸಿತ್ಯಾಗಚ್ಛೇತ್ಸಿತಿ ॥**

(ನಿ. ೫-೨೮)

**ಸೃಣಿ** ಎಂದರೆ ಅಂಕುಶವು ಅಥವಾ ಕೊಕ್ಕೆಯು (hook) ಸೃಣಿಶಬ್ದವು ಸರಿ, ಹೋಗು, ಪ್ರವೇಶಿಸು ರ್ಥವುಳ್ಳ ಸೃಧಾತುವಿನಿಂದ (ಸರಣಾತ್) ನಿಷ್ಪನ್ನವಾಗಿದೆ. ಏಕೆಂದರೆ ಅಂಕುಶವು ಆನೆಯ ಶಿರಸ್ಸಿನಲ್ಲಿ ಹೋಗು ಎಂದರೆ ಒಳಗೆ ಪ್ರವೇಶಿಸವುದು. ಅಂಕುಶಶಬ್ದವು ಹೋಗು ಪ್ರವೇಶಿಸು ಎಂಬರ್ಥವುಳ್ಳ ಅಂಚತಿ ಧಾತುವಿ ನಿಷ್ಪನ್ನವಾಗಿದೆ ಅಥವಾ **ಆಕುಚಿತೋ ಭವತೀತಿ** ಸ್ವಲ್ಪ ಬಗ್ಗಿರುವುದರಿಂದ ಅಂಕುಶವೆಂದು ಹೆಸರು. **ೀಯ ಇತ್ಸೃಣ್ಯಃ ಪಕ್ವಮೇಯಾತ್** ಎಂಬ ಶ್ರುತಿವಾಕ್ಯದಲ್ಲಿ ಸೃಣಿಶಬ್ದ ಪ್ರಯೋಗವಿರುವುದು. ಚೆನ್ನಾಗಿ ಗಿದ ಧಾನ್ಯದ ತೆನೆಯು ಈ ಅಂಕುಶ ಅಥವಾ ಸೃಣಿ ಎಂದರೆ ಕುಡುಗೋಲಿನ ಸಮೀಪಕ್ಕೆ ಬರುವುದು. ಎಂದರೆ ಗೋಲಿನಿಂದ ಧಾನ್ಯದ ತೆನೆಯನ್ನು ಕೊಯ್ಯುತ್ತಾರೆ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

**ಸೀರಾ ಯುಂಜಂತಿ ಕವಯೋ ಯುಗಾ ವಿ ತನ್ವತೇ ಪೃಥಕ್ ।**

**ಧೀರಾ ದೇವೇಷು ಸುಮ್ನಯಾ ॥ ೪ ॥**

॥ ಪದಪಾಠಃ ॥

ಸೀರಾ । ಯುಂಜಂತಿ । ಕವಯಃ । ಯುಗಾ । ವಿ । ತನ್ವತೇ । ಪೃಥಕ್ ।

ಧೀರಾಃ । ದೇವೇಷು । ಸುಮ್ನऽಯಾ ॥ ೪ ॥

॥ ಸಾಯಣಭಾಷ್ಯಂ ॥

ಕವಯೋ ಮೇಧಾವಿನ ಋತ್ವಿಜಃ ಸೀರಾ ಸೀರಾಣಿ ಕರ್ಷಣಸಾಧನಾನಿ ಯುಂಜಂತಿ । ಯೋಜಯಂತಿ । ಯುಗಾ ಯುಗಾನ್ಯಪಿ ಪೃಥಕ್ ಪರಸ್ಪರಂ ವಿ ತನ್ವತೇ । ಭಿನ್ನಪ್ರದೇಶಾನಿ ಕುರ್ವಂತಿ । ಕೀದೃಶಾಃ ಕವಯಃ । ದೇವೇಷು ವಿಷಯೇ ಧೀರಾ ಧೀಮಂತಃ । ಕಿಮರ್ಥಂ । ಸುಮ್ನಯಾ । ಸುಮ್ನಮಿತಿ ಸುಖನಾಮ । ಸುಖೇಚ್ಛಯಾ ॥ ಸುಮ್ನಶಬ್ದಾತ್ಕ್ಯಜಂತಾದ್ಭಾವೇ ಅ ಪ್ರತ್ಯಯಾದಿತ್ಯಕಾರಪ್ರತ್ಯಯಃ । ಸುಪಾಂ ಸುಲುಗಿತಿ ತೃತೀಯಾಯಾ ಆಕಾರಃ ॥ ಅಥವಾ । ಧೀರಾ ಧೀಮಂತೋ ದೇವೇಷು ಸುಮ್ನಯಾ ಸುಮ್ನೇನ । ದೇವೇಷು ಸುಖಂ ಭೂಯಾದಿತಿ ॥ ಸುಪಾಂ ಸುಲುಗಿತಿ ವಿಭಕ್ತೇರ್ಯಾಜಾದೇಶಃ ॥

॥ ಪ್ರತಿಪದಾರ್ಥ ॥

**ಸುಮ್ನಯಾ**—ಸುಖಾರ್ಥವಾಗಿ । **ದೇವೇಷು**—ದೇವತೆಗಳಲ್ಲಿ । **ಧೀರಾಃ**—ಪ್ರಾಜ್ಞತೆಯಿಂದ ಕೂಡಿದ ಭಕ್ತಿಯುಳ್ಳವರಾದ । **ಕವಯಃ**—ಋತ್ವಿಕ್ಕುಗಳು । **ಸೀರಾ**—ನೇಗಿಲುಗಳನ್ನು । **ಯುಂಜಂತಿ**—ಸೇರಿಸುತ್ತಾರೆ । **ಯುಗಾ**—ನೊಗಗಳನ್ನು । **ಪೃಥಕ್**—ಬೇರೆಬೇರೆ ಮಾಡಿ । **ವಿ ತನ್ವತೇ**—ವಿಸ್ತರಿಸುತ್ತಾರೆ.

॥ ಭಾವಾರ್ಥ ॥

ಸುಖವನ್ನಪೇಕ್ಷಿಸಿ ದೇವತೆಗಳಲ್ಲಿ ಪ್ರಾಜ್ಞತೆಯಿಂದ ಕೂಡಿದ ಭಕ್ತಿಯುಳ್ಳವರಾದ ಋತ್ವಿಕ್ಕುಗಳು ನೇಗಿಲುಗಳನ್ನು ಸೇರಿಸುತ್ತಾರೆ. ನೊಗಗಳನ್ನು ಬೇರೆಬೇರೆ ಮಾಡಿ ವಿಸ್ತರಿಸುತ್ತಾರೆ.

## English Translation.

The wise (priests) harness the ploughs, they lay the yokes apart, firmly devoted through the desire of happiness.

॥ ಸಂಹಿತಾಪಾಠಃ ॥

ನಿರಾಹಾವಾನ್ಕೃಣೋತನ ಸಂ ವರತ್ರಾ ದಧಾತನ ।

ಸಿಂಚಾಮಹಾ ಅವತಮುದ್ರಿಣಂ ವಯಂ ಸುಷೇಕಮನುಪಕ್ಷಿತಂ ॥ ೫ ॥

|| ಪದಪಾಠಃ ||

ನಿಃ । ಆऽಹಾವಾನ್ । ಕೃಣೋತನ । ಸಂ । ವರತ್ರಾಃ । ದಧಾತನ ।

ಸಿಂಚಾಮಹೈ । ಅವತಂ । ಉದ್ರಿಣಂ । ವಯಂ । ಸುऽಸೇಕಂ । ಅನುಪಽಕ್ಷಿತಂ ॥ ೫ ॥

|| ಸಾಯಣಭಾಷ್ಯಂ ||

ಹೇ ಸಖಾಯಃ ಆಹಾವಾನ್। ಆಹೂಯಂತೇ ಪಾನಾರ್ಥಂ ಗಾವೋऽತ್ರೇತ್ಯಾಹಾವಾ ನಿಪಾನಾನಿ । ಅತ್ರೌಚಿತ್ಯಾದಗ್ನಿಚಯನಪ್ರದೇಶಕರ್ಷಣಾರ್ಥಗೋಪಾನಸಾಧನದ್ರುಮಮಯಪಾನಪಾತ್ರಾಣ್ಯುಚ್ಯಂತೇ ತಾನಾಹಾವಾನ್ ನಿಷ್ಕೃಣೋತನ । ನಿಷ್ಕುರುತ ॥ ಆಹೂಯತೇರ್ನಿಪಾನಮಾಹಾವಃ । ಪಾ. ೩-೩-೭೪ । ಇತಿ ನಿಪಾತಿತಃ । ಥಾಥಾದಿಸ್ವರಃ । ಕೃಣೋತನ । ತಪ್ತನಬಿತ್ಯಾದಿನಾ ತನಪ್ । ತೇನಾಙಿತ್ತ್ವಾದ್ಗುಣಃ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ ॥ ಕಿಮರ್ಥಮಾಹಾವಕರಣಂ ವರತ್ರಸ್ಥಾಪನಂ ಚೇತಿ । ಅತ್ರೋಚ್ಯತೇ । ವಯಮವತಮವಟಂ ಸಿಂಚಾಮಹೈ । ಕೀದೃಶಮವಟಂ । ಉದ್ರಿಣಮುದ್ಧ್ರಾವವಂತಂ ಸುಷೇಕಂ ಸುಷ್ಠು ಸೇಕ್ತುಂ ಶಕ್ಯಂ ಅನುಪಕ್ಷಿತಮನುಪಕ್ಷೀಣಂ ಕದಾಚಿದುದಕೋಪಕ್ಷಯರಹಿತಂ ॥

|| ಪ್ರತಿಪದಾರ್ಥ ||

(ಎಲೈ ಋತ್ವಿಕ್ಕುಗಳೇ) **ಆಹಾವಾನ್**—ಎತ್ತುಗಳಿಗೆ ನೀರನ್ನು ತೋರಿಸುವ ತೊಟ್ಟಿಗಳನ್ನು । **ನಿಷ್ಕೃಣೋತನ**—ನಿರ್ಮಿಸಿರಿ । **ವರತ್ರಾಃ**—ಎತ್ತುಗಳ ಕತ್ತು ಪಟ್ಟಿಗಳನ್ನು । **ಸಂ ದಧಾತನ**—ಸೇರಿಸಿ ಕಟ್ಟಿರಿ **ವಯಂ**—ನಾವು । **ಉದ್ರಿಣಂ**—ನೀರಿನ ಬುಗ್ಗೆಯಿಂದ ಕೂಡಿದುದೂ । **ಸುಷೇಕಂ**—ಸುಲಭವಾಗಿ ಸೇದಬಲ್ಲ ನೀರುಳ್ಳದ್ದೂ । **ಅನುಪಕ್ಷಿತಂ**—ಎಷ್ಟು ನೀರನ್ನು ತೆಗೆದರೂ ಶೋಷಿಸಲ್ಪಡದಿರುವುದೂ ಆದ । **ಅವತಂ**—ಬಾವಿಯ ನೀರನ್ನು । **ಸಿಂಚಾಮಹೈ**—ಎಳೆದು ಸುರಿಯೋಣ.

|| ಭಾವಾರ್ಥ ||

ಎಲೈ ಋತ್ವಿಕ್ಕುಗಳೇ, ಎತ್ತುಗಳಿಗೆ ನೀರನ್ನು ತೋರಿಸುವ ತೊಟ್ಟಿಗಳನ್ನು ನಿರ್ಮಿಸಿರಿ. ಎತ್ತುಗಳಿಗೆ ಕತ್ತುಪಟ್ಟಿಗಳನ್ನು ಸೇರಿಸಿ ಕಟ್ಟಿರಿ. ನಾವು ನೀರಿನ ಬುಗ್ಗೆಯಿಂದ ಕೂಡಿರುವುದೂ, ಸುಲಭವಾಗಿ ಸೇದಬಲ್ಲ ನೀರುಳ್ಳದ್ದೂ, ಎಷ್ಟು ನೀರನ್ನು ಸೆಳೆದರೂ ಶೋಷಿಸಲ್ಪಡದಿರುವುದೂ ಆದ ಬಾವಿಯ ನೀರನ್ನು ಎಳೆದು ಸುರಿಯೋಣ.

English Translation

Set up the cattle-troughs, bind the straps to it; let us pour out (the water of) the well, which is full of water, fit to be poured out, and not easily exhausted.

॥ ಸಂಹಿತಾಪಾಠಃ ॥

ಇಷ್ಕೃತಾಹಾವಮವತಂ ಸುವರತ್ರಂ ಸುಷೇಚನಂ ।

ಉದ್ರಿಣಂ ಸಿಂಚೇ ಅಕ್ಷಿತಂ ॥ ೬ ॥

॥ ಪದಪಾಠಃ ॥

ಇಷ್ಕೃತಽಆಹಾವಂ । ಅವತಂ । ಸುಽವರತ್ರಂ । ಸುಽಸೇಚನಂ ।

ಉದ್ರಿಣಂ । ಸಿಂಚೇ । ಅಕ್ಷಿತಂ ॥ ೬ ॥

॥ ಸಾಯಣಭಾಷ್ಯಂ ॥

ಇಷ್ಕೃತಾಹಾವಂ ಸಂಸ್ಕೃತಾಹಾವಮವತಮವಟಂ ದ್ರೋಣಂ ಸಿಂಚೇ । ಸೇಚಯಾಮಿ । ಪುನಃ ಕೀದೃಶಮವಟಂ । ಸುವರತ್ರಂ ಶೋಭನವರತ್ರೋಪೇತಂ ಸುಷೇಚನಂ ಶೋಭನೋದಕಸೇಕೋಪೇತಂ ಉದ್ರಿಣಮುದ್ದ್ರಾವವಂತಂ ಅಕ್ಷಿತಮಕ್ಷೀಣಂ ॥

॥ ಪ್ರತಿಪದಾರ್ಥ ॥

ಇಷ್ಕೃತಾಹಾವಂ—ಎತ್ತುಗಳು ಕುಡಿಯಲು ಸಿದ್ಧಪಡಿಸಿರುವುದೂ । **ಸುವರತ್ರಂ**—ಉತ್ತಮವಾದ ಕಟ್ಟೆಯಿಂದ ಯುಕ್ತವಾಗಿರುವುದೂ । **ಸುಷೇಚನಂ**—ಸುಲಭವಾಗಿ ಎಳೆಯಲ್ಪಡತಕ್ಕದ್ದೂ । **ಉದ್ರಿಣಂ**—ಬುಗೆಯಂತಿರುವ ನೀರುಳ್ಳದ್ದೂ । **ಅಕ್ಷಿತಂ**—ತುಂಬಾ ನೀರು ಹಿಡಿಸುವುದೂ ಆದ । **ಅವತಂ**—ಬಾವಿಯಂತಿರುವ ತೊಟ್ಟಿಯನ್ನು । **ಸಿಂಚೇ**—ನೀರಿನಿಂದ ತುಂಬುತ್ತೇನೆ.

॥ ಭಾವಾರ್ಥ ॥

ಎತ್ತುಗಳು ಕುಡಿಯಲು ಸಿದ್ಧಪಡಿಸಿರುವುದೂ, ಉತ್ತಮವಾದ ಕಟ್ಟೆಯಿಂದ ಯುಕ್ತವಾಗಿರುವುದೂ, ಸುಲಭವಾಗಿ ಎಳೆಯಲ್ಪಡತಕ್ಕದ್ದೂ, ಬುಗ್ಗೆಯಂತಿರುವ ನೀರುಳ್ಳದ್ದೂ, ತುಂಬಾ ನೀರಿರುವುದೂ ಆದ ಬಾವಿಯಂತಿರುವ ತೊಟ್ಟಿಯನ್ನು ನೀರಿನಿಂದ ತುಂಬುತ್ತೇನೆ.

## English Translation.

I pour out (the water of) the well, whose cattle troughs are prepared, well fitted with straps, fit to be poured out, full of water, inexhaustible.

॥ ಸಂಹಿತಾಪಾಠಃ

ಪ್ರೀಣೀತಾಶ್ವಾನ್ಹಿತಂ ಜಯಾಥ ಸ್ವಸ್ತಿವಾಹಂ ರಥಮಿತ್ಕೃಣುಧ್ವಂ ।
ದ್ರೋಣಾಹಾವಮವತಮಶ್ಮಚಕ್ರಮಂಸತ್ರಕೋಶಂ ಸಿಂಚತಾ ನೃಪಾಣಂ ॥೭॥

॥ ಪದಪಾಠಃ ॥

ಪ್ರೀಣೀತ । ಅಶ್ವಾನ್ । ಹಿತಂ । ಜಯಾಥ । ಸ್ವಸ್ತಿऽವಾಹಂ । ರಥಂ । ಇತ್ । ಕೃಣುಧ್ವಂ ।
ದ್ರೋಣऽಆಹಾವಂ । ಅವತಂ । ಅಶ್ಮऽಚಕ್ರಂ । ಅಂಸತ್ರऽಕೋಶಂ । ಸಿಂಚತ । ನೃऽಪಾನಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ಯೂಯಮಶ್ವಾನ್ವ್ಯಾಪನಶೀಲಾನ್ಬಲಿವರ್ದಾನ್ಪ್ರೀಣೀತ । ಉಚಿತಘಾಸೋದಕಾದಿಪ್ರದಾನೇನ ಪ್ರೀಣಯತ । ಯಥಾ ಕ್ಷೇತ್ರಕರ್ಷಣಾಯ ಪ್ರಭವಂತಿ ತಥಾ ಕುರುತೇತ್ಯರ್ಥಃ । ತಥಾ ಕೃತ್ವಾ ಹಿತಂ ಚಯನಾಯೋಚಿತಂ ಕರ್ಷಣಂ ಜಯಾಥ । ಜಯಥ । ಸಂಪಾದಯಥ । ತಥಾ ರಥಂ ಚಯನಾಖ್ಯಂ ಹಲಾಖ್ಯಂ ವಾ ಸ್ವಸ್ತಿವಾಹಮಿತ್ ಸುಖಸ್ಯ ವಾಹಕಮೇವ ಕೃಣುಧ್ವಂ । ಕುರುಧ್ವಂ । ತದರ್ಥಂ ದ್ರೋಣಾಹಾವಂ । ಆಹೂಯಂತ್ಯತ್ರ ಪಾನಾರ್ಥಂ ಬಲಿವರ್ದಾನಿತ್ಯಾಹಾವೋ ಜಲಾಧಾರಃ ಪಾತ್ರವಿಶೇಷಃ । ಸ ಚ ದ್ರೋಣಮಯೋ ದ್ರುಮಮಯ ಆಹಾವೋ ಯಸ್ಯ ತಾದೃಶಮವತಮವಟವನ್ನಿಮ್ನಭೂತಮಶ್ಮಚಕ್ರಂ ವ್ಯಾಪ್ತಕ್ರಮಣಮಶ್ಮಮಯಚಕ್ರಂ ವಾಂಸತ್ರಕೋಶಂ ಅಂಸತ್ರಂ ಕವಚಂ ಯಥಾ ಕಾಯಂ ರಕ್ಷತಿ ತದ್ವದುದಕಸ್ಯ ಕೋಶಂ ಕೋಶಸ್ಥಾನೀಯಂ ನೃಪಾಣಂ ನೄಣಾಂ ಕರ್ಮನೇತೄಣಾಂ ಪಾನಯೋಗ್ಯಮೀದೃಶಮವತಂ ಸಿಂಚತ ಹೇ ಋತ್ವಿಜಃ । ಏವಮೃತ್ವಿಕ್ಸ್ತುತಿರ್ವೇತಿ ಪಕ್ಷೇ । ಸೂಕ್ತಸ್ಯ ವೈಶ್ವದೇವಪಕ್ಷ ಏವಂ ಯೋಜನಾ । ಪ್ರೀಣೀತ ಪ್ರೀಣಯತಾಶ್ವಾನ್ । ಸ್ನಾನಪಾನಯೋಗ್ಯಾನ್ನೈಃ ಸಂಗ್ರಾಮಯೋಗ್ಯಾನ್ಕುರುತೇತ್ಯರ್ಥಃ । ಹಿತಂ ಜಯಾಥ । ಹಿತಮಿತಿ ಕ್ರಿಯಾವಿಶೇಷಣಂ । ಕಥಂ ಜಯಥ । ಬಂಧುಸುಹೃದ್ಭ್ಯಃ ಯಥಾ ಹಿತಂ ಭವತಿ ತಥಾ ಜಯಥ ಸಂಗ್ರಾಮಂ । ಸ್ವಸ್ತಿವಾಹಂ। ಸ್ವಸ್ತೀತ್ಯವಿನಾಶನಾಮ । ಅವಿನಾಶವಾಹನಂ ರಥಮಿದ್ರಥಂ ಚ ಕೃಣುಧ್ವಂ । ಇದಿತಿ ಚಾರ್ಥೇ । ಅಶ್ವರಥಂ ಚ ದೃಢಂ ಕೃತ್ವಾ ಸಂಗ್ರಾಮಭೂಮಿಂ ಗತ್ವಾ ದ್ರೋಣಾಹಾವಮಿತ್ಯಾದೀನಿ ದ್ವಿತೀಯಾಂತಾನಿ ಕೂಪಾಖ್ಯಸಂಗ್ರಾಮವಿಶೇಷಣಾನಿ ಸಿಂಚತೇತ್ಯನೇನ ಸಂಬಧ್ಯತೇ । ದ್ರೋಣೋ ದ್ರುಮಮಯಃ ಸ ಏವ ರಥ ಆಹಾವ ಆಹಾವಸ್ಥಾನೀಯೋ ಯಸ್ಯ ಸಂಗ್ರಾಮಸ್ಯ ತಂ । ಅವತಂ । ಕೂಪನಾಮೈತತ್ । ಕೂಪಂ ಸಂಗ್ರಾಮಾಖ್ಯಂ । ಅಶ್ಮಚಕ್ರಂ ಕೂಪಪ್ರಾಂತನಿಬದ್ಧಾಶ್ಮಸದೃಶಪ್ರಹರಣಾಯುಧವಂತಂ । ಅಸನಾನಿ ವಾ ಕ್ಷೇಪಣಾನಿ ವಾ ಚಕ್ರಾಖ್ಯಾಯುಧವಿಶೇಷಾ ಯಸ್ಮಿನ್ ತಂ । ವ್ಯಾಪ್ತಚರಣವಂತಂ ವ್ಯಾಪ್ತಕ್ರಮಣವಂತಂ ವಾ । ಚಕ್ರಂ ಚಕತೇರ್ವಾ ಚರತೇರ್ವಾ ಕ್ರಾಮತೇರ್ವೇತಿ ನಿರುಕ್ತಂ । ೪-೨೭ । ಅಂಸತ್ರಕೋಶಂ

ಅಂಸತ್ರಾಣಿ ಧನೂಂಷಿ ಕವಚಾನಿ ಚ ಕೋಶಸ್ಥಾನೀಯಾನಿ ಯಸ್ಮಿನ್ ತಂ ಸಿಂಚತ । ನೃಪಾಣಂ ಯಸ್ಮಿನ್ನುದ್ಧಾರ ಉದಕವತ್ಪೀಯಂತೇ ಮಾರ್ಯಂತೇ ತಂ । ಈದೃಶಂ ಕೂಪಸದೃಶಂ ಸಂಗ್ರಾಮಂ ಸಿಂಚತ ಹೇ ಅಸ್ಮದೀಯಾ ಯೋದ್ಧಾರಃ । ಸೂಕ್ತಸ್ಯ ವೈಶ್ವದೇವತ್ವಾದ್ಧೇ ಸೈನಿಕಾ ವಿಶ್ವೇಷಾಂ ದೇವಾನಾಂ ಪ್ರಸಾದೇನ ಸರ್ವಮೇತತ್ಕುರುತೇತ್ಯರ್ಥಃ । ಏವಂ ನಿರಾಹಾವಾನಿತ್ಯಾದಿಷು ಕೂಪರೂಪವ್ಯಾಜೇನ ಸಂಗ್ರಾಮವರ್ಣನಮವಗಂತವ್ಯಂ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ಅಶ್ವಾನ್**—ಸರ್ವತ್ರ ಸಂಚರಿಸುವ ಎತ್ತುಗಳನ್ನು । **ಪ್ರೀಣೀತ**—ತೃಣಾದಿಗಳನ್ನು ಕೊಟ್ಟು ತೃಪ್ತಿಪಡಿಸಿರಿ । **ಹಿತಂ**—ಉಳುವುದೇ ಮುಂತಾದ ಕಾರ್ಯವನ್ನು । **ಜಯಾಥ**—ಮಾಡಿ ಮುಗಿಸಿರಿ । **ರಥಂ**—ರಥವನ್ನು । **ಸ್ವಸ್ತಿವಾಹಂ ಇತ್**—ಕಲ್ಯಾಣಾತ್ಮಕವಾದ ಸಂಪತ್ತನ್ನು ವಹಿಸುವಂತೆ । **ಕೃಣುಧ್ವಂ**—ಮಾಡಿರಿ । **ಅವತಂ**—ಬಾವಿಯಂತೆ ಆಳವಾಗಿರುವುದೂ । **ಅಶ್ಮಚಕ್ರಂ**—ಕಲ್ಲಿನಿಂದಲೇ ಮಾಡಿದ ಚಕ್ರವುಳ್ಳದ್ದೂ । **ಅಂಸತ್ರಕೋಶಂ**—ಕವಚದಂತೆ ಉದಕಕ್ಕೆ ರಕ್ಷಕವಾದುದೂ । **ನೃಪಾಣಂ**—ಮಾನವರು ಕುಡಿಯಲು ಯೋಗ್ಯವಾದ ನೀರುಳ್ಳದ್ದೂ ಆದ । **ದ್ರೋಣಾಹಾವಂ**—ನೀರಿನ ತೊಟ್ಟಿಯನ್ನು । **ಸಿಂಚತ**—ನೀರಿನಿಂದ ತುಂಬಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಸರ್ವತ್ರ ಸಂಚರಿಸಬಲ್ಲ ಎತ್ತುಗಳನ್ನು ತೃಣಾದಿಗಳನ್ನು ಕೊಟ್ಟು ತೃಪ್ತಿಪಡಿಸಿರಿ. ಉಳುವುದೇ ಮುಂತಾದ ಕಾರ್ಯಗಳನ್ನು ಮಾಡಿ ಮುಗಿಸಿರಿ. ರಥಕ್ಕೆ ಕಲ್ಯಾಣಾತ್ಮಕವಾದ ಸಂಪತ್ತುಗಳನ್ನು ತುಂಬಿರಿ. ಬಾವಿಯಂತೆ ಆಳವಾಗಿರುವುದೂ, ಕಲ್ಲಿನಿಂದಲೇ ಮಾಡಿದ ಚಕ್ರವುಳ್ಳದ್ದೂ, ಉದಕಕ್ಕೆ ಕವಚದಂತೆ ರಕ್ಷಕವಾದುದೂ, ಮಾನವರು ಕುಡಿಯಲು ಯೋಗ್ಯವಾದ ನೀರುಳ್ಳದ್ದೂ ಆದ ನೀರಿನ ತೊಟ್ಟಿಯನ್ನು ನೀರಿನಿಂದ ತುಂಬಿರಿ.

## English Translation.

Satisfy the horses, accomplish the good work (of ploughing), equip a car laden with good fortune, pour out (the water of) the well having a stone rim, having a receptacle like armour, fit for the drinking of men.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಭಾಷ್ಯಕಾರರು ಎರಡು ವಿಧವಾದ ಅರ್ಥವನ್ನು ಹೇಳಿದಾರೆ. ಒಂದು ಋತ್ವಿಕ್‌ಪಕ್ಷ; ಮತ್ತೊಂದು ವೈಶ್ವದೇವಪಕ್ಷ. ಋತ್ವಿಕ್ಕುಗಳನ್ನು ಸಂಬೋಧಿಸಿ ಹೇಳಿರುವುದು ಋತ್ವಿಕ್ (ಯಜ್ಞ) ಪಕ್ಷವು. ಅದನ್ನೇ ಮೇಲೆ ತಿಳಿಸಿದೆ. ವೈಶ್ವದೇವಪಕ್ಷವು (ಯುದ್ಧಪಕ್ಷವು) ಈ ರೀತಿ ಇದೆ—

॥ ಪ್ರತಿಪದಾರ್ಥ ॥

(ಎಲೈ ಸೈನಿಕರೇ) **ಅಶ್ವಾನ್**—ಕುದುರೆಗಳನ್ನು । **ಪ್ರೀಣೀತ**—ಆಹಾರಾದಿಗಳಿಂದಲೂ, ನೀರಿನಿಂದಲೂ, ತೃಪ್ತಿ ಪಡಿಸಿ ಯುದ್ಧದಲ್ಲಿ ಭಾಗವಹಿಸಲು ಯೋಗ್ಯವಾಗುವಂತೆ ಮಾಡಿರಿ । **ಹಿತಂ**—ಬಂಧುಗಳಿಗೂ ಸ್ನೇಹಿತ

ರಿಗೂ ಹಿತವಾಗುವಂತೆ | **ಜಯೋಥ**—ಯುದ್ಧದಲ್ಲಿ ಜಯವನ್ನು ಪಡೆಯಿರಿ | **ಸ್ವಸ್ತಿವಾಹಂ**—ಕಲ್ಯಾಣಾತ್ಮಕವಾದ ಸಂಪತ್ತನ್ನು ವಹಿಸಲು ಸಮರ್ಥವಾಗುವಂತೆ | **ರಥಮಿತ್**—ರಥವನ್ನು | **ಕೃಣುಧ್ವಂ**—ಸಿದ್ಧಪಡಿಸಿ | **ದ್ರೋಣಾಹಾವಂ**—ಮರದಿಂದ ನಿರ್ಮಿತವಾದ ರಥಗಳ ಸಂಚಾರವುಳ್ಳದ್ದೂ | **ಅಶ್ಮಚಕ್ರಂ**—ಭಾವಿಯ ಕಲ್ಲಿನರಾಟೆಯಂತಿರುವ ಮತ್ತು ಶತ್ರುಗಳ ಮೇಲೆ ಎಸೆಯಲ್ಪಡುವ ಚಕ್ರಾದ್ಯಾಯುಧಗಳಿಂದ ಸುಸಜ್ಜಿತವಾದುದೂ | **ಅಂಸತ್ರಕೋಶಂ**—ಧನಸ್ಸು, ಕವಚ ಮೊದಲಾದ ರಕ್ಷಣಾಸಾಧನಗಳುಳ್ಳದ್ದೂ | **ನೃಪಾಣಂ**—ಯುದ್ಧಕರ್ಮಗಳಲ್ಲಿ ನೇತೃಗಳಾದ (ನಾಯಕರಾದ) ಮುಖಂಡರುಗಳಿಂದ ಪೂರ್ಣವಾದುದೂ ಆದ | **ಅವತಂ**—ಯುದ್ಧಭೂಮಿಯನ್ನು | **ಸಿಂಚತ**—ಸೇವಿಸಿರಿ |

॥ ಭಾವಾರ್ಥ ॥

ಎಲೈ ಸೈನಿಕರೇ, ಕುದುರೆಗಳಿಗೆ ಹುಲ್ಲನ್ನೂ, ನೀರನ್ನೂ ಕೊಟ್ಟು ಅವು ಯುದ್ಧದಲ್ಲಿ ಹೋರಾಡಲು ಅನುಕೂಲವಾಗುವಂತೆ ಸಿದ್ಧಪಡಿಸಿರಿ. ಬಂಧುಗಳಿಗೂ ಹಿತೈಷಿಗಳಿಗೂ ಸಂತೋಷವುಂಟಾಗುವುದಕ್ಕಾಗಿ ಜಯವನ್ನು ಗಳಿಸಿರಿ. ಯುದ್ಧದಲ್ಲಿ ಶತ್ರುಗಳನ್ನು ಸೋಲಿಸಿ ಅವರ ಧನಾದಿಸಂಪತ್ತುಗಳನ್ನು ದೋಚಿ ತರಲು ಅನುಕೂಲವಾಗುವಂತೆ ರಥವನ್ನು ಸಜ್ಜುಗೊಳಿಸಿರಿ. ಯುದ್ಧಭೂಮಿಯಲ್ಲಿ ಮರದಿಂದ ನಿರ್ಮಿತವಾದ ರಥಗಳು ಓಡಾಡುತ್ತಿರುವುವು. ಶತ್ರುಗಳ ಮೇಲೆ ಚಕ್ರಾದ್ಯಯುಧಗಳನ್ನು ಪ್ರಯೋಗಿಸಲಾಗುವುದು. ಆತ್ಮರಕ್ಷಣಾರ್ಥವಾಗಿ ಕವಚವನ್ನೂ ಶತ್ರುಗಳನ್ನು ಹಿಂಸಿಸುವುದಕ್ಕಾಗಿ ಧನುಸ್ಸನ್ನೂ ಉಪಯೋಗಿಸಲಾಗುವುದು. ಯುದ್ಧಕರ್ಮಕುಶಲರಾದ ನಾಯಕರ ಸಂಮೇಳನವು ಅಲ್ಲಿರುವುದು. ಇಂತಹ ಯುದ್ಧಭೂಮಿಯಲ್ಲಿ ನೀವು ಹೋಗಿ ಸೇರಿ ಶತ್ರುಗಳನ್ನು ಜಯಿಸಿ ನಿಮ್ಮ ಶೌರ್ಯಾದಿಗಳನ್ನು ಪ್ರಕಟಿಸಿರಿ.

ಈ ಎರಡು ವಿಧವಾದ ಅರ್ಥಗಳಲ್ಲಿ ಮೊದಲನೆಯದು ಕೃಷಿಕರ್ಮವನ್ನು ವರ್ಣಿಸುವುದಾಗಿದೆ. ಎರಡನೆಯದರಲ್ಲಿ ಯುದ್ಧಭೂಮಿಯ ವರ್ಣನೆ ಇದೆ. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

> **ಪ್ರೀಣೀತಾಶ್ವಾನ್ ಸುಹಿತಂ ಜಯಥ ಜಯನಂ ವೋ ಹಿತಮಸ್ತು ಸ್ವಸ್ತಿವಾಹನಂ ರಥಂ ಕುರುಧ್ವಂ ದ್ರೋಣಾಹಾವಂ ದ್ರೋಣಂ ದ್ರುಮಮಯಂ ಭವತಿ | ಆಹಾವ ಆಹ್ವಾನಾದಾವಹ ಆವಹನಾದವತೋಽವಾತಿತೋ ಮಹಾನ್ ಭವತ್ಯಶ್ಮಚಕ್ರಮಸನಚಕ್ರಮಿತಿ ವಾ ಅಂಸತ್ರಕೋಶಮಂಸತ್ರಾಣಿ ವಃ ಕೋಶಸ್ಥಾನೀಯಾನಿ ಸಂತು ಕೋಶಃ ಕುಷ್ಣಾತೇರ್ವಿಕುಷಿತೋ ಭವತಿ | ಅಯಮಪೀತರಃ ಕೋಶ ಏತಸ್ಮಾದೇವ ಸಂಚಯ ಆಚಿತಮಾತ್ರೋಽಮಹಾನ್ ಭವತಿ ಸಿಂಚತ ನೃಪಾಣಂ ನರಪಾಣಂ ಕೂಪಕರ್ಮಣಾ ಸಂಗ್ರಾಮಮುಪಮಿಮೀತೇ ||**
>
> (ನಿ. ೫-೨೬)

ಈ ನಿರುಕ್ತದಲ್ಲಿ ಯಾಸ್ಕರು (ಅಥವಾ ಸೂಕ್ತದ ಋಷಿಯು) ಯುದ್ಧಭೂಮಿಯನ್ನು ಒಂದು (ನೀರಿನ) ಭಾವಿಗೆ ಹೋಲಿಸಿ ವರ್ಣನೆ ಮಾಡಿರುತ್ತಾರೆ.

**ಪ್ರೀಣೀತಾಶ್ವಾನ್**—ಯುದ್ಧಕ್ಕೆ ಸಿದ್ಧವಾಗುವುದಕ್ಕಾಗಿ ಅಶ್ವಗಳಿಗೆ ಹುಲ್ಲನ್ನೂ ನೀರನ್ನೂ ಒದಗಿಸಿ ಅವುಗಳನ್ನು ಸಂತೋಷಪಡಿಸಿರಿ.

**ಸುಹಿತಂ ಜಯಥ ಜಯೇನಂ ವೋ ಹಿತಮಸ್ತು**—ಯುದ್ಧಗಳಲ್ಲಿ ಭಾಗವಹಿಸುವ ಸೈನಿಕರಲ್ಲಿ ಬಂಧುಗಳೂ ಸ್ನೇಹಿತರೂ ಇದ್ದೇ ಇರುವರು. ಇವರಲ್ಲಿ ಕೆಲವರಾದರೂ ಯುದ್ಧದಲ್ಲಿ ಮಡಿಯುವರು ಆದ್ದರಿಂದ ಯುದ್ಧವು ಸ್ವಲ್ಪ ಮಟ್ಟಿಗೆ ಅಹಿತವಾದರೂ ಜಯವು ಎಲ್ಲರಿಗೂ ಹಿತಕರವಾಗಿಯೇ ಇರುವುದು. ಆದ್ದರಿಂದ ಎಲ್ಲರಿಗೂ ಹಿತವಾಗುವಂತೆ ಜಯವನ್ನು ಗಳಿಸಿರಿ.

**ಸ್ವಸ್ತಿವಾಹನಂ ರಥಂ ಕುರುಧ್ವಂ**—ಉತ್ತಮವಾದ ಜಯಪ್ರಾಪ್ತಿಯಿಂದ ದೊರೆಯುವ ಸಂಪತ್ತನ್ನು ವಹಿಸಿ ತರಲು ರಥವನ್ನು ಸುಸಜ್ಜಿತವನ್ನಾಗಿಮಾಡಿ.

**ದ್ರೋಣಾಹಾವಂ ದ್ರೋಣಂ ದ್ರುಮಮಯಂ ಭವತಿ। ಆಹಾವ ಆಹ್ವಾನಾದಾವಹ ಆವಹನಾದವತೋಽವಾತಿತೋ ಮಹಾನ್ ಭವತಿ**—ದ್ರೋಣವೆಂದರೆ ದ್ರುಮಮಯ, ಮರದಿಂದ ನಿರ್ಮಿತವಾದದ್ದು (ರಥ ಅಥವಾ ನೀರುತುಂಬುವ ಮರದತೊಟ್ಟಿ ಅಥವಾ ಬಾನೆ) ಆಹಾವ ಎಂದರೆ ಮರದ ಬಾನೆ. (ಆ-ಹಾವ) ಆವಹ ಎಂದರೆ ವಹಿಸುವ ಸಾಧನ, ಗಾಡಿ ಇತ್ಯಾದಿ, ಈ ಶಬ್ದಕ್ಕೆ ಆ ವಹ ವಹಿಸುವುದು ಹೊರುವುದು ಎಂಬರ್ಥವಿರುವುದು ಅವತವೆಂದರೆ ಆಳವಾದ ಭಾವಿಯು. ಈ ಶಬ್ದವು ಅವ ಅತಿತ-ಕೆಳಗೆ ಬಹಳ ಆಳವಾಗಿರುವುದು ಎಂಬರ್ಥವನ್ನು ಸೂಚಿಸುವುದು.

**ಅಶ್ಮಚಕ್ರಮಶನಚಕ್ರಮಸನಚಕ್ರಮಿತಿ ವಾ**--ಅಶ್ಮಚಕ್ರವೆಂದರೆ ಕಲ್ಲಿನ ಚಕ್ರವು ಅಥವಾ ಗಾಲಿಯು. ಇದು ಯುದ್ಧಭೂಮಿಯಲ್ಲಿ ಸರ್ವತ್ರವಾಪಿಸಿರುವುದು ಅಥವಾ ಇದರ ಪ್ರಯೋಗವು ಶತ್ರುಗಳನ್ನು ಭಯಪಡಿಸುವುದು. ಈ ಅರ್ಥದಲ್ಲಿ ಇದು ಯುದ್ಧದಲ್ಲಿ ಉಪಯೋಗಿಸುವ ಒಂದು ಆಯುಧವಿಶೇಷವು (Stone-Axe)

**ಅಂಸತ್ರಕೋಶಮಂಸತ್ರಾಣಿ ವಃ ಕೋಶಸ್ಥಾನೀಯಾನಿ ಸಂಕು। ಕೋಶಃ ಕುಷ್ಣಾತೇರ್ವಿಕುಷಿತೋ ಭವತಿ। ಅಯಮಪೀತರಃ ಕೋಶ ಏತಸ್ಮಾದೇವ**—ಅಂಸ ಎಂದರೆ ಶರೀರದ ಅಂಗಗಳು. ಅವುಗಳನ್ನು ತ್ರಾಯತೇ - ಕಾಪಾಡುವುದಾದ್ದರಿಂದ (ಯುದ್ಧದಲ್ಲಿ ಉಪಯೋಗಿಸುವ ಉಕ್ಕಿನ) ಕವಚ, ಧನುಸ್ಸುಗಳಿಗೆ ಅಂಸತ್ರವೆಂದು ಹೆಸರು. ಅವುಗಳನ್ನು ಇಡುವ ಕೋಶ ಅಥವಾ ಚರ್ಮದಚೀಲಕ್ಕೆ ಅಂಸತ್ರಕೋಶವೆಂದು ಹೆಸರು. ಕೋಶ-ಶಬ್ದವು, ಎಳೆ, ಸೇದು ಎಂಬರ್ಥವುಳ್ಳ ಕುಷ್ ಧಾತುವಿನಿಂದ ನಿಷ್ಪನ್ನವಾಗಿದೆ. ತನ್ನಲ್ಲಿರುವ (ಕೋಶದಲ್ಲಿ,-ಚೀಲದಲ್ಲಿ) ಕವಚ ಧನುಸ್ಸು ಮೊದಲಾವನ್ನು ಈಚೆಗೆ ಎಳೆದು ತೆಗೆದುಕೊಳ್ಳುವುದರಿಂದ ಇದಕ್ಕೆ ಕೋಶವೆಂದು ಹೆಸರು. ಅಥವಾ ಕೋಶಶಬ್ದಕ್ಕೆ ಧನಾದಿಗಳನ್ನು ಸಂಗ್ರಹಿಸಿ ಇಡುವ ಪ್ರದೇಶವೆಂದು ಇನ್ನೊಂದು ಅರ್ಥವಿರುವುದು. ಈ ಅರ್ಥವನ್ನು ಸೂಚಿಸುವಾಗಲೂ ಈ ಶಬ್ದವು ಕುಷ್‌ಧಾತುವಿನಿಂದಲೇ ನಿಷ್ಪನ್ನವಾಗಿರುವುದು

**ಸಂಚಯ ಆಚಿತಮಾತ್ರೋ ಮಹಾನ್ ಭವತಿ**—ಸಂಚಯವೆಂದರೆ ಸಂಗ್ರಹವು, ಅನೇಕವಸ್ತುಗಳನ್ನು ಒಂದಡೆ ಒಟ್ಟಾಗಿ ಶೇಖರಿಸಿ ಇಡುವುದು

**ಸಂಚಿತನೃಪಾಣಂ ನರಪಾಣಂ ಕೂಪಕರ್ಮಣಾ ಸಂಗ್ರಾಮಮುಪಮಿಮೀತೇ**—ನೃಪಾಣವೆಂದರೆ ಮನುಷ್ಯರು ಪಾನಮಾಡುಲು ಯೋಗ್ಯವಾದ ಉದಕವನ್ನು ತುಂಬವುದಕ್ಕಾಗಿ ಭಾವಿಯಂತೆ ಆಳವಾಗಿರುವ ತೊಟ್ಟಿಯು ಅಥವಾ ಬಾನೆಯು. ಇದನ್ನು ನೀರಿನಿಂದ ತುಂಬಿರಿ ಎಂದಭಿಪ್ರಾಯವು. ಇಲ್ಲಿ ಯುದ್ಧಭೂಮಿಯನ್ನು ಒಂದು ಆಳವಾದಭಾವಿಗೆ ಹೋಲಿಸಿ ವರ್ಣಿಸಲಾಗಿದೆ.

|| ಸಂಹಿತಾಪಾಠಃ ||

ವ್ರಜಂ ಕೃಣುಧ್ವಂ ಸ ಹಿ ವೋ ನೃಪಾಣೋ ವರ್ಮ ಸೀವ್ಯಧ್ವಂ ಬಹುಲಾ ಪೃಥೂನಿ ।
ಪುರಃ ಕೃಣುಧ್ವಮಾಯಸೀರಧೃಷ್ಟಾ ಮಾ ವಃ ಸುಸ್ರೋಚ್ಚಮಸೋ ದೃಂಹತಾ ತಂ ॥ ೮ ॥

|| ಪದಪಾಠಃ ||

ವ್ರಜಂ । ಕೃಣುಧ್ವಂ । ಸಃ । ಹಿ । ವಃ । ನೃಽಪಾನಃ । ವರ್ಮ । ಸೀವ್ಯಧ್ವಂ । ಬಹುಲಾ । ಪೃಥೂನಿ ।
ಪುರಃ । ಕೃಣುಧ್ವಂ । ಆಯಸೀಃ । ಅಧೃಷ್ಟಾಃ । ಮಾ । ವಃ । ಸುಸ್ರೋತ್ । ಚಮಸಃ । ದೃಂಹತ । ತಂ ॥

|| ಸಾಯಣಭಾಷ್ಯಂ ||

ಹೇ ಋತ್ವಿಜಃ ವ್ರಜಂ ಕೃಣುಧ್ವಂ । ವ್ರಜಂ ಗೋಷ್ಠಂ ಕುರುಧ್ವಂ । ಆಶಿರದೋಹಾರ್ಥಂ ಗೋಸ್ಥಾನಂ ಕುರುತ । ಸ ಹಿ ಸ ಖಲು ವೋ ನೃಪಾಣೋ ನೇತ್ೃಣಾಂ ದೇವಾನಾಂ ಪಾತವ್ಯಃ । ದೇವ-ಪಾನಸಾಧನ ಇತಿ । ಸಾಂನಾಯ್ಯರೂಪೇಣ ವಾಶಿರರೂಪೇಣ ವಾ ಗೋಃ ಪಯಆದಿಕಂ ದೇವಾಃ ಪಿಬಂತಿ ಖಲು । ವರ್ಮ ವರ್ಮಾಣಿ ಸೀವ್ಯಧ್ವಂ । ವರ್ಮವತ್ತ್ರಧಾನಸ್ಯೋಭಯತ ಆಚ್ಛಾದಕತ್ವಾತ್ಪ್ರಯಾಜಾದೀನಿ ಪ್ರಾಚ್ಯಾನಿ ಪ್ರತೀಚ್ಯಾನಿ ಚಾಂಗಾನಿ ವರ್ಮಾಣಿ । ತಾನಿ ಸೀವ್ಯಧ್ವಂ । ದಲಯಧ್ವಂ । ಕುರುಧ್ವಮಿತ್ಯರ್ಥಃ। ಕೀದೃಶಾನಿ ವರ್ಮಾಣಿ । ಬಹುಲಾ ಬಹುಲಾನ್ಯನೇಕಾನಿ । ತಾನಿ ಚ ಪೃಥೂನಿ ವಿಸ್ತೀರ್ಣಾನಿ । ತಥಾ ಪುರಃ ಪುರಾಣಿ ಧಿಷ್ಣ್ಯಾದೀನಿ ಯಷ್ಟವ್ಯಾನಾಂ ದೇವಾನಾಂ ವಾ ಪುರಃ ಶರೀರಾಣ್ಯಾಯಸೀರಯೋಮಯವತ್ ಸಾರಭೂತಾ ಅಧೃಷ್ಟಾ ಅನ್ಯೈರಧೃಷ್ಯಾಃ । ಪೂರಣೀಯಾ ಗ್ರಹಾ ವಾ ಪುರ ಇತ್ಯುಚ್ಯಂತೇ । ತಾನುಕ್ತ-ಲಕ್ಷಣಾನ್ಕುರುತ । ವೋ ಯುಷ್ಮದೀಯಶ್ಚಮಸೋ ಯಜ್ಞಾಖ್ಯೋ ಭಕ್ಷಣಸಾಧನಶ್ಚಮಸ ಏವ ವಾ । ಚಮಸಪಕ್ಷೇ ಸಾಮಾನ್ಯೇನೈಕವಚನಂ । ಮಾ ಸುಸ್ರೋತ್ । ಮಾ ಸ್ರವೇತ್ ॥ ಸ್ರವತೇರ್ಲಙಿ ಬಹುಲಂ ಛಂದಸೀತಿ ಶಪಃ ಶ್ಲುಃ ॥ ತಂ ದೃಂಪತ । ದೃಢೀಕುರುತ । ಯಥಾ ವಿಕಲೋ ನ ಭವತಿ ತಥಾ ಕುರುತ ॥ ದೃಹ ದೃಹಿ ವೃದ್ಧೌ ಭೌವಾದಿಕಃ । ತಸ್ಮಾಲ್ಲೋಟೀದಿತ್ತ್ವಾನ್ನುಮ್ ॥ ಋತ್ವಿಕ್‌ಸ್ತುತಿಪಕ್ಷ ಏವಂ । ವೈಶ್ವದೇವಪಕ್ಷೇ। ಅಸ್ಮದೀಯಾ ಯೋದ್ಧಾರೋ ಯೂಯಂ। ನರೋ ಯೋದ್ಧಾರಃ ಪಿಬಂತಿ ಪ್ರತ್ಯರ್ಥಿನಾಂ ಪ್ರಾಣಾನಿತಿ ನೃಪಾಣಃ । ಸ ತಾದೃಶೋ ಯುಷ್ಮದೀಯಃ ಖಲು । ಗೋಷ್ಠಪಕ್ಷೇ ನರಾಣಾಂ ಪಾನಸಾಧನಃ ಸ ಖಲು ॥ ಪಾತೇಃ ಕರಣಾಧಿಕರಣಯೋಶ್ಚೇತಿ ಲ್ಯುಟ್ ॥ ವರ್ಮ ವರ್ಮಾಣಿ ಕವಚಾನಿ ಸೀವ್ಯಧ್ವಂ ಬಹುಲಾನಿ ಪೃಥೂನಿ ಚ ಯಥಾ ಭವಂತಿ ತಥಾ । ಪುರಃ ಪುರೀಃ ಕೃಣುಧ್ವಮಾಯಸೀರನ್ಯೈರಧೃಷ್ಟಾಶ್ಚ। ವಶ್ಚಮಸೋಽನ್ನಸಾಧನೋ ಮಾ ಸುಸ್ರೋತ್ । ಮಾ ಸ್ರವೇತ್ । ತಂ ದೃಂಹತೇತಿ । ಇತಿ ದೇವತಾನುಗ್ರಹಲಬ್ಧಬಲೋ ವದತಿ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ವ್ರಜಂ**— ಗೋವುಗಳ ಕೊಟ್ಟಿಗೆಯನ್ನು । **ಕೃಣುಧ್ವಂ**— ಸಿದ್ಧಪಡಿಸಿರಿ । **ಸ ಹಿ**— ಅದೇ । **ವಃ**— ನಿಮ್ಮ । **ನೃಪಾಣಃ**— ನಾಯಕರಾದ ದೇವತೆಗಳಿಗೆ ಕ್ಷೀರಾದಿಗಳನ್ನು ಪಾನಮಾಡುವ ಪ್ರದೇಶವಾಗಿದೆ । **ವರ್ಮ**— ಕವಚದಂತೆ ಆಚ್ಛಾದಕವಾಗಿರುವ ಪ್ರಯಾಜಾದಿಗಳನ್ನು । **ಸೀವ್ಯಧ್ವಂ**— ನೇದು ಸಿದ್ಧಪಡಿಸಿರಿ । **ಬಹುಲಾ**— ಅನೇಕವೂ । **ಪೃಥುಲಾ**— ವಿಸ್ತೃತವೂ ಆದ । **ಪುರಃ**— ಯಜ್ಞಭೂಮಿಗಳನ್ನು । **ಆಯಸೀಃ**— ಉಕ್ಕಿನಿಂದ ನಿರ್ಮಿತವಾದ ಪಟ್ಟಣಗಳಂತೆ । **ಅಧೃಷ್ಟಾಃ**— ಅಪ್ರತಿಹತವಾಗಿರುವಂತೆ ಮಾಡಿರಿ । **ವಃ**— ನಿಮ್ಮ । **ಚಮಸಃ**— ಸ್ರುಕ್ಪಾತ್ರೆಯು । **ಮಾ ಸುಸ್ರೋತ್**— ತೂತಿಲ್ಲದೆ ಇರಲಿ । **ತಂ**— ಅದನ್ನು । **ದೃಂಹತ**— ದೃಢವಾಗಿರುವಂತೆ ಮಾಡಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಗೋವುಗಳ ಕೊಟ್ಟಿಗೆಯನ್ನು ಸಿದ್ಧಪಡಿಸಿರಿ. ಅದು ನಿಮ್ಮ ನಾಯಕರಾದ ದೇವತೆಗಳಿಗೆ ಕ್ಷೀರಾದಿಗಳನ್ನು ಪಾನಮಾಡುವ ಪ್ರದೇಶವಾಗಿದೆ ಪ್ರಯಾಜಾದಿರೂಪವಾದ ಕವಚಗಳನ್ನು ನೇದು ಸಿದ್ಧಪಡಿಸಿರಿ. ಅನೇಕವೂ ವಿಸ್ತೃತವೂ ಆದ ಯಜ್ಞಭೂಮಿಯನ್ನು ಉಕ್ಕಿನಿಂದ ನಿರ್ಮಿತವಾದ ಪಟ್ಟಣಗಳಂತೆ ಅಪ್ರತಿಹತವಾಗಿರುವಂತೆ ಮಾಡಿರಿ ನಿಮ್ಮ ಸ್ರುಕ್ಪಾತ್ರೆಯು ತೂತಿಲ್ಲದಂತಿರಲಿ. ಅದನ್ನು ದೃಢವಾಗಿರುವಂತೆ ಮಾಡಿರಿ.

## English Translation.

Construct the cow-stall, for that is the drinking-place of your leaders (the gods), fabricate armour, manifold and ample; make cities of iron and impregnable, let not the ladle leak, make it strong.

॥ ವಿಶೇಷವಿಷಯಗಳು ॥

ಈ ಋಕ್ಕಿಗೂ ಭಾಷ್ಯಕಾರರು ಎರಡುವಿಧ ಅರ್ಥಗಳನ್ನು ಹೇಳಿದಾರೆ ಒಂದು ಋತ್ವಿಕ್‌ಪಕ್ಷ ಅಥವಾ ಚಮಸ ಪಕ್ಷವು, ಎರಡನೆಯದು ಯುದ್ಧಪಕ್ಷವು.

**ವ್ರಜಂ ಕೃಣುಧ್ವಂ**— ಎಲೈ ಋತ್ವಿಕ್ಕುಗಳೇ, ಯಜ್ಞಾದಿಗಳಲ್ಲಿ ಉಪಯೋಗಿಸುವುದಕ್ಕಾಗಿ ಗೋವುಗಳ ಹಾಲನ್ನು ಕರೆಯಲು ದನಗಳ ಕೊಟ್ಟಿಗೆಯನ್ನು ಸಿದ್ಧಪಡಿಸಿರಿ. ಯುದ್ಧಪಕ್ಷದಲ್ಲಿ— ವ್ರಜವೆಂದರೆ ಸಮೂಹ. ಯುದ್ಧಾರ್ಥವಾಗಿ ಸೇನೆಗಳ ಅಥವಾ ಸೈನಿಕರ ಸಮೂಹವನ್ನು ಆಯುಧಾದಿಸಲಕರಣೆಗಳಿಂದ ಸಿದ್ಧಪಡಿಸಿರಿ. ಯುದ್ಧ ಮಾಡುವುದಕ್ಕಾಗಿ ಸೈನಿಕರನ್ನು ಒಂದೆಡೆ ಸೇರಿಸಿ ಅವರಿಗೆ ಅಶ್ವ, ರಥ, ಆಯುಧಗಳು ಮೊದಲಾದ ಯುದ್ಧೋಪಕರಣಗಳನ್ನು ಕೊಟ್ಟು ಯುದ್ಧಸನ್ನದ್ಧರಾಗುವಂತೆ ಮಾಡಿರಿ ಎಂದಭಿಪ್ರಾಯವು.

**ಸ ಹಿ ವಃ ನೃಪಾಣಃ**— ಆ ಕೊಟ್ಟಿಗೆಯಲ್ಲಿ ಕರೆದ ಹಾಲು ಯಜ್ಞನೇತೃಗಳಾದ ದೇವತೆಗಳಿಗೆ ಪಾನ ಯೋಗ್ಯವಾದುದಾಗಿದೆ. ಇದಲ್ಲದೆ ಗೋವಿನ ಹಾಲನ್ನು ಸಾನಾಯ್ಯರೂಪದಿಂದಲೂ ಅಥವಾ ಸೋಮರಸಕ್ಕೆ ಮಿಶ್ರ ಮಾಡುವ ಆಶಿರದ್ರವ್ಯವಾಗಿಯೂ ಉಪಯೋಗಿಸುವರು ಯುದ್ಧಪಕ್ಷದಲ್ಲಿ — **ನರೋ ಯೋದ್ಧಾರಃ ಪಿಬಂತಿ**

**ಪ್ರತ್ಯರ್ಥಿನಾಂ ಪ್ರಾಣಾನಿತಿ ನೃಪಾಣಃ । ಸ ತಾದೃಶೋ ಯುಷ್ಮದೀಯಃ ಖಲು ।** ನೃಪಾಣವೆಂದರೆ ಯುದ್ಧದಲ್ಲಿ ಎದುರಾಗುವ ಶತ್ರುಗಳ ಪ್ರಾಣಗಳನ್ನು ಪಾನಮಾಡುವ ಎಂದರೆ ಕೊಲ್ಲುವ ಯುದ್ಧಭಟರು.

**ವರ್ಮ ಸೀವ್ಯಧ್ವಂ ಬಹುಲಾ ಪೃಥೂನಿ**—ವರ್ಮವೆಂದರೆ ಕವಚ ಎಲೈ ಋತ್ವಿಜರೇ, ಕವಚವು ಶರೀರವನ್ನು ಕಾಪಾಡುವಂತೆ ಯಜ್ಞವನ್ನು ಅಸುರರಿಂದ ಕಾಪಾಡುವುದಕ್ಕಾಗಿ ಅಗ್ನಿಯಲ್ಲಿ ಅರ್ಪಿಸುವ ಪ್ರಯಾಜಾದಿ ಹೋಮಗಳನ್ನು ವಿಸ್ತಾರವಾಗಿ ನೇಯಿರಿ ಎಂದರೆ ಚೆನ್ನಾಗಿ ಪರಿಸಿ ಹೋಮಮಾಡಿರಿ. ಯುದ್ಧಪಕ್ಷದಲ್ಲಿ—ಶತ್ರುಗಳ ಬಾಣಗಳಿಂದ ಶರೀರವನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಎಲೈ ಯುದ್ಧಭಟರೇ, ನೀವು (ಉಕ್ಕಿನ) ಕವಚವನ್ನು ಯುದ್ಧದಲ್ಲಿ ಧಾರಾಳವಾಗಿ ಉಪಯೋಗಿಸಿ ಎಂದಭಿಪ್ರಾಯವು.

**ಪುರಃ ಕೃಣುಧ್ವಮಾಯಸೀರಧೃಷ್ಟಾಃ**—ಎಲೈ ಋತ್ವಿಜರೇ, ನಿಮ್ಮ ಸ್ತುತಿರೂಪವಾದ ಮಂತ್ರಗಳಿಂದ ದೇವತೆಗಳ ಶರೀರಗಳನ್ನು ಉಕ್ಕಿನಂತೆ ಸಾರಭೂತವನ್ನಾಗಿಯೂ ಇತರರಿಂದ ಹಿಂಸಿತವಾಗದಂತೆಯೂ ಮಾಡಿರಿ, ಯುದ್ಧಪಕ್ಷದಲ್ಲಿ—ಎಲೈ ಸೈನಿಕರೇ ನಮ್ಮ ಪಟ್ಟಣಗಳನ್ನು ಉಕ್ಕಿನಂತೆ ಶತ್ರುಗಳಿಂದ ಅಭೇದ್ಯವನ್ನಾಗಿ ಮಾಡಿರಿ.

**ಮಾ ವಃ ಸುಸ್ರೋತ್ ಚಮಸಃ ದೃಂಹತ ತಂ**—ಎಲೈ ಋತ್ವಿಕ್ಕುಗಳೇ, ನಿಮ್ಮ ಚಮಸಪಾತ್ರೆಗಳನ್ನು ಸೋರದಂತೆಯೂ ದೃಢವಾಗಿರುವಂತೆಯೂ ಮಾಡಿರಿ ಯುದ್ಧಪಕ್ಷದಲ್ಲಿ—ಎಲೈ ಯೋಧರೇ, ನೀವು ಭಕ್ಷಿಸುವ ಆಹಾರಾದಿಗಳು ಕಮ್ಮಿಯಾಗದಂತೆಯೂ, ಬಲಪ್ರದವಾಗಿರುವಂತೆಯೂ ಮಾಡಿರಿ ಅಥವಾ ದೇವತಾನುಗ್ರಹದಿಂದ ನಿಮ್ಮ ಶಕ್ತಿಯನ್ನು ದೃಢವಾಗಿರುವಂತೆ ಮಾಡಿರಿ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಆ ವೋ ಧಿಯಂ ಯಜ್ಞಿಯಾಂ ವರ್ತ ಊತಯೇ ದೇವಾ ದೇವೀಂ ಯಜತಾಂ ಯಜ್ಞಿಯಾಮಿಹ ।
ಸಾ ನೋ ದುಹೀಯದ್ಯವಸೇವ ಗತ್ವೀ ಸಹಸ್ರಧಾರಾ ಪಯಸಾ ಮಹೀ ಗೌಃ ॥

॥ ಪದಪಾಠಃ ॥

ಆ । ವಃ । ಧಿಯಂ । ಯಜ್ಞಿಯಾಂ । ವರ್ತೇ । ಊತಯೇ । ದೇವಾಃ । ದೇವೀಂ । ಯಜತಾಂ । ಯಜ್ಞಿಯಾಂ । ಇಹ ।
ಸಾ । ನಃ । ದುಹೀಯತ್ । ಯವಸಾಽಇವ । ಗತ್ವೀ । ಸಹಸ್ರಽಧಾರಾ । ಪಯಸಾ । ಮಹೀ । ಗೌಃ ॥ ೯ ॥

|| ಸಾಯಣಭಾಷ್ಯಂ ||

**ಹೇ ದೇವಾಃ ಸ್ತೋತಾರ ಋತ್ವಿಜಃ ವೋ ಯುಷ್ಮಾಕಮೂತಯೇ ಯಜ್ಞಿಯಾಂ ಯಜ್ಞಾರ್ಹಾಂ ಧಿಯಂ ಬುದ್ಧಿಮಾ ವರ್ತೇ । ಪ್ರವರ್ತಯೇ । ಯದ್ವಾ । ಹೇ ದೇವಾ ಋತ್ವಿಜಃ ವೋ ಯಜ್ಞಿಯಾಂ ಧಿಯಂ ಯುಷ್ಮಾಕಂ ಕರ್ತವ್ಯತ್ವೇನ ಸಂಬಂಧಿನೀಮಸ್ಮಾಕಮೂತಯೇ ರಕ್ಷಣಾಯಾ ವರ್ತೇ । ಅಪಿ ಚ ದೇವಾ ಏವ ಸಂಬೋಧ್ಯಾಃ । ಹೇ ದೇವಾಃ ವೋ ಯುಷ್ಮಾಕಂ ಧಿಯಂ ಬುದ್ಧಿಮಾ ವರ್ತೇ । ಆವರ್ತಯಾಮಿ । ಕಿಮರ್ಥಂ । ಊತಯೇಽಸ್ಮಾಕಂ ರಕ್ಷಣಾಯ । ಕೀದೃಶೀಂ ಧಿಯಂ । ಯಜ್ಞಿಯಾಂ ಯಜ್ಞಾರ್ಹಾಂ ದೇವೀಂ ದ್ಯೋತಮಾನಾಂ ಯಜತಾಂ ಪೂಜ್ಯಾಂ । ಇಹಾಸ್ಮಿನ್ಯಾಗೇಽಸ್ಯಾಂ ಭೂಮೌ ವಾ । ಏಕೋ ಯಜ್ಞಿಯಾಮಿತಿ ಶಬ್ದಃ ಪೂರಣಃ । ಸಾ ಧೀರ್ನೋಽಸ್ಮಾಕಂ ದುಹೀಯತ್ । ದುಹ್ಯಾತ್ । ತತ್ರ ದೃಷ್ಟಾಂತಃ । ಯವಸೇವ ಯವಸಾನಿ ಭಕ್ಷಯಿತ್ವೇವ ಗತ್ವೀ ಪುನರ್ಗೋಽಷ್ಠಂ ಗತ್ವಾ। ಪೀತ್ವೇತಿವತ್। ಪಯಸಾ ಸಹಸ್ರಧಾರಾ ಮಹೀ ಮಹತೀ ಗೌರ್ಯಥಾ ದುಗ್ಧೇ ತದ್ವತ್ ||**

|| ಪ್ರತಿಪದಾರ್ಥ ||

**ದೇವಾಃ**—ಎಲೈ ದೇವತೆಗಳೇ । **ಇಹ**—ಇಲ್ಲಿ । **ಊತಯೇ**—ರಕ್ಷಣಾರ್ಥವಾಗಿ । **ವಃ**—ನಿಮ್ಮ । **ಯಜ್ಞಿಯಾಂ**—ಪೂಜಾರ್ಹವಾದುದೂ । **ದೇವೀಂ**—ಪ್ರಕಾಶಮಾನವಾದುದೂ । **ಯಜ್ಞಿಯಾಂ**—**ಯಜ್ಞಕ್ಕೆ**-ಅರ್ಹವಾದುದೂ । **ಯಜತಾಂ**—ಪೂಜಾಯೋಗ್ಯವಾದುದೂ ಆದ । **ಧಿಯಂ**—ನಿಮ್ಮ ಅನುಗ್ರಹಬುದ್ಧಿಯನ್ನು । **ಆ ವರ್ತೇ**—ನಮ್ಮ ಕಡೆಗೆ ಸೆಳೆಯುತ್ತೇನೆ । **ಯವಸಾ**—ತೃಣಾದಿಗಳಿಂದ ತೃಪ್ತಿಯನ್ನು ಹೊಂದಿ । **ಗತ್ವೀ**—ಕೊಟ್ಟಿಗೆಹೋಗಿ । **ಪಯಸಾ**—ಕ್ಷೀರರೂಪವಾದ । **ಸಹಸ್ರಧಾರಾ**—ಅನೇಕ ಧಾರೆಗಳುಳ್ಳ । **ಮಹೀ**—ಮಹತ್ತಾದ । **ಗೌಃ** **ಇವ**—ಗೋವಿನಂತೆ । **ಸಾ**—ನಿಮ್ಮ ಅನುಗ್ರಹಬುದ್ಧಿಯು । **ನಃ**—**ನಮಗೆ** । **ದುಹೀಯತ್**—ಇಷ್ಟಾರ್ಥಗಳನ್ನು ಸುರಿಸಲಿ ।

|| ಭಾವಾರ್ಥ ||

ಎಲೈ ದೇವತೆಗಳೇ, ಪೂಜಾಯೋಗ್ಯವೂ, ಪ್ರಕಾಶಮಾನವೂ ಯಜ್ಞಯೋಗ್ಯವೂ **ಆದ ನಿಮ್ಮ ಅನುಗ್ರಹಬುದ್ಧಿಯನ್ನು** ನಮ್ಮ ರಕ್ಷಣಾರ್ಥವಾಗಿ ನಮ್ಮ ಕಡೆಗೆ ಸೆಳೆಯುತ್ತೇನೆ ತೃಣಾದಿಗಳಿಂದ **ತೃಪ್ತಿಯನ್ನು ಹೊಂದಿ ಕೊಟ್ಟಿಗೆಗೆ ಹೋಗಿ ಕ್ಷೀರರೂಪವಾದ** ಅನೇಕ ಧಾರೆಗಳನ್ನು ಸುರಿಸುವ ಮಹತ್ತಾದ **ಗೋವಿನಂತೆ ನಿಮ್ಮ ಅನುಗ್ರಹ ಬುದ್ಧಿಯು** ನಮಗೆ ಇಷ್ಟಾರ್ಥಗಳನ್ನು ಸುರಿಸಲಿ.

## English Translation.

I attract, O gods for my protection, your adorable, divine **mind, which is deserving of sacrifice and worship** here; may it milk **forth for us, like a large cow** with milk, giving a thousand streams, (having **eaten) fodder and returned.**

॥ ಸಂಹಿತಾಪಾಠಃ ॥

**ಆ ತೂ ಷಿಂಚ ಹರಿಮೀಂ ದ್ರೋರುಪಸ್ಥೇ ವಾಶೀಭಿಸ್ತಕ್ಷತಾಶ್ಮನ್ಮಯೀಭಿಃ ।**
**ಪರಿ ಷ್ವಜಧ್ವಂ ದಶ ಕಕ್ಷ್ಯಾಭಿರುಭೇ ಧುರೌ ಪ್ರತಿ ವಹ್ನಿಂ ಯುನಕ್ತ ॥೧೦॥**

॥ ಪದಪಾಠಃ ॥

**ಆ । ತು । ಸಿಂಚ । ಹರಿಂ । ಈಂ । ದ್ರೋಃ । ಉಪಽಸ್ಥೇ । ವಾಶೀಭಿಃ । ತಕ್ಷತ । ಅಶ್ಮನ್ಽಮಯೀಭಿಃ ।**
**ಪರಿ । ಸ್ವಜಧ್ವಂ । ದಶ । ಕಕ್ಷ್ಯಾಭಿಃ । ಉಭೇ ಇತಿ । ಧುರೌ । ಪ್ರತಿ । ವಹ್ನಿಂ । ಯುನಕ್ತ ॥ ೧೦ ॥**

॥ ಸಾಯಣಭಾಷ್ಯಂ ॥

ಹೇ ಅಧ್ವರ್ಯೋ ತ್ವಮೇನಂ ಹರಿಂ ಹರಿತವರ್ಣಂ ಸೋಮಂ ದ್ರೋರ್ದ್ರುಮವಿಕಾರಸ್ಯ ಪಾತ್ರಸ್ಯೋಪಸ್ಥ ಉಪರ್ಯಾ ಸಿಂಚ । ಆಸೇಕಂ ಕುರು । ತ್ವಿತಿ ಪೂರಣಃ । ತದರ್ಥಂ ಹೇ ಪಾತ್ರಸಂಪಾದಿನಃ ಅಶ್ಮನ್ಮಯೀಭಿರಯಃಶಿಲಾಸಾರಭೂತಾಭಿರ್ವಾಶೀಭಿಸ್ತಕ್ಷತ ಪಾತ್ರಾಣಿ ॥ ನಕಾರೋಪಜನಶ್ಛಾಂದಸಃ । ಮಯಟಃ ಟಿತ್ತ್ವಾದ್ ಙೀಪ್ ॥ ತಾನಿ ಪಾತ್ರಾಣಿ ಸೋಮಪೂರ್ಣಾನಿ ದಶ ದಶಸಂಖ್ಯಾಕಾನಿ ಕಕ್ಷ್ಯಾಭಿಃ ಪ್ರಕಾರೈಃ ಪರ್ಯಾಯೇಣ ಪರಿ ಷ್ವಜಧ್ವಂ । ಸಂಸ್ಕುರುಧ್ವಂ । ಆಸಾದಯತ । ಯದ್ವಾ । ವಾಶೀಭಿರಶ್ಮನ್ಮಯೀಭಿರ್ವಿಧಾನಶಕಟೇ ತಕ್ಷತ । ತೇ ಚ ದಶ ಕಕ್ಷ್ಯಾಭಿರ್ದಶಸಂಖ್ಯಾಕಾಭೀ ರಜ್ಜುಭಿಃ ಪರಿ ಷ್ವಜಧ್ವಂ । ಉಭೇ ಧುರೌ ಯುಗಸಂಬಂಧಿನ್ಯೌ ಪ್ರತಿ ವಹ್ನೀ ವಾಹಕಾವನಡ್ವಾಹೌ ಯುನಕ್ತ । ಅಥವಾಯಂ ಮಂತ್ರಶ್ಚಯನಕ್ಷೇತ್ರಕರ್ಷಣಸಾಧನಹಲಾವಿಷಯತಯಾ ವ್ಯಾಖ್ಯೇಯಃ ॥

॥ ಪ್ರತಿಪದಾರ್ಥ ॥

(ಎಲೈ ಅಧ್ವರ್ಯುವೇ) **ಈಂ ಹರಿಂ**— ಈ ಸೋಮವನ್ನು । **ದ್ರೋಃ ಉಪಸ್ಥೇ**— ಮರದಿಂದ ಮಾಡಿದ ಪಾತ್ರೆಯಲ್ಲಿ । **ಆ ಸಿಂಚ**— ಸುರಿ । **ಅಶ್ಮನ್ಮಯೀಭಿಃ**— ಉಕ್ಕಿನಂತಿರುವ ಕಲ್ಲುಗಳಿಂದ ಮಾಡಿದ । **ವಾಶೀಭಿಃ**— ಸುತ್ತಿಗೆಗಳಿಂದ । **ತಕ್ಷತ**— ಪಾತ್ರೆಗಳನ್ನು ಸಿದ್ಧಪಡಿಸಿರಿ । **ದಶ ಕಕ್ಷ್ಯಾಭಿಃ**— ಹತ್ತು ದಾರಗಳಿಂದ । **ಪರಿಷ್ವಜಧ್ವಂ**— ಸುತ್ತುವರೆದು ಕಟ್ಟಿ ಅಲಂಕರಿಸಿರಿ । **ಉಭೇ ಧುರೌ**— ನೊಗದ ಎರಡು ಕಡೆಗಳಲ್ಲಿಯೂ । **ವಹ್ನಿಂ**— ಭಾರವನ್ನು ವಹಿಸುವ ಎತ್ತನ್ನು । **ಪ್ರತಿ ಯುನಕ್ತ**— ನೊಗಕ್ಕೆ ಸೇರಿಸಿ ಕಟ್ಟಿರಿ.

॥ ಭಾವಾರ್ಥ ॥

ಎಲೈ ಅಧ್ವರ್ಯುವೇ, ಈ ಸೋಮವನ್ನು ಮರದಿಂದ ಮಾಡಿದ ಪಾತ್ರೆಯಲ್ಲಿ ಸುರಿ. ಉಕ್ಕಿನಂತಿರುವ ಕಲ್ಲುಗಳಿಂದ ಮಾಡಿದ ಸುತ್ತಿಗೆಗಳಿಂದ ಪಾತ್ರೆಗಳನ್ನು ಸಿದ್ಧಪಡಿಸಿರಿ ಹತ್ತು ದಾರಗಳಿಂದ ಸುತ್ತುವರೆದು ಕಟ್ಟಿ ಅಲಂಕರಿಸಿರಿ. ನೊಗದ ಎರಡು ಕಡೆಗಳಲ್ಲಿ ಭಾರವನ್ನು ವಹಿಸುವ ಎತ್ತನ್ನು ನೊಗಕ್ಕೆ ಸೇರಿಸಿ ಕಟ್ಟಿರಿ.

## English Translation

Pour out the golden-tinted Soma into the bowl of the wooden **cup,** fabricate it with the stone axes, gird it with ten bands, harness the **beast of** burden to the two poles (of the waggon).

॥ ವಿಶೇಷವಿಷಯಗಳು ॥

**ವಾಶೀ**— ಎಂಬ ಶಬ್ದದ ಅರ್ಥವನ್ನು ವಿವರಿಸುವುದಕಾಗಿ ಯಾಸ್ಕರು ಈ ಋಕ್ಕಿನ **ಪೂರ್ವಾರ್ಧಕ್ಕೆ** ನಿರ್ವಚನವನ್ನು ಹೇಳಿದಾರೆ—

> **ವಾಶೀ । ಆ ತೂ ಷಿಂಚ ಹರಿಮೀಂ ದ್ರೋರುಪಸ್ಥೇ ವಾಶೀಭಿಸ್ತಕ್ಷತಾಶ್ಮನ್ಮಯೀಭಿಃ ॥ ಆಸಿಂಚ ಹರಿಂ ದ್ರೋರುಪಸ್ಥೇ । ದ್ರುಮಮಯಸ್ಯ ಹರಿಃ ಸೋಮೋ ಹರಿತವರ್ಣಃ । ಅಯಮಪೀ-ತರೋ ಹರಿರೇತಸ್ಮಾದೇವ । ವಾಶೀಭಿಸ್ತಕ್ಷತಾಶ್ಮನ್ಮಯೀಭಿಃ । ವಾಶೀಭಿರಶ್ಮಮಯೀಭಿರಿತಿ ವಾ ವಾಗ್ಭಿರಿತಿ ವಾ ॥**

(ನಿ. ೪-೧೯)

**ಆಸಿಂಚ ಹರಿಂ ದ್ರೋರುಪಸ್ಥೇ**—(ಎಲೈ ಅಧ್ವರ್ಯುವೇ!) ಮರದಿಂದ ನಿರ್ಮಿತವಾದ **ಪಾತ್ರೆಯಲ್ಲಿ** (ಅಥವಾ ಅಧಿಷವಣಫಲಕಗಳಲ್ಲಿ) ಚಿನ್ನದಂತೆ ಥಳಥಳಿಸುವ ವರ್ಣವುಳ್ಳ (ಹರಿತವರ್ಣ) ಸೋಮರಸವನ್ನು **ಸುರಿ. ದ್ರು** ಎಂದರೆ ಮರ. ದ್ರೋರುಪಸ್ಥೇ ಎಂದರೆ ಮರದಿಂದ ನಿರ್ಮಿತವಾದ ಪಾತ್ರೆಯಲ್ಲಿ, ಎಂದರೆ ಸೋಮರಸವನ್ನು ಸಂಗ್ರಹಿಸಿ ಇಡುವ ಮರದ ಪಾತ್ರೆಯಲ್ಲಿ ಎಂದರ್ಥವು. ಇದಕ್ಕೆ ದ್ರೋಣಕಲಶವೆಂದು ಹೆಸರು.

**ಹರಿಃ ಸೋಮೋ ಹರಿತವರ್ಣಃ । ಅಯಮಪೀತರೋ ಹರಿರೇತಸ್ಮಾದೇವ**—ಇಲ್ಲಿ ಹರಿಂ ಎಂದರೆ ಹರಿತವರ್ಣವುಳ್ಳ ಸೋಮರಸವೆಂದರ್ಥವು ಸೋಮಲತೆಗಳಿಂದ ರಸವನ್ನು ಹಿಂಡಿದಾಗ ಅದು **ಚಿನ್ನದ ಬಣ್ಣದಂತೆ** ಥಳಥಳಿಸುತ್ತಿರುವುದು. ಹರಿಶಬ್ದಕ್ಕೆ ಕಪಿ (ಕೋತಿ)ಎಂಬರ್ಥವೂ ಇರುವುದು. ಈ ಕೋತಿಯ ಬಣ್ಣವೂ **ಹರಿತವರ್ಣ**ವಾಗಿಯೇ ಇರುವುದರಿಂದ ಕಪಿಯನ್ನು ಹರಿಯೆಂದು ಕರೆಯುವುದು ರೂಢಿಯಾಗಿದೆ

**ವಾಶೀಭಿರಶ್ಮಮಯೀಭಿರಿತಿ ವಾ ವಾಗ್ಭಿರಿತಿ ವಾ ತಕ್ಷತ** - ಈ ವಾಕ್ಯಕ್ಕೆ ಎರಡು ವಿಧವಾದ **ಅರ್ಥ**ವನ್ನು ಹೇಳಬಹುದು. **ಅಶೂ ವ್ಯಾಪ್ತೌ** ಎಂಬ ಧಾತುವಿನಿಂದ ನಿಷ್ಪನ್ನವಾದ **ಅಶ್ಮಮಯೀಭಿಃ ಎಂಬ ಶಬ್ದಕ್ಕೆ** ಸರ್ವತ್ರ ವ್ಯಾಪ್ತವಾದ ಎಂದರ್ಥವು. **ವಾಶೀಭಿಃ** ಎಂದರೆ **ಸ್ತುತಿಲಕ್ಷಣಾಭಿಃ ವಾಗ್ಭಿಃ** ಸ್ತುತಿರೂಪವಾದ **ವಾಕ್ಯ**ಗಳಿಂದ ಎಂದರ್ಥವು. ಆದ್ದರಿಂದ—ಎಲೈ ಋತ್ವಿಕ್ಕುಗಳೇ, ಸರ್ವತ್ರ ವ್ಯಾಪ್ತವಾದ ಸ್ತುತಿರೂಪವಾದ **ವಾಕ್ಯಗಳಿಂದ** ಈ ಸೋಮವನ್ನು ಸಂಸ್ಕರಿಸಿರಿ. ಸೋಮದೇವತೆಯನ್ನು ಪ್ರಶಂಸಿಸುವ ಮಂತ್ರಗಳಿಂದಲೂ **ಸ್ತೋತ್ರಗಳಿಂದಲೂ** ಈ ಸೋಮವನ್ನು ಸ್ತುತಿಸಿ ಸಂಸ್ಕರಿಸಿರಿ ಎಂದು ಒಂದು ವಿಧವಾದ ಅರ್ಥವು.

**ವಾಶೀಭಿಃ** ಎಂದರೆ ಸುತ್ತಿಗೆಗಳಿಂದ ಅಥವಾ ಉಳಿಗಳಿಂದ, **ಅಶ್ಮಮಯೀಭಿಃ** ಎಂದರೆ ಕಲ್ಲಿನಿಂದ **ಮಾಡಿದ;** ಆದ್ದರಿಂದ **ಈ** ಋಕ್ಕಿನ ಪೂರ್ವಾರ್ಧಕ್ಕೆ—ಎಲೈ ಋತ್ವಿಕ್ಕುಗಳೇ ಕಲ್ಲುಗಳಿಂದ ಮಾಡಿದ, ನಿರ್ಮಿತವಾದ **ಅಥವಾ**

ಕಲ್ಲಿನಂತೆ ಕಠಿನವಾದ ಲೋಹಾದಿಗಳಿಂದ ನಿರ್ಮಿತವಾದ ಸುತ್ತಿಗೆಗಳಿಂದ ಮಾಡಲ್ಪಟ್ಟ ಮರದ ಪಾತ್ರೆಯಲ್ಲಿ ಹರಿತವರ್ಣವುಳ್ಳ ಸೋಮರಸವನ್ನು ಸುರಿಯಿರಿ ಎಂದು ಇನ್ನೊಂದು ವಿಧವಾದ ಅರ್ಥವು.

॥ ಸಂಹಿತಾಪಾಠಃ ॥

ಉಭೇ ಧುರೌ ವಹ್ನಿರಾಪಿಬ್ದಮಾನೋಽಂತರ್ಯೋನೇವ ಚರತಿ ದ್ವಿಜಾನಿಃ ।
ವನಸ್ಪತಿಂ ವನ ಆಸ್ಥಾಪಯಧ್ವಂ ನಿ ಷೂ ದಧಿಧ್ವಮಖನಂತ ಉತ್ಸಂ ॥ ೧೧ ॥

॥ ಪದಪಾಠಃ ॥

ಉಭೇ ಇತಿ । ಧುರೌ । ವಹ್ನಿಃ । ಆಽಪಿಬ್ದಮಾನಃ । ಅಂತಃ । ಯೋನಾಽಇವ । ಚರತಿ । ದ್ವಿಽಜಾನಿಃ ।
ವನಸ್ಪತಿಂ । ವನೇ । ಆ । ಅಸ್ಥಾಪಯಧ್ವಂ । ನಿ । ಸು । ದಧಿಧ್ವಂ । ಅಖನಂತಃ । ಉತ್ಸಂ ॥ ೧೧ ॥

॥ ಸಾಯಣಭಾಷ್ಯಂ ॥

ಹವಿರ್ಧಾನಶಕಟಸ್ಯೋಭೇ ಧುರಾವಾಪಿಬ್ದಮಾನ ಆಪಿಶಬ್ದಮಾನೋ ವಹ್ನಿರ್ಹವಿರ್ವಾಹಕೋಽನಡ್ವಾನ್ ಯೋನಾವಂತರಿವ ದ್ವಿಜಾನಿರ್ದ್ವಿಜಾಯಃ । ತಯೋರಂತಶ್ಚರತಿ । ತಂ ವನಸ್ಪತಿಂ ವನಸ್ಪತಿವಿಕಾರಂ ಶಕಟಂ ವನೇ ವನಸಂಬಂಧಿನಿ ವೃಕ್ಷೇ । ಮೇಥೀಭೂತ ಇತ್ಯರ್ಥಃ । ತತ್ರಾಸ್ಥಾಪಯಧ್ವಂ। ಯದ್ವಾ। ವನೇ ವನನೀಯೇ ದೇಶ ಆಸ್ಥಾಪಯಧ್ವಂ । ತತ್ಪಶ್ಚಾತ್ತತ್ರತ್ಯಂ ಸೋಮಂ ಸು ಸುಷ್ಠು ನಿ ದಧಿಧ್ವಂ । ಸುಖಂ ಯಥಾ ಭವತಿ ತಥಾ ಸ್ಥಾಪಯತಾಸಂದ್ಯಾಂ । ಅಭಿಷವಪ್ರದೇಶೇ ಚ ಪಶ್ಚಾದುತ್ಸಂ ತದ್ರಸಮಖನಂತಃ ಸಂಪಾದಯತೇತ್ಯರ್ಥಃ ॥ ಅಥವಾಯಮಪಿ ಮಂತ್ರಃ ಕರ್ಷಣಪರೋ ವ್ಯಾಖ್ಯೇಯಃ। ಯಸ್ಯ ಲಾಂಗಲಸ್ಯೋಭೇ ಧುರಾವಾಪಿಬ್ದಮಾನೋಽಪಿಶಬ್ದಮಾನೋ ವಹ್ನಿರನಡ್ವಾನ್ ಅಂತರ್ಯೋನಾವಿವೇತ್ಯಾದಿ ಸಮಾನಂ। ತಾದೃಶಂ ವನಸ್ಪತಿಂ ವನಸ್ಪತಿವಿಕಾರಂ ಲಾಂಗಲಂ ವನೇ ವನನೀಯೇ ವಹನಾರ್ಥಂ ಕರ್ಷಣಪ್ರದೇಶ ಆಸ್ಥಾಪಯಧ್ವಂ । ಸು ಸುಷ್ಠು ಸರ್ವತ್ರ ತಂ ಲಾಂಗಲಂ ನಿ ದಧಿಧ್ವಂ । ಉತ್ಸಂ ಸೇಕಸಾಧನಂ ಗರ್ತಂ ಸಿಕ್ತಂ ವಾ ಪ್ರದೇಶಮಖನಂತಃ ॥

॥ ಪ್ರತಿಪದಾರ್ಥ ॥

**ದ್ವಿಜಾನಿಃ**—ಇಬ್ಬರು ಪತ್ನಿಯರನ್ನು ಹೊಂದಿರುವ ಪುರುಷನು ಆ ಇಬ್ಬರ ನಡುವೆ ಇರುವಂತೆ । **ಉಭೇ ಧುರೌ**—ಎರಡು ನೊಗಗಳ ಮಧ್ಯದಲ್ಲಿ ಅಥವಾ ನೊಗದ ಎರಡು ತುದಿಗಳ ಮಧ್ಯದಲ್ಲಿ (ಹೂಡಿರುವ) । **ವಹ್ನಿಃ**—ಹವಿಸ್ಸನ್ನು ಎಂದರೆ ಸೋಮಲತೆಗಳನ್ನು ತುಂಬಿದ ಗಾಡಿಯನ್ನು ಎಳೆಯುವ ವೃಷಭವು । **ಆಪಿಬ್ದಮಾನಃ**—ಶಬ್ದಮಾಡುತ್ತಾ । **ಅಂತಃ ಯೋನೇವ**—ಯಜ್ಞಭೂಮಿಯ ಮಧ್ಯಭಾಗದಲ್ಲಿ । **ಚರತಿ**—ಸಂಚರಿಸುತ್ತದೆ (ಎಲೈ ಋತ್ವಿಕ್ಕುಗಳೇ) । **ವನಸ್ಪತಿಂ**—(ಮರದಿಂದ ನಿರ್ಮಿತವಾದ) ಆ ಗಾಡಿಯನ್ನು । **ವನೇ**—

ವೃಕ್ಷದ ಕೆಳಗೆ ಅಥವಾ ಕಾಡಿನಲ್ಲಿ | **ಆಸ್ಥಾಪಯಧ್ವಂ**—ನಿಲ್ಲಿಸಿರಿ (ಮತ್ತು ಆ ಗಾಡಿಯಲ್ಲಿ) | **ಸು ನಿ ದಧಿಧ್ವಂ**—ಸೋಮಲತೆಗಳನ್ನು ಭರ್ತಿಯಾಗುವಂತೆ ತುಂಬಿರಿ (ಅನಂತರ ಸೋಮಲತೆಗಳನ್ನು ಜಜ್ಜುವ ಪ್ರದೇಶದಲ್ಲಿ) | **ಉತ್ಸಂ**—ಆ ಸೋಮರಸವನ್ನು | **ಅಖನಂತಃ**—ಹಿಂಡಿ ತೆಗೆಯಿರಿ |

|| ಭಾವಾರ್ಥ ||

ಇಬ್ಬರು ಪತ್ನಿಯರನ್ನು ಹೊಂದಿರುವ ಪುರುಷನು ಅವರಿಬ್ಬರ ಮಧ್ಯದಲ್ಲಿ ಇದ್ದು ಯಾವರೀತಿ ಸಂಚರಿಸುವನೋ ಅದರಂತೆ ನೊಗದ ಎರಡು ತುದಿಗಳ ಮಧ್ಯದಲ್ಲಿ ಹೂಡಿರುವ ವೃಷಭವು ಹವಿಸ್ಸನ್ನು ಎಂದರೆ ಸೋಮಲತೆಗಳನ್ನು ತುಂಬಿದ ಗಾಡಿಯನ್ನು ಎಳೆಯುತ್ತಾ ಯಜ್ಞವೇದಿಯ ಒಳಗೆ ಬರುತ್ತದೆ. ಎಲೈ ಋತ್ವಿಕ್ಕುಗಳೇ ಸೋಮಲತೆಗನ್ನು ತರುವುದಕ್ಕಾಗಿ ನೀವು ಮರದಿಂದ ನಿರ್ಮಿತವಾದ ಆ ಗಾಡಿಯನ್ನು ಸೋಮಲತೆಗಳು ಬೆಳೆದಿರುವ ವನಪ್ರದೇಶಕ್ಕೆ ತೆಗೆದು ಕೊಂಡು ಹೋಗಿ ಅಲ್ಲಿ ನಿಲ್ಲಿಸಿರಿ ಮತ್ತು ಆ ಗಾಡಿಯಲ್ಲಿ ಸೋಮಲತೆಗಳನ್ನು ಭರ್ತಿಯಾಗಿ ತುಂಬಿರಿ. ಅನಂತರ ಸೋಮಲತೆಗಳನ್ನು ಯಜ್ಞವೇದಿಗೆ ತಂದಮೇಲೆ ಆ ಲತೆಗಳನ್ನು ಜಜ್ಜಿ ರಸವನ್ನು ಹಿಂಡಿ ತೆಗೆಯಿರಿ.

## English Translation.

The beast of burden pressed within the two waggon-poles, moves as if on the womb of sacrifie having two wives. Place the chariot in the wood, withont digging store up the juice.

|| ವಿಶೇಷವಿಷಯಗಳು ||

ಈ ಋಕ್ಕಿಗೆ ಸೋಮಪರವಾದ ಅರ್ಥವನ್ನು ಮೇಲೆ ವಿವರಿಸಲಾಗಿದೆ, ನೇಗಲಿನ ಪರವಾಗಿ ಇನ್ನೊಂದು ಅರ್ಥವೂ ಸಾಧ್ಯವೆಂದು ಭಾಷ್ಯಕಾರರು ಅದನ್ನೂ ವಿವರಿಸಿದ್ದಾರೆ—

|| ಪ್ರತಿಪದಾರ್ಥ ||

**ದ್ವಿಜಾನಿಃ**....ಇಬ್ಬರು ಪತ್ನಿಯರನ್ನು ಹೊಂದಿರುವ ಪುರುಷನು ಅವರಿಬ್ಬರ ಮಧ್ಯದಲ್ಲಿ ಸಂಚರಿಸುವಂತೆ | **ಉಭೇ ಧುರೌ**—ನೇಗಲಿನ ಎರಡು ತುದಿಗಳ ಮಧ್ಯದಲ್ಲಿ ಹೂಡಿರುವ | **ವಹ್ನಿಃ**—ವೃಷಭವು | **ಆಪಿಬ್ದಮಾನಃ**—ಶಬ್ದಮಾಡುತ್ತಾ | **ಅಂತಃ ಯೋನಾವಿವ**—ಹೊಲದ (ಭೂಮಿಯ) ಮಧ್ಯದಲ್ಲಿ | **ಚರತಿ**—ಸಂಚರಿಸುತ್ತದೆ (ಎಲೈ ಕೃಷಿಕರೇ) | **ವನಸ್ಪತಿಂ**—ಮರದಿಂದ ಮಾಡಿದ ನೇಗಿಲನ್ನು | **ವನೇ**—ಉಳುವುದಕ್ಕಾಗಿಹೊಲದಲ್ಲಿ | **ಆಸ್ಥಾಪಯಧ್ವಂ**-- ತೆಗೆದುಕೊಂಡು ಹೋಗಿ ಇಡಿ | **ಸು**— ಚೆನ್ನಾಗಿ ಅಥವಾ ಎಲ್ಲ ಕಡೆಯಲ್ಲಿಯೂ | **ನಿ ದಧಿಧ್ವಂ**—(ಭೂಮಿಯನ್ನು ನೇಗಿಲಿನಿಂದ) ಉಳುಮೆ ಮಾಡಿ | **ಉತ್ಸಂ**—ಹೊಲಕ್ಕೆ ನೀರನ್ನು ಹಾಯಿಸುವುದಕ್ಕಾಗಿ ನೀರಿನ ಭಾವಿಯನ್ನು | **ಅಖನಂತಃ**— ಅಗೆಯಿರಿ.

|| ಭಾವಾರ್ಥ ||

ಇಬ್ಬರು ಪತ್ನಿಯರಿರುವ ಪುರುಷನು ಅವರ ನಡುವೆ ವಿಹರಿಸುವಂತೆ ನೇಗಲಿನ ಎರಡು ತುದಿಗಳ ಮಧ್ಯದಲ್ಲಿ ಹೂಡಿರುವ ವೃಷಭವು (ಎತ್ತು) ಹೊಲದ ಮಧ್ಯದಲ್ಲಿ ಶಬ್ದಮಾಡುತ್ತಾ ನೇಗಿಲನ್ನು ಎಳೆಯುತ್ತದೆ. ಎಲೈ ಕೃಷಿಕರೇ,

ಮರದಿಂದ ಮಾಡಿದ ನೇಗಿಲನ್ನು ಭೂಮಿಯನ್ನು ಉಳುವುದಕ್ಕಾಗಿ ಅಲ್ಲಿಗೆ ತೆಗೆದುಕೊಂಡು ಹೋಗಿ ಭೂಮಿಯನ್ನು ಚೆನ್ನಾಗಿ ಉಳುಮೆಮಾಡಿ. ನೀರನ್ನು ಹಾಯಿಸುವುದಕ್ಕಾಗಿ ಅಲ್ಲಿ ಭಾವಿಯೊಂದನ್ನು ಅಗೆಯಿರಿ.

|| ಸಂಹಿತಾಪಾಠಃ ||

ಕಪೃನ್ನರಃ ಕಪೃಥಮುದ್ದಧಾತನ ಚೋದಯತ ಖುದತ ವಾಜಸಾತಯೇ ।
ನಿಷ್ಟಿಗ್ರ್ಯಃ ಪುತ್ರಮಾ ಚ್ಯಾವಯೋತಯ ಇಂದ್ರಂ ಸಬಾಧ ಇಹ ಸೋಮ-
ಪೀತಯೇ || ೧೨ ||

|| ಪದಪಾಠಃ ||

ಕಪೃತ್ । ನರಃ । ಕಪೃಥಂ । ಉತ್ । ದಧಾತನ । ಚೋದಯತ । ಖುದತ । ವಾಜಽಸಾತಯೇ ।
ನಿಷ್ಟಿಗ್ರ್ಯಃ । ಪುತ್ರಂ । ಆ । ಚ್ಯವಯ । ಊತಯೇ । ಇಂದ್ರಂ । ಸಽಬಾಧಃ । ಇಹ । ಸೋಮಽಪೀತಯೇ ||

|| ಸಾಯಣಭಾಷ್ಯಂ ||

ಷಷ್ಠೇಽಹನಿ ಬ್ರಾಹ್ಮಣಾಚ್ಛಂಸಿಶಸ್ತ್ರೇ ಕಪೃನ್ನರ ಇತ್ಯೇಷಾ । ಕಪೃನ್ನರೋ ಯದ್ಧ ಪ್ರಾಚೀರ-ಜಗಂತೇತಿ ಚೈತೇ । ಆ. ೮-೩ । ಇತಿ ||

ಹೇ ನರೋ ನೇತಾರ ಋತ್ವಿಜಃ ಏಷ ಇಂದ್ರಃ ಕಪೃತ್ । ಸುಖಸ್ಯ ಪೂರಕೋ ಯಷ್ಟೄಣಾಂ ಸ್ತೋತೄಣಾಂ ಚ । ಕಮಿತಿ ಸುಖನಾಮ । ತಂ ಕಪೃಥಂ ಸುಖಸ್ಯ ಪೂರಯಿತಾರಮಿಂದ್ರಂ ಚೋದಯತ । ಪ್ರೇರಯತ । ಖುದತ । ಖುರ್ದತ । ಕ್ರೀಡಯತ ।। ಖುರ್ದ ಕ್ರೀಡಾಯಾಂ ಭೌವಾದಿಕಃ । ವ್ಯತ್ಯಯೇನ ಶಃ । ರೇಫಲೋಪಶ್ಛಾಂದಸಃ ।। ಸಂಪಿಂಷ್ಟ । ಸಂಸ್ಕುರುತೇತ್ಯರ್ಥಃ । ಕಿಮರ್ಥಂ । ವಾಜಸಾತಯೇಽನ್ನಸ್ಯ ಲಾಭಾಯ । ತದೇವಾಹ । ಹೇ ಹೋತಃ ನಿಷ್ಟಿಗ್ರ್ಯಃ ಪುತ್ರಂ । ನಿಷ್ಟಿಂ ದಿತಿಂ ಸ್ವಸಪತ್ನೀಂ ಗಿರತೀತಿ ನಿಷ್ಟಿಗ್ರೀರದಿತಿಃ । ತಸ್ಯಾಃ ಪುತ್ರಮಿಂದ್ರಂ ಸಬಾಧಃ । ಸಹ ಪಾಪ್ಮೈಃ ಪ್ರಯಾಸರೂಪೈಃ ಕರ್ಮಭಿರ್ಬಾಧ್ಯಂತ ಇತಿ ಸಬಾಧ ಋತ್ವಿಜಃ । ತಥಾವಿಧಾ ಯೂಯಂ ಸೋಮಪೀತಯೇ ತಸ್ಯ ಸೋಮಪಾನಾಯೋತ-ಯೇಽಸ್ಮಾಕಂ ರಕ್ಷಣಾಯ ವಾ ಚ್ಯವಯ ।। ವ್ಯತ್ಯಯೇನೈಕವಚನಂ । ಆಚ್ಯಾವಯತೇತ್ಯರ್ಥಃ ||

|| ಪ್ರತಿಪದಾರ್ಥ ||

ನರಃ—ಕರ್ಮನೇತೃಗಳಾದ ಎಲೈ ಋತ್ವಿಕ್ಕುಗಳೇ ಈ ಇಂದ್ರನು । **ಕಪೃತ್**— ಸುಖದಾಯಕನಾಗಿದ್ದಾನೆ । **ಕಪೃಥಂ**— ಸುಖಪ್ರದನಾದ ಈ ಇಂದ್ರನನ್ನು । **ಚೋದಯತ**— ಪ್ರೇರಿಸಿರಿ । **ಉದ್ದ-ಧಾತನ**— ಹುರಿದುಂಬಿಸಿರಿ । **ವಾಜಸಾತಯೇ**—ಅನ್ನಲಾಭಾರ್ಥವಾಗಿ । **ಖುದತ**—ಅವನೊಡನೆ ಕ್ರೀಡಿಸರಿ । **ಸಬಾಧಃ**—ಎಲೈ ಋತ್ವಿಕ್ಕುಗಳೇ । **ನಿಷ್ಟಿಗ್ರ್ಯಃ**—ಅದಿತಿಯ । **ಪುತ್ರಂ**—ಪುತ್ರನಾದ । **ಇಂದ್ರಂ**—ಇಂದ್ರ

ನನ್ನು | **ಸೋಮಪೀತಯೇ**—ಸೋಮಪಾನಾರ್ಥವಾಗಿಯೂ | **ಊತಯೇ**—ರಕ್ಷಣಾರ್ಥವಾಗಿಯೂ | **ಇಹ**—ಇಲ್ಲಿಗೆ | **ಆ ಚ್ಯವಯ**—ಕೆಳಗಿಳಿದುಬರುವಂತೆ ಮಾಡಿರಿ.

|| ಭಾವಾರ್ಥ ||

ಕರ್ಮನೇತೃಗಳಾದ ಎಲೈ ಋತ್ವಿಕ್ಕುಗಳೇ, ಇಂದ್ರನು ನಮಗೆ ಸುಖದಾಯಕನಾಗಿದ್ದಾನೆ. ಸುಖಪ್ರದನಾದ ಈ ಇಂದ್ರನನ್ನು ಪ್ರೇರಿಸಿರಿ. ಹುರಿದುಂಬಿಸಿರಿ. ಅನ್ನ ಲಾಭಾರ್ಥವಾಗಿ ಅವನೊಡನೆ ಕ್ರೀಡಿಸಿರಿ ಎಲೈ ಋತ್ವಿಕ್ಕುಗಳೇ, ಅದಿತಿಯ ಪುತ್ರನಾದ ಇಂದ್ರನನ್ನು ಸೋಮಪಾನಾರ್ಥವಾಗಿಯೂ ರಕ್ಷಣಾರ್ಥ ವಾಗಿಯೂ ಇಲ್ಲಿಗೆ ಇಳಿದು ಬರುವಂತೆ ಮಾಡಿರಿ.

English Translation

Indra, you leaders, is the giver of happiness; excite the giver of happiness, stimulate him, sport with him for the acquisition of food, bring down here, O priests, Indra, the son of Nishtigri, to drink the soma juice.

|| ವಿಶೇಷವಿಷಯಗಳು ||

ಯಾಗದ ಆರನೆಯ ದಿವಸ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ **ಕಪೃನ್ನರಃ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- **ಕಪೃನ್ನರೋ ಯದ್ಧ ಪ್ರಾಚೀ-ರಜಗನ್ತ್ಯೇತಿ ಚೈತೇ** ಎಂಬ ಸೂತ್ರದಿಂದ (ಆ ೮-೩ ) ವಿವೃತವಾಗಿರುವುದು.

---

## ನೂರ ಎಡರನೆಯ ಸೂಕ್ತವು

### ಪೀಠಿಕೆ.

ಈ ಸೂಕ್ತಕ್ಕೆ ಭೃಮ್ಯಶ್ವಋಷಿಯ ಪುತ್ರನಾದ ಮುದ್ಗಲನೆಂಬುವನು ಋಷಿಯು. ಈ ಋಷಿಯ ವಿಷಯವಾಗಿ ಒಂದು ಇತಿಹಾಸವಿದೆ. ಒಂದು ಸಮಯದಲ್ಲಿ ಈ ಮುದ್ಗಲನಲ್ಲಿದ್ದ ಗೋವುಗಳನ್ನೆಲ್ಲಾ ಕಳ್ಳರು ಅಪಹರಿಸಿಕೊಂಡು ಹೋದರು. ಯಾವ ಕೆಲಸಕ್ಕೂ ಬಾರದಿರುವ ಒಂದು ಮುದಿ ಎತ್ತನ್ನು ಮಾತ್ರ ಬಿಟ್ಟು ಹೋಗಿದ್ದರು. ಅದರಿಂದ ಮುದ್ಗಲನು ಧೈರ್ಯಗೆಡದೆ ಆ ಮುದಿ ಎತ್ತನ್ನೇ ತನ್ನ ಗಾಡಿಗೆ ಕಟ್ಟಿ ಕಳ್ಳರನ್ನು ಬೆನ್ನಟ್ಟಿದನು. ತನ್ನಲ್ಲಿದ್ದ ಒಂದು ಗದೆ ಅಥವಾ ದೊಣ್ಣೆಯನ್ನು ಮುಂದೆ ಎಸೆದನು. ಅದು (ಇವನ ತಪಃಪ್ರಭಾವದಿಂದ) ಕಳ್ಳರು ಹೋದ ದಾರಿಯನ್ನೇ ಅನುಸರಿಸಿ ಹೋಗಿ ಅವರಿರುವ ಸ್ಥಳವನ್ನು ಸಿಕ್ಕುವಂತೆ ಮಾಡಿತು. ಆಗ ಮುದ್ಗಲನು ಆ ಗದೆಯಿಂದಲೇ ಕಳ್ಳರನ್ನು ಸದೆಬಡಿದು ತನ್ನ ಗೋವುಗಳನ್ನು ಹಿಂದಕ್ಕೆ ತಂದನು ಎಂದಿದೆ. ಈ ವಿಷಯವನ್ನು ಋಷಿಯು ಈ ಸೂಕ್ತದ ಒಂಭತ್ತನೆಯ ಋಕ್ಕಿನಲ್ಲಿ ತಾನೇ ಹೇಳಿಕೊಂಡಿದಾನೆ.

ಯಾಸ್ಕರು ಸಹ ಈ ವಿಷಯದಲ್ಲಿ ಈ ರೀತಿ ಹೇಳಿದಾರೆ—**ತತ್ರೇತಿಹಾಸಮಾಚಕ್ಷತೇ | ಮುದ್ಗಲೋ ಭಾರ್ಮ್ಯಶ್ವ ಋಷಿರ್ವೃಷಭಂ ಚ ದ್ರುಘಣಂ ಚ ಯುಕ್ತ್ವಾ ಸಂಗ್ರಾಮೇ ವ್ಯವಹೃತ್ಯಾಜಿಂ ಜಿಗಾಯ ||**

(ನಿ· ೯-೨೪)

ಒಂದು ಸಮಯದಲ್ಲಿ ಭೃಮ್ಯಶ್ವಪುತ್ರನಾದ ಮುದ್ಗಲನೆಂಬ ಋಷಿಯು ತನ್ನ ಗಾಡಿಗೆ ಒಂದು ಎತ್ತನ್ನೂ ಅದರ ಜೊತೆಗೆ ಒಂದು ಮರದ ಗದೆಯನ್ನೂ ಹೂಡಿ ಅದರ ಸಹಾಯದಿಂದ ಯುದ್ಧದಲ್ಲಿ ಜಯವನ್ನು ಗಳಿಸಿದನು. ಈ ವಿಷಯವು ಇದೇ ಸೂಕ್ತದ ಒಂಭತ್ತನೆಯ ಋಕ್ಕಿನಲ್ಲಿ ಹೇಳಿದೆ. ಅದನ್ನು ಆ ಋಕ್ಕಿನ ವಿಶೇಷವಿಷಯಗಳಲ್ಲಿ ನಿರ್ವಚನವನ್ನು ವಿವರಿಸುವಾಗ ತಿಳಿಸಲಾಗುವುದು. ಮುದ್ಗಲ ಮತ್ತು ಭಾರ್ಮ್ಯಶ್ವಶಬ್ದಗಳ ನಿರ್ವಚನವನ್ನೂ ಅಲ್ಲಿಯೇ ತಿಳಿಸಲಾಗುವುದು.

|| ಸಾಯಣಭಾಷ್ಯಂ ||

**ಪ್ರ ತೇ ರಥಮಿತಿ ದ್ವಾದಶರ್ಚಂ ತೃತೀಯಂ ಸೂಕ್ತಂ । ಭರ್ಮ್ಯಶ್ವಪುತ್ರೋ ಮುದ್ಗಲಋಷಿಃ । ಆದ್ಯಾ ತೃತೀಯಾಂತ್ಯಾ ಚೇತಿ ತಿಸ್ರೋ ಬೃಹತ್ಯಃ । ಶಿಷ್ಟಾ ನವ ತ್ರಿಷ್ಟುಭಃ । ದ್ರುಘಣೋ ನಾಮ ಮುದ್ಗರಃ । ತದ್ದೇವತ್ಯಮಿದಮಿಂದ್ರದೇವತ್ಯಂ ವಾ । ತಥಾ ಚಾನುಕ್ರಾಂತಂ । ಪ್ರ ತೇ ಮುದ್ಗಲೋ ಭಾರ್ಮ್ಯಶ್ವ ಋಷಭೇಣ ದ್ರುಘಣೇನ ಚಾಜಿಂ ಜಿಗಾಯೇತಿ ದ್ರೌಘಣಂ ವಾದ್ಯಾ ತೃತೀಯಾಂತ್ಯಾ ಚ ಬೃಹತ್ಯ ಇತಿ ॥ ಗತೋ ವಿನಿಯೋಗಃ ॥ ಅತ್ರಾಹುಃ । ಮುದ್ಗಲಸ್ಯ ಹೃತಾ ಗಾವಶ್ಚೋರೈಸ್ತ್ವೇಕಾತ್ವ ಜರದ್ಗವಂ । ಸ ಶಿಷ್ಟಂ ಶಕಟೇ ಕೃತ್ವಾ ಗತ್ವೈಕ ಋಜುರಾಹವಂ । ದ್ರುಘಣಂ ಯುಯುಜೇಽನ್ಯತ್ರ ಚೋರಮಾರ್ಗಾನುಸಾರಕಃ । ದ್ರುಘಣಂ ಚಾಗ್ರತಃ ಕ್ಷಿಪ್ತ್ವಾ ಚೋರೇಭ್ಯೋ ಜಗೃಹೇ ಸ್ವಗಾ ಇತಿ ॥ ತಥಾ ನಿರುಕ್ತೇಽಪೀಯಂ ಕಥಾ ಸೂಚಿತಾ । ಮುದ್ಗಲೋ ಭಾರ್ಮ್ಯಶ್ವ ಋಷಿರ್ವೃಷಭಂ ಚ ದ್ರುಘಣಂ ಚ ಯುಕ್ತ್ವಾ ಸಂಗ್ರಾಮೇ ವ್ಯವಹೃತ್ಯಾಜಿಂ ಜಿಗಾಯ ।ನಿ ೯-೨೩ । ಇತಿ ॥**

ಅನುವಾದವು—**ಪ್ರ ತೇ ರಥಂ** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭೃಮ್ಯಶ್ವಋಷಿಯ ಪುತ್ರನಾದ ಮುದ್ಗಲ ನೆಂಬುವನು ಋಷಿಯು. ಈ ಸೂಕ್ತದ ಮೊದಲನೆಯ, ಮೂರನೆಯ ಮತ್ತು ಕೊನೆಯ ಋಕ್ಕುಗಳು ಬೃಹತೀ ಛಂದಸ್ಕವು. ಉಳಿದ ಒಂಭತ್ತು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ದ್ರುಘಣವೆಂದರೆ ಮುದ್ಗರವು ಎಂದರೆ (ಮರದ) ಗದೆಯು. ಈ ಸೂಕ್ತಕ್ಕೆ ಅದೇ ದೇವತೆಯು ಅಥವಾ ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ—**ಪ್ರ ತೇ ಮುದ್ಗಲೋ ಭಾರ್ಮ್ಯಶ್ವ ಋಷಭೇಣ ದ್ರುಘಣೇನ ಚಾಜಿಂ ಜಿಗಾಯೇತಿ ದ್ರೌಘಣಂ ವಾದ್ಯಾ ತೃತೀಯಾಂತ್ಯಾ ಚ ಬೃಹತ್ಯಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

ಈ ಸೂಕ್ತದ ಋಷಿಯಾದ ಮುದ್ಗಲನ ವಿಷಯದಲ್ಲಿ ಈ ರೀತಿ ಹೇಳಲಾಗಿದೆ—

**ಮುದ್ಗಲಸ್ಯ ಹೃತಾ ಗಾವಶ್ಚೋರೈಸ್ತ್ವೇಕಾತ್ವ ಜರದ್ಗವಂ । ಸ ಶಿಷ್ಟಂ ಶಕಟೇ ಕೃತ್ವಾ ಗತ್ವೈಕ ಋಜುರಾಹವಂ ॥ ದ್ರುಘಣಂ ಯುಯುಜೇಽನ್ಯತ್ರ ಚೋರಮಾರ್ಗಾನುಸಾರಕಃ । ದ್ರುಘಣಂ ಚಾಗ್ರತಃ ಕ್ಷಿಪ್ತ್ವಾ ಚೋರೇಭ್ಯೋ ಜಗೃಹೇ ಸ್ವಗಾಃ ॥ ಇತಿ ॥**

ಒಂದು ಸಮಯದಲ್ಲಿ ಈ ಮುದ್ಗಲ ಋಷಿಯ ಗೋವುಗಳೆನ್ನೆಲ್ಲಾ ಕಳ್ಳರು ಅಪಹರಿಸಿಕೊಂಡು ಹೋದರು. ಒಂದು ಮುದಿ ಎತ್ತನ್ನು ಮಾತ್ರ ಬಿಟ್ಟುಹೋದರು. ಮುದ್ಗಲನು ಆ ಮುದಿ ಎತ್ತನ್ನೇ ತನ್ನ ಗಾಡಿಯ ಒಂದು ಕಡೆಗೂ ತನ್ನಲ್ಲಿದ್ದ ಮರದ ಗದೆಯನ್ನು ಮತ್ತೊಂದು ಕಡೆಗೂ ಹೂಡಿ ಆ ಗಾಡಿಯಲ್ಲಿ ತಾನು ಕುಳಿತು ಕಳ್ಳರ ಬೆನ್ನಟ್ಟಿಹೋಗಿ

ಅವರೊಡನೆ ಆ ಗದೆಯಿಂದಲೇ ಯುದ್ಧಮಾಡಿ ಅವರನ್ನು ಜಯಿಸಿ ತನ್ನ ಗೋವುಗಳನ್ನು ಹಿಂದಕ್ಕೆ ತಂದನು, ಎಂಬ ಇತಿಹಾಸವಿದೆ. ನಿರುಕ್ತದಲ್ಲಿಯೂ ಸಹ— **ಮುದ್ಗಲೋ ಭಾರ್ಮ್ಯಶ್ವ ಋಷಿರ್ವೃಷಭಂ ಚ ದ್ರುಘಣಂ ಚ ಯುಕ್ತ್ವಾ ಸಂಗ್ರಾಮೇ ವ್ಯವಹೃತ್ಯಾಜಿಂ ಜಿಗಾಯ** (ನಿ. ೯-೨೩) ಎಂದು ಹೇಳಿದೆ. ಇದರ ಅರ್ಥಾನುವಾದ ವನ್ನು ನಾವು ಈ ಸೂಕ್ತದ ಪೀಠಿಕೆಯಲ್ಲಿಯೇ ವಿವರಿಸಿದೇವೆ.

## ಸೂಕ್ತ—೧೦೨

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ—೧೦೨ ॥

ಅಷ್ಟಕ—೮ ॥ ಅಧ್ಯಾಯ—೫ ॥ ವರ್ಗ—೨೦, ೨೧.

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
ಋಷಿಃ—ಮುದ್ಗಲೋ ಭಾರ್ಮ್ಯಶ್ವಃ ॥
ದೇವತಾ—ದ್ರುಘನ ಇಂದ್ರೋ ವಾ ॥
ಛಂದಃ—೧, ೩, ೧೨. ಬೃಹತೀ । ೨, ೪-೧೧. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ತೇ ರಥಂ ಮಿಥೂಕೃತಮಿಂದ್ರೋಽವತು ಧೃಷ್ಣುಯಾ ।
ಅಸ್ಮಿನ್ನಾಜೌ ಪುರುಹೂತ ಶ್ರವಾಯ್ಯೇ ಧನಭಕ್ಷೇಷು ನೋಽವ ॥ ೧ ॥

॥ ಪದಪಾಠಃ ॥

ಪ್ರ । ತೇ । ರಥಂ । ಮಿಥುಽಕೃತಂ । ಇಂದ್ರಃ । ಅವತು । ಧೃಷ್ಣುಽಯಾ ।
ಅಸ್ಮಿನ್ । ಆಜೌ । ಪುರುಽಹೂತ । ಶ್ರವಾಯ್ಯೇ । ಧನಽಭಕ್ಷೇಷು । ನಃ । ಅವ ॥ ೧ ॥

। ಸಾಯಣಭಾಷ್ಯಂ ॥

ಹೇ ಮುದ್ಗಲ ತೇ ರಥಂ ಮಿಥೂಕೃತಂ ಮಿಥಃಕೃತಮಸಹಾಯಂ ಕೃತಂ । ಅಥವಾ ಮಿಥುರಿತಿ ಮಿಥ್ಯಾನಾಮ । ಅಶ್ವಾದಿಭಿಃ ಶೂನ್ಯಂ ಕೃತಂ ಧೃಷ್ಣುಯಾ ಧರ್ಷಣಶೀಲ ಇಂದ್ರೋಽವತು । ರಕ್ಷತು । ಯದ್ವಾ । ಧೃಷ್ಣುಯಾ ಧರ್ಷಣಶೀಲೇನ ವಜ್ರೇಣ ॥ ಉಭಯತ್ರ ಸುಪಾಂ ಸುಲುಗಿತಿ ಸುಪೋ ಯಾಜಾದೇಶಃ ॥ ಅಥ ಪ್ರತ್ಯಕ್ಷಕೃತಃ । ಹೇ ಪುರುಹೂತ ಬಹುಭಿರಾಹೂತೇಂದ್ರ ಅಸ್ಮಿನ್ನಾಜೌ ಸಂಗ್ರಾಮೇಽಪಹೃತಗೋಭಿಶ್ಚೋರೈಃ ಕೃತೇ ಸಂಗ್ರಾಮೇ । ಕೀದೃಶೇ ।ಶ್ರವಾಯ್ಯೇ ಶ್ರೋತವ್ಯೇ ।ವಿಶ್ರುತ ಇತ್ಯರ್ಥಃ ॥ ಶ್ರುದಕ್ಷೀತ್ಯಾದಿನಾ । ಉ-೩-೯೬ । ಆಯ್ಯಪ್ರತ್ಯಯಃ ॥ ಧನಭಕ್ಷೇಷ್ವಸ್ಮಾಸು ಗೋರೂಪ-ಧನಭಜನಕಾಮೇಷು ಸತ್ಸು । ಯದ್ವಾ । ಗೋರೂಪಧನಸ್ಯ ಭಕ್ಷಕೇಷು ಚೌರೇಷು ಜೇತವ್ಯೇಷು ಸತ್ಸು । ನೋಽಸ್ಮಾನವ । ರಕ್ಷ ॥

|| ಪ್ರತಿಪದಾರ್ಥ ||

(ಎಲೈ ಮುದ್ಗಲನೇ)**ತೇ**— ನಿನ್ನ | **ಮಿಥೂಕೃತಂ**-ಹೂಡಲು ಅಶ್ವಾದಿಗಳಿಲ್ಲದೆ ಅಸಹಾಯಕಸ್ಥಿತಿಯಲ್ಲಿರುವ **ರಥಂ**—ರಥವನ್ನು ಅಥವಾ ಗಾಡಿಯನ್ನು | **ಇಂದ್ರಃ**— ಇಂದ್ರನು:| **ಧೃಷ್ಣುಯಾ**—ಧರ್ಷಣಶೀಲವಾದ ಎಂದರೆ ಶತ್ರುಗಳನ್ನು ಎದುರಿಸಬಲ್ಲ ವಜ್ರಾಯುಧದಿಂದ | **ಅವತು**—ರಕ್ಷಿಸಲಿ | **ಪುರುಹೂತ**—ಅನೇಕರ ಆಹ್ವಾನಕ್ಕೆ | ಪಾತ್ರನಾದ ಎಲೈ ಇಂದ್ರನೇ | **ಶ್ರವಾಯ್ಯೇ**-ಪ್ರಸಿದ್ಧವಾದ | **ಧನಭಕ್ಷೇಷು**- ಗೋರೂಪವಾದ ಧನಪ್ರಾಪ್ತಿದಾಯಕವಾದ ಅಥವಾ ಗೋರೂಪಧನವನ್ನಪಹರಿಸಿದ ಚೋರರೊಡನೆ ನಡೆಯಬೇಕಾಗಿರುವ | **ಅಸ್ಮಿನ್ ಆಜೌ**—ಈ ಯುದ್ಧದಲ್ಲಿ | **ನಃ**—ನಮ್ಮನ್ನು | **ಅವ**—ರಕ್ಷಿಸು |

|| ಭಾವಾರ್ಥ ||

ಎಲೈ (ಮುದ್ಗಲ ಋಷಿಯೇ) ಹೂಡಲು ಅಶ್ವಾದಿಗಳಿಲ್ಲದಿರುವ ಮತ್ತು ಅಸಹಾಯಕಸ್ಥಿತಿಯಲ್ಲಿರುವ ನಿನ್ನ ರಥವನ್ನು ಇಂದ್ರನು ತನ್ನ ಶತ್ರುಧರ್ಷಕವಾದ ವಜ್ರಾಯುಧದ ಸಹಾಯದಿಂದ ರಕ್ಷಿಸಲಿ. ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ, ಗೋರೂಪವಾದ ಧನವನ್ನಪಹರಿಸಿದ ಚೋರರೊಡನೆ ನಡೆಯುವ ಪ್ರಸಿದ್ಧವಾದ ಈ ಯುದ್ಧದಲ್ಲಿ ನಮ್ಮನ್ನು (ಮುದ್ಗಲ ಮೊದಲಾದವರನ್ನು) ರಕ್ಷಿಸು.

English Translation

May (Indra) by his prowess protect your waggon (Mudgala) that has no companion, defend us, O invoked of many, in this memorable conflict in the recovery of our wealth.

|| ವಿಶೇಷವಿಷಯಗಳು ||

ಮುದ್ಗಲನ ವಿಷಯವನ್ನೂ ಈ ಮುದ್ಗಲನು ಚೋರರೊಡನೆ ಏತಕ್ಕೆ ಯುದ್ಧಮಾಡಬೇಕಾಯಿತೆಂಬುದನ್ನೂ ಈ ಸೂಕ್ತದ ಪೀಠಿಕೆಯಲ್ಲಿ ವಿವರಿಸಲಾಗಿದೆ. ಇಂತಹ ಈ ಯುದ್ಧದಲ್ಲಿ ಇಂದ್ರನು ತನಗೆ ಸಹಾಯಮಾಡಿ ತನ್ನನ್ನು ರಕ್ಷಿಸಬೇಕೆಂದು ಋಷಿಯು ಇಂದ್ರನನ್ನು ಪ್ರಾರ್ಥಿಸಿದಾನೆ.

|| ಸಂಹಿತಾಪಾಠಃ ||

ಉತ್ಸ್ಮ ವಾತೋ ವಹತಿ ವಾಸೋ ಅಸ್ಯಾ ಅಧಿರಥಂ ಯದಜಯತ್ಸಹಸ್ರಂ |
ರಥೀರಭೂನ್ಮುದ್ಗಲಾನೀ ಗವಿಷ್ಟೌ ಭರೇ ಕೃತಂ ವ್ಯಚೇದಿಂದ್ರಸೇನಾ || ೨ ||

|| ಪದಪಾಠಃ ||

ಉತ್ | ಸ್ಮ | ವಾತಃ | ವಹತಿ | ವಾಸಃ | ಅಸ್ಯಾಃ | ಅಧಿऽರಥಂ | ಯತ್ | ಅಜಯತ್ | ಸಹಸ್ರಂ |
ರಥೀಃ | ಅಭೂತ್ | ಮುದ್ಗಲಾನೀ | ಗೋऽಇಷ್ಟೌ | ಭರೇ | ಕೃತಂ | ವಿ | ಅಚೇತ್ | ಇಂದ್ರऽಸೇನಾ ||

॥ ಸಾಯಣಭಾಷ್ಯಂ ॥

ಅಸ್ಯಾ ರಥೀರಭೂನ್ಮುದ್ಗಲಾನೀತಿ ವಕ್ಷ್ಯಮಾಣತ್ವಾದಸ್ಯ ಮುದ್ಗಲಸ್ಯ ಪತ್ನ್ಯಾಃ ಸಾರಥಿಭೂತಾಯಾ ವಾಸೋಽಂಶುಕಂ ವಾತೋ ವಾಯುರದ್ವಹತಿ । ಊರ್ಧ್ವಂ ಪ್ರಾಪಯತಿ । ಶ್ರಮಜನಿತಸ್ವೇದಾಪನಯನಾಯ । ಅಥವಾ ಶೀಘ್ರರಥಧಾವನಜನಿತೋ ವಾಯುರಂಶುಕಂ ಚಾಲಯತೀತ್ಯರ್ಥಃ । ಕದೇತಿ ಉಚ್ಯತೇ । ಯದ್ಯದಾಧಿರಥಮಧಿಕಂ ರಥಮಾರುಹ್ಯ ಸಹಸ್ರಂ ಸಹಸ್ರಸಂಖ್ಯಾಕಂ ಗೋಸಂಘಮಜಯತ್ ತದಾ । ಯದ್ವಾ ಗೋಸಹಸ್ರಮಜಯದಸ್ಯಾ ಇತಿ ವಾ ಯೋಜ್ಯಂ ॥ ಯದ್ವೋಗಾಜ್ಞಯತೇರ್ನ ನಿಘಾತಃ ॥ ಗವಿಷ್ಟೌ ಗವಾಮಪಹೃತಾನಾಮೇಷಣೇ ಮುದ್ಗಲಾನೀ ಮುದ್ಗಲಸ್ಯ ಸ್ತ್ರೀ ರಥೀರಭೂತ್ । ಸಾರಥಿರಭವತ್ ॥ ಛಾಂದಸ ಆನುಕ್ ॥ ಇಂದ್ರಸೇನಾ ಸ್ತುತ್ಯಾ ಪರಿತುಷ್ಟಸ್ಯೇಂದ್ರಸ್ಯ ಸೇನಾ । ಯದ್ವಾ । ಇಂದ್ರಸ್ಯ ಶತ್ರೂಣಾಂ ದಾರಯಿತುರ್ಮುದ್ಗಲಸ್ಯ ಸೇನಾನೀರೂಪಾ ಮುದ್ಗಲಾನೀ । ಭರೇ ಸಂಗ್ರಾಮೇ ಕೃತಂ ಸಂಪಾದಿತಂ ಗೋಸಂಘಂ ವ್ಯಚೇತ್ । ವ್ಯಚಿನೋತ್ । ಶತ್ರುಭ್ಯಃ ಪೃಥಕ್ಕೃತವತೀ ॥ ಚಯತೇರ್ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ ಮುದ್ಗಲನ ಪತ್ನಿಯು । **ಅಧಿರಥಂ**—ದೊಡ್ಡದಾದ ರಥವನ್ನು ಹತ್ತಿ । **ಸಹಸ್ರಂ**—ಚೋರರು ಅಪಹರಿಸಿದ್ದ ಅನೇಕ ಗೋವುಗಳನ್ನು । **ಅಜಯತ್**—ಜಯಿಸಿ ತಂದಳೋ ಆಗ । **ಅಸ್ಯಾಃ**— ಈ ಸಾರಥಿಯಾದ ಮುದ್ಗಲಾನಿಯ । **ವಾಸಃ**—ವಸ್ತ್ರವನ್ನು । **ವಾತಃ**—ಗಾಳಿಯು । **ಉತ್ ಸ್ಮ ವಹತಿ**—ಮೇಲಕ್ಕೆ ಹಾರಿಸುತ್ತಿತ್ತು । **ಗವಿಷ್ಟೌ**—ಅಪಹೃತವಾದ ಗೋವುಗಳನ್ನು ಹುಡುಕಿ ತರುವುದಕ್ಕಾಗಿ ಹೂಡಿದ ಯುದ್ಧದಲ್ಲಿ । **ಮುದ್ಗಲಾನೀ**—ಮುದ್ಗಲನ ಪತ್ನಿಯು । **ರಥೀಃ**—ರಥವನ್ನು ನಡೆಸುವ ಸಾರಥಿಯಾಗಿ । **ಅಭೂತ್**—ಆಗಿದ್ದಳು । **ಇಂದ್ರಸೇನಾ**—ಸ್ತೋತ್ರದಿಂದ ಸಂತುಷ್ಟನಾದ ಇಂದ್ರನ ಸೇನೆಯು ಅಥವಾ ಶತ್ರುಗಳನ್ನು ಸೀಳುವ ಮುದ್ಗಲನ ಸೇನಾನಿಯಂತಿರುವ ಮುದ್ಗಲನ ಪತ್ನಿಯು । **ಭರೇ**—ಯುದ್ಧದಲ್ಲಿ । **ಕೃತಂ**—ಸಂಪಾದಿಸಲ್ಪಟ್ಟ ಗೋಸಂಘವನ್ನು । **ವ್ಯಚೇತ್**—ಶತ್ರುಗಳಿಂದ ಬಿಡಿಸಿ ತಂದಳು ।

॥ ಭಾವಾರ್ಥ ॥

ಮುದ್ಗಲನ ಗೋವುಗಳನ್ನು ಅಪಹರಿಸಿದ ಕಳ್ಳರಿಂದ ಅವುಗಳನ್ನು ಬಿಡಿಸಿ ತರುವುದಕ್ಕಾಗಿ ಕಳ್ಳರೊಡನೆ ನಡೆದ ಹೋರಾಟದಲ್ಲಿ ಮುದ್ಗಲನ ಪತ್ನಿಯೇ ರಥವನ್ನು ನಡೆಸುವ ಸಾರಥಿಯಾಗಿದ್ದಳು. ಅವಳು ರಥವನ್ನು ನಡೆಸುತ್ತಿರುವಾಗ ರಥವೇಗದಿಂದ ಉಂಟಾದ ಗಾಳಿಯು ಅವಳ ವಸ್ತ್ರವನ್ನು ಮೇಲಕ್ಕೆ ಹಾರಿಸುತ್ತಿತ್ತು. ಗೋವುಗಳಿಗಾಗಿ ನಡೆದ ಆ ಯುದ್ಧದಲ್ಲಿ ಮುದ್ಗಲನ ಸೇನಾನಿಯಂತಿದ್ದ ಅವನ ಪತ್ನಿಯು ಗೋವುಗಳನ್ನು ಕಳ್ಳರಿಂದ ಜಯಿಸಿ ತಂದಳು.

## English Translation.

The wind raised her vesture when she won a thousand waggon-loads. Mudgalani was the charioteer in the quest of the cattle, the army of Indra recovered (the spoil) taken in battle.

॥ ಸಂಹಿತಾಪಾಠಃ ॥

ಅಂತರ್ಯಚ್ಛ ಜಿಘಾಂಸತೋ ವಜ್ರಮಿಂದ್ರಾಭಿದಾಸತಃ ।
ದಾಸಸ್ಯ ವಾ ಮಘವನ್ನಾರ್ಯಸ್ಯ ವಾ ಸನುತರ್ಯವಯಾ ವಧಂ ॥ ೩ ॥

॥ ಪದಪಾಠಃ ॥

ಅಂತಃ । ಯಚ್ಛ । ಜಿಘಾಂಸತಃ । ವಜ್ರಂ । ಇಂದ್ರ । ಅಭಿऽದಾಸತಃ ।
ದಾಸಸ್ಯ । ವಾ । ಮಘऽವನ್ । ಆರ್ಯಸ್ಯ । ವಾ । ಸನುತಃ । ಯವಯ । ವಧಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಜಿಘಾಂಸತೋ ಹಂತುಮಿಚ್ಛತೋಽಭಿದಾಸತೋಽಭಿದ್ರುಹ್ಯತಃ ಶತ್ರೋರ್ವಜ್ರಮಂತರ್ಯಚ್ಛ । ಅಂತರ್ಗಮಯ । ತದೇವಾಹ । ಹೇ ಮಘವನ್ಧನವನ್ನಿಂದ್ರ ದಾಸಸ್ಯ ವೋಪಕ್ಷೀಣಸ್ಯಾಲ್ಪಸ್ಯಾರ್ಯಸ್ಯಾಭಿಗಂತವ್ಯಸ್ಯ ಮಹತೋ ವಾ ಶತ್ರೋರ್ವಧಂ । ವಜ್ರನಾಮೈತತ್ । ಹನನಸಾಧನಂ ವಜ್ರಂ ಸನುತಃ । ಅಂತರ್ಹಿತನಾಮೈತತ್ । ಅಂತರ್ಹಿತಂ ಗೂಢಂ ಪ್ರಯುಜ್ಯಮಾನಂ ಯವಯ । ಪೃಥಕ್ಕುರು ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಜಿಘಾಂಸತಃ**—ನಮ್ಮನ್ನು ಕೊಲ್ಲಲಿಚ್ಛಿಸುವವನೂ । **ಅಭಿದಾಸತಃ**—ನಮಗೆ ದ್ರೋಹವನ್ನೆಸಗುವವನೂ ಆದ ಶತ್ರುವಿನ । **ವಜ್ರಂ**—ವಜ್ರಸದೃಶವಾದ ಆಯುಧವನ್ನು । **ಅಂತಃ ಯಚ್ಛ**—(ನಮ್ಮ ಮೇಲೆ ಬಂದು ಬೀಳದಂತೆ) ಅಲ್ಲಿಯೇ ತಡೆ । **ಮಘವನ್**—ಎಲೈ ಧನವಂತನಾದ ಇಂದ್ರನೇ । **ದಾಸಸ್ಯ**—ಶತ್ರುವು ಹಂತಕನಾದ ದಸ್ಯುವಾಗಿದ್ದರೂ । **ಆರ್ಯಸ್ಯ ವಾ**—ಆರ್ಯರಲ್ಲಿ ಒಬ್ಬನಾಗಿದ್ದರೂ ಅಂತಹ ಶತ್ರುವಿನ । **ಸನುತಃ**—ಗೂಢವಾಗಿ ಬಚ್ಚಿಟ್ಟುಕೊಂಡಿರುವ । **ವಧಂ**—ಹನನಸಾಧನವಾದ (ವಜ್ರ) ಆಯುಧವನ್ನು **ಯವಯ**—ನಮ್ಮಲ್ಲಿಗೆ ಬರದಂತೆ ಬೇರೆಮಾಡು ಎಂದರೆ ತಡೆಗಟ್ಟು.

॥ ಭಾವಾರ್ಥ ॥

ಎಲೈ ಇಂದ್ರನೇ, ನಮಗೆ ದ್ರೋಹವನ್ನೆಸಗುವವನೂ ನಮ್ಮನ್ನು ಕೊಲ್ಲಲಿಚ್ಛಿಸುವವನೂ ಆದ ಶತ್ರುವಿನ ವಜ್ರಸದೃಶವಾದ ಆಯುಧವನ್ನು ನಮ್ಮ ಮೇಲೆ ಬೀಳದಂತೆ ಅಲ್ಲಿಯೇ ತಡೆಗಟ್ಟು. ಎಲೈ ಧನವಂತನಾದ ಇಂದ್ರನೇ, ನಮ್ಮನ್ನು ಕೊಲ್ಲಬಯಸುವ ಶತ್ರುವು ದಸ್ಯುವಾಗಿರಲಿ ಅಥವಾ ಆರ್ಯನೇ ಆಗಿರಲಿ, ಅವನು ಗೂಢವಾಗಿ ಬಚ್ಚಿಟ್ಟುಕೊಂಡಿರುವ ಆಯುಧವು ನಮ್ಮಲ್ಲಿಗೆ ಬರದಂತೆ ಅದನ್ನು ಅಲ್ಲಿಯೇ ತಡೆ.

## English Translation.

Restrain, Indra, the thunderbolt of the malignant threatening (foe); ward off, Maghavan, the secret weapon (of our foe), be he Dasa or Arya.

|| ಸಂಹಿತಾಪಾಠಃ ||

ಉದ್ನೋ ಹ್ರದಮಪಿಬಜ್ಜರ್ಹೃಷಾಣಃ ಕೂಟಂ ಸ್ಮ ತೃಂಹದಭಿಮಾತಿಮೇತಿ |
ಪ್ರ ಮುಷ್ಕಭಾರಃ ಶ್ರವ ಇಚ್ಛಮಾನೋಽಜಿರಂ ಬಾಹೂ ಅಭರತ್ಸಿಷಾಸನ್ ||

|| ಪದಪಾಠಃ ||

ಉದ್ನಃ | ಹ್ರದಂ | ಅಪಿಬತ್ | ಜರ್ಹೃಷಾಣಃ | ಕೂಟಂ | ಸ್ಮ | ತೃಂಹತ್ | ಅಭಿಽಮಾತಿಂ | ಏತಿ |
ಪ್ರ | ಮುಷ್ಕಽಭಾರಃ | ಶ್ರವಃ | ಇಚ್ಛಮಾನಃ | ಅಜಿರಂ | ಬಾಹೂ ಇತಿ | ಅಭರತ್ | ಸಿಸಾಸನ್ || ೪ ||

|| ಸಾಯಣಭಾಷ್ಯಂ ||

ಅತ್ರ ವೃಷಭಃ ಸ್ತೂಯತೇ | ವೃಷಭ ಉದ್ನ ಉದಕಸ್ಯ ಹ್ರದಮಗಾಧಜಲಾಶಯಮಪಿಬಜ್ಜರ್ಹೃಷಾಣೋಽತ್ಯಂತಂ ಹೃಷಿತಃ ಸನ್ | ತಥಾ ಕೂಟಂ ಪರ್ವತಶೃಂಗಂ ಚೋರೈರ್ಗೋಽಪಿಧಾನಾರ್ಥಂ ನಿಹಿತಂ ತೃಂಹತ್ಸ್ಮ | ಶೃಂಗೇಣ ವಿಹಿಂಸಿತವಾನ್ | ವ್ಯದಾರಯದಿತ್ಯರ್ಥಃ | ತಥಾ ಕೃತ್ವಾಭಿಮಾತಿಮೇತಿ | ಶತ್ರುಂ ಗಚ್ಛತಿ ಹಂತುಂ | ಪಶ್ಚಾನ್ಮುಷ್ಕಭಾರಃ ಪ್ರವೃದ್ಧಮುಷ್ಕಃ | ಪ್ರವೃದ್ಧಸ್ಯ ವೃಷಭಸ್ಯ ಹಿ ಮುಷ್ಕವೃದ್ಧಿರ್ಭವತಿ | ತಥಾ ಪ್ರವೃದ್ಧೋ ವೃಷಭಃ ಶ್ರವಃ | ಶ್ರೂಯತ ಇತಿ ಶ್ರವೋ ಯಶಃ | ಇಚ್ಛಮಾನ ಇಚ್ಛನ್ನಜಿರಂ ಗಮನಶೀಲಂ ಶತ್ರುಂ ಬಾಹೂ ಬಾಹುಭ್ಯಾಂ ಬಾಹ್ವೋರ್ವಾ ಪ್ರಾಭರತ್ | ಪ್ರಹೃತವಾನ್ | ಯದ್ವಾ | ಅಜಿರಮಿತಿ ಕ್ಷಿಪ್ರನಾಮ | ಕ್ಷಿಪ್ರಂ ಸಿಷಾಸನ್ ಸಂಭಕ್ತುಮಿಚ್ಛನ್ ಬಾಹೂ ಪ್ರಾಭರತ್ | ಪ್ರಸಾರಿತವಾನಿತ್ಯರ್ಥಃ ||

|| ಪ್ರತಿಪದಾರ್ಥ ||

(ಮುದ್ಗಲನ ಗಾಡಿಗೆ ಕಟ್ಟಿದ್ದ ವೃಷಭವು) ಉದ್ನಃ—ನೀರಿನಿಂದ ತುಂಬಿದ | ಹ್ರದಂ—ಕುಂಟೆಯನ್ನೇ | ಅಪಿಬತ್—ಕುಡಿಯಿತು | ಜರ್ಹೃಷಾಣಃ—ಹರ್ಷಯುಕ್ತವಾಗಿ (ಎಂದರೆ ಸಂತೋಷಾತಿಶಯದಿಂದ) | ಕೂಟಂ—(ಚೋರರು ಗೋವುಗಳನ್ನು ಬಚ್ಚಿಡುವುದಕ್ಕಾಗಿ ಮರೆ ಮಾಡಿದ್ದ)ಪರ್ವತಶೃಂಗವನ್ನು ಎಂದರೆ ದೊಡ್ಡ ಕಲ್ಲು ಬಂಡೆಯನ್ನು | ತೃಂಹತ್ ಸ್ಮ—ತನ್ನ ಕೊಂಬಿನಿಂದ ತಿವಿದು ಕೆಡವಿತು (ಅನಂತರ) | ಅಭಿಮಾತಿಂ ಏತಿ—ಶತ್ರುವಿನ ಮೇಲೆ ಮುನ್ನುಗ್ಗಿಹೋಯಿತು | ಪ್ರ ಮುಷ್ಕಭಾರಃ—ಮುಷ್ಕದಿಂದ ಮದಿಸಿದ ಎಂದರೆ ಶಕ್ತಿಯಿಂದ ಮದಿಸಿದ ಆ ವೃಷಭವು | ಶ್ರವಃ—ಯಶಸ್ಸನ್ನು ಎಂದರೆ ತನ್ನ ಯಜಮಾನನ ಮೆಚ್ಚುಗೆಯನ್ನು | ಇಚ್ಛಮಾನಃ—

**ಅಪೇಕ್ಷಿಸುತ್ತಾ** । **ಅಜಿರಂ** ಮುನ್ನುಗ್ಗುತ್ತಿರುವ ಶತ್ರುವನ್ನು । **ಸಿಷಾಸನ್**— ಸಮೀಪಿಸುತ್ತಾ । **ಬಾಹೂ**— ತನ್ನ **ಬಾಹು**ಗಳಿಂದ ಎಂದರೆ ಪಾದಗಳಿಂದ (ಗೊರಸುಗಳಿಂದ) । **ಪ್ರ ಅಭರತ್**—ಹಿಡಿದು ಹಿಂಸಿಸಿತು.

॥ ಭಾವಾರ್ಥ ॥

ಮುದ್ಗಲನ ಗಾಡಿಗೆ ಕಟ್ಟಿದ್ದ ಆ ಒಂದು ವೃಷಭವು (ಎತ್ತು) ಕುಂಟೆಯಲ್ಲಿದ್ದ ನೀರನ್ನೆಲ್ಲಾ ಕುಡಿಯಿತು. ಅದರಿಂದ ಹರ್ಷಿತವಾಗಿ ಚೋರರು ಗೋವುಗಳನ್ನು ಅವಿಸಿಟ್ಟಿದ್ದ ಗುಹೆಯ ಬಾಗಿಲಿಗೆ ಅಡ್ಡವಾಗಿದ್ದ ಕಲ್ಲುಬಂಡೆಯನ್ನು ತನ್ನ ಕೊಂಬುಗಳಿಂದ ತಿವಿದು ಕೆಡವಿ ಶತ್ರುವಿನ ಮೇಲೆ ಮುನ್ನುಗ್ಗಿಹೋಯಿತು. ಶಕ್ತ್ಯತಿಶಯದಿಂದ ಮದಿಸಿದ ಆ ವೃಷಭವು ಯಜಮಾನನ ಮೆಚ್ಚುಗೆಯನ್ನು ಪಡೆಯುವುದಕ್ಕಾಗಿ ಶತ್ರುವಿನ ಮೇಲೆ ನುಗ್ಗಿ ತನ್ನ ಪಾದಗಳ ಗೊರಸುಗಳಿಂದ ಅವನನ್ನು ತುಳಿದು ಹಿಂಸಿಸಿತು.

## English Translation.

Rejoicing, he drank up the pool of water; he cleft the mountain peak, he went against the enemy, endowed with vigour, eager for fame, assailing the quick-moving (foe), he seized him with his two arms.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಮುದ್ಗಲಋಷಿಯು ಗಾಡಿಗೆ ಕಟ್ಟಿದ್ದ ವೃಷಭವು ಶತ್ರುವಿನ ಮೇಲೆ ಮುನ್ನುಗ್ಗಿ ಅವನನ್ನು ಘಾಸಿಪಡಿಸಿದ ಸಾಹಸಕೃತ್ಯವನ್ನು ವರ್ಣಿಸಲಾಗಿದೆ

॥ ಸಂಹಿತಾಪಾಠಃ ॥

ನ್ಯಕ್ರಂದಯನ್ನುಪಯಂತ ಏನಮಮೇಹಯನ್ವೃಷಭಂ ಮಧ್ಯ ಆಜೇಃ ।
ತೇನ ಸೂಭರ್ವಂ ಶತವತ್ಸಹಸ್ರಂ ಗವಾಂ ಮುದ್ಗಲಃ ಪ್ರಧನೇ ಜಿಗಾಯ ॥೫॥

॥ ಪದಪಾಠಃ ॥

ನಿ । ಅಕ್ರಂದಯನ್ । ಉಪಽಯಂತಃ । ಏನಂ । ಅಮೇಹಯನ್ । ವೃಷಭಂ । ಮಧ್ಯೇ । ಆಜೇಃ ।
ತೇನ । ಸೂಭರ್ವಂ । ಶತಽವತ್ । ಸಹಸ್ರಂ । ಗವಾಂ । ಮುದ್ಗಲಃ । ಪ್ರಽಧನೇ । ಜಿಗಾಯ ॥ ೫ ॥

॥ ಸಾಯಣಭಾಷ್ಯಂ ॥

ಮುದ್ಗಲ ಆಹ । ತೇನೇತಿ ತಚ್ಛಬ್ದಶ್ರುತೇರ್ಯಚ್ಛಬ್ದಾಧ್ಯಾಹಾರಃ । ಯಮೇನಂ ವೃಷಭಂ ನ್ಯಕ್ರಂದಯನ್ ನಿತರಾಂ ಕ್ರಂದನಮಕುರ್ವನ್ । ಕೇ । ಉಪಯಂತಃ ಸಮೀಪೇ ಗಚ್ಛಂತೋ ನರಃ । ಯಥಾ ಪ್ರಚಂಡೇನ ಕ್ರಂದನೇನ ಶತ್ರವೋ ಭೀತಾಃ ಪಲಾಯಂತೇ ತಥಾಕುರ್ವನ್ । ಕಿಂ । ವೃಷಭಂ

**ವರ್ಷಕಂ ಸೇಕ್ತಾರಮಾಜೇಃ ಸಂಗ್ರಾಮಸ್ಯ ಮಧ್ಯೇಽನೋಹಯನ್ ಮೂತ್ರಪುರೀಷೋತ್ಸರ್ಗಂ ವಿಶ್ರಾಮಾರ್ಥಂ ಕಾರಿತವಂತಃ ಸೂಭರ್ವಂ । ಭರ್ವತಿರತ್ತಿಕರ್ಮಾ । ಶೋಭನಚರ್ವಣಾದಿಭಕ್ಷಕಂ । ಶಾದ್ವಶೋಯಥಾ ಭವತಿ ತಥಾ ಕೃತ್ವೇತ್ಯರ್ಥಃ । ಯದ್ವಾ । ಏತದ್ಗೋಸಹಸ್ರವಿಶೇಷಣಂ । ತೇನೋಕ್ತರೂಪೇಣ ವೃಷಭೇಣ ಸೂಭರ್ವಂ ಸುಷ್ಠು ಯವಸಾಸ್ವಾದಿ ಶತವಚ್ಛತೋಪೇತಂ ಗವಾಂ ಸಹಸ್ರಂ ಮುದ್ಗಲ ಏತನ್ನಾಮಾಹಂ ಪ್ರಧನೇ ಸಂಗ್ರಾಮೇ ಜಿಗಾಯ । ಅಜೈಷಂ ॥**

॥ ಪ್ರತಿಪದಾರ್ಥ ॥

**ಆಜೇಃ**—ಯುದ್ಧಭೂಮಿಯ । **ಮಧ್ಯೇ**—ಮಧ್ಯದಲ್ಲಿ । **ಏನಂ ವೃಷಭಂ**—ಈ ಎತ್ತನ್ನು (ಮಾನವರು) । **ಉಪೆಯಂತಃ**--ಸಮೀಪಿಸಿ । **ನಿ ಅಕ್ರಂದಯನ್**--(ಶತ್ರುಗಳನ್ನು ಹೆದರಿಸುವುದಕ್ಕಾಗಿ) ಘಟ್ಟಿಯಾಗಿ ಗುಟುರು ಹಾಕುವಂತೆ ಮಾಡಿದರು । **ಅಮೇಹಯನ್**—ಮೂತ್ರಪುರೀಷೋತ್ಸರ್ಜನೆಯನ್ನು ಮಾಡುವಂತೆಯೂ ಮಾಡಿದರು । **ತೇನ**—ಈ ರೀತಿ ಮಾಡಿದಎತ್ತಿನ ಕೃತ್ಯದಿಂದ । **ಮುದ್ಗಲಃ**—ಮುದ್ಗಲನೆಂಬ ನಾನು । **ಪ್ರಧನೇ**—ಯುದ್ಧದಲ್ಲಿ । **ಸೂಭರ್ವಂ**—ಚೆನ್ನಾಗಿ ಮೇದಿರುವ । **ಗವಾಂ ಶತವತ್ ಸಹಸ್ರಂ**—ನೂರಾರು ಮತ್ತು ಸಾವಿರಾರು ಗೋವುಗಳನ್ನು । **ಜಿಗಾಯ**—ಗೆದ್ದು ತಂದಿದ್ದೇನೆ ।

॥ ಭಾವಾರ್ಥ ॥

(ಮುದ್ಗಲನ ವಾಕ್ಯವು) ನನ್ನ ಕಡೆಯ ಜನರು ನನ್ನಲ್ಲಿದ್ದ ಈ ವೃಷಭವನ್ನು ಯುದ್ಧ ಭೂಮಿಗೆ ತೆಗೆದುಕೊಂಡು ಹೋಗಿ ಅದನ್ನು ಅಲ್ಲಿ ಗುಟುರು ಹಾಕುವಂತೆಯೂ ಮೂತ್ರ ಪುರಿಷೋತ್ಸರ್ಜನವನ್ನು ಮಾಡುವಂತೆಯೂ ಮಾಡಿದರು. ವೃಷಭದ ಗುಟರುಧ್ವನಿಯಿಂದ ಶತ್ರುಗಳು ತತ್ತರಿಸುವಂತಾಯಿತು. ವೃಷಭದ ಈ ವಿಧ ಕಾರ್ಯದಿಂದ ಮುದ್ಗಲನಾದ ನಾನು ಯುದ್ಧದಲ್ಲಿ ಚೆನ್ನಾಗಿ ಹುಲ್ಲು ಮೇದಿರುವ ನೂರಾರು, ಸಾವಿರಾರು ಗೋವುಗಳನ್ನು ಗೆದ್ದು ತಂದೆನು.

## English Translation

Approaching the bull, they made him roar in the midst of the battle. I, Mudgala, have thereby gained in war hundreds and thousauds of cattle well-pastured.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ವೃಷಭಃ । ಪ್ರಜಾಂ ವರ್ಷತೀತಿ ವಾತಿಬೃಹತಿ ರೇತ ಇತಿ ವಾ ತದ್ವೃಷಕರ್ಮಾ ವರ್ಷಣಾದ್ವೃಷಭಃ ॥ ತಸ್ಯೈಷಾ ಭವತಿ ॥**

(ನಿ ೯-೨೨)

ವೃಷಭವೆಂದರೆ, ಸುರಿಸುವುದು ಎಂದರ್ಥವು. ಏನನ್ನು ಸುರಿಸುವುದು ಎಂದರೆ ಪ್ರಜೆಗಳನ್ನು ಅಥವಾ ಪ್ರಜೋತ್ಪತ್ತಿ ಕಾರಣಭೂತವಾದ ರೇತಸ್ಸನ್ನು (ವೀರ್ಯವನ್ನು) (ಸ್ತ್ರಿಯ) ಯೋನಿಯಲ್ಲಿ ಸುರಿಸುವುದರಿಂದ

ವೃಷಭವೆಂದು ಹೆಸರು. ಅಥವಾ ಅತಿಶಯವಾಗಿ ರೇತಸ್ಸನ್ನು ಸುರಿಸುವುದರಿಂದ ವೃಷಭವೆಂದು ಹೆಸರು. **ವರ್ಷಣಾತ್ ವೃಷಭಃ** ರೇತಸ್ಸನ್ನು ಸುರಿಸುವುದಕ್ಕೆ ವೃಷಕರ್ಮಾ ಎಂದು ಹೆಸರು. ಆದನ್ನು ಮಾಡುವುದರಿಂದ ವೃಷಭವೆಂದು ಹೆಸರು. ಈ ಶಬ್ದಯೋಗವಿರುವ ಋಕ್ಕನ್ನು ಇಲ್ಲಿ ಉದಾಹರಿಸಲಾಗಿದೆ—

**ನ್ಯಕ್ರಂದಯನ್ನುಪಯಂತ ಏನಮಿತಿ ವ್ಯಾಖ್ಯಾತಂ । ಅಮೇಹಯನ್ ವೃಷಭಂ ಮಧ್ಯ ಆಜೇರಾಜಯನಸ್ಯಾಜವನಸ್ಯೇತಿ ವಾ । ತೇನ ತಂ ಸೂಭರ್ವಂ ರಾಜಾನಂ । ಭರ್ವತಿರತ್ತಿಕರ್ಮಾ । ತದ್ವಾ ಸೂಭರ್ವಂ ಸಹಸ್ರಂ ಗವಾಂ ಮುದ್ಗಲಃ ಪ್ರಧನೇ ಜಿಗಾಯ । ಪ್ರಧನ ಇತಿ ಸಂಗ್ರಾಮನಾಮ ಪ್ರಕೀರ್ಣಾನ್ಯಸ್ಮಿನ್ ಧನಾನಿ ಭವಂತಿ ॥**

(ನಿ. ೯–೨೩)

**ನ್ಯಕ್ರಂದಯನ್ನುಪಯಂತ ಏನಂ** ಎಂಬ ವಾಕ್ಯದ ಅರ್ಥವನ್ನು ಹಿಂದೆಯೇ ವಿವರಿಸಲಾಗಿದೆ. ಯುದ್ಧಭೂಮಿಯ ಮಧ್ಯದಲ್ಲಿ ಈ ವೃಷಭವು ಮೂತ್ರ ಪುರೀಷೋತ್ಸರ್ಜನವನ್ನು ಮಾಡುವಂತೆ ಮಾಡಿದರು ಎಂದರೆ ಕ್ಷಣಕಾಲ ವಿಶ್ರಮಿಸಿಕೊಳ್ಳುವಂತೆ ಮಾಡಿದರು. ಆಜಿ ಎಂದರೆ ಯುದ್ಧಭೂಮಿ. **ಆ ಜಯನ**—ಶತ್ರುಗಳನ್ನು ಜಯಿಸುವ ಸ್ಥಳ ಅಥವಾ **ಆ ಜವನ**—ವೇಗವಾಗಿ ಸಂಚರಿಸುವ ಸ್ಥಳ ಎಂಬ ಶಬ್ದಗಳ ಅರ್ಥವನ್ನನುಸರಿಸಿ ಆಜಿ ಎಂಬ ಶಬ್ದದ ನಿಷ್ಪತ್ತಿಯಾಗಿದೆ. ಏಕೆಂದರೆ ಈ ಯುದ್ಧಭೂಮಿಯು ಶತ್ರುಗಳನ್ನು ಜಯಿಸುವುದಕ್ಕೆ ಸಹಾಯಕವಾಗಿರುವುದು. ಅಥವಾ ಈ ಯುದ್ಧಭೂಮಿಯಲ್ಲಿ ಸೈನಿಕರು ಒಬ್ಬರಮೇಲೊಬ್ಬರು ವೇಗವಾಗಿ ಮುನ್ನುಗ್ಗಿಹೋಗಿ ಕಾದಾಡುವರು. ಆದ್ದರಿಂದ ಈ ಅರ್ಥಗಳನ್ನೊಳಗೊಂಡ **ಆಜಯನ** ಅಥವಾ **ಆಜವನ** ಎಂಬ ಶಬ್ದದಿಂದ ಆಜಿಶಬ್ದದ ನಿಷ್ಪತ್ತಿಯಾಗಿದೆ. ಇಂತಹ ಯುದ್ಧಭೂಮಿಯಲ್ಲಿ ರಾಜನಂತೆ ಮೆರೆಯುತ್ತಿರುವ ಆ ವೃಷಭವನ್ನು ಗರ್ಜಿಸುವಂತೆ ಮಾಡಿದರು ಎಂದು ವಾಕ್ಯದ ಅಭಿಪ್ರಾಯವು. **ಭರ್ವತಿರತ್ತಿಕರ್ಮಾ**—ಭರ್ವತಿಧಾತುವಿಗೆ ತಿನ್ನುವುದು ಎಂದರ್ಥವಿರುವುದು. ಆದ್ದರಿಂದ ಈ ಧಾತುವಿನಿಂದ ನಿಷ್ಪನ್ನವಾದ **ಸು ಭರ್ವಂ** ಎಂಬ ಶಬ್ದಕ್ಕೆ ಚೆನ್ನಾಗಿ (ಹುಲ್ಲನ್ನು) ತಿಂದಿರುವ, ಮೇದಿರುವ ವೃಷಭವನ್ನು ಎಂದರ್ಥವು. ಇಂತಹ ವೃಷಭದ ಸಹಾಯದಿಂದ ಮುದ್ಗಲಋಷಿಯು ಸಾವಿರಾರು ಗೋವುಗಳನ್ನು ಯುದ್ಧದಲ್ಲಿ ಜಯಿಸಿ ತಂದನು. **ಪ್ರಧನ** ಎಂದರೆ ಯುದ್ಧಕ್ಕೆ ಹೆಸರು. ಏಕೆಂದರೆ ಈ ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ ಅವರಲ್ಲಿರುವ ಬಹಳವಾದ ಧನವನ್ನು ದೋಚಿತರಲು ಸಾಧ್ಯವಾಗಿರುವುದರಿಂದ ಯುದ್ಧಕ್ಕೆ ಪ್ರಧನವೆಂಬ ಹೆಸರೂ ಇರುವುದು.

॥ ಸಂಹಿತಾಪಾಠಃ ॥

**ಕಕರ್ದವೇ ವೃಷಭೋ ಯುಕ್ತ ಆಸೀದವಾವಚೀತ್ಸಾರಥಿರಸ್ಯ ಕೇಶೀ ।**
**ದುಧೇರ್ಯುಕ್ತಸ್ಯ ದ್ರವತಃ ಸಹಾನಸ ಋಚ್ಛಂತಿ ಷ್ಮಾ ನಿಷ್ಪದೋ ಮುದ್ಗಲಾನೀಂ ॥ ೬ ॥**

|| ಪದಪಾಠಃ ||

ಕಕರ್ದವೇ । ವೃಷಭಃ । ಯುಕ್ತಃ । ಆಸೀತ್ । ಅವಾವಚೀತ್ । ಸಾರಥಿಃ । ಅಸ್ಯ । ಕೇಶೀ ।

ದುಧೇಃ । ಯುಕ್ತಸ್ಯ । ದ್ರವತಃ । ಸಹ । ಅನಸಾ । ಋಚ್ಛಂತಿ । ಸ್ಮ । ನಿಃಽಪದಃ । ಮುದ್ಗಲಾನೀಂ ||೬||

|| ಸಾಯಣಭಾಷ್ಯಂ ||

ಕಕರ್ದವೇ ಹಿಂಸನಾಯ ಶತ್ರೂಣಾಂ ವೃಷಭೋ ವರ್ಷಿತಾ ಗೌರ್ಯುಕ್ತ ಆಸೀತ್ । ರಥೇ ಸಂಬದ್ಧೋಽಭೂತ್ । ಕೇಶೀ ಕೇಶವಾನ್ ಪ್ರಗ್ರಹವಾನಸ್ಯ ರಾಜ್ಞೋ ರಥಸ್ಯ ವಾ ಸಾರಥಿಃ । ಮುದ್ಗಲಾನೀತ್ಯರ್ಥಃ । ಸಾರಥ್ಯಭಿಪ್ರಾಯೇಣ ಕೇಶೀತಿ ಪುಲ್ಲಿಂಗತಾ । ಅವಾವಚೀತ್ । ವೃಷಭಭಯಜನಕಂ ಶತ್ರುಭಯಜನಕಂ ವಾಕ್ರೋಶಮಕರೋತ್ । ಅಥವಾ । ಕೇಶೀ ಕೇಶಿನೀ ಸಾರಥಿರಸ್ಯ । ಅಮುಮಿತ್ಯರ್ಥಃ । ಅಮುಂ ವೃಷಭಂ ಶಬ್ದಮಕಾರಯತ್ ॥ ವಚ ಪರಿಭಾಷಣ ಇತ್ಯಸ್ಯ ಕೇವಲಸ್ಯಾಂತರ್ಣೀತಣ್ಯರ್ಥಸ್ಯ ಯಙ್ಲುಗಂತಸ್ಯ ಲುಙಿ ರೂಪಂ ॥ ಅಥವಾ । ಅಸ್ಯ ಸಾರಥಿಃ ಸಹಾಯಭೂತಃ ಕೇಶೀ ಪ್ರಕೃಷ್ಟಕೇಶೋ ವೃಷಭೋಽವಾವಚೀತ್ । ಭೃಶಮಶಬ್ದಯತ್ । ಏವಂಭೂತಸ್ಯ ದುಧೇರ್ದುರ್ಧರಸ್ಯಾನಸಾ ಸಹ ದ್ರವತಃ ಶೀಘ್ರಂ ಶತ್ರುಮಧ್ಯೇ ರಥೇನ ಸಹ ಧಾವತೋ ವೃಷಭಸ್ಯ ಭಯಂಕರಶಬ್ದೇನ ನಿಷ್ಪದೋ ನಿರ್ಗಚ್ಛಂತೋ ಯೋದ್ಧಾರೋ ಮುದ್ಗಲಾನೀಂ ಮುದ್ಗಲಸ್ಯ ಯೋಷಿತಂ ಸಾರಥಿಭೂತಾಂ ಪ್ರತ್ಯೃಚ್ಛಂತಿ ಸ್ಮ । ಆಗಚ್ಛನ್ನಿತ್ಯರ್ಥಃ ॥ ಪಾಘ್ರೇತ್ಯಾದಿನಚ್ಛಾದೇಶಃ ॥

|| ಪ್ರತಿಪದಾರ್ಥ ||

**ಕಕರ್ದವೇ**—ಶತ್ರುಗಳನ್ನು ಹಿಂಸಿಸುವುದಕ್ಕೋಸ್ಕರ । **ವೃಷಭಃ**—ವೃಷಭವು । **ಯುಕ್ತಃ ಆಸೀತ್**—ರಥಕ್ಕೆ ಹೂಡಲ್ಪಟ್ಟಿತು । **ಕೇಶೀ**—ಉದ್ದವಾದ ಕೇಶ (ಕೂದಲು) ಗಳುಳ್ಳ । **ಅಸ್ಯ ಸಾರಥಿಃ**—ಈ ರಥದ ಸಾರಥಿಯಾದ ಮುದ್ಗಲಾನಿಯು । **ಅವಾವಚೀತ್**—ವೃಷಭವನ್ನು ಅಥವಾ ಶತ್ರುಗಳನ್ನು ಹೆದರಿಸುವುಕ್ಕಾಗಿ ಘಟ್ಟಿಯಾಗಿ ಶಬ್ದ ಮಾಡಿದಳು । **ದುಧೇಃ**—ಸಹಿಸಲಸಾಧ್ಯವಾದುದೂ । **ಅನಸಾ ಸಹ**—ರಥ(ಗಾಡಿ) ದೊಡನೆ । **ದ್ರವತಃ**—ಶತ್ರುಗಳ ಮಧ್ಯದಲ್ಲಿ ವೇಗವಾಗಿ ಓಡಾಡುತ್ತಿರುವುದೂ ಆದ ಈ ವೃಷಭದ ಭಯಂಕರ ವಾದ ಗುಟುರು ಶಬ್ದದಿಂದ । **ನಿಷ್ಪದಃ**—ಓಡಿಹೋಗುತ್ತಿದ್ದ ಯುದ್ಧಭಟರು । **ಮುದ್ಗಲಾನೀಂ**—ಸಾರಥಿಯಾದ ಮುದ್ಗಲಾನಿಯನ್ನು । **ಋಚ್ಛಂತಿ ಸ್ಮ**—ಅನುಸರಿಸಿ ಹೋದರು (ಹಿಂಬಾಲಿಸಿದರು) ।

|| ಭಾವಾರ್ಥ ||

ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವುದಕ್ಕಾಗಿ ರಥವನ್ನು ಸಜ್ಜುಗೊಳಿಸುವಾಗ ಅದಕ್ಕೆ ವೃಷಭವನ್ನು ಹೂಡಲಾಯಿತು. ಆಗ ಉದ್ದವಾದ ಕೇಶಗಳಿಂದ ಶೋಭಿಸುತ್ತಿದ್ದ ಸಾರಥಿಯಾದ ಮುದ್ಗಲಾನಿಯು ವೃಷಭವನ್ನು ಪ್ರೇರಿಸುವುದಕ್ಕಾಗಿ ಘಟ್ಟಿಯಾದ ಶಬ್ದವನ್ನು ಮಾಡುತ್ತಿದ್ದಳು. ಸಹಿಸಲಸಾಧ್ಯವಾದ ವೇಗದಿಂದ ಮುನ್ನುಗ್ಗುತ್ತಿದ್ದ ಗಾಡಿಗೆ ಕಟ್ಟಿದ ಆ ವೃಷಭವು ಶತ್ರುಗಳ ಮಧ್ಯದಲ್ಲಿ ಗಾಡಿಯನ್ನು ಎಳೆದುಕೊಂಡು ನುಗ್ಗುತ್ತಿರುವಾಗ

ಆ ಶಬ್ದದಿಂದ ಭೀತರಾಗಿ ಓಡಿಹೋಗುತ್ತಿದ್ದ ಸೈನಿಕರು ಸಾರಥಿಯಾದ ಮುದ್ಗಲಾನಿಯನ್ನು ಅನುಸರಿಸಿ ಹೋದರು. ಅಥವಾ ಶತ್ರುಸೈನಿಕರು ಸಾರಥಿಯಾದ ಮುದ್ಗಲಾನಿಯ ಮೇಲೆ ನುಗ್ಗಿಬಂದರು.

## English Translation.

The bull has been yoked for the destruction of the enemy; his long-haired yoke-fellow made him roar; rushing on with the waggon of the irresistible yoked (bull), the warriors comming forth went to Mudgalanı.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿದೆ. ಶತ್ರುಗಳನ್ನು ಕೊಲ್ಲುವುದಕ್ಕಾಗಿ ಯುದ್ಧಮಾಡುವಾಗ ರಥಗಳನ್ನು ಉಪಯೋಗಿಸುವುದು ರೂಢಿಯಷ್ಟೆ. ಮುದ್ಗಲನು ಚೋರರೊಡನೆ ಮಾಡಿದ ಯುದ್ಧದಲ್ಲಿ ಅವನಲ್ಲಿದ್ದ ಒಂದೇ ಆದ ವೃಷಭವನ್ನು ರಥಕ್ಕೆ ಹೂಡಲಾಯಿತು. ಆ ರಥವನ್ನು ಮುದ್ಗಲನ ಪತ್ನಿಯಾದ ಮುದ್ಗಲಾನಿಯು ಸಾರಥಿಯಾಗಿ ನಡೆಸುತ್ತಿದ್ದಳು ಆಗ ಅವಳ ಉದ್ದವಾದ ತಲೆಕೂದಲು ಎಲ್ಲರಿಗೂ ಕಾಣುವಂತೆ ಶೋಭಿಸುತ್ತಿತ್ತು. ಗಾಡಿಯನ್ನು ಹೊಡೆಯುವವರು ತಮ್ಮ ಎತ್ತುಗಳನ್ನು ಪ್ರೇರಿಸುವುದಕ್ಕಾಗಿ 'ಹೇ' ಎಂದು ಮೊದಲಾದ ಶಬ್ದಗಳಿಂದ ಹೆದರಿಸಿ ಓಡಿಸುವುದು ಸರಿಯಷ್ಟೆ. ಅದರಂತೆ ಸಾರಥಿಯಾದ ಮುದ್ಗಲಾನಿಯೂ ತನ್ನ ರಥದ ವೃಷಭವನ್ನು ವೇಗವಾಗಿ ಹೋಗಲು ಪ್ರೇರಿಸುವಾಗ ಘಟ್ಟಿಯಾದ ಶಬ್ದವನ್ನು ಮಾಡುತ್ತಿದ್ದಳು ಈ ಶಬ್ದವು ತನ್ನ ವೃಷಭ (ಎತ್ತನ್ನು) ವನ್ನು ಪ್ರೇರಿಸುತ್ತಿದ್ದುದಲ್ಲದೆ ಶತ್ರುಸೈನಿಕರಿಗೂ ಭಯವನ್ನುಂಟುಮಾಡುತ್ತಿತ್ತು ಅಥವಾ **ಕೇಶೀ ಅವಾವಚೀತ್** ಎಂಬ ವಾಕ್ಯಕ್ಕೆ ಈ ರಥಕ್ಕೆ ಹೂಡಿದ್ದ ಉದ್ದವಾದ ಕೂದಲುಗಳುಳ್ಳ ವೃಷಭವು ಭಯಂಕರವಾಗಿ ಗುಟುರುಹಾಕಿ ಶಬ್ದಮಾಡುತ್ತಿತ್ತು ಎಂದಾಗಲಿ, ಸಾರಥಿಯಾದ ಮುದ್ಗಲಾನಿಯು ತನ್ನ ವೃಷಭವು ಗುಟುರು ಹಾಕುವಂತೆ ಮಾಡಿದಳು ಎಂಬರ್ಥವನ್ನಾಗಲಿ ಈ ಋಕ್ಕಿನ ಪೂರ್ವಾರ್ಧಕ್ಕೆ ಹೇಳಬಹುದು.

**ದುಧ್ರೇಯುರ್ಯುಕ್ತಸ್ಯ** ಇತ್ಯಾದಿಯಾದ ಈ ಋಕ್ಕಿನ ಉತ್ತರಾರ್ಧಕ್ಕೆ—ಈ ರಥಕ್ಕೆ ಕಟ್ಟಿದ್ದ ವೃಷಭವು ರಥವನ್ನು ಎಳೆದುಕೊಂಡು ಶತ್ರುಗಳ ಮಧ್ಯದಲ್ಲಿ ವೇಗವಾಗಿ ಓಡುತ್ತಿರುವಾಗ ಇದರ ರಭಸವನ್ನು ತಡೆಯುವುದಕ್ಕಾಗದೆ ಶತ್ರುಸೈನಿಕರು ನಾನಾ ದಿಕ್ಕುಗಳಿಗೆ ಓಡಿಹೋಗುತ್ತಿದ್ದರು. ಮತ್ತು ರಥವನ್ನು ನಡೆಸುತ್ತಿದ್ದ ಮುದ್ಗಲಾನಿಯ ಮೇಲೆ ಮುನ್ನುಗ್ಗಿ ಬರುತ್ತಿದ್ದರು—ಎಂಬರ್ಥವನ್ನು ಹೇಳಬಹುದು.

॥ ಸಂಹಿತಾಪಾಠಃ ॥

ಉತ ಪ್ರಧಿಮುದಹನ್ನಸ್ಯ ವಿದ್ವಾನುಪಾಯುನಗ್ವಂಸಗಮತ್ರ ಶಿಕ್ಷನ್ ।
ಇಂದ್ರ ಉದಾವತ್ಪತಿಮಘ್ನ್ಯಾನಾಮರಂಹತ ಪದ್ಯಾಭಿಃ ಕಕುದ್ಮಾನ್ ॥ ೭ ॥

|| ಪದಪಾಠಃ ||

ಉತ | ಪ್ರಧಿಂ | ಉತ್ | ಅಹನ್ | ಅಸ್ಯ | ವಿದ್ವಾನ್ | ಉಪ | ಅಯುನಕ್ | ವಂಸಗಂ | ಅತ್ರ | ಶಿಕ್ಷನ್ |

ಇಂದ್ರಃ | ಉತ್ | ಆವತ್ | ಪತಿಂ | ಅಘ್ನ್ಯಾನಾಂ | ಅರಂಹತ | ಪದ್ಯಾಭಿಃ | ಕಕುತ್ಮಾನ್ || ೭ ||

|| ಸಾಯಣಭಾಷ್ಯಂ ||

ಉತಾಪಿ ಚ ವಿದ್ವಾನ್ ಸ ಮುದ್ಗಲೋಽಸ್ಯ ರಥಸ್ಯ ಪ್ರಧಿಂ | ಪ್ರಧಿರಕ್ಷಚ್ಛಿದ್ರಕಾಷ್ಠಃ ಸ ಚ ರಥಾವಯವಾನಾಮುಪಲಕ್ಷಕಃ| ರಥಾವಯವಮುದಹನ್| ಉದಗಮಯತ್| ರಥಂ ಸಂನನಾಹೇತ್ಯರ್ಥಃ | ತದನಂತರಮತ್ರ ರಥೇ ವಂಸಗಂ ವನನೀಯಗಮನಂ ವೃಷಭಂ ಶಿಕ್ಷನ್ಶಿಕ್ಷಯನ್ರಜ್ಜುಷು ಸ್ಥಾಪಯನ್ನುಪಾಯುನಕ್ | ರಥಸಮೀಪೇ ಯುಗೇಽಯೋಜಯತ್ || ಯುಜೇರ್ಲಙಿ ತಿಪೋ ಹಲ್ಙ್ಯಾದಿಲೋಪಃ || ಏವಂ ಸತೀಂದ್ರೋ ದೇವೋಽಘ್ನ್ಯಾನಾಮಹಂತವ್ಯಾನಾಂ ಗವಾಂ ಪತಿಮುದಾವತ್ | ಉತ್ಕೃಷ್ಟಮಾವತ್ | ರಕ್ಷಾಮಕರೋತ್ | ಪಶ್ಚಾತ್ಕಕುದ್ಮಾನ್ವೃಷಭಃ ಪದ್ಯಾಭಿಃ ಸರಣಿಭಿರರಂಹತ | ವೇಗೇನಾಗಮತ್| ರಹಿರ್ಗತ್ಯರ್ಥಃ ||

|| ಪ್ರತಿಪದಾರ್ಥ ||

ಉತ—ಮತ್ತು | ವಿದ್ವಾನ್—ವಿವೇಕಿಯಾದ ಆ ಮುದ್ಗಲನು | ಅಸ್ಯ—ತನ್ನ ರಥದ | ಪ್ರಧಿ—ಚಕ್ರದ ಕಡಾಣಿಗಳನ್ನೂ | ಉತ್ ಅಹನ್—ಸೇರಿಸಿ ಸಿದ್ಧಮಾಡಿದನು | ಅತ್ರ—ಈ ರಥದಲ್ಲಿ | ವಂಸಗಂ—ಉತ್ತಮಗಮನವುಳ್ಳ ತನ್ನ ವೃಷಭವನ್ನು | ಶಿಕ್ಷನ್—ಹಗ್ಗದಿಂದ ಕಟ್ಟಿ | ಉಪ ಆಯುನಕ್—ನೊಗಕ್ಕೆ ಹೂಡಿದನು (ಅನಂತರ) | ಇಂದ್ರಃ—ಇಂದ್ರನು | ಅಘ್ನ್ಯಾನಾಂ—ಕೊಲ್ಲಬಾರದಾದ ಗೋವುಗಳಿಗೆ | ಪತಿಂ—ಒಡೆಯನಾದ ಈ ವೃಷಭಕ್ಕೆ | ಉತ್ ಆವತ್—ಉತ್ಕೃಷ್ಟವಾದ ರಕ್ಷಣೆಯನ್ನಿತ್ತನು (ಅನಂತರ) | ಕಕುದ್ಮಾನ್—ಆ ವೃಷಭವು | ಪದ್ಯಾಭಿಃ—ಪಾದನ್ಯಾಸಗಳಿಂದ | ಅರಂಹತ—ವೇಗವಾಗಿ ಮುನ್ನುಗ್ಗಿ ಹೋಯಿತು.

|| ಭಾವಾರ್ಥ ||

ಇದಲ್ಲದೆ ವಿವೇಕಿಯಾದ ಆ ಮುದ್ಗಲನು ತನ್ನ ರಥದ ಚಕ್ರಗಳ ಒಳಿ ಕಡಾಣಿಗಳನ್ನು ಸೇರಿಸಿ ರಥವನ್ನು ಸಜ್ಜುಗೊಳಿಸಿದನು. ಉತ್ತಮಗಮನವುಳ್ಳ ತನ್ನ ವೃಷಭವನ್ನು ರಥದ ನೊಗಕ್ಕೆ ಹಗ್ಗದಿಂದ ಕಟ್ಟಿಹೂಡಿದನು. ಬಳಿಕ ಇಂದ್ರನು ಗೋವುಗಳಿಗೆ ಒಡೆಯನೆನಿಸಿದ ಆ ವೃಷಭಕ್ಕೆ ಉತ್ಕೃಷ್ಟವಾದ ರಕ್ಷಣೆಯನ್ನಿತ್ತನು. ಅನಂತರ ಆ ವೃಷಭವು ತನ್ನ ಶ್ರೇಷ್ಠಗಮನದಿಂದ ವೇಗವಾಗಿ ಯುದ್ಧಭೂಮಿಯಲ್ಲಿ ಮುನ್ನುಗ್ಗಿಹೋಯಿತು.

## English Translation.

The sage (Mudgala) has fitted up the frame of the waggon, he has harnessed the bull, training him to his work. Indra protected the lord of the inviolable (cows). the buffalo rushed along with speed.

॥ ಸಂಹಿತಾಪಾಠಃ ॥

ಶುನಮಷ್ಟ್ರಾವ್ಯಚರತ್ಕಪರ್ದೀ ವರತ್ರಾಯಾಂ ದಾರ್ವಾನಹ್ಯಮಾನಃ ।
ನೃಮ್ಣಾನಿ ಕೃಣ್ವನ್ಬಹವೇ ಜನಾಯ ಗಾಃ ಪಸ್ಪಶಾನಸ್ತವಿಷೀರಧತ್ತ ॥ ೮ ॥

॥ ಪದಪಾಠಃ ॥

ಶುನಂ । ಅಷ್ಟ್ರಾಽವೀ । ಅಚರತ್ । ಕಪರ್ದೀ । ವರತ್ರಾಯಾಂ । ದಾರು । ಆಽನಹ್ಯಮಾನಃ ।
ನೃಮ್ಣಾನಿ । ಕೃಣ್ವನ್ । ಬಹವೇ । ಜನಾಯ । ಗಾಃ । ಪಸ್ಪಶಾನಃ । ತವಿಷೀಃ । ಅಧತ್ತ ॥ ೮ ॥

॥ ಸಾಯಣಭಾಷ್ಯಂ ॥

ಶುನಮಿತಿ ಸುಖನಾಮ । ಸುಖಂ ಯಥಾ ಭವತಿ ತಥಾ । ಅಷ್ಟ್ರಾವೀ । ಅಷ್ಟ್ರಾ ಪ್ರತೋದಃ । ತದ್ವಾನ್ ॥ ಛಾಂದಸೋ ವಿನಿಃ ॥ ಕಪರ್ದೀ ಕಪರ್ದವಾನಚರತ್ । ಸಂಚರತಿ । ಕಿಂ ಕುರ್ವನ್ । ವರತ್ರಾಯಾಂ ವಧ್ರ್ಯಾಂ ದಾರು ಕಾಷ್ಠಂ ರಥಾಂಗಭೂತಮಾನಹ್ಯಮಾನಃ ಸರ್ವತೋ ಬಧ್ನನ್ । ಪುನಃ ಕಿಂ ಕುರ್ವನ್ । ಬಹವೇ ಜನಾಯ ಸ್ವಪುತ್ರಭೃತ್ಯಾದಿಲಕ್ಷಣಾಯ ನೃಮ್ಣಾನಿ ಧನಾನಿ ಶತ್ರುಸಂಬಂಧೀನಿ ಸುಖಾನಿ ವಾ ಕೃಣ್ವನ್ । ಗಾಃ ಪಸ್ಪಶಾನಃ ಸ್ಪೃಶನ್ ॥ ಸ್ಪಶ ಬಾಧನಸ್ಪರ್ಶನಯೋಃ । ಛಾಂದಸೋ ಲಿಟಿ ಕಾನಚ್ ॥ ಏವಂ ಕುರ್ವಂಸ್ತವಿಷೀರ್ಬಲಾನ್ಯಧತ್ತ । ಧತ್ತೇ । ಜಯಂ ಪ್ರಾಪ್ನೋತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಕಪರ್ದೀ**—ಸುಂದರವಾದ ಕೇಶಗಳುಳ್ಳ (ಇಂದ್ರನು) । **ಶುನಂ**—ಸುಲಭವಾಗಿ । **ಅಷ್ಟ್ರಾವೀ**—ಚಾವಟಿಯನ್ನು ಹಿಡಿದು । **ವರತ್ರಾಯಾಂ ದಾರು**—ರಥದ (ಮರದ) ಭಾಗವನ್ನು ಹಗ್ಗದಿಂದ । **ಆನಹ್ಯಮಾನಃ**—ಬಿಗಿದು ಕಟ್ಟಿದವನಾಗಿಯೂ । **ಬಹವೇ ಜನಾಯ**—ಅನೇಕ ಜನರಿಗೆ । **ನೃಮ್ಣಾನಿ**—ಧನಗಳನ್ನು (ಅಥವಾ ಸುಖವನ್ನು) । **ಕೃಣ್ವನ್**—ಒದಗಿಸಿ ಕೊಡುತ್ತಲೂ । **ಗಾಃ**—ಗೋವುಗಳನ್ನು । **ಪಸ್ಪಶಾನಃ**—ಆದರದಿಂದ ಸ್ಪರ್ಶಿಸುತ್ತಲೂ । **ಅಚರತ್**—ಸರ್ವತ್ರ ಸಂಚರಿಸುತ್ತಾನೆ (ಮತ್ತು) । **ತವಿಷೀಃ**—ತನ್ನ ಶಕ್ತಿಸಾಮರ್ಥ್ಯಗಳನ್ನು । **ಅಧತ್ತ**—ಧರಿಸುತ್ತಾನೆ ಎಂದರೆ ವೃದ್ಧಿಪಡಿಸಿ ಜಯವನ್ನು ಗಳಿಸುತ್ತಾನೆ.

॥ ಭಾವಾರ್ಥ ॥

ಸುಂದರವಾದ ಕೇಶಪಾಶವುಳ್ಳ ಇಂದ್ರನು ತನ್ನ ಕೈಯಲ್ಲಿ ಚಾವಟಿಯನ್ನು ಹಿಡಿದು ಸಂಚರಿಸುತ್ತಾನೆ. ರಥದ ಸಡಿಲವಾದ ಭಾಗಗಳನ್ನು ಹಗ್ಗದಿಂದ ಬಿಗಿದು ಕಟ್ಟುತ್ತಾನೆ. ಅನೇಕ ಜನರಿಗೆ ಧನವನ್ನು ಅಥವಾ ಸುಖವನ್ನು ಒದಗಿಸುತ್ತಾನೆ ಗೋವುಗಳನ್ನು ಆದರದಿಂದ ತಟ್ಟುತ್ತಾನೆ. ತನ್ನ ಶಕ್ತಿಯನ್ನು ವೃದ್ಧಿಪಡಿಸಿ ಜಯವನ್ನು ಗಳಿಸುತ್ತಾನೆ.

### English Translation.

Wielding the goad (Indra) with the braided hair proceeded happily, fastening the strap to the wood (of the waggon); distributing riches to many people, caressing the oxen he acquired vigour.

॥ ಸಂಹಿತಾಪಾಠಃ ॥

ಇಮಂ ತಂ ಪಶ್ಯ ವೃಷಭಸ್ಯ ಯುಂಜಂ ಕಾಷ್ಠಾಯಾ ಮಧ್ಯೇ ದ್ರುಘಣಂ ಶಯಾನಂ ।
ಯೇನ ಜಿಗಾಯ ಶತವತ್ಸಹಸ್ರಂ ಗವಾಂ ಮುದ್ಗಲಃ ಪೃತನಾಜ್ಯೇಷು ॥ ೯ ॥

॥ ಪದಪಾಠಃ ॥

ಇಮಂ । ತಂ । ಪಶ್ಯ । ವೃಷಭಸ್ಯ । ಯುಂಜಂ । ಕಾಷ್ಠಾಯಾಃ । ಮಧ್ಯೇ । ದ್ರುऽಘಣಂ । ಶಯಾನಂ ।
ಯೇನ । ಜಿಗಾಯ । ಶತऽವತ್ । ಸಹಸ್ರಂ । ಗವಾಂ । ಮುದ್ಗಲಃ । ಪೃತನಾಜ್ಯೇಷು ॥ ೯ ॥

॥ ಸಾಯಣಭಾಷ್ಯಂ ॥

ಕಂಚನ ಸಖಾಯಂ ಸೇನಾದಿಸಹಾಯಾಭಾವೇನ ಜಯವಿಷಯ ಉಪಹಾಸಂ ಕುರ್ವಾಣಂ ಪ್ರತಿ ಬ್ರವೀತಿ । ರಾಜಾ ದ್ರುಘಣೇನ ವೃಷಭೇಣ ಚಾಜಿಂ ಜಿಗಾಯೇತ್ಯುಕ್ತವಾನ್ । ಪೂರ್ವಂ ವೃಷಭೋ ವರ್ಣಿತಃ । ಅತ್ರ ದ್ರುಘಣೋ ವರ್ಣ್ಯತೇ । ಹೇ ಸಖೇ ತಮಿಮಂ ದ್ರುಘಣಂ ಪಶ್ಯ । ಕೀದೃಶಮಿಮಮಿತಿ ಉಚ್ಯತೇ ॥ ಯುಜೇರಸಮಾಸೇ । ಪಾ. ೭-೧-೭೧ । ಇತಿ ನುಮ್ ॥ ಯುಂಜಂ । ಯುಜ್ಯತ ಇತಿ ಯುಕ್ ಸಖಾ । ವೃಷಭಸ್ಯ ಸಖಿಭೂತಂ । ವೃಷಭೋ ಯಾವಂತಮರ್ಥಂ ಸಾಧಯತಿ ತಾವಂತಮೇವ ಸಾಧಯಂತಮಿತ್ಯರ್ಥಃ । ಪುನಃ ಕೀದೃಶಂ । ಕಾಷ್ಠಾಯಾ ಮಧ್ಯೇ । ಆಜ್ಯಂತೋऽಪಿ ಕಾಷ್ಠೋಚ್ಯತ ಇತಿ ನಿರುಕ್ತಂ । ೨-೧೫ । ಆಜ್ಯಂತಸ್ಯ ಮಧ್ಯೇ । ಸಂಗ್ರಾಮ ಇತ್ಯರ್ಥಃ । ತತ್ರ ಶಯಾನಂ ಹಂತವ್ಯಾನ್ಸರ್ವಾನ್ಹತ್ವಾ ಸುಖೇನ ಸ್ವಪಂತಂ ನಿರ್ವ್ಯಾಪಾರತ್ವೇನ ವರ್ತಮಾನಂ । ಈದೃಶಂ ದ್ರುಮಮಯಂ ಘನಂ ಪಶ್ಯೇತ್ಯರ್ಥಃ । ಯೇನ ದ್ರುಘಣೇನ ಶತವಚ್ಛತೋಪೇತಂ ಗವಾಂ ಸಹಸ್ರಂ ಪೃತನಾಜ್ಯೇಷು ಸಂಗ್ರಾಮೇಷು ಜಿಗಾಯ ಅಹಮಜೈಷಂ ತಮಿಮಂ ಪಶ್ಯೇತಿ ಸಮನ್ವಯಃ ॥ ಜಯತೇರ್ಲಿಟ್ । ಸನ್ಲಿಟೋರ್ಜೇರಿತ್ಯಭ್ಯಾಸಾದುತ್ತರಸ್ಯ ಕುತ್ವಂ । ಮಿಪೋ ಣಲ್ ॥

॥ಪ್ರತಿಪದಾರ್ಥ॥

(ಎಲೈ ಮಿತ್ರನೇ) **ಯೇನ**—ಯಾವ ಮರದ ಗದೆಯಿಂದ | **ಗವಾಂ ಶತವತ್ ಸಹಸ್ರಂ**—ನೂರಾರು ಸಾವಿರಾರು ಗೋವುಗಳನ್ನು | **ಪೃತನಾಜ್ಯೇಷು**—ಯುದ್ಧಗಳಲ್ಲಿ | **ಜಿಗಾಯ**—ನಾನು ಜಯಿಸಿ ತಂದೆನೋ ಅಂತಹ | **ಯುಂಜಂ**—ಯುದ್ಧದಲ್ಲಿ ಸಹಾಯಾರ್ಥವಾಗಿ ಉಪಯೋಗಿಸಲ್ಪಡುವುದೂ | **ವೃಷಭಸ್ಯ**—ವೃಷಭದ (ಎತ್ತಿನ) ಸ್ನೇಹಿತನಂತಿರುವುದೂ | **ಕಾಷ್ಠಾಯಾಃ ಮಧ್ಯೇ**—ಯುದ್ಧದ ಮಧ್ಯದಲ್ಲಿ | **ಶಯಾನಂ**—ಶತ್ರುಗಳನ್ನು ಸಂಹರಿಸಿ ಆರಾಮವಾಗಿ ಮಲಗಿರುವುದೂ ಆದ | **ತಂ ಇಮಂ ದ್ರುಘಣಂ** – ಈ ನನ್ನ ಗದೆಯನ್ನು (ಅಥವಾ ದೊಣ್ಣೆಯನ್ನು) | **ಪಶ್ಯ**—ನೋಡು

॥ ಭಾವಾರ್ಥ ॥

ಎಲೈ ಸ್ನೇಹಿತನೇ, ನನ್ನಲ್ಲಿರುವ ಈ ಮರದ ಗದೆಯನ್ನು (ದೊಣ್ಣೆಯನ್ನು) ನೋಡು. ಇದರ ಸಹಾಯದಿಂದ ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ ಸಾವಿರಾರು ಗೋವುಗಳನ್ನು ಗೆದ್ದು ತಂದಿರುವೆನು. ಇದು ನನಗೆ ಯುದ್ಧದಲ್ಲಿ ಮಿತ್ರನಂತೆ ಸಹಾಯಕವಾಗಿದೆ ನನ್ನ ವೃಷಭದ ಜತೆಯಲ್ಲಿ ಗಾಡಿಯನ್ನು ವಹಿಸುವುದರಿಂದ ವೃಷಭಕ್ಕೂ ಜತೆಗಾರನಂತಿದೆ. ಈ ಗದೆಯು ಯುದ್ಧದ ಮಧ್ಯದಲ್ಲಿ ಶತ್ರುಗಳನ್ನು ಸದೆಬಡಿದು ಈಗ ಇಲ್ಲಿ ವಿಶ್ರಮಾರ್ಥವಾಗಿ ಮಲಗಿರುವಂತಿದೆ, ಇಂತಹ ಈ ಗದೆಯನ್ನು ನೋಡು.

## English Translation.

Behold this club, the ally of the bull, resting in the midst of the conflict, with which I, Mudgala, have won hundreds and thousands of cattle in war.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ಇಮಂ ತಂ ಪಶ್ಯ ವೃಷಭಸ್ಯ ಸಹಯುಜಂ ಕಾಷ್ಠಾಯಾ ಮಧ್ಯೇ ದ್ರುಘಣಂ ಶಯಾನಂ ಯೇನ ಜಿಗಾಯ ಶತವತ್ ಸಹಸ್ರಂ ಗವಾಂ ಮುದ್ಗಲಃ ಪೃತನಾಜ್ಯೇಷು । ಪೃತನಾಜ್ಯಮಿತಿ ಸಂಗ್ರಾಮನಾಮ ಪೃತನಾನಾಮ ಜನಾದ್ವಾ ಜಯನಾದ್ವಾ । ಮುದ್ಗಲೋ ಮುದ್ಗವಾನ್ ಮುದ್ಗಗಿಲೋ ವಾ ಮದನಂ ಗಿಲತೀತಿ ವಾ ಮದಂಗಿಲೋ ವಾ ಮುದಂಗಿಲೋ ವಾ । ಭಾರ್ಮ್ಯಶ್ವೋ ಭೃಮ್ಯಶ್ವಸ್ಯ ಪುತ್ರಃ । ಭೃಮ್ಯಶ್ವೋ ಭೃಮಯೋऽಸ್ಯಾಶ್ವಾ ಅಶ್ವಭರಣಾದ್ವಾ ॥**

(ನಿ ೯-೨೪)

**ಇಮಂ ತಂ ಪಶ್ಯ ವೃಷಭಸ್ಯ ಸಹಯುಜಂ ಕಾಷ್ಠಾಯಾ ಮಧ್ಯೇ ದ್ರುಘಣಂ ಶಯಾನಂ**—ಮುದ್ಗಲ ಋಷಿಯು ತನ್ನ ಸ್ನೇಹಿತನೊಡನೆ ತನ್ನ ಬಳಿ ಇರುವ ದ್ರುಘಣ ಎಂದರೆ ಮರದ ಗದೆ ಅಥವಾ ದೊಣ್ಣೆಯ ವಿಷಯವಾಗಿ ಹೇಳುತ್ತಾ ಅದನ್ನು ಪ್ರಶಂಸೆಮಾಡಿರುವನು—ಎಲೈ ಮಿತ್ರನೇ, ಇಗೋ ನನ್ನ ಬಳಿ ಇರುವ ಈ ಗದೆಯನ್ನು ನೋಡು. ನನ್ನ ಬಳಿ ಒಂದೇ ವೃಷಭ ಅಥವಾ ಎತ್ತು ಇರುವುದರಿಂದ ಗಾಡಿಯ ನೊಗದ ಒಂದು ಕಡೆಗೆ ಈ ಎತ್ತನ್ನೂ ಇನ್ನೊಂದು ಕಡೆಗೆ ಈ ಗದೆಯನ್ನೂ ಹೂಡಿ ಯುದ್ಧಭೂಮಿಗೆ ಬಂದಿರುವೆನು. ಆದ್ದರಿಂದ ಈ ಗದೆಯು

**ವೃಷಭಸ್ಯ ಸಹಯುಜಂ** ಎತ್ತಿನ ಜತೆಗಾರನೆಂದು (ಸ್ನೇಹಿತನೆಂದು) ಹೇಳಲ್ಪಡುವುದು. ಈ ಗದೆಯನ್ನು ನಾನು ಯುದ್ಧದಲ್ಲಿ ಶತ್ರುಗಳ ಮೇಲೆ ಧಾರಾಳವಾಗಿ ಉಪಯೋಗಿಸಿರುವುದರಿಂದ ಇದು ಶತ್ರುಗಳನ್ನು ಸಂಹರಿಸಿ ವಿಶ್ರಾಮಾರ್ಥವಾಗಿ ಯುದ್ಧಭೂಮಿಯ ಮಧ್ಯದಲ್ಲಿ ಮಲಗಿರುವುದು (ಬಿದ್ದಿರುವುದು) ಇಂತಹ ನನ್ನ ಗದೆಯನ್ನು ನೋಡು.

**ಯೇನ ಜಿಗಾಯ ಶತವತ್ ಸಹಸ್ರಂ ಗವಾಂ ಮುದ್ಗಲಃ ಪೃತನಾಜ್ಯೇಷು**— ಈ ಗದೆಯ ಸಹಾಯದಿಂದ ಮುದ್ಗಲ ನಾದ ನಾನು ಯುದ್ಧಗಳಲ್ಲಿ ಶತ್ರುಗಳನ್ನು ಸದೆಬಡಿದು ನೂರಾರು, ಸಾವಿರಾರು ಗೋವುಗಳನ್ನು ಗೆದ್ದುತಂದಿದೇನೆ

**ಪೃತನಾಜ್ಯಮಿತಿ ಸಂಗ್ರಾಮನಾಮ ಪೃತನಾನಾಮ ಜನಾದ್ವಾ ಜಯನಾದ್ವಾ**— ಪೃತನಾಜ್ಯವೆಂದರೆ ಯುದ್ಧವು ಪೃತನಾ ಎಂದರೆ ಜನರು, ಸೇನೆಗಳು. ಅಂತಹ ಸೇನೆಗಳು **ಅಜಂತಿ ಗಚ್ಛಂತಿ** ಎಲ್ಲಿ ಸೇರುತ್ತವೆಯೋ ಎಂದರೆ ಸಂಧಿಸುತ್ತವೆಯೋ ಅದಕ್ಕೆ ಪೃತನಾಜ್ಯ ಯುದ್ಧ ಎಂದು ಹೆಸರು. ಅಥವಾ ಜಯನಾದ್ವಾ, ಪೃಧನಾದ್ವಾ— ಸೇನೆಗಳನ್ನು ಅಥವಾ ಜನರನ್ನು ಜಯನಾತ್—ಜಯಿಸುವುದರಿಂದ ; ಜನರು ಅಥವಾ ಸೇನೆಗಳು ಇಲ್ಲಿ ಪರಸ್ಪರ ಹೋರಾಡಿ ಜಯಿಸುವುದರಿಂದ ಇದಕ್ಕೆ ಪೃತನಾಜ್ಯ ಎಂದರೆ ಯುದ್ಧವೆಂದು ಹೆಸರು.

**ಮುದ್ಗಲೋ ಮುದ್ಗವಾನ್- ಮುದ್ಗಗಿಲೋ ವಾ ಮದನಂ ಗಿಲತೀತಿ ವಾ ಮದಂಗಿಲೋ ವಾ ಮುದಂಗಿಲೋ ವಾ**— ಮುದ್ಗವೆಂದರೆ ಒಂದು ಧಾನ್ಯದ ಹೆಸರು. ಹೆಸರು ಎಂಬ ಧಾನ್ಯವು ಇವನ ಬಳಿ (ಹೆಸರು ಧಾನ್ಯ) ಇರುವುದರಿಂದ ಇವನಿಗೆ ಮುದ್ಗಲನೆಂಬ ಹೆಸರು. ಅಥವಾ **ಮುದ್ಗಲೋ ವಾ**— ಹೆಸರು ಧಾನ್ಯವನ್ನು ತಿನ್ನುವುದರಲ್ಲಿ ಆಸಕ್ತನಾದ್ದರಿಂದ ಇವನಿಗೆ ಮುದ್ಗಲನೆಂಬ ಹೆಸರು ಬಂದಿದೆ. ಅಥವಾ **ಮದನಂ ಗಿಲತೀತಿ ವಾ**—ಕಾಮವನ್ನು ಜಯಿಸುವವನಾದುದರಿಂದ(ಜಿತೇಂದ್ರಿಯ) ಇವನಿಗೆ ಮುದ್ಗಲ ಎಂಬ ಹೆಸರು. ಅಥವಾ **ಮದಂಗಿಲೋ ವಾ**— ಉದ್ರೇಕ ಅಥವಾ ಕೋಪವನ್ನು ಗೆಲ್ಲುವವನು ಎಂದರೆ ಶಾಂತಸ್ವಭಾವದವನಾದ್ದರಿಂದ ಮುದ್ಗಲನೆಂಬ ಹೆಸರು. ಅಥವಾ **ಮುದಂಗಿಲೋ ವಾ**— ಹರ್ಷವನ್ನು ಜಯಿಸಿದವನು, ಸುಖದುಃಖಾದಿರಹಿತನು, ನಿವೃತ್ತಿಮಾರ್ಗಪರನು ಎಂದರ್ಥವು. ಆದ್ದರಿಂದ ಮುದ್ಗಲ ಎಂಬ ಹೆಸರು

**ಅಂಸತ್ರಂ । ಅಂಸತ್ರಮಂಹಸಸ್ತ್ರಾಣಂ ಧನುರ್ವಾ ಕವಚಂ ವಾ । ಕವಚಂ ಕು ಅಂಚಿತಂ ಭವತಿ ಕಾಂಚಿತಂ ಭವತಿ ಕಾಯೇಽಂಚಿತಂ ಭವತೀತಿ ವಾ ॥** (ನಿ. ೫-೨೬)—ಅಂಸತ್ರವೆಂದರೆ— **ಅಂಹಸಃ ತ್ರಾಣಂ** ಯುದ್ಧದಲ್ಲಿ ಜನರನ್ನು ಕೊಲ್ಲುವುದರಿಂದುಂಟಾಗುವ ಪಾಪದಿಂದ ರಕ್ಷಿಸುವ ಧನುಸ್ಸನ್ನು ಅಥವಾ ಕವಚವನ್ನು ಎಂದರ್ಥವು. ಕವಚ (ಯುದ್ಧದಲ್ಲಿ ಉಪಯೋಗಿಸುವ ಉಕ್ಕಿನ ಕವಚ) ವು ನೊಟ್ಟಾಗಿ ಬಗ್ಗಿರುವುದರಿಂದ ಅಥವಾ ಸ್ವಲ್ಪಮಾತ್ರ ಬಗ್ಗಿರುವುದರಿಂವ ಅಥವಾ ಶರೀರದ ಆಕಾರವನ್ನನುಸರಿಸಿ ಅದಕ್ಕೆ ಹೊಂದಿಕೊಂಡಿರುವುದರಿಂದ ಇದಕ್ಕೆ ಕವಚವೆಂದು ಹೆಸರು.

**ದ್ರುಘಣಃ । ದ್ರುಘಣೋ ದ್ರುಮಮಯೋ ಘನಃ** (ನಿ ೯-೨೩)- ಈ ಶಬ್ದದಲ್ಲಿ **ದ್ರು ಘನಃ** ಎಂಬ ಎರಡು ಶಬ್ದಗಳಿರುವುವು. ದ್ರು ಎಂದರೆ ಮರ, ಘನ ಎಂದರೆ ಘಟ್ಟಿಯಾದ. ಆದ್ದರಿಂದ ದ್ರುಘಣ ಎಂದರೆ ಮರದಿಂದ ನಿರ್ಮಿತವಾದ ಮತ್ತು ಘಟ್ಟಿಯಾಗಿರುವ ಗದೆ (ದೊಣ್ಣೆ) ಎಂದರ್ಥವು.

**ಭಾರ್ಮ್ಯಶ್ವೋ ಭೃಮ್ಯಶ್ವಸ್ಯ ಪುತ್ರಃ । ಭೃಮ್ಯಶ್ವೋ ಭೃಮಯೋಽಸ್ಯಾ ಅಶ್ವಭರಣಾದ್ವಾ**— ಭಾರ್ಮ್ಯಶ್ವನೆಂದರೆ ಭೃಮ್ಯಶ್ವನೆಂಬುವನ ಪುತ್ರನು. ಭೃಮ್ಯಶ್ವನೆಂದರೆ—ಇವನ ಅಶ್ವಗಳು ಒಂದು ಕಡೆ ನಿಲ್ಲದೆ

ಎಲ್ಲೆಲ್ಲಿಯೂ ಅಲೆದಾಡುತ್ತಿರುವುದರಿಂದ ಇವನಿಗೆ ಭೃಮ್ಯಶ್ವನೆಂದು ಹೆಸರು ಅಥವಾ ಇವನು ಕುದುರೆಗಳನ್ನು ಸಾಕಿ ಪೋಷಿಸುವವನಾದ್ದರಿಂದ ಇವನಿಗೆ ಭೃಮ್ಯಶ್ವನೆಂದು ಹೆಸರು.

**ಕಾಷ್ಠಾಯಾಃ**— ಕಾಷ್ಠಾಶಬ್ದಕ್ಕೆ ಇಲ್ಲಿ ಯುದ್ಧವೆಂಬ ಅರ್ಥವಿರುವುದು. ಈ ಶಬ್ದಕ್ಕಿರುವ ಅನೇಕಾರ್ಥಗಳನ್ನು ವಿವರಿಸುತ್ತಾ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದ್ದಾರೆ—

(ನಿ. ೨-೧೫)

೧. **ತತ್ರ ಕಾಷ್ಠಾ ಇತ್ಯೇತದನೇಕಸ್ಯಾಪಿ ಸತ್ತ್ವಸ್ಯ ನಾಮ ಭವತಿ**—ಕಾಷ್ಠಾ ಎಂಬ ಶಬ್ದಕ್ಕೆ ಅನೇಕಾರ್ಥಗಳಿರುವವು.

೨. **ಕಾಷ್ಠಾ ದಿಶೋ ಭವಂತಿ ಕ್ರಾಂತ್ವಾ ಸ್ಥಿತಾ ಭವಂತಿ**— ಕಾಷ್ಠಾ ಎಂದರೆ ದಿಕ್ಕುಗಳು. ಇವು ಬಹಳ ದೂರ ವ್ಯಾಪಿಸಿರುವುದರಿಂದ ಈ ಹೆಸರು.

೩. **ಕಾಷ್ಠಾ ಉಪದಿಶೋ ಭವಂತೀತರೇತರಂ ಕ್ರಾಂತ್ವಾ ಸ್ಥಿತಾ ಭವಂತಿ**—ವಿದಿಕ್ಕುಗಳಿಗೂ ಕಾಷ್ಠಾ. ಎಂಬ ಹೆಸರಿರುವುದು. ಏಕೆಂದರೆ ಇವು ಎರಡು ದಿಕ್ಕುಗಳ ಮಧ್ಯದಲ್ಲಿ ನುಗ್ಗಿದಂತೆ ಇರುವವು.

೪. **ಆದಿತ್ಯೋಽಪಿ ಕಾಷ್ಠೋಽಚ್ಯತೇ ಕ್ರಾಂತ್ವಾ ಸ್ಥಿತೋ ಭವತಿ** — ಆದಿತ್ಯನಿಗೂ ಕಾಷ್ಠವೆಂಬ ಹೆಸರಿದೆ. ಏಕೆಂದರೆ ಈ ಆದಿತ್ಯನು ಅಂತರಿಕ್ಷದಲ್ಲಿ ಒಂದು ಸ್ಥಳದಿಂದ ಮತ್ತೊಂದುಸ್ಥಳಕ್ಕೆ (ಪೂರ್ವದಿಂದ ಪಶ್ಚಿಮಕ್ಕೆ) ದಾಟಿ ಹೋಗುವನು.

೫. **ಆಜ್ಯಂತೋಽಪಿ ಕಾಷ್ಠೋಽಚ್ಯತೇ ಕ್ರಾಂತ್ವಾ ಸ್ಥಿತೋ ಭವತಿ**-ಯುದ್ಧಭೂಮಿಗೂ ಕಾಷ್ಠವೆಂದು ಹೆಸರು. ಏಕೆಂದರೆ ಇದರಲ್ಲಿ ಯೋಧರ ಬಾಣಗಳು ಪರಸ್ಪರ ದಾಟಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವವು.

೬. **ಆಪೋಽಪಿ ಕಾಷ್ಠಾ ಉಚ್ಯಂತೇ ಕ್ರಾಂತ್ವಾ ಸ್ಥಿತಾ ಭವಂತೀತಿ ಸ್ಥಾವರಾಣಾಂ**— ಉದಕಗಳಿಗೂ ಕಾಷ್ಠಾಃ ಎಂದು ಹೆಸರು. ಇವುಗಳಲ್ಲಿ ಎರಡು ವಿಧವು. ಸ್ಥಾವರ, ಅಸ್ಥಾವರ ಎಂದು. ಸ್ಥಾವರ ಎಂದರೆ ಗಮನವಿಲ್ಲದೆ ಒಂದೆಡೆ ಜಲಾಶಯಾ (ಕೆರೆ, ಕೊಳ)ದಿಗಳಲ್ಲಿ ನಿಂತಿರುವ ನೀರು. ಅಸ್ಥಾವರ ಎಂದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ (ಎತ್ತರದಿಂದ ತಗ್ಗಿಗೆ) ಹರಿದು ಹೋಗುವ ನೀರು. ಇವು ಒಂದು ಸ್ಥಳವನ್ನು ಬಿಟ್ಟು ಬೇರೊಂದು ಸ್ಥಳಕ್ಕೆ ಹರಿದು ಹೋಗುವುದರಿಂದ ಉದಕಗಳಿಗೆ ಕಾಷ್ಠಾ ಎಂದು ಹೆಸರು.

॥ ಸಂಹಿತಾಪಾಠಃ ॥

ಆರೇ ಅಘಾ ಕೋ ನ್ವಿ೧ತ್ಥಾ ದದರ್ಶ ಯಂ ಯುಂಜಂತಿ ತಮ್ವಾ ಸ್ಥಾಪಯಂತಿ ।
ನಾಸ್ಮೈ ತೃಣಂ ನೋದಕಮಾ ಭರಂತ್ಯುತ್ತರೋ ಧುರೋ ವಹತಿ ಪ್ರದೇದಿಶತ್ ॥ ೧೦ ॥

॥ ಪದಪಾಠಃ ॥

ಆರೇ । ಅಘಾ । ಕಃ । ನು । ಇತ್ಥಾ । ದದರ್ಶ । ಯಂ । ಯುಂಜಂತಿ । ತಂ । ಊಂ ಇತಿ । ಆ । ಸ್ಥಾಪ-
ಯಂತಿ ।

ನ । ಅಸ್ಮೈ । ತೃಣಂ । ನ । ಉದಕಂ । ಆ । ಭರಂತಿ । ಉತ್ऽತರಃ । ಧುರಃ । ವಹತಿ । ಪ್ರऽದೇದಿಶತ್॥

॥ ಸಾಯಣಭಾಷ್ಯಂ ॥

ಯ ಆರೇ ಸಮೀಪ ಏವಾಘಾಘಾನಿ ದುಃಖಾನಿ ಶತ್ರುರೂಪಾಣಿ ಕರೋತಿ ತಂ ಕೋ ನರೋ ನ್ವಿದಾನೀಮಿತ್ಥೇತ್ಥಂ ದದರ್ಶ । ಪಶ್ಯತಿ । ಕಿಂಚ ಯಂ ದ್ರುಘಣಂ ಯುಂಜಂತಿ ರಥೇ ತಮು ತಮೇವಾ ಸ್ಥಾಪಯಂತಿ । ಆರೋಹಯಂತೀತ್ಯರ್ಥಃ । ಅಥವಾ ಯಂ ರಥೇ ಯುಂಜಂತಿ ತಮೇವ ಪ್ರಹರಣಾರ್ಥಮಾ ಸ್ಥಾಪಯಂತಿ । ಉಭಯವಿಧಂ ಕಾರ್ಯಮೇಕಃ ಕರೋತೀತ್ಯರ್ಥಃ । ಕಿಂಚಾಸ್ಮೈ ತೃಣಂ ನಾ ಭರಂತಿ । ನಾಹರಂತಿ । ತಥೋದಕಂ ನಾಹರಂತಿ ॥ ಹೃಗ್ರಹೋರ್ಭ ಇತಿ ಭತ್ವಂ ॥ ಈದೃಶೋ ದ್ರುಘಣ ಉತ್ತರೋ ದಕ್ಷಿಣಸ್ಯ ವೃಷಭಸ್ಯ ಸ್ವಯಮುತ್ತರಃ ಸನ್ ಧುರೋ ರಥಭಾರಸ್ಯ ರಥಧುರಂ ವಹತಿ ಪ್ರದೇದಿಶತ್ ಪ್ರಕರ್ಷೇಣ ಜಯಂ ಸ್ವಾಮಿನೇ ಪ್ರದಿಶನ್ ಶತ್ರೂಣಾಂ ವಾ ಭಯಂ ಪ್ರದಿಶನ್ ವಹತಿ ॥ ದಿಶ ಅತಿಸರ್ಜನ ಇತ್ಯಸ್ಮಾದ್ಯಙ್ಲುಗಂತಾಚ್ಛತರಿ ರೂಪಂ ॥

॥ ಪ್ರತಿಪದಾರ್ಥ ॥

(ಯಃ—ಯಾರು) । **ಆರೇ**—ಸಮೀಪದಲ್ಲಿದ್ದೇ । **ಅಘಾ**—ದುಃಖವನ್ನುಂಟುಮಾಡುವನೋ ಅಂತಹ ಮನುಷ್ಯನನ್ನು । **ಕಃ ನರಃ**—ಯಾವ ಮನುಷ್ಯನು ತಾನೇ । **ನು**—ಈಗ । **ಇತ್ಥಾ**—ಈ ಪ್ರಕಾರವಾಗಿ । **ದದರ್ಶ**—ನೋಡುತ್ತಾನೆ ? (ಮತ್ತು) । **ಯಂ**—ಯಾವ ಗದೆಯನ್ನು । **ಯುಂಜಂತಿ**—ರಥದಲ್ಲಿ ಎತ್ತಿನ ಜೊತೆ ಯಲ್ಲಿ ಹೂಡುವರೋ । **ತಮು**—ಆ ಗದೆಯನ್ನೇ । **ಆ ಸ್ಥಾಪಯಂತಿ**—ಶತ್ರುವಧಾರ್ಥವಾಗಿ ಸ್ಥಾಪಿಸುತ್ತಾರೆ (ಉಪಯೋಗಿಸುತ್ತಾರೆ) । **ಅಸ್ಮೈ**—ಈ ಗದೆಗೆ । **ತೃಣಂ**—ಹುಲ್ಲನ್ನು (ಆಹಾರವನ್ನು) । **ನ ಆ ಭರಂತಿ**—ಒದಗಿಸಿ ಹಾಕುವುದಿಲ್ಲ । **ನ ಉದಕಂ**—ನೀರನ್ನೂ ಕುಡಿಸುವುದಿಲ್ಲ (ಹೀಗಿದ್ದರೂ ಸಹ ಈ ಗದೆಯು) । **ಉತ್ತರಃ**—ನೊಗದ ಮತ್ತೊಂದು ಭಾಗದಲ್ಲಿದ್ದು ರಥದ ಭಾರವನ್ನು । **ವಹತಿ**—ಹೊರುತ್ತದೆ । **ಪ್ರದೇದಿಶತ್**—ತನ್ನ ಯಜ ಮಾನನಿಗೆ (ಯುದ್ಧದಲ್ಲಿ) ಜಯವನ್ನೂ ದೊರಕಿಸಿಕೊಡುತ್ತದೆ.

॥ ಭಾವಾರ್ಥ ॥

(ಇಲ್ಲಿ ದ್ರುಘಣವನ್ನು ಪ್ರಶಂಸಿಸಲಾಗಿದೆ) ಅತ್ಯಂತ ಸಮೀಪದಲ್ಲಿದ್ದು ನಮ್ಮ ಶತ್ರುಗಳಿಂದ ಉಂಟಾಗುವ ದುಃಖ ವನ್ನು ನೋಡುತ್ತಾ ಯಾವ ಪುರುಷನು ತಾನೆ ಸುಮ್ಮನಿರುತ್ತಾನೆ? ನನ್ನಲ್ಲಿರುವ ಈ ಗದೆಯನ್ನು ಶತ್ರುವಧಾರ್ಥವಾಗಿ ಯುದ್ಧಮಾಡುವಾಗ ರಥಕ್ಕೆ ಹೂಡುತ್ತೇನೆ. ರಥಕ್ಕಾಗಲಿ, ಗಾಡಿಗಾಗಲಿ ಎರಡು ಎತ್ತುಗಳನ್ನು ಹೂಡುವುದು ಸ್ವಾಭಾವಿಕವಷ್ಟೆ. ಆದರೆ ನನ್ನಲ್ಲಿ ಒಂದೇ ಎತ್ತಿರುವುದರಿಂದ ರಥದ ಒಂದು ಭಾಗಕ್ಕೆ ಈ ಎತ್ತನ್ನೂ ಇನ್ನೊಂದು ಭಾಗಕ್ಕೆ ಈ ಗದೆಯನ್ನೂ ಹೂಡಲಾಗುತ್ತದೆ. ಎತ್ತುಗಳಿಗೆ ಹಾಕುವಂತೆ ಈ ಗದೆಗೆ ಹುಲ್ಲನ್ನು ಹಾಕಬೇಕಾಗಿಲ್ಲ, ನೀರನ್ನೂ

ಕುಡಿಸಬೇಕಾಗಿಲ್ಲ. ಆದರೂ ಇದು ಎತ್ತಿನ ಜೊತೆಯಲ್ಲಿ ರಥದ ಭಾರವನ್ನೂ ವಹಿಸುತ್ತದೆ ಮತ್ತು ತನ್ನ ಒಡೆಯನಿಗೆ ಯುದ್ಧದಲ್ಲಿ ಜಯವನ್ನೂ ದೊರಕಿಸಿಕೊಡುತ್ತದೆ.

## English Translation.

Who has thus beheld the evils nigh at hand ? The (bull) which they yoke, they stop; to him they briug neither fodder nor water. Being above (the bull) he bears the chariot-pole announcing (victory to his lord).

॥ ಸಂಹಿತಾಪಾಠಃ ॥

ಪರಿವೃಕ್ತೇವ ಪತಿವಿದ್ಯಮಾನಟ್ ಪೀಪ್ಯಾನಾ ಕೂಚಕ್ರೇಣೇವ ಸಿಂಚನ್ ।
ಏಷೈಷ್ಯಾ ಚಿದ್ರಥ್ಯಾ ಜಯೇಮ ಸುಮಂಗಲಂ ಸಿನವದಸ್ತು ಸಾತಂ ॥ ೧೧ ॥

॥ ಪದಪಾಠಃ ॥

ಪರಿವೃಕ್ತಾಽಇವ । ಪತಿಽವಿದ್ಯಂ । ಆನಟ್ । ಪೀಪ್ಯಾನಾ । ಕೂಚಕ್ರೇಣಽಇವ । ಸಿಂಚನ್ ।
ಏಷಽಏಷ್ಯಾ । ಚಿತ್ । ರಥ್ಯಾ । ಜಯೇಮ । ಸುಽಮಂಗಲಂ । ಸಿನಽವತ್ । ಅಸ್ತು । ಸಾತಂ ॥ ೧೧ ॥

॥ ಸಾಯಣಭಾಷ್ಯಂ ॥

ಅತ್ರ ಮುದ್ಗಲಾನೀ ಸಾರಥಿಃ ಸ್ತೂಯತೇ । ಏಷಾ ಮುದ್ಗಲಾನೀ ಪರಿವೃಕ್ತೇವ ॥ ವೃಜೀ ವರ್ಜನೇ॥ ಪರಿತ್ಯಕ್ತಾ ಪತ್ಯಾ ಪತ್ಯಾ ವಿಯುಕ್ತಾ ಯೋಷಿದಿವ । ಸಾ ಯಥಾ ಪತಿವಿದ್ಯಂ । ವಿದ್ಯೋ ವೇದ್ಯೋ ಲಂಭನೀಯಃ । ಪತಿಶ್ಚಾಸೌ ವಿದ್ಯಶ್ಚ। ಪತಿವಿದ್ಯಮಾನಶೇ ತದ್ವತ್ಪತಿವಿದ್ಯಮಾನಟ್ ॥ ಆನಡ್ ವ್ಯಾಪ್ತಿ-ಕರ್ಮಾ । ನಶೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಛಂದಸ್ಯಪಿ ದೃಶ್ಯತೇ । ಪಾ. ೬-೪-೭೩ । ಇತ್ಯನಜಾದೀನಾಮಪ್ಯಡಾಗಮಃ । ಅಶ್ನೋತೇರ್ಲಿಟಿ ವಾ ಣಲ್ಯೋಪಶ್ಛಾಂದಸಃ ॥ ತಥಾ ಪತಿಸಮೀಪಂ ಸಾರಥಿತ್ವೇನಾಗತ್ಯ ಪೀಪ್ಯಾನಾ ವರ್ಧಮಾನಾ ಭವತಿ। ಕಿಮಿವ। ಕೂಚಕ್ರೇಣೇವ ಸಿಂಚನ್। ಕುಃ ಪೃಥಿವೀ। ತಸ್ಯಾಶ್ಚಕ್ರೋ ವಲಯಃ ಕೂಚಕ್ರಃ। ತೇನ ವರ್ಷಣೀಯತ್ವೇನ ನಿಮಿತ್ತೇನ ಸಿಂಚಞ್ಜಲಂ ವರ್ಷನ್ಮೇಘ ಇವ । ಸ ಯಥಾಂತರಿಕ್ಷೇ ಸ್ವಲ್ಪಮಾತ್ರೋಽಪಿ ವರ್ಷಣಸಮಯೇ ಮಹಾನ್ಭವತಿ ತದ್ವದಿಯಮಪಿ ಶತ್ರುಮಧ್ಯೇ ಶರಧಾರಾ ವರ್ಷಂತೀ ವರ್ಧತ ಇತ್ಯರ್ಥಃ। ತಥೈಷ್ಯೈಷ್ಯಾ । ಏಷಿತವ್ಯೋ ಗೋಸಂಘ ಏಷಃ । ತಮಿಚ್ಛತೀತ್ಯೇಷ್ಯೈಷೀ । ಈದೃಶ್ಯಾ ತಯಾ ರಥ್ಯಾ ಸಾರಥಿಭೂತಯಾ ಜಯೇಮ ಶತ್ರುಭಿರಪಹೃತಂ ಗೋಸಂಘಂ। ತಸ್ಯಾಃ ಸಾತಂ ದತ್ತಂ ಸಂಭಜನಂ ವಾ ಸುಮಂಗಲಂ ಶೋಭನ-ಮಂಗಲವತ್ ಸಿನವತ್ । ಸಿನಮನ್ನಂ । ತದ್ವಚ್ಚಾಸ್ತು । ಗೋರೂಪಾನ್ನವಚ್ಚ ಭವತು ॥

|| ಪ್ರತಿಪದಾರ್ಥ ||

**ಪರಿವೃಕ್ತಾ ಇವ**—ಪತಿಯಿಂದ ತ್ಯಕ್ತಳಾದ ಸ್ತ್ರೀಯು | **ಪತಿವಿದ್ಯಂ**—ಪತಿಯ ಸಮೀಪವನ್ನು | **ಆನಟ್**—ಹೊಂದಿ ಸಂತೋಷಿಸುವಂತೆ ಈ ಸಾರಥಿಯಾದ ಮುದ್ಗಲಾನಿಯು | **ಕೋಚಕ್ರೇಣೇವ**—ಭೂವಲಯದ ಮೇಲೆ | **ಸಿಂಚನ್**—ಮಳೆಗರೆಯುವ ಮೇಘವು ಮಳೆಗರೆಯುವಾಗ ಅಂತರಿಕ್ಷದಲ್ಲಿ ದೊಡ್ಡದಾಗಿ ಹರಡುವಂತೆ | **ಪೀಪ್ಯಾನಾ**—ಸಂತೋಷದಿಂದ ವೃದ್ಧಿಯನ್ನೈದುತ್ತಾಳೆ | **ಏಷೈಷ್ಯಾ**—ಗೋವುಗಳ ಅನ್ವೇಷಣದಲ್ಲಿ ಆಸಕ್ತಳಾದ | **ರಥ್ಯಾ ಚಿತ್**—ಸಾರಥಿಯಾದ ಮುದ್ಗಲಾನಿಯಿಂದಲೇ | **ಜಯೇಮ**—ನಾವು ಯುದ್ಧದಲ್ಲಿ ಜಯವನ್ನು ಗಳಿಸುತ್ತೇವೆ | **ಸಾತಂ**—ಆ ಮುದ್ಗಲಾನಿಯಿಂದ ಗಳಿಸಲ್ಪಟ್ಟ (ಕೊಡಲ್ಪಟ್ಟ) | **ಸುಮಂಗಲಂ**—ಮಂಗಲಕರವಾದ ಗೋಸಮೂಹವು | **ಸಿನವತ್**—ಅನ್ನದಂತೆ ನಮಗೆ ಪ್ರಿಯವಸ್ತುವಾಗಿ | **ಅಸ್ತು**—ಆಗಲಿ.

|| ಭಾವಾರ್ಥ ||

ಪತಿಯನ್ನು ಬಿಟ್ಟಗಲಿದ ಪತ್ನಿಯು ಪುನಃ ಪತಿಯೊಡನೆ ಸೇರಿದಾಗ ಸಂತೋಷಪಡುವಂತೆ ಸಾರಥಿಯಾದ ಈ ಮುದ್ಗಲಾನಿಯು ಭೂಮಂಡಲದ ಮೇಲೆ ಮಳೆಗರೆಯುವ ಮೇಘವು ಮಳೆಗರೆಯುವ ಕಾಲದಲ್ಲಿ ಬೃಹದಾಕಾರವಾಗಿ ಅಂತರಿಕ್ಷದಲ್ಲಿ ವ್ಯಾಪಿಸಿರುವಂತೆ ಸಂತೋಷದಿಂದ ವೃದ್ಧಿಯನ್ನೈದುತ್ತಾಳೆ. (ಹಿಗ್ಗುತ್ತಾಳೆ.) ಗೋವುಗಳ ಅನ್ವೇಷಣದಲ್ಲಿ ಆಸಕ್ತಳಾದ ಈ ಮುದ್ಗಲಾನಿಯಿಂದಲೇ ನಾವು ಯುದ್ಧದಲ್ಲಿ ಜಯವನ್ನು ಗಳಿಸುತ್ತೇವೆ. ಅವಳಿಂದ ದತ್ತವಾದ ಎಂದರೆ ಯುದ್ಧದಲ್ಲಿ ಶತ್ರುಗಳಿಂದ ಲಬ್ಧವಾದ ಮಂಗಲಕರವಾದ ಗೋಸಮೂಹವು ಅನ್ನದಂತೆ ನಮಗೆ ಪ್ರಿಯವಸ್ತುವಾಗಲಿ.

## English Translation.

As a wife who has been abandoned rejoices to find her husband, as cloud expanding when pouring forth rain with the aid of the earth's disc; with her eager (to recover the cattle) for our charioteer, may we win (the prize), may good fortune, together with food, be given to us

|| ಸಂಹಿತಾಪಾಠಃ ||

ತ್ವಂ ವಿಶ್ವಸ್ಯ ಜಗತಶ್ಚಕ್ಷುರಿಂದ್ರಾಸಿ ಚಕ್ಷುಷಃ |
ವೃಷಾ ಯದಾಜಿಂ ವೃಷಣಾ ಸಿಷಾಸಸಿ ಚೋದಯನ್ವಧ್ರಿಣಾ ಯುಜಾ||೧೨||

|| ಪದಪಾಠಃ ||

ತ್ವಂ | ವಿಶ್ವಸ್ಯ | ಜಗತಃ | ಚಕ್ಷುಃ | ಇಂದ್ರ | ಅಸಿ | ಚಕ್ಷುಷಃ |

ವೃಷಾ | ಯತ್ | ಆಜಿಂ | ವೃಷಣಾ | ಸಿಸಾಸಸಿ | ಚೋದಯನ್ | ವಧ್ರಿಣಾ | ಯುಜಾ || ೧೨ ||

॥ ಸಾಯಣಭಾಷ್ಯಂ ॥

**ಸೂಕ್ತಸ್ಯ ವಿಕಲ್ಪೇನೈಂದ್ರತ್ವಾದಾದಾವಿಂದ್ರಸ್ಯ ಸ್ತುತತ್ವಾದಂತೇಽಪೀಂದ್ರಃ ಸ್ತೂಯತೇ । ಹೇ ಇಂದ್ರ ತ್ವಂ ವಿಶ್ವಸ್ಯ ಸರ್ವಸ್ಯ ಜಗತಶ್ಚಕ್ಷುಷಶ್ಚಕ್ಷುಷ್ಮತಃ ಪಶ್ಯತೋ ವಾ ಜಗತಶ್ಚಕ್ಷುರಸಿ । ಪ್ರತ್ಯೇಕಮುತ್ಪತ್ತಿವಿಶಿಷ್ಟಚಕ್ಷುಃಸದ್ಭಾವೇಽಪಿ ಸರ್ವಸ್ಯ ಸಾಧಾರಣಂ ಚಕ್ಷುರಸಿ । ತ್ವಯಾ ದೃಷ್ಟವ್ಯಾನೈಹಿಕಾಮುಷ್ಮಿಕಪದಾರ್ಥಾನ್ಪಶ್ಯಂತೀತ್ಯರ್ಥಃ । ತ್ವಾಮೇವ ಹಿ ಯಜ್ಞಾದಿನಾ ಲಬ್ಧ್ವಾ ಪುರುಷಾರ್ಥಾನ್ಸಾಧಯಂತಿ। ಯದ್ವಾ । ವಿಶ್ವಸ್ಯ ಜಗತೋ ಯನ್ನಿಜಂ ಚಕ್ಷುರಸ್ತಿ ತಸ್ಯಾಪಿ ಚಕ್ಷುಷಸ್ತ್ವಂ ಚಕ್ಷುರಸಿ । ಯದ್ಯಸ್ಮಾದ್ವೃಷಾಭಿಮತವರ್ಷಕಸ್ತ್ವಮಾಜಿಂ ಮುದ್ಗಲಸ್ಯ ಮಮ ಸಂಗ್ರಾಮಂ ವಧ್ರಿಣಾ ಪಾಶೇನ ಯುಜಾ ಯುಜೌ ಯುಕ್ತೌ ವೃಷಣಾ ವೃಷಣೌ ವರ್ಷಕಾವಶ್ವೌ ರಥೇ ಯೋಜಯಿತ್ವಾ ಚೋದಯಞ್ಶತ್ರುಷು ಪ್ರೇರಯನ್ ಸಿಷಾಸಸಿ ಆಜಿಂ ಸ್ತಂಭಕ್ತುಮಿಚ್ಛಸಿ ತಸ್ಮಾಚ್ಚಕ್ಷುರಸಿ ॥**

॥ ಪ್ರತಿಪದಾರ್ಥ ॥

**ಇಂದ್ರ** – ಎಲೈ ಇಂದ್ರನೇ । **ತ್ವಂ** – ನೀನು । **ವಿಶ್ವಸ್ಯ ಜಗತಃ**—ಸಮಸ್ತ ಜಗತ್ತಿಗೂ । **ಚಕ್ಷುಷಃ**—ನೋಡುವ ಸಾಮರ್ಥ್ಯವುಳ್ಳ । **ಚಕ್ಷುಃ ಅಸಿ**—ನೇತ್ರರೂಪನಾಗಿರುವೆ ಎಂದರೆ ಕಣ್ಣಿನಂತೆ ಪ್ರಾಧಾನ್ಯತೆಯನ್ನು ಪಡೆದಿರುವೆ. । [**ವಿಶ್ವಸ್ಯ ಜಗತಃ**—ಸಮಸ್ತಜಗತ್ತಿಗೂ । **ಚಕ್ಷುಷಃ**—ಚಕ್ಷುಃಸ್ವರೂಪನಾದ ಆದಿತ್ಯನಿಗೆ (ಸೂರ್ಯನಿಗೆ) । **ಚಕ್ಷುಃ ಅಸಿ** – ನೇತ್ರಪ್ರಾಯನಾಗಿರುವೆ] । **ಯತ್**—ಆ ಕಾರಣದಿಂದಲೇ । **ವೃಷಾ**—ಇಷ್ಟಾರ್ಥಗಳನ್ನು ಸುರಿಸುವ ನೀನು । **ಆಜಿಂ**--ಮುದ್ಗಲನಾದ ನಾನು ನಡೆಸುತ್ತಿರುವ ಯುದ್ಧವನ್ನು ಅಥವಾ ಯುದ್ಧದಲ್ಲಿ । **ವಧ್ರಿಣಾ**—ಪಾಶದಿಂದ । **ವೃಷಣಾ**—ನಿನ್ನ ಅಶ್ವಗಳನ್ನು । **ಯುಜಾ**—ರಥಕ್ಕೆ ಕಟ್ಟಿ । **ಚೋದಯನ್**—ರಥವನ್ನು ಶತ್ರುಗಳ ಮಧ್ಯದಲ್ಲಿ ಹೋಗುವಂತೆ ಪ್ರೇರಿಸುತ್ತಾ । **ಸಿಷಾಸಸಿ**—ನಮಗೆ ಯುದ್ಧದಲ್ಲಿ ಜಯವನ್ನು ದೊರಕಿಸಿಕೊಡಲು ಇಚ್ಛಿಸುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನೋಡುವ ಸಾಮರ್ಥ್ಯವುಳ್ಳ ಸಮಸ್ತಜಗತ್ತಿಗೂ ನೇತ್ರರೂಪನಾಗಿರುವೆ. ಅಥವಾ ಸಮಸ್ತ ಜಗತ್ತಿಗೂ ಚಕ್ಷುಃಸ್ವರೂಪನಾದ ಸೂರ್ಯನಿಗೆ ನೇತ್ರಪ್ರಾಯನಾಗಿರುವೆ. ಆದ್ದರಿಂದಲೇ ಇಂತಹ ಸಾಮರ್ಥ್ಯವುಳ್ಳವನೂ ಇಷ್ಟಾರ್ಥಪ್ರದನೂ ಆದ ನೀನು ಮುದ್ಗಲನಾದ ನಾನು ನಡೆಸುತ್ತಿರುವ ಈ ಯುದ್ಧದಲ್ಲಿ ನಿನ್ನ ಅಶ್ವಗಳನ್ನು ಹಗ್ಗದಿಂದ ರಥಕ್ಕೆ ಹೂಡಿ ಅದನ್ನು ಶತ್ರುಗಳ ಮಧ್ಯದಲ್ಲಿ ಹೋಗುವಂತೆ ಪ್ರೇರಿಸುತ್ತಾ ನಮಗೆ ಜಯವನ್ನು ಗಳಿಸಿಕೊಡಲು ಇಚ್ಛಿಸುತ್ತೀಯೆ.

## English Translation.

You, Indra, are the eye of the eye of the whole world, when, showerer (of benıfits), urging on your two vigours steeds, harnessed to the car, you engage in battle.

# ನೂರ ಮೂರನೆಯ ಸೂಕ್ತವು

## ಪೀಠಿಕೆ.

ಪ್ರಕೃತಸೂಕ್ತದ (ಆಶುಃ ಶಿಶಾನಃ) ಎಂಬ ಸೂಕ್ತದ ವಿಷಯದಲ್ಲಿ ಋಗ್ವಿಧಾನದಲ್ಲಿ ಈ ರೀತಿ ಹೇಳಿದೆ—

**ಸರ್ವತ್ರ ತು ಪರಾ ಶಾಂತಿರ್ಜ್ಞೇಯೋಽಪ್ರತಿರಥಸ್ತ್ವೃಷಿಃ ।**
**ಯಮೇವ ದೇಶಂ ಗಚ್ಛೇತ ಶತ್ರುಂ ವಾಪ್ಯನುಮಂತ್ರಿತಃ ॥**
**ನಾಜಿತ್ವಾ ವಿನಿವರ್ತೇತ ಪರಂ ಹಿ ಬ್ರಹ್ಮಣೋ ಬಲಂ ।**
**ಸರ್ವಕಾಮೈರ್ಜಪೇದೇತತ್ಸರ್ವಕಾಮಸಮೃದ್ಧಯೇ ॥**
**ಸಂಗ್ರಾಮಮಭ್ಯುದ್ಯತಾಸು ರಾಜ್ಞೇ ಚೈತತ್ಪ್ರಯೋಜಯೇತ್ ।**
**ಸರ್ವಾನ್ ವಿಜಯತೇ ಶತ್ರೂನ್ನ ಪರಾಜೀಯತೇಽಪರೈಃ ॥**
**ಪಥಿ ಸ್ವಸ್ತ್ಯಯನಂ ಚೈತತ್ತಸ್ಕರೇಭ್ಯಶ್ಚರನ್ ಪಥಿ ।**
**ಭೂತೋರಗಪಿಶಾಚೇಭ್ಯಃ ಸರ್ವೇಭ್ಯಃ ಪರಿರಕ್ಷತಿ ॥**

(ಋಗ್ವಿಧಾನ. ಅಧ್ಯಾಯ ೪. ಶ್ಲೋ. ೬–೯)

ಈ ಸೂಕ್ತದ ಋಷಿಯಾದ ಅಪ್ರತಿರಥನೆಂಬುವನು ಸರ್ವತ್ರ ಶಾಂತ್ಯರ್ಥವಾಗಿ ಈ ಸೂಕ್ತವನ್ನು ಪಠಿಸಿರುವನು. ರಾಜನಾದವನು ಈ ಸೂಕ್ತದ ಮಂತ್ರಗಳಿಂದ ಅನುಮಂತ್ರಿತನಾಗಿ ಶತ್ರುಜಯಾರ್ಥವಾಗಿ ಯಾವ ದೇಶಕ್ಕೆ ಹೋದರೂ ಅಲ್ಲಿ ತನ್ನ ಶತ್ರುಗಳನ್ನು ಜಯಿಸದೆ ಹಿಂತಿರುಗಿ ಬರುವುದಿಲ್ಲ. ಏಕೆಂದರೆ ಈ ಸೂಕ್ತದ ಪ್ರಭಾವವು ಅಷ್ಟು ಶಕ್ತಿಸಾಮರ್ಥ್ಯಗಳುಳ್ಳದ್ದಾಗಿದೆ. ಇದಲ್ಲದೆ ಈ ಸೂಕ್ತವನ್ನು ಜಪಿಸಿದರೆ ತಾನು ಬಯಸುವ ಸರ್ವಾಭೀಷ್ಟಗಳೂ ಸಿದ್ಧಿಸುವವು. ಮುಖ್ಯವಾಗಿ ಶತ್ರುಗಳ ಮೇಲೆ ಯುದ್ಧಮಾಡುವುದಕ್ಕಾಗಿ ಹೊರಡುವ ರಾಜನು ಈ ಸೂಕ್ತದಿಂದ ಅಭಿಮಂತ್ರಿತನಾದರೆ ಅವನು ತನ್ನ ಶತ್ರುಗಳೆಲ್ಲರನ್ನೂ ಜಯಿಸುವನು ತಾನು ಮಾತ್ರ ಸೋಲುವುದಿಲ್ಲ. ಮಾರ್ಗದಲ್ಲಿ ಪ್ರಯಾಣಮಾಡುವಾಗಲೂ ಈ ಸೂಕ್ತಜಪದಿಂದ ಕಳ್ಳಕಾಕರ ಭಯವುಂಟಾಗುವುದಿಲ್ಲ. ಎಲ್ಲವೂ ಮಂಗಳಕರವಾಗಿಯೇ ನೆರವೇರುವುದು. ಭೂತ, ಸರ್ಪಗಳು, ಪಿಶಾಚಾದಿಗಳು ಮೊದಲಾದ ಸರ್ವಭಯಗಳಿಂದಲೂ ಕಾಪಾಡುವುದು.

ಈ ಸೂಕ್ತದ ವಿಷಯದಲ್ಲಿ ಶೌನಕಮಹರ್ಷಿಗಳು ತಮ್ಮ ಬೃಹದ್ದೇವತಾ ಎಂಬ ಗ್ರಂಥದಲ್ಲಿ ಈ ರೀತಿ ಹೇಳಿರುವರು—

**ಯುಧ್ಯನ್ ಸಂಖ್ಯೇ ಜಯಂ ಪ್ರೇಪ್ಸುರೈಂದ್ರೋಽಪ್ರತಿರಥೋ ಜಗೌ ।**
**ಆಶುರೈಂದ್ರಮಪಷ್ವಾ ದೇವೀ ಅಮೀಷಾಮಿತ್ಯೃಚಿ ಸ್ತುತಾ ।**
**ಚತುರ್ಥೀ ಬಾರ್ಹಸ್ಪತ್ಯಾ ಸ್ಯಾನ್ನಾಕುಲೇ ಚ ಮಹಾನಿತಿ ॥**
**ದ್ವ್ಯೃಚಸ್ತು ಮಾರುತಃ ಪ್ರೇತೇತ್ಯೈಂದ್ರೀ ವಾ ಬ್ರಹ್ಮ ಯತ್ಪರಂ ॥**
**ತತ್ರಾನಿರುಕ್ತಸೂಕ್ತಾದಾವೃಗೇಕಾ ಸೂರ್ಯಮರ್ಚತಿ ॥**

(ಬೃ. ದೇ ಅಧ್ಯಾ ೮. ಶ್ಲೋ ೧೨–೧೫)

ಅಪ್ರತಿರಥ ಐಂದ್ರನೆಂಬುವನು ಯುದ್ಧಮಾಡುವಾಗ ಜಯಪ್ರಾಪ್ತಿಗಾಗಿ ಈ ಸೂಕ್ತವನ್ನು ಪಠಿಸಿರುವನು **ಆಶುಃ ಶಿಶಾನಃ** ಎಂಬ ಈ ಸೂಕ್ತಕ್ಕೆ ಇಂದ್ರನು ದೇವತೆಯು, ಆದರೆ ಅಮೀಷಾಂ ಚಿತ್ತಂ ಎಂಬ ಹನ್ನೆರಡನೆಯ ಋಕ್ಕಿನಲ್ಲಿ **ಅಪ್ವಾ** ಎಂಬ ದೇವತೆಯನ್ನು ಸ್ತುತಿಸಲಾಗಿದೆ ಈ ಸೂಕ್ತದ ನಾಲ್ಕನೆಯ ಋಕ್ಕಿಗೆ ಬೃಹಸ್ಪತಿಯು ದೇವತೆಯು ಮತ್ತು ನಕುಲ ಋಷಿಯ ಖಿಲಮಂತ್ರಗಳಲ್ಲಿ **ಮಹಾನ್** ಎಂಬ ಮಂತ್ರಕ್ಕೂ ಬೃಹಸ್ಪತಿಯೇ ದೇವತೆಯು. ಮುಂದಿನ **ಪ್ರೇತಾ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೧೩ನೇ ಋಕ್ಕು ಮತ್ತು ಖಿಲಮಂತ್ರದ ಒಂದು ಋಕ್ಕು) ಮರುದ್ದೇವತೆಗಳನ್ನು ಸ್ತುತಿಸಲಾಗಿದ್ದರೂ ಮೊದಲನೇ ಪ್ರೇತಾ (೧೩ನೇ ಋಕ್ಕು) ಎಂಬ ಋಕ್ಕಿಗೆ ಇಂದ್ರನೂ ವಿಕಲ್ಪವಾಗಿ ದೇವತೆಯು. ಬ್ರಹ್ಮ ಎಂದು ಪ್ರಾರಂಭವಾಗುವ ಮುಂದಿನ ಖಿಲಸೂಕ್ತದ ಮೊದಲನೆಯ ಋಕ್ಕಿನಲ್ಲಿ ಸೂರ್ಯನನ್ನು ಸ್ತುತಿಸಲಾಗಿದೆ.

॥ ಸಾಯಣಭಾಷ್ಯಂ ॥

**ಆಶುಃ ಶಿಶಾನ ಇತಿ ತ್ರಯೋದಶರ್ಚಂ ಚತುರ್ಥಂ ಸೂಕ್ತಮಿಂದ್ರಪುತ್ರಸ್ಯಾಪ್ರತಿರಥನಾಮ್ನ ಆರ್ಷಂ। ತ್ರಯೋದಶ್ಯನುಷ್ಟುಪ್ ಶಿಷ್ಟಾಸ್ತ್ರಿಷ್ಟುಭಃ। ಬೃಹಸ್ಪತೇ ಪರಿ ದೀಯೇತ್ಯಸ್ಯಾ ಬೃಹಸ್ಪತಿ-ರ್ದೇವತಾ। ಅಮೀಷಾಂ ಚಿತ್ತಮಿತ್ಯಸ್ಯಾ ಅಪ್ವಾಖ್ಯಾ ದೇವೀ ದೇವತಾ। ಶಿಷ್ಟಾ ಐಂದ್ರ್ಯಃ। ತ್ರಯೋದಶೀ ವಿಕಲ್ಪೇನ ಮಾರುತೀ। ತಥಾ ಚಾನುಕ್ರಾಂತಂ। ಆಶುಃ ಸಪ್ತೋನೈಂದ್ರೋಽಪ್ರತಿರಥಶ್ಚತುರ್ಥೀ ಬಾರ್ಹಸ್ಪತ್ಯೋಽಪಾಂತ್ಯಾಪ್ವಾದೇವ್ಯಂತ್ಯಾನುಷ್ಟುಮ್ಮಾರುತೀ ವೇತಿ॥ ಸಾಗ್ನಿಚಿತೇ ಕ್ರತೌ ಚಿತ್ಯಗ್ನಿಷು ಪ್ರಣೀಯಮಾನೇಷು ದಕ್ಷಿಣತೋ ವ್ರಜತಾ ಬ್ರಹ್ಮಣೈತತ್ಸೂಕ್ತಂ ಜಪ್ಯಂ। ತಥಾ ಚ ಸೂತ್ರಿತಂ। ದಕ್ಷಿಣತಶ್ಚ ವ್ರಜಞ್ಜಪತ್ಯಾಶುಃ ಶಿಶಾನ ಇತಿ ಸೂಕ್ತಂ ಸಮಾಪ್ಯ। ಆ. ೧-೧೨। ಇತಿ। ಬ್ರಹ್ಮಾಪ್ರತಿರಥಂ ಜಪಿತ್ವಾ। ಆ. ೪-೮। ಇತಿ ಚ॥ ಯುದ್ಧಾರ್ಥಂ ರಾಜ್ಞಃ ಸನ್ನಹನೇಽನೇನ ಸೂಕ್ತೇನ ರಾಜೇಕ್ಷಿತವ್ಯಃ। ಸೂತ್ರಿತಂ ಚ। ಅಥೈನಮನ್ವೀಕ್ಷೇತಾಪ್ರತಿರಥಶಾಸಸೌಪರ್ಣೈಃ। ಆ. ಗೃ. ೩-೧೨-೧೩। ಇತಿ॥**

ಅನುವಾದವು—**ಆಶುಃ ಶಿಶಾನಃ** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಇಂದ್ರಪುತ್ರನಾದ ಅಪ್ರತಿರಥನೆಂಬುವನು ಋಷಿಯು, ಈ ಸೂಕ್ತದ ಹದಿಮೂರನೆಯ ಋಕ್ಕು ಅನುಷ್ಟುಪ್‌ಛಂದಸ್ಸಿನವು ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು **ಬೃಹಸ್ಪತೇ ಪರಿದೀಯಾ** ಎಂಬ ನಾಲ್ಕನೇ ಋಕ್ಕಿಗೆ ಬೃಹಸ್ಪತಿಯು ದೇವತೆಯು, **ಅಮೀಷಾಂ ಚಿತ್ತಂ** ಎಂಬ ಹನ್ನೆರಡನೇ ಋಕ್ಕಿಗೆ ಅಪ್ವಾ ಎಂಬ ಹೆಸರಿನ ದೇವಿಯು ದೇವತೆಯು, ಉಳಿದ ಋಕ್ಕುಗಳು ಇಂದ್ರದೇವತಾಕವು ಹದಿಮೂರನೆಯ ಋಕ್ಕಿಗೆ ಮರುದ್ದೇವತೆಗಳು ವಿಕಲ್ಪದಿಂದ ದೇವತೆಯು ಅನುಕ್ರಮಣಿಕೆಯಲ್ಲಿ- **ಆಶುಃ ಸಪ್ತೋನೈಂದ್ರೋಽಪ್ರತಿ-ರಥಶ್ಚತುರ್ಥೀ ಬಾರ್ಹಸ್ಪತ್ಯೋಽಪಾಂತ್ಯಾಪ್ವಾದೇವ್ಯಂತ್ಯಾನುಷ್ಟುಮ್ಮಾರುತೀ ವಾ** ಎಂದು ಹೇಳಿರುವುದು. ಅಗ್ನಿ ಚಯನಸಹಿತವಾದ ಯಜ್ಞದಲ್ಲಿ ಚಿತ್ಯಾಗ್ನಿಗಳನ್ನು ಒಯ್ಯುವಾಗ ದಕ್ಷಿಣಾಭಿಮುಖವಾಗಿ ಹೋಗುತ್ತಿರುವ ಬ್ರಹ್ಮನೆಂಬ ಋತ್ವಿಜನಿಂದ ಈ ಸೂಕ್ತವು ಜಪಿಸಲ್ಪಡಬೇಕೆಂದು ಆಶ್ವಲಾಯನಶ್ರೌತಸೂತ್ರದ—**ದಕ್ಷಿಣತಶ್ಚ ವ್ರಜನ್ ಜಪತ್ಯಾ-ಶುಃ ಶಿಶಾನ ಇತಿ ಸೂಕ್ತಂ ಸಮಾಪ್ಯ** ಎಂಬ ಸೂತ್ರದಿಂದ (ಆ. ೧-೧೨) ವಿವೃತವಾಗಿರುವುದು. ಮತ್ತು **ಬ್ರಹ್ಮಾ-ಪ್ರತಿರಥಂ ಜಪಿತ್ವಾ** ಎಂಬ ಸೂತ್ರದಿಂದಲೂ (ಆ.೪-೮) ವಿವೃತವಾಗಿರುವುದು. ಯುದ್ಧಾರ್ಥವಾಗಿ ಸನ್ನದ್ಧನಾಗಿ ಹೊರಡುತ್ತಿರುವ ರಾಜನನ್ನು ಈ ಸೂಕ್ತಪಠನದಿಂದ ನೋಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ— **ಅಥೈನಮ-ನ್ವೀಕ್ಷೇತಾಪ್ರತಿರಥಶಾಸಸೌಪರ್ಣೈಃ** ಎಂಬ ಸೂತ್ರದಿಂದ (ಆ. ಗೃ ೩-೧೨-೧೩) ವಿವೃತವಾಗಿರುವುದು.

## ಸೂಕ್ತ—೧೦೩

ಮಂಡಲ—೧೦ ॥ ಅನುವಾಕ—೯ । ಸೂಕ್ತ—೧೦೩ ॥
ಅಷ್ಟಕ—೮ ॥ ಅಧ್ಯಾಯ—೫ ॥ ವರ್ಗ—೨೨, ೨೩.

ಸೂಕ್ತದಲ್ಲಿರುವ ಋಕ್ಸಂಖ್ಯೇ—೧೩ ॥
ಋಷಿ—ಅಪ್ರತಿರಥ ಐಂದ್ರಃ ॥
ದೇವತಾ—೧-೩, ೫-೧೧. ಇಂದ್ರಃ ।೪. ಬೃಹಸ್ಪತಿಃ ।
೧೨ ಅಪ್ವಾ । ೧೩. ಇಂದ್ರೋ ಮರುತೋ ವಾ ॥
ಛಂದಃ—೧-೧೨. ತ್ರಿಷ್ಟುಪ್ । ೧೩. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಆಶುಃ ಶಿಶಾನೋ ವೃಷಭೋ ನ ಭೀಮೋ ಘನಾಘನಃ ಕ್ಷೋಭಣಶ್ಚರ್ಷಣೀನಾಂ ।
ಸಂಕ್ರಂದನೋಽನಿಮಿಷ ಏಕವೀರಃ ಶತಂ ಸೇನಾ ಅಜಯತ್ಸಾಕಮಿಂದ್ರಃ॥೧॥

॥ ಪದಪಾಠಃ ॥

ಆಶುಃ । ಶಿಶಾನಃ । ವೃಷಭಃ । ನ । ಭೀಮಃ । ಘನಾಘನಃ । ಕ್ಷೋಭಣಃ । ಚರ್ಷಣೀನಾಂ ।
ಸಂಽಕ್ರಂದನಃ । ಅನಿಽಮಿಷಃ । ಏಕಽವೀರಃ । ಶತಂ । ಸೇನಾಃ । ಅಜಯತ್ । ಸಾಕಂ । ಇಂದ್ರಃ ॥ ೧ ॥

॥ ಸಾಯಣಭಾಷ್ಯಂ ॥

ಅಯಮಿಂದ್ರ ಆಶುಃ ಶೀಘ್ರಕಾರೀ ವ್ಯಾಪಕೋ ವಾ ಶಿಶಾನೋ ನಿಶಿತಃ । ಶತ್ರೂಣಾಂ ಭಯಜನಕ ಇತ್ಯರ್ಥಃ । ಕ ಇವ । ವೃಷಭೋ ನ ಭೀಮಃ । ಬಿಭೇತ್ಯಸ್ಮಾದಿತಿ ಭೀಮಃ । ತಾದೃಶೋ ವೃಷಭ ಇವ । ಸ ಯಥಾ ತೀಕ್ಷ್ಣಾಭ್ಯಾಂ ಶೃಂಗಾಭ್ಯಾಂ ಭೀಮೋ ಭವತಿ ತದ್ವತ್ । ಅಥವಾ । ಶಿಶಾನಸ್ತೀಕ್ಷ್ಣಮತಿಃ ॥ ವ್ಯತ್ಯಯೇನಾತ್ಮನೇಪದಂ ॥ ವೃಷಭೋ ನ ಭೀಮಃ ವೃಷಭೋ ಯಥಾ ಶೃಂಗಾಭ್ಯಾಂ ಭಯಜನಕಃ ತದ್ವಚ್ಛತ್ರೂಣಾಂ ಭಯಜನಕಶ್ಚ । ಘನಾಘನೋ ಘಾತಕಃ ಶತ್ರೂಣಾಂ ಹಂತಾ ॥ ಪಚಾದ್ಯಚಿ ಹಂತೇರ್ಘುರ್ಚ । ಪಾ. ೬-೧-೧೨-೭ । ಇತಿ ದ್ವಿರ್ವಚನಮಭ್ಯಾಸಸ್ಯಾಡಾಗಮೋ ಘತ್ವಂ ಚ ಧಾತ್ವಭ್ಯಾಸಯೋಃ ॥ ಚರ್ಷಣೀನಾಂ । ಚರ್ಷಣಯೋ ಮನುಷ್ಯಾಃ । ಮನುಷ್ಯಾಣಾಂ ದ್ವೇಷ್ಯಾಣಾಂ ಕ್ಷೋಭಣಃ ಕ್ಷೋಭಯಿತಾ । ಸಂಕ್ರಂದನಃ ಸಮ್ಯಕ್ಕ್ರಂದಯಿತಾ ಪ್ರಾಣಿನಾಮಾಕರ್ಷಣೇನ ಪ್ರಹಾರೇಣ ವಾ । ಅನಿಮಿಷಶ್ಚಕ್ಷುರ್ನಿಮೇಷರಹಿತಃ । ಸರ್ವದಾ ಸ್ವಯಜ್ಞಗಮನಯುದ್ಧಾದಿಕಾರ್ಯೇಷ್ವನಲಸ ಇತ್ಯರ್ಥಃ । ಏಕವೀರಃ । ವೀರಯತ್ಯಮಿತ್ರಾನಿತಿ ವೀರಃ । ಏಕಶ್ಚಾಸೌ ವೀರಶ್ಚ । ಅಥವಾ ಏಕ ಏವ ವಿಕ್ರಾಂತಃ । ಅಸಾಹಾಯ್ಯೇನ ಕಾರ್ಯಕ್ಷಮ ಇತ್ಯರ್ಥಃ । ಈದೃಶೋಽಯಮಿಂದ್ರಃ ಶತಂ ಸೇನಾಃ ಸಾಕಂ ಸಹೈಕೋದ್ಯೋಗೇನೈವಾಜಯತ್ । ಜಯತಿ ॥

|| ಪ್ರತಿಪದಾರ್ಥ ||

**ಆಶುಃ**— ಶೀಘ್ರಗಾಮಿಯೂ | **ವೃಷಭೋ ನ**—ವೃಷಭವು ತನ್ನ ಕೊಂಬನ್ನು ಉಜ್ಜುವಂತೆ | **ಶಿಶಾನಃ**— ಆಯುಧವನ್ನು ಉಜ್ಜಿ ಹರಿತವಮಾಡಿಕೊಳ್ಳುವವನೂ | **ಭೀಮಃ**—ಭಯಂಕರನೂ | **ಘನಾಘನಃ**—ಶತ್ರುಗಳ ಹಂತಕನೂ | **ಚರ್ಷಣೀನಾಂ**—ಶತ್ರುಜನರಿಗೆ | **ಕ್ಷೋಭಣಃ**—ಕ್ಷಯಕಾರಕನೂ | **ಸಂಕ್ರಂದನಃ**—ಅವರನ್ನು ಅಳುವಂತೆ ಮಾಡುವವನೂ | **ಅನಿಮಿಷಃ**—ಎವೆಯಿಕ್ಕದೆ ನೋಡುವವನೂ | **ಏಕವೀರಃ**—ಅದ್ವಿತೀಯನಾದ ವೀರನೂ ಆದ | **ಇಂದ್ರಃ**—ಇಂದ್ರನು | **ಶತಂ ಸೇನಾಃ**—ಅನೇಕ ಸೇನೆಗಳ ಗುಂಪನ್ನು | **ಸಾಕಂ**—ಒಟ್ಟಿಗೆ **ಅಜಯತ್**—ಜಯಿಸುತ್ತಾನೆ

|| ಭಾವಾರ್ಥ ||

ಶೀಘ್ರಗಾಮಿಯೂ, ವೃಷಭವು ತನ್ನ ಕೊಂಬುಗಳನ್ನು ಉಜ್ಜುವಂತೆ ತನ್ನ ಆಯುಧವನ್ನು ಉಜ್ಜಿ ಹರಿತವಮಾಡಿ ಕೊಳ್ಳುವವನೂ, ಭಯಂಕರನೂ, ಶತ್ರುನಾಶಕನೂ, ಶತ್ರುಜನರಿಗೆ ಕ್ಷಯಕಾರಕನೂ, ಅವರನ್ನು ಅಳುವಂತೆ ಮಾಡು ವವನೂ, ಎವೆಯಿಕ್ಕದೆ ನೋಡುವವನೂ, ಅದ್ವಿತೀಯನಾದ ವೀರನೂ ಆದ ಇಂದ್ರನು ಅನೇಕ ಸೇನೆಗಳ ಗುಂಪನ್ನು ಒಟ್ಟಿಗೆ ಜಯಿಸುತ್ತಾನೆ.

English Translation

The fleet-going Indra, like a formidable bull sharpening (his horns), the slayer of foes, the exciter of men, loud-shouting, ever-vigilant, the chief of heroes overthrew at once a hundred hosts.

|| ವಿಶೇಷವಿಷಯಗಳು ||

ಯಾಸ್ಕರು ಮಂತ್ರಗಳ ಅರ್ಥವಿಧಾನವನ್ನು ವಿವರಿಸುತ್ತಾ ಕೆಲವು ಮಂತ್ರಗಳು **ವಿಪ್ರತಿಷಿದ್ಧಾರ್ಥಾ ಭವಂತಿ**—ಮಂತ್ರಗಳಲ್ಲಿ ಉಕ್ತವಾಗಿರುವ ಅರ್ಥಗಳು ಪರಸ್ಪರ ವಿರುದ್ಧವಾಗಿರುವುದು ಕಂಡುಬರುವುದು ಎಂದು ಹೇಳಿ ಉದಾಹರಣೆಗಾಗಿ **ಅಶತ್ರುರಿಂದ್ರ ಜಜ್ಞಿಷೇ । ಶತಂ ಸೇನಾ ಅಜಯತ್ಸಾಕಮಿಂದ್ರಃ** (ನಿ. ೧-೧೫) ಎಂಬ ಶ್ರುತಿ ವಾಕ್ಯಗಳನ್ನು ಉದಾಹರಣೆಯಾಗಿ ಕೊಟ್ಟಿದಾರೆ—

> **ತ್ವಂ ಸಿಂಧೂँರವಾಸೃಜೋಽಧರಾಚೋ ಅಹನ್ನಹಿಂ । ಅಶತ್ರುರಿಂದ್ರ ಜಜ್ಞಿಷೇ ವಿಶ್ವಂ ಪುಷ್ಯಸಿ ವಾರ್ಯಂ ತಂ ತ್ವಾ ಪರಿಷ್ವಜಾಮಹೇ ನಭಂತಾಮನ್ಯಕೇಷಾಂ ಜ್ಯಾಕಾ ಅಧಿ ಧನ್ವಸು ॥**
>
> (ಋ. ಸಂ ೧೦-೧೩೩-೨)

> **ಆಶುಃ ಶಿಶಾನೋ ವೃಷಭೋ ನ ಭೀಮೋ ಘನಾಘನಃ ಕ್ಷೋಭಣಶ್ಚರ್ಷಣೀನಾಂ । ಸಂಕ್ರಂದನೋಽನಿಮಿಷ ಏಕವೀರಃ ಶತಂ ಸೇನಾ ಅಜಯತ್ಸಾಕಮಿಂದ್ರಃ ॥**
>
> (ಋ. ಸಂ. ೧೦-೧೦೩-೧)

ಎಂಬ ಎರಡು ಋಕ್ಕುಗಳಲ್ಲಿ ಹೇಳಿರುವ ಅರ್ಥವು ಪರಸ್ಪರ ವಿರೋಧವಾಗಿದೆ. ಹೇಗೆಂದರೆ ಮೊದಲನೆಯ ಋಕ್ಕಿನಲ್ಲಿ **ಅಶತ್ರುರಿಂದ್ರ ಜಜ್ಞಿಷೇ**—ಎಲೈ ಇಂದ್ರನೇ, ನೀನು ಶತ್ರುರಹಿತನಾಗಿಯೇ ಉತ್ಪನ್ನನಾಗಿರುವೆ ಎಂದರೆ ನಿನಗೆ ಹುಟ್ಟಿ

ದಾಗಿನಿಂದ ಶತ್ರುಗಳೇ ಇಲ್ಲ ಎಂದಿದೆ. **ಎರಡೇ ಋಕ್ಕಿನಲ್ಲಿ ಏಕವೀರಃ ಶತಂ ಸೇನಾ ಅಜಯತ್ಸಾಕಮಿಂದ್ರಃ**— ಇಂದ್ರನು ಏಕೈಕವೀರನು. ಅವನಿಗೆ ಇನ್ನೊಬ್ಬರ ಸಹಾಯದ ಅವಶ್ಯಕತೆ ಇಲ್ಲ. ಅವನೊಬ್ಬನೇ ನೂರಾರು ಶತ್ರು ಸೇನೆಗಳನ್ನು ಜಯಿಸಿದನು ಎಂದಿದೆ. ಹೀಗಿರುವಲ್ಲಿ—ಯದ್ಯಶತ್ರುಃ ಕಥಂ ಶತಂ ಸೇನಾ ಅಜಯತ್ ! ಅಥ ಶತಂ ಸೇನಾ ಅಜಯತ್, ಕಥಮಶತ್ರುಃ ॥ ಎಂದರೆ ಇಂದ್ರನಿಗೆ ಶತ್ರುಗಳೇ ಇಲ್ಲದಿದ್ದರೆ ಅವನು ಹೇಗೆ ನೂರು ಶತ್ರುಸೇನೆಗಳನ್ನು ಜಯಿಸಿದನು? ಅಥವಾ ಇಂದ್ರನು ನೂರು ಶತ್ರುಸೇನೆಗಳನ್ನು ಜಯಿಸುವುದಾದರೆ ಅವನು ಹೇಗೆ ಶತ್ರುರಹಿತನು ? ಈ ವಾಕ್ಯಗಳಲ್ಲಿ ಕಂಡುಬರುವ ಭಿನ್ನಾರ್ಥಗಳನ್ನು ಪರಿಹರಿಸುವುದಕ್ಕಾಗಿ ಸಮಾಧಾನವನ್ನು ಹೇಳುವಾಗ ಈ ವಾಕ್ಯಗಳಲ್ಲಿರುವ ಅರ್ಥಗಳನ್ನು ಕೇವಲ ಇಂದ್ರನ ಗುಣಗಳನ್ನು ಅತ್ಯತಿಶಯವಾಗಿ ವರ್ಣಿಸಲು ಹೇಳಿರುವುದಾಗಿದೆ ಎಂದೇ ಹೇಳಬೇಕಾಗುವುದು.

॥ ಸಂಹಿತಾಪಾಠಃ ॥

ಸಂಕ್ರಂದನೇನಾನಿಮಿಷೇಣ ಜಿಷ್ಣುನಾ ಯುತ್ಕಾರೇಣ ದುಶ್ಚ್ಯವನೇನ
ಧೃಷ್ಣುನಾ ।
ತದಿಂದ್ರೇಣ ಜಯತ ತತ್ಸಹಧ್ವಂ ಯುಧೋ ನರ ಇಷುಹಸ್ತೇನ ವೃಷ್ಣಾ॥೨॥

॥ ಪದಪಾಠಃ ॥

ಸಂऽಕ್ರಂದನೇನ । ಅನಿऽಮಿಷೇಣ । ಜಿಷ್ಣುನಾ । ಯುತ್ऽಕಾರೇಣ । ದುಃऽಚ್ಯವನೇನ । ಧೃಷ್ಣುನಾ ।
ತತ್ । ಇಂದ್ರೇಣ । ಜಯತ । ತತ್ । ಸಹಧ್ವಂ । ಯುಧಃ । ನರಃ । ಇಷುऽಹಸ್ತೇನ । ವೃಷ್ಣಾ ॥ ೨ ॥

॥ ಸಾಯಣಭಾಷ್ಯಂ ॥

ಅಸ್ತು ನಾಮೇಂದ್ರ ಉಕ್ತವಿಧಃ ತಥಾಪ್ಯಸ್ಮಾಕಂ ಕಿಮಿತಿ ಚೇತ್ ಆಹ । ಸಂಕ್ರಂದನೇನಾನಿಮಿಷೇಣ ಚೋಕ್ತಲಕ್ಷಣೇನ ಜಿಷ್ಣುನಾ ಜಯಶೀಲೇನ ಯುತ್ಕಾರೇಣ । ಯೋಧನಂ ಯುತ್ । ಯುದ್ಧಕಾರಿಣಾ ॥ ಕರ್ಮಣ್ಯಣ್ ॥ ದುಶ್ಚ್ಯವನೇನಾನ್ಯೈರವಿಚಾಲ್ಯೇನ ॥ ಚ್ಯುಙ್ ಪ್ರುಙ್ ಗತೌ । ಛಂದಸಿ ಗತ್ಯರ್ಥೇಭ್ಯಃ । ಪಾ- ೩-೩-೧೨೯ । ಇತಿ ಯುಚ್ ॥ ಧೃಷ್ಣುನಾ ಧರ್ಷಕೇಣ ಈದೃಶೇನೇಂದ್ರೇಣ ತದ್ಯುದ್ಧಂ ಜಯತ । ಶತ್ರುಬಲಂ ಸಹಧ್ವಂ । ಅಭಿಭವತ । ಹೇ ಯುಧೋ ಯೋದ್ಧಾರೋ ಹೇ ನರೋ ನೇತಾರಃ ॥ ವಿಭಾಷಿತಂ ವಿಶೇಷವಚನೇ ಬಹುವಚನಂ । ಪಾ. ೮-೧-೭೪ । ಇತಿ ಪೂರ್ವಸ್ಯಾವಿದ್ಯಮಾನವತ್ತ್ವನಿಷೇಧಾದುತ್ತರಂ ನಿಹನ್ಯತೇ ॥ ಪುನಃ ಕೀದೃಶೇನೇಂದ್ರೇಣೇತಿ । ಇಷುಹಸ್ತೇನ ವೃಷ್ಣಾ ವರ್ಷಿತ್ರಾ ಚ ॥

॥ ಪ್ರತಿಪದಾರ್ಥ ॥

**ಯುಧಃ** — ಎಲೈ ಯೋಧರೇ | **ನರಃ** — ಎಲೈ ನೇತೃಗಳೇ | **ಸಂಕ್ರಂದನೇನ**— ಶತ್ರುಜನರನ್ನು ಅಳುವಂತೆ ಮಾಡುವವನೂ | **ಅನಿಮಿಷೇಣ**—ಎವೆಯಿಕ್ಕದೆ ನೋಡುವವನೂ | **ಜಿಷ್ಣುನಾ**—ಜಯಶಾಲಿಯೂ **ಯುತ್ಕಾರೇಣ**—ಯುದ್ಧ ಮಾಡುವವನೂ | **ದುಶ್ಚ್ಯವನೇನ**—ಅಪ್ರತಿಹತನೂ | **ಧೃಷ್ಣುನಾ**— ಶತ್ರುಗಳನ್ನು ಎದುರಿಸುವವನೂ | **ಇಷುಹಸ್ತೇನ**—ಬಾಣವನ್ನು ಹಿಡಿದಿರುವವನೂ | **ವೃಷ್ಣಾ**—ಇಷ್ಟಾರ್ಥಪ್ರದನೂ ಆದ | **ಇಂದ್ರೇಣ**—ಇಂದ್ರನೊಡಗೂಡಿ | **ತತ್**—ಯುದ್ಧವನ್ನು | **ಜಯತ**—ಗೆಲ್ಲಿರಿ | **ತತ್**—ಶತ್ರುಸೇನೆಯನ್ನು | **ಸಹಧ್ವಂ**—ಸೋಲಿಸಿರಿ.

। ಭಾವಾರ್ಥ ।

ಎಲೈ ಯೋಧರೇ, ಎಲೈ ನೇತೃಗಳೇ, ಶತ್ರುಜನರನ್ನು ಅಳುವಂತೆ ಮಾಡುವವನೂ, ಎವೆಯಿಕ್ಕದೆ ನೋಡುವವನೂ, ಜಯಶಾಲಿಯೂ, ಯುದ್ಧಮಾಡುವವನೂ, ಅಪ್ರತಿಹತನೂ, ಶತ್ರುಗಳನ್ನು ಎದುರಿಸುವವನೂ, ಬಾಣವನ್ನು ಹಿಡಿದಿರುವವನೂ, ಇಷ್ಟಾರ್ಥಪ್ರದನೂ ಆದ ಇಂದ್ರನೊಡಗೂಡಿ ಯುದ್ಧವನ್ನು ಗೆಲ್ಲಿರಿ. ಶತ್ರುಸೇನೆಯನ್ನು ಸೋಲಿಸಿರಿ

English Translation.

With Indra the loud-shouting, the vigilant, the victorious, the warlike the unconquerable, the daring, the hurler of arrows, the showerer, (as your ally) conquer warriors, leaders, that (hostile host) and overcome it.

॥ ಸಂಹಿತಾಪಾಠಃ ॥

ಸ ಇಷುಹಸ್ತೈಃ ಸ ನಿಷಂಗಿಭಿರ್ವಶೀ ಸಂಸ್ರಷ್ಟಾ ಸ ಯುಧ ಇಂದ್ರೋ ಗಣೇನ ।
ಸಂಸೃಷ್ಟಜಿತ್ಸೋಮಪಾ ಬಾಹುಶರ್ಧ್ಯುಗ್ರಧನ್ವಾ ಪ್ರತಿಹಿತಾಭಿರಸ್ತಾ ॥ ೩ ॥

॥ ಪದಪಾಠಃ ॥

ಸಃ । ಇಷುಽಹಸ್ತೈಃ । ಸಃ । ನಿಷಂಗಿಽಭಿಃ । ವಶೀ । ಸಂಽಸ್ರಷ್ಟಾ । ಸಃ । ಯುಧಃ । ಇಂದ್ರಃ । ಗಣೇನ ।
ಸಂಸೃಷ್ಟಽಜಿತ್ । ಸೋಮಽಪಾಃ । ಬಾಹುಽಶರ್ಧೀ । ಉಗ್ರಽಧನ್ವಾ । ಪ್ರತಿಽಹಿತಾಭಿಃ । ಅಸ್ತಾ ॥ ೩ ॥

ಯುರ್ಕ್ತಃ । ನಿಷಂಗಃ ಖಡ್ಗಃ । ತದ್ವದ್ಭಿರ್ವಶೀ । ಸ ಚೇಂದ್ರೋ ಯುಧೋ ಯುಧ್ಯಮಾನಃ ಸನ್ ॥ ಇಗುಪಧಲಕ್ಷಣಃ ಕಃ ॥ ಅಥವಾ ಯುಧೋ ಯುದ್ಧಹೇತೋರ್ಗಣೇನ ಶತ್ರುಸಂಘೇನ ಸಹ ಸಂಸ್ರಷ್ಟೈ-ಕೀಭವನಶೀಲಃ । ಯತ ಏವಂವಿಧೋಽತಃ ಸಂಸ್ಪಷ್ಟಜಿತ್ । ಯೇ ಪರಸ್ಪರೈಕಮತ್ಯೇನ ಯುದ್ಧಾಯ ಸಂಸೃಷ್ಟಾ ಭವಂತಿ ತೇಷಾಂ ಜೇತಾ । ತಥಾ ಸೋಮಪಾಃ ಸೋಮಸ್ಯ ಪಾತಾ । ಬಾಹುಶರ್ಧೀ । ಶರ್ಧೋ ಬಲಂ । ಬಾಹ್ವೋರ್ಬಲಂ ಬಾಹುಬಲಂ । ತದ್ವಾನ್ ॥ ಮತ್ವರ್ಥೀಯ ಇನಿಃ । ಯದ್ವಾ । ಶೃಧು ಪ್ರಸಹನೇ । ಬಾಹುಭ್ಯಾಂ ಶರ್ಧಯತ್ಯಭಿಭವತೀತಿ ಬಾಹುಶರ್ಧೀ । ಸುಪ್ಯಜಾತೌ ಣಿನಿಸ್ತಾಚ್ಛೀಲ್ಯೇ । ಪಾ. ೩-೨-೭೮ । ಇತಿ ಣಿನಿಃ ॥ ಉಗ್ರಧನ್ವೋದ್ಯತಧನ್ವಾ ಪ್ರತಿಹಿತಾಭಿಃ ಶತ್ರುಷು ಪ್ರೇರಿತಾಭಿರಿಷುಭಿರಸ್ತಾ ಮಾರಯಿತಾ । ಯತ್ರೇಷೂನ್ಮುಂಚತಿ ತತ್ರ ವೃಥಾ ನ ಭವತೀತ್ಯರ್ಥಃ । ಈದೃಶೇನೇಂದ್ರೇಣ ಜಯತೇತಿ ಸಂಬಂಧಃ ॥

॥ ಪ್ರತಿಪದಾರ್ಥ ॥

ಸಃ ಇಂದ್ರಃ — ಆ ಇಂದ್ರನು । ಇಷುಹಸ್ತೈಃ — ಬಾಣಗಳನ್ನು ಹಿಡಿದಿರುವ ಮರುತ್ತುಗಳೊಡನೆ ಕೂಡಿದ್ದಾನೆ । ನಿಷಂಗಿಭಿಃ — ಖಡ್ಗಯುಕ್ತನಾಗಿದ್ದಾನೆ । ವಶೀ — ಎಲ್ಲರನ್ನೂ ತನ್ನ ವಶಮಾಡಿಕೊಳ್ಳುತ್ತಾನೆ । ಸಃ — ಅವನು । ಯುಧಃ - ಯುದ್ಧಮಾಡುತ್ತ । ಗಣೇನ — ಶತ್ರುಗುಂಪಿನೊಡನೆ । ಸಂಸೃಷ್ಟಾ — ಸೇರಿಕೊಳ್ಳುತ್ತಾನೆ । ಸಂಸೃಷ್ಟಜಿತ್ — ತನ್ನೊಡನೆ ಸೇರಿದ ಶತ್ರುಗಳನ್ನು ಜಯಿಸುತ್ತಾನೆ । ಸೋಮಪಾಃ — ಸೋಮವನ್ನು ಪಾನಮಾಡುತ್ತಾನೆ । ಬಾಹುಶರ್ಧೀ — ಬಾಹುಬಲವುಳ್ಳವನು । ಉಗ್ರಧನ್ವಾ — ಎತ್ತಿದ ಧನುಸ್ಸುಳ್ಳವನಾಗಿ । ಪ್ರತಿಹಿತಾಭಿಃ — ಶತ್ರುಗಳಮೇಲೆ ಪ್ರೇರಿಸಿದ ಬಾಣಗಳಿಂದ । ಅಸ್ತಾ — ಶತ್ರುಗಳನ್ನು ನಾಶಪಡಿಸುತ್ತಾನೆ.

॥ ಭಾವಾರ್ಥ ॥

ಇಂದ್ರನು ಬಾಣಗಳನ್ನು ಹಿಡಿದಿರುವ ಮರುತ್ತುಗಳೊಡನೆ ಕೂಡಿದ್ದಾನೆ. ಖಡ್ಗಯುಕ್ತನಾಗಿದ್ದಾನೆ. ಎಲ್ಲರನ್ನೂ ತನ್ನ ವಶಮಾಡಿಕೊಳ್ಳುತ್ತಾನೆ. ಯುದ್ಧಮಾಡುವಾಗಲೇ ಶತ್ರುಗುಂಪಿನೊಡನೆ ಸೇರಿಕೊಳ್ಳುತ್ತಾನೆ. ತನ್ನೊಡನೆ ಸೇರಿದ ಶತ್ರುಗಳನ್ನು ಜಯಿಸುತ್ತಾನೆ. ಸೋಮವನ್ನು ಪಾನಮಾಡುತ್ತಾನೆ. ಬಾಹುಬಲವನ್ನು ಹೊಂದಿದ್ದಾನೆ. ತನ್ನ ಧನುಸ್ಸಿನಿಂದ ಶತ್ರುಗಳ ಮೇಲೆ ಬಾಣವನ್ನು ಪ್ರಯೋಗಿಸಿ ಅವರನ್ನು ನಾಶಪಡಿಸುತ್ತಾನೆ.

English Translation.

Indra, with the arrow-bearing (Maruts), armed with swords, the subduer, the warrior, who encounters a multitude (of foes), whod conquers those who encounter him, the drinker of the Soma, the strong-armed, having a powerful bow, who shoots with well aimed arrows (couquer with his help)

॥ ಸಂಹಿತಾಪಾಠಃ ॥

ಬೃಹಸ್ಪತೇ ಪರಿ ದೀಯಾ ರಥೇನ ರಕ್ಷೋಽಹಾಮಿತ್ರಾಁ ಅಪಬಾಧಮಾನಃ ।
ಪ್ರಭಂಜನ್ತ್ಸೇನಾಃ ಪ್ರಮೃಣೋ ಯುಧಾ ಜಯನ್ನಸ್ಮಾಕಮೇಧ್ಯವಿತಾ
ರಥಾನಾಂ ॥ ೪ ॥

॥ ಪದಪಾಠಃ ॥

ಬೃಹಸ್ಪತೇ । ಪರಿ । ದೀಯ । ರಥೇನ । ರಕ್ಷಃಽಹಾ । ಅಮಿತ್ರಾನ್ । ಅಪಽಬಾಧಮಾನಃ ।
ಪ್ರಽಭಂಜನ್ । ಸೇನಾಃ । ಪ್ರಽಮೃಣಃ । ಯುಧಾ । ಜಯನ್ । ಅಸ್ಮಾಕಂ । ಏಧಿ । ಅವಿತಾ । ರಥಾನಾಂ॥

॥ ಸಾಯಣಭಾಷ್ಯಂ ॥

ಹೇ ಬೃಹಸ್ಪತೇ ಬೃಹತಾಂ ಪಾತಃ ಪಾಲಯಿತರ್ದೇವ ರಥೇನ ಪರಿ ದೀಯ । ಪರಿಗಚ್ಛ । ದೀಯತಿರ್ಗಚ್ಛತಿಕರ್ಮಾ । ಆಗತ್ಯ ಚ ರಕ್ಷೋಹಾ ರಕ್ಷಸಾಂ ಹಂತಾಮಿತ್ರಾಞ್ಶತ್ರೂನಪಬಾಧಮಾನಃ ಸರ್ವತೋ ನಾಶಯನ್ ತಥಾ ಸೇನಾಃ ಶತ್ರುಸಂಬಂಧಿನೀಃ ಪ್ರಭಂಜನ್ ಪ್ರಕರ್ಷೇಣ ನಾಶಯನ್ ಪ್ರಮೃಣಃ ಪ್ರಕರ್ಷೇಣ ಹಿಂಸನ್ ॥ ಮೃಣ ಹಿಂಸಾಯಾಂ । ಇಗುಪಧಲಕ್ಷಣಃ ಕಃ ॥ ಕೇನ ಹಿಂಸನ್ । ಯುಧಾ ಯುದ್ಧೇನ ॥ ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥ ಜಯನ್ನೇವಂ ಸರ್ವತ್ರ ಜಯಂ ಪ್ರತಿಪದ್ಯಮಾನಃ ಈದೃಶಸ್ತ್ವಮಸ್ಮಾಕಂ ರಥಾನಾಮವಿತೈಧಿ । ಭವ ॥

॥ ಪ್ರತಿಪದಾರ್ಥ ॥

**ಬೃಹಸ್ಪತೇ**— ಎಲೈ ಬೃಹಸ್ಪತಿಯೇ **ರಥೇನ**— ನಿನ್ನ ರಥದೊಡನೆ । **ಪರಿದೀಯ**— ಸಂಚರಿಸು । **ಯುಧಾ**— ಯುದ್ಧದಿಂದ । **ರಕ್ಷೋಹಾ**— ರಾಕ್ಷಸರ ಹಂತಕನಾಗಿಯೂ । **ಅಮಿತ್ರಾನ್**— ಶತ್ರುಗಳನ್ನು । **ಅಪಬಾಧಮಾನಃ**— ಹಿಂಸಿಸುತ್ತಲೂ । **ಸೇನಾಃ**— ಶತ್ರು ಸೇನೆಗಳನ್ನು । **ಪ್ರಭಂಜನ್**— ನಾಶಪಡಿಸುತ್ತಲೂ । **ಪ್ರಮೃಣಃ**— ಹಿಂಸಿಸುತ್ತಲೂ । **ಜಯನ್**— ಜಯವನ್ನು ಹೊಂದುತ್ತಲೂ । **ಅಸ್ಮಾಕಂ**— ನಮ್ಮ । **ರಥಾನಾಂ**—ರಥಗಳಿಗೆ । **ಅವಿತಾ**—ರಕ್ಷಕನಾಗಿ । **ಏಧಿ**—ಆಗಿರು.

॥ ಭಾವಾರ್ಥ ॥

ಎಲೈ ಬೃಹಸ್ಪತಿಯೇ, ನಿನ್ನ ರಥದೊಡನೆ ಸಂಚರಿಸು ಯುದ್ಧದಿಂದ ರಾಕ್ಷಸರ ಹಂತಕನಾಗಿಯೂ, ಶತ್ರುಗಳನ್ನು ಹಿಂಸಿಸುತ್ತಲೂ, ಅವರನ್ನು ನಾಶಪಡಿಸುತ್ತಲೂ, ಸರ್ವತ್ರ ಜಯವನ್ನು ಹೊಂದುತ್ತಲೂ ನಮ್ಮ

## English Translation.

Come with your chariot, Brihaspathi, who are the slayer of Rakshasas discomfiting your enemies, crushing (hostile) hosts and demolishing (them) victorious in battle, be the defender of our chariots.

॥ ಸಂಹಿತಾಪಾಠಃ ॥

ಬಲವಿಜ್ಞಾಯಃ ಸ್ಥವಿರಃ ಪ್ರವೀರಃ ಸಹಸ್ವಾನ್ವಾಜೀ ಸಹಮಾನ ಉಗ್ರಃ ।
ಅಭಿವೀರೋ ಅಭಿಸತ್ವಾ ಸಹೋಜಾ ಜೈತ್ರಮಿಂದ್ರ ರಥಮಾ ತಿಷ್ಠ ಗೋವಿತ್॥

॥ ಪದಪಾಠಃ ॥

ಬಲऽವಿಜ್ಞಾಯಃ । ಸ್ಥವಿರಃ । ಪ್ರऽವೀರಃ । ಸಹಸ್ವಾನ್ । ವಾಜೀ । ಸಹಮಾನಃ । ಉಗ್ರಃ ।
ಅಭಿऽವೀರಃ । ಅಭಿऽಸತ್ವಾ । ಸಹಃऽಜಾಃ । ಜೈತ್ರಂ । ಇಂದ್ರ । ರಥಂ । ಆ । ತಿಷ್ಠ । ಗೋऽವಿತ್ ॥ ೫ ॥

। ಸಾಯಣಭಾಷ್ಯಂ ॥

ಸರ್ವಸ್ಯ ಭೂತಸ್ಯ ಬಲಂ ವಿಜಾನಾತೀತಿ ಬಲವಿಜ್ಞಾಯಃ । ಯದ್ವಾ । ಬಲಂ ಮಮಾಯಮಿತಿ ಸರ್ವೈರ್ಬಲತ್ವೇನ ವಿಜ್ಞಾಯತ ಇತಿ ಬಲವಿಜ್ಞಾಯಃ । ಸರ್ವಸ್ಯ ಬಲಭೂತ ಇತ್ಯರ್ಥಃ । ಸ್ಥವಿರೋ ಮಹಾನ್ ಪ್ರವೀರಃ ಪ್ರಕರ್ಷೇಣ ವೀರಃ ಸಹಸ್ವಾನ್ ಪರಾಭಿಭವಸಾಮರ್ಥ್ಯವಾನ್ ವಾಜೀ ವೇಜನವಾನ್ ಅನ್ನವಾನ್ವಾ ಸಹಮಾನಃ ಶತ್ರೂಣಾಮಭಿಭವಿತೋಗ್ರ ಉದ್ಗೂರ್ಣಬಲೋऽಭಿವೀರಃ । ಅಭಿಗತಾ ವೀರಾ ವೀರ್ಯವಂತೋऽನುಚರಾ ಯಸ್ಯ ಸ ತಥೋಕ್ತಃ । ಅಭಿಸತ್ವಾಭಿಗತಸತ್ವಾ ಸಹೋಜಾಃ ಸಹಸೋ ಬಲಾಜ್ಜಾತಃ ಏವಂಮಹಾನುಭಾವಸ್ತ್ವಂ ಹೇ ಇಂದ್ರ ಜೈತ್ರಂ ಜಯಶೀಲಂ ರಥಮಾ ತಿಷ್ಠ । ಅಸ್ಮತ್ಸಹಾಯಾರ್ಥಮಾರೋಢುಮರ್ಹಸಿ । ತ್ವಂ ಚ ಗೋವಿದುದಕಸ್ಯ ಸ್ತುತೇರ್ವಾ ಲಬ್ಧಾ ವೇದಿತಾ ವಾ ॥

॥ ಪ್ರತಿಪದಾರ್ಥ ॥

(ಇಂದ್ರಃ— ಇಂದ್ರನು) । ಬಲವಿಜ್ಞಾಯಃ— ತನ್ನ ಬಲದಿಂದ ತನ್ನ ಮಹತ್ತ್ವವನ್ನರಿತವನೂ । ಸ್ಥವಿರಃ—ಮಹಾತ್ಮನೂ । ಪ್ರವೀರಃ—ಉತ್ತಮವಾದ ವೀರನೂ । ಸಹಸ್ವಾನ್—ಶತ್ರುಗಳನ್ನು ಸೋಲಿಸುವವನೂ । ವಾಜೀ—ಅನ್ನವಂತನೂ । ಸಹಮಾನಃ—ಶತ್ರುಗಳನ್ನು ಎದುರಿಸುವವನೂ । ಉಗ್ರಃ—ಭಯಂಕರನೂ । ಅಭಿವೀರಃ—ವೀರರಿಂದ ಕೂಡಿದವನೂ । ಅಭಿಸತ್ವಾ— ಶಕ್ತಿರೂಪನೂ । ಸಹೋಜಾಃ—ಶಕ್ತಿಪುತ್ರನೂ ಆಗಿದ್ದಾನೆ । ಇಂದ್ರ—ಎಲೈ ಇಂದ್ರನೇ । ಜೈತ್ರಂ—ಜಯವನ್ನು ಪಡೆಯುವ । ರಥಂ—ರಥವನ್ನು । ಆ ತಿಷ್ಠ—ಹತ್ತಿ ಕುಳಿತುಕೊ । ಗೋವಿತ್—ಸ್ತುತಿಯನ್ನು ಅರಿಸು.

|| ಭಾವಾರ್ಥ ||

ಇಂದ್ರನು ತನ್ನ ಬಲದಿಂದ ತನ್ನ ಮಹತ್ತ್ವವನ್ನರಿತವನೂ, ಮಹಾತ್ಮನೂ, ಉತ್ತಮನಾದ ವೀರನೂ, ಶತ್ರುಗಳನ್ನು ಸೋಲಿಸುವವನೂ, ಅನ್ನವಂತನೂ, ಶತ್ರುಗಳನ್ನು ಎದುರಿಸುವವನೂ, ಭಯಂಕರನೂ, ವೀರರೊಡನೆ ಕೂಡಿದವನೂ, ಶಕ್ತಿಪುತ್ರನೂ ಆಗಿದ್ದಾನೆ. ಎಲೈ ಇಂದ್ರನೇ, ಜಯಶಾಲಿಯಾದ ರಥವನ್ನು ಹತ್ತಿ ಕುಳಿತುಕೊ. ನಮ್ಮ ಸ್ತುತಿಯನ್ನು ಆಲಿಸಿಕೇಳು

English Translation.

Known by his strength, mighty, heroic, over-powering, vigorous, enduring, fierce, attenede d by heroes, attended by mighty men, the offspring of strength, the possessor of water, do you, Indra, ascend your triumphant chariot.

|| ಸಂಹಿತಾಪಾಠಃ ||

ಗೋತ್ರಭಿದಂ ಗೋವಿದಂ ವಜ್ರಬಾಹುಂ ಜಯಂತಮಜ್ಮ ಪ್ರಮೃಣಂತ-
ಮೋಜಸಾ ।
ಇಮಂ ಸಜಾತಾ ಅನು ವೀರಯಧ್ವಮಿಂದ್ರಂ ಸಖಾಯೋ ಅನು ಸಂ
ರಭಧ್ವಂ ॥ ೬ ॥

|| ಪದಪಾಠಃ ||

ಗೋತ್ರಽಭಿದಂ । ಗೋಽವಿದಂ । ವಜ್ರಽಬಾಹುಂ । ಜಯಂತಂ । ಅಜ್ಮ । ಪ್ರಽಮೃಣಂತಂ । ಓಜಸಾ ।
ಇಮಂ । ಸಽಜಾತಾಃ । ಅನು । ವೀರಯಧ್ವಂ । ಇಂದ್ರಂ । ಸಖಾಯಃ । ಅನು । ಸಂ । ರಭಧ್ವಂ ॥ ೬ ॥

|| ಸಾಯಣಭಾಷ್ಯಂ ||

ಗೋತ್ರಭಿದಂ । ಗಾ ಉದಕಾನಿ ತ್ರಾಯಂತೆ ಇತಿ ಗೋತ್ರಾ ಮೇಘಾಃ । ಯದ್ವಾ । ಗೌರ್ಭೂಮಿಃ । ತಾಂ ತ್ರಾಯಂತೆ ಇತಿ ಗೋತ್ರಾಃ ಪರ್ವತಾಃ । ತೇಷಾಂ ಭೇತ್ತಾರಂ ಗೋವಿದಮುದಕಸ್ಯ ಲಬ್ಧಾರಂ ವಜ್ರಬಾಹುಂ ವಜ್ರಹಸ್ತಂ ॥ ಪ್ರಹರಣಾರ್ಥೇಭ್ಯಃ । ಪಾ. ೨-೨-೩೬-೪ । ಇತಿ ಪರನಿಪಾತಃ ॥ ಜಯಂತಂ ಶತ್ರೂನಭಿಭವಂತಂ ಜಯನಶೀಲಮಜ್ಮ ಗಮನಶೀಲಂ ಶತ್ರುಬಲಮೋಜಸಾ ಬಲೇನ ಜಯಂತಂ ಯದ್ವಾಜ್ಮಾಜಿಂ ಜಯಂತಮೋಜಸಾ ಬಲೇನ ಪ್ರಮೃಣಂತಂ ಶತ್ರೂನಭಿಭವಂತಂ ಈದೃಶಂ ಮಹಾನು-ಭಾವಮಿಮಮಿಂದ್ರಂ ಹೇ ಸಜಾತಾಃ ಸಹೋತ್ಪನ್ನಾ ಯೋದ್ಧಾರಃ ಯೂಯಮನು ವೀರಯಧ್ವಂ ।

**ವಿಕ್ರಾಂತೌ । ವೀರಶಬ್ದಾತ್ತತ್ಕರೋತೀತಿ ತದಾಚಷ್ಟ ಇತಿ ಣಿಚ್ ॥ ಹೇ ಸಖಾಯಃ ಪರಸ್ಪರಂ ಸಖಿಭೂತಾಃ ಯೂಯಮಿಮಮಿಂದ್ರಂ ಸಂರಭಮಾಣಮನು ಸಂ ರಭಧ್ವಂ ॥**

॥ ಪ್ರತಿಪದಾರ್ಥ ॥

**ಸಜಾತಾಃ**—ಬಂಧುಭೂತರಾದ ಎಲೈ ಯೋಧರೇ । **ಗೋತ್ರಭಿದಂ**—ಮೇಘಗಳನ್ನು ಸೀಳುವವನೂ । **ಗೋವಿದಂ**— ಉದಕವನ್ನು ಪಡೆಯುವವನೂ । **ವಜ್ರಬಾಹುಂ**— ವಜ್ರಾಯುಧವನ್ನು ಹಿಡಿದಿರುವವನೂ । **ಜಯಂತಂ**—ಜಯಶೀಲನೂ । **ಓಜಸಾ**—ಶಕ್ತಿಯೊಡನೆ । **ಅಜ್ಮ**—ಶತ್ರುಸೈನ್ಯಕ್ಕೆ ನುಗ್ಗುವವನೂ । **ಪ್ರಮೃಣಂತಂ**—ಶತ್ರುಸೈನ್ಯಗಳನ್ನು ಹಿಂಸಿಸುವವನೂ ಆದ । **ಇಮಂ**—ಈ ಇಂದ್ರನನ್ನು । **ಅನು ವೀರಯಧ್ವಂ**—ಹಿಂಬಾಲಿಸಿ ಯುದ್ಧಮಾಡಿರಿ । **ಸಖಾಯಃ**—ಎಲೈ ಮಿತ್ರರೇ । **ಇಂದ್ರಂ**—ಇಂದ್ರನನ್ನು । **ಅನು ಸಂ ರಭಧ್ವಂ**—ಅನುಸರಿಸಿರಿ.

॥ ಭಾವಾರ್ಥ ॥

ಬಂಧುಭೂತರಾದ ಎಲೈ ಯೋಧರೇ, ಮೇಘಗಳನ್ನು ಸೀಳುವವನೂ, ಉದಕವನ್ನು ಪಡೆಯುವವನೂ, ವಜ್ರಾಯುಧವನ್ನು ಹಿಡಿದಿರುವವನೂ, ಜಯಶೀಲನೂ, ಶಕ್ತಿಯೊಡಗೂಡಿ ಶತ್ರುಸೈನ್ಯಕ್ಕೆ ನುಗ್ಗುವವನೂ, ಶತ್ರು ಸೈನ್ಯಗಳನ್ನು ಹಿಂಸಿಸುವವನೂ ಆದ ಇಂದ್ರನನ್ನು ಹಿಂಬಾಲಿಸಿ ಯುದ್ಧಮಾಡಿರಿ, ಎಲೈ ಮಿತ್ರರೇ, ಇಂದ್ರನನ್ನು ಅನುಸರಿಸಿರಿ.

## English Translation.

Imitate in heroism, you kindred warriors, follow, friends, in prowess this Indra, who is the breaker of mountains, the acquirer of water, armed with the thunderbolt, conquering the swift (foe), destroying (the enemy) by his might.

॥ ಸಂಹಿತಾಪಾಠಃ ॥

ಅಭಿ ಗೋತ್ರಾಣಿ ಸಹಸಾ ಗಾಹಮಾನೋಽದಯೋ ವೀರಃ ಶತಮನ್ಯುರಿಂದ್ರಃ ।
ದುಶ್ಚ್ಯವನಃ ಪೃತನಾಷಾಳಯುಧ್ಯೋಽಸ್ಮಾಕಂ ಸೇನಾ ಅವತು ಪ್ರ ಯುತ್ಸು ॥

॥ ಪದಪಾಠಃ ॥

ಅಭಿ । ಗೋತ್ರಾಣಿ । ಸಹಸಾ । ಗಾಹಮಾನಃ । ಅದಯಃ । ವೀರಃ । ಶತಽಮನ್ಯುಃ । ಇಂದ್ರಃ ।

ದುಃಽಚ್ಯವನಃ । ಪೃತನಾಷಾಟ್ । ಅಯುಧ್ಯಃ । ಅಸ್ಮಾಕಂ । ಸೇನಾಃ । ಅವತು । ಪ್ರ । ಯುತ್ಽಸು ॥೭॥

॥ ಸಾಯಣಭಾಷ್ಯಂ ॥

ಅದಯಮಿಂದ್ರೋ ಗೋತ್ರಾಣ್ಯಭ್ರಾಣಿ ಮೇಘಾನ್ ಸಹಸಾ ಬಲೇನಾಭಿ ಗಾಹಮಾನಃ ಪ್ರವಿಶನ್ನ-ದಯೋ ನಿರ್ದಯೋ ವೀರೋ ವಿಕ್ರಾಂತಃ ಶತಮನ್ಯುರ್ಬಹುಯಜ್ಞೋ ಬಹುಕ್ರೋಧೋ ವಾ ದುಶ್ಚ್ಯವ-ನೋಽನ್ಯೈರಚಾಲ್ಯಃ ॥ ಸ್ವಯಂ ಪೃತನಾಷಾಟ್ ಶತ್ರುಸೇನಾನಾಮಭಿಭವಿತಾ ॥ ಛಂದಸಿ ಸಹ ಇತಿ ಣ್ವಿಃ । ಸಹೇಃ ಸಾಡಃ ಸ ಇತಿ ಮೂರ್ಧನ್ಯಾದೇಶಃ ॥ ಅಯುಧ್ಯಃ ಸಂಪ್ರಹರ್ತುಮಶಕ್ಯಃ ॥ ಯುಧ ಸಂಪ್ರಹಾರೇ। ಛಾಂದಸಃ ಕ್ಯಪ್ ॥ ಈದೃಗಿಂದ್ರೋಽಸ್ಮಾಕಂ ಸೇನಾ ಯುತ್ಸು ಸಂಗ್ರಾಮೇಷು ಪ್ರಾವತು । ಪ್ರಕರ್ಷೇಣ ರಕ್ಷತು ॥

॥ ಪ್ರತಿಪದಾರ್ಥ ॥

**ಅದಯಃ**— ಶತ್ರುಗಳಲ್ಲಿ ನಿರ್ದಯನೂ । **ವೀರಃ**— ಪರಾಕ್ರಮಿಯೂ । **ಶತಮನ್ಯುಃ**— ಅನೇಕ ಯಜ್ಞಗಳಲ್ಲಿ ಸ್ತುತ್ಯನೂ । **ದುಶ್ಚ್ಯವನಃ**— ಇತರರಿಂದ ಚಲಿಸಲ್ಪಡದವನೂ । **ಪೃತನಾಷಾಟ್**— ಶತ್ರು ಸೈನ್ಯಗಳನ್ನು ಸೋಲಿಸುವವನೂ । **ಅಯುಧ್ಯಃ**— ಅಪ್ರತಿಹತನೂ ಆದ । **ಇಂದ್ರಃ**— ಇಂದ್ರನು । **ಗೋತ್ರಾಣಿ**— ಮೇಘಗಳನ್ನು । **ಸಹಸಾ**— ಶಕ್ತಿಯಿಂದ । **ಅಭಿಗಾಹಮಾನಃ**— ಪ್ರವೇಶಿಸುತ್ತ । **ಅಸ್ಮಾಕಂ**— ನಮ್ಮ । **ಸೇನಾಃ**— ಸೇನೆಗಳನ್ನು । **ಯುತ್ಸು**— ಯುದ್ಧಗಳಲ್ಲಿ । **ಪ್ರಾವತು**— ರಕ್ಷಿಸಲಿ.

॥ ಭಾವಾರ್ಥ ॥

ಶತ್ರುಗಳಲ್ಲಿ ನಿರ್ದಯನೂ, ಪರಾಕ್ರಮಿಯೂ, ಅನೇಕ ವಿಧವಾದ ಯಜ್ಞಗಳಲ್ಲಿ ಸ್ತುತ್ಯನೂ, ಇತರರಿಂದ ಚಲಿಸಲ್ಪಡದವನೂ, ಶತ್ರುಸೈನ್ಯಗಳನ್ನು ಸೋಲಿಸುವವನೂ, ಅಪ್ರತಿಹತನೂ ಆದ ಇಂದ್ರನು ತನ್ನ ಶಕ್ತಿಯಿಂದ ಮೇಘಗಳನ್ನು ಪ್ರವೇಶಿಸುತ್ತ ನಮ್ಮ ಸೇನೆಗಳನ್ನು ಯುದ್ಧಗಳಲ್ಲಿ ರಕ್ಷಿಸಲಿ.

English Translation

May Indra, bursting open the clouds with force; pitiless, heroic, with hundredfold anger, invincible, the overthrower of armies, irressistible, protect our armies in battles.

॥ ಸಂಹಿತಾಪಾಠಃ ॥

ಇಂದ್ರ॑ ಆಸಾಂ ನೇ॒ತಾ ಬೃಹ॒ಸ್ಪತಿ॒ರ್ದಕ್ಷಿ॑ಣಾ ಯ॒ಜ್ಞಃ ಪು॒ರ ಏ॑ತು॒ ಸೋಮಃ॑ ।
ದೇ॒ವ॒ಸೇ॒ನಾನಾ॑ಮಭಿಭಂಜ॒ತೀನಾಂ॒ ಜಯಂ॑ತೀನಾಂ ಮ॒ರುತೋ॑ ಯ॒ಂ-
ತ್ವಗ್ರಂ॑ ॥ ೮ ॥

॥ ಪದಪಾಠಃ ॥

ಇಂದ್ರಃ । ಆಸಾಂ । ನೇತಾ । ಬೃಹಸ್ಪತಿಃ । ದಕ್ಷಿಣಾ । ಯಜ್ಞಃ । ಪುರಃ । ಏತು । ಸೋಮಃ ।

ದೇವಽಸೇನಾನಾಂ । ಅಭಿಽಭಂಜತೀನಾಂ । ಜಯಂತೀನಾಂ । ಮರುತಃ । ಯಂತು । ಅಗ್ರಂ ॥ ೮ ॥

॥ ಸಾಯಣಭಾಷ್ಯಂ ॥

ಆಸಾಮಸ್ಮತ್ಸಹಾಯಾರ್ಥಮಾಗತಾನಾಮಯಮಿಂದ್ರೋ ನೇತಾ ನಾಯಕೋಽಸ್ತು । ತಥಾ ತಸ್ಯ ಬೃಹಸ್ಪತಿಃ ಪುರ ಏತು । ಏವಂ ದಕ್ಷಿಣಾ ಯಜ್ಞಃ ಸೋಮಶ್ಚ ಪುರ ಏತ್ವಿತಿ ಪ್ರತ್ಯೇಕಂ ಸಂಬಂಧಃ । ತಥಾ ದೇವಸೇನಾನಾಮಭಿಭಜಂತೀನಾಮಸ್ಮದಮಿತ್ರಾನಾಭಿಮುಖ್ಯೇನ ಮರ್ದಯಂತೀನಾಂ ಜಯಂತೀನಾಂ ॥ ಛಂದಸೀತಿ ನಾಮ ಉದಾತ್ತತ್ವಂ ಜಯಂತೀನಾಮಿತ್ಯತ್ರ ಬಹುಲವಚನಾನ್ನ ಭವತಿ । ಪಾ. ೬-೧-೧೭೮ ॥ ತಾಸಾಮಗ್ರಂ ಮರುತೋ ಯಂತು । ಗಚ್ಛಂತು ॥

॥ ಪ್ರತಿಪದಾರ್ಥ ॥

**ಆಸಾಂ**— ಈ ಸೇನೆಗಳಿಗೆ । **ಇಂದ್ರಃ**— ಇಂದ್ರನು । **ನೇತಾ**— ನಾಯಕನಾಗಿರಲಿ । **ಬೃಹಸ್ಪತಿಃ**— ಬೃಹಸ್ಪತಿಯು । **ಪುರ ಏತು**— ಮುಂದೆ ನಡೆಯಲಿ । **ದಕ್ಷಿಣಾ**— ದಕ್ಷಿಣೆಯೂ । **ಯಜ್ಞಃ**— ಯಜ್ಞವೂ । **ಸೋಮಃ**— ಸೋಮವೂ (ಸೇನೆಯ ಮುಂದೆ ನಡೆಯಲಿ) । **ಅಭಿಭಂಜತೀನಾಂ**— ಶತ್ರುಗಳನ್ನು ನಾಶ ಪಡಿಸುವವೂ । **ಜಯಂತೀನಾಂ**— ಜಯಶಾಲಿಗಳೂ ಆದ । **ದೇವಸೇನಾನಾಂ**— ಈ ದೇವತೆಗಳ ಸೈನ್ಯಗಳ । **ಅಗ್ರಂ**— ಮುಂಭಾಗದಲ್ಲಿ । **ಮರುತಃ**— ಮರುತ್ತುಗಳು । **ಯಂತು**— ಹೋಗಲಿ.

॥ ಭಾವಾರ್ಥ ॥

ಈ ಸೇನೆಗಳಿಗೆ ಇಂದ್ರನು ಮುಖ್ಯನಾಯಕನಾಗಿರಲಿ. ಬೃಹಸ್ಪತಿಯೂ, ದಕ್ಷಿಣೆಯೂ, ಯಜ್ಞವೂ ಮತ್ತು ಸೋಮವೂ ಈ ಸೇನೆಯ ಅಗ್ರ ಭಾಗದಲ್ಲಿ ನಡೆಯಲಿ. ಶತ್ರುನಾಶಕವೂ, ಜಯಶಾಲಿಗಳೂ ಆದ ಈ ದೇವತೆಗಳ ಸೈನ್ಯಗಳ ಮುಂದಾಳುಗಳಾಗಿ ಮರುತ್ತುಗಳೂ ನಡೆಯಲಿ.

English Translation

May Indra be the leader of these (hosts), may Brihaspathi, Dakshina, Yajna, and Soma go before, let the Maruts march in the van of the destroying and victorious armies of the gods.

॥ ಸಂಹಿತಾಪಾಠಃ ॥

ಇಂದ್ರಸ್ಯ ವೃಷ್ಣೋ ವರುಣಸ್ಯ ರಾಜ್ಞ ಆದಿತ್ಯಾನಾಂ ಮರುತಾಂ ಶರ್ಧ ಉಗ್ರಂ ।

ಮಹಾಮನಸಾಂ ಭುವನಚ್ಯವಾನಾಂ ಘೋಷೋ ದೇವಾನಾಂ ಜಯತಾ-
ಮುದಸ್ಥಾತ್ ॥ ೯ ॥

॥ ಪದಪಾಠಃ ॥

ಇಂದ್ರಸ್ಯ । ವೃಷ್ಣಃ । ವರುಣಸ್ಯ । ರಾಜ್ಞಃ । ಆದಿತ್ಯಾನಾಂ । ಮರುತಾಂ । ಶರ್ಧಃ । ಉಗ್ರಂ ।
ಮಹಾಽಮನಸಾಂ । ಭುವನಽಚ್ಯವಾನಾಂ । ಘೋಷಃ । ದೇವಾನಾಂ । ಜಯತಾಂ । ಉತ್ । ಅಸ್ಥಾತ್ ॥

॥ ಸಾಯಣಭಾಷ್ಯಂ ॥

ವೃಷ್ಣೋ ವರ್ಷಕಸ್ಯೇಂದ್ರಸ್ಯ ರಾಜ್ಞೋ ವರುಣಸ್ಯಾದಿತ್ಯಾನಾಂ ಮರುತಾಂ ಚೋಗ್ರಮುದ್ಗೂರ್ಣಂ ಶರ್ಧೋ ಬಲಮಸ್ಮಾಕಂ ಭವತ್ವಿತಿ ಶೇಷಃ । ಕಿಂಚ ಮಹಾಮನಸಾಮುದಾರಮನಸಾಂ ಭುವನಚ್ಯವಾನಾಂ ಚಾವಯಿತ್ರೂಣಾಂ ದೇವಾನಾಂ ಘೋಷೋ ಜಯಶಬ್ದ ಉದಸ್ಥಾತ್ । ಉತ್ತಿಷ್ಠತಿ ॥ ಅನೂರ್ಧ್ವಕರ್ಮತ್ವಾದಾತ್ಮನೇಪದಾಭಾವಃ ॥ ಪಾ. ೧-೩-೨೪ ॥

॥ ಪ್ರತಿಪದಾರ್ಥ ॥

**ವೃಷ್ಣಃ**—ಇಷ್ಟಾರ್ಥಪ್ರದನಾದ । **ಇಂದ್ರಸ್ಯ** ಇಂದ್ರನ । **ರಾಜ್ಞಃ**—ಪ್ರಭುವಾದ । **ವರುಣಸ್ಯ**—ವರುಣನ । **ಆದಿತ್ಯಾನಾಂ**—ಆದಿತ್ಯರ । **ಮರುತಾಂ**—ಮರುತ್ತುಗಳ । **ಉಗ್ರಂ**—ಪ್ರಬಲವಾದ । **ಶರ್ಧಃ**—ಶಕ್ತಿಯು (ನಮಗೆ ಸಾಹಾಯ್ಯಕವಾಗಲಿ) । **ಮಹಾಮನಸಾಂ**—ಅತ್ಯುದಾರಿಗಳೂ । **ಭುವನಚ್ಯವಾನಾಂ**—ಲೋಕವನ್ನೇ ಅಲುಗಾಡಿಸುವವರೂ ಆದ । **ದೇವಾನಾಂ**—ದೇವತೆಗಳ । **ಘೋಷಃ**—ಜಯಶಬ್ದವು । **ಉದಸ್ಥಾತ್**—ಮೇಲೆದ್ದಿದೆ,

॥ ಭಾವಾರ್ಥ ॥

ಇಷ್ಟಾರ್ಥಪ್ರದನಾದ ಇಂದ್ರನ ಶಕ್ತಿಯೂ, ಪ್ರಭುವಾದ ವರುಣನ, ಆದಿತ್ಯರ ಮತ್ತು ಮರುತ್ತುಗಳ ಶಕ್ತಿಯೂ ನಮಗೆ ಸಾಹಾಯ್ಯಕವಾಗಿರಲಿ. ಅತ್ಯುದಾರಿಗಳೂ, ಲೋಕವನ್ನೇ ಅಲುಗಾಡಿಸುವವರೂ ಆದ ದೇವತೆಗಳ ಜಯಶಬ್ದವು ಮೇಲೆದ್ದಿದೆ.

## English Translation.

(May) the mighty force of the showerer Indra, of the royal Varuna, of the Adityas and Maruts (be ours). The shout of the magnanimous and victorious deities, the subverters of worlds, has arisen.

॥ ಸಂಹಿತಾಪಾಠಃ ॥

ಉದ್ಧ॑ರ್ಷಯ ಮಘವ॒ನ್ನಾಯು॑ಧಾ॒ನ್ಯುತ್ಸತ್ವ॑ನಾಂ ಮಾಮ॒ಕಾನಾ॒ಂ ಮನಾ॑ಂಸಿ।
ಉದ್ವೃ॑ತ್ರಹನ್ವಾ॒ಜಿನಾ॒ಂ ವಾಜಿ॑ನಾ॒ನ್ಯುದ್ರಥಾ॑ನಾ॒ಂ ಜಯ॑ತಾಂ ಯಂ॒ತು॒
ಘೋಷಾ॑ಃ ॥ ೧೦ ॥

॥ ಪದಪಾಠಃ ॥

ಉತ್ । ಹ॒ರ್ಷ॒ಯ॒ । ಮ॒ಘ॒ವ॒ನ್ । ಆಯು॑ಧಾನಿ । ಉತ್ । ಸತ್ವ॑ನಾಂ । ಮಾ॒ಮ॒ಕಾನಾ॑ಂ । ಮನಾ॑ಂಸಿ ।
ಉತ್ । ವೃ॒ತ್ರ॒ಹ॒ನ್ । ವಾ॒ಜಿನಾ॑ಂ । ವಾಜಿ॑ನಾನಿ । ಉತ್ । ರಥಾ॑ನಾಂ । ಜಯ॑ತಾಂ । ಯ॒ಂ॒ತು॒ ।
ಘೋಷಾ॑ಃ ॥ ೧೦ ॥

। ಸಾಯಣಭಾಷ್ಯಂ ॥

ಹೇ ಮಘವನ್ನಿಂದ್ರ ಅಸ್ಮದೀಯಾನ್ಯಾಯುಧಾನ್ಯುದ್ಧರ್ಷಯ । ಉತ್ಕೃಷ್ಟಂ ಹರ್ಷಯ । ಪ್ರಹರಣೇಷೂದ್ಯುಕ್ತಾನಿ ಭವಂತ್ವಿತ್ಯರ್ಥಃ । ಮಾಮಕಾನಾಮಸ್ಮದೀಯಾನಾಂ ಸತ್ವನಾಂ ಪ್ರಾಣಿನಾಂ ಸೇವಕಾನಾಂ ಮನಾಂಸಿ ಚೋದ್ಧರ್ಷಯ । ಹೇ ವೃತ್ರಹನ್ನಿಂದ್ರ ವಾಜಿನಾಮಶ್ವಾನಾಂ ವಾಜಿನಾನಿ ವೇಗಾ ಉದ್ಯಂತು । ತಥಾ ಜಯತಾಂ ರಥಾನಾಂ ಘೋಷಾ ಉದ್ಯಂತು ॥

॥ ಪ್ರತಿಪದಾರ್ಥ ॥

**ಮಘವನ್**—ಧನವಂತನಾದ ಎಲೈ ಇಂದ್ರನೇ । **ಆಯುಧಾನಿ**—ನಮ್ಮ ಆಯುಧಗಳನ್ನು । **ಉದ್ಧರ್ಷಯ**—ಉತ್ತೇಜನಗೊಳಿಸು । **ಮಾಮಕಾನಾಂ**—ನನ್ನ । **ಸತ್ವಾನಾಂ**—ಸೈನಿಕರ । **ಮನಾಂಸಿ**—ಮನಸ್ಸುಗಳನ್ನು । **ಉತ್ (ಹರ್ಷಯ)**—ಉತ್ಸಾಹಯುಕ್ತವಾಗುವಂತೆ ಮಾಡು । **ವೃತ್ರಹನ್**—ಶತ್ರುನಾಶಕನಾದ ಎಲೈ ಇಂದ್ರನೇ । **ವಾಜಿನಾಂ** ನಮ್ಮ ಅಶ್ವಗಳ । **ವಾಜಿನಾನಿ**—ವೇಗಗಳು । **ಉದ್ಯಂತು**—ಅಧಿಕವಾಗಿ ಪ್ರಕಟವಾಗಲಿ । **ಜಯತಾಂ**—ಜಯಶೀಲವಾದ । **ರಥಾನಾಂ**—ನಮ್ಮ ರಥಗಳ । **ಘೋಷಾಃ**—ಶಬ್ದಗಳು । **ಉತ್**—ಪ್ರಕಟವಾಗಲಿ.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ನಮ್ಮ ಆಯುಧಗಳನ್ನು ಉತ್ತೇಜನಗೊಳಿಸು. ನಮ್ಮ ಸೈನಿಕರ ಮನಸ್ಸನ್ನು ಉತ್ಸಾಹಯುಕ್ತವಾಗುವಂತೆ ಮಾಡು. ಶತ್ರುನಾಶಕನಾದ ಎಲೈ ಇಂದ್ರನೇ, ನಮ್ಮ ಅಶ್ವಗಳ ವೇಗಗಳೂ, ರಥಗಳ ಶಬ್ದಗಳೂ ಮೇಲೆದ್ದು ಪ್ರಕಟವಾಗಲಿ.

## English Translation

Excite, Maghavan, my weapons, (excite) the spirits of my heroes; slayer of Vritra, let the speed of the horses be accelerated, let the noises of the chariots be increased

॥ ಸಂಹಿತಾಪಾಠಃ ॥

ಅಸ್ಮಾಕಮಿಂದ್ರಃ ಸಮೃತೇಷು ಧ್ವಜೇಷ್ವಸ್ಮಾಕಂ ಯಾ ಇಷವಸ್ತಾ ಜಯಂತು।
ಅಸ್ಮಾಕಂ ವೀರಾ ಉತ್ತರೇ ಭವಂತ್ವಸ್ಮಾँ ಉ ದೇವಾ ಅವತಾ ಹವೇಷು॥೧೧॥

॥ ಪದಪಾಠಃ ॥

ಅಸ್ಮಾಕಂ । ಇಂದ್ರಃ । ಸಂऽಋತೇಷು। ಧ್ವಜೇಷು । ಅಸ್ಮಾಕಂ । ಯಾಃ । ಇಷವಃ । ತಾಃ । ಜಯಂತು ।
ಅಸ್ಮಾಕಂ । ವೀರಾಃ । ಉತ್ऽತರೇ । ಭವಂತು । ಅಸ್ಮಾನ್ । ಊಂ ಇತಿ । ದೇವಾಃ । ಅವತ । ಹವೇಷು॥

॥ ಸಾಯಣಭಾಷ್ಯಂ ॥

**ಅಸ್ಮಾಕಂ ಸಂಬಂಧಿಷ್ವೇವ ಸಮೃತೇಷು ಪರಸೇನಾಂ ಸಂಪ್ರಾಪ್ತೇಷು ಧ್ವಜೇಷು ಧ್ವಜವತ್ಸು ಸೈನಿಕೇಷ್ವಿಂದ್ರೋ ರಕ್ಷಿತಾ ಭವತು । ತಥಾಸ್ಮಾಕಂ ಯಾ ಇಷವಃ ಸಂತಿ ತಾ ಏವ ಜಯಂತು ಶತ್ರೂನ್ । ತಥಾಸ್ಮಾಕಂ । ವೀರಾ ಭಟಾ ಉತ್ತರ ಉಪರಿ ಭವಂತು । ಹೇ ದೇವಾಃ ಅಸ್ಮಾँ ಉ ಅಸ್ಮಾನೇವಾವತ ರಕ್ಷತ ಹವೇಷು ಸಂಗ್ರಾಮೇಷು ॥**

॥ ಪ್ರತಿಪದಾರ್ಥ ॥

**ಅಸ್ಮಾಕಂ**—ನಮ್ಮ । **ಧ್ವಜೇಷು**—ಧ್ವಜಗಳೊಡನೆ । **ಸಂಋತೇಷು**—ಶತ್ರುಧ್ವಜಗಳ ಸಂಪರ್ಕವುಂಟಾದಾಗ । **ಇಂದ್ರಃ**—ಇಂದ್ರನು (ನಮ್ಮನ್ನು ರಕ್ಷಿಸಲಿ) । **ಯಾಃ**—ಯಾವುವು । **ಅಸ್ಮಾಕಂ ಇಷವಃ**—ನಮ್ಮ ಬಾಣಗಳಾಗಿವೆಯೋ । **ತಾಃ**—ಅವು । **ಜಯಂತು**—ಜಯವನ್ನು ಹೊಂದಲಿ । **ಅಸ್ಮಾಕಂ**—ನಮ್ಮ । **ವೀರಾಃ**—ವೀರಯೋಧರು । **ಉತ್ತರೇ ಭವಂತು**—ಜಯಶೀಲರಾಗಲಿ । **ದೇವಾಃ**—ಎಲೈ ದೇವತೆಗಳೇ । **ಹವೇಷು**—ಯುದ್ಧಗಳಲ್ಲಿ । **ಅಸ್ಮಾನ್ ಉ**—ನಮ್ಮನ್ನೇ । **ಅವತ**—ರಕ್ಷಿಸಿರಿ ।

॥ ಭಾವಾರ್ಥ ॥

ನಮ್ಮ ಸೈನ್ಯದ ಧ್ವಜಗಳೊಡನೆ ಶತ್ರುಸೈನ್ಯಗಳ ಧ್ವಜಗಳ ಸಂಪರ್ಕವುಂಟಾದಾಗ ಇಂದ್ರನು ನಮ್ಮನ್ನು ರಕ್ಷಿಸಲಿ. ಯಾವುವು ನಮ್ಮ ಬಾಣಗಳಾಗಿವೆಯೋ, ಅವು ಜಯವನ್ನು ಹೊಂದಲಿ. ನಮ್ಮ ವೀರಯೋಧರು ಜಯವನ್ನು ಪಡೆಯಲಿ. ಎಲೈ ದೇವತೆಗಳೇ, ಯುದ್ಧಗಳಲ್ಲಿ ನಮ್ಮನ್ನೇ ರಕ್ಷಿಸಿರಿ.

## English Translation.

When the banners are intermingled, may Indra be our (defender), may those arrows which are ours be victorious, may our warriors be triumphant; gods, protect us in battles.

॥ ಸಂಹಿತಾಪಾಠಃ ॥

ಅಮೀಷಾಂ ಚಿತ್ತಂ ಪ್ರತಿಲೋಭಯಂತೀ ಗೃಹಾಣಾಂಗಾನ್ಯಪ್ವೇ ಪರೇಹಿ ।
ಅಭಿ ಪ್ರೇಹಿ ನಿರ್ದಹ ಹೃತ್ಸು ಶೋಕೈರಂಧೇನಾಮಿತ್ರಾಸ್ತಮಸಾ ಸಚಂತಾಂ॥

॥ ಪದಪಾಠಃ ॥

ಅಮೀಷಾಂ । ಚಿತ್ತಂ । ಪ್ರತಿಽಲೋಭಯಂತೀ । ಗೃಹಾಣ । ಅಂಗಾನಿ । ಅಪ್ವೇ । ಪರಾ । ಇಹಿ ।
ಅಭಿ । ಪ್ರ । ಇಹಿ । ನಿಃ । ದಹ । । ಹೃತ್ಽಸು । ಶೋಕೈಃ । ಅಂಧೇನ । ಅಮಿತ್ರಾಃ । ತಮಸಾ ।
ಸಚಂತಾಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಅಪ್ವೇ ಪಾಪಾಭಿಮಾನಿನಿ ದೇವತೇ ಅಮೀಷಾಂ ಯೋದ್ಧೄಣಾಂ ಶತ್ರೂಣಾಂ ಚಿತ್ತಂ ಪ್ರತಿಲೋಭಯಂತೀ ವಿಮೋಹಯಂತ್ಯಂಗಾನಿ ತೇಷಾಮವಯವಾಞ್ಶರೀರಾದಿಕಾನ್ಗೃಹಾಣ । ಸ್ವೀಕುರು । ಅಭಿ ಪ್ರೇಹಿ । ಅಭಿಗಚ್ಛ । ತೇಷಾಂ ಸಮೀಪಂ ಗತ್ವಾ ಚ ಹೃತ್ಸು ಹೃದಯೇಷು ಶೋಕೈರ್ನಿರ್ದಹ । ನಿತರಾಂ ಭಸ್ಮೀಕುರು । ತೇಽಮಿತ್ರಾ ಅಸ್ಮಚ್ಛತ್ರವೋಽಂಧೇನ ತಮಸಾ ಸಚಂತಾಂ । ಸಂಗಚ್ಛಂತಾಂ ॥

॥ ಪ್ರತಿಪದಾರ್ಥ ॥

**ಅಪ್ವೇ**—ಎಲೈ ಪಾಪಾಭಿಮಾನಿಯಾದ ದೇವತೆಯೇ । **ಅಮೀಷಾಂ**—ನಮ್ಮ ಶತ್ರುಗಳ । **ಚಿತ್ತಂ**—ಮನಸ್ಸನ್ನು । **ಪ್ರತಿಲೋಭಯಂತೀ**—ಮೋಹಗೊಳಿಸುತ್ತ । **ಅಂಗಾನಿ**—ಅವರ ಅವಯವಗಳನ್ನು । **ಗೃಹಾಣ**—ಭದ್ರವಾಗಿ ಹಿಡಿ । **ಅಭಿ. ಪ್ರೇಹಿ**—ಅವರನ್ನು ಎದುರಿಸಿ ಹೋಗು । **ಪರೇಹಿ**—ನಮ್ಮಿಂದ ದೂರವಾಗು । **ಹೃತ್ಸು**—ಅವರ ಹೃದಯಗಳಲ್ಲಿ । **ಶೋಕೈಃ**—ಶೋಕಗಳಿಂದ । **ನಿರ್ದಹ**—ದಹಿಸು । **ಅಮಿತ್ರಾಃ**—ನಮ್ಮ ಶತ್ರುಗಳು । **ಅಂಧೇನ**—ಕಣ್ಣು ಕಾಣದಿರುವ । **ತಮಸಾ**—ಕಗ್ಗತ್ತಲೆಯಿಂದ । **ಸಚಂತಾಂ**—ಕೂಡಿಕೊಳ್ಳಲಿ.

॥ ಭಾವಾರ್ಥ ॥

ಎಲೈ ಪಾಪಾಭಿಮಾನಿಯಾದ ದೇವತೆಯೇ, ನಮ್ಮ ಶತ್ರುಗಳ ಮನಸ್ಸನ್ನು ಮೋಹಗೊಳಿಸುತ್ತ ಅವರ ಅವಯವಗಳನ್ನು ಭದ್ರವಾಗಿ ಹಿಡಿ. ಅವರನ್ನು ಎದುರಿಸಿ ಹೋಗು. ನಮ್ಮಿಂದ ದೂರವಾಗು. ಅವರ ಹೃದಯಗಳಲ್ಲಿ ಶೋಕಗಳನ್ನು ತುಂಬಿ ದಹಿಸು. ನಮ್ಮ ಶತ್ರುಗಳು ಕಣ್ಣು ಕಾಣದಿರುವ ಕಗ್ಗತ್ತಲೆಯಿಂದ ಕೂಡಿಕೊಳ್ಳಲಿ.

## English Translation

Bewildering the mind of our foes, Apiva, seize their limbs and depart, proceed against them, burn in their hearts with sorrow, let our enemies be covered with thick darkness.

### ವಿಶೇಷ ವಿಷಯಗಳು

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ಅಮೀಷಾಂ ಚಿತ್ತಾನಿ ಪ್ರಜ್ಞಾನಾನಿ ಪ್ರತಿಲೋಭಯಮಾನಾ ಗೃಹಾಣಾಂಗಾನ್ಯಪ್ವೇ ಪರೇಹ್ಯಭಿಪ್ರೇಹಿ ನಿರ್ದಹೈಷಾಂ ಹೃದಯಾನಿ ಶೋಕೈರಂಧೇನಾಮಿತ್ರಾಸ್ತಮಸಾ ಸಂಸೇವ್ಯಂತಾಂ ||**

(ನಿ. ೯-೩೩)

ಎಲೈ ಅಪ್ವಾ ಎಂಬ ಪಾಪಾಭಿಮಾನಿದೇವತೆಯೇ, ನಮ್ಮ ಶತ್ರುಗಳ ಬುದ್ಧಿಯನ್ನು ಎಂದರೆ ವಿವೇಚನಾ ಶಕ್ತಿಯನ್ನು ಮೋಹಗೊಳಿಸು. ಅವರ ಅವಯವಗಳನ್ನು ಹಿಡಿ ಎಂದರೆ ಅವಯವಗಳು ಅವುಗಳ ಸಹಜವಾದ ಕಾರ್ಯಗಳನ್ನು ಮಾಡದಂತೆ ಪ್ರತಿಬಂಧಿಸು ಅವರ ಬಳಿಗೆ ಹೋಗು, ಹೋಗಿ ಅವರ ಹೃದಯಗಳನ್ನು ಮನಸ್ಸನ್ನು ದುಃಖಶೋಕಾದಿಗಳಿಂದ ತುಂಬಿ ದಹಿಸುವಂತೆ ಮಾಡು. ಕತ್ತಲೆಯಲ್ಲಿವವರು ಏನುಮಾಡಲೂ ತೋರದಂತೆ ಅವರ ಮನಸ್ಸಿಗೆ ಕತ್ತಲೆಯನ್ನುತುಂಬಿ ಎಂದರೆ ವಿವೇಚನಾಶಕ್ತಿಯನ್ನು ನಾಶಗೊಳಿಸಿ ಕತ್ತಲಲ್ಲಿ ತಡುಕಾಡುವಂತೆ ಮಾಡು.

|| ಸಂಹಿತಾಪಾಠಃ ||

ಪ್ರೇತಾ ಜಯತಾ ನರ ಇಂದ್ರೋ ವಃ ಶರ್ಮ ಯಚ್ಛತು ।
ಉಗ್ರಾ ವಃ ಸಂತು ಬಾಹವೋಽನಾಧೃಷ್ಯಾ ಯಥಾಸಥ || ೧೩ ||

|| ಪದಪಾಠಃ ||

ಪ್ರ । ಇತ । ಜಯತ । ನರಃ । ಇಂದ್ರಃ । ವಃ । ಶರ್ಮ । ಯಚ್ಛತು ।
ಉಗ್ರಾಃ । ವಃ । ಸಂತು । ಬಾಹವಃ । ಅನಾಧೃಷ್ಯಾಃ । ಯಥಾ । ಅಸಥ || ೧೩ ||

|| ಸಾಯಣಭಾಷ್ಯಂ ||

**ಹೇ ನರೋ ನೇತಾರಃ ಸಂಗ್ರಾಮಸ್ಯ ನಿರ್ವೋಢಾರೋ ಯೋದ್ಧಾರಃ ಪ್ರೇತ । ಪ್ರಕರ್ಷೇಣ ಗಚ್ಛತ । ಗತ್ವಾ ಚ ಜಯತ ತಾನ್ಪ್ರತಿಭಟಾನ್ || ತಿಜಃ ಪರಸ್ಮೈಪದಿತ್ವಾತ್ ತಿಜ ಇತಿ ನಿಘಾತಾಭಾವಃ || ವೋ ಯುಷ್ಮಾಕಮಿಂದ್ರಃ ಶರ್ಮ ಸುಖಂ ಯಚ್ಛತು । ಪ್ರಯಚ್ಛತು । ವೋ ಬಾಹವ ಉಗ್ರಾ ಉದ್ಗೂರ್ಣಬಲಾಃ ಸಂತು । ಭವಂತು । ಅನಾಧೃಷ್ಯಾ ಅನ್ಯೈರನಭಿಭಾವ್ಯಾ ಯಥಾ ಯೂಯಮಸಥ ಭವಿಷ್ಯಥ ತಥೋಗ್ರಾಃ ಸಂತು ವೋ ಬಾಹವಃ ||**

|| ಪ್ರತಿಪದಾರ್ಥ ||

**ನರಃ**—ಎಲೈ ಯೋಧರೇ | **ಪ್ರೇತ**—ಮುನ್ನುಗ್ಗಿರಿ | **ಜಯತ**—ಜಯವನ್ನು ಹೊಂದಿರಿ | **ವಃ**—ನಿಮಗೆ | **ಇಂದ್ರಃ**—ಇಂದ್ರನು | **ಶರ್ಮ**—ಸುಖವನ್ನು | **ಯಚ್ಛತು**—ಕೊಡಲಿ | **ಯಥಾ**—ಯಾವ ರೀತಿ | **ಅನಾಧೃಷ್ಯಾಃ**—ನೀವು ಅಪ್ರತಿಹತರಾಗಿ | **ಅಸಥ**—ಆಗುವಿರೋ ಹಾಗೆ | **ವಃ**—ನಿಮ್ಮ | **ಬಾಹವಃ**—ಬಾಹುಗಳು | **ಉಗ್ರಾಃ**—ಪ್ರಬಲವಾದ ಶಕ್ತಿಯುಳ್ಳವಾಗಿ | **ಸಂತು**—ಆಗಿರಲಿ.

|| ಭಾವಾರ್ಥ ||

ಎಲೈ ಯೋಧರೇ, ಮುನ್ನುಗ್ಗಿರಿ. ಜಯವನ್ನು ಹೊಂದಿರಿ. ನಿಮಗೆ ಇಂದ್ರನು ಸುಖವನ್ನು ಕೊಡಲಿ. ನೀವು ಅಪ್ರತಿಹತರಾಗುವಂತೆ ನಿಮ್ಮ ಬಾಹುಗಳು ಪ್ರಬಲವಾದ ಶಕ್ತಿಯನ್ನು ಹೊಂದಲಿ.

## English Translation.

Advance, warriors, and conquer; may Indra grant you happiness, may your arms be strong, so that you may be invincible.

|| ವಿಶೇಷವಿಷಯಗಳು ||

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಖಿಲ ಮಂತ್ರವು—

**ಅಸೌ ಯಾ ಸೇನಾ ಮರುತಃ ಪರೇಷಾಮಭ್ಯೈತಿ ನ ಓಜಸಾ ಸ್ಪರ್ಧಮಾನಾ |**
**ತಾಂ ಗೂಹತ ತಮಸಾಪವ್ರತೇನ ಯಥಾಮೀಷಾಮನ್ಯೋ ಅನ್ಯಂ ನ ಜಾನಾತ್** || ೧ ||

**ಅಂಧಾ ಅಮಿತ್ರಾ ಭವತಾಶೀರ್ಷಾಣಾ ಅಹಯ ಇವ |**
**ತೇಷಾಂ ವೋ ಅಗ್ನಿದಗ್ಧಾನಾಮಗ್ನಿಮೂಳ್ಹಾನಾಮಿಂದ್ರೋ ಹಂತು ವರಂವರಂ** || ೨ ||

---

## ನೂರ ನಾಲ್ಕನೆಯ ಸೂಕ್ತವು

**ಅಸಾವೀತ್ಯೇಕಾದಶರ್ಚಂ ಪಂಚಮಂ ಸೂಕ್ತಂ | ವೈಶ್ವಾಮಿತ್ರಸ್ಯಾಷ್ಟಕಸ್ಯಾರ್ಷಂ ತ್ರೈಷ್ಟುಭಮೈಂದ್ರಂ | ತಥಾ ಚಾನುಕ್ರಾಂತಂ | ಅಸಾವ್ಯೇಕಾದಶಾಷ್ಟಕೋ ವೈಶ್ವಾಮಿತ್ರ ಇತಿ || ಗತಃ ಸೂಕ್ತವಿನಿಯೋಗಃ ||**

ಅನುವಾದವು—**ಅಸಾವಿ** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು ಈ ಸೂಕ್ತಕ್ಕೆ ವಿಶ್ವಾಮಿತ್ರಋಷಿಯ ಪುತ್ರನಾದ ಅಷ್ಟಕನೆಂಬುವನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಸಾವ್ಯೇಕಾದಶಾಷ್ಟಕೋ ವೈಶ್ವಾಮಿತ್ರಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೪

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ—೧೦೪ ॥
ಅಷ್ಟಕ—೮ ॥ ಅಧ್ಯಾಯ—೫ ॥ ವರ್ಗ—೨೪, ೨೫ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ಅಷ್ಟಕೋ ವೈಶ್ವಾಮಿತ್ರಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಸಾವಿ ಸೋಮಃ ಪುರುಹೂತ ತುಭ್ಯಂ ಹರಿಭ್ಯಾಂ ಯಜ್ಞಮುಪ ಯಾಹಿ ತೂಯಂ ।
ತುಭ್ಯಂ ಗಿರೋ ವಿಪ್ರವೀರಾ ಇಯಾನಾ ದಧನ್ವಿರ ಇಂದ್ರ ಪಿಬಾ ಸುತಸ್ಯ ॥೧॥

॥ ಪದಪಾಠಃ ॥

ಅಸಾವಿ । ಸೋಮಃ । ಪುರುऽಹೂತ । ತುಭ್ಯಂ । ಹರಿऽಭ್ಯಾಂ । ಯಜ್ಞಂ । ಉಪ । ಯಾಹಿ । ತೂಯಂ ।
ತುಭ್ಯಂ । ಗಿರಃ । ವಿಪ್ರऽವೀರಾಃ । ಇಯಾನಾಃ । ದಧನ್ವಿರೇ । ಇಂದ್ರ । ಪಿಬ । ಸುತಸ್ಯ ॥ ೧ ॥

॥ ಸಾಯಣಭಾಷ್ಯಂ ॥

ಹೇ ಪುರುಹೂತ ಬಹುಭಿಃ ಸ್ತೋತೃಭಿರಾಹೂತ ತುಭ್ಯಂ ತ್ವದರ್ಥಂ ಸೋಮೋಽಸಾವಿ । ಅಭಿಷುತೋಽಭೂತ್ ॥ ಷುಞ್ ಅಭಿಷವ ಇತ್ಯಸ್ಮಾತ್ಕರ್ಮಣಿ ಲುಙ್ ॥ ಅತೋ ಹರಿಭ್ಯಾಂ ಹರಿತವರ್ಣಾಭ್ಯಾಮಶ್ವಾಭ್ಯಾಂ ಯಜ್ಞಮಸ್ಮದೀಯಂ ತೂಯಂ ತೂರ್ಣಮುಪ ಯಾಹಿ ॥ ಉಪಾಗಚ್ಛ । ತುಭ್ಯಂ ತ್ವದರ್ಥಂ ಗಿರೋಽಸ್ಮದೀಯಾಃ ಸ್ತುತಯೋ ವಿಪ್ರವೀರಾಃ । ವಿಪ್ರಾ ಮೇಧಾವಿನೋ ವೀರಾ ವಿಶೇಷೇಣ ಪ್ರೇರಯಿತಾರಃ ಪ್ರೋದ್ಗಮಯಿತಾರೋ ಯಾಸಾಂ ತಾಸ್ತಥೋಕ್ತಾಃ । ಇಯಾನಾ ಗಮನಶೀಲಾ ದಧನ್ವಿರೇ । ಗಮ್ಯಂತೇ । ಅಸ್ಮಾಭಿರ್ಯುಷ್ಮತ್ಪ್ರೀಣನಾಯ ಪ್ರಾಪ್ಯಂತೆ ಇತ್ಯರ್ಥಃ ॥ ಈಙ್ ಗತೌ । ತಾಚ್ಛೀಲಿಕಃ ಶಾನಚ್ । ಛಾಂದಸೋ ವಿಕರಣಸ್ಯ ಲುಕ್ । ಧವಿರ್ಗತ್ಯರ್ಥಃ । ಇದಿತ್ತ್ವಾನ್ನುಮ್ । ಕರ್ಮಣಿ ಚ್ಛಾಂದಸೋ ಲಿಟ್ ॥ ಯತ ಏವಮತಃ ಸುತಸ್ಯಾಭಿಷುತಸ್ಯಾಂಶಂ ಸುತಂ ಸೋಮಂ ವಾ ಪಿಬ ॥

॥ ಪ್ರತಿಪದಾರ್ಥ ॥

**ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದ । **ಇಂದ್ರ**—ಎಲೈ ಇಂದ್ರನೇ । **ತುಭ್ಯಂ**—ನಿನ್ನನ್ನು ದ್ದೇಶಿಸಿ । **ಸೋಮಃ**—ಸೋಮವು । **ಅಸಾವಿ**—ಹಿಂಡಲ್ಪಟ್ಟಿದೆ । **ಹರಿಭ್ಯಾಂ**—ನಿನ್ನ ಅಶ್ವಗಳೊಡನೆ ।

**ಯಜ್ಞಂ**—ನಮ್ಮ ಯಜ್ಞಕ್ಕೆ | **ತೂಯಂ**—ಶೀಘ್ರವಾಗಿ | **ಉಪ ಯಾಹಿ**- ದಯಮಾಡು | **ವಿಪ್ರ ವೀರಾಃ**—ಮೇಧಾವಿಗಳಿಂದ ಪಠಿತವೂ | **ಇಯಾನಾಃ**—ನಿನ್ನನ್ನು ಸಮೀಪಿಸುವುವೂ ಆದ | **ಗಿರಃ**—ನಮ್ಮ ಸ್ತುತಿಗಳು | **ತುಭ್ಯಂ**—ನಿನ್ನನ್ನುದ್ದೇಶಿಸಿ | **ದಧನ್ವಿರೇ**—ಅರ್ಪಿತವಾಗಿ ನಿನ್ನನ್ನು ಸೇರುತ್ತವೆ | **ಸುತಸ್ಯ**—ಹಿಂಡಿರುವ ಸೋಮವನ್ನು | **ಪಿಬ**—ಪಾನಮಾಡು.

॥ ಭಾವಾರ್ಥ ॥

ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಸೋಮರಸವು ಹಿಂಡಲ್ಪಟ್ಟಿದೆ. ನಿನ್ನ ಅಶ್ವಗಳೊಡನೆ ನಮ್ಮ ಯಜ್ಞಕ್ಕೆ ಶೀಘ್ರವಾಗಿ ದಯಮಾಡು. ಮೇಧಾವಿಗಳಿಂದ ಪಠಿತವೂ ನಿನ್ನನ್ನು ಸಮೀಪಿಸುವುವೂ ಆದ ನಮ್ಮ ಸ್ತುತಿಗಳು ನಿನ್ನನ್ನುದ್ದೇಶಿಸಿ ಅರ್ಪಿತವಾಗಿ ನಿನ್ನನ್ನು ಸೇರುತ್ತವೆ ಹಿಂಡಿರುವ ಸೋಮವನ್ನು ಪಾನಮಾಡು.

English Translation

The Soma has been effused for you, (Indra), the invoked of many, come quickly to the sacrifice with your two bay horses; our praises recited by the wise, moving quickly, are addressed to you; drink, Indra, of the libation.

॥ ಸಂಹಿತಾಪಾಠಃ ॥

ಅಪ್ಸು ಧೂತಸ್ಯ ಹರಿವಃ ಪಿಬೇಹ ನೃಭಿಃ ಸುತಸ್ಯ ಜಠರಂ ಪೃಣಸ್ವ ।
ಮಿಮಿಕ್ಷುರ್ಯಮದ್ರಯ ಇಂದ್ರ ತುಭ್ಯಂ ತೇಭಿರ್ವರ್ಧಸ್ವ ಮದಮುಕ್ಥ-
ವಾಹಃ ॥ ೨ ॥

॥ ಪದಪಾಠಃ ॥

ಅಪ್ಽಸು । ಧೂತಸ್ಯ । ಹರಿಽವಃ । ಪಿಬ । ಇಹ । ನೃಽಭಿಃ । ಸುತಸ್ಯ । ಜಠರಂ । ಪೃಣಸ್ವ ।
ಮಿಮಿಕ್ಷುಃ । ಯಂ । ಅದ್ರಯಃ । ಇಂದ್ರ । ತುಭ್ಯಂ । ತೇಭಿಃ । ವರ್ಧಸ್ವ । ಮದಂ । ಉಕ್ಥಽವಾಹಃ ॥ ೨॥

॥ ಸಾಯಣಭಾಷ್ಯಂ ॥

ಪ್ರಥಮೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿಶಸ್ತ್ರೇಽಪ್ಸು ಧೂತಸ್ಯೇತ್ಯೇಷಾ ಯಾಜ್ಯಾ । **ಸೂತ್ರಿತಂ ಚ** । ಅಪ್ಸು ಧೂತಸ್ಯ ಹರಿವಃ ಪಿಬೇಹೇತಿ ಯಾಜ್ಯಾ । ಆ. ೬-೪ । ಇತಿ ॥

ಹೇ ಹರಿವಃ ಋಕ್ಸಾಮೇ ವಾ ಇಂದ್ರಸ್ಯ ಹರೀ । ಐ. ಬ್ರಾ. ೨-೨೪ । ಇತಿ ಶ್ರುತೇಃ **ಸ್ತೋತ್ರಶಸ್ತ್ರಾಧಾರಭೂತಾಭ್ಯಾಮೃಕ್ಸಾಮಾಭ್ಯಾಂ ಹರಿಭ್ಯಾಂ** ತದ್ವನ್ನಿಂದ್ರ ಅಪ್ಸ್ವೇಕಧಾನಾದಿಷೂದಕೇಷು **ಧೂತಸ್ಯ**

**ಕಂಪಿತಸ್ಯ । ಅಭಿಷುತಸ್ಯೇತ್ಯರ್ಥಃ । ತಥಾ ನೃಭಿಃ ಕರ್ಮನೇತೃಭಿಃ ಕರ್ಮನಿರ್ವಾಹಕೈರಧ್ವರ್ಯ್ವಾದಿಭಿಃ ಸುತಸ್ಯಾಭಿಷುತಸ್ಯ ॥ ಉಭಯತ್ರ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನಸಂಜ್ಞಾಯಾಂ ಚತುರ್ಥ್ಯರ್ಥೇ ಬಹುಲಂ ಛಂದಸೀತಿ ಷಷ್ಠೀ ॥ ಈದೃಶಂ ಸೋಮಮಿಹಾಸ್ಮಿನ್ಯಜ್ಞೇ ಪಿಬ । ಪೀತ್ವಾ ಚ ಜಠರಂ ಸ್ವಕೀಯಂ ಪೃಣಸ್ವ । ಪೂರಯ ಚ ॥ ಚಾದಿಲೋಪೇ ವಿಭಾಷೇತಿ ಪ್ರಥಮಾ ತಿಙ್ವಿಭಕ್ತಿರ್ನ ನಿಹನ್ಯತೇ ॥ ಯಂ ಸೋಮಮದ್ರಯೋಽಭಿಷವಗ್ರಾವಾಣೋ ಹೇ ಇಂದ್ರ ತುಭ್ಯಂ ತ್ವದರ್ಥಂ ಮಿಮಿಕ್ಷುಃ ಸೇಕ್ತುಮಭಿಷೋತುಮೈಚ್ಛನ್ । ಅಭಿಷವಮಕುರ್ವನ್ನಿತ್ಯರ್ಥಃ ॥ ಮಿಹ ಸೇಚನ ಇತ್ಯಸ್ಯ ಸನಿ ಲಿಙ್ಯಸಿ ರೂಪಂ ॥ ಹೇ ಉಕ್ಥವಾಹ ಉಕ್ಥೈಃ ಶಸ್ತ್ರೈರುಹ್ಯಮಾನ ತೇಭಿಸ್ತೈರ್ಮದಂ ವರ್ಧಸ್ವ ॥**

॥ ಪ್ರತಿಪದಾರ್ಥ ॥

**ಹರಿವಃ**—ಋಕ್ಸಾಮರೂಪವಾದ ಅಶ್ವಗಳಿಂದ ವಹಿಸಲ್ಪಡುವ ಎಲೈ ಇಂದ್ರನೇ । **ಅಪ್ಸು**—ಉದಕಗಳೊಡನೆ ಸೇರಿ । **ಧೂತಸ್ಯ**—ಕಂಪಿತವಾದುದೂ । **ನೃಭಿಃ**—ಋತ್ವಿಕ್ಕುಗಳಿಂದ । **ಸುತಸ್ಯ**—ಹಿಂಡಲ್ಪಟ್ಟುದೂ ಆದ ಸೋಮವನ್ನು । **ಇಹ**—ಈ ಯಜ್ಞದಲ್ಲಿ । **ಪಿಬ**—ಪಾನಮಾಡು । **ಜಠರಂ**—ನಿನ್ನ ಉದರವನ್ನು । **ಪೃಣಸ್ವ**—ತುಂಬಿಕೊ । **ಉಕ್ಥವಾಹಃ**—ಶಸ್ತ್ರ (ಸ್ತುತಿ) ಗಳಿಂದ ವಹಿಸಲ್ಪಡುವ । **ಇಂದ್ರ**—ಎಲೈ ಇಂದ್ರನೇ । **ಯಂ**—ಯಾವ ಸೋಮವನ್ನು । **ಅದ್ರಯಃ**—ಹಿಂಡುವ ಕಲ್ಲುಗಳು । **ತುಭ್ಯಂ**—ನಿನ್ನನ್ನುದ್ದೇಶಿಸಿ । **ಮಿಮಿಕ್ಷುಃ**—ಹಿಂಡಿವೆಯೋ । **ತೇಭಿಃ**—ಅವುಗಳೊಡನೆ । **ಮದಂ**—ಹರ್ಷವನ್ನು । **ವರ್ಧಸ್ವ**—ಬೆಳೆಸು

॥ ಭಾವಾರ್ಥ ॥

ಋಕ್ಸಾಮರೂಪವಾದ ಅಶ್ವಗಳಿಂದ ವಹಿಸಲ್ಪಡುವ ಎಲೈ ಇಂದ್ರನೇ, ಉದಕಗಳೊಡನೆ ಸೇರಿಸಿ ಕಂಪಿಸಲ್ಪಡುವುದೂ, ಋತ್ವಿಕ್ಕುಗಳಿಂದ ಹಿಂಡಲ್ಪಟ್ಟುದೂ ಆದ ಸೋಮವನ್ನು ಈ ಯಜ್ಞದಲ್ಲಿ ಪಾನಮಾಡು. ನಿನ್ನ ಉದರವನ್ನು ತುಂಬಿಕೊ. ಶಸ್ತ್ರಮಂತ್ರಗಳಿಂದ ವಹಿಸಲ್ಪಡುವ ಎಲೈ ಇಂದ್ರನೇ, ಹಿಂಡುವ ಕಲ್ಲುಗಳು ಯಾವ ಸೋಮವನ್ನು ನಿನ್ನನ್ನುದ್ದೇಶಿಸಿ ಹಿಂಡಿವೆಯೋ, ಅದನ್ನು ಪಾನಮಾಡಿ ನಿನ್ನ ಹರ್ಷವನ್ನು ವೃದ್ಧಿಪಡಿಸು.

## English Translation.

Lord of bay steeds, drink at this ceremony of the juice that has been shaken up with the water, fill your belly with the libation offered by the priests, which the grinding-stones desired to express for you, Indra; do you who are carried by hymns enhance your exhilaration with these (hymns).

॥ ವಿಶೇಷವಿಷಯಗಳು ॥

ಪ್ರಥಮ ಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಅಪ್ಸು ಧೂತಸ್ಯ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಅಪ್ಸು ಧೂತಸ್ಯ ಹರಿವಃ ಪಿಬೇಹೇತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

|| ಸಂಹಿತಾಪಾಠಃ ||

ಪ್ರೋಗ್ರಾಂ ಪೀತಿಂ ವೃಷ್ಣ ಇಯರ್ಮಿ ಸತ್ಯಾಂ ಪ್ರಯ್ಯೈ ಸುತಸ್ಯ ಹರ್ಯಶ್ವ ತುಭ್ಯಂ ।
ಇಂದ್ರ ಧೇನಾಭಿರಿಹ ಮಾದಯಸ್ವ ಧೀಭಿರ್ವಿಶ್ವಾಭಿಃ ಶಚ್ಯಾ ಗೃಣಾನಃ ॥ ೩ ॥

|| ಪದಪಾಠಃ ||

ಪ್ರ । ಉಗ್ರಾಂ । ಪೀತಿಂ । ವೃಷ್ಣೇ । ಇಯರ್ಮಿ । ಸತ್ಯಾಂ । ಪ್ರಽಯ್ಯೈ । ಸುತಸ್ಯ । ಹರಿಽಅಶ್ವ । ತುಭ್ಯಂ ।
ಇಂದ್ರ । ಧೇನಾಭಿಃ । ಇಹ । ಮಾದಯಸ್ವ । ಧೀಭಿಃ । ವಿಶ್ವಾಭಿಃ । ಶಚ್ಯಾ । ಗೃಣಾನಃ ॥ ೩ ॥

|| ಸಾಯಣಭಾಷ್ಯಂ ||

ದ್ವಿತೀಯೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿನಃ ಪ್ರೋಗ್ರಾಮಿತ್ಯೇಷಾ ಯಾಜ್ಯಾ। ಸೂತ್ರಿತಂ ಚ । ಅಶ್ವಾವತಿ ಪ್ರಥಮಃ ಪ್ರೋಗ್ರಾಂ ಪೀತಿಂ ವೃಷ್ಣ ಇಯರ್ಮಿ ಸತ್ಯಾಮಿತಿ ಯಾಜ್ಯಾ। ಆ. ೬-೪ । ಇತಿ ॥

ಹೇ ಹರ್ಯಶ್ವೇಂದ್ರ ವೃಷ್ಣೇ ವರ್ಷಕಾಯ ತುಭ್ಯಮುಗ್ರಾಮುದ್ಗೂರ್ಣಂ ಸತ್ಯಾಂ ಪೀತಿಂ ಸೋಮಪಾನಂ ಪ್ರೇಯರ್ಮಿ । ಪ್ರೇರಯಾಮಿ । ಕಿಮರ್ಥಂ । ಪ್ರಯ್ಯೈ ಪ್ರಗಮನಾಯ । ಕಸ್ಯ ಪೀತಿಂ । ಸುತಸ್ಯಾಭಿಷುತಸ್ಯ । ಅತೋ ಹೇ ಇಂದ್ರ ಶಚ್ಯಾ ಶಕ್ತ್ಯಾ ಕರ್ಮಣಾ ವಾ ಯುಕ್ತೋ ಗೃಣಾನಃ ಸ್ತೂಯಮಾನಸ್ತ್ವಂ ವಿಶ್ವಾಭಿಃ ಸರ್ವಾಭಿರ್ಧೇನಾಭಿಃ ಸ್ತುತಿವಾಗ್ಭಿರ್ವಿಶ್ವಾಭಿರ್ಧೀಭಿಃ ಸರ್ವೈಃ ಕರ್ಮಭಿಶ್ಚೇಹಾಸ್ಮಿನ್ಯಾಗೇ ಮಾದಯಸ್ವ । ತೃಪ್ಯಸ್ವ ॥ ಮದ ತೃಪ್ತಿಯೋಗೇ । ಆತ್ಮನೇಪದಂ ॥

|| ಪ್ರತಿಪದಾರ್ಥ ||

ಹರ್ಯಶ್ವ—ಹರಿಸಂಜ್ಞಕವಾದ ಅಶ್ವವುಳ್ಳ । ಇಂದ್ರ—ಎಲೈ ಇಂದ್ರನೇ । ವೃಷ್ಣೇ—ಇಷ್ಟಾರ್ಥಪ್ರದನಾದ । ತುಭ್ಯಂ—ನಿನ್ನನ್ನುದ್ದೇಶಿಸಿ । ಉಗ್ರಾಂ—ಶಕ್ತಿಯುತವೂ । ಸತ್ಯಾಂ—ಉತ್ತಮವೂ ಆದ । ಸುತಸ್ಯ—ಹಿಂಡಲ್ಪಟ್ಟ ಸೋಮದ । ಪೀತಿಂ—ಪಾನವನ್ನು । ಪ್ರಯ್ಯೈ—ನಿನ್ನ ಆಗಮನಕ್ಕಾಗಿ । ಪ್ರ ಇಯರ್ಮಿ—ಅರ್ಪಿಸುತ್ತೇನೆ । ಶಚ್ಯಾ—ಕರ್ಮಯುಕ್ತನೂ । ಗೃಣಾನಃ—ನಮ್ಮಿಂದ ಸ್ತುತಿಸಲ್ಪಡುವವನೂ ಆದ ನೀನು । ವಿಶ್ವಾಭಿಃ—ಸಮಸ್ತವಾದ । ಧೇನಾಭಿಃ—ಸ್ತುತಿಗಳಿಂದಲೂ । ಧೀಭಿಃ—ಕರ್ಮಗಳಿಂದಲೂ । ಇಹ—ಈ ಯಜ್ಞದಲ್ಲಿ । ಮಾದಯಸ್ವ—ತೃಪ್ತಿಯನ್ನು ಹೊಂದು.

|| ಭಾವಾರ್ಥ ||

ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, ಇಷ್ಟಾರ್ಥಪ್ರದನಾದ ನಿನ್ನನ್ನುದ್ದೇಶಿಸಿ ಶಕ್ತಿಯುತವೂ ಉತ್ತಮವೂ ಆದ ಸೋಮಪಾನವನ್ನು ನಿನ್ನ ಆಗಮನಕ್ಕಾಗಿ ಅರ್ಪಿಸುತ್ತೇನೆ. ಕರ್ಮಯುಕ್ತನೂ, ನಮ್ಮಿಂದ

ಸ್ತುತಿಸಲ್ಪಡುವವನೂ ಆದ ನೀನು ಸಮಸ್ತವಾದ ಸ್ತುತಿಗಳಿಂದಲೂ, ಕರ್ಮಗಳಿಂದಲೂ ಈ ಯಜ್ಞದಲ್ಲಿ ತೃಪ್ತಿಯನ್ನು ಹೊಂದು.

## English Translation.

Lord of bay steeds, showerer (of benifits), I send you strong good drink that you may proceed; Indra, who are glorified for your prowess, be exhilarated at this (ceremony) with praises, with all rites.

॥ ವಿಶೇಷವಿಷಯಗಳು ॥

ದ್ವಿತೀಯಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಪ್ರೋಗ್ರಾಂ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ–**ಅಶ್ವಾವತಿ ಪ್ರಥಮಃ ಪ್ರೋಗ್ರಾಂ ಪೀತಿಂ ವೃಷ್ಣ ಇಯರ್ಮಿ ಸತ್ಯಾಮಿತಿ ಯಾಜ್ಯಾ** ಎಂಬ ಸೂತ್ರದಿಂದ (ಆ-೬-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಊತೀ ಶಚೀವಸ್ತವ ವೀರ್ಯೇಣ ವಯೋ ದಧಾನಾ ಉಶಿಜ ಋತಜ್ಞಾಃ ।
ಪ್ರಜಾವದಿಂದ್ರ ಮನುಷೋ ದುರೋಣೇ ತಸ್ಥುರ್ಗೃಣಂತಃ ಸಧಮಾದ್ಯಾಸಃ ॥

॥ ಪದಪಾಠಃ ॥

ಊತೀ । ಶಚೀಽವಃ । ತವ । ವೀರ್ಯೇಣ । ವಯಃ । ದಧಾನಾಃ । ಉಶಿಜಃ । ಋತಽಜ್ಞಾಃ ।
ಪ್ರಜಾಽವತ್ । ಇಂದ್ರ । ಮನುಷಃ । ದುರೋಣೇ । ತಸ್ಥುಃ । ಗೃಣಂತಃ । ಸಧಽಮಾದ್ಯಾಸಃ ॥ ೪ ॥

॥ ಸಾಯಣಭಾಷ್ಯಂ ॥

ತೃತೀಯೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿನಃ ಶಸ್ತ್ರ ಊತೀ ಶಚೀವ ಇತ್ಯೇಷಾ ಯಾಜ್ಯಾ ಊತೀ ಶಚೀವಸ್ತವ ವೀರ್ಯೇಣೇತಿ ಯಾಜ್ಯಾ । ಅ. ೬-೪ । ಇತಿ ಸೂತ್ರಿತಂ ॥

ಹೇ ಶಚೀವಃ ಶಕ್ತಿವನ್ನಿಂದ್ರ ತವೋತ್ಯೋತ್ಯಾ ರಕ್ಷಣೇನ ತವ ವೀರ್ಯೇಣ ವಯೋಽನ್ನಂ ಪ್ರಜಾವತ್ಪ್ರಜೋಪೇತಂ ದಧಾನಾ ಧಾರಯಂತ ಉಶಿಜಸ್ತ್ವಾಮೇವ ಕಾಮಯಮಾನಾ ಋತಜ್ಞಾ ಋತಂ ಯಜ್ಞಮಹರ್ಜಾನಂತಃ । ಆಂಗಿರಸಃ ಸತ್ರಮನುತಿಷ್ಠಂತಃ ಷಷ್ಠೇಽಹನಿ ಪ್ರಯೋಗಮೂಢಾಃ ಸಂತೋ ನಾಭಾನೇದಿಷ್ಠೇನ ಪಾರಂಗತಾ ಯತಃ ಅತಸ್ತೇಷಾಮೃತಜ್ಞತ್ವಂ । ಈದೃಶೋಽಂಗಿರಸೋ ಮನುಷೋ

ಮನುಷ್ಯಸ್ಯ ಯಜಮಾನಸ್ಯ ದುರೋಣೇ ಯಜ್ಞಗೃಹೇ ಗೃಣಂತಸ್ತ್ವಾಂ ಸ್ತುವಂತಃ ಸಧಮಾದ್ಯಾಸಃ ಸಹ ಮಾದ್ಯಂತಸ್ತಸ್ಥುಃ । ತಿಷ್ಠಂತಿ ॥ ಮಾದಯತೇಃ ಕೃತ್ಯಲ್ಯುಟೋ ಬಹುಲಮಿತಿ ವಚನಾತ್ಕರ್ತರ್ಯಚೋ ಯದಿತಿ ಯತ್ । ಛಾಂದಸಃ ಸದಾದೇಶಃ ॥ ಅತೋ ವಯಮಪಿ ತಿಷ್ಠೇಮೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಶಚೀವಃ**— ಕರ್ಮವಂತನಾದ । **ಇಂದ್ರ**— ಎಲೈ ಇಂದ್ರನೇ । **ತವ**— ನಿನ್ನ । **ಊತೀ**— ರಕ್ಷಣೆಯಿಂದಲೂ । **ವೀರ್ಯೇಣ**— ವೀರ್ಯದಿಂದಲೂ । **ಪ್ರಜಾವತ್**— ಪುತ್ರಾದಿಯುಕ್ತವಾದ । **ವಯಃ**— ಅನ್ನವನ್ನು । **ದಧಾನಾಃ**— ಹೊಂದಿರುವವರೂ । **ಉಶಿಜಃ**— ನಿನ್ನನ್ನಪೇಕ್ಷಿಸುವವರೂ । **ಋತಜ್ಞಾಃ**— ಯಜ್ಞತತ್ತ್ವವನ್ನರಿತವರೂ । **ಮನುಷಃ**— ಯಜಮಾನನ । **ದುರೋಣೇ**— ಯಜ್ಞಗೃಹದಲ್ಲಿ । **ಗೃಣಂತಃ**— ಸ್ತುತಿಸುವವರೂ । **ಸಧಮಾದ್ಯಾಸಃ**— ಒಟ್ಟಿಗೆ ಸೇರಿ ಹರ್ಷವನ್ನನುಭವಿಸುವವರೂ ಆದ ಅಂಗಿರಸ್ಸುಗಳು । **ತಸ್ಥುಃ**— ನಿನ್ನನ್ನು ನಿರೀಕ್ಷಿಸುತ್ತಿದ್ದಾರೆ.

॥ ಭಾವಾರ್ಥ ॥

ಕರ್ಮವಂತನಾದ ಎಲೈ ಇಂದ್ರನೇ, ನಿನ್ನ ರಕ್ಷಣೆಯಿಂದಲೂ, ವೀರ್ಯದಿಂದಲೂ, ಪುತ್ರಾದಿಯುಕ್ತವಾದ ಅನ್ನವನ್ನು ಹೊಂದಿರುವವರೂ, ನಿನ್ನನ್ನಪೇಕ್ಷಿಸುವವರೂ, ಯಜ್ಞತತ್ತ್ವವನ್ನರಿತವರೂ, ಯಜಮಾನನ ಯಜ್ಞಗೃಹದಲ್ಲಿ ನಿನ್ನನ್ನು ಸ್ತುತಿಸುವವರೂ, ಒಟ್ಟಿಗೆ ಸೇರಿ ಹರ್ಷವನ್ನನುಭವಿಸುವವರೂ ಆದ ಅಂಗಿರಸ್ಸುಗಳು ನಿನ್ನನ್ನು ನಿರೀಕ್ಷಿಸುತ್ತಿದ್ದಾರೆ.

English Translation

Powerful Indra, they stood in the dwelling of the man (who instituted the rite), enjoing food together with offspring, through your protection and prowess, desiring you, knowing the ceremonies, glorifiying you and partaking of the exilaration.

॥ ವಿಶೇಷವಿಷಯಗಳು ॥

ತೃತೀಯಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಊತೀ ಶಚೀವಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಊತೀ ಶಚೀವಸ್ತವ ವೀರ್ಯೇಣೇತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಪ್ರಣೀತಿಭಿಷ್ಟೇ ಹರ್ಯಶ್ವ ಸುಷ್ಟೋಃ ಸುಷುಮ್ನಸ್ಯ ಪುರುರುಚೋ ಜನಾಸಃ।
ಮಂಹಿಷ್ಠಾಮೂತಿಂ ವಿತಿರೇ ದಧಾನಾಃ ಸ್ತೋತಾರ ಇಂದ್ರ ತವ ಸೂನೃತಾಭಿಃ ॥ ೫ ॥

॥ ಪದಪಾಠಃ ॥

ಪ್ರನೀತಿಽಭಿಃ । ತೇ । ಹರಿಽಅಶ್ವ । ಸುಽಸ್ತೋಃ । ಸುಽಸುಮ್ನಸ್ಯ । ಪುರುಽರುಚಃ । ಜನಾಸಃ ।

ಮಂಹಿಷ್ಠಾಂ । ಊತಿಂ । ವಿಽತಿರೇ । ದಧಾನಾಃ । ಸ್ತೋತಾರಃ । ಇಂದ್ರ । ತವ । ಸೂನೃತಾಭಿಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಹರ್ಯಶ್ವ ಹರಿತವರ್ಣಾಶ್ವೋಪೇತೇಂದ್ರ ಸುಷ್ಟೋಃ ಸುಷ್ಠು ಸ್ತೂಯಮಾನಸ್ಯ ಸುಷುಮ್ನಸ್ಯ ಸುಸುಖಸ್ಯ ಸುಧನಸ್ಯ ವಾ ಪುರುರುಚೋ ಬಹುದೀಪ್ತೇಸ್ತೇ ತವ ಪ್ರಣೀತಿಭಿಃ ಪ್ರಣಯನೈರ್ಧನಾದಿ-ಪ್ರದಾನೈರ್ಜನಾಸೋ ಜನಾಃ ಸ್ತೋತಾರಃ ಸೂನೃತಾಭಿಃ ಪ್ರಿಯಸತ್ಯಾತ್ಮಿಕಾಭಿರ್ವಾಗ್ಭಿಃ । ಏತತ್ಪ್ರಣೀತಿ-ಭಿರಿತ್ಯನೇನ ಸಮುಚ್ಚೀಯತೇ । ವಿತಿರೇಽನ್ಯೇಭ್ಯೋಽರ್ಥಿಭ್ಯೋ ವಿತರಣಾಯ ಮಂಹಿಷ್ಠಾಮತಿಶಯೇನ ಮಂಹನೀಯಾಂ ತವ ಸಂಬಂಧಿನೀಮೂತಿಂ ರಕ್ಷಾಂ ದಧಾನಾ ಆಸತ ಇತಿ ಶೇಷಃ ॥

॥ಪ್ರತಿಪದಾರ್ಥ॥

**ಹರ್ಯಶ್ವ**—ಹರಿತವರ್ಣದ ಅಶ್ವವುಳ್ಳ । **ಇಂದ್ರ**— ಎಲೈ ಇಂದ್ರನೇ । **ಸುಷ್ಟೋಃ**— ಉತ್ತಮವಾಗಿ ಸ್ತುತಿಸಲ್ಪಡುವವನೂ । **ಸುಷುಮ್ನಸ್ಯ**—ಉತ್ತಮವಾದ ಸುಖಪ್ರದನೂ । **ಪುರುರುಚಃ**—ಅಧಿಕವಾಗಿ ಪ್ರಕಾಶಿಸುವವನೂ ಆದ । **ತೇ**—ನಿನ್ನಿಂದ । **ಪ್ರಣೀತಿಭಿಃ** – ದತ್ತವಾದ ಧನಗಳಿಂದ । **ಸ್ತೋತಾರಃ**— ಸ್ತುತಿಕರ್ತರಾದ । **ಜನಾಸಃ**—ಜನರು । **ಸೂನೃತಾಭಿಃ**— ಶ್ರೇಷ್ಠವಾದ ಸ್ತುತಿಗಳಿಂದ । **ವಿತಿರೇ**— ಇತರರನ್ನು ಮೀರಿಸುವುದಕ್ಕಾಗಿ **ಮಂಹಿಷ್ಠಾಂ**—ಪೂಜ್ಯವಾದ । **ತವ ಊತಿಂ** – ನಿನ್ನ ರಕ್ಷಣೆಯನ್ನು । **ದಧಾನಾಃ**—ಹೊಂದಿದವರಾಗಿದ್ದಾರೆ.

॥ ಭಾವಾರ್ಥ ॥

ಹರಿತವರ್ಣದ ಅಶ್ವಗಳುಳ್ಳ ಎಲೈ ಇಂದ್ರನೇ, ಉತ್ತಮವಾಗಿ ಸ್ತುತಿಸಲ್ಪಡುವವನೂ, ಸುಖಪ್ರದನೂ ಅಧಿಕವಾಗಿ ಪ್ರಕಾಶಿಸುವವನೂ ಆದ ನಿನ್ನಿಂದ ದತ್ತವಾದ ಧನಗಳಿಂದ ಸ್ತುತಿಕರ್ತರಾದ ಜನರು ಶ್ರೇಷ್ಠವಾದ ತಮ್ಮ ಸ್ತುತಿಗಳಿಂದ ಇತರರನ್ನು ಮೀರಿಸಿರುವದಕ್ಕಾಗಿ ಪೂಜ್ಯವಾದ ನಿನ್ನ ರಕ್ಷಣೆಯನ್ನೂ ಹೊಂದಿದವರಾಗಿದ್ದಾರೆ.

## English Translation

Lord of bay horses, by the right guidance of you who are deservedly praised, the bestower of happiness, the illustrious, the men your praisers, O Indra, have acquired your most gracious assistance for excelling (other suppliants) through your favours.

|| ಸಂಹಿತಾಪಾಠಃ ||

ಉಪ ಬ್ರಹ್ಮಾಣಿ ಹರಿವೋ ಹರಿಭ್ಯಾಂ ಸೋಮಸ್ಯ ಯಾಹಿ ಪೀತಯೇ ಸುತಸ್ಯ ।

ಇಂದ್ರತ್ವಾ ಯಜ್ಞಃ ಕ್ಷಮಮಾಣಮಾನಡ್ ದಾಶ್ವಾ ಅಸ್ಯಧ್ವರಸ್ಯ ಪ್ರಕೇತಃ ||

|| ಪದಪಾಠಃ ||

ಉಪ । ಬ್ರಹ್ಮಾಣಿ । ಹರಿಽವಃ । ಹರಿಽಭ್ಯಾಂ । ಸೋಮಸ್ಯ । ಯಾಹಿ । ಪೀತಯೇ । ಸುತಸ್ಯ ।

ಇಂದ್ರ । ತ್ವಾ । ಯಜ್ಞಃ । ಕ್ಷಮಮಾಣಂ । ಆನಟ್ । ದಾಶ್ವಾನ್ । ಅಸಿ । ಅಧ್ವರಸ್ಯ । ಪ್ರಽಕೇತಃ || ೬ ||

|| ಸಾಯಣಭಾಷ್ಯಂ ||

ಹೇ ಹರಿವೋ ಹರಿವನ್ನಿಂದ್ರ ಸುತಸ್ಯಾಭಿಷುತಸ್ಯ ಸೋಮಸ್ಯ ಪೀತಯೇ :ಪಾನಾಯ ಬ್ರಹ್ಮಾಣಿ ಪರಿವೃಢಾನ್ಯಸ್ಮದೀಯಾನಿ ಕರ್ಮಾಣಿ ಸ್ತೋತ್ರಾಣಿ ವೋಪ ಯಾಹಿ । ಉಪಾಗಚ್ಛ । ಕೇನ ಸಾಧನೇನೇತಿ ತದುಚ್ಯತೇ । ಹರಿಭ್ಯಾಮಶ್ವಾಭ್ಯಾಂ । ತಾಭ್ಯಾಂ ಯುಕ್ತೇನ ರಥೇನೇತ್ಯರ್ಥಃ । ಯದ್ವಾ । ಹರಿಭ್ಯಾಂ ಹರಿವ ಇತಿ ಸಂಬಂಧನೀಯಂ । ಹೇ ಇಂದ್ರ ಕ್ಷಮಮಾಣಂ ತ್ವಾ ತ್ವಾಂ ಯಜ್ಞಃ ಸೋಮಯಾಗ ಆನಟ್। ವ್ಯಾಪ್ನೋತಿ || ನಶತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಛಂದಸ್ಯಪಿ ದೃಶ್ಯತ ಇತ್ಯಾಡಾಗಮಃ । ಅಶ್ನೋತೇರೇವ ವಾ ಲಿಟಿ ಚ್ಛಾಂದಸಸ್ತುತ್ಪ್ರತ್ಯಯಸ್ಯ ಲೋಪಃ । ಅಶ್ನೋತೇಶ್ಚೇತಿ ನುಡಾಗಮಃ || ಅಧ್ವರಸ್ಯ ಯಾಗಸ್ಯ ಪ್ರಕೇತಃ ಪ್ರಕರ್ಷೇಣ ಜಾನಂಸ್ತ್ವಂ ದಾಶ್ವಾನಸಿ । ದಾತಾಸಿ ಕರ್ಮಫಲಸ್ಯ ||

|| ಪ್ರತಿಪದಾರ್ಥ ||

**ಹರಿವಃ**—ಹರಿವಂತನಾದ ಎಲೈ ಇಂದ್ರನೇ । **ಸುತಸ್ಯ**—ಹಿಂಡಿರುವ । **ಸೋಮಸ್ಯ**—ಸೋಮದ । **ಪೀತಯೇ**—ಪಾನಾರ್ಥವಾಗಿ । **ಹರಿಭ್ಯಾಂ**—ನಿನ್ನ ಅಶ್ವಗಳೊಡನೆ । **ಬ್ರಹ್ಮಾಣಿ**—ವಿಸ್ತೃತವಾದ ಸ್ತುತಿಗಭಿಮುಖವಾಗಿ । **ಉಪ ಯಾಹಿ**—ದಯಮಾಡು । **ಇಂದ್ರ**—ಎಲೈ ಇಂದ್ರನೇ । **ಕ್ಷಮಮಾಣಂ**—ಸಹನಶೀಲನಾದ । **ತ್ವಾ**—ನಿನ್ನನ್ನು । **ಯಜ್ಞಃ**—ಸೋಮಯಾಗವು । **ಆನಟ್**—ಸವಿಾಪಿಸುತ್ತದೆ । **ಅಧ್ವರಸ್ಯ**—ಯಾಗದ ಸ್ವರೂಪವನ್ನು । **ಪ್ರಕೇತಃ**—ಅರಿತ ನೀನು । **ದಾಶ್ವಾನ್ ಅಸಿ**—ಕರ್ಮಫಲವನ್ನು ಕೊಡುವವನಾಗಿದ್ದೀಯೆ.

|| ಭಾವಾರ್ಥ ||

ಹರಿವಂತನಾದ ಎಲೈ ಇಂದ್ರನೇ, ಹಿಂಡಿರುವ ಸೋಮದ ಪಾನಾರ್ಥವಾಗಿ ನಿನ್ನ ಅಶ್ವಗಳೊಡನೆ ವಿಸ್ತೃತವಾದ ಸ್ತುತಿಗಭಿಮುಖವಾಗಿ ದಯಮಾಡು. ಎಲೈ ಇಂದ್ರನೇ, ಸಹನಶೀಲನಾದ ನಿನ್ನನ್ನು ಸೋಮಯಾಗವು ಸವಿಾಪಿಸುತ್ತದೆ ಯಾಗದ ಸ್ವರೂಪವನ್ನರಿತ ನೀನು ಕರ್ಮಫಲವನ್ನು ಕೊಡುವವನಾಗಿದ್ದೀಯೆ.

## English Translation.

Lord of bay horses, come with your two bays to our adorations to drink of the effused Soma-juice ; the sacrifice Indra, reaches to you who are enduring ; cognizant of the sacrifice, thou are the donor of the reward.

|| ಸಂಹಿತಾಪಾಠಃ ||

ಸಹಸ್ರವಾಜಮಭಿಮಾತಿಷಾಹಂ ಸುತೇರಣಂ ಮಘವಾನಂ ಸುವೃಕ್ತಿಂ |
ಉಪ ಭೂಷಂತಿ ಗಿರೋ ಅಪ್ರತೀತಮಿಂದ್ರಂ ನಮಸ್ಯಾ ಜರಿತುಃ ಪನಂತ||೭||

|| ಪದಪಾಠಃ ||

ಸಹಸ್ರಽವಾಜಂ | ಅಭಿಮಾತಿಽಸಹಂ | ಸುತೇಽರಣಂ | ಮಘಽವಾನಂ | ಸುಽವೃಕ್ತಿಂ |
ಉಪ | ಭೂಷಂತಿ | ಗಿರಃ | ಅಪ್ರತಿಽಇತಂ | ಇಂದ್ರಂ | ನಮಸ್ಯಾಃ | ಜರಿತುಃ | ಪನಂತ || ೭ ||

|| ಸಾಯಣಭಾಷ್ಯಂ ||

ಸಹಸ್ರವಾಜಮಪರಿಮಿತಾನ್ನಮಪರಿಮಿತಬಲಂ ವಾಭಿಮಾತಿಷಾಹಮಭಿಮಾತೀನಾಂ ಸರ್ವತೋ ಹಿಂಸಕಾನಾಂ ಶತ್ರೂಣಾಮಭಿಭವಿತಾರಂ ಸುತೇರಣಮಭಿಷುತೇ ಸೋಮೇ ರಮಮಾಣಂ ಮಘವಾನಂ ಧನವಂತಂ ಸುವೃಕ್ತಿಂ ಶೋಭನಸ್ತುತಿಕಮಪ್ರತೀತಂ ಯುದ್ಧೇಽನ್ಯೈರಪ್ರತಿಗತಮಿಂದ್ರಂ ಗಿರಃ ಸ್ತುತಿರೂಪಾ ವಾಚ ಉಪ ಭೂಷಂತಿ | ಅಲಂಕುರ್ವಂತಿ | ತದೇವಾಹ | ಜರಿತುಃ ಸ್ತೋತುರ್ನಮಸ್ಯಾಃ ಸ್ತುತಯಃ ಪನಂತ | ಸ್ತುವಂತಿ ||

|| ಪ್ರತಿಪದಾರ್ಥ ||

**ಸಹಸ್ರವಾಜಂ**—ಅಪರಿಮಿತವಾದ ಶಕ್ತಿಯುಳ್ಳವನೂ | **ಅಭಿಮಾತಿಷಾಹಂ**—ಹಿಂಸಕರಾದ ಶತ್ರುಗಳನ್ನು ನಾಶಪಡಿಸುವವನೂ | **ಸುತೇರಣಂ**—ಹಿಂಡಿರುವ ಸೋಮದಲ್ಲಿ ತೃಪ್ತಿಯನ್ನು ಹೊಂದುವವನೂ | **ಮಘವಾನಂ**—ಧನವಂತನೂ | **ಸುವೃಕ್ತಿಂ**—ಉತ್ತಮವಾದ ಸ್ತುತಿಯುಕ್ತನೂ | **ಅಪ್ರತೀತಂ**—ಯುದ್ಧದಲ್ಲಿ ಅಪ್ರತಿಹತನೂ ಆದ | **ಇಂದ್ರಂ**—ಇಂದ್ರನನ್ನು | **ಗಿರಃ**—ಸ್ತುತಿರೂಪವಾದ ವಾಕ್ಕುಗಳು | **ಉಪಭೂಷಂತಿ**—ಅಲಂಕರಿಸುತ್ತವೆ | **ಜರಿತುಃ**—ಸ್ತುತಿಕರ್ತನ | **ನಮಸ್ಯಾಃ**—ಸ್ತುತಿಗಳು | **ಪನಂತ**—ಇಂದ್ರನನ್ನು ಪ್ರಶಂಸಿಸುತ್ತವೆ.

॥ ಭಾವಾರ್ಥ ॥

ಅಪರಿಮಿತವಾದ ಶಕ್ತಿಯುಳ್ಳವನೂ, ಹಿಂಸಕರಾದ ಶತ್ರುಗಳನ್ನು ನಾಶಪಡಿಸುವವನೂ, ಹಿಂಡಿರುವ ಸೋಮದಲ್ಲಿ ತೃಪ್ತಿಯನ್ನು ಹೊಂದುವವನೂ, ಧನವಂತನೂ, ಉತ್ತಮವಾದ ಸ್ತುತಿಯುಕ್ತನೂ, ಯುದ್ಧದಲ್ಲಿ ಅಪ್ರತಿಹತನೂ ಆದ ಇಂದ್ರನನ್ನು ಸ್ತುತಿರೂಪವಾದ ವಾಕ್ಯಗಳು ಅಲಂಕರಿಸುತ್ತವೆ. ಸ್ತುತಿಕರ್ತನ ಸ್ತುತಿಗಳು ಇಂದ್ರನನ್ನು ಪ್ರಶಂಸಿಸುತ್ತವೆ.

## English Translation.

Our praises celebrate the irresistible Indra, the dispenser of abundant food, overcomer of enemies, the delighter in the libation, the possessor of opulence, the well-praised; the adorations of the worshipper glorify (him).

॥ ಸಂಹಿತಾಪಾಠಃ ॥

ಸಪ್ತಾಪೋ ದೇವೀಃ ಸುರಣಾ ಅಮೃಕ್ತಾ ಯಾಭಿಃ ಸಿಂಧುಮತರ ಇಂದ್ರ ಪೂರ್ಭಿತ್ ।
ನವತಿಂ ಸ್ರೋತ್ಯಾ ನವ ಚ ಸ್ರವಂತೀರ್ದೇವೇಭ್ಯೋ ಗಾತುಂ ಮನುಷೇ ಚ ವಿಂದಃ ॥ ೮ ॥

॥ ಪದಪಾಠಃ ॥

ಸಪ್ತ । ಆಪಃ । ದೇವೀಃ । ಸುಽರಣಾಃ । ಅಮೃಕ್ತಾಃ । ಯಾಭಿಃ । ಸಿಂಧುಂ । ಅತರಃ । ಇಂದ್ರ । ಪೂಃಽಭಿತ್ ।
ನವತಿಂ । ಸ್ರೋತ್ಯಾಃ । ನವ । ಚ । ಸ್ರವಂತೀಃ । ದೇವೇಭ್ಯಃ । ಗಾತುಂ । ಮನುಷೇ । ಚ । ವಿಂದಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವದಾಜ್ಞಯಾ ಸಪ್ತೈತತ್ಸಂಖ್ಯಾಕಾ ಆಪೋಽಬ್ರೂಪಾ ದೇವೀರ್ದೇವ್ಯೋ ಗಂಗಾದ್ಯಾಃ ಸುರಣಾಃ ಸುಷ್ಠು ರಮಮಾಣಾಃ ಶೋಭನಶಬ್ದಾ ವಾ ॥ ರಣಿಃ ಶಬ್ದಾರ್ಥಃ । ವಶಿರಣ್ಯೋರುಪಸಂಖ್ಯಾನಂ । ಪಾ. ೩-೩-೫೮-೩ । ಇತಿ ಭಾವೇಽಪ್ । ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ ॥ ಅಮೃಕ್ತಾ ಅಹಿಂಸಿತಾಃ ಪ್ರವಹಂತೀತಿ ಶೇಷಃ । ಹೇ ಇಂದ್ರ ಪೂರ್ಭಿತ್ ಪುರಾಂ ಭೇತ್ತಾ ತ್ವಂ ಯಾಭಿರ್ಗಂಗಾದಿಭಿಃ ಸಪ್ತನದೀಭಿಃ ಸಿಂಧುಂ ಸಮುದ್ರಮತರಃ । ಪ್ರಾವರ್ಧಯ ಇತ್ಯರ್ಥಃ । ಯದ್ವಾ । ಸಪ್ತ ಸರ್ಪಣಸ್ವಭಾವಾ ಉಕ್ತಲಕ್ಷಣಾ ಆಪೋ ದೇವ್ಯಸ್ತ್ವಯಾ ಸೃಷ್ಟಾಃ

**ಪ್ರವಹಂತಿ ಯಾಭಿಃ ಸಿಂಧುಂ ನದೀಮತರಃ । ಕಿಂಚ ತ್ವಂ ನವತಿಂ ನವ ಚ ನವೋತ್ತರನವತಿಸಂಖ್ಯಾಕಾಃ ಸ್ರವಂತೀಃ ಪ್ರವಹಂತೀಃ ಸ್ರೋತ್ಯಾಃ । ನದೀನಾಮೈತತ್ । ನದೀರ್ದೇವೇಭ್ಯೋ ಹವಿರರ್ಥಂ ಮನುಷೇ ಮನುಷ್ಯಾಯ ಭೋಗಾರ್ಥಂ ಚ ಗಾತುಂ ಗಂತವ್ಯಂ ತಾಸಾಂ ಮಾರ್ಗಂ ಚ ವಿಂದಃ । ಅಲಭಥಾಃ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೆ । **ಪೂರ್ಭಿತ್**—ಶತ್ರುಪಟ್ಟಣಗಳನ್ನು ಸೀಳುವ ನೀನು । **ಯಾಭಿಃ**—ಯಾವ ಗಂಗಾದಿ ನದಿಗಳಿಂದ । **ಸಿಂಧುಂ**—ಸಮುದ್ರವನ್ನು । **ಅತರಃ**—ವಿಸ್ತೃತವನ್ನಾಗಿ ಮಾಡಿದೆಯೋ ಅಂತಹ । **ದೇವೀಃ**—ದೇವಾತಾತ್ಮವೂ । **ಸುರಣಾಃ**—ಹರ್ಷಕಾರಕವಾದ ಶಬ್ದವುಳ್ಳವೂ ಆದ । **ಸಪ್ತ ಆಪಃ**—ಗಂಗಾದಿ ಸಪ್ತನದಿಗಳೂ । **ಅಮೃಕ್ತಾಃ**—ಅಹಿಂಸಿತಗಳಾಗಿ ಪ್ರವಹಿಸುತ್ತವೆ । (**ತ್ವಂ**—ನೀನು) । **ನವತಿಂ ನವ**—ತೊಂಭತ್ತೊಂದು ಸಂಖ್ಯೆಯುಳ್ಳವೂ । **ಸ್ರವಂತೀಃ**—ಪ್ರವಹಿಸುವುವೂ ಆದ । **ಸ್ರೋತ್ಯಾಃ**—ನದಿಗಳ । **ಗಾತುಂ**—ಮಾರ್ಗವನ್ನು । **ದೇವೇಭ್ಯಃ**—ದೇವತೆಗಳಿಗಾಗಿಯೂ । **ಮನುಷೇ**-ಮಾನವರಿಗಾಗಿಯೂ । **ವಿಂದಃ**—ಅರಿತಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಶತ್ರುಪಟ್ಟಣಗಳನ್ನು ಸೀಳುವ ನೀನು ಯಾವ ಗಂಗಾದಿನದಿಗಳಿಂದ ಸಮುದ್ರವನ್ನು ವಿಸ್ತೃತವನ್ನಾಗಿ ಮಾಡಿದೆಯೋ ಅಂತಹ ದೇವತಾತ್ಮವೂ, ಹರ್ಷಕಾರಕವಾದ ಶಬ್ದವುಳ್ಳವೂ ಆದ ಗಂಗಾದಿಸಪ್ತ ನದಿಗಳೂ ಅಹಿಂಸಿತಗಳಾಗಿ ಪ್ರವಹಿಸುತ್ತವೆ. ತೊಂಭತ್ತೊಂಭತ್ತು ನದಿಗಳ ಮಾರ್ಗಗಳನ್ನು ನೀನು ದೇವತೆಗಳಿಗಾಗಿಯೂ ಮಾನವರಿಗಾಗಿಯೂ ಅರಿತಿರುವೆ

## English Translation.

The seven divine meandering rivers with which you, Indra, the destroyer of cities, replenished the ocean, flow unimpeded; you discovered the nine-and-ninety flowing rivers (and their) path for gods and men.

॥ ಸಂಹಿತಾಪಾಠಃ ॥

ಅಪೋ ಮಹೀರಭಿಶಸ್ತೇರಮುಂಚೋಽಜಾಗರಾಸ್ವಧಿ ದೇವ ಏಕಃ ।
ಇಂದ್ರ ಯಾಸ್ತ್ವಂ ವೃತ್ರತೂರ್ಯೇ ಚಕರ್ಥ ತಾಭಿರ್ವಿಶ್ವಾಯುಸ್ತನ್ವಂ ಪುಪುಷ್ಯಾಃ ॥ ೯ ॥

|| ಪದಪಾಠಃ ||

ಅಪಃ । ಮಹೀಃ । ಅಭಿऽಶಸ್ತೇಃ । ಅಮುಂಚಃ । ಅಜಾಗಃ । ಆಸು । ಅಧಿ । ದೇವಃ । ಏಕಃ ।

ಇಂದ್ರ । ಯಾಃ । ತ್ವಂ । ವೃತ್ರऽತೂರ್ಯೇ । ಚಕರ್ಥ । ತಾಭಿಃ । ವಿಶ್ವऽಆಯುಃ । ತನ್ವಂ । ಪುಪುಷ್ಯಾಃ ||

|| ಸಾಯಣಭಾಷ್ಯಂ ||

ಹೇ ಇಂದ್ರ ಮಹೀರ್ಮಹತೀರಪ ಉದಕಾನ್ಯಭಿಶಸ್ತೇರಭಿಶಂಸಕಾದ್ವೃತ್ರಾದಮುಂಚಃ । ಆಸು ಮುಕ್ತಾಸ್ವಪ್ಸು ದೇವಸ್ತ್ವಮೇಕ ಏಕ ಏವಾಸಹಾಯಃ ಸನ್ನಧ್ಯಜಾಗಃ । ಅಪ್ರಮತ್ತೋ ಭವಸಿ । ಯದ್ವಾ । ಅಧೀತಿ ಸಪ್ತಮ್ಯರ್ಥಾನುವಾದೀ । ಹೇ ಇಂದ್ರ ತ್ವಂ ಯಾ ಅಪೋ ವೃತ್ರತೂರ್ಯೇ ವೃತ್ರಹತ್ಯಾಯಾಂ ಚಕರ್ಥ ಕರೋಷಿ ತಾಭಿರದ್ಭಿರ್ವಿಶ್ವಾಭಿಃ ಸರ್ವಾಭಿಸ್ತ್ವಂ ತನುಂ ಸ್ವಕೀಯಂ ಶರೀರಂ ಪುಪುಷ್ಯಾಃ । ಪೋಷಯೇಃ ॥ ಪುಷ ಪುಷ್ಟಾವಿತ್ಯಸ್ಯ ವ್ಯತ್ಯಯೇನ ಶ್ಲುಃ ॥

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ । ಮಹೀಃ—ಮಹತ್ಸ್ವರೂಪವುಳ್ಳ । ಅಪಃ—ಉದಕಗಳನ್ನು । ಅಭಿ-ಶಸ್ತೇಃ—ದುಷ್ಟನಾದ ಅಸುರನ ಹಿಡಿತದಿಂದ । ಅಮುಂಚಃ—ಬಿಡಿಸಿದೆ । ಆಸು—ವಿಮುಕ್ತವಾದ ಈ ಉದಕಗಳ ವಿಷಯದಲ್ಲಿ । ದೇವಃ—ಪೂಜ್ಯನಾದ ನೀನು । ಏಕಃ—ಅಸಹಾಯನಾಗಿ (ಅದ್ವಿತೀಯನಾಗಿ) । ಅಧಿ ಅಜಾಗಃ—ಎಚ್ಚರವುಳ್ಳವನಾಗಿದ್ದೀಯೆ । ತ್ವಂ—ನೀನು । ಯಾಃ—ಯಾವ ಉದಕಗಳನ್ನು । ವೃತ್ರತೂರ್ಯೇ—ವೃತ್ರನಾಶಕ್ಕಾಗಿ । ಚಕರ್ಥ—ಸಾಧನವನ್ನಾಗಿ ಮಾಡಿದೆಯೋ । ತಾಭಿಃ ವಿಶ್ವಾಭಿಃ—ಆ ಸಕಲವಾದ ಉದಕಗಳೊಡನೆಯೂ । ತನುಂ—ನಿನ್ನ ಶರೀರವನ್ನು । ಪುಪುಷ್ಯಾಃ—ಪ್ರವೃದ್ಧವಾಗುವಂತೆ ಮಾಡು.

|| ಭಾವಾರ್ಥ ||

ಎಲೈ ಇಂದ್ರನೇ, ಮಹತ್ಸ್ವರೂಪವುಳ್ಳ ಉದಕಗಳನ್ನು ದುಷ್ಟನಾದ ಅಸುರನ ಹಿಡಿತದಿಂದ ಬಿಡಿಸಿ ವಿಮುಕ್ತವಾದ ಈ ಉದಕಗಳ ವಿಷಯದಲ್ಲಿ ನೀನೊಬ್ಬನೇ ಮಾತ್ರ ಇತರರ ಸಹಾಯವೂ ಇಲ್ಲದೆ ಎಚ್ಚರವಾಗಿರುತ್ತೀಯೆ. ಯಾವ ಉದಕಗಳನ್ನು ನೀನು ವೃತ್ರನಾಶಕ್ಕಾಗಿ ಸಾಧನವನ್ನಾಗಿ ಮಾಡಿದೆಯೋ, ಆ ಸಕಲವಾದ ಉದಕಗಳೊಡನೆ ನಿನ್ನ ಶರೀರವನ್ನು ಪ್ರವೃದ್ಧವಾಗುವಂತೆ ಮಾಡು.

## English Translation

You released the great waters from the malingnant (obstructer), you were the only god who watched over them ; with those waters wich you have employed for the destruction of Vritra, may you, all vivifying Indra, cherish your own person.

॥ ಸಂಹಿತಾಪಾಠಃ ॥

ವೀರೇಣ್ಯಃ ಕ್ರತುರಿಂದ್ರಃ ಸುಶಸ್ತಿರುತಾಪಿ ಧೇನಾ ಪುರುಹೂತಮೀಟ್ಟೇ ।
ಆರ್ದಯದ್ವೃತ್ರಮಕೃಣೋದು ಲೋಕಂ ಸಸಾಹೇ ಶಕ್ರಃ ಪೃತನಾ ಅಭಿಷ್ಟಿಃ॥

॥ ಪದಪಾಠಃ ॥

ವೀರೇಣ್ಯಃ । ಕ್ರತುಃ । ಇಂದ್ರಃ । ಸುऽಶಸ್ತಿಃ । ಉತ । ಅಪಿ । ಧೇನಾ । ಪುರುऽಹೂತಂ । ಈಟ್ಟೇ ।
ಆರ್ದಯತ್ । ವೃತ್ರಂ । ಅಕೃಣೋತ್ । ಊಂ ಇತಿ । ಲೋಕಂ । ಸಸಹೇ । ಶಕ್ರಃ । ಪೃತನಾಃ ।
ಅಭಿಷ್ಟಿಃ ॥ ೧೦ ॥

॥ ಸಾಯಣಭಾಷ್ಯಂ ॥

ಇಂದ್ರೋ ವೀರೇಣ್ಯೋ ವೀರೈರ್ಗಂತವ್ಯೋऽತಿಶಯೇನ ವೀರೋ ವಾ ಕ್ರತುಃ ಕರ್ಮವಾನ್ ಸುಶಸ್ತಿಃ ಶೋಭನಸ್ತುತಿಕಃ । ಉತಾಪಿ ಚ । ಅಪೀತ್ಯನರ್ಥಕಃ । ಅಪಿ ಚ ಧೇನಾ । ವಾಗ್ನಾಮೈತತ್ । ಪ್ರೀಣಯಿತ್ರೀ ಸ್ತುತಿವಾಕ್ ಪುರುಹೂತಮಿಂದ್ರಮೀಟ್ಟೇ । ಸ್ತೌತಿ ಪೂಜಯತಿ ವಾ । ಯತ ಉಕ್ತಲಕ್ಷಣಃ ಅತಃ ಸ್ತೌತೀತ್ಯರ್ಥಃ। ಕಿಂಚಾಯಂ ವೃತ್ರಮಾವರಕಮೇತನ್ನಾಮಕಮಸುರಮಾರ್ದಯತ್ । ಹತವಾನಿತ್ಯರ್ಥಃ। ಉ ಅಪಿ ಚ ಲೋಕಂ। ಲೋಕ್ಯತ ಇತಿ ಲೋಕಃ ಪ್ರಕಾಶಃ। ತಮಕೃಣೋತ್ । ಅಕರೋತ್।। ಆವರಕಮಸುರಂ ಹತ್ವಾ ಪ್ರಕಾಶಂ ಕೃತವಾನಿತ್ಯರ್ಥಃ । ನ ಕೇವಲಂ ತಮೇಕಮೇವ ಅಪಿ ತು ಶಕ್ರ ಇಂದ್ರೋऽಭಿಷ್ಟಿಃ ಶತ್ರೂಣಾಮಭಿಗಂತಾ ಪೃತನಾಃ ಶತ್ರುಸೇನಾಃ ಸಸಾಹೇ । ಅಭ್ಯಭವತ್ ॥

॥ ಪ್ರತಿಪದಾರ್ಥ ॥

ಇಂದ್ರಃ— ಇಂದ್ರನು । ವೀರೇಣ್ಯಃ— ವೀರರಲ್ಲಿ ಅಗ್ರಗಣ್ಯನು । ಕ್ರತುಃ— ಅಸಾಧಾರಣವಾದ ಕರ್ಮವಂತನು । ಸುಶಸ್ತಿಃ— ಉತ್ತಮವಾದ ಸ್ತುತಿಯುಕ್ತನು । ಧೇನಾ — ಸ್ತುತಿಯು । ಪುರುಹೂತಂ— ಅನೇಕರ ಆಹ್ವಾನಕ್ಕೆ ಪಾತ್ರನಾದ ಇಂದ್ರನನ್ನು । ಈಟ್ಟೇ— ಸ್ತುತಿಸುತ್ತದೆ । ವೃತ್ರಂ— ವೃತ್ರನನ್ನು । ಆರ್ದಯತ್— ಇಂದ್ರನು ನಾಶಪಡಿಸಿದ್ದಾನೆ । ಲೋಕಂ— ಪ್ರಕಾಶವನ್ನು । ಅಕೃಣೋತ್— ಉಂಟುಮಾಡಿದ್ದಾನೆ । ಅಭಿಷ್ಟಿಃ —ಶತ್ರುಗಳನ್ನು ಎದುರಿಸುವವನೂ । ಶಕ್ರಃ— ಶಕ್ತನೂ ಆದ ಇಂದ್ರನು । ಪೃತನಾಃ— ಶತ್ರುಸೇನೆಗಳನ್ನು । ಸಸಾಹೇ— ಜಯಿಸಿದ್ದಾನೆ.

॥ ಭಾವಾರ್ಥ ॥

ಇಂದ್ರನು ವೀರರಲ್ಲೆಲ್ಲ ಅಗ್ರಗಣ್ಯನು. ಅಸಾಧಾರಣವಾದ ಕರ್ಮವಂತನು. ಉತ್ತಮವಾದ ಸ್ತುತಿಯುಕ್ತನು. ಅನೇಕರ ಆಹ್ವಾನಕ್ಕೆ ಪಾತ್ರನಾದ ಇಂದ್ರನನ್ನು ಸ್ತುತಿಯು ಪ್ರಶಂಸಿಸುತ್ತದೆ. ಇಂದ್ರನು ಪ್ರಕಾಶವನ್ನು ಉಂಟುಮಾಡಿದ್ದಾನೆ ಶತ್ರುಗಳನ್ನು ಎದುರಿಸುವವನೂ, ಶಕ್ತನೂ ಆದ ಇಂದ್ರನು ಶತ್ರುಸೇನೆಗಳನ್ನು ಜಯಿಸಿದ್ದಾನೆ.

## English Translation

Indra is the chief of heroes, the doer of great deeds, to whom praise is well offered; and the voice of praise lauds him the invoked of many. He slew Vritra, he created light; Shakra, the conqueror, has overcome (hostile) hosts.

|| ಸಂಹಿತಾಪಾಠಃ ||

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ ಧನಾ-
ನಾಂ ‖ ೧೧ ‖

‖ ಪದಪಾಠಃ ‖

ಶುನಂ । ಹುವೇಮ । ಮಘsವಾನಂ । ಇಂದ್ರಂ । ಅಸ್ಮಿನ್ । ಭರೇ । ನೃsತಮಂ । ವಾಜsಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್sಸು । ಘ್ನಂತಂ । ವೃತ್ರಾಣಿ । ಸಂsಜಿತಂ । ಧನಾನಾಂ‖೧೧‖

‖ ಸಾಯಣಭಾಷ್ಯಂ ‖

ಹೇ ಇಂದ್ರ ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋಽಯಂ ವಾಜಸಾತಿಃ। ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ । ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನ-ವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋಽತಿಶಯೇನ ನೇತಾ-ರಂ ತ್ವಾಂ ಹುವೇಮ । ಕುಶಿಕಾ ವಯಂ ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ ಕ್ರಿಯ-ಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ವೃತ್ರೋ-ಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮ್ಯಗ್ಜೇ-ತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ‖ ಶುನಂ । ಟುಓಶ್ವಿ ಗತಿವೃದ್ಧ್ಯೋರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾಭಾವಶ್ಛಾಂದಸಃ ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ ಕೃತೇ ಚ ಲಿಙ್ ರೂಪಂ । ನಿಘಾತಃ ।।ಭರೇ । ಭೃಞ್ ಭರಣೇ । ಘಃ । ವೃಷಾದಿತ್ವಾದಾದ್ಯುದಾತ್ತಃ । ವಾಜಸಾತೌ। ಷಣು ದಾನೇ । ಭಾವೇ ಕ್ತಿನ್ । ಜನಸನೇತ್ಯಾದಿನಾನುನಾಸಿಕಸ್ಯಾತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಸಮತ್ಸು । ಅದ ಭಕ್ಷಣೇ । ಸಂಪೂರ್ವಾತ್ ಕ್ವಿಪ್ । ಸಂಭಕ್ಷಯಂತಿ ಯೋದ್ಧೄಣಾಮಾಯೂಂಷೀತಿ ಸಮದಃ

**ಸಂಗ್ರಾಮಾಃ ಕೃದುತ್ತರಪದಸ್ವರಃ । ಘ್ನಂತಂ । ಹನ ಹಿಂಸಾಗತ್ಯೋರಿತ್ಯಸ್ಯ ಶತರಿ ಗಮಹನೇತ್ಯಾದಿನೋ-ಪಧಾಲೋಪಃ । ಹೋ ಹಂತೇರಿತಿ ಘತ್ವಂ ಸಂಜಿತಂ । ಜಿ ಜಯೇ । ಕ್ವಿಪ್ ॥**

॥ ಪ್ರತಿಪದಾರ್ಥ ॥

**ನೃತಮಂ**—ನೇತೃಗಳಲ್ಲಿ ಉತ್ತಮನೂ । **ಅಸ್ಮಿನ್ ಭರೇ**—ಈ ಯುದ್ಧದಲ್ಲಿ । **ಶುನಂ**—ಸುಖಕರನೂ । **ಮಘವಾನಂ**—ಧನವಂತನೂ । **ಶೃಣ್ವಂತಂ**--ನಮ್ಮ ಸ್ತುತಿಗಳನ್ನು ಕೇಳುವವನೂ । **ಉಗ್ರಂ—**ಅಧಿಕವಾದ ಶಕ್ತಿಯುಳ್ಳವನೂ । **ಸಮತ್ಸು**—ಯುದ್ಧಗಳಲ್ಲಿ । **ವೃತ್ರಾಣಿ**– ಶತ್ರುಗಳನ್ನು । **ಘ್ನಂತಂ**— ನಾಶಪಡಿಸುವವನೂ । **ಧನಾನಾಂ**—ಶತ್ರುಧನಗಳನ್ನು । **ಸಂಜಿತಂ**—ಜಯಿಸುವವನೂ ಆದ । **ಇಂದ್ರಂ**—ಇಂದ್ರನನ್ನು । **ವಾಜಸಾ-ತೌ**—ಅನ್ನಾರ್ಥವಾಗಿಯೂ । **ಊತಯೇ**—ರಕ್ಷಣಾರ್ಥವಾಗಿಯೂ । **ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ನೇತೃಗಳಲ್ಲಿ ಉತ್ತಮನೂ, ಈ ಯುದ್ಧದಲ್ಲಿ ಸುಖಕರನೂ, ಧನವಂತನೂ, ನಮ್ಮ ಸ್ತುತಿಗಳನ್ನು ಕೇಳುವವನೂ, ಅಧಿಕವಾದ ಶಕ್ತಿಯುಳ್ಳವನೂ, ಯುದ್ಧಗಳಲ್ಲಿ ಶತ್ರುಗಳನ್ನು ನಾಶಪಡಿಸುವವನೂ, ಶತ್ರುಧನಗಳನ್ನು ಜಯಿಸುವವನೂ ಆದ ಇಂದ್ರನನ್ನು ಅನ್ನಾರ್ಥವಾಗಿಯೂ, ರಕ್ಷಣಾರ್ಥವಾಗಿಯೂ ಪ್ರಾರ್ಥಿಸಿ ಕರೆಯುತ್ತೇವೆ.

English Translation.

We invoke for our protection the opulent Indra, distinguished in this combat; the leader in the food bestowing strife, hearing (our praises), terrible in battles, the destroyer of foes, the conqueror of wealth.

## ನೂರ ಐದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಕದೇತ್ಯೇಕಾದಶರ್ಚಂ ಷಷ್ಠಂ ಸೂಕ್ತಂ । ಐಂದ್ರಕುತ್ಸಪುತ್ರೋ ನಾಮ್ನಾ ದುರ್ಮಿತ್ರೋ ಗುಣತಃ ಸುಮಿತ್ರಃ ಯದ್ವಾ ನಾಮ್ನಾ ಸುಮಿತ್ರೋ ಗುಣತೋ ದುರ್ಮಿತ್ರ ಋಷಿಃ । ಹರೀ ಯಸ್ಯ ಸುಯುಜಾ ವಜ್ರಂ ಯಶ್ಚಕ್ರ ಇತಿ ದ್ವೇ ಪಿಪೀಲಿಕಮಧ್ಯೇ ಏಕಾದಶಷಟ್ಕೈಕಾದಶಕೇ ಉಷ್ಣಿಹೌ। ಅಂತ್ಯಾ ತ್ರಿಷ್ಟುಪ್ । ಆದ್ಯಾ ಗಾಯತ್ರೀ ವಾ । ಅಕ್ಷರವ್ಯೂಹೇನ ಪಕ್ಷಾಂತರ ಉಷ್ಣಿಕ್ । ಶಿಷ್ಟಾಭಿಃ ಸರ್ವಾಭಿಃ ಸಪ್ತೋಷ್ಣಿಹಃ । ತಥಾ ಚಾನುಕ್ರಾಂತಂ । ಕದಾ ಕೌತ್ಸೋ ದುರ್ಮಿತ್ರೋ ನಾಮ್ನಾ ಸುಮಿತ್ರೋ ಗುಣತಃ ಸುಮಿತ್ರೋ ವಾ ನಾಮ್ನಾ ದುರ್ಮಿತ್ರೋ ಗುಣತ ಔಷ್ಣಿಹಂ ಹರೀ ವಜ್ರಂ ಪಿಪೀಲಿಕಮಧ್ಯೇ ತ್ರಿಷ್ಟುಬಂತ್ಯಾದ್ಯಾ ಗಾಯತ್ರೀ ವೇತಿ ॥ ಗತೋ ವಿನಿಯೋಗಃ ॥**

**ಅನುವಾದವು**—**ಕದಾ** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕುತ್ಸಋಷಿಯ ಪುತ್ರನಾದ ದುರ್ಮಿತ್ರನೆಂಬುವನು ಅಥವಾ ಗುಣದ

ದೃಷ್ಟಿಯಿಂದ ಸುಮಿತ್ರನು ಋಷಿಯು; ಅಥವಾ ಇವನ ಹೆಸರು ಸುಮಿತ್ರನೆಂದಿರಬಹುದು ಗುಣದ ದೃಷ್ಟಿಯಿಂದ ನೋಡುವುದಾದರೆ ದುರ್ಮಿತ್ರನಾಗಿರಬಹುದು ಈ ಸೂಕ್ತದ **ಹರೀ ಯಸ್ಯ ಸುಯುಜಾ** ಎಂಬ ೨ನೇ ಋಕ್ಕೂ **ವಜ್ರಂ ಯಶ್ಚಕ್ರೇ** ಎಂಬ ೭ನೇ ಋಕ್ಕೂ ಪಿಪೀಲಿಕಮಧ್ಯಾ ಎಂಬ ಛಂದಸ್ಸಿನವು ಈ ಛಂದಸ್ಸಿನ ಋಕ್ಕಿನಲ್ಲಿ ಮೂರುಪಾದಗಳಿದ್ದು ಅವುಗಳಿಗೆ ಕ್ರಮವಾಗಿ ೧೧, ೬, ೧೧ ಅಕ್ಷರಗಳಿರುವವು, ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು; ಮೊದಲನೆಯ ಋಕ್ಕು ಗಾಯತ್ರೀಛಂದಸ್ಕವೂ ಆಗಬಹುದು. ಅಕ್ಷರಸಂಯೋಜನಕ್ರಮದಿಂದ ಉಷ್ಣಿಕ್‌ಛಂದಸ್ಕವೂ ಆಗಬಹುದು. ಉಳಿದ ಏಳು ಋಕ್ಕುಗಳು ಉಷ್ಣಿಕ್‌ಛಂದಸ್ಕವು ಅನುಕ್ರಮಣಿಕೆಯಲ್ಲಿ— **ಕದಾ ಕೌತ್ಸೋ ದುರ್ಮಿತ್ರೋ ನಾಮ್ನಾ ಸುಮಿತ್ರೋ ಗುಣತಃ ಸುಮಿತ್ರೋ ವಾ ನಾಮ್ನಾ ದುರ್ಮಿತ್ರೋ ಗುಣತ ಔಷ್ಣಿಹಂ ಹರೀ ವಜ್ರಂ ಪಿಪೀಲಿಕಮಧ್ಯೇ ತ್ರಿಷ್ಟುಬಂತ್ಯಾದ್ಯಾ ಗಾಯತ್ರೀ ವಾ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೫

ಮಂಡಲ—೧೦ || ಅನುವಾಕ—೯ || ಸೂಕ್ತ—೧೦೫ ||

ಅಷ್ಟಕ—೮ || ಅಧ್ಯಾಯ—೫ || ವರ್ಗ—೨೬, ೨೭ ||

ಸೂಕ್ತದಲ್ಲಿರುವ ಋಕ್ಸಂಖ್ಯೇ—೧೧ ||
ಋಷಿಃ—ಕೌತ್ಸೋ ದುರ್ಮಿತ್ರೋ ನಾಮ್ನಾ ದುರ್ಮಿತ್ರೋ ಗುಣತೋ ವಾ ನಾಮ್ನಾ ದುರ್ಮಿತ್ರೋ ಗುಣತಃ ||
ದೇವತಾ—ಇಂದ್ರಃ
ಛಂದಃ—೧. ಉಷ್ಣಿಗ್ಗಾಯತ್ರೀ ವಾ | ೨,೭. ಪಿಪೀಲಿಕಮಧ್ಯಾ | ೩-೬, ೮-೧೦. ಉಷ್ಣಿಕ್ | ೧೧. ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಕದಾ ವಸೋ ಸ್ತೋತ್ರಂ ಹರ್ಯತ ಆವ ಶ್ಮಶಾ ರುಧದ್ವಾಃ |

ದೀರ್ಘಂ ಸುತಂ ವಾತಾಪ್ಯಾಯ || ೧ ||

|| ಪದಪಾಠಃ ||

ಕದಾ | ವಸೋ ಇತಿ | ಸ್ತೋತ್ರಂ | ಹರ್ಯತೇ | ಆ | ಅವ | ಶ್ಮಶಾ | ರುಧತ್ | ವಾರಿತಿ ವಾಃ |

ದೀರ್ಘಂ | ಸುತಂ | ವಾತಾಪ್ಯಾಯ || ೧ ||

|| ಸಾಯಣಭಾಷ್ಯಂ ||

ಹೇ ವಸೋ ವಾಸಯಿತರಿಂದ್ರ ಸ್ತೋತ್ರಮಸ್ಮತ್ಕರ್ತೃಕಂ ಹರ್ಯತೇ ಕಾಮಯಮಾನಾಯ ಕಾಮಯಮಾನಂ ತ್ವಾಂ || ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ ||

ಕದಾ ಕಸ್ಮಿನ್ಕಾಲೇಽವ ರುಧತ್ । ಅವರೋತ್ಸ್ಯತಿ । ಅವರುಧ್ಯ ಚ ಕದಾ ವಾಃ । ವಾರಯಿಷ್ಯತಿ । ಕಾಧೃತಃ ಕಾಲಃ ಕದಾಸ್ಮಾಕಂ ಸಂಭವಿಷ್ಯತೀತ್ಯಾಶಾಸ್ತೇ ॥ ರುಧೇರ್ಲುಙ್ಯಿರಿತೋ ವೇತಿ ಚ್ಲೇರಙಾದೇಶಃ । ವಾರಿತಿ ವೃಣೋತೇರ್ಣ್ಯಂತಾಲ್ಲಙಿ ಚ್ಛಾಂದಸಃ ಶಪೋ ಲುಕ್ ॥ ಛಂದಸ್ಯುಭಯಥೇತಿ ತಿಪ ಆರ್ಧಧಾತುಕತ್ವಾಣ್ಣೇರನಿಟೀತಿ ಲೋಪೇ ಹಲ್ಙ್ಯಾಭ್ಯ ಇತಿ ತಿಲೋಪಃ । ತತ್ರ ವೃಷ್ಟ್ಯಾಂತಃ ॥ ಅಶ್ನುತೇ ಕ್ಷೇತ್ರಮಿತಿ ಕೃಶಾ ಕುಲ್ಯಾ । ಲುಪ್ತೋಪಮಮೇತತ್ । ಯಥಾ ಕುಲ್ಯೇತಸ್ತತ ಉದಕಾನ್ಯವರುಣದ್ಧಿ ಅವರುಧ್ಯ ಚ ವಾರಯತಿ ತಥೇತ್ಯರ್ಥಃ । ಕಿಮುದ್ದಿಶ್ಯಾವರೋಧ ಇತಿ ತತ್ರಾಹ । ದೀರ್ಘಂ ಸವನತ್ರಯರೂಪೇಣಾಯತಂ ಸುತಮಭಿಷುತಂ ಸೋಮಂ ಪ್ರತಿ । ಕಿಮರ್ಥಮಿತಿ ತದಾಹ । ವಾತಾಪ್ಯಾಯ । ವಾತೇನಾಪ್ಯತೇಽಧಸ್ತಾನ್ನಿಪಾತ್ಯತ ಇತಿ ವಾತಾಪ್ಯಮುದಕಂ । ತಸ್ಯ ಪ್ರದಾನಾಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಸೋ**—ವಸತಿದಾಯಕನಾದ ಎಲೈ ಇಂದ್ರನೇ । **ಸ್ತೋತ್ರಂ**—ನಮ್ಮಿಂದ ನಿರ್ಮಿತವಾದ ಸ್ತೋತ್ರವನ್ನು । **ಹರ್ಯತೇ**—ಅಪೇಕ್ಷಿಸುತ್ತಿರುವ ನಿನ್ನನ್ನು । **ದೀರ್ಘಂ**—ಸವನತ್ರಯಗಳಲ್ಲಿ ಸಿದ್ಧಪಡಿಸಿದ । **ಸುತಂ**—ಸೋಮರಸವನ್ನು ಪಾನಮಾಡುವುದಕ್ಕಾಗಿಯೂ । **ವಾತಾಪ್ಯಾಯ**—ವೃಷ್ಟಿಪ್ರದಾನಕ್ಕಾಗಿಯೂ । **ಕೃಶಾ**—ನದಿಯ ದಡಗಳು ನೀರನ್ನು ತಡೆದು ನಿಲ್ಲಿಸುವಂತೆ । **ಕದಾ**—ಯಾವಾಗ । **ಅವ ರುಧತ್**—ತಡೆದು ನಿಲ್ಲಿಸುತ್ತದೆ (ನಿಲ್ಲಿಸಿದ ಮೇಲೆ) । **ವಾಃ**—ಯಾವಾಗ ನಿವಾರಣೆ ಮಾಡುತ್ತದೆ ?

॥ ಭಾವಾರ್ಥ ॥

ವಸತಿದಾಯಕನಾದ ಎಲೈ ಇಂದ್ರನೇ, ನಮ್ಮಿಂದ ಅರ್ಪಿತವಾದ ಸ್ತೋತ್ರವನ್ನು ಅಪೇಕ್ಷಿಸುತ್ತಿರುವ ನಿನ್ನನ್ನು ಸವನತ್ರಯಗಳಲ್ಲಿ ಸಿದ್ಧಪಡಿಸಿದ ಸೋಮರಸವನ್ನು ಪಾನಮಾಡುವುದಕ್ಕಾಗಿಯೂ ನಮಗೆ ವೃಷ್ಟಿಪ್ರದಾನ ಮಾಡುವುದಕ್ಕಾಗಿಯೂ ನದಿಯ ದಡಗಳು ನೀರನ್ನು ತಡೆದು ನಿಲ್ಲಿಸುವಂತೆ ಯಾವಾಗ ನಿನ್ನನ್ನು ತಡೆದು ನಿಲ್ಲಿಸುತ್ತದೆ? ನಿಂತಮೇಲೆ ಯಾವಾಗ ನಿನ್ನನ್ನು ಬಿಡುಗಡೆ ಮಾಡುತ್ತದೆ ?

## English Translation

When, Vasu, (will our) praise (reach) you desiring it? (when) will he (like) a dam, obstruct and let those the long-protracted libation for the sake of wind-driven (rain) ?

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಸಾಯಣರು ವಿವರಿಸಿರುವ ಅರ್ಥವು ಸರಿಯಾಗಿ ಹೊಂದಿಕೊಳ್ಳುವುದಿಲ್ಲ. ಯಾಸ್ಕರು ಈ ಋಕ್ಕಿಗೆ ಹೇಳಿರುವ ನಿರುಕ್ತದ ವಿವರಣೆಯೇ ಹೆಚ್ಚು ಸಮಂಜಸವಾಗಿ ಕಂಡುಬರುವುದು—

ಕೃಶಾ । ಕೃಶಾ ಕು ಅಶ್ನುತೆ ಇತಿ ವಾ ಕ್ಶ್ಯಾಶ್ನುತ ಇತಿ ವಾ । ಅವ ಕೃಶಾ ರುಧದ್ವಾಃ । ಅವಾರುಧಚ್ಛೃಶಾ ವಾರಿತಿ ॥

(ನಿ ೫ ೧೬)

**ಶ್ಮಾಶಿನೀ** ಅಥವಾ **ಶ್ಮಾಶಿನೀ** ಎಂದರೆ ನದಿಯು. **ಶ್ಮಾಶಿನೀ** ಎಂದರೆ ಶು ಅಶಿನೀ ಶೀಘ್ರವಾಗಿ ಹರಿಯು ವುದರಿಂದ ನದಿಗೆ ಶ್ಮಾಶಿನೀ ಎಂಬ ಹೆಸರು ಅಥವಾ ಶ್ಮಾಶಿನೀ-ಶ್ಮಾ ಅಶಿನೀ (ತನ್ನ) ದಡವನ್ನು ಸ್ವಲ್ಪಸ್ವಲ್ಪವಾಗಿ ಕೊಚ್ಚುತ್ತಿರುವುದರಿಂದ ನದಿಗೆ ಶ್ಮಾಶಿನೀ ಎಂದೂ ಹೆಸರು. ಅದರಂತೆ ಇಲ್ಲಿ ಶ್ಮಶಾ ಎಂಬ ಶಬ್ದಕ್ಕೆ **ಶು ಅಶ್ನುತೆ ಇತಿ ವಾ** ವೇಗವಾಗಿ ಹರಿಯುತ್ತಿರುವ, ಅಥವಾ **ಶ್ಮಾಶ್ನುತೆ ಇತಿ ವಾ** ಶರೀರದಲ್ಲಿ ವ್ಯಾಪಿಸಿರುವ ನಾಡೀ ಎಂದರ್ಥವು ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು ಈ ಋಕ್ಕಿಗೆ ವಿವರಿಸಿರುವ ಅರ್ಥವು ಅರ್ಥವತ್ತಾಗಿಯೂ ಗ್ರಾಹ್ಯ ವಾಗಿಯೂ ಇರುವುದು:—

> **ಹೇ ವಸೋ ವಸುಮನ್ ಇಂದ್ರ । ಕದಾ ಕಸ್ಮಿನ್ಕಾಲೇ ಸ್ತೋತ್ರಂ ಏತನ್ಮಯೋದೀರಿತಂ ಅಸ್ಯ ಯಜಮಾನಸ್ಯ ಹರ್ಯತಃ ಕಾಮಯತಃ ಕಾಮಾನ್ ಪ್ರಾರ್ಥಯತಃ ತ್ವಾಂ ರುಧತ್ ಉಪ- ರೋತ್ಸ್ಯತಿ । ಶ್ಮಶಾ ಇವ ಕುಲ್ಯೇವೋದಕಂ ವಿಸರ್ಪಮಾಣಂ ನಾಡೀವ ವಾ ಅಥವಾ ಆಧ್ಯಾ- ತ್ಮಿಕೀ ನಾಡೀ ಶರೀರಾಶ್ರಿತಂ ರಸಂ । ಆಹ-ಕತಮತ್ ಸ್ತೋತ್ರಂ ? ಇತಿ । ಉಚ್ಯತೆ–ಯದೇ- ತತ್ ದೀರ್ಘಂ ಸುತಂ ಸೋಮಂ ಸತ್ರಾಖ್ಯಂ ಸುತಮಭಿಷುತಂ ಪ್ರವರ್ತತೇ ವಾತಾ- ಪ್ಯಾಯ ಉದಕಾರ್ಥಂ । ಏವಮೇತಸ್ಮಿನ್ ಶ್ಮಶಾ ಇತ್ಯೇತತ್ ನಾಡ್ಯಭಿಧಾನಂ ಕುಲ್ಯಾಭಿ- ಧಾನಂ ವಾಃ ಶಬ್ದೋಪಪತ್ತೇಶ್ಚ ಇತಿ ॥**
>
> (ನಿರುಕ್ತ-ದುರ್ಗವ್ಯಾಖ್ಯಾ-೫-೧೩)

ಈ ವ್ಯಾಖ್ಯಾನವನ್ನನುಸರಿಸಿ ಹೇಳುವ ಅರ್ಥವು ಈರೀತಿಯಾಗುತ್ತದೆ—

॥ ಪ್ರತಿಪದಾರ್ಥ ॥

**ವಸೋ** ಧನವಂತನಾದ ಎಲೈ ಇಂದ್ರನೇ, । **ಕದಾ**—ಯಾವಾಗ । **ಸ್ತೋತ್ರಂ**—ನಾನು ಅರ್ಪಿಸುವ ಸ್ತೋತ್ರವು । **ದೀರ್ಘಂ ಸುತಂ**—ದೀರ್ಘಕಾಲ ಆಚರಿಸಲ್ಪಡುವ ಸತ್ರಯಾಗಗಳಲ್ಲಿ ಹಿಂಡುವ ಸೋಮರಸವನ್ನು ಪಾನಮಾಡುವುದಕ್ಕಾಗಿಯೂ । **ವಾತಾಪ್ಯಾಯ**— ವೃಷ್ಟ್ಯರ್ಥವಾಗಿಯೂ । **ಹರ್ಯತಃ**— ಇಷ್ಟಾರ್ಥಗಳನ್ನು ಬಯಸುವ ಯಜಮಾನನ ಸಮೀಪಕ್ಕೆ ಹೋಗುವ ನಿನ್ನನ್ನು । **ವಾಃ**—ನದಿಯ ನೀರನ್ನು । **ಶ್ಮಶಾ**—ದಡಗಳು ತಡೆದು ನಿಲ್ಲಿಸುವಂತೆ [ಅಥವಾ । **ವಾಃ**—ದೇಹದಲ್ಲಿರುವ ರಸಗಳನ್ನು । **ಶ್ಮಶಾ**— ನಾಡಿಗಳು ತಡೆದು ನಿಲ್ಲಿಸುವಂತೆ] । (**ತ್ವಾಂ**—ನಿನ್ನನ್ನು) । ಆ **ಅವ ರುಧತ್**—ತಡೆದು ನಿಲ್ಲಿಸುವುದು ?

॥ ಭಾವಾರ್ಥ ॥

ಎಲೈ ಧನವಂತನಾದ ಇಂದ್ರನೇ, ಅನೇಕದಿನಗಳವರೆಗೆ ಆಚರಿಸಲ್ಪಡುವ ಸತ್ರಯಾಗಗಳಲ್ಲಿ ನಿನಗಾಗಿ ಹಿಂಡಿ ಸಿದ್ಧಪಡಿಸಲ್ಪಟ್ಟಿರುವ ಸೋಮರಸವನ್ನು ಪಾನಮಾಡುವುದಕ್ಕಾಗಿಯೂ, ವೃಷ್ಟ್ಯರ್ಥವಾಗಿಯೂ ಇಷ್ಟಾರ್ಥ- ಗಳನ್ನು ಬಯಸುವ ಯಜಮಾನರ ಬಳಿಗೆ ಹೋಗುತ್ತಿರುವ ನಿನ್ನನ್ನು ನಾನು ಅರ್ಪಿಸುವ ಸ್ತೋತ್ರವು, ನದಿಯ ದಡಗಳು ನದಿಯ ನೀರನ್ನು ತಡೆದು ನಿಲ್ಲಿಸುವಂತೆ ನಿನ್ನನ್ನು (ಬೇರೆ ಕಡೆಗೆ ಹೋಗದಂತೆ) ಯಾವಾಗ ತಡೆದು ನಿಲ್ಲಿಸುವುದು ?

|| ಸಂಹಿತಾಪಾಠಃ ||

ಹರೀ ಯಸ್ಯ ಸುಯುಜಾ ವಿವ್ರತಾ ವೇರರ್ವಂತಾನು ಶೇಪಾ ।
ಉಭಾ ರಜೀ ನ ಕೇಶಿನಾ ಪತಿರ್ದನ್ ॥ ೨ ॥

|| ಪದಪಾಠಃ ||

ಹರೀ ಇತಿ । ಯಸ್ಯ । ಸುऽಯುಜಾ । ವಿऽವ್ರತಾ । ವೇಃ । ಅರ್ವಂತಾ । ಅನು । ಶೇಪಾ ।

ಉಭಾ । ರಜೀ ಇತಿ । ನ । ಕೇಶಿನಾ । ಪತಿಃ । ದನ್ ॥ ೨ ॥

|| ಸಾಯಣಭಾಷ್ಯಂ ||

ಯಸ್ಯೇಂದ್ರಸ್ಯ ಹರೀ ಹರಿತವರ್ಣಾವಶ್ವೌ ಸುಯುಜಾ ಸುಷ್ಠು ನಿಯೋಜ್ಯೌ । ಸುಶಿಕ್ಷಿತಾವಿತ್ಯರ್ಥಃ । ವಿವ್ರತಾ । ವ್ರತಮಿತಿ ಕರ್ಮನಾಮ । ವಿಶಿಷ್ಟಕರ್ಮಾಣಾವರ್ವಂತಾವರಣಕುಶಲೌ ಶೇಪಾ ಶೇಪವಂತೌ । ಮತ್ವರ್ಥೋ ಲುಪ್ಯತೇ । ಪ್ರಶಸ್ತಪುಂಸ್ತ್ವಾವಿತ್ಯರ್ಥಃ । ಉಭೋಭೌ ರಜೀ ನ ರಜಸೀ ದ್ಯಾವಾಪೃಥಿವ್ಯಾವಿವ ಯದ್ವಾ ಮಹಾಂತೌ ರಂಜಕೌ ಸೂರ್ಯಾಚಂದ್ರಮಸಾವಿವ ಕೇಶಿನೌ ಪ್ರಕಾಶಮಾನೌ ಕೇಶವಂತೌ ವಾ ಈದೃಶಾವಶ್ವೌ ಹೇ ಇಂದ್ರ ಯಸ್ಯ ತೇ ತವ ಸ್ವಭೂತೌ ತಯೋಃ ಪತಿಃ ಸ್ವಾಮೀ ತ್ವಂ ದನ್ ಧನಾನಿ ಪ್ರಯಚ್ಛನ್ನನು ವೇಃ । ಸ್ತುತಶಸ್ತ್ರಾದೀನ್ಯನುಕಾಮಯಸ್ವ ॥ ದನ್ನಿತಿ ದದಾತೇಃ ಶತರಿ ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದಾತೋ ಲೋಪ ಇಟಿ ಚೇತ್ಯಾಕಾರಲೋಪಃ । ಅತ ಏವ ಶ್ಲ್ವಭಾವಶ್ಚ ॥

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ಯಸ್ಯ**—ಯಾವ ನಿನಗೆ । **ಸುಯುಜಾ**—ಉತ್ತಮವಾಗಿ ಶಿಕ್ಷಿತವಾದವೂ । **ವಿವ್ರತಾ**—ಉತ್ತಮವಾದ ಕರ್ಮವುಳ್ಳವೂ । **ಅರ್ವಂತಾ**—ಶೀಘ್ರಗಾಮಿಗಳೂ । **ಶೇಪಾ**—ವೀರ್ಯವುಳ್ಳವೂ । **ರಜೀ ನ**—ದ್ಯಾವಾಪೃಥಿವಿಗಳಂತೆ । **ಕೇಶಿನಾ**—ಪ್ರಕಾಶಮಾನವಾದವೂ ಆದ । **ಉಭಾ ಹರೀ**—ಹರಿತವರ್ಣವುಳ್ಳ ಎರಡು ಅಶ್ವಗಳೂ ವಾಹಕವಾಗಿವೆಯೋ ಅವುಗಳಿಗೆ । **ಪತಿಃ**—ಒಡೆಯನಾದ ನೀನು । **ದನ್**—ನಮಗೆ ಧನಗಳನ್ನು ಕೊಡುತ್ತ । **ಅನು ವೇಃ**—ನಮ್ಮ ಸ್ತುತ್ಯಾದಿಗಳನ್ನಪೇಕ್ಷಿಸು.

|| ಭಾವಾರ್ಥ ||

ಎಲೈ ಇಂದ್ರನೇ, ಯಾವ ನಿನಗೆ ಉತ್ತಮವಾಗಿ ಶಿಕ್ಷಿತವಾದವೂ, ಉತ್ತಮವಾದ ಕರ್ಮವುಳ್ಳವೂ, ಶೀಘ್ರಗಾಮಿಗಳೂ, ವೀರ್ಯವುಳ್ಳವೂ, ದ್ಯಾವಾಪೃಥಿವಿಗಳಂತೆ ಪ್ರಕಾಶಮಾನವೂ ಆದ ಹರಿತವರ್ಣವುಳ್ಳ ಎರಡು ಅಶ್ವಗಳೂ ವಾಹಕವಾಗಿವೆಯೋ, ಅವುಗಳಿಗೆ ಒಡೆಯನಾದ ನೀನು ನಮಗೆ ಧನಗಳನ್ನು ಕೊಡುತ್ತ ನಮ್ಮ ಸ್ತುತ್ಯಾದಿಗಳನ್ನಪೇಕ್ಷಿಸು.

English Translation

(O Indra), to whom belong the two bay horses, well-trained, active, swift, courageous, brilliant as the two worlds; you who are lord (of bay horses), bestowing (wealth upon us), desire (our praises).

॥ ಸಂಹಿತಾಪಾಠಃ ॥

ಅಪ ಯೋರಿಂದ್ರಃ ಪಾಪಜ ಆ ಮರ್ತೋ ನ ಶಶ್ರಮಾಣೋ ಬಿಭೀವಾನ್।
ಶುಭೇ ಯದ್ಯುಯುಜೇ ತವಿಷೀವಾನ್ ॥ ೩ ॥

॥ ಪದಪಾಠಃ ॥

ಅಪ । ಯೋಃ । ಇಂದ್ರಃ । ಪಾಪಜೇ । ಆ । ಮರ್ತಃ । ನ । ಶಶ್ರಮಾಣಃ । ಬಿಭೀವಾನ್ ।
ಶುಭೇ । ಯತ್ । ಯುಯುಜೇ । ತವಿಷೀऽವಾನ್ ॥ ೩ ॥

॥ ಸಾಯಣಭಾಷ್ಯಂ ॥

ಯ ಇಂದ್ರಃ ಪಾಪಜೇ । ಆ ಇತ್ಯನರ್ಥಕಃ । ಪಾಪಾಜ್ಜಾಯತ ಇತಿ ಪಾಪಜೋ ವೃತ್ರಃ । ತಸ್ಮಿನ್ಮರ್ತೋ ನ ಮನುಷ್ಯ ಇವ ಶಶ್ರಮಾಣಸ್ತೇನ ಸಹ ಯುದ್ಧೇ ಶ್ರಾಮ್ಯನ್ ಬಿಭೀವಾನ್ ಬಿಭ್ಯಚ್ಚ ಭವತಿ ॥ ಶ್ರಾಮ್ಯತೇಶ್ಛಂದಸಿ ಲಿಟ್ । ತಸ್ಯ ವ್ಯತ್ಯಯೇನ ಕಾನಚ್ ॥ ಸ ಇಂದ್ರೋ ಯದ್ಯದಾ ತವಿಷೀವಾನ್ ಮರುದ್ಭಿರ್ಬಲೈರ್ಬಲವಾನ್ಯುಯುಜೇ ಯುಜ್ಯತೇ ಸಂಪದ್ಯತೇ ಶುಭೇ ಶೋಭಾರ್ಥಂ ತದಾ ನೀಮಪಯೋಃ । ತಸ್ಯ ವೃತ್ರಸ್ಯಾಪಯೋರಪಯೋಜಿತಾ ಭವತಿ ॥

॥ ಪ್ರತಿಪದಾರ್ಥ ॥

**ಇಂದ್ರಃ** ಇಂದ್ರನು । **ಪಾಪಜೇ**—ಪಾಪದ ಫಲವಾಗಿ ಉತ್ಪನ್ನನಾದ ವೃತ್ರನೊಡನೆ । **ಶಶ್ರಮಾಣಃ**—ಯುದ್ಧದಲ್ಲಿ ಹೋರಾಡುತ್ತ । **ಮರ್ತೋ ನ** ಮಾನವನಂತೆ । **ಬಿಭೀವಾನ್**—ಭೀತನಾದನು । **ಯತ್**—ಯಾವಾಗ । **ತವಿಷೀವಾನ್**—ಮರುತ್ತುಗಳೊಡನೆ । **ಶುಭೇ**—ಶಕ್ತ್ಯರ್ಥವಾಗಿ (ಕಲ್ಯಾಣಕ್ಕಾಗಿ) । **ಯುಯುಜೇ**—ಸೇರಿಕೊಂಡು ಪ್ರಕಾಶಿಸಿದನೋ ಆಗ । **ಅಪ ಯೋಃ**—ವೃತ್ರನನ್ನು ಓಡಿಸಲು ಸಮರ್ಥನಾದನು ।

॥ ಭಾವಾರ್ಥ ॥

ಪಾಪದ ಫಲವಾಗಿ ಉತ್ಪನ್ನನಾದ ವೃತ್ರನೊಡನೆ ಯುದ್ಧದಲ್ಲಿ ಹೋರಾಡುವಾಗ ಇಂದ್ರನು ಮಾನವ

## English Translation.

Indra repelled (him), being like a mortal tired and affrighted in (the combat with) the offspring of iniquity (Vritra), when being associated with the forces (of the Maruts), he has beeu prepared for splender.

॥ ಸಂಹಿತಾಪಾಠಃ ॥

ಸಚಾಯೋರಿಂದ್ರಶ್ಚರ್ಕೃಷ ಆँ ಉಪಾನಸಃ ಸಪರ್ಯನ್ ।
ನದಯೋರ್ವಿವ್ರತಯೋಃ ಶೂರ ಇಂದ್ರಃ ॥ ೪ ॥

॥ ಪದಪಾಠಃ ॥

ಸಚಾ । ಆಯೋಃ । ಇಂದ್ರಃ । ಚರ್ಕೃಷೇ । ಆ । ಉಪಾನಸಃ । ಸಪರ್ಯನ್ ।
ನದಯೋಃ । ವಿऽವ್ರತಯೋಃ । ಶೂರಃ । ಇಂದ್ರಃ ॥ ೪ ॥

॥ ಸಾಯಣಭಾಷ್ಯಂ ॥

ಆಯೋಃ । ಮನುಷ್ಯನಾಮ್ಯೈತತ್ । ಮನುಷ್ಯಸ್ಯ ಸ್ತೋತುಶ್ಚರ್ಕೃಷೇ ಪುನಃಪುನರ್ವಿಲೇಖನಾಯ । ಧನಪ್ರದಾನಾಯೇತ್ಯರ್ಥಃ । ಸಚಾ ಸಹ ದಾತವ್ಯೈರ್ಧನೈಃ ಸಹಿತಃ । ಯದ್ವಾ । ಆಯೋಃ ಸಚಾ ಸಹಾಯಭೂತಃ । ಉಪಾನಸೋऽನ ಉಪಾಗತವಾನ್ ॥ ಅತ್ಯಾದಯಃ ಕ್ರಾಂತಾದ್ಯರ್ಥೇ ದ್ವಿತೀಯಯಾ । ಮ- ೨-೨-೧೮-೪ । ಇತಿ ಪ್ರಾದಿಸಮಾಸಃ । ಅನಸಂತಾನ್ನಪುಂಸಕಾತ್ । ಪಾ. ೫-೪-೧೦೩ । ಇತಿ ಸಮಾಸಾಂತಷ್ಟಚ್ ॥ ಆರೂಢರಥ ಇತ್ಯರ್ಥಃ । ಸಪರ್ಯನ್ ಧನೈಃ ಸ್ತೋತಾರಂ ಪೂಜಯನ್ । ಯದ್ವಾ । ವ್ಯತ್ಯಯೇನ ಕರ್ತೃಪ್ರತ್ಯಯಃ । ಸ್ತುತಿಭಿರ್ಹವಿರ್ಭಿಶ್ಚ ಪೂಜ್ಯಮಾನಃ । ಉಕ್ತಗುಣವಿಶಿಷ್ಟಃ ಸನ್ನಾ । ಆಗಚ್ಛತಿ । ಉಪಸರ್ಗಶ್ರುತೇರುಚಿತಕ್ರಿಯಾಧ್ಯಾಹಾರಃ । ಕೀದೃಶ ಇಂದ್ರಃ । ನದಯೋರ್ಹೇಷಾಶಬ್ದಂ ಕುರ್ವತೋರ್ವಿವ್ರತಯೋರ್ವಿಶಿಷ್ಟಕರ್ಮಣೋರಶ್ವಯೋರ್ನಿಯಂತಾ ಶೂರೋ ವಿಕ್ರಾಂತಃ ॥

॥ ಪ್ರತಿಪದಾರ್ಥ ॥

**ನದಯೋಃ**—ಹೇಷಾ (ಕೆನೆಯುವ) ಶಬ್ದವನ್ನು ಮಾಡುವುವೂ । **ವಿವ್ರತಯೋಃ**—ಉತ್ತಮವಾದ ಕರ್ಮವುಳ್ಳವೂ ಆದ ಅಶ್ವಗಳಿಗೆ ಒಡೆಯನೂ । **ಶೂರಃ**—ಪರಾಕ್ರಮಿಯೂ ಆದ । **ಇಂದ್ರಃ**—ಇಂದ್ರನು **ಸಪರ್ಯನ್**—ಸ್ತುತಿಗಳಿಂದ ಪೂಜಿಸಲ್ಪಡುತ್ತಲೂ । **ಉಪಾನಸಃ**—ರಥವನ್ನು ಹತ್ತಿದವನಾಗಿಯೂ । **ಆಯೋಃ**—ಮಾನವನಿಗೆ (ಯಜಮಾನನಿಗೆ) । **ಚರ್ಕೃಷೇ**—ಧನಪ್ರದಾನಕ್ಕಾಗಿ । **ಸಚಾ**—ಧನದೊಡನೆ । **ಆ**—ಬರುತ್ತಾನೆ

॥ ಭಾವಾರ್ಥ ॥

ಕೆನೆಯುವ ಶಬ್ದವನ್ನು ಮಾಡುವುವೂ, ಉತ್ತಮವಾದ ಕರ್ಮವುಳ್ಳವೂ, ಆದ ಅಶ್ವಗಳಿಗೆ ಒಡೆಯನೂ, ಪರಾಕ್ರಮಿಯೂ ಆದ ಇಂದ್ರನು, ಸ್ತುತಿಗಳಿಂದ ಪೂಜಿಸಲ್ಪಡುತ್ತಲೂ, ರಥವನ್ನು ಹತ್ತಿದವನಾಗಿಯೂ ಯಜಮಾನನಿಗೆ ಧನಪ್ರದಾನಕ್ಕಾಗಿ ಧನದೊಡನೆ ಬರುತ್ತಾನೆ.

## English Translation.

Indra, the friend of man, for his exhilaration, comes mounted in his chariot, granting him favour, the hero Indra, (the driver) of the two neighing and prancing (steeds).

॥ ಸಂಹಿತಾಪಾಠಃ ॥

ಅಧಿ ಯಸ್ತಸ್ಥೌ ಕೇಶವಂತಾ ವ್ಯಚಸ್ವಂತಾ ನ ಪುಷ್ಟ್ಯೈ ।
ವನೋತಿ ಶಿಪ್ರಾಭ್ಯಾಂ ಶಿಪ್ರಿಣೀವಾನ್ ॥ ೫ ॥

॥ ಪದಪಾಠಃ ॥

ಅಧಿ । ಯಃ । ತಸ್ಥೌ । ಕೇಶऽವಂತಾ । ವ್ಯಚಸ್ವಂತಾ । ನ । ಪುಷ್ಟ್ಯೈ ।
ವನೋತಿ । ಶಿಪ್ರಾಭ್ಯಾಂ । ಶಿಪ್ರಿಣೀऽವಾನ್ ॥ ೫ ॥

॥ ಸಾಯಣಭಾಷ್ಯಂ ॥

ಯ ಇಂದ್ರಃ ಕೇಶವಂತಾ ಕೇಶಿನೌ ವ್ಯಚಸ್ವಂತಾ ವ್ಯಚನವಂತೌ ವ್ಯಾಪ್ತಿಮಂತೌ । ನೇತ್ಯೇನರ್ಥಕೋ ನಿಪಾತಃ । ಈದೃಶಾವಶ್ವೌ ಪುಷ್ಟ್ಯೈ ಪೋಷಣಾಯ ಯಜಮಾನಸ್ಯಾತ್ಮನೋ ವಾಧಿ ತಸ್ಥೌ ಅಧಿತಿಷ್ಠತಿ ಆರೋಹತಿ ॥ ಅಧಿಶೀಙ್ಸ್ಥಾಸಾಂ ಕರ್ಮ । ಪಾ.೧-೪-೪೬।ಇತಿ ಕರ್ಮಣೋऽಧಿಕರಣಸಂಜ್ಞಾ ॥ ಯದ್ವಾ। ನೇತಿ ಚಾರ್ಥೇ । ತೇನ ಗುಣೌ ಸಮುಚ್ಚೀಯೇತೇ। ಪ್ರಶಸ್ತಕೇಶೌ ವ್ಯಚಸ್ವಂತೌ ಚೇತ್ಯರ್ಥಃ । ಸ ಶಿಪ್ರಾಭ್ಯಾಂ ಹನೂಭ್ಯಾಂ ಶಿಪ್ರಿಣೀವಾನ್ ಪ್ರವಾನಿಂದ್ರಃ । ಏಕೋ ಮತ್ವರ್ಥೀಯೋऽನುವಾದಃ। ವನೋತಿ। ಸೋಮಾನ್ಯಾಚತೇ ॥ ವನು ಯಾಚನೇ ॥ ಯದ್ವಾ । ವನುಷ್ಯತಿರ್ಹಂತಿಕರ್ಮಾ । ಶತ್ರೂನ್ಹಿನಸ್ತಿ ॥

॥ ಪ್ರತಿಪದಾರ್ಥ ॥

ಯಃ—ಯಾವ ಇಂದ್ರನು । ಕೇಶವಂತಾ—ಉತ್ತಮವಾದ ಕೇಶವುಳ್ಳವೂ । ವ್ಯಚಸ್ವಂತಾ—ವ್ಯಾಪಿಸುವವೂ ಆದ ಅಶ್ವಗಳನ್ನು । ಪುಷ್ಟಯೇ— ಯಜಮಾನನ ಪುಷ್ಟಿಗಾಗಿ । ಅಧಿ ತಸ್ಥೌ—ಹತ್ತುವನೋ, ಅದೇ

ಇಂದ್ರನು । **ಶಿಪ್ರಿಣೀವಾನ್**— ಉತ್ತಮವಾದ ಕೆನ್ನೆಯುಳ್ಳವನಾಗಿ । **ಶಿಪ್ರಾಭ್ಯಾಂ**—ತನ್ನ ದವಡೆಗಳನ್ನು (ಬಾಯನ್ನು) ತೆರೆದು । **ವನೋತಿ**—ಸೋಮವನ್ನು ಅಪೇಕ್ಷಿಸುತ್ತಾನೆ.

|| ಭಾವಾರ್ಥ ||

ಯಜಮಾನನಿಗೆ ಪುಷ್ಟಿಯನ್ನುಂಟುಮಾಡಲು ಉತ್ತಮವಾದ ಕೇಶವುಳ್ಳವೂ, ವ್ಯಾಪಕವಾದವೂ ಆದ ಅಶ್ವಗಳನ್ನು ಹತ್ತತಕ್ಕ ಇಂದ್ರನು ಉತ್ತಮವಾದ ಕೆನ್ನೆಯುಳ್ಳವನಾಗಿ ತನ್ನ ದವಡೆಗಳನ್ನು (ಬಾಯನ್ನು) ತೆರೆದು ಸೋಮವನ್ನು ಯಾಚಿಸುತ್ತಾನೆ.

## English Translation.

He who has mounted the two long-maned and all-pervading steeds for the nourishment (of the sacrificer) asks (for the Soma with his two jaws, possesing mighty jaws.

|| ಸಂಹಿತಾಪಾಠಃ ||

ಪ್ರಾಸ್ತೌದೃಷ್ವೌಜಾ ಋಷ್ವೇಭಿಸ್ತತಕ್ಷ ಶೂರಃ ಶವಸಾ ।
ಋಭುರ್ನ ಕ್ರತುಭಿರ್ಮಾತರಿಶ್ವಾ ॥ ೬ ॥

|| ಪದಪಾಠಃ ||

ಪ್ರ । ಅಸ್ತೌತ್ । ಋಷ್ವಽಓಜಾಃ । ಋಷ್ವೇಭಿಃ । ತತಕ್ಷ । ಶೂರಃ । ಶವಸಾ ॥
ಋಭುಃ । ನ । ಕ್ರತುಽಭಿಃ । ಮಾತರಿಶ್ವಾ ॥ ೬ ॥

|| ಸಾಯಣಭಾಷ್ಯಂ ||

ಋಷ್ವೌಜಾ ದರ್ಶನೀಯಬಲೋ ವ್ಯಾಪ್ತಬಲೋ ವಷ್ವೇಭಿರ್ದರ್ಶನೀಯೈರ್ಮರುದ್ಭಿಃ ಸಹ ಪ್ರಾಸ್ತೌತ್ । ಸ್ತುತ್ಯಾದಿಕಂ ಸಮ್ಯಕ್ಕೃತಮನೇನೇತಿ ಪ್ರಶಂಸತಿ । ಯದ್ವಾ । ಕರ್ಮಣಿ ಕರ್ತೃಪ್ರತ್ಯಯಃ । ಪ್ರಕರ್ಷೇಣ ಸ್ತುತೋಽಭೂತ್ । ಯ ಇಂದ್ರಃ ಶೂರೋ ವಿಕ್ರಾಂತೋ ಮಾತರಿಶ್ವಾ ವೃಷ್ಟೇರ್ನಿರ್ಮಾತ-ರ್ಯಂತರಿಕ್ಷೇ ಶ್ವಸನ್ವರ್ತಮಾನಃ ಸಶ್ಶವಸಾ ಬಲೇನ ಕ್ರತುಭಿಃ ಕ್ರಿಯಮಾಣೈಃ ಕರ್ಮಭಿಃ । ಯದ್ವಾ । ಕ್ರತುರಿತಿ ಪ್ರಜ್ಞಾನಾಮ । ಬಲೇನ ಪ್ರಜ್ಞಾಭಿಶ್ಚ ತತಕ್ಷ ವೃತ್ರವಧಾದಿಕಂ ಚಕಾರ । ತತ್ರ ದೃಷ್ಟಾಂತಃ । ಋಭುರ್ನರ್ಭವ ಇವ ॥ ಸುಪಾಂ ಸುಲುಗಿತಿ ಜಸಃ ಸುರಾದೇಶಃ ॥ ಋಭವೋ ಯಥಾ ಕರ್ಮಭಿಃ ಪ್ರಜ್ಞಾಭಿಶ್ಚಾನನ್ಯಸಾಧಾರಣರಥಚಮಸಾದಿನಿರ್ಮಾಣಮಕುರ್ವನ್ ತದ್ವದಿತ್ಯರ್ಥಃ ॥

|| ಪ್ರತಿಪದಾರ್ಥ ||

**ಶೂರಃ**— ಪರಾಕ್ರಮಿಯೂ । **ಋಷ್ವೌಜಾಃ**— ಆಕರ್ಷಕವಾದ ಶಕ್ತಿಯುಳ್ಳವನೂ । **ಋಷ್ವೇಭಿಃ**— ಪ್ರಕಾಶಮಾನರಾದ ಮರುತ್ತುಗಳೊಡನೆ ಕೂಡಿದವನೂ ಆದ ಇಂದ್ರನು । **ಸ್ತ್ರಾಸ್ತೌತ್**— ಪ್ರಶಂಸಿತನಾಗಿದ್ದಾನೆ । **ಋಭುಃ ನ** — ಋಭುಗಳು ತಮ್ಮ ಪ್ರಜ್ಞೆಯಿಂದ ಅಸಾಧಾರಣವಾದ ಕರ್ಮವನ್ನು ನೆರವೇರಿಸಿದಂತೆ । **ಮಾತರಿಶ್ವಾ**— ಅಂತರಿಕ್ಷಸ್ಥನಾದ ಇಂದ್ರನು । **ಶವಸಾ** — ತನ್ನ ಬಲದಿಂದಲೂ । **ಕ್ರತುಭಿಃ**— ಉತ್ತಮವಾದ ಪ್ರಜ್ಞೆಯಿಂದಲೂ । **ತತಕ್ಷ**— ವೃತ್ರವಧಾದಿ ಕರ್ಮವನ್ನು ನೆರವೇರಿಸಿದನು.

|| ಭಾವಾರ್ಥ ||

ಪರಾಕ್ರಮಿಯೂ, ಆಕರ್ಷಕವಾದ ಶಕ್ತಿಯುಳ್ಳವನೂ, ಪ್ರಕಾಶಮಾನರಾದ ಮರುತ್ತುಗಳೊಡನೆ ಕೂಡಿದವನೂ ಆದ ಇಂದ್ರನು ಪ್ರಶಂಸಿತನಾಗಿದ್ದಾನೆ. ಋಭುಗಳು ತಮ್ಮ ಪ್ರಜ್ಞೆಯಿಂದ ಅಸಾಧಾರಣವಾದ ಕರ್ಮವನ್ನು ನೆರವೇರಿಸಿದಂತೆ ಅಂತರಿಕ್ಷಸ್ಥನಾದ ಇಂದ್ರನು ತನ್ನ ಬಲದಿಂದಲೂ, ಉತ್ತಮವಾದ ಪ್ರಜ್ಞೆಯಿಂದಲೂ ವೃತ್ರವಧಾದಿ ಕರ್ಮವನ್ನು ನೆರವೇರಿಸಿದನು.

English Translation.

Of glorious strength (associated) with the glorious (Maruts) he was renowned, the hero abiding in the firmament wrought with his strength as the Ribhus with their wonderful works.

|| ಸಂಹಿತಾಪಾಠಃ ||

ವಜ್ರಂ ಯಶ್ಚಕ್ರೇ ಸುಹನಾಯ ದಸ್ಯವೇ ಹಿರೀಮಶೋ ಹಿರೀಮಾನ್ ।
ಅರುತಹನುರದ್ಭುತಂ ನ ರಜಃ || ೭ ||

|| ಪದಪಾಠಃ ||

ವಜ್ರಂ । ಯಃ । ಚಕ್ರೇ । ಸುऽಹನಾಯ । ದಸ್ಯವೇ । ಹಿರೀಮಶಃ । ಹಿರೀಮಾನ್ ।
ಅರುತ್ऽಹನುಃ । ಅದ್ಭುತಂ । ನ । ರಜಃ || ೭ ||

|| ಸಾಯಣಭಾಷ್ಯಂ ||

ಯ ಇಂದ್ರಃ ಸುಹನಾಯ ಸುಷ್ಠು ಹನನೀಯಾಯ ದಸ್ಯವ ಉಪಕ್ಷಪಯಿತ್ರೇ ಶತ್ರವೇ ತಸ್ಯ ವಧಾಯ ವಜ್ರಂ ಪ್ರಹರಣಸಾಧನಮಾಯುಧಂ ಚಕ್ರೇ ಕೃತವಾನ್ ಸ ತ್ವಂ ವೃಜಿನಾ ಶಿಶೀಹೀತ್ಯುತ್ತರ-ಸಂಬಂಧಃ । ಕೀದೃಶ ಇಂದ್ರಃ । ಹಿರೀಮಶೋ ಹರಿತಶ್ಮಶ್ರುಃ || ಪೃಷೋದರಾದಿಃ || ಹಿರೀಮಾನ್ ಹರಿ-

ಶಾಶ್ವೋ ಹರಿತವರ್ಣೋ ವಾ ಅರುತಹನುರಬಾಧಿತಹನುಃ । ಕಿಮಿವ । ಅದ್ಭುತಂ ನ ರಜಃ । ಅದ್ಭುತಮಿತಿ ಮಹನ್ನಾಮ । ರಜ ಇತಿ ರಂಜಕಮಂತರಿಕ್ಷಮುಚ್ಯತೇ । ಮಹದಂತರಿಕ್ಷಮಿವ । ತದ್ಯಥಾನ್ಯೈರಬಾಧ್ಯಂ ಭವತಿ ತದ್ವತ್ ॥

॥ ಪ್ರತಿಪದಾರ್ಥ ॥

ಹಿರೀಮಶಃ—ಹೊಂಬಣ್ಣದ ಕೂದಲುಳ್ಳವನೂ । ಹಿರೀಮಾನ್—ಹರಿತವರ್ಣವುಳ್ಳ ಅಶ್ವಯುಕ್ತನೂ। ಅದ್ಭುತಂ—ಮಹತ್ತಾದ । ರಜಃ ನ—ಅಂತರಿಕ್ಷದಂತೆ । ಅರುತಹನುಃ—ಅಹಿಂಸಿತವಾದ ಕೆನ್ನೆಯುಳ್ಳವನೂ ಆದ । ಯಃ—ಅದೇ ಇಂದ್ರನು । ಸುಹನಾಯ—ವಧಾರ್ಹನಾದ । ದಸ್ಯವೇ—ವೃತ್ರನಿಗಾಗಿ । ವಜ್ರಂ—ವಜ್ರಾಯುಧವನ್ನು । ಚಕ್ರೇ—ತೀಕ್ಷ್ಣಮಾಡಿಕೊಂಡನು.

॥ ಭಾವಾರ್ಥ ॥

ಹೊಂಬಣ್ಣದ ಕೂದಲುಳ್ಳವನೂ, ಹರಿತವರ್ಣವುಳ್ಳ ಅಶ್ವಯುಕ್ತನೂ, ಮಹತ್ತಾದ ಅಂತರಿಕ್ಷದಂತೆ ಅಹಿಂಸಿತವಾದ ಕೆನ್ನೆಯುಳ್ಳವನೂ ಆದ ಇಂದ್ರನು ವಧಾರ್ಹನಾದ ವೃತ್ರನಿಗಾಗಿ ವಜ್ರಾಯುಧವನ್ನು ಹರಿತಮಾಡಿಕೊಂಡನು.

## English Translation.

The golden-bearded (Indra), lord of bay horses, who made the thunderbolt for the easy destruction of the Dasyu, who has irresistible jaws like the vast firmament.

॥ ಸಂಹಿತಾಪಾಠಃ ॥

ಅವ ನೋ ವೃಜಿನಾ ಶಿಶೀಹ್ಯೃಚಾ ವನೇಮಾನೃಚಃ ।
ನಾಬ್ರಹ್ಮಾ ಯಜ್ಞ ಋಧಗ್ಜೋಷತಿ ತ್ವೇ ॥ ೮ ॥

॥ ಪದಪಾಠಃ ॥

ಅವ । ನಃ । ವೃಜಿನಾ । ಶಿಶೀಹಿ । ಋಚಾ । ವನೇಮ । ಅನೃಚಃ ।
ನ । ಅಬ್ರಹ್ಮಾ । ಯಜ್ಞಃ । ಋಧಕ್ । ಜೋಷತಿ । ತ್ವೇ ಇತಿ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನೋಽಸ್ಮಾಕಂ ವೃಜಿನಾ ವೃಜಿನಾನಿ ವರ್ಜನೀಯಾನಿ ಪಾಪಾನ್ಯವ ಶಿಶೀಹಿ । ಅತ್ಯರ್ಥಂ ತನೂಕುರು । ವಿನಾಶಯೇತ್ಯರ್ಥಃ । ವಯಂ ಚರ್ಚಾ ಸ್ತುತ್ಯಾ ಸಾಧನೇನಾನೃಚೋಽಸ್ತುತಿಕಾನಯಜಮಾನಾನ್ವನೇಮ । ಹಿಂಸಾಮ । ಅಬ್ರಹ್ಮಾ । ಬ್ರಹ್ಮ ಪರಿವೃಢಂ ಸ್ತೋತ್ರಂ । ಸ್ತುತಿವಿರಹಿತೋ ಯಜ್ಞ

ಋಧಕ್ ಸಸ್ತುತಿಕಾದ್ಯಜ್ಞಾತ್ಪೃಥಗ್ಭೂತಸ್ತ್ವೇ ತ್ವಯಿ ನ ಜೋಷತಿ । ನ ಸೇವತೇ ತ್ವಾಂ । ನ ಪ್ರೀಣಯ- ತೀತ್ಯರ್ಥಃ ॥ ಜುಷೀ ಪ್ರೀತಿಸೇವನಯೋಃ । ವ್ಯತ್ಯಯೇನ ಶಪ್ ಪರಸ್ಮೈಪದಂ ಚ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ನಃ**—ನಮ್ಮ । **ವೃಜಿನಾ**—ಪಾಪಗಳನ್ನು । **ಅವ ಶಿಶೀಹಿ**—ನಾಶಪಡಿಸು । **ಋಚಾ**—ನಮ್ಮ ಸ್ತುತಿಗಳೊಡನೆ ಕೂಡಿ । **ಅನೃಚಃ**—ಸ್ತುತಿಕರ್ತರಲ್ಲದವರನ್ನು । **ವನೇಮ**—ನಾವು ಹಿಂಸಿಸುವಂತಾಗಲಿ । **ಅಬ್ರಹ್ಮಾ**—ಸ್ತುತಿಯುಕ್ತವಲ್ಲದ । **ಯಜ್ಞಃ**—ಪೂಜೆಯು । **ಋಧಕ್**—ಸ್ತುತಿಯುಕ್ತವಾದ ಪೂಜೆಗಿಂತ ಬೇರೆಯಾಗಿರುವುದರಿಂದ । **ತ್ವೇ**—ನಿನ್ನಲ್ಲಿ । **ನ ಜೋಷತಿ**—ತೃಪ್ತಿಯನ್ನುಂಟುಮಾಡುವುದಿಲ್ಲ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮ ಪಾಪಗಳನ್ನು ನಾಶಪಡಿಸು. ನಮ್ಮ ಸ್ತುತಿಗಳೊಡನೆ ಕೂಡಿ ಸ್ತುತಿಕರ್ತರಲ್ಲದವರನ್ನು ನಾವು ಹಿಂಸಿಸುವಂತಾಗಲಿ. ಸ್ತುತಿಯುಕ್ತವಲ್ಲದ ಪೂಜೆಯು ಸ್ತುತಿಯುಕ್ತವಾದ ಪೂಜೆಗಿಂತ ಬೇರೆಯಾಗಿರುವುದರಿಂದ ಅದು ನಿನಗೆ ತೃಪ್ತಿಯನ್ನುಂಟುಮಾಡುವುದಿಲ್ಲ.

## English Translation.

Comminute, Indra our iniquities, may we, by our hymns, exterminate those who offers no hymns. The sacrifice, unaccompained by prayer, distinct (from that which is performed with prayer), is not gratefnl to you.

॥ ಸಂಹಿತಾಪಾಠಃ ॥

ಊರ್ಧ್ವಾ ಯತ್ತೇ ತ್ರೇತಿನೀ ಭೂದ್ಯಜ್ಞಸ್ಯ ಧೂರ್ಷು ಸದ್ಮನ್ ।
ಸಜೂರ್ನಾವಂ ಸ್ವಯಶಸಂ ಸಚಾಯೋಃ ॥ ೯ ॥

॥ ಪದಪಾಠಃ ॥

ಊರ್ಧ್ವಾ । ಯತ್ । ತೇ । ತ್ರೇತಿನೀ । ಭೂತ್ । ಯಜ್ಞಸ್ಯ । ಧೂಃऽಸು । ಸದ್ಮನ್ ।
ಸऽಜೂಃ । ನಾವಂ । ಸ್ವऽಯಶಸಂ । ಸಚಾ । ಆಯೋಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಸ್ವಭೂತಾ ತ್ರೇತಿನೀ । ತ್ರೇತಾಗ್ನಿತ್ರಯಂ । ತದ್ವತೀ ತ್ರೇತಿನೀ ಕ್ರಿಯಾ । ಸಾ ಯದ್ಯದೋರ್ಧ್ವೋನ್ನತಾ ಪ್ರವೃತ್ತಾ ಭೂತ್ ಅಭೂತ್ ॥ ಯದ್ವೃೋಗಾದನಿಘಾತಃ ॥ ಕುತ್ರ ಸ್ಥಾನ ಇತಿ । ಯಜ್ಞಸ್ಯ ಯಾಗಸ್ಯ ಸದ್ಮನ್ ಸದನೇ । ಕೇಷ್ವಿತಿ । ಧೂರ್ಷು ಕರ್ಮಣಾಂ ಪೂರ್ಧೃಷ್ಟ್ಯೃತ್ವಿಕ್ಷು । ತದಾನೀಂ

**ಸಜೂರ್ಯಜಮಾನೇನ ಮರುದ್ಭಿರ್ವಾ ಸಹ ಪ್ರೀಯಮಾಣೋ ವಾ ಸನ್ನಾಯೋರ್ಮನುಷ್ಯಸ್ಯ ಯಜಮಾನಸ್ಯ ಸಚಾ ಸಹ ತೇನ ಸಾಕಂ ಸ್ವಯಶಸಂ ಸ್ವಾಯತ್ತಯಶಸ್ಕಂ ಯಶಃಸಾಧನಂ ನಾವಂ ತರಣಸಾಧನಂ ತರಣಿಂ । ಆರೋಹಸೀತಿ ಶೇಷಃ । ಏಕನೇವ ರಥಂ ಯಜಮಾನ ಆರೋಹತಿ ಸ್ವತರಣಾರ್ಥಂ ತನೇವ ತಸ್ಯ ಸಾಧಕಮಾರೋಹಸೀತ್ಯರ್ಥಃ । ಯದ್ವಾ । ನಾವಂ ರಥಂ ಸ್ವಯಶಸಮಾಯೋರ್ಯಜಮಾನಸ್ಯ ಸಚಾ ಸಹಾಯಭೂತಃ ಸಜೂಸ್ತೇನ ಸಹ ಪ್ರೀಯಮಾಣ ಆರೋಹೇತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯಜ್ಞಸ್ಯ**—ಯಾಗದ । **ಸದ್ಮನ್**—ಸ್ಥಾನದಲ್ಲಿ । **ಧೂರ್ಷದ**—ಕರ್ಮನಿರ್ವಾಹಕರಾದ ಋತ್ವಿಕ್ಕುಗಳ ನಡುವೆ । **ತೇ**—ನಿನ್ನನ್ನು ಪೂಜಿಸುವ । **ತ್ರೇತಿನೀ**—ಅಗ್ನಿತ್ರಯಾತ್ಮಕವಾದ ಕ್ರಿಯೆಯು । **ಯತ್**—ಯಾವಾಗ । **ಊರ್ಧ್ವಾ ಭೂತ್**—ಊರ್ಧ್ವಮುಖವಾಗುವುದೋ (ಆಚರಿಸಲ್ಪಡುವುದೋ) ಆಗ । **ಸಜೂಃ**—ಮರುತ್ತುಗಳೊಡಗೂಡಿ । **ಆಯೋಃ ಸಚಾ**—ಯಜಮಾನನೊಡನೆ । **ಸ್ವಯಶಸಃ**—ಸ್ವಾಯತ್ತವಾದ ಯಶಃಸಾಧನವಾದ । **ನಾವಂ**—ದೋಣಿಯನ್ನು ಹತ್ತುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾಗದ ಸ್ಥಾನದಲ್ಲಿ ಕರ್ಮನಿರ್ವಾಹಕರಾದ ಋತ್ವಿಕ್ಕುಗಳ ನಡುವೆ ನಿನ್ನನ್ನು ಪೂಜಿಸುವ ಅಗ್ನಿತ್ರಯಾತ್ಮಕವಾದ ಕ್ರಿಯೆಯು ಯಾವಾಗ ಊರ್ಧ್ವಮುಖವಾಗುವುದೋ ಆಗ ಮರುತ್ತುಗಳೊಡಗೂಡಿ ಯಜಮಾನನೊಡನೆ ಸ್ವಾಯತ್ತವಾದ ಯಶಃಸಾಧನವಾದ ದೋಣಿಯನ್ನು ಹತ್ತುವೆ.

## English Translation.

When the ceremony of the three fires is instituted for you by those who support (the burden of the rite) in the hall of sacrifice, accompanied by the sacrifice, you, the friend of man, (ascend) your vessel of the glory.

॥ ಸಂಹಿತಾಪಾಠಃ

**ಶ್ರಿಯೇ ತೇ ಪೃಶ್ನಿರುಪಸೇಚನೀ ಭೂಚ್ಛ್ರಿಯೇ ದರ್ವಿರರೇಪಾಃ ।**

**ಯಯಾ ಸ್ವೇ ಪಾತ್ರೇ ಸಿಂಚಸ ಉತ್ ॥ ೧೦ ॥**

॥ ಪದಪಾಠಃ ॥

**ಶ್ರಿಯೇ । ತೇ । ಪೃಶ್ನಿಃ । ಉಪಽಸೇಚನೀ । ಭೂತ್ । ಶ್ರಿಯೇ । ದರ್ವಿಃ । ಅರೇಪಾಃ ।**

**ಯಯಾ । ಸ್ವೇ । ಪಾತ್ರೇ । ಸಿಂಚಸೇ । ಉತ್ ॥ ೧೦ ॥**

। ಸಾಯಣಭಾಷ್ಯಂ ।

ಹೇ ಇಂದ್ರ ತೇ ತವ ಸಂಬಂಧಿನಃ ಸೋಮಸ್ಯ ಶ್ರೀಯೇ ಶ್ರಯಣಾಯ ಪೃಶ್ನಿರ್ಗೌಃ ಪೃಶ್ನಿವರ್ಣೋಪಸೇಚನೀ ಪಯಸೋ ದೋಗ್ಧ್ರೀ ಭೂತ್ । ಭವತು । ತಥಾ ದರ್ವಿರರಣೀರರೇಪಾ ಅಪಾಪಾ ಸತೀ ತೇ ಶ್ರೀಯೇ ಹವಿಷಃ ಶ್ರಯಣಾಯ ಭೂತ್ । ಭವತು । ಯಯಾ ದರ್ವ್ಯಾ ಸ್ವೇ ಸ್ವಕೀಯೇ ಪಾತ್ರೇ ಪಾನಸಾಧನೇ ಮುಖ ಉತ್ಸಿಂಚಸೇ ಉಪರ್ಯೋಕ್ಷ್ಯಸಿ ಪಿಬಸಿ ಸಾ ಶ್ರೀಯೇ ಭೂದಿತಿ ಸಂಬಂಧಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತೇ**— ನಿನ್ನ ಸೋಮದೊಡನೆ । **ಶ್ರೀಯೇ**— ಮಿಶ್ರಮಾಡಲು । **ಪೃಶ್ನಿಃ**— ಪೃಶ್ನಿ ವರ್ಣವುಳ್ಳ ಗೋವು । **ಉಪಸೇಚನೀ**— ಕ್ಷೀರವನ್ನು ಕೊಡುವುದಾಗಿ । **ಭೂತ್**— ಆಗಲಿ । **ಯಯಾ**— ಯಾವ ದರ್ವಿಯಿಂದ । **ಸ್ವೇ ಪಾತ್ರೇ**— ಪಾನಸಾಧನವಾದ ನಿನ್ನ ಮುಖದಲ್ಲಿ । **ಉತ್ ಸಿಂಚಸೇ**— ಸೋಮವನ್ನು ಸುರಿಯುವೆಯೋ । **ದರ್ವಿಃ**— ಅದೇ ದರ್ವಿಯು । **ಅರೇಪಾಃ**— ದೋಷರಹಿತವಾಗಿಯೂ । **ಶ್ರೀಯೇ**— ಹವಿಸ್ಸನ್ನು ಮಿಶ್ರಮಾಡಲು ಯೋಗ್ಯವಾಗಿಯೂ । **ಭೂತ್**— ಆಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಸೋಮದೊಡನೆ ಮಿಶ್ರಮಾಡಲು ಪೃಶ್ನಿ ವರ್ಣವುಳ್ಳ ಗೋವು ಕ್ಷೀರವನ್ನು ಕೊಡಲಿ. ನಿನ್ನ ಮುಖದಲ್ಲಿ ಸೋಮವನ್ನು ಸುರಿಯಲು ಸಾಧನವಾದ ದರ್ವಿಯು ದೋಷರಹಿತವಾಗಿಯೂ, ಪಾನಮಾಡಲು ಯೋಗ್ಯವಾಗಿಯೂ ಇರಲಿ.

## English Translation.

May the spotted cow yield milk for mixing with your (Soma), may the ladle for the mixture wherewith you pour it into your own vessel be free from defect.

॥ ಸಂಹಿತಾಪಾಠಃ ॥

ಶತಂ ವಾ ಯದಸುರ್ಯ ಪ್ರತಿ ತ್ವಾ ಸುಮಿತ್ರ ಇತ್ಥಾಸ್ತೌದ್ದುರ್ಮಿತ್ರ ಇತ್ಥಾಸ್ತೌತ್ ।

ಆವೋ ಯದ್ದಸ್ಯುಹತ್ಯೇ ಕುತ್ಸಪುತ್ರಂ ಪ್ರಾವೋ ಯದ್ದಸ್ಯುಹತ್ಯೇ ಕುತ್ಸವತ್ಸಂ ॥ ೧೧ ॥

|| ಪದಪಾಠಃ ||

ಶ॒ತಂ । ವಾ॒ । ಯತ್ । ಅ॒ಸು॒ರ್ಯ॒ । ಪ್ರತಿ॑ । ತ್ವಾ॒ । ಸು॒ಽಮಿ॒ತ್ರಃ । ಇ॒ತ್ಥಾ । ಅ॒ಸ್ತೌ॒ತ್ । ದು॒ಃಽಮಿ॒ತ್ರಃ ।

ಇ॒ತ್ಥಾ । ಅ॒ಸ್ತೌ॒ತ್ ॥

ಆವ॑ಃ । ಯತ್ । ದ॒ಸ್ಯು॒ಽಹತ್ಯೇ॑ । ಕು॒ತ್ಸ॒ಽಪು॒ತ್ರಮ್ । ಪ್ರ । ಆವ॑ಃ । ಯತ್ । ದ॒ಸ್ಯು॒ಽಹತ್ಯೇ॑ । ಕು॒ತ್ಸ॒ಽವ॒ತ್ಸಮ್ ॥

|| ಸಾಯಣಭಾಷ್ಯಂ ||

ಹೇ ಅಸುರ್ಯ ಬಲವನ್ನಿಂದ್ರ । ಅವಧ್ಯತ್ವೇನಾಸುರಸಂಬಂಧಿತ್ವಾತ್ । ತ್ವಾ ತ್ವಾಂ ಪ್ರತಿ ಶತಂ ವಾ ಶತಸಂಖ್ಯಾಕಂ ಧನಂ । ವಾಶಬ್ದೇನಾಪರಿಮಿತಂ ಧನಂ ವಾ । ಯದ್ಯದಾ ಕಾಮಿತವಾನಿತ್ಯರ್ಥಃ । ಯದ್ಯದಾ ಚ ದಸ್ಯುಹತ್ಯೇ ದಸ್ಯುಹನನೇ ಶತ್ರುವಧೇ ಕುತ್ಸಪುತ್ರಂ ದುರ್ಮಿತ್ರಮಾವಃ ರಕ್ಷಿತವಾನಸಿ । ತಥಾ ಕುತ್ಸವತ್ಸಂ ಕುತ್ಸಪುತ್ರಂ ಪ್ರಾವಃ ಪ್ರಕರ್ಷೇಣ ರಕ್ಷಿತವಾನಸಿ ॥ ಅವ ರಕ್ಷಣಾದೌ । ಲಙ್ಯ-ಡಜಾದೀನಾಮಿತ್ಯಾಡಾಗಮಃ । ಪಾದಾದಿತ್ವಾದನಿಘಾತಃ। ಪುನರುಕ್ತಿರಾದರಾರ್ಥಂ॥ ತದಾನೀಂ ಸುಮಿತ್ರೋ ನಾಮ್ನೇತ್ಥಮಸ್ತೌತ್ । ತಥಾ ದುರ್ಮಿತ್ರೋ ಗುಣತ ಇತ್ಥಮಸ್ತೌತ್ । ತದ್ವಿಪರೀತಂ ವಾ ದ್ರಷ್ಟವ್ಯಂ । ಸುಮಿತ್ರೋ ನಾಮ್ನಾ ದುರ್ಮಿತ್ರೋ ಗುಣತ ಇತಿ ಕಾತ್ಯಾಯನೇನ ತಥೋಕ್ತೇಃ । ಸ ಇತ್ಥೇತ್ಥಮನೇನ ಕೃತಪ್ರಕಾರೇಣಾಸ್ತೌತ್ । ಅಸ್ತಾವೀತ್ । ಇತ್ಥಾಸ್ತೌದಿತಿ ದ್ವಿರುಕ್ತಿಃ ಸ್ತುತಿಸಮಾಪ್ತ್ಯರ್ಥಂ ॥

|| ಪ್ರತಿಪದಾರ್ಥ ||

**ಅಸುರ್ಯ**—ಶಕ್ತಿಯುತನಾದ ಎಲೈ ಇಂದ್ರನೇ । **ಶತಂ ವಾ**—ಅಪರಿಮಿತವಾದ ಧನವನ್ನು ಕೊಡ ಬೇಕೆಂದು । **ತ್ವಾ ಪ್ರತಿ**—ನಿನ್ನನ್ನು । **ಯತ್**—ಯಾವಾಗ ಪ್ರಾರ್ಥಿಸಿದೆನೋ (ಮತ್ತು) । **ಯತ್**—ಯಾವಾಗ **ದಸ್ಯುಹತ್ಯೇ**—ಶತ್ರುವಧಕಾಲದಲ್ಲಿ । **ಕುತ್ಸಪುತ್ರಂ**—ಕುತ್ಸಋಷಿಯ ಪುತ್ರನಾದ ದುರ್ಮಿತ್ರನನ್ನು । **ಆವಃ**—ರಕ್ಷಿಸಿದೆಯೋ (ಹಾಗೆಯೇ) । **ಕುತ್ಸವತ್ಸಂ**—ಕುತ್ಸಪುತ್ರನನ್ನು । **ಪ್ರಾವಃ**—ರಕ್ಷಿಸಿದೆಯೋ ಆಗ । **ಸುಮಿತ್ರಃ**—ಸುಮಿತ್ರನಾಮಕನಾದ ಋಷಿಯು । **ಇತ್ಥಾ**—ಈ ಪ್ರಕಾರವಾಗಿ ನಿನ್ನನ್ನು । **ಅಸ್ತೌತ್**—ಸ್ತೋತ್ರಮಾಡಿದನು (ಮತ್ತು) । **ದುರ್ಮಿತ್ರಃ**—ದುರ್ಮಿತ್ರನೆಂಬ ಆ ಋಷಿಯೇ । **ಇತ್ಥಾ**—ಈ ಪ್ರಕಾರವಾಗಿ । **ಅಸ್ತೌತ್**—ಸ್ತೋತ್ರಮಾಡಿದನು.

|| ಭಾವಾರ್ಥ ||

ಶಕ್ತಿಯುತನಾದ ಎಲೈ ಇಂದ್ರನೇ, ಅಪರಿಮಿತವಾದ ಧನವನ್ನು ಕೊಡಬೇಕೆಂದು ನಿನ್ನನ್ನು ಪ್ರಾರ್ಥಿಸಿದಾಗಲೂ, ದಸ್ಯುಗಳಾದ ಶತ್ರುಜನರನ್ನು ಸಂಹರಿಸುವಾಗಲೂ ಕುತ್ಸಪುತ್ರನಾದ ದುರ್ಮಿತ್ರನನ್ನು ಅಥವಾ ಸುಮಿತ ನನ್ನು ರಕ್ಷಿಸಿದಾಗಲೂ ಸುಮಿತ್ರನೆಂಬ ಹೆಸರಿನ ಋಷಿಯು ನಿನ್ನನ್ನು ಈ ರೀತಿ ಸ್ತುತಿಸಿದನು. ದುರ್ಮಿತ್ರನೆಂಬ ಹೆಸರಿನ ಅದೇ ಸುಮಿತ್ರಋಷಿಯು ನಿನ್ನನ್ನು ಈ ರೀತಿ ಸ್ತುತಿಸಿದನು.

## English Translation

When you mighty (Indra, gave) hundredfold (riches), Sumitra praised you thus, Durmitra praised you thus, when at the slaughter of the Dasyus you protected Kutsa's son, when at the slaughter of the Dasyus you protected Kutsa's darling.

॥ ವಿಶೇಷವಿಷಯಗಳು ॥

ಈ ಸೂಕ್ತವು ಕುತ್ಸಪುತ್ರನಾದ ಸುಮಿತ್ರ ಅಥವಾ ದುರ್ಮಿತ್ರ ಎಂಬ ಋಷಿದೃಷ್ಟವಾದುದು. ಸುಮಿತ್ರ ಎಂದರೆ ಒಳ್ಳೆಯ ಸ್ನೇಹಿತ. ದುರ್ಮಿತ್ರ ಎಂದರೆ ಕೆಟ್ಟ ಸ್ನೇಹಿತ. ಈ ಎರಡು ಹೆಸರುಗಳಲ್ಲಿ ಒಂದು ಇವನ ನಿಜವಾದ ಹೆಸರಾಗಿರಬಹುದು ಮತ್ತೊಂದು ಇವನ ಸ್ವಭಾವಕ್ಕನುಗುಣವಾಗಿ ಪ್ರಸಿದ್ಧವಾಗಿರಬಹುದು. ಎಂದರೆ ಇವನಿಗೆ ಈ ಹೆಸರು ಬರಲು ಇವನ ಗುಣವೇ ಕಾರಣವಾಗಿದೆ. ಈ ಕೊನೆಯ ಋಕ್ಕಿನಲ್ಲಿ ಪೂರ್ವಾರ್ಧದಲ್ಲಿ ಇತ್ಥಾಸ್ತೌತ್ ಎಂಬ ಶಬ್ದಗಳು ದ್ವಿರುಕ್ತಿಯಾಗಿ ಪಠಿತವಾಗಿವೆ. ಉತ್ತರಾರ್ಧದಲ್ಲಿ ದಸ್ಯುಹತ್ಯೇ ಕುತ್ಸಪುತ್ರಂ (ವತ್ಸಂ) ಎಂಬ ಶಬ್ದಗಳೂ ಅದೇ ರೀತಿ ಪುನರುಕ್ತಿಯಾಗಿ ಪಠಿತವಾಗಿವೆ. ಪೂರ್ವಾರ್ಧದಲ್ಲಿ ಋಷಿಯು ತನ್ನ ವಿಷಯದಲ್ಲಿ ಬಳಕೆಯಲ್ಲಿದ್ದ ಸುಮಿತ್ರ ದುರ್ಮಿತ್ರ ಎಂಬ ಎಂಬ ಎರಡು ಹೆಸರುಗಳನ್ನೂ ಹೇಳಿಕೊಂಡಿದಾನೆ. ಮತ್ತು ಪ್ರಾಸಬದ್ಧವಾಗಿರುವುದಕ್ಕಾಗಿಯೂ ಸೂಕ್ತ ಸಮಾಪ್ತಿಗಾಗಿಯೂ ಋಕ್ಕಿನಲ್ಲಿ ದ್ವಿರುಕ್ತಿ ಇದೆಯೆಂದು ಭಾಷ್ಯಕಾರರು ವಿವರಿಸಿದಾರೆ.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಮಹೀಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇಽಷ್ಟಮಾಷ್ಟಕೇ ಪಂಚಮೋಽಧ್ಯಾಯಃ ಸಮಾಪ್ತಃ

॥ಓಂ ತತ್ಸತ್॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ ಋಗ್ವೇದಸಂಹಿತಯ
ಎಂಟನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು ಸಮಾಪ್ತವು

ಶುಭಂಭೂಯಾತ್

ಮಂಗಳಂ





॥ ಶ್ರೀಃ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್॥
ಅಷ್ಟಮೇ ಪಂಚಮಾಧ್ಯಾಯಂ ವ್ಯಾಖ್ಯಾಯ ಶ್ರುತಿಕೋವಿದಃ ।
ಸಾಯಣಾರ್ಯಸ್ತತೋಽಧ್ಯಾಯಂ ಷಷ್ಠಂ ಚ ವ್ಯಾಚಿಕೀರ್ಷತಿ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಭಾಗ -- ೩೦

## ಎಂಟನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು



## ಹತ್ತನೆಯ ಮಂಡಲದ ಸೂಕ್ತಗಳು

## ನೂರ ಆರನೆಯ ಸೂಕ್ತವು

---

### ಪೀಠಿಕೆ.

ಈ ಸೂಕ್ತಕ್ಕೆ ಕಶ್ಯಪವಂಶದವನಾದ ಭೂತಾಂಶನೆಂಬುವನು ಋಷಿಯು. ಇವನಿಗೆ ಮಕ್ಕಳಿಲ್ಲದ್ದರಿಂದ ಅಶ್ವಿನಿ ದೇವತೆಗಳನ್ನು ಸ್ತುತಿಸಿದನು. ಬೃಹದ್ದೇವತೆಯಲ್ಲಿ ಈ ಋಷಿಯ ವಿಷಯವಾಗಿ ಈ ರೀತಿ ಹೇಳಿದೆ—

ಭೂತಾಂಶಸ್ತು ಪ್ರಜಾಕಾಮಃ ಕರ್ಮಾಣಿ ಕೃತವಾನ್ಪುರಾ ।
ನ ಹಿ ಲೇಭೇ ಪ್ರಜಾಃ ಕಾಶ್ಚಿತ್ಕಾಶ್ಯಪೋ ಮುನಿಸತ್ತಮಃ ॥

(ಬೃ. ದೆ. ೮-೧೮)

ಪೂರ್ವದಲ್ಲಿ ಕಶ್ಯಪವಂಶದ ಭೂತಾಂಶನೆಂಬ ಋಷಿಯು ತನಗೆ ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ಅನೇಕ ಯಜ್ಞಾದಿಕರ್ಮಗಳನ್ನು ಮಾಡಿದನು. ಆದರೂ ಈ ಋಷಿಶ್ರೇಷ್ಠನಿಗೆ ಮಕ್ಕಳಾಗಲಿಲ್ಲ

ಉವಾಚ ಭಾರ್ಯಾ ಭೂತಾಂಶಂ ಸುತಾನಿಚ್ಛಸಿ ಯಾವತಃ ।
ತಾವತೋ ಜನಯಿಷ್ಯಾಮಿ ದೇವತಾ ದ್ವಂದ್ವಶಃ ಸ್ತುಹಿ ॥

(ಬೃ. ದೇ. ೮–೧೯)

ಆಗ ಅವನ ಪತ್ನಿಯು ಭೂತಾಂಶಋಷಿಯನ್ನುದ್ದೇಶಿಸಿ— ಎಲೈ ಋಷಿಶ್ರೇಷ್ಠನೇ, ನಿನಗೆ ಎಷ್ಟು ಮಕ್ಕಳು ಬೇಕಾದರೂ ಅಷ್ಟು ಮಕ್ಕಳನ್ನು ನಾನು ಹೆರುವೆನು. ಆದ್ದರಿಂದ ನಿನಗೆ ಮಕ್ಕಳಾಗುವುದಕ್ಕಾಗಿ ಇಬ್ಬಿಬ್ಬರು ದೇವತೆಗಳನ್ನು ಒಟ್ಟಾಗಿ ಸ್ತುತಿಸು ಎಂದಳು.

ತಮುಭ್ಯಯುಸ್ತು ಸರ್ವಾಣಿ ದ್ವಂದ್ವಾನಿ ಸ್ತುತಿಕಾಮ್ಯಯಾ ।
ತಾನ್ಯವೇಕ್ಷ್ಯಾಥ ತಚ್ಚಕ್ರೇ ನಾಸತ್ಯೌ ಸೂಕ್ತಭಾಗಿನೌ ॥

(ಬೃ. ದೇ. ೮–೨೦)

ಈ ವಿಷಯವನ್ನು ತಿಳಿದು ದೇವತೆಗಳಲ್ಲಿ ಇಬ್ಬಿಬ್ಬರಾಗಿರುವವರೆಲ್ಲರೂ ತಮ್ಮನ್ನು ಸ್ತುತಿಸಬೇಕೆಂಬ ಇಚ್ಛೆಯಿಂದ ಇವನ ಬಳಿಗೆ ಬಂದರು ಆ ದ್ವಂದ್ವದೇವತೆಗಳನ್ನು ನೋಡಿ ಋಷಿಯು ಈ ಸೂಕ್ತದಲ್ಲಿ (೧೦೬ನೇ ಸೂಕ್ತದಲ್ಲಿ) ಸ್ತುತಿಸಿರುವನು. ಆದರೆ ಈ ಸೂಕ್ತಕ್ಕೆ ಅಶ್ವಿನೀದೇವತೆಗಳೇ ಮುಖ್ಯದೇವತೆಯು.

ತದೇತದಂತತೋ ಭಾವಾದಾಶ್ವಿನಂ ಸೂಕ್ತಮುಚ್ಯತೇ ।
ನ ಹ್ಯಸ್ಮಿನ್ದೇವತಾಲಿಂಗಂ ಪ್ರಾಗನ್ತ್ಯಾದ್ದೃಶ್ಯತೇ ಪದಾತ್ ॥

(ಬೃ ದೇ. ೮–೨೧)

ಈ ೧೦೬ ನೇ ಸೂಕ್ತದಲ್ಲಿ ಯಾವ ದೇವತೆಯನ್ನು ಸ್ತುತಿಸಲಾಗಿದೆಯೆಂಬ ವಿಷಯವು ಕಡೆಯ ತನಕ ವ್ಯಕ್ತವಾಗಿಲ್ಲ. ಸೂಕ್ತದಲ್ಲಿರುವ ಹೆಸರು ಮೊದಲಾದ ಲಕ್ಷಣಗಳಿಂದ ದೇವತೆಯನ್ನು ನಿರ್ಧರಿಸುವಂತಿಲ್ಲ ಸೂಕ್ತದ ಕೊನೆಯ ಋಕ್ಕಿನ (೧೧)ಕೊನೆಯ ಪಾದದಲ್ಲಿ ಅಶ್ವಿನೋಃ ಎಂಬ ಶಬ್ದಪ್ರಯೋಗವಿರುವುದರಿಂದ ಈ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನೇ ಮುಖ್ಯವಾಗಿ ಸ್ತುತಿಸಲಾಗಿದೆಯೆಂದು ಹೇಳಬೇಕಾಗಿರುವುದು. ಈ ಸೂಕ್ತದಲ್ಲಿ ವಿಶೇಷವಾಗಿ ಬಳಕೆಯಲ್ಲಿಲ್ಲದ ಮತ್ತು ತೊಡಕಾದ, ಅಸ್ಪಷ್ಟಾರ್ಥಯುಕ್ತವಾದ ಶಬ್ದಗಳ ಪ್ರಯೋಗವಿದೆ. ಪ್ರತಿವಾಕ್ಯದಲ್ಲಿಯೂ ಉಪಮಾನ (ದೃಷ್ಟಾಂತ) ಮೂಲಕ ವಿಷಯನಿರೂಪಣೆ ಮಾಡಲಾಗಿದೆ.

॥ ಸಾಯಣಭಾಷ್ಯಂ ॥

ತತ್ರೋಭಾ ಉ ನೂನಮಿತ್ಯೇಕಾದಶರ್ಚಮಾದ್ಯಂ ಸೂಕ್ತಂ । ಅನುವಾಕಾಪೇಕ್ಷಯಾ ಸಪ್ತಮಂ ಸೂಕ್ತಂ । ತ್ರೈಷ್ಟುಭಮಶ್ವಿದೈವತ್ಯಂ । ಕಶ್ಯಪಪುತ್ರೋ ಭೂತಾಂಶೋ ನಾಮರ್ಷಿಃ । ತಥಾ ಚಾನುಕ್ರಮ್ಯತೇ । ಉಭಾ ಭೂತಾಂಶಃ ಕಾಶ್ಯಪ ಆಶ್ವಿನಮಿತಿ ॥ ಅಪ್ತೋರ್ಯಾಮೇऽಚ್ಛಾವಾಕಾತಿರಿಕ್ತೋಕ್ಥ್ಯ ಏತತ್ಸೂಕ್ತಂ । ಸೂತ್ರಿತಂ ಚ । ಉಭಾ ಉ ನೂನಂ ದೈವ್ಯಾ ಹೋತಾರಾ ಪ್ರಥಮಾ ಪುರೋಹಿತೇತಿ ಪರಿಧಾನೀಯಾ । ಆ. ೯–೧೧ । ಇತಿ ॥

ಅನುವಾದವು— ಈ ಅಧ್ಯಾಯದಲ್ಲಿ **ಉಭಾ ಉ ನೂನಂ** ಎಂಬ ಈ ಸೂಕ್ತವು ಮೊದಲನೆಯದಾಗಿದ್ದರೂ ೧೦ ನೇ ಮಂಡಲದ ಒಂಭತ್ತನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಶ್ಯಪ ಪುತ್ರನಾದ ಭೂತಾಂಶನೆಂಬುವನು ಋಷಿಯು, ಅಶ್ವಿನೀದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಉಭೌ ಭೂತಾಂಶಃ ಕಾಶ್ಯಪ ಆಶ್ವಿನಂ** ಎಂದು ಹೇಳಿರುವುದು. **ಅಪ್ತೋರ್ಯಾಮ**ದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಅತಿರಿಕ್ತೋಕ್ಥಮಂತ್ರಗಳಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಉಭಾ ಉ ನೂನಂ ದೈವ್ಯಾ ಹೋತಾರಾ ಪ್ರಥಮಾ ಪುರೋಹಿತೇತಿ ಪರಿಧಾನೀಯಾ** ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು

## ಸೂಕ್ತ—೧೦೬

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ—೧೦೬ ॥
ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೧, ೨ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ಭೂತಾಂಶಃ ಕಾಶ್ಯಪಃ ॥
॥ ದೇವತಾ—ಅಶ್ವಿನೌ ॥
। ಛಂದಃ—ತ್ರಿಷ್ಟುಪ್ ।

॥ ಸಂಹಿತಾಪಾಠಃ ॥

ಉಭಾ ಉ ನೂನಂ ತದಿದರ್ಥಯೇಥೇ ವಿ ತನ್ವಾಥೇ ಧಿಯೋ ವಸ್ತ್ರಾಪಸೇವ ।
ಸಧ್ರೀಚೀನಾ ಯಾತವೇ ಪ್ರೇಮಜೀಗಃ ಸುದಿನೇವ ಪೃಕ್ಷ ಆ ತಂಸಯೇಥೇ ॥

॥ ಪದಪಾಠಃ ॥

ಉಭಾ । ಊಂ ಇತಿ । ನೂನಂ । ತತ್ । ಇತ್ । ಅರ್ಥಯೇಥೇ ಇತಿ । ವಿ । ತನ್ವಾಥೇ ಇತಿ । ಧಿಯಃ ।
ವಸ್ತ್ರಾ । ಅಪಸಾಽಇವ ।
ಸಧ್ರೀಚೀನಾ । ಯಾತವೇ । ಪ್ರ । ಈಂ । ಅಜೀಗರಿತಿ । ಸುದಿನಾಽಇವ । ಪೃಕ್ಷಃ । ಆ । ತಂಸಯೇಥೇ
ಇತಿ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾವುಭೌ ಯುವಾಂ ನೂನಮಿದಾನೀಂ ತದಿದಸ್ಮಾಭಿರ್ದೀಯಮಾನಂ ಹವಿಃ ಕ್ರಿಯಮಾಣಂ ಸ್ತೋತ್ರಮೇವಾರ್ಥಯೇಥೇ । ಪ್ರಾರ್ಥಯಥಃ ॥ ಅರ್ಥ ಯಾಚ್ಞಾಯಾಂ ಚೌರಾದಿಕಃ ।

ಅನುದಾತ್ತೇತ್ । ಉಃ ಪೂರಣಃ ॥ ಸಂಪ್ರಾರ್ಥ್ಯ ಚ ಧಿಯಃ ಕರ್ಮಾಣಿ ಸ್ತುತೀರ್ವಾ ವಿ ತನ್ವಾಥೇ । ವಿಸ್ತಾರಯಥಃ ॥ ತನು ವಿಸ್ತಾರೇ ತಾನಾದಿಕಃ ॥ ತತ್ರ ದೃಷ್ಟಾಂತಃ । ಅಪಸೇವಾಪಸ್ವಿನೌ ಕುವಿಂದೌ ಯಥಾ ವಸ್ತ್ರ ವಸ್ತ್ರಾಣಿ ವಿಸ್ತಾರಯತಃ ॥ ಅಪಃಶಬ್ದಾನ್ಮತ್ವರ್ಥೀಯೋ ವಿನಿಃ । ತಸ್ಯ ಬಹುಲಂ ಛಂದಸೀತಿ ಲುಕ್ । ಪ್ರಾತಿಪದಿಕಸ್ವರೇಣಾಂತೋದಾತ್ತಃ । ಉಭಯತ್ರ ಸುಪ ಆಕಾರಃ ॥ ಈಮಯಂ ಯಜಮಾನಃ ಸಧ್ರೀಚೀನಾ ಸಧ್ರೀಚೀನೌ ಸಹಾಂಚನೌ ಯುವಾಂ ॥ ಸಹಪೂರ್ವಾದಂಚತೇಃ ಕ್ವಿನಿ ಸಹಸ್ಯ ಸಧ್ರಿರಿತಿ ಸಧ್ರ್ಯಾದೇಶಃ । ವಿಭಾಷಾಂಚೇರದಿಕ್‌ಸ್ತ್ರಿಯಾಮಿತಿ ಖಃ । ಸುಪ ಆಜಾದೇಶಃ ॥ ತೌ ಯಾತವೇ॥ ತುಮರ್ಥೇ ತವೇನ್ಪ್ರತ್ಯಯಃ ॥ ಅಭಿಮತಪ್ರಾಪ್ತ್ಯರ್ಥಂ ಪ್ರಾಜೀಗಃ । ಪ್ರಕರ್ಷೇಣ ಸ್ತೌತಿ । ಯದ್ವಾ । ಯುವಾಂ ಪ್ರತಿ ಸ್ತುತೀರುದ್ಗಿರತಿ ॥ ಗೃ ಶಬ್ದೇ । ಗೃ ನಿಗರಣೇ ವಾ । ಏತಾಭ್ಯಾಂ ಲುಙಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ದೀರ್ಘಶ್ಛಾಂದಸಃ । ಗುಣೇ ಕೃತೇ ಹಲ್‌ಙ್ಯಾದಿನಾ ತಿಪೋ ಲೋಪಃ ॥ ಕಿಂಚ ಸುದಿನೇವ ಸುದಿನೇಷ್ವನ್ನಾನಿ :ಯಥಾಲಂಕುರ್ವಂತಿ । ಯದ್ವಾ। ಸುದಿನಾ ಸುದಿನೌ । ಅಹೋರಾತ್ರಯೋಃ ಪ್ರವರ್ತಕತ್ವೇನ ತದ್ವಂತೌ ಸೂರ್ಯಾಚಂದ್ರಮಸೌ ಸ್ವರಶ್ಮಿಭಿರ್ಯಥಾನ್ನಾನ್ಯಲಂಕುರುತಃ । ತದ್ವದ್ಯುವಾಂ ಪೃಕ್ಷಃ । ಅನ್ನನಾಮೈತತ್ । ಭೋಕ್ತೃಭಿಃ ಸಂಪೃಚ್ಯಂತ ಇತಿ ಪೃಕ್ಷೋಽನ್ನಾನಿ । ಆ ತೆಂಸಯೇಥೇ । ಸಮಂತಾದಲಂಕುರುಥಃ ॥ ತಸಿ ಭೂಷ ಅಲಂಕಾರೇ ಚೌರಾದಿಕಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಉಭೌ**—ನೀವಿಬ್ಬರೂ । **ನೂನಂ**—ಈಗ । **ತದಿತ್**—ನಮ್ಮಿಂದ ಅರ್ಪಿತವಾದ ಸ್ತೋತ್ರಗಳನ್ನು ಅಥವಾ ಹವಿಸ್ಸನ್ನು । **ಅರ್ಥಯೇಥೇ**—ಅಪೇಕ್ಷಿಸುತ್ತೀರಿ । **ವಸ್ತ್ರಾ**—ವಸ್ತ್ರಗಳನ್ನು । **ಅಪಸೇವ**—ನೆಯ್ಗೆಯವರಿಬ್ಬರು ವಸ್ತ್ರಗಳನ್ನು ವಿಸ್ತರಿಸುವಂತೆ । **ಧಿಯಃ**—ನೀವು ನಮ್ಮ ಕರ್ಮಗಳನ್ನು । **ವಿ ತನ್ವಾಥೇ**—ವಿಸ್ತರಿಸುವಂತೆ ಮಾಡುತ್ತೀರಿ । **ಈಂ**—ಈ ಯಜಮಾನನು । **ಸಧ್ರೀಚೀನಾ**—ಒಟ್ಟಿಗೆ ಸೇರಿರುವ ನಿಮ್ಮನ್ನು । **ಯಾತವೇ**—ತನ್ನ ಇಷ್ಟಾರ್ಥಪ್ರಾಪ್ತಿಗಾಗಿ । **ಪ್ರ ಅಜೀಗಃ**—ಪ್ರಾರ್ಥಿಸಿ ಸ್ತುತಿಸುತ್ತಾನೆ । **ಸುದಿನೇವ**—ಉತ್ತಮವಾದ ದಿನನಿರ್ಮಾಪಕರಾದ ಸೂರ್ಯ ಮತ್ತು ಚಂದ್ರರಂತೆ । **ಪೃಕ್ಷಃ**—ಅನ್ನವನ್ನು । **ಆ ತೆಂಸಯೇಥೇ**—ಸುತ್ತಲೂ ಅಲಂಕರಿಸುತ್ತೀರಿ.

॥ ಭಾವಾರ್ಥ ॥

(ಎಲೈ ಅಶ್ವಿನೀದೇವತೆಗಳೇ,) ನೀವಿಬ್ಬರೂ ಈಗ ನಮ್ಮಿಂದ ಅರ್ಪಿತವಾದ ಹವಿಸ್ಸನ್ನು ಅಥವಾ ಸ್ತೋತ್ರವನ್ನು ಅಪೇಕ್ಷಿಸುತ್ತೀರಿ. ನೆಯ್ಗೆಯವರಿಬ್ಬರು ವಸ್ತ್ರಗಳನ್ನು ವಿಸ್ತರಿಸುವಂತೆ ನಮ್ಮ ಕರ್ಮಗಳನ್ನು ನೀವು ವಿಸ್ತರಿಸುವಂತೆ ಮಾಡುತ್ತೀರಿ. ಈ ಯಜಮಾನನು ಒಟ್ಟಿಗೆ ಸೇರಿರುವ ನಿಮ್ಮನ್ನು ತನ್ನ ಇಷ್ಟಾರ್ಥಪ್ರಾಪ್ತಿಗಾಗಿ ಪ್ರಾರ್ಥಿಸಿ ಸ್ತುತಿಸುತ್ತಾನೆ. ಉತ್ತಮವಾದ ದಿನನಿರ್ಮಾಪಕರಾದ ಸೂರ್ಯಚಂದ್ರರಂತೆ ನೀವು ಸುತ್ತಲೂ ಅನ್ನವನ್ನು ಅಲಂಕರಿಸುತ್ತೀರಿ.

## English Translation.

You both demand the oblation (Aswins), you spread out the ceremonials as two weavers (stretch) cloths; (the institutor of the rite) praised you

associated together to attain (his desires); like two fortunate days you bestow food.

‖ ವಿಶೇಷವಿಷಯಗಳು ‖

**ವಿ ತನ್ವಾಥೇ ಧಿಯೋ ವಸ್ತ್ರಾಪಸೇವ**–ನೇಯ್ಗೆಯವರು ವಸ್ತ್ರವನ್ನು ನೇಯುವಾಗ ಪ್ರಾರಂಭದಲ್ಲಿ ವಸ್ತ್ರವು ಸಣ್ಣದಾಗಿದ್ದು ಕ್ರಮಕ್ರಮವಾಗಿ ನೇಯ್ಯದಂತೆಲ್ಲಾ ದೊಡ್ಡದಾಗುವಂತೆ ನಾವು ಮಾಡುತ್ತಿರುವ ಯಜ್ಞಾದಿಕರ್ಮಗಳನ್ನು ನೀವು ಯೋಗ್ಯರೀತಿಯಲ್ಲಿ ಮುಂದುವರಿಸುತ್ತೀರಿ ಎಂದರೆ ನಿಮ್ಮ ಸಹಾಯದಿಂದ ಮತ್ತು ಅನುಗ್ರಹದಿಂದ ಯಜ್ಞಾದಿಕರ್ಮಗಳು ಸಾಂಗವಾಗಿ ನೆರವೇರುತ್ತವೆ ಎಂದಭಿಪ್ರಾಯವು. ಧಿಯಃ ಎಂಬ ಶಬ್ದವು, ಧೀಃ ಎಂಬ ಶಬ್ದದ ದ್ವಿತೀಯಾ ಬಹುವಚನವು. ಧೀಃ ಶಬ್ದವು ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩–೧)

**ಸುದಿನೇವ ಪೃಕ್ಷ ಆ ತಂಸಯೇಥೇ**— ಪೃಕ್ಷಶಬ್ದವು ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಪೃಕ್ಷಃ ಎಂದರೆ ಅನ್ನವು, ಆಹಾರವು ಎಂದರ್ಥ. ನಮಗೆ ಯಥೇಚ್ಛವಾದ ಆಹಾರವು ಸಿಕ್ಕುವ ದಿನವೇ ಸುದಿನವು ಆದ್ದರಿಂದ ಸುದಿನ ಅಥವಾ ಒಳ್ಳೆಯದಿನದಲ್ಲಿ ನಮಗೆ ಅನ್ನಪ್ರಾಪ್ತಿಯಾಗುವಂತೆ ನೀವು ನಮ್ಮನ್ನು ಅನುಗ್ರಹಿಸುತ್ತೀರಿ. ಅಥವಾ ಸುದಿನವೆಂದರೆ— **ಸುದಿನಾ ಸುದಿನೌ । ಅಹೋರಾತ್ರಯೋಃ ಪ್ರವರ್ತಕತ್ವೇನ ತದ್ವಂತೌ ಸೂರ್ಯಾಚಂದ್ರಮಸೌ ಸ್ವರಶ್ಮಿಭಿರ್ಯಥಾನ್ನಾನ್ಯಲಂಕುರುತಃ ।** ಅಹೋರಾತ್ರಿಗಳಿಗೆ ಸೂರ್ಯಚಂದ್ರರೇ ಕಾರಣಕರ್ತರು. ಅವರು ತಮ್ಮ ರಶ್ಮಿಗಳಿಂದ, ವೃಷ್ಟ್ಯಾದಿಕರ್ಮಗಳಿಂದ ಜನರಿಗೆ ಅನ್ನಾದ್ಯಾಹಾರಗಳನ್ನು ದೊರೆಯುವಂತೆ ಮಾಡುವವರು ಅದರಂತೆ ನೀವು(ಅಶ್ವಿನೀದೇವತೆಗಳು) ನಮಗೆ ಅನ್ನಾದಿಗಳನ್ನು ದೊರಕಿಸಿಕೊಟ್ಟು ಅನುಗ್ರಹಮಾಡುತ್ತೀರಿ ಎಂದಭಿಪ್ರಾಯವು

‖ ಸಂಹಿತಾಪಾಠಃ ‖

ಉಷ್ಟಾರೇವ ಫರ್ವರೇಷು ಶ್ರಯೇಥೇ ಪ್ರಾಯೋಗೇವ ಶ್ವಾತ್ರ್ಯಾ ಶಾಸುರೇಥಃ ।
ದೂತೇವ ಹಿ ಷ್ಠೋ ಯಶಸಾ ಜನೇಷು ಮಾಪ ಸ್ಥಾತಂ ಮಹಿಷೇವಾವಪಾನಾತ್ ‖ ೨ ‖

‖ ಪದಪಾಠಃ ‖

ಉಷ್ಟಾರಾऽಇವ । ಫರ್ವರೇಷು । ಶ್ರಯೇಥೇ ಇತಿ । ಪ್ರಾಯೋಗಾऽಇವ । ಶ್ವಾತ್ರ್ಯಾ । ಶಾಸುಃ । ಆ । ಇಥಃ ।
ದೂತಾऽಇವ । ಹಿ । ಸ್ಥಃ । ಯಶಸಾ । ಜನೇಷು । ಮಾ । ಅಪ । ಸ್ಥಾತಂ । ಮಹಿಷಾऽಇವ । ಅವऽಪಾನಾತ್ ‖ ೨ ‖

|| ಸಾಯಣಭಾಷ್ಯಂ ||

ಉಷ್ವಾರೇವ । ಉಷ್ವಃ ಕಾಮಯೇತೇ ಗಂತವ್ಯಂ ದೇಶಮಿತ್ಯುಷ್ವಾರೌ ಪ್ರಾಸಂಗಸ್ಯ ವೋಢಾರಾವನಡ್ವಾಹಾವಿವ || ವಶ ಕಾಂತಾವಿತ್ಯಸ್ಮಾತ್ತೃಚಿ ಛಾಂದಸಂ ಸಂಪ್ರಸಾರಣಮಿಡಭಾವಶ್ಚ || ತೌ ಯಥಾ ಸಂಪೂರ್ಣಘಾಸೇಷು ಸಂಚರತಃ ತದ್ವತ್ಫರ್ವರೇಷು ಸ್ತುತಿಭಿರ್ಹವಿರ್ಭಿಶ್ಚ ಪೂರಯಿತೃಷು ಜನೇಷು ಶ್ರಯೇಥೇ । ತಚ್ಛ್ರೀಕರಣಾರ್ಥಮಾಶ್ರಯಥಃ || ಫರ್ವತಿಃ ಪೂರಣಾರ್ಥಃ । ಅಸ್ಮಾದೌಣಾದಿಕೋ ರನ್ಪ್ರತ್ಯಯಃ || ಪ್ರಾಯೋಗೇವ ಪ್ರಯೋಕ್ತವ್ಯಾವನಡ್ವಾಹಾವಿವ || ಪ್ರಪೂರ್ವಾದ್ಯುಜೇಃ ಕರ್ಮಣಿ ಘಞ್ಯುಪಸರ್ಗಸ್ಯ ದೀರ್ಘಃ || ಥಾಥಾದಿಸ್ವರೇಣಾಂತೋದಾತ್ತಃ || ತೌ ಯಥಾ ಶ್ವಾತ್ರ್ಯಾ ಶ್ವಾತ್ರ್ಯಾ । ಶು ಕ್ಷಿಪ್ರಮತನಂ ಶ್ವಾತ್ರಂ । ತತ್ರ ಸಾಧೂ ಭವತಃ ತದ್ವತ್ । ಯದ್ವಾ । ಯುದ್ಧಾರ್ಥಂ ಪ್ರಯೋಕ್ತವ್ಯಾವಶ್ವಾವಿವ ಶ್ವಾತ್ರ್ಯಾ । ಶ್ವಾತ್ರಮಿತಿ ಧನನಾಮ । ತತ್ರ ಭವೌ । ಧನಸ್ಯ ಸಾಧಕಾವಿತ್ಯರ್ಥಃ । ತೌ ಯುವಾಂ ಶಾಸುಃ ಶಂಸಿತುಃ ಸ್ತೋತುಃ ಸ್ತುತಿಂ ಪ್ರತ್ಯೇಥಃ । ಆಗಚ್ಛಥಃ || ಇಣ್ ಗತೌ, ಆದಾದಿಕಃ || ದೂತೇವ ದೂತಾವಿವ ಯಥಾ ರಾಜ್ಞಃ ಪ್ರಿಯತಮೌ ದೂತೌ ಜನಪದೇಷು ಯಶಸ್ವಿನೌ ಭವತಃ ತದ್ವಜ್ಜನೇಷು ಸ್ತೋತೃಷು ಯಶಸಾ ಯಶಸ್ವಿನೌ ಸ್ಥೋ ಹಿ । ಭವಥಃ ಖಲು || ಅಸ್ತೇರ್ಲಟಿ ರೂಪಂ । ಹಿಯೋಗಾದನಿಘಾತಃ || ಮಹಿಷೇವ ಮಹಿಷಾವಿವ ಯಥಾ ಶ್ರಾಂತೌ ಮಹಿಷಾವವಪಾನಾತ್ । ಪೀಯತೇಽಸ್ಮಿನ್ನಿತಿ ಪಾನಂ ಹ್ರದಾದಿ || ಅಧಿಕರಣೇ ಲ್ಯುಟ್ || ಪಾನಮೇವಾವಪಾನಂ । ಸಂನಿಕೃಷ್ಟಾತ್ಪಾನಾದಪಗಚ್ಛತಃ ತದ್ವದ್ಯುವಾಮಸ್ಮದೀಯಾದ್ಧವಿಷಃ ಸ್ತೋತ್ರಾಚ್ಚ ಮಾಪ ಸ್ಥಾತಂ । ಮಾಪಕ್ರಮ್ಯ ತಿಷ್ಠತಂ || ತಿಷ್ಠತೇರ್ಲುಙಿ ಗಾತಿಸ್ಥೇತಿ ಸಿಚೋ ಲುಕ್ । ನ ಮಾಙ್ಯೋಗ ಇತ್ಯಡಭಾವಃ ||

|| ಪ್ರತಿಪದಾರ್ಥ ||

(ಎಲೈ ಅಶ್ವಿನೀದೇವತೆಗಳೇ) **ಉಷ್ವಾರೇವ**—ಮೇಯುವುದಕ್ಕಾಗಿ ಹುಲ್ಲುಗಾವಲಿಗೆ ಹೋಗುವ (ಎರಡು) ವೃಷಭಗಳಂತೆ (ನೀವು) । **ಫರ್ವರೇಷು**—ಸ್ತೋತ್ರಗಳನ್ನೂ ಹವಿಸ್ಸನ್ನೂ ಅರ್ಪಿಸಿ ನಿಮ್ಮನ್ನು ತೃಪ್ತಿಪಡಿಸುವ ಜನರಲ್ಲಿ । **ಶ್ರಯೇಥೇ**—ನೀವು ಆಶ್ರಯವನ್ನು ಪಡೆಯುತ್ತೀರಿ ಎಂದರೆ ಅವರಲ್ಲಿಗೆ ಹೋಗುತ್ತೀರಿ । **ಪ್ರಾಯೋಗೇವ**—ಗಾಡಿಗಳಿಗೆ ಹೂಡಲ್ಪಡುವ ಎತ್ತುಗಳಂತೆ । **ಶ್ವಾತ್ರ್ಯಾ**—ವೇಗಗಮನವುಳ್ಳವರಾಗಿ । **ಶಾಸುಃ**—ನಿಮ್ಮನ್ನು ಸ್ತುತಿಸುವ ಯಜಮಾನನ ಬಳಿಗೆ । **ಆ ಇಥಃ**—ಬರುತ್ತೀರಿ [ಅಥವಾ **ಶ್ವಾತ್ರ್ಯಾ**—ಯುದ್ಧದಲ್ಲಿ ಭಾಗವಹಿಸುವ ವೇಗಗತಿಯುಳ್ಳ ಅಶ್ವಗಳಂತೆ ಅಥವಾ ಯುದ್ಧದಲ್ಲಿ ಧನವನ್ನು ಗಳಿಸುವುದಕ್ಕೆ ಸಾಧಕವಾದ ಅಶ್ವಗಳಂತೆ । **ಶಾಸುಃ**—ನಿಮ್ಮನ್ನು ಸ್ತುತಿಸುತ್ತಿರುವ ಯಜಮಾನನ ಸ್ತುತ್ಯಭಿಮುಖವಾಗಿ । **ಆ ಇಥಃ**—ಬರುತ್ತೀರಿ] (ಮತ್ತು) । **ದೂತೇವ**—ರಾಜನಿಂದ ನಿಯಮಿತರಾದ ದೂತರು ಎಂದರೆ ರಾಜಭಟರು ಅಥವಾ ರಾಜನಿಗೆ ವಿಶ್ವಾಸಾರ್ಹರಾದ ರಾಜಪುರುಷರು ರಾಜ್ಯದಲ್ಲಿ ಜನರ ವಿಶ್ವಾಸವನ್ನು ಗಳಿಸುವಂತೆ (ನೀವು) । **ಜನೇಷು**—ನಿಮ್ಮನ್ನು ಸ್ತುತಿಸುವ ಜನರಲ್ಲಿ । **ಯಶಸಾ**—ಕೀರ್ತಿವಂತರಾಗಿ ಎಂದರೆ ಮೆಚ್ಚುಗೆಯನ್ನು ಪಡೆದವರಾಗಿ । **ಸ್ಥಃ ಹಿ**—ಆಗಿದ್ದೀರಲ್ಲವೇ ? (ಇದಲ್ಲದೆ) । **ಮಹಿಷೇವ**—ಬಿಸಲಿನಿಂದ ಬಳಲಿದ ಎಮ್ಮೆಗಳು । **ಅವಪಾನಾತ್**—ನೀರಿರುವ ಹಳ್ಳದಿಂದ ಎದ್ದು ಬರದಿರುವಂತೆ (ನೀವು) ನಮ್ಮ ಹವಿಸ್ಸನ್ನು, ಅಥವಾ ಸ್ತೋತ್ರವನ್ನು । **ಮಾ ಅಪ ಸ್ಥಾತಂ**—ಬಿಟ್ಟು ಹೋಗುವುದಿಲ್ಲ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ ಹುಲ್ಲನ್ನು ಮೇಯುವುದಕ್ಕಾಗಿ ಹುಲ್ಲುಗಾವಲಿಗೆ ಯಾರ ಪ್ರೇರಣೆಯೂ ಇಲ್ಲದೆ ತಾವಾಗಿಯೇ ಹೋಗುವ ವೃಷಭಗಳಂತೆ ನೀವು ನಿಮ್ಮನ್ನು ಹವಿಸ್ಸಿನಿಂದಲೂ ಸ್ತೋತ್ರಗಳಿಂದಲೂ ತೃಪ್ತಿಪಡಿಸುವ ಯಜಮಾನರಲ್ಲಿಗೆ ಹೋಗುತ್ತೀರಿ. ಗಾಡಿಗೆ ಕಟ್ಟಿದ ಎತ್ತುಗಳು ಹೇಗೆ ಬೇಗಬೇಗನೆ ಹೋಗುವವೋ ಅಥವಾ ಯುದ್ಧದಲ್ಲಿ ಉಪಯೋಗಿಸಲ್ಪಡುವ ಕುದುರೆಗಳು ಹೇಗೆ ಮುನ್ನುಗ್ಗಿ ವೇಗವಾಗಿ ಹೋಗುವವೋ ಅಥವಾ ಯುದ್ಧದಲ್ಲಿ ಧನವನ್ನು ಗಳಿಸಿ ತರುವುದಕ್ಕಾಗಿ ಅಶ್ವಗಳು ಹೇಗೆ ವೇಗವಾಗಿ ಹೋಗುವವೋ ಅದರಂತೆ ನೀವು ಅತಿಶಯವಾದ ವೇಗದಿಂದ ಯಜಮಾನನ ಸ್ತುತಿಗಭಿಮುಖವಾಗಿ ಎಂದರೆ ಅವನ ಸ್ತುತಿಯನ್ನು ಕೇಳುವುದಕ್ಕಾಗಿ ಬೇಗನೆ ಬರುತ್ತೀರಿ. ಮತ್ತು ಪ್ರೀತಿಗೆ ವಿಶ್ವಾಸಾರ್ಹರಾದ ರಾಜಪುರುಷರು ರಾಷ್ಟ್ರದ ಜನರಲ್ಲಿ ನಂಬಿಕೆ ವಿಶ್ವಾಸಗಳನ್ನು ಹೇಗೆ ಗಳಿಸುವರೋ ಅದರಂತೆ ನೀವು ನಿಮ್ಮನ್ನು ಸ್ತುತಿಸುವ ಜನರ ಆದರವಿಶ್ವಾಸಗಳನ್ನು ಗಳಿಸುತ್ತೀರಿ. ಇದಲ್ಲದೆ ಬಿಸಿಲಿನ ಬೇಗೆಯಿಂದ ಬಳಲಿದ ಎಮ್ಮೆಗಳು ನೀರಿರುವ ಹಳ್ಳಗಳಲ್ಲಿ ಬಿದ್ದು ಶ್ರಮಪರಿಹಾರಮಾಡಿಕೊಳ್ಳುತ್ತಿರುವಾಗ ಆ ನೀರಿನಿಂದ ಹೇಗೆ ಎದ್ದು ಬರುವುದಿಲ್ಲವೋ ಅದರಂತೆ ನೀವು ಯಜಮಾನನ ಹವಿಸ್ಸನ್ನು ಅಥವಾ ಸ್ತೋತ್ರವನ್ನು ಸೇವಿಸದೆ ಹಿಂತಿರುಗಿ ಹೋಗುವುದಿಲ್ಲ.

## English Translation.

Like two longing oxen (to the pastures), you have recourse to those who fill you (with oblations); you approach like two horses prepared for the fray, employed to bring treasure · you are like two (royal) messengers renowned among the people; turn not away (from our) oblation) like two buffaloes from the drinking-trough.

|| ವಿಶೇಷವಿಷಯಗಳು ||

**ಉಷ್ಟಾರೇವ**— ಉಷ್ಟಃ ಕಾಮಯೇತೇ ಗಂತವ್ಯಂ ದೇಶಮಿತ್ಯುಷ್ಟಾರೌ ಪ್ರಾಸಂಗಸ್ಯ ವೋಢಾರಾವನಡ್ವಾಹಾವಿವ । ತೌ ಯಥಾ ಸಂಪೂರ್ಣಘಾಸೇಷು ಸಂಚರತಃ ತದ್ವತ್ ॥ ವಶ ಕಾಂತೌ ಅಪೇಕ್ಷಿಸು ಎಂಬ ಧಾತುವಿನಿಂದ ಉಷ್ಟೃಶಬ್ದದ ನಿಷ್ಪತ್ತಿಯಾಗಿದೆ. ಅಪೇಕ್ಷಿಸುವ (ಎರಡು) ಪ್ರಾಣಿಗಳು ಎಂದು ಉಷ್ಟಾರಾ ಎಂಬ ಶಬ್ದಕ್ಕೆ ಅರ್ಥವು. ಏನನ್ನು ಅಪೇಕ್ಷಿಸುವ ಎಂದರೆ ಪ್ರಕೃತಸಂದರ್ಭದಲ್ಲಿ ಹುಲ್ಲಿನಿಂದ ಕೂಡಿದ ಹುಲ್ಲುಗಾವಲಿನಲ್ಲಿ ಇರುವ ಹುಲ್ಲನ್ನು ಮೇಯುವುದಕ್ಕಾಗಿ ಹೋಗುವುದನ್ನು ಎಂದಭಿಪ್ರಾಯವು. ಆದ್ದರಿಂದ ಹುಲ್ಲುಮೇಯುವುದಕ್ಕಾಗಿ ಹುಲ್ಲಿರುವ ಪ್ರದೇಶವನ್ನು ಹುಡುಕಿಕೊಂಡು ಹೋಗುವ ವೃಷಭಗಳಂತೆ ಅಶ್ವಿನೀದೇವತೆಗಳಾದ ನೀವು ನಿಮ್ಮನ್ನು ಸ್ತುತಿಸುವ ಜನರನ್ನು ಹುಡುಕಿಕೊಂಡು ಅವರ ಬಳಿಗೆ ಹೋಗುತ್ತೀರಿ ಎಂದಭಿಪ್ರಾಯವು.

**ಘರ್ವರೀಷು**—ಘರ್ವತಿಃ ಪೂರಣಾರ್ಥಃ । ಸ್ತುತಿಭಿಃ ಹರ್ವಿರ್ಭಿಶ್ಚ ಪೂರಯಿತೃಷು ಜನೇಷು । ಘರ್ವತಿಧಾತುವಿಗೆ ತುಂಬು, ತೃಪ್ತಿಪಡಿಸು ಎಂದರ್ಥ. ಆ ಧಾತುವಿನಿಂದ ನಿಷ್ಪನ್ನವಾದ ಘರ್ವರೀಷು ಎಂಬ ಶಬ್ದಕ್ಕೆ ಇಲ್ಲಿ ಸ್ತೋತ್ರಗಳಿಂದಲೂ, ಹವಿಸ್ಸಿನಿಂದಲೂ ನಿಮ್ಮನ್ನು ತೃಪ್ತಿಪಡಿಸುವ ಜನರಲ್ಲಿ **ಶ್ರಯಥೇ**—ಆಶ್ರಯವನ್ನು ಪಡೆಯುತ್ತೀರಿ ಎಂದರೆ ಅವರ ಬಳಿಗೆ ಹೋಗುತ್ತೀರಿ.

**ಪ್ರಾಯೋಗೇವ ಶ್ವಾತ್ರ್ಯಾ ಶಾಸುಃ ಆ ಇಥಃ**--ಪ್ರಾಯೋಗಾ ಎಂದರೆ **ಪ್ರಯೋಕ್ತವ್ಯಾವನಡ್ವಾಹೌ** ಗಾಡಿಗೆ ಹೂಡುವ ಎತ್ತುಗಳು. ಅಥವಾ ಯುದ್ಧಾರ್ಥವಾಗಿ **ಪ್ರಯೋಕ್ತವ್ಯಾವಶ್ವೌ** ಉಪಯೋಗಿಸಲ್ಪಡುವ ಕುದುರೆಗಳು **ಶ್ವಾತ್ರ್ಯಾ-ಶು ಕ್ಷಿಪ್ರಮುತ್ತರಂ** ವೇಗಗಮನವುಳ್ಳ ಎಂದರ್ಥವು ಯುದ್ಧದಲ್ಲಿ ವೇಗವಾಗಿ ಮುನ್ನುಗ್ಗುವ ಕುದುರೆಗಳು ಅಥವಾ ಶ್ವಾತ್ರ್ಯ ವೆಂದರೆ ಧನಕ್ಕೂ ಹೆಸರು (ನಿ. ೩-೯) ಯುದ್ಧದಲ್ಲಿ ಧನವನ್ನು ಗೆದ್ದು ತರಲು ಸಾಧನ ಭೂತವಾದ ಅಶ್ವಗಳಿಗೆ ಶ್ವಾತ್ರ್ಯ ಎಂದೂ ಹೆಸರು ಇಂತಹ ಅಶ್ವಗಳಂತೆ ಅಥವಾ ಎತ್ತುಗಳಂತೆ ವೇಗಗಮನವುಳ್ಳವರಾಗಿ ನೀವು ನಿಮ್ಮನ್ನು ಸ್ತುತಿಸುವ ಯಜಮಾನನ ಸ್ತುತ್ಯಭಿಮುಖವಾಗಿ ಎಂದರೆ ಸ್ತುತಿಯನ್ನು ಕೇಳುವುದಕ್ಕಾಗಿ ಬರುತ್ತೀರಿ.

**ದೂತೇವ ಹಿ ಸ್ಥಃ-ಯಶಸಾ ಜನೇಷು**--ರಾಜನ ವಿಶ್ವಾಸಕ್ಕೆ ಪಾತ್ರರಾದ ರಾಜಪುರುಷರು ದೇಶದ ಜನರ ಆದರವಿಶ್ವಾಸಗಳಿಗೂ ಪಾತ್ರರಾಗುವಂತೆ ನೀವು ನಿಮ್ಮನ್ನು ಸ್ತುತಿಸುವ ಜನರ ಮೆಚ್ಚುಗೆಯನ್ನು ಪಡೆದಿರುತ್ತೀರಿ.

**ಮಾ ಅಪ ಸ್ಥಾತಂ ಮಹಿಷೇವ ಅವಪಾನಾತ್**--ಪೀಯತೇಽಸ್ಮಿನ್ನಿತಿ ಪಾನಂ ಹ್ರದಾದಿ | ಪಾನಮೇವಾವಪಾನಂ | ಕುಡಿಯುವ ನೀರು ಇರುವ ಹಳ್ಳಕ್ಕೆ ಪಾನವೆಂದು ಹೆಸರು. ಅವಪಾನವೆಂದರೂ ಅದೇ ಅರ್ಥವು. ಅಥವಾ ಅವಪಾನವೆಂದರೆ ಪಾನಮಾಡುವುದಕ್ಕೆ ಅರ್ಹವಲ್ಲದ ಕೊಳಕುನೀರಿನಿಂದ ಕೂಡಿರುವ ಹಳ್ಳವು ಎಂದೂ ಅರ್ಥಮಾಡಬಹುದು ಇಂತಹ ಹಳ್ಳದಲ್ಲಿ ಬಿಸಲಿನ ಬೇಗೆಯನ್ನು ಪರಿಹಾರಮಾಡಿಕೊಳ್ಳುವುದಕ್ಕಾಗಿ ಎಮ್ಮೆಗಳು ಬಿದ್ದಿರುವುದು ಎಲ್ಲರಿಗೂ ತಿಳಿದ ವಿಷಯವು ಈ ಎಮ್ಮೆಗಳು ಆ ನೀರಿನಿಂದ ಬೇಗನೆ ಎದ್ದುಹೋಗುವುದಿಲ್ಲ. ಬಹುಕಾಲ ಅದರಲ್ಲಿದ್ದು ತಮ್ಮ ಶ್ರಮ ಪರಿಹಾರಮಾಡಿಕೊಂಡೇ ಹೋಗುತ್ತವೆ. ಅದರಂತೆ ಅಶ್ವಿನೀದೇವತೆಗಳಾದ ನೀವು ನಿಮಗೆ ಸ್ತುತಿಯನ್ನು, ಅಥವಾ ಹವಿಸ್ಸನ್ನು ಅರ್ಪಿಸಿದ ಜನರ ಬಳಿಯಿಂದ ಬೇಗನೆ ಹೊರಟು ಹೋಗುವುದಿಲ್ಲ. ಅವರ ಸ್ತುತಿಯನು ಸ್ವೀಕರಿಸಿಯೇ ಹೋಗುತ್ತೀರಿ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

**ಸಾಕಂಯುಜಾ ಶಕುನಸ್ಯೇವ ಪಕ್ಷಾ ಪಶ್ವೇವ ಚಿತ್ರಾ ಯಜುರಾ ಗಮಿಷ್ಟಂ।**
**ಅಗ್ನಿರಿವ ದೇವಯೋರ್ದೀದಿವಾಂಸಾ ಪರಿಜ್ಮಾನೇವ ಯಜಥಃ ಪುರುತ್ರಾ॥೩॥**

॥ ಪದಪಾಠಃ॥

**ಸಾಕಂಽಯುಜಾ । ಶಕುನಸ್ಯಽಇವ । ಪಕ್ಷಾ । ಪಶ್ವಾಽಇವ । ಚಿತ್ರಾ । ಯಜುಃ । ಆ । ಗಮಿಷ್ಟಂ ।**
**ಅಗ್ನಿಃಽಇವ । ದೇವಽಯೋಃ । ದೀದಿಽವಾಂಸಾ । ಪರಿಜ್ಮಾನಾಽಇವ । ಯಜಥಃ । ಪುರುಽತ್ರಾ ॥ ೩ ॥**

॥ ಸಾಯಣಭಾಷ್ಯಂ ॥

**ಶಕುನಸ್ಯೇವ ಪಕ್ಷಿಣ ಇವ ಯಥಾ ಪಕ್ಷಿಣಃ ಪಕ್ಷಾ ಪಕ್ಷೌ ಸಂಹತ್ಯ ವರ್ತಮಾನೌ ತದ್ವತ್ಸಾಕಂ-ಯುಜಾ ಸಾಕಂಯುಜೌ ಸಹಾವಿಯುಜ್ಯ ವರ್ತಮಾನೌ ಭವಥಃ ॥ ಯುಜೇಃ ಸತ್ಸೂದ್ವಿಷೇತ್ಯಾದಿನಾ**

ಕ್ವಿಪ್ ॥ ಪಶ್ವೇವ ಪಶೂ ಇವ ॥ ಸುಪ ಆಕಾರಃ ॥ ತೌ ಯಥಾ ಚಾಯನೀಯೌ ತದ್ವಚ್ಚಿತ್ರಾ ಚಿತ್ರೌ ಚಾಯನೀಯೌ ಯುವಾಂ ಯಜುರ್ಯಜನಾವಸ್ಮದೀಯಾವಾ ಗಮಿಷ್ಟಂ । ಆಗಚ್ಛತಂ ॥ ಯಜೇರೌಣಾದಿಕೋ ಭಾವ ಉಸಿನ್ಪ್ರತ್ಯಯಃ । ಗಮಿಷ್ಟಂ । ಗಮೇರ್ಲೇಟಿ ಸಿಬ್ಬಹುಲಂ ಲೇಟೀತಿ ಸಿಪ್ ॥ ಸಿಪ ಆರ್ಧಧಾತುಕತ್ವಾದ್ಗಮೇರಿಟ್ ಪರಸ್ಮೈಪದೇಷು । ಪಾ. ೭-೨-೫೮ । ಇತೀಡಾಗಮಃ ॥ ದೇವಯೋರ್ದೇವಾನಿಚ್ಛತೋ ಯಜಮಾನಸ್ಯ ಯಜ್ಞೇಽಗ್ನಿರಿವಾಗ್ನಿರ್ಯಥಾ ಹವಿರ್ಭಿಃ ಸ್ತುತಿಭಿಶ್ಚ ದೀಪ್ಯತೇ ತದ್ವದ್ದೀದಿವಾಂಸಾ ದೀದಿವಾಂಸೌ ಸ್ತುತಿಭಿರ್ದೀಪ್ತೌ ಭವಥಃ ॥ ದೀವ್ಯತೇಃ ಕ್ವಸೌ ವಸ್ವೇಕಾಜಾದಿತಿ ನಿಯಮಾದಿಡಭಾವಃ । ವಲಿ ಲೋಪೇ ತುಜಾದಿತ್ವಾದಭ್ಯಾಸಸ್ಯ ದೀರ್ಘಃ ॥ ಪರಿಜ್ಮಾನೇವ ಪರಿಜ್ಮಾನಾವಿವ ಪರಿತೋಽಜತೋ ಗಚ್ಛತಃ ಕರ್ಮಕರಣಾರ್ಥಮಿತಿ ಪರಿಜ್ಮಾನಾವಧ್ವರ್ಯೂ ಇವ ಸ್ಥಿತೌ ಯುವಾಂ ಪುರುತ್ರಾ ಬಹುಷು ದೇಶೇಷು ಯಜಥಃ । ದೇವಾನ್ಪೂಜಯಥಃ । ಅಶ್ವಿನೌ ಹಿ ದೇವಾನಾಮಧ್ವರ್ಯೂ ಇತ್ಯಾಮ್ನಾನಾತ್ । ಐ. ಬ್ರಾ. ೧-೧೮ । ಯದ್ವಾ । ಪರಿಜ್ಮಾನೇವ ಪರಿತೋ ಗಂತಾರೌ ಪುರೋ ವಾ ಪಶ್ಚಾದ್ವಾ ತೌ ಯಥಾ ಬಹುಷು ದೇಶೇಷು ಯಜಥಃ ಸಂಗಚ್ಛಮಾನೌ ಭವಥಃ ॥ ಯಜ ದೇವಪೂಜಾಸಂಗತಿಕರಣದಾನೇಷು । ಪುರುತ್ರಾ । ದೇವಮನುಷ್ಯೇತ್ಯಾದಿನಾ ತ್ರಾಪ್ರತ್ಯಯಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) । **ಶಕುನಸ್ಯ**—ಪಕ್ಷಿಯ । **ಪಕ್ಷಾ ಇವ**—ಎರಡು ರೆಕ್ಕೆಗಳು ಸೇರಿಕೊಂಡಿರುವಂತೆ । **ಸಾಕಂಯುಜಾ**—ಒಟ್ಟಿಗೆ ಸೇರಿಕೊಂಡಿರುವ ನೀವು । **ಪಶ್ವೇವ**—ಎರಡು ಪಶುಗಳಂತೆ । **ಚಿತ್ರಾ**—ಆಕರ್ಷಕರಾಗಿ । **ಯಜುಃ**—ಯಜ್ಞಸ್ಥಾನಕ್ಕೆ । **ಆ ಗಮಿಷ್ಟಂ**—ಬರುತ್ತೀರಿ । **ದೇವಯೋಃ**—ಯಜಮಾನನ ಯಜ್ಞದಲ್ಲಿ । **ಅಗ್ನಿರಿವ**—ಅಗ್ನಿಯು ಪ್ರಕಾಶಿಸುವಂತೆ । **ದೀದೀವಾಂಸಾ**—ಪ್ರಕಾಶಿಸುವ ನೀವು । **ಪರಿಜ್ಮಾನೇವ**—ಕರ್ಮಾರ್ಥವಾಗಿ ಸಂಚರಿಸುವ ಅಧ್ವರ್ಯುಗಳಂತೆ । **ಪುರುತ್ರಾ**—ಅನೇಕ ದೇಶಗಳಲ್ಲಿ । **ಯಜಥಃ**—ದೇವತೆಗಳನ್ನು ಪೂಜಿಸುತ್ತೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪಕ್ಷಿಯು ಎರಡು ರೆಕ್ಕೆಗಳು ಸೇರಿಕೊಂಡಿರುವಂತೆ ಒಟ್ಟಿಗೆ ಸೇರಿಕೊಂಡಿರುವ ನೀವು ಎರಡು ಪಶುಗಳಂತೆ ಆಕರ್ಷಕವಾಗಿ ಯಜ್ಞಸ್ಥಾನಕ್ಕೆ ಬರುತ್ತೀರಿ. ಯಜಮಾನನ ಯಜ್ಞದಲ್ಲಿ ಅಗ್ನಿಯು ಪ್ರಕಾಶಿಸುವಂತೆ ಪ್ರಕಾಶಿಸುವ ನೀವು ಕರ್ಮಾರ್ಥವಾಗಿ ಸಂಚರಿಸುವ ಅಧ್ವರ್ಯುಗಳಂತೆ ಅನೇಕ ದೇಶಗಳಲ್ಲಿ ದೇವತೆಗಳನ್ನು ಪೂಜಿಸುತ್ತೀರಿ.

## English Translation.

Connected together like the two wings of a bird, you come to the sacrifice like two choice animals; radiant as Agni (at the offering) of the devout (worshipper), like two perambulating priests yon celebrate worship in many places.

॥ ವಿಶೇಷವಿಷಯಗಳು ॥

**ಶಕುನಸ್ಯೇವ ಪಕ್ಷಾ ಸಾಕಂಯುಜಾ—ಪಕ್ಷಿಣಃ ಪಕ್ಷಾವಿವ ಸಹಾವಿಯುಜ್ಯ ವರ್ತಮಾನೌ ॥** ಪಕ್ಷಿಯ ಎಡಬಲದ ಎರಡು ರೆಕ್ಕೆಗಳು ಯಾವರೀತಿ ಒಂದೇ ಸಮನಾಗಿಯೂ ಒಂದೇ ವಿಧವಾಗಿಯೂ ಪಕ್ಷಿಗೆ ಅಂಟಿಕೊಂಡು ಇರುವುವೋ ಅದರಂತೆ ಅಶ್ವಿನೀದೇವತೆಗಳಾದ ನೀವು ಒಂದೇ ವಿಧವಾದ ರೂಪ ಮತ್ತು ಆಕಾರವುಳ್ಳವರಾಗಿಯೂ ಒಬ್ಬರನ್ನೊಬ್ಬರು ಅಗಲದೆ ಯಾವಾಗಲೂ ಜೊತೆಯಲ್ಲಿಯೇ ಇರುವವರಾಗಿಯೂ ಇರುತ್ತೀರಿ.

**ಪಶ್ವೇವ ಚಿತ್ರಾ—** ಚೆನ್ನಾಗಿ ಬೆಳೆದು ಧಷ್ಟಪುಷ್ಟವಾಗಿರುವ ಎರಡು ಪಶುಗಳು ಯಾವರೀತಿ ನೋಡುವುದಕ್ಕೆ ಸುಂದರವಾಗಿ ಕಾಣುವವೋ ಅದರಂತೆ ನೀವಿಬ್ಬರೂ ಆಕರ್ಷಕವಾಗಿ ಕಾಣುತ್ತೀರಿ.

**ಅಗ್ನಿರಿವ ದೇವಯೋರ್ನೇಃ ದೀದಿವಾಂಸಾ—ದೇವಾನಿಚ್ಛತೋ ಯಜಮಾನಸ್ಯ ಯಜ್ಞೇ ಅಗ್ನಿರ್ಯಥಾ ಹವಿರ್ಭಿಃ ಸ್ತುತಿಭಿಶ್ಚ ದೀಪ್ಯತೇ ತದ್ವತ್ ಸ್ತುತಿಭಿರ್ದೀಪ್ತೌ ಭವತಃ ॥** ದೇವತೆಗಳನ್ನು ಪೂಜಿಸಲಿಚ್ಛಿಸುವ ಯಜಮಾನನ ಯಜ್ಞಗೃಹದಲ್ಲಿ ಪ್ರತಿಷ್ಠಾಪಿತವಾಗಿರುವ ಅಗ್ನಿಯು ಆಜ್ಯಾದಿ ಹವಿಸ್ಸುಗಳಿಂದಲೂ ಸ್ತೋತ್ರಾದಿಗಳಿಂದಲೂ ಯಾವರೀತಿ ಪ್ರಜ್ವಲಿಸುತ್ತಾ ಬೆಳಗುತ್ತಿರುವುದೋ ಅದರಂತೆ ನೀವು ಯಜಮಾನರ ಸ್ತೋತ್ರಾದಿಗಳಿಂದ ಸಂತುಷ್ಟರಾಗಿ ಯಜ್ಞವೇದಿಯಲ್ಲಿ ಪ್ರಕಾಶಿಸುತ್ತಿರುವಿರಿ.

**ಪರಿಜ್ಮಾನೇವ ಯಜಥಃ ಪುರುತ್ರಾ—ಪರಿಜ್ಮಾನಾ ಎಂದರೆ ಪರಿತೋ ಅಜತೋ ಗಚ್ಛತಃ ।** ಯಜ್ಞವೇದಿಯಲ್ಲಿ ಕಾರ್ಯನಿರ್ವಹಣೆಗಾಗಿ ಇಲ್ಲಿಂದಲ್ಲಿಗೆ ಸಂಚರಿಸುತ್ತಿರುವ ಎಂದರ್ಥವು. ಋತ್ವಿಕ್ಕುಗಳಲ್ಲಿ ಹೋತೃ, ಉದ್ಗಾತೃ, ಬ್ರಹ್ಮ ಮೊದಲಾದವರು ಯಜ್ಞವೇದಿಯ ಒಂದು ನಿರ್ದಿಷ್ಟಸ್ಥಳದಲ್ಲಿ ಕುಳಿತು ತಾವು ಪಠಿಸಬೇಕಾದ ಮಂತ್ರಗಳನ್ನು ಆಯಾಸಂದರ್ಭಕ್ಕನುಸಾರವಾಗಿ ಪಠಿಸುವರು. ಇದು ಇವರ ಕರ್ತವ್ಯವು. ಆದರೆ ಅಧ್ವರ್ಯುವಿನ ಕರ್ತವ್ಯವು ಒಂದು ಸ್ಥಳದಲ್ಲಿ ಕುಳಿತು ಮಾಡುವುದಾಗಿಲ್ಲ. ಅವನು ಯಜ್ಞಸಂಬಂಧವಾದ ಎಲ್ಲಾ ಕಾರ್ಯಗಳಲ್ಲಿಯೂ ಭಾಗವಹಿಸಿ ಅವುಗಳನ್ನು ನೋಡಿಕೊಳ್ಳಬೇಕಾದುದರಿಂದ ಅವನು ಅಲ್ಲಿಂದಿಲ್ಲಿಗೆ ಓಡಾಡಬೇಕಾಗಿರುವುದು. ಯಜಮಾನನೂ ಇತರ ಋತ್ವಿಕ್ಕುಗಳೂ ತಮ್ಮಕೆಲಸಕಾರ್ಯಗಳನ್ನು ಸರಿಯಾಗಿ ಕಾಲಕಾಲಕ್ಕೆ ನೆರವೇರಿಸುತ್ತಿರುವರೇ ಇಲ್ಲವೇ ಎಂಬುದನ್ನು ಸುತ್ತಲೂ ಓಡಾಡುತ್ತಾ ನೋಡಬೇಕಾಗಿರುವುದು. ಆದ್ದರಿಂದ ಪರಿಜ್ಮಾ ಎಂಬ ಶಬ್ದವು ಅಧ್ವರ್ಯುವಿಗೆ ಅನ್ವಯಿಸುವುದು. ಇಲ್ಲಿ ಅಶ್ವಿನೀದೇವತೆಗಳು— **ಅಶ್ವಿನೌ ಹಿ ದೇವಾನಾಮಧ್ವರ್ಯೂ ಆಸ್ತಾಂ** (ಐ. ಬ್ರಾ. ೧-೧೮) ದೇವತೆಗಳಿಗೆ ಅಧ್ವರ್ಯುಗಳಾದ್ದರಿಂದ ಇವರೂ ಸಹ ಮಾನವರ ಅಧ್ವರ್ಯುಗಳಂತೆ ಸುತ್ತಲೂ ಸಂಚರಿಸುತ್ತಾ ತಮ್ಮ ಕರ್ತವ್ಯವನ್ನು ನೆರವೇರಿಸುವರು ಆದ್ದರಿಂದ ಇಲ್ಲಿ— ಅನೇಕದೇಶಗಳಲ್ಲಿ ಅನೇಕ ಯಜಮಾನರು ನೆರವೇರಿಸುವ ಯಜ್ಞಾದಿಗಳಿಗೆ ಹೋಗಿ ಅವರ ಯಜ್ಞಗಳನ್ನು ನೆರವೇರಿಸುವುದಕ್ಕೆ ಸಹಾಯಭೂತರಾಗಿರುವರು ಎಂಬ ಅಭಿಪ್ರಾಯವನ್ನು ಇಲ್ಲಿ ಸೂಚಿಸಲಾಗಿದೆ.

॥ ಸಂಹಿತಾಪಾಠಃ ॥

ಆಪೀ ವೋ ಅಸ್ಮೇ ಪಿತರೇವ ಪುತ್ರೋಗ್ರೇವ ರುಚಾ ನೃಪತೀವ ತುರ್ಯೈ ।
ಇರ್ಯೇವ ಪುಷ್ಟ್ಯೈ ಕಿರಣೇವ ಭುಜ್ಯೈ ಶ್ರುಷ್ಟೀವಾನೇವ ಹವಮಾಗಮಿಷ್ಟಂ ॥ ೪ ॥

॥ ಪದಪಾಠಃ ॥

ಆಪೀ ಇತಿ । ವಃ । ಅಸ್ಮೇ ಇತಿ । ಪಿತರಾಽಇವ । ಪುತ್ರಾ । ಉಗ್ರಾಽಇವ । ರುಚಾ । ನೃಪತೀ ಇವೇತಿ ನೃಪತೀಽಇವ । ತುರ್ಯೈ ।

ಇರ್ಯಾಽಇವ । ಪುಷ್ಟ್ಯೈ । ಕಿರಣಾಽಇವ । ಭುಜ್ಯೈ । ಶ್ರುಷ್ಟೀವಾನಾಽಇವ । ಹವಂ । ಆ । ಗಮಿಷ್ಟಂ ॥೪॥

॥ ಸಾಯಣಭಾಷ್ಯಂ ॥

ಅಸ್ಮೇ ಅಸ್ಮಾಕಂ ವೋ ಯುವಾಂ । ಪೂಜಾಯಾಂ ಬಹುವಚನಂ । ಆಪೀ ಪ್ರಾಪ್ತೌ ಬಂಧುಭೂತೌ ಭವಥಃ । ಪಿತರೇವ ಪಿತರಾವಿವ ಯಥಾತ್ರ ಪಿತರೌ ಪ್ರತಿ ಪುತ್ರಾ ಪುತ್ರೌ ಬಂಧುಭೂತೌ ಭವತಃ ತದ್ವತ್ । ಯದ್ವಾ । ಪುತ್ರಾ ॥ ಷಷ್ಠ್ಯಾ ಆಕಾರಃ ॥ ಪುತ್ರಾಣಾಂ ಪಿತರೌ ಬಂಧೂ । ತಥೋಗ್ರೇವೋಗ್ರಾವಿವ ಯಥೋಗ್ರೌ ಸ್ವತೇಜಸೋದ್ಗೂರ್ಣಾವಗ್ನ್ಯಾದಿತ್ಯೌ ಯಥಾ ರೋಚಮಾನೌ ಭವತಃ ತದ್ವದ್ರುಚಾ ದೀಪ್ತ್ಯಾ ಯುಕ್ತೌ ॥ ರೋಚತೇರ್ಭಾವೇ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥ ಯದ್ವಾ। ರುಚಾ ರೋಚಮಾನೌ ಭವಥಃ ॥ ರೋಚತೇರಿಗುಪಧಲಕ್ಷಣಃ ಕಃ । ಸುಪ ಆಕಾರಃ ॥ ನೃಪತೀವ ಯಥಾ ನೃಣಾಂ ಪಾಲಯಿತಾರೌ ರಾಜಾನೌ ಸಂಭ್ರಮಯುಕ್ತಾಯೈ ಸೇನಾಯೈ ರಕ್ಷಕತ್ವೇನ ಭವತಃ ತದ್ವತ್ತುರ್ಯೈ ಕರ್ಮಾರ್ಥಂ ತ್ವರಮಾಣಾಯೈ ಸಂಭ್ರಮವತ್ಯೈ ಜನತಾಯೈ ಯುವಾಮಭೀಷ್ಟದಾತೃತ್ವೇನ ಭವಥಃ ॥ ತುರ ತ್ವರಣೇ । ಇಗುಪಧಾತ್ಕಿತ್ । ಉ. ೪-೧೧೯ । ಇತೀನ್ಪ್ರತ್ಯಯಃ । ಕೃದಿಕಾರಾದಕ್ತಿನಃ । ಪಾ. ೪-೧-೪೫ । ಇತಿ ಙೀಷ್ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ ॥ ಇರ್ಯೇವೇರ್ಯಾವಿವ । ಇರಾನ್ನಂ । ತತ್ರ ಭವೌ ॥ ಭಾವಾರ್ಥೇ ಯತ್ ॥ ಅನ್ನವಂತಾವಾಢ್ಯೌ ಸ್ವಜನಪರಿತೋಷಣಾಯ ಭವತಃ । ತದ್ವದ್ಯುವಾಂ ಪುಷ್ಟ್ಯೈ ಧನಾದಿದಾನೇನಾಸ್ಮಾಕಂ ಪರಿತೋಷಣಾಯ ಭವಥಃ । ಕಿರಣೇವ ಕಿರಣಾವಿವ ಯಥಾಗ್ನ್ಯಾದಿತ್ಯಕಿರಣೌ ಸರ್ವೇಷಾಂ ಪ್ರಕಾಶನಾದಿದ್ವಾರೇಣ ಭೋಗಾಯ ಭವತಃ ತದ್ವದ್ಭುಜ್ಯೈ ಸ್ತೋತೄಣಾಂ ಪರಿಭೋಗಾಯ ಭವಥಃ । ಶ್ರುಷ್ಟೀವಾನೇವ ಶ್ರುಷ್ಟಿವಂತಾವಿವ । ಶ್ರುಷ್ಟೀತಿ ಕ್ಷಿಪ್ರನಾಮ ॥ ಮತ್ವರ್ಥೀಯೋ ವನಿಪ್ ॥ ತದ್ವಂತಾವಶ್ವೌ ಯಥಾ ಲಕ್ಷ್ಯಂ ದೇಶಂ ಪ್ರತಿ ಶೀಘ್ರಂ ಗಚ್ಛತಃ ತದ್ವತ್ । ಯದ್ವಾ । ಶ್ರುಷ್ಟೀವಾನೇವ । ಶ್ರುಷ್ಟೀತಿ ಸುಖನಾಮ । ತದ್ವಂತೌ ಪುರುಷೌ ಯಥಾ ಕ್ರೀಡಾರ್ಥಮಾಗಚ್ಛತಃ ತದ್ವದ್ಯುವಾಂ ಹವಮಸ್ಮದೀಯಮಾಹ್ವಾನಂ ಪ್ರತ್ಯಾಗಮಿಷ್ಟಂ । ಆಗಚ್ಛತಂ ॥ ಹವಂ । ಭಾವೇಽನುಪಸರ್ಗಸ್ಯೇತಿ ಹ್ವಯತೇರಪ್ ಸಂಪ್ರಸಾರಣಂ ಚ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಪುತ್ರಾ**—ತಮ್ಮ ಪುತ್ರರ ವಿಷಯದಲ್ಲಿ । **ಪಿತರೇವ**—ತಂದೆಯರು ಆಪ್ತರಾಗಿರುವಂತೆ । **ಅಸ್ಮೇ**—ನಮ್ಮ ವಿಷಯದಲ್ಲಿ । **ವಃ**—ನೀವು । **ಆಪೀ**—ಬಂಧುಗಳಾಗಿದ್ದಿರಿ । **ಉಗ್ರೇವ**—ತೀವ್ರವಾದ ಪ್ರಭಾಯುತರಾದ ಅಗ್ನಿ ಮತ್ತು ಆದಿತ್ಯರಂತೆ । **ರುಚಾ**—ಕಾಂತಿಯುಕ್ತರಾಗಿಯೂ । **ನೃಪತೀವ**—

ಸೇನೆಯನ್ನು ರಕ್ಷಿಸಲು ಆತುರವುಳ್ಳ ರಾಜರಂತೆ | **ತುರ್ಭ್ಯ**—ನಿಮ್ಮ ಭಕ್ತರಿಗೆ ಇಷ್ಟಾರ್ಥಪ್ರದರಾಗಲು ಆತುರವುಳ್ಳವರಾಗಿಯೂ | **ಇರ್ಯೇವ**—ಧನಾಢ್ಯರಾದ ಐಶ್ವರ್ಯವಂತರು ತಮ್ಮ ಪರಿವಾರದವರಿಗೆ ಪೋಷಕರಾಗಿರುವಂತೆ | **ಪುಷ್ಟ್ಯೈ**—ನಿಮ್ಮ ಭಕ್ತರಿಗೆ ಪುಷ್ಟಿದಾಯಕರಾಗಿರುತ್ತೀರಿ | **ಕಿರಣೇವ**—ಅಗ್ನಿಯ ಅಥವಾ ಸೂರ್ಯನ ಕಿರಣಗಳು ಸರ್ವರಿಗೂ ಅಪೇಕ್ಷಿತವಾಗಿರುವಂತೆ | **ಭುಜ್ಯೈ**—ನೀವು ಸಕಲರ ಭೋಗಕ್ಕೂ ಪಾತ್ರರಾಗಿರುತ್ತೀರಿ | **ಶ್ರುಷ್ಟೀವಾನೇವ**—ಕ್ಷಿಪ್ರಗಮನವುಳ್ಳ ಅಶ್ವಗಳಂತೆ ಇರುವ ನೀವು | **ಹವಂ**—ನಮ್ಮ ಆಹ್ವಾನವನ್ನು ಮನ್ನಿಸಿ | **ಆಗಮಿಷ್ಟಂ**—ದಯಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ತಮ್ಮ ಪುತ್ರರ ವಿಷಯದಲ್ಲಿ ತಂದೆಯರು ಆಪ್ತರಾಗಿರುವಂತೆ ನಮ್ಮ ವಿಷಯದಲ್ಲಿ ನೀವು ಬಂಧುಗಳಾಗಿರಿ. ತೀವ್ರವಾದ ಪ್ರಭಾಯುತರಾದ ಅಗ್ನಿ ಮತ್ತು ಆದಿತ್ಯರಂತೆ ಕಾಂತಿಯುಕ್ತರಾಗಿದ್ದೀರಿ, ಸೇನೆಯನ್ನು ರಕ್ಷಿಸಲು ಸಂಭ್ರಮಯುಕ್ತರಾದ ರಾಜರಂತೆ ನಿಮ್ಮ ಭಕ್ತರಿಗೆ ಇಷ್ಟಾರ್ಥಪ್ರದರಾಗಲು ಆತುರವುಳ್ಳವರಾಗಿದ್ದೀರಿ. ಧನಾಢ್ಯರು ತಮ್ಮ ಪರಿವಾರದವರಿಗೆ ಪೋಷಕರಾಗಿರುವಂತೆ ನಿಮ್ಮ ಭಕ್ತರಿಗೆ ಪುಷ್ಟಿದಾಯಕರಾಗಿರುತ್ತೀರಿ ಅಗ್ನಿಯ ಅಥವಾ ಸೂರ್ಯನ ಕಿರಣಗಳು ಸರ್ವರಿಗೂ ಅಪೇಕ್ಷಿತವಾಗಿರುವಂತೆ ನೀವು ಸಕಲರ ಭೋಗಕ್ಕೂ ಪಾತ್ರರಾಗಿರುತ್ತೀರಿ, ಕ್ಷಿಪ್ರಗಾಮಿಗಳಾದ ಅಶ್ವಗಳಂತಿರುವ ನೀವು ನಮ್ಮ ಆಹ್ವಾನವನ್ನು ಮನ್ನಿಸಿ ಬನ್ನಿರಿ

## English Translation.

You are kinsmen to us, like parents (to) sons, like two fierce, shining fires, like two princes hastening (to give protection), like two bestowers of food are you for the nourisment (of men), like two luminaries for the enjoyment (of your worshippers), like two quick (horses) you came to our invocation.

|| ಸಂಹಿತಾಪಾಠಃ ||

ವಂಸಗೇವ ಪೂಷರ್ಯಾ ಶಿಂಬಾತಾ ಮಿತ್ರೇವ ಋತಾ ಶತರಾ ಶಾತಪಂತಾ ।
ವಾಜೇವೋಚ್ಚಾ ವಯಸಾ ಘರ್ಮ್ಯೇಷ್ಠಾ ಮೇಷೇವೇಷಾ ಸಪರ್ಯಾ
ಪುರೀಷಾ || ೫ ||

|| ಪದಪಾಠಃ ||

ವಂಸಗಾಽಇವ । ಪೂಷರ್ಯಾ । ಶಿಂಬಾತಾ । ಮಿತ್ರಾಽಇವ । ಋತಾ । ಶತರಾ । ಶಾತಪಂತಾ ।
ವಾಜಾಽಇವ । ಉಚ್ಚಾ । ವಯಸಾ । ಘರ್ಮ್ಯೇಽಸ್ಥಾ । ಮೇಷಾಽಇವ । ಇಷಾ । ಸಪರ್ಯಾ । ಪುರೀಷಾ ॥

|| ಸಾಯಣಭಾಷ್ಯಂ ||

ವಂಸಗೇವ ವಂಸಗಾವಿವ ವನನೀಯಗಮನೌ ವೃಷಭಾವಿವ ತೌ ಯಥಾ ಪೂಷರ್ಯಾ ಪೂಷರ್ಯೌ ಪೂಷಣೇ ಭವೌ । ಪುಷ್ಟಾವಯವಾವಿತ್ಯರ್ಥಃ । ತದ್ವದ್ಯುವಾಂ ಸ್ಫೀತಾಂಗಾವಯವೌ || ಪುಷ ಪುಷ್ಟೌ। ಅಸ್ಮಾದೌಣಾದಿಕೋ ಭಾವೇಽರನ್ಪ್ರತ್ಯಯಃ । ತದಂತಾದ್ಭಾವೇ ಛಂದಸೀತಿ ಯತ್ । ತಿತ್ಸ್ವರಿತಂ || ತಥಾ ಶಿಂಬಾತಾ ಶಿಂಬಾತೌ । ಸುಖನಾಮೈತತ್ । ಶಿಂಬೇನ ದುಃಖಾನಾಂ ತನೂಕರಣೇನ ಹೇತುನಾತಿತಂ ಪ್ರಾಪ್ತಮಿತಿ || ಶಿಙ್ ನಿಶಾನೇ । ಅಸ್ಮಾಚ್ಛಿಂಬಮಿತಿ ಬಾಹುಲಕಾದ್ಬಪ್ರತ್ಯಯೋ ಮುಕ್ಚ ನಿಪಾತ್ಯತೇ । ಅತತೇಃ ಕರ್ಮಣಿ ಘಙ್। ಸುಪ ಆಲಾದೇಶಃ|| ಸುಖಕರೌ ಭವಥಃ। ಮಿತ್ರೇವ ಮಿತ್ರಾವಿವ। ಮಿತ್ರಶಬ್ದೇನ ವರುಣೋಽಪ್ಯುಪಲಕ್ಷ್ಯತೇ । ಸಹಾವಸ್ಥಿತಮಿತ್ರಾವರುಣಾವಿವರ್ತತೌ ಸತ್ಯಭೂತೌ ತದ್ವದ್ಯಥಾರ್ಥದ-ರ್ಶಿನೌ ಭವಥಃ || ತಥಾ ಶತರಾ ಶತಂ ಶತಸಂಖ್ಯಾಕಾನಿ ಬಹೂನಿ ರಾಯೋ ಧನಾನಿ ಯಯೋಃ ಸಂತಿ ತೌ ತಥೋಕ್ತೌ || ಸುಪೋ ಡಾದೇಶಃ || ಯದ್ವಾ । ಶತಮನೇಕಮಿಂದ್ರಿಯಪ್ರಸಾದಾದಿ ರಾತಿ ದದಾತೀತಿ ಶತರಾ ಸುಖಂ । ತೇನ ತದ್ವಂತೌ । ಶಾತಪಂತಾ ಶಾತಪಂತೌ ತೀಕ್ಷ್ಣಸ್ತುತಿಕೌ || ಶಾತಂ ತೀಕ್ಷ್ಣಂ । ಪಂತಂ । ಪಂತೇರ್ಬಾಹುಲಕಾತ್ತನ್ । ಉ. ೩-೮೬ || ಯದ್ವಾ । ಶಾತಪಂತಾ ಶಾತೇನ ದುಃಖಾನಾಂ ತನೂಕರಣೇನ ಪನ್ಯತೇ ಸ್ತೂಯತ ಇತಿ ಶಾತಪಂತಂ ಸುಖಂ || ಶೋ ತನೂಕರಣೇ । ನಿಷ್ಠಾ । ಪನತೇ-ಸ್ತನ್ || ತೇನ ಯುವಾಂ ಸುಖವಂತೌ ಭವಥಃ || ಯದ್ಯಪಿ ಶಿಂಬಾತಾ ಶತರಾ ಶಾತಪಂತೇತಿ ತ್ರೀಣ್ಯಪಿ ಸುಖನಾಮಾನಿ ತಥಾಪಿ ಕಾಲತ್ರಯೇಽಪ್ಯಶ್ವಿನೋಃ ಸುಖಕರತ್ವಸ್ಯ ವಿವಕ್ಷಿತತ್ವೇನ ವಿಷಯಭೇದಾದಪೌನ-ರುಕ್ತ್ಯಂ । ವಾಜೇವ ವಾಜಾವಿವ ಯಥಾಶ್ವೌ ಘಾಸಾದಿನೋನ್ನತೌ ಸಂಪೂರ್ಣಾವಯವೌ ತದ್ವದ್ವಯಸಾ ಹವೀರೂಪೇಣಾನ್ನೇನ ·ಹೇತುನೋಚ್ಚೋಚ್ಚೈರ್ವರ್ತಮಾನೌ । ಪುಷ್ಟಾವಿತ್ಯರ್ಥಃ || ಉಚ್ಚಾ। ಉಚ್ಚೈಃ ಶಬ್ದಾತ್ಸುಪೋ ಡಾದೇಶಃ । ಟಿತ್ತ್ವಾಟ್ಟಿಲೋಪಃ || ಘರ್ಮ್ಯೇಷ್ಠಾ ಘರ್ಮಸ್ಥೌ। ಘರ್ಮಂ ದೀಪ್ತಮಂ-ತರಿಕ್ಷಂ । ತತ್ಸಂಬಂಧಿನಿ ದೇಶೇ ಸೂರ್ಯಾಚಂದ್ರಮಸೋ ರೂಪೇಣಾವಸ್ಥಿತೌ ಭವಥಃ ಸೂರ್ಯಾಚಂದ್ರ-ಮಸಾವಿತಿ ಯಾಸ್ಕಃ । ೨. ೧೨-೧ । ಯದ್ವಾ । ಘರ್ಮೇ ಪ್ರವರ್ಗ್ಯೇ ಭವಂ ಘರ್ಮ್ಯಂ ಹವಿಃ । ತತ್ರ ದೇವತಾತ್ವೇನಾವಸ್ಥಿತೌ ಭವಥಃ || ತಿಷ್ಠತೇರನ್ಯೇಭ್ಯೋಽಪಿ ದೃಶ್ಯಂತೆ ಇತಿ ವಿಚ್ । ತತ್ಪುರುಷೇ ಕೃತಿ ಬಹುಲಮಿತಿ ಪೂರ್ವಪದಸ್ಯ ಸಪ್ತಮ್ಯಾ ಅಲುಕ್ || ಮೇಷೇವ ಮೇಷಾವಿವ । ತೌ ಯಥಾನ್ನೇನ ಪರಿ-ಚರಣೀಯೌ ತದ್ವದ್ಯುವಾಮಿಷಾ ಹವೀರೂಪೇಣಾನ್ನೇನ ಸಪರ್ಯಾ ಸಪರ್ಯೌ ಪರಿಚರಣೀಯೌ ಭವಥಃ|| ಸಪರಶಬ್ದಃ ಕಂಡ್ವಾದಿಃ । ಸಪರ್ಯತಿಃ ಪರಿಚರಣಕರ್ಮಾ || ಪುರೀಷಾ ಪುರೀಷೌ ಧನಾದಿದಾನೇನ ಸ್ತೋತೄಣಾಂ ಪೋಷಯಿತಾರೌ ಯದ್ವಾ ಹವಿರ್ಭಿಃ ಪೋಷಣೀಯೌ ಭವಥಃ । ಪುರೀಷಂ ಪುಷ್ಣಾತೇಃ ಪೋಷಯತೇರ್ವೇತಿ ಯಾಸ್ಕಃ ||

|| ಪ್ರತಿಪದಾರ್ಥ ||

(ಎಲೈ ಅಶ್ವಿಸೀದೇವತೆಗಳೇ) । **ವಂಸಗೇವ**-- ಆಕರ್ಷಕವಾದ ಗಮನವುಳ್ಳ ವೃಷಭಗಳಂತೆ । **ಪೂಷ-ರ್ಯಾ**— ಪುಷ್ಟವಾದ ಅವಯವಗಳಿಂದ ಕೂಡಿ । **ಶಿಂಬಾತಾ**—ಸುಖಕಾರಕರಾಗಿದ್ದೀರಿ । **ಮಿತ್ರೇವ**— ಮಿತ್ರಾ ವರುಣರಂತೆ । **ಋತಾ**—ಸತ್ಯವಂತರಾಗಿಯೂ । **ಶತರಾ**—ಅಧಿಕವಾದ ಧನಯುಕ್ತರಾಗಿಯೂ । **ಶಾತಪಂತಾ**—

ಅಧಿಕವಾದ ಸ್ತುತಿಗೆ ಪಾತ್ರರಾಗಿಯೂ ಇದ್ದೀರಿ। **ವಾಜೀವ**- ಪುಷ್ಟವಾದ ಅಶ್ವಗಳಂತೆ । **ವಯಸಾ**— ಹವೀರೂಪದ ಅನ್ನದಿಂದ । **ಉಚ್ಛಾ**— ಪುಷ್ಟರಾಗಿ । **ಘರ್ಮ್ಯೇಷ್ಠಾ**—ಅಂತರಿಕ್ಷಸ್ಥರಾಗಿದ್ದೀರಿ । **ಮೇಷೇವ**— ಟಗರುಗಳಂತೆ । **ಇಷಾ**—ಅನ್ನದಿಂದ । **ಸಪರ್ಯಾ**— ಉಪಚರಿಸಲ್ಪಡುವವರಾಗಿದ್ದೀರಿ । **ಪುರೀಷಾ**— ಧನಾದಿದಾನಗಳಿಂದ ಸ್ತುತಿಕರ್ತರನ್ನು ಪೋಷಿಸುತ್ತೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಆಕರ್ಷಕವಾದ ಗಮನವುಳ್ಳ ವೃಷಭಗಳಂತೆ ನೀವು ಪುಷ್ಟವಾದ ಅವಯವಗಳಿಂದ ಕೂಡಿ ಸುಖಕಾರಕರಾಗಿದ್ದೀರಿ. ಮಿತ್ರಾವರುಣರಂತೆ ಸತ್ಯವಂತರಾಗಿಯೂ ಅಧಿಕವಾದ ಧನಯುಕ್ತರಾಗಿಯೂ ಅಧಿಕವಾದ ಸ್ತುತಿಗೆ ಪಾತ್ರರಾಗಿಯೂ ಇದ್ದೀರಿ. ಪುಷ್ಟವಾದ ಅಶ್ವಗಳಂತೆ ಹವೀರೂಪದ ಅನ್ನದಿಂದ ಪುಷ್ಟರಾಗಿ ಅಂತರಿಕ್ಷಸ್ಥರಾಗಿದ್ದೀರಿ. ಟಗರುಗಳಂತೆ ಅನ್ನದಿಂದ ಉಪಚರಿಸಲ್ಪಡುವವರಾಗಿದ್ದೀರಿ. ಧನಾದಿದಾನಗಳಿಂದ ಸ್ತುತಿಕರ್ತರನ್ನು ಪೋಷಿಸುತ್ತೀರಿ.

English Translation

You are like two pleasantly moving well-fed (hills) like Mitra and Varuna, the rwo bestowers of felicity, veracious, possessors of infinate wealth, happy, like two horses plump with fodder, abiding in the firmament, like two rams (are you) to be nourished with sacrificial food, to be cherished (with oblations).

ವಿಶೇಷ ವಿಷಯಗಳು

**ಶತರಾ** – ಶತಂ ಶತಸಂಖ್ಯಾಕಾನಿ ಬಹೂನಿ ರಾಯೋ ಧನಾನಿ ಯಯೋಃ ಸಂತಿ ತೌ । ಶತವೆಂದರೆ ಅನೇಕ, ರಾಯಃ ಎಂದರೆ ಧನ. ಅನೇಕವಿಧವಾದ ಧನಸಂಪತ್ತಿನಿಂದ ಯುಕ್ತರಾದವರು ಎಂರ್ಥವು ಅಥವಾ **ಶತಮನೇಕಮಿಂದ್ರಿಯಪ್ರಸಾದಾದಿ ರಾತಿ ದದಾತೀತಿ ಶತರಾ ಸುಖಂ ತೇನ ತದ್ವಂತೌ** ಅನೇಕ ಇಂದ್ರಿಯಗಳಿಗೆ (ಬಾಹ್ಯಾಭ್ಯಂತರ) ಸಂತೋಷವನ್ನುಂಟುಮಾಡುವುದರಿಂದ ಶತರ ಎಂದರೆ ಸುಖವು. ಅಂತಹ ಸುಖಯುಕ್ತರಾದ ಅಥವಾ ಸುಖಪ್ರದರಾದ ಎಂದು ಅರ್ಥವು.

**ಶಾತಪನ್ತಾ**-- ಶಾತಪಂತಾ ತೀಕ್ಷ್ಣಸ್ತುತಿಕೌ । ಶಾತಂ ಎಂದರೆ ತೀಕ್ಷ್ಣವಾದ, ಪನ್ತಂ-- ಸ್ತುತಿ. ಅಧಿಕವಾದ ಸ್ತುತಿಗೆ ಪಾತ್ರರಾದವರು. ಅಥವಾ **ಶಾತೇನ ದುಃಖಾನಾಂ ತನೂಕರಣೇನ ಪನ್ಯತೇ ಸ್ತೂಯತೆ ಇತಿ ಶಾತಪನ್ತಂ ಸುಖಂ । ತೇನ ಯುವಾಂ ಸುಖವನ್ತಾ ಭವಥಃ ।** ನೀವು ಭಕ್ತರ ದುಃಖವನ್ನೂ ಕಮ್ಮಿ ಮಾಡುವುದರಿಂದ ನೀವು ಸ್ತುತಿಸಲ್ಪಡುವಿರಿ ಎಂದರೆ ಅವರಿಗೆ ಸುಖವನ್ನುಂಟುಮಾಡುತ್ತೀರಿ ಆದ್ದರಿಂದ ನೀವು ಸುಖಪ್ರದರು ಎಂದು ಅರ್ಥವು. **ಶಿಂಬಾತಾ ಶತರಾ, ಶಾತಪನ್ತಾ** ಎಂಬ ಮೂರು ಶಬ್ದಗಳೂ ಸ್ವಲ್ಪ ಹೆಚ್ಚು ಕಡಿಮೆ ಸುಖಕರವಾದ ಎಂಬ ಒಂದೇ ಅರ್ಥವನ್ನು ಸೂಚಿಸುವುದಾದರೂ ಅಶ್ವಿನಿದೇವತೆಗಳು ತಮ್ಮ ಭಕ್ತರಿಗೆ ಕಾಲತ್ರಯಗಳಲ್ಲಿಯೂ ಸುಖವನ್ನುಂಟುಮಾಡುವವರಾದ್ದರಿಂದ ಇಲ್ಲಿ ಈ ವಿಶೇಷಣವನ್ನು ಮೂರಾವರ್ತಿ ಉಪಯೋಗಿಸಲಾಗಿದೆಯೆಂದೂ ಪುನರುಕ್ತಿ ಇಲ್ಲವೆಂದೂ ತಿಳಿಯಬೇಕು

**ವಾಜೀವ ಉಚ್ಛಾ ವಯೆಸಾ**—ಅಶ್ವಗಳು ತೃಣಾದಿಭಕ್ಷಣದಿಂದ ಧಷ್ಟಪುಷ್ಟವಾದ ಶರೀರದಿಂದ ಆಕರ್ಷಕವಾಗಿರುವಂತೆ ನೀವು ಯಜ್ಞಾದಿಗಳಲ್ಲಿ ನಿಮಗಾಗಿ ಅರ್ಪಿಸಲ್ಪಡುವ ಹವೀರೂಪವಾದ ಅನ್ನದಿಂದ ಚೆನ್ನಾಗಿ ಪುಷ್ಟರಾಗಿ ಬೆಳಗುತ್ತಿದ್ದೀರಿ.

**ಘರ್ಮೇಽರ್ಸ್ಥಾ**—ಘರ್ಮವೆಂದರೆ ಪ್ರಕಾಶಮಾನವಾದ ಅಂತರಿಕ್ಷವು ಆ ಅಂತರಿಕ್ಷಪ್ರದೇಶದಲ್ಲಿ ನೀವು ಸೂರ್ಯಚಂದ್ರರಂತೆ ಬೆಳಗುತ್ತಿದ್ದೀರಿ. ಅಥವಾ ಘರ್ಮವೆಂಬ ಪ್ರವರ್ಗ್ಯಯಾಗದಲ್ಲಿ ಅರ್ಪಿತವಾಗುವ ಹವಿಸ್ಸು. ನೀವು ಆ ಯಾಗದಲ್ಲಿ ದೇವತೆಗಳಂತೆ ಬಂದು ಆ ಹವಿಸ್ಸನ್ನು ಸ್ವೀಕರಿಸುತ್ತೀರಿ ಎಂದೂ ಅರ್ಥಮಾಡಬಹುದು.

**ಮೇಷೇವ ಇಷಾ ಸಪರ್ಯಾ ಪುರೀಷಾ—ಸಪರ್ಯತಿಃ ಪರಿಚರಣಕರ್ಮಾ।** ಸಪರ್ಯಾ ಎಂದರೆ ಉಪಚರಿಸಿ ಪೂಜಿಸುವುದು, **ಪುರೀಷಾ** ಎಂದರೆ **ಧನಾದಿದಾನೇನ ಸ್ತೋತೄಣಾಂ ಪೋಷಯಿತಾರೌ ಅಥವಾ ಹವಿರ್ಭಿಃ ಪೋಷಣೀಯೌ ಭವಥಃ।** ಧನಾದಿಗಳನ್ನು ಭಕ್ತರಿಗೆ ಕೊಟ್ಟು ಅವರನ್ನು ಪೋಷಿಸುವವರು ಅಥವಾ ಹವೀರೂಪವಾದ ಅನ್ನದಿಂದ ಪುಷ್ಟರಾದವರು. ಎರಡು ಟಗರುಗಳನ್ನು ಜನರು ಯಾವರೀತಿ ಆಹಾರಾದಿಗಳನ್ನು ಕೊಟ್ಟು ಪೋಷಿಸಿ ಬೆಳೆಸುವರೋ ಅದರಂತೆ ಈ ಅಶ್ವಿನೀದೇವತೆಗಳಿಗೂ ಹವೀರೂಪವಾದ ಆಹಾರವನ್ನು ಅರ್ಪಿಸಿ ಪ್ರೀತ್ಯಾದರಗಳಿಂದ ಪುಷ್ಟರನ್ನಾಗಿಮಾಡುವರು. ಅಥವಾ ತಮ್ಮನ್ನು ಸ್ತುತಿಸುವ ಈ ಸ್ತೋತೃಜನರನ್ನು ಈ ಅಶ್ವಿನೀ ದೇವತೆಗಳು ಧನಾದಿಗಳನ್ನು ಕೊಟ್ಟು ಪೋಷಿಸುವರು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಸೃಣ್ಯೇವ ಜರ್ಭರೀ ತುರ್ಫರೀತೂ ನೈತೋಶೇವ ತುರ್ಫರೀ ಪರ್ಫರೀಕಾ ।
ಉದನ್ಯಜೇವ ಜೇಮನಾ ಮದೇರೂ ತಾ ಮೇ ಜರಾಯ್ವಜರಂ ಮರಾಯು ॥

॥ ಪದಪಾಠಃ ॥

ಸೃಣ್ಯಾಽಇವ । ಜರ್ಭರೀ ಇತಿ । ತುರ್ಫರೀತೂ ಇತಿ । ನೈತೋಶಾಽಇವ । ತುರ್ಫರೀ ಇತಿ । ಪರ್ಫರೀಕಾ ॥
ಉದನ್ಯಜಾಽಇವ । ಜೇಮನಾ । ಮದೇರೂ ಇತಿ । ತಾ । ಮೇ । ಜರಾಯು । ಅಜರಂ । ಮರಾಯು ॥೬॥

॥ ಸಾಯಣಭಾಷ್ಯಂ ॥

ಸೃಣ್ಯೇವ ಸೃಣ್ಯಾವಿವ । ಸೃಣಿರಂಕುಶಃ ॥ ತತ್ರ ಸಾಧುರಿತಿ ಯತ್ ॥ ಅಂಕುಶಾರ್ಹೌ ಮತ್ತಗಜಾವಿವ ಜರ್ಭರೀ ಗಾತ್ರವಿನಾಮಂ ಕುರ್ವಂತೌ ॥ ಜಭ ಜೃಭಿ ಗಾತ್ರ ವಿನಾಮೇ । ಅಸ್ಮಾದೌಣಾದಿಕೋ ರಿಪ್ರತ್ಯಯಃ ॥ ಯದ್ವಾ । ಸೃಣ್ಯೇವ । ಸೃಣಿರ್ದ್ವಿವಿಧಾ । ಮತ್ತಗಜಸ್ಯೈಕತ್ರಾವಸ್ಥಾಪಯಿತ್ರ್ಯೇಕಾ । ಅಪರಾ ಬಾಧಯಿತ್ರೀ ॥ ಸರ್ತೇಃ ಕಿಚ್ಚ । ಉ. ೪-೪೯-೧೦೪ । ಇತ್ಯೌಣಾದಿಕೋ ನಿಪ್ರತ್ಯಯಃ ।

ಕಿತ್ತ್ವಾದಗುಣಃ । ಕೃದಿಕಾರಾದಕ್ತಿನ ಇತಿ ಙೀಷ್ । ಸುಪ ಆಕಾರಃ । ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತಃ ॥ ತಾವೃಶ್ಯಾ ಸೃಣ್ಯಾವಿವ ಜರ್ಭರೀ ಭರ್ತಾರಾವನೇಕಶ್ರೈವಾವಸ್ಥಾಪಕೌ। ತಥಾ ತುರ್ಫರೀತೂ ತರ್ಫಿತಾರೌ ಶತ್ರೂಣಾಂ ಹಂತಾರೌ ॥ ಜರ್ಭರೀ । ಭರತೇರ್ಯಙ್‌ಲುಗಂತಾದೌಣಾದಿಕ ಇಪ್ರತ್ಯಯಃ । ಅಭ್ಯಾಸಸ್ಯ ಜಕಾರಶ್ಛಾಂದಸಃ । ತೃಫ ತೃಂಫ ಹಿಂಸಾಯಾಂ । ಅಸ್ಮಾತ್ತ್ರೈಜಂತಸ್ಯ ತುರ್ಫರೀತಾರಾವಿತ್ಯಸ್ಯ ಪೃಷೋದರಾದಿತ್ವಾದ್ವರ್ಣವಿಕಾರಃ । ಯದ್ವಾ । ಅಸ್ಮಾದ್ಬಾಹುಲಕಾದೌಣಾದಿಕೋಽರೀತುಪ್ರತ್ಯಯ ಉಕ್ತಂ ಚ । ಅತ್ರ ನಿರುಕ್ತಂ । ದ್ವಿವಿಧಾ ಸೃಣಿರ್ಭವತಿ ಭರ್ತಾ ಚ ಹಂತಾ ಚ ತಥಾಶ್ವಿನೌ ಚಾಪಿ ಭರ್ತಾರೌ ಜರ್ಭರೀ ಭರ್ತಾರಾವಿತ್ಯರ್ಥಸ್ತುರ್ಫರೀತೂ ಹಂತಾರಾವಿತ್ಯಾದಿ । ನಿ. ೧೩-೫ ॥ ನೈತೋಶೇವ । ನಿತೋಶತಿರ್ವಧಕರ್ಮಾ । ನಿತೋಶಯತೀತಿ ನಿತೋಶಃ । ತಸ್ಯಾಪತ್ಯಂ ನೈತೋಶಃ । ತಾವಿವ ತುರ್ಫರೀ ಶತ್ರೂಣಾಂ ಹಂತಾರೌ ॥ ತೃಫತಿರ್ಹಿಂಸಾರ್ಥಃ । ಅಸ್ಮಾದೌಣಾದಿಕೋ ರಿಪ್ರತ್ಯಯ ಉಕ್ತಂ ಚ ॥ ಪರ್ಫರೀಕಾ ಪರ್ಫರೀಕೌ ಶತ್ರೂಣಾಂ ವಿದಾರಯಿತಾರೌ ॥ ಞಿಫಲಾ ವಿಶರಣೇ । ಅಸ್ಮಾತ್ಪರ್ಫರೀಕಾದ-ಯಶ್ಚ । ಉ. ೪-೨೦ । ಇತೀಕಪ್ರತ್ಯಯಾಂತೋ ನಿಪಾತ್ಯತೇ ॥ ಯದ್ವಾ । ಸ್ತೋತೃಜನಾನಾಂ ಧನಾದಿ-ದಾನೇನ ಪೂರಯಿತಾರೌ ॥ ಪೄ ಪಾಲನಪೂರಣಯೋಃ । ಅಸ್ಮಾದೀಕನಿ ಪೂರ್ವವತ್ಸರ್ವಂ ನಿಪಾತ್ಯತೇ । ಫರ್ವತೇಃ ಪೂರಣಾರ್ಥಾದ್ವಾ ॥ ಉದನ್ಯಜೇವ ಉದನ್ಯಜೇ ಇವ । ಉದಕೇ ಭವಮುದನ್ಯಂ ॥ ಪದ್ದನ್ನೋಮಾಸ್ । ಪಾ. ೬-೧-೬೩ । ಇತ್ಯಾದಿನಾಶಸ್ಪ್ರಭೃತಿಷ್ವಪ್ಯುದನ್ನಾದೇಶಃ ॥ ತತ್ರ ಜಾತೇ ರತ್ನೇ ಇವ ನಿರ್ಮಲೌ ಕಾಂತಿಯುಕ್ತಾವಿತ್ಯರ್ಥಃ । ಜೇಮನಾ ಜೇಮನೌ ಜಯಶೀಲೌ ॥ ಜಯತೇರನ್ಯೇ-ಭ್ಯೋಽಪಿ ದೃಶ್ಯಂತ ಇತಿ ಮನಿನ್ । ದೀರ್ಘಾಭಾವಶ್ಛಾಂದಸಃ ॥ ಮದೇರೂ ಬಲಾತಿಶಯೇನ ಮತ್ತೌ ಸ್ತುತ್ಯೌ ವಾ । ತಾ ತೌ ಪೂರ್ವೋಕ್ತಗುಣಾವಶ್ವಿನೌ ಯುವಾಂ ಮೇ ಮದೀಯಂ ಜರಾಯು ಜರಾಯುಜಂ ಅತ ಏವ ಮರಾಯು ಮರಣಶೀಲಂ ಶರೀರಮಜರಂ ಜರಾರಹಿತಂ ಮರಣಧರ್ಮರಹಿತಂ ಕುರುತಂ ॥ ನಞೋ ಜರಮರಮಿತ್ರಮೃತಾ ಇತಿ ನಞ ಉತ್ತರಸ್ಯ ಜರಶಬ್ದಸ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಸೃಣ್ಯೇವ**—ಮದಗಜಗಳಂತೆ । **ಜರ್ಭರೀ—**ಬಗ್ಗಿದ ಶರೀರವುಳ್ಳವರೂ । **ತುರ್ಫರೀತೂ**—ಶತ್ರುನಾಶಕರಾಗಿಯೂ । **ನೈತೋಶೇವ**—ನಿತೋಶ ಪುತ್ರರಂತೆ । **ತುರ್ಫರೀ**—ಶತ್ರುನಾಶಕರಾಗಿಯೂ । **ಪರ್ಫರೀಕಾ**—ಶತ್ರುಜನರನ್ನು ಸೀಳಿಹಾಕುವವರೂ ಅಥವಾ ಭಕ್ತರಿಗೆ ಫಲಪ್ರದರಾಗಿಯೂ । **ಉದನ್ಯಜೇವ**—ಉದಕೋತ್ಪನ್ನವಾದ ರತ್ನಗಳಂತೆ ಪ್ರಕಾಶಿಸುವವರೂ । **ಜೇಮನಾ**—ಜಯಶೀಲರೂ । **ಮದೇರೂ**—ಹರ್ಷಯುಕ್ತರೂ ಅಥವಾ ಸ್ತುತ್ಯರ್ಹರೂ ಆದ । **ತಾ**—ನೀವು । **ಜರಾಯು**—ಮುಪ್ಪಿನಿಂದ ಕೂಡಿದುದೂ । **ಮರಾಯು**—ಆದುದರಿಂದಲೇ ಮರಣೋನ್ಮುಖವಾದುದೂ ಆದ । **ಮೇ**—ನನ್ನ ಶರೀರವನ್ನು । **ಅಜರಂ**—ಜರಾರಹಿತವಾಗುವಂತೆ ಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಮದಗಜಗಳಂತೆ ಅಥವಾ ಅಂಕುಶದಂತೆ ಬಗ್ಗಿದ ಶರೀರವುಳ್ಳವರೂ ಶತ್ರುನಾಶಕರಾಗಿಯೂ ನಿತೋಶನ ಪುತ್ರರಂತೆ ಶತ್ರುನಾಶಕರೂ ಮತ್ತು ಭಕ್ತರಿಗೆ ಫಲಪ್ರದರೂ ಸ್ತುತಿಪ್ರಿಯರೂ ಆದ

ನೀವು ಮುಪ್ಪಿನಿಂದ ಕೂಡಿದುದೂ, ಆದುದರಿಂದಲೇ ಮರಣೋನ್ಮುಖವಾದುದೂ ಆದ ನನ್ನ ಶರೀರವನ್ನು ಜರಾರಹಿತವಾಗುವಂತೆ ಮಾಡಿರಿ.

## English Translation.

You are like two mad elephants bending their forequarters and smiting the foe, like the two sons of Nitosha destroying (foes), and cheristing (friends); you are as bright as two water-born (jewels), do you, who are victorious, (render) my decaying mortal body free from decay.

### ॥ ವಿಶೇಷವಿಷಯಗಳು ॥

**ಸೃಣ್ಯೇವ ಜರ್ಭರೀ**—ಸೃಣಿ ಎಂದರೆ ಅಂಕುಶ. ಇಲ್ಲಿ ಅಂಕುಶವು ಉಪಯೋಗಿಸಲ್ಪಡುವ ಮತ್ತಗಜಗಳೆಂದು ಅರ್ಥಮಾಡಿದಾರೆ. ಮತ್ತಗಜಗಳು ಯಾವ ರೀತಿ ಬಗ್ಗಿ ನಡೆಯುವವೋ ಅದರಂತೆ ತಮ್ಮ ಶರೀರವನ್ನು ಸ್ವಲ್ಪ ಬಗ್ಗಿಸಿಕೊಂಡು ಹೋಗುವವರು ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿದಾರೆ. ಅಥವಾ ಸೃಣಿ ಎಂದರೆ ಅಂಕುಶವೆಂಬ ಆಯುಧವು. ಇದನ್ನು ಆನೆಯನ್ನು ನಿಯಮನದಲ್ಲಿಡುವುದಕ್ಕಾಗಿ ಉಪಯೋಗಿಸುವರು. ಇದು ಒಂದು ಭಾಗದಲ್ಲಿ ವಕ್ರವಾಗಿ ಬಗ್ಗಿರುವುದು. ಸೃಣಿ ಶಬ್ದಕ್ಕೆ ಬಗ್ಗಿರುವ ಆಯುಧ ವಿಶೇಷ ಎಂದರೆ ಧಾನ್ಯಾದಿಗಳನ್ನು ಕೊಯ್ಯುವ ಕುಡುಗೋಲೂ ಎಂದು ಮತ್ತೊಂದರ್ಥ ವಿರುವುದು. ಈ ಎರಡು ಆಯುಧಗಳೂ ವಕ್ರವಾಗಿ ಬಗ್ಗಿರುವವು. ಅಶ್ವಿನೀ ದೇವತೆಗಳ ಶರೀರವು ಏತಕ್ಕೆ ಬಗ್ಗಿದೆ ಎಂಬುದನ್ನು ಇಲ್ಲಿ ತಿಳಿಸಿಲ್ಲ ಸೃಣಿಶಬ್ದದ ನಿರ್ವಚನವನ್ನೂ ಅರ್ಥವಿವರಣೆಯನ್ನೂ ನಾವು ಇದೇ ಭಾಗದಲ್ಲಿ ೧೦೧ ನೇ ಸೂಕ್ತದ ೩ನೇ ಋಕ್ಕಿನ ವಿಶೇಷವಿಷಯದಲ್ಲಿ (154 ನೇ ಪುಟದಲ್ಲಿ) ವಿವರಿಸಿದೇವೆ. **ಜಭ ಜೃಭಿ—ಗಾತ್ರವಿನಾಮೇ** ಎಂಬ ಧಾತುವಿನಿಂದ ಜರ್ಭರೀ ಎಂಬ ಶಬ್ದದ ನಿಷ್ಪತ್ತಿಯಾಗಿದೆ.

**ತುರ್ಫರೀತೂ ನೈತೋಶೇವ ತುರ್ಫರೀ ಪರ್ಫರೀಕಾ**—ಹಿಂಸೆ ಮಾಡು ಎಂಬರ್ಥವುಳ್ಳ **ತೃಪ ಹಿಂಸಾಯಾಂ** ಎಂಬ ಧಾತುವಿನಿಂದ ತುರ್ಫರೀತೂ ಅಥವಾ ತುರ್ಫರೀ ಎಂಬ ಶಬ್ದದ ನಿಷ್ಪತ್ತಿಯಾಗಿದೆ. (ಶತ್ರುಗಳನ್ನು) ಹಿಂಸೆಮಾಡುವವರು- ಎಂದರ್ಥ **ನೈತೋಶೇವ— ನಿತೋಶತಿರ್ವಧಕರ್ಮಾ । ನಿತೋಶಯತೀತಿ ನಿತೋಶಃ । ತಸ್ಯಾಪತ್ಯಂ ನೈತೋಶಃ । ತಾವಿವ ಶತ್ರೂಣಾಂ ಹಂತಾರೌ ।** ನಿತೋಶತಿಧಾತುವಿಗೆ ಕೊಲ್ಲುವುದು ಎಂದರ್ಥವಿರುವುದು. ಕೊಲ್ಲುವವನಿಗೆ ನಿತೋಶ ಎಂದು ಹೆಸರು. ಅವನ ಪುತ್ರರಿಗೆ ನೈತೋಶರೆಂದು ಹೆಸರು. ಅದರಂತೆ ಶತ್ರುಗಳನ್ನು ಕೊಲ್ಲುವವರು ಎಂದರ್ಥವು. **ಪರ್ಫರೀಕಾ**—ರಕ್ಷಿಸು, ತುಂಬು ಎಂಬರ್ಥವುಳ್ಳ **ಪೃ ಪಾಲನಪೂರಣಯೋಃ** ಎಂಬ ಧಾತುವಿನಿಂದ ಪರ್ಫರೀಕಾ ಎಂಬ ಶಬ್ದದ ನಿಷ್ಪತ್ತಿಯಾಗಿದೆ. ತಮ್ಮನ್ನು ಸ್ತೋತ್ರಮಾಡುವ ಜನರನ್ನು ರಕ್ಷಿಸುವವರು ಅಥವಾ ಅವರ ಇಷ್ಟಾರ್ಥಗಳನ್ನು ಪೂರಯಿಸುವವರು ಎಂದರ್ಥವು

**ಉದನ್ಯಜೇವ—ಉದಕೇ ಭವಮುದನ್ಯಂ । ತತ್ರ ಜಾತೇ ರತ್ನೇ ಇವ ನಿರ್ಮಲೌ ॥ ರತ್ನಾಕರೋ ಜಲನಿಧಿಃ** ಎಂಬ ನಿಘಂಟುವಾಕ್ಯದಂತೆ ಸಮುದ್ರವೇ (ನೀರೇ) ರತ್ನಾದಿಗಳಿಗೆ ಉದ್ಗಮಸ್ಥಾನವಾಗಿದೆ. ನೀರಿನಲ್ಲಿ ಉತ್ಪನ್ನವಾಗುವ ರತ್ನಗಳಂತೆ ನಿರ್ಮಲರಾದವರು ಎಂದಭಿಪ್ರಾಯವು.

**ಜೇಮನಾ ಮದೇರೂ—ಜೇಮನೌ ಜಯಶೀಲೌ । ಮದೇರೂ ಬಲಾತಿಶಯೇನ ಮತ್ತೌ ಸ್ತುತ್ಯೌ ವಾ ।** **ಜೇಮನಾ** ಎಂದರೆ ಯುದ್ಧಾದಿಗಳಲ್ಲಿಯೂ ಸ್ಪರ್ಧಾದಿಗಳಲ್ಲಿಯೂ ಜಯಶೀಲರಾದವರು. **ಮದೇರೂ** ಎಂದರೆ ತಮ್ಮ ಅಪರಿಮಿತವಾದ ಬಲದಿಂದ ಎಂದರೆ ಶಕ್ತಿಸಾಮರ್ಥ್ಯಗಳಿಂದ ಮತ್ತರಾದವರು ಅಥವಾ ಸ್ತುತ್ಯರ್ಹರು ಎಂದರ್ಥವು.

**ತಾ ಮೇ ಜರಾಯು ಮರಾಯು ಅಜರಂ (ಕುರುತಂ)**—ಇಂತಹ ಗುಣವಿಶಿಷ್ಟರಾದ ನೀವು (ಅಶ್ವಿನೀ ದೇವತೆಗಳು) ಮುಪ್ಪಿನಿಂದ ಜರ್ಝರಿತವಾದುದೂ, ಮರಣಕ್ಕೆ ಈಡಾಗುವುದೂ ಆದ ನನ್ನ ಶರೀರವನ್ನು ಜರಾರಹಿತವನ್ನಾಗಿಯೂ, ಮರಣರಹಿತವನ್ನಾಗಿಯೂ ಮಾಡಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

ಯಾಸ್ಕರು ಅತಿಸ್ತುತಿ ಎಂದರೆ ಸ್ವಲ್ಪಉತ್ಪ್ರೇಕ್ಷೆ (ಅತಿಶಯವಾದ ಸ್ತುತಿ) ಯಿಂದ ಕೂಡಿದ ಸ್ತುತಿಗಳಿರುವ ಋಕ್ಕುಗಳಲ್ಲಿ ಒಂದೊಂದು ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರುಕ್ತವನ್ನು ಹೇಳಿದಾರೆ. ಅಗ್ನಿ, ಇಂದ್ರ, ಆದಿತ್ಯ, ಅಶ್ವಿನೀದೇವತೆಗಳು, ಯಜ್ಞ, ವಾಕ್ಕು, ಅಕ್ಷರ ಎಂಬ ದೇವತೆಗಳನ್ನು ಸ್ತುತಿಸುವ ಋಕ್ಕುಗಳನ್ನು ವಿವರಿಸಿದಾರೆ. ಅವುಗಳಲ್ಲಿ ಅಶ್ವಿನೀದೇವತೆಗಳನ್ನು ಸ್ತುತಿಸಿರುವ ಋಕ್ಕಿಗಾಗಿ ಪ್ರಕೃತಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅರ್ಥವಿವರಣೆಮಾಡಿದಾರೆ.

> **ಸೃಣ್ಯೇವ ಜರ್ಭರೀ ತುರ್ಫರೀ ತೂ ನೈತೋಶೇವ ತುರ್ಫರೀ ಪರ್ಫರೀಕಾ ।**
> **ಉದನ್ಯಜೇವ ಜೇಮನಾ ಮದೇರೂ ತಾ ಮೇ ಜರಾಯ್ವಜರಂ ಮರಾಯು ॥**

> **ಸೃಣ್ಯೇವೇತಿ ದ್ವಿವಿಧಾ ಸೃಣಿರ್ಭವತಿ । ಭರ್ತಾ ಚ ಹಂತಾ ಚ । ತಥಾಶ್ವಿನೌ ಚಾಪಿ ಭರ್ತಾರೌ ಜರ್ಭರೀ ಭರ್ತಾರಾವಿತ್ಯರ್ಥಸ್ತುರ್ಫರೀತೂ ಹಂತಾರೌ । ನೈತೋಶೇವ ತುರ್ಫರೀ ಪರ್ಫರೀಕಾ । ನಿತೋಶಸ್ಯಾಪತ್ಯಂ ನೈತೋಶಂ ನೈತೋಶೇವ ತುರ್ಫರೀ ಕ್ಷಿಪ್ರಹಂತಾರೌ । ಉದನ್ಯಜೇವ ಜೇಮನಾ ಮದೇರೂ । ಉದನ್ಯಜೇವೇತ್ಯುದಕಜೇ ಇವ ರತ್ನೇ ಸಾಮುದ್ರೇ ಚಾಂದ್ರಮಸೇತಿ ವಾ ಜೇಮನೇ ಜಯಮನೇ । ಜೇಮನಾ ಮದೇರೂ । ತಾ ಮೇ ಜರಾಯ್ವಜರಂ ಮರಾಯು । ಏತಜ್ಜರಾಯುಜಂ ಶರೀರಂ ಶರದಮಜೀರ್ಣಂ ॥**
>
> (ನಿ. ೧೩-೫)

**ಸೃಣ್ಯೇವೇತಿ ದ್ವಿವಿಧಾ ಸೃಣಿರ್ಭವತಿ ಭರ್ತಾ ಚ ಹಂತಾ ಚ ತಥಾಶ್ವಿನೌ ಚಾಪಿ ಭರ್ತಾರೌ ಜರ್ಭರೀ ಭರ್ತಾರಾವಿತ್ಯರ್ಥಸ್ತುರ್ಫರೀತೂ ಹಂತಾರೌ**—ಸೃಣ್ಯೇವ ಎಂಬ ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನು ಎರಡುವಿಧವಾದ ಪ್ರತ್ಯೇಕ ಗುಣಗಳುಳ್ಳವರನ್ನಾಗಿ ಸ್ತುತಿಸಲಾಗಿದೆ. ಸೃಣಿಶಬ್ದಕ್ಕೆ ಎರಡುವಿಧ ಅರ್ಥವಿರುವುದು. ಬಗ್ಗಿರುವ ಆಯುಧವೆಂದು ಸೃಣಿಗೆ ಹೆಸರು. ಅವು ಯಾವವೆಂದರೆ-ಕುಡುಗೋಲು ಮತ್ತು ಅಂಕುಶ. ಕುಡುಗೋಲಿನಿಂದ ಪೈರಿನ ತೆನೆಗಳನ್ನು ಕುಯ್ಯುವರು. ಆ ಧಾನ್ಯವು ಜನರನ್ನು ಭರಿಸುವುದು ಎಂದರೆ ಪೋಷಿಸುವುದು. ಅಂಕುಶವು ಆನೆಯನ್ನು ಹಿಂಸಿಸುವುದು. ಆದ್ದರಿಂದ ಸೃಣಿಯು ಜನರನ್ನು ಪೋಷಿಸುವ ಮತ್ತು ಹಿಂಸಿಸುವ ಎರಡುವಿಧಕಾರ್ಯಗಳನ್ನೂ ಮಾಡಿದಂತಾಯಿತು. ಅದರಂತೆ ಅಶ್ವಿನೀದೇವತೆಗಳೂ ತಮ್ಮನ್ನು ಸ್ತುತಿಸುವ ಜನರ ಇಷ್ಟಾರ್ಥಗಳನ್ನು ಪೂರಯಿಸಿ ಅವರನ್ನು ಪೋಷಿಸುವರು ಮತ್ತು ಶತ್ರುಜನರನ್ನು ಹಿಂಸಿಸುವರು. ಆದ್ದರಿಂದ ಅಶ್ವಿನೀದೇವತೆಗಳು ಸೃಣಿಯಂತೆ ಪೋಷಿಸುವ ಮತ್ತು ಹಿಂಸಿಸುವ ಎಂಬ ಎರಡುವಿಧ ಕಾರ್ಯಗಳನ್ನು ಮಾಡುವರು ಎಂದು ವಾಕ್ಯಾ

ಭಿಪ್ರಾಯವು. ಇಲ್ಲಿ ಈ ಎರಡು ಪ್ರತ್ಯೇಕ ಅರ್ಥಗಳನ್ನು ಸೂಚಿಸುವುದಕ್ಕಾಗಿ ಜರ್ಭರೀ, ತುರ್ಫರೀತೂ ಎಂಬ ಎರಡು ಶಬ್ದಗಳನ್ನು ಉಪಯೋಗಿಸಲಾಗಿದೆ **ಜರ್ಭರೀ** ಶಬ್ದವು **ಭೃಞ್ ಭರಣೇ** (ಪೋಷಿಸು) ಎಂಬ ಧಾತುವಿನಿಂದ ನಿಷ್ಪನ್ನವಾಗಿ ಪೋಷಿಸುವವರು ಎಂದೂ **ತುರ್ಫರೀತೂ** ಎಂಬ ಶಬ್ದವು ತೃಫ ತೃಂಫ ಹಿಂಸಾಯಾಂ (ಹಿಂಸಿಸು) ಎಂಬ ಧಾತುವಿನಿಂದ ನಿಷ್ಪನ್ನವಾಗಿ ಶತ್ರುಜನರನ್ನು ಹಿಂಸಿಸುವವರು ಎಂದೂ ಎರಡು ಪ್ರತ್ಯೇಕ ಅರ್ಥಗಳನ್ನು ಸೂಚಿಸುತ್ತವೆ.

**ನೈತೋಶೇವ ತುರ್ಫರೀ ಪರ್ಫರೀಕಾ । ನಿತೋಶಸ್ಯಾಪತ್ಯಂ ನೈತೋಶಂ ನೈತೋಶೇವ ತುರ್ಫರೀ ಕ್ಷಿಪ್ರಹಂತಾರೌ ॥** ನಿತೋಶ ಎಂದರೆ ಹಂತಕ, ಕೊಲ್ಲುವವನು ಅಥವಾ ನಿತೋಶನೆಂಬ ಒಬ್ಬ ಪುರುಷನು. ಇವನು ಜನರನ್ನು (ಶತ್ರುಗಳನ್ನು) ಕೊಲ್ಲುವುದರಲ್ಲಿ ಪ್ರಸಿದ್ಧನಾಗಿರಬಹುದು. ಅವನ ಪುತ್ರನಿಗೆ ನೈತೋಶ ಎಂದು ಹೆಸರು. ಇಲ್ಲಿ ನೈತೋಶಾ ಎ ದು ದ್ವಿಚನಪ್ರಯೋಗವಿದೆ. ಅಶ್ವಿನೀದೇವತೆಗಳು ಇಬ್ಬರಾದ್ದರಿಂದ ಇವರನ್ನು ವರ್ಣಿಸುವ ವಿಶೇಷಣಪದಗಳೂ ದ್ವಿವಚನಾಂತವಾಗಿರುವುದು ಸಹಜವು ಈ ನೈತೋಶರಂತೆ ಎಂದರೆ ನಿತೋಶನ ಪುತ್ರರಂತೆ **ತುರ್ಫರೀ–ಕ್ಷಿಪ್ರಹಂತಾರೌ** ಶತ್ರುಗಳನ್ನು ಬೇಗನೆ ಕೊಲ್ಲುವವರು ಎಂದರ್ಥವು.

**ಉದನ್ಯಜೇವ ಜೇಮನಾ ಮದೇರೂ—ಉದನ್ಯಜೇವೇತ್ಯುದಕಜೇ ಇವ ರತ್ನೇ ಸಾಮುದ್ರೇ ಚಾಂದ್ರಮಸೇತಿ ವಾ ಜೇಮನೇ ಜಯಮನೇ ಜೇಮನಾ ಮದೇರೂ ॥ ಉದನ್ಯ** ಎಂದರೆ ಉದಕ. **ಉದನ್ಯಜಾ** ಎಂದರೆ ಉದಕದಲ್ಲಿ ಅಥವಾ ಸಮುದ್ರದಲ್ಲಿ (ಸಮುದ್ರದ ಉದಕದಲ್ಲಿ) ಹುಟ್ಟಿದ ಎರಡು ರತ್ನಗಳಂತೆ ಅತಿಶಯವಾದ ಕಾಂತಿಯಿಂದ ಬೆಳಗುತ್ತಿರುವವರು ಅಥವಾ ಚಂದ್ರನಂತೆ ಆಹ್ಲಾದಕರು ಎಂದರ್ಥವು. **ಜೇಮನಾ** ಎಂದರೆ **ಜಯಮನಾ** ಯುದ್ಧದಲ್ಲಿ ಜಯಶೀಲರಾದವರು. **ಮದೇರೂ** ಎಂದರೆ ಸಂತೋಷಾತಿಶಯದಿಂದ ಮತ್ತರಾದವರು ಅಥವಾ ಸ್ತುತ್ಯರ್ಹರಾದವರು.

**ತಾ ಮೇ ಜರಾಯ್ವಜರಂ ಮರಾಯು —ಏತಜ್ಜರಾಯುಜಂ ಶರೀರಂ ಶರದಮಜೀರ್ಣಂ ॥** ಈ ಶರೀರವು **ಜರಾಯು** ಎಂದರೆ ಮುಪ್ಪಿಗೆ ಈಡಾಗುವುದು ಎಂದರೆ ಮುಪ್ಪಿನಿಂದ ಶರೀರದ ಅವಯವಗಳು ನಿರ್ಬಲವಾಗಿರುವವು. **ಮರಾಯು** ಎಂದರೆ ಮೃತ್ಯುವಿಗೆ ವಶವಾಗುವ, ಸಾಯುವ ಸ್ಥಿತಿಯಲ್ಲಿರುವ, ಮರಣೋನ್ಮುಖವಾದ ಎಂದರ್ಥವು. ಇಂತಹ ಸತ್ತ್ವರಹಿತವಾದ ಮತ್ತು ಮರಣೋನ್ಮುಖವಾದ ನನ್ನ ಶರೀರವನ್ನು ಅಶ್ವಿನೀದೇವತೆಗಳು **ಅಜರಂ**—ಜರಾರಹಿತವನ್ನಾಗಿಯೂ ಪುಷ್ಟಿಯುಕ್ತವಾಗಿರುವಂತೆಯೂ ಮಾಡಲಿ ಎಂದು ಋಷಿಯು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದಾನೆ

॥ ಸಂಹಿತಾಪಾಠಃ ॥

ಪಜ್ರೇವ ಚರ್ಚರಂ ಜಾರಂ ಮರಾಯು ಕ್ಷದ್ಮೇವಾರ್ಥೇಷು ತರ್ತರೀಥ ಉಗ್ರಾ ।
ಋಭೂ ನಾಪತ್ಖರಮಜ್ರಾ ಖರಜ್ರುರ್ವಾಯುರ್ನ ಪರ್ಫರತ್ಕ್ಷಯದ್ರಯೀಣಾಂ ॥ ೭ ॥

॥ ಪದಪಾಠಃ ॥

ಪಜ್ರ್ಯಾಽಇವ । ಚರ್ಚರಂ । ಜಾರಂ । ಮರಾಯು । ಕ್ಷದ್ಮಽಇವ । ಅರ್ಥೇಷು । ತರ್ತರೀಥಃ । ಉಗ್ರಾ । ಋಭೂ ಇತಿ । ನ । ಆಪತ್ । ಖರಮಜ್ರಾ । ಖರಽಜ್ರುಃ । ವಾಯುಃ । ನ । ಪರ್ಫರತ್ । ಕ್ಷಯತ್ । ರಯೀಣಾಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಉಗ್ರೌ ಉಗ್ರಾವುದ್ಗೂರ್ಣತೇಜಸ್ಕಾವಶ್ವಿನೌ ಪಜ್ರೇವ ಪಜ್ರಾವಿವ ಪ್ರಾರ್ಜಿತಬಲೌ ವೀರಾವಿವ ಸ್ಥಿತೌ । ಯದ್ವಾ । ಪಜ್ರೇವ ॥ ಜಿ ಜ್ರಿ ಅಭಿಭವೇ ॥ ಪಾದಾಭ್ಯಾಮಭಿಭವಂತೌ ಸಮರ್ಥಾವಿವ ಸ್ಥಿತೌ । ಯುವಾಂ ಚರ್ಚರಂ ಚರಣಶೀಲಂ ಜಾರಂ ಜರಾಯುಕ್ತಂ ಅತ ಏವ ಮರಾಯು ಮರಣಶೀಲಂ ಮದೀಯಂ ಶರೀರಮರ್ಥೇಷು ಗಂತವ್ಯೇಷು ತರೀತವ್ಯೇಷ್ವಾಪದಾದಿಷು ಕ್ಷದ್ಮೇವ । ಉದಕನಾಮೈತತ್ । ಉದಕಮಿವ ತರ್ತರೀಥಃ ॥ ಅತ್ಯಂತಂ ತಾರಯಥಃ ॥ ತೄ ಪ್ಲವನತರಣಯೋಃ । ಯಙ್ಲುಗಂತಾಲ್ಲಟಿ ಛಂದಸ್ಯುಭಯಥೇತಿ ಥಸ ಆರ್ಧಧಾತುಕತ್ವೇನೇಡಾಗಮಃ । ವೄತೋ ವಾ । ಪಾ. ೭ ೨-೩೮ । ಇತಿ ದೀರ್ಘಃ ॥ ಋಭೂ ನರ್ಭೂ ಇವ । ದಾರ್ಷ್ಟಾಂತಿಕಸಾಮ್ಯಾದತ್ರ ದ್ವಿವಚನಂ । ಋಭೂ ಯಥಾ ಸ್ವನಿರ್ಮಿತೋ ರಥ ಆಪತ್ ತದ್ವತ್ ಖರಮಜ್ರಾ ಖರಂ ತೀಕ್ಷ್ಣಂ ಮಜ್ಜಯಿತಾರೌ ಶೋಧಯಿತಾರೌ । ಅತ್ಯಂತಂ ಶುದ್ಧಬಲಾವಿತ್ಯರ್ಥಃ ॥ ಟುಮಸ್ಜೋ ಶುದ್ಧೌ । ಅಸ್ಮಾದೌಣಾದಿಕೋ ರಪ್ರತ್ಯಯಃ ॥ ತಾದೃಶೌ ಯುವಾಂ ಖರಜ್ರುಸ್ತೀಕ್ಷ್ಣಗತಿರತಿಶಯೇನ ವೇಗವಾನೃಭುಭಿರ್ದತ್ತೋ ರಥೋ ಯುವಾಮಾಪತ್ । ಆಪ್ನೋತ್ ॥ ಆಪ್ಲೃ ವ್ಯಾಪ್ತೌ । ಲುಙಿ ಲೃದಿತ್ತ್ವಾಚ್ಚ್ಲೇರಙ್ ॥ ಸ ರಥೋ ವಾಯುರಿವ ಪರ್ಫರತ್ । ಸರ್ವತ್ರಾಪೂರಯತ್ । ಸರ್ವತ್ರ ವ್ಯಾಪ್ತವಾನಿತ್ಯರ್ಥಃ ॥ ಪೄ ಪೂರಣೇ । ಅಸ್ಮಾಲ್ಲೇಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ಅಭ್ಯಾಸಸ್ಯ ರುಗಾಗಮೋ ವಲೋಪಶ್ಚ । ಲೇಟೋಽಡಾಟಾವಿತ್ಯಡಾಗಮಃ ॥ ತತಃ ಸ ರಥೋ ರಯೀಣಾಂ ಧನಾನಾಂ ಧನಾನಿ ಕ್ಷಯತ್ । ಶತ್ರುಭ್ಯ ಆಗಮಯತ್ ॥ ಕ್ಷಿ ನಿವಾಸ-ಗತ್ಯೋಃ । ಅಸ್ಮಾದಂತರ್ಣೀತಣ್ಯರ್ಥಾಲ್ಲೇಟ್ಯಡಾಗಮಃ ॥ ಯದ್ವಾ । ಕ್ಷಯತಿರೈಶ್ವರ್ಯಕರ್ಮಾ । ಧನಾನಾಮೀಷ್ಟೇ ॥ ಛಾಂದಸಮನುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಉಗ್ರಾ**— ಅತ್ಯಧಿಕವಾದ ತೇಜಸ್ಸುಳ್ಳ ಎಲೈ ಅಶ್ವಿನೀ ದೇವತೆಗಳೇ ! **ಪಜ್ರೇವ**— ಅಧಿಕವಾದ ಶಕ್ತಿಯುಳ್ಳ ವೀರರಂತೆ । **ಚರ್ಚರಂ**— ಸಂಚಾರಾತ್ಮಕವೂ । **ಜಾರಂ**— ಜರಾಯುಕ್ತವೂ । **ಮರಾಯು**— ಮರಣೋನ್ಮುಖವಾದುದೂ ಆದ ಶರೀರವನ್ನು । **ಅರ್ಥೇಷು**— ಸುರಕ್ಷಿತವಾದ ಪ್ರದೇಶಕ್ಕೆ । **ಕ್ಷದ್ಮೇವ**— ಉದಕವನ್ನು ನಾವೆಗಳಿಂದ ದಾಟಿಸುವಂತೆ । **ತರ್ತರೀಥಃ**— (ಆಪತ್ಪ್ರದೇಶದಿಂದ ದಾಟಿಸಿ) ಕರೆದುಕೊಂಡು ಹೋಗಿ ಸೇರಿಸಿರಿ. **ಋಭೂ ನ ಆಪತ್**— ಋಭುಗಳಂತೆ । **ಖರಮಜ್ರಾ**— ಉತ್ಕೃಷ್ಟವಾದ ಬಲವುಳ್ಳವರಾಗಿದ್ದೀರಿ । **ಖರಜ್ರುಃ**— ಅವರಿಂದ ಕೊಡಲ್ಪಟ್ಟ ನಿಮ್ಮ ಬಲಯುಕ್ತವಾದ ರಥವು । **ವಾಯುರ್ನ**— ವಾಯುವಿನಂತೆ ವೇಗವಾಗಿ । **ಆಪತ್**—

**ಅಪೇಕ್ಷಿತವಾದ** ಪ್ರದೇಶಕ್ಕೆ ಬಂದಿದೆ | **ಪರ್ಫರತ್**— ಸರ್ವತ್ರ ವ್ಯಾಪಿಸಿದೆ | **ರಯೀಣಾಂ**—ಶತ್ರುಗಳ ಧನವನ್ನು| **ಕ್ಷಯತ್**—ತಂದೊದಗಿಸಿದೆ.

|| ಭಾವಾರ್ಥ ||

ಅತ್ಯಧಿಕವಾದ ತೇಜಸ್ಸುಳ್ಳ ಎಲೈ ಅಶ್ವಿನೀದೇವತೆಗಳೇ, ಅಧಿಕವಾದ ಶಕ್ತಿಯುಳ್ಳ ವೀರರಂತೆ ಸಂಚಾರಾತ್ಮಕವೂ ಜರಾಯುಕ್ತವೂ, ಮರಣೋನ್ಮುಖವೂ ಆದ ಶರೀರವನ್ನು ಸುರಕ್ಷಿತವಾದ ಪ್ರದೇಶಕ್ಕೆ ಉದಕವನ್ನು ನಾವೆಗಳಿಂದ ದಾಟಿಸುವಂತೆ ಆಪತ್ಪ್ರದೇಶದಿಂದ ಕರೆದುಕೊಂಡು ಹೋಗಿ ಸೇರಿಸಿರಿ. ನೀವು ಋಭುಗಳಂತೆ ಉತ್ಕೃಷ್ಟವಾದ ಬಲವುಳ್ಳವರಾಗಿದ್ದೀರಿ. ಅವರಿಂದ ಕೊಡಲ್ಪಟ್ಟ ನಿಮ್ಮ ಬಲಯುತವಾದ ರಥವು ವಾಯುವಿನಂತೆ ವೇಗವಾಗಿ ಅಪೇಕ್ಷಿತವಾದ ಪ್ರದೇಶಕ್ಕೆ ಬಂದಿದೆ. ಮತ್ತು ಸರ್ವತ್ರ ವ್ಯಾಪಿಸಿದೆ ಶತ್ರುಗಳ ಧನವನ್ನು ತಂದೊದಗಿಸಿದೆ.

## English Translation.

Fierce (Ashwins), like two powerful (heroes), you enable this moving perishable mortal (frame) to cross over to the objects (of its destination) as over water; extremely strong, like the Ribhus, your chariot attained its destination swift as the wind, it pervaded (everywhere), it dispensed riches.

|| ವಿಶೇಷವಿಷಯಗಳು ||

**ಪಜ್ರೇವ— ಪಜ್ರಾವಿವ ಪ್ರಾರ್ಜಿತಬಲೌ ವೀರಾವಿವ ಸ್ಥಿತೌ |** ತಮ್ಮ ಸ್ವಶಕ್ತಿಯಿಂದ ಯುದ್ಧಮಾಡಲು ಸಮರ್ಥರಾದ ವೀರರಂತೆ ಇರುವವರು. ಎಂದರೆ ಇನ್ನೊಬ್ಬರ ಸಹಾಯವನ್ನು ಅಪೇಕ್ಷಿಸದೆ ತಮ್ಮ ಶಕ್ತಿಸಾಮರ್ಥ್ಯಗಳಲ್ಲಿ ದೃಢವಿಶ್ವಾಸವುಳ್ಳ ಯೋಧರಂತೆ ಇರುವವರು ಎಂದಭಿಪ್ರಾಯವು

**ಋಭೂ ನ**—ಋಭುಗಳು ಋಭು, ವಿಭು, ವಾಜ ಎಂದು ಮೂರು ಮಂದಿ ಇದ್ದರೂ ಇಲ್ಲಿ ಇಬ್ಬರಾದ ಅಶ್ವಿನೀದೇವತೆಗಳ ವಿಷಯದಲ್ಲಿ ಉಪಮಾನವನ್ನು ಸೂಚಿಸುವುದಕ್ಕಾಗಿ ಋಭೂ ಎಂದು ದ್ವಿವಚನ ಶಬ್ದವನ್ನು ಉಪಯೋಗಿಸಲಾಗಿದೆ.

**ವಾಯುಃ ನ ಪರ್ಫರತ್—ಫರ್ವ ಪೂರಣೇ** ಎಂಬ ಧಾತುವಿನಿಂದ ಪರ್ಫರತ್ ಶಬ್ದವು ನಿಷ್ಪನ್ನವಾಗಿ ತುಂಬಿರುವುದು, ವ್ಯಾಪಿಸಿರುವುದು, ಎಂಬರ್ಥವನ್ನು ಸೂಚಿಸುವುದು. ವಾಯುವು ಯಾವರೀತಿ ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಿಸಿ ತುಂಬಿಕೊಂಡಿರುವುದೋ ಅದರಂತೆ ಅಶ್ವಿನೀ ದೇವತೆಗಳ ರಥವು ಸರ್ವತ್ರ ವ್ಯಾಪಿಸಿರುವುದು ಎಂದರೆ ಸರ್ವ ಸ್ಥಳಗಳಲ್ಲಿಯೂ ಸಂಚಾರ ಮಾಡುವುದು ಎಂದಭಿಪ್ರಾಯವು.

**ಕ್ಷಯತ್ ರಯೀಣಾಂ**—ಈ ರಥವು ಶತ್ರುಗಳ ಧನವನ್ನು ಅವರಿಂದ ಗೆದ್ದು ತರುವುದು ಅಥವಾ **ಕ್ಷಯತಿರ್ಕ್ಷಯರ್ಯಕರ್ಮಾ** ಎಂಬ ವಾಕ್ಯದಂತೆ ಈ ರಥವು ಧನಗಳಿಗೆ ಮುಖ್ಯ ನಿವಾಸ ಅಥವಾ ಆಶ್ರಯಸ್ಥಾನವಾಗಿರುವುದು.

॥ ಸಂಹಿತಾಪಾಠಃ ॥

ಘರ್ಮೇವ ಮಧು ಜಠರೇ ಸನೇರೂ ಭಗೇವಿತಾ ತುರ್ಫರೀ ಫಾರಿವಾರಂ ।
ಪತರೇವ ಚಚರಾ ಚಂದ್ರನಿರ್ಣಿಙ್ಮನಋಂಗಾ ಮನನ್ಯಾ೩ ನ ಜಗ್ಮೀ ॥ ೮ ॥

॥ ಪದಪಾಠಃ ॥

ಘರ್ಮಾಽಇವ । ಮಧು । ಜಠರೇ । ಸನೇರೂ ಇತಿ । ಭಗೇಽಅವಿತಾ । ತುರ್ಫರೀ ಇತಿ । ಫಾರಿವಾ । ಅರಂ ।
ಪತರಾಽಇವ । ಚಚರಾ । ಚಂದ್ರಽನಿರ್ನಿಕ್ । ಮನಃಽಋಂಗಾ । ಮನನ್ಯಾ । ನ । ಜಗ್ಮೀ ಇತಿ ॥ ೮ ॥

॥ ಸಾಯಣಭಾಷ್ಯಂ ॥

ಘರ್ಮೇವ ಘರ್ಮಾವಿವ ಮಹಾವೀರಾವಿವ ಜಠರೇ ಸ್ವೋದರೇ ಮಧು ಮಧುನಃ ॥ ಷಷ್ಠ್ಯಾ ಲುಕ್ ॥ ಘೃತಸ್ಯ ಸನೇರೂ ಸಂಭಕ್ತಾರೌ ॥ ವನ ಷಣ ಸಂಭಕ್ತೌ । ಅಸ್ಮಾದ್ದಾಣಾದಿಕ ಏರುಪ್ರತ್ಯಯಃ ॥ ಭಗೇವಿತಾ । ಭಗೋ ಧನಂ । ತದ್ವಿಷಯರಕ್ಷಣಯುಕ್ತೌ ॥ ಅವತೇರ್ಭಾವೇಕ್ತಃ । ತತ್ಪುರುಷೇ ಕೃತಿ ಬಹುಲಮಿತಿ ಬಹುಲವಚನಾದ್ಬಹುವ್ರೀಹಾವಪ್ಯಲುಕ್ । ಯದ್ವಾ । ಅವತೇಸ್ತೃಜಂತಸ್ಯ ಸುಪೋ ಡಾದೇಶಃ । ಸ್ವರಸ್ತು ಛಾಂದಸಃ ॥ ಅರಮಲಂ ತುರ್ಫರೀ ಶತ್ರೂಣಾಂ ಹಿಂಸಿತಾರೌ ಅತ ಏವ ಫಾರಿವಾ । ಫಾರಿರಾಯುಧಂ । ತದ್ವಂತೌ ಭವತಃ ॥ ಸ್ಫುರತಿರ್ವಧಕರ್ಮಾ । ಅಸ್ಮಾಣ್ಣಿಚಿ ಚಿಸ್ಫುರೋರ್ಣೌ । ಪಾ. ೬-೧-೫೪ । ಇತ್ಯಾತ್ವಂ । ತದಂತಾದಿಪ್ರತ್ಯಯಃ ಸಕಾರಲೋಪಶ್ಛಾಂದಸಃ । ಛಂದಸೀವನಿಪಾವಿತಿ ಮತ್ವರ್ಥೀಯೋ ವನಿಪ್ । ಸುಪೋ ಡಾದೇಶಃ ॥ ಪತರೇವ ಪತರಾವಿವ ಪತನಶೀಲೌ ಪಕ್ಷಿಣಾವಿವ ಚಚರಾ ಸಂಚರಂತೌ ಚಂದ್ರನಿರ್ಣಿಕ್ । ನಿರ್ಣಿಗಿತಿ ರೂಪನಾಮ ॥ ಸುಪೋ ಲುಕ್ ॥ ಚಂದ್ರನಿರ್ಣಿಜೌ ಚಂದ್ರಸದೃಶರೂಪಯುಕ್ತೌ । ಯದ್ವಾ । ಚಂದ್ರಮಾಹ್ಲಾದಿಕಂ ರೂಪಂ ಯಯೋಸ್ತೌ ವರ್ತೇತೇ । ಮನಋಂಗಾ ಮನಸಾ ಪ್ರಸಾಧನಂ ಯಯೋಸ್ತೌ ॥ ಋಂಜತಿಃ ಪ್ರಸಾಧನಕರ್ಮಾ । ಅಸ್ಮಾದ್ಭಾವೇ ಘಞ್ । ಬಹುವ್ರೀಹಿಸ್ವರಃ ॥ ಮನನ್ಯಾ ನ ಮನನ್ಯೌ ಯಥಾ । ಮನನೇ ಸಾಧೂ । ಸ್ತುತ್ಯಾವಿತ್ಯರ್ಥಃ ॥ ಮನನಶಬ್ದಾತ್ತತ್ರ ಸಾಧುರಿತಿ ಯತ್ । ತಿತ್ಸ್ವರಿತಂ ॥ ತಾದೃಶಾವಿವ ಜಗ್ಮೀ ಯಜ್ಞಂ ಪ್ರತ್ಯಾಗಮನಶೀಲೌ ಭವತಃ ॥ ಗಮೇರಾದೃಗಮಹನ ಇತಿ ಕಿನ್ಪ್ರತ್ಯಯಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಘರ್ಮೇವ**—ಮಹಾ ವೀರಸಂಜ್ಞಕವಾದ ಚಮಸ ಪಾತ್ರೆಗಳು ಹವಿರ್ಯುಕ್ತವಾಗಿರುವಂತೆ । **ಜಠರೇ**—ನಿಮ್ಮ ಉದರಗಳಲ್ಲಿ । **ಮಧು**—ಮಧುರವನ್ನು (ಸೋಮವನ್ನು) **ಸನೇರೂ—**

ತುಂಬಿಕೊಂಡಿರುವವರೂ | **ಭಗೇವಿತಾ**—ಧನರಕ್ಷಕರಾಗಿಯೂ | **ಅರಂ**—ಪೂರ್ಣವಾಗಿ | **ತುರ್ಫರೀ**—ಶತ್ರುನಾಶಕರಾಗಿಯೂ | **ಫಾರಿವಾ**—ಆಯುಧಸಹಿತರಾಗಿಯೂ ಇದ್ದೀರಿ | **ಪತರೇವ**—ಪಕ್ಷಿಗಳಂತೆ | **ಚಚರಾ**—ಸಂಚರಿಸುವವರೂ | **ಚಂದ್ರನಿರ್ಣಿಕ್**—ಆಕರ್ಷಕವಾದ ರೂಪವುಳ್ಳವರಾಗಿಯೂ | **ಮನಯುಂಗಾ**—ಅಲಂಕಾರ ಯುಕ್ತರಾಗಿಯೂ | **ಮನನ್ಯಾ ನ**—ಸ್ತುತಿಗೆ ಯೋಗ್ಯರಾಗಿರುವಂತೆಯೂ | **ಜಗ್ಮೀ**—ಯಜ್ಞಶಾಲೆಗೆ ಬರುವವರಾಗಿದ್ದೀರಿ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ಮಹಾ ವೀರಸಂಜ್ಞಕವಾದ ಯಾಗದಲ್ಲಿ ಚಮಸಪಾತ್ರೆಗಳು ಹವಿಸ್ಸಿನಿಂದ ತುಂಬಿರುವಂತೆ ನೀವು ನಿಮ್ಮ ಉದರಗಳಲ್ಲಿ ಮಧುವನ್ನು ತುಂಬಿಕೊಂಡಿರುತ್ತೀರಿ, ಧನರಕ್ಷಕರೂ, ಪೂರ್ಣವಾಗಿ ಶತ್ರುಗಳನ್ನು ನಾಶಪಡಿಸುವ ಆಯುಧಗಳುಳ್ಳವರಾಗಿಯೂ ಇದ್ದೀರಿ ಪಕ್ಷಿಗಳಂತೆ ಸಂಚರಿಸುವವರೂ, ಆಕರ್ಷಕವಾದ ರೂಪವುಳ್ಳವರೂ, ಅಲಂಕಾರಯುಕ್ತರೂ, ಸ್ತುತಿಗೆ ಯೋಗ್ಯರೂ ಆದ ನೀವು ನಮ್ಮ ಯಜ್ಞಶಾಲೆಗೆ ಬರುವವರಾಗಿದ್ದೀರಿ.

## English Translation

With your bellies full of the Soma, like two saucepans, preservers of wealth, destroyers of enemies, (you are) armed with hatchets, moving like two flying (birds) with forms like the moon, attaining success through the mind, like two laudable beings, ( you are) approaching (the sacrifice).

|| ಸಂಹಿತಾಪಾಠಃ ||

ಬೃಹಂತೇವ ಗಂಭರೇಷು ಪ್ರತಿಷ್ಠಾಂ ಪಾದೇವ ಗಾಧಂ ತರತೇ ವಿದಾಥಃ |
ಕರ್ಣೇವ ಶಾಸುರನು ಹಿ ಸ್ಮರಾಥೋಽಂಶೇವ ನೋ ಭಜತಂ ಚಿತ್ರಮಪ್ನಃ ||

|| ಪದಪಾಠಃ ||

ಬೃಹಂತಾಽಇವ | ಗಂಭರೇಷು | ಪ್ರತಿಽಸ್ಥಾಂ | ಪಾದಾಽಇವ | ಗಾಧಂ | ತರತೇ | ವಿದಾಥಃ |
ಕರ್ಣಾಽಇವ | ಶಾಸುಃ | ಅನು | ಹಿ | ಸ್ಮರಾಥಃ | ಅಂಶಾಽಇವ | ನಃ | ಭಜತಂ | ಚಿತ್ರಂ | ಅಪ್ನಃ |೯||

|| ಸಾಯಣಭಾಷ್ಯಂ ||

ಬೃಹಂತೇವ ಬೃಹಂತಾವಿವ ಪ್ರಾಂಶೂ ಪುರುಷೌ ಯಥಾ ಗಂಭರೇಷು ಗಹನೇಷು ಜಲೇಷು ಪ್ರತಿಷ್ಠಾಂ ವಿಂದತಃ ತದ್ವದ್ಗಹ್ವರೇಷು ಗಂಭೀರೇಷು ದುಷ್ಪ್ರವೇಶೇಷು ಸ್ಥಾನೇಷು ಪ್ರತಿಷ್ಠಾಮವಸ್ಥಿತಿಮಾ-

ಸದಂ ಯುವಾಂ ವಿದಾಥಃ । ಜಾನೀಥಃ । ಪಾದೇವ ಪಾದಾವಿವ ಯಥಾ ತರತೇ । ಷಷ್ಠ್ಯರ್ಥೇ ಚತುರ್ಥೀ। ತರತಃ ಪುರುಷಸ್ಯ ಪಾದೌ ಯಥಾ ಗಾಧಂ ಜಲಂ ವಿತ್ತಃ ತದ್ವದ್ಯುವಾಂ ಕಾರ್ಯೇಷು ಜಲೇಷು ಗಾಧಂ ವಿದಾಥಃ ॥ ಜಾನೀಥಃ ॥ ವಿದ ಜ್ಞಾನೇ । ಲೇಟ್ಯಡಾಗಮಃ ॥ ಕರ್ಣೇವ ಯಥಾ ಕರ್ಣಾವುಕ್ತಂ ಶಬ್ದಂ ವಿದತುಃ ತದ್ವದ್ಯುವಾಂ ಶಾಸುಃ ಶಾಸಿತಾರಂ ಸ್ತುತಿಂ ಕುರ್ವಾಣಂ ಜನಮನು ಹಿ ಸ್ಮರಾಥಃ। ಅನುಕೂಲಂ ಜಾನೀಥಃ ಖಲು ॥ ಸ್ಮರತೇರ್ಲೇಟ್ಯಡಾಗಮಃ। ಹಿಯೋಗಾದನಿಘಾತಃ । ಅಧೀಗರ್ಥದಯೇಶಾಂ ಕರ್ಮಣಿ । ಪಾ. ೨-೩-೫೨ । ಇತಿ ಶಾಸುರಿತ್ಯಸ್ಯ ಷಷ್ಠೀ। ಅಂಶೇವಾಂಶಾವಿವ ಯಥಾವಯವೌ ತದ್ವಂತಂ ಯಜ್ಞಂ ಭಜೇತೇ ತದ್ವದ್ಯುವಾಂ ನೋಽಸ್ಮದೀಯಂ ಚಿತ್ರಂ ಚಾಯನೀಯಮಪ್ನಃ ಕರ್ಮ ಭಜತಂ। ಆಶ್ರಯತಂ ॥ ಅಪ್ನಃ । ಅಪ್ಲೃ ವ್ಯಾಪ್ತೌ । ಅಸ್ಮಾದಾಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ಚ ವಾ। ಉ. ೪-೨೦೭ । ಇತ್ಯಸುನ್ ತತ್ಸಂನಿಯೋಗೇನ ಹ್ರಸ್ವೋ ನುಡಾಗಮಶ್ಚ। ನಿತ್ಸ್ವರೇಣಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀ ದೇವತೆಗಳೇ) । **ಬೃಹಂತೇವ**— ಎತ್ತರವಾಗಿ ಬೆಳೆದಿರುವ ಪುರುಷರು । **ಗಂಭರೇಷು**— ಆಳವಾದ ನೀರಿನಲ್ಲಿದ್ದರೂ ತಮ್ಮ ಸ್ಥಿತಿಯನ್ನು ತಿಳಿಯುವಂತೆ । **ಪ್ರತಿಷ್ಠಾಂ**— ನಿಮ್ಮ ಇರುವಿಕೆಯನ್ನು । **ವಿದಾಥಃ**— ನೀವು ಅರಿಯುತ್ತೀರಿ । **ತರತಃ**— ನದಿಯನ್ನು ದಾಟುವ ಪುರುಷನ । **ಪಾದೇವ**— ಪಾದಗಳಂತೆ । **ಗಾಧಂ**— ಆಳವಾದ ಪ್ರದೇಶಗಳನ್ನೂ ನೀವು ಅರಿಯುತ್ತೀರಿ । **ಕರ್ಣೇವ**— ಕಿವಿಗಳಂತೆ । **ಶಾಸುಃ**— ನಿಮ್ಮನ್ನು ಸ್ತುತಿಸುವ ಸ್ತುತಿಕರ್ತನ ಸ್ತೋತ್ರವನ್ನು । **ಅನು ಹಿ ಸ್ಮರಾಥಃ**— ಸುಲಭವಾಗಿ ತಿಳಿಯುತ್ತೀರಿ । **ಅಂಶೇವ**— ಯಜ್ಞಕ್ಕೆ ಅವಲಂಬನವಾದ ಎರಡು ತೋಳುಗಳಂತಿರುವ ನೀವು । **ನಃ**— ನಮ್ಮ । **ಚಿತ್ರಂ**— ಆಕರ್ಷಕವಾದ । **ಅಪ್ನಃ**— (ಯಜ್ಞ) ಕರ್ಮವನ್ನು । **ಭಜತಂ**— ಸೇವಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಎತ್ತರವಾಗಿ ಬೆಳದಿರುವ ಪುರುಷರು ಆಳವಾದ ನೀರಿನಲ್ಲಿದ್ದರೂ ಅವರ ಸ್ಥಿತಿಯು ತಿಳಿಯುವಂತೆ ನಿಮ್ಮ ಇರುವಿಕೆಯನ್ನು ನೀವು ಅರಿಯುತ್ತೀರಿ. ನದಿಯನ್ನು ದಾಟುವ ಪುರುಷನ ಪಾದಗಳಂತೆ ಆಳವಾದ ಪ್ರದೇಶಗಳನ್ನು ನೀವು ಅರಿಯುತ್ತೀರಿ. ಕಿವಿಗಳಂತೆ ನಿಮ್ಮನ್ನು ಸ್ತುತಿಸುವ ಸ್ತುತಿಕರ್ತನ ಸ್ತೋತ್ರವನ್ನು ಸುಲಭವಾಗಿ ತಿಳಿಯುತ್ತೀರಿ ಯಜ್ಞಕ್ಕೆ ಅವಲಂಬನವಾದ ಎರಡು ತೋಳುಗಳಂತಿರುವ ನೀವು ನಮ್ಮ ಆಕರ್ಷಕವಾದ ಕರ್ಮವನ್ನು ಸೇವಿಸಿರಿ.

## English Translation.

Like two big (men) in deep waters you find a resting-place, like two feet crossing a ford you find (the fording-place), like two ears you recognize (the voice) of the reciter of your praises, like two shoulders (supporting the sacrifice, come to our desirable rite.

|| ಸಂಹಿತಾಪಾಠಃ ||

ಆರಂಗರೇವ ಮಧ್ವೇರಯೇಥೇ ಸಾರಘೇವ ಗವಿ ನೀಚೀನಬಾರೇ |
ಕೀನಾರೇವ ಸ್ವೇದಮಾಸಿಸ್ವಿದಾನಾ ಕ್ಷಾಮೇವೋರ್ಜಾ ಸೂಯವಸಾ-
ತ್ಸಚೇಥೇ || ೧೦ ||

|| ಪದಪಾಠಃ ||

ಆರಂಗರಾऽಇವ | ಮಧು | ಆ | ಈರಯೇಥೇ ಇತಿ | ಸಾರಘಾऽಇವ | ಗವಿ | ನೀಚೀನऽಬಾರೇ |
ಕೀನಾರಾऽಇವ | ಸ್ವೇದಂ | ಆऽಸಿಸ್ವಿದಾನಾ | ಕ್ಷಾಮऽಇವ | ಊರ್ಜಾ | ಸುಯವಸऽಅತ್ | ಸಚೇಥೇ
ಇತಿ || ೧೦ ||

|| ಸಾಯಣಭಾಷ್ಯಂ ||

ಆರಂಗರೇವ || ಗೄ ಶಬ್ದೇ | ಅಸ್ಮಾದ್ಭಾವ ಋದೋರಪ್ | ಅರಮಲಂ ಪರ್ಯಾಪ್ತಂ ಗರಃ ಶಬ್ದನಂ | ತಸ್ಯ ಸಂಬಂಧಿನೌ | ತಸ್ಯೇದಮಿತ್ಯಣ್ || ಶಬ್ದವಂತೌ ಮೇಘಾವಿವ ಯಥಾ ಮಧು ಜಲಂ ಪ್ರೇರಯತಃ ತದ್ವದ್ಯುವಾಮೇರಯೇಥೇ | ಪ್ರೇರಯಥಃ || ಈರ ಪ್ರೇರಣೇ ಚೌರಾದಿಕಃ || ಸಾರಘೇವ ಸಾರಘಾವಿವ | ಸರಘಾ ಮಧುಮಕ್ಷಿಕಾ | ಸರಘೈವ ಸಾರಘಾ || ಪ್ರಜ್ಞಾದಿತ್ವಾದಣ್ | ಪಾ. ೫-೪-೩೮ || ತೇ ಯಥಾ ನೀಚೀನಬಾರೇ ನೀಚೀನದ್ವಾರೇ ಮಧುಪುಷ್ಪೇ ಮಧು ಪ್ರೇರಯತಃ ತದ್ವದ್ಯುವಾಂ ನೀಚೀನಬಾರೇ ನ್ಯಗ್ಭೂತದ್ವಾರೇ ಗವಿ ಗೋರೂಧಸಿ ಕ್ಷೀರಂ ಪ್ರಕ್ಷಿಪಥಃ | ಕೀನಾರೇವ ಕೀನಾರಾವಿವ ಕುತ್ಸಿತಮನುಷ್ಯೌ ಯಥಾ ಸ್ವಿದ್ಯಮಾನೌ ಭವತಃ ತದ್ವತ್ಸ್ವೇದಂ ಸ್ವಿದ್ಯಮಾನಂ ಜಲಮಾಸಿಸ್ವಿದಾನಾ ಸಮಂತಾತ್ ಸ್ವೇದಯಂತೌ ಪ್ರಕ್ಷಾರಯಂತೌ ಭವಥಃ || ಞಿಷ್ವಿದಾ ಗಾತ್ರಪ್ರಕ್ಷರಣೇ | ಅನುದಾತ್ತೇತ್ | ತಸ್ಮಾಚ್ಛಾಂದಸೇ ಲಿಟಿ ಕಾನಜಾದೇಶಃ | ಕ್ಷಾಮೇವ | ಕ್ಷೈ ಜೈ ಷೈ ಕ್ಷಯೇ | ಅಸ್ಮಾದಾತೋ ಮನಿನ್ | ಹ್ರಸ್ವಶ್ಛಾಂದಸಃ || ಕ್ಷಾಮಾ ಕ್ಷೀಣಾ ಗೌಃ ಸುಯವಸಾತ್ || ಅದೇಃ ಕ್ವಿಪ್ || ಶೋಭನಂ ಯವಸಂ ಘಾಸಾದಿಕಂ ಭಕ್ಷಯಂತೀ ಕ್ಷೀರರೂಪೇಣಾನ್ನೇನ ಸಮವೇತಾ ಯಥಾ ಭವತಿ ತದ್ವದ್ಯುವಾಮೂರ್ಜಾ ಹವೀರೂಪೇಣಾನ್ನೇನ ಸಚೇಥೇ | ಸಂಗಚ್ಛೇಥೇ || ಷಚ ಸಮವಾಯೇ ||

|| ಪ್ರತಿಪದಾರ್ಥ ||

(ಎಲೈ ಅಶ್ವಿನೀದೇವತೆಗಳೇ) ಆರಂಗರೇವ—ಶಬ್ದಮಾಡತಕ್ಕ ಮೇಘಗಳಂತೆ | ಮಧು—ರುಚಿಕರವಾದ ಜಲವನ್ನು | ಏರಯೇಥೇ—ನೀವು ಕಳುಹತ್ತೀರಿ | ಸಾರಘೇವ—ಮಧುಕರಗಳು ಮಧುವನ್ನು ಶೇಖರಿಸುವಂತೆ|

**ನೀಚೀನಬಾರೇ**—ಅಧೋಮುಖವಾಗಿ ದ್ವಾರವುಳ್ಳ । **ಗವಿ**—ಗೋವಿನ ಕೆಚ್ಚಲಿನಲ್ಲಿ ಕ್ಷೀರವನ್ನು ತುಂಬಿರುತ್ತೀರಿ । **ಕೀನಾರೇವ**—ಕಷ್ಟಪಟ್ಟು ಕೆಲಸಮಾಡುವ ಜನರು । **ಸ್ವೇದಂ**—ಬೆವರಿನ ಬಿಂದುಗಳನ್ನು ಸುರಿಸುವಂತೆ । **ಆಸಿಸ್ವಿದಾನಾ**—ನಮ್ಮ ಸುತ್ತಲೂ ಜಲವನ್ನು ಚಿಮುಕಿಸುತ್ತೀರಿ । **ಕ್ಷಾಮಾ**—ಬಡವಾದ ಗೋವು । **ಸುಯವಸಾದಿವ**–ಉತ್ತಮವಾದ ಹುಲ್ಲನ್ನು ತಿನ್ನುವಂತೆ । **ಊರ್ಜಾ**—ಹವೀರೂಪದ ಅನ್ನವನ್ನು । **ಸಚೇಥೇ**—ನೀವು ಸೇವಿಸುತ್ತೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಶಬ್ದಮಾಡತಕ್ಕ ಮೇಘಗಳಂತೆ ನೀವು ರುಚಿಕರವಾದ ಜಲವನ್ನು ಕಳುಹುತ್ತೀರಿ. ಮಧುಕರಗಳು ಮಧುವನ್ನು ಶೇಖರಿಸುವಂತೆ ಕೆಳಭಾಗಕ್ಕೆ ತಿರುಗಿಕೊಂಡಿರುವ ಗೋವಿನ ಕೆಚ್ಚಲಿನಲ್ಲಿ ಕ್ಷೀರವನ್ನು ತುಂಬಿರುತ್ತೀರಿ ಕಷ್ಟಪಟ್ಟು ಕೆಲಸಮಾಡುವ ಜನರು ಬೆವರನ್ನು ಸುರಿಸುವಂತೆ ನಮ್ಮ ಸುತ್ತಲೂ ನೀರಿನ ಬಿಂದುಗಳನ್ನು ಚಿಮುಕಿಸುತ್ತೀರಿ. ಬಡವಾದ ಗೋವು ಉತ್ತಮವಾದ ಹುಲ್ಲನ್ನು ತಿನ್ನುವಂತೆ ಹವೀರೂಪದ ಅನ್ನವನ್ನು ನೀವು ಸೇವಿಸುತ್ತೀರಿ.

## English Translation.

Like two loud-sounding (clonds). you send forth the sweet (rain); like two bees (you deposit milk) in (the udder of) the cow which has its opening turned downwards; like two labourers you are dripping with perspiration, like a tired cow eating sweet herbage, you attend (the sacrifice).

॥ ಸಂಹಿತಾಪಾಠಃ ॥

ಋಧ್ಯಾಮ ಸ್ತೋಮಂ ಸನುಯಾಮ ವಾಜಮಾ ನೋ ಮಂತ್ರಂ ಸರಥೇ-
ಹೋಪ ಯಾತಂ ।
ಯಶೋ ನ ಪಕ್ವಂ ಮಧು ಗೋಷ್ವಂತರಾ ಭೂತಾಂಶೋ ಅಶ್ವಿನೋಃ
ಕಾಮಮಪ್ರಾಃ ॥ ೧೧ ॥

॥ ಪದಪಾಠಃ ॥

ಋಧ್ಯಾಮ । ಸ್ತೋಮಂ । ಸನುಯಾಮ । ವಾಜಂ । ಆ । ನಃ । ಮಂತ್ರಂ । ಸ್ಽರಥಾ । ಇಹ । ಉಪ । ಯಾತಂ ।

ಯಶಃ । ನ । ಪಕ್ವಂ । ಮಧು । ಗೋಷು । ಅಂತಃ । ಆ । ಭೂತಽಅಂಶಃ । ಅಶ್ವಿನೋಃ । ಕಾಮಂ । ಅಪ್ರಾಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಯಂ ಸ್ತೋಮಂ ತ್ರಿವೃತ್ಪಂಚದಶಾದಿಕಮೃಧ್ಯಾಮ । ಋಧ್ಯಾಸ್ಮ । ವರ್ಧಯೇಮ ॥ ಋಧು ವೃದ್ಧೌ । ಅಸ್ಮಾದಾಶೀರ್ಲಿಙಿ ಕಿದಾಶಿಷೀತಿ ಯಾಸುಟಃ ಕಿತ್ತ್ವಂ ॥ ವಾಜಂ ಹವಿರ್ಲಕ್ಷಣಮನ್ನಂ ಯುವಾಭ್ಯಾಂ ಸನುಯಾಮ । ಪ್ರಯಚ್ಛೇಮ ॥ ಷಣು ದಾನೇ ತಾನಾದಿಕಃ । ವಿಧಿಲಿಙ್ । ವಾಕ್ಯಭೇದಾದನಿಘಾತಃ ॥ ತಸ್ಮಾದ್ಯುವಾಂ ಸರಥಾ ಸರಥೌ ಸಮಾನರಥಾವೇಕಮೇವ ರಥಮಾರೂಢೌ ಸಂತಾವಿಹಾಸ್ಮಿನ್ಕರ್ಮಣಿ ನೋಽಸ್ಮದೀಯಂ ಮಂತ್ರಂ ಮನನೀಯಂ ಸ್ತೋತ್ರಮುಪ ಯಾತಂ । ಉಪಾಗಚ್ಛತಂ । ಗೋಷ್ಠಂತೆಗೋಽರೂಧಸ್ಯವಸ್ಥಿತಂ ಪಕ್ವಂ ಪರಿಣತಂ ಅತ ಏವ ಮಧು ಮಧುರಂ ಯಶೋ ನ । ಯಶ ಇತ್ಯನ್ನನಾಮ । ನಶ್ಚಾರ್ಥೇ । ಕ್ಷೀರಾಜ್ಯಾದಿಲಕ್ಷಣಂ ಮಹಾವೀರೇಽವನೀಯಮಾನಮನ್ನಂ ಚಾವೇಕ್ಷ್ಯಾಗಚ್ಛತಮಿತಿ ಸಂಬಂಧಃ । ಏವಮುಕ್ತಪ್ರಕಾರೇಣ ಭೂತಾಂಶ ಏತನ್ನಾಮರ್ಷಿರಶ್ವಿನೋಃ ಕಾಮಮಭಿಲಾಷಮಾತ್ಮೀಯಾಭಿಃ ಸ್ತುತಿಭಿರಪ್ರಾಃ । ಅಪೂರಯತ್ । ಸಂಪೂರ್ಣಮಕಾರ್ಷೀದಿತ್ಯರ್ಥಃ ॥ ಪ್ರಾ ಪೂರಣೇ ಆದಾದಿಕಃ । ವ್ಯತ್ಯಯೇನ ಮಧ್ಯಮಃ ॥ ಅತ್ರಾಶ್ವಿನೇ ಸೂಕ್ತೇ ಸರ್ವಾಣ್ಯಪಿ ಪದಾನಿ ದುರ್ವ್ಯಾಖ್ಯತ್ವಾದಾನ್ಯಸ್ಮಾಭಿರ್ದಿಙ್ಮಾತ್ರೇ ಪ್ರದರ್ಶಿತಾನಿ । ಏವಂ ನಿರುಕ್ತವ್ಯಾಕರಣಾದಿಭಿರರ್ಥವಿಶೇಷೇ ಬುದ್ಧಿಮದ್ಭಿರುನ್ನೇಯಾನಿ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಸ್ತೋಮಂ**—ನಿಮ್ಮನ್ನುದ್ದೇಶಿಸಿ ಅರ್ಪಿಸುವ ಸ್ತೋತ್ರವನ್ನು । **ಋಧ್ಯಾಮ**—ನಾವು ವೃದ್ಧಿಪಡಿಸುವಂತಾಗಲಿ । **ವಾಜಂ**—ಹವಿಸ್ಸಿನ ರೂಪದ ಅನ್ನವನ್ನು । **ಸನುಯಾಮ**—ನಿಮಗೆ ಅರ್ಪಿಸುವಂತಾಗಲಿ । **ಸರಥಾ**—ಒಂದೇ ರಥದಲ್ಲಿ ಕುಳಿತವರಾಗಿ । **ನಃ**—ನಮ್ಮ । **ಮಂತ್ರಂ**—ಸ್ತುತಿಯನ್ನು ಸ್ವೀಕರಿಸಲು । **ಇಹ**—ಇಲ್ಲಿಗೆ । **ಉಪ ಯಾತಂ**—ಬನ್ನಿರಿ । **ಗೋಷ್ಠಂತಃ**—ಕೆಚ್ಚಲಿನಲ್ಲಿರುವ । **ಪಕ್ವಂ**—ಪಕ್ವವಾದುದೂ । **ಮಧು**—ಮಧುರವಾದುದೂ ಆದ । **ಯಶೋ ನ**—ಅನ್ನಕ್ಕಾ (ಕ್ಷೀರಾದಿಗಳನ್ನು ಉದ್ದೇಶಿಸಿ) ಅಭಿಮುಖವಾಗಿ ಬನ್ನಿರಿ । **ಭೂತಾಂಶಃ**—ಭೂತಾಂಶನೆಂಬ ಋಷಿಯು । **ಅಶ್ವಿನೋಃ**—ಅಶ್ವಿನೀದೇವತೆಗಳ । **ಕಾಮಂ**—ಇಷ್ಟಾರ್ಥವನ್ನು । **ಅಪ್ರಾಃ**—ತನ್ನ ಸ್ತುತಿಗಳಿಂದ ತುಂಬಿದ್ದಾನೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನುದ್ದೇಶಿಸಿ ಅರ್ಪಿಸುವ ತ್ರಿವೃದಾದಿ ಸ್ತೋತ್ರವನ್ನು ನಾವು ವೃದ್ಧಪಡಿಸುವಂತಾಗಲಿ (ಹೆಚ್ಚಾಗಿ ಪಠಿಸುವಂತಾಗಲಿ) ಹವಿಸ್ಸಿನ ರೂಪದ ಅನ್ನವನ್ನು ನಿಮಗೆ ಅರ್ಪಿಸುವಂತಾಗಲಿ. ಒಂದೇ ರಥದಲ್ಲಿಕುಳಿತು ನಿಮ್ಮ ಸ್ತುತಿಯನ್ನು ಸ್ವೀಕರಿಸಲು ಇಲ್ಲಿಗೆ ಬನ್ನಿರಿ. ಹಸುವಿನ ಕೆಚ್ಚಲಿನಿಂದ ಉತ್ಪನ್ನವಾದ ಕ್ಷೀರಾದಿಗಳನ್ನೂ ಉದ್ದೇಶಿಸಿ ಇಲ್ಲಿಗೆ ಬನ್ನಿರಿ. ಭೂತಾಂಶನೆಂಬ ಋಷಿಯು ಅಶ್ವಿನೀದೇವತೆಗಳ ಇಷ್ಟಾರ್ಥವನ್ನು ತನ್ನ ಸ್ತುತಿಗಳಿಂದ ತುಂಬಿದ್ದಾನೆ.

## English Translation.

May we increase our praise, (O Ashwins), may we offer you food, come hither in the same chariot to our worships; and accept the sweet food prepared from within the cows. Bhuthamsha has fulfilled the desires of the learned.

॥ ವಿಶೇಷವಿಷಯಗಳು ॥

ಈ ಸೂಕ್ತದ ವಿನಿಯೋಗ ವಿಷಯದಲ್ಲಿ ಋಗ್ವಿಧಾನದಲ್ಲಿ ಈ ರೀತಿ ಹೇಳಿದೆ—

ಭೂತಾಂಶಸ್ಯ ಋಷೇಃ ಸೂಕ್ತಂ ಪ್ರಜಾಕಾಮಃ ಶುಚಿರ್ಜಪನ್ ।
ಅನುರೂಪಾಂ ಪ್ರಜಾಮಾಶು ಲಭತೇ ನಾತ್ರ ಸಂಶಯಃ ॥

ಸ್ಥಾಲೀಪಾಕೇನ ನಾಸತ್ಯಾವಶ್ವಿನೌ ತು ಯಜೇದ್ದ್ವಿಜಃ ।
ಅನೇನೈವೋಪಚಾರೇಣ ಹುತ್ವಾಶ್ವಾನನುಮಂತ್ರಯೇತ್ ॥

ಪಾಯಸಂ ಕೃಶರಾಮಾಂಸನೋದನಂ ದಧಿಸಕ್ತುಕಾನ್ ।
ಕುಲ್ಮಾಷಾಂಶ್ಚ ಕರಂಭಾಂಶ್ಚ ಫಲಾನಿ ವಿವಿಧಾನಿ ಚ ॥

ಚಿತ್ರಂ ಮಾಲ್ಯಂ ಶುಭಾನ್ ಗಂಧಾನ್ ಅನ್ನಪಾನಾನಿ ಯಾನಿ ಚ ।
ಭಕ್ಷ್ಯಂ ಭೋಜ್ಯಂ ಚ ಪೇಯಂ ಚ ಸಮಾಹೃತ್ಯೋದಿತೇ ರವೌ ।
ಭೂತಾಂಶಮಭ್ಯಸೇತ್ತಾವದ್ಯಾವದಸ್ತಮಿತೋ ರವಿಃ ॥
ಅರ್ಧರಾತ್ರೇ ತ್ವತಿಕ್ರಾಂತೇ ತತೋಽಶ್ವಿಭ್ಯಾಂ ನಿವೇದಯೇತ್ ॥

ದೀರ್ಘಾಯುಷಂ ಸರೂಪಂ ಚ ಲಭೇತ್ಪುತ್ರಂ ಸುವರ್ಚಸಂ ।
ರೂಪವಾಂಶ್ಚ ಭವೇನ್ನಿತ್ಯಂ ಭೂತಾಂಶಂ ಯೋಽಭ್ಯಸೇತ್ಸದಾ ।
ಸರ್ವಕಾಮಿಕಮಿತ್ಯೇತಮೃಷಿಂ ವಿದ್ಯಾದ್ವಿಚಕ್ಷಣಃ ॥

(ಋಗ್ವಿಧಾನ. ಅ. ೪. ಶ್ಲೋ. ೧೦–೧೫)

**ಭೂತಾಂಶನೆಂಬ** ಋಷಿದೃಷ್ಟವಾದ **ಉಭಾ ಉ ನೂನಂ** ಎಂಬ ಈ ಸೂಕ್ತವನ್ನು ಪುತ್ರಸಂತಾನವನ್ನಪೇಕ್ಷಿಸುವ ಪುರುಷನು ಶುಚಿರ್ಭೂತನಾಗಿ ಪಠಿಸಿದರೆ ಅವನು ಅನುರೂಪವಾದ ಉತ್ತಮ ಪುತ್ರನನ್ನು ಪಡೆಯುವನು. ಈ ವಿಷಯದಲ್ಲಿ ಸಂಶಯವಿಲ್ಲ. ಅಶ್ವಿನೀದೇವತೆಗಳನ್ನು ವಿಧ್ಯುಕ್ತವಾಗಿ ಆವಾಹನೆಮಾಡಿ ಬಳಿಕ ಸ್ಥಾಲೀಪಾಕವಿಧಾನದಿಂದ ಅಗ್ನಿಯಲ್ಲಿ, ಪಾಯಸ, ಮಾಂಸ, ಅನ್ನ, ಮೊಸರುಮಿಶ್ರವಾದ ಹಿಟ್ಟು, ನಾನಾವಿಧ ಫಲಗಳು ಮೊದಲಾದವುಗಳಿಂದ ಹೋಮವನ್ನು ಮಾಡಿ ಅನಂತರ ನಾನಾವಿಧವಾದ ಗಂಧಮಾಲ್ಯಾದಿಗಳಿಂದ ಪೂಜಿಸಿ, ನಾನಾವಿಧ ಭಕ್ಷ್ಯಭೋಜ್ಯಾದಿಗಳನ್ನು ಸಿದ್ಧಪಡಿಸಿಕೊಂಡು ಸೂರ್ಯೋದಯಕಾಲದಿಂದ ಸೂರ್ಯಾಸ್ತಮಯವಾಗುವವರೆಗೆ ಈ ಭೂತಾಂಶದೃಷ್ಟ

ವಾದ ಈ ಸೂಕ್ತವನ್ನು ಪಠಿಸುತ್ತಾ ಅರ್ಧರಾತ್ರೆ ಕಳೆದ ಮೇಲೆ ಅಶ್ವಿನೀದೇವತೆಗಳಿಗೆ ನಿವೇದನಮಾಡಿದಲ್ಲಿ ದೀರ್ಘಾಯುಸ್ಸು, ಒಳ್ಳೆಯರೂಪ, ವರ್ಚಸ್ಸು ಇವುಗಳಿಂದ ಕೂಡಿದ ಪುತ್ರನನ್ನು ಪಡೆಯುವನು ಈ ಭೂತಾಂಶ ಸೂಕ್ತವನ್ನು ನಿತ್ಯವೂ ಪಠಿಸುತ್ತಿದ್ದರೆ, ಆ ಪುರುಷನು ರೂಪವಂತನಾಗಿ ತನ್ನ ಸಕಲ ಇಷ್ಟಾರ್ಥಗಳನ್ನು ಪಡೆಯುವನು ಎಂದು ಹೇಳಿದೆ

## ನೂರ ಏಳನೆಯ ಸೂಕ್ತವು

---

### ಪೀಠಿಕೆ.

ಈ ಸೂಕ್ತದಲ್ಲಿ ಯಜ್ಞಗಳಲ್ಲಿ ಋತ್ವಿಕ್ಕುಗಳಿಗೆ ಕೊಡುವ ದಕ್ಷಿಣೆಯನ್ನು ಅಥವಾ ಆ ದಕ್ಷಿಣೆಯನ್ನು ಕೊಡುವ ಯಾಜಮಾನರನ್ನು ಸ್ತುತಿಸಲಾಗಿದೆ ಈ ಸೂಕ್ತದ ವಿಷಯವಾಗಿ ಬೃಹದ್ದೇವತೆಯಲ್ಲಿ ಈ ರೀತಿ ತಿಳಿಸಿದೆ—

**ಸೂಕ್ತೇನ ಕು ಪರೇಣಾತ್ರ ಸ್ವಯಮಾವಿರಭೂದಿತಿ ।**
**ಆತ್ಮಾನಮೇವ ತುಷ್ಟಾವ ಪ್ರಾಜಾಪತ್ಯಾಥ ದಕ್ಷಿಣಾ ॥**
**ದಾತ್ರೄನತ್ರ ಸ್ತುತಾನೇಕೇ ದಕ್ಷಿಣಾನಾಂ ವದಂತಿ ತು ।**
**ದಾತೄತ್ವಾದ್ದಕ್ಷಿಣಾನಾಂ ಚ ಭೋಜ್ಯಾಶ್ಚತಸೃಭಿಃ ಸ್ತುತಾಃ ॥**

(ಬೃ. ದೇ. ೮-೨೨, ೨೩)

**ಆವಿರಭೂತ್** ಎಂಬ ಈ ೧೦೭ನೇ ಸೂಕ್ತದಲ್ಲಿ **ದಕ್ಷಿಣಾ ಪ್ರಾಜಾಪತ್ಯಾ** ಎಂಬ ದೇವತೆಯನ್ನು ಸ್ತುತಿಸಲಾಗಿದೆ. ಈ ಸೂಕ್ತಕ್ಕೆ ಅಂಗಿರಸವಂಶದ ದಿವ್ಯನೆಂಬುವನು ಋಷಿಯಾಗಿದ್ದರೂ ಇವನ ಜತೆಗೆ ಪ್ರಜಾಪತಿಯ ಪುತ್ರಿಯಾದ **ದಕ್ಷಿಣಾ ಪ್ರಾಜಾಪತ್ಯಾ** ಎಂಬ ದೇವತೆಯೂ ಈ ಸೂಕ್ತಕ್ಕೆ ಋಷಿಯೆಂದು ಹೇಳಲ್ಪಡುವುದು. ಈ **ದಕ್ಷಿಣಾ ಪ್ರಾಜಾಪತ್ಯಾ** ಎಂಬ ದೇವತೆಯು ಈ ಸೂಕ್ತದಲ್ಲಿ ತನ್ನನ್ನೇ ಸ್ತುತಿಸಿರುವುದನ್ನು ಗಮನಿಸಬಹುದು ಈ ಸೂಕ್ತದಲ್ಲಿ ಯಜ್ಞಾದಿಕರ್ಮಗಳಲ್ಲಿ ದಕ್ಷಿಣೆಯನ್ನು ಕೊಡತಕ್ಕ ದಾತೃಗಳನ್ನು (ಯಜಮಾನರನ್ನು) ಸ್ತುತಿಸಲಾಗಿದೆಯೆಂದು ಕೆಲವರು ಹೇಳುವರು. ದಕ್ಷಿಣೆಯನ್ನೇ ಸ್ತುತಿಸಲಾಗಿದೆಯೆಂದು ಮತ್ತೆ ಕೆಲವರು ಹೇಳುವರು. ಈ ದಾನಕರ್ಮಗಳಲ್ಲಿ **ಭೋಜಾಃ** ಎಂಬ ಉದಾರವಾಗಿ ದಾನಮಾಡುವವರೂ ಸೇರಿರುವುದರಿಂದ **ಭೋಜಾಃ ಎಂಬ ಈ ಉದಾರದಾತೃ**ಗಳನ್ನು ಕೊನೆಯ ನಾಲ್ಕು ಋಕ್ಕುಗಳಲ್ಲಿ(೮-೧೧) ಸ್ತುತಿಸಲಾಗಿದೆ.

॥ ಸಾಯಣಭಾಷ್ಯಂ ॥

**ಆವಿರಿತ್ಯೇಕಾದಶರ್ಚಮಷ್ಟಮಂ ಸೂಕ್ತಂ । ದಿವ್ಯೋ ನಾಮಾಂಗಿರಸ ಋಷಿಃ । ಪ್ರಜಾಪತೇಃ ಸುತಾ ದಕ್ಷಿಣಾ ಸಾ ವರ್ಷಿಕಾ । ಶತಧಾರಂ ವಾಯುಮಿತಿ ಚತುರ್ಥೀ ಜಗತೀ ಶಿಷ್ಟಾ ದಶ ತ್ರಿಷ್ಟುಭಃ । ಅನೇನ ಸೂಕ್ತೇನರ್ತ್ವಿಗ್ಭ್ಯೋ ದೀಯಮಾನಾ ದಕ್ಷಿಣಾ ತದ್ದಾತಾರೋ ಯಜಮಾನಾ ವಾ ಸ್ತೂಯಂತೇ । ಅತಃ ಸೈವ ದೇವತಾ । ತಥಾ ಚಾನುಕ್ರಾಂತಂ । ಆವಿರ್ದಿವ್ಯೋ ದಕ್ಷಿಣಾ ವಾ ಪ್ರಾಜಾಪತ್ಯಾ ದಕ್ಷಿಣಾಂ ತದ್ದಾತೄನ್ವಾಸ್ತೌಚ್ಚತುರ್ಥೀ ಜಗತೀತಿ ॥ ಗತೋ ವಿನಿಯೋಗಃ ॥**

ಅನುವಾದವು— **ಆವಿಃ** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಂಗಿರಸವಂಶದ ದಿವ್ಯನೆಂಬುವನು ಋಷಿಯು; ಅಥವಾ ಪ್ರಜಾಪತಿಯ ಪುತ್ರಿಯಾದ ದಕ್ಷಿಣಾ ಎಂಬ ಸ್ತ್ರೀಯೂ ಋಷಿಯಾಗಬಹುದು. ಈ ಸೂಕ್ತದಲ್ಲಿ **ಶತಧಾರಂ** ಎಂಬ ನಾಲ್ಕನೆಯ ಋಕ್ಕು ಜಗತೀಛಂದಸ್ಕವು. ಉಳಿದ ಹತ್ತು ಋಕ್ಕುಗಳೂ ತ್ರಿಷ್ಟುಪ್ಛಂದಸ್ಕವು. ಈ ಸೂಕ್ತದಲ್ಲಿ ಋತ್ವಿಕ್ಕುಗಳಿಗೆ ಕೊಡಬೇಕಾದ ದಕ್ಷಿಣೆಯನ್ನೂ ಅದನ್ನು ಕೊಡುವ ಯಜಮಾನರನ್ನೂ ಸ್ತುತಿಸಲಾಗಿದೆ. ಆದ್ದರಿಂದ ಈ ಸೂಕ್ತಕ್ಕೆ ದಕ್ಷಿಣೆ ಅಥವಾ ಯಜಮಾನರು ದೇವತೆಯು; ಅನುಕ್ರಮಣಿಕೆಯಲ್ಲಿ-- **ಆವಿರ್ದಿವ್ಯೋ ದಕ್ಷಿಣಾ ವಾ ಪ್ರಾಜಾಪತ್ಯಾ ದಕ್ಷಿಣಾಂ ತದ್ದಾತೄನ್ವಾಸ್ತುಷ್ಟಚ್ಚತುರ್ಥೀ ಜಗತೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೭

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ—೧೦೭ ॥
ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೩, ೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೇ—೧೧ ॥
ಋಷಿಃ—ದಿವ್ಯೋ ದಕ್ಷಿಣಾ ವಾ ಪ್ರಾಜಾಪತ್ಯಾ ॥
ದೇವತಾ—ದಕ್ಷಿಣಾ ತದ್ದಾತಾರೋ ವಾ ॥
ಛಂದಃ—೧-೩, ೫-೧೧, ತ್ರಿಷ್ಟುಪ್ ॥ ೪. ಜಗತೀ ॥

॥ ಸಂಹಿತಾಪಾಠಃ ॥

ಆವಿರಭೂನ್ಮಹಿ ಮಾಘೋನಮೇಷಾಂ ವಿಶ್ವಂ ಜೀವಂ ತಮಸೋ ನಿರಮೋಚಿ ।
ಮಹಿ ಜ್ಯೋತಿಃ ಪಿತೃಭಿರ್ದತ್ತಮಾಗಾದುರುಃ ಪಂಥಾ ದಕ್ಷಿಣಾಯಾ ಅದರ್ಶಿ ॥

॥ ಪದಪಾಠಃ ॥

ಆವಿಃ । ಅಭೂತ್ । ಮಹಿ । ಮಾಘೋನಂ । ಏಷಾಂ । ವಿಶ್ವಂ । ಜೀವಂ । ತಮಸಃ । ನಿಃ । ಅಮೋಚಿ ।
ಮಹಿ । ಜ್ಯೋತಿಃ । ಪಿತೃಭಿಃ । ದತ್ತಂ । ಆ । ಅಗಾತ್ । ಉರುಃ । ಪಂಥಾಃ । ದಕ್ಷಿಣಾಯಾಃ । ಅದರ್ಶಿ ॥

॥ ಸಾಯಣಭಾಷ್ಯಂ ॥

ಇದಂ ಸೂಕ್ತಂ ದಕ್ಷಿಣಾಯಾ ವಾ ತದ್ದಾತೄಣಾಂ ವಾ ಸ್ತಾವಕಂ । ದಕ್ಷಿಣಾ ತು ಯಾಗಾಂಗಂ ಯಾಗಸ್ತು ಸಾಯಂಕಾಲೇ ನ ಕ್ರಿಯತೇ । ನ ಸಾಯಮಸ್ತಿ ದೇವಯಾ ಅಜುಷ್ಟಂ । ಋ. ೫-೭೭-೨ । ಇತ್ಯಾದಿಶ್ರವಣಾತ್ । ತಸ್ಮಾದಹನ್ಯೇವ ಕರ್ತವ್ಯಃ । ಅಹಶ್ಚ ಸೂರ್ಯೋದಯಾತ್ಪಶ್ಚಾದ್ಭವತೀತಿ

ಸೂಕ್ತಾದೌ ಸೂರ್ಯೋದಯೋಽಭಿಧೀಯತೇ । ಮಾಘೋನಂ । ಮಘವೇಂದ್ರಃ । ಇಂದ್ರಶ್ಚ ಸೂರ್ಯ-ಶ್ಚೈತ್ರಮಾಸೇ ತಯೋರಿಂದ್ರ ಇತಿ ಸ್ಮರಣಾತ್ । ತಸ್ಯ ಸಂಬಂಧಿ ॥ ತಸ್ಯೇದಮಿತ್ಯಣ್ । ಅತದ್ಧಿತೇ ಪ್ರತ್ಯಯೇ ಸಂಪ್ರಸಾರಣಮಭಿಹಿತಂ । ಪಾ. ೬-೪-೧೩೩ । ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರ ತದ್ಧಿತೇಽಪಿ ಸಂಪ್ರಸಾರಣಂ ॥ ಸೂರ್ಯಾತ್ಮಕಸ್ಯೇಂದ್ರಸ್ಯ ಸ್ವಭೂತಂ ಮಹಿ ಮಹತ್ತೇಜ ಏಷಾಂ ಯಜಮಾನಾನಾಂ ಯಾಗಸಿದ್ಧ್ಯರ್ಥಮಾವಿರಭೂತ್ । ಪ್ರಕಾಶಿತಮುದ್ಗತಮಭೂತ್ । ತತ್ರ ವಿಶ್ವಂ ಸರ್ವಂ ಜೀವಂ ಸ್ಥಾವರಜಂಗಮಾತ್ಮಕಂ ಜಗತ್ತಮಸಃ ಸಕಾಶಾನ್ನಿರಮೋಚಿ । ನಿರ್ಮುಕ್ತಮಭೂತ್ ॥ ಮುಂಚತೇಃ ಕರ್ಮಣಿ ಲುಙಿ ಚಿಣಿ ರೂಪಂ ॥ ಅಥಾನಂತರಂ ಪಿತೃಭಿರ್ಯಜ್ಞಪಿತೃಭಿರ್ದೇವೈರ್ದತ್ತಂ ನೋ ಹವಿಷಾಮಾಗಮನಾಯ ತನ್ಮಹಿ ಮಹಜ್ಜ್ಯೋತಿಃ ಸೂರ್ಯಾಖ್ಯಮಾಗಾತ್ । ಆಗಚ್ಛತಿ । ಪಶ್ಚಾದ್ದಕ್ಷಿಣಾಯಾ ಯಾಗಾಂಗಭೂತಾಯಾ ಉರುರ್ಮಹಾನ್ ಪಂಥಾ ಮಾರ್ಗೋಽದರ್ಶಿ । ಸರ್ವೈರ್ಯಜಮಾನೈರ್ದೃಷ್ಟೋಽಭೂತ್ । ಸರ್ವೇ ಯಾಗಂ ಕೃತ್ವರ್ತ್ವಿಗ್ಭ್ಯೋ ದಕ್ಷಿಣಾಂ ದತ್ತವಂತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಮಾಘೋನಂ**— ಇಂದ್ರಸಂಬಂಧಿಯಾದ । **ಮಹಿ**— ಅದ್ಭುತವಾದ ತೇಜಸ್ಸು । **ಏಷಾಂ**— ಈ ಯಜಮಾನರ ಯಾಗಸಿದ್ಧ್ಯರ್ಥವಾಗಿ । **ಆವಿರಭೂತ್**— ಆವಿರ್ಭವಿಸಿದೆ । **ವಿಶ್ವಂ ಜೀವಂ**— ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತೂ । **ತಮಸಃ**— ಕತ್ತಲೆಯಿಂದ । **ನಿರಮೋಚಿ**— ಮುಕ್ತವಾಗಿದೆ । **ಪಿತೃಭಿಃ**— ಪಿತೃದೇವತೆಗಳಿಂದ । **ದತ್ತಂ**— ಅರ್ಪಿತವಾದುದೂ । **ಮಹಿ**— ಮಹತ್ತಾದುದೂ । **ಜ್ಯೋತಿಃ**— ಸೂರ್ಯಾಖ್ಯವೂ ಆದ ಈ ಜ್ಯೋತಿಯು । **ಆಗಾತ್**— ಸಮೀಪಿಸುತ್ತಿದೆ । **ದಕ್ಷಿಣಾಯಾಃ**— ಯಜ್ಞಭೂಮಿಯ । **ಉರುಃ ಪಂಥಾಃ**— ವಿಸ್ತೃತವಾದ ಮಾರ್ಗವು । **ಅದರ್ಶಿ**— ಗೋಚರವಾಗುತ್ತಿದೆ.

॥ ಭಾವಾರ್ಥ ॥

ಇಂದ್ರನ (ಸೂರ್ಯನ) ಅದ್ಭುತವಾದ ತೇಜಸ್ಸು ಯಜಮಾನನ ಯಾಗಸಿದ್ಧ್ಯರ್ಥವಾಗಿ ಆವಿರ್ಭವಿಸಿದೆ. ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತೂ ಕತ್ತಲೆಯಿಂದ ಮುಕ್ತವಾಗಿದೆ. ಪಿತೃದೇವತೆಗಳಿಂದ ಅರ್ಪಿತವಾದುದೂ, ಮಹತ್ತಾದುದೂ, ಸೂರ್ಯಾಖ್ಯವೂ ಆದ ಈ ಜ್ಯೋತಿಯು ಸಮೀಪಿಸುತ್ತಿದೆ. ಯಜ್ಞಭೂಮಿಯು ವಿಸ್ತೃತವಾದ ಮಾರ್ಗವು ಗೋಚರವಾಗುತ್ತಿದೆ. ಎಂದರೆ ಯಜ್ಞಕರ್ಮವು ಆರಂಭವಾಗಿದೆ.

## English Translation.

The great (splendour) of Maghavan has become manifest (for the rites) of these (worshippers); all life has been extricated from darkness; the vast light bestowed by the progenitors has arrived, a spacious path for the dakshina has been displayed.

॥ ಸಂಹಿತಾಪಾಠಃ ॥

ಉಚ್ಚಾ ದಿವಿ ದಕ್ಷಿಣಾವಂತೋ ಅಸ್ಥುರ್ಯೇ ಅಶ್ವದಾಃ ಸಹ ತೇ ಸೂರ್ಯೇಣ ।
ಹಿರಣ್ಯದಾ ಅಮೃತತ್ವಂ ಭಜಂತೇ ವಾಸೋದಾಃ ಸೋಮ ಪ್ರ ತಿರಂತ ಆಯುಃ ॥ ೨ ॥

॥ ಪದಪಾಠಃ ॥

ಉಚ್ಚಾ । ದಿವಿ । ದಕ್ಷಿಣಾऽವಂತಃ । ಅಸ್ಥುಃ । ಯೇ । ಅಶ್ವऽದಾಃ । ಸಹ । ತೇ । ಸೂರ್ಯೇಣ ।
ಹಿರಣ್ಯऽದಾಃ । ಅಮೃತऽತ್ವಂ । ಭಜಂತೇ । ವಾಸಃऽದಾಃ । ಸೋಮ । ಪ್ರ । ತಿರಂತೇ । ಆಯುಃ ॥ ೨ ॥

॥ ಸಾಯಣಭಾಷ್ಯಂ ॥

ದಕ್ಷಿಣಾವಂತೋ ದಕ್ಷಿಣಾಯಾ ದೇಯತ್ವೇನ ತದ್ವಂತೋ ದಕ್ಷಿಣಾಂ ದತ್ತವಂತೋ ಯಜಮಾನಾ ಉಚ್ಚೋಚ್ಚೈಃ ಸ್ಥಾನೈಃ ಸ್ಥಿತೇ ದಿವಿ ದ್ಯುಲೋಕೇಽಸ್ಥುಃ । ತಿಷ್ಠಂತಿ । ಸಾಮಾನ್ಯೇನೋಕ್ತ್ವಾ ದಾತೃವಿಶೇಷಾಣಾಂ ಫಲವಿಶೇಷಮಾಹ ಅಶ್ವದಾ ಅಶ್ವಾನಾಂ ದಾತಾರೋ ಯೇ ಯಜಮಾನಾಃ ತೇ ಸೂರ್ಯೇಣ ಸರ್ವಸ್ಯ ಸ್ವಸ್ವಕರ್ಮಣಿ ಪ್ರೇರಕೇಣಾದಿತ್ಯೇನ ಸಹ ತಿಷ್ಠಂತಿ । ಯೇ ಹಿರಣ್ಯದಾ ಹಿರಣ್ಯದಾತಾರಃ ತೇಽಮೃತತ್ವಮಮರಣಧರ್ಮತ್ವಂ ದೇವತ್ವಂ ಭಜಂತೇ । ಅಮೃತಂ ವೈ ಹಿರಣ್ಯಮಿತ್ಯಾಮ್ನಾನಾತ್ । ತಥಾ ಸೌಮ್ಯಂ ವೈ ವಾಸ ಇತಿ ಶ್ರವಣಾತ್ಸೋಮ ಏವ ಸಂಬೋಧ್ಯತೇ । ಹೇ ಸೋಮ ವಾಸೋದಾಸ್ತ್ವದ್ದೇವತ್ಯವಸ್ತ್ರಾಣಾಂ ದಾತಾರೋ ಯೇ ಸಂತಿ ತೇ ತ್ವಯಾ ಸಹ ತಿಷ್ಠಂತೀತಿ ಶೇಷಃ । ಏತೇ ಸರ್ವ ಆಯುರ್ಜೀವನಂ ಪ್ರತಿರಂತೇ । ಪ್ರವರ್ಧಯಂತಿ । ಪ್ರಪೂರ್ವಸ್ತಿರತಿರ್ವೃದ್ಧ್ಯರ್ಥಃ ॥

॥ ಪ್ರತಿಪದಾರ್ಥ ॥

ದಕ್ಷಿಣಾವಂತಃ—ದಕ್ಷಿಣೆಯನ್ನು ಕೊಟ್ಟ ಯಜಮಾನರು । **ಉಚ್ಚಾ**—ಎತ್ತರಪ್ರದೇಶವಾದ । **ದಿವಿ**—ದ್ಯುಲೋಕದಲ್ಲಿ । ಅಸ್ಥುಃ—ಸ್ಥಾಪಿತರಾಗಿದ್ದಾರೆ । **ಯೇ**—ಯಾವ ಯಜಮಾನರು । **ಅಶ್ವದಾಃ**—ಅಶ್ವವನ್ನು ದಾನಮಾಡಿದರೋ । ತೇ—ಅವರು । **ಸೂರ್ಯೇಣ ಸಹ**—ಆದಿತ್ಯನೊಡನೆ ಐಕ್ಯರಾಗಿದ್ದಾರೆ । **ಹಿರಣ್ಯದಾಃ**—ಸುವರ್ಣವನ್ನು ದಾನಮಾಡಿದವರು । **ಅಮೃತತ್ವಂ**—ಮರಣರಾಹಿತ್ಯವನ್ನು (ದೇವತ್ವವನ್ನು) । **ಭಜಂತೇ**—ಹೊಂದಿದ್ದಾರೆ । **ಸೋಮ**—ಎಲೈ ಸೋಮದೇವನೇ । **ವಾಸೋದಾಃ**—ವಸ್ತ್ರಗಳನ್ನು ದಾನಮಾಡಿದವರು । **ಆಯುಃ**—ತಮ್ಮ ಆಯುಸ್ಸನ್ನು । **ಪ್ರ ತಿರಂತೇ**—ವೃದ್ಧಿಪಡಿಸಿಕೊಳ್ಳುತ್ತಾರೆ.

|| ಭಾವಾರ್ಥ ||

ದಕ್ಷಿಣೆಯನ್ನು ಹಂಚಿದ ಯಜಮಾನರು ಎತ್ತರಪ್ರದೇಶವಾದ ದ್ಯುಲೋಕದಲ್ಲಿ ಸ್ಥಾಪಿತರಾಗಿದ್ದಾರೆ. ಅಶ್ವವನ್ನು ದಾನಮಾಡಿದ ಯಜಮಾನರು ಆದಿತ್ಯನೊಡನೆ ಐಕ್ಯರಾಗಿದ್ದಾರೆ. ಸುವರ್ಣವನ್ನು ದಾನಮಾಡಿದವರು ಅಮೃತತ್ವವನ್ನು (ದೇವತ್ವವನ್ನು) ಹೊಂದಿದ್ದಾರೆ. ಎಲೈ ಸೋಮದೇವನೇ, ವಸ್ತ್ರಗಳನ್ನು ದಾನಮಾಡಿದವರು ತಮ ಆಯುಸ್ಸನ್ನು ವೃದ್ಧಿಪಡಿಸಿಕೊಳ್ಳುತ್ತಾರೆ.

English Translation

The donors of the dakshina have mounted high ın heaven; those who are givers of horses dwell with the sun ; the givers of gold obtain immortality the givers of raiment, O Soma, prolong their life.

|| ಸಂಹಿತಾಪಾಠಃ ||

ದೈವೀ ಪೂರ್ತಿರ್ದಕ್ಷಿಣಾ ದೇವಯಜ್ಯಾ ನ ಕವಾರಿಭ್ಯೋ ನಹಿ ತೇ ಪೃಣಂತಿ ।
ಅಥಾ ನರಃ ಪ್ರಯತದಕ್ಷಿಣಾಸೋಽವದ್ಯಭಿಯಾ ಬಹವಃ ಪೃಣಂತಿ ॥ ೩ ॥

|| ಪದಪಾಠಃ ||

ದೈವೀ । ಪೂರ್ತಿಃ । ದಕ್ಷಿಣಾ । ದೇವಽಯಜ್ಯಾ । ನ । ಕವಽಅರಿಭ್ಯಃ । ನಹಿ । ತೇ । ಪೃಣಂತಿ ।
ಅಥ । ನರಃ । ಪ್ರಯತಽದಕ್ಷಿಣಾಸಃ । ಅವದ್ಯಽಭಿಯಾ । ಬಹವಃ । ಪೃಣಂತಿ ॥ ೩ ॥

|| ಸಾಯಣಭಾಷ್ಯಂ ||

ದೈವೀ ದೇವಸಂಬಂಧಿನೀ ॥ ದೇವಾದ್ಯಞಞೌ । ಪಾ. ೪-೧-೮೫-೩ । ಇತ್ಯಞ್ ॥ ತಾದೃಶೀ ಪೂರ್ತಿಃ ಪಾಲಿನೀ ತತ್ಸಾಧ್ಯಾ ದೇವಯಜ್ಯಾ ॥ ಛಂದಸಿ ನಿಷ್ಟರ್ಕ್ಯೇತಿ ನಿಪಾತಿತಃ ॥ ದೇವಯಾಗಃ । ತದಂಗಭೂತಾ ದಕ್ಷಿಣಾ ನ ಕವಾರಿಭ್ಯಃ ॥ ಋ ಗತಾವಿತ್ಯಸ್ಮಾಚ್ಚ ಇಃ । ಉ ೪-೧೩೯ । ಇತೀಪ್ರತ್ಯಯಃ ॥ ಕುತ್ಸಿತಗಂತೃಭ್ಯೋಽಯಷ್ಟೃಭ್ಯಃ । ಏತೇಭ್ಯೋ ನ ಭವತಿ । ಯದ್ವಾ । ದೇವಾನಾಂ ಸ್ವಭೂತಾ ಪೂರ್ತಿಃ ಪೂರಯಿತ್ರೀ ಸ್ತುತಿಭಿರ್ಹವಿರ್ಭಿಶ್ಚ ತಾದೃಶೀ ದೇವಯಜ್ಯಾ ದಕ್ಷಿಣಾ ಚ ತೇಭ್ಯೋ ನ ಭವತಃ । ತತ್ರ

**ಬಹವೋ ಯಜಮಾನಾ ಅವದ್ಯಭಿಯಾ || ಅವದ್ಯಪಣ್ಯವರ್ಯಾ ಗರ್ಹ್ಯೇತಿ । ಪಾ. ೩-೧-೧೦೧ । ಯತ್ಪ್ರತ್ಯಯಾಂತತ್ವೇನ ನಿಪಾತಿತಃ || ಪಾಪಭಿಯಾ । ವಿಹಿತಾನನುಷ್ಠಾನೇ ದುರಿತಾನಿ ಭವಂತಿ ಖಲು । ತಸ್ಮಾತ್ತದ್ಭೀತ್ಯಾ ಪೃಣಂತಿ । ದೇವಾನ್ಪ್ರೀಣಯಂತಿ । ತಸ್ಮಾದ್ದುಷ್ಕೃತಾಂ ದೇವಪಾಲನಯಾಗದಕ್ಷಿಣಾ ಭವತೀತ್ಯರ್ಥಃ ||**

|| ಪ್ರತಿಪದಾರ್ಥ ||

**ಪೂರ್ತಿಃ**—ಯಜಮಾನನಿಗೆ ಪಾಲಕವಾದುದೂ । **ದೇವಯಜ್ಯಾ**—ದೇವಯಾಗಕ್ಕೆ ಅಂಗಭೂತವಾದುದೂ । **ದೈವೀ**—ದೇವತಾಸಂಬಂಧಿಯಾದುದೂ ಆದ । **ದಕ್ಷಿಣಾ**—ದಕ್ಷಿಣೆಯು । **ಕವಾರಿಭ್ಯಃ**—ದುಷ್ಟರಿಗೆ (ಯಜ್ಞಕರ್ತರಲ್ಲದವರಿಗೆ) । **ನ**—ಸೇರತಕ್ಕದ್ದಲ್ಲ । **ತೇ**—ಅವರು । **ನಹಿ ಪೃಣಂತಿ**—ಯಜ್ಞಾದಿಗಳಿಂದ ದೇವತೆಗಳನ್ನು ಪೂಜಿಸಿ ತೃಪ್ತಿಪಡಿಸುವುದಿಲ್ಲ । **ಅಥ**—ಆದರೆ । **ಅವದ್ಯಭಿಯಾ**—ಪಾಪಭೀತಿಯಿಂದ । **ಬಹವಃ ನರಃ**—ಅನೇಕ ಯಜಮಾನರು । **ಪ್ರಯತದಕ್ಷಿಣಾಸಃ**—ಯಜ್ಞದಲ್ಲಿ ದಕ್ಷಿಣೆಯನ್ನು ಹಂಚಿದವರಾಗಿ । **ಪೃಣಂತಿ**—ದೇವತೆಗಳನ್ನು ತೃಪ್ತಿಪಡಿಸುತ್ತಾರೆ.

|| ಭಾವಾರ್ಥ ||

ಯಜಮಾನನಿಗೆ ಪಾಲಕವಾದುದೂ, ದೇವಯಾಗಕ್ಕೆ ಅಂಗಭೂತವಾದುದೂ, ದೇವತಾಸಂಬಂಧಿಯಾದುದೂ ಆದ ದಕ್ಷಿಣೆಯು ಯಜ್ಞಕರ್ತರಲ್ಲದ ದುಷ್ಟರಿಗೆ ಸೇರತಕ್ಕದ್ದಲ್ಲ ಅವರು ಯಜ್ಞಾದಿಗಳಿಂದ ದೇವತೆಗಳನ್ನು ಪೂಜಿಸಿ ತೃಪ್ತಿಪಡಿಸುವುದಿಲ್ಲ. ಆದರೆ, ಪಾಪಭೀತಿಯಿಂದ ಅನೇಕ ಯಜಮಾನರು ಯಜ್ಞದಲ್ಲಿ ದಕ್ಷಿಣೆಯನ್ನು ಕೊಟ್ಟು ದೇವತೆಗಳನ್ನು ತೃಪ್ತಿಪಡಿಸುತ್ತಾರೆ.

## English Translation

The divine nourishing dakshina, which is part of the sacrifice to the gods, is not for those who go wrong, for they do not gratify (the gods with worship), but many men through fear of incurring sin liberally extending the dakshina gratify the gods.

|| ಸಂಹಿತಾಪಾಠಃ ||

**ಶತಧಾರಂ ವಾಯುಮರ್ಕಂ ಸ್ವರ್ವಿದಂ ನೃಚಕ್ಷಸಸ್ತೇ ಅಭಿ ಚಕ್ಷತೇ ಹವಿಃ ।**

**ಯೇ ಪೃಣಂತಿ ಪ್ರ ಚ ಯಚ್ಛಂತಿ ಸಂಗಮೇ ತೇ ದಕ್ಷಿಣಾಂ ದುಹತೇ ಸಪ್ತಮಾತರಂ || ೪ ||**

॥ ಪದಪಾಠಃ ॥

ಶತಽಧಾರಂ । ವಾಯುಂ । ಅರ್ಕಂ । ಸ್ವಃಽವಿದಂ । ನೃಽಚಕ್ಷಸಃ । ತೇ । ಅಭಿ । ಚಕ್ಷತೇ । ಹವಿಃ ।

ಯೇ । ಪೃಣಂತಿ । ಪ್ರ । ಚ । ಯಚ್ಛಂತಿ । ಸಂಽಗಮೇ । ತೇ । ದಕ್ಷಿಣಾಂ । ದುಹತೇ । ಸಪ್ತಽಮಾತರಂ॥

॥ಸಾಯಣಭಾಷ್ಯಂ ॥

ಶತಧಾರಂ ಬಹುಧಾರೇಣೋಪೇತಂ ವಾಯುಮೇತನ್ನಾಮಕಂ ಸ್ವರ್ವಿದಂ ಸ್ವರ್ಗಸ್ಯ ಲಂಭಕಂ ಸರ್ವಸ್ಯ ವೇತ್ತಾರಂ ವಾರ್ಕಮರ್ಚನೀಯಮಾದಿತ್ಯಂ ಚ ತೌ ನೃಚಕ್ಷಸೋ ನೃಣಾಂ ದ್ರಷ್ಟ್ವನನ್ಯಾನಿಂದ್ರಾದೀನ್ದೇವಾಂಶ್ಚಾಭಿಲಕ್ಷ್ಯ ತೇ ಯಜಮಾನಾ ಹವಿಶ್ಚಕ್ಷತೇ । ತೇಭ್ಯೋ ದಾತುಂ ಪಶ್ಯಂತಿ ಜಾನಂತಿ ॥ ಚಷ್ಟೇರ್ಲಟಿ ರೂಪಂ ॥ ಕಿಂಚ ಸಂಗಮೇ । ಕರ್ಮಕರಣಾರ್ಥಮೃತ್ವಿಜೋಽತ್ರ ಸಂಗಂಛಂತೆ ಇತಿ ಸಂಗಮಃ ॥ ಗ್ರಹವೃದೃನಿಶ್ಚಿಗಮಶ್ಚೇತ್ಯಧಿಕರಣೇಽಪ್ । ಥಾಥಾದಿಸ್ವರಃ ॥ ತಸ್ಮಿನ್ಯಜ್ಞೇ ಯೇ ಯಷ್ಟಾರಃ ಪೃಣಂತಿ ಸ್ತುತಿಭಿಃ ಪ್ರೀಣಯಂತಿ । ಯೇ ಚ ತೇಭ್ಯೋ ದೇವೇಭ್ಯೋ ಹವೀಂಷಿ ಪ್ರಯಚ್ಛಂತಿ ॥ ಉಭಯತ್ರ ಯದ್ಯೋಗಾದನಿಘಾತಃ ॥ ತೇ ಸಪ್ತಮಾತರಂ । ಸಪ್ತಸಂಖ್ಯಾಕಾ ಮಾತೃಭೂತಾ ಅಗ್ನಿಷ್ಟೋಮಾದಿಸಂಸ್ಥಾ ಯಸ್ಯಾಂ ಭವಂತಿ ಸಾ । ಯದ್ವಾ । ಸಪ್ತಸಂಖ್ಯಾಕಾ ಮಾತರಃ ಕರ್ಮಣಾಂ ನಿರ್ಮಾತಾರಃ ಕರ್ತಾರೋ ಹೋತ್ರಾದಯಃ ಸಂತಿ । ತಾದೃಶೀಂ ದಕ್ಷಿಣಾಂ ದುಹತೇ । ಋತ್ವಿಗ್ಭ್ಯೋ ದುಹಂತಿ ॥

॥ ಪ್ರತಿಪದಾರ್ಥ ॥

**ಶತಧಾರಂ**—ಅನೇಕವಿಧವಾದ ಧಾರೆಗಳುಳ್ಳ । **ವಾಯುಂ**—ವಾಯುವನ್ನೂ । **ಸ್ವರ್ವಿದಂ**—ಸರ್ವಜ್ಞನಾದ । **ಅರ್ಕಂ**—ಸೂರ್ಯನನ್ನೂ । **ನೃಚಕ್ಷಸಃ**—ಮಾನವರನ್ನು ನೋಡಬಲ್ಲ ಇಂದ್ರಾದಿ ದೇವತೆಗಳನ್ನೂ ಉದ್ದೇಶಿಸಿ । **ತೇ**—ಯಜಮಾನರು । **ಹವಿಃ**—ಹವಿಸ್ಸನ್ನು ಅರ್ಪಿಸಬೇಕೆಂದು । **ಚಕ್ಷತೇ**—ಅರಿಯುತ್ತಾರೆ । **ಸಂಗಮೇ**—ಯಜ್ಞದಲ್ಲಿ । **ಯೇ**—ಯಾವ ಯಜಮಾನರು । **ಪ್ರ ಯಚ್ಛಂತಿ**—ದೇವತೆಗಳಿಗೆ ಹವಿಸ್ಸನ್ನರ್ಪಿಸುವರೋ । **ಚ**—ಮತ್ತು । **ಪೃಣಂತಿ**—ದೇವತೆಗಳನ್ನು ತೃಪ್ತಿಪಡಿಸುವರೋ । **ತೇ**—ಅವರು । **ಸಪ್ತಮಾತರಂ**—ಏಳು ವಿಧವಾದ ಹೋತ್ರಾದಿಯಜ್ಞನಿರ್ಮಾಪಕರುಳ್ಳ ಯಜ್ಞಸಂಸ್ಥೆಗಳಲ್ಲಿ । **ದಕ್ಷಿಣಾಂ**—ದಕ್ಷಿಣೆಯನ್ನು । **ದುಹತೇ**—ಉದಾರವಾಗಿ ಕೊಡುತ್ತಾರೆ.

॥ ಭಾವಾರ್ಥ ॥

ಅನೇಕವಿಧವಾದ ಧಾರೆಗಳುಳ್ಳ ವಾಯುವನ್ನೂ, ಸರ್ವಜ್ಞನಾದ ಸೂರ್ಯನನ್ನೂ, ಮಾನವರನ್ನು ನೋಡಬಲ್ಲ ಇಂದ್ರಾದಿ ದೇವತೆಗಳನ್ನೂ ಉದ್ದೇಶಿಸಿ ಯಜಮಾನರು ಹವಿಸ್ಸನ್ನು ಅರ್ಪಿಸಬೇಕೆಂದು ಅರಿಯುತ್ತಾರೆ. ಯಜ್ಞದಲ್ಲಿ ಯಾವ ಯಜಮಾನರು ದೇವತೆಗಳಿಗೆ ಹವಿಸ್ಸನ್ನರ್ಪಿಸುವರೋ ಮತ್ತು ದೇವತೆಗಳನ್ನು ತೃಪ್ತಿಪಡಿಸುವರೋ ಅವರು ಏಳು ವಿಧವಾದ ಹೋತ್ರಾದಿ ಯಜ್ಞನಿರ್ಮಾಪಕರುಳ್ಳ ದಕ್ಷಿಣೆಯನ್ನು ಏಳುವಿಧ ಯಜ್ಞಗಳಲ್ಲಿಯೂ ಉದಾರವಾಗಿ ಕೊಡುತ್ತಾರೆ.

## English Translation.

They see (to the offering of) the oblation of Yayu of the hundred streams, to the all-conscious sun, to the men-beholding (deities); they who please (the gods) and offer (oblations) at the festival, let flow the dakshina the mother of seven.

॥ ಸಂಹಿತಾಪಾಠಃ ॥

ದಕ್ಷಿಣಾವಾನ್ಪ್ರಥಮೋ ಹೂತ ಏತಿ ದಕ್ಷಿಣಾವಾನ್ಗ್ರಾಮಣೀರಗ್ರ-
ಮೇತಿ ।
ತಮೇವ ಮನ್ಯೇ ನೃಪತಿಂ ಜನಾನಾಂ ಯಃ ಪ್ರಥಮೋ ದಕ್ಷಿಣಾಮಾವಿ-
ವಾಯ ॥ ೫ ॥

॥ ಪದಪಾಠಃ ॥

ದಕ್ಷಿಣಾಽವಾನ್ । ಪ್ರಥಮಃ । ಹೂತಃ । ಏತಿ । ದಕ್ಷಿಣಾಽವಾನ್ । ಗ್ರಾಮಽನೀಃ । ಅಗ್ರಂ । ಏತಿ ।
ತಂ । ಏವ । ಮನ್ಯೇ । ನೃಽಪತಿಂ । ಜನಾನಾಂ । ಯಃ । ಪ್ರಥಮಃ । ದಕ್ಷಿಣಾಂ । ಆಽವಿವಾಯ ॥ ೫ ॥

॥ ಸಾಯಣಭಾಷ್ಯಂ ॥

ಹೂತ ಋತ್ವಿಗ್ಭಿರಾಹೂತೋ ದಕ್ಷಿಣಾವಾನ್ಯಜಮಾನಃ ಪ್ರಥಮಃ ಸರ್ವೇಷಾಂ ಮುಖ್ಯಃ ಸನ್ನೇತಿ । ಸರ್ವತ್ರ ಗಚ್ಛತಿ । ತಥಾ ಗ್ರಾಮಣೀರ್ಗ್ರಾಮಾಣಾಂ ನೇತಾ ಧನವತ್ತ್ವೇನ ತೇಷಾಂ ಕರ್ತಾ ದಕ್ಷಿಣಾವಾನ್ ಸೋಽಗ್ರಮೇತಿ । ಸರ್ವೇಷಾಂ ಪ್ರಥಮಮೇವ ಗಚ್ಛತಿ । ತಮೇವ ನೃಪತಿಂ ನರಾಣಾಂ ಪಾಲಯಿತಾರಮಿತಿ ಮನ್ಯ ಋಷಿರಹಮವಬುಧ್ಯೇ ಪ್ರಥಮೋ ಯೋ ಜನಾನಾಂ ದಕ್ಷಿಣಾಮಾವಿವಾಯ ಆಗಮಯತಿ ॥ ವೀ ಗತ್ಯಾದಿಷು । ತಸ್ಯ ಲಿಟಿ ರೂಪಂ ॥ ತಂ ನೃಪತಿಮಿತಿ ಮನ್ಯೇ । ಯದ್ವಾ। ಜನಾನಾಮಿತಿ ಪೂರ್ವವಾಕ್ಯ-ಶೇಷಃ । ಜನಾನಾಂ ಮಧ್ಯೇ ತಮೇವ ಮನುಷ್ಯಾಣಾಂ ಸ್ವಾಮಿನಮಿತಿ ಮನ್ಯೇ ॥

॥ ಪ್ರತಿಪದಾರ್ಥ ॥

**ಹೂತಃ**—ಋತ್ವಿಕ್ಕುಗಳಿಂದ ಕರೆಯಲ್ಪಟ್ಟ । **ದಕ್ಷಿಣಾವಾನ್**—ದಕ್ಷಿಣೆಯನ್ನು ಕೊಡಲಿಚ್ಛಿಸುವ ಯಜಮಾನನು । **ಪ್ರಥಮಃ**—ಎಲ್ಲರಿಗಿಂತಲೂ ಮೊದಲು । **ಏತಿ**—ಹೋಗುತ್ತಾನೆ । (ಗಣ್ಯತೆಯನ್ನು ಪಡೆಯುತ್ತಾನೆ) **ಗ್ರಾಮಣೀಃ**—ತನ್ನ ಧನದಿಂದ ಗ್ರಾಮನಿರ್ವಾಪಕನಾದವನೂ । **ದಕ್ಷಿಣಾವಾನ್**—ದಕ್ಷಿಣೆಯನ್ನು ಹಂಚಲು

ಹೊಂದಿರುವವನೂ ಆದ ಯಜಮಾನನು । **ಅಗ್ರಂ ಏತಿ**—ಎಲ್ಲರಿಗಿಂತಲೂ ಪೂರ್ವಭಾವಿಯಾಗಿ ಹೋಗುತ್ತಾನೆ । **ಪ್ರಥಮಃ**—ಎಲ್ಲರಿಗಿಂತಲೂ ಮೊದಲನೆಯವನಾಗಿ । **ಯಃ**—ಯಾರು । **ಜನಾನಾಂ**—ಜನರಿಗೆ । **ದಕ್ಷಿಣಾಂ**—ದಕ್ಷಿಣೆಯ ಆವಶ್ಯಕತೆಯನ್ನೂ ತಿಳಿಸಿ । **ಆವಿವಾಯ**—ಆರಂಭಿಸಿದನೋ । **ತಮೇವ**—ಅವನನ್ನೇ । **ನೃಪತಿಂ**—ರಾಜನೆಂದು । **ಮನ್ಯೇ**—ತಿಳಿಯುತ್ತೇನೆ.

॥ ಭಾವಾರ್ಥ ॥

ಯಾವ ಯಜಮಾನನು ಋತ್ವಿಕ್ಕುಗಳ ಅಪೇಕ್ಷೆಯ ಮೇರೆ ದಕ್ಷಿಣೆಯನ್ನು ಋತ್ವಿಕ್ಕುಗಳಿಗೆ ಕೊಡಲಿಚ್ಛಿಸುವನೋ ಅವನು ಎಲ್ಲರಿಗಿಂತಲೂ ಪ್ರಥಮತಃ ಹೋಗುತ್ತಾನೆ (ಗಣ್ಯತೆಯನ್ನು ಪಡೆಯುತ್ತಾನೆ). ತನ್ನ ಧನದಿಂದ ಗ್ರಾಮನಿರ್ಮಾಪಕನಾದವನೂ ದಕ್ಷಿಣೆಯನ್ನು ಹಂಚಲು ಹೊಂದಿರುವವನೂ ಆದ ಯಜಮಾನನು ಎಲ್ಲರಿಗಿಂತಲೂ ಅಧಿಕವಾಗಿ ಗಣ್ಯತೆಯನ್ನು ಪಡೆಯುತ್ತಾನೆ. ಯಾರು ಪ್ರಥಮತಃ ದಕ್ಷಿಣೆಯನ್ನು ಆರಂಭಿಸಿದನೋ ಅವನನ್ನೇ ಮಾನವರಲ್ಲಿ ರಾಜನೆಂದು ತಿಳಿಯುತ್ತೇನೆ.

## English Translation

Summoned (by the priests) first advances the dakshina bearing (sacrificer); the head of the village bearing the dakshina goes in the front. I regard him as a king amongst men who first introdnced the dakshina.

॥ ಸಂಹಿತಾಪಾಠಃ ॥

ತಮೇವ ಋಷಿಂ ತಮು ಬ್ರಹ್ಮಾಣಮಾಹುರ್ಯಜ್ಞನ್ಯಂ ಸಾಮಗಾಮುಕ್ಥಶಾಸಂ ।

ಸ ಶುಕ್ರಸ್ಯ ತನ್ವೋ ವೇದ ತಿಸ್ರೋ ಯಃ ಪ್ರಥಮೋ ದಕ್ಷಿಣಯಾ ರರಾಧ ॥

॥ ಪದಪಾಠಃ ॥

ತಂ । ಏವ । ಋಷಿಂ । ತಂ । ಊಂ ಇತಿ । ಬ್ರಹ್ಮಾಣಂ । ಆಹುಃ । ಯಜ್ಞಽನ್ಯಂ । ಸಾಮಽಗಾಂ । ಉಕ್ಥಽಶಸಂ ।

ಸಃ । ಶುಕ್ರಸ್ಯ । ತನ್ವಃ । ವೇದ । ತಿಸ್ರಃ । ಯಃ । ಪ್ರಥಮಃ । ದಕ್ಷಿಣಯಾ । ರರಾಧ ॥ ೬ ॥

॥ ಸಾಯಣಭಾಷ್ಯಂ ॥

ತಮೇವ ದಕ್ಷಿಣಾಯಾ ದಾತಾರಮೃಷಿಮತೀಂದ್ರಿಯಾರ್ಥದರ್ಶಿನಂ ಯದ್ವಾ ಸತ್ಕರ್ಮಕರಣೇನ-ರ್ಷಿಮಿತ್ಯಾಹುಃ । ತಥಾ ತಮು ತಮೇವ ಬ್ರಹ್ಮಾಣಮಾಹುಃ । ಕಿಂಚ ತಮೇವ ಯಜ್ಞನ್ಯಂ ॥ ಣೀಞ್ ಪ್ರಾಪಣೇ । ಕ್ವಿಪ್ । ಉದಾತ್ತಸ್ವರಿತಯೋರ್ಯಣ ಇತ್ಯಮುಃ ಸ್ವರಿತತ್ವಂ ॥ ಯಜ್ಞಸ್ಯ ನೇತಾರಮಧ್ವ-

ರ್ಯುರ್ಮಿತ್ಯಾಹುಃ । ತಮೇವ ಸಾಮಗಾಂ ಸಾಮ್ನಾಂ ಗಾತಾರಮಿತಿ । ತಥೋಕ್ಥಶಾಸಂ ॥ ಶಸ್ತ್ರ ಸ್ತುತೌ । ಕ್ವಿಪ್ । ಸಂಹಿತಾಯಾಂ ದೀರ್ಘಶ್ಛಾಂದಸಃ ॥ ಉಕ್ಥಶಸಂ ಶಸ್ತ್ರಾಣಾಂ ಶಂಸಿತಾರಂ ಹೋತಾರಮಿತಿ ಬ್ರುವಂತಿ । ದಕ್ಷಿಣಾದಾನೇನ ತತ್ಕರ್ಮಣಃ ಪರಿಗ್ರಹಾತ್ । ಸ ದಾತಾ ಶುಕ್ರಸ್ಯ ದೀಪ್ಯಮಾನಸ್ಯ ಜ್ಯೋತಿಷಸ್ತಿಸ್ರಸ್ತನ್ವೋಽಗ್ನಿವೈದ್ಯುತಾದಿತ್ಯಾತ್ಮಕಾನಿ ತ್ರೀಣಿ ಶರೀರಾಣಿ ವೇದ । ಜಾನಾತಿ । ಯದ್ವಾ। ಶುಕ್ರಸ್ಯ ದೀಪ್ತಸ್ಯಾಗ್ನೇರಾಹವನೀಯಾದ್ಯಾತ್ಮಕಾನಿ ತ್ರೀಣಿ ಶರೀರಾಣಿ ಜಾನಾತಿ । ಪ್ರಥಮೋ ಮುಖ್ಯೋ ಯೋ ಜನೋ ದಕ್ಷಿಣಯಾ ರರಾಧ ಋತ್ವಿಗಾದೀನಾರಾಧಯತಿ ॥ ರಾಧ ಸಂಸಿದ್ಧೌ । ಲಿಟಿ ರೂಪಂ । ಲಿಟ್‌ಸ್ವರಃ ॥

॥ ಪ್ರತಿಪದಾರ್ಥ ॥

**ತಂ ಏವ**—ದಕ್ಷಿಣೆಯನ್ನು ಕೊಡತಕ್ಕವನನ್ನೇ । **ಋಷಿಂ**—ಋಷಿಯೆಂದೂ । **ತಮು**—ಅವನನ್ನೇ । **ಬ್ರಹ್ಮಾಣಂ**—ಬ್ರಾಹ್ಮಣನೆಂದೂ । **ಆಹುಃ**—ತಿಳಿದವರು ಹೇಳುತ್ತಾರೆ (ಅವನನ್ನೇ) । **ಸಾಮಗಾಂ**—ಸಾಮಗಾನಮಾಡತಕ್ಕವನೆಂದೂ । **ಉಕ್ಥ ಶಾಸಂ**—ಶಸ್ತ್ರಾದಿಗಳನ್ನು ಪಠಿಸುವವನೆಂದೂ ಹೇಳುತ್ತಾರೆ । **ಯಃ**—ಯಾವ ಯಜಮಾನನು । **ಪ್ರಥಮಃ**—ಎಲ್ಲರಿಗಿಂತಲೂ ಪೂರ್ವಭಾವಿಯಾಗಿ । **ದಕ್ಷಿಣಯಾ**—ದಕ್ಷಿಣೆಯನ್ನು ಅರ್ಪಿಸುವುದರಿಂದ । **ರರಾಧ**—ಋತ್ವಿಗಾದಿಗಳನ್ನು ಪೂಜಿಸುವನೋ । **ಸಃ**—ಅವನೇ । **ಶುಕ್ರಸ್ಯ**—ಪ್ರಕಾಶಮಾನವಾದ ದಿವ್ಯತೇಜಸ್ಸಿನ । **ತಿಸ್ರಃ ತನ್ವಃ**—ಅಗ್ನಿ ವಾಯು ಆದಿತ್ಯ ಎಂಬ ಮೂರು ಸ್ವರೂಪಗಳನ್ನೂ । **ವೇದ**—ಅರಿಯುತ್ತಾನೆ.

॥ ಭಾವಾರ್ಥ ॥

ದಕ್ಷಿಣೆಯನ್ನು ಕೊಡತಕ್ಕ ಯಜಮಾನನನ್ನೇ ಋಷಿಯೆಂದೂ, ಬ್ರಾಹ್ಮಣನೆಂದೂ, ಸಾಮಗಾಯಕನೆಂದೂ, ಶಸ್ತ್ರಮಂತ್ರಗಳ ಪಾಠಕನೆಂದೂ ಹೇಳುತ್ತಾರೆ. ಯಾವ ಯಜಮಾನನು ಎಲ್ಲರಿಗಿಂತಲೂ ಪೂರ್ವಭಾವಿಯಾಗಿ ದಕ್ಷಿಣೆಯನ್ನು ಅರ್ಪಿಸುವುದರಿಂದ ಋತ್ವಿಗಾದಿಗಳನ್ನು ಪೂಜಿಸುವನೋ ಅವನೇ ಪ್ರಕಾಶಮಾನರಾದ ದಿವ್ಯತೇಜಸ್ಸಿನ ಅಗ್ನಿ, ವಾಯು, ಆದಿತ್ಯ ಎಂಬ ಮೂರು ರೂಪಗಳನ್ನು ಅರಿಯುತ್ತಾನೆ.

## English Translation.

They call him the Rishi, the Brahmana, the leader of the sacrifice the chanter of the hymn, the reciter of the prayer, he knows the three forms of light who first worshipped with the dakshina.

॥ ಸಂಹಿತಾಪಾಠಃ ॥

ದಕ್ಷಿಣಾಶ್ವಂ ದಕ್ಷಿಣಾ ಗಾಂ ದದಾತಿ ದಕ್ಷಿಣಾ ಚಂದ್ರಮುತ ಯದ್ಧಿರಣ್ಯಂ ।
ದಕ್ಷಿಣಾನ್ನಂ ವನುತೇ ಯೋ ನ ಆತ್ಮಾ ದಕ್ಷಿಣಾಂ ವರ್ಮ ಕೃಣುತೇ ವಿಜಾನನ್ ॥ ೭ ॥

|| ಪದಪಾಠಃ ||

ದಕ್ಷಿಣಾ । ಅಶ್ವಂ । ದಕ್ಷಿಣಾ । ಗಾಂ । ದದಾತಿ । ದಕ್ಷಿಣಾ । ಚಂದ್ರಂ । ಉತ । ಯತ್ । ಹಿರಣ್ಯಂ ।

ದಕ್ಷಿಣಾ । ಅನ್ನಂ । ವನುತೇ । ಯಃ । ನಃ । ಆತ್ಮಾ । ದಕ್ಷಿಣಾಂ । ವರ್ಮ । ಕೃಣುತೇ । ವಿಽಜಾನನ್ ||೭||

|| ಸಾಯಣಭಾಷ್ಯಂ ||

**ದಕ್ಷಿಣಾ ತದ್ದಾತೃಭ್ಯೋಽಶ್ವಂ ದದಾತಿ । ತಥಾ ಗಾಂ ಚ ದದಾತಿ ತಥಾ ಚಂದ್ರಂ ಸುವರ್ಣಂ ದದಾತಿ । ಉತಾಪಿ ಚ ಯದ್ಧಿರಣ್ಯಂ ರಜತಮಸ್ತಿ । ರಜತಂ ಹಿರಣ್ಯಮಿತ್ಯಾಮ್ನಾನಾತ್। ತಚ್ಚ ದದಾತಿ। ಕಿಂಚ ಸಾನ್ನಂ ವನುತೇ । ದದಾತಿ । ವನೋತಿರತ್ರ ದಾನಾರ್ಥಃ । ತಸ್ಮಾನ್ನೋಽಸ್ಮದೀಯೋ ಯ ಆತ್ಮಾಸ್ತಿ ಸ ವರ್ಮ ವಿಜಾನನ್ ಕವಚಂ ಯಥಾಯುಧಾನಾಂ ನಿವಾರಕಂ ತದ್ವದ್ದುರಿತಾನಿ ವಾರಯತೀತಿ ಕವಚಮಿತಿ ವಿಜಾನನ್ ದಕ್ಷಿಣಾಮಶ್ವಾದಿದಾನಶೀಲಾಂ ಕೃಣುತೇ । ಋತ್ವಿಗ್ಭ್ಯಃ ಕರೋತಿ ||**

|| ಪ್ರತಿಪದಾರ್ಥ ||

**ದಕ್ಷಿಣಾ**—ದಕ್ಷಿಣೆಯು । **ಅಶ್ವಂ**– ಅಶ್ವವನ್ನು । **ದದಾತಿ**— ದಾತೃವಿಗೆ ಕೊಡುತ್ತದೆ । **ಗಾಂ**— ಗೋವನ್ನೂ । **ಚಂದ್ರಂ**—ಸುವರ್ಣವನ್ನೂ । **ಉತ**—ಮತ್ತು । **ಹಿರಣ್ಯಂ**—ರಜತವನ್ನೂ । **ಅನ್ನಂ**— ಅನ್ನವನ್ನೂ । **ವನುತೇ**—ಕೊಡುತ್ತದೆ । **ನಃ** – ನಮ್ಮ । **ಯಃ ಆತ್ಮಾ**—ಯಾವ ಆತ್ಮವಿದೆಯೋ ಅದು । **ವರ್ಮ**—ರಕ್ಷಾಕವಚವೆಂದು । **ವಿಜಾನನ್**— ತಿಳಿದು । **ದಕ್ಷಿಣಾಂ**—ದಕ್ಷಿಣೆಯನ್ನು । **ಕೃಣುತೇ**—ಋತ್ವಿಕ್ಕುಗಳಿಗೆ ಕೊಡುತ್ತದೆ.

|| ಭಾವಾರ್ಥ ||

ದಕ್ಷಿಣೆಯು ದಾತೃವಿಗೆ ಅಶ್ವವನ್ನು ಕೊಡುತ್ತದೆ. ಗೋವನ್ನೂ. ಸುವರ್ಣವನ್ನೂ, ರಜತವನ್ನೂ ಮತು ಅನ್ನವನ್ನೂ ಕೊಡುತ್ತದೆ ನಮ್ಮ ಆತ್ಮವು ದಕ್ಷಿಣೆಯನ್ನೇ ರಕ್ಷಾಕವಚವೆಂದು ತಿಳಿದು ಋತ್ವಿಕ್ಕುಗಳಿಗೆ ದಕ್ಷಿಣೆಯನ್ನು ಕೊಡುತ್ತದೆ.

English Translation.

Dakshina gives horses, Dakshina gives cows, Dakshina gives gold and also silver, Dakhina bestows food. Our spirit discriminating (all things) puts on Dakshina for armour.

|| ಸಂಹಿತಾಪಾಠಃ ||

ನ ಭೋಜಾ ಮಮ್ರುರ್ನ ನ್ಯರ್ಥಮೀಯುರ್ನ ರಿಷ್ಯಂತಿ ನ ವ್ಯಥಂತೇ ಹ

ಇದಂ ಯದ್ವಿಶ್ವಂ ಭುವನಂ ಸ್ವಶ್ಚೈತತ್ಸರ್ವಂ ದಕ್ಷಿಣೈಭ್ಯೋ ದದಾತಿ ॥ ೮ ॥

॥ ಪದಪಾಠಃ ॥

ನ । ಭೋಜಾಃ । ಮಮ್ರುಃ । ನ । ನಿಽಅರ್ಥಂ । ಈಯುಃ । ನ । ರಿಷ್ಯಂತಿ । ನ । ವ್ಯಥಂತೇ । ಹ । ಭೋಜಾಃ ।

ಇದಂ । ಯತ್ । ವಿಶ್ವಂ । ಭುವನಂ । ಸ್ವರಿತಿ ಸ್ವಃ । ಚ । ಏತತ್ । ಸರ್ವಂ । ದಕ್ಷಿಣಾ । ಏಭ್ಯಃ । ದದಾತಿ ॥ ೮ ॥

॥ ಸಾಯಣಭಾಷ್ಯಂ ॥

ಭೋಜಾ ಭೋಜಯಿತಾರೋ ಧನಾದಿದಾನೇನ ದಾತಾರೋ ನ ಮಮ್ರುಃ । ನ ಮ್ರಿಯಂತೇ । ದೇವತ್ವಂ ಭಜಂತ ಇತ್ಯರ್ಥಃ । ಅತ ಏವ ನ್ಯರ್ಥಂ ॥ ಋ ಗತೌ । ಉಷಿಕುಷಿಗಾರ್ತಿಭ್ಯಸ್ಥನ್ । ಉ. ೨-೪। ಸಮಾಸೇ ಥಾಥಾದಿಸ್ವರಃ ॥ ನಿಕೃಷ್ಟಾಂ ಗತಿಂ ನೇಯುಃ । ನ ಪ್ರಾಪ್ನುವಂತಿ ॥ ಇಣ್ ಗತೌ। ಲಿಟಿ ದೀರ್ಘ ಇಣಃ ಕಿತೀತಿ ದೀರ್ಘಃ ॥ ತಥಾ ಚ ನ ರಿಷ್ಯಂತಿ । ಕೈಶ್ಚಿದಪ್ಯಹಿಂಸಿತಾ ಭವಂತಿ ॥ ಕರ್ಮಣಿ ವ್ಯತ್ಯಯೇನ ಪರಸ್ಮೈಪದಂ ॥ ಅತ ಏವ ಭೋಜಾ ದಾತಾರೋ ನ ವ್ಯಥಂತೇ । ಪರಸ್ಪರಂ ನ ಭೀತಾ ನ ಬಾಧಿತಾ ವಾ ಭವಂತಿ । ಹ ಪ್ರಸಿದ್ಧೌ । ಕಿಂಚೇದಂ ಪರಿದೃಶ್ಯಮಾನಂ ವಿಶ್ವಂ ಸರ್ವಂ ಭುವನಂ ಯದ್ಭೂತಜಾತಮಸ್ತಿ ಸ್ವಶ್ಚ ಸ್ವರ್ಗಲೋಕಶ್ಚ ಏತತ್ಸರ್ವಂ ದಕ್ಷಿಣಾ ಸ್ವಯಮೇಭ್ಯಸ್ತದ್ದಾತೃಭ್ಯೋ ದದಾತಿ । ಪ್ರಯಚ್ಛತಿ ॥

॥ ಪ್ರತಿಪದಾರ್ಥ ॥

**ಭೋಜಾಃ**—ಧನದಾನದಿಂದ ಸಂತೋಷವನ್ನುಂಟುಮಾಡುವವರು । **ನ ಮಮ್ರುಃ**—ಸಾಯುವುದಿಲ್ಲ । **ನ್ಯರ್ಥಂ**—ನೀಚವಾದ ಸ್ಥಿತಿಯನ್ನು । **ನ ಈಯುಃ**—ಹೊಂದುವುದಿಲ್ಲ । **ನ ರಿಷ್ಯಂತಿ**—ಹಿಂಸಿತರಾಗುವುದಿಲ್ಲ । **ಭೋಜಾಃ**—ಧನದಾನದಿಂದ ಸಂತೋಷವನ್ನುಂಟುಮಾಡುವವರು । **ನ ವ್ಯಯಂತೇ**—ನಾಶವನ್ನು ಹೊಂದುವುದಿಲ್ಲ । **ಯದಿದಂ ವಿಶ್ವಂ ಭುವನಂ**—ಯಾವ ಈ ಸಕಲ ಭೂತಜಾತಗಳಿವೆಯೋ । **ಯತ್ ಸ್ವಶ್ಚ**—ಯಾವ ಸ್ವರ್ಗ ಲೋಕವಿದೆಯೋ । **ಏತತ್ ಸರ್ವಂ**—ಅದೆಲ್ಲವನ್ನೂ । **ದಕ್ಷಿಣಾಂ**—ದಕ್ಷಿಣೆಯು । **ಏಭ್ಯಃ**—ದಾತೃಗಳಿಗೆ । **ದದಾತಿ**—ಒದಗಿಸಿ ಕೊಡುತ್ತದೆ.

॥ ಭಾವಾರ್ಥ ॥

ದಕ್ಷಿಣಾದಾನದಿಂದ ಸಂತೋಷವನ್ನುಂಟುಮಾಡುವವರು ಸಾಯುವುದಿಲ್ಲ. ನೀಚವಾದ ಸ್ಥಿತಿಯನ್ನು ಹೊಂದುವುದಿಲ್ಲ. ಹಿಂಸಿತರಾಗುವುದಿಲ್ಲ. ಅವರಿಗೆ ನಾಶವಿಲ್ಲ. ಯಾವ ಈ ಸಕಲ ಭೂತಜಾತಗಳಿವೆಯೋ, ಯಾವ ಸ್ವರ್ಗವಿದೆಯೋ ಅದೆಲ್ಲವನ್ನೂ ದಕ್ಷಿಣೆಯು ದಾತೃಗಳಿಗೆ ಒದಗಿಸಿ ಕೊಡುತ್ತದೆ.

## English Translation.

The givers of eujoyment do not die, they do not go to destruction, they suffer no injury, the givers of enjoyment snffer no pain. Dakshina gives them all this world and the entire heaven.

॥ ಸಂಹಿತಾಪಾಠಃ ॥

ಭೋಜಾ ಜಿಗ್ಯುಃ ಸುರಭಿಂ ಯೋನಿಮಗ್ರೇ ಭೋಜಾ ಜಿಗ್ಯುರ್ವಧ್ವಂ೧ ಯಾ ಸುವಾಸಾಃ ।
ಭೋಜಾ ಜಿಗ್ಯುರಂತಃಪೇಯಂ ಸುರಾಯಾ ಭೋಜಾ ಜಿಗ್ಯುರ್ಯೇ ಅಹೂತಾಃ ಪ್ರಯಂತಿ ॥ ೯ ॥

॥ ಪದಪಾಠಃ ॥

ಭೋಜಾಃ । ಜಿಗ್ಯುಃ । ಸುರಭಿಂ । ಯೋನಿಂ । ಅಗ್ರೇ । ಭೋಜಾಃ । ಜಿಗ್ಯುಃ । ವಧ್ವಂ । ಯಾ । ಸುಽವಾಸಾಃ ।
ಭೋಜಾಃ । ಜಿಗ್ಯುಃ । ಅಂತಃಽಪೇಯಂ । ಸುರಾಯಾಃ । ಭೋಜಾಃ । ಜಿಗ್ಯುಃ । ಯೇ । ಅಹೂತಾಃ । ಪ್ರಽಯಂತಿ ॥ ೯ ॥

। ಸಾಯಣಭಾಷ್ಯಂ ।

ಭೋಜಾ ದಾತಾರೋಽಗ್ರೇ ಪ್ರಥಮಮೇವ ಯೋನಿಂ ಕ್ಷೀರಾದೇರುತ್ಪತ್ತಿಸ್ಥಾನಂ ಸುರಭಿಂ ಧೇನುಂ ಜಿಗ್ಯುಃ । ಶತ್ರುಭ್ಯೋ ಜಿತವಂತಃ ॥ ಜಿ ಜಯೇ । ಲಿಟಿ ಸನ್‌ಲಿಟೋರ್ಜೇರಿತ್ಯಭ್ಯಾಸಾದುತ್ತರಸ್ಯ ಕವರ್ಗಾದೇಶಃ ॥ ತಥಾ ಭೋಜಾ ದಾತಾರೋ ವಧ್ವಂ ವಧೂಂ ನವೋಢಾಂ ಸ್ತ್ರೀಂ ಜಿಗ್ಯುಃ । ಯಾ ಸ್ತ್ರೀ ಸುವಾಸಾಃ ಶೋಭನವಾಸಾ ಅಸ್ತಿ ತಾಂ ಜಿಗ್ಯುಃ । ಕಿಂಚ ಭೋಜಾಃ ಶತ್ರೂಣಾಂ ಸುರಾಯಾ ಅಂತಃಪೇಯಮಂತಃಪಾನಂ ಜಿಗ್ಯುಃ ॥ ಪಾ ಪಾನೇ । ಭಾವೇ ಯತ್ । ಈದ್ಯತೀತೀತ್ವಂ । ಆರ್ಧಧಾತುಕಲಕ್ಷಣೋ ಗುಣಃ । ಕೃದುತ್ತರಪದಪ್ರಕೃತಿಸ್ವರತ್ವಂ ॥ ಯೇ ಶತ್ರವೋಽಹೂತಾ ಬಲಾಧಿಕ್ಯೇನಾಹೂಯಮಾನಾಃ ಪ್ರಯಂತಿ ಪ್ರಮುಖಮಾಗಚ್ಛಂತಿ ತಾನ್ಭೋಜಾ ದಕ್ಷಿಣಾಯಾ ದಾತಾರೋ ಜನಾ ಜಿಗ್ಯುಃ । ಜಯಂತಿ ॥

|| ಪ್ರತಿಪದಾರ್ಥ ||

**ಭೋಜಾಃ**—ದಕ್ಷಿಣೆಯನ್ನು ದಾನಮಾಡುವವರು | **ಅಗ್ರೇ**—ಮೊದಲೇ | **ಯೋನಿಂ**—ಕ್ಷೀರಾದಿಗಳಿಗೆ ಉತ್ಪತ್ತಿಸ್ಥಾನವಾದ | **ಸುರಭಿಂ**—ಧೇನುವನ್ನು | **ಜಿಗ್ಯುಃ**—ಶತ್ರುಗಳಿಂದ ಜಯಿಸುತ್ತಾರೆ | **ಯಾ**—ಯಾರು | **ಸುವಾಸಾಃ**—ಉತ್ತಮವಾದ ವಸ್ತ್ರಾದಿಗಳಿಂದ ಅಲಂಕೃತಳೋ ಅಂತಹ | **ವಧ್ವಂ**—ಸುಂದರಳಾದ ಕನ್ಯೆಯನ್ನು | **ಜಿಗ್ಯುಃ**—ಪಡೆಯುತ್ತಾರೆ | **ಭೋಜಾಃ**—ದಕ್ಷಿಣಾದಾತರು | **ಸುರಾಯಾಃ**—ಶತ್ರುಗಳ ಸುರೆಯ | **ಅಂತಃಪೇಯಂ**—ಉತ್ತಮವಾದ ಪಾನವನ್ನು | **ಜಿಗ್ಯುಃ**—ಹೊಂದುತ್ತಾರೆ | **ಯೇ**—ಯಾವ ಶತ್ರುಗಳು | **ಅಹೂತಾಃ**—ಎದುರಿಸದೆಯೇ | **ಪ್ರಯಂತಿ**—ವಶವಾಗುವರೋ ಆ ಶತ್ರುಗಳನ್ನು | **ಭೋಜಾಃ**—ದಕ್ಷಿಣಾದಾತರು | **ಜಿಗ್ಯುಃ**—ಜಯಿಸುತ್ತಾರೆ.

|| ಭಾವಾರ್ಥ ||

ದಕ್ಷಿಣೆಯನ್ನು ದಾನ ಮಾಡುವವರು ಕ್ಷೀರಾದಿಗಳಿಗೆ ಉತ್ಪತ್ತಿಸ್ಥಾನವಾದ ಧೇನುವನ್ನು ಶತ್ರುಗಳಿಂದ ಜಯಿಸುತ್ತಾರೆ. ಉತ್ತಮವಾದ ವಸ್ತ್ರಾದಿಗಳಿಂದ ಅಲಂಕೃತಳಾದ ಸುಂದರಕನ್ಯೆಯನ್ನು ಪಡೆಯುತ್ತಾರೆ. ಶತ್ರುಗಳ ಸುರೆಯನ್ನು ಪಾನಮಾಡುತ್ತಾರೆ. ಶ್ರಮವಿಲ್ಲದೆ ಶತ್ರುಗಳನ್ನು ವಶಪಡಿಸಿಕೊಳ್ಳುತ್ತಾರೆ.

## English Translation.

The givers of enjoyment first won the cow the source (of food), the givers of enjoyment have won a bride who was beautifully attaired, the givers of enjoyment have won deep potations of wine, the givers of enjoyment have conquered those who without being challenged advance to meet them.

|| ಸಂಹಿತಾಪಾಠಃ ||

ಭೋಜಾಯಾಶ್ವಂ ಸಂ ಮೃಜಂತ್ಯಾಶುಂ ಭೋಜಾಯಾಸ್ತೇ ಕನ್ಯಾ೩ ಶುಂಭಮಾನಾ |
ಭೋಜಸ್ಯೇದಂ ಪುಷ್ಕರಿಣೀವ ವೇಶ್ಮ ಪರಿಷ್ಕೃತಂ ದೇವಮಾನೇವ ಚಿತ್ರಂ ||

|| ಪದಪಾಠಃ ||

ಭೋಜಾಯ | ಅಶ್ವಂ | ಸಂ | ಮೃಜಂತಿ | ಆಶುಂ | ಭೋಜಾಯ | ಆಸ್ತೇ | ಕನ್ಯಾ | ಶುಂಭಮಾನಾ |
ಭೋಜಸ್ಯ | ಇದಂ | ಪುಷ್ಕರಿಣೀಽಇವ | ವೇಶ್ಮ | ಪರಿಽಕೃತಂ | ದೇವಮಾನಾಽಇವ | ಚಿತ್ರಂ || ೧೦ ||

|| ಸಾಯಣಭಾಷ್ಯಂ ||

ಭೋಜಾಯ ದಾತ್ರೆ ಆಶುಂ ಶೀಘ್ರಗಾಮಿನಮಶ್ವಂ ಸಂ ಮೃಜಂತಿ | ಪರಿಚಾರಕಾಃ ಸಮ್ಯಗಲಂಕುರ್ವಂತಿ || ಮೃಜೂ ಶೌಚಾಲಂಕಾರಯೋಃ || ತಥಾ ಕನ್ಯಾ | ಕನ್ಯಾತ್ವೇನಾತ್ರ ಸಂನಿಕರ್ಷಾದಭಿನವಂ ಯೌವನಂ ಲಕ್ಷ್ಯತೇ | ಅಭಿನವಯೌವನಾ ಶುಂಭಮಾನಾ ಶರೀರಾವಯವಶೋಭಯಾ ವಸ್ತ್ರಾದ್ಯಲಂಕಾರಶೋಭಯಾ ಚ ಶೋಭಮಾನಾ ಸ್ತ್ರೀ ತಸ್ಮೈ ಭೋಜಾಯ ದಾತ್ರೆ ಅಸ್ತೇ | ತಥಾ ಭೋಜಸ್ಯ ದಾತುರೇವ ಹೃದಯಾಹ್ಲಾದಕರಂ ವೇಶ್ಮ ಗೃಹಂ ಭವತಿ | ಕೀದೃಶಂ | ಪುಷ್ಕರಿಣೀವ | ಪುಷ್ಕರಾಣಿ ಪದ್ಮಾನಿ ಯಸ್ಯಾಃ ಸಂತೀತಿ ಪುಷ್ಕರಿಣೀ ಸರಸೀ | ಸಾ ಯಥಾ ಪದ್ಮಹಂಸಾದಿಭಿರಲಂಕೃತಾ ಭವತಿ ತದ್ವತ್ ಪರಿಷ್ಕೃತಂ ವಿತಾನಾದಿಭಿರಲಂಕೃತಂ || ಪರಿಪೂರ್ವಸ್ಯ ಕರೋತೇರ್ಭೂಷಣಾರ್ಥೇ ಸಂಹಿತಾಯಾಂ ಸುಡಾಗಮಃ | ಪರಿನಿವಿಭ್ಯ ಇತಿ ಸುಟಃ ಷತ್ವಂ | ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ || ತಥಾ ದೇವಮಾನೇವ || ಸುಪಾಂ ಸುಲುಗಿತಿ ಪ್ರಥಮೈಕವಚನಸ್ಯಾಕಾರಃ || ದೇವಮಾನಮಿವ ಚಿತ್ರಂ ಮನೋಹರಂ ವೇಶ್ಮ ತಸ್ಯ ಭವತಿ ||

|| ಪ್ರತಿಪದಾರ್ಥ ..

**ಭೋಜಾಯ** ದಕ್ಷಿಣೆಯನ್ನು ಕೊಡುವವನಿಗಾಗಿ | **ಆಶುಂ**— ಶೀಘ್ರಗಾಮಿಯಾದ | **ಅಶ್ವಂ—** ಅಶ್ವವನ್ನು | **ಸಂ ಮೃಜಂತಿ**— ಪರಿಚಾರಕರು ಅಲಂಕರಿಸುತ್ತಾರೆ | **ಕನ್ಯಾ**— ಸುಂದರಳಾದ ಕನ್ಯೆಯು | **ಶುಂಭಮಾನಾ**— ಅಲಂಕೃತಳಾಗಿ | **ಭೋಜಾಯ** — ದಕ್ಷಿಣೆಯನ್ನು ಕೊಡುವವನಿಗೆ | **ಆಸ್ತೇ**— ಅರ್ಪಿತಳಾಗುತ್ತಾಳೆ | **ಪುಷ್ಕರಣೀವ**— ಸರೋವರವು ಕಮಲಪುಷ್ಪಗಳಿಂದ ಅಲಂಕೃತವಾಗಿರುವಂತೆ | **ಪರಿಷ್ಕೃತಂ**— ಉತ್ತಮವಾಗಿ ಅಂಕೃತವಾಗಿರುವ | **ವೇಶ್ಮ**— ಗೃಹವು | **ಭೋಜಸ್ಯ—** ದಕ್ಷಿಣಾದಾತೃವಿಗಿರುತ್ತದೆ | (ಅದೇ ಗೃಹವು) **ದೇವಮಾನೇವ**— ದೇವತೆಗಳ ವಾಸಸ್ಥಾನದಂತೆ | **ಚಿತ್ರಂ**— ಮನೋಹರವಾಗಿರುತ್ತದೆ.

|| ಭಾವಾರ್ಥ ||

ದಕ್ಷಿಣೆಯನ್ನು ಕೊಡುವ ಯಜಮಾನನಿಗಾಗಿ ಪರಿಚಾರಕರು ಶೀಘ್ರಗಾಮಿಯಾದ ಅಶ್ವವನ್ನು ಅಲಂಕರಿಸುತ್ತಾರೆ. ಸುಂದರಳಾದ ಕನ್ಯೆಯು ಅಲಂಕೃತಳಾಗಿ ಅವನಿಗೆ ಅರ್ಪಿತಳಾಗುತ್ತಾಳೆ ಸರೋವರವು ಕಮಲಪುಷ್ಪಗಳಿಂದ ಅಲಂಕೃತವಾಗಿರುವಂತೆ ಧ್ವಜಾದಿಗಳಿಂದ ಅಲಂಕೃತವಾದ ಗೃಹವು ದಕ್ಷಿಣಾದಾತೃವಿಗೆ ಲಭಿಸುತ್ತದೆ. ಅದೇ ಗೃಹವು ದೇವತೆಗಳ ವಾಸಸ್ಥಾನದಂತೆ ಮನೋಹರವಾಗಿರುತ್ತದೆ.

## English Translation

For the giver of enjoyment they deck out a fleet horse, to the giver enjoyment is presented a maiden beautifully adorned, to the giver of enjoyment belongs this dwelling, adorned like a lake full of lotus flowers, delightful as a dwelling of the gods.

॥ ಸಂಹಿತಾಪಾಠಃ ॥

ಭೋಜಮಶ್ವಾಃ ಸುಷ್ಠುವಾಹೋ ವಹಂತಿ ಸುವೃದ್ರಥೋ ವರ್ತತೇ ದಕ್ಷಿಣಾಯಾಃ ।
ಭೋಜಂ ದೇವಾಸೋಽವತಾ ಭರೇಷು ಭೋಜಃ ಶತ್ರೂನ್ತ್ಸಮನೀಕೇಷು ಜೇತಾ ॥ ೧೧ ॥

॥ ಪದಪಾಠಃ ॥

ಭೋಜಂ । ಅಶ್ವಾಃ । ಸುಷ್ಠುऽವಾಹಃ । ವಹಂತಿ । ಸುऽವೃತ್ । ರಥಃ । ವರ್ತತೇ । ದಕ್ಷಿಣಾಯಾಃ ।
ಭೋಜಂ । ದೇವಾಸಃ । ಅವತ । ಭರೇಷು । ಭೋಜಃ । ಶತ್ರೂನ್ । ಸಂऽಅನೀಕೇಷು । ಜೇತಾ ॥ ೧೧ ॥

॥ ಸಾಯಣಭಾಷ್ಯಂ ॥

ಸುಷ್ಠುವಾಹಃ ॥ ವಹ ಪ್ರಾಪಣೇ । ವಹಶ್ಚೇತಿ ಣ್ವಿಪ್ರತ್ಯಯಃ ॥ ಶೋಭನವಹನಸಮರ್ಥಾ ಅಶ್ವಾ ಭೋಜಂ ದಾತಾರಂ ವಹಂತಿ । ಲಕ್ಷ್ಯಂ ದೇಶಂ ಪ್ರಾಪಯಂತಿ । ತತೋ ದಕ್ಷಿಣಾಯಾ ದಾತುರ್ಯಜಮಾನಸ್ಯ ಸುವೃತ್ ಸುಷ್ಠು ಚಕ್ರಾದಿವರ್ತನಂ ಯಸ್ಯ ಸೋಽಶ್ವಾದಿಸಹಿತೋ ರಥೋ ವರ್ತತೇ । ಅಥ ಪ್ರತ್ಯಕ್ಷಃ । ಹೇ ದೇವಾಸೋ ಹೇ ದೇವಾ ಇಂದ್ರಾದಯಃ ಭರೇಷು । ಭ್ರಿಯತ ಆಹವನೀಯಾದಿರೂಪೇಣಾಗ್ನಿರತ್ರೇತಿ ಭರಾ ಯಜ್ಞಾಃ । ಯದ್ವಾ ॥ ಭೃ ಭರ್ತ್ಸನೇ ॥ ಭೃಣಂತಿ ಭರ್ತ್ಸಯಂತಿ ಯೋದ್ಧಾರೋಽತ್ರೇತಿ ಭರಾಃ ಸಂಗ್ರಾಮಾಃ । ತೇಷು ಭೋಜಂ ದಾತಾರಮವತ । ರಕ್ಷತ । ತತೋ ಯುಷ್ಮಾಭಿಃ ಪಾಲಿತೋ ಭೋಜೋ ಧನಾದಿದಾನೇನ ಜನಾನಾಂ ಭೋಜಯಿತಾ ಸನ್ ಸಮನೀಕೇಷು ಸಂಗ್ರಾಮೇಷು ಶತ್ರೂಞ್ಜೇತಾ ಜಯಶೀಲೋ ಭವತಿ ॥ ಜಿ ಜಯೇ । ತಾಚ್ಛೀಲಿಕಸ್ತೃನ್ । ಅತ ಏವ ನ ಲೋಕಾವ್ಯಯೇತಿ ಶತ್ರುಶಬ್ದಸ್ಯ ಷಷ್ಠೀಪ್ರತಿಷೇಧಃ ॥

॥ಪ್ರತಿಪದಾರ್ಥ॥

**ಸುಷ್ಠುವಾಹಃ**—ಅಧಿಕಭಾರವನ್ನು ವಹಿಸಬಲ್ಲ । **ಅಶ್ವಾಃ**—ಅಶ್ವಗಳು । **ಭೋಜಂ**—ದಕ್ಷಿಣೆಯನ್ನು ಕೊಡುವವನನ್ನು । **ವಹಂತಿ**—ವಹಿಸುತ್ತವೆ । **ದಕ್ಷಿಣಾಯಾಃ** - ದಕ್ಷಿಣೆಯನ್ನು ಕೊಡುವ ಯಜಮಾನನಿಗಾಗಿ । **ಸುವೃತ್**—ಉತ್ತಮವಾದ ಚಕ್ರದಿಂದ ಕೂಡಿದ । **ರಥಃ**—ರಥವು । **ವರ್ತತೇ**—ಸಿದ್ಧವಾಗಿದೆ । **ದೇವಾಸಃ**—ಎಲೈ ದೇವತೆಗಳೇ । **ಭರೇಷು**—ಯುದ್ಧಗಳಲ್ಲಿ । **ಭೋಜಂ**—ದಕ್ಷಿಣಾದಾತೃವನ್ನು । **ಅವತ**—ರಕ್ಷಿಸಿರಿ । **ಭೋಜಃ**—ದಕ್ಷಿಣೆಯನ್ನು ಕೊಡತಕ್ಕವನು । **ಸಮನೀಕೇಷು** - ಯುದ್ಧಗಳಲ್ಲಿ । **ಶತ್ರೂನ್**—ಶತ್ರುಗಳನ್ನು । **ಜೇತಾ**—ಜಯಿಸಲು ಸಮರ್ಥನಾಗುತ್ತಾನೆ.

|| ಭಾವಾರ್ಥ ||

ಅಧಿಕ ಭಾರವನ್ನು ವಹಿಸಬಲ್ಲ ಅಶ್ವಗಳು ದಕ್ಷಿಣೆಯನ್ನು ಕೊಡುವವನನ್ನು ವಹಿಸುತ್ತವೆ. ದಕ್ಷಿಣೆಯನ್ನು ಕೊಡುವ ಯಜಮಾನನಿಗಾಗಿ ಉತ್ತಮವಾದ ಚಕ್ರದಿಂದ ಕೂಡಿದ ರಥವು ಸಿದ್ಧವಾಗಿದೆ. ಎಲೈ ದೇವತೆಗಳೇ, ದಕ್ಷಿಣೆಯನ್ನು ಕೊಡತಕ್ಕವನನ್ನು ಯುದ್ಧಗಳಲ್ಲಿ ರಕ್ಷಿಸಿರಿ. ದಕ್ಷಿಣೆಯನ್ನು ಕೊಡತಕ್ಕವನು ಯುದ್ಧಗಳಲ್ಲಿ ಶತ್ರುಗಳನ್ನು ಜಯಿಸುತ್ತಾನೆ.

English Translation

Horses capable of bearing hevvy burdens bear the giver of enjoyment, a well-constructed chariot rolls along (for the giver) of the dakshina; O gods, protect the giver of enjoyment in combats; may the giver of enjoyment be the victor over his foes in battles.

## ನೂರ ಎಂಟನೆಯ ಸೂಕ್ತವು

### ಪೀಠಿಕೆ.

ಈ ಸೂಕ್ತದಲ್ಲಿ ಪಣಿ ಎಂಬ ಅಸುರರಿಗೂ ಸರಮಾ ಎಂಬ ಇಂದ್ರನ ಬಳಿ ಇದ್ದ ದೇವಶುನಿ (ಹೆಣ್ಣುನಾಯಿ) ಗೂ ನಡೆದ ಸಂಭಾಷಣೆಯು ಉಕ್ತವಾಗಿದೆ. ಸರಮಾ ಮತ್ತು ಇದರ ಮರಿಗಳಾದ ಸಾರಮೇಯೌ ಎಂಬ ಎರಡು ನಾಯಿಗಳ ವಿಷಯವು,

ಇಂದ್ರಸ್ಯಾಂಗಿರಸಾಂ ಚೇಷ್ಟೌ ವಿದತ್ಸರಮಾ ತನಯಾಯ ಧಾಸಿಂ |
ಬೃಹಸ್ಪತಿರ್ಭಿನದದ್ರಿಂ ವಿದದ್ಗಾಃ ಸಮುಸ್ರಿಯಾಭಿರ್ವಾವಶಂತ ನರಃ ||

(ಋ. ಸಂ. ೧-೬೨-೩)

**ಅನೂನೋದತ್ರ ಹಸ್ತಯತೋ ಅದ್ರಿರಾರ್ಚನ್ಯೇನ ದಶ ಮಾಸೋ ನವಗ್ವಾಃ |**
**ಋತಂ ಯತೀ ಸರಮಾ ಗಾ ಅವಿಂದದ್ವಿಶ್ವಾನಿ ಸತ್ಯಾಂಗಿರಾಶ್ಚಕಾರ ||**
**ವಿಶ್ವೇ ಅಸ್ಯಾ ವ್ಯುಷಿ ಮಾಹಿನಾಯಾಃ ಸಂ ಯದ್ಗೋಭಿರಂಗಿರಸೋ ನವಂತ |**
**ಉತ್ಸ ಆಸಾಂ ಪರಮೇ ಸಧಸ್ಥ ಋತಸ್ಯ ಪಥಾ ಸರಮಾ ವಿದದ್ಗಾಃ ||**

(ಋ. ಸಂ. ೫-೪೫-೭, ೮)

ಎಂಬ ಋಕ್ಕುಗಳಲ್ಲಿ ಹೇಳಲಾಗಿದೆ. ಪಣಿಗಳು ಬಚ್ಚಿಟ್ಟಿದ್ದ ದೇವತೆಗಳ ಗೋವುಗಳನ್ನು ಹುಡುಕಿ ವರ್ತಮಾನವನ್ನು ತಂದು ದೇವತೆಗಳಿಗೆ ತಿಳಿಸಿದ ವಿಚಾರದಲ್ಲಿ ಋ. ಸಂ ೧-೬೨-೩ ನೇ ಋಕ್ಕಿನ ಭಾಷ್ಯದಲ್ಲಿ ಸಾಯಣರು ಒಂದು ಉಪಾಖ್ಯಾನವನ್ನು ಹೇಳಿರುವರು—

**ಅತ್ರೇದಮಾಖ್ಯಾನಂ | ಸರಮಾ ನಾಮ ದೇವಶುನೀ | ಪಣಿಭಿರ್ಗೋಷ್ವಪಹೃತಾಸು ತದ್ಗವೇಷಣಾಯ ತಾಂ ಸರಮಾಮಿಂದ್ರಃ ಪ್ರಾಹೈಷೀತ್ | ಯಥಾ ಲೋಕೇ ವ್ಯಾಧೋ ವನಾಂತರ್ಗತ-**

**ಮೃಗಾನ್ವೇಷಣಾಯ ಶ್ವಾನಂ ವಿಸೃಜತಿ ತದ್ವತ್ । ಸಾ ಚ ಸರಮೈವಮುವೋಚತ್ । ಹೇ ಇಂದ್ರ ಅಸ್ಮದೀಯಾಯ ಶಿಶವೇ ತದ್ಗೋಸಂಬಂಧಿ ಕ್ಷೀರಾನ್ನಂ ಯದಿ ಪ್ರಯಚ್ಛಸಿ ತರ್ಹಿ ಗಮಿಷ್ಯಾಮೀತಿ । ಸ ತಥೇತ್ಯಬ್ರವೀತ್ । ತಥಾ ಚ ಶಾಟ್ಯಾಯನಕಂ । ಅನ್ನಾದಿನೀಂ ತೇ ಸರಮೇ ಪ್ರಜಾಂ ಕರೋಮಿ ಯಾ ನೋ ಗಾ ಅನ್ವವಿಂದ ಇತಿ । ತತೋ ಗತ್ವಾ ಗವಾಂ ಸ್ಥಾನಮಜ್ಞಾಸೀತ್ । ಜ್ಞಾತ್ವಾ ಚಾಸ್ಮೈ ನ್ಯವೇದಯತ್ । ತಥಾ ನಿವೇದಿತಾಸು ಗೋಷು ತಮಸುರಂ ಹತ್ವಾ ತಾ ಗಾಃ ಸ ಇಂದ್ರೋಽಲಭತೇತಿ । ಅಯಮರ್ಥೋಽಸ್ಯಾಂ ಪ್ರತಿಪಾದ್ಯತೇ ॥**

(ಸಾ ಭಾ.)

ಸರಮಾ ಎಂಬುದು ದೇವತೆಗಳ ಬಳಿ ಇರುವ ಹೆಣ್ಣು ನಾಯಿಯು. ಪಣಿನಾಮಕ ದೈತ್ಯರು ದೇವತೆಗಳ ಗೋವುಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟಿದ್ದಾಗ ಆ ಗೋವುಗಳನ್ನು ಹುಡುಕುವುದಕ್ಕಾಗಿ ಇಂದ್ರನು ಈ ಸರಮಾ ಎಂಬ ದೇವಶುನಿಯನ್ನು ಕಳುಹಿಸಿದನು ಲೋಕವ್ಯವಹಾರದಲ್ಲಿ ಬೇಟೆಗಾರನು ಮೃಗಗಳನ್ನು ಹುಡುಕುವುದಕ್ಕಾಗಿ ತನ್ನ ಬಳಿ ಇರುವ ಬೇಟೆ ನಾಯಿಯನ್ನು ಕಳುಹಿಸುವಂತೆ ಇಂದ್ರನೂ ಸಹ ಗವಾನ್ವೇಷಣಕ್ಕಾಗಿ ಈ ದೇವಶುನಿಯನ್ನು ಹೋಗೆನಲು ಆಗ ಅದು ಇಂದ್ರನನ್ನು ಕುರಿತು ಇಂತೆಂದಿತು-ಎಲೈ ಇಂದ್ರನೇ, ನೀನು ನನ್ನ ಮರಿಗಾಗಿ ಕ್ಷೀರಾದ್ಯಾಹಾರವನ್ನು ಕೊಡುವುದಾದರೆ ನಾನು ಹೋಗಿ ಗೋವುಗಳನ್ನು ಹುಡುಕಿ ತರುವೆನೆಂದಿತು. (ಶಾಟ್ಯಾಯನ ಶಾಖೆಯವರು ಹೇಳುವಂತೆ **ಅನ್ನಾದಿನೀಂ ತೇ ಸರಮೇ ಪ್ರಜಾಂ ಕರೋಮಿ ಯಾ ನೋ ಗಾ ಅನ್ವವಿಂದ**—ಎಲೈ ಸರಮೆಯೇ ನಿನ್ನ ಮರಿಗೆ ಆಹಾರವನ್ನು ಒದಗಿಸಿ ಕೊಡುವೆನು. ನೀನು ಹೋಗಿ ಗೋವುಗಳನ್ನು ಹುಡುಕಿಕೊಂಡು ಬಾ ಎಂದು ಹೇಳಲು) ಇಂದ್ರನು ಹಾಗೆಯೇ ಆಗಲೆಂದು ಹೇಳಲು ಆ ಶುನಿಯು ಹೊರಟು ಹುಡುಕುತ್ತಾ ಪಣಿಗಳು ಗೋವನ್ನು ಬಚ್ಚಿಟ್ಟಿದ್ದ ಪ್ರದೇಶವನ್ನು ಕಂಡುಹಿಡಿದು ಅದನ್ನು ಇಂದ್ರನಿಗೆ ತಿಳಿಸಿತು. ಇಂದ್ರನು ಅದನ್ನು ತಿಳಿದು ಆ ಅಸುರರನ್ನು ಸಂಹರಿಸಿ ದೇವತೆಗಳ ಗೋವುಗಳನ್ನು ಬಿಡಿಸಿ ಹಿಂದಕ್ಕೆ ತಂದನು. ಈ ಅಭಿಪ್ರಾಯವೇ ಈ ಋಕ್ಕಿನಲ್ಲಿ ಪ್ರತಿಪಾದಿತವಾಗಿರುವುದು ಎಂದು

ಸರಮಾ ಎಂಬುವುದು ದೇವತೆಗಳ ಎಂದರೆ ಇಂದ್ರನ ಶುನಿಯು. ಇದಕ್ಕೆ ಎರಡು ಮರಿಗಳಿದ್ದವೆಂದೂ ಅವು ಮೃತ್ಯುದೇವತೆಯಾದ ಯಮನ ಬಳಿ ಇದ್ದವೆಂದೂ ಅವುಗಳಿಗೆ ತಾಯಿಯ ಹೆಸರನ್ನನುಸರಿಸಿ ಸಾರಮೇಯೌ ಎಂಬ ಹೆಸರಿದ್ದಿತೆಂದೂ ತಿಳಿದು ಬರುವುದು—

**ಅತಿ ದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ ।**

(ಋ. ಸಂ. ೧೦-೧೪-೧೦)

**ಯೌ ತೇ ಶ್ವಾನೌ ಯಮರಕ್ಷಿತಾರೌ ಚತುರಕ್ಷೌ ಪಥಿರಕ್ಷೀ ನೃಚಕ್ಷಸೌ ॥**

(ಋ. ಸಂ. ೧೦-೧೪-೧೧)

ಎಂಬ ಋಕ್ಕುಗಳಲ್ಲಿ ಸರಮಾ ಎಂಬ ದೇವಶುನಿಯ ಎರಡು ಮರಿಗಳಾದ ಸಾರಮೇಯೌ ಎಂಬ ನಾಯಿಗಳ ವಿಷಯವೂ ಅವುಗಳಿಗೆ ನಾಲ್ಕು ಕಣ್ಣುಗಳಿದ್ದ ವಿಷಯವೂ ತಿಳಿದು ಬರುವುದು. ಮೇಲೆ ಹೇಳಿದ ಸರಮಾ ಎಂಬ ದೇವಶುನಿಯು ಪಣಿಗಳ ಬಳಿಗೆ ಹೋಗಿ ಅವರೊಡನೆ ಸಂಧಾನಮಾಡಿದ ವಿಷಯವು ಋಗ್ವೇದದ ೧೦ ನೆಯ ಮಂಡಲದ ೧೦೮ ನೆಯ ಸೂಕ್ತದಲ್ಲಿ (ಪ್ರಕೃತ ಸೂಕ್ತದಲ್ಲಿ) ಈ ರೀತಿ ವರ್ಣಿತವಾಗಿರುವುದು—

ಹಿಂದೆ ಬೃಹಸ್ಪತಿಯ ಗೋವುಗಳನ್ನು ವಲನ ಅನುಯಾಯಿಗಳಾದ ಪಣಿಗಳೆಂಬುವರು ಅಪಹರಿಸಿ ಒಂದು ರಹಸ್ಯ ಸ್ಥಳದಲ್ಲಿ ಬಚ್ಚಿಟ್ಟಿದ್ದರು. ಆಗ ಬೃಹಸ್ಪತಿಯ ಕೋರಿಕೆಯಂತೆ ಇಂದ್ರನು ಆ ಗೋವುಗಳನ್ನು ಹುಡುಕುವುದ ಕ್ಕಾಗಿ ದೇವಶುನಿಯಾದ ಸರಮೆಯನ್ನು ಕಳುಹಿಸಿದನು. ಆ ಸರಮೆಯು ಗೋವುಗಳನ್ನು ಹುಡುಕುತ್ತಾ ಬಹುದೂರ ಸಂಚರಿಸಿ ದಾರಿಯಲ್ಲಿ ಅಡ್ಡಲಾಗಿ ಸಿಕ್ಕಿದ ರಸಾ ಎಂಬ ಒಂದು ದೊಡ್ಡ ನದಿಯನ್ನು ದಾಟಿ ಪಣಿಗಳ ಸಮೀಪಕ್ಕೆ ಬಂದಿತು ಆಗ ಪಣಿಗಳು ಸರಮೆಯು ಬಂದ ಉದ್ದೇಶವನ್ನು ತಿಳಿದು ಅದರೊಡನೆ ಸ್ನೇಹಮಾಡಿಕೊಳ್ಳುವ ಭಾವನೆ ಯಿಂದ ಇಂತು ಸಂಭಾಷಣೆಯನ್ನು ನಡೆಸಿದರು—

**ಪಣಿಗಳು**—ಎಲೈ ಸರಮೆಯೇ, ನೀನು ಬಹುದೂರದಿಂದ ಬಹುಕಷ್ಟಪಟ್ಟು ಇಲ್ಲಿಗೆ ಬಂದಿರುವಂತೆ ಕಾಣುತ್ತೆ. ನೀನು ಇಲ್ಲಿಗೆ ಬಂದ ಉದ್ದೇಶವೇನು? ಇಲ್ಲಿಗೆ ಹೇಗೆ ಬಂದೆ? ರಸಾ ಎಂಬ ನದಿಯನ್ನು ಹೇಗೆ ದಾಟಿದೆ?

**ಸರಮೇ**—ಎಲೈ ಪಣಿಗಳೇ ಕೇಳಿರಿ. ನಾನು ಇಂದ್ರನಿಂದ ನಿಯಮಿತಳಾಗಿ ಅವನ ದೂತಿಯಂತೆ ಇಲ್ಲಿಗೆ ಬಂದಿರುವೆನು. ನೀವು ಬಚ್ಚಿಟ್ಟಿರುವ ಧನಗಳನ್ನು ಇಂದ್ರನು ಅಪೇಕ್ಷಿಸುವನು. ರಸಾನದಿಯು ಹೆದರಿ ನನಗೆ ದಾಟುವುದಕ್ಕೆ ಸಹಾಯಮಾಡಿತು. ಆದುದರಿಂದ ನಾನು ಆ ನದಿಯನ್ನು ದಾಟಿ ಬಂದೆನು.

**ಪಣಿಗಳು**—ಎಲೈ ಸರಮೆಯೇ, ಒಳ್ಳೇದು. ಇಂದ್ರನು ನಿನ್ನನ್ನು ದೂತಿಯನ್ನಾಗಿ ಕಳುಹಿಸಿರುವೆನೆಂದು ಹೇಳಿದೆಯಷ್ಟೆ. ಆ ಇಂದ್ರನು ನೋಡುವುದಕ್ಕೆ ಹೇಗಿರುವನು? (ಪಣಿಗಳು ತಮ್ಮ ತಮ್ಮಲ್ಲಿ ಹೀಗೆ ಮಾತನಾಡಿಕೊಳ್ಳುವರು) ಸರಮೆಯು ಬಂದರೆ ಬರಲಿ. ಅದರೊಡನೆ ಸ್ನೇಹವನ್ನೇ ಮಾಡಿಕೊಳ್ಳೋಣ ಮತ್ತು ನಮ್ಮ ಗೋವುಗಳಿಗೆ ಅದೇ ಯಜಮಾನತಿಯಾಗಿರಲಿ.

**ಸರಮೇ**—ನೀವು ಭಾವಿಸಿರುವಂತೆ ಆ ಇಂದ್ರನನ್ನು ಜಯಿಸಲು ಸಾಧ್ಯವಿಲ್ಲ. ನನ್ನನ್ನು ಕಳುಹಿಸಿದ ಆ ಇಂದ್ರನು ಶತ್ರುಗಳನ್ನು ಜಯಿಸುವನೇ ಹೊರತು ಅವನನ್ನು ಇತರರು ಜಯಿಸಲು ಸಾಧ್ಯವಿಲ್ಲ. ಆಳ ವಾದ ನದಿಗಳು ಸಹ ಅವನನ್ನು ತಡೆಯಲಾರವು. ಅವನಿಂದ ನೀವು ಸಂಹೃತರಾಗಿ ಮೃತ್ಯುಶಯ್ಯೆಯಲ್ಲಿ ಮಲಗಬೇಕಾಗುವುದು.

**ಪಣಿಗಳು**—ಎಲೈ ಸರಮೆಯೇ, ಇಗೋ ಈ ಗೋವುಗಳಿಗಾಗಿಯೇ ಅಲ್ಲವೇ ನೀನು ಅಂತರಿಕ್ಷಮಾರ್ಗದಿಂದ ಬಹುದೂರ ಬಂದು ಅವುಗಳನ್ನು ಅಪೇಕ್ಷಿಸುತ್ತಿರುವುದು? ಆದರೆ ಆ ಗೋವುಗಳನ್ನು ಯುದ್ಧಮಾಡದೆ ನಿಮಗೆ ಸುಮ್ಮನೆ ಒಪ್ಪಿಸುವವರಾರು? ನಮ್ಮ ಆಯುಧಗಳು ಬಹು ಹರಿತವಾಗಿವೆ.

**ಸರಮೇ**—ನಿಮ್ಮ ಮಾತುಗಳಿಂದ ಏನು ಪ್ರಯೋಜನ? ಆ ಮಾತಿನಲ್ಲಿ ಸೈನ್ಯದ ಬಲವಿರುವುದೇ, ನಿಮ್ಮ ಪಾಪಪೂರಿತವಾದ ಶರೀರಗಳಿಗೆ ಬಿಲ್ಲುಬಾಣಗಳಿಗೆ ಇರುವ ಶಕ್ತಿ ಇರುವುದೇ? ನೀವು ಅನುಸರಿಸುವ ಮಾರ್ಗವು ಬಹುಕಷ್ಟಕರವಾದುದು. (ಗೋವುಗಳ ಮಾಲೀಕನಾದ) ಬೃಹಸ್ಪತಿಯು ನಿಮಗೆ ದಯ ವನ್ನು ತೋರಿಸುವುದಿಲ್ಲ, ನಿಮ್ಮ ಮಾತಿಗೆ ಬೆಲೆಯನ್ನು ಕೊಡುವುದಿಲ್ಲ.

**ಪಣಿಗಳು**—ಎಲೈ ಸರಮೇ, ಈ ಪಶುಧನವು, ಎಂದರೆ ಹಸುಗಳು ಕುದುರೆಗಳು, ದ್ರವ್ಯ ಮುಂತಾದವು ಗಳನ್ನು ನಾವು ಪರ್ವತಗಳಲ್ಲಿ ಸಂಗ್ರಹಿಸಿ ಇಟ್ಟಿರುವೆವು, ಪಣಿಗಳಾದ ನಾವು ಅವುಗಳನ್ನು ಬಹು ಜಾಗರೂಕತೆಯಿಂದ ಕಾಪಾಡುತ್ತಿರುವೆವು. ಇಂತಹ ದುರ್ಗಮವಾದ ಸ್ಥಳಕ್ಕೆ ನೀನು ಏಕಾಂಗಿಯಾಗಿ ಬಂದಿರುವುದು ವ್ಯರ್ಥವು.

**ಸರಮೇ** - ಎಲೈ ಪಣಿಗಳೇ ಕೇಳಿ. ಋಷಿಗಳೂ, ಅಂಗಿರಸ್ಸುಗಳೂ ಸೋಮಪಾನದಿಂದ ಶಕ್ತಿಸಾಮರ್ಥ್ಯಗಳನ್ನು ಪಡೆದು ಅಯಾಸ್ಯನ ನಾಯಕತ್ವದಲ್ಲಿ ಇಲ್ಲಿಗೆ ಬಂದು ಈ ಗೋವುಗಳನ್ನು ಬಲಾತ್ಕಾರದಿಂದ ವಶಪಡಿಸಿಕೊಂಡು ತಮ್ಮಲ್ಲಿ ಹಂಚಿಕೊಳ್ಳುವರು ನೀವು ಆಡುತ್ತಿರುವ ಮಾತು ವ್ಯರ್ಥವೆಂಬುದು ನಿಮಗೆ ಆಗ ಗೊತ್ತಾಗುವುದು.

**ಪಣಿಗಳು**—ಎಲೈ ಸರಮೇ, ನಿನಗೆ ದೇವತೆಗಳ ಬೆಂಬಲವಿರುವಂತೆ ಕಾಣುವುದು. ಆದುದರಿಂದ ನಾವು ನಿನ್ನನ್ನು ನಮ್ಮ ಸೋದರಿಯಂತೆ ಭಾವಿಸುವೆವು. ನೀನು ಇಂದ್ರನ ಬಳಿಗೆ ಹಿಂದಕ್ಕೆ ಹೋಗಬೇಡ. ಇಲ್ಲಿಯೇ ಇರು. ಈ ಗೋವುಗಳಲ್ಲಿ ನಿನಗೂ ಒಂದು ಪಾಲನ್ನು ಕೊಡುವೆವು.

**ಸರಮೇ**—ನೀವು ನೀಡುವ ಸ್ನೇಹಭಾವವೂ ಸಹೋದರಿತ್ವವೂ ನನಗೆ ಬೇಡ. ಇಂದ್ರನೂ, ಭಯಂಕರವಾದ ಅಂಗಿರಸ್ಸುಗಳೂ ನನ್ನ ಸ್ವಭಾವವನ್ನು ತಿಳಿದಿರುವರು. ಗೋವುಗಳನ್ನು ಹುಡುಕುತ್ತಾ ನಾನು ಇಲ್ಲಿಗೆ ಬರುವಾಗ ಅವರು ಗೂಢಮಾರ್ಗದಿಂದ ನಿಮ್ಮ ವಾಸಸ್ಥಾನವನ್ನು ಅರಿತಿರುವರು. ಆದುದರಿಂದ ಎಲೈ ಪಣಿಗಳೇ, ನೀವು ದೂರ ಓಡಿಹೋಗಿ ಬದುಕಿಕೊಳ್ಳಿರಿ.

**ಸಾವಕಾಶ ಮಾಡಬೇಡಿ,** ದೂರದಲ್ಲಿರುವ ಸುರಕ್ಷಿತವಾದ ಪ್ರದೇಶಕ್ಕೆ ಹೋಗಿ. ಗುಹೆಯಲ್ಲಿಟ್ಟಿರುವ ಗೋವುಗಳು ಕ್ರಮವಾಗಿ ಈಚೆಗೆ ಬರಲಿ. ಬೃಹಸ್ಪತಿ, ಸೋಮ ಮತ್ತು ಬುದ್ಧಿವಂತರಾದ ಋಷಿಗಳು ಈ ರಹಸ್ಯ ಸ್ಥಳವನ್ನು ಕಂಡುಹಿಡಿದು ಗೋವುಗಳಿರುವ ಗುಹೆಯ ಬಾಗಿಲನ್ನು ಒಡೆದು ಒಳಗೆ ನುಗ್ಗುವರು.

ಈ ಸಂಭಾಷಣೆಯಲ್ಲಿ ಒಂದು ಋಕ್ಕನ್ನು ಪಣಿಗಳೂ ಅದಕ್ಕೆ ಪ್ರತ್ಯುತ್ತರವಾಗಿ ಮತ್ತೊಂದು ಋಕ್ಕನ್ನು ಸರಮೆಯೂ ಹೇಳಿರುವರು. ಈ ಪಣಿಗಳು ಗೋವುಗಳನ್ನು ಅಪಹರಿಸಿದ ವಿಷಯಗಳು ಋಗ್ವೇದದಲ್ಲಿ ಅನೇಕ ಕಡೆ ಸೂಚಿತವಾಗಿರುವುದು.

ಋಗ್ವೇದದಲ್ಲಿ ಪಣಿಶಬ್ದಕ್ಕೆ ವ್ಯಾಪಾರಾದಿಗಳನ್ನು ಮಾಡುವ ಧನಿಕನೆಂಬ ಅರ್ಥವಿದ್ದರೂ ಅವನು ಯಜ್ಞಾದಿಗಳನ್ನು ಮಾಡದೆ ಮತ್ತು ದಕ್ಷಿಣೆದಾನಾದಿಗಳನ್ನು ಕೊಡದಿರುವ ಮನುಷ್ಯನೆಂದೂ ಅರ್ಥವಿರುವುದರಿಂದ ಅವನನ್ನು ನಿಕೃಷ್ಟಭಾವನೆಯಿಂದ ನೋಡುವುದಲ್ಲದೆ ಅವನು ಗೌರವಾರ್ಹನಲ್ಲದವನೆಂದೂ ನೀಚಮನುಷ್ಯನೆಂದೂ ಋಷಿಗಳು ಭಾವಿಸಿದ್ದಂತೆ ತೋರುವುದು. ಕೆಲವು ಕಡೆ ಪಣಿ ಎಂಬುವನು ಒಬ್ಬ ಪ್ರತ್ಯೇಕ ವ್ಯಕ್ತಿಯಾಗಿ ಕಂಡುಬರುವುದಾದರೂ ಈ ಶಬ್ದದ ಬಹುವಚನ ಪ್ರಯೋಗವು ವಿಶೇಷವಾಗಿರುವುದರಿಂದ ಪಣಯಃ ಎಂಬ ಶಬ್ದವು ಒಂದು ವರ್ಗದ ಜನರನ್ನು ಸೂಚಿಸುವುದಾಗಿರುವುದೆಂದು ತಿಳಿಯಬೇಕು. ಈ ಪಣಿಗಳೆಂಬುವರು ಈ ದೇಶದ ಪೂರ್ವನಿವಾಸಿಗಳೆಂದೂ ಇವರು ವ್ಯಾಪಾರಾದಿಗಳಲ್ಲಿ ತೊಡಗಿದ್ದರೆಂದೂ ಆದರೂ ಇವರಲ್ಲಿ ಪ್ರಾಮಾಣಿಕತೆ ಇರಲಿಲ್ಲವಾದ್ದರಿಂದ ಇವರನ್ನು ಅಸುರರ ಗುಂಪಿಗೆ ಸೇರಿದವರೆಂದು ಜನರು ಹೇಳುತ್ತಿದ್ದರೆಂದೂ ಕೆಲವರ ಅಭಿಮತವು. ಅವರು ಯಜ್ಞಾದಿಗಳನ್ನು ಮಾಡದೆ ಯಾವ ಸತ್ಕರ್ಮಾನುಷ್ಠಾನದಲ್ಲಿಯೂ ಆಸಕ್ತಿ ಇಲ್ಲದೆ ನ್ಯಾಯ ಅಥವಾ ಅನ್ಯಾಯಮಾರ್ಗದಿಂದ ಕೇವಲ ದ್ರವ್ಯ ಸಂಪಾದನೆಯೇ ಮುಖ್ಯವೆಂದು ಪರಿಗಣಿಸಿ ಅದರಂತೆ ನಡೆಯುತ್ತಿದ್ದುದರಿಂದ ಇವರನ್ನು ಆರ್ಯರು ದಸ್ಯುಗಳೆಂತಲೂ, ನೀಚವೃತ್ತಿಯ ಮನುಷ್ಯರೆಂತಲೂ ಭಾವಿಸಿ ಆ ವಿಧವಾದ ಅಭಿಪ್ರಾಯವನ್ನು ಮಂತ್ರಾದಿಗಳಲ್ಲಿ ಹೊರಗೆಡವಿದ್ದಾರೆ. ಪಣಿಗಳ ವಿಷಯವಾಗಿ ಋಗ್ವೇದದಲ್ಲಿ ಅನೇಕ ಋಕ್ಕುಗಳಿರುವುವು

ಈ ಸೂಕ್ತದ ವಿಷಯದಲ್ಲಿ ಬೃಹದ್ದೇವತೆಯು ೮ ನೇ ಅಧ್ಯಾಯದಲ್ಲಿ ಈ ರೀತಿ ಹೇಳಿರುವುದು—

**ಅಸುರಾಃ ಪಣಯೋ ನಾಮ ರಸಾಪಾರನಿವಾಸಿನಃ |**
**ಗಾಸ್ತೇಽಪಜಹ್ರುರಿಂದ್ರಸ್ಯ ನ್ಯಗೂಹಂಶ್ಚ ಪ್ರಯತ್ನತಃ || ೨೪ ||**

24. ಪೂರ್ವದಲ್ಲಿ ಪಣಿಗಳೆಂಬ ಆಸುರರಿದ್ದರು. ಅವರು **ರಸಾ** ಎಂಬ ನದಿಯ ಆಚೆಯ ದಡದ ಪ್ರದೇಶಗಳಲ್ಲಿ ವಾಸವಾಗಿದ್ದರು. ಇವರು ಒಂದು ಸಮಯದಲ್ಲಿ ಇಂದ್ರನ ಗೋವುಗಳನ್ನು ಅಪಹರಿಸಿಕೊಂಡು ಹೋಗಿ ರಹಸ ಸ್ಥಳದಲ್ಲಿ ಬಚ್ಚಿಟ್ಟರು.

**ಬೃಹಸ್ಪತಿಸ್ತಥಾಪಶ್ಯದ್ದೃಷ್ಟ್ವೇಂದ್ರಾಯ ಶಶಂಸ ಚ |**
**ಪ್ರಾಹಿಣೋತ್ತತ್ರ ದೂತ್ಯೇಽಥ ಸರಮಾಂ ಪಾಕಶಾಸನಃ || ೨೫ ||**

25. ಈ ಪಣಿಗಳು ಗೋವುಗಳನ್ನು ಅಪಹರಿಸಿದ ವಿಷಯವು ಬೃಹಸ್ಪತಿಗೆ ತಿಳಿಯಿತು. ಅವನು ಅದನ್ನು ಇಂದ್ರನಿಗೆ ತಿಳಿಸಿದನು ಆಗ ಇಂದ್ರನು ತನ್ನ ಬಳಿ ಇದ್ದ **ಸರಮಾ** ಎಂಬ ದೇವಶುನಿಯನ್ನು (ದೇವಲೋಕದ ಹೆಣ್ಣು ನಾಯಿ) ದೂತಕಾರ್ಯಾರ್ಥವಾಗಿ ಆ ಪಣಿಗಳ ಬಳಿಗೆ ಕಳುಹಿಸಿದನು.

**ಕಿಮಿತ್ಯತ್ರಾಯುಜಾಭಿಸ್ತಾಂ ಪಪ್ರಚ್ಛುಃ ಪಣಯೋಽಸುರಾಃ |**
**ಕುತಃ ಕಸ್ಯಾಸಿ ಕಲ್ಯಾಣಿ ಕಿಂ ವಾ ಕಾರ್ಯಮಿಹಾಸ್ತಿ ತೇ || ೨೬ ||**

26. ಆ **ಸರಮಾ** ಎಂಬ ದೇವಶುನಿಯು ಪಣಿಗಳ ಬಳಿಗೆ ಹೋದಮೇಲೆ ಆ ನಾಯಿಯನ್ನು ಪಣಿಗಳು **ಕಿಮಿಚ್ಛಂತೀ** ಎಂಬ ೧೦೮ನೇ ಸೂಕ್ತದ ಮೊದಲನೆಯ ಋಕ್ಕಿನಿಂದ ಪ್ರಶ್ನೆಮಾಡಿದರು, ಮತ್ತು ಈ ಸೂಕ್ತದ ೧, ೩ ಮೊದಲಾದ ಅಸಮಸಂಖ್ಯೆಯ ಋಕ್ಕುಗಳಲ್ಲಿ ಪಣಿಗಳು ಸರಮೆಯನ್ನು ಉದ್ದೇಶಿಸಿ ಹೇಳಿದ ವಾಕ್ಯಗಳಿರುವವು. ಮತ್ತು ಆ ಪಣಿಗಳು ಸರಮೆಯನ್ನು ಕುರಿತು—ಎಲೈ ಶೋಭನಾಂಗಿಯೇ, ನೀನು ಎಲ್ಲಿಂದ ಬಂದಿರುವೆ? ನೀನು ಯಾರ ಬಳಿ ಇರುವೆ ಎಂದರೆ ನಿನ್ನ ಯಜಮಾನನಾರು? ನೀನು ಇಲ್ಲಿಗೆ ಯಾವ ಕೆಲಸಕ್ಕಾಗಿ ಬಂದಿರುವೆ? ಎಂದು ಪ್ರಶ್ನೆ ಮಾಡಿದರು

**ಅಥಾಬ್ರವೀತ್ತಾನ್ಸರಮಾ ದೂತ್ಯೈಂದ್ರೀ ವಿಚರಾಮ್ಯಹಂ |**
**ಯುಷ್ಮಾನ್ವ್ರಜಂ ಚಾನ್ವಿಷ್ಯಂತೀ ಗಾಶ್ಚೈವೇಂದ್ರಸ್ಯ ಪೃಚ್ಛತಃ || ೨೭ ||**

27. ಆ ಸರಮೆಯು ಅವರನ್ನು ಕುರಿತು ಇಂತೆಂದಿತು. ನಾನು ಇಂದ್ರನ ದೂತಳು. ಅವನ ಕಾರ್ಯಾರ್ಥವಾಗಿ ನಾನು ಸಂಚರಿಸುತ್ತಿರುವೆನು. ಇಂದ್ರನ ಗೋವುಗಳು ಅಪಹರಿಸಲ್ಪಟ್ಟಿರುವುದರಿಂದ ಅವನ್ನು ಹುಡುಕಬೇಕೆಂದು ಇಂದ್ರನ ಆಜ್ಞೆಯ ಪ್ರಕಾರ ನಾನು ನಿಮ್ಮ ಕೊಟ್ಟಿಗೆ ಎಲ್ಲಿರುವುದೆಂದು ಹುಡುಕುತ್ತಾ ಇಲ್ಲಿಗೆಬಂದಿದ್ದೇನೆ ಎಂದಿತು.

**ವಿದಿತ್ವೇಂದ್ರಸ್ಯ ದೂತೀಂ ತಾಮಸುರಾಃ ಪಾಪಚೇತಸಃ |**
**ಊಚುರ್ಮಾ ಸರಮೇ ಗಾಸ್ತ್ವಮಿಹಾಸ್ಮಾಕಂ ಸ್ವಸಾ ಭವ || ೨೮ ||**

28. ಸರಮೆಯು ಇಂದ್ರನ ದೂತಿಯಾಗಿ ತಮ್ಮಲ್ಲಿಗೆ ಬಂದಿರುವುದನ್ನು ತಿಳಿದು ಆ ಪಾಪಿಷ್ಠರಾದ ಪಣಿಗಳು ಆ ಸರಮೆಗೆ–ಎಲೈ ಸರಮೆಯೇ, ನೀನು ಹಿಂದಕ್ಕೆ ಹೋಗಬೇಡ. ನೀನು ನಮಗೆ ಸಹೋದರಿಯಂತೆ ಇಲ್ಲಿಯೇ ಇದ್ದುಬಿಡು.

ವಿಭಜಾನೋ ಗವಾಂ ಭಾಗಂ ಮಾಹಿತಾ ಹ ತತಃ ಪುನಃ ।
ಸೂಕ್ತಸ್ಯಾಸ್ಯಾನ್ತ್ಯಯಾ ಚರ್ಚಾಯುಗ್ಮಾಭಿಸ್ತ್ವೇವ ಸರ್ವಶಃ ॥ ೨೯ ॥

29. ನಾವು ತಂದಿರುವ ಗೋವುಗಳಲ್ಲಿ ನಿನಗೂ ಒಂದು ಪಾಲನ್ನು (ಭಾಗವನ್ನು) ಕೊಡುವೆವು. ಇನ್ನು ಮೇಲೆ ನೀನು ನಮ್ಮ ವಿಷಯದಲ್ಲಿ ಶತ್ರುಗಳಂತೆ ಇರಬೇಡ ಎಂದು ಹೇಳಿದರು ಈ ರೀತಿ ಇವರಿಗೆ ಸಂವಾದವು ನಡೆಯಿತು. ಈ ಸೂಕ್ತದ ಕೊನೆಯ ಋಕ್ಕಿನಿಂದಲೂ, ಮತ್ತು ಈ ಸೂಕ್ತದ ಇತರ ಅಸಮುಸಂಖ್ಯೆಯ ಋಕ್ಕುಗಳಿಂದಲೂ,

ಸಾಬ್ರವೀನ್ನಾಹಮಿಚ್ಛಾಮಿ ಸ್ವಸೃತ್ವಂ ವಾ ಧನಾನಿ ವಾ ।
ಪಿಬೇಯಂ ತು ಪಯಸ್ತಾಸಾಂ ಗವಾಂ ಯಾಸ್ತಾ ನಿಗೂಹಥ ॥ ೩೦ ॥

30. ಸರಮೆಯು ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸುತ್ತಾ—ಎಲೈ ಪಣಿಗಳೇ, ನನಗೆ ನಿಮ್ಮ ಸಹೋದರಿತ್ವವೂ ಬೇಡ, ನಿಮ್ಮ ಧನವೂ ಬೇಡ, ಆದರೆ ನೀವು ಬಚ್ಚಿಟ್ಟಿರುವ ಗೋವುಗಳ ಹಾಲನ್ನು ಪಾನಮಾಡಬೇಕೆಂದು ಬಯಸುವೆನು ಎಂದಿತು.

ಅಸುರಾಸ್ತಾಂ ತಥೇತ್ಯುಕ್ತ್ವಾ ತದಾಜಹ್ರುಃ ಪಯಸ್ತತಃ ।
ಸಾ ಸ್ವಭಾವಾಚ್ಚ ಲೌಲ್ಯಾಚ್ಚ ಪೀತ್ವಾ ತತ್ಪಯ ಆಸುರಂ ॥ ೩೧ ॥

31. ಅಸುರರು ಹಾಗೆಯೇ ಆಗಲೆಂದು ಹೇಳಿ ಆ ಗೋವುಗಳ ಹಾಲನ್ನು ಆ ಸರಮೆಗೆ ತಂದುಕೊಟ್ಟರು. ಸರಮೆಯೂ ಸಹ ತನ್ನ ಸ್ವಭಾವಕ್ಕೂ ಆಶೆಗೂ ಅನುಗುಣವಾಗಿ ಅಸುರರು ತಂದುಕೊಟ್ಟ ಹಾಲನ್ನು ಪಾನಮಾಡಿ,

ಪರಂ ಸಂವನನಂ ಹೃದ್ಯಂ ಬಲಪುಷ್ಟಿಕರಂ ತತಃ ।
ಶತಯೋಜನವಿಸ್ತಾರಾಮುತರತ್ತಾಂ ರಸಾಂ ಪುನಃ ॥ ೩೨ ॥

32. ಅಹಾ! ಈ ಹಾಲು, ಎಷ್ಟು ಚನ್ನಾಗಿದೆ, ರುಚಿಯಾಗಿದೆ, ಸಂತೋಷ ಮತ್ತು ಬಲ ಪುಷ್ಟಿಪ್ರದ [illegible] ಎಂದು ಆ ಹಾಲನ್ನು ಪ್ರಶಂಸೆಮಾಡುತ್ತಾ ನೂರು ಯೋಜನದಷ್ಟು ಅಗಲವಾದ ಆ ರಸಾನದಿಯನ್ನು ಮತ್ತೆ ದಾಟಿ ತನ್ನ ಸ್ವಸ್ಥಾನವನ್ನು ಸೇರಿ ಇಂದ್ರನ ಬಳಿಗೆ ಹೋಯಿತು. ಏಕೆಂದರೆ,

ಯಸ್ಯಾಃ ಪಾರೇ ಪರೇ ತೇಷಾಂ ಪುರಮಾಸೀತ್ಸುದುರ್ಜಯಂ ।
ಪಪ್ರಚ್ಛೇಂದ್ರಶ್ಚ ಸರಮಾಂ ಕಚ್ಚಿದ್ಗಾ ದೃಷ್ಟವತ್ಯಸಿ ॥ ೩೩ ॥

33. ಆ ರಸಾನದಿಯ ಆಚೆಯ ದಡದಲ್ಲಿ ಆ ಪಣಿಗಳ ಅಭೇದ್ಯವಾದ ಪಟ್ಟಣವಿದ್ದಿತು. ಆದ್ದರಿಂದ ರಸಾನದಿಯನ್ನು ಮತ್ತೆ ದಾಟಿ ಇಂದ್ರನ ಬಳಿಗೆ ಬಂದನಂತರ ಇಂದ್ರನು ಆ ಸರಮೆಯನ್ನು ಕುರಿತು—ಎಲೈ ಸರಮೆಯೇ, ನೀನು ಹೋದ ಕೆಲಸವೇನಾಯಿತು ? ಗೋವುಗಳನ್ನು ಕಂಡು ಬಂದೆಯಾ ? ಎಂದು ಕೇಳಿದನು.

ಸಾ ನೇತಿ ಪ್ರತ್ಯುವಾಚೇಂದ್ರ ಪ್ರಭಾವಾದಾಸುರಸ್ಯ ತು ।
ತಾಂ ಜಘಾನ ಪದಾ ಕ್ರುದ್ಧಃ ಉದ್ಗಿರಂತೀ ಪಯಸ್ತತಃ ॥ ೩೪ ॥

34. ಸರಮೆಯು ಅಸುರರ ಹಾಲನ್ನು ಪಾನಮಾಡಿ ಅದರ ಮದವೇರಿದ್ದರಿಂದ ಉನ್ಮತ್ತಳಾಗಿ ಆ ಗೋವುಗಳನ್ನು ತಾನು ನೋಡಲಿಲ್ಲವೆಂದು ಇಂದ್ರನಿಗೆ ಪ್ರತ್ಯುತ್ತರವೀಯಲು (ಸುಳ್ಳನ್ನು ಹೇಳಲು) ಇಂದ್ರನಿಗೆ ಕೋಪಬಂದು ಆ ಸರಮೆಯನ್ನು ತನ್ನ ಕಾಲಿನಿಂದ ಒದ್ದನು ಅದರಿಂದ (ಇಂದ್ರನ ಪದಾಘಾತದಿಂದ) ಸರಮೆಯು ತಾನು ಪಾನ ಮಾಡಿದ್ದ ಹಾಲನ್ನು ಕಕ್ಕುತ್ತಾ,

**ಜಗಾಮ ಸಾ ಭಯೋದ್ವಿಗ್ನಾ ಪುನರೇವ ಪಣೀನ್ಪ್ರತಿ ।**
**ಪದಾನುಸಾರಿಪದ್ಧತ್ಯಾ ರಥೇನ ಹರಿವಾಹನಃ ॥ ೩೫ ॥**

35. ಭಯದಿಂದ ನಡುಗುತ್ತಾ ಪುನಃ ಪಣಿಗಳ ಬಳಿಗೆ ಹೋಯಿತು. ಆಗ ಇಂದ್ರನು ಆ ಸರಮೆಯ ಕಾಲುಗಳ ಹೆಜ್ಜೆಯ ಗುರುತುಗಳನ್ನೇ ಅನುಸರಿಸಿ, ರಥದಲ್ಲಿ ಕುಳಿತು,

**ಗತ್ವಾ ಜಘಾನ ಚ ಪಣೀನ್ ಗಾಶ್ಚ ತಾಃ ಪುನರಾಹರತ್ ।**

36. ಆ ಪಣಿಗಳಿದ್ದಲ್ಲಿಗೆ ಹೋಗಿ ಅವರನ್ನು ಕೊಂದು ಗೋವುಗಳನ್ನು ಹಿಂದಕ್ಕೆ ತಂದನು ಎಂದಿದೆ.

॥ ಸಾಯಣಭಾಷ್ಯಂ ॥

**ಕಿಮಿಚ್ಛಂತೀತ್ಯೇಕಾದಶರ್ಚಂ ನವಮಂ ಸೂಕ್ತಂ ತ್ರೈಷ್ಟುಭಂ । ಐಂದ್ರಪುರೋಹಿತಸ್ಯ ಬೃಹಸ್ಪತೇರ್ಗೋಷು ವಲನಾಮ್ನೋಽಸುರಸ್ಯ ಭಟೈಃ ಪಣಿನಾಮಕೈರಸುರೈರಪಹೃತ್ಯ ಗುಹಾಯಾಂ ನಿಹಿತಾಸು ಸತೀಷು ಬೃಹಸ್ಪತಿಪ್ರೇರಿತೇನೇಂದ್ರೇಣ ಗವಾಮನ್ವೇಷಣಾಯ ಸರಮಾ ನಾಮ ದೇವಶುನೀ ಪ್ರೇಷಿತಾ । ಸಾ ಚ ಮಹತೀಂ ನದೀಮುತ್ತೀರ್ಯ ವಲಪುರಂ ಪ್ರಾಪ್ಯ ಗುಪ್ತಸ್ಥಾನೇ ನೀತಾಸ್ತಾ ಗಾ ದದರ್ಶ । ಅಥ ತಸ್ಮಿನ್ನಂತರೇ ಪಣಯ ಇದಂ ವೃತ್ತಾಂತಮವಗಚ್ಛಂತ ಏನಾಂ ಮಿತ್ರೀಕರ್ತುಂ ಸಂವಾದಮಕುರ್ವನ್ । ತತ್ರ ಪ್ರಥಮಾತೃತೀಯಾದ್ಯಾ ಅಯುಜೋಽಂತ್ಯಾವರ್ಜಿತಾಃ ಪಣೀನಾಂ ವಾಕ್ಯಾನಿ । ಅತ್ರ ತ ಋಷಯಃ ಸರಮಾ ದೇವತಾ । ದ್ವಿತೀಯಾಚತುರ್ಥ್ಯಾದ್ಯಾ ಯುಜ ಏಕಾದಶೀ ಚ ಷಟ್ ಸರಮಾಯಾ ವಾಕ್ಯಾನಿ । ಅತಸ್ತಾಸು ಸರ್ಷಿಃ ಪಣಯೋ ದೇವತಾ । ತಥಾ ಚಾನುಕ್ರಾಂತಂ । ಕಿಮಿಚ್ಛಂತೀ ಪಣಿಭಿರಸುರೈರ್ನಿಗೂಳ್ಹಾ ಗಾ ಅನ್ವೇಷ್ಟುಂ ಸರಮಾಂ ದೇವಶುನೀಮಿಂದ್ರೇಣ ಪ್ರಹಿತಾಮಯುಗ್ಭಿಃ ಪಣಯೋ ಮಿತ್ರೀಯಂತಃ ಪ್ರೋಚುಃ ಸಾ ತಾನ್ಯುಗ್ಮಾಂತ್ಯಾಭಿರನಿಚ್ಛಂತೀ ಪ್ರತ್ಯಾಚಷ್ಟ ಇತಿ ॥ ಗತೋ ವಿನಿಯೋಗಃ ॥**

ಅನುವಾದವು—**ಕಿಮಿಚ್ಛಂತೀ** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು ಈ ಸೂಕ್ತದಲ್ಲಿ ಇಂದ್ರಪುರೋಹಿತನಾದ ಬೃಹಸ್ಪತಿಯ ಗೋವುಗಳನ್ನು ವಲ ಎಂಬ ಅಸುರನ ಅನುಚರರಾದ ಪಣಿಗಳೆಂಬ ಅಸುರರು ಅಪಹರಿಸಿ ಒಂದು ಪರ್ವತದ ಗುಹೆಯಲ್ಲಿ ಬಚ್ಚಿಟ್ಟಿದ್ದರು. ಆಗ ಬೃಹಸ್ಪತಿಯ ಕೋರಿಕೆಯ ಮೇಲೆ ಇಂದ್ರನು ಆ ಗೋವುಗಳಿರುವ ಪ್ರದೇಶವನ್ನು ಕಂಡುಹಿಡಿಯುವುದಕ್ಕಾಗಿ ತನ್ನ ಬಳಿ ಇದ್ದ ಸರಮಾ ಎಂಬ ದೇವಶುನಿಯನ್ನು (ಹೆಣ್ಣು ನಾಯಿಯನ್ನು) ಕಳುಹಿಸಿದನು. ಆ ನಾಯಿಯು ಬಹುದೂರ ಸಂಚರಿಸಿ ದಾರಿಯಲ್ಲಿ ಸಿಕ್ಕಿದ ಒಂದು ದೊಡ್ಡನದಿಯನ್ನು ದಾಟಿ ವಲನೆಂಬ ಅಸುರನ ಪಟ್ಟಣಕ್ಕೆ ಹೋಗಿ ಅಲ್ಲಿ ಅಸುರರು ರಹಸ್ಯಸ್ಥಾನದಲ್ಲಿ ಬಚ್ಚಿಟ್ಟಿದ್ದ ಗೋವುಗಳನ್ನು ಕಂಡಿತು. ಇಷ್ಟರಲ್ಲಿ ಇಂದ್ರನ ನಾಯಿಯು ಬಂದು ತಾವು ರಹಸ್ಯಸ್ಥಳದಲ್ಲಿ ಇಟ್ಟಿದ್ದ ಗೋವುಗಳನ್ನು ನೋಡಿತೆಂಬ ವಿಚಾರವು ಅಸುರರಿಗೆ ತಿಳಿಯಲಾಗಿ ಅವರು ಕೂಡಲೇ

ನಾಯಿಯು ಬಳಿಗೆ ಬಂದು ಅದನ್ನು ತಮ್ಮ ಕಡೆಗೆ ಸೇರಿಸಿಕೊಂಡು ಅವರ ಸ್ನೇಹವನ್ನು ಸಂಪಾದಿಸಬೇಕೆಂಬ ಆಸೆಯಿಂದ ಅದರೊಡನೆ ಸಂಭಾಷಣೆಮಾಡಿದರು. ಈ ಸಂಭಾಷಣೆಯನ್ನೇ ಈ ಸೂಕ್ತದಲ್ಲಿ ವರ್ಣಿಸಲಾಗಿದೆ. ಆದ್ದರಿಂದ ಈ ಸೂಕ್ತದ ಒಂದು, ಮೂರು ಮೊದಲಾದ ಅಸಮಸಂಖ್ಯೆಯ ಋಕ್ಕುಗಳಲ್ಲಿ (ಕೊನೆಯ ಋಕ್ಕನ್ನು ಬಿಟ್ಟು) ಪಣಿಗಳ ವಾಕ್ಯಗಳಿವೆ ಆದ್ದರಿಂದ ಆ ಋಕ್ಕುಗಳಿಗೆ ಆ ಪಣಿಗಳೇ ಋಷಿಗಳು, ಸರಮೆಯೇ ದೇವತೆಯು. ಎರಡು, ನಾಲ್ಕು ಮೊದಲಾದ ಸಮಸಂಖ್ಯೆಯ ಋಕ್ಕುಗಳಲ್ಲಿಯೂ ಹನ್ನೊಂದನೆಯ ಋಕ್ಕಿನಲ್ಲಿಯೂ ಒಟ್ಟು ಆರು ಋಕ್ಕುಗಳಲ್ಲಿ ಸರಮೆಯ ವಾಕ್ಯವಿದೆ. ಆದ್ದರಿಂದ ಆ ಋಕ್ಕುಗಳಿಗೆ ಸರಮೆಯು ಋಷಿಯು, ಪಣಿಗಳು ದೇವತೆಗಳು ಅನುಕ್ರಮಣಿಕೆಯಲ್ಲಿ-**ಕಿಮಿಚ್ಛಂತೀ ಪಣಿಭಿರಸುರೈರ್ನಿಗೂಳ್ಹಾ ಗಾ ಅನ್ವೇಷ್ಟುಂ ಸರಮಾಂ ದೇವಶುನೀಮಿಂದ್ರೇಣ ಪ್ರಹಿತಾಮಯುಗ್ಭಿಃ ಪಣಯೋ ಮಿತ್ರೀಯಂತಃ ಪ್ರೋಚುಃ ಸಾ ತಾನ್ಯುಗ್ಮಾಂತ್ಯಾಭಿರನಿಚ್ಛಂತೀ ಪ್ರತ್ಯಾಚಷ್ಟೇ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೦೮

ಮಂಡಲ—೧೦ ‖ ಅನುವಾಕ—೯ ‖ ಸೂಕ್ತ—೧೦೮ ‖

ಅಷ್ಟಕ—೮ ‖ ಅಧ್ಯಾಯ—೬ ‖ ವರ್ಗ—೫. ೬ ‖

ಸೂಕ್ತದಲ್ಲಿರುವ ಋಕ್ಸಂಖ್ಯೇ—೧೧ ‖

**ಋಷಿಃ**—೧, ೩, ೫, ೭, ೯. ಪಣಯೋಽಸುರಾಃ । ೨, ೪, ೬, ೮, ೧೦, ೧೧ ಸರಮಾ ದೇವಶುನೀ ।

**ದೇವತಾ**—೧, ೩, ೫, ೭, ೯. ಸರಮಾ । ೨, ೪, ೬, ೮, ೧೦, ೧೧. ಪಣಯಃ ‖

**ಛಂದಃ**—ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಕಿಮಿಚ್ಛಂತೀ ಸರಮಾ ಪ್ರೇದಮಾನಡ್ ದೂರೇ ಹ್ಯಧ್ವಾ ಜಗುರಿಃ ಪರಾಚೈಃ ।
ಕಾಸ್ಮೇಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ರಸಾಯಾ ಅತರಃ ಪಯಾಂಸಿ ‖ ೧ ‖

‖ ಪದಪಾಠಃ ‖

ಕಿಂ । ಇಚ್ಛಂತೀ । ಸರಮಾ । ಪ್ರ । ಇದಂ । ಆನಟ್ । ದೂರೇ । ಹಿ । ಅಧ್ವಾ । ಜಗುರಿಃ । ಪರಾಚೈಃ ।
ಕಾ । ಅಸ್ಮೇಽಹಿತಿಃ । ಕಾ । ಪರಿಽತಕ್ಮ್ಯಾ । ಆಸೀತ್ । ಕಥಂ । ರಸಾಯಾಃ । ಅತರಃ । ಪಯಾಂಸಿ ‖೧‖

‖ ಸಾಯಣಭಾಷ್ಯಂ ‖

ಅನಯಾಗಚ್ಛಂತೀಂ ಸರಮಾಂ ದೃಷ್ಟ್ವಾ ಪಣಯೋ ವದಂತಿ । ಸರಮಾ ಸರಣಶೀಲೈತನ್ನಾಮಿಕಾ ದೇವಶುನೀ ಕಿಮಿಚ್ಛಂತೀ ಕಿಂ ಪ್ರಾರ್ಥಯಮಾನಾ ಸತೀದಮಸ್ಮದೀಯಂ ಸ್ಥಾನಂ ಪ್ರಾನಟ್ । ಪ್ರಾಪ್ನೋತ್ ‖ ಅಶ್ನೋತೇರ್ವ್ಯಾಪ್ತಿಕರ್ಮಣಃ । ತಸ್ಯ ಲುಙಿ ಮಂತ್ರೇ ಘಸೇತ್ಯಾದಿನಾ

ಚ್ಲೇಲುರ್ಕ್ । ಛಂದಸ್ಯಪಿ ದೃಶ್ಯತ ಇತ್ಯಾಡಾಗಮಃ ॥ ಪರಾಚೈಃ ಪರಾಂಚಿ ಪರಾಙ್ಮುಖಾನ್ಯಾವೃತ್ತಿವ-
ರ್ಜಿತಾನಿ ಯಾನಿ ಗಮನಾನಿ ತೈರ್ಜಗುರಿರುದ್ಗೂರ್ಣಃ । ಮಹತಾ ಪ್ರಯತ್ನೇನಾಪಿ ಗಂತುಂ ನ ಶಕ್ಯತ
ಇತ್ಯರ್ಥಃ ॥ ಗೄ ನಿಗರಣೇ । ಆದೃಗಮಹನೇತ್ಯಾದಿನಾ ಕಿನ್ಪ್ರತ್ಯಯಃ । ಬಹುಲಂ ಛಂದಸಿ । ಪಾ. ೬-೧-
೧೦೩ । ಇತ್ಯುತ್ವಂ ॥ ತಾದೃಶೋಽಯಮಧ್ವಾ ದೂರೇ ಹಿ । ವಿಪ್ರಕೃಷ್ಟಃ ಖಲು । ಯದ್ವಾ । ಪರಾಚೈಃ
ಪರಾಂಚನೈರ್ಜಗುರಿರಿತ್ಯರ್ಥಂ ಗಂತ್ರೀ ಪಾಶ್ಚಾತ್ಯಭಾಗಮನಾಲೋಕಮಾನಾ ಸತೀದಂ ಸ್ಥಾನಂ ಪ್ರಾಪ್ನೋತಿ ।
ದೂರೇಽಯಮಧ್ವಾ ಯದೃಚ್ಛಯಾ ಗಂತುಂ ನ ಶಕ್ಯತೇ । ಅತೋ ವಯಮೇತಾಂ ಪೃಚ್ಛಾಮಃ । ಹೇ
ಸರಮೇ ಕಾ ಕೀದೃಶ್ಯಸ್ಮೇಹಿತಿಃ । ಕೋಽಸ್ಮಾಸ್ವರ್ಥಹಿತಿಃ । ಕೋಽಸ್ಮಾಸು ತ್ವದಪೇಕ್ಷಿತಾರ್ಥೋ ನಿಹಿತಃ।
ಯದ್ವಾ। ಅಸ್ಮಾಸು ಕೋಽರ್ಥೋ ಗತಃ ॥ ದಧಾತೇರ್ಹಿನೋತೇರ್ವಾ ಕ್ತಿನಿ ರೂಪಂ ॥ ಆಗಚ್ಛಂತ್ಯಾಸ್ತವ
ಕಾ ಕೀದೃಶೀ ಪರಿತಕ್ಮ್ಯಾ ರಾತ್ರಿರಾಸೀತ್। ಯದ್ವಾ । ತಕತಿರ್ಗತ್ಯರ್ಥಃ । ಪರಿತಕನಂ ಪರಿತೋ ಗಮನಂ
ಭ್ರಮಣಂ ವಾ ಕೀದೃಶಮಾಸೀತ್ । ಕಥಂ ಚ ರಸಾಯಾಃ ಶಬ್ದಾಯಮಾನಾಯಾ ಅಂತರಿಕ್ಷನದ್ಯಾ
ಯೋಜನಶತವಿಸ್ತೀರ್ಣಾಯಾಃ ಪಯಾಂಸ್ಯುದಕಾನ್ಯತರಃ । ತೀರ್ಣವತ್ಯಸಿ । ಏತದ್ವದ । ಅತ್ರ ಕಿಮಿ-
ಚ್ಛಂತೀ ಸರಮೇದಂ ಪ್ರಾನಡಿತ್ಯಾದಿಕಂ ನಿರುಕ್ತಂ ದ್ರಷ್ಟವ್ಯಂ ॥ ನಿ. ೧೧-೨೫ ॥

॥ ಪ್ರತಿಪದಾರ್ಥ ॥

ಸರಮಾ— ಸರಮೆಯು । ಕಿಂ ಇಚ್ಛಂತೀ— ಏನನ್ನು ಅಪೇಕ್ಷಿಸಿ । ಪ್ರ ಆನಟ್— ಇಲ್ಲಿ ಬಂದಿದ್ದಾಳೆ ?। ಅಧ್ವಾ— ಇಲ್ಲಿಗೆ ಬರುವ ದಾರಿಯು । ದೂರೇ ಹಿ— ಅತಿದೀರ್ಘವಾದುದು । ಪರಾಚೈಃ— ಅನುಸ್ಯೂತವಾಗಿ ನಡೆಯುವವರಿಂದಲೂ । ಜಗುರಿಃ— ದಾಟಲು ಸಾಧ್ಯವಿಲ್ಲ ಆದ್ದರಿಂದ ಎಲೈ ಸರಮೆಯೇ । ಅಸ್ಮೇಹಿತಿಃ— ನಮ್ಮಲ್ಲಿಗೆ ನೀನು ಬಂದಿರುವ ಉದ್ದಿಶ್ಯವು । ಕಾ— ಏನು? । ಪರಿತಕ್ಮ್ಯಾ— ಇಲ್ಲಿಗೆ ಬರುವ ರೀತಿಯು । ಕಾ ಆಸೀತ್— ಯಾವ ಪ್ರಕಾರವಾಗಿದ್ದಿತು । ರಸಾಯಾಃ-- ರಸಾನದಿಯ । ಪಯಾಂಸಿ— ಉದಕಗಳನ್ನು । ಕಥಂ— ಹೇಗೆ । ಅತರಃ— ದಾಟಿದ್ದೀಯೆ ? ।

॥ ಭಾವಾರ್ಥ ॥

ಸರಮೆಯು ಏನನ್ನು ಅಪೇಕ್ಷಿಸಿ ಇಲ್ಲಿ ಬಂದಿದ್ದಾಳೆ ? ಇಲ್ಲಿಗೆ ಬರುವ ದಾರಿಯು ಅತಿದೀರ್ಘವಾದುದು. ಅನುಸ್ಯೂತವಾಗಿ ನಡೆಯುವವರಿಗೂ ಈ ದಾರಿಯನ್ನು ನಡೆದುಬರಲು ಸಾಧ್ಯವಿಲ್ಲ. ಆದ್ದರಿಂದ ಎಲೈ ಸರಮೆಯೇ ನಮ್ಮಲ್ಲಿಗೆ ನೀನು ಬಂದಿರುವ ಉದ್ದಿಶ್ಯವು ಏನು ? ಯಾವ ರೀತಿಯ ಗಮನದಿಂದ ನೀನು ಇಲ್ಲಿಗೆ ಬಂದೆ ? ರಸಾನದಿಯ ಉದಕಗಳನ್ನು ಹೇಗೆ ದಾಟಿಬಂದೆ ?

## English Translation.

(The Panis :) With what intention has Sarama come to this place ? Verily the way is long and difficult to be traveresed by the prersevering. What is the motive of your comming to us ? What sort of waudering was yours ? How have you crossed the waters of the Rasa ?

॥ ವಿಶೇಷವಿಷಯಗಳು ॥

ಯಾಸ್ಕರು ಈ ಋಕ್ಕಿಗೂ ಈ ಋಕ್ಕಿನಲ್ಲಿರುವ ಸರಮಾ ಎಂಬ ಶಬ್ದಕ್ಕೂ ನಿರ್ವಚನವನ್ನು ಹೇಳಿದಾರೆ—

**ಸರಮಾ । ಸರಮಾ ಸರಣಾತ್ ॥ (ನಿ.೧೧-೨೪) ತಸ್ಯೈಷಾ ಭವತಿ । ಕಿಮಿಚ್ಛಂತೀ ಸರಮೇದಂ-ಪ್ರಾನಡ್ದೂರೇ ಹ್ಯಧ್ವಾ ಜಗುರಿರ್ಜಂಗಮ್ಯತೇಃ ಪರಾಂಚನೈರಚಿತಃ ಕಾ ತವಾಸ್ಮಾಸ್ವರ್ಥಹಿತಿ-ರಾಸೀತ್ ಕಿಂ ಪರಿತಕನಂ । ಪರಿತಕ್ಮ್ಯಾ ರಾತ್ರಿಃ ಪರಿತ ಏನಾಂ ತಕ್ಮ । ತಕ್ಮೇತ್ಯುಷ್ಣನಾಮ-ತಕತ ಇತಿ ಸತಃ । ಕಥಂ ರಸಾಯಾ ಅತರಃ ಪಯಾಂಸೀತಿ । ರಸಾ ನದೀ ರಸತೇಃ ಶಬ್ದ-ಕರ್ಮಣಃ । ಕಥಂ ರಸಾನಿ ತಾನ್ಯುದಕಾನೀತಿ ವಾ । ದೇವಶುನೀಂದ್ರೇಣ ಪ್ರಹಿತಾ ಪಣಿ-ಭಿರಸುರೈಃ ಸಮೂದ ಇತ್ಯಾಖ್ಯಾನಂ ॥**

(ನಿ ೧೧-೨೫)

**ಸರಮಾ ಸರಣಾತ್**—ಸೃ-ಸರಿ ಎಂಬ ಧಾತುವಿನಿಂದ ನಿಷ್ಪನ್ನವಾದ ಸರಣ ಎಂಬ ಶಬ್ದವನ್ನನುಸರಿಸಿ **ಸರಮಾ** ಎಂಬ ಶಬ್ದದ ವ್ಯುತ್ಪತ್ತಿಯಾಗಿದೆ. ಸರಿಯುವ ಅಥವಾ ಸಂಚರಿಸುವ ಎಂದು ಅರ್ಥವು ಸಂಚರಿಸುವ ಸ್ವಭಾವವುಳ್ಳ ದೇವಶುನಿ ಎಂದಭಿಪ್ರಾಯವು.

**ಕಿಮಿಚ್ಛಂತೀ ಸರಮೇದಂ ಪ್ರಾನಟ್**—ಸರಮೆಯು ನಮ್ಮಿಂದ ಏನನ್ನು ಬಯಸಿ ಇಲ್ಲಿಗೆ ಬಂದಿರಬಹುದು ಎಂದು ಅಸುರರು ತಮ್ಮಲ್ಲಿಯೇ ಮಾತನಾಡಿಕೊಂಡು ಬಳಿಕ ಸರಮೆಯನ್ನು ನೇರವಾಗಿ ಕೇಳುವರು.

**ದೂರೇ ಹ್ಯಧ್ವಾ ಜಗುರಿರ್ಜಂಗಮ್ಯತೇಃ ಪರಾಂಚನೈರಚಿತಃ**—ನೀನು ನಡೆದುಬಂದಿರುವ ರಸ್ತೆಯು (ದಾರಿಯು) ಬಹುದೂರವಾಗಿರುವುದು. **ಜಗುರಿ** ಶಬ್ದವು **ಗಮ್ಲೃ ಗತೌ**—ಹೋಗು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಜಗುರಿಯೆಂದರೆ, ಹೋಗುವುದು, ಸಂಚರಿಸುವುದು **ಪರ ಅಂಚನೈಃ ಪರಾಙ್ಮುಖೈರ್ಗಮನೈಃ ವಿಪ್ರಕೃಷ್ಟೋ ದೇವನಿವಾಸಾತ್.**। ಪರಾಂಚನ ವೆಂದರೆ ಒಂದುಸ್ಥಳವನ್ನು ಬಿಟ್ಟು ಮತ್ತೊಂದು ಸ್ಥಳಕ್ಕಾಗಿ ಗಮನ, ಒಂದು ಪ್ರದೇಶವನ್ನು ಹಿಂದಕ್ಕೆ ಹಾಕಿ ಮುಂದಿರುವ ಪ್ರದೇಶಕ್ಕೆ ಹೋಗುವುದು ಎಂದರ್ಥವು ಎಂದರೆ ದೇವಶುನಿಯಾದ ಸರಮೆಯು ಇಂದ್ರನ ನಿವಾಸಸ್ಥಾನದಿಂದ ಹೊರಟು ಪಣಿಗಳ ಪಟ್ಟಣಕ್ಕೆ ಬಂದಿರುವುದು ಎಂದಭಿಪ್ರಾಯವು

**ಕಾ ತವಾಸ್ಮಾಸ್ವರ್ಥಹಿತಿರಾಸೀತ್**—ನಮ್ಮಲ್ಲಿ ನಿನಗೆ ಏನು ಕೆಲಸ ? ಯಾವ ಕಾರ್ಯಾರ್ಥವಾಗಿ ನೀನು ನಮ್ಮಲ್ಲಿಗೆ ಬಂದಿರುವೆ ?

**ಪರಿತಕ್ಮ್ಯಾ ರಾತ್ರಿಃ ಪರಿತ ಏನಾಂ ತಕ್ಮ । ತಕ್ಮೇತ್ಯುಷ್ಣನಾಮ ತಕತ ಇತಿ ಸತಃ**—ಹೋಗು ಎಂಬ-ರ್ಥವುಳ್ಳ ತಕತಿಧಾತುವಿನಿಂದ ತಕ್ಮ ಶಬ್ದವು ನಿಷ್ಪನ್ನವಾಗಿದೆ. ತಕ್ಮವೆಂದರೆ ಉಷ್ಣವು, ಶಾಖವು. ರಾತ್ರಿಯ ಎರಡು ಕಡೆಗಳಲ್ಲಿಯೂ ಎಂದರೆ ರಾತ್ರಿಗೆ ಪೂರ್ವದಲ್ಲಿಯೂ, ರಾತ್ರಿಗೆ ಕೊನೆಯಲ್ಲಿಯೂ ಉಷ್ಣವಿರುವುದು. ರಾತ್ರಿಗೆ ಪೂರ್ವ ದಲ್ಲಿ ಎಂದರೆ ಸೂರ್ಯಾಸ್ತಮಯಕ್ಕೆ ಮೊದಲು ಬಿಸಲು (ಉಷ್ಣ)ವಿರುವುದು. ರಾತ್ರಿಯ ಕೊನೆಯಲ್ಲಿ ಎಂದರೆ ರಾತ್ರಿಯು ಮುಗಿದು ಪ್ರಾತಃಕಾಲವಾದಮೇಲೆ ಸೂರ್ಯೋದಯವಾದ ಮೇಲೆ ಬಿಸಿಲು(ಉಷ್ಣ)ಇರುವುದು ಆದ್ದರಿಂದ ಎರಡು ಕೊನೆಗಳಲ್ಲಿಯೂ ಉಷ್ಣವು (ಬಿಸಲು)ಆವರಿಸಲ್ಪಟ್ಟ ಕಾಲಕ್ಕೆ ಎಂದರೆ ರಾತ್ರಿಗೆ **ಪರಿತಕ್ಮ್ಯಾ** ಎಂದು ಹೆಸರು.

**ಕಥಂ ರಸಾಯಾ ಅತರಃ ಪಯಾಂಸೀತಿ ರಸಾ ನದೀ ರಸತೇಃ ಶಬ್ದಕರ್ಮಣಃ । ಕಥಂ ರಸಾನಿ ತಾನ್ಯುದಕಾನೀತಿ ವಾ**—ಎಲೈ ಸರಮೆಯೇ, ನೀನು ರಸಾನದಿಯ ಅಗಾಧವಾದ ಜಲವನ್ನು ಹೇಗೆ ದಾಟಿದೆ ?

ರಸಾ ಎಂಬುದು ಒಂದು ನದಿಯ ಹೆಸರು. ಶಬ್ದಮಾಡು ಎಂಬರ್ಥವುಳ್ಳ ರಸತಿ ಧಾತುವಿನಿಂದ ರಸಾ ಎಂಬ ಶಬ್ದವು ನಿಷ್ಪನ್ನವಾಗಿದೆ. ರಸಾ ಎಂದರೆ ನೀರು ಹರಿಯುವಾಗ ಭೋರ್ಗರೆಯುವಂತೆ ಶಬ್ದಮಾಡುತ್ತಾ ಹರಿಯುವ ನದಿ ಎಂದರ್ಥವು. ಅಥವಾ ರಸವೆಂದರೆ ಉದಕವೆಂದೂ ಹೆಸರು. ಅಗಾಧವಾದ ಜಲರಾಶಿಯಿಂದ ಕೂಡಿದ ನದೀ ಎಂದೂ ಅರ್ಥವು

**ದೇವಶುನೀಂದ್ರೇಣ ಪ್ರಹಿತಾ ಪಣಿಭಿರಸುರೈಃ ಸಮೂದ ಇತ್ಯಾಖ್ಯಾನಂ**— ಇಂದ್ರನಿಂದ ಕಳುಹಲ್ಪಟ್ಟ ಸರಮೆ ಎಂಬ ದೇವಶುನಿಯು ಪಣಿಗಳೆಂಬ ಅಸುರರೊಡನೆ ಸಂಭಾಷಣೆ ಮಾಡಿತೆಂದು ಒಂದು ಆಖ್ಯಾನವಿದೆ. ಅದನ್ನು ಈ ಸೂಕ್ತದಲ್ಲಿ ಹೇಳಲಾಗಿದೆ.

ಈ ಋಕ್ಕಿನಲ್ಲಿ ಪಣಿಯೆಂಬ ಅಸುರರು ಸರಮೆಯನ್ನು ಕಂಡಕೂಡಲೆ ಅದನ್ನು ಈ ರೀತಿ ಪ್ರಶ್ನೆಮಾಡಿದರು— ಎಲೈ ಸರಮೆಯೇ, ನೀನು ಏತಕ್ಕಾಗಿ ಇಲ್ಲಿಗೆ ಬಂದಿರುವೆ ? ನಿನಗೆ ನಮ್ಮಲ್ಲಿ ಏನು ಕೆಲಸ ? ನೀನು ಬಹುದೂರಪ್ರದೇಶದಿಂದ ಇಲ್ಲಿಗೆ ಬಂದಿರುವೆ. ನಮ್ಮಲ್ಲಿ ನಿನಗೆ ಯಾವಕಾರ್ಯವಿರುವುದು ? ಬಹಳ ಆಳವಾದುದೂ ,ಅಗಾಧವಾದ ಜಲದಿಂದ ಕೂಡಿರುವುದೂ ಆದ ಈ ರಸಾನದಿಯನ್ನು ಹೇಗೆ ದಾಟಿದೆ ? ಎಂದು ಪ್ರಶ್ನೆಮಾಡಿದಾರೆ, ಇದಕ್ಕೆ ಸಮರೆಯು ಮುಂದಿನ (೨ ನೇ) ಋಕ್ಕಿನಲ್ಲಿ ಪ್ರತ್ಯುತ್ತರವನ್ನು ಹೇಳಿರುವುದು.

॥ ಸಂಹಿತಾಪಾಠಃ ॥

ಇಂದ್ರಸ್ಯ ದೂತೀರಿಷಿತಾ ಚರಾಮಿ ಮಹ ಇಚ್ಛಂತೀ ಪಣಯೋ ನಿಧೀನ್ವಃ ।
ಅತಿಷ್ಕದೋ ಭಿಯಸಾ ತನ್ನ ಆವತ್ತಥಾ ರಸಾಯಾ ಅತರಂ ಪಯಾಂಸಿ ॥೨॥

॥ ಪದಪಾಠಃ ॥

ಇಂದ್ರಸ್ಯ । ದೂತೀಃ । ಇಷಿತಾ । ಚರಾಮಿ । ಮಹಃ । ಇಚ್ಛಂತೀ । ಪಣಯಃ । ನಿಽಧೀನ್ । ವಃ ।
ಅತಿಽಸ್ಕದಃ । ಭಿಯಸಾ । ತತ್ । ನಃ । ಆವತ್ । ತಥಾ । ರಸಾಯಾಃ । ಅತರಂ । ಪಯಾಂಸಿ ॥ ೨ ॥

॥ಸಾಯಣಭಾಷ್ಯಂ ॥

ಅನಯಾ ತಾನ್ಸರಮಾ ಪ್ರತ್ಯುವಾಚ । ಹೇ ಪಣಯ ಏತನ್ನಾಮಕಾ ಅಸುರಾಃ ಇಂದ್ರಸ್ಯ ದೂತೀಃ ॥ ಸುಪಾಂ ಸುಲುಗಿತಿ ಪ್ರಥಮೈಕವಚನಸ್ಯ ಸುಶ್ಛಾಂದಸಃ ॥ ಅಹಮಿಷಿತಾ ತೇನೈವ ಪ್ರೇಷಿತಾ ಸತೀ ಚರಾಮಿ । ಯುಷ್ಮದೀಯಂ ಸ್ಥಾನಮಾಗಚ್ಛಾಮಿ । ಕಿಮರ್ಥಂ । ವೋ ಯುಷ್ಮದೀಯಾನ್ಯುಷ್ಮದೀಯೇ ಪರ್ವತೇಽಧಿಷ್ಠಾಪಿತಾನ್ಮಹೋ ಮಹತೋ ನಿಧೀನ್ಬೃಹಸ್ಪತೇರ್ಗೋನಿಧೀನಿಚ್ಛಂತೀ ಕಾಮಯಮಾನಾ ಸತೀ ಚರಾಮಿ । ಕಿಂಚಾತಿಷ್ಕದಃ ॥ ಸ್ಕಂದಿರ್ ಗತಿಶೋಷಣಯೋಃ । ಭಾವೇ ಕ್ವಿಪ್ ॥ ಅತಿ-

ಷ್ಯಂದನಾದತಿಕ್ರಮಣಾಜ್ಜಾತೇನ ಭಿಯಸಾ ಭಯೇನ ತನ್ನದೀಜಲಂ ನಃ । ಪೂಜಾಯಾಂ ಬಹುವಚನಂ । ಮಾಮಾವತ್ । ಅರಕ್ಷತ್ । ತಥಾ ತೇನ ಪ್ರಕಾರೇಣ ರಸಾಯಾ ನದ್ಯಾಃ ಪಯಾಂಸ್ಯುದಕಾನ್ಯತರಂ । ತೀರ್ಣವತ್ಯಸ್ಮಿ ॥

॥ಪ್ರತಿಪದಾರ್ಥ॥

**ಪಣಯಃ**—ಎಲೈ ಪಣಿಗಳೇ । **ಇಂದ್ರಸ್ಯ**—ಇಂದ್ರನ । **ದೂತೀ**—ದೂತಿಯಾದ ನಾನು । **ವಃ**—ನಿಮ್ಮಲ್ಲಿರುವ । **ಮಹಃ**—ಮಹತ್ತಾದ । **ನಿಧೀನ್**—ಗೋರೂಪವಾದ ನಿಧಿಗಳನ್ನು । **ಇಚ್ಛಂತೀ** - ಅಪೇಕ್ಷಿಸುತ್ತ । **ಇಷಿತಾ**—ಇಂದ್ರನಿಂದ ಕಳುಹಲ್ಪಟ್ಟು । **ಚರಾಮಿ**—ಸಂಚರಿಸುತ್ತಿದ್ದೇನೆ । **ಅತಿಷ್ಕದಃ** ಅತಿಕ್ರಮ ಪ್ರವೇಶದ । **ಭಿಯಸಾ**—ಭಯದಿಂದ । **ತತ್**—ನದೀಜಲವು । **ನಃ**—ನನ್ನನ್ನು । **ಅವತ್**—ರಕ್ಷಿಸಿತು । **ತಥಾ**—ಅದೇರೀತಿ । **ರಸಾಯಾಃ**—ರಸಾನದಿಯ । **ಪಯಾಂಸಿ**—ಉದಕಗಳನ್ನು । **ಅತರಂ**—ನಾನು ದಾಟಿದ್ದೇನೆ.

॥ ಭಾವಾರ್ಥ ॥

(ಸರಮೆಯ ವಾಕ್ಯ) ಎಲೈ ಪಣಿಗಳೇ, ಇಂದ್ರನ ದೂತಿಯಾದ ನಾನು ನಿಮ್ಮಲ್ಲಿರುವ ಮಹತ್ತಾದ ಗೋರೂಪವಾದ ನಿಧಿಗಳನ್ನು ಅಪೇಕ್ಷಿಸುತ್ತ ಇಂದ್ರನಿಂದ ಇಲ್ಲಿ ಕಳುಹಲ್ಪಟ್ಟು ಸಂಚರಿಸುತ್ತಿದ್ದೇನೆ. ಅತಿಕ್ರಮ ಪ್ರವೇಶದ ಭಯದಿಂದ ನದೀಜಲವು ನನ್ನನ್ನು ರಕ್ಷಿಸಿತು. ಅದೇ ರೀತಿ ರಸಾನದಿಯ ಉದಕಗಳನ್ನು ನಾನು ದಾಟಿದೇನೆ.

## English Translation.

(Sarama :) I come the appointed messenger of Indra, desiring, Panis your great hidden treasures; through fear of being crossed the (water) helped us, thus I passed over the waters of the Rasa.

॥ ಸಂಹಿತಾಪಾಠಃ

ಕೀದೃಙ್ಙಿಂದ್ರಃ ಸರಮೇ ಕಾ ದೃಶೀಕಾ ಯಸ್ಯೇದಂ ದೂತೀರಸರಃ ಪರಾಕಾತ್ ।
ಆ ಚ ಗಚ್ಛಾನ್ಮಿತ್ರಮೇನಾ ದಧಾಮಾಥಾ ಗವಾಂ ಗೋಪತಿರ್ನೋ ಭವಾತಿ॥

॥ ಪದಪಾಠಃ ॥

ಕೀದೃಙ್ । ಇಂದ್ರಃ । ಸರಮೇ । ಕಾ । ದೃಶೀಕಾ । ಯಸ್ಯ । ಇದಂ । ದೂತೀಃ । ಅಸರಃ । ಪರಾಕಾತ್ ।
ಆ । ಚ । ಗಚ್ಛಾತ್ । ಮಿತ್ರಂ । ಏನ । ದಧಾಮ । ಅಥ । ಗವಾಂ । ಗೋऽಪತಿಃ । ನಃ । ಭವಾತಿ ॥ ೩ ॥

। ಸಾಯಣಭಾಷ್ಯಂ ॥

**ತೇಷಾಂ ವಾಕ್ಯಂ । ಹೇ ಸರಮೇ ತವ ಸ್ವಾಮೀಂದ್ರಃ ಕೀದೃಕ್ । ಕಿಯತ್ಪರಾಕ್ರಮವಾನ್ । ಕಾ ದೃಶೀಕಾ । ತಸ್ಯ ಕೀದೃಶೀ ದೃಷ್ಟಿಃ । ದೃಷ್ಟಿರೂಪಾ ಸೇನಾ ಕಿಯತೀ । ಯಸ್ಯ ದೂತೀರ್ದೂತೀ ತ್ವಮಿದಮಸ್ಮದೀಯಂ ಸ್ಥಾನಂ ಪರಾಕಾದತಿದೂರಾದಸರಃ ಆಗಮಃ । ಇತಿ ತಾಮುಕ್ತ್ವೇದಾನೀಂ ತೇ ಪರಸ್ಪರಮಾಹುಃ । ಏಷಾ ಸರಮಾ ಗಚ್ಛಾಚ್ಚ । ಆಗಚ್ಛತು ಚ ॥ ಗಮೇರ್ಲೇಟ್ಯಾಡಾಗಮಃ ॥ ಸ್ವಾಮೀ ಭವಾತಿ । ಭವತು । ನ ಹ್ಯೇಕಸ್ಯಾ ಗೋಃ ಕಿಂತು ಬಹೂನಾಂ ಗವಾಂ ಸ್ವಾಮೀ ಭವತು । ವೃತ್ತ್ಯವೃತ್ತಿಭ್ಯಾಂ ಸ್ವಾಮಿತ್ವಂ ಬಾಹುಲ್ಯಂ ಚ ವಿವಕ್ಷ್ಯತೇ ॥**

॥ ಪ್ರತಿಪದಾರ್ಥ ॥

**ಸರಮೇ**—ಎಲೈ ಸರಮೆಯೇ । **ಯಸ್ಯ**—ಯಾವ ಇಂದ್ರನ । **ದೂತೀಃ**—ದೂತಿಯಾದ ನೀನು । **ಇದಂ**—ನಮ್ಮ ಈ ಸ್ಥಾನಕ್ಕೆ । **ಪರಾಕಾತ್**—ಅತಿದೂರಪ್ರದೇಶದಿಂದ । **ಅಸರಃ**—ಬಂದಿದ್ದಿಯೋ ಅಂತಹ । **ಇಂದ್ರಃ**—ಇಂದ್ರನು । **ಕೀದೃಕ್**—ಎಂತಹವನು ? । **ಕಾ ದೃಶೀಕಾ**—ಯಾವ ರೂಪವುಳ್ಳವನು ? । **ಆ ಚ ಗಚ್ಛಾತ್**—ಅವಳು ನಮ್ಮ ಆದರಕ್ಕೆ ಪಾತ್ರಳಾಗಿ ಇಲ್ಲಿಗೆ ಬರಲಿ । **ಏನಾ**—ಇವಳನ್ನು । **ಮಿತ್ರಂ**—ನನ್ನ ಆಪ್ತಳನ್ನಾಗಿ । **ದಧಾಮ**—ಹೊಂದೋಣ । **ನಃ**—ನಮ್ಮ । **ಗವಾಂ**—ಗೋವುಗಳಿಗೆ । **ಗೋಪತಿಃ**—ಒಡೆಯಳಾಗಿ । **ಭವಾತಿ**—ಆಗಿರಲಿ.

॥ ಭಾವಾರ್ಥ ॥

(ಪಣಿಗಳು)—ಎಲೈ ಸರಮೆಯೇ, ಯಾವ ಇಂದ್ರನ ದೂತಿಯಾದ ನೀನು ನಮ್ಮ ಈ ಸ್ಥಾನಕ್ಕೆ ಅತಿದೂರ ಪ್ರದೇಶದಿಂದ ಬಂದಿದ್ದೀಯೋ ಅಂತಹ ಇಂದ್ರನು ಎಂಥವನು? ಯಾವ ರೂಪವುಳ್ಳವನು ?(ತಮ್ಮಲ್ಲಿ) ಈ ಸರಮೆಯು ಆದರಕ್ಕೆ ಪಾತ್ರಳಾಗಿ ಇಲ್ಲಿಗೆ ಬರಲಿ ಇವಳನ್ನು ನಮ್ಮ ಆಪ್ತಳನ್ನಾಗಿ ಹೊಂದೋಣ. ನಮ್ಮ ಗೋವುಗಳಿಗೆ ನಮ್ಮ ಒಡೆಯಳಾಗಿರಲಿ.

English Translation

(The Panis:) What is Indra like, O Sarama ? What is the appearance of him as whose messenger you have come to this place from afar? (They then say to one another.) Let her approach : let us make friends with her and let her be the lord of our cattle.

॥ ಸಂಹಿತಾಪಾಠಃ ॥

**ನಾಹಂ ತಂ ವೇದ ದಭ್ಯಂ ದಭತ್ಸ ಯಸ್ಯೇದಂ ದೂತೀರಸರಂ ಪರಾಕಾತ್ ।**
**ನ ತಂ ಗೂಹಂತಿ ಸ್ರವತೋ ಗಭೀರಾ ಹತಾ ಇಂದ್ರೇಣ ಪಣಯಃ ಶಯಧ್ವೇ॥**

॥ ಪದಪಾಠಃ ॥

ನ । ಅಹಂ । ತಂ । ವೇದ । ದಭ್ಯಂ । ದಭತ್ । ಸಃ । ಯಸ್ಯ । ಇದಂ । ದೂತೀಃ । ಅಸರಂ । ಪರಾಕಾತ್।

ನ । ತಂ । ಗೂಹಂತಿ । ಸ್ರವತಃ । ಗಭೀರಾಃ । ಹತಾಃ । ಇಂದ್ರೇಣ । ಪಣಯಃ । ಶಯಧ್ವೇ ॥ ೪ ॥

॥ ಸಾಯಣಭಾಷ್ಯಂ ॥

ಸರಮಾ ವದತಿ । ಹೇ ಪಣಯಃ ತಮಿಂದ್ರಂ ದಭ್ಯಂ ಹಂತವ್ಯಮಿತಿ ನ ವೇದ । ನ ಜಾನಾಮಿ ॥ ದಭೇರಚೋ ಯತ್ ॥ ಕಥಂ । ಸ ಇಂದ್ರೋ ದಭತ್ । ಸರ್ವಾಣ್ಯಾನಾನ್ದಭತಿ । ಹಿನಸ್ತ್ಯೇವ ॥ ದಭೇರ್ಲೇಟಿ ರೂಪಂ । ವಾಕ್ಯಭೇದಾದನಿಘಾತಃ ॥ ಯಸ್ಯ ದೂತೀರ್ದೂತ್ಯಹಮಿದಂ ಯುಷ್ಮದೀಯಂ ಸ್ಥಾನಂ ಪರಾಕಾದತಿದೂರಾದ್ದೇಶಾದಸರಂ ಪ್ರಾಪ್ತಾಭೂವಂ । ಇಂದ್ರೋ ಹಿಂಸಿತವ್ಯೋ ನ ಭವತೀತ್ಯತ್ರ ಯುಕ್ತಿಮಾಹ । ಸ್ರವತಃ । ಸ್ರವಣಂ ಸ್ರವಃ । ತಮಾಚರಂತಿ ॥ ಆಚಾರಾರ್ಥೇ ಕ್ವಿಪ್ । ತುಗಾಗಮಃ । ಜಸಿ ರೂಪಂ ॥ ಸ್ರವಣಶೀಲಾ ಗಭೀರಾ ಗಂಭೀರಾ ನದ್ಯಸ್ತಮಿಂದ್ರಂ ನ ಗೂಹಂತಿ । ನ ಸಂವೃಣ್ವಂತಿ । ನಾಚ್ಛಾದಯಂತಿ । ಕಿಂತ್ವಾವಿಷ್ಕುರ್ವಂತಿ । ವಯಂ ಯಸ್ಯ ಮಹಿಮ್ನಾ ಸಮುದ್ರಂ ಪ್ರತಿಸರಾಮಃ । ತಸ್ಮಾದಹಿಂಸ್ಯ ಇತ್ಯೇನಂ ಪ್ರಕಟೀಕುರ್ವಂತಿ ॥ ಗುಹೂ ಸಂವರಣೇ ಭೌವಾದಿಕಃ ॥ ತಸ್ಮಾದ್ಧೇ ಪಣಯಃ ಯೂಯಮಿಂದ್ರೇಣ ತಾದೃಶಪರಾಕ್ರಮೇಣ ಹತಾಃ ಸಂತಃ ಶಯಧ್ವೇ ॥ ಶೀಙ್ ಸ್ವಪ್ನೇ । ಬಹುಲಂ ಛಂದಸೀತಿ ಶಪೋ ಲುಗಭಾವಃ ॥

॥ ಪ್ರತಿಪದಾರ್ಥ ॥

(ಎಲೈ ಪಣಿಗಳೇ) **ತಂ**—ಇಂದ್ರನನ್ನು । **ದಭ್ಯಂ**—ನಿಮ್ಮಿಂದ ಹತನಾಗುವನೆಂದು । **ನ ವೇದ**—ತಿಳಿಯುವುದಿಲ್ಲ । **ಯಸ್ಯ**—ಯಾವ ಇಂದ್ರನಿಗೆ । **ದೂತೀ**—ದೂತಿಯಾದ ನಾನು । **ಇದಂ**—ನಿಮ್ಮ ಈ ಪ್ರದೇಶಕ್ಕೆ । **ಪರಾಕಾತ್**—ಅತ್ಯಂತ ದೂರಪ್ರದೇಶದಿಂದ । **ಅಸರಂ**—ದಾಟಿ ಬಂದಿದ್ದೇನೆಯೋ । **ಸಃ**—ಆ ಇಂದ್ರನು । **ದಭತ್**—ಎಲ್ಲರನ್ನೂ ನಾಶಮಾಡುತ್ತಾನೆ । **ಸ್ರವತಃ**—ಪ್ರವಹಿಸುವ । **ಗಭೀರಾಃ**—ಆಳವಾದ ನದಿಗಳು । **ತಂ**—ಇಂದ್ರನನ್ನು । **ನ ಗೂಹಂತಿ**—ಮರೆಸಲಾರವು । **ಪಣಯಃ**—ಎಲೈ ಪಣಿಗಳೇ **ಇಂದ್ರೇಣ**—ಇಂದ್ರನಿಂದ । **ಹತಾಃ**—ಕೊಲ್ಲಲ್ಪಟ್ಟವರಾಗಿ । **ಶಯಧ್ವೇ**—ಮಲಗುತ್ತೀರಿ.

॥ ಭಾವಾರ್ಥ ॥

(ಸರಮೆ)—ಎಲೈ ಪಣಿಗಳೇ, ನೀವು ಇಂದ್ರನನ್ನು ಕೊಲ್ಲುವಿರೆಂಬ ಭಯವು ನನಗೆ ಖಂಡಿತ ಇಲ್ಲ. ಯಾವ ಇಂದ್ರನಿಗೆ ದೂತಿಯಾದ ನಾನು ಅತ್ಯಂತ ದೂರಪ್ರದೇಶದಿಂದ ಇಲ್ಲಿ ಬಂದಿದ್ದೇನೆಯೋ ಆ ಇಂದ್ರನು ಎಲ್ಲರನ್ನೂ ನಾಶ ಮಾಡುತ್ತಾನೆ. ಪ್ರವಹಿಸುವ ಆಳವಾದ ನದಿಗಳೂ ಇಂದ್ರನನ್ನು ಮರೆಸಲಾರವು. (ತಡೆಯಲಾರವು) ಎಲೈ ಪಣಿಗಳೇ, ನೀವು ಇಂದ್ರನಿಂದ ಕೊಲ್ಲಲ್ಪಟ್ಟು (ಯುದ್ಧಭೂಮಿಯಲ್ಲಿ) ಮಲಗುತ್ತೀರಿ.

## English Translation.

(Sarama :) I do not believe that he can be subdued; he as whose messenger I have come to this place from afar subdues (his enemies). The deep rivers do not conceal him; you, Panis, slain by Indra, will sleep (in death).

|| ಸಂಹಿತಾಪಾಠಃ ||

ಇಮಾ ಗಾವಃ ಸರಮೇ ಯಾ ಐಚ್ಛಃ ಪರಿ ದಿವೋ ಅಂತಾನ್ತ್ಸುಭಗೇ ಪತಂತೀ ।
ಕಸ್ತ ಏನಾ ಅವ ಸೃಜಾದಯುಧ್ವ್ಯುತಾಸ್ಮಾಕಮಾಯುಧಾ ಸಂತಿ ತಿಗ್ಮಾ ||೫||

|| ಪದಪಾಠಃ ||

ಇಮಾಃ । ಗಾವಃ । ಸರಮೇ । ಯಾಃ । ಐಚ್ಛಃ । ಪರಿ । ದಿವಃ । ಅಂತಾನ್ । ಸುऽಭಗೇ । ಪತಂತೀ ।
ಕಃ । ತೇ । ಏನಾಃ । ಅವ । ಸೃಜಾತ್ । ಅಯುಧ್ವೀ । ಉತ । ಅಸ್ಮಾಕಂ । ಆಯುಧಾ । ಸಂತಿ । ತಿಗ್ಮಾ ||

|| ಸಾಯಣಭಾಷ್ಯಂ ||

ಕ್ರುದ್ಧಾಃ ಪಣಯಃ ಪ್ರತ್ಯೂಚುಃ । ಹೇ ಸುಭಗೇ ಶೋಭನಸೌಭಾಗ್ಯವತಿ ಹೇ ಸರಮೇ ದಿವೋ ದ್ಯುಲೋಕಸ್ಯಾಂತಾನ್ಪರ್ಯಂತಾನ್ಪರಿ ಪತಂತೀ ಕುತ್ರ ಗಾವಸ್ತಿಷ್ಠಂತೀತಿ ಪರಿತೋ ಗಚ್ಛಂತೀ ತ್ವಮಿಮಾಃ ಪರಿದೃಶ್ಯಮಾನಾ ಯಾ ಗಾವಃ || ಸುಬ್ವ್ಯತ್ಯಯಃ || ಗಾ ಐಚ್ಛಃ ಕಾಮಯಸೇ ತಾ ಏನಾ ಗಾಸ್ತೇ ತ್ವದೀಯಃ ಕೋऽಯುಧ್ವ್ಯಯುದ್ಧ್ವೈವ ಸೃಜಾತ್ । ಅಸ್ಮಾತ್ಪರ್ವತಾದವಸೃಜೇತ್ । ವಿಸರ್ಗಮಯೇತ್ || ಸೃಜೇರ್ಲೇಟಿ ರೂಪಂ । ಅಯುಧ್ವೀ ಯುಧೇಃ ಕ್ತ್ವಾಪ್ರತ್ಯಯೇ ಸ್ನಾತ್ವ್ಯಾದಯಶ್ಚೇತಿ ನಿಪಾತಿತಃ । ನಞ್ಸಮಾಸತ್ವಾಲ್ಲ್ಯಬಾದೇಶಾಭಾವಃ । ನಞಃ ಪ್ರಕೃತಿಸ್ವರತ್ವಂ || ಉತಾಪಿ ಚಾಸ್ಮಾಕಂ ತಿಗ್ಮಾ ತೀಕ್ಷ್ಣಾನ್ಯಾಯುಧಾಯುಧಾನಿ ಸಂತಿ । ತಸ್ಮಾದಸ್ಮಾಭಿರ್ಯುದ್ಧಮಕೃತ್ವಾ ಕೋ ನಾಮ ಗಾ ಆಹರತಿ ||

|| ಪ್ರತಿಪದಾರ್ಥ ||

**ಸುಭಗೇ**—ಸೌಭಾಗ್ಯವತಿಯಾದ । **ಸರಮೇ**—ಎಲೈ ಸರಮೆಯೇ । **ದಿವಃ**—ದ್ಯುಲೋಕದ । **ಅಂತಾನ್ ಪರಿ**—ತುತ್ತತುದಿಯ ಪ್ರದೇಶಕ್ಕೂ । **ಪತಂತೀ**—ಬಂದಿರುವ ನೀನು । **ಯಾಃ ಇಮಾಃ ಗಾವಃ**—ಯಾವ ಈ ಗೋವುಗಳನ್ನು । **ಐಚ್ಛಃ**—ಅಪೇಕ್ಷಿಸುವೆಯೋ । **ಏನಾಃ**—ಅಂತಹ ಈ ಗೋವುಗಳನ್ನು । **ತೇ**—ನಿನಗೆ । **ಕಃ**—ಯಾರು ತಾನೇ । **ಅಯುಧ್ವೀ**—ಯುದ್ಧವಿಲ್ಲದೇ । **ಅವ ಸೃಜಾತ್**—ಬಿಟ್ಟುಕೊಡುವರು ? । **ಅಸ್ಮಾಕಂ**—ನಮ್ಮ । **ಆಯುಧಾ**—ಆಯುಧಗಳು । **ತಿಗ್ಮಾ**—ಹರಿತವಾಗಿ । **ಸಂತಿ**—ಇವೆ.

॥ ಭಾವಾರ್ಥ ॥

(ಪಣಿಗಳು)—ಸೌಭಾಗ್ಯವತಿಯಾದ ಎಲೈ ಸರಮೆಯೇ, ದ್ಯುಲೋಕದ ತುತ್ತತುದಿಯ ಪ್ರದೇಶಕ್ಕೂ ಬಂದಿರುವ ನೀನು ಯಾವ ಈ ಗೋವುಗಳನ್ನು ಅಪೇಕ್ಷಿಸುವೆಯೋ ಅಂತಹ ಈ ಗೋವುಗಳನ್ನು ನಿನಗೆ ಯಾರು ತಾನೇ ಯುದ್ಧ ಮಾಡದೆ ಸುಮ್ಮನೆ ಬಿಟ್ಟುಕೊಡುತ್ತಾರೆ? ನಮ್ಮ ಆಯುಧಗಳು ಹರಿತವಾಗಿವೆ.

## English Translation

(The Panis:) These are the cows which you, auspicious Sarama, coming to the extremities of the sky, demand. Who will give them up to you without a combat? and our weapons are sharp.

॥ ಸಂಹಿತಾಪಾಠಃ ॥

ಅಸೇನ್ಯಾ ವಃ ಪಣಯೋ ವಚಾಂಸ್ಯನಿಷವ್ಯಾಸ್ತನ್ವಃ ಸಂತು ಪಾಪೀಃ ।
ಅಧೃಷ್ಟೋ ವ ಏತವಾ ಅಸ್ತು ಪಂಥಾ ಬೃಹಸ್ಪತಿರ್ವ ಉಭಯಾ ನ ಮೃಳಾತ್ ॥ ೬ ॥

॥ ಪದಪಾಠಃ ॥

ಅಸೇನ್ಯಾ । ವಃ । ಪಣಯಃ । ವಚಾಂಸಿ । ಅನಿಷವ್ಯಾಃ । ತನ್ವಃ । ಸಂತು । ಪಾಪೀಃ ।
ಅಧೃಷ್ಟಃ । ವಃ । ಏತವೈ । ಅಸ್ತು । ಪಂಥಾಃ । ಬೃಹಸ್ಪತಿಃ । ವಃ । ಉಭಯಾ । ನ । ಮೃಳಾತ್ ॥ ೬ ॥

॥ ಸಾಯಣಭಾಷ್ಯಂ ॥

ಸಾ ತಾನ್ನಿರಾಹ । ಹೇ ಪಣಯಃ ವೋ ಯುಷ್ಮಾಕಂ ವಚಾಂಸಿ ಪೂರ್ವೋಕ್ತಾನಿ ವಚನಾನ್ಯ-ಸೇನ್ಯಾಸೇನ್ಯಾನಿ । ಸೇನಾರ್ಹಾಣಿ ನ ಭವಂತಿ ॥ ಸೇನಾಶಬ್ದಾತ್ತದರ್ಹತೀತ್ಯರ್ಥೇ ಛಂದಸಿ ಚೇತಿ ಯತ್ಪ್ರತ್ಯಯಃ । ನಞಾ ಸಮಾಸಃ । ಯಯತೋಶ್ಚಾತದರ್ಥೇ । ಪಾ. ೬-೨-೧೫೬ । ಇತ್ಯುತ್ತರಪದಾಂ-ತೋದಾತ್ತತ್ವಂ ॥ ತಥಾ ತನ್ವೋ ಯುಷ್ಮದೀಯಾನಿ ಶರೀರಾಣ್ಯನಿಷವ್ಯಾ ಇಷ್ವರ್ಹಾಣಿ ನ ಸಂತು ಪರಾಕ್ರಮರಾಹಿತ್ಯೇನ ॥ ಪೂರ್ವವತ್ಪ್ರತ್ಯಯಃ । ಓರ್ಗುಣಃ । ಪಾ. ೬-೪-೧೪೬ । ಇತಿ ಗುಣಃ । ಸ್ವರಶ್ಚ ತಾದೃಕ್ ॥ ಯತಃ ಪಾಪೀಃ ಪಾಪಯುಕ್ತಾನಿ ಖಲು ॥ ಛಂದಸೀವನಿಪಾವಿತೀಪ್ರತ್ಯಯಃ । ಜಸಃ ಶಃ ॥ ಕಿಂಚ ವೋ ಯುಷ್ಮದೀಯಃ ಪಂಥಾ ಮಾರ್ಗ ಏತವೈ ಗಂತುಮಧೃಷ್ಟೋಽಸಮರ್ಥೋಽಸ್ತು ॥ ಇಣ್

ಗತಾವಿತ್ಯಸ್ಯ ತುಮರ್ಥೇ ತವೈಪ್ರತ್ಯಯಃ। ತವೈ ಚಾಂತಶ್ಚ ಯುಗಪತ್। ಪಾ. ೬-೨-೫೧। ಇತಿ ಧಾತೋಃ ಪ್ರತ್ಯಯಸ್ಯ ಚ ಯುಗಪದುದಾತ್ತತ್ವಂ। ತತ್ರ ಹೇತುಮಾಹ। ವೋ ಯುಷ್ಮದೀಯಾನು-ಭಯೋಭಯವಿಧಾನ್ಪೂರ್ವೋಕ್ತಾಂಸ್ತನ್ವೋ ದೇಹಾನ್ಬೃಹಸ್ಪತಿರಿಂದ್ರಪ್ರೇರಿತೋ ನ ಮೃಳಾತ್। ನ ಸುಖಯತು। ಕಿಂತು ಬಾಧೇತ॥ ಮೃಡ ಸುಖನೇ। ಲೇಟ್ಯಡಾಗಮಃ॥

॥ ಪ್ರತಿಪದಾರ್ಥ ॥

**ಪಣಯಃ**- ಎಲೈ ಪಣಿಗಳೇ। **ವಃ**-ನಿಮ್ಮ। **ವಚಾಂಸಿ**-ವಾಕ್ಕುಗಳು। **ಅಸೇನ್ಯಾ**-ಸೇನೆಗೆ(ಸೈನಿಕರಿಗೆ) ಅರ್ಹವಾಗಿಲ್ಲ। **ತನ್ವಃ**—ನಿಮ್ಮ ಶರೀರಗಳು। **ಅನಿಷವ್ಯಾಃ**—ಬಾಣಗಳಿಗೆ ಯೋಗ್ಯವಲ್ಲದವಾಗಿ। **ಸಂತು**—ಆಗಿರಲಿ (ಆಗಿವೆ)। **ಪಾಪೀಃ**—ನಿಮ್ಮ ದೇಹಗಳು ಪಾಪಪೂರಿತವಾಗಿವೆ। **ವಃ**—ನಿಮ್ಮ। **ಪಂಥಾಃ**—ಮಾರ್ಗವು। **ಏತವೈ**—ಸಂಚರಿಸಲು। **ಅಧೃಷ್ಟಃ**—ಅಸಮರ್ಥವಾಗಿ। **ಅಸ್ತು**—ಆಗಿರಲಿ (ಆಗಿವೆ)। **ವಃ**—ನಿಮ್ಮ। **ಉಭಯಾ**—ವಾಕ್ಕನ್ನಾಗಲಿ ಅಥವಾ ದೇಹವನ್ನಾಗಲಿ। **ಬೃಹಸ್ಪತಿಃ**—ಬೃಹಸ್ಪತಿಯು। **ನ ಮೃಳಾತ್**—ಸುಖಪಡಿಸದಿರಲಿ. (ಲಕ್ಷ್ಯಮಾಡುವುದಿಲ್ಲ)

॥ ಭಾವಾರ್ಥ ॥

(ಸರಮೆ)—ಎಲೈ ಪಣಿಗಳೇ, ನಿಮ್ಮ ವಾಕ್ಕುಗಳು ಸೈನಿಕರು ಆಡುವ ಮಾತಲ್ಲ. ನಿಮ್ಮ ಶರೀರಗಳು ಬಾಣಗಳಿಗೆ ಅಭೇದ್ಯವಾಗಿಲ್ಲ. ನಿಮ್ಮ ದೇಹಗಳು ಪಾಪಪೂರಿತವಾಗಿವೆ. ನೀವು ಅನುಸರಿಸುವ ರೀತಿಯು ಉಪಯೋಗವಿಲ್ಲ. ನಿಮ್ಮ ವಾಕ್ಕನ್ನಾಗಲಿ ಅಥವಾ ದೇಹವನ್ನಾಗಲಿ ಬೃಹಸ್ಪತಿಯು ಲಕ್ಷ್ಯಮಾಡುವುದಿಲ್ಲ.

**English Translation.**

(Sarama :) Your words, Panis, are not in the place of armies; your sinful bodies will not be equal to arrows. Let your path be difficult to follow, let Brihaspathi show no favour to either (your words or your persons).

॥ ಸಂಹಿತಾಪಾಠಃ ॥

ಅಯಂ ನಿಧಿಃ ಸರಮೇ ಅದ್ರಿಬುಧ್ನೋ ಗೋಭಿರಶ್ವೇಭಿರ್ವಸುಭಿರ್ನ್ಯೃಷ್ಟಃ।
ರಕ್ಷಂತಿ ತಂ ಪಣಯೋ ಯೇ ಸುಗೋಪಾ ರೇಕು ಪದಮಲಕಮಾ ಜಗಂಥ ॥ ೭ ॥

॥ ಪದಪಾಠಃ ॥

ಅಯಂ। ನಿऽಧಿಃ। ಸರಮೇ। ಅದ್ರಿऽಬುಧ್ನಃ। ಗೋಭಿಃ। ಅಶ್ವೇಭಿಃ। ವಸುऽಭಿಃ। ನಿऽಋಷ್ಟಃ।
ರಕ್ಷಂತಿ। ತಂ। ಪಣಯಃ। ಯೇ। ಸುऽಗೋಪಾಃ। ರೇಕು। ಪದಂ। ಅಲಕಂ। ಆ। ಜಗಂಥ ॥ ೭ ॥

॥ ಸಾಯಣಭಾಷ್ಯಂ ॥

ತೇ ಪುನರಾಹುಃ । ಹೇ ಸರಮೇ ಅಯಂ ನಿಧಿರಸ್ಮದೀಯಃ ಕೋಶೋಽದ್ರಿಬುಧ್ನಃ ॥ ಬಂಧ ಬಂಧನೇ । ಬಂಧೇರ್ಬ್ರಧಿಬುಧೀ ಚ । ಉ. ೩-೫ । ಇತಿ ನಪ್ರತ್ಯಯೋ ಬುಧ ಇತ್ಯಾದೇಶಃ ॥ ಅದ್ರಿರ್ಬಂಧಕೋ ಯಸ್ಯ ತಾದೃಶಃ । ತಥಾಹೃತೈರ್ಗೋಭಿರಶ್ವೇಭಿರಶ್ವೈಶ್ಚ ವಸುಭಿರಾತ್ಮೀಯೈರ್ಧನೈಶ್ಚ ನ್ಯೃಷ್ಟೋ ನಿತರಾಂ ಪ್ರಾಪ್ತೋ ಭವತಿ ॥ ಋಷೀ ಗತೌ । ಕ್ತಪ್ರತ್ಯಯೇ ಶ್ವೀದಿತೋ ನಿಷ್ಠಾಯಾಮಿತೀಟ್ಪ್ರತಿಷೇಧಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ಸುಗೋಪಾಃ ॥ ಗುಪೂ ರಕ್ಷಣೇ । ಆಯಪ್ರತ್ಯಯಾಂತಾತ್ಕ್ವಿಪ್ಯಾತೋಲೋಪಯಲೋಪೌ ॥ ಸುಷ್ಠು ಗೋಪಾಯಿತಾರೋ ಯೇ ಪಣಯಸ್ತೇಽಸುರಾಸ್ತಂ ನಿಧಿಂ ರಕ್ಷಂತಿ । ಪಾಲಯಂತಿ । ರೇಕು ॥ ರೇಕೃ ಶಂಕಾಯಾಂ । ಔಣಾದಿಕ ಉಪ್ರತ್ಯಯಃ ॥ ಶಂಕಿತಂ ಗೋಭಿಃ ಶಬ್ದಾಯಮಾನಂ ಪದಮಸ್ಮಾಭಿಃ ಪಾಲಿತಂ ಸ್ಥಾನಮಲಕಂ ವ್ಯರ್ಥಮೇವಾ ಜಗಂಥ । ಆಗತವತ್ಯಸಿ ॥ ಗಮೇರ್ಲಿಟಿ ರೂಪಂ ॥

॥ ಪ್ರತಿಪದಾರ್ಥ ॥

**ಸರಮೇ**—ಎಲೈ ಸರಮೆಯೇ । **ಅದ್ರಿಬುಧ್ನಃ**—ಪರ್ವತದ ಗುಪ್ತಪ್ರದೇಶದಲ್ಲಿರುವ । **ಅಯಂ ನಿಧಿಃ**—ಈ ನಿಧಿಯು । **ಗೋಭಿಃ**—ಗೋವುಗಳಿಂದಲೂ । **ಅಶ್ವೇಭಿಃ**—ಅಶ್ವಗಳಿಂದಲೂ । **ವಸುಭಿಃ**—ಇತರ ಸಂಪತ್ತುಗಳಿಂದಲೂ । **ನ್ಯೃಷ್ಟಃ**—ತುಂಬಿಕೊಂಡಿದೆ । **ಯೇ ಪಣಯಃ**—ಯಾವ ಪಣಿಗಳು । **ತಂ**—ಆ ನಿಧಿಯನ್ನು **ರಕ್ಷಂತಿ**—ರಕ್ಷಿಸುವರೋ ಅವರು । **ಸು ಗೋಪಾಃ**—ಉತ್ತಮವಾದ ರಕ್ಷಕರಾಗಿದ್ದಾರೆ । **ರೇಕು**—ಗುಪ್ತವಾದ (ಶಂಕಾಸ್ಪದವಾದ) । **ಪದಂ**—ನಮ್ಮ ಸ್ಥಾನಕ್ಕೆ । **ಅಲಕಂ**—ವ್ಯರ್ಥವಾಗಿ । **ಆ ಜಗಂಥ**—ಬಂದಿದ್ದೀಯೆ.

॥ ಭಾವಾರ್ಥ ॥

(ಪಣಿಗಳು)—ಎಲೈ ಸರಮೆಯೇ, ಪರ್ವತದ ಗುಪ್ತಪ್ರದೇಶದಲ್ಲಿರುವ ಈ ನಿಧಿಯು ಗೋವುಗಳಿಂದಲೂ। ಅಶ್ವಗಳಿಂದಲೂ ಇತರ ಸಂಪತ್ತುಗಳಿಂದಲೂ ತುಂಬಿದೆ ಯಾವ ಪಣಿಗಳು ಆ ನಿಧಿಯನ್ನು ರಕ್ಷಿಸುವರೋ ಅವರು ಅದರ ಉತ್ತಮವಾದ ರಕ್ಷಕರಾಗಿದ್ದಾರೆ ಶಂಕಾಸ್ಪದವಾದ ನಮ್ಮ ಸ್ಥಾನಕ್ಕೆ ನೀನು ಬಂದಿರುವುದು **ವ್ಯರ್ಥ.**

English Translation.

(The Panis :) This treasure, Sarama, secured in the mountain is composed of cows horses and riches : the Panis protect it who are good watchers; you have come this lonely spot in vain.

॥ ಸಂಹಿತಾಪಾಠಃ ॥

ಏಹ ಗಮನ್ನೃಷಯಃ ಸೋಮಶಿತಾ ಅಯಾಸ್ಯೋ ಅಂಗಿರಸೋ ನವಗ್ವಾಃ ।
ತ ಏತಮೂರ್ವಂ ವಿ ಭಜಂತ ಗೋನಾಮಥೈತದ್ವಚಃ ಪಣಯೋ ವಮನ್ನಿತ್ ॥ ೮ ॥

॥ ಪದಪಾಠಃ ॥

ಆ । ಇಹ । ಗಮನ್ । ಋಷಯಃ । ಸೋಮsಶಿತಾಃ । ಅಯಾಸ್ಯಃ । ಅಂಗಿರಸಃ । ನವsಗ್ವಾಃ ।

ತೇ । ಏತಂ । ಊರ್ವಂ । ವಿ । ಭಜಂತ । ಗೋನಾಂ । ಅಥ । ಏತತ್ । ವಚಃ । ಪಣಯಃ । ವಮನ್ । ಇತ್ ॥ ೮ ॥

॥ ಸಾಯಣಭಾಷ್ಯಂ ॥

ಸರಮಾ ಪುನಃ ಪ್ರತ್ಯುವಾಚ । ಹೇ ಪಣಯಃ ಸೋಮಶಿತಾಃ ಸೋಮೇನ ತೀಕ್ಷ್ಣೀಕೃತಾಃ ಸೋಮಪಾನೇನ ಮತ್ತಾಃ ॥ ಶಿಞ್ ನಿಶಾನೇ । ಕರ್ಮಣಿ ಕ್ತಪ್ರತ್ಯಯಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥ ತಾದೃಶಾ ನವಗ್ವಾ ನವಗತಯಃ । ಯದ್ವಾ । ಅಂಗಿರಸಾಂ ಸತ್ರಮಾಸೀನಾನಾಂ ಮಧ್ಯೇ ಕೇಚನ ನವಸು ಮಾಃಸ್ವಧ್ಯತಿಷ್ಠನ್ ತೇ ನವಗ್ವಾಃ । ಅನೇನ ದಶಗ್ವಾ ಅಪ್ಯುಪಲಕ್ಷ್ಯಂತೇ । ಉಭಯವಿಧಾಸ್ತೇಂऽಗಿರಸ ಋಷಯಃ ತೇಷಾಂ ಪ್ರಥಮೋऽಯಾಸ್ಯ ಏತನ್ನಾಮಾ ಚ ತ ಏತ ಇಹ ಯುಷ್ಮದೀಯೇ ಸ್ಥಾನ ಆ ಗಮನ್ । ಆಗಚ್ಛೇಯುಃ ॥ ಗಮೇಶ್ಛಂದಸಿ ಲುಙ್‌ಲಙ್‌ಲಿಟ ಇತಿ ಸಾರ್ವಕಾಲಿಕೋ ಲುಙ್ । ಲೃದಿತ್ತ್ವಾಚ್ಚ್ಲೇರಙ್ ॥ ಆಗತ್ಯ ಚ ತೇ ಗೋನಾಂ ॥ ಗೋಃ ಪಾದಾಂತ ಇತಿ ಚ್ಛಂದಸಿ ನುಡಾಗಮಃ ॥ ಗವಾಮೂರ್ವಂ ತಂ ಸಮೂಹಂ ವಿ ಭಜಂತ । ವಿಭಾಗಂ ಕುರ್ಯುಃ ॥ ಅತ್ರಾಪಿ ಪೂರ್ವವತ್ಸಾರ್ವಕಾಲಿಕೋ ಲುಙ್ ॥ ಅಥಾನಂತರಂ ಪಣಯೋ ಯೂಯಮೇತದ್ವಚಃ ಪೂರ್ವಂ ಯದ್ವ್ಯರ್ಥಮಾಗತಾಸೀತಿ ಯದ್ವಾಕ್ಯಮವೋಚತ ತದ್ವಾಕ್ಯಂ ತದಾ ವಮನ್ನಿದ್ವಮಂತಃ ಪರಿತ್ಯಜಂತ ಏವ ಭವಥ ॥ ವಮು ಉದ್ಗಿರಣೇ । ಶತರಿ ಸುಪಾಂ ಸುಲುಗಿತಿ ಜಸೋ ಲುಕ್ । ನುಮಾಗಮಃ । ಸಂಯೋಗಾಂತಸ್ಯ ಲೋಪಃ । ಯದ್ವಾ । ಲಙಿ ರೂಪಂ । ಸ್ವರಶ್ಛಾಂದಸಃ ॥

॥ ಪ್ರತಿಪದಾರ್ಥ ॥

(ಎಲೈ ಪಣಿಗಳೇ) **ಸೋಮಶಿತಾಃ**—ಸೋಮಪಾನದಿಂದ ಉತ್ತೇಜಿತರೂ । **ನವಗ್ವಾಃ**—ನವಮಾಸದ ಯಾಗಕರ್ಮವುಳ್ಳವರೂ । **ಅಂಗಿರಸಃ**—ಅಂಗಿರಾಸಂಜ್ಞಕರೂ ಆದ । **ಋಷಯಃ**—ಋಷಿಗಳು । **ಅಯಾಸ್ಯಃ**—ಅಯಾಸ್ಯನೊಡಗೂಡಿ । **ಇಹ**—ಈ ನಿಮ್ಮ ಸ್ಥಾನಕ್ಕೆ । **ಆ ಗಮನ್**—ಬರುತ್ತಾರೆ । **ತೇ**—ಅವರು । **ಗೋನಾಂ**—ಗೋವುಗಳ । **ಊರ್ವಂ**—ಸಮೂಹವನ್ನು । **ವಿ ಭಜಂತ**—ವಿಭಾಗಿಸುತ್ತಾರೆ । **ಅಥ**—ಅನಂತರ । **ಪಣಯಃ**—ಪಣಿಗಳಾದ ನೀವು । **ಏತದ್ವಚಃ**—ನನ್ನನ್ನು ಹೀಯಾಳಿಸಿದ ಮಾತನ್ನು । **ವಮನ್ನಿತ್**—ವ್ಯರ್ಥವೆಂದು ತಿಳಿಯುತ್ತೀರಿ.

॥ ಭಾವಾರ್ಥ ॥

(ಸರಮೆ)—ಎಲೈ ಪಣಿಗಳೇ, ಸೋಮಪಾನದಿಂದ ಉತ್ತೇಜಿತರೂ, ನವಮಾಸದ ಯಾಗಕರ್ಮವುಳ್ಳವರೂ, ಅಂಗಿರಾಸಂಜ್ಞಕರೂ ಆದ ಋಷಿಗಳು ಅಯಾಸ್ಯನೊಡಗೂಡಿ ಈ ನಿಮ್ಮ ಸ್ಥಾನಕ್ಕೆ ಬರುತ್ತಾರೆ. ಅವರು ಗೋವುಗಳ ಸಮೂಹವನ್ನು ತಮ್ಮಲ್ಲಿ ವಿಭಾಗಿಸಿಹಂಚಿಕೊಳ್ಳುತ್ತಾರೆ. ಅನಂತರ ನೀವು ನನ್ನನ್ನು ಹೀಯಾಳಿಸಿದ ಮಾತನ್ನು ವ್ಯರ್ಥವೆಂದು ತಿಳಿಯುತ್ತೀರಿ.

English Translation.

(Sarma :) Excited by the Soma, the Rishis, the Angirasas of the nine month's rite, headed by Ayasya, will come hither: they will partition this herd of cattle, then the Panis will retract their words.

|| ಸಂಹಿತಾಪಾಠಃ ||

ಏವಾ ಚ ತ್ವಂ ಸರಮ ಆಜಗಂಥ ಪ್ರಬಾಧಿತಾ ಸಹಸಾ ದೈವ್ಯೇನ ।
ಸ್ವಸಾರಂ ತ್ವಾ ಕೃಣವೈ ಮಾ ಪುನರ್ಗಾ ಅಪ ತೇ ಗವಾಂ ಸುಭಗೇ ಭಜಾಮ ॥ ೯ ॥

|| ಪದಪಾಠಃ ||

ಏವ । ಚ । ತ್ವಂ । ಸರಮೇ । ಆऽಜಗಂಥ । ಪ್ರऽಬಾಧಿತಾ । ಸಹಸಾ । ದೈವ್ಯೇನ ।
ಸ್ವಸಾರಂ । ತ್ವಾ । ಕೃಣವೈ । ಮಾ । ಪುನಃ । ಗಾಃ । ಅಪ । ತೇ । ಗವಾಂ । ಸುऽಭಗೇ । ಭಜಾಮ ॥ ೯ ॥

|| ಸಾಯಣಭಾಷ್ಯಂ ||

ತಯೈವಮುಕ್ತೇ ಸತಿ ಪಣಯಃ ಪ್ರಣಯವಾಕ್ಯಮಾಹುಃ । ಹೇ ಸರಮೇ ತ್ವಂ ದೈವ್ಯೇನ ದೇವಸಂಬಂಧಿನಾ ಸಹಸಾ ಬಲೇನ ಪ್ರಬಾಧಿತಾ ಯಥಾ ತಥಾ ವಲಪುರಂ ಪ್ರಾಪ್ಯ ತತ್ರ ಸ್ಥಿತಾ ಗಾ ದೃಷ್ಟ್ವಾ ಪುನರಾಗಚ್ಛೇತಿ ತೇನ ಪ್ರಪೀಡಿತಾ ತ್ವಮೇವಂ ಚೇದಾಜಗಂಥ ಆಗತವತ್ಯಸಿ ॥ ಚಶಬ್ದಶ್ಚೇದರ್ಥೇ । ನಿಪಾತೈರ್ಯದ್ಯದಿಹಂತೇತಿ ತಿಙೋ ನಿಘಾತಾಭಾವಃ । ಗಮೇರ್ಲಿಟಿ ಥಲಿ ರೂಪಂ । ಸಹ ಸುಪೇತ್ಯತ್ರ ಸಹೇತಿ ಯೋಗವಿಭಾಗಾತ್ಸಮಾಸಃ । ತಿಙ್ ಚೋದಾತ್ತವತೀತಿ ಗತೇರ್ನಿಘಾತಃ । ಲಿತ್ಸ್ವರಃ ॥ ತರ್ಹಿ ತ್ವಾ ತ್ವಾಂ ಸ್ವಸಾರಂ ಭಗಿನೀಂ ಕೃಣವೈ । ಕರವೈ । ಸಮೂಹಾಪೇಕ್ಷ್ಯೈಕವಚನಂ । ತ್ವಂ ತು ಪುನರ್ಮಾ ಗಾಃ । ಇಂದ್ರಾದೀನ್ಮಾ ಗಚ್ಛ । ಅಪಿ ತರ್ಹಿ ಹೇ ಸುಭಗೇ ಸರಮೇ ತೇ ತ್ವದೀಯಾನಾಂ ಗವಾಂ ಸಮೂಹಂ ಪರ್ವತಾದಪಗಮಯ್ಯ ಭಜಾಮ । ತ್ವಂ ಚ ವಯಂ ಚ ವಿಭಜಾಮ । ವಿಭಾಗಂ ಕರವಾಮೇತ್ಯರ್ಥಃ ॥

|| ಪ್ರತಿಪದಾರ್ಥ ||

**ಸರಮೇ**— ಎಲೈ ಸರಮೆಯೇ । **ತ್ವಂ**— ನೀನು । **ದೈವ್ಯೇನ ಸಹಸಾ**— ದೇವತಾಸಂಬಂಧವಾದ ಶಕ್ತಿಯಿಂದ । **ಪ್ರಬಾಧಿತಾ**— ನಿರ್ಬಂಧಿತಳಾಗಿ । **ಆ ಜಗಂಥ**— ಇಲ್ಲಿಗೆ ಬಂದಿದ್ದೀಯೆ । **ತ್ವಾ**— ನಿನ್ನನ್ನು । **ಸ್ವಸಾರಂ**— ನಮ್ಮ ಸಹೋದರಿಯನ್ನಾಗಿ । **ಕೃಣವೈ**— ಮಾಡಿಕೊಳ್ಳುತ್ತೇವೆ । **ಪುನಃ**— ಹಿಂತಿರುಗಿ । **ಮಾ ಗಾಃ**— ಹೋಗಬೇಡ । **ಸುಭಗೇ**— ಸುಂದರಾಂಗಿಯಾದ ಸರಮೆಯೇ । **ತೇ**— ನಿನ್ನೊಡನೆ । **ಗವಾಂ**— ಗೋವುಗಳನ್ನು । **ಭಜಾಮ**— ಹಂಚಿಕೊಳ್ಳೋಣ.

|| ಭಾವಾರ್ಥ ||

(ಪಣಿಗಳು)-ಎಲೈ ಸರಮೆಯೇ, ನೀನು ದೇವತಾಸಂಬಂಧಿಯಾದ ಶಕ್ತಿಯಿಂದ ಎಂದರೆ ದೇವತೆಗಳ ನಿರ್ಬಂಧಕ್ಕಾಗಿ ಇಲ್ಲಿಗೆ ಬಂದಿದ್ದೀಯೆ. ನಿನ್ನನ್ನು ನಮ್ಮ ಸಹೋದರಿಯೆಂದು ಭಾವಿಸುತ್ತೇವೆ. ನೀನು ಹಿಂತಿರುಗಿ ಹೋಗಬೇಡ. ಸುಂದರಾಂಗಿಯಾದ ಎಲೈ ಸರಮೆಯೇ, ನಿನ್ನೊಡನೆ ನಾವು ಗೋವುಗಳನ್ನು ಹಂಚಿಕೊಳ್ಳೋಣ. (ನಮ್ಮ ಗೋವುಗಳಲ್ಲಿ ನಿನಗೂ ಭಾಗವನ್ನು ಕೊಡುತ್ತೇವೆ)

## English Translation.

(The Panis :) You have indeed come hither, Sarama, constrained by divine power, we will make you our sister, do not return, we will share the cattle with you, auspicious one.

|| ಸಂಹಿತಾಪಾಠಃ ||

ನಾಹಂ ವೇದ ಭ್ರಾತೃತ್ವಂ ನೋ ಸ್ವಸೃತ್ವಮಿಂದ್ರೋ ವಿದುರಂಗಿರಸಶ್ಚ ಘೋರಾಃ |

ಗೋಕಾಮಾ ಮೇ ಅಚ್ಛದಯನ್ಯದಾಯಮಪಾತ ಇತ ಪಣಯೋ ವರೀಯಃ || ೧೦ ||

|| ಪದಪಾಠಃ ||

ನ | ಅಹಂ | ವೇದ | ಭ್ರಾತೃಽತ್ವಂ | ನೋ ಇತಿ | ಸ್ವಸೃಽತ್ವಂ | ಇಂದ್ರಃ | ವಿದುಃ | ಅಂಗಿರಸಃ | ಚ | ಘೋರಾಃ |

ಗೋಽಕಾಮಾಃ | ಮೇ | ಅಚ್ಛದಯನ್ | ಯತ್ | ಆಯಂ | ಅಪ | ಅತಃ | ಇತ | ಪಣಯಃ | ವರೀಯಃ || ೧೦ ||

|| ಸಾಯಣಭಾಷ್ಯಂ ||

ಸಾ ತಾನ್ಪ್ರತ್ಯಾಚಷ್ಟೇ | ಹೇ ಪಣಯಃ ಅಹಂ ಭ್ರಾತೃತ್ವಂ ನ ವೇದ | ನ ಜಾನಾಮಿ | ತಥಾ ಸ್ವಸೃತ್ವಂ ಚ ನೋ ವೇದ | ನೈವ ಜಾನಾಮಿ | ಕೇ ಜಾನಂತಿ | ತಾನಾಹ | ಇಂದ್ರೋ ಘೋರಾಃ ಶತ್ರೂಣಾಂ ಭಯಂಕರಾ ಅಂಗಿರಸಶ್ಚ ವಿದುಃ | ಜಾನಂತಿ | ಕಿಂಚಾಸ್ಮಾತ್ಸ್ಥಾನಾದಹಂ ಯದ್ಯದಾಯಂ ಇಂದ್ರಾದೀನ್ಪ್ರಾಪ್ನವಂ || ಅಯ ಪಯ ಗತೌ | ಲಙಿ ರೂಪಂ || ತದಾ ಮೇ ಮದೀಯಾ ಗೋಕಾಮಾ

ಯುಷ್ಮಾಭಿರಪಹೃತಾ ಗಾ· ಕಾಮಯಮಾನಾ ಇಂದ್ರಾದಯ ಅಚ್ಛದಯ. । ಯುಷ್ಮದೀಯಂ ಸ್ಥಾನಮಾಚ್ಛಾದಯಂತಿ ॥ ಭದ ಅಪವಾರಣೇ ॥ ಅತಃ ಕಾರಣಾದ್ಧೇ ಪಣಯಃ ವರೀಯ ಉರುತರಂ ಗವಾಂ ವೃಂದಂ ಪರಿತ್ಯಜ್ಯಾಪೇತ । ಅನ್ಯತ್ಸ್ಥಾನಂ ಪ್ರತಿ ಗಚ್ಛತ । ಯದ್ವಾ । ವರೀಯಃ ಪ್ರಭೂತಮತಿದೂರಂ ದೇಶಂ ಗಚ್ಛತ ॥ ಇತ । ಇಣ್ ಗತೌ । ಲೋಟಿ ರೂಪಂ ವರೀಯಃ । ಉರಿಶಬ್ದಾದೀಯಸುನಿ ಪ್ರಿಯಸ್ಥಿರೇತ್ಯಾದಿನಾ ವರಾದೇಶಃ ॥

॥ ಪ್ರತಿಪದಾರ್ಥ ॥

(ಎಲೈ ಪಣಿಗಳೇ) **ಅಹಂ**—ನಾನು । **ಭ್ರಾತೃತ್ವಂ**—ನನ್ನೊಡನಿರುವ ನಿಮ್ಮ ಭ್ರಾತೃಸಂಬಂಧವನ್ನು । **ನ ವೇದ**—ಅರಿಯೆನು । **ಸ್ವಸೃತ್ವಂ**—ನಿಮ್ಮೊಡನಿರುವ ನನ್ನ ಸ್ವಸೃಸಂಬಂಧವನ್ನು । **ನೋ**—ಅರಿಯೆನು । **ಇಂದ್ರಃ**—ಇಂದ್ರನೂ । **ಘೋರಾಃ**—ಶತ್ರುಗಳಿಗೆ ಭಯಂಕರರಾದ । **ಅಂಗಿರಸಶ್ಚ**—ಅಂಗಿರಸ್ಸುಗಳೂ । **ವಿದುಃ**—ಈ ವಿಷಯವನ್ನು ಅರಿತಿದ್ದಾರೆ । **ಪಣಯಃ**—ಎಲೈ ಪಣಿಗಳೇ । **ಯತ್**—ಯಾವಾಗ । **ಆಯಂ**—ನಾನು ಇಲ್ಲಿಗೆ ಬಂದೆನೋ ಆಗ । **ಗೋಕಾಮಾಃ**—ಗೋವನ್ನು ಇಚ್ಛಿಸುವ । **ಮೇ**—ನನ್ನ ಸಂಬಂಧಿಗಳಾದ ಇಂದ್ರಾದಿಗಳು । **ಅಚ್ಛದಯನ್**—ಈ ಪ್ರದೇಶವನ್ನು ಮುತ್ತಿದ್ದಾರೆ । **ಅತಃ**—ಆದ್ದರಿಂದ ಈ ಪ್ರದೇಶವನ್ನು ಬಿಟ್ಟು । **ವರೀಯಃ**—ದೂರದೇಶಕ್ಕೆ । **ಅಪೇತ**—ಹೊರಟುಹೋಗಿರಿ.

॥ ಭಾವಾರ್ಥ ॥

(ಸರಮೆ)—ಎಲೈ ಪಣಿಗಳೇ, ನನ್ನೊಡನೆ ನೀವು ಬಯಸುವ ಭ್ರಾತೃಸಂಬಂಧವನ್ನಾಗಲಿ ಅಥವಾ ಸ್ವಸೃಸಂಬಂಧವನ್ನಾಗಲಿ ಏನೆಂದು ನಾನು ಅರಿಯೆನು. ಇಂದ್ರನೂ, ಶತ್ರುಗಳಿಗೆ ಭಯಂಕರರಾದ ಅಂಗಿರಸ್ಸುಗಳೂ ಈ ವಿಷಯವನ್ನು ಅರಿತಿದ್ದಾರೆ. ಎಲೈ ಪಣಿಗಳೇ, ಯಾವಾಗ ನಾನು ಇಲ್ಲಿಗೆ ಬಂದೆನೋ ಆಗಲೇ ಗವಾಪೇಕ್ಷಿಗಳಾದ ಇಂದ್ರಾದಿಗಳು ಈ ಪ್ರದೇಶವನ್ನು ಆಕ್ರಮಿಸಿದ್ದಾರೆ. ಈ ಪ್ರದೇಶವನ್ನು ಬಿಟ್ಟು ದೂರ ಹೊರಟುಹೋಗಿರಿ.

## English Translation.

(Sarama.) I recognize not fraternity nor sisterhood ; Indra and the terrible Angirasas know (my kindred) ; my (masters) desiring the cattle overshadowed (your habitation) when I came ; depart hence, Panis, to a distant (spot).

॥ ಸಂಹಿತಾಪಾಠಃ ॥

ದೂರಮಿ॑ತ ಪಣಯೋ॒ ವರೀ॑ಯ॒ ಉದ್ಗಾವೋ॑ ಯಂತು ಮಿನ॒ತೀರೃ॒ತೇನ॑ ।

ಬೃಹ॒ಸ್ಪತಿ॒ರ್ಯಾ ಅವಿಂ॑ದ॒ನ್ನಿಗೂ॑ಳ್ಹಾಃ॒ ಸೋಮೋ॒ ಗ್ರಾವಾ॑ಣ॒ ಋಷ॑ಯಶ್ಚ॒

ವಿಪ್ರಾಃ॑ ॥ ೧೧ ॥

॥ ಪದಪಾಠಃ ॥

ದೂರಂ । ಇತ । ಪಣಯಃ । ವರೀಯಃ । ಉತ್ । ಗಾವಃ । ಯಂತು । ಮಿನತೀಃ । ಋತೇನ ।

ಬೃಹಸ್ಪತಿಃ । ಯಾಃ । ಅವಿಂದತ್ । ನಿऽಗೂಳ್ಹಾಃ । ಸೋಮಃ । ಗ್ರಾವಾಣಃ । ಋಷಯಃ । ಚ । ವಿಪ್ರಾಃ॥

॥ ಸಾಯಣಭಾಷ್ಯಂ ॥

ಹೇ ಪಣಯಃ ಯೂಯಂ ವರೀಯ ಉರುತರಂ ದೂರಂ ದೂರದೇಶಮಿತ । ಗಚ್ಛತ । ಯುಷ್ಮಾಭಿರಪಹೃತಾ ಗಾವ ಋತೇನ ಸತ್ಯೇನ ಮಿನತೀರ್ಮಿನತ್ಯೋ ದ್ವಾರಸ್ಯ ಪಿಧಾಯಕಂ ಪರ್ವತಂ ಹಿಂಸತ್ಯೋ ವಿದಾರಯಂತ್ಯ ಉದ್ಯಂತು । ತಸ್ಮಾದುದ್ಗಚ್ಛಂತು । ಯದ್ವಾ । ಮಿನತೀಃ ॥ ವ್ಯತ್ಯಯೇನ ಕರ್ಮಣಿ ಶತೃ ॥ ಮೀಯಮಾನಾ ಯುಷ್ಮಾಭಿರ್ಬಾಧ್ಯಮಾನಾಸ್ತಾ ಗಾವಃ ॥ ಸುಬ್ವ್ಯತ್ಯಯಃ ॥ ಗಾ ಋತೇನ ಸ್ತುತಿಭಿರ್ಗಂತವ್ಯೇನೇಂದ್ರೇಣ ಸಹಾಯೇನ ಬೃಹಸ್ಪತ್ಯಾದಯ ಉದ್ಯಂತು । ಪರ್ವತಾದುದ್ಗಮಯಂತು । ನಿಗೂಢಾ ನಿತರಾಂ ಸ್ಥಾಪಿತಾ ಯಾ ಗಾ ಬೃಹಸ್ಪತಿರವಿಂದತ್ ಲಪ್ಸ್ಯತೇ ತಥಾ ಸೋಮಸ್ತದಭಿಷವಕಾರಿಣೋ ಗ್ರಾವಾಣಶ್ಚ ವಿಪ್ರಾ ಮೇಧಾವಿನ ಋಷಯೋऽಂಗಿರಸಶ್ಚ ಲಪ್ಸ್ಯಂತೇ ॥ ವಿದ್ಲೃ ಲಾಭೇ ತೌದಾದಿಕಃ । ತಸ್ಮಾಚ್ಛಂದಸಿ ಲುಙ್ಲಙ್ಲಿಟ್ ಇತಿ ಭವಿಷ್ಯದರ್ಥೇ ಲಙ್ । ಶೇ ಮುಚಾದೀನಾಮಿತಿ ನುಮಾಗಮಃ ॥

॥ ಪ್ರತಿಪದಾರ್ಥ ॥

ಪಣಯಃ—ಎಲೈ ಪಣಿಗಳೇ । ವರೀಯಃ ದೂರಂ—ಅತ್ಯಧಿಕವಾದ ದೂರಪ್ರದೇಶಕ್ಕೆ । ಇತ—ಹೊರಟುಹೋಗಿರಿ । ನಿಗೂಢಾಃ—ಅಡಗಿರತಕ್ಕ । ಯಾಃ— ಯಾವ ಗೋವುಗಳನ್ನು । ಬೃಹಸ್ಪತಿಃ—ಬೃಹಸ್ಪತಿಯು । ಅವಿಂದತ್—ಹೊಂದುವನೋ ಹಾಗೆಯೇ । ಸೋಮಃ—ಸೋಮನೂ । ಗ್ರಾವಾಣಃ—ಹಿಂಡುವ ಕಲ್ಲುಗಳೂ । ವಿಪ್ರಾಃ—ಮೇಧಾವಿಗಳಾದ । ಋಷಯಃ—ಅಂಗಿರಾಋಷಿಗಳೂ ಹೊಂದುವರೋ ಅಂತಹ । ಗಾವಃ—ಗೋವುಗಳು । ಋತೇನ—ಸತ್ಯರೂಪದಿಂದ । ಮಿನತೀಃ—ಬಂಧಕವಾದ ಬಾಗಿಲನ್ನು ತೆರೆದುಕೊಂಡು ಉದ್ಯಂತು—ಹೊರಕ್ಕೆ ಬರಲಿ.

॥ ಭಾವಾರ್ಥ ॥

(ಸರಮೆ)—ಎಲೈ ಪಣಿಗಳೇ, ನೀವು ಅತ್ಯಧಿಕವಾದ ದೂರಪ್ರದೇಶಕ್ಕೆ ಹೊರಟುಹೋಗಿರಿ. ಈ ಗೋವುಗಳು ಬಂಧಕವಾದ ಬಾಗಿಲನ್ನು ತೆರೆದುಕೊಂಡು ಯಥಾಕ್ರಮವಾಗಿ ಹೊರಕ್ಕೆ ಬರಲಿ. ಅನಂತರ ಇವನ್ನು ಬೃಹಸ್ಪತಿಯೂ ಸೋಮನೂ, ಗ್ರಾವಗಳೂ ಮತ್ತು ಮೇಧಾವಿಗಳಾದ ಅಂಗಿರಸ್ಸುಗಳೂ ಹೊಂದಲಿ.

## English Translation

Go hence, Panis, to a far-off distant (spot), let the cattle come forth in due order, bursting through (the door) the concealed cattle which Brihaspathi, the Soma, the grinding stones and the wise Rishis have found.

# ನೂರ ಒಂಭತ್ತನೆಯ ಸೂಕ್ತವು

## ಪೀ ಠಿ ಕೆ .

ಭಾಷ್ಯಕಾರರು ಈ ಸೂಕ್ತದ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳಿದಾರೆ—

**ಅತ್ರೇತಿಹಾಸಮಾಚಕ್ಷತೇ । ಜುಹೂರಿತಿ ವಾಙ್ನಾಮ । ಸಾ ಬ್ರಹ್ಮಣೋ ಜಾಯಾ ಚ । ಬೃಹಸ್ಪತೇರ್ವಾಚಸ್ಪತಿತ್ವಾದ್ಬೃಹಸ್ಪತೇರ್ಜುಹೂರ್ನಾಮ ಭಾರ್ಯಾ ಬಭೂವ । ಕದಾಚಿದಸ್ಯ ಕಿಲ್ಬಿಷಮಸ್ಯಾ ದೌರ್ಭಾಗ್ಯರೂಪೇಣಾಸಾಂಚಕ್ರೇ । ಅತ ಏವ ಸ ಏನಾಂ ಪರ್ಯತ್ಯಾಕ್ಷೀತ್ । ಅನಂತರಮಾದಿತ್ಯಾದಯೋ ದೇವಾ ಮಿಥೋ ವಿಚಾರ್ಯೈನಾಮಕಿಲ್ಬಿಷಾಂ ಕೃತ್ವಾ ಪುನರ್ಬೃಹಸ್ಪತಯೇ ಪ್ರಾದುರಿತಿ । ತದತ್ರ ವರ್ಣ್ಯತೇ ॥**

ಜುಹೂ ಎಂದರೆ ವಾಕ್ಕಿಗೆ ಹೆಸರು. ಈ ವಾಗಭಿಮಾನಿದೇವತೆಯು ಬ್ರಹ್ಮನಿಗೆ ಭಾರ್ಯೆಯು. ಬೃಹಸ್ಪತಿಯೂ ಸಹ ವಾಚಸ್ಪತಿ ಎಂದರೆ ವಾಕ್ಕಿಗೆ ಅರ್ಥಾತ್ ವಾಗಭಿಮಾನಿದೇವಿಗೆ ಪತಿಯೆಂದು ಹೇಳಿರುವುದರಿಂದ ಈ ವಾಗ್ದೇವಿಯು ಬೃಹಸ್ಪತಿಗೂ ಭಾರ್ಯೆಯೆಂದಾಯಿತು. ಒಂದಾನೊಂದು ಕಾಲದಲ್ಲಿ ಈ ಬೃಹಸ್ಪತಿಯ ಪಾಪವು ಈ ವಾಗ್ದೇವಿಯ ದೌರ್ಭಾಗ್ಯರೂಪವಾಗಿ ಪರಿಣಮಿಸಿತು. ಆದ್ದರಿಂದ ಬೃಹಸ್ಪತಿಯು ತನ್ನ ಪತ್ನಿಯಾದ ಈ ವಾಗ್ದೇವಿಯನ್ನು ತ್ಯಜಿಸಿದನು. ಇದನ್ನು ತಿಳಿದು ಆದಿತ್ಯಾದಿ ದೇವತೆಗಳು ತಮ್ಮತಮ್ಮಲ್ಲಿಯೇ ವಿಚಾರಮಾಡಿ ಈ ವಾಗ್ದೇವಿಯ ಪಾಪವನ್ನು ಪರಿಹಾರಮಾಡಿ ಅವಳ ಪತಿಯಾದ ಬೃಹಸ್ಪತಿಯುವಶಕ್ಕೆ ಒಪ್ಪಿಸಿದರು. ಈ ವಿಷಯವನ್ನೇ ಈ ಸೂಕ್ತದಲ್ಲಿ ವರ್ಣಿಸಲಾಗಿದೆ

॥ ಸಾಯಣಭಾಷ್ಯಂ ॥

**ತೇಽವದನ್ನಿತಿ ಸಪ್ತರ್ಚಂ ದಶಮಂ ಸೂಕ್ತಂ । ಜುಹುರ್ನಾಮ ಬ್ರಹ್ಮವಾದಿನ್ಯೃಷಿಃ । ಬ್ರಹ್ಮಪುತ್ರ ಊರ್ಧ್ವನಾಭಾ ನಾಮ ವಾ । ಷಷ್ಠೀಸಪ್ತಮ್ಯಾವನುಷ್ಟುಭೌ । ಶಿಷ್ಟಾಃ ಪಂಚ ತ್ರಿಷ್ಟುಭಃ । ವಿಶ್ವೇ ದೇವಾ ದೇವತಾ । ತಥಾ ಚಾನುಕ್ರಾಂತಂ । ತೇಽವದನ್ಸಪ್ತ ಜುಹೂರ್ಬ್ರಹ್ಮಜಾಯಾ ಬ್ರಾಹ್ಮೋ ವೋರ್ಧ್ವನಾಭಾ ವೈಶ್ವದೇವಂ ದ್ವ್ಯನುಷ್ಟುಬಂತಮಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ತೇಽವದನ್** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಬ್ರಹ್ಮಪುತ್ರಿಯಾದ ಜುಹೂ ಎಂಬ ಹೆಸರಿನ ಬ್ರಹ್ಮವಾದಿನಿಯು ಋಷಿಕೆಯು , ಅಥವಾ ಉರ್ಧ್ವನಾಭಾ ಎಂಬ ಹೆಸರಿನ ಬ್ರಹ್ಮಪುತ್ರನು ಋಷಿಯು. ಈ ಸೂಕ್ತದ ಆರು, ಮತ್ತು ಏಳನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಉಳಿದ ಐದು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು ವಿಶ್ವೇದೇವತೆಗಳು ದೇವತೆಯು, ಅನುಕ್ರಮಣಿಕೆಯಲ್ಲಿ—**ತೇಽವದನ್ಸಪ್ತ ಜುಹೂರ್ಬ್ರಹ್ಮಜಾಯಾ ಬ್ರಾಹ್ಮೋ ವೋರ್ಧ್ವನಾಭಾ ವೈಶ್ವದೇವಂ ಹ್ಯನುಷ್ಟುಬಂತಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ,

## ಸೂಕ್ತ—೧೦೯

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ—೧೦೯ ॥

ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
॥ ಋಷಿಃ—ಜುಹೂರ್ಬ್ರಹ್ಮಜಾಯೋರ್ಧ್ವನಾಭಾ ವಾ ಬ್ರಾಹ್ಮಃ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—೧–೫. ತ್ರಿಷ್ಟುಪ್ । ೬, ೭. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ತೇಽವದನ್ಪ್ರಥಮಾ ಬ್ರಹ್ಮಕಿಲ್ಬಿಷೇಽಕೂಪಾರಃ ಸಲಿಲೋ ಮಾತರಿಶ್ವಾ ।
ವೀಳುಹರಾಸ್ತಪ ಉಗ್ರೋ ಮಯೋಭೂರಾಪೋ ದೇವೀಃ ಪ್ರಥಮಜಾ ಋತೇನ ॥ ೧ ॥

॥ ಪದಪಾಠಃ ॥

ತೇ । ಅವದನ್ । ಪ್ರಥಮಾಃ । ಬ್ರಹ್ಮಽಕಿಲ್ಬಿಷೇ । ಅಕೂಪಾರಃ । ಸಲಿಲಃ । ಮಾತರಿಶ್ವಾ ।
ವೀಳುಽಹರಾಃ । ತಪಃ । ಉಗ್ರಃ । ಮಯಃಽಭೂಃ । ಆಪಃ । ದೇವೀಃ । ಪ್ರಥಮಽಜಾಃ । ಋತೇನ ॥ ೧ ॥

॥ ಸಾಯಣಭಾಷ್ಯಂ ॥

ಅತ್ರೇತಿಹಾಸಮಾಚಕ್ಷತೇ । ಜುಹೂರಿತಿ ವಾಗ್ನಾಮ । ಸಾ ಬ್ರಹ್ಮಣೋ ಜಾಯಾ ಚ । ಬೃಹಸ್ಪತೇರ್ವಾಚಸ್ಪತಿತ್ವಾದ್ಬೃಹಸ್ಪತೇರ್ಜುಹೂರ್ನಾಮ ಭಾರ್ಯಾ ಬಭೂವ । ಕದಾಚಿದಸ್ಯ ಕಿಲ್ಬಿಷಮಸ್ಯಾ ದೌರ್ಭಾಗ್ಯರೂಪೇಣಾಸಾಂಚಕ್ರೇ । ಅತ ಏವ ಸ ಏನಾಂ ಪರ್ಯತ್ಯಾಕ್ಷೀತ್ । ಅನಂತರಮಾದಿತ್ಯಾದಯೋ ದೇವಾ ಮಿಥೋ ವಿಚಾರ್ಯೈನಾಮಕಿಲ್ಬಿಷಾಂ ಕೃತ್ವಾ ಪುನರ್ಬೃಹಸ್ಪತಯೇ ಪ್ರಾದುರಿತಿ । ತದತ್ರ ವರ್ಣ್ಯತೇ । ಪ್ರಥಮಾ ಮುಖ್ಯಾಸ್ತೇ ದೇವಾ ಬ್ರಹ್ಮಕಿಲ್ಬಿಷೇ ॥ ಷಷ್ಠೀಸಮಾಸಃ । ಸಮಾಸಸ್ವರಃ ॥ ಬ್ರಹ್ಮಣೋ ಬೃಹಸ್ಪತೇಃ ಕಿಲ್ಬಿಷೇ ಪಾಪೇ ಜುಹೂದೌರ್ಭಾಗ್ಯರೂಪೇ ವಿಷಯೇಽವದನ್ । ನಿಷ್ಕೃತ್ಯುಪಾಯಮವೋಚನ್ ॥ ವಕಾರಪರತ್ವಾದತ್ರ ಪ್ರಕೃತಿಭಾವಾಭಾವಃ ॥ ಕೇ ತೇ । ಅಕೂಪಾರಃ । ಅತ್ರ ಯಾಸ್ಕಃ । ಆದಿತ್ಯೋಽಪ್ಯಕೂಪಾರ ಉಚ್ಯತೇಽಕೂಪಾರೋ ಭವತಿ ದೂರಪಾರಃ । ನಿ.೪–೧೮ । ಇತಿ । ಅಕುತ್ಸಿತಪಾರೋ ಮಹಾಗತಿರಾದಿತ್ಯಃ ಸಲಿಲೋಽಬ್ದೇವತಾ ವರುಣೋ ಮಾತರಿಶ್ವಾ ವಾಯುರ್ವೀಳುಹರಾಃ ॥ ಹರತೇರಸುನಿ ರೂಪಂ ಹರ ಇತಿ ॥ ಹರತಿ ವಿನಾಶಯತಿ ತಮಾಂಸೀತಿ ಹರಸ್ತೇಜಃ । ಪ್ರಭೂ-

**ತತೇಜಸ್ಕಃ । ತಪಃ ॥ ತೃತೀಯಾಯಾಃ ಸುಃ ॥ ತಪಸಾ ತಾಪನೇನೋಗ್ರ ಉದ್ಗೂರ್ಣೋಽಗ್ನಿರ್ಮಯೋಭೂಃ ಸುಖಸ್ಯ ಭಾವಯಿತಾ ಸೋಮೋ ದೇವೀರ್ದೇವ್ಯ ಆಪಃ । ಕೀದೃಶ್ಯಃ । ಋತೇನ ಸತ್ಯಭೂತೇನ ಬ್ರಹ್ಮಣಾ ಪ್ರಥಮಜಾ ಆದಿತ ಏವೋತ್ಪಾದಿತಾಃ । ಏತ ಉಪಾಯಮುಕ್ತ್ವಾ ಪ್ರಾಯಶ್ಚಿತ್ತಮಸ್ಯ ಕಾರಯನ್ನಿತಿ ಭಾವಃ ॥**

॥ ಪ್ರತಿಪದಾರ್ಥ ॥

**ಅಕೂಪಾರಃ**— ಅನಂತವಾದ ಗತಿಯುಳ್ಳ ಆದಿತ್ಯನೂ । **ಸಲಿಲಃ**— ಅಬ್ದೇವತೆಯೂ (ವರುಣನೂ) **ಮಾತರಿಶ್ವಾ**— ವಾಯುವೂ । **ವೀಳುಹರಾಃ** – ಅತ್ಯಂತ ತೇಜಸ್ವಿಯೂ । **ತಪಃ**- ದಾಹಾತ್ಮಕನೂ । **ಉಗ್ರಃ**— ಅಧಿಕವಾದ ಶಕ್ತಿಯುಳ್ಳನನೂ ಆದ ಅಗ್ನಿಯೂ । **ಮಯೋಭೂಃ**— ಸುಖದಾತೃವಾದಸೋಮನೂ । **ಋತೇನ**— ಸತ್ಯಾತ್ಮಕ ನಾದ ಬ್ರಹ್ಮನಿಂದ । **ಪ್ರಥಮಜಾಃ**— ಪ್ರಥಮತಃ ಉತ್ಪನ್ನರಾದ । **ದೇವೀಃ ಆಪಃ**— ದಿವ್ಯರೂಪರಾದ ಉದಕಗಳೂ ಇವರೇ ಮುಂತಾದ । **ಪ್ರಥಮಾಃ ತೇ**— ಮುಖ್ಯರಾದ ದೇವತೆಗಳೆಲ್ಲ । **ಬ್ರಹ್ಮಕಿಲ್ಬಿಷೇ**— ಬೃಹಸ್ಪತಿಯ ಪಾಪದ ವಿಷಯುವನ್ನು । **ಅವದನ್**— ವಿವರಿಸಿದರು.

॥ ಭಾವಾರ್ಥ ॥

ಅಂತರಹಿತವಾದ ಗಮನವುಳ್ಳ ಆದಿತ್ಯನೂ, ಅಬ್ದೇವತೆಯಾದ ವರುಣನೂ, ವಾಯುವೂ, ಅತ್ಯಂತ ತೇಜಸ್ವಿಯೂ, ದಾಹಾತ್ಮಕನೂ ಅಧಿಕವಾದ ಶಕ್ತಿಯುಳ್ಳವನೂ ಆದ ಅಗ್ನಿಯೂ, ಸುಖದಾತೃವಾದಸೋಮನೂ ಸತ್ಯಾತ್ಮಕನಾದ ಬ್ರಹ್ಮನಿಂದ ಪ್ರಥಮತಃ ಉತ್ಪನ್ನರಾದ ದಿವ್ಯರೂಪರಾದ ಉದಕಗಳೂ, - ಇವರೇ ಮುಂತಾದ ಮುಖ್ಯರಾದ ದೇವತೆಗಳೆಲ್ಲ ಬೃಹಸ್ಪತಿಯ ಪಾಪದ ವಿಷಯುವನ್ನು ವಿವರಿಸಿದರು

## English Translation

These spoke first about Brahma's sin, the boundless (sun), the water-god (Varuna), the wind god (Vayu), the fierce, wide consuming fire, the source of happiness, (Soma), the divine waters, the first-born sons of the truthful (Brahma).

॥ ವಿಶೇಷವಿಷಯಗಳು ॥

**ತೇಽವದನ್ ಬ್ರಹ್ಮಕಿಲ್ಬಿಷೇ** –**ಬೃಹಸ್ಪತೇಃ ಕಿಲ್ಬಿಷೇ ಪಾಪೇ ಜುಹೂದೌರ್ಭಾಗ್ಯರೂಪೇ ವಿಷಯೇ ತೇ ದೇವಾಃ ಅವದನ್** ॥ ಬೃಹಸ್ಪತಿಯ ಪಾಪವು ಅವನ ಪತ್ನಿಯಾದ ಜುಹೂದೇವಿಯ ದೌರ್ಭಾಗ್ಯವಾಗಿ ಪರಿಣಮಿಸಿ ಪತಿಯಿಂದ ಪರಿತ್ಯಕ್ತಳಾದ ವಿಷಯದಲ್ಲಿ ದೇವತೆಗಳು ಈ ರೀತಿ ಹೇಳಿದರು. ಇಲ್ಲಿ **ತೇ** ಎಂದರೆ ದೇವತೆಗಳು ಎಂದು ಹೇಳಿದೆ. ಆ ದೇವತೆಗಳು ಯಾರು ಎಂದರೆ, **ಪ್ರಥಮಾಃ**— ಮುಖ್ಯರಾದವರು ಅವರು ಯಾರು ಯಾರು ಎಂದರೆ,

**ಅಕೂಪಾರಃ— ಆದಿತ್ಯೋಽಕೂಪಾರ ಉಚ್ಯತೇಽಕೂಪಾರೋ ಭವತಿ ದೂರಪಾರಃ** (ನಿ. ೪-೧೮) ಆದಿತ್ಯನಿಗೆ ಅಕೂಪಾರನೆಂದು ಹೆಸರು. ಏಕೆಂದರೆ ಈ ಆದಿತ್ಯನು ಅಂತರಿಕ್ಷದಲ್ಲಿ ಬಹುದೂರದವರೆಗೆ (ಪೂರ್ವದಿಂದ ಪಶ್ಚಿಮಕ್ಕೆ) ಸಂಚರಿಸುವನಾದ್ದರಿಂದ ಆದಿತ್ಯನಿಗೆ ಅಕೂಪಾರನೆಂದು ಹೆಸರು.

**ಸಲಿಲಃ**—ಸಲಿಲಃ ಎಂದರೆ ಉದಕ. ಇಲ್ಲಿ ಉದಕಾಭಿಮಾನಿಯಾದ ವರುಣನು.

**ಮಾತರಿಶ್ವಾ**—ವಾಯುವು, ಯಾಸ್ಕರು-**ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತ-ರ್ಯಾಶ್ವನಿತೀತಿ. ವಾ** ಎಂದು ಹೇಳಿರುವರು (ನಿ. ೭-೨೬) ಅಂತರಿಕ್ಷದಲ್ಲಿ ವ್ಯಾಪಿಸಿರುವುದರಿಂದ ಅಥವಾ ವೇಗವಾಗಿ ಸಂಚರಿಸುವುದರಿಂದ ವಾಯುವಿಗೆ ಮಾತರಿಶ್ವಾ ಎಂದು ಹೆಸರು.

**ವೀಳುಹರಾಃ ತಪ ಉಗ್ರಃ—ಹರತಿ ವಿನಾಶಯತಿ ತಮಾಂಸೀತಿ ಹರಸ್ತೇಜಃ ಪ್ರಭೂತತೇಜಸ್ಕಃ। ತಪಃ ತಪಸಾ ಉಗ್ರ ಉದ್ಗೂರ್ಣೋಽಗ್ನಿಃ।** ತನ್ನ ಪ್ರಕಾಶದಿಂದ ಕತ್ತಲೆಯನ್ನು ನಾಶಮಾಡುವವನಾದ್ದರಿಂದಲೂ, ತನ್ನ ಶಾಖದಿಂದ ಬಹಳ ತೀಕ್ಷ್ಣಸ್ವಭಾವದವನಾದ್ದರಿಂದಲೂ ಇಲ್ಲಿ **ವೀಳುಹರಾಃ** ಎಂಬ ಶಬ್ದವು ಅಗ್ನಿಯನ್ನು ನಿರ್ದೇಶಿಸುವುದು.

**ಮಯೋಭೂಃ**—ಮಯ ಎಂದರೆ ಸುಖ. ಆ ಸುಖವನ್ನುಂಟುಮಾಡುವವನು ಎಂದರೆ ಪಾನಮಾಡುವವರಿಗೆ ಸುಖವನ್ನು ಅಥವಾ ಹರ್ಷವನ್ನುಂಟುಮಾಡುವವನು ಸೋಮನು.

**ಆಪಃ ದೇವೀಃ ಪ್ರಥಮಜಾ ಋತೇನ—ಸತ್ಯಭೂತೇನ ಬ್ರಹ್ಮಣಾ ಆದಿತ ಏವ ಉತ್ಪಾದಿತಾ ದೇವ್ಯಃ।** ಉದಕಾಭಿಮಾನಿದೇವತೆಗಳು. ಪೂರ್ವದಲ್ಲಿ ಬ್ರಹ್ಮನು ಸೃಷ್ಟಿಮಾಡುವಾಗ ಎಲ್ಲಕ್ಕಿಂತಲೂ ಮೊದಲು ಉದಕವನ್ನೇ ಸೃಷ್ಟಿಮಾಡಿದನೆಂದು ಶ್ರುತಿಸ್ಮೃತಿಗಳಲ್ಲಿ ಹೇಳಿದೆ. **"ಆಪೋ ವಾ ಇದಮಾಸನ್ ಸಲಿಲಮೇವ" "ಆಪೋ ವಾ ಇದಮಗ್ರೇ ಸಲಿಲಮಾಸೀತ್" "ಅಪ ಏವ ಸಸರ್ಜಾದೌ"** ಎಂಬ ವಾಕ್ಯಗಳು ಇದನ್ನು ಸಮರ್ಥಿಸುವವು.

ಆದ್ದರಿಂದ ಈ ಋಕ್ಕಿನ ಪ್ರಾರಂಭದಲ್ಲಿ ತೇ ಎಂಬ ಶಬ್ದದಿಂದ ನಿರ್ದಿಷ್ಟರಾದ ದೇವತೆಗಳಾರೆಂದರೆ— ಆದಿತ್ಯ, ವರುಣ, ವಾಯು, ಅಗ್ನಿ, ಸೋಮ, ಅಬ್ದೇವತೆ ಇವರೇ ಮೊದಲಾದ ಎಲ್ಲಾ ದೇವತೆಗಳೂ ಎಂದರ್ಥವು. ಇವರೆಲ್ಲರೂ ಪರಸ್ಪರ ಆಲೋಚನೆ ಮಾಡಿ ಬೃಹಸ್ಪತಿಯ ಪಾಪರೂಪವಾದ ಅವನ ಪತ್ನಿಯ ದೌರ್ಭಾಗ್ಯವನ್ನು ಪರಿಹಾರ ಮಾಡುವುದಕ್ಕೆ ಸರಿಯಾದ ಪ್ರಾಯಶ್ಚಿತ್ತವನ್ನು ಕಲ್ಪಿಸಿ, ಅವಳನ್ನು ದೋಷಮುಕ್ತಳನ್ನಾಗಿ ಮಾಡಿ, ಬೃಹಸ್ಪತಿಗೆ ಪುನಃ ಒಪ್ಪಿಸಿದರು ಎಂದು ಮುಖ್ಯಾಭಿಪ್ರಾಯವು.

|| ಸಂಹಿತಾಪಾಠಃ ||

**ಸೋಮೋ ರಾಜಾ ಪ್ರಥಮೋ ಬ್ರಹ್ಮಜಾಯಾಂ ಪುನಃ ಪ್ರಾಯಚ್ಛದಹೃಣೀ-**
**ಯಮಾನಃ ।**
**ಅನ್ವರ್ತಿತಾ ವರುಣೋ ಮಿತ್ರ ಆಸೀದಗ್ನಿರ್ಹೋತಾ ಹಸ್ತಗೃಹ್ಯಾ ನಿನಾಯ ॥**

|| ಪದಪಾಠಃ ||

**ಸೋಮಃ । ರಾಜಾ । ಪ್ರಥಮಃ । ಬ್ರಹ್ಮsಜಾಯಾಂ । ಪುನರಿತಿ । ಪ್ರ । ಅಯಚ್ಛತ್ । ಅಹೃಣೀಯಮಾನಃ ।**

**ಅನುsಅರ್ತಿತಾ । ವರುಣಃ । ಮಿತ್ರಃ । ಆಸೀತ್ । ಅಗ್ನಿಃ । ಹೋತಾ । ಹಸ್ತsಗೃಹ್ಯ । ಆ । ನಿನಾಯ ॥೨॥**

|| ಸಾಯಣಭಾಷ್ಯಂ ||

**ಪ್ರಥಮೋ ಮುಖ್ಯಃ ಸೋಮೋ ರಾಜಾಹೃಣೀಯಮಾನಃ । ಪಾಪಾಪಗಮನೇನಾಲಜ್ಜಮಾನಃ । ಸಂಸ್ಥಾನೇನಾಮಕಿಲ್ಬಿಷಾಂ ಬ್ರಹ್ಮಜಾಯಾಂ ಪುನರ್ಬೃಹಸ್ಪತಯೇ ಪ್ರಾಯಚ್ಛತ್ । ತತೋ ವರುಣೋಽನ್ವರ್ತಿತಾ ॥ ಋತಿಃ ಸೌತ್ರೋ ಧಾತುರ್ಘೃಣಾಯಾಂ ವರ್ತತೇ । ತಸ್ಯ ತೃಚಿ ರೂಪಂ ॥ ಸೋಮಮನುನೋದಯಿತಾಸೀತ್ । ಸರ್ವಥಾ ತ್ವಂ ಪರಿಗೃಹಾಣೇತಿ ದಯಾಮಕಾರ್ಷೀತ್ । ತಥಾ ಮಿತ್ರಶ್ಚ । ಅನಂತರಂ ಹೋತಾ ದೇವಾನಾಮಾಹ್ವಾತಾ ಮನುಷ್ಯಾಣಾಂ ಹೋಮನಿಷ್ಪಾದಕೋ ವಾಗ್ನಿರ್ಹಸ್ತಗೃಹ್ಯ ತಾಂ ಹಸ್ತೇ ಗೃಹೀತ್ವಾ ನಿನಾಯ । ಆನೈಷೀತ್ । ಪ್ರಾದಾದಿತ್ಯರ್ಥಃ ॥ ಹಸ್ತಗೃಹ್ಯ । ನಿತ್ಯಂ ಹಸ್ತೇ ಪಾಣಾವುಪಯಮನೇ । ಪಾ ೧-೪-೭೭ । ಇತಿ ಹಸ್ತಶಬ್ದಸ್ಯ ಗತಿಸಂಜ್ಞಾಯಾಂ ಗ್ರಹಿಣಾ ಸಮಾಸೇ ಲ್ಯಪ್ । ಏಕಾರಲೋಪಶ್ಛಾಂದಸಃ । ಯದ್ವಾ । ಹಸ್ತಶಬ್ದಾತ್ಸ್ವರಸ್ಯ ಗೃಹೇಶ್ಛಾಂದಸೌ ಸಮಾಸಲ್ಯಪೌ ॥**

|| ಪ್ರತಿಪದಾರ್ಥ ||

**ಪ್ರಥಮಃ**— ಮುಖ್ಯನೂ । **ರಾಜಾ**— ಪ್ರಭುವೂ ಆದ । **ಸೋಮಃ** - ಸೋಮನು । **ಅಹೃಣೀಯಮಾನಃ**— ದೋಷನಿವೃತ್ತಿಯ ಫಲವಾಗಿ ಯಾವ ಸಂಕೋಚವೂ ಇಲ್ಲದೆ । **ಬ್ರಹ್ಮಜಾಯಾಂ**— ಬ್ರಹ್ಮಪತ್ನಿಯಾದ ಜುಹೂದೇವಿಯನ್ನು । **ಪುನಃ**— ತಿರುಗಿಯೂ । **ಪ್ರಾಯಚ್ಛತ್**— ಅವಳ ಪತಿಗೆ ಅರ್ಪಿಸಿದನು । **ವರುಣಃ**— ವರುಣನು । **ಅನ್ವರ್ತಿತಾ**— ಈ ಕಾರ್ಯಕ್ಕೆ ಅನುಮತಿದಾಯಕನಾಗಿ । **ಆಸೀತ್**— ಆದನು । **ಮಿತ್ರಃ**— ಮಿತ್ರನೂ ಅನುಮೋದಿಸಿದನು । **ಹೋತಾ**— ಹೋಮಸಂಪಾದಕನಾದ । **ಅಗ್ನಿಃ** — ಅಗ್ನಿಯು । **ಹಸ್ತಗೃಹ್ಯ**— ಅವಳ ಕೈಯನ್ನು ಹಿಡಿದು । **ಆ ನಿನಾಯ**— ಕರೆತಂದನು.

|| ಭಾವಾರ್ಥ ||

ಮುಖ್ಯಪ್ರಭುವಾದ ಸೋಮನು ದೋಷನಿವೃತ್ತಿಯ ಫಲವಾಗಿ ಯಾವ ಸಂಕೋಚವೂ ಇಲ್ಲದೆ ಬ್ರಹ್ಮಪತ್ನಿಯಾದ ಜುಹೂವನ್ನು ತಿರುಗಿಯೂ ಅವಳ ಪತಿಗೆ ಅರ್ಪಿಸಿದನು. ವರುಣನು ಈ ಕಾರ್ಯಕ್ಕೆ ಅನುಮತಿದಾಯಕನಾದನು. ಮಿತ್ರನು ದೇವತೆಗಳನ್ನು ಕರೆಯುವವನಾದನು. ಅಗ್ನಿಯು ಅವಳ ಕೈಯನ್ನು ಹಿಡಿದು ಕರೆತಂದನು.

## English Translation.

First, the royal Soma, without being ashamed, rstored Brahma's wife (to Brihaspati), Varuna was the inviter, and Mitra, Agni as the ministrant priest taking her by the hand, led her (to her husband).

|| ಸಂಹಿತಾಪಾಠಃ ||

ಹಸ್ತೇನೈವ ಗ್ರಾಹ್ಯ ಆಧಿರಸ್ಯಾ ಬ್ರಹ್ಮಜಾಯೇಯಮಿತಿ ಚೇದವೋಚನ್ ।
ನ ದೂತಾಯ ಪ್ರಹ್ಯೇ ತಸ್ಥ ಏಷಾ ತಥಾ ರಾಷ್ಟ್ರಂ ಗುಪಿತಂ ಕ್ಷತ್ರಿಯಸ್ಯ ॥೩॥

|| ಪದಪಾಠಃ ||

ಹಸ್ತೇನ । ಏವ । ಗ್ರಾಹ್ಯಃ । ಆऽಧಿಃ । ಅಸ್ಯಾಃ । ಬ್ರಹ್ಮಽಜಾಯಾ । ಇಯಂ । ಇತಿ । ಚ । ಇತ್ ।
ಅವೋಚನ್ ।
ನ । ದೂತಾಯ । ಪ್ರಽಹ್ಯೇ । ತಸ್ಥೇ । ಏಷಾ । ತಥಾ । ರಾಷ್ಟ್ರಂ । ಗುಪಿತಂ । ಕ್ಷತ್ರಿಯಸ್ಯ ॥ ೩ ॥

|| ಸಾಯಣಭಾಷ್ಯಂ ||

ದೇವಾ ಬೃಹಸ್ಪತಿಮೂಚುಃ । ಹೇ ಬೃಹಸ್ಪತೇ ಅಸ್ಯಾ ಆಧಿಃ । ಆಧೀಯಂತ ಆಭರಣಾನ್ಯತ್ರೇ-ತ್ಯಾಧಿಃ ಶರೀರಂ ॥ ಉಪಸರ್ಗೇ ಘೋಃ ಕಿಃ । ಪಾ. ೩-೩-೯೨ । ಇತಿ ಕಿಪ್ರತ್ಯಯಃ ॥ ಅಸ್ಯಾಃ ಶರೀರಂ ಹಸ್ತೇನೈವ ಗ್ರಾಹ್ಯೋ ಗೃಹೀತವ್ಯನೇವ । ಪುನಸ್ತೇ ದೇವಾ ಇದಾನೀಮಿಯಂ ಬ್ರಹ್ಮಜಾಯೇತ್ಯೇವಾ-ವೋಚನ್ । ಅವಾದಿಷುಃ ॥ ಚಶಬ್ದಃಶ್ಚೇದರ್ಥೇ । ಅತ ಏವ ನಿಪಾತೈರ್ಯದ್ಯದಿಹಂತೇತಿ ತಿಙೋ ನಿಘಾತಾಭಾವಃ । ಬ್ರೂಞ್ ವ್ಯಕ್ತಾಯಾಂ ವಾಚಿ । ಲುಙಿ ಬ್ರುವೋ ವಚಿಃ । ಅಸ್ಯತಿವಕ್ತಿಖ್ಯಾತಿಭ್ಯೋऽ-ಙ್ಙಿತಿ ಚ್ಲೇರಙಾದೇಶಃ । ವಚ ಉಮಿತ್ಯುಮಾಗಮಃ । ಅಡಾಗಮಸ್ವರಃ । ಇದವಧಾರಣೇ ॥ ಏಷಾ ಬ್ರಹ್ಮಜಾಯಾ ಪುರಾ ಪ್ರಹ್ಯೇ ॥ ಹಿ ಗತೌ ವೃದ್ಧೌ ಚ । ಕರ್ಮಣ್ಯೌಣಾದಿಕಃ ಕ್ವಿಪ್ । ತುಗಭಾವ-ಶ್ಛಾಂದಸಃ । ಜಾದ್ವಚನೇ ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣಾಭಾವಃ । ಉದಾತ್ತಸ್ವರಿತಯೋ-ರ್ಯಣ ಇತಿ ಸುಪಃ ಸ್ವರಿತತ್ವಂ ॥ ಪ್ರಹಿತಾಯ ತ್ವದೀಯಾ ಭಾರ್ಯಾನ್ವೇಷಣಾರ್ಥಂ ಪ್ರೇಷಿತಾಯ ದೂತಾಯ ತಥಾ ನ ತಸ್ಥೇ । ಸ್ವಾತ್ಮಾನಂ ನ ಪ್ರಕಾಶಯತಿ ॥ ತಿಷ್ಠತೇರ್ಲಿಟಿ ಪ್ರಕಾಶನಸ್ಥೇಯಾಖ್ಯಯೋಶ್ಚ । ಪಾ. ೧-೩-೨೩ । ಇತ್ಯಾತ್ಮನೇಪದಂ । ಶ್ಲಾಘಹ್ನುಙ್ಸ್ಥಾಶಪಾಂ । ಪಾ. ೧-೪-೩೪ । ಇತಿ ದೂತಸ್ಯ ಸಂಪ್ರದಾನಸಂಜ್ಞಾ ॥ ತತ್ರ ದೃಷ್ಟಾಂತಃ । ಯಥಾ ಕ್ಷತ್ರಿಯಸ್ಯ ರಾಜ್ಞೋ ಗುಪಿತಂ ರಕ್ಷಿತಂ ರಾಷ್ಟ್ರಂ ರಾಜ್ಯಂ ಶತ್ರವೇ ಯಥಾ ನ ಪ್ರಕಾಶಯತಿ ತದ್ವದಸೌ ದೌರ್ಭಾಗ್ಯಯುಕ್ತತಯಾ ತಸ್ಮೈ ಸ್ವಾತ್ಮಾನಂ ನ ಪ್ರಕಾಶಿತವತೀ । ಇದಾನೀಂ ತು ತದ್ರಾಹಿತ್ಯೇನ ಪ್ರಕಾಶಮಾನೇಯಂ ಬ್ರಹ್ಮಜಾಯೈವೇತ್ಯಬ್ರುವನ್ ॥

|| ಪ್ರತಿಪದಾರ್ಥ ||

(ಎಲೈ ಬೃಹಸ್ಪತಿಯೇ) **ಕ್ಷತ್ರಿಯಸ್ಯ**—ಕ್ಷತ್ರಿಯನಿಂದ । **ಗುಪಿತಂ**—ರಕ್ಷಿಸಲ್ಪಟ್ಟ । **ರಾಷ್ಟ್ರಂ ಇವ**—ರಾಜ್ಯರಕ್ಷಣೆಯು ಶತ್ರುಗಳಿಗೆ ಕಾಣಿಸಿಕೊಳ್ಳದಿರುವಂತೆ । " **ಏಷಾ**—ಈ ಬ್ರಹ್ಮಪತ್ನಿಯು । **ಪ್ರಹ್ವೇ**—ಅವನನ್ನು

ಹುಡುಕಲು ಕಳುಹಲ್ಪಟ್ಟ । **ದೂತಾಯ**—ದೂತನಿಗೆ । **ತಥಾ ನ ತಸ್ಥೇ**—ಕಾಣಿಸಿಕೊಳ್ಳಲಿಲ್ಲ । **ಅಸ್ಯಾಃ**—ಇವಳ । **ಅಧಿಃ**—ಶರೀರವು । **ಹಸ್ತೇನೈವ**—ಪಾಣಿಯಿಂದಲೇ । **ಗ್ರಾಹ್ಯಃ**—ಪರಿಗ್ರಹಿಸಲ್ಪಡತಕ್ಕದ್ದು । **ಇಯಂ**—ಇವಳು । **ಬ್ರಹ್ಮಜಾಯಾ**—ಬ್ರಹ್ಮಪತ್ನಿಯು " । **ಇತಿ**—ಎಂಬುದಾಗಿ । **ಅವೋಚನ್**—ದೇವತೆಗಳು ಹೇಳಿದರು.

॥ ಭಾವಾರ್ಥ ॥

" ಎಲೈ ಬೃಹಸ್ಪತಿಯೇ, ಕ್ಷತ್ರಿಯನಿಂದ ರಕ್ಷಿತವಾದ ರಾಷ್ಟ್ರರಕ್ಷಣೆಯ ರಹಸ್ಯವು ಶತ್ರುಗಳಿಗೆ ಕಾಣಿಸದಿರುವಂತೆ ಈ ಬ್ರಹ್ಮಪತ್ನಿಯು ಅವಳನ್ನು ಹುಡುಕಲು ಕಳುಹಲ್ಪಟ್ಟ ದೂತನಿಗೆ ಕಾಣಿಸಿಕೊಳ್ಳಲಿಲ್ಲ ಇವಳ ಶರೀರವನ್ನು ಪಾಣಿಗ್ರಹಣ ಪೂರ್ವಕವಾಗಿಯೇ ಪರಿಗ್ರಹಿಸಬೇಕು ಇವಳು ಬ್ರಹ್ಮಪತ್ನಿಯು " ಎಂದು ದೇವತೆಗಳು ಹೇಳಿದರು.

English Translation

And (the gods) said (to Brihaspati), " This pledge of hers is to be taken by the hand, this is the wife of Brahma, she has not made herself known to the messenger sent (to seek her), so is the kingdom of a Kshatriya protected."

॥ ಸಂಹಿತಾಪಾಠಃ ॥

ದೇವಾ ಏತಸ್ಯಾಮವದಂತ ಪೂರ್ವೇ ಸಪ್ತಋಷಯಸ್ತಪಸೇ ಯೇ ನಿಷೇದುಃ।
ಭೀಮಾ ಜಾಯಾ ಬ್ರಾಹ್ಮಣಸ್ಯೋಪನೀತಾ ದುರ್ಧಾಂ ದಧಾತಿ ಪರಮೇ
ವ್ಯೋಮನ್ ॥ ೪ ॥

॥ ಪದಪಾಠಃ ॥

ದೇವಾಃ । ಏತಸ್ಯಾಂ । ಅವದಂತ । ಪೂರ್ವೇ । ಸಪ್ತಋಷಯಃ । ತಪಸೇ । ಯೇ । ನಿಽಸೇದುಃ ।
ಭೀಮಾ । ಜಾಯಾ । ಬ್ರಾಹ್ಮಣಸ್ಯ । ಉಪಽನೀತಾ । ದುಃಽಧಾಂ । ದಧಾತಿ । ಪರಮೇ । ವಿಽಓಮನ್॥೪॥

॥ ಸಾಯಣಭಾಷ್ಯಂ ॥

ಪೂರ್ವೇ ಚಿರಂತನಾ ದೇವಾ ಆದಿತ್ಯಾದಯ ಏತಸ್ಯಾಂ ವಿಷಯೇಽವದಂತ । ಇಯಂ ಪಾಪರಹಿತೇತ್ಯೇವಾದಿಷುಃ । ತಥಾ ಯೇ ಸಪ್ತರ್ಷಯಃ ॥ ಸಮಾಸಸ್ವರಃ ॥ ಸಪ್ತಸಂಖ್ಯಾಕಾ ಋಷಯಸ್ತಪಸೇ ತಪಶ್ಚರಣಾಯ ನಿಷೇದುಃ ನಿಷಣ್ಣಾ ಬಭೂವುಃ ॥ ಸದೇರ್ಲಿಟಿ ರೂಪಂ । ಉಪಸರ್ಗೇಣ ಸಮಾಸಃ ।

ಯದ್ಯೋಗಾಪನಿಘಾತಃ ॥ ತೇऽಸ್ಯ ವಾದಿಷುಃ । ತತೋ ಭೀಮಾ ಶತ್ರುರೂಪಾಣಾಂ ಪಾಪಾನಾಂ ಭಯಂಕರೀ ಸುಕೃತವತ್ಯೇಷಾ ಜಾಯಾ ಬ್ರಾಹ್ಮಣಸ್ಯ ಬೃಹಸ್ಪತೇರುಪನೀತಾ । ಸಮೀಪೇ ದೇವೈಃ ಸ್ಥಾಪಿತಾ ॥ ಣೀಞ್ ಪ್ರಾಪಣೇ । ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ತಥಾ ಹಿ । ತಪಃ ಪ್ರಭಾವೋ ದುರ್ಧಾಂ ದುರ್ಧಾನಾಮಪಿ ಪರಮೇ ವ್ಯೋಮನ್ ವ್ಯೋಮನ್ಯುತ್ಕೃಷ್ಟೇ ಸ್ಥಾನೇ ದಧಾತಿ । ವಿದಧಾತಿ ಖಲು । ತಸ್ಮಾದೇನಾಮಪಿ ದೇವತಾಪರಿಗ್ರಹರೂಪಸ್ತಪೋಮಹಿಮಾ ಬೃಹಸ್ಪತೇರಂತಿಕೇ ಸ್ಥಾಪಯತಿ ॥

॥ ಪ್ರತಿಪದಾರ್ಥ ॥

**ಪೂರ್ವೇ**— ಪುರಾತನರಾದ । **ದೇವಾಃ**— ಆದಿತ್ಯಾದಿ ದೇವತೆಗಳು । **ಏತಸ್ಯಾಂ** — ಈ ಜುಹೂವಿನ ವಿಷಯದಲ್ಲಿ । **ಅವದಂತ**-- ಪ್ರಶಂಸಿಸಿ ಮಾತನಾಡಿದ್ದಾರೆ । **ಯೇ**— ಯಾರು । **ತಪಸೇ**— ತಪಸ್ಸನ್ನು ಆಚರಿಸಲು । **ನಿಷೇದುಃ**— ಆಸಕ್ತರಾಗಿದ್ದರೋ । **ಸಪ್ತ ಋಷಯಃ**— ಅಂತಹ ಸಪ್ತರ್ಷಿಗಳೂ ಪ್ರಶಂಸಿಸಿದ್ದಾರೆ **ಭೀಮಾ**— ಪಾಪರೂಪವಾದ ಶತ್ರುಗಳಿಗೆ ಭಯಂಕರಳಾದ । **ಜಾಯಾ**— ಈ ಬ್ರಹ್ಮಪತ್ನಿಯು । **ಬ್ರಾಹ್ಮಣಸ್ಯ**— ಬೃಹಸ್ಪತಿಯ ಸಮೀಪಕ್ಕೆ । **ಉಪನೀತಾ**— ಸೇರಿಸಲ್ಪಟ್ಟಿದ್ದಾಳೆ । (**ತಪಃ**— ತಪಸ್ಸು) । **ದುರ್ಧಾಂ**— ದುಃಖ ಭೂತವಾದ ಪಾಪವನ್ನೂ (ಶುದ್ಧಿಗೊಳಿಸಿ) । **ಪರಮೇ ವ್ಯೋಮನ್**— ಅತ್ಯುತ್ಕೃಷ್ಟವಾದ ಲೋಕದಲ್ಲಿ । **ದಧಾತಿ**— ಸ್ಥಾಪಿಸುತ್ತದೆ.

॥ ಭಾವಾರ್ಥ ॥

ಪುರಾತನರಾದ ಆದಿತ್ಯಾದಿ ದೇವತೆಗಳು ಈ ಜುಹೂವನ್ನು ಪ್ರಶಂಸಿಸಿ ಮಾತನಾಡಿದ್ದಾರೆ. ತಪಸ್ಸನ್ನು ಆಚರಿಸಲು ಆಸಕ್ತರಾಗಿದ್ದ ಸಪ್ತರ್ಷಿಗಳೂ ಪ್ರಶಂಸಿಸಿದ್ದಾರೆ. ಪಾಪರೂಪವಾದ ಶತ್ರುಗಳಿಗೆ ಭಯಂಕರಳಾದ ಈ ಬ್ರಹ್ಮಪತ್ನಿಯು ಬೃಹಸ್ಪತಿಯ ಸಮೀಪಕ್ಕೆ ಸೇರಿಸಲ್ಪಟ್ಟಿದ್ದಾಳೆ. ತಪಸ್ಸು ದುಃಖಭೂತವಾದ ಪಾಪವನ್ನೂ ಸಹ ಶುದ್ಧಿಗೊಳಿಸಿ ಅತ್ಯುತ್ಕೃಷ್ಟವಾದ ಲೋಕದಲ್ಲಿ ಸ್ಥಾಪಿಸುತ್ತದೆ.

## English Translation.

The ancient deities spoke about her, the seven Rishis who were engaged in penance. The terrible wife of Brahma has been brought back (to her husband); (penance) elevates sin to the highest heaven.

॥ ಸಂಹಿತಾಪಾಠಃ ॥

ಬ್ರಹ್ಮಚಾರೀ ಚರತಿ ವೇವಿಷದ್ವಿಷಃ ಸ ದೇವಾನಾಂ ಭವತ್ಯೇಕಮಂಗಂ ।
ತೇನ ಜಾಯಾಮನ್ವವಿಂದದ್ಬೃಹಸ್ಪತಿಃ ಸೋಮೇನ ನೀತಾಂ ಜುಹ್ವಂ ನ
ದೇವಾಃ ॥ ೫ ॥

॥ ಪದಪಾಠಃ ॥

ಬ್ರಹ್ಮಚಾರೀ । ಚರತಿ । ವೇವಿಷತ್ । ವಿಷಃ । ಸಃ । ದೇವಾನಾಂ । ಭವತಿ । ಏಕಂ । ಅಂಗಂ । ತೇನ । ಜಾಯಾಂ । ಅನು । ಅವಿಂದತ್ । ಬೃಹಸ್ಪತಿಃ । ಸೋಮೇನ । ನೀತಾಂ । ಜುಹ್ವಂ । ನ । ದೇವಾಃ ॥ ೫ ॥

॥ಸಾಯಣಭಾಷ್ಯಂ॥

ಏವಂ ಸ್ವಪತಿರ್ಮಾಮುಲಭತೇತಿ ಜುಹೂಃ ಪರೋಕ್ಷತಯಾ ವದತಿ । ಹೇ ದೇವಾಃ ಪೂರ್ವಂ ಸ ಬ್ರಹ್ಮಚಾರೀ ಜಾಯಾಭಾವೇನ ಬ್ರಹ್ಮಚಾರೀ ಚರತಿ । ಅತ ಏವ ವಿಷಃ ಸರ್ವೇಷು ಯಜ್ಞೇಷು ವ್ಯಾಪ್ತಾನ್ದೇವಾನ್ವೇವಿಷತ್ ಸ್ತುತಿಭಿರ್ಹವಿರ್ಭಿಶ್ಚ ವ್ಯಾಪ್ನುವನ್ ದೇವಾನಾಮೇಕಮಂಗಂ ಭವತಿ। ಜಾಯಾಪತೀ ಯಜ್ಞಸ್ಯ ದ್ವೇ ಅಂಗೇ ಖಲು ॥ ವೇವಿಷತ್ । ವಿಷ್ಲೃ ವ್ಯಾಪ್ತೌ ಜೌಹೋತ್ಯಾದಿಕಃ । ನಿಜಾಂ ತ್ರಯಾಣಾಂ ಗುಣಃ ಶ್ಲೌ । ಪಾ. ೭-೪-೭೫ । ಇತ್ಯಭ್ಯಾಸಸ್ಯ ಗುಣಃ । ಶತುರ್ನಾಭ್ಯಸ್ತಾಚ್ಛತುರಿತಿ ನುಮಾಗಮಪ್ರತಿಷೇಧಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ತೇನ ದೇವಾನಾಂ ಪರಿಚರಣೇನ ಬೃಹಸ್ಪತಿರ್ಜಾಯಾಂ ಜುಹೂನಾಮಿಕಾಂ ಮಾಮನ್ವವಿಂದತ್ । ಅನುಗಮ್ಯಾಲಭತ । ನಶಬ್ದ ಉಪಮಾರ್ಥೇ । ಪೂರ್ವಂ ಯಥಾ ಸೋಮೇನ ನೀತಾಂ ಸೋಮೋ ದದದ್ಗಂಧರ್ವಾಯ । ಋ. ೧೦-೮೫-೪೧ । ಇತ್ಯಾದಿಕ್ರಮೇಣ ನೀತಾಂ ಜುಹೂಂ ಜುಹೂಂ ಯಥಾ ಲಬ್ಧವಾನ್ ತದ್ವದಿದಾನೀಮಪಿ ॥ ಜುಹೂಂ । ಹು ದಾನಾದನಯೋಃ । ಅನ್ಯೇಭ್ಯೋಽಪಿ ದೃಶ್ಯತ ಇತಿ ಕ್ವಿಪ್ । ಜುಹೋತೇರ್ದ್ವೇ ಚೇತಿ ದ್ವಿರ್ವಚನಂ ದೀರ್ಘಶ್ಚ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತ್ಯುದಾತ್ತತ್ವೇ ಪ್ರಾಪ್ತೇ ನೋಙ್ಧಾತ್ವೋರಿತಿ ಪ್ರತಿಷೇಧ ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ । (**ಸಃ**—ಆ ಬೃಹಸ್ಪತಿಯು) **ಬ್ರಹ್ಮಚಾರೀ**—ಬ್ರಹ್ಮಚಾರಿಯಾಗಿಯೇ ಎಂದರೆ ಪತ್ನೀರಹಿತನಾಗಿಯೇ । **ಚರತಿ**—ಸಂಚರಿಸುತ್ತಿದ್ದನು(ಆದ್ದರಿಂದ)। **ವಿಷಃ**—ಸಮಸ್ತಯಜ್ಞಗಳಿಗೂ ಬರುವ ದೇವತೆಗಳನ್ನು । **ವೇವಿಷತ್**—ಸ್ತುತಿಗಳಿಂದಲೂ, ಹವಿಸ್ಸಿನಿಂದಲೂ ಬೃಹಸ್ಪತಿಯು ಆರಾಧಿಸಿದರೂ ಅದು । **ದೇವಾನಾಂ**—ದೇವತೆಗಳನ್ನು ಪೂಜಿಸುವ ಯಜ್ಞದ । **ಏಕಂ ಅಂಗಂ**—ಒಂದು ಅಂಗ (ಭಾಗ) ಮಾತ್ರ । **ಭವತಿ**—ಆಗುತ್ತದೆ । **ತೇನ**—ಆ ದೇವತಾರಾಧನೆಯಿಂದ । **ಸೋಮೇನ**—(ಪೂರ್ವದಲ್ಲಿ ಎಂದರೆ ವಿವಾಹ ಕಾಲದಲ್ಲಿ) ಸೋಮನಿಂದ । **ನೀತಾಂ**—ಕರೆತರಲ್ಪಟ್ಟ । **ಜುಹ್ವಂ ನ**—ಜುಹೂ ಎಂಬ ಹೆಸರಿನ ನನ್ನನ್ನು ಯಾವರೀತಿ ಪಡೆದನೋ ಅದರಂತೆ । **ಬೃಹಸ್ಪತಿಃ**—ಬೃಹಸ್ಪತಿಯು । **ಜಾಯಾಂ**—ಜುಹೂ ಎಂಬ ಅವನ ಪತ್ನಿಯಾದ ನನ್ನನ್ನು । **ಅನು ವಿಂದತ್**—ಈಗ ಪುನಃ ಪಡೆದನು.

॥ ಭಾವಾರ್ಥ ॥

ಎಲೈ ದೇವತೆಗಳೇ, ಬೃಹಸ್ಪತಿಯು ಪೂರ್ವದಲ್ಲಿ ಬ್ರಹ್ಮಚಾರಿಯಾಗಿ ಎಂದರೆ ಪತ್ನೀರಹಿತನಾಗಿ ಸಂಚರಿಸುತ್ತಿದ್ದನು. ಯಜ್ಞಮಾಡಲು ಯಜಮಾನ ಮತ್ತು ಅವನ ಪತ್ನಿಯೂ ಸಹ ಅವಶ್ಯಕವಾದ್ದರಿಂದ ಅವರಿಬ್ಬರೂ

ಯಜ್ಞಕ್ಕೆ ಎರಡು ಮುಖ್ಯವಾದ ಅಂಗಗಳು. ಬೃಹಸ್ಪತಿಯು ಪತ್ನೀರಹಿತನಾದ್ದರಿಂದ ಅವನು ಯಜ್ಞಗಳಲ್ಲಿ ದೇವತೆಗಳನ್ನು ಸ್ತುತಿಗಳಿಂದಲೂ ಹವಿಸ್ಸಿನಿಂದಲೂ ಆರಾಧಿಸಿದರೂ ಅದು ಯಜ್ಞದ ಒಂದು ಅಂಗಮಾತ್ರವಾಯಿತು. ಪತ್ನಿಯಿಲ್ಲದ್ದರಿಂದ ಎರಡು ಅಂಗಗಳನ್ನು ನೆರವೇರಿಸಿದಂತಾಗಲಿಲ್ಲ ಆದ್ದರಿಂದಲೇ ಯಜ್ಞದಲ್ಲಿ ದೇವತೆಗಳು ಬೃಹಸ್ಪತಿಯಿಂದ ಅರ್ಪಿತವಾದ ಆಹುತಿಯನ್ನು ಸ್ವೀಕರಿಸುವ ಉದ್ದೇಶದಿಂದಲೇ ಸೋಮನು ಕರೆತಂದು ಒಪ್ಪಿಸಿದ ತನ್ನ ಪತ್ನಿಯನ್ನು ಬೃಹಸ್ಪತಿಯು ಹಿಂದಿನಂತೆ ಪಡೆದನು.

## English Translation·

He leads the life of a Brahmacharin, even adoring all the gods; he becomes a portion of the gods; therefore Brihaspati obtained his wife (formerly) brought him by Soma, as the gods receive an offering.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಜುಹೂ ಎಂಬ ಬೃಹಸ್ಪತಿಯ ಪತ್ನಿಯು ದೇವತೆಗಳನ್ನು ಸಂಬೋಧಿಸಿ ಈರೀತಿ ಹೇಳಿದಾಳೆ- ಎಲೈ ದೇವತೆಗಳೇ, ನನ್ನ ಪತಿಯಾದ ಬೃಹಸ್ಪತಿಯು ನನ್ನನ್ನು ತ್ಯಜಿಸಿದ ಮೇಲೆ ಅವನು ಬ್ರಹ್ಮಚಾರಿಯಾಗಿಯೇ ಎಂದರೆ ಪತ್ನಿಯಿಲ್ಲದೆ ಒಬ್ಬಂಟಿಗನಾಗಿ ಸಂಚರಿಸುತ್ತಿದಾನೆ. ಅವನು ಮಾಡುವ ಯಜ್ಞಗಳಲ್ಲಿ ಅವನಿಗೆ ಪತ್ನಿಯಿಲ್ಲದ್ದರಿಂದ ಯಜ್ಞವು ಸಾಂಗವಾಗುವುದಿಲ್ಲ. ಯಜ್ಞ ಕರ್ಮಕ್ಕೆ ಪತಿ ಪತ್ನಿಯರು ಎರಡು ಮುಖ್ಯ ಅಂಗಗಳು. ಪತ್ನೀರಹಿತನಾಗಿ ಬೃಹಸ್ಪತಿಯು ಮಾಡುವ ಯಜ್ಞವು ಒಂದು ಅಂಗಮಾತ್ರವಾಗಿ ಆಗುವುದರಿಂದ ಅದು ಪೂರ್ಣವಾಗುವುದಿಲ್ಲ. ದೇವತೆಗಳು ಅಪೂರ್ಣವಾಗುವ ಆ ಯಜ್ಞದಲ್ಲಿ ಹವಿರಾದಿಗಳನ್ನು ಸ್ವೀಕರಿಸುವುದಿಲ್ಲ. ಆದ್ದರಿಂದಲೇ ನನ್ನ ಮತ್ತು ಬೃಹಸ್ಪತಿಯ ವಿವಾಹ ಕಾಲದಲ್ಲಿ ಸೋಮನು ತಂದೊಪ್ಪಿಸಿದ ನನ್ನನ್ನು ಬೃಹಸ್ಪತಿಯು ಸ್ವೀಕರಿಸಿದಂತೆ ಈಗಲೂ ದೇವತೆಗಳು ತಂದೊಪ್ಪಿಸಿದ ದೋಷರಹಿತಳಾದ ನನ್ನನ್ನು ಪುನಃ ಪಡೆದನು ಎಂದು ಮುಖ್ಯಾಭಿಪ್ರಾಯವು.

ಭಾಷ್ಯಕಾರರು ಇಲ್ಲಿ **ಸೋಮೋ ದದದ್ಗಂಧರ್ವಾಯ** ಎಂಬ ಋ. ಸಂ. ೧೦-೮೫-೪೧ ಋಕ್ಕನ್ನು ಉದಾಹರಿಸಿದ್ದಾರೆ—

**ಸೋಮೋ ದದದ್ಗಂಧರ್ವಾಯ ಗಂಧರ್ವೋ ದದದಗ್ನಯೇ ।**
**ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಂ ॥**

(ಋ. ಸಂ. ೧೦-೮೫-೪)

ಈ ಋಕ್ಕಿನ ಅರ್ಥವನ್ನು ತಿಳಿಯಬೇಕಾದರೆ ಅಲ್ಲಿಯೇ ಹೇಳಿರುವ ಇದರ ಹಿಂದಿನ ಋಕ್ಕನ್ನು ತಿಳಿಯಬೇಕು.

**ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ।**
**ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥**

(ಋ. ಸಂ. ೧೦-೮೫-೪೦)

ವಿವಾಹಾತ್ಪೂರ್ವದಲ್ಲಿ ಕನ್ಯೆಯು ಬಾಲ್ಯಾವಸ್ಥೆಯಲ್ಲಿರುವಾಗ ಅವಳಿಗೆ ಸೋಮನು ಪತಿಯೆಂದೂ ಎಂದರೆ ಪಾಲಕನೆಂದೂ, ಅನಂತರ ಕೌಮಾರಾವಸ್ಥೆಯಲ್ಲಿ ಗಂಧರ್ವನು ಪಾಲಕನೆಂದೂ ಅನಂತರ ಪ್ರೌಢಾವಸ್ಥೆಯಲ್ಲಿ ಎಂದರೆ ವಿವಾಹ

ವಯಸ್ಕಳಾಗಿ ಯೌವನಾವಸ್ಥೆಯಲ್ಲಿರುವ ಕನ್ಯೆಗೆ ಅಗ್ನಿಯು ಪತಿ ಅಥವಾ ಪಾಲಕನೆಂದೂ ಹೇಳಲ್ಪಟ್ಟಿರುವುದು. ಆದ್ದರಿಂದ ಕನ್ಯೆಯು ಬಾಲ್ಯದಿಂದ ಕೌಮಾರಾವಸ್ಥೆಗೂ, ಅಲ್ಲಿಂದ ಯೌವನಾವಸ್ಥೆಗೂ ಬರುವ ವಿಷಯವನ್ನು ಸೋಮೋ ದದದ್ಗಂಧರ್ವಾಯ ಎಂಬ ಋಕ್ಕಿನಿಂದ ಹೇಳಿದೆ. ಸೋಮನು ಈ ಕನ್ಯೆಯನ್ನು ಗಂಧರ್ವನ ವಶಕ್ಕೆ ಕೊಡುವನು, ಗಂಧರ್ವನು ಅಗ್ನಿಯವಶಕ್ಕೆ ಕೊಡುವನು, ಅಗ್ನಿಯು ಆ ಕನ್ಯೆಯ ಸಹಜಪತಿಯಾದ ಮಾನವಪತಿಯ ವಶಕ್ಕೆ ಒಪ್ಪಿಸುವನು ಎಂದು ವರ್ಣಿಸಲಾಗಿದೆ. ಪ್ರಕೃತ ಋಕ್ಕಿನಲ್ಲಿ ಸೋಮನು ಜುಹೂವನ್ನು ಬೃಹಸ್ಪತಿಗೆ ಒಪ್ಪಿಸಿದನು ಎಂದರೆ ಹಿಂದೆ ವಿವಾಹಕಾಲದಲ್ಲಿ ಶಾಸ್ತ್ರವಿಧಿಗನುಸಾರವಾಗಿ ಸೋಮನಿಂದ ಗಂಧರ್ವನಿಗೂ, ಗಂಧರ್ವನಿಂದ ಅಗ್ನಿಗೂ ಕ್ರಮವಾಗಿ ಬಂದಿರುವುದಕ್ಕೆ ಮೊದಲು ಸೋಮನೇ ಕಾರಣನಾದ್ದರಿಂದ ಇಲ್ಲಿ ಸೋಮನನ್ನೇ ನಿರ್ದೇಶಿಸಲಾಗಿದೆ.

॥ ಸಂಹಿತಾಪಾಠಃ ॥

ಪುನರ್ವೈ ದೇವಾ ಅದದುಃ ಪುನರ್ಮನುಷ್ಯಾ ಉತ ।
ರಾಜಾನಃ ಸತ್ಯಂ ಕೃಣ್ವಾನಾ ಬ್ರಹ್ಮಜಾಯಾಂ ಪುನರ್ದದುಃ ॥ ೬ ॥

॥ ಪದಪಾಠಃ ॥

ಪುನಃ । ವೈ । ದೇವಾಃ । ಅದದುಃ । ಪುನಃ । ಮನುಷ್ಯಾಃ । ಉತ ।
ರಾಜಾನಃ । ಸತ್ಯಂ । ಕೃಣ್ವಾನಾಃ । ಬ್ರಹ್ಮಽಜಾಯಾಂ । ಪುನಃ । ದದುಃ ॥ ೬ ॥

॥ ಸಾಯಣಭಾಷ್ಯಂ ॥

**ಲಾಭಹೇತುಮಾಹ । ದೇವಾ ಬ್ರಹ್ಮಜಾಯಾಂ ಜುಹೂಂ ಬೃಹಸ್ಪತಯೇ ಪುನರದದುಃ । ವೈ-ಶಬ್ದಃ ಪ್ರಸಿದ್ಧವಾಚೀ । ಉತಾಪ್ಯರ್ಥೇ । ಮನುಷ್ಯಾ ಅಪಿ ಪುನರದದುಃ । ಏವಂ ದೇವಮನುಷ್ಯೈಃ ಕೃತಂ ದಾನಂ ಸತ್ಯಂ ಯಥಾರ್ಥಂ ಕೃಣ್ವಾನಾಃ ಕುರ್ವಾಣಾಃ ರಾಜಾನೋಽಪಿ ಪುನಸ್ತಸ್ಮೈ ದದುಃ । ಏವಮುವ್ಯ-ವಹಾರ್ಯನಿಮಿತ್ತಂ ಪಾಪಮಪಿ ವ್ಯನಾಶಯನ್ನಿತಿ ಭಾವಃ ॥**

॥ ಪ್ರತಿಪದಾರ್ಥ ॥

**ದೇವಾಃ**— ದೇವತೆಗಳು । **ಬ್ರಹ್ಮಜಾಯಾಂ**— ಬ್ರಹ್ಮಪತ್ನಿಯಾದ ಜುಹೂವನ್ನು । **ಪುನಃ**— ತಿರುಗಿಯೂ । **ಅದದುಃ**— ಬೃಹಸ್ಪತಿಗೆ ಕೊಟ್ಟರು । **ಮನುಷ್ಯಾಃ**— ಮನುಷ್ಯರೂ ಕೊಟ್ಟರು । **ಸತ್ಯಂ ಕೃಣ್ವಾನಃ**— ಸತ್ಯವನ್ನು ಆಚರಿಸುವ । **ರಾಜಾನಃ**— ರಾಜರೂ । **ಪುನಃ**— ತಿರುಗಿಯೂ । **ದದುಃ**— ಕೊಟ್ಟರು.

॥ ಭಾವಾರ್ಥ ॥

ದೇವತೆಗಳು ಬ್ರಹ್ಮಪತ್ನಿಯಾದ ಜುಹುವನ್ನು ತಿರುಗಿಯೂ ಬೃಹಸ್ಪತಿಗೆ ಕೊಟ್ಟರು. ಮಾನವರೂ ಕೊಟ್ಟರು. ಸತ್ಯವನ್ನು ಆಚರಿಸುವ ರಾಜರೂ ಪುನಃ ಕೊಟ್ಟರು. ಎಂದರೆ ದೇವತೆಗಳು ಕೊಟ್ಟಿದ್ದನ್ನು ಮಾನವರೂ ರಾಜರೂ ಅನುಮೋದಿಸಿದರು.

## English Translation.

The gods gave her back again, men also gave her back, and kings confirming (the gift) gave Brahma's wife back again.

|| ಸಂಹಿತಾಪಾಠಃ ||

ಪುನರ್ದಾಯ ಬ್ರಹ್ಮಜಾಯಾಂ ಕೃತ್ವೀ ದೇವೈರ್ನಿಕಿಲ್ಬಿಷಂ ।
ಊರ್ಜಂ ಪೃಥಿವ್ಯಾ ಭಕ್ತ್ವಾಯೋರುಗಾಯಮುಪಾಸತೇ ॥ ೭ ॥

|| ಪದಪಾಠಃ ||

ಪುನಃऽದಾಯ । ಬ್ರಹ್ಮऽಜಾಯಾಂ । ಕೃತ್ವೀ । ದೇವೈಃ । ನಿಃऽಕಿಲ್ಬಿಷಂ ।
ಊರ್ಜಂ । ಪೃಥಿವ್ಯಾಃ । ಭಕ್ತ್ವಾಯ । ಉರುऽಗಾಯಂ । ಉಪ । ಆಸತೇ ॥ ೭ ॥

|| ಸಾಯಣಭಾಷ್ಯಂ ||

ದೇವೈಃ ॥ ಸುಪಾಂ ಸುಪೋ ಭವಂತೀತಿ ಜಸಸ್ತೃತೀಯಾದೇಶಃ ॥ ದೇವಾ ನಿಕಿಲ್ಬಿಷಂ ॥ ಅರ್ಥಾಭಾವೇऽವ್ಯಯೀಭಾವಃ । ಸಮಾಸಸ್ವರಃ ॥ ತಸ್ಯಾಃ ಕಿಲ್ಬಿಷಾಭಾವಂ ಕೃತ್ವೀ ॥ ಸ್ನಾತ್ವ್ಯಾದಯಶ್ಚೇತಿ ನಿಪಾತಿತಃ ॥ ಕೃತ್ವಾ ಬ್ರಹ್ಮಜಾಯಾಂ ಬ್ರಹ್ಮಣೋ ಬೃಹಸ್ಪತೇರ್ಭಾರ್ಯಾಂ ಪುನರ್ದಾಯ ಪುನರ್ದತ್ವಾ ॥ ಪುನಶ್ಚನಸೋಶ್ಛಂದಸಿ ಗತಿಸಂಜ್ಞಾ ವಕ್ತವ್ಯೇತಿ । ಪಾ. ೧-೪-೬೦-೨ । ಪುನಃಶಬ್ದಸ್ಯ ಗತಿಸಂಜ್ಞಾಯಾಂ ಸಮಾಸಲ್ಯಪ್ । ನ ಲ್ಯಪಿ । ಪಾ. ೬-೪-೬೯ । ಇತೀತ್ವಪ್ರತಿಷೇಧಃ । ಕೃದುತ್ತರಪದಪ್ರಕೃತಿಸ್ವರತ್ವಂ ॥ ಪೃಥಿವ್ಯಾ ಊರ್ಜಂ ರಸಭೂತಮನ್ನಂ ಹವೀರೂಪಂ ಭಕ್ತ್ವಾಯ। ಕ್ತ್ವೋ ಯಕ್। ಪಾ. ೭-೧-೪೭ । ಇತಿ ಯಗಾಗಮಃ ॥ ಭಕ್ತ್ವಾ ವಿಭಜ್ಯೋರುಗಾಯಂ ಬಹುಕೀರ್ತಿಂ ಬಹುಭಿಃ ಸ್ತೋತವ್ಯಂ ವಾ ಬಾರ್ಹಸ್ಪತ್ಯಂ ಯಜ್ಞಮುಪಾಸತೇ । ಸೇವಂತೇ ॥

|| ಪ್ರತಿಪದಾರ್ಥ ||

**ದೇವೈಃ**—ದೇವತೆಗಳು । **ಬ್ರಹ್ಮಜಾಯಾಂ**—ಬ್ರಹ್ಮಪತ್ನಿಯಾದ ಜುಹೂವನ್ನು । **ನಿಕಿಲ್ಬಿಷಂ**—ದೋಷರಹಿತಳನ್ನಾಗಿ । **ಕೃತ್ವೀ**—ಮಾಡಿ । **ಪೃಥಿವ್ಯಾಃ**—ಪೃಥ್ವಿಯ । **ಊರ್ಜಂ**—ರಸಭೂತವಾದ ಹವಿಸ್ಸನ್ನು । **ಭಕ್ತ್ವಾಯ**—ವಿಭಾಗ ಮಾಡಿಕೊಂಡು । **ಉರುಗಾಯಂ**—ಪ್ರಶಂಸಾರ್ಹನಾದ ಬೃಹಸ್ಪತಿಯನ್ನು । **ಉಪಾಸತೇ**—ಸೇವಿಸುತ್ತಾರೆ.

॥ ಭಾವಾರ್ಥ ॥

ದೇವತೆಗಳು ಬ್ರಹ್ಮಪತ್ನಿಯಾದ ಜುಹೂವನ್ನು ದೋಷರಹಿತಳನ್ನಾಗಿ ಮಾಡಿ ಪೃಥ್ವಿಯ ರಸಭೂತವಾದ ಹವಿಸ್ಸನ್ನು ವಿಭಾಗ ಮಾಡಿಕೊಂಡು ಪ್ರಶಂಸಾರ್ಹನಾದ ಬೃಹಸ್ಪತಿಯನ್ನು ಸೇವಿಸುತ್ತಾರೆ.

## English Translation.

The gods having given back Brahma's wife, and made her free from sin, having partaken of the food of the earth, sat down to (the sacrifice of) the widely-hymned Brihaspati.

॥ ವಿಶೇಷವಿಷಯಗಳು ॥

ಬೃಹಸ್ಪತಿಗೆ ತನ್ನ ಪತ್ನಿಯಾದ ಜುಹೂ ಇಲ್ಲದಿರುವಾಗ ಅವನು ಮಾಡುತ್ತಿದ್ದ ಯಜ್ಞಗಳಲ್ಲಿ ದೇವತೆಗಳು ಅವನು ಅರ್ಪಿಸಿದ ಹವಿರಾದಿಗಳನ್ನು ಸ್ವೀಕರಿಸಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಜುಹೂವು ದೋಷರಹಿತಳಾಗಿ ಪುನಃ ಬೃಹಸ್ಪತಿಯನ್ನು ಸೇರಿದನಂತರ ಬೃಹಸ್ಪತಿಯು ಪತ್ನೀಸಹಿತನಾಗಿ ಆಚರಿಸುವ ಯಜ್ಞಗಳಲ್ಲಿ ದೇವತೆಗಳು ಹವಿರಾದಿಗಳನ್ನು ಸ್ವೀಕರಿಸಲು ಸಾಧ್ಯವಾಯಿತು. ಆದ್ದರಿಂದ ಪತ್ನಿಯನ್ನು ಬೃಹಸ್ಪತಿಗೆ ಒಪ್ಪಿಸಿದನಂತರ ದೇವತೆಗಳು ಹವಿಸ್ಸನ್ನು ತಮ್ಮಲ್ಲಿ ಹಂಚಿಕೊಂಡು ಸೇವಿಸಲು ಪ್ರಾರಂಭಿಸಿದರು ಎಂದು ಈ ಋಕ್ಕಿನಲ್ಲಿ ಹೇಳಲಾಗಿದೆ.

# ನೂರ ಹತ್ತನೆಯ ಸೂಕ್ತವು

## ಪೀಠಿಕೆ.

ಋಗ್ವೇದದಸಂಹಿತೆಯಲ್ಲಿ ಒಟ್ಟು ಹತ್ತು ಆಪ್ರೀಸೂಕ್ತಗಳಿರುವವು. ಅವುಗಳಲ್ಲಿ ಪ್ರಕೃತಸೂಕ್ತವೇ ಕೊನೆಯ (೧೦ ನೆಯ) ಆಪ್ರೀಸೂಕ್ತವು. ಈ ಆಪ್ರೀಸೂಕ್ತಗಳು ಯಾವುವೆಂದರೆ—

| ಸಂಖ್ಯೆ | ಆಪ್ರೀಸೂಕ್ತದಪ್ರಾರಂಭ | ಮಂಡಲ | ಸೂಕ್ತ | ಋಷಿ | ಋ ಸಂ. ಭಾಗ | ಪುಟ |
|---|---|---|---|---|---|---|
| 1 | ಸುಸಮಿದ್ಧೋ ನ ಆ ವಹ | ೧ | ೧೩ | ಮೇಧಾತಿಥಿಃ ಕಾಣ್ವಃ | ೨ | 525 |
| 2 | ಸಮಿದ್ಧೋ ಅಗ್ನ ಆ ವಹ | ೧ | ೧೪೨ | ದೀರ್ಘತಮಾ ಔಚಥ್ಯಃ | ೧೧ | 221 |
| 3 | ಸಮಿದ್ಧೋ ಅದ್ಯ ರಾಜಸಿ | ೧ | ೧೮೮ | ಅಗಸ್ತ್ಯೋ ಮೈತ್ರಾವರುಣಿಃ | ೧೪ | 216 |
| 4 | ಸಮಿದ್ಧೋ ಅಗ್ನಿರ್ನಿಹಿತಃ | ೨ | ೩ | ಗೃತ್ಸಮದಃ | ೧೪ | 454 |
| 5 | ಸಮಿತ್ಸಮಿತ್ಸುಮನಾ | ೩ | ೪ | ಗಾಥಿನೋ ವಿಶ್ವಾಮಿತ್ರಃ | ೧೫ | 665 |
| 6 | ಸುಸಮಿದ್ಧಾಯ ಶೋಚಿಷೇ | ೫ | ೫ | ವಸುಶ್ರುತ ಆತ್ರೇಯಃ | ೧೮ | 805 |
| 7 | ಜುಷಸ್ವ ನಃ ಸಮಿಧಮಗ್ನೇ | ೭ | ೨ | ಮೈತ್ರಾವರುಣಿರ್ವಸಿಷ್ಠಃ | ೨೧ | 647 |
| 8 | ಸಮಿದ್ಧೋ ವಿಶ್ವತಸ್ಪತಿಃ | ೯ | ೫ | ಕಾಶ್ಯಪೋಽಸಿತೋದೇವಲೋ ವಾ | ೨೫ | 612 |
| 9 | ಇಮಾಂ ಮೇ ಅಗ್ನೇ ಸಮಿಧಂ | ೧೦ | ೭೦ | ಸುಮಿತ್ರೋ ವಾಧ್ರ್ಯಶ್ವಃ | ೨೮ | 602 |
| 10 | ಸಮಿದ್ಧೋ ಅದ್ಯ ಮನುಷಃ | ೧೦ | ೧೧೦ | ಜಮದಗ್ನಿರ್ಭಾರ್ಗವಃ | ೩೦ | 322 |

ಇವುಗಳಲ್ಲಿ ಇಧ್ಮಃ (ಸಮಿದ್ಧೋಽಗ್ನಿರ್ವಾ) ನರಾಶಂಸಃ, ತನೂನಪಾತ್, ಇಳಃ, ಬರ್ಹಿಃ, ದೇವೀರ್ದ್ವಾರಃ, ಉಷಾಸಾನಕ್ತಾ, ದೈವ್ಯೌ ಹೋತಾರೌ ಪ್ರಚೇತಸೌ, ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ, ತ್ವಷ್ಟಾ, ವನಸ್ಪತಿಃ ಸ್ವಾಹಾಕೃತಯಃ ಎಂಬ ದೇವತಾಕವಾದ ಮಂತ್ರಗಳಿವೆ. ಆದರೆ ನರಾಶಂಸಃ ಮತ್ತು ತನೂನಪಾತ್ ಎಂಬ ದೇವತೆ, ಗಳ ವಿಷಯವಾಗಿ ಕೆಲವು ಸೂಕ್ತಗಳಲ್ಲಿ ನರಾಶಂಸಃ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತಗಳಲ್ಲಿ ತನೂನಪಾತ್ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತಗಳಲ್ಲಿ ನರಾಶಂಸಃ ಮತ್ತು ತನೂನಪಾತ್ ಎಂಬ ಉಭಯದೇವತೆಗಳನ್ನೂ ಸ್ತುತಿಸಲಾಗಿದೆ. ಈ ಅರ್ಥಕ್ಕನುಸಾರವಾಗಿ ಈ ಆಪ್ರೀಸೂಕ್ತಗಳನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ—ವಸಿಷ್ಠ, ಅತ್ರಿ, ವಾಧ್ರ್ಯಶ್ವ, ಗೃತ್ಸಮದ ಎಂಬ ಋಷಿಪ್ರಣೀತಗಳಾದ ಆಪ್ರೀಸೂಕ್ತಗಳು ಎಂದರೆ—

೧. **ಜುಷಸ್ವ ನಃ ಸಮಿಧಮಗ್ನೇ**— ಋ. ಸಂ. ೭-೨ (ಮೈತ್ರಾವರುಣಿರ್ವಸಿಷ್ಠಃ)

೨. **ಸುಸಮಿದ್ಧಾಯ ಶೋಚಿಷೇ**— ಋ. ಸಂ. ೫-೫ (ವಸುಶ್ರುತ ಆತ್ರೇಯಃ)

೩. **ಇಮಾಂ ಮೇ ಅಗ್ನೇ ಸಮಿಧಂ**— ಋ. ಸಂ. ೧೦-೭೦ (ಸುಮಿತ್ರೋ ವಾಧ್ರ್ಯಶ್ವಃ)

೪. **ಸಮಿದ್ಧೋ ಅಗ್ನಿರ್ನಿಹಿತಃ**— ಋ. ಸಂ. ೨-೩ (ಗೃತ್ಸಮದಃ)

ಎಂಬ ಈ ನಾಲ್ಕು ಸೂಕ್ತಗಳೂ ಒಂದು ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸಃ ಎಂಬ ದೇವತಾಕವಾದ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ನಾಲ್ಕು ಸೂಕ್ತಗಳಿಗೆ **ನರಾಶಂಸವಂತಿ ಸೂಕ್ತಾನಿ**— ನರಾಶಂಸ ದೇವತೆಯನ್ನು ಮಾತ್ರ ಸ್ತುತಿಸುವ ಆಪ್ರೀ ಸೂಕ್ತಗಳೆಂದು ಹೆಸರು.

೧. **ಸುಸಮಿದ್ಧೋ ನ ಆ ವಹ**— ಋ. ಸಂ. ೧-೧೩ (ಮೇಧಾತಿಥಿಃ ಕಾಣ್ವಃ)

೨. **ಸಮಿದ್ಧೋ ಅಗ್ನ ಆ ವಹ**— ಋ. ಸಂ. ೧-೧೪೨ (ದೀರ್ಘತಮಾ ಔಚಥ್ಯಃ) ಎಂಬ ಈ ಎರಡು ಆಪ್ರೀ ಸೂಕ್ತಗಳು ಎರಡನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸ ಮತ್ತು ತನೂನಪಾತ್ ಎಂಬ ಉಭಯ ದೇವತೆಯ ಪರವಾಗಿ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ಆಪ್ರೀಸೂಕ್ತಗಳಲ್ಲಿ ಉಭಯ ದೇವತೆಗಳೂ ಇರುವುದರಿಂದ ೧-೧೪೨ನೆಯ ಸೂಕ್ತದಲ್ಲಿ ಇಂದ್ರನನ್ನು ಬಿಟ್ಟು ಹನ್ನೊಂದು ಪ್ರಯಾಜ ಹೋಮಗಳಿಗೆ ಬದಲಾಗಿ ಹನ್ನೆರಡು ಹೋಮಗಳಿದ್ದಂತಾಯಿತು.

೧. **ಸಮಿದ್ಧೋ ಅದ್ಯ ರಾಜಸಿ**— ಋ. ಸಂ. ೧-೧೮೮ (ಅಗಸ್ತ್ಯೋ ಮೈತ್ರಾವರುಣಃ)

೨. **ಸಮಿತ್ಸಮಿತ್ಸುಮನಾ**— ಋ. ಸಂ. ೩-೪ (ಗಾಥಿನೋ ವಿಶ್ವಾಮಿತ್ರಃ)

೩. **ಸಮಿದ್ಧೋ ವಿಶ್ವತಸ್ಪತಿಃ**— ಋ. ಸಂ. ೯-೫ (ಕಾಶ್ಯಪೋಽಸಿತೋ ದೇವಲೋ ವಾ)

೪. **ಸಮಿದ್ಧೋ ಅದ್ಯ ಮನುಷೋ**— ಋ. ಸಂ. ೧೦-೧೧೦ (ಜಮದಗ್ನಿ ಭಾರ್ಗವಃ)

ಎಂಬ ಸೂಕ್ತಗಳು ಮೂರನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ತನೂನಪಾತ್ ಎಂಬ ದೇವತಾಕವಾದ ಋಕ್ಕುಗಳು ಮಾತ್ರವಿರುವುವು. (ನರಾಶಂಸ ದೇವತಾಕವಾದ ಋಕ್ಕುಗಳಿರುವುದಿಲ್ಲ). ಆದುದರಿಂದ ಇವುಗಳಿಗೆ **ತನೂನಪಾತ್ವಂತಿ ಸೂಕ್ತಾನಿ** ಎಂದರೆ ತನೂನಪಾತ್ ಎಂಬ ದೇವತಾಕವಾದ ಮಂತ್ರಗಳನ್ನೊಳಗೊಂಡ ಆಪ್ರೀಸೂಕ್ತಗಳೆಂದು ಹೆಸರು.

ಆಪ್ರೀಸೂಕ್ತಗಳ ಸಂಬಂಧವಾದ ಸಮಸ್ತವಿಷಯುಗಳನ್ನು ಮೇಲಿನ ಕೆಲವು ಆಪ್ರೀಸೂಕ್ತಗಳ ಪೀಠಿಕೆಯಲ್ಲಿಯೂ, ವಿಶೇಷವಿಷಯುಗಳಲ್ಲಿಯೂ ವಿಸ್ತಾರವಾಗಿ ವಿವರಿಸಿದೇವೆ. ಈಗ ಈ ಸೂಕ್ತಗಳ ವಿಷಯದಲ್ಲಿ ಬೃಹದ್ದೇವತೆಯಲ್ಲಿ ಹೇಳಿರುವುದನ್ನೂ ಯಾಸ್ಕರ ನಿರುಕ್ತವನ್ನೂ ತಿಳಿಸಲಾಗುವುದು. ಬೃಹದ್ದೇವತೆಯ ೨ ಮತ್ತು ೩ ನೇ ಅಧ್ಯಾಯುಗಳಲ್ಲಿ ಈ ರೀತಿ ಉಕ್ತವಾಗಿದೆ.

**ಪ್ರಥಮಾಯಾಂ ಸ್ತುತಶ್ಚೇಧ್ಮೋ ದ್ವಿತೀಯಾಯಾಂ ತನೂನಪಾತ್ ।**
**ನರಾಶಂಸಸ್ತೃತೀಯಾಯಾಂ ಚತುರ್ಥ್ಯಾಂ ಸ್ತೂಯತೇ ತ್ವಿಳಃ ॥ ೧೪೭ ॥**

147. ಮೊದಲನೆಯ ಋಕ್ಕಿನಲ್ಲಿ ಇಧ್ಮವೂ (ಜ್ವಲಿತಾಗ್ನಿಯೂ), ಎರಡನೆಯ ಋಕ್ಕಿನಲ್ಲಿ **ತನೂನಪಾತ್** ಎಂಬ ದೇವತೆಯೂ, ಮೂರನೆಯ ಋಕ್ಕಿನಲ್ಲಿ **ನರಾಶಂಸ** ನೆಂಬ ದೇವತೆಯೂ, ನಾಲ್ಕನೆಯ ಋಕ್ಕಿನಲ್ಲಿ **ಇಳಃ** ಎಂಬ ದೇವತೆಯೂ ಸ್ತುತರಾಗಿರುವರು.

**ಬರ್ಹಿರೇವ ತು ಪಂಚಮ್ಯಾಂ ದ್ವಾರೋ ದೇವ್ಯಸ್ತತೋಽನ್ಯಯಾ ।**
**ನಕ್ತೋಷಾಸಾ ತು ಸಪ್ತಮ್ಯಾಮಷ್ಟಮ್ಯಾಂ ಸಂಸ್ತುತೌ ಸಹ ॥ ೧೪೮ ॥**

148. ಐದನೆಯ ಋಕ್ಕಿನಲ್ಲಿ **ಬರ್ಹಿಃ** (ಕತ್ತರಿಸಿದ ದರ್ಭೆಗಳು) ಎಂಬ ದೇವತೆಯೂ, ಮುಂದಿನ ಋಕ್ಕಿನಲ್ಲಿ **ದ್ವಾರೋ ದೇವ್ಯಃ** ಎಂಬ ದ್ವಾರಾಭಿಮಾನಿ ದೇವತೆಗಳೂ, ಏಳನೆಯ ಋಕ್ಕಿನಲ್ಲಿ **ನಕ್ತೋಷಾಸಾ** ಎಂಬ (ರಾತ್ರಿ ಮತ್ತು ಉಷಃಕಾಲಾಭಿಮಾನಿ ದೇವತೆಗಳು) ದೇವತೆಗಳೂ, ಎಂಟನೆಯ ಋಕ್ಕಿನಲ್ಲಿ,

**ದೈವ್ಯಾವಿತಿ ತು ಹೋತಾರೌ ನವಮ್ಯಾಮೃಚಿ ಸಂಸ್ತುತಾಃ ।**
**ತಿಸ್ರೋ ದೇವ್ಯೋ ದಶಮ್ಯಾಂ ತು ಜ್ಞೇಯಸ್ತ್ವಷ್ಟೈವ ತು ಸ್ತುತಃ ॥ ೧೪೯ ॥**

149. ದೈವ್ಯಾ ಹೋತಾರೌ ಎಂಬ ದೇವತೆಗಳೂ, ಒಂಭತ್ತನೆಯ ಋಕ್ಕಿನಲ್ಲಿ (ಸರಸ್ವತೀ ಇಳಾ ಭಾರತೀ) **ತಿಸ್ರೋ ದೇವ್ಯಃ** ಎಂಬ ಮೂರು ಮಂದಿ ದೇವತೆಯರೂ, ಹತ್ತನೆಯ ಋಕ್ಕಿನಲ್ಲಿ **ತ್ವಷ್ಟೃವೂ,**

**ಏಕಾದಶ್ಯಾಂ ತು ಸೂಕ್ತಸ್ಯ ಸ್ತುತಂ ವಿದ್ಯಾದ್ವನಸ್ಪತಿಂ ।**
**ದ್ವಾದಶ್ಯಾಂ ತು ಸ್ತುತಾ ದೇವೀರ್ವಿದ್ಯಾತ್ಸ್ವಾಹಾಕೃತೀರಿತಿ ॥ ೧೫೦ ॥**

150. ಹನ್ನೊಂದನೆಯ ಋಕ್ಕಿನಲ್ಲಿ **ವನಸ್ಪತಿ**ಯೆಂಬ ದೇವತೆಯೂ, ಹನ್ನೆರಡನೆಯ ಋಕ್ಕಿನಲ್ಲಿ **ಸ್ವಾಹಾಕೃತಿ** ಎಂಬ ದೇವತೆಯೂ ಸ್ತುತರಾಗಿರುವರು.

**ಸೂಕ್ತೇಽಸ್ಮಿನ್ಪ್ರತ್ಯೃಚಂ ಯಾಸ್ತು ದೇವತಾಃ ಪರಿಕೀರ್ತಿತಾಃ ।**
**ತಾ ಏವ ಸರ್ವಾಸ್ವಾಪ್ರೀಷು ದ್ವಿತೀಯಾ ತು ವಿಕಲ್ಪತೇ ॥ ೧೫೧ ॥**

151. ಈ ಸೂಕ್ತದ ಪ್ರತಿ ಋಕ್ಕಿನಲ್ಲಿಯೂ ಯಾವ ಯಾವ ದೇವತೆಗಳು ಸ್ತುತರಾಗಿರುವರೋ ಅವರೆಲ್ಲರೂ ಎಲ್ಲಾ (ಹತ್ತು) ಆಪ್ರೀ ಸೂಕ್ತಗಳಲ್ಲಿಯೂ ಈ ಕ್ರಮದಿಂದಲೇ ಸ್ತುತರಾಗಿರುವರು. ಎರಡನೆಯ ದೇವತೆಯ ವಿಷಯದಲ್ಲಿ (**ತನೂನಪಾತ್** ಅಥವಾ **ನರಾಶಂಸ**) ಸ್ವಲ್ಪ ವ್ಯತ್ಯಾಸವಿರುವುದು.

**ಪ್ರೈಷೈಃ ಸಹಾಪ್ರೀಸೂಕ್ತಾನಿ ತಾನ್ಯೇಕಾದಶ ಸಂತಿ ಚ ।**
**ಯಜೂಂಷಿ ಪ್ರೈಷಸೂಕ್ತಂ ವಾ ದಶೈತಾನೀತರಾಣಿ ತು ॥ ೧೫೨ ॥**

**ಆಪ್ರೀ ಸೂಕ್ತಗಳ ಮೂರು ಗುಂಪುಗಳು ಅಥವಾ ಪ್ರಭೇದಗಳು.**

152. ಪ್ರೈಷ ಸೂಕ್ತವನ್ನೂ ಸೇರಿಸಿಕೊಂಡರೆ ಒಟ್ಟು ಹನ್ನೊಂದು ಆಪ್ರೀ ಸೂಕ್ತಗಳಿರುವುವು. ಪ್ರೈಷ ಸೂಕ್ತವು ಮುಖ್ಯವಾಗಿ ಯಜುರ್ವೇದಕ್ಕೆ ಸಂಬಂಧಪಟ್ಟ ಮಂತ್ರಗಳನ್ನು ನಿರ್ದೇಶಿರುವುದರಿಂದ ಅದನ್ನು ಬಿಟ್ಟರೆ ಋಗ್ವೇದದಲ್ಲಿ ಒಟ್ಟು ಹತ್ತು ಆಪ್ರೀ ಸೂಕ್ತಗಳಿರುವುವು.

**ಸೌತ್ರಾಮಣಾನಿ ತು ತ್ರೀಣಿ ಪ್ರಾಜಾಪತ್ಯಾಶ್ವಮೇಧಿಕೇ ।**
**ಪುರುಷಸ್ಯ ತು ಯನ್ಮೇಧೇ ಯಜುಃಷ್ವೇವ ತು ತಾನಿ ಷಟ್** || ೧೫೩ ||

153. ಇವುಗಳಲ್ಲದೆ, ಸೌತ್ರಾಮಣಿ ಎಂಬ ಯಾಗಕ್ಕೆ ಸಂಬಂಧಪಟ್ಟಂತೆ ಮೂರು ಆಪ್ರೀ **ಸೂಕ್ತಗಳೂ, ಪ್ರಾಜಾಪತ್ಯ**, ಅಶ್ವಮೇಧ, ಪುರುಷಮೇಧ ಎಂಬ ಯಾಗಗಳಿಗೆ ಸಂಬಂಧಪಟ್ಟಂತೆ ಒಂದೊಂದು ಆಪ್ರೀ **ಸೂಕ್ತವೂ ಒಟ್ಟು** ಆರು ಆಪ್ರೀ ಸೂಕ್ತಗಳೂ ಯಜುರ್ವೇದಕ್ಕೆ ಸಂಬಂಧಪಟ್ಟಂತಿರುವವು.

**ಅತ್ರೈವ ಪ್ರೈಷಸೂಕ್ತಂ ಸ್ಯಾನ್ನ ಯಜುಃಷ್ವಾದ್ರಿಯೇತ ತತ್ ।**
**ತೇಷಾಂ ಪ್ರೈಷಗತಂ ಸೂಕ್ತಂ ಯಚ್ಚ ದೀರ್ಘತಮಾ ಜಗೌ** || ೧೫೪ ||

154. ಈ ಆರು ಆಪ್ರೀ ಸೂಕ್ತಗಳಲ್ಲಿ ಶುಕ್ಲ ಯಜುರ್ವೇದದ ವಾಜಸನೇಯ ಸಂಹಿತೆಯಲ್ಲಿರುವ 29 ರಿಂದ 40 ವರೆಗಿನ ಪ್ರೈಷ ಮಂತ್ರಗಳನ್ನು ಮಾತ್ರ ವಿಮರ್ಶೆ ಮಾಡಬೇಕು. ಉಳಿದ ಐದು ಸೂಕ್ತಗಳನ್ನು **ವಿವೇಚಿಸಬೇಕಾದ** ಅವಶ್ಯಕತೆ ಇಲ್ಲ. ಮೇಲೆ ಹೇಳಿದ ಪ್ರೈಷ ಸೂಕ್ತದ 11 ಮಂತ್ರಗಳನ್ನು **ದೀರ್ಘತಮಾಃ** ಎಂಬ ಋಷಿಯು ಪಠಿಸಿರುವನು.

**ಮೇಧಾತಿಥೌ ಯದುಕ್ತಂ ಚ ತ್ರೀಣ್ಯೇವೋಭಯವಂತಿ ತು ।**
**ಋಷೌ ಗೃತ್ಸಮದೇ ಯಚ್ಚ ವಾಧ್ರ್ಯಶ್ವೇ ಚ ಯದುಚ್ಯತೇ** || ೧೫೫ ||

155. ಈ ಮೇಲಿನ 10 ಆಪ್ರೀ ಸೂಕ್ತಗಳಲ್ಲಿ ಮೇಧಾತಿಥಿ ಋಷಿದೃಷ್ಟವಾದ (1ನೇ ಮಂಡಲದ 13ನೇ ಸೂಕ್ತ) ಸೂಕ್ತದಲ್ಲಿಯೂ, **ದೀರ್ಘತಮಾಃ** ಎಂಬ ಋಷಿದೃಷ್ಟವಾದ **ಸಮಿದ್ಧೋ ಅಗ್ನ ಆ ವಹ** ಎಂಬ 1ನೇ ಮಂಡಲದ 142ನೇ ಸೂಕ್ತದಲ್ಲಿಯೂ, ಎರಡನೆಯ ದೇವತೆಯ ಸ್ಥಾನದಲ್ಲಿ **ತನೂನಪಾತ್** ಮತ್ತು **ನರಾಶಂಸ** ಎಂಬ ಎರಡು ದೇವತೆಗಳೂ ಇವೆ. ಆದ್ದರಿಂದ ಈ 2 ಸೂಕ್ತಗಳಿಗೆ **ಉಭಯವಂತಿ ಸೂಕ್ತಾನಿ** ಎಂದು ಹೆಸರು. ಈ ಸೂಕ್ತದಲ್ಲಿರುವಂತೆ ಎರಡನೆಯ ದೇವತೆಯ ಸ್ಥಾನದಲ್ಲಿ ನರಾಶಂಸ ದೇವತೆಯಿರುವ ಇನ್ನೂ ಮೂರು ಆಪ್ರೀ ಸೂಕ್ತಗಳಿರುವವು. ಅವು ಯಾವವೆಂದರೆ—ಗೃತ್ಸಮದ ಋಷಿದೃಷ್ಟವಾದ ಸೂಕ್ತ (2ನೇ ಮಂಡಲವ 3ನೇ ಸೂಕ್ತ). **ಸಮಿದ್ಧೋ ಅಗ್ನಿರ್ನಿಹಿತಃ** ಎಂಬ ಸೂಕ್ತ; ವಾಧ್ರ್ಯಶ್ವಋಷಿದೃಷ್ಟವಾದ **ಇಮಾಂ ಮೇ ಅಗ್ನೇ** ಎಂಬ ಸೂಕ್ತ (10ನೇ ಮಂಡಲದ 70ನೇ ಸೂಕ್ತ); ವಸುಶ್ರುತ ಆತ್ರೇಯನಿಂದ ದೃಷ್ಟವಾದ **ಸುಸಮಿದ್ಧಾಯ** ಎಂಬ ಐದನೆಯ ಮಂಡಲದ ಐದನೆಯ ಸೂಕ್ತ. ವಸಿಷ್ಠದೃಷ್ಟವಾದ **ಜುಷಸ್ವ ನಃ** ಎಂಬ ಏಳನೆಯ ಮಂಡಲದ ಎರಡನೆಯ ಸೂಕ್ತ. ಈ ನಾಲ್ಕು ಸೂಕ್ತಗಳಲ್ಲಿಯೂ ಎರಡನೆಯ ಸ್ಥಾನ ದೇವತೆಯು ನರಾಶಂಸನಾದುದರಿಂದ ಈ ನಾಲ್ಕು ಆಪ್ರೀ ಸೂಕ್ತಗಳಿಗೆ **ನರಾಶಂಸವಂತಿ ಸೂಕ್ತಾನಿ** ಎಂದು ಹೆಸರು.

**ನರಾಶಂಸವದತ್ರೇಶ್ಚ ದದರ್ಶ ಚ ಯದ್ವಾರ್ವಶಃ ।**
**ತನೂನಪಾದಗಸ್ತ್ಯಶ್ಚ ಜಮದಗ್ನಿಶ್ಚ ಯೆಜ್ಜಗೌ** || ೧೫೬ ||
**ವಿಶ್ವಾಮಿತ್ರ ಋಷಿರ್ಯಚ್ಚ ಜಗೌ ನ್ವೈ ಕಾಶ್ಯಪೋಽಸಿತಃ ।**
**ಮೇಧಾತಿಥೇರ್ಋಚಾಂ ಯಾಸ್ತು ಪ್ರೋಕ್ತಾ ದ್ವಾದಶ ದೇವತಾಃ** || ೧೫೭ ||

156-157. ಅಗಸ್ತ್ಯಋಷಿದೃಷ್ಟವಾದ **ಸಮಿದ್ಧೋ ಅದ್ಯ ಮನುಷೋ** ಎಂಬ ಮೊದಲನೇ ಮಂಡಲದ 188ನೇ ಸೂಕ್ತದಲ್ಲಿಯೂ, ಜಮದಗ್ನಿ ಋಷಿದೃಷ್ಟವಾದ **ಸಮಿದ್ಧೋ ಅದ್ಯ ಮನುಷೋ** ಎಂಬ 10ನೇ ಮಂಡಲದ 110ನೇ ಸೂಕ್ತದಲ್ಲಿಯೂ, ವಿಶ್ವಾಮಿತ್ರಋಷಿದೃಷ್ಟವಾದ **ಸಮಿತ್ಸಮಿತ್ಸುಮನಾ** ಎಂಬ ಮೂರನೆಯ ಮಂಡಲದ **ನಾಲ್ಕನೆಯ** ಸೂಕ್ತದಲ್ಲಿಯೂ, ಕಶ್ಯಪ ಪುತ್ರನಾದ ಅಸಿತ (ಅಥವಾ ದೇವಲ) ಎಂಬ ಋಷಿದೃಷ್ಟವಾದ **ಸಮಿದ್ಧೋ ವಿಶ್ವತಸ್ಪತಿಃ** ಎಂಬ 9ನೇ ಮಂಡಲದ 5ನೇ ಸೂಕ್ತದಲ್ಲಿಯೂ, **ತನೂನಪಾತ್** ಎಂಬುದು ಎರಡನೆಯ ದೇವತೆಯಾಗಿರುವುದು. ಆದ್ದರಿಂದ ಈ 4 ಸೂಕ್ತಗಳಿಗೆ **ತನೂನಪಾತ್ವಂತಿ ಸೂಕ್ತಾನಿ** ಎಂನು ಹೆಸರು. ಮೇಧಾತಿಥಿ ಋಷಿ ದೃಷ್ಟವಾದ 1ನೇ ಮಂಡಲದ 13ನೇ ಸೂಕ್ತದಲ್ಲಿ ಒಟ್ಟು ಹನ್ನೆರಡುಮಂದಿ ದೇವತೆಗಳು ಸ್ತುತರಾಗಿದಾರೆ.

**ಸಂಪದ್ಯಂತೇ ಯಥಾಗ್ನಿಂ ತಾಃ ಸಂಪದಂ ತಾಂ ನಿಬೋಧತ ।**
**ಇಧ್ಮೋ ಯಃ ಸರ್ವಮೇವಾಗ್ನಿರಯಂ ಹೀಧ್ಮಃ ಸಮಿಧ್ಯತೇ** || ೧೫೮ ||
**ಧ್ಮಾತೇರ್ವೈತತ್ಕೃತಂ ರೂಪಂ ಧ್ಮಾತೋ ಹೀಧ್ಮಃ ಸಮಿಧ್ಯತೇ**

158. ಈ ದೇವತೆಗಳು ಯಾವ ರೀತಿ ಅಗ್ನಿಯನ್ನು ಪ್ರತಿಬಿಂಬಿಸುವರೆಂಬುದನ್ನು ಹೇಳುವೆನು, ಕೇಳಿ. ಈ ಎಲ್ಲಾ ಆಪ್ರೀಸೂಕ್ತಗಳಲ್ಲಿಯೂ ಮೊದಲನೆಯ ಋಕ್ಕಿನಲ್ಲಿರುವ **ಇಧ್ಮಃ** ಎಂಬ ಶಬ್ದವು ಅಗ್ನಿಯನ್ನು ಸೂಚಿಸುವುದು. ಏಕೆಂದರೆ **ಸಮಿಧ್ಯತೇ** ಎಂಬ ಶಬ್ದಕ್ಕೆ ಹೊತ್ತಿಸಿ ಜ್ವಲಿಸುವಂತೆ ಮಾಡಲ್ಪಡುವುದು ಎಂದೂ, ಧ್ಮಾತಿ ಶಬ್ದಕ್ಕೆ (ಊದುಕೊಳವಿಯಿಂದ) ಊದಿ ಉರಿಮಾಡುವುದು ಎಂದೂ ಅರ್ಥವಿರುವುದು. ಈ ಎರಡು ಕಾರ್ಯಗಳಲ್ಲಿ (ಹೊತ್ತಿಸುವುದು, ಮತ್ತು ಊದಿ ಉರಿಮಾಡುವುದು) ಅಗ್ನಿಗೆ ಸಂಬಂಧಪಟ್ಟಿರುವುದರಿಂದ ಮೊದಲನೆಯ ಋಕ್ಕಿನಲ್ಲಿ ಕಂಡುಬರುವ **ಸಮಿದ್ಧಃ** ಇತ್ಯಾದಿ ಪದಗಳು ಅಗ್ನಿಯನ್ನೇ ಸೂಚಿಸುವವು. ಆದ್ದರಿಂದ ಆಪ್ರೀಸೂಕ್ತದ ಮೊದಲನೆಯ ಋಕ್ಕಿಗೆ (ಪ್ರಜ್ವಲಿತನಾದ) ಅಗ್ನಿಯೇ ದೇವತೆಯು.

ಇಲ್ಲಿಗೆ ಬೃಹದ್ದೇವತೆಯೆಂಬ ಗ್ರಂಥದಲ್ಲಿ ಎರಡನೆಯ ಅಧ್ಯಾಯವು ಸಮಾಪ್ತವಾದುದು.

## ಮೂರನೆಯ ಅಧ್ಯಾಯವು

**ತನೂನಪಾದಯಂ ತ್ವೇವ ನಾಮ್ನಾ ಯಚ್ಛೃತ್ಯಸೌ ತನುಂ ।**
**ನಪಾದಿತಿ ಪ್ರಜಾಮಾಹುರಮುತೋಽಸ್ಯ ಚ ಸಂಭವಂ** || ೧ ||

### ತನೂನಪಾತ್, ನರಾಶಂಸ, ಇಳೆ, ಬರ್ಹಿ ಎಂಬ ದೇವತೆಗಳು.

1. **ತನೂನಪಾತ್**— ಈ ಅಗ್ನಿಗೆ **ತನೂನಪಾತ್** ಎಂದು ಹೆಸರು. **ನಪಾತ್** ಎಂದರೆ ಪ್ರಜೆಯು ಪ್ರಜೆ, ಸಂತತಿ ಎಂದರ್ಥವು. ಸ್ವರ್ಗೀಯಾಗ್ನಿಯು ತನ್ನ ಶರೀರವನ್ನು **(ತನು)** ವಿಸ್ತರಿಸುವುದರಿಂದ ಮತ್ತು ಅದರಿಂದ ಪಾರ್ಥಿವಾಗ್ನಿಯು ಉತ್ಪತ್ತಿಯಾಗುವುದರಿಂದ ಪಾರ್ಥಿವಾಗ್ನಿಗೆ **ತನೂನಪಾತ್** ಎಂದು ಹೆಸರು.

**ನರಾಶಂಸಮಿಹೈಕೇ ತು ಯಜ್ಞಮಾಹುರಥೇತರೇ ।**
**ನರಾಃ ಶಂಸಂತಿ ಸರ್ವೇಽಸ್ಮಿನ್ನಾಸೀನಾ ಇತಿ ವಾಧ್ವರೇ ॥ ೨ ॥**

2. **ನರಾಶಂಸಃ**— ಈ ನರಾಶಂಸ ದೇವತೆಯನ್ನು ಯಜ್ಞವೆಂದು ಕೆಲವರು ಹೇಳುವರು. **ಅಥವಾ ಸಮಸ್ತ** ಜನರು (ನರಾಃ) ಯಜ್ಞದಲ್ಲಿ ಕುಳಿತು ಈ ದೇವತೆಯನ್ನು ಪ್ರಶಂಸೆ (ಸ್ತುತಿ) ಮಾಡುವುದರಿಂದ **ಈ ದೇವತೆಗೆ ನರಾಶಂಸನೆಂಬ** ಹೆಸರು ಬಂದಿರುವುದು.

**ಏತಮೇವಾಹುರನ್ಯೇಽಗ್ನಿಂ ನರಾಶಂಸೋಽಧ್ವರೇ ಹ್ಯಯಂ ।**
**ನರೈಃ ಪ್ರಶಸ್ಯ ಆಸೀನೈರಾಹುಶ್ಚೈವರ್ತ್ವಿಜೋ ನರಃ ॥ ೩ ॥**

3. ಮತ್ತೆಕೆಲವರು ಈ ದೇವತೆಯನ್ನು (ನರಾಶಂಸನನ್ನು) ಅಗ್ನಿಯೆಂದು ಹೇಳುವರು. ಏಕೆಂದರೆ— **ಯಜ್ಞದಲ್ಲಿ** ಕುಳಿತಿರುವ ನರರಿಂದ (ಜನರಿಂದ) ಈ ದೇವತೆಯು ಎಂದರೆ ಅಗ್ನಿಯು ಪ್ರಶಂಸಿಸಲ್ಪಡುವನು. **ಋತ್ವಿಕ್ಕುಗಳೂ ಇದೇ** ರೀತಿ ಹೇಳುವರು

**ಇಳಸ್ತ್ವೃಷಿಕೃತಂ ರೂಪಮೀಡೇಃ ಸ್ತುತಿಕರ್ಮಣಃ ।**
**ಇಳಾವಾಂಸ್ತೇನ ವೋಕ್ತೋಽಗ್ನಿರಿಡಿನಾ ವೃದ್ಧಿಕರ್ಮಣಾ ॥ ೪ ॥**

4. **ಇಳಃ** ಶಬ್ದವು **ಈಳ ಸ್ತುತೌ** (ಸ್ತುತಿಸು) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಋಷಿಗಳು **ಹೇಳುವರು.** ಅಗ್ನಿಗೆ **ಇಳಾವಾನ್** ಎಂದೂ ಹೆಸರು. ಈ ಶಬ್ದವು ಈಡ್–ಸ್ತುತಿಸು ಎಂಬ ಧಾತುವಿನಿಂದಾಗಲೀ **ಇದ್**–ವೃದ್ಧಿಯನ್ನು ಹೊಂದು ಎಂಬ ಧಾತುವಿನಿಂದಾಗಲೀ ನಿಷ್ಪನ್ನವಾಗಿರುವುದು.

**ಬರ್ಹಿರೇವಾಯಮಗ್ನಿಸ್ತು ಸರ್ವಂ ಹಿ ಪರಿಬೃಂಹಿತಂ ।**
**ಅನೇನ ಯದ್ಬುಧತೋ ವಾ ಸನ್ನಿಧ್ಮೇನ ಪರಿಬೃಂಹಿತಃ ॥ ೫ ॥**

5. **ಬರ್ಹಿಃ**— ಅಗ್ನಿಯೇ ಬರ್ಹಿಃ ಎಂಬ ಹೆಸರಿನಿಂದಲೂ ಕರೆಯಲ್ಪಡುವನು. ಏಕೆಂದರೆ, **ಅಗ್ನಿಯು** ಹವೀರೂಪವಾದ ಅನ್ನದಿಂದಾಗಲಿ, ಇಧ್ಮದಿಂದಾಗಲಿ, ಪೋಷಿಸಲ್ಪಟ್ಟು ವೃದ್ಧಿಯನ್ನೈದುವನು (ಪರಿಬೃಂಹಿತಃ).

**ದ್ವಾರಸ್ತು ದೇವ್ಯೋ ಯಾಃ ಪ್ರೋಕ್ತಾ ವಿಶ್ವೇಷಾಂ ತಾಸ್ತು ಪತ್ನಯಃ ।**
**ಅಗ್ನಾಯಿಮನುವರ್ತಂತೇ ತಥಾಗ್ನಾಯ್ಯಗ್ನಿಮೇವ ಚ ॥ ೬ ॥**

### ದೇವೀರ್ದ್ವಾರಃ ಮತ್ತು ಉಷಾಸಾನಕ್ತಾ ಎಂಬ ದೇವತೆಗಳು

6. **ದ್ವಾರಃ ದೇವ್ಯಃ**—ಸಮಸ್ತ ದೇವತೆಗಳ ಪತ್ನಿಯರೇ (ಎಂದರೆ ದೇವಪತ್ನಿಯರೇ) ಈ ಹೆಸರಿನಿಂದ **ಕರೆಯಲ್ಪಡುವರು.** ಇವರೆಲ್ಲರೂ ಅಗ್ನಿ ಪತ್ನಿಯಾದ ಅಗ್ನಾಯಿ ಎಂಬ ದೇವತೆಯನ್ನು ಅನುಸರಿಸಿರುವರು ಈ **ಅಗ್ನಾಯಿಯು** ಅಗ್ನಿಯನ್ನು ಅನುಸರಿಸುವಳು.

**ಅಗ್ನೌ ಧ್ರುವಂ ಸ್ಥಿತಾಸ್ತಾಸ್ತು ಸಂಸ್ತೂಯಂತೇಽಗ್ನಿನಾ ಸಹ ।**
**ಪ್ರಾಧಾನ್ಯಂ ತಾಸು ಚೈವಾಗ್ನೇ ಸ್ತುತಿಷ್ವೇವ ಹವಿಃಷು ಚ ॥ ೭ ॥**

7. ಈ ದೇವತೆಗಳು ಅಗ್ನಿಯಲ್ಲಿ ದೃಢವಾಗಿ ಸ್ಥಾಪಿತರಾಗಿರುವರು. ಮತ್ತು ಅಗ್ನಿಯೊಡನೆ ಸ್ತುತಿಸಲ್ಪಡುವರು. ಇವರನ್ನು ಉದ್ದೇಶಿಸಿ ಅರ್ಪಿಸುವ ಸ್ತುತಿಗಳಲ್ಲಿಯೂ, ಹವಿಸ್ಸುಗಳಲ್ಲಿಯೂ ಅಗ್ನಿಗೇ ಪ್ರಾಧಾನ್ಯತೆ ಇರುವುದು.

**ನಕ್ತೋಷಾಸೌ ಚ ಯೇ ದೇವ್ಯಾವಾಗ್ನೇಯ್ಯಾವೇವ ತೇ ಸ್ಮೃತೇ ।**
**ಶ್ಯಾವ್ಯಾಗ್ನೇಯಿಾ ಹಿ ಕಾಲಸ್ಯ ತಸ್ಯೈವೋಷಾಃ ಕಲೇವ ತು ॥ ೮ ॥**

8. **ನಕ್ತೋಷಾಸೌ ಅಥವಾ ಉಷಾಸಾನಕ್ತಾ**--(ಎಂದರೆ ಉಷೋದೇವತೆ ಮತ್ತು ರಾತ್ರ್ಯಭಿಮಾನಿ ದೇವತೆ) ಈ ಎರಡು ದೇವತೆಗಳೂ ಸಹ ಅಗ್ನಿಗೇ ಸಂಬಂಧಪಟ್ಟಿರುವರೆಂದು ಹೇಳಲಾಗಿದೆ. ಏಕೆಂದರೆ ಅಗ್ನಿಯು ಕತ್ತಲೆಯನ್ನು ಪರಿಹಾರಮಾಡುವುದರಿಂದ ಅಗ್ನಿಗೂ ಕತ್ತಲೆಗೂ (ಶ್ಯಾವಿ) ಒಂದು ವಿಧವಾದ ಸಂಬಂಧವಿದ್ದಂತಾಯಿತು. ಉಷಸ್ಸೂ ಸಹ ಆ ರಾತ್ರಿಕಾಲದ ಒಂದು ಕಲೆಯೆಂದು (ಹದಿನಾರರಲ್ಲಿ ಒಂದು ಭಾಗ) ಹೇಳಲ್ಪಡುವುದು.

**ತಮ ಉಚ್ಛೃತ್ಯುಷಾ ನಕ್ತಾನಕ್ತೀಮಾಂ ಹಿಮಬಿಂದುಭಿಃ ।**
**ಅಪಿ ವಾವ್ಯಕ್ತವರ್ಣೇತಿ ನಞ್ಪೂರ್ವಾದಞ್ಚೇರಿದಂ ಭವೇತ್ ॥ ೯ ॥**

9. **ತಮಃ ಉಚ್ಛೃತೀತ್ಯುಷಾಃ** - ಕತ್ತಲೆಯನ್ನು ಓಡಿಸುವುದಾದ್ದರಿಂದ ಈ ದೇವತೆಗೆ **ಉಷಾಃ** ಎಂದು ಹೆಸರು. **ಇಮಾಂ (ರಾತ್ರಿಂ) ಅನಕ್ತಿ ಹಿಮಬಿಂದುಭಿರತಿ ನಕ್ತಾ**---ಈ ರಾತ್ರಿ ಕಾಲವನ್ನು ಹಿಮಬಿಂದುಗಳಿಂದ (ಮಂಜಿನಿಂದ ತೋಯಿಸುವುದರಿಂದ ರಾತ್ರಿಗೆ **ನಕ್ತಾ** ಎಂದು ಹೆಸರು ಅಥವಾ **ನಕ್ತಾ** ಎಂಬ ಶಬ್ದವು **ನ— ಅಂಚತಿ** ಎಂಬುದರಿಂದ ನಿಷ್ಪನ್ನವಾಗಬಹುದು. ಈ ರಾತ್ರಿಕಾಲದಲ್ಲಿ ಯಾವುದೂ ಸ್ಪಷ್ಟವಾಗಿ ಕಾಣಿಸುವುದಿಲ್ಲವಾದ್ದರಿಂದ **ನಕ್ತಾ—ಅವ್ಯಕ್ತವರ್ಣಾ** ಎಂದೂ ಹೆಸರು.

**ಸಾ ಹಿ ದೋಷಾ ಭವತ್ಯಾದೌ ನಿಶೀಥೇ ಸಾ ತಮಸ್ವತೀ ।**
**ನಾಮ್ನಾ ಭವತ್ಯುಷಾಶ್ಚೈವ ಸೈಷಾ ಪ್ರಾಗುದಯಾದ್ರವೇಃ ॥ ೧೦ ॥**

10, ಈ ರಾತ್ರಿ ದೇವತೆಗೆ ಕಾಲಾನುಸಾರವಾಗಿ ಮೂರು ವಿಧ ಹೆಸರುಗಳಿರುವವು. ರಾತ್ರಿಯು ಪ್ರಾರಂಭ ಕಾಲದಲ್ಲಿ **ದೋಷಾ** ಎಂದೂ, ಅರ್ಧ ರಾತ್ರಿಯ ಸಮಯದಲ್ಲಿ **ತಮಸ್ವತೀ** ಎಂದೂ, ರಾತ್ರಿಯ ಕೊನೆಯಲ್ಲಿ ಎಂದರೆ ಸೂರ್ಯೋದಯಕ್ಕೆ ಪೂರ್ವದಲ್ಲಿ **ಉಷಾಃ** ಎಂದೂ ಹೆಸರು.

**ದೈವ್ಯಾವಿತಿ ತು ಹೋತಾರಾವಾಗ್ನೀ ಪಾರ್ಥಿವಮಧ್ಯಮೌ ।**
**ದಿವ್ಯಾದಗ್ನೇರ್ಹಿ ಜಜ್ಞಾತೇ ದೈವ್ಯೌ ತೇನೇಹ ಜನ್ಮನಾ ॥ ೧೧ ॥**

**ದೈವ್ಯಾ ಹೋತಾರಾ, ತಿಸ್ರೋ ದೇವ್ಯಃ, ತ್ವಷ್ಟಾ**

11. **ದೈವ್ಯಾ ಹೋತಾರೌ** ಎಂದರೆ ಪಾರ್ಥಿವಾಗ್ನಿ ಮತ್ತು ಮಧ್ಯಮಾಗ್ನಿಯು. ಈ ಎರಡು ಅಗ್ನಿಯ ರೂಪಗಳೂ ಸ್ವರ್ಗೀಯಾಗ್ನಿಯಿಂದ (ದಿವ್ಯಾದಗ್ನೇಃ) ಉತ್ಪತ್ತಿಯಾಗಿರುವವು, ಆದ್ದರಿಂದ ಅಗ್ನಿಯ ಈ ಎರಡು ರೂಪಗಳನ್ನು ದೈವ್ಯಾ (ಸ್ವರ್ಗಸಂಬಂಧವಾದ) ಎಂಬ ಹೆಸರಿನಿಂದ ಕರೆಯಲಾಗಿರುವುದು.

**ತಿಸ್ರಸ್ತು ದೇವ್ಯೋ ಯಾಃ ಪ್ರೋಕ್ತಾಸ್ತಿಸ್ರಸ್ತಾ ಸೈವೇಹ ಸಾ ತು ವಾಕ್ ।**
**ತ್ರಿವಿಧೇನೋಚ್ಯತೇ ನಾಮ್ನಾ ಜ್ಯೋತಿಃಷು ತ್ರಿಷು ವರ್ತನೀ ॥ ೧೨ ॥**

12. **ತಿಸ್ರೋ ದೇವ್ಯಃ**—ತಿಸ್ರಃ ದೇವ್ಯಃ (ಮೂರು ಮಂದಿ ದೇವತೆಯರು) ಎಂಬ ದೇವತೆಗಳು ತ್ರಿಸ್ಥಾನಗಳಲ್ಲಿರುವ ವಾಕ್ ಅಥವಾ ವಾಗ್ದೇವತೆಯನ್ನು ಪ್ರತಿಬಿಂಬಿಸುವರು. ಈ ವಾಗ್ದೇವತೆಯು ಮೂರು ಸ್ಥಾನಗಳಲ್ಲಿರುವವುದರಿಂದ ಮೂರು ವಿಧ ರೂಪಗಳುಳ್ಳವಳೆಂದು ಮೂರು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವಳು.

**ಅಗ್ನಿಮೇವಾನುಗೇಳಾ ತು ಮಧ್ಯಂ ಪ್ರಾಪ್ತಾ ಸರಸ್ವತೀ ।**
**ಅಮುಂ ಸ್ಥಿತಾಧಿ ಲೋಕಂ ತು ಭಾರತೀ ಭವತಿ ಹ್ಯಸೌ ॥ ೧೩ ॥**

13. ಪಾರ್ಥಿವಾಗ್ನಿಯನ್ನು ಅನುಸರಿಸಿ ಈ ಲೋಕದಲ್ಲಿರುವ ವಾಗ್ದೇವಿಗೆ **ಇಳಾ** ಎಂದು ಹೆಸರು. ಮಧ್ಯವ್ಯ (ಅಂತರಿಕ್ಷ) ಲೋಕದಲ್ಲಿರುವ ವಾಕ್ಕಿಗೆ **ಸರಸ್ವತಿ**ಯೆಂದೂ, ಸ್ವರ್ಗಲೋಕದಲ್ಲಿರುವ ವಾಗ್ದೇವತೆಗೆ **ಭಾರತೀ** ಎಂದೂ ಹೆಸರು. (ಒಂದೇ ದೇವತೆಗೆ ಸ್ಥಾನಭೇದಗಳಿಂದ ಮೂರು ಬೇರೆಬೇರೆ ಹೆಸರುಗಳಿರುವವು).

**ಸೈಷಾ ತು ತ್ರಿವಿಧಾ ವಾಗ್ಸ್ಯೈ ದಿವಿ ಚ ವ್ಯೋಮ್ನಿ ಚೇಹ ಚ ।**
**ವ್ಯಸ್ತಾ ಚೈವ ಸಮಸ್ತಾ ಚ ಭಜತ್ಯಗ್ನೀನಿಮಾನಪಿ ॥ ೧೪ ॥**

14. ಈ ವಾಗ್ದೇವತೆಯು ಒಬ್ಬಳೇ ಆದರೂ, ಪೃಥಿವಿ, ಅಂತರಿಕ್ಷ, ಸ್ವರ್ಗಗಳೆಂಬ ಮೂರು ಸ್ಥಾನಗಳಲ್ಲಿ ಮೂರು ವಿಧವಾದ ಹೆಸರುಗಳಿಂದ ಇರುವಳು. ಈ ದೇವತೆಯು ಒಂದೇ ರೂಪದಲ್ಲಿದ್ದರೂ ಬೇರೆ ಬೇರೆ ರೂಪಗಳಿದ್ದರೂ ಆಯಾ ಸ್ಥಾನದಲ್ಲಿರುವ ಅಗ್ನಿಯೊಡನೆ (ಪೃಥಿವ್ಯಂತರಿಕ್ಷ ಸ್ವರ್ಗಗಳಲ್ಲಿರುವ ಮೂರುವಿಧ ಅಗ್ನಿಯೊಡನೆ) ಸೇರಿರುವಳು.

**ತ್ವಷ್ಟಾ ತು ಯಸ್ತ್ವಯಮೇವ ಪಾರ್ಥಿವೋಽಗ್ನಿರಿತಿ ಸ್ತುತಿಃ ।**
**ಪಾರ್ಥಿವಸ್ಯಾಸ್ಯ ವರ್ಚಃ ಸ್ಯುಃ ಕಸ್ಯಾಪ್ಯೃಕ್ ಚಾರ್ತವೇಷು ಚ ॥ ೧೫ ॥**

15. **ತ್ವಷ್ಟಾ** ಎಂಬ ಯಾವ ದೇವತೆಯಿರುವುದೋ ಅದು ಪಾರ್ಥಿವಾಗ್ನಿಯೆಂದೇ (ಅಥವಾ ಅದರ ರೂಪಾಂತರವೆಂದೇ) ಸ್ತುತಿಸಲ್ಪಟ್ಟಿರುವುದು ಅಥವಾ ಈ ದೇವತೆಯು ಪಾರ್ಥಿವ ದೇವತೆಯೆಂದು (ಪೃಥಿವೀಸ್ಥಾನಕ್ಕೆ ಸಂಬಂಧಪಟ್ಟ) ಸ್ತುತಿಸಿರುವ ಋಕ್ಕುಗಳಿರುವವು. ಮತ್ತು ಋತುಗಳನ್ನು ಸ್ತುತಿಸುವ ಋಕ್ಕುಗಳ ಮಧ್ಯದಲ್ಲಿ ಈ ತ್ವಷ್ಟೃದೇವತೆಯನ್ನು ಅಗ್ನಿಯ ರೂಪಾಂತರವೆಂದು (ಕಶ್ಯಪ) ಸ್ತುತಿಸಿರುವ ಋಕ್ಕು ಒಂದಿರುವುದು.

**ತ್ವಿಷಿತಸ್ತ್ವಕ್ಷತೇರ್ವಾ ಸ್ಯಾತ್ತೂರ್ಣಮಶ್ನುತ ಏವ ವಾ ।**
**ಕರ್ಮಸೂತ್ತಾರಣೋ ವೇತಿ ತೇನ ನಾಮ್ನೈತದಶ್ನುತೇ ॥ ೧೬ ॥**

## ಸ್ವರ್ಗೀಯ ದೇವತೆಯಾದ ತ್ವಷ್ಟೃ, ದಧೀಚಋಷಿಯ ವೃತ್ತಾಂತ

16. **ತ್ವಷ್ಟೃ** ಶಬ್ದನಿರ್ವಚನ—**ತ್ವಷ್ಟೃ** ಶಬ್ದವು **ತ್ವಿಷ್** (ಪ್ರಕಾಶಿಸು) ಅಥವಾ **ತ್ವಕ್ಷ್** ಎಂಬ ಧಾತುವಿನಿಂದ ನಿಷ್ಪನ್ನವಾಗಬಹುದು ಅಥವಾ ಬೇಗನೆ (ತೂರ್ಣ) ಪಡೆಯುವವನಾದ್ದರಿಂದ ಅಥವಾ ಕರ್ಮಗಳಲ್ಲಿ ಸಹಾಯ ಮಾಡುವವನಾದ್ದರಿಂದ ಈ ದೇವನಿಗೆ **ತ್ವಷ್ಟಾ** ಎಂದು ಹೆಸರು ಬಂದಿರುವುದು.

**ಯಃ ಸಹಸ್ರತಮೋ ರಶ್ಮೀ ರವೇಶ್ಚಂದ್ರಮುಪಾಶ್ರಿತಃ ।**
**ಸೋಽಪಿ ತ್ವಷ್ಟಾರಮೇವಾಗ್ನಿಂ ಪರಂ ಚೇಹ ಚ ಯನ್ನೃಧು ॥ ೧೭ ॥**

17. ಸೂರ್ಯನ ಸಾವಿರಾರು ರಶ್ಮಿಗಳು ಚಂದ್ರನಲ್ಲಿ ಆಶ್ರಯವನ್ನು ಪಡೆದಿರುವವು. ಆ ರಶ್ಮಿಯು ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಇರುವ ಅಗ್ನಿಯ ರೂಪಾಂತರವಾದ ತ್ವಷ್ಟೃವನ್ನೂ, ಮಧುವಿದ್ಯೆಯನ್ನೂ (ಮೃತಸಂಜೀವಿನೀ ವಿದ್ಯೆ) ವ್ಯಾಪಿಸಿ ಅಲ್ಲಿ ಆಶ್ರಯವನ್ನು ಪಡೆದಿರುವುದು.

**ಪ್ರಾದಾದ್ಬ್ರಹ್ಮಾಪಿ ಸುಪ್ರೀತಃ ಸುತಾಯ ತದಥರ್ವಣಃ ।**
**ಸ ಚಾಭವದೃಷಿಸ್ತೇನ ಬ್ರಹ್ಮಣಾ ದೀಪ್ತಿಮತ್ತರಃ ॥ ೧೮ ॥**

18. ಒಂದು ಸಮಯದಲ್ಲಿ ಇಂದ್ರನು ಅಥರ್ವಣಪುತ್ರನಾದ ದಧ್ಯಂಚ ಋಷಿಯ ವಿಷಯದಲ್ಲಿ ಸಂತುಷ್ಟನಾಗಿ ಅವನಿಗೆ ಮಧುವಿದ್ಯೆ (ಬ್ರಹ್ಮವಿದ್ಯೆ) ಯನ್ನು ಉಪದೇಶಿಸಿದನು. ಆ ವಿದ್ಯಾಪ್ರಭಾವದಿಂದ ದಧೀಚಿಋಷಿಯು ಅತ್ಯಂತ ತೇಜಸ್ಸಿನಿಂದ (ವರ್ಚಸ್ಸಿನಿಂದ) ಬೆಳಗುತ್ತಿದ್ದನು.

**ತಮೃಷಿಂ ನಿಷಿಷೇಧೇಂದ್ರೋ ನ್ಯೈವಂ ವೋಚಃ ಕ್ವಚಿನ್ಮಧು ।**
**ನ ಹಿ ಪ್ರೋಕ್ತೇ ಮಧುನ್ಯಸ್ಮಿಞ್ಜೀವಂತಂ ತ್ವೋತ್ಸೃಜಾಮ್ಯಹಂ ॥ ೧೯ ॥**

19. ಈ ಮಧುವಿದ್ಯೆಯನ್ನು ಉಪದೇಶಿಸುವಾಗ ಇಂದ್ರನು ಆ ಋಷಿಯನ್ನು ಕುರಿತು—ಇದನ್ನು (ಈ ಮಧುವಿದ್ಯೆಯನ್ನು) ನೀನು ಯಾರಿಗೂ ಹೇಳಿಕೊಡಕೂಡದು. ಒಂದುವೇಳೆ ನನ್ನ ಮಾತನ್ನುಲ್ಲಂಘಿಸಿ ಇದನ್ನು ಯಾರಿಗಾದರೂ ಹೇಳಿದ್ದೇ ಆದರೆ ಆಗ ನಾನು ನಿನ್ನನ್ನು ಜೀವದಿಂದಿರಲು ಬಿಡುವುದಿಲ್ಲ ಎಂದು ಹೇಳಿದನು

**ತಮೃಷಿಂ ತ್ವಶ್ವಿನೌ ದೇವೌ ವಿವಿಕ್ತೇ ಮಧ್ವಯಾಚತಾಂ ।**
**ಸ ಚ ತಾಭ್ಯಾಂ ತದಾಚಷ್ಟೇ ಯದುವಾಚ ಶಚೀಪತಿಃ ॥ ೨೦ ॥**

20. ಹೀಗಿರುವಾಗ ಒಂದು ಸಮಯದಲ್ಲಿ ದಧೀಚಋಷಿಯ ಬಳಿಗೆ ಅಶ್ವಿನೀದೇವತೆಗಳು ಬಂದು ತಮಗೆ ಆ ಮಧುವಿದ್ಯೆಯನ್ನು ಹೇಳಿಕೊಡಬೇಕೆಂದು ರಹಸ್ಯವಾಗಿ ಪ್ರಾರ್ಥಿಸಿದರು. ಅದನ್ನು ಕೇಳಿ ಋಷಿಯು ಶಚೀಪತಿಯು (ಇಂದ್ರನು) ಈ ವಿದ್ಯವನ್ನು ಯಾರಿಗೂ ಹೇಳಬೇಡವೆಂದು ಹೇಳಿರುವ ವಿಷಯವನ್ನು ತಿಳಿಸಿದನು.

**ತಮಬ್ರೂತಾಂ ತು ನಾಸತ್ಯಾವಾಶ್ವ್ಯೇನ ಶಿರಸಾ ಭವಾನ್ ।**
**ಮಧ್ವಾವಾಂ ಗ್ರಾಹಯತ್ವಾವಾಂ ನೇಂದ್ರಸ್ತ್ವಾ ವಧೀತ್ತತಃ ॥ ೨೧ ॥**

### ದಧೀಚಿಋಷಿಯ ಅಶ್ವಶಿರಸ್ಸು—ಮಧ್ಯಸ್ಥಾನನಾದ ತ್ವಷ್ಟೃವು

21. ಅದನ್ನು ಕೇಳಿ ಅಶ್ವಿನೀದೇವತೆಗಳು—ಹಾಗಾದರೆ ನೀನು ಒಂದು ಅಶ್ವದ (ಕುದುರೆಯ) ಶಿರಸ್ಸನ್ನು ಧರಿಸಿ ಆ ರೂಪದಿಂದ ನಮಗೆ ಮಧುವಿದ್ಯೆಯನ್ನು ಹೇಳಿಕೊಡು. ಇಂದ್ರನು ನಿನ್ನನ್ನು ಕೊಲ್ಲುವುದಿಲ್ಲ ಎಂದರು.

**ಆಶ್ವ್ಯೇನ ಶಿರಸಾ ತೌ ತು ದಧ್ಯಙ್ಙಾಹ ಯದಶ್ವಿನಾ ।**
**ತದಸ್ಯೇಂದ್ರೋಽಹರತ್ತಸ್ಯಂ ತನ್ನ್ಯಧತ್ತಾಮುಸ್ಯ ಯಚ್ಛಿರಃ ॥ ೨೨ ॥**

22. ಅನಂತರ ದಧ್ಯಂಚಋಷಿಯು ಅಶ್ವಿನೀದೇವತೆಗಳಿಗೆ ಆ ಮಧುವಿದ್ಯೆಯನ್ನು ಉಪದೇಶಿಸಿದನು. ಇದರಿಂದ ಕೋಪಗೊಂಡ ಇಂದ್ರನು ಆ ದಧೀಚಿಋಷಿಯ ಅಶ್ವಶಿರಸ್ಸನ್ನು ಕತ್ತರಿಸಿಹಾಕಿದನು. ಬಳಿಕ ಅಶ್ವಿನೀದೇವತೆಗಳು ದಧೀಚಿಋಷಿಯ ಮುಂಚೆ ಇದ್ದ ಶಿರಸ್ಸನ್ನೇ ಪುನಃ ಅವನ ಶರೀರಕ್ಕೆ ಸೇರಿಸಿದರು.

**ದಧೀಚಶ್ಚ ಶಿರಶ್ಚಾಶ್ವ್ಯಂ ಕೃತ್ತಂ ವಜ್ರೇಣ ವಜ್ರಿಣಾ ।**
**ಪಪಾತ ಸರಸೋ ಮಧ್ಯೇ ಪರ್ವತೇ ಶರ್ಯಣಾವತಿ ॥ ೨೩ ॥**

23. ಇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟ ದಧೀಚಿಋಷಿಯ ಅಶ್ವಶಿರಸ್ಸು ಶರ್ಯಣಾವತ್ ಎಂಬ ಪರ್ವತದಲ್ಲಿದ್ದ ಒಂದು ಸರೋವರದ ಮಧ್ಯದಲ್ಲಿ ಹೋಗಿ ಬಿದ್ದಿತು.

**ತದದ್ಭ್ಯಸ್ತು ಸಮುತ್ಥಾಯ ಭೂತೇಭ್ಯೋ ವಿವಿಧಾನ್ವರಾನ್ ।**
**ಪ್ರಾದಾಯ ಯುಗಪರ್ಯಂತಂ ತಾಸ್ವೇವಾಪ್ಸು ನಿಮಜ್ಜತಿ ॥ ೨೪ ॥**

24. ಸರೋವರದ ನೀರಿನಲ್ಲಿ ಮುಳುಗಿಹೋದ ಆ ಅಶ್ವಶಿರಸ್ಸು ಆಗಾಗ ಮೇಲಕ್ಕೆ ಎದ್ದುಬಂದು ಪ್ರಾಣಿಗಳಿಗೆ ನಾನಾವಿಧ ವರಗಳನ್ನು ಅನುಗ್ರಹಿಸಿ ಪುನಃ ಆ ನೀರಿನಲ್ಲಿಯೇ ಮುಳುಗಿರುವುದು. ಈ ಕಾರ್ಯವು ಯುಗಪರ್ಯಂತರ ನಡೆದುಬರುತ್ತಿರುವುದು.

**ತ್ವಷ್ಟಾ ರೂಪವಿಕರ್ತಾ ಚ ಯೋಽಸೌ ಮಾಧ್ಯಮಿಕೇ ಗಣೇ ।**
**ಸ್ತುತಃ ಸ ಚ ನಿಪಾತೇನ ಸೂಕ್ತಂ ತಸ್ಯ ನ ವಿದ್ಯತೇ ॥ ೨೫ ॥**

25. ಮಧ್ಯಮಸ್ಥಾನದೇವತೆಯಾದ ತ್ವಷ್ಟೃವು ರೂಪಗಳಿಗೆ ಅಧಿಪತಿಯಾಗಿ ಪ್ರಾಣಿಗಳೇ ಮೊದಲಾದವರಿಗೆ ಯಾವ ರೂಪವನ್ನು ಬೇಕಾದರೂ ಉಂಟುಮಾಡಬಲ್ಲನು. ಈ ದೇವನು ಅನೇಕ ಸೂಕ್ತಗಳಲ್ಲಿ ಸಂದರ್ಭತ್ವೇನ ಅಲ್ಲಲ್ಲಿ ಸ್ತುತನಾಗಿರುವನು ಆದರೆ ಇವನನ್ನು ಸ್ತುತಿಸುವ ಪ್ರತ್ಯೇಕ ಸೂಕ್ತವು ಯಾವುದೂ ಇರುವುದಿಲ್ಲ.

**ವನಸ್ಪತಿಂ ತು ಯಂ ಪ್ರಾಹುರಯಂ ಸೋಽಗ್ನಿರ್ವನಸ್ಪತಿಃ ।**
**ಅಯಂ ವನಾನಾಂ ಹಿ ಪತಿಃ ಪಾತಾ ಪಾಲಯೇತೀತಿ ವಾ ॥ ೨೬ ॥**

26. **ವನಸ್ಪತಿ**—ವನಸ್ಪತಿಯೆಂದು ಯಾವ ದೇವನನ್ನು ಕರೆಯುವರೋ ಆ ದೇವನು ವನಗಳಿಗೆ ಪಾಲಕನೆಂದು ಹೇಳಲ್ಪಡುವ ಅಗ್ನಿಯ ರೂಪಾಂತರವೇ ಆಗಿರುವನು. ಅಗ್ನಿಯೇ ವನಸ್ಪತಿಯೆಂದು ಹೇಳಲ್ಪಡುವನು ಏಕೆಂದರೆ, ಈ ಅಗ್ನಿಯು ವನಗಳ ಸಂರಕ್ಷಕನು ಅಥವಾ ಈ ವನಗಳನ್ನು (ವೃಕ್ಷಗಳನ್ನು) ತೊಂದರೆಗೆ ಈಡಾಗದಂತೆ ಕಾಪಾಡುವವನು.

**ಅಗ್ನಿರ್ಗೃತ್ಸಮದೇನಾಽಯಂ ವನಸ್ಪತಿರಿತೀಳಿತಃ ।**
**ಮಂದಸ್ವೇತ್ಯಸ್ಯ ಸೂಕ್ತಸ್ಯ ಷಳೃಚಸ್ಯ ತೃತೀಯಯಾ ॥ ೨೭ ॥**

27. ಗೃತ್ಸಮದ ಋಷಿಯು, ಆರು ಋಕ್ಕುಗಳಿರುವ **ಮಂದಸ್ವ ಹೋತ್ರಾದನು** ಎಂಬ ಸೂಕ್ತದ (೨ನೇ ಮಂಡಲದ ೩೭ ನೇ ಸೂಕ್ತ) ಮೂರನೆಯ ಋಕ್ಕಿನಲ್ಲಿ (**ಮೇದ್ಯಂತು ತೇ ವಹ್ನಯಃ** ಎಂಬ ಋಕ್ಕಿನಲ್ಲಿ) ಅಗ್ನಿಯನ್ನು ವನಸ್ಪತಿ ಶಬ್ದದಿಂದ ಸ್ತುತಿಸಿರುವನು

**ಯೂಪವತ್ತ್ರುವಚ್ಚೈವ ಸ್ತುತಿರ್ಯಾಸ್ಯ ಪ್ರಸಂಗಜಾ ।**
**ಸರ್ವೇಣಾಂಜಂತಿಸೂಕ್ತೇನ ತೃತೀಯೇ ಸಾ ತು ಮಂಡಲೇ ॥ ೨೮ ॥**

28. ಆದರೆ ಮೂರನೆ ಮಂಡಲದ **ಅಂಜಂತಿ ತ್ವಾ** ಎಂಬ ೮ನೇ ಸೂಕ್ತದಲ್ಲೆಲ್ಲಾ ಪ್ರಸಂಗ ವಶದಿಂದ **ವನಸ್ಪತಿ** ದೇವತೆಯನ್ನು ಯೂಪವೆಂದೂ ದೊಡ್ಡ ವೃಕ್ಷವೆಂದೂ ಸ್ತುತಿಸಲಾಗಿದೆ.

**ಸ್ವಾಹಾಕೃತಯೋಽನೇಕಾಶ್ಚ ವಿದುಷಾಂ ಮತಯೋಽಭವನ್ ।**
**ತತ್ಸರ್ವಂ ತ್ವಯಮೇವಾಗ್ನಿರ್ಭವತೀತಿ ವಿನಿಶ್ಚಯಃ ॥ ೨೯ ॥**

**ವನಸ್ಪತಿ ಮತ್ತು ಸ್ವಾಹಾಕೃತಿ ಎಂಬ ದೇವತೆಗಳು**

29. **ಸ್ವಾಹಾಕೃತಿ** ಎಂಬ ದೇವತೆಯ ವಿಷಯದಲ್ಲಿ ವಿದ್ವಾಂಸರ ಮತಭೇದಗಳು (ಭೇದಾಭಿಪ್ರಾಯಗಳು) ಅನೇಕವಾಗಿವೆ. ಆದರೆ ಅವರಲ್ಲಿ ಎಷ್ಟೇ ಮತಭೇದವಿದ್ದರೂ ಈ **ಸ್ವಾಹಾಕೃತಿ** ಎಂಬ ಈ ದೇವತೆಯು ಅಗ್ನಿಯ ರೂಪವಿಶೇಷವೆಂಬ ವಿಷಯದಲ್ಲಿ ಮಾತ್ರ ಎಲ್ಲರ ಅಭಿಪ್ರಾಯವೂ ಒಂದೇ ಆಗಿರುವುದು.

**ಅಯಂ ಹಿ ಕರ್ತಾ ಸ್ವಾಹಾನಾಂ ಕೃತಿಸ್ತ್ವಾಸಾಮಿಹೈಕಜಾ ।**
**ಅಯಂ ಪ್ರಸೂತಿರ್ಭೂತಾನಾಂ ಸರ್ವೇಷಾಮಯಮವ್ಯಯಃ ॥ ೩೦ ॥**

30. ಏಕೆಂದರೆ ಸ್ವಾಹಾಕಾರಗಳಿಗೆ (ಎಂದರೆ ಸ್ವಾಹಾಶಬ್ದಪೂರ್ವಕವಾಗಿ ಅರ್ಪಿಸುವ ಹವಿಸ್ಸುಗಳಿಗೆ ಅಥವಾ ಮಂತ್ರಗಳಿಗೆ) ಈ ಅಗ್ನಿಯೇ ಕರ್ತೃವು. ಈ ವಿಧವಾದ ಮಂತ್ರಗಳಿಗೆಲ್ಲಾ ಇವನೇ ಕರ್ತೃವು ಮತ್ತು ದೇವತೆಯು, ಈ ಅಗ್ನಿಯೇ ಸಮಸ್ತ ಭೂತಗಳಿಗೂ (ಪ್ರಾಣಿಗಳಿಗೂ) ಉತ್ಪತ್ತಿಸ್ಥಾನನು ಎಂದರೆ ಇವನಿಂದಲೇ ಸಕಲ ಪ್ರಾಣಿಗಳೂ ಉತ್ಪನ್ನವಾಗುವವು. ಸರ್ವಪ್ರಾಣಿಗಳಲ್ಲಿ ಇವನಿಗೆ ಮಾತ್ರ ನಾಶವಿಲ್ಲ ಎಂದರೆ ಇವನು ನಾಶರಹಿತನು.

**ತನೂನಪಾದ್ದ್ವಿತೀಯಾ ಚ ನರಾಶಂಸವತೀ ಚ ಯಾ ।**
**ಸಮಸ್ಯೇತೇ ಪ್ರಯೋಕ್ತವ್ಯೇ ತ್ರಿಷ್ವೇವೋಭಯವತ್ಸು ತು ॥ ೩೧ ॥**

**ತನೂನಪಾತ್ ಮತ್ತು ನರಾಶಂಸ ಎಂಬ ಎರಡು ದೇವತೆಗಳನ್ನು ಸ್ತುತಿಸಿರುವ ಆಪ್ರೀಸೂಕ್ತಗಳು**

31. ಆಪ್ರೀ ಸೂಕ್ತದಲ್ಲಿ (ಎರಡನೆಯ ದೇವತೆಯಾದ) **ತನೂನಪಾತ್** ಮತ್ತು **ನರಾಶಂಸ** ಎಂಬ ಎರಡು ದೇವತೆಗಳನ್ನು ಸ್ತುತಿಸಿರುವ ಸೂಕ್ತಗಳು ಋಗ್ವೇದದಲ್ಲಿ ಮೂರುಮಾತ್ರವಿರುವವು. (ಈ ವಿಧವಾದ ಸೂಕ್ತಗಳು ಯಾವವೆಂದರೆ— 1ನೇ ಮಂಡಲದ 13ನೇ ಸೂಕ್ತ (**ಮೇಧಾತಿಥಿಃ ಕಾಣ್ವಃ** ಎಂಬ ಋಷಿದೃಷ್ಟವಾದುದು) ಮತ್ತು 1ನೇ ಮಂಡಲದ 142ನೇ ಸೂಕ್ತ (**ದೀರ್ಘತಮಾ ಔಚಥ್ಯಃ** ಎಂಬ ಋಷಿದೃಷ್ಟವಾದುದು.) ಈ ವಿಧವಾದ ಸೂಕ್ತಗಳು ಮೂರು ಇರುವವೆಂದು ಇಲ್ಲಿ ಹೇಳಿದೆ (ಪ್ರೈಷ ಸೂಕ್ತವನ್ನು ಬಿಟ್ಟರೆ) ಇದು ತಪ್ಪು. ಎರಡು ಮಾತ್ರ ಇರುವವು.

**ನರಾಶಂಸವತೀ ವಾ ಸ್ಯಾದ್ದ್ವಿತೀಯಾ ಚ ಪ್ರಜಾರ್ಥಿನಾಂ ।**
**ಬಲಕಾಮೋಽನ್ನಕಾಮೋ ವಾ ಭೂತಿಮಿಚ್ಛೇದಥಾಪಿ ಯಃ ॥ ೩೨ ॥**

32. ಎರಡನೇ ಮಂತ್ರವು ನರಾಶಂಸ ದೇವತಾಕವಾದ ಆಪ್ರೀ ಸೂಕ್ತ ಪ್ರಯೋಗದಿಂದ ಯಜ್ಞಮಾಡುವ ಯಜಮಾನನು ತಾನು ಬಯಸುವ ಪ್ರಜಾ ಸಂತತಿಯನ್ನೂ, ಬಲವನ್ನೂ, ಅನ್ನವನ್ನೂ ಅಥವಾ ಸಂಪತ್ತನ್ನೂ ಪಡೆಯುವನು.

ಆಪ್ರೀಸೂಕ್ತಗಳ ವಿಷಯದಲ್ಲಿ ಯಾಸ್ಕರ ನಿರುಕ್ತವು ಈ ರೀತಿ ಇದೆ—

**ಅಥಾತ ಆಪ್ರಿಯಃ । ಆಪ್ರಿಯಃ ಕಸ್ಮಾದಾಪ್ನೋತೇಃ ಪ್ರೀಣಾತೇರ್ವಾ । ಆಪ್ರೀಭಿರಾಪ್ರೀಣಾತೀತಿ ಚ ಬ್ರಾಹ್ಮಣಂ ॥** (ನಿ. ೮-೪)

ಈಗ ಆಪ್ರೀಸೂಕ್ತಗಳ ವಿಷಯವನ್ನು ವಿವರಿಸುತ್ತೇವೆ. ಈ ಸೂಕ್ತಗಳಿಗೆ **ಆಪ್ರಿಯಃ** ಎಂಬ ಹೆಸರು ಏತಕ್ಕೆ ಬಂದಿತು ಎಂದರೆ **ಆಪ್ನುವಂತಿ ಪ್ರೀಣಂತಿ ವಾ ದೇವತಾ ಇತ್ಯಾಪ್ರಿಯಃ** ಈ ಸೂಕ್ತಗಳ ಋಕ್ಕುಗಳಿಂದ ದೇವತೆಗಳನ್ನು ಸ್ತುತಿಸಿದರೆ ಅವುಗಳು ಆ ದೇವತೆಗಳನ್ನು ಹೋಗಿ ಸೇರುವವು ಅಥವಾ ಅವರನ್ನು ಸಂತೋಷಪಡಿಸುವವು ಆದ್ದರಿಂದ ದೇವತೆಗಳಿಗೆ ಪ್ರೀತಿಪಾತ್ರವಾದ ಈ ಸೂಕ್ತವನ್ನು ಆಪ್ರೀಸೂಕ್ತವೆಂದು ಕರೆಯಲಾಗಿದೆ ಎಂದಭಿಪ್ರಾಯವು.

ಆಪ್ರೀಸೂಕ್ತಗಳಲ್ಲಿ ಕಂಡುಬರುವ ೧೧ಮಂದಿ ದೇವತೆಗಳ ವಿಷಯವನ್ನು ವಿವರಿಸುವಾಗ ಯಾಸ್ಕರು ಈ ಸೂಕ್ತವನ್ನೇ ಉದಾಹರಣೆಯಾಗಿ ತೆಗೆದುಕೊಂಡು ಇದರಲ್ಲಿರುವ ೧೧ ಋಕ್ಕುಗಳಿಗೂ ಪ್ರತ್ಯೇಕವಾಗಿ ನಿರುಕ್ತವನ್ನು ಹೇಳಿದಾರೆ. ಆಯಾ ಋಕ್ಕಿನ ನಿರುಕ್ತವನ್ನು ಆಯಾ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗಿದೆ.

॥ ಸಾಯಣಭಾಷ್ಯಂ ॥

**ಸಮಿದ್ಧ ಇತ್ಯೇಕಾದಶರ್ಚಮೇಕಾದಶಂ ಸೂಕ್ತಂ ತ್ರೈಷ್ಟುಭಂ । ಭಾರ್ಗವೋ ಜಮದಗ್ನಿರ್ಋಷಿಃ। ತಸ್ಯ ಪುತ್ರೋ ರಾಮೋ ವಾ ಯಃ ಪರಶುರಾಮ ಇತಿ ಪ್ರಖ್ಯಾತಃ । ಆಪ್ರೀಸೂಕ್ತಮಿದಂ । ಅತಃ ಸಮಿದಾದ್ಯಾಃ ಸತನೂನಪಾತೋ ನರಾಶಂಸವರ್ಜಿತಾಃ ಪ್ರತ್ಯೃಚಂ ದೇವತಾಃ । ತಥಾ ಚಾನುಕ್ರಾಂತಂ ಸಮಿದ್ಧ ಏಕಾದಶ ಜಮದಗ್ನಿಸ್ತತ್ಸುತೋ ವಾ ರಾಮ ಆಪ್ರಿಯ ಇತಿ ॥ ಪಶೌ ಜಾಮದಗ್ನ್ಯಾನಾಮಿದಮಾಪ್ರೀಸೂಕ್ತಂ ಯದ್ವಾವಿಶೇಷೇಣ ಸರ್ವೇಷಾಂ । ಸೂತ್ರಿತಂ ಚ । ಸಮಿದ್ಧೋ ಅದ್ಯೇತಿ ಸರ್ವೇಷಾಂ ಯಥರ್ಷಿ ವಾ । ಆ. ೩-೨ । ಇತಿ ॥ ಅಗ್ನಿಚಯನಾಂಗಭೂತೇ ಪ್ರಾಜಾಪತ್ಯೇ ಪಶೌ ಸರ್ವೇಷಾಂ ನಿತ್ಯಮಿದಮಾಪ್ರೀಸೂಕ್ತಂ । ಸೂತ್ರಿತಂ ಚ । ಪ್ರಾಜಾಪತ್ಯೇ ತು ಜಾಮದಗ್ನ್ಯಃ ಸರ್ವೇಷಾಂ । ಆ. ೩-೨। ಇತಿ ॥**

ಅನುವಾದವು—**ಸಮಿದ್ಧಃ** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭೃಗುಪುತ್ರನಾದ ಜಮದಗ್ನಿಯು ಋಷಿಯು ; ಈ ಜಮದಗ್ನಿಯ ಪುತ್ರನಿಗೆ ರಾಮ ಅಥವಾ ಪರಶುರಾಮನೆಂಬ ಹೆಸರು ಪ್ರಸಿದ್ಧವಾಗಿದೆ. ತ್ರಿಷ್ಟುಪ್‌ಛಂದಸ್ಸು. ಇದು ಆಪ್ರೀಸೂಕ್ತವು. ಆದ್ದರಿಂದಈ ಸೂಕ್ತದ ೧೧ ಋಕ್ಕುಗಳಿಗೂ ಸಮಿದಾದಿ ಹನ್ನೊಂದು ಮಂದಿ ಆಪ್ರೀಸೂಕ್ತಗಳಿಗೆ ಉಕ್ತವಾಗಿರುವ ದೇವತೆಗಳೇ ಪ್ರತ್ಯೇಕವಾಗಿ ಒಂದೊಂದು ಋಕ್ಕಿಗೆ ಒಬ್ಬೊಬ್ಬರಂತೆ ದೇವತೆಗಳು. ಆದರೆ ಈ ಸೂಕ್ತದಲ್ಲಿ ತನೂನಪಾತ್ ಎಂಬ ದೇವತೆಯನ್ನು ಸ್ತುತಿಸಲಾಗಿದೆ. ನರಾಶಂಸ ದೇವತೆಯನ್ನು ಇಲ್ಲಿ ಸ್ತುತಿಸಲಾಗಿಲ್ಲ. ಅನುಕ್ರಮಣಿಕೆಯಲ್ಲಿ—**ಸಮಿದ್ಧ ಏಕಾದಶ ಜಮದಗ್ನಿಸ್ತತ್ಸುತೋ ವಾ ರಾಮ ಆಪ್ರಿಯಃ** ಎಂದು ಹೇಳಿರುವುದು ಪಶುಯಾಗದಲ್ಲಿ ಈ ಆಪ್ರೀಸೂಕ್ತವು ಜಮದಗ್ನಿ ವಂಶದವರಿಗೆ ಅಥವಾ ಸಾಮಾನ್ಯವಾಗಿ ಇತರರಿಗೂ ಉಕ್ತವಾಗಿರುವುದು. ಈ ವಿಷಯದಲ್ಲಿ ಆಶ್ವಲಾಯನಶ್ರೌತಸೂತ್ರದ—**ಸಮಿದ್ಧೋ ಅದ್ಯೇತಿ ಸರ್ವೇಷಾಂ ಯಥರ್ಷಿ ವಾ** ಎಂಬ ಸೂತ್ರವು (ಆ. ೩-೨) ಇದನ್ನು ನಿರ್ದೇಶಿಸುವುದು. ಅಗ್ನಿಚಯನಾಂಗಭೂತವಾದ ಪ್ರಾಜಾಪತ್ಯಪಶುಹೋಮದಲ್ಲಿ ಈ ಸೂಕ್ತವು ಸರ್ವರಿಗೂ ನಿರ್ದಿಷ್ಟವಾಗಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಪ್ರಾಜಾಪತ್ಯೇತು ಜಾಮದಗ್ನ್ಯಃ ಸರ್ವೇಷಾಂ** ಎಂಬ ಸೂತ್ರದಿಂದ (ಆ.೩-೨) ವಿವೃತವಾಗಿರುವುದು.

## ಸೂಕ್ತ—೧೧೦

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ—೧೧೦ ॥
ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೮, ೯ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ಜಮದಗ್ನಿಸ್ತತ್ಸುತೋ ವಾ ರಾಮಃ ॥
ದೇವತಾ—ಆಪ್ರಿಯಃ ॥ ೧. ಇಧ್ಮಃ ಸಮಿದ್ಧೋಽಗ್ನಿರ್ವಾ । ೨. ತನೂನಪಾತ್ । ೩ ಇಳಃ । ೪ ಬರ್ಹಿಃ । ೫. ದೇವೀರ್ದ್ವಾರಃ । ೬. ಉಷಾಸಾನಕ್ತಾ । ೭ ದೈವ್ಯಾ ಹೋತಾರಾ ಪ್ರಚೇತಸಾ । ೮. ತಿಸ್ರೋ ದೇವ್ಯಃ ಸರಸ್ವತೀಳಾ ಭಾರತ್ಯಃ । ೯. ತ್ವಷ್ಟಾ । ೧೦. ವನಸ್ಪತಿಃ । ೧೧. ಸ್ವಾಹಾಕೃತಯಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ಯಜಸಿ ಜಾತವೇದಃ ।
ಆ ಚ ವಹ ಮಿತ್ರಮಹಶ್ಚಿಕಿತ್ವಾನ್ತ್ವಂ ದೂತಃ ಕವಿರಸಿ ಪ್ರಚೇತಾಃ ॥ ೧ ॥

॥ ಪದಪಾಠಃ ॥

ಸಂऽಇದ್ಧಃ । ಅದ್ಯ । ಮನುಷಃ । ದುರೋಣೇ । ದೇವಃ । ದೇವಾನ್ । ಯಜಸಿ । ಜಾತऽವೇದಃ ।
ಆ । ಚ । ವಹ । ಮಿತ್ರऽಮಹಃ । ಚಿಕಿತ್ವಾನ್ । ತ್ವಂ । ದೂತಃ । ಕವಿಃ । ಅಸಿ । ಪ್ರऽಚೇತಾಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಜಾತವೇದೋ ಜಾತಪ್ರಜ್ಞಾಗ್ನೇ ದೇವಃ ಸ್ವತೇಜಸಾ ದೀಪ್ಯಮಾನಸ್ತ್ವಂ ಮನುಷೋ ಮನುಷ್ಯಸ್ಯ ಯಷ್ಟುರ್ದುರೋಣೇ । ಗೃಹನಾಮೈತತ್ । ದುರವನ ಆಯಾಸೇನ ರಕ್ಷಿತವ್ಯೇ ಗೃಹೇಽದ್ಯಾಸ್ಮಿನ್ಕರ್ಮಣಿ ಸಮಿದ್ಧಃ ಸಮ್ಯಕ್ಪ್ರಜ್ವಾಲಿತಃ ಸನ್ ದೇವಾನಿಂದ್ರಾದೀನ್ಯಜಸಿ । ಹವಿರ್ಭಿಃ ಪೂಜಯ ॥ ಸಮಿದ್ಧಃ । ಇಂಧೀ ದೀಪ್ತೌ । ಕರ್ಮಣಿ ಕ್ತೇ ಶ್ವೀದಿತೋ ನಿಷ್ಠಾಯಾಮಿತೀಟ್ಪ್ರತಿಷೇಧಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ಹೇ ಮಿತ್ರಮಹಃ ಸ್ತುತ್ಯಸ್ತೋತೃಲಕ್ಷಣತ್ವೇನ ಮಿತ್ರಭೂತಾನಾಂ ಸ್ತೋತೄಣಾಂ ಪೂಜಯಿತಃ ತೈಃ ಪೂಜ್ಯಮಾನ ವಾಗ್ನೇ ಚಿಕಿತ್ವಾಂಸ್ತೈಃ ಕೃತಾಃ ಸ್ತುತೀಃ ಪ್ರಜಾನನ್ ಚೇತನಾವಾನ್ವಾ ತ್ವಮಸ್ಮದೀಯೇ ಯಜ್ಞೇ ದೇವಾನಾ ವಹ ಚ । ಆಪ್ರಾಪಯ ॥ ವಹ ಪ್ರಾಪಣೇ । ಲೋಟಿ ರೂಪಂ । ಚವಾಯೋಗೇ ಪ್ರಥಮೇತಿ ನ ನಿಘಾತಃ ॥ ತಥಾ ಕವಿಃ ಕ್ರಾಂತಪ್ರಜ್ಞಃ ಅತ ಏವ ಪ್ರಚೇತಾಃ ಪ್ರಕೃಷ್ಟಜ್ಞಾನಸ್ತ್ವಂ ದೂತೋ ದೇವಾನಾಂ ಹವಿಷ್ಪ್ರಾಪಣೇನ ಹಿತಕಾರೀ ಭವಸಿ ॥

॥ ಪ್ರತಿಪದಾರ್ಥ ॥

**ಜಾತವೇದಃ**—ಜಾತವೇದೋರೂಪನಾದ ಎಲೈ ಅಗ್ನಿಯೇ, । **ಮನುಷಃ**—ಯಜ್ಞಕರ್ತನ । **ದುರೋಣೇ**—ಯಜ್ಞಗೃಹದಲ್ಲಿ । **ಅದ್ಯ**—ಇಂದು । **ಸಮಿದ್ಧಃ**—ಪ್ರಜ್ವಲಿತನೂ । **ದೇವಃ**—ದೇವತಾತ್ಮನೂ ಆದ ನೀನು । **ದೇವಾನ್**—ಇಂದ್ರಾದಿ ದೇವತೆಗಳನ್ನು । **ಯಜಸಿ**—ಪೂಜಿಸುತ್ತೀಯೇ । **ಮಿತ್ರಮಹಃ**—ಸ್ತುತಿಕರ್ತರಿಂದ ಪೂಜಿಸಲ್ಪಡುವವನೂ । **ಚಿಕಿತ್ವಾನ್**—ಅವರ ಕರ್ಮವನ್ನು ಅರಿತವನೂ ಆದ ನೀನು । **ಆ ವಹ**—ದೇವತೆಗಳನ್ನು ಇಲ್ಲಿ ಕರೆದುಕೊಂಡು ಬಾ । **ಕವಿಃ**—ಕ್ರಾಂತಪ್ರಜ್ಞನೂ । **ಪ್ರಚೇತಾಃ**—ಉತ್ಕೃಷ್ಟವಾದ ಜ್ಞಾನವುಳ್ಳವನೂ ಆದ । **ತ್ವಂ**—ನೀನು । **ದೂತಃ ಅಸಿ**—ದೇವದೂತನಾಗಿರುತ್ತೀಯೆ.

॥ ಭಾವಾರ್ಥ ॥

ಜಾತವೇದೋರೂಪನಾದ ಎಲೈ ಅಗ್ನಿಯೇ, ಯಜ್ಞಕರ್ತನ ಗೃಹದಲ್ಲಿ ಇಂದು ಪಜ್ವಲಿತನೂ, ದೇವತಾತ್ಮನೂ ಆದ ನೀನು ಇಂದ್ರಾದಿದೇವತೆಗಳನ್ನು ಪೂಜಿಸುತ್ತೀಯೆ. ಸ್ತುತಿಕರ್ತರಿಂದ ಪೂಜಿಸಲ್ಪಡುವವನೂ, ಅವರ ಕರ್ಮವನ್ನು ಅರಿತವನೂ ಆದ ನೀನು ದೇವತೆಗಳನ್ನು ಇಲ್ಲಿಗೆ ಕರೆದುಕೊಂಡು ಬಾ. ಕ್ರಾಂತಪ್ರಜ್ಞನೂ, ಉತ್ಕೃಷ್ಟವಾದ ಜ್ಞಾನವುಳ್ಳವನೂ ಆದ ನೀನು ದೇವದೂತನಾಗಿರುತ್ತೀಯೆ.

## English Translation

Kindled to-day, Jatavedas, in the dewlling of the wroshipper, you who are divine, sacrifice to the gods. Bear (the oblation), you who respect your friends, who are intelligent; you are the wise, far-seeing messenger (of the gods).

॥ ವಿಶೇಷವಿಷಯಗಳು ॥

ಯಾಸ್ಕರು ಈ ಸೂಕ್ತದ ಪ್ರತಿಋಕ್ಕಿಗೂ ನಿರ್ವಚನವನ್ನು ಹೇಳಿದಾರೆ—

**ಇಧ್ಮಃ । ತಾಸಾಮಿಧ್ಮಃ ಪ್ರಥಮಾಗಾಮಿಾ ಭವತಿ । ಇಧ್ಮಃ ಸಮಿಂಧನಾತ್ । ತಸ್ಯೈಷಾ ಭವತಿ । ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ಯಜಸಿ ಜಾತವೇದಃ । ಆ ಚ ವಹ ಮಿತ್ರಮಹಶ್ಚಿಕಿತ್ವಾನ್ತ್ವಂ ದೂತಃ ಕವಿರಸಿ ಪ್ರಚೇತಾಃ ॥ ಸಮಿದ್ಧೋ ಅದ್ಯ ಮನುಷ್ಯಸ್ಯ ಮನುಷ್ಯಸ್ಯ ಗೃಹೇ ದೇವೋ ದೇವಾನ್ಯಜಸಿ ಜಾತವೇದ ಆ ಚ ವಹ ಮಿತ್ರಮಹಶ್ಚಿಕಿತ್ವಾಂಶ್ಚೇತನಾವಾಂಸ್ತ್ವಂ ದೂತಃ ಕವಿರಸಿ ಪ್ರಜೇತಾಃ ಪ್ರವೃದ್ಧಚೇತಾಃ ॥ಯಜ್ಞೇಧ್ಮ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ ॥ (ನಿ.-೮-೫)**

ಆಪ್ರೀಸೂಕ್ತಗಳಲ್ಲಿ ಸ್ತುತರಾಗುವ ದೇವತೆಗಳಲ್ಲಿ ಇಧ್ಮಃ ಎಂಬುವುದು ಮೊದಲನೆಯದು. ಸಮಿದ್ಧ ಶಬ್ದವು ಸಂ ಎಂಬ ಉಪಸರ್ಗದಿಂದ ಕೂಡಿದ ಇಧ್-ಹೊತ್ತಿಸು ಪ್ರಜ್ವಲನಗೊಳಿಸು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಇಧ್ಮವೆಂದರೆ ಅಗ್ನಿಯು ಉರಿಯುವುದಕ್ಕಾಗಿ ಅದರಲ್ಲಿ ಹಾಕುವ ಸಮಿತ್, ಸೌದೆ. ಮೊದಲಾದ ಪ್ರಜ್ವಲನಸಾಧನ. ಸಮಿದ್ಧೋ ಅದ್ಯ ಎಂಬ ಮುಂದಿನ ಋಕ್ಕು ಈ ಇಧ್ಮಶಬ್ದದ ಅರ್ಥವನ್ನು ಸ್ಪಷ್ಟಪಡಿಸುವುದು.

**ಸಮಿದ್ಧೋ ಅದ್ಯ ಮನುಷ್ಯಸ್ಯ ಮನುಷ್ಯಸ್ಯ ಗೃಹೇ—ದುರೋಣೇ** ಎಂದರೆ ಗೃಹ ಅಥವಾ ಯಜ್ಞ ಗೃಹ. **ದುರವನೇ ಆಯಾಸೇನ ರಕ್ಷಿತವ್ಯೇ ಗೃಹೇ**—ನಮ್ಮನ್ನು ಆಯಾಸದಿಂದ ಎಂದರೆ ಅಪಾಯಗಳಿಂದ ರಕ್ಷಿಸುವ ಸ್ಥಳಕ್ಕೆ ದುರವನೇ ಅಥವಾ ದುರೋಣೇ ಎಂದು ಹೆಸರು. ಎಲೈ ಅಗ್ನಿಯೇ, ಪ್ರತಿ ಮನುಷ್ಯನ ಎಂದರೆ ಯಜಮಾನನ ಯಜ್ಞಗೃಹದಲ್ಲಿಯೂ ನೀನು ಹೋತ್ರಿಸಲ್ಪಟ್ಟು ಬೆಳಗುತ್ತಿರುವೆ ಎಂದರೆ ಪ್ರಕಾಶಮಾನನಾಗಿ ಉರಿಯುತ್ತಿರುವೆ.

**ದೇವೋ ದೇವಾನ್ ಯಜಸಿ ಜಾತವೇದಃ**—ಎಲೈ ಜಾತಪ್ರಜ್ಞನಾದ ಅಗ್ನಿಯೇ, ದೇವಾತ್ಮನಾದ ಅಥವಾ ಪ್ರಕಾಶಮಾನನಾದ ನೀನು ದೇವತೆಗಳನ್ನು ಪೂಜಿಸುತ್ತೀಯೆ, ಎಂದರೆ ಮನುಷ್ಯಯಜಮಾನರು ನಿನ್ನಲ್ಲಿ (ಅಗ್ನಿಯಲ್ಲಿ)ಆಹುತಿರೂಪವಾಗಿ ಅರ್ಪಿಸುವ ಹವಿರಾದಿಗಳನ್ನು ಆಯಾ ದೇವತೆಗಳಿಗೆ ಸೇರುವಂತೆ ಮಾಡುತ್ತೀಯೆ. **ಜಾತವೇದಃ** ಎಂದರೆ ಅಗ್ನಿಯು ಅರಣಿಗಳಲ್ಲಿ ಕಡೆಯಲ್ಪಟ್ಟು ಉತ್ಪನ್ನವಾದಕೂಡಲೇ ಎಲ್ಲರೂ ಅದನ್ನು ನೋಡಿ ತಿಳಿಯುವರು ಅಥವಾ ಉತ್ಪನ್ನವಾಗುವ ಸಕಲ ಭೂತಜಾತವನ್ನು ತಿಳಿಯುವವನಾದ್ದರಿಂದ ಅಗ್ನಿಗೆ **ಜಾತವೇದಾಃ** ಎಂದು ಹೆಸರು ಇತರ ದೇವತೆಗಳಿಗೆ ಹವಿರಾದಿಗಳನ್ನು ಅಗ್ನಿಯ ಮೂಲಕವೇ ಅರ್ಪಿಸಬೇಕಾಗಿರುವುದರಿಂದ ಅಗ್ನಿಯೇ ಅವರನ್ನು ಪೂಜಿಸುವನೆಂದು **ದೇವಾನ್ ಯಜಸಿ** ಎಂಬ ಶಬ್ದಗಳಿಂದ ವರ್ಣಿಸಲಾಗಿದೆ.

**ಆ ಚ ವಹ ಮಿತ್ರಮಹಶ್ಚಿಕಿತ್ವಾಂಶ್ಚೇತನಾವಾಂಸ್ತ್ವಂ**—**ಮಿತ್ರಮಹಃ** ಎಂದರೆ **ಸ್ತುತ್ಯಸ್ತೋತೃಲಕ್ಷಣತ್ವೇನ ಮಿತ್ರಭೂತಾನಾಂ ಸ್ತೋತೃಣಾಂ ಪೂಜ್ಯಮಾನಾಗ್ನೇ**—ಅಗ್ನಿಯು ಸ್ತುತಿಸಲ್ಪಡುವವನು, ಜನರು ಸ್ತೋತ್ರಮಾಡುವವರು. ಇವರಿಗೆ ಎಂದರೆ ಜನರಿಗೂ ಅಗ್ನಿಗೂ ಸ್ತುತ್ಯಸ್ತೋತೃಸಂಬಂಧವಿದೆ. ಈ ವಿಧವಾದ ಸಂಬಂಧದಿಂದ ಅಗ್ನಿಯು ಸ್ತೋತ್ರಮಾಡುವ ಜನರಿಗೆ ಮಿತ್ರನಾಗಿರುವನು ಎಂದರೆ ಪೂಜ್ಯನಾಗಿರುವನು. **ಚಿಕಿತ್ವಾನ್**—ಎಂದರೆ **ಚೇತನಾವಾನ್ ತ್ವೈಃ ಕೃತಾಃ ಸ್ತುತೀಃ ಪ್ರಜಾನನ್** ಜನರು ಮಾಡುವ ಸ್ತೋತ್ರಗಳನ್ನು ಅಗ್ನಿಯು ತಿಳಿಯುವನು ಎಂದಭಿಪ್ರಾಯವು.

**ತ್ವಂ ದೂತಃ ಕವಿರಸಿ ಪ್ರಚೇತಾಃ ಪ್ರವೃದ್ಧಚೇತಾಃ**—ಜನರು ನಾನಾದೇವತೆಗಳಿಗೆ ಅಗ್ನಿಯ ಮೂಲಕ ಹವಿಸ್ಸನ್ನು ಅರ್ಪಿಸುವರು ಅದನ್ನು ಅಗ್ನಿಯು ಆ ದೇವಗಳಿಗೆ ಸೇರುವಂತೆ ಮಾಡುವುದರಿಂದ ಅಗ್ನಿಯು ಜನರಿಗೂ ದೇವತೆಗಳಿಗೂ ಮಧ್ಯ ಇರುವ ದೂತನೆಂದು ಹೇಳಲ್ಪಡುವನು. **ಕವಿಃ** ಎಂದರೆ ಕ್ರಾಂತಪ್ರಜ್ಞನು. ಪ್ರಕೃಷ್ಟಜ್ಞಾನವುಳ್ಳವನು. ಇತರರಿಗಿಂತ ಅಧಿಕವಾದ ಜ್ಞಾನವುಳ್ಳವನು, ಅತೀಂದ್ರಿಯಜ್ಞಾನವುಳ್ಳವನು. ಮನುಷ್ಯರ ಇಂದ್ರಿಯಗಳಿಗೆ ತಿಳಿದುಕೊಳ್ಳಲು ಸಾಧ್ಯವಾಗದ ಜ್ಞಾನವು ಈ ಅಗ್ನಿಗಿದೆ. ಆದ್ದರಿಂದ ಇವನನ್ನು **ಪ್ರಚೇತಾಃ ಅಥವಾ ಪ್ರವೃದ್ಧಚೇತಾಃ** ಎಂದು ಕರೆಯಲಾಗಿದೆ. ಆದ್ದರಿಂದ ಎಲೈ ಅಗ್ನಿಯೇ, ನೀನು ದೇವಮನುಷ್ಯರ ನಡುವೆ ಹವಿರಾದಿಗಳನ್ನು ಒಯ್ಯುವ ದೂತನು, ಕ್ರಾಂತಪ್ರಜ್ಞನು, ಅತೀಂದ್ರಿಯಜ್ಞಾನವುಳ್ಳವನು. ಇಂತಹ ನೀನು **ಆ ಚ ವಹ ಆಪ್ರಾಪಯ**—ದೇವತೆಗಳನ್ನು ಈ ನಮ್ಮ ಯಜ್ಞಭೂಮಿಗೆ ಕರೆದುಕೊಂಡುಬಾ ಎಂದಭಿಪ್ರಾಯವು.

**ಯಜ್ಞೇಧ್ಮ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ**—ಈ ಇಧ್ಮ ಎಂಬ ದೇವತೆ ಯಾರು ಎಂಬ ವಿಷಯದಲ್ಲಿ ಮತಭೇದಗಳಿವೆ ಯಜ್ಞದಲ್ಲಿ ಉಪಯೋಗಿಸುವ ಇಧ್ಮ ಎಂಬ ಸಮಿತ್ತು ಎಂದು ಕಾತ್ಥಕ್ಯ (ಕತ್ಥಕ ಎಂಬುವರ ಪುತ್ರ) ಎಂಬ ಆಚಾರ್ಯರ ಮತವು. ಇಧ್ಮ ಎಂದರೆ ಅಗ್ನಿಯೆಂದು ಶಾಕಪೂಣಿಯವರ ಮತವು.

॥ ಸಂಹಿತಾಪಾಠಃ ॥

ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ ।
ಮನ್ಮಾನಿ ಧೀಭಿರುತ ಯಜ್ಞಮೃಂಧನ್ದೇವತ್ರಾ ಚ ಕೃಣುಹ್ಯಧ್ವರಂ ನಃ ॥೨॥

॥ ಪದಪಾಠಃ ॥

ತನೂಽನಪಾತ್ । ಪಥಃ । ಋತಸ್ಯ । ಯಾನಾನ್ । ಮಧ್ವಾ । ಸಂಽಅಂಜನ್ । ಸ್ವದಯ । ಸುಽಜಿಹ್ವ ।
ಮನ್ಮಾನಿ । ಧೀಭಿಃ । ಉತ । ಯಜ್ಞಂ । ಋಂಧನ್ । ದೇವಽತ್ರಾ । ಚ । ಕೃಣುಹಿ । ಅಧ್ವರಂ । ನಃ ॥೨॥

॥ ಸಾಯಣಭಾಷ್ಯಂ ॥

ಹೇ ತನೂನಪಾತ್ । ನಪಾದಿತ್ಯನಂತರಾಪತ್ಯನಾಮಧೇಯಂ । ಗೌರತ್ರ ತನೂರುಚ್ಯತೇ ತತಾ ಅಸ್ಯಾಂ ಭೋಗಾಃ ಕ್ಷೀರಾದಯ ಇತಿ । ತಸ್ಯಾಃ ಪಯೋ ಜಾಯತೇ ಪಯಸ ಆಜ್ಯಂ ತಸ್ಮಾದಗ್ನಿಃ । ಯದ್ವಾ । ಅಂತರಿಕ್ಷೇ ತತಾ ಆಪಸ್ತನ್ವಃ ತಾಭ್ಯ ಓಷಧ್ಯಾದಯಃ ತೇಭ್ಯೋಽಗ್ನಿರಿತಿ । ಏವಂರೂಪ ಹೇ ಸುಜಿಹ್ವ ಶೋಭನಜ್ವಾಲ ಯದ್ವಾ । ಜಿಹ್ವೇತಿ ವಾಙ್ನಾಮ । ಶೋಭನವಾಗಗ್ನೇ ಋತಸ್ಯ ಯಜ್ಞಸ್ಯ ಯಾನಾನ್ಫಲಪ್ರಾಪ್ತಿಹೇತೂನ್ಪಥೋ ಮಾರ್ಗಾನ್ದೇವಿರಾಖ್ಯಾನ್ಮಧ್ವಾ ಮದಕರೇಣ ರಸೇನ ಯದ್ವಾ ವಾಗ್ಘನಿತೇನ ರಸೇನ ಸಮಂಜನ್ ಸಮ್ಯಗ್ದೀಪಯನ್ ಸ್ವದಯ । ಸ್ವಾದಯಸ್ವ । ಸ್ವಾದೂಕುರು ॥ ಸ್ವದ ಆಸ್ವಾದನೇ । ಣಿಚ್ಯುಪಧಾವೃದ್ಧ್ಯಭಾವಶ್ಛಾಂದಸಃ ॥ ಕಿಂಚ ಮನ್ಮಾನಿ । ಮನ್ಯತೇರರ್ಚತಿಕರ್ಮಣಃ । ಮನನೀಯಾನ್ಯಸ್ಮದಭಿಪ್ರೇತಾನಿ ಸ್ತೋತ್ರಾಣಿ ಧೀಭಿಃ ಪ್ರಜ್ಞಾಭಿಃ ಕರ್ಮಭಿರ್ವೋತಾಪಿ ಚ ಯಜ್ಞಂ ಯಜನೀಯಂ ಹವಿಶ್ಚ ಋಂಧನ್ ಸಮೃದ್ಧಾನಿ ಕುರ್ವನ್ ನೋಽಸ್ಮದೀಯಮಧ್ವರಂ ಯಜ್ಞಂ ದೇವತಾ ದೇವೇಷು ಕೃಣುಹಿ । ಕುರು ॥ ದೇವಶಬ್ದಾದ್ದೇವಮನುಷ್ಯೇತ್ಯಾದಿನಾ ಸಪ್ತಮ್ಯರ್ಥೇ ತ್ರಾಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ತನೂನಪಾತ್**—ತನೂನಪಾತ್ಸಂಜ್ಞಕನೂ । **ಸುಜಿಹ್ವ**—ಉತ್ತಮವಾದ ಜಿಹ್ವೆಯುಳ್ಳವನೂ ಆದ ಎಲೈ ಅಗ್ನಿಯೇ । **ಋತಸ್ಯ**—ಯಜ್ಞದ । **ಯಾನಾನ್**—ಫಲಪ್ರಾಪ್ತಿ ಸಾಧಕವಾದ । **ಪಥಃ**—ಮಾರ್ಗಗಳನ್ನು । **ಮಧ್ವಾ**—ಮದಕರವಾದ ಸೋಮದಿಂದ । **ಸಮಂಜನ್**—ತೋಯಿಸುತ್ತ । **ಸ್ವದಯ**—ಮಾಧುರ್ಯಯುಕ್ತವನ್ನಾಗಿ ಮಾಡು । **ಮನ್ಮಾನಿ**—ಧ್ಯಾನಾತ್ಮಕವಾದ ನಮ್ಮ ಸ್ತುತಿಗಳನ್ನು । **ಯಜ್ಞಂ**—ನಮ್ಮ ಯಜ್ಞದ ಹವಿಸ್ಸನ್ನೂ । **ಧೀಭಿಃ**—ನಿನ್ನ ಪ್ರಜ್ಞೆಗಳಿಂದ । **ಋಂಧನ್**—ವೃದ್ಧಿಗೊಳಿಸುತ್ತ । **ನಃ**—ನಮ್ಮ । **ಅಧ್ವರಂ**—ಯಜ್ಞವನ್ನು । **ದೇವತ್ರಾ**—ದೇವತೆಗಳನ್ನು ಸಮೀಪಿಸುವಂತೆ । **ಕೃಣುಹಿ**—ಮಾಡು.

|| ಭಾವಾರ್ಥ ||

ತನೂನಪಾತ್ಸಂಜ್ಞಕನೂ, ಉತ್ತಮವಾದ ಜಿಹ್ವೆಯುಳ್ಳವನೂ ಆದ ಎಲೈ ಅಗ್ನಿಯೇ, ಯಜ್ಞಕ್ಕೆ ಫಲಪ್ರಾಪ್ತಿ ಸಾಧಕವಾದ ಮಾರ್ಗಗಳನ್ನು ಮಧುಕರವಾದ ಸೋಮದಿಂದ ತೋಯಿಸುತ್ತ ಮಾಧುರ್ಯಯುಕ್ತವನ್ನಾಗಿ ಮಾಡು. ಧ್ಯಾನಾತ್ಮಕವಾದ ನಮ್ಮ ಸ್ತುತಿಗಳನ್ನೂ ನಮ್ಮ ಯಜ್ಞದ ಹವಿಸ್ಸನ್ನೂ ನಿನ್ನ ಪ್ರಜ್ಞೆಗಳಿಂದ ವೃದ್ಧಿಗೊಳಿಸುತ್ತ ನಮ್ಮ ಯಜ್ಞವನ್ನು ದೇವತೆಗಳಲ್ಲಿಗೆ ಸೇರುವಂತೆ ಮಾಡು.

## English Translation.

Pure-tongued Tanunapat, flavour the paths of the sacrifice which lead (to success), moistening them with the sweet (Soma-juice); elevating our praises and our rite by understanding, convey our sacrifice to the gods.

|| ವಿಶೇಷವಿಷಯಗಳು ||

**ತನೂನಪಾತ್ । ತನೂನಪಾದಾಜ್ಯಮಿತಿ ಕಾತ್ಥಕ್ಯಃ । ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ ನಿರ್ಣತತಮಾ ಭವತಿ । ಗೌರತ್ರ ತನೂರುಚ್ಯತೇ । ತತಾ ಅಸ್ಯಾಂ ಭೋಗಾಃ ತಸ್ಯಾಃ ಪಯೋ ಜಾಯತೇ ಪಯಸ ಆಜ್ಯಂ ಜಾಯತೇ । ಅಗ್ನಿರಿತಿ ಶಾಕಪೂಣಿಃ । ಆಪೋऽತ್ರ ತನ್ವ ಉಚ್ಯಂತೇ । ತತಾ ಅಂತರಿಕ್ಷೇ ತಾಭ್ಯ ಓಷಧಿವನಸ್ಪತಯೋ ಜಾಯಂತ ಓಷಧಿವನಸ್ಪತಿಭ್ಯ ಏಷ ಜಾಯತೇ ॥ ತಸ್ಯೈಷಾಪರಾ ಭವತಿ । ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ । ಮನ್ಮಾನಿ ಧೀಭಿರುತ ಯಜ್ಞಮೃಂಧನ್ದೇವತ್ರಾ ಚ ಕೃಣುಹ್ಯಧ್ವರಂ ನಃ ॥ ತನೂನಪಾತ್ ಪಥ ಋತಸ್ಯ ಯಾನಾನ್ ಯಜ್ಞಸ್ಯ ಯಾನಾನ್ ಮಧುನಾ ಸಮಂಜನ್ ಸ್ವದಯ ಕಲ್ಯಾಣಜಿಹ್ವಮನನಾನಿ ಚ ನೋ ಧೀಭಿರ್ಯಜ್ಞಂ ಚ ಸಮರ್ಧಯ ದೇವಾನ್ ನೋ ಯಜ್ಞಂ ಗಮಯ ॥**

(ನಿ. ೮–೬)

ಈ ಋಕ್ಕಿನಲ್ಲಿ ಸ್ತುತಿಸಲ್ಪಟ್ಟಿರುವ **ತನೂನಪಾತ್** ಎಂಬ ದೇವತೆಯು ಯಾರು ಎಂದರೆ, ಈ ವಿಷಯದಲ್ಲಿಯೂ ಮತಭೇದವಿರುವುದು.

**ತನೂಪಾತ್ । ತನೂನಪಾದಾಜ್ಯಮಿತಿ ಕಾತ್ಥಕ್ಯಃ**— ತನೂನಪಾತ್ ಎಂದರೆ ಆಜ್ಯವು (ತುಪ್ಪ) ಎಂದು ಕಾತ್ಥಕ್ಯ ಎಂಬುವರ ಮತವು. ಅದು ಹೇಗೆ ಎಂಬ ವಿಷಯವನ್ನು ಮುಂದಿನ ವಾಕ್ಯದಲ್ಲಿ ವಿವರಿಸಲಾಗುವುದು.

**ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ ನಿರ್ಣತತಮಾ ಭವತಿ । ಗೌರತ್ರ ತನೂರುಚ್ಯತೇ । ತತಾ ಅಸ್ಯಾಂ ಭೋಗಾಃ ತಸ್ಯಾಃ ಪಯೋ ಜಾಯತೇ ಪಯಸ ಆಜ್ಯಂ ಜಾಯತೇ—ನಪಾತ್** ಎಂದರೆ ಪ್ರಜೆಯ ಪ್ರಜೆಯು, ಸಂತತಿಯ ಸಂತತಿಯು. ಎಂದರೆ ಒಬ್ಬ ಪುರುಷನಿಗೆ ಅವನ ಪುತ್ರನು ಅಥವಾ ಪುತ್ರಿಯ ಪ್ರಜೆಯು. ಆ ಪ್ರಜೆಯ ಪ್ರಜೆಯು ಎಂದರೆ ಪುತ್ರನ ಅಥವಾ ಪುತ್ರಿಯ ಪ್ರಜೆ ಅಥವಾ ಸಂತತಿಯು. ಎಂದರೆ ಮಗನ ಮಗ ಅಥವಾ ಮಗಳ ಮಗ, ಮೊಮ್ಮಗ ಎಂದರ್ಥವು. ಅಥವಾ ಮೊಮ್ಮಗಳಾದರೂ ಆಗಬಹುದು.

ಒಂದು ಸಂತತಿಯನ್ನು ದಾಟಿ ಮುಂದೆ ಬರುವ ಸಂತತಿಯು ಎಂದಭಿಪ್ರಾಯವು ಈಗ ಗೋವಿಗೂ (ಹಸುವಿಗೂ) ತನೂಃ ಎಂದು ಹೆಸರಿದೆ. ಆ ಗೋವಿನಿಂದ ಭೋಗಸಾಧನವಾದ ಹಾಲು ಉತ್ಪನ್ನವಾಗುವುದು. ಆ ಹಾಲಿನಿಂದ ಪುನಃ ಆಜ್ಯವು ಉತ್ಪನ್ನವಾಗುವುದು. ಆದ್ದರಿಂದ ಗೋವಿಗೆ ಹಾಲು ಸಂತತಿಯು, ಹಾಲಿಗೆ ಆಜ್ಯವು ಸಂತತಿಯು. ಎಂದರೆ ಗೋವಿಗೆ ಆಜ್ಯವು ತನ್ನ ಸಂತತಿಯ ಸಂತತಿ ಎಂದಾಯಿತು. ಆದ್ದರಿಂದ ತನೂನಪಾತ್ ಎಂದರೆ ಆಜ್ಯವು ಎಂದು ಕಾತ್ಥಕ್ಯರ ಮತವು.

**ಅಗ್ನಿರಿತಿ ಶಾಕಪೂಣಿಃ । ಆಪೋಽತ್ರ ತನ್ವ ಉಚ್ಯಂತೇ । ತತಾ ಅಂತರಿಕ್ಷೇ ತಾಭ್ಯ ಓಷಧಿವನಸ್ಪತಯೋ ಜಾಯಂತ ಓಷಧಿವನಸ್ಪತಿಭ್ಯ ಏಷ ಜಾಯತೇ । ತಸ್ಯೈಷಾ ಭವತಿ ॥** ತನೂಪಾತ್ ಎಂದರೆ ಅಗ್ನಿಯೆಂದು ಶಾಕಪೂಣಿ ಎಂಬ ಆಚಾರ್ಯರ ಮತವು. ಹಿಂದೆ ಹೇಳಿದಂತೆ ನಪಾತ್‌ಶಬ್ದಕ್ಕೆ ಸಂತತಿಯ ಸಂತತಿಯು ಎಂದರ್ಥವು. ತನ್ವಃ ಎಂದರೆ ಉದಕಗಳು. ಆ ಉದಕಗಳು ಅಂತರಿಕ್ಷದಲ್ಲಿ ಮೇಘರೂಪದಿಂದ ವ್ಯಾಪಿಸಿ ಭೂಮಿಯ ಮೇಲೆ ಮಳೆಯನ್ನು ಕರೆಯುವುದರಿಂದ ಓಷಧಿವನಸ್ಪತಿಗಳು ಎಂದರೆ ವೃಕ್ಷಗಳು ಉತ್ಪನ್ನವಾಗುತ್ತದೆ. ಆದ್ದರಿಂದ ಉದಕಗಳಿಗೆ ಓಷಧಿವನಸ್ಪತಿಗಳೇ ಸಂತತಿಯು. ಮತ್ತು ಓಷಧಿವನಸ್ಪತಿಗಳಿಂದ (ವೃಕ್ಷಗಳಿಂದ ಅಥವಾ ವೃಕ್ಷರೂಪದ ಅರಣಿಗಳಿಂದ) ಅಗ್ನಿಯು ಉತ್ಪತ್ತಿಯಾಗುವುದು. ಓಷಧಿವನಸ್ಪತಿಗಳಿಗೆ ಅಗ್ನಿಯು ಸಂತತಿಯೆಂದಾಯಿತು. ಆದ್ದರಿಂದ ಉದಕಗಳಿಗೆ ಅಗ್ನಿಯು ಸಂತತಿಯ ಸಂತತಿಯು ಎಂದರೆ ಮೊಮ್ಮಗ ಅಥವಾ ಪೌತ್ರಸ್ಥಾನೀಯನು ಎಂದಾಯಿತು. ಅದನ್ನೇ ಇಲ್ಲಿ **ತನೂನಪಾತ್** ಎಂದರೆ ಉದಕಗಳ ಪೌತ್ರಸ್ಥಾನೀಯನಾದ ಅಗ್ನಿಯು ಎಂದು ಹೇಳಲಾಗಿದೆ. ಈ ತನೂನಪಾತ್ ಎಂಬ ಶಬ್ದಪ್ರಯೋಗವಿರುವ ಋಕ್ಕಿನ ನಿರ್ವಚನವನ್ನು ಇಲ್ಲಿ ಹೇಳಿದೆ—

> **ತನೂನಪಾತ್ ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ । ಮನ್ಮಾನಿ ಧೀಭಿರುತ ಯಜ್ಞಮೃಂಧನ್ದೇವತ್ರಾ ಚ ಕೃಣುಹ್ಯಧ್ವರಂ ನಃ ॥ ತನೂನಪಾತ್ಪಥ ಋತಸ್ಯ ಯಾನಾನ್ ಯಜ್ಞಸ್ಯ ಯಾನಾನ್ಮಧುನಾ ಸಮಂಜನ್ ಸ್ವದಯ ಕಲ್ಯಾಣಜಿಹ್ವಮನನಾನಿ ಚ ನೋ ಧೀಭಿರ್ಯಜ್ಞಂ ಚ ಸಮರ್ಧಯ ದೇವಾನ್ ನೋ ಯಜ್ಞಂ ಗಮಯ ॥**
>
> (ನಿ. ೮-೬)

**ತನೂನಪಾತ್ ಪಥ ಋತಸ್ಯ ಯಾನಾನ್ ಯಜ್ಞಸ್ಯ ಯಾನಾನ್ ಮಧುನಾ ಸಮಂಜನ್ ಸ್ವದಯ ಕಲ್ಯಾಣಜಿಹ್ವ—** ಈ ವಾಕ್ಯದಲ್ಲಿರುವ **ಋತಸ್ಯ** ಎಂಬ ಶಬ್ದಕ್ಕೆ ಯಜ್ಞದ ಎಂದೂ **ಯಾನಾನ್** ಎಂದರೆ ಮಾರ್ಗ ಅಥವಾ ರೀತಿ(ಕ್ರಮ)ಯೆಂದೂ ಅರ್ಥವು. ಸುಜಿಹ್ವ ಎಂದರೆ ಕಲ್ಯಾಣಜಿಹ್ವ-ಉತ್ತಮವಾದ ನಾಲಗೆಯುಳ್ಳವನು. ಅಗ್ನಿಗೆ ಜ್ವಾಲೆಯೇ ಜಿಹ್ವೆಯು ಮನುಷ್ಯರು ತಮ್ಮ ಜಿಹ್ವೆಯಿಂದ (ನಾಲಗೆಯಿಂದ) ಆಹಾರವನ್ನು ತಿನ್ನುವಂತೆ ಅಗ್ನಿಯು ತನ್ನ ಜ್ವಾಲೆಗಳಿಂದ ಕಾಷ್ಠಾದಿಗಳನ್ನು ದಹಿಸುವನು ಅಥವಾ ಅಗ್ನಿಯಲ್ಲಿ ಅರ್ಪಿಸುವ ಹವಿರಾಜ್ಯಾದಿಗಳನ್ನು ಪಕ್ವಮಾಡಿ ದಹಿಸುವನು. ಮನುಷ್ಯರಿಗೆ ನಾಲಗೆಯು ಹೇಗೋ ಅಗ್ನಿಗೆ ಜ್ವಾಲೆಯೂ ಹಾಗೆ. ಆದ್ದರಿಂದ ಇಲ್ಲಿ ಅಗ್ನಿಯನ್ನು **ಸುಜಿಹ್ವ-ಶೋಭನಜ್ವಾಲ** ಎಂದು ಸಂಬೋಧಿಸಿದೆ. ಆದ್ದರಿಂದ ಈ ವಾಕ್ಯಕ್ಕೆ— ಎಲೈ ಜ್ವಾಲಾರೂಪದ ಜಿಹ್ವೆಯುಳ್ಳ ಅಗ್ನಿಯೇ, ತನೂನಪಾತ್ ಎಂಬ ಅಭಿಧಾನದಿಂದ ಕರೆಯಲ್ಪಡುವ ನೀನು ಯಜ್ಞದ ಮಾರ್ಗಗಳನು ಎಂದರೆ ಕ್ರಮಗಳನ್ನು ಮಧುರವಾದ ನಿನ್ನ ವಾಗ್ವಸಿತ ಮಂತ್ರದಿಂದ ಅಥವಾ ಮಧುರವಾದ ನಿನ್ನ ಪ್ರಕಾಶದಿಂದ ಅಥವ ಮಧುರವಾದ ಸೋಮರಸದಿಂದ ಚೆನ್ನಾಗಿ ಪ್ರಕಾಶಿತವನ್ನಾಗಿ ಮಾಡಿ ದೇವತೆಗಳಿಗೆ ಗ್ರಾಹ್ಯವಾಗುವಂತೆ ಮಧುರವಾಗಿ

ಮಾಡು ಎಂದರ್ಥವು ತನೂನಪಾತ್‌ಶಬ್ದದ ನಿಷ್ಪತ್ತಿಯನ್ನು ಹಿಂದೆಯೇ ವಿವರಿಸಿದೆ. **ಪಥ ಋತಸ್ಯ ಯಾನಾನ್**—ಯಜ್ಞದ ಮಾರ್ಗಗಳನ್ನು ಎಂದರೆ ರೀತಿಗಳನ್ನು ಅಥವಾ ಕ್ರಮಗಳನ್ನು, ವಿಧಾನಗಳನ್ನು, ಯಜ್ಞವು ಯಾವ ಮಂತ್ರಗಳಿಂದ ಹೇಗೆ ಯಾವ ಕ್ರಮದಲ್ಲಿ ನಡೆಯಬೇಕು ಎಂಬ ವಿಧಿನಿಯಮಗಳನ್ನು ಸರಿಯಾಗಿ ಪಾಲಿಸಿ ಎಂದರ್ಥವು. **ಮಧುನಾ ಸಮಂಜನ್ ಸ್ವದಯ**--ಇಲ್ಲಿ ಮಧುಶಬ್ದಕ್ಕೆ ಅನೇಕಾರ್ಥಗಳನ್ನು ಹೇಳಬಹುದು ಮಧುನಾ ಎಂದರೆ ಸುಲಲಿತವಾಗಿ, ಯಾವ ವಿಘ್ನಗಳೂ ಉಂಟಾಗದಂತೆ, ಅಥವಾ ಮಧುರವಾದ ಅಗ್ನಿಯ ಪ್ರಕಾಶದಿಂದ ದೀಪ್ತವಾಗುವಂತೆ ಇತ್ಯಾದಿ. **ಸಮಂಜನ್ ಸ್ವದಯ** – ಸಮಂಜನ್ ಎಂದರೆ ಆಜ್ಯಾದಿಗಳ ಅಂಜನದಿಂದ ಸುಲಲಿತವಾಗಿ ಕೆಲಸ ಮಾಡುವಂತೆ. ಎಂದರೆ ರಥದ ಚಕ್ರಗಳೂ ಇತರ ಭಾಗಗಳೂ ತೈಲ (ಎಣ್ಣೆ) ಅಥವಾ ಘೃತವನ್ನು ಲೇಪನಮಾಡುವುದರಿಂದ ಸುಲಭವಾಗಿ ಕೆಲಸ ಮಾಡುವಂತೆ ಯಜ್ಞದ ನಾನಾ ಕಾರ್ಯಕಲಾಪಗಳನ್ನು ಮಧುರವಾದ ನೇತೃತ್ವದಿಂದ ಮುಂದುವರೆಸಿ ಆ ಯಜ್ಞಕರ್ಮವು ದೇವತೆಗಳಿಗೆ ಸ್ವೀಕಾರಾರ್ಹವೂ, ಸುಖಪ್ರದವೂ ಆಗುವಂತೆ ಮಾಡು ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

**ಮನನಾನಿ ಚ ನೋ ಧೀಭಿರ್ಯಜ್ಞಂ ಚ ಸಮರ್ಧಯ ದೇವಾನ್ ನೋ ಯಜ್ಞಂ ಗಮಯ**—**ಮನ್ಮಾನಿ ಎಂದರೆ ಮನನಾನಿ, ಮನನೀಯಾನಿ.** ಅರ್ಥಾದಿಗಳನ್ನು ತಿಳಿದುಕೊಂಡು ಮನಸ್ಸಿಗೆ ಮಂದಟ್ಟುಮಾಡಿಕೊಳ್ಳುವುದಕ್ಕೆ ಯೋಗ್ಯವಾದ ಮಂತ್ರಗಳನ್ನು ಎಂದರ್ಥವು. **ಧೀಭಿಃ** ಎಂದರೆ ಕರ್ಮಗಳಿಂದ, ಎಲೈ ಅಗ್ನಿಯೇ, ಈ ಯಜ್ಞದಲ್ಲಿ ನಾವು ಪಠಿಸುತ್ತಿರುವ ಸ್ತೋತ್ರಗಳನ್ನೂ ಯಜ್ಞವನ್ನೂ ಸಂದರ್ಭಾನುಸಾರ ಮಾಡಬೇಕಾದ ಕರ್ಮಗಳಿಂದಲೂ, ಪ್ರಜ್ಞೆ(ತಿಳಿವಳಿಕೆ)ಯಿಂದಲೂ ಸಹ ಕ್ರಮವಾಗಿ ಮುಂದುವರೆಯುವಂತೆ ಮಾಡು ಮತ್ತು ನಾವು ಮಾಡುತ್ತಿರುವ ಈ ಯಜ್ಞಕ್ಕೆ ದೇವತೆಗಳನ್ನು ಕರೆದುಕೊಂಡು ಬಾ ಎಂದು ಈ ವಾಕ್ಯದ ಅಭಿಪ್ರಾಯವು

ಆಪ್ರೀಸೂಕ್ತದ ಎರಡನೆಯ ಋಕ್ಕಿನಲ್ಲಿ ಸ್ತುತಿಸಲಾದ **ತನೂನಪಾತ್** ಎಂಬ ದೇವತೆಯ ವಿಷಯವನ್ನು ವಿವರಿಸಿದ್ದಾಯಿತು. ಈ ಸೂಕ್ತದಲ್ಲಿ ತನೂನಪಾತ್ ದೇವತೆಯನ್ನೇ ಸ್ತುತಿಸಲಾಗಿದೆ. ಆದರೆ ಕೆಲವು ಆಪ್ರೀಸೂಕ್ತದಲ್ಲಿ **ತನೂನಪಾತ್** ಎಂಬ ದೇವತೆಯ ಜತೆಯಲ್ಲಿ ಅಥವಾ ಆ ದೇವತೆಗೆ ಬದಲಾಗಿ **ನರಾಶಂಸ** ಎಂಬ ದೇವತೆಯ ಸ್ತುತಿ ಇರುವುದು. ಆದ್ದರಿಂದ ಆಪ್ರೀಸೂಕ್ತದ ದೇವತೆಗಳನ್ನು ವಿವರಿಸುವಾಗ ಯಾಸ್ಕರು ಪ್ರಕೃತಸಂದರ್ಭಕ್ಕೆ ಸೇರಿಲ್ಲದಿದ್ದರೂ ನರಾಶಂಸ ದೇವತೆಯ ವಿಷಯವನ್ನು ವಿವರಿಸಿದ್ದಾರೆ—

**ನರಾಶಂಸಃ । ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ । ನರಾ ಅಸ್ಮಿನ್ನಾಸೀನಾಃ ಶಂಸಂತಿ । ಅಗ್ನಿರಿತಿ ಶಾಕಪೂಣಿಃ । ನರೈಃ ಪ್ರಶಸ್ಯೋ ಭವತಿ । ತಸ್ಯೈಷಾ ಭವತಿ । ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ । ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ॥ (ಋ. ಸಂ. ೭-೨-೨) ॥ ನರಾಶಂಸಸ್ಯ ಮಹಿಮಾನಮೇಷಾಮುಪಸ್ತುಮೋ ಯಜ್ಞಿಯಸ್ಯ ಯಜ್ಞೈರ್ಯೇ ಸುಕರ್ಮಾಣಃ ಶುಚಯೋ ಧಿಯಂ ಧಾರಯಿತಾರಃ ಸ್ವದಯಂತು ದೇವಾ ಉಭಯಾನಿ ಹವೀಂಷಿ ಸೋಮಂ ಚೇತರಾಣಿ ಚೇತಿ ವಾ ತಾಂತ್ರಾಣಿ ಚಾವಾಪಿಕಾನಿ ಚೇತಿ ವಾ ॥**

(ನಿ. ೮-೭)

**ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ। ನರಾ ಅಸ್ಮಿನ್ನಾಸೀನಾಃ ಶಂಸಂತಿ**—ನರಾಶಂಸ ಎಂದರೆ ಯಜ್ಞವು ಈ ಯಜ್ಞದಲ್ಲಿ (ಯಜ್ಞವೇದಿಯಲ್ಲಿ) ಮನುಷ್ಯರು ಎಂದರೆ ಋತ್ವಿಗ್ಯಜಮಾನರು ಕುಳಿತು (ದೇವತೆಗಳನ್ನು) ಸ್ತೋತ್ರಮಾಡುವರು. ಆದ್ದರಿಂದ ನರಾಶಂಸವೆಂದರೆ ಯಜ್ಞವು ಎಂದು ಕಾತ್ಥಕ್ಯರ ಮತವು.

**ಅಗ್ನಿರಿತಿ ಶಾಕಪೂಣಿಃ। ನರೈಃ ಪ್ರಶಸ್ಯೋ ಭವತಿ। ತಸ್ಯೈಷಾ ಭವತಿ**—ನರಾಶಂಸನೆಂದರೆ ಅಗ್ನಿಯು. ಏಕೆಂದರೆ ಈ ಅಗ್ನಿಯು ನರರಿಂದ ಎಂದರೆ ಮಾನವರಿಂದ ಸ್ತುತಿಸಲ್ಪಡುವನು. ಇದು ಶಾಕಪೂಣಿ ಎಂಬ ಆಚಾರ್ಯರ ಮತವು. ಈ ನರಾಶಂಸಶಬ್ದಪ್ರಯೋಗವಿರುವ ಋಕ್ಕನ್ನು ಕೆಳಗೆ ಉದಾಹರಿಸಲಾಗಿದೆ—

**ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ।**
**ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ।**

(ಋ. ಸಂ. ೭-೨-೨)

**ನರಾಶಂಸಸ್ಯ ಮಹಿಮಾನಂ ಏಷಾಂ ಉಪಸ್ತುಮಃ ಯಜತಸ್ಯ ಯಜ್ಞೈಃ**—ಇಲ್ಲಿ ಏಷಾಂ ಎಂದರೆ ಈ ಯಜ್ಞಕರ್ಮದಲ್ಲಿ ನಿರತರಾಗಿರುವ ಜನರಿಗೆ ಎಂದರ್ಥವು ಇಂತಹ ಜನರಿಗೆ ಅಭಿಮತಫಲಗಳನ್ನು ಕೊಡುವ, ಯಜ್ಞಾದಿ ಕರ್ಮಗಳಿಂದ ಆರಾಧಿಸಲ್ಪಡುವ ನರರಿಂದ ಪ್ರಶಂಸಿಸಲ್ಪಡುವ (ನರಾಶಂಸಸ್ಯ) ಈ ಯಜ್ಞದ ಮಹಿಮೆಯನ್ನು ಅಥವಾ ನರಾಶಂಸನೆಂಬ (ಅಗ್ನಿಯೆಂಬ) ಈ ದೇವತೆಯನ್ನು ಸಮೀಪಿಸಿ ಸ್ತೋತ್ರಮಾಡುತ್ತೇವೆ.

**ಯೇ ಸುಕರ್ಮಾಣಃ ಶುಚಯಃ ಧಿಯಂ ಧಾರಯಿತಾರಃ ಸ್ವದಯಂತು ದೇವಾ ಉಭಯಾನಿ ಹವೀಂಷಿ ಸೋಮಂ ಚೇತರಾಣಿ ಚೇತಿ ವಾ ತಾಂತ್ರಾಣಿ ಚಾವಾಪಿಕಾನಿ ಚೇತಿ ವಾ**—ಇಲ್ಲಿ **ಸುಕ್ರತವಃ ಶುಚಯಃ ಧಿಯಂಧಾಃ** ಎಂಬ ಶಬ್ದಗಳು **ದೇವಾಃ** ಎಂಬ ಶಬ್ದಕ್ಕೆ ವಿಶೇಷಣಪದಗಳಾಗಿವೆ. ಕ್ರತುಶಬ್ದಕ್ಕೆ ಕರ್ಮವೆಂದರ್ಥವಿರುವುದರಿಂದ ಸುಕ್ರತವಃ ಎಂದರೆ ಜಗತ್ಪಾಲನ, ಅನುಗ್ರಹಾತ್ಮಕವಾದ ಕರ್ಮಗಳನ್ನು ಮಾಡುತ್ತಿರುವ ಎಂದು **ಸುಕ್ರತವಃ** ಅಥವಾ **ಸುಕರ್ಮಾಣಃ** ಎಂಬ ಶಬ್ದಕ್ಕೆ ಅರ್ಥವು. **ಶುಚಯಃ** ಎಂದರೆ ಪಾಪರಹಿತರಾದವರು ಅಥವಾ ಪ್ರಕಾಶಮಾನರಾದವರು. **ಧಿಯಂಧಾಃ** ಎಂದರೆ ಧಿಯಂ ಎಂದರೆ ಯಜ್ಞಾದಿಕರ್ಮವನ್ನು ಅಥವಾ ಪ್ರಜ್ಞೆಯನ್ನು ಧಾಃ ಧರಿಸಿರುವವರು ಎಂದರೆ ಯಜ್ಞಾದಿಕರ್ಮಗಳಿಗೆ ಪ್ರೋತ್ಸಾಹವಿತ್ತು ಅವನ್ನು ಸಾಂಗವಾಗಿ ನೆರವೇರುವಂತೆ ಮಾಡುವವರು ಅಥವಾ ಪ್ರಜ್ಞಾವಂತರಾದವರು. **ಉಭಯಾನಿ ಹವ್ಯಾ** ಎಂದರೆ ಎರಡು ವಿಧವಾದ ಹವಿಸ್ಸುಗಳು. ಅವು ಯಾವವೆಂದರೆ, **ಸೋಮಂ ಚೇತರಾಣಿ ಚ**—ಸೋಮರಸ ಮತ್ತು ಚರುಪುರೋಡಾಶಾದಿ ಹವಿಸ್ಸು ಅಥವಾ **ತಾಂತ್ರಾಣಿ ಚಾವಾಪಿಕಾನಿ ಚೇತಿ ವಾ**—ಪ್ರಯಾಜ, ಆಜ್ಯಭಾಗ, ಸ್ವಿಷ್ಟಕೃತ್ ಮೊದಲಾದ ಆಹುತಿಗಳಲ್ಲಿ ಅರ್ಪಿಸುವ ಹವಿಸ್ಸು ಮತ್ತು ಪ್ರಧಾನಹೋಮಗಳಲ್ಲಿ ಅರ್ಪಿಸುವ ಹವಿಸ್ಸು. ಈ ರೀತಿ ಎರಡು ವಿಧವಾದ ಹವಿಸ್ಸುಗಳನ್ನು ದೇವತೆಗಳು ಸೇವಿಸಲಿ

ಮುಖ್ಯಾಭಿಪ್ರಾಯವು—ಜಗತ್ಪಾಲನಾದಿ ಒಳ್ಳೆಯ ಕರ್ಮಗಳಲ್ಲಿ ನಿರತರಾದವರೂ, ಪಾಪರಹಿತರೂ, ಶುದ್ಧರೂ ಅಥವಾ ಪ್ರಕಾಶಾತ್ಮರೂ ಪ್ರಜ್ಞಾವಂತರೂ ಅಥವಾ ಯಜ್ಞಾದಿಕರ್ಮಗಳಿಗೆ ನೆರವಾಗುವವರೂ ಅಥವಾ ಆ ಕರ್ಮಗಳಿಗೆ ಫಲದಾತೃಗಳೂ ಆದ ಯಾವ ದೇವತೆಗಳಿರುವರೋ ಅವರು ಈ ಯಜ್ಞದಲ್ಲಿ ನಾವು ಅವರನ್ನುದ್ದೇಶಿಸಿ

ಅರ್ಪಿಸುವ ಸೋಮರಸ ಮತ್ತು ಚರುಪುರೋಡಾಶ ಎಂಬ ಎರಡುವಿಧ ಹವಿಸ್ಸುಗಳನ್ನು ಅಥವಾ ಪ್ರಯಾಜಾಜ್ಯ ಭಾಗಸ್ವಿಷ್ಟಕೃದಾದಿಹೋಮಗಳಲ್ಲಿಯೂ, ಪ್ರಧಾನಹೋಮಗಳಲ್ಲಿಯೂ ಅರ್ಪಿಸುವ ಎರಡುವಿಧ ಹವಿಸ್ಸುಗಳನ್ನೂ ಸೇವಿಸಲಿ

॥ ಸಂಹಿತಾಪಾಠಃ ॥

ಆಜುಹ್ವಾನ ಈಡ್ಯೋ ವಂದ್ಯಶ್ಚಾ ಯಾಹ್ಯಗ್ನೇ ವಸುಭಿಃ ಸಜೋಷಾಃ ।
ತ್ವಂ ದೇವಾನಾಮಸಿ ಯಹ್ವ ಹೋತಾ ಸ ಏನಾನ್ಯಕ್ಷೀಷಿತೋ ಯಜೀಯಾನ್ ॥ ೩ ॥

॥ ಪದಪಾಠಃ ॥

ಆऽಜುಹ್ವಾನಃ । ಈಡ್ಯಃ । ವಂದ್ಯಃ । ಚ । ಆ । ಯಾಹಿ । ಅಗ್ನೇ । ವಸುऽಭಿಃ । ಸಂऽಜೋಷಾಃ ।
ತ್ವಂ । ದೇವಾನಾಂ । ಅಸಿ । ಯಹ್ವ । ಹೋತಾ । ಸಃ । ಏನಾನ್ । ಯಕ್ಷಿ । ಇಷಿತಃ । ಯಜೀಯಾನ್॥೩॥

॥ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಮಸ್ಮತ್ಕರ್ಮಣ್ಯಾ ಯಾಹಿ । ಆಗಚ್ಛ। ಕೀದೃಶಃ । ಆಜುಹ್ವಾನೋ ದೇವಾನಾಮಾಹ್ವಾತಾ ॥ ಹು ದಾನಾದನಯೋಃ ಜೌಹೋತ್ಯಾದಿಕಃ । ಅಭ್ಯಸ್ತಸ್ವರಃ ॥ ಈಡ್ಯಃ ॥ ಈಡಿರಧ್ಯೇಷಣಾಕರ್ಮಾ । ಅಧ್ಯೇಷ್ಯಃ ಪ್ರಾರ್ಥ್ಯಮಾನಃ ವಂದ್ಯಃ ಸ್ತೋತವ್ಯಃ ವಸುಭಿರ್ದೇವೈಃ ಸಜೋಷಾಃ ಸಹ ಪ್ರೀಯಮಾಣಃ । ಆಗತ್ಯ ಚ ಹೇ ಯಹ್ವ। ಮಹನ್ನಾಮೈತತ್ । ಹೇ ಮಹನ್ ಸ ತ್ವಂ ದೇವ ದೇವಾನಾಂ ಹೋತಾಹ್ವಾತಾಸಿ । ಅತೋ ಯಜೀಯಾನ್ ॥ ಯಷ್ಟೃಶಬ್ದಾದೀಯಸುನಿ ತುರಿಷ್ಠೇಮೇಯಃಸ್ವಿತಿ ತೃಚೋ ಲೋಪಃ ॥ ಯಷ್ಟೃತರಃ ಸ ತ್ವಮಿಷಿತೋऽಸ್ಮಾಭಿರಧ್ಯೇಷಿತಃ ಪ್ರಾರ್ಥಿತಃ ಸನ್ನೇತಾನ್ದೇವಾನ್ಯಕ್ಷಿ । ಯಜ । ಹವಿಷಾ ಪೂಜಯ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಆಜುಹ್ವಾನಃ**—ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ । **ಈಡ್ಯಃ**—ಪ್ರಶಂಸನೀಯನೂ । **ವಂದ್ಯಃ**—ಪೂಜ್ಯನೂ ಆದ ನೀನು । **ವಸುಭಿಃ**—ವಸುಸಂಜ್ಞಕರಾದ ದೇವತೆಗಳೊಡನೆ । **ಸಜೋಷಾಃ**—ಕೂಡಿಕೊಂಡು । **ಆ ಯಾಹಿ**—ದಯಮಾಡು । **ಯಹ್ವ**—ಮಹಾತ್ಮನಾದ ಎಲೈ ಅಗ್ನಿಯೇ । **ದೇವಾನಾಂ**—ದೇವತೆಗಳನ್ನು **ಹೋತಾ**—ಕರೆಯುವವನಾಗಿ । **ಅಸಿ**—ಆಗಿದ್ದೀಯೇ । **ಯಜೀಯಾನ್**—ಅತ್ಯಂತ ಪೂಜ್ಯನಾದ । **ಸಃ**—ನೀನು । **ಇಷಿತಃ**—ನಮ್ಮಿಂದ ಪ್ರಾರ್ಥಿತನಾಗಿ । **ಏತಾನ್ ಯಕ್ಷಿ**—ಈ ದೇವತೆಗಳನ್ನು ಪೂಜಿಸು.

|| ಭಾವಾರ್ಥ ||

ಎಲೈ ಅಗ್ನಿಯೇ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ ಪ್ರಶಂಸನೀಯನೂ, ಪೂಜ್ಯನೂ ಆದ ನೀನು ವಸುಸಂಜ್ಞಕರಾದ ದೇವತೆಗಳೊಡನೆ ಕೂಡಿಕೊಂಡು ದಯಮಾಡು ಮಹಾತ್ಮನಾದ ಎಲೈ ಅಗ್ನಿಯೇ, ನೀನು ದೇವತೆಗಳನ್ನು ಕರೆಯುವವನಾಗಿದ್ದೀಯೆ. ಅತ್ಯಂತ ಪೂಜ್ಯನಾದ ನೀನು ನಮ್ಮಿಂದ ಪ್ರಾರ್ಥಿತನಾಗಿ ದೇವತೆಗಳನ್ನು ಪೂಜಿಸು.

English Translation.

Agni, you are the invoker (of the gods), and are to be solicited and praised; come, being propitated, along with the Vasus; you, O mighty (Agni), are the invoker of the gods, you, are most entitled to worship solicited by us, offer them adoration.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಇಳಃ ಎಂಬ ದೇವತೆಯನ್ನು ಈಡ್ಯಃ ಎಂಬ ಶಬ್ದಪ್ರಯೋಗದ ಮೂಲಕ ಸ್ತುತಿಸಲಾಗಿದೆ. ಈ ಋಕ್ಕಿನ ನಿರುಕ್ತವು ಈರೀತಿ ಇದೆ—

**ಈಳಃ । ಈಳ ಈಟ್ಟೇಃ ಸ್ತುತಿಕರ್ಮಣಃ ಇಂಧತೇರ್ವಾ । ತಸ್ಯೈಷಾ ಭವತಿ ||**

(ನಿ. ೮-೮)

ಸ್ತುತಿಸು ಎಂಬರ್ಥವಿರುವ ಈಡ್ ಧಾತುವಿನಿಂದಾಗಲಿ, ಹೊತ್ತಿಸು, ಉರಿಯುವಂತೆಮಾಡು ಎಂಬರ್ಥವಿರುವ ಇಂಧ್ ಧಾತುವಿನಿಂದಾಗಲಿ ಈಳಃ ಎಂಬ ಶಬ್ದವು ನಿಷ್ಪತ್ತಿಯಾಗಿದೆ. ಈಳಃ ಎಂಬುದು ಅಗ್ನಿ ಅಥವಾ ಅಗ್ನಿಯ ರೂಪವಿಶೇಷವು. ಈ ಶಬ್ದ ಪ್ರಯೋಗವಿರುವ ಋಕ್ಕನ್ನು ಇಲ್ಲಿ ಉದಾಹರಣೆಗಾಗಿ ವಿವರಿಸಲಾಗಿದೆ.—

**ಆಜುಹ್ವಾನ ಈಡ್ಯೋ ವಂದ್ಯಶ್ಚಾಯಾಹ್ಯಗ್ನೇ ವಸುಭಿಃ ಸಜೋಷಾಃ । ತ್ವಂ ದೇವಾನಾಮಸಿ ಯಹ್ವ ಹೋತಾ ಸ ಏನಾನ್ಯಕ್ಷೀಷಿತೋ ಯಜೀಯಾನ್ ।**

(ಋ. ಸಂ. ೧೦-೧೧೦-೩)

**ಆಹೂಯಮಾನ ಈಳಿತವ್ಯೋ ವಂದಿತವ್ಯಶ್ಚಾಯಾಹ್ಯಗ್ನೇ ವಸುಭಿಃ ಸಹಜೋಷಣಸ್ತ್ವಂ ದೇವಾನಾಮಸಿ ಯಹ್ವ ಹೋತಾ । ಯಹ್ವ ಇತಿ ಮಹತೋ ನಾಮಧೇಯಂ ಯಾತಶ್ಚ ಹೂತಶ್ಚ ಭವತಿ । ಸ ಏವಾನ್ ಯಕ್ಷೀಷಿತೋ ಯಜೀಯಾನ್ । ಇಷಿತಃ ಪ್ರೇಷಿತ ಇತಿ ವಾಧೀಷ್ಟ ಇತಿ ವಾ ಯಜೀಯಾನ್ಯಷ್ಟೃತರಃ ||**

(ನಿ. ೮-೮)

**ಆಹೂಯಮಾನ ಈಳಿತವ್ಯಃ ವಂದಿತವ್ಯಶ್ಚ**—ಆಜುಹ್ವಾನಃ ಈಡ್ಯಃ ಎಂಬ ಎರಡು ಶಬ್ದಗಳು ಅಗ್ನಿಯನ್ನು ವರ್ಣಿಸುವ ವಿಶೇಷಣಪದಗಳು. ಆಹೂಯಮಾನಃ ಎಂದರೆ ಯಜ್ಞಾದಿಗಳಲ್ಲಿ ಋತ್ವಿಗ್ಯಜಮಾನರಿಂದ ಪ್ರಾರ್ಥಿಸಿ ಕರೆಯಲ್ಪಡುವವನು. **ಈಳಿತವ್ಯಃ** ಅಥವಾ **ವಂದಿತವ್ಯಃ** ಎಂದರೆ ಲೋಕದಲ್ಲಿರುವ ಸರ್ವಜನರಿಂದಲೂ ಅಥವಾ ಋತ್ವಿಗ್ಯಜಮಾನರಿಂದಲೂ ಹವಿರಾದಿಗಳಿಂದಲೂ ಸತ್ಕರಿಸಲ್ಪಟ್ಟು ಸ್ತುತಿಸಲ್ಪಡುವವನು ಅಥವಾ ನಮಸ್ಕರಿಸಲ್ಪಡುವವನು.

**ಆ ಯಾಹ್ಯಗ್ನೇ ವಸುಭಿಃ ಸಹಜೋಷಣಃ—ಸಹಜೋಷಣಃ** ಎಂದರೆ ಸಮಾನಪ್ರೀತಿಯುಳ್ಳವನು ಎಂದರೆ ಯಜ್ಞಕರ್ಮದಲ್ಲಿ ನಿರತರಾದ ಋತ್ವಿಗ್ಯಜಮಾನರಲ್ಲಿ ಇತರದೇವತೆಗಳಿಗೆ ಯಾವವಿಧವಾದ ಪ್ರೀತಿಯಿರುವುದೋ ಅಗ್ನಿಗೂ ಅದೇ ವಿಧವಾದ ಪ್ರೀತಿ ಇರುವುದು ಎಂದರ್ಥವು. ಎಲೈ ಅಗ್ನಿಯೇ, ಸಮಾನ ಪ್ರೀತಿಯುಳ್ಳ ನೀನು ವಸುಗಳೆಂಬ ದೇವತೆಗಳೊಡನೆ ಸಹಿತನಾಗಿ ನಮ್ಮ ಯಜ್ಞಕ್ಕೆ ದಯಮಾಡು ಎಂದಭಿಪ್ರಾಯವು. **ವಸುಭಿಃ** ಎಂಬ ಶಬ್ದಕ್ಕೆ ಅಷ್ಟವಸುಗಳು ಎಂದಾಗಲಿ, ನಿವಾಸಸ್ಥಾನದಾತೃಗಳಾದ ಇತರ ದೇವತೆಗಳೆಂದಾಗಲಿ, ಧನಾದಿಗಳೆಂದಾಗಲಿ ಅರ್ಥವಾಗಬಹುದು.

**ತ್ವಂ ದೇವಾನಾಂ ಅಸಿ ಯಹ್ವ ಹೋತಾ—ಯಹ್ವ** ಎಂದರೆ ದೊಡ್ಡ ಅಥವಾ ಅತಿಶಯವಾದ ಎಂದರ್ಥವು **ಹೋತಾ—ದೇವಾನಾಮಾಹ್ವಾತಾ** ದೇವತೆಗಳನ್ನು ಯಜ್ಞಭೂಮಿಗೆ ಕರೆತರುವವನು. ಎಲೈ ಅಗ್ನಿಯೇ ನೀನು ದೊಡ್ಡವನು ಎಂದರೆ ಮಹತ್ಸ್ವರೂಪವುಳ್ಳವನು, ದೇವತೆಗಳನ್ನು ಯಜ್ಞಭೂಮಿಗೆ ಕರೆತರುವವನೂ ಆಗಿದ್ದೀಯೆ.

**ಯಹ್ವ ಇತಿ ಮಹತೋ ನಾಮಧೇಯಂ ಯಾತಶ್ಚ ಹೂತಶ್ಚ ಭವತಿ—ಯಹ್ವ** ಎಂದರೆ ದೊಡ್ಡ, ಅತಿಶಯವಾದ ಎಂದರ್ಥವು ಅಗ್ನಿಯ ವಿಷಯದಲ್ಲಿ ದೊಡ್ಡವನು ಎಂದರೆ **ಯಾತಶ್ಚ** ಹೋಗುವವನು, **ಹೂತಶ್ಚ** ಪ್ರಾರ್ಥಿಸಿ ಕರೆಯಲ್ಪಡುವವನು ಎಂದರ್ಥವು ಅಗ್ನಿಯು ಮಾನವರಿಂದ ಪ್ರಾರ್ಥಿತನಾಗಿ ದೇವತೆಗಳ ಬಳಿಗೆ ಹೋಗಿ ಅವರನ್ನು ಯಜ್ಞಭೂಮಿಗೆ ಕರೆತರುವವನಾದ್ದರಿಂದ ಅಗ್ನಿಯು ಮಹತ್ವಗುಣಯುಕ್ತನು ದೊಡ್ಡವನು ಎಂದು ಇಲ್ಲಿ ವರ್ಣಿಸಲಾಗಿದೆ. ಈವಿಧವಾದ ಮಹತ್ತ್ವವು ಇತರ ದೇವತೆಗಳಿಗಿಲ್ಲ.

**ಸ ಏನಾನ್ ಯಕ್ಷೀಷಿತೋ ಯಜೀಯಾನ್ । ಇಷಿತಃ ಪ್ರೇಷಿತ ಇತಿ ವಾಧೀಷ್ಟ ಇತಿ ವಾ ಯಜೀಯಾನ್ಯಷ್ಟೃತಮ—ಯಜೀಯಾನ್** ಎಂದರೆ ಯಷ್ಟೃತಮಃ-ಯಜ್ಞಮಾಡುವವರಲ್ಲಿ, ದೇವತೆಗಳನ್ನು ಪೂಜಿಸುವವರಲ್ಲಿ ಶ್ರೇಷ್ಠನಾದವನು ಎಂದರ್ಥವು ಇಷಿತಃ ಎಂದರೆ ಪ್ರೇರಿತನು , ಪ್ರೇಷಿತಃ-ಕಳುಹಲ್ಪಟ್ಟವನು : ಅಧೀಷ್ಟಃ-ಪ್ರಾರ್ಥಿತನು, ಎಲೈ ಅಗ್ನಿಯೇ. ದೇವತೆಗಳನ್ನು ಆಹ್ವಾನಿಸಿ ಅವರನ್ನು ಆರಾಧಿಸುವವರಲ್ಲಿ ಅತ್ಯಂತ ಶ್ರೇಷ್ಠನಾದ ನೀನು ನಮ್ಮಿಂದ ಪ್ರೇರಿತನಾಗಿ ಅಥವಾ ದೇವತೆಗಳ ಬಳಿಗೆ ಕಳುಹಲ್ಪಟ್ಟವನಾಗಿ ಅಥವಾ ನಮ್ಮಿಂದ ಪ್ರಾರ್ಥಿತನಾಗಿ ದೇವತೆಗಳನ್ನು ಪೂಜಿಸು, ಆರಾಧಿಸು ಎಂದು ವಾಕ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ ।
ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಂ ॥ ೪ ॥

|| ಪದಪಾಠಃ ||

ಪ್ರಾಚೀನಂ । ಬರ್ಹಿಃ । ಪ್ರಽದಿಶಾ । ಪೃಥಿವ್ಯಾಃ । ವಸ್ತೋಃ । ಅಸ್ಯಾಃ । ವೃಜ್ಯತೇ । ಅಗ್ರೇ । ಅಹ್ನಾಂ ।

ವಿ । ಊಂ ಇತಿ । ಪ್ರಥತೇ । ವಿಽತರಂ । ವರೀಯಃ । ದೇವೇಭ್ಯಃ । ಅದಿತಯೇ । ಸ್ಯೋನಂ ॥ ೪ ॥

|| ಸಾಯಣಭಾಷ್ಯಂ ||

ಯದಿದಂ ಪ್ರಾಚೀನಂ ಪ್ರಾಗಂಚಿತಂ ಪ್ರಾಙ್ಮುಖಂ ಬರ್ಹಿರಸ್ತಿ ತದಿದಂ ಪೃಥಿವ್ಯಾ ವೇದಿಲಕ್ಷಣಾಯಾ ವಸ್ತೋಃ ॥ ವಸ ಆಚ್ಛಾದನೇ । ತುನ್ಪ್ರತ್ಯಯಃ । ಚತುರ್ಥ್ಯರ್ಥೇ ಬಹುಲಂ ಛಂದಸೀತಿ ಷಷ್ಠೀ । ಯದ್ವಾ । ಭಾವಲಕ್ಷಣೇ ತೋಸುನ್ ದ್ರಷ್ಟವ್ಯಃ ॥ ವಸನಾಯಾಚ್ಛಾದನಾರ್ಥಮಹ್ನಾಮಗ್ರೇ ಪೂರ್ವಾಹ್ಣೇ ಪ್ರದಿಶಾ ಪ್ರಕರ್ಷೇಣ ದಿಶ್ಯಮಾನೇನ ಮಂತ್ರೇಣಾಸ್ಯಾಃ ಪ್ರಾಚ್ಯಾ ದಿಶೋ ವೃಜ್ಯತೇ । ಸ್ತೀರ್ಯತೇ । ಆಹ್ರಿಯತೇ । ತಥಾ ಚ ನಿಗಮಃ । ತ ಆ ವಹಂತಿ ಕವಯಃ ಪುರಸ್ತಾದಿತ್ಯಾದಿ । ತದ್ಬರ್ಹಿರಾಹೃತಂ . ವರೀಯ ಉರುತರಂ ಬರ್ಹಿರ್ವಿತರಂ ವಿಸ್ತೀರ್ಣತರಂ ಯಥಾ ಭವತಿ ತಥಾ ವಿಪ್ರಥತೇ । ವಿವಿಧಮೇವ ವೇದ್ಯಾಂ ಪ್ರಸ್ತೃತಂ ಭವತಿ । ತಥಾ ದೇವೇಭ್ಯೋಽದಿತಯೇ ವೇದಿಲಕ್ಷಣಾಯೈ ಪೃಥಿವ್ಯೈ ಚ ಸ್ಯೋನಂ ಸುಖಕರಂ ಭವತಿ । ವಿಸ್ತೀರ್ಣೇ ಬರ್ಹಿಷಿ ದೇವಾಃ ಸುಖಂ ನಿಷೀದಂತಿ ॥

|| ಪ್ರತಿಪದಾರ್ಥ ||

**ಪ್ರಾಚೀನಂ**—ಪೂರ್ವಾಭಿಮುಖವಾದ । **ಬರ್ಹಿಃ**—ದರ್ಭಾಸನವು । **ಅಸ್ಯಾಃ ಪೃಥಿವ್ಯಾಃ**—ವೇದಿರೂಪವಾದ ಪೃಥ್ವಿಯ । **ವಸ್ತೋಃ**—ಆಚ್ಛಾದನಕ್ಕಾಗಿ (ಪೃಥ್ವಿಗೆ ಹೊದ್ದಿಸಲು) । **ಅಹ್ನಾಂ ಅಗ್ರೇ**—ಪ್ರಾತಃಕಾಲದಲ್ಲಿಯೇ । **ಪ್ರದಿಶಾ**—ಮಾರ್ಗದರ್ಶಕವಾದ ಮಂತ್ರದೊಡನೆ । **ವೃಜ್ಯತೇ**—ಹರಡಲ್ಪಡುತ್ತದೆ । **ದೇವೇಭ್ಯಃ**—ದೇವತೆಗಳಿಗೂ । **ಅದಿತಯೇ**- ಅದಿತಿಗೂ । **ಸ್ಯೋನಂ**—ಸುಖಕರವಾಗಿರುವಂತೆ । **ವರೀಯಃ**—ವಿಸ್ತೃತವಾದ ಬರ್ಹಿಯು । **ವಿತರಂ**- ಅಧಿಕವಾಗಿ । **ವಿ ಪ್ರಥತೇ**—ಹರಡಲ್ಪಡುತ್ತದೆ.

|| ಭಾವಾರ್ಥ ||

ಪೂರ್ವಾಭಿಮುಖವಾದ ದರ್ಭಾಸನವು ವೇದಿರೂಪವಾದ ಪೃಥ್ವಿಯ ಆಚ್ಛಾದನಕ್ಕಾಗಿ ಪೃಥ್ವಿಗೆ ಹೊದ್ದಿಸಲು ಪ್ರಾತಃಕಾಲದಲ್ಲಿಯೇ ಮಾರ್ಗದರ್ಶಕವಾದ ಮಂತ್ರಪೂರ್ವಕವಾಗಿ ಹರಡಲ್ಪಡುತ್ತದೆ. ದೇವತೆಗಳಿಗೂ ಅದಿತಿಗೂ ಸುಖಕರವಾಗಿರುವಂತೆ ವಿಸ್ತೃತವಾದ ಬರ್ಹಿಯು ಅಧಿಕವಾಗಿ ಹರಡಲ್ಪಡುತ್ತದೆ

## English Translation.

In the beginning of the day the sacred grass, pointing eastwards, is strewn with the prescribed (text) as a covering for the earth (of the altar); they spread it out far and wide as a pleasant (seat) for the gods and Aditi.

॥ ವಿಶೇಷವಿಷಯಗಳು ॥

**ಬರ್ಹಿಃ । ಬರ್ಹಿಃ ಪರಿಬರ್ಹಣಾತ್ । ತಸ್ಯೈಷಾ ಭವತಿ । ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ । ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಂ ॥ ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾ ಪ್ರವೃಜ್ಯತೇ ಅಗ್ರೇ ಅಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ ವಿತರಂ ವಿಕೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ ವರೀಯೋ ವರತರಮುರುತರಂ ವಾ ದೇವೇಭ್ಯಶ್ಚಾದಿತಯೇ ಚ ಸ್ಯೋನಂ । ಸ್ಯೋನಮಿತಿ ಸುಖನಾಮ ಸ್ಯತೇರವಸ್ಯಂತ್ಯೇತತ್ ಸೇವಿತವ್ಯಂ ಭವತೀತಿ ವಾ ॥**

(ನಿ. ೮-೯)

**ಬರ್ಹಿಃ ಪರಿಬರ್ಹಣಾತ್ । ತಸ್ಯೈಷಾ ಭವತಿ**—**ಬರ್ಹಿಃ** ಎಂದರೆ ಒಂದೇಸಮನಾಗಿ ಕತ್ತರಿಸಿದ ದರ್ಭೆಯನ್ನು ಆಸನಾರ್ಥವಾಗಿ ಹರಡಿರುವುದು ಯಜ್ಞದಲ್ಲಿ ಪ್ರಾರ್ಥಿತರಾಗಿ ಕರೆಯಲ್ಪಟ್ಟ ದೇವತೆಗಳು ಬಂದು ಕುಳಿತುಕೊಳ್ಳುವುದಕ್ಕಾಗಿ ಒಂದು ಆಸನವನ್ನು ಸಿದ್ಧಪಡಿಸಿರುವರು. ಒಂದೇಸಮನಾಗಿ ಕತ್ತರಿಸಿರುವ ದರ್ಭೆಗಳನ್ನು ಮೂರು ಪದರಗಳಲ್ಲಿ ಹರಡಿ ಕುಳಿತುಕೊಳ್ಳಲು ಮೆತ್ತಗಿರುವಂತೆ ಒಂದು ಪದರದ ಮೇಲೆ ಮತ್ತೊಂದು ಪದರವನ್ನು ಹಾಸಿ ಸಿದ್ಧಪಡಿಸಿರುವ ಆಸನಕ್ಕೆ **ಬರ್ಹಿಃ** ಎಂದು ಹೆಸರು. ಈ ಬರ್ಹಿಃ ಎಂಬ ಆಸನವನ್ನು ಹವಿರಾದಿಗಳನ್ನು ಇಡುವುದಕ್ಕೂ ಉಪಯೋಗಿಸುವರು. ಹವಿರಾದಿಗಳನ್ನು ನೆಲದ ಮೇಲಿಡುವುದಿಲ್ಲ. ದರ್ಭೆಯಿಂದ ಹರಡಿದ ಆಸನದ ಮೇಲಿಡುವರು. ಈ ಆಸನಾರ್ಥವಾಗಿ ಉಪಯೋಗಿಸಲ್ಪಡುವ ದರ್ಭೆಯು ಒಂದೇಸಮವಾಗಿ ಎಂದರೆ ಒಂದೇ ಅಳತೆಗೆ ಕತ್ತರಿಸಲ್ಪಟ್ಟಿರುವುದು ಬರ್ಹಿಃ ಎಂಬ ಶಬ್ದಕ್ಕೆ **ಪರಿಬರ್ಹಣಾತ್—ಪರಿಚ್ಛೇದನಾತ್**—ಕತ್ತರಿಸಲ್ಪಟ್ಟ ಎಂಬರ್ಥವಿರುವುದು. ಮತ್ತು ಈ ದರ್ಭೆಯು ಬಹುಬೇಗನೆ ಬೆಳೆಯುವುದರಿಂದಲೂ ಇದಕ್ಕೆ ಬರ್ಹಿಃ ಎಂಬ ಹೆಸರು ಬಂದಿದೆ. ಈ ಶಬ್ದ ಪ್ರಯೋಗವಿರುವ ಒಂದು ಋಕ್ಕನ್ನು ಎಂದರೆ ಪ್ರಕೃತಋಕ್ಕನ್ನೇ ಇಲ್ಲಿ ಉದಾಹರಣೆಗಾಗಿ ಕೊಡಲಾಗಿದೆ

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾಃ ಪ್ರವೃಜ್ಯತೇ—ಪ್ರಾಚೀನಂ** ಎಂದರೆ ಪೂರ್ವದಿಕ್ಕಿನಲ್ಲಿ ಅಥವಾ ದರ್ಭೆಯ ತುದಿಗಳು (ಅಗ್ರಗಳು) ಪೂರ್ವದಿಕ್ಕಿಗಿರುವಂತೆ, **ಬರ್ಹಿಃ** ಎಂದರೆ ಒಂದೇಸಮನಾದ ಅಳತೆಗೆ ಕತ್ತರಿಸಿದ ದರ್ಭೆಗಳು; **ಪ್ರದಿಶಾ**—ವಿಧ್ಯುಕ್ತವಾಗಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಪ್ರಸ್ತರಣ ಮಂತ್ರಪುರಸ್ಸರವಾಗಿ, **ಪೃಥಿವ್ಯಾ ವಸನಾಯಾಸ್ಯಾಃ ಪ್ರವೃಜ್ಯತೇ**—ಭೂಮಿಯ ಮೇಲೆ ಅದನ್ನು ಮುಚ್ಚುವುದಕ್ಕಾಗಿ ಹಂಡಲ್ಪಡುತ್ತದೆ ಎಂದರೆ ಯಜ್ಞವೇದಿಯಲ್ಲಿ ದೇವತೆಗಳು ಬಂದು ಕುಳಿತುಕೊಳ್ಳುವುದಕ್ಕಾಗಿ ಪೂರ್ವದಿಕ್ಕಿನಲ್ಲಿ ಒಂದೇ ಅಳತೆಗೆ ಕತ್ತರಿಸಿರುವ ದರ್ಭೆಗಳನ್ನು ಪ್ರಾಗಗ್ರವಾಗಿಯೂ ಪ್ರಸ್ತರಣಮಂತ್ರ ಪುರಸ್ಸರವಾಗಿಯೂ ಭೂಮಿಯ ಮೇಲೆ ಆವರಣದಂತೆ ಹರಡಲ್ಪಡುತ್ತದೆ ಎಂದು ವಾಕ್ಯಾರ್ಥವು.

**ಅಗ್ರೇ ಅಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ—ಅಗ್ರೇ ಅಹ್ನಾಂ** ಎಂದರೆ ದಿವಸ ಅಥವಾ ಹಗಲಿನ ಪ್ರಾರಂಭದಲ್ಲಿ ಎಂದರೆ ಪೂರ್ವಾಹ್ಣದಲ್ಲಿ, ದರ್ಭಾಸ್ತರಣವನ್ನು ಪೂರ್ವಾಹ್ಣದಲ್ಲಿ (ಪ್ರಾತಃಕಾಲದಲ್ಲಿ) ವಿಸ್ತಾರವಾಗಿ ಹರಡಲ್ಪಡುತ್ತದೆ ಎಂದರ್ಥವು

**ವಿತರಂ ವಿಕೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ ವರಿಯೋ ವರತರಮುರುತರಂ ವಾ ದೇವೇಭ್ಯಶ್ಚಾದಿತಯೇ ಸ್ಯೋನಂ**—ವಿತರಂ ಎಂದರೆ ವಿಕೀರ್ಣತರಂ ಹರಡಲ್ಪಡುವುದು ಅಥವಾ ವಿಸ್ತೀರ್ಣತರಂ ವಿಸ್ತಾರವಾಗಿ ಹರಡಲ್ಪಡುವುದು, **ವರೀಯಃ** ಎಂದರೆ **ವರತರಂ** ಅಥವಾ **ಶ್ರೇಷ್ಠತರಂ**-ಇತರ ಯಜ್ಞಾಂಗಗಳಿಗಿಂತ ಶ್ರೇಷ್ಠವಾದದ್ದು; **ಉರುತರಂ**—ಬಹಳವಾದದ್ದು. ಬಹಳವಾದುದೂ ಶ್ರೇಷ್ಠವಾದುದೂ ಆದ ದರ್ಭಾಸ್ತರಣವನ್ನು ದೇವತೆಗಳು ಮತ್ತು ಅದಿತಿಯು ಬಂದು ಸುಖವಾಗಿ ಕುಳಿತುಕೊಳುವುದಕ್ಕಾಗಿ ವಿಸ್ತಾರವಾಗಿ ಹರಡಿ ಸಜ್ಜುಗೊಳಿಸ ಲಾಗುವುದು ಎಂದಭಿಪ್ರಾಯವು

**ಸ್ಯೋನಮಿತಿ ಸುಖನಾಮ ಸ್ಯತೇರವಸ್ಯಂತ್ಯೇತತ್ ಸೇವಿತವ್ಯಂ ಭವತೀತಿ ವಾ**—ಸ್ಯೋನವೆಂದರೆ ಸುಖಕ್ಕೆ ಹೆಸರು ಸ್ಯೋನಶಬ್ದವು ವಿಶ್ರಾಂತಿಯನ್ನು ಹೊಂದು ಎಂಬರ್ಥವಿರುವ ಸ್ಯತಿಧಾತುವಿನಿಂದಾಗಲಿ ಅಥವಾ ಜನರು ಇದರಲ್ಲಿ ವಿಶ್ರಾಂತಿಯನ್ನು ಪಡೆಯುವುದರಿಂದಾಗಲಿ ಅಥವಾ ವಿಶ್ರಾಂತಿಗಾಗಿ ಜನರು ಇದನ್ನು ಆಶ್ರಯಿಸುವುದರಿಂದಾ ಗಲಿ ಸ್ಯೋನಶಬ್ದದ ನಿಷ್ಪತ್ತಿಯಾಗಿದೆ

॥ ಸಂಹಿತಾಪಾಠಃ ॥

ವ್ಯಚಸ್ವತೀರುರ್ವಿಯಾ ವಿ ಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭ-
ಮಾನಾಃ ।
ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾ-
ಯಣಾಃ ॥ ೫ ॥

॥ ಪದಪಾಠಃ ॥

ವ್ಯಚಸ್ವತೀಃ । ಉರ್ವಿಯಾ । ವಿ । ಶ್ರಯಂತಾಂ । ಪತಿಽಭ್ಯಃ । ನ । ಜನಯಃ । ಶುಂಭಮಾನಾಃ ।

ದೇವೀಃ । ದ್ವಾರಃ । ಬೃಹತೀಃ । ವಿಶ್ವಂಽಇನ್ವಾಃ । ದೇವೇಭ್ಯಃ । ಭವತ । ಸುಪ್ರಽಅಯನಾಃ ॥ ೫ ॥

॥ ಸಾಯಣಭಾಷ್ಯಂ ॥

ವ್ಯಚಸ್ವತೀಃ । ವ್ಯಚೋ ವ್ಯಾಪನಂ । ತದ್ವತ್ಯಃ ॥ ವಾ ಛಂದಸೀತಿ ಪೂರ್ವಸವರ್ಣದೀರ್ಘಃ ॥ ತಾ ದ್ವಾರದೇವತಾ ಉರ್ವಿಯಾ ॥ ಉರುಶಬ್ದಾತ್ತೃತೀಯೈಕವಚನ ಇಯಾಡಿಯಾಜೀಕಾರಾಣಾಮುಪ- ಸಂಖ್ಯಾನಂ । ಪಾ. ೭-೧-೩೯-೧ । ಇತೀಯಾದೇಶಃ ॥ ಉರುತ್ವೇನ ವಿ ಶ್ರಯಂತಾಂ । ವಿಶೇಷೇಣಾಶ್ರಿತಾ ಭವಂತು । ತತ್ರ ದೃಷ್ಟಾಂತಃ । ಪತಿಭ್ಯೋ ನ ಯಥಾ ಪತೀನಾಮರ್ಥಾಯ ಸಂಭೋಗಕಾಲೇ ಶುಂಭ- ಮಾನಾಃ ಶೋಭಮಾನಾ ಜನಯೋ ಜಾಯಾ ವಿಶ್ರಯಂತಿ ತದ್ವದಸ್ಮಿನ್ಕರ್ಮಣಿ ವಿಶ್ರಯಂತಾಂ । ಹೇ ಬೃಹತೀರ್ಮಹತ್ಯೋ ಹೇ ವಿಶ್ವಮಿನ್ವಾಃ ॥ ಇವಿ ಪ್ರೀಣನಾರ್ಥಃ । ತಸ್ಮಾತ್ಕರ್ಮಣ್ಯುಪಪದೇಽಣ್ ।

ಇದಿತ್ಯಾತ್ವನ್ನುಮ್ । ತತ್ಪುರುಷೇ ಕೃತಿ ಬಹುಲಮಿತ್ಯತ್ರ ಬಹುಲವಚನಾದ್ದ್ವಿತೀಯಾಯಾ ಅಪ್ಯಲುಕ್ ॥ ಸರ್ವಸ್ಯ ಪ್ರೀಣಯಿತ್ರ್ಯೋ ಹೇ ದ್ವಾರೋ ದೇವೀರ್ದ್ವಾರಾಭಿಮಾನಿನ್ಯೋ ಹೇ ದೇವ್ಯಃ ಯೂಯಂ ದೇವೇಭ್ಯೋ ದೇವನಾಮರ್ಥಾಯ ಸುಪ್ರಾಯಣಾಃ ಸುಪ್ರಗಮನಾಃ ಸುವಿವೃತಾ ಭವತ ॥

॥ ಪ್ರತಿಪದಾರ್ಥ ॥

**ಪತಿಭ್ಯಃ**— ಪತಿಗಳ ಹರ್ಷಕ್ಕಾಗಿ । **ಶುಂಭಮಾನಾಃ**— ಅಲಂಕಾರವನ್ನು ಮಾಡಿಕೊಂಡಿರುವ । **ಜನಯಃ ನ**— ಪತ್ನಿಯರು ಅವಕಾಶವನ್ನು ಮಾಡಿಕೊಡುವಂತೆ । **ವ್ಯಚಸ್ವತೀಃ**— ದೀರ್ಘವಾದ ಅವಕಾಶವುಳ್ಳ ದ್ವಾರ ದೇವತೆಗಳು । **ಉರ್ವಿಯಾ**— ವಿಸ್ತೃತವಾಗಿ ದೇವತೆಗಳ ಪ್ರವೇಶಕ್ಕಾಗಿ । **ವಿ ಶ್ರಯಂತಾಂ**— ಮುಚ್ಚಿರುವ ಬಾಗಿಲನ್ನು ತೆರೆಯಲಿ । **ಬೃಹತೀಃ**— ಮಹತ್ಸ್ವರೂಪವುಳ್ಳವರೂ । **ವಿಶ್ವಮಿನ್ವಾಃ**— ಸಕಲರಿಗೂ ಪ್ರೀತಿಕಾರಕರೂ ಆದ । **ದ್ವಾರಃ ದೇವೀಃ**— ಎಲೈ ದ್ವಾರದೇವತೆಗಳೇ । **ದೇವೇಭ್ಯಃ**— ದೇವತೆಗಳಿಗೆ । **ಸುಪ್ರಾಯಣಾಃ**— ಸುಲಭವಾದ ಪ್ರವೇಶದಾಯಕಿಯರಾಗಿ । **ಭವತ**— ಆಗಿರಿ.

॥ ಭಾವಾರ್ಥ ॥

ಪತಿಗಳ ಹರ್ಷಕ್ಕಾಗಿ ಅಲಂಕಾರವನ್ನು ಮಾಡಿಕೊಂಡಿರುವ ಪತ್ನಿಯರು ಅವರ ಸುಖಕ್ಕೆ ಅವಕಾಶವನ್ನು ಮಾಡಿಕೊಡುವಂತೆ ; ಅಗಲವಾಗಿ ದೊಡ್ಡದಾಗಿರುವ ದ್ವಾರದೇವತೆಗಳು ತಮ್ಮ ಮುಚ್ಚಿರುವ ಬಾಗಿಲನ್ನು ದೇವತೆಗಳ ಪ್ರವೇಶಕ್ಕಾಗಿ ವಿಸ್ತೃತವಾಗಿ ತೆರೆಯಲಿ. ಮಹತ್ಸ್ವರೂಪವುಳ್ಳವರೂ, ಸಕಲರಿಗೂ ಪ್ರೀತಿಕಾರಕರೂ ಆದ ಎಲೈ ದ್ವಾರದೇವತೆಗಳೇ, ದೇವತೆಗಳಿಗೆ ಸುಲಭವಾದ ಪ್ರವೇಶದಾಯಕಿಯರಾಗಿ ಆಗಿರಿ.

## English Translation.

Expanding wide, let the Doors give access as gracefully decorated wives give access to their husbands, divine Doors, spacious and admitting all, be easy of entry for the gods.

॥ ವಿಶೇಷವಿಷಯಗಳು ॥

ದ್ವಾರಃ ಎಂಬ ಶಬ್ದದ ನಿರ್ವಚನವನ್ನು ಈ ರೀತಿ ವಿವರಿಸಲಾಗಿದೆ—

ದ್ವಾರಃ । ಜವತೇರ್ವಾ ದ್ರವತೇರ್ವಾ ವಾರಯತೇರ್ವಾ । ತಾಸಾಮೇಷಾ ಭವತಿ ॥ ವ್ಯಚಸ್ವತೀರುರ್ವಿಯಾ ವಿಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾನಾಃ । ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾಯಣಾಃ ॥ ವ್ಯಂಚನವತ್ಯ ಉರುತ್ವೇನ ವಿಶ್ರಯಂತಾಂ ಪತಿಭ್ಯ ಇವ ಜಾಯಾ ಊರೂ ಮೈಥುನೇ ಧರ್ಮೇ ಶುಶೋಭಿಷಮಾಣಾಃ ವರತಮಮಂಗಮೂರೂ ದೇವ್ಯೋ ದ್ವಾರೋ ಬೃಹತ್ಯೋ ಮಹತ್ಯೋ ವಿಶ್ವಮಿನ್ವಾ ವಿಶ್ವಮಾಭಿರೇತಿ ಯಜ್ಞೇ । ಗೃಹದ್ವಾರ ಇತಿ ಕಾತ್ಥಕ್ಯಃ ॥ ಅಗ್ನಿರಿತಿ ಶಾಕಪೂಣಿಃ ॥

(ನಿ. ೮–೧೦)

**ದ್ವಾರಃ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ । ತಾಸಾಮೇಷಾ ಭವತಿ**— ದ್ವಾರಃ ಎಂದರೆ ಯಜ್ಞಗೃಹದ ಬಾಗಿಲುಗಳು. ಇವು ಸಾಧಾರಣವಾಗಿ ಸ್ತ್ರೀಲಿಂಗಬಹುವಚನಾಂತಶಬ್ದಗಳಾಗಿಯೇ ಇರುವವು. ಮುಂದಕ್ಕೆ ಅಥವಾ ಒಳಕ್ಕೆ ಹೋಗು ಎಂಬರ್ಥವುಳ್ಳ ಜು ಧಾತುವಿನಿಂದಾಗಲಿ, ಸರಿ ಎಂಬರ್ಥವುಳ್ಳ ದ್ರು ಧಾತುವಿನಿಂದಾಗಲಿ ದ್ವಾರಃ ಎಂಬ ಶಬ್ದವು ನಿಷ್ಪನ್ನವಾಗಿದೆ ಅಥವಾ ಒಳಕ್ಕೆ ಹೋಗದಂತೆ ತಡೆ ಎಂಬ ಅರ್ಥವುಳ್ಳ ವೃ ಧಾತುವಿನಿಂದಲೂ ನಿಷ್ಪನ್ನವಾಗಬಹುದು ಈ ಶಬ್ದಪ್ರಯೋಗವಿರುವ ಪ್ರಕೃತಋಕ್ಕನ್ನೇ ಯಾಸ್ಕರು ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರುಕ್ತವನ್ನು ಹೇಳಿದಾರೆ.

**ವ್ಯಚಸ್ವತೀರುರ್ವಿಯಾ ವಿಶ್ರಯಂತಾಂ— ವ್ಯಂಚನವತ್ಯ ಉರುತ್ವೇನ ವಿಶ್ರಯಂತಾಂ ।** ವಿಸ್ತಾರವಾದ ಯಜ್ಞಗೃಹದ ಬಾಗಿಲುಗಳು ಚೆನ್ನಾಗಿ ಅಥವಾ ಪೂರ್ತಿಯಾಗಿ ತೆರದಿರಲಿ. ಬಾಗಿಲುಗಳು ತೆರೆದಿರುವ ವಿಷಯದಲ್ಲಿ ಇಲ್ಲಿ ಒಂದು ದೃಷ್ಟಾಂತವನ್ನು ಹೇಳಲಾಗಿದೆ.

**ಪತಿಭ್ಯೋ ನ ಜನಯಃ ಶುಂಭಮಾನಃ— ಪತಿಭ್ಯ ಇವ ಜಾಯಾ ಊರೂ ಮೈಥುನೇ ಧರ್ಮೇ ಶುಶೋಭಿಷಮಾಣಾಃ ವರತಮಮಂಗಮೂರೂ ।** ಸಂಭೋಗಕಾಲದಲ್ಲಿ ಪತ್ನಿಯರು ತಮ್ಮ ಪತಿಗಳಿಗೆ ಸಂತೋಷವನ್ನುಂಟುಮಾಡುವುದಕ್ಕಾಗಿ ತಮ್ಮ ತೊಡೆಗಳನ್ನು ಹಿಗ್ಗಲಿಸಿ ತೆರೆ[illegible]ವಂತೆ ಯಜ್ಞಗೃಹದ ಬಾಗಿಲುಗಳು ದೇವತೆಗಳ ಋತ್ವಿಗ್ಯಜಮಾನರ ಮತ್ತು ಇತರ ಜನರ ಆಗಮನಕ್ಕಾಗಿ ಸಂಪೂರ್ಣವಾಗಿ ತೆರದಿರಲಿ ಎಂದಭಿಪ್ರಾಯವು. ಸ್ತ್ರೀಯರ ತೊಡೆಗಳು ಶರೀರದ ಇತರ ಎಲ್ಲಾ ಅಂಗಗಳಿಗಿಂತಲೂ ತುಂಬಾ ಆಕರ್ಷಕವಾದವು

**ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾಯಣಾಃ— ದೇವ್ಯೋ ದ್ವಾರೋ ಬೃಹತ್ಯೋ ಮಹತ್ಯೋ ವಿಶ್ವಮಿನ್ವಾ ವಿಶ್ವಮಾಭಿರೇತಿ ಯಜ್ಞೇ । ಗೃಹದ್ವಾರ ಇತಿ ಕಾತ್ಥಕ್ಯಃ ॥ ಅಗ್ನಿರಿತಿ ಶಾಕಪೂಣಿಃ ॥** ಬೃಹತ್ಯಃ ಎಂದರೆ ದೊಡ್ಡದಾಗಿರುವ ಬಾಗಿಲುಗಳು; **ವಿಶ್ವಮಿನ್ವಾ** ಎಂದರೆ ವಿಶ್ವಮಾಭಿರೇತಿ, **ವಿಶ್ವಂ**— ಸಮಸ್ತರೂ **ಅಭಿಃ**— ಈ ಬಾಗಿಲುಗಳಿಂದ, **ಏತಿ**— ಒಳಗೆ ಬರುತ್ತಾರೆ. ಎಂದರೆ ಸಮಸ್ತರೂ ಯಜ್ಞಗೃಹದ ಒಳಗೆ ಪ್ರವೇಶಿಸಲು ಅರ್ಹವಾದ ದೊಡ್ಡದಾಗಿರುವ ಬಾಗಿಲುಗಳು.

**ದೇವೇಭ್ಯೋ ಭವತ ಸುಪ್ರಾಯಣಾಃ— ಸುಪ್ರಾಯಣಾಃ** ಎಂದರೆ **ಸುಪ್ರಗಮನಾಃ** ಸುಲಭವಾಗಿ ಪ್ರವೇಶಮಾಡಲು ಅರ್ಹವಾದವುಗಳಾಗಲಿ ಎಂದಭಿಪ್ರಾಯವು.

ಮುಖ್ಯಾಭಿಪ್ರಾಯವು— ವಿಸ್ತಾರವಾದವೂ ದೊಡ್ಡವಾಗಿರುವವೂ ಆದ ಯಜ್ಞಗೃಹದ ಬಾಗಿಲುಗಳು (ದ್ವಾರಗಳು) ಸಂಭೋಗಕಾಲದಲ್ಲಿ ಸರ್ವಾಲಂಕಾರಯುಕ್ತರಾದ ಸ್ತ್ರೀಯರು ಎಂದರೆ ಪತ್ನಿಯರು ತಮ್ಮ ಪತಿಗಳ ಸುಖಾನುಭವಕ್ಕಾಗಿ ತಮ್ಮ ಆಕರ್ಷಕವಾದ ತೊಡೆಗಳನ್ನು ಹಿಗ್ಗಲಿಸಿ ಅಗಲವಾಗುವಂತೆ ಮಾಡಿ ಯಾವ ರೀತಿ ಚಾಚುವರೋ ಅದರಂತೆ, ವಿಸ್ತಾರವಾದವೂ ದೊಡ್ಡದಾಗಿರುವವೂ ಆದ ಯಜ್ಞಗೃಹದ ಬಾಗಿಲುಗಳು (ದ್ವಾರಗಳು) ದೇವತೆಗಳು, ಋತ್ವಿಗ್ಯಜಮಾನರು, ಇತರ ಜನರು ಮುಂತಾದವರ ಸುಖಾಗಮನಕ್ಕಾಗಿ ಚೆನ್ನಾಗಿ ತೆರದಿರಲಿ.

ಇಲ್ಲಿ ದ್ವಾರಃ ಎಂದರೆ ಗೃಹದ್ವಾರ ಮನೆಯ ಬಾಗಿಲುಗಳು ಎಂಬರ್ಥವನ್ನು ಕಾತ್ಥಕ್ಯರು ಅನುಮೋದಿಸುವರು.

ದ್ವಾರಃ ಎಂದರೆ ಅಗ್ನಿಯು ಅಥವಾ ಅಗ್ನಿಯ ರೂಪವಿಶೇಷವೆಂದು ಶಾಕಪೂಣಿಯವರ ಅಭಿಪ್ರಾಯವು.

ಯಜ್ಞಗೃಹದ ನಾಲ್ಕುದ್ವಾರಗಳನ್ನು ಸಂಸ್ಕಾರನಗಾಡುವ ವಿಷಯದಲ್ಲಿ ತೈತ್ತಿರೀಯ ಸಂಹಿತೆಯಲ್ಲಿ ಈ ವಿವರಣೆಯು ಈ ರೀತಿ ಉಕ್ತವಾಗಿದೆ.

(ತೈ. ಸಂ. ೬. ೧. ೧ ೧.)

**ಪ್ರಾಚೀನವಗ್ಂಶಂ ಕರೋತಿ ದೇವಮನುಷ್ಯಾ ದಿಶೋ ವ್ಯಭಜಂತ ಪ್ರಾಚೀಂ ದೇವಾ ದಕ್ಷಿಣಾ ಪಿತರಃ ಪ್ರತೀಚೀಂ ಮನುಷ್ಯಾ ಉದೀಚೀಗ್ಂ ರುದ್ರಾಃ ||**

(ತೈ. ಸಂ. ೬-೧-೧-೧)

ಎಂದರೆ, ಯಜ್ಞಗೃಹದ ಪೂರ್ವದ್ವಾರವನ್ನು ದೇವತೆಗಳೂ, ದಕ್ಷಿಣದ್ವಾರವನ್ನು ಪಿತೃದೇವತೆಗಳೂ, ಪಶ್ಚಿಮದ್ವಾರವನ್ನು ಮನುಷ್ಯರೂ, ಉತ್ತರದ್ವಾರವನ್ನು (ಏಕಾದಶ) ರುದ್ರರೂ ಹಂಚಿಕೊಂಡರೆಂದಿದೆ.

ಈ ಯಜ್ಞಗೃಹದ ದ್ವಾರಗಳ ಹೆಸರುಗಳು ೧-೧೮೮-೫ ರಲ್ಲಿ ಹೇಳಿರುವಂತೆ ಈ ರೀತಿ ಇದೆ. **ವಿರಾಟ್** ಎಂಬುವುದು ಪೂರ್ವದ್ವಾರವೆಂದೂ, **ಸಮ್ರಾಟ್** ಎಂಬುವುದು ದಕ್ಷಿಣದ್ವಾರವೆಂದೂ, ವಿಭ್ವೀಃ ಎಂಬುದು ಪಶ್ಚಿಮ ದ್ವಾರವೆಂದೂ, **ಪ್ರಭ್ವೀಃ** ಎಂಬುದು ಉತ್ತರದ್ವಾರವೆಂದೂ ಹೇಳಬಹುದು. ಈ ಶಬ್ದಗಳ ಅವಯವಾರ್ಥಗಳನ್ನು ಸಾಯಣರು ವಿವರಿಸಿರುವರು.

|| ಸಂಹಿತಾಪಾಠಃ ||

**ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।**

**ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ||**

|| ಪದಪಾಠಃ ||

**ಆ । ಸುಸ್ವಯಂತೀ ಇತಿ । ಯಜತೇ ಇತಿ । ಉಪಾಕೇ ಇತಿ। ಉಷಸಾನಕ್ತಾ । ಸದತಾಂ । ನಿ । ಯೋನೌ । ದಿವ್ಯೇ ಇತಿ । ಯೋಷಣೇ ಇತಿ । ಬೃಹತೀ ಇತಿ । ಸುರುಕ್ಮೇ ಇತಿ ಸುऽರುಕ್ಮೇ । ಅಧಿ । ಶ್ರಿಯಂ । ಶುಕ್ರऽಪಿಶಂ । ದಧಾನೇ ಇತಿ || ೬ ||**

|| ಸಾಯಣಭಾಷ್ಯಂ ||

**ಸುಸ್ವಯಂತೀ || ಅಯ ಪಯ ಗತೌ । ಶಕಯೋರುಪಸರ್ಗಸ್ಯ ಸೋರ್ದ್ವಿರ್ವಚನಂ ಛಾಂದಸಂ || ಸುಷ್ಠು ಯಂತ್ಯೌ ಗಚ್ಛಂತ್ಯೌ । ಯದ್ವಾ || ಸ್ವಪೇರ್ಣ್ಯಂತಸ್ಯ ವರ್ಣಲೋಪಃ || ಸುಷ್ವಾಪಯಂತ್ಯೌ। ಯಜತೇ ಯಷ್ಟವ್ಯೇ ಉಪಾಕೇ ಉಪಕ್ರಾಂತೇ ಉಷಾಸಾನಕ್ತೋಷಶ್ಚ ನಕ್ತಂ ಚ || ದ್ವಂದ್ವೇ ಉಷಾಸೋಷಸಃ । ಪಾ. ೬-೩-೩೧ । ಇತ್ಯುಷಾಸಾದೇಶಃ । ದೇವತಾದ್ವಂದ್ವೇ ಚೇತಿ ಪೂರ್ವೋತ್ತರಪದಯೋ-**

ಯುರ್ಗಪತ್ತ್ರಕೃತಿಸ್ಸರತ್ವಂ ॥ ಅಹೋರಾತ್ರದೇವ್ಯೌ ಯೋನಾವಸ್ಮಿನ್ಯಜ್ಞಸ್ಥಾನೇ ನಿ ನಿತರಾಂ ನಿಯಮೇನ ವಾ ಸದತಾಂ । ಆಸೀದತಾಂ ॥ ಸದೇರ್ಲುಙಿ ಲೃದಿತ್ವಾಚ್ಚ್ಲೇರಙ್ ॥ ಕೀದೃಶ್ಯೌ । ದಿವ್ಯೇ ದಿವಿ ಭವೇ ಯೋಷಣೇ ಯೋಷಿತಾವಿವ ಪ್ರೀಣಯಿತ್ರ್ಯೌ । ಯದ್ವಾ । ಯೋಷಣೇ ಸಮಿತೇ ಪರಸ್ಪರತೋಽವಿವಿಕ್ತೇ । ಬೃಹತೀರ್ಗುಣೈರ್ಮಹತ್ಯೌ ಸುರುಕ್ಮೇ ಶೋಭನದೀಪ್ತೇ ॥ ರುಕ್ಮಂ । ರೋಚತೇರ್ಮಕ್ಪ್ರತ್ಯಯೇ ಕುತ್ವೇ ಚ ಕೃತೇ ರೂಪಂ ॥ ಶುಕ್ರಪಿಶಂ ಶೋಚಮಾನರೂಪಾಂ ಶ್ರಿಯಮಧಿ ದಧಾನೇ ಅಧಿಕಂ ಧಾರಯಂತ್ಯೌ ॥

॥ ಪ್ರತಿಪದಾರ್ಥ ॥

**ದಿವ್ಯೇ**—ದ್ಯುಲೋಕೋತ್ಪನ್ನರೂ । **ಯೋಷಣೇ**—ಒಟ್ಟಿಗೆ ಸೇರಿರುವವರೂ । **ಬೃಹತೀ**—ಮಹತ್ಸ್ವರೂಪವುಳ್ಳವರೂ । **ಸುರುಕ್ಮೇ**—ಅಧಿಕವಾದ ಪ್ರಕಾಶವುಳ್ಳವರೂ। **ಶುಕ್ರಪಿಶಂ**—ಪ್ರಭಾಯುತವಾದ । **ಶ್ರಿಯಂ**—ಕಾಂತಿಯನ್ನು । **ಅಧಿ ದಧಾನೇ**—ಹೊಂದಿರುವವರೂ । **ಸುಷ್ವಯಂತೀ**—ಸುಖದಾಯಕಿಯರೂ । **ಯಜತೇ**—ಪೂಜ್ಯರೂ । **ಉಪಾಕೇ**—ಯಜ್ಞಕ್ಕಾಗಿ ಒಟ್ಟಿಗೆ ದಯಮಾಡಿರುವವರೂ ಆದ । **ಉಷಾಸಾನಕ್ತಾ**—ಅಹಸ್ಸಿನ ಮತ್ತು ರಾತ್ರಿಯ ದೇವತೆಗಳು । **ಯೋನೌ**—ಯಜ್ಞಸ್ಥಾನದಲ್ಲಿ । **ನಿ ಸದತಾಂ**—ಕುಳಿತುಕೊಳ್ಳಲಿ.

॥ ಭಾವಾರ್ಥ ॥

ದ್ಯುಲೋಕೋತ್ಪನ್ನರೂ, ಒಟ್ಟಿಗೆ ಸೇರಿರುವವರೂ, ಮಹತ್ಸ್ವರೂಪವುಳ್ಳವರೂ, ಅಧಿಕವಾದ ಪ್ರಕಾಶವುಳ್ಳವರೂ, ಪ್ರಭಾಯುತವಾದ ಕಾಂತಿಯನ್ನು ಹೊಂದಿರುವವರೂ ಸುಖದಾಯಕಿಯರೂ, ಪೂಜ್ಯರೂ, ಯಜ್ಞಕ್ಕಾಗಿ ಒಟ್ಟಿಗೆ ದಯಮಾಡಿರುವವರೂ ಆದ ಉಷಾಸಾನಕ್ತಾ ಎಂಬ ದೇವತೆಗಳು ಯಜ್ಞಸ್ಥಾನದಲ್ಲಿ ಕುಳಿತುಕೊಳ್ಳಲಿ.

## English Translation.

May the adorable Day and Night, the givers of sound repose, having approached, sit down in the place (of sacrifice), two divine females, majestic and richly ornamented, bearing beauty of a bright form.

ವಿಶೇಷ ವಿಷಯಗಳು

ಈ ಋಕ್ಕಿನಲ್ಲಿ ಉಷಾಸಾನಕ್ತಾ ಎಂಬ ಇಬ್ಬರು ದೇವತೆಗಳ ವಿಷಯವನ್ನು ವಿವರಿಸಲಾಗಿದೆ—

**ಉಷಾಸಾನಕ್ತಾ । ಉಷಾಸಾನಕ್ತೋಷಾಶ್ಚ ನಕ್ತಾ ಚೋಷಾ ವ್ಯಾಖ್ಯಾತಾ । ನಕ್ತೇತಿ ರಾತ್ರಿನಾಮಾನಕ್ತಿ ಭೂತಾನ್ಯವಶ್ಯಾಯೇನಾಪಿ ವಾ ನಕ್ತಾವ್ಯಕ್ತವರ್ಣಾ । ತಯೋರೇಷಾ ಭವತಿ ॥**

(ನಿ. ೮-೧೧)

**ಉಷಾಸಾನಕ್ತಾ** ಎಂಬ ಶಬ್ದವು ಯಾವ ದೇವತೆಗಳನ್ನು ನಿರ್ದೇಶಿಸುವುದೋ **ನಕ್ತೋಷಾಸಾ** ಎಂಬ ಶಬ್ದವೂ ಆ ದೇವತೆಗಳನ್ನೇ ನಿರ್ದೇಶಿಸುವುದು. ಈ ಶಬ್ದದಲ್ಲಿ ನಕ್ತಾ ಉಷಾಃ ಎಂಬ ಈರ್ವರು ದೇವತೆಗಳ ಹೆಸರುಗಳಿರುವವು. ನಕ್ತಾ ಎಂದರೆ ರಾತ್ರಿಯು ಏಕೆಂದರೆ ಪ್ರತಿದಿನವೂ ಇದು ಅವಶ್ಯಕವಾಗಿ ಬಂದೇಬರುವುದು ಮತ್ತು **ಅನಕ್ತಿ ಭೂತಾನಿ— ಕ್ಲೇದಯತಿ ಭೂತಾನಿ** ಸಮಸ್ತ ಪ್ರಾಣಿಗಳನ್ನು ತೊಂದರೆ ಪಡಿಸುವುದು ಆದ್ದರಿಂದ ರಾತ್ರಿಗೆ ನಕ್ತಾ ಎಂದು ಹೆಸರು.

**ಅಥವಾ ಅಪಿ ವಾ ನಕ್ತಾ ಅವ್ಯಕ್ತವರ್ಣಾ (ನ ಅಕ್ತಾ ಅನಕ್ತಾ)** ಹಗಲಿನಂತೆ ಬೆಳಕಿದೆಲ್ಲ ರಾತ್ರಿಯಲ್ಲಿ ಕತ್ತಲೆ ಇರುವುದರಿಂದ ಯಾವ ವಸ್ತುಗಳೂ ಸ್ಪಷ್ಟವಾಗಿ ಕಾಣಿಸುವುದಿಲ್ಲ. ಆದ್ದರಿಂದ ಅವ್ಯಕ್ತವರ್ಣವುಳ್ಳ ರಾತ್ರಿಗೆ ನಕ್ತಾ ಎಂದು ಹೆಸರು. ಉಷಾಃ ಎಂದರೆ **ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ** (ನಿ ೨-೧೮) ಇದು ಕತ್ತಲೆಯನ್ನು ಹೋಗಲಾಡಿಸುವುದರಿಂದ ಇದಕ್ಕೆ ಉಷಾಃ ಎಂದು ಹೆಸರು. ಎಂದರೆ ರಾತ್ರಿಯ ಕೊನೆಯ ಭಾಗಕ್ಕೆ ಉಷಃ ಕಾಲವೆಂದು ಹೆಸರು. ಆಗ ರಾತ್ರಿಯಲ್ಲಿದ್ದ ಕತ್ತಲೆಯೆಲ್ಲವೂ ಹೊರಟುಹೋಗಿ ಸ್ವಲ್ಪಸ್ವಲ್ಪವಾಗಿ ಬೆಳಕು ಗೋಚರವಾಗುತ್ತಿರುವುದು ರಾತ್ರಿಯ ಕತ್ತಲೆಯು ಕಳೆದುಹೋದಮೇಲೆ ಸೂರ್ಯೋದಯಕ್ಕೆ ಪೂರ್ವಭಾವಿಯಾಗಿ ಬೆಳಕಿನಿಂದ ಕೂಡಿರುವ ಕಾಲಕ್ಕೆ ಉಷಃಕಾಲವೆಂದು ಹೆಸರು. ಈ ಕಾಲಕ್ಕೆ ಅಭಿಮಾನಿದೇವತೆಯನ್ನು ಉಷಾಃ ಎಂಬ ಹೆಸರಿನಿಂದ ನಿರ್ದೇಶಿಸಲಾಗಿದೆ. ನಕ್ತಾ ಉಷಾಃ ಎಂಬ ಈರ್ವರೂ ಸ್ತ್ರೀದೇವತೆಗಳು.

**ನಕ್ತೋಷಾಸಾ, ಉಷಾಸಾನಕ್ತಾ** ಎಂದು ಎರಡು ವಿಧವಾಗಿ ಪಠಿಸಿದರೂ, ಅರ್ಥಮಾತ್ರ ಒಂದೇ ಆಗಿರುವುದು. **ಉಷಾಃ** ಶಬ್ದದ ವಿವರಣೆಯನ್ನು ಹಿಂದೆಯೇ ಹೇಳಿರುವೆವು. **ನಕ್ತಾ** ಎಂದರೆ ರಾತ್ರಿಯ ಹೆಸರು. ಏಕೆಂದರೆ, **ನಕ್ತಾ** ಎಂದರೆ **ಅವ್ಯಕ್ತವರ್ಣಾ** ಕತ್ತಲೆಯಾಗಿರುವುದರಿಂದ ವಸ್ತುಗಳು ಚೆನ್ನಾಗಿ ಕಾಣಿಸದೆ ಇರುವುವು ಆದುದರಿಂದ ಕತ್ತಲೆಯಿಂದ ಕೂಡಿದ ರಾತ್ರಿಗೆ ನಕ್ತಾ ಎಂದು ಹೆಸರು. ಮತ್ತು ಈ ರಾತ್ರಿಕಾಲದಲ್ಲಿ ಪ್ರಾಣಿಗಳು ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಲಸಮರ್ಥವಾಗಿರುವುವು. **ಅನಕ್ತಿ ಕ್ಲೇದ—ಯತಿ . ಭೂತಾನಿ ಅವಶ್ಯಾಯೇನ । ಅಪಿ ವಾನಕ್ತಾ ಅವ್ಯಕ್ತವರ್ಣಾ । ಯಥಾ ಅಹಃ ಸರ್ವಮಭಿವ್ಯಕ್ತರೂಪಂ ಭವತಿ ನ ತಥಾ ರಾತ್ರಿಃ ॥** ಕತ್ತಲೆಯು ಪ್ರಾಣಿಗಳ ವ್ಯಾಪಾರಾದಿಗಳು ಸರಿಯಾಗಿ ನಡೆಯಲು ಅವಕಾಶವಿಲ್ಲದಂತೆ ಅವುಗಳಿಗೆ ತೊಂದರೆ ಕೊಡುವುದರಿಂದ ಅಂತಹ ಕತ್ತಲೆಯಿಂದ ಕೂಡಿದ ರಾತ್ರಿಗೆ ನಕ್ತಾ ಎಂದು ಹೆಸರು. ಅಥವಾ ಯಾವುದೂ ಚೆನ್ನಾಗಿ ಕಾಣಿಸದಂತೆ ಅವ್ಯಕ್ತವಾಗಿರುವುದರಿಂದ **ನಕ್ತಾ** ಎಂದು ಹೆಸರು. ಹಗಲಿನಲ್ಲಿ ಸಮಸ್ತ ವಸ್ತುಗಳ ರೂಪಗಳು ಸ್ಪಷ್ಟವಾಗಿ ಕಾಣಿಸುವುವು ರಾತ್ರಿಯಲ್ಲಿ ಆ ರೀತಿ ಕಾಣಿಸುವುದಿಲ್ಲ. ಆದುದರಿಂದ ರಾತ್ರಿಕಾಲಕ್ಕೆ ನಕ್ತಾ ಎಂದು ಹೆಸರು ಎಂದು ಅರ್ಥವಿವರಣೆ ಮಾಡಿರುವರು. (ನಿ. ೮-೧೧)

**ಉಷಾಃ** ಎಂಬ ಶಬ್ದಕ್ಕೆ ಅರ್ಥವಿವರಣೆಯನ್ನು ಹಿಂದೆಯೇ ಮಾಡಿರುವೆವು ಎಂದು ಹೇಳಿರುವರಷ್ಟೆ. ಆ ವಿವರಣೆಯು ಈ ರೀತಿ ಇರುವುದು—

> **ವಿಭಾವರೀ, ಸೂನರೀ** ಮೊದಲಾದ ಹದಿನಾರು ಶಬ್ದಗಳು ಉಷೋನಾಮ ಶಬ್ದಗಳು (೨-೧೮) ಮತ್ತು,
> **ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ॥**

ರಾತ್ರಿಕಾಲದ ತಮಸ್ಸನ್ನು (ಕತ್ತಲೆಯನ್ನು) ನಿವಾರಣೆ ಮಾಡುವುದರಿಂದ ಉಷಾಃ ಎಂದು ಹೆಸರು. ಎಂದರೆ ರಾತ್ರಿಯ ಅಪರಕಾಲವು, ಕೊನೆಯ ಭಾಗವು. ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಕೊಟ್ಟಿರುವರು—

> **ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।**
> **ಯಥಾ ಪ್ರಸೂತಾ ಸವಿತುಃ ಸವಾಯೆ ಏವಾ ರಾತ್ರ್ಯುಷಸೇ ಯೋನಿಮಾರೈಕ್ ।**
> (ಋ. ಸಂ. ೧-೧೧೩-೧)

ಈ ಋಕ್ಕಿನ ನಿರುಕ್ತವು—

**ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಮತ್। ಚಿತ್ರಂ ಪ್ರಕೇತನಂ ಪ್ರಜ್ಞಾತತಮಮಜನಿಷ್ಟ ವಿಭೂತತಮಂ ಯಥಾ ಪ್ರಸೂತಾ ಸವಿತುಃ ಪ್ರಸವಾಯ ರಾತ್ರಿರಾದಿತ್ಯಸ್ಯ। ಏವಂ ರಾತ್ರ್ಯು ಷಸೇ ಯೋನಿಮರಿಚತ್ ಸ್ಥಾನಂ। ಸ್ತ್ರೀಯೋನಿರಭಿಯುತ ಏನಾಂ ಗರ್ಭಃ।** (ನಿ. ೨-೧೯)

ಸೂರ್ಯನ ಉತ್ತಮವಾದ ಮತ್ತು ಅತಿ ಪ್ರಕಾಶಮಾನವಾದ ಬೆಳಕು ಉದಯಿಸುತ್ತಿರುವುದು. ಇಂತಃ ಸೂರ್ಯನ ಪ್ರಕಾಶಕ್ಕೆ ಪೂರ್ವಾವಿರ್ಭಾವಿಯಾಗಿರುವ ಉಷಃಕಾಲವು ಆ ಪ್ರಕಾಶದ ನಿಕೇತನ (**ಧ್ವಜದಂತೆ**) ದಂ ಬೆಳಕಿಗೆ ಮುಂಚೆಯೇ ತಲೆದೋರುವುದು. ಹೇಗೆಂದರೆ—ಸೂರ್ಯನ ಬೆಳಕು ಹಗಲೆಲ್ಲಾ ಪ್ರಕಾಶಿಸಿ, ಅಸ್ತಮಾ ಕಾಲದಲ್ಲಿ ರಾತ್ರಿಗೆ ಯೋನಿಭೂತವಾಗಿ ಎಂದರೆ ಕಾರಣವಾಗಿರುವಂತೆ ರಾತ್ರಿಯು ತನ್ನ ಅವಸಾನಕಾಲದಲ್ಲಿ ಉಷ ಕಾಲಕ್ಕೆ ಯೋನಿಭೂತವಾಗಿರುವುದು ಎಂದರೆ ಕಾರಣಭೂತವಾಗಿರುವುದು ಯೋನಿಯೆಂದರೆ ಜನ್ಮಸ್ಥಾನವು ಹಗಲಿ ಕೊನೆಯಲ್ಲಿ ರಾತ್ರಿಯೂ, ರಾತ್ರಿಯು ಕೊನೆಯಲ್ಲಿ ಉಷಃಕಾಲವೂ ಒಂದಾಗುತ್ತಲೊಂದು ಪರಿವರ್ತನರೂಪದಿಂ ಪ್ರಾಪ್ತವಾಗುವುವು ಎಂದು ಮುಖ್ಯಾಭಿಪ್ರಾಯವು. ಆದುದರಿಂದ ಉಷಃ ಎಂದರೆ ರಾತ್ರಿ ಕಳೆದನಂತರ ಸೂರ್ಯೋ ದಯಕ್ಕೆ ಪೂರ್ವದಲ್ಲಿ ಸಮಸ್ತದಿಕ್ಕುಗಳನ್ನು ವ್ಯಾಪಿಸಿ ತಲೆದೋರುವ ಪ್ರಕಾಶವು, ಬೆಳಕು ಎಂದರ್ಥವು.

ಭಾಷ್ಯಕಾರರ (ಸಾಯಣರ) ಅರ್ಥವಿವರಣೆಯು—**ನಕ್ತಶಬ್ದ ಉಷಶ್ಶಬ್ದಶ್ಚ ಲೋಕೇ ಕಾಲವಿಶೇಷವಾ ಚಿನೌ। ಇಹ ತು ತತ್ಕಾಲಾಭಿಮಾನಿವಹ್ನಿಮೂರ್ತಿದ್ವಯೇ ಪ್ರಯುಜ್ಯೇತೇ। ನಕ್ತೋಷಾಸಾ ನಕ್ತೋ ಷೋನಾಮಿಕೇ ವಹ್ನಿಮೂರ್ತೀ**—ಎಂದರೆ, ನಕ್ತ (ರಾತ್ರಿ) ಉಷಃ (ಪ್ರಾತಃಕಾಲ) ಎಂಬ ಈ ಎರಡು ಶಬ್ದಗಳ ಲೋಕವ್ಯವಹಾರದಲ್ಲಿ ರಾತ್ರಿ, ಪ್ರಾತಃಕಾಲ ಎಂಬ ಕಾಲವಿಶೇಷಗಳನ್ನು ಸೂಚಿಸುವ ಅರ್ಥವಿರುವುದು. ಇಲ್ಲಿ ಎಂದರೆ ಈ ಋಕ್ಕಿನಲ್ಲಿ ಅಥವಾ ಋಗ್ವೇದದಲ್ಲಿ, ಈ ಶಬ್ದಗಳು ರಾತ್ರಿ ಮತ್ತು ಪ್ರಾತಃಕಾಲಾಭಿಮಾನಿದೇವತೆಗಳೆಂಬ ಅರ್ಥ ವನ್ನು ಪ್ರತಿಪಾದಿಸುವುವು. ಆದುದರಿಂದ **ನಕ್ತೋಷಾಸಾ** ಅಥವಾ **ಉಷಾಸಾನಕ್ತಾ** ಎಂಬ ಶಬ್ದಗಳು ರಾತ್ರಿ ಮತ್ತು ಉಷಃಕಾಲಾಭಿಮಾನಿದೇವತೆಗಳಾದ ಅಗ್ನಿಯ ಎರಡು ಮೂರ್ತಿ (ರೂಪಗಳು) ಗಳೆಂಬ ಅರ್ಥದಲ್ಲಿ ಉಪ ಯೋಗಿಸಲ್ಪಟ್ಟಿವೆ. ಅಲ್ಲಲ್ಲಿ ಉಪಯೋಗಿಸಿರುವ **ಸುಪೇಶಸಾ** (ಒಳ್ಳೆಯ ರೂಪ ಅಥವಾ ಆಕಾರವುಳ್ಳ) ಎಂಬ ಶಬ್ದವು ಈ ಅರ್ಥವನ್ನು ಸಮರ್ಥಿಸುವುದು. ಏಕೆಂದರೆ, ರಾತ್ರಿ ಮತ್ತು ಪ್ರಾತಃಕಾಲಗಳು ಕಾಲವಿಭಾಗಗಳಾಗಿದ್ದ ರಿಂದ ಅವುಗಳಿಗೆ ರೂಪವಾಗಲಿ, ಆಕಾರವಾಗಲಿ ಇರುವುದಿಲ್ಲ, ಆ ಕಾಲದ ಅಭಿಮಾನಿದೇವತೆಗಳೆಂದು ಹೇಳುವ ಪಕ್ಷದಲ್ಲಿ ಆ ದೇವತೆಗಳಿಗೆ ರೂಪವನ್ನು ನಿರ್ದೇಶಿಸಬಹುದು. ಈ ಋಕ್ಕಿನಲ್ಲಿ ಆ ರೀತಿ ನಿರ್ದೇಶವಿರುವುದರಿಂದ ಇಲ್ಲಿ ಆ ಕಾಲಗಳ ಅಭಿಮಾನಿದೇವತೆಗಳನ್ನೇ ಪ್ರತಿಪಾದಿಸಿರುವುದೆಂದು ತಿಳಿಯಬೇಕು. ನಕ್ತೋಷಾಸಾ ಎಂಬ ಶಬ್ದ ದಲ್ಲಿರುವ **ಷಕಾರವು** ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘವಾಗಿರುವುದು.

**ಋ.** ಸಂ. ೧-೧೪೨-೭ ನೆಯ ಋಕ್ಕಿನಲ್ಲಿರುವ **ಋತಸ್ಯ ಮಾತರಾ** ಎಂಬ ವಿಶೇಷಣವು ಬಹು ಮುಖ್ಯ ವಾದುದು.

**ದ್ರವಂತಾಂ ತ ಉಷಸಾ ವಾಜಯಂತೀ ಅಗ್ನೇ ವಾತಸ್ಯ ಪಥ್ಯಾಭಿರಚ್ಛ।**
**ಯತ್ಸೀಮಂಜಂತಿ ಪೂರ್ವ್ಯಂ ಹವಿರ್ಭಿರಾ ವಂಧುರೇವ ತಸ್ಥತುರ್ದುರೋಣೇ॥**

(ಋ. ಸಂ. ೩-೧೪-೩)

ಎಂಬ ಋಕ್ಕಿನಲ್ಲಿ ಯಜ್ಞಕ್ಕೂ ಅವರಿಗೂ ಇರತಕ್ಕ ನಿತ್ಯಸಂಬಂಧವು ವರ್ಣಿತವಾಗಿದೆ. ಅವರನ್ನು ಆಹ್ವಾನಿಸಿರುವ ಋಕ್ಕುಗಳಲ್ಲೆಲ್ಲಾ (ಇಂತಹ ಋಕ್ಕುಗಳು ಸುಮಾರು ಇಪ್ಪತ್ತಿವೆ) ಇತರ ದೇವತೆಗಳೊಡನೆ ಬಂದು ದರ್ಭಾಸನದ ಮೇಲೆ ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಿದೆ. ಅದರಲ್ಲೂ ಉಷಃಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ ಪ್ರಜ್ವಲಿತ ನಾಗತಕ್ಕ ಅಗ್ನಿಯೊಡನೆ ಅತ್ಯಂತ ನಿಕಟವಾದ ಸಂಬಂಧವಿದೆ. ಆದುದರಿಂದಲೇ ಅವರು ತಮ್ಮ ನಡುವೆ ಅಗ್ನಿಯನ್ನು ಧರಿಸಿ ಹಿಡಿದಿರುವುದಾಗಿ ಆಲಂಕಾರಿಕವಾದ ವರ್ಣನೆಯು.

**ತಮ ಉಚ್ಛತ್ಯುಷಾ ನಕ್ತಾನಕ್ತೀಮಾಂ ಹಿಮಬಿಂದುಭಿಃ ।**
**ಅಪಿ ವಾವ್ಯಕ್ತವರ್ಣೇತಿ ನಞದ್ ಪೂರ್ವಾಞ್ಜೇರಿದಂ ಭವೇತ್ ॥**

(ಬೃ. ದೇ. ೩-೯)

ಈ ಇಬ್ಬರಲ್ಲಿ ಉಷಸ್ಸು ಕತ್ತಲನ್ನು ಓಡಿಸುತ್ತಾಳೆ. ರಾತ್ರಿಯು ಹಿಮಬಿಂದುಗಳಿಂದ ಎಲ್ಲರನ್ನೂ ನೆನೆಯುವಂತೆಯೂ, ವ್ಯಾಪ್ತವಾಗುವಂತೆಯೂ ಮಾಡುತ್ತಾಳೆ. ಅಥವಾ ನಿರ್ದಿಷ್ಟವಾದ ವರ್ಣವಿಲ್ಲದಿರುವುದರಿಂದ **ನಞ್** ಪದದೊಡನೆ **ಅಂಜನ್** ಧಾತುವು ಸೇರಿ ಅವ್ಯಕ್ತವರ್ಣವೆಂಬ ಅರ್ಥವನ್ನು ಕೊಡುತ್ತದೆ.

**ಸಾ ಹಿ ದೋಷಾ ಭವತ್ಯಾದೌ ನಿಶೀಥೇ ಸಾ ತಮಸ್ವತೀ ।**
**ನಾಮ್ನಾ ಭವತ್ಯುಷಾಶ್ಚೈವ ಸೈಷಾ ಪ್ರಾಗುದಯಾದ್ರವೇಃ ॥**

(ಬೃ. ದೇ. ೩-೧೦)

ಪ್ರಾರಂಭದಲ್ಲಿ ಈ ದೇವತೆಗೆ **(ಪ್ರ) ದೋಷಾ** ಎಂದೂ, ಮಧ್ಯರಾತ್ರಿಯಲ್ಲಿ **ತಮಸ್ವತೀ** ಎಂದೂ, ಸೂರ್ಯೋದಯಕ್ಕೆ ಮೊದಲು **ಉಷಸ್ಸೆಂದೂ** ಹೆಸರು. **ದೋಷಾ, ತಮಸ್ವತೀ, ಶ್ಯಾವೀ, ನಕ್ತಾ** ಇವೆಲ್ಲಾ ರಾತ್ರಿನಾಮಗಳೆಂದು ನಿಘಂಟುವಿನಲ್ಲಿ ಪಠಿತವಾಗಿದೆ. (ನಿಘಂಟು ೧-೭).

ಋಕ್ಸಂಹಿತೆಯ ಇತರ ಕಡೆಗಳಲ್ಲಿ **ತಂತುಂ ತತಂ ಸಂವಯಂತೀ** (ಋ. ಸಂ. ೨-೩-೬) ಇತ್ಯಾದಿ ವಿಶೇಷಣಗಳಿಂದ ಯಜ್ಞದ ವಿಸ್ತರಣೆಗೆ **ಉಷಾಸಾನಕ್ತ**ಗಳ ಸಹಾಯವನ್ನು ವಿವರಿಸಿದೆ.

ಪ್ರಕೃತ ಋಕ್ಕಿಗೆ ಯಾಸ್ಕರ ನಿರುಕ್ತವನ್ನು ಈ ರೀತಿ ಹೇಳಿದಾರೆ—

**ಆಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿಯೋನೌ । ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ॥ ಸೇಷ್ಮೀಯಮಾಣೇ ಇತಿ ವಾ ಸುಷ್ವಾಪಯಂತ್ಯಾವಿತಿ ವಾ ಸೀದತಾಮಿತಿ ವಾ ನ್ಯಾಸೀದತಾಮಿತಿ ವಾ । ಯಜ್ಞಿಯೇ ಉಪಕ್ರಾಂತೇ ದಿವ್ಯೇ ಯೋಷಣೇ ಬೃಹತ್ಯಾ ಮಹತ್ಯಾ ಸುರುಕ್ಮೇ ಸುರೋಚನೇ ಅಧಿದಧಾನೇ ಶುಕ್ರಪೇಶಸಂ ಶ್ರಿಯಂ ಶುಕ್ರಂ ಶೋಚತೇರ್ಜ್ವಲತಿಕರ್ಮಣಃ । ಪೇಶ ಇತಿ ರೂಪನಾಮ ಪಿಂಶತೇರ್ವಿಪಿಶಿತಂ ಭವತಿ ॥**

(ನಿ. ೮-೧೧)

**ಆಸುಷ್ವಯಂತೀ—ಸೇಷ್ಮೀಯಮಾಣೇ ಪರಸ್ಪರಂ ಸ್ಮಯಮಾನೇ ಅಥವಾ ಸುಷ್ವಾಪಯಂತ್ಯೌ ಸುಷ್ಟು ಜನಾನ್ ಸ್ವಾಪಯಂತ್ಯೌ ॥ ಆಸುಷ್ವಯಂತೀ** ಎಂದರೆ ಪರಸ್ಪರ ನೋಡಿ ಮಂದಹಾಸದಿಂದ ನಗುತ್ತಿರು

ವವರು. ಅಥವಾ ಜನರನ್ನು ಚೆನ್ನಾಗಿ ನಿದ್ರಿಸುವಂತೆ ಮಾಡುವವರು ಎಂದರೆ ಉಷಃಕಾಲವಾದೊಡನೆ ಜನರು ಸಂತೋಷದಿಂದಿರುವವರು ರಾತ್ರಿಕಾಲದಲ್ಲಿ ನಿದ್ರಿಸುವರು ಇಂತಹ ಗುಣವಿಶಿಷ್ಟರಾದ ಈ ಉಷಾಸಾನಕ್ತಾ ಎಂಬ ದೇವತೆಗಳು **ಸದತಾಂ ನಿಯೋನೌ** ತಮ್ಮ ಸ್ವಸ್ಥಾನದಲ್ಲಿ ಕುಳಿತುಕೊಳ್ಳಲಿ ಎಂಬಭಿಪ್ರಾಯವು.

**ಯಜ್ಞಿಯೇ**—ಯಜ್ಞದಲ್ಲಿ ಪೂಜಾರ್ಹರಾದವರು ಅಥವಾ ಯಜ್ಞಕರ್ಮವನ್ನು ನೆರವೇರಿಸಲು ಸಹಾಯ ಭೂತರಾದವರು.

**ಉಪಾಕೇ—ಉಪಕ್ರಾಂತೇ** । ಸಮೀಪವರ್ತಿಗಳಾಗಿರುವವರು.

**ದಿವ್ಯೇ ಯೋಷಣೇ**—ದ್ಯುಲೋಕದಲ್ಲಿ ಎಂದರೆ ಅಂತರಿಕ್ಷದಲ್ಲಿ ಪರಸ್ಪರ ಅಗಲದೇ ಇರುವವರು. ರಾತ್ರಿಯಾದನಂತರ ಉಷಃಕಾಲವು ಪ್ರಾಪ್ತವಾಗುವುದರಿಂದ ಪರಸ್ಪರ ಸೇರಿರುವರು ಎಂದರ್ಥವು.

**ಬೃಹತೀ ಸುರುಕ್ಮೇ—ಮಹತ್ಯೌ ಸುರೋಚನೇ** । ಬಹಳವಾದ ತೇಜಸ್ಸಿನಿಂದ ಬೆಳಗುವವರು.

**ಅಧಿಶ್ರಿಯಂ ಶುಕ್ರಪಿಶಂ ದಧಾನೇ—ಶುಕ್ರಪೇಶಸಂ ಶ್ರಿಯಂ ಅಧಿದಧಾನೇ** । ಅಂತರಿಕ್ಷದ ಮೇಲು ಭಾಗದಲ್ಲಿ ಶುಕ್ಲವರ್ಣದ ಕಾಂತಿಯನ್ನು ಧರಿಸಿರುವವರು ಎಂದರೆ ಅಧಿಕವಾದ ಕಾಂತಿಯಿಂದ ಬೆಳಗುತ್ತಿರುವವರು.

**ಶುಕ್ರಂ ಶೋಚತೇರ್ಜ್ವಲತಿಕರ್ಮಣಃ**—ಪ್ರಕಾಶಿಸು, ಬೆಳಗು ಎಂಬರ್ಥವುಳ್ಳ ಶುಚ್ ಧಾತುವಿನಿಂದ ಶುಕ್ರಶಬ್ದವು ನಿಷ್ಪನ್ನವಾಗಿದೆ. ಶುಕ್ರಂ ಎಂದರೆ ಪ್ರಕಾಶಮಾನವಾದ ಎಂದರ್ಥವು.

**ಪೇಶ ಇತಿ ರೂಪನಾಮ ಪಿಂಶತೇರ್ವಿಪಿಶಿತಂ ಭವತಿ**—ಪೇಶ ಎಂದರೆ ರೂಪಕ್ಕೆ ಹೆಸರು. ಅಲಂಕರಿಸು ಎಂಬರ್ಥವುಳ್ಳ ಪಿಶ್ ಧಾತುವಿನಿಂದ ಪೇಶ ಶಬ್ದದ ನಿಷ್ಪತ್ತಿಯಾಗಿದೆ. ವಿಪಿಶಿತಂ—ಎಂದರೆ ಚೆನ್ನಾಗಿ ಅಲಂಕರಿಸಲ್ಪಟ್ಟ ಎಂದರ್ಥವು

ಮುಖ್ಯಾಭಿಪ್ರಾಯವು—ಮಂದಹಾಸಯುಕ್ತರೂ ಅಥವಾ ಜನರನ್ನು ನಿದ್ರಿಸುವಂತೆ ಮಾಡುವವರೂ, ಯಜ್ಞ ಕರ್ಮಕ್ಕೆ ಸಹಾಯಭೂತರೂ, ಸಮೀಪವರ್ತಿಗಳೂ ಅಂತರಿಕ್ಷದಲ್ಲಿ ಪರಸ್ಪರ ಸಂಮಿಶ್ರಭಾವದಿಂದ ಇರುವವರೂ ಅತ್ಯಧಿಕವಾದ ತೇಜಸ್ಸಿನಿಂದ ಬೆಳಗುತ್ತಿರುವವರೂ ಶುಕ್ಲವರ್ಣದ ಥಳಥಳಿಸುವ ದಿವ್ಯಕಾಂತಿಯನ್ನು ಧರಿಸಿರುವವರೂ ಆದ ಉಷಾಸಾನಕ್ತಾ ಎಂಬ ಉಷಃಕಾಲ ಮತ್ತು ರಾತ್ರ್ಯಭಿಮಾನ ದೇವತೆಗಳು ಈ ನಮ್ಮ ಯಜ್ಞವೇದಿಯಲ್ಲಿ ಅವರಿಗಾಗಿ ಸಿದ್ಧಪಡಿಸಿರುವ ಸ್ಥಾನದಲ್ಲಿ ಬಂದು ಕುಳಿತುಕೊಳ್ಳಲಿ.

॥ ಸಂಹಿತಾಪಾಠಃ ॥

**ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ ।**

**ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ॥ ೭ ॥**

॥ ಪದಪಾಠಃ ॥

**ದೈವ್ಯಾ । ಹೋತಾರಾ । ಪ್ರಥಮಾ । ಸುಽವಾಚಾ । ಮಿಮಾನಾ । ಯಜ್ಞಂ । ಮನುಷಃ । ಯಜಧ್ಯೈ ।**

**ಪ್ರಽಚೋದಯಂತಾ । ವಿದಥೇಷು । ಕಾರೂ ಇತಿ । ಪ್ರಾಚೀನಂ । ಜ್ಯೋತಿಃ । ಪ್ರಽದಿಶಾ । ದಿಶಂತಾ ॥೭॥**

॥ಸಾಯಣಭಾಷ್ಯಂ ॥

**ದೈವ್ಯಾ ॥ ದೇವಾದ್ಯಞಞಾವಿತಿ ಯಞ್ಪ್ರತ್ಯಯಃ ॥ ದೇವಸಂಬಂಧಿನೌ ಹೋತಾರೌ ಹೋಮನಿಷ್ಪಾದಕೌ ಹೋತೃನಾಮಕಾವಗ್ನ್ಯಾದಿತ್ಯಾವಸ್ಮಿನ್ಯಜ್ಞ ಆಸೀದತಾಂ । ಕೀದೃಶೌ । ಪ್ರಥಮಾ ಮನುಷ್ಯಹೋತುಃ ಪೂರ್ವಭಾವಿನೌ ಸುವಾಚಾ ಶೋಭನಸ್ತೋತ್ರೌ ಮನುಷೋ ಮನುಷ್ಯಸ್ಯ ಸರ್ವಸ್ಯ ಯಷ್ಟುರ್ಯಜಧ್ಯೈ ಯಾಗನಿವೃತ್ತಯೇ ॥ ಯಜೇಸ್ತುಮರ್ಥೇ ಶಧ್ಯೈಪ್ರತ್ಯಯಃ ॥ ಯಜ್ಞಂ ಮಿಮಾನಾ ನಿರ್ಮಿಮಾನಾವುತ್ಪಾದಯಂತೌ । ವಿದಥೇಷು । ವಿದಂತ್ಯತ್ರರ್ತ್ವಿಜಃ ಸ್ವಸ್ವಕರ್ಮಾಣೀತಿ ವಿದಥಾ ಯಜ್ಞಾಃ । ತೇಷ್ವೃತ್ವಿಜೋ ಯಜಮಾನಾಂಶ್ಚ ಪ್ರಚೋದಯಂತಾ ಪ್ರೇರಯಂತೌ ಕಾರೂ ಸ್ತುತೀನಾಂ ಕರ್ತಾರೌ ಪ್ರಾಚೀನಂ ಪೂರ್ವಸ್ಯಾಂ ದಿಶಿ ಯಷ್ಟವ್ಯತ್ವೇನ ಸ್ಥಿತಮಾಹವನೀಯಾಖ್ಯಂ ಜ್ಯೋತಿಃ ಪ್ರದಿಶಾ ಪ್ರಕೃಷ್ಟೇನೋಪದಿಷ್ಟಮಾರ್ಗೇಣ ಯದ್ವಾ ಪ್ರದಿಶ್ಯಮಾನೇನ ಮಂತ್ರೇಣ ದಿಶಂತಾ ನಿರ್ವಹಂತೌ ॥**

॥ ಪ್ರತಿಪದಾರ್ಥ ॥

**ಪ್ರಥಮಾ**— ಪ್ರಮುಖರೂ । **ಸುವಾಚಾ**— ಉತ್ತಮವಾದ ಸ್ತುತಿವಾಕ್ಯಗಳ್ಳವರೂ । **ಮನುಷಃ**— ಯಜಮಾನನು । **ಯಜಧ್ಯೈ**— ಯಾಗಮಾಡಲು । **ಯಜ್ಞಂ ಮಿಮಾನಾ**— ಯಜ್ಞವನ್ನು ನಿರ್ಮಿಸುವವರೂ । **ವಿದಥೇಷು**— ಯಜ್ಞಗಳಲ್ಲಿ । **ಪ್ರಚೋದಯಂತಾ**— ಋತ್ವಿಕ್ಕುಗಳನ್ನು ಪ್ರೇರಿಸುವವರೂ । **ಕಾರೂ**— ಸ್ತುತಿ ಕರ್ತರೂ । **ಪ್ರಾಚೀನಂ**— ಪೂರ್ವದಿಕ್ಕಿನ ಆಹವನೀಯರೂಪವಾದ । **ಜ್ಯೋತಿಃ**— ಅಗ್ನಿಯನ್ನು । **ಪ್ರದಿಶಾ**— ಉತ್ಕೃಷ್ಟವಾದ ಮಂತ್ರದೊಡನೆ । **ದಿಶಂತಾ**— ನಿರ್ದೇಶಮಾಡುವವರೂ । **ದೈವ್ಯಾ ಹೋತಾರಾ**— ದೇವಸಂಬಂಧಿಗಳೂ ಆದ ಹೋತೃಗಳು (ಅಗ್ನಿ ಮತ್ತು ಆದಿತ್ಯರು) ಯಜ್ಞದಲ್ಲಿ ಬಂದು ಕುಳಿತುಕೊಳ್ಳಲಿ.

॥ ಭಾವಾರ್ಥ ॥

ಪ್ರಮುಖರೂ, ಉತ್ತಮವಾದ ಸ್ತುತಿವಾಕ್ಯಗಳ್ಳವರೂ, ಯಜಮಾನನು ಯಾಗ ಮಾಡಲು ಯಜ್ಞವನ್ನು ನಿರ್ಮಿಸುವವರೂ, ಯಜ್ಞಗಳಲ್ಲಿ ಋತ್ವಿಕ್ಕುಗಳನ್ನು ಪ್ರೇರಿಸುವವರೂ, ಸ್ತುತಿಕರ್ತರೂ, ಪೂರ್ವದಿಕ್ಕಿನ ಆಹವನೀಯರೂಪವಾದ ಅಗ್ನಿಯನ್ನು ಉತ್ಕೃಷ್ಟವಾದ ಮಂತ್ರದೊಡನೆ ನಿರ್ದೇಶಮಾಡುವವರೂ, ದೇವಸಂಬಂಧಿಗಳೂ ಆದ ಅಗ್ನ್ಯಾದಿತ್ಯರು ಯಜ್ಞದಲ್ಲಿ ಬಂದು ಕುಳಿತುಕೊಳ್ಳಲಿ.

## English Translation.

Divine ministers, prior (to those of earth), repeaters of pious praise, instituting the sacrifice at which men are to worship, (sit down) stimulating

(the priests) at the sacrifices, makers (of praises), indicating the eastern fire with the prescribed (text).

॥ ವಿಶೇಷವಿಷಯಗಳು ॥

**ದೈವ್ಯಾ ಹೋತಾರಾ ದೈವ್ಯೌ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ । ತಯೋರೇಷಾ ಭವತಿ ॥** (ನಿ. ೮-೧೨)

ಈ ಋಕ್ಕಿನಲ್ಲಿ **ದೈವ್ಯೌ ಹೋತಾರೌ** ಎಂಬ ಇಬ್ಬರು ದೇವತೆಗಳನ್ನು ಸ್ತುತಿಸಲಾಗಿದೆ. ಈ ದೇವತೆಗಳು ಯಾರು ಎಂಬ ವಿಷಯದಲ್ಲಿ ಸಾಯಣರು **ಅಗ್ನ್ಯಾದಿತ್ಯೌ**—ಅಗ್ನಿ ಮತ್ತು ಆದಿತ್ಯರು ಎಂದು ಹೇಳಿದಾರೆ. ಆದರೆ ಯಾಸ್ಕರು ಅವರನ್ನನುಸರಿಸಿ ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರೂ **ದೈವ್ಯೌ ಹೋತಾರೌ** ಎಂದರೆ **ಅಯಂ ಚಾಗ್ನಿರಸೌ ಚ ಮಧ್ಯಮಃ** ಈ ಲೋಕದಲ್ಲಿರುವ ಪಾರ್ಥಿವಾಗ್ನಿ ಮತ್ತು ಮಧ್ಯಮಸ್ಥಾನದೇವತೆಯಾದ ವಾಯು ಎಂದು ಹೇಳಿದಾರೆ. ಈ ದೇವತೆಗಳನ್ನು ಸ್ತುತಿಸುವ ಋಕ್ಕಿನ ಉದಾಹರಣೆಗಾಗಿ ಪ್ರಕೃತಋಕ್ಕಿಗೇ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ। ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ॥ ದೇವ್ಯೌ ಹೋತಾರೌ ಪ್ರಥಮೌ ಸುವಾಚೌ ನಿರ್ಮಿಮಾನಾ ಯಜ್ಞಂ ಮನುಷ್ಯಸ್ಯಮನುಷ್ಯಸ್ಯ ಪ್ರಚೋದಯಮಾನೌ ಯಜ್ಞೇಷು ಕರ್ತಾರೌ ಪೂರ್ವಸ್ಯಾಂ ದಿಶಿ ಯಷ್ಟವ್ಯಮಿತಿ ಪ್ರದಿಶಂತೌ ॥** (ನಿ. ೮-೧೨)

**ದೈವ್ಯಾ ಹೋತಾರಾ ಪ್ರಥಮಾ ಸುವಾಚಾ—ದೈವ್ಯೌ ಹೋತಾರೌ ಪ್ರಥಮೌ ಸುವಾಚೌ ॥** ದೇವಸಂಬಂಧಿಗಳೂ ದೇವತೆಗಳನ್ನು ಆಹ್ವಾನಮಾಡುವರೂ ಆದ ದೇವ್ಯೌ ಹೋತಾರೌ ಎಂಬ ಈರ್ವರು ದೇವತೆಗಳು, ದೇವತೆಗಳಲ್ಲಿ ಮುಖ್ಯರಾದವರು, ಉತ್ತಮವಾದ ವಾಕ್ಕುಗಳುಳ್ಳವರು ಅಥವಾ ಉತ್ತಮವಾದ ವಾಕ್ಕುಗಳಿಂದ ಸ್ತುತಿಸಲ್ಪಡುವವರು.

**ಮಿಮಾನಾ ಯಜ್ಞಂ ಮನುಷೋ ಯಜಧ್ಯೈ—ನಿರ್ಮಿಮಾನೌ ಯಜ್ಞಂ ಮನುಷ್ಯಸ್ಯ ಮನುಷ್ಯಸ್ಯ ಯಜನಾಯ ॥** ಪ್ರತಿಮಾನವ ಯಜಮಾನನ ಯಜ್ಞದ ಕಾರ್ಯಕಲಾಪಗಳನ್ನು ವಿಧ್ಯುಕ್ತವಾಗಿ ನಡೆಯುವಂತೆ ನಿರ್ವಹಿಸುವರು, ಎಂದರೆ ಯಜ್ಞದ ನೇತೃತ್ವವನ್ನು ಅಥವಾ ರಕ್ಷಣಾಭಾರವನ್ನೂ ವಹಿಸಿರುವವರು.

**ಪ್ರಚೋದಯಂತಾ ವಿದಥೇಷು ಕಾರೂ— ಪ್ರಚೋದಯಮಾನೌ ಯಜ್ಞೇಷು ಕರ್ತಾರೌ ॥** ವಿದಥವೆಂದರೆ ಯಜ್ಞ; ಕಾರೂ ಎಂದರೆ ಕರ್ತಾರೌ— ಮಾಡುವವರು; ಈ ದೇವತೆಗಳು ಯಜ್ಞಗಳಲ್ಲಿ ಋತ್ವಿಗಾದಿಗಳು ಪಠಿಸಬೇಕಾದ ಮಂತ್ರಗಳನ್ನೂ ಕಾರ್ಯಕಲಾಪಗಳನ್ನೂ ಪ್ರೇರಿಸುವವರು ಮತ್ತು ಯಜ್ಞಾಧಿಷ್ಠಾತೃಗಳಿಗೆ ಅನುಗ್ರಹ ಮಾಡುವವರು ಅಥವಾ ಉದ್ದಿಷ್ಟರಾದ ದೇವತೆಗಳನ್ನು ಆಹ್ವಾನಮಾಡುವವರು.

**ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ— ಪೂರ್ವಸ್ಯಾಂ ದಿಶಿ ಯಷ್ಟವ್ಯಮಿತಿ ಪ್ರದಿಶಂತೌ ॥** **ಪ್ರಾಚೀನಂ ಜ್ಯೋತಿಃ** ಎಂದರೆ—ಪೂರ್ವದಿಕ್ಕಿನಲ್ಲಿ ಯಜ್ಞವೇದಿಯಲ್ಲಿ ಸ್ಥಾಪಿತವಾಗಿರುವ ಆಹವನೀಯವೆಂಬ

ಅಗ್ನಿಯು .ಅರಣಿಗಳಲ್ಲಿ ಕಡೆದ ಅಗ್ನಿಯನ್ನು **ಪ್ರಾಚೀಮನು ಪ್ರದಿಶಂ ಪ್ರೇಹಿ ವಿದ್ವಾನ್** ಇತ್ಯಾದಿ ಅಗ್ನಿಪ್ರಣಯನ ವಿಧಿವಾಕ್ಯ ಮಂತ್ರಗಳಿಂದ ಪೂರ್ವದಿಕ್ಕಿನಲ್ಲಿರುವ ಆಹವನೀಯ ಅಗ್ನಿಕುಂಡಕ್ಕೆ ತಂದು ಅಲ್ಲಿ ಸ್ಥಾಪಿಸಿ ಆ ಅಗ್ನಿಯಲ್ಲಿ ಹೋಮಗಳನ್ನು ಮಾಡಬೇಕೆಂದು ಆಜ್ಞಾಪಿಸುವವರು ಎಂದಭಿಪ್ರಾಯವು.

ಇಂತಹ ಗುಣವಿಶಿಷ್ಟರಾದ ದೇವ್ಯಾ ಹೋತಾರಾ ಎಂಬ ದೇವತೆಗಳು (ಅಗ್ನ್ಯಾದಿತ್ಯರು ಅಥವಾ ವಾಯ್ವಗ್ನಿಗಳು) ಈ ನಮ್ಮ ಯಜ್ಞವೇದಿಯಲ್ಲಿ ಅವರಿಗಾಗಿ ಸಿದ್ಧಪಡಿಸಿರುವ ಸ್ಥಾನದಲ್ಲಿ ಬಂದು ಕುಳಿತುಕೊಳ್ಳಲಿ ಎಂದು ಋಕ್ಕಿನ ಅಭಿಪ್ರಾಯವು. ಈ ಋಕ್ಕಿನಲ್ಲಿ ಕ್ರಿಯಾಪದವಿಲ್ಲದ್ದರಿಂದ ಹಿಂದಿನ ಋಕ್ಕಿನಲ್ಲಿರುವ **ಸದತಾಂ ನಿಯೋನೌ** ಎಂಬ ಶಬ್ದಗಳನ್ನೇ ಇಲ್ಲಿಯೂ ಅಧ್ಯಾಹಾರ ಮಾಡಿಕೊಳ್ಳಬೇಕು.

॥ ಸಂಹಿತಾಪಾಠಃ ॥

**ಆ ನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹ ಚೇತಯಂತೀ।**
**ತಿಸ್ರೋ ದೇವೀರ್ಬರ್ಹಿರೇದಂ ಸ್ಯೋನಂ ಸರಸ್ವತೀ ಸ್ವಪಸಃ ಸದಂತು ॥ ೮ ॥**

॥ ಪದಪಾಠಃ ॥

**ಆ । ನಃ । ಯಜ್ಞಂ । ಭಾರತೀ । ತೂಯಂ । ಏತು । ಇಳಾ । ಮನುಷ್ವತ್ । ಇಹ । ಚೇತಯಂತೀ ।**
**ತಿಸ್ರಃ । ದೇವೀಃ । ಬರ್ಹಿಃ । ಆ । ಇದಂ । ಸ್ಯೋನಂ । ಸರಸ್ವತೀ । ಸುऽಅಪಸಃ । ಸದಂತು ॥ ೮ ॥**

॥ ಸಾಯಣಭಾಷ್ಯಂ ॥

ಭಾರತೀ । ಭರತ ಆದಿತ್ಯಃ । ತಸ್ಯ ಸ್ವಭೂತಾ ದೀಪ್ತಿಃ ॥ ತಸ್ಯೇದಮಿತ್ಯರ್ಥೆ ಉತ್ಸಾದಿತ್ವಾದಞ್ । ಪಾ. ೪-೧-೮೬ । ಟಿಡ್ಢಾಣಞಿತಿ ಙೀಪ್ ॥ ನೋऽಸ್ಮದೀಯಂ ಯಜ್ಞಂ ತೂಯಂ ಕ್ಷಿಪ್ರಮೇತು । ಆಗಚ್ಛತು । ತಥಾ ಮನುಷ್ವನ್ಮನುಷ್ಯೋ ಯಥೇದಂ ಮಯಾ ಕರ್ತವ್ಯಮಿತಿ ಜಾನಾತಿ ತದ್ವಚ್ಚೇತಯಂತೀ ಜಾನತೀಳಾ ದೇವೀ ಚೇಹಾಸ್ಮಿನ್ಕರ್ಮಣ್ಯಾಗಚ್ಛತು । ತಥಾ ಸರಸ್ವತೀ ಚ । ಸ್ವಪಸಃ ಸುಕರ್ಮಾಣಃ । ಅಪ ಇತಿ ಕರ್ಮನಾಮ ॥ ಆಪ್ನೋತೇರಸುನ್ಹ್ರಸ್ವಃ ಕರ್ಮಾಖ್ಯಾಯಾಂ ಹ್ರಸ್ವಃ । ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ ॥ ಏತಾಸ್ತಿಸ್ರೋ ದೇವೀರ್ದೇವ್ಯಃ ಸ್ಯೋನಂ ಸುಖಕರಮಿದಂ ಬರ್ಹಿರಿಮಂ ಯಜ್ಞಮಾ ಸದಂತು । ಆಸೀದಂತು । ಪ್ರಾಪ್ನುವಂತು ॥ ಸದೇರ್ಲೋಟಿ ಸೀದಾದೇಶಾಭಾವಶ್ಛಾಂದಸಃ ॥

॥ ಪ್ರತಿಪದಾರ್ಥ ॥

**ಭಾರತೀ**—ಆದಿತ್ಯನ ತೇಜೋರೂಪವಾದ ಭಾರತೀದೇವಿಯು । **ನಃ**—ನಮ್ಮ । **ಯಜ್ಞಂ**—ಯಜ್ಞಕ್ಕೆ । **ತೂಯಂ**—ಕ್ಷಿಪ್ರವಾಗಿ । **ಏತು**—ದಯಮಾಡಲಿ । **ಮನುಷ್ವತ್**—ಮಾನವರಂತೆ । **ಚೇತಯಂತೀ**—

ಕರ್ತವ್ಯವನ್ನರಿತ | **ಇಳಾ**—ಇಳಾ ದೇವಿಯೂ | **ಇಹ**—ನಮ್ಮ ಯಜ್ಞಕ್ಕೆ ಬರಲಿ | **ಸರಸ್ವತೀ ಚ**—ಸರಸ್ವತಿಯೂ ಬರಲಿ | **ಸ್ವಪಸಃ**—ಉತ್ತಮವಾದ ಕರ್ಮವುಳ್ಳ | **ತಿಸ್ರೋ ದೇವೀಃ** –ಈ ಮೂರು ದೇವತೆಗಳೂ | **ಸ್ಯೋನಂ**—ಸುಖಕರವಾದ | **ಇದಂ ಬರ್ಹಿಃ**—ಈ ಯಜ್ಞವೇದಿಯಲ್ಲಿ | **ಆ ಸದಂತು**—ಬಂದು ಕುಳಿತುಕೊಳ್ಳಲಿ.

|| ಭಾವಾರ್ಥ ||

ಆದಿತ್ಯನ ತೇಜೋರೂಪವಾದ ಭಾರತೀದೇವಿಯು ನಮ್ಮ ಯಜ್ಞಕ್ಕೆ ಕ್ಷಿಪ್ರವಾಗಿ ದಯಮಾಡಲಿ. ಮಾನವರಂತೆ ಕರ್ತವ್ಯವನ್ನರಿತ ಇಳಾದೇವಿಯೂ ಸರಸ್ವತಿಯೂ ಬರಲಿ. ಉತ್ತಮವಾದ ಕರ್ಮವುಳ್ಳ ಈ ಮೂರು ದೇವತೆಗಳೂ ಸುಖಕರವಾದ ಈ ಯಜ್ಞವೇದಿಯಲ್ಲಿ ಬಂದು ಕುಳಿತುಕೊಳ್ಳಲಿ.

## English Translation.

May Bharati come quickly to our sacrifice, and Ila thinking (of what she has to do), like a human being; may Saraswati also—the three gracious goddesses, sit down upon this pleasant sacred grass.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ತಿಸ್ರೋ ದೇವೀಃ ಎಂಬ ಇಳಾ, ಸರಸ್ವತೀ, ಭಾರತೀ ಎಂಬ ಮೂರುಮಂದಿ ದೇವತೆಯರನ್ನು ಸ್ತುತಿಸಲಾಗಿದೆ. ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ—

> **ತಿಸ್ರೋ ದೇವೀಃ ತಿಸ್ರೋ ದೇವ್ಯಃ | ತಾಸಾಮೇಷಾ ಭವತಿ | ಆ ನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹ ಚೇತಯಂತೀ | ತಿಸ್ರೋ ದೇವೀರ್ಬರ್ಹಿರೇದಂ ಸ್ಯೋನಂ ಸರಸ್ವತೀ ಸ್ವಪಸಃ ಸದಂತು || ಏತು ನೋ ಯಜ್ಞಂ ಭಾರತೀ ಕ್ಷಿಪ್ರಂ | ಭರತ ಆದಿತ್ಯಸ್ತಸ್ಯ ಭಾ ಇಳಾ ಚ ಮನುಷ್ಯವದಿಹ ಚೇತಯಮಾನಾ ತಿಸ್ರೋ ದೇವ್ಯೋ ಬರ್ಹಿರಿದಂ ಸುಖಂ ಸರಸ್ವತೀ ಚ ಸುಕರ್ಮಾಣ ಆಸೀದಂತು ||**
>
> (ನಿ. ೮-೧೩)

**ತಿಸ್ರೋ ದೇವೀಸ್ತಿಸ್ರೋ ದೇವ್ಯಃ | ತಾಸಾಮೇಷಾ ಭವತಿ**— **ತಿಸ್ರೋ ದೇವೀಃ** ಎಂದರೆ ಮೂರು ಮಂದಿ ದೇವಿಯರು. ಅವರು ಯಾರೆಂದರೆ—ಇಳಾ, ಸರಸ್ವತೀ ಮತ್ತು ಭಾರತೀ ಎಂಬುವರು. ಇವರನ್ನು ಸ್ತುತಿಸುವ ಪ್ರಕೃತ ಋಕ್ಕಿನ ನಿರ್ವಚನವನ್ನು ಇಲ್ಲಿ ವಿವರಿಸಲಾಗಿದೆ.

**ಆ ನೋ ಯಜ್ಞಂ ಭಾರತೀ ತೂಯಂ ಏತು— ಏತು ನೋ ಯಜ್ಞಂ ಭಾರತೀ ಕ್ಷಿಪ್ರಂ | ಭರತ ಆದಿತ್ಯಸ್ತಸ್ಯ ಭಾ ||** ಇಲ್ಲಿ ಭರತನೆಂದರೆ ಆದಿತ್ಯನು. **ಸರ್ವಭೂತಾನ್ಯುದಕೇನ ಬಿಭರ್ತೀತಿ ಭರತ ಆದಿತ್ಯಃ |** ಸರ್ವ ಪ್ರಾಣಿಗಳನ್ನೂ ವೃಷ್ಟ್ಯುದಕದಿಂದ ಭರಿಸುವವನು ಎಂದರೆ ಪೋಷಿಸುವವನಾದ್ದರಿಂದ ಆದಿತ್ಯನಿಗೆ ಭರತನೆಂದು ಹೆಸರು. ತಸ್ಯ ಭಾ ಅವನ ಪ್ರಕಾಶಕ್ಕೆ ಅಥವಾ ರಶ್ಮಿಗೆ ಭಾ ಎಂದು ಹೆಸರು. ಆದಿತ್ಯನು ದ್ಯುಸ್ಥಾನದೇವತೆಯು. ಇಂತಹ ದ್ಯುಸ್ಥಾನದೇವತೆಯಾದ ಭಾರತಿಯು ನಮ್ಮ ಯಜ್ಞಕ್ಕೆ ಬೇಗನೆ ಬರಲಿ ಎಂದು ವಾಕ್ಯಾಭಿಪ್ರಾಯವು.

ಇಳಾ ಮನುಷ್ವದಿಹ ಚೇತಯಂತೀ— ಇಳಾ ಚ ಮನುಷ್ಯವದಿಹ ಚೇತಯಮಾನಾ || ಚೇತಯಮಾನಾ ಎಂದರೆ ತಿಳಿದಿರುವವಳು, ಏನನ್ನು ತಿಳಿದಿರುವವಳೆಂದರೆ **ಮನುಷ್ಯವದಿಹ ಚೇತಯಮಾನಾ—** ಮನುಷ್ಯರು ಮನುಷ್ಯರನ್ನು ಭೋಜನಕ್ಕೆ ಕರೆದರೆ ಯಾವರೀತಿ ಬೇಗನೆ ಬರುವರೋ ಅದರಂತೆ ಈ ಇಳಾ ದೇವತೆಯು ಯಜ್ಞದಲ್ಲಿ ಹವಿಸ್ಸನ್ನು ಭಕ್ಷಿಸುವುದಕ್ಕಾಗಿ ತನ್ನನ್ನು ಪ್ರಾರ್ಥಿಸಿ ಕರೆಯುತ್ತಾರೆಂಬುವುದನ್ನು ತಿಳಿಯುವವಳು. ಇಂತಹ ಇಳಾ ದೇವಿಯೂ ನಮ್ಮ ಯಜ್ಞಕ್ಕೆ ಬೇಗನೆ ಬರಲಿ ಈ ಇಳಾ ದೇವತೆಯು ಪೃಥಿವೀಸ್ಥಾನ ದೇವತೆಯು.

**ಸರಸ್ವತೀ—ಸರಸ್ವತೀ ಚ |** ಮಧ್ಯಮಸ್ಥಾನದೇವತೆಯಾದ ಈ ಸರಸ್ವತೀ ಎಂಬ ದೇವಿಯೂ ಸಹ ನಮ್ಮ ಯಜ್ಞಕ್ಕೆ ಬೇಗನೆ ಬರಲಿ.

**ತಿಸ್ರೋ ದೇವೀರ್ಬರ್ಹಿರೇದಂ ಸ್ಯೋನಂ ಸ್ವಪಸಃ ಸದಂತು—ತಿಸ್ರೋ ದೇವ್ಯೋ ಬರ್ಹಿರಿದಂ ಸುಖಂ ಸುಕರ್ಮಾಣ ಆಸೀದಂತು ||** **ಸ್ವಪಸಃ** ಎಂದರೆ ಸು ಅಪಸಃ—ಉತ್ತಮವಾದ ಕರ್ಮವುಳ್ಳವರು, ಉತ್ತಮವಾದ ಕರ್ಮಗಳನ್ನು ಮಾಡುವವರು ಎಂದರ್ಥವು. ಸ್ಯೋನಂ ಎಂದರೆ ಸುಖವು, ಆದ್ದರಿಂದ ಉತ್ತಮವಾದ ಕರ್ಮವುಳ್ಳವರೂ ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಮೂರುಸ್ಥಾನಗಳಲ್ಲಿ ಅಧಿಷ್ಠಿತರೂ ಆದ ಇಳಾ, ಸರಸ್ವತೀ, ಭಾರತೀ ಎಂಬ ಮೂರು ಮಂದಿ ದೇವಿಯರೂ ಬಂದು ಈ ಬರ್ಹಿ—ಎಂಬ ದರ್ಭಾಸನದ ಮೇಲೆ ಕುಳಿತುಕೊಳ್ಳಲಿ ಎಂದು ವಾಕ್ಯಾರ್ಥವು.

|| ಸಂಹಿತಾಪಾಠಃ ||

**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ |**
**ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ || ೯ ||**

|| ಪದಪಾಠಃ ||

**ಯಃ | ಇಮೇ ಇತಿ | ದ್ಯಾವಾಪೃಥಿವೀ ಇತಿ | ಜನಿತ್ರೀ ಇತಿ | ರೂಪೈಃ | ಅಪಿಂಶತ್ | ಭುವನಾನಿ | ವಿಶ್ವಾ | ತಂ | ಅದ್ಯ | ಹೋತಃ | ಇಷಿತಃ | ಯಜೀಯಾನ್ | ದೇವಂ | ತ್ವಷ್ಟಾರಂ | ಇಹ | ಯಕ್ಷಿ | ವಿದ್ವಾನ್ ||**

|| ಸಾಯಣಭಾಷ್ಯಂ ||

**ತ್ವಾಷ್ಟ್ರಸ್ಯ ಪಶೋರ್ವಪಾಯಾಂ ಯ ಇಮೇ ಇತ್ಯೇಷಾನುವಾಕ್ಯಾ | ಸೂತ್ರಿತಂ ಚ | ಯ ಇಮೇ ದ್ಯಾವಾಪೃಥಿವೀ ಜನಿತ್ರೀ ತನ್ನಸ್ತುರೀಪಮಧ ಪೋಷಯಿತ್ನು | ಆ. ೩-೮ | ಇತಿ ||**

**ಯಸ್ತ್ವಷ್ಟಾ ದೇವೋ ಜನಿತ್ರೀ ವಿಶ್ವಸ್ಯ ಜನಯಿತ್ರ್ಯಾವಿಮೇ ದ್ಯಾವಾಪೃಥಿವೀ || ದ್ವಂದ್ವೇ ದಿವೋ ದ್ಯಾವೇತಿ ದ್ಯಾವಾದೇಶಃ | ಆದ್ಯುದಾತ್ತಃ | ಪೃಥಿವೀಶಬ್ದೋ ಙೀಷಂತತ್ವೇನಾಂತೋದಾತ್ತಃ |**

**ದೇವತಾದ್ವಂದ್ವೇ ಚೇತಿ ಪೂರ್ವೋತ್ತರಪದಯೋಃ ಪ್ರಕೃತಿಸ್ವರತ್ವಂ ॥ ದ್ಯಾವಾಪೃಥಿವ್ಯೌ ರೂಪೈರ್ದೇವತಿರ್ಯಙ್ಮನುಷ್ಯಾದ್ಯಾಕಾರೈರಪಿಂಶತ್ ರೂಪವತ್ಯಾವಕರೋತ್ ॥ ಪಿಶ ಅವಯವೇ ತೌದಾದಿಕಃ । ಶೇ ಮುಚಾದೀನಾಮಿತಿ ನುಮಾಗಮಃ ॥ ತಥಾ ವಿಶ್ವಾ ಸರ್ವಾಣಿ ಭುವನಾನಿ ಭೂತಜಾತಾನಿ ರೂಪಯುಕ್ತಾನ್ಯಕರೋತ್ । ಹೇ ಹೋತಃ ಯಜೀಯಾನ್ಯಷ್ಟೃತಮೋ ವಿದ್ವಾನ್ ಸರ್ವಂ ಜಾನಂಸ್ತ್ವಮಿಷಿತೋಽಸ್ಮಾಭಿರಧ್ಯೇಷಿತಃ ಪ್ರಾರ್ಥಿತಃ ಸನ್ನಿಹಾಸ್ಮಿನ್ಕರ್ಮಣ್ಯದ್ಯಾಸ್ಮಿನ್ದಿನೇ ತಂ ತ್ವಷ್ಟಾರಂ ದೇವಂ ಯಕ್ಷಿ । ಸ್ತುತಿಭಿರ್ಹವಿರ್ಭಿರ್ವಾ ಯಜ । ಪೂಜಯ ॥**

॥ ಪ್ರತಿಪದಾರ್ಥ ॥

**ಹೋತಃ**—ಎಲೈ ಹೋತೃವೇ । **ಯಃ**—ಯಾವ ತ್ವಷ್ಟೃವು । **ಜನಿತ್ರೀ**—ಲೋಕಕ್ಕೆಲ್ಲ ಉತ್ಪಾದಕಿಯರಾದ । **ಇಮೇ ದ್ಯಾವಾಪೃಥಿವೀ**—ಈ ದ್ಯಾವಾಪೃಥಿವಿಗಳನ್ನೂ । **ವಿಶ್ವಾ ಭುವನಾನಿ**—ಸಕಲ ಭೂತಜಾತಗಳನ್ನೂ । **ರೂಪೈಃ**—ನಾನಾವಿಧವಾದ ಆಕಾರಗಳಿಂದ । **ಅಪಿಂಶತ್**—ರೂಪಯುಕ್ತರನ್ನಾಗಿ ಮಾಡಿದನೋ । **ತಂ**—ಅಂತಹ । **ದೇವಂ**—ದೇವತಾತ್ಮಕನಾದ । **ತ್ವಷ್ಟಾರಂ**—ತ್ವಷ್ಟೃದೇವನನ್ನು । **ವಿದ್ವಾನ್**—ಸಕಲವನ್ನು ಅರಿತ ನೀನು । **ಯಜೀಯಾನ್**—ಉತ್ತಮವಾದ ಯಜ್ಞಕರ್ತನಾಗಿ । **ಇಹ**—ಇಲ್ಲಿ । **ಅದ್ಯ**—ಈ ಯಾಗ ದಿನದಲ್ಲಿ । **ಇಷಿತಃ**—ನಮ್ಮಿಂದ ಪ್ರಾರ್ಥಿತನಾಗಿ । **ಯಕ್ಷಿ**—ಪೂಜಿಸು.

॥ ಭಾವಾರ್ಥ ॥

ಎಲೈ ಹೋತೃವೇ, ಯಾವ ತ್ವಷ್ಟೃವು ಲೋಕಕ್ಕೆಲ್ಲ ಉತ್ಪಾದಕಿಯರಾದ ದ್ಯಾವಾಪೃಥಿವಿಗಳನ್ನೂ ಸಕಲ ಭೂತಜಾತಗಳನ್ನು ನಾನಾವಿಧವಾದ ಆಕಾರಗಳಿಂದ ರೂಪಯುಕ್ತರನ್ನಾಗಿ ಮಾಡಿದನೋ ಅಂತಹ ದೇವತಾತ್ಮಕನಾದ ತ್ವಷ್ಟೃದೇವನನ್ನು ಸಕಲವನ್ನೂ ಅರಿತ ನೀನು ಉತ್ತಮವಾದ ಯಜ್ಞಕರ್ತನಾಗಿ ಇಂದು ಈ ಯಜ್ಞಕಾಲದಲ್ಲಿ ನಮಗಾಗಿ ಪೂಜಿಸು.

## English Translation.

To the divine Twashtri, who decked the parental heaven and earth and all the worlds with living forms, to him, O priest, who are venerable and wise, being solicited by us, offer oblation here to-day.

ವಿಶೇಷ ವಿಷಯಗಳು

ತ್ವಷ್ಟೃದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದ ವಪಾಹೋಮದಲ್ಲಿ **ಯ ಇಮೇ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ತನ್ನಸ್ತುರೀಪಮಧ ಪೋಷಯಿತ್ನು** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

ಈ ಋಕ್ಕಿನಲ್ಲಿ ತ್ವಷ್ಟೃ ಎಂಬ ದೇವತೆಯನ್ನು ಸ್ತುತಿಸಲಾಗಿದೆ, ಈ ಋಕ್ಕಿಗೆ ಯಾಸ್ಕರು ಹೇಳಿರುವ ನಿರುಕ್ತವು ಈ ರೀತಿ ಇದೆ—

**ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ । ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ಕರೋತಿಕರ್ಮಣಃ ॥ ತಸ್ಯೈಷಾ ಭವತಿ ॥ ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ । ತಮದ್ಯ ಹೋತರಿಷಿತೋ ಯಜೀಯಾನ್ದೇವಂ ತ್ವಷ್ಟಾರ-ಮಿಹ ಯಕ್ಷಿ ವಿದ್ವಾನ್ ॥ ಯ ಇಮೇ ದ್ಯಾವಾಪೃಥಿವ್ಯೌ ಜನಯಿತ್ರ್ಯೌ ರೂಪೈರಕರೋತ್ ಭೂತಾನಿ ಚ ಸರ್ವಾಣಿ ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಜ ವಿದ್ವಾನ್ ॥**

(ನಿ. ೮-೧೩)

**ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ । ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ಕರೋತಿಕರ್ಮಣಃ**—ತ್ವಷ್ಟೃ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದು. ತ್ವಷ್ಟೃವು ದ್ವಾದಶಾದಿತ್ಯರಲ್ಲಿ ಒಬ್ಬನೆಂದು ಪ್ರಸಿದ್ಧವಾಗಿರುವನು ಇವನು ಮಧ್ಯಮಸ್ಥಾನ ದೇವತೆಯೆಂದು ನೈರುಕ್ತಕಾರರು ಹೇಳುವರು. ಅಗ್ನಿಯೆಂದು ಶಾಕಪೂಣಿಯವರ ಮತವು. ತೂರ್ಣಂ ಎಂದರೆ ಬೇಗನೆ, ಅಶ್ನುತೇ ಎಂದರೆ ವ್ಯಾಪಿಸುತ್ತಾನೆ. ಈ ದೇವನು ತನ್ನ ಕಿರಣಗಳಿಂದ ಸಕಲ ಪ್ರದೇಶಗಳನ್ನೂ ಬೇಗನೆ ವ್ಯಾಪಿಸುವುದರಿಂದ ಇವನಿಗೆ ತ್ವಷ್ಟಾ ಎಂಬ ಹೆಸರು ಬಂದಿದೆ. ಈ ಅರ್ಥದಲ್ಲಿ ಈ ದೇವನು ಆದಿತ್ಯನೂ ಆಗಬಹುದು, ಅಗ್ನಿಯೂ ಆಗಬಹುದು. ತ್ವಷ್ಟೃ ಶಬ್ದವು ಪ್ರಕಾಶಿಸು ಎಂಬರ್ಥವುಳ್ಳ ತ್ವಿಷ್ ಧಾತುವಿನಿಂದಾಗಲಿ ಅಥವಾ ನಿರ್ಮಿಸು, ಮಾಡು ಎಂಬರ್ಥವುಳ್ಳ ತ್ವಕ್ಷ್ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಈ ಶಬ್ದಪ್ರಯೋಗವಿರುವ ಪ್ರಕೃತ ಋಕ್ಕನ್ನೇ ಯಾಸ್ಕರು ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರುಕ್ತವನ್ನು ಹೇಳಿದಾರೆ—

**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈಃ ಅಪಿಂಶತ್ ಭುವನಾನಿ ವಿಶ್ವಾ-ಯ ಇಮೇ ದ್ಯಾವಾಪೃಥಿವ್ಯೌ ಜನಯಿತ್ರ್ಯೌ ರೂಪೈರಕರೋತ್ ಭೂತಾನಿ ಚ ಸರ್ವಾಣಿ ॥** ಈ ತ್ವಷ್ಟಾ ಎಂಬ ದೇವನು ದ್ಯಾವಾಪೃಥಿವಿಗಳ ನಿರ್ಮಾಪಕನು ಎಂದರೆ ಅವುಗಳನ್ನು ಇವನು ನಿರ್ಮಾಣ ಮಾಡಿದನು (ಸೃಷ್ಟಿಸಿದನು). ಮತ್ತು ಆ ದ್ಯಾವಾಪೃಥಿವಿಗಳಲ್ಲಿರುವ ಸಮಸ್ತ ಪ್ರಾಣಿಗಳಿಗೂ ಚರಾಚರ ವಸ್ತುಗಳಿಗೂ ನಾನಾವಿಧ ರೂಪ ಮತ್ತು ಆಕಾರಗಳಿಂದ ಕೂಡಿರುವಂತೆ ಮಾಡಿದನು. ಎಂದರೆ ಯಾವ ಯಾವ ಪ್ರಾಣಿಗಳಿಗೆ ಅಥವಾ ವಸ್ತುಗಳಿಗೆ ಯಾವರೀತಿ ರೂಪವಿರಬೇಕೋ ಅಂತಹ ರೂಪವನ್ನು ಅವುಗಳಿಗೆ ಉಂಟುಮಾಡಿದನು ಎಂದಭಿಪ್ರಾಯವು.

**ತಂ ಅದ್ಯ ಹೋತಃ ಇಷಿತಃ ಯಜೀಯಾನ್ ದೇವಂ ತ್ವಷ್ಟಾರಂ ಇಹ ಯಕ್ಷಿ ವಿದ್ವಾನ್—ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಜ ವಿದ್ವಾನ್॥** ಇಲ್ಲಿ ಯಜ್ಞಮಾಡುವ ಯಜಮಾನನು ಹೋತೃವೆಂಬ ಋತ್ವಿಕ್ಕನ್ನು ಉದ್ದೇಶಿಸಿ ಈ ರೀತಿ ಹೇಳುವನು—ಎಲೈ ಹೋತೃವೆಂಬ ಋತ್ವಿಜನೇ, ಯಜ್ಞಮಾಡುವುದರಲ್ಲಿ ಕುಶಲನೂ, ವಿವೇಕಿಯೂ ಆದ ನೀನು ಈಗ ನಮ್ಮಿಂದ ಪ್ರೇರಿತನಾಗಿ ಅಥವಾ ಪ್ರಾರ್ಥಿತನಾಗಿ (ಮೇಲೆ ವಿವರಿಸಿದ ಗುಣವಿಶಿಷ್ಟನಾದ) ತ್ವಷ್ಟೃ ಎಂಬ ದೇವತೆಯನ್ನು ಆಹ್ವಾನಿಸಿ ಪೂಜಿಸು (ಸತ್ಕರಿಸು).

**ಮಾಧ್ಯಮಿಕಸ್ತ್ವಷ್ಟೇತ್ಯಾಹುರ್ಮಧ್ಯಮೇ ಚ ಸ್ಥಾನೇ ಸಮಾಮ್ನಾತಃ । ಅಗ್ನಿರಿತಿ ಶಾಕಪೂಣಿಃ । ತಸ್ಯೈಷಾಪರಾ ಭವತಿ ॥**

(ನಿ. ೮-೧೪)

ಈ ತ್ವಷ್ಟೃವೆಂಬ ದೇವತೆಯು ಮಧ್ಯಮ (ಅಂತರಿಕ್ಷ) ಸ್ಥಾನದೇವತೆಯೆಂದು ನಿರ್ದಿಷ್ಟವಾಗಿದೆ. ಈ ದೇವತೆಯು ಅಗ್ನಿಯೆಂದು ಶಾಕಪೂಣಿಯವರ ಮತವು. ಇದನ್ನು ಸ್ಪಷ್ಟಪಡಿಸುವುದಕ್ಕಾಗಿ ಯಾಸ್ಕರು ಕೆಳಗಿನ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೂ ನಿರುಕ್ತವನ್ನು ಹೇಳಿರುವರು—

**ಆವಿಷ್ಟ್ಯೋ ವರ್ಧತೇ ಚಾರುರಾಸು ಜಿಹ್ಮಾನಾಮೂರ್ಧ್ವಃ ಸ್ವಯಶಾ ಉಪಸ್ಥೇ । ಉಭೇ ತ್ವಷ್ಟು-ರ್ಬಿಭ್ಯತುರ್ಜಾಯಮಾನಾತ್ಪ್ರತೀಚೀ ಸಿಂಹಂ ಪ್ರತಿಜೋಷಯೇತೇ ॥ ಆವಿರಾವೇದನಾತ್ತ್ವಷ್ಟ್ಯೋ ವರ್ಧತೇ ಚಾರುರಾಸು । ಚಾರು ಚರತೇಃ ಜಿಹ್ಮಂ ಜಿಹೀತೇಃ ಊರ್ಧ್ವ ಉಚ್ಛ್ರಿತೋ ಭವತಿ । ಸ್ವಯಶಾ ಆತ್ಮಯಶಾಃ ಉಪಸ್ಥ ಉಪಸ್ಥಾನೇ । ಉಭೇ ತ್ವಷ್ಟುರ್ಬಿಭ್ಯತುರ್ಜಾಯಮಾನಾತ್ಪ್ರ-ತೀಚೀ ಸಿಂಹಂ ಪ್ರತಿ ಜೋಷಯೇತೇ ॥**

(ನಿ ೮-೧೫)

ಮಧ್ಯಮಸ್ಥಾನದೇವತೆಯಾದ ವೈದ್ಯುತಾಗ್ನಿಯೇ ಈ ತ್ವಷ್ಟೃ ಎಂದು ಹೇಳುವುದಕ್ಕಾಗಿ ಈ ಋಕ್ಕಿಗೆ ನಿರ್ವಚನವನ್ನು ಹೇಳಿ ವಿವರಿಸಿದಾರೆ—

ಮೇಲಿನ ಋಕ್ಕಿನಲ್ಲಿ **ಉಭೇ ಬಿಭ್ಯತುಃ** ಎಂಬ ಶಬ್ದಗಳಿವೆ. ಇಲ್ಲಿ ಉಭೇ ಎಂದರೆ ಯಾರು ಎಂಬ ವಿಷಯದಲ್ಲಿ ಯಾಸ್ಕರು ಈ ರೀತಿ ಹೇಳಿದಾರೆ—

**ದ್ಯಾವಾಪೃಥಿವ್ಯಾವಿತಿ ವಾ । ಅಹೋರಾತ್ರೇ ಇತಿ ವಾ । ಅರಣೀ ಇತಿ ವಾ । ಪ್ರತ್ಯಕ್ತೇ ಸಿಂಹಂ ಸಹನಂ ಪ್ರತ್ಯಾಸೇವೇತೇ ॥**

(ನಿ. ೮-೧೫)

ಈ ಋಕ್ಕಿನಲ್ಲಿ ಇರುವ ಉಭೇ ಎಂಬ ಶಬ್ದಕ್ಕೆ ದ್ಯಾವಾಪೃಥಿವಿಗಳು ಎಂದು ಕೆಲವರು ಅರ್ಥವಿವರಣೆ ಮಾಡುತ್ತಾರೆ. ಮತ್ತೆ ಕೆಲವರು ಅಹೋರಾತ್ರಿಗಳು ಎಂದೂ, ಅಗ್ನಿಯನ್ನು ಮಥನಮಾಡುವ ಎರಡು ಅರಣಿ (ಮರದ ತುಂಡುಗಳು) ಗಳೆಂದೂ ಹೇಳುತ್ತಾರೆ. ಈ ಋಕ್ಕಿನಲ್ಲಿರುವ ಸಿಂಹಂ ಎಂಬ ಶಬ್ದಕ್ಕೆ ಸಹನೆಯನ್ನು ಎಂದು ಯಾಸ್ಕರು ಅರ್ಥ ಮಾಡಿದ್ದಾರೆ. ಆದ್ದರಿಂದ **ಪ್ರತ್ಯಕ್ತೇ ಸಿಂಹಂ ಪ್ರತಿ ಜೋಷಯೇತೇ** ಎಂಬ ವಾಕ್ಯಕ್ಕೆ, ಈ ದ್ಯಾವಾಪೃಥವಿಗಳು ವೈದ್ಯುತಾಗ್ನಿಯ ಶಕ್ತಿಸಾಮರ್ಥ್ಯಗಳಿಗೆ ಹೆದರಿ ಇವನ ವಿರುದ್ಧವಾಗಿ ಹೋರಾಡಬಾರದೆಂದು ಸಹನೆಯನ್ನು ತಾಳಿ ಅವನನ್ನು ಸೇವಿಸುತ್ತವೆ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

## ಉಪಾವಸೃಜ ತ್ಮನ್ಯಾ ಸಮಂಜನ್ದೇವಾನಾಂ ಪಾಥ ಋತುಥಾ ಹವೀಂಷಿ । ವನಸ್ಪತಿಃ ಶಮಿತಾ ದೇವೋ ಅಗ್ನಿಃ ಸ್ವದಂತು ಹವ್ಯಂ ಮಧುನಾ ಘೃತೇನ ॥

॥ ಪದಪಾಠಃ ॥

ಉಪ಼ಽಅವ಼ಸೃಜ । ತ್ಮನ್ಯಾ । ಸಂಽಅಂಜನ್ । ದೇವಾನಾಂ । ಪಾಥಃ । ಋತುಽಥಾ । ಹವೀಂಷಿ ।
ವನಸ್ಪತಿಃ । ಶಮಿತಾ । ದೇವಃ । ಅಗ್ನಿಃ । ಸ್ವದಂತು । ಹವ್ಯಂ । ಮಧುನಾ । ಘೃತೇನ ॥ ೯ ॥

॥ ಸಾಯಣಭಾಷ್ಯಂ ॥

ಹೇ ವನಸ್ಪತೇ ಯೂಪ ತ್ಮನ್ಯಾ ॥ ಆತ್ಮಶಬ್ದಸ್ಯ ತೃತೀಯೈಕವಚನೇ ಯಾದೇಶಃ । ಮಂತ್ರೇಷ್ವಾಙ್ಯಾದೇರಾತ್ಮನ ಇತ್ಯಾಕಾರಲೋಪಃ ॥ ಆತ್ಮನೈವ ತುರ್ಥರ್ತಾವೃತಾ ಪ್ರಾಪ್ತೇ ಕಾಲೇ ದೇವಾನಾಮುರ್ಥಾಯ ಪಾಥಃ ಪಶುಲಕ್ಷಣಮನ್ನಮನ್ನಾನಿ ಚ ಹವೀಂಷಿ ಸಮಂಜನ್ ಸಮ್ಯಗ್ವ್ಯಕ್ತೀಕುರ್ವನ್ನುಪಾವಸೃಜ । ಉಪಾಗಮ್ಯ ಪ್ರಯಚ್ಛ ॥ ಗತಿರ್ಗತೌ । ಪಾ ೮ ೧-೭೦ । ಇತಿ ಗತೇರ್ನಿಘಾತಃ ॥ ಕಿಂಚ ವನಸ್ಪತಿರ್ಯೋಽಯಂ ಯೂಪಃ ಶಮಿತ್ರೈತನ್ನಾಮಕೋ ದೇವಃ ಯದ್ವಾ ಶಾಮಿತ್ರೋಽಗ್ನಿರ್ದೇವೋ ದೀಪ್ಯಮಾನ ಆಹವನೀಯಾಖ್ಯೋಽಗ್ನಿಶ್ಚೈತೇ ತ್ರಯೋ ಮಧುನಾ ಮಧುರೇಣ ಘೃತೇನ । ಯದ್ವಾ। ಮಧುನೋದಕೇನ ಪ್ರೋಕ್ಷಣೋಪನಯನಾದಿಗತೇನ ಘೃತೇನ ಚ । ಹವ್ಯಂ ಹವನಯೋಗ್ಯಂ ಸ್ವದಂತು । ಸ್ವಾದಂ ಕುರ್ವಂತು ॥

॥ ಪ್ರತಿಪದಾರ್ಥ ॥

(ಎಲೈ ವನಸ್ಪತಿಯೇ) **ತ್ಮನ್ಯಾ**—ಸ್ವಪ್ರೇರಣೆಯಿಂದಲೇ । **ಋತುಥಾ** – ಯಜ್ಞಕಾಲಕ್ಕೆ ಸರಿಯಾಗಿ । **ದೇವಾನಾಂ**—ದೇವತೆಗಳಿಗೆ । **ಪಾಥಃ**—ಪಶುರೂಪವಾದ ಅನ್ನವನ್ನೂ । **ಹವೀಂಷಿ**—ಹವಿಸ್ಸುಗಳನ್ನೂ । **ಸಮಂಜನ್**—ಪರಿಷ್ಕಾರಗೊಳಿಸಿ । **ಉಪಾವಸೃಜ**—ಅರ್ಪಿಸು । **ವನಸ್ಪತಿಃ** –ವನಸ್ಪತಿಯೂ । **ಶಮಿತಾ**—ಶಮಿತೃ ಸಂಜ್ಞಕನಾದ ದೇವತೆಯೂ । **ಅಗ್ನಿಃ**—ಅಗ್ನಿಯೂ । **ಮಧುನಾ**—ಮಧುರವಾದ । **ಘೃತೇನ**—ಉದಕದಿಂದ । **ಹವ್ಯಂ**—ಹವಿಸ್ಸನ್ನು । **ಸ್ವದಂತು**—ರುಚಿಗೊಳಿಸಲಿ.

॥ ಭಾವಾರ್ಥ ॥

ಎಲೈ ವನಸ್ಪತಿಯೇ, ಯಜ್ಞಕಾಲಕ್ಕೆ ಸರಿಯಾಗಿ ದೇವತೆಗಳಿಗೆ ಪಶುರೂಪವಾದ ಅನ್ನವನ್ನೂ, ಹವಿಸ್ಸುಗಳನ್ನೂ ಆತ್ಮ ಪ್ರೇರಣೆಯಿಂದಲೇ ಪರಿಷ್ಕಾರಗೊಳಿಸಿ ಅರ್ಪಿಸು. ವನಸ್ಪತಿಯೂ ಶಮಿತೃವೂ ಮತ್ತು ಅಗ್ನಿಯೂ ಮಧುರವಾದ ಉದಕದಿಂದ ಅಥವಾ ಆಜ್ಯದಿಂದ ಹವಿಸ್ಸನ್ನು ರುಚಿಗೊಳಿಸಲಿ.

## English Translation.

Offer of your own will in due season the food (and other) oblations of the gods besmearing it. Let Vanaspati, Shamitri, the divine Agni, sweeten the oblation with honey and butter.

॥ ವಿಶೇಷವಿಷಯಗಳು ॥

ವನಸ್ಪತಿ ಎಂಬ ದೇವತೆಯ ವಿಷಯವನ್ನು ಈ ರೀತಿ ಹೇಳಿದ್ದಾರೆ—

**ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ ॥**
(ನಿ. ೮-೩)

**ತತ್ಕೋ ವನಸ್ಪತಿಃ । ಯೂಪ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ ॥**
(ನಿ. ೮-೧೮)

**ಅಗ್ನಿ**ಯನ್ನೇ ವನಸ್ಪತಿಯೆಂದು ಹೇಳುವರು. ಏಕೆಂದರೆ ಅಗ್ನಿಯು ವನಗಳ ಎಂದರೆ ವೃಕ್ಷಗಳ ಪಾಲಕನು ಅಥವಾ ಸಂರಕ್ಷಕನು. ವೃಕ್ಷದಲ್ಲಿ ಅಗ್ನಿಯು ಅಂತರ್ಗತನಾಗಿದ್ದರೂ ಅದನ್ನು ಸುಡುವುದಿಲ್ಲವಾದ್ದರಿಂದ ಅದರ ಸಂರಕ್ಷಕನೆಂದು ಹೇಳಲ್ಪಡುವನು ಅಥವಾ ದಾರ್ವಾದಿಯಜ್ಞಸಾಧನಗಳಿಗೆ ವೃಕ್ಷವು ಅಥವಾ ಮರವು ಉಪಯೋಗವಾಗುವುದರಿಂದ ವೃಕ್ಷಕ್ಕೆ ವನವೆಂದು ಹೆಸರು. ವನಸ್ಪತಿ ಎಂದರೆ ವೃಕ್ಷರಾಜ, ದೊಡ್ಡದಾದ ವೃಕ್ಷ ಎಂದರ್ಥವು. ಈಗ ವನಸ್ಪತಿ ಎಂದರೆ ಯಾವ ದೇವತೆಯು ? ಯಜ್ಞದಲ್ಲಿ ಪಶುವನ್ನು ಕಟ್ಟಿಹಾಕುವುದಕಾಗಿ ಯಜ್ಞವೇದಿಯಲ್ಲಿ ಹೂಳುವ ಮರದ ಕಂಭವೆಂದು (ಯೂಪ) ಕಾತ್ಥಕ್ಯರ ಅಭಿಪ್ರಾಯವು ವನಸ್ಪತಿಯೆಂದರೆ ಅಗ್ನಿಯೆಂದು ಶಾಕಪೂಣಿಯವರ ಮತವು: ಈ ವನಸ್ಪತಿಯೆಂಬ ದೇವತೆಯನ್ನು ಸ್ತುತಿಸುವ ಋಕ್ಕಿನ ಉದಾಹರಣೆಗಾಗಿ ಯಾಸ್ಕರು ಪ್ರಕೃತಋಕ್ಕನ್ನೇ ತೆಗೆದುಕೊಂಡು ಅದಕ್ಕೆ ನಿರುಕ್ತವನ್ನು ಹೇಳಿರುವರು—

**ಉಪಾವಸೃಜ ತ್ಮನ್ಯಾ ಸಮಂಜನ್ದೇವಾನಾಂ ಪಾಥ ಋತುಥಾ ಹವೀಂಷಿ । ವನಸ್ಪತಿಃ ಶಮಿತಾ ದೇವೋ ಅಗ್ನಿಃ ಸ್ವದಂತು ಹವ್ಯಂ ಮಧುನಾ ಘೃತೇನ ॥ ಉಪಾವಸೃಜಾತ್ಮನಾತ್ಮಾನಂ ಸಮಂಜನ್ದೇವಾನಾಮನ್ನಮೃತಾವೃತೌ ಹವೀಂಷಿ ಕಾಲೇ ಕಾಲೇ ವನಸ್ಪತಿಃ ಶಮಿತಾ ದೇವೋ ಅಗ್ನಿರಿತ್ಯೇತೇ ತ್ರಯಃ ಸ್ವದಯಂತು ಹವ್ಯಂ ಮಧುನಾ ಚ ಘೃತೇನ ಚ ॥**
(ನಿ ೮ ೧೭)

**ಉಪಾವಸೃಜ ತ್ಮನ್ಯಾ ಸಮಂಜನ್ ದೇವಾನಾಂ ಪಾಥ ಋತುಥಾ ಹವೀಂಷಿ— ಉಪಾವಸೃಜಾತ್ಮನಾತ್ಮಾನಂ ಸಮಂಜನ್ ದೇವಾನಾಮನ್ನಮೃತಾವೃತೌ ಹವೀಂಷಿ ಕಾಲೇ ಕಾಲೇ ॥** ಇಲ್ಲಿ **ಉಪ ಅವಸೃಜ** ಎಂದರೆ **ಆಶ್ಲಿಷ್ಯ ಪ್ರಯಚ್ಛ**-ಸಮೀಪಿಸಿ ಕೊಡು ಎಂದರ್ಥವು; **ತ್ಮನ್ಯಾ ಸಮಂಜನ್-ಆತ್ಮನಾತ್ಮಾನಂ ಸಮಂಜನ್ ವಿಶಿಷ್ಟೇನ ಸಂಸ್ಕಾರೇಣ ವ್ಯಕ್ತೀಕುರ್ವನ್** ಮಂತ್ರಪುರಸ್ಸರವಾದ ಸಂಸ್ಕಾರಾದಿಗಳಿಂದ ತನ್ನನ್ನು (ಅಗ್ನಿಯನ್ನು) ತಾನೇ ಪ್ರಕಾಶಪಡಿಸುತ್ತಾ ಎಂದರ್ಥವು, **ಪಾಥಃ** ಎಂದರೆ ಅನ್ನವು, **ಋತುಥಾ** ಎಂದರೆ **ಋತಾವೃತೌ ಕಾಲೇಕಾಲೇ**—ಆಯಾ ಕಾಲಗಳಲ್ಲಿ, ಹವೀಂಷಿ-ಆಜ್ಯವೇ ಮೊದಲಾದ ಹವಿಸ್ಸುಗಳನ್ನು, ಮುಖ್ಯಾಭಿಪ್ರಾಯವು—ಎಲೈ ವನಸ್ಪತಿದೇವತೆಯೇ (ಅಗ್ನಿಯೇ) ನಿನ್ನನ್ನು ನಿನ್ನಿಂದ ಎಂದರೆ ವನಸ್ಪತಿಯಾದ ನಿನ್ನನ್ನು ನಿನ್ನ ಎಂದರೆ ಅಗ್ನಿಯ ಪ್ರಕಾಶದಿಂದ ಸಮಸ್ತರಿಗೂ ಕಾಣಿಸುವಂತೆ ಮಾಡುತ್ತಾ ಆಯಾಕಾಲಗಳಲ್ಲಿ ಎಂದರೆ ಕಾಲಕಾಲಕ್ಕೆ ಸರಿಯಾಗಿ ಅನ್ನವನ್ನೂ ಆಜ್ಯ ಮೊದಲಾದ ಹವಿಸ್ಸುಗಳನ್ನೂ ದೇವತೆಗಳ ಬಳಿಗೆ ತೆಗೆದುಕೊಂಡುಹೋಗಿ ಕೊಡು ಎಂದು ವಾಕ್ಯಾಭಿಪ್ರಾಯವು

**ವನಸ್ಪತಿಃ ಶಮಿತಾ ದೇವಃ ಅಗ್ನಿಃ ಸ್ವದಂತು ಹವ್ಯಂ ಮಧುನಾ ಘೃತೇನ—ವನಸ್ಪತಿಃ ಶಮಿತಾ ದೇವೋ ಅಗ್ನಿರಿತ್ಯೇತೇ ತ್ರಯಃ ಸ್ವದಯಂತು ಹವ್ಯಂ ಮಧುನಾ ಚ ಘೃತೇನ ಚ ॥** ವನಸ್ಪತಿದೇವತೆಯೂ

ಶಮಿತಾ ಎಂಬ ದೇವತೆಯೂ ಪ್ರಕಾಶಾತ್ಮನಾದ (ದೇವ) ಅಗ್ನಿಯೂ ಈ ಮೂರು ಮಂದಿ ದೇವತೆಗಳೂ ಈ ಯಜ್ಞದಲ್ಲಿ ದೇವತೆಗಳಿಗಾಗಿ ಸಿದ್ಧಪಡಿಸಿರುವ ಹವಿಸ್ಸನ್ನು ಉದಕಪ್ರೋಕ್ಷಣಾದಿಗಳಿಂದಲೂ ಆಜ್ಯದಿಂದಲೂ ಅಥವಾ ಮಧುರ(ಸಿಹಿ) ವಾದ ಘೃತದಿಂದಲೂ ಸ್ವಾದು(ಸಿಹಿ)ಯುಕ್ತವನ್ನಾಗಿ ಮಾಡಲಿ ಎಂದಭಿಪ್ರಾಯವು.

ಇಲ್ಲಿ ಯಾಸ್ಕರು ವನಸ್ಪತಿ ಶಬ್ದಕ್ಕೆ ಯೂಪವೆಂಬ ಅರ್ಥವನ್ನು ವಿಶದಪಡಿಸುವುದಕ್ಕಾಗಿ **ಅಂಜಂತಿ ತ್ವಾ** (ಋ. ಸಂ. ೩-೮-೧) ಎಂಬ ಋಕ್ಕಿಗೂ, ಅಗ್ನಿಯೆಂಬ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ **ದೇವೇಭ್ಯೋ ವನಸ್ಪತೇ** (ತೈ. ಬ್ರಾ. ೩-೬-೧೧-೨) ಮತ್ತು **ವನಸ್ಪತೇ ರಶನಯಾ** (ಋ. ಸಂ. ೧೦-೭೦-೧೦) ಎಂಬ ಋಕ್ಕುಗಳ ನಿರ್ವಚನ ವನ್ನೂ ಹೇಳಿದಾರೆ. ಪ್ರಕೃತಸಂದರ್ಭದಲ್ಲಿ ಅವುಗಳ ಅವಶ್ಯಕತೆ ಇಲ್ಲದ್ದರಿಂದ ಇಲ್ಲಿ ಅವುಗಳನ್ನು ವಿವರಿಸಲಾಗಿಲ್ಲ.

॥ ಸಂಹಿತಾಪಾಠಃ ॥

**ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪು-**
**ರೋಗಾಃ ।**
**ಅಸ್ಯ ಹೋತುಃ ಪ್ರದಿಶ್ಯೃತಸ್ಯ ವಾಚಿ ಸ್ವಾಹಾಕೃತಂ ಹವಿರದಂತು ದೇವಾಃ॥**

॥ ಪದಪಾಠಃ ॥

**ಸದ್ಯಃ । ಜಾತಃ । ವಿ । ಅಮಿಮೀತ । ಯಜ್ಞಂ । ಅಗ್ನಿಃ । ದೇವಾನಾಂ । ಅಭವತ್ । ಪುರಃऽಗಾಃ ।**

**ಅಸ್ಯ । ಹೋತುಃ । ಪ್ರऽದಿಶಿ । ಋತಸ್ಯ । ವಾಚಿ । ಸ್ವಾಹಾऽಕೃತಂ । ಹವಿಃ । ಅದಂತು । ದೇವಾಃ ॥೧೧॥**

॥ ಸಾಯಣಭಾಷ್ಯಂ ॥

ಅಯಮಗ್ನಿಃ ಸದ್ಯಸ್ತದಾನೀಮೇವ ಜಾತೋ ಜಾಯಮಾನ ಏವ ಯಜ್ಞಂ ವ್ಯಮಿಮೀತ । ವಿಶೇಷೇಣ ನಿರ್ಮಿಮೀತೇ । ಉತ್ಪಾದಯತಿ ॥ ಮಾಙ್ ಮಾನೇ ಶಬ್ದೇ ಚ ಜೌಹೋತ್ಯಾದಿಕಃ ॥ ಅತ ಏವಾಯಮಗ್ನಿರ್ದೇವಾನಾಂ ಪುರೋಗಾಃ ಪ್ರಥಮಗಾಮೀ ಮುಖ್ಯೋऽಭವತ್ ॥ ಗಮೇರ್ವಿಟ್-ಪ್ರತ್ಯಯ ಆತ್ವೇ ಚ ಕೃತೇ ರೂಪಂ ॥ ತತಃ ಪ್ರದಿಶಿ ಪ್ರಕೃಷ್ಟಾಯಾಂ ದಿಶಿ ಪ್ರಾಚ್ಯಾಮೃತಸ್ಯಾಹವನೀ-ಯಾತ್ಮನಾಗತಸ್ಯಾಸ್ಯ ಹೋತುರ್ಹೋಮನಿಷ್ಪಾದಕಸ್ಯಾಗ್ನೇರ್ವಾಚಿ । ಅತ್ರ ವಾಗಾಶ್ರಯ ಆಸ್ಯಂ ಲಕ್ಷ್ಯತೇ । ವಾಚ್ಯಾಸ್ಯೇ ಸ್ವಾಹಾಕೃತಂ ಸ್ವಾಹಾಕಾರೇಣ ಪ್ರಕ್ಷಿಪ್ತಂ ಹವಿಃ ಸರ್ವೇ ದೇವಾ ಅದಂತು । ಭಕ್ಷಯಂತು । ಇದಂ ಸೂಕ್ತಂ ಯಾಸ್ಕೇನ ಸಮ್ಯಗಭ್ಯಧಾಯಿ । ನಿ. ೮.೫-೨೧ । ತದತ್ರಾನುಸಂ-ಧೀಯತಾಂ ॥

॥ ಪ್ರತಿಪದಾರ್ಥ ॥

**ಸದ್ಯಃ**—ಒಡನೆಯೇ । **ಜಾತಃ**—ಉತ್ಪನ್ನವಾದ ಅಗ್ನಿಯು । **ಯಜ್ಞಂ**—ಯಜ್ಞವನ್ನು । **ವ್ಯಮಿ-ಮೀತ**—ಉತ್ಪನ್ನ ಮಾಡುತ್ತಾನೆ । **ಅಗ್ನಿಃ**—ಅದೇ ಅಗ್ನಿಯು । **ದೇವಾನಾಂ**—ದೇವತೆಗಳಿಗೆ । **ಪುರೋಗಾಃ**—

ಮುಖ್ಯನಾಗಿ । **ಅಭವತ್**– ಆಗಿದ್ದಾನೆ । **ಪ್ರದಿಶಿ**— ಉತ್ತಮವಾದ ಪ್ರಾಗ್ದಿಕ್ಕಿನಲ್ಲಿ । **ಋತಸ್ಯ**—ಆಹವನೀಯರೂಪದಿಂದಿರುವವನೂ । **ಹೋತುಃ**— ಹೋಮಸಂಪಾದಕನೂ ಆದ । **ಅಸ್ಯ**— ಈ ಅಗ್ನಿಯ । **ವಾಚಿ**— ಮುಖದಲ್ಲಿ । **ಸ್ವಾಹಾಕೃತಂ**— ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾದ । **ಹವಿಃ**—ಹವಿಸ್ಸನ್ನು । **ದೇವಾಃ**— ದೇವತೆಗಳು । **ಅದಂತು**— ಭಕ್ಷಿಸುತ್ತಾರೆ.

॥ ಭಾವಾರ್ಥ ॥

ಅಗ್ನಿಯು ಉತ್ಪನ್ನನಾದೊಡನೆಯೇ ಯಜ್ಞವನ್ನು ನಿರ್ಮಿಸುತ್ತಾನೆ. ಅದೇ ಅಗ್ನಿಯು ದೇವತೆಗಳಿಗೆ ಮುಖ್ಯನಾಗಿದ್ದಾನೆ. ಉತ್ತಮವಾದ ಪ್ರಾಗ್ದಿಕ್ಕಿನಲ್ಲಿ ಆಹವನೀಯರೂಪದಿಂದಿರುವವನೂ ಹೋಮಸಂಪಾದಕನೂ ಆದ ಅಗ್ನಿಯ ಮುಖದಲ್ಲಿ ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾದ ಹವಿಸ್ಸನ್ನು ದೇವತೆಗಳು ಭಕ್ಷಿಸುತ್ತಾರೆ.

## English Translation.

As soon as he was born, Agni constructed a sacrifice, he was the preceder of the gods; may the gods partake of the oblation presented with the swaha through the voice of him the hotri of the sacrifice at the eastern station.

॥ ವಿಶೇಷವಿಷಯಗಳು ॥

ಸ್ವಾಹಾ ಎಂಬ ಶಬ್ದಕ್ಕೆ ಯಾಸ್ಕರ ವಿವರಣೆಯು—

**ಸ್ವಾಹಾಕೃತಯಃ । ಸ್ವಾಹಾಕೃತಯಃ ಸ್ವಾಹೇತ್ಯೇತತ್ ಸು ಆಹೇತಿ ವಾ । ಸ್ವಾ ವಾಗಹೇತಿ ವಾ । ಸ್ವಂ ಪ್ರಾಹೇತಿ ವಾ । ಸ್ವಾಹುತಂ ಹುವಿರ್ಜುಹೋತೀತಿ ವಾ ॥**

(ನಿ. ೮–೨೧)

ಸ್ವಾಹಾ ಎಂಬ ಶಬ್ದಕ್ಕೆ ನಾಲ್ಕು ವಿಧವಾದ ಅವಯವಾರ್ಥಗಳಿರುವುವು.

(೧) **ಸು ಆಹೇತಿ ವಾ**—ಸು = ಚೆನ್ನಾಗಿ ಆಹ = ಹೇಳುತ್ತಾನೆ. ಚೆನ್ನಾಗಿ ಅಥವಾ ಸ್ಪಷ್ಟವಾಗಿ ಉಚ್ಚರಿಸುವುದರಿಂದ ಇದಕ್ಕೆ ಸ್ವಾಹಾ ಎಂದು ಹೆಸರು.

(೨) **ಸ್ವಾ ವಾಗಹೇತಿ ವಾ**—ಸ್ವಾ = ಸ್ವಕೀಯವಾದ ವಾಕ್ = ವಾಕ್ಯವು. **ತಂ ಸ್ವಾ ವಾಗಭ್ಯವದಜ್ಜುಹುಧೀತಿ ತತ್ಸ್ವಾಹಾಕಾರಸ್ಯ ಜನ್ಮ** ಎಂದು ಶ್ರುತಿವಾಕ್ಯವಿರುವುದು (ಬ್ರಾಹ್ಮಣ). ಎಂದರೆ ಹೋಮ ಮಾಡುವಾಗ ವೇದಮಂತ್ರವಾದ ಋಕ್ಕಿನ ಅಂತ್ಯದಲ್ಲಿ ಸ್ವಾಹಾ ಎಂಬ ಶಬ್ದವನ್ನು ತಾನೇ (ಹೋಮ ಮಾಡುವವನು) ಸೇರಿಸಿ ಹೇಳುವುದರಿಂದ ಸ್ವಾಹಾ ಎಂದು ಹೆಸರು.

(೩) **ಸ್ವ ಪ್ರಾಹೇತಿ ವಾ**— ಇಲ್ಲಿ ಸ್ವ = ತನ್ನ ಹವಿಸ್ಸನ್ನು ಆಹ = ಹೋಮ ಮಾಡುವನೆಂದು ಹೇಳುವನು. ಆದ್ದರಿಂದ ಸ್ವಾಹಾ ಎಂದು ಹೆಸರು.

(೪) **ಸ್ವಾಹುತಂ ಹವಿರ್ಜುಹೋತೀತಿ ವಾ**—ತಾನು ಹೋಮಮಾಡುವ ಹವಿಸ್ಸನ್ನು ಸ್ವಾಹಾ ಎಂಬ ಶಬ್ದೋಚ್ಚಾರಣೆ ಮೂಲಕ ಹೋಮಮಾಡುವುದರಿಂದ ಎಂದರೆ ಅಗ್ನಿಯಲ್ಲಿ ಹವಿಃಪ್ರದಾನ ಮಾಡುವುದರಿಂದ **ಸ್ವಾಹಾ** ಎಂದು ಹೆಸರು

ಸ್ವಾಹಾಕಾರಾರ್ಥಕ್ಕೆ ಯಾಸ್ಕರು ಈ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು—

**ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾಃ ।**
**ಅಸ್ಯ ಹೋತುಃ ಪ್ರದಿಶ್ಯೃತಸ್ಯ ವಾಚಿ ಸ್ವಾಹಾಕೃತಂ ಹವಿರದಂತು ದೇವಾಃ ॥**
**ಸದ್ಯೋ ಜಾಯಮಾನೋ ನಿರಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾವ್ಯಸ್ಯ ಹೋತುಃ ಪ್ರದಿಶ್ಯೃತಸ್ಯ ವಾಚ್ಯಾ ಸ್ವಾಹಾಕೃತಂ ಹವಿರದಂತು ದೇವಾಃ ॥**

(ನಿ. ೮–೨೧)

ಇದರ ಮುಖ್ಯಾರ್ಥವು—ಈಗತಾನೆ ಉತ್ಪನ್ನನಾದ (ಎಂದರೆ ಯಜ್ಞದಲ್ಲಿ ಈಗ ಪ್ರತಿಷ್ಠಿಸಲ್ಪಟ್ಟಿರುವ) ಅಗ್ನಿಯು ದೇವತೆಗಳ ಮುಂದೆ ಕುಳಿತು ಹೋತೃವಿನ ಕರ್ತವ್ಯವನ್ನು ಎಂದರೆ ದೇವತೆಗಳನ್ನು ಆಹ್ವಾನಮಾಡುವ ಕಾರ್ಯವನ್ನು ನೆರವೇರಿಸುತ್ತಾ ಯಜ್ಞವನ್ನು ನಿರ್ವಹಿಸುವನು. ಇಂತಹ ಹೋತೃವು ಪೂರ್ವದಿಕ್ಕಿನಲ್ಲಿ ಇದ್ದು ಸಮರ್ಪಿಸುವ ಸ್ವಾಹಾಕಾರಶಬ್ದಪೂರ್ವಕವಾಗಿ ಹೋಮಮಾಡುವ ಹವಿಸ್ಸನ್ನು ದೇವತೆಗಳು ಭಕ್ಷಿಸಲಿ ಎಂದು. ಆದುದರಿಂದ ಸ್ವಾಹಾ ಎಂದರೆ ಯಜ್ಞಾರ್ಥವಾಗಿ ವಿಧಿಪೂರ್ವಕವಾಗಿ ಪ್ರತಿಷ್ಠಿತವಾದ ಅಗ್ನಿಯಲ್ಲಿ ದೇವತೆಗಳ ಪ್ರೀತ್ಯರ್ಥವಾಗಿ ಹವಿಸ್ಸನ್ನು ಹೋಮಮಾಡುವಾಗ ಮಂತ್ರಾಂತ್ಯದಲ್ಲಿ ಉಚ್ಚರಿಸುವ ಶಬ್ದಕ್ಕೆ **ಸ್ವಾಹಾ** ಎಂದು ಹೆಸರು ಎಂದಭಿಪ್ರಾಯವು,

ಕೆಲವು ಆಪ್ರೀಸೂಕ್ತಗಳಲ್ಲಿ **ಸ್ವಾಹಾಕೃತಯಃ** ಎಂದು ಬಹುವಚನ ಪ್ರಯೋಗವಿರುವುದು. ಈ ಸೂಕ್ತದಲ್ಲಿರುವ ಹನ್ನೊಂದು ದೇವತೆಗಳಿಗೆ ಹೋಮಮಾಡುವಾಗ ಉಪಯೋಗಿಸುವ ಹನ್ನೊಂದು ಪ್ರಯಾಜ ಮಂತ್ರಗಳಿಗೂ ಸ್ವಾಹಾಕಾರವನ್ನು ಸೇರಿಸಿ ಪಠಿಸುವುದರಿಂದ **ಸ್ವಾಹಾಕೃತಯಃ** ಎಂದು ಬಹುವಚನವನ್ನು ಪ್ರಯೋಗಿಸಿರುವುದು.

ಪುರಾಣಾದಿಗಳಲ್ಲಿ **ಸ್ವಾಹಾ** ಎಂಬ ಶಬ್ದವು ಬೇರೆ ಅರ್ಥದಲ್ಲಿ ಉಪಯೋಗಿಸಲ್ಪಡುವುದು. ಅಂಗಿರಾಋಷಿಯ ಪುತ್ರನಾದ ಬೃಹಸ್ಪತಿಯ ಮಗಳಿಗೆ **ಸ್ವಾಹಾ** ಎಂದು ಮಹಾಭಾರತದಲ್ಲಿ ಹೇಳಿರುವುದು. ಪುರಾಣಗಳಲ್ಲಿ ಸ್ವಾಹಾ ದೇವಿಯು ದಕ್ಷಪ್ರಜಾಪತಿಯ ಮಗಳೆಂದೂ, ಅಗ್ನಿಯ ಪತ್ನಿಯೆಂದೂ ಹೇಳಿರುವುದು.

ಸ್ವಾಹಾಕೃತಿಯ ವಿಷಯದಲ್ಲಿ ಪ್ರಾಜ್ಞರ ಅಭಿಪ್ರಾಯಗಳು ಒಂದೇವಿಧವಾಗಿಲ್ಲ. ಆದರೂ ಸಹ ಈ ಶಬ್ದದಿಂದ ನಿರ್ದೇಶಿಸಲ್ಪಡುವ ಸಕಲಭಾವವೂ ಸಹ ಪಾರ್ಥಿವಾಗ್ನಿಯನ್ನೇ ಉದ್ದೇಶಿಸಿದೆ. ಈ ಅಗ್ನಿಯೇ ಸ್ವಾಹಾಕರ್ತನಾದುದರಿಂದಲೂ, ಇವನೇ ಇದರ ಕೃತಿಯೂ ಆಗಿರುವುದರಿಂದಲೂ ಪಾರ್ಥಿವಾಗ್ನಿಯು ಈ ರೀತಿ ಕರೆಯಲ್ಪಟ್ಟಿದಾನೆ ಎಂದು **ಅಗ್ನೇಯಿಾ ಇತಿ ತು ಸ್ಥಿತಿಃ** (ನಿ. ೮–೨೨) ಎಂದು ನಿರುಕ್ತಕಾರರೂ ಬೃಹದ್ದೇವತಾಕಾರರೂ ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಸ್ವಾಹಾಕಾರಾತ್ಮಕವಾದ ಕೆಲವು ಆಪ್ರೀಸೂಕ್ತಗಳ ಕೊನೆಯ ಋಕ್ಕಿನಲ್ಲಿ ಪೂಷಾ, ಮರುತ್ತುಗಳು, ವಾಯು, ಸೂರ್ಯ, ಇಂದ್ರ, ವರುಣ ಮೊದಲಾದ ದೇವತೆಗಳೆಲ್ಲಾ ಸ್ತುತಿಸಲ್ಪಟ್ಟಿದಾರೆ. ಸ್ವಾಹಾ ಎಂಬ ಶಬ್ದಾಂತ್ಯವಾದ ಮಂತ್ರಗಳಿಂದ ದೇವತೆಗಳಿಗೆ ಹರ್ಷವಾಗುವುದರಿಂದ ಯಜ್ಞದಲ್ಲಿ ಸ್ವಾಹಾಶಬ್ದಕ್ಕೆ ಮಹತ್ತ್ವವಾದ ಸ್ಥಾನವಿದೆ.

# ನೂರ ಹನ್ನೊಂದನೆಯ ಸೂಕ್ತವು.

## ಪೀಠಿಕೆ

ಋಗ್ವೇದದಲ್ಲಿ ಅಗ್ನಿಗೂ, ಇಂದ್ರನಿಗೂ ಇರುವ ಪ್ರಾಧಾನ್ಯತೆಯು ಬೇರೆ ಯಾವ ದೇವತೆಗೂ ಇಲ್ಲ. ಅದರಲ್ಲಿಯೂ ಸೂಕ್ತ ಮತ್ತು ಋಕ್ಕುಗಳ ಸಂಖ್ಯೆಯ ದೃಷ್ಟಿಯಿಂದ ಪರಿಶೀಲಿಸುವುದಾದರೆ ಇಂದ್ರನಿಗೇ ಪ್ರಥಮ ಸ್ಥಾನವು ದೊರೆಯುವುದು. ಸುಮಾರು ಒಟ್ಟು ಋಗ್ವೇದಸಂಹಿತೆಯಲ್ಲಿ ಕಾಲುಭಾಗದಷ್ಟು ಮಂತ್ರಗಳು ಇಂದ್ರನನ್ನೇ ಸ್ತುತಿಸುವವು. ಆದ್ದರಿಂದ ಇಂದ್ರನ ವಿಷಯವನ್ನು ವಿಸ್ತಾರವಾಗಿಯೂ, ವಿಮರ್ಶಾತ್ಮಕವಾಗಿಯೂ ತಿಳಿದುಕೊಳ್ಳುವುದು ಅವಶ್ಯಕವಾದ್ದರಿಂದ ಅದನ್ನೇ ಇಲ್ಲಿ ವಿವರಿಸುವೆವು. ಇಂದ್ರನು ಯಾರು ಎಂಬ ವಿಷಯದಲ್ಲಿ ಹಿಂದೆ ಗೃತ್ಸಮದ ಋಷಿಯು ಋ. ಸಂ. ೨-೧೨ನೆಯ ಸೂಕ್ತದಲ್ಲಿ ಸರಿಯಾದ ಪ್ರತ್ಯುತ್ತರವನ್ನು ಹೇಳಿದಾನೆ. ಅದನ್ನೇ ಇಲ್ಲಿ ಸೂಕ್ಷ್ಮವಾಗಿ ಹೇಳಿ ಇಂದ್ರನ ವಿಷಯದಲ್ಲಿ ಋಗ್ವೇದದಲ್ಲಿ ಕಂಡುಬರುವ ಸಂಗತಿಗಳನ್ನು ಹೇಳಲಾಗಿದೆ.

ಎಲೈ ಜನರೇ, ಯಾವನು ಉತ್ಪನ್ನನಾದೊಡನೆಯೇ ದೇವತೆಗಳಿಗೆ ಪ್ರಧಾನಭೂತನೂ, ಸ್ಥಿರಮನಸ್ಕನೂ, ದ್ಯೋತಮಾನನೂ ಆಗಿ ವೃತ್ರವಧಾದಿರೂಪವಾದ ಕರ್ಮದಿಂದ ಸಕಲ ದೇವತೆಗಳನ್ನೂ ಗೌರವಿಸಿ ರಕ್ಷಿಸಿದನೋ ಮತ್ತು ಯಾವನ ಶರೀರದ ಬಲದಿಂದ ದ್ಯಾವಾಪೃಥಿವಿಗಳೆರಡೂ ಭೀತಿಗೊಂಡವೋ ಸೇನಾರೂಪವಾದ ಬಲದ ಮಹತ್ತ್ವದೊಡನೆ ಕೂಡಿದ ಅವನೇ ಇಂದ್ರನು.

ಎಲೈ ಜನರೇ, ಯಾವನು ಅಲುಗಾಡುತ್ತಿದ್ದ ಪೃಥಿವಿಯನ್ನು ದೃಢವಾಗಿ ನಿಲ್ಲುವಂತೆ ಮಾಡಿದನೋ, ಯಾವನು ರೆಕ್ಕೆಗಳೊಡನೆ ಸರ್ವತ್ರ ಸಂಚರಿಸುತ್ತಿದ್ದ ಪರ್ವತಗಳನ್ನು ತನ್ನ ನಿಯಮನಕ್ಕೆ ಬಾಗಿ ಸ್ಥಿರವಾಗಿರುವಂತೆ ಮಾಡಿದನೋ, ಯಾವನು ವಿಸ್ತೃತವಾದ ಅಂತರಿಕ್ಷವನ್ನು ನಿರ್ಮಿಸಿದನೋ, ಯಾವನು ದ್ಯುಲೋಕವನ್ನು ತಡೆದು ನಿಲ್ಲಿಸಿದನೋ, ಅವನೇ ಇಂದ್ರನು.

ಎಲೈ ಜನರೇ, ಯಾವನು ಮೇಘವನ್ನು ಹನನಮಾಡಿ ಸಪ್ತಸಂಖ್ಯಾಕವೂ ಪ್ರವಹಿಸತಕ್ಕವೂ ಆದ ಗಂಗಾದಿ ನದಿಗಳನ್ನು ಪ್ರವಹಿಸುವಂತೆ ಮಾಡಿದನೋ, ಯಾವನು ವಲನೆಂಬ ಅಸುರನ ತಡೆಗೆ ಸಿಕ್ಕಿದ ಗೋವುಗಳನ್ನು ಬಿಡಿಸಿದನೋ ಯಾವನು ಮೇಘಗಳ ಮಧ್ಯಪ್ರದೇಶದಲ್ಲಿ ವಿದ್ಯುದ್ರೂಪದ ಅಗ್ನಿಯನ್ನು ಸೃಷ್ಟಿಸಿದನೋ ಮತ್ತು ಯಾವನು ಸಂಗ್ರಾಮಗಳಲ್ಲಿ ಅಪ್ರತಿಹತನಾಗಿರುತ್ತಾನೆಯೋ, ಅವನೇ ಇಂದ್ರನು.

ಎಲೈ ಜನರೇ, ಯಾವ ಇಂದ್ರನಿಂದ ನಶ್ವರವಾದ ಈ ಲೋಕವೆಲ್ಲವೂ ಸ್ಥಿರವಾಗಿರುವಂತೆ ನಿರ್ಮಿತವಾದವೋ, ಯಾವನು ನಾಶಕನಾದವನೂ ನಿಕೃಷ್ಟನಾದವನೂ ಆದ ಅಸುರನನ್ನು ನರಕರೂಪವಾದ ಗುಹೆಯಲ್ಲಿ ಇರುವಂತೆ ಮಾಡಿದನೋ ಮತ್ತು ತಾನು ಗುರಿಯಿಟ್ಟ ಶತ್ರುವನ್ನು ಜಯಿಸಿದನೋ ಮತ್ತು ಬೇಡನು ಮೃಗವನ್ನು ಸ್ವಾಧೀನಪಡಿಸಿಕೊಳ್ಳುವಂತೆ ಯಾರು ಶತ್ರುವಿನ ಸಮೃದ್ಧವಾದ ಸಂಪತ್ತುಗಳನ್ನು ತನ್ನಧೀನವಾದುದನ್ನಾಗಿ ಮಾಡಿಕೊಂಡನೋ ಅವನೇ ಇಂದ್ರನು.

ಆ ಇಂದ್ರನು ಎಲ್ಲಿರುವನು ಎಂದು ಶತ್ರುವಿಗೆ ಭಯಂಕರನಾದ ಯಾವನ ವಿಷಯದಲ್ಲಿ ಪ್ರಶ್ನಿಸುತ್ತಾರೆಯೋ, ಅಂತಹ ಇಂದ್ರನ ವಿಷಯದಲ್ಲಿ ಅವನು ಒಂದೇಕಡೆಯಲ್ಲಿರುವುದಿಲ್ಲವೆಂದು ತಿಳಿದವರು ಹೇಳುತ್ತಾರೆ ಅದೇ ಇಂದ್ರನು

ಉದ್ವೇಜಕನಾಗಿ ಶತ್ರುವಿಗೆ ಸೇರಿದವೂ ಅವನಿಗೆ ಪೋಷಕಗಳೂ ಆದ ಗವಾಶ್ವಾದಿಗಳನ್ನು ಸುತ್ತಲೂ ಹಿಂಸಿಸುತ್ತಾನೆ. ಎಲೈ ಜನರೇ, ಇಂತಹ ಮಹಾತ್ಮನಾದ ಇಂದ್ರನಲ್ಲಿ ಶ್ರದ್ಧೆಯನ್ನಿಡಿ.

ಎಲೈ ಜನರೇ, ಯಾವನು ಧನಿಕನಿಗೂ, ದರಿದ್ರನಿಗೂ, ಅವನನ್ನು ಯಾಚಿಸುವವನಿಗೂ, ಸ್ತುತಿಕಾರನಾದ ಋತ್ವಿಕ್ಕಿಗೂ ಏಕಪ್ರಕಾರವಾಗಿ ಧನವನ್ನು ಒದಗಿಸುತ್ತಾನೆಯೋ, ಯಾರು ಶ್ರೇಷ್ಠವಾದ ಕೆನ್ನೆಯುಳ್ಳವನಾಗಿರುವನೋ ಮತ್ತು ರಸವನ್ನು ಹಿಂಡುವ ಕಲ್ಲನ್ನು ಕೈಯ್ಯಲ್ಲಿ ಹಿಡಿದಿರುವವನೂ, ಸೋಮರಸವನ್ನು ಹಿಂಡಿರುವವನೂ ಆದ ಯಜಮಾನನ ರಕ್ಷಕನಾಗಿರುತ್ತಾನೆಯೋ ಅವನೇ ಇಂದ್ರನು.

ಎಲೈ ಜನರೇ, ಯಾವ ಸರ್ವಾಂತರ್ಯಾಮಿಯಾದವನ ಅನುಶಾಸನದಲ್ಲಿ ಅಶ್ವಗಳೂ, ಗೋವುಗಳೂ, ಗ್ರಾಮಗಳೂ ಮತ್ತು ಸಕಲ ರಥಗಳೂ ಇವೆಯೋ, ಯಾವನು ವೃತ್ರನನ್ನು ಸಂಹರಿಸಿ ಸೂರ್ಯನನ್ನೂ ಉಷಸ್ಸನ್ನೂ ಸೃಷ್ಟಿಸಿದನೋ, ಯಾರು ಮೇಘವನ್ನು ಭೇದಿಸಿ ಉದಕಗಳಿಗೆ ಪ್ರೇರಕನಾಗಿದ್ದಾನೆಯೋ ಅವನೇ ಇಂದ್ರನು.

ಎಲೈ ಜನರೇ, ದೇವಸೇನೆಯೂ ಮಾನವಸೇನೆಯೂ ಒಟ್ಟಿಗೆ ಶಬ್ದಮಾಡಿಕೊಂಡು ಯಾವನನ್ನು ರಕ್ಷಣಾರ್ಥವಾಗಿ ಕರೆಯುತ್ತವೆಯೋ ಮತ್ತು ಉತ್ಕೃಷ್ಟರೂ ಅಧಮರೂ ಆದ ಶತ್ರುಗಳೂ ಸಹ ಕರೆಯುತ್ತಾರೆಯೋ, ಮತ್ತು ಇಂದ್ರರಥಕ್ಕೆ ಸದೃಶವಾದ ರಥವನ್ನು ಹತ್ತಿ ಕುಳಿತಿರುವ ಮತ್ತು ಇಬ್ಬರು ರಥಿಕರೂ (ರಕ್ಷಣಾರ್ಥವಾಗಿ) ಯಾರನ್ನು ಬೇರೆಬೇರೆಯಾಗಿ ಕರೆಯುತ್ತಾರೆಯೋ, ಅವನೇ ಇಂದ್ರನು.

ಎಲೈ ಜನರೇ, ಯಾವನನ್ನು ಬಿಟ್ಟು ಜನರು ಜಯವನ್ನು ಪಡೆಯಲಾರರೋ ಆದುದರಿಂದಲೇ, ಯುದ್ಧದಲ್ಲಿ ನಿರತರಾಗಿರುವವರು ರಕ್ಷಣಾರ್ಥವಾಗಿ ಯಾರನ್ನು ಕರೆಯುತ್ತಾರೆಯೋ, ಯಾವನು ಸಕಲ ಜಗತ್ತಿನ ಪ್ರತಿನಿಧಿಯಾಗಿರುವನೋ ಮತ್ತು ಯಾವನು ಅಚಲಿತವಾದ ಪರ್ವತಾದಿಗಳನ್ನು ಚಲಿಸುವಂತೆ ಮಾಡಿದನೋ ಅವನೇ ಇಂದ್ರನು.

ಎಲೈ ಜನರೇ, ಯಾವನು ಮಹತ್ತಾದ ಪಾಪವನ್ನು ಹೊತ್ತಿರುವವರೂ, ಬಹುಸಂಖ್ಯಾಕರೂ, ಅಹಂಕಾರದಿಂದ ಕೂಡಿದವರೂ ಆದ ಜನರನ್ನು ವಜ್ರಾಯುಧದಿಂದ ಕೊಂದನೋ, ಯಾವನು ಅನಾತ್ಮಜ್ಞನಿಗೆ ಉತ್ಸಾಹಕಾರಕವಾದ ಸಹಾಯವನ್ನು ಕೊಡುವುದಿಲ್ಲವೋ, ಯಾವನು ಕ್ಷಯಕಾರಕನಾದ ಶತ್ರುವಿನ ನಾಶಕನಾಗಿರುವನೋ ಅವನೇ ಇಂದ್ರನು.

ಎಲೈ ಜನರೇ, ಪರ್ವತಗಳಲ್ಲಿ ತಲೆಮರೆಸಿಕೊಂಡು ನಲವತ್ತು ವರ್ಷಗಳಕಾಲ ವಾಸಿಸುತ್ತಿದ್ದ ಶಂಬರನೆಂಬ ಅಸುರನನ್ನು ಹುಡುಕಿ ಯಾವನು ಕೊನೆಗೆ ಕಂಡುಹಿಡಿದನೋ, ಬಲಶಾಲಿಯಾಗಿಯೂ, ಹಂತಕನಾಗಿಯೂ ಇದ್ದ ಆ ದಾನವನನ್ನು ಯಾವನು ಕೊಂದನೋ ಅವನೇ ಇಂದ್ರನು.

ಎಲೈ ಜನರೇ, ಯಾರು ಸಪ್ತಸಂಖ್ಯಾಕವಾದ ರಶ್ಮಿಯುಳ್ಳವನೂ, ವೃಷ್ಟಿಯನ್ನು ಸುರಿಸುವವನೂ, ಬಲಶಾಲಿಯೂ ಆಗಿ ಗಂಗಾದಿ ಸಪ್ತನದಿಗಳನ್ನು ಪ್ರವಹಿಸುವುದಕ್ಕಾಗಿ ಅಹಿಯಿಂದ ಬಿಡಿಸಿದನೋ, ಯಾರು ವಜ್ರಾಯುಧವನ್ನು ಕೈಯ್ಯಲ್ಲಿ ಹಿಡಿದವನಾಗಿ ದ್ಯುಲೋಕವನ್ನು ಹತ್ತುತ್ತಿದ್ದ ರೌಹಿಣನೆಂಬ ಅಸುರನನ್ನು ಕೊಂದನೋ ಅವನೇ ಇಂದ್ರನು.

ಈ ಇಂದ್ರನಿಗೆ ದ್ಯಾವಾಪೃಥಿವಿಗಳೆರಡೂ ವಿನಯದಿಂದ ನಮಸ್ಕರಿಸುವುವು ಮತ್ತು ಈ ಇಂದ್ರನ ಬಲದಿಂದಲೇ ಪರ್ವತಗಳು ಭಯಪಡುತ್ತವೆ. ಯಾವನು ಸೋಮರಸವನ್ನು ಪಾನಮಾಡುವವನಾಗಿಯೂ, ದೃಢಕಾಯನಾಗಿಯೂ, ವಜ್ರಾಯುಧಕ್ಕೆ ಸಮಾನವಾದ ಬಾಹುಗಳುಳ್ಳವನಾಗಿಯೂ ಇರುವನೋ, ಯಾವನು ಕೈಯ್ಯಲ್ಲಿ ವಜ್ರಾಯುಧವನ್ನು ಹಿಡಿದಿರುವನೋ ಅವನೇ ಇಂದ್ರನು

ಎಲೈ ಜನರೇ, ಯಾರು ಸೋಮರಸವನ್ನು ಹಿಂಡುವ ಯಜಮಾನನನ್ನು ರಕ್ಷಿಸುತ್ತಾನೆಯೋ, ಯಾರು ಪುರೋಡಾಶಾದಿಗಳನ್ನು ಪಕ್ವಮಾಡುವವನನ್ನು ರಕ್ಷಿಸುವನೋ, ಯಾರು ರಕ್ಷಣಾರ್ಥವಾಗಿ ಯಾಚಿಸುವವರನ್ನು ರಕ್ಷಿಸುವನೋ, ಯಾರು ಸ್ತುತಿಕರ್ತರನ್ನು ರಕ್ಷಿಸುವನೋ ಮತ್ತು ಯಾರಿಗೆ ಸ್ತೋತ್ರವೂ, ಸೋಮರಸವೂ, ಪುರೋಡಾಶಾದ್ಯನ್ನಗಳೂ, ವೃದ್ಧಿಕಾರಕವೂ ಆಗಿವೆಯೋ ಅವನೇ ಇಂದ್ರನು.

ಎಲೈ ಇಂದ್ರನೇ, ಅಪ್ರತಿಹತನಾದ ಯಾವನು ಸೋಮರಸವನ್ನು ಹಿಂಡುವವನೂ, ಪುರೋಡಾಶಾದಿಗಳನ್ನು ಪಕ್ವಮಾಡುವವನೂ ಆದ ಯಜಮಾನನಿಗೆ ಅನ್ನವನ್ನೂ, ಬಲವನ್ನೂ ಪ್ರಭೂತವಾಗಿ ಕೊಡುವನೋ ಅಂತಹ ನೀನು ಸತ್ಯಾತ್ಮಕನಾಗಿ ಆಗಿದ್ದೀಯಲ್ಲವೇ ? ನಿನಗೆ ಪ್ರಿಯರಾದವರೂ, ನಿನ್ನ ಅನುಗ್ರಹದಿಂದ ಕಲ್ಯಾಣಾತ್ಮಕರಾದ ಪುತ್ರಪೌತ್ರಾದಿಗಳಿಂದ ಕೂಡಿದವರೂ ಆದ ನಾವು ಸಕಲ ದಿನಗಳಲ್ಲಿಯೂ ಸ್ತೋತ್ರವನ್ನು ಪಠಿಸುತ್ತೇವೆ.

## ಇಂದ್ರನ ಉತ್ಪತ್ತಿ ; ಮಾತಾಪಿತೃಗಳು ಮತ್ತು ತತ್ಪತ್ನೀ.

ಅತ್ಯಂತ ಶ್ರೇಷ್ಠವಾದುದೂ ಕಾವ್ಯಾತ್ಮಕವಾದುದೂ ಆದ ಶೈಲಿಯಲ್ಲಿ ಇಂದ್ರನ ಮಾಹಾತ್ಮ್ಯವು ವರ್ಣಿತವಾಗಿದ್ದರೂ ಸಹ ಇಂದ್ರನು ಜನ್ಮರಹಿತನಾದ ಪರದೈವನೆಂದು ಎಲ್ಲಿಯೂ ವರ್ಣಿತನಾಗಿಲ್ಲ. ಹಿಂದೆ ಅನೇಕ ಸಂದರ್ಭಗಳಲ್ಲಿ ಗಮನಿಸಿರುವಂತೆ ಇಂದ್ರನಿಗೆ ಮಾತೃವೂ ಪಿತೃವೂ ನಿರ್ದಿಷ್ಟರಾಗಿದ್ದಾರೆ. ಮತ್ತು ಇಂದ್ರನ ಉತ್ಪತ್ತಿಸ್ವರೂಪವೂ ಸಹ ಅನೇಕಕಡೆಗಳಲ್ಲಿ ಅತಿ ವಿಸ್ತೃತವಾಗಿ ಪ್ರಶಂಸಿಸಲ್ಪಟ್ಟಿದೆ. ಉದಾಹರಣೆಗೆ, ಕೆಳಗೆ ಉದಾಹೃತವಾಗುವ ಕೆಲವು ಮಂತ್ರಗಳಲ್ಲಿ ಇಂದ್ರನ ಜನ್ಮದ ವಿಷಯವನ್ನು ತಿಳಿಸಿದೆ.

" ಎಲೈ ಇಂದ್ರನೇ, ನೀನು ಉತ್ಪನ್ನನಾದ ದಿನವೇ, ಪರ್ವತಪ್ರಾಂತದಲ್ಲಿ ಹುಟ್ಟಿದ ಸೋಮಲತೆಯ ರಸವನ್ನು ಕುಡಿದು ಅದರಲ್ಲಿ ನಿನ್ನ ಆದರಾತಿಶಯವನ್ನು ತೋರಿಸಿವೆ. ನಿನ್ನನ್ನು ಹಡೆದವಳೂ ತರುಣಿಯೂ ಆದ ನಿನ್ನ ಮಾತೆಯು ಮಹತ್ಪ್ರಭಾವವುಳ್ಳ ನಿನ್ನ ಜನಕನ ಗೃಹದಲ್ಲಿ ನಿನಗೆ ಆ ಸೋಮರಸವನ್ನು ಕೊಟ್ಟು ತೃಪ್ತಿಪಡಿಸಿದಳು. ಇದೇ ಇಂದ್ರನು ಉತ್ಪನ್ನನಾದೊಡನೆಯೇ ತನ್ನ ಮಾತೆಯನ್ನು ಸಮೀಪಿಸಿದಾಗ ಅವಳ ಸ್ತನದಲ್ಲಿ ಸೋಮರಸವನ್ನು ಕಂಡುಕೊಂಡನು "

(೩-೪೮-೨, ೩)

" ಎಲೈ ಇಂದ್ರನೇ. ಅಂತರಿಕ್ಷವು ನಿರೀಕ್ಷಿಸಿದಂತೆ ನಿನ್ನ ಪಿತೃವು ಅತ್ಯಂತ ದೃಢಕಾಯನು ಅಂತರಿಕ್ಷದಲ್ಲಿ ಗರ್ಜಿಸುವವನೂ, ಪೃಥ್ವಿಯಂತೆ ಸ್ಥಿರನೂ ಆದ ಇಂದ್ರನ ಜನಕನು ಅತ್ಯಂತ ಕುಶಲನಾದ ಕರ್ಮಕರ್ತನು. ಇಂದ್ರನಿಗೆ ತನ್ನ ಪಿತೃವಿನಲ್ಲಿಯೂ ಮತ್ತು ಮಾತೃವಿನಲ್ಲಿಯೂ ಅತ್ಯತಿಶಯವಾದ ಭಕ್ತಿಯಿರುತ್ತದೆ.

(೪-೧೭-೪)

" ಹಿಂದೆಲ್ಲಾ ದೇವತೆಗಳೂ ಯಾವುದರಮೂಲಕ ಜನಿಸಿದರೋ, ಇದೂ (ಯೋನಿಯು) ಸಹ ಅದೇ ಪ್ರಾಚೀನವಾದ ದ್ವಾರವಾಗಿರುತ್ತದೆ. ಪೂರ್ಣವಾಗಿ ಬೆಳೆದಿರುವ ಗರ್ಭವು ಈ ದ್ವಾರದಿಂದಲೇ ಹೊರಕ್ಕೆ ಬರಲಿ, ಇದರಿಂದ ಉತ್ಪನ್ನನಾಗತಕ್ಕ ಇಂದ್ರನು ಅನವಶ್ಯವಾಗಿ ತನ್ನ ಮಾತೆಯನ್ನು ಹಿಂಸಿಸದಿರಲಿ."

(೪.೧೮.೧)

ಇಂದ್ರನ ಉತ್ಪತ್ತಿಯು ದೋಷಪ್ರಕಾಶಕವಾಗುವುದೆಂದರಿತು ಇಂದ್ರಮಾತೆಯು ಅವನನ್ನು ಮರೆಸಿಟ್ಟಳು ಅತ್ಯಂತ ಶಕ್ತಿಯುತನಾದ ಅವನು ಅತ್ಯಂತ ಆಕರ್ಷಕವಾದ ಶಸ್ತ್ರಧಾರಿಯಾಗಿ ತಾನೇ ಉದಯಿಸಿ, ಆ ಒಡನೆಯೇ ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿದನು. (೪-೧೮-೫)

ಅತ್ಯಂತ ಶಕ್ತಿಯುತನೂ, ದೃಢಕಾಯನೂ, ಅಪ್ರತಿಹತವಾದ ಶಕ್ತಿಯುಳ್ಳವನೂ, ವೀರ್ಯವಂತನೂ, ಪುಷ್ಟನೂ ಆದ ಇಂದ್ರನು, ತಾನೇ ಸ್ವತಂತ್ರವಾಗಿ ಸಂಚರಿಸಿ ತನ್ನಶಕ್ತಿಯನ್ನು ಪ್ರಕಟಿಸಲೆಂದು ಅವನನ್ನು ಅವನ ಮಾತೆಯು ಗೋವು ವತ್ಸವನ್ನು ಹಡೆದಂತೆ ಪ್ರಸವಿಸಿದಳು. (೪-೧೮-೧೦)

ಮಹಚ್ಛಕ್ತಿಯುಳ್ಳ ಇಂದ್ರನು ಉತ್ಪನ್ನನಾದಾಗ ಅವನ ಮಾತೆಯು ಅವನನ್ನು ಕುರಿತು "ಎಲೈ ಪುತ್ರನೇ, ಈ ದೇವತೆಗಳು ಯಾರೂ ನಿನಗೆ ಸಹಾಯಮಾಡದೇ ಎಲ್ಲರೂ ನಿನ್ನನ್ನು ತ್ಯಜಿಸಿದರು" ಎಂದು ಪುತ್ರನಮೇಲಿನ ಅಭಿಮಾನ ದಿಂದ ಎಚ್ಚರಿಸಿದಳು. ಆಗ ಇಂದ್ರನು "ಎಲೈ ವಿಷ್ಣುವೇ, ವೃತ್ರಾಸುರನನ್ನು ಹನನಮಾಡುವ ಆವಶ್ಯಕತೆಯಿರುವುದ ರಿಂದ ನೀನು ಲೋಕಗಳನ್ನೆಲ್ಲಾ ವ್ಯಾಪಿಸುವ ಸ್ವರೂಪವನ್ನೂ ಶಕ್ತಿಯನ್ನೂ ಹೊಂದುವವನಾಗು." ಎಂದು ತಿಳಿಸಿದನು. (೧-೧೮-೧೧)

ಎಲೈ ಇಂದ್ರನೇ, ನಿನ್ನ ಮಾತೆಯನ್ನು ವಿಧವೆಯನ್ನಾಗಿ ಮಾಡಿದವರಾರು ? ನೀನು ಸುಪ್ತನಾಗಿರುವಾಗಾಗಲಿ ಅಥವಾ ಸಂಚರಿಸುವಾಗಾಗಲಿ, ನಿನ್ನನ್ನು ಸಂಹರಿಸಬೇಕೆಂದಿಚ್ಛಿಸಿದವರಾರು ? ನಿನ್ನ ಪಿತೃವನ್ನು ಪಾದದಿಂದ ಹಿಡಿದು ಹಿಂಸಿಸಿದಾಗ ನಿನ್ನ ಸಮೀಪದಲ್ಲಿದ್ದ ದೇವತೆಯಾರು ?

(೪-೧೮-೧೨).

" ವೀರ್ಯವಂತನಾದ ಪಿತೃವು ಯುದ್ಧದಲ್ಲಿ ಶತ್ರುನಾಶಕ್ಕೆ ತಕ್ಕ ವೀರ್ಯವುಳ್ಳ ಪುತ್ರನನ್ನು ಉತ್ಪನ್ನಮಾಡಿದನು ತೇಜೋಯುತಳಾದ ನಾರಿಯು ತೇಜಸ್ವಿಯಾದ ಪುತ್ರನನ್ನು ಹಡೆದಳು."

(೭-೨೦-೫)

" ಎಲೈ ಇಂದ್ರನೇ, ನೀನು ಉತ್ಪನ್ನನಾದೊಡನೆಯೇ, ನಿನ್ನ ಶಕ್ತಿಸಂಪಾದನೆಗಾಗಿ ಸೋಮವನ್ನು ಪಾನ ಮಾಡಿದೆ. ನಿನ್ನ ತಾಯಿಯು ನಿನ್ನ ಮಹತ್ತ್ವವನ್ನು ಪ್ರಕಾಶಪಡಿಸಿದಳು."

(೭-೯೮-೩)

" ಅಪ್ರತಿಹತವಾದ ಶಕ್ತಿಯನ್ನು ಪ್ರಕಾಶಪಡಿಸಲು ನೀನು ಭಯಂಕರಸ್ವರೂಪವುಳ್ಳವನಾಗಿ ಜನಿಸಿದೆ. ಮತ್ತು ಕ್ರೋಧವನ್ನು ಪ್ರಕಟಿಸುತ್ತಾ ನಿನ್ನ ಅಭಿಮಾನಯುತವಾದ ಪರಾಕ್ರಮವನ್ನೂ ತಿಳಿಯಪಡಿಸಿ ನಿನ್ನ ಆತ್ಮವಿಶ್ವಾಸವನ್ನೂ ತೋರಿಸಿಕೊಂಡೆ. ಐಶ್ವರ್ಯಯುಕ್ತಳಾದ ಇಂದ್ರಮಾತೆಯು ಇಂದ್ರನನ್ನು ಹಡೆದಾಗ ಮರುತ್ತುಗಳು ಪ್ರಭಾವಯುತನಾದ ಈ ಇಂದ್ರನನ್ನು ಪ್ರವೃದ್ಧಮಾನನಾಗಿ ಬೆಳೆಯುವಂತೆ ಅವನನ್ನು ಉಪಚರಿಸಿ ಪೋಷಿಸಿದರು." (೧೦ ೭೩ ೧)

ಭಯಂಕರಸ್ವರೂಪನೂ, ಅಪ್ರತಿಹತವಾದ ಶಕ್ತಿಯುಳ್ಳವನೂ ಆದ ಈ ಇಂದ್ರನನ್ನು ಉತ್ಪನ್ನಮಾಡಿದ ದೇವನು ವಿಶ್ವದಲ್ಲೆಲ್ಲಾ ಅತ್ಯಧಿಕವಾದ ಪ್ರಭಾವವುಳ್ಳವನು. (೧೧-೨೦-೧)

" ಎಲೈ ಇಂದ್ರನೇ, ಉಷೋದೇವಿಯು ಜಗತ್ತನ್ನೆಲ್ಲಾ ವ್ಯಾಪಿಸುವಂತೆ, ನೀನೂ ಸಹ ದ್ಯಾವಾಪೃಥಿವಿಗಳ ನ್ನೆಲ್ಲಾ ವ್ಯಾಪಿಸಿ ನಿಂತಾಗ, ಜಗತ್ತಿನ ಪ್ರಜೆಗಳಲ್ಲೆಲ್ಲಾ ಉತ್ತಮ ಪ್ರಜೆಗಳಾದ ದೇವತೆಗಳಿಗೆಲ್ಲಾ ಪ್ರಭುವಾದ ನಿನ್ನನ್ನು ದೇವತಾತ್ಮಳೂ, ಮಹತ್ಸ್ವರೂಪವುಳ್ಳವಳೂ ಆದ ಮಾತೆಯು ನಿನ್ನನ್ನು ಪಡೆದಳು."

(೧೦-೧೩೪-೧)

" ನಮಗೆ ಹಿಂದೆಯೇ ತಿಳಿದಂತೆ, ಈ ಇಂದ್ರನು ನಿಷ್ಟಿಗ್ರಿಯ ಪುತ್ರನಾಗಿದ್ದಾನೆ. (ನಿಷ್ಟಿಗ್ರಿಯೆಂದರೆ ಅದಿತಿ ಯೆಂದು ಸಾಯಣರು ಅರ್ಥಮಾಡಿದ್ದಾರೆ). ೧೦-೧೦೧-೧೨)

ಪುರಾಣಾದಿಗಳಲ್ಲಿ ಇಂದ್ರನು ಆದಿತ್ಯರಲ್ಲೊಬ್ಬನೆಂದೂ, ವರುಣನ ಸಹಚಾರಿಯೆಂದೂ ಪ್ರಸಿದ್ಧನಾಗಿದ್ದರೂ ಸಹ (ಋ. ಸಂ. ೭-೮೫-೪) ಋಕ್ಸಂಹಿತೆಯ ಇತರ ಭಾಗಗಳಲ್ಲಿ ಈ ರೀತಿಯಿಂದ ಎಂದರೆ ಆದಿತ್ಯರಲ್ಲೊಬ್ಬನೆಂದು ಪ್ರಾಯಃ ವರ್ಣಿತನಾಗಿಲ್ಲ. ೪-೨೬-೧ರಲ್ಲೂ ಮನು ಮತ್ತು ಸೂರ್ಯ ಇವರೊಂದಿಗೆ ತಾದಾತ್ಮ್ಯವನ್ನು ತೋರಿಸಿದೆ. ೮.೮-೨.೧ ಮತ್ತು ೪ ; ೧೦.೮೯.೨ ಈ ಮಂತ್ರಗಳಲ್ಲಿ ಅವನು ಸೂರ್ಯಶಬ್ದವಾಚ್ಯನಾಗಿದ್ದಾನೆ. ೨-೩೦-೧ ರಲ್ಲಿ **ಸವಿತೃ** ಎಂಬ ವಿಶೇಷಣದಿಂದ ವರ್ಣಿತನಾಗಿದ್ದಾನೆ.

ಅಥರ್ವವೇದದಲ್ಲಿ ಇಂದ್ರನ ಪ್ರಭಾವದ ವರ್ಣನವು ಕೆಳಗೆ ಉದಹರಿಸಿರುವ ವಾಕ್ಯಗಳಿಂದ ಈ ರೀತಿ ವರ್ಣಿತವಾಗಿದೆ.

**ಏಕಾಷ್ಟಕಾ ತಪಸಾ ತಪ್ಯಮಾನಾ ಜಜಾನ ಗರ್ಭಂ ಮಹಿಮಾನಮಿಂದ್ರಂ ।**
**ತೇನ ದೇವಾ ಅಪಹಂತ ಶತ್ರೂನ್ ಹಂತಾ ದಸ್ಯೂನಾಮಭವಚ್ಛಚೀಪತಿಃ ॥**

**(ಅ. ವೇ. ೩-೧೦-೧೨)**

ಪ್ರಭಾವಯುತವಾದ ತಪಸ್ಸನ್ನಾಚರಿಸಿ ಏಕಾಷ್ಟಕೆಯು ಮಹತ್ತ್ವವುಳ್ಳ ಇಂದ್ರನನ್ನು ಹಡೆದಳು. ಈ ಇಂದ್ರನ ಸಹಾಯದಿಂದಲೇ ದೇವತೆಗಳು ತಮ್ಮ ಶತ್ರುಗಳನ್ನು ಜಯಿಸಿದರು. ಶಚೀಪತಿಯಾದ ಇಂದ್ರನು ದಸ್ಯುಹಂತಕನಾದನು

ಇದಕ್ಕೆ ಮುಂದಿನ ಋಕ್ಕಿನಲ್ಲಿ ಏಕಾಷ್ಟಕೆಯು ಇಂದ್ರ ಮತ್ತು ಸೋಮ ಇವರಿಬ್ಬರ ಮಾತೆಯೆಂದೂ ಪ್ರಜಾಪತಿಯ ದುಹಿತೆಯೆಂದೂ ನಿರ್ದಿಷ್ಟಳಾಗಿದ್ದಾಳೆ. ಅಥರ್ವವೇದದಲ್ಲಿ ಇಂದ್ರಮಾತೆಯು ಸಂಬೋಧಿತಳಾಗಿದ್ದಾಳೆ (೬.೩೮) ಆದರೆ ಅವಳ ನಾಮನಿರ್ದೇಶವಿಲ್ಲ. ದಕ್ಷಪುತ್ರಿಯೂ ಅದಿತಿಯೆಂಬ ಅಪರನಾಮವುಳ್ಳವಳೂ ಆದ ದಾಕ್ಷಾಯಣಿಯಲ್ಲಿ ಕಶ್ಯಪನಿಗೆ ಉತ್ಪನ್ನರಾದ ಪುತ್ರರಲ್ಲಿ ಇಂದ್ರನೂ ಒಬ್ಬನೆಂದು ಮಹಾಭಾರತದಲ್ಲಿ ತಿಳಿಸಿದೆ. (ಆ. ಪ.) ಅಥರ್ವವೇದದ ೮-೫೮-೪ ರಲ್ಲಿ ಸತ್ಯಪುತ್ರನೆಂದು (**ಸೂನುಂ ಸತ್ಯಸ್ಯ**) ಕರೆದಿದೆ

ಬೇರೊಂದು ಕಡೆಯಲ್ಲಿ, ಇಂದ್ರನು ಶತ್ರುನಾಶಕ್ಕಾಗಿ ದೇವತೆಗಳಿಂದ ಸೃಷ್ಟನಾದವನೆಂದು ತಿಳಿಸಿದೆ. (೩.೪೯-೧) **ಘನಂ ವೃತ್ರಾಣಾಂ ಜನಯಂತ ದೇವಾಃ.** (೨-೧೩.೫ ; ೩-೫೧.೮)

ಅಗ್ನಿಯೊಡನೆ ಇಂದ್ರನು ಪುರುಷನ ಮುಖದಿಂದ ಉತ್ಪನ್ನನಾದನೆಂದು ಪುರುಷಸೂಕ್ತದಲ್ಲಿ ತಿಳಿಸಿದೆ. (**ಮುಖಾದಿಂದ್ರಶ್ಚಾಗ್ನಿಶ್ಚ**).

(೧೦-೯೦-೧೩)

ಸೋಮನಿಂದ ಜನಿತರಾದ ದೇವತೆಗಳಲ್ಲಿ ಇಂದ್ರನೂ ಒಬ್ಬನೆಂದು ಋಕ್ಸಂಹಿತೆಯು ಬೇರೊಂದು ಕಡೆಯಲ್ಲಿ ನಿಷ್ಕೃಷ್ಟವಾಗಿ ತಿಳಿಸಿದೆ.

(೯-೯೬-೫)

ಇಂತಹ ಪರಾಕ್ರಮವುಳ್ಳ ಇಂದ್ರನು ತನ್ನ ತಪಃಪ್ರಭಾವದಿಂದ ಸ್ವರ್ಗವನ್ನು ಜಯಿಸಿದನು.

(೧೦-೧೬೭-೧)

ಶತಪಥಾದಿಬ್ರಾಹ್ಮಣಗಳಲ್ಲಿ ಇಂದ್ರನ ಉತ್ಪತ್ತಿವಿಷಯಕವಾದ ಕಥೆಯು ಬೇರೆ ಬೇರೆ ವಿಧಗಳಲ್ಲಿ ವಿವೃತವಾಗಿದೆ. ಉದಾಹರಣೆಗೆ ಶತಪಥಬ್ರಾಹ್ಮಣದ ವಿವರಣವು ಈ ರೀತಿಯಿರುತ್ತದೆ.

**ತಾ ವಾ ಏತಾಃ ಪ್ರಜಾಪತೇರಧಿ ದೇವತಾಃ ಅಸೃಜ್ಯಂತ ಅಗ್ನಿರಿಂದ್ರಃ ಸೋಮಃ ಪರಮೇಷ್ಠೀ ಪ್ರಾಜಾಪತ್ಯಃ । ತಾಃ ಸಹಸ್ರಾಯುಷೋ ಜಜ್ಞಿರೇ । ತಾ ಯಥಾ ನದ್ಯೈ ಪಾರಂ ಪರಾಪಶ್ಯೇದೇವಂ ಸ್ವಸ್ಯಾಯುಷಃ ಪಾರಂ ಪರಾಚಖ್ಯುಃ ॥**

(ಶ. ಬ್ರಾ. ೧೧.೧.೬.೧೪)

ಅಗ್ನಿ, ಇಂದ್ರ, ಸೋಮ ಮತ್ತು ಪಾರಮೇಷ್ಠಿಪ್ರಾಜಾಪತ್ಯ ಇವರೆಲ್ಲರೂ ಪ್ರಜಾಪತಿಯಿಂದ ಸೃಷ್ಟರಾದ ದೇವತೆಗಳು. ಇವರೆಲ್ಲರೂ ಸಹಸ್ರಾಯುವುಳ್ಳವರಾಗಿ ಉತ್ಪನ್ನರಾದರು. ನದಿಯ ಆಚೆ ದಡವನ್ನು ಪುರುಷನಾದವನು ಯಾವ ರೀತಿಯಲ್ಲಿ ನೋಡಬಲ್ಲನೋ ಅದೇರೀತಿಯಲ್ಲಿ ಇವರೆಲ್ಲರೂ ತಮ್ಮ ಆಯುಸ್ಸಿನ ಅಂತರಕ್ಕಿಂತಲೂ ಆಚೆ ನೋಡಬಲ್ಲ ಸಾಮರ್ಥ್ಯವುಳ್ಳವರಾಗಿದ್ದರು ಎಂದಿದೆ. ತೈತ್ತಿರೀಯಬ್ರಾಹ್ಮಣದ ವಿವರಣವು ಇಂದ್ರನ ಉತ್ಪತ್ತಿಯ ವಿಷಯವನ್ನು ಈರೀತಿ ತಿಳಿಸುತ್ತದೆ—

**ಪ್ರಜಾಪತಿರ್ದೇವಾಸುರಾನಸೃಜತ । ಸ ಇಂದ್ರಮಪಿ ನಾ ಸೃಜತ । ತಂ ದೇವಾ ಅಬ್ರುವನ್ । ಇಂದ್ರಂ ನೋ ಜನಯೇತಿ । ಸೋಽಬ್ರವೀತ್ । ಯಥಾಹಂ ಯುಷ್ಮಾಗ್ ಸ್ತಪಸಾಸೃಕ್ಷಿ । ಏವಮಿಂದ್ರಂ ಜನಯಧ್ವಮಿತಿ । ತೇ ತಪೋಽತಪ್ಯಂತ । ತ ಆತ್ಮನ್ನಿಂದ್ರಮಪಶ್ಯನ್ । ತಮಬ್ರುವನ್ । ಜಾಯಸ್ವೇತಿ । ಸೋಽಬ್ರವೀತ್ । ಕಿಂಭಾಗಧೇಯಮಭಿ ಜನಿಷ್ಯ ಇತಿ । ಋತೂನ್ತ್ಸಂವತ್ಸರಂ । ಪ್ರಜಾಃ ಪಶೂನ್ । ಇಮಾನ್ಲೋಕಾನಿತ್ಯಬ್ರುವನ್ । ತಂ ವೈ ಮಾಹುತ್ಯಾಪ್ರಜನಯತೇತ್ಯಬ್ರವೀತ್ । ತಂ ಚತುರ್ಹೋತ್ರಾ ಪ್ರಾಜನಯನ್ ।**

(ತೈ. ಬ್ರಾ. ೨–೨-೩-೨, ೪).

ಪ್ರಜಾಪತಿಯು ದೇವತೆಗಳನ್ನೂ ಅಸುರರನ್ನೂ ಸೃಷ್ಟಿಸಿದನು. ಇಂದ್ರನನ್ನು ಮಾತ್ರ ಸೃಷ್ಟಿಸಲಿಲ್ಲ ಆಗ ಅವರು ಪ್ರಜಾಪತಿಯನ್ನುದ್ದೇಶಿಸಿ “ ನಮಗಾಗಿ ಇಂದ್ರನನ್ನು ಸೃಷ್ಟಿಸು ” ಎಂದು ಪ್ರಾರ್ಥಿಸಿದರು. ಆಗ ಅವನು ದೇವತೆಗಳನ್ನು ಕುರಿತು “ ಯಾವರೀತಿ ನಾನು ನನ್ನ ತಪಃಪ್ರಭಾವದಿಂದ ನೀವೆಲ್ಲರೂ ಉತ್ಪನ್ನರಾಗುವಂತೆ ಮಾಡಿದೆನೋ, ಅದೇ ರೀತಿ ನೀವೂ ಸಹ ತಪಃಕ್ಲೇಶದ ಫಲವಾಗಿ ಇಂದ್ರನನ್ನು ಸೃಷ್ಟಿಸಿರಿ ” ಎಂದನು. ಆಗ ಆ ದೇವತೆಗಳೆಲ್ಲರೂ ತಪಸ್ಸನ್ನಾಚರಿಸಿದರು. ಆಗ ಇಂದ್ರನನ್ನು ತಮ್ಮಲ್ಲೇ ಕಂಡುಕೊಂಡರು. ನಂತರ ಹವಿರ್ಭಾಗವನ್ನು ಹೊಂದುವಂತೆ ತಿಳಿಸಿದರು ಆಗ ಇಂದ್ರನು “ ನಾನು ಯಾವ ಉದ್ದಿಶ್ಯಕ್ಕಾಗಿ ಹೊರಗೆ ಆವಿರ್ಭೂತನಾಗಬೇಕೆಂದನು. ಆಗ ಅವರು “ ಋತು ಪೋಷಣೆಗೂ ಸಂವತ್ಸರ, ಸಕಲಭೂತಗಳು ಸಕಲಲೋಕಗಳು ಇವುಗಳೆಲ್ಲದರ ಸಂರಕ್ಷಣೆಗಾಗಿಯೂ ನೀನು ಉತ್ಪನ್ನನಾಗ ತಕ್ಕದ್ದು ” ಎಂದರು. ಆದರೆ, ಇದೇ ಬ್ರಾಹ್ಮಣದ ಬೇರೊಂದು ಕಡೆಯಲ್ಲಿ ಇಂದ್ರನ ಉತ್ಪತ್ತಿಯ ವಿಷಯದಲ್ಲಿ ಸ್ವಲ್ಪ ವ್ಯತ್ಯಸ್ತವಾದ ವಿವರಣೆಯಿರುತ್ತದೆ. ಆದರ ವಿವರಣೆಯು ಇರೀತಿಯಿದೆ—

**ಪ್ರಜಾಪತಿರಿಂದ್ರಮಸೃಜತಾನುಜಾವರಂ ದೇವಾನಾಂ । ತಂ ಪ್ರಾಹಿಣೋತ್ । ಪರೇಹಿ । ಏತೇಷಾಂ ದೇವಾನಾಮಧಿಪತಿರೇಧೀತಿ । ತಂ ದೇವಾ ಅಬ್ರುವನ್ । ಕಸ್ತ್ವಮಸಿ । ವಯಂ ವೈ ತ್ವಚ್ಛ್ರೇಯಾಗ್ಂಸಸ್ಮ ಇತಿ । ಸೋಽಬ್ರವೀತ್ । ಕಸ್ತ್ವಮಸಿ ವಯಂ ವೈ ತ್ವಚ್ಛ್ರೇಯಾಗ್ಂಸಸ್ಸ ಇತಿ ಮಾ ದೇವಾ ಅವೋಚನ್ನಿತಿ । ಅಥ ವಾ ಇದಂ ತರ್ಹಿ ಪ್ರಜಾಪತೌ ಹರ ಆಸೀತ್ । ಯದಸ್ಮಿನ್ನಾದಿತ್ಯೇ । ತದೇನಮಬ್ರವೀತ್ । ಏತನ್ಮೇ ಪ್ರಯಚ್ಛ । ಅಥಾ-**

**ಹನೋಽತೇಷಾಂ ದೇವಾನಾಮಧಿಪತಿರ್ಭವಿಷ್ಯಾಮೀತಿ.... .... ತತೋ ವಾ ಇಂದ್ರೋ ದೇವಾ-**

**ನಾಮಧಿಪತಿರಭವತ್ ॥**

(ತೈ. ಬ್ರಾ. ೨-೨-೧೦ ೧, ೨)

ಪ್ರಜಾಪತಿಯು ದೇವತೆಗಳನ್ನೆಲ್ಲಾ ಸೃಷ್ಟಿಸಿದನಂತರ ಇಂದ್ರನನ್ನು ಕೊನೆಯವನನ್ನಾಗಿ ಸೃಷ್ಟಿಸಿ ಅವನನ್ನು ಉಳಿದ ದೇವತೆಗಳಿಗೆಲ್ಲಾ ಪ್ರಭುವಾಗಿರುವಂತೆ ಮಾಡಿದನು. ಆಗ ದೇವತೆಗಳು ಇಂದ್ರನನ್ನು ಸಂಬೋಧಿಸಿ " ನೀನು ಯಾರು? ನಾವೆಲ್ಲರೂ ನಿನಗಿಂತಲೂ ಉತ್ಕೃಷ್ಟರಾಗಿರುವಾಗ ನೀನು ಹೇಗೆ ನಮಗೆಲ್ಲಾ ಪ್ರಭುವಾಗಿರಬಲ್ಲೆ " ಎಂದರು. ಆಗ ಇಂದ್ರನು ಈ ಸಂದರ್ಭವನ್ನು ತಿಳಿಸಿ ದೇವತೆಗಳಿಗೆಲ್ಲಾ ಪ್ರಭುವಾಗಲು ಅರ್ಹತೆಯನ್ನು ಕೊಡತಕ್ಕ ಪ್ರಜಾಪತಿಯ ಪ್ರಭಾವವನ್ನು ತನಗೆ ಒದಗಿಸುವಂತೆ ಪ್ರಜಾಪತಿಯನ್ನು ಬೇಡಿದನು. ಅನಂತರ ಆವರ ಪ್ರಭುತ್ವವನ್ನು ಪಡೆದನು ಎಂದಿದೆ. ತೈತ್ತಿರೀಯಸಂಹಿತೆಯಲ್ಲಿ,

**ಇಂದ್ರೋ ವೈ ದೇವಾನಾಮಾನುಜಾವರ ಆಸೀತ್ಸ ಪ್ರಜಾಪತಿಮುಪಾಧಾವತ್ತಸ್ಮಾ ಏತಗ್ಂ ಷೋಡಶಿನಂ ಪ್ರಾಯಚ್ಛತ್ತಮಗೃಹ್ಣೀತ ತತೋ ವೈ ಸೋಽಗ್ರಂ ದೇವತಾನಾಂ ಪರ್ಯೈತ್**

(ತೈ. ಸಂ ೬.೬-೧೧-೨)

ಇಂದ್ರನು ದೇವತೆಗಳಲ್ಲೆಲ್ಲಾ ಅತಿಕನಿಷ್ಠನಾಗಿದ್ದನು. ಆಗ ಪ್ರಜಾಪತಿಯಲ್ಲಿಗೆ ಹೋಗಿ ಅವನ ಸಹಾಯವನ್ನು ಪಡೆದು ದೇವತೆಗಳ ಪ್ರಭುತ್ವವನ್ನು ಹೊಂದಬೇಕೆಂಬ ಉದ್ದೇಶದಿಂದ ಷೋಡಶಿಯನ್ನರ್ಪಿಸಿದನು. ಆಗ ಪ್ರಜಾಪತಿಯು ಅನುಗ್ರಹಿಸಿದನು. ತತ್ಫಲವಾಗಿ ಇಂದ್ರನು ಉತ್ತಮವಾದ ಅರ್ಹತೆಯನ್ನು ಪಡೆದು ದೇವತೆಗಳಿಗೆ ಪ್ರಭುವಾದ ನೆಂದಿದೆ. ಅಲ್ಲದೇ ಇದೇ ತೈತ್ತಿರೀಯಸಂಹಿತೆಯ ಬೇರೊಂದು ಭಾಗದಲ್ಲಿ ಇದೇ ವಿಷಯವನ್ನು ಸ್ವಲ್ಪ ವ್ಯತ್ಯಸ್ತವಾಗಿ ಈ ರೀತಿ ತಿಳಿಸಿದೆ.

**ತೇನೇಂದ್ರಂ ಪ್ರಜಾಪತಿರಯಾಜಯತ್ತತೋ ವಾ ಇಂದ್ರ ಇಂದ್ರೋಽಭವತ್ ।**

(ತೈ. ಸಂ. ೭-೨-೧೦-೨)

ಪ್ರಜಾಪತಿಯು ಇಂದ್ರನಿಂದ ಋತ್ವನುಸಾರವಾದ ವ್ರೀಹ್ಯಾದಿಗಳ ಅರ್ಪಣೆಯ ಮೂಲಕ ಯಾಗಮಾಡಿಸಿದನು. ಇದರ ಫಲವಾಗಿ ಇಂದ್ರನು ಇಂದ್ರತ್ವವನ್ನು ಪಡೆದನೆಂದಿದೆ. ಹೀಗೆಯೇ **ಪಂಚದಶರಾತ್ರ** ನಾಮಕವಾದ ಸತ್ತ್ರದ ಪ್ರಭಾವವಾಗಿ ಅಸುರರನ್ನು ನಾಶಮಾಡುವ ಶಕ್ತಿಯನ್ನೂ ದೇವತೆಗಳಿಗೆ ಪ್ರಭುವಾಗುವ ಶಕ್ತಿಯನ್ನೂ ಪಡೆದನೆಂದು ತಿಳಿಸಿದೆ.

(ತೈ ಸಂ. ೭-೩-೬-೧)

ಇಂದ್ರನೂ ಅಗ್ನಿಯೂ ಯಮಳರೆಂದೂ, ಇವರು ಸಮಾನಪಿತೃಕರೆಂದೂ ಆದರೆ ಭಿನ್ನಮಾತೃಕರೆಂದೂ ಋಕ್ಸಂಹಿತೆಯ ಒಂದು ಪ್ರಕರಣವು ತಿಳಿಸುತ್ತದೆ.

(೬-೫೯-೨)

೧೦-೫೫-೧ ರಲ್ಲು ಇಂದ್ರನ ಭ್ರಾತೃವಿನ ಪುತ್ರರು ನಿರ್ದಿಷ್ಟರಾಗಿದ್ದಾರೆ. ದ್ಯಾವಾಪೃಥಿವಿಗಳೇ ಈ ಭ್ರಾತೃ ಪುತ್ರರೆಂದು ಹೇಳಬಹುದಾಗಿದೆ. ೬.೫೫-೫ ರಲ್ಲಿ **ಪೂಷನು** ಇಂದ್ರಭ್ರಾತೃವೆಂದು ನಿರ್ದಿಷ್ಟನಾಗಿದ್ದಾನೆ.

ಇಂದ್ರನು ಶೈಶವಾವಸ್ಥೆಯಲ್ಲಿರುವಾಗಲೇ ಯೋಧನ ಪರಾಕ್ರಮವನ್ನು ಪ್ರಕಟಿಸಿದುದಾಗಿ ವರ್ಣಿತವಾಗಿದೆ. ಅದರ ವರ್ಣನವು ಈ ರೀತಿಯಿದೆ.

" ವೃತ್ರಹಂತಕನಾದ ಇಂದ್ರನು ಉತ್ಪನ್ನನಾದೊಡನೆಯೇ ತನ್ನ ಆಯುಧವನ್ನು ಹಿಡಿದುಕೊಂಡು ಅತ್ಯಂತ ಪರಾಕ್ರಮಿಗಳೆಂದು ಪ್ರಸಿದ್ಧರಾದ ಯೋಧರು ಯಾರಿರುವರು " ಎಂದು ಪ್ರಶ್ನಿಸಿದನು.

(೮-೪೫-೪ ; ೮-೭೭.೧)

" ಎಲೈ ಇಂದ್ರನೇ, ಸ್ವಾಭಾವಿಕವಾಗಿಯೇ ಶತ್ರುರಹಿತನಾದ ವೃದ್ಧನಾಗಿದ್ದೀಯೆ " ಎಂದು ಭಕ್ತನೊಬ್ಬನು ಇಂದ್ರನನ್ನು ಪ್ರಶಂಸಿಸಿ ತನ್ನ ಭಕ್ತಿಯನ್ನು ಸೂಚಿಸಿದ್ದಾನೆ.

(೧.೧೦೨-೮ ; ೧.೧೭೬-೧ ; ೧೦-೧೩೩-೨)

" ಎಲೈ ಇಂದ್ರನೇ, ಅತ್ಯಂತ ಹರ್ಷಿತನಾಗಿ ನೀನು ನಿನ್ನ ಪತ್ನಿಯನ್ನು ಸೇರಿಕೊ. ಮತ್ತು ಅವಳ ಸಂಗದಿಂದ ನಿನ್ನ ತೃಪ್ತಿಯನ್ನು ಹೊಂದು " ಎಂಬುದಾಗಿ ಇಂದ್ರನ ಪತ್ನಿಯ ನಿರ್ದೇಶವು ಇರುವ ಸಂದರ್ಭವು ಇಂದ್ರನ ಶೃಂಗಾರ ಸೌಂದರ್ಯವನ್ನನುಭವಿಸುವ ಸಂದರ್ಭವನ್ನು ವರ್ಣಿಸುತ್ತದೆ. (**ಸಮು ಪತ್ನ್ಯಾಮದಃ**).

(೧.೯೨.೫, ೬)

ಈ ವಿದವಾದ ಗೃಹಸುಖವಿರುವ ಕಾಲದಲ್ಲಿ ಕೆಲವು ವೇಳೆ ಸಂಧಿಗ್ದವಾದ ಪರಿಸ್ಥಿತಿಯೂ ಒದಗುತ್ತದೆ. ಯಜಮಾನರು ಯಜ್ಞಕಾಲದಲ್ಲಿ ಅರ್ಪಿಸತಕ್ಕ ಸೋಮರಸರೂಪವಾದ ಹವಿಸ್ಸು ಒಂದುಕಡೆ ಅತ್ಯಂತ ಆಕರ್ಷಕವಾಗಿರುತ್ತದೆ. ಈ ಎರಡರಲ್ಲಿ ಯಾವುದನ್ನು ಪರಿಗ್ರಹಿಸಬೇಕು, ಯಾವುದನ್ನು ತ್ಯಜಿಸಬೇಕು ಎಂಬ ವಿಷಯದಲ್ಲಿ ಇಂದ್ರನಿಗೆ ಅನೇಕ ವೇಳೆ ಸಂಶಯವುಂಟಾಗುತ್ತದೆ ಎಂದು ಋಷಿಯು ಇಂದ್ರನ ಸಂದಿಗ್ಧಾವಸ್ಥೆಯನ್ನು ವರ್ಣಿಸಿದ್ದಾನೆ. ಅದು ಹೇಗೆಂದರೆ,

" ಎಲೈ ಇಂದ್ರನೇ, ಗೃಹಿಣಿಯೇ ಗೃಹವು, ಅವಳೇ ಪುರುಷನ ವಸತಿಗೃಹವು. ಆದುದರಿಂದ ನಿನ್ನ ಅಶ್ವಗಳು ನಿನ್ನನ್ನು ನಿನ್ನ ಗೃಹಿಣಿಯಿರುವ ಸ್ಥಾನಕ್ಕೆ ಕರೆದೊಯ್ಯಲಿ. ಆದರೆ, ನಾವು ಸೋಮರೂಪವಾದ ಹವಿಸ್ಸನ್ನರ್ಪಿಸಿದೊಡನೆಯೇ, ನಿನಗೆ ಆಹ್ವಾನವನ್ನು ಕೊಡಲು ಅಗ್ನಿಯು ನಿನ್ನಲ್ಲಿಗೆ ಬರಲಿ. (೩-೫೩೪)

" ಭ್ರಾತೃವಾದ ಎಲೈ ಇಂದ್ರನೇ, ಹೊರಡು. ದಯಮಾಡಿ ಇಲ್ಲಿ ಬಾ. ನಿನಗೆ ಎರಡು ಸ್ಥಾನಗಳೂ ಆಕರ್ಷಕವಾಗಿವೆ. ನಿನ್ನ ರಥವು ನಿಂತಾಗ ನಿನ್ನ ಅಶ್ವಗಳು ಬಿಚ್ಚಲ್ಪಡುತ್ತವೆ. "

(೩ ೫೩.೫)

" ಎಲೈ ಎಂದ್ರನೇ, ನೀನು ಸೋಮಪಾನವನ್ನು ಮಾಡಿದ್ದೀಯೆ ಇನ್ನು ನೀನು ನಿನ್ನ ಗೃಹಕ್ಕೆ ಹೊರಡು. ನಿನ್ನ ಗೃಹದಲ್ಲಿ ಆಕರ್ಷಕಳಾದ ಪತ್ನಿಯಿದ್ದಾಳೆ. ಮತ್ತು ನಿನಗೆ ಉತ್ತಮವಾದ ಗೃಹಸುಖವಿದೆ. ನಿನ್ನ ರಥವು ಎಲ್ಲೆಲ್ಲಿ ನಿಲ್ಲುವುದೋ ಅಲ್ಲೆಲ್ಲಾ ನೀನು ಅಶ್ವಗಳನ್ನು ಬಿಚ್ಚಿಬಿಡತಕ್ಕದ್ದು " (೩.೫೩-೬)

ಇಂದ್ರಾಣಿಯೆಂಬ ನಾಮವು ಅನೇಕ ಕಡೆಗಳಲ್ಲಿ ಉಕ್ತವಾಗಿದೆ. ಆದರೆ ಇಂದ್ರಪತ್ನಿಯೆಂದು ಪ್ರತ್ಯಕ್ಷವಾಗಿ ತಿಳಿಸಿಲ್ಲ. ಆದರೆ ಆ ನಾಮನಿರ್ದೇಶದಿಂದ ಇಂದ್ರಪ್ರತ್ನಿಯೆಂದೇ ಧಾರಾಳವಾಗಿ ಹೇಳಬಹುದು

(೧ ೨೨-೧೨ ; ೨-೩೨.೮ , ೫-೪೬.೮ , ೧೦.೮೬-೧೧, ೧೨)

**ಈ** ಕಡೆಗಳಲ್ಲಿ ಅಗ್ನಿಪತ್ನಿಯಾದ **ಅಗ್ನಾಯೀ**ಯೊಂದಿಗೂ, ವರುಣಪತ್ನಿಯಾದ **ವರುಣಾನೀ**ಯೊಂದಿಗೂ, ಪ್ರಶಂಸಿತಳಾಗಿದ್ದಾಳೆ, ಮತ್ತು ಅವಳಿಗೂ ಅವರೊಡನೆ ಯಜ್ಞಕ್ಕೆ ಆಹ್ವಾನವಿದೆ. ಆದರೆ, ೧೦-೮೬-೧೧ ಮತ್ತು ೧೨ನೇ ಮಂತ್ರಗಳಲ್ಲಿ ಅವಳ ವಿಷಯವಾಗಿ ಸ್ವಲ್ಪ ವಿಶೇಷವಿವರಣೆಯಿರುತ್ತದೆ.

"ಈ ಸ್ತ್ರೀದೇವತೆಗಳಲ್ಲೆಲ್ಲಾ ಇಂದ್ರಾಣಿಯೇ ಅತಂತ್ಯ ಭಾಗ್ಯಶಾಲಿನಿಯೆಂದು ನಾನು ಕೇಳಿದ್ದೇನೆ. ಏಕೆಂದರೆ ಅವಳ ಪತಿಗೆ ಮುಪ್ಪೇ ಇಲ್ಲ. ತತ್ಪರಿಣಾಮವಾದ ಮರಣವೂ ಇಲ್ಲ" ಎಂದಿದೆ.

ಇಂದ್ರಾಣಿಯು ಇಂದ್ರಪತ್ನಿಯೆಂದೂ, ಅವಳಿಗೆ ಎಲ್ಲಾ ರೂಪವನ್ನೂ ಹೊಂದುವ ಅತ್ಯುತ್ತಮವಾದ ಶಿರೋಭೂಷಣವುಂಟೆಂದೂ ಶತಪಥಬ್ರಾಹ್ಮಣದ ವಾಕ್ಯವು ನಿಷ್ಕೃಷ್ಟವಾಗಿ ತಿಳಿಸುತ್ತದೆ.

(ಶ. ಬ್ರಾ. ೧೪-೨-೧-೮)

ತೈತ್ತಿರೀಯಬ್ರಾಹ್ಮಣದಲ್ಲಿ ಇಂದ್ರಾಣಿಯ ಸೌಭಾಗ್ಯವನ್ನು ವರ್ಣಿಸುವ ವಿವರಣೆಯು ಈ ರೀತಿಯಿದೆ—

**ಇಂದ್ರಾಣೀ ದೇವೀ ಸುಭಗಾ ಸುಪತ್ನೀ । ಉದಗ್ಂಶೇನ ಪತಿವಿದ್ಯೇ ಜಿಗಾಯ ।**
**ತ್ರಿಗ್ಂಶದಸ್ಯಾ ಜಘನಂ ಯೋಜನಾನಿ । ಉಪಸ್ಥ ಇಂದ್ರಗ್ಂ ಸ್ಥವಿರಂ ಬಿಭರ್ತಿ ॥**

(ತೈ. ಬ್ರಾ. ೨-೪-೨-೭)

ಸೌಭಾಗ್ಯಯುಕ್ತಳಾದ ಇಂದ್ರಾಣಿಯು ಪತಿಗೆ ಸುಖದಾಯಕಳಾಗಿರುತ್ತಾಳೆ ಎಂದು ಮೇಲೆ ತಿಳಿಸಿದ ವಿಷಯವನ್ನು ಹೇಳಿದೆ. ಕಾಠಕದ ವಾಕ್ಯವು ಇನ್ನೊಂದು ವಿಧವಾಗಿದೆ.

**ಇಂದ್ರೋ ವೈ ವಿಲಿಷ್ಟೇಂಗಾಂ ದಾನವೀಮುಕಾಮಯತ । ಸೋಽಸುರೇಷ್ವಚರತ್ಸ್ತ್ರೀವ ಸ್ತ್ರೀಷು ಭವನ್ ಪುಮಾನ್ ಪುಂಸು । ಸ ನಿರ್ಋತಿಗೃಹೀತ ಇವಾಮನ್ಯತ । ಸ ಏತಮೈಂದ್ರಾನೈರ್ಋತಮಪಶ್ಯತ್ ॥**

(ಕಾ. ಸಂ ೧೩-೫)

**ವಿಲಿಷ್ಟೇಂಗಾ** ಎಂಬ ದಾನವೀ ಸ್ತ್ರೀಯನ್ನು ಇಂದ್ರನು ಮೋಹಿಸಿದನು. ಆಗ ಅಸುರರ ಜೊತೆಯಲ್ಲಿ ತಾನೂ ಸೇರಿಕೊಂಡು ಸ್ತ್ರೀಯರ ನಡುವೆ ಸ್ತ್ರೀಯಂತೆಯೂ, ಪುರುಷರ ನಡುವೆ ಪುರುಷನಂತೆಯೂ ವ್ಯವಹರಿಸಿದನು. ಆಗ ನಿರ್ಋತಿಗೃಹೀತನಾದಂತೆ ತನ್ನನ್ನು ಎಂದರೆ ತನ್ನ ಬಂಧನವನ್ನರಿತು ಅದಕ್ಕೆ ಪ್ರತಿಕ್ರಿಯೆಯನ್ನು ಮಾಡಲು ಹವಿಸ್ಸನ್ನು ಸ್ವೀಕರಿಸಿದನು. ಇದಲ್ಲದೇ, ಅಥರ್ವವೇದದಲ್ಲಿ,

**ಯೇನಾನಿ ಚಕ್ರೇ ಆಸುರೀ ಇಂದ್ರಂ ದೇವೇಭ್ಯಸ್ಪರಿ ।**
**ತೇನಾನಿ ಕುರ್ವೇ ತ್ವಾಮಹಂ ಯಥಾ ತೇಽಸಾನಿ ಸುಪ್ರಿಯಾ ॥**

(ಅ. ವೇ ೭.೩೮-೨)

ಎಲೈ ಇಂದ್ರನೇ, ನೀನು ನನ್ನನ್ನು ಪ್ರೀತಿಸಬೇಕು. ಅದರಂತೆ ಮಾಡಲು ನಾನು ನಿನ್ನನ್ನು ಈ ಓಷಧಿಯ ಸಹಾಯದಿಂದ ನನ್ನ ವಶಮಾಡಿಕೊಳ್ಳುತ್ತೇನೆ ಎಂದು ಅದರ ಸಹಾಯದಿಂದ ದೇವತೆಗಳ ನಡುವೆಯಿದ್ದ ಇಂದ್ರನನ್ನು ಆ ಸ್ತ್ರೀಯು ತನ್ನ ಗುಂಪಿಗೆ ಸೆಳೆದುಕೊಂಡಳು ಎಂದಿದೆ. ಈ ರೀತಿಯಾಗಿ ಇಂದ್ರಪತ್ನಿಯ ವಿಷಯವಾಗಿ ಬೇರೆ ಬೇರೆ ಶ್ರುತಿವಾಕ್ಯಗಳು ಬೇರೆ ಬೇರೆಯಾದ ವಿವರಣೆಯನ್ನು ಕೊಡುತ್ತವೆ.

## ಇಂದ್ರನ ಭೌತಿಕವೂ ಮಾನಸಿಕವೂ ಆದ ಗುಣಗಳನ್ನು ತೋರಿಸತಕ್ಕ ವಿಶೇಷಣಗಳು

ಇಂದ್ರನ ಅಸಾಧಾರಣವಾದ ಗುಣಗಳನ್ನು ವಿವರಿಸುವ ವಿಶೇಷಣಗಳು ಬಹಳ ಹೇರಳವಾಗಿವೆ. ಪ್ರಥಮತಃ ಅವನ ಯೌವನ ಮತ್ತು ಶಕ್ತಿಗಳ ವರ್ಣನೆ. ಈ ಇಂದ್ರನು ಅತ್ಯಂತ ಯುವಕನೂ, ಅಂತೆಯೇ ಪ್ರಾಚೀನನೂ, ಅತಿ ಶಕ್ತಿಯುತನೂ ಕಾರ್ಯಪಟುವೂ ಆಗಿದ್ದಾನೆ.

(೧.೧೩೦.೭ ; ೨-೨೨.೪ ; ೬-೨೯-೩ ; ೮-೨೪.೯, ೧೨ ; ೮-೫೮-೭ ; ೮-೮೧-೩)

ಅವನು ಕ್ಷಾತ್ರವೀರ್ಯವುಳ್ಳವನು, ಪ್ರಕಾಶಮಾನನು, ಅಜರನು, ಸರ್ವವನ್ನೂ ಜಯಿಸತಕ್ಕವನು, ಅನಂತವಾದ ವಿವೇಕಯುತನು, ಅಪ್ರತಿಹತವಾದ ವೀರ್ಯವೂ ಓಜಸ್ಸೂ ಉಳ್ಳವನು ಮತ್ತು ವಜ್ರಾಯುಧಧಾರಿಯು ಎಂಬ ಇಂದ್ರನ ಕ್ಷಾತ್ರಗುಣಗಳನ್ನು ವರ್ಣಿಸುವ ಸನ್ನಿವೇಶಗಳೂ ಬಹು ಅಧಿಕವಾಗಿವೆ.

(೧-೪-೮ , ೧-೧೭-೯ , ೧-೩೦-೬. ೧೫ ; ೧-೬೧-೧ ; ೧-೮೧-೨, ೭ ; ೧-೮೪-೨ ; ೧-೧೦೦-೧೨ ; ೧-೧೦೨.೬ , ೧-೧೬೫-೬ . ೨.೨೧-೧, ೨, ೩ ; ೩-೩೦-೩ ; ೩-೩೨-೭ ; ೩-೪೫-೩ ; ೩-೪೬.೦ ; ೬-೧೮-೪ ; ೭-೨೦.೪ , ೭-೨೨-೫ ; ೮-೮೧-೮ ; ೮-೮೪-೭ ; )

ಇಂದ್ರನ ದೇಹದಲ್ಲಿ ವೀರ್ಯವೂ, ಭುಜಗಳಲ್ಲಿ ಬಲವೂ, ಹಸ್ತದಲ್ಲಿ ವಜ್ರಾಯುಧವೂ, ಶಿರಸ್ಸಿನಲ್ಲಿ ವಿವೇಕವೂ ಇರುತ್ತದೆ.

(೨ ೧೬-೨)

ಇಂದ್ರನು ಅನೇಕ ವಿಧವಾದ ರೂಪಗಳನ್ನು ಧರಿಸಬಲ್ಲನು. ಆ ರೂಪಗಳೆಲ್ಲವೂ ಅತ್ಯಂತ ಸುಂದರವಾಗಿಯೇ ಇರುತ್ತವೆ. ಮತ್ತು ಸೂರ್ಯನ ಹೊಂಬಣ್ಣದ ರೂಪವುಳ್ಳವಾಗಿವೆ. (೧೦.೧೧೨ ೩)

ಋಕ್ಸಂಹಿತಾದ್ರಷ್ಟ್ರುಗಳಾದ ಋಷಿಗಳು ಇಂದ್ರನ ಈ ಸೌಂದರ್ಯವಿಶೇಷವನ್ನು ವರ್ಣಿಸಲು ಅನೇಕವಿಧವಾದ ಸಾದೃಶ್ಯಗಳನ್ನು ತೋರಿಸಿ ವಿವರಿಸಿದ್ದಾರೆ. **ಸುಶಿಪ್ರ, ಶಿಪ್ರಿನ್** ಎಂಬ ಪದಗಳು ಇವುಗಳಲ್ಲಿ ಮುಖ್ಯವಾದುವು. ಈ ಶಬ್ದಗಳಿಗೆ ಉತ್ತಮವಾದ ಕೆನ್ನೆ ಅಥವಾ ಮೂಗುಳ್ಳವನು ಎಂದರ್ಥ ಇದು ಇಂದ್ರನ ವೈಯಕ್ತಿಕವಾದ ಗುಣ

(೧ ೯-೩ , ೧-೨೯-೨ , ೧-೮೧-೪ ; ೧-೧೦೧-೧೦ ; ೩-೩೨-೩ , ೩-೩೬-೧೦ ; ೮-೩೨ ೪ , ೨೪. ೮-೩೩-೭ ; ೮-೫೫-೪ , ೧೦-೧೨೫-೫ , ೩-೩೦-೩ , ೮-೧೭ ೪ ; ೮-೮೧-೪)

೮-೬೫-೧೦ ರಲ್ಲಿ ಇಂದ್ರನು ಸೋಮಪಾನದ ಫಲವಾಗಿ ಶಕ್ತಿಯನ್ನು ಪಡೆದು ಸೋಮಪಾನದ ಸ್ವಾದುತೆಯನ್ನು ತನ್ನ ತುಟಿಗಳ ಚಪ್ಪರಿಸುವಿಕೆಯಿಂದ ಆಸ್ವಾದಿಸುವುದು ವರ್ಣಿತವಾಗಿದೆ. **ಹರಿಶಿಪ್ರ, ಹರಿಕೇಶ, ಹರಿಶ್ಮಶ್ರು** ಇತ್ಯಾದಿ ವಿಶೇಷಣಗಳೂ ಅತ್ಯಧಿಕವಾಗಿವೆ. ಎಂದರೆ, ಹೊಂಬಣ್ಣದ ಕೆನ್ನೆಯುಳ್ಳವನು, ಹೊಂಬಣ್ಣದ ಕೂದಲುಳ್ಳವನು, ಹೊಂಬಣ್ಣದ ಮುಖರೋಮಗಳುಳ್ಳವನು ಎಂದರ್ಥ.

(೧೦-೯೬-೪, ೯, ೧೨ ; ೧೦-೯೬-೫, ೮ , ೧೦-೨೩-೪).

ಅವನು ಅಧಿಕವಾಗಿ ಹರ್ಷಿತನಾದಾಗ ಅವನ ಮುಖಶ್ಮಶ್ರುಗಳು ರೋಮಾಂಚಿತವಾಗಿ ಚಲಿಸುತ್ತವೆ

(೨-೧೧-೧೭ ; ೧೦-೨೩-೧ ;).

(೬-೪೬-೩ರಲ್ಲು ಇಂದ್ರನು ಸಹಸ್ರಮುಖನೆಂದೂ ವರ್ಣಿತನಾಗಿದ್ದಾನೆ).

ಈ ಇಂದ್ರನ ಸ್ವರೂಪವೆಲ್ಲವೂ ಹಿರಣ್ಮಯವಾಗಿಯೇ ಇದೆ. **ಹರಿವರ್ಪಸ್** ನೆಂದೂ **ಹಿರಣ್ಯಯ** ರೂಪನೆಂದೂ ಅನೇಕಕಡೆಗಳಲ್ಲಿ ಇವನ ಸ್ವರೂಪವು ವರ್ಣಿತವಾಗಿದೆ.

(೧೦-೯೬-೧, ೮-೫೫-೩, ೧-೭-೨)

ಆದರೆ ಇನ್ನು ಕೆಲವೆಡೆಗಳಲ್ಲಿ ಆಯಸರೂಪವುಳ್ಳವನೆಂದೂ ತಿಳಿಸಿದೆ. ಎಂದರೆ, ಉಕ್ಕಿನಿಂದ ಮಾಡಿದ ದೇಹವುಳ್ಳವೆಂದರ್ಥ.

(೧-೫೬-೩, ೧೦-೯೬-೪, ೮).

ಅವನ ಬಾಹುಗಳು ಬಹುದೂರ ವಿಸ್ತೃತವಾಗಿ ಹರಡಿವೆ. **(ಪೃಥೂ ಕರಸ್ನಾ ಬಹುಲಾ ಗಭಸ್ತೀ)**.

(೬-೧೯-೨, ೮-೩೨-೧೦, ೮-೭೦-೧)

ಋಕ್ಸಂಹಿತೆಯಲ್ಲಿಲ್ಲದ ಒಂದು ಮಂತ್ರವು ಸಾಮಸಂಹಿತೆಯಲ್ಲಿ ಇಂದ್ರನ ದೀರ್ಘಬಾಹುತ್ವವನ್ನೂ, ಆಕರ್ಷಕ ಸ್ವರೂಪವನ್ನೂ ಪ್ರಶಂಸಿಸಿ ಈ ರೀತಿ ವರ್ಣಿಸುತ್ತದೆ.

**ಇಂದ್ರಸ್ಯ ಬಾಹೂ ಸ್ಥವಿರೌ ಯುವಾನಾವನಾಧೃಷ್ಯೌ ಸುಪ್ರತೀಕಾವಸಹ್ಯೌ ।**
**ತೌ ಯುಂಜೀತ ಪ್ರಥಮೌ ಯೋಗೇ ಆಗತೇ ಯಾಭ್ಯಾಂ ಜಿತಮಸುರಾಣಾಂ ಸಹೋ ಮಹತ್ ॥**

(ಸಾ. ವೇ. ೨-೧೨೧೯)

ಇಂದ್ರನು ತನ್ನ ಪರಾಕ್ರಮವನ್ನು ಪ್ರಕಟಿಸುವ ಸಂದರ್ಭವೊದಗಿದಾಗ, ಹಿಂದೆ ಅಸುರರ ಮಹತ್ತಾದ ಶಕ್ತಿಯನ್ನು ನಾಶಪಡಿಸಿ ಜಯವನ್ನು ಪಡೆದುದೂ, ಶಕ್ತಿಯುತವಾದುದೂ, ಯೌವನೋಪೇತವಾದುದೂ, ಅಪ್ರತಿಹತವಾದ ಶಕ್ತಿಯುಳ್ಳದ್ದೂ ರಮ್ಯವಾದ ರೂಪವುಳ್ಳದ್ದೂ, ಅಜೇಯವಾದುದೂ ಆದ ಬಾಹುವನ್ನು ಪ್ರಯೋಗಿಸಲಿ, ಎಂದಿರುತ್ತದೆ.

ಆದರೆ, ಇಂದ್ರನ ರೂಪಗಳು ಅನಂತವಾದುವು. ಅವನು ತನ್ನ ಸಂಕಲ್ಪ ಮಾತ್ರದಿಂದಲೇ ತನ್ನಿಷ್ಟಬಂದ ರೂಪಗಳನ್ನೆಲ್ಲಾ ಹೊಂದಬಲ್ಲನು ಎಂದು ಅನೇಕ ಕಡೆಗಳಲ್ಲಿದೆ—

(೩-೩೮-೪, ೩ ೪೮-೪, ೩-೫೩-೮)

**ರೂಪರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥**

(ಋ. ಸಂ. ೬-೪೭-೧೮)

## ಇಂದ್ರನ ರಥ ಮತ್ತು ಅಶ್ವಗಳು

ಇಂದ್ರನು ತನ್ನ ಸುವರ್ಣಮಯವಾದ ರಥದಲ್ಲಿ ಕುಳಿತು, ಕೈಯಲ್ಲಿ ಹಿರಣ್ಮಯವಾದ ಕಶೆ (ಚಾವುಟಿ) ಯನ್ನು ಹಿಡಿದು ತನ್ನ ಸಂಚಾರಕ್ಕಾಗಿ ಹೊರಡುತ್ತಾನೆ. ಆ ರಥಕ್ಕೆ ಸಹಸ್ರ ಆಧಾರಸ್ತಂಭಗಳಿರುತ್ತವೆ.

(೬-೨೯-೨, ೮-೧-೨೪, ೮-೫೮-೧೬)

ಇಂದ್ರನ ಈ ರಥವು ಮನೋವೇಗಕ್ಕಿಂತಲೂ ಅಧಿಕವಾದ ವೇಗವುಳ್ಳದ್ದಾಗಿದೆ.

(೧೦-೧೧೨-೨)

ಈ ರಥವು ಹೊಂಬಣ್ಣವುಳ್ಳವೂ, ಅಪ್ರತಿಹತವಾದ ಶಕ್ತಿಯುಳ್ಳವೂ, ಅದ್ಭುತವಾಗಿ ಕೆನೆಯುವುವೂ ಆದ ಅಶ್ವದ್ವಯದಿಂದ ಎಳೆಯಲ್ಪಡುತ್ತವೆ. ಅವಕ್ಕೆ ಸುವರ್ಣರೂಪದ ಕೇಸರಗಳಿರುತ್ತವೆ ಅವು ನವಿಲುಗರಿಗಳಂತೆ ಆಕರ್ಷಕ ವಾಗಿವೆ. ಈ ಅಶ್ವಗಳು ಅತಿ ವೇಗವಾಗಿ ಸಂಚರಿಸತಕ್ಕವಾಗಿವೆ, ಮತ್ತು ಬಹುದೂರ ಸಂಚರಿಸಬಲ್ಲವು. ತನ್ನ ರೆಕ್ಕೆಯ ಸಹಾಯದಿಂದ ಗಿಡಗವು ಯಾವರೀತಿ ಸಂಚರಿಸಬಲ್ಲಮೋ ಅದೇರೀತಿ ಈ ಇಂದ್ರನೂ ಸಹ ತನ್ನ ಅಶ್ವಗಳ ಸಹಾಯದಿಂದ ಅಂತರಿಕ್ಷವಲ್ಲೆಲ್ಲಾ ಹಾರಾಡಬಲ್ಲನು.

(೧.೩೦.೧೬ ; ೧.೮೧.೩ ; ೧-೧೦.೩ , ೧-೮೨.೬ ; ೮.೧೭-೨ ; ೮.೩೨-೨೯ ; ೮-೮೨-೨೪ ; ೩-೪೫-೧ ; ೮-೧-೨೫ ; ೨-೧೬-೩ ; ೮-೩೪.೯).

ತನ್ನ ರಥವನ್ನು ಒಯ್ಯುವ ಅಶ್ವಗಳಿಂದ ವಹಿಸಲ್ಪಟ್ಟ ಸೋಮಪಾನಕ್ಕೆ ಬರಬೇಕೆಂಬ ಪ್ರಾರ್ಥನಾಮಂತ್ರಗಳಲ್ಲಿ ಇಂದ್ರನ ಅಪರಿಮಿತವಾದ ಅಶ್ವಸಂಖ್ಯೆಗಳು, ನಿರ್ದಿಷ್ಟವಾಗಿವೆ. ಎರಡು, ನಾಲ್ಕು, ಆರು, ಎಂಟು, ಹತ್ತು, ಇಪ್ಪತ್ತು, ಮೂವತ್ತು, ನಲವತ್ತು, ಐವತ್ತು, ಅರವತ್ತು, ಎಪ್ಪತ್ತು, ಎಂಭತ್ತು ತೊಂಬತ್ತು ಮತ್ತು ಶತಸಂಖ್ಯಾಕವಾದ ಅಶ್ವಗಳೊಡನೆ ಬರಬೇಕೆಂದು ಪ್ರಾರ್ಥಿತನಾಗಿದ್ದಾನೆ.

(೨ ೧೮-೪ ರಿಂದ ೭ ; ೮-೧ ೯)

ಇನ್ನೂ ಕೆಲವೆಡೆಗಳಲ್ಲಿ ಈ ಸಂಖ್ಯೆಯು ಸಹಸ್ರವನ್ನೂ ಮೀರುತ್ತದೆ. ಉದಾಹರಣೆಗೆ " ಇಂದ್ರ ಮತ್ತು ವಾಯುಗಳಿಬ್ಬರೂ ಸಹಸ್ರಸಂಖ್ಯಾಕವಾದ ಅಶ್ವಗಳಿಂದ ಒಯ್ಯಲ್ಪಡುತ್ತಾರೆ."

(೪-೪೬-೩ ; ೬-೪೭-೧೮ , ೮-೧-೨೪)

ಈ ಇಂದ್ರನ ಅಶ್ವಗಳು ಅಲೌಕಿಕವಾದ ಸ್ವರೂಪವನ್ನುಹೊಂದಿರುವುದರಿಂದ ಅವುಗಳ ನಿಷ್ಕೃಷ್ಟವಾದ ಸ್ವರೂಪ ಜ್ಞಾನವು ಮಾನವ ಚಕ್ಷುಸ್ಸಿನಿಂದ ಅರಿಯುವುದು ಸಾಧ್ಯವಾಗುವುದಿಲ್ಲ. ಆದುದರಿಂದ "ಇಂದ್ರನ ಎರಡು ಅಶ್ವಗಳನ್ನು ನೋಡಲು ಯಾರಿಗೆ ಸಾಮರ್ಥ್ಯವಿದೆ, ಯಾರು ನೋಡಿರುವಿರಿ ಎಂಬ ಪ್ರಶ್ನೆಯು ಸಹಜವಾಗಿರುತ್ತದೆ. **ಹರೀ ಇಂದ್ರಸ್ಯ ನಿ ಚಿಕಾಯ ಕಃ ಸ್ವಿತ್.**

(೧೧-೧೧೪-೯)

ಇಂದ್ರನ ರಥವೂ ಅಶ್ವಗಳೂ ಕುಶಲಕರ್ಮಿಗಳಾದ ಋಭುಗಳಿಂದ ನಿರ್ಮಿತವಾದವು ಎಂದು ಪ್ರಸಿದ್ಧವಾಗಿದೆ.

(೧-೧೧೧-೧ ; ೫-೩೧-೪).

ಕೆಳಗೆ ಕಂಡಂತೆ ತಾತ್ಪರ್ಯವನ್ನು ಕೊಡುವ ಕೆಲವು ವಾಕ್ಯಗಳು ಇಂದ್ರನ ರಥದ ಮತ್ತು ಅಶ್ವಗಳ ವಿಶೇಷ ಗುಣಗಳನ್ನು ತಿಳಿಸುತ್ತವೆ. ಉದಾಹರಣೆಗೆ, ಇಂದ್ರನ ರಥವನ್ನು ವಹಿಸುವ ಅಶ್ವಗಳು **ಸೂರಚಕ್ಷುಸ್ಸ**ಗಳೆಂದು ವರ್ಣಿತವಾಗಿವೆ. (**ಸೂರಚಕ್ಷಸಃ**).

(೧-೬-೨ , ೧-೧೬.೧, ೨ ; ೧-೫೫-೭ ; ೧-೮೪-೬ ; ೧ ೧೦೧.೧೦ ; ೨-೧೧-೬ ; ೮-೧೩-೧೧, ೨೭ ; ೧೦-೪೪-೨)

ಸೂರ್ಯನ ಅಶ್ವಗಳಿಂದ ಇಂದ್ರನು ವಹಿಸಲ್ಪಡುವನೆಂದು ಕೆಲವು ವೇಳೆಯೂ, ವಾಯುದೇವನ ಅಶ್ವಗಳಿಂದ ವಹಿಸಲ್ಪಡುವನೆಂದು ಇನ್ನು ಕೆಲವು ವೇಳೆಯೂ ಇಂದ್ರನು ಸ್ತುತನಾಗಿದ್ದಾನೆ.

(೧೦-೪೯-೭ , ೧೦-೨೨-೪ ರಿಂದ ೬)

ಇಂದ್ರನು ವಾಯುದೇವನ ರಥದಲ್ಲಿ ಕೆಲವು ವೇಳೆ ಸಾರಥಿಯಾಗಿಯೂ ಇನ್ನು ಕೆಲವು ವೇಳೆ ಅವನ ಸಖನಾಗಿಯೂ ಒಂದೇ ರಥದಲ್ಲಿ ಇಬ್ಬರೂ ಕುಳಿತು ಸಂಚರಿಸುವ ವರ್ಣನೆಯು ಇಂದ್ರನಿಗೂ ವಾಯುವಿಗೂ ಇರುವ ಸಂಬಂಧವನ್ನೂ, ಇಂದ್ರನ ರಥದ ವೇಗವನ್ನೂ ಅತಿಶಯವಾಗಿ ತಿಳಿಸುವುದಾಗಿದೆ.

(೪-೪೬-೨ , ೪-೪೮-೨ , ೭-೯೧-೬)

ಇಂದ್ರನ ಅಶ್ವಗಳು ಸ್ತುತಿಪ್ರಭಾವದಿಂದ ತಾವೇ ರಥಕ್ಕೆ ಬಂದು ಯೋಜಿತವಾಗುತ್ತವೆ. **ಬ್ರಹ್ಮಣಾ ತೇ ಬ್ರಹ್ಮಯುಜಾ ಯುನಜ್ಮೀ ಹರೀ).**

**(೩-೩೫.೪ ; ೧-೮೨-೬ ; ೨-೧೮-೩ ; ೮-೧-೨೪ ; ೮.೧೭-೨ ; ೮ ೨-೨೭ ; ೮-೪೫-೩೯ , ೮-೮೬-೯)**

ಇಂದ್ರನು ಯಜ್ಞಕರ್ತರಾದ ಯಜಮಾನರ ಸ್ತುತಿರೂಪವಾದ ಪ್ರಾರ್ಥನೆಯು ಪಠಿತವಾದೊಡನೆಯೇ ಅವರ ಯಜ್ಞಕ್ಕೆ ಬರಲು ಒಡನೆಯೇ ರಥಕ್ಕೆ ಅಶ್ವಗಳನ್ನು ಹೂಡುವನು ಎಂದು ತಾತ್ಪರ್ಯವು. ರಥಕ್ಕೆ ಅಶ್ವಗಳನ್ನು ಯೋಜಿಸಲು ಸ್ತುತಿಗಳೇ ಕಾರಣವಾಗಿರುವುದರಿಂದ, ಸ್ತುತಿಪ್ರಭಾವದಿಂದ ಅಶ್ವಯೋಜನೆಯಾಗುತ್ತದೆ ಎಂದು ಭಾವವು. ಈರೀತಿ ಪೃಥಿವ್ಯಂತರಿಕ್ಷಗಳಲ್ಲೆಲ್ಲಾ ಸಂಚರಿಸತಕ್ಕ ಇಂದ್ರನ ಪ್ರಭಾವಯುತವಾದ ರಥವನ್ನೂ ಅಶ್ವಗಳನ್ನೂ ವರ್ಣಿಸತಕ್ಕ ಅನೇಕ ಸಂಹಿತಾವಾಕ್ಯಗಳಲ್ಲಿ ಕೆಲವನ್ನು ಮಾತ್ರ ಮೇಲೆ ಉದಾಹರಣೆಗಾಗಿ ವಿವರಿಸಿ ತಿಳಿಸಿದೆ.

## ಇಂದ್ರನ ವಜ್ರಾಯುಧ ಮತ್ತು ಇತರ ಸಾಧನಗಳು

ಇಂದ್ರನ ಮಹತ್ತಾದ ವಜ್ರಾಯುಧವು ದೇವಶಿಲ್ಪಿಯಾದ ತ್ವಷ್ಟೃವಿನಿಂದ ನಿರ್ಮಿತವಾದುದೆಂದು ಪ್ರಸಿದ್ಧವಾಗಿದೆ. ತ್ವಷ್ಟೃವು ಇಂದ್ರನಿಗಾಗಿಯೇ ಇದನ್ನು ನಿರ್ಮಿಸಿದನೆಂದೂ ಹೇಳಿದೆ (**ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ**).

(೧-೩೨-೨ ; ೧-೬೧-೬ ; ೧-೮೫-೯ , ೫.೩೧-೪ , ೬-೧೭-೧೦ ; ೧೦-೪೮-೩)

ಆದರೆ, ಕೆಲವೆಡೆಗಳಲ್ಲಿ ಮಾತ್ರ ಇದು ಕಾವ್ಯಉಶನಸ್ಸಿನಿಂದ ನಿರ್ಮಿತವಾಗಿ ಅಸುರವಧಾರ್ಥವಾಗಿ ಇಂದ್ರನಿಗೆ ದತ್ತವಾಯಿತು ಎಂದು ನಿಷ್ಕೃಷ್ಟವಾಗಿ ತಿಳಿಸಿದೆ. (**ಯಂ ತೇ ಕಾವ್ಯ ಉಶನಾ............ .ತತಕ್ಷ ವಜ್ರಂ**).

(೧-೧೨೧-೧೨ , ೫-೩೪ ೨)

ವಜ್ರಾಯುಧದ ಸೃಷ್ಟಿ ಮತ್ತು ಇಂದ್ರನು ಅದನ್ನು ಪರಿಗ್ರಹಿಸಿದುದು ಈ ವಿಷಯದಲ್ಲಿ ಐತರೇಯಬ್ರಾಹ್ಮಣದ ವಾಕ್ಯವು ಈರೀತಿ ತಿಳಿಸುತ್ತದೆ—

**ದೇವಾ ವೈ ಪ್ರಥಮೇನಾಹ್ನೇಂದ್ರಾಯ ವಜ್ರಂ ಸಮಭರಂಸ್ತಂ ದ್ವಿತೀಯೇನಾಹ್ನಾಸಿಂಚಂಸ್ತಂ ತೃತೀಯೇನಾಹ್ನಾ ಪ್ರಾಯಚ್ಛಂಸ್ತಂ ಚತುರ್ಥೇऽಹನ್ಪ್ರಾಹರತ್ ॥** (ಐ. ಬ್ರಾ. ೪-೧)

ದೇವತೆಗಳು ಮೊದಲನೆಯದಿನದ ಕಾರ್ಯಕಲಾಪಗಳಿಗಾಗಿ ಇಂದ್ರನಿಗೆ ವಜ್ರವನ್ನು ಒದಗಿಸಿದರು ಎರಡನೆಯ ದಿನ ಅದಕ್ಕೆ ಅಭಿಷೇಕಮಾಡಿದರು. ಮೂರನೇದಿನ ಅದನ್ನು ಅವನಿಗೆ ಒಪ್ಪಿಸಿದರು. ನಾಲ್ಕನೆಯದಿನ ಇಂದ್ರನು ದೇವತೆಗಳಿಂದ ದತ್ತವಾದ ಆ ವಜ್ರಾಯುಧವನ್ನು ಪ್ರಯೋಗಿಸಿದನು ಎಂದಿದೆ. ಅಲ್ಲದೇ,

" ವಜ್ರಾಯುಧವು ಅಂತರಿಕ್ಷಸ್ಥವಾದ ಸಮುದ್ರದಲ್ಲಿ ಉದಕದಿಂದ ಮುಚ್ಚಲ್ಪಟ್ಟುದಾಗಿ ಇರುತ್ತದೆ."

(೮-೧೦೦-೯)

ಎಂಬ ಈ ವಿವರಣೆಯಲ್ಲಿ ವಜ್ರಾಯುಧದ ಸ್ವಾಭಾವಿಕವಾದ ಉತ್ಪತ್ತಿಕ್ರಮವು ವರ್ಣಿತವಾಗಿದೆ. ಈ ವಜ್ರವು ಕೆಲವೆಡೆಗಳಲ್ಲಿ ಸುವರ್ಣರೂಪದ್ದೆಂದೂ (೧-೫೭-೨; ೧-೮೫.೯; ೮-೫೭-೩; ೧೦-೨೩-೩) ಮತ್ತು ಕೆಲವೆಡೆಗಳಲ್ಲಿ ಪಚ್ಚೆಯೊಡಗೂಡಿದ ಹೊಂಬಣ್ಣವುಳ್ಳದ್ದೆಂದೂ ತಿಳಿಸಲ್ಪಟ್ಟದೆ (೧೦-೯೬-೩) **ಆಯಸವೆಂದೂ** ಎಂದರೆ ಉಕ್ಕಿನಿಂದ ಮಾಡಲ್ಪಟ್ಟುದೂ ಎಂದೂ ಇನ್ನೂ ಕೆಲವೆಡೆಗಳಲ್ಲಿ ತಿಳಿಸಿದೆ. (**ಆಯಸಃ**)

(೧-೫೨-೮, ೧-೮೦-೧೨; ೧-೮೧-೪; ೧-೧೨೧-೯; ೮-೮೫-೩; ೧೦-೪೮-೩; ೧೦-೯೬-೩; ೧೦–೧೧೩–೫)

ನಾಲ್ಕು ಅಲುಗಳುಳ್ಳದ್ದು ಎಂದು ಕೆಲವು ವಾಕ್ಯಗಳ ಮತವಾಗಿದೆ. (೪–೨೨–೨) (**ಚತುರಶ್ರಿಃ**) ಆದರೆ, **ಶತಾಶ್ರಿ** ಎಂದು ತಿಳಿಸುವ ವಾಕ್ಯಗಳೂ ಇವೆ. (೬–೧೭–೧೦) ನೂರು ಅಲುಗಳುಳ್ಳವೆಂದರ್ಥ. ನೂರು ಪರ್ವಗಳುಳ್ಳದ್ದೆಂದೂ ವರ್ಣಿತವಾಗಿದೆ. (**ಶತಪರ್ವನ್**)

(೧-೮೦-೬; ೮-೬-೬, ೮-೬೫-೨; ೨-೭೮-೩)

ಸಾವಿರ ಪರ್ವಗಳುಳ್ಳದ್ದೆಂದು ಹೇಳಿರುವ ಸನ್ನಿವೇಶಗಳೂ ಕೆಲವಿವೆ.

(೧-೮೦-೧೨; ೧-೮೫-೯; ೫-೩೪-೨; ೬-೧೭-೧೦)

**ಭೀಮಾ ಇಂದ್ರಸ್ಯ ಹೇತಯಃ ಶತಮೃಷ್ಟೀರಯಸ್ಮಯೀಃ ।**

(ಅ. ವೇ. ೪-೩೭-೮)

ಶತಭೃಷ್ಟಿಯುಳ್ಳವೂ ಉಕ್ಕಿನಿಂದ ಮಾಡಲ್ಪಟ್ಟವೂ ಆದ ಇಂದ್ರನ ಆಯುಧಗಳು ಅತ್ಯಂತ ಭಯಂಕರವಾದವು ಎಂದು ಅಥರ್ವವೇದದಲ್ಲಿ ಪ್ರಶಂಸಿತವಾಗಿದೆ **ಅಯಸ್ಮಯೀಃ** ಎಂಬುದಕ್ಕೆ ಪ್ರತಿಯಾಗಿ **ಹಿರಣ್ಮಯೀಃ** ಎಂಬ ಪಾಠಾಂತರದಿಂದ ಇದೇ ವರ್ಣನೆಯು ಬೇರೆಡೆಯಲ್ಲಿರುತ್ತದೆ

(ಋ. ವೇ. ೮-೫-೧೫)

ವೃಷಭವು ತನ್ನ ಕೊಂಬನ್ನು ಉಜ್ಜಿಕೊಳ್ಳುವಂತೆ ಇಂದ್ರನು ತನ್ನ ಆಯುಧವನ್ನು ಉಜ್ಜಿ (ಶತ್ರುವಧಕ್ಕಾಗಿ) **ಹರಿತಮಾಡಿಕೊಳ್ಳುತ್ತಾನೆ.** (**ಶಿಶೀತೇ ವಜ್ರಂ**).

(೧-೫೫-೧)

ಅಂತರಿಕ್ಷದಲ್ಲಿ ಸ್ಥಿತನಾದ ಆದಿತ್ಯನು ಯಾವರೀತಿ ತನ್ನ ದಿವ್ಯಪ್ರಭೆಯಿಂದ ಪ್ರಕಾಶಿಸುವನೋ ಅದೇರೀತಿ ಇಂದ್ರನ ಹಸ್ತದಲ್ಲಿ ಸ್ಥಾಪಿತವಾದ ವಜ್ರಾಯುಧವು ಪ್ರಕಾಶಿಸುತ್ತದೆ. (**ದಿವೇ ನ ಸೂರ್ಯಃ**)

(೮-೫೯-೨)

ಬಾಣ ಮತ್ತು ಬಿಲ್ಲುಗಳನ್ನು ಧರಿಸಿರುವ ದೇವತೆಯೆಂದು ಇಂದ್ರನು ವರ್ಣಿತವಾಗಿರುವ ಸಂದರ್ಭಗಳೂ ಕೆಲವು ಇರುತ್ತವೆ.

(೮-೪೫-೪, ೮-೬೬-೬, ೧೧, ೧೦-೧೦೩-೨, ೧೦.೧೦೩-೩)

ಇಂದ್ರನ ಬಾಣಗಳಿಗೆ ಮೂರು ಪರ್ವಗಳೂ ಮತ್ತು ತೀಕ್ಷ್ಣವಾದ ಅಲಗುಗಳೂ ಇವೆ. ಅವುಗಳು ಸಹಸ್ರಸಂಖ್ಯಾಕವಾದ ರೆಕ್ಕೆಗಳಿಂದ ಅಲಂಕೃತವಾಗಿವೆ. ಮತ್ತು ಸುವರ್ಣಮಯವಾಗಿವೆ.

(೮-೬೬-೭; ೮-೬೬-೧೧)

ಇಂದ್ರನು ಅಂಕುಶಧಾರಿಯೆಂದೂ ವರ್ಣಿತನಾಗಿದ್ದಾನೆ. (**ದೀರ್ಘಸ್ತೇ ಅಸ್ತ್ವಂಕುಶಃ**)

"ಎಲೈ ಇಂದ್ರನೇ, ನಿನಗೆ ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಸಂಪತ್ತನ್ನೊದಗಿಸಲು ಸಹಾಯ ಮಾಡುವ ನಿನ್ನ ಅಂಕುಶವು ದೀರ್ಘವಾದುದಾಗಿರಲಿ.

(೮-೧೭-೧೦)

ಅಥರ್ವವೇದದಲ್ಲೂ ಸಹ ಇದೇ ವಿಷಯವು ಈ ರೀತಿ ಹೇಳಲ್ಪಟ್ಟಿದೆ.

**ಯಸ್ತೇ ಅಂಕುಶೋ ವಸುದಾನೋ ಬೃಹನ್ನಿಂದ್ರ ಹಿರಣ್ಯಯಃ ।**
**ತೇನಾಜನೀಯತೇ ಜಾಯಾಂ ಮಹ್ಯಂ ಧೇಹಿ ಶಚೀಪತೇ ॥**

(ಅ. ವೇ. ೬-೮೨-೩)

"ಎಲೈ ಇಂದ್ರನೇ, ಜಾಯೆಯನ್ನು ಪಡೆಯಬೇಕೆಂದು ನಾನು ಬಹಳ ಆತುರನಾಗಿದ್ದೇನೆ ಸಂಪತ್ತನ್ನೊದಗಿಸ ತಕ್ಕದ್ದೂ, ಸುವರ್ಣಮಯವಾದುದೂ ಆದ ನಿನ್ನ ಅಂಕುಶದ ಸಹಾಯದಿಂದ ನನಗೆ ಓರ್ವ ಪತ್ನಿಯನ್ನೊದಗಿಸಿಕೊಡು" ಎಂದು ಯಜಮಾನರು ಇಂದ್ರನನ್ನು ಪ್ರಾರ್ಥಿಸುವ ಸನ್ನಿವೇಶವಾಗಿರುತ್ತದೆ. ಅಲ್ಲದೇ,

ಎಲೈ ಇಂದ್ರನೇ, ಆಡು ತನ್ನ ಮುಂದಿನ ಕಾಲನ್ನು ಚಾಚಿ ಲತೆಯ ಕೊಂಬೆಯನ್ನು ಹಿಡಿಯುವಂತೆ, ನೀನೂ ನಿನ್ನ ಅಂಕುಶವನ್ನು ಚಾಚಿ ನೀನು ಇಷ್ಟಪಟ್ಟ ವಸ್ತುವನ್ನು ಎಳೆದುಕೊಳ್ಳುತ್ತೀಯೆ. ನೀನು ಅಂತಹ ಶಕ್ತಿಯನ್ನು ಧರಿಸಿದ್ದೀಯೆ.

(೧೦-೧೩೪.೬)

"ಎಲೈ ಇಂದ್ರನೇ, ಯಾವುದರ ಸಹಾಯದಿಂದ ನೀನು ಶಕ್ತಿಯುತರಾದ ಅಸುರರನ್ನು ನಾಶಪಡಿಸುವೆಯೋ, ಅಂತಹ ದೀರ್ಘವಾದ ಈ ಅಂಕುಶವನ್ನು ನಾನು ನಿನ್ನಲ್ಲಿಗೆ ತಂದೊಪ್ಪಿಸುತ್ತೇನೆ" ಎಂಬ ತಾತ್ಪರ್ಯವನ್ನು ಕೊಡುವ ಮಂತ್ರವೂ ಅದೇ ಭಾವನೆಯನ್ನು ತಿಳಿಸುತ್ತದೆ.

(೧೦-೪೪-೯)

ಅಥರ್ವವೇದದಲ್ಲಿ ಇಂದ್ರನ ಜಾಲದ (ಬಲೆ) ವರ್ಣನವೂ ಪ್ರಶಂಸೆಯೂ ಈ ರೀತಿಯಿರುತ್ತದೆ.

**ಅಂತರಿಕ್ಷಂ ಜಾಲಮಾಸೀಜ್ಜಾಲದಂಡಾ ದಿಶೋ ಮಹೀಃ ।**
**ತೇನಾಭಿಧಾಯ ದಸ್ಯೂನಾಂ ಶಕ್ರಃ ಸೇನಾಮಪಾತಯತ್ ॥**

(ಅ. ವೇ. ೮-೮-೫)

ಅಂತರಿಕ್ಷವೇ ಇಂದ್ರನ ಜಾಲವು (ಬಲೆಯು), ಮಹತ್ತಾದ ದಿಕ್ಕುಗಳೇ ಈ ಜಾಲದ ಊರೆಕೋಲುಗಳು ಈ ಸರ್ವದಿಗ್ವ್ಯಾಪಿಯಾದ ಬಲೆಯನ್ನು ಚಾಚಿ ಇಂದ್ರನು ದಸ್ಯುರೂಪರಾದ ಶತ್ರುಗಳನ್ನು ಸೆರೆಹಿಡಿದು ಅವರನ್ನು ಕೆಳಕ್ಕೆ ಬೀಳುವಂತೆ ಮಾಡಿದನು.

**ಬೃಹದ್ಧಿ ಜಾಲಂ ಬೃಹತಶ್ಶಕ್ರಸ್ಯ ವಾಜಿನೀವತಃ ।**
**ತೇನ ಶತ್ರೂನಭಿ ಸರ್ವಾನ್ನ್ಯುಬ್ಜ ಯಥಾ ನ ಮುಚ್ಯಾತೈ ಕತಮಶ್ಚನ ಏಷಾಂ ॥**

(ಅ. ವೇ ೮-೮-೬)

ಅನ್ನದಾತೃವೂ, ಮಹತ್ಸ್ವರೂಪವುಳ್ಳವನೂ ಆದ ಇಂದ್ರನ ಬಲೆಯು ಬಹಳ ವಿಸ್ತೃತವಾದುದು ಅದನ್ನು ಬೀಸಿ ಹರಡಿದರೆ ಶತ್ರುಗಳೆಲ್ಲರೂ ಸಿಕ್ಕಿಕೊಳ್ಳುತ್ತಾರೆ. ಅದರಲ್ಲಿ ಯಾವನೊಬ್ಬನೂ ತಪ್ಪಿಸಿಕೊಳ್ಳುವಂತಿಲ್ಲ.

**ಬೃಹತ್ತೇ ಜಾಲಂ ಬೃಹತ ಇಂದ್ರ ಶೂರ ಸಹಸ್ರಾರ್ಘಸ್ಯ ಶತವೀರ್ಯಸ್ಯ ।**
**ತೇನ ಸಹಸ್ರಮಯುತಂ ನ್ಯರ್ಬುದಂ ಜಘಾನ ಶಕ್ರೋ ದಸ್ಯೂನಾಮಭಿಧಾಯ ಸೇನಯಾ ॥**

(ಅ. ವೇ. ೮.೮-೭)

ಬೃಹತ್ಸ್ವರೂಪವುಳ್ಳ ಎಲೈ ಇಂದ್ರನೇ, ಪರಾಕ್ರಮಿಯಾದ ನಿನ್ನ ಬಲೆಯು ಅತಿ ವಿಸ್ತೃತವಾದುದು. ನೂರು ಶತ್ರುಗಳ ಬಲವನ್ನು ನೀನು ಒಟ್ಟಿಗೆ ಹೊಂದಿದ್ದೀಯೆ. ಸಾವಿರಾರು ಶತ್ರುಗಳನ್ನು ಒಟ್ಟಿಗೆ ಎದುರಿಸಬಲ್ಲೆ. ಇಂದ್ರನು ತನ್ನ ಪರಿವಾರಗಳೊಡನೆ ಕೂಡಿ ಸಹಸ್ರಸಂಖ್ಯಾಕವೂ, ಹತ್ತು ಸಹಸ್ರ ಸಂಖ್ಯೆಯುಳ್ಳವೂ, ಹತ್ತುಕೋಟಿ ಸಂಖ್ಯೆಯುಳ್ಳವೂ ಆದ ದಸ್ಯುಜನರನ್ನೆಲ್ಲಾ ತನ್ನ ಬಲೆಯಲ್ಲಿ ಸಿಕ್ಕಿಸಿಕೊಂಡು ಅವರನ್ನೆಲ್ಲಾ ತನ್ನ ಆಯುಧದಿಂದ ಹೊಡೆದು ಕೊಂದು ಹಾಕಿದನು.

**ಅಯಂ ಲೋಕೋ ಜಾಲಮಾಸೀಚ್ಛಕ್ರಸ್ಯ ಮಹತೋ ಮಹಾನ್ ।**
**ತೇನಾಹಮಿಂದ್ರಜಾಲೇನಾಮೂಂಸ್ತಮಸಾಭಿದಧಾಮಿ ಸರ್ವಾನ್ ॥**

(ಅ. ವೇ. ೮-೮-೮)

ಈ ಲೋಕವೇ ಮಹತ್ಸ್ವರೂಪವುಳ್ಳ ಇಂದ್ರನ ಬಲೆಯು. ಆ ಬಲೆಯ ಸಹಾಯದಿಂದ ನಾನು ಶತ್ರುಗಳನ್ನೆಲ್ಲಾ ಕಗ್ಗತ್ತಲೆಯಲ್ಲಿ ಸಿಕ್ಕಿಕೊಳ್ಳುವಂತೆ ಮಾಡುತ್ತೇನೆ.

## ಸೋಮಪಾನದಲ್ಲಿ ಇಂದ್ರನಿಗಿರುವ ಆದರ

ಸೋಮಪಾನಾರ್ಥವಾಗಿ ಯಜಮಾನರಿಂದ ಆಹೂತನಾದೊಡನೆಯೇ, ಇಂದ್ರನು ರಥದಲ್ಲಿ ಕುಳಿತು ಸಿದ್ಧನಾಗಿ ಬರುತ್ತಾನೆ. ಮತ್ತು ಅಲ್ಲಿ ತನ್ನ ಅಶ್ವಗಳಿಗೂ ಆಹಾರವು ಸಿದ್ಧವಾಗಿರುತ್ತದೆ. ಮತ್ತು ಬಂದೊಡನೆಯೇ ಅವನ ಪಾನಕ್ಕಾಗಿ ಪ್ರಭೂತವಾಗಿ ಸೋಮರೂಪವಾದ ಆಹುತಿಯು ಸಿದ್ಧವಾಗಿ ಅರ್ಪಿತವಾಗುತ್ತದೆ.

(೩-೩೫-೭)

ಈ ಸೋಮಪಾನವಾದೊಡನೆಯೇ ಅವನು ಅತ್ಯತಿಶಯವಾದ ಹರ್ಷವನ್ನು ಪಡೆಯುತ್ತಾನೆ ಮತ್ತು ಇದರಿಂದ ಯುದ್ಧಕ್ಕೆ ಬೇಕಾದ ಉತ್ಸಾಹವನ್ನು ಪಡೆಯುವುದಲ್ಲದೇ, ದ್ಯಾವಾಪೃಥಿವಿಗಳ ಧಾರಣವೇ ಮುಂತಾದ ಇತರ ಅನೇಕ ಅಸಾಧಾರಣವಾದ ಕರ್ಮಗಳಿಗೂ ಉಪಯುಕ್ತವಾದ ಶಕ್ತಿಯನ್ನು ಪಡೆಯುತ್ತಾನೆ. ಎಲ್ಲಾ ವಿಧವಾದ ಶಕ್ತ್ಯುತ್ಸಾಹಗಳೂ ವೃದ್ಧಿಯನ್ನು ಹೊಂದುತ್ತವೆ.

(೨.೧೫-೨)

ಇಂದ್ರನ ಪೂಜಾವಿಧಿಯನ್ನು ತಿಳಿಸತಕ್ಕ ಅನೇಕ ವಾಕ್ಯಗಳಲ್ಲಿ ಕೆಲವುದರ ತಾತ್ಪರ್ಯವನ್ನು ಮಾತ್ರ ಇಲ್ಲಿ ತಿಳಿಸಲಾಗುತ್ತದೆ. ಈ ಸೋಮರಸವು ನಾಶರಹಿತವಾದ ಚೈತನ್ಯವನ್ನುಂಟುಮಾಡುತ್ತದೆ. ಸೂರ್ಯನು ತನ್ನ ಕಿರಣಗಳಿಂದ ಅಂತರಿಕ್ಷಾದಿಪ್ರದೇಶಗಳನ್ನೆಲ್ಲಾ ವ್ಯಾಪಿಸುವಂತೆ ಈ ಸೋಮರಸವು ಇಂದ್ರನ ದೇಹದಲ್ಲೆಲ್ಲಾ ಶಕ್ತಿಯು ವ್ಯಾಪಿಸುವಂತೆ ಮಾಡಲಿ ಎಂದು ಋಷಿಯು ಪ್ರಾರ್ಥಿಸಿದ್ದಾನೆ.

(೨-೧೫-೧, ೨, ೨.೧೯.೧; ೨.೨೧.೧, ೩-೩೬-೩, ೩-೪೦-೧; ೩-೪೨-೧, ೬-೨೩-೧, ೫, ೬ : ೬ ೨೭-೧, ೬-೨೯-೪; ೭-೨೨.೧; ೭-೨೯.೧, ೮-೩-೧, ೮-೮೧-೫, ೬; ೧೦-೧೦೪-೧)

ಇಂದ್ರನಿಗೆ ಅರ್ಪಿತವಾಗತಕ್ಕ ಸೋಮರಸದ ಭಾಗಕ್ಕೆ ದೇವತೆಗಳೆಲ್ಲರೂ ಆತುರದಿಂದ ಓಡಿಬರುತ್ತಾರೆ.

(೮-೨-೧೮)

"ಇಂದ್ರನೊಡನೆ ಇತರ ದೇವತೆಗಳೂ ಅಗ್ನಿಯೂ ಪಾನಮಾಡಿದ್ದಾರೆ. ಎಲ್ಲಾ ದೇವತೆಗಳೂ ತೃಪ್ತಿಯನ್ನು ಹೊಂದಿದ್ದಾರೆ. ಆದರೆ ಇಂದ್ರನ ತೃಪ್ತಿಯು ಅತ್ಯಧಿಕವಾದುದಾಗಿದೆ.''

(೧-೧೦೪-೯, ೧-೧೭೫-೫, ೨-೧೪-೧; ೭-೩೩-೨, ೮-೨-೪)

ಉಳಿದ ಎಲ್ಲಾ ದೇವತೆಗಳ ನಡುವೆಯೂ ಇಂದ್ರನ ಸೋಮಪಾನವೇ ಅತ್ಯತಿಶಯವಾದುದು. **ಇಂದ್ರ ಇತ್ ಸೋಮಪಾ ಏಕಃ . . ಅಂತರ್ದೇವಾನ್ ಮರ್ತ್ಯಾಂಶ್ಚ** । (೮-೨-೪) ದೇವಮಾನಾದಿಗಳ ನಡುವೆಯಲ್ಲಾ ಇಂದ್ರನೊಬ್ಬನೇ ನಿಜವಾದ ಸೋಮಪನಾಗಿದ್ದಾನೆ ಆದುದರಿಂದ ಇವನೇ ನಿಜವಾದ ವೀರ್ಯವಂತನು

(೮-೪-೧೨, ೮-೬-೪೦)

ಇಂದ್ರನ ತಾಯಿಯು ಇಂದ್ರನ ಜನನವಾದ ದಿನವೇ ಅವನಿಗೆ ಸೋಮವನ್ನು ಒದಗಿಸಿದುದರಿಂದ ಸೋಮವೇ ಇಂದ್ರನಿಗೆ ಜೀವಾತುವೆಂಬ ಅಂಶವು ಸ್ಪಷ್ಟವಾಗಿದೆ. (**ಸದ್ಯೋ ಯಜ್ಜಾತೋ ಅಪಿಬೋ ಹ ಸೋಮಂ**)

(೩-೩೨-೯, ೧೦, ೩-೪೮-೨, ೬-೪೦-೨, ೭-೯೮-೩)

ಒಂದೇ ಗುಟುಕಿಗೆ ಮೂವತ್ತು ದ್ರೋಣಪಾತ್ರೆಯ ಸೋಮವನ್ನೂ ಪಾನಮಾಡಿದನೆಂಬ ಪ್ರಸಿದ್ಧಿಯಿದೆ.

(೮-೬೬-೪ ೬-೧೭-೧೧; ೮-೭-೧೦, ೫ ೪-೧೧)

ಅವನ ಭಕ್ತರು ಈ ಸೋಮಪಾನಕ್ಕಾಗಿ ಅತ್ಯಂತ ವಿನಯದಿಂದಲೂ ಭಕ್ತಿಯಿಂದಲೂ ಕರೆಯುತ್ತಾರೆ ಮತ್ತು ಅವರ ಆಹ್ವಾನವನ್ನು ಮನ್ನಿಸಿಬಂದ ಇಂದ್ರನು ದಾಹಯುಕ್ತವಾದ ಜಿಂಕೆಯಂತೆ ಅವಸರದಿಂದ ಪಾನಮಾಡುತ್ತಾನೆ

(೮-೪-೧೦, ೫-೩೬-೧; ೮-೩೩-೨)

ಈ ಇಂದ್ರನ ಉದರ (ಗಳು) ವು ಎರಡು ಸರೋವರಗಳಂತಿವೆ. ಇದನ್ನು ತುಂಬಲು ಆತುರದಿಂದ ಇಂದ್ರನು ನೀರಿಲ್ಲದ ಬೆಂಗಾಡಿನಲ್ಲಿ ನೀರಿಗಾಗಿ ಅಲೆಯುವ ವೃಷಭದಂತೆ ಗರ್ಜಿಸುತ್ತಾನೆ.

(೫-೩೬-೧; ೧-೮-೭, ೧-೧೦೪-೯; ೨-೧೧-೧೧, ೨-೧೪-೧೦, ೨-೧೬-೨, ೩-೩೫-೬; ೩-೩೬-೭, ೮; ೩-೪೦-೫, ೩-೪೭-೧, ೩-೫೧-೧೨; ೮-೧೨-೨೩, ೮-೨-೧; ೮-೧೭ ೫ ರಿಂದ ೮; ೮-೬೭-೭; ೮-೮೧-೨೨, ೨೩, ೨೪, ೧೦-೨೮-೨, ೧೦-೪೩-೭, ೧೦-೧೦೪-೨, ಅ. ವೇ ೨-೫ ೧; ೬-೨-೧)

ಕೆಲವು ವೇಳೆಗಳಲ್ಲಿ ಇದೇ ಸೋಮರಸವನ್ನು ಯಜಮಾನರು ಪಾನಮಾಡಿದಾಗಲೂ ಇದೇವಿಧವಾದ ವರ್ಣನೆ ಯಿರುತ್ತದೆ. ಉದಾಹರಣೆಗೆ—

"ಈ ಸೋಮವನ್ನು ನಾನು ಪಾನಮಾಡಿದೊಡನೆಯೇ ಇದು ನನ್ನ ಶಾರೀರವನ್ನು ವೃದ್ಧಿಪಡಿಸುತ್ತದೆ.".

(೬-೪೭-೩)

ಎಂದು ಋಷಿಯು ತಿಳಿಸುತ್ತಾನೆ. ಇನ್ನೊಂದು ಸಂದರ್ಭದಲ್ಲಿ ಸೋಮಪಾನದ ಪ್ರಭಾವವನ್ನು ತಿಳಿಸುತ್ತಾ—

" ನಾವು ಸೋಮಪಾನವನ್ನು ಮಾಡಿದ್ದೇವೆ, ಆದುದರಿಂದಲೇ ನಾವು ಮರಣರಹಿತರಾಗಿದ್ದೇವೆ. ನಮ್ಮನ್ನು ಈಗ ಯಾವ ಮಾನವನೂ ಹಿಂಸಿಸಲಾರನು. ಅಮರ್ತ್ಯನಾದ ಎಲೈ ಇಂದ್ರನೇ, ನಿನ್ನ ಅನುಗ್ರಹದಿಂದ ನಾವೂ ಸಹ ನಿನ್ನೊಡನೆಯೇ, ಭೀತಿಯಿಲ್ಲದೇ, ಅಂತರಿಕ್ಷಕ್ಕೆ ಹತ್ತುವೆವು " ಎಂದು ಪ್ರಕಟಿಸುತ್ತಾನೆ.

(೮-೪೮-೩)

ಪಕ್ಷಿಗಳು ಪರ್ಣಭರಿತವಾದ ವೃಕ್ಷಕ್ಕೆ ಹಾರಿಹೋಗುವಂತೆಯೂ, ಸಾಗರಕ್ಕೆ ಜಲಭರಿತವಾದ ನದಿಗಳು ಹೋಗಿ ಸೇರುವಂತೆಯೂ, ಸೋಮರಸಪ್ರವಾಹವು ಇಂದ್ರನನ್ನು ಹೋಗಿ ಸೇರಿಕೊಳ್ಳುತ್ತವೆ. ವೃಷ್ಟಿಯು ಸುರಿಯುವುದರಿಂದ ಧಾನ್ಯಾದಿಗಳು ಯಾವರೀತಿ ಪುಷ್ಕಲವಾಗಿಯೂ ಪುಷ್ಟವಾಗಿಯೂ ಬೆಳೆಯುವುವೋ ಅದರಂತೆಯೇ ಸೋಮರಸದ ಅರ್ಪಣೆಯಿಂದ ಯಜಮಾನರು ಇಂದ್ರನು ಪುಷ್ಟನಾಗಿ ಬೆಳೆಯುವಂತೆ ಮಾಡುತ್ತಾರೆ

(೧೯-೪೩-೪, ೭)

ಸತ್ಪತಿಯು ಪತ್ನಿಯನ್ನು ಪ್ರೀತಿಸುವಂತೆಯೂ ಅವಳ ಸಾಹಚರ್ಯವನ್ನು ಅಪೇಕ್ಷಿಸುವಂತೆಯೂ ಸಹ ಇಂದ್ರನು ಯಜಮಾನರಿಂದ ಅರ್ಪಿತವಾದ ಸೋಮವನ್ನು ಪಾನಮಾಡಿ ಅವರಿಂದ ಅರ್ಪಿತವಾದ ಸ್ತುತಿಗಳನ್ನು ಸ್ವೀಕರಿಸಿ ಅದರಿಂದ ತೃಪ್ತಿಯನ್ನು ಹೊಂದಬೇಕೆಂದು ಪ್ರಾರ್ಥಿತನಾಗಿದ್ದಾನೆ.

(೩ ೫೩-೩, ೪-೩೨-೧೬)

ಸೋಮಪಾನದ ಪ್ರಭಾವವು ಇಂದ್ರನ ಉತ್ಸಾಹವನ್ನು ಯಾವರೀತಿ ವೃದ್ಧಿಪಡಿಸುವುದು ಎಂಬುದನ್ನು ವಿಶದವಾಗಿ ತೋರಿಸಲು ಒಂದು ಸೂಕ್ತದಲ್ಲಿ ಋಷಿಯು ಇಂದ್ರನ ಸ್ವರೂಪವನ್ನು ಈರೀತಿ ವರ್ಣಿಸಿದ್ದಾನೆ—ಸೋಮ ಪಾನದಿಂದ ತೃಪ್ತನಾದ ಇಂದ್ರನು ಯಜಮಾನನಿಗೆ ಯಾವಯಾವ ರೀತಿಯಲ್ಲಿ ತನ್ನ ಅನುಗ್ರಹವನ್ನು ತೋರಿಸುವ ನೆಂಬುದು ಇದರಿಂದ ತಿಳಿಯುತ್ತದೆ.

" ನಾನು ಪೂರ್ಣವಾಗಿ ಸೋಮಪಾನವನ್ನು ಮಾಡಿದ್ದೇನೆ ಆದುದರಿಂದ ಯಜಮಾನನಿಗೆ ನಾನು ಪಶು ಗಳನ್ನೂ ಅಶ್ವಗಳನ್ನೂ ಒದಗಿಸುತ್ತೇನೆ. ನಾನು ಪಾನಮಾಡಿರುವ ಸೋಮಪ್ರವಾಹವು ನನಗೆ ಅತಿಶಯವಾದ ಚೈತನ್ಯ ವನ್ನುಂಟುಮಾಡಿದೆ. ಪಶುವು ತನ್ನ ಕರುವನ್ನು ವಾತ್ಸಲ್ಯದಿಂದ ಓಡಿಹೋಗಿ ಸೇರುವಂತೆ ಋಷಿನಿರ್ಮಿತವಾದ ಸ್ತುತಿಯು ನನ್ನನ್ನು ಬಂದು ಸೇರಿದೆ. ಕರ್ಮಾರನು ಮಂಚವನ್ನು ಸುತ್ತುವರಿದು ಪರಿಷ್ಕರಿಸುವಂತೆ ನಾನೂ ಆ ಸ್ತುತಿಯನ್ನು ನನ್ನ ಹೃದಯದಲ್ಲಿ ವ್ಯಾಪಿಸುವಂತೆ ಮಾಡಿದ್ದೇನೆ. ಗಂಧರ್ವಾದಿ ಪಂಚಜನರೂ ಸಹ ನನ್ನಮುಂದೆ ಅಲ್ಪ ರಾಗಿರುತ್ತಾರೆ. ಅದು ಸೋಮದ ಪ್ರಭಾವ. ದ್ಯಾವಾಪೃಥಿವಿಗಳೆರಡೂ ಸೇರಿದರೂ ನನಗೆ ಅರ್ಧಪ್ರಮಾಣದಷ್ಟಾಗ ಲಾರವು. ಈ ದ್ಯಾವ್ಯಾಪೃಥಿವಿಗಳೆರಡರ ಮಹತ್ತ್ವವನ್ನೂ ಮೀರಿಸುವ ಮಹತ್ತ್ವವುಳ್ಳವನಾಗಿದ್ದೇನೆ. ಈ ಪೃಥಿವಿ ಯನ್ನು ನನ್ನ ಸಂಕಲ್ಪಕ್ಕನುಸಾರವಾಗಿ ಪ್ರತಿಷ್ಠಾಪಿಸುತ್ತೇನೆ. ಅಂತರಿಕ್ಷವು ನನ್ನ ಅರ್ಧಭಾಗ. ಉಳಿದರ್ಧವನ್ನು ಕೆಳಗಿಳಿಸಿದ್ದೇನೆ. ನಾನು ಅಂತರಿಕ್ಷದಲ್ಲಿ ಪ್ರಭುತ್ವವನ್ನು ಮಾಡುವ ಪ್ರಭಾವವನ್ನು ಹೊಂದಿದ್ದೇನೆ. ಈ ಸೋಮಪಾನದ ಫಲವಾಗಿ ನಾನು ದೇವತೆಗಳಿಗೆಲ್ಲಾ ಹವಿಸ್ಸನ್ನು ತೆಗೆದುಕೊಂಡುಹೋಗಿ ಹಂಚುವ ಶಕ್ತಿಯನ್ನು ಹೊಂದಿದ್ದೇನೆ "

(ಋ. ಸಂ. ೧೦-೧೧೯-೧ ರಿಂದ ೧೩)

ಇಂದ್ರನಿಗೆ ಅರ್ಪಿಸಿದ ಸೋಮದಂತೆಯೇ, ಯಜಮಾನನಿಂದ ಅರ್ಪಿತವಾದ ಸ್ತುತಿಗಳೂ ಇತರ ವಿಧವಾದ ಪೂಜೆಗಳೂ ಸಹ ಅವನ ವೀರ್ಯವನ್ನೂ ಚೈತನ್ಯವನ್ನೂ ಅತ್ಯಧಿಕವಾಗಿ ವೃದ್ಧಿಪಡಿಸುವುವು. **ಬ್ರಹ್ಮಾಣೀಂದ್ರ ತವ-ಯಾನಿ ವರ್ಧನಾ) (ಉಕ್ಥೈರ್ವರ್ಧಮಾನಾಃ)**

(೧-೫೨-೭, ೧-೫೪-೮, ೧-೮೦-೧, ೨-೧೧-೨, ೨-೧೨-೧೪, ೩-೩೨-೧೨ ; ೩-೩೪-೧, ೫-೩೧-೧೦. ೬-೨೧-೨; ೬-೪೪-೧೩; ೮-೬-೧, ೨೧,೩೧,೩೫, ೮-೧೩-೬, ೮-೧೪-೫, ೧೧; ೮-೮೨-೨೭, ೮-೪೭-೮, ೧೦.೫೦-೪ ; ೧೦-೧೨೦ ೫).

ಆ ಸೋಮಪಾನದಿಂದ ಉತ್ತೇಜಿತವಾದ ವೀರ್ಯಕ್ಕೆ ಅತಿಶಯವಾದ ಪ್ರಭಾವವನ್ನುಂಟುಮಾಡಲು ದೇವತೆಗಳೂ ಮಾನವರೂ ಇಂದ್ರನ ಹಸ್ತದಲ್ಲಿ ವಜ್ರಾಯುಧವನ್ನಿಡುತ್ತಾರೆ

(೧-೬೩-೨ , ೨-೨೦-೮ ; ೩-೩೨ ೧೨)

ಅಲ್ಲದೇ ಇತರ ದೇವತೆಗಳೂ ಸಹ ತಮ್ಮ ಶಕ್ತಿಯನ್ನೆಲ್ಲಾ ಇಂದ್ರನಲ್ಲಿಯೇ ಸ್ಥಾಪಿಸುತ್ತಾರೆ

(೧-೮೦-೧೫ ; ೬.೨೦-೨ ; ೧೦-೪೮-೩ ; ೧೦-೧೧೩-೮ ; ೧೦-೧೨೦-೩ , ೧೦ ೫೬-೪ , ೮-೧೫-೮)

ಮತ್ತು ಅವನನ್ನು ರಥದಲ್ಲಿ ಕುಳ್ಳಿರಿಸಿ ಯುದ್ಧಕ್ಕೆ ಸಿದ್ಧಪಡಿಸುತ್ತಾರೆ.

(೧-೫೫-೩ ; ೧.೧೩೧-೧ , ೬.೧೭-೮ ,)

ವೃತ್ರಾಸುರನ ವಧಕಾಲದಲ್ಲಿ ಮರುತ್ತುಗಳು ಈ ಇಂದ್ರನಿಗೆ ಉತ್ತೇಜನವನ್ನು ಕೊಟ್ಟು ಇವನ ಶಕ್ತಿಯು ಸ್ಥಿರವಾಗಿ ನಿಂತು ಜಯಸಾಧಕವಾಗುವಂತೆ ಮಾಡುತ್ತಾರೆಂದು ಅನೇಕಕಡೆಗಳಲ್ಲಿ ವರ್ಣಿತವಾಗಿದೆ. ಅದು ಸೋಮಪಾನದ ಪ್ರಭಾವವನ್ನು ಇನ್ನೂ ಅಧಿಕಗೊಳಿಸುತ್ತದೆ. (**ಯಾँ ಆಭಜೋ ಮರುತ ಇಂದ್ರ ಸೋಮೇ ಯೇ ತ್ವಾಮವರ್ಧನ್ನಭವನ್ ಗಣಸ್ತೇ**).

(೩.೩೫-೯ , ೩-೩೨-೪ , ೩-೪೭-೩ , ೬-೭.೧೧ , ೮-೭-೨೪ , ೧೦-೭೩-೧, ೨ ; ೧೦-೧೧೩-೩).

ಈ ಸಂದರ್ಭದಲ್ಲಿ ಇಂದ್ರನಿಗೂ ಮರುತ್ತುಗಳಿಗೂ ಇರತಕ್ಕ ಸಹಜಸಂಬಂಧವನ್ನೂ ಸಾಹಚರ್ಯವನ್ನೂ ತಿಳಿಸಬೇಕಾದುದು ಅವಶ್ಯವಾಗಿರುತ್ತದೆ. ಈ ಪ್ರಕರಣವು ಇಂದ್ರನಿಗೆ ಸೋಮದಲ್ಲಿರುವ ಆದರವನ್ನು ತೋರಿಸುವುದಾಗಿದೆ. ಆದರೆ ಆ ಸೋಮಪಾನವು ವೃತ್ರವಧಕ್ಕೆ ಎಷ್ಟು ಉತ್ತೇಜಕ, ಈ ಸಂದರ್ಭದಲ್ಲಿ ಮರುತ್ತುಗಳ ಪಾತ್ರವೇನು ಎಂಬುದನ್ನೂ ನಿರ್ದೇಶಿಸುವುದರಿಂದ ಈ ವಿಷಯವೂ ಸಹ ಆನುಷಂಗಿಕವಾಗಿರುತ್ತದೆ.

೧-೧೬೫ರಲ್ಲು ಇಂದ್ರನಿಗೂ ಮರುತ್ತುಗಳಿಗೂ ನಡೆದ ವಾಗ್ವಾದವು ವರ್ಣಿತವಾಗಿದೆ. ೧-೧೧೬-೮ ರಲ್ಲು ಇಂದ್ರನು ಮರುತ್ತುಗಳ ಸಹಾಯವಿಲ್ಲದೆಯೇ, ತನ್ನ ಸ್ವಶಕ್ತಿಯಿಂದಲೇ ವೃತ್ರನನ್ನು ಸಂಹರಿಸಿದುದಾಗಿ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಾನೆ. ೭.೨೧-೬ ರಲ್ಲು ಇದೇ ಪ್ರಶಂಸೆಯು ಇಂದ್ರನ ಭಕ್ತನಿಂದ ಮಾಡಲ್ಪಟ್ಟಿದೆ (**ಸ್ವೇನಾ ಹಿ ವೃತ್ರಂ ಶವಸಾ ಜಘಂಥ**) ಇದರಂತೆಯೇ, ೧೦.೧೩೮-೬ ರಲ್ಲೂ ಸಹ "**ಏತಾ ತ್ಯಾ ತೇ ಶ್ರುತ್ಯಾನಿ ಕೇವಲಾ ಯದೇಕಃ** ." ಇತ್ಯಾದಿಯಾಗಿ ಸ್ತುತಿಸಿದೆ. ಈ ಪರಾಕ್ರಮವಿರುವುದರಿಂದಲೇ ಸಕಲ ದೇವತೆಗಳೂ ಇಂದ್ರನಿಗೆ ಬೆದರುವುದಾಗಿ ತಿಳಿಸಿದೆ. (೫.೩೦.೫). ೮-೭-೧ ರಲ್ಲು ಮರುತ್ತುಗಳು ತಮ್ಮ ಸ್ನೇಹಿತನಾದ ಇಂದ್ರನಿಗೆ ಕ್ಲಿಷ್ಟಕಾಲ

**ಬೃಹತ್ತೇ ಜಾಲಂ ಬೃಹತ ಇಂದ್ರ ಶೂರ ಸಹಸ್ರಾರ್ಘಸ್ಯ ಶತವೀರ್ಯಸ್ಯ ।**
**ತೇನ ಸಹಸ್ರಮಯುತಂ ನ್ಯರ್ಬುದಂ ಜಘಾನ ಶಕ್ರೋ ದಸ್ಯೂನಾಮಭಿಧಾಯ ಸೇನಯಾ ॥**

(ಅ. ವೇ. ೮.೮-೭)

ಬೃಹತ್ಸ್ವರೂಪವುಳ್ಳ ಎಲೈ ಇಂದ್ರನೇ, ಪರಾಕ್ರಮಿಯಾದ ನಿನ್ನ ಬಲೆಯು ಅತಿ ವಿಸ್ತೃತವಾದುದು. ನೂರು ಶತ್ರುಗಳ ಬಲವನ್ನು ನೀನು ಒಟ್ಟಿಗೆ ಹೊಂದಿದ್ದೀಯೆ. ಸಾವಿರಾರು ಶತ್ರುಗಳನ್ನು ಒಟ್ಟಿಗೆ ಎದುರಿಸಬಲ್ಲೆ. ಇಂದ್ರನು ತನ್ನ ಪರಿವಾರಗಳೊಡನೆ ಕೂಡಿ ಸಹಸ್ರಸಂಖ್ಯಾಕವೂ, ಹತ್ತು ಸಹಸ್ರ ಸಂಖ್ಯೆಯುಳ್ಳವೂ, ಹತ್ತುಕೋಟಿ ಸಂಖ್ಯೆಯುಳ್ಳವೂ ಆದ ದಸ್ಯುಜನರನ್ನೆಲ್ಲಾ ತನ್ನ ಬಲೆಯಲ್ಲಿ ಸಿಕ್ಕಿಸಿಕೊಂಡು ಅವರನ್ನೆಲ್ಲಾ ತನ್ನ ಆಯುಧದಿಂದ ಹೊಡೆದು ಕೊಂದು ಹಾಕಿದನು.

**ಅಯಂ ಲೋಕೋ ಜಾಲಮಾಸೀಚ್ಛಕ್ರಸ್ಯ ಮಹತೋ ಮಹಾನ್ ।**
**ತೇನಾಹಮಿಂದ್ರಜಾಲೇನಾಮೂಂಸ್ತಮಸಾಭಿದಧಾಮಿ ಸರ್ವಾನ್ ॥**

(ಅ. ವೇ. ೮-೮-೮)

ಈ ಲೋಕವೇ ಮಹತ್ಸ್ವರೂಪವುಳ್ಳ ಇಂದ್ರನ ಬಲೆಯು. ಆ ಬಲೆಯ ಸಹಾಯದಿಂದ ನಾನು ಶತ್ರುಗಳನ್ನೆಲ್ಲಾ ಕಗ್ಗತ್ತಲೆಯಲ್ಲಿ ಸಿಕ್ಕಿಕೊಳ್ಳುವಂತೆ ಮಾಡುತ್ತೇನೆ.

## ಸೋಮಪಾನದಲ್ಲಿ ಇಂದ್ರನಿಗಿರುವ ಆದರ

ಸೋಮಪಾನಾರ್ಥವಾಗಿ ಯಜಮಾನರಿಂದ ಆಹೂತನಾದೊಡನೆಯೇ, ಇಂದ್ರನು ರಥದಲ್ಲಿ ಕುಳಿತು ಸಿದ್ಧನಾಗಿ ಬರುತ್ತಾನೆ. ಮತ್ತು ಅಲ್ಲಿ ತನ್ನ ಅಶ್ವಗಳಿಗೂ ಆಹಾರವು ಸಿದ್ಧವಾಗಿರುತ್ತದೆ. ಮತ್ತು ಬಂದೊಡನೆಯೇ ಅವನ ಪಾನಕ್ಕಾಗಿ ಪ್ರಭೂತವಾಗಿ ಸೋಮರೂಪವಾದ ಆಹುತಿಯು ಸಿದ್ಧವಾಗಿ ಅರ್ಪಿತವಾಗುತ್ತದೆ.

(೩–೩೫–೭)

ಈ ಸೋಮಪಾನವಾದೊಡನೆಯೇ ಅವನು ಅತ್ಯತಿಶಯವಾದ ಹರ್ಷವನ್ನು ಪಡೆಯುತ್ತಾನೆ ಮತ್ತು ಇದರಿಂದ ಯುದ್ಧಕ್ಕೆ ಬೇಕಾದ ಉತ್ಸಾಹವನ್ನು ಪಡೆಯುವುದಲ್ಲದೇ, ದ್ಯಾವಾಪೃಥಿವಿಗಳ ಧಾರಣವೇ ಮುಂತಾದ ಇತರ ಅನೇಕ ಅಸಾಧಾರಣವಾದ ಕರ್ಮಗಳಿಗೂ ಉಪಯುಕ್ತವಾದ ಶಕ್ತಿಯನ್ನು ಪಡೆಯುತ್ತಾನೆ. ಎಲ್ಲಾ ವಿಧವಾದ ಶಕ್ತ್ಯುತ್ಸಾಹಗಳೂ ವೃದ್ಧಿಯನ್ನು ಹೊಂದುತ್ತವೆ.

(೨.೧೫-೨)

ಇಂದ್ರನ ಪೂಜಾವಿಧಿಯನ್ನು ತಿಳಿಸತಕ್ಕ ಅನೇಕ ವಾಕ್ಯಗಳಲ್ಲಿ ಕೆಲವುದರ ತಾತ್ಪರ್ಯವನ್ನು ಮಾತ್ರ ಇಲ್ಲಿ ತಿಳಿಸಲಾಗುತ್ತದೆ. ಈ ಸೋಮರಸವು ನಾಶರಹಿತವಾದ ಚೈತನ್ಯವನ್ನುಂಟುಮಾಡುತ್ತದೆ ಸೂರ್ಯನು ತನ್ನ ಕಿರಣಗಳಿಂದ ಅಂತರಿಕ್ಷಾದಿಪ್ರದೇಶಗಳನ್ನೆಲ್ಲಾ ವ್ಯಾಪಿಸುವಂತೆ ಈ ಸೋಮರಸವು ಇಂದ್ರನ ದೇಹದಲ್ಲೆಲ್ಲಾ ಶಕ್ತಿಯು ವ್ಯಾಪಿಸುವಂತೆ ಮಾಡಲಿ ಎಂದು ಋಷಿಯು ಪ್ರಾರ್ಥಿಸಿದ್ದಾನೆ.

(೨-೧೫-೧, ೨ , ೨.೧೯ ೧ ; ೨.೨೧.೧ ; ೩-೩೬-೩ , ೩-೪೦-೧ ; ೩-೪೨-೧ ; ೬-೨೩-೧ , ೫, ೬ : ೬ ೨೭-೧ , ೬-೨೯-೪ ; ೭-೨೨.೧ ; ೭--೨೯.೧ , ೮.೩-೧ , ೮-೮೧-೫, ೬ , ೧೦-೧೦೪-೧)

ಇಂದ್ರನಿಗೆ ಅರ್ಪಿತವಾಗತಕ್ಕ ಸೋಮರಸದ ಭಾಗಕ್ಕೆ ದೇವತೆಗಳೆಲ್ಲರೂ ಆತುರದಿಂದ ಓಡಿಬರುತ್ತಾರೆ.

(೮-೨-೧೮)

"ಇಂದ್ರನೊಡನೆ ಇತರ ದೇವತೆಗಳೂ ಅಗ್ನಿಯೂ ಪಾನಮಾಡಿದ್ದಾರೆ. ಎಲ್ಲಾ ದೇವತೆಗಳೂ ತೃಪ್ತಿಯನ್ನು ಹೊಂದಿದ್ದಾರೆ. ಆದರೆ ಇಂದ್ರನ ತೃಪ್ತಿಯು ಅತ್ಯಧಿಕವಾದುದಾಗಿದೆ.''

(೧-೧೦೪-೯, ೧-೧೭೫-೫, ೨-೧೪-೧, ೭-೩೩-೨, ೮-೨-೪)

ಉಳಿದ ಎಲ್ಲಾ ದೇವತೆಗಳ ನಡುವೆಯೂ ಇಂದ್ರನ ಸೋಮಪಾನವೇ ಅತ್ಯತಿಶಯವಾದುದು. **ಇಂದ್ರ ಇತ್ ಸೋಮಪಾ ಏಕಃ । ಅಂತರ್ದೇವಾನ್ ಮರ್ತ್ಯಾಂಶ್ಚ** । (೮-೨-೪) ದೇವಮಾನವಾದಿಗಳ ನಡುವೆಯಲ್ಲಾ ಇಂದ್ರನೊಬ್ಬನೇ ನಿಜವಾದ ಸೋಮಪನಾಗಿದ್ದಾನೆ ಆದುದರಿಂದ ಇವನೇ ನಿಜವಾದ ವೀರ್ಯವಂತನು

(೮-೪-೧೩, ೮-೬-೪೦)

ಇಂದ್ರನ ತಾಯಿಯು ಇಂದ್ರನ ಜನನವಾದ ದಿನವೇ ಅವನಿಗೆ ಸೋಮವನ್ನು ಒದಗಿಸಿದುದರಿಂದ ಸೋಮವೇ ಇಂದ್ರನಿಗೆ ಜೀವಾತುವೆಂಬ ಅಂಶವು ಸ್ಪಷ್ಟವಾಗಿದೆ. (**ಸದ್ಯೋ ಯಜ್ಜಾತೋ ಅಪಿಬೋ ಹ ಸೋಮಂ**).

(೩-೩೨-೯, ೧೦, ೩-೪೮-೨, ೬-೪೦-೨, ೭-೯೮-೩)

ಒಂದೇ ಗುಟುಕಿಗೆ ಮೂವತ್ತು ದ್ರೋಣಪಾತ್ರೆಯ ಸೋಮವನ್ನೂ ಪಾನಮಾಡಿದನೆಂಬ ಪ್ರಸಿದ್ಧಿಯಿದೆ.

(೮-೬೬-೪. ೬-೧೭-೧೧ ; ೮-೭-೧೦, ನಿ ೪-೧೧)

ಅವನ ಭಕ್ತರು ಈ ಸೋಮಪಾನಕ್ಕಾಗಿ ಅತ್ಯಂತ ವಿನಯದಿಂದಲೂ ಭಕ್ತಿಯಿಂದಲೂ ಕರೆಯುತ್ತಾರೆ ಮತ್ತು ಅವರ ಆಹ್ವಾನವನ್ನು ಮನ್ನಿಸಿಬಂದ ಇಂದ್ರನು ದಾಹಯುಕ್ತವಾದ ಜಿಂಕೆಯಂತೆ ಅವಸರದಿಂದ ಪಾನಮಾಡುತ್ತಾನೆ

(೮-೪-೧೦, ೫ ೩೬-೧ ; ೮-೩೩-೨)

ಈ ಇಂದ್ರನ ಉದರ (ಗಳು) ವು ಎರಡು ಸರೋವರಗಳಂತಿವೆ. ಇದನ್ನು ತುಂಬಲು ಆತುರದಿಂದ ಇಂದ್ರನು ನೀರಿಲ್ಲದ ಬೆಂಗಾಡಿನಲ್ಲಿ ನೀರಿಗಾಗಿ ಅಲೆಯುವ ವೃಷಭದಂತೆ ಗರ್ಜಿಸುತ್ತಾನೆ.

(೫-೩೬-೧ ; ೧-೮-೭, ೧-೧೦೪-೯ ; ೨-೧೧.೧೧ ; ೨-೧೪-೧೦, ೨-೧೬-೨, ೩-೩೫-೬ ; ೩.೩೬-೭, ೮ ; ೩-೪೦-೫, ೩.೪೭-೧, ೩.೫೧-೧೨, ೮-೧೨-೨೩ ; ೮-೨-೧ ; ೮-೧೭ ೫ ರಿಂದ ೮ ; ೮.೬೭-೭ ; ೮-೮೧-೨೨, ೨೩, ೨೪ ; ೧೦-೨೮-೨, ೧೦-೪೩-೭, ೧೦-೧೦೪-೨ ; ಅ. ವೇ ೨-೫ ೧ ; ೬.೨-೧)

ಕೆಲವು ವೇಳೆಗಳಲ್ಲಿ ಇದೇ ಸೋಮರಸವನ್ನು ಯಜಮಾನರು ಪಾನಮಾಡಿದಾಗಲೂ ಇದೇವಿಧವಾದ ವರ್ಣನೆ ಯಿರುತ್ತದೆ. ಉದಾಹರಣೆಗೆ—

"ಈ ಸೋಮವನ್ನು ನಾನು ಪಾನಮಾಡಿದೊಡನೆಯೇ ಇದು ನನ್ನ ಶಾರೀರವನ್ನು ವೃದ್ಧಿಪಡಿಸುತ್ತದೆ." .

(೬-೪೭-೩)

ಎಂದು ಋಷಿಯು ತಿಳಿಸುತ್ತಾನೆ. ಇನ್ನೊಂದು ಸಂದರ್ಭದಲ್ಲಿ ಸೋಮಪಾನದ ಪ್ರಭಾವವನ್ನು ತಿಳಿಸುತ್ತಾ—

" ನಾವು ಸೋಮಪಾನವನ್ನು ಮಾಡಿದ್ದೇವೆ, ಆದುದರಿಂದಲೇ ನಾವು ಮರಣರಹಿತರಾಗಿದ್ದೇವೆ. ನಮ್ಮನ್ನು ಈಗ ಯಾವ ಮಾನವನೂ ಹಿಂಸಿಸಲಾರನು. ಅಮರ್ತ್ಯನಾದ ಎಲೈ ಇಂದ್ರನೇ. ನಿನ್ನ ಅನುಗ್ರಹದಿಂದ ನಾವೂ ಸಹ ನಿನ್ನೊಡನೆಯೇ, ಭೀತಿಯಿಲ್ಲದೇ, ಅಂತರಿಕ್ಷಕ್ಕೆ ಹತ್ತುವೆವು " ಎಂದು ಪ್ರಕಟಿಸುತ್ತಾನೆ.

(೮-೪೮-೩)

ಪಕ್ಷಿಗಳು ಪರ್ಣಭರಿತವಾದ ವೃಕ್ಷಕ್ಕೆ ಹಾರಿಹೋಗುವಂತೆಯೂ. ಸಾಗರಕ್ಕೆ ಜಲಭರಿತವಾದ ನದಿಗಳು ಹೋಗಿ ಸೇರುವಂತೆಯೂ, ಸೋಮರಸಪ್ರವಾಹವು ಇಂದ್ರನನ್ನು ಹೋಗಿ ಸೇರಿಕೊಳ್ಳುತ್ತದೆ. ವೃಷ್ಟಿಯು ಸುರಿಯುವುದರಿಂದ ಧಾನ್ಯಾದಿಗಳು ಯಾವರೀತಿ ಪುಷ್ಕಲವಾಗಿಯೂ ಪುಷ್ಟವಾಗಿಯೂ ಬೆಳೆಯುವುವೋ ಅದರಂತೆಯೇ ಸೋಮರಸದ ಅರ್ಪಣೆಯಿಂದ ಯಜಮಾನರು ಇಂದ್ರನು ಪುಷ್ಟನಾಗಿ ಬೆಳೆಯುವಂತೆ ಮಾಡುತ್ತಾರೆ

(೧೯-೫೩-೪, ೭)

ಸತ್ಪತಿಯು ಪತ್ನಿಯನ್ನು ಪ್ರೀತಿಸುವಂತೆಯೂ ಅವಳ ಸಾಹಚರ್ಯವನ್ನು ಅಪೇಕ್ಷಿಸುವಂತೆಯೂ ಸಹ ಇಂದ್ರನು ಯಜಮಾನರಿಂದ ಅರ್ಪಿತವಾದ ಸೋಮವನ್ನು ಪಾನಮಾಡಿ ಅವರಿಂದ ಅರ್ಪಿತವಾದ ಸ್ತುತಿಗಳನ್ನು ಸ್ವೀಕರಿಸಿ ಅದರಿಂದ ತೃಪ್ತಿಯನ್ನು ಹೊಂದಬೇಕೆಂದು ಪ್ರಾರ್ಥಿತನಾಗಿದ್ದಾನೆ.

(೩.೫೩-೨, ೪-೩೨-೧೬)

ಸೋಮಪಾನದ ಪ್ರಭಾವವು ಇಂದ್ರನ ಉತ್ಸಾಹವನ್ನು ಯಾವರೀತಿ ವೃದ್ಧಿಪಡಿಸುವುದು ಎಂಬುದನ್ನು ವಿಶದವಾಗಿ ತೋರಿಸಲು ಒಂದು ಸೂಕ್ತದಲ್ಲಿ ಋಷಿಯು ಇಂದ್ರನ ಸ್ವರೂಪವನ್ನು ಈರೀತಿ ವರ್ಣಿಸಿದ್ದಾನೆ—ಸೋಮ ಪಾನದಿಂದ ತೃಪ್ತನಾದ ಇಂದ್ರನು ಯಜಮಾನನಿಗೆ ಯಾವಯಾವ ರೀತಿಯಲ್ಲಿ ತನ್ನ ಅನುಗ್ರಹವನ್ನು ತೋರಿಸುವ ನೆಂಬುದು ಇದರಿಂದ ತಿಳಿಯುತ್ತದೆ.

" ನಾನು ಪೂರ್ಣವಾಗಿ ಸೋಮಪಾನವನ್ನು ಮಾಡಿದ್ದೇನೆ. ಆದುದರಿಂದ ಯಜಮಾನನಿಗೆ ನಾನು ಪಶು ಗಳನ್ನೂ ಅಶ್ವಗಳನ್ನೂ ಒದಗಿಸುತ್ತೇನೆ. ನಾನು ಪಾನಮಾಡಿರುವ ಸೋಮಪ್ರವಾಹವು ನನಗೆ ಅತಿಶಯವಾದ ಚೈತನ್ಯ ವನ್ನುಂಟುಮಾಡಿದೆ. ಪಶುವು ತನ್ನ ಕರುವನ್ನು ವಾತ್ಸಲ್ಯದಿಂದ ಓಡಿಹೋಗಿ ಸೇರುವಂತೆ ಋಷಿನಿರ್ಮಿತವಾದ ಸ್ತುತಿಯು ನನ್ನನ್ನು ಬಂದು ಸೇರಿವೆ. ಕರ್ಮಾರನು ಮಂಧುರವನ್ನು ಸುತ್ತುವರಿದು ಪರಿಷ್ಕರಿಸುವಂತೆ ನಾನೂ ಆ ಸ್ತುತಿಯನ್ನು ನನ್ನ ಹೃದಯದಲ್ಲಿ ವ್ಯಾಪಿಸುವಂತೆ ಮಾಡಿದ್ದೇನೆ. ಗಂಧರ್ವಾದಿ ಪಂಚಜನರೂ ಸಹ ನನ್ನ ಮುಂದೆ ಅಲ್ಪ ರಾಗಿರುತ್ತಾರೆ. ಅದು ಸೋಮದ ಪ್ರಭಾವ. ದ್ಯಾವಾಪೃಥಿವಿಗಳೆರಡೂ ಸೇರಿದರೂ ನನಗೆ ಅರ್ಧಪ್ರಮಾಣದಷ್ಟಾಗ ಲಾರವು. ಈ ದ್ಯಾವಾಪೃಥಿವಿಗಳೆರಡರ ಮಹತ್ತ್ವವನ್ನೂ ಮೀರಿಸುವ ಮಹತ್ತ್ವವುಳ್ಳವನಾಗಿದ್ದೇನೆ. ಈ ಪೃಥಿವಿ ಯನ್ನು ನನ್ನ ಸಂಕಲ್ಪಕ್ಕನುಸಾರವಾಗಿ ಪ್ರತಿಷ್ಠಾಪಿಸುತ್ತೇನೆ. ಅಂತರಿಕ್ಷವು ನನ್ನ ಅರ್ಧಭಾಗ. ಉಳಿದರ್ಧವನ್ನು ಕೆಳಗಿಳಿಸಿದ್ದೇನೆ. ನಾನು ಅಂತರಿಕ್ಷದಲ್ಲಿ ಪ್ರಭುತ್ವವನ್ನು ಮಾಡುವ ಪ್ರಭಾವವನ್ನು ಹೊಂದಿದ್ದೇನೆ. ಈ ಸೋಮಪಾನದ ಫಲವಾಗಿ ನಾನು ದೇವತೆಗಳಿಗೆಲ್ಲಾ ಹವಿಸ್ಸನ್ನು ತೆಗೆದುಕೊಂಡುಹೋಗಿ ಹಂಚುವ ಶಕ್ತಿಯನ್ನು ಹೊಂದಿದ್ದೇನೆ "

(ಋ. ಸಂ. ೧೦-೧೧೯-೧ ರಿಂದ ೧೩)

ಇಂದ್ರನಿಗೆ ಅರ್ಪಿಸಿದ ಸೋಮದಂತೆಯೇ, ಯಜಮಾನನಿಂದ ಅರ್ಪಿತವಾದ ಸ್ತುತಿಗಳೂ ಇತರ ವಿಧವಾದ ಪೂಜೆಗಳೂ ಸಹ ಅವನ ವೀರ್ಯವನ್ನೂ ಚೈತನ್ಯವನ್ನೂ ಅತ್ಯಧಿಕವಾಗಿ ವೃದ್ಧಿಪಡಿಸುವುವು **ಬ್ರಹ್ಮಾಣೀಂದ್ರ ತವ ಯಾನಿ ವರ್ಧನಾ) (ಉಕ್ಥೈರ್ವಾವೃಧಾನಾಃ)**

(೧-೫೨-೭, ೧-೫೪-೮, ೧-೮೦-೧, ೨-೧೧-೨, ೨-೧೨-೧೪, ೩-೩೨-೧೨, ೩-೩೪-೧, ೫-೩೧-೧೦. ೬-೨೧-೨; ೬-೪೪-೧೩; ೮-೬-೧, ೨೧,೩೧,೩೫; ೮-೧೩-೬, ೮-೧೪-೫, ೧೧; ೮-೮೨-೨೭, ೮ ೪೭-೮, ೧೦-೫೦-೪; ೧೦-೧೨೦ ೫).

ಆ ಸೋಮಪಾನದಿಂದ ಉತ್ತೇಜಿತವಾದ ವೀರ್ಯಕ್ಕೆ ಅತಿಶಯವಾದ ಪ್ರಭಾವವನ್ನುಂಟುಮಾಡಲು ದೇವತೆಗಳೂ ಮಾನವರೂ ಇಂದ್ರನ ಹಸ್ತದಲ್ಲಿ ವಜ್ರಾಯುಧವನ್ನಿಡುತ್ತಾರೆ

(೧-೬೩-೨, ೨-೨೦-೮; ೩-೩೨ ೧೨)

ಅಲ್ಲದೇ ಇತರ ದೇವತೆಗಳೂ ಸಹ ತಮ್ಮ ಶಕ್ತಿಯನ್ನೆಲ್ಲಾ ಇಂದ್ರನಲ್ಲಿಯೇ ಸ್ಥಾಪಿಸುತ್ತಾರೆ

(೧-೮೦-೧೫; ೬.೨೦-೨; ೧೦-೪೮-೩; ೧೦-೧೧೩-೮; ೧೦-೧೨೦-೩; ೧೦ ೫೬-೪, ೮ ೧೫-೮)

ಮತ್ತು ಅವನನ್ನು ರಥದಲ್ಲಿ ಕುಳ್ಳಿರಿಸಿ ಯುದ್ಧಕ್ಕೆ ಸಿದ್ಧಪಡಿಸುತ್ತಾರೆ

(೧-೫೫-೩, ೧-೧೩೧-೧, ೬-೧೭-೮,)

ವೃತ್ರಾಸುರನ ವಧಕಾಲದಲ್ಲಿ ಮರುತ್ತುಗಳು ಈ ಇಂದ್ರನಿಗೆ ಉತ್ತೇಜನವನ್ನು ಕೊಟ್ಟು ಇವನ ಶಕ್ತಿಯು ಸ್ಥಿರವಾಗಿ ನಿಂತು ಜಯಸಾಧಕವಾಗುವಂತೆ ಮಾಡುತ್ತಾರೆಂದು ಅನೇಕಕಡೆಗಳಲ್ಲಿ ವರ್ಣಿತವಾಗಿವೆ. ಅದು ಸೋಮಪಾನದ ಪ್ರಭಾವವನ್ನು ಇನ್ನೂ ಅಧಿಕಗೊಳಿಸುತ್ತದೆ. (**ಯಾಁ ಆಭಜೋ ಮರುತ ಇಂದ್ರ ಸೋಮೇ ಯೇ ತ್ವಾಮವರ್ಧನ್ನಭವನ್ ಗಣಸ್ತೇ**).

(೩.೩೫-೯, ೩-೩೨-೪; ೩-೪೭-೩; ೬-೭.೧೧, ೮-೭-೨೪, ೧೦-೭೩-೧, ೨; ೧೦-೧೧೩-೩).

ಈ ಸಂದರ್ಭದಲ್ಲಿ ಇಂದ್ರನಿಗೂ ಮರುತ್ತುಗಳಿಗೂ ಇರತಕ್ಕ ಸಹಜಸಂಬಂಧವನ್ನೂ ಸಾಹಚರ್ಯವನ್ನೂ ತಿಳಿಸಬೇಕಾದುದು ಅವಶ್ಯವಾಗಿರುತ್ತದೆ. ಈ ಪ್ರಕರಣವು ಇಂದ್ರನಿಗೆ ಸೋಮದಲ್ಲಿರುವ ಆದರವನ್ನು ತೋರಿಸುವುದಾಗಿದೆ. ಆದರೆ ಆ ಸೋಮಪಾನವು ವೃತ್ರವಧಕ್ಕೆ ಎಷ್ಟು ಉತ್ತೇಜಕ, ಈ ಸಂದರ್ಭದಲ್ಲಿ ಮರುತ್ತುಗಳ ಪಾತ್ರವೇನು ಎಂಬುದನ್ನೂ ನಿರ್ದೇಶಿಸುವುದರಿಂದ ಈ ವಿಷಯವೂ ಸಹ ಆನುಷಂಗಿಕವಾಗಿರುತ್ತದೆ.

೧-೧೬೫ರಲ್ಲು ಇಂದ್ರನಿಗೂ ಮರುತ್ತುಗಳಿಗೂ ನಡೆದ ವಾಗ್ವಾದವು ವರ್ಣಿತವಾಗಿದೆ. ೧-೧೧೬-೮ ರಲ್ಲು ಇಂದ್ರನು ಮರುತ್ತುಗಳ ಸಹಾಯವಿಲ್ಲದೆಯೇ, ತನ್ನ ಸ್ವಶಕ್ತಿಯಿಂದಲೇ ವೃತ್ರನನ್ನು ಸಂಹರಿಸಿದುದಾಗಿ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಾನೆ. ೭.೨೧-೬ ರಲ್ಲು ಇದೇ ಪ್ರಶಂಸೆಯು ಇಂದ್ರನ ಭಕ್ತನಿಂದ ಮಾಡಲ್ಪಟ್ಟಿದೆ (**ಸ್ವೇನಾ ಹಿ ವೃತ್ರಂ ಶವಸಾ ಜಘಂಥ**) ಇದರಂತೆಯೇ, ೧೦.೧೩೮-೬ ರಲ್ಲೂ ಸಹ " **ಏತಾ ತ್ಯಾ ತೇ ಶ್ರುತ್ಯಾನಿ ಕೇವಲಾ ಯದೇಕಃ** . ... " ಇತ್ಯಾದಿಯಾಗಿ ಸ್ತುತಿಸಿದೆ. ಈ ಪರಾಕ್ರಮವಿರುವುದರಿಂದಲೇ ಸಕಲ ದೇವತೆಗಳೂ ಇಂದ್ರನಿಗೆ ಬೆದರುವುದಾಗಿ ತಿಳಿಸಿದೆ. (೫.೩೦.೫). ೮-೭-೧ ರಲ್ಲು ಮರುತ್ತುಗಳು ತಮ್ಮ ಸ್ನೇಹಿತನಾದ ಇಂದ್ರನಿಗೆ ಕ್ಲಿಷ್ಟಕಾಲ

ದಲ್ಲಿ ಸಹಾಯಮಾಡದೇ ಇದ್ದುದು ಅಪರಾಧವೆಂದೂ, ಇಂತಹ ಸಂದರ್ಭದಲ್ಲಿ ಅವರು ನಂಬಿಕೆಗೆ ಹೇಗೆ ಪಾತ್ರರಾಗಬಲ್ಲ ರೆಂದೂ ಪ್ರಶ್ನಿಸಿದೆ.

೪-೧೮ ೧೧ ರಲ್ಲು ಇಂದ್ರಮಾತೆಯಾದ ಅದಿತಿಯು ಉಳಿದ ದೇವತೆಗಳೆಲ್ಲರೂ ತನ್ನ ಮಗನಿಗೆ ಸಹಾಯಮಾಡದೇ ಪರಿತ್ಯಜಿಸಿದುದಕ್ಕಾಗಿ ಖೇದಗೊಂಡು ವಿಷ್ಣುವನ್ನು ಸಮೀಪಿಸಿ ತನ್ನ ಮಗನಿಗೆ ಸಹಾಯಮಾಡಬೇಕೆಂದು ಪ್ರಾರ್ಥಿಸುತ್ತಾಳೆ. ಆದರೆ ಬೇರೆಡೆಯಲ್ಲಿ ಇದಕ್ಕೆ ಕೊಂಚ ವ್ಯತ್ಯಸ್ತವಾದ ವಿವರಣೆಯೂ ಇರುತ್ತದೆ. ವೃತ್ರಾಸುರನೊಡನೆ ಯುದ್ಧಮಾಡುತ್ತಿದ್ದಾಗ ಉಳಿದ ದೇವತೆಗಳೆಲ್ಲರೂ ಅವನ ಭಯಂಕರವಾದ ರೂಪಕ್ಕೆ ಹೆದರಿ ಇಂದ್ರನೊಬ್ಬನನ್ನೇ ಬಿಟ್ಟು ಓಡಿಹೋದರೆಂದೂ ಆಗ ಇಂದ್ರನು ಮರುತ್ತುಗಳೊಂದಿಗೆ ಸಖ್ಯವಿದ್ದುದರಿಂದ ಅವರ ಸಹಾಯದಿಂದ ವೃತ್ರನನ್ನು ನಾಶಪಡಿಸಿದನೆಂದೂ ತಿಳಿಸಿದೆ. (೮-೯೬-೭), ಸಾಯಣರು ಈ ಸನ್ನಿವೇಶದಲ್ಲಿ ಹಿಂದಿನ ವಾಕ್ಯಗಳಿಗೂ ಇದಕ್ಕೂ ವಿರೋಧವಿರದಂತೆ ತಾತ್ಪರ್ಯವನ್ನು ಹೇಳಿದ್ದಾರೆ. ಮತ್ತು ಐತರೇಯ ಬ್ರಾಹ್ಮಣದ ವಾಕ್ಯವನ್ನುದಾಹರಿಸಿ ತಮ್ಮ ಅರ್ಥವನ್ನು ಸಮರ್ಥಿಸಿಕೊಂಡಿದ್ದಾರೆ. ಐತರೇಯಬ್ರಾಹ್ಮಣದ ವಾಕ್ಯವು ಈ ರೀತಿಯಿರುತ್ತದೆ —

> **ಇಂದ್ರೋ ವೈ ವೃತ್ರಂ ಹನಿಷ್ಯನ್ಸರ್ವಾ ದೇವತಾ ಅಬ್ರವೀದನು ಮೋಪತಿಷ್ಠಧ್ವಮುಪ ಮಾ ಹ್ವಯಧ್ವಮಿತಿ ತಥೇತಿ ತಂ ಹನಿಷ್ಯಂತ ಆದ್ರವನ್ಸೋಽವೇನ್ಮಾಂ ವೈ ಹನಿಷ್ಯಂತ ಆದ್ರವಂತಿ ಹಂತೇಮಾನ್ಭೀಷಯಾ ಇತಿ ತಾನಭಿಪ್ರಾಶ್ವಸೀತ್ತಸ್ಯ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅದ್ರವನ್ ಮರುತೋ ಹೈನಂ ನಾಜಹುಃ ಪ್ರಹರ ಭಗವೋ ಜಹಿ ವೀರಯಸ್ವೇತ್ಯೇವೈನಮೇತಾಂ ವಾಚಂ ವದಂತ ಉಪಾತಿಷ್ಠಂತ । ತದೇತದೃಷಿಃ ಪಶ್ಯನ್ನಭ್ಯನೂವಾಚ ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ । ಮರುದ್ಭಿರಿಂದ್ರ ಸಖ್ಯಂ ತೇ ಅಸ್ತ್ವಥೇಮಾ ವಿಶ್ವಾಃ ಪೃತನಾ ಜಯಾಸೀತಿ । ಸೋಽವೇದಿಮೇ ವೈ ಕಿಲ ಮೇ ಸಚಿವಾ ಇಮೇ ಮಾಕಾಮಯಂತ ಹಂತೇಮಾನಸ್ಮಿನ್ನುಕ್ಥ ಆಭಜಾ ಇತಿ ॥**

(ಐ. ಬ್ರಾ. ೩-೨೦)

ವೃತ್ರಾಸುರನನ್ನು ಕೊಲ್ಲಲಿಚ್ಛಿಸಿದ ಇಂದ್ರನು ದೇವತೆಗಳನ್ನು ಕುರಿತು " ಎಲೈ ದೇವತೆಗಳೇ, ನನ್ನನ್ನೇ ಎಡಬಿಡದೇ ಹಿಂಬಾಲಿಸಿರಿ ಮತ್ತು ನನಗೆ ಸಹಾಯಕರಾಗಿರಿ " ಎಂದನು. ಆಗ ಅವರು " ಹಾಗೆಯೇ ಮಾಡುವೆವು " ಎಂದು ಭರವಸೆಯನ್ನು ಕೊಟ್ಟು ವೃತ್ರನನ್ನು ಕೊಲ್ಲಲು ಮುನ್ನುಗ್ಗಿದರು. ಆಗ ವೃತ್ರನು, " ಈ ದೇವತೆಗಳು ನನ್ನನ್ನು ಕೊಲ್ಲಲು ಮುನ್ನುಗ್ಗಿ ಬರುತ್ತಿರುವರು. ನಾನು ಅವರನ್ನು ಬೆದರಿಸುವೆನು " ಎಂದು ಪ್ರಬಲವಾದ ನಿಟ್ಟುಸಿರನ್ನು ಬಿಟ್ಟು ಭಯಂಕರವಾದ ಶಬ್ದವನ್ನು ಮಾಡಿದನು. ಆಗ ಆ ಭಯಂಕರವಾದ ಶಬ್ದವನ್ನು ಕೇಳಿದ ದೇವತೆಗಳೆಲ್ಲರೂ ಭೀತರಾಗಿ ದಿಕ್ಕಾಪಾಲಾಗಿ ಓಡಿದರು. ಆದರೆ ಮರುತ್ತುಗಳು ಮಾತ್ರ ಇಂದ್ರನನ್ನು ಪರಿತ್ಯಜಿಸಲಿಲ್ಲ. ಅವರು ಇಂದ್ರನ ಪಕ್ಕದಲ್ಲೇ ನಿಂತು '' ಎಲೈ ಇಂದ್ರನೇ, ಇವನನ್ನು ಹೊಡೆ. ನಿನ್ನ ಪರಾಕ್ರಮವನ್ನು ತೋರಿಸು'' ಎಂದು ಉತ್ತೇಜನವನ್ನು ಕೊಡುತ್ತಿದ್ದರು. ಆಗ ಮರುತ್ತುಗಳ ಸಖ್ಯವನ್ನು ಪ್ರಶಂಸಿಸುತ್ತಾ ಋಷಿಯು **ವೃತ್ರಸ್ಯ ತ್ವಾ** ಎಂಬ ಮಂತ್ರವನ್ನು ಪಠಿಸಿ ಪ್ರಶಂಸಿಸಿದನು. (೮-೯೬-೭). ಆಗ ಇಂದ್ರನು " ಈ ಮರುತ್ತುಗಳೇ ನನ್ನ ನಿಜವಾದ ಸಖರು. ಅವರು ನನ್ನನ್ನು ಪ್ರೀತಿಸುತ್ತಾರೆ, ಆದುದರಿಂದ ನನಗೆ ಅರ್ಪಿತವಾದ ಉಕ್ಥಮಂತ್ರದಲ್ಲಿ ಅವರಿಗೂ ಭಾಗವನ್ನು ಕೊಡುತ್ತೇನೆ" ಎಂದನು.

ಋಕ್ಸಂಹಿತೆಯಲ್ಲಿ ೧.೩೨-೧೪ ನೇ ಮಂತ್ರದಲ್ಲಿ ಇದೇ ಸನ್ನಿವೇಶವನ್ನು ವರ್ಣಿಸುತ್ತಾ, **ಅಹೇರ್ಯಾತಾರಂ** ಎಂದು ಸ್ತುತಿಸಿದೆ. ಇಲ್ಲಿಯೂ ಸಹ ಅರ್ಥವು ಸಂದಿಗ್ಧವಾಗಿರುತ್ತದೆ. ವೃತ್ರಾಸುರನ ವಧಕಾಲದಲ್ಲಿ ಇಂದ್ರನಿಗೇ ಕೊಂಚ ಭೀತಿಯುಂಟಾಯಿತೆಂದು ಇಲ್ಲಿ ತಿಳಿಸಿದೆ. ಆ ಭೀತಿಯಿಂದ ಶ್ಯೇನಪಕ್ಷಿಯಂತೆ ಓಡುತ್ತಾ ದಾರಿಯಲ್ಲಿ ಸಿಕ್ಕಿದ ತೊಂಭತ್ತು-ಒಂಭತ್ತು ನದೀಪ್ರವಾಹಗಳನ್ನೂ ದಾಟಿ ತಪ್ಪಿಸಿಕೊಂಡನು ಇತ್ಯಾದಿಯಾಗಿ ಎರಡು ಮೂರು ವಿಧವಾದ ತಾತ್ಪರ್ಯವನ್ನು ಹೇಳಬಹುದು. ಆದರೆ ಪ್ರಕೃತ ಆ ವಿಮರ್ಶನೆಯು ಅನವಶ್ಯಕವಾಗಿರುತ್ತದೆ. ಇಂದ್ರನಿಗೆ ಸಹಾಯಮಾಡಿದ ಇತರ ದೇವತೆಗಳ ವಿಷಯವೂ ಕೆಲವೆಡೆಗಳಲ್ಲಿ ಸ್ತುತಿಸಲ್ಪಟ್ಟಿದೆ. ಉದಾಹರಣೆಗೆ—

" ಪ್ರಕಾಶಕ್ಕೆ ಪ್ರಭುಗಳಾದ ಎಲೈ ಅಶ್ವಿನೀದೇವತೆಗಳೇ, ಇಂದ್ರನೊಡನೆ, ಮಧುರವಾದ ಸೋಮವನ್ನು ಪಾನ ಮಾಡಿದವರಾಗಿ, ಅಸುರ ನಮುಚಿಯನ್ನು ನಾಶಪಡಿಸುವಾಗ ನೀವು ಅವನಿಗೆ ಸಹಾಯವನ್ನುಮಾಡಿದಿರಿ, ಮತ್ತು ತತ್ಕಾಲದಲ್ಲಿ ನೀವು ಅವನನ್ನು ರಕ್ಷಿಸಿದಿರಿ "

(೧೦-೧೩೧-೪)

" ಎಲೈ ಇಂದ್ರನೇ, ಮಾತಾಪಿತೃಗಳು ಮಕ್ಕಳನ್ನು ರಕ್ಷಿಸುವಂತೆ, ಅಶ್ವಿನೀದೇವತೆಗಳಿಬ್ಬರೂ ಇಂದ್ರನನ್ನು ಆಪತ್ಕಾಲದಲ್ಲಿ ರಕ್ಷಿಸಿದರು. ನಿನ್ನ ಪರಾಕ್ರಮದ ಪ್ರಕಾಶನದ ವೇಳೆಯಲ್ಲಿ ಸೋಮಪಾನವನ್ನು ಮಾಡಿದಾಗ ಸರಸ್ವತೀ ದೇವಿಯು ತನ್ನ ಸಕಲ ರಕ್ಷಾಸಾಧನಗಳೊಂದಿಗೂ ನಿನ್ನ ಪಕ್ಕದಲ್ಲೇ ಸಹಾಯಕಳಾಗಿದ್ದಳು. "

(೧೦-೧೩೧-೫)

ಈ ಪ್ರಕರಣವು ವಾಜಸನೇಯಸಂಹಿತೆಯಲ್ಲಿಯೂ ಉಕ್ತವಾಗಿದೆ. (೧೦-೩೩, ೩೪) ಮತ್ತು ವಾಜಸನೇಯ ಸಂಹಿತಾಭಾಷ್ಯದಲ್ಲಿ, ಭಾಷ್ಯಕಾರರು ಶತಪಥಬ್ರಾಹ್ಮಣೋಕ್ತವಾದ ಒಂದು ಕಥೆಯನ್ನು ಉದಾಹರಿಸಿದ್ದಾರೆ ಅದರ ರೂಪವು ಈ ರೀತಿಯಲ್ಲಿದೆ—

**ಇಂದ್ರಸ್ಯೇಂದ್ರಿಯಮನ್ನಸ್ಯ ರಸಗ್ಂ ಸೋಮಸ್ಯ ಭಕ್ಷಗ್ಂ ಸುರಯಾಸುರೋ ನಮುಚಿರಹರ-ತ್ಸೋಽಶ್ವಿನೌ ಚ ಸರಸ್ವತೀಂ ಚೋಪಾಧಾವಚ್ಛೇಪಾನೋಽಸ್ಮಿ ನಮುಚಯೇ ನ ತ್ವಾ ದಿವಾ ನ ನಕ್ತಗ್ಂ ಹನಾನಿ ನ ದಣ್ಡೇನ ನ ಧನ್ವನಾ ನ ಪೃಥೇನ ನ ಮುಷ್ಟಿನಾ ನ ಶುಷ್ಕೇಣ ನಾರ್ದ್ರೇಣಾಥ ಮ ಇದಮಹಾರ್ಷೀದಿದಂ ಮ ಆಜಿಹೀರ್ಷಥೇತಿ ।**

(ಶ. ಬ್ರಾ. ೧೨-೭-೩-೧)

ಅಸುರ ನಮುಚಿಯು ಒಂದುಸಲ ಇಂದ್ರನ ವೀರ್ಯವನ್ನೂ, ಅನ್ನವನ್ನೂ, ಸೋಮವನ್ನೂ, ಸುರೆಯನ್ನೂ ಅಪಹರಿಸಿದನು. ಆಗ ಇಂದ್ರನು ಅಶ್ವಿನೀದೇವತೆಗಳಲ್ಲಿಗೂ ಮತ್ತು ಸರಸ್ವತೀಯಲ್ಲಿಗೂ ಹೋಗಿ " ನಾನು ನಮುಚಿಯನು ಹಗಲಿನಲ್ಲಾಗಲಿ ಅಥವಾ ರಾತ್ರಿಯಲ್ಲಾಗಲಿ ಕೊಲ್ಲುವುದಿಲ್ಲವೆಂದು ಭರವಸೆಯನ್ನು ಕೊಟ್ಟಿದ್ದೇನೆ. ಇಷ್ಟೇ ಅಲ್ಲದೇ, ಕಾಷ್ಠದಿಂದಾಗಲಿ, ಅಥವಾ ನನ್ನ ಹಸ್ತದಿಂದಾಗಲಿ, ಮುಷ್ಟಿಯಿಂದಾಗಲಿ, ಶುಷ್ಕವಾದ ಸಾಧನದಿಂದಾಗಲಿ, ಹಸಿಯಾಗಿರುವ ಸಾಧನದಿಂದಾಗಲಿ ಅವನನ್ನು ಕೊಲ್ಲುವುದಿಲ್ಲವೆಂದೂ ಭರವಸೆಯನ್ನು ಕೊಟ್ಟಿದ್ದೇನೆ. ಈ ಭರವಸೆಯಿದ್ದುದರಿಂದ ಅವನು ನನ್ನ ಶಕ್ತಿಯನ್ನು ಅಪಹರಿಸಿದ್ದಾನೆ. ಅದನ್ನು ನನಗೆ ತಂದುಕೊಡಿರಿ " ಎಂದು ಕೇಳಿದನು ಅದಕ್ಕೆ ಅವರು ಈ ರೀತಿ ಉತ್ತರವನ್ನು ಕೊಟ್ಟರು.

**ಅಸ್ತು ನೋऽತ್ರಾಪ್ಯಥಾಹರಾಮೇತಿ ಸಹ ನ ಏತದಥಾಹರತೇತ್ಯಬ್ರುವೀದಿತಿ ।**

(೧೨.೭.೩.೨)

ಆ ವೀರ್ಯದಲ್ಲೂ ಇತರ ಸೋಮಾದಿಗಳಲ್ಲೂ ನಮಗೂ ಭಾಗವನ್ನು ಕೊಟ್ಟರೆ ಆಗಬಹುದೆಂದರು. ಇಂದ್ರನು ಈದಕ್ಕೆ ಒಪ್ಪಿದನು.

**ತಾವಶ್ವಿನೀ ಚ ಸರಸ್ವತೀ ಚ ಅಪಾಂ ಫೇನೇನ ವಜ್ರಮಸಿಂಚನ್ನ ಶುಷ್ಕೋ। ನಾರ್ದ್ರ ಇತಿ ತೇನೇಂದ್ರೋ ನಮುಚೇರಾಸುರಸ್ಯ ವ್ಯುಷ್ಟಾಯಾಗ್ಂ ರಾತ್ರಾವನುದಿತ ಆದಿತ್ಯೇ ನ ದಿವಾ ನ ನಕ್ತಮಿತಿ ಶಿರ ಉದವಾಸಯತ್ ।**

(೧೨-೭-೩-೩)

ಆಗ ಅಶ್ವಿನೀದೇವತೆಗಳೂ ಸರಸ್ವತಿಯೂ ಸಹ ವಜ್ರಾಯುಧವನ್ನು ನೊರೆಯಿಂದ ಬಳಿದರು. ಆಗ ಅದು ಆರ್ದ್ರವೂ ಆಗಲಿಲ್ಲ. ಶುಷ್ಕವೂ ಆಗಲಿಲ್ಲ. ಆಗ ಅದರಿಂದ ಇಂದ್ರನು ನಮುಚಿಯವನ್ನು ಹೊಡೆದನು. ರಾತ್ರಿಯು ಕಳೆದು ಇನ್ನೂ ಸೂರ್ಯೋದಯವಾಗದಿರುವಾಗಲೇ ಉಷಃಕಾಲದಲ್ಲಿ ಹೊಡೆದುದರಿಂದ ಅದು ಹಗಲೂ ಅಲ್ಲ ರಾತ್ರಿಯೂ ಅಲ್ಲದುದಾಯಿತು. ಆದರಿಂದ ನಮುಚಿಯ ಶಿರಸ್ಸನ್ನು ಛೇದಿಸಿದನು.

**ತಸ್ಮಾದೇತದೃಷಿಣಾಭ್ಯನೂಕ್ತಂ . . . . . . ತಸ್ಯ ಶೀರ್ಷಂಛಿನ್ನೇ ಲೋಹಿತಮಿಶ್ರಃ ಸೋಮೋऽತಿಷ್ಠತ್ತಸ್ಮಾದಬೀಭತ್ಸಂತ ತೇ ಏತದಂಧಸೋರ್ವಿಪಾನಮಪಶ್ಯನ್ತ್ಸೋಮೋ ರಾಜ್ಞಾಮೃತಗ್ಂ ಸುತ ಇತಿ ತೇನೈನಗ್ಂ ಸ್ವದಯಿತ್ವಾತ್ಮನ್ನದಧತ ॥**

(೧೨.೭.೩.೪)

ನಮುಚಿಯ ಶಿರಸ್ಸು ಛಿನ್ನವಾದೊಡನೆಯೇ ಸೋಮವು ರಕ್ತದೊಂದಿಗೆ ಮಿಶ್ರಿತವಾಯಿತು. ಆಗ ಅದು ಅಸಹ್ಯವಾಯಿತು ಆಗ ಅವರು " ಸೋಮರಾಜನು ಸಿಕ್ತನಾದೊಡನೆಯೇ ಅಮೃತರೂಪವಾಗುತ್ತದೆ " ಎಂದು ತಿಳಿದು ಈ ಸೋಮದೊಡನೆ ಅದನ್ನೂ ಸುರಿದು ಪಾನಮಾಡಿದರು ಎಂಬ ವರ್ಣನೆಯಿರುತ್ತದೆ. ಆದರೆ ಇಲ್ಲಿ ಈ ಕೊನೆಯ ಭಾಗದಲ್ಲಿ, **ಈ ಸೋಮ, ಆ ಸೋಮ** ಎಂಬಲ್ಲಿ ಎರಡು ಸೋಮಗಳಾವುವೆಂಬುದು ವಿಮರ್ಶಾರ್ಹವಾಗಿದೆ. ಸದ್ಯಃ ಅದು ಅಪ್ರಕೃತ.

ಇದರಂತೆಯೇ, ಶತಪಥಬ್ರಾಹ್ಮಣದಲ್ಲಿ ಇನ್ನೂ ಬೇರೊಂದು ಸನ್ನಿವೇಶದಲ್ಲಿ ಇಂದ್ರನ ಶಕ್ತಿಯು ಕುಂಠಿತವಾದಾಗ ದೇವವೈದ್ಯರಾದ ಅಶ್ವಿನೀದೇವತೆಗಳೂ ಸರಸ್ವತಿಯೂ ಅವನ ವೀರ್ಯವನ್ನು ಪುನಃ ಸ್ಥಾಪಿತವಾಗುವಂತೆ ಮಾಡಿದರೆಂದೂ ತಿಳಿಸಿರುತ್ತದೆ.

(೧೨–೭–೧.೧೦ ; ೧೨–೮–೩–೧)

ಮರುತ್ತಗಳ ಸಹಾಯದಿಂದ ಇಂದ್ರನು ಅಸುರರ ಶಕ್ತಿಯನ್ನು ನಾಶಪಡಿಸಿದಂತೆಯೇ ಬೃಹಸ್ಪತಿಯ ನೆರವಿನಿಂದಲೂ ಸಹ ಇಂದ್ರನು ಅವನನ್ನು ಪ್ರತಿಭಟಿಸಿದ ದೇವಶತ್ರುಗಳನ್ನು ನಾಶಪಡಿಸಿದನು.

(೮-೮೫-೧೫)

ಈರೀತಿ ಸೋಮಪಾನದಿಂದ ಹೃಷ್ಟನೂ, ಉತ್ತೇಜಿತನೂ ಆಗಿ, ಕೆಲವುವೇಳೆ ಮರುತ್ತುಗಳಿಂದಲೂ ಇನ್ನು ಕೆಲವುವೇಳೆ ವಿಷ್ಣುವಿನಿಂದಲೂ ಒಡಗೂಡಿ ಇಂದ್ರನು ವೃತ್ರನಮೇಲೆ ಹೋರಾಟಕ್ಕೆ ಹೋಗುತ್ತಾನೆ

(೨-೧೫-೧, ೨-೧೯-೨, ೬-೪೭-೧, ೨, ೧೦-೧೧೩-೧)

ಈ ಮರುತ್ತುಗಳ ಮತ್ತು ವಿಷ್ಣುವಿನ ಸಹಾಯದಿಂದ ಅಂತರಿಕ್ಷದಲ್ಲಿ ಜಲನಿಧಿಗಳನ್ನು ಹರಿಯದಂತೆ ತಡೆಗಟ್ಟುವ ಅಸುರರೊಂದಿಗೆ ಯುದ್ಧಕ್ಕೆ ಹೋಗುತ್ತಾನೆ.

(೧-೨೨-೧೯ ; ೧-೮೫-೭ , ೪-೧೮-೧೧ ; ೬-೨೦-೨ , ೮-೮೯-೧೨ . ೭-೯೯-೪, ೫)

ಇಂದ್ರ ಮತ್ತು ವಿಷ್ಣುಗಳ ಸಾಹಚರ್ಯವನ್ನು ಅನೇಕ ಮಂತ್ರಗಳಲ್ಲಿ ಪ್ರಶಂಸಿಸಿದೆ. **ಆ ಯೋ ವಿವಾಯ ಸಚಥಾಯ ದೈವ್ಯ ಇಂದ್ರಾಯ ವಿಷ್ಣುಃ ಸುಕೃತೇ ಸುಕೃತ್ತರಃ** (೧.೧೫೬-೫) ಇತ್ಯಾದಿ ವಾಕ್ಯಗಳಿಂದ ವಿಷ್ಣುವು ಇಂದ್ರನಿಗೆ ಮಾಡಿದ ಸಹಾಯವು ವ್ಯಕ್ತವಾಗಿದೆ.

(೬-೧೭-೧೧ , ೮-೧೨-೨೭ , ೮-೬೭-೧೦ ; ೧೦-೧೯೩-೨)

ಇಂದ್ರ ಮತ್ತು ವಿಷ್ಣುಗಳ ಸಾಹಚರ್ಯದ ವಿಷಯದಲ್ಲಿ ಶತಪಥಬ್ರಾಹ್ಮಣವು ಕಥಾರೂಪವಾದ ಒಂದು ಸನ್ನಿವೇಶವನ್ನು ಕೆಳಗೆ ಉದಾಹೃತವಾಗಿರುವ ವಾಕ್ಯಗಳಲ್ಲಿ ಈರೀತಿ ವಿವರಿಸಿದೆ.

**ವೃತ್ರೇ ಹ ವಾ ಇದಮಗ್ರೇ ಸರ್ವಮಾಸ ಯದೃಚೋ ಯದ್ಯಜೂಗ್ಂಷಿ ಯತ್ಸಾಮಾನಿ ತಸ್ಮಾ ಇಂದ್ರೋ ವಜ್ರಂ ಪ್ರಾಜಿಹೀರ್ಷತ್ ।**

(ಶ. ಬ್ರಾ. ೫-೫-೫-೧)

ಪೂರ್ವದಲ್ಲಿ ಅಸುರಾಧಿಪತಿಯಾದ ವೃತ್ರಾಸುರನು ಋಕ್, ಯಜುಸ್ ಮತ್ತು ಸಾಮ ಇವುಗಳೆಲ್ಲವನ್ನೂ ತನ್ನಲ್ಲಿಯೇ ಅಂತರ್ಗತಮಾಡಿಕೊಂಡಿದ್ದನು. ಅದನ್ನು ಹೊರಕ್ಕೆ ಬರಮಾಡಿ ಲೋಕಕ್ಕೆ ಪ್ರಕಾಶಕವಾಗುವಂತೆ ಮಾಡಬೇಕೆಂಬುದ್ದೇಶದಿಂದ ಇಂದ್ರನು ಆ ವೃತ್ರನಮೇಲೆ ವಜ್ರಾಯುಧವನ್ನು ಪ್ರಯೋಗಿಸಲು ಪ್ರಯತ್ನಿಸಿದನು.

**ಸ ಹ ವಿಷ್ಣುಮುವಾಚ । ವೃತ್ರಾಯ ವೈ ವಜ್ರಂ ಪ್ರಹರಿಷ್ಯಾಮ್ಯನುಮಾ ತಿಷ್ಠಸ್ವೇತಿ ತಥೇತಿ ಹ ವಿಷ್ಣುರುವಾಚಾನು ತ್ವಾ ಸ್ಥಾಸ್ಯೇ ಪ್ರಹರೇತಿ ತಸ್ಮಾ ಇಂದ್ರೋ ವಜ್ರಮುದ್ಯಯಾಮ ಸ ಉದ್ಯತಾದ್ವಜ್ರಾದ್ವೃತ್ರೋ ಬಿಭಯಾಂ ಚಕಾರ ॥**

(೫-೫-೫-೨)

ಆಗ ಇಂದ್ರನು ವಿಷ್ಣುವನ್ನು ಕುರಿತು "ನಾನು ಋಗಾದಿಗಳ ಸಂಗ್ರಹಣಕ್ಕಾಗಿ ವೃತ್ರನ ಮೇಲೆ ವಜ್ರವನ್ನು ಪ್ರಯೋಗಿಸಬೇಕೆಂದಿದ್ದೇನೆ. ನೀನು ಸಹ ಇದಕ್ಕೆ ಸಹಾಯಮಾಡು" ಎಂದನು. ಆಗ ವಿಷ್ಣುವು "ಆಗಬಹುದು. ನಾನು ಈ ಕಾರ್ಯಕ್ಕೆ ಸಹಾಯಮಾಡುತ್ತೇನೆ. ವೃತ್ರನ ಮೇಲೆ ವಜ್ರಾಯುಧವನ್ನು ಪ್ರಹರಿಸು" ಎಂದನು. ಆ ಭರವಸೆಯ ಮೇಲೆ ಇಂದ್ರನು ವೃತ್ರನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿದಾಗ ವೃತ್ರನು ಬೆದರಿದನು. ಮತ್ತು ಇಂದ್ರನಿಗೆ ಈ ರೀತಿ ತಿಳಿಸಿದನು.

**ಸ ಹೋವಾಚ । ಅಸ್ತಿ ವಾ ಇದಂ ವೀರ್ಯಂ ತನ್ನು ತೇ ಪ್ರಯಚ್ಛಾನಿ ಮಾ ತು ಮೇ ಪ್ರಹಾರ್ಷೀರಿತಿ ತಸ್ಮೈ ಯಜೂಂಷಿ ಪ್ರಾಯಚ್ಛತ್ತಸ್ಮೈ ದ್ವಿತೀಯಮುದ್ಯಯಾಮ ॥**

(೫-೫-೫-೩)

ಈ ವೀರ್ಯವು ನನ್ನಲ್ಲಿ ಸ್ಥಾಪಿತವಾಗಿದೆ. ಇವನ್ನು ನಿನಗೆ ಕೊಡುತ್ತೇನೆ ನನ್ನನ್ನು ಹೊಡೆಯಬೇಡ ಎಂದು ಯಜುಸ್ಸನ್ನು ಇಂದ್ರನಿಗೆ ಒಪ್ಪಿಸಿದನು. ಆಗ ಇಂದ್ರನು ಅಷ್ಟಕ್ಕೆ ತೃಪ್ತನಾಗದೇ, ಉಳಿದುದನ್ನೂ ಕಸಿಯಬೇಕೆಂಬ ಉದ್ದೇಶದಿಂದ ಅವನ ಮೇಲೆ ಎರಡನೆಯಸಲವೂ ಪ್ರಹರಿಸಲು ವಜ್ರವನ್ನು ಮೇಲಕ್ಕೆತ್ತಿದನು.

**ಸ ಹೋವಾಚ । ಅಸ್ತಿ ವಾ ಇದಂ ವೀರ್ಯಂ ತನ್ನು ತೇ ಪ್ರಯಚ್ಛಾನಿ ಮಾ ತು ಮೇ ಪ್ರಹಾರ್ಷೀರಿತಿ ತಸ್ಮಾ ಋಚಃ ಪ್ರಾಯಚ್ಛತ್ತಸ್ಮೈ ತೃತೀಯಮುದ್ಯಯಾಮ ॥**

(೫-೫-೫-೪)

ನನಗೆ ವೀರ್ಯವು ಇನ್ನೊಂದು ರೂಪದಲ್ಲಿದೆ. ಅದನ್ನೂ ನಿನಗೆ ಕೊಡುತ್ತೇನೆ. ನನ್ನನ್ನು ಹೊಡೆಯಬೇಡ. ಎಂದು ಹೇಳಿ ಋಕ್ಕುಗಳನ್ನೆಲ್ಲಾ ಇಂದ್ರನಿಗೆ ಒಪ್ಪಿಸಿದನು. ಆಗ ಇಂದ್ರನು ಅದಕ್ಕೂ ತೃಪ್ತನಾಗದೇ. ಉಳಿದುದನ್ನೂ ಅಪಹರಿಸಬೇಕೆಂಬ ಉದ್ದೇಶದಿಂದ ಅವನ ಮೇಲೆ ಮೂರನೆಯ ಸಲವೂ ಪ್ರಹರಿಸಲು ವಜ್ರವನ್ನು ಮೇಲಕ್ಕೆತ್ತಿದನು.

**ಸ ಹೋವಾಚ । ಅಸ್ತಿ ವಾ ಇದಂ ವೀರ್ಯಂ ತನ್ನು ತೇ ಪ್ರಯಚ್ಛಾನಿ ಮಾ ತು ಮೇ ಪ್ರಹಾರ್ಷೀರಿತಿ ತಸ್ಮೈ ಸಾಮಾನಿ ಪ್ರಾಯಚ್ಛತ್ ತಸ್ಮಾದಪ್ಯೇತರ್ಹ್ಯೇವ ಮೇವೈತೈರ್ವೇದೈರ್ಯಜ್ಞಂ ತನ್ವತೇ ಯಜುರ್ಭಿರೇವಾಗ್ರೇಽಥರ್ಗ್ಭಿರಥ ಸಾಮಭಿರೇವಗ್ಂ ಹ್ಯಸ್ಮಾ ಏತತ್ಪ್ರಾಯಚ್ಛತ್ ॥**

(ಶ. ಬ್ರಾ. ೫-೫-೫-೫)

ಎಲೈ ಇಂದ್ರನೇ, ನನ್ನಲ್ಲಿ ಇನ್ನೂ ಒಂದು ವಿಧವಾದ ವೀರ್ಯಸಾಧನವಿದೆ. ಅದನ್ನೂ ನಿನಗರ್ಪಿಸುತ್ತೇನೆ. ದಯವಿಟ್ಟು ನನ್ನನ್ನು ಹೊಡೆಯಬೇಡ. ಎಂದು ಸಾಮುಗಳನ್ನು ಸಹ ಇಂದ್ರನಿಗರ್ಪಿಸಿದನು.

**ಇಂದ್ರೋ ಹಿ ವಜ್ರಮುದ್ಯಚ್ಛದ್ವಿಷ್ಣುರನ್ವತಿಷ್ಠತ ।**

(೫-೫-೫-೭)

ಇಷ್ಟಾದರೂ ಸಹ ಇಂದ್ರನು ವಜ್ರಾಯುಧವನ್ನೆತ್ತಿ ಪ್ರಹರಿಸಲೆತ್ನಿಸಿದಾಗ ವಿಷ್ಣುವೂ ಅನುವಾದನು ಎಂದಿದೆ. ತೈತ್ತಿರೀಯಸಂಹಿಯಲ್ಲಿಯೂ ಇದೇ ವಿಧವಾದ ಕಥೆಯು ಉಕ್ತವಾಗಿದೆ. ಆದರೆ, ಅಲ್ಲಿ ಋಗ್ಯಜುಸ್ಸಾಮರೂಪವಾದ ಶಕ್ತಿಗಳಿಗೆ ಪ್ರತಿಯಾಗಿ ಮೂರುಸಲವೂ ಮೂರುವಿಧವಾದ ಉಕ್ಥ್ಯವನ್ನು ವೃತ್ರನು ಇಂದ್ರನಿಗೆ ಅರ್ಪಿಸಿದುದಾಗಿ ತಿಳಿಸಿದೆ. ವಿಷ್ಣುವೂ ಇಂದ್ರನಿಗೆ ಸಹಾಯಮಾಡಿದುದರಿಂದ ವಿಷ್ಣುವಿಗೂ ಇದರಲ್ಲಿ ಭಾಗವುಂಟೆಂದು ತಿಳಿಸಿದೆ. (ತೈ. ಸಂ. ೬ ೫ ೧-೧) ಋ. ಸಂ. ೧-೧೦೯-೫, ೭, ೮, ೩-೧೨-೪, ೬, ೧೦-೬೫-೨ ಇತ್ಯಾದಿ ಸ್ಥಳಗಳಲ್ಲಿ ವೃತ್ರನಾಶಕನೂ, ಘನರೂಪಿಯೂ ಆದ ಅಗ್ನಿಯು ಇಂದ್ರನೊಡನೆ ಸೇರಿ ವೃತ್ರವಧಮಾಡಿದುದಾಗಿ ತಿಳಿಸಿದೆ.

“ ಎಲೈ ಇಂದ್ರಾಗ್ನಿಗಳೇ, ಸ್ತೋತೃಗಳಿಗೆಲ್ಲಾ ಧನವನ್ನು ಹಂಚುವ ಕಾಲದಲ್ಲಿ ನೀವಿಬ್ಬರೂ ಎದುರಿಗೇ ಇದ್ದು ವೃತ್ರಾಸುರನ ನಾಶಕಾರ್ಯದಲ್ಲಿ ಅತ್ಯಂತ ಸಮರ್ಥರಾದಿರಿ ಎಂಬುದಾಗಿ ನಾನು ಕೇಳಿದ್ದೇನೆ.

(೧-೧೦೯-೫)

**ವಜ್ರಬಾಹೂ, ಪುರಂದರಾ** ಇತ್ಯಾದಿ ವಿಶೇಷಣಗಳು ಇಬ್ಬರಿಗೂ ಸಮಾನವಾಗಿರುತ್ತವೆ. ಒಂದೆರಡು ಸನ್ನಿವೇಶಗಳಲ್ಲಿ ವರುಣನೂ ಇಂದ್ರನಿಗೆ ಸಹಾಯಮಾಡಿದ ವಿಷಯವು ತಿಳಿಸಲ್ಪಟ್ಟಿದೆ.

“ ಎಲೈ ಇಂದ್ರಾವರುಣರೇ, ಅಸಾಧಾರಣವಾದ ಶಕ್ತಿಯುಳ್ಳ ಈ ವೃತ್ರನ ಮೇಲೆ ನೀವಿಬ್ಬರೂ ಸೇರಿ ಪ್ರಕಾಶ ಮಾನವೂ ಮಹಚ್ಛಕ್ತಿಯುಳ್ಳದ್ದೂ ಆದ ವಜ್ರಾಯುಧವನ್ನು ಪ್ರಯೋಗಿಸಿದಿರಿ. ”

(೪-೪೧.೪)

ದುರ್ಭಿಕ್ಷಗಳಿಗೆ ಕಾರಣರಾದ ಈ ಅಸುರರು **ವೃತ್ರ, ಅಹಿ, ಶುಷ್ಣ, ನಮುಚಿ, ಪಿಪ್ರು, ಶಂಬರ, ಉರಣ** ಇತ್ಯಾದ್ಯನೇಕ ನಾಮಗಳಿಂದ ಪ್ರಸಿದ್ಧರಾಗಿದ್ದಾರೆ.

(೧-೧೩೧-೯, ೧೦ , ೨-೧೪-೪ , ೮-೩೨-೨, ೩)

ಇವರುಗಳ ವಿಷಯವನ್ನು ತಿಳಿಸುವ ಮತ್ತು ನಾಶಾದಿಕಾರ್ಯಗಳನ್ನು ವರ್ಣಿಸುವ ಕೆಲವು ಸನ್ನಿವೇಶಗಳನ್ನು ಪ್ರಕೃತದಲ್ಲಿ ಉದಾಹರಣೆಗೆ ತೆಗೆದುಕೊಂಡು ನೋಡಿದರೆ ಇವರ ವಿಕಾರವಾದ ಸ್ವರೂಪವು ತಿಳಿಯುತ್ತದೆ. ಕೆಲವೆಡೆ ಗಳಲ್ಲಿ ಇವರೆಲ್ಲರ ಹೆಸರುಗಳೂ ಒಟ್ಟಿಗೇ ನಿರ್ದಿಷ್ಟವಾಗಿವೆ. ಇವರೆಲ್ಲರೂ ದಾನವರು ದನುವೇ ಇವರ ಮಾತೆಯು. ಇವಳೂ ಸಹ ತನ್ನ ಪುತ್ರರನ್ನು ರಕ್ಷಿಸಲು ಒಂದೊಂದು ಸಲ ಯುದ್ಧದಲ್ಲಿ ಭಾಗವನ್ನು ವಹಿಸುತ್ತಾಳೆಂದು ತಿಳಿಸಿದೆ. ಉದಾಹರಣೆಗೆ—

“ ವೃತ್ರಾಸುರನ ವಧಕಾಲದಲ್ಲಿ ಅವನನ್ನು ರಕ್ಷಿಸಲು ಅವನ ತಾಯಿಯು ವಜ್ರಾಯುಧದ ಏಟಿನಿಂದ ಮಗ ನನ್ನು ರಕ್ಷಿಸಲು ಬಂದಳು. ಆಗ ಇಂದ್ರನು ಅವಳ ಶಕ್ತಿಯನ್ನು ಕುಗ್ಗಿಸಿ ಅವಳ ದೇಹದ ಕೆಳಭಾಗದಲ್ಲಿ ಬಲವಾಗಿ ಹೊಡೆದನು. ವಜ್ರಾಯುಧದಿಂದ ಅವಳನ್ನು ಹೊಡೆದಮೇಲೆ ತಾಯಿ ಮೇಲುಭಾಗಕ್ಕಾದಳು. ಮಗನು ಕೆಳಭಾಗಕ್ಕೆ ಸಿಕ್ಕಿಬಿದ್ದು ಮಲಗಿದನು. ಹಸುವು ಕರುವಿನೊಡನೆ ಸೇರಿ ಮಲಗುವಂತೆ ತಾಯಿಯಾದ ದಾನವಿಯು ಮಗನಾದ ವೃತ್ರನೊಡನೆ ಸೇರಿಕೊಂಡು ಸತ್ತು ಬಿದ್ದು ಮಲಗಿದಳು.

(೧.೩೨.೯)

**ತದ್ವೈ ಏಷ ಏವ ಇಂದ್ರೋ ಯ ಏಷ ತಪತಿ । ಅಥ ಏಷ ಏವ ವೃತ್ರೋ ಯಚ್ಚಂದ್ರಮಾಃ ॥**

(ಶ. ಬ್ರಾ ೧-೬-೪-೧೮)

ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವವನೇ ಸೂರ್ಯನು. ಚಂದ್ರನುಸ್ಸೇ ವೃತ್ರಾಸುರನು ಎಂದು ಶತಪಥ ಬ್ರಾಹ್ಮಣದ ವಾಕ್ಯದಲ್ಲಿ ತಿಳಿಸಿದೆ. ಇಂದ್ರನೇ ಸೂರ್ಯರೂಪನೆಂದು ಋಕ್ಸಂಹಿತೆಯಲ್ಲಿಯೂ ತಿಳಿಸಿದೆ. ಈ ಅಸುರ ರೆಲ್ಲರೂ ತಮ್ಮ ನಾನಾವಿಧವಾದ ಆಯುಧಗಳನ್ನು ಹಿಡಿದು ಯುದ್ಧಕ್ಕೆ ಸಿದ್ಧರಾಗುತ್ತಾರೆ.

(೧-೩೨-೧೩)

ಆದರೆ, ದೇವತೆಗಳನ್ನು ಪ್ರತಿಭಟಿಸುತ್ತೇವೆಂದು ಇವರು ಪ್ರಯತ್ನಿಸುವುದು ಕೇವಲ ಭ್ರಮೆಯಾಗುತ್ತದೆ. ವೃತ್ರನು ಮೋಘರೂಪಾಚ್ಛನ್ನನಾಗಿ ಇಂದ್ರನನ್ನು ಪ್ರತಿಭಟಿಸಿ ಆ ಪ್ರಯತ್ನವು ವ್ಯರ್ಥವಾಗಿ ಇಂದ್ರನಿಂದ ಸೋಲಿಸಲ್ಪಟ್ಟ

ವಿಷಯುವು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. **(೨-೩೦-೩)** ಇಂದ್ರನು ಆರ್ಭಟಿಸಮಾಡಿದಾಗ ದ್ಯಾವಾಪೃಥಿವಿಗಳೂ ಸಹ ಭೀತಿಯಿಂದ ನಡಗುತ್ತವೆ.

(೧-೮೦-೧೧, ೧೪ ; ೨-೧೧ ೯, ೧೦ ; ೪.೧೭-೯)

ತ್ವಷ್ಟೃವೇ ವಜ್ರಾಯುಧದ ನಿರ್ಮಾಪಕನಾಗಿದ್ದರೂ ಸಹ, ಇಂದ್ರನಿಗಾಗಿಯೇ ಅದನ್ನು ಅವನು ಸೃಷ್ಟಿಸಿದ್ದರೂ ಸಹ ಇಂದ್ರನು ವಜ್ರಾಯುಧಧಾರಿಯಾಗಿ ಶತ್ರುಗಳನ್ನು ಎದುರಿಸಿ ಆರ್ಭಟಿಸುತ್ತಾ ತನ್ನ ಕ್ರೋಧವನ್ನು ಪ್ರಕಟಿಸುವ ಕಾಲದಲ್ಲಿ ಅದೇ ತ್ವಷ್ಟೃವೂ ಭೀತನಾಗುತ್ತಾನೆ. **(ತ್ವಷ್ಟಾ ಚಿತ್ತವ ಮನ್ಯವ ಇಂದ್ರ ವಿವಿಜ್ಯತೇ ಭಿಯಾ)** (೧.೮೦-೧೪)

ಈ ಇಂದ್ರನ ಉಕ್ಕಿನ ಆಯುಧವನ್ನು ಪ್ರಯೋಗಿಸಿದೊಡನೆಯೇ ಅದು ಶತ್ರುಗಳ ಮರ್ಮವನ್ನು ಭೇದಿಸಿ ಅವರನ್ನೆಲ್ಲಾ ಪೂರ್ಣವಾಗಿ ಚದುರುವಂತೆ ಮಾಡುತ್ತದೆ

(೧-೩೨-೫, ೧.೫೭.೬. ೧-೬೧ ೧೦, ೨-೧೯-೩, ೧೦-೮೯.೭ ; ೬.೨೭.೪ ; ೮ ೬.೧೩)

ಅಸುರರಿಂದ ತಡೆಯಲ್ಪಟ್ಟಿದ್ದ ಉದಕಗಳನ್ನು ಇಂದ್ರನು ತನ್ನ ಪರಾಕ್ರಮದಿಂದ ಬಿಡಿಸಿದೊಡನೆಯೇ ಅವು ಪ್ರಭೂತವಾದ ಜಲದಿಂದ ತುಂಬಿದ ಪ್ರವಾಹರೂಪದಲ್ಲಿ ಅಂತರಿಕ್ಷದಿಂದ ಪೃಥ್ವಿಗಿಳಿದು ಸಕಲ ನದಿಗಳನ್ನೂ ತುಂಬಿ ಹರಿದು ಸಾಗರಕ್ಕೆ ಸೇರುತ್ತವೆ

(೧-೩೨ ೨. ೧ ೩೨-೧೨ ; ೧ ೫೭-೬ ; ೧-೬೧.೧೦ ; ೧-೧೦೩-೨, ೨-೧೧-೨, ೨-೧೨-೧೨ ; ೨.೧೪.೨, ೨-೧೫-೩, ೨.೧೯-೩ ; ೩-೩೨-೬ ; ೪-೧೭-೧ ; ೫-೩೨-೧; ೬-೩೦-೪, ೮ ೬೫.೩; ೧೦-೧೩೩-೨,)

ಇಂದ್ರನು ತನ್ನ ಪರಾಕ್ರಮವನ್ನು ಪ್ರಕಟಿಸಿ ಸಂಕಲ್ಪಿಸಿದೊಡನೆಯೇ, ಅಂತರಿಕ್ಷಸ್ಥವಾದ ಮೇಘಗಳೆಲ್ಲವೂ ಚದುರಿ ಅಂಧಕಾರವು ನಾಶವಾಗುತ್ತದೆ. ಸೂರ್ಯನೂ ಸಹ ತನ್ನ ಸಹಜವಾದ ಸ್ಥಿತಿಯನ್ನು ಹೊಂದಿ ಲೋಕಕ್ಕೆಲ್ಲಾ ಬೆಳಕನ್ನುಂಟುಮಾಡತಕ್ಕ ಪ್ರಭೆಯನ್ನು ಎಲ್ಲೆಲ್ಲೂ ಬೀರುತ್ತಾನೆ.

(೧-೩೨-೪ ; ೧-೫೧.೪, ೧-೫೧.೮ ; ೨-೧೯-೩)

೧-೫೧.೪ನೇ ಮಂತ್ರದಲ್ಲಿ ವರ್ಣಿತವಾಗಿರುವ ವಿಷಯದಲ್ಲಿ ಸಾಯಣರು ತಮ್ಮ ಅಭಿಪ್ರಾಯವನ್ನು ಈ ರೀತಿ ತಿಳಿಸುತ್ತಾರೆ. ಅದರ ಮೂಲವೇನೆಂದರೆ,

**ವೃತ್ರಂ ಯದಿಂದ್ರ ಶವಸಾವಧೀರಹಿಮಾದಿತ್ಸೂರ್ಯಂ ದಿವ್ಯಾರೋಹಯೋ ದೃಶೇ ।**

ಎಂಬುದಾಗಿದೆ. ಇದರ ತಾತ್ಪರ್ಯವನ್ನು ವಿವರಿಸುತ್ತಾ ಸಾಯಣರು,

**ವೃತ್ರೇಣಾವೃತಂ ಸೂರ್ಯಂ ತಸ್ಮಾದ್ವೃತ್ರಾತ್ ಅಮೂಮುಚ ಇತ್ಯರ್ಥಃ ॥**

ವೃತ್ರನಿಂದ ಆವೃತನಾದ ಸೂರ್ಯನನ್ನು ಇಂದ್ರನು ಮುಕ್ತನಾಗುವಂತೆ ಮಾಡಿದನು ಎಂದು ತಾತ್ಪರ್ಯವೆಂದು ತಿಳಿಸಿದ್ದಾರೆ. ಆದರೆ, ಮೂಲದ ವಾಕ್ಯವನ್ನು ಪರಿಶೀಲಿಸಿದರೆ, ವೃತ್ರವಧಾನಂತರ ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದನು ಎಂದು ಅರ್ಥವನ್ನು ಕೊಡುವಂತೆ ತಿಳಿಸುತ್ತದೆ. ಒಟ್ಟಿನಲ್ಲಿ ಅಂಧಕಾರನಾಶಕ್ಕೆ ಇಂದ್ರನು ಕಾರಣನಾದನು ಎಂಬುವುದೇ ಇದರ ತಾತ್ಪರ್ಯ.

ಈ ರೀತಿ ಅಂಧಕಾರರೂಪನಾದ ವೃತ್ರನೊಂದಿಗೆ ಹೋರಾಟಮಾಡುವ ಸನ್ನಿವೇಶವು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ವರ್ಣಿತವಾಗಿದೆ. ಕತ್ತಲನ್ನು ನಾಶಮಾಡಿ ಪ್ರಕಾಶವನ್ನು ಹರಡುವುದೇ ಹೋರಾಟದ ಉದ್ದಿಶ್ಯ.

(೧-೪-೮ ; ೧-೩೨-೧ ; ೧-೫೨-೨ ; ೧-೫೪-೪ ; ೧-೮೦-೧ ; ೧-೧೦೩-೨ ; ೨-೧೧-೫ ; ೫-೩೨-೧ ; ೧.೮೯-೭ ; ೧೦-೧೦೩-೬).

ಮತ್ತು ಈ ವರ್ಣನೆಯು ನಾನಾವಿಧವಾದ ರೂಪಕಗಳಿಂದ ಕೂಡಿ ಕಾವ್ಯಾತ್ಮಕವಾಗಿರುತ್ತದೆ. ಮೇಘಗಳು ಅತ್ಯದ್ಭುತವಾದ ರೂಪಗಳನ್ನು ಹೊಂದಿರುವುದರಿಂದ ಅವನ್ನು ಒಂದೊಂದು ಸಲ ಪರ್ವತಗಳೆಂದೂ ಇನ್ನು ಕೆಲವು ವೇಳೆಗಳಲ್ಲಿ ಅಸುರರ ದುರ್ಗಗಳೆಂದೂ, ಘನವಾದ ಅಸುರರ ಪಟ್ಟಣಗಳೆಂದೂ ಅನೇಕವಿಧದಲ್ಲಿ ವರ್ಣಿಸಿದೆ.

(೨-೧೪ ೬ ; ೮-೧೭-೧೪ , ೮-೮೭-೬)

ಚಲಿಸತಕ್ಕ ಮತ್ತು ಪ್ರಕಾಶಪ್ರತಿಬಂಧಕವಾಗಿರತಕ್ಕ ಈ ಮೇಘವೃಂದಗಳು ಆಯಸ (ಉಕ್ಕು)ದಿಂದ ನಿರ್ಮಿತವಾದವೆಂದೂ, ಶಿಲಾನಿರ್ಮಿತವೆಂದೂ, ವರ್ಣಿತವಾಗಿವೆ. ಮತ್ತು ಇವೇ ಅಸುರಪಟ್ಟಣಗಳೆಂದೂ ಅಂತರಿಕ್ಷಸ್ಥವಾದ ಅಸುರರಿಗೆ ಆಶ್ರಯವನ್ನು ಕೊಡತಕ್ಕ ಈ ಪಟ್ಟಣಗಳನ್ನೇ ಇಂದ್ರನು ವಜ್ರಾಯುಧಪ್ರಯೋಗದಿಂದ ನಾಶಮಾಡಿದನೆಂದೂ ತಿಳಿಸಿದೆ.

೧.೫೧-೫ ; ೧-೬೩-೭ : ೧-೧೦೩ ೩ ; ೧-೧೩೦-೭ , ೧-೧೭೪-೮ , ೨-೧೯-೬ ; ೨-೨೦-೭ ; ೩-೧೨-೬ ; ೪-೨೦-೩ ; ೪-೩೦-೧೩ ; ೮-೮೨-೨ ; ೧೦-೮೯-೭).

ಅಂತರಿಕ್ಷಸ್ಥವಾದ ಪರ್ವತಗಳಲ್ಲಿ ಸುಪ್ತರಾಗಿದ್ದ ಅಸುರರನ್ನೆಲ್ಲಾ ಆರಿಸಿ ಅವರನ್ನು ನದೆಬಡಿದು ಇಂದ್ರನು ಅವರೆಲ್ಲರನ್ನೂ ಅಂತರಿಕ್ಷದಿಂದ ಕೆಳಕ್ಕೆ ಉರುಳಿಸುತ್ತಾನೆ.

(೧.೩೨-೨; ೧-೧೩೦ ೭ ; ೨-೧೨-೧೧ ; ೪-೩೦-೧೪ , ೬.೨೬-೫)

ಮತ್ತು ಅವರು ಅಂತರಿಕ್ಷವನ್ನೆಲ್ಲಾ ವ್ಯಾಪಿಸಲಿಚ್ಛಿಸಿದಾಗ ಅವರನ್ನೆಲ್ಲಾ ಹಿಂದಕ್ಕಟ್ಟುತ್ತಾನೆ.

(೨-೧೨-೧೨ ; ೮-೧೪-೧೪)

ಆ ಆಸುರರಲ್ಲಿ ಒಬ್ಬನನ್ನು ತನ್ನ ಕಾಲಿನಿಂದ ಮೆಟ್ಟಿ ತುಳಿಯುತ್ತಾನೆ. ಮತ್ತು ಹಿಮದಿಂದ ಹಿಂಸಿಸುತ್ತಾನೆ.

(೧-೫-೬ ; ೮-೩೨-೨೬)

ನೀರಿನ ನೊರೆಯಿಂದ ನಮುಚಿಯ ಶಿರಸ್ಸನ್ನು ಪ್ರಹರಿಸುತ್ತಾನೆ.

(೮-೧೪-೧೩)

ಇಂದ್ರಶತ್ರುಗಳಾದ ಅಸುರರಲ್ಲಿ ಒಬ್ಬನಾದ ಉರಣನೆಂಬುವನಿಗೆ ತೊಂಭತ್ತೊಂಬತ್ತು ತೋಳುಗಳಿವೆಯೆಂದೂ. ಅವನು ಪೆಡಂಭೂತವೆಂದೂ ಆವನ ವಿಕಾರರೂಪವು ವರ್ಣಿತವಾಗಿದೆ.

(೨-೧೪-೪)

ಇನ್ನೊಬ್ಬನಿಗೆ ಮೂರು ತಲೆಗಳೂ ಆರು ಕಣ್ಣುಗಳೂ ಇದ್ದವೆಂಬು ತಿಳಿಸಿದೆ.

(೧೦-೯೯-೬)

ಈ ವಿಧವಾದ ರೂಪಗಳೂ, ಕಲ್ಪನಾಪೂರ್ವಕವಾದ ವರ್ಣನಗಳೂ ಸಹ ಪ್ರಾಕೃತಿಕ ಸನ್ನಿವೇಶಗಳಿಗುಚಿತವಾಗಿವೆ. ಗ್ರೀಷ್ಮಕಾಲದ ಉರಿಬೇಸಿಗೆಯ ಬಿಸಿಲಿನಿಂದ ತಪ್ತರಾದ ಜನರು ಬೇಸಿಗೆಯು ಮುಗಿದೊಡನೆಯೇ ಮಳೆಯನ್ನು ನಿರೀಕ್ಷಿಸುವುದು ಸಹಜವಾಗಿದೆ. ಆದರೆ ಘನವಾದ ಮೋಡಗಳು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ವೃಷ್ಟಿಯನ್ನು

ಸುಂಸದಿರುವ ಸನ್ನಿವೇಶಗಳೂ ಬಹಳವಾಗಿವೆ. ಇಂತಹ ಸಂದರ್ಭಗಳಲ್ಲಿ ಯಾವುದೋ ಆಸುರೀಶಕ್ತಿಯು ವೃಷ್ಟಿಪ್ರತಿಬಂಧಕವಾಗಿರುತ್ತದೆ ಎಂಬ ನಂಬಿಕೆಯು ಬರುವುದೂ ಸಹಜವಾಗಿರುತ್ತದೆ. ಈ ಆಸುರೀಶಕ್ತಿಯನ್ನು ನಾಶಮಾಡುವ ದೈವೀಶಕ್ತಿಯಲ್ಲಿಯೂ ಸಹ ಒಂದು ಬಗೆಯ ಶ್ರದ್ಧೆಯು ಉತ್ಪನ್ನವಾಗುವುದೂ ಸ್ವಾಭಾವಿಕವಾಗಿಯೇ ಇದೆ. ಗುಡುಗು ಮತ್ತು ಮಿಂಚು ಇವುಗಳ ಆವಿರ್ಭಾವವು ಅಂತರಿಕ್ಷದಲ್ಲಿ ನಡೆಯತಕ್ಕ ದೈವೀ ಮತ್ತು ಆಸುರೀ ಎಂಬ ಎರಡು ಶಕ್ತಿಗಳ ಘರ್ಷಣೆಯೆಂದು ವರ್ಣಿತವಾಗಿರುತ್ತದೆ.

ಇಂದ್ರನೇ ಈ ದೈವಶಕ್ತಿಯನ್ನು ಪ್ರತಿಬಿಂಬಿಸುವ ಅಧಿದೇವತೆ. ಭಕ್ತರಿಗೆ ಉಪಕಾರಕವೂ ಶತ್ರುಗಳ ನಾಶಕವೂ ಆದ ಈ ಇಂದ್ರನ ಶಕ್ತಿಯು ಯಜಮಾನಾದಿಗಳಿಗೆ ಸಂಪತ್ತನ್ನೊದಗಿಸಿ ಅವರಿಗೆ ಅಸುರರ ಬಾಧೆಯನ್ನು ತಪ್ಪಿಸುತ್ತದೆ. ಅಂತರಿಕ್ಷದಲ್ಲಿ ಚಲಿಸತಕ್ಕ ಮೇಘರಾಶಿಗಳೇ ರಥಗಳೆಂದೂ, ರಥಾಶ್ವಗಳೆಂದೂ ಇಂದ್ರನ ವಾಹಕಗಳೆಂದೂ ವರ್ಣಿತವಾಗಿವೆ.

ಈ ಇಂದ್ರನು ಪರ್ಜನ್ಯನಿಗಿಂತಲೂ ಬೇರೆ ಸ್ವರೂಪವುಳ್ಳ ದೇವತೆಯೆಂದು ತಿಳಿಯುತ್ತದೆ. ಇಂದ್ರನಿಗೂ, ಪರ್ಜನ್ಯನಿಗೂ ಹೋಲಿಸಿರುವ ಸನ್ನಿವೇಶಗಳೂ ಇರುವುದರಿಂದ ಇವರು ಪ್ರತ್ಯೇಕ ಸ್ವರೂಪವುಳ್ಳ ಬೇರೆಬೇರೆ ದೇವತೆಗಳೆಂದು ಹೇಳಲು ಪೂರ್ಣವಾದ ಅವಕಾಶವಿರುತ್ತದೆ. ಪರ್ಜನ್ಯಪರವಾದ ಸ್ತುತಿಗಳೂ ಅನೇಕವಾಗಿ ಇಂದ್ರನಿಗಿಂತ ಆವನು ಭಿನ್ನದೇವತೆಯೆಂದು ತಿಳಿಸುತ್ತವೆ

(೮-೬-೧)

ಆದರೆ ಇಂದ್ರನಿಗೂ, ಸೂರ್ಯನಿಗೂ ತಾದಾತ್ಮ್ಯವನ್ನು ಹೇಳಿರುವ ಸನ್ನಿವೇಶಗಳೂ ಬಹಳವಾಗಿವೆ.

## ಇಂದ್ರನ ಮಹತ್ತ್ವದ ವರ್ಣನೆ

ದೇವತೆಗಳಲ್ಲೆಲ್ಲಾ ಅತ್ಯಂತ ಉನ್ನತಸ್ಥಾನವನ್ನು ತೋರಿಸತಕ್ಕ ವಿಶೇಷಣಗಳು ಋಕ್ಸಂಹಿತೆಯಲ್ಲೆಲ್ಲಾ ಇಂದ್ರಪರವಾಗಿರುವುದೇ ಅತ್ಯಧಿಕವೆಂದು ಹೇಳಬಹುದು. ಇವು ಇಂದ್ರನ ವಿಶ್ವಪ್ರಭುತ್ವವನ್ನೂ ತೋರಿಸುವುವಾಗಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಆರಿಸಿ ಪ್ರಕೃತ ಅವುಗಳ ತಾತ್ಪರ್ಯಗಳನ್ನು ತಿಳಿಸಲಾಗಿದೆ.

**ಮೊದಲನೆಯ ಮಂಡಲದಲ್ಲಿ:—**

ಅತ್ಯಂತ ದೂರಕ್ಕೂ ಸಹ ಕಾಣಿಸುವಂತೆ ಇಂದ್ರನು ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದ್ದಾನೆ.

(೧-೭-೩)

ಎಲೈ ಇಂದ್ರನೇ, ನೀನು ನಿನ್ನ ಬಾಹುಗಳಲ್ಲಿ ಉಕ್ಕಿನಿಂದ ನಿರ್ಮಿತವಾದ ವಜ್ರಾಯುಧವನ್ನು ಧರಿಸಿದ್ದೀಯೆ. ಮತ್ತು ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದ್ದೀಯೆ.

(೧.೫೨.೮)

ಅಂತರಿಕ್ಷದ ಆಚೆ ದಡದಲ್ಲಿ ವಾಸಿಸುತ್ತಾ, ನಿನ್ನ ದಿವ್ಯಶಕ್ತಿಯನ್ನು ಪ್ರಕಟಿಸುತ್ತಾ ಮಾನವರಾದ ನಮ್ಮ ಉಪಕಾರಕ್ಕಾಗಿ ಈ ಪೃಥ್ವಿಯಲ್ಲೂ ಸ್ಥಿತನಾಗಿ ಅಂತರಿಕ್ಷದ ಸಮುದ್ರದ ಮೂಲಕ ದ್ಯುಲೋಕವನ್ನೂ ವ್ಯಾಪಿಸಿ ಲೋಕತ್ರಯದಲ್ಲೂ ನಿನ್ನ ಪ್ರಭಾವವನ್ನು ಬೀರಿದ್ದೀಯೆ.

(೧-೫೨-೧೨)

ಎಲೈ ಇಂದ್ರನೇ, ನೀನು ಈ ಪೃಥ್ವಿಯ ಪ್ರತಿನಿಧಿಯಾಗಿದ್ದೀಯೆ. ಅಂತರಿಕ್ಷಕ್ಕೆ ಪ್ರಭುವಾಗಿದ್ದೀಯೆ. ಮತ್ತು ನಿನ್ನ ಮಹತ್ತ್ವದಿಂದ ದ್ಯುಲೋಕವೆಲ್ಲವನ್ನೂ ವ್ಯಾಪಿಸಿದ್ದೀಯೆ. ನಿನ್ನ ಸಮಾನವಾದ ಮಹತ್ತ್ವಗುಣವುಳ್ಳವರು ದೇವಮಾನವಾದಿಗಳಲ್ಲಿ ಯಾರೂ ಇಲ್ಲವೇ ಇಲ್ಲ.

(೧-೫೨-೧೩)

ಪೃಥ್ವಿಯಾಗಲಿ ಅಥವಾ ದ್ಯುಲೋಕವಾಗಲಿ ನಿನ್ನ ಆಧಿಕ್ಯವನ್ನು ಹೊಂದಿಲ್ಲ. ಅಂತರಿಕ್ಷದ ಸಮುದ್ರವೂ ಸಹ ನಿನ್ನ ವ್ಯಾಪ್ತಿಯನ್ನು ಹೊಂದಿಲ್ಲ. ಮೂರು ಲೋಕಗಳಲ್ಲೂ ಎಲ್ಲವೂ ಅವುಗಳ ನಿಯಮಿತವಾದ ಸ್ಥಾನಗಳಲ್ಲಿ ಭದ್ರವಾಗಿ ನಿನ್ನಿಂದಲೇ ಸ್ಥಾಪಿತವಾಗಿವೆ.

(೧-೫೨-೧೪, ೧-೫೫-೧; ೧-೬೧-೯)

ಇಂದ್ರನು ಉತ್ಪನ್ನನಾದೊಡನೆಯೇ, ಆವನ ಮುಂದೆ ಕಾಣಿಸಿಕೊಳ್ಳಲು ಭಯಭಟ್ಟು ಅಚಲವಾದ ಪರ್ವತವೂ ಮತ್ತು ದ್ಯಾವಾಪೃಥಿವಿಗಳೂ ನಡುಗಿದವು.

(೧-೬೧-೧೪)

" ಇಂದ್ರನು ಪೃಥ್ವಿಯನ್ನೆಲ್ಲಾ ವ್ಯಾಪಿಸಿದ್ದಾನೆ. ಅಂತರಿಕ್ಷದಲ್ಲಿ ತೇಜೋಮಂಡಲಗಳನ್ನೆಲ್ಲಾ ಸ್ಥಾಪಿಸಿದ್ದಾನೆ. ಎಲೈ ಇಂದ್ರನೇ, ನಿನ್ನಂತಹ ದಿವ್ಯಗುಣವುಳ್ಳವರು ಇಲ್ಲಿಯವರೆಗೆ ಉತ್ಪನ್ನರಾಗಿಲ್ಲ. ಮುಂದೆಯೂ ಉತ್ಪನ್ನರಾಗುವುದಿಲ್ಲ. ನೀನು ಸಕಲ ವಿಶ್ವವನ್ನೂ ಮೀರಿ ನಿಂತಿದ್ದೀಯೆ."

(೧-೮೧-೫)

ಇದೇ ಇಂದ್ರನು ದ್ಯಾವಾಪೃಥಿವಿಗಳಿಗೆಲ್ಲಾ ಸಾರ್ವಭೌಮನು ಈ ಇಂದ್ರನ ಮಹತ್ತ್ವವನ್ನು ದೇವತೆಗಳಾಗಲೀ, ಮಾನವರಾಗಲೀ, ಯಕ್ಷ ಗಂಧರ್ವರಾಗಲೀ, ಅಪ್ದೇವತೆಗಳಾಗಲೀ ಪಡೆದಿಲ್ಲ. ಪಡೆಯಲಾಗುವುದೂ ಇಲ್ಲ.

(೧-೧೦೦-೧)

ಸ್ಥಾವರ-ಜಂಗಮಾತ್ಮಕವಾದುದೂ, ಚೈತನ್ಯಯುಕ್ತವಾದುದೂ ಆದ ಯಾವ ಸಕಲ ಜಗತ್ತು ಇರುವುದೋ ಆ ಜಗತ್ತಿಗೆಲ್ಲಾ ಇಂದ್ರನು ಯಜಮಾನನಾಗಿದ್ದಾನೆ.

(೧-೧೦೧.೫)

ಎಲೈ ಇಂದ್ರನೇ, ಮೂರು ಲೋಕಗಳೂ, ಮೂರು ಲೋಕಗಳ ತೇಜೋರಾಶಿಗಳೂ ನಿನ್ನ ಪ್ರತಿನಿಧಿಗಳು. ಮೂರು ಲೋಕಗಳನ್ನೂ ಮೀರಿ ನಿಂತಿರುವ ನೀನು ಶತ್ರುರಹಿತನಾದ ವಿಶ್ವಪ್ರಭುವಾಗಿ ಎಲ್ಲೆಲ್ಲೂ ನಿನ್ನ ಸಾರ್ವಭೌಮತ್ವವನ್ನು ಪ್ರಕಾಶಪಡಿಸಿದ್ದೀಯೆ.

(೧-೧೦೨-೮)

ಇಂದ್ರನು ಪೃಥ್ವಿಯನ್ನು ಸ್ಥಾಪಿಸಿ ವಿಸ್ತರಿಸಿದನು. ತನ್ನ ವಜ್ರಾಯುಧದಿಂದ ಹೊಡೆದು ಉದಕವನ್ನು ಪ್ರವಹಿಸುವಂತೆ ಮಾಡಿದನು. ಅಹಿಯನ್ನು (ವೃತ್ರನನ್ನು) ಸಂಹರಿಸಿದನು.

(೧-೧೦೩-೨)

ಇಂದ್ರನು ಅಂತರಿಕ್ಷಕ್ಕೆ ಊರೆಗೋಲಿನಂತೆ ಆಸರೆಯಾಗಿದ್ದಾನೆ. ಮತ್ತು ಚತುಷ್ಪಾದಗಳುಳ್ಳ ಪ್ರಾಣಿಗಳಿಗಾಗಿಯೂ, ದ್ವಿಪಾದಗಳುಳ್ಳ ಮಾನವಾದಿಗಳಿಗಾಗಿಯೂ ಅಂತರಿಕ್ಷವನ್ನು ಕೆಳಗೆ ಬೀಳದಂತೆ ತಡೆದು ನಿಲ್ಲಿಸಿದ್ದಾನೆ.

(೧-೧೨೧-೨)

ಎಲೈ ಇಂದ್ರನೇ, ನೀನು ಜಯಿಸದೇ ಇರತಕ್ಕದ್ದು ಯಾವುದೂ ಇಲ್ಲ. ದೇವತೆಗಳಲ್ಲೂ ಸಹ ನಿನ್ನ ಸಮಾನರಾದವರು ಯಾರೂ ಇಲ್ಲ ನಿನ್ನೊಂದಿಗೆ ಸ್ಪರ್ಧಿಸತಕ್ಕವರು ಇಲ್ಲಿಯವರೆಗೆ ಹುಟ್ಟಿಲ್ಲ. ಮುಂದೆಯೂ ಅಂತಹವರು ಯಾರೂ ಹುಟ್ಟಲಾರರು. ಎಲೈ ದೇವನೇ- ನೀನು ಸಂಕಲ್ಪಿಸಿದುದನ್ನೆಲ್ಲಾ ಖಂಡಿತ ಮಾಡುವೆ.

(೧-೧೬೫-೯ ; ४-೧೮.४)

ಇಂದ್ರನು ಸಕಲ ಪ್ರಜೆಗಳಿಗಿಂತಲೂ ಅಧಿಕನಾಗಿರುವುದರಿಂದ ದ್ಯಾವಾಪೃಥಿವಿಗಳೆರಡೂ ಸೇರಿದರೂ -ವನ ನಡುಕಟ್ಟಾಗುವುದಿಲ್ಲ.

(೧-೧೭೩-೬)

## ಎರಡನೆಯ ಮಂಡಲದಲ್ಲಿ—

ಎಲೈ ಮಾನವರೇ, ಯಾವ ದೇವನು ಉತ್ಪನ್ನನಾದೊಡನೆಯೇ ತನ್ನ ಮಹತ್ತ್ವದಿಂದ ದೇವತೆಗಳನ್ನೆಲ್ಲಾ ಮೀರಿಸಿದನೋ ಯಾವನು ದ್ಯಾವಾಪೃಥಿವಿಗಳನ್ನೂ ನಡಗುವಂತೆ ಮಾಡಿದನೋ ಅವನೇ ತನ್ನ ಪ್ರಭಾವದಿಂದ ಇಂದ್ರನೆಂದು ಪ್ರಖ್ಯಾತನಾಗಿದ್ದಾನೆ.

(೨-೧೨-೧೦ ; ನಿ. ೧೦-೧೦)

ಅಲುಗಾಡುತ್ತಿದ್ದ ಪೃಥಿವಿಯನ್ನು ಸ್ಥಿರವಾಗಿ ನಿಲ್ಲುವಂತೆ ಯಾವನು ಮಾಡಿದನೊ, ವಿಸ್ತೃತವಾದ ಅಂತರಿಕ್ಷವನ್ನೂ ಯಾವನು ಅಳೆದನೋ ಮತ್ತು ದ್ಯುಲೋಕವು ಬೀಳದಂತೆ ಯಾವನು ನಿಲ್ಲಿಸಿದನೋ ಅವನೇ ಇಂದ್ರನು.

(೨-೧೨-೨)

ಈ ಇಂದ್ರನೊಬ್ಬನೇ ವಿಶ್ವಕ್ಕೆಲ್ಲಾ ಪ್ರತಿನಿಧಿಯು. ದ್ಯಾವಾಪೃಥಿವಿಗಳೂ ಸಹ ಇವನಿಗೆ ನಮ್ರತೆಯಿಂದ ನಮಸ್ಕಾರ ಮಾಡುತ್ತವೆ.

(೨-೧೨-೯)

ಇಂದ್ರನ ಅದ್ಭುತಪರಾಕ್ರಮವನ್ನೂ, ಸತ್ಯಾತ್ಮನಾದ ಇವನ ಸತ್ಯಸ್ವರೂಪವನ್ನೂ ನಾನು ಸ್ತುತಿಸುತ್ತೇನೆ. ಮೂರು ಪಾತ್ರೆಗಳಿಂದ ಇಂದ್ರನು ಸೋಮವನ್ನು ಪಾನಮಾಡಿದನು ಮತ್ತು ಅದರ ಫಲವಾದ ಹರ್ಷದಿಂದ ಕೂಡಿ ಅಹಿಯನ್ನು ಸಂಹರಿಸಿದನು. (೨-೧೫-೧)

ಸೋಮಪಾನದ ಪ್ರಭಾವದಿಂದಲೇ ಇಂದ್ರನು ಶೂನ್ಯವಾದ ಪ್ರದೇಶದಲ್ಲಿ ಅಂತರಿಕ್ಷವನ್ನು ನಿಲ್ಲಿಸಿದನು. ಮತ್ತು ಪೃಥಿವಿಯನ್ನು ಸ್ಥಾಪಿಸಿ ಅದನ್ನು ವಿಸ್ತರಿಸಿದನು.

(೨-೧೫ ೨)

ಇಂದ್ರನು ಅತ್ಯಂತ ಪ್ರಾಚೀನಗಳಾದ ಪರ್ವತಗಳನ್ನು ತನ್ನ ಶಕ್ತಿಯಿಂದ ಅಚಲವಾಗಿ ನಿಲ್ಲುವಂತೆ ಮಾಡಿದ್ದಾನೆ. ಉದಕಗಳು ತಮ್ಮ ಸಹಜವಾದ ಮಾರ್ಗವನ್ನನುಸರಿಸಿ ಪ್ರವಹಿಸುವಂತೆ ಮಾಡಿದ್ದಾನೆ. ವಿಶ್ವಕ್ಕೆಲ್ಲಾ ಧಾತ್ರಿಯಾದ ಪೃಥಿವಿಯನ್ನು ಪುಷ್ಕಳವನ್ನಾಗಿ ಮಾಡಿದ್ದಾನೆ. ದ್ಯುಲೋಕವು ಕೆಳಕ್ಕೆ ಬೀಳದಂತೆ ಮಾಡಿದ್ದಾನೆ

(೨-೧೭-೫)

## ಮೂರನೆಯ ಮಡಲದಲ್ಲಿ—

ಎಲೈ ಇಂದ್ರನೇ, ನೀನು ಅನಂತಗಳಾದ ಈ ಎರಡು ಲೋಕಗಳನ್ನೂ ಕೈಯಲ್ಲಿ ಹಿಡಿದಾಗ ಅವು ನಿನ್ನ ಹಿಡಿತದ ಪ್ರಮಾಣಮಾತ್ರದ್ದಾದವು. (೩-೩೦-೫)

ಅತ ೦ತ ಶಕ್ತಿಯುತನೂ, ಮಹತ್ತ್ವರೂಪವುಳ್ಳವನೂ, ಅಜರನೂ ಮತ್ತು ನಿತ್ಯಯುವಕನೂ ಆದ ಇಂದ್ರನನ್ನು ನಾವು ಪೂಜಿಸಿ ಪ್ರಶಂಸಿಸುತ್ತೇವೆ. ದ್ಯಾವಾಪೃಥಿವಿಗಳೆರಡೂ ಸೇರಿದರೂ ಪೂಜ್ಯನಾದ ಇಂದ್ರನ ಮಹತ್ತ್ವವನ್ನು ಪೂರ್ಣವಾಗಿ ಅಳೆಯಲಾರವು.

(೩-೩೨-೭)

ಇಂದ್ರನು ಮಾಡಿರುವ ಅಸಾಧಾರಣವಾದ ಕರ್ಮಗಳು ಅಪರಿಮಿತವಾದವು. ಯಾವ ದೇವತೆಯಾಗಲಿ, ಇಂದ್ರನ ಸಂದೇಶವನ್ನು ಮೀರಲಾರನು. ಉಷಸ್ಸನ್ನೂ ಸೂರ್ಯನನ್ನೂ ಲೋಕನಿಯಮನ ಕಾರ್ಯಕ್ಕೆ ನಿಯಮಿಸಿದ ಈ ಇಂದ್ರನ ಪ್ರಭುತ್ವವು ಅತಿಕ್ರಮಿಸಲ್ಪಡತಕ್ಕದ್ದಲ್ಲ.

(೩.೩೨.೮)

ಎಲೈ ಇಂದ್ರನೇ- ಉತ್ಪನ್ನನಾದಾಗಲೇ, ಸೋಮಪಾನದಿಂದ ಹರ್ಷಿತನಾದ ನಿನ್ನ ಆಜ್ಞೆಯನ್ನು ಮಾಸಗಳಾಗಲಿ, ಋತುಗಳಾಗಲಿ, ಸಂವತ್ಸರಗಳಾಗಲಿ ಉಲ್ಲಂಘಿಸಲಾರವು.

(೩-೩೨-೯)

ಎಲೈ ಇಂದ್ರನೇ, ನೀನೊಬ್ಬನೇ ದೇವಮಾನವಾದಿಗಳಿಗೆಲ್ಲಾ ನೇತೃವೂ ಮಾರ್ಗದರ್ಶಕನೂ ಆಗಿದ್ದೀಯೆ. ಯುದ್ಧದಲ್ಲಿ ಈ ಇಂದ್ರನು ದೇವತೆಗಳಿಗೆ ಬೇಕಾದ ಸಂಪತ್ತನ್ನು ಸಂಪಾದಿಸಿದ್ದಾನೆ.

(೩-೩೪-೨, ೭)

ಪ್ರಭಾಯುತನಾದ ಇಂದ್ರನು, ಎಲ್ಲಾ ವಿಧವಾದ ಪರಿಮಿತಿಗಳನ್ನೂ ಮೀರಿದ್ದಾನೆ. ದೇವತೆಗಳಲ್ಲಿ ಯಾರೂ ಇವನಿಗೆ ಸದೃಶರಿಲ್ಲ.

(೩-೪೬-೩)

**ನಾಲ್ಕನೆಯ ಮಂಡಲದಲ್ಲಿ—**

ಇಂದ್ರನು ಮೂರು ಲೋಕಗಳನ್ನೂ ವ್ಯಾಪಿಸಿದರೂ ಸಹ ಅವನ ಪ್ರಭಾವವು ಮೂರು ಲೋಕಗಳನ್ನೂ ಮೀರಿದೆ.

(೪-೧೬-೫)

"ಎಲೈ ಇಂದ್ರನೇ, ನೀನು ಹುಟ್ಟಿದೊಡನೆಯೇ ನಿನ್ನ ಕ್ರೋಧಕ್ಕೆ ಬೆದರಿ ದ್ಯುಲೋಕವೂ, ಅಂತರಿಕ್ಷವೂ, ಪೃಥ್ವಿಯೂ ನಡುಗಿದವು."

(೪-೧೭-೨)

**ಐದನೆಯ ಮಂಡಲದಲ್ಲಿ—**

ಅತ್ಯುತ್ತಮನೂ, ಅತ್ಯಧಿಕನೂ ಆದ ನೀನು ಉತ್ಪನ್ನನಾದೊಡನೆಯೇ ದಿಗಂತದಲ್ಲೆಲ್ಲಾ ಹರಡಿ ಪ್ರಸಿದ್ಧವಾಗಿದ್ದ ನಿನ್ನ ನಾಮವನ್ನು ಕೇಳಿ ದೇವತೆಗಳೂ ಬೆದರಿದರು. (೫-೩೦-೫)

ಮರುತ್ತುಗಳೊಡನೆ ವಿಹರಿಸುತ್ತಿರುವವನೂ, ಅಪ್ರತಿಹತವಾದ ಶಕ್ತಿಯುಳ್ಳವನೂ, ವಿಜಯಿಯೂ, ಅಜರನೂ ಆದ ಇಂದ್ರನ ಮಹತ್ಕಾರ್ಯಗಳನ್ನು ನಾವು ಪ್ರಶಂಸಿಸೋಣ. ಪ್ರಾಚೀನರಲ್ಲಾಗಲಿ ಅಥವಾ ಅರ್ವಾಚೀನರಲ್ಲಾಗಲಿ ಯಾರೂ ಇಂದ್ರನ ಆಧಿಕ್ಯವನ್ನು ಹೊಂದಿಲ್ಲ. (೫-೪೨.೬)

**ಆರನೆಯ ಮಂಡಲದಲ್ಲಿ—**

ದ್ಯಾವಾಪೃಥಿವಿಗಳ ಸೃಷ್ಟಿಗೂ ಸ್ಥಾಪನೆಗೂ ಕಾರಣನಾದ ಎಲೈ ಇಂದ್ರನೇ, ಪವಿತ್ರವಾದ ಯಜ್ಞಕಾರ್ಯಗಳಿಗೆಲ್ಲಾ ಶ್ರೇಷ್ಠರಾದ ಪಿತೃಗಳೂ, ಪ್ರಾಚೀನರೂ ಆದ ದೇವತೆಗಳೆಲ್ಲರೂ ನಿನ್ನ ಪ್ರಜೆಗಳೇ ಆಗಿರುತ್ತಾರೆ.

(೬-೧೭-೭)

ನಮ್ಮಿಂದ ಪ್ರಶಂಸಿತನೂ ಪೂಜಿತನೂ ಆದ ಇಂದ್ರನು ದಸ್ಯುಗಳಿಂದ ಪ್ರಚೋದಿತನಾದವನಿಗೆ ತಲೆಬಾಗುವುದಿಲ್ಲ. ಅಂತಹವನು ಶಕ್ತಿಯುತನಾಗಲಿ ಅಥವಾ ಸ್ಥಿರಸಂಕಲ್ಪವುಳ್ಳವನಾಗಲಿ ಅಥವಾ ಅಭಿಮಾನವುಳ್ಳವನಾಗಲಿ ಅಂತಹ ಶತ್ರುಪಕ್ಷದವನಿಗೆ ಮರ್ಯಾದೆಯನ್ನೇ ತೋರಿಸುವುದಿಲ್ಲ. ಪರ್ವತಗಳು ಅತ್ಯಂತ ಉನ್ನತವಾಗಿ ಮೇಲಕ್ಕೆ ಬೆಳೆದಿದ್ದರೂ ಸಹ ಅವು ಇಂದ್ರನ ದೃಷ್ಟಿಯಲ್ಲಿ ಬಯಲುಪ್ರದೇಶಗಳಂತೆಯೇ ಕಾಣುತ್ತವೆ. ಅತ್ಯಗಾಧವಾದ ಸಾಗರಾದಿಗಳಲ್ಲಿಯೂ ಸಹ ಇಂದ್ರನು ತಟವನ್ನು (ಬುಡವನ್ನು ಅಥವಾ ದಡವನ್ನು) ಮುಟ್ಟಬಲ್ಲನು.

(೬-೨೪-೮)

ದ್ಯಾವಾಪೃಥಿವಿಗಳನ್ನೂ ಮೀರಿ ವ್ಯಾಪಿಸಿರುವ ಇಂದ್ರನಿಗೆ ಈ ಎರಡು ಲೋಕಗಳೂ ಅರ್ಧದಷ್ಟು ಮಾತ್ರವಾಗಿವೆ.

(೬-೩೦-೧)

ಎಲೈ ಇಂದ್ರನೇ, ನಿನಗಿಂತಲೂ ಅಧಿಕನಾದವನಾಗಲಿ ಅಥವಾ ನಿನ್ನ ಸದೃಶನಾಗಲಿ, ದೇವಮಾನವಾದಿಗಳಲ್ಲಿ ಯಾರೂ ಇಲ್ಲವೆಂಬುದು ಮಾತ್ರ ಸತ್ಯವು

(೬-೩೦-೪)

ಎಲೈ ಇಂದ್ರನೇ, ಒಂದೇಕಾಲದಲ್ಲಿ ನೀನು ಸೂರ್ಯನನ್ನೂ, ದ್ಯುಲೋಕವನ್ನೂ, ಉಷಸ್ಸನ್ನೂ ಸೃಷ್ಟಿಸಿ ಜಂಗಮಾತ್ಮಕವಾದ ಸಕಲ ಭೂತಗಳಿಗೂ ಮಾನವಾದಿಗಳಿಗೂ ಶ್ರೇಷ್ಠನಾದ ಪ್ರಭುವಾಗಿ ಸಕಲ ಲೋಕಗಳನ್ನೂ ಆಳುತ್ತಿರುವೆ

(೬-೩೦-೫)

ಅತ್ಯಂತ ಪುರಾತನನೂ, ಕ್ಷಯರಹಿತನೂ ಆದ ಎಲೈ ಇಂದ್ರನೇ, ನಾನು ನಿನ್ನನ್ನು ಅತ್ಯುತ್ತಮವಾದ ಸ್ತುತಿಗಳಿಂದಲೂ ಸೂಕ್ತಗಳಿಂದಲೂ ಪ್ರಶಂಸಿದ್ದೇನೆ.

(೬ ೩೮ ೩)

**ಏಳನೆಯ ಮಂಡಲದಲ್ಲಿ—**

ಎಲೈ ಇಂದ್ರನೇ, ರೂಪದಿಂದ ಮಾತ್ರವಲ್ಲದೇ ನಿನ್ನ ಮಹತ್ಕಾರ್ಯಗಳನ್ನೂ ಎಲ್ಲೆಲ್ಲೂ ವ್ಯಾಪಿಸುವಂತೆ ಮಾಡಿದ್ದೀಯೆ. ನೀನು ಅತ್ಯದ್ಭುತನು.

(೭-೨೦-೪)

ಎಲೈ ಇಂದ್ರನೇ, ಅತಿ ಚಿಕ್ಕ ಪ್ರಮಾಣವುಳ್ಳ ಐಶ್ವರ್ಯಕ್ಕೂ ನೀನೇ ಒಡೆಯನು. ಅತ್ಯುತ್ತಮವಾದ ಸಂಪತ್ತಿಗೂ ನೀನೇ ಪ್ರಭುವು. ಮಧ್ಯಮವರ್ಗಕ್ಕೆ ಸೇರಿದ ಸಂಪತ್ತಿಗೂ ನೀನೇ ಒಡೆಯನು. ಪಶುಗಳಲ್ಲೂ ನಿನ್ನ ಪ್ರಭುತ್ವಕ್ಕೆ ತಡೆಯಿಲ್ಲ.

(೭-೩೨-೧೬)

ವೀರ್ಯವಂತನಾದ ಎಲೈ ಇಂದ್ರನೇ, ಸ್ಥಾವರಜಂಗಮಾತ್ಮಕವಾದ ಸಕಲವಸ್ತುಗಳಿಗೂ ಒಡೆಯನಾದ ನಿನ್ನನ್ನು ನಾವು ಕರೆಯದೇ ಇರುವ ಗೋವುಗಳಂತೆ ನಮ್ಮ ಸ್ತುತಿಗಳೊಡನೆ ಕೂಡಿಕೊಂಡು ಸಮಾಪಿಸುತ್ತೇವೆ.

(೬-೩೨.೨೨)

ನಿನ್ನನ್ನುಳಿದು ನಮಗೆ ಪೃಥ್ವಿಯಲ್ಲಾಗಲಿ, ಅಂತರಿಕ್ಷದಲ್ಲಾಗಲಿ ಬೇರೊಬ್ಬ ರಕ್ಷಕರಿಲ್ಲ.

(೬.೩೨.೨೩)

ಎಲೈ ಇಂದ್ರನೇ, ನೀನು ಯುದ್ಧದಲ್ಲಿ ಶತ್ರುಗಳೊಡನೆ ಹೋರಾಡಿ ದೇವತೆಗಳೊಡನೆ ಸ್ವಾತಂತ್ರ್ಯವನ್ನು ಗಳಿಸಿ ಕೊಟ್ಟಿದ್ದೀಯೆ. ಆದುದರಿಂದ ಅತ್ಯಂತ ವಿಸ್ತೃತವಾದ ಅಂತರಿಕ್ಷವ್ಯಾಪಿಯಾಗಿದ್ದೀಯೆ.

(೬-೯೮-೩)

**ಎಂಟನೆಯ ಮಂಡಲದಲ್ಲಿ—**

ಅದ್ಭುತರೂಪವುಳ್ಳ ಇಂದ್ರನು ಲೋಕಗಳೆಲ್ಲದರ ವಿಸ್ತೃತಿಗೂ ವ್ಯಾಪ್ತಿಗೂ ಕಾರಣನಾಗಿದ್ದಾನೆ ಸೂರ್ಯನಿಗೆ ಜ್ಯೋತಿಯನ್ನು ಒದಗಿಸಿದ್ದಾನೆ. ಎಲ್ಲಾ ಜಗತ್ತುಗಳ ಸಂರಕ್ಷಣವೂ ಇಂದ್ರನಿಗೇ ಸೇರಿದುದಾಗಿದೆ.

(೮ ೩-೬)

" ಪರಾಕ್ರಮದಿಂದ ಗರ್ಜಿಸುವ ಇಂದ್ರನ ಪರಾಕ್ರಮಕ್ಕೆ ಲೋಕತ್ರಯದಲ್ಲಿ ಯಾವುದೂ ಸಮನಾಗಿಲ್ಲ."

(೮-೬.೧೫)

ಎಲೈ ಇಂದ್ರನೇ, ಅಂತರಿಕ್ಷದಲ್ಲಿ ಪ್ರಭಾಯುತನಾದ ಸೂರ್ಯನನ್ನು ನೀನು ಸ್ಥಾಪಿಸಿದೊಡನೆಯೇ ಸಕಲ ಲೋಕಗಳೂ ಕೃತಜ್ಞತೆಯಿಂದ ನಿನಗೆ ತಲೆಬಾಗಿದವು.

(೮ ೧೨.೩೦)

ಅಂತರಿಕ್ಷಾದಿಗಳಲ್ಲಿ ಪ್ರಕಾಶಿಸುವ ತೇಜೋರಾಶಿಗಳೆಲ್ಲಾ ಇಂದ್ರನಿಂದಲೇ ಸ್ಥಾಪಿತವಾಗಿವೆ. ಒಂದು ಸಲ ನಿಯಮಿಸಿದರೆ ಆ ಇಂದ್ರನ ನಿಯಮಗಳು ಸಡಿಲವಾಗುವುದಿಲ್ಲ. ಆದುದರಿಂದ ತೇಜಸ್ಸುಗಳು ಕುಂಠಿತವಾಗದೇ ಸ್ಥಿರವಾಗಿ ಪ್ರಭೆಯನ್ನು ಬೀರುತ್ತಿರುವುವು.

(೮-೧೪-೯)

ಇಂದ್ರನ ಈ ಮಹತ್ತ್ವದಿಂದಲೇ ಪರ್ವತಗಳೂ, ಬಯಲುಸೀಮೆಗಳೂ, ಸಮುದ್ರಗಳೂ ಒಟ್ಟಿನಲ್ಲಿ ಸಕಲ ಲೋಕಗಳೂ ದೃಢವಾಗಿವೆ.

(೮.೧೫.೨)

ಎಲೈ ಇಂದ್ರನೇ, ಶಕ್ತಿನಿಮಿತ್ತದಿಂದಲೂ, ವೀರ್ಯಗಣನೆಯಿಂದಲೂ ಸಕಲ ದೇವತೆಗಳೂ ನಿನಗೆ ಮಣಿಯುತ್ತಾರೆ.

(೮-೫೧-೭)

ಎಲೈ ಇಂದ್ರನೇ, ಮಾನವನ ಪ್ರತ್ಯಕ್ಷ ಗೋಚರಕ್ಕೆ ಮೀರಿದ ಸಹಸ್ರಾರು ಅಂತರಿಕ್ಷಗಳೂ, ಪೃಥಿವ್ಯಾದಿಗಳೂ ನಿನ್ನ ನಿಯಮನಕ್ಕೆ ಸೇರಿದವಾಗಿವೆ. ಸಹಸ್ರ ಸೂರ್ಯರು ಸೇರಿದರೂ ನಿನ್ನ ಪ್ರಕಾಶವನ್ನು ಮೀರಿಸಲಾರರು. ಸೃಷ್ಟವಾದ ಯಾವ ವಸ್ತುವೂ ನಿನಗೆ ಸರಿತೂಗಲಾರದು.

(೮-೫೯-೫)

ಇಂದ್ರನು ಅಜೇಯನು, ಶಕ್ತನು, ಅಪ್ರತಿಹತನು. ಅವನು ಸಕಲವನ್ನೂ ಕೇಳಬಲ್ಲನು, ವೀಕ್ಷಿಸಬಲ್ಲನು, ಸರ್ವಜ್ಞನು, ಸರ್ವಶಕ್ತನು.

(೮-೬೭-೫)

ಎಲೈ ಇಂದ್ರನೇ, ನೀನೊಬ್ಬನೇ ನಿಜವಾದ ಯೋಧನು. ಗೋತಮರಿಂದ ನಿರ್ಮಿತವಾದ ಈ ಸ್ತುತಿಗಳು ನಿನ್ನನ್ನು ಪ್ರಚೋದಿಸಿ, ನಿನ್ನ ಶಕ್ತಿಯನ್ನು ವೃದ್ಧಿಪಡಿಸಿ, ನಮ್ಮನ್ನು ರಕ್ಷಿಸುವ ಸಾಮರ್ಥ್ಯವನ್ನು ಹೊಂದುವುವು. ನೀನು ನಿನ್ನ ಸ್ವಸಂಕಲ್ಪದಿಂದಲೇ ನಿನ್ನ ವೃದ್ಧಿಯನ್ನು ಸಂಪಾದಿಸಿದ್ದೀಯೆ. ಪಾರ್ಥಿವ ಸ್ವರೂಪವಾವುದೂ ನಿನ್ನಲ್ಲಿಲ್ಲ, ನಿನ್ನನ್ನು ನಿಯಮಿಸಿ ಪ್ರಭುತ್ವಮಾಡುವವರೂ ಸಹ ದ್ಯಾವಾಪೃಥಿವ್ಯಾದಿಗಳಲ್ಲಿ ಯಾರೂ ಇಲ್ಲ.

(೮-೭೭-೪, ೫)

ಎಲೈ ಇಂದ್ರನೇ, ಆದುದರಿಂದಲೇ, ಸಕಲ ದೇವತೆಗಳೂ ನಿನ್ನ ಸಖ್ಯವನ್ನು ಅರಸುವರು.

(೮-೭೮-೨)

ಎಲೈ ಇಂದ್ರನೇ, ನೀನು ಯಾವಾಗ ವೃತ್ರವಧದ ಉದ್ದಿಶ್ಯದಿಂದ ಉತ್ಪನ್ನನಾಗಿ ದ್ಯಾವಾಪೃಥಿವಿಗಳನ್ನು ವಿಸ್ತರಿಸಿ ಹಿಡಿದೆಯೋ ಆಗ ನೀನು ಯಜ್ಞತತ್ತ್ವವನ್ನು ಉತ್ಪನ್ನಮಾಡಿದೆ. ಆಗಲೇ ನಿನ್ನನ್ನುದ್ದೇಶಿಸಿದ ಸ್ತುತಿಗಳೂ ಉಕ್ಥಮಂತ್ರಗಳೂ ನಿರ್ಮಿತವಾದವು. ಆ ಸ್ತುತಿಗಳಿಂದ ಪ್ರಶಂಸಿಸಲ್ಪಟ್ಟ ನೀನು ಉತ್ತಮವಾದ ಪ್ರಭಾವವನ್ನು ಪಡೆದು ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಉತ್ಪನ್ನವಾಗಿರುವ ಮತ್ತು ಆಗತಕ್ಕ ಸಕಲ ಭೂತಗಳಿಂದಲೂ ಅತಿಶಯವಾದ ಮಹತ್ತ್ವವನ್ನು ಹೊಂದಿರುವೆ.

(೮-೭೮-೫)

ಎಲೈ ಇಂದ್ರನೇ, "ನನಗೆ ಮರಣವೇ ಇಲ್ಲ, ನನಗೆ ಕ್ಷಯವಿಲ್ಲ" ಎಂದು ಯಾವ ವಿಶ್ವಾಸವನ್ನು ನೀನು ಹೊಂದಿದ್ದೀಯೋ ಅದು ಸತ್ಯವೇ ಆಗಿರುತ್ತದೆ.

(೮-೮೨-೫)

ನಿನ್ನ ಆಜ್ಞೆಯನ್ನೂ, ನಿನ್ನ ಸಾರ್ವಭೌಮತ್ವವನ್ನೂ ಎದುರಿಸಲು ದೇವಮಾನವಾದಿಗಳಲ್ಲಿ ಯಾರಿಗೂ ಶಕ್ಯವಿಲ್ಲ. ಧೈರ್ಯವೂ ಇಲ್ಲ.

(೮.೮೨-೧೧)

ಎಲೈ ಇಂದ್ರನೇ, ನೀನು ಪೂಜ್ಯರಲ್ಲೆಲ್ಲಾ ಅತ್ಯಂತ ಶ್ರೇಷ್ಠನಾದ ಪೂಜ್ಯತಮನೆಂದೂ, ಅಚಲನಾದ ಶತ್ರುವನ್ನೂ ಕೆಳಕ್ಕುರುಳಿಸುವವನೆಂದೂ, ಚೈತನ್ಯಯುಕ್ತನಾದ ಸಕಲ ಭೂತಗಳಿಗಿಂತಲೂ ಅಧಿಕನೆಂದೂ ನಾನು ನಿನ್ನನ್ನು ಅತಿಶಯವಾಗಿ ಪ್ರಶಂಸಿಸುತ್ತೇನೆ.

(೮-೮೫-೪)

ಈ ಸಕಲ ಲೋಕಗಳನ್ನೂ ನಿರ್ಮಿಸಿದ ಈ ಇಂದ್ರನನ್ನು ನಾವು ಸ್ತುತಿಸೋಣ ಉತ್ಪನ್ನವಾದ ಸಕಲ ವಸ್ತುಗಳೂ ಅವನಿಗಿಂತ ನಿಕೃಷ್ಟವಾದವು.

(೮-೮೫-೬)

ಅಸುರರು ಆಯುಧರಹಿತರು. ಆದುದರಿಂದ ಅವರು ದೇವತೆಗಳಲ್ಲ. ನಿನ್ನ ಚಕ್ರದಿಂದ ಅವರನ್ನು ನಾಶಗೊಳಿಸು. (ಅಗ್ನಿಯು ಶುಷ್ಕವಾದ ವನವನ್ನು ದಹಿಸಿ ನಿರ್ಮೂಲಮಾಡುವಂತೆ ಇಂದ್ರನು ದುಷ್ಟರಾದ ರಾಕ್ಷಸರನ್ನು ನಾಶಮಾಡಿ

ಯಜ್ಞಾದಿಕಾರ್ಯಗಳಿಗೆ ಸೌಕರ್ಯವನ್ನುಂಟುಮಾಡುವನೆಂದು ೬.೧೮.೧೦ ರಲ್ಲಿ ಹೇಳಿರುವಂತೆ ಇಲ್ಲಿಯೂ ತಿಳಿಸಿದೆ).

(೮-೮೫-೯)

ದೇವಮಾನವಾದಿಗಳೆಲ್ಲರೂ ಒಟ್ಟಿಗೆ ಸೇರಿ ಶತ್ರುನಾಶಕನೂ, ಅತಿಶಯವಾದ ಶಕ್ತಿಯುಳ್ಳವನೂ, ಭಯಂಕರನೂ, ವೀರ್ಯವಂತನೂ, ವೇಗಗಾಮಿಯೂ ಆದ ಇಂದ್ರನನ್ನು ರಾಜ್ಯಾಧಿಪತಿಯಾಗುವಂತೆ ಮಾಡಿದರು. ವೀರ್ಯಶಾಲಿಯಾದ ಇಂದ್ರನನ್ನು ಈ ಉದ್ದಿಶ್ಯಕ್ಕಾಗಿಯೇ ಅವರು ಉತ್ಪನ್ನಮಾಡಿದರು.

(೮-೮೬-೯)

**ಹತ್ತನೆಯ ಮಂಡಲದಲ್ಲಿ:—**

ಇಂದ್ರನು ಸೂರ್ಯನಿಂದ ವೃಷ್ಟಿಸಾಮಗ್ರಿಯನ್ನೆಲ್ಲಾ ಸಂಗ್ರಹಿಸಿದಾಗ, ದ್ಯೂತಕಾರನು ದ್ಯೂತದಲ್ಲಿ ತನ್ನ ಲಾಭವನ್ನೆಲ್ಲಾ ಒಟ್ಟಿಗೆ ಸೇರಿಸಿ ಹಿಡಿದಿರುವಂತೆ ಕಾಣುತ್ತದೆ. ಈ ಶಕ್ತಿಯನ್ನು ಪುರಾತನನಾಗಲಿ, ಅರ್ವಾಚೀನನಾಗಲಿ ಯಾರೂ ಹೊಂದಿರಲು ಸಾಧ್ಯವಿಲ್ಲ.

(೧೦-೪೩-೫)

ಅಲ್ಲಾಡುತ್ತಿರುವ ಪರ್ವತಗಳನ್ನೂ, ತಪ್ಪಲು ಪ್ರದೇಶಗಳನ್ನೂ ಇಂದ್ರನು ಸ್ಥಿರವಾಗಿ ನಿಲ್ಲುವಂತೆ ಮಾಡಿದನು. ಅಂತರಿಕ್ಷವು ಈ ಕಾರ್ಯದ ವೇಳೆಯಲ್ಲಿ ಶಬ್ದಮಾಡಿತು ಅವನು ಅಂತರಿಕ್ಷವನ್ನು ಕಂಪಿಸುವಂತೆ ಮಾಡಿದನು.

(೧೦-೪೪.೮)

"ತ್ವಷ್ಟೃವು ನನಗಾಗಿ ಉಕ್ಕಿನ ವಜ್ರಾಯುಧವನ್ನು ನಿರ್ಮಿಸಿದನು. ದೇವತೆಗಳು ಚೈತನ್ಯವನ್ನೂ ನನ್ನಲ್ಲಿ ತುಂಬಿದರು. ಆದಿತ್ಯನ ತೇಜಸ್ಸಿನಂತೆ ನನ್ನ ತೇಜಸ್ಸೂ ಸಹ ಅದ್ವಿತೀಯವಾದುದು. ನಾನು ಮಾಡಿದ ಅದ್ಭುತ ಕಾರ್ಯಗಳಿಗಾಗಿಯೂ ಮುಂದೆ ನೆರವೇರಿಸಬಹುದಾದ ಅದ್ಭುತವಾದ ಕಾರ್ಯಗಳಿಗಾಗಿಯೂ ಸಕಲ ದೇವಮಾನವರೂ ನನ್ನನ್ನು ಅತಿಶಯವಾಗಿ ಪ್ರಶಂಸಿಸಿ ನನ್ನನ್ನು ಪೂಜಿಸುತ್ತಾರೆ."

(೧೦-೪೮-೩)

ಎಲೈ ಧನವಂತನಾದ ಇಂದ್ರನೇ, ನಿನ್ನಿಂದ ಭೀತವಾದ ಸಕಲವಸ್ತುಗಳೂ ನಿನ್ನನ್ನು ಪೂಜಿಸುವುದೇ ನಿನ ಆಧಿಕ್ಯವು. ದೇವತೆಗಳನ್ನು ನೀನು ಬಿಡಿಸಿದೆ.

(೧೦-೫೪-೧)

ನೀನು ನಿನ್ನ ಸ್ವರೂಪವನ್ನು ಬೆಳೆಸಿಕೊಳ್ಳುತ್ತಾ ಮಾನವರ ನಡುವೆ ನಿನ್ನ ವೀರ್ಯಾತಿಶಯವನ್ನು ಪ್ರಕಟಿಸುತ್ತಾ ಸಂಚರಿಸುವಾಗ ನಿನ್ನ ಶಕ್ತಿಯನ್ನು ಅವರು ಪ್ರಶಂಸಿಸುತ್ತಾರೆ. ಈಗಾಗಲಿ ಅಥವಾ ಹಿಂದೆಯಾಗಲಿ, ನಿನ್ನ ವೀರ್ಯವನ್ನು ಎದುರಿಸುವ ಶತ್ರುವೆಂಬುವನು ನಿನಗಿಲ್ಲವೇ ಇಲ್ಲ.

(೧೦-೫೪.೨)

ಎಲೈ ಇಂದ್ರನೇ, ನಮ್ಮ ಮುಂದೆ ಇರತಕ್ಕ ಈ ಋಷಿಗಳಲ್ಲಿ ನಿನ್ನ ಮಹತ್ತ್ವದ ಪಾರವನ್ನು ಯಾರು ತಿಳಿದಿರುವವರಾಗಿದ್ದಾರೆ ? ಜಗತ್ತಿಗೆ ಮಾತಾಪಿತೃಗಳಾದ ಪೃಥಿವ್ಯಂತರಿಕ್ಷಗಳನ್ನು ನಿನ್ನ ದೇಹದಿಂದಲೇ ಉತ್ಪನ್ನಮಾಡಿದುದೇ ನಿನ್ನ ಪ್ರಭಾವವು. ಇದನ್ನು ಜಗತ್ತೇ ಅರಿತಿದೆ.

(೧೦ ೫೪-೩)

ತೇಜೋಮಂಡಲಗಳಿಗೆ ಇಂದ್ರನು ತೇಜಸ್ಸನ್ನು ತುಂಬಿದನು. ಸ್ವಾದುವಾದ ವಸ್ತುಗಳಲ್ಲಿ ಸ್ವಾದುತೆಯನ್ನು (ಸಿಹಿಯನ್ನು) ತುಂಬಿದನು.

(೧೦-೫೪-೬)

ರಥದ ಎರಡು ಚಕ್ರಗಳನ್ನೂ ಬೇರೆಬೇರೆಯಾಗಿಟ್ಟಿದ್ದರೂ ಇರಚಿಯ ಸಹಾಯದಿಂದ ಅವೆರಡಕ್ಕೂ ಸಂಬಂಧವನ್ನು ಕಲ್ಪಿಸಿರುವಂತೆ ಇಂದ್ರನು ದ್ಯಾವಾಪೃಥಿವಿಗಳೆರಡನ್ನೂ ಪ್ರತ್ಯೇಕವಾಗಿಟ್ಟದ್ದು ತನ್ನ ಪ್ರಭಾವದಿಂದ ಅವೆರಡಕ್ಕೂ ಸಹಜವಾದ ಸಂಬಂಧವನ್ನು ಕಲ್ಪಿಸಿದ್ದಾನೆ ಮತ್ತು ಅಂತರಿಕ್ಷದ ಪ್ರಭುತ್ವವನ್ನು ಮಾಡುವುದರ ಜೊತೆಗೆ ಇಂದ್ರನು ಪೃಥ್ವಿಗೂ, ಸಮುದ್ರಾದಿಗಳಿಗೂ, ಪರ್ವತಾದಿಗಳಿಗೂ ಸಾರ್ವಭೌಮನಾಗಿದ್ದಾನೆ. ಆದರೆ ಇವನಿಗೆ ಪ್ರಭುವಾದವನು ಇನ್ನಾರೂ ಇಲ್ಲ, ಇವನೇ ಅತ್ಯಧಿಕನು.

(೧೦-೮೯-೪, ೧೦)

ಎಲೈ ಇಂದ್ರನೇ, ಜಂಗಮಾತ್ಮಕವಾದ ಯಾವ ಭೂತಗಳುಂಟೋ ಅವುಗಳೆಲ್ಲಕ್ಕೂ ಸಹ ನೋಡುವ ಸಾಧನವಾದ ಚಕ್ಷುಸ್ಸು ನೀನೇ ಆಗಿದ್ದೀಯೆ.

(೧೦-೧೦೨-೧೨)

ಎಲೈ ಕವಿರೂಪರಾದ ಋಷಿಗಳೇ, ಮಾನವರ ಇಷ್ಟಾರ್ಥಗಳು ಏನಿವೆಯೋ ಅವನ್ನೆಲ್ಲಾ ಅರಿತು ಅದಕ್ಕನುರೂಪವಾದ ಸ್ತುತಿಗಳನ್ನು ಇಂದ್ರನಿಗೆ ಅರ್ಪಿಸಿರಿ. ಇಂದ್ರನು ಸ್ತುತಿಪ್ರಿಯನಾದುದರಿಂದ ನಾವು ನಮ್ಮ ಪ್ರಶಂಸೆಗಳಿಂದ ಇಂದ್ರನನ್ನು ನಮ್ಮ ಹಿತಕ್ಕೆ ಬೇಕಾದ ಕಾರ್ಯತತ್ಪರನಾಗುವಂತೆ ಮಾಡೋಣ.

(೧೦-೧೧೧-೧)

ಯಜ್ಞಭೂಮಿಯಿಂದ ಯಜಮಾನಾದಿಗಳ ಸ್ತುತಿಯು ಪ್ರಕಾಶಮಾನವಾಗಿ ಉದ್ಭೂತವಾಗಿದೆ. ಒಳ್ಳೆಯ ಕಡಸಿನಿಂದ ಉತ್ಪನ್ನವಾದ ಹೋರಿಯು ಪಶುಗಳನ್ನು ಸಮೀಪಿಸುವಂತೆ ನಮ್ಮ ಸ್ತುತಿಯು ಇಂದ್ರನನ್ನು ಸಮೀಪಿಸಿದೆ. ಅವನೂ ಸಹ ಗುಟುರನ್ನು ಹಾಕುತ್ತಾ ಎಚ್ಚೆತ್ತಿದ್ದಾನೆ. ಮತ್ತು ಅತಿವಿಸ್ತೃತವಾದ ಪ್ರದೇಶವನ್ನು ಆಕ್ರಮಿಸಿ ವ್ಯಾಪಿಸಿದ್ದಾನೆ.

(೧೦-೧೧೧-೨)

ನಮ್ಮಿಂದ ಪಠಿತವಾದ ಸ್ತುತಿಯನ್ನು ಇಂದ್ರನು ಖಂಡಿತವಾಗಿಯೂ ಅರಿತಿದ್ದಾನೆ. ವಿಜಯಿಯಾದ ಇಂದ್ರನು ಸೂರ್ಯನ ಸಂಚಾರಕ್ಕೆ ಮಾರ್ಗವನ್ನು ಕಲ್ಪಿಸಿದ್ದಾನೆ. ವೃಷಭಕ್ಕೆ ಸಹಚಾರಿಯಾದ ಪಶುವನ್ನು ಸೃಷ್ಟಿಸಿ ಅಂತರಿಕ್ಷದಲ್ಲಿ ನಿತ್ಯನೂ, ಅಚಲನೂ ನಿರುಪಮನೂ ಆದ ಪ್ರಭುವಾಗಿ ಸ್ಥಾಪಿತನಾಗಿದ್ದಾನೆ.

(೧೦-೧೧೧-೩)

ಅರ್ಬುದಾಖ್ಯನಾದ ಅಸುರನ ಶಿರಸ್ಸನ್ನು ಸೀಳಿದನೆಂದು ಯಾವ ಅಸುರನು (ದೇವನು) ಪ್ರಸಿದ್ಧನಾಗಿದ್ದಾನೋ (೧೦-೬೭-೨) ಅದೇ ಇಂದ್ರನು ಅಹಿರೂಪನಾದ ಅಸುರನನ್ನು ನಾಶಪಡಿಸಿ ಅವನ ದುರಾಲೋಚನೆಗಳನ್ನು ಭಂಗಪಡಿಸಿದನು. ಸತ್ಯದ ಆಧಾರದ ಮೇಲೆ ಅನೇಕ ಲೋಕಗಳನ್ನು ಸ್ಥಾಪಿಸಿದನು.

(೧೦-೧೧೧-೪)

ಅಂಗಿರಾಋಷಿಗಳಿಂದ ಸ್ತುತನಾದ ಇದೇ ಇಂದ್ರನು ದ್ಯಾವ್ಯಾಪೃಥಿವಿಗಳನ್ನೆಲ್ಲಾ ಪ್ರತಿಬಿಂಬಿಸುವ ಪ್ರತಿನಿಧಿಯಾಗಿದ್ದಾನೆ. ಯಜಮಾನಾದಿಗಳು ಅರ್ಪಿಸುವ ಹವಿರಾದಿಗಳನ್ನೆಲ್ಲಾ ಅರಿಯುತ್ತಾನೆ. ಶುಷ್ಣನನ್ನು ಸಂಹರಿ

ಸುತ್ತಾನೆ. ಸೂರ್ಯನ ಸಹಾಯದಿಂದ ಅಂತರಿಕ್ಷಾದಿಗಳನ್ನು ಪ್ರಸರಿಸಿ ಹರಡುವಂತೆ ಮಾಡಿದ್ದಾನೆ. ತಾನೇ ಸತ್ಯಾತ್ಮಕನಾದುದರಿಂದ ದ್ಯಾವಾಪೃಥಿವಿಗಳನ್ನೆಲ್ಲಾ ಸತ್ಯರೂಪನಾದ ತನ್ನ ಶಕ್ತಿಯಿಂದಲೇ ಧರಿಸಿ ಆಧಾರಭೂತನಾಗಿದ್ದಾನೆ (೧೦-೧೧೧-೫)

ಎಲೈ ಇಂದ್ರನೇ, ಉಷಸ್ಸಿನ ಪ್ರಭೆಯು ಎಲ್ಲಾ ಲೋಕಗಳನ್ನೂ ವ್ಯಾಪಿಸುವಂತೆ ನೀನು ಯಾವಾಗ ಲೋಕಗಳನ್ನೂ ವ್ಯಾಪಿಸಿದೆಯೋ ಆಗಲೇ ದಿವ್ಯಮಾತೆಯು ನಿನ್ನನ್ನು ಹಡೆದಳು. ಅಸಾಧಾರಣವಾದ ಭೂತಗಳಿಗೆ ನೀನು ಅತ್ಯದ್ಭುತನಾದ ಪ್ರಭುವಾಗಿದ್ದೀಯೆ. ನೀನು ದಿವ್ಯಮಾತೆಯಿಂದ ಉತ್ಪನ್ನವಾದುದರಿಂದಲೇ ನಿನ್ನ ಮಹತ್ತ್ವವು ಅಧಿಕವಾಗಿದೆ. (೧೦-೧೩೪-೧)

ಎಲೈ ಇಂದ್ರನೇ, ಅಂತರಿಕ್ಷದಲ್ಲಿ ಸೂರ್ಯಾದಿಗಳ ಚಲನಕ್ಕೆ ನಿಯಮನವನ್ನು ಮಾಡಿದ್ದೀಯೆ. ಜಗತ್ತಿಗೆ ಪಿತೃವಾದ ಅಂತರಿಕ್ಷದಲ್ಲಿ ನಿನ್ನಿಂದ ನಿರ್ಮಿತವಾದ ಪರಿಧಿಯಿರುತ್ತದೆ.

(೧೦-೧೩೮-೬)

ಕೆಲವು ಸಂದರ್ಭಗಳಲ್ಲಿ ಇಂದ್ರನು **ಸಮ್ರಾಟ್**-ವಿಶ್ವಕ್ಕೆಲ್ಲಾ ಸಾರ್ವಭೌಮನು ಎಂದು ವರ್ಣಿತನಾಗಿದ್ದಾನೆ.

(೪-೧೯-೨ ; ೪-೨೧-೧೦)

ಇನ್ನು ಕೆಲವೆಡೆಗಳಲ್ಲಿ **ಸ್ವರಾಟ್** ಇತರರ ಅಧೀನಕ್ಕೊಳಗಾಗದೇ ತನ್ನ ಸ್ವಾತಂತ್ರ್ಯವೇ ಪ್ರಧಾನವಾಗಿ ಉಳ್ಳ ಸ್ವಯಂಪ್ರಭುವೆಂದು ಸ್ತುತನಾಗಿದ್ದಾನೆ. (೩-೪೬-೧; ೩-೪೯-೨, ೭.೮೨.೨; ೮.೧೨-೧೪)

ಅಲ್ಲದೇ, ತನ್ನ ಮಹತ್ತ್ವದಿಂದಲೇ ಪ್ರಭುತ್ವವನ್ನು ಮಾಡತಕ್ಕವನೂ ಪುರಾತನನೂ ಆದ ಋಷಿಯೆಂದು ಕೆಲವೆಡೆಗಳಲ್ಲಿ ಪ್ರಶಂಸಿತನಾಗಿದ್ದಾನೆ. (**ಋಷಿರ್ಹಿ ಪೂರ್ವಜಾ ಅಸ್ಯೇಕ ಈಶಾನ ಓಜಸಾ**)

(೮-೬-೪೧)

ಅಲೌಕಿಕವಾದ ಶಕ್ತಿಯನ್ನು ತೋರಿಸತಕ್ಕ **ಅಸುರ** ಎಂಬ ವಿಶೇಷಣದಿಂದಲೂ ವರ್ಣಿತನಾಗಿದ್ದಾನೆ.

(೧-೧೭೪-೧, ೮-೭೦.೬)

## ಇಂದ್ರನು ಭಕ್ತರಲ್ಲಿ ತೋರಿಸತಕ್ಕ ಅನುಗ್ರಹದ ಸ್ವರೂಪ

ಇಂದ್ರನಿಗೂ ಅವನ ಭಕ್ತರಿಗೂ ಇರತಕ್ಕ ಸಾಕ್ಷಾತ್ಸಂಬಂಧವನ್ನು ತೋರಿಸತಕ್ಕ ವಾಕ್ಯಗಳನೇಕವಿರುತ್ತವೆ. ಕೆಲವು ವಾಕ್ಯಗಳು ಇಂದ್ರನ ನೈತಿಕವಾದ ವ್ಯಕ್ತಿತ್ವವನ್ನೂ ವರ್ಣಿಸುವುವಾಗಿವೆ. ಇಂದ್ರನಲ್ಲಿ ಶ್ರದ್ಧೆಯನ್ನು ತೋರಿಸುವ ಅನೇಕ ವಾಕ್ಯಗಳಲ್ಲಿ ಕೆಲವುದರ ತಾತ್ಪರ್ಯವನ್ನು ಪ್ರಕೃತ ತಿಳಿಸಲಾಗುತ್ತದೆ.

ಇಂದ್ರನು ಶತ್ರುನಾಶಮಾಡುವಕಾಲದಲ್ಲಿ ತನ್ನ ವಜ್ರಾಯುಧವನ್ನು ಪದೇಪದೇ ತಿರುಗಿಸುತ್ತಿರುವಾಗ ಜನರೆಲ್ಲರೂ ಅವನ ಭಯಂಕರರೂಪಕ್ಕೆ ಹೆದರಿ ಶ್ರದ್ಧೆಯನ್ನಿಡುತ್ತಾರೆ.

(೧-೫೫-೫)

ಎಲೈ ಇಂದ್ರನೇ, (ನಿನ್ನ ನಿಯಮನದಲ್ಲಿರತಕ್ಕ) ಸೂರ್ಯನೂ ಚಂದ್ರನೂ ಪರ್ಯಾಯರೂಪದಲ್ಲಿ ತಮ್ಮಭ್ರಮಣಕಾರ್ಯವನ್ನಿಟ್ಟುಕೊಂಡಿದ್ದಾರೆ. ಅಂತಹ ವಿಶ್ವನಿಯಮನವನ್ನು ನೋಡತಕ್ಕ ಸಕಲರೂ ನಿನ್ನಲ್ಲಿ ಅಂತಹ ಅಸಾಧಾರಣವಾದ ಶಕ್ತಿಯಿರುವುದಕ್ಕಾಗಿ ಭಕ್ತಿಯನ್ನೂ ಶ್ರದ್ಧೆಯನ್ನೂ ತೋರಿಸುತ್ತಾರೆ. (೧-೧೦೨-೨)

**ಎಲೈ ಯಜಮಾನರೇ, ಇಂದ್ರನ ಅತ್ಯುತ್ತಮವಾದ ಐಶ್ವರ್ಯವನ್ನು ನೋಡಿ ಅವನಲ್ಲಿ ಭಕ್ತಿಶ್ರದ್ಧೆಗಳನ್ನಿಡಿರಿ.**

(೧-೧೦೩-೫)

ಎಲೈ ಇಂದ್ರನೇ, ನಮ್ಮ ಭವಿಷ್ಯದ ಸಂತತಿಯ ವೃದ್ಧಿಗೆ ಯಾವವಿಧವಾದ ಕೆಡಕನ್ನೂ ಉಂಟುಮಾಡಬೇಡ. ನಾವು ನಿನ್ನ ಭಕ್ತರಾಗಿದ್ದೇವೆ.

(೧-೧೦೪-೬)

ಎಲೈ ದೇವನೇ, ಖಂಡಿತವಾಗಿಯೂ ನಿನ್ನಲ್ಲಿ ನಾವು ಶ್ರದ್ಧೆಯನ್ನಿಟ್ಟಿದ್ದೇವೆ. ನಮಗೆ ಅತ್ಯುತ್ತಮವಾದ ಸಂಪತ್ತನ್ನು ತಂದೊದಗಿಸಿಕೊಡು. ನೀನು ವೀರ್ಯವಂತನು.

(೧-೧೦೪-೭)

ಪ್ರಥಮತಃ ನಿಮ್ಮಿಬ್ಬರನ್ನೂ (ಇಂದ್ರಾಗ್ನಿಗಳು) ಪ್ರಾರ್ಥಿಸುತ್ತಾ "ಈ ಸೋಮವು ದೇವತಾತ್ಮರಾದ ನಿಮ್ಮಿಬ್ಬರಿಗೆ ಅರ್ಪಿತವಾಗತಕ್ಕದ್ದು" ಎಂದು ಸಂಕಲ್ಪಿಸಿದ್ದೇನೆ. ನನ್ನ ಭಕ್ತಿಪೂರ್ವಕವಾದ ಆ ಸಂಕಲ್ಪಕ್ಕನುಸಾರವಾಗಿ ಇಲ್ಲಿ ದಯಮಾಡಿ ಇಲ್ಲಿ ಅರ್ಪಿತವಾದ ಸೋಮವನ್ನು ಪಾನಮಾಡಿರಿ.

(೧-೧೦೮-೬)

ಎಲೈ ಯಜಮಾನಾದಿಗಳೇ, ಈ ಗೋವುಗಳೇ ಇಂದ್ರನು. ನಾನು ನನ್ನ ಹೃತ್ಪೂರ್ವಕವಾಗಿ ಇಂದ್ರನ ಸಾನ್ನಿಧ್ಯವನ್ನಪೇಕ್ಷಿಸುತ್ತೇನೆ.

(೬-೨೮-೫)

ಸತ್ಯ, ಶ್ರದ್ಧೆ, ಮತ್ತು ಗಾಢವಾದ ತಪಸ್ಸು ಇವೇ ಭಕ್ತನ ವ್ಯವಹಾರಗಳಲ್ಲಿ ತೋರತಕ್ಕ ನೀತಿಗಳು. ಎಲೈ ಸೋಮವೇ, ನೀನು ಸತ್ಯಾತ್ಮಕವಾದ ಸಂಕಲ್ಪದಿಂದಲೂ ಶ್ರದ್ಧೆಯಿಂದಲೂ ಮತ್ತು ತಪಸ್ಸಿನಿಂದಲೂ ಇಂದ್ರನನ್ನುದ್ದೇಶಿಸಿ ಅರ್ಪಿತವಾಗಿದ್ದೀಯೆ. ಇಂದ್ರನಲ್ಲಿಗೆ ಪ್ರವಹಿಸಿ ಹೋಗಿ ಸೇರು.

(೯-೧೧೩-೨)

ದೇವತೆಗಳಲ್ಲಿ ಭಕ್ತಿಯುಳ್ಳವನಾಗಿ, ಆದರಪೂರ್ವಕವಾದ ಮನಸ್ಸಿನಿಂದಲೂ ಶುದ್ಧ ಹೃದಯದಿಂದ ಕೂಡಿದವನಾಗಿಯೂ ಯಾವನು ಸೋಮರಸರೂಪವಾದ ಹವಿಸ್ಸನ್ನು ಅರ್ಪಿಸುವನೋ ಅಂತಹ ಭಕ್ತನ ಗೋವುಗಳು ಅಪಹೃತವಾಗಲು ಇಂದ್ರನು ಎಂದಿಗೂ ಅವಕಾಶವನ್ನುಂಟುಮಾಡುವುದಿಲ್ಲ. ಖಂಡಿತವಾಗಿಯೂ ಅವುಗಳನ್ನು ರಕ್ಷಿಸುತ್ತಾನೆ.

(೧೦-೧೬೦-೩)

**ಶ್ರದ್ಧಾರಹಿತರಿಗೆ ಆಗತಕ್ಕ ಬಾಧಕಗಳಿಂದ ಇಂದ್ರನ ಅಸ್ತಿತ್ವವು ಸ್ಥಿರಪಡುವುದು ಎಂಬ ಅಂಶದ ವರ್ಣನೆ**

ಯಾವ ಶತ್ರುರೂಪನಾದ ಮಾನವನು ಇಂದ್ರನ ವಿಷಯದಲ್ಲಿ ಅಶ್ರದ್ಧೆಯನ್ನು ತೋರಿಸುತ್ತಾ "ಅವನೆಲ್ಲಿ" "ಅವನಿಲ್ಲವೇ ಇಲ್ಲ" ಇತ್ಯಾದಿಯಾಗಿ ವ್ಯವಹಾರಮಾಡಿ ಇಂದ್ರನನ್ನು ತಿರಸ್ಕರಿಸಿ ಮಾತನಾಡುವನೋ ಅವನ ಗವಾದಿ ಸಂಪತ್ತುಗಳನ್ನು ದ್ಯೂತಕಾರನು ತಾನು ಸಂಪಾದಿಸಿದ ದ್ಯೂತದ ಮೊತ್ತವನ್ನು ತೆಗೆದುಕೊಂಡು ಓಡುವಂತೆ, ಇಂದ್ರನು ಅಪಹರಿಸಿ ಕಣ್ಮರೆಯಾಗುವನು. ಆದುದರಿಂದ ಎಲೈ ಮಾನವರೇ, ಇಂದ್ರನಲ್ಲಿ ಶ್ರದ್ಧೆಯಿಡಿರಿ. ಅಶ್ರದ್ಧೆಯನ್ನು ತೋರಿಸಿ ತೊಂದರೆಗೀಡಾಗಬೇಡಿರಿ.

(೨-೧೨-೫)

ಎಲೈ ಇಂದ್ರನೇ, ಆ ಪರಾಕ್ರಮವು ನಿನಗೆ ಸೇರಿದ್ದೇ, ಅಲ್ಲವೇ ? ನಮಗೆ ಆ ವಿಷಯದಲ್ಲಿ ಸರಿಯಾದ ತಿಳಿವಳಿಕೆಯನ್ನು ಕೊಡು.

(೬-೧೮-೩)

ಸಹಜವಾಗಿಯೇ ಮಹತ್ತ್ವವನ್ನು ಹೊಂದಿದವನೂ, ಸಕಲಭೂತಗಳಲ್ಲಿಯೂ ಅತ್ಯಧಿಕವಾದ ಶಕ್ತಿಯನ್ನು ಪಡೆದವನೂ ಆದ ಎಲೈ ಇಂದ್ರನೇ, ನಿನ್ನ ಶಕ್ತಿಯು ನಿಜವಾಗಿಯೂ ಪ್ರಕಟವಾಗುತ್ತಿದೆ ಅದು ಅಸತ್ಯವಾಗಲಾರದು.

(೬-೧೮-೪)

ಇಂದ್ರನ ಅಸ್ತಿತ್ವವು ಸತ್ಯವಾಗಿದ್ದರೆ, ಅವನನ್ನುದ್ದೇಶಿಸಿ ಸತ್ಯರೂಪವಾದ ಸ್ತುತಿಯನ್ನರ್ಪಿಸಿರಿ ಮತ್ತು ಅವನಲ್ಲಿ ಅನ್ನವನ್ನು ಪ್ರಾರ್ಥಿಸಿರಿ. " ಇಂದ್ರನು ಎಂಬ ದೇವತೆಯೇ ಇಲ್ಲ " ಎಂದು ಕೆಲವರ ಮತ. "ಅವನನ್ನು ನೋಡಿದವರು ಯಾರು ? ನಾವು ಯಾರನ್ನು ಪ್ರಾರ್ಥಿಸೋಣ'' ಇತ್ಯಾದಿಯಾದ ಪ್ರಶ್ನೆಗಳೂ ಇವೆ.

(೮-೧೦೦-೩)

"ಎಲೈ ಯಜಮಾನರೇ, ನಾನಿಲ್ಲಿದ್ದೇನೆ ನನ್ನ ಮಹತ್ತ್ವವು ಉಳಿದೆಲ್ಲಾ ಭೂತಗಳ ಮಹತ್ತ್ವಕ್ಕಿಂತಲೂ ಅಧಿಕವಾದುದು. ಅದನ್ನು ಗಮನಿಸಿ" ಎಂದು ಇಂದ್ರನು ಹೇಳುತ್ತಾನೆ.

(೮-೧೦೦-೪)

ಪ್ರಕೃತದಲ್ಲಿ ಯಜ್ಞಕರ್ತನಾದ ಯಜಮಾನನಿಗೆ ಇಂದ್ರನು ಸಖನೂ ಭ್ರಾತೃರೂಪನೂ ಆಗಿರುವನು ಮತ್ತು ಅವನ ಪೂರ್ವಜರಿಗೆ ಸುಹೃತ್ತಾಗಿದ್ದನು. (**ಆ ಚ ಯಾಹಿ ಇಂದ್ರ ಭ್ರಾತಃ**)

(೩-೫೩-೫; ೨-೧೮-೩, ೨-೨೦-೩)

ಎಲೈ ಇಂದ್ರನೇ, ಮಾನವರೆಲ್ಲರೂ ಅನುಸೂತ್ಯವಾಗಿ ನಿನ್ನ ರಕ್ಷಣೆಯನ್ನೇ ಕೋರುತ್ತಾರೆ. ಅಲ್ಲದೇ, ಎಲೈ ಇಂದ್ರನೇ, ನೀನು ನಮ್ಮ ಪೂರ್ವಜರಾದ ಪಿತೃಗಳಿಗೆ ಯಾವಾಗಲೂ ಸುಹೃತ್ತಾಗಿದ್ದೆ

(೬-೨೧-೫, ೮)

ಎಲೈ ಇಂದ್ರನೇ, ನಿನ್ನೊಡನಿರುವ ಸಖ್ಯವು ಹಿತಕರವಾದುದು. ಮತ್ತು ನೀನು ನಮಗೆ ಮಾರ್ಗದರ್ಶಕನಾಗಿರುವುದು ನಮಗೆಲ್ಲಾ ಶ್ರೇಯಸ್ಸನುಂಟುಮಾಡತಕ್ಕದ್ದಾಗಿದೆ. (**ಯಸ್ಯ ತೇ ಸ್ವಾದು ಸಖ್ಯಂ ಸ್ವಾದ್ವೀ ಪ್ರಣೀತಿಃ**).

(೮-೬೮-೧೧; ೫-೪೫-೧, ೭ , ೭-೨೧-೯ ; ೮-೪-೭ , ೮-೪೫-೧, ೧೬, ೧೮ ; ೮-೫೦-೧೧,).

ಎಲೈ ಇಂದ್ರನೇ, ನಿನ್ನ ಮತ್ತು ವಿಮದನಾಮಕನಾದ ಋಷಿಯ ಸಖ್ಯವು ಎಂದಿಗೂ ಕುಂದದಿರಲಿ. ನಿನ್ನನ್ನು ಪೂಜಿಸುವ ಋಷಿಗಳೊಂದಿಗೆ ನೀನು ಸಖ್ಯವನ್ನು ತ್ಯಾಗಮಾಡಬೇಡ

(೮-೯೨-೩೩ ; ೮-೯೩-೭ ; ೮-೯೭-೭, ೮-೧೦೦-೨ ; ೧೦-೨೨-೧ , ೧೦.೨೩-೭).

ಇಂದ್ರನು ತನ್ನ ಸಖರಾದ ನಮಗೆಲ್ಲಾ ನಮ್ಮ ಜೀವನದ ಆದಿಯಿಂದ ಅಂತ್ಯದವರೆಗೂ ಸಂಪತ್ತನ್ನು ಒದಗಿಸಿ ಕೊಡಲಿ.

(೧೦-೪೩-೧೧)

ಹವಿಸ್ಸನ್ನು ಅರ್ಪಿಸುವ ಯಜಮಾನನೊಂದಿಗೆ ಮಾತ್ರ ಇಂದ್ರನು ಸಖ್ಯವನ್ನು ಬೆಳಸುತ್ತಾನೆ. ಅದಾತೃಗಳೊಂದಿಗೆ ಅವನೆಂದಿಗೂ ಸಖ್ಯವನ್ನು ಬೆಳೆಸುವುದಿಲ್ಲ.

(೧೦-೪೨-೪)

ಎಲೈ ಇಂದ್ರನೇ, ನಿನಗೆ ಅಸಂಖ್ಯಾತರಾದ ಸುಹೃತ್ತುಗಳಿದ್ದಾರೆ. ನಮಗೆ ನಿನ್ನನ್ನು ಬಿಟ್ಟರೆ ಬೇರೆ ಯಾರೂ ಸುಹೃತ್ತುಗಳೇ ಇಲ್ಲ.

(೮-೨೧-೯)

ಇಂದ್ರನು ಕೇವಲ ಸುಹೃತ್ತೇ ಅಲ್ಲ. ಅತ್ಯಂತ ಅಭಿಮಾನವುಳ್ಳ ಪಿತೃವಿಗಿಂತಲೂ ಅಧಿಕವಾದ ಅಭಿಮಾನವನ್ನೂ ಪುತ್ರವಾತ್ಸಲ್ಯವನ್ನೂ ಭಕ್ತರಲ್ಲಿ ತೋರಿಸುತ್ತಾನೆ.

(೪-೧೭.೧೭)

ಇಂತಹ ವಾತ್ಸಲ್ಯಾತಿಶಯವಿರುವುದರಿಂದಲೇ ಯಜಮಾನರು ಅವನನ್ನು ಸ್ತುತಿಸಿ ಕರೆಯುತ್ತಾರೆ.

(೧೦-೪೮-೧ ; ೧-೧೦೪-೯ ; ೭-೩೨-೩, ೨೬)

ಕೇವಲ ಪಿತೃವಿನ ಅಭಿಮಾನಮಾತ್ರವಲ್ಲದೇ, ಇಂದ್ರನು ಮಾತೃವಾತ್ಸಲ್ಯವನ್ನೂ ತೋರಿಸುತ್ತಾನೆ,

(೮-೯೮.೧೧ , ೮.೧-೬)

ಎಲೈ ಇಂದ್ರನೇ, ನೀನು ನಮ್ಮವನು ; ನಾವೆಲ್ಲಾ ನಿನ್ನವರು" ಎಂದು ಅತ್ಯಂತ ನಿಕಟವಾದ ಸಂಬಂಧವನ್ನು ಪ್ರಕಟಿಸುತ್ತಾ ಋಷಿಯು ಸ್ತುತಿಸುತ್ತಾನೆ.

(೮-೯೨ ೩೨)

ದರಿದ್ರರಿಗೆ ಉಪಕಾರಕನಾಗಿ ಇಂದ್ರನು ಅವರ ದಾರಿದ್ರ್ಯವನ್ನು ನೀಗಿಸುತ್ತಾನೆ. (**ರಧ್ರಚೋದನಃ**).

(೮-೮೦-೩)

ಮಾನವರನ್ನು ಪ್ರೀತಿಸತಕ್ಕ ದೇವತೆಯಾರೆಂದರೆ ಅವನು ಇಂದ್ರನೊಬ್ಬನೇ ಎಂದು ಹೇಳಬಹುದು. ಮತ್ತು ಆಪತ್ಕಾಲದಲ್ಲಿ ಅವರಿಗೆಲ್ಲಾ ವಿಧವಾದ ಸಹಾಯವನ್ನೂ ಮಾಡತಕ್ಕವನು.

(೭-೨೩-೫ ; ೧.೮೪-೧೯ ; ೮-೬೬-೧೩)

ಇಂದ್ರನಿಗೆ ಪಕ್ಷಪಾತವಿಲ್ಲ. ಸಕಲ ಮಾನವರೂ ಒಂದೇ ಸಮನಾಗಿ ಅವನ ಸಹಾಯವನ್ನು ಪಡೆಯುತ್ತಾರೆ.

(೮-೬೫-೭)

ಇಂದ್ರನು ತನ್ನ ಭಕ್ತರಿಗೆ ಆಪತ್ತೊದಗಿದಾಗ ಅದನ್ನು ಬಿಡಿಸಿ ಕಷ್ಟವಿಮೋಚನೆಯನ್ನು ಮಾಡತಕ್ಕವನು ಮತ್ತು ಅವರನ್ನು ಸುಖಪಡಿಸುವವನು.

(೮-೯೬-೨೦)

ಅಶಕ್ತರಾದ ಮನುಷ್ಯರಿಗೆಲ್ಲಾ ಇಂದ್ರನೇ ಶಕ್ತಿದಾತನಾದ ಸಹಾಯಕನು.

(೭-೩೧-೫)

ಮತ್ತು ಕಷ್ಟದಲ್ಲಿ ಸಿಕ್ಕಿರುವ ಮಾನವರಿಗೆ ರಕ್ಷಣಾದುರ್ಗದಂತಿರುತ್ತಾನೆ.

(೮-೮೦.೭)

ಯಾವ ಪುರುಷನಿಗೆ ಇಂದ್ರನು ಸಖನಾಗಿರುವನೋ ಅವನಿಗೆ ಶತ್ರುವಿನಿಂದ ಮರಣವೆಂಬುದೇ ಇಲ್ಲ. ಅಲ್ಲದೇ ಅವನ ಶತ್ರುವು ಖಂಡಿತ ಅವನನ್ನು ಜಯಿಸಲಾರನು.

(೧೦-೧೫೨-೧)

ಅಂತಹ ಮಾನವನು ತನ್ನ ಜಯಲಾಭಕ್ಕೆ ಇಂದ್ರನ ಬಾಹುಗಳನ್ನೇ ಪೂರ್ಣವಾಗಿ ನಂಬಿರುತ್ತಾನೆ.

(೬-೪೭-೮)

ಅತ್ಯದ್ಭುತವಾದ ಪರಾಕ್ರಮವುಳ್ಳ ರಕ್ಷಕನೆಂದೂ ಬಂಧವಿಮೋಚಕನೆಂದೂ ಇಂದ್ರನು ಪ್ರಶಂಸಿತನೂ ಸಹಾಯಕ್ಕಾಗಿ ಪ್ರಾರ್ಥಿತನೂ ಆಗಿದ್ದಾನೆ. (**ತ್ರಾತಾರಮಿಂದ್ರಮವಿತಾರಮಿಂದ್ರಂ**).

(೬-೪೭-೧೧)

ಭಕ್ತಪ್ರಿಯನಾಗಿ ಇಂದ್ರನು ಅತಿದೂರಪ್ರದೇಶದಲ್ಲಿದ್ದರೂ ಸಹ ಅವನಿಗೆ ಬಧಿರತ್ವವಿಲ್ಲ. ಯಜಮಾನರ ಪ್ರಾರ್ಥನೆಯನ್ನು ಕೇಳಿ ಒಡನೆಯೇ ರಕ್ಷಣೆಗಾಗಿ ಬರುತ್ತಾನೆ.

(೮-೪೫.೧೭)

ಯಜಮಾನರು ತಮಗೆ ಸಂಪತ್ಪ್ರಾಪ್ತಿಗಾಗಿ ಇಂದ್ರನ ದಕ್ಷಿಣಹಸ್ತವನ್ನು ಭದ್ರವಾಗಿ ಹಿಡಿಯುತ್ತಾರೆ.

(೧೦-೪೭-೧)

ಯಜಮಾನನ ಶ್ರದ್ಧಾಭಕ್ತಿಯುತವಾದ ಸ್ತುತಿಗಳು, ಹೃತ್ಪೂರ್ವಕವಾಗಿ ಪ್ರೇರಿತವಾಗಿ ದೂತನ ರೂಪದಲ್ಲಿ ಹೊರಟು ಇಂದ್ರನನ್ನು ಸಮೀಪಿಸಿ, ಅವನ ಹೃದಯದಲ್ಲಿ ಪ್ರವೇಶಿಸಿ, ಅವನಿಗೆ ಹರ್ಷವನ್ನುಂಟುಮಾಡುತ್ತವೆ.

(೧೦-೪೭-೭)

ಪುತ್ರನು ಪಿತೃವಿನ ಬಟ್ಟೆಯನ್ನು ಆದರದಿಂದಲೂ, ಸ್ವಾತಂತ್ರ್ಯದಿಂದಲೂ ಹಿಡಿದೆಳೆಯುವಂತೆ ಇಂದ್ರನನ್ನು ಬೇಡುವ ಋಷಿಯು ತನ್ನ ಸ್ತುತಿಯ ಮೂಲಕ ಇಂದ್ರನ ವಸ್ತ್ರವನ್ನು ಭದ್ರವಾಗಿ ಹಿಡಿದು ಸಹಾಯಕ್ಕಾಗಿ ನಿರ್ಬಂಧಿಸುತ್ತಾನೆ.

(೩-೫೩-೨)

ಪ್ರೇಮಪೂರಿತಳಾದ ಪತ್ನಿಯಿಂದ ಪತಿಯು ಆಲಿಂಗಿತನಾಗುವಂತೆ ಹೃತ್ಪೂರ್ವಕವಾದ ಸ್ತುತಿಗಳಿಂದ ದೇವತಾತ್ಮನಾದ ಇಂದ್ರನು ಆಲಿಂಗಿತನಾಗುತ್ತಾನೆ.

(೧-೬೨-೧೧ ; ೧೦-೧೮೬.೭ , ೧೦-೪೩.೧ ; ೨-೧೬-೯)

ಪಶುಗಳು ವಾತ್ಸಲ್ಯದಿಂದ ಓಡಿ ಬಂದು ಕರುವನ್ನು ನೆಕ್ಕುವಂತೆ ಸ್ತುತಿಗಳು ಇಂದ್ರನನ್ನು ಸಮೀಪಿಸಿ ಆಘ್ರಾಣಿಸುತ್ತವೆ. (೧೦.೧೪೯-೪ ; ೧೦-೧೮೬.೭)

ಬ್ರಹ್ಮರೂಪಿಯಾದ ಋತ್ವಿಕ್ಕಿನಂತೆ ಅಲಸನಾಗಿರಬಾರದೆಂದೂ ಸಹ ಇಂದ್ರನು ಪ್ರಾರ್ಥಿತನಾಗಿದ್ದಾನೆ.

(೮-೯೨-೩೦)

ಅನೇಕ ಸಂದರ್ಭಗಳಲ್ಲಿ ಯಜಮಾನರು ಇಂದ್ರನನ್ನು ತಮ್ಮ ಕಾರ್ಯಕ್ಕೆ ಬರಮಾಡಿಕೊಳ್ಳಲು ಮಾಡತಕ್ಕ ಪ್ರಯತ್ನಗಳನ್ನು ಬೇಡರು ಪಕ್ಷಿಗಳನ್ನು ಹಿಡಿಯುವ ಪ್ರಯತ್ನಕ್ಕೆ ಹೋಲಿಸಿದೆ. ಅಲ್ಲದೇ, ಯಜ್ಞಕರ್ತರಲ್ಲಿಯೇ ಈ

ವಿಷಯದಲ್ಲಿ ಪರಸ್ಪರ ಸ್ಪರ್ಧೆಯಿರುತ್ತದೆ ಇತರರು ಇಂದ್ರನ ಅಶ್ವಗಳನ್ನು ತಡೆದು ಇಂದ್ರನನ್ನು ಎಲ್ಲಿ ನಿಲ್ಲಿಸಿಬಿಟ್ಟು ತಮ್ಮಲ್ಲಿಗೆ ಬರಲು ಅವಕಾಶವನ್ನು ತಪ್ಪಿಸುವರೋ ಎಂಬ ಆತುರದಿಂದ ಸೋಮಾರ್ಪಣೆಗಾಗಿ ಸಿದ್ಧವಾಗಿರುವ ಯಜಮಾನರು ಉಳಿದೆಲ್ಲರಿಗಿಂತಲೂ ತಾವೇ ಮುಂದಾಗಿ ಹೋಗಿ ಬಲೆಯಿಂದ ಪಕ್ಷಿಯನ್ನು ತಡೆಯುವಂತೆ ಇಂದ್ರನನ್ನು ತಡೆದು ನಿಲ್ಲಿಸಿ ತಮ್ಮ ಯಜ್ಞಕ್ಕೆ ಬರಬೇಕೆಂದು ಪ್ರಾರ್ಥಿಸುತ್ತಾರೆ. ಈ ಭಾವವಿರುವ ಕೆಲವು ವಾಕ್ಯಗಳ ತಾತ್ಪರ್ಯವನ್ನು ಇಲ್ಲಿ ಉದಾಹರಣೆಗಾಗಿ ಪರಿಶೀಲಿಸಬಹುದು

ಇಂದ್ರನ ಅಶ್ವಗಳನ್ನು ಇತರರು ತಡೆಯುವುದಕ್ಕಿಂತಲೂ ಪೂರ್ವಭಾವಿಯಾಗಿಯೇ ನಾನು ತಡೆದು ನಿಲ್ಲಿಸುತ್ತೇನೆ. ಎಲೈ ಇಂದ್ರನೇ, ನನ್ನ ಸ್ತುತಿವಾಕ್ಯಕ್ಕೆ ಪ್ರೀತನಾಗಿ ನನ್ನಲ್ಲಿಗೆ ದಯಮಾಡು. ನನ್ನಂತೆಯೇ ಇತರ ಯಜಮಾನರೂ ನಿನ್ನನ್ನು ಕರೆಯುವುದರಿಂದ ಅವರ ಸ್ತುತಿಯಿಂದ ಆಕೃಷ್ಟನಾಗಿ ಅಲ್ಲಿ ನಿಲ್ಲಬೇಡ

(೨.೧೮.೩)

ಎಲೈ ಇಂದ್ರನೇ, ಮಯೂರಗಳಂತೆ ರೋಮಗಳುಳ್ಳ ನಿನ್ನ ಅಶ್ವಗಳೊಡನೆ ಶೀಘ್ರವಾಗಿ ದಯಮಾಡು. ವ್ಯಾಧರು ಮೃಗಾದಿಗಳನ್ನು ತಡೆದು ನಿಲ್ಲಿಸುವಂತೆ ಇತರ ಯಾವ ಯಜಮಾನರೂ ನಿನ್ನನ್ನು ತಡೆದು ನಿಲ್ಲಿಸದಿರಲಿ. ಮರಳುಗಾಡಿನಲ್ಲಿ ಪ್ರಯಾಣಮಾಡುವವರು ಬಿಸಲಿನ ಹಿಂಸೆಯನ್ನು ತಪ್ಪಿಸಿಕೊಳ್ಳಲು ವೇಗವಾಗಿ ಬರುವಂತೆ ನೀನೂ ಸಹ ಯಜ್ಞಕ್ಕೆ ಅತ್ಯಾತುರದಿಂದ ಬಂದು ನಮ್ಮ ಯಜ್ಞದಲ್ಲಿ ಭಾಗವನ್ನು ವಹಿಸು.

(೩–೪೫–೧)

ಎಲೈ ಇಂದ್ರನೇ, ಮದಕಾರಕವಾದ ಈ ಸೋಮರಸವನ್ನು ಪಾನಮಾಡು. ಈ ಸೋಮರಸಗಳು ನಿನ್ನನ್ನು ಉದ್ದೇಶಿಸಿಯೇ ಅರ್ಪಿತವಾಗಿವೆ. ಇತರ ಯಾವ ಯಜಮಾನರೂ ನಿನ್ನನ್ನು ತಡೆದು ನಿಲ್ಲಿಸದಿರಲಿ.

(೧೦.೧೬೦.೧)

ಇದೇ ಇಂದ್ರನು ಜಂಗಮಾತ್ಮಕವಾದ ಸಕಲ ಭೂತಗಳಿಗೂ ಪ್ರಭುವು. ಮಾನವರಿಗೆಲ್ಲಾ ಒಡೆಯನು. ಪಾರ್ಥಿವವಾದ ಸಕಲ ವಸ್ತುಗಳಿಗೂ ನಿಯಾಮಕನು. ತನ್ನ ಪ್ರಭೂತವಾದ ಸಂಪತ್ತಿನಲ್ಲಿ ಹವಿಸ್ಸನ್ನರ್ಪಿಸತಕ್ಕ ಯಜಮಾನನಿಗೂ ಸಹ ಹೇರಳವಾದ ಧನವನ್ನು ಹಂಚುತ್ತಾನೆ.

(೭-೨೭.೩)

ಇಂದ್ರನ ಎಡ ಮತ್ತು ಬಲಭಾಗಗಳಲ್ಲಿರುವ ಎರಡು ಕೈಗಳಲ್ಲೂ ಸಂಪತ್ತು ತುಂಬಿದೆ.

(೭-೩೭.೩)

ಸಂಪತ್ತಿಗೆಲ್ಲಾ ನಿಧಿಯಾದುದರಿಂದ ಅತ್ಯುದಾರವಾಗಿ ದಾನಮಾಡಬೇಕೆಂದು ಪ್ರಾರ್ಥಿತನಾಗಿದ್ದಾನೆ.

(೧೦–೪೨–೨)

ವೃಕ್ಷದಿಂದ ಶಾಖೆಗಳು ನಾನಾ ಭಾಗಗಳಾಗಿ ಒಡೆದು ಎಲ್ಲಾ ದಿಕ್ಕುಗಳಿಗೂ ಪ್ರಸರಿಸುವಂತೆ ಇಂದ್ರನ ಶಕ್ತಿಯ ಫಲವಾಗಿ ನಾನಾ ವಿಧವಾದ ರಕ್ಷಣೆಗಳು ಎಲ್ಲಾ ದಿಕ್ಕಿನಲ್ಲಿಯೂ ಇರುವ ಯಜಮಾನರನ್ನು ಎಲ್ಲಾ ವಿಧವಾದ ಆಪತ್ತುಗಳಿಂದಲೂ ಸಹ ಪೂರ್ಣವಾಗಿ ರಕ್ಷಿಸುತ್ತವೆ.

(೬-೨೪-೪)

ಮೂತಿಕೋಲಿನಿಂದ ಪುರುಷನು ಎತ್ತರದಲ್ಲಿರುವ ವೃಕ್ಷದ ಫಲಗಳನ್ನು ಕೆಳಕ್ಕುದುರಿಸುವಂತೆ ತನ್ನ ಅಂತರಿಕ್ಷಸ್ಥವಾದ ಸಂಪತ್ತನ್ನು ಪೃಥ್ವಿಯಲ್ಲಿರುವ ಯಜಮಾನರಿಗೆ ಸುರಿಸುವಂತೆ ಪ್ರಾರ್ಥಿತನಾಗಿದ್ದಾನೆ. (೩.೪೫.೪)

ವೃಷಭದ ವೇಗವನ್ನು ತಡೆಯಲು ಹೇಗೆ ಸಾಧ್ಯವಿಲ್ಲವೋ ಹಾಗೆ ಇಂದ್ರನು ತನ್ನ ಔದಾರ್ಯವನ್ನು ಪ್ರಕಾಶ ಪಡಿಸುತ್ತಾ ಯಜಮಾನರಿಗೆ ಸಂಪತ್ತನ್ನು ಹಂಚಲು ಇಷ್ಟಪಟ್ಟಿದ್ದೇ ಆದರೆ ಅದನ್ನು ನಿರೋಧಿಸಲು ದೇವತೆಗಳಿಗಾಗಲಿ ಅಥವಾ ಮಾನವರಿಗಾಗಲಿ ಸಾಧ್ಯವಾಗಲಾರದು.

(೮-೮೧-೩ ; ೮-೩೩-೮ ; ೪-೧೬-೧೪)

ಇಂದ್ರನ ಸ್ನೇಹವು ನಾಶರಹಿತವಾದುದು, ಪಶುವನ್ನು ಅಪೇಕ್ಷಿಸುವ ಪುರುಷನಿಗೆ ಪಶುರೂಪದಲ್ಲಿಯೂ, ಅಶ್ವಾಪೇಕ್ಷಿಯಾದ ಪುರುಷನಿಗೆ ಅಶ್ವರೂಪದಲ್ಲಿಯೂ ಇರುತ್ತಾನೆ.

(೬-೪೫-೨೬)

ಪತ್ನೀರಹಿತರಾದ ಪುರುಷರಿಗೆ ಪತ್ನಿಯರು ಲಭಿಸುವಂತೆ ಮಾಡುತ್ತಾನೆ.

(೫-೩೧-೨ ; ೪-೧೭-೧೬)

ಇಂದ್ರನು ತನ್ನ ವಿಶ್ವಾಸಪಾತ್ರರಾದ ಪೂಜಕರಿಗೂ ಸೇವಕರಿಗೂ ಪ್ರಭೂತವಾದ ಸಂಪತ್ತನ್ನೊದಗಿಸುತ್ತಾನೆ.

(೨-೧೨-೬ ; ೨-೧೯-೪ ; ೨-೨೨-೩)

ಯಾವ ಯಜಮಾನನು ಇಂದ್ರನನ್ನುದ್ದೇಶಿಸಿ ಸೋಮರೂಪವಾದ ಆಹುತಿಯನ್ನರ್ಪಿಸಬೇಕೆಂದು ಸಂಕಲ್ಪಿಸುವನೋ ಅವನ ಭಾಗಕ್ಕೆ ದಿನದ ಉದಯವು ಅತ್ಯಂತ ಸಂಪತ್ಪ್ರದವಾದ ಸೂಚನೆಯಿಂದ ಕಾಣಿಸುತ್ತದೆ.

(೫-೩೭-೧)

ಯಾವ ರಾಜನ ಗೃಹದಲ್ಲಿ ಇಂದ್ರನು ಪಯೋಮಿಶ್ರವಾದ ಸೋಮರಸವನ್ನು ಪಾನಮಾಡುತ್ತಾನೆಯೋ ಆ ರಾಜನಿಗೆ ಆಪತ್ತೆಂಬುದೇ ಇಲ್ಲ. ತನ್ನ ಪರಿವಾರಗಳಿಗೆಲ್ಲಾ ಪ್ರಭುವಾಗಿರುತ್ತಾನೆ. ಶತ್ರುಗಳನ್ನೆಲ್ಲಾ ನಾಶಪಡಿಸುತ್ತಾನೆ. ತನ್ನ ಗೃಹದಲ್ಲಿ ಶಾಂತಿಯನ್ನನುಭವಿಸುತ್ತಾನೆ, ಮತ್ತು ಸಕಲವಿಧವಾದ ಸೌಖ್ಯಗಳೂ ಅವನ ಭಾಗಕ್ಕೆ ಸಿಕ್ಕುತ್ತವೆ.

(೫-೩೭-೪)

ಇಂದ್ರನಿಗೆ ಮಿತ್ರನಾಗಿರತಕ್ಕ ರಾಜನು ಅಶ್ವಗಳನ್ನೂ ಪಶುಗಳನ್ನೂ ಪಡೆಯುತ್ತಾನೆ. ಯಾವಾಗಲೂ ರಥವಲ್ಲೇ ಸಂಚರಿಸುತ್ತಾನೆ. ಸರ್ವದಾ ಪ್ರಭೂತವಾಗಿರುವ ಸಂಪದ್ಯುಕ್ತವಾದ ಜೀವನವನ್ನೇ ಅನುಭವಿಸುತ್ತಾನೆ- ಮತ್ತು ತನ್ನ ರಾಜಸಭೆಗೆ ಹೋಗುವಕಾಲದಲ್ಲಿ ಅತ್ಯಂತ ಪ್ರಭಾವಯುತವಾದ ಸ್ವರೂಪವನ್ನು ಹೊಂದುತ್ತಾನೆ.

(೮-೪-೯)

ಸ್ತುತಿಕರ್ತನು ಜ್ಞಾನಿಯಾಗಿರಲಿ ಅಥವಾ ಅನಕ್ಷರಸ್ಥನಾಗಿರಲಿ, ಅವನು ಶುದ್ಧಮನಸ್ಕನಾಗಿದ್ದರೆ ಸಾಕು, ಇಂದ್ರನು ಅವನ ಸ್ತುತಿಯಿಂದ ತೃಪ್ತನಾಗುತ್ತಾನೆ.

(೮-೬೧-೯ ; ೮-೯೨-೧೨)

ಪ್ರಾರ್ಥನೆಯನ್ನುಮಾಡುವ ಕಾಲದಲ್ಲೂ, ಅದರಂತೆಯೇ ಪ್ರತಿದಿನವೂ ಮತ್ತು ಅಹೋರಾತ್ರವೂ ಯಜಮಾನನನ್ನು ಕ್ಲೇಶರಹಿತನನ್ನಾಗಿ ಮಾಡಬೇಕೆಂದು ಪ್ರಾರ್ಥಿತನಾಗಿದ್ದಾನೆ.

(೮-೬೧-೧೭; ೮-೬೮.೬)

ಇಂದ್ರನ ಅನುಗ್ರಹವು ಕೊಂಚ ಆಲಸ್ಯವಾದರೆ, ಆಗ ಯಜಮಾನನು ಬಹಳ ದೈನ್ಯದಿಂದ ಈರೀತಿ ಪ್ರಾರ್ಥಿಸುತ್ತಾನೆ. "ಎಲೈ ಇಂದ್ರನೇ, ನಿನ್ನ ಹಸ್ತಗಳು ಅನುಗ್ರಹಾತ್ಮಕವಾಗಿವೆ. ನಿನ್ನ ಕೈಬೆರಳುಗಳು ಉಪಕಾರಕವಾಗಿವೆ.

ಅವು ನಿನ್ನನ್ನು ಪೂಜಿಸುವವರಿಗೆ ಅತ್ಯಧಿಕವಾದ ಸಂಪತ್ತನ್ನೊದಗಿಸುತ್ತವೆ. ಆದರೂ ಸಹ ನೀನೇಕೆ ಕೊಂಚವೂ ಅಲುಗಾಡದೇ ಕುಳಿತಿದ್ದೀಯೆ ? ನೀನೇಕೆ ಉದಾರವಾಗಿ ಕೊಡಬಾರದು ? ಮತ್ತು ಕೊಡುವ ಕೈಯಿನಲ್ಲಿ ಉದಾರವಾಗಿ ಕೊಟ್ಟು ನೀನೇಕೆ ನಮ್ಮನ್ನು ಸಂತೋಷಗೊಳಿಸುವುದಿಲ್ಲ ? ಅಥವಾ ನಮಗೆ ಉದಾರವಾಗಿ ಕೊಡುವುದರಿಂದ ಲಭಿಸುವ ಸಂತೋಷವನ್ನು ನೀನೇಕೆ ಹೊಂದಬಾರದು ?

(೧೦-೪೨-೩)

"ಇಂದ್ರನೊಬ್ಬನಿಂದ ಮಾತ್ರ ಪಡೆಯಲ್ಪಟ್ಟಿರುವ ಐಶ್ವರ್ಯವನ್ನು ನಾನು ಪಡೆದಿದ್ದೇ ಆದರೆ ಇಂದ್ರನಿಗಿಂತಲೂ ನಾನೇ ಅಧಿಕವಾದ ಔದಾರ್ಯವನ್ನು ತೋರಿಸುತ್ತಾ, ನನ್ನ ಭಕ್ತರಿಗೆಲ್ಲಾ ಅತಿಶಯವಾಗಿ ದಾನಮಾಡಿ, ಅವರ ದಾರಿದ್ರ್ಯವನ್ನು ನಿರ್ಮೂಲಮಾಡಿ, ಪ್ರತಿದಿನವೂ ಅವರಿಗೆ ಧನಕನಕಾದಿಗಳನ್ನು ತುಂಬಿಕೊಡುತ್ತಿದ್ದೆನು ಮತ್ತು ಅವರಿಗೆ ದಾರಿದ್ರ್ಯದುಃಖವು ಈಷತ್ತೂ ಇಲ್ಲದಂತೆ ಮಾಡುತ್ತಿದ್ದೆನು " ಎಂದು ಋಷಿಯು ಇಂದ್ರನನ್ನುದ್ದೇಶಿಸಿ ಪರಿತಾಪವನ್ನು ಪ್ರಕಟಿಸುತ್ತಾನೆ. ೮.೧೯-೨೫ ರಲ್ಲು ಇದೇ ವಿಧವಾಗಿ ಅಗ್ನಿಯಲ್ಲಿಯೂ ಸಹ ನೊರೆಯಿಟ್ಟಿರುವ ವರ್ಣನೆಯಿದೆ).

(೧-೩೩.೧೮ , ೧೯)

ಇಂದ್ರನು ಯುದ್ಧಕವಚವನ್ನೊದಗಿಸಿ ರಥದಲ್ಲಿ ಕುಳಿತು ಯುದ್ಧಮಾಡುತ್ತಾನೆ.

(೭.೩೧-೬)

ಪಾರ್ಥಿವವಾದ ಯಾವ ಯಾವ ಸೌಕರ್ಯಗಳೂ, ಸೌಕರ್ಯಗಳನ್ನೊದಗಿಸುವ ಸಾಧನಗಳೂ ಇವೆಯೋ ಅವೆಲ್ಲವನ್ನೂ ಒದಗಿಸಬೇಕೆಂದು ಇಂದ್ರನು ಪ್ರಾರ್ಥಿತನಾಗಿದ್ದಾನೆ. ಉದಾಹರಣೆಗೆ, ಪಶುಸಂಪತ್ತು, ಅಶ್ವಗಳು, ರಥಗಳು, ಆರೋಗ್ಯ. ಜ್ಞಾನ, ಶಾರೀರಸೌಖ್ಯ (ಸ್ವಾತ್ಮಾನಂ ವಾಚಃ), ನೂರುವರ್ಷಪರಿಮಿತಿಯುಳ್ಳ ಆಯುಸ್ಸು ಇತ್ಯಾದಿಗಳೆಲ್ಲವೂ ಇಂದ್ರನ ವರದಿಂದಲೇ ಲಭ್ಯವಾಗತಕ್ಕವು ಎಂದು ಶ್ರದ್ಧೆಯನ್ನು ತೋರಿಸಿವೆ

(೨-೨೧-೬ ; ೩-೩೬-೧೦ , ೭.೨೭-೫ , ೧೦-೪೭-೧)

ಇಂದ್ರನಿಂದ ಅನುಗ್ರಹಿಸಲ್ಪಡತಕ್ಕವೂ ಯಜಮಾನನಿಂದ ಪ್ರಾರ್ಥಿತವಾಗತಕ್ಕವೂ ಆದ ಪದಾರ್ಥಗಳ ವೈಶಿಷ್ಟ್ಯವು ಅನೇಕಕಡೆ ವಿವೃತವಾಗಿರುತ್ತದೆ. ಉದಾಹರಣೆಗೆ—

ಎಲೈ ಇಂದ್ರನೇ. ಶೀಘ್ರಗಾಮಿಗಳೂ, ಚೆನ್ನಾಗಿ ಪಳಗಿಸಲ್ಪಟ್ಟವೂ ಆದ ಸಾವಿರ ಅಶ್ವಗಳನ್ನು ಅನುಗ್ರಹಿಸಬೇಕೆಂದು ನಾವು ಪ್ರಾರ್ಥಿಸುತ್ತೇವೆ. ಅಲ್ಲದೇ ನಾವು ಸೋಮರಸದಿಂದ ಪೂರ್ಣವಾದ ನೂರು ಕುಂಭಗಳನ್ನೂ ಹೊಂದಿರಬೇಕೆಂದು ಅಪೇಕ್ಷಿಸುತ್ತೇವೆ.

(೪-೩೨.೧೭)

ಎಲೈ ಇಂದ್ರನೇ, ನಾವು ನಿನ್ನಿಂದ ಸಹಸ್ರಾರು ಗೋವುಗಳನ್ನು ಹೊಂದಬೇಕೆಂದಿಚ್ಛಿಸುತ್ತೇವೆ. ನಿನ್ನಿಂದ ಪಡೆಯಬೇಕಾದ ಸಕಲ ಐಶ್ವರ್ಯಗಳೂ ನಮಗೆ ಲಭ್ಯವಾಗಲಿ.

(೪-೩೨-೧೮)

ಎಲೈ ಇಂದ್ರನೇ, ನಿನ್ನಿಂದ ನಾವು ಹತ್ತು ಸುವರ್ಣದ ದ್ರೋಣಕಲಶವನ್ನು ಹೊಂದುವಂತಾಗಲಿ. ವೃತ್ರಹಂತಕನಾದ ಎಲೈ ಇಂದ್ರನೇ, ನೀನು ಉದಾರಿಯಾದ ದಾನಿಯು.

ಎಲೈ ಇಂದ್ರನೇ, ನೀನು ಉದಾರದಾನಿಯೆಂದು ಪ್ರಸಿದ್ಧನಾಗಿದ್ದೀಯೆ, ನಮಗೆ ಉದಾರವಾಗಿ ದಾನಮಾಡು. ಅಲ್ಪಸ್ವಲ್ಪವಾಗಿ ಯಾವುದನ್ನೂ ಕೊಡಬೇಡ. ನಮಗೆ ಪ್ರಭೂತವಾದ ಸಂಪತ್ತನ್ನು ಕೊಡಬೇಕೆಂಬುದೇ ನಿನ್ನ ಇಷ್ಟವೂ ಆಗಿದೆಯೆಂಬುದು ನಮಗೆ ಗೊತ್ತಿದೆ.

(೪-೩೨ ೨೦)

ಅತ್ಯುದಾರಿಯೆಂದು ಪ್ರಸಿದ್ಧನಾದ ಎಲೈ ಇಂದ್ರನೇ, ನಿನ್ನ ಅಪರಿಮಿತವಾದ ಐಶ್ವರ್ಯಕ್ಕೆ ನಾವೂ ಸಹ ಕೊಂಚ ಮಟ್ಟಿಗೆ ಭಾಗಿಗಳಾಗುವಂತೆ ಮಾಡು

(೪-೩೨-೨೧)

ಇದೇ ವಿಧವಾದ ಅನೇಕ ಇಷ್ಟಾರ್ಥಗಳಲ್ಲಿ ಯುದ್ಧದಲ್ಲಿ ಯಜಮಾನನು ಹೊಂದಬೇಕಾದ ಜಯವು ಮುಖ್ಯ ನಾದುದಾಗಿರುತ್ತದೆ. ಈ ಜಯವು ಇಂದ್ರನ ಸಂಕಲ್ಪವನ್ನೇ ಅನುಸರಿಸುತ್ತದೆ. ಆದರೆ, ಈ ಜಯಲಾಭಕ್ಕೆ ಯುದ್ಧದಲ್ಲಿ ತೊಡಗಿರತಕ್ಕ ಎರಡು ಪಕ್ಷಗಳವರೂ ಇಂದ್ರನ ಸಹಾಯವನ್ನೇ ಅಪೇಕ್ಷಿಸುತ್ತಾರೆ

(೨-೧೨-೮, ೯)

ಯಜಮಾನನಿಗೆ ಕಲ್ಯಾಣವನ್ನಪೇಕ್ಷಿಸತಕ್ಕ ಇತರ ದೇವತೆಗಳೂ ಸಹ ಯುದ್ಧಕಾಲದಲ್ಲಿ ಇಂದ್ರನೊಡನಿದ್ದು ಇಂದ್ರನಿಗೂ ತನ್ಮೂಲಕ ಯಜಮಾನನಿಗೂ ಸಹಾಯಮಾಡುವವರಾಗಿ ಪ್ರಶಂಸಿತರಾಗಿದ್ದಾರೆ. ಉದಾಹರಣೆಗಾಗಿ ಇಂತಹ ಕೆಲವು ಸಂದರ್ಭಗಳನ್ನು ಪರಿಶೀಲಿಸಬಹುದು.

ಇಂದ್ರನು ನಮ್ಮ ಸೈನ್ಯಗಳಿಗೆಲ್ಲಾ ಮುಖ್ಯವಾದ ನೇತೃವಾಗಿರಲಿ. ಬೃಹಸ್ಪತಿ, ದಕ್ಷಿಣಾ, ಯಜ್ಞಾಧಿದೇವತೆ ಮತ್ತು ಸೋಮರಾಜ ಇವರೆಲ್ಲರೂ ಸಹಾಯಕರಾಗಿರಲಿ. ಶತ್ರುಗಳನ್ನು ನಾಶಮಾಡತಕ್ಕದ್ದೂ ಜಯವನ್ನು ಪಡೆಯು ತಕ್ಕದ್ದೂ ಆದ ದೇವತೆಗಳ ಸೈನ್ಯಗಳ ಮುಂಭಾಗದಲ್ಲಿ ಮರುತ್ತುಗಳು ಸ್ಥಾಪಿತವಾಗಿರಲಿ.

(೧೦-೧೦೩-೮)

ಇಷ್ಟಾರ್ಥಪ್ರದನಾದ ಇಂದ್ರನಿಗೂ, ಪ್ರಭುವಾದ ವರುಣನಿಗೂ, ಆದಿತ್ಯರಿಗೂ ಮತ್ತು ಮರುತ್ತುಗಳಿಗೂ, ಸೇರಿದ ಅತ್ಯದ್ಭುತವಾದ ಶಕ್ತಿಯುಳ್ಳ ಸೈನ್ಯಶಕ್ತಿಗಳು ನಮ್ಮ ಕಡೆಗಿರಲಿ. ಮಹಚ್ಛಕ್ತಿಯುಳ್ಳವೂ, ಜಯವನ್ನು ಪಡೆ ಯತಕ್ಕವೂ, ಪ್ರಪಂಚವನ್ನೇ ವ್ಯತ್ಯಸ್ತವನ್ನಾಗಿ ಮಾಡಬಲ್ಲವೂ ಆದ ದೇವತೆಗಳ ಸಿಂಹನಾದವು ಪ್ರಾರಂಭವಾಗಿದೆ.

(೧೦-೧೦೩-೯)

ಎಲೈ ಇಂದ್ರನೇ, ನನ್ನ ಆಯುಧವು ತೀಕ್ಷ್ಣವಾಗಿರುವಂತೆ ಮಾಡು. ನನ್ನ ಸೈನ್ಯದ ನಾಯಕರನ್ನು ಹುರಿ ದುಂಬಿಸಿ ಪ್ರಚೋದಿಸು. ವೃತ್ರಹಂತಕನಾದ ಎಲೈ ಇಂದ್ರನೇ, ನಮ್ಮ ಅಶ್ವಗಳ ಗತಿಯು ಶೀಘ್ರಗಾಮಿಯಾಗಿರಲಿ. ಮತ್ತು ನಮ್ಮ ರಥಗಳ ಜಯಸೂಚಕವಾದ ಧ್ವನಿಯು ವೃದ್ಧಿಯನ್ನು ಹೊಂದಲಿ.

(೧೦-೧೦೩-೧೦)

ಜಯಧ್ವಜಗಳು ಒಂದಕ್ಕೊಂದು ಮಿಳಿತವಾಗಿ ಸೇರಿದಾಗ, ನಮ್ಮ ಆಯುಧಗಳು ಜಯಸಂಪಾದಕವಾಗಿ ನಮ್ಮ ಯೋಧರು ಉತ್ಸಾಹಿಗಳಾಗಿ ಜಯವನ್ನು ಪಡೆಯುವವರಾಗಲಿ. ಎಲೈ ಇಂದ್ರಾದಿದೇವತೆಗಳೇ, ನಾವು ಮ ನೀವು ಒಟ್ಟಿಗೆ ನಿರತರಾಗಿರತಕ್ಕ ಈ ಯುದ್ಧದಲ್ಲಿ ನಮ್ಮನ್ನು ರಕ್ಷಿಸು.

(೧೦-೧೦೩-೧೧)

ಎಲೈ ವ್ಯಾಧಿದೇವತೆಯೇ, ನಮ್ಮ ಶತ್ರುಗಳ ಮನಸ್ಸನ್ನು ಭ್ರಾಂತಿಗೊಳಿಸುತ್ತಾ ಅವರ ಅಂಗಾವಯವಗಳನ್ನು ಬಲವಾಗಿ ಹಿಡಿದು ನಮ್ಮನ್ನು ಹಿಂಸಿಸದಿರುವಂತೆ ಮಾಡು. ಅವರ ಹೃದಯದಲ್ಲಿ ಸರ್ವದಾ ದುಃಖವನ್ನು ತುಂಬಿಡು ಮತ್ತು ನಮ್ಮ ಶತ್ರುಗಳನ್ನು ಯಾವಾಗಲೂ ಕಗ್ಗತ್ತಲೆಯಲ್ಲಿ ಆವೃತರಾಗಿರುವಂತೆ ಮಾಡು.

(೧೦-೧೦೩-೧೨)

ನಮ್ಮ ಭವಿಷ್ಯವನ್ನು ನಿರ್ಧರಿಸುವುದೂ, ತಾನೇ ಸ್ವತಂತ್ರವಾಗಿ ವರ್ತಿಸುವುದೂ ಇಂದ್ರನ ಸ್ವಭಾವವಾಗಿದೆ. ಇಂತಹ ಸ್ವತಂತ್ರವರ್ಣನೆಯಲ್ಲಿ ಮಾನವರ ಸ್ವಾತಂತ್ರ್ಯವನ್ನೂ ಅಪಹರಿಸುವ ಸನ್ನಿವೇಶಗಳಿವೆಯೆಂದೂ ಅನೇಕ ಸಂದರ್ಭಗಳಲ್ಲಿ ಕ್ಲೇಶತಪ್ತರಾದ ಋಷಿಗಳು ತಮ್ಮ ಪರಿತಾಪವನ್ನು ವ್ಯಕ್ತಪಡಿಸಿದ್ದಾರೆ.

ಇಂದ್ರನ ಅದ್ಭುತಶಕ್ತಿಯನ್ನರಿತವನು ಇಂದ್ರನಲ್ಲದೇ ಬೇರೊಬ್ಬರಿಲ್ಲ. ಅವನು ಸ್ವೇಚ್ಛೆಯಿಂದಲೇ ಪ್ರಥಮತಃ ಒಂದು ಕಾರ್ಯವನ್ನು ನಡೆಯುವಂತೆ ಏರ್ಪಡಿಸಿ ಅನಂತರ ಮತ್ತೊಂದು ನಡೆಯುವಂತೆ ಮಾಡುತ್ತಾನೆ. ಮತ್ತು ಈ ರೀತಿ ಪೂರ್ವ ಮತ್ತು ಅಪರ ಎಂಬ ವ್ಯತ್ಯಾಸಗಳನ್ನು ತೋರಿಸುವವನೂ ಅವನೇ ಆಗಿದ್ದಾನೆ. ಮಾನವನು ನಡೆಯುವಾಗ ಒಂದಾದಮೇಲೆ ಇನ್ನೊಂದು ಕಾಲನ್ನು ಇಡುವಂತೆ ಇಂದ್ರನೂ ಸಹ ಈ ಪೌರ್ವಾಪರ್ಯಗಳನ್ನು ಪರ್ಯಾಯರೂಪದಲ್ಲಿ ನಿರ್ಧರಿಸುತ್ತಾನೆ.

(೬ ೪೭-೧೫)

ವೀರ್ಯವಂತನಾದ ಇಂದ್ರನ ಖ್ಯಾತಿಯು ವಿಶ್ವಕ್ಕೆಲ್ಲಾ ಹರಡಿದೆ. ಭಯಂಕರರಾದ ಶತ್ರುಗಳನ್ನು ನಾಶಪಡಿಸುತ್ತಾನೆ. ಒಬ್ಬ ಯಜಮಾನನ ಸ್ಥಾನದಲ್ಲಿ ಇನ್ನೊಬ್ಬನನ್ನು ಸ್ಥಾಪಿಸುವ ಶಕ್ತಿಯು ಈ ಇಂದ್ರನಿಗೆ ಇದೆ. ದುರಭಿಮಾನವುಳ್ಳವನಿಗೆ ಶತ್ರುವೂ ದ್ಯಾವಾಪೃಥಿವಿಗಳ ಸಾರ್ವಭೌಮನೂ ಆದ ಇಂದ್ರನು ತನಗೆ ಹವಿಸ್ಸನ್ನರ್ಪಿಸಿ ತನ್ನನ್ನು ಪೂಜಿಸುವ ಯಜಮಾನರಿಗೆ ಉತ್ತೇಜನವನ್ನು ಕೊಡುವ ಸಲುವಾಗಿ ಪದೇ ಪದೇ ಅವರನ್ನು ನಿರ್ದೇಶಿಸಿ ಕರೆಯುತ್ತಾನೆ,

(೬-೪೭-೧೬)

ಇಂದ್ರನು ತನ್ನಿಷ್ಟಬಂದಂತೆ ವರ್ತಿಸುತ್ತಾನೆ. ಈಗಿದ್ದ ಯಜಮಾನನನ್ನು ತ್ಯಜಿಸಿ ಬೇರೊಬ್ಬ ಯಜಮಾನನಲ್ಲಿಗೆ ಹೋಗಿ ಅಲ್ಲಿ ಸೇರುವುದೂ ಉಂಟು. ಹಿಂದಿನ ಯಜಮಾನನ ಕ್ರಿಯೆಗಳು ಉತ್ಕೃಷ್ಟವಾಗಿದ್ದರೂ ಅದನ್ನು ಬಿಟ್ಟು ನ್ಯೂನತೆಯಿಂದ ಕೂಡಿದ ಇನ್ನೊಬ್ಬ ಯಜಮಾನನ ಕ್ರಿಯೆಗಳನ್ನೂ ಒಂದೊಂದು ಸಲ ಇಚ್ಛಿಸುತ್ತಾನೆ. ಇವನ ಸ್ವಾತಂತ್ರ್ಯಕ್ಕೆ ಅಡ್ಡಿ ಬರುವವರಾರೂ ಇಲ್ಲ. ಆದರೆ ತನ್ನನ್ನು ಪೂಜಿಸುವವರ ಹತ್ತಿರ ಇರುವ ಸಂದರ್ಭವೇ ಅಧಿಕವಾಗಿರುತ್ತದೆ.

(೬ ೪೭ ೧೭)

ಮೇಲೆ ಉದಾಹೃತವಾಗಿರುವ ವಾಕ್ಯದಲ್ಲಿ ಎಂದರೆ, ೬-೪೭-೧೬ ನೇ ಮಂತ್ರದ ತಾತ್ಪರ್ಯವನ್ನು ಹೇಳುವಾಗ ಒಂದು ಸನ್ನಿವೇಶವು ಕೊಂಚ ಚರ್ಚೆಗೆ ಆಸ್ಪದವಾಗಿದೆ. ೧೬ ನೇ ಮಂತ್ರದಲ್ಲಿ **ಏಧಮಾನದ್ವಿಟ್** ಎಂಬುದು ಇಂದ್ರನಿಗೆ ವಿಶೇಷಣವಾಗಿದ್ದು ಅವನ ಸ್ವಭಾವವನ್ನು ತಿಳಿಸುವುದಾಗಿದೆ. **ಏಧಮಾನ** ಶಬ್ದಕ್ಕೆ ಪ್ರವೃದ್ಧಮಾನನು ಎಂದರೆ ಸಂಪದಾದಿಗಳಿಂದಲೂ ಮನಸ್ಸೌಖ್ಯಗಳಿಂದಲೂ ಕೂಡಿದವನು ಎಂದರ್ಥ. ಆದರೆ, ಇಂದ್ರನು ಸಂಪದ್ಯುಕ್ತರಾದವರೊಡನೆ ಶತ್ರುತ್ವವನ್ನು ಬೆಳೆಸತಕ್ಕವನೇ ? ಆದರಲ್ಲಿ ಮಿತ್ರಾಮಿತ್ರಭೇದವಿಲ್ಲವೇ ಎಂಬ ಪ್ರಶ್ನೆಯೂ ಸಹಜವಾಗಿದೆ. ಆದುದರಿಂದ ಸಾಯಣರು ಈ ಸಂದರ್ಭದಲ್ಲಿ **ಅಸುನ್ವತಾಂ ಏಧಮಾನಾನಾಂ** 'ಸಂಪದ್ವೃದ್ಧಿಯನ್ನು ಹೊಂದಿ ಯಾಗಾದಿ ಕರ್ಮ

ಗಳಲ್ಲಿ ಹವಿಸ್ಸನ್ನು ಅರ್ಪಿಸದೆಯೂ ಇರುವ ಸ್ವಾರ್ಥಿಗಳಿಗೆ ದ್ವೇಷಿಯೆಂದು ತಿಳಿಸಿದ್ದಾರೆ. ಹೇಗೆಂದರೆ, **ಏಧಮಾನದ್ವಿಟ್** ಎಂಬುದು ಸಾಮಾನ್ಯವಾಗಿ ದೇವತೆಗಳಿಗೆಲ್ಲಾ ಅನ್ವಯಿಸತಕ್ಕದ್ದಾಗಿದೆ. ಮಾನವರ ಅಭಿವೃದ್ಧಿಯನ್ನು ದೇವತೆಗಳು ಸಹಿಸಲಾರರು ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಇದೇ ಅಭಿಪ್ರಾಯವನ್ನು ಮುಂದಿನ ಮಂತ್ರದ ಅರ್ಥವು ಸಮರ್ಥಿಸುತ್ತದೆ. Wilson ಎಂಬ ಪಂಡಿತನು ಈರೀತಿ ತಿಳಿಸುತ್ತಾನೆ—

" He is also represented in the same hymn as of a capricious temperament, neglecting those whe serve him, and favouring those who pay him no adoration , a notion somewhat at variance with a doctiine, previously inculcated that the ceremonial worship of Indra is able to atone for the most atrocious crimes "

(Quoted by Muir. Original Sanskrit Text. Vol. V. p. 111).

ಈ ವಾಕ್ಯಗಳ ತಾತ್ಪರ್ಯವು ಈ ರೀತಿಯಿದೆ. **ಏಧಮಾನದ್ವಿಟ್** ಎಂಬುದಕ್ಕೆ ಆಂಗ್ಲವ್ಯಾಖ್ಯಾಕಾರರು ಮಾಡಿರುವ ಅರ್ಥವು ಸಹಜವಾಗಿದೆಯೆಂದು ಹೇಳಿದರೂ ಹೇಳಬಹುದು. ಏತಕ್ಕೆಂದರೆ ಈ ಮಂತ್ರವಾದನಂತರವೇ ಮುಂದಿನ ಮಂತ್ರದಲ್ಲಿ " ಇಂದ್ರನು ತನ್ನಿಷ್ಟಬಂದಂತೆ ವರ್ತಿಸುತ್ತಾನೆ. ಹವಿಸ್ಸನ್ನರ್ಪಿಸುವ ಯಜಮಾನನನ್ನು ಬಿಟ್ಟು ಅರ್ಪಿಸದಿರುವವನಲ್ಲಿಗೆ ಹೋಗಲೂ ಇಂದ್ರನು ಸಿದ್ಧ " ಎಂಬ ವಾಕ್ಯವು ಮೇಲಿನ ತಾತ್ಪರ್ಯವನ್ನು ಸಮರ್ಥಿಸುತ್ತದೆ. ಇಂದ್ರನನ್ನು ದ್ವೇಶಿಸಿ ಯಜ್ಞದಲ್ಲಿ ಹವಿಸ್ಸನ್ನರ್ಪಿಸಿದರೆ ಎಂತಹ ಪಾಪಗಳೂ ನಾಶವಾಗುತ್ತವೆ ಎಂಬ ತಾತ್ಪರ್ಯವನ್ನು ಕೊಡುವ ಮಂತ್ರಗಳಲ್ಲಿ (೫-೩೪-೪) ವರ್ಣಿತವಾಗಿರುವುದಕ್ಕೂ ಪ್ರಕೃತವಾದ ಮಂತ್ರಗಳಲ್ಲಿ ಹೇಳಿರುವುದಕ್ಕೂ ಪೂರ್ಣವಾದ ವಿರುದ್ಧಾರ್ಥವಿದೆ. ಇದೇ Wilson ಪಂಡಿತನ ಅಭಿಪ್ರಾಯ. ಈ ವಿರೋಧಾಭಾಸವು ತಪ್ಪಬೇಕಾದರೆ, ಸಾಯಣರೂ, ನಿರುಕ್ತಕಾರರೂ ಹೇಳಿರುವಂತೆ **ಏಧಮಾನಾನಾಂ ವರ್ಧಮಾನಾನಾಂ ಅಸುನ್ವತಾಂ ದ್ವಿಟ್** ಹವಿಸ್ಸನ್ನರ್ಪಿಸದೇ ವೃದ್ಧಿಯನ್ನು ಹೊಂದುತ್ತಿರುವವರಿಗೆಲ್ಲಾ ಶತ್ರು ಎಂದು ತಾತ್ಪರ್ಯಮಾಡಬೇಕಾಗುತ್ತದೆ. ಅದೇ ಸನ್ನಿವೇಶಕ್ಕೆ ಹೊಂದಿಕೊಳ್ಳುತ್ತದೆ.

ಯಜಮಾನನು ಇಂದ್ರನಿಂದ ಅನುಗ್ರಹವನ್ನೂ ಕ್ಷಮೆಯನ್ನೂ ಬೇಡುತ್ತಿರುವಾಗ ಇಂದ್ರನು ತನ್ನ ಔದಾರ್ಯವನ್ನು ಪ್ರಕಾಶಪಡಿಸದಿರುವಾಗ ಯಜಮಾನನು (ಅಥವಾ ಋಷಿಯು) ತನ್ನ ಅಸಮಾಧಾನವನ್ನು ತೋರ್ಪಡಿಸುವ ವಾಕ್ಯಗಳೂ ಅನೇಕವಾಗಿರುತ್ತವೆ ಉದಾಹರಣೆಗೆ—

" ಎಲೈ ಇಂದ್ರನೇ, ನಿನ್ನಂತಹ ಮಾಹಾತ್ಮ್ಯವಿರತಕ್ಕ ದೇವನು ಸೃಷ್ಟಿಯಲ್ಲಿ ಯಾವವಿಧವಾಗಿಯೂ ಮಾನವರಿಗೆ ಉಪಕಾರಮಾಡಿರುವುದಾಗಿ ತಿಳಿದಿಲ್ಲ. ಎಲೈ ದೇವನೇ, ನಿನ್ನ ದಿವ್ಯದೃಷ್ಟಿಯನ್ನು ನಮ್ಮ ಕಡೆಗೂ ತಿರುಗಿಸಿ ನಿನ್ನ ಪೂಜಕರಾದ ನಮಗೂ ಉಪಕಾರವನ್ನು ಮಾಡು

(೮-೪೫-೩೨)

ನಮ್ಮಮೇಲೆ ನಿನ್ನ ದಯೆಯನ್ನು ಬೀರಿ ನಮಗೆ ಉಪಕಾರವನ್ನು ಮಾಡುವುದರ ಮೂಲಕ ನಿನ್ನ ಖ್ಯಾತಿಯೂ ನಿನ್ನನ್ನುದ್ದೇಶಿಸಿ ಅರ್ಪಿತವಾಗತಕ್ಕ ಸ್ತುತಿಗಳೂ ಸಾರ್ಥಕವಾಗಲಿ

(೮-೪೫-೩೩)

ವೀರ್ಯವಂತನಾದ ಇಂದ್ರನೇ, ನಾವು ಒಂದೆರಡು ಪಾಪಗಳನ್ನು ಮಾಡಿರಬಹುದು. ಅಥವಾ ಇನ್ನೂ ಅಧಿಕ ವಾಗಿರಬಹುದು. ಆದರೆ, ಆ ಕಾರಣದಿಂದ ಮಾತ್ರವೇ ನಮ್ಮನ್ನು ಪೂರ್ಣವಾಗಿ ನಾಶಮಾಡದೇ ನಮ್ಮನ್ನು ಕ್ಷಮಿಸು.
(೮-೪೫-೩೪)

ಎಲೈ ಇಂದ್ರನೇ, ಅತ್ಯಂತ ಭಯಂಕರನೂ, ನಾಶಕನೂ, ಹಿಂಸಕನೂ, ವಿರೋಧಿಯನ್ನು ಎದುರಿಸಿ ಉರುಳಿಸು ವವನೂ ಆದ ನಿನ್ನಂತಹ ದೇವನನ್ನು ನೋಡಿದರೆ ಹೆದರಿಕೆಯಾಗುತ್ತದೆ.
(೮-೪೫.೩೫)

ಅವೈದಿಕನೂ, ಕರ್ಮಭ್ರಷ್ಟನೂ ಆದ ನಾಸ್ತಿಕನಿಗೆ ಇಂದ್ರನು ಶತ್ರುವಾಗಿದ್ದಾನೆ. ಅಂತಹ ನಾಸ್ತಿಕನನ್ನು ಇಂದ್ರನು ಶಿಕ್ಷಿಸಿ ನಾಶಪಡಿಸುತ್ತಾನೆ. ಎಲೈ ಇಂದ್ರನೇ, ನಿನ್ನನ್ನು ಪೂಜಿಸದೇ, ನಿನಗೆ ಹವಿಸ್ಸನ್ನರ್ಪಿಸದೇ ಇರುವ ಪುರುಷನನ್ನು ನೀನು ಕ್ರಮವಾಗಿ ಶಿಕ್ಷಿಸಿಯೇ ಇರುವೆ
(೧-೧೩೧-೪)

ಯಾರು ಇಂದ್ರನನ್ನು ಗೌರವಿಸದೇ ಅವನನ್ನು ಅಲಕ್ಷಿಸಿ ದೊಡ್ಡ ಪಾಪವನ್ನು ಮಾಡುವನೋ ಅವನನ್ನು ಇಂದ್ರನು ವಜ್ರಾಯುಧದಿಂದ ಹೊಡೆದು ನಾಶಪಡಿಸುತ್ತಾನೆ. (೨೦.೧೨.೧೦)

ಸೋಮನನ್ನು ಪಾನಮಾಡತಕ್ಕವನೂ, ಎಲ್ಲರಿಗಿಂತಲೂ ಅತ್ಯಧಿಕನೂ ಆದ ಎಲೈ ಇಂದ್ರನೇ, ಸೋಮವನ್ನು ಅರ್ಪಿಸದೇ ಇರುವ ಮಾನವರ ಗುಂಪನ್ನೆಲ್ಲಾ ನೀನು ಚದುರಿಸಿ ನಾಶಪಡಿಸಿರುವೆ.
(೮-೧೪.೧೫)

ಇಂದ್ರನು ಸಕಲವನ್ನೂ ಕೇಳಬಲ್ಲನು. ಸಕಲವೂ ಅವನ ಗೋಚರಕ್ಕೆ ಬೀಳುತ್ತದೆ. ಅವನು ಮಾತ್ರ ನಿರ್ಬಂಧರಹಿತನು.
(೮-೭೮.೫)

ತನ್ನ ಆಪ್ತರೂ ಭಕ್ತಿಯುತರೂ ಆದ ಅನುಚರರನ್ನು ರಕ್ಷಿಸುತ್ತಾನೆ, ಮತ್ತು ಅವರನ್ನು ಜ್ಯೋತಿರೂಪವಿರ ತಕ್ಕ ಅಂತರಿಕ್ಷದಲ್ಲಿ ಕರೆದೊಯ್ಯುತ್ತಾನೆ,
(೬-೪೭-೮)

ಅಂತರಿಕ್ಷದಲ್ಲಿ ಸೂರ್ಯಮಂಡಲದ ಪ್ರದೇಶವನ್ನು ಇಂದ್ರನೊಡನೆ ಹೋಗಿ ಸೇರಿ ಅಲ್ಲಿ ತ್ರಿಗುಣಿತವಾದ ಏಳು ಸಲ ಅಮೃತವನ್ನು ಪಾನ ಮಾಡುತ್ತಾರೆ. (೮-೬೯-೭)

ಆರ್ಯರಿಗೆಲ್ಲಾ ರಕ್ಷಕನಾದ ಪಿತೃವೆಂದು ಇತರ ದೇವತೆಗಳಿಗಿಂತಲೂ ಅಧಿಕವಾಗಿ ಇಂದ್ರನು ಪ್ರಾರ್ಥಿತನಾ ಗಿದ್ದಾನೆ, ಮತ್ತು ಪಾರ್ಥಿವವೂ ಅಂತರಿಕ್ಷಸ್ಥವೂ ಆದ ಸಕಲ ಶತ್ರುಗಳನ್ನೂ ಅವನು ನಾಶಪಡಿಸುವವನಾಗಿದ್ದಾನೆ.

ಎಲೈ ಇಂದ್ರನೇ, ಆರ್ಯರಾರು, ದಸ್ಯುಗಳಾರು ಎಂಬ ವ್ಯತ್ಯಾಸವನ್ನು ತೋರಿಸುವವನಾಗು. ನಿಯಮರಹಿತ ರಾದವರೂ ಮತ್ತು ಆಹುತಿಗಳನ್ನರ್ಪಿಸದವರೂ ಆದ ಪುರುಷರನ್ನು ಯಜ್ಞಕರ್ತರಿಗೆ ಅಧೀನರನ್ನಾಗಿ ಮಾಡು. ಯಜ್ಞ ಕರ್ತರಿಗೆ ಪ್ರಭಾವಯುತವಾದ ಸಹಾಯವನ್ನು ಮಾಡು. ನಿನ್ನ ಪೂಜಾಕಾಲದಲ್ಲಿ ನಾನು ಇವನ್ನೆಲ್ಲಾ ಅಪೇಕ್ಷಿಸುತ್ತೇನೆ.
(೧-೫೧.೮)

ಇಂದ್ರನೇ ಅಲ್ಲದೇ ಇತರ ದೇವತೆಗಳೂ ಆರ್ಯರಕ್ಷಕರೆಂದು ಸ್ತುತರಾಗಿದ್ದಾರೆ. ಉದಾಹರಣೆಗೆ—

" ಎಲೈ ಅಶ್ವಿನೀದೇವತೆಗಳೇ, ವಜ್ರಾಯುಧದಿಂದ ದಸ್ಯುಕುಲವನ್ನೆಲ್ಲಾ ನಾಶಮಾಡಿ ನೀವು ಆರ್ಯರಿಗೆ ಉತ್ತಮವಾದ ಜ್ಯೋತಿಯನ್ನು ನಿರ್ಮಿಸಿದ್ದೀರಿ."

(೧-೧೧೭-೨೧)

" ಅಗ್ನಿಯನ್ನೇ ತಮ್ಮ ಜಿಹ್ವೆಯನ್ನಾಗಿ ಉಳ್ಳ ವಿಶ್ವದೇವತೆಗಳು ಮನು (ಆರ್ಯ) ಸಂತತಿಯನ್ನು ದಾಸಸಂತತಿಗಿಂತಲೂ ಉತ್ತಮವಾದ ಸ್ಥಾನದಲ್ಲಿರಿಸಿದ್ದಾರೆ."

(೬-೨೧-೧೧)

" ಆರ್ಯಸಂತತಿಯ ವೃದ್ಧಿಗೆ ಕಾರಣನಾದ ಅಗ್ನಿಯನ್ನು ನಮ್ಮ ಈ ಸ್ತುತಿಗಳು ಸಮೀಪಿಸಿ ಅವನಿಗೆ ಉತ್ತಮವಾದ ಸಂತೋಷವನ್ನುಂಟುಮಾಡಲಿ." (೮-೧೦೩-೨)

ಇತ್ಯಾದಿ ವಾಕ್ಯಗಳಲ್ಲಿ ಅಗ್ನ್ಯಾದಿದೇವತೆಗಳೂ ಆರ್ಯಸಂತತಿಯ ಹಿತಕಾರಿಗಳೆಂದು ತಿಳಿಸಿದೆ.

ಇಂದ್ರನು ತನ್ನ ವಜ್ರಾಯುಧವನ್ನು ಬೀಸುತ್ತಲೂ, ತನ್ನ ಅದ್ಭುತವಾದ ಶಕ್ತಿಯಲ್ಲಿ ದೃಢವಾದ ವಿಶ್ವಾಸವನ್ನು ತೋರಿಸುತ್ತಲೂ, ದಸ್ಯುಗಳ ಪಟ್ಟಣಗಳನ್ನು ನಿರ್ಮೂಲಗೊಳಿಸುತ್ತಲೂ, ಸಹ ಮುನ್ನುಗ್ಗುತ್ತಿದ್ದನು. ಆರ್ಭಟದಿಂದ ಮುನ್ನುಗ್ಗುವ ಎಲೈ ಇಂದ್ರನೇ, ನೀನು ಯಾವಾಗಲೂ ಕೇವಲ ದಸ್ಯುಗಳ ಮೇಲೆ ನಿನ್ನ ವಜ್ರಾಯುಧವನ್ನು ಪ್ರಹರಿಸಿ. ಆರ್ಯರ ಶಕ್ತಿಯನ್ನೂ, ಮಹಿಮೆಯನ್ನೂ ವೃದ್ಧಿಪಡಿಸು.

(೧-೧೦೩-೩)

ಇಂದ್ರನು ನಾನಾವಿಧವಾದ ಸಹಾಯಗಳಿಗೆ ಶಕ್ತನಾಗಿದ್ದು, ಎಲ್ಲಾ ಯುದ್ಧಗಳಲ್ಲಿಯೂ ಸಹ ಯಜ್ಞಕರ್ತನಾದ ಆರ್ಯನನ್ನು ಸಂರಕ್ಷಿಸಿದನು. ನಿಯಮರಹಿತನಾದ ಅನಾರ್ಯನನ್ನು ಶಿಕ್ಷಿಸುತ್ತಾ, ಕರೀಬಣ್ಣವುಳ್ಳವರೂ ಅನಾಗರಿಕರೂ ಆದ ಜನರನ್ನು ಮನುಸಂತತಿಯವರ ವಶವಾಗುವಂತೆ ಮಾಡಿದನು.

(೧-೧೩೦-೮)

ಎಲೈ ಇಂದ್ರನೇ, ನೀನು ಆರ್ಯನಿಗೆ ಜ್ಯೋತಿಯನ್ನು ತೋರ್ಪಡಿಸಿದೆ. ದಸ್ಯುವನ್ನು ಎಡೆಭಾಗದಲ್ಲಿರಿಸಿದೆ.

(೨-೧೧-೧೮)

ಇಂದ್ರನು ಆರ್ಯರಿಗೆ ಅಶ್ವಗಳನ್ನೂ, ಸೂರ್ಯಜ್ಯೋತಿಯನ್ನೂ, ಉತ್ತಮವಾಗಿ ಕರೆಯತಕ್ಕ ಪಶುಗಳನ್ನೂ, ಸುವರ್ಣರೂಪದ ಸಂಪತ್ತನ್ನೂ ಒದಗಿಸಿಕೊಟ್ಟಿದ್ದಾನೆ.

(೩-೩೪-೯)

"ಯಜ್ಞವನ್ನಾಚರಿಸಿ ನನ್ನನ್ನು ಪೂಜಿಸುವ ಆರ್ಯನಿಗೆ ಈ ಪೃಥ್ವಿಯನ್ನು ನಿರ್ಮಿಸಿದ್ದೇನೆ" ಎಂದು ಇಂದ್ರನೇ ಹೇಳಿಕೊಳ್ಳುತ್ತಾನೆ.

(೪-೩೬-೨)

" ಎಲೈ ಇಂದ್ರನೇ, ನೀನು ದಸ್ಯುವನ್ನು ಸೋಲಿಸಿ ಆರ್ಯನ ಅಧೀನವಾಗುವಂತೆ ಮಾಡಿದೆ."

(೬-೧೮-೩)

ನೀನು ಇದೇ ವಿಧವಾದ ರಕ್ಷಣೆಗಳಿಂದ ಚದುರಿಹೋಗಿದ್ದ ದಸ್ಯುಗಳನ್ನೆಲ್ಲಾ ಒಟ್ಟುಗೂಡಿಸಿ ಆರ್ಯರ ಅಧೀನವಾಗಿರುವಂತೆ ಅವರ ವಶಕ್ಕೊಪ್ಪಿಸಿದೆ. (೬-೨೫-೩)

ಎಲೈ ಇಂದ್ರನೇ, ನೀನು ಮಹತ್ಪಾತಕಗಳಿಂದ ನಮ್ಮನ್ನು ಸಂರಕ್ಷಿಸಿದೆ. ಮತ್ತು ಸಪ್ತಸಿಂಧುಃ ಪ್ರದೇಶಗಳಲ್ಲಿ ವಾಸವಾಗಿದ್ದ ಸಕಲ ಆರ್ಯರನ್ನೂ ರಕ್ಷಿಸಿ ದಸ್ಯುಗಳ ಆಯುಧಗಳು ಆ ಪ್ರದೇಶದಲ್ಲಿ ವಾಸವಾಗಿದ್ದ ಜನಗಳನ್ನು ಹಿಂಸಿಸದಂತೆ ಅವನ್ನೆಲ್ಲಾ ತಡೆಗಟ್ಟಿದೆ.

(೮–೨೪–೨೭)

ಎಲೈ ಇಂದ್ರನೇ, ನೀನು ನಾಶಮಾಡಿರುವ ಶತ್ರುಪಟ್ಟಣಗಳ ಸಂಖ್ಯೆಯು ಅಪರಿಮಿತವಾದವು. ನೀನು ದಸ್ಯುಗಳ ಪ್ರಾಣಾಪಹಾರಿಯಾಗಿರುವೆ. ಆರ್ಯರ ವೃದ್ಧಿಗೆ ಕಾರಣವಾಗಿರುವೆ. ಮತ್ತು ಪ್ರಭಾಯುತವಾದ ಅಂತರಿಕ್ಷಕ್ಕೆಲ್ಲಾ ಅಧಿಪತಿಯಾಗಿರುವೆ.

(೮-೯೮-೬)

"ಶತ್ರುನಾಶಕನಾದ ನಾನು ಶುಷ್ಣನ ಆಯುಧವನ್ನು ತಡೆದು ನಿಲ್ಲಿಸಿದ್ದೇನೆ. ನಾನು ಖಂಡಿತವಾಗಿಯೂ ಆರ್ಯರನ್ನು ದಸ್ಯುಗಳ ವಶಕ್ಕೆ ಬಿಟ್ಟುಕೊಡುವುದಿಲ್ಲ."

(೧೦–೪೯–೨)

"ದಾಸರಾರು, ಆರ್ಯರಾರು ಎಂಬ ಭೇದವನ್ನು ಪೂರ್ಣವಾಗಿ ಪರಿಗಣಿಸಿ ನಾನು ಸಂಚರಿಸುತ್ತಿರುವೆನು." (ಇತ್ಯಾದಿ ವಾಕ್ಯಗಳು ಇಂದ್ರವಾಕ್ಯಗಳೇ ಇರಬೇಕು.) (೧೦.೮೬.೧೯)

ಇಂದ್ರನು ಇತರ ದೇವತೆಗಳೊಡನೆಯೂ ಸೇರಿಕೊಂಡು ದಸ್ಯುಹನನ ಮಾಡುವ ಸನ್ನಿವೇಶಗಳನ್ನು ವಿವರಿಸುವ ಕೆಲವು ವಾಕ್ಯಗಳ ತಾತ್ಪರ್ಯಗಳನ್ನೂ ಕೆಳಗೆ ತಿಳಿಸಲಾಗುತ್ತದೆ.

ಎಲೈ ಇಂದ್ರಾಗ್ನಿಗಳೇ, ನೀವು ನಮ್ಮ ಕಷ್ಟಗಳನ್ನು ಪರಿಹರಿಸತಕ್ಕವರು, ನಮಗೆ, ನಮ್ಮ ಗುಂಪಿನವರೇ ಆದ ಆರ್ಯರಿಂದಾಗಲಿ ಅಥವಾ ಶತ್ರುಗುಂಪಿಗೆ ಸೇರಿದ ದಸ್ಯುಗಳಿಂದಲೇ ಆಗಲಿ ಯಾವ ವಿಧವಾದ ತೊಂದರೆಗಳು ಬಂದರೂ ಸಹ ಅವೆಲ್ಲವನ್ನೂ ನೀವು ಪೂರ್ಣವಾಗಿ ನಾಶಮಾಡುತ್ತೀರಿ.

(೬-೬೦-೬)

ಎಲೈಇಂದ್ರನೇ, ಆರ್ಯರಲ್ಲಾಗಲಿ, ದಸ್ಯುಗಳಲ್ಲಾಗಲಿ ಯಾವ ಕರ್ಮಭ್ರಷ್ಟನು ನಮ್ಮೊಂದಿಗೆ ಹೋರಾಡಲಿಚ್ಛಿಸುವನೋ ಅಂತಹವನನ್ನು ನಾವು ಜಯಿಸುವಂತೆ ಅನುಗ್ರಹಿಸು. ಅವರೊಂದಿಗೆ ಹೋರಾಡಿ ಅಂತಹ ಶ್ರದ್ಧಾರಹಿತರಾದ ಶತ್ರುಗಳನ್ನೆಲ್ಲಾ ನಾವು ಪೂರ್ಣವಾಗಿ ನಾಶಪಡಿಸುವಂತಾಗಲಿ, (ಈ ವಾಕ್ಯದಲ್ಲಿ ಇಂದ್ರನೊಬ್ಬನು ಮಾತ್ರ ನಿರ್ದಿಷ್ಟನಾಗಿದ್ದಾನೆ), ಇದರಂತೆಯೇ,

(೧೦–೩೮-೩)

ಎಲೈ ಇಂದ್ರನೇ, ಯಾವ ಶತ್ರುವು ನಮ್ಮನ್ನು ನಾಶಪಡಿಸಲಿಚ್ಛಿಸುವನೋ, ಅವನ ಆಯುಧವನ್ನು ಅಲ್ಲೇ ತಡೆದು ನಿಲ್ಲಿಸು. ದಾಸನಿಂದಲಾಗಲಿ ಅಥವಾ ಆರ್ಯರಗುಂಪಿಗೆ ಸೇರಿದವನಿಂದಾಗಲಿ ನಮ್ಮ ಕಡೆಗೆ ಪ್ರಯೋಗಿಸಲ್ಪಟ್ಟು ನಮ್ಮನ್ನು ಹಿಂಸಿಸತಕ್ಕ ಆಯುಧಗಳು ನಮ್ಮನ್ನು ಮುಟ್ಟದಂತೆ ಮಾಡು.

(೧೦.೧೦೨-೩)

ಎಲೈ ಇಂದ್ರಾವರುಣರೇ, ದಾಸರೂಪನಾದ ಶತ್ರುವಾಗಲಿ ಅಥವಾ ಆರ್ಯರೂಪನಾದ ಶತ್ರುವಾಗಲಿ ನಮ್ಮನ್ನು ಹಿಂಸಿಸಲು ಬರದಂತೆ ನಾಶಮಾಡಿರಿ. ಸುದಾಸನನ್ನು ನಿಮ್ಮ ರಕ್ಷಣೆಗಳಿಂದ ಕಾಪಾಡಿರಿ.

(೮-೮೩-೧)

(ಹೀಗೆಯೇ, ಮನ್ಯುವೇ ಮುಂತಾದ ಇತರ ದೇವತೆಗಳೂ ಪ್ರಾರ್ಥಿತರಾಗಿದ್ದಾರೆ. ೧೦-೮೩-೧, ೨-೧೧-೧೯, ೧೦-೬೫-೧೧.)

## ಇಂದ್ರನ ಸ್ವರೂಪವರ್ಣನೆಯಲ್ಲಿ ಸ್ಥೂಲವಾದ ದೃಷ್ಟಿಗೆ ತೋರಬಹುದಾದ ಕೆಲವು ಅಸಾಮಂಜಸ್ಯಗಳು ಮತ್ತು ಅವಕ್ಕೆ ಸಮಾಧಾನ.

ಮೂಲದ ಅಧ್ಯಯನದಿಂದಾಗಲಿ ಅಥವಾ ಭಾಷಾಂತರದ ಮೂಲಕವಾಗಿಯಾಗಲಿ ಋಕ್ಸಂಹಿತೆಯ ಪರಿಚಯ ವಿಲ್ಲದವರಿಗೆ ಮೇಲೆ ವರ್ಣಿತವಾಗಿ ಇರುವ ಇಂದ್ರನ ಸ್ವರೂಪವರ್ಣನೆಯಲ್ಲಿ ಕೆಲವು ವಿರುದ್ಧವಾದ ಅಂಶಗಳು ಕಾಣ ಬರುವುದು ಸಹಜವಾಗಿದೆ. ಆದರೆ, ಅದು ಸಹಜವಾಗಿಯೇ ಇದೆ. ಸ್ಥೂಲದೃಷ್ಟಿಯಿಂದ ಮಾತ್ರ ಪರಿಶೀಲಿಸಿದರೆ, ಮೇಲಿನ ವಿವರಣೆಗಳಲ್ಲಿ ಅಸಾಮಂಜಸ್ಯವು ತೋರುವುದರಲ್ಲಿ ಸಂಶಯವಿಲ್ಲ. ಇಂದ್ರನೇ ವಿಶ್ವನಿಯಾಮಕನೂ ವಿಶ್ವಾಧಾರಕನೂ ಆದ ಪರದೇವತೆ ಎಂಬ ವರ್ಣನವು ಇತರ ಸಾಧಾರಣವಾದ ಗುಣವರ್ಣನೆಗೆ ವಿರುದ್ಧವಾಗಿ ಇರುತ್ತದೆ. ಉದಾಹರಣೆಗೆ— ಸೋಮಪಾನಾದಿಗಳಲ್ಲೂ ಇತರ ವ್ಯವಹಾರಗಳಲ್ಲೂ ಸಹ ಇಂದ್ರನಿಗೆ ಸಾಧಾರಣ ಮಾನವರಿಗಿರುವ ಇಚ್ಛಾದಿಗಳು ವರ್ಣಿತವಾಗಿವೆ. ಒಂದೊಂದು ಸಲ ವಿಷಯೇಚ್ಛೆಯೂ ಉತ್ಕಟವಾಗಿರುವಂತಿದೆ. ಇಂತಹ ಸ್ವರೂಪವರ್ಣನವು ಇಂದ್ರನ ಅಸಾಧಾರಣವೂ, ಅಲೌಕಿಕವೂ ವಿಶ್ವಕ್ಕೆಲ್ಲಾ ಮಾರ್ಗದರ್ಶಕವೂ, ಆಧ್ಯಾತ್ಮಿಕವೂ ಆದ ಇಂದ್ರನ ಮಹಾಗುಣಗಳೊಂದಿಗೆ ಸಾಮಂಜಸ್ಯವನ್ನು ಹೊಂದುವುದಿಲ್ಲ. ಇಂತಹ ವಿರುದ್ಧ ಸ್ವರೂಪಗಳನ್ನು ವರ್ಣಿಸುವ ಸನ್ನಿವೇಶಗಳು ಒಂದೇ ಸೂಕ್ತದಲ್ಲೇ ಇರತಕ್ಕ ಸಂದರ್ಭಗಳೂ ಇರುತ್ತವೆ. ಆದರೆ ಇಲ್ಲಿ ಆಧ್ಯಾತ್ಮಿಕ ದೃಷ್ಟಿಯಿಂದ ಪರಿಶೀಲಿಸಿದರೆ ಇಂತಹ ಸ್ವರೂಪವು ಸಹಜ ವಾಗಿಯೇ ಇರುತ್ತದೆಂಬ ವಿಷಯವು ತಿಳಿಯುತ್ತದೆ. ಹೇಗೆಂದರೆ, ವಿಶ್ವದ ಸಮಸ್ತ ಅಂಶಗಳೂ ಎರಡು ವಿಧವಾದ ಸ್ವರೂಪ ವನ್ನು ಕಾಣಬಹುದು. ಒಂದು ನಿತ್ಯ, ಇನ್ನೊಂದು ಅನಿತ್ಯ, ಒಂದು ಐಂದ್ರಿಯಕ, ಇನ್ನೊಂದು ಆಧ್ಯಾತ್ಮಿಕ; ಒಂದು ಸಾಧಾರಣ, ಇನ್ನೊಂದು ಅಸಾಧಾರಣ; ಈ ರೀತಿ, ಪ್ರತಿಮಾನವನಲ್ಲೂ ಈ ದ್ವೈವಿಧ್ಯವು ಪ್ರತ್ಯಕ್ಷವಾಗಿಯೇ ಇರುತ್ತದೆ ವಿಶ್ವಕ್ಕೆ ಸಹಜವಾದ ಸಾಧಾರಣಗುಣಗಳೂ, ವಿಶ್ವಾತೀತನಾದುದರಿಂದ ಅಸಾಧಾರಣವೂ ಅಲೌಕಿಕವೂ ಆದ ದಿವ್ಯ ಗುಣಗಳೂ ಒಟ್ಟಿಗೆ ಸೇರಿರುವುದರಲ್ಲಿ ಅಸಾಮಂಜಸ್ಯವೇನೂ ಇರುವುದಿಲ್ಲ. ಒಂದು ವೇಳೆ ಇಚ್ಛಾದಿಗುಣಗಳು ಇಂದ್ರನಲ್ಲಿ ಪಾರ್ಥಿವ ಸ್ವರೂಪವನ್ನು ತಿಳಿಸುವುವು ಎಂದು ಭಾವಿಸಿದರೂ ಸಹ, ಆಧುನಿಕಸಂಸ್ಕೃತಿಗೆ ಸಂಬಂಧಪಟ್ಟಂತೆ ವಿಷಯೇಚ್ಛೆಯ ವರ್ಣನವಲ್ಲವೆಂಬುದು ಸಿದ್ಧವಾಗಿರುತ್ತದೆ. ಇಂದ್ರನು ಯಾವ ಸೋಮಪಾನಾದಿಗಳಲ್ಲಿ ಅಮೃತವನ್ನು ಸಂಪಾದಿಸಿಕೊಡುವನೋ, ಅಂತಹ ಅಮೃತತ್ವಸಾಧಕವಾದ ಸೋಮರಸದಲ್ಲಿರುವ ಇಚ್ಛೆಯು ಅಲೌಕಿಕವೂ ದಿವ್ಯವೂ ಆದ ಇಚ್ಛೆಯೇ ಆಗಿರುತ್ತದೆ, ಅದು ದೋಷವಲ್ಲವೆಂಬುದು ಖಚಿತವಾಗಿದೆ. ಈ ವಿರುದ್ಧಗುಣಗಳು ಒಬ್ಬನೇ ಋಷಿಯಿಂದ ವರ್ಣಿತವಾಗಿರುವುದರಿಂದ ಅಂತಹ ಋಷಿವಾಕ್ಯವು ಅಸಮಂಜಸನೆಂದು ಹೇಳುವುದು ಸರಿಯಾಗಿರುವುದಿಲ್ಲ. ಇಂತಹ ಕೆಲವು ಸನ್ನಿವೇಶಗಳನ್ನು ಪರೀಶೀಲಿಸಬಹುದು. ಉದಾಹರಣೆಗೆ—

"ಇಂದ್ರನು ಶೂನ್ಯವಾದ ಪ್ರದೇಶದಲ್ಲಿ ದ್ಯುಲೋಕವನ್ನು ಸ್ಥಾಪಿಸಿದನು. ಅವನು ದ್ಯಾವಾಪೃಥಿವಿಗಳನ್ನೆಲ್ಲಾ ವ್ಯಾಪಿಸಿ ನಿಂತನು. ಅವನು ಪೃಥ್ವಿಯನ್ನು ಧರಿಸಿ ಅದನ್ನು ವಿಸ್ತೃತವಾಗಿ ಹರಡುವಂತೆ ಮಾಡಿದನ. ಈ ಅಸಾ ಧಾರಣವಾದ ಕಾರ್ಯಗಳೆಲ್ಲಾ ಇಂದ್ರನು ಸೋಮರಸದ ಪಾನದ ಪ್ರಭಾವದಿಂದಲೇ ಮಾಡಿದನು."

(೨-೧೫-೨)

ಅತ್ಯದ್ಭುತವಾದ ಪರಾಕ್ರಮವುಳ್ಳವನೂ, ಅಂತರಿಕ್ಷದ ಉತ್ಪಾದಕನೂ, ಪೃಥ್ವಿಯನ್ನು ನಿರ್ಮಿಸಿದವನೂ ಆದ ಎಲೈ ಇಂದ್ರನೇ, ನಿನಗೆ ಉತ್ಕೃಷ್ಟವಾದ ಹರ್ಷವನ್ನು ಉಂಟುಮಾಡುವ ಸೋಮವನ್ನು ಪಾನಮಾಡು.

(೮-೩೬-೪)

ಹಿಂದೆ ವಿವರಿಸಿರುವಂತೆ, ೮-೭೮-೫ ಇತ್ಯಾದಿ ಋಕ್ಕುಗಳಲ್ಲೆಲ್ಲಾ ಇಂದ್ರನ ಸೋಮರಸ ಪಾನವೂ, ಅದರಿಂದ ಉತ್ಪನ್ನವಾಗುವ ಅವನ ವೀರ್ಯವೂ, ಆ ವೀರ್ಯದ ಫಲವಾಗಿ ಇಂದ್ರನು ನೆರವೇರಿಸತಕ್ಕ ಅಲೌಕಿಕವಾದ ವ್ಯಾಪಾರಗಳೂ ಪ್ರಸಿದ್ಧವಾಗಿವೆ.

"ಅತ್ಯುತ್ಕಟವಾದುದೂ, ಅತ್ಯುತ್ತಮವಾದುದೂ ಆದ ಹರ್ಷವನ್ನುಂಟುಮಾಡತಕ್ಕ ಈ ಸೋಮಪಾನದಿಂದ ಇಂದ್ರನ ವೀರ್ಯವು ವೃದ್ಧಿಯನ್ನು ಹೊಂದಿ ಅದರ ಪ್ರಭಾವದಿಂದ ಇಂದ್ರನು ಸಕಲ ಜಗತ್ತುಗಳನ್ನೂ ಜಯಿಸಿ ವಿಶ್ವಕ್ಕೆಲ್ಲಾ ನಿಯಾಮಕನಾದ ಪ್ರಭುವಾದನು." (೮-೯೨-೬)

ಇತ್ಯಾದಿ ವಾಕ್ಯಗಳಿಂದ ಇಂದ್ರನ ಸೋಮಪಾನೇಚ್ಛೆಯು ವಿಷಯೇಚ್ಛೆಯಲ್ಲವೆಂಬುದೂ ತಜ್ಜನಿತವಾದ ವೀರ್ಯವು ಕೇವಲ ಲೌಕಿಕವಾದ ವೀರ್ಯವಲ್ಲವೆಂಬುದೂ, ಇಂತಹ ವರ್ಣನೆಗಳು ಇಂದ್ರನ ದಿವ್ಯಗುಣಗಳಿಗೆ ವಿರುದ್ಧವಾದ ಅಂಶಗಳನ್ನು ತಿಳಿಸುತ್ತವೆಂಬುದನ್ನೂ ಹೇಳಲು ಸಾಧ್ಯವಿಲ್ಲ. ಆಧ್ಯಾತ್ಮಿಕ ದೃಷ್ಟಿಯಿಂದ ಪರಿಶೀಲಿಸಿದರೂ ಸಹ ಈ ವರ್ಣನೆಗಳು ಇಂದ್ರನ ದಿವ್ಯಗುಣಗಳನ್ನು ವರ್ಣಿಸುವುದೇ ಆಗಿವೆಯೆಂಬುದರಲ್ಲಿ ಸಂದೇಹವಿಲ್ಲ.

**ಇಂದ್ರಾವರುಣರಿಗಿರುವ ಪರಸ್ಪರ ಸಂಬಂಧವನ್ನು ವರ್ಣಿಸುವ ಕೆಲವು ವಾಕ್ಯಗಳು**

ಋಕ್ಸಂಹಿತೆಯ ಪ್ರಾರಂಭದ ಮಂಡಲಗಳಲ್ಲಿ ಇಂದ್ರಪರಸೂಕ್ತಗಳು ಅಧಿಕವಾಗಿರುತ್ತವೆ. ಕೊನೆಯ ಮಂಡಲಗಳಲ್ಲಿ ವರುಣಪರವಾದ ಸೂಕ್ತಗಳು ಹೆಚ್ಚಿನ ಸಂಖ್ಯೆಯಲ್ಲಿರುತ್ತವೆ ಈ ಕಾರಣದಿಂದ ಕೆಲವು ಆಂಗ್ಲಪಂಡಿತರು ಋಕ್ಸಂಹಿತಾನಿರ್ಮಾಣದ ಆದಿಕಾಲದಲ್ಲಿ ವರುಣನಿಗಿಂತಲೂ ಇಂದ್ರನಿಗೇ ಅಧಿಕವಾದ ಪ್ರಾಶಸ್ತ್ಯವಿದ್ದಿತೆಂದೂ ಮತ್ತು ಕೊನೆಗಾಲದಲ್ಲಿ ಇಂದ್ರನಿಗಿಂತಲೂ ವರುಣನಿಗೇ ಅಧಿಕವಾದ ಪೂಜ್ಯತೆಯು ತೋರಿಸಲ್ಪಡುತ್ತಿತ್ತೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಈ ಅಭಿಪ್ರಾಯಕ್ಕೆ ಸರಿಯಾದ ಆಧಾರಗಳಿಲ್ಲ. ಮತ್ತು ಇವು ತಪ್ಪಭಿಪ್ರಾಯವೆಂದೂ ಹೇಳಬಹುದು. **ಇಂದ್ರ, ವರುಣ** ಇತ್ಯಾದಿಯಾಗಿರುವ ನಾಮವಾಚಿಕ ವ್ಯತ್ಯಾಸಗಳೆಲ್ಲವೂ ಒಂದೇ ತತ್ತ್ವದ ಬೇರೆ ಬೇರೆ ವಿಭೂತಿ ವಿಶೇಷಗಳೆಂದೂ, ಈ ಹೆಸರುಗಳು ತಾತ್ತ್ವಿಕವ್ಯತ್ಯಾಸವನ್ನುಳ್ಳ ದೇವತಾಪ್ರಭೇದಗಳಲ್ಲವೆಂದೂ ಸಂಹಿತಾವಾಕ್ಯಗಳೇ ತಿಳಿಸಿರುವ ವಿಷಯವನ್ನು ಹಿಂದೆ ವಿವರಿಸಿದೆ ಮತ್ತು ಮುಂದೆಯೂ ತಿಳಿಸಲಾಗುತ್ತದೆ. (**ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ**) ಅದರೂ ಸಹ ಏಕತತ್ತ್ವದ ವಿಭೂತಿವಿಶೇಷಗಳ ವರ್ಣನೆಯಲ್ಲಿಯೂ ಇಂತಹ ವ್ಯತ್ಯಾಸಕ್ಕೆ ಅವಕಾಶವೇ ಇರುವುದಿಲ್ಲವೆಂಬುದನ್ನು ಸಮರ್ಥಿಸಲು ಈ ಎರಡು ದೇವತೆಗಳನ್ನೂ ಒಟ್ಟಿಗಾಗಲಿ ಅಥವಾ ವೈಯಕ್ತಿಕವಾಗಿಯಾಗಲಿ ವರ್ಣಿಸುವ ಕೆಲವು ಸನ್ನಿವೇಶಗಳನ್ನು ಪರಿಶೀಲಿಸಬಹುದು.

೧-೧೭, ೪-೪೧; ೪-೪೨; ೬-೬೮; ೭.೮೨, ೭.೮೩, ೭.೮೪; ೭.೮೫ ಇತ್ಯಾದಿ ಸೂಕ್ತಗಳಲ್ಲಿ ಇಂದ್ರಾವರುಣರಿಬ್ಬರಿಗೂ ಸಮಾನವಾದ ಪೂಜ್ಯತೆಯನ್ನು ತೋರಿಸಿದೆ. ಪ್ರಾರಂಭದಲ್ಲಿಯೇ, ಇಂದ್ರ ಮತ್ತು ವರುಣ ಇವರಿಬ್ಬರನ್ನೂ ಸಕಲ ಜಗತ್ತನ್ನೂ ಧರಿಸುವ ಸಾರ್ವಭೌಮರೆಂದು ನಿರ್ದೇಶಿಸಿದೆ.

**ಇಂದ್ರಾವರುಣಯೋರಹಂ ಸಮ್ರಾಜೋರವ ಆ ವೃಣೇ । ತಾ ನೋ ಮೃಳಾತ ಈದೃಶೇ ॥**

(೧-೧೭-೧)

**ಗಂತಾರಾ ಹಿ ಸ್ಥೋಽವಸೇ ಹವಂ ವಿಪ್ರಸ್ಯ ನಾವತಃ । ಧರ್ತಾರಾ ಚರ್ಷಣೀನಾಂ ॥**

(೧.೧೭-೨)

ಇಂತಹ ಸಂದರ್ಭಗಳಲ್ಲಿ ಯಾವ ದೇವತೆಗೂ ಉತ್ಕರ್ಷವಾಗಲಿ, ಅಪಕರ್ಷವಾಗಲಿ ತೋರಿಸಿಲ್ಲ. ಧೃತವ್ರತ ಇತ್ಯಾದಿ ವಿಶೇಷಣಗಳೂ ಸಹ ಇಬ್ಬರಿಗೂ ಸಾಧಾರಣವಾಗಿದ್ದು ವಿಶ್ವಧಾರಣೆಯಲ್ಲಿ ಇಬ್ಬರ ಸಮಾನವಾದ ಪಾತ್ರವನ್ನು ತಿಳಿಸುತ್ತದೆ.

(೬-೬೮ ೧೦)

ಪ್ರಭಾಯುತವಾದ ವಜ್ರಾಯುಧವನ್ನು ಶತ್ರುವಿನ ಮೇಲೆ ಪ್ರಯೋಗಿಸಬೇಕೆಂದು ಇಂದ್ರನನ್ನು ಯಾವ ರೀತಿ ಪ್ರಾರ್ಥಿಸಿದೆಯೋ ಅದೇರೀತಿ ವರುಣನನ್ನೂ ಪ್ರಾರ್ಥಿಸಿದೆ

(೪.೪೧-೪)

ಆದರೆ, ಅನೇಕ ಸಂದರ್ಭಗಳಲ್ಲಿ ಈ ಶಕ್ತಿಯು ಇಂದ್ರನಿಗೊಬ್ಬನಿಗೆ ಮಾತ್ರ ಅನ್ವಯಿಸುತ್ತದೆ. ೭-೮೨-೨ ರಲ್ಲಿ **ವರುಣನು ಸಮ್ರಾಟ್** ಎಂಬ ವಿಶೇಷಣದಿಂದಲೂ **ಇಂದ್ರನು ಸ್ವರಾಟ್** ಎಂಬ ವಿಶೇಷಣದಿಂದಲೂ ಪ್ರಶಂಸಿತರಾಗಿದ್ದಾರೆ. **(ಸಮ್ರಾಳನ್ಯಃ ಸ್ವರಾಳನ್ಯ ಉಚ್ಯತೇ).**

(೩-೪೬-೧, ೧-೬೧-೯ ಇತ್ಯಾದಿ ಮಂತ್ರಗಳನ್ನು ನೋಡಿ)

ಇದೇ ಸೂಕ್ತದಲ್ಲೂ ಮತ್ತು ಇತರ ಸೂಕ್ತಗಳಲ್ಲೂ ಸಹ ಇಂದ್ರಾವರುಣರಿಬ್ಬರ ವೈಯಕ್ತಿಕವಾದ ಕಾರ್ಯಗಳೂ ಗುಣಗಳೂ ಪ್ರತ್ಯೇಕವಾಗಿಯೇ ವರ್ಣಿತವಾಗಿವೆ

ಎಲೈ ಇಂದ್ರಾವರುಣರೇ, ನೀವು ಜಗತ್ತಿನ ಸಕಲ ಪ್ರಾಣಿಗಳನ್ನೂ ಸೃಷ್ಟಿಸಿ ನಿಮ್ಮ ಶಕ್ತಿಯನ್ನು ಪ್ರಕಟಿಸಿದಾಗ ಮಿತ್ರನು ಪ್ರಶಾಂತರೀತಿಯಲ್ಲಿ ವರುಣನ ಜೊತೆಯಲ್ಲಿಯೂ, ಭಯಂಕರನಾದ ಇಂದ್ರನು ಮರುತ್ತುಗಳ ಜೊತೆಯಲ್ಲಿಯೂ ಪ್ರಕಾಶಿಸುತ್ತಿದ್ದರು

(೭-೮೨-೫)

ವರುಣನು ನಾಶಕನಾದ ಶತ್ರುವನ್ನು ಜಯಿಸುತ್ತಾನೆ. ಇಂದ್ರನು ಕೇವಲ ಮರುತ್ತುಗಳ ಸಹಾಯದಿಂದಲೇ ಬಹುಸಂಖ್ಯಾಕರಾದ ಶತ್ರುಗಳನ್ನು ದೂರಕ್ಕೆ ಓಡಿಸುತ್ತಾನೆ.

(೭-೮೨-೬)

ಇಂದ್ರನು ಯುದ್ಧದಲ್ಲಿ ಶತ್ರುಗಳನ್ನು ನಾಶಪಡಿಸುವುದರಲ್ಲಿಯೇ ಪ್ರೀತಿಯನ್ನು ಪ್ರಕಟಿಸುತ್ತಾನೆ. ಧೃತವ್ರತನಾಗಿ ನಿಯಮಪಾಲನವೇ ವರುಣನ ಕರ್ತವ್ಯವಾಗಿರುತ್ತದೆ.

(೭-೮೩-೯)

ವರುಣನ ಕ್ರೋಧವು ನಮ್ಮನ್ನು ಹಿಂಸಿಸದೇ ನಮ್ಮಿಂದ ದೂರವಾಗಿಯೇ ಇರಲಿ. ಇಂದ್ರನು ನಮಗೆ ವಿಸ್ತಾರವಾದ ಅವಕಾಶವನ್ನು ಕಲ್ಪಿಸಿಕೊಡಲಿ.

(೭-೮೪-೨)

ಒಬ್ಬನಾದ ವರುಣನು ನಾನಾಬಗೆಯ ಚೈತನ್ಯಗಳನ್ನೂ ಧರಿಸಿದ್ದಾನೆ. ಇನ್ನೊಬ್ಬನಾದ ಇಂದ್ರನು ಅನಂತವಾದ ಶತ್ರುಸೈನ್ಯಗಳನ್ನು ಪೂರ್ಣವಾಗಿ ನಾಶಪಡಿಸುತ್ತಾನೆ.

(೭-೮೫-೩)

ಇತ್ಯಾದಿಗಳೆಲ್ಲವೂ ಅವರ ವೈಯಕ್ತಿಕವಾದ ಕ್ರಿಯೆಗಳ ವರ್ಣನವಾದರೆ, ಮುಂದೆ ಅವರ ಸುಸಂಘಟಿತವೂ ಅನ್ಯೋನ್ಯ ಸಾಹಾಯ್ಯಕವೂ ಆದ ಕೆಲವು ಮುಖ್ಯವ್ಯಾಪಾರಗಳ ವರ್ಣನೆಗಳಲ್ಲಿ ಕೆಲವನ್ನು ಪರಿಶೀಲಿಸಬಹುದು.

(೭.೮೫.೩)

ಎಲ್ೈ ಇಂದ್ರಾವರುಣರೇ, ನೀವಿಬ್ಬರೂ ಸಹ ನಿಮ್ಮ ಶಕ್ತಿಯಿಂದ ಉದಕಕ್ಕೆ ಇದ್ದ ತಡೆಯನ್ನು ತಪ್ಪಿಸಿದಿರಿ. ಮತ್ತು ಅವನ್ನು ಪ್ರವಾಹಯೋಗ್ಯವಾಗುವಂತೆ ಮಾಡಿದಿರಿ. ಜಗತ್ಪ್ರಕಾಶಕನಾದ ಸೂರ್ಯನನ್ನು ಅಂತರಿಕ್ಷಕ್ಕೆ ಅಧಿಪತಿಯಾಗಿರುವಂತೆ ಮಾಡಿದಿರಿ ಸೋಮಪಾನದಿಂದ ಉಂಟಾದ ಹರ್ಷದ ಫಲವಾಗಿ ನದಿಯ ದಡಗಳನ್ನೆಲ್ಲಾ ಫಲವತ್ತಾಗುವಂತೆ ಮಾಡಿದಿರಿ. ನಮ್ಮ ಯಜ್ಞಕರ್ಮದ ಉದ್ದಿಶ್ಯವನ್ನು ದಯೆಯಿಟ್ಟು ಸಾರ್ಥಕಪಡಿಸಿರಿ.

(೭.೮೨.೩)

ಎಲೈ ಇಂದ್ರಾವರುಣರೇ. ನಿಮ್ಮ ಮಹಚ್ಛಕ್ತಿಯಿಂದ ನೀವು ಜಗತ್ತಿನ ಸಕಲ ಭೂತಗಳನ್ನೂ ನಿರ್ಮಿಸಿದ್ದೀರಿ

(೭.೮೨.೫)

ಉಳಿದ ಎಲ್ಲಾ ದೇವತೆಗಳೂ ಸಹ ಅಂತರಿಕ್ಷದಲ್ಲಿ ಅತ್ಯುನ್ನತವಾದ ಪ್ರದೇಶದಲ್ಲಿರತಕ್ಕ ಇಂದ್ರಾವರುಣರಿಗೆ ವೀರ್ಯವನ್ನೂ ತೇಜಸ್ಸನ್ನೂ ತುಂಬುತ್ತಾರೆ. (೭.೮೨.೨)

ಇದರಂತೆಯೇ ಇನ್ನು ಕೆಲವು ಮಂತ್ರಗಳಲ್ಲಿ ಇಂದ್ರಾವಿಷ್ಣುಗಳನ್ನು ಒಟ್ಟಿಗೆ ಪ್ರಶಂಸಿಸಿದೆ.

ಅಪ್ರತಿಹತರಾದವರೂ ಮಹಾತ್ಮರೂ ಆದ ಇಂದ್ರ ಮತ್ತು ವಿಷ್ಣುಗಳಿಬ್ಬರೂ ಸಹ ಶಿಖರಗಳಂತಿರುವ ಮೇಘಗಳ ಉನ್ನತವಾದ ಪ್ರದೇಶದಲ್ಲಿ ಪಳಗಿದ ಅಶ್ವಗಳನ್ನು ಹತ್ತಿಕೊಂಡು ಎತ್ತರವಾದ ಪ್ರದೇಶಗಳಿಗೆ ಹತ್ತುತ್ತಿರುವಂತೆ ವೈಭವದಿಂದ ನಿಂತಿರುತ್ತಾರೆ. ಪ್ರಭಾವಶಾಲಿಗಳೂ, ಪರಾಕ್ರಮಿಗಳೂ ಆದ ಇಂದ್ರಾವಿಷ್ಣುಗಳಿಗೆ ನಿಮ್ಮ ಪೋಷಕವಾದ ಸೋಮ ರೂಪವಾದ ಅನ್ನವನ್ನು ಅರ್ಪಿಸಿರಿ.

(೧.೧೫೫.೧)

ಎಲೈ ಇಂದ್ರಾವಿಷ್ಣುಗಳೇ, ನೀವು ಮಾನವನಾದ ಯಜಮಾನನಿಗೆ ಯಜ್ಞಫಲದ ರೂಪದಲ್ಲಿ ಸ್ವೀಕರಿಸಬೇಕಾದ ಅನ್ನಾದಿಗಳನ್ನು ಇಷ್ಟಾರ್ಥಪ್ರದನಾದ ಅಗ್ನಿಯ ಮೂಲಕವಾಗಿ ಯಾವಾಗಲೂ ಒದಗಿಸಿಕೊಡುತ್ತೀರಿ. ಈ ರೀತಿ ಇಷ್ಟಾರ್ಥಪ್ರದಾನಾದಿ ಕರ್ಮಗಳುಳ್ಳ ನಿಮ್ಮಿಬ್ಬರ ಪ್ರಕಾಶಮಾನವಾದುದೂ ಒಡಗೂಡಿದುದೂ ಆದ ಆಗಮನವನ್ನು ಯಜಮಾನನು ಪೂಜಿಸುತ್ತಾನೆ.

(೧.೧೫೫.೨)

ಪ್ರಾಣಿಗಳಿಗೆ ಸಂತಾನೋತ್ಪತ್ತಿಯ ಸಾಮರ್ಥ್ಯವನ್ನುಂಟುಮಾಡುವುದಕ್ಕಾಗಿಯೂ ಭೋಗಗಳನ್ನು ಅನುಭವಿಸುವುದಕ್ಕಾಗಿಯೂ ದ್ಯಾವಾಪೃಥಿವಿಗಳಿಗಾಗಿ ಮಹತ್ತಾದ ಪುರುಷಶಕ್ತಿಯನ್ನು ಹಂಚುತ್ತಾನೆ. ಅತ್ಯಧಿಕವಾಗಿ ಬೆಳಗುವ ಆದಿತ್ಯನ | ಮಂಡಲದಲ್ಲಿ ಸ್ಥಾಪಿತನಾದ ಈ ಶಕ್ತಿಯನ್ನು ವಿಷ್ಣುವಿನ ಅನುಗ್ರಹದಿಂದ ಸಕಲ ಮಾನವನೂ ಪುತ್ರಪೌತ್ರಾದಿ ಸಂಜ್ಞೆಯುಳ್ಳದ್ದನ್ನಾಗಿ ಹೊಂದುತ್ತಾನೆ.

(೧.೧೫೫.೩ ; ೭.೯೯.೬)

ಇಂದ್ರ ಮತ್ತು ಅಗ್ನಿಗಳ ಸಾಹಚರ್ಯವೂ ಅನೇಕ ಕಡೆಗಳಲ್ಲಿ ಪ್ರಶಂಸಿತವಾಗಿದೆ. (೧.೧೦೮ ; ೧.೧೦೯), ಉದಾಹರಣೆಗೆ—

ಎಲೈ ಇಂದ್ರಾಗ್ನಿಗಳೇ, ನೀವು ಕಲ್ಯಾಣಾತ್ಮಕವಾದ ನಿಮ್ಮ ಹೆಸರನ್ನು ಯಾವಾಗಲೂ ಸಂಯುಕ್ತವಾಗಿ ಒಡಗೂಡಿರುವುದೆಂದು ಪ್ರಸಿದ್ಧಮಾಡಿದ್ದೀರಿ. ಮತ್ತು ವೃತ್ರನ ಘಾತಕರಾಗಿ ವೃತ್ರಹನನಕಾಲದಲ್ಲಿಯೂ ಸಹ ಒಡಗೂಡಿದವರಾಗಿಯೇ ಇದ್ದೀರಿ. ಆದುದರಿಂದಲೇ, ಇಷ್ಟಪ್ರದರಾದ ಎಲೈ ಇಂದ್ರಾಗ್ನಿಗಳೇ, ನೀವಿಬ್ಬರೂ ಒಟ್ಟಿಗೆ ಸೇರಿ ಯಜ್ಞವೇದಿಕೆಯಲ್ಲಿ ಕುಳಿತು ಪ್ರವಿಸುತ್ತಿರುವ ನಿಮ್ಮ ಭಾಗದ ಸೋಮರಸವನ್ನು ಪಾನಮಾಡಿರಿ.

(೧-೧೦೮-೩)

ಕೈಯಲ್ಲಿ ವಜ್ರಾಯುಧವನ್ನು ಹಿಡಿದಿರುವ ಎಲೈ ಇಂದ್ರಾಗ್ನಿಗಳೇ, ನಮಗಾಗಿ ಧನವನ್ನು ತೆಗೆದುಕೊಂಡು ಬಂದು ನಮಗೆ ಕೊಡಿರಿ. ಯಜ್ಞಾನುಷ್ಠಾನವನ್ನು ಮಾಡುವ ನಮ್ಮನ್ನು ನಿಮ್ಮ ವೀರ್ಯಕರ್ಮಗಳಿಂದ ರಕ್ಷಿಸಿರಿ. ಸೂರ್ಯರೂಪದ ಇಂದ್ರನ ಯಾವ ಕಿರಣಗಳಿಂದ ನಮ್ಮ ಪಿತೃಪಿತಾಮಹಾದಿಗಳು ಒಟ್ಟಿಗೆ ಬ್ರಹ್ಮಲೋಕವನ್ನು ಸೇರಿಕೊಂಡರೋ, ನಮ್ಮ ಕಣ್ಣಿಗೆ ಕಾಣುವ ಈ ಅದೇ ಕಿರಣಗಳು ನಮ್ಮನ್ನೂ ಅನುಗ್ರಹಿಸಲಿ.

(೧-೧೦೯-೭; ೩-೧೨; ೫-೮೬; ೬-೫೯)

ಇದರಂತೆಯೇ, **ಇಂದ್ರವಾಯೂ, ಇಂದ್ರಾಪೂಷನ್, ಇಂದ್ರಾಸೋಮಾ** ಇತ್ಯಾದಿ ಸಂಯುಕ್ತವರ್ಣನೆಗಳೂ, ಪ್ರಶಂಸೆಗಳೂ ಬಹಳವಾಗಿರುತ್ತವೆ.

**(೪-೪೬ ರಿಂದ ೮)** ಇಂದ್ರವಾಯೂ, (೬-೫೭) ಇಂದ್ರಾಪೂಷನ್; (೬-೭೨, ೭-೧೦೪) ಇಂದ್ರಾಸೋಮಾ.

'ಅನಿಂದ್ರ' ಎಂಬ ಪದಪ್ರಯೋಗವುಳ್ಳ ಮಂತ್ರಗಳಲ್ಲಿ ವರ್ಣಿತವಾಗಿರುವ ಅಂಶವು ಗಮನಾರ್ಹವಾದುದಾಗಿದೆ. ಈ ಪದವು ಅನೇಕ ಸಂದರ್ಭಗಳಲ್ಲಿ ಪ್ರಯುಕ್ತವಾಗಿವೆ.

(೧-೧೩೩-೧, ೪-೨೩-೭; ೫-೨-೩, ೭-೧೮-೧೬, ೧೦-೨೭-೬, ೧೦-೬೮-೭)

'ಅನಿಂದ್ರ' ನೆಂದರೆ ಇಂದ್ರಪೂಜಕನಲ್ಲದವನೆಂದರ್ಥ. ಈ ಪದದಿಂದ ಇಂದ್ರಾದಿದೇವತೆಗಳನ್ನು ಪೂಜಿಸದ ಅನಾರ್ಯರೆಂದಾಗಲಿ ಅಥವಾ ಇಂದ್ರದ್ವೇಷಿಗಳಾದ ಅಸುರೀಶಕ್ತಿಗಳೆಂದಾಗಲಿ ಅರ್ಥವಾಗಬಹುದು.

ಎರಡನೇ ಮಂಡಲದ ಹನ್ನೆರಡನೇ ಸೂಕ್ತದಲ್ಲಿ ಇಂದ್ರನ ಮಹದ್ಗುಣಗಳ ವರ್ಣನವು ಅತ್ಯಂತ ಶ್ರೇಷ್ಠವಾದುದಾಗಿದೆ. ಇದರಲ್ಲಿ ಕೆಲವನ್ನು ಮಾತ್ರ ಪ್ರಕೃತದಲ್ಲಿ ಪರಿಶೀಲಿಸಬಹುದು. ಅವು ಇಂದ್ರನ ವಿಶ್ವನಿಯಾಮಕ ಶಕ್ತಿಯನ್ನು ವರ್ಣಿಸುವುದಾಗಿವೆ.

ಅತ್ಯಂತ ಪ್ರಾಜ್ಞನಾದ ಇಂದ್ರನು ಉತ್ಪನ್ನನಾದೊಡನೆಯೇ, ತನ್ನ ಮಹಚ್ಛಕ್ತಿಯಿಂದ ಇತರ ಸಕಲದೇವತೆಗಳನ್ನೂ ಮೀರಿದ್ದನು. ಎಲೈ ಮಾನವರೇ, ಯಾವ ಇಂದ್ರನ ಶಕ್ತಿಗೂ ಪ್ರಭಾವಕ್ಕೂ ದ್ಯಾವಾಪೃಥಿವಿಗಳೂ ನಡುಗಿದವೋ, ಅವನೇ ಇಂದ್ರನೆಂದು ತಿಳಿಯಿರಿ (೨-೧೨-೧)

ಎಲೈ ಮಾನವರೇ, ಯಾವನು ಕಂಪಿಸುತ್ತಿದ್ದ ಪೃಥ್ವಿಯನ್ನು ಸ್ಥಿರವಾಗಿರುವಂತೆ ನಿಲ್ಲಿಸಿದನೋ. ಯಾವನು ಕ್ಷುಬ್ಧವಾದ ಪರ್ವತಗಳನ್ನು ಅಚಲವಾಗಿರುವಂತೆ ಮಾಡಿದನೋ, ಯಾವನು ಅತ್ಯಂತ ವಿಸ್ತೃತವಾದ ಅಂತರಿಕ್ಷವನ್ನು ನಿರ್ಮಿಸಿದನೋ ಮತ್ತು ದ್ಯುಲೋಕವನ್ನು ಧರಿಸಿದನೋ, ಅವನೇ ಇಂದ್ರನೆಂದು ತಿಳಿಯಿರಿ. (೨-೧೨-೨)

ದೇವತಾತ್ಮನಾದ ನಾನು ಆದಿತ್ಯಾದಿ ದೇವತೆಗಳ ಸಹಾಯದಿಂದಲೇ ಅತ್ಯಂತ ಪ್ರಭಾವಯುತನಾದ ಶಕ್ತಿ

ಯನ್ನೂ, ಅಜೇಯವಾದ ಸ್ಥಿತಿಯನ್ನೂ ಅಪ್ರತಿಹತವಾದ ವೀರ್ಯವನ್ನೂ ಪಡೆದಿದ್ದೇನೆ. ಆದುದರಿಂದ ಆದಿತ್ಯರು, ವಸುಗಳು ಮತ್ತು ದತ್ತುಪುತ್ರರಾದ ಮರುತ್ತುಗಳು ಇವರುಗಳ ಉತ್ತಮ ಸ್ಥಿತಿಗಳಿಗೆ ಭಂಗಬರುವಂತೆ ಮಾಡುವುದಿಲ್ಲ" ಎಂಬ ಈ ಇಂದ್ರನ ವಾಕ್ಯಗಳು (೧೦.೪೮-೧೧) ಇತರ ದೇವತೆಗಳ ವಿಷಯದಲ್ಲಿ ಇಂದ್ರನು ತನ್ನ ಕೃತಜ್ಞತೆಯನ್ನು ಸೂಚಿಸುವ ಸನ್ನಿವೇಶವನ್ನು ತಿಳಿಸುತ್ತವೆ.

ಇತರ ದೇವತೆಗಳಿಂದ ಸಾಧ್ಯವಿಲ್ಲದ ಅಸಾಧಾರಣವಾದ ಕರ್ಮಗಳನ್ನು ಇಂದ್ರನೊಬ್ಬನೇ ನಿರ್ವಹಿಸಿದನೆಂಬ ಪ್ರಶಂಸಾವಾಕ್ಯಗಳಲ್ಲಿ ಕೆಲವುದರ ತಾತ್ಪರ್ಯವನ್ನು ತಿಳಿಸಿ ಈ ಪ್ರಕರಣವನ್ನು ಸಮಾಪ್ತಿಗೊಳಿಸುತ್ತೇವೆ.

ಮಾನವರಿಗಿಂತಲೂ ಮೀರಿದವನೂ, ಇತರ ಸಹಾಯವನ್ನು ಅಪೇಕ್ಷಿಸದವನೂ ಆದ ಇಂದ್ರನೊಬ್ಬನೇ ಸಕಲ ಜೀವರಾಶಿಗಳಿಗಿಂತಲೂ ಅತ್ಯಧಿಕವಾದ ಶಕ್ತಿಯನ್ನು ಹೊಂದಿದ್ದಾನೆ. ಮತ್ತು ಯಾರಿಂದಲೂ ಜಯಿಸಲು ಸಾಧ್ಯವಾಗದ ಶಕ್ತಿಯನ್ನೂ ಹೊಂದಿದ್ದಾನೆ.

(೮-೬೨-೨)

ಉಳಿದ ಸಕಲ ದೇವತೆಗಳೂ ಸಹ ಇಂದ್ರನ ಉತ್ಕೃಷ್ಟವಾದ ವೀರ್ಯವನ್ನೂ, ಪರಾಕ್ರಮವನ್ನೂ ಪ್ರಶಂಸಿಸಿ ತಮ್ಮ ನಮ್ರತೆಯನ್ನು ಪ್ರಕಾಶಪಡಿಸುತ್ತಾರೆ.

(೮-೬೩-೭)

ಇಂದ್ರನನ್ನುದ್ದೇಶಿಸಿದ ನಮ್ಮ ಪ್ರಶಂಸೆಯು ಸತ್ಯಾತ್ಮಕವಾದುದಾಗಿರಲಿ. ಅದರಲ್ಲಿ ಯಾವ ವಿಧವಾದ ಅಪ್ರಮಾಣಿಕತೆಯೂ ಇಲ್ಲದಿರಲಿ. ಇಂದ್ರನನ್ನುದ್ದೇಶಿಸಿ ಸೋಮರಸವನ್ನು ಅರ್ಪಿಸದಿರುವವನಿಗೆ ಅತ್ಯಂತ ಕಠಿನವಾದ ಆಪತ್ತು ಸಂಭವಿಸುತ್ತದೆ. ಆದರೆ, ಸೋಮವನ್ನರ್ಪಿಸಿ ಇಂದ್ರನನ್ನು ಪೂಜಿಸತಕ್ಕ ಭಕ್ತನಿಗೆ ಮಹಜ್ಜ್ಯೋತಿಯಿಂದೊಡಗೂಡಿದ ಪ್ರಭೂತವಾದ ಸಂಪತ್ತು ಲಭಿಸುತ್ತದೆ.

(೮.೬೨-೧೨)

ಇಂದ್ರನಿಗೆ ಸಮಾನವಾದ ದೇವತೆಯೇ ಇಲ್ಲ. ಆದುದರಿಂದ ಅವನನ್ನೂ ಮೀರಿದ ಗುಣಗಳುಳ್ಳ ದೇವತೆಯು ಯಾರೂ ಇರುವ ಸಂಭವವೇ ಇಲ್ಲ.

(೪.೩೦-೧)

ಈ ಇಂದ್ರನು ಯುದ್ಧದಲ್ಲಿ ಸಕಲ ದೇವತೆಗಳನ್ನೂ ತಾನೊಬ್ಬನೇ ಜಯಿಸಿದನು. ಮತ್ತು ಅತ್ಯಂತ ಪ್ರಾಚೀನರಾದ ದೇವತೆಗಳೂ ಸಹ ಇಂದ್ರನ ಪ್ರಭಾವವನ್ನರಿತು ಅವನ ಮುಂದೆ ತಮ್ಮ ನಮ್ರತೆಯನ್ನು ಸೂಚಿಸಿ ಅವನ ಪ್ರಭುತ್ವವನ್ನೊಪ್ಪಿಕೊಂಡನು. (೭-೨೧-೭)

ವರುಣ, ಸೂರ್ಯ ಇತ್ಯಾದಿ ಉಳಿದ ಸಕಲ ದೇವತೆಗಳೂ ಸಹ ಇಂದ್ರನಿಂದ ವಿಹಿತವಾದ ನಿಯಮಕ್ಕೆ ತಲೆಬಾಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

(೧-೧೦೧-೩)

ಮಿತ್ರ, ಅರ್ಯಮ ಮತ್ತು ವರುಣ ಈ ದೇವತೆಗಳಿಗೆ ಸಮಾನವಾದ ಶತ್ರುಗಳನ್ನೆಲ್ಲಾ ಇಂದ್ರನೊಬ್ಬನೇ ಜಯಿಸಿದನು (೧೦-೮೯-೮, ೯) ಇತ್ಯಾದಿ ವಾಕ್ಯಗಳಲ್ಲಿ ನಿರ್ದಿಷ್ಟವಾದ ಸಕಲ ದೇವತೆಗಳಿಗಿಂತಲೂ ಇಂದ್ರನೇ ಅತ್ಯಧಿಕವಾದ ಪ್ರಭಾವವುಳ್ಳವನೆಂದು ತಿಳಿಯುತ್ತದೆ.

## ವೃತ್ರಾಸುರವಧವರ್ಣನೆ

ವೃತ್ರಾಸುರನು ದುಷ್ಟಸ್ವಭಾವದವನು. ಇವನ ಸ್ವಭಾವವು ಯಾರಿಗೂ ತಿಳಿಯದು. ಇವನಿಗೆ ಯಾವ ಉತ್ತಮ ಪರಿಜ್ಞಾನವೂ ಇಲ್ಲ. ಯಾವಾಗಲೂ ಉದಕಗಳನ್ನು ಅಡ್ಡಗಟ್ಟಿ ಮಲಗಿರುವುದೇ ಇವನ ಸ್ವಭಾವ. ಇಂತಹ ನೀಚಸ್ವಭಾವವುಳ್ಳ ವೃತ್ರನನ್ನು ಇಂದ್ರನು ಪೌರ್ಣಮಾಸಿಯ ದಿವಸ ವಜ್ರಾಯುಧದಿಂದ ಸಂಹರಿಸಿದನೆಂದು ವರ್ಣನೆ ಇದೆ. ಈ ವಿಷಯದಲ್ಲಿ ಭಾಷ್ಯಕಾರರು—

ತೈತ್ತಿರೀಯಸಂಹಿತಾವಾಕ್ಯವನ್ನುದಾಹರಿಸಿ ಅದರಲ್ಲಿ ಇಂದ್ರನು ವೃತ್ರನನ್ನು ಪೌರ್ಣಮಾಸಿಯ ದಿನದಲ್ಲಿ ಸಂಹಾರಮಾಡಿರುವ ವಿಷಯವು ಉಕ್ತವಾಗಿವೆಯೆಂದು ತಿಳಿಸಿದಾರೆ. ಇಂದ್ರನು ವೃತ್ರನನ್ನು ಸಂಹಾರಮಾಡಿದ ವಿಷಯವನ್ನು ಎಲ್ಲಾ ಋಷಿಗಳೂ ಪ್ರಶಂಸೆಮಾಡಿರುವುದರಿಂದ ಆ ವೃತ್ರಹನನದ ವಿಸ್ತಾರವಾದ ವಿವರಣೆಯನ್ನು ಇಲ್ಲಿ ಹೇಳುವುದು ಆವಶ್ಯಕವು. ಆದುದರಿಂದ ಆ ವಿವರವನ್ನು ತಿಳಿಸುವ ಯಜುರ್ವೇದದ ಮಂತ್ರಭಾಗವನ್ನೂ ಅದರ ಅರ್ಥಾನುವಾದವನ್ನೂ ಇಲ್ಲಿ ವಿವರಿಸಿದೇವೆ—

> **ತ್ವಷ್ಟಾ ಹತಪುತ್ರೋ ವೀಂದ್ರಗ್ಂ ಸೋಮಮಾಹರತ್ತಸ್ಮಿನ್ನಿಂದ್ರ ಉಪಹವಮೈಚ್ಛತ ತಂ ನೋಪಾಹ್ವಯತ ಪುತ್ರಂ ಮೇಽವಧೀರಿತಿ ಸ ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮಮಪಿಬತ್ತಸ್ಯ ಯದತ್ಯಶಿಷ್ಯತ ತತ್ತ್ವಷ್ಟಾಹವನೀಯಮುಪ ಪ್ರಾವರ್ತಯತ್ಸ್ವಾಹೇಂದ್ರಶತ್ರುರ್ವರ್ಧಸ್ವೇತಿ ಯದವರ್ತಯತ್ತದ್ವೃತ್ರಸ್ಯ ವೃತ್ರತ್ವಂ ಯದಬ್ರವೀತ್ಸ್ವಾಹೇಂದ್ರಶತ್ರುರ್ವರ್ಧಸ್ವೇತಿ ತಸ್ಮಾದಸ್ಯೇಂದ್ರಃ ಶತ್ರುರಭವತ್ಸ ಸಂಭವನ್ನಗ್ನೀಷೋಮಾವಭಿ ಸಮಭವತ್ಸ ಇಷುಮಾತ್ರಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾನ್ ಲೋಕಾನವೃಣೋದ್ಯದಿಮಾನ್ ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ ತಸ್ಮಾದಿಂದ್ರೋಽಬಿಭೇತ್ ||**
>
> (ತೈ. ಸಂ. ೨-೫-೨-೧)

ಈ ಅನುವಾಕದಲ್ಲಿ ಇಂದ್ರನು ವೃತ್ರನನ್ನು ಸಂಹರಿಸಿದ ವಿವರವು ಉಕ್ತವಾಗಿದೆ. ಈ ಕಥಾಸಂದರ್ಭಕ್ಕೆ ಹಿನ್ನೆಲೆಯಾಗಿ ಇನ್ನೊಂದು ಉಪಾಖ್ಯಾನವಿರುವುದು ಅದನ್ನು ನಾವು ಹಿಂದೆ ವಿವರಿಸಿರುವೆವಾದರೂ ಇಲ್ಲಿ ಮುಂದಿನ ವಿವರಣೆಗೆ ಪೀಠಿಕಾರೂಪವಾಗಿ ಸೂಕ್ಷ್ಮರೀತಿಯಿಂದ ವಿವರಿಸುವುದು ಆವಶ್ಯಕವು. ಪೂರ್ವದಲ್ಲಿ ತ್ವಷ್ಟೃ ಪ್ರಜಾಪತಿಗೆ ವಿಶ್ವರೂಪನೆಂಬ ಪುತ್ರನಿದ್ದನು. ಅವನು ದೇವತೆಗಳಿಗೆ ಪುರೋಹಿತನಾಗಿದ್ದನು ಆದರೂ ಇವನು ಅಸುರಸ್ತ್ರೀಯಲ್ಲಿ ಜನಿಸಿದವನಾದ್ದರಿಂದ ಇವನಿಗೆ ಅಸುರರ ವಿಷಯದಲ್ಲಿ ವಿಶೇಷವಾಗಿ ಅಭಿಮಾನವಿತ್ತು. ಹೀಗಿರುವಾಗ ಈ ವಿಶ್ವರೂಪನು ನಮಗೆ ಪುರೋಹಿತನಾಗಿದ್ದರೂ ಅಸುರಪಕ್ಷಪಾತಿಯಾದ್ದರಿಂದ ಸಮಯಸಾಧಿಸಿ ಅಸುರರಿಗೆ ಸಹಾಯಮಾಡುತ್ತಾ ದೇವತೆಗಳಿಗೆ ರಾಜ್ಯವೇ ಇಲ್ಲದಂತೆ ಒಳಸಂಚು ನಡೆಸಬಹುದೆಂದು ಇಂದ್ರನು ಹೆದರಿದನು. ಆದ್ದರಿಂದ ಇಂದ್ರನು ಇವನನ್ನು ಉಪಾಯಾಂತರದಿಂದ ಸಂಹಾರಮಾಡಿದನು. ಈ ವಿಷಯವನ್ನೇ ಇಲ್ಲಿ **ತ್ವಷ್ಟಾ ಹತಪುತ್ರಃ ವೀಂದ್ರಗ್ಂ ಸೋಮಮಾಹರತ್** ಎಂಬ ವಾಕ್ಯದಿಂದ ಹೇಳಲಾಗಿದೆ. ತನ್ನ ಮಗನನ್ನು ಕೊಂದನೆಂಬ ಕೋಪದಿಂದ ತ್ವಷ್ಟೃವು ತಾನು ಯಜ್ಞ ಮಾಡುವಾಗ ಇಂದ್ರನನ್ನು ಯಜ್ಞದಲ್ಲಿ ಆಹ್ವಾನಮಾಡದೆ ಅವನನ್ನು ಬಿಟ್ಟೇ ಯಜ್ಞಮಾಡಿದನು. ಅವನಿಗೆ ಪಾನಾರ್ಥವಾಗಿ ಸೋಮವನ್ನೂ ಕೊಡಲಿಲ್ಲ. ಅದರಿಂದ ಕೋಪಗೊಂಡ ಇಂದ್ರನು ಅವನ ಯಜ್ಞಕ್ಕೆ ಬಂದು ಯಜ್ಞಕ್ಕೆ ವಿಘ್ನವನ್ನುಂಟುಮಾಡಿದ್ದಲ್ಲದೆ ಯಜ್ಞಕ್ಕಾಗಿ ಸಿದ್ಧಪಡಿಸಿಟ್ಟಿದ್ದ ಸೋಮರಸವನ್ನು ಬಲಾತ್ಕಾರವಾಗಿ ಪಾನಮಾಡಿದನು. ಇದನ್ನು

ನೋಡಿ ತ್ವಷ್ಟೃವು ಇಂದ್ರನಿಗೆ ತಕ್ಕಪ್ರತೀಕಾರಮಾಡಬೇಕೆಂದು ಯೋಚಿಸಿ ಇಂದ್ರನು ಕುಡಿದು ಮಿಕ್ಕ ಸೋಮರಸವನ್ನು ಆಹವನೀಯಾಗ್ನಿಯಲ್ಲಿ ಸುರಿದು **ಸ್ವಾಹೇಂದ್ರಶತ್ರುರ್ವರ್ಧಸ್ವ**—ಇಂದ್ರನನ್ನು ಜಯಿಸುವ ಮತ್ತು ಇಂದ್ರನಿಗೆ ಶತ್ರುವಾದ ಪುತ್ರನುಂಟಾಗಲಿ ಎಂದು ಅಗ್ನಿಯನ್ನು ಪ್ರಾರ್ಥಿಸುತ್ತಾ ಸೋಮಶೇಷವನ್ನು ಅಗ್ನಿಯಲ್ಲಿ ಹೋಮಮಾಡಿದನು. ಹೀಗೆ ಹೋಮಮಾಡುವಾಗ ಮಂತ್ರದಲ್ಲಿ ಸ್ವರವ್ಯತ್ಯಾಸವಾದುದರಿಂದ ಇಂದ್ರನನ್ನು ಜಯಿಸುವ ಪುತ್ರನಿಗೆ ಬದಲಾಗಿ ಇಂದ್ರನಿಂದ ಜಯಿಸಲ್ಪಡುವ ಪುತ್ರನಾದನು. ಈ ಪುತ್ರನೇ ವೃತ್ರನು. ಇದೇ ಇವನ ಉತ್ಪತ್ತಿಯ ಕ್ರಮವು. ಯಜ್ಞಾದಿಗಳಲ್ಲಿ ಮಂತ್ರಪಠನಮಾಡುವಾಗ ಸ್ವರವ್ಯತ್ಯಾಸವಾದರೆ ಯಜಮಾನನಿಗೆ ಹಾನಿಯುಂಟಾಗುವುದೆಂದು:—

**ದುಷ್ಟಃ ಶಬ್ದಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ ।**
**ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥**
(ಪಾಣಿನೀಯಶಿಕ್ಷಾ)

ಪಾಣಿನಿಮಹರ್ಷಿಯು ಈ ಮಂತ್ರವನ್ನೇ ಉದಾಹರಣೆಯನ್ನಾಗಿ ತೆಗೆದುಕೊಂಡು ಹೇಳಿದರು. ಹೀಗ ಮಂತ್ರದ ಸ್ವರವ್ಯತ್ಯಾಸದಿಂದ ತ್ವಷ್ಟೃವಿಗೆ ತನಗೆ ಬೇಕಾದ ಇಂದ್ರನನ್ನು ನಿಗ್ರಹಿಸುವ ಪುತ್ರನಿಗೆ ಬದಲಾಗಿ ಇಂದ್ರನಿಂದ ಸಂಹೃತನಾಗುವ ಪುತ್ರನು ಜನಿಸಿದನು. ಆದರೂ ಆ ವೃತ್ರನು, ಅಗ್ನಿಯಲ್ಲಿ ಅಗ್ನಿ ಮತ್ತು ಸೋಮದೇವತೆಗಳನ್ನು ಉದ್ದೇಶಿಸಿ ಮಾಡಿದ ಹವಿಸ್ಸಿನಿಂದ ವೃದ್ಧಿಯನ್ನೈದುತ್ತಾ ಬಂದನು. ಅವನು ಪ್ರತಿದಿನವೂ ಒಂದು ಬಿಲ್ಲಿನ ಪ್ರಮಾಣದಂತೆ ಬೆಳೆಯುತ್ತಾ ದೊಡ್ಡ ಆಕಾರವುಳ್ಳವನಾಗಿ ಈ ಲೋಕಗಳನ್ನೆಲ್ಲಾ ಎಲ್ಲೆಲ್ಲಿಯೂ ವ್ಯಾಪಿಸಿದನು. ಹೀಗೆ ಸರ್ವಪ್ರದೇಶಗಳನ್ನೂ ವ್ಯಾಪಿಸುವ ಸ್ವಭಾವವುಳ್ಳವನಾದ್ದರಿಂದ ವೃತ್ರನಿಗೆ ವೃತ್ರನೆಂದು ಹೆಸರಾಯಿತು. ಆಚ್ಛಾದಿಸು, ಮುಚ್ಚು ವ್ಯಾಪಿಸು ಎಂಬರ್ಥವುಳ್ಳ ವೃಞ್ ವರಣೇ ಎಂಬ ಧಾತುವಿನಿಂದ ವೃತ್ರಶಬ್ದವು ನಿಷ್ಪನ್ನವಾಗಿ ಇವನು ಸರ್ವವನ್ನೂ ವ್ಯಾಪಿಸುವವನು ಎಂಬ ಅನ್ವರ್ಥನಾಮವನ್ನು ಸೂಚಿಸುವುದು. ವೃತ್ರನ ಈ ವಿಧವಾದ ಬೆಳವಣಿಗೆಯನ್ನು ಕಂಡು ಇಂದ್ರನು ಹೆದರಿದನು.

**ಸ ಪ್ರಜಾಪತಿಮುಪಾಧಾವಚ್ಛತ್ರುರ್ಮೇಽಜನೀತಿ ತಸ್ಮೈ ವಜ್ರಗ್ಂ ಸಿಕ್ತ್ವಾ ಪ್ರಾಯಚ್ಛ-ದೇತೇನ ಜಹೀತಿ ತೇನಾಭ್ಯಾಯತ ॥**

ಬಳಿಕ ಇಂದ್ರನು ಪ್ರಜಾಪತಿಯ ಸಮೀಪಕ್ಕೆ ಹೋಗಿ ಎಲೈ ಬ್ರಹ್ಮನೇ, ನನಗೆ ಒಬ್ಬ ಶತ್ರುವು ಜನಿಸಿರುವನು. ಅವನನ್ನು ಸಂಹರಿಸುವ ಬಗೆ ಹೇಗೆ ಎಂದು ಪ್ರಾರ್ಥಿಸಲು ಪ್ರಜಾಪತಿಯು ಇಂದ್ರನನ್ನು ಹೆದರಬೇಡವೆಂದು ಸಂತೈಸಿ ಅವನ ವಜ್ರಾಯುಧವನ್ನು ಹರಿತವನ್ನಾಗಿ ಮಾಡಿಕೊಟ್ಟು ಈ ಆಯುಧದಿಂದ ನಿನ್ನ ಶತ್ರುವನ್ನು ಸಂಹರಿಸೆಂದು ಹೇಳಲು ಇಂದ್ರನು ಅದನ್ನು ತೆಗೆದುಕೊಂಡು ವೃತ್ರನ ಬಳಿಗೆ ಬಂದನು.

**ತಾವಬ್ರೂತಾಮಗ್ನೀಷೋಮೌ ಮಾ ಪ್ರಹಾರಾವಮಂತಃ ಸ್ವ ಇತಿ ಮಮ ವೈ ಯುವಗ್ಂ ಸ್ಥ ಇತ್ಯ-ಬ್ರವೀನ್ಮಾಮಭ್ಯೇತಮಿತಿ ತೌ ಭಾಗಧೇಯಮೈಚ್ಛೇತಾಂ ತಾಭ್ಯಾಮೇತಮಗ್ನೀಷೋಮೀಯ-ಮೇಕಾದಶಕಪಾಲಂ ಪೂರ್ಣಮಾಸೇ ಪ್ರಾಯಚ್ಛತ್ತಾವಬ್ರೂತಾಮಭಿ ಸಂದಷ್ಟೌ ವೈ ಸ್ವೋ ನ ಶಕ್ನುವ ಐತುಮಿತಿ ಸ ಇಂದ್ರ ಆತ್ಮನಃ ಶೀತರೂರಾವಜನಯತ್ತಚ್ಛೀತರೂರಯೋರ್ಜನ್ಮ ಯ ಏವಗ್ಂ ಶೀತರೂರಯೋರ್ಜನ್ಮ ವೇದ ನೈನಗ್ಂ ಶೀತರೂರೌ ಹತಸ್ತಾಭ್ಯಾಮೇನಮಭ್ಯನ-ಯತ್ತಸ್ಮಾಜ್ಜಂಜಭ್ಯಮಾನಾದಗ್ನೀಷೋಮೌ ನಿರಕ್ರಾಮತಾಂ ॥**

ಅನಂತರ ಇಂದ್ರನು ತನ್ನ ಆಯುಧದಿಂದ ವೃತ್ರನನ್ನು ಪ್ರಹರಿಸಲು ಉದ್ಯುಕ್ತನಾದಾಗ ಅಗ್ನಿ ಮತ್ತು ಸೋಮರು ಇಂದ್ರನನ್ನು ಹೊಡೆಯಬೇಡವೆಂದು ತಡೆದು—ಎಲೈ ಇಂದ್ರನೇ, ಈಗ ವೃತ್ರನನ್ನು ಹೊಡೆಯಬೇಡ. ಅಗ್ನಿಸೋಮ ದೇವತೆಗಳಾದ ನಾವು ಈ ವೃತ್ರನ ಮುಖದಲ್ಲಿ ವಾಸಿಸುತ್ತಿರುವೆವು ಎನ್ನಲು, ಇಂದ್ರನು ಎಲೈ ಅಗ್ನಿಸೋಮರೇ, ನೀವು ನಮ್ಮವರು ತಾನೆ. ಆದ್ದರಿಂದ ನೀವು ವೃತ್ರನ ಶರೀರವನ್ನು ಬಿಟ್ಟು ನನ್ನ ಬಳಿಗೆ ಬನ್ನಿ. ಅನಂತರ ನಾನು ವೃತ್ರನನ್ನು ಸಂಹರಿಸುವೆನು ಎಂದನು. ಅದನ್ನು ಕೇಳಿ ಅಗ್ನೀಸೋಮದೇವತೆಗಳು—ಎಲೈ ಇಂದ್ರನೇ, ನೀನು ಹೇಳುವಂತೆ ನಾವು ಮಾಡುವುದಾದರೆ ನಮಗೆ ಏನು ಉಪಕಾರಮಾಡುತ್ತೀಯೆ? ನಮಗೂ ಯಜ್ಞದಲ್ಲಿ ಭಾಗವನ್ನು ಕಲ್ಪಿಸಿ ಕೊಡುವುದಾದರೆ ನೀನು ಹೇಳುವಂತೆ ಕೇಳುವೆವು ಎನ್ನಲು ಅದಕ್ಕೆ ಇಂದ್ರನು ಸಮ್ಮತಿಸಿ ಅವರಿಗೆ ಪೂರ್ಣಮಾಸ ಯಾಗದಲ್ಲಿ ಏಕಾದಶ ಕಪಾಲವೆಂಬ ಪುರೋಡಾಶ ಹವಿಸ್ಸಿನ ಆಹುತಿಭಾಗವನ್ನು ಕಲ್ಪಿಸಿಕೊಟ್ಟನು. ಬಳಿಕ ಅಗ್ನಿ ಸೋಮದೇವತೆಗಳು ಈ ರೀತಿ ತಮಗೆ ಬೇಕಾದ ವರವನ್ನು ಪಡೆದರೂ ಸಹ ಇಂದ್ರನನ್ನು ಕುರಿತು—ಎಲೈ ಇಂದ್ರನೇ, ಈಗ ನಾವು ವೃತ್ರನ ಮುಖದಿಂದ ಹೊರಟುಬರಲು ಸಾಧ್ಯವಿಲ್ಲ. ನಾವು ವೃತ್ರನ ಹಲ್ಲುಗಳ ಮಧ್ಯಸಿಕ್ಕಿ ಬಲವಾಗಿ ಒತ್ತಲ್ಪಟ್ಟಿದ್ದೇವೆ. ಅವನು ಬಾಯನ್ನು ತೆರೆದಲ್ಲದೆ ನಾವು ಈಚೆಗೆ ಬರಲಾಗುವುದಿಲ್ಲ ಎಂದರು. ಆಗ ಇಂದ್ರನು ಇದಕ್ಕೊಂದುಪಾಯವನ್ನು ಯೋಚಿಸಿದನು. ತನ್ನ ಶರೀರದಿಂದ ಶೀತಜ್ವರ ಮತ್ತು ಅದರಿಂದ ಉಂಟಾಗುವ ಮಹಾತಾಪವನ್ನು ಸೃಷ್ಟಿಮಾಡಿದನು. ಛಳಿಜ್ವರವು ಪ್ರಪಂಚದಲ್ಲಿ ಜನರನ್ನು ಬಾಧಿಸುವುದಕ್ಕೆ ಇದೇ ಮೊದಲು. ಈ ಛಳಿಜ್ವರದ, ಈ ರೀತಿಯಾದ ಉತ್ಪತ್ತಿಕ್ರಮವನ್ನು ಯಾವ ಪುರುಷನು ತಿಳಿಯುವನೋ ಅವನಿಗೆ ಈ ಶೀತಜ್ವರದಿಂದ ಬಾಧೆ ಇರುವುದಿಲ್ಲ. ಬಳಿಕ ಇಂದ್ರನು ತಾನು ಸೃಷ್ಟಿಸಿದ ಛಳಿಜ್ವರಗಳನ್ನು ಕರೆದುಕೊಂಡು ಹೋಗಿ ವೃತ್ರಾಸುರನ ಶರೀರವನ್ನು ಪ್ರವೇಶಿಸುವಂತೆ ಮಾಡಿದನು. ಆಗ ವೃತ್ರಾಸುರನು ಛಳಿಯಿಂದ ನಡಗುತ್ತಾ ಜ್ವರದ ತಾಪದಿಂದ ಬಳಲಿ ಆಯಾಸದಿಂದ ನಿಟ್ಟುಸಿರನ್ನು ಬಿಡುವುದಕ್ಕಾಗಿ ಬಾಯನ್ನು ಅಗಲವಾಗಿ ತೆರೆದನು. ತಕ್ಷಣ ಅವನ ಬಾಯಿಯಿಂದ ಅಗ್ನಿಸೋಮದೇವತೆಗಳು ಹೊರಹೊರಟು ಈಚೆಗೆ ಬಂದರು.

**ಪ್ರಾಣಾಪಾನೌ ವಾ ಏನಂ ತದಜಹಿತಾಂ ಪ್ರಾಣೋ ವೈ ದಕ್ಷೋಽಪಾನಃ ಕ್ರತುಸ್ತಸ್ಮಾಜ್ಜಂಜಭ್ಯಮಾನೋ ಬ್ರೂಯಾನ್ಮಯಿ ದಕ್ಷಕ್ರತೂ ಇತಿ ಪ್ರಾಣಾಪಾನಾವೇವಾತ್ಮನ್ಧತ್ತೇ ಸರ್ವಮಾಯುರೇತಿ ।**

ಅನಂತರ ಪ್ರಾಣ, ಅಪಾನ ಎಂಬ ವಾಯುಗಳು ಆ ವೃತ್ರನನ್ನು ತ್ಯಜಿಸಿದವು. ಎಂದರೆ ಅವನ ಶರೀರವನ್ನು ಬಿಟ್ಟು ಹೋದವು. ಪ್ರಾಣಶಬ್ದಕ್ಕೆ ದಕ್ಷವೆಂದೂ, ಅಪಾನಶಬ್ದಕ್ಕೆ ಕ್ರತುವೆಂದೂ ಅರ್ಥವಿರುವುದು. ದಕ್ಷವೆಂದರೆ ಕೆಲಸ ಕಾರ್ಯಗಳಲ್ಲಿ ಕುಶಲತೆಯು, ಪ್ರಜ್ಞೆಯು. ಕ್ರತುವೆಂದರೆ ಕೆಲಸಮಾಡುವ ದೇಹಶಕ್ತಿ, ಸಾಮರ್ಥ್ಯ, ಇವೆರಡೂ ಬಾಯನ್ನು ತೆರೆದಿದ್ದ ಆ ವೃತ್ರನನ್ನು ಬಿಟ್ಟು ಹೋದವು. ಆದ್ದರಿಂದ ಯಜ್ಞಕರ್ಮವನ್ನು ನೆರವೇರಿಸುತ್ತಿರುವಾಗ ದೇಹಚೇಷ್ಟೆ ಮಾಡಿದರೂ, ಆಕಳಿಸಿ ಬಾಯನ್ನು ತೆರೆದರೂ ಆಗ **ಮಯಿ ದಕ್ಷಕ್ರತೂ** ಎಂಬ ಮಂತ್ರವನುಚ್ಚರಿಸಬೇಕು. ಹಾಗೆ ಮಾಡಿದರೆ ಪ್ರಾಣಾಪಾನಗಳು ಯಜಮಾನನ್ನು ಬಿಟ್ಟು ಹೋಗದೆ ಸ್ಥಿರವಾಗಿ ನಿಲ್ಲುವವು. ದೀರ್ಘಾಯುಸೂ ಉಂಟಾಗುವುದು.

**ಸ ದೇವತಾ ವೃತ್ರಾನ್ನಿರ್ಹೂಯ ವಾರ್ತ್ರಘ್ನಗ್ಂ ಹವಿಃ ಪೂರ್ಣಮಾಸೇ ನಿರವಪದ್ ಘ್ನಂತಿ ವಾ ಏನಂ ಪೂರ್ಣಮಾಸ ಆಮಾವಾಸ್ಯಾಯಾಂ ಪ್ಯಾಯಯಂತಿ ತಸ್ಮಾದ್ವಾರ್ತ್ರಘ್ನೀ ಪೂರ್ಣಮಾಸೇಽನೂಚ್ಯೇತೇ ವೃಧನ್ವತೀ ಅಮಾವಾಸ್ಯಾಯಾಂ ॥**

ಅನಂತರ ಇಂದ್ರನು ವೃತ್ರಾಸುರನ ಮುಖದಲ್ಲಿ ಇದ್ದ ಅಗ್ನೀಷೋಮಾದಿದೇವತೆಗಳನ್ನೆಲ್ಲಾ ಅಲ್ಲಿಂದ ಈಚೆಗೆ ಕರೆದು ವೃತ್ರನ ಸಂಹಾರಕ್ಕೆ ಸಾಧನಭೂತವಾದ ಹವಿರಾಜ್ಯಭಾಗದ್ರವ್ಯರೂಪವಾದ ಆಹುತಿಯನ್ನು ಪೌರ್ಣಮಾಸಿಯ ದಿವಸ ಸಿದ್ಧಪಡಿಸಿದನು. ಲೋಕವ್ಯವಹಾರದಲ್ಲಿಯೂ ಅಂಧಕಾರವೆಂಬ ಎಲ್ಲೆಲ್ಲಿಯೂ ಆವರಿಸಿರುವ ಕತ್ತಲೆಯೆಂಬ ಶತ್ರುವು ಪೌರ್ಣಮಾಸಿಯ ಪ್ರಕಾಶಮಾನವಾದ ಬೆಳದಿಂಗಳಿನಿಂದ ನಾಶವಾಗುವ ವಿಷಯವು ಎಲ್ಲರಿಗೂ ತಿಳಿದೇ ಇದೆ. ಆದರೆ ಅಮಾವಾಸ್ಯೆಯ ದಿವಸ ಬೆಳದಿಂಗಳಿನ ಪ್ರಕಾಶವು ಇರುವುದಿಲ್ಲವಾದುದರಿಂದ ಆಗ ಕತ್ತಲೆಯೆಂಬ ಶತ್ರುವು (ವೃತ್ರ) ಎಲ್ಲೆಲ್ಲಿಯೂ ಆವರಿಸಿ ವೃದ್ಧಿಯಾಗುವುದು. ಆದುದರಿಂದ ವೃತ್ರಹನನಕ್ಕಾಗಿ ಪೂರ್ಣಮಾಸಿಯ ದಿವಸ ಅಗ್ನೀಷೋಮೀಯ ಆಜ್ಯಭಾಗಗಳೆಂಬ ಆಹುತಿಗಳಿಗೆ ಪೂರ್ವಭಾವಿಯಾಗಿ,

**ಅಗ್ನಿರ್ವೃತ್ರಾಣಿ ಜಂಘನದ್ದ್ರವಿಣಸ್ಯುರ್ವಿಪನ್ಯಯಾ । ಸಮಿದ್ಧಃ ಶುಕ್ರ ಆಹುತಃ ।**

(ಋ. ಸಂ. ೬-೧೬-೩೪)

**ತ್ವಂ ಸೋಮಾಸಿ ಸತ್ಪತಿಸ್ತ್ವಂ ರಾಜೋತ ವೃತ್ರಹಾ । ತ್ವಂ ಭದ್ರೋ ಅಸಿ ಕ್ರತುಃ ॥**

(ಋ. ಸಂ ೧-೯೧-೫)

ಎಂಬ ಋಕ್ಕುಗಳನ್ನು ಪುರೋನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕು ಈ ಎರಡು ಋಕ್ಕುಗಳಲ್ಲಿಯೂ ವೃತ್ರಹನನವನ್ನು ಸೂಚಿಸುವ ಶಬ್ದಗಳ ಪ್ರಯೋಗವಿರುವುದರಿಂದ ಈ ಋಕ್ಕುಗಳಿಗೆ ವಾರ್ತ್ರಘ್ನೀ ಋಕ್ಕುಗಳೆಂದು ಹೆಸರು. ಏಕೆಂದರೆ—ಪೌರ್ಣಮಾಸಿಯ ದಿವಸವೇ ವೃತ್ರನ ಸಂಹಾರವಾಯಿತು ಆದುದರಿಂದ ಆ ದಿವಸ ವೃತ್ರಹನನ ಸಂಬಂಧವಾದ ಋಕ್ಕುಗಳನ್ನು ಪಠಿಸಿ ಹೋಮಮಾಡುವುದು ಯುಕ್ತವಾಗಿದೆ. ಅಮಾವಾಸ್ಯೆಯ ದಿವಸ ಅಂಧಕಾರವು ವೃದ್ಧಿಯಾಗಿರುವುದು. ಎಂದರೆ, ತಮಸ್ಸಿನಿಂದ ಸರ್ವವನ್ನು ವ್ಯಾಪಿಸುವ ವೃತ್ರನು ಅಭಿವೃದ್ಧಿಯನ್ನೈದುವನು. ಆದುದರಿಂದ ಆ ದಿವಸ ವೃಧು-ವೃದ್ಧೌ ಎಂಬ ವೃದ್ಧಿಯನ್ನು ಸೂಚಿಸುವ ಧಾತುವಿನಿಂದ ನಿಷ್ಪನ್ನವಾದ ಶಬ್ದಗಳನ್ನೊಳಗೊಂಡ—

**ಅಗ್ನಿಃ ಪ್ರತ್ನೇನ ಮನ್ಮನಾ ಶುಂಭಮಾನಸ್ತನ್ವಂ೧ ಸ್ವಾಂ । ಕವಿರ್ವಿಪ್ರೇಣ ವಾವೃಧೇ ॥**

(ಋ. ಸಂ ೮-೪೪-೧೨)

**ಸೋಮ ಗೀರ್ಭಿಷ್ಟ್ವಾ ವಯಂ ವರ್ಧಯಾಮೋ ವಚೋವಿದಃ । ಸುಮೃಳೀಕೋ ನ ಆ ವಿಶ ॥**

(ಋ. ಸಂ. ೧-೯೧-೧೧)

ಎಂಬ ಋಕ್ಕುಗಳನ್ನು ಪಠಿಸಬೇಕು ವೃದ್ಧಿಯನ್ನು ಸೂಚಿಸುವ ಶಬ್ದಗಳಿಂದ ಸಹಿತವಾದ ಈ ಋಕ್ಕುಗಳಿಗೆ ವೃಧನ್ವತೀ ಋಕ್ಕುಗಳೆಂದು ಹೆಸರು. ಇವುಗಳನ್ನು ಅಂಧಕಾರದಿಂದ ವೃದ್ಧಿಯಾಗಿರುವ ಅಮಾವಾಸ್ಯೆಯ ದಿವಸ ಪಠಿಸಬೇಕು.

**ತಸ್ಸಗ್ಂಸ್ಥಾಪ್ಯ ವಾರ್ತ್ರಘ್ನಗ್ಂ ಹವಿರ್ವಜ್ರಮಾದಾಯ ಪುನರಭ್ಯಾಯತ ತೇ ಅಬ್ರೂತಾಂ ದ್ಯಾವಾಪೃಥಿವೀ ಮಾ ಪ್ರಹಾರಾವಯೋರ್ವೈ ಶ್ರಿತ ಇತಿ ತೇ ಅಬ್ರೂತಾಂ ವರಂ ವೃಣಾವಹೈ ನಕ್ಷತ್ರವಿಹಿತಾಹಮಸಾನೀತ್ಯಸಾವಬ್ರವೀಚ್ಚಿತ್ರವಿಹಿತಾಹಮಿತೀಯಂ ತಸ್ಮಾನ್ನಕ್ಷತ್ರವಿಹಿತಾಸೌ ಚಿತ್ರವಿಹಿತೇಯಂ ಯ ಏವಂ ದ್ಯಾವಾಪೃಥಿವ್ಯೋರ್ವರಂ ವೇದೈನಂ ವರೋ ಗಚ್ಛತಿ ಸ ಆಭ್ಯಾಮೇವ ಪ್ರಸೂತ ಇಂದ್ರೋ ವೃತ್ರಮಹನ್ ॥**

ಅನಂತರ ಇಂದ್ರನು ವೃತ್ರಹನನಹೇತುಭೂತವಾದ ಆಜ್ಯಭಾಗ ಮತ್ತು ಹವಿಸ್ಸುಗಳನ್ನು ಪೂರ್ತಿಯಾಗಿ ನೆರವೇರಿಸಿ ಹಿಂದಿನ ವಜ್ರಾಯುಧವನ್ನು ಕೈಯಲ್ಲಿ ಹಿಡಿದುಕೊಂಡು ವೃತ್ರನನ್ನು ಸಂಹಾರಮಾಡುವ ಉದ್ದಿಶ್ಯದಿಂದ ಅವನ ಅಭಿಮುಖವಾಗಿ ನುಗ್ಗಿಹೋದನು. ಆಗ ದ್ಯಾವಾಪೃಥಿವಿಗಳು (ಭೂಮ್ಯಂತರಿಕ್ಷಗಳು) ಇಂದ್ರನನ್ನು ತಡೆದು—ಎಲೈ ಇಂದ್ರನೇ, ನೀನು ಈ ವೃತ್ರನನ್ನು ಕೊಲ್ಲಬೇಡ. ಇವನು ಭೂಮಿಯಿಂದ ಸ್ವರ್ಗಪರ್ಯಂತರ ಇರುವ ಪ್ರದೇಶವನ್ನೆಲ್ಲಾ ವ್ಯಾಪಿಸಿ ಇರುವನು. ನಮ್ಮನ್ನಾಶ್ರಯಿಸಿ ಇರುವ ಇವನನ್ನು ನಾವು ಬಿಟ್ಟುಕೊಡಲಾರೆವು ಎಂದವು. ಅದಕ್ಕೆ ಇಂದ್ರನು ಒಪ್ಪದಿರಲು ಮತ್ತೆ ದ್ಯಾವಾಪೃಥಿವಿಗಳು ಇಂದ್ರನನ್ನು ಕುರಿತು-ಎಲೈ ಇಂದ್ರನೇ, ಒಂದುವೇಳೆ ನಾವು ವೃತ್ರಸಂಹಾರಕ್ಕೆ ಅವಕಾಶವನ್ನು ಕೊಡುವುದಾದರೆ ನಾವು ಕೇಳುವ ವರವನ್ನು ಕೊಡಬೇಕು ಎಂದು ಹೇಳಲು ಇಂದ್ರನು ಹಾಗೆಯೇ ಆಗಲೆಂದನು. ಆಗ ಅಂತರಿಕ್ಷವು (ದ್ಯೌ) ತಾನು ನಕ್ಷತ್ರಗಳಿಂದ ಅಲಂಕೃತವಾಗಿರಬೇಕೆಂದು ವರವನ್ನು ಬೇಡಿತು ಭೂಮಿಯು ನಾನಾವಿಧವಾದ ಮನುಷ್ಯಪಶುವೃಕ್ಷಪರ್ವತನದೀಸಮುದ್ರಾದಿ ವಿಚಿತ್ರವಸ್ತುಗಳಿಂದ ಕೂಡಿರಬೇಕೆಂದು ವರವನ್ನು ಕೇಳಿತು. ಇಂದ್ರನು ಅದರಂತೆ ವರವನ್ನು ಕೊಟ್ಟನು. ದ್ಯಾವಾಪೃಥಿವಿಗಳ ಈ ವಿಧವಾದ ವರಪ್ರಾಪ್ತಿ ಕ್ರಮವನ್ನು ತಿಳಿಯುವ ಪುರುಷನು ತನಗೆ ಬೇಕಾದ ಇಷ್ಟಾರ್ಥಗಳನ್ನು ಪಡೆದು ಸುಖಿಸುವನು. ಬಳಿಕ ಇಂದ್ರನು ದ್ಯಾವಾಪೃಥಿವಿಗಳ ಅನುಮತಿಯನ್ನು ಪಡೆದು ವೃತ್ರನನ್ನು ವಜ್ರಾಯುಧದಿಂದ ಹೊಡೆದು ಸಂಹರಿಸಿದನು.

**ತೇ ದೇವಾ ವೃತ್ರಗ್ಂ ಹತ್ವಾಗ್ನೀಷೋಮಾವಬ್ರುವನ್ ಹವ್ಯಂ ನೋ ವಹತಮಿತಿ ತಾವಬ್ರೂತಾ-ಮಪತೇಜಸೌ ವೈ ತ್ಯೌ ವೃತ್ರೇ ವೈ ತ್ಯಯೋಸ್ತೇಜ ಇತಿ ತೇಽಬ್ರುವನ್ ಕ ಇದಮಚ್ಛೈತೀತಿ ಗೌರಿತ್ಯಬ್ರುವನ್ಗೌರ್ವಾವ ಸರ್ವಸ್ಯ ಮಿತ್ರಮಿತಿ ಸಾಬ್ರವೀದ್ವರಂ ವೃಣೈ ಮಯ್ಯೇವ ಸತೋ-ಭಯೇನ ಭುನಜಾಥಾ ಇತಿ ತದ್ಗೌರಾಹರತ್ತಸ್ಮಾದ್ಗವಿ ಸತೋಭಯೇನ ಭುಂಜತ ಏತದ್ವಾ ಅಗ್ನೇಸ್ತೇಜೋ ಯದ್ಘೃತಮೇತತ್ಸೋಮಸ್ಯ ಯತ್ಪಯೋ ಯ ಏವಮಗ್ನೀಷೋಮಯೋ ಸ್ತೇಜೋ ವೇದ ತೇಜಸ್ವ್ಯೇವ ಭವತಿ ॥**

ವೃತ್ರಹನನಾನಾಂತರ ಇಂದ್ರನ ಸಮೀಪದಲ್ಲಿದ್ದ ದೇವತೆಗಳೆಲ್ಲರೂ ಅಗ್ನೀಷೋಮರನ್ನು ಕುರಿತು—ಎಲೈ ಅಗ್ನೀಷೋಮ ದೇವತೆಗಳೇ, ನೀವು ಈಗ ವೃತ್ರನ ಮುಖದಿಂದ ಹಿಂತಿರುಗಿ ಬಂದಿರುವಿರಷ್ಟೆ. ಇನ್ನುಮುಂದೆ ನಮಗಾಗಿ ಯಜ್ಞಾದಿ ಗಳಲ್ಲಿ ಹೋಮಮಾಡುವ ಹವಿಸ್ಸುಗಳನ್ನು ವಹಿಸಿ ತಂದು ನಮಗೆ ಅರ್ಪಿಸಿರಿ ಎಂದರು. ಅದಕ್ಕೆ ಆ ಅಗ್ನೀಷೋಮರು ದೇವತೆಗಳನ್ನು ಕುರಿತು—ಎಲೈ ದೇವತೆಗಳೇ, ನಾವು ಬಹಳ ಕಾಲದಿಂದಲೂ ವೃತ್ರನ ಶರೀರದಲ್ಲಿದ್ದು ಅವನ ದಂತದಶನಾದಿಗಳಿಂದ ನಿಸ್ತೇಜಸ್ಕರಾಗಿದೇವೆ ಎಂದರೆ ನಮ್ಮ ಶಕ್ತಿಯು ಕುಗ್ಗಿಹೋಗಿದೆ. ನಮ್ಮ ಶಕ್ತಿ ಅಥವಾ ತೇಜ ಸ್ಸೆಲ್ಲವೂ ವೃತ್ರನಲ್ಲಿಯೇ ನಿಂತುಹೋಗಿದೆ ಎಂದರು. ಆಗ ದೇವತೆಗಳು ವೃತ್ರನ ಶರೀರದಲ್ಲಿದ್ದು ಅಗ್ನಿಷೋಮರು ಬಿಟ್ಟುಬಂದ ತೇಜಸ್ಸನ್ನು ಹಿಂದಕ್ಕೆ ತರುವ ಬಗೆ ಹೇಗೆಂದು ತಮ್ಮತಮ್ಮಲ್ಲಿಯೇ ಆಲೋಚಿಸಿ, ಗೋವು ಯಾರಿಗೂ ಕೇಡುಮಾಡದೆ ಎಲ್ಲರಲ್ಲಿಯೂ ಸ್ನೇಹಭಾವದಿಂದ ವರ್ತಿಸುತ್ತಿರುವುದರಿಂದ ಅದನ್ನು ಕಳುಹಿಸಿ ವೃತ್ರನಲ್ಲಿದ್ದ ತೇಜಸ್ಸನ್ನು ತರಿಸಬೇಕೆಂದು ನಿರ್ಧರಿಸಿದರು. ಬಳಿಕ ಅವರು ಹಸುವನ್ನು ಕರೆದು ವೃತ್ರನಲ್ಲಿರುವ ತೇಜಸ್ಸನ್ನು ತರಬೇಕೆಂದು ಹೇಳಲು ಅದು—ಹಾಗೆಯೇ ಆಗಲಿ. ಆದರೆ ನಾನು ತರುವ ತೇಜಸ್ಸು, ಹಾಲು, ತುಪ್ಪ ಇವುಗಳ ರೂಪದಲ್ಲಿ ಸದಾ ನನ್ನಲ್ಲಿಯೇ ನೆಲಸಿರಬೇಕು ಅವುಗಳನ್ನು ಜನರು ನನ್ನಿಂದ ಪಡೆದು ಭೋಜನಾದಿಗಳನ್ನು ನೆರವೇರಿಸಬೇಕು. ಈರೀತಿ ವರವನ್ನು

ಕೊಡುವುದಾದರೆ ತರುತ್ತೇನೆಂದಿತು. ದೇವತೆಗಳು ಹಾಗೆಯೇ ಆಗಲೆಂದು ಹೇಳಿ ಅದರಂತೆ ವರವನ್ನು ಕೊಟ್ಟರು ವರವನ್ನು ಪಡೆದ ಗೋವು ಆ ತೇಜಸ್ಸನ್ನು ತಂದಿತು. ಈ ವಿಧವಾದ ವರಪ್ರದಾನದ ಫಲವಾಗಿ ಈಗಲೂ ಲೋಕದಲ್ಲಿರುವ ಜನರು ಗೋವುಗಳಿಂದಲೇ ಹಾಲು, ತುಪ್ಪ ಮೊದಲಾದ ಪುಷ್ಟಿಪ್ರದವಾದ ಆಹಾರವನ್ನು ಆಗಾಗ್ಯೆ ಪಡೆಯುತ್ತಾ ಭೋಜನಮಾಡುತ್ತಿರುವರು. ಇಲ್ಲಿ ತುಪ್ಪ ಅಥವಾ ಘೃತವು ಅಗ್ನಿಯ ತೇಜಸ್ಸೆಂದು ಹೇಳಲ್ಪಡುವುದು. ಆದುದರಿಂದಲೇ ಯಜ್ಞಾದಿಗಳಲ್ಲಿ ಜನರು ಘೃತ ಅಥವಾ ತುಪ್ಪದಿಂದ ಅಗ್ನಿಯಲ್ಲಿ ಹೋಮಾದಿಗಳನ್ನು ಮಾಡಿ ಅಗ್ನಿಯು ಪ್ರಜ್ವಲಿಸುವಂತೆ ಮಾಡುವರು. ಹಾಲು ಸೋಮದ ತೇಜಸ್ಸೆಂದು ಹೇಳಲ್ಪಡುವುದು. ಏಕೆಂದರೆ ಸೋಮವು ಹಾಲಿನಂತೆ ದ್ರವರೂಪದಲ್ಲಿರುವುದು ಮತ್ತು ಸೋಮರಸದ ರುಚಿಯನ್ನು ಹೆಚ್ಚಿಸುವುದಕ್ಕಾಗಿ ಅದರ ಜತೆಗೆ ಹಾಲನ್ನು ಮಿಶ್ರಮಾಡುವರು. ಇದಕ್ಕೆ ಗವಾಶಿರವೆಂದು ಹೆಸರು ಈ ರೀತಿ ಹಾಲನ್ನು ಮಿಶ್ರಮಾಡುವುದರಿಂದ ಸೋಮದ ತೇಜಸ್ಸು ಅಥವಾ ಸತ್ತ್ವವು (ರುಚಿಯು) ಹೆಚ್ಚುವುದು. ಈ ರೀತಿಯಾದ ಅಗ್ನಿಯ ಮತ್ತು ಸೋಮದ ತೇಜಸ್ಸುಗಳ ಮಹಿಮೆಯನ್ನು ತಿಳಿಯುವ ಪುರುಷನು ತೇಜಸ್ವಿಯಾಗಿರುವನು.

**ಬ್ರಹ್ಮವಾದಿನೋ ವದಂತಿ ಕಿಂದೇವತ್ಯಂ ಪೌರ್ಣಮಾಸಮಿತಿ ಪ್ರಾಜಾಪತ್ಯಮಿತಿ ಬ್ರೂಯಾತ್ತೇನೇಂದ್ರಂ ಜ್ಯೇಷ್ಠಂ ಪುತ್ರಂ ನಿರವಾಸಾಯಯದಿತಿ ತಸ್ಮಾಜ್ಜ್ಯೇಷ್ಠಂ ಪುತ್ರಂ ಧನೇನ ನಿರವಾಸಯಂತಿ ।**

(ತೈ. ಸಂ ೨-೫-೨-೧ ರಿಂದ ೭)

ಈ ಪೌರ್ಣಮಾಸ್ಯವೆಂಬ ಯಾಗಕ್ಕೆ ಮುಖ್ಯದೇವತೆಯಾರು ಎಂದು ಬ್ರಹ್ಮವಾದಿಗಳು ಕೇಳುವರು. ಅದಕ್ಕೆ ಪ್ರಜಾಪತಿಯೇ ಯಜ್ಞಾಧಿಷ್ಠಾತೃವಾದ ದೇವತೆಯು ಎಂದು ಪ್ರತ್ಯುತ್ತರವನ್ನು ಹೇಳಬೇಕು. ಆದರೆ ಈ ಯಾಗದಲ್ಲಿ ಪ್ರಜಾಪತಿಗೆ ಯಾವ ಹವಿರ್ಭಾಗವೂ ಇರುವುದಿಲ್ಲವಲ್ಲ ? ಆದ್ದರಿಂದ ಈ ಯಜ್ಞಕ್ಕೆ ಪ್ರಜಾಪತಿಯು ಹೇಗೆ ದೇವತೆಯು ? ಎಂದರೆ, ಪೂರ್ವದಲ್ಲಿ ಪ್ರಜಾಪತಿಯು ಎಲ್ಲಾ ಯಜ್ಞಗಳನ್ನೂ ಸೃಷ್ಟಿಮಾಡಿದನು. ಈ ವಿಷಯವು—

**ಪ್ರಜಾಪತಿರ್ಯಜ್ಞಾನಸೃಜತಾಗ್ನಿಹೋತ್ರಂ ಚಾಗ್ನಿಷ್ಟೋಮಂ ಚ ಪೌರ್ಣಮಾಸೀಂ ಚೋಕ್ಥ್ಯಂ ಚಾಮಾವಾಸ್ಯಾಂ ಚಾತಿರಾತ್ರಂ ಚ ॥**

(ತೈ. ಸಂ. ೧-೫-೯-೧)

ಎಂಬ ಶ್ರುತಿವಾಕ್ಯದಲ್ಲಿ ಹೇಳಲಾಗಿದೆ. ಎಂದರೆ ಪ್ರಜಾಪತಿಯು—ಅಗ್ನಿಹೋತ್ರ, ಅಗ್ನಿಷ್ಟೋಮ, ಪೌರ್ಣಮಾಸಿ (ಪೌರ್ಣಮಾಸಿಯ ದಿನದಲ್ಲಿ ಮಾಡುವ ಯಾಗ), ಉಕ್ಥ್ಯ, ಅಮಾವಾಸ್ಯಾ (ಅಮಾಸ್ಯೆಯ ದಿನದಲ್ಲಿ ಮಾಡುವ ಯಾಗ) ಅತಿರಾತ್ರ ಮೊದಲಾದ ಯಜ್ಞಗಳನ್ನೆಲ್ಲಾ ಸೃಷ್ಟಿಮಾಡಿದನು ಎಂದು ಇಲ್ಲಿ ಹೇಳಿದೆ. ಪ್ರಜಾಪತಿಯು ಸೃಷ್ಟಿಮಾಡಿರುವ ಯಜ್ಞಗಳೆಲ್ಲಾ ಅವನ ಸ್ವಕೀಯವಾದ ಆಸ್ತಿಯಾಯಿತು. ಆದುದರಿಂದ ಲೋಕವ್ಯವಹಾರದಲ್ಲಿ ರೂಢಿಯಾಗಿರುವಂತೆ ಎಂದರೆ ತನ್ನ ಆಸ್ತಿಯನ್ನು ತನ್ನ ಜ್ಯೇಷ್ಠಪುತ್ರನಿಗೆ ಕೊಡುವಂತೆ, ಪ್ರಜಾಪತಿಯು ತನ್ನ ಜ್ಯೇಷ್ಠಪುತ್ರನಾದ ಇಂದ್ರನಿಗೆ ಈ ಯಜ್ಞಗಳ ಮುಖ್ಯದೇವತ್ವವನ್ನು ವಹಿಸಿಕೊಟ್ಟನು. ಈ ವಿಷಯವು— **ತೇನೇಂದ್ರಂ ನಿರವಾಸಾಯಯತ್ತೇನೇಂದ್ರಃ ಪರಮಾಂ ಕಾಷ್ಠಾಮಗಚ್ಛತ್**—ಎಂಬ ತೈತ್ತಿರೀಯಾಸಂಹಿತಾ ವಾಕ್ಯದಲ್ಲಿಯೇ ಹೇಳಿದೆ. ಆದುದರಿಂದ ಪುತ್ರನಾದ ಇಂದ್ರನಿಗೆ ಪೌರ್ಣಮಾಸ್ಯಯಾಗದಲ್ಲಿ ಅರ್ಪಿತವಾಗುವ ಹವಿಸ್ಸುಗಳೆಲ್ಲವೂ ತಂದೆಯಾದ ಪ್ರಜಾಪತಿಗೆ ಅರ್ಪಿತವಾದಂತೆಯೇ ಎಂದು ಭಾವಿಸಬೇಕು. ಈ ಕಾರಣದಿಂದಲೇ

ಈ ಪೌರ್ಣಮಾಸ್ಯಯೆಂಬ ಯಾಗವು ಪ್ರಾಜಾಪತ್ಯ ಎಂದರೆ ಪ್ರಜಾಪತಿಸಂಬಂಧವಾದುದು ಎಂದು ಹೇಳುವ ರೂಢಿಯಿದೆ, ಈ ಕ್ರಮವನ್ನನುಸರಿಸಿ ಈಗಲೂ ಲೋಕವ್ಯವಹಾರದಲ್ಲಿ ತಂದೆಯು ತನ್ನ ಧನಾದಿಯಾದ ಸಮಸ್ತ ಆಸ್ತಿಯನ್ನೂ ತನ್ನ ಹಿರಿಯಮಗನಿಗೆ ಕೊಡುವುದು ರೂಢಿಯಲ್ಲಿದೆ

---

## ಪ್ರಜಾಪತಿಗೆ ಕಃ ಎಂಬ ಹೆಸರು ಬರಲು ಕಾರಣ.

ಈ ವಿಷಯದಲ್ಲಿ ಒಂದು ಉಪಾಖ್ಯಾನವಿರುವುದು—

**ಇಂದ್ರೋ ವೈವೃತ್ರಂ ಹತ್ವಾ ಸರ್ವಾ ವಿಜಿತೀರ್ವಿಜಿತ್ಯಾಬ್ರವೀತ್ಪ್ರಜಾಪತಿಮಹಮೇತದಸಾನಿ ಯತ್ತ್ವಮಹಂ ಮಹಾನಸಾನೀತಿ ಸ ಪ್ರಜಾಪತಿರಬ್ರವೀದಥ ಕೋಽಹಮಿತಿ ಯದ್ವೈವೈತ-ದವೋಚ ಇತ್ಯಬ್ರವೀತ್ತತೋ ವೈ ಕೋ ನಾಮ ಪ್ರಜಾಪತಿರಭವತ್ಕೋ ವೈ ನಾಮ ಪ್ರಜಾ-ಪತಿರ್ಯನ್ಮಹಾನಿಂದ್ರೋಽಭವತ್ತನ್ಮಹೇಂದ್ರಸ್ಯ ಮಹೇಂದ್ರತ್ವಂ ॥**

(ಐ. ಬ್ರಾ. ೧೨-೨೧)

ಸ್ವರ್ಗದಲ್ಲಿ ಇಂದ್ರನು ವೃತ್ರನನ್ನು ಸಂಹಾರಮಾಡಿದನಂತರ ಭೂಮಂಡಲದ ಸಮಸ್ತ ಪ್ರದೇಶಗಳನ್ನೂ ಜಯಿಸಿ, ಪ್ರಜಾಪತಿಯನ್ನು ಕುರಿತು—ಎಲೈ ಪ್ರಜಾಪತಿಯೇ, ಈಗ ನೀನು ಮಹತ್ವ್ಸಾನವನ್ನು ಗಳಿಸಿ ಪೂಜ್ಯನಾಗಿರುವಿಯಷ್ಟೆ. ಇನ್ನುಮೇಲೆ ನಿನ್ನ ಮಹತ್ವಪದವಿಯು ನನಗೆ ಬೇಕು ಎಂದನು. ಅದಕ್ಕೆ ಪ್ರಜಾಪತಿಯು ನನ್ನ ಪದವಿಯನ್ನು ನೀನು ತೆಗೆದುಕೊಂಡರೆ, ಆಗ ನಾನು ಯಾರು (ಕಃ) ನನ್ನ ಸ್ಥಾನಮಾನವೇನು ಎಂದು ಕೇಳಲು, ಅದಕ್ಕೆ ಇಂದ್ರನು—ಎಲೈ ಪ್ರಜಾಪತಿಯೇ, ಈಗ ನೀನೇ ಹೇಳಿದಂತೆ ನಿನ್ನ ಹೆಸರು ಇನ್ನುಮೇಲೆ ಕಃ (ಯಾರು) ಎಂದಾಗುವುದು ಎಂದರೆ ಕ ಶಬ್ದವಾಚ್ಯನಾಗುವೆ ಎಂದನು. ಆದುದರಿಂದ ಆ ಕಾಲ ಮೊದಲುಗೊಂಡು ಪ್ರಜಾಪತಿಯು ಕಶಬ್ದವಾಚ್ಯನಾದನು. ಈ ವಿಷಯವು ಪ್ರಸಿದ್ಧವಾಗಿರುವುದು. ಆದುದರಿಂದಲೇ ಯಾವುದಾದರೂ ದಾನವನ್ನು ಸ್ವೀಕರಿಸುವಾಗ ಪಠಿಸಬೇಕಾದ ಪ್ರತಿಗ್ರಹಮಂತ್ರಗಳಲ್ಲಿ ಈ ವಿಷಯವು ಉಕ್ತವಾಗಿರುವುದು ಎಂದರೆ—**ಕ ಇದಂ ಕಸ್ಮಾ ಅದಾದಿತ್ಯಾಹ ಪ್ರಜಾಪತಿರ್ವೈ ಕಃ । ಪ್ರಜಾಪತಯ ಏವ ತದ್ದದಾತಿ** ಎಂದು ಇತರ ವೇದಗಳ ಬ್ರಾಹ್ಮಣವಾಕ್ಯವಿರುವುದು ಕ ಶಬ್ದಕ್ಕೆ ಸುಖವೆಂಬ ಅರ್ಥವಿರುವುದರಿಂದ ಪ್ರಜಾಪತಿ ಸಂಬಂಧವಾದ ವ್ಯವಹಾರಗಳಲ್ಲಿಯೂ, ವಿಷಯಗಳಲ್ಲಿಯೂ ಪ್ರಜಾಪತಿಯು ಸುಖಸ್ವರೂಪನು ಎಂದೇ ಹೇಳಲ್ಪಡುವುದು. ಈರೀತಿ ಪ್ರಜಾಪತಿಯ ಮಹತ್ತ್ವವನ್ನು ಇಂದ್ರನು ಸ್ವೀಕರಿಸಿದುದರಿಂದ ಇಂದ್ರನಿಗೆ **ಮಹಾನ್** ಎಂಬ ಅಭಿಧಾನವು ಬಂದಿತು. ಎಂದರೆ—ಇಂದ್ರನು ಮಹಾನಿಂದ್ರನಾದನು. ಈ ವಿಷಯವು ಇತರ ವೇದಗಳಲ್ಲಿ **ಇಂದ್ರೋ ವೃತ್ರಮಹನ್ತಂ ದೇವಾ ಅಬ್ರುವನ್ಮಹಾನ್ವಾ ಅಯಮಭೂದ್ಯೋ ವೃತ್ರಮವಧೀದಿತಿ ತನ್ಮಹೇಂದ್ರಸ್ಯ ಮಹೇಂದ್ರತ್ವಂ ।** ಇಂದ್ರನು ವೃತ್ರನನ್ನು ಸಂಹಾರಮಾಡಿದ ವಿಷಯವನ್ನು ದೇವತೆಗಳು ಪ್ರಶಂಸಿಸುತ್ತಾ ಈ ಇಂದ್ರನು ವೃತ್ರನನ್ನು ಸಂಹಾರಮಾಡಿದ್ದರಿಂದ ಮಹೇಂದ್ರನಾದನು. (ಮಹತ್ವಪದವಿಯನ್ನು ಗಳಿಸಿದನು) ಎಂದರೆ ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠನಾದನು. ಇಂದ್ರನಿಗೆ ಮಹೇಂದ್ರನೆಂಬ ಹೆಸರುಬರಲು ಇದೇ ಕಾರಣವು—ಎಂದು ಹೇಳಿದೆ.

**ಸ ಮಹಾನ್ಭೂತ್ವಾ ದೇವತಾ ಅಬ್ರವೀದುದ್ಧಾರಂ ಮ ಉದ್ಧರತೇತಿ ಯಥಾಽಪ್ಯೇತರ್ಹಿ ಶ್ರೇಷ್ಠ**

**ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ಸ ಮಹಾನ್ಭವತಿ ತಂ ದೇವಾ ಅಬ್ರುವನ್ ತ್ವಯಮೇವ ಬ್ರೂಷ್ವ ಯತ್ತೇ ಭವಿಷ್ಯತೀತಿ ಸ ಏತಂ ಮಾಹೇಂದ್ರಂ ಗ್ರಹಮಬ್ರೂತ ಮಾಧ್ಯಂದಿನಂ ಸವನಾನಾಂ ನಿಷ್ಕೇವಲ್ಯಮುಕ್ಥಾನಾಂ ತಿಷ್ಟುಭಂ ಛಂದಸಾಂ ಪೃಷ್ಠಂ ಸಾಮ್ನಾಂ ತಮಸ್ಮಾ ಉದ್ಧಾರಮುದಹರನ್ ಉದಸ್ಮಾ ಉದ್ಧಾರಂ ಹರಂತಿ ಯ ಏವಂ ವೇದ।**

ಬಳಿಕ ಇಂದ್ರನು ಮೇಲೆ ಹೇಳಿದಂತೆ ಮಹತ್ಪದವಿಯನ್ನು ಗಳಿಸಿ ದೇವತೆಗಳನ್ನು ಕರೆದು ಇಂತೆಂದನು—ಎಲೈ ದೇವತೆಗಳೇ, ನಾನು ಮಹತ್ಪದವಿಯನ್ನು ಗಳಿಸಿರುವುದರಿಂದ ಇದರ ನಿಮಿತ್ತವಾಗಿ ಎಂದರೆ ನನ್ನನ್ನು ಅಭಿನಂದಿಸುವುದಕ್ಕಾಗಿ ಗೌರವಸೂಚಕವಾದ ಸತ್ಕಾರವೊಂದನ್ನು ಏರ್ಪಡಿಸಿ ಎಂದನು. ಲೋಕವ್ಯವಹಾರದಲ್ಲಿಯೂ ಸಹ ಒಬ್ಬ ಪುರುಷನಿಗೆ ಅತುಳೈಶ್ವರ್ಯಪ್ರಾಪ್ತಿಯಾಗಲಿ, ವಿದ್ಯಾದಿಗಳಲ್ಲಿ ಪ್ರಶಸ್ತಿಯಾಗಲಿ, ರಾಜಸನ್ಮಾನವಾಗಲಿ ಲಭಿಸಿದಲ್ಲಿ ಅಂತಹ ಪುರುಷನು ಜನರ ಮಧ್ಯೆ ಗಣ್ಯನಾದವನೆಂದು ಪ್ರಸಿದ್ಧನಾಗಿರುವುದರಿಂದ, ಜನರು ಸಾಧಾರಣವಾಗಿ ಅಂತಹ ಪುರುಷನನ್ನು ಅಭಿನಂದಿಸಲು ಸತ್ಕಾರಕೂಟವನ್ನು ಏರ್ಪಡಿಸುವುದು ರೂಢಿಯಷ್ಟೆ. ಅದರಂತೆ ಇಂದ್ರನು ದೇವತೆಗಳನ್ನು ಈ ವಿಷಯವಾಗಿ ಪ್ರಶ್ನೆಮಾಡಿದನು. ದೇವತೆಗಳೂ ಸಹ ಇಂದ್ರನ ಮಾತನ್ನನುಮೋದಿಸಿ—ಎಲೈ ಇಂದ್ರನೇ, ಈ ಸತ್ಕಾರಸಮಾರಂಭವನ್ನು ಯಾವ ರೀತಿ ಮಾಡಬೇಕು ? ಹೇಗೆ ಮಾಡಿದರೆ ನಿನಗೆ ಸಂತೋಷವಾಗುವುದು ? ಅದನ್ನು ನೀನೇ ಹೇಳಬೇಕು. ನಾವು ಅದರಂತೆ ನಡೆಸುವೆವು ಎನ್ನಲು, ಅದಕ್ಕೆ ಇಂದ್ರನು—ಗ್ರಹಗಳ (ಗ್ರಹವೆಂದರೆ ಸೋಮವನ್ನು ಪಾನಮಾಡುವ ಪಾತ್ರವಿಶೇಷ) ಮಧ್ಯದಲ್ಲಿ ಮಾಹೇಂದ್ರಗ್ರಹವು (ಮಹೇಂದ್ರನಾದ ನನಗೆ ಅರ್ಪಿಸುವ ಸೋಮಪಾನ ಪಾತ್ರೆಯು) ಎಲ್ಲಾ ಗ್ರಹಗಳಿಗಿಂತ ಶ್ರೇಷ್ಠವಾದುದಾಗಿರಬೇಕು. ಅದರಂತೆಯೇ, ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸವನಗಳಲ್ಲಿ ಮಾಧ್ಯಂದಿನಸವನವೂ, ಆಶ್ವಿನಶಸ್ತ್ರ, ಮರುತ್ವತೀಯ ಮೊದಲಾದ ಶಸ್ತ್ರ (ಮಂತ್ರ) ಗಳಲ್ಲಿ ನಿಷ್ಕೇವಲ್ಯಶಸ್ತ್ರವೂ, ಗಾಯತ್ರ್ಯಾದಿಛಂದಸ್ಸುಗಳಲ್ಲಿ ತ್ರಿಷ್ಟುಪ್‌ಛಂದಸ್ಸೂ, ಸಾಮಗಾನಗಳ ಮಧ್ಯದಲ್ಲಿ ಪೃಷ್ಠಸ್ತೋತ್ರನಿಷ್ಪಾದಕವಾದ ಬೃಹದ್ರಥಂತರಸಾಮವೂ ಶ್ರೇಷ್ಠವಾಗಿರುವುದೆಂದು ನೀವು ಅನುಮೋದಿಸಬೇಕು. ಏಕೆಂದರೆ ಅವುಗಳೆಲ್ಲಾ ನನಗೆ ಪ್ರಿಯವಾಗಿರುವುವು. ಇದೇ ನೀವು ನನಗೆ ಮಾಡುವ ಸತ್ಕಾರವು ಎಂದನು. ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಯಜ್ಞಾದಿಗಳಲ್ಲಿ ಮಾಹೇಂದ್ರಗ್ರಹಾದಿಗಳಿಗೆ ಶ್ರೇಷ್ಠತೆಯನ್ನು ಅನುಮೋದಿಸಿದರು. ಈ ವಿಷಯವು ಇತರ ವೇದಗಳಲ್ಲಿಯೂ **ಸ ಏತಂ ಮಾಹೇಂದ್ರಮುದಹರತ ವೃತ್ರಂ ಹತ್ವಾನ್ಯಾಸು ದೇವತಾಸ್ವಧೀತಿ ಯನ್ಮಾಹೇಂದ್ರೋ ಗೃಹ್ಯತ ಉದ್ಧಾರಮೇವ ತಂ ಯಜಮಾನ ಉದ್ಧರತೇ ವ ಪ್ರಜಾಸ್ವಧಿ।** ಎಂದು ಹೇಳಿರುವುದು. ಈ ವಿಷಯವನ್ನು ಯಜ್ಞಮಾಡುವ ಯಾವ ಯಜಮಾನನು ತಿಳಿಯುವನೋ ಅವನು ಜನರಲ್ಲಿ ಶ್ರೇಷ್ಠತೆಯನ್ನೂ, ಗಣ್ಯಸ್ಥಾನವನ್ನೂ ಪಡೆಯುವನು.

**ತಂ ದೇವಾ ಅಬ್ರುವನ್ಸರ್ವಂ ವಾ ಅವೋಚಥಾ ಅಪಿ ನೋಽತ್ರಾಸ್ತ್ವಿತಿ ಸ ನೇತ್ಯಬ್ರವೀತ್ಕಥಂ ವೋಽಪಿ ಸ್ಯಾದಿತಿ ತಮಬ್ರುವನ್ನಪ್ಯೇವ ನೋಽಸ್ತು ಮಘವನ್ನಿತಿ ತಾನೀಕ್ಷತೈವ ॥**

(ಐ. ಬ್ರಾ. ೧೨-೨೧)

ಅನಂತರ ದೇವತೆಗಳು ಇಂದ್ರನನ್ನು ಕುರಿತು—ಎಲೈ ಇಂದ್ರನೇ, ನಾವು ನಿನ್ನನ್ನು ಸತ್ಕರಿಸಿ ಯಜ್ಞದಲ್ಲಿ ನಿನಗೆ ಬೇಕಾದ ಸಾರವಸ್ತುಗಳನ್ನೆಲ್ಲಾ ಅರ್ಪಿಸಿರುವೆವು. ಸಾರವಾದ ಎಲ್ಲ ವಸ್ತುಗಳನ್ನೂ ನೀನೇ ತೆಗೆದುಕೊಂಡಿರುವೆ ಇವುಗಳಲ್ಲಿ ಕೆಲವನ್ನು ನಮಗೂ ಕೊಡು ಎಂದರು. ಇಂದ್ರನು—ಅದಾಗುವುದಿಲ್ಲ. ಈ ಸಾರವಸ್ತುಗಳನ್ನೆಲ್ಲಾ ನಾನೇ ಅಪೇಕ್ಷಿಸಿದೆನು. ಅವೆಲ್ಲಾ ನನಗೆ ಲಭಿಸಿತು. ನಿಮಗೆ ಕೊಡಲು ಕಾರಣವೇನು ? ಎಂದನು. ದೇವತೆಗಳು ಮತ್ತೆ—ಎಲೈ

ಇಂದ್ರನೇ, ಈ ರೀತಿ ನಮ್ಮ ಪ್ರಾರ್ಥನೆಯನ್ನು ನಿರಾಕರಿಸಬೇಡ. ನಮಗೂ ಸ್ವಲ್ಪ ಭಾಗವನ್ನು ಕೊಡು ಎಂದು ಪ್ರಾರ್ಥಿಸಲು ಇಂದ್ರನು ಅವರನ್ನು ಅನುಗ್ರಹದೃಷ್ಟಿಯಿಂದ ನೋಡಿದನು. ಮತ್ತೇನನ್ನೂ ಹೇಳಲಿಲ್ಲ.

**ತೇ ದೇವಾ ಅಬ್ರುವನ್ನಿಯಂ ವಾ ಇಂದ್ರಸ್ಯ ಪ್ರಿಯಾ ಜಾಯಾ ವಾವಾತಾ ಪ್ರಾಸಹಾ ನಾಮಾಸ್ಯಾಮೇವೇಚ್ಛಾಮಹಾ ಇತಿ ತಥೇತಿ ತಸ್ಯಾಮೈಚ್ಛಂತ ಸೈನಾನಬ್ರವೀತ್ಪ್ರಾತರ್ವಃ ಪ್ರತಿವಕ್ತಾಸ್ಮೀತಿ ತಸ್ಮಾತ್ಸ್ತ್ರಿಯಃ ಪತ್ಯಾವಿಚ್ಛಂತೇ ತಸ್ಮಾದು ಸ್ತ್ರ್ಯನುರಾತ್ರಂ ಪತ್ಯಾವಿಚ್ಛತೇ ತಾಂ ಪ್ರಾತರುಪಾಯನ್ಸ್ಯೈತದೇವ ಪ್ರತ್ಯಪದ್ಯತ ।** (ಐ. ಬ್ರಾ. ೧೨-೨೨)

ಇಂದ್ರನು ಯಾವ ಮಾತನ್ನೂ ಆಡದ್ದರಿಂದ ದೇವತೆಗಳಿಗೆ ಇಂದ್ರನ ಅಭಿಪ್ರಾಯವು ತಿಳಿಯಲಿಲ್ಲ. ಆದ್ದರಿಂದ ಅವರು ಪರಸ್ಪರ ಈ ರೀತಿ ಮಾತನಾಡಿಕೊಂಡರು. ಈಗ ನಮ್ಮೆದುರಿಗೆ ಇರುವ ಈ ಸ್ತ್ರೀಯು ಇಂದ್ರನಿಗೆ ಪ್ರೀತಿಪಾತ್ರಳಾದ ಪತ್ನಿಯು. ಇವಳು ಮಧ್ಯಮಜಾತಿಯವಳು. ಇವಳ ಹೆಸರು ವಾವಾತಾ ಎಂದು ರಾಜರಿಗೆ ಮೂರುವಿಧವಾದ ಪತ್ನಿಯರಿರುವರು. ಅವರಲ್ಲಿ ಉತ್ತಮಜಾತಿಯ ಪತ್ನಿಗೆ ಮಹಿಷಿ ಎಂದೂ, ಮಧ್ಯಮಜಾತಿಯ ಪತ್ನಿಗೆ ವಾವಾತಾ ಎಂದೂ, ಅಧಮಜಾತಿಯ ಪತ್ನಿಗೆ ಪರಿವೃತ್ತಿ ಎಂದೂ ಹೇಳುವ ರೂಢಿ ಇದೆ. ಆದ್ದರಿಂದಲೇ ಅಶ್ವಮೇಧಯಜ್ಞದಲ್ಲಿ ಸ್ತ್ರೀಯರು ಮಾಡಬೇಕಾದ ಕರ್ತವ್ಯಕರ್ಮಗಳಲ್ಲಿ **ಮಹಿಷಿ**ಯನ್ನು **ಭೂಃ** ಎಂಬ ಶಬ್ದದಿಂದಲೂ **ವಾವಾತಾ** ಎಂಬ ಪತ್ನಿಯನ್ನು **ಭುವಃ** ಎಂಬ ಶಬ್ದದಿಂದಲೂ **ಪರಿವೃತ್ತಿ** ಎಂಬ ಪತ್ನಿಯನ್ನು **ಸುವಃ** ಎಂಬ ಶಬ್ದದಿಂದಲೂ ನಿರ್ದೇಶಿಸುವರು. ಈ ಮೂವರಲ್ಲಿ **ವಾವಾತಾ** ಎಂಬ ಮಧ್ಯಮಜಾತಿಗೆ ಸೇರಿದ ಪತ್ನಿಗೆ **ಪ್ರಾಸಹಾ** ಎಂದು ಹೆಸರಿದೆ ಏಕೆಂದರೆ ಈ ಪತ್ನಿಯು ಪತಿಯ ಇಷ್ಟವನ್ನು ತಿಳಿದು ಅದರಂತೆ ವರ್ತಿಸುತ್ತಾ ಬಲಾತ್ಕಾರದಿಂದ ಸಮಸ್ತ ಕೆಲಸವನ್ನೂ ಮಾಡಲು ಸಮರ್ಥಳಾದ್ದರಿಂದ ಇವಳು ರಾಜನಿಗೆ ಬಹಳ ಪ್ರೀತಿ ಪಾತ್ರಳಾಗಿರುವಳು. ಆದ್ದರಿಂದ ಇವಳ ಮೂಲಕ ರಾಜನಾದ ಇಂದ್ರನ ಅಭಿಪ್ರಾಯವನ್ನು ತಿಳಿದುಕೊಳ್ಳುವುದು ಯುಕ್ತವೆಂದರಿತು, ಇವಳಲ್ಲಿ ತಮ್ಮ ವಿಚಾರವನ್ನು ಅರಿಕೆಮಾಡಿಕೊಂಡರು. ಅದನ್ನು ಕೇಳಿ ವಾವಾತೆಯು—ಎಲೈ ದೇವತೆಗಳೇ, ನಿಮ್ಮ ವಿಚಾರವನ್ನು ಇಂದ್ರನಿಗೆ ತಿಳಿಸಿ ಅವನ ಅಭಿಪ್ರಾಯವನ್ನು ತಿಳಿಯಬೇಕಾದರೆ ಈಗ ಸರಿಯಾದ ಕಾಲವಲ್ಲ. ಲೋಕದಲ್ಲಿ ಸ್ತ್ರೀಯರು ತಮ್ಮ ಪತಿಗೆ ತಿಳಿಸಬೇಕಾದ ಯಾವ ಮುಖ್ಯ ವಿಷಯವನ್ನಾಗಲಿ ರಾತ್ರಿಕಾಲದಲ್ಲಿ ಏಕಾಂತದಲ್ಲಿರುವಾಗ ತಿಳಿಸುವುದು ರೂಢಿಯಷ್ಟೆ. ಏಕಾಂತದಲ್ಲಿರುವಾಗ ಯಾವ ವಿಧವಾದ ಅಡ್ಡಿ ಆತಂಕಗಳಿಲ್ಲದೆ ಇರುವುದರಿಂದ ಸ್ತ್ರೀಯರು ಹೇಳಿದ್ದನ್ನು ಪುರುಷನು ಸಹಾನುಭೂತಿಯಿಂದ ಕೇಳಿ ಯೋಗ್ಯವಾದ ಉತ್ತರವನ್ನು ಹೇಳುವನು ಆದ್ದರಿಂದ ನಾನು ಈ ರಾತ್ರಿ ಇಂದ್ರನೊಡನೆ ಏಕಾಂತದಲ್ಲಿರುವಾಗ ನಿಮ್ಮ ವಿಷಯವನ್ನು ಪ್ರಸ್ತಾಪಮಾಡಿ ಇಂದ್ರನ ಅಭಿಪ್ರಾಯವನ್ನು ತಿಳಿದುಕೊಳ್ಳುವೆನು. ಆದ್ದರಿಂದ ನೀವು ನಾಳೆ ಬೆಳಗ್ಗೆ ಬಂದರೆ ಇಂದ್ರನ ಪ್ರತ್ಯುತ್ತರವನ್ನು ತಿಳಿಸುವೆನು ಎಂದಳು. ದೇವತೆಗಳು ಹಾಗೇ ಆಗಲೆಂದು ಹೇಳಿ ಮಾರನೆಯ ದಿವಸ ಪ್ರಾತಃಕಾಲ ಬಂದು ಕೇಳಲು, ಆ ವಾವಾತೆಯು ಪ್ರತ್ಯುತ್ತರರೂಪವಾಗಿ ಮಂತ್ರರೂಪವಾದ ಈ ವಾಕ್ಯವನ್ನು ಹೇಳಿದಳು—

**ಯದ್ವಾವಾನ ಪುರುತಮಂ ಪುರಾಷಾಳಾ ವೃತ್ರಹೇಂದ್ರೋ ನಾಮಾನ್ಯಪ್ರಾಃ ।**
**ಅಚೇತಿ ಪ್ರಾಸಹಸ್ಪತಿಸ್ತುವಿಷ್ಮಾನಿತಿ ॥** (ಋ. ಸಂ. ೧೦-೭೪-೬)

ಪುರಾತನ ಪುರುಷರ ಮಧ್ಯದಲ್ಲಿ ಇಂದ್ರನು ವೃತ್ರನನ್ನು ಸಂಹಾರಮಾಡಿ, ಇತರ ಅನೇಕ ಯುದ್ಧಗಳಲ್ಲಿಯೂ ಜಯ

ಶಾಲಿಯಾಗಿ ಪ್ರಪಂಚದಲ್ಲೆಲ್ಲಾ ಖ್ಯಾತಿಯನ್ನು ಗಳಿಸಿರುವನು. ಆದ್ದರಿಂದ ಇಂದ್ರನಿಗೆ ಪ್ರಾಸಹಸ್ಪತಿ ಎಂಬ ಹೆಸರು. **ಪ್ರ**—ಎಂದರೆ ಅತಿಶಯವಾದ, **ಸಹಃ**—ಬಲಕ್ಕೆ, **ಪತಿಃ**—ಪ್ರಭುವು, ಅತ್ಯಂತ ಬಲಶಾಲಿಯು ಎಂಬ ಹೆಸರು ಅನ್ವರ್ಥ ನಾಮವಾಗಿರುವುದು. ಇಂತಹ ಹೆಸರನ್ನು ವೃತ್ರಸಂಹಾರರೂಪವಾದ ಮಹಾಕಾರ್ಯದಿಂದ ಗಳಿಸಿ, ಮಾಹೇಂದ್ರ ಗ್ರಹ, ಮಾಧ್ಯಂದಿನಸವನ ಮೊದಲಾದ ಪ್ರಶಸ್ತಿನಾಮಗಳು ತನಗೆ ಅತ್ಯಂತ ಪ್ರಿಯವಾಗಿರುವುದೆಂದು ಪ್ರಪಂಚ ದಲ್ಲೆಲ್ಲಾ ಹರಡಿರುವನು. ಈ ಇಂದ್ರನು ದೇವತೆಗಳ ಅಭೀಷ್ಟವೇನೆಂಬುದನ್ನೂ ತಿಳಿದೇ ಇರುವನು. ಮತ್ತು ಇವನು ಬಹಳ ಬಲಶಾಲಿಯು—ಎಂದು ಈ ಋಕ್ಕಿನ ಮೂರು ಪಾದಗಳಿಗೆ ಅರ್ಥವು. ಇದನ್ನೇ ವಾವಾತೆಯು ದೇವತೆಗಳಿಗೆ ತಿಳಿಸಿದಳು.

**ಇಂದ್ರೋ ವೈ ಪ್ರಾಸಹಸ್ಪತಿಸ್ತುವಿಷ್ಮಾನ್। ಯದೀಮುಶ್ಮಸಿ ಕರ್ತವೇ ಕರತ್ತದಿತಿ ಯದೇವೈತ-ದವೋಚಾಮಾಕರತ್ತದಿತ್ಯೇವೈನಾಂಸ್ತದಬ್ರವೀತ್ ॥**

ಮೇಲೆ ಹೇಳಿದಂತೆ ಮಂತ್ರದ ಮೂರು ಪಾದಗಳಿಂದ ವಾವಾತೆಯು ಹೇಳಿದ ಉತ್ತರವನ್ನು ಕೇಳಿ ದೇವತೆಗಳು—

**ಯದೀಮುಶ್ಮಸಿ ಕರ್ತವೇ ಕರತ್ತತ್ ।**

ಎಂಬ ನಾಲ್ಕನೆಯ ಪಾದದಿಂದ ತಮ್ಮ ತಮ್ಮಲ್ಲಿ ಮಾತನಾಡಿಕೊಂಡರು. ದೇವತೆಗಳಾದ ನಮಗೂ ಯಜ್ಞದಲ್ಲಿ ಭಾಗವಿರುವುದಾದರೆ ಮತ್ತು ಇಂದ್ರನು ನಮಗೆ ಆ ಯಜ್ಞಭಾಗವನ್ನು ಕಲ್ಪಿಸಿಕೊಡುವುದಾದರೆ, ನಮ್ಮ ಅಪೇಕ್ಷೆಯನ್ನು ಇಂದ್ರನು ನೆರವೇರಿಸಿದಂತಾಗುವುದು ಎಂದು ಅಥವಾ ಈ ನಾಲ್ಕನೆಯ ಪಾದದ ವಾಕ್ಯವನ್ನು ವಾವಾತೆಯ ಪ್ರತ್ಯುತ್ತರ ವೆಂದೇ ಪರಿಗಣಿಸುವುದಾದರೆ ಆಗ—ಎಲೈ ದೇವತೆಗಳೇ, ನೀವು ಆಲೋಚಿಸಿ ಇಂದ್ರನನ್ನು ಪ್ರಾರ್ಥಿಸಿದ ಕಾರ್ಯವನ್ನು ಇಂದ್ರನು ನೆರವೇರಿಸುತ್ತಾನೆ ಅಥವಾ ನೆರವೇರಿಸುವನು, ಎಂದು ಚತುರ್ಥಪಾದದ ಅರ್ಥವು. ಅದನ್ನೇ ಇಲ್ಲಿ ಸ್ಪಷ್ಟವಾಗಿ ಹೇಳಿರುವುದು.

**ತೇ ದೇವಾ ಅಬ್ರುವನ್ನಸ್ಯಸ್ಯಾ ಇಹಾಸ್ತು ಯಾ ನೋಽಸ್ಮಿನ್ನ ವೈ ಕಮವಿದದಿತಿ ತಥೇತಿ ತಸ್ಯಾ ಅಪ್ಯತ್ರಾಕುರ್ವನ್ ॥**

ಈ ರೀತಿ ಹೇಳಿದ ವಾವಾತೆಯ ಪ್ರತ್ಯುತ್ತರವನ್ನು ದೇವತೆಗಳು ಕೇಳಿ ಈ ವಾವಾತೆಯು ದೇವತೆಗಳಾದ ನಮಗೆ ಬಹಳ ಉಪಕಾರಮಾಡಿದ್ದಾಳೆ. ಆದ್ದರಿಂದ ಇವಳಿಗೆ ನಾವು ಪ್ರತ್ಯುಪಕಾರವನ್ನು ಮಾಡಬೇಕಾಗಿರುವುದು. ನಿಷ್ಕೇವಲ್ಯ ಶಸ್ತ್ರಮಂತ್ರದಲ್ಲಿ ಈ ವಾವಾತೆಗೆ ಯಾವುದಾದರೂ ಸಂಬಂಧವಿದೆಯೋ ಇಲ್ಲವೋ ತಿಳಿಯದು. ಹೇಗಾದರೂ ಆಗಲಿ ಈ ವಾವಾತೆಗೆ ನಿಷ್ಕೇವಲ್ಯಶಸ್ತ್ರಮಂತ್ರದಲ್ಲಿ ಯೋಗ್ಯವಾದ ಸಂಬಂಧವನ್ನು ಕಲ್ಪಿಸೋಣ ಎಂದು ಯೋಚಿಸಿ ಅದರಂತೆ ಮಾಡಿದರು.

**ತಸ್ಮಾದೇಷಾತ್ರಾಪಿ ಶಸ್ಯತೇ ಯದ್ವಾವಾನ ಪುರುತಮಂ ಪುರಾಷಾಳಿತಿ ।**

ಈ ರೀತಿ ನಿಷ್ಕೇವಲ್ಯಶಸ್ತ್ರಮಂತ್ರದಲ್ಲಿ ವಾವಾತೆಗೆ ಈ ಋಕ್ಕಿನ (ಯದ್ವಾವಾನ ಋ. ಸಂ. ೧೦-೭೪-೬) ಸಂಬಂಧವನ್ನು ದೇವತೆಗಳು ಕಲ್ಪಿಸಿದ್ದರಿಂದ ಈ ಋಕ್ಕು ನಿಷ್ಕೇವಲ್ಯಶಸ್ತ್ರಮಂತ್ರದಲ್ಲಿ ಧಾಯ್ಯಾಮಂತ್ರವೆಂದು ಹೇಳಲ್ಪಡುವುದು.

**ಸೇನಾ ವಾ ಇಂದ್ರಸ್ಯ ಪ್ರಿಯಾ ಜಾಯಾ ವಾವಾತಾ ಪ್ರಾಸಹಾ ನಾಮ ಕೋ ನಾಮ ಪ್ರಜಾಪತಿಃ ಶ್ವಶುರಸ್ತದ್ಯಾಸ್ಯ ಕಾಮೋ ಸೇನಾ ಜಯೇತ್ತಸ್ಯಾ ಅರ್ಧಾತ್ತಿಷ್ಠಂಸ್ತೃಣಮುಭಯತಃ**

**ಪರಿಚ್ಛಿದ್ಯೇತರಾಂ ಸೇನಾಮಭ್ಯಸ್ಯೇತ್ಪ್ರಾಸಹೇ ಕಸ್ತ್ವಾ ಪಶ್ಯತೀತಿ ತದ್ಯಥೈವಾದಃ ಸ್ನುಷಾ ಶ್ವಶುರಾಲ್ಲಜ್ಜಮಾನಾ ನಿಲೀಯಮಾನೈತ್ಯೇವಮೇವ ಸಾ ಸೇನಾ ಭಜ್ಯಮಾನಾ ನಿಲೀಯಮಾನೈತಿ ಯತ್ರೈವಂ ವಿದ್ವಾಂಸ್ತೃಣಮುಭಯತಃ ಪರಿಚ್ಛಿದ್ಯೇತರಾಂ ಸೇನಾಮಭ್ಯಸ್ಯತಿ ಪ್ರಾಸಹೇ ಕಸ್ತ್ವಾ ಪಶ್ಯತೀತಿ ।**

ಈ ಛಾಯ್ಯಾಮಂತ್ರವನ್ನು ಹೇಳಿದ ಇಂದ್ರಪತ್ನಿಯಾದ ವಾವಾತೆಯು ಪ್ರಶಂಸೆಯನ್ನು ಸ್ವಲ್ಪ ವಿವರವಾಗಿ ಇಲ್ಲಿ ತಿಳಿಸಿದೆ. ಹಿಂದೆ ವಾವಾತೆಯೆಂಬುವಳು ಇಂದ್ರನ ಪ್ರಿಯಪತ್ನಿಯೆಂದೂ ಇವಳ ಹೆಸರು ಪ್ರಾಸಹಾ ಎಂದೂ ಹೇಳಿದೆಯಷ್ಟೆ. ಲೋಕವ್ಯವಹಾರದಲ್ಲಿ ಈ ವಾವಾತಾ ಅಥವಾ ಪ್ರಾಸಹಾ ಎಂಬುವಳು ಯುದ್ಧಕ್ಕಾಗಿ ಸಿದ್ಧವಾಗಿರುವ ಸೇನಾರೂಪದಿಂದ ಇರುವಳೆಂದು ಹೇಳುವರು. ಏಕೆಂದರೆ ಇಂದ್ರಪತ್ನಿಯು ಸೇನಾಭಿಮಾನಿದೇವತೆಯು. ವೇದದಲ್ಲಿಯೂ ಸಹ **ಇಂದ್ರಾಣೀ ವೈ ಸೇನಾಯ ದೇವತಾ ।** ಎಂದು ಹೇಳಿರುವುದು. ಮತ್ತು **ಕೋ ನಾಮ**—ನಾನು ಯಾರು ಎಂದು ಹೇಳಿದ್ದರಿಂದ ಪ್ರಜಾಪತಿಯು ಕಶಬ್ದವಾಚ್ಯನೆಂದೂ ಹಿಂದೆ ವಿವರಿಸಲಾಗಿದೆಯಷ್ಟೆ. ಆ ಪ್ರಜಾಪತಿಯೇ ಇಂದ್ರಪತ್ನಿಯ **ಶ್ವಶುರ** ಅಥವಾ ಮಾವನು ಇಂದ್ರನು ಪ್ರಜಾಪತಿಯ ಪುತ್ರನೆಂಬ ವಿಷಯದಲ್ಲಿ—**ಪ್ರಜಾಪತಿರಿಂದ್ರಮಸೃಜತಾನುಜಾವರಂ ದೇವಾನಾಂ**—ಎಂದು ವೇದದಲ್ಲಿಯೇ ಹೇಳಿದೆ. ಈ ವಿಷಯವು ಹೀಗಿರುವಾಗ ಲೌಕಿಕ ವ್ಯವಹಾರದಲ್ಲಿ ಯುದ್ಧಾಭಿಲಾಷಿಯಾದ ಪುರುಷನು ತನ್ನ ಸೇನೆಯು ಜಯವನ್ನು ಪಡೆಯಬೇಕೆಂದು ತನಗಿಷ್ಟವಿದ್ದರೆ ಆಗ ಅವನೊಂದು ಕಾರ್ಯವನ್ನು ಮಾಡಬೇಕು. ಯುದ್ಧಸಮಯದಲ್ಲಿ ಎರಡು ಸೇನೆಗಳೂ ಪರಸ್ಪರಾಭಿಮುಖವಾಗಿ ಯುದ್ಧಮಾಡಲು ನಿಂತಿರುವಾಗ ಆ ಪುರುಷನು ತನ್ನ ಸೇನೆಯನ್ನತಿಕ್ರಮಿಸಿ ಎಂದರೆ ಸೇನೆಯ ಮಧ್ಯಭಾಗದಿಂದ ಸ್ವಲ್ಪ ಮುಂದಕ್ಕೆ ಹೋಗಿ ಭೂಮಿಯಲ್ಲಿ ನಿಂತುಕೊಂಡು ಒಂದು ಹುಲ್ಲುಕಡ್ಡಿಯನ್ನು ತೆಗೆದುಕೊಂಡು ಅದರ ಬೇರನ್ನೂ ತುದಿಯನ್ನೂ ಕತ್ತರಿಸಿ ಉಳಿದ ಮಧ್ಯಭಾಗವನ್ನು ಶತ್ರುಸೇನೆಯ ಅಭಿಮುಖವಾಗಿ (ಎದುರಿಗೆ) ಬಾಣವನ್ನು ಎಸೆಯುವಂತೆ ಎಸೆಯಬೇಕು. ಹೀಗೆ ಎಸೆಯುವಾಗ—**ಪ್ರಾಸಹೇ ಕಸ್ತ್ವಾ ಪಶ್ಯತಿ ।** ಎಲೈ ಪ್ರಾಸಹಾ ಎಂಬ ಹೆಸರುಳ್ಳ ಇಂದ್ರಪತ್ನಿಯೇ, ಕಶಬ್ದವಾಚ್ಯನೂ, ನಿನ್ನ ಮಾವನೂ ಆದ ಪ್ರಜಾಪತಿಯು ನಿನ್ನನ್ನು ತನ್ನ ಕಣ್ಣುಗಳಿಂದ ನೋಡುತ್ತಿರುವನು-ಎಂಬ ಮಂತ್ರದಿಂದ ಆ ಹುಲ್ಲುಕಡ್ಡಿಯನ್ನು ಎಸೆಯಬೇಕು. ಈ ಮಂತ್ರದಿಂದ ಹುಲ್ಲುಕಡ್ಡಿಯನ್ನು ಈ ರೀತಿ ಎಸೆದರೆ ಶತ್ರುಸೇನೆಗೆ ಪರಾಜಯವುಂಟಾಗುವುದು. ಇದನ್ನು ಒಂದು ದೃಷ್ಟಾಂತಮೂಲಕ ಸ್ಪಷ್ಟಪಡಿಸುವರು. ಲೋಕವ್ಯವಹಾರದಲ್ಲಿ ದೊಡ್ಡಮನುಷ್ಯರೂ ಪೂರ್ವಾಚಾರ ಸಂಪ್ರದಾಯನಿಷ್ಠರೂ ಆದ ಗೃಹಸ್ಥರ ಮನೆಯಲ್ಲಿ ತರುಣಿಯಾದ ಸೊಸೆಯು ತನ್ನ ಮಾವನನ್ನು ಕಂಡರೆ ನಾಚಿಕೆಯಿಂದ ಸೀರೆಯ ಸೆರಗನ್ನು ಸರಿಮಾಡಿಕೊಳ್ಳುತ್ತಾ ಹಸ್ತಾದ್ಯವಯವಗಳನ್ನು ಮುದುರಿಕೊಂಡು ಮನೆಯ ಒಳಭಾಗಕ್ಕೆ ಮೆಲ್ಲನೆ ಹೊರಟು ಹೋಗುವಳು. ಅದರಂತೆ ಮಂತ್ರಪೂರ್ವಕವಾದ ತೃಣವಿಕ್ಷೇಪದಿಂದ ಶತ್ರುಸೇನೆಗೆ ಪರಾಭವ (ಸೋಲು) ವುಂಟಾಗಿ ಅದು ಪರ್ವತಾರಣ್ಯನದಿಗಳನ್ನು ದಾಟಿ ಹಿಂದಕ್ಕೆ ಸರಿಯುತ್ತಾ ತನ್ನ ದೇಶಕ್ಕೆ ಪಲಾಯನ ಮಾಡುವುದು. ಪ್ರಾಸಂಗಿಕವಾಗಿ ಈ ವಿಷಯವನ್ನು ಇಲ್ಲಿಗೆ ನಿಲಿಸಿ ಮುಂದೆ ಪ್ರಕೃತಸಂದರ್ಭವನ್ನು ವಿಸ್ತರಿಸಿರುವರು—

**ತಾನಿಂದ್ರ ಉವಾಚಾಪಿ ವೋಽತ್ರಾಸ್ತೀತಿ ತೇ ದೇವಾ ಅಬ್ರುವನ್ವಿರಾಡ್ಯಾಜ್ಯಾಸ್ತು ನಿಷ್ಕೇವಲ್ಯಸ್ಯ ಯಾ ತ್ರಯಸ್ತ್ರಿಂಶದಕ್ಷರಾ ತ್ರಯಸ್ತ್ರಿಂಶದ್ವೈ ದೇವಾ ಅಷ್ಟೌ ವಸವ ಏಕಾದಶ ರುದ್ರಾ ದ್ವಾದ-**

**ತಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚ ದೇವತಾ ಅಕ್ಷರಭಾಜಃ ಕರೋತ್ಯಕ್ಷರಮಕ್ಷರಮೇವ ತದ್ದೇವತಾ ಅನು ಪ್ರಪಿಬಂತಿ ದೇವಪಾತ್ರೇಣೈವ ತದ್ದೇವತಾಸ್ತೃಪ್ಯಂತಿ ।**

ವಾವಾತೆಯ ವಚನವನ್ನು (ಪ್ರತ್ಯುತ್ತರವನ್ನು) ಕೇಳಿ ದೇವತೆಗಳು ಇಂದ್ರನ ಸಮೀಪಕ್ಕೆ ಹೋಗಲು, ಇಂದ್ರನು ಅವರನ್ನು ಕುರಿತು—ಎಲೈ ದೇವತೆಗಳೇ, ನೀವು ಅಪೇಕ್ಷಿಸುವಂತೆ ಯಜ್ಞದ ನಿಷ್ಕೇವಲ್ಯಶಸ್ತ್ರದಲ್ಲಿ ನಿಮಗೆ ಯಜ್ಞ ಭಾಗವು ಕೊಡಲ್ಪಟ್ಟಿರುವುದು ಎಂದನು. ಅದನ್ನು ಕೇಳಿ ದೇವತೆಗಳು—ನಾವು (ದೇವತೆಗಳು) ಮೂವತ್ತಮೂರು ಮಂದಿ ಇರುವೆವು. ಹೇಗೆಂದರೆ, ಎಂಟು ಮಂದಿ ವಸುಗಳು, ಹನ್ನೊಂದುಮಂದಿ ರುದ್ರರು, ಹನ್ನೆರಡುಮಂದಿ ಆದಿತ್ಯರು ಇವರ ಜತೆಗೆ ಪ್ರಜಾಪತಿ ಒಬ್ಬನು, ವಷಟ್ಕಾರವು ಒಂದು, ಒಟ್ಟು ಮೂವತ್ತಮೂರು ದೇವತೆಗಳಿರುವುದರಿಂದ ಮೂವತ್ತಮೂರು ಅಕ್ಷರಗಳುಳ್ಳ ವಿರಾಟ್ ಎಂಬ ಛಂದಸ್ಸಿನ ಯಾಜ್ಯಾಮಂತ್ರದಿಂದ ಎಂದರೆ—

**ಪಿಬಾ ಸೋಮಮಿಂದ್ರ ಮಂದತು ತ್ವಾ ಯಂ ತೇ ಸುಷಾವ ಹರ್ಯಶ್ವಾದ್ರಿಃ ।**
**ಸೋತುರ್ಬಾಹುಭ್ಯಾಂ ಸುಯತೋ ನಾರ್ವಾ ।**

(ಋ. ಸಂ. ೭-೨೨-೧)

ಎಂಬ ಯಾಜ್ಯಾಮಂತ್ರದಿಂದ ಸೋಮಪಾನವನ್ನು ಕಲ್ಪಿಸಬೇಕೆಂದು ಇಂದ್ರನನ್ನು ಪ್ರಾರ್ಥಿಸಿದರು. ಈ ಯಾಜ್ಯಾ ಮಂತ್ರದಲ್ಲಿ ಮೂವತ್ತಮೂರು ಅಕ್ಷರಗಳಿರಬೇಕು. ಆದರ ಹಾಗಿಲ್ಲದೆ ಇಪ್ಪತ್ತೊಂಭತ್ತು ಅಕ್ಷರಗಳು ಮಾತ್ರ ಇರುವವು ಆದರೂ ಅಕ್ಷರಸಂಯೋಜನಾಕ್ರಮದಿಂದ ಅಕ್ಷರಗಳು ಕಮ್ಮಿ ಇದ್ದರೂ ಒಟ್ಟು ಮೂವತ್ತುಮೂರು ಅಕ್ಷರಗಳಿರುವು ವೆಂದೇ ಪರಿಗಣಿಸಬೇಕು. ಈ ರೀತಿ ಯಾಜ್ಯಾಮಂತ್ರದಲ್ಲಿರುವ ಮೂವತ್ತಮೂರು ಅಕ್ಷರಗಳೂ, ಒಂದೊಂದು ಅಕ್ಷರ ಒಂದೊಂದು ದೇವತೆಯಂತೆ, ಮೂವತ್ತಮೂರು ದೇವತೆಗಳನ್ನೂ ತೃಪ್ತಿಪಡಿಸುವವು ಈ ಕ್ರಮವನ್ನು ಬಿಟ್ಟು ಬೇರೆ ಛಂದಸ್ಸಿನ ಮಂತ್ರದಿಂದ ಯಾಜ್ಯಾಹುತಿಯನ್ನು ಅರ್ಪಿಸಿದರೆ ಅದರಿಂದ ಉಂಟಾಗುವ ಹಾನಿಯನ್ನು ವಿವರಿಸುವರು—

**ಯಂ ಕಾಮಯೇತಾನಾಯತನವಾನ್ ಸ್ಯಾದಿತ್ಯವಿರಾಜಾಸ್ಯ ಯಜೇದ್ಗಾಯತ್ರ್ಯಾ ವಾ ತ್ರಿಷ್ಟುಭಾ ವಾನ್ಯೇನ ವಾ ಛಂದಸಾ ವಷಟ್ಕುರ್ಯಾದನಾಯತನವಂತಮೇವೈನಂ ತತ್ಕರೋತಿ ಯಂ ಕಾಮಯೇತಾಯತನವಾನ್ ಸ್ಯಾದಿತಿ ವಿರಾಜಾಸ್ಯ ಯಜೇತ್ಪಿಬಾ ಸೋಮಮಿಂದ್ರ ಮಂದತು ತ್ವೇತ್ಯೇತಯಾಯತನವಂತಮೇವೈನಂ ತತ್ಕರೋತಿ ।**

(ಋ. ಸಂ. ೧೨-೨೨)

ಯಜ್ಞಮಾಡುವ ಯಜಮಾನನಿಗೆ ಗೃಹಾದಿಸಂಪತ್ತುಗಳು ನಾಶವಾಗಬೇಕೆಂಬ ಅಪೇಕ್ಷೆಯು ಹೋತೃವಿಗಿದ್ದಲ್ಲಿ ಆಗ ಅವನು ನಿಷ್ಕೇವಲ್ಯಶಸ್ತ್ರದಲ್ಲಿ ಪಠಿಸಬೇಕಾದ ಯಾಜ್ಯಾಮಂತ್ರವನ್ನು ವಿರಾಟ್‌ಛಂದಸ್ಸಿನ ಋಕ್ಕಿನಿಂದ ಪಠಿಸದೆ ಗಾಯತ್ರೀ, ತ್ರಿಷ್ಟುಪ್ ಅಥವಾ ಬೇರೆ ಛಂದಸ್ಸಿನ ಮಂತ್ರಗಳನ್ನು ಪಠಿಸುತ್ತಾ ಹೋಮಮಾಡಬೇಕು. ಆ ರೀತಿ ಮಾಡಿದಲ್ಲಿ ಯಜಮಾನನ ಗೃಹಾದಿನಿವಾಸಸ್ಥಾನಗಳು ನಾಶವಾಗುವವು. ಆದ್ದರಿಂದ ಯಜಮಾನನಿಗೆ ಗೃಹಸಂಪತ್ತು ಶಾಶ್ವತವಾಗಿರಲಿ ಎಂಬ ಅಪೇಕ್ಷೆಯಿದ್ದಲ್ಲಿ ಹೋತೃವು ಈ ಯಾಜ್ಯಾಹೋಮವನ್ನು ವಿರಾಟ್‌ಛಂದಸ್ಸಿನ ಋಕ್ಕಾದ—ಪಿಬಾ ಸೋಮಮಿಂದ್ರ (ಋ. ಸಂ. ೭-೨೨-೧) ಎಂಬ ಮಂತ್ರದಿಂದಲೇ ನೆರವೇರಿಸಬೇಕು. ಹಾಗೆ ಮಾಡಿದಲ್ಲಿ ಯಜಮಾನನಿಗೆ ಗೃಹಾದಿನಿವಾಸಸ್ಥಾನಗಳ ಸಮೃದ್ಧಿಯುಂಟಾಗುವುದು.

———

## ಇಂದ್ರನಿಗೆ ಮರುತ್ವಾನ್ ಎಂಬ ಹೆಸರು ಬರಲು ಕಾರಣ

ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವೂ, ಅವರವರಿಗೆ ಇರುವ ರಾಜಪ್ರಜಾ ಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ ಮತ್ತು ವೃತ್ರಾಸುರನೊಡನೆ ಯುದ್ಧವನ್ನು ನಡೆಸುವಾದ ಇಂದ್ರನಿಗೆ ಮರುತ್ತುಗಳು ಸಹಾಯಮಾಡಿರುವುದೂ ಸಂಹಿತೆ ಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅನೇಕಕಡೆ ಸ್ತುತಿಸಲ್ಪಟ್ಟಿದೆ. ಇಂದ್ರನು ಮರುತ್ತುಗಳೊಡನೆ ಸೇರಿಕೊಂಡು ಉಳಿದ ದೇವತೆಗಳಿಂದ ಪ್ರತ್ಯೇಕವಾಗಿ ಇದ್ದುದನ್ನು ತಿಳಿಸುವ ಪೂರ್ವಕಥೆಯೊಂದನ್ನು ಶತಪಥಬ್ರಾಹ್ಮಣದಲ್ಲಿ ಹೇಳಿದೆ

**ಆತಿಥ್ಯೇನ ವೈ ದೇವಾ ಇಷ್ಟ್ವಾ । ತಾನ್ತ್ಸಮುದವಿಂದತ್ತೇ ಚತುರ್ಧಾವ್ಯದ್ರವನ್ನನ್ಯೋನ್ಯಸ್ಯ ಶ್ರಿಯಾ ಅತಿಷ್ಠಮಾನಾ ಅಗ್ನಿರ್ವಸುಭಿಃ ಸೋಮೋ ರುದ್ರೈರ್ವರುಣ ಆದಿತ್ಯೈರಿಂದ್ರೋ ಮರುದ್ಭಿರ್ಬೃಹಸ್ಪತಿರ್ವಿಶ್ವೈರ್ದೇವೈಃ ॥**

(ಶ. ಬ್ರಾ. ೩-೪-೨-೧)

ಹಿಂದೆ ದೇವತೆಗಳು ಆತಿಥ್ಯಕ್ರಿಯೆಯನ್ನು ನೆರವೇರಿಸಿದಾಗ ಅವರವರಲ್ಲೇ ವೈಮನಸ್ಯವುಂಟಾಗಿ ಒಬ್ಬರಿಗೊಬ್ಬರು ಸೇರಲಿಷ್ಟಪಡದೆ, ನಾಲ್ಕು ಗುಂಪು ಮಾಡಿಕೊಂಡು ಬೇರೆ ಬೇರೆಯಾದರು. ಅಗ್ನಿಯು ವಸುಗಳೊಂದಿಗೂ ಸೋಮನು ರುದ್ರರೊಂದಿಗೂ, ವರುಣನು ಆದಿತ್ಯರೊಂದಿಗೂ, ಇಂದ್ರನು ಮರುತ್ತುಗಳೊಂದಿಗೂ ಮತ್ತು ಬೃಹಸ್ಪತಿಯು ವಿಶ್ವೇದೇವತೆಗಳೊಂದಿಗೂ ಕೂಡಿಕೊಂಡು ಪ್ರತ್ಯೇಕವಾದ ಗುಂಪುಮಾಡಿಕೊಂಡರು, ಎಂಬ ಕಥೆಯಲ್ಲಿ ಇಂದ್ರನು ಮರುತ್ತುಗಳೊಡನೆ ಸಾಹಚರ್ಯವನ್ನು ಬೆಳೆಸಿ ಅವರೊಡನೆ ಇಟ್ಟುಕೊಂಡಿರುವ ನಿಕಟವಾದ ಸಂಬಂಧವನ್ನು ಹೇಳಿದೆ. ಇದೂ ಅಲ್ಲದೇ, ಇಂದ್ರನೇ ದೊರೆಯೆಂದೂ, ಮರುತ್ತುಗಳೇ ಪ್ರಜೆಗಳೆಂದೂ ಅನೇಕಕಡೆ ಹೇಳಿದೆ. ಉದಾಹರಣೆಗೆ ಅದೇ ಶತಪಥಬ್ರಾಹ್ಮಣದಲ್ಲಿ,

**ಕ್ಷತ್ರಂ ವಾ ಇಂದ್ರೋ ವಿಶೋ ಮರುತೋ ವಿಶಾ ವೈ ಕ್ಷತ್ರಿಯೋ ಬಲವಾನ್ ಭವತಿ ।**

(ಶ. ಬ್ರಾ. ೪-೩-೩-೬)

ಇಂದ್ರನು ಕ್ಷಾತ್ರತೇಜಸ್ಸುಳ್ಳ ರಾಜನು. ಮರುತ್ತುಗಳೇ ಅವನ ಪ್ರಜೆಗಳು. ಪ್ರಜೆಗಳ ಸಹಕಾರದಿಂದಲೇ ರಾಜನು ಶಕ್ತಿಯುಳ್ಳವನಾಗಿ ಆಗುತ್ತಾನೆಂದೂ, ಮರುತ್ತುಗಳ ಸಹಾಯದಿಂದ ಇಂದ್ರನ ಪರಾಕ್ರಮವು ವೃದ್ಧಿಯನ್ನು ಪಡೆಯಿ ತೆಂದೂ ಸೂಚಿಸಿದೆ. ಈ ರೀತಿಯಾದ ನಿಕಟವಾದ ಸಂಬಂಧವೂ ಸಾಹಚರ್ಯವೂ ಇರುವುದರಿಂದಲೇ ಇಂದ್ರನನ್ನೂ ಮರುತ್ತುಗಳನ್ನೂ ಒಟ್ಟಿಗೆ ಉದ್ದೇಶಿಸಿ ಹವಿಸ್ಸುಗಳನ್ನು ಅರ್ಪಿಸುವಕ್ರಮವು ಶ್ರುತಿಗಳಲ್ಲಿ ಕಂಡುಬರುತ್ತದೆ. ಮತ್ತು

**ಸ ನೋ ಮರುದ್ಭಿರ್ವೃಷಭ ಶ್ರವೋ ಧಾ ಉಗ್ರ ಉಗ್ರೇಭಿಃ ಸ್ಥವಿರಃ ಸಹೋದಾಃ ।**

(ಋ. ಸಂ ೧-೧೭೧-೫)

ಎಂಬಿವೇ ಮುಂತಾದ ಋಕ್ಕುಗಳಿಂದ ಇಂದ್ರನಿಗೂ, ಮರುತ್ತುಗಳಿಗೂ ಒಟ್ಟಿಗೆ ಸೇರಿಸಿ ಆಹ್ವಾನವೂ ಹವಿಸ್ಸಿನ ರ್ಪಣೆಯೂ ಇದೆ. ಈ ರೀತಿಯಾದ ಸಾಹಚರ್ಯವನ್ನು ವರ್ಣಿಸಿ ಬೃಹದ್ದೇವತೆಯಲ್ಲಿ—

**ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।**

(ಬೃ. ದೇ. ೪-೫೬)

ಇತ್ಯಾದಿ ವಾಕ್ಯಗಳಿಂದ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ. ಆದರೆ ಒಂ ಸೂಕ್ತದಲ್ಲಿ ಇಂದ್ರನಿಗೂ ಮರುತ್ತುಗಳಿಗೂ ನಡೆದ ವಾಗ್ವಾದದ ಫಲವಾಗಿ ಅವರವರ ವೈಷಮ್ಯವೂ ಇಂದ್ರನ ಕ್ರೋಧ ಸೂಚಿತವಾಗಿದೆ. ಈ ಕ್ರೋಧಕ್ಕೆ ಮೂಲವಾದ ಅವರವರ ವಾಗ್ವಾದವನ್ನು ಈರೀತಿ ತಿಳಿಸಿದೆ.

**ಕ್ವಸ್ಯಾ ವೋ ಮರುತಃ ಸ್ವಧಾಸೀದ್ಯನ್ಮಾಮೇಕಂ ಸಮಧತ್ತಾಹಿಹತ್ಯೇ ।**
**ಅಹಂ ಹ್ಯುಗ್ರಸ್ತವಿಷಸ್ತುವಿಷ್ಮಾನ್ವಿಶ್ವಸ್ಯ ಶತ್ರೋರನಮಂ ವಧಸ್ನೈಃ ॥**

(ಋ. ಸಂ. ೧-೧೬೫-೬)

ಎಲೈ ಮರುತ್ತುಗಳೇ, ನಿಮ್ಮ ಸಹಾಯದಿಂದ ನಾನು ಅಹಿ (ವೃತ್ರ) ಹನನವನ್ನು ಮಾಡಿದೆನು ಎಂದು ಹೇಳುವು ಸುಳ್ಳು. ನಿಮಗೆ ಆ ಶಕ್ತಿಯು ತಾನೆ ಎಲ್ಲಿದ್ದಿತು ? ನನ್ನ ಶಕ್ತಿಯೇ ಅಸಾಧಾರಣವಾದುದರಿಂದ ಇತರ ಶಕ್ತಿಯ ಸಹಾ ವನ್ನು ಅಪೇಕ್ಷಿಸದೆ ವೃತ್ರಹನನಕಾಲದಲ್ಲಿ ಅದು ನನಗೆ ಸಹಾಯಮಾಡಿತು. ಕೇವಲ ನಾನು ಮಾತ್ರ ಭಯಂಕರನು ಅದ್ಭುತವಾದ ಶಕ್ತಿಯುಳ್ಳವನೂ, ಮಹತ್ತ್ವದಿಂದ ಕೂಡಿದವನೂ ಆಗಿದ್ದೇನೆ ಎಂದು ಮರುತ್ತುಗಳನ್ನು ತಿರಸ್ಕೃತವಾ ದೃಷ್ಟಿಯಿಂದ ಕಂಡು ತನ್ನ ಕ್ರೋಧವನ್ನು ಪ್ರಕಟಿಸುತ್ತಾನೆ. ಇಲ್ಲಿ ಆ ಕ್ರೋಧವು ಸೂಚಿತವಾಗಿದೆ. ವೃತ್ರಾಸು ವಧಕಾಲದಲ್ಲಿ ಮರುತ್ತುಗಳ ಸಹಾಯವನ್ನು ಇಂದ್ರನು ಪಡೆದನೆಂಬುದು ಪ್ರಸಿದ್ಧವಾಗಿದೆ ಆದರೂ ಸಹ ಮರುತ ಗಳು ಆ ವಿಷಯವನ್ನು ತಿಳಿಸಿ ಆ ಸಹಾಯದ ಜ್ಞಾಪಕಾರ್ಥವಾಗಿ ಇಂದ್ರನಿಗೆ ಸೇರಬೇಕಾದ ಹವಿಸ್ಸಿನಲ್ಲಿ ತಮಗ ಭಾಗವನ್ನು ಕೊಡಬೇಕೆಂದು ಕೇಳಿದಾಗ ಇಂದ್ರನು ಮರುತ್ತುಗಳಿಂದ ಯಾವ ಸಹಾಯವೂ ಆಗಿಯೇ ಇಲ್ಲವೆಂದು ತಾನು ತನ್ನ ಸ್ವಶಕ್ತಿಯಿಂದಲೇ ಸಕಲ ಶತ್ರುಗಳನ್ನೂ ಕೊಂದೆನೆಂದೂ ಹೇಳಿಕೊಳ್ಳುತ್ತಾನೆ. ಇದೇ ವಿಷಯವನ ನಿರುಕ್ತಕಾರರು ತಿಳಿಸುತ್ತಾ ಈರೀತಿ ಹೇಳಿದ್ದಾರೆ—

**ಅಗಸ್ತ್ಯ ಇಂದ್ರಾಯ ಹವಿರ್ನಿರುಪ್ಯ ಮರುದ್ಭ್ಯಃ ಸಂಪ್ರದಿತ್ಸಾಂಚಕಾರ। ಸ ಇಂದ್ರ ಏ ಪರಿದೇವಯಾಂಚಕ್ರೇ ।**

(ನಿ. ೧.೫)

ಅಗಸ್ತ್ಯಮುನಿಯು ಇಂದ್ರನನ್ನುದ್ದೇಶಿಸಿ ಹವಿಸ್ಸನ್ನು ಸಿದ್ಧಪಡಿಸಿದಾಗ ಮರುತ್ತುಗಳಿಗೂ ಅದರಲ್ಲಿ ಭಾಗವನ್ನರ್ಪಿಸಲ ಅಪೇಕ್ಷಿಸಿದೊಡನೆಯೇ ಇಂದ್ರನು ಆ ವಿಷಯದಲ್ಲಿ ಆಕ್ಷೇಪಿಸಿದನು ಎಂಬ ಸಂದರ್ಭವನ್ನು ತಿಳಿಸಿ ನಿರುಕ್ತಕಾರರು ಅಂಶವನ್ನು ತಿಳಿಸುವ,

**ನ ನೂನಮಸ್ತಿ ನೋ ಶ್ವಃ ಕಸ್ತದ್ವೇದ ಯದದ್ಭುತಂ ।**
**ಅನ್ಯಸ್ಯ ಚಿತ್ತಮಭಿ ಸಂಚರೇಣ್ಯಮುತಾಧೀತಂ ವಿನಶ್ಯತಿ ॥**

(ಋ. ಸ. ೧.೧೭೦.೧)

ಎಂಬ ಋಕ್ಕನ್ನುದಹರಿಸಿದ್ದಾರೆ. ಆ ಕ್ರೋಧದ ವೇಗವು ಕಡಿಮೆಯಾಗಿ ತನಗೆ ಅದರಿಂದ ಬಾಧಕವಾಗದಿರಲೆಂದ ಮತ್ತು ಮರುತ್ತುಗಳಿಗೆ ನ್ಯಾಯವಾಗಿ ಸಲ್ಲಬೇಕಾದ ಹವಿರ್ಭಾಗವು ಅವರಿಗೆ ಸೇರಲೇಬೇಕೆಂಬ ಉದ್ದಿಶ್ಯದಿಂದಲೂ ಇ ಮರುತ್ತುಗಳನ್ನುದ್ದೇಶಿಸಿ ಪ್ರಾರ್ಥಿಸಿದೆ. ಈ ವಿಧವಾದ ಸಾಂತ್ವವಚನವಾದನಂತರ ಇಂದ್ರನ ಮೈತ್ರಿಯು ಹಿಂದಿನಂತೆಯೇ ಬೆಳೆದು ತನ್ನ ಹವಿಸ್ಸಿನ ಭಾಗವನ್ನು ಮರುತ್ತುಗಳಿಗೂ ತಾನೇ ಕೊಡುತ್ತಾನೆ. ಇದೇ ವಿಷಯವನ್ನು ಎಂಟನ ಮಂಡಲದಲ್ಲಿ ಋಷಿಯು ಈ ರೀತಿ ಹೇಳಿ ಸ್ತುತಿಸುತ್ತಾನೆ.

**ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ ।**
**ಮರುದ್ಭಿರಿಂದ್ರ ಸಖ್ಯಂ ತೇ ಅಸ್ತ್ವಥೇಮಾ ವಿಶ್ವಾಃ ಪೃತನಾ ಜಯಾಸಿ ॥**

(ಋ. ಸಂ. ೮-೯೬-೭)

ಎಲೈ ಇಂದ್ರನೇ, ಮರುತ್ತುಗಳೊಡನಿರುವ ನಿನ್ನ ಸಖ್ಯವು ಪ್ರಸಿದ್ಧವಾದುದು. ಅವರಿಗೂ ನಿನ್ನ ಹವಿಸ್ಸಿನಲ್ಲಿ ಭಾಗವನ್ನು ಕೊಟ್ಟು ಅವರ ಸಹಾಯದಿಂದ ಶತ್ರುಗಳನ್ನೆಲ್ಲಾ ಜಯಿಸು ಎಂದು ಪ್ರಾರ್ಥಿಸಿದೆ.

---

## ಇಂದ್ರನು ನಮುಚಿಯೆಂಬ ರಾಕ್ಷಸನನ್ನು ಸಂಹರಿಸಿದ ವಿಷಯ

ಈ ನಮುಚಿಯ ಸೂಕ್ಷ್ಮಪರಿಚಯವನ್ನು ಹೇಳಿ ಅನಂತರ ಇಂದ್ರನು ಅವನನ್ನು ಹೇಗೆ ವಧಿಸಿದನೆಂಬ ವಿಷಯ ವನ್ನು ವಿವರಿಸುವೆವು.

ನಮುಚಿಯ ಹೆಸರು ಋಗ್ವೇದದಲ್ಲಿ ಒಂಭತ್ತುಸಲವಲ್ಲದೆ, ವಾಜಸನೇಯಸಂಹಿತೆ, ತೈತ್ತಿರೀಯಬ್ರಾಹ್ಮಣ (ತೈ. ಬ್ರಾ. ೧-೭-೧-೬, ೭), ಶತಪಥಬ್ರಾಹ್ಮಣ (ಶ. ಬ್ರಾ. ೧೨-೭-೧-೧೦) ಮೊದಲಾದ ಸ್ಥಳಗಳಲ್ಲಿಯೂ ಈ ಹೆಸರು ಕಂಡುಬರುತ್ತದೆ. ಇವನು ಅಸುರಸ್ವಭಾವದವನು ಎಂದೂ ಋಗ್ವೇದದಲ್ಲಿ ದಾಸ ಎಂದೂ (ಋ. ಸಂ. ೫-೩೦-೭, ೮) ವ್ಯವಹೃತನಾಗಿದಾನೆ. ಒಂದುಕಡೆ (ಋ. ಸಂ. ೧-೫೩-೭) ಮಾಯಿ ಎಂದು ವರ್ಣಿತನಾಗಿದಾನೆ. ಇಂದ್ರನು ನಮುಚಿಯನ್ನು ಸೋಲಿಸುವಾಗ ನಮಿ ಮತ್ತು ಸಾಯ್ಯ ಎಂಬುವರ ಸ್ನೇಹ ಅಥವಾ ಬೆಂಬಲವಿದ್ದಿತೆಂದು ಋಗ್ವೇದ ದಲ್ಲಿ ಹೇಳಿದೆ. (ಋ. ಸಂ. ೧-೫೩-೭ ; ೬-೨೦-೬). ಇತರ ಅಸುರರಂತೆ ನಮುಚಿಯೂ ಇಂದ್ರನಿಂದ ಹತನಾಗಿ ದಾನೆ. (ಋ. ಸಂ. ೨-೧೪-೫, ೭-೧೯-೫) ಅಥವಾ ಹೊಡೆದು ಕೆಡವಲ್ಪಟ್ಟಿದಾನೆ. (೧-೫೩-೭) ಇಂದ್ರನು ವೃತ್ರ ನಮುಚಿ ಎಂಬ ಅಸುರರನ್ನು ವಧಿಸಿ ಅಸುರರ ನೂರು ಕೋಟೆಗಳನ್ನು ನಾಶಮಾಡಿದನು. (ಋ. ಸಂ. ೭-೧೯-೫) ವೃತ್ರಾಸುರನ ಶಿರಸ್ಸನ್ನು ಭೇದಿಸುವಂತೆ ನಮುಚಿಯ ಶಿರಸ್ಸನ್ನು ಭೇದಿಸುವುದಿಲ್ಲ. ಆದರೆ ಮಥನಮಾಡಿ (ಜಜ್ಞಿ) ಕೊಲ್ಲುತ್ತಾನೆ. (ಋ. ಸಂ. ೫.೩೦-೮ ; ೬-೨೦-೬) ಅಥವಾ ಶಿರಸ್ಸನ್ನು ತಿರುಚಿ ಕೊಲ್ಲುತ್ತಾನೆ. (ಋ ಸಂ. ೫-೩೦-೭) ಅಥವಾ ನೀರಿನ (ಸಮುದ್ರದ) ನೊರೆಯಿಂದ ಅವನ ಶಿರಸ್ಸನ್ನು ತಿರುಚಿ (ನುಲಿದು) ಕೊಲ್ಲುತ್ತಾನೆ. (ಋ. ಸಂ. ೮-೧೪-೩) ಕೆಲವುಕಡೆ ಶಿರಸ್ಸನ್ನು ಕತ್ತರಿಸಿದನು ಎಂದೂ ಇದೆ. (ತೈ. ಬ್ರಾ. ೧-೭-೧-೬, ೭) ಒಂದು ಸ್ಥಳದಲ್ಲಿ (ಋ. ಸಂ. ೧೦-೧೩೧-೪, ೫) ಇಂದ್ರನು ನಮುಚಿಯ ಪಾರ್ಶ್ವದಲ್ಲಿ ಕುಳಿತು ಮದ್ಯವನ್ನು ಪಾನಮಾಡಿದನು. ಆಗ ಸರಸ್ವತಿಯು ಅಶ್ವಿನೀದೇವತೆಗಳ ಸಹಾಯದಿಂದ ಗುಣಪಡಿಸಿದಳು ಎಂದಿದೆ. ಇವೆಲ್ಲಾ ಋಗ್ವೇದದಲ್ಲಿ ಹೇಳಿರುವ ವಿವರಣೆಗಳು.

ಈಗ ಯಜುರ್ವೇದದ ತೈತ್ತಿರೀಯಬ್ರಾಹ್ಮಣದಲ್ಲಿ ಇಂದ್ರನು ನಮುಚಿಯನ್ನು ಹೇಗೆ ಸಂಹಾರಮಾಡಿದನೆಂಬ ವಿಷಯವಿರುವುದನ್ನು ವಿವರಿಸುತ್ತೇವೆ. **ನಮುಚಿಃ । ಇಂದ್ರೇಣ ಸಹ ಯುದ್ಧಂ ನ ಮುಂಚತೀತಿ ನಮುಚಿಃ ।** ಇಂದ್ರನೊಡನೆ ಯುದ್ಧಮಾಡುವುದನ್ನು ಬಿಡುವವನಲ್ಲವಾದ್ದರಿಂದ ಇವನಿಗೆ ನಮುಚಿಯೆಂದು ಹೆಸರು ಎಂದು ಕೆಲವು ಭಾಷ್ಯಕಾರರು ನಮುಚಿಶಬ್ದದ ರೂಪನಿಷ್ಪತ್ತಿಮಾಡಿರುವರು. ಈ ಅಸುರನು ಮಹಾಬಲವುಳ್ಳವನಾದುದರಿಂದ ಇಂದ್ರನು ಇವನೊಡನೆ ಯುದ್ಧಮಾಡಿ ಜಯಿಸುವುದು ಬಹಳ ಕಷ್ಟವಾಯಿತು. ಆದ್ದರಿಂದ ಇಂದ್ರನು ಉಪಾಯದಿಂದ ಇವನನ್ನು ಸಂಹರಿಸಬೇಕಾಯಿತು. ಈ ವಿಷಯದಲ್ಲಿ ತೈತ್ತಿರೀಯಬ್ರಾಹ್ಮಣದಲ್ಲಿ ಒಂದು ಉಪಾಖ್ಯಾನವಿರುವುದು—

ಇಂದ್ರೋ ವೃತ್ರಗ್‍ಂ ಹತ್ವಾ। ಅಸುರಾನ್ ಪರಾಭಾವ್ಯ। ನಮುಚಿಮಾಸುರಂ ನಾಲಭತ। ತಗ್‍ಂ ಶಚ್ಯಾಗೃಹ್ಣಾತ್। ತೌ ಸಮಲಭೇತಾಂ। ಸೋಽಸ್ಮಾದಭಿಶುನತರೋಽಭವತ್। ಸೋಽಬ್ರವೀತ್। ಸಂಧಾಗ್‍ಂ ಸಂದಧಾವಹೈ। ಅಥ ತ್ವಾವಸ್ರಕ್ಷ್ಯಾಮಿ। ನ ಮಾ ಶುಷ್ಕೇಣ ನಾರ್ದ್ರೇಣ ಹನಃ। ನ ದಿವಾ ನ ನಕ್ತಮಿತಿ। ಸ ಏತಮಪಾಂ ಫೇನಮಸಿಂಚತ್। ನ ವಾ ಏಷ ಶುಷ್ಕೋ ನಾರ್ದ್ರೋ ವ್ಯುಷ್ಟಾಸೀತ್। ಅನುದಿತಃ ಸೂರ್ಯಃ। ನ ವಾ ಏತದ್ದಿವಾ ನ ನಕ್ತಂ। ತಸ್ಯೈತಸ್ಮಿನ್ ಲೋಕೇ। ಅಪಾಂ ಫೇನೇನ ಶಿರ ಉದವರ್ತಯತ್। ತದೇನಮನ್ವವರ್ತತ। ಮಿತ್ರದ್ರುಗಿತಿ। ಸ ಏತಾನಪಾಮಾರ್ಗಾನಜನಯತ್। ತಾನಜುಹೋತ್। ತೈರ್ವೈ ಸ ರಕ್ಷಾಗ್‍ಸ್ಯಪಾಹತ। ಯದಪಾಮಾರ್ಗಹೋಮೋ ಭವತಿ। ರಕ್ಷಸಾಮಪಹತ್ಯೈ ॥

(ತೈ. ಬ್ರಾ ೧-೭-೧.೬, ೭)

ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದ ಮೇಲೆ ಇನ್ನೂ ಇತರ ಅಸುರರನ್ನೂ ಸಂಹಾರಮಾಡಿದನು. ಆದರೆ ನಮುಚಿಯೆಂಬ ಅಸುರನನ್ನು ಜಯಿಸಲಾಗಲಿಲ್ಲ. ಇವನು ಮಹಾಬಲಶಾಲಿಯಾಗಿದ್ದನು. ಯಾವವಿಧವಾದ ಆಯುಧಗಳಿಗೂ ಇವನು ಜಗ್ಗಲಿಲ್ಲ. ಆದುದರಿಂದ ಇಂದ್ರನು ಅವನನ್ನು ತನ್ನ ಶರೀರಬಲದಿಂದಲೇ ಗೆಲ್ಲಬೇಕೆಂದು ಬಯಸಿ ಅವನೊಡನೆ ಮಲ್ಲಯುದ್ಧವನ್ನು ಪ್ರಾರಂಭಿಸಿದನು. ಆದರೂ ಯುದ್ಧಮಾಡಿದಂತೆಲ್ಲಾ ನಮುಚಿಯ ಬಲವೇ ವೃದ್ಧಿಯಾಗುತ್ತಿತ್ತು. ಇಂದ್ರನು ಅವನ ಹಿಡಿತದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಆಗ ಇಂದ್ರನು ತನ್ನನ್ನು ಬಿಡಬೇಕೆಂದು ನಮುಚಿಯನ್ನು ಕೇಳಲು ಆಗ ಆ ಅಸುರನು ಇಂದ್ರನನ್ನು ಕುರಿತು—ಎಲೈ ಇಂದ್ರನೇ, ನಿನ್ನನ್ನು ಬಿಡಬೇಕಾದರೆ ನಾನು ಹೇಳಿದಂತೆ ಕೇಳಬೇಕು. ಈಗ ನಾವು ಒಬ್ಬರಿಗೊಬ್ಬರು ಸಂಧಿಯನ್ನು (ಒಪ್ಪಂದವನ್ನು) ಮಾಡಿಕೊಳ್ಳೋಣ. ನೀನು ಮತ್ತೆ ನನ್ನೊಡನೆ ಯಾವುದಾದರೂ ತಂತ್ರದಿಂದ ಯುದ್ಧಮಾಡಿ ನನ್ನನ್ನು ಕೊಲ್ಲಬೇಕೆಂದು ಇಚ್ಛಿಸಬಹುದು. ಅಂತಹ ಸಂದರ್ಭದಲ್ಲಿ ನೀನು ನನ್ನನ್ನು ಕೊಲ್ಲಬೇಕೆಂದು ಉಪಯೋಗಿಸುವ ಆಯುಧವು ಹಸಿಯಾಗಿರಕೂಡದು, ಒಣಗಿರಲೂ ಕೂಡದು, ಹಗಲಿನಲ್ಲಿ ನನ್ನನ್ನು ಕೊಲ್ಲಕೂಡದು, ರಾತ್ರಿಕಾಲದಲ್ಲಿಯೂ ಕೊಲ್ಲಕೂಡದು. ಈ ನಿಯಮಗಳಿಗೆ ನೀನು ಒಪ್ಪುವಿಯಾದರೆ ನಿನ್ನನ್ನು ಬಿಡುವೆನು ಎಂದು ಹೇಳಿದನು. ಇಂದ್ರನು ಹಾಗೆಯೇ ಆಗಲೆಂದೊಪ್ಪಿ ಅವನ ಹಿಡಿತದಿಂದ ಬಿಡಿಸಿಕೊಂಡು ಇವನನ್ನು ಹೇಗೆ ಜಯಿಸಬೇಕೆಂದು ಆಲೋಚಿಸತೊಡಗಿದನು. ಕೆಲವುಕಾಲದಮೇಲೆ ಇಂದ್ರನು ಒಂದು ಉಪಾಯವನ್ನು ಯೋಚಿಸಿದನು. ಸಮುದ್ರತೀರದಲ್ಲಿ ಸಂಚರಿಸುತ್ತಿರುವಾಗ ಸಮುದ್ರದ ನೊರೆಯು ಅವನ ದೃಷ್ಟಿಗೆ ಬಿದ್ದಿತು. ಈ ನೊರೆಯು ಹಸಿಯೂ ಅಲ್ಲ, ಒಣಗಿದುದೂ ಅಲ್ಲ. ಆದುದರಿಂದ ಇದನ್ನೇ ಆಯುಧವನ್ನಾಗಿಮಾಡಿಕೊಂಡು ನಮುಚಿಯನ್ನು ಸಂಹರಿಸುವೆನು. ರಾತ್ರಿಯು ಕಳೆದು ಉಷಃಕಾಲವು ಪ್ರಾರಂಭವಾಗಿ ಸೂರ್ಯನು ಉದಯಿಸುವುದಕ್ಕೆ ಮೊದಲು ಚೆನ್ನಾಗಿ ಬೆಳಕಾಗಿರುವುದು. ಆ ಕಾಲವು ಕತ್ತಲೆಯಿಲ್ಲದ್ದರಿಂದ ರಾತ್ರಿಯೂ ಅಲ್ಲ, ಸೂರ್ಯನು ಉದಯಿಸಿಲ್ಲವಾದ್ದರಿಂದ ಹಗಲೂ ಅಲ್ಲ. ಇಂತಹ ಕಾಲದಲ್ಲಿ ನಮುಚಿಯೊಡನೆ ಯುದ್ಧಮಾಡಿ ನೀರಿನ ನೊರೆಯಿಂದ ನಿರ್ಮಿತವಾದ ಆಯುಧದಿಂದ ಅವನನ್ನು ಕೊಂದರೆ ನಾನು ಆಡಿದ ಮಾತಿಗೆ ತಪ್ಪಿದಂತಾಗುವುದಿಲ್ಲ ಎಂದು ನಿಶ್ಚಯಿಸಿ ಅದರಂತೆ ನಮುಚಿಯೊಡನೆ ಯುದ್ಧಮಾಡಿ ಆ ನೊರೆಯಿಂದ ಅವನ ಶಿರಸ್ಸನ್ನು ಕತ್ತರಿಸಿದನು. ಆದರೂ ಆ ಅಸುರನು ಮೃತನಾಗದೆ ಇಂದ್ರನನ್ನು ಕೊಲ್ಲುವುದಕ್ಕಾಗಿ ಅವನನ್ನು ಅಟ್ಟಿಸಿಕೊಂಡು ಬಂದನು. ಎಲೈ ಮಿತ್ರದ್ರೋಹಿಯಾದ ಇಂದ್ರನೇ, ನಿಲ್ಲು ನಿಲ್ಲು. ನೀನು ನನ್ನನ್ನು ಕೊಲ್ಲುವುದಿಲ್ಲವೆಂದು ಹಿಂದೆ ಮಾತುಕೊಟ್ಟು ಈಗ ಇಂತಹ ಮಿತ್ರದ್ರೋಹಕರವಾದ ಕೆಲಸವನ್ನು ಮಾಡಿರುತ್ತೀಯೆ.

ನಿನ್ನನ್ನು ಈಗಲೂ ಕೊಲ್ಲದೆ ಬಿಡುವುದಿಲ್ಲ ಎಂದನು. ಆಗ ಇಂದ್ರನು ಹೆದರಿ ಅಪಾಮಾರ್ಗವೆಂಬ ವೃಕ್ಷವಿಶೇಷವನ್ನು ಸೃಷ್ಟಿಸಿ ಅದರ ಸಮಿತ್ತುಗಳಿಂದ ವೀರ್ಯವೃದ್ಧಿಗಾಗಿ ಅಗ್ನಿಯಲ್ಲಿ ಹೋಮಮಾಡಿದನು. ಇದರಿಂದ ಇಂದ್ರನ ಬಲವು ಅಧಿಕವಾಗಿ ಆ ನಮುಚಿಯನ್ನು ಸಂಹಾರಮಾಡಿದನು. ಆದುದರಿಂದ ರಾಕ್ಷಸರ ಬಾಧೆಯಿಂದ ಪಾರಾಗಬೇಕೆಂದು ಬಯಸುವವರು ಅಪಾಮಾರ್ಗಸಮಿತ್ತುಗಳಿಂದ ಅಗ್ನಿಯಲ್ಲಿ ವೀರ್ಯವೃದ್ಧಿಗಾಗಿ ಹೋಮಮಾಡಬೇಕು. ಆ ಹೋಮದಿಂದ ಅವರ ಬಲವು ವೃದ್ಧಿಯಾಗಿ ರಾಕ್ಷಸರನ್ನು ಜಯಿಸಲು ಶಕ್ಯವಾಗುವುದು ಎಂದು ಉಪಾಖ್ಯಾನವಿದೆ. ಈ ನಮುಚಿಯ ಹೆಸರು ಋಗ್ವೇದದಲ್ಲಿ—

ನವ್ಯಾ ಯದಿಂದ್ರ ಸಖ್ಯಾ ಪರಾವತಿ ನಿಬರ್ಹಯೋ ನಮುಚಿಂ ನಾಮ ಮಾಯಿನಂ ॥
(ಋ. ಸಂ. ೧.೫೩.೭)

ಯಃ ಪಿಪ್ರುಂ ನಮುಚಿಂ ಯೋ ರುಧಿಕ್ರಾಂ ತಸ್ಮಾ ಇಂದ್ರಾಯಾಂಧಸೋ ಜುಹೋತ ॥
(ಋ. ಸಂ. ೨.೧೪.೫)

ನಿವೇಶನೇ ಶತತಮಾವಿವೇಷೀರಹಞ್ಚ ವೃತ್ರಂ ನಮುಚಿಮುತಾಹನ್ ॥
(ಋ. ಸಂ. ೭.೧೯.೫)

ತ್ವಂ ಜಘಂಥ ನಮುಚಿಂ ಮಖಸ್ಯುಂ ದಾಸಂ ಕೃಣ್ವಾನ ಋಷಯೇ ವಿಮಾಯಂ ॥
(ಋ. ಸಂ. ೧೦.೭೩.೭)

ಅತ್ರಾ ದಾಸಸ್ಯ ನಮುಚೇಃ ಶಿರೋ ಯದವರ್ತಯೋ ಮನವೇ ಗಾತುಮಿಚ್ಛನ್ ॥
(ಋ. ಸಂ. ೫.೩೦.೭)

ಯುಜಂ ಹಿ ಮಾಮಕೃಥಾ ಆದಿದಿಂದ್ರ ಶಿರೋ ದಾಸಸ್ಯ ನಮುಚೇರ್ಮಥಾಯನ್ ॥
(ಋ. ಸಂ. ೫.೩೦.೮)

ಪ್ರ ಶ್ಯೇನೋ ನ ಮದಿರಮಂಶುಮಸ್ಮೈ ಶಿರೋ ದಾಸಸ್ಯ ನಮುಚೇರ್ಮಥಾಯನ್ ॥
(ಋ. ಸಂ. ೬.೨೦.೬)

ಅಪಾಂ ಫೇನೇನ ನಮುಚೇಃ ಶಿರ ಇಂದ್ರೋದವರ್ತಯಃ ॥
(ಋ. ಸಂ. ೮.೧೪.೧೩)

ಯುವಂ ಸುರಾಮಮಶ್ವಿನಾ ನಮುಚಾವಾಸುರೇ ಸಚಾ ॥
(ಋ. ಸಂ. ೧೦.೧೩೧.೪)

ಎಂಬ ಋಕ್ಕುಗಳಿರುವುದು. ಮತ್ತೆಲ್ಲಿಯೂ ಇರುವುದಿಲ್ಲ.

---

## ಇಂದ್ರನಿಗೆ ಋಜೀಷೀ ಎಂಬ ಹೆಸರು ಬರಲು ಕಾರಣ

ಋಜೀಷೀ—ಈ ಶಬ್ದಕ್ಕೆ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದ್ದಾರೆ—

**ಋಜೀಷೀ ಸೋಮೋ ಯತ್ಸೋಮಸ್ಯ ಪೂಯಮಾನಸ್ಯಾತಿರಿಚ್ಯತೇ ತದೃಜೀಷಮಪಾರ್ಜಿತಂ ಭವತಿ ತೇನರ್ಜೀಷೀ ಸೋಮಃ । ಅಥಾಪ್ಯೈಂದ್ರೋ ನಿಗಮೋ ಭವತಿ ಋಜೀಷೀ ವಜ್ರೀ ಇತಿ ॥** (ನಿ. ೫–೧೨)

ಸೋಮಲತೆಯನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆದ ಮೇಲೆ ಉಳಿಯುವ ಸಿಪ್ಪೆಯಂತಿರುವ ರಸರಹಿತವಾದ ಪದಾರ್ಥಕ್ಕೆ ಋಜೀಷವೆಂದು ಹೆಸರು. ಈ ಋಜೀಷವನ್ನು ಬೇಡವೆಂದು ಎಸೆದುಬಿಡುವರು. ಕೆಲವು ಸಂದರ್ಭದಲ್ಲಿ ಅಂತಹ ಋಜೀಷವನ್ನು ನೀರಿನಲ್ಲಿ ನೆನೆಯಿಸಿ ಇನ್ನೂ ಸ್ವಲ್ಪ ರಸವನ್ನು ಹಿಂಡಿ ತಗೆಯುವರು ಅಂತಹ ಸೋಮರಸಕ್ಕೆ **ಋಜೀಷಃ ಸೋಮಃ** ಎಂದು ಹೆಸರು. ತೃತೀಯಸವನಕಾಲದಲ್ಲಿ ಇಂತಹ ಋಜೀಷ ಸೋಮಕ್ಕೆ ಹಿಟ್ಟು ಮೊದಲಾದ ಆಶಿರದ್ರವ್ಯಗಳನ್ನು ಮಿಶ್ರಮಾಡಿ ಇಂದ್ರನಿಗೆ ಅರ್ಪಿಸುವರು ಈ ಋಜೀಷ ಸೋಮವನ್ನು ಇಂದ್ರನು ಪಾನಮಾಡು ವುದರಿಂದ ಇಂದ್ರನನ್ನು **ಋಜೀಷೀ** ಎಂಬ ಶಬ್ದದಿಂದಲೇ ಕರೆಯುವುದು ರೂಢಿಯಾಗಿದೆ. ಇದಲ್ಲದೆ ಇಂದ್ರನ ಹರೀ ಎಂಬ ಕುದುರೆಗಳು ಈ ಋಜೀಷವೆಂಬ ಸೋಮಲತೆಗಳ ಸಿಪ್ಪೆಯನ್ನು ತಿನ್ನುವವು ಎಂದು ಪ್ರಸಿದ್ಧಿಯಾಗಿದೆ. ಈ ವಿಷಯದಲ್ಲಿ ಯಾಸ್ಕರು ಉದಾಹರಣೆಗಾಗಿ—**ಬದ್ಧಾಂ ತೇ ಹರೀಧಾನಾ ಉಪ ಋಜೀಷಂ ಜಿಘ್ರತಾಂ** ಎಂಬ ಶ್ರುತಿವಾಕ್ಯವನ್ನು ಹೇಳಿದಾರೆ. ಎಲೈ ಇಂದ್ರನೇ, ನಿನ್ನ ಕುದುರೆಗಳು ಧಾನ್ಯವನ್ನು ತಿಂದು ಈ ಋಜೀಷವನ್ನು ಮೂಸಿನೋಡಲಿ ಎಂದು ಮೇಲಿನ ವಾಕ್ಯದ ಅರ್ಥವು

ಋಜೀಷವೆಂದರೇನು ? ಇದಕ್ಕೆ ಈ ಹೆಸರು ಬರಲು ಕಾರಣವೇನು ? ಯಜ್ಞದಲ್ಲಿ ಇದರ ಉಪಯೋಗವೇನು? ಇತ್ಯಾದಿ ವಿಷಯಗಳು ಐತರೇಯ ಬ್ರಾಹ್ಮಣ ಮತ್ತು ತೈತ್ತಿರೀಯ ಸಂಹಿತೆಗಳಲ್ಲಿ ಹೇಳಿರುವುದನ್ನು ಇಲ್ಲಿ ಸೂಕ್ಷ್ಮವಾಗಿ ಪರಿಶೀಲಿಸುವೆವು—

> **ಸೋಮೋ ವೈ ರಾಜಾಮುಷ್ಮಿಂಲ್ಲೋಕ ಆಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ ಕಥಮಯಮಸ್ಮಾನ್ತ್ಸೋಮೋ ರಾಜಾಗಚ್ಛೇದಿತಿ ತೇऽಬ್ರುವಂಶ್ಛಂದಾಂಸಿ ಯೂಯಂ ನ ಇಮಂ ಸೋಮಂ ರಾಜಾನಮಾಹರತೇತಿ ತಥೇತಿ ತೇ ಸುಪರ್ಣಾ ಭೂತ್ವೋದಪತನ್ ।**
>
> (ಐ. ಬ್ರಾ ೧೩-೨೫)

ಪೂರ್ವದಲ್ಲಿ ಸೋಮರಾಜನು (ಸೋಮಲತೆಯು; ಗೌರವಾರ್ಥವಾಗಿ ಸೋಮಲತೆಯನ್ನು ಸೋಮರಾಜನೆಂದು ಕರೆ ಯುವ ರೂಢಿ ಇದೆ) ಎಂದರೆ ಸೋಮಲತೆಯು ಸ್ವರ್ಗಲೋಕದಲ್ಲಿದ್ದಿತು. ಈ ಲೋಕದಲ್ಲಿರಲಿಲ್ಲ ಇದನ್ನು ತಿಳಿದು ದೇವತೆಗಳೂ ಋಷಿಗಳೂ ಈ ಸೋಮವನ್ನು ಇಲ್ಲಿಗೆ ತರುವ ಬಗೆ ಹೇಗೆ ಎಂದು ಆಲೋಚಿಸಿದರು. ಬಳಿಕ ಅವರು ಈ ವಿಚಾರವನ್ನು ವಿಮರ್ಶೆಮಾಡಿ ಸೋಮವನ್ನು ಸ್ವರ್ಗದಿಂದ ಭೂಮಿಗೆ ತರುವ ಶಕ್ತಿಯು ಛಂದಸ್ಸುಗಳಿಗೆ ಇರುವುದೆಂದು ತಿಳಿದು ಛಂದಸ್ಸುಗಳನ್ನು ಕುರಿತು—ಎಲೈ ಛಂದಸ್ಸುಗಳೇ, ನಮಗೋಸ್ಕರ ಎಂದರೆ ನಮ್ಮ ಯಜ್ಞದಲ್ಲಿ ಉಪಯೋಗಿಸು ವುದಕ್ಕೋಸ್ಕರ ಸ್ವರ್ಗದಲ್ಲಿರುವ ಸೋಮವನ್ನು ಭೂಮಿಗೆ ತರಬೇಕೆಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯ ನ್ನಂಗೀಕರಿಸಿ ಛಂದಸ್ಸುಗಳು ಲೋಕದಲ್ಲಿ ಪ್ರಸಿದ್ಧವಾಗಿರುವ ಕೆಲವು ಪಕ್ಷಿಗಳ ರೂಪವನ್ನು ಧರಿಸಿ ಸ್ವರ್ಗಲೋಕಕ್ಕೆ ಹಾರಿಹೋದವು. ಮೊದಲು ಜಗತೀ ಛಂದಸ್ಸು ಪಕ್ಷಿರೂಪವನ್ನು ಧರಿಸಿ ಸ್ವರ್ಗಲೋಕದ ಕಡೆಗೆ ಹಾರಿತು. ಆದರೆ ಸ್ವಲ್ಪದೂರ ಹೋಗುವುದರೊಳಗಾಗಿ ಅದಕ್ಕೆ ಆಯಾಸವಾಗಿ ಸ್ವರ್ಗದವರೆಗೂ ಹೋಗಲಾರದೆ ಹಿಂತಿರುಗಿತು. ಬಳಿಕ ತ್ರಿಷ್ಟುಪ್ ಛಂದಸ್ಸು ತಾನು ಸೋಮವನ್ನು ತರುತ್ತೇನೆಂದು ಹೇಳಿ ಅಂತರಿಕ್ಷಕ್ಕೆ ನೆಗೆಯಿತು. ಆದರೆ ಅರ್ಧದಾರಿಗಿಂತ ಸ್ವಲ್ಪದೂರ ಹೋಗುವುದರೊಳಗಾಗಿ ಆಯಾಸದಿಂದ ಬಳಲಿ ಹಿಂತಿರುಗಿತು. ಈ ರೀತಿ ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸುಗಳು ಸೋಮವನ್ನು ತರಲು ಸಾಮರ್ಥ್ಯವಿಲ್ಲದೇ ಹಿಂತಿರುಗಿ ಬಂದದ್ದನ್ನು ದೇವತೆಗಳು ನೋಡಿ ಗಾಯತ್ರೀ ಛಂದಸ್ಸಿನ ಸಮೀಪಕ್ಕೆ ಹೋಗಿ—ಎಲೈ ಗಾಯತ್ರಿಯೇ, ನಮಗಾಗಿ ನೀನು ಸ್ವರ್ಗದಿಂದ ಸೋಮವನ್ನು ತರಬೇಕೆಂದು

ಪ್ರಾರ್ಥಿಸಿದರು. ಗಾಯತ್ರಿಯು ಹಾಗೆಯೇ ಆಗಲೆಂದೊಪ್ಪಿ ಶ್ಯೇನಪಕ್ಷಿಯ ರೂಪವನ್ನು ಧರಿಸಿ ಸ್ವರ್ಗಕ್ಕೆ ಹಾರಿಹೋಗಿ ಅಲ್ಲಿ ಸೋಮವನ್ನು ಕಾಯುತ್ತಿದ್ದ ಸ್ವಾನ, ಭ್ರಾಜ ಮೊದಲಾದ ಸೋಮಪಾಲಕರನ್ನು ಹೆದರಿಸಿ ಸೋಮವನ್ನು ಅಪಹರಿಸಿಕೊಂಡು ಬಂದು ಭೂಮಿಗೆ ತಂದಿತು. ಸೋಮಲತೆಯನ್ನು ತಂದದ್ದರಿಂದ ಛಂದಸ್ಸುಗಳಲ್ಲೆಲ್ಲಾ ಗಾಯತ್ರಿಗೆ ಶ್ರೇಷ್ಠವಾದ ಸ್ಥಾನವು ಲಭಿಸಿತು.

**ಸಾ ಯದ್ದಕ್ಷಿಣೇನ ಪದಾ ಸಮಗೃಭ್ಣಾತ್ತತ್ಪ್ರಾತಃಸವನಮಭವತ್ತದ್ಗಾಯತ್ರೀ ಸ್ವಮಾಯತನಮ-ಕುರುತ ತಸ್ಮಾತ್ತತ್ಸಮೃದ್ಧತಮಂ ಮನ್ಯಂತೇ ಸರ್ವೇಷಾಂ ಸವನಾನಾಮಗ್ರಿಯೋ ಮುಖ್ಯೋ ಭವತಿ ಶ್ರೇಷ್ಠತಾಮಶ್ನುತೇ ಯ ಏವಂ ವೇದಾಥ ಯತ್ಸವ್ಯೇನ ಪದಾ ಸಮಗೃಭ್ಣಾತ್ತನ್ಮಾ-ಧ್ಯಂದಿನಂ ಸವನಮಭವತ್ತದ್ವಿಸ್ರಂಸತ ತದ್ವಿಸ್ರಸ್ತಂ ನಾನ್ವಾಪ್ನೋತ್ಪೂರ್ವಂ ಸವನಂ ತೇ ದೇವಾಃ ಪ್ರಾಜಿಜ್ಞಾಸಂತ ತಸ್ಮಿಂಸ್ತ್ರಿಷ್ಟುಭಂ ಛಂದಸಾಮದಧುರಿಂದ್ರಂ ದೇವತಾನಾಂ ತೇನ ತತ್ಸಮಾವದ್ವೀರ್ಯಮಭವತ್ಪೂರ್ವೇಣ ಸವನೇನೋಭಾಭ್ಯಾಂ ಸವನಾಭ್ಯಾಂ ಸಮಾವದ್ವೀ-ರ್ಯಾಭ್ಯಾಂ ಸಮಾವಜ್ಜಾಮಿಭ್ಯಾಂ ರಾಧ್ನೋತಿ ಯ ಏವಂ ವೇದಾಥ ಯನ್ಮುಖೇನ ಸಮಗೃಭ್ಣಾತ್ತತ್ತೃತೀಯಸವನಮಭವತ್ ।**

(ಐ ಬ್ರಾ ೧೩-೨೬)

ಸೋಮಲತೆಗಳನ್ನು ತರುವಾಗ ಶ್ಯೇನಪಕ್ಷಿಯು ತನ್ನ ಎರಡು ಕಾಲುಗಳಿಂದಲೂ ಕೊಕ್ಕಿನಿಂದಲೂ ಕಚ್ಚಿಕೊಂಡು ತರುತ್ತಿದ್ದಿತು. ಪಕ್ಷಿಯು ತನ್ನ ಬಲಗಾಲಿನಿಂದ ಹಿಡಿದುಕೊಂಡು ತಂದ ಸೋಮವು (ಅಥವಾ ಸೋಮಲತೆಯು) ಪ್ರಾತಃಸವನವಾಯಿತು. ಗಾಯತ್ರಿಯು ಅದನ್ನು ಎಂದರೆ ಪ್ರಾತಃಸವನವನ್ನು ತನ್ನ ಸ್ವಕೀಯ ಸ್ಥಾನವನ್ನಾಗಿ ಮಾಡಿಕೊಂಡಿತು ಆದ್ದರಿಂದ ಸಮಸ್ತ ಸವನಗಳಲ್ಲಿಯೂ ಪ್ರಾತಃಸವನವೇ ಸರ್ವಶ್ರೇಷ್ಠವೆಂದು ಯಾಜ್ಞಿಕರ ಅಭಿಮತವು. ಆ ಪ್ರಾತಃಸವನಕರ್ಮದಲ್ಲಿ ಮಂತ್ರಾದಿಗಳ ಪ್ರಯೋಗವೂ ವಿಶೇಷವಾಗಿರುವುದು. ಆದ್ದರಿಂದ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿರುವ ಪುರುಷನು ತನ್ನ ಸಮಾನರಾದವರ ಮಧ್ಯದಲ್ಲಿ ಶ್ರೇಷ್ಠನೂ ಮುಖ್ಯನೂ ಆಗುವನೆಂದು ಪರಿಗಣಿಸಲ್ಪಡುವನು. ಗಾಯತ್ರಿಯು ಎಡಗಾಲಿನಿಂದ ಸೋಮಲತೆಯನ್ನು ಹಿಡಿದುಕೊಂಡು ತರುವಾಗ ಬಲಗಾಲಿಗಿರುವಷ್ಟು ಶಕ್ತಿಯು ಎಡಗಾಲಿಗಿಲ್ಲದಿರುವುದರಿಂದ ಆ ಲತಾದಿಗಳು ಕಾಲಿನಿಂದ ಆಗಾಗ ಸ್ವಲ್ಪ ಸ್ವಲ್ಪ ಜಾರುತ್ತಿದ್ದಿತು. ಈ ಕಾರಣದಿಂದ ಈ ಮಾಧ್ಯಂದಿನಸವನವು ಪ್ರಾತಃಸವನದಂತೆ ಶಕ್ತಿಸಾಮರ್ಥ್ಯಗಳಲ್ಲಿ ಸರಿಸಮ ವಾಗಲಿಲ್ಲ. ಇದನ್ನು ಕಂಡು ದೇವತೆಗಳು ವಿಚಾರವಿಮರ್ಶೆಮಾಡಿ ಮಾಧ್ಯಂದಿನಸವನಕರ್ಮದಲ್ಲಿ ಉಪಯೋಗಿಸುವ ಛಂದಸ್ಸುಗಳಿಗಾಗಿ ತ್ರಿಷ್ಟುಪ್ ಛಂದಸ್ಸನ್ನೂ ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನನ್ನೂ ಸ್ಥಾಪಿಸಿದರು ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನ ಮತ್ತು ಅವನಿಗೆ ಪ್ರಿಯವಾದ ತ್ರಿಷ್ಟುಪ್‌ಛಂದಸ್ಸಿನ ಸಾಹಚರ್ಯದಿಂದ ಮಾಧ್ಯಂದಿನಸವನವು ಶಕ್ತಿಸಾಮರ್ಥ್ಯಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಪ್ರಾತಃಸವನಕ್ಕೆ ಸರಿಸಮನಾದ ಸ್ಥಾನವನ್ನು ಪಡೆಯಿತು. ಪ್ರಾತಃ ಸವನ ಮತ್ತು ಮಾಧ್ಯಂದಿನಸವನಗಳ ಈವಿಧವಾದ ಸರಿಸಮಾನತೆಯನ್ನೂ, ಶಕ್ತಿಸಾಮರ್ಥ್ಯಗಳನ್ನೂ, ಶ್ರೇಷ್ಠತೆ ಯನ್ನೂ ತಿಳಿದಿರುವ ಪುರುಷನು ಧನಾದಿಗಳಲ್ಲಿ ಸಮೃದ್ಧಿಯನ್ನೂ, ಶ್ರೇಯಸ್ಸನ್ನೂ ಪಡೆದು ಸುಖಿಸುವನು ಬಳಿಕ ಶ್ಯೇನರೂಪದಿಂದಿದ್ದ ಆ ಗಾಯತ್ರಿಯು ತನ್ನ ಕೊಕ್ಕಿನಿಂದ ಕಚ್ಚಿ ತಂದ ಸೋಮದ ಭಾಗವು ತೃತೀಯಸವನವೆಂದು ಪ್ರಸಿದ್ಧವಾಯಿತು.

**ತಸ್ಯ ಪತಂತೀ ರಸಮಧಯತ್ತದ್ವಿತರಸಂ ನಾಶಸ್ಯತೃತೀಯಸ್ಪವರ್ನೇ ಸವನೇ ತೇ ದೇವಾಃ ಪ್ರಾಜಿಜ್ಞಾಸಂತ ತತ್ಪಶುಷ್ವಪಶ್ಯಂಸ್ತದ್ಯದಾಶಿರಮವನಯಂತ್ಯಾಜ್ಯೇನ ಪಶುನಾ ಚರಂತಿ ತೇನ ತತ್ಸಮಾವದ್ವೀರ್ಯಮಭವತ್ಪೂರ್ವಾಭ್ಯಾಂ ಸವನಾಭ್ಯಾಂ ಸರ್ವೈಃ ಸವನ್ಯೈಃ ಸಮಾವದ್ವೀ. ರ್ಯೈಃ ಸಮಾವಜ್ಞಾಮಿಭೀ ರಾಧ್ನೋತಿ ಯ ಏವಂ ವೇದ ॥**

(ಐ. ಬ್ರಾ. ೧೩-೨೭)

ಗಾಯತ್ರಿಯು (ಶ್ಯೇನವು) ತನ್ನ ಕೊಕ್ಕಿನಿಂದ ಸೋಮಲತೆಯನ್ನು ಕಚ್ಚಿಕೊಂಡು ಬರುತ್ತಿರುವಾಗ ಆ ಲತೆಯಲ್ಲಿದ್ದ ರಸವನ್ನು ಸ್ವಲ್ಪ ಸ್ವಲ್ಪವಾಗಿ ಹೀರಿ ಕುಡಿಯುತ್ತಿದ್ದಿತು. ಆದ್ದರಿಂದ ಎಂದರೆ ಕೊಕ್ಕಿನಿಂದ ತಂದ ಸೋಮಲತೆಗಳಲ್ಲಿ ರಸವು ಹೆಚ್ಚಾಗಿಲ್ಲವೆ ಕಮ್ಮಿಯಾಗಿದ್ದುದರಿಂದ ಈ ತೃತೀಯಸವನವು ಶಕ್ತಿಸಾಮರ್ಥ್ಯಾದಿಗಳಲ್ಲಿ ಪ್ರಾತಃಸವನ ಮಾಧ್ಯಂದಿನಸವನಗಳಿಗೆ ಸರಿಸಮನಾಗಲಿಲ್ಲ. ಆದ್ದರಿಂದ ಈ ವಿಷಯವನ್ನು ಕಂಡ ದೇವತೆಗಳು ವಿಚಾರಮಾಡಿ ಇದಕ್ಕೆ ತಕ್ಕ ಸಾಧನೋಪಾಯವು ಪಶುಗಳಲ್ಲಿರುವುದೆಂದು ಕಂಡುಕೊಂಡರು. ಪಶುಗಳಲ್ಲಿ ಹಾಲು, ಮೊಸರು, ಅದರಿಂದ ಲಬ್ಧವಾಗುವ ಆಜ್ಯ (ತುಪ್ಪ) ಮೊದಲಾದ ಪವಿದ್ರವ್ಯಗಳು ದೊರಕುವವು. ಕ್ಷೀರವನ್ನು ಅಥವಾ ಹಾಲನ್ನು ಲತೆಗಳಲ್ಲಿ ಕಮ್ಮಿಯಾಗಿರುವ ಸೋಮರಸಕ್ಕೆ ಬೆರಸಿದರೆ ಆ ರಸವು ಶಕ್ತಿಯುತವಾಗುವುದು. ಆಜ್ಯದಿಂದಲೂ ಪಶುಗಳ ಅವಯವಗಳಿಂದಲೂ ಹೋಮಾದಿಗಳನ್ನು ಮಾಡಿದರೆ ಸವನಕರ್ಮವು ಸಾಂಗವಾಗುವುದು ಆದುದರಿಂದ ಯಜ್ಞ ಕರ್ಮವನ್ನು ತಿಳಿದವರು ತೃತೀಯ-ಸವನದಲ್ಲಿ ಉಪಯೋಗಿಸುವ ಋಜೀಷದ ರಸಕ್ಕೆ (ಪ್ರಾತಃಸವನ ಮಾಧ್ಯಂದಿನ ಸವನಗಳಲ್ಲಿ ರಸವನ್ನು ತೆಗೆದ ಬಳಿಕ ಉಳಿದಿರುವ ಸೋಮಲತೆಯ ಸಿಪ್ಪೆಗಳಿಗೆ ಋಜೀಷವೆಂದು ಹೇಳುವರು) ಹಾಲು ಮೊದಲಾದ ಆಶಿರದ್ರವ್ಯಗಳನ್ನು ಸೇರಿಸುವುದರಿಂದಲೂ, ಪಶುಗಳಿಂದ ಲಭಿಸತಕ್ಕ ಆಜ್ಯದಿಂದ ಮತ್ತು ಪಶುಗಳ ಹೃದಯಾದ್ಯಂಗಗಳಿಂದ ಹೋಮಗಳನ್ನು ಮಾಡುವುದರಿಂದಲೂ ತೃತೀಯಸವನಕರ್ಮವು ಪ್ರಾತಃಸವನಮಾಧ್ಯಂದಿನಸವನಗಳಿಗೆ ಶಕ್ತಿಸಾಮರ್ಥ್ಯಾದಿಗಳಲ್ಲಿ ಸರಿಸಮನಾಗುವುದು ಎಂದು ತಿಳಿದು ಅದರಂತೆ ಆಚರಿಸುವರು. ಈ ವಿಷಯವು ಶಾಖಾಂತರದಲ್ಲಿ ಈ ರೀತಿ ಹೇಳಲ್ಪಟ್ಟಿರುವುದು—

**ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್‌ಂ ಸತೀ ಯಜ್ಞಮುಖಂ ಪರಿಯಾಯೇತಿ ಯದೇವಾದಃ ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾ. ತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ವೇ ಸವನೇ ಶುಕ್ರವತೀ ಪ್ರಾತಃಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನ ಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ಆಶಿರಮವನಯತಿ ಸಶುಕ್ರತ್ವಾಯ ॥**

(ತೈ. ಸಂ. ೬.೧.೬-೪)

ಎಂದು ತೈತ್ತಿರೀಯ ಸಂಹಿತೆಯಲ್ಲಿ ಇದೇ ಅಭಿಪ್ರಾಯವು ಉಕ್ತವಾಗಿದೆ. ಈ ವಿಷಯವನ್ನು ಎಂದರೆ ಪ್ರಾತಃಸವನ ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸವನಗಳೂ ಶಕ್ತಿಸಾಮರ್ಥ್ಯಾದಿಗಳಲ್ಲಿಯೂ, ಶ್ರೇಷ್ಠತೆಯಲ್ಲಿಯೂ ಸರಿಸಮಾನವಾದ ಸ್ಥಾನವನ್ನು ಪಡೆದಿರುವವು ಎಂಬ ವಿಷಯವನ್ನು ಯಾವ ಪುರುಷನು ತಿಳಿಯುವನೋ ಅವನು ಸರ್ವ ಸಮೃದ್ಧಿಯುಕ್ತನಾಗಿ ಸುಖಿಸುವನು.

### ಇಂದ್ರವಾಯುಗಳಿಗೆ ಪ್ರಥಮ ಸೋಮಪಾನ ಹೇಗೆ ಲಭಿಸಿತು ಎಂಬ ವಿಚಾರ

**ಅಗ್ರಂ ಪಿಬ ಮಧೂನಾಂ** (ಋ. ಸಂ. ೪-೪೬-೧) ಎಂಬ ಋಕ್ಕಿನಲ್ಲಿ ಇಂದ್ರಾದಿದೇವತೆಗಳಿಗಿಂತಲೂ ವಾಯುವೇ ಮೊದಲು ಸೋಮಪಾನಮಾಡಲು ಅರ್ಹನೆಂದು ಹೇಳಿದೆ. ಇದರ ಸಮರ್ಥನೆಗಾಗಿ—

**ಆ ವಾಯೋ ಭೂಷ ಶುಚಿಪಾ ಉಪ ನಃ ಸಹಸ್ರಂ ತೇ ನಿಯುತೋ ವಿಶ್ವವಾರ ।**
**ಉಪೋ ತೇ ಅಂಧೋ ಮದ್ಯಮಯಾಮಿ ಯಸ್ಯ ದೇವ ದಧಿಷೇ ಪೂರ್ವಪೇಯಂ ॥**
(ಋ. ಸಂ. ೭-೯೨-೧)

ಎಂಬ ಋಕ್ಕನ್ನು ಉದಾಹರಿಸಿ ಅಲ್ಲಿ ವಾಯುವೇ ಮೊದಲು ಸೋಮಪಾನಮಾಡಬೇಕೆಂದು ಋಷಿಯು ಪ್ರಾರ್ಥಿಸಿರುವುದನ್ನು ಸೂಚಿಸಲಾಗಿದೆ. ವಾಯುವಿಗೆ ದೇವತೆಗಳ ಮಧ್ಯೇ ಸೋಮಪಾನವಿಷಯಲ್ಲಿ ಅಗ್ರಸ್ಥಾನವು ಹೇಗೆ ಲಭಿಸಿತೆಂಬ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿ ಒಂದು ಪೂರ್ವೇತಿಹಾಸವಿದೆ. ಅದನ್ನು ಇಲ್ಲಿ ವಿವರಿಸಿದೇವೆ—

**ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್ನಹಂ ಪ್ರಥಮಃ ಪಿಬೇಯಮಹಂ ಪ್ರಥಮಃ ಪಿಬೇಯಮಿತ್ಯೇವಾಕಾಮಯಂತ ತೇ ಸಂಪಾದಯಂತೋಽಬ್ರುವನ್ ಹಂತಾಜಿಮಯಾಮ ಸ ಯೋ ನ ಉಜ್ಜೇಷ್ಯತಿ ಸ ಪ್ರಥಮಃ ಸೋಮಸ್ಯ ಪಾಸ್ಯತೀತಿ ತಥೇತಿ ತ ಆಜಿಮಯುಸ್ತೇಷಾಮಾಜಿಂ ಯತಾಮಭಿಸೃಷ್ಟಾನಾಂ ವಾಯುರ್ಮುಖಂ ಪ್ರಥಮಃ ಪ್ರತ್ಯಪದ್ಯತಾಥೇಂದ್ರೋಽಥ ಮಿತ್ರಾವರುಣಾವಥಾಶ್ವಿನೌ ।** (ಐ ಬ್ರಾ. ೯-೨೫)

ಪೂರ್ವದಲ್ಲಿ ದೇವತೆಗಳೆಲ್ಲರೂ ಸೇರಿ ಸೋಮಪಾನ ಮಾಡಬೇಕೆಂದು ಅಪೇಕ್ಷಿಸಿ ತಮ್ಮಲ್ಲಿ ಯಾರು ಮೊದಲು ಸೋಮಪಾನವನ್ನು ಮಾಡಬೇಕೆಂದು ವಿವಾದವುಂಟಾಗಲು ಆಗ ಅವರಲ್ಲಿ ನಾ ಮೊದಲು, ತಾನು ಮೊದಲು ಪಾನಮಾಡಬೇಕೆಂದು ಚರ್ಚೆಗಾರಂಭವಾಯಿತು. ಈ ವಿಷಯವು ಯಾವ ರೀತಿಯಲ್ಲಿಯೂ ಇತ್ಯರ್ಥವಾಗದಿದ್ದರಿಂದ ಅವರೆಲ್ಲರೂ ಸೇರಿ ಸಮಾಲೋಚನೆಮಾಡಿ ಒಂದು ಒಪ್ಪಂದಕ್ಕೆ ಬಂದರು. ಏನೆಂದರೆ, ನಾವೆಲ್ಲರೂ ಸೇರಿ ಒಂದು ಸ್ಪರ್ಧೆಯನ್ನು ಏರ್ಪಡಿಸೋಣ. ಅದರಲ್ಲಿ ಗೆದ್ದವರು ಮೊದಲು ಸೋಮಪಾನಮಾಡಲು ಅರ್ಹರಾಗುವರು ಎಂದು. ಅದಕ್ಕೆ ಎಲ್ಲರೂ ಒಪ್ಪಲು, ಆಗ ಒಂದು ಸ್ಥಳದಿಂದ ದೂರದಲ್ಲಿರುವ ಮತ್ತೊಂದು ಸ್ಥಳಕ್ಕೆ ಓಡಿಹೋಗಿ ಅಲ್ಲಿರುವ ಒಂದು ಕಲ್ಲುಬಂಡೆಯನ್ನಾಗಲಿ, ವೃಕ್ಷವನ್ನಾಗಲಿ ಮೊದಲು ಸಮೀಪಿಸಿದವರು ಗೆದ್ದವರೆಂದು ಭಾವಿಸಬೇಕು ಎಂದು ಸ್ಪರ್ಧೆಯ ನಿಶ್ಚಯವಾಯಿತು. ಈ ರೀತಿ ಗೆದ್ದವರು ನಮ್ಮಗಳ ಮಧ್ಯದಲ್ಲಿ ಜಯಶಾಲಿಯಾಗಿ ಮೊದಲು ಸೋಮಪಾನವನ್ನು ಮಾಡಬೇಕು ಎಂಬ ಒಪ್ಪಂದಕ್ಕೆ ಎಲ್ಲರೂ ಸಮ್ಮತಿಸಲು ಎಲ್ಲಾ ದೇವತೆಗಳೂ ಏಕಕಾಲದಲ್ಲಿ ಓಡಲು ಪ್ರಾರಂಭಿಸಿದರು. ಓಡುತ್ತಿರುವ ಎಲ್ಲಾ ದೇವತಗಳಲ್ಲಿ ವಾಯುವು ಎಲ್ಲರಿಗಿಂತಲೂ ಮುಂದಾಗಿ ನಿರ್ದಿಷ್ಟಸ್ಥಳವನ್ನು ಸೇರಿದನು. ಇಂದ್ರನು ವಾಯುವಿನ ಹಿಂಭಾಗದಲ್ಲಿಯೇ ಬಂದು ಎರಡನೆಯವನಾದನು. ಅನಂತರ ಇಂದ್ರನ ಹಿಂದೆ ಮಿತ್ರಾವರುಣರೂ, ಅವರ ಹಿಂದೆ ಅಶ್ವಿನೀ ದೇವತೆಗಳೂ ಓಡಿಬಂದು ನಿರ್ದಿಷ್ಟಸ್ಥಳವನ್ನು ಸೇರಿದರು. ಆದುದರಿಂದ ಈ ದೇವತೆಗಳಲ್ಲಿ ವಾಯುವೇ ಎಲ್ಲರಿಗಿಂತಲೂ ಮುಂದಾಗಿ ಓಡಿ ಜಯಶಾಲಿಯಾದನು.

**ಸೋಽವೇದಿಂದ್ರೋ ವಾಯುರ್ವಾ ಉದ್ಯೈ ಜಯತೀತಿ ತಮನು ಪರಾಪತತ್ಸಹ ನಾವಥೋಜ್ಜಯಾವೇತಿ ಸ ನೇತ್ಯಬ್ರವೀದಹಮೇವೋಜ್ಜೇಷ್ಯಾಮೀತಿ ತೃತೀಯಂ ಮೇಽಥೋಜ್ಜಯಾವೇತಿ**

**ನೇತಿ ಹೈವಾಬ್ರವೀದಹಮೇವೋಜ್ಜೇಷ್ಯಾಮೀತಿ ತುರೀಯಂ ಮೇಽಥೋಜ್ಜಯಾವೇತಿ ತಥೇತಿ ತಂ ತುರೀಯೇಽತ್ಯಾರ್ಜತ ತತ್ತುರೀಯಭಾಗೀಂದ್ರೋಽಭವತ್ತ್ರಿಭಾಗ್ವಾಯುಃ ॥**

ವಾಯುವೂ ಅವನ ಹಿಂದೆ ಇಂದ್ರನೂ ಓಡುತ್ತಿರುವಾಗ ಅವರಲ್ಲಿ ಈ ರೀತಿ ಪರಸ್ಪರ ಸಂವಾದವುಂಟಾಯಿತು. ವಾಯುವು ವೇಗವಾಗಿ ಓಡುತ್ತಿರುವುದನ್ನು ಅವನ ಹಿಂದಿದ್ದ ಇಂದ್ರನು ಕಂಡು ಈ ವಾಯುವೇ ಎಲ್ಲರಿಗಿಂತಲೂ ಮುಂಚಿತವಾಗಿ ಓಡಿ ಜಯಶಾಲಿಯಾಗುವನು. ಏನಾದರೂ ಮಾಡಿ ನಾನೂ ಇವನ ಜತೆಗೇ ಓಡಿ ಗೆಲ್ಲಬೇಕು ಎಂದು ನಿಶ್ಚಯಿಸಿ, ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ವಾಯುವಿನ ಸಮೀಪದಲ್ಲಿಯೇ ಓಡಿದನು ಆದರೂ ವಾಯುವನ್ನು ಹಿಂದಕ್ಕೆ ಹಾಕಿ ತಾನು ಮುಂದುವರಿಯುವ ಸೂಚನೆಯು ಕಾಣದಿರಲು, ಆಗ ಇಂದ್ರನು ವಾಯುವನ್ನು ಕುರಿತು—ಎಲೈ ವಾಯುವೇ, ನಾವಿಬ್ಬರೂ ಎಲ್ಲರಿಗಿಂತಲೂ ಮುಂದಾಗಿರುವೆವು. ಆದ್ದರಿಂದ ನಾವಿಬ್ಬರೂ ಗೆದ್ದಂತೆ ಭಾವಿಸಿ ಪ್ರಥಮ ಸೋಮಪಾನವನ್ನು ಇಬ್ಬರೂ ಹಂಚಿಕೊಳ್ಳೋಣ. ನನಗರ್ಧ ನಿನಗರ್ಧ. ಈ ರೀತಿ ಇಬ್ಬರೂ ಸಹಕರಿಸಿ ಜಯವನ್ನು ಸಂಪಾದಿಸೋಣ ಎಂದನು ಆ ಮಾತನ್ನು ಕೇಳಿ ವಾಯುವು—ಎಲೈ ಇಂದ್ರನೇ, ನಿನಗಿಂತಲೂ ನಾನು ಸ್ವಲ್ಪವಾದರೂ ಮುಂದಾಗಿಯೇ ಇರುವೆನು. ಆದ್ದರಿಂದ ನಾನೊಬ್ಬನೇ ಜಯಶಾಲಿಯಾಗುವೆನು ಪ್ರಥಮ ಸೋಮಪಾನದಲ್ಲಿ ಎಲ್ಲವೂ ನನಗೇ ಸೇರಬೇಕು. ನಿನಗೆ ಅರ್ಧವನ್ನು ಕೊಡುವುದಕ್ಕಾಗುವುದಿಲ್ಲ ಎಂದನು. ಆಗ ಇಂದ್ರನು—ಒಳ್ಳೇದು, ಹಾಗಾದರೆ ನನಗೆ ಅರ್ಧಭಾಗ ಬೇಡ. ಮೂರು ಭಾಗಗಳಲ್ಲಿ ಎರಡನ್ನು ನೀನು ತೆಗೆದುಕೊ. ನನಗೆ ಒಂದು ಭಾಗವನ್ನು ಮಾತ್ರ ಕೊಡು ಎನ್ನಲು, ವಾಯುವು ಅದಕ್ಕೂ ಒಪ್ಪದೆ, ಹೇಗಾದರೂ ನಾನೇ ಗೆಲ್ಲುವೆನು. ಎಲ್ಲಾ ಭಾಗವೂ ನನಗೇ ಸೇರುವುದು, ನಿನಗೆ ಮೂರರಲ್ಲಿ ಒಂದು ಭಾಗವನ್ನೂ ಕೊಡಲು ನನಗಿಷ್ಟವಿಲ್ಲ ಎಂದನು. ಆಗ ಇಂದ್ರನು ಮತ್ತೆ ವಾಯುವನ್ನು ಪ್ರಾರ್ಥಿಸುತ್ತಾ, ನನಗೆ ಮೂರರಲ್ಲೊಂದು ಭಾಗವೂ ಬೇಡ. ಇನ್ನೂ ಕಡಿಮೆಯಾಗಿ ಎಂದರೆ—ನಾಲ್ಕರಲ್ಲೊಂದು ಭಾಗವನ್ನು ಕೊಟ್ಟರೆ ಸಾಕು. ಅದಕ್ಕಾದರೂ ಒಪ್ಪು ಎಂದು ಕೇಳಲು, ವಾಯುವು ಹಾಗೆಯೇ ಆಗಲೆಂದು ಅದಕ್ಕೊಪ್ಪಿದನು. ಆದ್ದರಿಂದ ಐಂದ್ರವಾಯವಗ್ರಹದಲ್ಲಿ (ಎಂದರೆ—ಇಂದ್ರ ಮತ್ತು ವಾಯು ಇಬ್ಬರೂ ಸೇರಿ ಸೋಮಪಾನ ಮಾಡುವಾಗ) ಇಂದ್ರನಿಗೆ ಒಂದು ಭಾಗವೂ, ವಾಯುವಿಗೆ ಮೂರು ಭಾಗವೂ ಇರಬೇಕೆಂದು ವ್ಯವಸ್ಥೆಯಾಯಿತು.

**ತೌ ಸಹೈವೇಂದ್ರವಾಯೂ ಉದಜಯತಾಂ ಸಹ ಮಿತ್ರಾವರುಣೌ ಸಹಾಶ್ವಿನೌ ತ ಏಷಾಮೇತೇ ಯಥೋಜ್ಜಿತಂ ಭಕ್ಷಾ ಇಂದ್ರವಾಯ್ವೋಃ ಪ್ರಥಮೋಽತ ಮಿತ್ರಾವರುಣಯೋರಥಾಶ್ವಿನೋಃ ಸ ಏಷ ಇಂದ್ರತುರೀಯೋ ಗ್ರಹೋ ಗೃಹ್ಯತೇ ಯದೈಂದ್ರವಾಯವಃ ॥**

ಈರೀತಿ ಇಂದ್ರ ಮತ್ತು ವಾಯುವು ಸಹಕರಿಸಿ ಸ್ಪರ್ಧೆಯನ್ನು ಗೆದ್ದು ನಿರ್ದಿಷ್ಟಪ್ರದೇಶವನ್ನು ಮೊದಲು ತಲಪಿದರು. ಅವರ ಹಿಂದೆ ಮಿತ್ರಾವರುಣರು ಬಂದು ಸೇರಿದರು. ಅವರ ಹಿಂದೆ ಅಶ್ವಿನೀದೇವತೆಗಳು ಬಂದರು. ಆದ್ದರಿಂದ ಈ ದೇವತೆಗಳ ಮಧ್ಯದಲ್ಲಿ ಅವರು ಸ್ಪರ್ಧೆಯಲ್ಲಿ ಯಾವಯಾವ ಸ್ಥಾನವನ್ನು ಪಡೆದರೋ ಆ ಕ್ರಮದಲ್ಲಿ ಅವರು ಸೋಮಪಾನಕ್ಕೆ ಅರ್ಹರಾದರು ಎಂದರೆ ಮೊದಲು ಇಂದ್ರವಾಯುಗಳು, ಅನಂತರ ಮಿತ್ರಾವರುಣರು ಅವರ ನಂತರ ಅಶ್ವಿನೀದೇವತೆಗಳು ಸೋಮಪಾನಮಾಡಲು ವ್ಯವಸ್ಥೆಯುಂಟಾಯಿತು. ಹೀಗೆ ಇಬ್ಬಿಬ್ಬರು ದೇವತೆಗಳು ಸೇರಿ ಸೋಮಪಾನ ಮಾಡುವ ಕ್ರಮವು) ರೂಢಿಗೆ ಬಂದಿತು. ಆದ್ದರಿಂದ ಐಂದ್ರವಾಯವಗ್ರಹದಲ್ಲಿ ಇಂದ್ರನಿಗೆ ನಾಲ್ಕರಲ್ಲಿ ಒಂದು ಭಾಗ ಮಾತ್ರ ಸೋಮಪಾನದಲ್ಲಿ ವ್ಯವಸ್ಥೆ ಇರುವುದು.

**ತದೇತದೃಷಿಃ ಪಶ್ಯನ್ನಭ್ಯನೂವಾಚ ನಿಯುತ್ವಾನ್ ಇಂದ್ರಸಾರಥಿರಿತಿ ।**

ಐಂದ್ರವಾಯವಗ್ರಹದಲ್ಲಿ ಇಂದ್ರನಿಗೆ ನಾಲ್ಕರಲ್ಲಿ ಒಂದು ಭಾಗವಿರುವುದನ್ನು ಋಷಿಯು ದಿವ್ಯದೃಷ್ಟಿಯಿಂದ ತಿಳಿದು, ಮುಂದಿನ ಋಕ್ಕಿನಲ್ಲಿ ಎಂದರೆ- **ಶತೇನಾ ನೋ ಅಭಿಷ್ಟಿಭಿರ್ನಿಯುತ್ವಾ ಇಂದ್ರಸಾರಥಿಃ** । (ಋ. ಸಂ. ೪-೪೬-೨) ಎಂಬ ಋಕ್ಕಿನಲ್ಲಿ ಈ ವಿಷಯವನ್ನು **ನಿಯುತ್ವಾ ಇಂದ್ರಸಾರಥಿಃ** ಎಂಬ ವಾಕ್ಯದಿಂದ ವ್ಯಕ್ತಪಡಿಸಿರುವನು. ಇಲ್ಲಿ **ನಿಯುತೋ ವಾಯೋಃ** ಎಂಬ ನಿರುಕ್ತವಚನದಂತೆ (ನಿ. ೨-೨೮) ನಿಯುತ ಎಂಬ ಅಶ್ವಗಳು ವಾಯುವಿಗೆ ವಾಹನವೆಂದು ಪ್ರಸಿದ್ಧವು. ಆದ್ದರಿಂದ ನಿಯುತ್ವಚ್ಛಬ್ದವು ವಾಯುಸಂಬಂಧವನ್ನು ಸೂಚಿಸುವುದು. ಮೇಲಿನ ಋಕ್ಕಿನಲ್ಲಿ **ನಿಯುತ್ವಾನ್** ಎಂಬ ಪದವು ವಾಯುವಿನಿಂದ ಸಹಿತವಾದ ಇಂದ್ರನನ್ನು ಸೂಚಿಸುವುದು. **ಅಥಾ ವ ಯುಂ ನಿಯುತಃ ಸಶ್ಚತಸ್ವಾಃ** (ತೈ. ಬ್ರಾ. ೨-೮.೧-೧) ಇತ್ಯಾದಿ ಮಂತ್ರಗಳು ಈ ವಿಷಯವನ್ನು ಸಮರ್ಥಿಸುವುವು. ಇಂದ್ರಸಾರಥಿಃ ಎಂಬ ಶಬ್ದಕ್ಕೆ ವಾಯುವಿಗೆ ಸಾರಥಿಯಾದ ಇಂದ್ರನು ಎಂದಭಿಪ್ರಾಯವು. ಇಂದ್ರನು ವಾಯುವಿಗೆ ಸಾರಥಿ ಸ್ಥಾನದಲ್ಲಿರುವುದರಿಂದ ಇಂದ್ರನಿಗೆ ಪ್ರಥಮ ಸೋಮಪಾನದಲ್ಲಿ ಚತುರ್ಥಾಂಶಮಾತ್ರವಿರುವುದೆಂದು ಇದರಿಂದ ಸೂಚಿತವಾಗುವುದು.

**ತಸ್ಮಾದ್ಧಾಪ್ಯೇತರ್ಹಿ ಭರತಾಃ ಸತ್ವನಾಂ ವಿತ್ತಿಂ ಪ್ರಯಂತಿ ತುರಿಯೇ ಹೈವ ಸಂಗ್ರಹೀತಾರೋ ವದಂತೇಽಮುನೈವಾನುಕಾಶೇನ ಯದದ ಇಂದ್ರಃ ಸಾರಥಿರಿವ ಭೂತ್ವೋದಜಯತ್ ॥**

(ಐ. ಬ್ರಾ. ೯–೨೫)

ಮೇಲೆ ಹೇಳಿದ ವಿಷಯವನ್ನು ಲೋಕವ್ಯವಹಾರದೃಷ್ಟಿಯಿಂದ ಉದಾಹರಣೆ ಮೂಲಕವಾಗಿ ವಿಶದಪಡಿಸುವರು. ಯುದ್ಧದಲ್ಲಿ ಯೋಧರಾದವರು ರಥಗಳಲ್ಲಿ ಕುಳಿತು ತಮ್ಮ ಸಾರಥಿಯ ಸಹಾಯದಿಂದ ಯುದ್ಧದಲ್ಲಿ ಜಯಶೀಲರಾಗಿ ಶತ್ರುಗಳ ಧನಾದಿಗಳನ್ನು ಆಕ್ರಮಿಸುವರು. ಆರೀತಿ ಆಕ್ರಮಿಸಿದಾಗ ಆ ಧನಾದಿಗಳಲ್ಲಿ ಒಂದು ಭಾಗವನ್ನು ಎಂದರೆ— ನಾಲ್ಕರಲ್ಲಿ ಒಂದು ಭಾಗವನ್ನು ತಮಗೆ ಸಹಾಯಕರಾದ ಸಾರಥಿಗಳಿಗೆ ಕೊಡುವರು. ಈ ಪದ್ಧತಿಯು ಲೋಕ ವ್ಯವಹಾರದಲ್ಲಿ ರೂಢಿಯಲ್ಲಿದೆ. ಅದರಂತೆ ದೇವತೆಗಳು ಏರ್ಪಡಿಸಿದ್ದ ಈ ಸ್ಪರ್ಧೆಯಲ್ಲಿ ಇಂದ್ರನು ವಾಯುವಿಗೆ ಸಾರಥಿಯಾಗಿ ವಾಯುವು ಜಯಶೀಲನಾಗಿದ್ದುದರಿಂದ ಸ್ಪರ್ಧೆಯಲ್ಲಿ ದೊರೆತ ಪ್ರಥಮ ಸೋಮಪಾನದಲ್ಲಿ ಚತುರ್ಥಾಂಶವು ಇಂದ್ರನ ಭಾಗವಾಯಿತು. ಇಂದ್ರನು ತನ್ನ ಚತುರ್ಥಾಂಶವನ್ನು ವಾಯುವಿಗೆ ಸಾರಥಿಯಾಗಿ ಗಳಿಸಿದನು ಎಂದು ಮುಖ್ಯಾಭಿಪ್ರಾಯವು.

— - —

## ಇಂದ್ರನು ವರಾಹಾಸುರನನ್ನು ಸಂಹಾರಮಾಡಿದ ವಿಷಯ

ವರಾಹನೆಂಬ ಅಸುರನೊಬ್ಬನಿದ್ದನೆಂದೂ, ಅವನನ್ನು ಇಂದ್ರನು ಸಂಹರಿಸಿದನೆಂದೂ ಒಂದು ಉಪಾಖ್ಯಾನ ವಿದೆ. ಅದರಲ್ಲಿ ವಿಷ್ಣುವಿನ ಪಾತ್ರವೂ ಇದೆ. ಈ ವಿಷಯದಲ್ಲಿ ಚರಕಬ್ರಾಹ್ಮಣದಲ್ಲಿ ಉಕ್ತವಾಗಿರುವ ಇತಿಹಾಸವನ್ನು ಇಲ್ಲಿ ವಿವರಿಸಿದೇನೆ.

**ವಿಷ್ಣುರ್ಯಜ್ಞಃ । ಸ ದೇವೇಭ್ಯ ಆತ್ಮಾನಮಂತರಧಾತ್ । ತಮನ್ಯದೇವತಾ ನಾವಿಂದನ್ನಿಂದ್ರ. ಸ್ತ್ವವೇತ್ । ಸ ಇಂದ್ರಮಬ್ರವೀತ್ಕೋ ಭವಾನಿತಿ । ತಮಿಂದ್ರಃ ಪ್ರತ್ಯಬ್ರವೀದಹಂ**

ದುರ್ಗಾಣಾಮಸುರಾಣಾಂ ಚ ಹಂತಾ ಭವಾಂಸ್ತು ಕ ಇತಿ । ಸೋಽಬ್ರವೀದಹಂ ದುರ್ಗ-ದಾಹರ್ತಾ ತ್ವಂ ತು ಯದಿ ದುರ್ಗಾಣಾಮಸುರಾಣಾಂ ಹಂತಾ ತತೋಽಯಂ ವರಾಹೋ-ವಾಮಮೋಷ ಏಕವಿಂಶ್ಯಾಃ ಪುರಾಂ ಪಾರೇಽಶ್ಮಮಯೀನಾಂ ವಸತಿ ತತಸ್ಮಿನ್ನಸುರಾಣಾಂ ವಸು ವಾಮಮಸ್ತಿ ತಮಿಮಂ ಜಹೀತಿ ॥ ತಸ್ಯೇಂದ್ರಸ್ತಾಃ ಪುರೋ ಭಿತ್ತ್ವಾ ಹೃದಯಮವಿ-ಧ್ಯತ್ ಅಧಿ ತತ್ರ ಯದಾಸೀತ್ತದ್ವಿಷ್ಣುರಾಹರದಿತಿ । ಸೋಽಯಮಿತಿಹಾಸಃ ॥

ಇದರ ಮುಖ್ಯಾಭಿಪ್ರಾಯವೇನೆಂದರೆ—ವಿಷ್ಣುವೇ ಯಜ್ಞವು. ಆ ಯಜ್ಞರೂಪಿಯಾದ ವಿಷ್ಣುವು ಒಂದಾನೊಂದು ಕಾಲದಲ್ಲಿ ದೇವತೆಗಳನ್ನು ಬಿಟ್ಟು ಹೊರಟುಹೋಗಿ ಒಂದು ರಹಸ್ಯಸ್ಥಳದಲ್ಲಿದ್ದನು. ಇದು ಇತರ ದೇವತೆಗಳಿಗೆ ತಿಳಿಯಲಿಲ್ಲ. ಇಂದ್ರನಿಗೆ ಮಾತ್ರ ತಿಳಿಯಿತು ಆಗ ಇಂದ್ರನು ವಿಷ್ಣುವಿದ್ದ ಸ್ಥಳಕ್ಕೆ ಹೋದಾಗ ವಿಷ್ಣುವು ಇಂದ್ರನನ್ನು ಕುರಿತು ನೀನು ಯಾರೆಂದು ಅವನನ್ನು ಕೇಳಿದನು. ವಿಷ್ಣುವಿಗೆ ಪ್ರತ್ಯುತ್ತರವಾಗಿ ಇಂದ್ರನು ನಾನು ದುರ್ಗಗಳನ್ನೂ ಅಸುರರನ್ನೂ ಧ್ವಂಸಮಾಡುವವನು. ಆದರೆ ನೀನು ಯಾರು ಎಂದನು. ವಿಷ್ಣುವು ನಾನು ದುರ್ಗಾದಿಗಳಿಂದ ಅಸುರರಿಗೆ ಸೇರಿದ ಧನಾದಿಗಳನ್ನು ಅಪಹರಿಸಿ ತರುವವನು. ನೀನು ಯಾರು ? ನೀನು ಮಾಡುವ ಕೆಲಸವೇನು ಎಂದು ಪುನಃ ಕೇಳಲು. ಅದಕ್ಕೆ ವಿಷ್ಣುವು ಇಂತೆಂದನು—ನೀನು ಹೇಳಿದಂತೆ ದುರ್ಗಗಳ ಮತ್ತು ಅಸುರರ ಧನಾದಿಗಳನ್ನು ಧ್ವಂಸಮಾಡುವವನಾಗಿದ್ದಲ್ಲಿ ಧನಾದಿಗಳನ್ನು ಅಪಹರಿಸಿ ತನ್ನಲ್ಲಿ ಬಚ್ಚಿಟ್ಟುಕೊಂಡಿರುವ ವರಾಹನೆಂಬ ಅಸುರನು ಇಲ್ಲಿಂದ ಇಪ್ಪತ್ತೊಂದು ಪುರಗಳ (ಕೋಟೆಗಳ) ಕೊನೆಯಲ್ಲಿ ಕಲ್ಲುಗಳಿಂದ ಭದ್ರವಾಗಿ ಕಟ್ಟಲ್ಪಟ್ಟಿರುವ ಕೋಟೆಯಲ್ಲಿ ವಾಸಮಾಡುತ್ತಿರುವನು ಅವನಲ್ಲಿ ಅಸುರರ ಬಹಳವಾದ ಧನವಿರುವುದು. ಆದ್ದರಿಂದ ಆ ಅಸುರನನ್ನು ಸಂಹರಿಸು ಎಂದನು ಅದನ್ನು ಕೇಳಿ ಇಂದ್ರನು ಅಸುರರ ಆ ಪಟ್ಟಣಗಳನ್ನು ಧ್ವಂಸಮಾಡಿ ವರಾಹ ಎಂಬ ಅಸುರನ ಹೃದಯವನ್ನು ಇರಿದು ಕೊಂದನು. ಆಗ ವಿಷ್ಣುವು ಅಸುರನಲ್ಲಿದ್ದ ಧನವನ್ನೆಲ್ಲಾ ಅಲ್ಲಿಂದ ತಂದನು. ಇದೇ ಈ ಇತಿಹಾಸದ ಮುಖ್ಯಾಭಿಪ್ರಾಯವು. ಈ ವಿಷಯವು ಮೇಲೆ ಹೇಳಿದ ಋಕ್ಕಿನಲ್ಲಿಯೂ,

ಅಸ್ಯೇದು ಮಾತುಃ ಸವನೇಷು ಸದ್ಯೋ ಮಹಃ ಪಿತುಂ ಪಪಿವಾಞ್ಚಾರ್ವನ್ನಾ ।
ಮುಷಾಯದ್ವಿಷ್ಣುಃ ಪಚತಂ ಸಹೀಯಾನ್ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ॥

(ಋ. ಸಂ. ೧-೬೧-೭)

ಎಂಬ ಋಕ್ಕಿನಲ್ಲಿಯೂ ಹೇಳಿದೆಯೆಂದು ಭಾಷ್ಯಕಾರರು ಹೇಳಿ ಪ್ರಕೃತ ಋಕ್ಕಿನಲ್ಲಿರುವ ಮತ್ತು ಉದಾಹರಣೆಯಾಗಿ ಕೊಟ್ಟಿರುವ ವಾಕ್ಯಗಳಿಗೂ ಮೇಲೆ ಹೇಳಿದ ಇತಿಹಾಸಕ್ಕೂ ಹೊಂದಿಸಿ ಅರ್ಥವಿವರಣೆಮಾಡಿರುವರು.

ಅಸ್ಯೇದು ಮಾತುಃ ಇತ್ಯತ್ರ ವಿಷ್ಣುನಾ ಹೇ ಇಂದ್ರ ತ್ವಂ ದುರ್ಗಾಣಾಂ ಹಂತೇತ್ಯಾತ್ಮಾನಂ-ಕಥಯಸಿ ತರ್ಹಿ ವಾಮಮುಷಂ ವರಾಹಮಸುರಂ ಜಹೀತ್ಯುಕ್ತಾರ್ಥೋ ವಿಧ್ಯದ್ವರಾಹಂ ಇತಿ ಪಾದೇನ ಪ್ರತಿಪಾದಿತಃ ॥

ಮೇಲಿನ ಇತಿಹಾಸದಲ್ಲಿ ಹೇಳಿರುವ—"ಎಲೈ ಇಂದ್ರನೇ, ನೀನು ದುರ್ಗಗಳ ಮತ್ತು ಅಸುರರ ಸಂಹಾರಕನೆಂದು ಹೇಳಿಕೊಳ್ಳುವಿಯಷ್ಟೆ. ಹಾಗಾದರೆ ಧನಾದಿಗಳನ್ನು ಅಪಹರಿಸಿ ತನ್ನಲ್ಲಿ ಬಚ್ಚಿಟ್ಟುಕೊಂಡಿರುವ ವರಾಹನೆಂಬ ಅಸುರ

ನನ್ನು ಸಂಹರಿಸು'' ಎಂದು ವಿಷ್ಣುವಿನ ವಾಕ್ಯಾರ್ಥವು ಮೇಲೆ ಹೇಳಿದ **ಅಸ್ಯೇದು ಮಾತುಃ** ಎಂಬ ಉದಾಹರಣೆಯ ಋಕ್ಕಿನ **ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ** ಎಂಬ ಕೊನೆಯ ಪಾದದಲ್ಲಿ ಉಕ್ತವಾಗಿರುವುದು.

**ಇಂದ್ರೇಣ ಚ ವಿಷ್ಣೋ ತ್ವಂ ದುರ್ಗಾದಾಹರ್ತೇತಿ ಬ್ರೂಷೇ ಮಯಾ ಪುರಾಣಿ ಜಿತಾನ್ಯಸುರಶ್ಚ ಘಾತಿತಸ್ತಸ್ಯ ವಾಮಂ ವಸ್ವಾನಯೇತ್ಯುಕ್ತೋ ವಿಷ್ಣುಮೂರ್ತಿಸ್ತಸ್ಯ ವರಾಹಾಸುರಸ್ಯ ಧನಂ ಮುಮೋಷ । ಸೋಽರ್ಥಂ ಮುಷಾಯುದ್ವಿಷ್ಣುಃ ಪಚತಂ ಸಹೀಯಾನ್ ಇತಿ ಪಾದೇನ ಸೂಚಿತಂ ॥**

ಮತ್ತು ಇಂದ್ರನು ವಿಷ್ಣುವನ್ನು ಕುರಿತು—ಎಲೈ ವಿಷ್ಣುವೇ, ನೀನು ಅಸುರರ ದುರ್ಗಗಳಿಂದ ಅವರ ಧನಾದಿಗಳನ್ನು ಅಪಹರಿಸಿ ತರುವವನೆಂದು ಹೇಳಿಕೊಂಡಿದ್ದೀಯಷ್ಟೆ. ಈಗ ನಾನು ಅನೇಕ ಶತ್ರುಪಟ್ಟಣಗಳನ್ನು ಜಯಿಸಿ ಅಸುರನನ್ನು ಕೊಂದಿರುವೆನು. ಆ ಅಸುರನಲ್ಲಿರುವ ಧನವನ್ನು ತೆಗೆದುಕೊಂಡು ಬಾ ಎಂದು ಹೇಳಲು ವಿಷ್ಣುವು ಅದಕ್ಕೆ ಒಪ್ಪಿ ಆ ವರಾಹಾಸುರನಲ್ಲಿದ್ದ ಧನವನ್ನು ಅಪಹರಿಸಿ ತಂದನು. ಈ ವಿವರವು-**ಮುಷಾಯುದ್ವಿಷ್ಣುಃ ಪಚತಂ ಸಹೀಯಾನ್** ಎಂಬ ಉದಾಹೃತ ಋಕ್ಕಿನ ಪಾದದಿಂದ ವ್ಯಕ್ತಪಡುವುದು.

**ಸ ಕಿಂ ಪುನರ್ಮುಷಿತವಾನಿತಿ ತದತ್ರೋಚ್ಯತೇ । ವಿಶ್ವೇತ್ತಾ ಇತಿ । ಹೇ ಇಂದ್ರ ತ್ವೇಷಿತಸ್ತ್ವಯಾ ಪ್ರೇರಿತೋ ವಿಷ್ಣುರ್ಯಜ್ಞರೂಪೀ । ತ್ವೇಷಿತಸ್ತ್ವಂ ದುರ್ಗಾದಾಹಾರ್ತಾ ಕಿಲ ತರ್ಹಿ ತ್ವಂ ತಸ್ಯ ಧನಾನ್ಯಾಹರೇತಿ ತ್ವಯಾ ಪ್ರೇರಿತಃ ಸನ್ನುರುಕ್ರಮೋ ಭೂತ್ವಾ ವಿಶ್ವೇತ್ತಾ ಯಾನಿ ಚ ತತ್ರ ಸ್ಥಿತಾನಿ ತಾನಿ ಸರ್ವಾಣ್ಯಾಭರತ್ । ಅಭರತ್ । ಕಾನಿ ತಾನೀತಿ । ಶತಂ ಮಹಿಷಾನಪರಿಮಿತಾನ್ ಪ್ರಶಸ್ತಾನ್ ಪದಾರ್ಥಾನ್ ತೇಷಾಂ ವಾಹನರೂಪಾನ್ ಮಹಿಷಾನ್ವಾ ಕ್ಷೀರಪಾಕಮೋದನಂ ಚ ಪಕ್ವಮಾತ್ರಮೇವೌದನಂ ಚಾಭರತ್ ॥**

ಮತ್ತು ಆ ವಿಷ್ಣುವು ಪುನಃ ಇನ್ನೂ ಅನೇಕ ಪದಾರ್ಥಗಳನ್ನು ಅಪಹರಿಸಿ ತಂದನು ಎಂದು ಹೇಳಿದೆಯಷ್ಟೆ. ಅದರ ವಿವರವನ್ನು **ವಿಶ್ವೇತ್ತಾ** ಎಂಬ ಪ್ರಕೃತ ಋಕ್ಕಿನಲ್ಲಿ ವಿಶದವಾಗಿ ಹೇಳಲಾಗಿದೆ. ಎಲೈ ಇಂದ್ರನೇ, ನೀನು ಯಜ್ಞರೂಪಿಯಾದ ವಿಷ್ಣುವನ್ನು ಕುರಿತು ಎಲೈ ವಿಷ್ಣುವೇ, ನೀನು ಅಸುರರ ದುರ್ಗಗಳಿಂದ ಧನಾದಿಗಳನ್ನು ಅಪಹರಿಸಿ ತರುವವನೆಂದು ಹೇಳಿಕೊಂಡಿರುವೆಯಷ್ಟೆ. ಹಾಗಾದರೆ ಈ ವರಾಹಾಸುರನಲ್ಲಿರುವ ಧನಾದಿಗಳನ್ನು ತೆಗೆದುಕೊಂಡುಬಾ ಎಂಬುದಾಗಿ ನಿನ್ನಿಂದ (ಇಂದ್ರನಿಂದ) ಪ್ರೇರಿತನಾದಕೂಡಲೇ ವಿಷ್ಣುವು ಹಾಗೇ ಆಗಲೆಂದೊಪ್ಪಿ ಬೇಗಬೇಗನೆ ಅಸುರನ ಪಟ್ಟಣಕ್ಕೆ ಹೋಗಿ, ಅಸುರನಲ್ಲಿದ್ದ—ಎಂದರೆ ಯಾವಯಾವ ವಸ್ತುಗಳನ್ನು ತರಬೇಕೆಂದು ಹೇಳಿದ್ದನೋ ಆ ಧನಾದಿಗಳನ್ನೆಲ್ಲಾ ಅಪಹರಿಸಿ ತಂದನು. ವಿಷ್ಣುವು ತಂದ ಆ ವಸ್ತುಗಳಾವುವು ಎಂದರೆ ಅತ್ಯುತ್ತಮವಾದವೂ ಅಸಂಖ್ಯಾತವಾದವೂ ಆದ ಧನಾದಿ ಶ್ರೇಷ್ಠವಸ್ತುಗಳನ್ನೂ, ಅವುಗಳನ್ನು ಹೊತ್ತುತರುವ ಮಹಿಷಾದಿಪಶುಗಳನ್ನೂ, ಕ್ಷೀರಾದಿಗಳಿಂದ ಪಕ್ವಮಾಡಿದ ಅನ್ನಾದ್ಯಾಹಾರಗಳನ್ನೂ ಎಲ್ಲವನ್ನೂ ಇಂದ್ರನು ಹೇಳಿದಂತೆ ಅಪಹರಿಸಿ ತಂದನು ಎಂಬ ವಿವರವು ಪ್ರಕೃತ ಋಕ್ಕಿನಲ್ಲಿ ವಿಶದವಾಗಿ ಸೂಚಿತವಾಗಿರುವುದು.

**ವಿಧ್ಯದ್ವರಾಹಂ ಇತ್ಯತ್ರೋಕ್ತೋಽರ್ಥಶ್ಚ ಚರಮಪಾದೇನೋಚ್ಯತೇ । ಇಂದ್ರಸ್ತು ವರಾಹಾರಂ ಸ್ವೀಕೃತಾಸುರಸರ್ವಸ್ವಂ ವರಾಹರೂಪಿಣಂ ವೈಮುಷಮೇಮುಷನಾಮಾನಮಥವೈಮುಷಂ ಧನಾನಾಮಾಮೋಷಕಂ ವರಾಹಮಸುರಂ ಹೃದಯೇಽವಿಧ್ಯದಿತಿ ಶೇಷಃ ॥**

ಇನ್ನು ವಿಧ್ಯದ್ವರಾಹಮಿಂದ್ರ ಏಮುಷಂ ಎಂಬ ಪ್ರಕೃತ ಋಕ್ಕಿನ ಕೊನೆಯ ಪಾದದ ಅರ್ಥವನ್ನು ವಿವರಿಸುವರು. ಈ ವರಾಹನೆಂಬ ಅಸುರನು ವರಾಹ (ಹಂದಿ) ರೂಪಿಯಾಗಿದ್ದು ಬಹಳ ಧನವನ್ನು ಅನೇಕರಿಂದ ಅಪಹರಿಸಿಟ್ಟಿದ್ದನು ಆದ್ದರಿಂದ ಇವನನ್ನು **ಏಮುಷಂ** ಎಂದರೆ **ಧನಾನಾಮಾಮೋಷಕಂ** ಧನವನ್ನು ಅಪಹರಿಸುವವನು ಎಂಬ ಹೆಸರಿನಿಂದ ಕರೆಯುವುದು ರೂಢಿಯು. ಇಂತಹ ವರಾಹರೂಪಿಯಾದ ಏಮುಷನೆಂಬ ಅಸುರನನ್ನು ಇಂದ್ರನು ತನ್ನ ಶಕ್ತಿಸಾಮರ್ಥ್ಯಗಳಿಂದ ಅವನ ಎದೆಯನ್ನು ತಿವಿದು ಕೊಂದನು ಎಂಬ ಅಭಿಪ್ರಾಯವು ಪ್ರಕೃತ ಋಕ್ಕಿನ ಕೊನೆಯ ಪಾದದಲ್ಲಿ ವಿವೃತವಾಗಿದೆ.

ಕೃಷ್ಣಯುಜುರ್ವೇದದ ತೈತ್ತಿರೀಯಸಂಹಿತೆಯಲ್ಲಿಯೂ ಈ ವಿಷಯದ ವಿವರಣೆಯು ಇದೇ ರೀತಿಯಾಗಿ ಹೇಳಲ್ಪಟ್ಟಿದೆ—

**ಯಜ್ಞೋ ದೇವೇಭ್ಯೋ ನಿಲಾಯತ ವಿಷ್ಣೂರೂಪಂ ಕೃತ್ವಾ ಸ ಪೃಥಿವೀಂ ಪ್ರಾವಿಶತ್ತಂ ದೇವಾ ಹಸ್ತಾನ್ತ್ಸಗ್ಂ ರಭ್ಯೈಚ್ಛನ್ತಮಿಂದ್ರ ಉಪರ್ಯುಪರ್ಯತ್ಯಕ್ರಾಮತ್ಸೋಽಬ್ರವೀತ್ಕೋ-ಮಾಯಮುಪರ್ಯುಪರ್ಯತ್ಯಕ್ರಮೀದಿತ್ಯಹಂ ದುರ್ಗೇ ಹಂತೇತ್ಯಥ ಕಸ್ತ್ವಮಿತ್ಯಹಂ ದುರ್ಗಾದಾಹರ್ತೇತಿ ಸೋಽಬ್ರವೀದ್ದುರ್ಗೇ ವೈ ಹಂತಾವೋಚಥಾವರಾಹೋಽಯಂ ವಾಮ-ಮೋಷಃ ಸಪ್ತಾನಾಂ ಗಿರೀಣಾಂ ಪರಸ್ತಾದ್ವಿತ್ತಂ ವೇದ್ಯಮಸುರಾಣಾಂ ಬಿಭರ್ತಿ ತಂ ಜಹಿ ಯದಿ ದುರ್ಗೇ ಹಂತಾಸೀತಿ ಸದರ್ಭಪುಂಜೀಲಮುದ್ವೃಹ್ಯ ಸಪ್ತಗಿರೀನ್ ಭಿತ್ವಾ ತಮಹನ್ತ್ಸೋಽಬ್ರವೀದ್ದುರ್ಗಾದ್ವಾ ಆಹರ್ತಾ ವೋಚಥಾ ಏತಮಾಹರೇತಿ ತಮೇಭ್ಯೋ ಯಜ್ಞ ಏವ ಯಜ್ಞಮಾಹರದ್ಯತ್ತದ್ವಿತ್ತಂ ವೇದ್ಯಮಸುರಾಣಾಮವಿದಂತ ತದೇಕಂ ವೇದ್ಯೈ ವೇದಿತ್ವಂ ॥**

(ತೈ. ಸಂ ೬-೨-೪,೨ ೩)

ಯಜ್ಞವೇದಿಗೆ ವೇದಿ ಎಂಬ ಹೆಸರು ಹೇಗೆ ಬಂದಿತೆಂಬ ವಿಷಯವನ್ನು ವಿವರಿಸುವುದಕ್ಕಾಗಿ ಯಜುರ್ವೇದದಲ್ಲಿ ಒಂದು ಇತಿಹಾಸವು ಉಕ್ತವಾಗಿದೆ.

ಪೂರ್ವಕಾಲದಲ್ಲಿ ಕಾರಣಾಂತರದಿಂದ ಯಜ್ಞವು ವಿಷ್ಣುರೂಪವನ್ನು ಧರಿಸಿ ದೇವತೆಗಳನ್ನು ಬಿಟ್ಟು ಹೊರಟು ಹೋಯಿತು. ಅನಂತರ ಯಜ್ಞರೂಪನಾದ ಆ ವಿಷ್ಣುವು ಭೂಮಿಯನ್ನು ಪ್ರವೇಶಿಸಿ ಯಾರಿಗೂ ತಿಳಿಯದಂತೆ ಅಡಗಿಕೊಂಡಿದ್ದನು. ದೇವತೆಗಳು ಅವನನ್ನು ಕಾಣದೆ ಒಬ್ಬರ ಕೈಯ್ಯನ್ನೊಬ್ಬರು ಹಿಡಿದುಕೊಂಡು ಎಲ್ಲೆಲ್ಲೂ ಹುಡುಕುತ್ತಿದ್ದರು. ಆದರೂ ಅವರಿಗೆ ವಿಷ್ಣುವಿರುವ ಸ್ಥಳವು ಸಿಕ್ಕಲಿಲ್ಲ. ಆದರೆ ಇಂದ್ರನು ವಿಷ್ಣುವು ಅಡಗಿಕೊಂಡಿದ್ದ ಪ್ರದೇಶದಮೇಲೆ ಹಾದುಹೋಗುವಾಗ, ಕೆಳಗಿದ್ದ ವಿಷ್ಣುವು— ಯಾರದು? ನಾನಿರುವ ಈ ಸ್ಥಳದಮೇಲೆ ಹಾದುಹೋಗುವವರು? ಎನ್ನಲು, ಅದನ್ನು ಕೇಳಿ ಇಂದ್ರನು—ನಾನು, ಅಸುರರ ದುರ್ಗಗಳನ್ನು ಪ್ರಹರಿಸಿ ಧ್ವಂಸಮಾಡುವ ಶೂರನೇ ನಾನು. ಆದರೆ ನೀನು ಯಾರು? ಎಂದು ಕೇಳಿದನು. ಅದಕ್ಕೆ ವಿಷ್ಣುವು ಅಸುರರ ದುರ್ಗಾದಿಗಳು ಧ್ವಂಸವಾದಮೇಲೆ ಅಲ್ಲಿರತಕ್ಕ ಧನಾದಿವಸ್ತುಗಳನ್ನು ತರುವವನೇ ನಾನು ಎಂದು ಪ್ರತ್ಯುತ್ತರವಿತ್ತನು ಮತ್ತು ಇಂದ್ರನನ್ನುದ್ದೇಶಿಸಿ—ಎಲೈ ಪುರುಷನೇ, ನೀನು ಹೇಳಿಕೊಳ್ಳುವಂತೆ ಶತ್ರುಪಟ್ಟಣಗಳನ್ನು ಧ್ವಂಸಮಾಡುವವನು ನೀನೇ

ಆಗಿದ್ದರೆ ಇಲ್ಲಿಂದ ಮುಂದೆ ಏಳು ಪರ್ವತಗಳ ಆಚೆ ವರಾಹನೆಂಬ ಅಸುರನಿರುವನು. ಅವನು ಅಸುರರ ಧನಾದಿಗಳನ್ನು ಅಪಹರಿಸಿ ತನ್ನ ಬಲವಾದ ಕೋಟೆಯೊಳಗೆ ಇಟ್ಟುಕೊಂಡಿರುವನು. ನೀನು ಹೇಳಿಕೊಳ್ಳುವಂತೆ, ಅಸುರರ ದುರ್ಗಗಳನ್ನು ನಾಶಮಾಡುವ ಶಕ್ತಿ ನಿನಗಿದ್ದರೆ ಆ ವರಾಹನೆಂಬ ಅಸುರನನ್ನು ಪ್ರಹರಿಸಿ ಧ್ವಂಸಮಾಡು. ಆಗ ಮಾತ್ರ ನಿನ್ನ ಶಕ್ತಿಯು ಗೊತ್ತಾಗುವುದು ಎಂದನು. ಅದನ್ನು ಕೇಳಿ ಇಂದ್ರನು ಸಮೀಪದಲ್ಲಿದ್ದ ದರ್ಭೆಯ ಗೊಂಚಲೊಂದನ್ನು ತೆಗೆದುಕೊಂಡು ಅದನ್ನೇ ತನ್ನ ಆಯುಧವನ್ನಾಗಿ ಮಾಡಿಕೊಂಡು ಅಭೇದ್ಯವಾದ ಏಳು ಪರ್ವತಗಳನ್ನೂ ಭೇದಿಸಿ ಆ ವರಾಹಸುರನನ್ನು ಹೊಡೆದು ಕೊಂದನು. ಬಳಿಕ ವಿಷ್ಣುವನ್ನುದ್ದೇಶಿಸಿ ಎಲೈ ಪುರುಷನೇ, ನೀನು ಹೇಳಿದಂತೆ ಸಪ್ತಪರ್ವತಗಳನ್ನೂ ಸೀಳಿಹಾಕಿ ಅಲ್ಲಿದ್ದ ಅಸುರನನ್ನು ಕೊಂದಿರುವೆನು. ಇದರಿಂದ ನನ್ನ ಶಕ್ತಿಸಾಮರ್ಥ್ಯಗಳು ಸ್ಪಷ್ಟವಾಯಿತಷ್ಟೆ. ನೀನು ಹಿಂದೆ ಧ್ವಂಸವಾದ ಅಸುರರ ದುರ್ಗಾದಿಗಳಿಂದ ಅಲ್ಲಿರುವ ಧನಾದಿಗಳನ್ನು ತರುವವನೇ ನಾನು ಎಂದು ಹೇಳಿಕೊಂಡೆಯಷ್ಟೆ. ಈಗ ನೀನು ಹೇಳಿಕೊಂಡಂತೆ ಅಲ್ಲಿರುವ ಧನಾದಿವಸ್ತುಗಳನ್ನು ತೆಗೆದುಕೊಂಡುಬಾ ಆಗ ನಿನ್ನ ಶಕ್ತಿಯು ವ್ಯಕ್ತವಾಗುವುದು ಎಂದು ಹೇಳಲು, ವಿಷ್ಣುವು ಹಾಗೇ ಆಗಲೆಂದು ಹೇಳಿ ಯಜ್ಞರೂಪದಿಂದಲೇ ಆ ಅಸುರನಲ್ಲಿದ್ದ ಧನಾದಿವಸ್ತುಗಳನ್ನು ಅಪಹರಿಸಿ ದೇವತೆಗಳ ಸಮೀಪಕ್ಕೆ ತಂದನು. ಈರೀತಿ ಯಜ್ಞದಿಂದ ದೇವತೆಗಳು ಅಸುರರ ಧನಗಳನ್ನು ಪಡೆದದ್ದರಿಂದ ಯಜ್ಞಮಾಡುವ ಪ್ರದೇಶಕ್ಕೆ ವೇದಿ ಎಂದು ಹೆಸರು ಬಂದಿತು ಎಂದು ಈ ಇತಿಹಾಸದ ಮುಖ್ಯಾಭಿಪ್ರಾಯವು.

|| ಸಾಯಣಭಾಷ್ಯಂ ||

**ಮನೀಷಿಣ ಇತಿ ದಶರ್ಚಂ ದ್ವಾದಶಂ ಸೂಕ್ತಂ ವೈರೂಪಸ್ಯಾಷ್ಟ್ರಾದಂಷ್ಟ್ರಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ತಥಾ ಚಾನುಕ್ರಮ್ಯತೇ । ಮನೀಷಿಣೋ ದಶಾಷ್ಟ್ರಾದಂಷ್ಟ್ರ ಇತಿ ॥ ಗತೋ ವಿನಿಯೋಗಃ ॥**

ಅನುವಾದವು--**ಮನೀಷಿಣಃ** ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿರೂಪಋಷಿಯ ಗೋತ್ರದ ಅಷ್ಟ್ರಾದಂಷ್ಟ್ರನೆಂಬುವನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು; ಅನುಕ್ರಮಣಿಕೆಯಲ್ಲಿ **ಮನೀಷಿಣೋ ದಶಾಷ್ಟ್ರಾದಂಷ್ಟ್ರಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೧೧

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ—೧೧೧ ॥

ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೧೦, ೧೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

॥ ಋಷಿಃ—ಅಷ್ಟ್ರಾದಂಷ್ಟ್ರಃ ॥

॥ ದೇವತಾ—ಇಂದ್ರಃ ॥

॥ ಛಂದಃ—ತ್ರಿಷ್ಟುಪ್ ॥

|| ಸಂಹಿತಾಪಾಠಃ ||

**ಮನೀಷಿಣಃ ಪ್ರ ಭರಧ್ವಂ ಮನೀಷಾಂ ಯಥಾಯಥಾ ಮತಯಃ ಸಂತಿ ನೃಣಾಂ ।**

ಇಂದ್ರಂ ಸತ್ಯೈರೇರಯಾಮಾ ಕೃತೇಭಿಃ ಸ ಹಿ ವೀರೋ ಗಿರ್ವಣಸ್ಯು-
ರ್ವಿದಾನಃ ॥ ೧ ॥

॥ ಪದಪಾಠಃ ॥

ಮನೀಷಿಣಃ । ಪ್ರ । ಭರಧ್ವಂ । ಮನೀಷಾಂ । ಯಥಾಽಯಥಾ । ಮತಯಃ । ಸಂತಿ । ನೃಣಾಂ ।

ಇಂದ್ರಂ । ಸತ್ಯೈಃ । ಆ । ಈರಯಾಮ । ಕೃತೇಭಿಃ । ಸಃ । ಹಿ । ವೀರಃ । ಗಿರ್ವಣಸ್ಯುಃ । ವಿದಾನಃ ॥೧॥

॥ ಸಾಯಣಭಾಷ್ಯಂ ॥

**ಹೇ ಮನೀಷಿಣಃ** ಸ್ತೋತಾರಃ ಮನೀಷಾಂ ಮನಸ ಈಶಿತ್ರೀಂ ಸ್ತುತಿಮಿಂದ್ರಾಯ ಪ್ರ ಭರಧ್ವಂ । **ಕುರುತ । ನೃಣಾಂ** ಕರ್ಮನೇತೄಣಾಂ ಯುಷ್ಮಾಕಂ ಯಥಾಯಥಾ ಮತಯಃ ಸಂತಿ ಭವಂತಿ **ತಥಾ ಬುದ್ಧ್ಯನುಸಾರೇಣ ಸ್ತುತಿಂ** ಕುರುಧ್ವಂ । ವಯಂ ಚ ಕೃತೇಭಿಃ ಕೃತೈಃ **ಸತ್ಯೈರ್ಯಥಾರ್ಥಭೂತೈಃ ಸ್ತೋತ್ರೈರಿಂದ್ರಮೇರಯಾಮ** । ಯಜ್ಞಂ ಪ್ರತ್ಯಾಗಮಯಾಮ ॥ ಈರ ಗತೌ । ಣ್ಯಂತಸ್ಯ **ಲೋಟ್** ॥ **ಹಿ ಯತೋ** ವಿದಾನೋ ಜಾನಾನಃ **ಸಮರ್ಥಃ** ಸ ಇಂದ್ರೋ ಗಿರ್ವಣಸ್ಯುಃ ಗೀರ್ಭಿರ್ವನಂತಿ **ಸಂಭಜಂತ ಇತಿ** ಗೀರ್ವಣಸಃ **ಸ್ತೋತಾರಃ** ॥ ವನತೇರಸುನಿ ರೂಪಂ । ಉಪಪದಸ್ಯ ದೀರ್ಘಾಭಾವಶ್ಛಾಂದಸಃ । **ತದಂತಾತ್ಕ್ಯಚ್** । **ಕ್ಯಾಚ್ಛಂದಸೀ**ತ್ಯುಪ್ರತ್ಯಯಃ ॥ ಸ್ತೋತೄನ್ಕಾಮಯಮಾನಃ ಖಲು । **ಅತಸ್ತಮ. ಭಿಷ್ಟುತ** ॥

॥ ಪ್ರತಿಪದಾರ್ಥ ॥

**ಮನೀಷಿಣಃ**— ಪ್ರಾಜ್ಞರಾದ ಎಲೈ ಸ್ತುತಿಕರ್ತರೇ । **ನೃಣಾಂ**— ಕರ್ಮನೇತೃಗಳಾದ ನಿಮಗೆ । **ಯಥಾ ಯಥಾ**— ಯಾವ ಯಾವ ಪ್ರಕಾರವಾಗಿ । **ಮತಯಃ**— ಬುದ್ಧಿಶಕ್ತಿಗಳು । **ಸಂತಿ**— ಇರುವುವೋ ಆ ರೀತಿ **ಮನೀಷಾಂ**— ಇಂದ್ರನನ್ನುದ್ದೇಶಿಸಿದ ಸ್ತುತಿಯನ್ನು । **ಪ್ರ ಭರಧ್ವಂ**— ಸಂಪಾದಿಸಿರಿ । **ವೀರಃ ಸಃ**— ಪರಾಕ್ರಮಿಯಾದ ಆ ಇಂದ್ರನು । **ಹಿ**— ಯಾವ ಪ್ರಭಾವದಿಂದ । **ವಿದಾನಃ**— ನಮ್ಮ ಇಚ್ಛೆಗಳನ್ನರಿತು ಅವನ್ನು ಒದಗಿಸಲು **ಸಮರ್ಥನಾಗಿ** । **ಗಿರ್ವಣಸ್ಯುಃ**— ಸ್ತುತಿಕರ್ತರ ಸ್ತುತಿಗಳನ್ನಿಚ್ಛಿಸುವನೋ ಆದುದರಿಂದ । **ಸತ್ಯೈಃ**— ಸತ್ಯಾತ್ಮಕವಾದ । **ಕೃತೇಭಿಃ**— ನಿಮ್ಮ ಸ್ತುತಿಗಳಿಂದ । **ಇಂದ್ರಂ**— ಇಂದ್ರನನ್ನು । **ಏರಯಾಮ**— ಯಜ್ಞಾಗಮನಕ್ಕಾಗಿ **ಹುರಿದುಂಬಿಸೋಣ.**

॥ ಭಾವಾರ್ಥ ॥

ಪ್ರಾಜ್ಞರಾದ ಎಲೈ ಸ್ತುತಿಕರ್ತರೇ, ಕರ್ಮನೇತೃಗಳಾದ ನಿಮಗೆ ಯಾವ ಯಾವ ಪ್ರಕಾರವಾಗಿ ಬುದ್ಧಿ

ಸುವನು ಆದುದರಿಂದಲೇ ಸತ್ಯಾತ್ಮಕವಾದ ನಿಮ್ಮ ಸ್ತುತಿಗಳಿಂದ ಇಂದ್ರನನ್ನು ಯಜ್ಞಾಗಮನಕ್ಕಾಗಿ ಹುರಿದುಂಬಿಸೋಣ.

## English Translation.

Offer, worshipper, to Indra praise agreeable to the thoughts of men; let us incite Indra hither with sincere adoration, for he, the hero, capable (of granting our wishes, is) desirous of laudation.

॥ ಸಂಹಿತಾಪಾಠಃ ॥

ಋತಸ್ಯ ಹಿ ಸದಸೋ ಧೀತಿರದ್ಯೌತ್ಸಂ ಗಾರ್ಷ್ಟೇಯೋ ವೃಷಭೋ ಗೋಭಿ-
ರಾನಟ್ ।

ಉದತಿಷ್ಠತ್ತವಿಷೇಣಾ ರವೇಣ ಮಹಾಂತಿ ಚಿತ್ಸಂ ವಿವ್ಯಾಚಾ ರಜಾಂಸಿ ॥೨॥

॥ ಪದಪಾಠಃ ॥

ಋತಸ್ಯ । ಹಿ । ಸದಸಃ । ಧೀತಿಃ । ಅದ್ಯೌತ್ । ಸಂ । ಗಾರ್ಷ್ಟೇಯಃ । ವೃಷಭಃ । ಗೋಭಿಃ । ಆನಟ್ ।

ಉತ್ । ಅತಿಷ್ಠತ್ । ತವಿಷೇಣ । ರವೇಣ । ಮಹಾಂತಿ । ಚಿತ್ । ಸಂ । ವಿವ್ಯಾಚ । ರಜಾಂಸಿ ॥ ೨ ॥

॥ ಸಾಯಣಭಾಷ್ಯಂ ॥

ಋತಸ್ಯೋದಕಸ್ಯ ಸದಸಃ ಸ್ಥಾನಸ್ಯಾಂತರಿಕ್ಷಸ್ಯ ಧೀತಿರ್ಧಾರಕಃ ಸ ಇಂದ್ರೋಽದ್ಯೌತ್ । ದ್ಯೋತತೇ । ಪ್ರಕಾಶತೇ । ಹಿ ಪ್ರಸಿದ್ಧೌ ॥ ದ್ಯುತ ದೀಪ್ತೌ । ಲುಙ' ದ್ಯುದ್ಭ್ಯೋ ಲುಙೀತಿ ಪರಸ್ಮೈ-ಪದಂ । ಚ್ಲೇರ್ಲುಕ್ ಛಾಂದಸಃ । ಹಲಂತಲಕ್ಷಣಾ ವೃದ್ಧಿಃ ಪಿ ॥ ಯದ್ವಾ' ಅದ್ಯೌತ್। ತಾದೃಶ ಇಂದ್ರೋ ಯಜ್ಞಮಭಿಗಚ್ಛತಿ ॥ ದ್ಯು ಅಭಿಗಮೇ ಆದಾದಿಕಃ । ಲಙ್ । ಉತೋ ವೃದ್ಧಿರ್ಲುಕಿ ಹಲೀತಿ ವೃದ್ಧಿಃ ॥ ಗಾರ್ಷ್ಟೇಯಃ । ಸಕೃತ್ಪ್ರಸೂತಾ ಧೇನುರ್ಗೃಷ್ಟಿಃ । ತಸ್ಯಾ ಅಪತ್ಯಂ ವೃಷಭೋ ಗೋಭಿಃ ಸಮಾನಟ್ । ಸಂವ್ಯಾಪ್ನೋತಿ । ತಥೈಷೋಽಪಿ ಸರ್ವಂ ಸ್ವಮಹಿಮ್ನಾ ವ್ಯಾಪ್ನೋತಿ । ತಥಾ ತವಿಷೇಣ । ಮಹನ್ನಾಮೈ-ತತ್ । ಮಹತಾ ರವೇಣ ಶಬ್ದೇನೋದತಿಷ್ಠತ್ । ಉಚ್ಛ್ರಿತ ಉನ್ನತೋಽಭವತ್ । ಅತ ಏವ ಮಹಾಂತಿ ಚಿನ್ಮಹಾಂತ್ಯಪಿ ರಜಾಂಸ್ಯುದಕಾನಿ ಭುವನಾನಿ ವಾ ಸಂ ವಿವ್ಯಾಚ । ಸಂವ್ಯಾಪ್ನೋತಿ ॥

॥ ಪ್ರತಿಪದಾರ್ಥ ॥

ಋತಸ್ಯ—ಉದಕಕ್ಕೆ । ಸದಸಃ—ಸ್ಥಾನವಾದ ಅಂತರಿಕ್ಷಕ್ಕೆ । ಧೀತಿಃ—ಧಾರಕನಾದ ಇಂದ್ರನು । ಅದ್ಯೌತ್—ಪ್ರಕಾಶಿಸುತ್ತಾನೆ । ಗಾರ್ಷ್ಟೇಯಃ—ಗೋವಿನಿಂದ ಉತ್ಪನ್ನವಾದ । ವೃಷಭಃ—ವೃಷಭವು ।

**ಗೋಭಿಃ**—ಗೋವುಗಳೊಂದಿಗೆ | **ಸಮೂನಟ್**—(ತನ್ನ ಪ್ರಭಾವವನ್ನು ತೋರಿಸುತ್ತ) ಸೇರಿಕೊಂಡು ಮೆರೆಯುವಂತೆ | (**ಇಂದ್ರಃ**—ಇಂದ್ರನೂ) | **ತವಿಷೇಣ**—ಅತ್ಯಧಿಕವಾದ | **ರವೇಣ**—ಶಬ್ದದಿಂದ | **ಉದತಿಷ್ಠತ್**—ಆವಿರ್ಭವಿಸಿ | **ಮಹಾಂತಿ ಚಿತ್**—ಅತ್ಯಂತ ಮಹತ್ತ್ವವನ್ನು ಹೊಂದಿರುವ | **ರಜಾಂಸಿ**—ಲೋಕಗಳನ್ನೂ | **ಸಂ ವಿವ್ಯಾಚ**—ವ್ಯಾಪಿಸಿದ್ದಾನೆ.

|| ಭಾವಾರ್ಥ ||

ಉದಕಕ್ಕೆ ಸ್ಥಾನವಾದ ಅಂತರಿಕ್ಷಕ್ಕೆ ಧಾರಕನಾದ ಇಂದ್ರನು ಪ್ರಕಾಶಿಸುತ್ತಾನೆ. ಗೋವಿನ ಮೊದಲ ಕರುವಾಗಿ ಉತ್ಪನ್ನವಾದ ವೃಷಭವು ಗೋವುಗಳೊಂದಿಗೆ ತನ್ನ ಪ್ರಭಾವವನ್ನು ತೋರಿಸುತ್ತ ಅವುಗಳೊಡನೆ ಮೆರೆಯುವಂತೆ ಇಂದ್ರನೂ ಅತ್ಯಧಿಕವಾದ ಶಬ್ದದೊಡನೆ ಆವಿರ್ಭವಿಸಿ ಅತ್ಯಂತ ಮಹತ್ತ್ವವನ್ನು ಹೊಂದಿರುವ ಲೋಕಗಳನ್ನೆಲ್ಲಾ ವ್ಯಾಪಿಸಿದ್ದಾನೆ.

English Translation

Sustainer of the abode of the water, (the firmament), he shon brightly; the bull, the offspring of a cow which has only borne once, met the cows, with a loud roar he sprang up, he pervaded the vast worlds.

|| ಸಂಹಿತಾಪಾಠಃ ||

ಇಂದ್ರಃ ಕಿಲ ಶ್ರುತ್ಯಾ ಅಸ್ಯ ವೇದ ಸಹಿ ಜಿಷ್ಣುಃ ಪಥಿಕೃತ್ಸೂರ್ಯಾಯ |
ಆನ್ಮೇನಾಂ ಕೃಣ್ವನ್ನಚ್ಯುತೋ ಭುವದ್ಗೋಃ ಪತಿರ್ದಿವಃ ಸನಜಾ ಅಪ್ರತೀತಃ ||

|| ಪದಪಾಠಃ ||

ಇಂದ್ರಃ | ಕಿಲ | ಶ್ರುತ್ಯೈ | ಅಸ್ಯ | ವೇದ | ಸಃ | ಹಿ | ಜಿಷ್ಣುಃ | ಪಥಿಽಕೃತ್ | ಸೂರ್ಯಾಯ |
ಆತ್ | ಮೇನಾಂ | ಕೃಣ್ವನ್ | ಅಚ್ಯುತಃ | ಭುವತ್ | ಗೋಃ | ಪತಿಃ | ದಿವಃ | ಸನಽಜಾಃ | ಅಪ್ರತಿಽಇತಃ || ೩ ||

|| ಸಾಯಣಭಾಷ್ಯಂ ||

ಅಸ್ಮಾಸ್ಮದೀಯಸ್ಯ ಸ್ತೋತ್ರಸ್ಯ ಶ್ರುತ್ಯೈ ಶ್ರವಣಾಯೇಂದ್ರಃ ಕಿಲೇಂದ್ರ ಏವ ವೇದ | ಜಾನಾತಿ | ಸ ಹಿ ಸ ಏವ ಜಿಷ್ಣುಃ ಶತ್ರೂಣಾಂ ಜಯಶೀಲಃ ಸೂರ್ಯಾಯ ಪಥಿಕೃನ್ಮಾರ್ಗಕರ್ತಾ ಭವತಿ | ಕಿಂಚಾಚ್ಯುತಃ ಶತ್ರುಭಿರಗಂತವ್ಯೋ ವೃಷಣಶ್ವಸ್ಯ ಮೇನಾಮಾತ್ಮಾನಂ ಕೃಣ್ವನ್ ಕುರ್ವನ್ ಇಂದ್ರ ಆತ್ | ಆಗಚ್ಛತ್ಯಸ್ಮದೀಯಂ ಯಜ್ಞಂ | ಮೇನಾಭವೋ ವೃಷಣಶ್ವಸ್ಯ ಸುಕ್ರತೋ | ಋ. ೧-೫೧-೧೩ | ಇತಿ ಮಂತ್ರಾಂತರಂ || ಅಸ ಗತಿದೀಪ್ತ್ಯಾದಾನೇಷು ಭ್ವಾದಿಕಃ | ........... || ದಿವೋ ದ್ಯುಲೋಕಸ್ಯ ಚ ಪತಿರ್ಭುವತ್ | ಅಭೂತ್ || ಭವತೇರ್ಲೇಟ್ | ವಾಕ್ಯಭೇದಾದನಿಘಾತಃ ||

॥ ಪ್ರತಿಪದಾರ್ಥ ॥

**ಅಸ್ಯ**— ನಮ್ಮ ಸ್ತುತಿಗಳನ್ನು । **ಶ್ರುತ್ಯೈ**—ಕೇಳಲು ಸಮರ್ಥನಾದ । **ಇಂದ್ರಃ ಕಿಲ**—ಇಂದ್ರನೇ । **ವೇದ**—ನಮ್ಮ ಇಷ್ಟಾರ್ಥಗಳನ್ನು ತಿಳಿದಿದ್ದಾನೆ । **ಜಿಷ್ಣುಃ**— ಜಯಶಾಲಿಯಾದ । **ಸ ಹಿ**— ಅವನೇ । **ಸೂರ್ಯಾಯ** —ಸೂರ್ಯನ ಸಂಚಾರಕ್ಕೆ । **ಪಥಿಕೃತ್**—ಮಾರ್ಗವನ್ನು ನಿರ್ಮಿಸಿದ್ದಾನೆ । **ಅಚ್ಯುತಃ**—ನಾಶರಹಿತನಾದ ಇಂದ್ರನು । **ಮೇನಾಂ**—ಮೇನೆಯನ್ನು । **ಕೃಣ್ವನ್**—ತನ್ನದನ್ನಾಗಿ ಮಾಡಿಕೊಂಡು । **ಆತ್**—ಯಜ್ಞಕ್ಕೆ ಬರುತ್ತಾನೆ । **ದಿವಃ**—ದ್ಯುಲೋಕಕ್ಕೆ । **ಪತಿಃ**—ಒಡೆಯನೂ । **ಗೋಃ**—ಗೋವುಗಳಿಗೆ ಒಡೆಯನೂ । **ಸನಜಾಃ** —ಚಿರಂತನನಾಗಿಯೂ । **ಅಪ್ರತೀತಃ**—ಅಪ್ರತಿಹತನಾಗಿಯೂ । **ಭುವತ್**—ಆಗುತ್ತಾನೆ.

॥ ಭಾವಾರ್ಥ ॥

ನಮ್ಮ ಸ್ತುತಿಗಳನ್ನು ಕೇಳಲು ಸಮರ್ಥನಾದ ಇಂದ್ರನೇ ನಮ್ಮ ಇಷ್ಟಾರ್ಥಗಳನ್ನು ತಿಳಿದಿದ್ದಾನೆ. ಜಯಶಾಲಿಯಾದ ಅವನೇ ಸೂರ್ಯನ ಸಂಚಾರಕ್ಕೆ ಮಾರ್ಗವನ್ನು ನಿರ್ಮಿಸಿದ್ದಾನೆ ನಾಶರಹಿತನಾದ ಇಂದ್ರನು ಮೇನೆಯನ್ನು ತನ್ನದನ್ನಾಗಿ ಮಾಡಿಕೊಂಡು ಯಜ್ಞಕ್ಕೆ ಬರುತ್ತಾನೆ ಅವನು ಗೋವುಗಳಿಗೆ ಒಡೆಯನಾಗಿಯೂ, ದ್ಯುಲೋಕಕ್ಕೆ ಒಡೆಯನಾಗಿಯೂ, ಚಿರಂತನನಾಗಿಯೂ, ಅಪ್ರತಿಹತನಾಗಿಯೂ ಇರುತ್ತಾನೆ.

## English Translation

On hearing our praise Indra knows our wishes; victorious, he opens a path for the sun ; making himself Mena, he came (to the sacrifice), he was unassailable, the lord of cattle, (the lord) of heaven, eternal, unsurpassed.

॥ ಸಂಹಿತಾಪಾಠಃ ॥

ಇಂದ್ರೋ ಮಹ್ನಾ ಮಹತೋ ಅರ್ಣವಸ್ಯ ವ್ರತಾಮಿನಾದಂಗಿರೋಭಿ-
ರ್ಗೃಣಾನಃ ।
ಪುರೂಣಿ ಚಿನ್ನಿ ತತಾನಾ ರಜಾಂಸಿ ದಧಾರ ಯೋ ಧರುಣಂ ಸತ್ಯತಾತಾ॥೪॥

॥ ಪದಪಾಠಃ ॥

ಇಂದ್ರಃ । ಮಹ್ನಾ । ಮಹತಃ । ಅರ್ಣವಸ್ಯ । ವ್ರತಾ । ಅಮಿನಾತ್ । ಅಂಗಿರಃऽಭಿಃ । ಗೃಣಾನ ।

ಪುರೂಣಿ । ಚಿತ್ । ನಿ । ತತಾನ । ರಜಾಂಸಿ । ದಾಧಾರ । ಯಃ । ಧರುಣಂ । ಸತ್ಯऽತಾತಾ ॥ ೪ ॥

॥ ಸಾಯಣಭಾಷ್ಯಂ ॥

ಇಂದ್ರೋಽಂಗಿರೋಭಿರ್ಋಷಿಭಿರ್ಗೃಣಾನಃ ಸ್ತೂಯಮಾನಃ ಸನ್ ಮಹತೋಽರ್ಣವಸ್ಯ ॥ ಅರ್ಣಸಃ ಸಲೋಪಶ್ಚ । ಕಾ. ೫-೨-೧೦೯-೩ । ಇತಿ ವಪ್ರತ್ಯಯಃ ॥ ಉದಕವತೋ ಮೇಘಸ್ಯ ವ್ರತಾ ವ್ರತಾನಿ ಕರ್ಮಾಣಿ ಮಹ್ನಾ ಸ್ವಮಹಿಮ್ನೈವಾಮಿನಾತ್ । ಅಹಿಂಸೀತ್ ॥ ಮೀಞ್ ಹಿಂಸಾಯಾಂ । ಲಙಿ ಮೀನಾತೇರ್ನಿಗಮ ಇತಿ ಹ್ರಸ್ವಃ ॥ ತತಃ ಪುರೂಣಿ ಚಿದ್ಬಹೂನ್ಯೇವ ರಜಾಂಸ್ಯುದಕಾನಿ ನಿ ತತಾನ । ನೀಚೀನಾನ್ಯಕರೋತ್ । ಯ ಇಂದ್ರಃ ಸತ್ಯತಾತಾ ಸತ್ಯೈರ್ದೇವೈಸ್ತತೇ । ಯದ್ವಾ । ಸತ್ಯಶಬ್ದಾದಪಿ ಸ್ವಾರ್ಥಿಕಸ್ತಾತಿಲ್ ದ್ರಷ್ಟವ್ಯಃ । ಸತ್ಯೇ । ದ್ಯುಲೋಕೇ ಧರುಣಂ ಧಾರಕಂ ಬಲಂ ದಾಧಾರ ಅಧಾರಯತ್॥

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ಅಂಗಿರೋಭಿಃ**—ಅಂಗಿರಸ್ಸುಗಳಿಂದ । **ಗೃಣಾನಃ**—ಸ್ತುತಿಸಲ್ಪಟ್ಟು । **ಮಹತಃ**—ಮಹತ್ತಾದ । **ಅರ್ಣವಸ್ಯ**—ಮೇಘದ । **ವ್ರತಾ**—ಕಾರ್ಯಗಳನ್ನು । **ಮಹ್ನಾ**—ತನ್ನ ಮಹಿಮೆಯಿಂದಲೇ । **ಅಮಿನಾತ್**—ಹಿಂಸಿಸಿದ್ದಾನೆ । **ಯಃ**—ಯಾವ ಇಂದ್ರನು । **ಸತ್ಯತಾತಾ**—ಸತ್ಯಾತ್ಮಕವಾದ ದ್ಯುಲೋಕದಲ್ಲಿ । **ಧರುಣಂ**—ಜಗದ್ಧಾರಕವಾದ ತನ್ನ ಶಕ್ತಿಯನ್ನು । **ದಾಧಾರ**—ಧರಿಸಿದ್ದಾನೆಯೋ ಆ ಇಂದ್ರನು । **ಪುರೂಣಿ ಚಿತ್**—ಅತ್ಯಧಿಕವಾದ । **ರಜಾಂಸಿ**—ಉದಕಗಳನ್ನು । **ನಿ ತತಾನ**—ಕೆಳಗೆ ಬೀಳುವಂತೆ ಸುರಿಸಿದ್ದಾನೆ.

॥ ಭಾವಾರ್ಥ ॥

ಅಂಗಿರಸ್ಸುಗಳಿಂದ ಸ್ತುತಿಸಲ್ಪಟ್ಟ ಇಂದ್ರನು ಮಹತ್ತಾದ ಮೇಘಗಳ ಕರ್ಮಗಳನ್ನು ತನ್ನ ಮಹಿಮೆಯಿಂದಲೇ ಹಿಂಸಿಸಿದ್ದಾನೆ. ಯಾವ ಇಂದ್ರನು ಸತ್ಯಾತ್ಮಕವಾದ ದ್ಯುಲೋಕದಲ್ಲಿ ಜಗದ್ಧಾರಕವಾದ ತನ್ನ ಶಕ್ತಿಯನ್ನು ಧರಿಸಿದ್ದಾನೆಯೋ ಆ ಇಂದ್ರನು ಅತ್ಯಧಿಕವಾದ ಉದಕಗಳನ್ನು ಕೆಳಕ್ಕೆ ಬೀಳುವಂತೆ ಸುರಿಸಿದ್ದಾನೆ.

## English Translation.

Praised by the Angirasas, Indra has by his might injured the functions of the mighty cloud; he has sent down abundant rains, he who (at other times) has supported the supporting (cloud) in heaven.

॥ ಸಂಹಿತಾಪಾಠಃ ॥

ಇಂದ್ರೋ ದಿವಃ ಪ್ರತಿಮಾನಂ ಪೃಥಿವ್ಯಾ ವಿಶ್ವಾ ವೇದ ಸವನಾ ಹಂತಿ ಶುಷ್ಣಂ।
ಮಹೀಂ ಚಿದ್ದ್ಯಾಮಾತನೋತ್ಸೂರ್ಯೇಣ ಚಾಸ್ಕಂಭ ಚಿತ್ಕಂಭನೇನ
ಸ್ಕಭೀಯಾನ್ ॥ ೫ ॥

॥ ಪದಪಾಠಃ ॥

ಇಂದ್ರಃ । ದಿವಃ । ಪ್ರತಿಽಮಾನಂ । ಪೃಥಿವ್ಯಾಃ । ವಿಶ್ವಾ । ವೇದ । ಸವನಾ । ಹಂತಿ । ಶುಷ್ಣಂ ।
ಮಹೀಂ । ಚಿತ್ । ದ್ಯಾಂ । ಆ । ಅತನೋತ್ । ಸೂರ್ಯೇಣ । ಚಾಸ್ಕಂಭ । ಚಿತ್ । ಸ್ಕಂಭನೇನ ।
ಸ್ಕಭೀಯಾನ್ ॥ ೫ ॥

॥ ಸಾಯಣಭಾಷ್ಯಂ ॥

ದಿವೋ ದ್ಯುಲೋಕಸ್ಯ ಪೃಥಿವ್ಯಾಶ್ಚ ಪ್ರತಿಮಾನಂ ಮಹತ್ತ್ವೇನ ಪ್ರತಿನಿಧಿರಿಂದ್ರೋ ವಿಶ್ವಾ ಸರ್ವಾಣಿ ಸವನಾ ಸವನಾನಿ ವೇದ । ಸೋಮಪಾನಾರ್ಥಂ ಜಾನಾತಿ । ಶುಷ್ಣಂ ಸರ್ವಸ್ಯ ಶೋಷಕಮೇತನ್ನಾಮಾನಮಸುರಂ ಹಂತಿ ॥ ವಾಕ್ಯಭೇದಾದನಿಘಾತಃ ॥ ಅಪಿ ಚ ಮಹೀಂ ಚಿನ್ಮಹತೀಮಪಿ ದ್ಯಾಂ ಸೂರ್ಯೇಣಾತನೋತ್ । ಸರ್ವತ್ರ ಪ್ರಕಾಶಯುಕ್ತಾಮಕರೋತ್ । ಸ್ಕಭೀಯಾನ್ ಸ್ಕಂಭಯಿತೄಣಾಂ ಮಧ್ಯೇ ಶ್ರೇಷ್ಠಃ ಸ ಸ್ಕಂಭನೇನ ಚಿನ್ನಿರೋಧನಸಾಧನೇನ ಸಾಮರ್ಥ್ಯೇನೈವ ಚಾಸ್ಕಂಭ । ದ್ಯುಲೋಕಮವರುದ್ಧಮಕರೋತ್ ॥ ಸ್ಕಂಭಿಃ ಸೌತ್ರೋ ಧಾತುಃ । ಲಿಟಿ ತುಜಾದೀನಾಮಿತಿ ದೀರ್ಘಃ । ಚಿತ್ಕಂಭನೇನೇತ್ಯತ್ರ ಸಂಹಿತಾಯಾಂ ಸಲೋಪಃ । ಉತ್ಪೂರ್ವಸ್ಯ ಸ್ತಂಭೇರುದಃ ಸ್ಥಾಸ್ತಂಭೋಃ । ಪಾ. ೮-೪-೬೧ । ಇತಿ ಸಲೋಪ ಉಕ್ತಃ । ಚಿತ್ಪೂರ್ವಸ್ಯ ಸ್ಕಂಭೇರಪಿ ಭವತಿ ಛಂದೋವಿಷಯತ್ವಾತ್ ॥

॥ ಪ್ರತಿಪದಾರ್ಥ ॥

**ದಿವಃ**—ದ್ಯುಲೋಕಕ್ಕೂ । **ಪೃಥಿವ್ಯಾಃ**—ಪೃಥ್ವಿಗೂ । **ಪ್ರತಿಮಾನಂ**—ಪ್ರತಿನಿಧಿಯಾದ । **ಇಂದ್ರಃ**—ಇಂದ್ರನು । **ವಿಶ್ವಾ**—ಸಕಲವಾದ । **ಸವನಾ**—ಯಜ್ಞಕರ್ಮಗಳನ್ನೂ । **ವೇದ**—ಅರಿತಿದ್ದಾನೆ । **ಶುಷ್ಣಂ**—ಶೋಷಕನಾದ ಶುಷ್ಣಾಸುರರನ್ನು । **ಹಂತಿ**—ಕೊಂದಿದ್ದಾನೆ । **ಮಹೀಂ ಚಿತ್**—ಮಹತ್ತಾದ । **ದ್ಯಾಂ**—ದ್ಯುಲೋಕವನ್ನೂ । **ಸೂರ್ಯೇಣ**—ಸೂರ್ಯನ ಸಹಾಯದಿಂದ । **ಆತನೋತ್**—ವಿಸ್ತೃತವಾಗುವಂತೆ ಮಾಡಿದನು । **ಸ್ಕಭೀಯಾನ್**—ಆಸರೆಯನ್ನು ಕೊಡುವವರಲ್ಲಿ ಉತ್ತಮನಾದ ಇಂದ್ರನು । **ಸ್ಕಂಭನೇನ ಚಿತ್**—ಸರ್ವಾಧಾರಯೋಗ್ಯವಾದ ತನ್ನ ಶಕ್ತಿಯಿಂದ । **ಚಾಸ್ಕಂಭ**—ದ್ಯುಲೋಕಕ್ಕೂ ಆಸರೆಯಾದನು.

॥ ಭಾವಾರ್ಥ ॥

ದ್ಯುಲೋಕಕ್ಕೂ ಪೃಥ್ವಿಗೂ ಪ್ರತಿನಿಧಿಯಾದ ಇಂದ್ರನು ಸಕಲವಾದ ಯಜ್ಞಕರ್ಮಗಳನ್ನೂ ಅರಿತಿದ್ದಾನೆ. ಶೋಷಕನಾದ ಶುಷ್ಣಾಸುರರನ್ನು ಕೊಂದಿದ್ದಾನೆ ಮಹತ್ತಾದ ದ್ಯುಲೋಕವನ್ನು ಸೂರ್ಯನ ಸಹಾಯದಿಂದ ವಿಸ್ತೃತವಾಗುವಂತೆ ಮಾಡಿದನು ಆಸರೆಯನ್ನು ಕೊಡುವುದರಲ್ಲಿ ಉತ್ತಮನಾದ ಇಂದ್ರನು ಸರ್ವಾಧಾರಯೋಗ್ಯವಾದ ತನ್ನ ಶಕ್ತಿಯಿಂದ ದ್ಯುಲೋಕಕ್ಕೂ ಆಸರೆಯಾದನು.

## English Translation.

Indra, the counterpart of heaven and earth, is cognizant of all sacrifices he is the slayer of Shushna; he spread out the spacious heaven with the sun (to light it up); best of proppers, he propped up (the heaven) with a prop.

॥ ಸಂಹಿತಾಪಾಠಃ ॥

ವಜ್ರೇಣ ಹಿ ವೃತ್ರಹಾ ವೃತ್ರಮಸ್ತರದೇವಸ್ಯ ಶೂಶುವಾನಸ್ಯ ಮಾಯಾಃ ।
ವಿ ಧೃಷ್ಣೋ ಅತ್ರ ಧೃಷತಾ ಜಘಂಥಾಥಾಭವೋ ಮಘವನ್ಬಾಹ್ವೋಜಾಃ ॥

॥ ಪದಪಾಠಃ ॥

ವಜ್ರೇಣ । ಹಿ । ವೃತ್ರಽಹಾ । ವೃತ್ರಂ । ಅಸ್ತಃ । ಅದೇವಸ್ಯ । ಶೂಶುವಾನಸ್ಯ । ಮಾಯಾಃ ।
ವಿ । ಧೃಷ್ಣೋ ಇತಿ । ಅತ್ರ । ಧೃಷತಾ । ಜಘಂಥ । ಅಥ । ಅಭವಃ । ಮಘಽವನ್ । ಬಾಹುಽಓಜಾಃ ॥೬॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವೃತ್ರಹಾ ವೃತ್ರಸ್ಯ ಹಂತಾ ವಜ್ರೇಣ ವೃತ್ರಮಸ್ತಃ । ಅಸ್ತೃಣಾಃ । ಅವಧೀಃ ॥ ಸ್ತೃಣಾತೇರ್ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಸಿಪಿ ಗುಣಃ । ಹಿಯೋಗಾದನಿಘಾತಃ ॥ ಅನಂತರಂ ಹೇ ಧೃಷ್ಣೋ ಧರ್ಷಣಶೀಲ ತ್ವಮದೇವಸ್ಯಾದ್ಯೋತಮಾನಸ್ಯ ಶೂಶುವಾನಸ್ಯ ಸ್ವಬಲೇನ ವರ್ಧಮಾನಸ್ಯ ತಸ್ಯ ಮಾಯಾ ಧೃಷತಾ ಸಮರ್ಥೇನ ವಜ್ರೇಣಾತ್ರಾಸ್ಮಿನ್ಕಾಲ ಏವ ವಿ ಜಘಂಥ । ವಿನಾಶಿತವಾನಸಿ ॥ ಹಂತೇರ್ಲಿಟಿ ಥಲ್ಯಭ್ಯಾಸಾಚ್ಚೇತಿ ಕುತ್ವಂ ॥ ಅಥ ಹೇ ಮಘವನ್ಧನವನ್ನಿಂದ್ರ ಬಾಹ್ವೋಜಾ ಭುಜಬಲವಾನಭವಃ ॥

॥ಪ್ರತಿಪದಾರ್ಥ॥

(ಎಲೈ ಇಂದ್ರನೇ) **ವೃತ್ರಹಾ**—ಶತ್ರುಹಂತಕನಾದ ನೀನು । **ವಜ್ರೇಣ**—ವಜ್ರಾಯುಧದಿಂದ । **ವೃತ್ರಂ**—ವೃತ್ರಾಸುರನನ್ನು । **ಅಸ್ತಃ**—ಕೊಂದಿದ್ದೀಯೆ । **ಧೃಷ್ಣೋ**—ಶತ್ರುಧರ್ಷಕನಾದ ನೀನು । **ಅದೇವಸ್ಯ**—ದೇವಪೂಜಕನಲ್ಲದವನೂ । **ಶೂಶುವಾನಸ್ಯ**—ತನ್ನ ಶಕ್ತಿಯಿಂದ ಬೆಳೆಯುತ್ತಿದ್ದವನೂ ಆದ ಆ ವೃತ್ರಾಸುರನ । **ಮಾಯಾಃ**—ವಂಚಕಶಕ್ತಿಗಳನ್ನು । **ಧೃಷತಾ**—ಶಕ್ತಿಯುತವಾದ ವಜ್ರಾಯುಧದಿಂದ । **ವಿ ಜಘಂಥ**—ನಾಶಪಡಿಸಿದ್ದೀಯೆ । **ಅಥ**—ಅನಂತರ । **ಮಘವನ್**—ಧನವಂತನಾದ ಎಲೈ ಇಂದ್ರನೇ । **ಬಾಹ್ವೋಜಾಃ**—ಅತ್ಯಧಿಕವಾದ ಭುಜಬಲವುಳ್ಳವನಾಗಿ । **ಅಭವಃ**—ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಶತ್ರುಹಂತಕನಾದ ನೀನು ವಜ್ರಾಯುಧದಿಂದ ವೃತ್ರಾಸುರನನ್ನು ಕೊಂದಿದ್ದೀಯೆ ಶತ್ರುಧರ್ಷಕನಾದ ನೀನು ದೇವಪೂಜಕನಲ್ಲದವನೂ, ತನ್ನ ಶಕ್ತಿಯಿಂದಲೇ ಬೆಳೆಯುತ್ತಿದವನೂ ಆದ ಆ ಅಸುರನ ವಂಚಕ ಶಕ್ತಿಗಳನ್ನೂ ಶಕ್ತಿಯುತವಾದ ನಿನ್ನ ವಜ್ರಾಯುಧದಿಂದ ನಾಶಪಡಿಸಿದ್ದೀಯೆ. ಅನಂತರ ಧನವಂತನಾದ ಎಲೈ ಇಂದ್ರನೇ, ನೀನು ಅತ್ಯಧಿಕವಾದ ಭುಜಬಲವುಳ್ಳವನಾದೆ.

## English Translation.

The slayer of Vritra, you have laid him low with the thunderbolt, resolute Indra, you have now overcome by your powerful (bolt), the devices of the impious (Asura), confiding in his own strength; you, Maghavan, wast strong-armed.

॥ ಸಂಹಿತಾಪಾಠಃ ॥

ಸಚಂತ ಯದುಷಸಃ ಸೂರ್ಯೇಣ ಚಿತ್ರಾಮಸ್ಯ ಕೇತವೋ ರಾಮವಿಂದನ್ ।
ಆ ಯನ್ನಕ್ಷತ್ರಂ ದದೃಶೇ ದಿವೋ ನ ಪುನರ್ಯತೋ ನಕಿರದ್ಧಾ ನು ವೇದ ॥

॥ ಪದಪಾಠಃ ॥

ಸಚಂತ । ಯತ್ । ಉಷಸಃ । ಸೂರ್ಯೇಣ । ಚಿತ್ರಾಂ । ಅಸ್ಯ । ಕೇತವಃ । ರಾಂ । ಅವಿಂದನ್ ।
ಆ । ಯತ್ । ನಕ್ಷತ್ರಂ । ದದೃಶೇ । ದಿವಃ । ನ । ಪುನಃ । ಯತಃ । ನಕಿಃ । ಅದ್ಧಾ । ನು । ವೇದ ॥ ೭ ॥

॥ ಸಾಯಣಭಾಷ್ಯಂ ॥

ಯದ್ಯದೋಷಸ ಉಷಃಕಾಲಾಃ ಸೂರ್ಯೇಣ ಸೂರ್ಯಾತ್ಮಕೇನೇಂದ್ರೇಣ ಸಚಂತ ಸಂಗಚ್ಛಂತೇ ॥ ಸಚ ಸಮವಾಯೇ ಭ್ವಾದಿಕಃ ॥ ತದಾನೀಮಸ್ಯ ಸ್ವಭೂತಾಃ ಕೇತವಃ ಸರ್ವಸ್ಯ ಪ್ರಜ್ಞಾಪಕಾ ರಶ್ಮಯಶ್ಚಿತ್ರಾಂ ನಾನಾವರ್ಣಾಂ ರಾಂ ರಾಯಂ ಶ್ರಿಯಮವಿಂದನ್ । ಅಲಭಂತ । ಪುನರುದಯಾನಂತರಂ ಯದ್ಯದಾ ದಿವೋ ನಕ್ಷತ್ರಂ ನ ದದೃಶೇ ನ ದೃಶ್ಯತೇ ॥ ದೃಶೇಃ ಕರ್ಮಣಿ ಲಿಟ್ । ಯದ್ವೋಗಾದನಿಘಾತಃ ॥ ತದಾನೀಂ ಯತಃ ॥ ಇಣಃ ಶತ್ರಂತಸ್ಯ ಶಸಿ ಶತುರನುಮೋ ನದ್ಯಜಾದೀ ಇತಿ ವಿಭಕ್ತೇರುದಾತ್ತತ್ವಂ ॥ ಸರ್ವತ್ರ ಗಚ್ಛತೋಽಸ್ಯ ರಶ್ಮೀನ್ನಕಿರ್ನ ಕಶ್ಚಿನ್ನು ವೇದ । ಜಾನಾತಿ । ಏತದದ್ಧಾ ಸತ್ಯಮೇವ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ | **ಉಷಸಃ**—ಉಷೋದೇವತೆಯ ಅಂಶಗಳು | **ಸೂರ್ಯೇಣ**—ಸೂರ್ಯನೊಂದಿಗೆ | **ಸಚಂತ**—ಸೇರಿಕೊಳ್ಳುತ್ತವೆಯೋ ಆಗ | **ಅಸ್ಯ**—ಸೂರ್ಯನ | **ಕೇತವಃ**—ರಶ್ಮಿಗಳು | **ಚಿತ್ರಾಂ**—ನಾನಾ ವರ್ಣಾತ್ಮಕವಾದ | **ರಾಂ**—ಸೌಂದರ್ಯ ಸಂಪತ್ತನ್ನು | **ಅವಿಂದನ್**—ಹೊಂದುತ್ತವೆ | **ಪುನಃ**—ಉದಯಾನಂತರ | **ಯತ್**—ಯಾವಾಗ | **ದಿವಃ**—ದ್ಯುಲೋಕದ | **ನಕ್ಷತ್ರಂ**—ನಕ್ಷತ್ರವು | **ನ ದದೃಶೇ**—ಕಾಣಿಸಿಕೊಳ್ಳುವುದಿಲ್ಲವೋ ಆಗ | **ಯತಃ**—ಸರ್ವತ್ರ ಸಂಚರಿಸುವ ಈ ಸೂರ್ಯನ ರಶ್ಮಿಗಳನ್ನು | **ನಕಿಃ ನು ವೇದ**—ಯಾರೂ ಅರಿಯಲಾರರು | **ಅದ್ಧಾ**—ಇದು ಸತ್ಯವು.

|| ಭಾವಾರ್ಥ ||

ಸೂರ್ಯೋದಯಕಾಲದಲ್ಲಿ ಉಷೋದೇವತೆಯ ಅಂಶಗಳು ಸೂರ್ಯನೊಂದಿಗೆ ಸೇರಿಕೊಳ್ಳುವಾಗ ಸೂರ್ಯನ ರಶ್ಮಿಗಳು ನಾನಾವರ್ಣಾತ್ಮಕವಾದ ಸೌಂದರ್ಯಸಂಪತ್ತನ್ನು ಹೊಂದುತ್ತವೆ. ಉದಯಾನಂತರ ದ್ಯುಲೋಕದ ನಕ್ಷತ್ರವು ಕಾಣಿಸಿಕೊಳ್ಳದಿದ್ದಾಗ ಸರ್ವತ್ರ ಸಂಚರಿಸುವ ಈ ಸೂರ್ಯನ ರಶ್ಮಿಗಳನ್ನು ಯಾರೂ ಅರಿಯಲಾರರು. ಇದು ಸತ್ಯವು.

**English Translation.**

When the dawns are associated with the sun, his rays acquire wonderful beauty; but when the constellation of heaven is not seen, no one really knows (his rays) as he moves.

|| ಸಂಹಿತಾಪಾಠಃ ||

ದೂರಂ ಕಿಲ ಪ್ರಥಮಾ ಜಗ್ಮುರಾಸಾಮಿಂದ್ರಸ್ಯ ಯಾಃ ಪ್ರಸವೇ ಸಸ್ರುರಾಪಃ ।
ಕ್ವ ಸ್ವಿದಗ್ರಂ ಕ್ವ ಬುಧ್ನ ಆಸಾಮಾಪೋ ಮಧ್ಯಂ ಕ್ವ ವೋ ನೂನಮಂತಃ ॥

|| ಪದಪಾಠಃ ||

ದೂರಂ । ಕಿಲ । ಪ್ರಥಮಾಃ । ಜಗ್ಮುಃ । ಆಸಾಂ । ಇಂದ್ರಸ್ಯ । ಯಾಃ । ಪ್ರಽಸವೇ । ಸಸ್ರುಃ । ಆಪಃ ।
ಕ್ವ । ಸ್ವಿತ್ । ಅಗ್ರಂ । ಕ್ವ । ಬುಧ್ನಃ । ಆಸಾಂ । ಆಪಃ । ಮಧ್ಯಂ । ಕ್ವ । ವಃ । ನೂನಂ । ಅಂತಃ ॥ ೮ ॥

|| ಸಾಯಣಭಾಷ್ಯಂ ||

ಆಸಾಮಪಾಂ ಮಧ್ಯೇ ಪ್ರಥಮಾಃ ಪ್ರಥಮಗಾಮಿನ್ಯಸ್ತಾ ಆಪೋ ದೂರಂ ಕಿಲ ಜಗ್ಮುಃ । ದೂರಮೇವ ಗತಾಃ । ಯಾ ಆಪ ಇಂದ್ರಸ್ಯ ಪ್ರಸವೇ ಪ್ರೇರಣೇ ॥ ಷೂ ಪ್ರೇರಣೇ । ಜವಸವೌ ಚೇತಿ ವಕ್ತವ್ಯಂ । ಪಾ. ೩-೩-೫೬-೪ । ಇತ್ಯಬಪವಾದೇಽಚ್ । ಥಾಥಘಞ್ಕ್ತಾಜಬಿತ್ರಕಾಣಾಮಿತ್ಯುತ್ತರಪದಾಂತೋದಾತ್ತತ್ವಂ ॥ ತಸ್ಯಾಜ್ಞಾಯಾಂ ಸಸ್ರುಃ । ಸರಂತಿ । ಗಚ್ಛಂತಿ ಖಲು । ಅಥ ಪ್ರತ್ಯಕ್ಷಕೃತಃ । ಹೇ ಆಪಃ ಆಸಾಂ ಯುಷ್ಮಾಕಮಗ್ರಂ ಕ್ವ ಸ್ವಿತ್ । ಕುತ್ರ ವರ್ತತೇ । ಬುಧ್ನೋ ಮೂಲಂ ಚ ಕ್ವ । ತಥಾ ವೋ ಯುಷ್ಮಾಕಂ ಮಧ್ಯಂ ಚ ಕ್ವ ನೂನಮಿದಾನೀಂ ಯುಷ್ಮಾಕಮಂತೋಽವಸಾನಂ ಚ ಕ್ವ । ಸರ್ವಗತತ್ವಾದನಿಜ್ಞಾಯಮಾನಗಮನಾ ಆಸನ್ನಿತ್ಯರ್ಥಃ ॥ ಕ್ವ । ಕಿಂಶಬ್ದಾತ್ ಸಪ್ತಮ್ಯರ್ಥೇ ಕಿಮೋಽದಿತ್ಯತ್ಪ್ರತ್ಯಯಃ । ಕ್ವಾತೀತಿ ಕ್ವಾದೇಶಃ । ತಿತ್ಸ್ವರಿತಃ । ಅಂತಃ । ಅಮೇರ್ಗತ್ಯರ್ಥಸ್ಯಾಸಿಹಸೀತ್ಯಾದಿನಾ ತಪ್ರತ್ಯಯಃ ॥

|| ಪ್ರತಿಪದಾರ್ಥ ||

**ಯಾಃ**—ಯಾವ ಉದಕಗಳು | **ಇಂದ್ರಸ್ಯ**—ಇಂದ್ರನ | **ಪ್ರಸವೇ**—ಪ್ರೇರಣೆಯಿಂದ | **ಸಸ್ರುಃ**—ಪ್ರವಿಸುವುವೋ | **ಆಸಾಂ**—ಆ ಉದಕಪ್ರವಾಹಗಳಲ್ಲಿ | **ಪ್ರಥಮಾಃ**—ಮೊದಲನೆಯ ಪ್ರವಾಹಗಳು | **ದೂರಂ ಕಿಲ**—ಬಹುದೂರಕ್ಕೆ | **ಜಗ್ಮುಃ**—ಹೋಗುತ್ತವೆ. | **ಆಪಃ**—ಎಲೈ ಉದಕಗಳೇ | **ಅಸಾಂ**—ನಿಮ್ಮ | **ಅಗ್ರಂ**—ಪ್ರಾರಂಭವು | **ಕ್ವ ಸ್ವಿತ್**—ಎಲ್ಲಿರುತ್ತದೆ | **ಬುಧ್ನಃ**—ಮೂಲವು | **ಕ್ವ**—ಎಲ್ಲಿ | **ವಃ**—ನಿಮ್ಮ | **ಮಧ್ಯಂ**—ಮಧ್ಯಭಾಗವು | **ಕ್ವ**—ಎಲ್ಲಿ | **ಅಂತಃ**—ಕೊನೆಯು | **ಕ್ವ**—ಎಲ್ಲಿರುತ್ತದೆ.

|| ಭಾವಾರ್ಥ ||

ಯಾವ ಉದಕಗಳು ಇಂದ್ರನ ಪ್ರೇರಣೆಯಿಂದ ಪ್ರವಹಿಸುವುವೋ ಆ ಉದಕ ಪ್ರವಾಹಗಳಲ್ಲಿ ಮೊದಲನೆಯ ಪ್ರವಾಹಗಳು ಬಹುದೂರಕ್ಕೆ ಹೋಗುತ್ತವೆ. ಎಲೈ ಉದಕಗಳೇ, ನಿಮಗೆ ಪ್ರಾರಂಭವು ಯಾವುದು ಮೂಲವು ಯಾವುದು? ನಿಮ್ಮ ಮಧ್ಯಭಾಗವು ಯಾವುದು? ಕೊನೆಯು ಯಾವುದು?

English Translation

The first of those waters, which issued forth at Indra's sending, went very far. Where, waters, is your beginning, where your root, where is your centre, where indeed is your termination?

|| ಸಂಹಿತಾಪಾಠಃ ||

ಸೃಜಃ ಸಿಂಧೂँರಹಿನಾ ಜಗ್ರಸಾನಾँ ಆದಿದೇತಾಃ ಪ್ರ ವಿವಿಜ್ರೇ ಜವೇನ |
ಮುಮುಕ್ಷಮಾಣಾ ಉತ ಯಾ ಮುಮುಚ್ರೇऽಧೇದೇತಾ ನ ರಮಂತೇ
ನಿತಿಕ್ತಾಃ || ೯ ||

|| ಪದಪಾಠಃ ||

ಸೃಜಃ | ಸಿಂಧೂನ್ | ಅಹಿನಾ | ಜಗ್ರಸಾನಾನ್ | ಆತ್ | ಇತ್ | ಏತಾಃ | ಪ್ರ | ವಿವಿಜ್ರೇ | ಜವೇನ | ಮುಮುಕ್ಷಮಾಣಾಃ | ಉತ | ಯಾಃ | ಮುಮುಚ್ರೇ | ಅಧ | ಇತ್ | ಏತಾಃ | ನ | ರಮಂತೇ | ನಿऽತಿಕ್ತಾಃ || ೯ ||

|| ಸಾಯಣಭಾಷ್ಯಂ ||

ಹೇ ಇಂದ್ರ ಅಹಿನಾಹಂತವ್ಯೇನ ವೃತ್ರೇಣ ಮೇಘೇನ ವಾ ಜಗ್ರಸಾನಾನ್ || ಗ್ರಸ ಅದನೇ | ಅನುದಾತ್ತೇತ್ | ಛಂದಸಿ ಲಿಟಃ ಕಾನಚ್ || ಗ್ರಸ್ತಾಃ ಸಿಂಧೂನ್ ಸ್ಯಂದಮಾನಾ ಅಪಃ ಸೃಜಃ | ಅಸೃಜಃ |

**ನಿರಗಮಯಃ । ಆದಿತ್ । ಇದವಧಾರಣೇ । ಅನಂತರಮೇವೈತಾ ಆಪೋ ಜವೇನ ವೇಗೇನ ಪ್ರ ವಿವಿಜ್ರೇ । ಸರ್ವತ್ರಾತ್ಯಂತಂ ಚಲಿತಾ ಬಭೂವುಃ ॥ ಓವಿಜೀ ಭಯಚಲನಯೋಃ । ಉದಾತ್ತೇತ್ । ಲಿಟೀರಯೋ ರೇ । ಪಾ. ೬-೪-೭೬ । ಇತೀರಯೋ ರೇಆದೇಶಃ ॥ ಉತಾಪಿ ಚ ಮುಮುಕ್ಷಮಾಣಾ ಇಂದ್ರೇಣ ಮೋಚಯಿತುಮಿಷ್ಯಮಾಣಾ ಯಾ ಆಪೋ ಮುಮುಚ್ರೇ ಇಂದ್ರೇಣ ಮೋಚಿತಾ ಅಭೂವನ್ ॥ ಮುಚೇಃ ಕರ್ಮಣಿ ಲಿಟ್ ॥ ಅಧೇದನಂತರಮೇವ ನಿತಿಕ್ತಾ ನಿತರಾಂ ಶುದ್ಧಾ ಆಪೋ ನ ರಮಂತೇ । ಏಕತ್ರ ನ ಕ್ರೀಡಂತೇ । ಕಿಂತು ಸರ್ವತ್ರ ಗಮನಶೀಲಾ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಅಹಿನಾ**—ಮೇಘರೂಪವಾದ ವೃತ್ರನಿಂದ । **ಜಗ್ರಸಾನಾನ್**—ಕಬಳಿಸಲ್ಪಟ್ಟ । **ಸಿಂಧೂನ್**—ಉದಕಪ್ರವಾಹಗಳನ್ನು । **ಸೃಜಃ**—ನೀನು ಬಿಡಿಸಿದ್ದೀಯೆ । **ಆದಿತ್**—ಆ ಒಡನೆಯೇ । **ಏತಾಃ**—ಈ ಉದಕಗಳು । **ಜವೇನ**—ವೇಗದಿಂದ । **ಪ್ರ ವಿವಿಜ್ರೇ**—ಮುನ್ನುಗ್ಗಿ ಪ್ರವಹಿಸಿವೆ । **ಉತ**—ಮತ್ತು । **ಮುಮುಕ್ಷಮಾಣಾಃ**—ಇಂದ್ರನಿಂದ ಬಿಡಿಸಲ್ಪಡಬೇಕೆಂಬ ಇಚ್ಛೆಯಿಂದ ಕೂಡಿದ । **ಯಾಃ**—ಯಾವ ಉದಕಗಳು । **ಮುಮುಚ್ರೇ**—ಅಸುರನಿಂದ ಬಿಡಿಸಲ್ಪಟ್ಟವೋ । **ಅಧೇತ್**—ಆ ಅನಂತರವೇ । **ನಿತಿಕ್ತಾಃ**—ಪರಿಶುದ್ಧವಾದ ಉದಕಗಳು । **ನ ರಮಂತೇ**—ಒಂದೇ ಜಾಗದಲ್ಲಿ ಕ್ರೀಡಿಸುವುದಿಲ್ಲ (ಸರ್ವತ್ರ ಪ್ರವಹಿಸುತ್ತವೆ)

॥ ಭಾವಾರ್ಥ ॥

ಎಲೈ ಇಂದ್ರನೇ, ಮೇಘರೂಪನಾದ ವೃತ್ರನಿಂದ ಕಬಳಿಸಲ್ಪಟ್ಟ ಉದಕಪ್ರವಾಹವನ್ನು ನೀನು ಬಿಡಿಸಿದ್ದೀಯೆ. ಆ ಒಡನೆಯೇ ಈ ಉದಕಗಳು ವೇಗದಿಂದ ಮುನ್ನುಗ್ಗಿ ಪ್ರವಹಿಸಿವೆ. ಇಂದ್ರನಿಂದ ಬಿಡಿಸಲ್ಪಡಬೇಕೆಂಬ ಇಚ್ಛೆಯಿಂದ ಕೂಡಿದ ಯಾವ ಉದಕಗಳು ಅಸುರನಿಂದ ಬಿಡಿಸಲ್ಪಟ್ಟವೋ ಪರಿಶುದ್ಧವಾದ ಆ ಉದಕಗಳು ಒಂದೇ ಜಾಗದಲ್ಲಿ ನಿಲ್ಲದೆ ಸರ್ವತ್ರ ಪ್ರವಹಿಸುತ್ತವೆ.

## English Translation

Yon have set at liberty the streams which had been swallowed by Ahi ; they rushed forth with rapidity ; the waters which longed to be liberated were set free, and now the pure (streams) never stop.

॥ ಸಂಹಿತಾಪಾಠಃ ॥

**ಸಧ್ರೀಚೀಃ ಸಿಂಧುಮುಶತೀರಿವಾಯನ್ತ್ಸನಾಜ್ಜಾರ ಆರಿತಃ ಪೂರ್ಭಿ-**
**ದಾಸಾಂ ।**
**ಅಸ್ತಮಾ ತೇ ಪಾರ್ಥಿವಾ ವಸೂನ್ಯಸ್ಮೇ ಜಗ್ಮುಃ ಸೂನೃತಾ ಇಂದ್ರ**
**ಪೂರ್ವೀಃ ॥ ೧೦ ॥**

॥ ಪದಪಾಠಃ ॥

ಸಧ್ರೀಚೀಃ । ಸಿಂಧುಂ । ಉಶತೀಃಽಇವ । ಆಯನ್ । ಸನಾತ್ । ಜಾರಃ । ಆರಿತಃ । ಪೂಃಽಭಿತ್ । ಆಸಾಂ। ಅಸ್ತಂ । ಆ । ತೇ । ಪಾರ್ಥಿವಾ । ವಸೂನಿ । ಅಸ್ಮೇ ಇತಿ । ಜಗ್ಮುಃ । ಸೂನೃತಾಃ । ಇಂದ್ರ । ಪೂರ್ವೀಃ ॥

॥ ಸಾಯಣಭಾಷ್ಯಂ ॥

ಸಧ್ರೀಚೀಃ ॥ ಸಹಸ್ಯ ಸಧ್ರಿರಿತಿ ಸಧ್ರ್ಯಾದೇಶಃ । ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್। ಅಲೋಪದೀರ್ಘೌ । ವಾ ಛಂದಸೀತಿ ಪೂರ್ವಸವರ್ಣದೀರ್ಘಃ ॥ ಸಹಾಂಚನಾಃ ಸಹಗಮನಾ ಅಪಃ ಸಿಂಧುಂ ಸಮುದ್ರಂ ಭರ್ತಾರಮಾಯನ್ । ಆಗಚ್ಛನ್ । ತತ್ರ ದೃಷ್ಟಾಂತಃ । ಉಶತೀರಿವ ಯಥಾ ಕಾಮಯಮಾನಾಃ ಸ್ತ್ರಿಯಃ ಸ್ವಪತಿಮಭಿಗಚ್ಛಂತಿ ತದ್ವತ್ । ಜಾರಃ ಶತ್ರೂಣಾಂ ಜಾರಯಿತಾ ಪೂರ್ಭಿದಿಂದ್ರಃ ಸನಾಚ್ಚಿರಾದೇವಾಸಾಮಪಾಮಾರಿತಃ ಪ್ರೇರಕತ್ವೇನ ಸ್ವಾಮೀ ಭವತಿ । ಹೇ ಇಂದ್ರ ಅಸ್ಮೇ ಅಸ್ಮಾಕಂ ಸ್ವಭೂತಾನಿ ಪಾರ್ಥಿವಾ ಪಾರ್ಥಿವಾನಿ ವಸೂನಿ ಧನವತ್ಪ್ರೀಣಯಿತೄಣಿ ಹವೀಂಷಿ ಪೂರ್ವೀರ್ಬಹ್ವ್ಯಃ ಸೂನೃತಾ ವಾಚಃ ಸ್ತುತಿಲಕ್ಷಣಾಶ್ಚ ತೇ ತ್ವದೀಯಮಸ್ತಂ ಗೃಹಮಾ ಜಗ್ಮುಃ । ಆಗಚ್ಛಂತು । ಯದ್ವಾ। ಅಸ್ಮದೀಯಾಃ ಸ್ತುತಯಸ್ತೇ ಗೃಹಂ ಗಚ್ಛಂತು । ಅಸ್ಮಾಕಂ ಗೃಹಂ ತ್ವದೀಯಾನಿ ಪಾರ್ಥಿವಾನಿ ಧನಾನ್ಯಭಿಗಚ್ಛಂತು ॥ ಗಮೇಶ್ಛಂದಸಿ ಸಾರ್ವಕಾಲಿಕೋ ಲಿಟ್ ॥

॥ ಪ್ರತಿಪದಾರ್ಥ ॥

**ಉಶತೀರಿವ**—ಪತಿಯಸಂಗವನ್ನಪೇಕ್ಷಿಸುವ ಸ್ತ್ರೀಯರು ಪತಿಯಲ್ಲಿಗೆ ಹೋಗಿ ಸೇರುವಂತೆ । **ಸಧ್ರೀಚೀಃ**—ಒಟ್ಟಿಗೆ ಸೇರಿಕೊಂಡು ಹರಿಯುವ ನದಿಗಳು । **ಸಿಂಧುಂ**—ಸಮುದ್ರವನ್ನು । **ಆಯನ್**—ಹೋಗಿ ಸೇರುತ್ತವೆ । **ಜಾರಃ**—ಶತ್ರುನಾಶಕನೂ । **ಪೂರ್ಭಿತ್**—ಶತ್ರು ಪಟ್ಟಣಗಳನ್ನು ಸೀಳುವವನೂ ಆದ ಇಂದ್ರನು । **ಸನಾತ್**—ಬಹುಕಾಲದಿಂದಲೂ । **ಆಸಾಂ**—ಈ ಉದಕಗಳಿಗೆ । **ಆರಿತಃ**—ಪ್ರೇರಕನಾದ ಪ್ರಭುವಾಗಿದ್ದಾನೆ। **ಇಂದ್ರ**—ಎಲೈ ಇಂದ್ರನೇ । **ಅಸ್ಮೇ**—ನಮ್ಮ । **ಪಾರ್ಥಿವಾ**—ಪೃಥಿವ್ಯುತ್ಪನ್ನವಾದ । **ವಸೂನಿ**—ಹವೀರೂಪವಾದ ಧನಗಳೂ । **ಪೂರ್ವೀಃ**—ಅಧಿಕವಾದ । **ಸೂನೃತಾಃ**—ಸ್ತುತಿಗಳೂ । **ತೇ**—ನಿನ್ನ । **ಅಸ್ತಂ**—ಗೃಹವನ್ನು । **ಆಜಗ್ಮುಃ**—ಹೋಗಿ ಸೇರಲಿ.

॥ ಭಾವಾರ್ಥ ॥

ಪತಿಯ ಸಂಗವನ್ನಪೇಕ್ಷಿಸುವ ಸ್ತ್ರೀಯರು ಪತಿಯಲ್ಲಿಗೆ ಹೋಗಿ ಸೇರುವಂತೆ ಒಟ್ಟಿಗೆ ಸೇರಿಕೊಂಡು ಹರಿಯುವ ನದಿಗಳು ಸಮುದ್ರವನ್ನು ಹೋಗಿ ಸೇರುತ್ತವೆ. ಶತ್ರುನಾಶಕನೂ, ಶತ್ರು ಪಟ್ಟಣಗಳನ್ನು ಸೀಳುವವನೂ ಆದ ಇಂದ್ರನು ಬಹುಕಾಲದಿಂದಲೂ ಈ ಉದಕಗಳಿಗೆ ಪ್ರೇರಕನಾದ ಪ್ರಭುವಾಗಿದ್ದಾನೆ, ಎಲೈ ಇಂದ್ರನೇ, ಪೃಥಿವ್ಯುತ್ಪನ್ನವಾದ ನಮ್ಮ ಹವೀರೂಪವಾದ ಧನಗಳೂ ಅಧಿಕವಾದ ಸ್ತುತಿಗಳೂ ನಿನ್ನ ಗೃಹಕ್ಕೆ (ನಿನ್ನ ಬಳಿಗೆ) ಹೋಗಿ ಸೇರಲಿ.

## English Translation

They hasten associated together to the ocean, like loving wives (to a husband); (Indra), the witherer of foes, the demolisher of cities, is their

impeller of old; may our oblations, the treasures of earth, and our copious praises, proceed, Indra, to your dwelling.

## ನೂರ ಹನ್ನೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಇಂದ್ರ ಪಿಬೇತಿ ದಶರ್ಚಂ ತ್ರಯೋದಶಂ ಸೂಕ್ತಂ ತ್ರೈಷ್ಟುಭಮೈಂದ್ರಂ ನಭಃಪ್ರಭೇದನೋ ನಾಮ ವಿರೂಪಗೋತ್ರ ಋಷಿಃ। ತಥಾ ಚಾನುಕ್ರಮ್ಯತೇ। ಇಂದ್ರ ಪಿಬ ನಭಃಪ್ರಭೇದೇನ ಇತಿ॥ ಗತೋ ವಿನಿಯೋಗಃ॥

ಅನುವಾದವು—ಇಂದ್ರ ಪಿಬ ಎಂಬ ಈ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿರೂಪಋಷಿಯ ಗೋತ್ರದ ನಭಃಪ್ರಭೇದನ ಎಂಬುವನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ಇಂದ್ರ ಪಿಬ **ನಭಃಪ್ರಭೇದನಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೧೧೨

ಮಂಡಲ—೧೦ ॥ ಅನುವಾಕ—೯ ॥ ಸೂಕ್ತ—೧೧೨ ॥
ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೧೨, ೧೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೧೦ ॥
॥ ಋಷಿಃ—ನಭಃಪ್ರಭೇದನೋ ವೈರೂಪಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಂದ್ರ ಪಿಬ ಪ್ರತಿಕಾಮಂ ಸುತಸ್ಯ ಪ್ರಾತಃಸಾವಸ್ತವ ಹಿ ಪೂರ್ವಪೀತಿಃ।
ಹರ್ಷಸ್ವ ಹಂತವೇ ಶೂರ ಶತ್ರೂನುಕ್ಥೇಭಿಷ್ಟೇ ವೀರ್ಯಾ೩ಪ್ರ ಬ್ರವಾಮ॥೧॥

॥ ಪದಪಾಠಃ ॥

ಇಂದ್ರ। ಪಿಬ। ಪ್ರತಿऽಕಾಮಂ। ಸುತಸ್ಯ। ಪ್ರಾತಃऽಸಾವಃ। ತವ। ಹಿ। ಪೂರ್ವऽಪೀತಿಃ।
ಹರ್ಷಸ್ವ। ಹಂತವೇ। ಶೂರ। ಶತ್ರೂನ್। ಉಕ್ಥೇಭಿಃ। ತೇ। ವೀರ್ಯಾ। ಪ್ರ। ಬ್ರವಾಮ॥ ೧॥

|| ಸಾಯಣಭಾಷ್ಯಂ ||

**ಹೇ ಇಂದ್ರ ತ್ವಂ ಪ್ರತಿಕಾಮಂ ಯೋ ಯೋ ಕಾಮಾಸ್ತಾಂಸ್ತಾನ್ಪ್ರತಿ || ಅವ್ಯಯೀಭಾವಸಮಾಸಃ | ತಸ್ಯ ಸ್ವರಃ || ಯಥೇಚ್ಛಂ ಸುತಸ್ಯಾಭಿಷುತಸ್ಯ ಯೋ ಭಾಗಸ್ತುಭ್ಯಂ ದಾತವ್ಯಸ್ತಂ ಪಿಬ || ಆಮಂತ್ರಿತ. ಸ್ಯಾವಿದ್ಯಮಾನತ್ವೇನ ಪಾದಾದಿತ್ವಾದನಿಘಾತಃ || ಪ್ರಾತಃಸಾವಃ ಪ್ರಾತಃಸವನೇಽಭಿಷೂಯಮಾಣಃ ಸೋಮಸ್ತವ ಹಿ | ಕೃತೀಯಾರ್ಥೇ ಷಷ್ಠೀ | ತ್ವಯೈವ ಪೂರ್ವಪೀತಿಃ ಪ್ರಥಮತ ಏವ ಪಾತವ್ಯಃ | ಯದ್ವಾ | ಪ್ರಾತಃಸಾವಃ | ಸಪ್ತಮ್ಯಾಃ ಸುಃ | ಪ್ರಾತಃಸವನೇ ತವೈವ ಪ್ರಥಮಪಾನಂ ಖಲು | ಐಂದ್ರ- ವಾಯವಗ್ರಹೇ ಹ್ಯಾದಿತ ಏವೇಂದ್ರಃ ಪಿಬತಿ || ತತ್ಪುರುಷೇ ದಾಸೀಭಾರಾದಿತ್ವಾತ್ಪೂರ್ವಪದಾಂತೋದಾ- ತ್ತತ್ವಂ | ಯದ್ವಾ | ಬಹುವ್ರೀಹಿಃ || ತತೋ ಹೇ ಶೂರ ಸಮರ್ಥ ತ್ವಂ ಶತ್ರೂನ್ಹಂತವೇ ಹಂತುಂ ಹರ್ಷಸ್ವ | ಹೃಷ್ಟೋ ಭವ | ಅಥ ತೇ ತ್ವದೀಯಾನಿ ವೀರ್ಯಾ ವೃತ್ರಹನನಾದಿಲಕ್ಷಣಾನಿ ವೀರ್ಯಾಣ್ಯುಕ್ಥೇಭಿರುಕ್ಥೈಃ ಶಸ್ತ್ರೈಃ ಪ್ರ ಬ್ರವಾಮ | ಪ್ರಕರ್ಷೇಣ ವದಾಮ ||**

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ | **ಪ್ರತಿಕಾಮಂ**—ನಿನ್ನ ಇಚ್ಛೆಬಂದಷ್ಟು | **ಸುತಸ್ಯ**—ಹಿಂಡಿರುವ ಸೋಮ ವನ್ನು | **ಪಿಬ**—ಪಾನಮಾಡು | **ಪ್ರಾತಃಸಾವಃ**—ಪ್ರಾತಃಸವನಕಾಲದಲ್ಲಿ ಹಿಂಡಲ್ಪಡುವ ಸೋಮವು | **ತವ ಹಿ**—ನಿನ್ನಿಂದಲೇ | **ಪೂರ್ವಪೀತಿಃ**—ಪ್ರಥಮತಃ ಪಾನಮಾಡಲ್ಪಡತಕ್ಕದ್ದು | **ಶೂರ**—ಸಮರ್ಥನಾದ ಎಲೈ ಇಂದ್ರನೇ | **ಶತ್ರೂನ್**—ಶತ್ರುಗಳನ್ನು | **ಹಂತವೇ**—ಕೊಲ್ಲುವುದಕ್ಕೆ | **ಹರ್ಷಸ್ವ**—ಉತ್ತೇಜನವನ್ನು ಹೊಂದು | **ತೇ**—ನಿನ್ನ | **ವೀರ್ಯಾ**—ಸಾಹಸಕಾರ್ಯಗಳನ್ನು | **ಉಕ್ಥೇಭಿಃ**—ಶಸ್ತ್ರಮಂತ್ರಗಳಿಂದ | **ಪ್ರ ಬ್ರವಾಮ**—ಪ್ರಶಂಸಿಸುತ್ತೇವೆ.

|| ಭಾವಾರ್ಥ ||

ಎಲೈ ಇಂದ್ರನೇ, ಇಲ್ಲಿ ಹಿಂಡಿರುವ ಸೋಮವನ್ನು ನಿನ್ನ ಇಚ್ಛೆಬಂದಷ್ಟು ಪಾನಮಾಡು. ಪ್ರಾತಃಸವನ ಕಾಲದಲ್ಲಿ ಹಿಂಡಲ್ಪಡುವ ಸೋಮವು ನಿನ್ನಿಂದಲೇ ಪ್ರಥಮತಃ ಪಾನಮಾಡತಕ್ಕದ್ದು. ಸಮರ್ಥನಾದ ಎಲೈ ಇಂದ್ರನೇ, ಶತ್ರುಗಳನ್ನು ಕೊಲ್ಲುವುದಕ್ಕೆ ತಕ್ಕ ಉತ್ತೇಜನವನ್ನು ಹೊಂದು. ನಿನ್ನ ಸಾಹಸಕಾರ್ಯಗಳನ್ನು ಶಸ್ತ್ರಮಂತ್ರಗಳಿಂದ ಪ್ರಶಂಸಿಸುತ್ತೇವೆ.

English Translation

Drink, Indra, at will of the effused libation, for it is poured out at the morning sacrifice, and is first drunk by you; exult, hero, in slaying your foes, we will glorify your heroic exploits with hymns.

|| ಸಂಹಿತಾಪಾಠಃ ||

ಯಸ್ತೇ ರಥೋ ಮನಸೋ ಜವೀಯಾನೇಂದ್ರ ತೇನ ಸೋಮಪೇಯಾಯ ಯಾಹಿ |

ತೂಯಮಾ ತೇ ಹರಯಃ ಪ್ರ ದ್ರವಂತು ಯೇಭಿರ್ಯಾಸಿ ವೃಷಭಿರ್ಮಂದ-
ಮಾನಃ ॥ ೨ ॥

॥ ಪದಪಾಠಃ ॥

ಯಃ । ತೇ । ರಥಃ । ಮನಸಃ । ಜವೀಯಾನ್ । ಆ । ಇಂದ್ರ । ತೇನ । ಸೋಮಽಪೇಯಾಯ । ಯಾಹಿ ।
ತೂಯಂ । ಆ । ತೇ । ಹರಯಃ । ಪ್ರ । ದ್ರವಂತು । ಯೇಭಿಃ । ಯಾಸಿ । ವೃಷಽಭಿಃ । ಮಂದಮಾನಃ ॥೨॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮನಸೋಽಪಿ ಜವೀಯಾನತಿಶಯೇನ ಗಂತಾ ತೇ ತ್ವದೀಯೋ ಯೋ ರಥೋಽಸ್ತಿ ತೇನ ರಥೇನ ಸೋಮಪೇಯಾಯಾಸ್ಮದೀಯಂ ಸೋಮಂ ಪಾತುಮಾ ಯಾಹಿ । ಆಗಚ್ಛ ॥ ಪಾ ಪಾನೇ । ಭಾವೇಽಚೋ ಯತ್ । ಈದ್ಯತೀತೀತ್ವಂ । ಆರ್ಧಧಾತುಕಲಕ್ಷಣೋ ಗುಣಃ । ಕೃದುತ್ತರಪದಪ್ರಕೃತಿಸ್ವರತ್ವಂ ॥ ತಥಾ ತೇ ತ್ವದೀಯಾ ಹರಯೋ ರಥೇ ಸಂಯುಕ್ತಾ ಅಶ್ವಾಸ್ತೂಯಂ ಕ್ಷಿಪ್ರಮಾಭಿಮುಖ್ಯೇನ ಪ್ರ ದ್ರವಂತು । ಪ್ರಗಚ್ಛಂತು । ವೃಷಭಿಃ ಸೇಕ್ತೃಭಿರ್ಯೇಭಿರ್ಯೈರಶ್ವೈರ್ಮಂದಮಾನೋ ಮೋದಮಾನಃ ಸನ್ ಯಾಸಿ ಗಚ್ಛಸಿ । ಹರೀ ಇಂದ್ರಸ್ಯೇತಿ ವಚನಾದಿಂದ್ರಸ್ಯ ದ್ವಾವೇವಾಶ್ವಾವಿತಿ ನ ಚೋದನೀಯಂ ಆ ತ್ವಾ ಸಹಸ್ರಮಾ ಶತಮಿತ್ಯಾದಿನಿಗಮಾಂತರೇ ದರ್ಶನಾತ್ । ಋ. ೮-೧-೨೪ ॥

। ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಮನಸಃ—ಮನಸ್ಸಿಗಿಂತಲೂ । ಜವೀಯಾನ್—ಅಧಿಕವಾದ ವೇಗವುಳ್ಳ । ತೇ—ನಿನ್ನ । ಯಃ ರಥಃ—ಯಾವ ರಥವಿದೆಯೋ । ತೇನ—ಅದರೊಂದಿಗೆ । ಸೋಮಪೇಯಾಯ—ಸೋಮಪಾನಕ್ಕಾಗಿ । ಆ ಯಾಹಿ—ದಯಮಾಡು । ವೃಷಭಿಃ—ಶಕ್ತಿಯುತವಾದ । ಯೇಭಿಃ—ಯಾವ ಅಶ್ವಗಳೊಡನೆ । ಮಂದಮಾನಃ—ಹರ್ಷವನ್ನನುಭವಿಸುತ್ತ । ಯಾಸಿ—ಬರುವೆಯೋ ಅಂತಹ । ತೇ ಹರಯಃ—ನಿನ್ನ ಅಶ್ವಗಳು । ತೂಯಂ—ಕ್ಷಿಪ್ರವಾಗಿ । ಆ ಪ್ರ ದ್ರವಂತು—ಓಡಿಬರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಮನಸ್ಸಿಗಿಂತಲೂ ಅಧಿಕವಾದ ವೇಗವುಳ್ಳ ನಿನ್ನ ಯಾವ ರಥವಿದೆಯೋ ಅದರೊಂದಿಗೆ ಸೋಮಪಾನಕ್ಕಾಗಿ ದಯಮಾಡು. ಶಕ್ತಿಯುತವಾದ ಯಾವ ಅಶ್ವಗಳೊಡನೆ ಹರ್ಷವನ್ನನುಭವಿಸುತ್ತ ಬರುವೆಯೋ ಅಂತಹ ನಿನ್ನ ಅಶ್ವಗಳು ಕ್ಷಿಪ್ರವಾಗಿ ಓಡಿಬರಲಿ.

## English Translation.

Come, Indra, to the Soma-drinking with your chariot, which is swifter than thought; let you bays, the vigorous steeds with which you go along rejoicing quickly, hasten hither.

|| ಸಂಹಿತಾಪಾಠಃ ||

ಹರಿತ್ವತಾ ವರ್ಚಸಾ ಸೂರ್ಯಸ್ಯ ಶ್ರೇಷ್ಠೈ ರೂಪೈಸ್ತನ್ವಂ ಸ್ಪರ್ಶಯಸ್ವ ।
ಅಸ್ಮಾಭಿರಿಂದ್ರ ಸಖಿಭಿರ್ಹುವಾನಃ ಸಧ್ರೀಚೀನೋ ಮಾದಯಸ್ವಾ ನಿಷದ್ಯ ॥

|| ಪದಪಾಠಃ ||

ಹರಿತ್ವತಾ । ವರ್ಚಸಾ । ಸೂರ್ಯಸ್ಯ । ಶ್ರೇಷ್ಠೈಃ । ರೂಪೈಃ । ತನ್ವಂ । ಸ್ಪರ್ಶಯಸ್ವ ।
ಅಸ್ಮಾಭಿಃ । ಇಂದ್ರ । ಸಖಿಽಭಿಃ । ಹುವಾನಃ । ಸಧ್ರೀಚೀನಃ । ಮಾದಯಸ್ವ । ನಿಽಸದ್ಯ ॥ ೩ ॥

| ಸಾಯಣಭಾಷ್ಯಂ ||

ಹೇ ಇಂದ್ರ ಹರಿತ್ವತಾ ॥ ಹರಿಚ್ಛಬ್ದಾನ್ಮತುಪೋ ಝಯ ಇತಿ ವತ್ವಂ ॥ ಹರಿದ್ವರ್ಣಯುಕ್ತೇನ ಸೂರ್ಯಸ್ಯ ವರ್ಚಸಾ ತೇಜಸಾ ತತ್ಸದೃಶೈಃ ಶ್ರೇಷ್ಠೈಃ ಪ್ರಶಸ್ಯತಮೈರಾತ್ಮೀಯೈ ರೂಪೈಸ್ತನ್ವಮಾತ್ಮೀಯಂ ಶರೀರಂ ಮದೀಯಂ ವಾ । ಯದ್ವಾ। ತಾಯತೆ ಇತಿ ತನೂರ್ಯಜ್ಞಃ । ತಂ ಸ್ಪರ್ಶಯಸ್ವ । ತೇಜೋಯುಕ್ತಂ ಕುರು । ಕಿಂಚ ಸಧ್ರೀಚೀನಃ ॥ ವಿಭಾಷಾಂಚೇರದಿಕ್‌ಸ್ತ್ರಿಯಾಮಿತಿ ಖಪ್ರತ್ಯಯಃ ॥ ಮರುದ್ಭಿಃ ಸಹಾಂಚನಸ್ತ್ವಂ ಸಖಿಭಿಃ ಸಖಿಭೂತೈರಸ್ಮಾಭಿರ್ಹುವಾನ ಆಹೂಯಮಾನಃ ಸನ್ನಿಷದ್ಯ ಯಜ್ಞೇ ನಿಷಣ್ಣೋ ಭೂತ್ವಾ ಮಾದಯಸ್ವ । ಸೋಮಪಾನೇನ ಹೃಷ್ಟೋ ಭವ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಹರಿತ್ವತಾ**—ಹೊಂಬಣ್ಣವುಳ್ಳ । **ಸೂರ್ಯಸ್ಯ**—ಸೂರ್ಯನ । **ವರ್ಚಸಾ**—ತೇಜಸ್ಸಿಗೆ ಸಮಾನವಾದ । **ಶ್ರೇಷ್ಠೈಃ**—ಉತ್ತಮವಾದ । **ರೂಪೈಃ**—ರೂಪಗಳಿಂದ । **ತನ್ವಂ**—ನಿನ್ನ ಶರೀರವನ್ನು । **ಸ್ಪರ್ಶಯಸ್ವ**—ಅಲಂಕರಿಸಿಕೊ । **ಸಖಿಭಿಃ**—ನಿನ್ನ ಮಿತ್ರರಾದ । **ಅಸ್ಮಾಭಿಃ**—ನಮ್ಮಿಂದ । **ಹುವಾನಃ**—ಕರೆಯಲ್ಪಡುವವನೂ । **ಸಧ್ರೀಚೀನಃ**—ಮರುತ್ತುಗಳೊಡನೆ ಕೂಡಿರುವವನೂ ಆದ ನೀನು । **ನಿಷದ್ಯ**—ಯಜ್ಞದಲ್ಲಿ ಕುಳಿತು । **ಮಾದಯಸ್ವ**—ಹರ್ಷವನ್ನನುಭವಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಸೂರ್ಯನ ಹೊಂಬಣ್ಣದ ತೇಜಸ್ಸಿಗೆ ಸಮಾನವಾದ ಉತ್ತಮವಾದ ರೂಪಗಳಿಂದ ನಿನ್ನ ಶರೀರವನ್ನು ಅಲಂಕರಿಸಿಕೊ. ನಿನ್ನ ಮಿತ್ರರಾದ ನಮ್ಮಿಂದ ಕರೆಯಲ್ಪಡುವವನೂ, ಮರುತ್ತುಗಳೊಡನೆ ಕೂಡಿರುವವನೂ ಆದ ನೀನು ಯಜ್ಞದಲ್ಲಿ ಕುಳಿತು ಹರ್ಷವನ್ನನುಭವಿಸು.

## English Translation.

Decorate your person with most beautiful forms with the golden radiance of the sun; invoked by us your friends, Indra, sit down and be exhilarated, accompanied by the Maruts.

॥ ಸಂಹಿತಾಪಾಠಃ ॥

ಯಸ್ಯ ತ್ಯತ್ತೇ ಮಹಿಮಾನಂ ಮದೇಷ್ವಿಮೇ ಮಹೀ ರೋದಸೀ ನಾವಿವಿಕ್ತಾಂ ।
ತದೋಕ ಆ ಹರಿಭಿರಿಂದ್ರ ಯುಕ್ತೈಃ ಪ್ರಿಯೇಭಿರ್ಯಾಹಿ ಪ್ರಿಯಮನ್ನ-
ಮಚ್ಛ ॥ ೪ ॥

॥ ಪದಪಾಠಃ ॥

ಯಸ್ಯ । ತ್ಯತ್ । ತೇ । ಮಹಿಮಾನಂ । ಮದೇಷು । ಇಮೇ ಇತಿ । ಮಹೀ ಇತಿ । ರೋದಸೀ ಇತಿ । ನ ।
ಅವಿವಿಕ್ತಾಂ ।
ತತ್ । ಓಕಃ । ಆ । ಹರಿಽಭಿಃ । ಇಂದ್ರ । ಯುಕ್ತೈಃ । ಪ್ರಿಯೇಭಿಃ । ಯಾಹಿ । ಪ್ರಿಯಂ । ಅನ್ನಂ ।
ಅಚ್ಛ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಇಮೇ ಮಹೀ ಮಹತ್ಯೌ ರೋದಸೀ ದ್ಯಾವಾಪೃಥಿವ್ಯೌ ಯಸ್ಯ ತೇ ತವ ಸೋಮಪಾನೇನ ಜನಿತೇಷು ಮದೇಷು ಸಂಭೂತಂ ತ್ಯತ್ತಂ ಮಹಿಮಾನಂ ನಾವಿವಿಕ್ತಾಂ ನ ಪೃಥಕ್ಕುರುತಃ ಕಿಂತು ಯಸ್ಯ ಮಹಿಮ್ನ್ಯೇವ ತಿಷ್ಠತಃ ॥ ವಿಚಿರ್ ಪೃಥಗ್ಭಾವೇ ಜೌಹೋತ್ಯಾದಿಕಃ । ಲಙಿ ಸಂಜ್ಞಾಪೂರ್ವಕೋ ವಿಧಿರನಿತ್ಯ ಇತ್ಯಭ್ಯಾಸಸ್ಯ ಗುಣಾಭಾವಃ । ಯದ್ಯೋಗಾದನಿಘಾತಃ ॥ ಪ್ರಿಯೇಭಿಃ ಪ್ರಿಯತಮೈ ರಥೇ ಯುಕ್ತೈರ್ಹರಿಭಿರಶ್ವೈಃ ಪ್ರಿಯಂ ಪ್ರೀಣನಕರಮನ್ನಂ ಸೋಮಲಕ್ಷಣಮಚ್ಛಾಭಿಲಕ್ಷ್ಯ ತದೋಕೋಽಸ್ಮದೀಯಂ ಯಜ್ಞಸದನಮಾ ಯಾಹಿ । ಆಗಚ್ಛ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯಸ್ಯ ತೇ—ನಿನ್ನ ಸೋಮಪಾನದಿಂದ ಉಂಟಾದ । ಮದೇಷು—ಹರ್ಷಕಾಲದಲ್ಲಿ ಪ್ರಕಟಿಸಿದ । ತ್ಯತ್ ಮಹಿಮಾನಂ—ಪ್ರಸಿದ್ಧವಾದ ಮಾಹಾತ್ಮ್ಯವನ್ನು । ಮಹೀ—ಮಹತ್ಸ್ವರೂಪವುಳ್ಳ । ಇಮೇ ರೋದಸೀ—ಈ ದ್ಯಾವಾಪೃಥಿವಿಗಳು । ನ ಅವಿವಿಕ್ತಾಂ—ಬೇರೆ ಮಾಡುವುದಿಲ್ಲ ।

**ಯುಕ್ತೈಃ**—ರಥಕ್ಕೆ ಯೋಜಿತವೂ | **ಪ್ರಿಯೇಭಿಃ**—ನಿನ್ನ ಪ್ರೀತಿಪಾತ್ರವೂ ಆದ | **ಹರಿಭಿಃ**—ಅಶ್ವಗಳೊಡನೆ | **ಪ್ರಿಯಂ**—ಹರ್ಷಕಾರಕವಾದ | **ಅನ್ನಂ ಅಚ್ಛ**-ನಮ್ಮ ಸೋಮರೂಪವಾದ ಹವಿಸ್ಸಿಗೆ ಅಭಿಮುಖವಾಗಿ | **ತದೋಕಃ**—ನಮ್ಮ ಯಜ್ಞಗೃಹಕ್ಕೆ | **ಆ ಯಾಹಿ**—ದಯಮಾಡು.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ಸೋಮಪಾನದಿಂದ ಉಂಟಾದ ಹರ್ಷಕಾಲದಲ್ಲಿ ಪ್ರಕಟಿಸಿದ ಪ್ರಸಿದ್ಧವಾದ ಮಾಹಾತ್ಮ್ಯವನ್ನು ಮಹತ್ಸ್ವರೂಪವುಳ್ಳ ಈ ದ್ಯಾವಾಪೃಥಿವಿಗಳು ಬೇರೆ ಮಾಡುವುದಿಲ್ಲ. ರಥಕ್ಕೆ ಯೋಜಿತವೂ ನಿನ್ನ ಪ್ರೀತಿಪಾತ್ರವೂ ಆದ ಅಶ್ವಗಳೊಡನೆ ಹರ್ಷಕಾರಕವಾದ ನಮ್ಮ ಸೋಮರೂಪವಾದ ಹವಿಸ್ಸಿಗೆ ಅಭಿಮುಖವಾಗಿ ನಮ್ಮ ಯಜ್ಞಗೃಹಕ್ಕೆ ದಯಮಾಡು.

## English Translation.

You whose greatness (manifested) in your exhilarations the vast heaven and earth, do not seperate; come, Indra, with your beloved bay horses harnessed to your chariot, come to our dwelling to (partake of) the (sacrificial) food that is agreeble to you.

|| ಸಂಹಿತಾಪಾಠಃ ||

ಯಸ್ಯ ಶಶ್ವತ್ಪಪಿವಾँ ಇಂದ್ರ ಶತ್ರೂನನಾನುಕೃತ್ಯಾ ರಣ್ಯಾ ಚಕರ್ಥ |
ಸ ತೇ ಪುರಂಧಿಂ ತವಿಷೀಮಿಯರ್ತಿ ಸ ತೇ ಮದಾಯ ಸುತ ಇಂದ್ರ ಸೋಮಃ || ೫ ||

|| ಪದಪಾಠಃ ||

ಯಸ್ಯ | ಶಶ್ವತ್ | ಪಪಿವಾನ್ | ಇಂದ್ರ | ಶತ್ರೂನ್ | ಅನನುऽಕೃತ್ಯಾ | ರಣ್ಯಾ | ಚಕರ್ಥ |
ಸಃ | ತೇ | ಪುರಂऽಧಿಂ | ತವಿಷೀಂ | ಇಯರ್ತಿ | ಸಃ | ತೇ | ಮದಾಯ | ಸುತಃ | ಇಂದ್ರ | ಸೋಮಃ ||

|| ಸಾಯಣಭಾಷ್ಯಂ ||

ಹೇ ಇಂದ್ರ ಪಪಿವಾನ್ || ಪಿಬತೇಃ ಕ್ವಸೌ ವಸ್ವೇಕಾಜಾದ್ಘಸಾಮಿತೀಡಾಗಮಃ || ಸೋಮಂ ಪೀತವಾಂಸ್ತ್ವಮನಾನುಕೃತ್ಯಾನುಕರಣರಹಿತೇನ ಸಕೃತ್ಪ್ರಹಾರೇಣ ಶತ್ರುಹನನಸಮರ್ಥೇನ ರಣ್ಯಾ ಸಾಂಯುಗೀನೇನಾಯುಧೇನ || ರಣಶಬ್ದಾತ್ಸಾಧ್ವರ್ಥೇ ಪ್ರಾಗ್ಘಿತೀಯೋ ಯತ್ || ಯಸ್ಯ ಯಜಮಾನಸ್ಯ ಶತ್ರೂಞ್ಛಶ್ವದ್ಬಹುವಾರಂ ಚಕರ್ಥ ಹತವಾನಸಿ || ಕೃಞ್ ಹಿಂಸಾಯಾಂ | ಲಿಟಿ ಥಲಿ ಯದ್ಯೋಗಾದ-

**ನಿಘಾತೇ ಲಿಕ್ಸ್ವರಃ ॥ ಸ ಯಷ್ಮಾ ತೇ ತ್ವದರ್ಥಂ ತವಿಷೀಂ ಮಹತೀಂ ಪುರಂಧಿಂ ಬಹ್ವೀಂ ಸ್ತುತಿಮಿಯರ್ತಿ । ಪ್ರೇರಯತಿ ॥ ಋ ಗತೌ ಜೌಹೋತ್ಯಾದಿಕಃ । ಅರ್ತಿಪಿಪರ್ತ್ಯೋರಿತ್ಯಭ್ಯಾಸಸ್ಯೇತ್ವಂ । ಅಭ್ಯಾಸಸ್ಯಾಸವರ್ಣ ಇತೀಯಙ್ ॥ ಹೇ ಇಂದ್ರ ಸುತೋಽಭಿಷುತಃ ಸ ಸೋಮಸ್ತೇ ಮದಾಯ ಸಮರ್ಥೋ ಭವತಿ । ಯದ್ವಾ । ಸ ಯಷ್ಮಾ ಸುತಃ ಸೋಮಃ । ಸುಬ್ವ್ಯತ್ಯಯಃ । ಅಭಿಷುತಂ ಸೋಮಂ ತ್ವನ್ಮದಾಯ ಪ್ರೇರಯತಿ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಪಪಿವಾನ್**—ಸೋಮಪಾನವನ್ನು ಮಾಡಿದ ನೀನು । **ಅನಾನುಕೃತ್ಯಾ**—ಅನುಕರಣರಹಿತವಾದ (ಅನುಪಮವಾದ) । **ರಣ್ಯಾ**—ಆಯುಧದಿಂದ । **ಯಸ್ಯ**—ಯಾವ ಯಜಮಾನನ । **ಶತ್ರೂನ್**—ಶತ್ರುಗಳನ್ನು । **ಶಶ್ವತ್**—ಅನೇಕ ವೇಳೆ । **ಚಕರ್ಥ**—ನಾಶಮಾಡಿದ್ದೀಯೋ । **ಸಃ**—ಆ ಯಜಮಾನನು । **ತೇ**—ನಿನ್ನನ್ನುದ್ದೇಶಿಸಿ । **ತವಿಷೀಂ**—ಶಕ್ತಿಯುತವಾದ । **ಪುರಂಧಿಂ**—ಸ್ತುತಿಯನ್ನು । **ಇಯರ್ತಿ**—ಅರ್ಪಿಸುತ್ತಾನೆ । **ಇಂದ್ರ**—ಎಲೈ ಇಂದ್ರನೇ । **ಸುತಃ**—ಹಿಂಡಲ್ಪಟ್ಟುದೂ । **ಸಃ ಸೋಮಃ**—ಅದೇ ಯಜಮಾನನಿಂದ ಅರ್ಪಿತವಾದುದೂ ಆದ ಸೋಮವು । **ತೇ**—ನಿನ್ನ । **ಮದಾಯ**—ಹರ್ಷಕ್ಕಾಗಿರುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸೋಮಪಾನವನ್ನು ಮಾಡಿದ ನೀನು ನಿನ್ನ ಅನುಪಮವಾದ ಆಯುಧದಿಂದ ಯಾವ ಯಜಮಾನನ ಶತ್ರುಗಳನ್ನು ಅನೇಕ ವೇಳೆ ನಾಶಮಾಡಿದ್ದೀಯೋ ಆ ಯಜಮಾನನು ನಿನ್ನನ್ನುದ್ದೇಶಿಸಿ ಶಕ್ತಿಯುತವಾದ ಸ್ತುತಿಯನ್ನು ಅರ್ಪಿಸುತ್ತಾನೆ. ಎಲೈ ಇಂದ್ರನೇ, ಹಿಂಡಲ್ಪಟ್ಟುದೂ, ಅದೇ ಯಜಮಾನನಿಂದ ಅರ್ಪಿತವಾದುದೂ ಆದ ಸೋಮವು ನಿನ್ನ ಹರ್ಷಕ್ಕಾಗಿರುತ್ತದೆ.

## English Translation.

That Soma, drinking constantly of which, Indra, you have destroyed the enemies (of the worshipper) with an inimitable weapon,—that Soma prompts your powerful, abundant (laudation), it is effused, Indra, for your exhilaration.

॥ ಸಂಹಿತಾಪಾಠಃ ॥

ಇದಂ ತೇ ಪಾತ್ರಂ ಸನವಿತ್ತಮಿಂದ್ರ ಪಿಬಾ ಸೋಮಮೇನಾ ಶತಕ್ರತೋ ।
ಪೂರ್ಣ ಆಹಾವೋ ಮದಿರಸ್ಯ ಮಧ್ವೋ ಯಂ ವಿಶ್ವ ಇದಭಿಹರ್ಯಂತಿ ದೇವಾಃ ॥ ೬ ॥

॥ ಪದಪಾಠಃ ॥

ಇದಂ । ತೇ । ಪಾತ್ರಂ । ಸನ‌ಽವಿತ್ತಂ । ಇಂದ್ರ । ಪಿಬ । ಸೋಮಂ । ಏನಾ । ಶತಕ್ರತೋ ಇತಿ ಶತಽಕ್ರತೋ ।

ಪೂರ್ಣಃ । ಆಽಹಾವಃ । ಮದಿರಸ್ಯ । ಮಧ್ವಃ । ಯಂ । ವಿಶ್ವೇ । ಇತ್ । ಅಭಿಽಹರ್ಯಂತಿ । ದೇವಾಃ॥೬॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದರ್ಥಂ ಪಾತ್ರಂ ಚಮಸಾದಿಕಂ ಸನವಿತ್ತಂ । ಅಸ್ಮಾಭಿಶ್ಚಿರಾದೇವ ಲಬ್ಧಂ ॥ ವಿದ್ಲೃ ಲಾಭೇ । ಕರ್ಮಣಿ ನಿಷ್ಠಾ ॥ ಹೇ ಶತಕ್ರತೋ ಬಹುಕರ್ಮನ್ನಿಂದ್ರೈನೈತೇನ ಪಾತ್ರೇಣ ಸೋಮಂ ಪಿಬ । ಯತೋ ಮದಿರಸ್ಯ ಮದಕರಸ್ಯ ಮಧ್ವೋ ಮಧುನಃ ಸೋಮಸ್ಯಾಹಾವಃ ಪಾನಸ್ಥಾನೀಯಪಾತ್ರವಿಶೇಷಃ ಪೂರ್ಣಃ ಪೂರಿತೋಽಭೂತ್ ॥ ಹ್ವೇಞ್ ಸ್ಪರ್ಧಾಯಾಂ । ನಿಪಾನಮಾಹಾವಃ । ಪಾ. ೩-೩-೭೪ । ಇತಿ ನಿಪಾತಿತಃ । ಸ್ತುತಿಭಿರಾಹೂಯಮಾನಾ ದೇವಾ ಅತ್ರ ಸೋಮಂ ಪಿಬಂತೀತಿ । ಥಾಥಾದಿಸ್ವರಃ ॥ ಯಮಿದ್ಯಮಾಹಾವಮೇವ ವಿಶ್ವೇ ಸರ್ವೇ ದೇವಾ ಅಭಿಹರ್ಯಂತಿ । ಅಭಿಕಾಮಯಂತೇ ॥ ಹರ್ಯ ಗತಿಕಾಂತ್ಯೋಃ ಭೌವಾದಿಕಃ । ಯದ್ವೋಗಾತ್ತಿಙೋ ನಿಘಾತಾಭಾವೇ ತಿಙ್ ಚೋದಾತ್ತವತೀತಿ ಗತೇರ್ನಿಘಾತಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ – ನಿನಗಾಗಿ । ಪಾತ್ರಂ—ಚಮಸಪಾತ್ರೆಯು । ಸನವಿತ್ತಂ— ಬಹಳ ಹಿಂದೆಯೇ ಸಂಪಾದಿತವಾಗಿದೆ । ಶತಕ್ರತೋ—ಅನೇಕ ಕರ್ಮಕರ್ತನಾದ ಎಲೈ ಇಂದ್ರನೇ । ಏನಾ— ಈ ಪಾತ್ರೆಯಿಂದ । ಸೋಮಂ—ಸೋಮವನ್ನು । ಪಿಬ—ಪಾನಮಾಡು । ಮದಿರಸ್ಯ—ಮದಕರವಾದ । ಮಧ್ವಃ—ಸೋಮದ । ಆಹಾವಃ—ಪಾತ್ರೆಯು । ಪೂರ್ಣಃ—ತುಂಬಿದೆ । ಯಂ ಇತ್—ಅದೇ ಸೋಮ ಪೂರಿತವಾದ ಪಾತ್ರೆಯನ್ನೇ । ವಿಶ್ವೇ ದೇವಾಃ—ಸಕಲ ದೇವತೆಗಳೂ । ಅಭಿಹರ್ಯಂತಿ—ಅಪೇಕ್ಷಿಸುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ. ನಿನಗಾಗಿ ಚಮಸಪಾತ್ರೆಯು ಬಹಳ ಹಿಂದೆಯೇ ಸಂಪಾದಿತವಾಗಿದೆ ಅನೇಕ ಕರ್ಮಕರ್ತನಾದ ಎಲೈ ಇಂದ್ರನೇ, ಈ ಪಾತ್ರೆಯಿಂದ ಸೋಮವನ್ನು ಪಾನಮಾಡು. ಮದಕರವಾದ ಸೋಮದ ಪಾತ್ರೆಯು ಸೋಮರಸದಿಂದ ತುಂಬಿದೆ. ಆ ಸೋಮಪೂರಿತವಾದ ಪಾತ್ರೆಯನ್ನೇ ಸಕಲ ದೇವತೆಗಳೂ ಅಪೇಕ್ಷಿಸುತ್ತಾರೆ.

## English Translation.

This your cup, Indra, has been long since provided by us, drink the Soma from it, Shatakratu; the goblet is full of the sweet Soma-juice, which all the gods desire,

॥ ಸಂಹಿತಾಪಾಠಃ ॥

ವಿ ಹಿ ತ್ವಾಮಿಂದ್ರ ಪುರುಧಾ ಜನಾಸೋ ಹಿತಪ್ರಯಸೋ ವೃಷಭ ಹ್ವಯಂತೇ ।
ಅಸ್ಮಾಕಂ ತೇ ಮಧುಮತ್ತಮಾನೀಮಾ ಭುವನ್ತ್ಸವನಾ ತೇಷು ಹರ್ಯ ॥೭॥

॥ ಪದಪಾಠಃ ॥

ವಿ । ಹಿ । ತ್ವಾಂ । ಇಂದ್ರ । ಪುರುಧಾ । ಜನಾಸಃ । ಹಿತಽಪ್ರಯಸಃ । ವೃಷಭ । ಹ್ವಯಂತೇ ।
ಅಸ್ಮಾಕಂ । ತೇ । ಮಧುಮತ್ಽತಮಾನಿ । ಇಮಾ । ಭುವನ್ । ಸವನಾ । ತೇಷು । ಹರ್ಯ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವೃಷಭ ಕಾಮಾನಾಂ ವರ್ಷಕ ಹಿತಪ್ರಯಸಃ । ಪ್ರಯ ಇತ್ಯನ್ನನಾಮ ಪ್ರೀಣನಕಾರಿತ್ವಾತ್ । ಸಂಭೃತಹವಿಷ್ಕಾ ಜನಾಸೋ ಜನಾಃ ಪುರುಧಾ ಬಹುಧಾ । ಹಿರವಧಾರಣೇ । ತ್ವಾಮೇವ ವಿ ಹ್ವಯಂತೇ । ವಿವಿಧಮಾಹ್ವಯಂತಿ ॥ ಹ್ವೇಞ್ ಸ್ಪರ್ಧಾಯಾಂ । ನಿಸಮುಪವಿಭ್ಯೋ ಹ್ವ ಇತ್ಯಾತ್ಮನೇಪದಂ ॥ ಅಸ್ಮಾಕಂ ಸ್ವಭೂತಾನೀಮೇಮಾನಿ ಸವನಾ ಸವನಾನಿ ತೇ ತ್ವದರ್ಥಂ ಮಧುಮತ್ತಮಾನ್ಯತಿಶಯೇನ ಸೋಮವಂತಿ ಭುವನ್ । ಅಭವನ್ । ತಸ್ಮಾತ್ತ್ವಂ ತೇಷು ಸವನೇಷು ಹರ್ಯ । ಸೋಮಾನ್ಕಾಮಯಸ್ವ ॥

॥ ಪ್ರತಿಪದಾರ್ಥ ॥

ವೃಷಭ—ಇಷ್ಟಾರ್ಥಪ್ರದನಾದ । ಇಂದ್ರ—ಎಲೈ ಇಂದ್ರನೇ । ಹಿತಪ್ರಯಸಃ—ಹಿತಕರವಾದ ಹವಿಸ್ಸಿನಿಂದ ಕೂಡಿದ । ಜನಾಸಃ—ಜನರು । ತ್ವಾಂ—ನಿನ್ನನ್ನು । ಪುರುಧಾ—ಅನೇಕ ವಿಧವಾಗಿ । ವಿ ಹ್ವಯಂತೇ—ಕರೆಯುತ್ತಾರೆ । ಅಸ್ಮಾಕಂ—ನಮ್ಮಿಂದ ಅರ್ಪಿತವಾಗುವ । ಇಮಂ ಸವನಾ—ಈ ಸವನಗಳು । ತೇ—ನಿನಗೆ । ಮಧುಮತ್ತಮಾನಿ—ಮಧುರವಾದ ಸೋಮವನ್ನು । ಭುವನ್—ಸಿದ್ಧಪಡಿಸುತ್ತವೆ । ತೇಷು—ಆ ಸವನಗಳಲ್ಲಿ । ಹರ್ಯ—ಸೋಮಗಳನ್ನು ಅಪೇಕ್ಷಿಸು.

॥ ಭಾವಾರ್ಥ ॥

ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ, ಹಿತಕರವಾದ ಹವಿಸ್ಸಿನಿಂದ ಕೂಡಿದ ಜನರು ನಿನ್ನನ್ನು ಅನೇಕ ವಿಧವಾಗಿ ಕರೆಯುತ್ತಾರೆ. ನಮ್ಮಿಂದ ಅರ್ಪಿತವಾಗುವ ಈ ಸವನಗಳು ನಿನಗೆ ಮಧುರವಾದ ಸೋಮವನ್ನು ಅರ್ಪಿಸುತ್ತವೆ. ಆ ಸವನಗಳಲ್ಲಿ ನೀನು ಸೋಮವನ್ನು ಅಪೇಕ್ಷಿಸು.

## English Translation.

Indra, showerer of benefits, men in several places offering acceptab sacrificial food, invoke you; these our sacrifices to you are most full of tl sweet (Soma); take pleasure in them.

॥ ಸಂಹಿತಾಪಾಠಃ ॥

ಪ್ರ ತೆ ಇಂದ್ರ ಪೂರ್ವ್ಯಾಣಿ ಪ್ರ ನೂನಂ ವೀರ್ಯಾ ವೋಚಂ ಪ್ರಥವ
ಕೃತಾನಿ ।
ಸತೀನಮನ್ಯುರಶ್ರಥಾಯೋ ಅದ್ರಿಂ ಸುವೇದನಾಮಕೃಣೋ ಬ್ರಹ್ಮಣ
ಗಾಂ ॥ ೮ ॥

॥ ಪದಪಾಠಃ ॥

ಪ್ರ । ತೇ । ಇಂದ್ರ । ಪೂರ್ವ್ಯಾಣಿ । ಪ್ರ । ನೂನಂ । ವೀರ್ಯಾ । ವೋಚಂ । ಪ್ರಥಮಾ । ಕೃತಾನಿ ।
ಸತೀನऽಮನ್ಯುಃ । ಅಶ್ರಥಯಃ । ಅದ್ರಿಂ । ಸುऽವೇದನಾಂ । ಅಕೃಣೋಃ । ಬ್ರಹ್ಮಣೇ । ಗಾಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದೀಯಾನಿ ಪ್ರಥಮಾದಿತಃ ಕೃತಾನಿ ಪೂರ್ವ್ಯಾಣಿ ಪುರಾತನಾನಿ ಚ ವೀರ್ಯಾ ವೀರ್ಯಾಣಿ ನೂನಮಿದಾನೀಂ ಪ್ರ ವೋಚಂ । ಪ್ರಕರ್ಷೇಣ ವದಾಮಿ । :ಏಕಃ ಪ್ರಶಬ್ದಃ ಪೂರಣಃ ವೋಚಂ । ಲುಙಿ ಬ್ರುವೋ ವಚಿಃ । ಚ್ಲೇರಙ್ ॥ ಕಾನಿ ತಾನಿ । ಸತೀನಮನ್ಯುಃ । ಸತೀನಮಿತ್ಯುದ ನಾಮ । ಉದಕಾಭಿವರ್ಷಣಬುದ್ಧಿಯುಕ್ತಸ್ತ್ವಮಿಂದ್ರಂ ಮೇಘಮಶ್ರಥಯಃ । ವಜ್ರೇಣಾಹಿಂಸೀಃ ಬ್ರಹ್ಮಣೇ ಬೃಹಸ್ಪತಯೇ ಗಾಂ ಪಣಿಭಿರಪಹೃತಾಂ ಸುವೇದನಾಂ ಸುಷ್ಠು ಜ್ಞಾಪನೀಯಾಮಕೃಣೋಃ ಅಕರೋರಿತ್ಯಾದೀನಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಪ್ರಥಮಾ—ಮುಖ್ಯವಾದವೂ । ಪೂರ್ವ್ಯಾಣಿ- ಅತ್ಯಂತ ಪ್ರಾಚೀನಕಾಲದಿಂದಲೂ । ಕೃತಾನಿ—ಮಾಡಲ್ಪಟ್ಟವೂ ಆದ । ವೀರ್ಯಾ—ವೀರ್ಯಕರ್ಮಗಳನ್ನು ನೂನಂ—ಈಗ । ಪ್ರ ವೋಚಂ—ಅತಿಶಯವಾಗಿ ಪ್ರಶಂಸಿಸುತ್ತೇನೆ । ಸತೀನಮನ್ಯುಃ—ಮಳೆಯನ್ನು ಸ ಸುವ ಸಂಕಲ್ಪವುಳ್ಳವನಾಗಿ । ಅದ್ರಿಂ—ಮೇಘವನ್ನು । ಅಶ್ರಥಯಃ—ವಜ್ರಾಯುಧದಿಂದ ಸೀಳಿದೆ । ಗಾಂ- ಪಣಿಗಳಿಂದ ಅಪಹೃತವಾದ ಗೋವುಗಳನ್ನು । ಬ್ರಹ್ಮಣೇ—ಬೃಹಸ್ಪತಿಗೆ । ಸುವೇದನಾಂ - ಸುಲಭವಾ ತಿಳಿಯುವಂತೆ । ಅಕೃಣೋಃ—ಮಾಡಿದೆ.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ಮುಖ್ಯವಾದವೂ, ಅತ್ಯಂತ ಪ್ರಾಚೀನವಾದವೂ ಆದ ವೀರ್ಯಕರ್ಮಗಳನ್ನು ಈಗ ಅತಿಶಯವಾಗಿ ಪ್ರಶಂಸಿಸುತ್ತೇನೆ. ಮಳೆಯನ್ನು ಸುರಿಸುವ ಸಂಕಲ್ಪವುಳ್ಳವನಾಗಿ ನೀನು ಮೇಘವನ್ನು ವಜ್ರಾಯುಧದಿಂದ ಸೀಳಿದೆ. ಪಣಿಗಳಿಂದ ಅಪಹೃತವಾದ ಗೋವುಗಳನ್ನು ಬೃಹಸ್ಪತಿಗೆ ಸುಲಭವಾಗಿ ತಿಳಿಯುವಂತೆ ಮಾಡಿದೆ.

English Translation

I will proclaim now, Indra, your ancient first-achieved exploits; resolved to send rain, you cleft the cloud, you made the cow easily discoverable for the Brahman.

|| ಸಂಹಿತಾಪಾಠಃ ||

ನಿ ಷು ಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ ।
ನ ಋತೇ ತ್ವತ್ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವಞ್ಚಿತ್ರಮರ್ಚ ॥ ೯ ॥

|| ಪದಪಾಠಃ ||

ನಿ । ಸು । ಸೀದ । ಗಣಽಪತೇ । ಗಣೇಷು । ತ್ವಾಂ । ಆಹುಃ । ವಿಪ್ರಽತಮಂ । ಕವೀನಾಂ ।
ನ । ಋತೇ । ತ್ವತ್ । ಕ್ರಿಯತೇ । ಕಿಂ । ಚನ । ಆರೇ । ಮಹಾಂ । ಅರ್ಕಂ । ಮಘಽವನ್ । ಚಿತ್ರಂ । ಅರ್ಚ ॥ ೯ ॥

। ಸಾಯಣಭಾಷ್ಯಂ ॥

ಹೇ ಗಣಪತೇ ತ್ವಂ ಗಣೇಷು ಸ್ತೋತೃಗಣೇಷು ಸು ಸುಷ್ಠು ನಿ ಷೀದ । ಸ್ತುತಿಶ್ರವಣಾರ್ಥಂ ನಿಷಣ್ಣೋ ಭವ । ಯತಃ ಕವೀನಾಂ ಕ್ರಾಂತಪ್ರಜ್ಞಾನಾಂ ಮಧ್ಯೇ ತ್ವಾ ತ್ವಾಂ ವಿಪ್ರತಮಮತಿಶಯೇನ ಮೇಧಾವಿನಮಿತ್ಯಾಹುಃ । ಕಿಂಚ ತ್ವದೃತೇ ॥ ಅನ್ಯಾರಾದಿತರರ್ತೇ । ಪಾ. ೨-೩-೨೯ । ಇತಿ ಪಂಚಮೀ ॥ ತ್ವಾಂ ವರ್ಜಯಿತ್ವಾ ಕಿಂ ಚನ ಕರ್ಮಾರೇ ದೂರೇ ಸಮೀಪೇ ವಾ ನ ಕ್ರಿಯತೇ । ತಸ್ಮಾನ್ನಿಷೀದ । ತತೋ ಹೇ ಮಘವನ್ಧನವನ್ನಿಂದ್ರ ಮಹಾಂ ಮಹಾಂತಮರ್ಕಮರ್ಚನೀಯಮಸ್ಮದೀಯಂ ತ್ರಿವೃತ್ಪಂಚದಶಾದಿಲಕ್ಷಣಂ ಸ್ತೋಮಂ ಚಿತ್ರಂ ನಾನಾರೂಪಂ ಕೃತ್ವಾರ್ಚ । ಪೂಜಯ । ವಿಧೇಹಿ ॥ ಅರ್ಚ ಪೂಜಾಯಾಂ ಭೌವಾದಿಕಃ ॥

|| ಪ್ರತಿಪದಾರ್ಥ ||

**ಗಣಪತೇ**—ಮರುದ್ಗಣಕ್ಕೆ ಒಡೆಯನಾದ ಎಲೈ ಇಂದ್ರನೇ | **ಗಣೇಷು**—ನಿನ್ನ ಸ್ತುತಿಕರ್ತರ ಮಧ್ಯೆ | **ಸು ನಿ ಷೀದ**—ಶ್ರೇಷ್ಠವಾದ ರೀತಿಯಲ್ಲಿ ಕುಳಿತುಕೊ | **ಕವೀನಾಂ**—ಮೇಧಾವಿಗಳಾದ ಪ್ರಾಜ್ಞರ ನಡುವೆ | **ತ್ವಾಂ**—ನಿನ್ನನ್ನು | **ವಿಪ್ರತಮಂ**—ಅಧಿಕವಾದ ಪ್ರಾಜ್ಞನೆಂದು | **ಆಹುಃ**—ತಿಳಿದವರು ಹೇಳುತ್ತಾರೆ | **ತ್ವ-ದೃತೇ**—ನಿನ್ನನ್ನು ಬಿಟ್ಟು | **ಕಿಂ ಚನ**—ಯಾವ ಕರ್ಮವೂ ಸಹ | **ಆರೇ**—ದೂರದಲ್ಲಾಗಲಿ ಅಥವಾ ಸಮೀಪದಲ್ಲಾಗಲಿ | **ನ ಕ್ರಿಯತೇ**—ನೆರವೇರುವುದಿಲ್ಲ | **ಮಘವನ್**—ಧನವಂತನಾದ ಎಲೈ ಇಂದ್ರನೇ | **ಮಹಾಂ**—ಮಹತ್ಸ್ವರೂಪವುಳ್ಳ | **ಅರ್ಕಂ**—ಪೂಜ್ಯವಾದ ನಮ್ಮ ಸ್ತೋತ್ರವನ್ನು | **ಚಿತ್ರಂ**—ನಾನಾರೂಪದಿಂದ | **ಅರ್ಚ**—ಗೌರವಿಸು.

|| ಭಾವಾರ್ಥ ||

ಮರುದ್ಗಣಕ್ಕೆ ಒಡೆಯನಾದ ಎಲೈ ಇಂದ್ರನೇ, ನಿನ್ನ ಸ್ತುತಿಕರ್ತರ ಮಧ್ಯೆ ಶ್ರೇಷ್ಠವಾದ ರೀತಿಯಲ್ಲಿ ಕುಳಿತುಕೊ. ಮೇಧಾವಿಗಳಾದ ಪ್ರಾಜ್ಞರ ನಡುವೆ ನಿನ್ನನ್ನು ಅಧಿಕವಾದ ಪ್ರಾಜ್ಞನೆಂದು ತಿಳಿದವರು ಹೇಳುತ್ತಾರೆ. ನಿನ್ನನ್ನು ಬಿಟ್ಟು ಯಾವ ಕರ್ಮವೂ ಸಹ ದೂರದಲ್ಲಾಗಲಿ, ಅಥವಾ ಸಮೀಪದಲ್ಲಾಗಲಿ ನೆರವೇರುವುದಿಲ್ಲ. ಧನವಂತನಾದ ಎಲೈ ಇಂದ್ರನೇ, ಮಹತ್ಸ್ವರೂಪವುಳ್ಳ, ಪೂಜ್ಯವಾದ ನಮ್ಮ ಸ್ತೋಮವನ್ನು ನಾನಾರೂಪದಿಂದ ಗೌರವಿಸು

## English Translation.

Lord of the companies (of the Maruts), sit down among the companies (of the worshippers), they call you the most sage of sages; without you nothing is done in the distance; have in honour, Maghavan, our great and various adoration.

|| ಸಂಹಿತಾಪಾಠಃ

ಅಭಿಖ್ಯಾನೋ ಮಘವನ್ನಾಧಮಾನಾನ್ತ್ಸಖೇ ಬೋಧಿ ವಸುಪತೇ ಸಖೀ-
ನಾಂ |
ರಣಂ ಕೃಧಿ ರಣಕೃತ್ಸತ್ಯಶುಷ್ಮಾಭಕ್ತೇ ಚಿದಾ ಭಜಾ ರಾಯೇ ಅಸ್ಮಾನ್ ||೧೦||

|| ಪದಪಾಠಃ ||

ಅಭಿಽಖ್ಯಾ | ನಃ | ಮಘಽವನ್ | ನಾಧಮಾನಾನ್ | ಸಖೇ | ಬೋಧಿ | ವಸುಽಪತೇ | ಸಖೀನಾಂ |

ರಣಂ | ಕೃಧಿ | ರಣಽಕೃತ್ | ಸತ್ಯಽಶುಷ್ಮ | ಅಭಕ್ತೇ | ಚಿತ್ | ಆ | ಭಜ | ರಾಯೇ | ಅಸ್ಮಾನ್ ||೧೦||

॥ ಸಾಯಣಭಾಷ್ಯಂ ॥

ಹೇ ಮಘವನ್ನನವನ್ನಿಂದ್ರ ನಾಧಮಾನಾನ್॥ ನಾಧೃ ನಾಥೃ ಯಾಚ್ಞೋಪತಾಪೈಶ್ವರ್ಯಾಶೀಃಷು ಭೌವಾದಿಕಃ । ಅನುದಾತ್ತೇತ್॥ ಯಾಚಮಾನಾನ್ನೋಽಸ್ಮಾನಭಿಖ್ಯಾಭಿಖ್ಯಾಪನೇನ ತೇಜಸಾ ಯುಕ್ತಾನ್ ಕುರು । ಪ್ರಸಿದ್ಧಾನ್ವಾ ಕುರು । ಹೇ ಸಖೇ ಧನದಾನೇನ ಹೇ ವಸುಪತೇ ವಸೂನಾಂ ಸ್ವಾಮಿನ್ ತ್ವಂ ಸಖೀನಾಂ ಸ್ತೋತೃತ್ವೇನ ಸಖಿಭೂತಾನಾಮಸ್ಮಾಕಂ ಸ್ವಭೂತಾನಿ ಸ್ತೋತ್ರಾಣಿ ಬೋಧಿ । ಬುಧ್ಯಸ್ವ ॥ ಬುಧ ಅವಗಮನೇ । ಭೌವಾದಿಕಃ । ಲೋಟಿ ಛಾಂದಸಃ ಶಪೋ ಲುಕ್ । ಛಂದಸ್ಯುಭಯಥೇತಿ ಹೇರಾರ್ಧಧಾತುಕತ್ವೇನಾಙಿತ್ತ್ವಾದಙಿತಶ್ಚೇತಿ ಹೇರ್ಧಿಭಾವಃ । ಅತ ಏವ ಗುಣಃ । ಸಾರ್ವಧಾತುಕತ್ವೇನ ಙಿತ್ತ್ವಾದಂತೋದಾತ್ತತ್ವಂ । ವರ್ಣಲೋಪಶ್ಛಾಂದಸಃ ॥ ಹೇ ರಣಕೃಚ್ಛತ್ರುಭಿಃ ಸಹ ಯುದ್ಧಕರ್ತಃ ಅತ ಏವ ಹೇ ಸತ್ಯಶುಷ್ಮ ಯಥಾರ್ಥಬಲೋಪೇತ ತ್ವಂ ರಣಂ ಕೃಧಿ । ಕುರು । ಶತ್ರೂಞ್ಜಹಿ ॥ ಕರೋತೇರ್ಲೋಟಿ ಶ್ರುಶೃಣುಪೃಕೃವೃಭ್ಯಶ್ಛಂದಸೀತಿ ಹೇರ್ಧಿಃ ॥ ಕಿಂಚಾಭಕ್ತೇ ಚಿದಸಂಭಜನೀಯೇ ಸ್ಥಾನೇಽಪ್ಯಸ್ಮಾನ್ರಾಯೇ ಧನಾಯಾ ಭಜಾ । ಭಾಗಿನಃ ಕುರು ॥ ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ ॥

॥ಪ್ರತಿಪದಾರ್ಥ॥

**ಮಘವನ್**—ಧನಯುಕ್ತನಾದ ಎಲೈ ಇಂದ್ರನೇ । **ನಾಧಮಾನಾನ್**—ನಿನ್ನನ್ನು ಯಾಚಿಸುತ್ತಿರುವ । **ನಃ**—ನಮ್ಮನ್ನು । **ಅಭಿಖ್ಯಾ**—ತೇಜೋಯುಕ್ತರನ್ನಾಗಿ ಮಾಡು । **ಸಖೇ**—ನಮ್ಮ ಮಿತ್ರನೂ । **ವಸುಪತೇ**—ಧನಗಳಿಗೆ ಪತಿಯೂ ಆದ ಎಲೈ ಇಂದ್ರನೇ । **ಸಖೀನಾಂ**—ನಿನ್ನ ಮಿತ್ರರಾದ ನಮ್ಮ ಇಷ್ಟಾರ್ಥಗಳನ್ನು । **ಬೋಧಿ**—ತಿಳಿ । **ರಣಕೃತ್**—ಯುದ್ಧದಲ್ಲಿ ನಿಪುಣನೂ. । **ಸತ್ಯಶುಷ್ಮ**—ಸತ್ಯಾತ್ಮಕವಾದ ಶಕ್ತಿಯುಳ್ಳವನೂ ಆದ ಎಲೈ ಇಂದ್ರನೇ, । **ರಣಂ**—ಯುದ್ಧವನ್ನು । **ಕೃಧಿ**—ಮಾಡು । **ಅಭಕ್ತೇ ಚಿತ್**—ನಮಗೆ ಭಾಗವಿಲ್ಲದಿರುವ ಸ್ಥಾನದಲ್ಲಿಯೂ ಸಹ । **ಅಸ್ಮಾನ್**—ನಮ್ಮನ್ನು । **ರಾಧೇ**—ಸಂಪತ್ತಿಗೆ । **ಆ ಭಜ**—ಭಾಗಿಗಳನ್ನಾಗಿ ಮಾಡು.

॥ ಭಾವಾರ್ಥ ॥

ಧನಯುಕ್ತನಾದ ಎಲೈ ಇಂದ್ರನೇ. ನಿನ್ನನ್ನು ಯಾಚಿಸುತ್ತಿರುವ ನಮ್ಮನ್ನು ತೇಜೋಯುಕ್ತರನ್ನಾಗಿ ಮಾಡು. ನಮ್ಮ ಮಿತ್ರನೂ, ಧನಗಳಿಗೆ ಪತಿಯೂ ಆದ ಎಲೈ ಇಂದ್ರನೇ, ನಿನ್ನ ಮಿತ್ರರಾದ ನಮ್ಮ ಇಷ್ಟಾರ್ಥಗಳನ್ನು ತಿಳಿ. ಯುದ್ಧದಲ್ಲಿ ನಿಪುಣನೂ, ಸತ್ಯಾತ್ಮಕವಾದ ಶಕ್ತಿಯುಳ್ಳವನೂ ಆದ ಎಲೈ ಇಂದ್ರನೇ, ನೀನು ಯುದ್ಧವನ್ನು ಮಾಡು. ನಮಗೆ ಭಾಗವಿಲ್ಲದಿರುವ ಸ್ಥಾನದಲ್ಲಿಯೂ ಸಹ ನಮ್ಮನ್ನು ಸಂಪತ್ತಿಗೆ ಭಾಗಿಗಳನ್ನಾಗಿ ಮಾಡು

## English Translation

Render us, Maghavan, who are you suitors, illustrious; comprehend, friendly (Indra), who are the lord wealth, (the wishes of) your friends; make war (for us), you warrior endowed with real strength, give us a share in the undivided riches.

# ನೂರ ಹದಿಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

ದಶಮೇಽನುವಾಕೇ ಷೋಡಶ ಸೂಕ್ತಾನಿ । ತತ್ರ ತಮಸ್ಯೇತಿ ದಶರ್ಚಂ ಪ್ರಥಮಂ ಸೂಕ್ತಮೈಂದ್ರಂ । ಶತಪ್ರಭೇದನೋ ನಾಮ ವೈರೂಪ ಋಷಿಃ । ಅಂತ್ಯಾ ತ್ರಿಷ್ಟುಪ್ ಶಿಷ್ಟಾ ಜಗತ್ಯಃ । ತಥಾ ಚಾನುಕ್ರಾಂತಂ । ತಮಸ್ಯ ಶತಪ್ರಭೇದನಸ್ತ್ರಿಷ್ಟುಬಂತಮಿತಿ ॥ ದಶರಾತ್ರಸ್ಯಾಷ್ಟಮೇಽಹನಿ ಮರುತ್ವತೀಯ ಏತತ್ಸೂಕ್ತಂ । ಸೂತ್ರಿತಂ ಚ । ತಮಸ್ಯ ದ್ಯಾವಾಪೃಥಿವೀ ಮಹಾ ಇಂದ್ರೋ ನೃವದಿತಿ ಮರುತ್ವತೀಯಂ । ಆ. ೮-೭ । ಇತಿ ॥

ಅನುವಾದವು—ಹತ್ತನೆಯ ಮಂಡಲದ ಹತ್ತನೆಯ ಅನುವಾಕದಲ್ಲಿ ಹದಿನಾರು ಸೂಕ್ತಗಳಿರುವವು. ಅವುಗಳಲ್ಲಿ **ತಮಸ್ಯ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಶತಪ್ರಭೇನನೋ ವೈರೂಪಃ ಎಂಬುವನು ಋಷಿಯು ; ಇಂದ್ರನು ದೇವತೆಯು ; ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಸವು, ಉಳಿದ ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ತಮಸ್ಯ ಶತಪ್ರಭೇದನಸ್ತ್ರಿಷ್ಟುಬಂತಂ** ಎಂದು ಹೇಳಿರುವುದು. ದಶರಾತ್ರವೆಂಬ ಯಾಗದ ಎಂಟನೆಯ ದಿವಸ ಮರುತ್ವತೀಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ತಮಸ್ಯ ದ್ಯಾವಾಪೃಥಿವೀ ಮಹಾ ಇಂದ್ರೋ ನೃವದಿತಿ ಮರುತ್ವತೀಯಂ** ಎಂಬ ಸೂತ್ರದಿಂದ (ಆ. ೮. ೭) ವಿವೃತವಾಗಿರುವುದು.

## ಸೂಕ್ತ—೧೧೩

ಮಂಡಲ—೧೦ ॥ ಅನುವಾಕ—೧೦ ॥ ಸೂಕ್ತ—೧೧೩ ॥
ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೧೪, ೧೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಶತಪ್ರಭೇದನೋ ವೈರೂಪಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧-೯ ಜಗತೀ, ೧೦ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತಮಸ್ಯ ದ್ಯಾವಾಪೃಥಿವೀ ಸಚೇತಸಾ ವಿಶ್ವೇಭಿರ್ದೇವೈರನು ಶುಷ್ಮಮಾವತಾಂ।
ಯದೈತ್ಕೃಣ್ವಾನೋ ಮಹಿಮಾನಮಿಂದ್ರಿಯಂ ಪೀತ್ವೀ ಸೋಮಸ್ಯ ಕ್ರತುಮಾँ ಅವರ್ಧತ ॥ ೧ ॥

॥ ಪದಪಾಠಃ ॥

ತಂ । ಅಸ್ಯ । ದ್ಯಾವಾಪೃಥಿವೀ ಇತಿ । ಸऽಚೇತಸಾ । ವಿಶ್ವೇಭಿಃ । ದೇವೈಃ । ಅನು । ಶುಷ್ಮಂ । ಅವತಾಂ । ಯತ್ । ಐತ್ । ಕೃಣ್ವಾನಃ । ಮಹಿಮಾನಂ । ಇಂದ್ರಿಯಂ । ಪೀತ್ವೀ । ಸೋಮಸ್ಯ । ಕ್ರತುऽಮಾನ್ । ಅವರ್ಧತ ॥ ೧ ॥

॥ ಸಾಯಣಭಾಷ್ಯಂ ॥

ಸಚೇತಸಾ ಸಹ ಚೇತಯಂತ್ಯೌ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ವಿಶ್ವೇಭಿಃ ಸರ್ವೇಭಿಃ ಸರ್ವೈರ್ದೇವೈಃ ಸಹಾಸ್ಯ ॥ ಅನ್ವಾದೇಶೇऽಶಾದೇಶೋऽನುದಾತ್ತಃ । ಪಾ. ೨-೪-೩೨ ॥ ಏತಸ್ಯೇಂದ್ರಸ್ಯ ತಂ ಶುಷ್ಮಂ ಶತ್ರೂಣಾಂ ಶೋಷಕಂ ಬಲಮನ್ವಾವತಾಂ । ರಕ್ಷತಾಂ । ತಸ್ಯ ಬಲಂ ಪೂರ್ವಮಸ್ಮಾಭೀರಕ್ಷತು ಪಶ್ಚಾದೇತೇ ಅಪಿ ರಕ್ಷತಾಮಿತಿ ಭಾವಃ ॥ ಅವತೇರ್ಲುಙ್ ॥ ಕೃಣ್ವಾನೋ ವೃತ್ರವಧಾದಿಕಂ ಕುರ್ವಾಣಃ ಸ ಮಹಿಮಾನಮಿಂದ್ರಿಯಮಿಂದ್ರಸ್ಯಾತ್ಮನಃ ಪರ್ಯಾಪ್ತಂ ವೀರ್ಯಂ ಚ ಯದ್ಯದೈತ್ ಪ್ರಾಪ್ನೋತ್ ॥ ಇಣ್ ಗತೌ ಅದಾದಿಕಃ । ಆಡಜಾದೀನಾಮಿತ್ಯಾಡಾಗಮಃ ॥ ತದಾ ಕ್ರತುಮಾನ್ಕರ್ಮವಾನ್ ಸ ಸೋಮಸ್ಯ ಪೀತ್ವೀ ಸೋಮಂ ಪೀತ್ವಾವರ್ಧತ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನಸಂಜ್ಞಾ। ಚತುರ್ಥ್ಯರ್ಥೇ ಬಹುಲಂ ಛಂದಸೀತಿ ಷಷ್ಠೀ । ಪೀತ್ವೀ । ಸ್ನಾತ್ವ್ಯಾದಯಶ್ಚೇತಿ ನಿಪಾತಿತಃ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । (**ಇಂದ್ರಃ**—ಇಂದ್ರನು) । **ಕೃಣ್ವಾನಃ**—ವೃತ್ರವಧಾದಿಕಾರ್ಯಗಳನ್ನು ಮಾಡುತ್ತ । **ಮಹಿಮಾನಂ**—ತನ್ನ ಮಹತ್ತ್ವವನ್ನೂ । **ಇಂದ್ರಿಯಂ**—ತನ್ನ ವೀರ್ಯವನ್ನೂ । **ಐತ್**—ಪಡೆಯುವನೋ (ಆಗ) । **ಸಚೇತಸಾ**—ಒಟ್ಟಿಗೆ ಸೇರಿಕೊಂಡಿರುವ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ವಿಶ್ವೇಭಿಃ ದೇವೈಃ**—ಸಕಲ ದೇವತೆಗಳೊಡನೆಯೂ । **ಅಸ್ಯ**—ಈ ಇಂದ್ರನ । **ತಂ ಶುಷ್ಮಂ**—ಪ್ರಸಿದ್ಧವಾದ ಆ ಶಕ್ತಿಯನ್ನು । **ಅನ್ವಾವತಾಂ**—ರಕ್ಷಿಸಲಿ । **ಕ್ರತುಮಾನ್**—ಕರ್ಮವಂತನಾದ ಇಂದ್ರನು । **ಸೋಮಸ್ಯ**—ಸೋಮವನ್ನು । **ಪೀತ್ವೀ**—ಪಾನಮಾಡಿ । **ಅವರ್ಧತ**—ವೃದ್ಧಿಯನ್ನು ಹೊಂದಿದನು.

॥ ಭಾವಾರ್ಥ ॥

ಇಂದ್ರನು ವೃತ್ರವಧಾದಿಕಾರ್ಯಗಳನ್ನು ನೇರವೇರಿಸುತ್ತ ತನ್ನ ಮಹತ್ತ್ವವನ್ನೂ ವೀರ್ಯವನ್ನೂ ಹೊಂದುವಾಗ, ಪರಸ್ಪರ ಒಟ್ಟಿಗೆ ಸೇರಿಕೊಂಡಿರುವ ದ್ಯಾವಾಪೃಥಿವಿಗಳು ಸಕಲ ದೇವತೆಗಳೊಡನೆಯೂ ಈ ಇಂದ್ರನ ಪ್ರಸಿದ್ಧವಾದ ಶಕ್ತಿಯನ್ನು ರಕ್ಷಿಸಲಿ. ಕರ್ಮವಂತನಾದ ಇಂದ್ರನು ಸೋಮವನ್ನು ಪಾನಮಾಡಿ ವೃದ್ಧಿಯನ್ನು ಹೊಂದಿದನು.

## English Translation

May the concurring heaven and earth, together with all the gods, preserve that strength of Indra, whereby achieving (great deeds) he obtained

the greatness that is appropriate to him, and having drunk the Soma, he, eminent for his prowess, increased (in strength).

॥ ಸಂಹಿತಾಪಾಠಃ ॥

ತಮಸ್ಯ ವಿಷ್ಣುರ್ಮಹಿಮಾನಮೋಜಸಾಂಶುಂ ದಧನ್ವಾನ್ಮಧುನೋ ವಿ ರಪ್ಶತೇ ।
ದೇವೇಭಿರಿಂದ್ರೋ ಮಘವಾ ಸಯಾವಭಿರ್ವೃತ್ರಂ ಜಘನ್ವಾँ ಅಭವದ್ವರೇಣ್ಯಃ ॥ ೨ ॥

॥ ಪದಪಾಠಃ ॥

ತಂ । ಅಸ್ಯ । ವಿಷ್ಣುಃ । ಮಹಿಮಾನಂ । ಓಜಸಾ । ಅಂಶುಂ । ದಧನ್ವಾನ್ । ಮಧುನಃ । ವಿ । ರಪ್ಶತೇ ।
ದೇವೇಭಿಃ । ಇಂದ್ರಃ । ಮಘऽವಾ । ಸಯಾವऽಭಿಃ । ವೃತ್ರಂ । ಜಘನ್ವಾನ್ । ಅಭವತ್ । ವರೇಣ್ಯಃ ॥೨॥

॥ ಸಾಯಣಭಾಷ್ಯಂ ॥

ವಿಷ್ಣುರೇತನ್ನಾಮಕಃ । ವ್ಯಾಪ್ತೋ ಯಜ್ಞೋ ವಾ । ಮಧುನೋ ಮದಕರಸ್ಯ ಸೋಮಸ್ಯಾಂಶುಂ ಲತಾಖಂಡಂ ದಧನ್ವಾನ್ ಪ್ರೇರಯನ್ ॥ ಧನ್ವೇರ್ಗತ್ಯರ್ಥಸ್ಯ ಕ್ವಸಾವಿದಿತ್ವಾನ್ನುಮಾಗಮೇ ಕೃತೇ ವಲಿಲೋಪಃ ॥ ಓಜಸಾ ಸ್ವವೀರ್ಯೇಣ ಸಂಜಾತಮಸ್ಯೇಂದ್ರಸ್ಯ ತಂ ಮಹಿಮಾನಂ ವಿ ರಪ್ಶತೇ । ವಿವಿಧಂ ಶಬ್ದಯತಿ । ಸ್ತೌತಿ । ಮಘವಾ ಧನವಾನ್ ಸಯಾವಭಿಃ ॥ ಯಾತೇರಾತೋ ಮನಿನ್ನಿತಿ ಕ್ವನಿಪ್ ॥ ಸಹಗಂತೃಭಿರ್ದೇವೇಭಿರ್ದೇವೈರ್ಮರುದ್ಭಿಃ ಸ್ವ ವೃತ್ರಂ ಜಘನ್ವಾನ್ ಹತವಾನಿಂದ್ರೋ ವರೇಣ್ಯಃ ಸರ್ವೈರ್ವರಣೀಯಃ ಸಂಭಜನೀಯೋಽಭವತ್ ॥

॥ ಪ್ರತಿಪದಾರ್ಥ ॥

ವಿಷ್ಣುಃ—ವಿಷ್ಣುವು । ಮಧುನಃ—ಮಧುರವಾದ ಸೋಮದ । ಅಂಶುಂ—ಲತಾಖಂಡವನ್ನು । ದಧನ್ವಾನ್— ರಸರೂಪದಲ್ಲಿ ಹರಿಯುವಂತೆ ಮಾಡುತ್ತ । ಓಜಸಾ— ತನ್ನ ತೇಜಸ್ಸಿನಿಂದ । ಅಸ್ಯ— ಇಂದ್ರನ । ತಂ ಮಹಿಮಾನಂ—ಪ್ರಸಿದ್ಧವಾದ ಮಹತ್ತ್ವವನ್ನು। ವಿ ರಪ್ಶತೇ—ಇನ್ನೂ ತೀಕ್ಷ್ಣವಾದುದನ್ನಾಗಿ ಮಾಡುತ್ತಾನೆ । ಸ್ವಯಾವಭಿಃ—ತನ್ನೊಡನೆ ಹಿಂಬಾಲಿಸುವ । ದೇವೇಭಿಃ—ಸಕಲ ದೇವತೆಗಳೊಡನೆಯೂ ಕೂಡಿ । ವೃತ್ರಂ—ವೃತ್ರಾಸುರನನ್ನು । ಜಘನ್ವಾನ್—ನಾಶಮಾಡಿದ । ಮಘವಾ—ಧನವಂತನಾದ । ಇಂದ್ರಃ—ಇಂದ್ರನು । ವರೇಣ್ಯಃ—ಪೂಜ್ಯನಾಗಿ । ಅಭವತ್—ಆದನು ।

॥ ಭಾವಾರ್ಥ ॥

ವಿಷ್ಣುವು ಮಧುರವಾದ ಸೋಮದ ಲತಾಖಂಡವನ್ನು ರಸರೂಪದಲ್ಲಿ ಹಿಂಡಿ ತನ್ನ ತೇಜಸ್ಸಿನಿಂದ ಇಂದ್ರನ ಪ್ರಸಿದ್ಧವಾದ ಮಹತ್ತ್ವವನ್ನು ಇನ್ನೂ ಅಧಿಕವಾದುದನ್ನಾಗಿ ಮಾಡುತ್ತಾನೆ. ತನ್ನೊಡನೆ ಹಿಂಬಾಲಿಸುವ ಸಕಲ ದೇವತೆಗಳೊಡನೆಯೂ ಕೂಡಿ ವೃತ್ರಾಸುರನನ್ನು ನಾಶಮಾಡಿದವನೂ, ಧನವಂತನೂ ಆದ ಇಂದ್ರನು ಪೂಜ್ಯನಾದನು.

## English Translation

Vishnu offering the portion of the Soma, glorifies by his own vigour that greatness of his. Indra, the lord of wealth, with the associated gods having slain Vritra, became deserving of honour.

॥ ಸಂಹಿತಾಪಾಠಃ ॥

ವೃತ್ರೇಣ ಯದಹಿನಾ ಬಿಭ್ರದಾಯುಧಾ ಸಮಸ್ಥಿಥಾ ಯುಧಯೇ ಶಂಸಮಾವಿದೇ ।
ವಿಶ್ವೇ ತೇ ಅತ್ರ ಮರುತಃ ಸಹ ತ್ಮನಾವರ್ಧನ್ನುಗ್ರ ಮಹಿಮಾನಮಿಂದ್ರಿಯಂ ॥ ೩ ॥

॥ ಪದಪಾಠಃ ॥

ವೃತ್ರೇಣ । ಯತ್ । ಅಹಿನಾ । ಬಿಭ್ರತ್ । ಆಯುಧಾ । ಸಮ್ಽಅಸ್ಥಿಥಾಃ । ಯುಧಯೇ । ಶಂಸಂ । ಆಽವಿದೇ ।
ವಿಶ್ವೇ । ತೇ । ಅತ್ರ । ಮರುತಃ । ಸಹ । ತ್ಮನಾ । ಅವರ್ಧನ್ । ಉಗ್ರ । ಮಹಿಮಾನಂ । ಇಂದ್ರಿಯಂ ॥ ೩ ॥

॥ ಸಾಯಣಭಾಷ್ಯಂ ॥

ಯುಧಯೇ ಯೋಧನಾಯಾಯುಧಾಯುಧಾನಿ ವಜ್ರಾದೀನಿ ಬಿಭ್ರದ್ಧಾರಯನ್ನಿಂದ್ರಸ್ತ್ವಂ ಯದ್ಯದಾಹಿನಾಹಂತವ್ಯೇನ ವೃತ್ರೇಣ ಸಮಸ್ಥಿಥಾಃ ಸಹಾಸ್ಥಾಃ ॥ ತಿಷ್ಠತೇರ್ಲುಙಿ ಸಮವಪ್ರವಿಭ್ಯಃ ಸ್ಥ ಇತ್ಯಾತ್ಮನೇಪದಂ । ಸ್ಥಾಘ್ವೋರಿಚ್ಚೇತಿ ಸಿಚಃ ಕಿತ್ತ್ವಮಿಕಾರಶ್ಚಾಂತಾದೇಶಃ । ಹ್ರಸ್ವಾದಂಗಾದಿತಿ ಸಿಚೋ ಲೋಪಃ । ಯದ್ಯೋಗಾದನಿಘಾತಃ । ತಿಙ್ ಚೋದಾತ್ತವತೀತಿ ಗತೇರ್ನಿಘಾತಃ ॥ ತದಾವಿದೇ ॥ ಕೃತ್ಯಾರ್ಥೇ ಕೇನ್ಪ್ರತ್ಯಯಃ ॥ ತವ ವೃತ್ರವಧಾದಿಕಂ ವೀರ್ಯಂ ಪ್ರಜ್ಞಾಪಯಿತುಂ ಶಂಸಂ । ಅಶಂಸಂ । ತತ್ಸ್ತೋತ್ರರಹಂ ಸ್ತೌಮಿ ॥ ಶನ್ಸು ಸ್ತುತೌ । ಲಙ್ । ವಾಕ್ಯಭೇದಾದನಿಘಾತಃ ॥ ಕಿಂಚ ಹೇ ಉಗ್ರೋದ್ಗೂ-

ರ್ಣಬಲ ಅತ್ರಾಸ್ಮಿನ್ಕಾಲ ಏವ ತೇ ತ್ವದೀಯಂ ಮಹಿಮಾನಮಿಂದ್ರಿಯಂ ವೀರ್ಯಂ ಚ ವಿಶ್ವೇ ಸರ್ವೇ ಮರುತಸ್ತ್ಮನಾತ್ಮನಾ ಸಹೈವಾವರ್ಧನ್ ॥ ವರ್ಣಲೋಪಶ್ಛಾಂದಸಃ ॥ ಅವರ್ಧಯನ್ । ಮರುತೋ ಹೀಂದ್ರಸ್ಯ ವೀರ್ಯಂ ಭವತಿ ॥

॥ ಪ್ರತಿಪದಾರ್ಥ ॥

**ಉಗ್ರ**—ಅತ್ಯಧಿಕವಾದ ಶಕ್ತಿಯುಳ್ಳ ಎಲೈ ಇಂದ್ರನೇ । **ಯುಧಯೇ**—ಯುದ್ಧಕ್ಕಾಗಿ । **ಆಯುಧಾ**—ಆಯುಧಗಳನ್ನು । **ಬಿಭ್ರತ್**—ಧರಿಸಿದವನಾಗಿ । **ಯತ್**—ಯಾವಾಗ । **ಅಹಿನಾ**—ಕೊಲ್ಲಲಸಾಧ್ಯನಾದ । **ವೃತ್ರೇಣ**—ವೃತ್ರಾಸುರನೊಂದಿಗೆ । **ಸಮಸ್ಥಿಥಾಃ**—ಸಂಧಿಸಿದೆಯೋ ಆಗ । **ಆವಿದೇ**—ಅವನನ್ನು ಕೊಲ್ಲುವ ನಿನ್ನ ಕಾರ್ಯವನ್ನು ತಿಳಿಯಲು । **ಶಂಸಂ**—ನಿನ್ನನ್ನು ಪ್ರಶಂಸಿಸುತ್ತೇನೆ । **ಅತ್ರ**—ಇದೇ ಕಾಲದಲ್ಲಿ । **ತೇ**—ನಿನ್ನ । **ಮಹಿಮಾನಂ**—ಮಹತ್ತ್ವವನ್ನೂ । **ಇಂದ್ರಿಯಂ**—ಶಕ್ತಿಯನ್ನೂ । **ವಿಶ್ವೇ ಮರುತಃ**—ಸಕಲ ಮರುತ್ತುಗಳೂ । **ತ್ಮನಾ ಸಹ**—ತಮ್ಮಷ್ಟಕ್ಕೆ ತಾವೇ । **ಅವರ್ಧನ್**—ವೃದ್ಧಿಗೊಳಿಸಿದರು.

॥ ಭಾವಾರ್ಥ ॥

ಅತ್ಯಧಿಕವಾದ ಶಕ್ತಿಯುಳ್ಳ ಎಲೈ ಇಂದ್ರನೇ, ಯುದ್ಧಕ್ಕಾಗಿ ನೀನು ಆಯುಧಗಳನ್ನು ಧರಿಸಿ ಕೊಲ್ಲಲಸಾಧ್ಯನಾದ ವೃತ್ರನೊಂದಿಗೆ ಯಾವಾಗ ಸಂಧಿಸಿದೆಯೋ, ಆಗ ಅವನನ್ನು ಕೊಲ್ಲುವ ನಿನ್ನ ಕರ್ತವ್ಯವನ್ನು ತಿಳಿಯಲು ನಿನ್ನನ್ನು ಪ್ರಶಂಸಿಸುತ್ತೇನೆ. ಇದೇ ಕಾಲದಲ್ಲಿ ನಿನ್ನ ಮಹತ್ತ್ವವನ್ನೂ, ಶಕ್ತಿಯನ್ನೂ ಸಹ ಸಕಲ ಮರುತ್ತುಗಳೂ ತಮ್ಮಷ್ಟಕ್ಕೆ ತಾವೇ ವೃದ್ಧಿಗೊಳಿಸಿದರು.

**English Translation.**

When you encountered the indestructible Vritra, wielding your weapons for combat, you acquired renown; all the associated Maruts of their own accord magnified your great might appropriate to Indra.

॥ ಸಂಹಿತಾಪಾಠಃ ॥

ಜಜ್ಞಾನ ಏವ ವ್ಯಬಾಧತ ಸ್ಪೃಧಃ ಪ್ರಾಪಶ್ಯದ್ವೀರೋ ಅಭಿ ಪೌಂಸ್ಯಂ ರಣಂ ।
ಅವೃಶ್ಚದದ್ರಿಮವ ಸಸ್ಯದಃ ಸೃಜದಸ್ತಭ್ನಾನ್ನಾಕಂ ಸ್ವಪಸ್ಯಯಾ ಪೃಥುಂ ॥೪॥

॥ ಪದಪಾಠಃ ॥

ಜಜ್ಞಾನಃ । ಏವ । ವಿ । ಅಬಾಧತ । ಸ್ಪೃಧಃ । ಪ್ರ । ಅಪಶ್ಯತ್ । ವೀರಃ । ಅಭಿ । ಪೌಂಸ್ಯಂ । ರಣಂ ।
ಅವೃಶ್ಚತ್ । ಅದ್ರಿಂ । ಅವ । ಸಽಸ್ಯದಃ । ಸೃಜತ್ । ಅಸ್ತಭ್ನಾತ್ । ನಾಕಂ । ಸುಽಅಪಸ್ಯಯಾ । ಪೃಥುಂ ॥

॥ ಸಾಯಣಭಾಷ್ಯಂ ॥

ಸ ಇಂದ್ರೋ ಜಜ್ಞಾನ ಏವ ॥ ಜನೀ ಪ್ರಾದುರ್ಭಾವೇ । ಛಾಂದಸಸ್ಯ ಲಿಟಃ ಕಾನಚ್ ॥ ಜಾಯಮಾನ ಏವ ಸ್ಪೃಧಃ ಶತ್ರೂನ್ವ್ಯಬಾಧತ । ಅತ್ಯರ್ಥಮಪೀಡಯತ್ ॥ ಸ್ಪೃಧಃ । ಸ್ಪರ್ಧ ಸಂಘರ್ಷೇ । ಕ್ವಿಪ್ । ಅಪಸ್ಪೃಧೇಥಾಮಿತಿ ನಿಪಾತನೇನ್ಯೈಕತ್ರ ಸಂಪ್ರಸಾರಣದರ್ಶನಾದತ್ರಾಪಿ ಭವತಿ ॥ ಅತ ಏವ ವೀರಃ ಸಮರ್ಥಃ ಸ ರಣಂ ಸಂಗ್ರಾಮಮಭಿಲಕ್ಷ್ಯ ಪೌಂಸ್ಯಮಾತ್ಮೀಯಂ ಬಲಂ ಪ್ರಾಪಶ್ಯತ್ । ಅಸ್ಯೈತಾವದ್ಬಲಮಿತಿ ಪ್ರಕರ್ಷೇಣ ಪಶ್ಯತಿ । ಜಾನಾತಿ । ಕಿಂಚಾದ್ರಿಂ ಮೇಘಮವೃಶ್ಚತ್ । ವರ್ಷಣಾರ್ಥಮಚ್ಛಿನತ್ । ಅನಂತರಂ ಸಸ್ಯದಃ ॥ಸ್ಯಂದೂ ಪ್ರಸ್ರವಣೇ । ಕ್ವಿಪ್ । ಶಸಿ ನಲೋಪಃ ॥ ಸಹ ಸ್ಯಂದಮಾನಾ ಅಪೋಽವ ಸೃಜತ್ । ಅವಾಙ್ಮುಖಮಸೃಜತ್ । ನಿರಗಮಯತ್। ತಥಾ ಸ ಪೃಥುಂ ಮಹಾಂತಂ ನಾಕಂ ದ್ಯುಲೋಕಂ ಸ್ವಪಸ್ಯಯಾ ॥ ಸುಪ ಆತ್ಮನಃ ಕ್ಯಚ್ । ಅ ಪ್ರತ್ಯಯಾದಿತಿ ಸ್ತ್ರಿಯಾಮಪ್ರತ್ಯಯಃ ॥ ಶೋಭನಕರ್ಮೇಚ್ಛಯಾಸ್ತಭ್ನಾತ್ । ನಿರುದ್ಧಮಕರೋತ್ ॥ ಸ್ತಂಭಿಃ ಸೌತ್ರೋ ಧಾತುಃ ॥

॥ ಪ್ರತಿಪದಾರ್ಥ ॥

(ಇಂದ್ರಃ—ಇಂದ್ರನು) । **ಜಜ್ಞಾನ ಏವ**— ಉತ್ಪನ್ನನಾಗುವಾಗಲೇ । **ಸ್ಪೃಧಃ**— ಶತ್ರುಗಳನ್ನು । **ವ್ಯ ಬಾಧತ**—ಹಿಂಸಿಸಿ ನಾಶಪಡಿಸಿದನು । **ವೀರಃ**— ಸಮರ್ಥನಾದ ಇಂದ್ರನು । **ರಣಂ**— ಯುದ್ಧವನ್ನು ಮುನ್ನಿಟ್ಟು । **ಪೌಂಸ್ಯಂ**—ತನ್ನ ಶಕ್ತಿಯನ್ನು । **ಪ್ರಾಪಶ್ಯತ್**—ಕಂಡುಕೊಂಡನು । **ಅದ್ರಿಂ**— ಮೇಘವನ್ನು । **ಅವೃಶ್ಚತ್**—ವೃಷ್ಟ್ಯರ್ಥವಾಗಿ ಸೀಳಿದನು । **ಸಸ್ಯದಃ**— ಪ್ರವಹಿಸುವ ಉದಕಗಳನ್ನು । **ಅವ ಸೃಜತ್**—ಅಧೋಮುಖವಾಗಿ ಹರಿಯುವಂತೆ ಮಾಡಿದನು । **ಸ್ವಪಸ್ಯಯಾ**— ಕಲ್ಯಾಣಕಾರ್ಯವನ್ನು ಮಾಡಲಿಚ್ಛೆಯುಳ್ಳವನಾಗಿ । **ಪೃಥುಂ**— ವಿಸ್ತೃತವಾದ । **ನಾಕಂ**— ದ್ಯುಲೋಕವನ್ನು । **ಅಸ್ತಭ್ನಾತ್**— ಎತ್ತಿಹಿಡಿದನು.

॥ ಭಾವಾರ್ಥ ॥

ಉತ್ಪನ್ನನಾಗುವಾಗಲೇ, ಇಂದ್ರನು ಶತ್ರುಗಳನ್ನು ಹಿಂಸಿಸಿ ನಾಶಪಡಿಸಿದನು. ಸಮರ್ಥನಾದ ಇಂದ್ರನು ಯುದ್ಧವನ್ನು ಮುನ್ನಿಟ್ಟು ತನ್ನ ಶಕ್ತಿಯನ್ನು ಕಂಡುಕೊಂಡನು ವೃಷ್ಟ್ಯರ್ಥವಾಗಿ ಮೇಘವನ್ನು ಸೀಳಿದನು. ಪ್ರವಹಿಸುವ ಉದಕಗಳನ್ನು ಅಧೋಮುಖವಾಗಿ ಹರಿಯುವಂತೆ ಮಾಡಿದನು ಕಲ್ಯಾಣಕಾರ್ಯವನ್ನು ಮಾಡಲಿಚ್ಛೆಯುಳ್ಳವನಾಗಿ ವಿಸ್ತೃತವಾದ ದ್ಯುಲೋಕವನ್ನು ಎತ್ತಿನಿಲ್ಲಿಸಿದನು.

## English Translation.

As soon as born he discomfited his assailants; the hero contemplated his own manly prowess in war; he divided the cloud, sent forth the flowing waters, and with the determination to do a good deed, upheld the vast heaven.

॥ ಸಂಹಿತಾಪಾಠಃ ॥

ಆದಿಂದ್ರಃ ಸತ್ರಾ ತವಿಷೀರಪತ್ಯತ ವರೀಯೋ ದ್ಯಾವಾಪೃಥಿವೀ ಅಬಾಧತ ।
ಅವಾಭರದ್ಧೃಷಿತೋ ವಜ್ರಮಾಯಸಂ ಶೇವಂ ಮಿತ್ರಾಯ ವರುಣಾಯ ದಾಶುಷೇ ॥ ೫ ॥

॥ ಪದಪಾಠಃ ॥

ಆತ್ । ಇಂದ್ರಃ । ಸತ್ರಾ । ತವಿಷೀಃ । ಅಪತ್ಯತ । ವರೀಯಃ । ದ್ಯಾವಾಪೃಥಿವೀ ಇತಿ । ಅಬಾಧತ ।
ಅವ । ಅಭರತ್ । ಧೃಷಿತಃ । ವಜ್ರಂ । ಆಯಸಂ । ಶೇವಂ । ಮಿತ್ರಾಯ । ವರುಣಾಯ । ದಾಶುಷೇ ॥೫॥

॥ ಸಾಯಣಭಾಷ್ಯಂ ॥

ಆದಪಿ ಚ ಸ ಇಂದ್ರಸ್ತವಿಷೀರ್ಮಹತೀಃ ಸೇನಾಃ ಸತ್ರಾ ಸಹೈವಾಪತ್ಯತ । ಅಗಚ್ಛತ್ ॥ ಪದ ಗತೌ ದೈವಾದಿಕಃ । ವರ್ಣವ್ಯತ್ಯಯಃ ॥ ಯದ್ವಾ। ಪತ್ಯತ ಇತ್ಯೈಶ್ವರ್ಯಕರ್ಮಾ । ಸೇನಾನಾಮೀಶ್ವೇ । ತಾಸಾಮೀಶ್ವರೋಽಭವದಿತ್ಯರ್ಥಃ । ಸ ಏವ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ವರೀಯಃ ॥ ತೃತೀಯಾಯಾಃ ಸುಃ ॥ ಉರುತರೇಣ ಮಹಿಮ್ನಾಬಾಧತ । ತಯೋರಂತಸ್ಥಿತಾಞ್ಛತ್ರೂನವಧೀದಿತ್ಯರ್ಥಃ । ಧೃಷಿತಃ ಶತ್ರುವಧೇ ಪ್ರಗಲ್ಭಃ ಸನ್ನಾಯಸಮಯೋಮಯಂ ವಜ್ರಮವಾಭರತ್ । ಅಧಾರಯತ್ । ಕಿಮರ್ಥಂ । ಮಿತ್ರಾಯ ವರುಣಾಯ ದಾಶುಷೇ ಹವಿರ್ದತ್ತವತೇ ಯಜ್ವನೇ ಚ ಶೇವಂ ಸುಖಂ ಕರ್ತುಂ ॥

॥ ಪ್ರತಿಪದಾರ್ಥ ॥

**ಆತ್**— ಒಡನೆಯೇ । **ಇಂದ್ರಃ**— ಇಂದ್ರನು । **ತವಿಷೀಃ ಸತ್ರಾ**— ದೊಡ್ಡ ಸೇನೆಗಳೊಡನೆ । **ಅಪ-ತ್ಯತ**— ಹೊರಟನು । **ದ್ಯಾವಾಪೃಥಿವೀ**— ದ್ಯಾವಾಪೃಥಿವಿಗಳ ನಡುವೆ ಇರುವ ಸಕಲ ಶತ್ರುಗಳನ್ನೂ । **ವರೀ-ಯಃ**-- ಅತ್ಯಧಿಕವಾದ ತನ್ನ ಶಕ್ತಿಯಿಂದ। **ಅಬಾಧತ**— ಹಿಂಸಿಸಿ ನಾಶಪಡಿಸಿದನು । **ಧೃಷಿತಃ**— ದೃಢವಾದ ಬಲವುಳ್ಳ ಇಂದ್ರನು । **ಮಿತ್ರಾಯ**— ಮಿತ್ರದೇವನಿಗಾಗಿಯೂ । **ವರುಣಾಯ**— ವರುಣನಿಗಾಗಿಯೂ । **ದಾಶುಷೇ**— ಹವಿಸ್ಸನ್ನರ್ಪಿಸುವ ಯಜಮಾನನಾಗಿಯೂ । **ಶೇವಂ**— ಸುಖವನ್ನುಂಟುಮಾಡಲು । **ಆಯಸಂ**— ಉಕ್ಕಿನಿಂದ ನಿರ್ಮಿತವಾದ । **ವಜ್ರಂ**— ವಜ್ರಾಯುಧವನ್ನು । **ಅವಾಭರತ್**— ಎತ್ತಿಹಿಡಿದನು ।

॥ ಭಾವಾರ್ಥ ॥

ಯುದ್ಧವು ಆರಂಭವಾದೊಡನೆಯೇ ಇಂದ್ರನು ದೊಡ್ಡಸೇನೆಗಳೊಡನೆ ಹೊರಟನು. ದ್ಯಾವಾಪೃಥಿವಿಗಳ ನಡುವೆ ಇರುವ ಸಕಲ ಶತ್ರುಗಳನ್ನೂ ತನ್ನ ಅತ್ಯಧಿಕವಾದ ಶಕ್ತಿಯಿಂದ ಹಿಂಸಿಸಿ ನಾಶಪಡಿಸಿದನು. ದೃಢವಾದ ಬಲವುಳ್ಳ ಇಂದ್ರನು ಮಿತ್ರದೇವನಿಗೂ, ವರುಣನಿಗೂ, ಹವಿಸ್ಸನ್ನರ್ಪಿಸುವ ಯಜಮಾನನಿಗೂ ಸುಖವನ್ನುಂಟುಮಾಡಲು ಉಕ್ಕಿನಿಂದ ನಿರ್ಮಿತವಾದ ವಜ್ರಾಯುಧವನ್ನು ಎತ್ತಿ ಹಿಡಿದನು.

### English Translation.

Indra advanced with vast (armies); he overcame with his might (his foes stationed between) heaven and earth; confident, he wielded his iron thunderbolt (to do) good to Mitra, Varuna, and the donor (of the oblation).

॥ ಸಂಹಿತಾಪಾಠಃ ॥

ಇಂದ್ರಸ್ಯಾತ್ರ ತವಿಷೀಭ್ಯೋ ವಿರಪ್ಶಿನ ಋಘಾಯತೋ ಅರಂಹಯಂತ ಮನ್ಯವೇ ।

ವೃತ್ರಂ ಯದುಗ್ರೋ ವ್ಯವೃಶ್ಚದೋಜಸಾಪೋ ಬಿಭ್ರತಂ ತಮಸಾ ಪರೀವೃತಂ ॥ ೬ ॥

॥ ಪದಪಾಠಃ ॥

ಇಂದ್ರಸ್ಯ । ಅತ್ರ । ತವಿಷೀಭ್ಯಃ । ವಿऽರಪ್ಶಿನಃ । ಋಘಾಯತಃ । ಅರಂಹಯಂತ । ಮನ್ಯವೇ ।

ವೃತ್ರಂ । ಯತ್ । ಉಗ್ರಃ । ವಿ । ಅವೃಶ್ಚತ್ । ಓಜಸಾ । ಅಪಃ । ಬಿಭ್ರತಂ । ತಮಸಾ । ಪರಿऽವೃತಂ ॥ ೬ ॥

॥ ಸಾಯಣಭಾಷ್ಯಂ ॥

**ಅತ್ರಾಸ್ಮಿನ್ಕಾಲ ಏವ ವಿರಪ್ಶಿನೋ ಮಹತೋ ವಿವಿಧಂ ಶಬ್ದಾಯಮಾನಸ್ಯ ವರ್ಧಾಯತಃ ಶತ್ರೂನ್ಹಿಂಸತ ಇಂದ್ರಸ್ಯ ತವಿಷೀಭ್ಯಃ । ಷಷ್ಠ್ಯರ್ಥೇ ಚತುರ್ಥೀ । ಬಲಾನಾಂ ಮನ್ಯವೇ ಪ್ರಖ್ಯಾಪನಾಯಾರಂಹಯಂತ । ಅಪೋ ನಿರಗಚ್ಛನ್ । ರಹಿರ್ಗತ್ಯರ್ಥಃ । ಉಗ್ರ ಉದ್ಗೂರ್ಣಃ ಸೋಽಪ ಉದಕಾನಿ ಬಿಭ್ರತಂ ಧಾರಯಂತಂ ತಮಸಾ ಪರೀವೃತಂ ಪರಿತೋ ವೇಷ್ಟಿತಂ ॥ ವೃಣೋತೇಃ ಕರ್ಮಣಿ ಕ್ತಃ । ಗತಿರನಂತರ ಇತಿ ಸ್ವರಃ । ಸಂಹಿತಾಯಾಮುಪಸರ್ಗಸ್ಯ ಘಞಿ । ಪಾ. ೬-೩-೧೨೨ । ಇತಿ ದೀರ್ಘಃ ॥ ತಂ ವೃತ್ರಂ ಯದ್ಯಸ್ಮಿನ್ಕಾಲ ಓಜಸಾ ಸ್ವವೀರ್ಯೇಣ ವ್ಯವೃಶ್ಚತ್ ಅತ್ಯರ್ಥಮವಧೀತ್ ॥**

॥ ಪ್ರತಿಪದಾರ್ಥ ॥

**ಉಗ್ರಃ**—ಅತ್ಯಧಿಕವಾದ ಶಕ್ತಿಯುಳ್ಳ ಇಂದ್ರನು । **ಅಪಃ**—ಉದಕಗಳನ್ನು । **ಬಿಭ್ರತಂ**—ಹೊಂದಿರುವವನೂ । **ತಮಸಾ**—ಕಗ್ಗತ್ತಲೆಯಿಂದ । **ಪರೀವೃತಂ**—ಸುತ್ತುವರೆಯಲ್ಪಟ್ಟಿರುವವನೂ ಆದ । **ವೃತ್ರಂ**—ವೃತ್ರನನ್ನು । **ಯತ್**—ಯಾವಾಗ । **ಓಜಸಾ**—ತನ್ನ ಶಕ್ತಿಯಿಂದ । **ವ್ಯವೃಶ್ಚತ್**—ನಾಶಮಾಡಿದನೋ । **ಅತ್ರ**—ಆ ಕಾಲದಲ್ಲಿ । **ವಿರಪ್ಶಿನಃ**—ಅಧಿಕವಾಗಿ ಶಬ್ದಮಾಡತಕ್ಕವನೂ । **ಋಘಾಯತಃ**—ಶತ್ರುನಾಶಕನೂ ಆದ । **ಇಂದ್ರಸ್ಯ**—ಇಂದ್ರನ । **ತವಿಷೀಭ್ಯಃ**—ಶಕ್ತಿಗಳ । **ಮನ್ಯವೇ**—ಪ್ರಕಟನಕ್ಕಾಗಿ । **ಅರಂಹಯಂತ**—ಜಲಗಳು ಪ್ರವಹಿಸಿದವು.

॥ ಭಾವಾರ್ಥ ॥

ಅತ್ಯಧಿಕವಾದ ಶಕ್ತಿಯುಳ್ಳ ಇಂದ್ರನು ಉದಕಗಳನ್ನು ತಡೆಗಟ್ಟಿರುವವನೂ, ಕಗ್ಗತ್ತಲೆಯಿಂದ ಸುತ್ತುವರೆಯಲ್ಪಟ್ಟಿರುವವನೂ, ಆದ ವೃತ್ರನನ್ನು ಯಾವಾಗ ತನ್ನ ಶಕ್ತಿಯಿಂದ ನಾಶಮಾಡಿದನೋ ಆ ಕಾಲದಲ್ಲಿ ಅಧಿಕವಾಗಿ ಶಬ್ದಮಾಡತಕ್ಕವನೂ ಶತ್ರುನಾಶಕನೂ ಆದ ಇಂದ್ರನ ಶಕ್ತಿಗಳ ಪ್ರಕಟನಕ್ಕಾಗಿ ಉದಕಗಳು ಪ್ರವಹಿಸಿದವು.

## English Translation.

Then (the waters) rushed forth to proclaim the might of Indra, shouting loudly, and crushing (his foes), when fierce he cut Vritra to pieces by his strength—(Vritra who) obstucted the waters, and was encompased by darkness.

॥ ಸಂಹಿತಾಪಾಠಃ ॥

ಯಾ ವೀರ್ಯಾಣಿ ಪ್ರಥಮಾನಿ ಕರ್ತ್ವಾ ಮಹಿತ್ವೇಭಿರ್ಯತಮಾನೌ ಸಮೀಯತುಃ ।
ಧ್ವಾಂತಂ ತಮೋಽವ ದಧ್ವಸೇ ಹತ ಇಂದ್ರೋ ಮಹ್ನಾ ಪೂರ್ವಹೂತಾವಪತ್ಯತ ॥ ೭ ॥

॥ ಪದಪಾಠಃ ॥

ಯಾ । ವೀರ್ಯಾಣಿ । ಪ್ರಥಮಾನಿ । ಕರ್ತ್ವಾ । ಮಹಿಽತ್ವೇಭಿಃ । ಯತಮಾನೌ । ಸಂಽಈಯತುಃ ।
ಧ್ವಾಂತಂ । ತಮಃ । ಅವ । ದಧ್ವಸೇ । ಹತೇ । ಇಂದ್ರಃ । ಮಹ್ನಾ । ಪೂರ್ವಽಹೂತೌ । ಅಪತ್ಯತ ॥ ೭ ॥

॥ ಸಾಯಣಭಾಷ್ಯಂ ॥

ಮಹಿತ್ವೇಭಿರ್ಮಂಹನೀಯೈಃ ಸ್ವಬಲೈರ್ಯತಮಾನೌ ಯುದ್ಧಾಯ ಪ್ರಯತ್ನಂ ಕುರ್ವಂತಾವಿಂದ್ರವೃತ್ರೌ ಪ್ರಥಮಾನಿ ಪೂರ್ವಭಾವೀನಿ ಕರ್ತ್ವಾ ॥ ಕೃತ್ಯಾರ್ಥೇ ತ್ವನ್ಪ್ರತ್ಯಯಃ ॥ ಕರ್ತವ್ಯಾನಿ ಯಾನಿ ವೀರ್ಯಾಣಿ ಸಮೀಯತುಃ ಸಂಯೋಜಯಾಮಾಸತುಃ ॥ ಇಣ್ ಗತೌ । ಲಿಟಿ ದೀರ್ಘ ಇಣಃ ಕಿತೀತಿ ದೀರ್ಘಃ ॥ ತಯೋರ್ಮಧ್ಯ ಇಂದ್ರೇಣ ವೃತ್ರೇ ಹತೇ ಸತಿ ಧ್ವಾಂತಮತಿನಿಬಿಡಂ ತಮೋಽವ ದಧ್ವಸೇ । ಅವಧ್ವಸ್ತಂ ವಿನಷ್ಟಮಭೂತ್ ॥ ಧ್ವಂಸೇರ್ಲಿಟ್ । ಕಿತ್ತ್ವಾನ್ನಲೋಪಃ ॥ ಇಂದ್ರಸ್ತು ಮಹ್ನಾ ಸ್ವಮಹಿಮ್ನಾ ಪೂರ್ವಹೂತೌ ಪ್ರಥಮಾಹ್ವಾನೇಽಪತ್ಯತ । ಅಗಚ್ಛತ್ । ಶೂರಾಣಾಂ ಮಧ್ಯೇಽಯಮೇವ ಪ್ರಥಮಮಾಹೂಯಮಾನೋಽಭವದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಮಹಿತ್ವೇಭಿಃ**—ತಮ್ಮ ಪರಾಕ್ರಮಗಳಿಂದ । **ಯತಮಾನೌ**—ಯುದ್ಧಕ್ಕೆ ಪ್ರಯತ್ನಿಸಿದ ಇಂದ್ರ ಮತ್ತು ವೃತ್ರರು । **ಪ್ರಥಮಾನಿ ಕರ್ತ್ವಾ**—ಪೂರ್ವಭಾವಿಯಾಗಿ ಮಾಡಬೇಕಾದ । **ಯಾ ವೀರ್ಯಾಣಿ**—ಯಾವ ವೀರ್ಯಕರ್ಮಗಳನ್ನು । **ಸಮಿಯತುಃ**—ನೆರವೇರಿಸಿದರೋ ಅವುಗಳ ಮಧ್ಯೆ । **ಹತೇ**—ವೃತ್ರ ಹನನವಾದಾಗ । **ಧ್ವಾಂತಂ ತಮಃ**—ಅತಿನಿಬಿಡವಾದ ಕಗ್ಗತ್ತಲೆಯು । **ಅವ ದಧ್ವಸೇ**—ಚದುರಿ ಹೋಯಿತು । **ಇಂದ್ರಃ**—ಇಂದ್ರನು । **ಮಹ್ನಾ**—ತನ್ನ ಮಹಿಮೆಯಿಂದ । **ಪೂರ್ವಹೂತೌ**—ಪರಾಕ್ರಮಿಗಳ ನಡುವೆ ಮೊದಲು ಕರೆಯಲ್ಪಟ್ಟವನಾಗಿ । **ಅಪತ್ಯತ**—ಹೊರಟನು.

॥ ಭಾವಾರ್ಥ ॥

ತಮ್ಮ ಪರಾಕ್ರಮಗಳಿಂದ ಯುದ್ಧಕ್ಕೆ ಪ್ರಯತ್ನಿಸಿದ ಇಂದ್ರ ಮತ್ತು ವೃತ್ರರು ತಮ್ಮ ವೀರ್ಯಕರ್ಮಗಳನ್ನು ಪ್ರದರ್ಶಿಸಿದ ನಂತರ ವೃತ್ರನು ಕೊಲ್ಲಲ್ಪಟ್ಟನು. ಆ ಒಡನೆಯೇ ಅತಿನಿಬಿಡವಾದ ಕಗ್ಗತ್ತಲೆಯು ಚದುರಿಹೋಯಿತು. ಇಂದ್ರನು ತನ್ನ ಮಹಿಮೆಯಿಂದ ಪರಾಕ್ರಮಿಗಳ ನಡುವೆ ಮೊದಲು ಕರೆಯಲ್ಪಟ್ಟವನಾಗಿ ಮುಂದೆ ಹೊರಟನು

## English Translation.

(In the midst of) the first exploits to be performed by them which (Indra and Vritra) achieved striving with their utmost might, Vritra being slain, the thick darkness was destroyed, and Indra in his might came at the first challenge.

॥ ಸಂಹಿತಾಪಾಠಃ ॥

ವಿಶ್ವೇ ದೇವಾಸೋ ಅಧ ವೃಷ್ಣ್ಯಾನಿ ತೇಽವರ್ಧಯನ್ತ್ಸೋಮವತ್ಯಾ ವಚಸ್ಯಯಾ ।
ರದ್ಧಂ ವೃತ್ರಮಹಿಮಿಂದ್ರಸ್ಯ ಹನ್ಮನಾಗ್ನಿರ್ನ ಜಂಭೈಸ್ತೃಷ್ವನ್ನಮಾವಯತ್॥ ೮ ॥

॥ ಪದಪಾಠಃ ॥

ವಿಶ್ವೇ । ದೇವಾಸಃ । ಅಧ । ವೃಷ್ಣ್ಯಾನಿ । ತೇ । ಅವರ್ಧಯನ್ । ಸೋಮವತ್ಯಾ । ವಚಸ್ಯಯಾ ।
ರದ್ಧಂ । ವೃತ್ರಂ । ಅಹಿಂ । ಇಂದ್ರಸ್ಯ । ಹನ್ಮನಾ । ಅಗ್ನಿಃ । ನ । ಜಂಭೈಃ । ತೃಷು । ಅನ್ನಂ । ಆವಯತ್॥

||ಸಾಯಣಭಾಷ್ಯಂ ||

ಹೇ ಇಂದ್ರ ಅಥ ವೃತ್ರಹನನಾನಂತರಂ ವಿಶ್ವೇ ದೇವಾಸೋ ದೇವಾ ಋತ್ವಿಜಃ ಸೋಮವತ್ಯಾ ಸೋಮಯುಕ್ತಯಾ ವಚಸ್ಯಯಾ ಸ್ತುತೀಚ್ಛಯಾ ತೇ ತ್ವದೀಯಾನಿ ವೃಷ್ಣ್ಯಾನಿ ಬಲಾನ್ಯವರ್ಧಯನ್ । ವರ್ಧಯಂತಿ । ಇಂದ್ರಸ್ಯ ಹನ್ಮನಾ ಹನನಸಾಧನೇನ ವಜ್ರೇಣ ರದ್ಧಂ ॥ ರಧ ಹಿಂಸಾಸಂರಾಧ್ಯೋಃ ॥ ಹಿಂಸಿತಮಹಿಂ ವೃತ್ರಮಪಾಮಾವರಕಂ ಮೇಘಂ ತೃಷು ಶೀಘ್ರಮನ್ನಮಾವಯತ್ । ಅಭಕ್ಷಯತ್ । ತಜ್ಜನ್ಯೇನೋದಕೇನ ಸಂಪಾದಿತಮನ್ನಂ ಜನೋಽಭಕ್ಷಯದಿತ್ಯರ್ಥಃ । ಆವಯತಿರತ್ತಿಕರ್ಮಾ । ತತ್ರ ದೃಷ್ಟಾಂತಃ । ಅಗ್ನಿರ್ನ ಯಥಾಗ್ನಿರ್ಜಂಭೈರಾತ್ಮೀಯೈರ್ದಂತೈರನ್ನಂ ಭಕ್ಷಯತಿ ತದ್ವತ್ ॥

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ಅಥ**—ವೃತ್ರಹನನವಾದೊಡನೆಯೇ । **ವಿಶ್ವೇ ದೇವಾಸಃ**—ಸಕಲ ಋತ್ವಿಕ್ಕುಗಳೂ । **ಸೋಮವತ್ಯಾ**—ಸೋಮದೊಡಿಗೆ ಕೂಡಿದ । **ವಚಸ್ಯಯಾ**—ಸ್ತುತಿಗಳೊಡನೆ । **ತೇ**—ನಿನ್ನ । **ವೃಷ್ಣ್ಯಾನಿ**—ಶಕ್ತಿಗಳನ್ನು । **ಅವರ್ಧಯನ್**—ವೃದ್ಧಿಗೊಳಿಸಿದರು । **ಜಂಭೈಃ**—ತನ್ನ ಜ್ವಾಲೆಗಳಿಂದ । **ಅಗ್ನಿರ್ನ**—ಅಗ್ನಿಯು ಹವಿಸ್ಸುಗಳನ್ನು ಭಕ್ಷಿಸುವಂತೆ । **ಇಂದ್ರಸ್ಯ**—ಇಂದ್ರನ । **ಹನ್ಮನಾ**—ಹನನಸಾಧನವಾದ ವಜ್ರಾಯುಧದಿಂದ । **ರದ್ಧಂ**—ಹೊಡೆಯಲ್ಪಟ್ಟ । **ಅಹಿಂ**—ಶತ್ರುವಾದ । **ವೃತ್ರಂ**—ವೃತ್ರನನ್ನು (ನೀರನ್ನು ಮುಚ್ಚಿದ ಮೇಘವನ್ನು) । **ತೃಷು** ಶೀಘ್ರವಾಗಿ । **ಅನ್ನಂ**—ಅನ್ನರೂಪದಲ್ಲಿ । **ಆವಯತ್**—(ಜನರು) ಭಕ್ಷಿಸಿದರು.

|| ಭಾವಾರ್ಥ ||

ಎಲೈ ಇಂದ್ರನೇ, ವೃತ್ರಹನನವಾದೊಡನೆಯೇ ಸಕಲ ಋತ್ವಿಕ್ಕುಗಳೂ ಸೋಮದಿಂದ ಕೂಡಿದ ಸ್ತುತಿಗಳೊಡನೆ ನಿನ್ನ ಶಕ್ತಿಗಳನ್ನು ವೃದ್ಧಿಗೊಳಿಸಿದರು. ತನ್ನ ಜ್ವಾಲೆಗಳಿಂದ ಅಗ್ನಿಯು ಹವಿಸ್ಸುಗಳನ್ನು ಭಕ್ಷಿಸುವಂತೆ ಇಂದ್ರನ ವಜ್ರಾಯುಧದಿಂದ ಹೊಡೆಯಲ್ಪಟ್ಟ ಶತ್ರುವಾದ ವೃತ್ರನನ್ನು ಎಂದರೆ ನೀರನ್ನು ಮುಚ್ಚಿದ ಮೇಘವನ್ನು ಜನರು ಅನ್ನರೂಪದಲ್ಲಿ ಭಕ್ಷಿಸಿದರು (ನೀರನ್ನು ಕುಡಿದರು)

## English Translation.

Then all the gods magnified your exploits with praise, accompanied with libations of Soma ; (and people) quickly devoured Vritra, the obstructer of water, wounded by Indra's slaughtering (weapon), as Agni devours food with his teeth.

|| ಸಂಹಿತಾಪಾಠಃ ||

ಭೂರಿ ದಕ್ಷೇಭಿರ್ವಚನೇಭಿರೃಕ್ವಭಿಃ ಸಖ್ಯೇಭಿಃ ಸಖ್ಯಾನಿ ಪ್ರ ವೋಚತ ।
ಇಂದ್ರೋ ಧುನಿಂ ಚ ಚುಮುರಿಂ ಚ ದಂಭಯಞ್ಛ್ರದ್ಧಾಮನಸ್ಯಾ ಶೃಣುತೇ
ದಭೀತಯೇ ॥ ೯ ॥

॥ ಪದಪಾಠಃ ॥

ಭೂರಿ । ದಕ್ಷೇಭಿಃ । ವಚನೇಭಿಃ । ಋಕ್ವಽಭಿಃ । ಸಖ್ಯೇಭಿಃ । ಸಖ್ಯಾನಿ । ಪ್ರ । ವೋಚತ ।

ಇಂದ್ರಃ । ಧುನಿಂ । ಚ । ಚುಮುರಿಂ । ಚ । ದಂಭಯನ್ । ಶ್ರದ್ಧಾಽಮನಸ್ಯಾ । ಶೃಣುತೇ । ದಭೀತಯೇ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರಃ ದಕ್ಷೇಭಿರ್ವರ್ಧನಹೇತುಭಿರ್ಋಕ್ವಭಿಃ ॥ ಛಂದಸೀವನಿಪಾವಿತಿವನಿಪ್ಪ್ರತ್ಯಯಃ । ಅಯಸ್ಮಯಾದಿತ್ವೇನ ಭತ್ವಾಜ್ಜಶ್ತ್ವಾಭಾವಃ । ಪದತ್ವಾತ್ಕುತ್ವಂ । ಕಾ. ೧-೪-೨೦ ॥ ಮಂತ್ರಯುಕ್ತೈಃ ಸಖ್ಯೇಭಿಃ ॥ ತದರ್ಹತೀತ್ಯರ್ಥೇ ಛಂದಸಿ ಚೇತಿ ಯತ್ಪ್ರತ್ಯಯಃ ॥ ಸಖ್ಯುರಿಂದ್ರಸ್ಯ ಯೋಗ್ಯೈರ್ವಚನೇ-ಭಿರ್ವಚನೈಃ ಸ್ತೋತ್ರೈಃ ಸಖ್ಯಾನಿ ಸ್ತುತ್ಯಸ್ತೋತ್ರಲಕ್ಷಣಾನ್ಯಭಿಲಕ್ಷ್ಯ ಭೂರಿ ಬಹುವಾರಮಿಂದ್ರಂ ಪ್ರ ವೋಚತ । ಪ್ರಬ್ರೂತ । ಅಭಿಷ್ಟುತ । ಇಂದ್ರಸ್ತು ದಭೀತಯ ಏತನ್ನಾಮಕಾಯ ರಾಜರ್ಷಯೇ ಧುನಿಂ ಚ ಚುಮುರಿಂ ಚೈತನ್ನಾಮಕೌ ದ್ವಾವಸುರೌ ದಂಭಯನ್ ಹಿಂಸಞ್ಛ್ರದ್ಧಾಮನಸ್ಯಾ ॥ ಮನಃಶಬ್ದಾ-ತ್ಕ್ಯಚ್ ॥ ಶ್ರದ್ಧಾಯುಕ್ತಯಾ ಮನಸ ಇಚ್ಛಯಾ ಶೃಣುತೇ । ಯುಷ್ಮಾಭಿಃ ಕೃತಾನಿ ಸ್ತೋತ್ರಾಣಿ ಶೃಣೋತಿ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಗಳೇ) **ದಕ್ಷೇಭಿಃ**—ಪುಷ್ಟಿಗೊಳಿಸಲು ಶಕ್ತವಾದ । **ಋಕ್ವಭಿಃ**—ಮಂತ್ರಗಳಿಂದ ಕೂಡಿದವೂ । **ಸಖ್ಯೇಭಿಃ**—ಮಿತ್ರನಾದ ಇಂದ್ರನಿಗೆ ಯೋಗ್ಯವಾದವೂ ಆದ । **ವಚನೇಭಿಃ**—ಸ್ತುತಿಗಳಿಂದ । **ಸಖ್ಯಾನಿ**—ಉಚಿತವಾದ ರೀತಿಯಲ್ಲಿ । **ಭೂರಿ**—ಅಧಿಕವಾಗಿ । **ಪ್ರ ವೋಚತ**—ಇಂದ್ರನನ್ನು ಸ್ತುತಿಸಿರಿ । **ಇಂದ್ರಃ**—ಇಂದ್ರನು । **ದಭೀತಯೇ**—ದಭೀತಿಯೆಂಬ ರಾಜರ್ಷಿಗಾಗಿ । **ಧುನಿಂ ಚ**—ಧುನಿಯೆಂಬ ರಾಕ್ಷಸನನ್ನೂ । **ಚುಮುರಿಂ ಚ**—ಚುಮುರಿಯನ್ನೂ । **ದಂಭಯನ್**—ನಾಶಮಾಡುತ್ತ । **ಶ್ರದ್ಧಾಮನಸ್ಯಾ**—ಪ್ರೀತಿಯುತವಾದ ಮನಸ್ಸಿನಿಂದ । **ಶೃಣುತೇ**—ಸ್ತುತಿಕರ್ತರ ಸ್ತುತಿಗಳನ್ನು ಕೇಳುತ್ತಾನೆ.

॥ ಭಾವಾರ್ಥ ॥

ಎಲೈ ಸ್ತುತಿಕರ್ತರೇ, ಇಂದ್ರನನ್ನು ಪುಷ್ಟಿಗೊಳಿಸಲು ಶಕ್ತವಾದ ಮಂತ್ರಗಳಿಂದ ಕೂಡಿದವೂ, ಮಿತ್ರನಾದ ಇಂದ್ರನಿಗೆ ಯೋಗ್ಯವಾದವೂ ಆದ ಸ್ತುತಿಗಳಿಂದ ಉಚಿತವಾದ ರೀತಿಯಲ್ಲಿ ಇಂದ್ರನನ್ನು ಅಧಿಕವಾಗಿ ಸ್ತುತಿಸಿರಿ. ಇಂದ್ರನು ದಭೀತಿಯೆಂಬ ರಾಜರ್ಷಿಗಾಗಿ ಧುನಿಯೆಂಬ ರಾಕ್ಷಸನನ್ನೂ ಚುಮುರಿಯನ್ನೂ ನಾಶಮಾಡುತ್ತ ಪ್ರೀತಿಯುತವಾದ ಮಸ್ಸಿನಿಂದ ಸ್ತುತಿಕರ್ತರ ಸ್ತುತಿಗಳನ್ನು ಕೇಳುತ್ತಾನೆ.

## English Translation

Celebrate the numerous benevolent (acts of Indra) with clever affectionate praises, together with texts; Indra subduing (the Asuras) Dhuni, and

Chumuri for (the Rishi) Dabhiti beares the praises made to him with a desire for adoration.

|| ಸಂಹಿತಾಪಾಠಃ ||

ತ್ವಂ ಪುರೂಣ್ಯಾ ಭರಾ ಸ್ವಶ್ವ್ಯಾ ಯೇಭಿರ್ಮಂಸೈ ನಿವಚನಾನಿ ಶಂಸನ್ |
ಸುಗೇಭಿರ್ವಿಶ್ವಾ ದುರಿತಾ ತರೇಮ ವಿದೋ ಷು ಣ ಉರ್ವಿಯಾ ಗಾಧಮದ್ಯ || ೧೦ ||

|| ಪದಪಾಠಃ ||

ತ್ವಂ | ಪುರೂಣಿ | ಆ | ಭರ | ಸುಽಅಶ್ವ್ಯಾ | ಯೇಭಿಃ | ಮಂಸೈ | ನಿಽವಚನಾನಿ | ಶಂಸನ್ |
ಸುಽಗೇಭಿಃ | ವಿಶ್ವಾ | ದುಃಽಇತಾ | ತರೇಮ | ವಿದೋ ಇತಿ | ಸು | ನಃ | ಉರ್ವಿಯಾ | ಗಾಧಂ | ಅದ್ಯ ||

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಂ ಸ್ವಶ್ವ್ಯಾ ಸ್ವಶ್ವ್ಯಾನಿ ಶೋಭನಾಶ್ವಯುಕ್ತಾನಿ ಪುರೂಣಿ ಬಹೂನಿ ಧನಾನಿ ಮಹ್ಯಮಾ ಭರ | ಆಹರ | ಪ್ರಯಚ್ಛ | ನಿವಚನಾನಿ ನಿತರಾಂ ವಕ್ತವ್ಯಾನಿ ಸ್ತೋತ್ರಾಣಿ ಶಂಸನ್ನಹಂ ಯೇಭಿರ್ಧನೈರ್ಮಂಸೈ | ಮನ್ಯತಿರರ್ಚತಿಕರ್ಮಾ | ದೇವಾನ್ಪೂಜಯಾನಿ ತಾನಿ ದೇಹಿ || ಮನ್ಯತೇರ್ಲೇಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ | ಸಿಬ್ಬಹುಲಮಿತಿ ಸಿಪ್ಯಡಾಗಮಃ | ಸಿಪಃ ಪಿತ್ತ್ವೇನಾನುದಾತ್ತತ್ವಾದ್ಧಾತುಸ್ವರಃ || ಸುಗೇಭಿಃ ಸುಷ್ಠು ಗಂತವ್ಯೈಃ ಸ್ತೋತ್ರೈರ್ವಾ ವಿಶ್ವಾ ಸರ್ವಾಣಿ ದುರಿತಾ ದುರಿತಾನಿ ಪಾಪಾನಿ ತರೇಮ | ಹೇ ಇಂದ್ರ ಅದ್ಯಾಸ್ಮಿನ್ಕರ್ಮಣಿ ಗಾಧಂ ಗ್ರಥ್ಯಮಾನಂ ಕ್ರಿಯಮಾಣಂ ನೋಽಸ್ಮದೀಯಂ ಸ್ತೋತ್ರಮುರ್ವಿಯೋರುತ್ವೇನ ಬಹುಮಾನೇನ ಸು ಸುಷ್ಠು ವಿದೋ | ವಿದ ಉ | ಜಾನೀಹ್ಯೇವ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ನಿವಚನಾನಿ**— ಉತ್ತಮವಾದ ಸ್ತೋತ್ರಗಳನ್ನು | **ಶಂಸನ್**— ಪಠಿಸುತ್ತ | **ಯೇಭಿಃ**— ಯಾವ ಧನಗಳೊಡಗೂಡಿ | **ಮಂಸೈ**— ನಿನ್ನನ್ನು ಪೂಜಿಸುವೆನೋ ಅಂತಹ | **ಸ್ವಶ್ವ್ಯಾ**— ಉತ್ತಮವಾದ ಅಶ್ವಗಳಿಂದ ಕೂಡಿದ ಧನಗಳನ್ನು | **ತ್ವಂ**— ನೀನು | **ಪುರೂಣಿ**— ಅತ್ಯಧಿಕವಾಗಿ | **ಆ ಭರ**— ನನಗೆ ಕೊಡು | **ಸುಗೇಭಿಃ**— ಉತ್ತಮವಾದ ಜೀವನಕ್ಕೆ ಯೋಗ್ಯವಾದ ಆ ಧನಗಳೊಡಗೂಡಿ | **ವಿಶ್ವಾ**— ಸಮಸ್ತವಾದ | **ದುರಿತಾ**— ಕಷ್ಟಗಳನ್ನೂ | **ತರೇಮ**— ನಾವು ದಾಟುವಂತಾಗಲಿ | **ಅದ್ಯ**— ಈ ಕರ್ಮಕಾಲದಲ್ಲಿ | **ಗಾಧಂ**— ನಿರ್ಮಿತವಾಗುವ | **ನಃ**— ನಮ್ಮ ಸ್ತುತಿಯನ್ನು | **ಉರ್ವಿಯಾ**— ಅಧಿಕವಾದ ಗೌರವದಿಂದ | **ಸು ವಿದೋ**— ತಿಳಿದು ಸ್ವೀಕರಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಉತ್ತಮವಾದ ಸ್ತೋತ್ರಗಳನ್ನು ಪಠಿಸುತ್ತ ಯಾವ ಧನಗಳೊಡಗೂಡಿ ನಿನ್ನನ್ನು ಪೂಜಿಸುವೆನೋ ಅಂತಹ ಉತ್ತಮವಾದ ಅಶ್ವಗಳಿಂದ ಕೂಡಿದ ಧನಗಳನ್ನು ನೀನು ನನಗೆ ಅಧಿಕವಾಗಿ ಕೊಡು. ಉತ್ತಮವಾದ ಜೀವನಕ್ಕೆ ಯೋಗ್ಯವಾದ ಆ ಧನಗಳೊಡಗೂಡಿ ಸಮಸ್ತವಾದ ಕಷ್ಟಗಳನ್ನೂ ನಾವು ದಾಟುವಂತಾಗಲಿ. ಈ ಕರ್ಮಕಾಲದಲ್ಲಿ ನಿರ್ಮಿತವಾಗುವ ನಮ್ಮ ಸ್ತುತಿಯನ್ನು ಅಧಿಕವಾದ ಗೌರವದಿಂದ ತಿಳಿದು ಸ್ವೀಕರಿಸು.

## English Translation

Do you, Indra, grant me ample riches and excellent horses with which I may honour (the gods) proffering praises; with well-acquired (riches) let us cross over all iniquity, accept our praise to day with the might.

# ನೂರ ಹದಿಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಘರ್ಮೇತಿ ದಶರ್ಚಂ ದ್ವಿತೀಯಂ ಸೂಕ್ತಂ । ಸಧ್ರಿರ್ನಾಮ ವೈರೂಪ ಋಷಿಃ । ತಪಸಃ ಪುತ್ರೋ ಘರ್ಮೋ ವಾ । ಚತುರ್ಥೀ ಜಗತೀ । ಶಿಷ್ಟಾಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಘರ್ಮಾ ಸಧ್ರಿಸ್ತಾಪಸೋ ವಾ ಘರ್ಮೋ ವೈಶ್ವದೇವಂ ಚತುರ್ಥೀ ಜಗತೀತಿ ॥ ಗತೋ ವಿನಿಯೋಗಃ ॥**

ಅನುವಾದವು—**ಘರ್ಮಾ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸಧ್ರಿರ್ವೈರೂಪಃ ಎಂಬುವನು ಋಷಿಯು; ಅಥವಾ ತಪಃಪುತ್ರನಾದ ಘರ್ಮನೆಂಬುವನು ಋಷಿಯು; ವಿಶ್ವೇದೇವತೆಗಳು ದೇವತೆಯು; ಈ ಸೂಕ್ತದ ನಾಲ್ಕನೆಯ ಋಕ್ಕು ಜಗತೀ ಛಂದಸ್ಸವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸವು. ಅನುಕ್ರಮಣಿಕೆಯಲ್ಲಿ—**ಘರ್ಮಾ ಸಧ್ರಿಸ್ತಾಪಸೋ ವಾ ಘರ್ಮೋ ವೈಶ್ವದೇವಂ ಚತುರ್ಥೀ ಜಗತೀ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೧೩

ಮಂಡಲ—೧೦ ॥ ಅನುವಾಕ—೧೦ ॥ ಸೂಕ್ತ—೧೧೩ ॥

ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೧೬, ೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

॥ ಋಷಿಃ—ಸಧ್ರಿರ್ವೈರೂಪೋ ಘರ್ಮೋ ವಾ ತಾಪಸಃ ॥

॥ ದೇವತಾ—ವಿಶ್ವೇದೇವಾಃ ॥

॥ ಛಂದಃ—೧-೩, ೫-೧೦. ತ್ರಿಷ್ಟುಪ್ । ೪. ಜಗತೀ, ॥

॥ ಸಂಹಿತಾಪಾಠಃ ॥

ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಸ್ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ ।

ದಿವಸ್ಪಯೋ ದಿಧಿಷಾಣಾ ಅವೇಷನ್ವಿದುರ್ದೇವಾಃ ಸಹಸಾಮಾನಮರ್ಕಂ ॥

॥ ಪದಪಾಠಃ ॥

ಘರ್ಮಾ । ಸಂऽಅಂತಾ । ತ್ರಿऽವೃತಂ । ವಿ । ಆಪತುಃ । ತಯೋಃ । ಜುಷ್ಟಿಂ । ಮಾತರಿಶ್ವಾ । ಜಗಾಮ ।

ದಿವಃ । ಪಯಃ । ದಿಧಿಷಾಣಾಃ । ಅವೇಷನ್ । ವಿದುಃ । ದೇವಾಃ । ಸಹऽಸಾಮಾನಂ । ಅರ್ಕಂ ॥ ೧ ॥

॥ ಸಾಯಣಭಾಷ್ಯಂ ॥

ಸಮಂತಾ ಸಮಂತೌ ಸಂವ್ಯಾಪ್ತದಿಗಂತೌ ಘರ್ಮಾ ॥ ಘೃ ಕ್ಷರಣದೀಪ್ತ್ಯೋಃ ॥ ಘರ್ಮೌ ದೀಪ್ಯಮಾನಾವಗ್ನ್ಯಾದಿತ್ಯೌ ತ್ರಿವೃತಂ । ತ್ರಯೋ ವಾ ಇಮೇ ತ್ರಿವೃತೋ ಲೋಕಾಃ । ಐ. ಆ. ೧-೧-೨ । ಇತ್ಯಾಮ್ನಾನಾತ್ । ತ್ರೈಲೋಕ್ಯಂ ವ್ಯಾಪತುಃ । ಸ್ವತೇಜೋಭಿರ್ವ್ಯಾಪ್ತವಂತೌ । ಮಾತರಿಶ್ವಾಂತರಿಕ್ಷೇ ವರ್ತಮಾನೋ ವಾಯುಸ್ತಯೋರಗ್ನ್ಯಾದಿತ್ಯಯೋರ್ಜುಷ್ಟಿಂ ಪ್ರೀತಿಂ ಜಗಾಮ । ಗತವಾನ್ । ಯದಾ ಸಹಸಾಮಾನಂ । ಸಾಮಶಬ್ದ ಉಪಲಕ್ಷಕಃ । ವೇದತ್ರಯತೇಜಃಸಹಿತಂ । ಸರ್ವಂ ತೇಜಃ ಸಾಮರೂಪಂ ಹ ಶಶ್ವದಿತ್ಯಾಮ್ನಾನಾತ್। ಈದೃಶಮರ್ಕಮರ್ಚನೀಯಂ ಸೂರ್ಯಂ ದೇವಾ ದೀಪ್ಯಮಾನಾಃ ಸ್ವರಶ್ಮಯೋ ವಿದುಃ ವಿವಿದುಃ ಲೇಭಿರೇ ಪ್ರಾಪುಃ ತದಾ ದಿಧಿಷಾಣಾ ಲೋಕಧಾರಣಶೀಲಾಸ್ತೇ ದಿವೋ ದ್ಯುಲೋಕಸ್ಯ ಸಂಬಂಧಿ ಪಯ ಉದಕಮವೇಷನ್ । ವ್ಯಾಪ್ತವಂತಃ । ವವರ್ಷುರಿತ್ಯರ್ಥಃ ॥ ದಿವಸ್ಪಯ ಇತ್ಯತ್ರ ಷಷ್ಠ್ಯಾಃ ಪತಿಪುತ್ರೇತಿ ಸತ್ವಂ । ದಿಧಿಷಾಣಾಃ । ಧಿಷ ಧಾರಣೇ । ಚಾನಶ್ । ಶಪಃ ಶ್ಲುಃ । ಯದ್ವಾ। ಧಿ ಧಾರಣೇ । ಸನಂತಸ್ಯ ಚಾನಶ್ । ಅಜ್ಝನಗಮಾಂ ಸನೀತಿ ದೀರ್ಘಾಭಾವಶ್ಛಾಂದಸಃ ॥ ಯದ್ವಾ। ಸಮಂತೌ ಸಂಗತೌ ಘರ್ಮೌ ಸ್ವಯಂ ದೀಪ್ಯಮಾನೌ ಜೀವೇಶ್ವರೌ ತ್ರಿವೃತಂ ಸತ್ತ್ವರಜಸ್ತಮೋಗುಣಾತ್ಮಿಕಾಂ ಮಾಯಾಂ ವ್ಯಾಪತುಃ । ನಿಯಂತೃನಿಯಂತವ್ಯಭಾವೇನ ಮಾತರಿಶ್ವಾ ಪರಮಾತ್ಮಾ ತಯೋರ್ಜುಷ್ಟಿಂ ಸಂಭೋಕ್ತವ್ಯಪದಾರ್ಥೈಃ ಸಂಜಾತಾಂ ಪ್ರೀತಿಂ ಜಗಾಮ । ಗತವಾನ್ । ತಂ ಪರಮಾತ್ಮಾನಂ ವೇದಮಯಮಿಮಂ ಸೂರ್ಯಮಿತಿ ದೇವಾ ಜಾನಂತಿ ॥

॥ಪ್ರತಿಪದಾರ್ಥ॥

**ಸಮಂತಾ**—ದಿಂಗತಗಳನ್ನೆಲ್ಲ ವ್ಯಾಪಿಸಿರುವವರೂ । **ಘರ್ಮಾ**—ಪ್ರಕಾಶಮಾನರೂ ಆದ ಅಗ್ನಿ ಮತ್ತು ಆದಿತ್ಯರು । **ತ್ರಿವೃತಂ**—ಮೂರು ಲೋಕಗಳನ್ನೂ । **ವ್ಯಾಪತುಃ**—ವ್ಯಾಪಿಸಿದ್ದಾರೆ । **ಮಾತರಿಶ್ವಾ**—ವಾಯುವು । **ತಯೋಃ**—ಅಗ್ನಿ ಮತ್ತು ಆದಿತ್ಯರಿಗೆ । **ಜುಷ್ಟಿಂ**—ಪ್ರೀತಿಯನ್ನು । **ಜಗಾಮ**—ಉಂಟುಮಾಡಿದ್ದಾನೆ ।

(ಯದಾ—ಯಾವಾಗ) | **ಸಹಸಾಮಾನಂ**—ವೇದತ್ರಯರೂಪವಾದ ತೇಜೋಯುತನಾದವನೂ | **ಅರ್ಕಂ**—ಪೂಜನೀಯನೂ ಆದ ಸೂರ್ಯನನ್ನು | **ದಧಿಷಾಣಾಃ**—ಲೋಕಧಾರಣಸಾಮರ್ಥ್ಯವುಳ್ಳ | **ದೇವಾಃ**—ಪ್ರಕಾಶಮಾನವಾದ ರಶ್ಮಿಗಳು | **ವಿದುಃ**—ಸಮೀಪಿಸಿದವೋ ಆಗ | **ದಿವಃ**—ದ್ಯುಲೋಕಸಂಬಂಧಿಯಾದ | **ಪಯಃ**—ಉದಕಗಳು | **ಅವೇಷನ್**—ವರ್ಷಿಸಿದವು.

|| ಭಾವಾರ್ಥ ||

ದಿಗಂತಗಳನ್ನೆಲ್ಲ ವ್ಯಾಪಿಸಿರುವವರೂ, ಪ್ರಕಾಶಮಾನರೂ ಆದ ಅಗ್ನಿ ಮತ್ತು ಆದಿತ್ಯರು ಮೂರು ಲೋಕಗಳನ್ನೂ ವ್ಯಾಪಿಸಿದಾರೆ. ವಾಯುವು ಅಗ್ನಿ ಮತ್ತು ಆದಿತ್ಯರಿಗೆ ಪ್ರೀತಿಯನ್ನುಂಟುಮಾಡಿದ್ದಾನೆ. ವೇದತ್ರಯರೂಪವಾದ ತೇಜೋಯುತನೂ, ಪೂಜನೀಯನೂ ಆದ ಸೂರ್ಯನನ್ನು ಲೋಕಧಾರಣ ಸಾಮರ್ಥ್ಯವುಳ್ಳವೂ, ಪ್ರಕಾಶಮಾನವೂ ಆದ ರಶ್ಮಿಗಳು ಯಾವಾಗ ಸಮೀಪಿಸಿದವೋ ಆಗ ದ್ಯುಲೋಕಸಂಬಂಧಿಯಾದ ಉದಕಗಳು ವರ್ಷಿಸಿದವು.

## English Translation.

The two sources of heat (Agni and Aditya) spreading to the limit (of the horizon), have pervaded the threefold (universe); Matariswan has come to give them pleasure; (when) the shining (rays) reached the adorable (sun), having the brilliancy of the Saman, sustaining (the universe), they attained the water of heaven.

|| ಸಂಹಿತಾಪಾಠಃ ||

ತಿಸ್ರೋ ದೇಷ್ಟ್ರಾಯ ನಿರ್ಋತೀರುಪಾಸತೇ ದೀರ್ಘಶ್ರುತೋ ವಿ ಹಿ ಜಾನಂತಿ ವಹ್ನಯಃ |
ತಾಸಾಂ ನಿ ಚಿಕ್ಯುಃ ಕವಯೋ ನಿದಾನಂ ಪರೇಷು ಯಾ ಗುಹ್ಯೇಷು ವ್ರತೇಷು || ೨ ||

|| ಪದಪಾಠಃ ||

ತಿಸ್ರಃ | ದೇಷ್ಟ್ರಾಯ | ನಿಃಽಋತೀಃ | ಉಪ | ಆಸತೇ | ದೀರ್ಘಽಶ್ರುತಃ | ವಿ | ಹಿ | ಜಾನಂತಿ | ವಹ್ನಯಃ |
ತಾಸಾಂ | ನಿ | ಚಿಕ್ಯುಃ | ಕವಯಃ | ನಿಽದಾನಂ | ಪರೇಷು | ಯಾಃ | ಗುಹ್ಯೇಷು | ವ್ರತೇಷು || ೨ ||

|| ಸಾಯಣಭಾಷ್ಯಂ ||

ನಿರ್ಋತೀಃ । ಪೃಥಿವೀನಾಮೈತತ್ । ಅನೇನೇತರಲೋಕಾವುಪಲಕ್ಷ್ಯೇತೇ । ತತ್ರಾಧಿಷ್ಠಿತಾಸ್ತಿಸ್ರೋಽಗ್ನ್ಯಾದಿದೇವತಾ ದೇಷ್ಣಾಯ ಹವಿಷಾಂ ಪ್ರದಾನಾಯೋಪಾಸತೇ । ಯಜಮಾನಾ ಉಪಾಸನಂ ಕುರ್ವತೇ । ತತೋ ದೀರ್ಘಶ್ರುತಃ ಪ್ರಭೂತಕೀರ್ತಯೋ ವಹ್ನಯೋ ಜಗತಃ ಪ್ರಾಪಿಕಾಸ್ತಾ ದೇವತಾ ವಿ ಜಾನಂತಿ । ಏತೈಃ ಕೃತಾಮುಪಾಸನಾಂ ಮನ್ಯಂತ ಏವ । ಯದ್ವಾ । ನಿರ್ಋತಿಃ । ನಿಃಶೇಷೇಣಚ್ಛಂತಿ ಗಚ್ಛಂತೀತಿ ನಿರ್ಋತಯಃ । ತಾಸ್ತಿಸ್ರಃ ಸೃಷ್ಟಿಸ್ಥಿತಿಸಂಹೃತೀರ್ದೇಷ್ಣಾಯಾತ್ಮನಃ ಕರ್ಮಭೋಗದಾನಾಯೋಪಾಸತೇ ತೇ ದೀರ್ಘಶ್ರುತೋ ದೀರ್ಘಂ ಸಂಸಾರೇ ಶೃಣ್ವಂತೋ ಮಂತವ್ಯದೃಶ್ಯಾದಿಪದಾರ್ಥಂ ಜಾನಂತಃ । ಮಂತ್ರದೃಷ್ಟ್ಯಾದಿರೂಪಮಜಾನಂತ ಇತ್ಯರ್ಥಃ । ಅತ ಏವ ವಹ್ನಯಃ ಸಂಸಾರಸ್ಯ ವೋಢಾರಸ್ತಾ ನ ಜಾನಂತಿ । ಕವಯಃ ಕ್ರಾಂತದರ್ಶಿನಸ್ತು ತಾಸಾಂ ಸೃಷ್ಟ್ಯಾದೀನಾಮಗ್ನ್ಯಾದೀನಾಂ ವಾ ನಿದಾನಂ ಮೂಲಕಾರಣಂ ಪರಮಾತ್ಮಾನಂ ನಿ ಚಿಕ್ಯುಃ । ನಿತರಾಂ ಚಿನ್ವಂತಿ ಜಾನಂತಿ । ಪರೇಷೂತ್ಕೃಷ್ಟೇಷು ವಾ ಗುಹ್ಯೇಷು ವಾ ಗೋಪ್ತವ್ಯೇಷು ಕರ್ಮಸು ಯಮನಿಯಮಾದಿಷು ವ್ರತೇಷು ಯಾಃ ಪ್ರವೃತ್ತಯಃ ಸಂತಿ ತಾಸಾಂ ನಿದಾನಂ ನಿ ಚಿಕ್ಯುಃ । ಜಾನಂತಿ ॥ ಚಿಞ್ ಚಯನೇ । ಲಿಟಿ ವಿಭಾಷಾಂ ಚೇರಿತ್ಯಭ್ಯಾಸಾದುತ್ತರಸ್ಯ ಕವರ್ಣಾದೇಶಃ । ಯದ್ವಾ। ಚಾಯತೇರ್ಲಿಟಿ ಚಾಯಃ ಕೀ । ಪಾ. ೬–೧–೩೫ । ಇತಿಚ್ಛಂದಸಿ ಕೀತ್ಯಾದೇಶಃ ॥

|| ಪ್ರತಿಪದಾರ್ಥ ||

**ನಿರ್ಋತೀಃ**—ಮೂರು ಲೋಕಗಳನ್ನೂ ಆಶ್ರಯಿಸಿರುವ । **ತಿಸ್ರಃ**—ಅಗ್ನಿ, ವಾಯು ಮತ್ತು ಆದಿತ್ಯ ದೇವತೆಗಳನ್ನೂ । **ದೇಷ್ಣಾಯ**—ಹವಿಸ್ಸನ್ನರ್ಪಿಸಲು । **ಉಪಾಸತೇ**—ಯಜಮಾನರು ಪೂಜಿಸುತ್ತಾರೆ । **ದೀರ್ಘಶ್ರುತಾಃ**—ಅಧಿಕವಾದ ಕೀರ್ತಿಯುಳ್ಳವರೂ । **ವಹ್ನಯಃ**—ಜಗತ್ತುಗಳನ್ನು ವಹಿಸಿರುವವರೂ ಆದ ಈ ದೇವತೆಗಳು । **ವಿ ಜಾನಂತಿ**—ಅವರ ಪೂಜೆಯನ್ನರಿಯುತ್ತಾರೆ । **ಕವಯಃ**—ಪ್ರಾಜ್ಞರು (ತತ್ತ್ವಜ್ಞರು) । **ಪರೇಷು**—ಉತ್ಕೃಷ್ಟವಾದ ಮತ್ತು । **ಗುಹ್ಯೇಷು**—ರಹಸ್ಯವಾದ । **ವ್ರತೇಷು**—ಕರ್ಮಗಳಲ್ಲಿ । **ಯಾಃ**—ಯಾವ ದೇವತೆಗಳು ನಿರತರಾಗಿದ್ದಾರೆಯೋ ಅಂತಹ । **ತಾಸಾಂ**—ಈ ದೇವತೆಗಳ । **ನಿದಾನಂ**—ಮೂಲಕಾರಣವನ್ನು (ಪರಮಾತ್ಮನನ್ನು) । **ನಿ ಚಿಕ್ಯುಃ**—ಪೂರ್ಣವಾಗಿ ಅರಿತಿದ್ದಾರೆ.

|| ಭಾವಾರ್ಥ ||

ಮೂರು ಲೋಕಗಳನ್ನು ಆಶ್ರಯಿಸಿರುವ ಅಗ್ನಿ, ವಾಯು ಮತ್ತು ಆದಿತ್ಯದೇವತೆಗಳನ್ನೂ ಹವಿಸ್ಸನ್ನರ್ಪಿಸಿ ಯಜಮಾನರು ಪೂಜಿಸುತ್ತಾರೆ. ಅಧಿಕವಾದ ಕೀರ್ತಿಯುಳ್ಳವರೂ ಜಗತ್ತುಗಳನ್ನು ವಹಿಸುವವರೂ ಆದ ಈ ದೇವತೆಗಳು ಅವರ ಪೂಜೆಯನ್ನರಿಯುತ್ತಾರೆ. ಉತ್ಕೃಷ್ಟವಾದ ಮತ್ತು ರಹಸ್ಯವಾದ ಕರ್ಮಗಳಲ್ಲಿ ಯಾವ ದೇವತೆಗಳು ನಿರತರಾಗಿದ್ದಾರೆಯೋ ಅಂತಹ ಈ ದೇವತೆಗಳ ಮೂಲಕಾರಣವನ್ನು ಪ್ರಾಜ್ಞರು ಪೂರ್ಣವಾಗಿ ಅರಿಯುತ್ತಾರೆ.

English Translation

The three Nirritis do obeisance for the gifts (of oblations), for (the gods), the far-famed sustainers (of the universe), know (their obeisance); the

wise have ascertained the primary cause of these (divinities) who (exist) in the conspicuous (or) in the hidden observances.

|| ಸಂಹಿತಾಪಾಠಃ ||

ಚತುಷ್ಕಪರ್ದಾ ಯುವತಿಃ ಸುಪೇಶಾ ಘೃತಪ್ರತೀಕಾ ವಯುನಾನಿ ವಸ್ತೇ ।
ತಸ್ಯಾಂ ಸುಪರ್ಣಾ ವೃಷಣಾ ನಿ ಷೇದತುರ್ಯತ್ರ ದೇವಾ ದಧಿರೇ ಭಾಗ-
ಧೇಯಂ ॥ ೩ ॥

|| ಪದಪಾಠಃ ||

ಚತುಃಽಕಪರ್ದಾ । ಯುವತಿಃ । ಸುಽಪೇಶಾಃ । ಘೃತಽಪ್ರತೀಕಾ । ವಯುನಾನಿ । ವಸ್ತೇ ।
ತಸ್ಯಾಂ । ಸುಽಪರ್ಣಾ । ವೃಷಣಾ । ನಿ । ಸೇದತುಃ । ಯತ್ರ । ದೇವಾಃ । ದಧಿರೇ । ಭಾಗಽಧೇಯಂ ॥೩॥

|| ಸಾಯಣಭಾಷ್ಯಂ ||

ಚತುಷ್ಕಪರ್ದಾ ಚತುಷ್ಕೋಣಾ ಯುವತಿಃ ಸ್ತ್ರೀರೂಪಾ ಸುಪೇಶಾಃ ಶೋಭನಾಲಂಕಾರಾ ಘೃತ-ಪ್ರತೀಕಾ ಘೃತಪ್ರಮುಖಹವಿಷ್ಕೃತಾದೃಶೀ ವೇದಿರ್ವಯುನಾನಿ ಜ್ಞಾತವ್ಯಾನಿ ಪದಾರ್ಥಜಾತಾನಿ ಕರ್ಮಾಣಿ ಸ್ತೋತ್ರಾಣಿ ವಾ ವಸ್ತೇ । ಆಚ್ಛಾದಯತಿ । ತಸ್ಯಾಂ ವೇದ್ಯಾಂ ವೃಷಣಾ ವೃಷಣೌ ಹವಿಷಾಂ ವರ್ಷಿತಾರೌ ಸುಪರ್ಣಾ ಸುಪರ್ಣೌ ಸುಪತನೌ ಜಾಯಾಪತೀ ಯಜಮಾನಬ್ರಹ್ಮಾಣೌ ವಾ ನಿಷೇದತುಃ । ನಿಷಣ್ಣೌ ಭವತಃ । ಯತ್ರ ಯಸ್ಯಾಂ ವೇದ್ಯಾಂ ದೇವಾ ಅಗ್ನ್ಯಾದಯೋ ಭಾಗಧೇಯಂ । ಸ್ವಾರ್ಥಿಕೋ ಧೇಯ-ಪ್ರತ್ಯಯಃ । ಸ್ವಸ್ವಭಾಗಂ ಹವಿರ್ದಧಿರೇ । ಧಾರಯಂತಿ ॥ ಯದ್ವಾ। ಚತುಷ್ಕಪರ್ದಾ ನಾಮಾಖ್ಯಾತೋ-ಪಸರ್ಗನಿಪಾತಾಶ್ಚತ್ವಾರಃ ಕಪರ್ದಸ್ಥಾನೀಯಾ ಯಸ್ಯಾಃ ಸಾ ಯುವತಿಸ್ತರುಣೀ ನಿತ್ಯಾ ಘೃತಪ್ರತೀಕಾ ದೀಪ್ಯಮಾನವರ್ಣಾವಯವೈಷಾಪನಿಷದೀ ವಾಗ್ವಯುನಾನಿ ಜ್ಞಾನಾನಿ ವಸ್ತೇ । ಆಚ್ಛಾದಯತಿ । ತಸ್ಯಾಂ ವಾಚಿ ಸುಪರ್ಣಾ ಸುಪರ್ಣೌ ಜೀವಪರಮಾತ್ಮಾನೌ ನಿಷಣ್ಣೌ ಭವತಃ । ಯತ್ರ ॥ ಇತರಾಭ್ಯೋಽಪಿ ದೃಶ್ಯಂತ ಇತಿ ತೃತೀಯಾರ್ಥೇ ತ್ರಲ್ಪ್ರತ್ಯಯಃ ॥ ಯಯಾ ವಾಚಾ ದೇವಾ ಭಾಗಂ ಧಾರಯಂತಿ ॥

|| ಪ್ರತಿಪದಾರ್ಥ ||

**ಚತುಷ್ಕಪರ್ದಾ**— ನಾಲ್ಕು ಮೂಲೆಗಳುಳ್ಳದ್ದೂ । **ಯುವತಿಃ**— ಸ್ತ್ರೀರೂಪವುಳ್ಳದ್ದೂ । **ಸುಪೇಶಾ**— ಉತ್ತಮವಾದ ಅಲಂಕಾರಾತ್ಮಕವಾದುದೂ । **ಘೃತಪ್ರತೀಕಾ**— ಘೃತದಿಂದ ಪ್ರಕಾಶಿಸುವುದೂ ಆದ ಯಜ್ಞವೇದಿಯು। **ವಯುನಾನಿ**— ಉತ್ತಮವಾದ ಕರ್ಮಗಳಿಂದ । **ವಸ್ತೇ**— ಸಿಬಿಡಿವಾಗಿರುತ್ತದೆ । **ಯತ್ರ**— ಯಾವ ವೇದಿಯಲ್ಲಿ । **ದೇವಾಃ**— ಅಗ್ನ್ಯಾದಿ ದೇವತೆಗಳು । **ಭಾಗಧೇಯಂ**— ತಮ್ಮ ತಮ್ಮ ಯಜ್ಞಭಾಗಗಳನ್ನು । **ದಧಿರೇ**— ಧರಿಸು

ವರೋ । **ತಸ್ಯಾಂ**—ಅದೇ ಯಜ್ಞವೇದಿಯಲ್ಲಿ । **ವೃಷಣಾ**—ಇಷ್ಟಾರ್ಥಪ್ರದರೂ । **ಸುಪರ್ಣಾ**—ಉತ್ತಮವಾದ ಆಗಮನನ ವುಳ್ಳವರೂ ಆದ ಯಜಮಾನ ಮತ್ತು ಅವನ ಪತ್ನಿಯು । **ನಿ ಷೇದತುಃ**—ಕುಳಿತುಕೊಳ್ಳುತ್ತಾರೆ.

॥ ಭಾವಾರ್ಥ ॥

ನಾಲ್ಕು ಮೂಲೆಗಳುಳ್ಳದ್ದೂ, ಸ್ತ್ರೀರೂಪದ್ದೂ, ಉತ್ತಮವಾದ ಅಲಂಕಾರವುಳ್ಳದ್ದೂ, ಘೃತದಿಂದ ಪ್ರಕಾಶಿಸುವುದೂ ಆದ ಯಜ್ಞವೇದಿಯು ಉತ್ತಮವಾದ ಕರ್ಮಗಳಿಂದ ವ್ಯಾಪಿಸಲ್ಪಡುತ್ತದೆ. ಯಾವ ವೇದಿಯಲ್ಲಿ ಅಗ್ನ್ಯಾದಿ ದೇವತೆಗಳು ತಮ್ಮ ತಮ್ಮ ಯಜ್ಞಭಾಗಗಳನ್ನು ಪಡೆಯುವರೋ, ಅದೇ ಯಜ್ಞವೇದಿಯಲ್ಲಿ ಇಷ್ಟಾರ್ಥಪ್ರದರೂ, ಪಕ್ಷಿಗಳಂತೆ ಉತ್ತಮವಾದ ಆಗಮನವುಳ್ಳವರೂ, ಆದ ಯಜಮಾನದಂಪತಿಗಳು ಕುಳಿತುಕೊಳ್ಳುತ್ತಾರೆ.

## English Translation.

The qnadrangular (altar) youthful, handsomely decorated, bright with ablations, clothes herself in pious rites; the two birds, the showerers of oblations, have sat down thereon where the gods receive their share.

॥ ಸಂಹಿತಾಪಾಠಃ ॥

ಏಕಃ ಸುಪರ್ಣಃ ಸ ಸಮುದ್ರಮಾ ವಿವೇಶ ಸ ಇದಂ ವಿಶ್ವಂ ಭುವನಂ ವಿ ಚಷ್ಟೇ ।
ತಂ ಪಾಕೇನ ಮನಸಾಪಶ್ಯಮಂತಿತಸ್ತಂ ಮಾತಾ ರೇಳ್ಹಿ ಸ ಉ ರೇಳ್ಹಿ ಮಾತರಂ॥

॥ ಪದಪಾಠಃ॥

ಏಕಃ । ಸುऽಪರ್ಣಃ । ಸಃ । ಸಮುದ್ರಂ । ಆ । ವಿವೇಶ । ಸಃ । ಇದಂ । ವಿಶ್ವಂ । ಭುವನಂ । ವಿ । ಚಷ್ಟೇ।
ತಂ । ಪಾಕೇನ । ಮನಸಾ । ಅಪಶ್ಯಂ । ಅಂತಿತಃ । ತಂ । ಮಾತಾ । ರೇಳ್ಹಿ । ಸಃ । ಊಂ ಇತಿ । ರೇಳ್ಹಿ ।
ಮಾತರಂ ॥ ೪ ॥

॥ ಸಾಯಣಭಾಷ್ಯಂ ॥

ಏಕಃ ಸರ್ವಕಾರ್ಯೇಷ್ವಸಹಾಯಃ ಸುಪರ್ಣಃ ಸುಪತನೋ ಮಧ್ಯಮಸ್ಥಾನೋ ದೇವಃ ಸಮುದ್ರಮಂತರಿಕ್ಷಮಾ ವಿವೇಶ । ಆವಿಶತಿ । ಆವಿಶ್ಯ ಚ ಸ ಇದಂ ವಿಶ್ವಂ ಸರ್ವಂ ಭುವನಂ ಭೂಜಾತಂ ವಿ ಚಷ್ಟೇ । ಅನುಗ್ರಾಹ್ಯತಯಾಭಿಪಶ್ಯತಿ । ತಮೇವಂ ರೂಪಂ ದೇವಂ ಪಾಕೇನ ಪರಿಪಕ್ವೇನ ಮನಸಾಂತಿತಃ ಸಮೀಪೇಽಹಮಪಶ್ಯಂ । ಅದರ್ಶಂ । ಕಿಂಚ ಮಾತೋದಕಾನಾಂ ನಿರ್ಮಾತ್ರೀ ಮಾಧ್ಯಮಿಕಾ ವಾಕ್ ತಾಂ

**ರೇಳ್ಹಿ । ಆಸ್ವಾದಯತಿ । ಉಪಜೀವನಮಾತ್ರಮತ್ರ ಲಕ್ಷ್ಯತೇ । ಸ ಉ ಸ ಖಲು ಮಾತರಂ ವಾಚಂ ರೇಳ್ಹಿ ಲೇಢಿ । ತಾಮೇವೋಪಜೀವತಿ ॥ ಲಿಹ ಆಸ್ವಾದನೇ ॥ ಯದ್ವಾ । ಸುಪರ್ಣಃ ಪಕ್ಷವಾನ್ನಿರಾಧಾರಸಂಚಾರ್ಯೇಕಃ ಪ್ರಾಣವಾಯುಃ ಪರಮಾತ್ಮಾ ವಾ ಸಮುದ್ರಂ । ಸಮುದ್ದ್ರವಂತ್ಯಾಪೋಽಸ್ಮಾದಿತಿ ಸಮುದ್ರಮಂತರಿಕ್ಷಂ । ಯದ್ವಾ । ಸಮುದ್ದ್ರವಂ ಸರ್ವತೋ ಗಮನಂ । ತಚ್ಛೀಲಂ ಪ್ರಪಂಚಜಾತಮಾವಿಷ್ಟವಾನ್। ಸೃಷ್ಟ್ವಾ ತದೇವಾನುಪ್ರಾವಿಶತ್ । ತೈ. ಆ. ೮-೬ । ಇತಿ ಶ್ರುತೇಃ । ವಾಯುಪಕ್ಷೇ ವಾಯ್ವಾದಿರೂಪೇಣಾವಿವೇಶ । ಸ ಇದಂ ವಿಶ್ವಂ ಸರ್ವಂ ಲೋಕಂ ವಿ ಚಷ್ಟೇ । ವಿಶೇಷೇಣ ಖ್ಯಾಪಯತಿ । ಸತಿ ಹಿ ಪ್ರಾಣೇ ಪರಮಾತ್ಮನಿ ವಾ ಜೀವಂತಃ ಪುರುಷಾ ಲೋಕಂ ವಿಖ್ಯಾತಂ ಕುರ್ವಂತಿ । ತಂ ದೇವಮುಪಾಸಕೋಽಹಂ ಪಾಕೇನ ಪರಿಪಕ್ವಜ್ಞಾನೇನ ಮನಸಾಂತಿತಃ ॥ ಅಂತಿಕಶಬ್ದಾತ್ತಸಿಃ । ಅಂತಿಕಸ್ಯ ತಸಿ ಕಾದಿಲೋಪೋ ಭವತ್ಯಾದ್ಯುದಾತ್ತತ್ವಂ ಚ ॥ ಪಾ. ೬-೪-೧೪೯-೮ । ಇತಿ ಕಾದಿಲೋಪಃ ॥ ಅಂತಿಕೇ ಸಮೀಪೇ ಸ್ವಹೃದಯೇಽಪಶ್ಯಂ । ತಂ ಪ್ರಾಣಂ ಮಾತಾ ವಾಗ್ರೇಳ್ಹಿ । ವಾಕ್ ಪ್ರಾಣೇಽಂತರ್ಭವತೀತ್ಯರ್ಥಃ । ಸ್ವಾಪೇ ಹಿ ವಾಗ್ವ್ಯಾಪಾರೋ ನ ದೃಶ್ಯತೇ ಪ್ರಾಣವ್ಯಾಪಾರಸ್ತು ದೃಶ್ಯತ ಇತಿ ॥**

॥ ಪ್ರತಿಪದಾರ್ಥ ॥

**ಏಕಃ**—ಸಮಸ್ತಕಾರ್ಯಗಳಲ್ಲಿಯೂ ಯಾರ ಸಹಾಯವನ್ನೂ ಅಪೇಕ್ಷಿಸದಿರುವ । **ಸುಪರ್ಣಃ**—ಸರ್ವತ್ರ ಗಮನ (ಸಂಚಾರ) ಶೀಲನಾದ ಸುಪರ್ಣ ಎಂಬ ಮಧ್ಯಮ ಸ್ಥಾನದ ದೇವನು । **ಸಮುದ್ರಂ**—ಅಂತರಿಕ್ಷವನ್ನು । **ಆ ವಿವೇಶ**—ಪ್ರವೇಶಿಸುತ್ತಾನೆ (ಪ್ರವೇಶಾನಂತರ) । **ಸಃ**—ಆ ದೇವನು । **ಇದಂ ವಿಶ್ವಂ ಭುವನಂ**— ಈ ಸಮಸ್ತ ಪ್ರಾಣಿವರ್ಗವನ್ನು। **ವಿ ಚಷ್ಟೇ**—ಅನುಗ್ರಹಬುದ್ಧಿಯಿಂದ ನೋಡುತ್ತಾನೆ । **ತಂ**— ಅಂತಹ ದೇವನನ್ನು । **ಪಾಕೇನ-ಮನಸಾ**— ಪರಿಪಕ್ವವಾದ ಬುದ್ಧಿಯಿಂದ । **ಅಂತಿತಃ**—ಸಮೀಪದಲ್ಲಿ । **ಅಪಶ್ಯಂ**—ನೋಡಿದೆನು । **ಮಾತಾ**—ಉದಕಗಳ ನಿರ್ಮಾತ್ರಿಯಾದ ಮಾಧ್ಯಮಿಕಾ ವಾಗ್ದೇವತೆಯು। **ತಂ**—ಸುಪರ್ಣಾಖ್ಯದೇವನನ್ನು । **ರೇಳ್ಹಿ**—ಆಸ್ವಾದನೆಮಾಡುತ್ತಾಳೆ । **ಸಃ ಉ**—ಆ ಸುಪರ್ಣದೇವನೂ ಸಹ । **ಮಾತರಂ**—ವಾಗ್ದೇವತೆಯನ್ನು । **ರೇಳ್ಹಿ**—ಆಸ್ವಾದನೆಮಾಡುತ್ತಾನೆ.

ಅಥವಾ

**ಸುಪರ್ಣಃ**—ಆಧಾರರಹಿತನೂ, ಸಂಚಾರಶೀಲನೂ ಆದ । **ಏಕಃ**—ಪ್ರಾಣವಾಯುವು ಅಥವಾ ಪರಮಾತ್ಮನು । **ಸಮುದ್ರಂ**—ಅಂತರಿಕ್ಷವನ್ನು ಅಥವಾ ಸಂಚರಿಸುವ ಸ್ವಭಾವವುಳ್ಳ ಪ್ರಾಣಿವರ್ಗವನ್ನು । **ಆ ವಿವೇಶ**—ವಾಯುರೂಪದಿಂದ ಪ್ರವೇಶಿಸುತ್ತಾನೆ । **ಸಃ**—ಆ ಪರಮಾತ್ಮನು । **ಇದಂ ವಿಶ್ವಂ ಸರ್ವಂ** – ಈ ಸಮಸ್ತ ಜಗತ್ತನ್ನೂ । **ವಿ ಚಷ್ಟೇ**—ಪ್ರಸಿದ್ಧವನ್ನಾಗಿ ಮಾಡುತ್ತಾನೆ ಎಂದರೆ ಚೇತನಾಯುಕ್ತರನ್ನಾಗಿ ಮಾಡುತ್ತಾನೆ । (**ಅಹಂ**—ಆ ದೇವನನ್ನು ಉಪಾಸನೆಮಾಡುವ ನಾನು) । **ತಂ**—ಆ ದೇವನನ್ನು । **ಪಾಕೇನ**—ಪರಿಪಕ್ವವಾದ ಎಂದರೆ ಯಜ್ಞಾದಿಸತ್ಕರ್ಮಗಳಿಂದಲೂ ತಪಸಾದಿಕ್ರಿಯೆಗಳಿಂದಲೂ ಶುದ್ಧವಾದ । **ಮನಸಾ**—ಮನಸ್ಸಿನಿಂದ । **ಅಂತಿತಃ**—ಸಮೀಪದಲ್ಲಿ ಎಂದರೆ ನನ್ನ ಹೃದಯದಲ್ಲಿ । **ಅಪಶ್ಯಂ**—ನೋಡಿದೆನು । **ತಂ**—ಆ ಪ್ರಾಣವನ್ನು । **ಮಾತಾ**—ವಾಕ್ಕು । **ರೇಳ್ಹಿ**—ಆಸ್ವಾದನೆಮಾಡುತ್ತದೆ । **ಸ ಉ**—ಆ ಪ್ರಾಣವೂ । **ಮಾತರಂ**—ವಾಕ್ಕನ್ನು । **ರೇಳ್ಹಿ**—ಆಸ್ವಾದನೆಮಾಡುತ್ತದೆ.

|| ಭಾವಾರ್ಥ ||

ಸಮಸ್ತಕಾರ್ಯಗಳನ್ನೂ ಯಾರ ಸಹಾಯವೂ ಇಲ್ಲದೆ ಮಾಡುವವನೂ ಸರ್ವತ್ರ ಸಂಚರಿಸಬಲ್ಲವನೂ ಆದ ಸುಪರ್ಣನೆಂಬ ದೇವನು ಅಂತರಿಕ್ಷವನ್ನು ಪ್ರವೇಶಿಸಿ ಅಲ್ಲಿ ಸಂಚರಿಸುತ್ತಾನೆ ಮತ್ತು ಸಮಸ್ತ ಪ್ರಾಣಿವರ್ಗವನ್ನೂ ಅನುಗ್ರಹಬುದ್ಧಿಯಿಂದ ನೋಡುತ್ತಾನೆ. ಅಂತಹ ದೇವನನ್ನು ನಾನು ಪರಿಪಕ್ವವಾದ (ಎಂದರೆ ಭಕ್ತಿಯುತವಾದ) ಬುದ್ಧಿಯಿಂದ ನಾನು ಸಮೀಪದಲ್ಲಿಯೇ ನೋಡಿದೆನು ಉದಕಗಳ ನಿರ್ಮಾತ್ರಿಯೂ ಮತ್ತು ಮಧ್ಯಮಸ್ಥಾನ ದೇವತೆಯೂ ಆದ ವಾಗ್ದೇವತೆಯು ಆ ಸುಪರ್ಣಾಖ್ಯದೇವನನ್ನೂ, ಆ ಸುಪರ್ಣದೇವನು ಆ ವಾಗ್ದೇವತೆಯನ್ನೂ ಪರಸ್ಪರ ಆಶ್ರಯಿಸಿ ಅಂತರಿಕ್ಷದಲ್ಲಿ ವಾಸಿಸುತ್ತಾರೆ.

ಅಥವಾ

ಆಧಾರರಹಿತನೂ, ಸಂಚಾರಶೀಲನೂ ಎಂದರೆ ಸರ್ವತ್ರ ವ್ಯಾಪಿಸಿರುವವನೂ ಆದ ಪ್ರಾಣವಾಯುವು ಅಥವಾ ಪರಮಾತ್ಮನು ಅಂತರಿಕ್ಷವನ್ನು ಅಥವಾ ಚಲನಸ್ವಭಾವವುಳ್ಳ ಪ್ರಾಣಿವರ್ಗವನ್ನು (ಪ್ರಾಣ) ವಾಯುರೂಪದಿಂದ ಪ್ರವೇಶಿಸುತ್ತಾನೆ. ಪ್ರಾಣಿಗಳ ಶರೀರಗಳನ್ನು ಪ್ರವೇಶಿಸಿದನಂತರ ಆ ಪರಮಾತ್ಮನು ಈ ಸಮಸ್ತ ಜಗತ್ತನ್ನೂ ಎಂದರೆ ಸಕಲಭೂತಜಾತವನ್ನೂ ಚೇತನಾಯುಕ್ತರನ್ನಾಗಿ ಮಾಡುತ್ತಾನೆ. ಅಂತಹ ಆ ಪರಮಾತ್ಮನನ್ನು ನಾನು ಅತ್ಯಂತ ಸಮೀಪದಲ್ಲಿ ಎಂದರೆ ನನ್ನ ಹೃದಯದಲ್ಲಿಯೇ ಅಂತರ್ಭೂತನಾಗಿರುವುದನ್ನು, ಶುದ್ಧವೂ ಪರಿಪಕ್ವವೂ ಆದ ಮನಸ್ಸಿನಿಂದ ಎಂದರೆ ಮನಸ್ಸಿನ ಸಹಾಯದಿಂದ ನೋಡಿದೆನು. ವಾಗ್ದೇವತೆ ಎಂದರೆ ಮಾತನಾಡುವ ಶಕ್ತಿಯು ಪ್ರಾಣಿಜಾತಕ್ಕೆ ಪ್ರಾಣವಾಯುವಿರುವವರೆಗೆ ಇರುತ್ತದೆ. ಪ್ರಾಣವ್ಯಾಪಾರವೂ ಸಹ ವಾಗ್ವ್ಯವಹಾರದೊಡನೆ ಮಿಳಿತವಾಗಿಯೇ ಇರುತ್ತದೆ ಪ್ರಾಣವಿರುವವರೆಗೆ ವಾಕ್ಕು ಶರೀರದೊಡನೆ ಸಹಕರಿಸುತ್ತದೆ. ನಿದ್ರಾಕಾಲದಲ್ಲಿ ವಾಗ್ವ್ಯವಹಾರವಿರುವುದಿಲ್ಲ. ಪ್ರಾಣವ್ಯವಹಾರವು ಮಾತ್ರ ಇರುವುದು ಕಂಡುಬರುತ್ತದೆ.

## English Translation.

One of the birds has entered the firmament; he contemplates this whole world: with mind mature I beheld him nigh at hand; him the mother licks, he licks the mother.

|| ವಿಶೇಷವಿಷಯಗಳು ||

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ಏಕಃ ಸುಪರ್ಣಃ ಸ ಸಮುದ್ರಮಾವಿಶತಿ ಸ ಇಮಾನಿ ಸರ್ವಾಣಿ ಭೂತಾನ್ಯಭಿವಿಪಶ್ಯತಿ ತಂ ಪಾಕೇನ ಮನಸಾಪಶ್ಯಮಂತಿತ ಇತ್ಯೃಷೇರ್ದೃಷ್ಟಾರ್ಥಸ್ಯ ಪ್ರೀತಿರ್ಭವತ್ಯಾಖ್ಯಾನಸಂಯುಕ್ತಾ ತಂ ಮಾತಾ ರೇಢಿ ವಾಗೇಷಾ ಮಾಧ್ಯಮಿಕಾ ಸ ಉ ಮಾತರಂ ರೇಢಿ ||**

(ನಿ. ೧೦-೪೬)

ಇಲ್ಲಿ **ಏಕಃ** ಎಂದರೆ ಅದ್ವಿತೀಯನು, ಇವನಂತೆ ಸಾಮರ್ಥ್ಯವುಳ್ಳವರು ಯಾರೂ ಇಲ್ಲ ಅಸಾಧಾರಣವಾದ ಶಕ್ತಿಸಾಮರ್ಥ್ಯವುಳ್ಳವನು ಎಂದರ್ಥವು. ಸುಪರ್ಣಃ ಶ್ರೇಷ್ಠವಾದ ಗಮನವುಳ್ಳವನು ಯಾವಾಗಲೂ ಸಂಚರಿಸುವ

ಸ್ವಭಾವವುಳ್ಳನು ಇವನಂತೆ ಗಮನಶೀಲರಾದವರು ಮತ್ತೊಬ್ಬರಿಲ್ಲ. ಇಂತಹ ವಾಯುವು (ಅಥವಾ ಪ್ರಾಣವಾಯುವು ಅಥವಾ ಪರಮಾತ್ಮನು) ಅಂತರಿಕ್ಷವನ್ನು ಅಥವಾ ಪ್ರಾಣಿಜಾತವನ್ನು ಪ್ರವೇಶಿಸುತ್ತಾನೆ. ಪ್ರವೇಶಮಾಡಿದನಂತರ ಆ ಪ್ರಾಣಿಗಳನ್ನು ನೋಡುತ್ತಾನೆ, ನೋಡುವಂತೆ ಮಾಡುತ್ತಾನೆ ಎಂದರೆ ಚೇತನಾಯುಕ್ತರನ್ನಾಗಿ ಮಾಡಿ ಅವುಗಳು ತಮ್ಮ ತಮ್ಮ ವ್ಯವಹಾರಗಳಲ್ಲಿ ಪ್ರೇರಿತವಾಗುವಂತೆ ಮಾಡುತ್ತಾನೆ. ಇಂತಹ ಗುಣವಿಶಿಷ್ಟನಾದ ಈ ದೇವನನ್ನು ನಾನು ಪಕ್ವವಾದುದೂ ಪ್ರಜ್ಞಾನಯುಕ್ತವಾದುದೂ ಆದ ಮನಸ್ಸಿನಿಂದ ನನ್ನ ಸಮೀಪದಲ್ಲಿಯೇ (ಹೃದಯಾಕಾಶದಲ್ಲಿಯೇ) ನೋಡಿದೆನು (ಎಂದು ಋಷಿಯು ತನ್ನ ಬಳಿ ಇರುವ ಮತ್ತೊಬ್ಬ ಪುರುಷನಿಗೆ ಹೇಳುತ್ತಾನೆ). ಅಂತರಿಕ್ಷದಲ್ಲಿ ವ್ಯಾಪಿಸಿರುವ ಈ ವಾಯುವು ಅಥವಾ ಪರಮಾತ್ಮನು ತಾನು ಪ್ರವೇಶಮಾಡಿದ ಭೂತಜಾತಗಳೊಡನೆ ಅನ್ಯೋನ್ಯಾಶ್ರಯದಿಂದ ವರ್ತಿಸುತ್ತ ಸಹಕರಿಸುತ್ತಾನೆ ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ ।
ಛಂದಾಂಸಿ ಚ ದಧತೋ ಅಧ್ವರೇಷು ಗ್ರಹಾನ್ತ್ಸೋಮಸ್ಯ ಮಿಮತೇ ದ್ವಾದಶ ॥ ೫ ॥

॥ ಪದಪಾಠಃ ॥

ಸುಽಪರ್ಣಂ । ವಿಪ್ರಾಃ । ಕವಯಃ । ವಚಃಽಭಿಃ । ಏಕಂ । ಸಂತಂ । ಬಹುಧಾ । ಕಲ್ಪಯಂತಿ ।
ಛಂದಾಂಸಿ । ಚ । ದಧತಃ । ಅಧ್ವರೇಷು । ಗ್ರಹಾನ್ । ಸೋಮಸ್ಯ । ಮಿಮತೇ । ದ್ವಾದಶ ॥ ೫ ॥

॥ ಸಾಯಣಭಾಷ್ಯಂ ॥

ವಿಪ್ರಾ ಮೇಧಾವಿನಃ ಕವಯಃ ಕ್ರಾಂತಪ್ರಜ್ಞಾ ಮನುಷ್ಯಾಃ ಸುಪರ್ಣಂ ಸುಪತನಮೇಕಂ ಸಂತಂ ಪರಮಾತ್ಮಾನಂ ವಚೋಭಿಃ ಸ್ತುತಿಲಕ್ಷಣೈರ್ವಚನೈರ್ಬಹುಧಾ ಬಹುಪ್ರಕಾರಂ ಕಲ್ಪಯಂತಿ । ಕುರ್ವಂತಿ । ಕಿಂಚ ತ ಏವ ಕವಯೋಽಧ್ವರೇಷು ಯಜ್ಞೇಷು ಛಂದಾಂಸಿ ಗಾಯತ್ರ್ಯಾದೀನಿ ಸಪ್ತ ಛಂದಾಂಸಿ ದಧತಃ ಸ್ತೋತ್ರಶಸ್ತ್ರಾದಿನಾ ಧಾರಯಂತೋ ದ್ವಾದಶಸಂಖ್ಯಾಕಾನ್ಸೋಮಸ್ಯ ಗ್ರಹಾನ್ ಗ್ರಹಣಸಾಧನಾನಿ ಪಾತ್ರಾಣ್ಯುಪಾಂಶ್ವಂತರ್ಯಾಮಾದೀನಿ ಮಿಮತೇ । ನಿರ್ಮಿಮತೇ ॥ ಗ್ರಹಾನ್। ಗೃಹ್ಯತ ಏಭಿರಿತಿ ಗ್ರಹಾಃ । ಗ್ರಹವೃದೃನಿಶ್ಚಿಗಮಶ್ಚೇತಿ ಕರಣೇಽಪ್ಪ್ರತ್ಯಯಃ । ಸೋಮಸ್ಯೇತಿ ಕರ್ಮಣಿ ಷಷ್ಠೀ । ದ್ವಾದಶೇತ್ಯತ್ರ ಸಂಖ್ಯಾ । ಪಾ. ೬-೨-೩೫ । ಇತಿ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ವಿಪ್ರಾಃ**—ಮೇಧಾವಿಗಳೂ | **ಕವಯಃ**—ಕ್ರಾಂತಪ್ರಜ್ಞರೂ ಆದ ಋಷಿಗಳು | **ಸುಪರ್ಣಂ**—ಪರಮಾತ್ಮನನ್ನು | **ಏಕಂ ಸಂತಂ**—ಒಬ್ಬನೇ ಆಗಿದ್ದರೂ ಸಹ | **ವಚೋಭಿಃ**—ತಮ್ಮ ಸ್ತುತಿಗಳಿಂದ | **ಬಹುಧಾ**—ಅನೇಕಪ್ರಕಾರವಾಗಿ | **ಕಲ್ಪಯಂತಿ**—ವರ್ಣಿಸುತ್ತಾರೆ (ಅದೇ ಋಷಿಗಳು) | **ಅಧ್ವರೇಷು**—ಯಜ್ಞಗಳಲ್ಲಿ | **ಛಂದಾಂಸಿ**—ಗಾಯತ್ರ್ಯಾದಿ ಛಂದಸ್ಸುಗಳನ್ನು | **ದಧತಃ**—ಹೊಂದಿದವರಾಗಿ (ಪಠಿಸುತ್ತಾ) | **ಸೋಮಸ್ಯ**—ಸೋಮದ | **ದ್ವಾದಶ ಗ್ರಹಾನ್**—ಅಂತರ್ಯಾಮಾದಿ ಹನ್ನೆರಡು ಪಾತ್ರೆಗಳನ್ನು | **ಮಿಮತೇ**—ನಿರ್ಮಿಸುತ್ತಾರೆ.

॥ ಭಾವಾರ್ಥ ॥

ಪರಮಾತ್ಮನು ಒಬ್ಬನೇ ಆಗಿದ್ದರೂ ಮೇಧಾವಿಗಳೂ ಕ್ರಾಂತಪ್ರಜ್ಞರೂ ಆದ ಋಷಿಗಳು ತಮ್ಮ ಸ್ತುತಿಗಳಿಂದ ಅವನನ್ನು ಬೇರೆ ಬೇರೆ ರೂಪಗಳುಳ್ಳವನೆಂದು ಅನೇಕ ಪ್ರಕಾರವಾಗಿ ವರ್ಣಿಸುತ್ತಾರೆ ಅದೇ ಋಷಿಗಳು ಯಜ್ಞಗಳಲ್ಲಿ ಗಾಯತ್ರ್ಯಾದಿ ಛಂದಸ್ಸುಗಳನ್ನು ಪಠಿಸುತ್ತಾ ಸೋಮದ ಅಂತರ್ಯಾಮಾದಿ ಹನ್ನೆರಡು ಪಾತ್ರೆಗಳನ್ನು ನಿರ್ಮಿಸಿರುತ್ತಾರೆ. (ದ್ವಾದಶಗ್ರಹಪಾತ್ರೆಗಳನ್ನು ಸಿದ್ಧಪಡಿಸುತ್ತಾರೆ)

## English Translation·

The wise seers through their praise make into many forms the bird which is only one; and holding the (seven) metres at the sacrifices, they measure twelve bowls of Soma.

॥ ವಿಶೇಷವಿಷಯಗಳು ॥

**ಛಂದಾಸಿ ಚ ದಧತಃ ಅಧ್ವರೇಷು— ಯಜ್ಞೇಷು ಗಾಯತ್ರ್ಯಾದೀನಿ ಸಪ್ತ ಛಂದಾಂಸಿ ಸ್ತೋತ್ರಶಸ್ತ್ರಾದಿನಾ ಧಾರಯಂತಃ |** ಇಲ್ಲಿ ಛಂದಾಂಸಿ ಎಂದರೆ ಗಾಯತ್ರೀ, ತ್ರಿಷ್ಟುಪ್, ಜಗತೀ ಮುಂತಾದ ಏಳು ವಿಧವಾದ ಮುಖ್ಯ ಛಂದಸ್ಸುಗಳು. ಛಂದಸ್ಸುಗಳಲ್ಲಿ ಅನೇಕವಿಧಗಳಿದ್ದರೂ ಪ್ರಾತರನುವಾಕ, ಮತ್ತು ಶಸ್ತ್ರಮಂತ್ರಗಳಲ್ಲಿ ಗಾಯತ್ರ್ಯಾದಿ ಏಳುವಿಧ ಛಂದಸ್ಸುಗಳಿಂದ ಕೂಡಿದ ಕೆಲವು ಮಂತ್ರಗಳನ್ನು ಮಾತ್ರ ಪಠಿಸುವುದು ರೂಢಿಯಾಗಿದೆ. ಅಂತಹ ಛಂದಸ್ಸುಗಳ ಮಂತ್ರಗಳನ್ನ ಪಠಿಸುತ್ತಾ ಎಂದಭಿಪ್ರಾಯವು.

**ಗ್ರಹಾನ್ ಸೋಮಸ್ಯ ಮಿಮತೇ ದ್ವಾದಶ**—ಗ್ರಹಣಸಾಧನಾನಿ ಪಾತ್ರಾಣ್ಯುಪಾಂಶ್ವಂತರ್ಯಾಮಾದೀನಿ ನಿರ್ಮಿಮಾತೇ | ಗೃಹ್ಯತ ಏಭಿರಿತಿ ಗ್ರಹಾಃ ॥ ಗ್ರಹವೆಂದರೆ ದೇವತೆಗಳು ಸೋಮವನ್ನು ಪಾನಮಾಡತಕ್ಕ ಪಾತ್ರೆಯು ಸೋಮಪಾನಮಾಡುವಾಗ ಆ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಳ್ಳುವುದರಿಂದ (ಗೃಹ್ಯತೇ—ಹಿಡಿದುಕೊಳ್ಳಲ್ಪಡುತ್ತದೆ). ಸೋಮಪಾನಮಾಡುವ ಪಾತ್ರೆಗೆ ಗ್ರಹ ಎಂದು ಹೆಸರು. ಇವುಗಳಿಗೆ ಉಪಾಂಶು ಪಾತ್ರೆ, ಅಂತರ್ಯಾಮಪಾತ್ರೆ ಇತ್ಯಾದಿ ನಾನಾ ಹೆಸರುಗಳಿವೆ. ಈ ಋಕ್ಕಿನಲ್ಲಿ ಇಂತಹ ಹನ್ನೆರಡು ಪಾತ್ರೆಗಳನ್ನು ದೇವತೆಗಳ ಪಾನಾರ್ಥವಾಗಿ ಸೋಮರಸದಿಂದ ತುಂಬಿ ಸಂಸ್ಕಾರಮಾಡಿ ಸಿದ್ಧಪಡಿಸುತ್ತಾರೆ ಎಂದು ಹೇಳಿದೆ.

॥ ಸಂಹಿತಾಪಾಠಃ ॥

ಷಟ್ತ್ರಿಂಶಾಂಶ್ಚ ಚತುರಃ ಕಲ್ಪಯಂತಶ್ಛಂದಾಂಸಿ ಚ ದಧತ ಆದ್ವಾದಶಂ ।
ಯಜ್ಞಂ ವಿಮಾಯ ಕವಯೋ ಮನೀಷ ಋಕ್ಸಾಮಾಭ್ಯಾಂ ಪ್ರ ರಥಂ ವರ್ತಯಂತಿ ॥ ೬ ॥

॥ ಪದಪಾಠಃ ॥

ಷಟ್ಽತ್ರಿಂಶಾನ್ । ಚ । ಚತುರಃ । ಕಲ್ಪಯಂತಃ । ಛಂದಾಂಸಿ । ಚ । ದಧತಃ । ಆಽದ್ವಾದಶಂ ।
ಯಜ್ಞಂ । ವಿಮಾಽಯ । ಕವಯಃ । ಮನೀಷಾ । ಋಕ್ಽಸಾಮಾಭ್ಯಾಂ । ಪ್ರ । ರಥಂ । ವರ್ತಯಂತಿ ॥೬॥

॥ ಸಾಯಣಭಾಷ್ಯಂ ॥

ಪೂರ್ವಂ ಸಾಮಾನ್ಯೇನ ಯಜ್ಞಗ್ರಹಾನುಕ್ತ್ವೇದಾನೀಂ ಸರ್ವಗ್ರಹಾದಿಪೂರ್ವಕೋ ಯಜ್ಞೋಽಭಿಧೀಯತೇ । ಷಟ್ತ್ರಿಂಶಾನ್ । ದ್ವಾವುಪಾಂಶ್ವಂತರ್ಯಾಮೌ । ಐಂದ್ರವಾಯವಾದಯಸ್ತ್ರಯೋ ದ್ವಿದೇವತ್ಯಗ್ರಹಾಃ । ದ್ವೌ ಶುಕ್ರಾಮಂಥಿನೌ । ಆಗ್ರಯಣ ಉಕ್ಥ್ಯೋ ಧ್ರುವಶ್ಚೇತಿ ತ್ರಯಃ । ಋತುಗ್ರಹಾ ದ್ವಾದಶ । ಐಂದ್ರಾಗ್ನೋ ವೈಶ್ವದೇವಶ್ಚ ದ್ವೌ । ತ್ರಯೋ ಮರುತ್ವತೀಯಾಃ । ಏಕೋ ಮಾಹೇಂದ್ರಃ । ಆದಿತ್ಯಸಾವಿತ್ರೌ ದ್ವೌ । ವೈಶ್ವದೇವಃ ಪಾತ್ನೀವತೋ ಹಾರಿಯೋಜನ ಇತಿ ತ್ರಯೋ ಗ್ರಹಾಃ । ಏವಂ ಷಟ್ತ್ರಿಂಶದ್ಭವಂತಿ । ಅತ್ಯಗ್ನಿಷ್ಟೋಮೇ ಪೂರ್ವೇ ಷಟ್ತ್ರಿಂಶದ್ಗ್ರಹಾ ದ್ವಾವಂಶ್ವದಾಭ್ಯೌ ದಧಿಗ್ರಹಃ ಷೋಡಶೀತಿ ಚೇತಿ ಚತ್ವಾರಃ । ಏತಾಂಶ್ಚತ್ವಾರಿಂಶತ್ಸಂಖ್ಯಾಕಾನ್ಗ್ರಹಾನ್ಕಲ್ಪಯಂತಃ ಸೋಮೇನ ಪೂರಯಂತಃ । ಕಿಂಚಾದ್ವಾದಶಂ ॥ ಆಙ್ಮರ್ಯಾದಾಭಿವಿಧ್ಯೋಃ । ಪಾ. ೨-೧-೧೩ । ಇತ್ಯವ್ಯಯೀಭಾವಸಮಾಸಃ । ತಸ್ಯ ಸ್ವರಃ ॥ ದ್ವಾದಶಸಂಖ್ಯಾಕಪ್ರಉಗಾದಿಶಸ್ತ್ರಸಮಾಪ್ತಿಪರ್ಯಂತಂ ಛಂದಾಂಸಿ ಗಾಯತ್ರ್ಯಾದೀನಿ ದಧತಃ ಸಂತಃ ಶಸ್ತ್ರಾದಿರೂಪೇಣ ಧಾರಯಂತಃ ಕವಯೋ ಮನೀಷಾ ॥ ತೃತೀಯಾಯಾ ಆಕಾರಃ ॥ ಮನೀಷಯಾ ಬುದ್ಧ್ಯೈವಂ ಯಜ್ಞಂ ವಿಮಾಯ ನಿರ್ಮಾಯ ರಥಂ । ರಮಂತ್ಯತ್ರೇತಿ ರಥೋ ಯಜ್ಞಃ । ತಂ ರಥಂ ಯಜ್ಞಮೃಕ್ಸಾಮಾಭ್ಯಾಂ ಪ್ರ ವರ್ತಯಂತಿ । ಪ್ರಕರ್ಷೇಣ ಸಂಪಾದಯಂತಿ ॥ ಚತುರ ಇತ್ಯತ್ರ ಚತುರಃ ಶಸೀತ್ಯಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

ಷಟ್ತ್ರಿಂಶಾಂಶ್ಚ ಚತುರಃ— ನಲವತ್ತು (೩೬+೪) ಗ್ರಹಗಳನ್ನು (ಯಜ್ಞಪಾತ್ರೆಗಳನ್ನು) । ಕಲ್ಪಯಂತಃ—ಸೋಮರಸದಿಂದ ತುಂಬುತ್ತಲೂ । ಆದ್ವಾದಶಂ—ಹನ್ನೆರಡು ಸಂಖ್ಯೆಯವರೆಗೆ ಇರುವ ಪ್ರಉಗಾದಿ

ಶಸ್ತ್ರಮಂತ್ರಗಳನ್ನು | **ಛಂದಾಂಸಿ**—ಗಾಯತ್ರ್ಯಾದಿ ಛಂದಸ್ಸುಗಳಿಂದ ಸಹಿತವಾದ ಮಂತ್ರಗಳಿಂದ | **ದಧತಃ**—ಪಠಿಸುತ್ತಲೂ | **ಕವಯಃ**--ಮೇಧಾವಿಗಳಾದ ಋಷಿಗಳು | **ಮನೀಷಾ**—ತಮ್ಮ ಪ್ರಜ್ಞೆಯಿಂದ | **ಯಜ್ಞಂ**—ಯಜ್ಞವನ್ನು | **ವಿಮಾಯ**—ನಿರ್ಮಿಸಿ (ಮುಂದುವರಿಸಿ) | **ರಥಂ**—ಅದೇ ಯಜ್ಞವನ್ನು | **ಋಕ್ಸಾಮಾಭ್ಯಾಂ**—ಋಗ್ವೇದ ಮತ್ತು ಸಾಮವೇದ ಮಂತ್ರಗಳಿಂದ | **ಪ್ರ ವರ್ತಯಂತಿ**—ಅತಿಶಯವಾಗಿ ಅಲಂಕರಿಸಿ ಮುಂದು ವರಿಯುವಂತೆ ಮಾಡುತ್ತಾರೆ.

॥ ಭಾವಾರ್ಥ ॥

ಮೇಧಾವಿಗಳಾದ ಋಷಿಗಳು, ದೇವತೆಗಳು ಯಜ್ಞದಲ್ಲಿ ಸೋಮಪಾನ ಮಾಡುವುದಕ್ಕಾಗಿ ನಲವತ್ತು ಯಜ್ಞ ಪಾತ್ರೆಗಳನ್ನು ಸೋಮರಸದಿಂದ ತುಂಬುತ್ತಲೂ ಹನ್ನೆರಡು ಶಸ್ತ್ರಮಂತ್ರಗಳನ್ನು ಗಾಯತ್ರ್ಯಾದಿ ಏಳುವಿಧ ಛಂದಸ್ಸುಗಳ ಮಂತ್ರಗಳಿಂದ ಪಠಿಸುತ್ತಲೂ ತಮ್ಮ ಪ್ರಜ್ಞೆಯಿಂದ ಯಜ್ಞವನ್ನು ನಿರ್ಮಿಸಿ ಅದೇ ಯಜ್ಞವನ್ನು ಋಕ್ಕುಗಳಿಂದಲೂ ಮತ್ತು ಸಾಮಗಳಿಂದಲೂ ಅಲಂಕರಿಸಿ ಮುಂದುವರಿಯುವಂತೆ ಮಾಡುತ್ತಾರೆ.

## English Translation

Filling thirty-six and four vessels, and holding the metres as for as twelve, measuring out the rite by their by their intelligence, the sages complete the sacrifice with the Ric and the Saman.

॥ ವಿಶೇಷವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ಹನ್ನೆರಡು ಸೋಮಪಾತ್ರೆಗಳನ್ನು ಎಂದು ಹೇಳಿದೆಯಷ್ಟೆ. ಈಗ ಈ ಋಕ್ಕಿನಲ್ಲಿ ಇನ್ನೂ ಕೆಲವು ಪಾತ್ರೆಗಳನು, ಯಾವ ಯಾವ ದೇವತೆಗಳು ಯಾವ ಪಾತ್ರೆಗಳಲ್ಲಿ ಸೋಮಪಾನಮಾಡುವರೆಂಬುದನ್ನು ಇಲ್ಲಿ ಭಾಷ್ಯಕಾರರು ವಿವರಿಸಿದಾರೆ. ಒಟ್ಟು ನಲವತ್ತು ಪಾತ್ರೆಗಳ ಹೆಸರನ್ನು ಇಲ್ಲಿ ಹೇಳಲಾಗಿದೆ. ಅವುಗಳು ಯಾವ ವೆಂದರೆ.

**ಉಪಾಂಶು** ಮತ್ತು **ಅಂತರ್ಯಾಮ** ಎಂಬ ಪಾತ್ರೆಗಳು—೨

**ಐಂದ್ರವಾಯವಃ** ಇಂದ್ರ ಮತ್ತು ವಾಯುದೇವತೆಗಳು ಮೊದಲಾದ ಇಬ್ಬಿಬ್ಬರು ದೇವತೆಗಳು ಒಟ್ಟಿಗೆ ಸೇರಿ ಪಾನಮಾಡತಕ್ಕ ಪಾತ್ರೆಗಳು—೨×೩=೬

**ಶುಕ್ರ** ಮತ್ತು **ಮಂಥೀ** ಎಂಬ ಪಾತ್ರೆಗಳು—೨

**ಆಗ್ರಯಣ, ಉಕ್ಥ್ಯ, ಧ್ರುವ** ಎಂಬ ಪಾತ್ರೆಗಳು—೩

**ಋತುಗ್ರಹ** ಪಾತ್ರೆಗಳು—೧೨

**ಐಂದ್ರಾಗ್ನ ವೈಶ್ವದೇವ** ಪಾತ್ರೆಗಳು—೨

**ಮರುತ್ವತೀಯ** ಪಾತ್ರೆಗಳು—೩

**ಮಾಹೇಂದ್ರಗ್ರಹ** ಪಾತ್ರೆ—೧

**ಆದಿತ್ಯ** ಮತ್ತು **ಸವಿತೃ** ಪಾತ್ರೆಗಳು—೨

ವೈಶ್ವದೇವ, ಪಾತ್ನೀವತ, ಹಾರಿಯೋಜನ ಪಾತ್ರೆಗಳು—೩

ಇವೆಲ್ಲಾ ಸೇರಿದರೆ ಒಟ್ಟು ೩೬ ಗ್ರಹಪಾತ್ರೆಗಳಾಗುವವು, ಇವಲ್ಲದೆ ಅಗ್ನಿಷ್ಟೋಮಯಾಗದಲ್ಲಿ ಅಂಶು, ಅದಾಭ್ಯ, ದಧಿಗ್ರಹ, ಷೋಡಶೀ ಎಂಬ ನಾಲ್ಕು ಬೇರೆ ಗ್ರಹಗಳಿರುವವು. ಇವುಗಳೆಲ್ಲವೂ ಸೇರಿದರೆ ಒಟ್ಟು ೪೦ ಗ್ರಹಪಾತ್ರೆಗಳಾಗುವವು. ಅವುಗಳನ್ನೇ ಇಲ್ಲಿ **ಷಟ್ತ್ರಿಂಶಾಶ್ಚ ಚತುರಃ**—ಮೂವತ್ತಾರು ಮತ್ತು ನಾಲ್ಕು ಎಂದು ಹೇಳಿದೆ.

ಮುಖ್ಯಾಭಿಪ್ರಾಯವು.

ಮೇಧಾವಿಗಳೂ ಪ್ರಾಜ್ಞರೂ ಆದ ಋತ್ವಿಕ್ಕುಗಳು ಯಜ್ಞದಲ್ಲಿ ದೇವತೆಗಳು ಸೋಮಪಾನಮಾಡುವುದಕ್ಕಾಗಿ ನಲವತ್ತುವಿಧವಾದ ಗ್ರಹಪಾತ್ರೆಗಳನ್ನು ಸೋಮರಸದಿಂದ ತುಂಬುತ್ತಾರೆ ಮತ್ತು ಗಾಯತ್ರ್ಯಾದಿ ಏಳು ವಿಧ ಛಂದಸ್ಸುಗಳಿಂದ ಕೂಡಿದ ಪ್ರಉಗ ಮೊದಲಾದ ಹನ್ನೆರಡು ವಿಧ ಶಸ್ತ್ರಮಂತ್ರಗಳನ್ನು ಪಠಿಸುತ್ತಾ ಯಜ್ಞಕರ್ಮವನ್ನು ನೆರವೇರಿಸುತ್ತಾರೆ ಮತ್ತು ಯಜ್ಞದಲ್ಲಿ ಶಸ್ತ್ರಮಂತ್ರಗಳಿಗಾಗಿ ಋಗ್ವೇದದ ಋಕ್ಕುಗಳನ್ನೂ ಸೂಕ್ತಗಳನ್ನೂ ಪಠಿಸುತ್ತಾರೆ. ಸ್ತೋತ್ರಪಠನಕ್ಕಾಗಿ ಸಾಮವೇದ ಮಂತ್ರಗಳನ್ನು ಗಾನಮಾಡುತ್ತಾರೆ. ಈ ರೀತಿ ನಾನಾವಿಧ ಕಾರ್ಯಕಲಾಪಗಳಿಂದ ಯಜ್ಞವನ್ನು ಸಾಂಗವಾಗಿ ನೇರವೇರಿಸುತ್ತಾರೆ ಎಂದು ಋಕ್ಕಿನ ಮುಖ್ಯಾಭಿಪ್ರಾಯವು

|| ಸಂಹಿತಾಪಾಠಃ ||

ಚತುರ್ದಶಾನ್ಯೇ ಮಹಿಮಾನೋ ಅಸ್ಯ ತಂ ಧೀರಾ ವಾಚಾ ಪ್ರ ಣಯಂತಿ-
ಸಪ್ತ |
ಆಪ್ನಾನಂ ತೀರ್ಥಂ ಕ ಇಹ ಪ್ರ ವೋಚದ್ಯೇನ ಪಥಾ ಪ್ರಪಿಬಂತೇ ಸುತಸ್ಯ ||

|| ಪದಪಾಠಃ ||

ಚತುಃऽದಶ | ಅನ್ಯೇ | ಮಹಿಮಾನಃ | ಅಸ್ಯ | ತಂ | ಧೀರಾಃ | ವಾಚಾ | ಪ್ರ | ನಯಂತಿ | ಸಪ್ತ |
ಆಪ್ನಾನಂ | ತೀರ್ಥಂ | ಕಃ | ಇಹ | ಪ್ರ | ವೋಚತ್ | ಯೇನ | ಪಥಾ | ಪ್ರऽಪಿಬಂತೇ | ಸುತಸ್ಯ || ೭ ||

| ಸಾಯಣಭಾಷ್ಯಂ ||

ಅಸ್ಯ ಯಜ್ಞರೂಪಸ್ಯ ಪರಮಾತ್ಮನೋऽನ್ಯೇ ಚತುರ್ದಶ ಚತುರ್ದಶಸಂಖ್ಯಾಕಾ ಮಹಿಮಾನೋ ವಿಭೂತಯೋ ಭವಂತಿ | ತಂ ಯಜ್ಞಂ ಸಪ್ತ ಸಪ್ತಸಂಖ್ಯಾಕಾ ಧೀರಾ ಧೀಮಂತೋ ಹೋತ್ರಾದಯೋ ವಾಚಾ ಶಸ್ತ್ರರೂಪಯಾ ಪ್ರ ಣಯಂತಿ | ಪ್ರಕರ್ಷೇಣ ನಯಂತಿ | ಆಪ್ನಾನಂ || ಆಪ್ಲೃ ವ್ಯಾಪ್ತೌ| ತಾಚ್ಛೀಲಿಕೇ ಚಾನಶಿ ವ್ಯತ್ಯಯೇನ ವಿಕರಣಸ್ಯ ವ್ಯತ್ಯಯಃ || ವ್ಯಾಪನಶೀಲಂ ತೀರ್ಥಂ ಪಾಪೋತ್ತಾರಣಸಮರ್ಥಂ ಚಾತ್ವಾಲೋತ್ಕರಮಧ್ಯದೇಶಮಿಹಾಸ್ಮಿನ್ಯಜ್ಞೇ ಕಃ ಪ್ರ ವೋಚತ್ | ಕೋ ವಕ್ತಿ | ನ

ಕೋsಪೀತ್ಯರ್ಥಃ । ಯೇನ ಪಥಾ ಯೇನ ಯಜ್ಞಮಾರ್ಗೇಣ ಸುತಸ್ಯಾಭಿಷುತಂ ಸೋಮಂ ಪ್ರಪಿಬಂತೇ ದೇವಾ ಅತಿಶಯೇನ ಪಿಬಂತಿ ॥ ಪಾ ಪಾನೇ । ಪಾಘ್ರೇತ್ಯಾದಿನಾ ಪಿಬಾದೇಶಃ । ವ್ಯತ್ಯಯೇನಾತ್ಮನೇಪದಂ । ಉಪಸರ್ಗೇಣ ಸಮಾಸಃ । ಯದ್ವೃತ್ತಯೋಗಾದನಿಘಾತೇ ತಿಙ್ ಚೋದಾತ್ತವತೀತಿ ಗತೇರ್ನಿಘಾತಃ ॥

॥ ಪ್ರತಿಪದಾರ್ಥ ॥

**ಅಸ್ಯ**—ಯಜ್ಞರೂಪನಾದ ಪ್ರಜಾಪತಿಗೆ | **ಚತುರ್ದಶ**—ಹದಿನಾಲ್ಕು ಸಂಖ್ಯೆಯುಳ್ಳ | **ಅನ್ಯೇ ಮಹಿಮಾನಃ**—ಇತರ ವಿಭೂತಿವಿಶೇಷಗಳೂ ಇವೆ | **ತಂ**—ಅವನನ್ನು | **ಸಪ್ತ ಧೀರಾಃ**—ಪ್ರಾಜ್ಞರಾದ ಸಪ್ತ ಹೋತೃಗಳು | **ವಾಚಾ**—ಶಸ್ತ್ರರೂಪವಾದ (ಮಂತ್ರ) ವಾಕ್ಕಿನ ಮೂಲಕ | **ಪ್ರಣಯಂತಿ**—ಮುಂದುವರಿಸುತ್ತಾರೆ | **ಇಹ**—ಈ ಯಜ್ಞದಲ್ಲಿ | **ಯೇನ ಪಥಾ**—ಯಾವ ಯಜ್ಞಮಾರ್ಗದಿಂದ | **ಸುತಸ್ಯ**—ಹಿಂಡಿರುವ ಸೋಮವನ್ನು | **ಪ್ರಪಿಬಂತೇ**—ದೇವತೆಗಳು ಪಾನಮಾಡುವರೋ ಅಂತಹ | **ಆಪ್ನಾನಂ**—ವಿಸ್ತೃತವಾದ | **ತೀರ್ಥಂ**—(ಮತ್ತು) ಪಾಪನಾಶಕರವಾದ ಯಜ್ಞಪ್ರದೇಶವನ್ನು | **ಕಃ**—ಯಾರು ತಾನೇ | **ಪ್ರವೋಚತ್**—ವರ್ಣಿಸಬಲ್ಲರು ?

॥ ಭಾವಾರ್ಥ ॥

ಯಜ್ಞರೂಪನಾದ ಪ್ರಜಾಪತಿಗೆ ಹದಿನಾಲ್ಕು ಸಂಖ್ಯೆಯುಳ್ಳ ಇತರ ವಿಭೂತಿವಿಶೇಷಗಳೂ ಇವೆ. ಅವನನ್ನು ಪ್ರಾಜ್ಞರಾದ ಸಪ್ತಹೋತೃಗಳು ಶಸ್ತ್ರರೂಪವಾದ ವಾಕ್ಕಿನ (ಮಂತ್ರ) ಮೂಲಕ ಸ್ತುತಿಸುತ್ತಾರೆ. ಈ ಯಜ್ಞದಲ್ಲಿ ಯಾವ ವಿಧ್ಯುಕ್ತಮಾರ್ಗದಿಂದ ಹಿಂಡಿರುವ ಸೋಮವನ್ನು ದೇವತೆಗಳು ಪಾನಮಾಡುವರೋ ಅಂತಹ ವಿಸ್ತೃತವಾದುದೂ ಪೂಜ್ಯವಾದುದೂ ಪಾಪೋತ್ತರಣಸಮರ್ಥವಾದುದೂ ಆದ ಚಾತ್ವಾಲ ಮೊದಲಾದ ಯಜ್ಞಸ್ಥಾನಗಳನ್ನು ಯಾರು ತಾನೇವರ್ಣಿಸಬಲ್ಲರು ?

## English Translation.

There are fourteen other great developments of him; seven sages conduct him by prayer. Who may declare the expanded place of sanctity at this (rite), the path by which they drink of the libation.

॥ ಸಂಹಿತಾಪಾಠಃ

ಸಹಸ್ರಧಾ ಪಂಚದಶಾನ್ಯುಕ್ಥಾ ಯಾವದ್ದ್ಯಾವಾಪೃಥಿವೀ ತಾವದಿತ್ತತ್ ।
ಸಹಸ್ರಧಾ ಮಹಿಮಾನಃ ಸಹಸ್ರಂ ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್ ॥ ೮ ॥

|| ಪದಪಾಠಃ ||

ಸಹಸ್ರಧಾ । ಪಂಚಽದಶಾನಿ । ಉಕ್ಥಾ । ಯಾವತ್ । ದ್ಯಾವಾಪೃಥಿವೀ ಇತಿ । ತಾವತ್ । ಇತ್ । ತತ್ ।

ಸಹಸ್ರಧಾ । ಮಹಿಮಾನಃ । ಸಹಸ್ರಂ । ಯಾವತ್ । ಬ್ರಹ್ಮ । ವಿಽಸ್ಥಿತಂ । ತಾವತೀ । ವಾಕ್ ॥ ೮ ॥

|| ಸಾಯಣಭಾಷ್ಯಂ ||

ಸಹಸ್ರಧಾ ಸಹಸ್ರಸಂಖ್ಯಾಕೇಷು ಬ್ರಹ್ಮಾದಿಸ್ತಂಬಪರ್ಯಂತೇಷು ದೇಹೇಷು ಪಂಚದಶಾನಿ ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣ ಇತ್ಯೇತಾನಿ ಪಂಚ । ತದಾಧಾರತ್ವೇನ ಮಾತಾಪಿತ್ರೋಃ ಸಕಾಶಾದಾಗತಾನಿ ಪೃಥಿವ್ಯಪ್ತೇಜೋವಾಯ್ವಾಕಾಶರೂಪಾಣಿ ಭೂತಾನಿ ಮಿಲಿತಾನಿ ದಶ । ಏವಂ ಪಂಚದಶಸಂಖ್ಯಾಕಾನ್ಯುಕ್ಥಾನ್ಯುಕ್ಥ್ಯಪ್ಯಾನ್ಯಂಗಾನಿ ವಿದ್ಯಂತೇ ಪ್ರಾಣಿದೇಹೇಷು ಜಾತೇಷು । ದ್ಯಾವಾಪೃಥಿವೀ ॥ ಷಷ್ಠೀದ್ವಿವಚನಸ್ಯ ಸುಪಾಂ ಸುಲುಗಿತಿ ಪೂರ್ವಸವರ್ಣದೀರ್ಘಃ ॥ ದ್ಯಾವಾಪೃಥಿವ್ಯೋರ್ಯಾವದ್ಯತ್ಪರಿಮಾಣಮಸ್ತಿ ತಾವದಿತ್ತತ್ಪರಿಮಾಣಮೇವಾತ್ಮಾಧಿಷ್ಠಿತಂ ಪ್ರಾಣಿದೇಹಜಾತಂ ಭವತಿ ॥ ಯಾವತ್ತಾವಚ್ಛಬ್ದಯೋರ್ಯತ್ತದೇತೇಭ್ಯಃ ಪರಿಮಾಣೇ ವತುಪಿ । ಪಾ. ೫-೨-೩೯ । ಆ ಸರ್ವನಾಮ್ನಃ । ಪಾ. ೬-೩-೯೧। ಇತಿ ದೀರ್ಘಃ ॥ ಕಿಂಚ ಸಹಸ್ರಧಾ ಸಹಸ್ರಸಂಖ್ಯಾಕೇಷು ಸಹಸ್ರಂ ಮಹಿಮಾನಃ ಸಹಸ್ರಸಂಖ್ಯಾಕಾ ಮಹಾಂತೋ ವ್ಯವಹಾರವಿಶೇಷಾ ಭವಂತಿ । ಪ್ರತಿವಿಷಯಂ ಪ್ರತಿಲಕ್ಷಣಂ ದರ್ಶನಶ್ರವಣಾದಿವ್ಯವಹಾರನಿಷ್ಪತ್ತೇಃ ॥ ಸಹಸ್ರಧೇತ್ಯತ್ರ ವಿಧಾರ್ಥೇ ಧಾಪ್ರತ್ಯಯಃ ॥ ಬ್ರಹ್ಮ ಜಗತ್ಕಾರಣಂ ವಸ್ತು ಯಾವನ್ನಾನಾವಿಧಪ್ರಾಣಿದೇಹರೂಪೇಣ ಯಾವತ್ಪರಿಮಾಣಂ ಭೂತ್ವಾ ವಿಷ್ಠಿತಂ ವಿಶೇಷೇಣ ಸ್ಥಿತಂ ವಾಕ್ ತಾವತೀ ತತ್ಪರಿಮಾಣಾ ಭವತಿ । ಏಕೈಕಸ್ಯಾಭಿಧೇಯಾರ್ಥಸ್ಯೈಕೈಕನಾಮಾಪೇಕ್ಷಣಾತ್ । ಅನ್ಯತ್ರಾಪಿ ಶ್ರೂಯತೇ । ಸರ್ವಾಣಿ ರೂಪಾಣಿ ವಿಚಿಂತ್ಯ ಧೀರೋ ನಾಮಾನಿ ಕೃತ್ವಾಭಿವದನ್ಯದಾಸ್ತೇ ಇತಿ । ಸಹಸ್ರಧಾ ಪಂಚದಶಾನ್ಯುಕ್ಥೇತಿ ಪಂಚ ಹಿ ದಶತೋ ಭವಂತೀತ್ಯಾದಿಕಮಾರಣ್ಯಕಮತ್ರಾನುಸಂಧೇಯಂ । ಐ. ಆ. ೧-೩-೮ ॥

|| ಪ್ರತಿಪದಾರ್ಥ ||

**ಸಹಸ್ರಧಾ**— ಬ್ರಹ್ಮಾದಿಸ್ತಂಬಪರ್ಯಂತವಾದ ಅನೇಕ ವಿಭಾಗಗಳುಳ್ಳ ಈ ಪರಮಾತ್ಮದೇಹದಲ್ಲಿ । **ಪಂಚದಶಾನಿ ಉಕ್ಥಾ**— ಹದಿನೈದು ಮುಖ್ಯವಾದ ಅಂಗಗಳು ಸ್ಥಾಪಿತವಾಗಿವೆ । **ದ್ಯಾವಾಪೃಥಿವೀ**— ದ್ಯಾವಾಪೃಥಿವಿಗಳು । **ಯಾವತ್**— ಎಷ್ಟು ಪರಿಮಾಣವುಳ್ಳವೋ । **ತಾವದಿತ್**— ಅಷ್ಟೇ ಪರಿಮಾಣವುಳ್ಳದ್ದಾಗಿ । **ತತ್**— ಆ ದೇಹ ವಿರುತ್ತದೆ । **ಸಹಸ್ರಧಾ**— ಸಾವಿರಾರು ಪ್ರದೇಶಗಳಲ್ಲಿ । **ಸಹಸ್ರಂ ಮಹಿಮಾನಃ**— ಸಾವಿರಾರು ಮಹತ್ತ್ವಗಳು ಪ್ರಕಟಿತವಾಗಿವೆ । **ಯಾವತ್**— ಎಷ್ಟು ಪರಿಮಾಣವುಳ್ಳದ್ದಾಗಿ । **ಬ್ರಹ್ಮ**— ಜಗತ್ಕಾರಣವಾದ ಬ್ರಹ್ಮವು । **ವಿಷ್ಠಿತಂ**— ಸ್ಥಾಪಿತವಾಗಿದೆಯೋ । **ತಾವತೀ** — ಅಷ್ಟೇ ಪ್ರಮಾಣವುಳ್ಳದ್ದಾಗಿ । **ವಾಕ್**— ವಾಕ್ತತ್ತ್ವವು ವ್ಯಾಪ್ತವಾಗಿದೆ.

|| ಭಾವಾರ್ಥ ||

ಬ್ರಹ್ಮಾದಿಸ್ತಂಬಪರ್ಯಂತವಾದ ಅನೇಕ ವಿಭಾಗಗಳುಳ್ಳ ಈ ಪರಮಾತ್ಮದೇಹದಲ್ಲಿ ಹದಿನೈದು ಮುಖ್ಯವಾದ ಅಂಗಗಳು ಸ್ಥಾಪಿತವಾಗಿವೆ. ದ್ಯಾವಾಪೃಥಿವಿಗಳು ಎಷ್ಟು ಪರಿಮಾಣವುಳ್ಳವೋ ಅಷ್ಟೇ ಪ್ರಮಾಣವುಳ್ಳದ್ದಾಗಿ ಈ ದೇಹವಿರುತ್ತದೆ ಸಾವಿರಾರು ಪ್ರದೇಶಗಳಲ್ಲಿ ಸಾವಿರಾರು ಮಹತ್ತ್ವಗಳು ಪ್ರಕಟಿತವಾಗಿವೆ. ಜಗತ್ಕಾರಣವಾದ ಬ್ರಹ್ಮವು ಎಷ್ಟು ಪ್ರಮಾಣವುಳ್ಳದ್ದಾಗಿ ಸ್ಥಾಪಿತವಾಗಿದೆಯೋ ಅಷ್ಟೇ ಪ್ರಮಾಣವುಳ್ಳದ್ದಾಗಿ ವಾಕ್ತತ್ತ್ವವೂ ವ್ಯಾಪ್ತ ವಾಗಿದೆ.

## English Translation

The fifteeen chief forms (are found) in a thousand places; as heaven heaven and earth are, so verily is that; the thousand great (functions) are in a thousand places; as Brahma is variably developed, so is speech.

|| ವಿಶೇಷವಿಷಯಗಳು ||

**ಸಹಸ್ರಧಾ— ಸಹಸ್ರಸಂಖ್ಯಾಕೇಷು ಬ್ರಹ್ಮಾದಿಸ್ತಂಬಪರ್ಯಂತೇಷು ದೇಹೇಷು** । ಇಲ್ಲಿ ಸಹಸ್ರವೆಂದರೆ ಒಂದು ಸಾವಿರ ಎಂಬ ಸಂಖ್ಯೆಮಾತ್ರವೇ ಅಲ್ಲ ಅನೇಕ ಅಥವಾ ಬಹುವಿಧವಾದ ಪ್ರಾಣಿಗಳ ಶರೀರಗಳಲ್ಲಿ ಎಂದರ್ಥವು.

**ಪಂಚದಶಾನಿ—ಚಕ್ಷುಃಶ್ರೋತ್ರಂ ಮನೋ ವಾಕ್ ಪ್ರಾಣ ಇತ್ಯೇತಾನಿ ಪಂಚ । ತದಾಧಾರತ್ವೇನ ಮಾತಾಪಿತ್ರೋಃ ಸಕಾಶಾದಾಗತಾನಿ ಪೃಥಿವ್ಯಪ್ತೇಜೋವಾಯ್ವಾಕಾಶರೂಪಾಣಿ ಭೂತಾನಿ ಮಿಲಿತಾನಿ ದಶ ।** ಪಂಚದಶವೆಂದರೆ ಹದಿನೈದು ಅಂಶಗಳು ಅಥವಾ ಭಾಗಗಳನ್ನೊಳಗೊಂಡ ಶರೀರಗಳು. ಅವು ಯಾವುವೆಂದರೆ ಪ್ರತಿ ಪ್ರಾಣಿಯ ಶರೀರದಲ್ಲಿಯೂ ಕಣ್ಣು, ಕಿವಿ, ಮನಸ್ಸು, ವಾಕ್ (ಮಾತನಾಡುವ ಅಥವಾ ಶಬ್ದಮಾಡುವ ಸಾಮರ್ಥ್ಯ) ಪ್ರಾಣ ಎಂಬ ಐದು ಜ್ಞಾನೇಂದ್ರಿಯಗಳಿರುವವು. ಇವುಗಳಿಗೆ ಆಧಾರವಾದ ಬಾಹ್ಯಾಂಗಗಳು ಇರುವವು ಎಂದರೆ ನೋಡುವುದು ಮೊದಲಾದ ವ್ಯಾಪಾರಗಳು ಜ್ಞಾನೇಂದ್ರಿಯಗಳಿಗೆ ಸಂಬಂಧಪಟ್ಟಿದ್ದರೂ ಅಂತಹ ಜ್ಞಾನವನ್ನು ಉಂಟು ಮಾಡುವ ಎಂದರೆ ಸಾಧನಭೂತವಾದ ಬಾಹ್ಯೇಂದ್ರಿಯಗಳೂ ಇರುವವು. ಒಂದು ವಸ್ತುವನ್ನು ನೋಡಿ ತಿಳಿಯು ವುದಕ್ಕೆ ಬಾಹ್ಯಾಂಗವಾದ ಕಣ್ಣೂ, ಅಂತರಿಂದ್ರಿಯವಾದ ಮನಸ್ಸೂ ಮುಖ್ಯಸಾಧನಗಳು. ಇದೇ ರೀತಿ ಇತರ ಅಂಗ ಗಳೂ ಇರುವವು. ಅಂತರಿಂದ್ರಿಯಗಳಾದ ಮನಸ್ಸು ಮೊದಲಾದವು ಆಯಾ ಪ್ರಾಣಿಯ ಹಿಂದಿನ ಮತ್ತು ಈಗಿನ ಸ್ಥಿತಿಯನ್ನನುಸರಿಸಿರುವವು. ಬಾಹ್ಯಾಂಗಗಳು ಮಾತ್ರ ಆ ಪ್ರಾಣಿಗಳ ಶರೀರೋತ್ಪತ್ತಿಗೆ ಕಾರಣಭೂತವಾದ ತಂದೆ ತಾಯಿಗಳ ದೇಹಪ್ರಕೃತಿಯನ್ನನುಸರಿಸುವವು. ತಂದೆತಾಯಿಗಳು ದೃಢಕಾಯರಾಗಿದ್ದರೆ ಮಕ್ಕಳೂ ಅವರಂತೆಯೇ ದೃಢಕಾಯರಾಗಿರುವರು. ಆದ್ದರಿಂದ ಬಾಹ್ಯಶರೀರಕ್ಕೆ ಕಾರಣಭೂತವಾದ ಪೃಥಿವ್ಯಪ್ತೇಜೋವಾಯ್ವಾಕಾಶಗಳೆಂಬ ಪಂಚ ಭೂತಗಳೂ (ಪಂಚಭೂತಗಳಿಂದ ಉಂಟಾಗ-ವಶರೀರಗಳು) ತಂದೆತಾಯಿಗಳ ಶರೀರಪ್ರಕೃತಿಯಿಂದಲೇ ಉಂಟಾಗುವವು. ಆದ್ದರಿಂದ ತಂದೆಯಸಂಬಂಧವಾದ ಪಂಚಭೂತಗಳೂ, ತಾಯಿಸಂಬಂಧವಾದ ಪಂಚಭೂತಗಳೂ ಸೇರಿ ಹತ್ತುವಿಧವಾದ ದ್ರವ್ಯಗಳಿಂದಲೂ, ಹಿಂದೆ ಹೇಳಿದ ಚಕ್ಷುಸ್ಸು ಮೊದಲಾದ ಐದು ಇಂದ್ರಿಯಗಳಿಂದಲೂ ಒಟ್ಟು ಹದಿನೈದು ವಿಧ ದ್ರವ್ಯಗಳಿಂದ ಪ್ರತಿಪ್ರಾಣಿಯ ಶರೀರವೂ ಕೂಡಿರುವುದು ಎಂದಭಿಪ್ರಾಯವು.

**ಯಾವತ್ ದ್ಯಾವಾಪೃಥಿವೀ ತಾವತ್ ಇತ್ ತತ್**—ದ್ಯಾವಾಪೃಥಿವಿಗಳು ಸೂಕ್ಷ್ಮ ಮತ್ತು ಸ್ಥೂಲ ರೂಪದ ಪಂಚಭೂತಗಳಿಂದ ಕೂಡಿದ ನಾನಾವಿಧ ದ್ರವ್ಯಗಳಿಂದ ಉಂಟಾಗಿರುವಂತೆ ಈ ಶರೀರವು ಸಹ ಅದರಂತೆಯೇ ನಿರ್ಮಿತವಾಗಿದೆ. ಎಂದರೆ ದ್ಯಾವಾಪೃಥಿವಿಗಳಲ್ಲಿ ಕಂಡುಬರುವ ವಸ್ತುಗಳು ಅಥವಾ ದ್ರವ್ಯಗಳು ಪ್ರಾಣಿಗಳ ಶರೀರ ದಲ್ಲಿಯೂ ಇರುವವು ಎಂದಭಿಪ್ರಾಯವು.

**ಸಹಸ್ರಧಾ ಮಹಿಮಾನಃ ಸಹಸ್ರಂ ಯಾವತ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್— ಬ್ರಹ್ಮ ಜಗತ್ಕಾ-ರಣಂ ವಸ್ತು ನಾನಾವಿಧಪ್ರಾಣಿದೇಹರೂಪೇಣ ಯಾವತ್ಪರಿಮಾಣಂ ಭೂತ್ವಾ ವಿಶೇಷೇಣ ಸ್ಥಿತಂ ವಾಕ್ ಚ ತಾವತೀ ತತ್ಪರಿಮಾಣಾ ಭವತಿ । ಏಕೈಕಸ್ಯಾಭಿಧೇಯಾರ್ಥಸ್ಯೈಕೈಕನಾಮಾಪೇಕ್ಷಣಾತ್ ॥** ಇಲ್ಲಿಯೂ ಸಹ ಸಹಸ್ರಶಬ್ದಕ್ಕೆ ಅನೇಕ, ನಾನಾವಿಧ, ಅಸಂಖ್ಯಾತ, ಬಹಳ ಎಂದರ್ಥವು. ಸರ್ವಕ್ಕೂ ಮೂಲವೂ ಜಗತ್ಕಾರಣವೂ ಆದ ಯಾವ ಬ್ರಹ್ಮವಸ್ತುವಿರುವುದೋ ಅದು ಅಸಂಖ್ಯಾತವಾದ ಮತ್ತು ನಾನಾವಿಧ ಪ್ರಾಣಿಗಳ ಶರೀರಗಳನ್ನು ಹೊಂದಿ ನಾನಾವಿಧ ರೂಪ ಮತ್ತು ಆಕಾರಗಳಿಂದ ವ್ಯವಹರಿಸಲ್ಪಡುವುದು ಅದರಂತೆಯೇ ವಾಕ್ಕು ಸಹ ಅಷ್ಟೇವಿಧವಾದ ನಾಮನಿರ್ದೇಶಗಳಿಂದ ವ್ಯವಹರಿಸಲ್ಪಡುವುದು. ಹೇಗೆಂದರೆ—ಪ್ರಪಂಚದಲ್ಲಿರುವ ಪ್ರತಿ ಪ್ರಾಣಿ ಮತ್ತು ವಸ್ತುವೂ ಸಹ ಬ್ರಹ್ಮವಸ್ತುವಿನ ರೂಪಾಂತರವೇ ಆಗಿದೆ. ಅವುಗಳಿಗೆ ರೂಪಗಳಿರುವಂತೆಯೇ ಪ್ರತಿವಸ್ತುವಿಗೂ ನಾಮ ಎಂದರೆ ಹೆಸರೂ ಇದೆ. ಎಷ್ಟುವಸ್ತುಗಳಿವೆಯೋ ಅಷ್ಟು ಹೆಸರುಗಳಿವೆ. ಆದ್ದರಿಂದ ವಸ್ತುಗಳ ಪರಿಮಾಣಕ್ಕನುಸಾರವಾಗಿ ಹೆಸರುಗಳೂ (ವಾಕ್) ಇರುವುದು ಎಂದು ಇಲ್ಲಿ ವರ್ಣಿಸಲಾಗಿದೆ. ಈ ವಿಷಯವನ್ನು ಸಮರ್ಥನೆಮಾಡುವುದಕ್ಕಾಗಿ ಭಾಷ್ಯಕಾರರು—

**ಸರ್ವಾಣಿ ರೂಪಾಣಿ ವಿಚಿಂತ್ಯ ಧೀರೋ ನಾಮಾನಿ ಕೃತ್ವಾಭಿವದನ್ಯದಾಸ್ತೇ ॥**

(ತೈ. ಆ ೩-೧೨-೭)

**ಸಹಸ್ರಧಾ ಪಂಚದಶಾನ್ಯುಕ್ಥೇತಿ ಪಂಚ ಹಿ ದಶತೋ ಭವಂತಿ ॥**

(ಐ. ಆ ೧-೩-೮)

ಎಂಬ ತೈತ್ತಿರೀಯ ಮತ್ತು ಐತರೇಯ ಆರಣ್ಯಕಗಳ ವಾಕ್ಯಗಳನ್ನು ಉದಾಹರಿಸಿದಾರೆ. ಈ ವಾಕ್ಯಗಳಲ್ಲಿಯೂ ಮೇಲೆ ವಿವರಿಸಿದ ಅಭಿಪ್ರಾಯವೇ ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಕಶ್ಛಂದಸಾಂ ಯೋಗಮಾ ವೇದ ಧೀರಃ ಕೋ ಧಿಷ್ಣ್ಯಾಂ ಪ್ರತಿ ವಾಚಂ ಪಪಾದ ।
ಕಮೃತ್ವಿಜಾಮಷ್ಟಮಂ ಶೂರಮಾಹುರ್ಹರೀ ಇಂದ್ರಸ್ಯ ನಿ ಚಿಕಾಯ ಕಃ ಸ್ವಿತ್ ॥ ೯ ॥

॥ ಪದಪಾಠಃ ॥

ಕಃ । ಛಂದಸಾಂ । ಯೋಗಂ । ಆ । ವೇದ । ಧೀರಃ । ಕಃ । ಧಿಷ್ಣ್ಯಾಂ । ಪ್ರತಿ । ವಾಚಂ । ಪಪಾದ ।

ಕಂ । ಋತ್ವಿಜಾಂ । ಅಷ್ಟಮಂ । ಶೂರಂ । ಆಹುಃ । ಹರೀ ಇತಿ । ಇಂದ್ರಸ್ಯ । ನಿ । ಚಿಕಾಯ । ಕಃ । ಸ್ವಿತ್ ॥ ೯ ॥

॥ ಸಾಯಣಭಾಷ್ಯಂ ॥

ಧೀರೋ ಧೀಮಾನ್ ಕೋ ಮಾನುಷಶ್ಛಂದಸಾಂ ಗಾಯತ್ರ್ಯಾದೀನಾಂ ಯೋಗಂ ಸ್ತುತಶಸ್ತ್ರಾತ್ಮನಾ ನಿಯೋಗಮಾ ವೇದ । ಆಜಾನಾತಿ । ಕೋ ವಾ ಧಿಷ್ಣ್ಯಾಂ । ಧಿಷ್ಣ್ಯಾನಿ ಹೋತ್ರಾದೀನಾಂ ಸಪ್ತ ಸ್ಥಾನಾನಿ । ತದರ್ಹಾಂ ವಾಚಂ ಪ್ರತಿ ಪಪಾದ । ಪ್ರತಿಪಾದಯತಿ । ಕರೋತಿ । ಕಿಂಚರ್ತ್ವಿಜಾಂ ಹೋತ್ರಾದೀನಾಂ ಸಪ್ತಾನಾಮಷ್ಟಮಮಷ್ಟಸಂಖ್ಯಾಪೂರಕಂ ಶೂರಂ ಸ್ವತಂತ್ರಂ ಕಮಾಹುಃ । ವದಂತಿ । ಕಃ ಸ್ವಿತ್ ಕಃ ಖಲ್ವಿಂದ್ರಸ್ಯ ಹರೀ ಋಕ್ಸಾಮರೂಪೌ ದ್ವಾವಶ್ವೌ । ಋಕ್ಸಾಮೇ ವಾ ಇಂದ್ರಸ್ಯ ಹರೀ ಇತ್ಯಾಮ್ನಾಯತೇ । ತಾದೃಶೌ ಹರೀ ನಿ ಚಿಕಾಯ । ನಿತರಾಂ ಪೂಜಯತಿ । ಜಾನಾತಿ । ವೇದಿತಾ ಪ್ರತಿಪಾದಯಿತಾಷ್ಟಸಂಖ್ಯಾಪೂರಕಸ್ಯ ದೇವಸ್ಯ ಜ್ಞಾತಾ ವಾ ಪರಮಾತ್ಮನೋಽನ್ಯೋ ನಾಸ್ತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಕಃ ಧೀರಃ**—ಯಾವ ಪ್ರಾಜ್ಞನು । **ಛಂದಸಾಂ**—ಗಾಯತ್ರ್ಯಾದಿ ಛಂದಸ್ಸುಗಳ । **ಯೋಗಂ**—ಪ್ರಯೋಗವನ್ನು । **ಆ ವೇದ**—ಅರಿಯುತ್ತಾನೆ । **ಧಿಷ್ಣ್ಯಾಂ**—ಹೋತ್ರಾದಿಗಳ ಸಪ್ತಸ್ಥಾನವನ್ನೂ । **ವಾಚಂ**—ಸ್ತುತಿರೂಪದಲ್ಲಿ । **ಕಃ**—ಯಾರು ತಾನೆ । **ಪ್ರತಿ ಪಪಾದ**—ವಿವರಿಸಿ ವರ್ಣಿಸುತ್ತಾನೆ । **ಋತ್ವಿಜಾಂ**—ಋತ್ವಿಕ್ಕುಗಳಲ್ಲಿ । **ಅಷ್ಟಮಂ**—ಎಂಟನೆಯುವನೂ । **ಶೂರಂ**—ಸ್ವತಂತ್ರನೂ ಎಂದು । **ಕಂ**—ಯಾರನ್ನು । **ಆಹುಃ**—ವರ್ಣಿಸುತ್ತಾರೆ । **ಇಂದ್ರಸ್ಯ**—ಇಂದ್ರನ । **ಹರೀ**—ಅಶ್ವಗಳೆಂದು ಪ್ರಸಿದ್ಧವಾದ ಋಕ್ಸಾಮಮಂತ್ರಗಳನ್ನು । **ಕಃ ಸ್ವಿತ್**—ಯಾರು ತಾನೆ । **ನಿ ಚಿಕಾಯ**—ತಿಳಿಯಬಲ್ಲನು ?

॥ ಭಾವಾರ್ಥ ॥

ಗಾಯತ್ರ್ಯಾದಿ ಛಂದಸ್ಸುಗಳ ಪ್ರಯೋಗವನ್ನು ಯಾವ ಪ್ರಾಜ್ಞನು ಅರಿಯುತ್ತಾನೆ ? ಹೋತ್ರಾದಿಗಳ ಸಪ್ತಸ್ಥಾನವನ್ನು ಸ್ತುತಿರೂಪದಲ್ಲಿ ಯಾರು ತಾನೆ ವಿವರಿಸಿ ವರ್ಣಿಸುತ್ತಾನೆ ? ಋತ್ವಿಕ್ಕುಗಳಲ್ಲಿ ಎಂಟನೆಯುವನೂ ಸ್ವತಂತ್ರನೂ ಎಂದು ಯಾರನ್ನು ವರ್ಣಿಸುತ್ತಾರೆ ? ಇಂದ್ರನ ಅಶ್ವಗಳನ್ನು (ಋಕ್ಸಾಮಮಂತ್ರಗಳನ್ನು)ಯಾರು ತಾನೆ ತಿಳಿಯಬಲ್ಲನು ?

## English Translation.

What grave person knows the application of the metres? Who utters the words appropriate to the functions (of the) different priests? Whom do

they call the eighth of the priests, the independent ? Who has done honour to the two bay horses of Indra ?

ವಿಶೇಷ ವಿಷಯಗಳು

ಈ ಋಕ್ಕಿನಲ್ಲಿ ಋಷಿಯು ಯಜ್ಞಾದಿಗಳಲ್ಲಿ ವ್ಯವಹರಿಸಲ್ಪಡುವ ಗಾಯತ್ರ್ಯಾದಿಛಂದಸ್ಸುಗಳ, ಸಪ್ತಹೋತೃಗಳ, ಅವರು ಪಠಿಸುವ ಮಂತ್ರಗಳ, ಆ ಮಂತ್ರಗಳಲ್ಲಿ ಪ್ರತಿಪಾದ್ಯವಾದ ದೇವನ, ಇಂದ್ರನ ಅಶ್ವಗಳೆಂದು ಪ್ರಸಿದ್ಧವಾದ ಋಕ್ಸಾಮಮಂತ್ರಗಳ ಮಹತ್ತ್ವವನ್ನು ಅರಿಯಬಲ್ಲ ಪ್ರಾಜ್ಞನಾರು ಎಂದು ಪ್ರಶ್ನೆಮಾಡಿರುವನು.

**ಕಃ ಛಂದಸಾಂ ಯೋಗಂ ಆ ವೇದ ಧೀರಃ—ಧೀಮಾನ್ ಕಃ ಪುರುಷಃ ಗಾಯತ್ರ್ಯಾದೀನಾಂ ಛಂದಸಾಂ ಸ್ತುತಿಶಸ್ತ್ರಮಾತ್ಮನಾ ನಿಯೋಗಂ ಆಜಾನಾತಿ** ‖ ಛಂದಸ್ಸುಗಳಲ್ಲಿ ಗಾಯತ್ರಿಯೇ ಮೊದಲಾದ ಅನೇಕ ವಿಧ ಛಂದಸ್ಸುಗಳಿರುವವು. ಇಂತಿಂತಹ ಕರ್ಮಗಳನ್ನು ಇಂತಿಂತಹ ಛಂದಸ್ಸಿನ ಮಂತ್ರಗಳಿಂದಲೇ ಮಾಡಬೇಕೆಂಬ ನಿಯಮವಿರುವುದು. ಪ್ರಾತರನುವಾಕಾದಿಮಂತ್ರಪಠನದಲ್ಲಿಯೂ ಗಾಯತ್ರ್ಯಾದಿ ಸಪ್ತಛಂದಸ್ಸಿನ ಬೇರೆ ಬೇರೆ ಮಂತ್ರಗಳನ್ನು ಪಠಿಸಬೇಕೆಂಬ ನಿಯಮವಿದೆ. ಆದ್ದರಿಂದ ಶಸ್ತ್ರಮಂತ್ರಪಠನದಲ್ಲಿಯೂ (ಋಗ್ವೇದಮಂತ್ರಗಳು) ಸ್ತೋತ್ರಮಂತ್ರ (ಸಾಮವೇದಮಂತ್ರ) ಗಳ ಗಾನದಲ್ಲಿಯೂ ಸಂಭಾನುಸಾರ ಉಪಯೋಗಿಸಲ್ಪಡುವ ಗಾಯತ್ರ್ಯಾದಿ ಛಂದಸ್ಸುಗಳ ಪ್ರಯೋಗವನ್ನೂ ಅವುಗಳ ಮಹತ್ತ್ವವನ್ನೂ ಯಾವ ಪುರುಷನು— ಅವನು ಎಷ್ಟೇ ಪ್ರಾಜ್ಞನಾಗಿದ್ದರೂ ತಾನೆ ತಿಳಿಯಬಲ್ಲನು ? (ಯಾರೂ ಪೂರ್ಣವಾಗಿ ತಿಳಿಯಲು ಸಮರ್ಥನಲ್ಲವೆಂದಭಿಪ್ರಾಯವು).

**ಕಃ ಧಿಷ್ಣ್ಯಂ ಪ್ರತಿ ವಾಚಂ ಪಪಾದ— ಕೋ ವಾ ಧಿಷ್ಣ್ಯಾನಿ ಹೋತ್ರಾದೀನಿ ಸಪ್ತಸ್ಥಾನಾನಿ ತದರ್ಹಾಂ ವಾಚಂ ಪ್ರತಿಪಾದಯತಿ** ‖ ಧಿಷ್ಣ್ಯ ಎಂದರೆ ಸ್ಥಾನ, ಪದವಿ. ಹೋತೃವಿಗೆ ಸಂಬಂಧಪಟ್ಟ ಧಿಷ್ಣ್ಯ ಎಂದರೆ ಹೋತೃವೆಂಬ ಋತ್ವಿಜನ ಸ್ಥಾನಮಾನಗಳು, ಅವನು ಯಜ್ಞದಲ್ಲಿ ಪಠಿಸಬೇಕಾದ ಮಂತ್ರಾದಿಗಳು, ಅವನು ನೆರವೇರಿಸಬೇಕಾದ ಕರ್ತವ್ಯಕರ್ಮಗಳು ಇತ್ಯಾದಿ. ಅದರಂತೆ ಇತರ ಋತ್ವಿಕ್ಕುಗಳ ಸ್ಥಾನಮಾನಗಳೂ ಇರುವವು. ಆದ್ದರಿಂದ ಯಜ್ಞಾದಿಕರ್ಮಗಳಲ್ಲಿ ಹೋತೃಮೊದಲಾದವರ ಸ್ಥಾನಮಾನಗಳನ್ನೂ ಅವರ ಕರ್ತವ್ಯಕರ್ಮಗಳನ್ನೂ, ಅವರು ಪಠಿಸಬೇಕಾದ ಮಂತ್ರಗಳನ್ನೂ ಯಾವ ಪುರುಷನು ತಾನೆ ಪೂರ್ಣವಾಗಿ ಅರಿಯಬಲ್ಲನು ?

**ಕಂ ಋತ್ವಿಜಾಂ ಅಷ್ಟಮಂ ಶೂರಂ ಆಹುಃ— ಹೋತ್ರಾದೀನಾಂ ಸಪ್ತಋತ್ವಿಜಾಂ ಅಷ್ಟಸಂಖ್ಯಾಪೂರಕಂ ಸ್ವತಂತ್ರಂ ಕಂ ವದಂತಿ** ‖ ಯಜ್ಞದಲ್ಲಿ ಸಪ್ತಹೋತೃಗಳು ಎಂಬ ಏಳು ಜನ ಮುಖ್ಯ ಋತ್ವಿಕ್ಕುಗಳಿರುವರು. ಆದರೆ ಎಂಟನೆಯವನು ಯಾರು ? ಇದನ್ನು ಹೇಳಲು ಯಾರೂ ಸಮರ್ಥರಲ್ಲ. ಎಂದರೆ ಎಂಟನೆಯವನು ಯಜ್ಞದಲ್ಲಿ ಆರಾಧಿಸಲ್ಪಡುವ ದೇವನೇ ಆಗಿರುವನು. ಇವನು ಯಾರು? ಇವನ ಸ್ವರೂಪವೇನು, ಮಹಾತ್ಮೆಯೇನು ? ಎಂಬುದನ್ನು ಆ ಸರ್ವಜ್ಞನಾದ ಪರಮಾತ್ಮನೊಬ್ಬಮಾತ್ರ ತಿಳಿದು ಹೇಳಬಲ್ಲನು. ಬೇರೆ ಯಾರೂ ತಿಳಿಯಲಾರರು. ಎಂದಭಿಪ್ರಾಯವು

**ಹರೀ ಇಂದ್ರಸ್ಯ ನಿ ಚಿಕಾಯ ಕಃ ಸ್ವಿತ್— ಕಃ ಖಲು ಇಂದ್ರಸ್ಯ ಋಕ್ಸಾಮರೂಪೌ ಹರೀ ನಿತರಾಂ ಪೂಜಯತಿ ಜಾನಾತಿ** ‖ ಇಂದ್ರನ ಅಶ್ವಗಳೆಂದು ಪ್ರಸಿದ್ಧವಾದ ಋಕ್ಸಾಮಮಂತ್ರಗಳನ್ನೂ ಅವುಗಳ ನಿಜವಾದ

ಅರ್ಥವನ್ನೂ ಯಾವ ಪುರುಷನು ತಾನೇ ಸರಿಯಾಗಿ ತಿಳಿಯಬಲ್ಲನು? ಸರ್ವಶಕ್ತನಾದ ಪರಮಾತ್ಮನನ್ನು ಬಿಟ್ಟರೆ ಇದನ್ನು ತಿಳಿಯುವವರು ಬೇರೆ ಯಾರೂ ಇಲ್ಲ ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಭೂಮ್ಯಾ ಅಂತಂ ಪರ್ಯೇಕೇ ಚರಂತಿ ರಥಸ್ಯ ಧೂರ್ಷು ಯುಕ್ತಾಸೋ ಅಸ್ಥುಃ ।
ಶ್ರಮಸ್ಯ ದಾಯಂ ವಿ ಭಜಂತ್ಯೇಭ್ಯೋ ಯದಾ ಯಮೋ ಭವತಿ ಹರ್ಮ್ಯೇ ಹಿತಃ ॥ ೧೦ ॥

॥ ಪದಪಾಠಃ ॥

ಭೂಮ್ಯಾಃ । ಅಂತಂ । ಪರಿ । ಏಕೇ । ಚರಂತಿ । ರಥಸ್ಯ । ಧೂಃऽಸು । ಯುಕ್ತಾಸಃ । ಅಸ್ಥುಃ ।
ಶ್ರಮಸ್ಯ । ದಾಯಂ । ವಿ । ಭಜಂತಿ । ಏಭ್ಯಃ । ಯದಾ । ಯಮಃ । ಭವತಿ । ಹರ್ಮ್ಯೇ । ಹಿತಃ ॥ ೧೦ ॥

॥ ಸಾಯಣಭಾಷ್ಯಂ ॥

ಏಕೇ ಕೇಚನಾಶ್ವಾ ಭೂಮ್ಯಾಃ ಪೃಥಿವ್ಯಾಃ । ಅನೇನ ದ್ಯುಲೋಕೋऽಪ್ಯುಪಲಕ್ಷ್ಯತೇ । ದ್ಯುಲೋಕಸ್ಯ ಚಾಂತಂ ಪರ್ಯಂತಂ ಪರಿ ಚರಂತಿ । ತದಾನೀಂ ಸರ್ವತ ಆಗಚ್ಛಂತಿ । ತದಾ ಚ ತೇऽಶ್ವಾ ರಥಸ್ಯ ಧೂರ್ಷು ಯುಗಾದಿಭಾರೇಷು ಯುಕ್ತಾಸೋ ಯುಕ್ತಾಃ ಸಂತೋऽಸ್ಥುಃ । ತಿಷ್ಠಂತಿ । ಏಭ್ಯೋऽಶ್ವೇಭ್ಯಃ ಶ್ರಮಸ್ಯ ದಾಯಂ ॥ ದೋ ಅವಖಂಡನೇ । ಘಞ್ । ಕರ್ಷಾತ್ವತ ಇತ್ಯಂತೋದಾತ್ತತ್ವಂ ॥ ಶ್ರಮಸ್ಯ ನಾಶಕಂ ಘಾಸಾದಿಕಂ ವಿ ಭಜಂತಿ । ದೇವಾಃ ಪ್ರಯಚ್ಛಂತಿ । ಯದಾ ಯಸ್ಮಿನ್ಕಾಲೇ ಯಮೋ ನಿಯಂತಾ ಸೂರ್ಯೋ ಹರ್ಮ್ಯೇ ಹರ್ಮ್ಯಸ್ಥಾನೀಯೇ ರಥೇ ಹಿತೋ ನಿಹಿತೋ ಭವತಿ । ತದೈತೇ ಭಜಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಏಕೇ—ಕೆಲವು ಅಶ್ವಗಳು ಎಂದರೆ ಸೂರ್ಯನ ಸಪ್ತಾಶ್ವಗಳು । **ಭೂಮ್ಯಾಃ**—ಪೃಥ್ವಿಯ । **ಅಂತಂ**—ಕೊನೆಯ ಪ್ರದೇಶಗಳಲ್ಲಿ । **ಪರಿ ಚರಂತಿ**—ಸಂಚರಿಸುತ್ತವೆ (ಆ ಕಾಲದಲ್ಲಿ ಅದೇ ಅಶ್ವಗಳು) । **ರಥಸ್ಯ**—ರಥದ । **ಧೂರ್ಷು**—ನೊಗಗಳಲ್ಲಿ । **ಯುಕ್ತಾಸಃ**—ಕಟ್ಟಲ್ಪಟ್ಟವಾಗಿ । **ಅಸ್ಥುಃ**—ಇರುತ್ತವೆ । **ಯದಾ**—ಯಾವಾಗ । **ಯಮಃ**—ಈ ಸಪ್ತಾಶ್ವಗಳನ್ನು ನಿಯಮಿಸುವ ಸೂರ್ಯನು । **ಹರ್ಮ್ಯೇ**—ತನ್ನ ರಥದಲ್ಲಿ । **ಹಿತಃ**—ಸ್ಥಾಪಿತ

ನಾಗಿ । **ಭವತಿ**—ಆಗುವನೋ ಆಗ । **ಏಭ್ಯಃ**—ಈ ಅಶ್ವಗಳಿಗೆ । **ಶ್ರಮಸ್ಯ ದಾಯಂ**—ಶ್ರಮನಾಶಕವಾದ ಹುಲ್ಲು ಮೊದಲಾದ ಆಹಾರ ಸಾಮಗ್ರಿಗಳನ್ನು । **ವಿ ಭಜಂತಿ**—ದೇವತೆಗಳು ಕೊಡುತ್ತಾರೆ.

॥ ಭಾವಾರ್ಥ ॥

ಕೆಲವು ಅಶ್ವಗಳು (ಸೂರ್ಯನ ಸಪ್ತಾಶ್ವಗಳು) ದ್ಯಾವಾಪೃಥ್ವಿಗಳ ತುತ್ತ ತುದಿಯವರೆಗೂ ಸಂಚರಿಸುತ್ತವೆ. ಆಗ ಅದೇ ಅಶ್ವಗಳು ರಥದ ನೊಗಗಳಲ್ಲಿ ಕಟ್ಟಲ್ಪಟ್ಟವಾಗಿ ಇರುತ್ತವೆ. ಯಾವಾಗ ಈ ಸಪ್ತಾಶ್ವಗಳನ್ನೂ ನಿಯಮಿಸುವ ಸೂರ್ಯನು ತನ್ನ ರಥದಲ್ಲಿ ಕುಳಿತುಕೊಳ್ಳುವನೋ ಆಗ ಈ ಅಶ್ವಗಳಿಗೆ ಶ್ರಮನಾಶಕವಾದ ತೃಣಾದಿ ಆಹಾರ ಸಾಮಗ್ರಿಗಳನ್ನು ದೇವತೆಗಳು ಕೊಟ್ಟು ಉಪಚರಿಸುತ್ತಾರೆ.

English Translation

Some (horses) proceed to the limit of the earth; they stand still harnessed to the yoke of the chariot; (the gods) apportion among them the alleviation of fatigue, when the charioteer is placed (ready to drive them) to their dwelling.

---

## ನೂರ ಹದಿನೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಚಿತ್ರ ಇತಿ ನವರ್ಚಂ ತೃತೀಯಂ ಸೂಕ್ತಮಾಗ್ನೇಯಂ । ಉಪಸ್ತುತೋ ನಾಮ ವೃಷ್ಟಿಹವ್ಯಪುತ್ರ ಋಷಿಃ । ಅಷ್ಟಮೀ ತ್ರಿಷ್ಟುಪ್ । ನವಮೀ ಶಕ್ವರೀ । ಆದಿತಃ ಸಪ್ತ ಜಗತ್ಯಃ । ತಥಾ ಚಾನುಕ್ರಾಂತಂ । ಚಿತ್ರ ಇನ್ನವ ವಾರ್ಷ್ಟಿಹವ್ಯ ಉಪಸ್ತುತ ಆಗ್ನೇಯಂ ಜಾಗತಂ ತ್ರಿಷ್ಟುಪ್ಶಕ್ವರ್ಯಂತಮಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಜಾಗತೇ ಛಂದಸೀದಂ ಸೂಕ್ತಂ । ಸೂತ್ರಿತಂ ಚ । ಚಿತ್ರ ಇಚ್ಛಿಶೋರ್ವಸುಂ ನ ಚಿತ್ರಮುಹಸಮಿತಿ ಜಾಗತಂ । ಆ. ೪-೧೩ । ಇತಿ ॥**

ಅನುವಾದವು—**ಚಿತ್ರಃ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವೃಷ್ಟಿಹವ್ಯಪುತ್ರನಾದ ಉಪಸ್ತುತನೆಂಬುವನು ಋಷಿಯು ; ಅಗ್ನಿಯು ದೇವತೆಯು; ಈ ಸೂಕ್ತದ ಎಂಟನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು ; ಒಂಭತ್ತನೆಯದು ಶಕ್ವರೀಛಂದಸ್ಕವು ; ಮೊದಲಿನ ಏಳು ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಚಿತ್ರ ಇನ್ನವ ವಾರ್ಷ್ಟಿಹವ್ಯ ಉಪಸ್ತುತ ಆಗ್ನೇಯಂ ಜಾಗತಂ ತ್ರಿಷ್ಟುಪ್‌ಶಕ್ವರ್ಯಂತಂ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಮಂತ್ರಗಳನ್ನು ಪಠಿಸುವಾಗ ಜಗತೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ-- **ಚಿತ್ರ ಇಚ್ಛಿಶೋರ್ವಸುಂ ನ ಚಿತ್ರಮುಹಸಮಿತಿ ಜಾಗತಂ** ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು.

## ಸೂಕ್ತ—೧೧೫

ಮಂಡಲ—೧೦ ॥ ಅನುವಾಕ—೧೦ ॥ ಸೂಕ್ತ—೧೧೫ ॥
ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೧೮, ೧೯ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
॥ ಋಷಿಃ—ಉಪಸ್ತುತೋ ವಾರ್ಷ್ಟಿಹವ್ಯಃ ॥
॥ ದೇವತಾ—ಅಗ್ನಿಃ ॥
॥ ಛಂದಃ—೧—೭. ಜಗತೀ । ೮. ತ್ರಿಷ್ಟುಪ್ । ೯. ಶಕ್ವರೀ॥



॥ ಸಂಹಿತಾಪಾಠಃ ॥

ಚಿತ್ರ ಇಚ್ಛಿಶೋಸ್ತರುಣಸ್ಯ ವಕ್ಷಥೋ ನ ಯೋ ಮಾತರಾವಪ್ಯೇತಿ ಧಾತವೇ ।
ಅನೂಧಾ ಯದಿ ಜೀಜನದಧಾ ಚ ನು ವವಕ್ಷ ಸದ್ಯೋ ಮಹಿ ದೂತ್ಯಂ೧ ಚರನ್ ॥ ೧ ॥

॥ ಪದಪಾಠಃ ॥

ಚಿತ್ರಃ । ಇತ್ । ಶಿಶೋಃ । ತರುಣಸ್ಯ । ವಕ್ಷಥಃ । ನ । ಯಃ । ಮಾತರಾ । ಅಪಿಽಏತಿ । ಧಾತವೇ ।
ಅನೂಧಾಃ । ಯದಿ । ಜೀಜನತ್ । ಅಧ । ಚ । ನು । ವವಕ್ಷ । ಸದ್ಯಃ । ಮಹಿ । ದೂತ್ಯಂ । ಚರನ್ ॥೧॥

॥ ಸಾಯಣಭಾಷ್ಯಂ ॥

ಶಿಶೋಃ ಶಿಶುಭೂತಸ್ಯ ಅತ ಏವ ತರುಣಸ್ಯ ನೂತನಸ್ಯಾಗ್ನೇರ್ವಕ್ಷಥಃ ॥ ವಕ್ಷೇರೌಣಾದಿಕೋಽಥಪ್ರತ್ಯಯಃ ॥ ಹವಿರ್ವಹನಂ ಚಿತ್ರ ಇದಾಶ್ಚರ್ಯಭೂತಮೇವ ಯೋ ಜಾತೋಽಗ್ನಿರ್ಮಾತರಾ ಸರ್ವಸ್ಯ ನಿರ್ಮಾತ್ರ್ಯೌ ಮಾತೃಪಿತೃಭೂತೇ ದ್ಯಾವಾಪೃಥಿವ್ಯಾವರಣ್ಯೌ ವಾ ಧಾತವೇ ನಾಪ್ಯೇತಿ ॥ ಧೇಟ್ ಪಾನೇ । ತುಮರ್ಥೇ ತವೇನ್ಪ್ರತ್ಯಯಃ ॥ ಪಾನಾಯಾಪಿ ನ ಗಚ್ಛತಿ ॥ ಇಣ್ ಗತೌ । ಲಟ್ಯುಪಸರ್ಗೇಣ ಸಮಾಸಃ । ತಿಙಿ ಚೋದಾತ್ತವತೀತಿ ಗತೇರ್ನಿಘಾತಃ ॥ ಅನೂಧಾಃ ॥ ನಞ್ಪೂರ್ವೋ ಬಹುವ್ರೀಹಿಃ । ಸಮಾಸಾಂತಸ್ಯಾನಙಃ ಸ್ತ್ರಿಯಾಮಿಷ್ಟತ್ವಾದತ್ರಾನಙಭಾವಃ । ಪಾ. ೫-೪-೧೩೧ । ಪ್ರತ್ಯೇಕವಿವಕ್ಷಯೈಕವಚನಂ ॥ ಊಧೋರಹಿತೋಽಯಂ ಲೋಕೋಽಸೌ ಲೋಕಶ್ಚೈನಮಗ್ನಿಂ ಯದಿ ಜೀಜನತ್ ಅಜೀಜನತ್ ಅಜನಯತ್ । ತರ್ಹಿ ಸ್ತನಪಾನಾಯ ನ ಗಚ್ಛತೀತಿ ಯುಕ್ತಂ । ತಥಾ ನ ಭವತಿ । ಕಿಂತು ದ್ಯಾವಾಪೃಥಿವ್ಯೌ ಸರ್ವೇಷಾಂ ಕಾಮದುಘೇ ಖಲು । ತಥಾಪಿ ನ ಯಾತಿ । ತಸ್ಮಾದಸ್ಯ ಹವಿರ್ವಹನಂ ಚಿತ್ರಂ । ಅಧ ಚೋತ್ಪತ್ತ್ಯನಂತರ-

**ಮೇವ ಸ್ವದ್ಯಾ ಸ್ಮಿನ್ನಿನೇ ಸದ್ಯಸ್ತದಾನೀಮೇವ ಶೀಘ್ರಂ ಮಹಿ ಮಹದ್ದೂತ್ಯಂ ॥ ದೂತಸ್ಯ ಭಾಗಕರ್ಮಣೀ ಇತಿ ಕರ್ಮಣಿ ಯತ್ಪ್ರತ್ಯಯಃ ॥ ದೂತಕರ್ಮ ಚರನ್ ವವಕ್ಷ । ದೇವಾನ್ಪ್ರತಿ ಹವೀಂಷಿ ವಹತಿ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಅಗ್ನಿಯು । **ಮಾತರೌ**—ಜಗನ್ನಿರ್ಮಾತ್ರಿಗಳೂ ಮಾತಾಪಿತೃಸ್ಥಾನೀಯರೂ ಆದ ದ್ಯಾವ ಪೃಥಿವಿಗಳಲ್ಲಿಗೆ । **ಧಾತವೇ**—ಸ್ತನ್ಯಪಾನಕ್ಕಾಗಿ । **ನ ಅಪ್ಯೇತಿ**—ಹೋಗುವುದಿಲ್ಲವೋ ಅಂತಹ । **ಶಿಶೋಃ**—ಶಿಶುರೂಪನೂ । **ತರುಣಸ್ಯ**—ಯುವಕನೂ ಆದ ಅಗ್ನಿಯ । **ವಕ್ಷಥಃ**—ಹವಿರ್ವಹನಕರ್ಮವು । **ಚಿತ್ರ-ಇತ್**—ಆಶ್ಚರ್ಯಕರವಾಗಿಯೇ ಇದೆ । **ಅನೂಧಾಃ**—ಕೆಚ್ಚಲೇ ಇಲ್ಲದ ಮಾತೃವು । **ಯದಿ**—ಯಾವ ಮಾಹಾತ್ಮ್ಯದಿಂದ । **ಜೀಜನತ್**—ಅಗ್ನಿಯನ್ನು ಹಡೆದಳೋ (ಆದುದರಿಂದಲೇ ಅವನಿಗೆ ಸ್ತನ್ಯಪಾನವಿಲ್ಲ) । **ಅಧ ಚ**—ಉತ್ಪನ್ನನಾದೊಡನೆಯೇ । **ಸದ್ಯಃ**—ಶೀಘ್ರವಾಗಿ । **ಮಹಿ**—ಮಹತ್ತಾದ । **ದೂತ್ಯಂ**—ದೇವದೂತನ ಕರ್ಮವನ್ನು । **ಚರನ್**—ಆಚರಿಸುತ್ತ । **ವವಕ್ಷ**—ದೇವತೆಗಳಿಗೆ ಹವಿಸ್ಸನ್ನು ವಹಿಸುತ್ತಾನೆ.

॥ ಭಾವಾರ್ಥ ॥

ಯಾವ ಅಗ್ನಿಯು ಜಗನ್ನಿರ್ಮಾತ್ರಿಗಳೂ ಮಾತಾಪಿತೃಸ್ಥಾನೀಯರೂ ಆದ ದ್ಯಾವಾಪೃಥಿವಿಗಳಲ್ಲಿಗೆ ಸ್ತನ್ಯಪಾನಕ್ಕಾಗಿ ಹೋಗುವುದಿಲ್ಲವೋ ಅಂತಹ ಶಿಶುರೂಪನೂ, ಯುವಕನೂ ಆದ ಅಗ್ನಿಯ ಹವಿರ್ವಹನಕರ್ಮವು ಆಶ್ಚರ್ಯಕರವಾಗಿಯೇ ಇದೆ. ಕೆಚ್ಚಲೇ ಇಲ್ಲದ ಮಾತೃವು ಯಾವ ಮಾಹಾತ್ಮ್ಯದಿಂದ ಅಗ್ನಿಯನ್ನು ಹಡೆದಳೋ ಆದುದರಿಂದಲೇ ಅವನಿಗೆ ಸ್ತನ್ಯಪಾನವಿಲ್ಲ. ಉತ್ಪನ್ನನಾದೊಡನೆಯೇ ಶೀಘ್ರವಾಗಿ ಮಹತ್ತಾದ ದೇವದೂತನ ಕರ್ಮವನ್ನಾಚರಿಸುತ್ತ ಅಗ್ನಿಯು ದೇವತೆಗಳಿಗೆ ಹವಿಸ್ಸನ್ನು ವಹಿಸುತ್ತಾನೆ.

## English Translation.

Wonderful is the conveyance of (the oblation by) the tender infant, who does not come to his parents to drink, although the underless (world) gave him birth : he immediately bears (the oblation to the gods) fulfilling the important office of their messenger.

॥ ವಿಶೇಷವಿಷಯಗಳು ॥

**ಯಃ ಧಾತಯೇ ಮಾತರೌ ನ ಅಪ್ಯೇತಿ (ತಸ್ಯ) ಶಿಶೋಃ ತರುಣಸ್ಯ ವಕ್ಷಥಃ ಚಿತ್ರ ಇತ್**—ದ್ಯಾವಾಪೃಥಿವಿಗಳು ಜಗನ್ನಿರ್ಮಾತೃಗಳು ಮಾತ್ರವೇ ಅಲ್ಲ ಅವರು ಪ್ರಪಂಚದಲ್ಲಿರುವ ಸಮಸ್ತರಿಗೂ ತಾಯಿತಂದೆಗಳಾಗಿರುವರು. ಏಕೆಂದರೆ ಸಮಸ್ತ ಪ್ರಾಣಿಗಳೂ ದ್ಯಾವಾಪೃಥಿವಿಗಳ ಅಂತರದಲ್ಲಿಯೇ, ದ್ಯಾವಾಪೃಥಿವಿಗಳ ಅಂಶದಿಂದಲೇ (ಎಂದರೆ ಪಂಚಭೂತಗಳಿಂದಲೇ) ಉತ್ಪನ್ನವಾಗುವವು. ಆದ್ದರಿಂದ ದ್ಯಾವಾಪೃಥಿವಿಗಳು ಅಗ್ನಿಗೂ ಮಾತಾಪಿತೃಗಳು ; ಲೋಕವ್ಯವಹಾರದಲ್ಲಿ ಆಗತಾನೇ ಹುಟ್ಟಿದ ಶಿಶುವು ಕೆಲವು ಕಾಲದವರೆಗೆ ಸ್ತನ್ಯಪಾನಕ್ಕಾಗಿ ತನ್ನ ತಾಯಿಯನ್ನು ಆಶ್ರಯಿಸುವುದು ವಾಡಿಕೆಯಾಗಿದೆಯಷ್ಟೆ. ಆದರೆ ಅಗ್ನಿಯು ಸ್ತನ್ಯಪಾನಕ್ಕಾಗಿ ತನ್ನ ತಾಯಿತಂದೆಗಳಾದ ದ್ಯಾವಾಪೃಥಿವಿಗಳನ್ನು ಅಥವಾ ತನ್ನ ಉತ್ಪತ್ತಿಸ್ಥಾನವಾದ ಅರಣಿಗಳನ್ನು ಆಶ್ರಯಿಸುವುದಿಲ್ಲ.

**ಅನೂಧಾಃ ಯದಿ ಜೀಜನತ್ ಊಧೋ ರಹಿತೋಽಯಂ ಲೋಕಶ್ಚೈನಮಗ್ನಿಂ ಯದಿ ಅಜನಯತ್ ತರ್ಹಿ ಸ್ತನಪಾನಾಯ ನ ಗಚ್ಛತೀತಿ ಯುಕ್ತಂ । ತಥಾ ನ ಭವತಿ । ಕಿಂತು ದ್ಯಾವಾಪೃಥಿವ್ಯೌ ಸರ್ವೇಷಾಂ ಕಾಮದುಘೇ ಖಲು । ತಥಾಪಿ ನ ಯಾತಿ । ತಸ್ಮಾದಸ್ಯ ಹವಿರ್ವಹನಂ ಚಿತ್ರಂ ॥** ಮೇಲೆ ಹೇಳಿದ ದ್ಯಾವಾಪೃಥಿವಿಗಳು ಅಗ್ನಿಗೆ ಪಿತೃಮಾತೃಸ್ಥಾನೀಯರೆಂದು ಹೇಳಿದೆಯಷ್ಟೆ. ಲೋಕವ್ಯವಹಾರದಲ್ಲಿರುವಂತೆ ತಾಯಿಯಾದವಳಿಗೆ ತನ್ನ ಮಕ್ಕಳ ಸ್ತನ್ಯಪಾನಕ್ಕಾಗಿ ಮೊಲೆಗಳಿರಬೇಕಾದುದು ಸಹಜವು ಈ ದ್ಯಾವಾಪೃಥಿವಿಗಳಿಗೆ ಆರೀತಿ ಮೊಲೆಗಳಿಲ್ಲದಿರುವುದರಿಂದ ಅಗ್ನಿಯು ಸ್ತನ್ಯಪಾನಕ್ಕಾಗಿ ಅವರನ್ನು ಆಶ್ರಯಿಸಲಿಲ್ಲ ಎಂದು ಹೇಳಿದರೆ ಅದು ಸರಿಯಲ್ಲ. ಏಕೆಂದರೆ ದ್ಯಾವಾಪೃಥಿವಿಗಳು ಸರ್ವಪ್ರಾಣಿಗಳಿಗೂ ಅವರವರಿಗೆ ಇಷ್ಟವಾದ ಆಹಾರಾದಿಗಳನ್ನು ಒದಗಿಸಿ ಪೋಷಿಸುವವು ಎಂಬುದು ಪ್ರಸಿದ್ಧವು. ಹೀಗಿದ್ದರೂ ಸಹ ಅಗ್ನಿಯು ಸ್ತನ್ಯಪಾನಕ್ಕಾಗಿ ಎಂದರೆ ತನ್ನ ಪೋಷಣೆಗಾಗಿ ದ್ಯಾವಾಪೃಥಿವಿಗಳನ್ನಾಶ್ರಯಿಸಲಿಲ್ಲ. ಆದರೂ ಈ ಅಗ್ನಿಯು ಹವಿರ್ವಹನಕಾರ್ಯದಲ್ಲಿ ಸಮರ್ಥನಾಗಿರುವುದು ಆಶ್ಚರ್ಯಕರವೇ ಆಗಿರುವುದು ಎಂದು ಋಷಿಯು ವರ್ಣಿಸಿರುವನು

**ಅಥ ಚ ನು ವವಕ್ಷ ಸದ್ಯಃ ಮಹಿ ದೂತ್ಯಂ ಚರನ್—ಉತ್ಪತ್ತ್ಯನಂತರಮೇವ ಅಸ್ಮಿನ್ ದಿನೇ ತದಾನೀಮೇವ ಶೀಘ್ರಂ ಮಹದ್ದೂತ್ಯಕರ್ಮ ಚರನ್ ದೇವಾನ್ ಪ್ರತಿ ಹವೀಂಷಿ ವಹತಿ ॥** ಈ ಅಗ್ನಿಯು (ಅರಣಿಗಳಲ್ಲಿ) ಉತ್ಪನ್ನನಾದಕೂಡಲೇ ತಕ್ಷಣವೇ ಶೀಘ್ರವಾಗಿ ಮಹತ್ಸ್ವರೂಪವಾದುದೂ ಕಷ್ಟಸಾಧ್ಯವಾದುದೂ ಆದ ದೂತ್ಯಕರ್ಮವನ್ನು ಕೈಗೊಂಡು ದೇವತೆಗಳ ಬಳಿಗೆ ಹವಿಸ್ಸುಗಳನ್ನು ಒಯ್ಯುತ್ತಾನೆ.

॥ ಸಂಹಿತಾಪಾಠಃ ॥

ಅಗ್ನಿರ್ಹ ನಾಮ ಧಾಯಿ ದನ್ನಪಸ್ತಮಃ ಸಂ ಯೋ ವನಾ ಯುವತೇ ಭಸ್ಮನಾ ದತಾ ।
ಅಭಿಪ್ರಮುರಾ ಜುಹ್ವಾ ಸ್ವಧ್ವರ ಇನೋ ನ ಪ್ರೋಥಮಾನೋ ಯವಸೇ ವೃಷಾ ॥ ೨ ॥

॥ ಪದಪಾಠಃ ॥

ಅಗ್ನಿಃ । ಹ । ನಾಮ । ಧಾಯಿ । ದನ್ । ಅಪಃಽತಮಃ । ಸಂ । ಯಃ । ವನಾ । ಯುವತೇ । ಭಸ್ಮನಾ । ದತಾ ।
ಅಭಿಽಪ್ರಮುರಾ । ಜುಹ್ವಾ । ಸುಽಅಧ್ವರಃ । ಇನಃ । ನ । ಪ್ರೋಥಮಾನಃ । ಯವಸೇ । ವೃಷಾ ॥ ೨ ॥

॥ ಸಾಯಣಭಾಷ್ಯಂ ॥

ಅಪಸ್ತಮಃ ॥ ಅಪಃಶಬ್ದಸ್ಯಾಂತೋದಾತ್ತತ್ವೇನ ಮತ್ವರ್ಥೋ ಲುಪ್ತ ಇತಿ ಜ್ಞಾಯತೇ । ಅನ್ಯಥಾಪಃ ಕರ್ಮಾಖ್ಯಾಯಾಮಿತ್ಯಸುನಿ ಕೃತೆ ಆದ್ಯುದಾತ್ತತ್ವಮೇವ ಸ್ಯಾತ್ ॥ ಅಪಸ್ವಿತಮಃ ಕರ್ಮವತ್ತಮೋಽಗ್ನಿರ್ನಾಮ ॥ ತೃತೀಯಾಯಾ ಲುಕ್ ॥ ನಾಮ್ನಾ ನಮಯಿತ್ರಾ ಹವಿಷಾ ಸ್ತೋತ್ರೇಣ ವಾ ಧಾಯಿ । ಯಜಮಾನೈರ್ಧಾರ್ಯತೇ ಖಲು । ಯತೋ ದನ್ ಯಷ್ಟ್ರೂಣಾಂ ಧನದಾತಾ ॥ ಡುದಾಞ್ ದಾನೇ । ಹೇತೌ ಛಂದಸ್ಯುಭಯಥೇತಿ ಶತುರಾರ್ಧಧಾತುಕತ್ವೇನಾಕಾರಲೋಪಃ । ಅತ ಏವ ಶಪೋಽಸಂಭವಃ ॥ ಯೋಽಗ್ನಿರ್ಭಸ್ಮನಾ ಭಾಸಕೇನ ಪ್ರಕಾಶಕೇನ ತೇಜಸಾ ದತಾ ದಂತೇನ ಚ ವನಾ ವನಾನ್ಯರಣ್ಯಾನಿ ಸಂ ಯುವತೇ ಸಂಯುನಕ್ತಿ । ಸಂದಹತೀತಿ ಯಾವತ್ ॥ ಯು ಮಿಶ್ರಣಾಮಿಶ್ರಣಯೋಃ । ವ್ಯತ್ಯಯೇನ ಶಃ । ಆತ್ಮನೇಪದಂ ಚ । ದತಾ । ದಂತಶಬ್ದಸ್ಯ ಪದ್ದನ್ನಿತ್ಯಾದಿನಾ ದದ್ಭಾವಃ। ಊಡಿದಮಿತಿ ವಿಭಕ್ತೇರಾದ್ಯುದಾತ್ತತ್ವಂ ॥ ಕಿಂಚಾಭಿಪ್ರಮುರಾ ॥ ಮೂರ್ಛಾ ಮೋಹಸಮುಚ್ಛ್ರಾಯಯೋಃ । ಅಸ್ಮಾತ್ ಕ್ವಿಪಿ ರಾಲ್ಲೋಪ ಇತಿ ಛಕಾರಲೋಪಃ । ಮುರ ಸಂವೇಷ್ಟನ ಇತ್ಯಸ್ಮಾದ್ವಾ ಕ್ವಿಪ್। ಕೃದುತ್ತರಪದಪ್ರಕೃತಿಸ್ವರತ್ವಂ ॥ ಅಭಿತಃ ಸಮುಚ್ಛ್ರಿತೇನೋದ್ಯತೇನ ಯದ್ವಾ ಸರ್ವತೋ ಹವಿರ್ಭಿಃ ಸಂವೇಷ್ಟಿತೇನ ಜುಹ್ವೈತನ್ನಾಮಕೇನ ಪಾತ್ರವಿಶೇಷೇಣ ಸ್ವಧ್ವರಃ ಶೋಭನಯಜ್ಞೋಽಗ್ನಿರದನೀಯೇ ಹವಿಷಿ ಚರತೀತಿ ಶೇಷಃ । ತತ್ರ ದೃಷ್ಟಾಂತಃ । ಇನೋ ನ ಸಮರ್ಥಃ ಪ್ರೋಥಮಾನಃ ಪರ್ಯಾಪ್ತಃ ಪುಷ್ಟಾಂಗೋ ವೃಷಾ ಯವಸೇ ನ ಯಥಾ ವೃಷಭೋ ಘಾಸಾದಿಷು ಚರತಿ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಅಗ್ನಿಯು । **ಭಸ್ಮನಾ**—ಪ್ರಕಾಶಮಾನವಾದ ತನ್ನ ತೇಜಸ್ಸಿನಿಂದಲೂ । **ದತಾ**—ಜ್ವಾಲಾರೂಪವಾದ ದಂತಗಳಿಂದಲೂ । **ವನಾ**—ಅರಣ್ಯಗಳನ್ನು (ವೃಕ್ಷಗಳನ್ನು) । **ಸಂಯುವತೇ**—ಒಟ್ಟಿಗೆ ಸುಡುವನೋ ಅಂತಹ । **ಅಪಸ್ತಮಃ**—ಉತ್ತಮವಾದ ಕರ್ಮನಿರತನೂ । **ದನ್**—ಯಜಮಾನರಿಗೆ ಧನದಾತನೂ ಆದ । **ಅಗ್ನಿಃ**—ಅಗ್ನಿಯು । **ನಾಮ**—ಹವಿಸ್ಸಿನಿಂದ । **ಧಾಯಿ**—ಧರಿಸಲ್ಪಡುತ್ತಾನೆ (ಪೋಷಿಸಲ್ಪಡುತ್ತಾನೆ) । **ಇನಃ**—ಸಮರ್ಥವಾದುದೂ । **ಪ್ರೋಥಮಾನಃ**—ಪುಷ್ಟವಾದ ಅಂಗವುಳ್ಳದ್ದೂ ಆದ । **ವೃಷಾ**—ವೃಷಭವು । **ಯವಸೇ ನ**—ಹುಲ್ಲುಗಾವಲಿನಲ್ಲಿ ತಿಂದು ತೃಪ್ತಿಪಡುವಂತೆ । **ಅಭಿಪ್ರಮುರಾ**—ತುಂಬಿದ ಹವಿಸ್ಸುಳ್ಳ । **ಜುಹ್ವಾ**—ಹವಿಷ್ಪಾತ್ರೆಯಿಂದ । **ಸ್ವಧ್ವರಃ**—ಉತ್ತಮವಾದ ಯಜ್ಞಾಹುತಿಯನ್ನು ಸ್ವೀಕರಿಸಿದ ಅಗ್ನಿಯು (ಯಜ್ಞಪ್ರದೇಶದಲ್ಲಿ ತೃಪ್ತಿಯನ್ನು ಹೊಂದುತ್ತಾನೆ).

॥ ಭಾವಾರ್ಥ ॥

ಯಾವ ಅಗ್ನಿಯು ಪ್ರಕಾಶಮಾನವಾದ ತನ್ನ ತೇಜಸ್ಸಿನಿಂದಲೂ ಜ್ವಾಲಾರೂಪವಾದ ದಂತಗಳಿಂದಲೂ ಅರಣ್ಯಗಳನ್ನು ಒಟ್ಟಿಗೆ ಸುಡುವನೋ ಅಂತಹ ಉತ್ತಮವಾದ ಕರ್ಮನಿರತನೂ ಯಜಮಾನರಿಗೆ ಧನದಾತನೂ ಆದ ಅಗ್ನಿಯು ಹವಿಸ್ಸಿನಿಂದ ಧರಿಸಲ್ಪಡುತ್ತಾನೆ. ಸಮರ್ಥವಾದುದೂ, ಪುಷ್ಟವಾದ ಅಂಗವುಳ್ಳದ್ದೂ ಆದ ವೃಷಭವು ಹುಲ್ಲುಗಾವಲಿನಲ್ಲಿ ತಿಂದು ತೃಪ್ತಿಪಡುವಂತೆ ತುಂಬಿದ ಹವಿಸ್ಸುಳ್ಳ ಹವಿಷ್ಪಾತ್ರೆಯಿಂದ ಉತ್ತಮವಾದ ಯಜ್ಞಾಹುತಿಯನ್ನು ಸ್ವೀಕರಿಸುವ ಅಗ್ನಿಯು ಯಜ್ಞಪ್ರದೇಶದಲ್ಲಿ ತೃಪ್ತಿಯನ್ನು ಹೊಂದುತ್ತಾನೆ.

## English Translation.

The most active Agni, the giver of wealth, is nourished with ghi (by the worshippers), he who with flaming tooth devours the forests; devoutly worshipped with the uplifted goblet (he is nourished) like a lordly well-fed bull amidst (fresh) pasture.

॥ ಸಂಹಿತಾಪಾಠಃ ॥

ತಂ ವೋ ವಿಂ ನ ದ್ರುಷದಂ ದೇವಮಂಧಸ ಇಂದುಂ ಪ್ರೋಥಂತಂ ಪ್ರವ-
ಪಂತಮರ್ಣವಂ ।
ಆಸಾ ವಹ್ನಿಂ ನ ಶೋಚಿಷಾ ವಿರಪ್ಶಿನಂ ಮಹಿವ್ರತಂ ನ ಸರಜಂತಮಧ್ವನಃ ॥

। ಪದಪಾಠಃ ।

ತಂ । ವಃ । ವಿಂ । ನ । ದ್ರುಽಸದಂ । ದೇವಂ । ಅಂಧಸಃ । ಇಂದುಂ । ಪ್ರೋಥಂತಂ । ಪ್ರಽವಪಂತಂ ।
ಅರ್ಣವಂ ।
ಆಸಾ । ವಹ್ನಿಂ । ನ । ಶೋಚಿಷಾ । ವಿಽರಪ್ಶಿನಂ । ಮಹಿಽವ್ರತಂ । ನ । ಸರಜಂತಂ । ಅಧ್ವನಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರಃ ವೋ ಯೂಯಂ ತಮಗ್ನಿಮಭಿಷ್ಟುತ । ಕೀದೃಶಂ । ವಿಂ ನ ಪಕ್ಷಿಣಮಿವ ದ್ರುಷದಂ । ದ್ರುರ್ವೃಕ್ಷಃ । ಅರಣಿಲಕ್ಷಣೇ ವೃಕ್ಷೇ ಸೀದಂತಂ ದೇವಂ ದ್ಯೋತಮಾನಂ ಅಂಧಸ ಇಂದುಂ ಸ್ತೋತೄಣಾಮನ್ನಸ್ಯ ಕ್ಲೇದಯಿತಾರಂ ಪ್ರಾಪಯಿತಾರಂ ॥ ಉಂದೇರಿಚ್ಚಾದೇಃ । ಉ. ೧-೧೩ । ಇತ್ಯು-ಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ ॥ ಪ್ರೋಥಂತಂ ಶಬ್ದಾಯಮಾನಂ ಪ್ರವಪಂತಮತ್ಯರ್ಥಂ ವನಾನಾಂ ದಾಹಕಂ ಅರ್ಣವಂ ॥ ಅರ್ಣಸಃ ಸಲೋಪಶ್ಚೇತಿ ಮತ್ವರ್ಥೀಯೋ ವಃ ॥ ಅಗ್ನೌ ಪ್ರಾಸ್ತಾ-ಹುತಿರಿತ್ಯಾದಿಕ್ರಮೇಣೋದಕವಂತಂ ಆಸಾ ॥ ಆಸ್ಯಶಬ್ದಸ್ಯ ಪದ್ದನ್ನಿತ್ಯಾದಿನಾಸನ್ನಾದೇಶಃ । ವರ್ಣ-ಲೋಪಶ್ಛಾಂದಸಃ ॥ ಆಸ್ಯೇನ ವಹ್ನಿಂ ಹವಿಷಾಂ ವೋಢಾರಂ । ಯದ್ವಾ । ಆಸಾ । ಅಂತಿಕನಾಮೈತತ್ । ದೇವಾನಾಂ ಸಮೀಪೇ ಹವಿಷಾಂ ಪ್ರಾಪಕಂ । ವಹನೇ ದೃಷ್ಟಾಂತಃ । ವಹ್ನಿಂ ನ । ವಹ್ನಿರ್ವಾ ಅನಡ್ವಾನ್। ತೈ. ಬ್ರಾ. ೧-೮-೨-೫ । ಇತಿ ಶ್ರವಣಾದನಡ್ವಾಹಮಿವ ವಹನೇ ಸಮರ್ಥಂ ಶೋಚಿಷಾ ಸ್ವದೀಪ್ತ್ಯಾ ವಿರಪ್ಶಿನಂ । ಮಹನ್ನಾಮೈತತ್ । ಮಹಾಂತಂ ಮಹಿವ್ರತಂ ನ ಮಹಾಕರ್ಮಾಣಮಾದಿತ್ಯಮಿವಾಧ್ವನಃ

ಸರಜಂತಂ । ಮಾರ್ಗಾನ್ಸಹ ಯುಗಪದೇವ ರಂಜಯಂತಂ । ಏವಂಗುಣಮಗ್ನಿಮಭಿಷ್ಟುತ ॥ ಸರಜಂತಂ । ರಞ್ಜ ರಾಗೇ । ರಂಜೇಃ ಶತರಿ ರಂಜೇಶ್ಚ । ಪಾ. ೬-೪-೨೬ । ಇತಿ ನಲೋಪೇ ಸಹಸ್ಯ ಸಭಾವೇ ಚ ಕೃತೇ ರೂಪಂ ॥ ಯದ್ವಾ । ಸರತೀತಿ ಸರಃ । ಸರಸ್ಯೋದಕಸ್ಯ ಜನಯಿತಾರಂ ॥ ಜನೇಸ್ತೃಪ್ರತ್ಯಯೇ ಕೃತೇ ರೂಪಮಿತಿ ವಾ । ವ್ಯುತ್ಪತ್ತ್ಯನವಧಾರಣಾದನವಗ್ರಹಃ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತ್ರಗಳೇ) **ವಃ**—ನೀವು । **ವಿಂ ನ**—ಪಕ್ಷಿಗಳು ವೃಕ್ಷದ ಮೇಲೆ ಕುಳಿತುಕೊಳ್ಳುವಂತೆ । **ದ್ರುಸದಂ**—ವೃಕ್ಷನಿರ್ಮಿತವಾದ ಅರಣಿಗಳಲ್ಲಿ (ಉತ್ಪನ್ನನಾಗಿ) ಇರುವವನೂ । **ದೇವಂ**—ಪ್ರಕಾಶಮಾನನೂ । **ಅಂಧಸಃ ಇಂದುಂ**—ಸ್ತೋತೃಜನರು ಅರ್ಪಿಸುವ ಹವಿರಾದಿಗಳನ್ನು ದೇವತೆಗಳಿಗೆ ಒಯ್ಯುವವನೂ । **ಪ್ರೋಥಂತಂ**—ಶಬ್ದಸಹಿತವಾಗಿ ಎಂದರೆ ಧಗಧಗನೆ ಶಬ್ದಮಾಡುತ್ತ । **ಪ್ರವಪಂತಂ**—ವನವೃಕ್ಷಗಳನ್ನು ದಹಿಸುವವನೂ । **ಅರ್ಣವಂ**—ವೃಷ್ಟ್ಯುದಕಕ್ಕೆ ಕಾರಣಭೂತನಾದವನೂ । **ಆಸಾ ವಹ್ನಿಂ**—ದೇವತೆಗಳ ಸಮೀಪಕ್ಕೆ ಹವಿಸ್ಸನ್ನು ಒಯ್ಯುವವನೂ ಅಥವಾ । [**ವಹ್ನಿಂ ನ**—ಭಾರವನ್ನು ಹೊರುವ ವೃಷಭ (ಎತ್ತು) ದಂತೆ । **ಆಸಾ**—ತನ್ನಮುಖದಿಂದ ಎಂದರೆ ಅಗ್ನಿಜ್ವಾಲೆಯಿಂದ ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ] । **ಶೋಚಿಷಾ**—ತನ್ನ ಕಾಂತಿಯಿಂದ । **ವಿರಪ್ಶಿನಂ ನ**—ಮಹಾಮಹಿಮನಾದ ಆದಿತ್ಯನಂತೆ । **ಅಧ್ವನಃ**—ಮಾರ್ಗಗಳನ್ನು । **ಸರಜಂತಂ**—ಬೆಳಗುವವನೂ ಅಥವಾ ವೃಷ್ಟಿವರ್ಷಕನೂ ಆದ । **ತಂ**—ಪ್ರಸಿದ್ಧನಾದ ಅಗ್ನಿಯನ್ನು । (**ಅಭಿಷ್ಟುತ**—ಸ್ತೋತ್ರ ಮಾಡಿರಿ).

॥ ಭಾವಾರ್ಥ ॥

ಎಲೈ ಸ್ತೋತೃಜನರೇ, ನೀವು ಪಕ್ಷಿಗಳು ವೃಕ್ಷಗಳಮೇಲೆ ಕುಳಿತುಕೊಳ್ಳುವಂತೆ ವೃಕ್ಷನಿರ್ಮಿತವಾದ ಅರಣಿಗಳಲ್ಲಿ ಇರುವವನೂ, ಪ್ರಕಾಶಮಾನನೂ, ಸ್ತೋತೃಜನರ ಹವಿರಾದಿಗಳನ್ನು ದೇವತೆಗಳ ಬಳಿಗೆ ಒಯ್ಯುವವನೂ, ಧಗಧಗನೆ ಶಬ್ದಸಹಿತವಾಗಿ ವನವೃಕ್ಷಗಳನ್ನು ದಹಿಸುವವನೂ, ವೃಷ್ಟ್ಯುದಕಕ್ಕೆ ಕಾರಣನೂ, ಭಾರವನ್ನು ಹೊರುವ ಎತ್ತಿನಂತೆ ತನ್ನ ಜ್ವಾಲೆಗಳಿಂದ ಹವಿಸ್ಸನ್ನು ದೇವತೆಗಳಿಗೆ ಒಯ್ಯುವವನೂ, ತನ್ನ ಕಾಂತಿಯಿಂದ ಮಹಾಮಹಿಮನಾಗಿ ಬೆಳಗುವ ಆದಿತ್ಯನಂತೆ ಮಾರ್ಗಗಳನ್ನು ಬೆಳಗುವವನೂ ಆದ ಅಗ್ನಿಯನ್ನು ಸ್ತೋತ್ರಮಾಡಿರಿ.

## English Translation.

(Glorify) him, (worshippers), the divine, like a bird seated upon a tree, demanding sacrificial food, clamorous, wood-consuming, water-shedding, like one bearing (the obation) in his mouth, mighty with radiance, simultaneously illuminating the paths, like the great functionary (the sun).

॥ ಸಂಹಿತಾಪಾಠಃ ॥

ವಿ ಯಸ್ಯ ತೇ ಜ್ರಯಸಾನಸ್ಯಾಜರ ಧಕ್ಷೋರ್ನ ವಾತಾಃ ಪರಿ ಸಂತ್ಯಚ್ಯುತಾಃ ।

ಆ ರಣ್ವಾಸೋ ಯುಯುಧಯೋ ನ ಸತ್ವನಂ ತ್ರಿತಂ ನಶಂತ ಪ್ರ ಶಿಷಂತ

ಇಷ್ಟಯೇ ॥ ೪ ॥

॥ ಪದಪಾಠಃ ॥

ವಿ । ಯಸ್ಯ । ತೇ । ಜ್ರಯಸಾನಸ್ಯ । ಅಜರ । ಧಕ್ಷೋಃ । ನ । ವಾತಾಃ । ಪರಿ । ಸಂತಿ । ಅಚ್ಯುತಾಃ ।

ಆ । ರಣ್ವಾಸಃ । ಯುಯುಧಯಃ । ನ । ಸತ್ವನಂ । ತ್ರಿತಂ । ನಶಂತ । ಪ್ರ । ಶಿಷಂತಃ । ಇಷ್ಟಯೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಜರ ಜರಾರಹಿತಾಗ್ನೇ ಜ್ರಯಸಾನಸ್ಯ ॥ ಜ್ರಯತಿರ್ಗತ್ಯರ್ಥಃ । ಬಾಹುಲಕಾದಸ್ಮಾದಸ್ಯ-ಸಾನಚ್‌ಪ್ರತ್ಯಯಃ ॥ ಗಮನಶೀಲಸ್ಯ ಧಕ್ಷೋಃ ॥ ದಹೇಃ ಸನ್ । ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಂ । ಕಾ. ೬-೧-೮-೧ । ಇತಿ ದ್ವಿರ್ವಚನಾಭಾವಃ । ತದಂತಾದುಪ್ರತ್ಯಯಃ । ಅರಣ್ಯದಹನೇ-ಚ್ಛೋರ್ಯಸ್ಯ ತೇ ತವ ಸ್ವಭೂತಾ ಅಚ್ಯುತಾಃ ಶತ್ರುಭಿರಚ್ಯವನೀಯಾಃ ಪ್ರಭಾವಾ ವಾತಾ ನ ವಾಯವ ಇವ ವಿ ಪರಿ ಸಂತಿ ಸರ್ವತೋ ವಿಶೇಷೇಣ ವರ್ತಂತೇ ॥ ಸಂತಿ । ಅಸ್ತೇರ್ಲಟ್ । ಯದ್ವೋಗಾದ-ನಿಘಾತಃ ॥ ಯುಯುಧಯೋ ನ ॥ ಯುಧೇಃ ಕಿನ್ಪ್ರತ್ಯಯಃ ॥ ಯೋದ್ಧಾರ ಇವ ರಣ್ವಾಸಃ ಶೀಘ್ರಂ ಗಂತಾರಃ ಶಬ್ದಾಯಮಾನಾ ವರ್ತ್ವಿಜ ಇಷ್ಟಯೇ ಯಾಗಾಯ ಪ್ರ ಶಿಷಂತಃ ಪ್ರಕರ್ಷೇಣ ಸಿಷಂತಃ ಸಿಷಾಸಂತಃ ಸಂಭಕ್ತುಮಿಚ್ಛಂತಃ ಸತ್ವನಂ ಬಲವಂತಂ ತ್ರಿತಂ ತ್ರಿಷ್ವಾಹವನೀಯಾದಿಷು ಸ್ಥಾನೇಷು ತತಂ ವಿಸ್ತೃತಂ ತ್ವಾಮಾ ನಶಂತ । ಸ್ತುತಿಭಿರ್ಹವಿರ್ಭಿಶ್ಚ ವ್ಯಾಪ್ನುವಂತಿ । ಆಙ್‌ಪೂರ್ವೋ ನಶಿರ್ವ್ಯಾಪ್ತಿ-ಕರ್ಮಾ । ಅಷ್ನಾಣ ಆನಡಿತಿ ವ್ಯಾಪ್ತಿಕರ್ಮಸು ಪಾಠಾತ್ ॥

॥ ಪ್ರತಿಪದಾರ್ಥ ॥

**ಅಜರ** — ಜರಾರಹಿತನಾದ ಎಂದರೆ ನಿತ್ಯಯುವಕನಾದ ಎಲೈ ಅಗ್ನಿಯೇ । **ಜ್ರಯಸಾನಸ್ಯ**—ಗಮನ ಶೀಲನೂ । **ಧಕ್ಷೋಃ**—ಅರಣ್ಯದಾಹಕನೂ ಆದ । **ಯಸ್ಯ ತೇ**—ಯಾವ ನಿನ್ನ । **ಅಚ್ಯುತಾಃ**— ಶತ್ರುಗಳಿಂದ ಅಬಾಧಿತವಾದ ಪ್ರಭಾವಗಳು । **ವಾತಾ ನ**— ವಾಯುವಿನಂತೆ । **ವಿ ಪರಿ ಸಂತಿ**— ನಿನ್ನ ಸುತ್ತಲೂ ಆವರಿಸಿರುತ್ತವೆ । **ಯುಯುಧೋ ನ**— ಯುದ್ಧಭಟರಂತೆ । **ರಣ್ವಾಸಃ**— ಶೀಘ್ರವಾಗಿ ಸಂಚರಿಸುವ ಅಥವಾ ಮಂತ್ರೋಚ್ಚಾರಣೆಯ ಶಬ್ದಮಾಡುತ್ತಿರುವ ಋತ್ವಿಕ್ಕುಗಳು । **ಇಷ್ಟಯೇ** — ಯಾಗವನ್ನು । **ಪ್ರ ಶಿಷಂತಃ**— ನಿರ್ವಹಿಸುವ ಇಚ್ಛೆ ಯುಳ್ಳವರಾಗಿ । **ಸತ್ವನಂ**— ಶಕ್ತಿಯುತನೂ । **ತ್ರಿತಂ**— ಆಹವನೀಯಾದಿತ್ರಿಸ್ಥಾನಗಳಲ್ಲಿ ನೆಲಸಿರುವವನೂ ಆದ ನಿನ್ನನ್ನು । **ಆ ನಶತ**— ಸ್ತೋತ್ರಾದಿಗಳಿಂದಲೂ ಹವಿಸ್ಸಿನಿಂದಲೂ ಸಮೀಪಿಸುತ್ತಾರೆ.

॥ ಭಾವಾರ್ಥ ॥

ಜರಾರಹಿತನಾದ ಎಲೈ ಅಗ್ನಿಯೇ, ಗಮನಶೀಲನೂ, ವನವೃಕ್ಷಗಳನ್ನು ದಹಿಸುವವನೂ ಆದ ನಿನ್ನ ನಿರ್ಬಾಧಿತವಾದ ಪ್ರಭಾವಗಳು ಗಾಳಿಯಂತೆ ನಿನ್ನ ಸುತ್ತಲೂ ನಿನ್ನನ್ನು ಆವರಿಸಿವೆ. ಯುದ್ಧಭಟರಂತೆ (ಮಂತ್ರೋಚ್ಚಾರಣೆ) ಶಬ್ದಮಾಡುತ್ತಾ ಇಲ್ಲಿಂದಲ್ಲಿಗೆ ಓಡಾಡುತ್ತಿರುವ ಋತ್ವಿಕ್ಕುಗಳು ಯಜ್ಞವನ್ನು ನೆರವೇರಿಸಬೇಕೆಂಬ ಇಚ್ಛೆಯಿಂದ ಶಕ್ತಿಯುತನೂ ಆಹವನೀಯಾದಿ ಮೂರುಸ್ಥಾನಗಳಲ್ಲಿ ಪ್ರತಿಷ್ಠಾಪಿತನೂ ಆದ ನಿನ್ನನ್ನು ಹವಿಸ್ಸಿನಿಂದಲೂ ಸ್ತೋತ್ರಾದಿಗಳಿಂದಲೂ ಸಮಾಪಿಸುತ್ತಾರೆ.

## English Translation.

O imperishable Agni, the invincible winds spread around you (who are) rapid in movement, and desirous of consuming (the forest); like combatants (the priests) calling aloud, anxious to bestow (the oblation), glorify you, the mighty, stationed in the three (altars).

॥ ಸಂಹಿತಾಪಾಠಃ ॥

ಸ ಇದಗ್ನಿಃ ಕಣ್ವತಮಃ ಕಣ್ವಸಖಾರ್ಯಃ ಪರಸ್ಯಾಂತರಸ್ಯ ತರುಷಃ ।
ಅಗ್ನಿಃ ಪಾತು ಗೃಣತೋ ಅಗ್ನಿಃ ಸೂರೀನಗ್ನಿರ್ದದಾತು ತೇಷಾಮವೋ ನಃ ॥

॥ ಪದಪಾಠಃ ॥

ಸಃ । ಇತ್ । ಅಗ್ನಿಃ । ಕಣ್ವಽತಮಃ । ಕಣ್ವಽಸಖಾ । ಅರ್ಯಃ । ಪರಸ್ಯ । ಅಂತರಸ್ಯ । ತರುಷಃ ।

ಅಗ್ನಿಃ । ಪಾತು । ಗೃಣತಃ । ಅಗ್ನಿಃ । ಸೂರೀನ್ । ಅಗ್ನಿಃ । ದದಾತು । ತೇಷಾಂ । ಅವಃ । ನಃ ॥ ೫ ॥

॥ ಸಾಯಣಭಾಷ್ಯಂ ॥

ಕಣ್ವತಮಃ ॥ ಕಣತೇಃ ಶಬ್ದಾರ್ಥಾದಶಿಪ್ರುಷೀತ್ಯಾದಿನಾ ಕ್ವನ್ಪ್ರತ್ಯಯಃ ॥ ಅತಿಶಯೇನ ಸ್ತೋತಾ ಅತ ಏವ ಕಣ್ವಸಖಾ ॥ ಬಹುವ್ರೀಹಿತ್ವಾತ್ಸಮಾಸಾಂತೋದಾತ್ತಾಭಾವಃ ॥ ಕಣ್ವಾಃ ಸ್ತೋತಾರಃ ಸಖಾಯೋ ಯಸ್ಯ ಸ ತಾದೃಶೋಽರ್ಯಃ ॥ ಸ್ವಾಮಿನ್ಯಂತೋದಾತ್ತತ್ವಂ ವಕ್ತವ್ಯಂ । ಪಾ. ೩-೧-೧೦೩-೧ । ಇತ್ಯಂತೋದಾತ್ತತ್ವಂ ॥ ಸ್ವಾಮೀ ಸರ್ವಸ್ಯೇಶ್ವರಃ ಸ ಇತ್ ಸ ಏವಾಗ್ನಿಃ ಪರಸ್ಯ ಚ ಪ್ರಕೃಷ್ಟಸ್ಯ ಚ ಬಾಹ್ಯಸ್ಯಾಂತರಸ್ಯಾವ್ಯವಹಿತಸ್ಯ ಸಮೀಪೇ ವರ್ತಮಾನಸ್ಯ ಶತ್ರೋಸ್ತರುಷಸ್ತಾರಯಿತಾ ವಿನಾಶಯಿತಾ ಭವತಿ । ಸೋಽಗ್ನಿರ್ಗೃಣತಃ ಸ್ತೋತ್ಯಾನಸ್ಮಾನ್ಪಾತು । ರಕ್ಷತು ॥ ಗೄ ಶಬ್ದೇ ಕ್ರ್ಯಾದಿಕಃ । ಶತುರನುಮೋ ನದ್ಯ-

**ಜಾದೀ ಇತಿ ವಿಭಕ್ತೇರುದಾತ್ತತ್ವಂ || ತಥಾ ಸೂರೀನ್ || ಷೂ ಪ್ರೇರಣೇ || ಹವಿಷಾಂ ಪ್ರೇರಯಿತೄನ-ಸ್ಮಾನ್ರಕ್ಷತು | ಕಿಂಚ ತೇಷಾಮೇಷಾಂ ನೋಽಸ್ಮಾಕಮವೋ ರಕ್ಷಣಮನ್ನಂ ವಾಗ್ನಿರ್ದದಾತು | ಪ್ರಯಚ್ಛತು ||**

|| ಪ್ರತಿಪದಾರ್ಥ ||

**ಕಣ್ವತಮಃ** –(ದೇವತೆಗಳನ್ನು) ಸ್ತುತಿಸತಕ್ಕವನೂ (ಆದ್ದರಿಂದಲೇ) | **ಕಣ್ವಸಖಾ**—ಸ್ತೋತ್ರಮಾಡುವ ಜನರಿಗೆ ಮಿತ್ರನೂ | **ಅರ್ಯಃ**—ಎಲ್ಲರಿಗೂ ಸ್ವಾಮಿಯೂ ಆದ | **ಸಃ ಇತ್ ಅಗ್ನಿಃ**—ಆ ಅಗ್ನಿಯೇ | **ಪರಸ್ಯ**—ದೂರದಲ್ಲಿರುವ ಎಂದರೆ ಹೊರಗಿರುವ | **ಅಂತರಸ್ಯ**—ಸಮೀಪದಲ್ಲಿರುವ ಶತ್ರುವಿನ | **ತರುಷಃ**—ವಿನಾಶಕನಾಗಿರುತ್ತಾನೆ | **ಅಗ್ನಿಃ**—ಅಗ್ನಿಯು | **ಗೃಣತಃ**—ಅವನನ್ನು ಸ್ತುತಿಸುತ್ತಿರುವ ನಮ್ಮನ್ನು | **ಪಾತು**—ರಕ್ಷಿಸಲಿ (ಮತ್ತು) | **ಸೂರೀನ್**—ಹವಿಸ್ಸನ್ನರ್ಪಿಸುವ ನಮ್ಮನ್ನೂ ರಕ್ಷಿಸಲಿ | **ತೇಷಾಂ ನಃ**—ಇಂತಹ ನಮಗೆ | **ಅವಃ**—ರಕ್ಷಣೆಯನ್ನು ಅಥವಾ ಅನ್ನವನ್ನು | **ಅಗ್ನಿಃ**—ಅಗ್ನಿಯು | **ದದಾತು** –ಕೊಡಲಿ.

|| ಭಾವಾರ್ಥ ||

ದೇವತೆಗಳನ್ನು ಸ್ವಯಂ ಪ್ರಶಂಸಿಸುವವನೂ, ಆದ್ದರಿಂದಲೇ ಸ್ತೋತೃಜನರಿಗೆ ಸ್ನೇಹಿತನೂ ಎಲ್ಲರಿಗೂ ಸ್ವಾಮಿಯೂ ಆದ ಆ ಅಗ್ನಿಯೇ ದೂರದಲ್ಲಾಗಲಿ ಸಮೀಪದಲ್ಲಾಗಲಿ ಇರುವ ಶತ್ರುವನ್ನು ನಾಶಮಾಡುತ್ತಾನೆ. ಅವನನ್ನು ಸ್ತುತಿಸಿ ಹವಿಸ್ಸನ್ನರ್ಪಿಸುವ ನಮ್ಮನ್ನು ಅಗ್ನಿಯು ರಕ್ಷಿಸಲಿ. ನಮಗೆ ರಕ್ಷಣೆಯನ್ನು ಅಥವಾ ಅನ್ನವನ್ನು ಅಗ್ನಿಯು ಕೊಡಲಿ.

## English Translation.

Agni, the most earnest of eulogists, the friends of those who praise him, the lord, the destroyer of enemies, whether far off or nigh, may Agni protect those who adore him, may, Agni (protect) those who offer oblations, may Agni give to us both these protection.

| ಸಂಹಿತಾಪಾಠಃ |

ವಾಜಿಂತಮಾಯ ಸಹ್ಯಸೇ ಸುಪಿತ್ರ್ಯ ತೃಷು ಚ್ಯವಾನೋ ಅನು ಜಾತವೇದಸೇ |
ಅನುದ್ರೇ ಚಿದ್ಯೋ ಧೃಷತಾ ವರಂ ಸತೇ ಮಹಿಂತಮಾಯ ಧನ್ವನೇದ-
ವಿಷ್ಯತೇ || ೬ ||

॥ ಪದಪಾಠಃ ॥

ವಾಜಿನ್ऽತಮಾಯ । ಸಹ್ಯಸೇ । ಸುऽಪಿತ್ರ್ಯ । ತೃಷು । ಚ್ಯವಾನಃ । ಅನು । ಜಾತऽವೇದಸೇ ।

ಅನುದ್ರೇ । ಚಿತ್ । ಯಃ । ಧೃಷತಾ । ವರಂ । ಸತೇ । ಮಹಿನ್ऽತಮಾಯ । ಧನ್ವನಾ । ಇತ್ । ಅವಿಷ್ಯತೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸುಪಿತ್ರ್ಯ। ಪಿತುರಾಗತಃ ಪಿತ್ರ್ಯಃ ॥ ಪಿತುರ್ಯಚ್ಚ । ಪಾ. ೪-೩-೭೯ । ಇತಿ ಯತ್ಪ್ರತ್ಯಯಃ ॥ ಶೋಭನಪಿತ್ರ್ಯ ಹೇ ಅಗ್ನೇ ವಾಜಿಂತಮಾಯಾತಿಶಯೇನಾನ್ನವತೇऽತ್ಯಂತಂ ಬಲವತೇ ವಾ ॥ ನಾದ್ಘಸ್ಯೇತಿ ನುಡಾಗಮಃ ॥ ಸಹ್ಯಸೇ ಸಹೀಯಸೇ ಶತ್ರೂಣಾಮತಿಶಯೇನಾಭಿಭವಿತ್ರೇ ಜಾತವೇದಸೇ ಜಾತಪ್ರಜ್ಞಾಯ ತುಭ್ಯಂ ತ್ವಾಂ ಸ್ತೋತುಂ ತೃಷು ಕ್ಷಿಪ್ರಮನು ಚ್ಯವಾನಃ ಸ್ತುತಿಭಿರನುಗತ ಉದ್ಯುಕ್ತೋऽಸ್ಮಿ ॥ ಕ್ರಿಯಾರ್ಥೋಪಪದಸ್ಯ ಚ ಕರ್ಮಣೀತಿ ಜಾತವೇದಃಶಬ್ದಸ್ಯ ಚತುರ್ಥೀ । ಸಹ್ಯಸೇ । ಸಹಸ್ವಿಙ್ಯಾಬ್ದಾದೀಯಸುನಿ ವಿನ್ಮತೋರ್ಲುಗಿತೀಯಸುನ ಈಕಾರಲೋಪಶ್ಛಾಂದಸಃ ॥ ಅನುದ್ರೇ ಚಿದುದಕವರ್ಜಿತೇ ಸ್ಥಾನೇ । ಆಪದೀತ್ಯರ್ಥಃ । ಶತ್ರುಭಿಃ ಸಂಜಾತಾಯಾಮಾಪದಿ ಧೃಷತಾ ಶತ್ರುಧರ್ಷಣಸಮರ್ಥೇನ ಧನ್ವನೇದಾತ್ಮೀಯೇನ ಧನುಷೈವಾವಿಷ್ಯತೇ ಪಾಲಕಾಯ ಸತೇ ಭೂಷ್ಣವೇ ॥ ಶತುರನುಮ ಇತಿ ವಿಭಕ್ತೇರುದಾತ್ತತ್ವಂ ॥ ಮಂಹಿತಮಾಯ ಪೂಜ್ಯತಮಾಯ ದಾತೃತಮಾಯ ವಾ ಈದೃಶಾಯಾಗ್ನಯೇ ಯೋऽಹಂ ವರಂ ವರಣೀಯಂ ಹವಿಃ ಪ್ರಯಚ್ಛಾಮಿ ಸೋऽಹಂ ಸ್ತುತಿಮಪಿ ತಸ್ಮೈ ಕರೋಮೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸುಪಿತ್ರ್ಯ**—ಉತ್ತಮವಾದ ತಂದೆತಾಯಿಗಳನ್ನುಳ್ಳ ಎಲೈ ಅಗ್ನಿಯೇ । **ವಾಜಿಂತಮಾಯ**—ಅತ್ಯಂತ ಬಲಶಾಲಿಯೂ । **ಸಹ್ಯಸೇ**—ಶತ್ರುಗಳನ್ನು ಪರಾಭವಗೊಳಿಸುವವನೂ । **ಜಾತವೇದಸೇ**—ಸಕಲವನ್ನೂ ತಿಳಿದವನೂ ಆದ ನಿನ್ನನ್ನುದ್ದೇಶಿಸಿ ಸ್ತೋತ್ರಮಾಡುವುದಕ್ಕಾಗಿ । **ತೃಷು**—ಬೇಗನೆ । **ಅನು ಚ್ಯವಾನಃ**—ಸಮೀಪಿಸಿ ಸ್ತುತಿಸಲುದ್ಯುಕ್ತನಾಗಿದೇನೆ । **ಅನುದ್ರೇ ಚಿತ್**—ಜಲರಹಿತವಾದ ಪ್ರದೇಶದಲ್ಲಿ ಅಥವಾ ಕಷ್ಟಕಾಲದಲ್ಲಿ । **ಧೃಷತಾ**—ಶತ್ರುಧರ್ಷಕವಾದ । **ಧನ್ವನಾ ಇತ್**—ನಿನ್ನ ಧನುಸ್ಸಿನಿಂದಲೇ । **ಅವಿಷ್ಯತೇ ಸತೇ**—ನಮ್ಮನ್ನು ಕಾಪಾಡುತ್ತಿರುವ । **ಮಹಿಂತಮಾಯ**—ಅತ್ಯಂತ ಪೂಜ್ಯನಾದ ಅಥವಾ ಉದಾರದಾತೃವಾದ ಅಗ್ನಿಯನ್ನುದ್ದೇಶಿಸಿ । **ಯಃ—(ಯಾವ)** ನಾನು । **ವರಂ**—ಉತ್ತಮವಾದ ಹವಿಸ್ಸನ್ನು ಅಥವಾ ಸ್ತೋತ್ರವನ್ನು ಅರ್ಪಿಸುತ್ತೇನೆ.

॥ ಭಾವಾರ್ಥ ॥

ಉತ್ತಮವಾದ ತಂದೆತಾಯಿಗಳನ್ನು ಹೊಂದಿರುವ ಎಲೈ ಅಗ್ನಿಯೇ, ಅತ್ಯಂತ ಶಕ್ತಿಯುತನೂ, ಶತ್ರುಗಳನ್ನು ಸೋಲಿಸುವವನೂ, ಸಕಲವನ್ನೂ ತಿಳಿದವನೂ ಆದ ನಿನ್ನನ್ನುದ್ದೇಶಿಸಿ ನಿನ್ನ ಸಮೀಪಕ್ಕೆ ಬೇಗನೆ ಬಂದು

ನಿನ್ನನ್ನು ಸ್ತುತಿಸಲುದ್ಯುಕ್ತನಾಗಿದ್ದೇನೆ. ಜಲರಹಿತವಾದ ಪ್ರದೇಶದಲ್ಲಿ ಎಂದರೆ ನಮ್ಮ ಕಷ್ಟಕಾಲದಲ್ಲಿ ಶತ್ರುಧರ್ಷಕವಾದ ನಿನ್ನ ಧನುಸ್ಸಿನಿಂದ ನಮ್ಮನ್ನು ಕಾಪಾಡುತ್ತಿರುವ ಅತ್ಯಂತ ಮಹಿಮಾನ್ವಿತನಾದ ನಿನಗಾಗಿ ಉತ್ತಮವಾದ ಹವಿಸ್ಸನ್ನು ಅಥವಾ ಸ್ತೋತ್ರವನ್ನು ಅರ್ಪಿಸುತ್ತೇನೆ.

### English Translation.

O Agni you have fair ancestors, (I have) arrived quickly to (praise) you, the most bountiful bestower of food, the overcomer (of foes) the Jathavedas, (I who offer) the best to you, the most mighty being, the protector in calamity, with your capable (bow).

॥ ಸಂಹಿತಾಪಾಠಃ ॥

ಏವಾಗ್ನಿರ್ಮರ್ತೈಃ ಸಹ ಸೂರಿಭಿರ್ವಸು ಷ್ಟವೇ ಸಹಸಃ ಸೂನರೋ ನೃಭಿಃ ।
ಮಿತ್ರಾಸೋ ನ ಯೇ ಸುಧಿತಾ ಋತಾಯವೋ ದ್ಯಾವೋ ನ ದ್ಯುಮ್ನೈರಭಿ
ಸಂತಿ ಮಾನುಷಾನ್ ॥ ೭ ॥

॥ ಪದಪಾಠಃ ॥

ಏವ । ಅಗ್ನಿಃ । ಮರ್ತ್ಯೈಃ । ಸಹ । ಸೂರಿಽಭಿಃ । ವಸುಃ । ಸ್ತವೇ । ಸಹಸಃ । ಸೂನರಃ । ನೃಽಭಿಃ ।
ಮಿತ್ರಾಸಃ । ನ । ಯೇ । ಸುಽಧಿತಾಃ । ಋತಽಯವಃ । ದ್ಯಾವಃ । ನ । ದ್ಯುಮ್ನೈಃ । ಅಭಿ । ಸಂತಿ ।
ಮಾನುಷಾನ್ ॥ ೭ ॥

॥ ಸಾಯಣಭಾಷ್ಯಂ ॥

ಸಹಸೋ ಬಲಸ್ಯ ಸೂನರಃ ಸುಷ್ಠು ಪ್ರೇರಕಃ । ಯದ್ವಾ । ಸೂನುರಿತ್ಯಸ್ಯ ವರ್ಣವ್ಯತ್ಯಯಃ । ಸೂನರಃ ಸೂನುಃ । ಬಲೇನ ಮಥ್ಯಮಾನತ್ವಾತ್ತಸ್ಯ ಪುತ್ರಃ । ಅಗ್ನಿರ್ನೃಭಿಃ ಕರ್ಮನೇತೃಭಿರ್ಮರ್ತ್ಯೈರ್ಮನುಷ್ಯೈಃ ಸಹ ಸೂರಿಭಿರ್ವಿದ್ವದ್ಭಿರಸ್ಮಾಭಿರ್ವಸು ಧನಮಭಿಲಕ್ಷ್ಯೈವಂ ಸ್ತವೇ । ಸ್ತೂಯತೇ ॥ ವಸು ಷ್ಟವ ಇತ್ಯತ್ರ ಸಂಹಿತಾಯಾಂ ಪೂರ್ವಪದಾದಿತಿ ಷತ್ವಂ ॥ ಮಿತ್ರಾಸೋ ನ ಸುಹೃದ ಇವ ಸುಧಿತಾಃ ಸುಹಿತಾಸ್ತೃಪ್ತಾಃ ॥ ದಧಾತೇರ್ನಿಷ್ಠಾಯಾಂ ಸುಧಿತವಸುಧಿತೇತಿ ನಿಪಾತಿತಃ । ಸುಧಿತಾರ್ಥಾಸ್ತೃಪ್ತ್ಯರ್ಥಾ ಇತಿ ಕಾಶಿಕಾಯಾಮುಕ್ತಂ ॥ ಋತಾಯವೋ ಯಜ್ಞಂ ಕಾಮಯಮಾನಾಃ ॥ ನ ಛಂದಸ್ಯಪುತ್ರಸ್ಯೇತಿ

ದೀರ್ಘೋತ್ವಯೋಃ ಪ್ರತಿಷೇಧಃ ॥ ಈದೃಶಾ ಯೇ ಸೂರಯೋ ದ್ಯಾವೋ ನ ದ್ಯೋತಮಾನಾ ಇವ ದ್ಯುಮ್ನೈಃ । ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವಾ । ನಿ. ೫-೫ । ಇತಿ ಯಾಸ್ಕಃ । ಅಗ್ನಿಪ್ರದತ್ತೈರ್ಬಲೈರಾತ್ಮೀಯೈರ್ಯಶೋಭಿರ್ವಾ ಮಾನುಷಾಞ್ಶತ್ರುಜನಾನಭಿ ಸಂತಿ ಅಭಿಭವಂತಿ ॥ ಯದ್ವೃತ್ತಯೋಗಾದನಿಘಾತಃ ॥

॥ ಪ್ರತಿಪದಾರ್ಥ ॥

**ಸಹಸಃ**—ಶಕ್ತಿಯ । **ಸೂನರಃ**—ಪುತ್ರನಾದ । **ಅಗ್ನಿಃ**—ಅಗ್ನಿಯು । **ನೃಭಿಃ**—ಕರ್ಮನೇತೃಗಳಾದ । **ಮರ್ತ್ಯೈಃ ಸಹ**—ಮನುಷ್ಯರಿಂದ ಸಹಿತರಾದ । **ಸೂರಿಭಿಃ**--ವಿವೇಕಿಗಳಾದ ನಮ್ಮಿಂದ । **ವಸು**—ಧನಪ್ರಾಪ್ತಿಗಾಗಿ । **ಏವ**—ಈ ರೀತಿಯಾಗಿ । **ಸ್ತವೇ**—ಸ್ತುತಿಸಲ್ಪಡುತ್ತಾನೆ । **ಮಿತ್ರಾಸೋ ನ**—ಸ್ನೇಹಿತರಂತೆ । **ಸುಧಿತಾಃ**—ತೃಪ್ತರಾದವರೂ । **ಋತಾಯವಃ**—ಯಜ್ಞಕರ್ಮವನ್ನಪೇಕ್ಷಿಸುವವರೂ ಆದ । **ಯೇ ಸೂರಯಃ**—ಯಾವ ಪ್ರಾಜ್ಞರಿರುವರೋ ಅವರು । **ದ್ಯಾವೋ ನ**—ಪ್ರಕಾಶಮಾನರಂತೆ ಇರುತ್ತಾ । **ದ್ಯುಮ್ನೈಃ**—ಅಗ್ನಿಯಿಂದ ಲಬ್ಧವಾದ ಯಶಸ್ಸಿನಿಂದ ಅಥವಾ ಬಲದಿಂದ । **ಮಾನುಷಾನ್**—ಶತ್ರುಜನರನ್ನು **ಅಭಿ ಸಂತಿ**—ಸೋಲಿಸುತ್ತಾರೆ.

॥ ಭಾವಾರ್ಥ ॥

ಶಕ್ತಿಪ್ರಯೋಗದಿಂದ ಉತ್ಪನ್ನನಾದ ಅಗ್ನಿಯು ಕರ್ಮನೇತೃಗಳೂ ವಿವೇಕಿಗಳೂ ಆದ ಮನುಷ್ಯರಿಂದ (ನಮ್ಮಿಂದ) ಧನಾರ್ಥವಾಗಿ ಈರೀತಿ ಸ್ತುತಿಸಲ್ಪಡುತ್ತಾನೆ. ಸ್ನೇಹಿತರಂತೆ ತೃಪ್ತರಾದವರೂ ಯಜ್ಞಕರ್ಮವನ್ನು ಮಾಡಬಯಸುವವರೂ ಪ್ರಕಾಶಮಾನರೂ ಆದ ಪ್ರಾಜ್ಞರು ಎಂದರೆ ವಿವೇಕಿಗಳು ಅಗ್ನಿಯಿಂದ ಲಬ್ಧವಾದ ಅನ್ನ (ಬಲ) ದಿಂದ ಅಥವಾ ಯಶಸ್ಸಿನಿಂದ ಶತ್ರುಗಳನ್ನು ಸೋಲಿಸುತ್ತಾರೆ.

## English Translation.

In this manner, Agni, the son of strength, is glorified by (us his) worshippers, together with pious mortals, for the sake of wealth—(his worshippers) who, like delighted friends, desiring the sacrifice, like shining (ones), overcome (hostile) men through his might.

। ಸಂಹಿತಾಪಾಠಃ ।

ಊರ್ಜೋ ನಪಾತ್ಸಹಸಾವನ್ನಿತಿ ತ್ವೋಪಸ್ತುತಸ್ಯ ವಂದತೇ ವೃಷಾ ವಾಕ್ ।
ತ್ವಾಂ ಸ್ತೋಷಾಮ ತ್ವಯಾ ಸುವೀರಾ ದ್ರಾಘೀಯ ಆಯುಃ ಪ್ರತರಂ
ದಧಾನಾಃ ॥ ೮ ॥

॥ ಪದಪಾಠಃ ॥

ಊರ್ಜಃ । ನಪಾತ್ । ಸಹಸಾಽವನ್ । ಇತಿ । ತ್ವಾ । ಉಪಽಸ್ತುತಸ್ಯ । ವಂದತೇ । ವೃಷಾ । ವಾಕ್ ।

ತ್ವಾಂ । ಸ್ತೋಷಾಮ । ತ್ವಯಾ । ಸುಽವೀರಾಃ । ದ್ರಾಘೀಯಃ । ಆಯುಃ । ಪ್ರಽತರಂ । ದಧಾನಾಃ ॥ ೮ ॥

॥ ಸಾಯಣಭಾಷ್ಯಂ ॥

ಊರ್ಜೋ ನಪಾತ್ । ನಪಾದಿತ್ಯಪತ್ಯನಾಮ । ಅನ್ನಸ್ಯ ಪುತ್ರ । ಅನ್ನಂ ವಾ ಆಜ್ಯಮಿತಿ ಶ್ರವಣಾತ್ತೇನ ಪ್ರವೃದ್ಧ್ಯಮಾನತ್ವಾತ್ । ಬಲಸ್ಯ ವಾ ಪುತ್ರ ॥ ಸುಬಾಮಂತ್ರಿತೇ ಪರಾಂಗವತ್ಸ್ವರ ಇತ್ಯೂರ್ಜ ಇತ್ಯಸ್ಯ ಪರಾಂಗವದ್ಭಾವೇನಾಮಂತ್ರಿತತ್ವ ಆಮಂತ್ರಿತಸ್ಯ ಚೇತಿ ಷಾಷ್ಠಿಕಮಾದ್ಯುದಾತ್ತತ್ವಂ ॥ ಹೇ ಸಹಸಾವನ್ ಸಹಸ್ವಿನ್ನಗ್ನೇ ತ್ವಾ ತ್ವಾಮಿತ್ಯೇವಮುಪಸ್ತುತಸ್ಯೈತನ್ನಾಮಕಸ್ಯರ್ಷೇರ್ಮಮ ವೃಷಾ ಹವಿಷಾಂ ವರ್ಷಯಿತ್ರೀ ತೈಃ ಸಹಿತಾ ವಾಕ್ ಸ್ತುತಿರ್ವಂದತೇ । ಸ್ತೌತಿ ॥ ವೃಷಾ । ಇಗುಪಧಜ್ಞೇತಿ ಕಃ । ಅಜಾದ್ಯತಷ್ಟಾಪ್ ॥ ಕಿಂಚ ವಯಂ ತ್ವಾಂ ಸ್ತೋಷಾಮ । ಸ್ತವಾಮ ॥ ಸ್ತೌತೇರ್ಲೇಟ್ಯಡಾಗಮಃ ॥ ತತಸ್ತ್ವಯಾ ಸುವೀರಾಃ ಶೋಭನಪುತ್ರಾಃ ಸ್ಯಾಮ । ದ್ರಾಘೀಯೋ ದೀರ್ಘತಮಮಾಯುರ್ಜೀವನಂ ಪ್ರತರಮತ್ಯರ್ಥಂ ದಧಾನಾ ಧಾರಯಂತೋ ಭವೇಮ ॥

॥ ಪ್ರತಿಪದಾರ್ಥ ॥

**ಊರ್ಜೋನಪಾತ್**—ಅನ್ನರೂಪವಾದ ಹವಿಸ್ಸಿನಿಂದ ವೃದ್ಧಿಯನ್ನೈದುವ ಅಥವಾ ಶಕ್ತಿಯ ಪುತ್ರನಾದ । **ಸಹಸಾವನ್**—ಅತಿಶಯವಾದ ಬಲವುಳ್ಳ ಎಲೈ ಅಗ್ನೇ । **ತ್ವಾ**—ನಿನ್ನನ್ನು । **ಇತಿ**—ಈ ಪ್ರಕಾರವಾಗಿ । **ಉಪಸ್ತುತಸ್ಯ**—ಉಪಸ್ತುತ ಎಂಬ ಹೆಸರಿನವನಾದ ನನ್ನ । **ವೃಷಾ**—ಹವಿಸ್ಸಿನಿಂದ ಕೂಡಿದ । **ವಾಕ್**—ಸ್ತುತಿ ರೂಪವಾದ ವಾಕ್ಯವು । **ವಂದತೇ**—ನಿನ್ನನ್ನು ಸ್ತುತಿಸುತ್ತದೆ (ಮತ್ತು ನಾವು) । **ತ್ವಾಂ**—ನಿನ್ನನ್ನು । **ಸ್ತೋಷಾಮ**—ಸ್ತುತಿಸುತ್ತೇವೆ । **ತ್ವಯಾ**—ನಿನ್ನಿಂದ ಎಂದರೆ ನಿನ್ನ ಅನುಗ್ರಹದಿಂದ (ನಾವು) । **ಸುವೀರಾಃ**—ಉತ್ತಮಪುತ್ರವಂತರಾಗಿ ಆಗುವಂತಾಗಲಿ । **ದ್ರಾಘೀಯಃ**—ದೀರ್ಘಕಾಲಪರ್ಯಂತರ । **ಆಯುಃ**—ಜೀವನವನ್ನೂ । **ಪ್ರತರಂ**—ಅತಿಶಯವಾಗಿ । **ದಧಾನಾಃ**—ನಡೆಸುವಂತಾಗಲಿ.

॥ ಭಾವಾರ್ಥ ॥

ಹವಿಸ್ಸಿಂದ ವೃದ್ಧಿಯನ್ನೈದುವ ಅಥವಾ ಶಕ್ತಿಪುತ್ರನಾದ ಮತ್ತು ಅತಿಶಯ ಬಲವುಳ್ಳ ಎಲೈ ಅಗ್ನಿಯೇ, ಉಪಸ್ತುತ ಎಂಬ ಹೆಸರಿನ ನನ್ನ ಸ್ತುತಿರೂಪವಾದ ವಾಕ್ಯವು ನಿನ್ನನ್ನು ಈ ರೀತಿ ಸ್ತುತಿಸುತ್ತದೆ. ನಾವೂ ನಿನ್ನನ್ನು ಸ್ತುತಿಸುತ್ತೇವೆ. ನಾವು ನಿನ್ನ ಅನುಗ್ರಹದಿಂದ ಉತ್ತಮ ಪುತ್ರರನ್ನು ಪಡೆಯುವಂತಾಗಲಿ ಮತ್ತು ದೀರ್ಘಕಾಲದವರೆಗೆ ಅತಿಶಯವಾದ ಜೀವನವನ್ನು ನಡೆಸುವಂತಾಗಲಿ,

English Translation

"Offspring of food! vigorous (Agni)," thus the praise of Upastuta, showering forth oblations, glorifices you. "Let us praise you; through you let us obtain excellent male progeny, enjoing long protracted life."

॥ ಸಂಹಿತಾಪಾಠಃ ॥

ಇತಿ ತ್ವಾಗ್ನೇ ವೃಷ್ಟಿಹವ್ಯಸ್ಯ ಪುತ್ರಾ ಉಪಸ್ತುತಾಸ ಋಷಯೋಽವೋಚನ್ ।
ತಾಂಶ್ಚ ಪಾಹಿ ಗೃಣತಶ್ಚ ಸೂರೀನ್ವಷಡ್ವಷಳಿತ್ಯೂರ್ಧ್ವಾಸೋ ಅನಕ್ಷನ್ನಮೋ
ನಮ ಇತ್ಯೂರ್ಧ್ವಾಸೋ ಅನಕ್ಷನ್ ॥ ೯ ॥

॥ ಪದಪಾಠಃ ॥

ಇತಿ । ತ್ವಾ । ಅಗ್ನೇ । ವೃಷ್ಟಿಽಹವ್ಯಸ್ಯ । ಪುತ್ರಾಃ । ಉಪಽಸ್ತುತಾಸಃ । ಋಷಯಃ । ಅವೋಚನ್ ।
ತಾನ್ । ಚ । ಪಾಹಿ । ಗೃಣತಃ । ಚ । ಸೂರೀನ್ । ವಷಟ್ । ವಷಟ್ । ಇತಿ । ಊರ್ಧ್ವಾಸಃ । ಅನಕ್ಷನ್ ।
ನಮಃ । ನಮಃ । ಇತಿ । ಊರ್ಧ್ವಾಸಃ । ಅನಕ್ಷನ್ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಾ ತ್ವಾಮಿತ್ಯೇವಮುಕ್ತಪ್ರಕಾರೇಣ ವೃಷ್ಟಿಹವ್ಯಸ್ಯೈತನ್ನಾಮಕಸ್ಯರ್ಷೇಃ ಪುತ್ರಾ ಉಪಸ್ತುತಾಸ ಉಪಸ್ತುತಾ ಏತದಭಿಧಾನಾ ಋಷಯಃ ಸೂಕ್ತದ್ರಷ್ಟಾರೋಽವೋಚನ್ । ಅಭ್ಯಷ್ಟುವನ್। ತಾನೃಷೀಂಶ್ಚ ತ್ವಂ ಪಾಹಿ । ರಕ್ಷ ॥ ಚವಾಯೋಗೇ ಪ್ರಥಮೇತಿ ನ ನಿಘಾತಃ ॥ ತಥಾ ಗೃಣತಃ ಸ್ತೋತೄನ್ ಸೂರೀನ್ವಿದುಷಶ್ಚ ಪಾಹಿ । ವಷಡ್ವಷಡಿತಿ ಮಂತ್ರೇಣೋರ್ಧ್ವಾಸೋ ಹವಿಷ್ಪ್ರದಾನಾರ್ಥಮೂರ್ಧ್ವಮುಖ-ಹಸ್ತಾಃ ಸಂತೋಽನಕ್ಷನ್ । ವ್ಯಾಪ್ನುವನ್ । ನಕ್ಷತಿರ್ವ್ಯಾಪ್ತಿಕರ್ಮಾ । ನಮೋ ನಮ ಇತ್ಯೇವಮೂರ್ಧ್ವಾಸಃ ಸ್ತೋತುಮುದ್ಯುಕ್ತಾ ಅನಕ್ಷನ್ । ಯ ಉಕ್ತಗುಣಾಸ್ತಾನುಭಯವಿಧಾನ್ಯಸ್ಮಾನ್ ಸ್ತೋತೄನ್ಪಾಲಯ ॥

। ಪ್ರತಿಪದಾರ್ಥ ।

ಅಗ್ನೇ—ಎಲೈ ಅಗ್ನಿಯೇ । ತ್ವಾ—ನಿನ್ನನ್ನು । ಇತಿ—ಈ ಪ್ರಕಾರವಾಗಿ । ವೃಷ್ಟಿಹವ್ಯಸ್ಯ—ವೃಷ್ಟಿಹವ್ಯನೆಂಬ ಋಷಿಯ । ಪುತ್ರಾಃ—ಪುತ್ರರಾದ । ಉಪಸ್ತುತಾಸಃ—ಉಪಸ್ತುತ ಎಂಬ ಹೆಸರಿನಿಂದ ಪ್ರಸಿದ್ಧರಾದ । ಋಷಯಃ—ಸೂಕ್ತದ್ರಷ್ಟೃಗಳಾದ ಋಷಿಗಳು । ಅವೋಚನ್—ಸ್ತುತಿಸಿದ್ದಾರೆ । ತ್ವಂ ಚ—

ನೀನೂ ಸಹ | **ತಾನ್**—ಆ ಋಷಿಗಳನ್ನು | **ಪಾಹಿ**—ರಕ್ಷಿಸು (ಮತ್ತು) | **ಗೃಣತಃ**—ಸ್ತೋತ್ರಮಾಡತಕ್ಕ | **ಸೂರೀನ್ ಚ**—ಪ್ರಾಜ್ಞರನ್ನೂ ಸಹ ರಕ್ಷಿಸು | **ವಷಟ್ ವಷಟ್**—ವಷಟ್ ವಷಟ್ ಎಂಬ ವಷಟ್ಕಾರಶಬ್ದಗಳನ್ನುಚ್ಚರಿಸುತ್ತಾ | **ಊರ್ಧ್ವಾಸಃ**—ಹೋಮಮಾಡುವುದಕ್ಕಾಗಿ ಆಜ್ಯಪೂರಿತವಾದ ತಮ್ಮ ಸ್ರುಕ್ಪಾತ್ರೆಗಳನ್ನು ಮೇಲೆತ್ತಿಹಿಡಿದಿರುವ ಋತ್ವಿಗ್ಜನರು | **ಅನಕ್ಷನ್**—ನಿನ್ನನ್ನು ಸಮೀಪಿಸಿದ್ದಾರೆ | **ಊರ್ಧ್ವಾಸಃ**—ಊರ್ಧ್ವಮುಖರಾಗಿರುವ ಸ್ತೋತೃಜನರು | **ನಮಃ ನಮಃ**—ನಮೋನಮಃ ಎಂದು ನಮಸ್ಕಾರಮಾಡುತ್ತಾ | **ಅನಕ್ಷನ್**—ನಿನ್ನ ಬಳಿಗೆ ಬಂದಿದ್ದಾರೆ.

॥ **ಭಾವಾರ್ಥ** ॥

ಎಲೈ ಅಗ್ನಿಯೇ, ವೃಷ್ಟಿಹವ್ಯನೆಂಬ ಋಷಿಯ ಪುತ್ರರೂ ಉಪಸ್ತುತ ಎಂಬ ಹೆಸರಿನವರೂ ಆದ ಈ ಸೂಕ್ತದ್ರಷ್ಟೃಗಳಾದ ಋಷಿಗಳು ಈ ಪ್ರಕಾರವಾಗಿ ನಿನ್ನನ್ನು ಸ್ತುತಿಸಿದ್ದಾರೆ. ನೀನೂ ಸಹ ಸ್ತೋತ್ರಮಾಡುತ್ತಿರುವ ಆ ಋಷಿಗಳನ್ನು ರಕ್ಷಿಸು. ಎಲೈ ಅಗ್ನಿಯೇ, ಹೋಮಮಾಡುವುದಕ್ಕಾಗಿ ಆಜ್ಯಪೂರಿತವಾದ ಸ್ರುಕ್ಪಾತ್ರೆಗಳನ್ನು ಮೇಲಕ್ಕೆತ್ತಿ ಹಿಡಿದು ವಷಟ್ಕಾರಶಬ್ದವನ್ನುಚ್ಚರಿಸುತ್ತಾ ಋತ್ವಿಗ್ಜನವರು ನಿನ್ನನ್ನು ಸಮೀಪಿಸುತ್ತಾರೆ. ಹಾಗೆಯೇ ನಿನ್ನನ್ನು ಸ್ತೋತ್ರಮಾಡುವ ಜನರೂ ಸಹ ನಮೋನಮಃ ಎಂದು ನಮಸ್ಕರಿಸುತ್ತಾ ನಿನ್ನ ಬಳಿಗೆ ಬಂದಿದ್ದಾರೆ.

## English Translation.

Thus, Agni, the Rishis, the Upastutas, the sons of Vrishtihavya celebrated you, and do you protect them and the pious worshippers. With uplifted faces, calling out vashat! vashat! they reached you; with uplifted faces they reached you, calling out namas! namas!

## ನೂರ ಹದಿನಾರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪಿಬೇತಿ ನವರ್ಚಂ ಚತುರ್ಥಂ ಸೂಕ್ತಂ ತ್ರೈಷ್ಟುಭಮೈಂದ್ರಂ । ಸ್ಥೂರನಾಮ್ನಃ ಪುತ್ರೋಽಗ್ನಿಯುತಾಖ್ಯ ಋಷಿರಗ್ನಿಯೂಪಾಖ್ಯೋ ವಾ । ತಥಾ ಚಾನುಕ್ರಮ್ಯತೇ । ಪಿಬ ಸ್ಥೌರೋಽಗ್ನಿಯುತೋಽಗ್ನಿಯೂಪೋ ವೇತಿ ॥ ಗತೋ ವಿನಿಯೋಗಃ ॥**

ಅನುವಾದವು—ಪಿಬ ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸ್ಥೂರ ಎಂಬ ಹೆಸರಿನ ಋಷಿಯ ಪುತ್ರನಾದ ಅಗ್ನಿಯುತ ಅಥವಾ ಅಗ್ನಿಯೂಪ ಎಂಬುವನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪಿಬ ಸ್ಥೌರೋಽಗ್ನಿಯುತೋಽಗ್ನಿಯೂಪೋ ವಾ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೧೬

ಮಂಡಲ—೧೦ ॥ ಅನುವಾಕ—೧೦ ॥ ಸೂಕ್ತ—೧೧೬ ॥

ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೨೦, ೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೯ ॥
॥ ಋಷಿಃ—ಅಗ್ನಿಯುತಃ ಸ್ಥಾರೋಽಗ್ನಿಯೂಪೋ ವಾ ಸ್ಥಾರಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪಿಬಾ ಸೋಮಂ ಮಹತ ಇಂದ್ರಿಯಾಯ ಪಿಬಾ ವೃತ್ರಾಯ ಹಂತವೇ ಶವಿಷ್ಠ ।
ಪಿಬ ರಾಯೇ ಶವಸೇ ಹೂಯಮಾನಃ ಪಿಬ ಮಧ್ವಸ್ತೃಪದಿಂದ್ರಾ ವೃಷಸ್ವ ॥

॥ ಪದಪಾಠಃ ॥

ಪಿಬ । ಸೋಮಂ । ಮಹತೇ । ಇಂದ್ರಿಯಾಯ । ಪಿಬ । ವೃತ್ರಾಯ । ಹಂತವೇ । ಶವಿಷ್ಠ ।
ಪಿಬ । ರಾಯೇ । ಶವಸೇ । ಹೂಯಮಾನಃ । ಪಿಬ । ಮಧ್ವಃ । ತೃಪತ್ । ಇಂದ್ರ । ಆ । ವೃಷಸ್ವ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಮಹತೇ ಪ್ರಭೂತಾಯೇಂದ್ರಿಯಾಯೇಂದ್ರಸ್ಯಾತ್ಮನೋ ಜುಷ್ಟಾಯ ವೀರ್ಯಾಯ ಸೋಮಮಸ್ಮಾಭಿರ್ದೀಯಮಾನಂ ಪಿಬ ॥ ಇಂದ್ರಿಯಮಿಂದ್ರಲಿಂಗೇತ್ಯಾದಿನೇಂದ್ರಿಯ-ಶಬ್ದೋ ಯಜಂತತ್ವೇನ ನಿಪಾತಿತಃ ॥ ಹೇ ಶವಿಷ್ಠಾತಿಶಯೇನ ಪ್ರವೃದ್ಧ ವೃತ್ರಾಯ ಹಂತವೇ ವೃತ್ರಂ ಹಂತುಂ ಸೋಮಂ ಪಿಬ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ವೃತ್ರಸ್ಯ ಸಂಪ್ರದಾನತ್ವಂ ॥ ತಥಾ ಹೂಯ-ಮಾನೋಽಸ್ಮಾಭಿರಾಹೂಯಮಾನಸ್ತ್ವಂ ರಾಯೇ ಧನಾಯ ॥ ಊಡಿದಮಿತ್ಯಾದಿನಾ ವಿಭಕ್ತೇರುದಾ-ತ್ತತ್ವಂ ॥ ಶವಸೇಽನ್ನಾಯ । ಧನಾನ್ನಯೋಃ ಪ್ರದಾನಾಯ ಸೋಮಂ ಪಿಬ । ಮಧ್ವೋ ಮದಕರಾನ್ಸ-ವಾನ್ಸೋಮಾನ್ಪಿಬ ॥ ವಾ ಛಂದಸೀತಿ ಪೂರ್ವಸವರ್ಣದೀರ್ಘಾಭಾವಃ । ಅನಂತರಂ ಹೇ ಇಂದ್ರ ತೃಪತ್ತೃಪ್ತೋಃ ಭವನ್ನಾ ವೃಷಸ್ವ । ಅಸ್ಮದಭಿಲಷಿತಾನ್ಯಾಸಿಂಚ । ದದಸ್ವ ॥ ತೃಪತ್ । ತೃಪ್ಸ ತೃಪ್ತೌ ತೌದಾದಿಕಃ । ಅನಿತ್ಯಮಾಗಮಶಾಸನಮಿತಿ ನುಮಭಾವಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ ನೀನು) **ಮಹತೇ**—ಅತಿಶಯವಾದ । **ಇಂದ್ರಿಯಾಯ**—ಪರಾಕ್ರಮಕ್ಕಾಗಿ ಎಂದರೆ ಶಕ್ತಿಸಾಮರ್ಥ್ಯಗಳ ಸಲುವಾಗಿ । **ಸೋಮಂ**—ನಮ್ಮಿಂದ ಅರ್ಪಿತವಾಗುವ ಸೋಮರಸವನ್ನು । **ಪಿಬ**—ಪಾನ ಮಾಡು । **ಶವಿಷ್ಠ**—ಅತಿಶಯವಾಗಿ ಪ್ರವರ್ಧಮಾನನಾದ ಎಲೈ ಇಂದ್ರನೇ । **ವೃತ್ರಾಯ ಹಂತವೇ**—ವೃತ್ರನನ್ನು ಸಂಹಾರ ಮಾಡುವುದಕ್ಕಾಗಿ । **ಪಿಬ**—ಸೋಮವನ್ನು ಪಾನಮಾಡು । **ಹೂಯಮಾನಃ**—ನಮ್ಮಿಂದ ಪ್ರಾರ್ಥಿತನಾಗಿ ಕರೆಯಲ್ಪಟ್ಟ ನೀನು । **ರಾಯೇ**—ನಮಗೆ ಧನವನ್ನುಕೊಡುವುದಕ್ಕಾಗಿಯೂ । **ಶವಸೇ**—ಅನ್ನ ಪ್ರದಾನಕ್ಕಾಗಿಯೂ । **ಪಿಬ**—ಸೋಮಪಾನಮಾಡು । **ಮಧ್ವಃ**—ಮಧುರವಾದ ಎಂದರೆ ರುಚಿಕರವಾದ ಸೋಮ ವನ್ನು । **ಪಿಬ**—ಪಾನಮಾಡು । **ಇಂದ್ರ**—ಎಲೈ ಇಂದ್ರನೇ । **ತೃಪತ್**—ಸೋಮಪಾನದಿಂದ ತೃಪ್ತನಾಗಿ । **ಆ ವೃಷಸ್ವ**—ನಮ್ಮ ಇಷ್ಟಾರ್ಥಗಳನ್ನು ಒದಗಿಸಿಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಅತಿಶಯವಾದ ಶಕ್ತಿಸಾಮರ್ಥ್ಯಗಳ ಅಥವಾ ಪರಾಕ್ರಮ ಪ್ರಾಪ್ತಿಗಾಗಿ ನಮ್ಮಿಂದ ಅರ್ಪಿತವಾಗುವ ಈ ಸೋಮರಸವನ್ನು ಪಾನಮಾಡು. ಪ್ರವರ್ಧಮಾನನಾದ ಎಲೈ ಇಂದ್ರನೇ, ವೃತ್ರನನ್ನು ಸಂಹರಿಸುವುದಕ್ಕಾಗಿಯೂ ಸೋಮಪಾನಮಾಡು. ನಮ್ಮಿಂದ ಪ್ರಾರ್ಥಿತನಾಗಿ ಕರೆಯಲ್ಪಡುವ ನೀನು ನಮಗೆ ಧನವನ್ನೂ ಅನ್ನವನ್ನೂ ಕೊಡುವುದಕ್ಕಾಗಿಯೂ ಈ ಮಧುರವೂ ರುಚಿಕರವೂ ಆದ ಸೋಮರಸವನ್ನು ಪಾನಮಾಡು. ಎಲೈ ಇಂದ್ರನೇ ಸೋಮಪಾನದಿಂದ ತೃಪ್ತನಾದ ನೀನು ನಮ್ಮ ಕೋರಿಕೆಗಳನ್ನು ಈಡೇರಿಸು.

English Translation

Drink (Indra) the Soma for the invigoration of your organs, drink most mighty one, for the death of Vritra; drink when invoked for wealth, for strength; drink of the exhilarating beverage, and being satisfied, Indra, shower down (blessings).

॥ ಸಂಹಿತಾಪಾಠಃ ॥

ಅಸ್ಯ ಪಿಬ ಕ್ಷುಮತಃ ಪ್ರಸ್ಥಿತಸ್ಯೇಂದ್ರ ಸೋಮಸ್ಯ ವರಮಾ ಸುತಸ್ಯ ।
ಸ್ವಸ್ತಿದಾ ಮನಸಾ ಮಾದಯಸ್ವಾರ್ವಾಚೀನೋ ರೇವತೇ ಸೌಭಗಾಯ ॥೨॥

॥ ಪದಪಾಠಃ ॥

ಅಸ್ಯ । ಪಿಬ । ಕ್ಷುऽಮತಃ । ಪ್ರऽಸ್ಥಿತಸ್ಯ । ಇಂದ್ರ । ಸೋಮಸ್ಯ । ವರಂ । ಆ । ಸುತಸ್ಯ ।

ಸ್ವಸ್ತಿಽದಾಃ । ಮನಸಾ । ಮಾದಯಸ್ವ । ಅರ್ವಾಚೀನಃ । ರೇವತೇ । ಸೌಭಗಾಯ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಕ್ಷುಮತಃ ಸ್ತುತಿಯುಕ್ತಸ್ಯ ಯದ್ವಾ ಹವೀರೂಪಾನ್ನವತಃ ಪ್ರಸ್ಥಿತಸ್ಯ ಹವಿರ್ಧಾನಾದುತ್ತರವೇದಿಂ ಪ್ರತಿ ಪ್ರಸ್ಥಾಪಿತಸ್ಯ ಸುತಸ್ಯಾಭಿಷುತಸ್ಯ ಸೋಮಸ್ಯ ವರಂ ವರಣೀಯಂ ತ್ವದೀಯಂ ಭಾಗಮಾಭಿಮುಖ್ಯೇನ ಪಿಬ ॥ ಪ್ರಸ್ಥಿತಸ್ಯ । ತಿಷ್ಠತೇಃ ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ತತಃ ಸ್ವಸ್ತಿದಾಃ ಕಲ್ಯಾಣಸ್ಯ ದಾತಾ ತ್ವಂ ಮನಸಾಂತಃಕರಣೇನ ಮಾದಯಸ್ವ । ಹೃಷ್ಟೋ ಭವ । ಯದ್ವಾ । ಅಸ್ಮಾನಪಿ ಹೃಷ್ಟಾನ್ಕುರು । ತದೇವೋಚ್ಯತೇ । ರೇವತೇ ಧನವತೇ ಸೌಭಗಾಯ ಸೌಭಾಗ್ಯಾಯ ತದಸ್ಮಭ್ಯಂ ದಾತುಮರ್ವಾಚೀನೋಽಭಿಮುಖಾಂಚನೋ ಭವ ॥ ವಿಭಾಷಾಂಚೇರದಿಕ್ಸ್ತ್ರಿಯಾಮಿತಿ ಖಃ । ರಯಿಶಬ್ದಾನ್ಮತುಪಶ್ಛಂದಸೀರ ಇತಿ ವತ್ವಂ । ರಯೇರ್ಮತೌ ಬಹುಲಮಿತಿ ಸಂಪ್ರಸಾರಣಂ । ಪೂರ್ವರೂಪತ್ವೇ ಗುಣಃ । ಸೌಭಗಾಯ । ಉದ್ಗಾತ್ರಾದಿಷು ಸುಭಗ ಮಂತ್ರ ಇತಿ ಪಠ್ಯತೇ। ತಸ್ಯೋತ್ತರಪದಸ್ಯ ಹೃದ್ಭಗೇತಿ ವೃದ್ಧಿರ್ನೇಷ್ಯತೇ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾತ್ । ಞಿತ್ಸ್ವರೇಣಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಕ್ಷುಮತಃ**—ಸ್ತುತಿಯುಕ್ತವಾದ ಅಥವಾ ಹವೀರೂಪವಾದ । **ಪ್ರಸ್ಥಿತಸ್ಯ**—ಉತ್ತರವೇದಿಯಲ್ಲಿ ಸ್ಥಾಪಿತವಾಗಿರುವ । **ಸುತಸ್ಯ**—ಸೋಮಲತೆಗಳನ್ನು ಜಜ್ಜಿ ಹಿಂಡಿರುವ । **ಅಸ್ಯ ಸೋಮಸ್ಯ**—ಈ ಸೋಮರಸದ । **ವರಂ**—ನಿನಗೆ ಸಲ್ಲಬೇಕಾದ ಭಾಗವನ್ನು । **ಆ**—ನಮ್ಮ ಎದುರಿಗೆ ಕುಳಿತು । **ಪಿಬ**—ಪಾನಮಾಡು । **ಸ್ವಸ್ತಿದಾಃ**—ಕಲ್ಯಾಣವನ್ನುಂಟುಮಾಡುವ ನೀನು । **ಮನಸಾ**—ಮನಃಪೂರ್ವಕವಾಗಿ । **ಮಾದಯಸ್ವ**—ಹರ್ಷವನ್ನು ಹೊಂದು ಅಥವಾ ನಮ್ಮನ್ನು ಹರ್ಷಿತರನ್ನಾಗಿ ಮಾಡು । **ರೇವತೇ**—ನಮ್ಮನ್ನು ಧನವಂತರನ್ನಾಗಿ ಮಾಡುವುದಕ್ಕೂ । **ಸೌಭಗಾಯ**—ಸೌಭಾಗ್ಯವನ್ನುಂಟುಮಾಡುವುದಕ್ಕೂ । **ಅರ್ವಾಚೀನಃ**—ನಮಗೆ ಅಭಿಮುಖನಾಗಿ ಇರು.

॥ ಭಾವಾರ್ಥ ॥

ಎಲೈ ಇಂದ್ರನೇ, ಉತ್ತರವೇದಿಯಲ್ಲಿ ಸ್ಥಾಪಿತವಾಗಿರುವುದೂ ಮಂತ್ರಗಳಿಂದ ಸಂಸ್ಕರಿಸಲ್ಪಟ್ಟುದೂ, ಸೋಮಲತೆಗಳನ್ನು ಜಜ್ಜಿ ಹಿಂಡಿರುವುದೂ ಆದ ಹವೀರೂಪದ ಈ ಸೋಮರಸದಲ್ಲಿ ನಿನಗೆ ಸಲ್ಲಬೇಕಾದ ಭಾಗವನ್ನು ಪಾನಮಾಡು. ಶ್ರೇಯಃಪ್ರದನಾದ ನೀನು ಸೋಮಪಾನದಿಂದ ಹರ್ಷಿತನಾಗು ಅಥವಾ ನಮ್ಮನ್ನು ಹರ್ಷಿತರನ್ನಾಗಿ ಮಾಡು. ನಮಗೆ ಧನವನ್ನು ಕೊಟ್ಟು ಮಂಗಳವನ್ನುಂಟುಮಾಡುವುದಕ್ಕಾಗಿ ನಮಗೆ ಎದುರಾಗಿ ಕುಳಿತುಕೋ.

## English Translation.

Drink, Indra, your excellent portion of this renowned Soma effused and poured forth; the giver of prosperity, be delighted in your mind, (be) turned towards us to bestow riches and happiness.

|| ಸಂಹಿತಾಪಾಠಃ ||

ಮಮತ್ತು ತ್ವಾ ದಿವ್ಯಃ ಸೋಮ ಇಂದ್ರ ಮಮತ್ತು ಯಃ ಸೂಯತೇ ಪಾರ್ಥಿವೇಷು ।
ಮಮತ್ತು ಯೇನ ವರಿವಶ್ಚಕರ್ಥ ಮಮತ್ತು ಯೇನ ನಿರಿಣಾಸಿ ಶತ್ರೂನ್ ||೩||

|| ಪದಪಾಠಃ ||

ಮಮತ್ತು । ತ್ವಾ । ದಿವ್ಯಃ । ಸೋಮಃ । ಇಂದ್ರ । ಮಮತ್ತು । ಯಃ । ಸೂಯತೇ । ಪಾರ್ಥಿವೇಷು ।
ಮಮತ್ತು । ಯೇನ । ವರಿವಃ । ಚಕರ್ಥ । ಮಮತ್ತು । ಯೇನ । ನಿಃ‌ಽರಿಣಾಸಿ । ಶತ್ರೂನ್ || ೩ ||

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಾ ತ್ವಾಂ ದಿವ್ಯೋ ದಿವಿ ಭವಃ ಸೋಮೋ ಮಮತ್ತು । ಆತ್ಮೀಯಕಲಾಪ್ರದಾನೇನ ಮಾದಯತು । ದೇವಾ ಹ್ಯಪರಪಕ್ಷೇ ಸೋಮಸ್ಯ ಕಲಾಂ ಪಿಬಂತಿ || ಮದೇರ್ಲೋಟಿ ವ್ಯತ್ಯಯೇನ ಶ್ಲುಃ । ಭೀಹ್ರೀಭೃಹುಮದಜನಧನದರಿದ್ರಾಜಾಗರಾಂ ಪ್ರತ್ಯಯಾತ್ ಪೂರ್ವಂ ಪಿತೀತ್ಯಾದಿನಾ । ಪಾ.೬-೧-೧೯೨ । ಪಿತಃ ಪೂರ್ವಸ್ಯೋದಾತ್ತತ್ವಂ || ತಥಾ ಪಾರ್ಥಿವೇಷು ಪೃಥಿವ್ಯಾಂ ಭವೇಷು ದೇವಯಜನೇಷು ಯಃ ಸೋಮೋಽಸ್ಮಾಭಿಃ ಸೂಯತೇ ಅಭಿಷೂಯತೇ ಸೋಽಪ್ಯಸ್ಮಾಭಿರ್ದತ್ತೋ ಮಮತ್ತು । ತ್ವಾಂ ಹರ್ಷಯತು । ಯೇನ ಸೋಮೇನ ವರಿವೋ ವರಣೀಯಂ ಧನಂ ಚಕರ್ಥ ಕೃತವಾನಸಿ ಸ ಚ ಮಮತ್ತು || ಕರೋತೇರ್ಲಿಟ್ । ಯದ್ಯೋಗಾದನಿಘಾತೇ ಲಿತ್ಸ್ವರಃ || ಕಿಂಚ ಯೇನ ಶತ್ರೂನ್ನಿರಿಣಾಸಿ ನಿರ್ಗಮಯಸಿ । ಸೋಽಪಿ ಮಮತ್ತು । ತ್ವಾಂ ಮಾದಯತು || ರಿಣಾಸಿ । ರೀ ಗತಿರೇಷಣಯೋಃ ಕ್ರ್ಯಾದಿಃ । ಪ್ವಾದೀನಾಂ ಹ್ರಸ್ವತ್ವಂ ||

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ತ್ವಾ**—ನಿನ್ನನ್ನು । **ದಿವ್ಯಃ**—ದ್ಯು (ಸ್ವರ್ಗ) ಲೋಕದಲ್ಲಿರುವ । **ಸೋಮಃ**—ಸೋಮವು । **ಮಮತ್ತು**—ಹರ್ಷಗೊಳಿಸಲಿ (ಮತ್ತು) । **ಪಾರ್ಥಿವೇಷು**—ಪೃಥಿವಿಯಲ್ಲಿ ನಡೆಯುವ ಯಜ್ಞಗಳಲ್ಲಿ । **ಯಃ**—ಯಾವ ಸೋಮರಸವು । **ಸೂಯತೇ**—ನಮ್ಮಿಂದ ಹಿಂಡಲ್ಪಟ್ಟು ಅರ್ಪಿಸಲ್ಪಡುವುದೋ ಆ ಸೋಮರಸವು । **ಮಮತ್ತು**—ನಿನ್ನನ್ನು ಹರ್ಷಯುಕ್ತನನ್ನಾಗಿ ಮಾಡಲಿ । **ಯೇನ**—ಯಾವ ಸೋಮಪಾನದಿಂದ । **ವರಿವಃ**—ಅಪೇಕ್ಷಿತವಾದ ಧನವನ್ನು । **ಚಕರ್ಥ**—ಒದಗಿಸಿಕೊಡುವೆಯೋ ಆ ಸೋಮವು । **ಮಮತ್ತು**—ನಿನ್ನನ್ನು ಹರ್ಷಗೊಳಿಸಲಿ । **ಯೇನ**—ಯಾವ ಸೋಮಪಾನದಿಂದ ಉತ್ಸಾಹಿತನಾದ (ನೀನು) । **ಶತ್ರೂನ್**—ಶತ್ರುಗಳನ್ನು । **ನಿರಿಣಾಸಿ**—ನಾಶಮಾಡುವೆಯೋ ಅಂತಹ ಸೋಮರಸವು । **ಮಮತ್ತು**—ನಿನ್ನನ್ನು ಹರ್ಷಗೊಳಿಸಲಿ.

|| ಭಾವಾರ್ಥ ||

ಎಲೈ ಇಂದ್ರನೇ, ಸ್ವರ್ಗಲೋಕದಲ್ಲಿರುವ ಸೋಮವು ನಿನ್ನನ್ನು ಹರ್ಷಗೊಳಿಸಲಿ. ಪೃಥಿವಿಯಲ್ಲಿ ನೇರವೇರಿಸಲ್ಪಡುವ ಅನೇಕಯಜ್ಞಗಳಲ್ಲಿ ನಾವು ಹಿಂಡಿ ಸಿದ್ಧಪಡಿಸುವ ಸೋಮವೂ ನಿನಗೆ ಹರ್ಷವನ್ನುಂಟುಮಾಡಲಿ. ಯಾವ ಸೋಮಪಾನದಿಂದ ಸಂತೋಷಗೊಂಡು ನೀನು ನಮಗೆ ಅಪೇಕ್ಷಿತವಾದ ಧನವನ್ನು ಒದಗಿಸಿ ಕೊಡುವೆಯೋ. ಯಾವ ಸೋಮಪಾನದಿಂದ ಉತ್ಸಾಹಗೊಂಡ ನೀನು ಶತ್ರುಗಳನ್ನು ನಾಶಮಾಡುವೆಯೋ ಅಂತಹ ಸೋಮರಸವು ನಿನ್ನನ್ನು ಹರ್ಷಗೊಳಿಸಲಿ.

English Translation

May the celestial Soma exhilarate you, Indra; may that which is effused at terrestrial rites exhilarate you; may that exhilarate you through the influence of which you have bestowed wealth; may that exhilarate you whereby you scatter foes.

|| ಸಂಹಿತಾಪಾಠಃ ||

ಆ ದ್ವಿಬರ್ಹಾ ಅಮಿನೋ ಯಾತ್ವಿಂದ್ರೋ ವೃಷಾ ಹರಿಭ್ಯಾಂ ಪರಿಷಿಕ್ತಮಂಧಃ।
ಗವ್ಯಾ ಸುತಸ್ಯ ಪ್ರಭೃತಸ್ಯ ಮಧ್ವಃ ಸತ್ರಾ ಖೇದಾಮರುಶಹಾ ವೃಷಸ್ವ ॥ ೪ ॥

|| ಪದಪಾಠಃ ||

ಆ । ದ್ವಿಽಬರ್ಹಾಃ । ಅಮಿನಃ । ಯಾತು । ಇಂದ್ರಃ । ವೃಷಾ । ಹರಿಽಭ್ಯಾಂ । ಪರಿಽಸಿಕ್ತಂ । ಅಂಧಃ ।
ಗವಿ । ಆ । ಸುತಸ್ಯ । ಪ್ರಽಭೃತಸ್ಯ । ಮಧ್ವಃ । ಸತ್ರಾ । ಖೇದಾಂ । ಅರುಶಽಹಾ । ಆ । ವೃಷಸ್ವ ॥ ೪ ॥

|| ಸಾಯಣಭಾಷ್ಯಂ ||

ದ್ವಿಬರ್ಹಾ ದ್ವಯೋರ್ಲೋಕಯೋಃ ಪರಿವೃಢಃ । ಯದ್ವಾ । ದ್ವಾಭ್ಯಾಂ ಸ್ತುತಶಸ್ತ್ರಾಭ್ಯಾಂ ವರ್ಧನೀಯಃ ॥ ವೃಹೇರ್ವರ್ಧನಾರ್ಥಸ್ಯ ಕರ್ತರಿ ಕರ್ಮಣಿ ವಾಸುನ್ ॥ ಅಮಿನಃ । ಅಮತೇರ್ಗತ್ಯರ್ಥಾದೌಣಾದಿಕ ಇನಚ್ । ಸರ್ವತ್ರ ಗಂತಾ । ಯದ್ವಾ । ಕಾಂತ್ಯರ್ಥಾತ್ । ಸರ್ವೈಃ ಕಾಮ್ಯಮಾನಃ । ಅತ ಏವ ವೃಷಾಭಿಲಷಿತಾನಾಂ ವರ್ಷಕ ಇಂದ್ರಃ ಪರಿಷಿಕ್ತಂ ವಸತೀವರೀಭಿಃ ಪರಿತಃ ಸಿಕ್ತಮಂಧೋಽಸ್ಮದೀಯಂ ಸೋಮಲಕ್ಷಣಮನ್ನಂ ಪ್ರತಿ ಹರಿಭ್ಯಾಮೇತನ್ನಾಮಕಾಭ್ಯಾಮಶ್ವಾಭ್ಯಾಂ ಸಹಾ ಯಾತು । ಆಗಚ್ಛತು । ಅಥ ಪ್ರತ್ಯಕ್ಷಃ । ಹೇ ಇಂದ್ರ ಅರುಶಹಾ । ಅರುಶಾಃ ಶತ್ರವಃ । ತೇಷಾಂ ಹಂತಾ ॥ ಅರ್ತೇರೌಣಾದಿಕ

**ಉಶನ್ । ಬಹುಲಂ ಛಂದಸೀತಿ ಹಂತೇಃ ಕ್ವಿಪ್ ॥ ಸಕ್ರಾ । ಸಪ್ತಮ್ಯಾಃ ಡಾದೇಶಃ । ಅಸ್ಮದೀಯೇ ಸತ್ರೇ ಯಜ್ಞೇ ಗವ್ಯಾನಡುಹೇ ಚರ್ಮಣಿ ಸುತಸ್ಯಾಭಿಷುತಸ್ಯ ಪ್ರಭೃತಸ್ಯ ಪಾತ್ರೇಷು ಪ್ರಹೃತಸ್ಯ ॥ ಹೃಗ್ರಹೋರ್ಭಃ ॥ ಈದೃಶಸ್ಯ ಮಧ್ವೋ ಮದಕರಸ್ಯ ಸೋಮಸ್ಯ ಪಾನೇನ ಹೃಷ್ಟಃ ಸನ್ ಖೇದಾಂ ಖಿದ್ಯಮಾನಾನಾಂ ಶತ್ರೂಣಾಮುತ್ಕ್ಷಿಪ್ತ್ಯೆ ಅಭಿಮುಖ್ಯೇನ ವೃಷಸ್ವ । ವೃಷ ಇವಾಚರ ॥ ವೃಷಶಬ್ದಾದಾಚಾರಾರ್ಥೇ ಕ್ವಿಪ್ । ವ್ಯತ್ಯಯೇನಾತ್ಮನೇಪದಂ । ಖೇದಾಂ । ಖಿದ ದೈನ್ಯೇ । ಕರ್ಮಣಿ ಘಞಂತಸ್ಯಾಮಿ ನುಡಾಗಮಾಭಾವಶ್ಛಾಂದಸಃ ॥**

॥ ಪ್ರತಿಪದಾರ್ಥ ॥

**ದ್ವಿಬರ್ಹಾಃ**— ಎರಡುಲೋಕಗಳಲ್ಲಿಯೂ ಪ್ರವೃದ್ಧಮಾನನಾದವನೂ ಅಥವಾ ಎರಡುವಿಧವಾದ ಸ್ತೋತ್ರ ಶಸ್ತ್ರಮಂತ್ರಗಳಿಂದ ಪ್ರವೃದ್ಧಮಾನನೂ । **ಅಮಿನಃ**— ಸರ್ವತ್ರ ಸಂಚಾರಶೀಲನೂ ಅಥವಾ ಸರ್ವರಿಂದಲೂ ಪ್ರಾರ್ಥಿತನೂ । **ವೃಷಾ**— ಇಷ್ಟಾರ್ಥಪ್ರದನೂ ಆದ । **ಇಂದ್ರಃ**— ಇಂದ್ರನು । **ಪರಿಷಿಕ್ತಂ**— ವಸತೀವರ್ಯುದಕದಿಂದ ಮಿಶ್ರಿತವಾದ । **ಅಂಧಃ**— ಸೋಮರೂಪವಾದ ಅನ್ನವನ್ನು ಲಕ್ಷಿಸಿ । **ಹರಿಭ್ಯಾಂ**— ಹರೀ ಎಂಬ ಅವನ ಎರಡು ಅಶ್ವಗಳೊಡನೆ । **ಆ ಯಾತು**— ನಮ್ಮ ಯಜ್ಞಭೂಮಿಗೆ ಬರಲಿ (ಎಲೈ ಇಂದ್ರನೇ) । **ಅರುಶಹಾ**— ಶತ್ರುಹಂತಕನಾದ ನೀನು । **ಸಕ್ರಾ**— ನಾವು ಮಾಡುತ್ತಿರುವ ಈ ಯಜ್ಞದಲ್ಲಿ । **ಗವಿ**— ಗೋಚರ್ಮದ ಮೇಲೆ । **ಸುತಸ್ಯ**— ಲತೆಗಳನ್ನು ಇಟ್ಟು ಜಜ್ಜಿ ಹಿಂಡಿರುವುದೂ । **ಪ್ರಭೃತಸ್ಯ**— ಪಾತ್ರೆಗಳಲ್ಲಿ ತುಂಬಿಟ್ಟಿರುವುದೂ । **ಮಧ್ವಃ**— ರುಚಿಕರವಾದುದೂ ಆದ ಸೋಮರಸಪಾನದಿಂದ । **ಖೇದಾಂ**— ಖೇದಯುಕ್ತರಾದ ಎಂದರೆ ಚಿಂತಾಕ್ರಾಂತರಾದ ಶತ್ರುಗಳ ನಾಶಾರ್ಥವಾಗಿ । **ವೃಷಸ್ವ**— ವೃಷಭದಂತೆ ಆಚರಿಸು ಎಂದರೆ ಅವರ ಮೇಲೆ ಮುನ್ನುಗ್ಗಿ ಹೋಗು

॥ ಭಾವಾರ್ಥ ॥

ಎರಡುಲೋಕಗಳಲ್ಲಿಯೂ ಪ್ರವೃದ್ಧಮಾನನೂ ಅಥವಾ ಸ್ತೋತ್ರ, ಶಸ್ತ್ರ ಎಂಬ ಎರಡುವಿಧ ಮಂತ್ರಗಳಿಂದ ಸ್ತುತನಾದವನೂ, ಸರ್ವತ್ರ ಸಂಚಾರಶೀಲನೂ, ಇಷ್ಟಾರ್ಥಪ್ರದನೂ ಆದ ಇಂದ್ರನು ವಸತೀವರ್ಯುದಕದಿಂದ ಮಿಶ್ರಿತವಾದ ಸೋಮರಸಪಾನಕ್ಕಾಗಿ ಹರೀ ಎಂಬ ಅವನ ಎರಡು ಕುದುರೆಗಳೊಡನೆ ನಮ್ಮ ಯಜ್ಞಭೂಮಿಗೆ ದಯಮಾಡಲಿ ಎಲೈ ಇಂದ್ರನೇ, ಶತ್ರುಹಂತಕನಾದ ನೀನು ಗೋಚರ್ಮದ ಮೇಲೈಲತೆಗಳನ್ನು ಇಟ್ಟು ಜಜ್ಜಿ ಹಿಂಡಿರುವುದೂ ಪಾತ್ರೆಗಳಲ್ಲಿ ತುಂಬಿರುವುದೂ ರುಚಿಕರವೂ ಆದ ಸೋಮರಸಪಾನದಿಂದ ಹರ್ಷಿತನಾಗಿ ವ್ಯಸನಾಕ್ರಾಂತರಾದ ಶತ್ರುಗಳ ಮೇಲೆ ವೃಷಭವು ನುಗ್ಗುವಂತೆ ನುಗ್ಗಿ ಹೋಗು.

## English Translation.

May Indra, who deserves the twofold adoration, (of praise and prayer), who goes everywhere, the showerer benefits, come to the offered sacrificial food with his two bay horses, O slayer of enemies, (exhilarated) at our sacrifiice (by drinking) of the Soma-juice effuse upon the cow-hide and poured (into the cups), rush like a bull upon the dispirited (foe).

॥ ಸಂಹಿತಾಪಾಠಃ ॥

ನಿ ತಿಗ್ಮಾನಿ ಭ್ರಾಶಯನ್ಭ್ರಾಶ್ಯಾನ್ಯವ ಸ್ಥಿರಾ ತನುಹಿ ಯಾತುಜೂನಾಂ ।
ಉಗ್ರಾಯ ತೇ ಸಹೋ ಬಲಂ ದದಾಮಿ ಪ್ರತೀತ್ಯಾ ಶತ್ರೂನ್ವಿಗದೇಷು ವೃಶ್ಚ ॥ ೫ ॥

॥ ಪದಪಾಠಃ ॥

ನಿ । ತಿಗ್ಮಾನಿ । ಭ್ರಾಶಯನ್ । ಭ್ರಾಶ್ಯಾನಿ । ಅವ । ಸ್ಥಿರಾ । ತನುಹಿ । ಯಾತುऽಜೂನಾಂ ।
ಉಗ್ರಾಯ । ತೇ । ಸಹಃ । ಬಲಂ । ದದಾಮಿ । ಪ್ರತಿऽಇತ್ಯ । ಶತ್ರೂನ್ । ವಿऽಗದೇಷು । ವೃಶ್ಚ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಭ್ರಾಶ್ಯಾನಿ ಪ್ರಕಾಶ್ಯಾನಿ ತಿಗ್ಮಾನಿ ತೀಕ್ಷ್ಣಾನ್ಯಾಯುಧಾನಿ ನಿತರಾಂ ಭ್ರಾಶಯನ್ ಪ್ರಕಾಶಯನ್ ॥ ಭ್ರಾಶೃ ದೀಪ್ತೌ ॥ ಸ ತ್ವಂ ಯಾತುಜೂನಾಂ ॥ ಜು ಇತಿ ಸೌತ್ರೋ ಧಾತುಃ । ಭ್ರಾಜಭಾಸೇತ್ಯತ್ರ ಜವತೇರ್ದೀರ್ಘಃ । ಕಾ. ೩-೨-೧೭೭-೧ । ಕ್ವಿಪ್ಚೇತಿ ಕ್ವಿಪ್ । ದೀರ್ಘಸ್ಯಾಮಿ ನುಡಾಗಮಶ್ಛಾಂದಸಃ ॥ ಯಾತುಧಾನಾನಾಂ ಸ್ಥಿರಾ ಸ್ಥಿರಾಣಿ ದೃಢಾನ್ಯಪಿ ಶರೀರಾಣ್ಯವ ತನುಹಿ । ಅವಸ್ತಾತ್ತನುಭೂತಾನ್ಪಾತಯ । ಉಗ್ರಾಯೋದ್ಗೂರ್ಣಬಲಾಯ ತೇ ತುಭ್ಯಂ ಸಹಃ ಶತ್ರುಸಹನಸಮರ್ಥಂ ಬಲಂ ಬಲಹೇತುಕಂ ಹವಿರ್ದದಾಮಿ । ಅಹಂ ಪ್ರಯಚ್ಛಾಮಿ । ತತೋ ವಿಗದೇಷು । ವಿವಿಧಂ ಗದಂತಿ ಶಬ್ದಾಯಂತೇ ॥ ಗದೇರ್ಘಞರ್ಥೇ ಕವಿಧಾನಮಿತ್ಯಧಿಕರಣೇ ಕಃ ॥ ಶತ್ರೂನ್ಪ್ರತೀತ್ಯ ಪ್ರತಿಗಮ್ಯ ಪ್ರತಿಕೂಲಂ ಗತ್ವಾ ವೃಶ್ಚ । ತಾಂಶ್ಛಿಂದ್ಧಿ ॥ ಓವ್ರಶ್ಚೂ ಛೇದನೇ ತೌದಾದಿಕಸ್ಯ ಲೋಟ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಭ್ರಾಶ್ಯಾನಿ—ಪ್ರಕಾಶಮಾನವಾದವೂ । ತಿಗ್ಮಾನಿ—ಹರಿತವಾದವೂ ಆದ ನಿನ್ನ ಆಯುಧಗಳನ್ನು । ನಿ ಭ್ರಾಶಯನ್—ಝುಳಪಿಸುತ್ತಾ । ಯಾತುಜೂನಾಂ—ಯಾತುಧಾನರೇ ಮೊದಲಾದ ರಕ್ಷೋಗಣಗಳ । ಸ್ಥಿರಾ—ದೃಢವಾದ ಶರೀರಗಳನ್ನು । ಅವ ತನುಹಿ—ಅಧೋಮುಖವಾಗಿ ಬೀಳುವಂತೆ ಮಾಡು । ಉಗ್ರಾಯ—ಅತಿಶಯಬಲವುಳ್ಳ । ತೇ—ನಿನಗೆ । ಸಹಃ—ಶತ್ರುಗಳ ಏಟನ್ನು ತಡೆದುಕೊಳ್ಳಬಲ್ಲ । ಬಲಂ—ಬಲಪ್ರದವಾದ ಹವಿಸ್ಸನ್ನು । ದದಾಮಿ—ಅರ್ಪಿಸುತ್ತೇನೆ । ವಿಗದೇಷು—ಕೋಲಾಹಲಯುಕ್ತವಾದ ಕದನಗಳಲ್ಲಿ । ಶತ್ರೂನ್ ಪ್ರತೀತ್ಯ—ಶತ್ರುಗಳಮೇಲೆ ಮುನ್ನುಗ್ಗಿ । ವೃಶ್ಚ—ಅವರನ್ನು ಕತ್ತರಿಸಿಹಾಕು.

॥ ಭಾವಾರ್ಥ ॥

ಎಲೈ ಇಂದ್ರನೇ ಪ್ರಕಾಶಮಾನವೂ ಹರಿತವಾದವೂ ಆದ ನಿನ್ನ ಆಯುಧಗಳನ್ನು ಝುಳಪಿಸುತ್ತಾ ಯಾತುಧಾನರ ದೃಢವಾದ ಶರೀರಗಳನ್ನು ಅಧೋಮುಖವಾಗಿ ಬೀಳುವಂತೆ ಕೆಡವು. ಅತಿಶಯಬಲಯುಕ್ತನಾದ ನಿನಗೆ

ಶತ್ರುಗಳ ಪ್ರಹಾರಗಳನ್ನು ಸಹಿಸಬಲ್ಲ ಮತ್ತು ಬಲಪ್ರದವಾದ ಹವಿಸ್ಸನ್ನು ಅರ್ಪಿಸುತ್ತೇನೆ. ಕೋಲಾಹಲಯುಕ್ತವಾದ ಕದನಗಳಲ್ಲಿ ಶತ್ರುಗಳ ಮೇಲೆ ಮನ್ನುಗ್ಗಿ ಹೋಗಿ ಅವರನ್ನು ಕತ್ತರಿಸಿಹಾಕು.

## English Translation.

Brandishing your sharp, shining weapons, pierce the solid bodies of the evil spirits. I give to you who are ficrce, foe-subding strength; having assailed the enemies· cut them to pieces in the midst of their clamour·

॥ ಸಂಹಿತಾಪಾಠಃ ॥

ವ್ಯ೧ರ್ಯ ಇಂದ್ರ ತನುಹಿ ಶ್ರವಾಂಸ್ಯೋಜಃ ಸ್ಥಿರೇವ ಧನ್ವನೋಽಭಿಮಾತೀಃ ।
ಅಸ್ಮದ್ರ್ಯಗ್ವಾವೃಧಾನಃ ಸಹೋಭಿರನಿಭೃಷ್ಟಸ್ತನ್ವಂ ವಾವೃಧಸ್ವ ॥ ೬ ॥

॥ ಪದಪಾಠಃ ॥

ವಿ । ಅರ್ಯಃ । ಇಂದ್ರ । ತನುಹಿ । ಶ್ರವಾಂಸಿ । ಓಜಃ । ಸ್ಥಿರಾಽಇವ । ಧನ್ವನಃ । ಅಭಿಽಮಾತೀಃ ।
ಅಸ್ಮದ್ರ್ಯಕ್ । ವವೃಧಾನಃ । ಸಹಃಽಭಿಃ । ಅನಿಽಭೃಷ್ಟಃ । ತನ್ವಂ । ವವೃಧಸ್ವ ॥ ೬ ॥

। ಸಾಯಣಭಾಷ್ಯಂ ॥

ಹೇ ಇಂದ್ರ ಅರ್ಯಃ ಸ್ವಾಮೀ ತ್ವಂ ಶ್ರವಾಂಸ್ಯನ್ನಾನಿ । ಶ್ರವ ಇತ್ಯನ್ನನಾಮ । ಅಸ್ಮಭ್ಯಂ ವಿ ತನುಹಿ । ವಿಸ್ತಾರಯ । ಪ್ರಯಚ್ಛ ॥ ತನೋತೇರ್ಲೋಟ್ಯುತಶ್ಚ ಪ್ರತ್ಯಯಾಚ್ಛಂದಸಿ ವಾವಚನಂ । ಪಾ. ೬-೪-೧೦೬-೧ । ಇತಿ ಹೇರ್ಲುಗಭಾವಃ ॥ ತಥಾಭಿಮಾತೀಃ । ಅಭಿತೋ ಮಾತಿರ್ಮಾನಂ ಯೇಷಾಂ ತೇಽಭಿಮಾತಯಃ ಶತ್ರವಃ । ತಾನ್ಪ್ರತ್ಯೋಜ ಆತ್ಮೀಯಂ ವೀರ್ಯಂ ಸ್ಥಿರೇವ ಸ್ಥಿರಾಣ್ಯೇವ ಧನ್ವನೋ ಧನೂಂಷಿ ಚ ವಿಸ್ತಾರಯ । ತೈಃ ಶತ್ರೂನ್ಜಹೀತ್ಯರ್ಥಃ । ಅಪಿ ಚಾಸ್ಮದ್ರ್ಯಗಸ್ಮದಭಿಮುಖಾಂಚನಃ ॥ ವಿಷ್ವಗ್ದೇವಯೋಶ್ಚ ಟೇರದ್ರ್ಯಂಚತಾವಿತ್ಯದ್ರ್ಯಾದೇಶಃ । ಪಾ. ೬-೩-೯೨ । ಅದ್ರಿಸಧ್ರ್ಯೋರಂತೋದಾತ್ತತ್ವೇನ ನಿಪಾತನಾತ್ । ಪಾ. ೬-೩-೯೫-೧ । ಉದಾತ್ತಸ್ವರಿತಯೋರ್ಯಣ ಇತಿ ಧಾತೋರಕಾರಸ್ಯಾನುದಾತ್ತಸ್ಯ ಸ್ವರಿತತ್ವಂ ॥ ಸಹೋಭಿರಾತ್ಮೀಯೈರ್ಬಲೈರ್ವಾವೃಧಾನಃ ಪ್ರವೃದ್ಧಃ ಅತ ಏವಾನಿಭೃಷ್ಟಃ ಶತ್ರುಭಿರಪರಿಭವನೀಯಸ್ತ್ವಂ ತನ್ವಮಾತ್ಮೀಯಂ ಶರೀರಂ ವಾವೃಧಸ್ವ । ವರ್ಧಯ । ಯದ್ವಾ। ತನ್ವಂ। ತನ್ಯತ ಇತಿ ತನೂರ್ಯಜ್ಞಃ । ತಂ ವರ್ಧಯ । ತ್ವದಾಗಮನೇನ ಹಿ ಯಜ್ಞೋ ವರ್ಧತೇ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ | **ಅರ್ಯಃ**—ಸರ್ವರಿಗೂ ಸ್ವಾಮಿಯಾದ ನೀನು | **ಶ್ರವಾಂಸಿ**—ಅನ್ನಾದ್ಯಾಹಾರಗಳನ್ನು | **ವಿ ತನುಹಿ**–ನಮಗೆ ಅತಿಶಯವಾಗಿ ಒದಗಿಸಿಕೊಡು | **ಅಭಿಮಾತೀಃ**—ನಮ್ಮೆದುರಾಗಿರುವ ಶತ್ರುಗಳ ಮೇಲೆ | **ಓಜಃ**—ನಿನ್ನ ವರ್ಚಸ್ಸನ್ನು | **ಸ್ಥಿರೇವ**—ಸ್ಥಿರವಾಗಿರುವಂತೆ ಬೀರಿ | **ಧನ್ವನಃ**—ನಿನ್ನ ಧನುಸ್ಸುಗಳನ್ನು ಪ್ರಯೋಗಿಸು | **ಅಸ್ಮದ್ರ್ಯಕ್**—ನಮ್ಮ ಎದುರಿಗಿರುವ ಜನರನ್ನು | **ಸಹೋಭಿಃ**—ನಿನ್ನ ಶಕ್ತಿಸಾಮರ್ಥ್ಯಗಳಿಂದ | **ವಾವೃಧಾನಃ**—ಉತ್ಸಾಹಿತರನ್ನಾಗಿ ಮಾಡುತ್ತಾ | **ಅನಿಭೃಷ್ಟಃ**—ಶತ್ರುಗಳಿಂದ ಪರಾಜಿತನಾಗದಿರುವ ನೀನು | **ತನ್ವಂ**—ನಿನ್ನ ಶರೀರವನ್ನು ಎಂದರೆ ಸ್ವಸಾಮರ್ಥ್ಯವನ್ನು | **ವಾವೃಧಸ್ವ**—ಇನ್ನೂ ಹೆಚ್ಚಾಗಿ ವೃದ್ಧಿಪಡಿಸಿಕೋ [ಅಥವಾ **ತನ್ವಂ**—ಯಜ್ಞವನ್ನು | **ವಾವೃಧಸ್ವ**—ಮುಂದುವರೆಯುವಂತೆ ಮಾಡು]

॥ ಭಾವಾರ್ಥ ॥

ಎಲೈ ಇಂದ್ರನೇ, ಸರ್ವರಿಗೂ ಸ್ವಾಮಿಯಾದ ನೀನು ನಮಗೆ ಅನ್ನಾದ್ಯಾಹಾರ ಗಳನ್ನು ಅತಿಶಯವಾಗಿ ಒದಗಿಸಿಕೊಡು ನಮ್ಮ ಎದುರಿಗಿರುವ ಶತ್ರುಗಳ ಮೇಲೆ ನಿನ್ನ ವರ್ಚಸ್ಸನ್ನು ಸ್ಥಿರವಾಗಿರುವಂತೆ ಬೀರಿ ಅವರ ಮೇಲೆ ನಿನ್ನ ಧನುಸ್ಸನ್ನು ಪ್ರಯೋಗಿಸು ನಮ್ಮ ಎದುರಿಗಿರುವ ನಮ್ಮ ಜನರನ್ನು ನಿನ್ನ ಶಕ್ತಿಸಾಮರ್ಥ್ಯಗಳಿಂದ ಹುರಿದುಂಬಿಸುತ್ತಾ ಶತ್ರುಗಳಿಂದ ಪರಾಜಿತನಾಗದ ನೀನು ನಿನ್ನ ಶರೀರಸಾಮರ್ಥ್ಯವನ್ನು ಇನ್ನೂ ಹೆಚ್ಚಾಗಿ ವೃದ್ಧಿಪಡಿಸಿಕೋ ಅಥವಾ ನಮ್ಮ ಯಜ್ಞವನ್ನು ವೃದ್ಧಿಪಡಿಸು.

**English Translation.**

Stretch out for us, lord Indra, varied food, (stretch out) your strength like strong bows against our enemies, mighty in our presence by your vigour and irresistible, still augment your form.

॥ ಸಂಹಿತಾಪಾಠಃ ॥

ಇದಂ ಹವಿರ್ಮಘವನ್ತುಭ್ಯಂ ರಾತಂ ಪ್ರತಿ ಸಮ್ರಾಳಹೃಣಾನೋ ಗೃಭಾಯ |
ತುಭ್ಯಂ ಸುತೋ ಮಘವನ್ತುಭ್ಯಂ ಪಕ್ವೋ೩ದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯ ॥ ೭ ॥

॥ ಪದಪಾಠಃ ॥

ಇದಂ | ಹವಿಃ | ಮಘಽವನ್ | ತುಭ್ಯಂ | ರಾತಂ | ಪ್ರತಿ | ಸಂಽರಾಟ್ | ಅಹೃಣಾನಃ | ಗೃಭಾಯ |
ತುಭ್ಯಂ | ಸುತಃ | ಮಘಽವನ್ | ತುಭ್ಯಂ | ಪಕ್ವಃ | ಅದ್ಧಿ | ಇಂದ್ರ | ಪಿಬ | ಚ | ಪ್ರಽಸ್ಥಿತಸ್ಯ ॥ ೭ ॥

|| ಸಾಯಣಭಾಷ್ಯಂ ||

ಹೇ ಮಘವನ್ಧನವನ್ ಸಮ್ರಾಟ್ ಸಮ್ಯಗ್ರಾಜಮಾನ ಸರ್ವೇಷಾಮೀಶ್ವರೇತಿ ವಾ ಇದಂ ಸೋಮಾದಿಲಕ್ಷಣಂ ರಾತಮಸ್ಮಾಭಿರ್ದತ್ತಂ ಹವಿರ್ಹೇ ಇಂದ್ರ ತುಭ್ಯಮಹೃಣಾನೋಽಕ್ರುಧ್ಯನ್ ಪ್ರತಿ ಗೃಭಾಯ । ಪ್ರತಿಗೃಹಾಣ ॥ ಗ್ರಹೇರ್ಲೋಟಿ ಶ್ನಾಪ್ರತ್ಯಯಸ್ಯ ಛಂದಸಿ ಶಾಯಜಪೀತಿ ಶಾಯಜಾದೇಶಃ। ಹೃಗ್ರಹೋರ್ಭ ಇತಿ ಭಃ । ಸಂನಿಪಾತಪರಿಭಾಷಾಯಾ ಅನಿತ್ಯತ್ವಾದ್ಧೇರ್ಲುಗ್ ॥ ಹೇ ಮಘವನ್ ತುಭ್ಯಮೇವಾಯಂ ಸೋಮಃ ಸುತಃ ॥ ಜಯಿ ಚ । ಪಾ. ೬-೧-೨೦೨ । ಇತ್ಯಾದ್ಯುದಾತ್ತತ್ವಂ ॥ ತುಭ್ಯಮೇವಾಯಂ ಪುರೋಡಾಶಾದಿಃ ಪಕ್ವಃ । ಹೇ ಇಂದ್ರ ತಂ ಪುರೋಡಾಶಮದ್ಧಿ । ಭಕ್ಷಯ । ಕಿಂಚ ಪ್ರಸ್ಥಿತಸ್ಯ ಹವಿರ್ಧಾನಾದುತ್ತರವೇದಿಂ ಪ್ರತಿ ಪ್ರಸ್ಥಾಪಿತಂ ಸೋಮಂ ಪಿಬ ॥ ವಾಕ್ಯಭೇದಾದನಿಘಾತಃ । ಯದ್ವಾ । ಆಮಂತ್ರಿತಸ್ಯಾವಿದ್ಯಮಾನತ್ವೇನ ತಿಙ ಉತ್ತರತ್ವಾದನಿಘಾತಃ ॥

|| ಪ್ರತಿಪದಾರ್ಥ ||

**ಮಘವನ್**—ಧನವಂತನೂ | **ಸಮ್ರಾಟ್**—ಸರ್ವರಿಗೂ ಈಶ್ವರನೂ ಆದ ಎಲೈ ಇಂದ್ರನೇ | **ತುಭ್ಯಂ**—ನಿನಗೋಸ್ಕರ | **ರಾತಂ**—ನಮ್ಮಿಂದ ಅರ್ಪಿಸಲ್ಪಟ್ಟ | **ಇದಂ ಹವಿಃ**—ಈ ಹವಿಸ್ಸನ್ನು | **ಅಹೃಣಾನಃ**—ಕೋಪರಹಿತನಾಗಿ | **ಪ್ರತಿ ಗೃಭಾಯ**—ಸ್ವೀಕರಿಸು | **ಮಘವನ್**—ಎಲೈ ಇಂದ್ರನೇ | **ತುಭ್ಯಂ**—ನಿನಗಾಗಿಯೇ | **ಸುತಃ**—ಈ ಸೋಮರಸವು ಹಿಂಡಿ ಸಿದ್ಧವಾಗಿದೆ | **ತುಭ್ಯಂ**—ನಿನಗಾಗಿಯೇ | **ಪಕ್ವಃ**—ಈ ಪುರೋಡಾಶಾದಿ ಹವಿಸ್ಸು ಪಕ್ವವಾಗಿದೆ | **ಇಂದ್ರ**—ಎಲೈ ಇಂದ್ರನೇ | (**ತಂ**—ಆ ಪುರೋಡಾಶವನ್ನು) **ಅದ್ಧಿ**—ಭಕ್ಷಿಸು | **ಪ್ರಸ್ಥಿತಸ್ಯ**—ಪಾತ್ರೆಯಲ್ಲಿ ತುಂಬಿ ಸಿದ್ಧವಾಗಿರುವ ಸೋಮವನ್ನು | **ಪಿಬ**—ಪಾನಮಾಡು.

|| ಭಾವಾರ್ಥ ||

ಧನವಂತನೂ ಸರ್ವರಿಗೂ ಒಡೆಯನೂ ಆದ ಎಲೈ ಇಂದ್ರನೇ, ನಿನಗೋಸ್ಕರ ನಮ್ಮಿಂದ ಅರ್ಪಿತವಾದ ಈ ಹವಿಸ್ಸನ್ನು ಕೋಪರಹಿತನಾಗಿ ಸ್ವೀಕರಿಸು. ಎಲೈ ಇಂದ್ರನೇ, ಈ ಸೋಮರಸವು ನಿನಗಾಗಿಯೇ ಹಿಂಡಿ ಸಿದ್ಧವಾಗಿದೆ. ಈ ಪುರೋಡಾಶವೂ ನಿನಗಾಗಿಯೇ ಪಕ್ವಮಾಡಲ್ಪಟ್ಟಿದೆ ಅದನ್ನು ಭಕ್ಷಿಸು. ಎಲೈ ಇಂದ್ರನೇ, ಪಾತ್ರೆಯಲ್ಲಿ ತುಂಬಿ ಸಿದ್ಧವಾಗಿರುವ ಸೋಮರಸವನ್ನು ಪಾನಮಾಡು.

## English Translation.

Imperial Maghavan, to you this oblation is offered; aecept it, not displeased: for you, Maghavan, the libation is effused, for you (the cake is) toasted; eat it, Indra, and drink the libation poured (upon the altar).

|| ವಿಶೇಷವಿಷಯಗಳು ||

ಪುರುಷರಿಗಿರುವಂತೆಯೇ ದೇವತೆಗಳಿಗೂ ದೇಹಾದ್ಯಾಕಾರಗಳು, ಹಸ್ತಾದ್ಯವಯವಗಳು, ಆಹಾರಭಕ್ಷಣ, ಸೋಮಪಾನ ಮೊದಲಾದ ಕರ್ಮಗಳು ಉಂಟೇ ಇಲ್ಲವೇ ಎಂಬ ವಿಷಯದಲ್ಲಿ ಯಾಸ್ಕರು ಈ ಋಕ್ಕಿನ **ಅದ್ಧೀಂದ್ರ-ಪಿಬ ಚ ಪ್ರಸ್ಥಿತಸ್ಯ** ಎಂಬ ವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿರುವರು. ಈ ವಿಷಯದಲ್ಲಿ ಯಾಸ್ಕರ ನಿರ್ವಚನವು ಈ ರೀತಿ ಇದೆ—

ದೇವತೆಗಳಿಗೆ ಮನುಷ್ಯರಿಗಿರುವಂತೆ ಹಸ್ತಪಾದಾದ್ಯವಯವಗಳುಂಟೇ? ಎಂಬ ವಿಚಾರದಲ್ಲಿ ಮತಭೇದ ವಿದ್ದರೂ ಋಗ್ವೇದದಲ್ಲಿ ಋಷಿಗಳು ಇಂದ್ರಾದಿ ದೇವತೆಗಳನ್ನು ಹಸ್ತಪಾದಾದಿ ಅವಯವವುಳ್ಳವರನ್ನಾಗಿ ಭಾವಿಸಿ ಸ್ತುತಿಸಿರುವುದು ಕಂಡುಬರುವುದು. ಈ ವಿಷಯದಲ್ಲಿ ಯಾಸ್ಕರು—

**ಅಥಾಕಾರಚಿಂತನಂ ದೇವತಾನಾಂ। ಪುರುಷವಿಧಾಃ ಸ್ಯುರಿತ್ಯೇಕಂ। ಚೇತನಾವದ್ವದ್ಧಿ ಸ್ತುತಯೋ ಭವಂತಿ। ತಥಾಭಿಧಾನಾನಿ। ಅಥಾಪಿ ಪೌರುಷವಿಧಿಕೈರಂಗೈಃ ಸಂಸ್ತೂಯಂತೇ। ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ। ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ।**

(ನಿ. ೭-೬)

ಎಂದು ನಿರ್ವಚನವನ್ನು ಹೇಳಿದ್ದಾರೆ. ಈಗ ದೇವತೆಗಳ ಆಕಾರ, ರೂಪ ಮೊದಲಾದವುಗಳನ್ನು ವಿಮರ್ಶೆ ಮಾಡೋಣ. ದೇವತೆಗಳಿಗೆ ಪುರುಷರಿಗಿರುವಂತೆ ಹಸ್ತಾದ್ಯವಯವಾದಿಗಳಿರುವವು ಎಂದು ಕೆಲವರ ಮತ, ಮನುಷ್ಯ ರಿಗೆ ಚೈತನ್ಯವಿರುವಂತೆ ದೇವತೆಗಳಿಗೂ ಚೈತನ್ಯ ಪ್ರಜ್ಞೆ ಮೊದಲಾದವು ಇರುವವು ಎಂದು ಭಾವಿಸಿ ಹಸ್ತಾದ್ಯವಯವ ಗಳೂ ಆಕಾರವೂ ಮನುಷ್ಯರಿಗಿರುವಂತೆ ದೇವತೆಗಳಿಗೂ ಇರುವುದರಿಂದ ಅವರನ್ನು ಚೈತನ್ಯಯುಕ್ತರೆಂದು ಭಾವಿಸಿ ಅದರಂತೆ ಸ್ತುತಿಸಲಾಗುವುದು. ಈ ಕಾರಣಕ್ಕಾಗಿಯೇ ಇಂದ್ರ ಮೊದಲಾದ ದೇವತೆಗಳನ್ನು ವರ್ಣಿಸುವಾಗ ಅವರ ಹಸ್ತಾದಿಗಳನ್ನು ವರ್ಣಿಸುವುದು ರೂಢಿಯು. ಪ್ರಕೃತ ಋಕ್ಕಿನ **ಋಷ್ವಾತ ಇಂದ್ರ ಸ್ಥವಿರಸ್ಯ ಬಾಹೂ** ಎಂಬ ಮೂರನೆಯ ಪಾದದಲ್ಲಿ ಇಂದ್ರನ ಬಾಹುಗಳ ವರ್ಣನೆ ಇದೆ. ಅದರಂತೆ,

**ಉತಾಭಯೇ ಪುರುಹೂತ ಶ್ರವೋಭಿರೇಕೋ ದೃಳ್ಹಮವದೋ ವೃತ್ರಹಾ ಸನ್।**
**ಇಮೇ ಚಿದಿಂದ್ರ ರೋದಸೀ ಅಪಾರೇ ಯತ್ಸಂಗೃಭ್ಣಾ ಮಘವನ್ ಕಾಶಿರಿತ್ತೇ॥**

(ಋ. ಸಂ. ೩-೩೦-೫)

ಎಂಬ ಋಕ್ಕಿನಲ್ಲಿಯೂ ಇಂದ್ರನ ಅವಯವ ವರ್ಣನೆ ಇರುವುದನ್ನು ನಿರುಕ್ತಕಾರರು ಉದಾಹರಿಸಿದ್ದಾರೆ.

ದೇವತೆಗಳಿಗೆ ಪುರುಷಾದಿರೂಪಗಳಲ್ಲದೆ ಪುರುಷರಿಗಿರುವಂತೆ ನಾನಾ ವಿಧ ದ್ರವ್ಯ ಸಂಯೋಗವೂ ಉಂಟೆಂದು ಅನೇಕ ವರ್ಣನೆಗಳಿವೆ—

**ಅಥಾಪಿ ಪೌರುಷವಿಧಿಕೈರ್ದ್ರವ್ಯಸಂಯೋಗೈಃ।** (ನಿ. ೭-೬)

ಈ ವಿಷಯದಲ್ಲಿ—

**ಆ ದ್ವಾಭ್ಯಾಂ ಹರಿಭ್ಯಾಮಿಂದ್ರ ಯಾಹ್ಯಾ ಚತುರ್ಭಿರಾ ಷಡ್ಭಿರ್ಹೂಯಮಾನಃ।**
**ಆಷ್ಟಾಭಿರ್ದಶಭಿಃ ಸೋಮಪೇಯಮಯಂ ಸುತಃ ಸುಮಖ ಮಾ ಮೃಧಸ್ಕಃ॥**

(ಋ. ಸಂ. ೨-೧೮-೪)

ಎಂಬ ಋಕ್ಕಿನ ಉದಾಹರಣೆಯನ್ನು ಕೊಟ್ಟು ಪುರುಷರಿಗೆ ಗೋವು, ಅಶ್ವಗಳು ಮೊದಲಾದವುಗಳಿರುವಂತೆ ಇಂದ್ರಾದಿ ದೇವತೆಗಳಿಗೂ ಅವುಗಳಿರುವವು ಎಂಬುದನ್ನು ಈ ಋಕ್ಕಿನಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಎಲೈ ಇಂದ್ರನೇ, ನೀನು ನಿನ್ನ ಹರೀ ಎಂಬ ಹೆಸರಿನ ಎರಡು ಕುದುರೆಗಳಿಂದ ಕೂಡಿ (ರಥದಲ್ಲಿ ಕುಳಿತು) ನಮ್ಮ ಯಜ್ಞಕ್ಕೆ ಬಾ ಅಥವಾ

ನಾಲ್ಕು, ಆರು, ಎಂಟು, ಹತ್ತು ಕುದುರೆಗಳಿಂದಲಾದರೂ ಕೂಡಿ ಸೋಮಪಾನಾರ್ಥವಾಗಿ ಇಲ್ಲಿಗೆ ಬಾ ಎಂದು ಹೇಳಿರುವುದರಿಂದ ಲೋಕವ್ಯವಹಾರದಲ್ಲಿ ಪುರುಷರಿಗೆ ಸ್ವತ್ತುಗಳಿರುವಂತೆಯೇ ದೇವತೆಗಳಿಗೂ ಅಶ್ವಾದಿಗಳಿರುವವು ಎಂದಭಿಪ್ರಾಯವು ವ್ಯಕ್ತವಾಗಿರುವುದು ಮತ್ತು

**ಅಪಾಃ ಸೋಮಮಸ್ತಮಿಂದ್ರ ಪ್ರ ಯಾಹಿ ಕಲ್ಯಾಣೀರ್ಜಾಯಾ ಸುರಣಂ ಗೃಹೇ ತೇ ।**
**ಯತ್ರಾ ರಥಸ್ಯ ಬೃಹತೋ ನಿಧಾನಂ ವಿಮೋಚನಂ ವಾಜಿನೋ ದಕ್ಷಿಣಾವತ್ ॥**

(ಋ. ಸಂ. ೩-೫೩-೬)

ಎಂಬ ಈ ಋಕ್ಕಿನಲ್ಲಿ ಪುರುಷರಿಗಿರುವಂತೆ ಇಂದ್ರನಿಗೂ ಮನೆಯಲ್ಲಿ ಪತ್ನಿಯೂ, ರಥ, ಕುದುರೆಗಳೂ ಇರುವ ವಿಷಯದ ಪ್ರಸ್ತಾಪವಿದೆ.

ಇನ್ನೂ ಪುರುಷರ ಕರ್ಮಗಳಂತೆ ದೇವತೆಗಳ ಕರ್ಮಗಳೂ ಇರುವವು ಎಂಬ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟು ಸಮರ್ಥಿಸಿದ್ದಾರೆ—

**ಅಥಾಪಿ ಪೌರುಷವಿಧಿಕೈಃ ಕರ್ಮಭಿಃ ।** (ನಿ. ೭-೬)

**ಇದಂ ಹವಿರ್ಮಘವನ್ ತುಭ್ಯಂ ರಾತಂ ಪ್ರತಿ ಸಮ್ರಾಳಹೃಣಾನೋ ಗೃಭಾಯ ।**
**ತುಭ್ಯಂ ಸುತೋ ಮಘವನ್ ತುಭ್ಯಂ ಪಕ್ವೋಽದ್ಧೀಂದ್ರ ಪಿಬ ಚ ಪ್ರಸ್ಥಿತಸ್ಯ ॥**

(ಋ. ಸಂ. ೧೦-೧೧೬-೭)

**ಆಶ್ರುತ್ಕರ್ಣ ಶ್ರುಧೀ ಹವಂ ನೂ ಚಿದ್ದಧಿಷ್ವ ಮೇ ಗಿರಃ ।**
**ಇಂದ್ರ ಸೋಮಮಿಮಂ ಮಮ ಕೃಷ್ವಾ ಯುಜಶ್ಚಿದಂತರಂ ।**

ಎಂಬ ಋಕ್ಕುಗಳನ್ನು ಉದಾಹರಣೆಗಾಗಿ ಕೊಟ್ಟಿದ್ದಾರೆ. ಮೊದಲನೆಯ ಋಕ್ಕಿನಲ್ಲಿ ಇಂದ್ರನಿಗಾಗಿ ಹವಿಸ್ಸನ್ನೂ ಸೋಮವನ್ನೂ ಅರ್ಪಿಸುವುದೂ ಅದನ್ನು ಇಂದ್ರನು ಪಾನಮಾಡಬೇಕೆಂದು ಪ್ರಾರ್ಥಿಸಿರುವುದೂ ಉಕ್ತವಾಗಿದೆ. ಎರಡನೇ ಋಕ್ಕಿನಲ್ಲಿ ನಮ್ಮ ಆಹ್ವಾನವನ್ನೂ ಸ್ತೋತ್ರವನ್ನೂ ಕೇಳಬೇಕೆಂಬ ಪ್ರಾರ್ಥನೆ ಇದೆ. ಎಂದರೆ ಮನುಷ್ಯರ ಕರ್ಮದಂತೆ, ಮನುಷ್ಯರು ಮಾಡುವಂತೆ ಹವಿಸ್ಸನ್ನು ಭಕ್ಷಿಸುವುದು, ಸೋಮರಸವನ್ನು ಪಾನಮಾಡುವುದು ಆಹ್ವಾನವನ್ನು ಮತ್ತು ಸ್ತೋತ್ರವನ್ನು ಆಲಿಸಿ ಕೇಳುವುದು ಮೊದಲಾದ ಮನುಷ್ಯೋಚಿತವಾದ ಕರ್ಮಗಳನ್ನು ಇಂದ್ರಾದಿ ದೇವತೆಗಳಲ್ಲಿಯೂ ಆರೋಪಮಾಡಿ ಸ್ತುತಿಸಲಾಗಿದೆ. ಈ ರೀತಿ ಪುರುಷರಂತೆ ದೇವತೆಗಳಿಗೆ ಆಕಾರ, ಹಸ್ತಾದ್ಯವಯವಗಳು, ಭಕ್ಷಣಾದಿಕರ್ಮಗಳು ದೇವತೆಗಳಿಗೂ ಇರುವವು ಎಂಬುದು ಕೆಲವರ ವಾದವು. ಮತ್ತೆ ಕೆಲವರು ದೇವತೆಗಳಿಗೆ ಮನುಷ್ಯರಿಗಿರುವಂತೆ ಆಕಾರಾದಿಗಳಿಲ್ಲವೆಂದೂ, ಕರ್ಮಗಳೂ ಮನುಷ್ಯರು ಆಚರಿಸುವ ಕರ್ಮಗಳಿಗಿಂತ ಭಿನ್ನವಾಗಿರುವುದೆಂತಲೂ ದೇವತೆಗಳ ಮಹತ್ತ್ವವನ್ನು ವರ್ಣಿಸುವುದಕ್ಕಾಗಿ ಉತ್ಪ್ರೇಕ್ಷೆಯಿಂದ ಆ ರೀತಿ ವರ್ಣಿಸಲಾಗಿರುವುದೆಂದೂ ಅಭಿಪ್ರಾಯಪಡುವರು—

**ಅಪುರುಷವಿಧಾಃ ಸ್ಯುರಿತ್ಯಪರಂ ॥** (ನಿ. ೭-೭)

ಪುರುಷರಿಗಿರುವಂತೆ ದೇವತೆಗಳಿಗೆ ರೂಪ, ಆಕಾರ, ಕರ್ಮ ಮೊದಲಾದುವುಗಳಿಲ್ಲವೆಂದೂ ಅವುಗಳ ವೈಶಿಷ್ಟ್ಯವೇ ಬೇರೆವಿಧವೆಂದೂ ಮತ್ತೆ ಕೆಲವರು ಅಭಿಪ್ರಾಯಪಡುವರು. ಹೇಗೆಂದರೆ—

**ಅಪಿ ತು ಯದ್ದೃಶ್ಯತೇಽಪುರುಷವಿಧಂ ತದ್ಯಥಾಗ್ನಿರ್ವಾಯುರಾದಿತ್ಯಃ ಪೃಥಿವೀ ಚಂದ್ರಮಾ ಇತಿ** (ನಿ. ೭-೭)

ಕೆಲವು ದೇವತೆಗಳ ರೂಪಗಳು, ಕರ್ಮಗಳು ಪುರುಷರಿಗಿರುವಂತೆ ಕಾಣಿಸುವುದಾದರೂ ಅವುಗಳು ಆ ರೀತಿಯಾಗಿಲ್ಲ. ಅಗ್ನಿ, ವಾಯು, ಆದಿತ್ಯ, ಪೃಥಿವೀ, ಚಂದ್ರಮಾ ಇತ್ಯಾದಿ ದೇವತೆಗಳ ರೂಪ ಮತ್ತು ಕರ್ಮಗಳು ಪುರುಷರ (ಮನುಷ್ಯರ) ಕರ್ಮಗಳಂತೆ ಕಾಣಿಸುವುದಾದರೂ, ಅವುಗಳ ರೀತಿಯೇ ಬೇರೆ. ಆ ಕರ್ಮಗಳಿಗೂ ಮನುಷ್ಯರ ಕರ್ಮಗಳಿಗೂ ವಿಶೇಷ ವ್ಯತ್ಯಾಸವಿರುವುದು

**ಯಥೋ ಏತಚ್ಚೇತನಾವದ್ವದ್ಧಿ ಸ್ತುತಯೋ ಭವಂತೀತ್ಯಚೇತನಾನ್ಯಪ್ಯೇವಂ ಸ್ತೂಯಂತೇ ಯಥಾಕ್ಷಪ್ರಭೃತೀನ್ಯೋಷಧಿಪರ್ಯಂತಾನಿ ||** (ನಿ. ೭-೭)

ಹೇಗೆಂದರೆ, ಅಗ್ನ್ಯಾದಿದೇವತೆಗಳನ್ನು ಸ್ತುತಿಸುವಾಗ ಅವುಗಳಿಗೆ ಚೇತನರಿಗಿರುವಂತೆಯೇ ಭಾವಿಸಿ ಸ್ತುತಿಸಲ್ಪಡುವವು. ಜೂಜಾಡುವಾಗ ದಾಳಗಳನ್ನು ಸಂಬೋಧಿಸುವರು. ದಾಳಗಳು ಚೇತನಾರಹಿತವಾಗಿದ್ದರೂ ಚೇತನವಿರುವ ಪ್ರಾಣಿಗಳಂತೆ ಅವುಗಳನ್ನು ಸಂಬೋಧಿಸುವರು. ಓಷಧಿಗಳನ್ನೂ ಎಂದರೆ, ಗಿಡ, ಮರ ಬಳ್ಳಿ ಇವುಗಳನ್ನೂ ಚೇತನವಿರುವಂತೆಯೇ ಭಾವಿಸಿ ಸಂಬೋಧಿಸುವರು.

**ಯಥೋ ಏತತ್ಪೌರುಷವಿಧಿಕೈರಂಗೈಃ ಸಂಸ್ತೂಯಂತೆ ಇತ್ಯಚೇತನೇಷ್ವಪ್ಯೇತದ್ಭವತ್ಯಭಿಕ್ರಂದಂತಿ ಹರಿತೇಭಿರಾಸಭಿರಿತಿ ಗ್ರಾವಸ್ತುತಿಃ ||** (ನಿ. ೭-೭)

ಹಾಗೆಯೇ ಅಚೇತನವಸ್ತುಗಳನ್ನೂ ಪುರುಷಸಂಬಂಧವಾದ ಅಂಗವುಳ್ಳವುಗಳಂತೆಯೇ ಭಾವಿಸಿ ಸ್ತುತಿಸಲಾಗಿರುವುದು. ಓಷಧಿಗಳು, ಸೋಮವನ್ನು ಜಜ್ಜುವ ಕಲ್ಲು ಇವುಗಳು ಅಚೇತನವಾದುವು ಆದರೂ ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜುವಾಗ ಉಂಟಾಗುವ ಶಬ್ದವನ್ನು—ಆ ಕಲ್ಲುಗಳು ತಮ್ಮ ಹಸುರಾದ ಬಾಯಿಗಳಿಂದ ಕೂಗುತ್ತವೆ—ಎಂದು ವರ್ಣಿಸಲಾಗಿದೆ. ಕಲ್ಲುಗಳು ಅಚೇತನವಾದ್ದರಿಂದ ಅವುಗಳಿಗೆ ಪ್ರಾಣಿಗಳಿಗಿರುವಂತೆ ಬಾಯಿ ಇಲ್ಲ ಆದರೂ ಕಲ್ಲಿನ ಮೇಲೆ ಲತೆಯನ್ನಿಟ್ಟು ಜಜ್ಜುವಾಗ ಆಗುವ ಶಬ್ದವನ್ನು ಕಲ್ಲುಗಳೇ ತಮ್ಮ ಬಾಯಿನಿಂದ ಮಾಡುತ್ತವೆ ಎಂದು ಋಷಿಯು ಆಲಂಕಾರಿಕವಾಗಿ ವರ್ಣಿಸಿದ್ದಾನೆ. ಸೋಮಲತೆಯನ್ನು ಜಜ್ಜುವಾಗ ಆ ಲತೆಗಳ ಹಸುರಾದ ವರ್ಣವು ಕಲ್ಲುಗಳಿಗೆ ಅಂಟಿಕೊಳ್ಳುವುದರಿಂದ ಕಲ್ಲುಗಳ ಬಾಯಿಯು ಹಸರು ವರ್ಣವುಳ್ಳದ್ದಾಗಿದೆ ಎಂಬುದನ್ನು ಸೂಚಿಸುವುದ ಕ್ಕಾಗಿ ಕಲ್ಲುಗಳ ಬಾಯಿಯು ಹಸರುವರ್ಣವುಳ್ಳದ್ದಾಗಿವೆ ಎಂದು ಉತ್ಪ್ರೇಕ್ಷೆಯುಳ್ಳ ವರ್ಣನೆಮಾಡಲಾಗಿದೆ.

**ಯಥೋ ಏತತ್ಪೌರುಷವಿಧಿಕೈರ್ದ್ರವ್ಯಸಂಯೋಗೈರಿತ್ಯೇತದಪಿ ತಾದೃಶಮೇವ | ಸುಖಂ ರಥಂ ಯುಯುಜೇ ಸಿಂಧುರಶ್ವಿನಂ ಇತಿ ನದೀಸ್ತುತಿಃ ||** (ನಿ. ೭-೭)

ಪುರುಷರಿಗಿರುವಂತೆ ಅಚೇತನವಸ್ತುಗಳಿಗೂ ದ್ರವ್ಯಸಂಯೋಗವಿರುವ ವಿಷಯದಲ್ಲಿ—ನದಿಯು (ಸಿಂಧುವು) ತನ್ನ ಕುದುರೆಗಳನ್ನು ಸುಖಕರವಾದ ರಥಕ್ಕೆ ಹೂಡಿದಳು—ಇತ್ಯಾದಿ ವಾಕ್ಯಗಳಲ್ಲಿರುವಂತೆ ನದಿಯು ಅಚೇತನವಸ್ತು ವಾದ್ದರಿಂದ ಅದಕ್ಕೆ ರಥವೂ ಇಲ್ಲ. ಆದರೂ ನದಿಯನ್ನೂ ಸ್ತುತಿಸುವಾಗ ಋಷಿಯು ಮನುಷ್ಯರಿಗಿರುವಂತೆ ನದಿಗೂ ದ್ರವ್ಯಸಂಯೋಗವನ್ನು (ಸ್ವತ್ತನ್ನು ಹೊಂದಿರುವಿಕೆ) ಆರೋಪಮಾಡಿ ಸ್ತುತಿಸಿರುವನು.

**ಯಥೋ ಏತತ್ಪೌರುಷವಿಧಿಕೈಃ ಕರ್ಮಭಿರಿತ್ಯೇತದಪಿ ತಾದೃಶಮೇವ । ಹೋತುಶ್ಚಿತ್ಪೂರ್ವೇ ಹವಿರದ್ಯಮಾಶತ ಇತಿ ಗ್ರಾವಸ್ತುತಿರೇವ ॥** (ನಿ. ೭-೭)

ಕರ್ಮಗಳ ವಿಷಯದಲ್ಲಿಯೂ ಪುರುಷರಿಗಿರುವಂತೆಯೇ ಅಚೇತನವಸ್ತುಗಳಾದ ಕಲ್ಲು ಮೊದಲಾದವುಗಳಿಗೂ ಕರ್ಮಕರ್ತೃತ್ವವನ್ನು ಆರೋಪಿಸಿ ಸ್ತುತಿಸಲಾಗಿದೆ. ಸೋಮಲತೆಯನ್ನು ಕಲ್ಲಿನಿಂದ ಜಜ್ಜುವಾಗ ಲತೆಯಿಂದ ಹೊರಡುವ ರಸವು ಕಲ್ಲಿಗೆ ಸ್ಪರ್ಶವಾಗುವುದು ಸಹಜವಷ್ಟೆ. ಇದನ್ನೇ ಋಷಿಯು ಸೋಮಾಭಿಷವಣಸಾಧನವಾದ ಕಲ್ಲುಗಳು ಸೋಮರಸವನ್ನು ಹೋತೃಮೊದಲಾದ ಯಜ್ಞಕರ್ತರಿಗಿಂತಲೂ ಮೊದಲೇ ರುಚಿನೋಡುತ್ತವೆ- ಎಂದು ವರ್ಣಿಸಿದ್ದಾನೆ. ಕಲ್ಲಿಗೆ ಬಾಯಿಇಲ್ಲ, ಅದಕ್ಕೆ ರುಚಿನೋಡುವ ಸಾಮರ್ಥ್ಯವೂ ಇಲ್ಲ. ಆದರೂ ಲತೆಯನ್ನು ಕಲ್ಲಿನಿಂದ ಜಜ್ಜುವಾಗ ಹೊರಹೊರಡುವ ರಸವು ಕಲ್ಲಿಗೆ ಸ್ಪರ್ಶವಾಗುವುದರಿಂದ ಕಲ್ಲು ಎಲ್ಲರಿಗಿಂತ ಮೊದಲೇ ಸೋಮರಸದ ರುಚಿ ನೋಡುತ್ತದೆ ಎಂದು ವರ್ಣಿಸಿರುವುದು ಉತ್ಪ್ರೇಕ್ಷೆಯುತವಾಗಿಯೂ ಆಲಂಕಾರಿಕವಾಗಿಯೂ ಇದೆ. ವಾಸ್ತವವಾಗಿ ಕಲ್ಲುಗಳು ಅಚೇತನವಾದ್ದರಿಂದ ಅವುಗಳಿಗೆ ಬಾಯಿಯಾಗಲೀ, ರುಚಿನೋಡುವ ಸಾಮರ್ಥ್ಯವಾಗಲಿ ಇಲ್ಲವೆಂಬ ವಿಷಯವು ಸರ್ವರಿಗೂ ಅನುಭವಸಿದ್ಧವಾಗಿದೆ.

**ಅಪಿ ವೋಭಯವಿಧಾಃ ಸ್ಯುಃ । ಅಪಿ ವಾ ಪುರುಷವಿಧಾನಾಮೇವ ಸತಾಂ ಕರ್ಮಾತ್ಮಾನ ಏತೇ ಸ್ಯುರ್ಯಥಾ ಯಜ್ಞೋ ಯಜಮಾನಸ್ಯ । ಏಷ ಚಾಖ್ಯಾನಸಮಯಃ ॥** (ನಿ. ೭-೭)

ಆದ್ದರಿಂದ ಈ ಎರಡು ವಿಧವಾದ ಮತಗಳಿಗೂ ಅವಕಾಶವಿದೆ. ಪೃಥಿವ್ಯಾದಿ ವಸ್ತುಗಳು ಅಚೇತನವಾದರೂ ಚೇತನಾಸಹಿತರಾದವರಂತೆ ಪ್ರವರ್ತಿಸುವುದರಿಂದ ಅವುಗಳನ್ನು ಚೇತನರಂತೆಯೂ ಅಚೇತನರಂತೆಯೂ ಎರಡುವಿಧವಾಗಿಯೂ ಭಾವಿಸುವುದರಲ್ಲಿ ಭಿನ್ನಾಭಿಪ್ರಾಯವಿದ್ದರೂ ಆ ಎರಡುವಿಧಗಳನ್ನೂ ಸರಿಯೆಂದು ಒಪ್ಪಬಹುದು **ಯಜ್ಞೋ ಯಜ್ಞಮಾನಸ್ಯ** ಎಂಬ ವಾಕ್ಯದಲ್ಲಿ ಯಜಮಾನನು ಚೇತನಾಸಹಿತನು. ಯಜ್ಞವು ಅಚೇತನವು. ಆದರೂ ಯಜ್ಞದ ವಿಷಯವನ್ನು ಮಾತನಾಡುವಾಗ—ಯಜ್ಞವು ಯಜಮಾನನಿಗೆ ಉತ್ತಮಸ್ಥಾನವಾದ ಸ್ವರ್ಗವನ್ನು ಒದಗಿಸಿ ಕೊಡುವುದು—ಇತ್ಯಾದಿ ವಾಕ್ಯಗಳಲ್ಲಿ ಯಜ್ಞವು ಚೇತನಾಸಹಿತವಾಗಿರುವಂತೆಯೇ ವ್ಯವಹರಿಸಲ್ಪಡುವುದು. ಆದ್ದರಿಂದ ಅಚೇತನವಸ್ತುಗಳನ್ನು ವರ್ಣಿಸುವಾಗ ಚೇತನಾಸಹಿತವಾಗಿರುವಂತೆ ವರ್ಣಿಸುವುದರಲ್ಲಿ ತಪ್ಪೇನಿಲ್ಲ ಉದಾಹರಣೆಗೆ ಹೇಳುವುದಾದರೆ—**ಪೃಥಿವೀ ಸ್ತ್ರೀರೂಪೇಣ ಭಾರಾವತರಣಾಯ ಬ್ರಹ್ಮಾಣಂ ಯಯಾಚೇ । ಅಗ್ನಿಶ್ಚ ಬ್ರಾಹ್ಮಣರೂಪೇಣ ವಾಸುದೇವಾರ್ಜುನಾವುಭೌ ಖಾಂಡವಂ ಯಯಾಚೇ । ಪುರುಷರೂಪೇಣಾಗ್ನಿ-ರೂಪೇಣ ಚ ಖಾಂಡವಂ ದದಾಹ ।** ಪೃಥಿವಿಯು ಸ್ತ್ರೀರೂಪವನ್ನು ಧರಿಸಿ ಭೂಭಾರವನ್ನು ಇಳುಹಬೇಕೆಂದು ಬ್ರಹ್ಮನನ್ನು ಪ್ರಾರ್ಥಿಸಿದಳು , ಅಗ್ನಿಯು ಬಾಹ್ಮಣರೂಪದಿಂದ ಕೃಷ್ಣಾರ್ಜುನರನ್ನು ಸಮೀಪಿಸಿ ಇಂದ್ರನ ಖಾಂಡವ ವನವನ್ನೂ ಪ್ರಾರ್ಥಿಸಿದನು. ಅಗ್ನಿಯು ಪುರುಷ ಮತ್ತು ಅಗ್ನಿರೂಪದಿಂದ ಖಾಂಡವವನವನ್ನು ದಹಿಸಿದನು. ಇತ್ಯಾದಿ ವಾಕ್ಯಗಳಲ್ಲಿ ಅಗ್ನಿ, ಪೃಥಿವೀ ಮೊದಲಾದ ನಿರ್ಜೀವವಸ್ತುಗಳು ಅಥವಾ ಅವುಗಳ ಅಭಿಮಾನಿದೇವತೆಗಳು ಪುರುಷರೂಪವನ್ನು ಧರಿಸಿ ನಾನಾಕಾರ್ಯಗಳನ್ನು ಮಾಡಿರುವರೆಂದು ಪುರಾಣಾದಿಗಳಲ್ಲಿಯೂ ಅನೇಕ ವರ್ಣನೆಗಳಿವೆ. ಆದ್ದರಿಂದ ಇವುಗಳನ್ನು ಚೇತನಾ ಮತ್ತು ಅಚೇತನಾ ಎಂದು ಎರಡು ವಿಧವಾಗಿ ಭಾವಿಸುವುದೂ ಸರಿಯೆಂಬುದೇ ಸಿದ್ಧಾಂತವು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಅದ್ಧೀದಿಂದ್ರ ಪ್ರಸ್ಥಿತೇಮಾ ಹವೀಂಷಿ ಚನೋ ದಧಿಷ್ವ ಪಚತೋತ ಸೋಮಂ ।
ಪ್ರಯಸ್ವಂತಃ ಪ್ರತಿ ಹರ್ಯಾಮಸಿ ತ್ವಾ ಸತ್ಯಾಃ ಸಂತು ಯಜಮಾನಸ್ಯ ಕಾಮಾಃ ॥ ೮ ॥

॥ ಪದಪಾಠಃ ॥

ಅದ್ಧಿ । ಇತ್ । ಇಂದ್ರ । ಪ್ರಽಸ್ಥಿತಾ । ಇಮಾ । ಹವೀಂಷಿ । ಚನಃ । ದಧಿಷ್ವ । ಪಚತಾ । ಉತ । ಸೋಮಂ ।
ಪ್ರಯಸ್ವಂತಃ । ಪ್ರತಿ । ಹರ್ಯಾಮಸಿ । ತ್ವಾ । ಸತ್ಯಾಃ । ಸಂತು । ಯಜಮಾನಸ್ಯ । ಕಾಮಾಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪ್ರಸ್ಥಿತಾ ಪ್ರಸ್ಥಿತಾನ್ಯುತ್ತರವೇದಿಂ ಪ್ರತೀಮೇಮಾನಿ ॥ ಉಭಯತ್ರ ಡಾದೇಶಃ ॥ ಹವೀಂಷ್ಯದ್ಧೀತ್ । ಇದವಧಾರಣೇ । ಭಕ್ಷಯೈವ । ಚನಃ । ಚನ ಇತ್ಯನ್ನನಾಮ । ತದ್ದಧಿಷ್ವ । ಧಾರಯ । ಉದರೇ ಪ್ರಕ್ಷಿಪ ॥ ದಧಾತೇರ್ಲೋಟಿ ಚ್ಛಂದಸ್ಯುಭಯಥೇತಿ ಥಾಸ ಆರ್ಧಧಾತುಕತ್ವಾದಿಡಾಗಮಃ ॥ ಪಚತಾ ಪಚತಾನಿ ಸವನೀಯಪುರೋಡಾಶಾದೀನಿ ಚ ಧಾರಯ ॥ ಪಚೇರ್ಭೃಮೃದೃಶೀತ್ಯಾದಿನಾ ಕರ್ಮಣ್ಯತಚ್‌ಪ್ರತ್ಯಯಃ ॥ ಉತಾಪಿ ಚ ಸೋಮಂ ಪಿಬ । ತತಃ ಪ್ರಯಸ್ವಂತಃ । ಪ್ರೀಣಯತೀತಿ ಪ್ರಯೋಽನ್ನಂ । ತೇನ ತದ್ವಂತಃ ಸಂತಸ್ತ್ವಾ ತ್ವಾಂ ಪ್ರತಿ ಹರ್ಯಾಮಸಿ । ಹರ್ಯಾಮಃ । ಕಾಮಯಾಮಹೇ ಧನಾದೀನಿ ॥ ಹರ್ಯತಿಃ ಪ್ರೇಪ್ಸಾಕರ್ಮಾ । ಇದಂತೋ ಮಸಿಃ ॥ ತಸ್ಮಾದ್ಯಜಮಾನಸ್ಯ ಯಾಗಂ ಕುರ್ವಾಣಸ್ಯ ಕಾಮಾ ಧನಾದಿವಿಷಯಾ ಅಭಿಲಾಷಾಃ ಸತ್ಯಾ ಯಥಾರ್ಥಾಃ ಸಂತು ॥ ಪೂಜ್ಯಜೋಃ ಶಾನನ್ । ಪಾ. ೩-೨-೧೨೮ । ಇತಿ ಯಜೇಃ ಶಾನನ್ಪ್ರತ್ಯಯಃ । ಚಿತ್ತ್ವಾದಾದ್ಯುದಾತ್ತಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಪ್ರಸ್ಥಿತಾ—ಉತ್ತರವೇದಿಯಲ್ಲಿ ತಂದು ಇರಿಸಿರುವ । ಇಮಾ ಹವೀಂಷಿ—ಈ ಹವಿಸ್ಸುಗಳನ್ನು । ಅದ್ಧಿ ಇತ್—ಖಂಡಿತ ತಿನ್ನು । ಚನಃ—ಅನ್ನವನ್ನೂ । ಪಚತಾ—ಪಕ್ವವಾದ ಪುರೋಡಾಶಾದಿಗಳನ್ನು । ದಧಿಷ್ವ—ಉದರದಲ್ಲಿ ತುಂಬಿಕೋ । ಉತ—ಮತ್ತು । ಸೋಮಂ—ಸೋಮರಸವನ್ನು

ಪಾನಮಾಡು | **ಪ್ರಯಸ್ವಂತಃ**—ತೃಪ್ತಿದಾಯಕವಾದ ಅನ್ನವನ್ನು ಅರ್ಪಿಸಲು ಸಿದ್ಧರಾಗಿರುವ ನಾವು | **ತ್ವಾ ಪ್ರತಿ**—ನಿನ್ನನ್ನು ಸಮಿಾಪಿಸಿ | **ಹರ್ಯೋಮಸಿ**—ಧನಾದಿಗಳನ್ನು ಪ್ರಾರ್ಥಿಸುತ್ತೇವೆ | **ಯಜಮಾನಸ್ಯ**—ಯಜ್ಞವನ್ನು ಮಾಡುವ ಯಜಮಾನನ | **ಕಾಮಃ**—ಅಭಿಲಾಷೆಗಳು | **ಸತ್ಯಾಃ ಸಂತು**—ನಿಶ್ಚಯವಾಗಿ ನೆರವೇರಲಿ |

|| ಭಾವಾರ್ಥ ||

ಎಲೈ ಇಂದ್ರನೇ, ಉತ್ತರವೇದಿಯಲ್ಲಿ ತಂದು ಸಿದ್ಧಪಡಿಸಿಟ್ಟಿರುವ ಈ ಹವಿಸ್ಸುಗಳನ್ನು ಖಂಡಿತ ಭಕ್ಷಿಸು. ಹಾಗೆಯೇ ಅನ್ನವನ್ನೂ ಪಕ್ವವಾದ ಪುರೋಡಾಶಾದಿಗಳನ್ನೂ ನಿನ್ನ ಉದರದಲ್ಲಿ ತುಂಬಿಕೊ. ಮತ್ತು ಸೋಮರಸವನ್ನು ಪಾನಮಾಡು. ತೃಪ್ತಿಯನ್ನುಂಟುಮಾಡುವ ಅನ್ನವನ್ನು ಅರ್ಪಿಸುವ ನಾವು ನಿನ್ನನ್ನು ಸಮಿಾಪಿಸಿ ಧನಾದಿಗಳನ್ನು ಯಾಚಿಸುತ್ತೇವೆ. ಯಜ್ಞವನ್ನು ಮಾಡುವ ಯಜಮಾನನ ಸಮಸ್ತ ಅಭಿಲಾಷೆಗಳೂ (ಕೋರಿಕೆಗಳು)ಸಿದ್ಧಿಸಲಿ.

## English Translation

Eat, Indra, these oblations placed (upon the altar), accept the food the toasted (cakes), and the Soma. Provided with sacrificial vainds we delight you, let the desires of the institutor of the rite be fulfilled.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿರುವ **ಚನಃ** ಮತ್ತು **ಪಚತಾ** ಎಂಬ ಶಬ್ದಗಳಿಗೆ **ಯಾಸ್ಕರು ಈರೀತಿ ನಿರ್ವಚನವನ್ನು ಹೇಳಿದಾರೆ**—

> ಚನಃ | ಪಚತಾ || **ಅದ್ಧೀದಿಂದ್ರ ಪ್ರಸ್ಥಿತೇಮಾ ಹವೀಂಷಿ ಚನೋ ದಧಿಷ್ವ ಪಚತೋತ ಸೋಮಂ|| ಅದ್ಧೀಂದ್ರ ಪ್ರಸ್ಥಿತಾನೀಮಾನಿ ಹವೀಂಷಿ ಚನೋ ದಧಿಷ್ವ | ಚನ ಇತ್ಯನ್ನನಾಮ | ಪಚತಿರ್ನಾಮಿಾಭೂತಃ | ತಂ ಮೇದಸ್ತಃ ಪ್ರತಿ ಪಚತಾಗ್ರಭೀಷ್ಮಾಂ ಇತ್ಯಪಿ ನಿಗಮೋ ಭವತಿ||**
>
> (ನಿ.೬–೧೬)

ಎಲೈ ಇಂದ್ರನೇ, ಇಲ್ಲಿ ಸಿದ್ಧಪಡಿಸಿರುವ ಹವಿಸ್ಸುಗಳನ್ನೂ ಅನ್ನವನ್ನೂ ನಿನ್ನ ಉದರದಲ್ಲಿ ತುಂಬಿಕೋ ಎಂದು ವಾಕ್ಯಾರ್ಥವು. ಇಲ್ಲಿ **ಚನಃ** ಎಂಬುದು ಅನ್ನವೆಂಬ ಅರ್ಥವನ್ನು ಸೂಚಿಸುವ ಶಬ್ದವು. **ಚನಃ ಎಂದರೆ ಅನ್ನವು. ಈ ವಿಷಯದಲ್ಲಿ ಅದ್ಧೀದಿಂದ್ರ** ಎಂಬ ಶ್ರುತಿವಾಕ್ಯವೇ (ಋ ಸಂ.೧೦–೧೧೬–೮)ಉದಾಹರಣೆಯು. **ಪಚತಿ** ಎಂಬ ಶಬ್ದವು ಕ್ರಿಯಾಪದವಾಗಿದ್ದರೂ ಅದು ಅನೇಕಸಂದರ್ಭಗಳಲ್ಲಿ ನಾಮಪದದಂತೆಯೇ ವ್ಯವಹರಿಸಲ್ಪಡುವುದು. **ಈ ವಿಷಯದಲ್ಲಿ ತಂ ಮೇದಸ್ತಃ ಪ್ರತಿ ಪಚತಾಗ್ರಭೀಷ್ಮಾಂ** ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸುವುದು.

॥ ಸಂಹಿತಾಪಾಠಃ ॥

ಪ್ರೇಂದ್ರಾಗ್ನಿಭ್ಯಾಂ ಸುವಚಸ್ಯಾಮಿಯರ್ಮಿ ಸಿಂಧಾವಿವ ಪ್ರೇರಯಂ ನಾವ-
ಮರ್ಕೈಃ ।

ಅಯಾ ಇವ ಪರಿ ಚರಂತಿ ದೇವಾ ಯೇ ಅಸ್ಮಭ್ಯಂ ಧನದಾ ಉದ್ಭಿದಶ್ಚ ॥೯॥

॥ ಪದಪಾಠಃ ॥

ಪ್ರ । ಇಂದ್ರಾಗ್ನಿಽಭ್ಯಾಂ । ಸುಽವಚಸ್ಯಾಂ । ಇಯರ್ಮಿ । ಸಿಂಧೌಽಇವ । ಪ್ರ । ಈರಯಂ । ನಾವಂ ।
ಅರ್ಕೈಃ ।

ಅಯಾಃಽಇವ । ಪರಿ । ಚರಂತಿ । ದೇವಾಃ । ಯೇ । ಅಸ್ಮಭ್ಯಂ । ಧನಽದಾಃ । ಉತ್ಽಭಿದಃ । ಚ ॥ ೯ ॥

॥ ಸಾಯಣಭಾಷ್ಯಂ ॥

ಇಂದ್ರಾಗ್ನಿಭ್ಯಾಂ ದೇವಾಭ್ಯಾಂ ಸುವಚಸ್ಯಾಂ ॥ ಛಂದಸಿ ಚೇತಿ ಯತ್ಪ್ರತ್ಯಯಃ ॥ ಸುವಚನಾ-
ರ್ಹಾಂ ಸ್ತುತಿಮಹಂ ಪ್ರೇಯರ್ಮಿ । ಪ್ರೇರಯಾಮಿ ॥ ಋ ಗತೌ ಜುಹೋತ್ಯಾದಿಕಃ । ಅರ್ತಿಪಿಪ-
ರ್ತ್ಯೋರ್ಶ್ಚೇತ್ಯಭ್ಯಾಸಸ್ಯೇತ್ವಂ । ದೇವತಾದ್ವಂದ್ವೇ ಚೇತೀಂದ್ರಾಗ್ನ್ಯೋರುಭಯಪದಪ್ರಕೃತಿಸ್ವರತ್ವೇ
ಪ್ರಾಪ್ತೇ ನೋತ್ತರಪದೇಽನುದಾತ್ತಾದಾವಿತಿ ಪ್ರತಿಷೇಧಃ ॥ ಸಿಂಧಾವಿವ ಸಿಂಧೌ ನದ್ಯಾಂ ಯಥಾ ನಾವಂ
ಪ್ರೇರಯಂತಿ ತದ್ವದರ್ಕೈರರ್ಚನೀಯೈರ್ಮಂತ್ರೈಃ ಸಹಿತಾಂ ಸ್ತುತಿಂ ಪ್ರೇರಯಂ । ಪ್ರಾವಾದಿಷಂ ॥
ಈರ ಗತೌ । ಣ್ಯಂತಸ್ಯ ಲಙ್ಯುತ್ತಮಸ್ಯಾಮಾದೇಶಃ ॥ ಸ್ತುತಾಸ್ತೇ ದೇವಾ ಅಯಾ ಇವ । ಅಯಂತಿ
ಕರ್ಮಕರಣಾರ್ಥಂ ಗಚ್ಛಂತ್ಯಯಾ ಋತ್ವಿಜಃ ಕರ್ಮಕರಾ ವಾ । ತದ್ವತ್ಪರಿ ಚರಂತಿ । ಅಸ್ಮಾನ್ಧನಾದಿದಾನೇನ
ಪೂಜಯಂತಿ । ಯೇ ದೇವಾ ಅಸ್ಮಭ್ಯಂ ಧನದಾ ಧನಸ್ಯ ದಾತಾರ ಉದ್ಭಿದೋಽಸ್ಮಚ್ಛತ್ರೂಣಾಮು-
ದ್ಭೇತ್ತಾರಶ್ಚ ಯೇ ಸಂತಿ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನಿಭ್ಯಾಂ**—ಇಂದ್ರ ಮತ್ತು ಅಗ್ನಿ ಎಂಬ ದೇವತೆಗಳನ್ನುದ್ದೇಶಿಸಿ । **ಸುವಚಸ್ಯಾಂ**—ಉತ್ತಮ
ವಾಕ್ಯಗಳಿಂದ ಕೂಡಿದ ಈ ಸ್ತೋತ್ರವನ್ನು । **ಪ್ರ ಇಯರ್ಮಿ**—ನನ್ನ ಸ್ವಪ್ರೇರಣೆಯಿಂದ ಅರ್ಪಿಸುತ್ತೇನೆ ।
**ಸಿಂಧಾವಿವ**—ಸಿಂಧೂನದಿಯಲ್ಲಿ । **ನಾವಂ**—ದೋಣಿಯನ್ನು ಪ್ರೇರಿಸಿ ನಡೆಸುವಂತೆ । **ಅರ್ಕೈಃ**—ಮಂತ್ರಗಳಿಂದ
ಸಹಿತವಾದ ಸ್ತೋತ್ರವನ್ನು । **ಪ್ರ ಈರಯಂ**—ಸ್ವಪ್ರೇರಣೆಯಿಂದ ಅರ್ಪಿಸಿದ್ದೇನೆ । **ಯೇ**—ಯಾವ ದೇವತೆಗಳು ।
**ಅಸ್ಮಭ್ಯಂ**—ನಮಗೆ । **ಧನದಾಃ**—ಧನವನ್ನು ಕೊಡುವವರೋ । **ಚ**—ಮತ್ತು ಯಾರು । **ಉದ್ಭಿದಃ**—

ನಮ್ಮ ಶತ್ರುಗಳ ವಿಧ್ವಂಸಕರೋ ಅಂತಹ | **ದೇವಾಃ**— ದೇವತೆಗಳು | **ಅಯಾ ಇವ**—ಸಂಚಾರಶೀಲರಾದ ಋತ್ವಿಗ್ಜನರಂತೆ ಅಥವಾ ಕೆಲಸಗಾರರಂತೆ | **ಪರಿ ಚರಂತಿ**—ಧನಾದಿಗಳಿಂದ ನಮ್ಮನ್ನು ಉಪಚರಿಸುತ್ತಾರೆ ಎಂದರೆ ಸಂತೋಷಗೊಳಿಸುತ್ತಾರೆ |

|| **ಭಾವಾರ್ಥ** ||

ಇಂದ್ರಾಗ್ನಿಗಳಿಗೆ ಉತ್ತಮವಾಕ್ಯಗಳಿಂದ ನಿರ್ಮಿತವಾದ ಈ ಸ್ತೋತ್ರವನ್ನು ನನ್ನ ಸ್ವಪ್ರೇರಣೆಯಿಂದಲೇ ಅರ್ಪಿಸುತ್ತೇನೆ. ಸಿಂಧೂನದಿಯಲ್ಲಿ ನಾವೆ (ದೋಣಿ) ಯನ್ನು ಪ್ರೇರಿಸಿ ತಳ್ಳುವಂತೆ ಮಂತ್ರಸಹಿತವಾದ ಈಸ್ತುತಿಯನ್ನು ಸ್ವಪ್ರೇರಣಯಿಂದಲೇ ನಿರ್ಮಿಸಿ ಅರ್ಪಿಸಿದೇನೆ. ಯಾವ ದೇವತೆಗಳು ನಮಗೆ ಧನದಾತೃಗಳೋ ಯಾರು ನಮ್ಮ ಶತ್ರುಗಳನ್ನು ನಾಶಮಾಡುವರೋ ಆ ದೇವತೆಗಳು ಸಂಚಾರಶೀಲರಾದ ಋತ್ವಿಗ್ಜನರಂತೆ ನಮ್ಮನ್ನು ಧನಾದಿದಾನಗಳಿಂದ ಉಪಚರಿಸಿ ಸಂತೋಷಗೊಳಿಸುತ್ತಾರೆ.

## English Translation.

I direct my eulogy to Indra and Agni ; with sacred prayers I directed (my praise) like a vessel (launched) upon the ocean ; like holy priests, the gods themselves reverence us being the donors (to us) of wealth and the extirpators (of our foes).

---

## ನೂರ ಹದಿನೇಳನೆಯ ಸೂಕ್ತವು



### ಪೀಠಿಕೆ.

ಈ ಸೂಕ್ತಕ್ಕೆ ಅನ್ನಸ್ತುತಿಯೇ ದೇವತೆಯು. ಶೌನಕರು ತಮ್ಮ ಋಗ್ವಿಧಾನದಲ್ಲಿ ಹೇಳಿರುವಂತೆ (ಋಗ್ವಿ. ೧-೨೭) ಅನ್ನವನ್ನು ಅಥವಾ ಆಹಾರವನ್ನು ಭಕ್ತಿಯಿಂದ ಪೂಜಿಸಿ, ಉಪಾಸನೆ ಮಾಡಿ, ಬಳಿಕ ಅತಿಥಿ ಮೊದಲಾದವರಿಗೆ ಸ್ವಲ್ಪ ಭಾಗವನ್ನು ದಾನಮಾಡಿ, ಅನಂತರ ತಾನು ಭುಂಜಿಸಬೇಕು ಎಂಬುದು ಆರ್ಯರಲ್ಲಿ ಹಿಂದಿನಿಂದಲೂ ನಡೆದು ಬಂದಿರುವ ಪದ್ಧತಿಯಾಗಿದೆ. ಅನ್ನದ ಮಹತ್ತ್ವದ ವಿಚಾರದಲ್ಲಿ ಇಲ್ಲಿ ಸ್ವಲ್ಪ ವಿಮರ್ಶೆ ಮಾಡುವುದು ಅವಶ್ಯಕವಾಗಿದೆ. ಅನ್ನವೆಂಬ ಶಬ್ದವು **ಅದ—ಭಕ್ಷಣೇ** (ಅದ್-ತಿನ್ನು) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಅನ್ನದ ಉತ್ಪತ್ತಿ ವಿಷಯದಲ್ಲಿ—

> **ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ | ಆಕಾಶಾದ್ವಾಯುಃ | ವಾಯೋರಗ್ನಿಃ | ಅಗ್ನೇರಾಪಃ | ಅದ್ಭ್ಯಃ ಪೃಥಿವೀ | ಪೃಥಿವ್ಯಾ ಓಷಧಯಃ | ಓಷಧೀಭ್ಯೋಽನ್ನಂ | ಅನ್ನಾತ್ಪುರುಷಃ ||**
>
> (ತೈ. ಉ. ೨-೧)

ಎಂದು ಶ್ರುತಿವಾಕ್ಯವಿರುವುದು. ಪ್ರಪಂಚ ಅಥವಾ ಪಂಚಭೂತಗಳ ಸೃಷ್ಟಿ ಕಾಲದಲ್ಲಿ ಪರಬ್ರಹ್ಮವಸ್ತುವಿನಿಂದ (ಪರಮಾತ್ಮನಿಂದ) ಮೊದಲು ಆಕಾಶವೂ, ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಉದಕವೂ, ಉದಕದಿಂದ ಪೃಥಿವೀ (ಭೂಮಿ) ಯೂ, ಭೂಮಿಯಿಂದ ಓಷಧಿಗಳೂ (ಸಸ್ಯಾದಿಗಳೂ), ಓಷಧಿಗಳಿಂದ ಅನ್ನವೂ ಉತ್ಪನ್ನವಾಯಿತೆಂದು ಹೇಳಿದೆ. ಇಂತಹ ಅನ್ನದಿಂದ ಪುರುಷನ (ಇತರ ಪ್ರಾಣಿಗಳೂ ಸಹ) ಉತ್ಪತ್ತಿಯುಂಟಾಯಿತೆಂದೂ ಹೇಳಿದೆ. ಮತ್ತು ಅನ್ನಕ್ಕೆ ಇರುವ ಪ್ರಾಶಸ್ತ್ಯವೇನು? ಅನ್ನದಿಂದ ಆಗುವ ಉಪಯೋಗವೇನು? ಅನ್ನಕ್ಕೆ ಅನ್ನವೆಂದು ಹೆಸರು ಬರಲು ಕಾರಣವೇನು? ಮುಂತಾದ ಪ್ರಶ್ನೆಗಳಿಗೆ ಉತ್ತರವನ್ನೂ ಅಲ್ಲಿಯೇ ಹೇಳಿದೆ.—

> ಅನ್ನಾದ್ವೈ ಪ್ರಜಾಃ ಪ್ರಜಾಯಂತೇ । ಯಾಃ ಕಾಶ್ಚ ಪೃಥಿವೀಗ್ಂ ಶ್ರಿತಾಃ । ಅಥೋ ಅನ್ನೇನೈವ ಜೀವಂತಿ । ಅಥೈನದಪಿಯಂತ್ಯಂತತಃ । ಅನ್ನಗ್ಂಹಿ ಭೂತಾನಾಂ ಜ್ಯೇಷ್ಠಂ । ತಸ್ಮಾತ್ಸರ್ವೌಷಧಮುಚ್ಯತೇ । ಸರ್ವಂ ವೈ ತೇಽನ್ನಮಾಪ್ನುವಂತಿ । ಯೇಽನ್ನಂ ಬ್ರಹ್ಮೋಪಾಸತೇ । ಅನ್ನಗ್ಂಹಿ ಭೂತಾನಾಂ ಜ್ಯೇಷ್ಠಂ । ತಸ್ಮಾತ್ಸರ್ವೌಷಧಮುಚ್ಯತೇ । ಅನ್ನಾದ್ಭೂತಾನಿ ಜಾಯಂತೇ । ಜಾತಾನ್ಯನ್ನೇನ ವರ್ಧಂತೇ । ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ ॥
>
> (ತೈ. ಉ. ೨-೨)

ಎಂದರೆ ಪೃಥಿವಿಯನ್ನಾಶ್ರಯಿಸಿದ ಎಲ್ಲಾ ಪ್ರಜೆಗಳೂ (ಸಮಸ್ತ ಪ್ರಾಣಿಗಳೂ ಸಹ) ಅನ್ನದಿಂದಲೇ ಹುಟ್ಟಿರುವರು, ಅನ್ನದಿಂದಲೇ ಜೀವಿಸುವರು, ಕೊನೆಗೆ ಅದರಲ್ಲಿಯೇ ಲಯಹೊಂದುವರು. ಭೂತಗಳಲ್ಲಿ (ಅಥವಾ ಪಂಚಮಹಾಭೂತಗಳಲ್ಲಿ ಸೃಜಿಸಲ್ಪಟ್ಟ ವಸ್ತುಗಳಲ್ಲಿ) ಅನ್ನವೇ ಎಲ್ಲಕ್ಕೂ ಹಿರಿಯದು. ಆದುದರಿಂದ ಅದಕ್ಕೆ ಸರ್ವೌಷಧವೆನ್ನುವರು. ಅನ್ನರೂಪದಿಂದಿರುವ (ಪರ) ಬ್ರಹ್ಮದ ಉಪಾಸನೆ ಮಾಡುವವರು ಎಲ್ಲ ಅನ್ನವನ್ನೂ ಸಂಪಾದಿಸುವರು ಎಂದರೆ ಅವರಿಗೆ ಅನ್ನವು ಯಥೇಷ್ಟವಾಗಿ ದೊರಕುವುದು. ಅನ್ನವೇ ಎಲ್ಲಾ ಭೂತಗಳಲ್ಲಿ ಹಿರಿಯದು.

ಭೂತಗಳೆಂದರೆ— ಪೃಥಿವಿ, ಉದಕ, ತೇಜಸ್ಸು, ವಾಯು, ಆಕಾಶ ಎಂದು ಪಂಚಮಹಾಭೂತಗಳು. ಈ ಪಂಚಮಹಾಭೂತಗಳೂ ಅವುಗಳ ಮೂಲರೂಪದಲ್ಲಿಯೇ ಆಹಾರವಾಗಿ ಇರುವವು. ಹೇಗೆಂದರೆ— ಪೃಥಿವೀಯೆಂದರೆ ಗಟ್ಟಿ ಪದಾರ್ಥ. ನಾವು ತಿನ್ನುವ ಆಹಾರದಲ್ಲಿ ಧಾನ್ಯ ಮೊದಲಾದ ಗಟ್ಟಿ ಪದಾರ್ಥಗಳಿದ್ದೇ ಇರುವವು. ಇವು ಪೃಥಿವ್ಯಂಶವು. ಎರಡನೆಯದು ಉದಕವು ಉದಕವನ್ನು ನಾವು ಪಾನ ಮಾಡುವೆವು ಇದಲ್ಲದೆ ನಾವು ತಿನ್ನುವ ಅಥವಾ ಪಾನ ಮಾಡುವ (ಹಾಲು ಮೊದಲಾದ) ಇತರ ವಸ್ತುಗಳಲ್ಲಿಯೂ ಉದಕಾಂಶವು ಇದ್ದೇ ಇರುವುದು. ಪ್ರಾಣಿಗಳಿಗೆ ಪೃಥಿವ್ಯಂಶವಾದ (ಘಟ್ಟಿಯಾದ) ಆಹಾರಕ್ಕಿಂತಲೂ ಉದಕವು ಹೆಚ್ಚಾಗಿ ಬೇಕಾಗುವುದು. ನಮ್ಮ ಶರೀರದಲ್ಲಿಯೂ ಸಹ ಉದಕಾಂಶವೇ (ರಕ್ತವೇ) ಹೆಚ್ಚಾಗಿರುವುದು. ಮೂರನೆಯದು—ತೇಜಸ್ಸು. ತೇಜಸ್ಸೆಂದರೆ ಶಾಖವು. ಪ್ರಾಣಿಗಳು ಶಾಖವಿಲ್ಲದೆ ಜೀವಿಸುವುದಕ್ಕಾಗುವುದಿಲ್ಲ. ನಾವು ತೆಗೆದುಕೊಳ್ಳುವ ಆಹಾರದಿಂದಲೂ ನಮ್ಮ ಸುತ್ತಲೂ ಇರುವ ಬಿಸಿಲು ಗಾಳಿ ಮೊದಲಾದುವುಗಳಲ್ಲಿ ಇರುವ ಉಷ್ಣಾಂಶದಿಂದಲೂ ನಮಗೆ ಶಾಖವು ದೊರೆಯುವುದು. ದೇಹದಲ್ಲಿ ಶಾಖವು ಇಲ್ಲದೆ ನಿಂತುಹೋದಕೂಡಲೇ ಮರಣವು ಸಂಭವಿಸುವುದು. ಹುಟ್ಟಿದಲಾಗಾಯಿತು ಸಾಯುವವರಿಗೂ

ದೇಹದಲ್ಲಿ ಶಾಖವಿದ್ದೇ ಇರಬೇಕು. ಆದುದರಿಂದ ಶಾಖದ ಅಥವಾ ತೇಜಸ್ಸಿನ ಆವಶ್ಯಕತೆ ಎಷ್ಟಿರುವುದೆಂಬುದನ್ನು ಹೇಳುವ ಅವಶ್ಯಕತೆ ಇಲ್ಲ. ನಮಗೆ ಉದಕಕ್ಕಿಂತ ಒಂದು ಪಾಲು ತೇಜಸ್ಸು ಹೆಚ್ಚಿಗೆ ಬೇಕಾಗುವುದು. ನಾಲ್ಕನೆಯದು—ವಾಯುವು. ನಾವು ಉಸಿರನ್ನು ಒಳಕ್ಕೆ ಎಳೆದುಕೊಳ್ಳುವಾಗ ಹೊರಗಿರುವ ವಾಯುವನ್ನು ಆಕರ್ಷಿಸಿ ದೇಹದ ಒಳಕ್ಕೆ ತೆಗೆದುಕೊಳ್ಳುತ್ತೇವೆ. ಉಸಿರಾಡದೆ ಒಂದು ಕ್ಷಣವೂ ಇರಲಾಗುವುದಿಲ್ಲ ಉಸಿರಾಡುವುದು ನಿಂತೊಡನೆಯೇ ಪ್ರಾಣವೂ ಹೋಗುವುದು ಎಂದರೆ ಮರಣವು ಸಂಭವಿಸುವುದು. ಹುಟ್ಟಿದಲಾಗಾಯಿತು ಮರಣ ಪರ್ಯಂತರ ಸಮಸ್ತ ಪ್ರಾಣಿಗಳಿಗೂ ವಾಯುವು ಅತ್ಯವಶ್ಯಕವಾಗಿ ಬೇಕೇಬೇಕು ಮತ್ತು ಹಿಂದೆ ಹೇಳಿದ, ಪೃಥಿವ್ಯಂಶವಾದ ಘಟ್ಟಿ ಆಹಾರ, ಉದಕ, ತೇಜಸ್ಸು ಇವುಗಳಿಗಿಂತ ವಾಯುವು ಅಧಿಕ ಪ್ರಮಾಣದಲ್ಲಿ ಬೇಕಾಗುವುದು. ಐದನೆಯದು—ಆಕಾಶ (ಅವಕಾಶ) ಆಕಾಶವಿಲ್ಲದೇ ನಾವಾಗಲಿ ಇತರ ಪ್ರಾಣಿಗಳಾಗಲಿ ಇರುವುದೇ ಅಸಾಧ್ಯವು. ನಮ್ಮ ಚಲನವಲನಗಳಿಗೂ ಶರೀರದ ಅವಶ್ಯಕತೆಗೂ ಆಕಾಶವು ಬೇಕೇಬೇಕು. ತೇಜಸ್ಸು, ವಾಯು, ಆಕಾಶ ಎಂಬ ಮೂರು ವಸ್ತುಗಳೂ ನಮ್ಮ ಕಣ್ಣಿಗೆ ಕಾಣಿಸದಿದ್ದರೂ ಅವುಗಳು ನಮ್ಮ ಶರೀರಪೋಷಣೆಗೆ ಅತ್ಯವಶ್ಯಕವು ಇದಲ್ಲದೆ ನಮಗೆ(ಪ್ರಾಣಿಗಳಿಗೂ ಸಹ) ಪೃಥಿವ್ಯಂಶವಾದ ಘಟ್ಟಿಯಾದ ಆಹಾರಕ್ಕಿಂತ ಉದಕವು ಒಂದು ಪಾಲು ಹೆಚ್ಚಾಗಿ ಬೇಕು. ಉದಕಕ್ಕಿಂತ ತೇಜಸ್ಸು ಹೆಚ್ಚಾಗಿ ಬೇಕು. ತೇಜಸ್ಸಿಗಿಂತ ವಾಯುವು ಹೆಚ್ಚಾಗಿರಬೇಕು. ವಾಯುವಿಗಿಂತ ಆಕಾಶವು ಹೆಚ್ಚಾಗಿಬೇಕು. ಮತ್ತು ಇನ್ನೊಂದು ವಿಶೇಷವೇನೆಂದರೆ ಪೃಥಿವ್ಯಂಶಸಂಬಂಧವಾದ ಆಹಾರದಲ್ಲಿ ಉದಕ, ತೇಜಸ್ಸು, ವಾಯು, ಆಕಾಶ ಇವುಗಳು ಮಿಶ್ರವಾಗಿರುವುವು, ತೇಜಸ್ಸಿನಲ್ಲಿ ವಾಯು ಆಕಾಶಗಳಿರುವವು. ವಾಯುವಿನಲ್ಲಿ ಆಕಾಶವು ಸೇರಿರುವುದು. ಈ ರೀತಿ ಪಂಚಭೂತಗಳೂ ಅವುಗಳ ಮಿಶ್ರಣವೂ (ಎಂದರೆ) ಓಷಧಿವನಸ್ಪತಿಗಳು ಪ್ರಾಣಿಗಳಿಗೆ ಆಹಾರರೂಪವಾಗಿ ಏರ್ಪಟ್ಟಿರುವವು. ಈ ವಿಧವಾದ ಆಹಾರಕ್ಕೆ ಅನ್ನವೆಂದು ಹೆಸರು. ಆದುದರಿಂದ ಅದಕ್ಕೆ (ಅನ್ನಕ್ಕೆ) ಸರ್ವೌಷಧವೆನ್ನುವರು.

ಅನ್ನದಿಂದ ಭೂತಗಳ (ಪ್ರಾಣಿಗಳ) ಉತ್ಪತ್ತಿಯಾಗುವುದು ಹುಟ್ಟಿದ ಪ್ರಾಣಿಗಳು ಅನ್ನದಿಂದಲೇ ಬೆಳೆದು ಅಭಿವೃದ್ಧಿಯನ್ನೈದುವವು (ದೊಡ್ಡದಾಗುವುವು) ಅದು (ಅನ್ನವು) ತಿನ್ನಲ್ಪಡುತ್ತದೆ ಹಾಗೂ ಪ್ರಾಣಿಗಳನ್ನೂ ತಿನ್ನುತ್ತದೆ. ಆದುದರಿಂದ ಅದಕ್ಕೆ ಅನ್ನವೆಂದು ಹೆಸರು. ಇಲ್ಲಿ ಕೊನೆಯ ವಾಕ್ಯಕ್ಕೆ (ಅನ್ನವು ತಿನ್ನಲ್ಪಡುತ್ತದೆ ಮತ್ತು ಅದು ಪ್ರಾಣಿಗಳನ್ನು ತಿನ್ನುತ್ತದೆ ಎಂಬ ವಾಕ್ಯಕ್ಕೆ) ವಿವರಣೆಯು ಅವಶ್ಯಕವು. ಪ್ರಪಂಚದಲ್ಲಿ ಸಂಚರಿಸುವ ಪ್ರಾಣಿಗಳಿಗೆ ಆಹಾರವೆಂಬುದು ಮೂಲಸ್ವರೂಪದಿಂದಿರುವ ನೀರು ಮೊದಲಾದ ಪಂಚಭೂತಗಳು ಹೊರತಾಗಿ ಇತರ ಆಹಾರವೆಲ್ಲವೂ ಸಜೀವ ಪ್ರಾಣಿಗಳಿಂದಲೇ ಉತ್ಪನ್ನವಾದದ್ದು. ಪ್ರಾಣಿಸಂಬಂಧವಾದ ಆಹಾರವಲ್ಲದೆ ಬೇರೆ ಆಹಾರವೇ ಪ್ರಪಂಚದಲ್ಲಿಲ್ಲ. ಹೇಗೆಂದರೆ ಮಾಂಸಾಹಾರಿಗಳಾದ ಪ್ರಾಣಿಗಳು ಸಸ್ಯಾಹಾರಿಗಳಾದ ಪ್ರಾಣಿಗಳನ್ನು ತಿನ್ನುತ್ತವೆ. ಸಸ್ಯಾಹಾರಿಗಳಾದ ಪ್ರಾಣಿಗಳು ಸಸ್ಯಗಳನ್ನು ತಿನ್ನುತ್ತವೆ. ಸಸ್ಯಗಳಿಗೂ ಜೀವವಿರುವುದರಿಂದ (ಸಸ್ಯವು ಜೀವವಿಲ್ಲದ್ದಾದರೆ ಬೆಳೆಯಲು ಹೇಗೆ ಸಾಧ್ಯ?) ಜೀವವಿರುವ ಚರಪ್ರಾಣಿಗಳು ಒಂದನ್ನೊಂದು ತಿಂದೇ ಜೀವಿಸಬೇಕಾಗಿದೆ. ಸಸ್ಯಜಾತಿಯು ಚರವರ್ಗಕ್ಕೆ ಸೇರದಿರುವ ಪ್ರಯುಕ್ತ ಅವು ತಮ್ಮ ಆಹಾರವನ್ನು ಭೂಮಿಯಿಂದ ಅಥವಾ ಪಂಚಭೂತಗಳಿಂದ ನೇರವಾಗಿ ಮಾತ್ರ ಸ್ವೀಕರಿಸಿ ವೃದ್ಧಿಯಾಗುವುವು. ಆದುದರಿಂದ ಚರಪ್ರಾಣಿಗಳಿಗೆ ಸಜೀವಪ್ರಾಣಿಗಳ ಅಥವಾ ಸಸ್ಯಸಂಬಂಧವಾದ ಆಹಾರವಿಲ್ಲದೇ ಜೀವಿಸುವುದಕ್ಕಾಗುವುದಿಲ್ಲ. ಆದ್ದರಿಂದಲೇ ಅನ್ನವನ್ನು ಪ್ರಾಣಿಗಳು ತಿನ್ನುವುವು; ಪ್ರಾಣಿಗಳನ್ನು ಅನ್ನವು ತಿನ್ನುವುದು ಎಂದರೆ ಪ್ರಾಣಿಗಳಿಂದಲೇ ಅನ್ನವು (ಆಹಾರವು) ಉಂಟಾಗುವುದು

ಎಂದು ಮೇಲೆ ಹೇಳಿದೆ. ಮುಖ್ಯವಾದ ವಿಷಯವೇನೆಂದರೆ ಲೋಕದಲ್ಲಿ ಚರಪ್ರಾಣಿಗಳೂ (ಮನುಷ್ಯರೂ ಸಹ) ಒಂದನ್ನೊಂದು ತಿಂದೇ ಜೀವಿಸಬೇಕಾಗಿದೆ. ಅವುಗಳಿಗೆ ಪ್ರಾಣಿಸಂಬಂಧವಾದ ಆಹಾರವಿಲ್ಲದೆ ಜೀವಿಸುವುದಕ್ಕೆ ಆಗುವುದೇ ಇಲ್ಲ. ಈ ಅಭಿಪ್ರಾಯವೇ **ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತೇ** ಎಂಬ ವಾಕ್ಯಗಳಲ್ಲಿ ಹೇಳಿಸುವುದು.

ಅನ್ನವನ್ನೂ (ಆಹಾರವನ್ನು) ಪೂಜಿಸಿ ಗೌರವದಿಂದ ಕಾಣಬೇಕೆಂಬ ವಿಚಾರದಲ್ಲಿಯೂ ಶ್ರುತಿವಾಕ್ಯಗಳಿವೆ—

**ಅನ್ನಂ ನ ನಿಂದ್ಯಾತ್ । ತದ್ವ್ರತಂ । ಪ್ರಾಣೋ ವಾ ಅನ್ನಂ । ಶರೀರಮನ್ನಾದಂ । ಪ್ರಾಣೇ ಶರೀರಂ ಪ್ರತಿಷ್ಠಿತಂ । ಶರೀರೇ ಪ್ರಾಣಃ ಪ್ರತಿಷ್ಠಿತಃ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ಕೀರ್ತ್ಯಾ ॥**

(ತೈ. ಉ. ೩-೭)

ಅನ್ನವನ್ನು ನಿಂದಿಸಬಾರದು ಅದನ್ನು ಒಂದು ವ್ರತವೆಂದು (ಕರ್ತವ್ಯಕರ್ಮವೆಂದು) ಭಾವಿಸಬೇಕು. ಪ್ರಾಣವೇ ಅನ್ನವು. ಶರೀರವು ಅನ್ನವನ್ನು ಭಕ್ಷಿಸಿ ಅದರಿಂದ ಬೆಳೆಯುವುದು. ಪ್ರಾಣದಲ್ಲಿ ಶರೀರವು ಪ್ರತಿಷ್ಠಿತವಾಗಿದೆ ಶರೀರದಲ್ಲಿ ಪ್ರಾಣವು ಪ್ರತಿಷ್ಠಿತವಾಗಿದೆ. ಆದ್ದರಿಂದ ಪ್ರಾಣ ಮತ್ತು ಶರೀರಗಳಿಗೆ ಪರಸ್ಪರ ಸಂಬಂಧವಿದೆ ಇವೆರಡೂ ಅನ್ನದಲ್ಲಿ ಪ್ರತಿಷ್ಠಿತವಿರುವುದು ಎಂದರೆ ಅನ್ನದಿಂದಲೇ ಶರೀರ ಮತ್ತು ಪ್ರಾಣಗಳ ವೃದ್ಧಿ ಮತ್ತು ರಕ್ಷಣೆಯು ಉಂಟಾಗುವುದು ಅನ್ನವಿಲ್ಲದೆ ಶರೀರವಾಗಲಿ, ಪ್ರಾಣವಾಗಲಿ ಇರಲು ಸಾಧ್ಯವಿಲ್ಲ. ಅನ್ನದಲ್ಲಿ (ಅನ್ನರೂಪವಾದ ಪರಬ್ರಹ್ಮದಲ್ಲಿ) ಅನ್ನ ಪ್ರತಿಷ್ಠಿತವಾಗಿರುವುದೆಂಬುದನ್ನು ಬಲ್ಲವನು ಗೌರವಿಸಲ್ಪಡುತ್ತಾನೆ. ಅನ್ನದಿಂದ ಸಮೃದ್ಧನೂ, ಅನ್ನವನ್ನು ಪಭೋಗಿಸುವವನೂ ಆಗುತ್ತಾನೆ. ಅವನು ಪ್ರಜೆಗಳಿಂದಲೂ (ಸಂತಾನಾದಿಗಳಿಂದಲೂ) ಪಶುಸಂಪತ್ತಿನಿಂದಲೂ, ಬ್ರಹ್ಮವರ್ಚಸ್ಸು ಮತ್ತು ಕೀರ್ತಿಗಳಿಂದಲೂ ಯುಕ್ತನಾಗಿ ಮನುಷ್ಯರಲ್ಲಿ ಶ್ರೇಷ್ಠನೂ ಗೌರವಾನ್ವಿತನೂ ಆಗುತ್ತಾನೆ.

**ಅನ್ನಂ ನ ಪರಿಚಕ್ಷೀತ । ತದ್ವ್ರತಂ । ಆಪೋ ವಾ ಅನ್ನಂ । ಜ್ಯೋತಿರನ್ನಾದಂ । ಅಪ್ಸು ಜ್ಯೋತಿಃ ಪ್ರತಿಷ್ಠಿತಂ । ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ಕೀರ್ತ್ಯಾ ॥**

(ತೈ ಉ. ೩-೮)

ಅನ್ನವನ್ನು ಹೀಯಾಳಿಸಬೇಡಿರಿ. ಹಾಗೆ ಮಾಡುವುದೇ ಒಂದು ವ್ರತವೆಂದು ಭಾವಿಸಿ. ಉದಕವೇ ಅನ್ನವು, ಜ್ಯೋತಿಯು (ತೇಜಸ್ಸು) ಅನ್ನವನ್ನು ಭಕ್ಷಿಸುವುದು. ಉದಕದಲ್ಲಿ ಜ್ಯೋತಿಯು ಪ್ರತಿಷ್ಠಿತವಾಗಿದೆ. ಜ್ಯೋತಿಯಲ್ಲಿ ಉದಕವು ಪ್ರತಿಷ್ಠಿತವು. ಇವೆರಡು ಎಂದರೆ ಜ್ಯೋತಿ ಮತ್ತು ಉದಕಗಳು ಅನ್ನದಲ್ಲಿ ಪ್ರತಿಷ್ಠಿತವಾಗಿರುವುವು. (ಅನ್ನದಲ್ಲಿ ಶಾಖವೂ ಉದಕಾಂಶವೂ ಇರುವುದು) ಅನ್ನವು ಅನ್ನದಲ್ಲಿ (ಅನ್ನರೂಪವಾದ ಪರಬ್ರಹ್ಮನಲ್ಲಿ) ಪ್ರತಿಷ್ಠಿತವಾಗಿರುವುದೆಂಬುದನ್ನು ಬಲ್ಲವನು ಗೌರವಿಸಲ್ಪಡುತ್ತಾನೆ. ಅನ್ನದಿಂದ ಸಮೃದ್ಧನೂ, ಅನ್ನವನ್ನು ಪಯೋಗಿಸುವವನೂ ಆಗುತ್ತಾನೆ. ಅವನು ಪ್ರಜೆಗಳಿಂದಲೂ (ಸಂತಾನಾದಿಗಳಿಂದಲೂ) ಪಶುಸಂಪತ್ತಿನಿಂದಲೂ, ಬ್ರಹವರ್ಚಸ್ಸು ಮತ್ತು ಕೀರ್ತಿಗಳಿಂದಲೂ ಯುಕ್ತನಾಗಿ ಮನುಷ್ಯರಲ್ಲಿ ಶ್ರೇಷ್ಠನೂ ಗೌರವಾನ್ವಿತನೂ ಆಗುತ್ತಾನೆ.

ಅನ್ನವನ್ನು ಅತಿಥಿ ಅಭ್ಯಾಗತರಿಗೆ ದಾನಮಾಡಿ ಅನಂತರ ತಾನು ಭುಜಿಸಬೇಕೆಂಬ ವಿಷಯದಲ್ಲಿಯೂ ಅನೇಕ ಶ್ರುತಿಪ್ರಮಾಣಗಳಿವೆ.

**ಮೋಘಮನ್ನಂ ವಿಂದತೇ ಅಪ್ರಚೇತಾಃ ಸತ್ಯಂ ಬ್ರವೀಮಿ ವಧ ಇತ್ಸ ತಸ್ಯ ।**
**ನಾರ್ಯಮಣಂ ಪುಷ್ಯತಿ ನೋ ಸಖಾಯಂ ಕೇವಲಾಘೋ ಭವತಿ ಕೇವಲಾದೀ ॥**

(ಋ. ಸಂ. ೧೦-೧೧೭-೬)

ಎಂದರೆ ಯಾರಿಗೂ ಏನನ್ನೂ ಕೊಡದ ಲೋಭಿಯು ಸಂಪಾದಿಸುವ ಅನ್ನವು (ಆಹಾರವು) ವ್ಯರ್ಥವು. ಅವನು ಸಂಪಾದಿಸುವ ಅನ್ನದಿಂದ ಅವನಿಗೆ ಯಾವ ಉಪಕಾರವೂ ಆಗುವುದಿಲ್ಲ. ಅದು ಅವನ ಮರಣಕ್ಕೆ (ಕೇಡಿಗೂ) ಕಾರಣವಾಗುವುದು. ಇದು ನಿಜವೆಂದು ನಾನು ಹೇಳುತ್ತೇನೆ. ಯಾವ ಪುರುಷನು ಅರ್ಯಮಾದಿ ದೇವತೆಗಳಿಗೆ ಹವಿರಾದಿಗಳನ್ನು ಕೊಡದೆ ಎಂದರೆ ದೇವತೆಗಳಿಗೆ ಆಹಾರವನ್ನು ಸಮರ್ಪಿಸದೆ ಸ್ನೇಹಿತನಿಗೂ ಅಥವಾ ಸ್ನೇಹಿತನಂತೆ ಮನೆಗೆ ಬರುವ ಅತಿಥಿಅಭ್ಯಾಗತರಿಗೂ ಆಹಾರದಿಂದ ತೃಪ್ತಿಪಡಿಸದೆ ತಾನೊಬ್ಬನೇ ತಿನ್ನುತ್ತಾನೆಯೋ ಅವನು ಮಹಾ ಪಾಪಿಯು ಎಂದು ಹೇಳಿರುವುದು. ಮತ್ತು,

**ನ ಸ ಸಖಾ ಯೋ ನ ದದಾತಿ ಸಖ್ಯೇ ಸಚಾಭುವೇ ಸಚಮಾನಾಯ ಪಿತ್ವಃ ।**
**ಅಪಾಸ್ಮಾತ್ಪ್ರೇಯಾನ್ನ ತದೋಕೋ ಅಸ್ತಿ ಪೃಣಂತಮನ್ಯಮರಣಂ ಚಿದಿಚ್ಛೇತ್ ॥**

(ಋ. ಸಂ. ೧೦-೧೧೭-೪)

ಸ್ನೇಹಿತನಿಗೂ, ತನ್ನ ಜತೆಗಾರನಿಗೂ, ತನ್ನ ಸಮೀಪದಲ್ಲಿರುವವನಿಗೂ ಅನ್ನವನ್ನು ಕೊಡದಿರುವವನು ಸ್ನೇಹಿತನೇ ಅಲ್ಲ ಆದ್ದರಿಂದ ಅಂತಹ ಪುರುಷನ ಮನೆಯನ್ನು ಬಿಟ್ಟು ಹೋಗಬೇಕು. ಅದೊಂದೇ ಮನೆಯಲ್ಲ. ಅನ್ನವನ್ನು ಕೊಡತಕ್ಕ ಉದಾರಿಗಳ ಮನೆಯು ಇದ್ದೇ ಇರುವುದು. ಅಲ್ಲಿಗೆ ಹೋಗುವುದು ಒಳ್ಳೆಯದು. ಎಂದು ಋಷಿಯು ವರ್ಣಿಸಿರುವನು. ಆದುದರಿಂದಲೇ ಸದ್ಗೃಹಸ್ಥರಾದವರು ಅತಿಥಿಅಭ್ಯಾಗತರ ಸತ್ಕಾರಕ್ಕಾಗಿ ಮನೆಯಲ್ಲಿ ಅನ್ನವನ್ನು ತಮಗೆ ಸಾಕಾಗುವುದಕ್ಕಿಂತ ಸ್ವಲ್ಪ ಹೆಚ್ಚಿಗೆ ಮಾಡಬೇಕು. ಈ ವಿಷಯದಲ್ಲಿ

**ಅನ್ನಂ ಬಹು ಕುರ್ವೀತ । ತದ್ವ್ರತಂ ಪೃಥಿವೀ ವಾ ಅನ್ನಂ । ಆಕಾಶೋऽನ್ನಾದಃ । ಪೃಥಿವ್ಯಾ-ಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾ-ನ್ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥**

(ತೈ. ಉ. ೩-೯)

ಅನ್ನವನ್ನು ಹೆಚ್ಚಾಗಿ ಮಾಡಬೇಕು. ಹಾಗೆ ಮಾಡುವುದನ್ನೇ ಒಂದುವ್ರತವೆಂದು ಭಾವಿಸಬೇಕು. ಪೃಥಿವಿಯು ಅನ್ನವು. ಆಕಾಶವು ಅನ್ನವನ್ನು ಭಕ್ಷಿಸುವುದು. ಎಂದರೆ ಪೃಥಿವಿಯಲ್ಲಿ ಬೆಳೆಯುವ ಸಸ್ಯಾದಿಗಳೂ, ಧಾನ್ಯಾದಿಗಳೂ ಹವೀರೂಪದಿಂದ ಅಂತರಿಕ್ಷ (ಸ್ವರ್ಗ) ಸ್ಥರಾದ ದೇವತೆಗಳಿಂದ ಭುಜಿಸಲ್ಪಡುವುದು. ಪೃಥಿವಿಯಲ್ಲಿ ಆಕಾಶವು ಪ್ರತಿಷ್ಠಿತವು. ಆಕಾಶದಲ್ಲಿ ಪೃಥಿವಿಯು ಪ್ರತಿಷ್ಠಿತವು. ಇವೆರಡೂ (ಪೃಥಿವ್ಯಾಕಾಶಗಳೆರಡೂ) ಅನ್ನದಲ್ಲಿ ಪ್ರತಿಷ್ಠಿತವು. ಆ ಅನ್ನವು ಅನ್ನದಲ್ಲಿ (ಅನ್ನರೂಪವಾದ ಬ್ರಹ್ಮನಲ್ಲಿ) ಪ್ರತಿಷ್ಠಿತವು ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವುದನ್ನು

ಬಲ್ಲವನು ಪ್ರತಿಷ್ಠೆ ಅಥವಾ ಗೌರವದಿಂದ ಬಾಳುತ್ತಾನೆ. ಅವನು ಅನ್ನದಿಂದ ಸಮೃದ್ಧನೂ, ಅನ್ನವನ್ನು ಪಭೋಗಿಸುವವನೂ ಆಗುತ್ತಾನೆ ಮತ್ತು ಪುತ್ರಪೌತ್ರಾದಿಸಂತತಿಯುಕ್ತನಾಗಿಯೂ, ಪಶುಗಳಿಂದ ಕೂಡಿರುವವನಾಗಿಯೂ, ಬ್ರಹ್ಮವರ್ಚಸ್ಸು ಕೀರ್ತಿಗಳಿಂದ ಸಹಿತನಾಗಿಯೂ ಮನುಷ್ಯರಲ್ಲಿ ಮನ್ನಣೆಯನ್ನು ಪಡೆಯುತ್ತಾನೆ. ಮತ್ತು,

> ನ ಕಂಚನ ವಸತೌ ಪ್ರತ್ಯಾಚಿಕ್ಷೀತ । ತದ್ವ್ರತಂ । ತಸ್ಮಾದ್ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ । ಅರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ । ಏತದ್ವೈ ಮುಖತೋಽನ್ನಗ್ಂ ರಾದ್ಧಂ । ಮುಖತೋಽಸ್ಮಾ ಅನ್ನಗ್ಂರಾಧ್ಯತೇ । ಏತದ್ವೈ ಮಧ್ಯತೋಽನ್ನಗ್ಂ ರಾದ್ಧಂ । ಮಧ್ಯತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವಾ ಅಂತತೋಽನ್ನಗ್ಂ ರಾದ್ಧಂ । ಅಂತತೋಽಸ್ಮಾ ಅನ್ನಗ್ಂ ರಾಧ್ಯತೇ । ಯ ಏವಂ ವೇದ । .. .... .. .. ....ತತ್ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ ಭವತಿ । ತನ್ಮಹ ಇತ್ಯುಪಾಸೀತ । ಮಹಾನ್ಭವತಿ । ತನ್ಮನ ಇತ್ಯುಪಾಸೀತ । ಮಾನವಾನ್ಭವತಿ । ತನ್ನಮ ಇತ್ಯುಪಾಸೀತ । ನಮ್ಯಂತೇಽಸ್ಮೈ ಕಾಮಾಃ । ತದ್ಬ್ರಹ್ಮೇತ್ಯುಪಾಸೀತ । ಬ್ರಹ್ಮವಾನ್ಭವತಿ । ತದ್ಬ್ರಹ್ಮಣಃ ಪರಿಮರ ಇತ್ಯುಪಾಸೀತ । ಪರ್ಯೇಣ ಮ್ರಿಯಂತೇ ದ್ವಿಷಂತಃ ಸಪತ್ನಾಃ । ಪರಿಯೇ ಪ್ರಿಯಾ ಭ್ರಾತೃವ್ಯಾಃ । ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ಪ್ರೇತ್ಯ । ಏತಮನ್ನಮಯಮಾತ್ಮಾನಮುಪಸಂಕ್ರಮ್ಯ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ । ಏತಂ ಮನೋಮಯಮಾತ್ಮಾನಮುಪಸಂಕ್ರಮ್ಯ । ಏತಂ ವಿಜ್ಞಾನಮಯಮಾತ್ಮಾನಮುಪ-ಸಂಕ್ರಮ್ಯ । ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ಇಮಾನ್ಲೋಕಾನ್ ಕಾಮನ್ನೀ ಕಾಮರೂಪ್ಯನುಸಂಚರನ್ । ಏತತ್ಸಾಮಗಾಯನ್ನಾಸ್ತೇ । ಹಾ೩ ವುಹಾ೩ ವುಹಾ೩ ವು । ಅಹಮನ್ನಮಹಮನ್ನಮಹಮನ್ನಂ । ಅಹಮನ್ನಾದೋ೨ಽಹಮನ್ನಾದೋ೨ಽಹಮನ್ನಾದಃ । ಅಹಗ್ಂಶ್ಲೋಕಕೃದಹಗ್ಂ ಶ್ಲೋಕಕೃದಹಗ್ಂಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾ೩ ಸ್ಯ । ಪೂರ್ವಂದೇವೇಭ್ಯೋ ಅಮೃತಸ್ಯನಾ೩ ಭಾಇ । ಯೋ ಮಾ ದದಾತಿ ಸ ಇದೇವಮಾ೩ ವಾಃ । ಅಹಮನ್ನ ಮನ್ನಮದಂತಮಾ೩ ದ್ಮಿ । ಅಹಂ ವಿಶ್ವಂ ಭುವನಮಭ್ಯಭವಾಂ । ಸುವರ್ಣಜ್ಯೋತೀಃ । ಯ ಏವಂ ವೇದ । ಇತ್ಯುಪನಿಷತ್ ॥
>
> (ತೈ. ಉ. ೩-೧೦)

ಮೇಲೆ ಹೇಳಿದ ಈ ವಾಕ್ಯಗಳನ್ನು ವೇದಪುರುಷನೇ ಹೇಳಿದ್ದಾನೆ. ಮನೆಯಲ್ಲಿ ಸ್ಥಳವಿಲ್ಲವೆಂದು ಯಾರಿಗೂ ಅಲ್ಲಗಳೆಯಬಾರದು. ಅದನ್ನೇ ವ್ರತವೆಂದು ಭಾವಿಸಬೇಕು ಆದ್ದರಿಂದ ಯಾವ ಪ್ರಕಾರದಿಂದಲಾದರೂ ಬಹಳ ಅನ್ನವನ್ನು ದೊರಕಿಸಬೇಕು. ಅವನ (ಅಥಿತಿಯ) ಸಲುವಾಗಿ ಅನ್ನವನ್ನು ಸಿದ್ಧಮಾಡಿರೆಂದು ಅನ್ನುತ್ತಾರೆ. ಇದೇ ಆತ್ಮಾದರಪೂರ್ವಕ ಅನ್ನವನ್ನು ಸಿದ್ಧಮಾಡುವಿಕೆಯು. ಅನ್ನವನ್ನು ಸಿದ್ಧಮಾಡಿ ಸತ್ಪಾತ್ರನಿಗೆ ದಾನಮಾಡುವುದರಲ್ಲಿ ಸಾತ್ವಿಕ, ರಾಜಸ, ತಾಮಸಗಳೆಂಬ ಮೂರು ವಿಧಗಳಿರುವುವೆಂದು ಪರಮೇಶ್ವರನೇ ಹೇಳಿದ್ದಾನೆ.

> ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
> ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ವಿಕಂ ಸ್ಮೃತಂ ॥

ಯದನ್ನಂ ಸಂಪಾದಿತಮಸ್ತ್ಯೇತದೇವಾನ್ನಂ ಮುಖತೋ ರಾದ್ಧಂ ಭವತಿ । ಮುಖ್ಯೇ ದೇಶೇ ತೀರ್ಥಕ್ಷೇತ್ರವಿಶೇಷೇ ಮುಖ್ಯಕಾಲೇ ಸಂಕ್ರಾಂತ್ಯಮಾವಾಸ್ಯಾದಿರೂಪೇ ಮುಖ್ಯಾಯಾಭ್ಯಾಗತಾಯ ವೇದಶಾಸ್ತ್ರತದಧ್ಯಯನಾನುಷ್ಠಾನಪರಾಯ ಮುಖ್ಯಯಾ ವೃತ್ತ್ಯಾ ಶ್ರದ್ಧಾಪ್ರಣಿಪಾತಸತ್ಕಾರಾದಿಪರಯಾ ಮುಖ್ಯೇನ ದಾತ್ರಾ ಸಾತ್ತ್ವಿಕೇನ ದತ್ತಮಿತ್ಯರ್ಥಃ । ಯಃ ಪುಮಾನೇವಂ ಸಾತ್ತ್ವಿಕಂ ದಾನಪ್ರಕಾರಂ ವೇದ ವಿದಿತ್ವಾನುತಿಷ್ಠತಿ ಅಸ್ಯ ಜನ್ಮಾಂತರೇ ಮುಖ್ಯಕ್ರಮೇಣೈವಾನ್ನಂ ಸಂಪದ್ಯತೇ ।

ಸಾತ್ತ್ವಿಕದಾನವೆಂದರೆ ದಾನಕೊಡುವಾಗ ದಾನತೆಗೆದುಕೊಳ್ಳುವ ಪುರುಷನಿಂದ ತಮಗೆ ಉತ್ತರೋತ್ತರ ಏನಾದರೂ ಪ್ರತ್ಯುಪಕಾರವಾದೀತೆಂಬ ಆಶೆಯನ್ನು ಇಟ್ಟುಕೊಳ್ಳಕೂಡದು. ಯಾವ ಪ್ರತ್ಯುಪಕಾರದ ಆಶೆಯೂ ಇಲ್ಲದೇ ಪಾರಮಾರ್ಥಿಕವಾಗಿ ದೇಶಕಾಲಗಳನ್ನೂ ಪಾತ್ರಾಪಾತ್ರಗಳನ್ನೂ ವಿವೇಚಿಸಿ ಕೊಡುವ ದಾನವು ಸಾತ್ತ್ವಿಕದಾನವೆನಿಸುವುದು. ಹೇಗೆಂದರೆ ತೀರ್ಥಕ್ಷೇತ್ರಾದಿಪುಣ್ಯಪ್ರದೇಶಗಳಲ್ಲಿ, ಸಂಕ್ರಾಂತಿ, ಅಮಾವಾಸ್ಯೆ ಮುಂತಾದ ಮುಖ್ಯ ದಿನಗಳಲ್ಲಿ, ಕರೆದು ಅಥವಾ ಕರೆಯದೆ ತಾನಾಗಿ ಬರುವ, ಅತಿಥಿ ಅಥವಾ ಅಭ್ಯಾಗತನಿಗೆ ಅನ್ನದಾನಮಾಡಬೇಕು. ಆ ಅತಿಥಿಯು ವೇದಶಾಸ್ತ್ರಾಧ್ಯಯನಸಂಪನ್ನನಾಗಿ ಅವುಗಳನ್ನು ಅನುಷ್ಠಾನಮಾಡುತ್ತಾ ಸದಾಚಾರಸಂಪನ್ನನಾಗಿದ್ದರೆ ಮತ್ತೂ ವಿಶೇಷವು ಅಂತಹ ಪುರುಷನನ್ನು ಶ್ರದ್ಧೆಯಿಂದ ಸತ್ಕರಿಸಿ ಆದರಾದಿಗಳಿಂದ ಉಪಚರಿಸಿ ಅನ್ನದಾನಮಾಡಬೇಕು. ಕ್ಷುದ್ಬಾಧೆಯಿಂದ ಪೀಡಿತನಾದ ಯಾವಪುರುಷನಿಗಾಗಲಿ ಅನ್ನದಾನವನ್ನುಮಾಡಿದಲ್ಲಿ ಅದರಲ್ಲಿಯೂ ಮೇಲೆ ಹೇಳಿದ ಗುಣಗಳುಳ್ಳ ಅತಿಥಿಅಭ್ಯಾಗತರಿಗೆ ಅನ್ನದಾನವನ್ನು ಮಾಡಿದಲ್ಲಿ ಅದು ಸಾತ್ತ್ವಿಕದಾನವಾಗುವುದಲ್ಲದೆ ಅದರಿಂದ ದಾನ ಮಾಡಿದವನು ಜನ್ಮಾಂತರಗಳಲ್ಲಿ ಬಹಳವಾಗಿ ಅನ್ನಸಂಪತ್ತಿನಿಂದ ಕೂಡಿ ಸುಖಿಸುತ್ತಾನೆ ಅದನ್ನೇ ಇಲ್ಲಿ-ಏತದ್ವೈ ಮುಖತೋಽನ್ನಗ್ಂ ರಾದ್ಧಂ । ಮುಖತೋಽಸ್ಮಾ ಅನ್ನಗ್ಂ ರಾಧ್ಯತೇ । ಎಂಬ ವಾಕ್ಯಗಳಿಂದ ವಿವರಿಸಲಾಗಿದೆ. ಇನ್ನು ಎರಡನೆಯದಾದ ರಾಜಸ ಮತ್ತು ತಾಮಸದಾನಗಳ ಪ್ರಕಾರವು ಈರೀತಿ ಇರುವುದು—

ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।
ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸಮುದಾಹೃತಂ ॥
ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।
ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ ॥

ಯಾವ ಪುರುಷನು ಪ್ರತ್ಯುಪಕಾರನಿರೀಕ್ಷಣೆಯಿಂದ ದಾನಮಾಡುವನೋ ಅವನು ಮಾಡುವ ದಾನವು ರಾಜಸ ದಾನವೆನಿಸುವುದು. ಹೇಗೆಂದರೆ, ಈ ದಿನ ನಾನು ಈ ಪುರುಷನಿಗೆ ಅನ್ನದಾನಮಾಡಿದರೆ ನಾಳೆ ಅಥವಾ ಮುಂದೆ ಒಂದಾನೊಂದು ದಿನ ಅವನೂ ನನಗೆ ಆರೀತಿ ಸತ್ಕರಿಸುವನು ಎಂಬ ಭಾವನೆಯನ್ನಿಟ್ಟುಕೊಂಡು ಮಾಡುವ ದಾನಕ್ಕೆ ರಾಜಸವೆಂದು ಹೆಸರು. ಇಂತಹದಾನವನ್ನು ಇಲ್ಲಿ-ಏತದ್ವೈ ಮಧ್ಯತೋಽನ್ನಗ್ಂ ರಾದ್ಧಂ । ಮಧ್ಯತೋಽಸ್ಮಾ ಅನ್ನಗ್ಂ ರಾಧ್ಯತೇ ಎಂಬ ವಾಕ್ಯಗಳಿಂದ ವಿವರಿಸಲಾಗಿದೆ.

ಇವಲ್ಲದೆ ದೇಶ, ಕಾಲ, ಪಾತ್ರಾಪಾತ್ರವಿವೇಚನೆ ಇಲ್ಲದೆ, ಸರಿಯಾದ ಸತ್ಕಾರವನ್ನೂ ಮಾಡದೆ ಕೇವಲ ಆತ್ಮಪ್ರಶಂಸೆಗೋಸ್ಕರ ಮಾಡುವ ದಾನವು ತಾಮಸವೆನಿಸುವುದು ಎಂದರೆ ಮನಸ್ಸು ಬಂದ ಎಂದರೆ ಗರ್ಹಿತಪ್ರದೇಶದಲ್ಲಿ

ಕಾಲವಲ್ಲದ ಕಾಲದಲ್ಲಿ ಎಂದರೆ ಅರ್ಧರಾತ್ರಿ ಮೊದಲಾದ ಅಕಾಲದಲ್ಲಿ, ಅಪಾತ್ರನಿಗೆ ಎಂದರೆ ಕ್ಷುದ್ಬಾಧೆಯಿಲ್ಲದೆ ಆ ಕಂಠಪೂರ್ತಿಯಾಗಿ ತಿಂದು ಯಾವ ಆಹಾರದ ಅವಶ್ಯಕತೆಯೂ ಇಲ್ಲದವನಿಗೆ, ಇನ್ನೊಬ್ಬರು ತನ್ನ ಅತಿಥಿಸತ್ಕಾರವನ್ನು ನೋಡಿ ಮೆಚ್ಚಲೆಂಬ ಅಹಂಭಾವದಿಂದ ಮಾಡುವ ಸತ್ಕಾರ ಅಥವಾ ದಾನವು ತಾಮಸವೆನಿಸುವುದು. ಇದನ್ನೇ ಇಲ್ಲಿ—**ಏತದ್ವಾ ಅಂತತೋನ್ನಗ್ಂ ರಾದ್ಧಂ । ಅಂತತೋಽಸ್ಮಾ ಅನ್ನಗ್ಂ ರಾಧ್ಯತೇ ।** ಎಂಬ ವಾಕ್ಯಗಳಿಂದ ವಿವರಿಸಲ್ಪಟ್ಟಿದೆ. ಆದ್ದರಿಂದ ಈ ವಿಷಯಗಳನ್ನೆಲ್ಲಾ ಚೆನ್ನಾಗಿ ತಿಳಿದುಕೊಂಡು ಯೋಗ್ಯನಾದ ಪಾತ್ರನಿಗೆ ಸಕಾಲದಲ್ಲಿ ಅನ್ನದಾನಮಾಡಬೇಕು.

ಅನ್ನವನ್ನು ಪರಬ್ರಹ್ಮಸ್ವರೂಪವೆಂದು ತಿಳಿದು ಅದನ್ನು ಪುರುಷನು ಯಾವ ಭಾವನೆಯಿಂದ ಉಪಾಸನೆ ಮಾಡುವನೋ ಅವನ ಭಾವನೆಗೆ ಅನುಸಾರವಾಗಿ ಅದಕ್ಕೆ ಫಲವನ್ನು ಪಡೆಯುವನು ಎಂದು ವಿವರಿಸಿದೆ ಹೇಗೆಂದರೆ—

**ತತ್ಪ್ರತಿಷ್ಠೇತ್ಯುಪಾಸೀತ। ಪ್ರತಿಷ್ಠಾವಾನ್ಭವತಿ ।** ಅದನ್ನು ಪ್ರತಿಷ್ಠೆಯೆಂದು ಭಾವಿಸಿ ಉಪಾಸನೆ ಮಾಡಿದಾರೆ. ಅನ್ನವಸ್ತ್ರಾದಿಸುಖಸಾಧನಗಳಿಂದ ಯುಕ್ತನಾಗಿ ಪ್ರತಿಷ್ಠೆಯುಳ್ಳವನಾಗುತ್ತಾನೆ ತೇಜಸ್ಸೆಂದು (ಮಹಃ) ಉಪಾಸನೆ ಮಾಡುವವನು ಧನಾದಿಗಳಿಂದ ಸಮೃದ್ಧನಾಗಿ ಮಹತ್ತ್ವಗುಣಗಳಿಂದ ಕೂಡಿ ಗೌರವಯೋಗ್ಯನಾಗುತ್ತಾನೆ. ಅದನ್ನು ಮನಃ ಎಂದು ಉಪಾಸನೆಮಾಡುವವನು ಮನಶ್ಶಕ್ತಿಯುಳ್ಳವನಾಗುತ್ತಾನೆ ನಮಃ (ನಮಸ್ಕಾರಯೋಗ್ಯ) ಎಂದು ಉಪಾಸನೆ ಮಾಡುವವನು ಎಲ್ಲರಿಂದಲೂ ನಮಸ್ಕರಿಸಲ್ಪಡುವವನೂ, ಎಲ್ಲರನ್ನೂ ವಶಪಡಿಸಿಕೊಳ್ಳುವವನೂ ಆಗುತ್ತಾನೆ. ಇವನಿಗೆ ಸಮಸ್ತ ಕಾಮಗಳೂ ಎಂದರೆ ಅವನ ಅಭೀಷ್ಟಗಳೆಲ್ಲವೂ ವಶವಾಗುತ್ತವೆ, ಎಂದರೆ ಸಿದ್ಧಿಸುತ್ತವೆ. ಬ್ರಹ್ಮ ಎಂದು ಉಪಾಸನೆ ಮಾಡುವವನು ವೇದಗಳನ್ನೂ ವೇದಾರ್ಥತತ್ತ್ವರಹಸ್ಯಗಳನ್ನೂ ಬಲ್ಲವನಾಗುತ್ತಾನೆ. ತದ್ಬ್ರಹ್ಮಣಃ ಪರಿಮರ ಎಂದು ಉಪಾಸನೆಮಾಡುವವನ ಸುತ್ತಲೂ ಇರುವ ಶತ್ರುಗಳು, ಆಧಿವ್ಯಾಧಿಗಳು ಎಲ್ಲವೂ ನಾಶವಾಗುತ್ತವೆ. ಎಲ್ಲ ಶತ್ರುಗಳೂ, ದ್ವೇಷಿಗಳೂ, ಅಪ್ರಿಯರಾದವರೂ ಸಂಪೂರ್ಣ ನಷ್ಟವಾಗುತ್ತಾರೆ. ಈ ಪುರುಷನಲ್ಲಿರುವವನೂ, ಆದಿತ್ಯನಲ್ಲಿರುವವನೂ ಬ್ರಹ್ಮನೇ. ಈ ವಿಧವಾದ ಜ್ಞಾನವುಳ್ಳವನು ಈ ಲೋಕದಿಂದ ತೆರಳಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಆತ್ಮಾವಸ್ಥೆಗಳನ್ನು ದಾಟಿ, ವಿದ್ಯಾಧರನಾಗಿ (ಎಂದರೆ ತನಗೆ ಬೇಕಾದ ರೂಪಗಳನ್ನು ಧರಿಸುವ ಶಕ್ತಿಯುಳ್ಳ ದೇವತೆಯಾಗಿ) ಕಾಮನೆಗಳನ್ನು ಪಭೋಗಿಸುತ್ತಾ ಈ (ಕೆಳಗಣ) ಸಾಮಮಂತ್ರಗಳನ್ನು ಹಾಡುತ್ತಾ ಅತ್ತಿತ್ತ ಸಂಚರಿಸುವನು. ಏನು ಚಮತ್ಕಾರವಿದು ? ನಾನು ಅನ್ನವು. ನಾನು ಅನ್ನವನ್ನುಣ್ಣುವವನು, ನಾನು ಸ್ತೋತ್ರಮಾಡುವವನು, ನಾನು ಸತ್ಯ (ಋತ) ಕ್ಕಿಂತ ಪೂರ್ವದಲ್ಲಿ ಹುಟ್ಟಿದವನು, ದೇವತೆಗಳಿಗೂ ಪೂರ್ವದಲ್ಲಿ ಅಮೃತನಾಭಿಯಲ್ಲಿ (ಮಧ್ಯದಲ್ಲಿ) ನಾನು ಹುಟ್ಟಿದವನು. ಯಾವನು ನನಗೆ (ಅನ್ನವನ್ನು) ಅರ್ಪಿಸುವನೋ ಅವನು ನನ್ನಂತೆಯೇ ಆಗುವನು. ನಾನು ಅನ್ನವು. ಅನ್ನವನ್ನು ತಿನ್ನುವವನನ್ನು ನಾನು ತಿನ್ನುವೆನು. ನಾನು ಈ ವಿಶ್ವವನ್ನೂ, ಈ ಭುವನವನ್ನೂ ಸೋಲಿಸುವೆನು. ಇದನ್ನರಿತವನು ಸುವರ್ಣಜ್ಯೋತಿಯಂತೆ ಆಗುವನು. ಇತ್ಯಾದಿಯಾಗಿ ಅನ್ನದ ಅಥವಾ ಅನ್ನಾಧಿಪತಿಯಾದ ದೇವತೆಯ (ಬ್ರಹ್ಮದ) ನಾನಾವರ್ಣನೆಗಳಿರುವುವು. ಅನ್ನಸಂಬಂಧವಾದ ವಿಷಯಗಳನ್ನೊಳಗೊಂಡ ಇನ್ನೂ ಅನೇಕ ಮಂತ್ರಗಳು ವೇದಗಳಲ್ಲಿ ಬಹಳವಾಗಿರುವುವು ಗ್ರಂಥವಿಸ್ತರದ ಭಯದಿಂದ ಅವುಗಳನ್ನೆಲ್ಲಾ ಇಲ್ಲಿ ವಿವರಿಸಲು ಸಾಧ್ಯವಿಲ್ಲ.

ಈ ಸೂಕ್ತದಲ್ಲಿ ಧನವನ್ನೂ ಅನ್ನವನ್ನೂ ಸ್ತುತಿಸಲಾಗಿದೆ. ಇದನ್ನು ಋಷಿಯು ಪ್ರಕಾರಾಂತರವಾಗಿ (ವ್ಯತಿರೇಕವಾಗಿ) ವರ್ಣಿಸಿದಾನೆ. ಅನ್ನವಿಲ್ಲದೆ ಹಸಿದು ಕೃಶನಾಗಿ ಮನೆಮನೆಯ ಬಾಗಿಲಿಗೆ ಭಿಕ್ಷಾರ್ಥವಾಗಿ ಸಂಚರಿಸುವ ಭಿಕ್ಷುಕನ ಅನುಭವವನ್ನೂ ಕಷ್ಟಗಳನ್ನೂ ಹೃದಯಂಗಮವಾಗುವಂತೆ ವರ್ಣಿಸಿದಾನೆ. ಈ ರೀತಿ ವರ್ಣಿಸಬೇಕಾದರೆ ಸೂಕ್ತದ್ರಷ್ಟೃವಾದ ಋಷಿಯೇ ಇಂತಹ ಅನುಭವಕ್ಕೆ ಒಳಗಾಗಿರಬೇಕೆಂದು ಊಹಿಸಲು ಸಾಕಾದಷ್ಟು ಆಧಾರಗಳಿವೆ. ಅದರಂತೆಯೇ, ಇಲುಷ ಪುತ್ರನಾದ ಕವಷನೆಂಬ ಋಷಿಯು ಬ್ರಾಹ್ಮಣನಲ್ಲ. ಇವನು ಕೃಷಿಕರ್ಮವನ್ನು (ವ್ಯವಸಾಯ) ಮಾಡುವ ಶೂದ್ರಜಾತಿಗೆ ಸೇರಿದವನು. ಇವನು ಪಗಡೆ, ದಾಳ ಮೊದಲಾದ ಸಾಧನಗಳಿಂದ ಜೂಜಾಡುತ್ತಿದ್ದನು. ಇವನು ಜೂಜಿನಲ್ಲಿ ಬಹಳ ದ್ರವ್ಯವನ್ನು ಕಳೆದುಕೊಂಡು ಅನ್ನಾದ್ಯಾಹಾರಗಳಿಲ್ಲದೆ. ತೊಂದರೆಗೆ ಒಳಗಾದನು. ಇವನ ತಂದೆತಾಯಿಗಳು, ನೆಂಟರಿಷ್ಟರೂ, ಅಣ್ಣತಮ್ಮಂದಿರೂ ಇವನನ್ನು ಮನೆಗೆ ಸೇರಿಸದೆ ದೂರಮಾಡಿದರು. ಇವೆಲ್ಲವನ್ನು ಋಷಿಯು ತನ್ನ ಸೂಕ್ತದಲ್ಲಿ (೧೦ನೇ ಮಂಡಲದ ೩೪ನೇ ಸೂಕ್ತದಲ್ಲಿ) ಬಹುಚೆನ್ನಾಗಿ ವರ್ಣಿಸಿದಾನೆ. ಪಗಡೆಯಾಟದಲ್ಲಿ ದಾಳಗಳು ಉರುಳುವಾಗ ಆಟಗಾರರ ಮನಸ್ಸಿನಲ್ಲಿ ಉಂಟಾಗುವ ತಾನು ಗೆಲ್ಲುವೆನೋ ಸೋಲುವೆನೋ ಎಂಬ ಭಾವನೆಗಳನ್ನೂ, ಜೂಜುಗಾರರಲ್ಲದವರು ಕಷ್ಟಪಟ್ಟು ಕೆಲಸಮಾಡಿ ದ್ರವ್ಯಸಂಪಾದನೆ ಮಾಡಿ ಸುಖವಾಗಿರುವುದನ್ನೂ, ಕೃಷಿಕರ್ಮದಲ್ಲಿ ಪ್ರವೃತ್ತನಾಗಿರುವವನು ತಾನು ಬೆಳೆದ ಬೆಳೆಯಿಂದ ಸುಖವಾಗಿ ಜೀವಿಸುತ್ತಿರುವುದನ್ನು ಸಹ ಚೆನ್ನಾಗಿ ವರ್ಣಿಸಿದಾನೆ. ಅಗಸ್ತ್ಯಋಷಿಯು ಒಂದಾನೊಂದುಕಾಲದಲ್ಲಿ ಹುಲ್ಲಿನ ಮೇಲೆನಡೆಯುತ್ತಿದಾಗ ತನ್ನನ್ನು ಒಂದು ಹಾವು ಕಚ್ಚಿರಬಹುದೆಂಬ ಶಂಕೆಯಿಂದ ಹಾವುಗಳ ವಿಷಯವನ್ನು ಅವುಗಳ ದುಷ್ಟಸ್ವಭಾವವನ್ನೂ, ವಿಷಪರಿಹಾರದ ನಿಧಾನವನ್ನೂ ಅದಕ್ಕೆ ಸಂಬಂದಪಟ್ಟ ಇತರ ವಿಷಯಗಳನ್ನೂ ೧ನೇ ಮಂಡಲದ ೧೯೧ನೇ ಸೂಕ್ತದಲ್ಲಿ ವರ್ಣಿಸಿದಾನೆ. ಇವೆಲ್ಲವೂ ಸ್ವಾನುಭವದಿಂದ ವರ್ಣಿಸಿರುವ ವಿಷಯಗಳು.

ಕೆಲವು ಸೂಕ್ತಗಳಲ್ಲಿ ಪ್ರತಿಪಾದಿತ (ಸ್ತುತ) ರಾಗಿರುವ ದೇವತೆಗಳ ಹೆಸರೇ ಆ ಸೂಕ್ತದ ಋಷಿಗಳಿಗೂ ಇರುವುದು ಗಮನೀಯವಾದುದು. ಮನ್ಯುದೇವತೆಯನ್ನು ಪ್ರಶಂಸಿಸುವ ಸೂಕ್ತಕ್ಕೆ(ಋ·ಸಂ೧೦ನೇ ಮಂಡಲಂದ ೮೩, ೮೪ನೇ ಸೂಕ್ತಗಳು) ಮನ್ಯುವೆಂಬ ಹೆಸರಿನ ಋಷಿಯೂ, ವಿಶ್ವಕರ್ಮನನ್ನು ಸ್ತುತಿಸುವ ಸೂಕ್ತಗಳಿಗೆ (೧೦ನೇಮಂಡಲದ ೮೧,೮೨ ನೇ ಸೂಕ್ತಗಳಿಗೆ) ವಿಶ್ವಕರ್ಮನೆಂಬ ಋಷಿಯೂ ಸೂಕ್ತದ್ರಷ್ಟೃಗಳಾದ ಋಷಿಗಳಾಗಿರುವುದೇ ಇದಕ್ಕೆ ಉದಹರಣೆಯು. ಇಂತಹ ಅನೇಕಸೂಕ್ತಗಳಿರುವವು. ಆದ್ದರಿಂದ ಪ್ರಕೃತಸೂಕ್ತಕ್ಕೆ ಋಷಿಯಾದ ಅಂಗಿರಸವಂಶದ ಭಿಕ್ಷು ಎಂಬುವನು ಒಂದು ಸಮಯದಲ್ಲಿ ಆಹಾರಾರ್ಥವಾಗಿ ಭಿಕ್ಷಬೇಡುತ್ತಿದ್ದನೆಂದು ಊಹಿಸಬಹುದಾಗಿದೆ. ಆದ್ದರಿಂದಲೇ ಇವನಿಗೆ ಭಿಕ್ಷು ಎಂಬ ಹೆಸರು ರೂಢಿಗೆ ಬಂದಿರಬಹುದೆಂದು ತೋರುತ್ತದೆ. ಇವನಿಗೆ ಬೇರೆ ಹೆಸರಿದ್ದರೂ ಅದು ಪ್ರಸಿದ್ಧವಾಗಿಲ್ಲ.

## ನೂರ ಹದಿನೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ನ ವಾ ಇತಿ ನವರ್ಚಂ೫ಪಂಚಮಂ·ಸೂಕ್ತಂ। ಭಿಕ್ಷುರ್ನಾಮಾಂಗಿರಸ ಋಷಿಃ। ಪ್ರಥಮಾದ್ವಿತೀಯೇ ಜಗತ್ಯೌ ಶಿಷ್ಟಾಃ ಸಪ್ತ ತ್ರಿಷ್ಟುಭಃ। ಅತ್ರ ಧನಸ್ಯಾನ್ನಸ್ಯ ಚ ದಾನಂ ಸ್ತೂಯತೇ। ಅತಸ್ತದ್ದೈವತ್ಯಮಿದಂ। ತಥಾ ಚಾನುಕ್ರಾಂತಂ। ನ ವಾ ಉ ಭಿಕ್ಷುರ್ಧನಾನ್ನದಾನಪ್ರಶಂಸಾದ್ಯೇ ಜಗತ್ಯಾವಿತಿ॥ ಗತೋ ವಿನಿಯೋಗಃ॥**

ಅನುವಾದವು—ನ ವಾ ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸಗೋತ್ರದ ಭಿಕ್ಷು ಎಂಬುವನು ಋಷಿಯು ; ಈ ಸೂಕ್ತದ ಮೊದಲ ಎರಡು ಋಕ್ಕುಗಳು ಜಗತೀಛಂದಸ್ಕವು, ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತದಲ್ಲಿ ಧನ ಮತ್ತು ಅನ್ನದ ದಾನಪ್ರಶಂಸೆಯು ಉಕ್ತವಾಗಿದೆ. ಆದ್ದರಿಂದ ಧನಾನ್ನದಾನಸ್ತುತಿಯೇ ಈ ಸೂಕ್ತಕ್ಕೆ ದೇವತೆಯು. ಅನುಕ್ರಮಣಿಕೆಯಲ್ಲಿ ನ ವಾ ಉ ಭಿಕ್ಷುರ್ಧನಾನ್ನದಾನಪ್ರಶಂಸಾದ್ಯೇ ಜಗತ್ಯೌ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೧೭

ಮಂಡಲ—೧೦ ॥ ಅನುವಾಕ—೧೦ ॥ ಸೂಕ್ತ—೧೧೭ ॥

ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೨೨, ೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ಭಿಕ್ಷುಃ ಆಂಗಿರಸಃ ॥

॥ ದೇವತಾ—ಧನಾನ್ನದಾನಪ್ರಶಂಸಾ ॥

॥ ಛಂದಃ—೧-೨. ಜಗತೀ । ೩-೯. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ನ ವಾ ಉ ದೇವಾಃ ಕ್ಷುಧಮಿದ್ವಧಂ ದದುರುತಾಶಿತಮುಪ ಗಚ್ಛಂತಿ ಮೃತ್ಯವಃ ।
ಉತೋ ರಯಿಃ ಪೃಣತೋ ನೋಪ ದಸ್ಯತ್ಯುತಾಪೃಣನ್ಮರ್ಡಿತಾರಂ ನ ವಿಂದತೇ ॥ ೧ ॥

॥ ಪದಪಾಠಃ ॥

ನ । ವೈ । ಊಂ ಇತಿ । ದೇವಾಃ । ಕ್ಷುಧಂ । ಇತ್ । ವಧಂ । ದದುಃ । ಉತ । ಆಶಿತಂ । ಉಪ । ಗಚ್ಛಂತಿ । ಮೃತ್ಯವಃ ।
ಉತೋ ಇತಿ । ರಯಿಃ । ಪೃಣತಃ । ನ । ಉಪ । ದಸ್ಯತಿ । ಉತ । ಅಪೃಣನ್ । ಮರ್ಡಿತಾರಂ । ನ । ವಿಂದತೇ ॥ ೧ ॥

॥ ಸಾಯಣಭಾಷ್ಯಂ ॥

ಭಿಕ್ಷುಃ ಪ್ರಥಮಂ ವ್ಯತಿರೇಕಮುಖೇನಾನ್ನದಾನಂ ಪ್ರಶಂಸತಿ । ದೇವಾ ವೈ ದೇವಾಃ ಖಲು ಸರ್ವೇಷಾಂ ಕ್ಷುಧಂ ನ ದದುಃ । ನ ಪ್ರಾಯಚ್ಛನ್ । ಕಿಂತು ವಧಮಿದ್ವಧಮೇವ ದತ್ತವಂತಃ । ಏತಾದೃಶೀಂ

ವಧರೂಪಾಂ ಕ್ಷುಧಮನ್ನದಾನೇನ ಯಃ ಶಮಯತಿ ಸ ದಾತಾ ಖಲು । ಉ ಇತಿ ಪೂರಣಃ । ಯೋಽದತ್ತ್ವಾ ಭುಂಕ್ತೇ ತಮಾಶಿತಂ ಭುಂಜಾನಂ ಪುರುಷಮಪಿ ಮೃತ್ಯವೋ ಮರಣಾನ್ಯುಪ ಗಚ್ಛಂತಿ । ಸಮೀಪೇ ಯಾಂತಿ ॥ ಆಶಿತಃ ಕರ್ತಾ। ಪಾ. ೬–೧–೨೦೭ । ಇತ್ಯಾದ್ಯುದಾತ್ತತ್ವಂ ॥ ಕ್ಷುಧಾರ್ತಾನಾಂ ಭೋಕ್ತೄಣಾಂ ಚ ಮರಣಂ ಸಮಾನಂ । ಕಿಂ ದಾನೇನ ಧನನಾಶರೂಪೇಣ । ಅತ ಆಹ । ಉತೋ । ಉತಶಬ್ದೋಽಪ್ಯರ್ಥೇ । ಪೃಣತಃ ಪ್ರಯಚ್ಛತಃ ಪುರುಷಸ್ಯ ರಯಿರ್ಧನಂ ನೋಪ ದಸ್ಯತಿ । ನೋಪಕ್ಷೀಯತೇ ॥ ದಸು ಉಪಕ್ಷಯೇ ದೈವಾದಿಕಃ । ಪೃಣ ದಾನೇ ತೌದಾದಿಕಃ । ತಸ್ಯ ಶತ್ರಂತಸ್ಯ ಶತುರನುಮೋ ನದ್ಯಜಾದೀ ಇತಿ ವಿಭಕ್ತೇರಾದ್ಯುದಾತ್ತತ್ವಂ ॥ ದಾನಪ್ರಸಂಗೇನಾದಾತಾರಂ ದೂಷಯತಿ । ಅಪೃಣನ್ನಪ್ರಯಚ್ಛನ್ ಪುರುಷಸ್ತು ಮರ್ಡಿತಾರಮಾತ್ಮನಃ ಸುಖಯಿತಾರಂ ನ ವಿಂದತೇ । ನ ಕುತ್ರಾಪಿ ಲಭತೇ । ಇಹ ಬಂಧವೋಽಪ್ರದಾನಾನ್ನ ಸುಖಯಂತಿ ದೇವಾ ಅಪಿ ಹವಿಷ್ಪ್ರದಾನಾಭಾವಾತ್ ॥

॥ ಪ್ರತಿಪದಾರ್ಥ ॥

**ದೇವಾಃ ನ್ವೈ**—ದೇವತೆಗಳು (ಸಮಸ್ತರಿಗೂ) । **ಕ್ಷುಧಂ**—ಹಸಿವನ್ನು (ಕ್ಷುದ್ಬಾಧೆಯನ್ನು) । **ನ ದದುಃ**—ಕೊಡಲಿಲ್ಲ. ಆದರೆ, । **ವಧಂ ಇತ್**—ಮರಣವನ್ನು ಮಾತ್ರ ಕೊಟ್ಟರು । **ಉತ**—ಮತ್ತು । **ಆಶಿತಂ**—ಆಹಾರವನ್ನು ಭುಜಿಸಿದ ಪುರುಷನನ್ನೂ ಸಹ । **ಮೃತ್ಯವಃ**—ಮರಣಗಳು । **ಉಪ ಗಚ್ಛಂತಿ**—ಸಮೀಪಿಸುತ್ತವೆ । **ಉತೋ**—ಇದಲ್ಲದೆ । **ಪೃಣತಃ**—ದಾನಮಾಡುವ ಪುರುಷನ । **ರಯಿಃ**—ಧನವು । **ನ ಉಪ ದಸ್ಯತಿ**—ಕ್ಷೀಣವಾಗುವುದಿಲ್ಲ । **ಉತ**—ಮತ್ತು ! **ಅಪೃಣನ್**—ಯಾರಿಗೂ ಏನನ್ನು ಕೊಡದಿರುವ ಪುರುಷನು । **ಮರ್ಡಿತಾರಂ**—ತನಗೆ ಸುಖವನ್ನು (ಅಥವಾ ಒಳ್ಳೆಯದನ್ನು) ಉಂಟುಮಾಡುವ ಮತ್ತೊಬ್ಬ ಪುರುಷನನ್ನು । **ನ ವಿಂದತೇ**—ಪಡೆಯುವುದಿಲ್ಲ ।

॥ ಭಾವಾರ್ಥ ॥

ದೇವತೆಗಳು ಮಾನವರನ್ನು ಸೃಷ್ಟಿಸಿದಾಗ ಅವರಿಗೆ ಹಸಿವಿನಿಂದ ಅಥವಾ ಕ್ಷುದ್ಬಾಧೆಯಿಂದ ಬಳಲಬೇಕೆಂದೂ ಆ ಕ್ಷುದ್ಬಾಧೆಯ ಪರಿಣಾಮವಾಗಿ ಮರಣವನ್ನು ಹೊಂದಬೇಕೆಂದೂ ನಿಯಮಿಸಲಿಲ್ಲ. ಹಸಿವಿನ ಬೇಗೆಯೆಂದರೇ ನೆಂಬುದನ್ನು ತಿಳಿಯದೆ ಯಾವಾಗಲೂ ಚೆನ್ನಾಗಿ ಆಹಾರವನ್ನು ತಿನ್ನುತ್ತಲೇ ಇರುವ ಪುರುಷನು ಸಹ ಮೃತ್ಯುವಶ ನಾಗುವನು. ಇದಲ್ಲದೆ ಧನ ಅಥವಾ ಅನ್ನವನ್ನು ದಾನಮಾಡುವ ಪುರುಷನಿಗೆ ಅವನ ಧನವು ಕಮ್ಮಿಯಾಗುವುದಿಲ್ಲ ಆದರೆ ಯಾರಿಗೂ ಯಾವಾಗಲೂ ಏನನ್ನು ಕೊಡದಿರುವ ಜಿಪುಣನಾದ ಪುರುಷನಿಗೆ ಯಾರಿಂದಲೂ ಸುಖವಾಗಲಿ ಸಹಾಯವಾಗಲಿ ದೊರೆಯುವುದಿಲ್ಲ.

## English Translation.

The gods have not assigned hunger as (the cause of) death, for deaths approach the man who has eaten; the riches of one who gives do not diminish, he who gives not finds no consoler.

॥ ವಿಶೇಷವಿಷಯಗಳು ॥

ದೇವತೆಗಳು ಮನುಷ್ಯರನ್ನು ಸೃಷ್ಟಿಮಾಡಿದಾಗ ಅವರು ಎಷ್ಟುಕಾಲ ಜೀವಿಸುತ್ತಿದ್ದರೂ ಕೊನೆಗೆ ಎಂದಾದರೊಂದು ದಿನ ಸಾಯಲೇಬೇಕೆಂದು ನಿಯಮವನ್ನು ಮಾಡಿದರು. ಆದರೆ ಅನ್ನಾದ್ಯಾಹಾರವಿಲ್ಲದೆ ಸಾಯಬೇಕೆಂದು ವಿಧಿಸಲಿಲ್ಲ. ಏಕೆಂದರೆ ಆಹಾರಾಭಾವವಿಲ್ಲದೆ ಯಾವಾಗಲೂ ಯಥೇಷ್ಟವಾಗಿ ತಿಂದು ಸುಖವಾಗಿರುವ ಪುರುಷನೂ ಸಹ ಕಾರಣಾಂತರದಿಂದ ಮೃತ್ಯುವಶನಾಗಲೇಬೇಕು. ಆಹಾರವಿಲ್ಲದಿದ್ದರೆ ಸಾಯುವುದು ಸತ್ಯವಾದರೂ ಅದು ದೈವನಿಯಾಮಕವಲ್ಲ. ಯಾವರೀತಿಯಿಂದಲಾದರೂ ಮನುಷ್ಯನು ತನ್ನ ಆಹಾರವನ್ನು ಸಂಪಾದಿಸಿಕೊಂಡು ಬದುಕಬಹುದು. ಆದ್ದರಿಂದ ಒಬ್ಬ ಪುರುಷನು ಅನ್ನವಿಲ್ಲದೆ ಸತ್ತರೆ ಅದು ದೈವನಿಯಾಮಕವಲ್ಲ ಅವನು ತನ್ನ ಆಹಾರವನ್ನು ಸಂಪಾದಿಸಲು ಅಶಕ್ತನಾಗಿರುವುದೇ ಕಾರಣವು. ಈ ಪುರುಷನಿಗೆ ಅನ್ನವಿಲ್ಲದೆ ಉಪವಾಸವಿದಾನೆ, ಇನ್ನೊಬ್ಬನು ಯಥೇಚ್ಛವಾಗಿ ತಿನ್ನುತ್ತಿದಾನೆ ಎಂಬ ಪಕ್ಷಪಾತವು ಮೃತ್ಯುವಿಗಿಲ್ಲ. ಆಹಾರವಿರಲಿ ಇಲ್ಲದಿರಲಿ ಎಲ್ಲರೂ ಮೃತ್ಯುವಶರಾಗಲೇಬೇಕು. ಆದ್ದರಿಂದ ಮೃತ್ಯುವಶರಾಗದಿರಲು ಪುರುಷನು ತನ್ನ ಸ್ವಪ್ರಯತ್ನದಿಂದ ಆಹಾರವನ್ನು ಸಂಪಾದಿಸಲೇಬೇಕು. ಆಹಾರಾಭಾವದಿಂದುಂಟಾಗುವ ಮರಣವು ದೈವನಿಯಾಮಕವೆಂಬ ಮೂಢನಂಬಿಕೆಯನ್ನು ತ್ಯಜಿಸಿ ತನ್ನ ಆಹಾರವನ್ನು ತಾನು ಸಂಪಾದಿಸಿಕೊಳ್ಳಬೇಕು.

ಒಂದುವೇಳೆ ಒಬ್ಬ ಪುರುಷನು ಕಾರಣಾಂತರಗಳಿಂದ ತನ್ನ ಆಹಾರ (ಅನ್ನ)ವನ್ನು ಸಂಪಾದಿಸಿಕೊಳ್ಳಲು ಅಶಕ್ತನಾಗಿದ್ದರೆ ಅವನು ಇತರರನ್ನು:ಯಾಚಿಸಿ ಅದನ್ನು ಪಡೆಯಬಹುದು ಅಂತಹ ಸಂದರ್ಭದಲ್ಲಿ ಅನ್ನವನ್ನು ಅಥವಾ ಧನವನ್ನು ಯಾಚಿಸುವವನಿಗೆ ಕೊಟ್ಟರೆ ಕೊಡುವವನಿಗೆ ಕಡಿಮೆಯಾಗುವುದಿಲ್ಲವೇ, ಎಂದರೆ ಖಂಡಿತವಾಗಿಯೂ ಇಲ್ಲ. ಏಕೆಂದರೆ ಅವನು ಕೊಡುವ ಅಲ್ಪಸ್ವಲ್ಪ ಭಾಗಕ್ಕೆ ಬದಲಾಗಿ ಅವನಿಗೆ ಅಪಾರವಾದ ಪುಣ್ಯವು ಲಭಿಸುವುದು. ಈ ಪುಣ್ಯಕಾರ್ಯದಿಂದ ಅವನು ದೇವತೆಗಳ ಅನುಗ್ರಹಕ್ಕೆ ಪಾತ್ರನಾಗಿ ತಾನು ಮಾಡಿದ ಅನೇಕ ಭಾಗದಷ್ಟು ಸಂಪತ್ತನ್ನು ಪಡೆಯುವನು. ಇದಲ್ಲದೆ ತಾನು ಮಾಡುವ ಉಪಕಾರದಿಂದ ಅವನಿಗೆ ಅನೇಕ ಮಿತ್ರರೂ ಹಿತೈಷಿಗಳೂ ಉಂಟಾಗುವರು. ಆದರೆ ಯಾರಿಗೂ ಯಾವಾಗಲೂ ಯಾವ ವಿಧವಾದ ದಾನವನ್ನೂ, ಅನ್ನಾದ್ಯಾಹಾರಗಳನ್ನೂ, ಕೊಡದಿರುವ ಲೋಭಿಯ ವಿಷಯದಲ್ಲಿ ಅವನಿಗೆ ಸುಖವಾಗಬೇಕೆಂದು ಯಾರೂ ಬಯಸುವುದಿಲ್ಲ. ಅವನಿಗೆ ಯಾರೂ ಮಿತ್ರರಿರುವುದಿಲ್ಲ. ತಾನು ಮತ್ತೊಬ್ಬರಿಗೆ (ಅನ್ನ, ದಾನ ಮೊದಲಾದ) ಉಪಕಾರ ಮಾಡದಿರುವವನಿಗೆ ಇತರರು ಅವನ ಕಷ್ಟಕಾಲದಲ್ಲಿ ಹೇಗೆತಾನೆ ಉಪಕಾರಮಾಡುವರು? ಆದ್ದರಿಂದ ತನ್ನ ಅನುಕೂಲಕ್ಕಾಗಿಯೂ ಶ್ರೇಯಸ್ಸಿಗಾಗಿಯೂ, ಪುಣ್ಯಸಂಪಾದನೆಗಾಗಿಯೂ ಒಬ್ಬನು ಕಷ್ಟದಲ್ಲಿರುವ ಮತ್ತೊಬ್ಬನಿಗೆ (ಅನ್ನ ಮೊದಲಾದ) ಸಹಾಯವನ್ನು ಮಾಡಲೇಬೇಕು, ಎಂದು ಋಷಿಯು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದಾನೆ.

॥ ಸಂಹಿತಾಪಾಠಃ ॥

ಯ ಆಧ್ರಾಯ ಚಕಮಾನಾಯ ಪಿತ್ವೋಽನ್ನವಾನ್ತ್ಸನ್ರಫಿತಾಯೋಪಜಗ್ಮುಷೇ ।

ಸ್ಥಿರಂ ಮನಃ ಕೃಣುತೇ ಸೇವತೇ ಪುರೋತೋ ಚಿತ್ಸ ಮರ್ಡಿತಾರಂ ನ ವಿಂದತೇ ॥ ೨ ॥

॥ ಪದಪಾಠಃ ॥

ಯಃ । ಆಧ್ರಾಯ । ಚಕಮಾನಾಯ । ಪಿತ್ವಃ । ಅನ್ನಃऽವಾನ್ । ಸನ್ । ರಫಿತಾಯ । ಉಪऽಜಗ್ಮುಷೇ । ಸ್ಥಿರಂ । ಮನಃ । ಕೃಣುತೇ । ಸೇವತೇ । ಪುರಾ । ಉತೋ ಇತಿ । ಚಿತ್ । ಸಃ । ಮರ್ಡಿತಾರಂ । ನ । ವಿಂದತೇ ॥ ೨ ॥

॥ ಸಾಯಣಭಾಷ್ಯಂ ॥

ಯಃ ಪುರುಷಃ ಸ್ವಯಮನ್ನವಾನಸ್ಯಾಧ್ರಾಯ । ಆಧಾರ್ಯತೇऽಸಾವಿತ್ಯಾಧ್ರೋ ದುರ್ಬಲಃ । ತಸ್ಮೈ ಪಿತ್ವಃ ಪಿತೂನನ್ನಾನಿ ಚಕಮಾನಾಯ । ಚಕಮಾನಃ ಕಾಂತಿಕರ್ಮಾ । ರಫಿತಾಯ । ರಫತಿರ್ಹಿಂಸಾರ್ಥಃ । ದಾರಿದ್ರ್ಯೇಣ ಹಿಂಸಿತಾಯೋಪಜಗ್ಮುಷೇ ಗೃಹಂ ಪ್ರತ್ಯಾಗತಾಯಾತಿಶಯೇನ ಮನ ಆತ್ಮೀಯಮಂತಃಕರಣಮದಾನೇ ಸ್ಥಿರಂ ಕೃಣುತೇ ಕುರುತೇ । ಮನಃಸ್ಥೈರ್ಯಕರಣೇನ ತಂ ಕ್ಲೇಶಯತೀತ್ಯರ್ಥಃ ॥ ಕೃಣುತೇ । ಕೃವಿ ಹಿಂಸಾಕರಣಯೋಃ। ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಕರೋತೇರ್ವಾ ವ್ಯತ್ಯಯೇನ ಶ್ನುಃ । ವಿಕರಣಸ್ವರಃ ಸತಿ ಶಿಷ್ಟೋऽಪಿ ಲಸಾರ್ವಧಾತುಕಸ್ವರಂ ನ ಬಾಧತೇ । ಪಾ. ೬-೧-೧೫೮-೧೧ । ಇತಿ ಲಸಾರ್ವಧಾತುಕಸ್ವರಃ । ನ ಕೇವಲಂ ಕ್ಲೇಶಕರಣಂ ಅಪಿ ತು ಪುರಾ ತಸ್ಯ ಪುರಸ್ತಾದೇವ ಸೇವತೇ ಭೋಗಾನ್ । ಸೋऽಪಿ ಮರ್ಡಿತಾರಮಾತ್ಮನಃ ಸುಖಯಿತಾರಂ ನ ವಿಂದತೇ । ನ ಕುತ್ರಾಪಿ ಲಭತೇ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಪುರುಷನು । **ಅನ್ನವಾನ್ ಸನ್**—ತಾನು ಸ್ವಯಂ ಅನ್ನವಂತನಾಗಿದ್ದರೂ । **ಆಧ್ರಾಯ**—ಸಹಾಯಾರ್ಹನಾದ ದುರ್ಬಲನೂ । **ಪಿತ್ವಃ**—ಅನ್ನಾಹಾರಗಳನ್ನು । **ಚಕಮಾನಾಯ**—ಯಾಚಿಸುತ್ತಿರುವವನೂ । **ರಫಿತಾಯ**—ಬಡತನದ ಬೇಗೆಗೆ ಒಳಗಾದವನೂ । **ಉಪಜಗ್ಮುಷೇ**—ತನ್ನ ಮನೆಗೆ ಬಂದವನೂ ಆದ ಅತಿಥಿಗೆ ಎಂದರೆ ಅತಿಥಿಯವಿಷಯದಲ್ಲಿ । **ಮನಃ**—ಇವನಿಗೆ ಏನನ್ನೂ ಕೊಡಬಾರದೆಂದು ತನ್ನ ಮನಸ್ಸನ್ನು । **ಸ್ಥಿರಂ ಕುರುತೇ**—ದೃಢಮಾಡುವನೋ । **ಉತೋ**—ಮತ್ತು । **ಪುರಾ ಚಿತ್**—ಅತಿಥಿಗೆ ಕೊಡುವುದಕ್ಕೆ ಮೊದಲೇ ಅಥವಾ ಅವನ ಮುಂದೆಯೇ । **ಸೇವತೇ**—ತಾನು ಅನ್ನವನ್ನು ಸೇವಿಸುವನೋ । **ಸಃ**—ಆ ಪುರುಷನು । **ಮರ್ಡಿತಾರಂ**—ತನಗೆ ಸುಖವನ್ನುಂಟುಮಾಡುವವನನ್ನು । **ನ ವಿಂದತೇ**—ಪಡೆಯುವುದಿಲ್ಲ ।

॥ ಭಾವಾರ್ಥ ॥

ಯಾವ ಪುರುಷನು ತನಗೆ ಬೇಕಾದಷ್ಟು ಅನ್ನವಿದ್ದರೂ, ಸಹಾಯರಹಿತನೂ, ದಾರಿದ್ರ್ಯದಿಂದ ಬಳಲಿ ಬೆಂಡಾಗಿ ಅನ್ನಕ್ಕಾಗಿ ತನ್ನ ಮನೆಗೆ ಬಂದು ಯಾಚಿಸುತ್ತಿರವವನೂ ಆದ ಅತಿಥಿಯ ವಿಷಯದಲ್ಲಿ ನಿರ್ದಯನಾಗಿ ಅವ

ನಿಗೆ ಏನನ್ನೂ ಕೊಡಬಾರದೆಂದು ಮನಸ್ಸನ್ನು ಘಟ್ಟಿಮಾಡಿಕೊಳ್ಳುವನೋ ಮತ್ತು ತನ್ನನ್ನು ಯಾಚಿಸುತ್ತಿರುವ ಪುರುಷನಿಗೆ ಅನ್ನವನ್ನು ಕೊಡುವುದಕ್ಕೆ ಮುಂಚೆಯೇ ತಾನು ಊಟಮಾಡುವನೋ ಆ ಪುರುಷನ ವಿಷಯದಲ್ಲಿ ಯಾರೂ ಕನಿಕರವನ್ನು ತೋರಿಸುವುದಿಲ್ಲ. ಅವನಿಗೆ ಸುಖವಾಗಲೆಂದು ಯಾರೂ ಬಯಸುವುದಿಲ್ಲ.

## English Translation

He who, possessed of food, hardens his heart against the feeble man craving nourishment, against the sufferer comming to him (for help), and pursues (his own enjoyment even) before hım, that man finds no consoler.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅನ್ನ (ಅಥವಾ ಧನ) ದಾನಮಾಡದ ಲೋಭಿಯ ಸ್ವಭಾವವನ್ನು ವರ್ಣಿಸಲಾಗಿದೆ. ಅರ್ಥವು ವಿಶದವಾಗಿರುವುದರಿಂದ ಹೆಚ್ಚುವಿವರಣೆ ಅವಶ್ಯಕವಿಲ್ಲ. ಮುಖ್ಯಾಭಿಪ್ರಾಯವೇನೆಂದರೆ- ಯಾವ ಮನುಷ್ಯನಲ್ಲಿ ತಾನು ತಿಂದು ಸಾಕಾಗಿ ಇತರರಿಗೂ ಕೊಡುವಷ್ಟು ಅನ್ನವಿದ್ದರೂ ಯಾರಿಗೂ ಕೊಡುವುದಿಲ್ಲವೋ, ಯಾರು ತನ್ನ ಬಳಿಗೆ ಬಂದ ಅತಿಥಿ ಅಭ್ಯಾಗತರಿಗೆ ಅನ್ನವನ್ನು ನೀಡದೆ ಅಥವಾ ಅವರು ಊಟಮಾಡುವುದಕ್ಕೆ ಮುಂಚೆಯೇ ತಾನು ಭುಜಿಸುವನೋ, ಯಾರು ದರಿದ್ರಾವಸ್ಥೆಯಿಂದಲೂ ಹಸಿವಿನಿಂದಲೂ ಬಳಲಿ ತನ್ನ ಮನೆಯ ಬಾಗಿಲಿಗೆ ಬರದು ಯಾಚಿಸಿದರೂ ಏನನ್ನು ಕೊಡುವುದಿಲ್ಲವೋ ಅಂತಹ ಲೋಭಿಯ ವಿಷಯದಲ್ಲಿ ಯಾರೂ ಶ್ರೇಯಸ್ಸನ್ನೂ ಸುಖವನ್ನೂ ಬಯಸುವುದಿಲ್ಲ.

॥ ಸಂಹಿತಾಪಾಠಃ ॥

**ಸ ಇದ್ಭೋಜೋ ಯೋ ಗೃಹವೇ ದದಾತ್ಯನ್ನಕಾಮಾಯ ಚರತೇ ಕೃಶಾಯ।**
**ಅರಮಸ್ಮೈ ಭವತಿ ಯಾಮಹೂತಾ ಉತಾಪರೀಷು ಕೃಣುತೇ ಸಖಾಯಂ॥**

॥ ಪದಪಾಠಃ ॥

ಸಃ । ಇತ್ । ಭೋಜಃ । ಯಃ । ಗೃಹವೇ । ದದಾತಿ । ಅನ್ನಽಕಾಮಾಯ । ಚರತೇ । ಕೃಶಾಯ ।
ಅರಂ । ಅಸ್ಮೈ । ಭವತಿ । ಯಾಮಽಹೂತೌ । ಉತ । ಅಪರೀಷು । ಕೃಣುತೇ । ಸಖಾಯಂ ॥ ೩ ॥

॥ ಸಾಯಣಭಾಷ್ಯಂ ॥

ಅನ್ನಯಮುಖೇನ ಪ್ರಶಂಸತಿ । ಸ ಇತ್ ಸ ಏವ ಭೋಜೋ ದಾತಾ ಖಲು ಯೋ ಗೃಹವೇ ॥ ಗ್ರಹೇರ್ವ್ಮೃಗಯ್ವಾದಿತ್ವಾತ್ । ಉ. ೧-೩೮ । ಕುಪ್ರತ್ಯಯಃ ॥ ಪ್ರತಿಗ್ರಹೀತ್ರೇಽನ್ನಕಾಮಾಯಾನ್ನಂ ಯಾಚಮಾನಾಯ ಚರತೇ ಗೃಹಮಾಗತವತೇ ಕೃಶಾಯ ದಾರಿದ್ರ್ಯೇಣೈತಾದೃಶಾಯಾತಿಥಯೇಽನ್ನಂ ದದಾತಿ ಪ್ರಯಚ್ಛತಿ ॥ ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ಯಾಮಹೂತೌ । ಯಾಮಾ ಗಂತಾರೋ

**ದೇವಾಃ ॥ ಅತ್ರ ಯಾತೇರರ್ಥಿಸ್ತುಸುಹುಸ್ಯ । ಉ. ೧-೧೩೯ । ಇತ್ಯಾದಿನಾ ಮನ್ಪ್ರತ್ಯಯಃ ॥ ತ ಆಹೂಯಂತೇಽತ್ರೇತಿ ಯಾಮಹೂತಿರ್ಯಜ್ಞಃ । ತಸ್ಮಿನ್ನಸ್ಮೈ ದಾತ್ರೇ ಫಲಮರಮಲಂ ಪರ್ಯಾಪ್ತಂ ಭವತಿ । ಕಾಮಪ್ರದಾನಂ ಭವತೀತ್ಯರ್ಥಃ । ಉತಾಪಿ ಚಾಪರೀಷು ॥ ಕೇವಲಮಾಮಕೇತಿ ಙೀಪ್ । ಪಾ. ೪-೧-೩೦ ॥ ಅನ್ಯಾಸು ಶಾತ್ರವೀಷು ಸೇನಾಸು ಸಖಾಯಂ ಕೃಣುತೇ । ತದ್ವದಾಚರತೀತ್ಯರ್ಥಃ । ತಸ್ಯ ಸರ್ವೇ ಸಖಾಯ ಏವ ನ ಶತ್ರವ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಪುರುಷನು । **ಅನ್ನಕಾಮಾಯ**—ಅನ್ನವನ್ನು ಯಾಚಿಸುವವನೂ । **ಗೃಹವೇ**—ಅದನ್ನು ಕೊಟ್ಟರೆ ಸ್ವೀಕರಿಸುವವನೂ । **ಚರತೇ**—ತನ್ನ ಮನೆಯಬಳಿಗೆ ಬಂದಿರುವವನೂ । **ಕೃಶಾಯ**—ದಾರಿದ್ರ್ಯದಿಂದಲೂ, ಅನ್ನವಿಲ್ಲದ್ದರಿಂದಲೂ ಕೃಶನಾಗಿರುವವನೂ ಆದ ಅತಿಥಿಗೆ (ಪುರುಷನಿಗೆ ಅಥವಾ ಭಿಕ್ಷುಕನಿಗೆ) । **ದದಾತಿ**—ಅನ್ನವನ್ನು ನೀಡುವನೋ । **ಸ ಇತ್**—ಆ ಪುರುಷನೇ । **ಭೋಜಃ**—ಅನ್ನದಾತನೆನಿಸುವನು । **ಯಾಮಹೂತೌ**—ಯಜ್ಞದಲ್ಲಿ । **ಅಸ್ಮೈ**—ಈ ಅನ್ನದಾತೃವಿಗೆ ಯಜ್ಞಾನುಷ್ಠಾನ ಫಲವು । **ಅರಂ**—ಶೀಘ್ರವಾಗಿ । **ಭವತಿ**—ಲಭಿಸುತ್ತದೆ । **ಉತ**—ಅಲ್ಲದೆ । **ಅಪರೀಷು**—ಶತ್ರುಜನರಲ್ಲಿಯೂ ಸಹ ಆ ಅನ್ನದಾತೃವು । **ಸಖಾಯಂ**—ಸ್ನೇಹಿತನನ್ನು । **ಕೃಣುತೇ**—ನಿರ್ಮಿಸಿಕೊಳ್ಳುತ್ತಾನೆ.

॥ ಭಾವಾರ್ಥ ॥

(ಈ ಋಕ್ಕಿನಲ್ಲಿ ಅನ್ನದಾತೃವನ್ನು ಪ್ರಶಂಸಿಸಲಾಗಿದೆ) ತನ್ನ ಮನೆಯ ಬಳಿಗೆ ಬಂದು ಅನ್ನವಿಲ್ಲದೆ ಕೃಶನಾಗಿ ಅನ್ನವನ್ನು ಯಾಚಿಸುತ್ತಿರುವ ದರಿದ್ರನಾದ ಅತಿಥಿಗೆ ಅಥವಾ ಭಿಕ್ಷುಕನಿಗೆ ಯಾವ ಪುರುಷನು ಅನ್ನವನ್ನು ನೀಡುವನೋ ಅವನೇ ನಿಜವಾದ ಅನ್ನದಾತನು. ಯಜ್ಞದಲ್ಲಿ ಇಂತಹ ಅನ್ನದಾತನಿಗೆ ಯಜ್ಞಾನುಷ್ಠಾನುಫಲವು ಶೀಘ್ರವಾಗಿ ಲಭಿಸುತ್ತದೆ. ಈ ಅನ್ನದಾತನ ವಿಷಯದಲ್ಲಿ ಇವನ ಶತ್ರುಗಳೂ ಸಹ ಮಿತ್ರರಾಗುತ್ತಾರೆ. ಇವನಿಗೆ ಶತ್ರುಗಳೇ ಇಲ್ಲ, ಎಲ್ಲರೂ ಮಿತ್ರರಾಗಿಯೇ ಇರುವರು.

## English Translation.

He is liberal who gives to the suppliant desiring food, wandering about distressed; to him there is an ample (recompense), and he contracts friendship with his adversaries.

॥ ಸಂಹಿತಾಪಾಠಃ ॥

**ನ ಸ ಸಖಾ ಯೋ ನ ದದಾತಿ ಸಖ್ಯೇ ಸಚಾಭುವೇ ಸಚಮಾನಾಯ ಪಿತ್ವಃ ।**
**ಅಪಾಸ್ಮಾತ್ಪ್ರೇಯಾನ್ನ ತದೋಕೋ ಅಸ್ತಿ ಪೃಣಂತಮನ್ಯಮರಣಂ ಚಿದಿಚ್ಛೇತ್ ॥ ೪ ॥**

॥ ಪದಪಾಠಃ ॥

ನ । ಸಃ । ಸಖಾ । ಯಃ । ನ । ದದಾತಿ । ಸಖ್ಯೇ । ಸಚಾऽಭುವೇ । ಸಚಮಾನಾಯ । ಪಿತ್ವಃ ।

ಅಪ । ಅಸ್ಮಾತ್ । ಪ್ರ । ಇಯಾತ್ । ನ । ತತ್ । ಓಕಃ । ಅಸ್ತಿ । ಪೃಣಂತಂ । ಅನ್ಯಂ । ಅರಣಂ । ಚಿತ್ ಇಚ್ಛೇತ್ ॥ ೪ ॥

॥ ಸಾಯಣಭಾಷ್ಯಂ ॥

ವ್ಯತಿರೇಕೇಣ ನಿಂದಾಮಾಹ । ಸ ಪುರುಷಃ ಸಖಾ ನ ಭವತಿ ಯಃ ಪುರುಷಃ ಸಚಾಭುವೆ ಸರ್ವದಾ ಸಹಭವನಶೀಲಾಯ ಸಚಮಾನಾಯ ಸೇವಮಾನಾಯೋಪಸರ್ಜನೀಭೂತಾಯ ಸಖ್ಯೆ ಸಖಿಜನಾಯ ಪಿತ್ವಃ ಪಿತೂನನ್ನಾನಿ ನ ದದಾತಿ ನ ಪ್ರಯಚ್ಛತಿ । ಸ ಸುಹೃನ್ನ ಭವತೀತ್ಯರ್ಥಃ । ಅಸ್ಮಾದ ದಾತುಃ ಸಖ್ಯುಃ ಸೋऽಪ ಪ್ರೇಯಾತ್ । ಅಪಗಚ್ಛೇತ್ । ಯದ್ವೇನಂ ಪರಿತ್ಯಜ್ಯ ಗಚ್ಛೇತ್ ॥ ಇಣ ಗತೌ । ಲಿಙ್ ಯಾಸುಟ್ ॥ ತರ್ಹಿ ತದೋಕೋ ನಿವಾಸಃ ಸದನಂ ನಾಸ್ತಿ । ನ ಭವತಿ । ಸದನಂ ಹಿ ಬಂಧುಭಿಃ ಪರಿವೃತಂ । ಸ ಗತಃ ಪುರುಷಃ ಪೃಣಂತಮನ್ನಾದಿಕಂ ಪ್ರಯಚ್ಛಂತಮನ್ಯಮರಣಂ ಚಿದರ್ಥ ಸ್ವಾಮಿನಮೇವೇಚ್ಛೇತ್ । ಕಾಮಯೇತ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಪುರುಷನು । **ಸಚಾಭುವೇ**—ಯಾವಾಗಲೂ ತನ್ನ ಜತೆಯಲ್ಲಿಯೇ ಇರುವವನೂ **ಸಚಮಾನಾಯ**—ತನ್ನನ್ನೇ ಅನುಸರಿಸುವವನೂ ಅಥವಾ ಹಿತಕಾಂಕ್ಷಿಯೂ ಆದ । **ಸಖ್ಯೇ**—ತನ್ನ ಸ್ನೇಹಿತನಿಗೆ **ಪಿತ್ವಃ**—ಅನ್ನವನ್ನು । **ನ ದದಾತಿ**—ಕೊಡುವುದಿಲ್ಲವೋ । **ಸಃ**—ಆ ಪುರುಷನು । **ನ ಸಖಾ**—ಸ್ನೇಹಿತನೇ ಅಲ್ಲ । **ಅಸ್ಮಾತ್**—ಅನ್ನವನ್ನು ನೀಡದಿರುವ ಇಂತಹ (ಹೆಸರಿಗೆ ಮಾತ್ರ ಸ್ನೇಹಿತನಂತೆ ನಟಿಸುವ)ಪುರುಷನಿಂದ **ಅಪ ಪ್ರೇಯಾತ್**—ದೂರ ಹೊರಟುಹೋಗಬೇಕು । **ತದೋಕಃ**—ಅಂತಹ ಪುರುಷನ ಮನೆಯು । **ನ ಅಸ್ತಿ**—ಮನೆ (ಗೃಹ) ವೆನಿಸುವುದಿಲ್ಲ (ಆದ್ದರಿಂದ ಅನ್ನವನ್ನು ಯಾಚಿಸುವವನು) । **ಪೃಣಂತಂ**—ಅನ್ನಾದ್ಯಾಹಾರಗಳನ್ನು ನೀಡುವ । **ಅನ್ಯಂ ಅರಣಂ**—ಬೇರೊಬ್ಬ ಒಡೆಯನನ್ನು । **ಇಚ್ಛೇತ್**—ಹುಡುಕಿಕೊಂಡು ಹೋಗಬೇಕು.

॥ ಭಾವಾರ್ಥ ॥

ಯಾವಾಗಲೂ ತನ್ನ ಜತೆಯಲ್ಲಿಯೇ ಇದ್ದು ತನ್ನನ್ನು ಅನುಸರಿಸುತ್ತಿರುವ ಮತ್ತು ತನ್ನ ಹಿತವನ್ನೇ ಕೋರುವ ಸ್ನೇಹಿತನಿಗೆ ಯಾವ ಪುರುಷನು ಅನ್ನವನ್ನು ನೀಡುವುದಿಲ್ಲವೋ ಅವನು ನಿಜವಾದ ಸ್ನೇಹಿತನೇ ಅಲ್ಲ.

## English Translation.

He is not a friend who gives not food to a friend, to an associate, to a companion; let him turn away from him, that is not a (fitting) dwelling; let him seek another more liberal lord.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅನ್ನವನ್ನು ನೀಡದಿರುವ ಪುರುಷನ ನಿಂದೆಯನ್ನೂ ಸ್ನೇಹಿತನ ಕರ್ತವ್ಯವನ್ನೂ ಗುಣಗಳನ್ನೂ ವರ್ಣಿಸಲಾಗಿದೆ. ಸ್ನೇಹಿತನೆಂದರೆ ತನ್ನ ಹಿತವನ್ನು ಬಯಸುವವನು. ಸ್ನೇಹಿತನೆಂಬ ಅರ್ಥವಿರುವ ಸಖಾಯಃ ಎಂಬ ಶಬ್ದಕ್ಕೆ ಯಾಸ್ಕರು—**ಸಹಮುದನಂ ಸಮಾನಖ್ಯಾನಾಃ** (ನಿ. ೭-೩೦) ಎಂದು ನಿರ್ವಚನವನ್ನು ಹೇಳಿದಾರೆ ಎಂದರೆ ಸ್ನೇಹಿತರೆಂದರೆ ಜತೆಯಲ್ಲಿ ಸಂತೋಷಪಡುವವರು, ಒಬ್ಬರ ಸಂತೋಷವೇ ಮತ್ತೊಬ್ಬನ ಸಂತೋಷ, ಪರಸ್ಪರ ಸಂತೋಷದಿಂದಿರುವವರು ಮತ್ತೆ ಸಮಾನಖ್ಯಾನಾಃ ಎಂದರೆ ಇಬ್ಬರೂ ಒಂದೇ ವಿಧವಾಗಿ ಹೇಳುವವರು ಎಂದರೆ ಇಬ್ಬರ ಅಭಿಪ್ರಾಯವೂ ಒಂದೇ ವಿಧವಾಗಿ ಪರಸ್ಪರ ಹೊಂದಿಕೊಂಡಿರುವವರಿಗೆ ಸ್ನೇಹಿತರೆಂದು ಹೆಸರು. ಲೋಕವ್ಯವಹಾರದಲ್ಲಿಯೂ ಸ್ನೇಹಿತರ ಲಕ್ಷಣಗಳು ಈ ರೀತಿ ಉಕ್ತವಾಗಿವೆ—

**ದದಾತಿ ಪ್ರತಿಗೃಹ್ಣಾತಿ ಗುಹ್ಯಮಾಖ್ಯಾತಿ ಪೃಚ್ಛತಿ ।**
**ಭುಂಕ್ತೇ ಚ ಭೋಜಯತ್ಯೇವ ಷಡ್ವಿಧಂ ಮಿತ್ರಲಕ್ಷಣಂ ॥**

ಇಬ್ಬರು ಸ್ನೇಹಿತರಿದ್ದಲ್ಲಿ ಪರಸ್ಪರ ಒಬ್ಬರಿಗೊಬ್ಬರು ಕೊಡುವುದು, ಕೊಟ್ಟದ್ದನ್ನು ಸ್ವೀಕರಿಸುವುದು, ಪರಸ್ಪರ ರಹಸ್ಯವನ್ನು (ಗುಟ್ಟಿನ ವಿಷಯವನ್ನು) ಹೇಳುವುದು ಮತ್ತು ಕೇಳುವುದು ಒಬ್ಬರ ಮನೆಯಲ್ಲಿ ಮತ್ತೊಬ್ಬರು ಭೋಜನ ಮಾಡುವುದು ಮತ್ತು ಭೋಜನಮಾಡಿದವನು ಮತ್ತೊಬ್ಬನಿಗೂ ಭೋಜನಮಾಡಿಸುವುದೂ ಈ ಆರೂ ಮಿತ್ರಲಕ್ಷಣಗಳೆಂದು ಹೇಳಿದೆ. ಪ್ರಕೃತಸಂದರ್ಭದಲ್ಲಿ ಭೋಜನದ ವಿಷಯವನ್ನು ತೆಗೆದುಕೊಂಡರೆ ಪರಸ್ಪರ ಭೋಜನ ಮಾಡುವುದೂ, ಮಾಡಿಸುವುದೂ ಸ್ನೇಹದ ಲಕ್ಷಣವೆಂದಿದೆ. ಭೋಜನವ್ಯವಹಾರವಿಲ್ಲದೆ ಸ್ನೇಹವಿಲ್ಲ. ಎಂದರೆ ಒಬ್ಬನು ಕಾರಣಾಂತರದಿಂದ ಅನ್ನವಿಲ್ಲದೆ ಹಸಿವಿನಿಂದ ಬಳಲುತ್ತಿದ್ದರೂ ಅವನ ಸ್ನೇಹಿತನು ತನ್ನಲ್ಲಿ ಅನ್ನವಿದ್ದರೂ ಅವನಿಗೆ ಕೊಡದಿದ್ದರೆ ಅವನ ಸ್ನೇಹವು ನಿಜವಾದ ಸ್ನೇಹವಲ್ಲ. ಸ್ವಾರ್ಥಸಹಿತವಾದ ಕೃತ್ರಿಮವು. ಇತರ ವಿಷಯಗಳಲ್ಲಿ ಸ್ನೇಹಿತರಿಗೆ ಎಷ್ಟೇ ಅಭಿಪ್ರಾಯಭೇದವಿದ್ದರೂ ಒಬ್ಬನು ಅನ್ನವಿಲ್ಲದೆ ಹಸಿದಿರುವಾಗ ಅವನ ಸ್ನೇಹಿತನೆನಿಸಿದವನು ಸಹಾಯ ನೀಡಲೇಬೇಕು. ಇದೇ ನಿಜವಾದ ಸ್ನೇಹಧರ್ಮವು ಆದ್ದರಿಂದ ಸ್ನೇಹಿತನಿಗೆ ಕಷ್ಟಕಾಲದಲ್ಲಿ ಅನ್ನವನ್ನು ನೀಡದಿರುವವನೂ, ಸ್ನೇಹಿತನಂತೆ ನಟಿಸುವವನೂ ಲೋಭಿಯೂ ಆದ ಪುರುಷನನ್ನೂ ಬಿಟ್ಟು ಯೋಗ್ಯನೂ, ಅನ್ನದಾತನೂ, ಕಷ್ಟಕಾಲದಲ್ಲಿ ಸಹಾಯಮಾಡುವವನೂ ಆದ ಬೇರೊಬ್ಬ ಪುರುಷನನ್ನಾಶ್ರಯಿಸಬೇಕು ಎಂದು ಋಷಿಯು ವರ್ಣಿಸಿರುವನು.

॥ ಸಂಹಿತಾಪಾಠಃ ॥

ಪೃಣೀಯಾದಿನ್ನಾಧಮಾನಾಯ ತವ್ಯಾನ್ದ್ರಾಘೀಯಾಂಸಮನು ಪಶ್ಯೇತ ಪಂಥಾಂ ।

ಓ ಹಿ ವರ್ತಂತೇ ರಥ್ಯೇವ ಚಕ್ರಾನ್ಯಮನ್ಯಮುಪ ತಿಷ್ಠಂತ ರಾಯಃ ॥ ೫ ॥

॥ ಪದಪಾಠಃ ॥

ಪೃಣೀಯಾತ್ । ಇತ್ । ನಾಧಮಾನಾಯ । ತವ್ಯಾನ್ । ದ್ರಾಘೀಯಾಂಸಂ । ಅನು । ಪಶ್ಯೇತ । ಪಂಥಾಂ।

ಓ ಇತಿ । ಹಿ । ವರ್ತಂತೇ । ರಥ್ಯಾಽಇವ । ಚಕ್ರಾ । ಅನ್ಯಂಽಅನ್ಯಂ । ಉಪ । ತಿಷ್ಠಂತೆ । ರಾಯಃ ॥ ೫ ॥

॥ ಸಾಯಣಭಾಷ್ಯಂ ॥

ಧನವಂತಂ ಪುರುಷಂ ದಾನೇ ಪ್ರೇರಯತಿ । ತವ್ಯಾಂಸ್ತವೀಯಾನ್ಧನೈರತಿಶಯೇನ ಪ್ರವೃದ್ಧಃ ಪುರುಷೋ ನಾಧಮಾನಾಯ ಯಾಚಮಾನಾಯಾತಿಥಯೇ ಪೃಣೀಯಾದಿತ್ । ಧನಾನಿ ದದ್ಯಾದೇವ ॥ ಪೃ ಪಾಲನಪೂರಣಯೋಃ ಕ್ರ್ಯಾದಿಃ । ಪ್ವಾದೀನಾಂ ಹ್ರಸ್ವಃ ॥ ಯದಿ ದದ್ಯಾತ್ ದ್ರಾಘೀಯಾಂಸಂ ॥ ದೀರ್ಘತಶಬ್ದಾದೀಯಸುನಿ ಪ್ರಿಯಸ್ಥಿರೇತ್ಯಾದಿನಾ ದ್ರಾಘೀತ್ಯಾದೇಶಃ ॥ ದೀರ್ಘತಮಂ ಪಂಥಾಂ ಪಂಥಾನಂ ಸುಕೃತಮಾರ್ಗಮನು ಪಶ್ಯೇತ । ಅನುಪಶ್ಯೇತ್ ॥ ವ್ಯತ್ಯಯೇನಾತ್ಮನೇಪದಂ । ತತ್ರ ಕಾರಣಮಾಹ । ರಾಯೋ ಧನಾನ್ಯೋ ಹಿ । ಆ ಉ । ಆವರ್ತಂತೇ ಖಲು। ಏಕತ್ರ ನ ತಿಷ್ಠಂತೀತ್ಯರ್ಥಃ। ತತ್ರ ದೃಷ್ಟಾಂತಃ। ರಥ್ಯೇವ ಯಥಾ ರಥ್ಯಾನಿ ॥ ರಥಾದ್ಯತ್ । ಪಾ. ೪-೩-೧೨೧ । ಇತಿ ತಸ್ಯೇದಮಿತ್ಯರ್ಥೇ ಯತ್ ॥ ರಥಸಂಬಂಧೀನಿ ಚಕ್ರಾಣ್ಯುಪರ್ಯಧೋಭಾವೇನಾವರ್ತಂತೇ ತದ್ವದಾವೃತ್ತಿಮೇವ ದರ್ಶಯತಿ । ಅನ್ಯಮನ್ಯಂ ಪುರುಷಂ ಧನಾನ್ಯುಪ ತಿಷ್ಠಂತ । ಉಪತಿಷ್ಠಂತೇ । ಸಮುಪೇತಾನಿ ಭವಂತಿ ॥ ಉಪಾದ್ದೇವಪೂಜಾಸಂಗತಿಕರಣೇತಿ । ಕಾ. ೧-೩-೨೫-೧ । ಆತ್ಮನೇಪದಂ ॥ ತಸ್ಮಾದ್ಧನಾನಿ ದೇಯಾನೀತಿ ಭಾವಃ ॥

॥ ಪ್ರತಿಪದಾರ್ಥ ॥

**ತವ್ಯಾನ್**—ಧನಸಂಪತ್ತಿನಿಂದ ಪ್ರವೃದ್ಧನಾದ ಪುರುಷನು । **ನಾಧಮಾನಾಯ**—ಯಾಚಿಸುತ್ತಿರುವ ಅತಿಥಿಗೆ (ಅಥವಾ ಭಿಕ್ಷುಕನಿಗೆ) । **ಪೃಣೀಯಾತ್ ಇತ್**—ಧನಾದಿಗಳನ್ನು ಕೊಡಲೇಬೇಕು (ಹಾಗೆ ದಾನಮಾಡಿದ್ದೇ ಆದರೆ ಆ ಪುರುಷನು) । **ದ್ರಾಘೀಯಾಂಸಂ**—ದೀರ್ಘವಾದ । **ಪಂಥಾಂ**—ಉತ್ತಮ ಮಾರ್ಗವನ್ನು ಎಂದರೆ ಉತ್ತರೋತ್ತರ ಅಭಿವೃದ್ಧಿಯನ್ನು । **ಅನು ಪಶ್ಯೇತ**—ನೋಡಿಯೇ ನೋಡುವನು (ಏಕೆಂದರೆ) । **ರಾಯಃ**—ಧನಾದಿ ಸಂಪತ್ತುಗಳು । **ರಥ್ಯೇವ ಚಕ್ರಾ**—ರಥದ ಚಕ್ರಗಳಂತೆ । **ಓ ಹಿ ವರ್ತಂತೇ**—ಚಲಿಸುತ್ತಿರುತ್ತವೆ (ಆ ಧನಗಳು) । **ಅನ್ಯಮನ್ಯಂ**—ಒಬ್ಬಪುರುಷನಿಂದ ಮತ್ತೊಬ್ಬನ ಬಳಿಗೆ । **ಉಪ ತಿಷ್ಠಂತೆ**—ಹೋಗಿ ನೆಲಸುತ್ತವೆ.

॥ ಭಾವಾರ್ಥ ॥

ಧನಸಂಪತ್ತಿನಿಂದ ಕೂಡಿದ ಐಶ್ವರ್ಯವಂತನು ತನ್ನನ್ನು ಯಾಚಿಸುತ್ತಿರುವ ಅತಿಥಿಗೆ ಧನಾದಿಗಳನ್ನು ಕೊಡಲೇಬೇಕು. ಹಾಗೆ ಕೊಟ್ಟರೆ ಅವನ ಧನಾದಿಗಳು ಉತ್ತರೋತ್ತರ ಇನ್ನೂ ಅಭಿವೃದ್ಧಿಯನ್ನೈದುವವು. ಏಕೆಂದರೆ ಧನಾದಿಸಂಪತ್ತುಗಳು ರಥಚಕ್ರದಂತೆ ಒಂದೆಡೆ ಸ್ಥಿರವಾಗಿ ನಿಲ್ಲದೆ ಒಬ್ಬಪುರುಷನಿಂದ ಮತ್ತೊಬ್ಬನಲ್ಲಿಗೆ ಹೋಗಿ ಸೇರುತ್ತವೆ.

English Translation.

Let the very rich man satisfy his suitor, let him look forward to a more protracted route, for riches revolve from one man to another, as the wheels of a chariot turn round.

॥ ವಿಶೇಷವಿಷಯಗಳು ॥

ಧನವಂತನಾದವನು ದಾನವನ್ನು ಏತಕ್ಕೆ ಕೊಡಬೇಕು ? ಕೊಡುವುದರಿಂದ ಆಗುವ ಪ್ರಯೋಜನವೇನು ? ಕೊಡದಿದ್ದರೆ ಆಗುವ ನಷ್ಟವೇನು ? ಎಂಬ ವಿಷಯಗಳನ್ನು ಋಷಿಯು ಇಲ್ಲಿ ವಿವರಿಸಿರುವನು. ತಾನು ಐಶ್ವರ್ಯವಂತನಾಗಿ ಅನುಕೂಲಪರಿಸ್ಥಿತಿಯಲ್ಲಿರುವಾಗ ತನ್ನನ್ನು ಯಾಚಿಸುವ ದರಿದ್ರನಾದ ಪುರುಷನಿಗೆ ಅವನ ಕಷ್ಟಪರಿಹಾರಾರ್ಥವಾಗಿ ಧನಾದಿಸಹಾಯವನ್ನು ನೀಡುವುದು ಪ್ರತಿಯೊಬ್ಬ ಮನುಷ್ಯನ ಕರ್ತವ್ಯವಾಗಿದೆ. ಕೊಡುವುದರಿಂದ ಆಗುವ ಪ್ರಯೋಜನವೇನು ಎಂದರೆ ಯೋಗ್ಯರಾದವರಿಗೆ ಧನಾದಿಸಹಾಯವನ್ನು ಮಾಡುವುದರಿಂದ ಧನವಂತನ ಐಶ್ವರ್ಯವು ನಷ್ಟವಾಗುವುದಿಲ್ಲ. ಎಂದರೆ ಕಡಿಮೆಯಾಗುವುದಿಲ್ಲ. ಈಗಿರುವುದಕ್ಕಿಂತಲೂ ಇನ್ನೂ ಅಭಿವೃದ್ಧಿಯಾಗುವುದು. ಅವನು ಇನ್ನೂ ಉತ್ತಮಸ್ಥಿತಿಯನ್ನೇ ಪಡೆಯುವನು. ಒಂದು ವೇಳೆ ಕೊಡದಿದ್ದರೆ ಆಗುವ ನಷ್ಟವೇನು ಎಂದರೆ ಧನಾದಿಸಂಪತ್ತುಗಳು ಶಾಶ್ವತವಲ್ಲ. ಈದಿನ ಇವನಲ್ಲಿರುವ ಸಂಪತ್ತು ನಾಳೆ ಮತ್ತೊಬ್ಬನ ಬಳಿ ಹೋಗಿ ಸೇರುವುದು. ಈದಿನ ಅನುಕೂಲಸ್ಥಿತಿಯಲ್ಲಿರುವ ಪುರುಷನು ನಾಳೆ ಹೀನಸ್ಥಿತಿಗೆ ಬರಬಹುದು. ಹಾಗೆಯೇ ಹೀನಸ್ಥಿತಿಯಲ್ಲಿರುವ ಮನುಷ್ಯನು ಉತ್ತಮಸ್ಥಿತಿಗೆ ಬರಬಹುದು ರಥದ ಚಕ್ರವು ತಿರುಗುವಾಗ ಯಾವರೀತಿ ಕೆಳಗಿನ ಭಾಗವು ಮೇಲಕ್ಕೆಬರುವುದೋ ಮತ್ತು ಆ ಕೂಡಲೇ ಮೇಲಿನ ಭಾಗವು ಯಾವರೀತಿ ಕೆಳಕ್ಕೆ ಬರುವುದೋ ಅದೇರೀತಿ ಧನಸಂಪತ್ತೂ ಸಹ ಒಬ್ಬನಲ್ಲಿಯೇ ಯಾವಾಗಲೂ ನಿಲ್ಲದೆ ಬೇರೆಬೇರೆ ಜನರಲ್ಲಿ ನೆಲಸುತ್ತಿರುವುದು ನಿರ್ಗತಿಕನಾದವನು ಧನವಂತನಾಗುವನು. ಧನವಂತನು ನಿರ್ಗತಿಕನಾಗುವನು. ಆದ್ದರಿಂದ ಅನುಕೂಲಸ್ಥಿತಿಯಲ್ಲಿದ್ದಾಗ ಧನವಂತನು ದರಿದ್ರರಿಗೆ ಧನಸಹಾಯಮಾಡಿ ಪುಣ್ಯವನ್ನೂ, ಶ್ರೇಯಸ್ಸನ್ನೂ ಗಳಿಸುವುದೇ ಒಳ್ಳೆಯದು ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಮೋಘಮನ್ನಂ ವಿಂದತೇ ಅಪ್ರಚೇತಾಃ ಸತ್ಯಂ ಬ್ರವೀಮಿ ವಧ ಇತ್ಸ ತಸ್ಯ ।
ನಾರ್ಯಮಣಂ ಪುಷ್ಯತಿ ನೋ ಸಖಾಯಂ ಕೇವಲಾಘೋ ಭವತಿ ಕೇವಲಾದೀ ॥ ೬ ॥

॥ ಪದಪಾಠಃ ॥

ಮೋಘಂ । ಅನ್ನಂ । ವಿಂದತೇ । ಅಪ್ರಽಚೇತಾಃ । ಸತ್ಯಂ । ಬ್ರವೀಮಿ ವಧಃ । ಇತ್ । ಸಃ । ತಸ್ಯ ।
ನ । ಅರ್ಯಮಣಂ । ಪುಷ್ಯತಿ । ನೋ ಇತಿ । ಸಖಾಯಂ । ಕೇವಲಽಅಘಃ । ಭವತಿ । ಕೇವಲಽಆದೀ ॥

॥ ಸಾಯಣಭಾಷ್ಯಂ ॥

ಅದಾತಾರಂ ದೂಷಯತಿ । ಅಪ್ರಚೇತಾ ಅಪ್ರಕೃಷ್ಟಜ್ಞಾನಃ ದಾನೇ ಚೇತೋ ಮನೋ ಯಸ್ಯ ನ ಭವತಿ ಸ ಮೋಘಂ ವ್ಯರ್ಥಮೇವಾನ್ನಂ ವಿಂದತೇ । ಲಭತೇ ॥ ವಿದ್ಲೃ ಲಾಭೇ ತೌದಾದಿಕಃ । ಶೇ ಮುಚಾದೀನಾಮಿತಿ ನುಮಾಗಮಃ ॥ ಇದಂ ಸತ್ಯಂ ಯಥಾರ್ಥಮೇವೇತಿ ಬ್ರವೀಮಿ । ಋಷಿರಹಂ ವದಾಮಿ । ನ ಕೇವಲಂ ವ್ಯರ್ಥಂ ಕಿಂತು ತಸ್ಯ ಪುರುಷಸ್ಯ ಸ ವಧ ಇದ್ವಧ ಏವಾನ್ನಂ ಪರಾಮೃಶತಃ ॥ ತಚ್ಛಬ್ದಸ್ಯ ವಧಸಾಮಾನಾಧಿಕರಣ್ಯಾತ್ಪುಲ್ಲಿಂಗತಾ । ಯಥಾ ಶೇರಣಾವಿತ್ಯತ್ರ । ಪಾ. ೧-೪-೭೭ । ಯತ್ಕರ್ಮ ಸ ಏವ ಕರ್ತೇತಿ ॥ ಅಥವಾ ಸ ನಿರರ್ಥಕೋ ವಧ ಏವ ಯಃ ಪುರುಷೋಽರ್ಯಮಣಂ । ಉಪಲಕ್ಷಣಮಿದಂ । ಸರ್ವಾನ್ದೇವಾನರ್ಯಮಾದೀನ್ನ ಪುಷ್ಯತಿ ಹವಿಷ್ಪ್ರದಾನೇನ ನ ಪೋಷಯತಿ ನೋ ನಾಪಿ ಸಖಾಯಂ ಸಮಾನಖ್ಯಾನಮಭ್ಯಾಗತಮತಿಥಿಂ ಮಿತ್ರವರ್ಗಂ ಚ ನ ಪೋಷಯತಿ ॥ ಪುಷ ಪುಷ್ಟೌ ದೈವಾದಿಕಃ । ಯಚ್ಛಬ್ದಾಧ್ಯಾಹಾರಾದನಿಘಾತಃ ॥ ಅತ ಏವ ಕೇವಲಾದೀ ॥ ಅದೇಃ ಸುಪ್ಯಜಾತೌ । ಪಾ. ೩-೨-೭೮ । ಇತಿ ಣಿನಿಃ । ಅತ ಉಪಧಾಲಕ್ಷಣಾವೃದ್ಧಿಃ ॥ ಕೇವಲಮಸಾಕ್ಷಿಕಮನ್ನಂ ಭುಂಜಾನಃ ಸ ಕೇವಲಾಘೋ ಭವತಿ । ಕೇವಲಪಾಪವಾನ್ಭವತಿ । ಅಘಮೇವ ಕೇವಲಂ ತಸ್ಯ ಶಿಷ್ಯತೇ । ಐಹಿಕಾಮುಷ್ಮಿಕಮಿತಿ । ತಸ್ಮಾದ್ಯಥಾಕಥಂಚಿದ್ದಾತವ್ಯಮಿತ್ಯಭಿಪ್ರಾಯಃ ॥

॥ ಪ್ರತಿಪದಾರ್ಥ ॥

**ಅಪ್ರಚೇತಾಃ**—ಅನ್ನದಾನದಲ್ಲಿ ಮನಸ್ಸಿಲ್ಲದ ಬುದ್ಧಿಹೀನನಾದ । **ಸಃ**—ಆ ಪುರುಷನು । **ಮೋಘಂ**—ವ್ಯರ್ಥವಾದ । **ಅನ್ನಂ**—ಅನ್ನವನ್ನು । **ವಿಂದತೇ**—ಪಡೆದಿರುತ್ತಾನೆ । **ಸತ್ಯಂ**—ಇದು ಸತ್ಯವೆಂದು । **ಬ್ರವೀಮಿ**—ಹೇಳುತ್ತೇನೆ । **ತಸ್ಯ**—ಆ ಪುರುಷನ (ಅನ್ನವು) । **ಸ ವಧ ಇತ್**—ಅವನಿಗೆ ಮೃತ್ಯು ಪ್ರಾಯವಾಗಿಯೇ ಇರುತ್ತದೆ । **ಯಃ**—ಯಾವ ಪುರುಷನು । **ಅರ್ಯಮಣಂ**—ಅರ್ಯಮಾದಿ ಸಕಲದೇವತೆಗಳನ್ನು । **ನ ಪುಷ್ಯತಿ**—ಹವಿಷ್ಪ್ರದಾನಾದಿಗಳಿಂದ ಪೋಷಿಸುವುದಿಲ್ಲವೋ । **ಸಖಾಯಂ**—ತನ್ನ ಸ್ನೇಹಿತನನ್ನು ಮತ್ತು ಮಿತ್ರವರ್ಗದವರನ್ನು । **ನೋ**—ಅನ್ನದಾನಾದಿಗಳಿಂದ ಪೋಷಿಸುವುದಿಲ್ಲವೋ (ಮತ್ತು)ಯಾವ ಪುರುಷನು । **ಕೇವಲಾದೀ**—ಜತೆಯಲ್ಲಿ ಯಾರುಇಲ್ಲದೆ ತಾನೊಬ್ಬನೇ ಕುಳಿತು ಭೋಜನಮಾಡುವನೋ । (**ಸಃ**—ಆ ಪುರುಷನು) **ಕೇವಲಾಘಃ**—ಬಹಳ ಪಾಪಿಷ್ಠನಾಗುತಾನೆ ।

॥ ಭಾವಾರ್ಥ ॥

ಅನ್ನದಾನಮಾಡುವ ಮನಸ್ಸಿಲ್ಲದ ಪುರುಷನಲ್ಲಿರುವ ಅನ್ನವು ವ್ಯರ್ಥವು. ನಾನು ಇದನ್ನು ಸತ್ಯವಾಗಿ ಹೇಳುತ್ತೇನೆ. ಅಂತಹ ಪುರುಷನಲ್ಲಿರುವ ಅನ್ನವೇ ಅವನಿಗೆ ಮೃತ್ಯುಪ್ರಾಯವಾಗಿರುತ್ತದೆ ಯಾವ ಪುರುಷನು ಅರ್ಯಮಾದಿದೇವತೆಗಳನ್ನು ಹವಿಷ್ಪ್ರದಾನಾದಿಗಳಿಂದ ಸತ್ಕರಿಸಿ ಪೋಷಿಸುವುದಿಲ್ಲವೋ ಯಾವ ಪುರುಷನು ತನ್ನ ಸ್ನೇಹಿತನನ್ನು ಅನ್ನದಾನದಿಂದ ಪೋಷಿಸುವುದಿಲ್ಲವೋ ಯಾವ ಪುರುಷನು ಊಟಮಾಡುವಾಗ ಯಾರನ್ನೂ ಜತೆಯಲ್ಲಿ ಕೂಡಿಸಿ ಕೊಳ್ಳದೆ ತಾನೊಬ್ಬನೇ ಏಕಾಂಗಿಯಾಗಿ ಭೋಜನಮಾಡುವನೋ ಅವನು ಬಹುಪಾಪಿಷ್ಠನಾಗುತ್ತಾನೆ

## English Translation.

The inhospitable man acquires food in vain. I speak the truth—it verily is his death. He cherishes not Aryaman nor a friend; he who eats alone is nothing but a sinner.

### ವಿಶೇಷ ವಿಷಯಗಳು

ಅರ್ಥಕ್ಕನುಸಾರವಾಗಿ ಋಕ್ಕುಗಳಲ್ಲಿ ನಾನಾ ಪ್ರಭೇದಗಳಿರುವವು ಎಂಬ ಪ್ರಕರಣವನ್ನು ವಿವರಿಸುವಾಗ ಯಾಸ್ಕರು ನಿಂದೆಯನ್ನು ನಿರ್ದೇಶಿಸುವ ಋಕ್ಕಿನ ಉದಾಹಣೆಗಾಗಿ ಈ ಋಕ್ಕಿನ **ಕೇವಲಾಘೋ ಭವತಿ ಕೇವಲಾದೀ** ಎಂಬ ವಾಕ್ಯದ ನಿರ್ವಚನವನ್ನು ಹೇಳಿದಾರೆ. (ನಿ ೭-೩) ಭೋಜನಮಾಡುವಾಗ ಅತಿಥಿ ಅಭ್ಯಾಗತರನ್ನು ಸ್ವಾಗತಿಸಿ ಸತ್ಕರಿಸಿ ಅವರು ಭೋಜನ ಮಾಡಿದನಂತರ ತಾನು ಭೋಜನ ಮಾಡಬೇಕೆಂದು ಗೃಹಸ್ಥನಿಯಮವಿರುವುದು. ಇಲ್ಲಿ ಅತಿಥಿ ಎಂದರೆ ಕ್ಷುದ್ಬಾಧೆಯಿಂದ ಬಳಲಿರುವ ಯಾವ ಮನುಷ್ಯನಾಗಲಿ, ಪ್ರಾಣಿಯಾಗಲೀ ಆಗಬಹುದು ಅನ್ನ ದಾನಕ್ಕೆ ಸ್ತ್ರೀಪುರುಷರೆಂಬ ಭೇದವಾಗಲಿ ಬ್ರಾಹ್ಮಣಾದಿ ಜಾತಿಭೇದವಾಗಲಿ, ಯಾವುದೂ ಇಲ್ಲ. ಕ್ಷುಧಾರ್ತನಾದ ಯಾವ ಪುರುಷನಾಗಲಿ, ಪ್ರಾಣಿಯಾಗಲಿ ಅನ್ನದಾನಕ್ಕೆ ಅರ್ಹನು ಎಂದು ಪುರಾಣಾದಿಗಳಲ್ಲಿಯೂ ಹೇಳಿರುವುದಲ್ಲದೆ ದಾನಗಳಲ್ಲೆಲ್ಲಾ ಅನ್ನದಾನವೇ ಶ್ರೇಷ್ಠವೆಂದೂ ಹೇಳಿದೆ. ಆದ್ದರಿಂದ ಭೋಜನಮಾಡುವಾಗ ತಾನೊಬ್ಬನೇ ಕುಳಿತು ಭೋಜನಮಾಡಬಾರದೆಂದೂ ಹಾಗೆ ಮಾಡಿದರೆ ಮಹಾಪಾಪವು ಸಂಭವಿಸುವುದೆಂದೂ ಋಷಿಯು ಈ ಋಕ್ಕಿನಲ್ಲಿ ವಿವರಿಸಿದಾನೆ.

॥ ಸಂಹಿತಾಪಾಠಃ ॥

ಕೃಷನ್ನಿತ್ಫಾಲ ಆಶಿತಂ ಕೃಣೋತಿ ಯನ್ನಧ್ವಾನಮಪ ವೃಂಕ್ತೇ ಚರಿತ್ರೈಃ ।
ವದನ್ಬ್ರಹ್ಮಾವದತೋ ವನೀಯಾನ್ಪೃಣನ್ನಾಪಿರಪೃಣಂತಮಭಿ ಷ್ಯಾತ್ ॥೭॥

॥ ಪದಪಾಠಃ ॥

ಕೃಷನ್ । ಇತ್ । ಫಾಲಃ । ಆಶಿತಂ । ಕೃಣೋತಿ । ಯನ್ । ಅಧ್ವಾನಂ । ಅಪ । ವೃಂಕ್ತೇ । ಚರಿತ್ರೈಃ ।
ವದನ್ । ಬ್ರಹ್ಮಾ । ಅವದತಃ । ವನೀಯಾನ್ । ಪೃಣನ್ । ಆಪಿಃ । ಅಪೃಣಂತಂ । ಅಭಿ । ಸ್ಯಾತ್ ॥ ೭ ॥

॥ ಸಾಯಣಭಾಷ್ಯಂ ॥

**ಕೃಷನ್ ಕೃಷಿಂ ಕುರ್ವನ್ಫಾಲ ಆಶಿತಂ ಕರ್ಷಕಂ ಭೋಕ್ತಾರಂ ಕೃಣೋತಿ । ಕರೋತಿ । ಕಥಾ- ಧ್ವಾನಂ ಮಾರ್ಗಂ ಯನ್ ॥ ಇಣಃ ಶತರಿ ನುಮಾಗಮಃ ॥ ಗಚ್ಛನ್ಪುರುಷಶ್ಚರಿತ್ರೈರಾತ್ಮೀಯೈರ್ಗಮನೈರಪ ವೃಂಕ್ತೇ । ಸ್ವಾಮಿನೋ ಧನಮಾವರ್ಜಯತಿ ॥ ವೃಜೀ ವರ್ಜನೇ ಆದಾದಿಕಃ । ಅನುದಾತ್ತೇತ್ ॥**

ವದಞ್ಛಾಸ್ತ್ರಾರ್ಥಂ ಬ್ರುವಾಣೋ ಬ್ರಹ್ಮಾ ಬ್ರಾಹ್ಮಣೋಽವದತಃ ಶಾಸ್ತ್ರಾರ್ಥಮಬ್ರುವಾಣಾಜ್ಜ್ಞಾನಾದ್ವನೀ-ಯಾನ್ । ಸಂಭಕ್ತೃತಮಃ ಪ್ರಿಯಕರೋ ಭವತಿ ॥ ವನತೇಸ್ತೃಜಂತಸ್ಯೇಯಸುನಿ ತುರಿಷ್ಠೇಮೇಯಃಸ್ವಿತಿ ತೃಚೋ ಲೋಪಃ ॥ ತೇ ಯಥಾ ಸ್ವಕರ್ಮಣಿ ಪ್ರವರ್ತಮಾನಾಃ ಪರೇಷಾಮುಪಕಾರಕಾಃ ತಥಾ ಪೃಣನ್ ದಾತಾ ಪುರುಷೋಽಪೃಣಂತಮದಾತಾರಂ ಜನಮಭ್ಯಭಿಲಕ್ಷ್ಯಾಪಿಃ ಸ್ಯಾತ್ । ಬಂಧುರ್ಭವೇತ್ ॥

॥ ಪ್ರತಿಪದಾರ್ಥ ॥

**ಕೃಷನ್**—ಕೃಷಿಯನ್ನು (ವ್ಯವಸಾಯ) ಮಾಡುವ ಎಂದರೆ ಭೂಮಿಯನ್ನು ಉಳುವ । **ಫಾಲಃ**—ನೇಗಿಲು । **ಆಶಿತಂ**—ಕೃಷಿಮಾಡುವ ರೈತನು ಅನ್ನವನ್ನು ತಿನ್ನುವಂತೆ । **ಕೃಣೋತಿ**—ಮಾಡುತ್ತದೆ (ಹಾಗೆಯೇ) । **ಅಧ್ವಾನಂ**—ಮಾರ್ಗವನ್ನು । **ಯನ್**—ಅತಿಕ್ರಮಿಸಿ ನಡೆಯುವ ಪುರುಷನು । **ಚರಿತ್ರೈಃ**—ತನ್ನ ಸಂಚಾರ ದಿಂದ । **ಅಪ ವೃಂಕ್ತೇ**—ತನ್ನ ಯಜಮಾನನಿಗೆ ಧನವನ್ನು ಸಂಪಾದಿಸಿ ಕೊಡುತ್ತಾನೆ । **ವದನ್**—ಶಾಸ್ತ್ರಾರ್ಥ ವನ್ನು (ವೇದಾರ್ಥವನ್ನು) ತಿಳಿದು ಹೇಳುವ । **ಬ್ರಹ್ಮಾ**—ಬ್ರಾಹ್ಮಣನು । **ಅವದತಃ**—ಶಾಸ್ತ್ರಾರ್ಥವನ್ನು (ವೇದಾರ್ಥವನ್ನು) ತಿಳಿಯದಿರುವ ಬ್ರಾಹ್ಮಣನಿಗಿಂತಲೂ । **ವನೀಯಾನ್**—ಶ್ರೇಷ್ಠನೆನಿಸುವನು । **ಪೃಣನ್**—ದಾತೃವು ಎಂದರೆ ಪರೋಪಕಾರಮಾಡುವವನು । **ಅಪೃಣಂತಂ ಅಭಿ**—ದಾನಮಾಡದಿರುವ ಲೋಭಿಯನ್ನು ಎಂದರೆ ಲೋಭಿಗೆ । **ಆಪಿಃ ಸ್ಯಾತ್**—ಬಂಧುವಾಗಲಿ.

॥ ಭಾವಾರ್ಥ ॥

ಕೃಷಿಮಾಡುವ ರೈತನಿಗೆ ಅವನ ನೇಗಿಲು ಆಹಾರವನ್ನು ಒದಗಿಸುತ್ತದೆ. ಯಜಮಾನನ ಕಾರ್ಯಾರ್ಥವಾಗಿ ಸಂಚರಿಸುವ ಭೃತ್ಯನು ತನ್ನ ಒಡೆಯನ ಧನಾರ್ಜನೆಗೆ ಸಹಾಯಕನಾಗುತ್ತಾನೆ. ವೇದಾರ್ಥವನ್ನು ತಿಳಿದು ಅದನ್ನು ಇತರರಿಗೆ ಹೇಳುವ ಬ್ರಾಹ್ಮಣನು ವೇದಾರ್ಥವನ್ನು ತಿಳಿಯದಿರುವ ಬ್ರಾಹ್ಮಣನಿಗಿಂತ ಶ್ರೇಷ್ಠನು. ಪರೋಪಕಾರಿಯಾದ ದಾತೃವು ದಾನಮಾಡದಿರುವ ಲೋಭಿಗೆ ಬಂಧುವಾಗಲಿ ಎಂದರೆ ದಾನಮಾಡದ ಲೋಭಿಯು ದಾನಮಾಡುವ ದಾತೃವಿನ ಗುಣವನ್ನು ಪಡೆದು ಅವನನ್ನು ಸರಿಸಲಿ.

## English Translation

The ploughshare furrowing (the field) provides food (for the ploughman); a man travelling along a road aquires (wealth for his master) by his movements; a Brahman expounding (the Veda) is better than one not expounding it; (so) let the man who gives become a kinsman to the man who gives not.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಹೇಳಿರುವ ವಿಷಯಗಳು ದಾನಮಾಡದ ಲೋಭಿಗಿಂತಲೂ ದಾನಮಾಡುವ ದಾತನು ಶ್ರೇಷ್ಠ ನೆಂದೂ ಲೋಭಿಯು ದಾತನ ಗುಣವರ್ತಿಯಾಗಿ ಅವನಂತೆ ತಾನೂ ಪರೋಪಕಾರಮಾಡಲೆಂದೂ ಕೆಲವು ದೃಷ್ಟಾಂತ

ಗಳಿಂದ ಋಷಿಯು ವರ್ಣಿಸಿದಾನೆ. ಆದರೆ ಆ ದೃಷ್ಟಾಂತಗಳು ಅಥವಾ ಉಪಮಾನಗಳು ಸಂದರ್ಭಕ್ಕೆ ಅನುಸಾರ ವಾಗಿಲ್ಲ. ಆದರೂ ಕೆಟ್ಟ ವಸ್ತುವಿಗಿಂತ ಒಳ್ಳೆಯ ವಸ್ತುವು ಶ್ರೇಷ್ಠವು ಎಂಬ ಒಂದು ವಿಧವಾದ ನೀತಿಯನ್ನು ನಿರ್ದೇಶಿಸುವುದಾಗಿದೆ.

ಕೃಷಿಯನ್ನು ಮಾಡುವವನಿಗೆ ಕೃಷಿಸಾಧನವಾದ ನೇಗಿಲು ಆಹಾರವನ್ನು ಒದಗಿಸಿಕೊಡುತ್ತದೆ ಇದು ಲೋಕ ಪ್ರಸಿದ್ಧವು. ಕೃಷಿಮಾಡದ ಸೋಮಾರಿಯಾದವನು ಆಹಾರವಿಲ್ಲದೆ ಕಷ್ಟಪಡುವನು. ಆದ್ದರಿಂದ ಕೃಷಿಮಾಡುವವನು ಕೃಷಿ ಮಾಡದವನಿಗಿಂತ ಶ್ರೇಷ್ಠನು. ಅದರಂತೆ ದಾನಮಾಡುವವನು ದಾನಮಾಡದ ಲೋಭಿಗಿಂತ ಶ್ರೇಷ್ಠನು.

ಯಜಮಾನನ ಕಾರ್ಯಕ್ಕಾಗಿ ಹೋಗಬೇಕಾದ ಸ್ಥಳಕ್ಕೆ ಹೋಗಿ ಅವನಿಗಾಗಿ ದುಡಿಯುವವನು ಯಜಮಾನನ ಅಭಿವೃದ್ಧಿಗೆ ಕಾರಣವಾಗುವನು ಎಂದರೆ ಕಷ್ಟಪಡುವವನಿಗೆ ಅದರ ಫಲವು ದೊರೆಯುವುದು. ಕಷ್ಟಪಟ್ಟು ಕೆಲಸಮಾಡದವನಿಗೆ ಯಾವ ಲಾಭವೂ ಉಂಟಾಗುವುದಿಲ್ಲ. ಆದ್ದರಿಂದ ಕಷ್ಟಪಟ್ಟು ಕೆಲಸಮಾಡುವ ಪುರುಷನು ಕೆಲಸಮಾಡದ ಸೋಮಾರಿಗಿಂತ ಶ್ರೇಷ್ಠನು. ಅದರಂತೆ ದಾನಮಾಡುವ ಪುರುಷನು ದಾನಮಾಡದ ಲೋಭಿಗಿಂತ ಶ್ರೇಷ್ಠನು.

ವೇದಗಳ ಮತ್ತು ಶಾಸ್ತ್ರಗಳ ಅರ್ಥವನ್ನು ತಿಳಿದು ಹೇಳುವ ಸಾಮರ್ಥ್ಯವುಳ್ಳ ಬ್ರಾಹ್ಮಣನು ಏನನ್ನೂ ತಿಳಿಯದಿರುವ ಎಂದರೆ ಅವಿದ್ಯಾವಂತನಾದ ಪುರುಷನಿಗಿಂತ ಶ್ರೇಷ್ಠನು ಅದರಂತೆ ದಾನಮಾಡುವ ದಾತೃವು ದಾನಮಾಡದ ಲೋಭಿಗಿಂತ ಶ್ರೇಷ್ಠನು.

ಆದ್ದರಿಂದ ದಾನಮಾಡುವ ದಾತೃವು ದಾನಮಾಡದ ಲೋಭಿಗೆ ಬಂಧುವಾಗಲಿ ಎಂದರೆ ದಾನಮಾಡುವವನ ಒಳ್ಳೆಯ ಗುಣಗಳು ಲೋಭಿಗೂ ಬಂದು ಅವನೂ ಇತರರಿಗೆ ದಾನಾದಿಗಳನ್ನು ಕೊಟ್ಟು ಸಹಾಯಮಾಡಿ ಪರೋಪಕಾರನಿರತನಾಗುವಂತೆ ಆಗಲಿ ಎಂದು ಋಷಿಯು ಆಶ್ವಾಸನೆಯನ್ನು ವ್ಯಕ್ತಪಡಿಸಿದಾನೆ.

॥ ಸಂಹಿತಾಪಾಠಃ ॥

ಏಕಪಾದ್ಭೂಯೋ ದ್ವಿಪದೋ ವಿ ಚಕ್ರಮೇ ದ್ವಿಪಾತ್ತ್ರಿಪಾದಮಭ್ಯೇತಿ ಪಶ್ಚಾತ್ ।
ಚತುಷ್ಪಾದೇತಿ ದ್ವಿಪದಾಮಭಿಸ್ವರೇ ಸಂಪಶ್ಯನ್ಪಂಕ್ತೀರುಪತಿಷ್ಠಮಾನಃ ॥ ೮ ॥

॥ ಪದಪಾಠಃ ॥

ಏಕಽಪಾತ್ । ಭೂಯಃ । ದ್ವಿಽಪದಃ । ವಿ । ಚಕ್ರಮೇ । ದ್ವಿಽಪಾತ್ । ತ್ರಿಽಪಾದಂ । ಅಭಿ । ಏತಿ । ಪಶ್ಚಾತ್ ।
ಚತುಃಽಪಾತ್ । ಏತಿ । ದ್ವಿಽಪದಾಂ । ಅಭಿಽಸ್ವರೇ । ಸಂಽಪಶ್ಯನ್ । ಪಂಕ್ತೀಃ । ಉಪಽತಿಷ್ಠಮಾನಃ ॥ ೮ ॥

॥ ಸಾಯಣಭಾಷ್ಯಂ ॥

ಅತ್ರ ಪಾದಶಬ್ದೋ ಭಾಗವಚನಃ । ಏಕಪಾದೇಕಭಾಗಧನಃ ಪುರುಷೋ ದ್ವಿಪದೋ ದ್ವಿಗುಣಧನಸ್ಯ ಮಾರ್ಗಂ ಭೂಯಃ ॥ ತೃತೀಯಾಯಾಃ ಸುಃ ॥ ಭೂಯಸಾ ಕಾಲೇನ ವಿ ಚಕ್ರಮೇ । ವಿವಿಧಂ ಗಚ್ಛತಿ ॥ ವೇಃ ಪಾದವಿಹರಣೇ । ಪಾ. ೧-೩-೪೧ । ಇತ್ಯಾತ್ಮನೇಪದಂ ॥ ತಥಾ ದ್ವಿಪಾತ್ಪುರುಷಸ್ತ್ರಿಪಾದಂ ತ್ರಿಭಾಗಧನಂ ಪುರುಷಂ ಪಶ್ಚಾದಭ್ಯೇತಿ । ಅಭಿಗಚ್ಛತಿ । ಚತುಷ್ಪಾಚ್ಚತುರ್ಭಾಗಧನಸ್ತು ದ್ವಿಪದಾಂ । ಬಹುವಚನಾದೇಕಪಾದಾದಯ ಉಪಲಕ್ಷ್ಯಂತೇ । ಏಕಪಾದಧನಾದೀನಾಂ ಪಂಕ್ತೀರಭಿಸ್ವರೇಽಭಿಗಮನೇ ಸಂಪಶ್ಯನ್ ಸಮ್ಯಗೀಕ್ಷಮಾಣಃ ಸನ್ನುಪತಿಷ್ಠಮಾನ ಏತಿ । ಗಚ್ಛಮಾನೋ ಭವತಿ । ಅನ್ಯೋನ್ಯಾಪೇಕ್ಷಯಾ ಸರ್ವ ಉತ್ತಮಾಧಮಾಃ । ತಸ್ಮಾತ್ತ್ವಮಹಮೇವ ಧನವಾನಿತಿ ನ ಮನ್ಯೇಥಾಃ ಕಿಂತ್ವತಿಥಿಭ್ಯೋ ಧನಾನಿ ದದಸ್ವೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಏಕಪಾತ್**—ಒಂದು ಪಾದ (ಕಾಲು) ಮಾತ್ರವಿರುವವನು । **ದ್ವಿಪದಃ**—(ಮಾರ್ಗಾತಿಕ್ರಮಣಗಳಲ್ಲಿ ಎಂದರೆ ನಡೆಯುವಾಗ) ಎರಡು ಪಾದಗಳಿರುವ ಪುರುಷನಿಗಿಂತ । **ಭೂಯಃ**—ಹೆಚ್ಚುಕಾಲವನ್ನು । **ವಿ ಚಕ್ರಮೇ**—ನಡೆಯುತ್ತಾನೆ (ಹಾಗೆಯೇ) । **ದ್ವಿಪಾತ್**—ಎರಡು ಪಾದಗಳಿರುವವನು । **ತ್ರಿಪಾದಂ**—ಮೂರು ಪಾದಗಳಿರುವವನನ್ನು । **ಪಶ್ಚಾತ್**—ಅನಂತರ ಎಂದರೆ ಇನ್ನೂ ನಿಧಾನವಾಗಿ । **ಅಭಿ ಏತಿ**—ಸಮೀಪಿಸುವನು **ಚತುಷ್ಪಾತ್**—ನಾಲ್ಕು ಪಾದಗಳುಳ್ಳವನು । **ಅಭಿಸ್ವರೇ**—ಸಂಚಾರಕಾಲದಲ್ಲಿ । **ದ್ವಿಪದಾಂ**—ಒಂದು ಮತ್ತು ಎರಡು ಪಾದಗಳಿರುವವರನ್ನೂ । **ಸಂಪಶ್ಯನ್**—ನೋಡುತ್ತಾ ಎಂದರೆ ಸಮೀಪಿಸುತ್ತಾ । **ಉಪತಿಷ್ಠಮಾನಃ**—ಅವರನ್ನು ಅತಿಕ್ರಮಿಸಿ । **ಏತಿ**—ಮುಂದುವರೆದು ಹೋಗುತ್ತಾನೆ.

॥ ಭಾವಾರ್ಥ ॥

ಮಾರ್ಗಾತಿಕ್ರಮಣದಲ್ಲಿ ಎಂದರೆ ನಡೆಯುವಾಗ ಒಂದುಪಾದಮಾತ್ರವಿರುವವನು ಎರಡುಪಾದವಿರುವವನ ಸಮಕ್ಕೆ ನಡೆಯಲಾರದೆ ನಿರ್ದಿಷ್ಟಸ್ಥಾನಕ್ಕೆ ಸೇರಬೇಕಾದರೆ ಹೆಚ್ಚು ಕಾಲಾವಕಾಶವನ್ನು ಅಪೇಕ್ಷಿಸುತ್ತಾನೆ. ಅದರಂತೆ ಎರಡುಪಾದವುಳ್ಳವನಿಗೆ ಮೂರುಪಾದಗಳಿರುವವನಿಗಿಂತ ಹೆಚ್ಚುಕಾಲ ಬೇಕಾಗುತ್ತದೆ. ಆದರೆ ನಾಲ್ಕುಪಾದಗಳಿರುವವನು ಒಂದು, ಎರಡು ಮೂರು ಪಾದಗಳಿರುವವರನ್ನು ಹಿಂದಕ್ಕೆ ಹಾಕಿ ಸಂಚಾರದಲ್ಲಿ ಎಲ್ಲರಿಗಿಂತಲೂ ಮುಂದುವರೆಯುವನು.

## English Translation.

He who has but one foot takes a longer time on a journey than he who has two ; he who has two feet comes after him who has three; he who has four feet comes up overtaking two-footed (and three-fooied), beholding

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಸಹ ಹಿಂದಿನ ಋಕ್ಕಿನಲ್ಲಿ ಹೇಳಿದಂತೆ ದೃಷ್ಟಾಂತಗಳ ಮೂಲಕ ದಾತನಿಗೂ ಲೋಭಿಗೂ ಇರುವ ವ್ಯತ್ಯಾಸವನ್ನು ಋಷಿಯು ವರ್ಣಿಸಿದಾನೆ ಇಲ್ಲಿ ಪಾದಶಬ್ದಕ್ಕೆ ಭಾಗ ವೆಂದು ಸಾಯಣರು ಅರ್ಥವಿವರಣೆಮಾಡಿದಾರೆ. ಅದರಂತೆ ಎರಡು ಪಾಲು ಧನವಿರುವವನು ಒಂದು ಪಾಲು ಧನವಿರು ವವನಿಗಿಂತ ಶ್ರೇಷ್ಠನು ಅಥವಾ ಎರಡುಭಾಗ ದಾನಮಾಡುವವನು ಒಂದುಭಾಗ ದಾನಮಾಡುವ ಪುರುಷನಿಗಿಂತ ಶ್ರೇಷ್ಠನು ಅದರಂತೆ ಮೂರುಭಾಗ ದಾನಮಾಡುವವನು ಎರಡುಭಾಗ ದಾನಮಾಡುವವನಿಗಿಂತ ಶ್ರೇಷ್ಠನು. ನಾಲು ಪಾಲು ದಾನಮಾಡುವವನು ಇವರೆಲ್ಲರನ್ನೂ ಮೀರಿ ಮುಂದುವರೆಯುತ್ತಾನೆ ಎಂದರೆ ಎಲ್ಲರಿಗಿಂತಲೂ ಶ್ರೇಷ್ಠನು ಎಂದರ್ಥವು.

॥ ಸಂಹಿತಾಪಾಠಃ ॥

ಸಮೌ ಚಿದ್ಧಸ್ತೌ ನ ಸಮಂ ವಿವಿಷ್ಟಃ ಸಂಮಾತರಾ ಚಿನ್ನ ಸಮಂ ದುಹಾತೇ ।
ಯಮಯೋಶ್ಚಿನ್ನ ಸಮಾ ವೀರ್ಯಾಣಿ ಜ್ಞಾತೀ ಚಿತ್ಸಂತೌ ನ ಸಮಂ
ಪೃಣೀತಃ ॥ ೯ ॥

॥ ಪದಪಾಠಃ ॥

ಸಮೌ । ಚಿತ್ । ಹಸ್ತೌ । ನ । ಸಮಂ । ವಿವಿಷ್ಟಃ । ಸಂऽಮಾತರಾ । ಚಿತ್ । ನ । ಸಮಂ । ದುಹಾತೇ ಇತಿ ।
ಯಮಯೋಃ । ಚಿತ್ । ನ । ಸಮಾ । ವೀರ್ಯಾಣಿ । ಜ್ಞಾತೀ ಇತಿ । ಚಿತ್ । ಸಂತೌ । ನ । ಸಮಂ ।
ಪೃಣೀತಃ ॥ ೯ ॥

॥ ಸಾಯಣಭಾಷ್ಯಂ ॥

ಅತಿಥಿಭ್ಯೋ ಧನಮಪ್ರಯಚ್ಛನ್ನಪಿ ಮಮ ಭ್ರಾತಾ ದಾಸ್ಯತೀತಿ ಚೇತ್ ತತ್ರ ಹೇತುಮಾಹ । ಸಮೌ ಚಿದ್ಧಸ್ತೌ ಸಮಾವಪಿ ಸಮಂ ಸಮಾನಂ ನ ವಿವಿಷ್ಟಃ । ಕಾರ್ಯಂ ನ ವ್ಯಾಪ್ನುತಃ ॥ ವಿಷ್ಲೃ ವ್ಯಾಪ್ತೌ ಜೌಹೋತ್ಯಾದಿಕಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದಭ್ಯಾಸಸ್ಯ ಗುಣಾಭಾವಃ ॥ ತಥಾ ಸಂಮಾತರಾ ವತ್ಸಸ್ಯ ಮಾತರೌ ಧೇನೂ ಸಮೇ ಅಪಿ ಸಮಂ ಸಮಾನಂ ಪಯೋ ನ ದುಹಾತೇ । ಯಮ. ಯೋಶ್ಚಿತ್ ಸಹಜಾತಯೋಃ ಪುತ್ರಯೋರಪಿ ಸಮಾ ಸಮಾನಿ ವೀರ್ಯಾಣಿ ನ ಸಂತಿ । ತಸ್ಮಾಜ್ಜ್ಞಾತೀ ಚಿದೇಕಸ್ಮಿನ್ಕುಲೇ ಸಂತೌ ಜಾತಾವಪಿ ಸಮಂ ನ ಪೃಣೀತಃ । ನ ಪ್ರಯಚ್ಛತಃ । ತಸ್ಮಾದ್ಯಸ್ಯ ಧನಮಸ್ತಿ ಸ ಏವ ದದ್ಯಾದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಹಸ್ತೌ**—ಎರಡು ಕೈಗಳು | **ಸಮೌ ಚಿತ್**—(ಆಕಾರದಲ್ಲಿಯೂ ರೂಪದಲ್ಲಿಯೂ) ಒಂದೇ ಸಮನಾಗಿದ್ದರೂ | **ಸಮಂ**—ಒಂದೇ ಸಮನಾದ ಕಾರ್ಯವನ್ನು | **ನ ವಿವಿಷ್ಟಃ**—ಮಾಡುವುದಿಲ್ಲ | **ಸಂ ಮಾತರಾ ಚಿತ್**—ಕರುಗಳ ಮಾತೆಯಾದ ಎರಡು ಗೋವುಗಳು ಒಂದೇ ವಿಧವಾಗಿದ್ದರೂ | **ಸಮಂ**—ಸಮಾನವಾಗಿ | **ನ ದುಹಾತೇ**—ಹಾಲು ಕರೆಯುವುದಿಲ್ಲ | **ಯಮಯೋಶ್ಚಿತ್**—ಒಂದೇ ಕಾಲದಲ್ಲಿ ಒಂದೇ ಮಾತೃವಿನಲ್ಲಿ ಹುಟ್ಟಿದ ಅವಳಿ ಮಕ್ಕಳಲ್ಲಿಯೂ | **ಸಮಾ**—ಸಮಾನವಾದ | **ವೀರ್ಯಾಣಿ (ನ)**—ಶಕ್ತಿಸಾಮರ್ಥ್ಯಗಳಿರುವುದಿಲ್ಲ (ಅದರಂತೆ) | **ಜ್ಞಾತೀ ಚಿತ್ ಸಂತೌ**—ಒಂದೇ ಕುಲದಲ್ಲಿ ಎಂದರೆ ಒಂದೇ ಮನೆಯಲ್ಲಿ ಅಥವಾ ತಂದೆತಾಯಿಗಳಿಂದ ಹುಟ್ಟಿದ ಬಂಧುಗಳು ಅಥವಾ ಸಹೋದರರು | **ಸಮಂ**—ಒಂದೇ ಸಮನಾಗಿ | **ನ ಪೃಣೀತಃ**—ದಾನಮಾಡುವುದಿಲ್ಲ.

॥ ಭಾವಾರ್ಥ ॥

ಎರಡು ಕೈಗಳು ಒಂದೇ ಸಮನಾಗಿದ್ದರೂ ಅವುಗಳ ಕೆಲಸಕಾರ್ಯಗಳು ಒಂದೇ ಸಮನಾಗಿರುವುದಿಲ್ಲ; ಕರುಗಳನ್ನು ಹಾಕಿದ ಹಸುಗಳು ಒಂದೇ ಸಮವಾಗಿದ್ದರೂ ಎರಡೂ ಒಂದೇ ಸಮನಾಗಿ ಹಾಲನ್ನು ಕೊಡುವುದಿಲ್ಲ; ಅವಳೀ ಮಕ್ಕಳಲ್ಲಿ ಒಂದೇ ವಿಧವಾದ ಶಕ್ತಿಸಾಮರ್ಥ್ಯಗಳಿರುವುದಿಲ್ಲ, ಒಂದೇ ಕುಲದಲ್ಲಿ ಅಥವಾ ಹುಟ್ಟಿದ ಬಂಧುಗಳು ದಾನಮಾಡುವುದರಲ್ಲಿ ಒಂದೇ ಸಮನಾಗಿರುವುದಿಲ್ಲ.

## English Translation.

The two hands are alike, but they do not perform the same work; two cows calving at the same time do not yield the same milk; two twins have not the same strength; two persons of the same family do not display equal liberality.

॥ ವಿಶೇಷವಿಷಯಗಳು ॥

ಮನುಷ್ಯನಿಗೆ ಎರಡು ಕೈಗಳಿರುವವು. ಅವು ನೋಡುವುದಕ್ಕೆ ಆಕಾರದಲ್ಲಿಯೂ ರೂಪದಲ್ಲಿಯೂ ಒಂದೇ ಸಮನಾಗಿರುವವು. ಆದರೆ ಕೆಲಸಕಾರ್ಯಗಳಲ್ಲಿ ಅವಕ್ಕೆ ಸಮವಾದ ಶಕ್ತಿ ಇರುವುದಿಲ್ಲ. ಬಲಗೈಗೆ ಇರುವ ಶಕ್ತಿಯು ಎಡಗೈಗೆ ಇರುವುದಿಲ್ಲ.

ಸಮಾನ ಆಕಾರವುಳ್ಳ ಸಮಾನವಯಸ್ಸಿನ ಎರಡು ಹಸುಗಳು ಹಾಲನ್ನು ಸಮನಾಗಿ ಕೊಡುವುದಿಲ್ಲ. ಒಂದು ಹಸುವು ಹೆಚ್ಚಾಗಿ ಹಾಲನ್ನು ಕೊಡುವುದು, ಇನ್ನೊಂದು ಸ್ವಲ್ಪಮಾತ್ರ ಕೊಡುವುದು ನೋಡುವುದಕ್ಕೆ ವ್ಯತ್ಯಾಸ ಕಾಣದಿದ್ದರೂ ಹಸುಗಳು ಅವುಗಳ ಪ್ರಕೃತಿಗನುಸಾರವಾಗಿ ಹಾಲನ್ನು ಕೊಡುವವು.

ಒಂದೇ ತಾಯಿಯಲ್ಲಿ ಹುಟ್ಟಿದ ಅವಳೀ ಮಕ್ಕಳು ನೋಡುವುದಕ್ಕೆ ಆಕಾರದಲ್ಲಿಯೂ ರೂಪದಲ್ಲಿಯೂ ಏನೂ ವ್ಯತ್ಯಾಸವಿಲ್ಲದೆ ಸಮನಾಗಿರುವವು. ಆದರೆ ಅವುಗಳ ಶಕ್ತಿಸಾಮರ್ಥ್ಯಗಳಲ್ಲಿಯೂ ಬುದ್ಧಿಯಲ್ಲಿಯೂ ವ್ಯತ್ಯಾಸವು ಕಂಡುಬರುವುದು.

ಅದರಂತೆ ಒಂದು ಮನೆಯಲ್ಲಿ ಸಮಾನ ತಂದೆತಾಯಿಗಳಿಗೆ ಜನಿಸಿದ ಪುತ್ರರಲ್ಲಿಯೂ ಇತರ ಬಂಧುಬಾಂಧವರಲ್ಲಿಯೂ ಒಂದೇ ವಿಧ ಗುಣವು ಕಂಡುಬರುವುದಿಲ್ಲ. ಸಹೋದರರಲ್ಲಿಯೂ ಹಾಗೆಯೇ. ಒಬ್ಬನು ಉದಾರಿಯಾದ ದಾನಿಯಾಗಿರುವನು, ಮತ್ತೊಬ್ಬನು ಜಿಪುಣನೂ ಲೋಭಿಯೂ ಆಗಿರುವನು.

ಶೌನಕಮಹರ್ಷಿಪ್ರೋಕ್ತವಾದ ಋಗ್ವಿಧಾನವೆಂಬ ಗ್ರಂಥದಲ್ಲಿ ಈ ಸೂಕ್ತದ ವಿನಿಯೋಗವಿಷಯದಲ್ಲಿ ಈ ರೀತಿ ಹೇಳಿದೆ—

ನ ವಾ ಉ ದೇವಾ ಇತ್ಯೇತಜ್ಜಪೇತ ನಿಯತವ್ರತಃ ।
ಅನ್ನಂ ವಿಂದತಿ ಸರ್ವತ್ರ ಯತ್ರ ಯತ್ರೋಪತಿಷ್ಠತಿ ॥
ಪಾಪ್ಮೋಪಹತಮಾತ್ಮಾನಂ ಯೋ ಮನ್ಯೇತ ವಿಚಕ್ಷಣಃ ।
ಸ ಜಪೇನ್ನಿಯತೋ ಭೂತ್ವಾ ಲಘು ಮನ್ಯೇತ ಪಾಪ್ಮನಾ ।
ವಾಚಂ ಪ್ರಪದ್ಯೇದ್ವಾಕ್ಕಾಮೋ ಜುಹ್ವದಾಶು ಜಪನ್ನಿಮಾಃ ॥

(ಋಗ್ವಿಧಾನ. ಅಧ್ಯಾಯ. ೪. ಶ್ಲೋ ೧೬-೧೮)

ಕ್ಷುಧಾರ್ತನಾದ ಪುರುಷನು ಶುಚಿರ್ಭೂತನಾಗಿ ನ ವಾ ಉ ದೇವಾಃ ಎಂಬ ಈ ಸೂಕ್ತವನ್ನು ಜಪಿಸಿದರೆ ಅವನಿಗೆ ಎಲ್ಲಾ ಸ್ಥಳಗಳಲ್ಲಿಯೂ ಅನ್ನಾದ್ಯಾಹಾರಗಳು ದೊರೆಯುವವು. ತಾನು ಏನನ್ನಾದರೂ ಪಾಪಮಾಡಿರುವೆನೆಂದು ಸಂಶಯಪಡುವ ಪುರುಷನು ಈ ಸೂಕ್ತವನ್ನು ನಿಯಮದಿಂದ ಜಪಿಸಿದರೆ ಪಾಪವಿಮುಕ್ತನಾಗುವನು. ವಾಕ್ಸಂಪತ್ತನ್ನು ಬಯಸುವ ಪುರುಷನು ಈ ಸೂಕ್ತದ ಮಂತ್ರಗಳನ್ನು ಪಠಿಸುತ್ತಾ ಅಗ್ನಿಯಲ್ಲಿ ಹೋಮಮಾಡಿದರೆ ಬೇಗನೆ ಸಿದ್ಧಿಯನ್ನು ಪಡೆಯುವನು

## ನೂರ ಹದಿನೆಂಟನೆಯ ಸೂಕ್ತವು

### ಪೀಠಿಕೆ.

ಈ ಸೂಕ್ತಕ್ಕೆ ರಕ್ಷೋಹಾಗ್ನಿಃ ಎಂಬುವುದು ದೇವತೆಯು. ರಕ್ಷೋಹಾಗ್ನಿಯ ವಿಚಾರವು ಅಲ್ಲಲ್ಲಿ ಅನೇಕ ಋಕ್ಕುಗಳಲ್ಲಿರುವುದಾದರೂ ಈ ದೇವತೆಯನ್ನೇ ಸ್ತುತಿಸುವ ಸೂಕ್ತಗಳು ಮುಖ್ಯವಾಗಿ ಮೂರು ಕೃಣುಷ್ವಪಾಜಃ (ಋ. ಸಂ. ೪-೪) ರಕ್ಷೋಹಣಂ ವಾಜಿನಂ (ಋ ಸಂ. ೧೦-೮೭) ಅಗ್ನೇ ಹಂಸಿ ನ್ಯತ್ರಿಣಂ (ಋ ಸಂ ೧೦-೧೧೮) ಎಂಬ ಮೂರು ಸೂಕ್ತಗಳಿಗೆ ರಕ್ಷೋಹಾಗ್ನಿಯೇ ದೇವತೆಯು. ಯಜ್ಞಾದಿಗಳಲ್ಲಿ ರಕ್ಷೋಗಣಗಳ ಬಾಧೆಯು ಉಂಟಾಗದಿರುವುದಕ್ಕಾಗಿ ರಕ್ಷೋಹಾಗ್ನಿಯನ್ನು ಸ್ತುತಿಸುವ ಸೂಕ್ತಗಳನ್ನು ಪಠಿಸುವುದು ರೂಢಿಯಾಗಿದೆ. ಅಗ್ನಿಮಥನಕಾಲದಲ್ಲಿ ಅರಣಿಗಳಿಂದ ಅಗ್ನಿಯು ಉತ್ಪತ್ತಿ ಆಗದಿದ್ದರೆ ಅದಕ್ಕೆ ರಕ್ಷೋಗಣದ ಬಾಧೆಯೇ ಕಾರಣವೆಂದು ಭಾವಿಸಿ ಗಾಯತ್ರೀ ಛಂದಸ್ಸಿನಲ್ಲಿರುವ ಅಗ್ನೇ ಹಂಸಿ ಎಂಬ ರಕ್ಷೋಘ್ನ ಸೂಕ್ತವನ್ನು ಪಠಿಸಬೇಕೆಂದು ಐತರೇಯಬ್ರಾಹ್ಮಣದಲ್ಲಿ ಅಗ್ನಿಮಥನ ಸಂದರ್ಭದಲ್ಲಿ ಹೇಳಿದೆ. ಈ ವಿಷಯವನ್ನು ನಾವು ಅಗ್ನಿಮಥನಕರ್ಮವನ್ನು ವಿವರಿಸುವಾಗ ಹೇಳಿದೇವೆ. ಋ. ಸಂ. ೭-೧೦೪ ನೇ ಸೂಕ್ತದಲ್ಲಿ ಇಂದ್ರ, ಸೋಮ ಮೊದಲಾದವರನ್ನು ರಕ್ಷೋಘ್ನರೆಂದು ಕರೆದಿದೆ ಮತ್ತು ಆ ಸೂಕ್ತವನ್ನೂ ರಕ್ಷೋಘ್ನಸೂಕ್ತವೆಂದೇ ಕರೆದಿದೆ. ರಕ್ಷೋಹಾಃ ಎಂಬ ವಿಶೇಷಣವು ಕೆಲವುವೇಳೆ ಸೋಮನಿಗೂ

ಅನ್ವಯಿಸುತ್ತದೆ. ರಕ್ಷೋಹಾ ವಿಶ್ವಚರ್ಷಣಿಃ (೯-೧-೨) ಇತ್ಯಾದಿ. ಪ್ರಕೃತ ಸೂಕ್ತದಲ್ಲಿ ಜಾತವೇದೋರೂಪನಾದ ಜಾತವೇದಾಃ, ಅಗ್ನಿ, ರಕ್ಷೋಹಾಗ್ನಿ, ರಕ್ಷೋಗಣಗಳು, ಭೂತಗಳು, ಪಿಶಾಚಿಗಳು, ಯಾತುಧಾನರು ಇವರುಗಳ ವಿಷಯವಿರುವುದರಿಂದ ಇವರ ಸೂಕ್ಷ್ಮವಿವರಣೆಯು ಅವಶ್ಯಕವು

**ಜಾತವೇದಃ**— ನಿರುಕ್ತಕಾರರಿಂದ ಈ ಪದವು **ಜಾತಾನಿ ವೇದ, ಜಾತಾನಿ ವೈನಂ ವಿದುಃ ಜಾತೇ ಜಾತೇ ವಿದ್ಯತ ಇತಿ ವಾ, ಜಾತವಿದ್ಯೋ ವಾ ಜಾತಧನಃ ಜಾತವಿದ್ಯೋ ವಾ ಜಾತಪ್ರಜ್ಞಾನಃ ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಂ ಇತಿ ಬ್ರಾಹ್ಮಣಂ** ಎಂದು ವ್ಯಾಖ್ಯಾತವಾಗಿರುತ್ತದೆ.

ಜಾತವೇದಸ್ಸಿನ ಸ್ವರೂಪವನ್ನು ಬೃಹದ್ದೇವತೆಯಲ್ಲಿ ಈ ರೀತಿ ತಿಳಿಸಿದೆ—

**ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ।**
**ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ॥**

(ಬೃ. ದೇ. ೧-೬೭)

ಋಷಿಗಳು ಪೃಥ್ವಿಯ ಮೇಲಿರತಕ್ಕ ಅಗ್ನಿಯನ್ನು ಜಾತವೇದಸ್ಸೆಂದೂ, ದ್ಯುಲೋಕದಲ್ಲಿರುವ ಅಗ್ನಿಯನ್ನು ವೈಶ್ವಾನರನೆಂದೂ ಕರೆಯುತ್ತಾರೆಂದು ಈ ಶ್ಲೋಕದಲ್ಲಿ ಹೇಳಿದೆ ಮತ್ತು ಇದೇ ವಿವರಣೆಯನ್ನು ಮುಂದುವರಿಸುತ್ತಾ,

**ವೈಶ್ವಾನರಂ ಶ್ರಿತೋಹ್ಯಗ್ನಿರಗ್ನಿಂ ವೈಶ್ವಾನರಃ ಶ್ರಿತಃ ।**
**ಅನಯೋರ್ಜಾತವೇದಾಸ್ತು ತಥೈತೇ ಜಾತವೇದಸಿ ॥** (ಬೃ. ದೇ. ೧-೯೭)

ಅಗ್ನಿಯು ವೈಶ್ವಾನರನಲ್ಲಿಯೂ ವೈಶ್ವಾನರನು ಅಗ್ನಿಯಲ್ಲಿಯೂ ಅಡಕವಾಗಿ ಜಾತವೇದಸ್ಸು ಈ ಎರಡು ರೂಪಗಳಲ್ಲಿಯೂ ಅಡಕವಾಗಿದ್ದಾನೆಂದೂ, ಈ ಎರಡು ರೂಪಗಳೂ ಜಾತವೇದಸ್ಸಿನ ಬೇರೆಬೇರೆ ಅಂಶಗಳೆಂದೂ ವಿವರಿಸಿದೆ. ಹೀಗೆ ಮೊದಲನೆ ಅಧ್ಯಾಯದಲ್ಲಿ ಜಾತವೇದಸ್ಸಿನ ಸ್ಥಾನಗಳನ್ನು ಹೇಳಿ ಎರಡನೇ ಅಧ್ಯಾಯದಲ್ಲಿ ಜಾತವೇದಸ್ಸಿನ ಸ್ವರೂಪ ನಿರ್ವಚನವನ್ನು ಈ ರೀತಿ ತಿಳಿಸಿದೆ—

**ಭೂತಾನಿ ವೇದ ಯಜ್ಜಾತೋ ಜಾತವೇದಾಥ ಕಥ್ಯತೇ ।**
**ಯಚ್ಚೈಷ ಜಾತವಿದ್ಯೋಽಭೂತ್ ವಿತ್ತಂ ಜಾತೋಽಧಿವೇತ್ತಿ ವಾ ॥**

(ಬೃ. ದೇ. ೨-೩೦)

**ವಿದ್ಯತೇ ಸರ್ವಭೂತೈರ್ಹಿ ಯದ್ವಾ ಜಾತಃ ಪುನಃಪುನಃ ।**
**ತೇನೈಷ ಮಧ್ಯಭಾಗೇಂದ್ರೋ ಜಾತವೇದಾ ಇತಿ ಸ್ತುತಃ ॥** (ಬೃ. ದೇ ೨-೩೧)

ಉತ್ಪನ್ನನಾಗುವಾಗಲೇ ಸಕಲವನ್ನೂ ತಿಳಿಯುವುದರಿಂದಲೂ ಅಥವಾ ಅವನಲ್ಲೇ ಜ್ಞಾನವು ಉತ್ಪನ್ನವಾದುದರಿಂದಲೂ ಅಥವಾ ಉತ್ಪನ್ನವಾದಾಗಲೇ ಸಕಲ ಧನವನ್ನೂ ತಿಳದು ಹೊಂದಿರುವುದರಿಂದಲೂ ಅಥವಾ ಪುನಃಪುನಃ ಉತ್ಪನ್ನವಾದಾಗಲೆಲ್ಲಾ ಸಕಲ ಭೂತಗಳಿಂದಲೂ ತಿಳಿಯಲ್ಪಡುವವನಾದುದರಿಂದಲೂ ಮಧ್ಯಲೋಕವಾಸಿಯಾದ ಇಂದ್ರನಂತೆ **ಜಾತವೇದಸ್ಸೆಂದು** ಅಗ್ನಿಯು ಸ್ತುತನಾಗಿದ್ದಾನೆಂದು ಬೃಹದ್ದೇವತೆಯಲ್ಲಿ ನಿರ್ವಚನವಿದೆ. ಇದರಂತೆಯೇ ಈ ಅಗ್ನಿಯ ಸ್ವರೂಪವನ್ನು ವಿವರಿಸಿ ಶತಪಥಬ್ರಾಹ್ಮಣದಲ್ಲಿ ಈ ರೀತಿ ಹೇಳಿದೆ—

**ಯಃ ಸಂವತ್ಸರಂ ಜಾತಃ ಸ್ಯಾತ್ಪ್ರಾಣೋ ವಾ ಅಗ್ನಿಸ್ತಮೇತದ್ವಿಭರ್ತ್ಯಥ ಹ ವೈ ರೇತಃ ಸಿಕ್ತಂ ಪ್ರಾಣೋಽನ್ವವರೋಹತಿ ತದ್ವಿಂದತೇ ತದ್ಯಜ್ಜಾತಂ ಜಾತಂ ವಿಂದತೇ ತಸ್ಮಾಜ್ಜಾತವೇದಾಃ ॥**

(ಶ. ಬ್ರಾ. ೯-೫-೧೬-೮)

ಪ್ರಾಣರೂಪಿಯಾದ ಅಗ್ನಿಯು ಉತ್ಪನ್ನವಾದ ಸಕಲ ಭೂತಗಳನ್ನೂ ತನ್ನ ಶಕ್ತಿಯಿಂದ ವ್ಯಾಪಿಸಿಕೊಳ್ಳುವುದರಿಂದ **ಜಾತವೇದಸ್ಸೆಂದು** ಕರೆಯಲ್ಪಟ್ಟಿದೆಯೆಂದು ಹೇಳಿದೆ ಯಜ್ಞಗೃಹದಲ್ಲಿ ಪೂಜಿಸಲ್ಪಡತಕ್ಕ ಈ ಜಾತವೇದಸ್ಸೇ ವಿಶ್ವಾತ್ಮನಾದ ಬ್ರಹ್ಮನೆಂದೂ ಉಪನಿಷತ್ತುಗಳಲ್ಲಿ ವರ್ಣಿಸಿದೆ.

**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ॥**

(ಪ್ರ. ಉ. ೧-೮)

ವಿಶ್ವರೂಪನೂ, ಸಹಸ್ರ ರಶ್ಮಿಗಳುಳ್ಳವನೂ, ಸರ್ವಜ್ಞನೂ, ಲೋಕಕ್ಕೆಲ್ಲಾ ಆಶ್ರಯನಾದವನೂ ಮತ್ತ ಜ್ಞಾನಿಗಳಿಂದ ಅರಿಯಲ್ಪಟ್ಟವನೂ ಸಕಲ ಭೂತಗಳಿಗೂ ಅಂತರಾತ್ಮನಾಗಿರುವವನೂ ಆದ ಸೂರ್ಯನು ಉದಯಿಸುತ್ತಾನೆಂದು ಪ್ರಶ್ನೋಪನಿಷತ್ತಿನಲ್ಲಿಯೂ,

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ ।**
**ದಿವೇ ದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ।**

(ಕ. ಉ. ೧-೪-೮)

ಯಾವ ಜಾತವೇದಸ್ಸು ಅರಣಿಗಳ ನಡುವೆ ಅಧಿಯಜ್ಞದಲ್ಲಿದ್ದುಕೊಂಡು ಎಲ್ಲಾ ಹವಿಸ್ಸುಗಳನ್ನೂ ಭೋಗಿಸುವನೋ, ಗರ್ಭಿಣೀಸ್ತ್ರೀಯರು ಮಮತೆಯಿಂದ ತಮ್ಮ ಗರ್ಭವನ್ನು ಪೋಷಿಸಿ ಬೆಳೆಸುವಂತೆ ಯಾವ ಪರಮಪುರುಷನನ್ನು ಯೋಗಿಗಳು ತಮ್ಮ ಹೃದಯದಲ್ಲಿಟ್ಟುಕೊಂಡು ಧ್ಯಾನಮಾಡುವರೋ ಮತ್ತು ಯಾವ ಪೂಜ್ಯನಾದ ಅಗ್ನಿಯನ್ನುದ್ದೇಶಿಸಿ ಯಜ್ಞಕರ್ತರು ಹವಿಸ್ಸುಗಳನ್ನರ್ಪಿಸುವರೋ ಆ ಜಾತವೇದಸ್ಸೇ ವಿಶ್ವಾತ್ಮನಾದ **ಪರಬ್ರಹ್ಮ** ಎಂದು ಕಠೋಪನಿಷತ್ತಿನಲ್ಲಿ ವರ್ಣಿಸಿದೆ. ಇದೇ ಆನುಪೂರ್ವಿಯಲ್ಲಿ ಋ. ಸಂ ೩-೨೯-೨ ನೇ ಋಕ್ಕಿನಲ್ಲಿ ವರ್ಣಿಸಿರುವ ಅಂಶವನ್ನೇ ಕಠದಲ್ಲಿ ತಿಳಿಸಿದೆ. ಹೀಗೆ ಸರ್ವಜ್ಞನೂ, ಸರ್ವವ್ಯಾಪಿಯೂ, ಸರ್ವಾಧಾರವುಳ್ಳವನೂ, ಸರ್ವೋತ್ಕೃಷ್ಟನೂ ಆದುದರಿಂದ **ಜಾತವೇದಸ್ಸೆಂದು** ಕರೆಯಲ್ಪಡುತ್ತಾನೆಂದು ಎಲ್ಲಾ ಶ್ರುತಿಗಳೂ ಸ್ತುತಿಸಿವೆ.

ಈ ಸೂಕ್ತಕ್ಕೆ **ಅಗ್ನೀ ರಕ್ಷೋಹಾ** ಎಂಬುದು ದೇವತೆಯು. ಎಂದರೆ ಭೂತ ಪಿಶಾಚಾದಿ ಯಜ್ಞವಿಘ್ನಕಾರಿಗಳಾದ ರಕ್ಷೋಗಣವನ್ನು ನಾಶಪಡಿಸುವ ಅಗ್ನಿಯೆಂದರ್ಥವು, ಯಾಸ್ಕರು ರಕ್ಷಃಶಬ್ದವನ್ನು ವಿವರಿಸುತ್ತಾ—

**ರಕ್ಷೋ ರಕ್ಷಿತವ್ಯಮಸ್ಮಾತ್ । ರಹಸಿ ಕ್ಷಣೋತೀತಿ ವಾ । ರಾತ್ರೌ ನಕ್ಷತ ಇತಿ ವಾ ॥**

(ನಿ. ೪-೧೮)

ಎಂದು ನಿರ್ವಚನವನ್ನು ಹೇಳಿರುವರು. ಎಂದರೆ ರಕ್ಷಸ್ಸೆಂಬ ಭೂತಗಣವು ಮನುಷ್ಯರನ್ನು ಭಕ್ಷಿಸುವುದು. ಇದರಿಂದ ನಮ್ಮ ಶರೀರವು ರಕ್ಷಿಸಲ್ಪಡಬೇಕು ರಕ್ಷಿಸಲ್ಪಡಬೇಕಾದುದರಿಂದ ಇದಕ್ಕೆ ರಕ್ಷಃ ಎಂದು ಹೆಸರು. ಅಥವಾ ಯಾರೂ ಇಲ್ಲದಿರುವ ನಿರ್ಜನಪ್ರದೇಶದಲ್ಲಿ ಅಥವಾ ಕತ್ತಲಲ್ಲಿ ಮನುಷ್ಯರನ್ನು ಹಿಂಸಿಸುವುದರಿಂದ ಇದಕ್ಕೆ ರಕ್ಷಃ ಎಂದು ಹೆಸರು. ಅಥವಾ ರಾತ್ರಿಕಾಲದಲ್ಲಿ ಇದು ಸಂಚರಿಸುವುದರಿಂದ ಇದಕ್ಕೆ ರಕ್ಷಃ ಎಂದು ಹೆಸರು ಎಂದು ಮೂರು ವಿಧ

ವಾದ ಅರ್ಥವನ್ನು ಹೇಳಿದಾರೆ. ರಕ್ಷಃ ಎಂಬ ಶಬ್ದಕ್ಕೂ, ರಾಕ್ಷಸಶಬ್ದಕ್ಕೂ ವ್ಯತ್ಯಾಸವಿದೆ. ರಾಕ್ಷಸರೆಂದರೆ ಮನುಷ್ಯಾಕಾರದ ಅಥವಾ ಕಣ್ಣಿಗೆ ಕಾಣಿಸುವ ಇತರ ಭಯಂಕರಾಕಾರದ ವ್ಯಕ್ತಿವಿಶೇಷಗಳು. ಇವರು ದುಷ್ಟ ಸ್ವಭಾವದವರಾಗಿ ಯಾವಾಗಲೂ ಸತ್ಪುರುಷರಿಗೆ ಹಿಂಸೆಯನ್ನುಂಟುಮಾಡುವವರು. ಸತ್ಕರ್ಮಗಳಿಗೆ ವಿಘ್ನವನ್ನುಂಟು ಮಾಡುವವರು. ರಕ್ಷಃ ಎಂಬ ಶಬ್ದಕ್ಕೆ ಕಣ್ಣಿಗೆ ಕಾಣಿಸದಿರುವ ಭೂತ, ದೈವ, ಪಿಶಾಚಾದಿಗಳು Demons, evil spirits &c ; ಮನುಷ್ಯರಿಗೆ ಹಿಂಸೆಯನ್ನುಂಟುಮಾಡುವುದೂ, ಯಜ್ಞಾದಿ ಸತ್ಕರ್ಮಗಳಿಗೆ ವಿಘ್ನವನ್ನುಂಟುಮಾಡು ವುದೂ ಇವುಗಳ ಸ್ವಭಾವ. ಇವುಗಳ ಬಾಧೆಯನ್ನು ಪರಿಹರಿಸಿ ಕಾಪಾಡಬೇಕೆಂದು ಅಗ್ನಿಯನ್ನು ಯಜ್ಞಾದಿಗಳಲ್ಲಿಯೂ ಇತರ ಕರ್ಮಗಳಲ್ಲಿಯೂ ಪ್ರಾರ್ಥಿಸುವುದು ರೂಢಿಯು. ಈ ವಿಧವಾದ ಬಾಧೆಯನ್ನು ಪರಿಹರಿಸುವ ಅಗ್ನಿಯನ್ನು ರಕ್ಷೋಹಾಗ್ನಿ ಎಂದು ಕರೆಯುವರು

ಭೂಮಿಯಲ್ಲಿರುವ ಪಿಶಾಚಿಗಳು ಅಥವಾ ಭೂತಗಳು—ಮನುಷ್ಯರ ದ್ವೇಷಿಗಳು. ಇವರನ್ನು ಹೇಳುವ ಜಾತಿ ವಾಚಕವು ರಕ್ಷಃ ಎಂಬುದು. ಈ ಶಬ್ದವು ಐವತ್ತಕ್ಕಿಂತ ಹೆಚ್ಚು ಸಲ ಏಕವಚನ ಮತ್ತು ಬಹುವಚನಗಳಲ್ಲಿ ಬಂದಿದೆ. ಸಾಧಾರಣವಾಗಿ ಯಾವುದಾದರೊಂದು ದೇವತೆಯೊಡನೆ, ರಾಕ್ಷಸನನ್ನು ಧ್ವಂಸಮಾಡೆಂದು ಪ್ರಾರ್ಥನಾರೂಪನಾಗಿ ಅಥವಾ ರಾಕ್ಷಸನನ್ನು ವಧಿಸಿದೆ ಎಂದು ಸ್ತುತಿರೂಪವಾಗಿಯೇ ಬರುತ್ತದೆ. ೭-೧೦೪ ಮತ್ತು ೧೦-೮೭ ನೆಯ ಸೂಕ್ತ ಗಳಲ್ಲಿ ಇವರ ಪ್ರಸ್ತಾಪವೇ ಇದೆ. ಇಲ್ಲಿ ರಕ್ಷಸಃ, ಯಾತು, ಯಾತುಧಾನ ಮೊದಲಾದ ಪದಗಳು ಇವರನ್ನು ಸೂಚಿಸು ತ್ತವೆ. ರಕ್ಷಸಃ ಎಂಬುದು ದೇವತೆಗಳು, ಪಿಶಾಚಿಗಳು ಇವೆಲ್ಲಕ್ಕೂ ಹೆಸರಾದುದರಿಂದ ಅದನ್ನು ಜಾತಿವಾಚಕ ವೆಂತಲೂ, ಯಾತು ಎಂಬುದನ್ನು ಉಪಜಾತಿವಾಚಕವೆಂತಲೂ ತಿಳಿಯಬಹುದು.

ಈ ಪಿಶಾಚಿಗಳು ಅಥವಾ ಭೂತಗಳಿಗೆ, ನಾಯಿ, ರಣಹದ್ದು, ಗೂಬೆ, ಮತ್ತು ಇತರ ಪಕ್ಷಿಗಳ ರೂಪಗಳುಂಟು. (೭-೧೦೪-೨೦ ರಿಂದ ೨೨). ಪಕ್ಷಿರೂಪವಾಗಿ, ರಾತ್ರಿವೇಳೆ ಹಾರಾಡುತ್ತಾರೆ (೭-೧೦೪-೧೮). ಭ್ರಾತೃ, ಭರ್ತೃ ಅಥವಾ ಪ್ರಿಯನ ರೂಪವನ್ನು ಧರಿಸಿ, ಸ್ತ್ರೀಯರನ್ನು ಸಮೀಪಿಸಿ, ಅವರ ಮಕ್ಕಳನ್ನು ನಾಶಪಡಿಸಲು ಇಚ್ಛಿಸುತ್ತಾರೆ (೧೦-೧೬೨-೫). ನಾಯಿ ಅಥವಾ ಕಪಿರೂಪಿಯಾಗಿ ಹೆಂಗಸರ ಮೇಲೆ ಬೀಳಲು ಕಾದಿರುತ್ತಾರೆ. (ಅ. ವೇ. ೪-೩೭-೧೧). ಆದುದರಿಂದ ಗರ್ಭಿಣಿಯರಿಗೆ ಮತ್ತು ಮಕ್ಕಳಿಗೆ ಇವರಿಂದ ತೊಂದರೆಯುಂಟು. (ಅ. ವೇ. ೮-೬), ವಿವಾಹಕಾಲದಲ್ಲಿ, ವಧುವಿನ ಸುತ್ತಲೂ ಓಡಾಡುತ್ತಿರುತ್ತಾರೆ, ಇವರ ಕಣ್ಣುಗಳನ್ನು ಚುಚ್ಚಲೆಂದು, ಸಣ್ಣಬಾಣಗಳನ್ನು ಅಂತರಿಕ್ಷದಲ್ಲಿ ಬಿಡುತ್ತಾರೆ (ಮಾ. ಗೃ. ಸೂ. ೧-೧೦). ಅಥರ್ವವೇದದಲ್ಲಿಯೇ ಇವರ ರೂಪ ಮೊದಲಾದುವುಗಳ ವರ್ಣನೆಯಿರುವುದು. ಅವರು ವಿಶೇಷವಾಗಿ ಮನುಷ್ಯರಂತೆ ರೂಪವನ್ನು ಧರಿಸಿರುತ್ತಾರೆ, ಅವರ ಶಿರಸ್ಸು, ಕಣ್ಣು, ಹೃದಯ ಮೊದಲಾದ ಅಂಗಾಂಗಗಳ ಪ್ರಸಕ್ತಿಯಿದೆ ; ಆದರೆ ಏನಾದರೊಂದು ವೈರೂಪ್ಯವಿದ್ದೇ ಇರುತ್ತದೆ. ಮೂರು ತಲೆ, ಎರಡು ಬಾಯಿ, ನಾಲ್ಕು ಕಣ್ಣು, ಐದು ಪಾದಗಳು, ಬೆರಳುಗಳಿಲ್ಲ, ಪಾದಗಳು ಹಿಂದು ಮುಂದಾಗಿರುವುದು ಅಥವಾ ಕೈಮೇಲೆ ಕೊಂಬುಗಳು, ಇತ್ಯಾದಿ (ಅ. ವೇ. ೮-೬ ; ಹಿ. ಗೃ. ಸೂ. ೨೩-೭). ನೀಲಿ, ಹಳದಿ ಅಥವಾ ಹಸರು ಪಿಶಾಚಿಗಳೂ ಉಕ್ತರಾಗಿದಾರೆ. (ಅ. ವೇ. ೧೯-೨೨-೪, ೫) ಅವರಲ್ಲಿಯೂ ಗಂಡು, ಹೆಣ್ಣುಗಳೂ, ಸಂಸಾರ ಗಳೂ, ರಾಜರೂ (ಅ. ವೇ. ೫-೨೨-೧೨ ; ಹಿ ಗೃ. ಸೂ ೨-೩-೭) ಉಂಟು ; ಅವರೂ ಮರಣಶೀಲರು (ಅ. ವೇ. ೬-೩-೨-೨ ; ಇತ್ಯಾದಿ)

ಯಾತುಧಾನರು ಮನುಷ್ಯರ ಮತ್ತ ಅಶ್ವಗಳ ಮಾಂಸವನ್ನು ತಿನ್ನುತ್ತಾರೆ. ಮತ್ತು ಗೋಕ್ಷೀರವನ್ನು ಪಾನಮಾಡುತ್ತಾರೆ. (೧೦-೮೭-೧೬, ೧೭) ತಮ್ಮ ರಕ್ತ ಮತ್ತು ಮಾಂಸದ ಆಶೆಯನ್ನು ತೀರಿಸಿಕೊಳ್ಳಲು ಅವರು ಮನುಷ್ಯರನ್ನು ಆಕ್ರಮಿಸುತ್ತಾರೆ ಈ ಆಕ್ರಮಣವು ಸಾಧಾರಣವಾಗಿ ಅವರನ್ನು ಪ್ರವೇಶಮಾಡುವ ಮೂಲಕವೇ. ಆಧಾರಕರನ್ನು ಪ್ರವೇಶಿಸದಂತೆ ರಾಕ್ಷಸರನ್ನು ತಡೆಗಟ್ಟಬೇಕೆಂದು ಅಗ್ನಿಗೆ ಪ್ರಾರ್ಥನೆ ಇದೆ. (೮-೪೮-೨೦) ಅಲ್ಲಿಂದಿಲ್ಲಿ ಹಾರಾಡುತ್ತಿರುವ ರೋಗಾಭಿಮಾನಿಯಾದ ಪಿಶಾಚಿಯೊಂದು ಮನುಷ್ಯರನ್ನು ಪ್ರವೇಶಿಸುತ್ತದೆ. (ಅ. ವೇ. ೭-೭೬-೪) ಈ ಭೂತಪ್ರೇತಗಳು ಸಾಧಾರಣವಾಗಿ ನಾವು ತಿನ್ನುವಾಗ ಅಥವಾ ಕುಡಿಯುವಾಗ ನಮ್ಮ ಬಾಯಿ ಮೂಲಕವೇ ನಮ್ಮನ್ನು ಪ್ರವೇಶಿಸುತ್ತವೆ. (ಅ. ವೇ. ೫-೨೯-೬ ರಿಂದ ೮); ಇತರ ದ್ವಾರಗಳಿಂದಲೂ ಪ್ರವೇಶಿಸುವುದುಂಟು. (ಅ. ವೇ. ೮.೬.೩) ಒಳಗೆ ಪ್ರವೇಶಮಾಡುವುದೇ ತಡ, ಮನುಷ್ಯನ ಮಾಂಸವನ್ನು ಕಿತ್ತು ತಿಂದು, ರೋಗವನ್ನುಂಟು ಮಾಡುತ್ತಾರೆ. (ಅ. ವೇ. ೫-೨೯-೫,೧೦). ಹುಚ್ಚುತನವನ್ನುಂಟುಮಾಡುತ್ತಾರೆ. ಮತ್ತು ವಾಕ್ಪಟುತ್ವವನ್ನು ನಾಶ ಗೊಳಿಸುತ್ತಾರೆ (ಅ. ವೇ. ೬-೧೧೧ ೩ ; ಹಿ. ಗೃ. ಸೂ. ೧-೧೫-೫), ಮನುಷ್ಯರ ವಾಸಗೃಹಗಳನ್ನು ಆಕ್ರಮಿಸುತ್ತಾರೆ. (ಕೌ. ಸೂ. ೧೩-೫-೯) ಕೆಲವು ಭೂತಗಳು ಸಾಯಂಕಾಲದ ವೇಳೆಯಲ್ಲಿ ಮನೆಗಳ ಸುತ್ತಲೂ ಕುಣಿಯುತ್ತಾ ಕತ್ತೆಗಳಂತೆ ಅರಚುತ್ತಾ, ತಿರುಗುತ್ತಿರುತ್ತವೆ ಅಥವಾ ಕಾಡುಗಳಲ್ಲಿ ತಿರುಗುತ್ತಿರುತ್ತವೆ ಅಥವಾ ಗಟ್ಟಿಯಾಗಿ ನಗುತ್ತಾ ಇಲ್ಲವೇ ಕಪಾಲಗಳಿಂದ ಪಾನಮಾಡುತ್ತಾ ಇರುತ್ತವೆ. (ಅ. ವೇ. ೮-೬-೧೦, ೧೧, ೧೪, ; ಹಿ. ಗೃ. ಸೂ. ೨-೩-೩).

ಅವರ ಸಂಚಾರಕಾಲವು ರಾತ್ರಿ ಅಥವಾ ಸಾಯಂಕಾಲ (೭-೧೦೪-೮). ಪೂರ್ವದಿಕ್ಕಿನಲ್ಲಿ ಅವರ ಆಟವೇನೂ ನಡೆಯುವುದಿಲ್ಲ ; ಅಲ್ಲಿ ಉದಯಿಸುವ ಸೂರ್ಯನು ಅವರನ್ನು ಓಡಿಸಿಬಿಡುತ್ತಾನೆ. (ತೈ. ಸಂ. ೧-೬-೬-೩). ಬೀಳುತ್ತಿರುವ ಉಲ್ಕೆಯು ಭೂತದ ರೂಪವೆಂದು ಭಾವನೆ. (ಕೌ. ಸೂ. ೧೨೫-೯) ಅಮಾವಾಸ್ಯೆಯ ಕಗ್ಗತ್ತಲೆಯು ಪ್ರೇತಗಳ ಸಂಚಾರಕ್ಕೆ ಯೋಗ್ಯವಾಗಿರುವಂತೆ ಭೂತಗಳಿಗೂ ಅದೇ ಅನುಕೂಲಕಾಲ. (ಅ. ವೇ. ೧-೧೬-೧ ; ೪-೩೬-೩).

ಯಜ್ಞಗಳಿಗೆ ಇವರಿಂದ ಇರುವಷ್ಟು ಆಪತ್ತು ಯಾವುದಕ್ಕೂ ಇಲ್ಲ. ದೇವಯೋಗ್ಯವಾದ ಯಜ್ಞಗಳಲ್ಲಿ ಪಿಶಾಚಿಗಳು, ಲೋಪದೋಷಗಳನ್ನುಂಟುಮಾಡುತ್ತವೆ. ಮತ್ತು ಯಾತುಧಾನರು ಅರ್ಪಿತವಾದ ಆಹುತಿಗಳನ್ನು ಚಲ್ಲಾಪಿಲ್ಲಿಯಾಗಿ ಎರಚುತ್ತಾರೆ. (೭-೧೦೪, ೨೧) ಸ್ತೋತ್ರವನ್ನು ಕಂಡರೆ ಅವರಿಗಾಗದು. (೧೦-೧೮೨-೩) ಯಜ್ಞಕ್ಕೆ ಶಾಪ ತಗಲದಂತೆ, ಭೂತಾದಿಗಳನ್ನು ದಹಿಸಿಬಿಡೆಂದು ಅಗ್ನಿಗೆ ಪ್ರಾರ್ಥನೆ. (೧-೭೬-೩) ಯಾತುಧಾನರ ಮತ್ತು ರಕ್ಷೋಗಣಗಳ ಮಾಯೆಯಿಂದ ಶತ್ರುವಿನ ಯಾಗವನ್ನು ಊರ್ಜಿತವಾಗುವಂತೆ ಮಾಡುವ ಮಂತ್ರವೊಂದಿದೆ. (ಅ. ವೇ. ೭-೭೦-೨) ಮೃತರಿಗೆ ಆಹುತಿಕೊಡುವ ಅನ್ನೋದಕಗಳಿಗೆ ಪ್ರೇತರೂಪದಲ್ಲಿ ಅಡ್ಡಿಯಾಗಿ ಬರುತ್ತಾರೆ. (ಅ. ವೇ. ೧೮-೨-೨೮ ; ವಾ. ಸಂ. ೧-೨೯ ಹೋಲಿಸಿ). ಪುರಾಣಗಳಲ್ಲಿ ಈ ರಕ್ಷೋಗಣಗಳು (ರಾಕ್ಷಸರಂತಲೇ ವ್ಯವಹಾರ) ಯೋಗಿಗಳಿಗೆ ತೊಂದರೆಮಾಡುತ್ತಾರೆ ಎಂಬುದು ಸಾಮಾನ್ಯವಾಗಿದೆ.

ಕತ್ತಲನ್ನು ಹೋಗಲಾಡಿಸುವವನೂ, ಯಾಗಕ್ಕೆ ಯಜಮಾನನೂ ಆದ ಅಗ್ನಿಗೂ ಇವರಿಗೂ ಬದ್ಧ ದ್ವೇಷ. ಇವರನ್ನು ದಹಿಸು, ಓಡಿಸು ಅಥವಾ ನಾಶಮಾಡು ಎಂದು ಅಗ್ನಿಯನ್ನೇ ಪ್ರಾರ್ಥಿಸುವುದು. (೧೦-೮೭-೩,೬ ಇತ್ಯಾದಿ) ಈ ಕಾರ್ಯದಿಂದಲೇ ಅಗ್ನಿ ಮತ್ತು ಇತರ ಕೆಲವು ದೇವತೆಗಳಿಗೆ 'ರಕ್ಷೋಹಾ' ಎಂದು ಹೆಸರು ಬಂದಿದೆ.

ಈ ಭೂತಗಳು ಸ್ವಭಾವತಃ ಹಾನಿಕರಗಳು ಮಾತ್ರವಲ್ಲ, ಇತರರಿಂದ ಪ್ರೇರಿತರಾಗಿಯೂ ಹಾನಿಯನ್ನುಂಟು ಮಾಡುವುದುಂಟು. ರಕ್ಷೋಯುಜಃ (ರಾಕ್ಷಸರನ್ನು ಪ್ರೇರಿಸುವವರು) ಎಂಬುದು ಕಂಡುಬರುತ್ತದೆ. (೬–೬೨–೯) ಮತ್ತು ಮಂತ್ರಗಾರರ ಭೂತಗಳು ಮತ್ತು ಯಾತುಗಳು ಅಲ್ಲಲ್ಲಿ ಇವೆ. (೭–೧೦೪–೨೩ ; ೮–೬೦–೨೦) ಶತ್ರುವಿನಿಂದ ಪ್ರೇರಿತವಾದ ಭೂತದ ಕಾಟಕ್ಕೆ ಒಳಗಾದವನು ಯವಿಷ್ಠಾಗ್ನಿಗೆ ಹೋಮಮಾಡಿ ಅವುಗಳನ್ನು ಓಡಿಸಬಹುದು. (ತೈ. ಸಂ. ೨–೨–೩–೨) ಮತ್ತು ಪ್ರೇರಿಸುವವನನ್ನೇ ನುಂಗಿಬಿಡು ಎಂದು ಆ ಭೂತಗಳಿಗೇ ಅಪ್ಪಣೆ ಇದೆ. (ಅ. ವೇ. ೨–೨–೪).

ಭೂತಗಳು ಎಂಬರ್ಥದಲ್ಲಿ ರಕ್ಷಃ ಎಂಬ ಪದವು ಪುಲ್ಲಿಂಗ ಸ್ತ್ರೀಲಿಂಗಳೆರಡರಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ನಪುಸಂಕಲಿಂಗದಲ್ಲಿ ಅಪಾಯ ಎಂತಲೂ ಅರ್ಥವುಂಟು ರಕ್ಷ್ (ತೊಂದರೆಮಾಡು) ಎಂಬ ಧಾತುವಿನಿಂದ ರಕ್ಷಃ ಎಂದಾಗಿರಬಹುದು (ಋಕ್ಷ್ ಅಪಾಯಕರವಾದ) ; ಆದರೆ ಈ ಪ್ರಯೋಗವು ಬಹಳ ಅಪರೂಪ. ಸಾಧಾರಣವಾದ ರಕ್ಷ್—ಕಾಪಾಡು ಎಂಬುದರಿಂದಲೂ ಆಗಿರಬಹುದು. ಈ ಸಂದರ್ಭದಲ್ಲಿ ರಕ್ಷಃ ಎಂದರೆ ತಪ್ಪಿಸಿಕೊಳ್ಳಬೇಕಾದುದು ಎಂದರ್ಥವಾಗಿದೆ.

॥ಸಾಯಣಭಾಷ್ಯಂ ॥

**ಅಗ್ನೇ ಹಂಸೀತಿ ನವರ್ಚಂ ಷಷ್ಠಂ ಸೂಕ್ತಮಮಹೀಯುಗೋತ್ರಸ್ಯೋರುಕ್ಷಯಸ್ಯಾರ್ಷಂ ಗಾಯತ್ರಂ । ರಕ್ಷೋಹಾಗ್ನಿರ್ದೇವತಾ । ತಥಾ ಚಾನುಕ್ರಮ್ಯತೇ । ಅಗ್ನೇ ಹಂಸ್ಯುರುಕ್ಷಯ ಆಮಹೀಯವ ಆಗ್ನೇಯಂ ರಾಕ್ಷೋಘ್ನಂ ಗಾಯತ್ರಂ ತ್ವಿತಿ ॥ ಮಥ್ಯಮಾನೇಽಗ್ನಾವಜಾಯಮಾನ ಇದಮನುವಕ್ತವ್ಯಂ । ಸೂತ್ರಿತಂ ಚ । ಅಜಾಯಮಾನೇ ಶ್ವೇತಸ್ಮಿನ್ನೇವಾವಸಾನೇಽಗ್ನೇ ಹಂಸಿ ನ್ಯತ್ರಿಣಾಮಿತಿ ಸೂಕ್ತಮಾವಪೇತ । ಆ. ೨–೧೬ । ಇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಪಿ ಗಾಯತ್ರೇ ಛಂದಸೀದಂ ಸೂಕ್ತಂ । ಸೂತ್ರಿತಂ ಚ । ಅಗ್ನೇ ಹಂಸ್ಯಗ್ನಿಂ ಹಿನ್ವಂತು ನಃ । ಆ. ೪–೧೩ । ಇತಿ ॥ ದಶಮೇಽಹನಿ ಧಿಷ್ಣ್ಯಾಂಗಾರಾಭಿವಿಹರಣ ಆದ್ಯಾ ಜಪ್ಯಾ । ಸೂತ್ರಿತಂ ಚ । ಪರಿ ತ್ವಾಗ್ನೇ ಪುರಂ ವಯಮಿತ್ಯೇತಸ್ಯಾಃ ಸ್ಥಾನೇಽಗ್ನೇ ಹಂಸಿ ನ್ಯತ್ರಿಣಂ । ಆ. ೮–೧೨ । ಇತಿ ॥**

ಅನುವಾದವು—**ಅಗ್ನೇ ಹಂಸಿ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಹೀಯುಗೋತ್ರದ ಉರುಕ್ಷಯ ಎಂಬುವನು ಋಷಿಯು ; ರಕ್ಷೋಹಾಗ್ನಿಯು ದೇವತೆಯು, ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಅಗ್ನೇ ಹಂಸ್ಯುರುಕ್ಷಯ ಆಮಹೀಯವ ಆಗ್ನೇಯಂ ರಾಕ್ಷೋಘ್ನಂ ಗಾಯತ್ರಂ ತು** ಎಂದು ಹೇಳಿರುವುದು. ಅಗ್ನಿಮಥನಕಾಲದಲ್ಲಿ ಎಷ್ಟು ಮಥಿಸಿದರೂ ಅಗ್ನಿಯು ಉತ್ಪತ್ತಿಯಾಗದಿದ್ದರೆ ಆಗ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—**ಅಜಾಯಮಾನೇ ಶ್ವೇತಸ್ಮಿನ್ನೇವಾವಸಾನೇಽಗ್ನೇ ಹಂಸಿ ನ್ಯತ್ರಿಣಮಿತಿ ಸೂಕ್ತಮಾವಪೇತ** ಎಂಬ ಸೂತ್ರದಿಂದ (ಆ ೨–೧೬) ವಿವೃತವಾಗಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನದಲ್ಲಿಯೂ ಸಹ ಗಾಯತ್ರೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಅಗ್ನೇ ಹಂಸ್ಯಗ್ನಿಂ ಹಿನ್ವಂತು ನಃ** ಎಂಬ ಸೂತ್ರದಿಂದ (ಆ.೪–೧೩) ವಿವೃತವಾಗಿರುವುದು. ಯಜ್ಞದ ಹತ್ತನೆಯ

ದಿವಸ ಧಿಷ್ಣ್ಯಾಂಗಾರವಿಹರಣಮಾಡುವಾಗ ಈ ಸೂಕ್ತದ ಮೊದಲನೆಯ ಋಕ್ಕನ್ನು ಜಪಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ– ಪರಿ ತ್ವಾಗ್ನೇ ಪುರಂ ವಯಮಿತ್ಯೇತಸ್ಯಾಃ ಸ್ಥಾನೇಽಗ್ನೇ ಹಂಸಿ ನ್ಯತ್ರಿಣಂ ಎಂಬ ಸೂತ್ರದಿಂದ (ಆ. ೮–೧೨) ವಿವೃತವಾಗಿರುವುದು

## ಸೂಕ್ತ—೧೧೮

ಮಂಡಲ—೧೦ ॥ ಅನುವಾಕ—೧೦ ॥ ಸೂಕ್ತ—೧೧೮ ॥

ಅಷ್ಟಕ—೮ ॥ ಅಧ್ಯಾಯ—೬ ॥ ವರ್ಗ—೨೪, ೨೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
॥ ಋಷಿಃ—ಉರುಕ್ಷಯ ಆಮಹೀಯವಃ ॥
॥ ದೇವತಾ—ಅಗ್ನೀ ರಕ್ಷೋಹಾ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಅಗ್ನೇ ಹಂಸಿ ನ್ಯ೧ತ್ರಿಣಂ ದೀದ್ಯನ್ಮರ್ತ್ಯೇಷ್ವಾ ।
ಸ್ವೇ ಕ್ಷಯೇ ಶುಚಿವ್ರತ ॥ ೧ ॥

॥ ಪದಪಾಠಃ ॥

ಅಗ್ನೇ । ಹಂಸಿ । ನಿ । ಅತ್ರಿಣಂ । ದೀದ್ಯತ್ । ಮರ್ತ್ಯೇಷು । ಆ ।
ಸ್ವೇ । ಕ್ಷಯೇ । ಶುಚಿऽವ್ರತ । ॥ ೧ ॥

॥ ಸಾಯಣಭಾಷ್ಯಂ ॥

ಹೇ ಶುಚಿವ್ರತ ಪೂತಕರ್ಮನ್ ದೀಪ್ಯಮಾನತೇಜಸ್ಕ ಹೇ ಅಗ್ನೇ ಅತ್ರಿಣಮತ್ತಾರಂ ಶತ್ರುಂ ತಮೋರೂಪಂ ನಿತರಾಂ ಹಂಸಿ । ವಿನಾಶಯ ॥ ಆಮಂತ್ರಿತಸ್ಯಾವಿದ್ಯಮಾನತ್ವೇನ ಪಾದಾದಿತ್ವಾದನಿಘಾತಃ ॥ ಕಿಂ ಕುರ್ವನ್ । ಮರ್ತ್ಯೇಷು ಮನುಷ್ಯೇಷು ಯಜಮಾನೇಷ್ವಾಭಿಮುಖ್ಯೇನ ದೀದ್ಯತ್ ಕರ್ಮಸಿದ್ಧ್ಯರ್ಥಂ ಪ್ರಕಾಶಮಾನಃ । ದೀದಿತಿರ್ದೀಪ್ತಿಕರ್ಮಾ । ತಥಾ ಸ್ವೇ ಆತ್ಮೀಯೇ ಕ್ಷಯೇ ನಿವಾಸಭೂತೇ ಆಹವನೀಯಾದಿಸ್ಥಾನೇ ದೀಪ್ಯಮಾನಃ ॥ ಕ್ಷಯೋ ನಿವಾಸೇ । ಪಾ. ೬–೧–೨೦೧ । ಇತ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಶುಚಿವ್ರತ—ಶುದ್ಧವಾದ ಕರ್ಮಗಳುಳ್ಳ ಅಥವಾ ಪ್ರಕಾಶಮಾನವಾದ ಕಾಂತಿಯಿಂದ ಬೆಳಗುವ । ಅಗ್ನೇ—ಎಲೈ ಅಗ್ನಿಯೇ । ಮರ್ತ್ಯೇಷು—ಮನುಷ್ಯರಲ್ಲಿ ಎಂದರೆ ಯಜ್ಞಮಾಡುವ ಯಜಮಾನರಲ್ಲಿ (ಯಜ

ಮಾನರ ಯಜ್ಞಗೃಹಗಳಲ್ಲಿಯೂ) । **ಸ್ವೇ ಕ್ಷಯೇ**— ನಿನ್ನ ಸ್ವಂತನಿವಾಸಸ್ಥಾನವಾದ ಆಹವನೀಯಾದಿ ಅಗ್ನಿಕುಂಡಗಳಲ್ಲಿಯೂ । **ಆ ದೀದ್ಯತ್**— ಕರ್ಮನಿರ್ವಹಣೆಗಾಗಿ ಚೆನ್ನಾಗಿ ಪ್ರಕಾಶಿಸುತ್ತಾ । **ಅತ್ರಿಣಂ**— ವಿಧ್ವಂಸಕವೂ ತಮೋರೂಪವೂ ಆದ ಶತ್ರುವನ್ನು ಎಂದರೆ ಕತ್ತಲೆಯನ್ನು । **ನಿ ಹಂಸಿ**— ಚೆನ್ನಾಗಿ ನಾಶಮಾಡು ।

॥ ಭಾವಾರ್ಥ ॥

ಪರಿಶುದ್ಧವಾದ ಕರ್ಮಕರ್ತನಾದ ಅಥವಾ ಪ್ರಕಾಶಮಾನವಾದ ಕಾಂತಿಯಿಂದ ಬೆಳಗುವ ಎಲೈ ಅಗ್ನಿಯೇ, ಮನುಷ್ಯರ ಎಂದರೆ ಯಜಮಾನರ ಗೃಹಗಳಲ್ಲಿಯೂ, ನಿನ್ನ ಸ್ವಸ್ಥಾನವಾದ ಆಹವನೀಯಾದಿ ಅಗ್ನಿಕುಂಡದಲ್ಲಿಯೂ ಯಜ್ಞಕರ್ಮನಿರ್ವಹಣೆಗಾಗಿ ಚೆನ್ನಾಗಿ ಪ್ರಕಾಶಿಸುತ್ತಾ ತಮೋರೂಪವಾದ ಶತ್ರುವನ್ನು ಎಂದರೆ ಕತ್ತಲೆಯನ್ನು ನಿಶ್ಶೇಷವಾಗಿ ನಾಶಮಾಡು

## English Translation

Agni, observer of purity, you destroy the devouring (gloom), shining, amongst men in your own dwelling.

॥ ಸಂಹಿತಾಪಾಠಃ ॥

ಉತ್ತಿಷ್ಠಸಿ ಸ್ವಾಹುತೋ ಘೃತಾನಿ ಪ್ರತಿ ಮೋದಸೇ ।

ಯತ್ತ್ವಾ ಸ್ರುಚಃ ಸಮಸ್ಥಿರನ್ ॥ ೨ ॥

॥ ಪದಪಾಠಃ ॥

ಉತ್ । ತಿಷ್ಠಸಿ । ಸುऽಆಹುತಃ । ಘೃತಾನಿ । ಪ್ರತಿ । ಮೋದಸೇ ।

ಯತ್ । ತ್ವಾ । ಸ್ರುಚಃ । ಸಂऽಅಸ್ಥಿರನ್ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸ್ವಾಹುತೋऽಸ್ಮಾಭಿಃ ಸುಷ್ಠ್ವಾಹೂಯಮಾನಃ ಸನ್ನುತ್ತಿಷ್ಠಸಿ । ಅರಣೀಭ್ಯಾಮುದ್ಗತೋ ಭವ ॥ ಊರ್ಧ್ವಕರ್ಮತ್ವಾದಾತ್ಮನೇಪದಾಭಾವಃ । ಪಾ. ೧-೩-೨೪ ॥ ಉದ್ಗತ್ಯ ಚ ಘೃತಾನಿ ಘೃತೇನ ಸಹಿತಾನ್ಯಸ್ಮಾಭಿರ್ದೀಯಮಾನಾನಿ ಹವೀಂಷಿ ಪ್ರತಿ ಮೋದಸೇ । ಹೃಷ್ಟೋ ಭವ ॥ ಮುದ ಹರ್ಷೇ ಭೌವಾದಿಕಃ । ಅನುದಾತ್ತೇತ್ ॥ ಯದ್ಯದಾ ತ್ವಾ ತ್ವಾಂ ಸ್ರುಚೋ ಜುಹ್ವಾದೀನಿ ಪಾತ್ರಾಣಿ ಸಮಸ್ಥಿರನ್ ಸಂಗತಾನ್ಯಭವನ್ ॥ ಸಮವಪ್ರವಿಭ್ಯಃ ಸ್ಥ ಇತಿ ಲುಙ್ಯಾತ್ಮನೇಪದಂ । ಸ್ಥಾಘ್ವೋರಿಚ್ಚೇತಿ ಸಿಚಃ ಕಿತ್ತ್ವಮಿಕಾರಶ್ಚಾಂತಾದೇಶಃ । ಹ್ರಸ್ವಾದಂಗಾದಿತಿ ಸಿಚೋ ಲೋಪಃ । ವ್ಯತ್ಯಯೇನ ಝಸ್ಯ ರನ್ । ತಿಙ್ ಚೋದಾತ್ತವತೀತಿ ಗತೇರ್ನಿಘಾತಃ ॥

॥ ಪ್ರತಿಪದಾರ್ಥ ॥

**ಸ್ವಾಹುತಃ**—ನಮ್ಮಿಂದ ವಿಶೇಷರೀತಿಯಲ್ಲಿ ಪ್ರಾರ್ಥಿತನಾಗಿ । **ಉತ್ತಿಷ್ಠಸಿ**— ಅರಣಿಗಳಲ್ಲಿ ಪ್ರಾದುರ್ಭೂತನಾಗುವೆ । **ಯತ್**—ಯಾವಾಗ । **ತ್ವಾಂ**—ನಿನ್ನನ್ನು । **ಸ್ರುಚಃ**—ಹೋಮಮಾಡುವ ಜುಹ್ವಾದಿಪಾತ್ರೆಗಳು **ಸಮಸ್ಥಿರನ್**—ಹೋಮಾರ್ಥವಾಗಿ ಸಮೀಪಿಸುವವೋ ಆಗ । **ಘೃತಾನಿ**—ನಮ್ಮಿಂದ ಅರ್ಪಿಸಲ್ಪಡುವ ಘೃತಸಹಿತವಾದ ಹವಿರಾದಿಗಳನ್ನು (ಸ್ವೀಕರಿಸಿ) । **ಪ್ರತಿ ಮೋದಸೇ**—ಹರ್ಷಿತನಾಗು ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮಿಂದ ವಿಶೇಷರೀತಿಯಲ್ಲಿ ಪ್ರಾರ್ಥಿತನಾಗಿ ಆಹ್ವಾನಿಸಲ್ಪಡುವ ನೀನು ಅರಣಿಗಳಲ್ಲಿ ಉತ್ಪನ್ನನಾಗುವೆ. ಹೋಮ ಮಾಡುವುದಕ್ಕಾಗಿ ಆಜ್ಯಪೂರಿತವಾದ ಜುಹ್ವಾದಿಪಾತ್ರೆಗಳು (ಸೌಟುಗಳು) ಯಾವಾಗ ನಿನ್ನನ್ನು ಹೋಮಾರ್ಥವಾಗಿ ಸಮೀಪಿಸುವವೋ ಆಗ ನಾವು ಅರ್ಪಿಸುವ ಘೃತಸಹಿತವಾದ ಹವಿರಾದಿಗಳನ್ನು ಸ್ವೀಕರಿಸಿ ಹರ್ಷವನ್ನು ಹೊಂದು

English Translation

You spring up when piously invoked, you delight in the oblation when the ladles are brought near you.

॥ ಸಂಹಿತಾಪಾಠಃ ॥

ಸ ಆಹುತೋ ವಿ ರೋಚತೇಽಗ್ನಿರೀಳೇನ್ಯೋ ಗಿರಾ ।
ಸ್ರುಚಾ ಪ್ರತೀಕಮಜ್ಯತೇ ॥ ೩ ॥

॥ ಪದಪಾಠಃ ॥

ಸಃ । ಆऽಹುತಃ । ವಿ । ರೋಚತೇ । ಅಗ್ನಿಃ । ಈಳೇನ್ಯಃ । ಗಿರಾ ।
ಸ್ರುಚಾ । ಪ್ರತೀಕಂ । ಅಜ್ಯತೇ ॥ ೩ ॥

॥ ಸಾಯಣಭಾಷ್ಯಂ ॥

**ಆಹುತ ಆಭಿಮುಖ್ಯೇನ ಹುತಃ ॥ ಗತಿರನಂತರ ಇತಿ ಗತೇಃ ಪ್ರಕೃತಿಸ್ವರಃ ॥ ಗಿರಾ ಸ್ತುತಿಲಕ್ಷಣಯಾ ವಾಚೇಳೇನ್ಯಃ ಸ್ತೋತವ್ಯಃ ಸೋಽಗ್ನಿರ್ವಿ ರೋಚತೇ । ಅತ್ಯರ್ಥಂ ದೀಪ್ಯತೇ । ತಥಾ ಪ್ರತೀಕಂ ಸರ್ವೇಷಾಂ ದೇವಾನಾಂ ಪೂರ್ವಮೇವ ಸ್ರುಚಾ ಘೃತಸಹಿತಯಾಜ್ಯತೇ । ಸಿಚ್ಯತೇ ॥**

॥ ಪ್ರತಿಪದಾರ್ಥ ॥

**ಆಹುತಃ**—ಅಭಿಮುಖವಾಗಿ ಆಹುತಿಯನ್ನು ಅರ್ಪಿಸಲ್ಪಡುವವನೂ । **ಗಿರಾ**—ಸ್ತುತಿರೂಪವಾದ ವಾಕ್ಯದಿಂದ । **ಈಳೇನ್ಯಃ**—ಸ್ತುತಿಸಲ್ಪಡುವವನೂ ಆದ । **ಸಃ ಅಗ್ನಿಃ**—ಆ ಅಗ್ನಿಯು । **ವಿ ರೋಚತೇ**—ಅತಿಶಯವಾಗಿ ಪ್ರಕಾಶಿಸುತ್ತಾನೆ । **ಪ್ರತೀಕಂ**—(ಎಲ್ಲಾ ದೇವತೆಗಳಿಗಿಂತಲೂ) ಪೂರ್ವಭಾವಿಯಾಗಿ । **ಸ್ರುಚಾ**—ಘೃತಸಹಿತವಾದ ಸ್ರುಕ್ಪಾತ್ರೆಯಿಂದ । **ಅಜ್ಯತೇ**—ಸೇಕಿಸಲ್ಪಡುತ್ತಾನೆ ।

॥ ಭಾವಾರ್ಥ ॥

ಅಭಿಮುಖವಾಗಿ ಆಹುತಿಯನ್ನರ್ಪಿಸಲ್ಪಡುವವನೂ, ಸ್ತುತಿರೂಪವಾದ ವಾಕ್ಯದಿಂದ ಪ್ರಶಂಸಿಸಲ್ಪಡುವವನೂ ಆದ ಅಗ್ನಿಯು ಎಲ್ಲಾ ದೇವತೆಗಳಿಗಿಂತಲೂ ಮೊದಲೇ ಘೃತಪೂರಿತವಾದ ಸ್ರುಕ್ಪಾತ್ರೆಯಿಂದ ಹೋಮಾರ್ಥವಾಗಿ ಸೇಕಿಸಲ್ಪಡುತ್ತಾನೆ.

## English Translation.

Agni, who is to be glorified with the voice (of praise), blazes up when invoked, he is sprinkled with the ladle before (the other goods)

॥ ವಿಶೇಷವಿಷಯಗಳು ॥

ಹೋಮಮಾಡುವಾಗ ಇತರ ಎಲ್ಲಾ ದೇವತೆಗಿಂತಲೂ ಪೂರ್ವಭಾವಿಯಾಗಿಯೇ ಅಗ್ನಿಗೆ ಆಜ್ಯಪೂರಿತವಾದ ಸ್ರುಕ್ಪಾತ್ರೆಯಿಂದ ಹೋಮಮಾಡುವರು. ಅಗ್ನಿಯನ್ನುದ್ದೇಶಿಸಿ ಆಜ್ಯದಿಂದ ಹೋಮಮಾಡಿದನಂತರವೇ ಇತರ ದೇವತೆಗಳಿಗೆ ಅಗ್ನಿಯ ಮೂಲಕವೇ ಆಹುತಿಗಳನ್ನು ಅರ್ಪಿಸುವರು.

॥ ಸಂಹಿತಾಪಾಠಃ ॥

ಘೃತೇನಾಗ್ನಿಃ ಸಮಜ್ಯತೇ ಮಧುಪ್ರತೀಕ ಆಹುತಃ ।
ರೋಚಮಾನೋ ವಿಭಾವಸುಃ ॥ ೪ ॥

॥ ಪದಪಾಠಃ ॥

ಘೃತೇನ । ಅಗ್ನಿಃ । ಸಂ । ಅಜ್ಯತೇ । ಮಧುಽಪ್ರತೀಕಃ । ಆಽಹುತಃ ।
ರೋಚಮಾನಃ । ವಿಭಾಽವಸುಃ ॥ ೪ ॥

॥ ಸಾಯಣಭಾಷ್ಯಂ ॥

ಅಗ್ನಿರ್ಘೃತೇನ ಹವಿಷಾ ಸಮಜ್ಯತೇ । ಸಮ್ಯಕ್ ಸಿಕ್ತೋ ಭವತಿ । ಕೀದೃಶಃ । ಮಧುಪ್ರತೀಕೋ ಘೃತಪ್ರಯುಕ್ತಾವಯವಃ ಆಹುತಃ ಸ್ತುತಿಭಿರ್ಹವಿರ್ಭಿರ್ವಾ ರೋಚಮಾನೋ ದೀಪ್ಯಮಾನಃ ವಿಭಾವಸುಃ ಸ್ವದೀಪ್ತ್ಯಾ ಸರ್ವಮಾಚ್ಛಾದಯನ್ । ಯದ್ವಾ । ದೀಪ್ತಿರೇವ ಧನಂ ಯಸ್ಯ ಸಃ ॥

|| ಪ್ರತಿಪದಾರ್ಥ ||

**ಮಧುಪ್ರತೀಕಃ**—ಘೃತದಿಂದ ಸಿಕ್ತವಾದ ಅವಯುವಗಳುಳ್ಳವನೂ | **ಆಹುತಃ**—ಸ್ತೋತ್ರಗಳಿಂದಲೂ ಹವಿರಾದಿಗಳಿಂದಲೂ ಪ್ರಾರ್ಥಿಸಿ ಕರೆಯಲ್ಪಡುವವನೂ | **ರೋಚಮಾನಃ**—ಕಾಂತಿಯಿಂದ ಬೆಳಗುವವನೂ | **ವಿಭಾವಸುಃ**—ಸ್ವಪ್ರಕಾಶದಿಂದ ಸರ್ವವನ್ನೂ ಆವರಿಸುವವನೂ ಅಥವಾ ದೀಪ್ತಿಯೇ ಧನವಾಗಿವುಳ್ಳವನೂ ಆದ | **ಅಗ್ನಿಃ**—ಅಗ್ನಿಯು | **ಘೃತೇನ**—ಘೃತದಿಂದ (ತುಪ್ಪದಿಂದ) | **ಸಂ ಅಜ್ಯತೇ**—ಚೆನ್ನಾಗಿ ಸೇಕಿಸಲ್ಪಡುತ್ತಾನೆ.

|| ಭಾವಾರ್ಥ ||

ಘೃತದಿಂದ ನೆನೆಸಲ್ಪಟ್ಟ ಅವಯುವಗಳುಳ್ಳವನೂ, ಸ್ತೋತ್ರಗಳಿಂದಲೂ ಹವಿರಾದಿಗಳಿಂದಲೂ ಪ್ರಾರ್ಥಿಸಿ ಕರೆಯಲ್ಪಡುವವನೂ, ದಿವ್ಯಕಾಂತಿಯಿಂದ ಬೆಳಗುವವನೂ ಸ್ವಪ್ರಕಾಶದಿಂದ ಸಮಸ್ತವನ್ನೂ ಆವರಿಸುವವನೂ ಆದ ಅಗ್ನಿಯು ಘೃತದಿಂದ ಚೆನ್ನಾಗಿ ಸೇಕಿಸಲ್ಪಡುತ್ತಾನೆ.

English Translation.

Agni is anointed with butter, having a face of honey, invoked, radiant irradiating all.

|| ವಿಶೇಷವಿಷಯಗಳು ||

ಅಗ್ನಿಯಲ್ಲಿ ಘೃತ (ತುಪ್ಪ) ದಿಂದ ಹೋಮಮಾಡುವುದರಿಂದ ಅಗ್ನಿಯ ಅವಯುವಗಳು ಎಂದರೆ ಅಗ್ನಿಯು ಘೃತದಿಂದ ನೆನೆಯುತ್ತದೆ. ಅಗ್ನಿಯಲ್ಲಿ ಹೋಮಮಾಡಿದ ತುಪ್ಪವು ಬಿದ್ದು ಅಗ್ನಿಯ ಬಹುಭಾಗವು ನೆನೆದಿರುವುದರಿಂದ ತುಪ್ಪದಿಂದ ನೆನೆದ ಅವಯುವಗಳುಳ್ಳವನು ಎಂದು ಇಲ್ಲಿ ಹೇಳಿದೆ. **ವಿಭಾವಸುಃ** ಎಂದರೆ ಸ್ವಪ್ರಕಾಶದಿಂದ ಸರ್ವವನ್ನೂ ಆವರಿಸುವವನು ಅಥವಾ ಅಗ್ನಿಯ ಮುಖ್ಯಗುಣವು ಪ್ರಕಾಶವೇ ಆಗಿರುವುದರಿಂದ ಇಲ್ಲಿ ವಿಭಾವಸುಃ—ಪ್ರಕಾಶವೇ ಧನವಾಗಿ ಉಳ್ಳವನು ಎಂಬ ವಿಶೇಷಣದಿಂದ ವರ್ಣಿಸಲಾಗಿದೆ **ಘೃತೇನ ಸಮಜ್ಯತೇ** ಎಂದರೆ ಹೋಮಮಾಡುವಾಗ ಬಹಳ ಘೃತವು ಅಗ್ನಿಯಲ್ಲಿ ಆಹುತಿರೂಪದಲ್ಲಿ ಸುರಿಯಲ್ಪಟ್ಟು ಅಗ್ನಿಯು ಘೃತದಿಂದ ನೆನೆಯುತ್ತದೆ ಎಂದಭಿಪ್ರಾಯವು.

|| ಸಂಹಿತಾಪಾಠಃ ||

ಜರಮಾಣಃ ಸಮಿಧ್ಯಸೇ ದೇವೇಭ್ಯೋ ಹವ್ಯವಾಹನ |
ತಂ ತ್ವಾ ಹವಂತ ಮರ್ತ್ಯಾಃ || ೫ ||

|| ಪದಪಾಠಃ ||

ಜರಮಾಣಃ | ಸಂ | ಇಧ್ಯಸೇ | ದೇವೇಭ್ಯಃ | ಹವ್ಯऽವಾಹನ |
ತಂ | ತ್ವಾ | ಹವಂತ | ಮರ್ತ್ಯಾಃ || ೫ ||

|| ಸಾಯಣಭಾಷ್ಯಂ ||

**ಅಪ್ತೋರ್ಯಾಮೇ ಹೋತುರತಿರಿಕ್ತೋಕ್ಥೇ ಜರಮಾಣಃ ಸಮಿಧ್ಯಸ ಇತ್ಯನುರೂಪಸ್ತೃಚಃ। ಸೂತ್ರಿತಂ ಚ। ಜರಾಬೋಧ ತದ್ವಿವಿಡ್ಢಿ ಜರಮಾಣಃ ಸಮಿಧ್ಯಸೇ। ಆ. ೯-೧೧। ಇತಿ ||**

**ಹೇ ಹವ್ಯವಾಹನ ಹವ್ಯಾನಾಂ ಪ್ರಾಪಯಿತಃ || ಹವ್ಯೇಽನಂತಃ ಪಾದಂ। ಪಾ. ೩-೨-೬೬। ಇತಿ ಞ್ಯುಟ್ || ಜರಮಾಣಃ ಸ್ತೋತೃಭಿಃ ಸ್ತೂಯಮಾನಃ। ಜರತಿಃ ಸ್ತುತಿಕರ್ಮಾ। ಸ ತ್ವಂ ದೇವೇಭ್ಯೋ ದೇವಾರ್ಥಂ ಸಮಿಧ್ಯಸೇ। ಹವಿರ್ಭಿಃ ಸಮ್ಯಗ್ದೀಪ್ಯಸೇ। ತಂ ತಾದೃಶಂ ತ್ವಾ ತ್ವಾಂ ಮರ್ತ್ಯಾ ಮನುಷ್ಯೇಷು ಸಾಧವೋ ಯಜಮಾನಾ ಹವಂತೇ। ಆಹ್ವಯಂತಿ || ಹ್ವಯತೇರ್ಲಟಿ ಬಹುಲಂ ಛಂದಸೀತಿ ಸಂಪ್ರಸಾರಣಂ ||**

|| ಪ್ರತಿಪದಾರ್ಥ ||

**ಹವ್ಯವಾಹನ**—(ದೇವತೆಗಳಿಗೆ)ಹವಿಸ್ಸನ್ನು ವಹಿಸುವ ಎಲೈ ಅಗ್ನಿಯೇ। **ಜರಮಾಣಃ**—ಸ್ತೋತೃಜನರಿಂದ ಸ್ತುತಿಸಲ್ಪಡುವ ನೀನು। **ದೇವೇಭ್ಯಃ**—ದೇವತೆಗಳಿಗಾಗಿ(ದೇವಃಕಾರ್ಯಗಳಿಗಾಗಿ)। **ಸಂ ಇಧ್ಯಸೇ**—ಹವಿರಾದಿಗಳಿಂದ ಚೆನ್ನಾಗಿ ಪ್ರಜ್ವಲಿತನಾಗುತ್ತೀಯೆ.। **ತಂ**—ಇಂತಹ ಗುಣಯುಕ್ತನಾದ ನಿನ್ನನ್ನು। **ಮರ್ತ್ಯಾಃ**—ಮಾನವರು ಎಂದರೆ ಯಜ್ಞಮಾಡುವ ಯಜಮಾನರು। **ಹವಂತೆ**—ಪ್ರಾರ್ಥಿಸಿ ಕರೆಯುತ್ತಾರೆ.

|| ಭಾವಾರ್ಥ ||

ದೇವತೆಗಳಿಗೆ ಹವಿಸ್ಸನ್ನು ಒಯ್ಯುವ ಎಲೈ ಅಗ್ನಿಯೇ, ಸ್ತೋತೃಜನರಿಂದ ಸ್ತುತಿಸಲ್ಪಡುವ ನಿನ್ನನ್ನು ದೇವತೆಗಳಿಗಾಗಿ ಎಂದರೆ ದೇವಕಾರ್ಯಾರ್ಥವಾಗಿ ಹವಿರಾದಿಗಳಿಂದ ಉಜ್ಜ್ವಲಗೊಳಿಸುತ್ತಾರೆ (ಧಗಧಗನೆ ಉರಿಯುವಂತೆ ಮಾಡುತ್ತಾರೆ.) ಇಂತಹ ನಿನ್ನನ್ನು ಮಾನವರು ಎಂದರೆ ಯಜಮಾನರು ಪ್ರಾರ್ಥಿಸಿ ಕರೆಯುತ್ತಾರೆ.

## English Translation.

Bearer of oblations, glorified by the worshippers, you are kindled for the gods; as such mortals invoke you.

|| ವಿಶೇಷವಿಷಯಗಳು||

ಅಪ್ತೋರ್ಯಾಮವೆಂಬ ಯಾಗದಲ್ಲಿ ಹೋತೃವು ಪಠಿಸುವ ಅತಿರಿಕ್ತೋಕ್ಥಮಂತ್ರದಲ್ಲಿ **ಜರಮಾಣಃ ಸಮಿಧ್ಯಸೇ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (ಈ ಸೂಕ್ತದ ೫-೭ ಋಕ್ಕುಗಳನ್ನು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಜರಾಬೋಧ ತದ್ವಿವಿಡ್ಢಿ ಜರಮಾಣಃ ಸಮಿಧ್ಯಸೇ ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು.

|| ಸಂಹಿತಾಪಾಠಃ ||

ತಂ ಮರ್ತಾ ಅಮರ್ತ್ಯಂ ಘೃತೇನಾಗ್ನಿಂ ಸಪರ್ಯತ।
ಅದಾಭ್ಯಂ ಗೃಹಪತಿಂ || ೬ ||

|| ಪದಪಾಠಃ ||

ತಂ | ಮರ್ತಾಃ | ಅಮರ್ತ್ಯಂ | ಘೃತೇನ | ಅಗ್ನಿಂ | ಸಪರ್ಯತ |

ಅದಾಭ್ಯಂ | ಗೃಹಽಪತಿಂ || ೬ ||

|| ಸಾಯಣಭಾಷ್ಯಂ ||

ಹೇ ಮರ್ತಾ ಋತ್ವಿಜಃ ಅಮರ್ತ್ಯಂ ಮನುಷ್ಯಧರ್ಮರಹಿತಮಗ್ನಿಂ ಘೃತೇನ ಹವಿಷಾ ಸಪರ್ಯತ | ಪರಿಚರತ || ಸಪರಶಬ್ದಃ ಕಂಡ್ವಾದಿಃ || ಕೀದೃಶಂ | ಅದಾಭ್ಯಂ ಕೈಶ್ಚಿದಪ್ಯಹಿಂಸ್ಯಂ || ದಭೇಶ್ಚೇತಿ ವಕ್ತವ್ಯಂ | ಪಾ. ೩-೧-೧೨೪-೩ | ಇತಿ ಣ್ಯತ್ || ಗೃಹಪತಿಂ ಗೃಹಸ್ಯ ಸ್ವಾಮಿನಂ ಯಜಮಾನರೂಪಂ || ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರಃ ||

|| ಪ್ರತಿಪದಾರ್ಥ ||

**ಮರ್ತಾಃ**—ಮಾನವರಾದ ಎಲೈ ಋತ್ವಿಜರೇ | **ಅಮರ್ತ್ಯಂ**—ಮನುಷ್ಯ ಧರ್ಮರಹಿತನಾದ (ಮರಣ ರಹಿತನಾದ) ವನೂ | **ಅದಾಭ್ಯಂ**—ಯಾರಿಂದಲೂ ಹಿಂಸಿಸಲ್ಪಡದಿರುವವನೂ | **ಗೃಹಪತಿಂ**—ಗೃಹಕ್ಕೆ ಒಡೆಯ ನಾದವನೂ ಆದ | **ಅಗ್ನಿಂ**—ಅಗ್ನಿಯನ್ನು | **ಘೃತೇನ**—ಘೃತದಿಂದ (ಹವಿಸ್ಸಿನಿಂದ) | **ಸಪರ್ಯತ**—ಸೇವಿಸಿರಿ.

|| ಭಾವಾರ್ಥ ||

ಮಾನವರಾದ ಎಲೈ ಋತ್ವಿಜರೇ, ಮರಣಧರ್ಮರಹಿತನೂ ಯಾರ ಬಾಧೆಗೂ ಒಳಗಾಗದವನೂ, ಗೃಹಕ್ಕೆ ಯಜಮಾನನಂತೆ ಒಡೆಯನೂ ಆಗಿರುವ ಅಗ್ನಿಯನ್ನು ಘೃತಮಿಶ್ರಿತ ಹವಿಸ್ಸಿನಿಂದ ಸೇವಿಸಿರಿ.

## English Translation

Mortals, worship with ghi the immortal agni, the indestructible, the master of the mansion.

|| ಸಂಹಿತಾಪಾಠಃ ||

ಅದಾಭ್ಯೇನ ಶೋಚಿಷಾಗ್ನೇ ರಕ್ಷಸ್ತ್ವಂ ದಹ |

ಗೋಪಾ ಋತಸ್ಯ ದೀದಿಹಿ || ೭ ||

|| ಪದಪಾಠಃ ||

ಅದಾಭ್ಯೇನ | ಶೋಚಿಷಾ | ಅಗ್ನೇ | ರಕ್ಷಃ | ತ್ವಂ | ದಹ |

ಗೋಪಾಃ | ಋತಸ್ಯ | ದೀದಿಹಿ || ೭ ||

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಮದಾಭ್ಯೇನಾಹಿಂಸ್ಯೇನ ಶೋಚಿಷಾ ತೇಜಸಾ ರಕ್ಷಃ । ಜಾತಾವೇಕವಚನಂ । ಸರ್ವಾನ್ರಾಕ್ಷಸಾನ್ದಹ । ವಿನಾಶಯ । ಕಿಂಚರ್ತಸ್ಯ ಯಜ್ಞಸ್ಯ ಗೋಪಾ ಗೋಪಾಯಿತಾ ಸನ್ ದೀದಿಹಿ । ದೀಪ್ಯಸ್ವ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಅಧಾಭ್ಯೇನ**—ನಿರ್ಬಾಧಿತವಾದ । **ಶೋಚಿಷಾ**—(ನಿನ್ನ) ತೇಜಸ್ಸಿನಿಂದ । **ರಕ್ಷಃ**—ಸಮಸ್ತರಾಕ್ಷಸರನ್ನೂ । **ದಹ**—ಸುಟ್ಟು ಭಸ್ಮಮಾಡು । **ಋತಸ್ಯ**—ಯಜ್ಞದ । **ಗೋಪಾಃ**—ಸಂರಕ್ಷಕನಾಗಿ । **ದೀದಿಹಿ**—ಅತಿಶಯವಾಗಿ ಪ್ರಕಾಶಿಸು ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ನಿರ್ಬಾಧಿತವಾದ ಎಂದರೆ ಯಾರಿಂದಲೂ ಸಹಿಸಲಶಕ್ಯವಾದ ನಿನ್ನ ತೇಜಸ್ಸಿನಿಂದ ಸಮಸ್ತ ರಕ್ಷೋಗಣಗಳನ್ನು ದಹಿಸು ಯಜ್ಞದ ಸಂರಕ್ಷಕನಾಗಿ ಬೆಳಗು.

English Translation

Wito your indestuctible flame, agni, consume the rakshasas ; shine, the defender of the sacrifice.

॥ ಸಂಹಿತಾಪಾಠಃ ॥

ಸ ತ್ವಮಗ್ನೇ ಪ್ರತೀಕೇನ ಪ್ರತ್ಯೋಷ ಯಾತುಧಾನ್ಯಃ ।

ಉರುಕ್ಷಯೇಷು ದೀದ್ಯತ್ ॥ ೮ ॥

॥ ಪದಪಾಠಃ ॥

ಸಃ । ತ್ವಂ । ಅಗ್ನೇ । ಪ್ರತೀಕೇನ । ಪ್ರತಿ । ಓಷ । ಯಾತುऽಧಾನ್ಯಃ ।

ಉರುऽಕ್ಷಯೇಷು । ದೀದ್ಯತ್ ॥ ೮ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಸ ತ್ವಂ ಪ್ರತೀಕೇನ ತ್ವದವಯವಭೂತೇನ ತೇಜಸಾ ಯಾತುಧಾನ್ಯೋ ಯಾತುಧಾನೀ ರಾಕ್ಷಸೀಃ ಪ್ರತ್ಯೋಷ । ಪ್ರತಿಕೂಲಂ ದಹ ॥ ಉಷ ದಾಹೇ ಭೌವಾದಿಕಃ । ಲೋಟಿ ಹೇರ್ಲುಕ್ । ಜಾತೇರಸ್ತ್ರೀವಿಷಯಾತ್ । ಪಾ. ೪-೧-೬೩ । ಇತಿ ಯಾತುಧಾನಶಬ್ದಸ್ಯ ಙೀಷ್ । ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ ॥ ಕಿಂ ಕುರ್ವನ್ । ಉರುಕ್ಷಯೇಷು ವಿಸ್ತೀರ್ಣೇಷು ನಿವಾಸೇಷ್ವಾಹವನೀಯಾದಿಷು ದೀದ್ಯದ್ದೀಪ್ಯಮಾನಃ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸಃ ತ್ವಂ** – ಅಂತಹ ನೀನು । **ಪ್ರತೀಕೇನ**—ನಿನ್ನ ಅವಯವಭೂತವಾದ ತೇಜಸ್ಸಿನಿಂದ । **ಉರುಕ್ಷಯೇಷು**—ವಿಸ್ತಾರವಾದ (ಅಥವಾ ಅನೇಕ) ಆಹವನೀಯಾದಿ ಅಗ್ನಿಕುಂಡಗಳಲ್ಲಿ । **ದೀದ್ಯತ್**—ಬೆಳಗುತ್ತಾ । **ಯಾತುಧಾನ್ಯಃ**—ಯಾತುಧಾನಿಯರೆಂಬ ರಾಕ್ಷಸಸ್ತ್ರೀಗಣಗಳನ್ನು । **ಪ್ರತಿ ಓಷ**—ಮೃತರಾಗುವಂತೆ ದಹಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ನಿನ್ನ ಅವಯವದಂತಿರುವ ತೇಜಸ್ಸಿನಿಂದ ವಿಸ್ತಾರವಾದ ಆಹವನೀಯಾದಿ ಯಜ್ಞಕುಂಡಗಳಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಾ ಯಾತುಧಾನಿಯರೆಂಬ ಸ್ತ್ರೀರಾಕ್ಷಸರನ್ನು ಚೆನ್ನಾಗಿ ದಹಿಸು.

## English Translation.

Do you, Agni with your brightness, consume the female fiends, shining in your outspread dwellings.

॥ ವಿಶೇಷವಿಷಯಗಳು ॥

ಯಾತುಧಾನರು ಮತ್ತು ಯಾತುಧಾನಿಯರ ವಿಷಯವನ್ನು ಈ ಸೂಕ್ತದ ಪೀಠಿಕೆಯಲ್ಲಿ ವಿವರಿಸಲಾಗಿದೆ.

॥ ಸಂಹಿತಾಪಾಠಃ ॥

ತಂ ತ್ವಾ ಗೀರ್ಭಿರುರುಕ್ಷಯಾ ಹವ್ಯವಾಹಂ ಸಮೀಧಿರೇ ।
ಯಜಿಷ್ಠಂ ಮಾನುಷೇ ಜನೇ ॥ ೯ ॥

॥ ಪದಪಾಠಃ ॥

ತಂ । ತ್ವಾ । ಗೀಃऽಭಿಃ । ಉರುऽಕ್ಷಯಾಃ । ಹವ್ಯऽವಾಹಂ । ಸಂ । ಈಧಿರೇ ।
ಯಜಿಷ್ಠಂ । ಮಾನುಷೇ । ಜನೇ ॥ ೯ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಉರುಕ್ಷಯಾ ಬಹುನಿವಾಸಾ ಯಜಮಾನಾ ಹವ್ಯವಾಹಂ ಹವಿಷಾಂ ವೋಢಾರಂ ಮಾನುಷೇ ಮನುಷ್ಯಸಂಬಂಧಿನಿ ಜನೇ ಜನಮಧ್ಯೇ ಯಜಿಷ್ಠಂ ಯಷ್ಟೃತಮಂ ತಂ ತ್ವಾ ತ್ವಾಂ ಗೀರ್ಭಿಃ ಸ್ತುತಿಭಿಸ್ತತ್ಸಹಿತೈರ್ಹವಿರ್ಭಿಃ ಸಮೀಧಿರೇ । ಸಮ್ಯಗದೀದಿಪನ್ ॥ ಇಂಧೇರ್ಲಿಟೀಂಧಿಭವತಿಭ್ಯಾಂ ಚೇತಿ ಕಿತ್ತ್ವೇ ನಲೋಪಃ ॥**

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಉರುಕ್ಷಯಾಃ**—ಅನೇಕಗೃಹಗಳಲ್ಲಿ ವಾಸಮಾಡುವ ಯಜಮಾನರು । **ಹವ್ಯವಾಹಂ**—ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನೂ । **ಮಾನುಷೇ ಜನೇ**—ಮಾನವರ ಮಧ್ಯದಲ್ಲಿ । **ಯಜಿಷ್ಠಂ**—ಅತ್ಯಂತ ಪೂಜಾರ್ಹನೂ ಆದ । **ತಂ ತ್ವಾ**—ನಿನ್ನನ್ನು । **ಗೀರ್ಭಿಃ**—ಸ್ತುತಿಗಳಿಂದಲೂ ಹವಿರಾದಿಗಳಿಂದಲೂ **ಸಮೀಧಿರೇ**—ಅತಿಶಯವಾಗಿ ಪ್ರಜ್ವಲನಗೊಳಿಸುತ್ತಾರೆ. ।

॥ ಭಾವಾರ್ಥ ॥

ನಾನಾಗೃಹಗಳಲ್ಲಿ ವಾಸಿಸುವ ಅನೇಕಯಜಮಾನರು ತಮ್ಮ ಯಜ್ಞಗೃಹಗಳಲ್ಲಿ ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನೂ, ಮಾನವರ ಮಧ್ಯದಲ್ಲಿ ಅತ್ಯಂತ ಪೂಜಾರ್ಹನೂ ಎಂದರೆ ಗೌರವಿಸಲ್ಪಡುವವನೂ ಆದ ನಿನ್ನನ್ನು ಸ್ತುತಿವಾಕ್ಯಗಳಿಂದಲೂ ಹವಿರಾದಿಗಳಿಂದಲೂ ಅತಿಶಯವಾಗಿ ಬೆಳಗುವಂತೆ ಮಾಡುತ್ತಾರೆ.

## English Translation.

The masters of many mansions have, by their praises, kindled you, Agni, the bearer of oblations, who are most adorable among human beings.

## ನೂರ ಹತ್ತೊಂಭತ್ತನೆಯ ಸೂಕ್ತವು



## ಪೀಠಿಕೆ.

ಈ ಸೂಕ್ತಕ್ಕೆ ಲಬನೆಂಬುವನು ಋಷಿಯು. ಒಂದುಸಮಯದಲ್ಲಿ ಲಬಋಷಿಯ ಆಶ್ರಮದಲ್ಲಿ ಇಂದ್ರನು ಲಬಋಷಿಯ ರೂಪವನ್ನೇಧರಿಸಿ ಸೋಮಪಾನಮಾಡಿದನು. ಅದನ್ನು ಇತರ ಋಷಿಗಳು ನೋಡಿದರು. ಆಗ ಲಬ ರೂಪದಿಂದಿದ್ದ ಇಂದ್ರನು ಈ ಸೂಕ್ತದಿಂದ ತನ್ನನ್ನೇ ಪ್ರಶಂಸೆಮಾಡಿಕೊಂಡಿರುವನು.

॥ ಸಾಯಣಭಾಷ್ಯಂ ॥

**ಇತಿ ವಾ ಇತಿ ತ್ರಯೋದಶರ್ಚಂ ಸಪ್ತಮಂ ಸೂಕ್ತಂ ಗಾಯತ್ರಂ । ಇಂದ್ರೋ ಲಬರೂಪಮಾಸ್ಥಾಯ ಸೋಮಪಾನಂ ಕುರ್ವನ್ ತದಾನೀಮೃಷಿಭಿಃ ದೃಷ್ಟಃ ಸನ್ ಸ್ವಾತ್ಮಾನಮನೇನ ಸೂಕ್ತೇನಾಸ್ತಾವೀತ್ । ಅತೋ ಲಬರೂಪಾಪನ್ನ ಇಂದ್ರ ಋಷಿಃ । ಸ ಏವ ದೇವತಾ । ತಥಾ ಚಾನುಕ್ರಮ್ಯತೇ । ಇತಿ ವೈ ಸಪ್ತೋನೈಂದ್ರೋ ಲಬ ಆತ್ಮಾನಂ ತುಷ್ಟಾವೇತಿ ॥ ಗತೋ ವಿನಿಯೋಗಃ ॥**

ಅನುವಾದವು— **ಇತಿ ವೈ** ಎಂಬ ಈ ಸೂಕ್ತವು ಹತ್ತನೆಯ ಅನುವಾದಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಒಂದು ಸಮಯದಲ್ಲಿ ಇಂದ್ರನು ಲಬಋಷಿಯ ರೂಪದಿಂದ ಸೋಮಪಾನಮಾಡು

ತ್ತಿರುವಾಗ ಇತರ ಋಷಿಗಳು ಅದನ್ನು ಕಂಡರು. ಆಗ ಇಂದ್ರನು ಆ ರೂಪದಿಂದಲೇ ತನ್ನನ್ನು ಸ್ತುತಿಸಿರುವನು. ಆದ್ದರಿಂದ ಈ ಸೂಕ್ತಕ್ಕೆ ಲಬರೂಪಧರನಾದ ಇಂದ್ರನೇ ಋಷಿಯು, ದೇವತೆಯೂ ಅವನೇ; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ-ಇತಿ ವೈ ಸಪ್ತೋನೈಂದ್ರೋ ಲಬ ಆತ್ಮಾನಂ ತುಷ್ಟಾವ ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೧೯

ಮಂಡಲ—೧೦ ‖ ಅನುವಾಕ—೧೦ ‖ ಸೂಕ್ತ—೧೧೯ ‖

ಅಷ್ಟಕ—೮ ‖ ಅಧ್ಯಾಯ—೬ ‖ ವರ್ಗ—೨೬, ೨೭ ‖

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ‖

ಋಷಿಃ—ಲಬ ಐಂದ್ರಃ ‖

ದೇವತಾ—ಆತ್ಮಸ್ತುತಿಃ ‖

ಛಂದಃ—ಗಾಯತ್ರೀ ‖

‖ ಸಂಹಿತಾಪಾಠಃ ‖

ಇತಿ ವಾ ಇತಿ ಮೇ ಮನೋ ಗಾಮಶ್ವಂ ಸನುಯಾಮಿತಿ ।
ಕುವಿತ್ಸೋಮಸ್ಯಾಪಾಮಿತಿ ‖ ೧ ‖

‖ ಪದಪಾಠಃ ‖

ಇತಿ । ವೈ । ಇತಿ । ಮೇ । ಮನಃ । ಗಾಂ । ಅಶ್ವಂ । ಸನುಯಾಂ । ಇತಿ ‖
ಕುವಿತ್ । ಸೋಮಸ್ಯ । ಅಪಾಂ । ಇತಿ ‖ ೧ ‖

‖ ಸಾಯಣಭಾಷ್ಯಂ ‖

ಇತಿ ವಾ ಇತಿ ಖಲ್ವಿತ್ಯೇವಂ ಪ್ರಕಾರೇಣ ಮೇ ಮದೀಯಂ ಮನೋ ವರ್ತತೇ । ತಂ ಪ್ರಕಾರಂ ದರ್ಶಯತಿ । ಗಾಮಶ್ವಂ ಚ ಸನುಯಾಂ ಸ್ತೋತೃಭ್ಯಃ ಪ್ರಯಚ್ಛಾಮೀತಿ ‖ ಷಣು ದಾನೇ ತಾನಾದಿಕಃ ‖ ಇತಿ ಶಬ್ದೋ ಹೇತೌ । ಯಸ್ಮಾತ್ ಕುವಿದ್ಬಹುವಾರಂ ಸೋಮಸ್ಯ ಸೋಮಮಪಾಂ ಪೀತವಾನಸ್ಮಿ ‖ ಕ್ರಿಯಾಗ್ರಹಣಂ ಕರ್ತವ್ಯಮಿತಿ ಸೋಮಸ್ಯ ಸಂಪ್ರದಾನಸಂಜ್ಞಾ । ಚತುರ್ಥ್ಯರ್ಥೇ ಬಹುಲಮಿತಿ ಷಷ್ಠೀ । ಪಾ ಪಾನೇ । ಲುಙಿ ಗಾತಿಸ್ಥೇತಿ ಸಿಚೋ ಲುಕ್ । ಕುವಿದ್ಯೋಗಾದನಿಘಾತಃ ‖

|| ಪ್ರತಿಪದಾರ್ಥ ||

**ಇತಿ ವೈ**—ಹೀಗೆಯೇ | **ಇತಿ**—ಈ ಪ್ರಕಾರವಾಗಿ | (**ಅಹಂ**—ನಾನು ಸ್ತೋತೃಜನರಿಗೆ) | **ಗಾಂ**—ಗೋವನ್ನೂ | **ಅಶ್ವಂ**—ಕುದುರೆಯನ್ನೂ | **ಸನುಯಾಂ**—ಕೊಡುತ್ತೇನೆ | **ಇತಿ**—ಹೀಗೆಂಬುದಾಗಿ | **ಮೇ**—ನನ್ನ | [**ಮನಃ**—ಮನಸ್ಸಿರುವುದು (ಏಕೆಂದರೆ ನಾನು) | **ಕುವಿತ್**—ಅನೇಕಾವರ್ತಿ | **ಸೋಮಸ್ಯ**—ಸೋಮರಸವನ್ನು | **ಅಪಾಂ**—ಪಾನಮಾಡಿದ್ದೇನೆ

|| ಭಾವಾರ್ಥ ||

ನಾನು ಅನೇಕಾವರ್ತಿ ಸೋಮಪಾನಮಾಡಿದ್ದೇನೆ. ಆದರಿಂದ ಹರ್ಷಗೊಂಡ ನಾನು ನನ್ನನ್ನು ಸ್ತೋತ್ರ ಮಾಡುವ ಜನರಿಗೆ ಈ ಪ್ರಕಾರವಾಗಿ ಗೋವನ್ನೂ ಅಶ್ವವನ್ನೂ ಕೊಡುತ್ತೇನೆ. ಹೀಗೆ ಕೊಡಬೇಕೆಂಬುದಾಗಿಯೇ ನನ್ನ ಮನಸ್ಸಿನಲ್ಲಿದೆ.

**English Translation.**

Thus, indeed, thus my mind (resolved): "I will give cows and horses (to my worshippers)," for I have often drunk of the Soma.

|| ಸಂಹಿತಾಪಾಠಃ ||

ಪ್ರ ವಾತಾ ಇವ ದೋಧತ ಉನ್ಮಾ ಪೀತಾ ಅಯಂಸತ |
ಕುವಿತ್ಸೋಮಸ್ಯಾಪಾಮಿತಿ || ೨ ||

|| ಪದಪಾಠಃ ||

ಪ್ರ | ವಾತಾಃऽಇವ | ದೋಧತಃ | ಉತ್ | ಮಾ | ಪೀತಾಃ | ಅಯಂಸತ |
ಕುವಿತ್ | ಸೋಮಸ್ಯ | ಅಪಾಂ | ಇತಿ || ೨ ||

|| ಸಾಯಣಭಾಷ್ಯಂ ||

ದೋಧತೋ ಭೃಶಂ ಕಂಪಯಮಾನಾ ವಾತಾ ಇವ ವಾಯವೋ ಯಥಾ ವೃಕ್ಷಾದೀನುದ್ಯಚ್ಛಂತೇ ತದ್ವತ್ಪೀತಾಃ ಸೋಮಾ ಮಾ ಮಾಂ ಪ್ರಕರ್ಷೇಣೋದಯಂಸತ | ಉದ್ಯಚ್ಛಂತೇ || ಯಮೋಽರ್ಲುಙಿ ಸಮುದಾಙ್ಭ್ಯೋ ಯಮೋಽಗ್ರಂಥೇ | ಪಾ. ೧-೩-೭೫ | ಇತ್ಯಾತ್ಮನೇಪದಂ || ಯಸ್ಮಾದ್ಬಹುವಾರಂ ಸೋಮಮಪಾಂ ||

|| ಪ್ರತಿಪದಾರ್ಥ ||

**ಪ್ರ ದೋಧತಃ**—ವೃಕ್ಷಾದಿಗಳನ್ನು ಬಹುವಾಗಿ ಕಂಪಿಸುವಂತೆ ಮಾಡುವ (ಬೀಸುವ) | **ವಾತ ಇವ**—ಬಿರುಗಾಳಿಯಂತೆ | **ಪೀತಾಃ**—ನಾನು ಪಾನಮಾಡಿದ ಸೋಮರಸಗಳು | **ಮಾ**—ನನ್ನನ್ನು | **ಉತ್**

**ಅಯಂಸತ**—ಮೇಲಕ್ಕೆತ್ತಿ ಉತ್ಸಾಹಯುತನನ್ನಾಗಿ ಮಾಡುತ್ತವೆ। **ಇತಿ**—ಏಕೆಂದರೆ (ನಾನು)। **ಕುವಿತ್**—ಅನೇಕಾವರ್ತಿ (ಅಥವಾ ಬಹಳವಾಗಿ)। **ಸೋಮಸ್ಯ**—ಸೋಮವನ್ನು। **ಅಪಾಂ**—ಪಾನಮಾಡಿದ್ದೇನೆ.

॥ ಭಾವಾರ್ಥ ॥

ವೃಕ್ಷಾದಿಗಳನ್ನು ಬಹಳವಾಗಿ ಕಂಪಿಸುವಂತೆ ಮಾಡುವ ಬಿರುಗಾಳಿಗಳಂತೆ ನಾನು ಪಾನಮಾಡಿದ ಸೋಮ ರಸಗಳು ನನ್ನನ್ನು ಮೇಲೆತ್ತಿ ಉತ್ಸಾಹಿತನನ್ನಾಗಿ ಮಾಡುತ್ತವೆ. ಏಕೆಂದರೆ ನಾನು ಬಹಳವಾಗಿ ಸೋಮವನ್ನು ಪಾನಮಾಡಿದೇನೆ.

## English Translation

Like the winds violently shaking (the trees), the draughts (of Soma) have lifted me up, for I have often drunk of the Soma).

॥ ಸಂಹಿತಾಪಾಠಃ ॥

ಉನ್ಮಾ ಪೀತಾ ಅಯಂಸತ ರಥಮಶ್ವಾ ಇವಾಶವಃ।
ಕುವಿತ್ಸೋಮಸ್ಯಾಪಾಮಿತಿ ॥ ೩ ॥

॥ ಪದಪಾಠಃ ॥

ಉತ್। ಮಾ। ಪೀತಾಃ। ಅಯಂಸತ। ರಥಂ। ಅಶ್ವಾಃಽಇವ। ಆಶವಃ।
ಕುವಿತ್। ಸೋಮಸ್ಯ। ಅಪಾಂ। ಇತಿ ॥ ೩ ॥

॥ ಸಾಯಣಭಾಷ್ಯಂ ॥

**ಪೀತಾಃ ಸೋಮಾ ಮಾಮುದಯಂಸತ। ಉದ್ಯಚ್ಛಂತೇ। ತತ್ರ ದೃಷ್ಟಾಂತಃ। ರಥಮಶ್ವಾ ಇವ ಯಥಾಶವಃ ಕ್ಷಿಪ್ರಗಾಮಿನೋ ಗಮನೇನ ವ್ಯಾಪ್ತಾ ವಾಶ್ವಾ ರಥಮುದ್ಗಮಯಂತಿ ತದ್ವತ್ ॥**

॥ ಪ್ರತಿಪದಾರ್ಥ ॥

**ಆಶವಃ**—ಶೀಘ್ರಗಾಮಿಗಳಾದ। **ಅಶ್ವಾ ಇವ**—ಕುದುರೆಗಳು। **ರಥಂ**—ರಥವನ್ನು ಎತ್ತಿಹಾಕುತ್ತಾ ವಹಿಸುವಂತೆ। **ಪೀತಾಃ**—ನನ್ನಿಂದ ಪಾನಮಾಡಲ್ಪಟ್ಟ ಸೋಮರಸಗಳು। **ಮಾ**—ನನ್ನನ್ನು। **ಉತ್-ಅಯಂಸತ**—ಉತ್ಸಾಹಪೂರಿತನನ್ನಾಗಿ ಮಾಡುತ್ತವೆ। ಇತಿ—ಏಕೆಂದರೆ (ನಾನು)। **ಕುವಿತ್**—ಬಹಳವಾಗಿ। **ಸೋಮಸ್ಯ**—ಸೋಮವನ್ನು। **ಅಪಾಂ**—ಪಾನಮಾಡಿದ್ದೇನೆ।

॥ ಭಾವಾರ್ಥ ॥

ಬೇಗನೆ ಓಡುವ ಕುದುರೆಗಳು ರಥವನ್ನು ಎಳೆಯುವಾಗ ತಮ್ಮ ಶೀಘ್ರಗಮನದಿಂದ ರಥವನ್ನು ಎತ್ತಿ ಹಾಕುತ್ತಿರುವಂತೆ ನಾನು ಪಾನಮಾಡಿದ ಸೋಮರಸಗಳು ನನ್ನನ್ನು ಮೇಲೆತ್ತಿ ಉತ್ಸಾಹಪೂರಿತನನ್ನಾಗಿ ಮಾಡುತ್ತವೆ. ಏಕೆಂದರೆ ನಾನು ಬಹಳವಾಗಿ ಸೋಮಪಾನಮಾಡಿದೇನೆ.

## English Translation.

The draughts (of Soma) have lifted me up like swift horses (drawing) a chariot, for I have often drunk of the Soma.

॥ ಸಂಹಿತಾಪಾಠಃ ॥

ಉಪ ಮಾ ಮತಿರಸ್ಥಿತ ವಾಶ್ರಾ ಪುತ್ರಮಿವ ಪ್ರಿಯಂ ।

ಕುವಿತ್ಸೋಮಸ್ಯಾಪಾಮಿತಿ ॥ ೪ ॥

॥ ಪದಪಾಠಃ ॥

ಉಪ । ಮಾ । ಮತಿಃ । ಅಸ್ಥಿತ । ವಾಶ್ರಾ । ಪುತ್ರಂಽಇವ । ಪ್ರಿಯಂ ।

ಕುವಿತ್ । ಸೋಮಸ್ಯ । ಅಪಾಂ । ಇತಿ ॥ ೪ ॥

॥ ಸಾಯಣಭಾಷ್ಯಂ ॥

ಮತಿಃ ಸ್ತೋತೃಭಿಃ ಕ್ರಿಯಮಾಣಾ ಸ್ತುತಿಕರ್ಮಾ ಮಾಮುಪಾಸ್ಥಿತ । ಸಂಯೋಜಯತಿ ॥ ಉಪಾದ್ದೇವಪೂಜಾಸಂಗತಿಕರಣೇತ್ಯಾತ್ಮನೇಪದಂ ॥ ಕಥಮಿವ । ವಾಶ್ರಾ ಪುತ್ರಮಿವ ಯಥಾ ವಾಶ್ರಾ ಶಬ್ದಾಯಮಾನಾ ಧೇನುಃ ಪ್ರಿಯಂ ಪುತ್ರಂ ವತ್ಸಂ ಸಂಗಚ್ಛತಿ ತದ್ವತ್ ॥

॥ ಪ್ರತಿಪದಾರ್ಥ ॥

**ವಾಶ್ರಾಃ**—ಅರಚುತ್ತಿರುವ ಹಸುಗಳು। **ಪ್ರಿಯಂ**—ತನಗೆ ಪ್ರೀತಿಪಾತ್ರವಾದ । **ಪುತ್ರಮಿವ**—ತನ್ನ ಕರುವಿನ ಬಳಿಗೆ ಹೋಗುವಂತೆ । **ಮತಿಃ**—ಸ್ತೋತೃಜನರು (ಘಟ್ಟಿಯಾಗಿ) ಪಠಿಸುತ್ತಿರುವ ಸ್ತುತಿಯು । **ಮಾ**—ನನ್ನನ್ನು । **ಉಪ ಅಸ್ಥಿತ**—ಸವಿಾಪವರ್ತಿಯಾಗಿ ಸೇರುತ್ತದೆ । **ಇತಿ**—ಏಕೆಂದರೆ (ನಾನು) । **ಕುವಿತ್**—ಬಹಳವಾಗಿ । **ಸೋಮಸ್ಯ**—ಸೋಮವನ್ನು । **ಅಪಾಂ**—ಪಾನಮಾಡಿದ್ದೇನೆ.

॥ ಭಾವಾರ್ಥ ॥

ಹಸುಗಳು ತಮ್ಮ ಪ್ರೀತಿಪಾತ್ರವಾದ ಕರುಗಳ ಬಳಿಗೆ ಅರಚುತ್ತಾ ಹೋಗುವಂತೆ ಸ್ತೋತ್ರಮಾಡುವ ಜನರು ಪಠಿಸುತ್ತಿರುವ ಸ್ತುತಿಯು ನನ್ನ ಬಳಿಗೆ ಬಂದು ಸೇರುತ್ತದೆ. ಏಕೆಂದರೆ ನಾನು ಬಹಳವಾಗಿ ಸೋಮಪಾನ ಮಾಡಿದ್ದೇನೆ.

## English Translation.

The praise (of the pious) has come to me like a lowing cow to her beloved calf, for I have often drunk of the Soma.

|| ಸಂಹಿತಾಪಾಠಃ ||

ಅಹಂ ತಷ್ಟೇವ ವಂಧುರಂ ಪರ್ಯಚಾಮಿ ಹೃದಾ ಮತಿಂ ।
ಕುವಿತ್ಸೋಮಸ್ಯಾಪಾಮಿತಿ || ೫ ||

|| ಪದಪಾಠಃ ||

ಅಹಂ । ತಷ್ಟಾऽಇವ । ವಂಧುರಂ । ಪರಿ । ಅಚಾಮಿ । ಹೃದಾ । ಮತಿಂ ।
ಕುವಿತ್ । ಸೋಮಸ್ಯ । ಅಪಾಂ । ಇತಿ || ೫ ||

|| ಸಾಯಣಭಾಷ್ಯಂ ||

ತಷ್ಟೇವ ತಷ್ಟಾ ಯಥಾ ವಂಧುರಂ ಸಾರಥಿನಿವಾಸಸ್ಥಾನಂ । ತದ್ವಾನ್ಸೋಽಪಲಕ್ಷ್ಯತೇ ತತ್ಸ್ಥಾನಂ ರಥಂ ವಾ ಸಾಧುಕರೋತಿ ತದ್ವದಹಂ ಮತಿಂ ಸ್ತುತಿಂ ಹೃದಾತ್ಮೀಯೇನ ಮನಸಾ ಪರ್ಯಚರಾಮಿ । ಸಾಧುಕರಣಾಯ ಪರಿಗಚ್ಛಾಮಿ ||

|| ಪ್ರತಿಪದಾರ್ಥ ||

ತಷ್ಟೇವ—ಮರಗೆಲಸದವನು (ಅಥವಾ ಶಿಲ್ಪಿಯು) । ವಂಧುರಂ—ರಥದಲ್ಲಿ ಸಾರಥಿಯು ಕುಳಿತುಕೊಳ್ಳುವ ಸ್ಥಾನವನ್ನು (ಮೂಕಿಯನ್ನು) ಚೆನ್ನಾಗಿ ನಿರ್ಮಿಸುವಂತೆ । ಅಹಂ—ನಾನು । ಮತಿಂ—ಸ್ತುತಿಯನ್ನು । ಹೃದಾ—ಮನಸ್ಸಿನಿಂದ ಎಂದರೆ ಮನಃಪೂರ್ವಕವಾಗಿ । ಪರಿ ಅಚಾಮಿ—ಪರಿಗ್ರಹಿಸುತ್ತೇನೆ । ಇತಿ—ಏಕೆಂದರೆ (ನಾನು) । ಕುವಿತ್—ಬಹಳವಾಗಿ । ಸೋಮಸ್ಯ—ಸೋಮವನ್ನು । ಅಪಾಂ—ಪಾನಮಾಡಿದ್ದೇನೆ.

|| ಭಾವಾರ್ಥ ||

ಮರಗೆಲಸದವನು ರಥದಲ್ಲಿ ಸಾರಥಿಯು ಕುಳಿತುಕೊಳ್ಳುವ ಸ್ಥಾನವನ್ನು ಜಾಗರೂಕತೆಯಿಂದ ಚೆನ್ನಾಗಿ ಮಾಡುವಂತೆ ನಾನು ಸ್ತೋತೃಜನರು ಮಾಡುವ ಸ್ತುತಿಯನ್ನು ಮನಃಪೂರ್ವಕವಾಗಿ ಸ್ವೀಕರಿಸುತ್ತೇನೆ. ಏಕೆಂದರೆ ನಾನು ಬಹಳವಾಗಿ ಸೋಮಪಾನಮಾಡಿದ್ದೇನೆ.

English Translation

I revolve the song of praise in my heart as a carpenter (making) a charioteer's seat, for I have often drunk of the Soma.

|| ಸಂಹಿತಾಪಾಠಃ ||

ನಹಿ ಮೇ ಅಕ್ಷಿಪಚ್ಚನಾಚ್ಛಾಂತ್ಸುಃ ಪಂಚ ಕೃಷ್ಟಯಃ ।
ಕುವಿತ್ಸೋಮಸ್ಯಾಪಾಮಿತಿ || ೬ ||

॥ ಪದಪಾಠಃ ॥

ನಹಿ । ಮೇ । ಅಕ್ಷಿऽಪತ್ । ಚನ । ಅಚ್ಛಾಂತ್ಸುಃ । ಪಂಚ । ಕೃಷ್ಟಯಃ ।

ಕುವಿತ್ । ಸೋಮಸ್ಯ । ಅಪಾಂ । ಇತಿ ॥ ೬ ॥

॥ ಸಾಯಣಭಾಷ್ಯಂ ॥

ಚನೇತಿ ನಿಪಾತಸಮುದಾಯೋऽಪ್ಯರ್ಥೇ । ಪಂಚ ಕೃಷ್ಟಯೋऽಪಿ ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಪಂಚ ಜನಾಃ । ಯದ್ವಾ । ದೇವಮನುಷ್ಯಾದಯಃ । ಮೇ ಮದೀಯಮಕ್ಷಿಪಚ್ಚಕ್ಷುಃಪತನಂ ದೃಷ್ಟಿಸಂಚಾರಂ ನಹ್ಯಚ್ಛಾಂತ್ಸುಃ । ನ ಹ್ಯಪವೃಣ್ವಂತಿ । ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತ ಇತಿ ಹಿ ಶ್ರುತೇಃ । ಶತ. ೧೪-೭-೧-೨೩ ॥ ಛದಿ ಅಪವಾರಣೇ । ಚುರಾದೀನಾಮಿತಿ ವಾ ಣ್ಯಂತತ್ವಾದತ್ರ ಣ್ಯಭಾವೇ ಲುಙಿ ಹಲಂತಲಕ್ಷಣಾ ವೃದ್ಧಿಃ । ಪಾ. ೭-೨-೩ ॥ ಯಸ್ಮಾದ್ಬಹುವಾರಂ ಸೋಮಮಪಾಂ ॥

॥ ಪ್ರತಿಪದಾರ್ಥ ॥

**ಚನ**—ಮತ್ತು । **ಪಂಚ ಕೃಷ್ಟಯಃ**—ನಿಷಾದಸಹಿತರಾದ ಬ್ರಾಹ್ಮಣಾದಿ ಪಂಚವರ್ಗದಜನರು ಅಥವಾ ದೇವಮನುಷ್ಯಾದಿ ಐದುವಿಧ ಜನರು । **ಮೇ**—ನನ್ನ । **ಅಕ್ಷಿಪತ್**—ದೃಷ್ಟಿಗೆ ಬೀಳುವುದನ್ನು । **ನಹಿ ಅಚ್ಛಾನ್ಸುಃ**—ತಪ್ಪಿಸಿಕೊಳ್ಳಲಾರರು । **ಇತಿ**—ಏಕೆಂದರೆ (ನಾನು) । **ಕುವಿತ್**—ಬಹಳವಾಗಿ । **ಸೋಮಸ್ಯ**—ಸೋಮವನ್ನು । **ಅಪಾಂ**—ಪಾನಮಾಡಿದ್ದೇನೆ.

॥ ಭಾವಾರ್ಥ ॥

ಇದಲ್ಲದೆ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದರೆಂಬ ಐದು ಗುಂಪಿನ ಜನರು ಅಥವಾ ದೇವ ಮನುಷ್ಯಾದಿ ಐದು ವಿಧ ಜನರು ಸಹ ನನ್ನ ದೃಷ್ಟಿಗೆ ಬೀಳುವುದನ್ನು ತಪ್ಪಿಸಿಕೊಳ್ಳಲಾರರು (ಎಲ್ಲರೂ ನನ್ನ ದೃಷ್ಟಿಗೆ ಬಿದ್ದೇ ಬೀಳುವರು) ಏಕೆಂದರೆ ನಾನು ಬಹಳವಾಗಿ ಸೋಮಪಾನಮಾಡಿದ್ದೇನೆ.

## English Translation.

The five castes have not eluded the glance of my eye, for I have often drunk of the Soma.

॥ ಸಂಹಿತಾಪಾಠಃ ॥

ನಹಿ ಮೇ ರೋದಸೀ ಉಭೇ ಅನ್ಯಂ ಪಕ್ಷಂ ಚನ ಪ್ರತಿ ।

ಕುವಿತ್ಸೋಮಸ್ಯಾಪಾಮಿತಿ ॥ ೭ ॥

॥ ಪದಪಾಠಃ ॥

ನಹಿ । ಮೇ । ರೋದಸೀ ಇತಿ । ಉಭೇ ಇತಿ । ಅನ್ಯಂ । ಪಕ್ಷಂ । ಚನ । ಪ್ರತಿ ।

ಕುವಿತ್ । ಸೋಮಸ್ಯ । ಅಪಾಂ । ಇತಿ ॥ ೭ ॥

॥ ಸಾಯಣಭಾಷ್ಯಂ ॥

ಉಭೇ ರೋದಸೀ ದ್ಯಾವಾಪೃಥಿವ್ಯೌ ಮೇ ಮದೀಯಮನ್ಯಂ ಪಕ್ಷಂ ಚನ ಪಕ್ಷಮಪಿ ಪ್ರತಿ ಸಮಾನೇ ನ ಭವತಃ ॥

॥ ಪ್ರತಿಪದಾರ್ಥ ॥

ಉಭೇ ರೋದಸೀ—ದ್ಯಾವಾಪೃಥಿವಿಗಳೆರಡೂ ಸೇರಿದರೂ । ಮೇ—ನನ್ನ (ಶಕ್ತಿಸಾಮರ್ಥ್ಯಾದಿಗಳಲ್ಲಿ) । ಅನ್ಯಂ ಪಕ್ಷಂ ಚನ—ಅರ್ಧದಷ್ಟೂ ಕೂಡ । ಪ್ರತಿ ನಹಿ—ಸಮನಾಗುವುದಿಲ್ಲ । ಇತಿ—ಏಕೆಂದರೆ (ನಾನು) । ಕುವಿತ್—ಬಹಳವಾಗಿ । ಸೋಮಸ್ಯ—ಸೋಮವನ್ನು । ಅಪಾಂ—ಪಾನಮಾಡಿದ್ದೇನೆ.

॥ ಭಾವಾರ್ಥ ॥

ದ್ಯಾವಾಪೃಥಿವಿಗಳು ಎರಡೂ ಸೇರಿದರೂ ಶಕ್ತಿಸಾಮರ್ಥ್ಯಗಳಲ್ಲಿ ನನ್ನನ್ನು ಅರ್ಧದಷ್ಟೂ ಸರಿಗಟ್ಟಲಾರವು. ಏಕೆಂದರೆ ನಾನು ಬಹಳವಾಗಿ ಸೋಮಪಾನಮಾಡಿದ್ದೇನೆ.

## English Translation.

Both heaven and earth (are) not equal to one half of me, for I have often drunk of tne Soma.

॥ ಸಂಹಿತಾಪಾಠಃ ॥

ಅಭಿ ದ್ಯಾಂ ಮಹಿನಾ ಭುವಮಭೀ೩ಮಾಂ ಪೃಥಿವೀಂ ಮಹೀಂ ।

ಕುವಿತ್ಸೋಮಸ್ಯಾಪಾಮಿತಿ ॥ ೮ ॥

॥ ಪದಪಾಠಃ ॥

ಅಭಿ । ದ್ಯಾಂ । ಮಹಿನಾ । ಭುವಂ । ಅಭಿ । ಇಮಾಂ । ಪೃಥಿವೀಂ । ಮಹೀಂ ।

ಕುವಿತ್ । ಸೋಮಸ್ಯ । ಅಪಾಂ । ಇತಿ ॥ ೮ ॥

॥ ಸಾಯಣಭಾಷ್ಯಂ ॥

ಉಕ್ತಮರ್ಥಂ ಪ್ರತಿಪಾದಯತಿ । ಮಹಿನಾ ಮಹಿಮ್ನಾತ್ಮೀಯೇನ ದ್ಯಾಂ ದ್ಯುಲೋಕಮಭಿ ಭುವಂ । ಅಭಿಭವಾಮಿ । ತಥಾ ಮಹೀಂ ಮಹತೀಮಿಮಾಂ ಪೃಥಿವೀಂ ಸ್ವಮಹಿಮ್ನಾಭಿ ಭವಾಮಿ ॥ ಭವತೇರ್ಲಙಿ ಛಾಂದಸೋ ವಿಕರಣಸ್ಯ ಲುಕ್ । ಭೂಸುವೋಸ್ತಿಙ'ೀತಿ ಗುಣೇ ಪ್ರತಿಷಿದ್ಧ ಉವಙಾದೇಶಃ ॥

॥ ಪ್ರತಿಪದಾರ್ಥ ॥

**ಮಹಿನಾ**—ನಾನು ನನ್ನ ಸ್ವಸಾಮರ್ಥ್ಯದಿಂದ ಅಥವಾ ಮಹಿಮೆಯಿಂದ । **ದ್ಯಾಂ**—ದ್ಯು (ಸ್ವರ್ಗ) ಲೋಕವನ್ನು । **ಅಭಿ ಭುವಂ**—ಸೋಲಿಸಿದ್ದೇನೆ (ಹಾಗೆಯೇ) । **ಮಹೀಂ**—ವಿಸ್ತಾರವಾದ । **ಇಮಾಂ ಪೃಥಿವೀಂ**— ಈ ಭೂಮಿಯನ್ನೂ । **ಅಭಿ**—ಸೋಲಿಸಿದ್ದೇನೆ । **ಇತಿ**—ಏಕೆಂದರೆ (ನಾನು) ।**ಕುವಿತ್**—ಬಹಳವಾಗಿ । **ಸೋಮಸ್ಯ**—ಸೋಮವನ್ನು । **ಅಪಾಂ**—ಪಾನಮಾಡಿದ್ದೇನೆ ।

॥ ಭಾವಾರ್ಥ ॥

ನಾನು ನನ್ನ ಮಹಿಮೆಯಿಂದ ದ್ಯು (ಸ್ವರ್ಗ)ಲೋಕವನ್ನು ಮತ್ತು ವಿಸ್ತಾರವಾದ ಈ ಭೂಮಿಯನ್ನು ಸಹ ಪರಾಭವಗೊಳಿಸಿದ್ದೇನೆ. ಏಕೆಂದರೆ ನಾನು ಬಹಳವಾಗಿ ಸೋಮಪಾನಮಾಡಿದ್ದೇನೆ.

## English Translation.

I excel the sky in greatness, (I excel) this great earth; for I have often drunk of the Soma.

॥ ಸಂಹಿತಾಪಾಠಃ ॥

ಹಂತಾಹಂ ಪೃಥಿವೀಮಿಮಾಂ ನಿ ದಧಾನೀಹ ವೇಹ ವಾ ।
ಕುವಿತ್ಸೋಮಸ್ಯಾಪಾಮಿತಿ ॥ ೯ ॥

॥ ಪದಪಾಠಃ ॥

ಹಂತ । ಅಹಂ । ಪೃಥಿವೀಂ । ಇಮಾಂ । ನಿ । ದಧಾನಿ । ಇಹ । ವಾ । ಇಹ । ವಾ ।
ಕುವಿತ್ । ಸೋಮಸ್ಯ । ಅಪಾಂ । ಇತಿ ॥ ೯ ॥

॥ ಸಾಯಣಭಾಷ್ಯಂ ॥

ಹಂತೇತಿ ಸಂಭಾವನಾಯಾಮನುಜ್ಞಾಯಾಂ ವಾ । ಸಂಭಾವಯಾಮ್ಯೇತದನುಜಾನಾಮಿ ವಾ । ಕಿಂ ತತ್ । ಅಹಮಿಮಾಂ ಪೃಥಿವೀಮಿಹ ವಾಂತರಿಕ್ಷೇ ನಿ ದಧಾನಿ । ಇಹ ವಾ ದ್ಯುಲೋಕ ಇತಿ ಹಸ್ತೇನ ನಿರ್ದಿಶತಿ ॥ ದಧಾತೇರ್ಲೋಟಿ ಮೇರ್ನಿಃ ॥

|| ಪ್ರತಿಪದಾರ್ಥ ||

**ಹಂತೆ**—ಇಗೋ | **ಅಹಂ**—ನಾನು | **ಇಮಾಂ ಪೃಥಿವೀಂ**—ಈ ಭೂಮಂಡಲವನ್ನು | **ಇಹ ವಾ**—ಇಲ್ಲಿಯೇ ಬೇಕಾದರೂ | **ಇಹ ವಾ**—ಅಂತರಿಕ್ಷದಲ್ಲಿ ಬೇಕಾದರೂ | **ನಿ ದಧಾನಿ**—ಇಡಬಲ್ಲೆನು | **ಇತಿ**—ಏಕೆಂದರೆ (ನಾನು) | **ಕುವಿತ್**—ಬಹಳವಾಗಿ | **ಸೋಮಸ್ಯ**—ಸೋಮವನ್ನು | **ಅಪಾಂ**—**ಪಾನಮಾಡಿದ್ದೇನೆ.**

|| ಭಾವಾರ್ಥ ||

ಇಗೋ ! ನಾನು ಈ ಭೂಮಂಡಲವನ್ನು ಇಲ್ಲಿಯೇ ಬೇಕಾದರೂ ಅಥವಾ ಅಂತರಿಕ್ಷದಲ್ಲಿ ಬೇಕಾದರೂ ಸ್ಥಾಪಿಸಿ ಇಡಬಲ್ಲೆನು. ಏಕೆಂದರೆ ನಾನು ಬಹಳವಾಗಿ ಸೋಮಪಾನಮಾಡಿದೇನೆ.

## English Translation.

Lo! I will place this earth (where I will), either here or there; for I have often drunk of the Soma.

|| ವಿಶೇಷವಿಷಯಗಳು ||

ಯಾಸ್ಕರು **ವಾ** ಎಂಬ ಶಬ್ದದ ಅರ್ಥವನ್ನೂ, ಪ್ರಯೋಗವನ್ನೂ ವಿವರಿಸುತ್ತಾ ಈ ರೀತಿ ಹೇಳಿದಾರೆ—

**ವೇತಿ ವಿಚಾರಣಾರ್ಥೇ | ಹಂತಾಹಂ ಪೃಥಿವೀಮಿಮಾಂ ನಿ ದಧಾನೀಹ ವೇಹ ವಾ | ಅಥಾಪಿ ಸಮುಚ್ಚಯಾರ್ಥೇ ಭವತಿ | ವಾಯುರ್ವಾ ತ್ವಾ ಮನುರ್ವಾ ತ್ವಾ | ಇತಿ**

(ನಿ.೧-೪)

**ವಾ** ಎಂಬ ಶಬ್ದವು ಒಂದು ಮುಖ್ಯವಾದ ಅಥವಾ ಗಹನವಾದ ವಿಚಾರಮಾಡುವಾಗ **ಉಪಯೋಗಿಸಲ್ಪಡು**ವುದು. **ಹಂತಾಹಂ ಪೃಥಿವೀಮಿಮಾಂ ನಿ ದಧಾನೀಹ ವೇಹ ವಾ** ಎಂಬ ಮೇಲಿನ ಉದಾಹರಣವಾಕ್ಯದಲ್ಲಿ—ಅಹಾ ! ನಾನು ಈ ಭೂಮಿಯನ್ನು ಇಲ್ಲೇ ಬೇಕಾದರೂ ಇಡಬಲ್ಲೆ ಅಥವಾ ಅಂತರಿಕ್ಷದಲ್ಲಿ **ಬೇಕಾದರೂ ಇಡಬಲ್ಲೆ** ಎಂಬ ವಿಚಾರವು ಉಕ್ತವಾಗಿದೆ. ಸಮುಚ್ಚಯಾರ್ಥದಲ್ಲಿಯೂ ಎಂದರೆ **ಮತ್ತು** ಎಂಬರ್ಥದಲ್ಲಿಯೂ **ಈ** ಶಬ್ದ ಪ್ರಯೋಗವಿರುವುದು. **ವಾಯುರ್ವಾ ತ್ವಾ ಮನುರ್ವಾ ತ್ವಾ** ಎಂಬ ಉದಾಹರಣೆಯಲ್ಲಿ **ವಾಯುವು ಮತ್ತು** ಮನುವು ಎಂದು **ವಾ** ಶಬ್ದಕ್ಕೆ ಮತ್ತು ಎಂಬರ್ಥವಿರುವುದು.

|| ಸಂಹಿತಾಪಾಠಃ ||

**ಓಷಮಿತ್ಪೃಥಿವೀಮಹಂ ಜಂಘನಾನೀಹ ವೇಹ ವಾ |**

**ಕುವಿತ್ಸೋಮಸ್ಯಾಪಾಮಿತಿ || ೧೦ ||**

॥ ಪದಪಾಠಃ ॥

ಓಷಂ । ಇತ್ । ಪೃಥಿವೀಂ । ಅಹಂ । ಜಂಘನಾನಿ । ಇಹ । ವಾ । ಇಹ । ವಾ ।

ಕುವಿತ್ । ಸೋಮಸ್ಯ । ಅಪಾಂ । ಇತಿ ॥ ೧೦ ॥

॥ ಸಾಯಣಭಾಷ್ಯಂ ॥

**ಅಹಂ ಪೃಥಿವೀಮಖಿಲಕ್ಷ್ಮ್ಯಾಷಂ ಸ್ವತೇಜಸಾ ತಾಪಕಮಾದಿತ್ಯಮಿಹ ವಾಂತರಿಕ್ಷ ಇಹ ವಾ ದ್ಯುಲೋಕೇ ಜಂಘನಾನಿ । ಭೃಶಂ ಯಾಪಯಾನಿ । ಇದಿತಿ ಪೂರಣಃ ॥ ಹಂತೇರ್ಗತ್ಯರ್ಥಸ್ಯ ಯಙ್-ಲುಗಂತಸ್ಯ ಲೋಟಿ ಶಪೋ ಲುಗಭಾವಶ್ಛಾಂದಸಃ ॥**

॥ ಪ್ರತಿಪದಾರ್ಥ ॥

**ಅಹಂ**—ನಾನು । **ಪೃಥಿವೀಂ**—ಭೂಮಿಯನ್ನು । **ಓಷಂ**—ತನ್ನ ತೇಜಸ್ಸಿನಿಂದ ಬೆಳಗುತ್ತಿರುವ ಸೂರ್ಯನನ್ನು । **ಇಹ ವಾ**—ಅಂತರಿಕ್ಷವಲ್ಲಾಗಲಿ । **ಇಹ ವಾ**—ಸ್ವರ್ಗದಲ್ಲಾಗಲಿ । **ಜಂಘನಾನಿ**—ಬೀಳುವಂತೆ ಎಸೆಯಬಲ್ಲೆನು । **ಇತಿ**—ಏಕೆಂದರೆ (ನಾನು) । **ಕುವಿತ್**—ಬಹಳವಾಗಿ । **ಸೋಮಸ್ಯ**—ಸೋಮವನ್ನು । **ಅಪಾಂ**—ಪಾನಮಾಡಿದ್ದೇನೆ ।

॥ ಭಾವಾರ್ಥ ॥

ತನ್ನ ತೇಜಸ್ಸಿನಿಂದ ಭೂಮಿಯನ್ನು ಪ್ರಕಾಶಪಡಿಸುತ್ತಿರುವ ಸೂರ್ಯನನ್ನು ಅಂತರಿಕ್ಷಕ್ಕಾಗಲಿ, ಸ್ವರ್ಗಕ್ಕಾಗಲಿ ಕಿತ್ತು ಎಸೆಯಬಲ್ಲೆನು. ಏಕೆಂದರೆ, ನಾನು ಬಹಳವಾಗಿ ಸೋಮವನ್ನು ಪಾನಮಾಡಿದೇನೆ.

## English Translation

I will drive the scroching (sun) either here or thre; for I have often drunk of Soma.

॥ ಸಂಹಿತಾಪಾಠಃ ॥

ದಿವಿ ಮೇ ಅನ್ಯಃ ಪಕ್ಷೋ೩ಧೋ ಅನ್ಯಮಚೀಕೃಷಂ ।

ಕುವಿತ್ಸೋಮಸ್ಯಾಪಾಮಿತಿ ॥ ೧೧ ॥

॥ ಪದಪಾಠಃ ॥

ದಿವಿ । ಮೇ । ಅನ್ಯಃ । ಪಕ್ಷಃ । ಅಧಃ । ಅನ್ಯಂ । ಅಚೀಕೃಷಂ ।

ಕುವಿತ್ । ಸೋಮಸ್ಯ । ಅಪಾಂ । ಇತಿ ॥ ೧೧ ॥

|| ಸಾಯಣಭಾಷ್ಯಂ ||

ಮೇ ಮದೀಯೋಽನ್ಯಃ ಪಕ್ಷೋ ದಿವಿ ದ್ಯುಲೋಕೇ ಸ್ಥಾಪಿತಃ । ಅಧಃ ॥ ಪೂರ್ವಾಧರಾವರಾಣಾಮಸೀತ್ಯಾದಿನಾಸಿಪ್ರತ್ಯಯಃ । ಪ್ರಕೃತೇರಧಾದೇಶಶ್ಚ ॥ ಅಧಸ್ತಾತ್ಪೃಥಿವ್ಯಾಮನ್ಯಂ ಪಕ್ಷಮಚೀಕೃಷಂ । ಅಕಾರ್ಷಂ ॥ ಕೃಷ ವಿಲೇಖನೇ । ಣ್ಯಂತಸ್ಯ ಲುಙಿ ಚಙಿ ನಿತ್ಯಂ ಛಂದಸಿ । ಪಾ. ೭-೪-೮ । ಇತ್ಯೃಕಾರಾದೇಶಃ ॥ ವಿಲೇಖನಂ ನಾವೋತ್ಪಾದನಂ । ಉದಪಾದಯಂ । ಅಸ್ಥಾಪಯಮಿತ್ಯರ್ಥಃ ॥

|| ಪ್ರತಿಪದಾರ್ಥ ||

**ಮೇ**—ನನ್ನ । **ಅನ್ಯಃ ಪಕ್ಷಃ**—ಒಂದುರೆಕ್ಕೆಯು । **ದಿವಿ**—ಸ್ವರ್ಗದಲ್ಲಿ ಸ್ಥಾಪಿತವಾಗಿದೆ । **ಅನ್ಯಂ**—ಇನ್ನೊಂದು ರೆಕ್ಕೆಯನ್ನು । **ಅಧಃ**—ಕೆಳಭಾಗದಲ್ಲಿರುವ ಭೂಮಿಗೆ । **ಅಚೀಕೃಷಂ**—ಎಳೆದುಹಾಕಿದ್ದಾನೆ । **ಇತಿ**—ಏಕೆಂದರೆ (ನಾನು) । **ಕುವಿತ್**—ಬಹಳವಾಗಿ । **ಸೋಮಸ್ಯ**—ಸೋಮವನ್ನು । **ಅಪಾಂ**—ಪಾನ ಮಾಡಿದ್ದೇನೆ.

|| ಭಾವಾರ್ಥ ||

ನನ್ನ ಒಂದು ರೆಕ್ಕೆಯು ಸ್ವರ್ಗದಲ್ಲಿಯೂ, ಇನ್ನೊಂದು ರೆಕ್ಕೆಯು ಭೂಮಿಯಲ್ಲಿಯೂ ಸ್ಥಾಪಿತವಾಗಿದೆ. ಏಕೆಂದರೆ ನಾನು ಬಹಳವಾಗಿ ಸೋಮಪಾನಮಾಡಿದ್ದೇನೆ.

## English Translation.

One of my wings is in the sky, the other I dragged below; for I have often drunk of the Soma.

|| ಸಂಹಿತಾಪಾಠಃ ||

ಅಹಮಸ್ಮಿ ಮಹಾಮಹೋಽಭಿನಭ್ಯಮುದೀಷಿತಃ ।

ಕುವಿತ್ಸೋಮಸ್ಯಾಪಾಮಿತಿ ॥ ೧೨ ॥

|| ಪದಪಾಠಃ ||

ಅಹಂ । ಅಸ್ಮಿ । ಮಹಾಽಮಹಃ । ಅಭಿಽನಭ್ಯಂ । ಉತ್ಽಈಷಿತಃ ।

ಕುವಿತ್ । ಸೋಮಸ್ಯ । ಅಪಾಂ । ಇತಿ ॥ ೧೨ ॥

|| ಸಾಯಣಭಾಷ್ಯಂ ||

ಅಭಿನಭ್ಯಂ ನಾಭೌ ಮಧ್ಯಸ್ಥಾನೇ ಭವಂ ನಭ್ಯಮಂತರಿಕ್ಷಂ ॥ ಉಗವಾದಿಭ್ಯೋ ಯತ್ । ಪಾ. ೫-೧-೨ । ಇತಿ ಯತ್ಪ್ರತ್ಯಯಃ । ತತ್ರೈವ ಪಾಠಾನ್ನಭಾದೇಶಶ್ಚ । ಲಕ್ಷಣೇನಾಭಿಪ್ರತೀ ಅಭಿಮುಖ್ಯೇ ।

ಪಾ. ೨-೧-೧೪ । ಇತ್ಯವ್ಯಯೀಭಾವಸಮಾಸಸ್ವರಃ ॥ ಅಂತರಿಕ್ಷಮಭ್ಯುದೀಷಿತ ಉದ್ಗತಃ ಸೂರ್ಯಾತ್ಮಾಹಂ ಮಹಾಮಹೋಽಸ್ಮಿ । ಮಹತಾಮಪಿ ಮಹಾನಸ್ಮಿ । ಯದ್ವಾ । ಮಹತ್ಪ್ರಭೂತಂ ಮಹಸ್ತೇಜೋ ಯಸ್ಯ । ಪ್ರಭೂತತೇಜಸ್ಕೋಽಸ್ಮಿ ॥ ಆನ್ಮಹತ ಇತ್ಯಾತ್ವಂ ॥

॥ ಪ್ರತಿಪದಾರ್ಥ ॥

**ಅಹಂ**— ನಾನು । **ಅಭಿನಭ್ಯಂ**— ನಾಭಿಸ್ಥಾನವಾದ ಅಂತರಿಕ್ಷದಲ್ಲಿ । **ಉದೀಷಿತಃ**— ಸ್ಥಾಪಿತನಾದ । **ಮಹಾಮಹಃ**— ಮಹಾಮಹಿಮನಾದ ಅಥವಾ ಮಹಾತೇಜಸ್ಸಿನಿಂದ ಬೆಳಗುವ ಆದಿತ್ಯನಾಗಿ । **ಅಸ್ಮಿ**— ಇದೇನೆ । **ಇತಿ**— ಏಕೆಂದರೆ (ನಾನು) । **ಕುವಿತ್**— ಬಹಳವಾಗಿ । **ಸೋಮಸ್ಯ**— ಸೋಮವನ್ನು । **ಅಪಾಂ**— ಪಾನಮಾಡಿದೇನೆ ।

॥ ಭಾವಾರ್ಥ ॥

ಪ್ರಪಂಚಕ್ಕೆ ನಾಭಿಸ್ಥಾನವಾದ ಅಂತರಿಕ್ಷದಲ್ಲಿ ಸ್ಥಾಪಿತನಾದವನೂ ಮಹಾಮಹಿಮನೂ ಅಥವಾ ಮಹಾತೇಜಸ್ಸಿನಿಂದ ಬೆಳಗುವವನೂ ಆದ ಆದಿತ್ಯನೇ ನಾನು. ಏಕೆಂದರೆ ನಾನು ಬಹಳವಾಗಿ ಸೋಮಪಾನಮಾಡಿದೇನೆ.

## English Translation.

I am (the sun), the great, raised to the firmament; for I have often drunk of the Soma.

॥ ಸಂಹಿತಾಪಾಠಃ ॥

ಗೃಹೋ ಯಾಮ್ಯರಂಕೃತೋ ದೇವೇಭ್ಯೋ ಹವ್ಯವಾಹನಃ ।
ಕುವಿತ್ಸೋಮಸ್ಯಾಪಾಮಿತಿ ॥ ೧೩ ॥

॥ ಪದಪಾಠಃ ॥

ಗೃಹಃ । ಯಾಮಿ । ಅರಂಽಕೃತಃ । ದೇವೇಭ್ಯಃ । ಹವ್ಯಽವಾಹನಃ ।
ಕುವಿತ್ । ಸೋಮಸ್ಯ । ಅಪಾಂ । ಇತಿ ॥ ೧೩ ॥

॥ಸಾಯಣಭಾಷ್ಯಂ ॥

ಗೃಹೋ ಹವಿಷಾಂ ಗ್ರಹೀತಾರಂಕೃತೋ ಯಜಮಾನೈರಲಂಕೃತೋಽಹಂ ದೇವೇಭ್ಯ ಇಂದ್ರಾದಿಭ್ಯೋ ಹವ್ಯವಾಹನೋ ಹವಿಷಾಂ ವೋಢಾ ಪ್ರಾಪಯಿತಾಗ್ನ್ಯಾತ್ಮಾ ಸನ್ಯಾಮಿ । ಹವೀಂಷಿ ಪ್ರಾಪಯಾಮಿ ॥ ಯಾ ಪ್ರಾಪಣೇ । ಲಟ್ । ಹವ್ಯೇಽನಂತಃಪಾದಮಿತಿ ವಹೇರ್ಞ್ಯುಟ್ । ಞಿತ್ಯಾದಿರ್ನಿತ್ಯ-

ದಾತ್ತಃ । ಸಮಾಸೇ ಕೃದುತ್ತರಪದಪ್ರಕೃತಿಸ್ವರಃ ॥ ಇತಿ ಯಸ್ಮಾತ್ಕುವಿದ್ಬಹುವಾರಂ ಸೋಮಸ್ಯ ಸೋಮಮಪಾಂ ಪೀತವಾನಸ್ಮಿ । ತಸ್ಮಾದೇತಾನ್ಯಕಾರ್ಷಮಿತೀಂದ್ರಃ ಸ್ವಾತ್ಮಾನಮೇವಾಸ್ತಾವೀತ್ ॥

॥ ಪ್ರತಿಪದಾರ್ಥ ॥

**ಗೃಹಃ**—ಹವಿಸ್ಸನ್ನು ಹಿಡಿದಿರುವವನೂ । **ಅರಂಕೃತಃ**—ಯಜ್ಞಮಾಡುವ ಯಜಮಾನರಿಂದ ಅಲಂಕೃತನಾದವನೂ । **ದೇವೇಭ್ಯಃ**—ಇಂದ್ರಾದಿದೇವತೆಗಳಿಗೆ । **ಹವ್ಯವಾಹನಃ**—ಹವಿಸ್ಸನ್ನು ವಹಿಸುವ ಅಗ್ನಿಯಾಗಿ । **ಯಾಮಿ**—ದೇವತೆಗಳಿಗೆ ಹವಿಸ್ಸನ್ನು ಒಯ್ಯುತ್ತೇನೆ । **ಇತಿ**—ಏಕೆಂದರೆ (ನಾನು) । **ಕುವಿತ್**—ಬಹಳವಾಗಿ । **ಸೋಮಸ್ಯ**—ಸೋಮರಸವನ್ನು । **ಅಪಾಂ**—ಪಾನಮಾಡಿದ್ದೇನೆ.

॥ ಭಾವಾರ್ಥ ॥

ಯಜ್ಞಮಾಡುವ ಯಜಮಾನರಿಂದ ಯಜ್ಞವೇದಿಯಲ್ಲಿ ಸಂಸ್ಕರಿಸಲ್ಪಟ್ಟು ಅಲಂಕೃತನೂ ದೇವತೆಗಳಿಗೆ ಹವಿಸ್ಸನ್ನು ವಹಿಸುವವನೂ ಅದಕ್ಕಾಗಿ ಹವಿಸ್ಸನ್ನು ಧರಿಸಿರುವವನೂ ಆದ ಅಗ್ನಿಯಾಗಿ ದೇವತೆಗಳ ಬಳಿಗೆ ಹವಿಸ್ಸನ್ನು ವಹಿಸುತ್ತೇನೆ. ಏಕೆಂದರೆ ನಾನು ಬಹಳವಾಗಿ ಸೋಮಪಾನಮಾಡಿದೇನೆ.

English Translation.

Receiving the offering I go, graced (by the worshippers), bearing the oblation to the gods; for I have often drunk of the Soma.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಋಕ್ಸಂಹಿತಾಭಾಷ್ಯೇಽಷ್ಟಮಾಷ್ಟಕೇ ಷಷ್ಠೋಽಧ್ಯಾಯಃ ಸಮಾಪ್ತಃ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯು
ಎಂಟನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು ಸಮಾಪ್ತವು.

ಶುಭಂಭೂಯಾತ್

ಮಂಗಳಂ.



॥ ಶ್ರೀಃ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಭಾಗ—೩೦



## ಎಂಟನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು



## ಹತ್ತನೆಯ ಮಂಡಲದಲ್ಲಿ ನೂರಇಪ್ಪತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ತತ್ರಾಷ್ಟಮಾಷ್ಟಕೇ ಷಷ್ಠಾಧ್ಯಾಯಂ ವ್ಯಾಖ್ಯಾಯ ಸಪ್ತಮಾಧ್ಯಾಯ ಆರಭ್ಯತೇ । ದಶಮಮಂಡಲಸ್ಯ ದಶಮೇಽನುವಾಕೇ ಸೂಕ್ತಸಪ್ತಕಂ ವ್ಯಾಖ್ಯಾತಂ । ತದಿದಿತಿ ನವರ್ಚಮಷ್ಟಮಂ ಸೂಕ್ತಮಥರ್ವಣಃ ಪುತ್ರಸ್ಯ ಬೃಹದ್ದಿವಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ತಥಾ ಚಾನುಕ್ರಾಂತಂ । ತದಿನ್ನವಾಥರ್ವಣೋ ಬೃಹದ್ದಿವ ಇತಿ ॥ ಚಾತುರ್ವಿಂಶಿಕೇಽಹನಿ ನಿಷ್ಕೇವಲ್ಯ ಇದಂ ಸೂಕ್ತಂ । ಸೂತ್ರಿತಂ ಚ । ತದಿದಾಸೇತಿ ಚ

**ಪುರಸ್ತಾತ್ಸೂಕ್ತಸ್ಯ ಶಂಸೇತ್ । ಆ. ೭-೩. । ಇತಿ ॥ ವ್ಯೋಮವಿಶ್ವದೇವಸ್ತುತ್ಪಂಚಶಾರದೀಯೇಷ್ವಪ್ಯೇಕಾಹೇಷ್ವಿದಮೇವ ನಿಷ್ಕೇವಲ್ಯನಿವಿದ್ಧಾನಂ । ಸೂತ್ರಿತಂ ಚ । ಏತೇಷಾಂ ತ್ರಯಾಣಾಂ ಕಯಾ ಶುಭಾ ತದಿದಾಸೇತಿ ಮಧ್ಯಂದಿನಃ । ಆ. ೯-೮ । ಇತಿ ॥ ರಾಶಿಮರಾಯಾಖ್ಯಯೋರೇಕಾಹಯೋರಪೀದಂ ನಿಷ್ಕೇವಲ್ಯನಿವಿದ್ಧಾನಂ । ಸೂತ್ರಿತಂ ಚ । ರಾಶಿಮರಾಯಯೋಶ್ಚ ಕಯಾಶುಭೀಯತದಿದಾಸೀಯೇ । ಆ. ೯-೮ । ಇತಿ ॥ ಮಹಾವ್ರತೇ ನಿಷ್ಕೇವಲ್ಯೇಽಪ್ಯೇತತ್ಸೂಕ್ತಂ । ತಥೈವ ಪಂಚಮಾರಣ್ಯಕೇ ಶೌನಕೇನ ಸೂತ್ರಿತಂ । ತದಿದಾಸ ಭವನೇಷು ಜ್ಯೇಷ್ಠಂ ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವಾ । ಐ. ಆ. ೫-೧-೬ । ಇತಿ ॥**

ಅನುವಾದವು—**ಈಗ** ಋಗ್ವೇದಸಂಹಿತೆಯ ಎಂಟನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯದ ಸೂಕ್ತಗಳನ್ನು ವಿವರಿಸಲಾಗುವುದು. ಹತ್ತನೆಯ ಮಂಡಲದ ಹತ್ತನೆಯ ಅನುವಾಕದಲ್ಲಿ ಮೊದಲಿನ ಏಳು ಸೂಕ್ತಗಳನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ಅನುವಾಕದಲ್ಲಿ **ತದಿತ್** ಎಂಬ ಈ ಸೂಕ್ತವು ಎಂಟನೆಯದು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಥರ್ವಋಷಿಯ ಪುತ್ರನಾದ ಬೃಹದ್ದಿವನೆಂಬುವನು ಋಷಿಯು, ಇಂದ್ರನು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ತದಿನ್ನವಾಥರ್ವಣೋ ಬೃಹದ್ದಿವಃ** ಎಂದು ಹೇಳಿರುವುದು. ಯಾಗದ ಚಾತುರ್ವಿಂಶಿಕವೆಂಬ ದಿನದಲ್ಲಿ ನಿಷ್ಕೇವಲಶಸ್ತ್ರಮಂತ್ರಗಳಿಗಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ತದಿದಾಸೇತಿ ಚ ಪುರಸ್ತಾತ್ಸೂಕ್ತಸ್ಯ ಶಂಸೇತ್** ಎಂಬ ಸೂತ್ರದಿಂದ (ಆ. ೭-೩) ವಿವೃತವಾಗಿರುವುದು. ಮತ್ತು ವ್ಯೋಮ ವಿಶ್ವೇದೇವಸ್ತುತ್ ಪಂಚಶಾರದೀಯ, ಏಕಾಹ ಎಂಬ ಇಷ್ಟಿಗಳಲ್ಲಿ ಪಠಿಸುವ ನಿಷ್ಕೇವಲ್ಯ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ನಿವಿತ್ಸೂಕ್ತವನ್ನಾಗಿ ಸೇರಿಸಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಏತೇಷಾಂ ತ್ರಯಾಣಾಂ ಕಯಾ ಶುಭಾ ತದಿದಾಸೇತಿ ಮಧ್ಯಂದಿನಃ** ಎಂಬ ಸೂತ್ರದಿಂದ (ಆ. ೯-೮) ವಿವೃತವಾಗಿರುವುದು. ರಾಶಿಮರಾಯಗಳೆಂಬ ಏಕಾಹೇಷ್ಟಿಗಳಲ್ಲಿಯೂ ಕೂಡ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಇದನ್ನು ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ರಾಶಿಮರಾಯಯೋಶ್ಚ ಕಯಾ ಶುಭೀಯ ತದಿದಾಸೀಯೇ** ಎಂಬ ಸೂತ್ರದಿಂದ (ಆ. ೯-೮) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ ಶೌನಕಮಹರ್ಷಿಗಳಿಂದ ಪ್ರೋಕ್ತವಾಗಿರುವುದು. ಈ ವಿಷಯದಲ್ಲಿ— **ತದಿದಾಸ ಭುವನೇಷು ಜ್ಯೇಷ್ಠಂ ತಾಂ ಸು ತೇ ಕೀರ್ತಿಂ ಮಘವನ್ ಮಹಿತ್ವಾ** ಎಂದು ಸೂತ್ರವಿರುವುದು. (ಐ. ಆ. ೫-೧-೬)

## ಸೂಕ್ತ—೧೨೦

ಮಂಡಲ—೧೦ ॥ ಅನುವಾಕ—೧೦ ॥ ಸೂಕ್ತ—೧೨೦ ॥

ಅಷ್ಟಕ—೮ ॥ ಅಧ್ಯಾಯ—೭ ॥ ವರ್ಗ—೧, ೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೯ ॥

॥ ಋಷಿಃ—ಬೃಹದ್ದಿವ ಆಥರ್ವಣಃ ॥

॥ ದೇವತಾ—ಇಂದ್ರಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತದಿದಾಸ ಭುವನೇಷು ಜ್ಯೇಷ್ಠಂ ಯತೋ ಜಜ್ಞ ಉಗ್ರಸ್ತ್ವೇಷನೃಮ್ಣಃ ।
ಸದ್ಯೋ ಜಜ್ಞಾನೋ ನಿ ರಿಣಾತಿ ಶತ್ರೂನನು ಯಂ ವಿಶ್ವೇ ಮದಂತ್ಯೂಮಾಃ ॥೧॥

॥ ಪದಪಾಠಃ ॥

ತತ್ । ಇತ್ । ಆಸ । ಭುವನೇಷು । ಜ್ಯೇಷ್ಠಂ । ಯತಃ । ಜಜ್ಞೇ । ಉಗ್ರಃ । ತ್ವೇಷಽನೃಮ್ಣಃ ।
ಸದ್ಯಃ । ಜಜ್ಞಾನಃ । ನಿ । ರಿಣಾತಿ । ಶತ್ರೂನ್ । ಅನು । ಯಂ । ವಿಶ್ವೇ । ಮದಂತಿ । ಊಮಾಃ ॥೧॥

॥ ಸಾಯಣಭಾಷ್ಯಂ ॥

ತಜ್ಜಗತ್ಕಾರಣತ್ವೇನ ಸರ್ವವೇದಾಂತಪ್ರಸಿದ್ಧಂ । ಇಚ್ಛಬ್ದೋಽವಧಾರಣೇ । ಭುವನೇಷು ॥ ಭೂ ಸತ್ತಾಯಾಂ ॥ ಸತ್ಸು ಪೃಥಿವ್ಯಾದಿಷು ಲೋಕೇಷು ಮಧ್ಯೇ ಜಗತ್ಕಾರಣಂ ಬ್ರಹ್ಮೈವ ಜ್ಯೇಷ್ಠಂ ಪ್ರಶಸ್ತತಮಮಾಸ । ಬಭೂವ । ತಸ್ಯ ಪರಮಾರ್ಥತ್ವಾತ್ ತದ್ವ್ಯತಿರಿಕ್ತಾನಾಂ ವ್ಯಾವಹಾರಿಕತ್ವಾಚ್ಚ । ಯದ್ವಾ ಜ್ಯೈಷ್ಠ್ಯಂ ವೃದ್ಧತಮಂ ಜಗತ್ಕಾರಣತ್ವೇನ ಸರ್ವೇಷಾಮಾದಿಭೂತಂ ಬಭೂವ ॥ ಅಸ್ತೇರ್ಲಿಟಿ ಛಂದಸ್ಯುಭಯಥೇತಿ ಸಾರ್ವಧಾತುಕತ್ವಾದಸ್ತೇರ್ಭೂಃ । ಪಾ. ೨-೪-೫೨ । ಇತಿ ಭೂಭಾವಾಭಾವಃ । ಯದ್ವಾ ವೃದ್ಧಂ ತದೇವ ಬ್ರಹ್ಮ ಸ್ವಪ್ರಕಾಶತಯಾಸ । ದಿದೀಪೇ ॥ ಅಸ ಗತಿದೀಪ್ತ್ಯಾದಾನೇಷು । ಅಸ್ಮಾಲ್ಲಿಟಿ ರೂಪಂ ॥ ಯತ ಉಪಾದಾನಭೂತಾದ್ಯಸ್ಮಾದ್ಬ್ರಹ್ಮಣ ಉಗ್ರ ಉದ್ಗೂರ್ಣಸ್ತ್ವೇಷನೃಮ್ಣಃ ಪ್ರದೀಪ್ತಬಲಃ ಸೂರ್ಯಾತ್ಮಕ ಇಂದ್ರೋ ಜಜ್ಞೇ ಜಾತೋ ಬಭೂವ । ಶ್ರೂಯತೇ ಹಿ । ಚಕ್ಷೋಃ ಸೂರ್ಯೋ ಅಜಾಯತ । ಋ. ೧೧-೯೦-೧೩ । ಇತಿ । ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ । ಋ. ೧೦-೧೯೦-೩ । ಇತಿ ಚ ॥ ಜನಿಕರ್ತುಃ ಪ್ರಕೃತಿಃ । ಪಾ. ೧ ೪-೩೦ । ಇತಿ ಪ್ರಕೃತೇರಪಾದಾನಸಂಜ್ಞಾಯಾಂ ಯತ ಇತಿ ಪಂಚಮೀ । ಜನೇರ್ಲಿಟಿ ಗಮಹನೇತ್ಯಾದಿನೋಪಧಾಲೋಪಃ । ದ್ವಿರ್ವಚನೇಽಚೀತಿ ತಸ್ಯ ಸ್ಥಾನಿವದ್ಭಾವಾದ್ದ್ವಿರ್ವಚನಾದಿ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ ॥ ಸ ಚ ಜಜ್ಞಾನೋ ಜಾಯಮಾನ ಏವ ಸದ್ಯಃ ಶೀಘ್ರಂ ಶತ್ರೂಞ್ಶಾತಯಿತೄನ್ಮಂದೇಹಾದೀನ್ರಾಕ್ಷಸಾನ್ನಿ ರಿಣಾತಿ। ನಿಹಿನಸ್ತಿ। ಯದ್ವಾ। ಉಪಾಸಕಾನಾಂ ಪಾಪರೂಪಾಞ್ಶತ್ರೂನ್ನಿಹಂತಿ । ತಥಾ ಚ ಬ್ರಾಹ್ಮಣಂ । ಸದ್ಯೋ ಹ್ಯೇಷ ಜಾತಃ ಪಾಪ್ಮಾನಮಪಾಹತ । ಐ. ಆ. ೧-೩-೪ । ಇತಿ ॥ ಜಜ್ಞಾನ ಇತಿ ಜನೇರ್ಲಿಟಿ ಕಾನಚಿ ರೂಪಮೇತತ್ । ರಿಣಾತಿ । ರೀ ಗತಿರೇಷಣಯೋಃ ಕ್ರ್ಯಾದಿಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ ॥ ವಿಶ್ವೇ ಸರ್ವೇ ಊಮಾಃ । ಅವಂತಿ ರಕ್ಷಂತೀತ್ಯೂಮಾಃ ಪ್ರಾಣಿನಃ ॥ ಅವತೇರೌಣಾದಿಕೋ ಮನ್ಪ್ರತ್ಯಯಃ । ಜ್ವರತ್ವರೇತ್ಯಾದಿನಾ ವಕಾರೋಪಧಯೋಃ ಸ್ಥಾನ ಊಠ್ ॥ ಸರ್ವೇ ಪ್ರಾಣಿನೋ ಯಂ ಸೂರ್ಯಾತ್ಮಕಮುದ್ಯಂತಮಿಂದ್ರಮನುಲಕ್ಷ್ಯ ಮದರ್ಥಮುದಗಾನ್ಮದರ್ಥಮುದಗಾದಿತಿ ಮದಂತಿ ಹೃಷ್ಯಂತಿ ॥ ಮದೀ

ಹರ್ಷೇ। ವ್ಯತ್ಯಯೇನ ಶಪ್ ॥ ತಥಾ ಚ ಬ್ರಾಹ್ಮಣಂ । ಭೂತಾನಿ ವೈ ವಿಶ್ವ ಊಮಾಸ್ತ ಏನಮನುಮದಂತ್ಯುದಗಾದುದಗಾದಿತಿ । ಐ. ಆ. ೧-೩-೪ । ಇತಿ । ತೈತ್ತಿರೀಯಕಂ ಚ । ತಸ್ಮಾತ್ಸರ್ವ ಏವ ಮನ್ಯಂತೇ ಮಾಂ ಪ್ರತ್ಯುದಗಾದಿತಿ । ಯದ್ವಾ। ಯಂ ಸ್ತುತ್ಯಾದಿಭಿರ್ಮಾದ್ಯಂತಮನು ಪಶ್ಚಾತ್ಸರ್ವೇ ಪ್ರಾಣಿನೋಽಭೀಷ್ಟಪ್ರಾಪ್ತ್ಯಾ ಹೃಷ್ಯಂತಿ ॥ ಅನುರ್ಲಕ್ಷಣೇ । ಪಾ. ೧-೪-೮೪ । ಇತ್ಯನೋಃ ಕರ್ಮಪ್ರವಚನೀಯತ್ವಾತ್ಕರ್ಮಪ್ರವಚನೀಯಯುಕ್ತ ಇತಿ ದ್ವಿತೀಯಾ ॥ ಸ ಇಂದ್ರೋ ಜಜ್ಞ ಇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಭುವನೇಷು**— ಪೃಥಿವ್ಯಾದಿಲೋಕಗಳ ಮಧ್ಯದಲ್ಲಿ ಜಗತ್ಕಾರಣಭೂತವಾದ । **ತತ್ ಇತ್**—ಸರ್ವ ವೇದಾಂತಪ್ರತಿಪಾದ್ಯವಾದ ಬ್ರಹ್ಮವಸ್ತುವೇ । **ಜ್ಯೇಷ್ಠಂ**—ಎಲ್ಲಕ್ಕೂ ಮೊದಲೇ (ಆದಿಯಲ್ಲಿ) । **ಆಸ**— ಇದ್ದಿತು । **ಯತಃ**—(ಯಾವ ಆ) ಎಲ್ಲಕ್ಕೂ ಕಾರಣಭೂತವಾದ ಆ ಬ್ರಹ್ಮವಸ್ತುವಿನಿಂದ । **ಉಗ್ರಃ**— ಶಕ್ತಿಯುತನೂ । **ತ್ವೇಷನೃಮ್ಣಃ**— ಪ್ರಕಾಶವೇ ಬಲವಾಗಿವುಳ್ಳವನೂ ಎಂದರೆ ಸ್ವಪ್ರಕಾಶದಿಂದ ಬೆಳಗುವವನೂ ಆದ ಸೂರ್ಯಾತ್ಮಕನಾದ ಇಂದ್ರನು । **ಜಜ್ಞೇ**— ಉತ್ಪನ್ನನಾದನು । **ಜಜ್ಞಾನಃ**— ಹುಟ್ಟಿದಕೂಡಲೇ ಸೂರ್ಯಾತ್ಮಕನಾದ ಆ ಇಂದ್ರನು । **ಸದ್ಯಃ**— ತಕ್ಷಣವೇ । **ಶತ್ರೂನ್**— ಮಂದೇಹಾರುಣರೇ ಮೊದಲಾದ ರಾಕ್ಷಸರುಗಳನ್ನು । **ನಿ ರಿಣಾತಿ**-- ನಾಶಪಡಿಸುತ್ತಾನೆ । **ವಿಶ್ವೇ ಊಮಾಃ**— ಸಮಸ್ತ ಪ್ರಾಣಿಗಳೂ । **ಯಂ**—(ಯಾವ) ಸೂರ್ಯಾತ್ಮಕನಾದ ಇಂದ್ರನನ್ನು । **ಅನು**— ಅನುಲಕ್ಷಿಸಿ ಎಂದರೆ ನೋಡಿ । **ಮದಂತಿ**— ಹರ್ಷಗೊಳ್ಳುತ್ತವೆ.

॥ ಭಾವಾರ್ಥ ॥

ಪೃಥಿವ್ಯಾದಿಸಮಸ್ತಲೋಕಗಳ ಮಧ್ಯದಲ್ಲಿಯೂ ಜಗತ್ಕಾರಣಭೂತನೆಂದು ಸಮಸ್ತ ವೇದಾಂತಗಳಲ್ಲಿಯೂ ಪ್ರತಿಪಾದ್ಯವಾದ ಬ್ರಹ್ಮವಸ್ತು (ಪರಬ್ರಹ್ಮ) ಮಾತ್ರವೇ ಎಲ್ಲಕ್ಕೂ ಆದಿಯಲ್ಲಿದ್ದಿತು. ಆ ಬ್ರಹ್ಮದಿಂದ ಅತ್ಯಂತ ಶಕ್ತಿಯುತನೂ ಅತಿಶಯಕಾಂತಿಯಿಂದ ಬೆಳಗುವವನೂ ಸೂರ್ಯಾತ್ಮಕನೂ ಆದ ಇಂದ್ರನು ಉತ್ಪನ್ನನಾದನು. ಆ ಇಂದ್ರನು ಹುಟ್ಟಿದ ಕೂಡಲೇ ಶತ್ರುಗಳನ್ನು ನಾಶಮಾಡುವವನಾದನು. ಮತ್ತು ಸಮಸ್ತ ಪ್ರಾಣಿಗಳೂ ಅವನನ್ನು ಕಂಡು ಹರ್ಷಗೊಂಡವು.

## English Translation

That was the chiefest in all worlds, from whence the fierce one, the rich in radiance, was born; as soon as born, he destroys the foes, he in whom all living beings delight.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಎಲ್ಲಕ್ಕೂ ಮೊದಲು ಎಂದರೆ ಸೃಷ್ಟಿಗೆ ಪೂರ್ವದಲ್ಲಿ ಸರ್ವವೇದಾಂತಪ್ರತಿಪಾದ್ಯವಾದ ಪರಬ್ರಹ್ಮವಸ್ತುಮಾತ್ರ ಆದಿಯಲ್ಲಿ ಇದ್ದಿತೆಂದೂ ಅದರಿಂದಲೇ ಸೂರ್ಯಾತ್ಮಕನಾದ ಇಂದ್ರನು ಉತ್ಪನ್ನನಾದನೆಂದೂ ಹೇಳಿದೆ. ಮತ್ತು ಆ ಇಂದ್ರನ ಶಕ್ತಿಯು ಅಗಾಧವಾದುದು. ಹುಟ್ಟಿದಕೂಡಲೇ ಶತ್ರುಗಳನ್ನು ನಿಗ್ರಹಿಸಿದನು.

ಇಂತಹ ಇಂದ್ರನನ್ನು ಕಂಡು ಸಮಸ್ತಪ್ರಾಣಿಗಳೂ ಹರ್ಷವನ್ನು ವ್ಯಕ್ತಪಡಿಸಿದವು ಎಂದು ವರ್ಣಿಸಲಾಗಿದೆ. ಈ ಋಕ್ಕಿನಲ್ಲಿರುವ ನಾಲ್ಕುಪಾದಗಳಲ್ಲಿಯೂ ನಾಲ್ಕು ಪ್ರತ್ಯೇಕ ವಿಷಯಗಳ ವಿವರಣೆ ಇದೆ. ಅವುಗಳಲ್ಲಿ ಒಂದೊಂದನ್ನೂ ಪ್ರತ್ಯೇಕವಾಗಿ ವಿವರಿಸುವುದು ಅವಶ್ಯಕವು.

**ತತ್ ಇತ್ ಆಸ ಭುವನೇಷು ಜ್ಯೇಷ್ಠಂ—** **ತತ್** ಎಂದರೆ ಆ ವಸ್ತುವು. ಯಾವ ವಸ್ತುವು ? ಜಗತ್ಕಾರಣವೆಂದು ಪ್ರಸಿದ್ಧವೂ ಸರ್ವವೇದಾಂತ ಮೊದಲಾದ ದರ್ಶನಗಳಲ್ಲಿ ವಿಮರ್ಶಿಸಲಾಗುವುದೂ ಆದ ಪರಬ್ರಹ್ಮ ವೆಂಬ ವಸ್ತುವು ಇದೇ ಅರ್ಥವನ್ನೇ **ತತ್ತ್ವಮಸಿ** ಎಂಬ ಮಹಾವಾಕ್ಯದಲ್ಲಿರುವ (ತತ್ + ತ್ವಂ + ಅಸಿ) ತತ್ ಎಂಬ ಶಬ್ದವೂ ನಿರ್ದೇಶಿಸುವುದು. ಪರಬ್ರಹ್ಮನಿಗೆ ಸ್ತ್ರೀಪುರುಷಾದಿ ಲಿಂಗಭೇದಗಳಿಲ್ಲದಿರುವುದರಿಂದ **ತತ್, ಬ್ರಹ್ಮ** ಇತ್ಯಾದಿ ನಪುಸಂಕ ಶಬ್ದಗಳಿಂದ ನಿರ್ದೇಶಿಸಲ್ಪಡುವನು. **ಜ್ಯೇಷ್ಠಂ** ಎಂಬ ಶಬ್ದಕ್ಕೆ ಇಲ್ಲಿ ಅನೇಕಾರ್ಥಗಳನ್ನು ಹೇಳಿದಾರೆ **ಜ್ಯೇಷ್ಠಂ—ಪ್ರಶಸ್ತತಮಂ,** ಅತ್ಯಂತ ಶ್ರೇಷ್ಠವಾದ, ಪ್ರಶಂಸಾರ್ಹವಾದ, ಎಂದರ್ಥವು ಅಥವಾ **ಪರಮಾರ್ಥ-ತ್ವಾತ್ ತದ್ವ್ಯತಿರಿಕ್ತಾನಾಂ ವ್ಯಾವಹಾರಿಕತ್ವಾಚ್ಚ—** ಜಗತ್ತಿನಲ್ಲಿರುವ ಸಮಸ್ತವಸ್ತುಗಳಿಗಿಂತಲೂ ಇದು ಬೇರೆ ಯಾದುದು. ಇತರ ವಸ್ತುಗಳಿಗೆ ನಾಶವಿರುವುದು. ಬ್ರಹ್ಮವಸ್ತುವಿಗೆ ನಾಶವಿಲ್ಲ. ಆದ್ದರಿಂದ ವ್ಯವಹಾರದೃಷ್ಟಿ ಯಿಂದ ಇದು ಪ್ರಪಂಚದ ಇತರ ವಸ್ತುಗಳಿಗಿಂತ ತೀರಾ ಭಿನ್ನವಾದುದು. ಇದರ ಸ್ವರೂಪವು ಯಾವುದನ್ನೂ ಹೋಲುವುದಿಲ್ಲ. **ಅಥವಾ ಜ್ಯೇಷ್ಠಂ ವೃದ್ಧತಮಂ ಜಗತ್ಕಾರಣತ್ವೇನ ಸರ್ವೇಷಾಮಾದಿಭೂತಂ—** ಈ ಬ್ರಹ್ಮ ವಸ್ತುವು ಜಗತ್ತಿಗೆ ಕಾರಣವು ಎಂದರೆ ಇದರಿಂದಲೇ ಸಮಸ್ತಜಗತ್ತುಗಳೂ ಉಂಟಾದವು ಆದ್ದರಿಂದ ಇದು ಎಲ್ಲಕ್ಕೂ ಆದಿಯು, ಮೂಲವು. ಇದಕ್ಕಿಂತ ಹಿಂದಿದ್ದ ವಸ್ತುವು ಯಾವುದೂ ಇಲ್ಲ. ಇದೇ ಎಲ್ಲಕ್ಕೂ ಮೊದಲನೆಯದು. ಇಂತಹ ಪರಬ್ರಹ್ಮವಸ್ತುವು ಸರ್ವಸೃಷ್ಟಿಗೂ ಆದಿಯಲ್ಲಿ ತಾನೊಂದೇ ಇದ್ದಿತು. ಸ್ವಪ್ರಕಾಶದಿಂದ ತಾನೇತಾನಾಗಿ ಬೆಳಗುತ್ತಿದ್ದಿತು ಎಂದು ವಾಕ್ಯಾರ್ಥವು.

ಬ್ರಹ್ಮ ವಸ್ತುವಿನ ಸ್ವರೂಪವನ್ನು ವರ್ಣಿಸುವ ಸನ್ನಿವೇಶಗಳು ನಾನಾ ಉಪನಿಷತ್ತುಗಳಲ್ಲಿಯೂ, ವೇದಾಂತ ಗ್ರಂಥಗಳಲ್ಲಿಯೂ ವಿಶೇಷವಾಗಿವೆ.

> **ಬ್ರಹ್ಮ ದೇವಾನಜನಯತ್ । ಬ್ರಹ್ಮ ವಿಶ್ವಮಿದಂ ಜಗತ್ । ಬ್ರಹ್ಮಣಃ ಕ್ಷತ್ರಂ ನಿರ್ಮಿತಂ । ಬ್ರಹ್ಮ ಬ್ರಾಹ್ಮಣ ಆತ್ಮನಾ । ಅಂತರಸ್ಮಿನ್ನಿಮೇ ಲೋಕಾಃ । ಅಂತರ್ವಿಶ್ವಮಿದಂ ಜಗತ್ । ಬ್ರಹ್ಮೈವ ಭೂತಾನಾಂ ಜ್ಯೇಷ್ಠಂ । ತೇನ ಕೋಽರ್ಹತಿ ಸ್ಪರ್ಧಿತುಂ । ಬ್ರಹ್ಮನ್ದೇವಾಸ್ತ್ರಯಸ್ತ್ರಿಂಶತ್ । ಬ್ರಹ್ಮನ್ನಿಂದ್ರಪ್ರಜಾಪತೀ । ಬ್ರಹ್ಮನ್ ಹ ವಿಶ್ವಾ ಭೂತಾನಿ । ನಾವೀವಾನ್ತಃ ಸಮಾಹಿತಾ ॥**
>
> (ತೈ. ಬ್ರಾ. ೨-೮-೮-೯, ೧೦)

ಬ್ರಹ್ಮನು ಎಂದರೆ ಪರಬ್ರಹ್ಮನು ದೇವತೆಗಳನ್ನು ಉತ್ಪತ್ತಿಮಾಡಿದನು. ಅಷ್ಟೇ ಅಲ್ಲ, ಈ ಸಮಸ್ತ ವಿಶ್ವವೂ ಬ್ರಹ್ಮಸ್ವರೂ ಪವೇ (ಬ್ರಹ್ಮವೇ) ಆಗಿದೆ. ಕ್ಷತ್ರಿಯಜಾತಿಯು ಬ್ರಹ್ಮನಿಂದಲೇ ನಿರ್ಮಿಸಲ್ಪಟ್ಟಿತು. ಬ್ರಾಹ್ಮಣನು ಸ್ವಯಂಬ್ರಹ್ಮಸ್ವರೂ ಪವೇ ಆಗಿರುವನು. ಈ ಬ್ರಹ್ಮನಲ್ಲಿ ಸಮಸ್ತಲೋಕಗಳು, ಈ ಸಮಸ್ತ ಜಗತ್ತೂ ಅಡಗಿವೆ. ಈ ಬ್ರಹ್ಮನು ಪೃಥಿವ್ಯಾದಿ ಪಂಚಮಹಾಭೂತಗಳಿಗೂ, ಸಮಸ್ತಪ್ರಾಣಿಗಳಿಗೂ ಶ್ರೇಷ್ಠನು, ಪ್ರಶಸ್ಯನು, ಆದಿಯು ಇಂತಹ ಬ್ರಹ್ಮನೊಡನೆ ಶಕ್ತಿ ಸಾಮರ್ಥ್ಯಾದಿಗಳಲ್ಲಿ ಸ್ಪರ್ಧಿಸಲು ಯಾರು ಸಮರ್ಥರು ? ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿರುವಂತೆ— **ನ ತತ್ಸಮ-ಶ್ಚಾಭ್ಯಧಿಕಶ್ಚ ದೃಶ್ಯತೇ—** ಈ ಬ್ರಹ್ಮನಿಗೆ ಸಮನಾದವನಾಗಲಿ, ಅಧಿಕನಾದವನಾಗಲಿ ಯಾರೂ ಇಲ್ಲ ಈ ಬ್ರಹ್ಮ

ನಲ್ಲಿಯೇ ಮೂವತ್ತಮೂರುದೇವತೆಗಳು ಅಂತರ್ಹಿತರಾಗಿರುವರು. ಇಂದ್ರನೂ, ಪ್ರಜಾಪತಿಯೂ ಬ್ರಹ್ಮನಲ್ಲಿಯೇ ಅಂತರ್ಗತರಾಗಿರುವರು. ಸಮಸ್ತ ಪ್ರಾಣಿಗಳೂ ಸಹ ನದಿಯನ್ನು ದಾಟುವಾಗ ದೋಣಿಯಲ್ಲಿ ಜನರೆಲ್ಲರೂ ಒಂದೆಡೆಯಲ್ಲಿ ಸೇರುವಂತೆ ಈ ಬ್ರಹ್ಮನಲ್ಲಿಯೇ ನೆಲಸಿರುವರು.

ತೈತ್ತಿರೀಯೋಪನಿಷತ್ತಿನಲ್ಲಿ—

**ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ ॥**

(ತೈ. ಉ. ೩-೧)

ಯಾವ ಪರಾತ್ಪರವಸ್ತುವಿನಿಂದ ಈ ಸಮಸ್ತ ಪ್ರಾಣಿಗಳೂ ಉತ್ಪನ್ನವಾಗುವವೋ, ಉತ್ಪನ್ನವಾದ ಪ್ರಾಣಿಗಳು ಯಾರ ಪ್ರಭಾವದಿಂದ ಜೀವಿಸುವವೋ ಮತ್ತು ಕೊನೆಯಲ್ಲಿ ಯಾರಲ್ಲಿಯೋ ಲೀನವಾಗಿ ನಾಶವನ್ನೈದುವವೋ ಅದೇ ಬ್ರಹ್ಮವು **ಯೋ ದೇವಾನಾಂ ಪ್ರಥಮಂ ಪುರಸ್ತಾತ್** (ತೈ.ಉ. ೪-೧೨-೩) ಎಂಬ ವಾಕ್ಯದಲ್ಲಿ ಆ ಬ್ರಹ್ಮವು ಸಮಸ್ತ ದೇವತೆಗಳಿಗೂ ಶ್ರೇಷ್ಠವೂ ಮತ್ತು ಆದಿಯೂ ಆಗಿದೆ ಎಂದು ಹೇಳಿದೆ. ಅದೇ ಉಪನಿಷತ್ತಿನ ಮತ್ತೊಂದೆಡೆಯಲ್ಲಿ— **ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ। ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ** ॥ (ತೈ. ಉ. ೨-೪) ಈ ಪರಬ್ರಹ್ಮನನ್ನು ವಾಕ್ಯಗಳಿಂದ ವರ್ಣಿಸಲಾಗುವುದಿಲ್ಲ ಮನಸ್ಸಿನಿಂದಲೂ ಧ್ಯಾನಿಸಲಾಗುವುದಿಲ್ಲ ಅದು ಈ ವಾಙ್ಮನಗಳಿಗೆ ಅತೀತವಾಗಿರುವುದು. ಇಂತಹ ಬ್ರಹ್ಮಸ್ವರೂಪವನ್ನು ತಿಳಿಯುವುದರಿಂದ ಉಂಟಾಗುವ ಆನಂದವನ್ನು ಯಾವ ವಿವೇಕಿಯು ಪಡೆಯುವನೋ ಅವನಿಗೆ ಯಾವವಿಧವಾದ ಭಯವೂ, ವ್ಯಸನವೂ, ದುಃಖವೂ ಇರುವುದಿಲ್ಲ ಎಂದು ಹೇಳಿದೆ.

ಮತ್ತು ಕೇನೋಪಷತ್ತಿನಲ್ಲಿ—

**ಕೇನೇಷಿತಂ ಪತತಿ ಪ್ರೇಷಿತಂ ಮನಃ ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ । ಕೇನೇಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥**

(ಕೇನ. ಉ. ೧-೧)

ಯಾರ ಇಚ್ಛೆಗನುಸರಿಸಿ, ಯಾರ ಪ್ರೇರಣೆಯಿಂದ ಈ ಮನಸ್ಸು ತನ್ನ ವಿಷಯದಲ್ಲಿ ತೊಡಗುವುದು ? ಪ್ರಾಣವು ಮೊಟ್ಟಮೊದಲು ಯಾರ ಆಜ್ಞೆಯಿಂದ ತನ್ನ ಕರ್ಮವನ್ನಾರಂಭಿಸುವುದು ? ಯಾರ ಇಚ್ಛೆಯಿಂದ ಜನರು ಮಾತನಾಡುವರು ? ಕಣ್ಣುಗಳಿಗೂ ಕಿವಿಗಳಿಗೂ ಆಜ್ಞೆಮಾಡುವ ದೇವತೆ ಯಾರು ? ಈ ಪ್ರಶ್ನೆಗಳಿಗೆ ಉತ್ತರವನ್ನು ಈ ರೀತಿ ಅಲ್ಲಿಯೇ ಹೇಳಲಾಗಿದೆ—

**ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಶ್ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ ॥**

(ಕೇನ. ಉ. ೧-೨)

ಯಾವುದು ಕಿವಿಗಳಿಗೂ ಕಿವಿಯಂತಿರುವುದೋ, ಮನಸ್ಸಿನ ಮನಸ್ಸೋ, ಮಾತಿಗೆ ಮಾತೋ ಅದು ಪ್ರಾಣದ ಪ್ರಾಣವು, ಕಣ್ಣುಗಳ ಕಣ್ಣು, ಪ್ರಾಜ್ಞರು ಇವುಗಳಾಚೆಗೆ ಎಂದರೆ ಈ ಇಂದ್ರಿಯಗಳನ್ನತಿಕ್ರಮಿಸಿ ಹೋಗುವರು ಮತ್ತು ಈ ಲೋಕದಿಂದ ತೆರಳಿದ ಬಳಿಕ ಅಮೃತಪದವಿಯನ್ನು (ಮರಣರಹಿತವಾದ ಮೋಕ್ಷಪದವಿಯನ್ನು) ಪಡೆಯುವರು.

**ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನೋ ಮನೋ ನ ವಿದ್ಮೋ ನ ವಿಜಾನೀಮೋ ಯಥೈತ-ದನುಶಿಷ್ಯಾದನ್ಯದೇವ ತದ್ವಿದಿತಾದಥೋ ಅವಿದಿತಾದಧಿ। ಇತಿ ಶುಶ್ರುಮ ಪೂರ್ವೇಷಾಂ ಯೇ ನಸ್ತದ್ವ್ಯಾಚಚಕ್ಷಿರೇ ॥**

(ಕೇನ. ಉ. ೧-೩)

ಅದು ಎಂದರೆ ಆ ಬ್ರಹ್ಮವು ಇದ್ದಲ್ಲಿಗೆ ನಮ್ಮ ದೃಷ್ಟಿಯು ಹೋಗಲರಿಯದು. ನಮ್ಮ ವಾಚಾಶಕ್ತಿಗೆ ಅದು ನಿಲುಕದು. ನಮ್ಮ ಮನಸ್ಸು ಅಲ್ಲಿಯವರೆಗೆ ಹೋಗಿ ಮುಟ್ಟಲಾರದು. ಅದನ್ನು ನಾವು ಅರಿಯೆವು. ಶಿಷ್ಯರಿಗೆ ಉಪದೇಶ ಮಾಡಿ ಅದನ್ನು ಅವರಿಗೆ ತಿಳಿಸುವಷ್ಟು ಪೂರ್ಣ ರೀತಿಯಿಂದ ನಾವು ಅದನ್ನು ತಿಳಿಯೆವು ಅದು ಇದುವರೆಗೆ ತಿಳಿದಿರುವ ಮತ್ತು ತಿಳಿಯದಿರುವ ವಸ್ತುಗಳಾಚೆ ಇರುವುದು ನಮಗೆ ಆ ಜ್ಞಾನವನ್ನು ಉಪದೇಶಿಸಿದ ಪೂರ್ವೀಕರಿಂದ ಹೀಗೆ ಕೇಳಿರುವೆವು.

**ಯದ್ವಾಚಾನಭ್ಯುದಿತಂ ಯೇನವಾಗಭ್ಯುದ್ಯತೇ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದ-ಮುಪಾಸತೇ ॥ ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ। ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಂಷಿ ಪಶ್ಯತಿ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಂ ಶ್ರುತಂ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮು-ಪಾಸತೇ ॥ ಯತ್ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥**

(ಕೇನ. ಉ. ೧-೪-೮)

ಯಾವುದು ವಾಚಾಶಕ್ತಿಯಿಂತ ವರ್ಣಿಸಲ್ಪಡಲಾರದೋ ಯಾವುದರ ಶಕ್ತಿಯಿಂದ ವಾಕ್ಕೇ (ಮಾತನಾಡುವ ಶಕ್ತಿ) ಪ್ರಕಟವಾಗುವುದೋ ಅದೇ ಬ್ರಹ್ಮವೆಂದು ತಿಳಿ. ಜನರು ಯಾವುದನ್ನು ಬ್ರಹ್ಮವೆಂದು ಉಪಾಸಿಸುವರೋ ಅದು ಬ್ರಹ್ಮವಲ್ಲ. ಯಾವುದು ಮನಸ್ಸಿನ ಸಹಾಯದಿಂದ ವಿಚಾರಮಾಡಲಾಗುವುದಿಲ್ಲವೋ ಆದರೆ ಮನಸ್ಸೇ ಯಾವುದರ ವಿಚಾರಕ್ಕೆ ವಿಷಯವಾಗುವುದೋ ಅದನ್ನೇ ಬ್ರಹ್ಮವೆಂದು ತಿಳಿ. ಯಾವುದನ್ನು ಕಣ್ಣುಗಳಿಂದ ನೋಡಲಾಗುವುದಿಲ್ಲವೋ (ನೋಡಲಸಾಧ್ಯವೋ) ಆದರೆ ಯಾವುದು ಕಣ್ಣುಗಳನ್ನೇ ನೋಡಬಲ್ಲದೋ ಅದೇ ಬ್ರಹ್ಮವೆಂದು ತಿಳಿ ಯಾವುದನ್ನು ಕಿವಿಗಳಿಂದ ಕೇಳಿ ತಿಳಿಯಲಾಗುವುದಿಲ್ಲವೋ, ಆದರೆ ಯಾವುದು ಕಿವಿಗಳನ್ನೇ ಕೇಳುವುದೋ ಅದೇ ಬ್ರಹ್ಮವೆಂದು ತಿಳಿ. ಯಾವುದು ಪ್ರಾಣದ ಸಹಾಯದಿಂದ ಉಸಿರಾಡುವುದಿಲ್ಲವೋ ಆದರೆ ಯಾವುದು ಪ್ರಾಣಶಕ್ತಿಯನ್ನೇ ಉಸಿರಾಡಿಸುವುದೋ ಅದೇ ಬ್ರಹ್ಮವೆಂದು ತಿಳಿ. ಜನರು ಯಾವುದನ್ನು ಬ್ರಹ್ಮವೆಂದು ಉಪಾಸಿಸುತ್ತಿರುವರೋ ಅದು ಬ್ರಹ್ಮವಲ್ಲ.

ತೈತರೀಯೋಪನಿಷತ್ತಿನಲ್ಲಿ—

**ಸತ್ಯಂ ಜ್ಞಾನಮನಂತಂ ಬ್ರಹ್ಮ। ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ಸೋಽಶ್ನುತೇ ಸರ್ವಾನ್ಕಾಮಾನ್ ಸಹ। ಬ್ರಹ್ಮಣಾ ವಿಪಶ್ಚಿತೇತಿ ॥**

(ತೈ. ಉ. ೨-೧)

ಬ್ರಹ್ಮವೆಂದರೇನು? ಬ್ರಹ್ಮವು ಸತ್ಯಸ್ವರೂಪವಾಗಿರುವುದು ಅದು ಸೂಕ್ಷ್ಮರೂಪದಿಂದಿದ್ದು ಬಾಹ್ಯಚಕ್ಷುಸ್ಸಿಗೆ ಗೋಚರವಾಗದಿದ್ದ ಮಾತ್ರಕ್ಕೆ ಅದು ಇಲ್ಲ, ಅದಿರುವುದು ಸತ್ಯವಲ್ಲ ಎಂದು ಹೇಳಲಾಗುವುದಿಲ್ಲ. ಅದು ಇರುವುದು ಸತ್ಯವು (ನಿಶ್ಚಯವು) ನಮ್ಮ ದೃಷ್ಟಿಶಕ್ತಿಗೆ ಒಂದು ಪರಿಮಿತಿ ಇರುವುದರಿಂದ ಅದನ್ನು ನಾವು ನಮ್ಮ ಕಣ್ಣುಗಳಿಂದ ನೋಡಲಾಗುವುದಿಲ್ಲ **ಜ್ಞಾನಂ** ಎಂದರೆ ತಿಳುವಳಿಕೆ, ಚೈತನ್ಯ. ಬ್ರಹ್ಮವಸ್ತುವು ಸೂಕ್ಷ್ಮಸ್ಥಿತಿಯಲ್ಲಿದ್ದರೂ ಇರುವುದೇನೋ ನಿಶ್ಚಯ ಎಂದು ಒಪ್ಪಿಕೊಂಡರೂ ಅದಕ್ಕೆ ಏನು ಶಕ್ತಿ ಇದೆ? ಅದು ಪರ್ವತಾದಿಗಳಂತೆ ಒಂದು ಜಡವಸ್ತುವಲ್ಲವೇ ಎಂದರೆ ಹಾಗಲ್ಲ. ಅದು ಚೈತನ್ಯಯುಕ್ತವಾದುದು, ಎಲ್ಲವನ್ನೂ ತಿಳಿದುಕೊಳ್ಳುವ ಶಕ್ತಿಯು ಅದಕ್ಕೆ ಇರುವುದು. ಅಷ್ಟೇ ಅಲ್ಲ; ವಿಶ್ವದಲ್ಲಿರುವ ಸಮಸ್ತ ಚೈತನ್ಯಕ್ಕೂ ಜ್ಞಾನಕ್ಕೂ ಅದೇ ಮೂಲವು. ಅದರಿಂದಲೇ ಅದರ ಅಂಶಗಳಾಗಿ ಸರ್ವ ಪ್ರಾಣಿಗಳ ಚೈತನ್ಯವೂ ಜ್ಞಾನಗಳೂ ಇರುವವು. ಇನ್ನು **ಅನಂತಂ** ಎಂಬ ಶಬ್ದದ ಅರ್ಥವೇನು ಎಂದರೆ—ಹಿಂದೆ ಹೇಳಿದ ಎರಡು ಗುಣಗಳಿಂದ ಎಂದರೆ ಸರ್ವದಾ ಇರುವುದೂ ಚೈತನ್ಯ ಅಥವಾ ಜ್ಞಾನಮಯವಾದುದೂ ಆದ ಆ ಬ್ರಹ್ಮವು ಎಲ್ಲಿಯೋ ಒಂದುಕಡೆ ಇರುವುದೇ ಎಂದರೆ ಹಾಗಲ್ಲ. ಅದು ಎಲ್ಲೆಲ್ಲಿಯೂ ವ್ಯಾಪಿಸಿರುವುದು ಅದಕ್ಕೆ ಕೊನೆ ಮೊದಲಿಲ್ಲ ಅದು ಇಲ್ಲದಿರುವ ಸ್ಥಳವಾಗಲಿ, ಕಾಲವಾಗಲಿ, ವಸ್ತುವಾಗಲಿ ಇಲ್ಲ. ಅಂತವೆಂದರೆ ಕೊನೆಯು, ಅನಂತವೆಂದರೆ ಕೊನೆಯಿಲ್ಲದ್ದು. ಬ್ರಹ್ಮವಸ್ತುವು ಇಲ್ಲಿಗೆ ಮುಗಿಯಿತು. ಇವೇ ಅದರ ಕೊನೆಯು, ಇನ್ನು ಮುಂದೆ ಅದು ಇಲ್ಲ ಎಂದು ಹೇಳುವಹಾಗಿಲ್ಲ. ಅದಕ್ಕೆ ಕೊನೆಯೂ ಇಲ್ಲ, ಮೊದಲೂ ಇಲ್ಲ ಅದಕ್ಕೆ ದೇಶ ಕಾಲ ವಸ್ತುಗಳ ಪರಿಮಿತಿ ಇಲ್ಲ ಅದು ಹಿಂದೆಯೂ ಇತ್ತು, ಈಗಲೂ ಇರುವುದು, ಮುಂದೆಯೂ ಇರುವುದು. ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ಪ್ರದೇಶಗಳಲ್ಲಿಯೂ, ಎಲ್ಲಾ ವಸ್ತುಗಳಲ್ಲಿಯೂ ಅದು ವ್ಯಾಪಿಸಿರುವುದು. ಇಂತಹ ಸಚ್ಚಿದಾತ್ಮಕವೂ, ಅನಂತವೂ ಆದ ಬ್ರಹ್ಮವನ್ನು ಯಾವ ಪುರುಷನು ತನ್ನ ಹೃದಯವೆಂಬ ಅತ್ಯಂತ ರಹಸ್ಯ ಪ್ರದೇಶದಲ್ಲಿ ನೆಲೆಸಿರುವುದನ್ನು ತಿಳಿದು ಅದನ್ನು ಉಪಾಸಿಸುವನೋ ಅವನು ಸರ್ವಜ್ಞನಾದ ಆ ಬ್ರಹ್ಮನೊಡನೆ ಅವನಲ್ಲೇ ಐಕ್ಯನಾಗಿ ಸಮಸ್ತ ಅಭೀಷ್ಟಗಳನ್ನು ಪಡೆದು ನಿರತಿಶಯವಾದ ಆನಂದವನ್ನನುಭವಿಸುತ್ತಾನೆ ಎಂದು ಮುಖ್ಯಾಭಿಪ್ರಾಯವು.

ತೈತ್ತಿರೀಯೋಪನಿಷತ್ತಿನ ಇನ್ನೊಂದು ಕಡೆ (ತೈ. ಉ. ೪-೧) ಈ ಪರಬ್ರಹ್ಮದ ಸ್ವರೂಪವನ್ನು ವಿಸ್ತಾರವಾಗಿಯೂ ಬಹು ಚೆನ್ನಾಗಿಯೂ ವರ್ಣಿಸಲಾಗಿದೆ. ಅದರ ಸಾರಾಂಶವನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ—

**ಅಂಭಸ್ಯ ಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ ಮಹತೋ ಮಹೀಯಾನ್ । ಶುಕ್ರೇಣ ಜ್ಯೋತೀಗ್‌ಂಷಿ ಸಮನುಪ್ರವಿಷ್ಟಃ ಪ್ರಜಾಪತಿಶ್ಚರತಿ ಗರ್ಭೇ ಅಂತಃ ।**

**(ತೈ. ಉ. ೪-೧)**

ನಾನಾ ಸಮುದ್ರಗಳ ಅತ್ಯಂತ ಕೊನೆಯಲ್ಲಿಯೂ ಇರುವ ಲೋಕಾಲೋಕ ಪ್ರದೇಶಗಳಲ್ಲಿಯೂ, ಪೃಥಿವ್ಯಾದಿಲೋಕಗಳ ಮಧ್ಯಪ್ರದೇಶದಲ್ಲಿಯೂ, ಸ್ವರ್ಗಲೋಕದ ಮೇಲುಭಾಗದಲ್ಲಿಯೂ ಇರುವ ವಸ್ತುಗಳಲ್ಲಿ ದೊಡ್ಡದಾದ ಯಾವ ವಸ್ತುಗಳಿವೆಯೋ ಆ ಎಲ್ಲಾ ವಸ್ತುಗಳಿಗಿಂತಲೂ ಈ ಬ್ರಹ್ಮವಸ್ತು ಅತಿದೊಡ್ಡದು. ಈ ಬ್ರಹ್ಮವು ಪ್ರಕಾಶಮಾನವಾದ ತನ್ನ ದಿವ್ಯಜ್ಯೋತಿಯಿಂದ ಸಮಸ್ತಪ್ರಾಣಿಗಳ ಹೃದಯ ಜ್ಯೋತಿಗಳನ್ನು ಪ್ರವೇಶಿಸಿ ಆ ಪ್ರಾಣಿಗಳಲ್ಲಿ ಜೀವರೂಪದಿಂದ (ಚೈತನ್ಯರೂಪದಿಂದ) ಇದ್ದು ಅವುಗಳ ಚಲನ ವಲನಗಳನ್ನು ನಿಯಮಿಸುವದು.

**ಯಸ್ಮಿನ್ನಿದಗ್‌ಂ ಸಂ ಚ ವಿ ಚೈತಿ ಸರ್ವಂ ಯಸ್ಮಿನ್ದೇವಾ ಅಧಿ ವಿಶ್ವೇ ನಿಷೇದುಃ । ತದೇವ ಭೂತಂ ತದು ಭವ್ಯಮಾ ಇದಂ ತದಕ್ಷರೇ ಪರಮೇ ವ್ಯೋಮನ್ ॥**

ಆ ಪರಬ್ರಹ್ಮದಲ್ಲಿ ಸಮಸ್ತ ಜಗತ್ತೂ ಅಡಗಿರುವುದು ಎಂದರೆ ಸೃಷ್ಟಿಕಾಲದಲ್ಲಿ ವ್ಯಕ್ತರೂಪವಾಗಿ ಗೋಚರಿಸುವುದು. ಸಂಹಾರಕಾಲದಲ್ಲಿ ಅವ್ಯಕ್ತ (ಸೂಕ್ಷ್ಮರೂಪದಿಂದ) ಬ್ರಹ್ಮನಲ್ಲಿಯೇ ಲೀನವಾಗಿ ಅಂತರ್ಗತವಾಗಿರುವುದು. ಆ ಬ್ರಹ್ಮದಲ್ಲಿಯೇ ಸಮಸ್ತ ದೇವತೆಗಳೂ ಅಡಗಿರುವುದು. ಅವ್ಯಕ್ತಸ್ವರೂಪದ ಆ ಬ್ರಹ್ಮದಿಂದಲೇ ಸಮಸ್ತ ದೇವತೆಗಳ ಉತ್ಪತ್ತಿಯೂ ಆಗಿರುವುದು. ಅಂತ್ಯದಲ್ಲಿ ಅವರೆಲ್ಲರೂ ಬ್ರಹ್ಮದಲ್ಲಿಯೇ ಐಕ್ಯರಾಗುವರು. ಆ ಬ್ರಹ್ಮವೇ ಹಿಂದೆ ಇದ್ದ, ಈಗಿರುವ, ಮುಂದೆ ಸೃಷ್ಟಿಯಾಗುವ ಸಮಸ್ತಜಗತ್ತಿಗೂ ಆಧಾರವಾಗಿರುವುದು ಆಕಾಶದಂತೆ ಸೂಕ್ಷ್ಮರೂಪದಿಂದ ಅವ್ಯಕ್ತಾವಸ್ಥೆಯಲ್ಲಿರುವ ನಾಶರಹಿತವಾದ ಈ ಪರಬ್ರಹ್ಮದಲ್ಲಿಯೇ ಸಮಸ್ತವಿಶ್ವವೂ ಅಂತರ್ಗತವಾಗಿರುವುದು.

**ಯೇನಾವೃತಂ ಖಂ ಚ ದಿವಂ ಮಹೀಂ ಚ ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ ।**
**ಯಮಂತಃಸಮುದ್ರೇ ಕವಯೋ ವಯಂತಿ ತದಕ್ಷರೇ ಪರಮೇ ಪ್ರಜಾಃ ॥**

ಆಕಾಶವೂ, ಸ್ವರ್ಗವೂ, ವಿಸ್ತಾರವಾದ ಈ ಭೂಮಿಯೂ ಇವೆಲ್ಲವೂ ಈ ಬ್ರಹ್ಮನಿಂದ ಆವರಿಸಲ್ಪಟ್ಟಿರುವುದು. ಎಂದರೆ ಈ ಲೋಕಗಳ ಒಳಗೂ ಹೊರಗೂ ಬ್ರಹ್ಮವು ವ್ಯಾಪಿಸಿರುವುದು ಪ್ರಕಾಶಮಾನವಾದ ಸೂರ್ಯನೂ ಈ ಬ್ರಹ್ಮದ ಪ್ರಭಾವದಿಂದಲೇ ತನ್ನ ಕಿರಣಗಳನ್ನು ಪ್ರಸರಿಸಿ ಬೆಳಗುತ್ತ ಸಮರ್ಥನಾಗಿರುವನು. ಸಮುದ್ರಸಹಿತವಾದ ಈ ಸಮಸ್ತಜಗತ್ತಿನಲ್ಲಿಯೂ ಯಾವ ಯಾವ ಚರಾಚರ ವಸ್ತುಗಳು, ಪ್ರಾಣಿಗಳೂ ಇವೆಯೆಂದು ಕವಿಗಳು (ಋಷಿಗಳು) ವರ್ಣಿಸಿರುವರೋ ಅವರೆಲ್ಲರೂ ನಾಶರಹಿತವಾದ ಈ ಪರಬ್ರಹ್ಮದಲ್ಲಿಯೇ ಅಂತರ್ಗತರಾಗಿರುವರು.

**ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ವ್ಯಚಸರ್ಜ ಭೂಮ್ಯಾಂ ।**
**ಯದೋಷಧೀಭಿಃ ಪುರುಷಾನ್ಪಶೂಗ್‌ಶ್ಚ ವಿವೇಶ ಭೂತಾನಿ ಚರಾಚರಾಣಿ ॥**

ಬ್ರಹ್ಮದಿಂದ ಈ ಜಗತ್ತಿನ ಸೃಷ್ಟಿಯಾಯಿತು ಮತ್ತು ಉದಕವೇ ಮೊದಲಾದ ಪಂಚಭೂತಗಳಿಂದ ಭೂಮಿಯಲ್ಲಿ ಪ್ರಾಣಿಗಳ ಉತ್ಪತ್ತಿಯೂ ಆಯಿತು. ಮತ್ತು ಓಷಧಿವನಸ್ಪತಿ (ವೃಕ್ಷ, ಸಸ್ಯವರ್ಗ) ಜನ್ಯವಾದ ಅನ್ನದ (ಆಹಾರದ) ಮೂಲಕ ಆ ಬ್ರಹ್ಮನು ಮಾನವರನ್ನೂ ಇತರ ಪ್ರಾಣಿಗಳನ್ನೂ ಪ್ರವೇಶಿಸಿ ಅವರನ್ನು ಪೋಷಿಸಿದನು. ಜಲಾದಿಗಳಿಂದ ವೃಕ್ಷಗಳೇ ಮೊದಲಾದ ಚರಾಚರವಸ್ತುಗಳನ್ನೂ ಪೋಷಿಸಿ ಅವುಗಳಲ್ಲಿ ಅಂತರ್ಭೂತನಾಗಿದ್ದು ಅವುಗಳು ವೃದ್ಧಿಯನ್ನೈದುವಂತೆ ಮಾಡಿದನು.

**ಅತಃಪರಂ ನಾನ್ಯದಣೀಯಸಗ್‌ಂ ಹಿ ಪರಾತ್ಪರಂ ಯನ್ಮಹತೋ ಮಹಾಂತಂ ।**
**ಯದೇಕಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ॥**

ಈ ಪರಬ್ರಹ್ಮವಸ್ತುವಿಗಿಂತ ಉತ್ಕೃಷ್ಟ ಅಥವಾ ಶ್ರೇಷ್ಠವಸ್ತುವಿಲ್ಲ ಇದಕ್ಕಿಂತ ಅತಿ ಸಣ್ಣದಾದ ಅಥವಾ ಸೂಕ್ಷ್ಮವಾದ ವಸ್ತುವಾಗಲೀ, ಇದಕ್ಕಿಂತ ಅತಿದೊಡ್ಡವಸ್ತುವಾಗಲಿ ಇಲ್ಲ ಈ ಬ್ರಹ್ಮವು ಅದ್ವಿತೀಯವಾಗಿ ಎಂದರೆ ಇದಕ್ಕೆ ಸರಿಗಟ್ಟುವ ವಸ್ತುವಿಲ್ಲದೆ ತಾನೇ ತಾನಾಗಿ ಬೆಳಗುತ್ತಿರುವುದು. ಇಂದ್ರಿಯಗಳಿಗೆ ಗೋಚರವಾಗದರೀತಿ ಅವ್ಯಕ್ತಾ (ಸೂಕ್ಷ್ಮ) ವಸ್ಥೆಯಲ್ಲಿರುವುದು. ಇದಕ್ಕೆ ದೇಶಕಾಲವಸ್ತುಪರಿಚ್ಛೇದವಿಲ್ಲದೆ ಅನಂತವಾಗಿರುವುದು. ಸಮಸ್ತವಿಶ್ವವನ್ನೂ ಒಳಗೊಂಡಿರುವುದು. ತಮಸ್ಸಿನಿಂದ ಎಂದರೆ ಕತ್ತಲಿನಿಂದ ಅಥವಾ ಅಜ್ಞಾನದಿಂದ ಬೇರೆಯಾಗಿದ್ದು ಪ್ರಕಾಶಮಾನವಾಗಿ ಬೆಳಗುತ್ತಿರುವುದು. ಇದು ಅನಾದಿಯಾಗಿಯೂ ಇರುವುದು.

ತದೇವರ್ತಂ ತದು ಸತ್ಯಮಾಹುಸ್ತದೇವ ಬ್ರಹ್ಮ ಪರಮಂ ಕವೀನಾಂ ।
ಇಷ್ಟಾಪೂರ್ತಂ ಬಹುಧಾ ಜಾತಂ ಜಾಯಮಾನಂ ವಿಶ್ವಂ ಬಿಭರ್ತಿ ಭುವನಸ್ಯ ನಾಭಿಃ ॥

ಮನಸ್ಸಿನಲ್ಲಿ ಧ್ಯಾನಮಾಡಿದರೂ, ಮಾತುಗಳಲ್ಲಿ ವರ್ಣಿಸಿದರೂ ಆ ಬ್ರಹ್ಮವಸ್ತುವು ಸತ್ಯವೇ ಆಗಿರುವುದೆಂದು ತಿಳಿದವರು ಹೇಳುವರು. ಇದನ್ನೇ ಸರ್ವೋತ್ಕೃಷ್ಟವಾದ ಬ್ರಹ್ಮವೆಂದು ಕವಿಗಳು ಹೇಳಿರುವರು. ಯಜ್ಞಸ್ವರೂಪವೂ ಈ ಬ್ರಹ್ಮವೇ. ಹಿಂದಿನ ಕಲ್ಪಗಳಲ್ಲಿ ಸೃಷ್ಟಿಸಲ್ಪಟ್ಟಿದ್ದ ಸಮಸ್ತ ಜಗತ್ತುಗಳೂ ಈಗ ಸೃಷ್ಟಿಸಲ್ಪಟ್ಟಿರುವ ಜಗದಾದಿಗಳೆಲ್ಲವೂ ಈ ಬ್ರಹ್ಮವೇ ಆಗಿರುವುದು. ಜಗತ್ತಿಗೆ ನಾಭಿಯಂತಿರುವ ಎಂದರೆ ಜಗದಾದಿಗಳಲ್ಲಿ ಚೈತನ್ಯರೂಪದಿಂದ ಪ್ರವೇಶಿಸಿ ಅಲ್ಲಿಯೇ ನೆಲಸಿರುವ ಈ ಬ್ರಹ್ಮವು ಸಮಸ್ತ ಜಗತ್ತನ್ನೂ ತನ್ನ ಪ್ರಭಾವದಿಂದ ಧರಿಸಿ ಪೋಷಿಸುತ್ತಿರುವುದು.

ತದೇವಾಗ್ನಿಸ್ತದ್ವಾಯುಸ್ತತ್ಸೂರ್ಯಸ್ತದು ಚಂದ್ರಮಾಃ ।
ತದೇವ ಶುಕ್ರಮಮೃತಂ ತದ್ಬ್ರಹ್ಮ ತದಾಪಃ ಸ ಪ್ರಜಾಪತಿಃ ॥

ಅಗ್ನಿಯೂ ಆ ಬ್ರಹ್ಮಸ್ವರೂಪವೇ ಆಗಿರುವುದು ಹಾಗೆಯೇ, ವಾಯು, ಸೂರ್ಯ ಚಂದ್ರ, ಪ್ರಕಾಶಮಾನವಾದ ನಕ್ಷತ್ರಮಂಡಲ, ಉದಕವೇ ಮೊದಲಾದ ಪಂಚಭೂತಗಳು ವಿರಾಡ್ರೂಪನಾದ ಪ್ರಜಾಪತಿ ಇವೆಲ್ಲವೂ ಆ ಬ್ರಹ್ಮವೇ ಆಗಿರುವುದು.

ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ।
ಕಲಾ ಮುಹೂರ್ತಾಃ ಕಾಷ್ಠಾಶ್ಚಾಹೋರಾತ್ರಾಶ್ಚ ಸರ್ವಶಃ ॥
ಅರ್ಧಮಾಸಾ ಮಾಸಾ ಋತವಃ ಸಂವತ್ಸರಶ್ಚ ಕಲ್ಪಂತಾಂ ।
ಸ ಆಪಃ ಪ್ರದುಘೇ ಉಭೇ ಇಮೇ ಅಂತರಿಕ್ಷಮಥೋ ಸವಃ ॥

ಸ್ವಯಂಪ್ರಕಾಶಮಾನನಾದ ಆ ಬ್ರಹ್ಮನಿಂದಲೇ ಕಾಲವಿಭಾಗಗಳು ಎಂದರೆ ನಿಮೇಷ (ಕಣ್ಣು ರೆಪ್ಪೆ ಮುಚ್ಚಿ ತೆಗೆಯುವಷ್ಟುಕಾಲ) ಕಾಷ್ಠ, ಕಲಾ, ಮುಹೂರ್ತ, ಹಗಲು, ರಾತ್ರಿ, ಪಕ್ಷ (ಹದಿನೈದುದಿವಸ ಅಥವಾ ಅರ್ಧಮಾಸ) ಮಾಸ, ಋತುಗಳು, ಸಂವತ್ಸರ ಎಂಬ ಕಾಲವಿಭಾಗಗಳೆಲ್ಲವೂ ಉತ್ಪನ್ನವಾಗಿ ಈ ಪರಬ್ರಹ್ಮಸ್ವರೂಪವೇ ಆಗಿರುವವು. ಈ ಕಾಲಾತ್ಮಕವಾದ ಬ್ರಹ್ಮನು ಜಲಾದಿಪಂಚಭೂತಗಳಿಂದ ಕೂಡಿದ ಪೃಥಿವಿಯನ್ನೂ ಅಂತರಿಕ್ಷವನ್ನೂ ಸ್ವರ್ಗವನ್ನೂ ಸೃಷ್ಟಿಸಿದನು.

ನೈನಮೂರ್ಧ್ವಂ ನ ತಿರ್ಯಂಚಂ ನ ಮಧ್ಯೇ ಪರಿಜಗ್ರಭತ್ ।
ನ ತಸ್ಯೇಶೇ ಕಶ್ಚನ ತಸ್ಯ ನಾಮ ಮಹದ್ಯಶಃ ।

ಈ ಬ್ರಹ್ಮಕ್ಕೆ, ಇದು ಸರ್ವತ್ರ ವ್ಯಾಪಿಸಿರುವುದರಿಂದ ಮೇಲುಭಾಗ ಯಾವುದು ಕೆಳಭಾಗ, ಅಗಲ, ಉದ್ದ, ಎತ್ತರ, ಮಧ್ಯೆ ಎಂಬ ವಿಭಾಗಗಳು ಯಾವುದೂ ಇಲ್ಲ. ಇದು ಒಬ್ಬರ ಅಧೀನದಲ್ಲಿಲ್ಲ ಎಂದರೆ ಇದರ ಮೇಲೆ ಅಧಿಕಾರ ನಡೆಸುವವರು ಯಾರೂ ಇಲ್ಲ. ಇಂತಹ ಸರ್ವತಂತ್ರಸ್ವತಂತ್ರನಾದ್ದರಿಂದಲೇ ಇದರ ಯಶಸ್ಸು ಎಂದರೆ ಮಹಿಮೆಯು ಅಗಾಧವಾಗಿರುವುದು.

ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಂ ।
ಹೃದಾ ಮನೀಷಾ ಮನಸಾಭಿಕ್ಲೃಪ್ತೋ ಯ ಏನಂ ವಿದುರಮೃತಾಸ್ತೇ ಭವಂತಿ ॥

ಈ ಬ್ರಹ್ಮವು ಯಾರಿಗೂ ಗೋಚರವಾಗುವ ವಸ್ತುವಲ್ಲ ಇದರ ರೂಪವನ್ನು ಕಣ್ಣಿನಿಂದ ಯಾವ ಪುರುಷನೂ ನೋಡಲು ಸಮರ್ಥನಲ್ಲ ಹೃದಯಕಮಲದಲ್ಲಿ ನೆಲಸಿರುವ ಈ ಪರಬ್ರಹ್ಮನನ್ನು ಮನಸ್ಸಿನಿಂದ ಧ್ಯಾನಿಸಿ ಸಾಕ್ಷಾತ್ಕರಿಸಿ ಯಾರು ತಿಳಿಯುವರೋ ಅವರು ಮರಣರಹಿತರಾಗಿ ಶಾಶ್ವತವಾದ ಪರಮಪದವಿಯನ್ನು ಪಡೆಯುವರು.

(ತೈ. ಉ. ೪-೧)

ಇವುಗಳಲ್ಲದೆ ಬ್ರಹ್ಮಸ್ವರೂಪವನ್ನು ತಿಳಿಸಲಿಚ್ಛಿಸುವ ಮಂತ್ರಗಳೂ, ವಾಕ್ಯಗಳೂ ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಅನೇಕವಾಗಿರುವವು. ಒಂದಲ್ಲ ಒಂದುರೀತಿ ಈ ಪರಬ್ರಹ್ಮವನ್ನು ವಿವರಿಸುವುದೇ ಸಮಸ್ತ ಉಪನಿಷತ್ತುಗಳ ಉದ್ದೇಶವಾಗಿರುವುದರಿಂದ ಅವೆಲ್ಲವನ್ನೂ ಇಲ್ಲಿ ವಿವರಿಸುವುದು ಸಾಧ್ಯವಿಲ್ಲ. ಆದ್ದರಿಂದ ಈ ವಿವರವನ್ನು ಇಲ್ಲಿಗೆ ನಿಲ್ಲಿಸಿ ಪ್ರಕೃತ ಋಕ್ಕಿನ ವಿವರಣೆಯನ್ನು ಮುಂದುವರಿಸಲಾಗುವುದು.

**ಯತೋ ಜಜ್ಞ ಉಗ್ರ ಸ್ತ್ವೇಷನೃಮ್ಣಃ—** **ಯಸ್ಮಾದ್ಬ್ರಹ್ಮಣಃ ಉದ್ಗೂರ್ಣಃ ಪ್ರದೀಪ್ತಬಲಃ ಸೂರ್ಯಾತ್ಮಕ ಇಂದ್ರಃ ಜಾತೋ ಬಭೂವ ||** ಈ ಪರಬ್ರಹ್ಮದಿಂದಲೇ ಅತ್ಯಂತ ಪ್ರಕಾಶಮಾನನೂ, ಶಕ್ತಿವಂತನೂ ಸೂರ್ಯಾತ್ಮಕನೂ ಆದ ಇಂದ್ರನು ಉತ್ಪನ್ನನಾದನು. ಮೇಲೆ ಉದಹರಿಸಿರುವ ಮಂತ್ರಗಳಲ್ಲಿ ಬ್ರಹ್ಮನಿಂದ ಅಗ್ನಿ, ಇಂದ್ರ, ಸೂರ್ಯ ಇವರು ಉತ್ಪನ್ನರಾದರೆಂದು ಹೇಳಿದೆ ಇದಲ್ಲದೆ **ಚಕ್ಷೋಃ ಸೂರ್ಯೋ ಅಜಾಯತ** (ಋ. ಸಂ. ೧೦-೯೦-೧೩) ಈ ಬ್ರಹ್ಮನ ಎಂದರೆ ಪರಮಪುರುಷನ ಕಣ್ಣಿನಿಂದ ಸೂರ್ಯನು ಉತ್ಪನ್ನನಾದನು ಎಂದು ಮಂತ್ರದಲ್ಲಿಯೂ ಹೇಳಿದೆ. ಮತ್ತು **ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್** (ಋ. ಸಂ. ೧೦-೧೯೦-೩) ಎಂಬ ಮಂತ್ರದಲ್ಲಿಯೂ ಈ ಬ್ರಹ್ಮನು ಹಿಂದಿನ ಕಲ್ಪದಲ್ಲಿದ್ದಂತೆಯೇ ಈ ಕಲ್ಪದಲ್ಲಿಯೂ ಸಹ ಸೂರ್ಯಚಂದ್ರರನ್ನು ಸೃಷ್ಟಿಮಾಡಿದನು ಎಂದು ಹೇಳಿದೆ. ಇಲ್ಲಿ ಸೂರ್ಯನಿಗೂ ಇಂದ್ರನಿಗೂ ತಾದಾತ್ಮ್ಯವನ್ನು ಹೇಳಿದೆ. ಇಂದ್ರ ಮತ್ತು ಸೂರ್ಯರಿಬ್ಬರೂ ಆ ಬ್ರಹ್ಮದ ಅಂಶಗಳೇ ಆಗಿರುವರು. ಮತ್ತು ಅವರು ಜಗತ್ತಿಗೆ ಪ್ರಭುಗಳೆಂದೂ ಅವರೇ ಬ್ರಹ್ಮಸ್ವರೂಪವೆಂದೂ ಅನೇಕ ಕಡೆ ವರ್ಣಿಸಲಾಗಿದೆ **ಅಸಾವಾದಿತ್ಯೋ ಬ್ರಹ್ಮೇತಿ**-ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಈ ಆದಿತ್ಯನೇ ಬ್ರಹ್ಮನಲ್ಲದೆ ಬೇರೆಯಲ್ಲ ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸುವುದು.

**ಸದ್ಯಃ ಜಜ್ಞಾನಃ ನಿ ರಿಣಾತಿ ಶತ್ರೂನ್—** ಈ ಇಂದ್ರನು ಹುಟ್ಟಿದ ಕೂಡಲೇ ಶತ್ರುಗಳನ್ನು ನಾಶ ಮಾಡಿದನು ಇತರ ಜನರು ಹುಟ್ಟಿದ ಮೇಲೆ ಅನೇಕ ವರ್ಷಗಳಾದನಂತರ ಎಂದರೆ ಬಾಲ್ಯ ಕೌಮಾರಾವಸ್ಥೆಗಳನ್ನು ದಾಟಿ ಯೌವನಾವಸ್ಥೆಗೆ ಬಂದನಂತರ ಶತ್ರುಗಳೊಡನೆ ಯುದ್ಧ ಮಾಡಿ ಅವರನ್ನು ಸಂಹರಿಸುವ ಸಾಮರ್ಥ್ಯವುಳ್ಳವರಾಗುವರು. ಆದರೆ ಇಂದ್ರನ ವಿಷಯವು ಹಾಗಲ್ಲ. ಹುಟ್ಟಿದ ಕೂಡಲೇ ತನ್ನ ಅತಿಶಯವಾದ ಶಕ್ತಿ ಸಾಮರ್ಥ್ಯಗಳಿಂದ ಶತ್ರುಗಳನ್ನು ಸಂಹರಿಸಲು ಸಮರ್ಥನು. ಸೂರ್ಯನ ವಿಷಯದಲ್ಲಿಯೂ, ಸೂರ್ಯನು ಉತ್ಪನ್ನನಾದ ಕೂಡಲೇ ತಮೋರೂಪವಾದ ಶತ್ರುಗಳನ್ನು ನಾಶಮಾಡಿ ಸಮಸ್ತ ಜಗತ್ತಿಗೂ ಬೆಳಕನ್ನುಂಟುಮಾಡುವನು ಎಂದರೆ ಸೂರ್ಯನು ಉದಯಿಸಿದ ಕೂಡಲೇ ಕತ್ತಲೆಯು ಹೋಗಿ ಬೆಳಕುಂಟಾಗುವುದು ಅಥವಾ **ಸದ್ಯೋ ಹ್ಯೇಷ ಜಾತಃ ಪಾಪ್ಮಾನಮಪಾಹತೆ** (ಐ. ಆ. ೧ ೩-೪) ಎಂಬ ಐತರೇಯಾರಣ್ಯಕದ ವಾಕ್ಯದಂತೆ ಸೂರ್ಯನು ಉದಯಿಸಿದ ಕೂಡಲೇ ತನ್ನನ್ನು ಉಪಾಸನೆಮಾಡುವ ಜನರ ಪಾಪಗಳನ್ನು ಪರಿಹಾರಮಾಡುವನು ಅಥವಾ ಮಂದೇಹಾದಿ ರಾಕ್ಷಸರನ್ನು ನಾಶಮಾಡುವನು. ಈ ವಿಷಯದಲ್ಲಿ ತೈತ್ತಿರೀಯಾರಣ್ಯಕದಲ್ಲಿ ಒಂದು ಇತಿಹಾಸವು ಉಕ್ತವಾಗಿದೆ—

**ರಕ್ಷಾಗ್ಂಸಿ ಹ ವಾ ಪುರೋಽನುವಾಕೇ ತಪೋಗ್ರಮತಿಷ್ಠಂತ ತಾನ್ಪ್ರಜಾಪತಿರ್ವರೇಣೋಪಾ-ಮಂತ್ರಯತ ತಾನಿ ವರಮವೃಣೀತಾದಿತ್ಯೋ ನೋ ಯೋದ್ಧಾ ಇತಿ ತಾನ್ಪ್ರಜಾಪತಿರಬ್ರವೀದ್ಯೋಧಯಧ್ವಮಿತಿ ತಸ್ಮಾದುತ್ತಿಷ್ಠಂತಗ್ಂ ಹ ವಾ ತಾನಿ ರಕ್ಷಾಗ್ಸ್ಯಾದಿತ್ಯಂ ಯೋಧಯಂತಿ ಯಾವದಸ್ತಮನ್ವಗಾತ್ತಾನಿ ಹ ವಾ ಏತಾನಿ ರಕ್ಷಾಗ್ಂಸಿ ಗಾಯತ್ರಿಯಾಭಿಮಂತ್ರಿತೇನಾಂಭಸಾ ಶಾಮ್ಯಂತಿ ತದು ಹ ವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾಸ್ಸಂಧ್ಯಾಯಾಂ ಗಾಯತ್ರಿ-ಯಾಭಿಮಂತ್ರಿತಾ ಆಪ ಊರ್ಧ್ವಂ ವಿಕ್ಷಿಪಂತಿ ತಾ ಏತಾ ಆಪೋ ವಜ್ರೀ ಭೂತ್ವಾ ತಾನಿ ರಕ್ಷಾಗ್ಂಸಿ ಮಂದೇಹಾರುಣೇ ದ್ವೀಪೇ ಪ್ರಕ್ಷಿಪಂತಿ ಯತ್ಪ್ರದಕ್ಷಿಣಂ ಪ್ರಕ್ರಮಂತಿ ತೇನ ಪಾಪ್ಮಾನಮವಧೂನ್ವಂತ್ಯುದ್ಯಂತಮಸ್ತಂಯಂತಮಾದಿತ್ಯಮಭಿಧ್ಯಾಯನ್ಕುರ್ವನ್ ಬ್ರಾಹ್ಮ-ಣೋ ವಿದ್ವಾನ್ತ್ಸಕಲಂ ಭದ್ರಮಶ್ನುತೇಽಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವ ಸನ್ಬ್ರಹ್ಮಾ-ಪ್ಯೇತಿ ಯ ಏವಂ ವೇದ ||**

(ತೈ. ಆ. ೨-೨)

ಪೂರ್ವದಲ್ಲಿ ರಾಕ್ಷಸರು ಉಗ್ರವಾದ ತಪಸ್ಸುಗಳನ್ನಾಚರಿಸಿದರು ಆಗ ದೇವನಾದ ಪ್ರಜಾಪತಿಯು ಪ್ರತ್ಯಕ್ಷನಾಗಿ ಅವರಿಗೆ ಯಾವ ವರವು ಬೇಕೆಂದು ಪ್ರಶ್ನಿಸಿದನು ಆಗ ಅವರು ನಮಗೆ ಸೂರ್ಯನೊಂದಿಗೆ ಯುದ್ಧ ಮಾಡುವ ಶಕ್ತಿಯನ್ನೂ ಅವಕಾಶವನ್ನೂ ಕಲ್ಪಿಸಿ ಕೊಡು ಎಂದು ಪ್ರಾರ್ಥಿಸಿದರು. ಹಾಗೆಯೇ ಆಗಬಹುದೆಂದು ಪ್ರಜಾಪತಿಯು ಸಮ್ಮತಿಸಿದನು. ಅಂದಿನಿಂದಲೇ ರಾಕ್ಷಸರು ಸೂರ್ಯನು ಉದಯಿಸಿದೊಡನೆಯೇ ಅವನೊಡನೆ ಹೋರಾಡಲುಪಕ್ರಮಿಸಿ ಅಸ್ತಕಾಲದವರೆಗೂ ಹೋರಾಡುತ್ತಲೇ ಇರುವರು. ಆದರೆ ಗಾಯತ್ರೀಪಠನದಿಂದ ಪೂತವಾದ ಉದಕದಿಂದ (ಅರ್ಘ್ಯೋದಕದಿಂದ) ಅವರನ್ನು ಓಡಿಸಲು ಸಾಧ್ಯವಾಗುವುದು. ಆದ್ದರಿಂದಲೇ ಬ್ರಹ್ಮವಾದಿಗಳು ಪ್ರಾತಃಸಂಧ್ಯಾಕಾಲದಲ್ಲಿಯೂ ಸಾಯಂಸಂಧ್ಯಾಕಾಲದಲ್ಲಿಯೂ ಗಾಯತ್ರೀಮಂತ್ರವನ್ನು ಪಠಿಸಿ ಅದರಿಂದ ಶುದ್ಧವಾದ ಉದಕದಿಂದ ಅರ್ಘ್ಯವನ್ನು ಸಮರ್ಪಿಸುತ್ತಾರೆ ಅರ್ಘ್ಯರೂಪದಲ್ಲಿ ಅರ್ಪಿಸಿದ ಈ ಉದಕಬಿಂದುಗಳು ವಜ್ರಾತ್ಮಕವಾಗಿ ಪರಿಣಮಿಸಿ, ಸೂರ್ಯನೊಡನೆ ಹೋರಾಡುತ್ತಿರುವ ಆ ರಾಕ್ಷಸರನ್ನು ಮಂದೇಹಾರುಣವೆಂಬ ದ್ವೀಪದಲ್ಲಿ ಎಸೆಯುತ್ತದೆ ಅನಂತರ ಬ್ರಹ್ಮವಾದಿಗಳು ಪ್ರದಕ್ಷಿಣ ನಮಸ್ಕಾರಪೂರ್ವಕವಾದ ಸಂಧ್ಯಾವಂದನೆಯಿಂದ ತಮ್ಮ ಪಾಪವನ್ನು ನೀಗಿಕೊಳ್ಳುತ್ತಾರೆ. ಈ ತತ್ತ್ವಪ್ರಸ್ನರಿತ ಬ್ರಾಹ್ಮಣನು (ಬ್ರಹ್ಮಜ್ಞಾನಿಯು) ಸೂರ್ಯೋದಯಕಾಲದಲ್ಲಿಯೂ ಸೂರ್ಯಾಸ್ತಮಯಕಾಲದಲ್ಲಿಯೂ ಸಹ ಗಾಯತ್ರೀಮಂತ್ರವನ್ನು ಪಠಿಸಿ ಅರ್ಘ್ಯವನ್ನರ್ಪಿಸುತ್ತಾ ತನ್ಮೂಲಕ ಆದಿತ್ಯನನ್ನು ಉಪಾಸಿಸುತ್ತಾನೆ ಅದರಿಂದ ಅವನಿಗೆ ಸಕಲವಿಧವಾದ ಶ್ರೇಯೋಭಿವೃದ್ಧಿಯೂ ಉಂಟಾಗುತ್ತದೆ ಆದಿತ್ಯನೇ ಪರಬ್ರಹ್ಮನು. ಗಾಯತ್ರ್ಯುಪಾಸ್ಯನಾದ ಆದಿತ್ಯನೇ ಬ್ರಹ್ಮನೆಂದರಿತು ಉಪಾಸನೆಯನ್ನು ಮಾಡತಕ್ಕ ಪುರುಷನು ಬ್ರಹ್ಮಸಾಯುಜ್ಯವನ್ನು ಪಡೆದು ಬ್ರಹ್ಮನೇ ಆಗಿ ಬ್ರಹ್ಮನಲ್ಲಿಯೇ ಐಕ್ಯನಾಗುವನು ಎಂದು ಹೇಳಿದೆ.

**ಅನು ಯಂ ವಿಶ್ವೇ ಮದಂತಿ ಊಮಾಃ** - ಸಮಸ್ತಪ್ರಾಣಿಗಳೂ ಸೂರ್ಯನು ಉದಯಿಸುವುದನ್ನು ಕಂಡು ಹರ್ಷಗೊಳ್ಳುವವು ಎಂದು ಈ ಋಕ್ಕಿನ ಕೊನೆಯ ಪಾದದಲ್ಲಿ ಹೇಳಿದೆ ರಾತ್ರಿಯಲ್ಲಿ ಕತ್ತಲು ಕವಿದಿರುವುದರಿಂದ ಪ್ರಾಣಿಗಳು ಸಂಚರಿಸುವುದಕ್ಕಾಗಲಿ, ತಮ್ಮ ಆಹಾರಗಳನ್ನು ಸಂಪಾದಿಸಿಕೊಳ್ಳುವುದಕ್ಕಾಗಲಿ ತೊಂದರೆಯಾಗಿರುವದು ಮತ್ತು ಶತ್ರು ಮೊದಲಾದ ಇತರ ಬಾಧೆಗಳ ಸಂಭವವೂ ಉಂಟು ಆದ್ದರಿಂದ ಸಮಸ್ತ ಪ್ರಾಣಿಗಳೂ (ಮನುಷ್ಯರೂ

ಸಹ) ಸೂರ್ಯನ ಆಗಮನವನ್ನೇ ನಿರೀಕ್ಷಿಸುತ್ತಾ ಸೂರ್ಯೋದಯವನ್ನು ಆನಂದದಿಂದ ಸ್ವಾಗತಿಸುವರು ಎಂದು ಹೇಳಿದೆ. ಈ ವಿಷಯದಲ್ಲಿ ಭಾಷ್ಯಕಾರರು— **ಭೂತಾನಿ ವೈ ವಿಶ್ವ ಊಮಾಸ್ತ ಏನಮನುಮದಂತ್ಯುದಗಾದು ದಗಾದಿತಿ** (ಐ ಆ ೧-೩-೪-) ಐತರೇಯಾರಣ್ಯಕವಾಕ್ಯವನ್ನೂ **ತಸ್ಮಾತ್ಸರ್ವ ಏವ ಮನ್ಯತೇ ಮಾಂ ಪ್ರತ್ಯುದಗಾದಿತಿ** । (ತೈ. ಸಂ. ೬-೫-೪-೨) ಎಂಬ ತೈತ್ತಿರೀಯಸಂಹಿತಾವಾಕ್ಯವನ್ನೂ ಉದಹರಿಸಿರುವರು ಇಂತಹ ಸೂರ್ಯಾತ್ಮಕನಾದ ಇಂದ್ರನು ಉತ್ಪನ್ನನಾದನು ಎಂದು ಇಂದ್ರನ ಉತ್ಪತ್ತಿ ವಿಷಯವೂ ಇಲ್ಲಿ ಉಕ್ತವಾಗಿದೆ.

॥ ಸಂಹಿತಾಪಾಠಃ ॥

**ವಾವೃಧಾನಃ ಶವಸಾ ಭೂರ್ಯೋಜಾಃ ಶತ್ರುರ್ದಾಸಾಯ ಭಿಯಸಂ ದಧಾತಿ।**

**ಅವ್ಯನಚ್ಚ ವ್ಯನಚ್ಚ ಸಸ್ನಿ ಸಂ ತೇ ನವಂತ ಪ್ರಭೃತಾ ಮದೇಷು ॥ ೨ ॥**

॥ ಪದಪಾಠಃ ॥

ವವೃಧಾನಃ । ಶವಸಾ । ಭೂರಿऽಓಜಾಃ । ಶತ್ರುಃ । ದಾಸಾಯ । ಭಿಯಸಂ । ದಧಾತಿ ।

ಅವಿऽಅನತ್ । ಚ । ವಿऽಅನತ್ । ಚ । ಸಸ್ನಿ । ಸಂ । ತೇ । ನವಂತ । ಪ್ರऽಭೃತಾ । ಮದೇಷು ॥ ೨ ॥

॥ ಸಾಯಣಭಾಷ್ಯಂ ॥

ಶವಸಾ ಬಲೇನ ವವೃಧಾನೋ ವರ್ಧಮಾನಃ ಅತ ಏವ ಭೂರ್ಯೋಜಾ ಬಹುಬಲಃ ಶತ್ರುಃ ಶಾತಯಿತೇಂದ್ರೋ ದಾಸಾಯೋಪಕ್ಷಯಕಾರಿಣೇ ಶತ್ರವೇ ಭಿಯಸಂ ಭೀತಿಂ ದಧಾತಿ । ವಿದಧಾತಿ । ಕರೋತಿ । ಅವ್ಯನತ್ । ವಿವಿಧಮನಿತಿ ಶ್ವಸಿತೀತಿ ವ್ಯನತ್ ಸ್ರಾಣವಜ್ಜಂಗಮಂ । ತದ್ವಿಲಕ್ಷಣಮವ್ಯನತ್ ಸ್ಥಾವರಂ । ತದುಭಯಮಪಿ ಸಸ್ನಿ ಸಂಸ್ನಾತಮಿಂದ್ರೇಣ ಸಮ್ಯಕ್ಶೋಧಿತಂ ಭವತಿ ॥ ಸ್ನಾತೇರಾದೃಗಮಹನ ಇತಿ ।ವ್ಯತ್ಯಯೇನ ಕರ್ಮಣಿ ಕಿನ್ಪ್ರತ್ಯಯಃ ॥ ಯದ್ವಾ ॥ ಅಂತರ್ಣೀತಣ್ಯರ್ಥಾತ್ಕರ್ತರ್ಯೇವ ಕಿನ್ ॥ ವೃಷ್ಟ್ಯಾದಿನಾ ಸಮ್ಯಕ್ ಸ್ನಾಪಯಿತಾ ಶೋಧಯಿತಾ ಭವತಿ ॥ ನ ಲೋಕಾವ್ಯಯೇತಿ ಕರ್ಮಣಿ ಷಷ್ಠ್ಯಾಃ ಪ್ರತಿಷೇಧಃ ॥ ಶಿಷ್ಟಃ ಪಾದಃ ಪ್ರತ್ಯಕ್ಷಕೃತಃ । ಹೇ ಇಂದ್ರ ತೇ ತವ ಮದೇಷು ಹರ್ಷೇಷು ಹವಿಷಾ ಸ್ತುತ್ಯಾ ಚ ಜಾತೇಷು ಸತ್ಸು ಪ್ರಭೃತಾ ಪ್ರಭೃತಾನಿ ಪ್ರಕರ್ಷೇಣ ಧೃತಾನಿ ಪೋಷಿತಾನಿ ವಾ ಸರ್ವಾಣಿ ಭೂತಜಾತಾನಿ ಸಂನವಂತ। ಸಂಗಚ್ಛಂತೇ। ಸ್ತೋತುಂ ಹವೀಂಷಿ ಚ ದಾತುಂ ಸಮೂಹೀಭವಂತೀತ್ಯರ್ಥಃ । ನವತಿರ್ಗತಿಕರ್ಮಾ ॥ ಪ್ರಭೃತಾ। ಬಿಭರ್ತೇಃ ಕರ್ಮಣಿ ನಿಷ್ಠಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಶವಸಾ**— ಬಲದಿಂದ । **ವವೃಧಾನಃ**— ಪ್ರವರ್ಧಮಾನನಾಗುತ್ತಿರುವವನೂ (ಅದ್ದರಿಂದಲೇ) । **ಭೂರ್ಯೋಜಾಃ**—ಬಹಳವಾದ ಶಕ್ತಿಸಾಮರ್ಥ್ಯಯುತನೂ । **ಶತ್ರುಃ**— ಶತ್ರುಗಳನ್ನು ನಾಶಮಾಡುವವನೂ ಅಥವಾ

ರಾಕ್ಷಸಾದಿಗಳಿಗೆ ಶತ್ರುವಾದವನೂ ಆದ ಆ ಇಂದ್ರನು । **ದಾಸಾಯ**—ಕೆಡಕನ್ನುಂಟುಮಾಡುವ ದಸ್ಯುಜನರಿಗೆ । **ಭಿಯಸಂ**—ಭಯವನ್ನು । **ದಧಾತಿ**—ಉಂಟುಮಾಡುತ್ತಾನೆ (ಆ ಇಂದ್ರನು) । **ವ್ಯನತ್ ಚ**—ಪ್ರಾಣಿವರ್ಗವನ್ನೂ । **ಅವ್ಯನತ್ ಚ**—ಚಲಿಸದಿರುವ ಸ್ಥಾವರವಸ್ತುಗಳನ್ನೂ । **ಸಸ್ನಿ**—ವೃಷ್ಟ್ಯಾದಿಗಳಿಂದ ಶುದ್ಧರನ್ನಾಗಿ ಮಾಡುತ್ತಾನೆ । (**ಇಂದ್ರ**—ಎಲೈ ಇಂದ್ರನೇ) । **ತೇ**—ನಿನಗೆ । **ಮದೇಷು**—ಜನರು ಅರ್ಪಿಸುವಹವಿಸ್ಸಿನಿಂದಲೂ ಸ್ತೋತ್ರದಿಂದಲೂ ಹರ್ಷವುಂಟಾದಾಗ । **ಪ್ರಭೃತಾ**—ಸಮಸ್ತಪ್ರಾಣಿಗಳೂ । **ಸಂ ನವಂತೆ**—ನಿನ್ನನ್ನು ಸ್ತೋತ್ರ ಮಾಡಲು ಮತ್ತು ನಿನಗೆ ಹವಿಸ್ಸನ್ನರ್ಪಿಸಲು ಒಂದೆಡೆಯಲ್ಲಿ ಒಟ್ಟಾಗಿ ಸೇರುತ್ತವೆ

॥ ಭಾವಾರ್ಥ ॥

ದಿನದಿನಕ್ಕೆ ಶಕ್ತಿಯಿಂದ ಬೆಳೆಯುತ್ತಿರುವವನೂ, ಅತಿಶಯವಾದ ಶಕ್ತಿಸಾಮರ್ಥ್ಯಗಳುಳ್ಳವನೂ ಆದ ಆ ಇಂದ್ರನು ಸಾಧುಜನರ ಶತ್ರುಗಳಾದ ದಸ್ಯುಜನರಿಗೆ ಭಯವನ್ನುಂಟುಮಾಡುತ್ತಾನೆ. ಎಂದರೆ ಇಂದ್ರನ ಅತಿಶಯವಾದ ಶಕ್ತಿ ಸಾಮರ್ಥ್ಯಗಳನ್ನು ಕಂಡು ದಸ್ಯುಜನರು ಭೀತರಾಗುತ್ತಾರೆ. ಆ ಇಂದ್ರನು ಸ್ಥಾವರಜಂಗಮಾತ್ಮಕವಾದ ಸಮಸ್ತ ಪ್ರಾಣಿಗಳನ್ನೂ ವೃಷ್ಟ್ಯಾದಿಗಳಿಂದ ಪೋಷಿಸುತ್ತಾನೆ. ಇಂದ್ರನ ಸಂತೋಷಾರ್ಥವಾಗಿ ಅವನಿಗೆ ಹವಿಸ್ಸನ್ನೂ, ಸ್ತೋತ್ರವನ್ನೂ ಅರ್ಪಿಸಲು ಸಮಸ್ತಪ್ರಾಣಿಗಳೂ ಎಂದರೆ ಜನರೂ ಒಟ್ಟಾಗಿ ಒಂದೆಡೆ ಸೇರುತ್ತಾರೆ ಎಂದರೆ ಯಜ್ಞವೇದಿಯಲ್ಲಿ ಋತ್ವಿಗ್ಯಜಮಾನರಾದಿ ಸಮಸ್ತಜನರೂ ಒಟ್ಟಾಗಿ ಸೇರಿ ಇಂದ್ರನನ್ನು ಸ್ತುತಿಸುತ್ತಾರೆ.

English Translation

Waxing in strength, the very powerful, destructive (Indra), implants fear in the Dasa , both the inanimate and the animate (world) is purified by him. Nourished in your exhilaration (all creatures) are assembled.

॥ ಸಂಹಿತಾಪಾಠಃ ॥

ತ್ವೇ ಕ್ರತುಮಪಿ ವೃಂಜಂತಿ ವಿಶ್ವೇ ದ್ವಿರ್ಯದೇತೇ ತ್ರಿರ್ಭವಂತ್ಯೂಮಾಃ ।
ಸ್ವಾದೋಃ ಸ್ವಾದೀಯಃ ಸ್ವಾದುನಾ ಸೃಜಾ ಸಮದಃ ಸು ಮಧು ಮಧುನಾಭಿ ಯೋಧೀಃ ॥ ೩ ॥

॥ ಪದಪಾಠಃ ॥

ತ್ವೇ ಇತಿ । ಕ್ರತುಂ । ಅಪಿ । ವೃಂಜಂತಿ । ವಿಶ್ವೇ । ದ್ವಿಃ । ಯತ್ । ಏತೇ । ತ್ರಿಃ । ಭವಂತಿ । ಊಮಾಃ ।
ಸ್ವಾದೋಃ । ಸ್ವಾದೀಯಃ । ಸ್ವಾದುನಾ । ಸೃಜ । ಸಂ । ಅದಃ । ಸು । ಮಧು । ಮಧುನಾ । ಅಭಿ ।
ಯೋಧೀಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವೇ ತ್ವಯಿ ॥ ಸುಪಾಂ ಸುಲುಗಿತಿ ಸಪ್ತಮ್ಯೇಕವಚನಸ್ಯ ಶೇಆದೇಶಃ ॥ ವಿಶ್ವೇ ಸರ್ವೇ ಯಜಮಾನಾಃ ಕ್ರತುಮನುಷ್ಠೇಯಂ ಕರ್ಮ ವ್ಯಂಜಂತಿ । ಸಮಾಪಯಂತಿ । ಅಪಿಶಬ್ದೋ ಬ್ರಾಹ್ಮಣೋಕ್ತಸರ್ವಭೂತಾನಾಂ ಸರ್ವಮನಸಾಂ ಸಮುಚ್ಚಯಾರ್ಥಃ । ಸರ್ವಾಣಿ ಪೃಥಿವ್ಯಾದೀನಿ ಭೂತಾನಿ ಸರ್ವೇಷಾಂ ಪ್ರಾಣಿನಾಂ ಮನಾಂಸಿ ಸರ್ವೇ ಯಜ್ಞಕ್ರತವಶ್ಚ ವ್ಯಾಪ್ತೇ ತ್ವಯ್ಯೇವ ಯಜಮಾನೈಃ ಪರಿಸಮಾಪ್ಯಂತೆ ಇತ್ಯರ್ಥಃ । ತಥಾ ಚ ಬ್ರಾಹ್ಮಣಂ । ತ್ವಯೀಮಾನಿ ಸರ್ವಾಣಿ ಭೂತಾನಿ ಸರ್ವಾಣಿ ಮನಾಂಸಿ ಸರ್ವೇ ಕ್ರತವೋಽಪಿ ವ್ಯಂಜಂತೀತ್ಯೇವ ತದಾಹ । ಐ. ಆ. ೧-೩-೪ । ಇತಿ । ಯದ್ಯಸ್ಮಾದೇತೆ ಊಮಾಸ್ತರ್ಪಕಾಃ ॥ ಅವತೇಸ್ತರ್ಪಣಾರ್ಥಾದೌಣಾದಿಕೋ ಮನ್ಪ್ರತ್ಯಯಃ । ಜ್ವರತ್ವರೇತ್ಯಾದಿನಾ ವಕಾರೋಪಧಯೋರೂಟ್ ॥ ಈದೃಶಾ ಯಜಮಾನಾಃ ಪೂರ್ವಮೇಕಾಕಿನಃ ಸಂತಃ ಪಶ್ಚಾದ್ದ್ವಿರ್ದ್ವಿವಾರಂ ಸ್ತ್ರೀರೂಪೇಣ ಪುಂರೂಪೇಣ ಚ ಜಾತಾಃ ಸಂತಃ ಪುನರಪತ್ಯೇನ ಸಾರ್ಧಂ ತ್ರಿಸ್ತ್ರಿವಾರಂ ಜನ್ಮಭಾಜೋ ಭವಂತಿ । ಏಕ ಏವಾತ್ಮಾ ಸ್ತ್ರೀಪುಂರೂಪೇಣ ಜಾಯತೇ । ಅರ್ಧೋ ವಾ ಏಷ ಆತ್ಮನೋ ಯತ್ಪತ್ನೀತಿ ಶ್ರುತೇಃ । ಪುತ್ರೋಽಪ್ಯಾತ್ಮೈವ । ಆತ್ಮಾ ವೈ ಪುತ್ರನಾಮಾಸಿ । ಶತ. ೧೪-೯-೪-೨೬ । ಇತಿ ಶ್ರುತೇಃ । ಯತ ಏವಮೇತೇಽಭಿವೃದ್ಧಾ ಭವಂತಿ ತತೋಽವಗಮ್ಯತೇ ತ್ವಯ್ಯೇವಾನುಷ್ಠಿತಂ ಸರ್ವಂ ಕರ್ಮ ಪರಿಸಮಾಪಯಂತೀತಿ । ತಥಾ ಚ ಬ್ರಾಹ್ಮಣಂ । ದ್ವೌ ವೈ ಸಂತೌ ಮಿಥುನೌ ಪ್ರಜಾಯೇತೇ ಪ್ರಜಾತ್ಯೈ । ಐ. ಆ. ೧-೩-೪ । ಇತಿ । ಹೇ ಇಂದ್ರ ತ್ವಂ ಸ್ವಾದೋಃ ಪ್ರಿಯಾದ್ಗೃಹಧನಾದೇರಪಿ ಸ್ವಾದೀಯಃ ಸ್ವಾದುತರಂ ಪ್ರಿಯತರಮಪತ್ಯಂ ಸ್ವಾದುನಾ ಸ್ವಾದುಭೂತೇನ ಮಿಥುನೇನ ಮಾತಾಪಿತ್ರಾತ್ಮಕೇನ ಸಂ ಸೃಜ । ಸಂಯೋಜಯ । ಯದ್ವಾ । ಸ್ವಾದುನಾ ಭಾವೇನೋತ್ಪನ್ನಂ ತದಪತ್ಯಮಪಿ ಸಂಯೋಜಯ । ಏತದೇವಾಹ । ಅದಸ್ತದಪತ್ಯಂ ಮಧು ಮಧುರಂ ಮಧುನಾ ಮದಹೇತುನಾ ಮಿಥುನಾಂತರೇಣ ಪೌತ್ರೇಣ ವಾ ಸು ಸುಷ್ಠ್ವಭಿ ಯೋಧೀಃ । ಅಭಿಯೋಧಯ । ಅಭಿತಃ ಕ್ರೀಡಯ ॥ ಧಾತೂನಾಮನೇಕಾರ್ಥತ್ವಾದ್ಯುಧ್ಯತಿರತ್ರ ಕ್ರೀಡಾರ್ಥೇ ವರ್ತತೇ ॥ ಮಿಥುನಂ ವೈ ಸ್ವಾದು ಪ್ರಜಾ ಸ್ವಾದು । ಐ. ಆ. ೧-೩-೪ । ಇತ್ಯಾದಿ ಬ್ರಾಹ್ಮಣಮತ್ರಾನುಸಂಧೇಯಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತ್ವೇ**—ನಿನ್ನಲ್ಲಿ । **ವಿಶ್ವೇ ಅಪಿ**—ಸಮಸ್ತ ಯಜಮಾನರೂ । **ಕ್ರತುಂ**—ತಾವು ಮಾಡುವ ಯಜ್ಞಾದಿಕರ್ಮವನ್ನು । **ವ್ಯಂಜಂತಿ**—ಅರ್ಪಿಸಿ ಸಮಾಪ್ತಿಗೊಳಿಸುತ್ತಾರೆ । **ಯತ್**—ಏಕೆಂದರೆ । **ಏತೇ ಊಮಾಃ**—ಈ ಯಜ್ಞಮಾಡುವ ಯಜಮಾನರು (ಯಜ್ಞಮಾಡುವುದಕ್ಕೆ ಮೊದಲು ಏಕಾಂಗಿಯಾಗಿದ್ದರೂ ಯಜ್ಞಾನಂತರ) । **ದ್ವಿಃ**—ಪತಿಪತ್ನಿರೂಪಗಳಿಂದ ಇಬ್ಬರಾಗಿದ್ದರೆ (ಅನಂತರ) । **ತ್ರಿಃ**—ಪತಿಪತ್ನಿಯರ ಜತೆಗೆ ಪುತ್ರ ರೂಪದಿಂದ ಸೇರಿ ಮೂವರಾಗಿದ್ದಾರೆ । (**ಇಂದ್ರ**—ಎಲೈ ಇಂದ್ರನೇ, ನೀನು) । **ಸ್ವಾದೋಃ**—ನಮಗೆ ಪ್ರೀತಿಪಾತ್ರವಾದ ಗೃಹಧನಾದಿಗಳಿಗಿಂತಲೂ । **ಸ್ವಾದೀಯಃ**—ಅತ್ಯಂತ ಪ್ರೀತಿಪಾತ್ರನಾಗಿರುವೆ. (ಮತ್ತು) । **ಸ್ವಾದುನಾ**—ಪ್ರೀತಿಪಾತ್ರವಾದ ನಮ್ಮ ಸಂತತಿಯೊಡನೆಯೂ । **ಸಂ ಸೃಜ**—ನಮ್ಮನ್ನು ಸೇರಿಸು (ಇದಲ್ಲದೆ) । **ಮಧು**—ನಮಗೆ ಪ್ರೀತಿಪಾತ್ರವಾದ । **ಅದಃ**—ಆ ನಮ್ಮ ಪುತ್ರಾದಿ ಸಂತತಿಯನ್ನೂ । **ಮಧುನಾ**—ಪ್ರೀತಿದಾಯಕವಾದ ಪೌತ್ರಾದಿ ಸಂತತಿಯಿಂದ । **ಅಭಿ ಯೋಧೀಃ**—ಕ್ರೀಡಿಸುವಂತೆ ಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಸಮಸ್ತಯಜಮಾನರೂ ತಾವು ಮಾಡುವ ಯಜ್ಞಾದಿಕರ್ಮವನ್ನು ನಿನಗೆ ಅರ್ಪಿಸಿ ನಿನ್ನಲ್ಲೇ ಪರಿಸಮಾಪ್ತಿಗೊಳ್ಳುವಂತೆ ಮಾಡುತ್ತಾರೆ ಏಕೆಂದರೆ ಯಜ್ಞಮಾಡುವುದಕ್ಕೆ ಮೊದಲು ಈ ಯಜಮಾನರು ಪತ್ನಿಯರಿಲ್ಲದೇ ಏಕಾಂಗಿಯರಾಗಿದ್ದರೆ ಯಜ್ಞಮಾಡುವಾಗ ಪತ್ನಿಯರು ಅವಶ್ಯಕವಾದ್ದರಿಂದ ಅವರೊಡನೆ ಸೇರಿ ಪತಿಪತ್ನಿಯರೆಂದು ಇಬ್ಬರಾದರು. ಅನಂತರ ನಿನ್ನ ಅನುಗ್ರಹದಿಂದ ಪತಿಪತ್ನಿಯರಿಂದ ಸಹಿತರಾಗಿರುವ ನಾವು ನಮಗೆ ಪ್ರೀತಿಪಾತ್ರವಾದ ಪುತ್ರಸಂತತಿಯನ್ನೂ, ಆ ಪುತ್ರಸಂತತಿಯಿಂದ ಪ್ರೀತಿದಾಯಕವಾದ ಪೌತ್ರಸಂತತಿಯನ್ನೂ ಪಡೆದು ಕ್ರೀಡಿಸುವಂತಾಗಲಿ.

## English Translation.

To you all (worshippers) offer adoration, whether those propitiators be two or three. Combine that which is sweeter than the sweet with sweetness, unite that honey with honey.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಅರ್ಥವನ್ನು ಸರಿಯಾಗಿ ಹೊಂದಿಸುವುದಕ್ಕಾಗಿ ಇತರ ಶಬ್ದಗಳನ್ನು ಅಲ್ಲಲ್ಲಿ ಅಧ್ಯಾಹಾರಮಾಡಿಕೊಳ್ಳಬೇಕಾಗಿದೆ.

**ತ್ವೇ ಕ್ರತುಂ ಅಪಿ ವೃಂಜಂತಿ ವಿಶ್ವೇ**—ಇಲ್ಲಿ ಅಪಿಶಬ್ದಕ್ಕೆ ಸಾಯಣರು **ಅಪಿಶಬ್ದೋ ಬ್ರಾಹ್ಮಣೋಕ್ತ ಸರ್ವಭೂತಾನಾಂ ಸರ್ವಮನಸಾಂ ಸಮುಚ್ಚಯಾರ್ಥಃ**—ಬ್ರಾಹ್ಮಣಶ್ರುತಿವಾಕ್ಯದಲ್ಲಿ ಹೇಳಿರುವ ಸಮಸ್ತಪ್ರಾಣಿಗಳೂ ಅವುಗಳ ಮನಸ್ಸುಗಳೂ ಎಂದು **ಸಮುಚ್ಚಯಾರ್ಥ** (ಮತ್ತು ಎಂಬ ಅರ್ಥ) ವನ್ನು ನಿರ್ದೇಶಿಸುತ್ತದೆ ಎಂದು ಹೇಳಿದಾರೆ. ಐತರೇಯ ಆರಣ್ಯಕದಲ್ಲಿ-**ತ್ವಯೀಮಾನಿ ಸರ್ವಾಣಿ ಭೂತಾನಿ ಸರ್ವಾಣಿ ಮನಾಂಸಿ ಸರ್ವೇ ಕ್ರತವೋಽಪಿ ವೃಂಜಂತೀತ್ಯೇವ ತದಾಹ** ( ಐ. ಆ. ೧-೩-೪ ) ಎಂದು ಹೇಳಿದೆ ಇದರ ಅರ್ಥವೇನೆಂದರೆ—**ಸರ್ವಾಣಿ ಪೃಥಿವ್ಯಾದೀನಿ ಭೂತಾನಿ ಸರ್ವೇಷಾಂ ಪ್ರಾಣಿನಾಂ ಮನಾಂಸಿ ಸರ್ವೇ ಯಜ್ಞಕ್ರತವಶ್ಚ ವ್ಯಾಪ್ತೇ ತ್ವಯ್ಯೇವ ಯಜಮಾನೈಃ ಪರಿಸಮಾಪ್ಯಂತೆ ಇತ್ಯರ್ಥಃ** । ಎಲೈ ಇಂದ್ರನೇ, ಪೃಥಿವ್ಯಾದಿ ಲೋಕಗಳೂ ಅವುಗಳಲ್ಲಿರುವ ಸಮಸ್ತ ಪ್ರಾಣಿಗಳೂ, ಅವುಗಳ ಮನಸ್ಸುಗಳೂ, ಸಮಸ್ತ ಯಜ್ಞಕರ್ಮಗಳೂ, ಸರ್ವವ್ಯಾಪ್ತನಾದ ನಿನ್ನಲ್ಲಿಯೇ ಪರಿಸಮಾಪ್ತಿಗೊಳ್ಳುವವು ಎಂದು ಹೇಳಿ, ಸಮಸ್ತ ಯಜ್ಞಮಾಡುವ ಯಜಮಾನರೂ ತಾವು ಮಾಡುವ ಕರ್ಮಗಳನ್ನು ನಿನ್ನಲ್ಲಿ ಅರ್ಪಿಸುತ್ತಾರೆ ಎಂದರೆ—ಸೂರ್ಯಾತ್ಮಕನಾದ ಇಂದ್ರನಿಂದಲೇ ಪೃಥಿವ್ಯಾದಿ ಲೋಕಗಳೂ, ಸಮಸ್ತ ಪ್ರಾಣಿಗಳೂ, ಅವುಗಳ ಮನಸ್ಸು ಎಂದರೆ ವ್ಯವಹಾರಗಳೂ, ಯಜ್ಞಾದಿಕರ್ಮಗಳೂ ಇವೆಲ್ಲವೂ ಉಂಟಾಗಿವೆ. ಆದ್ದರಿಂದ ಅಂತ್ಯದಲ್ಲಿ ಇಂದ್ರನಲ್ಲಿಯೇ ಲೀನವಾಗುತ್ತವೆ ಎಂದರೆ ಪರಿಸಮಾಪ್ತಿಗೊಳ್ಳುತ್ತವೆ, ಎಂಬ ನಿಶ್ಚಯಬುದ್ಧಿಯಿಂದ ಯಜಮಾನರು ತಾವು ನೆರವೇರಿಸುವ ಸಮಸ್ತ ಕರ್ಮಗಳನ್ನು ನಿನಗೇ ಅರ್ಪಿಸುತ್ತಾರೆ ಎಂದಭಿಪ್ರಾಯವು.

**ದ್ವಿಃ ಯತ್ ಏತೇ ತ್ರಿಃ ಭವಂತಿ ಊಮಾಃ**—ಊಮಾಃ ಎಂಬ ಶಬ್ದಕ್ಕೆ—ಅವತೇಸ್ತರ್ಪಣಾರ್ಥಾದೌಣಾದಿಕೋ ಮನ್‌ಪ್ರತ್ಯಯಃ ಎಂಬ ಸೂತ್ರದಂತೆ ತೃಪ್ತಿಯನ್ನುಂಟುಮಾಡುವವರು ಎಂದರ್ಥವು. ಎಂದರೆ ದೇವತೆಗಳಿಗೆ

ಹವಿರಾದಿಗಳನ್ನರ್ಪಿಸಿ ತೃಪ್ತಿಯನ್ನುಂಟುಮಾಡುವ ಯಜಮಾನರು ಎಂದಭಿಪ್ರಾಯವು. ಈ ಯಜಮಾನರು ಬ್ರಹ್ಮಚರ್ಯಾಶ್ರಮದಲ್ಲಿದ್ದಾಗ ಒಂಟಿಯಾಗಿ ಎಂದರೆ ಏಕಾಂಗಿಯಾಗಿ (ಪತ್ನಿಯಿಲ್ಲದೆ) ಇರುವರು. ಯಜ್ಞವನ್ನು ಮಾಡಬೇಕಾದರೆ ಪತ್ನಿಯು ಅವಶ್ಯಕವು ಯಜ್ಞಕರ್ಮದಲ್ಲಿ ಪತ್ನಿಯ ಪಾತ್ರವೂ ಇರುವುದರಿಂದ ಯಜ್ಞ ಮಾಡುವ ಯಜಮಾನನಿಗೆ ಪತ್ನಿ ಇರಲೇಬೇಕು. ಪತ್ನಿ ಇಲ್ಲದ ಪುರುಷನು ಯಜ್ಞವನ್ನು ಮಾಡಲಾಗುವುದಿಲ್ಲ ಆದ್ದರಿಂದ **ದ್ವಿ॰ ಭವಂತಿ**—ಆ ಬ್ರಹ್ಮಚರ್ಯಾಶ್ರಮದಲ್ಲಿ ಏಕಾಂಗಿಯಾಗಿದ್ದ ಯಜಮಾನರು ವಿವಾಹವನ್ನು ಮಾಡಿಕೊಂಡು, ಪತಿ, ಪತ್ನಿ ಎಂದು ಎರಡು ರೂಪಗಳುಳ್ಳವರಾದರು. ತೈತ್ತಿರೀಯಬ್ರಾಹ್ಮಣದಲ್ಲಿ— **ಅಥೋ ಅರ್ಧೋ ವಾ ಏಷ ಆತ್ಮನಃ । ಯತ್ಪತ್ನೀ ॥** (ತೈ. ಬ್ರಾ. ೩-೩-೩-೫) ಪತ್ನಿಯು ಪುರುಷನ ಅರ್ಧಭಾಗವು ಎಂದು ಹೇಳಿದೆ. ಪತಿ ಪತ್ನಿಯರಿಬ್ಬರೂ ಸೇರಿ ಯಜ್ಞವನ್ನು ಮಾಡಬೇಕು ಏಕೆಂದರೆ- **ಅಯಜ್ಞೋ ವಾ ಏಷಃ । ಯೋಽಪತ್ನೀಕಃ ॥** (ತೈ ಬ್ರಾ ೩-೩-೩-೧) ಪತ್ನಿಯಿಲ್ಲದವನು ಮಾಡುವ ಯಜ್ಞವು ಯಜ್ಞವೆನಿಸುವುದಿಲ್ಲ ಎಂದು ಅಲ್ಲಿಯೇ ಹೇಳಿದೆ. ಆದ್ದರಿಂದ ಇಂದ್ರನ ಪ್ರೀತ್ಯರ್ಥವಾಗಿ ಯಜ್ಞಮಾಡುವಾಗ ಯಜ್ಞಮಾಡುವ ಯಜಮಾನನೂ ಅವನ ಪತ್ನಿಯೂ ಸೇರಿ ಇಬ್ಬರಿರಬೇಕಾಯಿತು ಇದನ್ನೇ ಇಲ್ಲಿ **ದ್ವಿಃ ಭವಂತಿ** ಎಂದು ಹೇಳಿದೆ

**ಏತೇ ತ್ರಿಃ ಭವಂತಿ**-ಇಲ್ಲಿ ತ್ರಿಃ ಎಂದರೆ ಮೂರು. ಯಜಮಾನ ಅವನ ಪತ್ನಿ, ಅವನ ಸಂತತಿ (ಪುತ್ರ ಅಥವಾ ಪುತ್ರಿ)ಎಂದು ಮೂವರು ಎಂದರ್ಥವು. ಯಜ್ಞಾನುಷ್ಠಾನಫಲದಿಂದ ಯಜಮಾನನಿಗೆ ಸಂತತಿಯುಂಟಾಗಿ, ಯಜಮಾನ, ಅವನ ಪತ್ನಿ, ಪುತ್ರ ಅಪರ:ಸಂತತಿ ಎಂದು ಮೂರು ಮಂದಿಯಾಗುತ್ತಾರೆ ಎಂದು ತಿಳಿಸಿದೆ. **ಆತ್ಮಾ ವೈ ಪುತ್ರನಾಮಾಸಿ** ಎಂಬ ಶ್ರುತಿವಾಕ್ಯದಂತೆ ಪುತ್ರನೂ ಸಹ ಪುರುಷನ ಅಂಶವೇ ಆಗಿರುವುದರಿಂದ ಪುರುಷನು– ತಾನು, ತನ್ನ ಪತ್ನಿ, ತನ್ನ ಪುತ್ರ ಎಂದು ಮೂರುಮಂದಿಯಾದಂತಾಯಿತು ಎಂದು ಮುಖ್ಯಾರ್ಥವು

**ಸ್ವಾದೋಃ ಸ್ವಾದೀಯಃ ಸ್ವಾದುನಾ ಸಂಸೃಜ**–ಸ್ವಾದು ಎಂದರೆ ಮಧುರ, ಪ್ರೀತಿಕರ ಎಲೈ ಇಂದ್ರನೇ. ನೀನು ನಮಗೆ ಪ್ರೀತಿಕರವಾದ ವಸ್ತುವಿಗಿಂತಲೂ ಅತ್ಯಂತ ಪ್ರೀತಿಪಾತ್ರನು ಇಂತಹ ನೀನು ನಮ್ಮನ್ನು ಪ್ರೀತಿಪಾತ್ರನಾದ ಪುತ್ರನೊಡನೆ ಸೇರಿಸು ಎಂದರೆ ಪುತ್ರನನ್ನು ಅನುಗ್ರಹಿಸು ಎಂದು ವಾಕ್ಯಾರ್ಥವು

**ಅದಃ ಮಧು ಮಧುನಾ ಸು ಯೋಧೀಃ**— ಪುತ್ತು ಎಲೈ ಇಂದ್ರನೇ, ನೀನು ನಮಗೆ ಪುತ್ರನನ್ನು ಅನುಗ್ರಹಿಸಿದರೆ ಮಾತ್ರ ಸಾಲದು. ನಮಗೆ ನೀನು ಅನುಗ್ರಹಿಸುವ ಪುತ್ರನಿಂದ ಪ್ರೀತಿದಾಯಕನಾದ ಪೌತ್ರನೂ ಉತ್ಪನ್ನನಾಗುವಂತೆ ಮಾಡು. ಎಂದರೆ ನಮಗೆ ಪುತ್ರ ಪೌತ್ರಾದಿಗಳನ್ನು ಕೊಟ್ಟು ಅವರೊಡನೆ ನಾವು ಕ್ರೀಡಿಸುತ್ತಾ ಸುಖಸಂತೋಷಾದಿಗಳಿಂದ ಇರುವಂತೆ ಮಾಡು ನಮ್ಮ ವಂಶವು ಪುತ್ರಪೌತ್ರಾದಿಸಂತತಿಯಿಂದ ವೃದ್ಧಿಯನ್ನೈದಲಿ ಎಂದು ಋಷಿಯು ಪ್ರಾರ್ಥಿಸಿದಾನೆ.

॥ ಸಂಹಿತಾಪಾಠಃ ॥

ಇತಿ ಚಿದ್ಧಿ ತ್ವಾ ಧನಾ ಜಯಂತಂ ಮದೇಮದೇ ಅನುಮದಂತಿ ವಿಪ್ರಾಃ ।
ಓಜೀಯೋ ಧೃಷ್ಣೋ ಸ್ಥಿರಮಾ ತನುಷ್ವ ಮಾ ತ್ವಾ ದಭನ್ಯಾತುಧಾನಾ ದುರೇವಾಃ ॥ ೪ ॥

|| ಪದಪಾಠಃ ||

ಇತಿ | ಚಿತ್ | ಹಿ | ತ್ವಾ | ಧನಾ | ಜಯಂತಂ | ಮದೇऽಮದೇ | ಅನುऽಮದಂತಿ | ವಿಪ್ರಾಃ |

ಓಜೀಯಃ | ಧೃಷ್ಣೋ ಇತಿ | ಸ್ಥಿರಂ | ಆ | ತನುಷ್ವ | ಮಾ | ತ್ವಾ | ದಭನ್ | ಯಾತುऽಧಾನಾಃ |

ದುಃऽಏವಾಃ || ೪ ||

|| ಸಾಯಣಭಾಷ್ಯಂ ||

ಇತಿ ಚಿದ್ಧ್ಯೇವಮೇವ ಖಲು ಹೇ ಇಂದ್ರ ಮದೇ ಮದೇ ಸೋಮಪಾನಜನ್ಯೇ ಹರ್ಷೇ ಸತಿ ಧನಾ ಶತ್ರುಧನಾನಿ ಜಯಂತಂ ಜಯೇನ ಪ್ರಾಪ್ನುವಂತಂ ತ್ವಾಮನು ಪಶ್ಚಾತ್ || ಲಕ್ಷಣೇऽನೋಃ ಕರ್ಮ-ಪ್ರವಚನೀಯತ್ವಂ || ವಿಪ್ರಾ ಮೇಧಾವಿನಃ ಸ್ತೋತಾರೋ ಮದಂತಿ ಹೃಷ್ಯಂತಿ ಯದ್ವಾ ತ್ವಾಮನುವದಂತಿ ಅನುಕ್ರಮೇಣ ಸ್ತುವಂತಿ | ಮದತಿಃ ಸ್ತುತಿಕರ್ಮಾ || ಹಿ ಚೇತಿ ನಿಘಾತಪ್ರತಿಷೇಧಃ || ಹೇ ಧೃಷ್ಣೋ ಶತ್ರೂಣಾಂ ಧರ್ಷಯಿತರಿಂದ್ರ || ತ್ರಸಿಗೃಧಿಧೃಷಿಕ್ಷಿಪೇಃ ಕ್ನುಃ || ಓಜೀಯಃ || ಓಜಸ್ವಿಶಬ್ದಾದೀಯಸುನಿ ವಿನ್ಮತೋರ್ಲುಗಿತಿ ವಿನೋ ಲುಕ್ | ಟೇರಿತಿ ಟಿಲೋಪಃ || ಬಲವತ್ತರಂ ಅತ ಏವ ಸ್ಥಿರಂ ದೃಢಂ ಧನಮಾ ತನುಷ್ವ | ಅಭಿತೋऽಸ್ಮದರ್ಥಂ ವಿಸ್ತಾರಯ | ತ್ವಾ ತ್ವಾಂ ಚ ಮಾ ದಭನ್ ಮಾ ಹಿಂಸಂತು ದುರೇವಾ ದುರ್ಗತಯೋ ಯಾತುಧಾನಾ ರಾಕ್ಷಸಾಃ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) ಇತಿ ಚಿದ್ಧಿ-- ಈ ಪ್ರಕಾರವಾಗಿಯೇ | **ಮದೇಮದೇ** – ಸೋಮಪಾನದಿಂದ ನಿನಗೆ ಹರ್ಷವುಂಟಾದಾಗ | **ಧನಾ**—ಶತ್ರುಗಳಲ್ಲಿರುವ ಧನಗಳನ್ನು | **ಜಯಂತಂ**– ಜಯಿಸಿ ತರುವ ನಿನ್ನನ್ನು | **ಅನು**—ಅನುಲಕ್ಷಿಸಿ | **ವಿಪ್ರಾಃ**—ಮೇಧಾವಿಗಳಾದ ಸ್ತೋತೃಜನರು | **ಮದಂತಿ** – ಸ್ತುತಿಸಿ ಹರ್ಷಗೊಳಿಸುತ್ತಾರೆ | **ಧೃಷ್ಣೋ**—ಶತ್ರುಗಳನ್ನು ಸೋಲಿಸುವ ಎಲೈ ಇಂದ್ರನೇ | **ಓಜೀಯಃ**— ಅತಿಶಯಶಕ್ತಿಯುತವಾದದ್ದೂ | **ಸ್ಥಿರಂ**—ದೃಢವಾದುದೂ ಆದ ಧನವನ್ನು | **ಆ ತನುಷ್ವ**—ನಮಗೆ ತಂದೊದಗಿಸು | **ದುರೇವಾಃ** – ಕೆಟ್ಟ ಗಮನವುಳ್ಳ | **ಯಾತುಧಾನಾಃ**—ಯಾತುಧಾನರೆಂಬ ರಾಕ್ಷಸರು | **ತ್ವಾ** – ನಿನ್ನನ್ನು | **ಮಾ ದಭನ್**— ಹಿಂಸಿಸದಿರಲಿ

|| ಭಾವಾರ್ಥ ||

ಎಲೈ ಇಂದ್ರನೇ ಈ ಪ್ರಕಾರವಾಗಿ ಸೋಮಪಾನದಿಂದ ನಿನಗೆ ಹರ್ಷವುಂಟಾದಾಗ ಶತ್ರುಗಳನ್ನು ಗೆದ್ದು ಅವರಲ್ಲಿದ್ದ ಧನವನ್ನು ತರುವ ನಿನ್ನನ್ನು ಉದ್ದೇಶಿಸಿ ಮೇಧಾವಿಗಳಾದ ಸ್ತೋತೃಜನರು ಸ್ತುತಿಸಿ ಹರ್ಷಗೊಳಿಸುತ್ತಾರೆ. ಶತ್ರುಧರ್ಷಕನಾದ ಎಲೈ ಇಂದ್ರನೇ, ಅತಿಶಯವಾದುದೂ ಶಾಶ್ವತವಾದುದೂ ಆದ ಧನವನ್ನು ನಮಗೆ ಒದಗಿಸಿಕೊಡು. ಕೆಟ್ಟಸ್ಥಳಗಳಲ್ಲಿ ಸಂಚರಿಸುವ ಯಾತುಧಾನರು ನಿನ್ನನ್ನು ಹಿಂಸಿಸದಿರಲಿ.

### English Translation

Verily the pious praise you (Indra), the giver of wealth in your repeated exhilaration; spread out for us, resolute Indra great and durable (affluence); may the malignant Yatudhanas never harm you.

॥ ಸಂಹಿತಾಪಾಠಃ ॥

ತ್ವಯಾ ವಯಂ ಶಾಶದ್ಮಹೇ ರಣೇಷು ಪ್ರಪಶ್ಯಂತೋ ಯುಧೇನ್ಯಾನಿ ಭೂರಿ ।
ಚೋದಯಾಮಿ ತ ಆಯುಧಾ ವಚೋಭಿಃ ಸಂ ತೇ ಶಿಶಾಮಿ ಬ್ರಹ್ಮಣಾ
ವಯಾಂಸಿ ॥ ೫ ॥

॥ ಪದಪಾಠಃ ॥

ತ್ವಯಾ । ವಯಂ । ಶಾಶದ್ಮಹೇ । ರಣೇಷು । ಪ್ರಽಪಶ್ಯಂತಃ । ಯುಧೇನ್ಯಾನಿ । ಭೂರಿ ।
ಚೋದಯಾಮಿ । ತೇ । ಆಯುಧಾ । ವಚಃಽಭಿಃ । ಸಂ । ತೇ । ಶಿಶಾಮಿ । ಬ್ರಹ್ಮಣಾ । ವಯಾಂಸಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಯಾನುಗೃಹೀತಾ ವಯಂ ರಣೇಷು ಸಂಗ್ರಾಮೇಷು ಶಾಶದ್ಮಹೇ । ಭೃಶಂ ಶತ್ರೂನ್ಘಾತಯಾಮಃ ॥ ಶದ್ಲೃ ಶಾತನೇ । ಅಸ್ಮಾದ್ಯಙಂತಾನ್ಮಹಿಙಶ್ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದತೋಲೋಪಯಲೋಪೌ ॥ ಕಿಂ ಕುರ್ವಂತಃ । ಯುಧೇನ್ಯಾನಿ ಯೋಧನಾರ್ಹಾಣಿ ॥ ಕೃತ್ಯಾರ್ಥೇ ತವೈಕೇನ್ಕೇನ್ಯತ್ವನ ಇತಿ ಯುಧೇರರ್ಹಾರ್ಥೇ ಕೇನ್ಯಪ್ರತ್ಯಯಃ ॥ ಭೂರಿ ಬಹೂನಿ ಬಹುಲಾನಿ ॥ ಸುಪಾಂ ಸುಲುಗಿತಿ ಶಸೋ ಲುಕ್ ॥ ಪ್ರಪಶ್ಯಂತಃ ಪ್ರಕರ್ಷೇಣ ಜಾನಂತಃ । ಅಪಿ ಚ ತೇ ತವಾಯುಧಾಯುಧಾನ್ಯಾಯೋಧನಸಾಧನಾನಿ ವಜ್ರಾದೀನಿ ॥ ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ ॥ ವಚೋಭಿಃ ಸ್ತುತಿಭಿಶ್ಚೋದಯಾಮಿ । ಶತ್ರೂನ್ಪ್ರತಿ ಪ್ರೇರಯಾಮಿ । ತೇ ತ್ವದರ್ಥಂ ಬ್ರಹ್ಮಣಾ ಮಂತ್ರೇಣ ಸ್ತುತಿರೂಪೇಣ ಸಹಿತಾನಿ ವಯಾಂಸಿ । ಅನ್ನನಾಮೈತತ್ । ಹವಿರ್ಲಕ್ಷಣಾನ್ಯನ್ನಾನಿ ಸಂ ಶಿಶಾಮಿ । ಸಮ್ಯಗ್ನಿಶ್ಯಾಮಿ । ಸಂಸ್ಕರೋಮೀತ್ಯರ್ಥಃ ॥ ಶೋ ತನೂಕರಣೇ । ಛಾಂದಸೋ ವಿಕರಣಸ್ಯ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) । **ತ್ವಯಾ**—ನಿನ್ನ ಅನುಗ್ರಹದಿಂದ । **ವಯಂ**—ನಾವು । **ರಣೇಷು**—ಯುದ್ಧಗಳಲ್ಲಿ । **ಯುಧೇನ್ಯಾನಿ**—ಯುದ್ಧಭಟರಿಗೆ ಯೋಗ್ಯವಾದ । **ಭೂರಿ**—ಅತಿಶಯವಾದ ಬಲವನ್ನು । **ಪ್ರಪಶ್ಯಂತಃ**—ಚೆನ್ನಾಗಿ ಅರಿತವರಾಗಿ । **ಶಾಶದ್ಮಹೇ**—ಶತ್ರುಗಳನ್ನು ನಾಶಮಾಡುತ್ತೇವೆ । **ತೇ**—ನಿನ್ನ ।

**ಆಯುಧಾ**— ಆಯುಧಗಳನ್ನು | **ವಚೋಭಿಃ** - ಸ್ತುತಿಗಳಿಂದ | **ಚೋದಯಾಮಿ**— ಶತ್ರುಗಳ ಮೇಲೆ ಪ್ರಯೋಗಿಸುವಂತೆ ಪ್ರೇರಿಸುತ್ತೇನೆ | **ತೇ**—ನಿನಗಾಗಿ | **ಬ್ರಹ್ಮಣಾ**—ಸ್ತುತಿರೂಪವಾದ ಮಂತ್ರದಿಂದ | **ವಯಾಂಸಿ**— ಹವೀರೂಪವಾದ ಅನ್ನಗಳನ್ನು | **ಸಂ ಶಿಶಾಮಿ**—ಸಂಸ್ಕರಿಸಿ ಅರ್ಪಿಸುತ್ತೇನೆ.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ಅನುಗ್ರಹದಿಂದ ನಾವು ಯುದ್ಧಗಳಲ್ಲಿ ಶತ್ರುಗಳ ಬಲಾಬಲಗಳನ್ನು ಚೆನ್ನಾಗಿ ತಿಳಿದು ಅವರನ್ನು ನಾಶಮಾಡುತ್ತೇವೆ ನಿನ್ನ ವಜ್ರಾದ್ಯಾಯುಧಗಳನ್ನು ಸ್ತುತಿಗಳಿಂದ ಪ್ರಶಂಸಿಸಿ ಶತ್ರುಗಳ ಮೇಲೆ ಪ್ರಯೋಗಿಸುವಂತೆ ನಿನ್ನನ್ನು ಪ್ರೇರಿಸುತ್ತೇನೆ. ಮತ್ತು ನಿನ್ನನ್ನುದ್ದೇಶಿಸಿ ಹವೀರೂಪವಾದ ಅನ್ನಗಳನ್ನು ಮಂತ್ರಾದಿಗಳಿಂದ ಸಂಸ್ಕರಿಸಿ ಅರ್ಪಿಸುತ್ತೇನೆ.

English Translation

Through you we destroy (our foes) in battles, beholding the numerous (hosts) which we have to fight, I urge your weapons with words (of praise) I prepare your viands with a sacred verse.

|| ಸಂಹಿತಾಪಾಠಃ ||

ಸ್ತುಷೇಯ್ಯಂ ಪುರುವರ್ಪಸಮೃಭ್ವಮಿನತಮಮಾಪ್ತ್ಯಮಾಪ್ತ್ಯಾನಾಂ |
ಆ ದರ್ಷತೇ ಶವಸಾ ಸಪ್ತ ದಾನೂನ್ಪ್ರ ಸಾಕ್ಷತೇ ಪ್ರತಿಮಾನಾನಿ ಭೂರಿ || ೬ ||

|| ಪದಪಾಠಃ ||

ಸ್ತುಷೇಯ್ಯಂ | ಪುರುऽವರ್ಪಸಂ | ಋಭ್ವಂ | ಇನऽತಮಂ | ಆಪ್ತ್ಯಂ | ಆಪ್ತ್ಯಾನಾಂ |
ಆ | ದರ್ಷತೇ | ಶವಸಾ | ಸಪ್ತ | ದಾನೂನ್ | ಪ್ರ | ಸಾಕ್ಷತೇ | ಪ್ರತಿऽಮಾನಾನಿ | ಭೂರಿ || ೬ ||

|| ಸಾಯಣಭಾಷ್ಯಂ ||

**ಸ್ತುಷೇಯ್ಯಂ ಸ್ತೋತವ್ಯಂ || ಸ್ತುವಃ ಶ್ಸೇಯ್ಯಶ್ಛಂದಸಿ | ಉ. ೩-೯೯ | ಇತ್ಯೌಣಾದಿಕಃ ಶ್ಸೇಯ್ಯಪ್ರತ್ಯಯಃ || ಪುರುವರ್ಪಸಂ ಬಹುರೂಪಮೃಭ್ವಮುರು ಭಾಸಮಾನಮುರುಭೂತಂ ವೇನತಮಮತಿಶಯೇನೇಶ್ವರಮಾಪ್ತ್ಯಾನಾಮಾಪ್ತವ್ಯಾನಾಂ ಮಧ್ಯ ಆಪ್ತ್ಯಮಾಪ್ತವ್ಯಂ ಏವಂಭೂತಮಿಂದ್ರಂ ಸ್ತೌಮೀತಿ ಶೇಷಃ | ಯ ಇಂದ್ರಃ ಶವಸಾ ಬಲೇನ ಸಪ್ತ ಸಪ್ತಸಂಖ್ಯಾಕಾನ್ದಾನೂನ್ದಾನವಾನ್ವೃತ್ರನಮುಚಿಶುಯವಾದೀನಾ ದರ್ಷತೇ ಆದೃಣಾತಿ ಹಿನಸ್ತಿ || ದೄ ವಿದಾರಣೇ | ಅಸ್ಮಾಲ್ಲೇಟಿ ವ್ಯತ್ಯಯೇನಾತ್ಮನೇ-**

ಪದಂ । ಲೇಟೋಽಡಾಟಾವಿತ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ತಥಾ ಪ್ರತಿಮಾನಾನ್ಯಸುರಾಣಾಂ ಪ್ರತಿರೂಪಾಣಿ ಭೂರಿ ಭೂರೀಣಿ ಬಹೂನ್ಯಸುರಬಲಾನಿ ಪ್ರ ಸಾಕ್ಷತೇ ಯ ಇಂದ್ರಃ ಪ್ರಸಹತೇ । ಯದ್ವಾ । ಬಹೂನಿ ಪ್ರತಿಮಾನಾನ್ಯಸುರಾಣಾಂ ಸ್ಥಾನಾನಿ ಪ್ರ ಸಾಕ್ಷತೇ ಪ್ರಾಪ್ನೋತಿ । ಸಾಕ್ಷತಿರಾಪ್ನೋತಿಕರ್ಮೇತಿ ಯಾಸ್ಕಃ । ನಿ. ೧೧-೧೨ ॥ ಷಹ ಅಭಿಭವೇ । ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ । ಟಿತ್ವಕತ್ವ-ಷತ್ವಾನಿ । ಛಾಂದಸೋ ದೀರ್ಘಃ ॥

॥ ಪ್ರತಿಪದಾರ್ಥ ॥

(**ಯ ಇಂದ್ರಃ**—ಯಾವ ಇಂದ್ರನು) | **ಶವಸಾ**—ತನ್ನ ಬಲದಿಂದ | **ಸಪ್ತದಾನೂನ್**—ವೃತ್ರ, ನಮುಚಿ, ಕುಯವರೇ ಮೊದಲಾದ ಏಳು ಮಂದಿ ದಾನವರನ್ನು ಅಥವಾ ಮೇಘಗಳನ್ನು | **ಅ ದರ್ಷತೇ**—ಸೀಳಿಹಾಕುವನೋ (ಹಾಗೆಯೇ) | **ಪ್ರತಿಮಾನಾನಿ**--ಅಸುರರ ಪ್ರತಿರೂಪವೆನಿಸಿದ | **ಭೂರಿ**—ಶತ್ರುಬಲಗಳನ್ನು | **ಪ್ರ ಸಾಕ್ಷತೇ**-ಸಹಿಸಬಲ್ಲನೋ[ಅಥವಾ | **ಭೂರಿ**—ಬಹಳವಾದ | **ಪ್ರತಿಮಾನಾನಿ**—ಅಸುರರ ಸ್ಥಾನಗಳನ್ನು | **ಪ್ರ ಸಾಕ್ಷತೇ**-ಮುನ್ನುಗ್ಗಿ ಹೇಗೆ ಹಿಡಿಯುವನೋ]ಅಂತಹ | **ಸ್ತುಷೇಯ್ಯಂ**—ಸ್ತುತ್ಯರ್ಹನೂ | **ಪುರುವರ್ಪಸಂ**--ಅನೇಕ ರೂಪಗಳನ್ನು ಧರಿಸಬಲ್ಲವನೂ | **ಋಭ್ವಂ**—ಅತ್ಯಂತ ಪ್ರಕಾಶಮಾನನೂ | **ಇನತಮಂ**—ಸರ್ವರಿಗೂ ಅತಿಶಯವಾದ ಅಧಿಪತಿಯಾದವನೂ | **ಆಪ್ತ್ಯಾನಾಂ**—ಹೊಂದಲ್ಪಡಬೇಕಾದ ದೇವತೆಗಳ ಮಧ್ಯದಲ್ಲಿ | **ಆಪ್ತ್ಯಂ**—ಪ್ರಾಪ್ತ್ಯರ್ಹನೂ ಆದ ಇಂದ್ರನನ್ನು ಸ್ತುತಿಸುತ್ತೇನೆ.

॥ ಭಾವಾರ್ಥ ॥

ಯಾವ ಇಂದ್ರನು ತನ್ನ ಸಾಮರ್ಥ್ಯದಿಂದ ವೃತ್ರ, ನಮುಚಿ, ಕುಯವ ಮೊದಲಾದ ಏಳುಮಂದಿ ಪ್ರಮುಖ ದಾನವರನ್ನು ಅಥವಾ ಮೇಘಗಳನ್ನು ಸೀಳಿಹಾಕಿದನೋ, ಯಾವ ಇಂದ್ರನು ಶತ್ರುಗಳ ಅತಿಶಯವಾದ ಬಲವನ್ನು ಸಹಿಸಬಲ್ಲನೋ ಅಥವಾ ಶತ್ರುಗಳ ದುರ್ಭೇದ್ಯವಾದ ಸ್ಥಾನಗಳನ್ನು ಆಕ್ರಮಿಸಿ ಹಿಡಿಯಬಲ್ಲನೋ ಅಂತಹ ಸ್ತುತಿಗೆ ಪಾತ್ರನಾದವನೂ ಅನೇಕ ರೂಪಗಳನ್ನು ಧರಿಸಬಲ್ಲವನೂ, ಅತ್ಯಂತ ಪ್ರಕಾಶಮಾನನೂ, ಸರ್ವರಿಗೂ ಪ್ರಭುವೂ ಪ್ರಾರ್ಥಿಸಿ ಕರೆಯಲ್ಪಡಬೇಕಾದ ದೇವತೆಗಳ ಮಧ್ಯದಲ್ಲಿ ಅತಿಶಯವಾಗಿ ಪ್ರಾರ್ಥಿತನೂ ಆದ ಇಂದ್ರನನ್ನು ನಾನು ಸ್ತುತಿಸುತ್ತೇನೆ.

English Translation

I praise (Indra) who is worthy of praise, multiform, vast, supreme, most accessible of the accessible: he assails with might the seven Danavas, he overpowers many opposing hosts.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ **ಆಪ್ತ್ಯಾನಾಂ** ಎಂಬ ಶಬ್ದದ ಅರ್ಥವಿವರಣೆ ಮಾಡುವಾಗ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದ್ದಾರೆ —

**ಆಪ್ತ್ಯಃ । ಆಪ್ತ್ಯ ಆಪ್ನೋತೇಃ । ತೇಷಾಮೇಷ ನಿಪಾತೋ ಭವತ್ಯೈಂದ್ರ್ಯಾಮೃಚಿ ॥**

**ಸ್ತುಷೇಯ್ಯಂ ಪುರುವರ್ಪಸಮೃಭ್ವಮಿನತಮಾಪ್ತ್ಯಮಾಪ್ತ್ಯಾನಾಂ ॥**

**ಆ ದರ್ಷತೇ ಶವಸಾ ಸಪ್ತದಾನೂನ್ಪ್ರಸಾಕ್ಷತೇ ಪ್ರತಿಮಾನಾನಿ ಭೂರಿ ॥ ಸ್ತೋತವ್ಯಂ ಬಹುರೂಪಮುರುಭೂತಮೀಶ್ವರತಮಮಾಪ್ತವ್ಯಮಾಪ್ತವ್ಯಾನಾಮಾದೃಣಾತಿ ಯಃ ಶವಸಾ ಬಲೇನ ಸಪ್ತ ದಾತ್ಯೈನಿತಿ ವಾ ಸಪ್ತ ದಾನವಾನಿತಿ ವಾ ಪ್ರಸಾಕ್ಷತೇ ಪ್ರತಿಮಾನಾನಿ ಬಹೂನಿ ॥**
(ನಿ. ೧೧-೨-೧)

**ಆಪ್ತ್ಯಃ**—ಎಂಬ ಶಬ್ದವು ಆಪ್ಲೃ ವ್ಯಾಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ ಇಂದ್ರದೇವತಾಕವಾದ ಪ್ರಕೃತಋಕ್ಕಿನಲ್ಲಿ ಪ್ರಸಂಗವಶದಿಂದ ಈ ಶಬ್ದದ ಪ್ರಯೋಗವಿದೆ.

**ಸ್ತುಷೇಯ್ಯಂ ಪುರುವರ್ಪಸಮೃಭ್ವಂ — ಸ್ತೋತವ್ಯಂ ಬಹುರೂಪಮುರುಭೂತಮೀಶ್ವರತಮಂ ॥** ಈ ಪಾದದಲ್ಲಿರುವ ಶಬ್ದಗಳೂ ಮುಂದಿನ ಪಾದದಲ್ಲಿರುವ ಶಬ್ದಗಳೂ ಇಂದ್ರನ ಗುಣಗಳನ್ನು ವರ್ಣಿಸುವ ವಿಶೇಷಣ ಪದಗಳಾಗಿವೆ ಇಂದ್ರನು ಸ್ತುತಿಸಲ್ಪಡಲು ಯೋಗ್ಯನಾದವನು. ಇಂದ್ರನು ಮಹಾಮಹಿಮನಾದ ದೇವತೆಯಾದ್ದರಿಂದ ಅವನನ್ನು ಜನರೆಲ್ಲರೂ ಸ್ತುತಿಸುವರು. ಇಂದ್ರನು ಅನೇಕ ರೂಪಗಳನ್ನು ಧರಿಸಬಲ್ಲನು **ಇಂದ್ರೋ ಮಾಯಾಭಿ ಪುರುರೂಪ ಏತಿ** ಎಂಬ ಶ್ರುತಿವಾಕ್ಯದಂತೆ ಇಂದ್ರನು ತನ್ನ ಶಕ್ತಿಯಿಂದ ಅಥವಾ ಮಹಿಮೆಯಿಂದ ತನಗೆ **ಬೇಕಾದ** ರೂಪಗಳನ್ನು ಧರಿಸಲು ಸಮರ್ಥನಾಗಿರುವನು **ಋಭ್ವಂ** ಎಂದರೆ **ಉರುಭೂತಂ** ಎಂದು ಹೇಳುವರು. ದೊಡ್ಡದಾದ ಆಕಾರಉಳ್ಳವನು ಅಥವಾ ಶ್ರೇಷ್ಠವಾದ ಮಹಿಮೆಯುಳ್ಳವನು ಎಂದರ್ಥವು.

**ಇನತಮಂ ಆಪ್ತ್ಯಂ ಆಪ್ತ್ಯಾನಾಂ—ಈಶ್ವರತಮಂ ಆಪ್ತವ್ಯಂ ಆಪ್ತವ್ಯಾನಾಂ ॥** ಇನ ಎಂದರೆ ಸ್ವಾಮಿ, ಈಶ್ವರ, ಪ್ರಭು, ಎಂದರ್ಥವು. ಇನತಮನೆಂದರೆ ಅತಿಶಯವಾದ ಅಥವಾ ಶ್ರೇಷ್ಠವಾದ ಪ್ರಭುವು ಎಲ್ಲರಿಗೂ ಒಡೆಯನಾದವನು ಎಂದಭಿಪ್ರಾಯವು, ಆಪ್ತ ಎಂದರೆ ಹೊಂದಲರ್ಹನಾದವನು ಎಂದರೆ ಅವನನ್ನು ಹೊಂದಬೇಕೆಂದು ಅಥವಾ ಅವನು ತಮಗೆ ದೊರೆಯಬೇಕೆಂದು ಅಥವಾ ತಮ್ಮ ಸಮೀಪಕ್ಕೆ ಬರಬೇಕೆಂದು ಜನರು ಅಪೇಕ್ಷಿಸುತ್ತಾರೆ. ಇಂತಹ ಗುಣವಿಶಿಷ್ಟರಾದ ದೇವತೆಗಳಲ್ಲಿ ಇಂದ್ರನು **ಆಪ್ತವ್ಯಂ** ಅತಿಶಯವಾಗಿ ತಮ್ಮ ಸಮೀಪವರ್ತಿಯಾಗಿರಬೇಕೆಂದು ಅಪೇಕ್ಷಿಸಲ್ಪಡುವವನು ಎಂದರೆ ಜನರು ಇಂದ್ರನನ್ನು ಸಮೀಪವರ್ತಿಯಾಗಿದ್ದು ತಮ್ಮ ಸ್ತೋತ್ರಗಳನ್ನು ಕೇಳಿ, ತಮಗೆ ಬೇಕಾದ ಇಷ್ಟಾರ್ಥಗಳನ್ನು ಒದಗಿಸಿಕೊಡಲಿ ಎಂದು ಜನರು ಅಪೇಕ್ಷಿಸುವರು. ಆದ್ದರಿಂದಲೇ ಎಲ್ಲಾ ದೇವತೆಗಳಿಗಿಂತಲೂ ಹೆಚ್ಚಾಗಿ ಜನರು ಇಂದ್ರನನ್ನು ಬಯಸುವರು ಎಂದು ಮುಖ್ಯಾಭಿಪ್ರಾಯವು

**ಆ ದರ್ಷತೇ ಶವಸಾ ಸಪ್ತ ದಾನೂನ್— ಆ ದೃಣಾತಿ ಯಃ ಶವಸಾ ಬಲೇನ ಸಪ್ತ ದಾತ್ಯೈನಿತಿ ವಾ ಸಪ್ತ ದಾನವಾನಿತಿ ವಾ॥** ಇಲ್ಲಿ ದಾನವಾನ್ ಎಂಬ ಶಬ್ದಕ್ಕೆ ಎರಡುವಿಧ ಅರ್ಥವನ್ನು ಹೇಳಿದ್ದಾರೆ. **ಸಪ್ತ ದಾತ್ಯೈನ್– ಸಪ್ತಸರ್ಪಣಶೀಲಾನ್ ವೃಷ್ಟ್ಯುದಕಪ್ರದಾತ್ಯೈನ್ ಮೇಘಾನ್।** ಅಂತರಿಕ್ಷದಲ್ಲಿ ಸಂಚರಿಸುತ್ತಿರುವ, ವೃಷ್ಟ್ಯುದಕಗಳನ್ನು ಕೊಡುವ ಎಂದರೆ ಸುರಿಸುವ ಮೇಘಗಳನ್ನು ಎಂದು ಒಂದುವಿಧವಾದ ಅರ್ಥವು. ಅಥವಾ ದಾನವಾನಿತಿ ವಾ— ದಾನವರನ್ನು, ಕಶ್ಯಪ ಋಷಿಯ ಪತ್ನಿಯರಲ್ಲಿ ಒಬ್ಬಳಾದ ದನು ಎಂಬ ಸ್ತ್ರೀಯಲ್ಲಿ ಉತ್ಪನ್ನರಾದ ಪುತ್ರರಿಗೆ ದಾನವರೆಂದು ಹೆಸರು. ಇವರು ಕೆಟ್ಟ ಸ್ವಭಾವದವರಾದ್ದರಿಂದ ಇವರು ಅಸುರರ ಗುಂಪಿಗೆ ಸೇರಿದವರೆಂದು ಹೇಳುವ ಪದ್ಧತಿ ಇದೆ. ಆದ್ದರಿಂದ ಈ ವಾಕ್ಯಕ್ಕೆ — ಇಂದ್ರನು ತನ್ನ ಶಕ್ತಿ ಸಾಮರ್ಥ್ಯದಿಂದ ಸರಿಯುತ್ತಿರುವ ಮೇಘಗಳನ್ನು ಅಥವಾ ದಾನವರೆಂಬ ಅಸುರರನ್ನು ಸೀಳಿಹಾಕುತ್ತಾನೆ ಎಂದರ್ಥವು.

**ಪ್ರ ಸಾಕ್ಷತೇ ಪ್ರತಿಮಾನಾನಿ ಭೂರಿ—ಪ್ರ ಸಾಕ್ಷತೇ ಪ್ರತಿಮಾನಾನಿ ಬಹೂನಿ** || ಇಲ್ಲಿ ಸಾಕ್ಷತಿರಾಪ್ನೋತಿ ಕರ್ಮಾ ಎಂದು ಹೇಳಿರುವುದರಿಂದ ಪ್ರಸಾಕ್ಷತೇ ಎಂದರೆ ಸಮಾಪಿಸುತ್ತಾನೆ ಎಂದರೆ ಸಮಾಪಿಸಿ ಸೋಲಿಸುತ್ತಾನೆ ಎಂದರ್ಥವು. ಇಂದ್ರನು ಅನೇಕ ಅಸುರರ ಶಕ್ತಿಸಾಮರ್ಥ್ಯಗಳನ್ನು ಪರಾಭವಗೊಳಿಸುತ್ತಾನೆ ಅಥವಾ ಅಸುರರ ಸ್ಥಾನಗಳನ್ನು ಸಮಾಪಿಸಿ ಅವುಗಳನ್ನು ಗೆಲ್ಲುತ್ತಾನೆ ಎಂದಭಿಪ್ರಾಯವು.

|| ಸಂಹಿತಾಪಾಠಃ ||

**ನಿ ತದ್ದ॒ಧಿ॒ಷೇಽವ॑ರಂ॒ ಪರಂ॑ ಚ॒ ಯಸ್ಮಿ॒ನ್ನಾವಿ॒ಥಾವ॑ಸಾ ದುರೋ॒ಣೇ ।**

**ಆ ಮಾ॒ತರಾ॑ ಸ್ಥಾಪಯಸೇ ಜಿಗ॒ತ್ನೂ ಅತ॑ ಇನೋಷಿ॒ ಕರ್ವ॑ರಾ ಪು॒ರೂಣಿ ||**

|| ಪದಪಾಠಃ ||

ನಿ । ತತ್ । ದ॒ಧಿ॒ಷೇ । ಅವ॑ರಂ । ಪರಂ॑ । ಚ॒ । ಯಸ್ಮಿ॑ನ್ । ಆವಿ॑ಥ । ಅವ॑ಸಾ । ದು॒ರೋ॒ಣೇ ।

ಆ । ಮಾ॒ತರಾ॑ । ಸ್ಥಾ॒ಪ॒ಯ॒ಸೇ॒ । ಜಿ॒ಗ॒ತ್ನೂ ಇತಿ॑ । ಅತಃ॑ । ಇ॒ನೋ॒ಷಿ॒ । ಕರ್ವ॑ರಾ । ಪು॒ರೂಣಿ ॥ ೭ ॥

|| ಸಾಯಣಭಾಷ್ಯಂ ||

ತತ್ತಸ್ಮಿನ್ಯಜಮಾನಸ್ಯ ಗೃಹೇಽವರಮಲ್ಪಂ ಭೌಮಂ ಧನಂ ಪರಮುತ್ಕೃಷ್ಟಂ ದಿವಿ ಭವಂ ಧನಂ ಚ ಹೇ ಇಂದ್ರ ತ್ವಂ ನಿ ದಧಿಷೇ । ನಿದಧಾಸಿ । ನಿಕ್ಷಿಪಸಿ । ಯಸ್ಮಿನ್ದುರೋಣೇ ಗೃಹೇಽವಸಾ । ಅನ್ನನಾಮೈತತ್ । ತರ್ಪಕೇಣಾನ್ನೇನ ಹವಿರ್ಲಕ್ಷಣೇನಾವಿಥ ಅವಸಿ ತೃಪ್ಯಸಿ || ಅವತೇಸ್ತೃಪ್ತ್ಯರ್ಥಾಚ್ಛಂದಸಿ ಲುಙ್ಲಙ್ಲಿಟ ಇತಿ ಸಾರ್ವಕಾಲಿಕೋ ಲಿಟ್ । ಅತ ಆದೇರಿತ್ಯಭ್ಯಾಸಸ್ಯಾತ್ವಂ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ || ಅಪಿ ಚ ಮಾತರಾ ಸಕಲಸ್ಯ ಭೂತಜಾತಸ್ಯ ನಿರ್ಮಾತ್ರ್ಯೌ ದ್ಯಾವಾಪೃಥಿವ್ಯೌ ಜಿಗತ್ನೂ ಗಮನಶೀಲೇ ಇತಸ್ತತಃ ಪ್ರಚಲಂತ್ಯಾವಾ ಸ್ಥಾಪಯಸೇ । ಸ್ವಕೀಯೇ ಸ್ಥಾನೇಽವಸ್ಥಾಪಯಸಿ । ನೈಶ್ಚಲ್ಯೇನ ಯಥಾವತಿಷ್ಠೇತೇ ತಥಾ ಕರೋಷೀತ್ಯರ್ಥಃ । ವಿಷ್ಕಕ್ತಸ್ತಂಭ ಪೃಥಿವೀಮುತ ದ್ಯಾಮಿತಿ ನಿಗಮಾಂತರಂ । ಋ. ೧೦-೮೯-೪ । ಹೇ ಇಂದ್ರ ಅತಃ ಕಾರಣಾತ್ಪುರೂಣಿ ಬಹೂನಿ ಕರ್ವರಾ । ಕರ್ಮನಾಮೈತತ್ । ಕರ್ವರಾಣಿ || ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ || ಕರ್ಮಾಣಿ ಲೌಕಿಕಾನಿ ವೈದಿಕಾನಿ ಚೇನೋಷಿ । ಪ್ರಾಪ್ನೋಷಿ || ಇಣ್ ಗತೌ । ವ್ಯತ್ಯಯೇನ ಶ್ನುಃ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ ನೀನು) **ಯಸ್ಮಿನ್ ದುರೋಣೇ**—ಯಾವ ಯಜಮಾನನ ಗೃಹದಲ್ಲಿ । **ಅವಸಾ**—ಹವಿರ್ಲಕ್ಷಣರೂಪವಾದ ಅನ್ನದಿಂದ । **ಆವಿಥ**—ತೃಪ್ತಿಯನ್ನು ಹೊಂದುವಿಯೋ । **ತತ್**—ಆ ಯಜಮಾನನ ಗೃಹದಲ್ಲಿ । **ಅವರಂ**—ಪೃಥಿವಿಸಂಬಂಧವಾದ ಅಲ್ಪಧನವನ್ನು । **ಪರಂ ಚ**—ಉತ್ಕೃಷ್ಟವಾದ ದ್ಯುಲೋಕದ

ಧನವನ್ನು । **ನಿ ವಧಿಷೇ**— ಒದಗಿಸಿ ಇಡುತ್ತೀಯೆ । **ಜಿಗತ್ನೂ**—ಅಲುಗಾಡುತ್ತಿರುವ । **ಮಾತರಾ**—ಸಕಲ ಪ್ರಾಣಿಗಳಿಗೂ ಉತ್ಪತ್ತಿಸ್ಥಾನವಾದ ದ್ಯಾವಾಪೃಥಿವಿಗಳನ್ನು । **ಆ ಸ್ಥಾಪಯಸೇ**—ಅವುಗಳ ಸ್ಥಾನದಲ್ಲಿ ದೃಢವಾಗಿ ರುವಂತೆ ಸ್ಥಾಪಿಸುತ್ತೀಯೆ (ಎಲೈ ಇಂದ್ರನೇ) । **ಅತಃ**—ಆದ್ದರಿಂದ । **ಪುರೂಣಿ**— ಬಹುವಿಧವಾದ । **ಕರ್ವರಾ**— ಲೌಕಿಕವೈದಿಕಕರ್ಮಗಳನ್ನು । **ಇನೋಷಿ**— ಪಡೆಯುತ್ತೀಯೆ

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಯಜಮಾನನ ಗೃಹದಲ್ಲಿ ಅವನು ಅರ್ಪಿಸುವ ಹವೀರೂಪವಾದ ಅನ್ನದಿಂದ ನೀನು ಸಂತುಷ್ಟನಾಗುವಿಯೋ ಆ ಯಜಮಾನನ ಗೃಹದಲ್ಲಿ ಅಲ್ಪವೆನಿಸಿದ ಪೃಥಿವಿಸಂಬಂಧವಾದ ಸಂಪತ್ತನ್ನೂ, ಉತ್ಕೃಷ್ಟವೆನಿಸುವ ಸ್ವರ್ಗಲೋಕದ ಧನಾದಿಸಂಪತ್ತನ್ನೂ, ಒದಗಿಸಿ ಇಡುತ್ತೀಯೆ. ಸ್ಥಿರವಾಗಿ ನಿಲ್ಲದೆ ಅಲುಗಾಡುತ್ತಿರುವ, ಸಕಲ ಪ್ರಾಣಿಗಳಿಗೂ ಉತ್ಪತ್ತಿಸ್ಥಾನವಾದ ದ್ಯಾವಾಪೃಥಿವಿಗಳನ್ನು ಚಲಿಸದಂತೆ ದೃಢವಾಗಿ ಸ್ಥಾಪಿಸಿರುತ್ತೀಯೆ. ಆದ್ದರಿಂದ ಎಲೈ ಇಂದ್ರನೇ, ಸಕಲವಿಧವಾದ ವೈದಿಕಲೌಕಿಕಕರ್ಮಗಳಲ್ಲಿಯೂ ಪೂಜಿಸಲ್ಪಡುತ್ತೀಯೆ.

## English Translation.

You deposit the lesser and the greater wealth in the mansion in which you are satisfied with food, you fix the two wandering mothers, you accomplish many works

॥ ಸಂಹಿತಾಪಾಠಃ ॥

ಇಮಾ ಬ್ರಹ್ಮ ಬೃಹದ್ದಿವೋ ವಿವಕ್ತೀಂದ್ರಾಯ ಶೂಷಮಗ್ರಿಯಃ ಸ್ವರ್ಷಾಃ ।
ಮಹೋ ಗೋತ್ರಸ್ಯ ಕ್ಷಯತಿ ಸ್ವರಾಜೋ ದುರಶ್ಚ ವಿಶ್ವಾ ಅವೃಣೋದಪ ಸ್ವಾಃ ॥ ೮ ॥

॥ ಪದಪಾಠಃ ॥

ಇಮಾ । ಬ್ರಹ್ಮ । ಬೃಹತ್ಽದಿವಃ । ವಿವಕ್ತಿ । ಇಂದ್ರಾಯ । ಶೂಷಂ । ಅಗ್ರಿಯಃ । ಸ್ವಃಽಸಾಃ ।
ಮಹಃ । ಗೋತ್ರಸ್ಯ । ಕ್ಷಯತಿ । ಸ್ವಽರಾಜಃ । ದುರಃ । ಚ । ವಿಶ್ವಾಃ । ಅವೃಣೋತ್ । ಅಪ । ಸ್ವಾಃ ॥ ೮ ॥

॥ ಸಾಯಣಭಾಷ್ಯಂ ॥

ಬೃಹದ್ದಿವ ಋಷಿರಿಮೇಮಾನಿ ಬ್ರಹ್ಮ ಬ್ರಹ್ಮಾಣೀಂದ್ರಾಯ ಶೂಷಂ ಸುಖಂ ಯಥಾ ಭವತಿ ತಥಾ ವಿವಕ್ತಿ । ಪ್ರಬ್ರವೀತೀತ್ಯಾತ್ಮನ ಏವ ಪರೋಕ್ಷನಿರ್ದೇಶಃ ॥ ವಚ ಪರಿಭಾಷಣೇ ಅದಾದಿಕಃ । ಛಾಂದಸಃ ಶಪಃ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ ॥ ಋಷಿರ್ವಿಶೇಷ್ಯತೇ । ಅಗ್ರಿಯೋಽಗ್ರೇ ಭವಃ । ಋಷೀಣಾಂ ಪ್ರಮುಖಃ ಶ್ರೇಷ್ಠ ಇತ್ಯರ್ಥಃ ॥ ಘಚ್ಛೌ ಚ । ಪಾ. ೪-೪-೧೧೭ । ಇತ್ಯಗ್ರಶಬ್ದಾದ್ಭವಾರ್ಥೇ

**ಘುಚ್ ॥ ಸ್ವರ್ಷಾಃ ಸ್ವರ್ಗಸ್ಯ ಸಂಭಕ್ತಾ । ಯದ್ವಾ । ಸ್ವರಾದಿತ್ಯ ಇಂದ್ರಃ । ಅಸೌ ವಾ ಆದಿತ್ಯ ಇಂದ್ರ ಇತಿ ಶ್ರುತ್ಯಂತರಾತ್ । ತಸ್ಯ ಸಂಭಕ್ತಾ ಸೇವಕ ಇತ್ಯರ್ಥಃ ॥ ವನ ಷಣ ಸಂಭಕ್ತೌ । ಜನಸನಖನಕ್ರಮುಗನೋ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ವಾತ್ವಂ । ಸನೋತೇರನ ಇತಿ ಷತ್ವಂ ॥ ಯ ಇಂದ್ರೋ ಮಹೋ ಮಹತೋ ಗೋತ್ರಸ್ಯ ಪರ್ವತಸ್ಯ ವಲೇನಾಸುರೇಣ ಗವಾಂ ಪಿಧಾನಾರ್ಥಂ ನಿಹಿತಸ್ಯ ಸ್ವರಾಜಃ ಸ್ವಯಮೇವ ರಾಜಮಾನಸ್ಯ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ ॥ ಈದೃಶಂ ಪರ್ವತಂ ಕ್ಷಯತಿ ಅಪಗಮಯತಿ ॥ ಕ್ಷಿ ಕ್ಷಯೇ ಭೌವಾದಿಕಃ ॥ ಯದ್ವಾ ॥ ಗೋಶಬ್ದಾತ್ಸಮೂಹಾರ್ಥ ಇನಿತ್ರಕಟ್ಯಚಶ್ಚ । ಪಾ. ೪-೨-೫೧ । ಇತಿ ತ್ರಪ್ರತ್ಯಯಃ ॥ ಗೋತ್ರಸ್ಯ ಗೋಸಮೂಹಸ್ಯ ಮಹೋ ಮಹತಃ ಸ್ವರಾಜಃ ಸ್ವಯಮೇವ ರಾಜಮಾನಸ್ಯ ಯ ಇಂದ್ರಃ ಕ್ಷಯತಿ ಈಷ್ಟೇ । ಕ್ಷಯತಿರೈಶ್ವರ್ಯಕರ್ಮಾ ॥ ಸ್ವಶಬ್ದೋಪಪದಾದ್ರಾಜತೇಃ ಸತ್ಸೂದ್ವಿಷೇತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ ॥ ದುರಶ್ಚ ಬಿಲದ್ವಾರಾಣಿ ಚ ವಿಶ್ವಾಃ ಸರ್ವಾಃ ಸ್ವಾ ವಲಾಸುರಸ್ಯ ಸ್ವಭೂತಾ ಅಪಾವೃಣೋತ್ । ಅಪಗತಾವರಣಾ ಅಕರೋತ್ । ಉದ್ಘಾಟಿತವಾನಿತ್ಯರ್ಥಃ । ಯದ್ವಾ । ದುರಶ್ಚಾಪಾವೃಣೋತ್ ವಿಶ್ವಾಃ ಸರ್ವಾಃ ಸ್ವಾಃ ಸ್ವಭೂತಾ ಗಾ ಬಿಲಮಧ್ಯೇ ವರ್ತಮಾನಾ ಅಲಭತೇತಿ ಶೇಷಃ । ಏವಂಭೂತೋ ಯ ಇಂದ್ರಸ್ತಸ್ಮಾ ಇಂದ್ರಾಯ ವಿವಕ್ತೀತ್ಯನ್ವಯಃ ॥**

॥ ಪ್ರತಿಪದಾರ್ಥ ॥

ಬೃಹದ್ದಿವಃ— ಈಸೂಕ್ತದ್ರಷ್ಟೃವಾದ ಬೃಹದ್ದಿವನೆಂಬ ಋಷಿಯು । **ಅಗ್ರಿಯಃ**— ಎಲ್ಲರಿಗೂ ಮುಖಂಡನಾದವನೂ । **ಸ್ವರ್ಷಾಃ**— ಆದಿತ್ಯಾತ್ಮಕನೂ ಆದ ಯಾವ ಇಂದ್ರನು । **ಮಹಃ**— ದೊಡ್ಡದಾದ । **ಸ್ವರಾಜಃ**— ಪ್ರಕಾಶಮಾನವಾದ । **ಗೋತ್ರಸ್ಯ**— ಪರ್ವತವನ್ನು (ಪರ್ವತಗುಹೆಯನ್ನು) । **ಕ್ಷಯತಿ**— ಸಮೀಪಿಸಿ ಮುನ್ನುಗ್ಗಿದನೋ ಮತ್ತು । **ದುರಃ ಚ**— ಆ ಗುಹಯ ಮುಚ್ಚಿದ ದ್ವಾರಗಳನ್ನು । **ಅಪ ಅವೃಣೋತ್**— ತೆಗೆದನೋ ಮತ್ತು । **ವಿಶ್ವಾಃ**— ಸಮಸ್ತವಾದ (ಗುಹೆಯಲ್ಲಿ ಬಚ್ಚಿಟ್ಟಿದ್ದ) । **ಸ್ವಾಃ**— ಸ್ವಕೀಯವಾದ ಗೋವುಗಳನ್ನು । **ಅಲಭತ**— ಪಡೆದು ತಂದನೋ ಅಂತಹ । **ಇಂದ್ರಾಯ**— ಇಂದ್ರನ ಪ್ರೀತ್ಯರ್ಥವಾಗಿ । **ಇಮಾ ಬ್ರಹ್ಮಾಣಿ**— ಈ ಸ್ತೋತ್ರಗಳನ್ನು ! **ಶೂಷಂ**— (ಇಂದ್ರನಿಗೆ) ಸುಖಕರವಾಗುವಂತೆ । **ವಿವಕ್ತಿ**— ಪಠಿಸುತ್ತಾನೆ

॥ ಭಾವಾರ್ಥ ॥

ಎಲ್ಲರಿಗೂ ನಾಯಕನೂ, ಸೂರ್ಯಾತ್ಮಕನೂ ಆದ ಯಾವ ಇಂದ್ರನು ದೊಡ್ಡದಾದ ಪರ್ವತದ ಗುಹೆಯನ್ನು ಸಮೀಪಿಸಿ ಅದರ ಬಾಗಿಲುಗಳನ್ನು ತೆಗೆದು ಅಲ್ಲಿ ಬಚ್ಚಿಟ್ಟಿದ ದೇವತೆಗಳ ಸಮಸ್ತ ಗೋವುಗಳನ್ನು ಬಿಡಿಸಿ ತಂದನೋ ಅಂತಹ ಇಂದ್ರನ ಪ್ರೀತ್ಯರ್ಥವಾಗಿ ಬೃಹದ್ದಿವನೆಂಬ ಈ ಸೂಕ್ತದ ದ್ರಷ್ಟೃವಾದ ಋಷಿಯು ಇಂದ್ರನಿಗೆ ಹಿತಕರವಾಗುವಂತೆ ಈ ಸ್ತೋತ್ರಗಳನ್ನು ಪಠಿಸಿ ಅರ್ಪಿಸುತ್ತಾನೆ.

## English Translation

Brihaddiva, the chief (of Rishis), the servant of the sun, repeats these prayers to gratify Indra. (Indra) rules over the great self-ruling herd of cattle, and he opened all his doors.

|| ಸಂಹಿತಾಪಾಠಃ ||

ಏವಾ ಮಹಾನ್ಬೃಹದ್ದಿವೋ ಅಥರ್ವಾವೋಚತ್ಸ್ವಾಂ ತನ್ವ೧ಮಿಂದ್ರಮೇವ।
ಸ್ವಸಾರೋ ಮಾತರಿಭ್ವರೀರರಿಪ್ರಾ ಹಿನ್ವಂತಿ ಚ ಶವಸಾ ವರ್ಧಯಂತಿ ಚ ||

|| ಪದಪಾಠಃ ||

ಏವ । ಮಹಾನ್ । ಬೃಹತ್ಽದಿವಃ । ಅಥರ್ವಾ । ಅವೋಚತ್ । ಸ್ವಾಂ । ತನ್ವಂ । ಇಂದ್ರಂ । ಏವ ।
ಸ್ವಸಾರಃ । ಮಾತರಿಭ್ವರೀಃ । ಅರಿಪ್ರಾಃ । ಹಿನ್ವಂತಿ । ಚ । ಶವಸಾ । ವರ್ಧಯಂತಿ । ಚ || ೯ ||

|| ಸಾಯಣಭಾಷ್ಯಂ ||

ಮಹಾನ್ಗುಣೈರಧಿಕೋಽಥರ್ವಾ । ಉಪಚಾರಾಜ್ಜನ್ಯೇ ಜನಕಶಬ್ದಃ । ಅಥರ್ವಣಃ ಪುತ್ರೋ ಬೃಹದ್ದಿವಾಖ್ಯ ಋಷಿರ್ದೇವೇಷು ಮಧ್ಯ ಇಂದ್ರಮೇವ ಪ್ರತಿ ಸ್ವಾಮಾತ್ಮೀಯಾಂ ತನ್ವಂ ವಿಸ್ತೃತಾಂ ಸ್ತುತಿಮೇವಮವೋಚತ್ । ಪ್ರೋಕ್ತವಾನ್ || ವಚೇರ್ಲುಙ್ಯಸ್ಯತಿವಕ್ತೀತ್ಯಾದಿನಾ ಚ್ಲೇರಙಾದೇಶಃ । ವಚ ಉಮಿತ್ಯುಮಾಗಮಃ । ಪಾದಾದಿತ್ವಾನ್ನ ನಿಹನ್ಯತೇ || ಅಪಿ ಚೈನಮೇವೇಂದ್ರಂ ಮಾರಿಭ್ವರೀರ್ಮಾತರಿ ಸಕಲಸ್ಯ ಭೂತಜಾತಸ್ಯ ನಿರ್ಮಾತ್ರ್ಯಾಂ ಭೂಮೌ ಭವಂತ್ಯೋ ವರ್ತಮಾನಾಃ || ಭವತೇರನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ವನೋ ರ ಚೇತಿ ಙೀಬ್ರೇಫೌ । ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘಃ । ಪೃಷೋದರಾದಿತ್ವಾದ್ವರ್ಣಲೋಪಃ || ಅರಿಪ್ರಾ ಅಪಾಪಾಃ ಸ್ವಸಾರಃ ಸ್ವಯಮೇವ ಸರಂತ್ಯಃ ಪರಸ್ಪರಂ ಭಗಿನ್ಯೋ ವಾ ಗಂಗಾದ್ಯಾ ನದ್ಯೋ ಹಿನ್ವಂತಿ । ಯಾಗಸಾಧನತ್ವೇನ ಪ್ರೀಣಯಂತಿ || ಹಿವಿಃ ಪ್ರೀಣನಾರ್ಥಃ । ಭೌವಾದಿಕಃ । ವ್ಯತ್ಯಯೇನ ಶಃ । ಇದಿತ್ವಾನ್ನುಮ್ । ಯದ್ವಾ । ಹಿ ಗತೌ ವೃದ್ಧೌ ಚ । ಸ್ವಾದಿಭ್ಯಃ ಶ್ನುಃ || ವೃಷ್ಟ್ಯರ್ಥಂ ತಮಿಂದ್ರಮುಪಗಚ್ಛಂತಿ । ಗತ್ವಾ ಚ ಶವಸಾ ಯಾಗಜನ್ಯೇನ ಬಲೇನ ತಂ ವರ್ಧಯಂತಿ ಚ ||

|| ಪ್ರತಿಪದಾರ್ಥ ||

**ಮಹಾನ್**—ಅಧಿಕಗುಣಯುಕ್ತನಾದವನೂ | **ಅಥರ್ವಾ**—ಅಥರ್ವಣಪುತ್ರನಾದವನೂ ಆದ **ಬೃಹದ್ದಿವಃ**—ಬೃಹದ್ದಿವನೆಂಬ ಋಷಿಯು | **ಇಂದ್ರಮೇವ**—ಇಂದ್ರನನ್ನೇ ಉದ್ದೇಶಿಸಿ | **ಸ್ವಾಂ**—ತಾನು ನಿರ್ಮಿಸಿದ | **ತನ್ವಂ**—ವಿಸ್ತಾರವಾದ ಈ ಸ್ತೋತ್ರವನ್ನು | **ಅವೋಚತ್**—ಪಠಿಸಿದ್ದಾನೆ | **ಮಾತರಿಭ್ವರೀಃ**—ಸಕಲಭೂತಗಳಿಗೂ ಉತ್ಪತ್ತಿಸ್ಥಾನವಾದ ಭೂಮಿಯಲ್ಲಿ ಪ್ರವಹಿಸುವವೂ | **ಅರಿಪ್ರಾಃ**—ಪಾಪರಹಿತವಾದವೂ | **ಸ್ವಸಾರಃ**—ಸ್ವಪ್ರೇರಣೆಯಿಂದಲೇ ಪ್ರವಹಿಸುವವೂ ಅಥವಾ ಪರಸ್ಪರ ಸಹೋದರಿಯಂತಿರುವವೂ ಆದ ಗಂಗಾದಿ ನದಿಗಳು | (**ಇಂದ್ರಂ**—ಇಂದ್ರನನ್ನು) | **ಹಿನ್ವಂತಿ**—(ಯಾಗಸಾಧನದ್ರವ್ಯಗಳಿಂದ) ಸಂತೋಷಗೊಳಿಸುತ್ತವೆ

(ಮತ್ತು) | **ಶವಸಾ**— ಯಾಗಸಂಬಂಧವಾದ ಬಲದಿಂದ | **ವರ್ಧಯಂತಿ ಚ**— ಪ್ರವೃದ್ಧಮಾನನನ್ನಾಗಿಯೂ ಮಾಡುತ್ತವೆ

॥ ಭಾವಾರ್ಥ ॥

ಗುಣಗಳಲ್ಲಿ ದೊಡ್ಡವನೆನಿಸಿದವನೂ ಅಥರ್ವಣಋಷಿಯಪುತ್ರನೂ ಆದ ಬೃಹದ್ದಿವನೆಂಬ ಈ ಸೂಕ್ತ ದ್ರಷ್ಟ್ರುವಾದ ಋಷಿಯು ಎಲ್ಲಾ ದೇವತೆಗಳ ಮಧ್ಯದಲ್ಲಿ ಇಂದ್ರನನ್ನು ಮಾತ್ರವೇ ಉದ್ದೇಶಿಸಿ ತಾನೇ ರಚಿಸಿದ ವಿಸ್ತಾರ ವಾದ ಈ ಸ್ತುತಿಯನ್ನು ಪಠಿಸಿ ಅರ್ಪಿಸಿದ್ದಾನೆ. ಸಕಲಪ್ರಾಣಿಗಳ ಉತ್ಪತ್ತಿಗೆ ಕಾರಣಭೂತವಾದ ಈ ಪೃಥಿವಿಯಲ್ಲಿ ಹರಿಯುತ್ತಿರುವವೂ, ಪಾಪನಾಶಕವೂ, ಸ್ವಪ್ರೇರಣೆಯಿಂದಲೇ ಪ್ರವಹಿಸುವವೂ ಅಥವಾ ಪರಸ್ಪರ ಸಹೋದರಿಯರಂತೆ ಇರುವವೂ ಆದ ಗಂಗಾದಿ ನದಿಗಳು (ತಮ್ಮ ದಡದಲ್ಲಿ ಬೆಳೆಯುವ ಯಾಗಸಾಧನ ದ್ರವ್ಯಗಳಾದ, ದರ್ಭೆ, ಸೋಮಲತೆ ಮೊದಲಾದವುಗಳಿಂದ) ಇಂದ್ರನನ್ನು ಹರ್ಷಗೊಳಿಸುತ್ತವೆ. ಯಜ್ಞದಲ್ಲಿ ನಡೆಯುವ ಶವಸಾದಿಗಳಿಂದಲೂ, ಸ್ತೋತ್ರಾದಿ ಗಳಿಂದಲೂ ಇಂದ್ರನ ಶಕ್ತಿಸಾಮರ್ಥ್ಯಗಳನ್ನು ವೃದ್ಧಿಪಡಿಸುತ್ತವೆ.

English Translation

Thus the great Brihaddiva, son of Atharvan, repeated his diffused (praise) to Indra. The unsullied sister (streams) abiding in the mother (earth), go to Indra, and augment him with strength

## ನೂರ ಇಪ್ಪತ್ತೊಂದನೆಯ ಸೂಕ್ತವು



### ಪೀಠಿಕೆ.

ಈ ಸೂಕ್ತಕ್ಕೆ— **ಕಶಬ್ದಾಭಿಧೇಯಃ ಪ್ರಜಾಪತಿರ್ದೇವತಾ** ಎಂದರೆ **ಕ** ಎಂಬ ಹೆಸರಿನಿಂದ ಪ್ರಸಿದ್ಧ ನಾದ ಪ್ರಜಾಪತಿಯೇ ದೇವತೆಯು 'ಎಂದು ಹೇಳಿರುವುದು ಪ್ರಜಾಪತಿಗೆ **ಕಃ** ಎಂಬ ಹೆಸರು ಬರಲು ಕಾರಣವೇನೆಂಬ ವಿಷಯದಲ್ಲಿ ಐತರೇಯ ಬ್ರಾಹ್ಮಣದಲ್ಲಿ (ಐ, ಬ್ರಾ ೧೨-೨೧) ಒಂದು ಇತಿಹಾಸವಿರುವುದು—

> **ಇಂದ್ರೋ ವೃತ್ರಂ ಹತ್ವಾ ಸರ್ವಾ ವಿಜಿತೀರ್ವಿಜಿತ್ಯಾಬ್ರವೀತ್ಪ್ರಜಾಪತಿಮಹಮೇತದಸಾನಿ ಯತ್ತ್ವಮಹಂ ಮಹಾನಸಾನೀತಿ ಸ ಪ್ರಜಾಪತಿರಬ್ರವೀದಥ ಕೋಽಹಮಿತಿ ಯದ್ವೈವೈತದ ವೋಚ ಇತ್ಯಬ್ರವೀತ್ತತೋ ವೈ ಕೋ ನಾಮ ಪ್ರಜಾಪತಿರಭವಕ್ಕೋ ವೈ ನಾಮ ಪ್ರಜಾಪ- ತಿರ್ಯನ್ಮಹಾನಿಂದ್ರೋಽಭವತ್ತನ್ಮಹೇಂದ್ರಸ್ಯ ಮಹೇಂದ್ರತ್ವಂ ||**
>
> (ಐ. ಬ್ರಾ. ೧೨-೨೧)

ಪೂರ್ವದಲ್ಲಿ ಇಂದ್ರನು ವೃತ್ರನನ್ನು ಸಂಹಾರ ಮಾಡಿದನಂತರ ಭೂಮಂಡಲದ ಸಮಸ್ತ ಪ್ರದೇಶಗಳನ್ನೂ ಜಯಿಸಿ, ಪ್ರಜಾಪತಿಯನ್ನು ಕುರಿತು:— ಎಲೈ ಪ್ರಜಾಪತಿಯೇ, ಈಗ ನೀನು ಮಹಾಸ್ಥಾನವನ್ನು ಗಳಿಸಿ ಪೂಜ್ಯ ನಾಗಿರುವೆಯಷ್ಟೆ. ಇನ್ನು ಮೇಲೆ ನಿನ್ನ ಮಹತ್ಪದವಿಯು ನನಗೆ ಬೇಕು ಎಂದನು. ಅದಕ್ಕೆ ಪ್ರಜಾಪತಿಯು

ನನ್ನ ಪದವಿಯನ್ನು ತೆಗೆದು ಕೊಂಡರೆ ಆಗ ಪದವಿಯನ್ನು ಕಳೆದುಕೊಂಡ ನಾನು ಯಾರು (ಕಃ) ? ನನ್ನ ಸ್ಥಾನವಾನ ವೇನು ? ಎಂದು ಕೇಳಲು. ಅದಕ್ಕೆ ಇಂದ್ರನು—ಎಲೈ ಪ್ರಜಾಪತಯೇ, ಈಗ ನೀನು ಹೇಳಿದಂತೆ ನಿನ್ನ ಹೆಸರು ಇನ್ನುಮೇಲೆ **ಕಃ** (ಯಾರು) ಎಂದಾಗುವುದು, ಎಂದರೆ ಕಶಬ್ದವಾಚ್ಯನಾಗುವೆ ಎಂದನು. ಆದುದರಿಂದ ಆಕಾಲ ಮೊದಲುಗೊಂಡು ಪ್ರಜಾಪತಿಯು ಕಶಬ್ದವಾಚ್ಯನಾದನು ಎಂದರೆ ಪ್ರಜಾಪತಿಗೆ ಕ ಎಂಬ ಹೆಸರು ಪ್ರಸಿದ್ಧವಾಯಿತು, ಆದುದರಿಂದಲೇ ಯಾವುದಾದರೂ ದಾನವನ್ನು ಸ್ವೀಕರಿಸುವಾಗ ಪಠಿಸಬೇಕಾದ ಪ್ರತಿಗ್ರಹಮಂತ್ರಗಳಲ್ಲಿ ಈ ವಿಷಯವು ಉಕ್ತವಾಗಿರುವುದು. ಎಂದರೆ—**ಕ ಇದಂ ಕಸ್ಮಾ ಅದಾದಿತ್ಯಾಹ । ಪ್ರಜಾಪತಿರ್ವೈ ಕಃ । ಪ್ರಜಾಪತಯ ಏವ ತದ್ದದಾತಿ** ಎಂದು ಇತರ ವೇದಗಳ ಬ್ರಾಹ್ಮಣವಾಕ್ಯವಿರುವುದು. ಕಶಬ್ದಕ್ಕೆ ಸುಖವೆಂಬ ಅರ್ಥವೂ ಇರುವುದರಿಂದ ಪ್ರಜಾಪತಿಸಂಬಂಧವಾದ ವ್ಯವಹಾರಗಳಲ್ಲಿಯೂ ವಿಷಯಗಳಲ್ಲಿಯೂ ಪ್ರಜಾಪತಿಯು ಸುಖಸ್ವರೂಪನು ಎಂದೇ ಹೇಳಲ್ಪಡುವುದು. ಈರೀತಿ ಪ್ರಜಾಪತಿಯ ಮಹತ್ತ್ವವನ್ನು ಇಂದ್ರನು ಸ್ವೀಕರಿಸಿದುದರಿಂದ ಇಂದ್ರನಿಗೆ **ಮಹಾನ್** ಎಂಬ ಅಭಿಧಾನವು ಬಂದಿತು. ಎಂದರೆ ಇಂದ್ರನು ಮಹಾನಿಂದ್ರನಾದನು. ಈ ವಿಷಯವು ಇತರ ವೇದಗಳಲ್ಲಿಯೂ ಹೇಳಿರುವುದು. **ಇಂದ್ರೋ ವೃತ್ರಮಹನ್ತಂ ದೇವಾ ಅಬ್ರುವನ್ಮಹಾನ್ವಾ ಅಯಮಭೂದ್ಯೋ ವೃತ್ರಮವಧೀದಿತಿ ತನ್ಮಹೇಂದ್ರಸ್ಯ ಮಹೇಂದ್ರತ್ವಂ** ಇಂದ್ರನು ವೃತ್ರನನ್ನು ಸಂಹಾರಮಾಡಿದ್ದರಿಂದ ಮಹೇಂದ್ರನಾದನು (ಮಹತ್ಪದವಿಯನ್ನು ಗಳಿಸಿದನು) ಎಂದು ದೇವತೆಗಳು ಪ್ರಶಂಸಿಸಿದರು. ಎಂದರೆ ಎಲ್ಲಾದೇವತೆಗಳಿಗಿಂತಲೂ ಇಂದ್ರನು ಶ್ರೇಷ್ಠನಾದನು. ಇಂದ್ರನಿಗೆ ಮಹೇಂದ್ರನೆಂಬ ಹೆಸರು ಬರಲು ಇದೇ ಕಾರಣವು ಎಂದು ಹೇಳಿದೆ.

॥ ಸಾಯಣಭಾಷ್ಯಂ ॥

**ಹಿರಣ್ಯಗರ್ಭ ಇತಿ ದಶರ್ಚಂ ನವಮಂ ಸೂಕ್ತಂ ಪ್ರಜಾಪತಿಪುತ್ರಸ್ಯ ಹಿರಣ್ಯಗರ್ಭಾಖ್ಯಸ್ಯಾರ್ಷಂ ತ್ರೈಷ್ಟುಭಂ । ಕಶಬ್ದಾಭಿಧೇಯಃ ಪ್ರಜಾಪತಿರ್ದೇವತಾ । ತಥಾ ಚಾನುಕ್ರಾಂತಂ । ಹಿರಣ್ಯಗರ್ಭೋ ದಶ ಹಿರಣ್ಯಗರ್ಭಃ ಪ್ರಾಜಾಪತ್ಯಃ ಕಾಯಮಿತಿ ॥ ಗತಃ ಸೂಕ್ತವಿನಿಯೋಗಃ ॥ ಪ್ರಾಜಾಪತ್ಯಸ್ಯ ಪಶೋರ್ವಪಾಪುರೋಡಾಶಹವಿಷಾಂ ಕ್ರಮೇಣಾದಿತಸ್ತಿಸ್ರೋಽನುವಾಕ್ಯಾಸ್ತತಸ್ತಿಸ್ರೋ ಯಾಜ್ಯಾಃ । ಸೂತ್ರಿತಂ ಚ । ಹಿರಣ್ಯಗರ್ಭಃ ಸಮವರ್ತತಾಗ್ರ ಇತಿ ಷಟ್ ಪ್ರಾಜಾಪತ್ಯಾಃ** । ಆ. ೩-೮ । ಇತಿ ॥ **ವರುಣಪ್ರಘಾಸೇಷು ಕಾಯಸ್ಯ ಹವಿಷೋ ಹಿರಣ್ಯಗರ್ಭ ಇತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಕಯಾನಶ್ಚಿತ್ರ ಆ ಭುವದ್ಧಿರಣ್ಯಗರ್ಭಃ ಸಮವರ್ತತಾಗ್ರ ಇತಿ ಪ್ರತಿಪ್ರಸ್ಥಾತಾ ವಾಜಿನೇ ತೃತೀಯಃ** । ಆ. ೨-೧೭ । ಇತಿ ॥

ಅನುವಾದವು—**ಹಿರಣ್ಯಗರ್ಭಃ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಪ್ರಜಾಪತಿಪುತ್ರನಾದ ಹಿರಣ್ಯಗರ್ಭನೆಂಬುವನು ಋಷಿಯು, **ಕಃ** ಎಂಬ ಹೆಸರಿನಿಂದ ಪ್ರಸಿದ್ಧನಾದ ಪ್ರಜಾಪತಿಯೇ ದೇವತೆಯು ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಹಿರಣ್ಯಗರ್ಭೋ ದಶ ಹಿರಣ್ಯಗರ್ಭಃ ಪ್ರಾಜಾಪತ್ಯಃ ಕಾಯಂ** ಎಂದು ಹೇಳಿರುವುದು. ಪ್ರಜಾಪತಿದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ವಪಾ, ಪುರೋಡಾಶ, ಹವಿಸ್ಸು ಇವುಗಳನ್ನು ಹೋಮಮಾಡುವಾಗ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಕ್ರಮವಾಗಿ (ಎಂದರೆ ವಪಾ ಹೋಮಕ್ಕೆ ಮೊದಲನೆಯ ಋಕ್ಕೂ, ಪುರೋಡಾಶ ಹೋಮಕ್ಕೆ ಎರಡನೆಯ ಋಕ್ಕೂ ಹವಿರ್ಹೋಮಕ್ಕೆ ಮೂರನೆಯ ಋಕ್ಕೂ) ಅನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದೂ, ನಾಲ್ಕರಿಂದ ಆರರವರಗಿನ ಮುಂದಿನ ಮೂರು ಋಕ್ಕುಗಳನ್ನೂ ಇದೇರೀತಿಯಾಗಿ ಯಾಜ್ಯಾಮಂ

ತ್ರಗಳನ್ನಾಗಿ ಪಠಿಸಬೇಕೆಂದೂ ಆಶ್ವಲಾಯನಶ್ರೌತಸೂತ್ರದ— **ಹಿರಣ್ಯಗರ್ಭಃ ಸಮವರ್ತತಾಗ್ರ ಇತಿ ಷಟ್ ಪ್ರಾಜಾಪತ್ಯಾಃ** ಎಂಬ ಸೂತ್ರದಿಂದ (ಆ, ೩-೮) ವಿವೃತವಾಗಿರುವುದು ಮತ್ತು ವರುಣಪ್ರಘಾಸೇಷ್ಟಿಗಳಲ್ಲಿ **ಕ** ಎಂಬ ಪ್ರಜಾಪತಿಯನ್ನುದ್ದೇಶಿಸಿ ಮಾಡುವ ಹವಿರ್ಹೋಮದಲ್ಲಿ **ಹಿರಣ್ಯಗರ್ಭಃ** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಕಯಾ ನಶ್ಚಿತ್ರ ಆ ಭುವದ್ಧಿರಣ್ಯಗರ್ಭಃ ಸಮವರ್ತತಾಗ್ರ ಇತಿ ಪ್ರತಿಪ್ರಸ್ಥಾತಾ ವಾಜಿನೇ ತೃತೀಯಃ** ಎಂಬ ಸೂತ್ರದಿಂದ (ಆ. ೨-೧೭) ವಿವೃತವಾಗಿರುವುದು.

## ಸೂಕ್ತ—೧೨೧

ಮಂಡಲ-೧೦ ॥ ಅನುವಾಕ-೧೦ ॥ ಸೂಕ್ತ-೧೨೧ ॥
ಅಷ್ಟಕ-೮ ॥ ಅಧ್ಯಾಯ-೭ ॥ ವರ್ಗ-೩, ೪ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಹಿರಣ್ಯಗರ್ಭಃ ಪ್ರಾಜಾಪತ್ಯಃ ॥
॥ ದೇವತಾ—ಕಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।**
**ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥ ೧ ॥**

॥ ಪದಪಾಠಃ ॥

**ಹಿರಣ್ಯಽಗರ್ಭಃ । ಸಂ । ಅವರ್ತತ । ಅಗ್ರೇ । ಭೂತಸ್ಯ । ಜಾತಃ । ಪತಿಃ । ಏಕಃ । ಆಸೀತ್ ।**
**ಸಃ । ದಾಧಾರ । ಪೃಥಿವೀಂ । ದ್ಯಾಂ । ಉತ । ಇಮಾಂ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥೧॥**

॥ ಸಾಯಣಭಾಷ್ಯಂ ॥

ಹಿರಣ್ಯಗರ್ಭೋ ಹಿರಣ್ಮಯಸ್ಯಾಂಡಸ್ಯ ಗರ್ಭಭೂತಃ ಪ್ರಜಾಪತಿರ್ಹಿರಣ್ಯಗರ್ಭಃ । ತಥಾ ಚ ತೈತ್ತಿರೀಯಕಂ । ಪ್ರಜಾಪತಿರ್ವೈ ಹಿರಣ್ಯಗರ್ಭಃ ಪ್ರಜಾಪತೇರನುರೂಪತ್ವಾಯ । ತೈ. ಸ. ೫-೫-೧-೨ । ಇತಿ । ಯದ್ವಾ । ಹಿರಣ್ಮಯೋಽಂಡೋ ಗರ್ಭವದ್ಯಸ್ಯೋದರೇ ವರ್ತತೇ ಸೋಽಸೌ ಸೂತ್ರಾತ್ಮಾ ಹಿರಣ್ಯಗರ್ಭ ಇತ್ಯುಚ್ಯತೇ । ಅಗ್ರೇ ಪ್ರಪಂಚೋತ್ಪತ್ತೇಃ ಪ್ರಾಕ್ ಸಮವರ್ತತ । ಮಾಯಾಧ್ಯಕ್ಷಾತ್ಸಿಸೃಕ್ಷೋಃ ಪರಮಾತ್ಮನಃ ಸಕಾಶಾತ್ಸಮಜಾಯತ । ಯದ್ಯಪಿ ಪರಮಾತ್ಮೈವ ಹಿರಣ್ಯಗರ್ಭಃ ತಥಾಪಿ

ತದುಪಾಧಿಭೂತಾನಾಂ ವಿಯದಾದೀನಾಂ ಸೂಕ್ಷ್ಮಭೂತಾನಾಂ ಬ್ರಹ್ಮಣ ಉತ್ಪತ್ತೇಸ್ತದುಪಾಹಿತೋಽಪ್ಯುತ್ಪನ್ನ ಇತ್ಯುಚ್ಯತೇ । ಸ ಚ ಜಾತೋ ಜಾತಮಾತ್ರ ಏವೈಕೋಽದ್ವಿತೀಯಃ ಸನ್ ಭೂತಸ್ಯ ವಿಕಾರಜಾತಸ್ಯ ಬ್ರಹ್ಮಾಂಡಾದೇಃ ಸರ್ವಸ್ಯ ಜಗತಃ ಪತಿರೀಶ್ವರ ಆಸೀತ್ । ನ ಕೇವಲಂ ಪತಿರಾಸೀದೇವ ಅಪಿ ತರ್ಹಿ ಸ ಹಿರಣ್ಯಗರ್ಭಃ ಪೃಥಿವೀಂ ವಿಸ್ತೀರ್ಣಾಂ ದ್ಯಾಂ ದಿವಮುತಾಪಿ ಚೇಮಾಮಸ್ಮಾಭಿರ್ದೃಶ್ಯಮಾನಾಂ ಪುರೋವರ್ತಿನೀಮಿಮಾಂ ಭೂಮಿಂ । ಯದ್ವಾ । ಪೃಥಿವೀತ್ಯಂತರಿಕ್ಷನಾಮ । ಅಂತರಿಕ್ಷಂ ದಿವಂ ಭೂಮಿಂ ಚ ದಾಧಾರ । ಧಾರಯತಿ ॥ ಛಂದಸಿ ಲುಙ್‌ಲಙ್‌ಲಿಟ ಇತಿ ಸಾರ್ವಕಾಲಿಕೋ ಲಿಟ್ । ತುಜಾದಿತ್ವಾದಭ್ಯಾಸದೀರ್ಘಃ॥ ಕಸ್ಮೈ। ಅತ್ರ ಕಿಂಶಬ್ದೋಽನಿರ್ಜ್ಞಾತಸ್ವರೂಪತ್ವಾತ್ಪ್ರಜಾಪತೌ ವರ್ತತೇ । ಯದ್ವಾ। ಸೃಷ್ಟ್ಯರ್ಥಂ ಕಾಮಯತ ಇತಿ ಕಃ ॥ ಕಮೇರ್ಡಪ್ರತ್ಯಯಃ ॥ ಯದ್ವಾ। ಕಂ ಸುಖಂ । ತದ್ರೂಪತ್ವಾತ್ಕ ಇತ್ಯುಚ್ಯತೇ । ಅಥವೇಂದ್ರೇಣ ಪೃಷ್ಟಃ ಪ್ರಜಾಪತಿರ್ಮದೀಯಂ ಮಹತ್ತ್ವಂ ತುಭ್ಯಂ ಪ್ರದಾಯಾಹಂ ಕಃ ಕೀದೃಶಃ ಸ್ಯಾಮಿತ್ಯುಕ್ತವಾನ್ । ಸ ಇಂದ್ರಃ ಪ್ರತ್ಯುಚೇ । ಯದೀದಂ ಬ್ರವೀಷ್ಯಹಂ ಕಃ ಸ್ಯಾಮಿತಿ ತದೇವ ತ್ವಂ ಭವೇತಿ । ಅತಃ ಕಾರಣಾತ್ಕ ಇತಿ ಪ್ರಜಾಪತಿರಾಖ್ಯಾಯತೇ । ಇಂದ್ರೋ ವೈ ವೃತ್ರಂ ಹತ್ವಾ ಸರ್ವಾ ವಿಜಿತೀರ್ವಿಜಿತ್ಯಾಬ್ರವೀದಿತ್ಯಾದಿಕಂ ಬ್ರಾಹ್ಮಣಮತ್ರಾನುಸಂಧೇಯಂ । ಐ. ಬ್ರಾ ೩-೨೧ ॥ ಯದಾಸೌ ಕಿಂಶಬ್ದಸ್ತದಾ ಸರ್ವನಾಮತ್ವಾತ್ಸ್ಮೈಭಾವಃ ಸಿದ್ಧಃ । ಯದಾ ತು ಯೌಗಿಕಸ್ತದಾ ವ್ಯತ್ಯಯೇನೇತಿ ದ್ರಷ್ಟವ್ಯಂ । ಸಾವೇಕಾಚ ಇತಿ ಪ್ರಾಪ್ತಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ ॥ ಕಂ ಪ್ರಜಾಪತಿಂ ದೇವಾಯ ದೇವಂ ದಾನಾದಿಗುಣಯುಕ್ತಂ ಹವಿಷಾ ಪ್ರಾಜಾಪತ್ಯಸ್ಯ ಪಶೋರ್ವಪಾರೂಪೇಣೈಕಕಪಾಲಾತ್ಮಕೇನ ಪುರೋಡಾಶೇನ ವಾ ವಿಧೇಮ । ವಯಮೃತ್ವಿಜಃ ಪರಿಚರೇಮ । ವಿಧತಿಃ ಪರಿಚರಣಕರ್ಮಾ ॥

॥ ಪ್ರತಿಪದಾರ್ಥ ॥

**ಹಿರಣ್ಯಗರ್ಭಃ**—ಹಿರಣ್ಯಗರ್ಭ ಎಂಬ ಹೆಸರಿನಿಂದ ಪ್ರಸಿದ್ಧನಾದ ಪ್ರಜಾಪತಿಯು। **ಅಗ್ರೇ**—ಪ್ರಪಂಚೋತ್ಪತ್ತಿಗೆ ಪೂರ್ವದಲ್ಲಿ । **ಏಕಃ**—ಅದ್ವಿತೀಯನಾಗಿ (ಮತ್ತೊಬ್ಬರಿಲ್ಲದೆ) । **ಸಂ ಅವರ್ತತ**—ತಾನು ಮಾತ್ರವೇ ಇದ್ದನು ಆ ಪ್ರಜಾಪತಿಯು । **ಜಾತಃ**—ಹುಟ್ಟಿದಕೂಡಲೇ । **ಭೂತಸ್ಯ**—ತನ್ನ ಅಂಶದಿಂದಲೇ ಉತ್ಪನ್ನವಾದ ಸಮಸ್ತ ಬ್ರಹ್ಮಾಂಡವೇ ಮೊದಲಾದ ಜಗತ್ತಿಗೂ । **ಪತಿಃ**—ಸ್ವಾಮಿಯಾಗಿ । **ಆಸೀತ್**—ಇದ್ದನು । **ಸಃ**—ಆ ಹಿರಣ್ಯಗರ್ಭನು । **ಪೃಥಿವೀಂ**—ವಿಸ್ತಾರವಾದ । **ದ್ಯಾಂ**—ದ್ಯು (ಸ್ವರ್ಗ) ಲೋಕವನ್ನೂ । **ಉತ**—ಮತ್ತು । **ಇಮಾಂ**—ನಮ್ಮ ಕಣ್ಣಿಗೆ ಕಾಣುವ ಈ ಭೂಮಿಯನ್ನು ಅಥವಾ ಅಂತರಿಕ್ಷವನ್ನೂ ಭೂಮಿಯನ್ನೂ ಸಹ । **ದಾಧಾರ**—ಧರಿಸುತ್ತಾನೆ । **ದೇವಾಯ**—ದಾನಾದಿಗುಣಯುಕ್ತನಾದ । **ಕಸ್ಮೈ**—ಸುಖಸ್ವರೂಪನಾದ ಪ್ರಜಾಪತಿಯನ್ನು । **ಹವಿಷಾ**—ಪುರೋಡಾಶಾದಿ ಹವಿಸ್ಸಿನಿಂದ । **ವಿಧೇಮ**—ಉಪಚರಿಸೋಣ

॥ ಭಾವಾರ್ಥ ॥

ಹಿರಣ್ಯಗರ್ಭನಾಮಧೇಯನಾದ ಪ್ರಜಾಪತಿಯು ಪ್ರಪಂಚಸೃಷ್ಟಿಗೆ ಪೂರ್ವದಲ್ಲಿ ತಾನೇತಾನಾಗಿ(ತಾನೊಬ್ಬನು ಮಾತ್ರ) ಇದ್ದನು. ಅನಂತರ ಇವನು ಉತ್ಪನ್ನನಾದ ಕೂಡಲೆ ತನ್ನ ಅಂಶದಿಂದಲೇ ಸೃಷ್ಟವಾದ ಬ್ರಹ್ಮಾಂಡಾದಿ

ಸಕಲ ಜಗತ್ತಿಗೂ ತಾನೇ ಏಕಮಾತ್ರ ಪ್ರಭುವಾಗಿದ್ದನು. ಆ ಹಿರಣ್ಯಗರ್ಭನು ವಿಸ್ತಾರವಾದ ಸ್ವರ್ಗಲೋಕವನ್ನೂ, ಈ ಭೂಮಿಯನ್ನೂ ಅಂತರಿಕ್ಷವನ್ನೂ ತನ್ನ ಸಾಮರ್ಥ್ಯದಿಂದ ಧರಿಸುತ್ತಾನೆ. ಎಂದರೆ ಇವನ ಆಶ್ರಯದಿಂದಲೇ ಈ ಪೃಥಿವ್ಯಾದಿ ಲೋಕಗಳು ಸ್ಥಾಪಿತವಾಗಿವೆ. ದಾನಾದಿ ಗುಣಯುಕ್ತವಾದ ಪ್ರಜಾಪತಿಯನ್ನೇ ವಪಾಪುರೋಡಾಶ ಹವಿಸ್ಸುಗಳಿಂದ ಉಪಚರಿಸೋಣ (ಸೇವಿಸೋಣ).

## English Translation.

Hiranyagarbhaa was present at the begining; when born, he was the sole lord of created beings; he upheld this earth and heaven,—let us offer worship with an oblation to the divine Ka.

॥ ವಿಶೇಷವಿಷಯಗಳು ॥

**ಹಿರಣ್ಯಗರ್ಭಃ ಸಂ ಅವರ್ತತ ಅಗ್ರೇ**— ಹಿರಣ್ಯಗರ್ಭಶಬ್ದಕ್ಕೆ ಭಾಷ್ಯಕಾರರು ಎರಡು ಮೂರುವಿಧ ಅರ್ಥಗಳನ್ನು ಹೇಳಿರುವರು. ಹಿರಣ್ಯಗರ್ಭನೇ ಪ್ರಜಾಪತಿಯೆಂದು **ಪ್ರಜಾಪತಿರ್ವೈ ಹಿರಣ್ಯಗರ್ಭಃ** ತೈತ್ತಿರೀಯಸಂಹಿತೆಯಲ್ಲಿ (ತೈ- ಸಂ-೫-೫-೧-೨) ಹೇಳಿದೆ. **ಹಿರಣ್ಯಗರ್ಭಃ** ಎಂದರೆ **ಹಿರಣ್ಮಯಸ್ಯಾಂಡಸ್ಯಗರ್ಭಭೂತಃ ಪ್ರಜಾಪತಿರ್ಹಿರಣ್ಯಗರ್ಭಃ**– ಸೃಷ್ಟಿಗೆ ಪೂರ್ವದಲ್ಲಿ ಸಮಸ್ತವಿಶ್ವವೂ ಒಂದು ಅಂಡಾಕಾರ (ಕೋಳೀಮೊಟ್ಟೆಯ ಆಕಾರ) ದಲ್ಲಿದ್ದು ಅದು ಪ್ರಜಾಪತಿಯ ಉದರದಲ್ಲಿ ಅಂತರ್ಗತವಾಗಿದ್ದಿತು ಆ ಅಂಡವು ಚಿನ್ನದಂತೆ ಥಳಥಳಿಸುತ್ತಾ ಪ್ರಕಾಶಮಾನವಾಗಿದ್ದಿತು. ಅಂತಹ ಹಿರಣ್ಯರೂಪವಾದ ಅಂಡವನ್ನು ತನ್ನ ಉದರದಮಧ್ಯದಲ್ಲಿ ಇಟ್ಟುಕೊಂಡಿರುವ ಪ್ರಜಾಪತಿಯನ್ನು ಹಿರಣ್ಯಗರ್ಭನೆಂದು ಕರೆಯುವ ಪದ್ಧತಿಇದೆ; ಇದಲ್ಲದೆ ಸೃಷ್ಟಿಗೆ ಪೂರ್ವದಲ್ಲಿ ಪರಮಾತ್ಮನು ಅವ್ಯಕ್ತಾವಸ್ಥೆ (ಸೂಕ್ಷ್ಮಾವಸ್ಥೆಯಲ್ಲಿದ್ದಾಗ) ಕಣ್ಣಿಗೆ ಕಾಣಿಸುತ್ತಿರುವ ಈಜಗದಾದಿಗಳೊಂದೂ ಇರಲಿಲ್ಲ. ಪ್ರಪಂಚವನ್ನು ಸೃಷ್ಟಿಸಬೇಕೆಂಬ ಇಚ್ಛೆಯು ಪರಮಾತ್ಮನಲ್ಲಿ ಉಂಟಾದಾಗ ಅವ್ಯಕ್ತಸ್ವರೂಪವು ವ್ಯಕ್ತರೂಪವನ್ನು ಹೊಂದಿತು ಇದನ್ನೇ—

> **ಸೋ ಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ಇದಗ್ಂ ಸರ್ವಮಸೃಜತ । ಯದಿದಂ ಕಿಂಚ । ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್ । ತದನು ಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ ॥**
>
> **(ತೈ. ಉ. ೨-೬)**

ಎಂಬ ಉಪನಿಷದ್ವಾಕ್ಯವು ಪ್ರತಿಪಾದಿಸುವುದು. ಆ ಪರಬ್ರಹ್ಮವು (ಅಥವಾ ಪರಮಾತ್ಮನು) ವ್ಯಕ್ತಸ್ವರೂಪ ಹೊಂದುವಾಗ ಅವನಲ್ಲಿ ಸೂಕ್ಷ್ಮರೂಪದಿಂದ ಲೀನವಾಗಿದ್ದ ಜಗದಾದಿಗಳನ್ನೇ ಇಲ್ಲಿ ಅಂಡರೂಪದಿಂದ ಇದ್ದಿತೆಂದು ಹೇಳಲಾಗಿದೆ. ಒಂದು ವಸ್ತುವಿನ ಮಧ್ಯದಲ್ಲಿ ಅಂತರ್ಗತವಾಗಿರುವ ಮತ್ತೊಂದು ವಸ್ತುವಿಗೆ ಗರ್ಭವೆಂದು ಹೇಳಲ್ಪಡುವುದು. ಆದ್ದರಿಂದ ಪರಮಾತ್ಮನಲ್ಲಿ ಅವ್ಯಕ್ತರೂಪದಿಂದ (ಸೂಕ್ಷ್ಮರೂಪದಿಂದ) ಲೀನವಾಗಿದ್ದ ಜಗದಾದಿಗಳನ್ನು ಇಲ್ಲಿ ಅಂಡ ಅಥವಾ ಗರ್ಭವೆಂದು ಹೇಳಲಾಗಿದೆ ಇದು ಹಿರಣ್ಯ (ಸುವರ್ಣ) ದಂತೆ ಪ್ರಕಾಶಮಾನವಾಗಿರುವುದೆಂದು ವರ್ಣಿಸಿ, ಇಂತಹ ಹಿರಣ್ಯಾಂಡವನ್ನು ಗರ್ಭ(ಮಧ್ಯ)ದಲ್ಲಿಟ್ಟುಕೊಂಡಿರುವ ಈ ಪರಮಾತ್ಮ ಅಥವಾ ಪ್ರಜಾಪತಿಯನ್ನು

ಹಿರಣ್ಯಗರ್ಭನೆಂದು ಸ್ತುತಿಸಲಾಗಿದೆ ಇಂತಹ ಹಿರಣ್ಯಗರ್ಭನು (ಅಥವಾ ಪ್ರಜಾಪತಿಯು) ಸೃಷ್ಟಿಗೆ ಪೂರ್ವದಲ್ಲಿ ತಾನೊಬ್ಬನೇ ಇದ್ದನು. ಸೃಷ್ಟಿಯಾಗಿರಲಿಲ್ಲವಾದ್ದರಿಂದ ಆಗ ಈ ಪ್ರಜಾಪತಿಯು ಹೊರತು ಮತ್ತಾರೂ ಇರಲಿಲ್ಲ.

**ಭೂತಸ್ಯ ಜಾತಃ ಪತಿಃ ಏಕಃ ಆಸೀತ್** — ಸೃಷ್ಟಿಗೆ ಪೂರ್ವದಲ್ಲಿ ಈ ಹಿರಣ್ಯಗರ್ಭನು ಒಬ್ಬನೇ ಇದ್ದನೆಂದು ಹೇಳಿದೆಯಷ್ಟೆ. ಆಗ ಇತರ ಚರಾಚರ ವಸ್ತುಗಳು ಇರಲಿಲ್ಲವೆಂದಾಯಿತು ಹಾಗಾದರೆ **ಭೂತಸ್ಯ ಪತಿಃ** ಸಮಸ್ತ ಭೂತವರ್ಗಕ್ಕೆ ಪ್ರಾಣಿಗಳಿಗೆ ಇವನು ಹೇಗೆ ಸ್ವಾಮಿಯು ? ಪ್ರಾಣಿಗಳೇ ಇಲ್ಲದಿದ್ದಾಗ ಪ್ರಾಣಿಗಳಿಗೆ ಪತಿಯೆನ್ನುವುದು ಅಸಂಭವವಲ್ಲವೇ ಎಂದರೆ, ಆ ಸಮಸ್ತ ಭೂತಗಳು ಎಂದರೆ ಸಮಸ್ತ ಬ್ರಹ್ಮಾಂಡಗಳನ್ನು ಒಳಗೊಂಡ ವಿಶ್ವವು ಈ ಹಿರಣ್ಯಗರ್ಭನಿಂದಲೇ ಉತ್ಪನ್ನವಾಯಿತು. ಹಾಗೆ ಸಮಸ್ತ ಜಗತ್ತೂ (ಅವುಗಳಲ್ಲಿರುವ ಪ್ರಾಣಿಗಳೂ) ಉತ್ಪನ್ನವಾದಕೂಡಲೇ ಅವುಗಳಿಗೆಲ್ಲಾ ಈ ಹಿರಣ್ಯಗರ್ಭನು ಅಥವಾ ಪ್ರಜಾಪತಿಯು ಏಕಮಾತ್ರ ಪ್ರಭುವಾಗಿದ್ದನು. ಇವನನ್ನು ಬಿಟ್ಟು ಬೇರೊಬ್ಬ ಪ್ರಭುವಿರಲಿಲ್ಲ. ಸಮಸ್ತವೂ ಇವನಾಜ್ಞೆಗೆ ಒಳಪಟ್ಟಿದ್ದಿತು ಎಂದಭಿಪ್ರಾಯವು

**ಸಃ ದಾಧಾರ ಪೃಥಿವೀಂ ದ್ಯಾಂ ಉತ ಇಮಾಂ**— ಈ ಪ್ರಜಾಪತಿಯು ಅಂಶದಿಂದಲೇ ಉತ್ಪತ್ತಿಯಾದ ಪೃಥಿವ್ಯಂತರಿಕ್ಷಸ್ವರ್ಗಲೋಕಗಳಿಗೆ ಇವನೇ ಆಧಾರಭೂತನಾಗಿ ತನ್ನ ಅತಿಶಯವಾದ ಶಕ್ತಿಸಾಮರ್ಥ್ಯಗಳಿಂದ ಅವುಗಳ ಸ್ಥಿತಿಗೆ ಕಾರಣಭೂತನಾಗಿದ್ದನು. ಇವನ ಶಕ್ತಿಸಾಮರ್ಥ್ಯಗಳಿಂದಲೇ ಪೃಥಿವ್ಯಾದಿಲೋಕಗಳು ಅವುಗಳ ನಿರ್ದಿಷ್ಟ ಸ್ಥಾನಗಳಲ್ಲಿ ಸ್ಥಾಪಿತವಾಗಿ ತಮ್ಮ ತಮ್ಮ ಕರ್ತವ್ಯಕರ್ಮನಿರ್ವಹಣೆಯಲ್ಲಿ ಸಮರ್ಥವಾಗಿರುವವು.

**ಕಸ್ಮೈ ದೇವಾಯ ಹವಿಷಾ ವಿಧೇಮ** — ಕಃ ಎಂಬ ಶಬ್ದಕ್ಕೆ ಎರಡು ಮೂರು ಅರ್ಥಗಳನ್ನು ಹೇಳಬಹುದು ಕಿಂಶಬ್ದಕ್ಕೆ ಏನು ಎಂದು ಅನಿರ್ಜ್ಞಾತವಾದ ಅರ್ಥವಿರುವುದು. ಏನು, ಯಾವುದು ಎಂದು ಕೇಳುವಾಗ ಅದರ ಸ್ವರೂಪವು ತಿಳಿದಿರುವುದಿಲ್ಲ. ಅದರಂತೆ ಕಸ್ಮೈ ಎಂದು ಹೇಳುವಾಗ ಈ ಪ್ರಜಾಪತಿಯ ಸ್ವರೂಪವು ಅಥವಾ ಸಾಮರ್ಥ್ಯವು ಸಾಧಾರಣಜನರಿಗೆ ತಿಳಿಯದು ಎಂದು ಹೇಳಬಹುದು ಎಂದರೆ ಯಾರಿಂದಲೂ ಸಂಪೂರ್ಣವಾಗಿ ತಿಳಿಯಲಸಾಧ್ಯವಾದ ಸ್ವರೂಪವುಳ್ಳ ಎಂಬರ್ಥವನ್ನು ಹೇಳಬಹುದು. ಅಥವಾ ಕಂ ಎಂದರೆ ಸುಖವು. ಕಸ್ಮೈ ಎಂದರೆ ಸುಖಸ್ವರೂಪನಾದ ಎಂದು ಅರ್ಥವನ್ನೂ ಹೇಳಬಹುದು. **ಆನಂದೋ ಬ್ರಹ್ಮೇತಿ ವ್ಯಜಾನಾತ್** ಎಂಬ ಶ್ರುತಿವಾಕ್ಯದಂತೆ, ಬ್ರಹ್ಮನು(ಅಥವಾ ಪ್ರಜಾಪತಿಯು) ಆನಂದ ಅಥವಾ ಸುಖಸ್ವರೂಪನಾಗಿರುವನು. ಅಥವಾ ಈ ಸೂಕ್ತದ ಪೀಠಿಕೆಯಲ್ಲಿ ಹೇಳಿರುವ ಉಪಾಖ್ಯಾನದಂತೆ ಪ್ರಜಾಪತಿಗೆ ಕಃ ಎಂಬ ಹೆಸರು ಕಾರಣಾಂತರದಿಂದ ಪ್ರಾಪ್ತವಾಗಿರುವುದು **ಪ್ರಜಾಪತಿರ್ವೈ ಕಃ**( ತೈ· ಬ್ರಾ೨-೨-೫-೫। ಎಂದು ತೈತ್ತಿರೀಯ ಬ್ರಾಹ್ಮಣದಲ್ಲಿಯೂ ಪ್ರಜಾಪತಿಗೆ ಕಃ ಎಂಬ ಹೆಸರಿರುವುದು ಎಂದು ಹೇಳಿದೆ. ಇಂತಹ ಸುಖಸ್ವರೂಪನಾದ ಹಿರಣ್ಯಗರ್ಭನನ್ನು ಅಥವಾ ಪ್ರಜಾಪತಿಯನ್ನು ಚರುಪುರೋಡಾಶಾದಿ ಹವಿರ್ದ್ರವ್ಯಗಳಿಂದ ಉಪಚರಿಸಿ ಸೇವಿಸೋಣ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಈ ಋಕ್ಕಿನಲ್ಲಿರುವ ಕಃ ಎಂಬ ಶಬ್ದದ ಅರ್ಥವಿವರಣೆ ಮಾಡುತ್ತಾ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದ್ದಾರೆ—

**ಕಃ । ಕಃ ಕಮನೋ ವಾ ಕ್ರಮಣೋ ವಾ ಸುಖೋ ವಾ । ತಸ್ಯೈಷಾ ಭವತಿ ॥** (ನಿ. ೧೦-೨೨)

**ಕಃ** ಎಂದರೆ-**ಕಮನೋ ವಾ।** ಕಮ್- ಪ್ರೀತಿಸು ಎಂಬ ಧಾತುವಿನಿಂದ ಕಃ ಎಂಬ ಶಬ್ದವು ನಿಷ್ಪನ್ನವಾಗಿದೆ ಪ್ರೀತಿಸುವವನು ತಾನು ಸೃಷ್ಟಿಸಿದ ಸಮಸ್ತಪ್ರಾಣಿಗಳನ್ನು ಪ್ರೀತಿಸುವವನು ಎಂದರ್ಥವು; ಅಥವಾ **ಕಃ** ಎಂದರೆ **ಕ್ರಮಣೋ** ವಾ-ಅತಿಕ್ರಮಿಸುವವನು. ಎಲ್ಲವನ್ನು ತನ್ನ ಶಕ್ತಿಸಾಮರ್ಥ್ಯಗಳಿಂದ ಅತಿಕ್ರಮಿಸುವವನು,

ಎಲ್ಲರಿಗಿಂತಲೂ ಅಧಿಕನಾದವನು ಎಂದರ್ಥವು, ಅಥವಾ **ಕಃ ಸುಖೋ ವಾ**—ಕಂ ಎಂದರೆ ಸುಖವು. ಸುಖಸ್ವರೂಪ ನಾದವನು ಎಂದೂ ಅರ್ಥವು. ಈ ಶಬ್ದದ ಪ್ರಯೋಗವಿರುವ ಋಕ್ಕನ್ನು ಇಲ್ಲಿ ಉದಾಹರಿಸಲಾಗಿದೆ—

**ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।**
**ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥**

**ಹಿರಣ್ಯಗರ್ಭೋ ಹಿರಣ್ಮಯೋ ಗರ್ಭೋ ಹಿರಣ್ಯಮಯೋ ಗರ್ಭೋಽಸ್ಯೇತಿ ವಾ । ಗರ್ಭೋ ಗೃಭೇರ್ಗೃಣಾತ್ಯರ್ಥೇ, ಗಿರತ್ಯನರ್ಥಾನಿತಿ ವಾ ॥ ಯದಾ ಹಿ ಸ್ತ್ರೀ ಗುಣಾನ್ ಗೃಹ್ಣಾತಿ ಗುಣಾಶ್ಚಾಸ್ಯಾ ಗೃಹ್ಯಂತೇಽಥ ಗರ್ಭೋ ಭವತಿ ಸಮಭವದಗ್ರೇ ಭೂತಸ್ಯ ಜಾತಃ ಪತಿರೇಕೋ ಬಭೂವ ಸ ಧಾರಯತಿ ಪೃಥಿವೀಂ ಚ ದಿವಂ ಚ ಕಸ್ಮೈ ದೇವಾಯ ಹವಿಷಾ ವಿಧೇಮೇತಿ ವ್ಯಾಖ್ಯಾತಂ । ವಿಧತಿರ್ದಾನಕರ್ಮಾ ॥** (ನಿ ೧೦ - ೨೩)

**ಹಿರಣ್ಯಗರ್ಭಃ ಹಿರಣ್ಮಯೋ ಗರ್ಭೋ ಹಿರಣ್ಯಮಯೋ ಗರ್ಭೋಽಸ್ಯೇತಿ ವಾ**—ಹಿರಣ್ಯ(ಚಿನ್ನ) ಮಯವಾದ, ಸುವರ್ಣಸದೃಶವಾದ ಅಥವಾ ಸುವರ್ಣಮಯವಾದ ಗರ್ಭವುಳ್ಳವನು ಹಿರಣ್ಯಗರ್ಭನು. ಎಂದರೆ ಇವನ ಗರ್ಭವು (ಅಂತಃಪ್ರದೇಶದಲ್ಲಿರುವ ಜಗದಾದಿಗಳು ಸುವರ್ಣದಂತೆ ಪ್ರಕಾಶಮಾನವಾದುದು. ಇಂತಹ ಗರ್ಭ ವನ್ನು ತನ್ನ ಶರೀರಮಧ್ಯದಲ್ಲಿ ಧರಿಸಿರುವನು ಹಿರಣ್ಯಗರ್ಭನೆನಿಸುವನು.

**ಗರ್ಭೋ ಗೃಭೇರ್ಗೃಣಾತ್ಯರ್ಥೇ, ಗಿರತ್ಯನರ್ಥಾನಿತಿ ವಾ**-ಗರ್ಭಶಬ್ದವು ಸ್ತುತಿಸು, ಪ್ರಶಂಸಿಸು ಎಂಬರ್ಥ ವುಳ್ಳ **ಗೃಭ್** ಧಾತುವಿನಿಂದ ನಿಷ್ಪನ್ನವಾಗಿದೆ. ಇದನ್ನು ಸರ್ವರೂ ಪ್ರಶಂಸಿಸುವರು ಎಂದರ್ಥವು. ಅಥವಾ ನಾಶ ಮಾಡು ಎಂಬರ್ಥವುಳ್ಳ ಗಿರತಿ ಧಾತುವಿನಿಂದಲೂ ನಿಷ್ಪನ್ನವಾಗಬಹುದು. **ಗಿರತ್ಯನರ್ಥಾನ್**—ಸಮಸ್ತ ಅನರ್ಥ ಗಳನ್ನು (ಉಪಯೋಗವಿಲ್ಲದ ವಸ್ತುಗಳನ್ನು)ನಾಶಮಾಡುವುದರಿಂದ ಇದಕ್ಕೆ ಗರ್ಭವೆಂದು ಹೆಸರು ಎಂದು ಗರ್ಭ ಶಬ್ದಕ್ಕೆ ಎರಡುವಿಧ ಅರ್ಥಗಳನ್ನು ಹೇಳಿರುವರು.

**ಯದಾ ಹಿ ಸ್ತ್ರೀ ಗುಣಾನ್ ಗೃಹ್ಣಾತಿ ಗುಣಾಶ್ಚಾಸ್ಯಾ ಗೃಹ್ಯಂತೇಽಥ ಗರ್ಭೋ ಭವತಿ**—ಗರ್ಭವು ಹೇಗೆ ಉಂಟಾಗುವುದು ಎಂಬುದನ್ನು ಇಲ್ಲಿ ವಿವರಿಸಲಾಗಿದೆ ಸ್ತ್ರೀಯು ಸಂಭೋಗ ಕಾಲದಲ್ಲಿ ಪುರುಷನ ಶುಕ್ರಾವಸ್ಥೆ ಯಲ್ಲಿರುವ (ವೀರ್ಯದಲ್ಲಿರುವ) ಗುಣಗಳನ್ನು ತನ್ನ ಯೋನಿಯ ಮೂಲಕ ಸ್ವೀಕರಿಸುತ್ತಾಳೆ. ಮತ್ತು ಎಲಬು, ಸ್ನಾಯು(ನರ)ಮಜ್ಜ ಮೊದಲಾದ ಸ್ತ್ರೀ ಅವಯವಗಳ ರಕ್ತಾವಸ್ಥೆಯಲ್ಲಿರುವ ಗುಣಗಳು ಪುರುಷನ ವೀರ್ಯದಿಂದ ಹೀರ ಲ್ಪಡುತ್ತವೆ. ಆದ್ದರಿಂದ ಪುರುಷನ ವೀರ್ಯದಲ್ಲಿರುವ ಗುಣಗಳೂ ಸ್ತ್ರೀಯ ಅವಯವಗಳಲ್ಲಿರುವ ರಕ್ತದ ಗುಣಗಳೂ ಎಂದರೆ ರಕ್ತಶುಕ್ರಗಳು (ಸ್ತ್ರೀಯರಕ್ತ, ಪುರುಷನ ವೀರ್ಯ ಇವೆರಡೂ) ಸೇರಿ ಸ್ತ್ರೀಯ ಶರೀರದಲ್ಲಿ ಗರ್ಭವು ಉತ್ಪತ್ತಿ ಯಾಗುವುದು ಅಥವಾ ಸ್ತ್ರೀ ಪುರುಷರು ತಮ್ಮಲ್ಲಿರುವ ಗುಣಗಳಿಂದಆಕರ್ಷಿತರಾಗಿ ಒಬ್ಬರನೊಬ್ಬರು ಪ್ರೀತಿಸುವಾಗ ಇವರಿಬ್ಬರಿಗೂ ಸಂತೋಷವುಂಟಾಗಿ, ಇವರ ಸಂಪರ್ಕದಿಂದ ಗರ್ಭೋತ್ಪತ್ತಿಯಾಗುವುದು ಎಂದು ಇಲ್ಲಿ ವಿವರಿಸ ಲಾಗಿದೆ ಇದನ್ನು ಲಕ್ಷ್ಮಣಸರೂಪ್ ಎಂಬ ವಿದ್ವಾಂಸರು ಈ ರೀತಿ ವಿವರಿಸಿದ್ದಾರೆ.

Durga describes the process of fertilization as follows—
When a woman receives from a man the life-germs, i e, the essence of the marrow of his bones &c in the form of seminal fluid and brings them (i. e. spermatozoa) in contact with her own life-germs, i. e. the essence of her flesh and blood in the form of her germinating fluid, then by the mutual contact of the male and female fluid in the interior of the uterus which is capable of receiving them, fertilization of a woman takes place. Or when a woman admires the qualities of a man, on account of her love for him, and a man a woman, the result of their mutual admiration is passion, and passionate intercourse produces ferlization.

**ಸಮುಭವದಗ್ರೇ ಭೂತಸ್ಯ ಜಾತಃ ಪತಿರೇಕೋ ಬಭೂವ** —ಆ ಹಿರಣ್ಯಗರ್ಭನು ಸೃಷ್ಟಿಗೆ ಪೂರ್ವದಲ್ಲಿ ಒಬ್ಬನೇ ಇದ್ದನು ಮತ್ತು ಅನಂತರ ತನ್ನಿಂದಲೇ ಉತ್ಪನ್ನವಾದ ಸಮಸ್ತ ಜಗತ್ತಿಗೂ ಪ್ರಾಣಿಗಳಿಗೂ ಏಕಮಾತ್ರ ಪ್ರಭುವಾಗಿದ್ದನು.

**ಸ ಧಾರಯತಿ ಪೃಥಿವೀಂ ಚ ದಿವಂ ಚ**—ಆ ಹಿರಣ್ಯಗರ್ಭನು (ಅಥವಾ ಪ್ರಜಾಪತಿಯು) ಈ ಪೃಥಿವಿಯನ್ನೂ ಅಂತರಿಕ್ಷವನ್ನೂ, ಸ್ವರ್ಗವನ್ನೂ ಒಳಗೂ ಹೊರಗೂ ವ್ಯಾಪಿಸಿ ಅವುಗಳಿಗೆ ಬೇಕಾದ ವೃಷ್ಟ್ಯಾದಿಗಳಿಂದ ಅವುಗಳನ್ನು ಪೋಷಿಸುತ್ತಾ ಅವುಗಳನ್ನು ಧರಿಸಿ ರಕ್ಷಿಸುತ್ತಾನೆ. ಇವನ ಶಕ್ತಿಸಾಮರ್ಥ್ಯಗಳಿಂದಲೇ ಜಗದಾದಿಗಳ ಧಾರಣ ಪೋಷಣ ಸಂರಕ್ಷಣೆಗಳು ನಡೆಯುತ್ತವೆ.

**ಕಸ್ಮೈ ದೇವಾಯ ಹವಿಷಾ ವಿಧೇಮ**— ಇಂತಹ ಸರ್ವಗುಣವಿಶಿಷ್ಟನಾದ (ಅಥವಾ ಸುಖಸ್ವರೂಪನಾದ) ಹಿರಣ್ಯಗರ್ಭನಿಗಾಗಿ ಅಥವಾ ಪ್ರಜಾಪತಿಗಾಗಿ ಚರುಪುರೋಡಾಶಾದಿ ಹವಿಸ್ಸುಗಳನ್ನು ಅರ್ಪಿಸೋಣ ಎಂದು ಮುಖ್ಯಾಭಿಪ್ರಾಯವು.

**ವಿಧತಿರ್ದಾನಕರ್ಮಾ**—ವಿಧತಿ ಧಾತುವಿಗೆ ಕೊಡುವುದು, ಅರ್ಪಿಸುವುದು ಎಂದರ್ಥವಿರುವುದು. ಆದ್ದರಿಂದ ಇಲ್ಲಿರುವ ವಿಧೇಮ ಎಂಬ ಶಬ್ದಕ್ಕೆ ಅರ್ಪಿಸೋಣ ಅಥವಾ ಹವಿರಾದಿಗಳಿಂದ ಉಪಚರಿಸಿ ಸೇವಿಸೋಣ ಎಂದರ್ಥವು.

॥ ಸಂಹಿತಾಪಾಠಃ ॥

ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯ ದೇವಾಃ ।
ಯಸ್ಯ ಛಾಯಾಮೃತಂ ಯಸ್ಯ ಮೃತ್ಯುಃ ಕಸ್ಮೈ ದೇವಾಯ ಹವಿಷಾ ವಿಧೇಮ ॥ ೨ ॥

॥ ಪದಪಾಠಃ ॥

ಯಃ । ಆತ್ಮ‌ಽದಾಃ । ಬಲ‌ಽದಾಃ । ಯಸ್ಯ । ವಿಶ್ವೇ । ಉಪ‌ಽಆಸತೇ । ಪ್ರ‌ಽಶಿಷಂ । ಯಸ್ಯ । ದೇವಾಃ । ಯಸ್ಯ । ಛಾಯಾ । ಅಮೃತಂ । ಯಸ್ಯ । ಮೃತ್ಯುಃ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥ ೨ ॥

॥ ಸಾಯಣಭಾಷ್ಯಂ ॥

ಯಃ ಪ್ರಜಾಪತಿರಾತ್ಮದಾ ಆತ್ಮನಾಂ ದಾತಾ । ಆತ್ಮಾನೋ ಹಿ ಸರ್ವೇ ತಸ್ಮಾತ್ಪರಮಾತ್ಮನ ಉತ್ಪದ್ಯಂತೇ । ಯಥಾಗ್ನೇಃ ಸಕಾಶಾದ್ವಿಸ್ಫುಲಿಂಗಾ ಜಾಯಂತೇ ತದ್ವತ್ । ಯದ್ವಾ । ಆತ್ಮನಾಂ ಶೋಧಯಿತಾ ॥ ದೈಪ್ ಶೋಧನೇ । ಆತೋ ಮನಿನ್ನಿತಿ ವಿಚ್ ॥ ಬಲದಾ ಬಲಸ್ಯ ಚ ದಾತಾ ಶೋಧಯಿತಾ ವಾ । ಯಸ್ಯ ಚ ಪ್ರಶಿಷಂ ಪ್ರಕೃಷ್ಟಂ ಶಾಸನಮಾಜ್ಞಾಂ ವಿಶ್ವೇ ಸರ್ವೇ ಪ್ರಾಣಿನ ಉಪಾಸತೇ ಪ್ರಾರ್ಥಯಂತೇ ಸೇವಂತೇ ವಾ ॥ ಶಾಸು ಅನುಶಿಷ್ಟೌ। ಶಾಸ ಇತ್ । ಪಾ. ೬-೪-೩೪ । ಇತ್ಯುಪಧಾಯಾ-ಇತ್ವಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಆಸೇರನುದಾತ್ತೇತ್ವಾ-ಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ತಿಙಿ ಚೋದಾತ್ತವತೀತಿ ಗತಿರನುದಾತ್ತಾ ॥ ತಥಾ ದೇವಾ ಅಪಿ ಯಸ್ಯ ಪ್ರಶಾಸನಮುಪಾಸತೇ । ಅಪಿ ಚಾಮೃತಮಮೃತತ್ವಂ । ಭಾವಪ್ರಧಾನೋ ನಿರ್ದೇಶಃ । ಯದ್ವಾ। ಅಮೃತಂ । ಮರಣಂ ನಾಸ್ತ್ಯಸ್ಮಿನ್ನಿತ್ಯಮೃತಂ ಸುಧಾ ॥ ಬಹುವ್ರೀಹೌ ನಞೋ ಜರಮರಮಿ-ತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ ॥ ತದಪಿ ಯಸ್ಯ ಪ್ರಜಾಪತೇಶ್ಛಾಯಾ ಛಾಯೇವ ವಶೀ ಭವತಿ । ಮೃತ್ಯುರ್ಯಮಶ್ಚ ಪ್ರಾಣಾಪಹಾರೀ ಛಾಯೇವ ಭವತಿ । ತಸ್ಮೈ ಕಸ್ಮೈ ದೇವಾಯೇತ್ಯಾದಿ ಸಮಾನಂ ಪೂರ್ವೇಣ ಹವಿಷಾ ಪುರೋಡಾಶಾತ್ಮನೇತಿ ತು ವಿಶೇಷಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಪ್ರಜಾಪತಿಯು । **ಆತ್ಮದಾಃ**—ಚೈತನ್ಯದಾಯಕನೋ ಅಥವಾ ಸಮಸ್ತ ಪ್ರಾಣಿಗಳಲ್ಲಿಯೂ ತನ್ನ ಅಂಶವಾದ ಆತ್ಮವನ್ನು ಸ್ಥಾಪಿಸಿರುವನೋ । **ಬಲದಾಃ**—ಶಕ್ತಿದಾಯಕನೋ । **ಯಸ್ಯ**—ಯಾವ ಪ್ರಜಾಪತಿಯ । **ಪ್ರಶಿಷಂ**—ಉತ್ಕೃಷ್ಟವಾದ ಆಜ್ಞೆಯನ್ನು । **ವಿಶ್ವೇ**—ಸಮಸ್ತ ಪ್ರಾಣಿಗಳೂ । **ಉಪಾಸತೇ**-ಪಾಲಿಸುವರೋ । **ಯಸ್ಯ**—ಯಾವ ದೇವನ ಶಾಸನವನ್ನು । **ದೇವಾಃ**—ದೇವತೆಗಳು ಪಾಲಿಸುವರೋ । **ಅಮೃತಂ**—ಮರಣರಾಹಿತ್ಯವು । **ಯಸ್ಯ**—ಯಾವ ದೇವನ । **ಛಾಯಾ**—ಛಾಯೆಯಂತೆ ಅನುಸರಿಸುವುದೋ । **ಮೃತ್ಯುಃ**—ಮರಣವೂ ಸಹ । **ಯಸ್ಯ**—ಯಾವ ದೇವನನ್ನು ಛಾಯೆಯಂತೆ ಅನುಸರಿಸಿರುವುದೋ ಅಂತಹ । **ಕಸ್ಮೈ**—ಸುಖಸ್ವರೂಪನಾದ । **ದೇವಾಯ**—ಪ್ರಜಾಪತಿ ಎಂಬ ದೇವನಿಗೆ । **ಹವಿಷಾ**—ಹವಿರಾದಿಗಳಿಂದ । **ವಿಧೇಮ**—ಉಪಚರಿಸೋಣ

॥ ಭಾವಾರ್ಥ ॥

ಯಾವ ಪ್ರಜಾಪತಿಯು ಸಮಸ್ತ ಪ್ರಾಣಿಗಳಿಗೂ ಜಗತ್ತಿಗೂ ಚೈತನ್ಯವನ್ನು ಅಥವಾ ತನ್ನ ಅಂಶವಾದ ಆತ್ಮವನ್ನು ನೀಡುವನೋ ಯಾವನು ಶಕ್ತಿದಾಯಕನೋ ಯಾವ ದೇವನ ಉತ್ಕೃಷ್ಟವಾದ ಶಾಸನವನ್ನು ಸಮಸ್ತ ಪ್ರಾಣಿಗಳೂ, ದೇವತೆಗಳೂ ಸಹ ಪಾಲಿಸುವರೋ ಮರಣವು ಮತ್ತು ಮರಣರಾಹಿತ್ಯವು ಯಾವ ದೇವನನ್ನು ಛಾಯೆ ಯಂತೆ (ನೆರಳಿನಂತೆ) ಯಾವಾಗಲೂ ಎಡಬಿಡದೆ ಅನುಸರಿಸಿರುವುದೋ ಅಂತಹ ಸುಖಸ್ವರೂಪನಾದ ಪ್ರಜಾಪತಿ ಎಂಬ ದೇವನಿಗೆ ಹವಿರಾದಿಗಳನ್ನು ಅರ್ಪಿಸೋಣ

## English Translation

(To him) who is the giver of soul, the giver of strength, whose commands all (beings), even the gods obey, whose shadow is immortality, whose shadow is death,—let us offer worship with an oblation to divine Ka

॥ ಸಂಹಿತಾಪಾಠಃ ॥

ಯಃ ಪ್ರಾಣತೋ ನಿಮಿಷತೋ ಮಹಿತ್ವೈಕ ಇದ್ರಾಜಾ ಜಗತೋ ಬಭೂವ।
ಯ ಈಶೇ ಅಸ್ಯ ದ್ವಿಪದಶ್ಚತುಷ್ಪದಃ ಕಸ್ಮೈ ದೇವಾಯ ಹವಿಷಾ ವಿಧೇಮ ॥ ೩ ॥

॥ ಪದಪಾಠಃ ॥

ಯಃ । ಪ್ರಾಣತಃ । ನಿऽಮಿಷತಃ । ಮಹಿऽತ್ವಾ । ಏಕಃ । ಇತ್ । ರಾಜಾ । ಜಗತಃ । ಬಭೂವ ।
ಯಃ । ಈಶೇ । ಅಸ್ಯ । ದ್ವಿऽಪದಃ । ಚತುःऽಪದಃ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥ ೩ ॥

॥ ಸಾಯಣಭಾಷ್ಯಂ ॥

ಯೋ ಹಿರಣ್ಯಗರ್ಭಃ ಪ್ರಾಣತಃ ಪ್ರಶ್ವಸತಃ ॥ ಅನ ಪ್ರಾಣನೇ ಅದಾದಿಕಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ ॥ ನಿಮಿಷತೋऽಕ್ಷಿಪಕ್ಷ್ಮಚಲನಂ ಕುರ್ವತಃ ॥ ಅತ್ರಾಪಿ ಪೂರ್ವವದ್ವಿಭಕ್ತಿರುದಾತ್ತಾ ॥ ಜಗತೋ ಜಂಗಮಸ್ಯ ಪ್ರಾಣಿಜಾತಸ್ಯ ಮಹಿತ್ವಾ ಮಹತ್ತ್ವೇನ ॥ ಸುಪಾಂ ಸುಲುಗಿತಿ ತೃತೀಯಾಯಾ ಆಕಾರಃ ॥ ಮಾಹಾತ್ಮ್ಯೇನೈಕ ಇದದ್ವಿತೀಯ ಏವ ಸನ್ರಾಜಾ ಬಭೂವ ಈಶ್ವರೋ ಭವತಿ ॥ ಭವತೇರ್ಣಲಿ ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ॥ ಅಸ್ಯ ಪರಿದೃಶ್ಯಮಾನಸ್ಯ ದ್ವಿಪದೋ ಪಾದದ್ವಯಯುಕ್ತಸ್ಯ ಮನುಷ್ಯಾದೇಶ್ಚತುಷ್ಪದೋ ಗವಾಶ್ವಾದೇಶ್ಚ ಯಃ ಪ್ರಜಾಪತಿರೀಶೇ ಈಷ್ಟೇ ॥ ಈಶ ಐಶ್ವರ್ಯೇ ಅದಾದಿಕೋऽನುದಾತ್ತೇತ್ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಅನುದಾ-

**ತ್ತ್ರೇತ್ಯಾ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಅಸ್ಯ। ಊಡಿದಮಿತೀದಮೋ ವಿಭಕ್ತಿರುದಾತ್ತಾ। ದ್ವೌ ಪಾದೌ ಯಸ್ಯ ಸ ದ್ವಿಪಾತ್ । ಸಂಖ್ಯಾಸುಪೂರ್ವಸ್ಯೇತಿ ಪಾದಶಬ್ದಸ್ಯಾಂತ್ಯಲೋಪಃ ಸಮಾಸಾಂತಃ। ಭಸಂಜ್ಞಾಯಾಂ ಪಾದಃ ಪದಿತಿ ಪದ್ಭಾವಃ। ದ್ವಿತ್ರಿಭ್ಯಾಂ ಪಾದ್ದನ್ಮೂರ್ಧಸ್ವಿತ್ಯೇಕಾದೇಶವಿಕೃತಸ್ಯಾನನ್ಯತ್ವಾದು- ತ್ತರಪದಾಂತೋದಾತ್ತತ್ವಂ । ಸ್ವರವರ್ಜಮೇಷೈವ ಚತುಷ್ಪದ ಇತ್ಯತ್ರಾಪಿ ಪ್ರಕ್ರಿಯಾ। ಬಹುವ್ರೀಹೌ ಪ್ರಕೃತ್ಯೇತಿ ಪೂರ್ವಪದಪ್ರಕೃತಿಸ್ವರಃ। ಪೂರ್ವಪದಂ ನ್ರಃ ಸಂಖ್ಯಾಯಾಃ। ಫಿ. ೨-೫। ಇತ್ಯಾದ್ಯುದಾ- ತ್ತತ್ವಂ। ಇದುದುಪಧಸ್ಯ ಚಾಪ್ರತ್ಯಯಸ್ಯೇತಿ ವಿಸರ್ಜನೀಯಸ್ಯ ಷತ್ವಂ॥ ಈದೃಶೋ ಯಃ ಪ್ರಜಾಪತಿ- ಸ್ತಸ್ಮೈ ಕಸ್ಮಾ ಇತ್ಯಾದಿ ಸುಬೋಧಂ ಹವಿಷಾ ಹೃದಯಾದ್ಯಾತ್ಮನೇತ್ಯಯಮತ್ರ ವಿಶೇಷಃ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಹಿರಣ್ಯಗರ್ಭನಾಮಕ ಪ್ರಜಾಪತಿಯು । **ಪ್ರಾಣತಃ**—ಉಸಿರಾಡುತ್ತಿರುವ । **ನಿಮಿಷತಃ**—ಕಣ್ಣು ರೆಪ್ಪೆಗಳನ್ನು ಚಲನಮಾಡುತ್ತಿರುವ (ಎಂದರೆ ಜೀವದಿಂದಿರುವ) । **ಜಗತಃ**—ಜಂಗಮ ರೂಪವಾದ (ಚಲಿಸುವ) ಪ್ರಾಣಿವರ್ಗಕ್ಕೆ । **ಮಹಿತ್ವಾ**—ತನ್ನ ಮಹಿಮೆಯಿಂದ । **ಏಕ ಇತ್**—ಅದ್ವಿತೀಯನಾದ । **ರಾಜಾ**—ಪ್ರಭುವಾಗಿಯೇ । **ಬಭೂವ**—ಇರುವನೋ । **ಯಃ**—ಯಾವ ದೇವನು । **ಅಸ್ಯ**—ನಮ್ಮ ಕಣ್ಣಿಗೆ ಕಾಣುತ್ತಿರುವ । **ದ್ವಿಪದಃ**—ಎರಡು ಪಾದಗಳುಳ್ಳ ಮನುಷ್ಯಾದಿಗಳಿಗೂ । **ಚತುಷ್ಪದಃ**—ನಾಲ್ಕು ಪಾದಗಳುಳ್ಳ ಗವಾದಿ ಪಶುಗಳಿಗೂ। **ಈಶೇ**—ಸ್ವಾಮಿಯಾಗಿರುವನೋ ಅಂತಹ । **ಕಸ್ಮೈ ದೇವಾಯ**—ಸುಖಸ್ವರೂಪನಾದ ಪ್ರಜಾಪತಿಯೆಂಬ ದೇವನಿಗೆ। **ಹವಿಷಾ**—ಹವಿರಾದಿ ದ್ರವ್ಯಗಳಿಂದ । **ವಿಧೇಮ**—ಉಪಚರಿಸೋಣ ।

॥ ಭಾವಾರ್ಥ ॥

ಯಾವ ಪ್ರಜಾಪತಿಯು ಉಸಿರಾಡುತ್ತಿರುವ ಕಣ್ಣುರೆಪ್ಪೆಗಳ ಚಲನಮಾಡುತ್ತಿರುವ ಎಂದರೆ ಜೀವದಿಂದಿರುವ ಸಮಸ್ತ ಪ್ರಾಣಿವರ್ಗಕ್ಕೆ ತನ್ನ ಮಹಿಮೆಯಿಂದ ಅದ್ವಿತೀಯನಾದ ಪ್ರಭುವಾಗಿರುವನೋ, ಯಾವ ದೇವನು ನಮ್ಮ ಕಣ್ಣಿಗೆ ಕಾಣುತ್ತಿರುವ ಎರಡು ಪಾದಗಳುಳ್ಳ ಮನುಷ್ಯಾದಿಗಳಿಗೂ, ನಾಲ್ಕು ಪಾದಗಳುಳ್ಳ ಗವಾದಿಪಶುಗಳಿಗೂ ಸ್ವಾಮಿಯಾಗಿರುವನೋ ಅಂತಹ ಸುಖಸ್ವರೂಪನಾದ ಪ್ರಜಾಪತಿಯೆಂಬ ದೇವನಿಗೆ ಹವಿರಾದಿ ದ್ರವ್ಯಗಳನ್ನು ಅರ್ಪಿಸಿ ಉಪಚರಿಸೋಣ.

## English Translation.

(To him) who, by his greatness has verily become the sole king of the breathing and seeing world, who rules over this aggregate of two-footed and four-footed beings,—let us offer worship with an oblation to the divine Ka.

॥ ಸಂಹಿತಾಪಾಠಃ ॥

ಯಸ್ಯೇಮೇ ಹಿಮವಂತೋ ಮಹಿತ್ವಾ ಯಸ್ಯ ಸಮುದ್ರಂ ರಸಯಾ ಸಹಾಹುಃ ।

ಯಸ್ಯೇಮಾಃ ಪ್ರದಿಶೋ ಯಸ್ಯ ಬಾಹೂ ಕಸ್ಮೈ ದೇವಾಯ ಹವಿಷಾ ವಿಧೇಮ ॥ ೪ ॥

॥ ಪದಪಾಠಃ ॥

ಯಸ್ಯ । ಇಮೇ । ಹಿಮSವಂತಃ । ಮಹಿSತ್ವಾ । ಯಸ್ಯ । ಸಮುದ್ರಂ । ರಸಯಾ । ಸಹ । ಆಹುಃ ।

ಯಸ್ಯ। ಇಮಾಃ । ಪ್ರSದಿಶಃ । ಯಸ್ಯ। ಬಾಹೂ ಇತಿ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥ ೪ ॥

॥ ಸಾಯಣಭಾಷ್ಯಂ ॥

ಹಿಮಾ ಅಸ್ಮಿನ್ಸಂತೀತಿ ಹಿಮವಾನ್ । ತೇನ ಬಹುವಚನಾಂತೇನ ಸರ್ವೇ ಪರ್ವತಾ ಲಕ್ಷ್ಯಂತೇ । ಯಥಾ ಛತ್ರಿಣೋ ಗಚ್ಛಂತೀತಿ । ಹಿಮವಂತೋ ಹಿಮವದುಪಲಕ್ಷಿತಾ ಇಮೇ ದೃಶ್ಯಮಾನಾಃ ಸರ್ವೇ ಪರ್ವತಾ ಯಸ್ಯ ಪ್ರಜಾಪತೇರ್ಮಹಿತ್ವಾ ಮಹತ್ತ್ವಂ ಮಾಹಾತ್ಮ್ಯಮೈಶ್ವರ್ಯಮಿತ್ಯಾಹುಃ । ತೇನ ಸೃಷ್ಟತ್ವಾತ್ತದ್ರೂಪೇಣಾವಸ್ಥಾನಾದ್ವಾ । ತಥಾ ರಸಯಾ । ರಸೋ ಜಲಂ । ತದ್ವತೀ ರಸಾ ನದೀ ॥ ಅರ್ಶಆದಿತ್ವಾದಚ್ ॥ ಜಾತಾವೇಕವಚನಂ । ರಸಾಭಿರ್ನದೀಭಿಃ ಸಹ ಸಮುದ್ರಂ । ಪೂರ್ವವದೇಕವಚನಂ । ಸರ್ವಾನ್ಸಮುದ್ರಾನ್ಯಸ್ಯ ಮಹಾಭಾಗ್ಯಮಿತ್ಯಾಹುಃ ಕಥಯಂತಿ ಸೃಷ್ಟ್ಯಭಿಜ್ಞಾಃ । ಯಸ್ಯ ಚೇಮಾಃ ಪ್ರದಿಶಃ ಪ್ರಾಚ್ಯಾರಂಭಾ ಆಗ್ನೇಯ್ಯಾದ್ಯಾಃ ಕೋಣದಿಶ ಈಶಾನಾಂತಾ ವಾ । ತಥಾ ಬಾಹೂ । ವಚನವ್ಯತ್ಯಯಃ । ಬಾಹವೋ ಭುಜಾಃ । ಭುಜವತ್ಪ್ರಾಧಾನ್ಯಯುಕ್ತಾಃ ಪ್ರದಿಶಶ್ಚ ಯಸ್ಯ ಸ್ವಭೂತಾಃ । ತಸ್ಮೈ ಕಸ್ಮಾ ಇತ್ಯಾದಿ ಸಮಾನಂ ಪೂರ್ವೇಣ ॥

॥ ಪ್ರತಿಪದಾರ್ಥ ॥

**ಹಿಮವಂತಃ**—ಹಿಮಾಚ್ಛಾದಿತವಾದ ಹಿಮವತ್ಪರ್ವತವೇ ಮೊದಲಾದ । **ಇಮೇ**—ಸಮಸ್ತಪರ್ವತಗಳೂ । **ಯಸ್ಯ**—ಯಾವ ದೇವನ । **ಮಹಿತ್ವಾ**—ಮಹಿಮೆಯೆಂದು ಅಥವಾ ಐಶ್ವರ್ಯವೆಂದು । **ಆಹುಃ**—ಹೇಳುವರೋ । **ರಸಯಾ**—ನದಿಗಳಿಂದ । **ಸಹ**—ಸಹಿತವಾದ । **ಸಮುದ್ರಂ**—ಸಮಸ್ತ ಸಮುದ್ರಗಳನ್ನು । **ಯಸ್ಯ**—ಯಾವ ದೇವನ ವಿಭೂತಿ ವಿಶೇಷವೆಂದು । **ಆಹುಃ**—(ಸೃಷ್ಟಿ ಕ್ರಮವನ್ನು ತಿಳಿದವರು) ಹೇಳುವರೋ । **ಇಮಾಃ**—ಈ ಪ್ರಾಚ್ಯಾದಿ ದಿಕ್ಕುಗಳು । **ಯಸ್ಯ**—ಯಾವ ದೇವನ । **ಬಾಹೂ**—ಬಾಹುಭೂತಗಳಾಗಿರುವವೋ । **ಪ್ರದಿಶಃ**—ನಾಲ್ಕು ವಿದಿಕ್ಕುಗಳೂ ಸಹ । **ಯಸ್ಯ**—ಯಾವದೇವನ ಬಾಹುಗಳಂತಿರುವವೋ ಅಂತಹ । **ಕಸ್ಮೈ**—ಸುಖಸ್ವರೂಪನಾದ । **ದೇವಾಯ**—ಪ್ರಜಾಪತಿಗೆ । **ಹವಿಷಾ**—ಹವಿರಾದಿದ್ರವ್ಯಗಳನ್ನು । **ವಿಧೇಮ**—ಅರ್ಪಿಸೋಣ

॥ ಭಾವಾರ್ಥ ॥

ಹಿಮಾಚ್ಛಾದಿತವಾದ (ಎಂದರೆ ಬಹಳ ಎತ್ತರವಾದ) ಹಿಮವತ್ಪರ್ವತವೇ ಮೊದಲಾದ ಸಮಸ್ತ ಪರ್ವತಗಳೂ ಯಾವ ದೇವನ ಐಶ್ವರ್ಯವೆಂದು ಹೇಳುವರೋ ನದಿಗಳಿಂದ ಸಹಿತವಾದ ಸಮಸ್ತ ಸಮುದ್ರಗಳನ್ನು ಯಾವ ದೇವನ

ಮಹಾಭಾಗ್ಯವೆಂದು ಹೇಳುವರೋ ಪೂರ್ವಾದಿದಿಕ್ಕುಗಳೂ, ಆಗ್ನೇಯಾದಿವಿದಿಕ್ಕುಗಳೂ ಯಾವ ದೇವನ ಬಾಹುಗಳೆಂದು ಹೇಳುವರೋ ಅಂತಹ ಸುಖಸ್ವರೂಪನಾದ ಪ್ರಜಾಪತಿಗೆ ಹವಿರಾದಿಗಳನ್ನು ಅರ್ಪಿಸೋಣ.

## English Translation.

Through whose greatness these snow-clad (mountains exist), whose property men call the ocean with the rivers, whose are these quarters of space, whose are the two arms,—let us offer worship with an oblation to the divine Ka.

|| ಸಂಹಿತಾಪಾಠಃ ||

ಯೇನ ದ್ಯೌರುಗ್ರಾ ಪೃಥಿವೀ ಚ ದೃಳ್ಹಾ ಯೇನ ಸ್ವಃ ಸ್ತಭಿತಂ ಯೇನ ನಾಕಃ।
ಯೋ ಅಂತರಿಕ್ಷೇ ರಜಸೋ ವಿಮಾನಃ ಕಸ್ಮೈ ದೇವಾಯ ಹವಿಷಾ ವಿಧೇಮ ॥

|| ಪದಪಾಠಃ ||

ಯೇನ । ದ್ಯೌಃ । ಉಗ್ರಾ । ಪೃಥಿವೀ । ಚ । ದೃಳ್ಹಾ । ಯೇನ । ಸ್ವರಿತಿ ಸ್ವಃ । ಸ್ತಭಿತಂ । ಯೇನ । ನಾಕಃ ।
ಯಃ । ಅಂತರಿಕ್ಷೇ । ರಜಸಃ । ವಿऽಮಾನಃ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥ ೫ ॥

|| ಸಾಯಣಭಾಷ್ಯಂ ||

ಯೇನ ಪ್ರಜಾಪತಿನಾ ದ್ಯೌರಂತರಿಕ್ಷಮುಗ್ರೋದ್ಗೂರ್ಣಂ ವಿಶೇಷಾಗಹನರೂಪಂ ವಾ । ಪೃಥಿವೀ ಭೂಮಿಶ್ಚ ದೃಳ್ಹಾ ಯೇನ ಸ್ಥಿರೀಕೃತಾ । ಸ್ವಃ ಸ್ವರ್ಗಶ್ಚ ಯೇನ ಸ್ತಭಿತಂ ಸ್ತಬ್ಧಂ ಕೃತಂ । ಯಥಾಧೋ ನ ಪತತಿ ತಥೋಪರ್ಯವಸ್ಥಾಪಿತಮಿತ್ಯರ್ಥಃ ॥ ಗ್ರಸಿತಸ್ಕಭಿತಸ್ತಭಿತೇತಿ ನಿಪಾತ್ಯತೇ ॥ ತಥಾ ನಾಕ ಆದಿತ್ಯಶ್ಚ ಯೇನಾಂತರಿಕ್ಷೇ ಸ್ತಭಿತಃ । ಯಶ್ಚಾಂತರಿಕ್ಷೇ ರಜಸ ಉದಕಸ್ಯ ವಿಮಾನೋ ನಿರ್ಮಾತಾ । ತಸ್ಮೈ ಕಸ್ಮಾ ಇತ್ಯಾದಿ ಗತಂ ॥

|| ಪ್ರತಿಪದಾರ್ಥ ||

**ಯೇನ**—ಯಾವ ಪ್ರಜಾಪತಿಯಿಂದ । **ದ್ಯೌಃ**—ಅಂತರಿಕ್ಷವು । **ಉಗ್ರಾ**—ವಿಶೇಷಗಹನರೂಪವಾಗಿ ಮಾಡಲ್ಪಟ್ಟಿತೋ । **ಪೃಥಿವೀ ಚ**—ಭೂಮಿಯು । **ದೃಳ್ಹಾ**—ದೃಢವಾಗಿ ಸ್ಥಾಪಿತವಾಯಿತೋ । **ಯೇನ**—ಯಾವ ದೇವನಿಂದ । **ಸ್ವಃ**—ಸ್ವರ್ಗಲೋಕವೂ ಸಹ । **ಸ್ತಭಿತಂ**—ಕೆಳಗೆ ಬೀಳದಂತೆ ಸ್ಥಿರವಾಗಿ ಸ್ಥಾಪಿತವಾಯಿತೋ । **ಯೇನ**—ಯಾವ ದೇವನಿಂದ । **ನಾಕಃ**—ಆದಿತ್ಯನೂ ಸಹ ಅಂತರಿಕ್ಷದಲ್ಲಿ ಬೀಳದಂತೆ ಸ್ಥಾಪಿಸಲ್ಪಟ್ಟನೋ । **ಯಃ**—ಯಾವದೇವನು । **ಅಂತರಿಕ್ಷೇ**—ಅಂತರಿಕ್ಷದಲ್ಲಿ । **ರಜಸಃ**—ಉದಕದ(ಮೇಘದ) ।

**ವಿಮಾನಃ**— ನಿರ್ಮಾತೃವಾಗಿರುವನೋ ಅಂತಹ । **ಕಸ್ಮೈ**—ಸುಖಸ್ವರೂಪನಾದ । **ದೇವಾಯ**— ಪ್ರಜಾಪತಿ ದೇವನಿಗೆ । **ಹವಿಷಾ**—ಹವಿರಾದಿದ್ರವ್ಯಗಳನ್ನು । **ವಿಧೇಮ**—ಅರ್ಪಿಸೋಣ

|| ಭಾವಾರ್ಥ ||

ಯಾವ ಪ್ರಜಾಪತಿಯಿಂದ ಅಂತರಿಕ್ಷವು ವಿಶೇಷಗಹನವಾಗಿ ಮಾಡಲ್ಪಟ್ಟಿತೋ ಭೂಮಿಯು ಅಲುಗದಂತೆ ದೃಢವಾಗಿ ಸ್ಥಾಪಿಸಲ್ಪಟ್ಟಿತೋ, ಸ್ವರ್ಗಲೋಕವು ಕೆಳಕ್ಕೆ ಬೀಳದಂತೆ ಅಂತರಿಕ್ಷದಲ್ಲಿ ತಡೆದು ನಿಲ್ಲಿಸಲ್ಪಟ್ಟಿತೋ ಆದಿತ್ಯನು ಸ್ಥಾಪಿತನಾದನೋ ಯಾವ ದೇವನು ಆಕಾಶದಲ್ಲಿ ಉದಕ ಪೂರಿತವಾದ ಮೇಘಗಳ ನಿರ್ಮಾತೃವಾಗಿರುವನೋ ಅಂತಹ ಸುಖಸ್ವರೂಪನಾದ ಪ್ರಜಾಪತಿಗೆ ಹವಿರಾದಿಗಳನ್ನು ಅರ್ಪಿಸಿ ಉಪಚರಿಸೋಣ

## English Translation

By whom the sky was made profound and the earth solid, by whom heaven and the solar sphere were fixed, who was the measure of the water in firmament,—let us offer worship with an oblation to the divine Ka.

॥ ಸಂಹಿತಾಪಾಠಃ ॥

ಯಂ ಕ್ರಂದಸೀ ಅವಸಾ ತಸ್ತಭಾನೇ ಅಭ್ಯೈಕ್ಷೇತಾಂ ಮನಸಾ ರೇಜಮಾನೇ।
ಯತ್ರಾಧಿ ಸೂರ ಉದಿತೋ ವಿಭಾತಿ ಕಸ್ಮೈ ದೇವಾಯ ಹವಿಷಾ ವಿಧೇಮ ॥

|| ಪದಪಾಠಃ ||

ಯಂ । ಕ್ರಂದಸೀ ಇತಿ । ಅವಸಾ । ತಸ್ತಭಾನೇ ಇತಿ । ಅಭಿ । ಐಕ್ಷೇತಾಂ । ಮನಸಾ । ರೇಜಮಾನೇ ಇತಿ ।
ಯತ್ರ । ಅಧಿ । ಸೂರಃ । ಉತ್ಽಇತಃ । ವಿಽಭಾತಿ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥ ೬ ॥

|| ಸಾಯಣಭಾಷ್ಯಂ ||

ಕ್ರಂದಿತವಾನ್ರೋದಿತವಾನನಯೋಃ ಪ್ರಜಾಪತಿರಿತಿ ಕ್ರಂದಸೀ ದ್ಯಾವಾಪೃಥಿವ್ಯೌ । ಶ್ರೂಯತೇ ಹಿ । ಯದರೋದೀತ್ತದನಯೋ ರೋದಸ್ತ್ವಂ । ತೈ. ಬ್ರಾ. ೨-೨-೯-೪ । ಇತಿ । ತೇ ಅವಸಾ ರಕ್ಷಣೇನ ಹೇತುನಾ ಲೋಕಸ್ಯ ರಕ್ಷಣಾರ್ಥಂ ತಸ್ತಭಾನೇ ಪ್ರಜಾಪತಿನಾ ಸೃಷ್ಟೇ ಲಬ್ಧಸ್ಥೈರ್ಯೇ ಸತ್ಯೌ ಯಂ ಪ್ರಜಾಪತಿಂ ಮನಸಾ ಬುದ್ಧ್ಯಾಭ್ಯೈಕ್ಷೇತಾಂ ಆವಯೋರ್ಮಹತ್ತ್ವಮನೇನೇತ್ಯಭ್ಯಪಶ್ಯೇತಾಂ ॥ ಈಕ್ಷ ದರ್ಶನೇ । ಲಙ್ಯಡಾದಿತ್ವಾದಾದ್ಯುದಾತ್ತತ್ವಂ ॥ ಕೀದೃಶ್ಯೌ ದ್ಯಾವಾಪೃಥಿವ್ಯೌ । ರೇಜಮಾನೇ ರಾಜಮಾನೇ ದೀಪ್ಯಮಾನೇ ॥ ಅಕಾರಸ್ಯ ವ್ಯತ್ಯಯೇನೈತ್ವಂ ॥ ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತು-

**ಸ್ವರಃ । ಯದ್ವಾ । ಲಿಟಃ ಕಾನಚ್ । ಛಣಾಂ ಚ ಸಪ್ತಾನಾಂ । ಪಾ. ೬-೪-೧೨೫ । ಇತ್ಯೇತ್ವಾಭ್ಯಾಸಲೋಪೌ। ಛಂದಸ್ಯುಭಯಥೇತಿ ಸಾರ್ವಧಾತುಕತ್ವಾಚ್ಛಪ್ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ಯತ್ರಾಧಿ ಯಸ್ಮಿನ್ನಾಧಾರಭೂತೇ ಪ್ರಜಾಪತೌ ಸೂರಃ ಸೂರ್ಯಃ ಉದಿತ ಉದಯಂ ಪ್ರಾಪ್ತಃ ಸನ್ ವಿಭಾತಿ ಪ್ರಕಾಶತೇ ॥ ಉತ್ಪೂರ್ವಾದೇತೇಃ ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ತಸ್ಮೈಕಸ್ಮಾ ಇತ್ಯಾದಿ ಸುಜ್ಞಾನಂ ॥**

॥ ಪ್ರತಿಪದಾರ್ಥ ॥

**ರೇಜಮಾನೇ**—ಪ್ರಕಾಶಮಾನವಾದವೂ । **ಅವಸಾ**—ಲೋಕರಕ್ಷಣಾರ್ಥವಾಗಿ । **ತಸ್ತಭಾನೇ**—ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟು ಸ್ಥಾಪಿತವಾದುವೂ ಆದ । **ಕ್ರಂದಸೀ**—ದ್ಯಾವಾಪೃಥಿವಿಗಳು । **ಯಂ**—ಯಾವ ಪ್ರಜಾಪತಿಯನ್ನು । **ಮನಸಾ**— ಕೃತಜ್ಞತೆಯಿಂದ ಯುಕ್ತವಾದ ಮನಸ್ಸಿನಿಂದ । **ಅಭಿ ಐಕ್ಷೇತಾಂ**—ನೋಡಿದವೋ । **ಯತ್ರ ಅಧಿ**—ಸಮಸ್ತಕ್ಕೂ ಆಧಾರಭೂತನಾದ ಯಾವ ಪ್ರಜಾಪತಿಯಲ್ಲಿ (ಪ್ರಜಾಪತಿಯ ಮಹಿಮೆಯಿಂದ) **ಸೂರಃ**—ಸೂರ್ಯನು । **ಉದಿತಃ**—ಉದಯಿಸಿದವನಾಗಿ । **ವಿಭಾತಿ**— ಪ್ರಕಾಶಿಸುವನೋ ಅಂತಹ । **ಕಸ್ಮೈ**—ಸುಖಸ್ವರೂಪನಾದ । **ದೇವಾಯ**— ಪ್ರಜಾಪತಿಗೆ । **ಹವಿಷಾ**—ಹವಿರಾದಿದ್ರವ್ಯಗಳಿಂದ । **ವಿಧೇಮ**—ಅರ್ಪಿಸಿ ಪೂಜಿಸೋಣ ॥

॥ ಭಾವಾರ್ಥ ॥

ಪ್ರಕಾಶಮಾನವಾದವೂ, ಲೋಕರಕ್ಷಣಾರ್ಥವಾಗಿ ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟು ಸ್ಥಾಪಿತವಾದವೂ ಆದ ದ್ಯಾವಾಪೃಥಿವಿಗಳು ಯಾವ ಪ್ರಜಾಪತಿಯನ್ನು ಕೃತಜ್ಞತಾಬುದ್ಧಿಯಿಂದ ನೋಡಿದವೋ ಸಮಸ್ತ ವಿಶ್ವಕ್ಕೂ ಆಧಾರಭೂತನಾದ ಯಾವ ಪ್ರಜಾಪತಿಯ ಮಹಿಮೆಯಿಂದ ಸೂರ್ಯನು ಉದಯಿಸಿ ಪ್ರಕಾಶಿಸುವನೋ ಅಂತಹ ಸುಖಸ್ವರೂಪನಾದ ಪ್ರಜಾಪತಿಗೆ ಹವಿರಾದಿಗಳನ್ನು ಅರ್ಪಿಸೋಣ.

## English Translation.

Whom heaven and earth established by his protection, and, shining brightly, regarded with their mind, in whom the risen sun shines forth,—let us offer worship with an oblation to the divine Ka.

॥ ಸಂಹಿತಾಪಾಠಃ ॥

ಆಪೋ ಹ ಯದ್ಬೃಹತೀರ್ವಿಶ್ವಮಾಯನ್ಗರ್ಭಂ ದಧಾನಾ ಜನಯಂತೀ-
ರಗ್ನಿಂ ।
ತತೋ ದೇವಾನಾಂ ಸಮವರ್ತತಾಸುರೇಕಃ ಕಸ್ಮೈ ದೇವಾಯ ಹವಿಷಾ
ವಿಧೇಮ ॥ ೭ ॥

॥ ಪದಪಾಠಃ ॥

ಆಪಃ । ಹ । ಯತ್ । ಬೃಹತೀಃ । ವಿಶ್ವಂ । ಆಯನ್ । ಗರ್ಭಂ । ದಧಾನಾಃ । ಜನಯಂತೀಃ । ಅಗ್ನಿಂ ।

ತತಃ । ದೇವಾನಾಂ । ಸಂ । ಅವರ್ತತ । ಅಸುಃ । ಏಕಃ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

॥ ಸಾಯಣಭಾಷ್ಯಂ ॥

ಬೃಹತೀರ್ಬೃಹತ್ಯೋ ಮಹತ್ಯಃ ॥ ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘಃ । ಬೃಹನ್ಮಹತೋರುಪಸಂಖ್ಯಾನಮಿತಿ ಙೀಪ ಉದಾತ್ತತ್ವಂ ॥ ಅಗ್ನಿಂ । ಉಪಲಕ್ಷಣಮೇತತ್ । ಅಗ್ನ್ಯುಪಲಕ್ಷಿತಂ ಸರ್ವಂ ವಿಯದಾದಿಭೂತಜಾತಂ । ಜನಯಂತೀರ್ಜನಯಂತ್ಯಃ ತದರ್ಥಂ ಗರ್ಭಂ ಹಿರಣ್ಮಯಾಂಡಸ್ಯ ಗರ್ಭಭೂತಂ ಪ್ರಜಾಪತಿಂ ದಧಾನಾ ಧಾರಯಂತ್ಯ ಆಪೋ ಹಾಪ ಏವ । ವಿಶ್ವಮಾಯನ್ ಸರ್ವಂ ಜಗದ್ವ್ಯಾಪ್ನುವನ್ ಯದ್ಯಸ್ಮಾತ್ ತತಸ್ತಸ್ಮಾದ್ಧೇತೋರ್ದೇವಾನಾಂ ದೇವಾದೀನಾಂ ಸರ್ವೇಷಾಂ ಪ್ರಾಣಿನಾಮಸುಃ ಪ್ರಾಣಭೂತ ಏಕಃ ಪ್ರಜಾಪತಿಃ ಸಮವರ್ತತ । ಸಮಜಾಯತ । ಯದ್ವಾ । ಯದ್ಯಂ ಗರ್ಭಂ ದಧಾನಾ ಆಪೋ ವಿಶ್ವಾತ್ಮನಾವಸ್ಥಿತಾಃ ತತೋ ಗರ್ಭಭೂತಾತ್ಪ್ರಜಾಪತೇರ್ದೇವಾದೀನಾಂ ಪ್ರಾಣಾತ್ಮಕೋ ವಾಯುರಜಾಯತ । ಅಥವಾ । ಯತ್ ॥ ಲಿಂಗವಚನಯೋರ್ವ್ಯತ್ಯಯಃ ॥ ಉಕ್ತಲಕ್ಷಣಾ ಯಾ ಆಪೋ ವಿಶ್ವಮಾವೃತ್ಯ ಸ್ಥಿತಾಃ ತತಸ್ತಾಭ್ಯೋಽದ್ಭ್ಯಃ ಸಕಾಶಾದೇಕೋಽದ್ವಿತೀಯೋಽಸುಃ ಪ್ರಾಣಾತ್ಮಕಃ ಪ್ರಜಾಪತಿಃ ಸಮವರ್ತತ । ನಿಶ್ಚಕ್ರಾಮ । ತಸ್ಮೈ ಕಸ್ಮಾ ಇತ್ಯಾದಿ ಗತಂ ॥

॥ ಪ್ರತಿಪದಾರ್ಥ ॥

**ಬೃಹತೀಃ**— ವಿಸ್ತಾರವಾಗಿ(ಬಹಳವಾಗಿ) ವ್ಯಾಪಿಸಿರುವವೂ । **ಅಗ್ನಿಂ**— ಅಗ್ನಿಯೇ ಮೊದಲಾದ ಪಂಚ ಭೂತಗಳನ್ನು । **ಜನಯಂತೀಃ**— ಉತ್ಪನ್ನ ಮಾಡುವವೂ (ಮಾಡುವುದಕ್ಕಾಗಿಯೇ) । **ಗರ್ಭಂ**— ಹಿರಣ್ಮಯ ರೂಪವಾದ ಮತ್ತು ಪ್ರಜಾಪತಿ ಯನ್ನೊಳಗೊಂಡ ಗರ್ಭವನ್ನು । **ದಧಾನಾಃ**— ಧರಿಸಿದ್ದ । **ಯತ್**— ಯಾವ । **ಆಪಃ**— ಉದಕಗಳು । **ವಿಶ್ವಂ ಹ**— ಸಮಸ್ತವಿಶ್ವವನ್ನು । **ಆಯನ್**— ವ್ಯಾಪಿಸಿದ್ದವೋ । **ತತಃ**— ಅಂತಹ ಉದಕದಿಂದ । **ದೇವಾನಾಂ**— ದೇವತೆಗಳಿಗೆ । **ಅಸುಃ ಏಕಃ**— ಪ್ರಾಣ ಭೂತನಾದ ಪ್ರಜಾಪತಿಯು । **ಸಂ ಅವರ್ತತ**— ಉತ್ಪನ್ನನಾದನು । **ಕಸ್ಮೈ**— ಸುಖಸ್ವರೂಪನಾದ ಅಂತಹ । **ದೇವಾಯ**— ಪ್ರಜಾಪತಿ ಯನ್ನುದ್ದೇಶಿಸಿ । **ಹವಿಷಾ**— ಹವಿರಾದಿದ್ರವ್ಯಗಳನ್ನು । **ವಿಧೇಮ**— ಅರ್ಪಿಸೋಣ.

॥ ಭಾವಾರ್ಥ ॥

ಬಹಳವಾಗಿ ಎಲ್ಲೆಲ್ಲೂ ವ್ಯಾಪಿಸಿರುವವೂ ಅಗ್ನಿಯೇ ಮೊದಲಾದ ಪಂಚಮಹಾಭೂತಗಳನ್ನು ಉತ್ಪತ್ತಿ ಮಾಡುವುದಕ್ಕಾಗಿಯೇ ಹಿರಣ್ಮಯವಾದ ಗರ್ಭವನ್ನು ಧರಿಸಿರುವವೂ ಆದ ಯಾವ ಉದಕಗಳು ಸಮಸ್ತ ವಿಶ್ವವನ್ನೆಲ್ಲಾ ಆವರಿಸಿದ್ದವೋ ಅಂತಹ ಉದಕಗಳಿಂದ ಸಮಸ್ತ ದೇವತೆಗಳಿಗೂ ಪ್ರಾಣಭೂತನಾದ ಪ್ರಜಾಪತಿಯು ಉತ್ಪನ್ನನಾದನು. ಅಂತಹ ಸುಖಸ್ವರೂಪನಾದ ಪ್ರಜಾಪತಿಯನ್ನುದ್ದೇಶಿಸಿ ಹವಿರಾದಿ ದ್ರವ್ಯಗಳನ್ನು ಅರ್ಪಿಸೋಣ.

## English Translation.

When the vast waters overspread the universe containiug the germ and giving birth to Agni, then was produced the one breath of the gods,—let us offer worship with an oblation to the devine Ka.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಸೃಷ್ಟಿಗೆ ಪೂರ್ವದಲ್ಲಿ ಸರ್ವವನ್ನೂ ವ್ಯಾಪಿಸಿದ್ದ ಜಲಮಾತ ವಿದ್ದಿತೆಂದೂ ಆ ಜಲದಿಂದಲೇ ಸಮಸ್ತ ಸೃಷ್ಟಿಯೂ ಮುಂದುವರೆಯಿತೆಂಬ ಅಂಶವು ವಿವೃತವಾಗಿದೆ ಇದಲ್ಲದೆ ಸೃಷ್ಟಿಗೆ ಪೂರ್ವದಲ್ಲಿ ಸರ್ವವೂ ಜಲಮಯವಾಗಿತ್ತೆಂದೂ ಆ ಜಲದಿಂದಲೇ ಜಗದಾದಿ ಸೃಷ್ಟಿಯು ನಡೆಯಿತೆಂದೂ ತೈತ್ತಿರೀಯ ಸಂಹಿತೆಯಲ್ಲಿ ಸೃಷ್ಟಿವಿಚಾರವಾದ ಈ ವಿವರಣೆ ಇದೆ (ಭಾಗ 29 ಪುಟ 247-252 ನೋಡಿ)

॥ ಸಂಹಿತಾಪಾಠಃ ॥

ಯಚ್ಚಿದಾಪೋ ಮಹಿನಾ ಪರ್ಯಪಶ್ಯದ್ದಕ್ಷಂ ದಧಾನಾ ಜನಯಂತೀರ್ಯಜ್ಞಂ ।
ಯೋ ದೇವೇಷ್ವಧಿ ದೇವ ಏಕ ಆಸೀತ್ಕಸ್ಮೈ ದೇವಾಯ ಹವಿಷಾ ವಿಧೇಮ॥

॥ ಪದಪಾಠಃ ॥

ಯಃ । ಚಿತ್ । ಆಪಃ । ಮಹಿನಾ । ಪರಿऽಅಪಶ್ಯತ್ । ದಕ್ಷಂ । ದಧಾನಾಃ । ಜನಯಂತೀಃ । ಯಜ್ಞಂ ।
ಯಃ । ದೇವೇಷು । ಅಧಿ । ದೇವಃ । ಏಕಃ । ಆಸೀತ್ । ಕಸ್ಮೈ ।ದೇವಾಯ । ಹವಿಷಾ । ವಿಧೇಮ ॥ ೮ ॥

॥ ಸಾಯಣಭಾಷ್ಯಂ ॥

ಯಜ್ಞಂ ಯಜ್ಞೋಪಲಕ್ಷಿತಂ ವಿಕಾರಜಾತಂ ಜನಯಂತೀರುತ್ಪಾದಯಂತೀಃ ತದರ್ಥಂ ದಕ್ಷಂ ಪ್ರಪಂಚಾತ್ಮನಾ ವರ್ಧಿಷ್ಣುಂ ಪ್ರಜಾಪತಿಮಾತ್ಮನಿ ದಧಾನಾ ಧಾರಯಿತ್ರೀಃ ॥ ದಧಾತೇರ್ಹೇತೌ ಶಾನಚ್ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ಈದೃಶೀರಾಪಃ ವ್ಯತ್ಯಯೇನ ಪ್ರಥಮಾ । ಆಪಃ ಪ್ರಲಯಕಾಲೀನಾ ಮಹಿನಾ ಮಹಿಮ್ನಾ ॥ ಛಾಂದಸೋ ಮಲೋಪಃ ॥ ಸ್ವಮಾಹಾತ್ಮ್ಯೇನ ಯಶ್ಚ ಪ್ರಜಾಪತಿಃ ಪರ್ಯಪಶ್ಯತ್ ಪರಿತೋ ದೃಷ್ಟವಾನ್ ಯಶ್ಚ ದೇವೇಷ್ವಧಿ ದೇವೇಷು ಮಧ್ಯೇ ದೇವಸ್ತೇಷಾಮಪೀಶ್ವರಃ ಸನ್ನೇಕೋऽದ್ವಿತೀಯ ಆಸೀತ್ ಭವತಿ ॥ ಅಸ್ತೇಶ್ಛಾಂದಸೋ ಲಙ್ । ಅಸ್ತಿಸಿಚೋऽಪೃಕ್ತೇ । ಪಾ. ೭-೩-೯೬ । ಇತೀಡಾಗಮಃ ॥ ತಸ್ಮೈ ಕಸ್ಮಾ ಇತ್ಯಾದಿ ಗತಂ ॥

॥ ಪ್ರತಿಪದಾರ್ಥ ॥

**ಯಜ್ಞಂ**—ಯಜ್ಞವೇ ಮೊದಲಾದ ವಿಕೃತಿಸೃಷ್ಟಿಯನ್ನು । **ಜನಯಂತೀಃ**—ಉತ್ಪನ್ನಮಾಡುವವೂ (ಅದಕ್ಕಾಗಿಯೇ) । **ದಕ್ಷಂ**—ಪ್ರಪಂಚರೂಪವಾಗಿ ವ್ಯಕ್ತವಾಗುವ ಪ್ರಜಾಪತಿಯನ್ನು (ತಮ್ಮಲ್ಲಿ) । **ದಧಾನಾಃ**—ಧರಿಸಿರುವವೂ ಆದ (ಎಲ್ಲೆಲ್ಲಿಯೂವ್ಯಾಪಿಸಿರುವ) । **ಆಪಃ**—ಉದಕಗಳನ್ನು । **ಯಃ ಚಿತ್**—ಯಾವ ಪ್ರಜಾಪತಿಯು । **ಮಹಿನಾ**—ತನ್ನ ಮಹಿಮೆಯಿಂದ । **ಪರ್ಯಪಶ್ಯತ್**—ನೋಡಿದನೋ । **ಯಃ**—ಯಾವ ಪ್ರಜಾಪತಿಯು । **ದೇವೇಷು ಅಧಿ**—ದೇವತೆಗಳ ಮಧ್ಯದಲ್ಲಿ । **ದೇವಃ**—ದೇವತೆಗಳಿಗೂ ಪ್ರಭುವಾಗಿ । **ಏಕಃ**—ಅದ್ವಿತೀಯನಾಗಿ । **ಆಸೀತ್**—ಆಗಿದ್ದನೋ ಅಂತಹ । **ಕಸ್ಮೈ**—ಸುಖಸ್ವರೂಪನಾದ । **ದೇವಾಯ**—ಪ್ರಜಾಪತಿಯನ್ನುದ್ದೇಶಿಸಿ । **ಹವಿಷಾ**—ಹವಿರಾದಿದ್ರವ್ಯಗಳಿಂದ । **ವಿಧೇಮ**—ಉಪಚರಿಸೋಣ ॥

॥ ಭಾವಾರ್ಥ ॥

ಯಜ್ಞವೇ ಮೊದಲಾದ ಸೃಷ್ಟಿಗೆ ಕಾರಣಭೂತವಾದವೂ, ಪ್ರಜಾಪತಿಯನ್ನೇ ತಮ್ಮಗರ್ಭದಲ್ಲಿ ಧರಿಸಿರುವವೂ ಆದ ಸರ್ವವ್ಯಾಪಿಯಾದ ಉದಕಗಳನ್ನು ಯಾವ ಪ್ರಜಾಪತಿಯು ತನ್ನ ಮಹಿಮೆಯಿಂದ ನೋಡಿದನೋ ಮತ್ತು ಯಾವ ಪ್ರಜಾಪತಿಯು ದೇವತೆಗಳಲ್ಲಿಯೂ ದೇವತೆಯೆನಿಸಿ ಎಂದರೆ ದೇವದೇವನಾಗಿ ಇರುವನೋ ಅಂತಹ ಸುಖಸ್ವರೂಪನಾದ ಪ್ರಜಾಪತಿಗೆ ಹವಿರಾದಿಗಳನ್ನು ಅರ್ಪಿಸೋಣ

## English Translation.

He who by his might beheld the waters all around containing the creative power and giving birth to sacrifice, he who among the gods was the one supreme god,—let us offer worship with an oblation to the devine Ka.

॥ ಸಂಹಿತಾಪಾಠಃ ॥

ಮಾ ನೋ ಹಿಂಸೀಜ್ಜನಿತಾ ಯಃ ಪೃಥಿವ್ಯಾ ಯೋ ವಾ ದಿವಂ ಸತ್ಯಧರ್ಮಾ ಜಜಾನ ।

ಯಶ್ಚಾಪಶ್ಚಂದ್ರಾ ಬೃಹತೀರ್ಜಜಾನ ಕಸ್ಮೈ ದೇವಾಯ ಹವಿಷಾ ವಿಧೇಮ॥

॥ ಪದಪಾಠಃ ॥

ಮಾ । ನಃ । ಹಿಂಸೀತ್ । ಜನಿತಾ । ಯಃ । ಪೃಥಿವ್ಯಾಃ । ಯಃ । ವಾ । ದಿವಂ । ಸತ್ಯಽಧರ್ಮಾ । ಜಜಾನ ।

ಯಃ । ಚ । ಅಪಃ । ಚಂದ್ರಾಃ । ಬೃಹತೀಃ । ಜಜಾನ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥೯॥

॥ ಸಾಯಣಭಾಷ್ಯಂ ॥

ಸ ಪ್ರಜಾಪತಿರ್ನೋಽಸ್ಮಾನ್ಮಾ ಹಿಂಸೀತ್ । ಮಾ ಬಾಧತಾಂ । ಯಃ ಪೃಥಿವ್ಯಾ ಭೂಮೇರ್ಜನಿತಾ ಜನಯಿತಾ ಸ್ರಷ್ಟಾ ॥ ಜನಿತಾ ಮಂತ್ರ ಇತಿ ಣಿಲೋಪೋ ನಿಪಾತ್ಯತೇ । ಉದಾತ್ತಯಣೋ ಹಲ್ಪೂರ್ವಾದಿತಿ ಪೃಥಿವೀಶಬ್ದಾದ್ವಿಭಕ್ತೇರುದಾತ್ತತ್ವಂ ॥ ಯೋ ವಾ ಯಶ್ಚ ಸತ್ಯಧರ್ಮಾ ಸತ್ಯಮವಿತಥಂ ಧರ್ಮ ಜಗತೋ ಧಾರಣಂ ಯಸ್ಯ ಸ ತಾದೃಶಃ ಪ್ರಜಾಪತಿರ್ದಿವಮಂತರಿಕ್ಷೋಪಲಕ್ಷಿತಾನ್ಸರ್ವಾಲ್ಲೋಕಾಞ್ಜಜಾನ ಜನಯಾಮಾಸ ॥ ಜನೀ ಪ್ರಾದುರ್ಭಾವೇ । ಣಿಚಿ ವೃದ್ಧೌ ಜನೀಜೃಷ್ಕ್ನಸುರಂಜಃ । ಧಾ. ೧೯-೬೩-೬೭ । ಇತಿ ಮಿತ್ತ್ವಾನ್ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ । ತತೋ ಲಿಟ್ಯಮಂತ್ರೇ । ಪಾ. ೩-೧-೩೫ । ಇತಿ ನಿಷೇಧಾದಾಮ್ಪ್ರತ್ಯಯಾಭಾವೇ ತಿಪೋ ಣಲಿ ವೃದ್ಧೌ ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ॥ ಯಶ್ಚ ಬೃಹತೀರ್ಮಹತೀಶ್ಚಂದ್ರಾ ಆಹ್ಲಾದಿನೀರಪ ಉದಕಾನಿ ಜಜಾನ ಜನಯಾಮಾಸ ॥ ಊಡಿದಮಿತ್ಯಾದಿನಾಪ್ಶಬ್ದಾದುತ್ತರಸ್ಯ ಶಸ ಉದಾತ್ತತ್ವಂ ॥ ತಸ್ಮೈ ಕಸ್ಮಾ ಇತ್ಯಾದಿಗತಂ ॥

॥ ಪ್ರತಿಪದಾರ್ಥ ॥

(ಆ ಪ್ರಜಾಪತಿಯು) **ನಃ**—ನಮ್ಮನ್ನು । **ಮಾ ಹಿಂಸೀತ್**- ಹಿಂಸಿಸದಿರಲಿ । **ಯಃ**—ಯಾವ ಪ್ರಜಾಪತಿಯು । **ಪೃಥಿವ್ಯಾಃ**—ಭೂಮಿಯ । **ಜನಿತಾ**- ಸೃಷ್ಟಿಕರ್ತನೋ । **ಸತ್ಯಧರ್ಮಾ**—ಜಗದ್ಧಾರಣಾದಿ ಸತ್ಯಕರ್ಮಗಳನ್ನು ನಿರ್ವಹಿಸುವ । **ಯಃ ವಾ**—ಯಾವ ಪ್ರಜಾಪತಿಯು । **ದಿವಂ**—ಅಂತರಿಕ್ಷವೇ ಮೊದಲಾದ ಸಮಸ್ತ ಲೋಕಗಳನ್ನು । **ಜಜಾನ**—ಉತ್ಪತ್ತಿಮಾಡಿದನೋ । **ಯಃ ಚ**—ಯಾವ ಪ್ರಜಾಪತಿಯು । **ಬೃಹತೀಃ**—ಮಹತ್ತಾದವೂ । **ಚಂದ್ರಾಃ**—ಆಹ್ಲಾದಕರವಾದವೂ ಆದ । **ಅಪಃ**—ಉದಕಗಳನ್ನು । **ಜಜಾನ**--ಉತ್ಪನ್ನ ಮಾಡಿದನೋ ಅಂತಹ । **ಕಸ್ಮೈ**—ಸುಖಸ್ವರೂಪನಾದ । **ದೇವಾಯ**--ಪ್ರಜಾಪತಿಗೆ । **ಹವಿಷಾ**—ಹವಿರಾದಿಗಳನ್ನು । **ವಿಧೇಮ**—ಅರ್ಪಿಸೋಣ ।

॥ ಭಾವಾರ್ಥ ॥

ಆ ಪ್ರಜಾಪತಿಯು ನಮ್ಮನ್ನು ಹಿಂಸಿಸದಿರಲಿ. ಯಾವ ಪ್ರಜಾಪತಿಯು ಈ ಭೂಮಿಯನ್ನು ಸೃಷ್ಟಿಸಿದನೋ, ಯಾವ ಪ್ರಜಾಪತಿಯು ಅಂತರಿಕ್ಷವೇ ಮೊದಲಾದ ಊರ್ಧ್ವಲೋಕಗಳನ್ನು ಸೃಷ್ಟಿಸಿದನೋ, ಯಾವ ಪ್ರಜಾಪತಿಯು ಮಹತ್ತಾದವೂ ಆಹ್ಲಾದಕರವೂ ಆದ ಉದಕಗಳನ್ನು ಉತ್ಪನ್ನಮಾಡಿದನೋ ಅಂತಹ ಸುಖಸ್ವರೂಪನಾದ ಪ್ರಜಾಪತಿಗೆ ಹವಿರಾದಿದ್ರವ್ಯಗಳನ್ನು ಅರ್ಪಿಸೋಣ.

## English Translation

May he do us no harm who is the parent of the earth or who the unerring support (of the world) begat the heaven, and who generated the vast and delightful waters,—let us offer worship with an oblation to the divine Ka.

|| ಸಂಹಿತಾಪಾಠಃ ||

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ ।
ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ || ೧೦ ||

|| ಪದಪಾಠಃ ||

ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ ।
ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ || ೧೦ ||

|| ಸಾಯಣಭಾಷ್ಯಂ ||

ಇಳಾದಧಾಖ್ಯ ಇಷ್ಟ್ಯಯನೇ ಪ್ರಾಜಾಪತ್ಯಸ್ಯ ಹವಿಷಃ ಪ್ರಜಾಪತ ಇತ್ಯೇಷಾನುವಾಕ್ಯಾ । ಸೂತ್ರಿತಂ ಚ । ಪ್ರಾಜಾಪತ್ಯ ಇಳಾದಧಃ ಪ್ರಜಾಪತೇ ನ ತ್ವದೇತಾನ್ಯನ್ಯಃ। ಆ. ೨-೧೪ । ಇತಿ ।। ಕೇಶನಖಕೀಟಾದಿಭಿರ್ದುಷ್ಟಾನಿ ಹವೀಂಷ್ಯನಯೈವಾಪ್ಸು ಪ್ರಕ್ಷಿಪೇತ್ । ಸೂತ್ರಿತಂ ಚ । ಅಪೋಽಭ್ಯವಹರೇಯುಃ ಪ್ರಜಾಪತೇ ನ ತ್ವದೇತಾನ್ಯನ್ಯಃ । ಆ. ೩-೧೦ । ಇತಿ ।। ಚೌಲಾದಿಕರ್ಮಸ್ವಪ್ಯೇಷಾ ಹೋಮಾರ್ಥಾ । ಸೂತ್ರಿತಂ ಚ । ತೇಷಾಂ ಪುರಸ್ತಾಚ್ಚತಸ್ರ ಆಜ್ಯಾಹುತೀರ್ಜುಹುಯಾದಗ್ನ ಆಯೂಂಷಿ ಪವಸ ಇತಿ ತಿಸೃಭಿಃ ಪ್ರಜಾಪತೇ ನ ತ್ವದೇತಾನ್ಯನ್ಯ ಇತಿ ಚ । ಆ. ಗೃ. ೧-೪-೪ । ಇತಿ ।।

ಹೇ ಪ್ರಜಾಪತೇ ತ್ವತ್ ತ್ವತ್ತೋಽನ್ಯಃ ಕಶ್ಚಿದೇತಾನೀದಾನೀಂ ವರ್ತಮಾನಾನಿ ವಿಶ್ವಾ ವಿಶ್ವಾನಿ ಸರ್ವಾಣಿ ।। ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ ।। ಜಾತಾನಿ ಪ್ರಥಮವಿಕಾರಭಾಂಜಿ ತಾ ತಾನಿ ಸರ್ವಾಣಿ ಭೂತಜಾತಾನಿ ನ ಪರಿ ಬಭೂವ । ನ ಪರಿಗೃಹ್ಣಾತಿ । ನ ವ್ಯಾಪ್ನೋತಿ । ತ್ವಮೇವೈತಾನಿ ಪರಿಗೃಹ್ಯ ಸ್ರಷ್ಟುಂ ಶಕ್ನೋಷೀತಿ ಭಾವಃ ।। ಪರಿಪೂರ್ವೋ ಭವತಿಃ ಪರಿಗ್ರಹಾರ್ಥಃ । ವಯಂ ಚ ಯತ್ಕಾಮಾ ಯತ್ಫಲಂ ಕಾಮಯಮಾನಾಸ್ತೇ ತುಭ್ಯಂ ಜುಹುಮಃ ಹವೀಂಷಿ ಪ್ರಯಚ್ಛಾಮಃ ತತ್ಫಲಂ ನೋಽಸ್ಮಾಕಮಸ್ತು । ಭವತು । ತಥಾ ವಯಂ ಚ ರಯೀಣಾಂ ಧನಾನಾಂ ಪತಯ ಈಶ್ವರಾಃ ಸ್ಯಾಮ । ಭವೇಮ ।। ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ ।।

|| ಪ್ರತಿಪದಾರ್ಥ ||

**ಪ್ರಜಾಪತೇ**—ಎಲೈ ಪ್ರಜಾಪತಿಯೇ । **ತ್ವತ್**—ನಿನ್ನಿಂದ ಹೊರತು । **ಅನ್ಯಃ**—ಮತ್ತೊಬ್ಬರು ಯಾರೂ । **ಏತಾನಿ**—ಈಗಿರುವ । **ವಿಶ್ವಾ**—ಸಮಸ್ತವಾದ । **ಜಾತಾನಿ**—ಪ್ರಥಮ ಸೃಷ್ಟಿವಿಕಾರಗಳು ಯಾವ ವಿರುವವೋ । **ತಾ**—ಅವುಗಳನ್ನು । **ನ ಪರಿ ಬಭೂವ**—ಸೃಷ್ಟಿಮಾಡಲು ಕೈಗೊಳ್ಳಲು ಶಕ್ತರಾಗುವುದಿಲ್ಲ ।

**ಯತ್ಕಾಮಾಃ**—ನಾವು ಯಾವ ಅಭೀಷ್ಟಗಳನ್ನು ಬಯಸುತ್ತಾ | **ತೇ**—ನಿನಗೆ | **ಜುಹುಮಃ**—ಹವಿರಾದಿ ಗಳನ್ನು ಅರ್ಪಿಸಿ ಹೋಮಮಾಡುತ್ತೇವೆಯೋ | **ತತ್**—ಆ ಅಭೀಷ್ಟರೂಪವಾದ ಫಲವು | **ನಃ**—ನಮಗೆ | **ಅಸ್ತು**—ಉಂಟಾಗಲಿ | **ವಯಂ ಚ**—ನಾವೂ ಸಹ | **ರಯೀಣಾಂ**—ಧನಗಳಿಗೆ | **ಪತಯಃ**—ಒಡೆಯರಾಗಿ | **ಸ್ಯಾಮ**—ಆಗುವಂತಾಗಲಿ

|| **ಭಾವಾರ್ಥ** ||

ಎಲೈ ಪ್ರಜಾಪತಿಯೇ, ಈಗಿರುವ ಸಮಸ್ತವಾದ ಮತ್ತು ಪ್ರಥಮಸೃಷ್ಟಿರೂಪವಾದ ಪಂಚಮಹಾ ಭೂತಾದಿ ಗಳನ್ನು ಸೃಷ್ಟಿಮಾಡಲು ಉದ್ಯುಕ್ತರಾಗುವವರು ನಿನ್ನನ್ನು ಬಿಟ್ಟರೆ ಮತ್ತೊಬ್ಬರಿಲ್ಲ. ಯಾವ ಅಭೀಷ್ಟಸಿದ್ಧಿಗಾಗಿ ನಾವು ನಿನಗೆ ಹವಿಸ್ಸನ್ನು ಅರ್ಪಿಸುವೆವೋ ಅಂತಹ ಫಲವು ನಮಗೆ ದೊರೆಯಲಿ. ನಾವೂ ಸಹ ಧನಗಳಿಗೆ ಒಡೆಯ ರಾಗುವಂತಾಗಲಿ.

## English Translation

No other than you, Prajapathi has given existance to all these beings may that object of our desires for which we sacrifice to you be ours, may we be the possessors of riches.

|| ವಿಶೇಷವಿಷಯಗಳು ||

ಇಳಾದಧವೆಂಬ ಇಷ್ಟಿಯಲ್ಲಿ ಪ್ರಜಾಪತಿ ದೇವತೆಯನ್ನುದ್ದೇಶಿಸಿ ಮಾಡುವ ಹವಿರ್ಹೋಮದಲ್ಲಿ **ಪ್ರಜಾಪತೇ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರಾಜಾಪತ್ಯ ಇಳಾದಧಃಪ್ರಜಾಪತೇ ನ ತ್ವದೇತಾನ್ಯನ್ಯಃ** ಎಂಬ ಸೂತ್ರದಿಂದ(ಆ. ೨-೧೪)ವಿವೃತವಾಗಿರುವುದು. ದೇವತೆಗಳಿಗೆ ಹೋಮಮಾಡಿ ಅರ್ಪಿಸುವ ಹವಿರ್ದ್ರವ್ಯಗಳಲ್ಲಿ ಕೂದಲು, ಉಗುರು, ಕ್ರಿಮಿ, ಹುಳುಗಳು ಮೊದಲಾದ ದುಷ್ಟ ಪದಾರ್ಥ ಗಳು ಮಿಶ್ರವಾಗಿದ್ದಲ್ಲಿ ಆ ಹವಿಸ್ಸುಗಳನ್ನು ಈ **ಪ್ರಜಾಪತೇ** ಎಂಬ ಋಕ್ಕನ್ನು ಪಠಿಸಿ ನೀರಿನಲ್ಲಿ ಇಡಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಪೋऽಭ್ಯವಹರೇಯುಃ ಪ್ರಜಾಪತೇ ನ ತ್ವದೇತಾನ್ಯನ್ಯಃ** ಎಂಬ ಸೂತ್ರದಿಂದ (ಆ-೩-೧೦) ವಿವೃತವಾಗಿರುವುದು. ಮತ್ತು ಚೌಲಾದಿಗೃಹ್ಯಕರ್ಮಗಳಲ್ಲಿ ಹೋಮಾರ್ಥವಾಗಿ ಈ ಋಕ್ಕಿನ ವಿನಿಯೋಗ ವಿರುವುದೆಂದು ಆಶ್ವಲಾಯನ ಗೃಹ್ಯಸೂತ್ರದ—**ತೇಷಾಂ ಪುರಸ್ತಾಚ್ಚತಸ್ರ ಆಜ್ಯಾಹುತೀರ್ಜುಹುಯಾದಗ್ನ ಆಯೂಂಷಿ ಪವಸ ಇತಿ ತಿಸೃಭಿಃ ಪ್ರಜಾಪತೇ ನ ತ್ವದೇತಾನ್ಯನ್ಯ ಇತಿ ಚ** ಎಂಬ ಸೂತ್ರದಿಂದ(ಆ ಗೃ.೧-೪-೪) ವಿವೃತವಾಗಿರುವುದು.

ಪ್ರಜಾಪತಿಶಬ್ದದ ಅರ್ಥವಿವರಣೆ ಮಾಡುವಾಗ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

**ಪ್ರಜಾಪತಿಃ | ಪ್ರಜಾಪತಿಃ ಪ್ರಜಾನಾಂ ಪಾತಾ ವಾ ಪಾಲಯಿತಾ ವಾ || ತಸ್ಯೈಷಾ ಭವತಿ ||**

**(ನಿ.೧೦-೪೨.)**

ಪ್ರಜಾಪತಿಶಬ್ದಕ್ಕೆ-ಪ್ರಜೆಗಳ ಸಂರಕ್ಷಕನು, ಪ್ರಜೆಗಳನ್ನು ಪಾಲಿಸುವವನು ಎಂದರ್ಥವು. ಈ ಕೆಳಗಿನ ಋಕ್ಕು ಪ್ರಜಾಪತಿಯ ವಿಷಯವಾಗಿರುವುದು

**ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ | ಯತ್ಕಾಮಾಸ್ತೇ ಜುಹು ಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ ||**

**ಪ್ರಜಾಪತೇ ನ ಹಿ ತ್ವದೇತಾನ್ಯನ್ಯಃ ಸರ್ವಾಣಿ ಜಾತಾನಿ ತಾನಿ ಪರಿ ಬಭೂವ ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಮಿತ್ಯಾಶೀಃ ॥ (ನಿ.೧೦-೪೩)**

ಎಲೈ ಪ್ರಜಾಪತಿಯೇ, ನಿನ್ನನ್ನು ಬಿಟ್ಟರೆ ಮತ್ತೆ ಯಾರೂ ಸೃಷ್ಟಿಸಲ್ಪಟ್ಟಿರುವ ಈ ವಸ್ತು ಸಮೂಹಗಳನ್ನೂ ದೇವತಾ ರೂಪಗಳನ್ನೂ ಒಳಗೂ ಹೊರಗೂ ವ್ಯಾಪಿಸಿರುವವನು ಇರುವುದಿಲ್ಲ ನಾವು ಯಾವ ಕೋರಿಕೆಗಳನ್ನು ಬಯಸಿ ಅವುಗಳ ಪ್ರಾಪ್ತಿಗಾಗಿ ನಿನಗೆ ಹವಿಸ್ಸನ್ನೂ ಅರ್ಪಿಸುವೆವೋ ಆ ಕೋರಿಕೆಗಳೆಲ್ಲವೂ ನಮಗೆ ಸಿದ್ಧಿಸಲಿ. ನಾವು ಬಹಳವಾದ ಧನ ಗಳಿಗೆ ಒಡೆಯರಾಗುವಂತಾಗಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು. ಈ ಋಕ್ಕು ಆಶೀರ್ವಾದರೂಪವಾಗಿರು ವುದೆಂದು ಯಾಸ್ಕರು ಹೇಳಿರುವರು.

## ನೂರ ಇಪ್ಪತ್ತೆರಡನೆಯ ಸೂಕ್ತವು



॥ ಸಾಯಣಭಾಷ್ಯಂ ॥

**ವಸುಂ ನೇತ್ಯಷ್ಟರ್ಚಂ ದಶಮಂ ಸೂಕ್ತಂ ವಸಿಷ್ಠಪುತ್ರಸ್ಯ ಚಿತ್ರಮಹಸ ಆರ್ಷಮಾಗ್ನೇಯಂ ಆದ್ಯಾಪಂಚಮೀ ತ್ರಿಷ್ಟುಭೌ ಶಿಷ್ಟಾ ಜಗತ್ಯಃ । ತಥಾ ಚಾನುಕ್ರಾಂತಂ । ವಸುಂ ನಾಷ್ಟೌ ಚಿತ್ರಮಹಾ ವಾಸಿಷ್ಠ ಆಗ್ನೇಯಂ ಜಾಗತಮಾದ್ಯಾಂ ಪಂಚಮೀಂ ಚರ್ತ ಇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋ-ರಾಗ್ನೇಯೇ ಕ್ರತೌ ಜಾಗತೇ ಛಂದಸೀದಂ ಸೂಕ್ತಂ । ಸೂತ್ರಿತಂ ಚ । ವಸುಂ ನ ಚಿತ್ರಮಹಸಮಿತಿ ಜಾಗತಂ । ಆ. ೪-೧೩ । ಇತಿ ॥**

ಅನುವಾದವು—**ವಸುಂ ನ** ಎಂಬ ಈ ಸೂಕ್ತವು ಹತ್ತನೆಯ ಅನುವಾದಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಸಿಷ್ಠಋಷಿಯ ಪುತ್ರನಾದ ಚಿತ್ರಮಹಾಃ ಎಂಬುವನು ಋಷಿಯು; ಅಗ್ನಿಯು ದೇವತೆಯು, ಈ ಸೂಕ್ತದಲ್ಲಿ ಮೊದಲನೆಯ ಮತ್ತು ಐದನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಕವು ಅನುಕ್ರಮಣಿಕೆಯಲ್ಲಿ— **ವಸುಂ ನಾಷ್ಟೌ ಚಿತ್ರಮಹಾ ವಾಸಿಷ್ಠ ಆಗ್ನೇಯಂ ಜಾಗತಮಾದ್ಯಾಂ ಪಂಚಮೀಂ ಚರ್ತೇ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನ ಶಸ್ತ್ರಮಂತ್ರಪಠನದಲ್ಲಿ ಆಗ್ನೇಯಕ್ರತು ಸಂಬಂಧವಾದ ಜಗತೀ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ವಸುಂ ನ ಚಿತ್ರಮಹಸಮಿತಿ ಜಾಗತಂ** ಎಂಬ ಸೂತ್ರ ದಿಂದ (ಆ ೪-೧೩) ವಿವೃತವಾಗಿರುವುದು.

## ಸೂಕ್ತ—೧೨೨

ಮಂಡಲ-೧೦ ॥ ಅನುವಾಕ-೧೦ ॥ ಸೂಕ್ತ-೧೨೨ ॥
ಅಷ್ಟಕ-೮ ॥ ಅಧ್ಯಾಯ-೬ ॥ ವರ್ಗ-೫, ೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೇ—೮ ॥
ಋಷಿಃ—ಚಿತ್ರಮಹಾ ವಾಸಿಷ್ಠಃ ॥
ದೇವತಾ—ಅಗ್ನಿಃ ॥
ಛಂದಃ—೧—೫ ತ್ರಿಷ್ಟುಪ್। ೨-೪, ೬-೮. ಜಗತೀ ॥

॥ ಸಂಹಿತಾಪಾಠಃ ॥

ವಸುಂ ನ ಚಿತ್ರಮಹಸಂ ಗೃಣೀಷೇ ವಾಮಂ ಶೇವಮತಿಥಿಮದ್ವಿಷೇಣ್ಯಂ ।
ಸ ರಾಸತೇ ಶುರುಧೋ ವಿಶ್ವಧಾಯಸೋಽಗ್ನಿರ್ಹೋತಾ ಗೃಹಪತಿಃ
ಸುವೀರ್ಯಂ ॥ ೧ ॥

॥ ಪದಪಾಠಃ ॥

ವಸುಂ । ನ । ಚಿತ್ರಽಮಹಸಂ । ಗೃಣೀಷೇ । ವಾಮಂ । ಶೇವಂ । ಅತಿಥಿಂ । ಅದ್ವಿಷೇಣ್ಯಂ ।
ಸಃ । ರಾಸತೇ । ಶುರುಧಃ । ವಿಶ್ವಽಧಾಯಸಃ । ಅಗ್ನಿಃ । ಹೋತಾ । ಗೃಹಽಪತಿಃ । ಸುಽವೀರ್ಯಂ ॥ ೧ ॥

॥ ಸಾಯಣಭಾಷ್ಯಂ ॥

ವಸುಂ ನ ವಾಸಕಂ ಸೂರ್ಯಮಿವ ಚಿತ್ರಮಹಸಂ ಚಾಯನೀಯತೇಜಸ್ಕಮಗ್ನಿಂ ಗೃಣೀಷೇ । ಗೃಣೇ । ಸ್ತೌಮಿ ॥ ಗೄ ಶಬ್ದೇ ಕ್ರ್ಯಾದಿಕಃ । ಪುರುಷವ್ಯತ್ಯಯಃ । ಪ್ವಾದಿತ್ವಾದ್ಧ್ರಸ್ವಃ ॥ ಯದ್ವಾ । ಚಿತ್ರಮಹಸಮಿತಿ ಪ್ರಥಮಾರ್ಥೇ ದ್ವಿತೀಯಾ । ನೇತಿ ಸಂಪ್ರತ್ಯರ್ಥೇ । ಸಂಪ್ರತಿ ವಾಸಕಮಗ್ನಿಮಹಂ ಚಿತ್ರಮಹಾಃ ಸ್ತೌಮಿ । ಕೀದೃಶಂ । ವಾಮಂ ವನನೀಯಂ ಶೇವಂ ಸುಖಕರಮತಿಥಿಮತಿಥಿವತ್ಪೂಜ್ಯಂ ಯದ್ವಾ ಹವಿರ್ವಹನಾಯ ಸತತಗಾಮಿನಂ ಅದ್ವಿಷೇಣ್ಯಂ ದ್ವೇಷ್ಯರಹಿತಂ ॥ ದ್ವಿಷೇಃ ಕೃತ್ಯಾರ್ಥೇ ತವೈಕೇನಿತಿ ಕೇನ್ಯಪ್ರತ್ಯಯಃ । ನಞಾ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥ ಸೋಽಗ್ನಿಃ ಶುರುಧಃ ಶೋಕಸ್ಯ ರೋಧಯಿತ್ರೀರ್ನಿವಾರಯಿತ್ರೀರ್ವಿಶ್ವಧಾಯಸಃ ಕ್ಷೀರಪ್ರದಾನಾದಿನಾ ವಿಶ್ವಂ ಸರ್ವಂ ಜಗದ್ಧಾರಯಂತೀರ್ಗಾಃ ಸುವೀರ್ಯಂ ಶೋಭನವೀರ್ಯಂ ಚ ರಾಸತೇ । ಯಜಮಾನೇಭ್ಯೋ ದದಾತಿ ॥ ರಾ ದಾನೇ । ಅಸ್ಮಾಲ್ಲೇಟ್ । ಲೇಟೋಽಡಾಗಮಃ । ಸಿಬ್ಬಹುಲಮಿತಿ ಸಿಪ್ । ವ್ಯತ್ಯಯೇನಾತ್ಮನೇಪದಂ । ವಿಶ್ವಶಬ್ದೋಪಪದಾದ್ದಧಾತೇರ್ವಹಿಹಾಧಾಞ್ಭ್ಯ ಇತ್ಯಸುನ್ । ಣಿದಿತ್ಯನುವೃತ್ತೇರಾತೋ ಯುಕ್ಚಿಣೀತಿ ಯುಕ್ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ ॥ ಕೀದೃಶೋಽಗ್ನಿಃ । ಹೋತಾ ದೇವಾನಾಮಾಹ್ವಾತಾ ಹೋಮನಿಷ್ಪಾದಕೋ ವಾ ಗೃಹಪತಿರ್ಯಜಮಾನಗೃಹಾಣಾಮೀಶ್ವರಃ ॥ ಗೇಹೇ ಕಃ । ಪಾ. ೩-೧-೧೪೪ । ಇತಿ ಗ್ರಹೇಃ ಕಪ್ರತ್ಯಯಃ । ಗ್ರಹಿಜ್ಯೇತ್ಯಾದಿನಾ ಸಂಪ್ರಸಾರಣಂ । ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಶೋಭನಂ ವೀರ್ಯಂ ಯಸ್ಯೇತಿ ಬಹುವ್ರೀಹೌ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ವಾಮಂ**—ಸರ್ವರಿಂದಲೂ ಅಪೇಕ್ಷಿಸಲ್ಪಡುವವನೂ । **ಶೇವಂ**—ಸುಖಕಾರಕನೂ । **ಅತಿಥಿಂ**—ಅತಿಥಿಯಂತೆ ಪೂಜಾರ್ಹನೂ ಅಥವಾ ಹವಿರ್ವಹನಕ್ಕಾಗಿ ಯಾವಾಗಲೂ ನಮ್ಮ ಬಳಿಗೆ ಬರುವವನೂ । **ಅದ್ವಿಷೇಣ್ಯಂ**—ಶತ್ರುರಹಿತನೂ । **ವಸುಂ ನ**—ಸೂರ್ಯನಂತೆ । **ಚಿತ್ರಮಹಸಂ**—ವಿಚಿತ್ರತೇಜಸ್ಸಿನಿಂದ ಕೂಡಿದವನೂ ಆದ ಅಗ್ನಿಯನ್ನು

**ಗೃಣೀಷೇ**—ಸ್ತುತಿಸುತ್ತೇನೆ [ಅಥವಾ । **ವಾಸಕಂ**—ವಸತಿದಾಯಕನಾದ ಅಗ್ನಿಯನ್ನು । **ನ**—ಈಗ । **ಚಿತ್ರಮಹಸಂ**—ಚಿತ್ರಮಹಾಃ ಎಂಬ ಹೆಸರಿನ ನಾನು । **ಗೃಣೀಷೇ**—ಸ್ತೋತ್ರಮಾಡುತ್ತೇನೆ । **ಹೋತಾ**—ದೇವತೆಗಳನ್ನು ಆಹ್ವಾನ ಮಾಡುವವನೂ । **ಗೃಹಪತಿಃ**— ಯಜಮಾನರ ಗೃಹಗಳಿಗೆ ಒಡೆಯನೂ ಅಥವಾ ಸಂರಕ್ಷಕನೂ ಆದ । **ಸ ಅಗ್ನಿಃ**—ಆ ಅಗ್ನಿಯು । **ಶುರುಧಃ**—ಶೋಕಪರಿಹಾರ ಮಾಡುವವೂ । **ವಿಶ್ವಧಾಯಸಃ**—ಕ್ಷೀರ ಪ್ರದಾನದಿಂದ ಸಮಸ್ತರನ್ನೂ ಕಾಪಾಡುವವೂ ಆದ ಗೋವುಗಳನ್ನೂ । **ಸುವೀರ್ಯಂ**— ಉತ್ತಮವಾದ ಪರಾಕ್ರಮವನ್ನೂ । **ರಾಸತೇ**—ಯಜಮಾನರಿಗೆ ಕೊಡುತ್ತಾನೆ.

॥ ಭಾವಾರ್ಥ ॥

ಸರ್ವರಿಂದಲೂ ಅಪೇಕ್ಷಿಸಲ್ಪಡುವವನೂ, ಸುಖಕಾರಕನೂ, ಅತಿಥಿಯಂತೆ ಪೂಜ್ಯನೂ, ಶತ್ರು ರಹಿತನೂ, ಸೂರ್ಯನಂತೆ ವಿಚಿತ್ರ ತೇಜಸ್ಸಿನಿಂದ ಕೂಡಿದವನೂ, ವಸತಿದಾಯಕನೂ ಆದ ಅಗ್ನಿಯನ್ನು ಚಿತ್ರಮಹಸನೆಂಬ ನಾನು ಸ್ತೋತ್ರ ಮಾಡುತ್ತೇನೆ. ದೇವತೆಗಳನ್ನು ಆಹ್ವಾನ ಮಾಡುವವನೂ, ಯಜಮಾನರ ಗೃಹಗಳ ಪಾಲಕನೂ ಆದ ಆ ಅಗ್ನಿಯು ದುಃಖಪರಿಹಾರಕವಾದವೂ, ಕ್ಷೀರಾದಿಗಳನ್ನು ಕೊಟ್ಟು ಸಕಲರನ್ನೂ ಕಾಪಾಡುವವೂ ಆದ ಗೋವುಗಳನ್ನೂ, ಶ್ರೇಷ್ಠವಾದ ಶಕ್ತಿಸಾಮರ್ಥ್ಯವನ್ನು ಯಜಮಾನರಿಗೆ ಕೊಡುತ್ತಾನೆ.

English Translation

I glorify him who is of wonderful radiance like the sun, the desirable, the giver of happiness, the guest (of man), the benevolent. He bestows vigour (upon the worshippers); Agni, the remover of sorrow, the sustainer of all, the invoker (of the gods), the lord of the mansion.

॥ ಸಂಹಿತಾಪಾಠಃ ॥

ಜುಷಾಣೋ ಅಗ್ನೇ ಪ್ರತಿ ಹರ್ಯ ಮೇ ವಚೋ ವಿಶ್ವಾನಿ ವಿದ್ವಾನ್ವಯುನಾನಿ ಸುಕ್ರತೋ ।
ಘೃತನಿರ್ಣಿಗ್ಬ್ರಹ್ಮಣೇ ಗಾತುಮೇರಯ ತವ ದೇವಾ ಅಜನಯನ್ನನು ವ್ರತಂ ॥ ೨ ॥

॥ ಪದಪಾಠಃ ॥

ಜುಷಾಣಃ । ಅಗ್ನೇ । ಪ್ರತಿ । ಹರ್ಯ । ಮೇ । ವಚಃ । ವಿಶ್ವಾನಿ । ವಿದ್ವಾನ್ । ವಯುನಾನಿ । ಸುಕ್ರತೋ ಇತಿ ಸುಽಕ್ರತೋ ।

ಘೃತ॑ಽನಿರ್ಣಿಕ್ । ಬ್ರಹ್ಮ॑ಣೇ । ಗಾತುಂ । ಆ । ಈರಯ । ತವ॑ । ದೇವಾಃ । ಅಜನಯನ್ । ಅನು॑ । ವ್ರತಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಜುಷಾಣಃ ಪ್ರೀಯಮಾಣಸ್ತ್ವಂ ಮೇ ಮಮ ವಚೋ ವಚನಂ ಸ್ತೋತ್ರಂ ಪ್ರತಿ ಹರ್ಯ । ಕಾಮಯಸ್ವ ॥ ಹರ್ಯ ಗತಿಕಾಂತ್ಯೋಃ ॥ ತಥಾ ಹೇ ಸುಕ್ರತೋ ಶೋಭನಕರ್ಮನ್ ಶೋಭನಪ್ರಜ್ಞ ವಾ ತ್ವಂ ವಿಶ್ವಾನಿ ಸರ್ವಾಣಿ ವಯುನಾನಿ । ಜ್ಞಾನನಾಮೈತತ್ ಇಹ ಜ್ಞಾತವ್ಯೇ ವರ್ತತೇ। ಜ್ಞಾತವ್ಯಾನ್ಯರ್ಥಜಾತಾನಿ ವಿದ್ವಾಞ್ಜಾನನ್ನರ್ತಸೇ ॥ ಹೇತೌ ಶತೃಪ್ರತ್ಯಯಃ ॥ ಯತೋ ಜಾನಾಸಿ ತತೋ ಹೇತೋರ್ಮದ್ವಚನಂ ಕಾಮಯಸ್ವೇತ್ಯರ್ಥಃ ಹೇ ಘೃತನಿರ್ಣಿಗ್ಘೃತೇನಾಜ್ಯೇನ ನಿರ್ಣಿಜ್ಯಮಾನ ಪುಷ್ಯಮಾಣಶರೀರ ॥ ಣಿಜಿರ್ ಶೌಚಪೋಷಣಯೋಃ ॥ ಯದ್ವಾ । ನಿರ್ಣಗಿತಿ ರೂಪನಾಮ । ದೀಪ್ತರೂಪಾಗ್ನೇ ಬ್ರಹ್ಮಣೇ ಬ್ರಾಹ್ಮಣಾಯ ಯಜಮಾನಾಯ ಗಾತುಂ ಗಾತವ್ಯಂ ಜ್ಞಾತವ್ಯಂ ವಾ ಯಜ್ಞಮೇರಯ। ಆಗಮಯ। ತವ ವ್ರತಂ ತ್ವದೀಯಂ ಯಜ್ಞಕರ್ಮಾನು ಪಶ್ಚಾದ್ದೇವಾ ಇಂದ್ರಾದಯಃ ಸರ್ವೇಽಜನಯನ್ । ಯಜಮಾನಾಯ ಫಲಾನಿ ಜನಯಂತಿ । ಅತಸ್ತ್ವದೀಯಂ ಯಜ್ಞಂ ಯಜಮಾನಾಯ ಪ್ರಾಪಯೇತ್ಯರ್ಥಃ ॥ ಲಕ್ಷಣೇಽನೋಃ ಕರ್ಮಪ್ರವಚನೀಯತ್ವಂ ವ್ರತಮಿತಿ ಕರ್ಮಪ್ರವಚನೀಯಯುಕ್ತ ಇತಿ ದ್ವಿತೀಯಾ । ಜನೇರ್ಣ್ಯಂತಾಚ್ಛಾಂದಸೋ ಲಙ್ । ಜನೀಜೃಷ್ಕ್ನಸುರಂಜೋಽಮಂತಾಶ್ಚೇತಿ ಮಿತ್ತ್ವಾನ್ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಜುಷಾಣಃ**—ಸಂತೋಷಚಿತ್ತನಾಗಿ । **ಮೇ**—ನನ್ನ । **ವಚಃ**—ಸ್ತುತಿರೂಪವಾದ ವಾಕ್ಯವನ್ನು । **ಪ್ರತಿ ಹರ್ಯ**—ಅಪೇಕ್ಷಿಸು । **ಸುಕ್ರತೋ**—ಶೋಭನ ಕರ್ಮವುಳ್ಳ ಅಥವಾ ಉತ್ತಮ ಜ್ಞಾನಿಯಾದ ಎಲೈ ಅಗ್ನಿಯೇ। **ವಿಶ್ವಾನಿ**—ಸಮಸ್ತವಾದ । **ವಯುನಾನಿ**—ತಿಳಿಯ ಬೇಕಾದ ವಿಷಯಗಳನ್ನು । **ವಿದ್ವಾನ್**—ತಿಳಿದವನಾಗಿದ್ದೀಯೆ । **ಘೃತನಿರ್ಣಿಕ್**—ಘೃತದಿಂದ ನೆನೆಸಲ್ಪಟ್ಟ ಶರೀರವುಳ್ಳ ಅಥವಾ ಪ್ರಕಾಶಮಾನವಾದ ರೂಪವುಳ್ಳ ಎಲೈ ಅಗ್ನಿಯೇ। **ಬ್ರಹ್ಮಣೇ**—ಬ್ರಾಹ್ಮಣನಾದ ಯಜಮಾನನಿಗಾಗಿ। **ಗಾತುಂ**—ಅವನು ತಿಳಿದಿರಬೇಕಾದ ಯಜ್ಞವನ್ನು। **ಆ ಈರಯ**—ಪ್ರೇರಿಸು। **ತವ**—ನಿನ್ನ ಸಂಬಂಧವಾದ। **ವ್ರತಂ**—ಯಜ್ಞಕರ್ಮವನ್ನು । **ಅನು**—ಅನುಲಕ್ಷಿಸಿ । **ದೇವಾಃ**—ದೇವತೆಗಳು । **ಅಜನಯನ್**—ಯಜಮಾನನಿಗೆ ಫಲವನ್ನು ಕೊಡುತ್ತಾರೆ

। ಭಾವಾರ್ಥ ॥

ಎಲೈ ಅಗ್ನಿಯೇ ,ಸಂತುಷ್ಟನಾಗಿ ನಾನು ಮಾಡುವ ಸ್ತುತಿಯನ್ನು ಆದರದಿಂದ ಕೇಳು. ಉತ್ತಮ ಕರ್ಮಯುಕ್ತನಾದ ಎಲೈ ಅಗ್ನಿಯೇ, ನೀನು ತಿಳಿಯಬೇಕಾದ ಸಮಸ್ತವಿಷಯಗಳನ್ನು ತಿಳಿದಿದ್ದೀಯೆ. ಘೃತಸಿಕ್ತಶರೀರವುಳ್ಳ ಅಥವಾ ಪ್ರಕಾಶಮಾನವಾದ ರೂಪವುಳ್ಳ ಎಲೈ ಅಗ್ನಿಯೇ ಬ್ರಾಹ್ಮಣ ಯಜಮಾನನಿಗಾಗಿ ಯಜ್ಞಕರ್ಮವನ್ನು ಪ್ರೇರಿಸಿ ನೆರವೇರಿಸು ನಿನ್ನ ಸಂಬಂಧವಾದ ಈ ಯಜ್ಞಕರ್ಮದಲ್ಲಿ ದೇವತೆಗಳು ಯಜಮಾನರಿಗೆ ಯಜ್ಞಫಲಗಳನ್ನು ಡುತ್ತಾರೆ.

### English Translation.

Accept, Agni, being well pleased, my praise; author of great deeds, (you are) cognizant of all objects of knowledge; anointed with butter, stimulate the movements of the Brahmana; the gods produce (rewards) after your worship.

॥ ಸಂಹಿತಾಪಾಠಃ ॥

ಸಪ್ತ ಧಾಮಾನಿ ಪರಿಯನ್ನಮರ್ತ್ಯೋ ದಾಶದ್ದಾಶುಷೇ ಸುಕೃತೇ ಮಾಮಹಸ್ವ ।
ಸುವೀರೇಣ ರಯಿಣಾಗ್ನೇ ಸ್ವಾಭುವಾ ಯಸ್ತ ಆನಟ್ ಸಮಿಧಾ ತಂ ಜುಷಸ್ವ ॥ ೩ ॥

॥ ಪದಪಾಠಃ ॥

ಸಪ್ತ । ಧಾಮಾನಿ । ಪರಿಽಯನ್ । ಅಮರ್ತ್ಯಃ । ದಾಶತ್ । ದಾಶುಷೇ । ಸುಽಕೃತೇ । ಮಮಹಸ್ವ । ಸುಽವೀರೇಣ । ರಯಿಣಾ । ಅಗ್ನೇ । ಸುಽಆಭುವಾ । ಯಃ । ತೇ । ಆನಟ್ । ಸಂಽಇಧಾ । ತಂ । ಜುಷಸ್ವ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸಪ್ತ ಸಪ್ತಸಂಖ್ಯಾಕಾನಿ ಧಾಮಾನಿ ಸ್ಥಾನಾನಿ ಪೃಥಿವ್ಯಾದಿಲೋಕಾತ್ಮಕಾನಿ ಪರಿಯನ್ ಪರಿತೋ ಗಚ್ಛನ್ನಮರ್ತ್ಯೋ ಮರಣಧರ್ಮರಹಿತಸ್ತ್ವಂ ಯೋ ಯಜಮಾನಃ ಪುರೋಡಾಶಾದೀನಿ ಹವೀಂಷಿ ದಾಶತ್ ಪ್ರಯಚ್ಛತಿ ತಸ್ಮೈ ದಾಶುಷೇ ದತ್ತವತೇ ಸುಕೃತೇ ಸುಷ್ಠು ಯಾಗಂ ಕೃತವತೇ ಮಾಮಹಸ್ವ । ಅಪೇಕ್ಷಿತಂ ಧನಂ ದದಸ್ವ । ಮಹತಿರ್ದಾನಕರ್ಮಾ ॥ ಸುಕರ್ಮಪಾಪೇತ್ಯಾದಿನಾ ಸುಪೂರ್ವಾತ್ಕೃಞೋ ಭೂತೇ ಕಾಲೇ ಕ್ವಿಪ್ ॥ ಯಶ್ಚ ಯಜಮಾನಃ ಸಮಿಧಾ ಸಮಿಂಧನಸಾಧನೇನೇಧ್ಮೇನ ಹೇ ಅಗ್ನೇ ತೇ ತ್ವಾಮಾನಟ್ ಪ್ರಾಪ್ನೋತಿ ॥ ನಶತಿರ್ಗತಿಕರ್ಮಾ । ಅಸ್ಮಾಚ್ಛಾಂದಸೋ ಲಙ್ । ಬಹುಲಂ ಛಂದಸೀತಿ ಶಪೋ ಲುಕ್ । ಛಂದಸ್ಯಪಿ ದೃಶ್ಯತ ಇತ್ಯಾಡಾಗಮಃ । ಅಶ್ನೋತೇರ್ವಾ ವ್ಯತ್ಯಯೇನ ಶ್ನಮ್ ॥ ತಂ ಯಜಮಾನಂ ಸುವೀರೇಣ । ಶೋಭನವೀರಾಃ ಪುತ್ರಾ ಯಸ್ಯ ॥ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ ॥ ತಾದೃಶೇನ ಸ್ವಾಭುವಾ ಸುಷ್ಠು ಸಮಂತಾದ್ಭೂಷ್ಣುನಾ ವರ್ಧಿಷ್ಣುನಾ ರಯಿಣಾ ಧನೇನ ದಾತವ್ಯೇನ ಸಾರ್ಧಂ ಜುಷಸ್ವ ॥

|| ಪ್ರತಿಪದಾರ್ಥ ||

(ಎಲೈ ಅಗ್ನಿಯೇ) **ಸಪ್ತ ಧಾಮಾನಿ**—ಪೃಥಿವ್ಯಾದಿ ಲೋಕಗಳೆಂಬ ಏಳುಸ್ಥಾನಗಳನ್ನೂ | **ಪರಿಯನ್**—ಸುತ್ತಿ ಸಂಚರಿಸುವ | **ಅಮರ್ತ್ಯಃ**—ಮರಣ ಧರ್ಮರಹಿತನಾದ ನೀನು | **ದಾಶತ್**—ನಿನಗೆ ಪುರೋಡಾಶಾದಿಗಳನ್ನು ಯಾವ ಯಜಮಾನನು ಅರ್ಪಿಸುವನೋ | **ದಾಶುಷೇ**—ಅಂತಹ ಹವಿಷ್ಪ್ರದಾತೃವೂ | **ಸುಕೃತೇ**—ಯಜ್ಞವನ್ನು ಚನ್ನಾಗಿ ನೆರವೇರಿಸುವವನೂ ಆದ ಯಜಮಾನನಿಗೆ | **ಮಾಮಹಸ್ವ**—ಅವನು ಅಪೇಕ್ಷಿಸುವ ಧನವನ್ನು ಕೊಡು | **ಅಗ್ನೇ**—ಎಲೈ ಅಗ್ನಿಯೇ | **ಯಃ**—ಯಾವ ಯಜಮಾನನು | **ಸಮಿಧಾ**—ಇಧ್ಮಾದಿ ಸಮಿತ್ತುಗಳಿಂದ | **ತೇ**—ನಿನ್ನನ್ನು | **ಆನಟ್**—(ಸೇವಿಸಲು) ಸಮೀಪಿಸುವನೋ | **ತಂ**—ಆ ಯಜಮಾನನನ್ನು | **ಸುವೀರೇಣ**—ವೀರ್ಯವಂತರಾದ ಪುತ್ರರಿಂದಲೂ | **ಸ್ವಾಭುವಾ**—ಚನ್ನಾಗಿ ಅಭಿವೃದ್ಧಿಯನ್ನೈದುವ | **ರಯಿಣಾ**-ಧನದಿಂದಲೂ | **ಜುಷಸ್ವ**—ಸೇವಿಸು ಎಂದರೆ ತೃಪ್ತಿಪಡಿಸು.

|| ಭಾವಾರ್ಥ ||

ಎಲೈ ಅಗ್ನಿಯೇ, ಪೃಥಿವ್ಯಾದಿ ಸಪ್ತಸ್ಥಾನಗಳಲ್ಲಿಯೂ ಸಂಚರಿಸಬಲ್ಲವನೂ ಮರಣಧರ್ಮರಹಿತನೂ ಆದ ನೀನು ನಿನಗೆ ಹವಿರಾದಿಗಳನ್ನು ಅರ್ಪಿಸುವವನೂ ಯಜ್ಞವನ್ನು ಚೆನ್ನಾಗಿ ನೆರವೇರಿಸುವವನೂ ಆದ ಯಜಮಾನನಿಗೆ ಬೇಕಾದ ಧನವನ್ನು ಕೊಡು. ಎಲೈ ಅಗ್ನಿಯೇ, ಸಮಿಧಾದಿ ದ್ರವ್ಯಗಳಿಂದ ನಿನ್ನನ್ನು ಸೇವಿಸಲು ಸಮೀಪಿಸುವ ಯಜಮಾನನಿಗೆ ವೀರ್ಯಯುಕ್ತರಾದ ಪುತ್ರರನ್ನೂ, ಅಭಿವೃದ್ಧಿಯನ್ನೈದುವ ಧನವನ್ನೂ ಕೊಟ್ಟು ತೃಪ್ತಿಪಡಿಸು.

English Translation

Traversing the seven regions (of the universe), immortal Agni, bestow wealth, giving liberally to the pious liberal giver. Gratify with easily obtainable riches, together with fair offspring, him who feeds you with fuel.

|| ಸಂಹಿತಾಪಾಠಃ ||

ಯಜ್ಞಸ್ಯ ಕೇತುಂ ಪ್ರಥಮಂ ಪುರೋಹಿತಂ ಹವಿಷ್ಮಂತ ಈಳತೇ ಸಪ್ತ ವಾಜಿನಂ |

ಶೃಣ್ವಂತಮಗ್ನಿಂ ಘೃತಪೃಷ್ಠಮುಕ್ಷಣಂ ಪೃಣಂತಂ ದೇವಂ ಪೃಣತೇ ಸುವೀರ್ಯಂ || ೪ ||

॥ ಪದಪಾಠಃ ॥

ಯ॒ಜ್ಞಸ್ಯ॑ । ಕೇ॒ತುಂ । ಪ್ರ॒ಥ॒ಮಂ । ಪು॒ರಃऽಹಿ॑ತಂ । ಹ॒ವಿಷ್ಮಂ॑ತಃ । ಈ॒ಳ॒ತೇ॒ । ಸ॒ಪ್ತ । ವಾ॒ಜಿನಂ॑ ।
ಶೃ॒ಣ್ವಂತಂ॑ । ಅ॒ಗ್ನಿಂ । ಘೃ॒ತಽಪೃ॑ಷ್ಠಂ । ಉ॒ಕ್ಷಣಂ॑ । ಪೃ॒ಣಂತಂ॑ । ದೇ॒ವಂ । ಪೃ॒ಣ॒ತೇ । ಸು॒ಽವೀರ್ಯಂ॥೪॥

॥ ಸಾಯಣಭಾಷ್ಯಂ ॥

ಯಜ್ಞಸ್ಯ ಯಾಗಸ್ಯ ಕೇತುಂ ಪ್ರಜ್ಞಾಪಕಂ ಪ್ರಥಮಂ ಸರ್ವೇಷು ದೇವೇಷು ಮುಖ್ಯಂ ಪ್ರಥಮಸ್ಥಾನಂ ವಾ ಪುರೋಹಿತಂ ಪುರತೋ ಹಿತಕಾರಿಣಂ । ಯದ್ವಾ। ಪುರಸ್ತಾತ್ಪೂರ್ವಸ್ಯಾಂ ದಿಶ್ಯಾ-ಹವನೀಯರೂಪೇಣ ನಿಹಿತಂ ॥ ಪೂರ್ವಾಧರೇತ್ಯಾದಿನಾ ಪೂರ್ವಶಬ್ದಾದಸಿಃ ಪ್ರತ್ಯಯಃ । ತತ್ಸಂನಿಯೋ-ಗೇನ ಪ್ರಕೃತೇಃ ಪುರಾದೇಶಶ್ಚ। ತದ್ಧಿತಶ್ಚಾಸರ್ವವಿಭಕ್ತಿರಿತ್ಯವ್ಯಯಸಂಜ್ಞಾಯಾಂ ಪುರೋಽವ್ಯಯಮಿತಿ ಗತಿಸಂಜ್ಞಾ। ಧಾಞಃ ಕರ್ಮಣಿ ನಿಷ್ಠಾ । ದಧಾತೇರ್ಹಿಃ । ತತಃ ಸಮಾಸೇ ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ವಾಜಿನಂ ಬಲವಂತಮನ್ನವಂತಂ ವಾ ಶೃಣ್ವಂತಮಸ್ಮತ್ಸ್ತುತೀಃ ಶ್ರೋತ್ರೇಣ ಜಾನಂತಂ ಘೃತಪೃಷ್ಠಂ ದೀಪ್ತಪೃಷ್ಠಂ ದೀಪ್ತಾಂಗಮುಕ್ಷಣಂ ಯಾಗದ್ವಾರೇಣ ವೃಷ್ಟೇಃ ಸಂಭಕ್ತಾರಂ ಯದ್ವಾ ಸೇಚನಸಮರ್ಥಂ ಯುವಾನಂ ಪೃಣತೇ ಹವಿರ್ಭಿಃ ಪ್ರೀಣಯಿತ್ರೇ ಯಜಮಾನಾಯ ॥ ಪೃಣ ಪ್ರೀಣನೇ ತೌದಾದಿಕಃ। ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ ॥ ಹವಿರ್ಭಿಃ ಪ್ರೀಣಯಂತಂ ಯಜಮಾನಂ ಧನೈಃ ಪ್ರೀಣಯಂತಂ। ಯದ್ವಾ । ಪೃಣತಿರ್ದಾನಕರ್ಮಾ । ಹವೀಂಷಿ ದದತೇ ಯಜಮಾನಾಯ ಪೃಣಂತಂ ಧನಾನಿ ಪ್ರಯಚ್ಛಂ-ತಂ । ಸುವೀರ್ಯಂ ಶೋಭನವೀರ್ಯೋಪೇತಂ ದೇವಂ ದ್ಯೋತಮಾನಂ ದಾನಾದಿಗುಣಯುಕ್ತಂ ವಾ ಏವಂಗುಣವಿಶಿಷ್ಟಮಗ್ನಿಂ ಹವಿಷ್ಮಂತೋ ಹವಿರ್ಭಿರ್ಯುಕ್ತಾಃ ಸಪ್ತ ಹೋತೃಪ್ರಮುಖಾ ವಷಟ್ಕರ್ತಾರ ಈಳತೇ । ಸ್ತುವಂತಿ ॥ ಈಡ ಸ್ತುತೌ ಆದಾದಿಕಃ ॥

॥ ಪ್ರತಿಪದಾರ್ಥ ॥

**ಯಜ್ಞಸ್ಯ**—ಯಜ್ಞಕ್ಕೆ । **ಕೇತುಂ**—ಪ್ರಜ್ಞಾಪಕನೂ । **ಪ್ರಥಮಂ**—ಸಮಸ್ತ ದೇವತೆಗಳಲ್ಲಿಯೂ ಮುಖ್ಯನಾದವನೂ ಅಥವಾ ಪ್ರಥಮಸ್ಥಾನೀಯನೂ । **ಪುರೋಹಿತಂ**—ಯಜ್ಞವೇದಿಯ ಪೂರ್ವಭಾಗಪ್ರದೇಶದಲ್ಲಿ ಆಹವನೀಯರೂಪದಿಂದ ಸ್ಥಾಪಿತನಾದವನೂ । **ವಾಜಿನಂ**—ಬಲವಂತನೂ ಅಥವಾ ಅನ್ನವಂತನೂ । **ಶೃಣ್ವಂತಂ**—ನಮ್ಮ ಸ್ತುತಿಗಳನ್ನು ಕೇಳಿ ತಿಳಿದುಕೊಳ್ಳುವವನೂ । **ಘೃತಪೃಷ್ಠಂ**—ಪ್ರಕಾಶಮಾನವಾದ ಶರೀರವುಳ್ಳನೂ । **ಉಕ್ಷಣಂ**—ಯಜ್ಞನಿರ್ವಹಣೆಯ ಮೂಲಕ ವೃಷ್ಟಿಯನ್ನು ಸುರಿಸುವನೂ ಅಥವಾ ಯುವಕನಾದವನೂ । **ಪೃಣತೇ**—ಹವಿಸ್ಸನ್ನು ಅರ್ಪಿಸಿ ತೃಪ್ತಿ ಪಡಿಸುವ ಯಜಮಾನನಿಗೆ । **ಪೃಣಂತಂ**—ಧನಾದಿಗಳನ್ನು ಕೊಡುವವನೂ । **ಸುವೀರ್ಯಂ**—ಉತ್ತಮವಾದ ಸಾಮರ್ಥ್ಯವುಳ್ಳವನೂ । **ದೇವಂ**—ಪ್ರಕಾಶಾತ್ಮಕನೂ ಆದ । **ಅಗ್ನಿಂ**—ಅಗ್ನಿಯನ್ನು । **ಹವಿಷ್ಮಂತಃ**—ಹವಿಸ್ಸನ್ನು ಸಿದ್ಧಪಡಿಸಿಕೊಂಡಿರುವ । **ಸಪ್ತ**—ಹೋತೃವೇ ಮೊದಲಾದ ಏಳು ಮಂದಿ ಋತ್ವಿಜರು ಎಂದರೆ ವಷಟ್ಕರ್ತೃಗಳಾದ ಸಪ್ತ ಹೋತೃಗಳು । **ಈಳತೇ**—ಸ್ತುತಿಸುತ್ತಾರೆ

|| ಭಾವಾರ್ಥ ||

ಯಜ್ಞಕ್ಕೆ ಪ್ರಜ್ಞಾಪಕನೂ ಅಥವಾ ಧ್ವಜದಂತಿರುವವನೂ, ಸಮಸ್ತ ದೇವತೆಗಳಿಗೂ ಮುಖ್ಯನಾದವನೂ. ಯಜ್ಞವೇದಿಯ ಪೂರ್ವಭಾಗದ ಪ್ರದೇಶದಲ್ಲಿ ಆಹವನೀಯರೂಪದಲ್ಲಿ ಸ್ಥಾಪಿತನಾದವನೂ, ಶಕ್ತಿ ಅಥವಾ ಅನ್ನಯುತನೂ, ನಮ್ಮ ಸ್ತುತಿಗಳನ್ನು ಆಲಿಸಿ ಕೇಳುವವನೂ ಪ್ರಕಾಶಮಾನವಾದ ಶರೀರವುಳ್ಳವನೂ, ವೃಷ್ಟಿಸೇಚಕನೂ, ಹವಿಸ್ಸನ್ನರ್ಪಿಸುವ ಯಜಮಾನನಿಗೆ ಧನಾದಿಗಳನ್ನು ಕೊಡುವವನೂ ಉತ್ತಮವಾದ ಶಕ್ತಿಸಾಮರ್ಥ್ಯಗಳನ್ನು ಹೊಂದಿರುವವನೂ ಪ್ರಕಾಶಾತ್ಮಕನೂ ಆದ ಅಗ್ನಿಯನ್ನು ಹವಿಸ್ಸಿನಿಂದ ಯುಕ್ತರಾದ ಸಪ್ತಹೋತೃಗಳು ಸ್ತುತಿಸುತ್ತಾರೆ

## English Translation.

The seven (priests) bearing oblations worship Agni. the emblem of sacrifice, the first of the gods, the family priest, the possessor of food, the hearer (of our prayers), the anointed with butter, the shedder of moisture propitiating the worshipper who propitiates him, divine, endowed with excellent might.

|| ಸಂಹಿತಾಪಾಠಃ ||

ತ್ವಂ ದೂತಃ ಪ್ರಥಮೋ ವರೇಣ್ಯಃ ಸ ಹೂಯಮಾನೋ ಅಮೃತಾಯ ಮತ್ಸ್ವ ।
ತ್ವಾಂ ಮರ್ಜಯನ್ಮರುತೋ ದಾಶುಷೋ ಗೃಹೇ ತ್ವಾಂ ಸ್ತೋಮೇಭಿರ್ಭೃಗವೋ ವಿ ರುರುಚುಃ ॥ ೫ ॥

|| ಪದಪಾಠಃ ||

ತ್ವಂ । ದೂತಃ । ಪ್ರಥಮಃ । ವರೇಣ್ಯಃ । ಸಃ । ಹೂಯಮಾನಃ । ಅಮೃತಾಯ । ಮತ್ಸ್ವ ।
ತ್ವಾಂ । ಮರ್ಜಯನ್ । ಮರುತಃ । ದಾಶುಷಃ । ಗೃಹೇ । ತ್ವಾಂ । ಸ್ತೋಮೇಭಿಃ । ಭೃಗವಃ । ವಿ । ರುರುಚುಃ ॥ ೫ ॥

|| ಸಾಯಣಭಾಷ್ಯಂ ||

ಹೇ ಅಗ್ನೇ ತ್ವಂ ದೂತೋ ದೇವಾನಾಂ ದೂತಕರ್ಮಣಿ ನಿಯುಕ್ತಃ ಪ್ರಥಮೋ ಮುಖ್ಯಃ ಪ್ರಥಿತಃ ಪ್ರಖ್ಯಾತೋ ವಾ ವರೇಣ್ಯಃ ಸಂಭಜನೀಯಶ್ಚಾಸಿ । ಸ ತ್ವಮಮೃತಾಯಾಮರಣಾಯ ತದರ್ಥಂ ನೋಽಸ್ಮಾಭಿರ್ಹೂಯಮಾನೋ ಹವಿಷಾ ತರ್ಪ್ಯಮಾಣೋ ವಾ ಸನ್ ಮತ್ಸ್ವ । ತ.ಪ.ಸ. ॥ ಮದೀ

ಮಾನಂ ಮರುತಸ್ತತ್ರತ್ಯಾ ದೇವಗಣಾ ಮರ್ಜಯನ್ । ಮಾರ್ಜಯಂತಿ । ಅಲಂಕುರ್ವಂತಿ । ತಥಾ ದಾಶುಷೋ ಹವೀಂಷಿ ದತ್ತವತೋ ಯಜಮಾನಸ್ಯ ಗೃಹೇ ಸ್ತೋಮೇಭಿಃ ಸ್ತೋಮೈಃ ಸ್ತೋತ್ರೈರ್ಭೃಗವೋ ಭೃಗುಗೋತ್ರಾ ಋಷಯಸ್ತ್ವಾಂ ವಿ ರುರುಚುಃ । ವಿಶೇಷೇಣ ದೀಪಯಂತಿ ॥ ಭೃಗುಶಬ್ದಾದುತ್ತರಸ್ಯ ತದ್ಧಿತಸ್ಯಾತ್ರಿಭೃಗುಕುತ್ಸೇತ್ಯಾದಿನಾ । ಪಾ. ೨-೪-೬೫ । ಬಹುಷು ಲುಕ್ । ರುರುಚುಃ । ರುಚ ದೀಪ್ತೌ। ಅಸ್ಮಾಚ್ಛಾಂದಸೋ ಲಿಟ್ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ತ್ವಂ**— ನೀನು । **ದೂತಃ**— ದೇವತೆಗಳಿಗೆ ಹವಿಸ್ಸನ್ನು ವಹಿಸುವ ದೂತನಾಗಿರುವೆ। **ಪ್ರಥಮಃ**— ಸಮಸ್ತ ದೇವತೆಗಳಲ್ಲಿಯೂ ಮುಖ್ಯನಾದವನೂ । **ವರೇಣ್ಯಃ**— ಸರ್ವರಿಂದಲೂ ಅಪೇಕ್ಷಿಸಲ್ಪಡುವವನೂ ಆದ । **ಸಃ(ತ್ವಂ)**— ಆ ನೀನು । **ಅಮೃತಾಯ**— ಮರಣರಹಿತವಾದ (ಸ್ವರ್ಗ) ಪದವಿಗಾಗಿ । **ಹೂಯಮಾನಃ**— ನಮ್ಮಿಂದ ಪ್ರಾರ್ಥಿಸಿ ಕರೆಯಲ್ಪಟ್ಟವನಾಗಿ । **ಮತ್ಸ್ವ**— ತೃಪ್ತನಾಗು (ಹರ್ಷವನ್ನು ಹೊಂದು) । **ತ್ವಾಂ**— ಅಂತರಿಕ್ಷದಲ್ಲಿ ವೈದ್ಯುತರೂಪದಿಂದಿರುವ ನಿನ್ನನ್ನು । **ಮರುತಃ**— ಅಲ್ಲಿರುವ ಮರುದ್ದೇವತೆಗಳು । **ಮರ್ಜಯನ್**— ಅಲಂಕರಿಸುತ್ತಾರೆ (ಮತ್ತು) । **ದಾಶುಷಃ**— ಹವಿಸ್ಸನ್ನು ಅರ್ಪಿಸುವ ಯಜಮಾನನ । **ಗೃಹೇ**— ಮನೆಯಲ್ಲಿ । **ಭೃಗವಃ**— ಭೃಗುಗೋತ್ರದ ಋಷಿಗಳು । **ಸ್ತೋಮೇಭಿಃ**— ಸ್ತೋಮಗಳಿಂದಲೂ ಸ್ತುತಿಗಳಿಂದಲೂ । **ವಿ ರುರುಚುಃ**— ನಿನ್ನನ್ನು ವಿಶೇಷವಾಗಿ ಪ್ರಜ್ವಲಗೊಳಿಸುತ್ತಾರೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ದೇವತೆಗಳಿಗೆ ಹವಿಸ್ಸನ್ನು ವಹಿಸುವುದರಿಂದ ದೂತನೆನಿಸಿದವನೂ, ಸರ್ವರಿಂದಲೂ ಅಪೇಕ್ಷಿಸಲ್ಪಡುವವನೂ ಆದ ನೀನು ಮರಣರಹಿತವಾದ ಸ್ವರ್ಗಾದಿಪ್ರಾಪ್ತಿಗಾಗಿ ನಮ್ಮಿಂದ ಪ್ರಾರ್ಥಿಸಿ ಕರೆಯಲ್ಪಟ್ಟು ಹರ್ಷಚಿತ್ತನಾಗು. ಅಂತರಿಕ್ಷದಲ್ಲಿ ವೈದ್ಯುತಾಗ್ನಿರೂಪದಿಂದಿರುವ ನಿನ್ನನ್ನು ಅಲ್ಲಿರುವ ಮರುದ್ದೇವತೆಗಳು ಅಲಂಕರಿಸುತ್ತಾರೆ. ಹವಿಸ್ಸನ್ನು ಅರ್ಪಿಸುವ ಯಜಮಾನನ ಮನೆಯಲ್ಲಿ ಭೃಗುಗೋತ್ರೋತ್ಪನ್ನರಾದ ಋಷಿಗಳು ಸ್ತೋತ್ರಾದಿಗಳಿಂದ ನಿನ್ನನ್ನು ಉದ್ದೀಪನಗೊಳಿಸಿ ಪ್ರಕಾಶಿಸುವಂತೆ ಮಾಡುತ್ತಾರೆ

## English Translation.

You are the chief and most excellent messenger ; do you, invoked by us to partake of the ambrosia, become, exhilarated , the Maruts decorated you in the dwelling of the donor of the oblation : the Bhrigus have glorified you with hymns.

॥ ಸಂಹಿತಾಪಾಠಃ ॥

ಇಷಂ ದುಹನ್ತ್ಸುದುಘಾಂ ವಿಶ್ವಧಾಯಸಂ ಯಜ್ಞಪ್ರಿಯೇ ಯಜಮಾನಾಯ ಸುಕ್ರತೋ ।

ಅಗ್ನೇ ಘೃತಸ್ನುಸ್ತ್ರಿರೃತಾನಿ ದೀದ್ಯದ್ವರ್ತಿರ್ಯಜ್ಞಂ ಪರಿಯನ್ತ್ಸುಕ್ರತೂಯಸೇ ‖ ೬ ‖

‖ ಪದಪಾಠಃ ‖

ಇಷಂ । ದುಹನ್ । ಸುಽದುಘಾಂ । ವಿಶ್ವಽಧಾಯಸಂ । ಯಜ್ಞಽಪ್ರಿಯೇ । ಯಜಮಾನಾಯ । ಸುಕ್ರತೋ ಇತಿ ಸುಽಕ್ರತೋ ।

ಅಗ್ನೇ । ಘೃತಽಸ್ನುಃ । ತ್ರಿಃ । ಋತಾನಿ । ದೀದ್ಯತ್ । ವರ್ತಿಃ । ಯಜ್ಞಂ । ಪರಿಽಯನ್ । ಸುಕ್ರತುಽಯಸೇ ‖

‖ ಸಾಯಣಭಾಷ್ಯಂ ‖

ಹೇ ಸುಕ್ರತೋ ಸುಕರ್ಮನ್ ಶೋಭನಪ್ರಜ್ಞ ವಾಗ್ನೇ ಯಜ್ಞಪ್ರಿಯೇ ಯಜ್ಞೈರ್ಹವಿರ್ಭಿರ್ದೇವಾನ್ಪ್ರೀಣಯಿತ್ರೇ ಯಜಮಾನಾಯ ವಿಶ್ವಧಾಯಸಂ ವಿಶ್ವಸ್ಯ ಸರ್ವಸ್ಯ ಧಾರಯಿತ್ರೀಂ ಸುದುಘಾಂ ದೋಗ್ಧುಂ ಸುಶಕ್ಯಾಂ ಯಜ್ಞರೂಪಿಣೀಂ ಗಾಮಿಷಮಿಷ್ಯಮಾಣಂ ಯಾಗಫಲರೂಪಂ ಪಯೋ ದುಹನ್ ಕ್ಷಾರಯನ್ ತಥಾ ಘೃತಸ್ನುರ್ಘೃತೇನಾಜ್ಯೇನ ಪ್ರಸ್ನಾತಃ ‖ ಸ್ನಾತೇರೌಣಾದಿಕಃ ಕುಪ್ರತ್ಯಯಃ ‖ ಯದ್ವಾ । ಘೃತೋ ದೀಪ್ತಃ ಸ್ನುಃ ಸಾನುಃ ಸಮುಚ್ಛ್ರಿತೋ ಜ್ವಾಲಾಸಮೂಹೋ ಯಸ್ಯ ಸ ತಥೋಕ್ತಃ ‖ ಪದಾದಿಷು ಮಾಂಸ್ಪೃತ್ಸ್ನೂನಾಮುಪಸಂಖ್ಯಾನಂ । ಪಾ. ೬-೧-೬೩-೧ । ಇತಿ ಸಾನುಶಬ್ದಸ್ಯ ಸ್ನುಭಾವಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ‖ ಈದೃಶಸ್ತ್ವಂ ತ್ರಿಸ್ತ್ರಿವಾರಮಾವೃತ್ತಾನ್ಯೃತಾನಿ ಸತ್ಯಭೂತಾನಿ ಪೃಥಿವ್ಯಾದೀನಿ ತ್ರೀಣಿ ಸ್ಥಾನಾನಿ ಯದ್ವಾ ಗಾರ್ಹಪತ್ಯಾದೀನಿ ಸ್ಥಾನಾನಿ ದೀದ್ಯದ್ದೀಪಯನ್ವರ್ತಿಃ ಸರ್ವಂ ಯಜ್ಞಗೃಹಂ ಸರ್ವಮನುಷ್ಠೀಯಮಾನಂ ಯಾಗಂ ಚ ಪರಿಯನ್ ಪರಿತೋ ಗಚ್ಛನ್ ತತ್ತದ್ಯಜ್ಞಗೃಹಂ ತಂ ತಂ ಯಜ್ಞಂ ಚ ಪ್ರಾಪ್ನುವನ್ ಸುಕ್ರತೂಯಸೇ । ಶೋಭನಂ ಕ್ರತುಂ ಯಜ್ಞಮಾತ್ಮನ ಇಚ್ಛಸಿ । ಯದ್ವಾ । ಶೋಭನಃ ಕ್ರತುರ್ಯಸ್ಯಾಸೌ ಸುಕ್ರತುರ್ಯಜಮಾನಃ । ಸ ಇವಾಚರಸಿ । ಸ ಯಥಾ ಸಮ್ಯಗನುಷ್ಠಾನೇ ಪ್ರವರ್ತತೇ ಏವಂ ತ್ವಮಪಿ ಸ್ವಯಮೇವ ಯಾಗಸ್ಯ ಸಮ್ಯಗ್ನಿಷ್ಪತ್ತ್ಯರ್ಥಂ ಪ್ರವರ್ತಸ ಇತ್ಯರ್ಥಃ ‖

‖ ಪ್ರತಿಪದಾರ್ಥ ‖

**ಸುಕ್ರತೋ**—ಉತ್ತಮಕರ್ಮಯುಕ್ತನಾದ । **ಅಗ್ನೇ**—ಎಲೈ ಅಗ್ನಿಯೇ । **ಯಜ್ಞಪ್ರಿಯೇ**—ಯಜ್ಞಕರ್ಮದಿಂದ ದೇವತೆಗಳನ್ನು ತೃಪ್ತಪಡಿಸುವ । **ಯಜಮಾನಾಯ**—ಯಜಮಾನನಿಗಾಗಿ । **ವಿಶ್ವಧಾಯಸಂ**—ಸರ್ವರನ್ನೂ ಧರಿಸಿ ಪೋಷಿಸುವ । **ಸುಧುಘಾಂ**—ಇಷ್ಟಾರ್ಥಗಳೆಂಬ ಹಾಲನ್ನು ಕರೆಯುವ ಯಜ್ಞರೂಪಿಯಾದ ಗೋವನ್ನು । **ಇಷಂ**—ಯಾಗಫಲರೂಪವಾದ ಹಾಲನ್ನು । **ದುಹನ್**—ಕರೆಯುವವನೂ । **ಘೃತಸ್ನುಃ**—ಆಜ್ಯದಿಂದ ಸಿಕ್ತನಾದವನೂ ಅಥವಾ ಆಜ್ಯದಿಂದ ಪ್ರದೀಪ್ತವಾದ ಜ್ವಾಲೆಗಳುಳ್ಳವನೂ ಆದ ನೀನು । **ತ್ರಿಃ ಋತಾನಿ**—

ಸತ್ಯಭೂತವಾದ ಪೃಥಿವ್ಯಾದಿ ಮೂರು ಸ್ಥಾನಗಳನ್ನು ಅಥವಾ ಗಾರ್ಹಪತ್ಯಾದಿ ಮೂರು ಅಗ್ನಿಸ್ಥಾನಗಳನ್ನು । **ದೀದ್ಯನ್**—ಪ್ರಕಾಶಗೊಳಿಸುತ್ತಾ । **ವರ್ತಿಃ**—ಯಜ್ಞಗೃಹದ ಮತ್ತು ಯಾಗದ ಸುತ್ತಲೂ । **ಪರಿಯನ್**—ಸಂಚರಿಸುತ್ತಾ । **ಸುಕ್ರತೂಯಸೇ**—ಯಜಮಾನನ ಯಜ್ಞವನ್ನು ಚೆನ್ನಾಗಿ ನೆರವೇರಿಸುತ್ತೀಯೆ. ಅಥವಾ ಯಜ್ಞಮಾಡುವ ಯಜಮಾನನಂತೆ ವರ್ತಿಸುತ್ತೀಯೆ.

॥ ಭಾವಾರ್ಥ ॥

ಉತ್ತಮ ಕರ್ಮ ಅಥವಾ ಪ್ರಜ್ಞೆಯಿಂದ ಕೂಡಿದ ಎಲೈ ಅಗ್ನಿಯೇ, ಯಜ್ಞಕರ್ಮದಿಂದ ಎಂದರೆ ಹವಿರಾದಿಗಳಿಂದ ದೇವತೆಗಳನ್ನು ತೃಪ್ತಿಪಡಿಸುವ ಯಜಮಾನನಿಗೆ ಸರ್ವರನ್ನೂ ಧರಿಸಿ ಪೋಷಿಸುವುದೂ ಇಷ್ಟಾರ್ಥಗಳೆಂಬ ಹಾಲನ್ನು ಕರೆಯುವುದೂ ಆದ ಯಜ್ಞರೂಪಿಯಾದ ಗೋವಿನಿಂದ ಯಾಗಫಲರೂಪವಾದ ಹಾಲನ್ನು ಕರೆಯುವವನೂ, ಆಜ್ಯದಿಂದ ಸಿಕ್ತವಾದ ಶರೀರವುಳ್ಳವನೂ ಅಥವಾ ದೀಪ್ತತೇಜಸ್ಕನೂ ಆದ ನೀನು ಸತ್ಯಭೂತವಾದ ಪೃಥಿವ್ಯಾದಿಸ್ಥಾನತ್ರಯಗಳನ್ನು ಅಥವಾ ಗಾರ್ಹಪತ್ಯಾದಿ ಮೂರು ಅಗ್ನಿಕುಂಡಗಳನ್ನು ಪ್ರಕಾಶಗೊಳಿಸುತ್ತಾ ಯಜ್ಞ ಮತ್ತು ಯಜ್ಞಗೃಹದ ಸುತ್ತಲೂ ಸಂಚರಿಸಿ ಯಜಮಾನನ ಯಜ್ಞವನ್ನು ಚೆನ್ನಾಗಿ ನೆರವೇರಿಸುತ್ತೀಯೆ

English Translation

Milking the easily milked cow (of sacrifice) of her all-sustaining food, for the benefit of the pious institutor of the rite, O Agni, doer of good deeds, anointed with butter, illumining the three regions, presiding (over the hall of sacrifice), going round the sacrifice, you accomplish each holy rite.

॥ ಸಂಹಿತಾಪಾಠಃ ॥

ತ್ವಾಮಿದಸ್ಯಾ ಉಷಸೋ ವ್ಯುಷ್ಟಿಷು ದೂತಂ ಕೃಣ್ವಾನಾ ಅಯಜಂತ ಮಾನುಷಾಃ ।
ತ್ವಾಂ ದೇವಾ ಮಹಯಾಯ್ಯಾಯ ವಾವೃಧುರಾಜ್ಯಮಗ್ನೇ ನಿಮೃಜಂತೋ ಅಧ್ವರೇ ॥ ೭ ॥

॥ ಪದಪಾಠಃ ॥

ತ್ವಾಂ । ಇತ್ । ಅಸ್ಯಾಃ । ಉಷಸಃ । ವಿऽಉಷ್ಟಿಷು । ದೂತಂ । ಕೃಣ್ವಾನಾಃ । ಅಯಜಂತ । ಮಾನುಷಾಃ ।
ತ್ವಾಂ । ದೇವಾಃ । ಮಹಯಾಯ್ಯಾಯ । ವವೃಧುಃ । ಆಜ್ಯಂ । ಅಗ್ನೇ । ನಿऽಮೃಜಂತಃ । ಅಧ್ವರೇ ॥ ೭ ॥

|| ಸಾಯಣಭಾಷ್ಯಂ ||

ಅಸ್ಯಾ ಇದಾನೀಂ ದೃಶ್ಯಮಾನಾಯಾ ಉಷಸೋ ವ್ಯುಷ್ಟಿಷು ವಿವಾಸನೇಷು ಪ್ರಭಾತೇಷು ಸತ್ಸು ಹೇ ಅಗ್ನೇ ತ್ವಾಮಿತ್ತ್ವಾಮೇವ ದೇವಾನಾಂ ದೂತಂ ಕೃಣ್ವಾನಾಃ ಕುರ್ವಾಣಾ ಮಾನುಷಾ ಮನುಷ್ಯಾ ಅಯಜಂತ । ಯಜಂತಿ । ಸರ್ವದೇವಾತ್ಮಕಂ ತ್ವಾಮೇವ ಯಜಂತೀತ್ಯರ್ಥಃ । ತಥಾ ದೇವಾ ಅಪಿ ತ್ವಾಂ ಮಹಯಾಯ್ಯಾಯ ಪೂಜಾಯೈ ॥ ಮಹ ಪೂಜಾಯಾಂ । ಅಸ್ಮಾದ್ದಾಣಾದಿಕೋ ಭಾವ ಆಯ್ಯಪ್ರತ್ಯಯಃ॥ ಆತ್ಮನಃ ಪೂಜಾರ್ಥಂ ವಾವೃಧುಃ । ವರ್ಧಯಂತಿ । ಕಿಂ ಕುರ್ವಂತಃ । ಅಧ್ವರೇ । ಧ್ವರೋ ಹಿಂಸಾನಿಮಿತ್ತಃ ಪ್ರತ್ಯವಾಯಃ । ತದ್ರಹಿತೇ ಯಾಗ ಆಜ್ಯಂ । ಉಪಲಕ್ಷಣಮೇತತ್ । ಆಜ್ಯೋಪಲಕ್ಷಿತಂ ಸರ್ವಂ ಹವಿರ್ನಿಮೃಜಂತಸ್ತ್ವಯಿ ನಿಮಾರ್ಜಯಂತಃ । ಪ್ರಕ್ಷಿಪಂತ ಇತ್ಯರ್ಥಃ ॥

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ಅಸ್ಯಾಃ**—ಈಗ ಕಾಣುತ್ತಿರುವ । **ಉಷಸಃ**—ಉಷಃಕಾಲದ । **ವ್ಯುಷ್ಟಿಷು**—ಪ್ರಾದುರ್ಭಾವಕಾಲದಲ್ಲಿ । **ತ್ವಾಂ ಇತ್** - ನಿನ್ನನ್ನೇ । **ದೂತಂ**—ದೇವತೆಗಳಿಗೆ ಹವಿಸ್ಸನ್ನು ವಹಿಸುವ ದೂತನನ್ನಾಗಿ । **ಕೃಣ್ವಾನಾಃ**—ಮಾಡಿಕೊಂಡಿರುವ । **ಮಾನುಷಾಃ**—ಮನುಷ್ಯರು । **ಅಯಜಂತ**—ನಿನ್ನನ್ನೇ ಆರಾಧಿಸುತ್ತಾರೆ (ಹಾಗೆಯೇ) । **ದೇವಾಃ** ದೇವತೆಗಳೂ ಸಹ । **ಅಧ್ವರೇ**—ಯಜ್ಞದಲ್ಲಿ । **ಆಜ್ಯಂ**—ಆಜ್ಯವನ್ನು ಅಥವಾ ಆಜ್ಯಸಹಿತವಾದ ಹವಿಸ್ಸನ್ನು । **ನಿಮೃಜಂತಃ**—ಅರ್ಪಿಸುತ್ತಾ (ಇಡುತ್ತಾ) । **ತ್ವಾಂ**—ನಿನ್ನನ್ನು । **ಮಹಯ್ಯಾಯ**—ಪೂಜಾರ್ಥವಾಗಿ । **ವಾವೃಧುಃ**—ಸ್ತೋತ್ರಾದಿಗಳಿಂದ ಸ್ತುತಿಸಿ ಪ್ರವೃದ್ಧಮಾನನನ್ನಾಗಿ ಮಾಡುತ್ತಾರೆ

|| ಭಾವಾರ್ಥ ||

ಎಲೈಅಗ್ನಿಯೇ ಈಗತಾನೇ.ಕಾಣುತ್ತಿರುವ ಉಷಃಕಾಲದ ಪ್ರಾದುರ್ಭಾವದಲ್ಲಿ ದೇವತೆಗಳಿಗೆ ಹವಿಸ್ಸನ್ನು ವಹಿಸುವ ದೂತನನ್ನಾಗಿ ಮಾಡಿಕೊಂಡಿರುವ ಮನುಷ್ಯರು ನಿನ್ನನ್ನೇ,ಆರಾಧಿಸುತ್ತಾರೆ ದೇವತೆಗಳು ಸಹ ಯಜ್ಞದಲ್ಲಿ ಆಜ್ಯವನ್ನು ಅರ್ಪಿಸುತ್ತಾ ಪೂಜಾರ್ಥವಾಗಿ ನಿನ್ನನ್ನು ಸ್ತೋತ್ರಗಳಿಂದ ಸ್ತುತಿಸಿ ಪ್ರವರ್ಧಮಾನನನ್ನಾಗಿ ಮಾಡುತ್ತಾರೆ.

## English Translation

Men worshipped you, Agni, at the opening of the present dawn, appointing you their messenger to the gods, the gods have magnified you for their adoration, sprinkling butter upon you at the sacrifice.

|| ಸಂಹಿತಾಪಾಠಃ ||

ನಿ ತ್ವಾ ವಸಿಷ್ಠಾ ಅಹ್ವಂತ ವಾಜಿನಂ ಗೃಣಂತೋ ಅಗ್ನೇ ವಿದಥೇಷು ವೇಧಸಃ ।

ರಾಯಸ್ಪೋಷಂ ಯಜಮಾನೇಷು ಧಾರಯ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೮ ॥

॥ ಪದಪಾಠಃ ॥

ನಿ । ತ್ವಾ । ವಸಿಷ್ಠಾಃ । ಅಹ್ವಂತ । ವಾಜಿನಂ । ಗೃಣಂತಃ । ಅಗ್ನೇ । ವಿದಥೇಷು । ವೇಧಸಃ ।

ರಾಯಃ । ಪೋಷಂ । ಯಜಮಾನೇಷು । ಧಾರಯ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಿದಥೇಷು । ವಿದಂತ್ಯಸ್ಮಿನ್ನಯಷ್ಟವ್ಯಾನ್ದೇವಾನಿತಿ ವಿದಥೋ ಯಜ್ಞಃ। ತೇಷು ವೇಧಸಃ ಕರ್ಮಣಾಂ ವಿಧಾತಾರೋ ಗೃಣಂತಃ ಸ್ತುವಂತೋ ವಸಿಷ್ಠಾ ವಸಿಷ್ಠಪುತ್ರಾ ಋಷಯೋ ವಾಜಿನಮನ್ನವಂತಂ ಬಲವಂತಂ ವಾ ತ್ವಾಂ ನ್ಯಹ್ವಂತ । ನಿತರಾಮಾಹ್ವಯನ್ । ಅಸ್ತಾವಿಷುರ್ವಾ ॥ ಹ್ವೇಞೋ ಲುಙಿ ನಿಸಮುಪವಿಭ್ಯೋ ಹ್ವ ಇತ್ಯಾತ್ಮನೇಪದಂ । ಆತ್ಮನೇಪದೇಷ್ವನ್ಯತರಸ್ಯಾಂ । ಪಾ. ೩-೧-೫೪ । ಇತಿ ಚ್ಲೇರಙಾದೇಶಃ । ವಸಿಷ್ಠಶಬ್ದಾದ್ವಿಹಿತಸ್ಯಾಪತ್ಯಾರ್ಥಪ್ರತ್ಯಯಸ್ಯಾತ್ರಿಭೃಗುಕುತ್ಸೇತ್ಯಾದಿನಾ ಬಹುಷು ಲುಕ್ ॥ ಸ ತ್ವಂ ಯಜಮಾನೇಷ್ವಸ್ಮಾಸು ರಾಯೋ ಧನಸ್ಯ ಪೋಷಂ ಪುಷ್ಟಂ ಧಾರಯ । ಅವಸ್ಥಾಪಯ ॥ ಊಡಿದಮಿತ್ಯಾದಿನಾ ರೈಶಬ್ದಾತ್ಪಷ್ಠ್ಯಾ ಉದಾತ್ತತ್ವಂ । ಷಷ್ಠ್ಯಾಃ ಪತಿಪುತ್ರೇತಿ ವಿಸರ್ಜನೀಯಸ್ಯ ಸತ್ವಂ ಗತಮನ್ಯತ್ । ಏಕಸ್ಮಿನ್ನಪ್ಯಗ್ನೌ ಪೂಜಾರ್ಥಂ ಬಹುವಚನಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ವಿದಥೇಷು**—ಯಜ್ಞಗಳಲ್ಲಿ । **ವೇಧಸಃ**—ಕರ್ಮನಿರತರೂ । **ಗೃಣಂತಃ**—ಸ್ತುತಿಸುವವರೂ ಆದ । **ವಸಿಷ್ಠಾಃ**—ವಸಿಷ್ಠಪುತ್ರರಾದ ಋಷಿಗಳು । **ವಾಜಿನಂ**—ಅನ್ನವಂತನಾದ ಅಥವಾ ಶಕ್ತಿಯುತನಾದ ನಿನ್ನನ್ನು । **ನಿ ಅಹ್ವಂತ**—ವಿಶೇಷವಾಗಿ ಆಹ್ವಾನಿಸಿ ಕರೆಯುತ್ತಾರೆ । (**ತ್ವಂ**—ನೀನು) । **ಯಜಮಾನೇಷು**—ಯಜ್ಞಮಾಡುವ ನಮ್ಮಲ್ಲಿ । **ರಾಯಃ**—ಧನದ । **ಪೋಷಂ**—ಪುಷ್ಟಿಯನ್ನು ಎಂದರೆ ಅಭಿವೃದ್ಧಿಯನ್ನು । **ಧಾರಯ**—ಸ್ಥಾಪಿಸು (ಎಲೈ ದೇವತೆಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಕರ್ಮನಿರತರೂ ನಿನ್ನ ಸ್ತುತಿಯನ್ನು ಮಾಡುತ್ತಿರುವವರೂ ಆದ ವಸಿಷ್ಠಪುತ್ರರಾದ ಋಷಿಗಳು ಅನ್ನವಂತನಾದ ನಿನ್ನನ್ನು ವಿಶೇಷವಾಗಿ ಪ್ರಾರ್ಥಿಸಿ ಸ್ತುತಿಸುತ್ತಾರೆ. ನೀನು ಯಜಮಾನರಲ್ಲಿ ಧನಸಮೃದ್ಧಿಯನ್ನು ಸ್ಥಾಪಿಸು ಅಥವಾ ಯಜಮಾನರಿಗೆ ಧನವನ್ನೂ ಪುಷ್ಟಿಯನ್ನೂ ಅನುಗ್ರಹಿಸು. ಎಲೈ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation.

The pious Vasishthas invoked you, Agni, at the sacrificial meetings, praising you, the mighty one; continue the sustanance of riches amongst the institutors of the rite, and do you (gods) ever cherish us with blessings.

# ನೂರ ಇಪ್ಪತ್ತಮೂರನೆಯ ಸೂಕ್ತವು



## ಪೀಠಿಕೆ.

ಈ ಸೂಕ್ತದ ಋಷಿಯೂ, ದೇವತೆಯೂ ವೇನನೆಂದು ಹೇಳಲಾಗಿದೆ. ಈ ವೇನನು ಯಾರು ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಯಾಸ್ಕರು—

**ವೇನಃ । ವೇನೋ ವೇನತೇಃ ಕಾಂತಿಕರ್ಮಣಃ ॥** (ನಿ. ೧೦-೩೮)

ಎಂದು ಹೇಳಿದಾರೆ. ಇಚ್ಛಿಸು, ಅಪೇಕ್ಷಿಸು ಎಂಬರ್ಥವುಳ್ಳ ವೇನತಿ ಧಾತುವಿನಿಂದ ವೇನಶಬ್ದವು ನಿಷ್ಪನ್ನವಾಗಿದೆ. ಈ ದೇವತೆಯು ಸರ್ವಲೋಕಗಳನ್ನೂ ಬೆಳಗುವ ಮಧ್ಯಮಸ್ಥಾನದೇವತೆಯು. ಸರ್ವರಿಗೂ ಉಪಕಾರಮಾಡುವುದರಿಂದ ಇವನನ್ನು ಎಲ್ಲರೂ ಅಪೇಕ್ಷಿಸುವರು ಎಂಬರ್ಥವನ್ನು ವಿವರಿಸಿದಾರೆ.

ಋಗ್ವೇದಸಂಹಿತೆಯ. ೧-೮೩-೫ ನೇಋಕ್ಕಿನಲ್ಲಿ

**ಯಜ್ಞೈರಥರ್ವಾ ಪ್ರಥಮಃ ಪಥಸ್ತತೇ ತತಃ ಸೂರ್ಯೋ ವ್ರತಪಾ ವೇನ ಆಜನಿ ।**

**ಆ ಗಾ ಆಜದುಶನಾ ಕಾವ್ಯಃ ಸಚಾ ಯಮಸ್ಯ ಜಾತಮಮೃತಂ ಯಜಾಮಹೇ ॥**

ಎಂದು ಹೇಳಿರುವುದು. ಈ ಋಕ್ಕಿನಲ್ಲಿರುವ **ವೇನಃ** ಎಂಬ ಶಬ್ದಕ್ಕೆ ಸಾಯಣರು ವೇನಃ ಕಾಂತಃ ಸೂರ್ಯಃ ಸೂರ್ಯರೂಪ ಇಂದ್ರಃ-ಪ್ರಕಾಶಮಾನನಾದ ಸೂರ್ಯ ಅಥವಾ ಸೂರ್ಯಾತ್ಮಕನಾದ ಇಂದ್ರನೆಂದು ಅರ್ಥವಿವರಣೆಮಾಡಿದಾರೆ. ಇದಲ್ಲದೆ ಈ ಋಕ್ಕಿನಲ್ಲಿ ಈ ಸೂಕ್ತದ ಋಷಿಯ ತಂದೆಯಾದ ಭೃಗುಋಷಿಯ ಪ್ರಸ್ತಾಪವೂ ಇದೆ. ಆದ್ದರಿಂದ ವೇನಶಬ್ದಕ್ಕೆ ಕಾಂತ-ಪ್ರಕಾಶಮಾನನಾದ, ಸರ್ವರಿಂದಲೂ ಅಪೇಕ್ಷಿಸಲ್ಪಡುವ ಎಂಬರ್ಥವಿರುವುದು. ಈ ಗುಣವಿಶಿಷ್ಟನಾದ ದೇವತೆಯಾರು? ಸಾಧಾರಣವಾಗಿ ಸೂರ್ಯನೆಂದು ಹೇಳಬೇಕಾಗುವುದು. ಸಾಯಣರು ಪ್ರಕೃತಋಕ್ಕಿನ ಭಾಷ್ಯದಲ್ಲಿ **ವೇನಃ ಕಾಂತ ಏತತ್ಸಂಜ್ಞೋ ಮಧ್ಯಮಸ್ಥಾನೋ ದೇವಃ** ಮಧ್ಯಮ(ಅಂತರಿಕ್ಷ) ಸ್ಥಾನದ ಪ್ರಕಾಶಮಾನನಾದ ವೇನನೆಂಬ ಹೆಸರಿನ ಒಬ್ಬ ದೇವನು ಎಂದು ವಿವರಿಸಿದಾರೆ. ಮೇಲೆ ಹೇಳಿದ ಪ್ರಕಾಶಮಾನವಾದ ಮತ್ತು ಸರ್ವರಿಂದಲೂ ಅಪೇಕ್ಷಿಸಲ್ಪಡುವ ಎಂಬ ಗುಣಗಳು ಇತರ ಅನೇಕ ದೇವತೆಗಳಿಗೂ ಮುಖ್ಯವಾಗಿ ಪರಬ್ರಹ್ಮನಿಗೂ ಅನ್ವಯಿಸು

ವುದರಿಂದ ವೇನ ಎಂದರೆ ಬ್ರಹ್ಮನೆಂದೂ ಹೇಳಬಹುದು. ಪ್ರಕೃತ ಸೂಕ್ತದಲ್ಲಿ ಈ ದೇವತೆಯು ಮಧ್ಯಮಸ್ಥಾನ ದೇವತೆಯೆಂದೂ ವೃಷ್ಟ್ಯಾದಿಗಳಿಗೆ ಕಾರಣಭೂತನೆಂದೂ ಸ್ತುತಿಸಿರುವುದರಿಂದ, ಇಂದ್ರ ಅಥವಾ ಪರ್ಜನ್ಯ ಎಂಬ ದೇವತೆಯೂ ಆಗಬಹುದು. ಯಜುರ್ವೇದದ ತೈತ್ತಿರೀಯೋಪನಿಷತ್ತಿನಲ್ಲಿ—

**ವೇನಸ್ತತ್ಪಶ್ಯನ್ನಿಶ್ವಾ ಭುವನಾನಿ ವಿದ್ವಾನ್ಯತ್ರ ವಿಶ್ವಂ ಭವತ್ಯೇಕನೀಳಂ ।**
**ಯಸ್ಮಿನ್ನಿದಗ್ಂ ಸಂ ಚ ವಿ ಚೈಕಗ್ಂ ಸ ಓತಃ ಪ್ರೋತಶ್ಚ ವಿಭು ಪ್ರಜಾಸು ॥**
**ಪ್ರ ತದ್ವೋಚೇ ಅಮೃತಂ ನು ವಿದ್ವಾನ್ಗಂಧರ್ವೋ ನಾಮ ನಿಹಿತಂ ಗುಹಾಸು ।**
**ತ್ರೀಣಿ ಪದಾ ನಿಹಿತಾ ಗುಹಾಸು ಯಸ್ತದ್ವೇದ ಸವಿತುಃ ಪಿತಾ ಸತ್ ॥** (ತೈ. ಉ ೪-೧)

ಎಂಬ ಮಂತ್ರಗಳಲ್ಲಿ ಇರುವ ವೇನಃ ಎಂಬ ಶಬ್ದಕ್ಕೆ ಸಾಯಣರು **ವೇನೋ ನಾಮ ಗಂಧರ್ವಃ** ವೇನ ಎಂಬ ಹೆಸರಿನ ಗಂಧರ್ವನು ಎಂದು ಅರ್ಥವಿವರಣೆ ಮಾಡಿದಾರೆ ಆದರೆ ಈ ಸೂಕ್ತದ ೪ನೆಯ ಋಕ್ಕಿನಲ್ಲಿರುವ ಗಂಧರ್ವ ಶಬ್ದಕ್ಕೆ ಸಾಯಣರು **ಗವಾಮುದಕಾನಾಂ ಧರ್ತಾ** ಉದಕಗಳನ್ನು ಧರಿಸಿ ಪಾಲಿಸುವವನು ಎಂದರ್ಥಮಾಡಿದಾರೆ ಮತ್ತು ಋ ಸಂ. ೧ ೧೬೪-೩೦, ೮-೩-೧೮, ೮-೬೩-೧, ಇತ್ಯಾದಿ ಋಕ್ಕುಗಳಲ್ಲಿ ವೇನ ಶಬ್ದಕ್ಕೆ ಸರ್ವರಿಂದಲೂ ಅಪೇಕ್ಷಿತನಾದ ಅಥವ ಕಾಂತಿಯುಕ್ತನಾದ ಎಂಬ ಸಾಮಾನ್ಯಾರ್ಥವೇ ಉಕ್ತವಾಗಿದೆ. ಈ ದೇವತೆಯನ್ನು ಸ್ತುತಿಸುವ ಸೂಕ್ತವು ಋಗ್ವೇದದಲ್ಲಿ ಇದೊಂದು ಮಾತ್ರ. ಬೇರೆ ಯಾವುದೂ ಇಲ್ಲ

॥ ಸಾಯಣಭಾಷ್ಯಂ ॥

**ಅಯಂ ವೇನ ಇತ್ಯಷ್ಟರ್ಚಮೇಕಾದಶಂ ಸೂಕ್ತಂ ಭಾರ್ಗವಸ್ಯ ವೇನಸ್ಯಾರ್ಷಂ ತ್ರೈಷ್ಟುಭಂ । ವೇನೋ ದೇವತಾ । ತಥಾ ಚಾನುಕ್ರಾಂತಂ । ಅಯಂ ವೇನೋ ವೈನ್ಯಮಿತಿ ॥ ಪ್ರವರ್ಗ್ಯೇಽಭಿಷ್ಟವ ಆದ್ಯಾನುವಕ್ತವ್ಯಾ । ಸೂತ್ರಿತಂ । ಸ್ರಕ್ವೇ ದ್ರಪ್ಸಸ್ಯಾಯಂ ವೇನಶ್ಚೋದಯತ್ಪೃಶ್ನಿಗರ್ಭಾಃ । ಆ. ೪-೬ । ಇತಿ ॥ ವೈಶ್ವದೇವಶಸ್ತ್ರೇಽಪ್ಯೇಷಾ ಧಾಯ್ಯಾ । ಸೂತ್ರಿತಂ ಚ । ತಕ್ಷನ್ಪ್ರಥಮಯಂ ವೇನಶ್ಚೋದಯತ್ಪೃಶ್ನಿಗರ್ಭಾಃ । ಆ. ೫-೧೮ । ಇತಿ ॥**

ಅನುವಾದವು—**ಅಯಂ ವೇನಃ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು ಈ ಸೂಕ್ತಕ್ಕೆ ಭೃಗುಗೋತ್ರದ ವೇನನೆಂಬುವನು ಋಷಿಯು, ವೇನ ಎಂಬ ಮಧ್ಯಮಸ್ಥಾನದ ದೇವತೆಯೇ ದೇವತೆಯು, ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ—**ಅಯಂ ವೇನೋ ವೈನ್ಯಂ** ಎಂದು ಹೇಳಿರುವುದು ಪ್ರವರ್ಗ್ಯದಲ್ಲಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ—**ಸ್ರಕ್ವೇ ದ್ರಪ್ಸಸ್ಯಾಯಂ ವೇನಶ್ಚೋದಯತ್ಪೃಶ್ನಿಗರ್ಭಾಃ** ಎಂಬ ಸೂತ್ರದಿಂದ (ಆ.೪-೬) ವಿವೃತವಾಗಿರುವುದು. ವೈಶ್ವದೇವಶಸ್ತ್ರಮಂತ್ರಗಳಲ್ಲಿಯೂ ಈ ಸೂಕ್ತದ ಮೊದಲನೆಯ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತಕ್ಷನ್ಪ್ರಥಮಯಂ ವೇನಶ್ಚೋದಯತ್ಪೃಶ್ನಿಗರ್ಭಾಃ** ಎಂಬ ಸೂತ್ರದಿಂದ (ಆ. ೫-೧೮) ವಿವೃತವಾಗಿರುವುದು.

## ಸೂಕ್ತ--೧೨೩

ಮಂಡಲ—೧೦ ॥ ಅನುವಾಕ—೧೦ ॥ ಸೂಕ್ತ—೧೨೩ ॥
ಅಷ್ಟಕ--೮ ॥ ಅಧ್ಯಾಯ—೭ ॥ ವರ್ಗ—೭, ೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
॥ ಋಷಿಃ—ವೇನಃ ॥
॥ ದೇವತಾ—ವೇನಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ

ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ ಜ್ಯೋತಿರ್ಜರಾಯೂ ರಜಸೋ ವಿಮಾನೇ ।
ಇಮಮಪಾಂ ಸಂಗಮೇ ಸೂರ್ಯಸ್ಯ ಶಿಶುಂ ನ ವಿಪ್ರಾ ಮತಿಭೀ ರಿಹಂತಿ ॥

॥ ಪದಪಾಠಃ ॥

ಅಯಂ । ವೇನಃ । ಚೋದಯತ್ । ಪೃಶ್ನಿಽಗರ್ಭಾಃ । ಜ್ಯೋತಿಃಽಜರಾಯುಃ । ರಜಸಃ । ವಿಽಮಾನೇ ॥
ಇಮಂ । ಅಪಾಂ । ಸಂಽಗಮೇ । ಸೂರ್ಯಸ್ಯ । ಶಿಶುಂ । ನ । ವಿಪ್ರಾಃ । ಮತಿಽಭಿಃ । ರಿಹಂತಿ ॥ ೧ ॥

॥ ಸಾಯಣಭಾಷ್ಯಂ ॥

ವೇನಃ ಕಾಂತ ಏತತ್ಸಂಜ್ಞೋ ಮಧ್ಯಸ್ಥಾನೋ ದೇವೋ ಜ್ಯೋತಿರ್ಜರಾಯುಃ । ಜ್ಯೋತಿರ್ದ್ಯೋತಮಾನೋ ಮೇಘೋ ಜರಾಯುಃ । ಉದರೇ ಗರ್ಭೋ ಯೇನ ವೇಷ್ಟಿತೋಽವತಿಷ್ಠತೇ ತಜ್ಜರಾಯು । ತದಿವ ವೇಷ್ಟಕೋ ಯಸ್ಯ ಸ ತಥೋಕ್ತಃ । ಮೇಘಮಧ್ಯೇ ಗರ್ಭವದವಸ್ಥಿತ ಇತ್ಯರ್ಥಃ । ವಿಮಾನೇ । ವಿಮಿಾಯಂತೇ ನಿರ್ಮಿಾಯಂತೇಽಸ್ಮಿನ್ನಾಪ ಇತಿ ವಿಮಾನಮಂತರಿಕ್ಷಂ । ರಜಸ ಉದಕಸ್ಯ ನಿರ್ಮಾತರ್ಯಂತರಿಕ್ಷೇ ಸ್ಥಿತಃ ಸನ್ನಯಂ ವೇನಃ ಪೃಶ್ನಿಗರ್ಭಾಃ । ಪೃಶ್ನಿರಾದಿತ್ಯಃ ತಸ್ಯ ಗರ್ಭಭೂತಾಃ । ಯದ್ವಾ ಪೃಶ್ನಯಃ ಸಪ್ರೋಜ್ಜ್ವಲವರ್ಣಾಃ ಸೂರ್ಯರಶ್ಮಯಃ । ತೇಷಾಂ ಗರ್ಭಭೂತಾ ಅಂತರಿಕ್ಷಸ್ಥಾ ಅಪಶ್ಚೋದಯತ್ । ಪೃಥಿವೀಂ ಪ್ರತಿ ಪ್ರೇರಯತಿ । ಅಪಾಮುದಕಾನಾಮಾಂತರಿಕ್ಷ್ಯಾಣಾಂ ಸೂರ್ಯಸ್ಯ ಚ ಸಂಗಮೇ ಸಂಗಮನೇಽಂತರಿಕ್ಷೇ ಸ್ಥಿತಮಿಮಂ ವೇನಂ ವಿಪ್ರಾ ಮೇಧಾವಿನಃ ಸ್ತೋತಾರೋ ಮತಿಭಿಃ ಸ್ತುತಿಭೀ ರಿಹಂತಿ । ರಿಹತಿರರ್ಚತಿಕರ್ಮಾ । ಅರ್ಚಂತಿ । ಪೂಜಯಂತಿ । ಸ್ತುವಂತೀತ್ಯರ್ಥಃ । ಶಿಶುಂ ನ । ಯಥಾ ಬಾಲಂ ಪುತ್ರಂ ಮಾತಾಪಿತ್ರಾದ್ಯಾ ಬಾಂಧವಾಃ ಸ್ತುತಿಪದೈರುಪಲಾಲಯಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಜ್ಯೋತಿರ್ಜರಾಯುಃ**—ಪ್ರಕಾಶಮಾನವಾದ ಮೇಘಗಳ ಮಧ್ಯದಲ್ಲಿ ಗರ್ಭದಂತೆ ಅಡಗಿರುವ । **ಅಯಂ ವೇನಃ**—ವೇನಸಂಜ್ಞಕನಾದ ಈ ದೇವನು । **ರಜಸಃ ವಿಮಾನೇ**— ಉದಕಗಳ ನಿರ್ಮಾಪಕಸ್ಥಾನವಾದ ಅಂತರಿಕ್ಷ

ದಲ್ಲಿ ಇದ್ದುಕೊಂಡು | **ಪೃಶ್ನಿಗರ್ಭಾಃ**—ಸೂರ್ಯರಶ್ಮಿಗಳ ಗರ್ಭಭೂತವಾದ ಅಂತರಿಕ್ಷಸ್ಥ ಉದಕಗಳನ್ನು | **ಚೋದಯತ್**— ಭೂಮಿಯಮೇಲೆ ವೃಷ್ಟಿರೂಪದಲ್ಲಿ ಬೀಳುವಂತೆ ಪ್ರೇರಿಸುತ್ತಾನೆ | **ಅಪಾಂ**— ಉದಕಗಳ ಮತ್ತು | **ಸೂರ್ಯಸ್ಯ**—ಸೂರ್ಯನ | **ಸಂಗಮೇ**—ಸಂಗಮಸ್ಥಾನವಾದ ಅಂತರಿಕ್ಷದಲ್ಲಿ (ಇರುವ) | **ಇಮಂ**— ಈ ವೇನ ದೇವನನ್ನು | **ವಿಪ್ರಾಃ**—ಮೇಧಾವಿಗಳಾದ ಸ್ತೋತೃಜನರು | **ಶಿಶುಂ ನ**—ತಂದೆತಾಯಿಗಳು ಸಣ್ಣ ಮಗುವನ್ನು ಲಾಲಿಸುವಂತೆ | **ಮತಿಭಿಃ**—ಸ್ತುತಿಗಳಿಂದ | **ರಿಹಂತಿ**—ಪೂಜಿಸುತ್ತಾರೆ.

|| **ಭಾವಾರ್ಥ** ||

ಮೇಘಮಧ್ಯದಲ್ಲಿ ಪ್ರಕಾಶಮಾನನಾಗಿ ಅಡಗಿರುವ ವೇನನೆಂಬ ಈ ದೇವನು ಅಂತರಿಕ್ಷದಲ್ಲಿದ್ದುಕೊಂಡು ಅಲ್ಲಿರುವ (ಸೂರ್ಯರಶ್ಮಿಗಳ ಗರ್ಭಭೂತನಾದ ಎಂದರೆ ಮೇಘಮಧ್ಯದಲ್ಲಿರುವ)ಉದಕಗಳನ್ನು ವೃಷ್ಟಿರೂಪದಲ್ಲಿ ಭೂಮಿಯಮೇಲೆ ಬೀಳುವಂತೆ ಪ್ರೇರಿಸುತ್ತಾನೆ. ಉದಕಗಳಿಗೂ ಸೂರ್ಯನಿಗೂ ಮಧ್ಯದಲ್ಲಿ ಅಂತರಿಕ್ಷದಲ್ಲಿರುವ ಈ ದೇವನನ್ನು ಮೇಧಾವಿಗಳಾದ ಸ್ತೋತೃಜನರು, ತಂದೆತಾಯಿಗಳು ತಮ್ಮ ಮಗುವನ್ನು ಆದರಿಸಿ ಲಾಲಿಸುವಂತೆ ತಮ್ಮ ಸ್ತುತಿಗಳಿಂದ ಸ್ತುತಿಸಿ ಪೂಜಿಸುತ್ತಾರೆ.

## English Translation

This Vena, enfolded in the membrance of light, urges on (the waters) the germs of the sun in the firmament of the water; the sages cherish him at the confluence of the waters, and the sun with endearments like a child.

|| **ವಿಶೇಷವಿಷಯಗಳು** ||

**ಜ್ಯೋತಿರ್ಜರಾಯುಃ**—ಪ್ರಕಾಶಮಾನವಾದ ಮೇಘವು **ಜರಾಯುವೆಂದರೆ ಉದರೇ ಗರ್ಭೋಯೇನ ವೇಷ್ಟಿತೋಽವತಿಷ್ಠತೇ ತಜ್ಜರಾಯು** | ತನ್ನ ಉದರದಲ್ಲಿ ಯಾವುದಾದರೂ ವಸ್ತುವನ್ನು ಗರ್ಭದಂತೆ ಎಂದರೆ ಒಳಗಿರುವಂತೆ ಧರಿಸಿರುವುದಕ್ಕೆ ಜರಾಯು ಎಂದು ಹೆಸರು. ಇಲ್ಲಿ ಮೇಘವು ತನ್ನ (ತನ್ನ ಉದರದ) ಮಧ್ಯದಲ್ಲಿ ಉದಕವನ್ನು ಗರ್ಭದಲ್ಲಿ ಧರಿಸಿರುವುದರಿಂದ ಈ ಮೇಘವನ್ನು ಜರಾಯುವೆಂದು ಕರೆದಿದೆ. ಪ್ರಕೃತ ಸಂದರ್ಭದಲ್ಲಿ ಜ್ಯೋತಿ-ರ್ಜರಾಯುಃ ಎಂಬ ಶಬ್ದಕ್ಕೆ ಮೇಘ ಮಧ್ಯದಲ್ಲಿ ಗರ್ಭ ಭೂತವಾದ ಉದಕವಿರುವಂತೆ, ಪ್ರಕಾಶಮಾನವಾದ ಈ ವೇನ ದೇವನು ಮೇಘಮಧ್ಯದಲ್ಲಿರುವನು ಎಂದಭಿಪ್ರಾಯವು.

**ವಿಮಾನೇ—ವಿಮೀಯಂತೇ ನಿರ್ಮೀಯಂತೇ ಅಸ್ಮಿನ್ನಾಪ ಇತಿ ವಿಮಾನಮಂತರಿಕ್ಷಂ** | ಸೂರ್ಯರಶ್ಮಿಗಳ ಸಹಾಯದಿಂದ ಸಮುದ್ರವೇ ಮೊದಲಾದ ಜಲಾಶಯಗಳ ನೀರು ಆವಿಯ ರೂಪದಲ್ಲಿ ಮೇಲಕ್ಕೆ ಆಕರ್ಷಿಸಲ್ಪಟ್ಟು, ಅಲ್ಲಿ ಎಂದರೆ ಅಂತರಿಕ್ಷದಲ್ಲಿ ಆ ಆವಿಯು ನೀರಿನಿಂದ ಕೂಡಿದ ಮೇಘಗಳಾಗಿ ಪರಿವರ್ತಿಸಲ್ಪಡುವುದರಿಂದ (ನಿರ್ಮಿಸಲ್ಪಡುವುದರಿಂದ) ಅಂತರಿಕ್ಷಕ್ಕೆ ವಿಮಾನವೆಂದು ಹೆಸರು.

ಪೃಶ್ನಿಗರ್ಭಾಃ—ಪೃಶ್ನಿರಾದಿತ್ಯಃ ತಸ್ಯ ಗರ್ಭಭೂತಾಃ | ಪೃಶ್ನಿಯೆಂದರೆ ಆದಿತ್ಯನು (?) ಅವನ ಗರ್ಭಭೂತವಾದ ಎಂದರೆ ಅವನ ಕ್ರಿಯೆಯಿಂದ ಉತ್ಪನ್ನವಾದ ಉದಕಗಳನ್ನು ಪೃಶ್ನಿ ಅಥವಾ ಆದಿತ್ಯನ ಗರ್ಭಭೂತವಾದವು ಎಂದು ಹೇಳಿದೆ. ಅಥವಾ **ಪೃಶ್ನಯಃ ಸಪ್ರೋಜ್ಜ್ವಲವರ್ಣಾಃ ಸೂರ್ಯರಶ್ಮಯಃ ತೇಷಾಂ ಗರ್ಭಭೂತ**

**ಅಂತರಿಕ್ಷಸ್ಥಾ ಅಪಃ** । ಸೂರ್ಯನ ನಾನಾವಿಧ ಎಂದರೆ ಏಳುವಿಧ ರಶ್ಮಿಗಳು ಅಂತರಿಕ್ಷದಲ್ಲಿ ಹರಡಿರುವುವು. ಅವುಗಳ ಮಧ್ಯದಲ್ಲಿ ಮೇಘರೂಪದಿಂದ ಇರುವ ಉದಕಗಳನ್ನು ಪೃಶ್ನಿಗರ್ಭಾಃ ಎಂದು ಕರೆಯಲಾಗಿದೆ.

**ಶಿಶುಂ ನ ವಿಪ್ರಾ ಮತಿಭಿಃ ರಿಹಂತಿ—ರಿಹಂತಿ** ಎಂಬ ಶಬ್ದಕ್ಕೆ ಎರಡು ವಿಧ ಅರ್ಥಗಳನ್ನು ಹೇಳಬಹುದು. ಲಕಾರಕ್ಕೆ ಬದಲಾಗಿ ರಕಾರ ಪ್ರಯೋಗವೇ ಋಗ್ವೇದದಲ್ಲಿ ವಿಶೇಷವಾಗಿರುವುದರಿಂದ (ಅಲಂಕೃತಃ ಎನ್ನುವುದಕ್ಕೆಬದಲಾಗಿ ಅರಂಕೃತಃ ಎಂಬ ಶಬ್ದವಿರುವಂತೆ) ಇಲ್ಲಿ **ರಿಹಂತಿ** ಎಂದರೆ **ಲಿಹಂತಿ** ಎಂದರ್ಥವು. **ಲಿಹ—ಆಸ್ವಾದನೇ** ಎಂಬ ಧಾತುವಿನ ಅರ್ಥದಂತೆ ಲಿಹಂತಿ ಎಂದರೆ ನೆಕ್ಕುತ್ತಾರೆ, ಮುದ್ದಿಡುತ್ತಾರೆ ಎಂದರ್ಥವು. ತಾಯಿ ತಂದೆಗಳು ಅಥವಾ ಬಂಧುಬಾಂಧವರು ತಮ್ಮ ಮಗುವನ್ನು ಯಾವರೀತಿ ಪ್ರೀತಿ ವಿಶ್ವಾಸಗಳಿಂದ ಮುದ್ದಿಸಿ ಲಾಲಿಸುತ್ತಾರೆಯೋ ಅದರಂತೆ ಮೇಧಾವಿಗಳಾದ ಸ್ತೋತೃಜನರು ಈ ವೇನನನ್ನು ಅತ್ಯಾದರದಿಂದ ಪೂಜಿಸುತ್ತಾರೆ. ಇಲ್ಲಿ **ರಿಹತಿರರ್ಚತಿ—ಕರ್ಮಾ** ಎಂಬ ನಿರುಕ್ತವಚನದಂತೆ ಪೂಜಿಸುತ್ತಾರೆ ಎಂಬರ್ಥವನ್ನು ಹೇಳಬಹುದು

ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದ್ದಾರೆ—

**ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ ಪ್ರಾಸ್ಪವರ್ಣಗರ್ಭಾ ಅಪ ಇತಿ ವಾ ಜ್ಯೋತಿರ್ಜರಾಯು-ರ್ಜ್ಯೋತಿರಸ್ಯ ಜರಾಯುಸ್ಥಾನೀಯಂ ಭವತಿ । ಜರಾಯುರ್ಜರಯಾ ಗರ್ಭಸ್ಯ ಜರಯಾ ಯೂಯತ ಇತಿ ವೇಮಮಪಾಂ ಚ ಸಂಗಮನೇ ಸೂರ್ಯಸ್ಯ ಚ ಶಿಶುಮಿವ ವಿಪ್ರಾ ಮತಿಭೀ ರಿಹಂತಿ ಲಿಹಂತಿ ಸ್ತುವಂತಿ ವರ್ಧಯಂತಿ ಪೂಜಯಂತೀತಿ ವಾ ॥ ಶಿಶುಃ ಶಂಸನೀಯೋ ಭವತಿ। ಶಿಶೀತೇರ್ವಾ ಸ್ಯಾದ್ದಾನಕರ್ಮಣಃ । ಚಿರಲಬ್ಧೋ ಗರ್ಭೋ ಭವತಿ ॥ (ನಿ. ೧೦—೩೯)**

**ಅಯಂ ವೇನಶ್ಚೋದಯತ್ ಪೃಶ್ನಿಗರ್ಭಾಃ ಪ್ರಾಸ್ಪವರ್ಣಗರ್ಭಾ ಅಪ ಇತಿ ವಾ—ಪೃಶ್ನಿ** ಎಂದರೆ ಆದಿತ್ಯನು. ಈ ಸೂರ್ಯನ ಉತ್ಕೃಷ್ಟವಾದ ವರ್ಣ ಅಥವಾ ರಶ್ಮಿಗಳಿಂದ(ಅಸ್ಪಃ—ಪ್ರಾಪ್ತಃ) ಹೀರಲ್ಪಟ್ಟ ಉದಕಗಳು ಎಂದು ಪೃಶ್ನಿಗರ್ಭಾಃ-ಎಂಬ ಶಬ್ದದ ಅರ್ಥವು. ರಶ್ಮ್ಯಂತರ್ಗತಾಃ **ಪರಿಪಕ್ವಾಃ ಆಪೋ ಮಾಸಾಷ್ಟಕೇನ ಸಂಭೃತಾಃ ತಾಃ ವೇನಶ್ಚೋದಯತಿ ಪ್ರಾವೃಷಿ ವರ್ಷಭಾವೇನ ಪ್ರೇರಯತಿ**—ಸೂರ್ಯರಶ್ಮಿಗಳಿಂದ ಹೀರಲ್ಪಟ್ಟ ಜಲಾಶಯಾದಿಗಳ ಉದಕಗಳು ಆವಿಯರೂಪದಲ್ಲಿ ಅಂತರಿಕ್ಷಕ್ಕೆ ಒಯ್ಯಲ್ಪಟ್ಟು ಅಲ್ಲಿ ಎಂಟುತಿಂಗಳವರೆಗೂ ಪರಿಪಕ್ವವಾಗಿ ಎಂದರೆ. ಮೇಘರೂಪವಾಗಿ ಪರಿವರ್ತಿಸಲ್ಪಟ್ಟು ಆ ಉದಕಗಳನ್ನು ವರ್ಷಾಕಾಲದಲ್ಲಿ (ಮಳೆಗಾಲದಲ್ಲಿ) ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಬೀಳುವಂತ ವೇನನು ಪ್ರೇರಿಸುತ್ತಾನೆ ಎಂದು ವಾಕ್ಯಾಭಿಪ್ರಾಯವು.

**ಜ್ಯೋತಿರ್ಜರಾಯುರ್ಜ್ಯೋತಿರಸ್ಯ ಜರಾಯುಸ್ಥಾನೀಯಂ ಭವತಿ । ಜರಾಯುರ್ಜರಯಾ ಗರ್ಭಸ್ಯ ಜರಯಾ ಯೂಯತೆ ಇತಿ ವಾ—ಜ್ಯೋತಿಃ** ಎಂದರೆ ವಿದ್ಯುದಾಖ್ಯ ಜ್ಯೋತಿಯು(ಮಿಂಚು). ಇಂತಹ ಜ್ಯೋತಿಯನ್ನು ಗರ್ಭರೂಪದಲ್ಲಿ ಹೊಂದಿರುವ (ವೇನನು) ಇಲ್ಲಿ ಜರಾಯುವೆಂದರೇನು? **ಜರಯಾ ಗರ್ಭಸ್ಯ**—ಗರ್ಭವು ಮೊದಲು ಸಣ್ಣದಾಗಿದ್ದು ಕ್ರಮಕ್ರಮವಾಗಿ ಬೆಳೆಯುತ್ತಿರುವುದನ್ನು **ಜರಾಯು** ವೆಂದು ಹೇಳುವರು. ಅಥವಾ **ಪ್ರಸೂತಾಯಾ ಗೋಃ ಸ್ತ್ರಿಯಾ ವಾ ಪಶ್ಚಾತ್ ಪತತಿ ಸಾ ಜರೆತ್ಯುಚ್ಯತೇ । ತಯಾ ಚ ಯೂಯತೇ ಮಿಶ್ರ್ಯತೇ ತಜ್ಜರಾಯ್ವಿತ್ಯುಚ್ಯತೇ**—ಗೋವಿನ ಅಥವಾ ಸ್ತ್ರೀಯ ಉದರದಿಂದ ಪ್ರಸವಕಾಲದಲ್ಲಿ ಯಾವದು ಈಚೆಗೆ ಬೀಳುವುದೋ ಅದಕ್ಕೆ **ಜರಾ** ಎಂದು ಹೆಸರು ಎಂದರೆ ಗರ್ಭವು. ಆ ಗರ್ಭದಿಂದ ಕೂಡಿರುವ ವಸ್ತುವಿಗೆ (ಪ್ರಾಣಿಗೆ)

ಜರಾಯುವೆಂದು ಹೆಸರು, ಗರ್ಭದಿಂದ ಕೂಡಿರುವ ಪ್ರಾಣಿಗೆ ಜರಾಯುವೆಂದು ಹೆಸರು ಪ್ರಕೃತ ಋಕ್ಕಿನಲ್ಲಿ ಜ್ಯೋತಿಯೇ (ಮಿಂಚೇ) ಮೇಘದ ಗರ್ಭರೂಪದಲ್ಲಿರುವುದು. ಎಂದರೆ ಪ್ರಕಾಶಾತ್ಮಕನೂ ಮಿಂಚಿನ ರೂಪದಲ್ಲಿರುವವನೂ ಆದ ವೇನನು ಮೇಘಗಳ ಗರ್ಭರೂಪದಲ್ಲಿರುವನು ಎಂದಭಿಪ್ರಾಯವು.

**ಇಮಮಪಾಂ ಚ ಸಂಗಮನೇ ಸೂರ್ಯಸ್ಯ ಶಿಶುಮಿವ ವಿಪ್ರಾ ಮತಿಭೀ ರಿಹಂತಿ ಲಿಹಂತಿ ಸ್ತುವಂತಿ ವರ್ಧಯಂತಿ ಪೂಜಯಂತೀತಿ ವಾ**—ಇಲ್ಲಿ **ಅಪಾಂ ಚ ಸೂರ್ಯಸ್ಯ ಚ ಸಂಗಮನೇ** ಎಂದರೆ ಆವಿಯ ರೂಪದಲ್ಲಿರುವ ಉದಕಗಳ ಮತ್ತು ಸೂರ್ಯನ ಸಮಾಗಮನಸ್ಥಾನದಲ್ಲಿ ಎಂದರೆ ಇವು ಎರಡೂ (ನೀರು ಮತ್ತು ಸೂರ್ಯ ಇವೆರಡೂ) ಒಟ್ಟಿಗೆ ಸೇರುವ ಪ್ರದೇಶದಲ್ಲಿ ಎಂದರೆ ಅಂತರಿಕ್ಷದಲ್ಲಿ ಎಂದರ್ಥವು. **ಶಿಶುಮಿವ ರಿಹಂತಿ** ಎಂದರೆ ಸಣ್ಣ ಮಗುವನ್ನು ಜನರು ಯಾವರೀತಿ ಒಳ್ಳೆಯ ಮಾತುಗಳಿಂದ ಮುದ್ದಿಸಿ ಲಾಲಿಸಿ ಹೊಗಳುವರೋ ಆದರಂತೇ ಎಂದರ್ಥವು. ಸೂರ್ಯ ಮತ್ತು ಉದಕಗಳ ಸಮಾಗಮನಸ್ಥಾನವಾದ ಅಂತರಿಕ್ಷದಲ್ಲಿ ಮೇಘಮಧ್ಯದಲ್ಲಿ ಜ್ಯೋತೀರೂಪದಿಂದ ನೆಲಸಿರುವ ಈ ವೇನದೇವನನ್ನು ಮೇಧಾವಿಗಳಾದ ಜನರು ಮಕ್ಕಳನ್ನು ಮುದ್ದಿಸಿ ಲಾಲಿಸಿ ಪ್ರಶಂಸಿಸುವಂತೆ ತಮ್ಮ ಸ್ತುತಿವಾಕ್ಯಗಳಿಂದ ಪ್ರಶಂಸೆಮಾಡುತ್ತಾರೆ, ಸ್ತುತಿಸುತ್ತಾರೆ, ಪ್ರವೃದ್ಧಮಾನನನ್ನಾಗಿ ಮಾಡುತ್ತಾರೆ ಅಥವಾ ಪೂಜಿಸುತ್ತಾರೆ ಎಂದು ಮುಖ್ಯಾಭಿಪ್ರಾಯವು

**ಶಿಶುಃ ಶಂಸನೀಯೋ ಭವತಿ । ಶಿಶೀತೇರ್ವಾ ಸ್ಯಾದ್ದಾನಕರ್ಮಣಃ । ಚಿರಲಬ್ಧೋ ಗರ್ಭೋ ಭವತಿ**—ಒಳ್ಳೆಯ ಮಾತನ್ನಾಡಿ ಹೊಗಳುವುದರಿಂದ ಅಥವಾ ಸಮಾಧಾನ ಮಾಡುವುದರಿಂದ ಮಗುವಿಗೆ ಶಿಶುವೆಂದು ಹೆಸರು. ಅಥವಾ ಶಿಶೀತಿಧಾತುವಿಗೆ ಕೊಡು ಎಂಬರ್ಥವಿರುವುದು, **ದೀಯತೇ ಹಿ ಸ ಪುರುಷೇಣ ಸ್ತ್ರಿಯೈ ಧಾರಣಾಯ**—ಪುರುಷನಿಂದ ಸ್ತ್ರೀಯ ಗರ್ಭದಲ್ಲಿ ಧರಿಸಿರುವುದಕ್ಕಾಗಿ ಸ್ತ್ರೀಗೆ ಕೊಡುವುದರಿಂದ ಮಗುವಿಗೆ ಶಿಶುವೆಂಬ ಹೆಸರು. ಗರ್ಭವು ಬಹುಕಾಲದವರೆಗೆ ಉದರದಲ್ಲಿದ್ದು ಹೊರಬರುವುದು ಎಂದು ನಿರುಕ್ತಾಭಿಪ್ರಾಯವು

॥ ಸಂಹಿತಾಪಾಠಃ ॥

ಸಮುದ್ರಾದೂರ್ಮಿಮುದಿಯರ್ತಿ ವೇನೋ ನಭೋಜಾಃ ಪೃಷ್ಠಂ ಹರ್ಯತಸ್ಯ ದರ್ಶಿ ।
ಋತಸ್ಯ ಸಾನಾವಧಿ ವಿಷ್ಟಪಿ ಭ್ರಾಟ್ ಸಮಾನಂ ಯೋನಿಮಭ್ಯನೂಷತ ವ್ರಾಃ ॥

॥ ಪದಪಾಠಃ ॥

ಸಮುದ್ರಾತ್ । ಊರ್ಮಿಂ । ಉತ್ । ಇಯರ್ತಿ । ವೇನಃ । ನಭಃऽಜಾಃ । ಪೃಷ್ಠಂ । ಹರ್ಯತಸ್ಯ । ದರ್ಶಿ ।
ಋತಸ್ಯ । ಸಾನೌ । ಅಧಿ । ವಿಷ್ಟಪಿ । ಭ್ರಾಟ್ । ಸಮಾನಂ । ಯೋನಿಂ । ಅಭಿ । ಅನೂಷತ । ವ್ರಾಃ ॥೨॥

|| ಸಾಯಣಭಾಷ್ಯಂ ||

**ತಸ್ಮಿನ್ನೇವಾಭೀಷ್ಟವನೇ ಸಮುದ್ರಾದೂರ್ಮಿಮಿತ್ಯೇಷಾ । ಸೂತ್ರ್ಯತೇ ಹಿ । ಸಮುದ್ರಾದೂರ್ಮಿ-ಮುದಿಯರ್ತಿ ವೇನೋ ದ್ರಪ್ಸಃ ಸಮುದ್ರಮಭಿ ಯಜ್ಜಿಗಾತಿ । ಅ. ೪-೭ । ಇತಿ ||**

**ಸಮುದ್ದ್ರವಂತ್ಯಸ್ಮಾದಾಪ ಇತಿ ಸಮುದ್ರಮಂತರಿಕ್ಷಂ । ತಸ್ಮಾದೂರ್ಮಿಂ ಜಲಸಮೂಹಮಯಂ ವೇನ ಉದಿಯರ್ತಿ । ಉದ್ಗಮಯತಿ । ಅಧಃ ಪಾತಯತೀತ್ಯರ್ಥಃ । ಕೀದೃಶಃ । ನಭೋಜಾಃ । ನಭಸ್ಯಾ-ಕಾಶೇ........... । ಇಮಂ ವೇನಮಭಿ ಶಬ್ದಾಯಂತೇ || ನು ಸ್ತುತೌ । ಕುಟಾದಿಃ । ಛಾಂದಸೋ ಲಙ್ ||**

|| ಪ್ರತಿಪದಾರ್ಥ ||

**ನಭೋಜಾಃ**—ಆಕಾಶಮಧ್ಯದಲ್ಲಿ (ಮೇಘಗಳಲ್ಲಿ) ಉತ್ಪನ್ನನಾಗುವ । **ವೇನಃ**—ಈ ವೇನದೇವನು । **ಸಮುದ್ರಾತ್**—ಅಂತರಿಕ್ಷದಿಂದ । **ಊರ್ಮಿಂ**—ಉದಕಸಮೂಹವನ್ನು । **ಉತ್ ಇಯರ್ತಿ**—ವೃಷ್ಟಿರೂಪದಿಂದ ಭೂಮಿಯ ಮೇಲೆ ಬೀಳುವಂತೆ ಪ್ರೇರಿಸುತ್ತಾನೆ (ಅನಂತರ) । **ಹರ್ಯತಸ್ಯ**—ಸ್ವರ್ಗದ । **ಪೃಷ್ಠಂ**—ಕೆಳಭಾಗವು । **ದರ್ಶಿ**—ಕಾಣಲ್ಪಡುತ್ತದೆ । **ವಿಷ್ಟಪಿ**—ಸ್ವರ್ಗದಲ್ಲಿ (ಎಂದರೆ ಅಂತರಿಕ್ಷದಲ್ಲಿ) । **ಋತಸ್ಯ**—ಉದಕದ । **ಸಾನೌ ಅಧಿ**—ಮೇಲುಭಾಗದಲ್ಲಿ । **ಭ್ರಾಟ್**—ಈ ವೇನನು ಪ್ರಕಾಶಿಸುತ್ತಾನೆ । **ಸಮಾನಂ ಯೋನಿಂ**—ಸಮಾನಸ್ಥಾನವಾದ ಅಂತರಿಕ್ಷದಲ್ಲಿರುವ । **ವ್ರಾಃ**—ಮರುದ್ಗಣಗಳು (ಅಥವಾ ಮೇಘಗಳು) । **ಅಭಿ ಅನೂಷತ**—ಘಟ್ಟಿಯಾಗಿ ಶಬ್ದಮಾಡುತ್ತಾ ಈ ವೇನನನ್ನು ಸ್ತುತಿಸುತ್ತವೆ

|| ಭಾವಾರ್ಥ ||

ಆಕಾಶಮಧ್ಯದಲ್ಲಿ ಮೇಘಮಂಡಲದಲ್ಲಿ ಉತ್ಪನ್ನನಾಗುವ ಈ ವೇನದೇವನು ಅಂತರಿಕ್ಷದಿಂದ ಉದಕವನ್ನು ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಬೀಳುವಂತೆ ಪ್ರೇರಿಸುತ್ತಾನೆ. ಮಳೆಯು ಬಿದ್ದನಂತರ ಆಕಾಶದ ಕೆಳಭಾಗವು ಎಂದರೆ ಆಕಾಶವು (ಮೋಡಗಳಿಲ್ಲದೆ) ಸ್ವಚ್ಛವಾಗಿ ಕಾಣಲ್ಪಡುತ್ತದೆ ಅಂತರಿಕ್ಷದ ಎತ್ತರವಾದ ಪ್ರದೇಶದಲ್ಲಿ ಉದಕದ (ಮೇಘದ) ಮೇಲುಭಾಗದಲ್ಲಿ ಈ ದೇವನು ಪ್ರಕಾಶಿಸುತ್ತಾನೆ ವೇನನಿಗೂ ಮರುತ್ತು ಅಥವಾ ಮೇಘಗಳಿಗೂ ಸಮಾನಸ್ಥಾನವಾದ ಅಂತರಿಕ್ಷದಲ್ಲಿ ಮರುದ್ಗಣಗಳು ಅಥವಾ ಮೇಘಗಳು ಶಬ್ದಮಾಡುತ್ತಾ ಈ ವೇನನನ್ನು ಸ್ತುತಿಸುತ್ತವೆ.

## English Translation

The cloud-born Vena sends the water from the firmament, the back of the azure (sky) is beheld. He shone on the summit of the water in heaven the troops praised their common abode.

|| ವಿಶೇಷವಿಷಯಗಳು ||

ಮೇಲೆ ಹೇಳಿದ ಪ್ರವರ್ಗ್ಯಾಭಿಷ್ಟವದಲ್ಲಿ **ಸಮುದ್ರಾದೂರ್ಮಿಂ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಸಮುದ್ರಾದೂರ್ಮಿಮುದಿಯರ್ತಿ ವೇನೋ ದ್ರಪ್ಸಃ ಸಮುದ್ರಮಭಿ ಯಜ್ಜಿಗಾತಿ** ಎಂಬ ಸೂತ್ರದಿಂದ (ಆ. ೪-೭) ವಿವೃತವಾಗಿರುವುದು.

ಈ ಋಕ್ಕಿನ ಸಾಯಣಭಾಷ್ಯದಲ್ಲಿ ಗ್ರಂಥಲೋಪವು ಕಂಡುಬರುವುದು

॥ ಸಂಹಿತಾಪಾಠಃ ॥

**ಸಮಾನಂ ಪೂರ್ವೀರಭಿ ವಾವಶಾನಾಸ್ತಿಷ್ಠನ್ವತ್ಸಸ್ಯ ಮಾತರಃ ಸನೀಳಾಃ ।**

**ಋತಸ್ಯ ಸಾನಾವಧಿ ಚಕ್ರಮಾಣಾ ರಿಹಂತಿ ಮಧ್ವೋ ಅಮೃತಸ್ಯ ವಾಣೀಃ ॥**

॥ ಪದಪಾಠಃ ॥

**ಸಮಾನಂ । ಪೂರ್ವೀಃ । ಅಭಿ । ವಾವಶಾನಾಃ । ತಿಷ್ಠನ್ । ವತ್ಸಸ್ಯ । ಮಾತರಃ । ಸಽನೀಳಾಃ ।**

**ಋತಸ್ಯ । ಸಾನೌ । ಅಧಿ । ಚಕ್ರಮಾಣಾಃ । ರಿಹಂತಿ । ಮಧ್ವಃ । ಅಮೃತಸ್ಯ । ವಾಣೀಃ ॥ ೩ ॥**

॥ ಸಾಯಣಭಾಷ್ಯಂ ॥

**ಪೂರ್ವೀರ್ಬಹ್ವ್ಯಃ ಸಮಾನಂ ವೇನಸ್ಯಾತ್ಮನಶ್ಚ ಸಾಧಾರಣಂ ಸ್ಥಾನಂ ಪ್ರಾಪ್ಯಾಭಿ ವಾವಶಾನಾ ಅಭಿತಃ ಶಬ್ದಾಯಮಾನಾಃ । ಯದ್ವಾ । ತಮೇವ ವೇನಮಭಿಕಾಮಯಮಾನಾಃ । ವತ್ಸಸ್ಯ ವತ್ಸಸ್ಥಾನೀಯಸ್ಯ ವೈದ್ಯುತಾಗ್ನೇರ್ಮಾತರೋ ಮಾತೃಭೂತಾಃ ಸನೀಳಾಃ ಸಮಾನನಿಲಯಾಃ ಏವಂವಿಧಾ ಅಂತರಿಕ್ಷ್ಯಾ ಆಪಸ್ತಿಷ್ಠನ್ । ತಿಷ್ಠಂತಿ । ಅಪಿ ಚರ್ತಸ್ಯೋದಕಸ್ಯ ಸಾನಾವಧಿ ಸಾನೌ ಸಮುಚ್ಛ್ರಿತೇಽಂತರಿಕ್ಷಸ್ಥಾನೇ ಚಕ್ರಮಾಣಾಃ ಪ್ರವರ್ತಮಾನಾ ಮಧ್ವೋ ಮಧುರಸ್ಯಾಮೃತಸ್ಯೋದಕಸ್ಯ ವಾಣೀರ್ವಾಣ್ಯಃ ಶಬ್ದಾ ರಿಹಂತಿ । ಇಮಂ ವೇನಮರ್ಚಂತಿ । ಅಲಂಕುರ್ವಂತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಪೂರ್ವೀಃ**—ಬಹಳವಾದವೂ । **ಸಮಾನಂ**—ತಮಗೂ, ವೇನನಿಗೂ ಸಮಾನ ಸ್ಥಾನವಾದ ಅಂತರಿಕ್ಷದಲ್ಲಿದ್ದು । **ಅಭಿ**—ಸುತ್ತಲೂ । **ವಾವಶಾನಾಃ**—ಶಬ್ದಮಾಡುತ್ತಿರುವವೂ ಅಥವಾ ವೇನನನ್ನು ಅಪೇಕ್ಷಿಸುತ್ತಿರುವವೂ । **ವತ್ಸಸ್ಯ**—ವತ್ಸ (ಶಿಶು) ಸ್ಥಾನೀಯವಾದ ವೈದ್ಯುತಾಗ್ನಿಗೆ । **ಮಾತರಃ**—ಮಾತೃಭೂತವಾದವೂ । **ಸನೀಳಾಃ**—ಸಮಾನಸ್ಥಾನವಾದ ಅಂತರಕ್ಷದಲ್ಲಿರುವವೂ ಆದ (ಮೇಘದ) ಉದಕಗಳು । **ತಿಷ್ಠನ್**—(ಅಲ್ಲಿಯೇ) ಇರುತ್ತವೆ. (ಮತ್ತು) । **ಋತಸ್ಯ**—ಉದಕದ (ಮೇಘದ) । **ಸಾನೌ**—ಮೇಲುಭಾಗದಲ್ಲಿ ಎಂದರೆ ಎತ್ತರವಾದ ಅಂತರಿಕ್ಷದಲ್ಲಿ । **ಚಕ್ರಮಾಣಾಃ**—ಚಲಿಸುತ್ತಿರುವ । **ಮಧ್ವಃ ಉದಕಸ್ಯ**—ಮಧುರವಾದ ಉದಕದ । **ವಾಣೀಃ**—ಶಬ್ದಗಳು । **ರಿಹಂತಿ**—ಈ ವೇನದೇವನನ್ನು ಸ್ತುತಿಸುತ್ತವೆ.

॥ ಭಾವಾರ್ಥ ॥

ಬೃಹತ್ಪ್ರಮಾಣದಲ್ಲಿರುವವೂ, ಸಮಾನಸ್ಥಾನವಾದ ಅಂತರಿಕ್ಷದಲ್ಲಿದ್ದು ಸುತ್ತಲೂ ಶಬ್ದ (ಸಿಡಿಲು ಗುಡುಗು) ಮಾಡುತ್ತಿರುವವೂ, ಶಿಶುಪ್ರಾಯವಾದ ವೈದ್ಯುತಾಗ್ನಿಗೆ ಮಾತೃಭೂತವಾಗಿರುವವೂ, ಆದ ಉದಕಗಳು ಎಂದರೆ ಮೇಘಗಳು ತಮಗೂ ವೇನನಿಗೂ ಸಮಾನನಿವಾಸಸ್ಥಾನವಾದ ಅಂತರಿಕ್ಷದಲ್ಲಿಯೇ ಇರುತ್ತವೆ. ಮತ್ತು ಎತ್ತರವಾದ ಅಂತರಿಕ್ಷದ ಮೇಲುಭಾಗದಲ್ಲಿ ಚಲಿಸುತ್ತಿರುವ ಮಧುರವಾದ ಉದಕಗಳಿಂದ ಕೂಡಿದ ಮೇಘಗಳ ಗರ್ಜನೆಗಳೂ ಈ ವೇನನನ್ನು ಸ್ತುತಿಸುತ್ತವೆ. (ಸ್ತುತಿಸುವಂತೆ ತೋರುತ್ತವೆ).

## English Translation

The many waters occupy a common station, clamouring arround like the assembled mothers of the calf ; wandering above the summit of the water they utter the praises of the sweet-flavoured ambrosia.

॥ ಸಂಹಿತಾಪಾಠಃ ॥

ಜಾನಂತೋ ರೂಪಮಕೃಪಂತ ವಿಪ್ರಾ ಮೃಗಸ್ಯ ಘೋಷಂ ಮಹಿಷಸ್ಯ ಹಿ ಗ್ಮನ್ ।
ಋತೇನ ಯಂತೋ ಅಧಿ ಸಿಂಧುಮಸ್ಥುರ್ವಿದದ್ಗಂಧರ್ವೋ ಅಮೃತಾನಿ ನಾಮ ॥ ೪ ॥

॥ ಪದಪಾಠಃ ॥

ಜಾನಂತಃ । ರೂಪಂ । ಅಕೃಪಂತ । ವಿಪ್ರಾಃ । ಮೃಗಸ್ಯ । ಘೋಷಂ । ಮಹಿಷಸ್ಯ । ಹಿ । ಗ್ಮನ್ ।
ಋತೇನ । ಯಂತಃ । ಅಧಿ । ಸಿಂಧುಂ । ಅಸ್ಥುಃ । ವಿದತ್ । ಗಂಧರ್ವಃ । ಅಮೃತಾನಿ । ನಾಮ ॥ ೪ ॥

॥ ಸಾಯಣಭಾಷ್ಯಂ ॥

ವಿಪ್ರಾ ಮೇಧಾವಿನಃ ಸ್ತೋತಾರೋಽಸ್ಯ ವೇನಸ್ಯ ರೂಪಂ ಜಾನಂತೋಽಕೃಪಂತ । ಸ್ತುವಂತಿ । ಕೃಪತಿಃ ಸ್ತುತಿಕರ್ಮಾ । ಕಥಮಸ್ಯ ರೂಪಂ ಜಾನಂತೀತ್ಯತ ಆಹ । ಮೃಗಸ್ಯಾನ್ವೇಷಣೀಯಸ್ಯ ಮಹಿಷಸ್ಯ । ಮಹನ್ನಾಮೈತತ್ । ಮಹತೋ ವೇನಸ್ಯ ಘೋಷಂ ಗರ್ಜಿತಲಕ್ಷಣಂ ಮೇಘಸ್ಥಂ ಶಬ್ದಂ ಹಿ ಯಸ್ಮಾದ್ಗ್ಮನ್ ಅಭಿಗಚ್ಛಂತಿ ಅತಸ್ತದೀಯಂ ರೂಪಂ ಜಾನಂತೀತ್ಯರ್ಥಃ ॥ ಗಮೇಶ್ಛಾಂದಸೇ ಲಙಿ ಬಹುಲಂ ಛಂದಸೀತಿ ಶಪೋ ಲುಕ್ । ಗಮಹನೇತ್ಯುಪಧಾಲೋಪಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ ॥ ಅಪಿ ಚರ್ತೇನ ಸತ್ಯಭೂತೇನ ಸ್ತೋತ್ರೇಣ ಯಜ್ಞೇನ ವಾ ಯಂತಸ್ತಂ ವೇನಂ ಗಚ್ಛಂತಃ ಪ್ರಾಪ್ನುವಂತೋ ಜನಾಃ ಸಿಂಧುಂ ಸ್ಯಂದನಶೀಲಂ ಜಲಸಮೂಹಮಧ್ಯಸ್ಥುಃ । ಅಧಿತಿಷ್ಠಂತಿ । ತೇಷಾಂ ಸ ವೇನೋ ವೃಷ್ಟಿಂ ಕರೋತೀತ್ಯರ್ಥಃ । ತತ್ರ ಕಿಂ ಕಾರಣಮಿತಿ ಚೇತ್ ಯತೋಽಯಂ ಗಂಧರ್ವೋ ಗವಾಮುದಕಾನಾಂ ಧರ್ತಾ ವೇನೋಽಮೃತಾನ್ಯಮರಣಹೇತುಭೂತಾನಿ ನಾಮ । ಉದಕನಾಮೈತತ್ । ನಮನಶೀಲಾನ್ಯುದಕಾನಿ ವಿದತ್ ವೇದ ಜಾನಾತಿ । ತಸ್ಯ ವಶೇ ವರ್ತಂತ ಇತ್ಯರ್ಥಃ । ಅತಸ್ತದ್ಭಕ್ತಾನಾಂ ವೃಷ್ಟಿಃ ಸುಲಭಾ ॥

॥ ಪ್ರತಿಪದಾರ್ಥ ॥

**ವಿಪ್ರಾಃ**—ಮೇಧಾವಿಗಳಾದ ಸ್ತೋತೃಜನರು । **ಮೃಗಸ್ಯ**—ಹುಡುಕಲ್ಪಡುತ್ತಿರುವ । **ಮಹಿಷಸ್ಯ**—ಮಹತ್ಸ್ವರೂಪವುಳ್ಳ ಈ ವೇನನ । **ಘೋಷಂ**—ಗರ್ಜನರೂಪವಾದ ಶಬ್ದವನ್ನು । **ಹಿ**— ಯಾವ ಕಾರಣದಿಂದ

**ಗ್ಮನ್**—ಸಮೀಪಿಸಿ (ಕೇಳಿ) ತಿಳಿಯುವರೋ ಆ ಕಾರಣದಿಂದಲೇ | **ರೂಪಂ**— ಈ ವೇನದೇವನ ರೂಪವನ್ನು | **ಜಾನಂತಃ**— ತಿಳಿದವರಾಗಿ | **ಅಕ್ಕೃಪಂತೆ**—ಅವನನ್ನು ಸ್ತುತಿಸುತ್ತಾರೆ | **ಋತೇನ**—ಸತ್ಯಭೂತವಾದ ಸ್ತೋತ್ರ ದಿಂದ ಅಥವಾ ಯಜ್ಞದಿಂದ | **ಯಂತಃ**— ಈ ವೇನನನ್ನು ಸಮೀಪಿಸುವ ಜನರು | **ಸಿಂಧುಂ**— ಹರಿಯುವ ಸ್ವಭಾವ ವುಳ್ಳ ಜಲಸಮೂಹವನ್ನು | **ಅಧಿ ಅಸ್ಥುಃ**—ವೃಷ್ಟಿರೂಪದಲ್ಲಿ ಪಡೆಯುತ್ತಾರೆ (ಏಕೆಂದರೆ) | **ಗಂಧರ್ವಃ**— ಉದಕ ಗಳನ್ನು ಧರಿಸುವ ಈ ವೇನನು | **ಅಮೃತಾನಿ**—ಮರಣರಹಿತವಾದ ಎಂದರೆ ಅಮೃತಸದೃಶವಾದ | **ನಾಮ**— ಉದಕ ವನ್ನು | **ವಿದತ್**— ತಿಳಿಯುತ್ತಾನೆ (ಎಂದರೆ ಮರಣಕ್ಕೆ ಎಡೆಗೊಡದಂತೆ ದೇಹಪೋಷಣೆಗೆ ಅತ್ಯವಶ್ಯಕವಾದ ಉದಕ ವು ಈ ವೇನನ ವಶದಲ್ಲಿರುತ್ತದೆ).

|| ಭಾವಾರ್ಥ ||

ಮೇಧಾವಿಗಳಾದ ಈ ಸ್ತೋತೃಜನರು, ತಾವು ಹುಡುಕುತ್ತಿರುವ ಮಹತ್ಸ್ವರೂಪವುಳ್ಳ ಈ ವೇನನ ರೂಪವನ್ನು ಎಂದರೆ ಇವನು ಎಲ್ಲಿರುವನೆಂಬುದನ್ನು ಇವನು ಮಾಡುತ್ತಿರುವ ಘರ್ಜನೆಯಿಂದಲೇ (ಗುಡುಗು) ಕೇಳಿ ತಿಳಿದು ಇವ ನನ್ನು ಸ್ತುತಿಸುತ್ತಾರೆ. ಸ್ತೋತ್ರಾದಿಗಳಿಂದ ಅಥವಾ ಯಜ್ಞದಿಂದ ಇವನನ್ನು ಆರಾಧಿಸುವ ಜನರು ಹರಿಯುವ ಸ್ವಭಾವ ವುಳ್ಳ ಉದಕವನ್ನು ವೃಷ್ಟಿರೂಪದಲ್ಲಿ ಪಡೆಯುತ್ತಾರೆ ಎಂದರೆ ಇವನ ಅನುಗ್ರಹದಿಂದ ವೃಷ್ಟ್ಯುದಕವು ಲಭಿಸುತ್ತದೆ ಮತ್ತು ಮರಣಕ್ಕೆ ಈಡಾಗದಂತೆ ಶರೀರಪೋಷಣೆಗೆ ಅತ್ಯವಶ್ಯಕವಾದ ಉದಕವು ಈ ವೇನನ ವಶದಲ್ಲಿರುತ್ತದೆ. ಅದನ್ನು ಈ ವೇನನು ತನ್ನನ್ನು ಸ್ತುತಿಸುವ ಜನರಿಗೆ ವೃಷ್ಟಿರೂಪದಲ್ಲಿ ಅನುಗ್ರಹಿಸುತ್ತಾನೆ.

## English Translation

The pious, knowing his form, praised him, for they followed the cry of the great deer, approaching him with sacrifice, they reached the flowing (water) for the sustainer of the waters knows the ambrosial (fluids)

|| ಸಂಹಿತಾಪಾಠಃ ||

ಅಪ್ಸರಾ ಜಾರಮುಪಸಿಷ್ಮಿಯಾಣಾ ಯೋಷಾ ಬಿಭರ್ತಿ ಪರಮೇ ವ್ಯೋಮನ್।
ಚರತ್ಪ್ರಿಯಸ್ಯ ಯೋನಿಷು ಪ್ರಿಯಃ ಸನ್ತ್ಸೀದತ್ಪಕ್ಷೇ ಹಿರಣ್ಯಯೇ ಸ ವೇನಃ॥

|| ಪದಪಾಠಃ ||

ಅಪ್ಸರಾಃ | ಜಾರಂ | ಉಪऽಸಿಷ್ಮಿಯಾಣಾ | ಯೋಷಾ | ಬಿಭರ್ತಿ | ಪರಮೇ | ವಿऽಓಮನ್ |

ಚರತ್ | ಪ್ರಿಯಸ್ಯ | ಯೋನಿಷು | ಪ್ರಿಯಃ | ಸನ್ | ಸೀದತ್ | ಪಕ್ಷೇ | ಹಿರಣ್ಯಯೇ | ಸಃ | ವೇನಃ ||

॥ಸಾಯಣಭಾಷ್ಯಂ ॥

ಅಪ್ಸರಾ ಅಪಾಂ ಸಾರಯಿತ್ರ್ಯಪ್ಸು ಕ್ರೀಡಾರ್ಥಂ ಸರಂತೀ ಯೋಷಾ ಸಿಷ್ಮಿಯಾಣಾ ಕಾಂತಸಮೀಪಮುಪಗತ್ಯೇಷದ್ಧಸಂತೀ ॥ ಸ್ಮಿಙ್ ಈಷದ್ಧಸನೇ । ಛಾಂದಸೋ ಲಿಟ್ । ತಸ್ಯ ಲಿಟಃ ಕಾನಜ್ವೇತಿ ಕಾನಚ್॥ ಈದೃಶೀ ಯೋಷಾ ಸ್ತ್ರೀ ವಿದ್ಯುದ್ರೂಪಾ ಜಾರಮಪಾಂ ಜಾರಯಿತಾರಂ । ಯದ್ವಾ। ಜಾರ ಉಪಪತಿಃ । ಸ ಇವ ಪ್ರಿಯಂ । ಇಮಂ ವೇನಂ ಪರಮ ಉತ್ಕೃಷ್ಟೇ ವ್ಯೋಮನ್ ವ್ಯೋಮನ್ಯಂತರಿಕ್ಷೇ ಬಿಭರ್ತಿ । ಪೋಷಯತಿ । ಧಾರಯತಿ ವಾ । ಯಥಾ ಕಾಚಿದ್ರೂಪವತೀ ಯೋಷಿಜ್ಜಾರಮುಪಗಮ್ಯೇಷದ್ಧಸಂತೀ ತಂ ನಿರ್ಜನೇ ಸ್ಥಲೇ ಪುಷ್ಣಾತಿ ತದ್ವದನೇನ ವೇನೇನ ವಿದ್ಯುದ್ರಮತ ಇತ್ಯರ್ಥಃ । ಪ್ರಿಯಸ್ಯಾಸ್ಯ ವೇನಸ್ಯ ಯೋನಿಷು ಸ್ಥಾನೇಷು ಚರತ್ । ವಿದ್ಯುದ್ರೂಪಾ ಯೋಷಿಚ್ಚರತಿ ಗಚ್ಛತಿ । ಅಭಿಸಾರಿಕಾವೃತ್ತ್ಯಾ ಸ್ವಯಮೇವ ಗಚ್ಛತಿ। ಸ ಚ ವೇನಃ ಪ್ರಿಯೋಽಸ್ಯಾ ಅನುಕೂಲತಮಃ ಸನ್ ಹಿರಣ್ಯಯೇ ಹಿರಣ್ಮಯೇ ಹಿರಣ್ಮಯವದ್ಭಾಸ್ವರೇ ಹಿತರಮಣೀಯರೂಪೇ ವಾ ಪಕ್ಷ ಆತ್ಮನಃ ಪಕ್ಷಭೂತೇ ಮೇಘೇ ಸೀದತ್ । ಸೀದತಿ । ತಯಾ ಸಹೋಪವಿಶತಿ ॥

॥ ಪ್ರತಿಪದಾರ್ಥ ॥

ಯೋಷಾ—ಓರ್ವ ಯುವತಿಯು । **ಉಪಸಿಷ್ಮಿಯಾಣಾ**—ಮಂದಹಾಸದಿಂದ ಮೆಲ್ಲನೆ ನಗುತ್ತಾ **ಜಾರಂ**—ತನ್ನ ಉಪಪತಿಯನ್ನು ಅಥವಾ ಪ್ರಿಯನನ್ನು ಸಮೀಪಿಸುವಂತೆ । **ಅಪ್ಸರಾಃ**—ಅಂತರಿಕ್ಷದಲ್ಲಿರುವ ಉದಕ ಸಮೂಹದಲ್ಲಿ ಸಂಚರಿಸುವ । **ಯೋಷಾ**—ವಿದ್ಯುದ್ರೂಪದಿಂದಿರುವ ಸ್ತ್ರೀಯು । **ಜಾರಂ**—ತನಗೆ ಪ್ರೀತಿಪಾತ್ರನಾದ ಈ ವೇನನನ್ನು । **ಪರಮೇ ವ್ಯೋಮನ್**—ಅಂತರಿಕ್ಷದ ಮೇಲುಭಾಗದಲ್ಲಿ । **ಬಿಭರ್ತಿ**—ಪೋಷಿಸುತ್ತಾಳೆ. **ಪ್ರಿಯಸ್ಯ**—ಪ್ರೀತಿಪಾತ್ರನಾದ ಈ ವೇನನ । **ಯೋನಿಷು**—ಸ್ವಸ್ಥಾನವಾದ ಅಂತರಿಕ್ಷದಲ್ಲಿ । **ಚರತ್**—ಈ ವಿದ್ಯುದ್ರೂಪದಿಂದಿರುವ ಸ್ತ್ರೀಯು ಸಂಚರಿಸುತ್ತಾಳೆ । **ಸಃ ವೇನಃ** ಆ ವೇನನು । **ಪ್ರಿಯಃ**—ಈ ವಿದ್ಯುದ್ಯೋಷಿತೆಗೆ ಪ್ರೀತಿಪಾತ್ರನಾಗಿದ್ದು । **ಹಿರಣ್ಯಯೇ** - ಹಿರಣ್ಯದಂತೆ ಪ್ರಕಾಶಿಸುವ ಅಥವಾ ರಮಣೀಯವಾದ । **ಪಕ್ಷೇ**—ತನಗೆ ಪಕ್ಷಭೂತವಾದ ಎಂದರೆ ತನ್ನ ಸುತ್ತಲೂ ಇರುವ ಮೇಘದಲ್ಲಿ । **ಸೀದತ್**—ಕುಳಿತಿರುತ್ತಾನೆ.

॥ ಭಾವಾರ್ಥ ॥

ಮಂದಹಾಸದಿಂದ ನಗುತ್ತಿರುವ ಓರ್ವ ಸ್ತ್ರೀಯು ತನ್ನ ಪ್ರಿಯನನ್ನು ಸಮೀಪಿಸಿ ಅವನೊಡನೆ ಕ್ರೀಡಿಸುವಂತೆ ಅಂತರಿಕ್ಷದ ಮೇಘಗಳ ಮಧ್ಯದಲ್ಲಿ ಸಂಚರಿಸುವ ವಿದ್ಯುತ್(ಮಿಂಚು)ಎಂಬ ಸ್ತ್ರೀಯು ತನ್ನ ಪ್ರಿಯನಾದ ವೇನನೊಡನೆ ಅಂತರಿಕ್ಷದಲ್ಲಿ ಕ್ರೀಡಿಸುತ್ತಾಳೆ ಮತ್ತು ಪ್ರೀತಿಪಾತ್ರನಾದ ಈ ವೇನನ ಸ್ವಸ್ಥಾನವಾದ ಅಂತರಿಕ್ಷದಲ್ಲಿ ಈ ವಿದ್ಯುತ್ ಸ್ತ್ರೀಯು ಸಂಚರಿಸುತ್ತಾಳೆ (ಎಂದರೆ ಮೇಘಗಳಲ್ಲಿ ಮಿಂಚು ಸಂಚರಿಸುತ್ತದೆ) ಈ ವೇನನೂ ಸಹ ಈ ವಿದ್ಯುತ್ ಸ್ತ್ರೀಗೆ ಪ್ರೀತಿಪಾತ್ರನಾಗಿದ್ದು ಸುವರ್ಣದಂತೆ ಪ್ರಕಾಶಿಸುವ ಅಥವಾ ರಮಣೀಯವಾದ ಮೇಘಮಂಡಲದ ಮೇಲೆ ಈ ವಿದ್ಯುತ್ ಸ್ತ್ರೀಯೊಡನೆ ಕುಳಿತು ವಿಹರಿಸುತ್ತಾನೆ.

## English Translation.

The Apsaras, smiling affectionately like a wife at her lover, cherishes him in the highest heaven : she wanders in the abodes of her beloved ; he, Vena, being loved, sits down on his golden wing.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಮಿಂಚಿನಿಂದ ಕೂಡಿದ ಮೇಘಗಳ ಮಧ್ಯದಲ್ಲಿ ಈ ವೇನನೆಂಬ ದೇವನು ಇರುವನು ಎಂಬುದನ್ನು ವಿವರಿಸುವಾಗ ಈ ವಿವರವನ್ನು ಓರ್ವ ಯುವತಿಯು ತನ್ನ ಪ್ರಿಯನನ್ನು ಮಂದಹಾಸದಿಂದ ಸಮೀಪಿಸುವುದಕ್ಕೆ ಹೋಲಿಸಿ ವರ್ಣಿಸಲಾಗಿದೆ. ಯುವತಿಯಾದ ಓರ್ವ ಸ್ತ್ರೀಯು ತನಗೆ ಪ್ರೀತಿಪಾತ್ರನಾದ ಪುರುಷನನ್ನು ಯಾವರೀತಿ ಮಂದಹಾಸಯುಕ್ತಳಾಗಿ ಸಮೀಪಿಸಿ ಕ್ರೀಡಿಸುವಳೋ ಅದರಂತೆ ಮೇಘಮಂಡಲದ ಮಧ್ಯದಲ್ಲಿ ಆಗಾಗ ಕಾಣಿಸಿಕೊಳ್ಳುತ್ತಿರುವ ವಿದ್ಯುತ್ (ಮಿಂಚು)ಎಂಬ ಸ್ತ್ರೀಯು ಈ ವೇನನೊಡನೆ ಅಂತರಿಕ್ಷದ ಮೇಲುಭಾಗದಲ್ಲಿ ಸೇರಿ ಅವನನ್ನು ಪೋಷಿಸುವಳು. ಇಲ್ಲಿ ಯುವತಿಯು ಮಂದಹಾಸದಿಂದ ನಗುವುದಕ್ಕೂ ಪ್ರಕಾಶಮಾನವಾದ ಮಿಂಚಿಗೂ ಹೋಲಿಸಿದೆ. ಮತ್ತು ಅಪ್ಸರಾಃ ಎಂದರೆ ಅಪ್ಸರೆಯಂತೆ ರೂಪಲಾವಣ್ಯಾದಿಗಳಿಂದ ಮೆರೆಯುವ ಸುಂದರ ಸ್ತ್ರೀಯು ಎಂದು ಅರ್ಥವು. ವೇನಪಕ್ಷದಲ್ಲಿ **ಅಪ್ಸರಾಃ** ಎಂದರೆ **ಆಪಾಂಸಾರಯಿತ್ರ್ಯಪ್ಸು ಕ್ರೀಡಾರ್ಥಂ ಸರಂತೀತಿ ವಾ**–ಉದಕದ ಸಾರಭೂತಳಾದವಳು ಅಥವಾ ಉದಕದಲ್ಲಿ ಕ್ರೀಡಾರ್ಥವಾಗಿ ಸಂಚರಿಸುವವಳು ಎಂದರ್ಥವು. ಉದಕದಿಂದ ಕೂಡಿದ ಮೇಘಮಂಡಲಗಳ ಮಧ್ಯದಲ್ಲಿ ಆಗಾಗ ಕಾಣಿಸಿಕೊಳ್ಳುತ್ತಿರುವ ಮಿಂಚನ್ನು(ವಿದ್ಯುತ್)ಇಲ್ಲಿ ಅಪ್ಸರಾಃ ಯೋಷಾ ಎಂಬ ಶಬ್ದಗಳಿಂದ ನಿರ್ದೇಶಿಸಿದೆ. ಮತ್ತು ಯುವತಿಯೂ ಅವಳ ಪ್ರಿಯನೂ ಏಕಾಂತವಾದ ರಹಸ್ಯಸ್ಥಾನದಲ್ಲಿ ಸೇರುವಂತೆ ಇಲ್ಲಿ ವೇನನೂ ಅವನ ಪ್ರಿಯವಾದ ವಿದ್ಯುತ್ ಅಂತರಿಕ್ಷದ ಮೇಲುಭಾಗದಲ್ಲಿ (ಪರಮೇ ವ್ಯೋಮನ್)ಸೇರುತ್ತಾರೆಂದು ವರ್ಣಿಸಿದೆ. ಇದಲ್ಲದೆ ಯುವತಿಯು ತನ್ನ ಪ್ರಿಯನಿರುವ ಪ್ರದೇಶದಲ್ಲಿ ಓಡಾಡುತ್ತಲೂ ಅವನ ಸಮೀಪದಲ್ಲಿ ಕುಳಿತು ವಿಹರಿಸುತ್ತಲೂ ಇರುವಂತೆ ಈ ವಿದ್ಯುತ್ ಎಂಬ ಸ್ತ್ರೀಯು ಅಂತರಿಕ್ಷದಲ್ಲಿ ಆಗಾಗ ಸಂಚರಿಸುತ್ತಾ ಪ್ರಕಾಶಮಾನವಾದ ಮೇಘಮಂಡಲದಲ್ಲಿ ವೇನನೊಡನೆ ಕುಳಿತು (ಎಂದರೆ ಮೇಘಮಂಡಲದಲ್ಲಿ ಅಡಗಿದ್ದು) ವಿಹರಿಸುತ್ತಾಳೆ ಎಂಬ ಉಪಮಾನಾರ್ಥವು ಇಲ್ಲಿ ಉಕ್ತವಾಗಿದೆ.

ಒಟ್ಟಿನಲ್ಲಿ—ಅಂತರಿಕ್ಷದಲ್ಲಿರುವ ಮೇಘದಲ್ಲಿ ವೇನನು ನೆಲಸಿರುವನು. ಆ ಮೇಘದಲ್ಲಿಯೇ ವಿದ್ಯುತ್ ಎಂದರೆ ಮಿಂಚು ಆಗಾಗ ಕಾಣಿಸಿಕೊಳ್ಳುವುದು. ಈ ವಿವರವನ್ನೇ ಋಷಿಯು ಮಂದಹಾಸಯುಕ್ತಳಾದ ಯುವತಿಯು ಪ್ರಿಯನನ್ನು ಸಮೀಪಿಸಿ ಅವನೊಡನೆ ವಿಹರಿಸುವುದಕ್ಕೆ ಹೋಲಿಸಿ ವರ್ಣಿಸಿದ್ದಾನೆ. ವಸ್ತುಸಾದೃಶ್ಯದಲ್ಲಿಯೂ, ವಿಷಯನಿರೂಪಣೆಯಲ್ಲಿಯೂ ಈ ಉಪಮಾನವು ಬಹು ಸಮಂಜಸವಾಗಿರುವುದು.

॥ ಸಂಹಿತಾಪಾಠಃ ॥

**ನಾಕೇ ಸುಪರ್ಣಮುಪ ಯತ್ಪತಂತಂ ಹೃದಾ ವೇನಂತೋ ಅಭ್ಯಚಕ್ಷತ ತ್ವಾ।**
**ಹಿರಣ್ಯಪಕ್ಷಂ ವರುಣಸ್ಯ ದೂತಂ ಯಮಸ್ಯ ಯೋನೌ ಶಕುನಂ ಭುರಣ್ಯುಂ॥**

॥ ಪದಪಾಠಃ ॥

**ನಾಕೇ । ಸುಽಪರ್ಣಂ । ಉಪ । ಯತ್ । ಪತಂತಂ । ಹೃದಾ । ವೇನಂತಃ । ಅಭಿ । ಅಚಕ್ಷತ । ತ್ವಾ ।**
**ಹಿರಣ್ಯಽಪಕ್ಷಂ । ವರುಣಸ್ಯ । ದೂತಂ । ಯಮಸ್ಯ । ಯೋನೌ । ಶಕುನಂ । ಭುರಣ್ಯುಂ ॥ ೬ ॥**

|| ಸಾಯಣಭಾಷ್ಯಂ ||

ಅಭಿಷ್ವನೇ ನಾಕೇ ಸುಪರ್ಣಮಿತ್ಯೇಷಾ | ಸೂತ್ರಿತಂ ಚ | ನಾಕೇ ಸುಪರ್ಣಮುಪ ಯತ್ಪತಂತ- ಮಿತಿ ಸಮಾಪ್ಯ ಪ್ರಣವೇನೋಽಪವಿಶೇತ್ | ಅ. ೪-೭ | ಇತಿ ||

ಹೇ ವೇನ ತ್ವಾ ತ್ವಾಂ ಹೃದಾ ಹೃದಯೇನ ಮನಸಾ ವೇನಂತಃ ಕಾಮಯಮಾನಾಃ ಸ್ತೋತಾರೋ ನಾಕೇಽಂತರಿಕ್ಷೇ ಯದ್ಯದಾಭ್ಯಚಕ್ಷತ ಅಭಿಪಶ್ಯಂತಿ ತದಾನೀಂ ತ್ವಮುಪ ಆಗಚ್ಛಸೀತಿ ಶೇಷಃ | ಕಥಂ- ಭೂತಂ | ಸುಪರ್ಣಂ ಶೋಭನಪತನಂ ಪತಂತಮಂತರಿಕ್ಷೇ ಗಚ್ಛಂತಂ ಹಿರಣ್ಯಪಕ್ಷಂ ಹಿರಣ್ಮಯಾಭ್ಯಾಂ ಪಕ್ಷಾಭ್ಯಾಮುಪೇತಂ ವರುಣಸ್ಯ ಜಲಾಭಿಮಾನಿನೋ ದೇವಸ್ಯ ದೂತಂ ಚಾರಂ ಯಮಸ್ಯ ನಿಯಾಮಕಸ್ಯ ವೈದ್ಯುತಾಗ್ನೇರ್ಯೋನೌ ಸ್ಥಾನೇಽಂತರಿಕ್ಷೇ ಶಕುನಂ ಪಕ್ಷಿರೂಪೇಣ ವರ್ತಮಾನಂ ಭುರಣ್ಯಂ ಭರ್ತಾರಂ | ಯದ್ವಾ| ವೃಷ್ಟಿಪ್ರದಾನಾದಿನಾ ಸರ್ವಸ್ಯ ಜಗತಃ ಪೋಷಕಂ || ಭುರಣ ಧಾರಣಪೋಷಣಯೋಃ | ಕಂಡ್ವಾದಿಃ | ಅಸ್ಮಾದೌಣಾದಿಕ ಉಪ್ರತ್ಯಯಃ ||

|| ಪ್ರತಿಪದಾರ್ಥ ||

(ಎಲೈ ವೇನದೇವನೇ) **ಸುಪರ್ಣಂ**—ಚೆನ್ನಾಗಿ ವೃಷ್ಟಿಯನ್ನು ಸುರಿಸುವವನೂ | **ಪತಂತಂ**—ಅಂತರಿಕ್ಷದಲ್ಲಿ ಸಂಚರಿಸುವವನೂ | **ಹಿರಣ್ಯಪಕ್ಷಂ**—ಸುವರ್ಣಮಯವಾದ ರೆಕ್ಕೆಗಳಿಂದ ಯುಕ್ತನಾದವನೂ | **ವರುಣಸ್ಯ**— ಜಲಾಭಿಮಾನಿದೇವತೆಯಾದ ವರುಣನ | **ದೂತಂ**—ದೂತನಾದವನೂ | **ಯಮಸ್ಯ**—ವೃಷ್ಟಿನಿಯಾಮಕನಾದ ವೈದ್ಯುತಾಗ್ನಿಯ | **ಯೋನೌ**—ಸ್ಥಾನವಾದ ಅಂತರಿಕ್ಷದಲ್ಲಿ | **ಶಕುನಂ**—ಪಕ್ಷಿಯಂತೆ ಇರುವವನೂ | **ಭುರಣ್ಯಂ**—ವೃಷ್ಟಿಪ್ರದಾನಾದಿಗಳಿಂದ ಸಮಸ್ತಜಗತ್ತನ್ನೂ ಪೋಷಿಸುವವನೂ ಆದ | **ತ್ವಾ**—ನಿನ್ನನ್ನು | **ಹೃದಾ**—ಮನಃಪೂರ್ವಕವಾಗಿ | **ವೇನಂತಃ**—ಅಪೇಕ್ಷಿಸುವ ಸ್ತೋತೃಜನರು | **ನಾಕೇ**—ಅಂತರಿಕ್ಷದಲ್ಲಿ | **ಯತ್**—ಯಾವಾಗ | **ಅಭಿ ಅಚಕ್ಷತ**—ನೋಡುತ್ತಾರೆಯೋ ಆಗ | **ಉಪ (ಆಗಚ್ಛಸಿ)**—ಸಮೀಪಕ್ಕೆ ಬರುತ್ತೀಯೆ.

|| ಭಾವಾರ್ಥ ||

ಎಲೈ ವೇನದೇವನೇ, ಮನಃಪೂರ್ವಕವಾಗಿ ನಿನ್ನಾಗಮನವನ್ನು ಬಯಸುವ ಸ್ತೋತೃಜನರು ವೃಷ್ಟಿಪ್ರದನೂ ಅಂತರಿಕ್ಷಸಂಚಾರಿಯೂ, ಸುವರ್ಣಮಯವಾದ ರೆಕ್ಕೆಗಳಿಂದ ಕೂಡಿದವನೂ, ಜಲಾಭಿಮಾನಿದೇವತೆಯಾದ ವರುಣನ ದೂತನೂ, ವೃಷ್ಟಿನಿಯಾಮಕನಾದ ವೈದ್ಯುತಾಗ್ನಿಯ ಸ್ಥಾನವಾದ ಅಂತರಿಕ್ಷದಲ್ಲಿ ಪಕ್ಷಿಯಂತೆ ಇರುವವನೂ, ವೃಷ್ಟಿ ಪ್ರದಾನಾದಿಗಳಿಂದ ಸಮಸ್ತಜಗತ್ತನ್ನೂ ಪೋಷಿಸುವವನೂ ಆದ ನಿನ್ನನ್ನು ಅಂತರಿಕ್ಷದಲ್ಲಿ ಯಾವಾಗ ನೋಡುವರೋ ಆಗ ನೀನು ಅವರ ಸಮೀಪಕ್ಕೆ ಬರುತ್ತೀಯೆ. ಎಂದರೆ ವೃಷ್ಟ್ಯುದಕರೂಪವಾಗಿ ಅವರನ್ನು ಸಮೀಪಿಸುತ್ತೀಯೆ (ವೃಷ್ಟಿಯನ್ನು ಸುರಿಸುತ್ತೀಯೆ)

## English Translation

Those desiring you in their hearts contemplated you travelling as a strong-winged bird in the sky, the golden-winged messenger of Varuna, the bird which nourishes (the world) in Yama's dwelling.

॥ ವಿಶೇಷವಿಷಯಗಳು ॥

ಅಭಿಪ್ಲವದಲ್ಲಿ **ನಾಕೇ ಸುಪರ್ಣಂ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ನಾಕೇ ಸುಪರ್ಣಮುಪಯತ್ಪತಂತಮಿತಿ ಸಮಾಪ್ಯ ಪ್ರಣವೇನೋಪವಿಶೇತ್** ಎಂಬ ಸೂತ್ರದಿಂದ (ಆ.೪-೭) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಊರ್ಧ್ವೋ ಗಂಧರ್ವೋ ಅಧಿ ನಾಕೇ ಅಸ್ಥಾತ್ಪ್ರತ್ಯಙ್ ಚಿತ್ರಾ ಬಿಭ್ರದಸ್ಯಾ-ಯುಧಾನಿ ।**

**ವಸಾನೋ ಅತ್ಕಂ ಸುರಭಿಂ ದೃಶೇ ಕಂ ಸ್ವ೧ರ್ಣ ನಾಮ ಜನತ ಪ್ರಿಯಾಣಿ॥**

॥ ಪದಪಾಠಃ ॥

**ಊರ್ಧ್ವಃ । ಗಂಧರ್ವಃ । ಅಧಿ । ನಾಕೇ । ಅಸ್ಥಾತ್ । ಪ್ರತ್ಯಙ್ । ಚಿತ್ರಾ । ಬಿಭ್ರತ್ । ಅಸ್ಯ । ಆಯುಧಾನಿ। ವಸಾನಃ । ಅತ್ಕಂ । ಸುರಭಿಂ । ದೃಶೇ । ಕಂ । ಸ್ವಃ । ನ । ನಾಮ । ಜನತ । ಪ್ರಿಯಾಣಿ ॥ ೭ ॥**

॥ ಸಾಯಣಭಾಷ್ಯಂ ॥

**ಊರ್ಧ್ವಃ ಉಪರಿದೇಶೇ ವರ್ತಮಾನೋ ಗಂಧರ್ವೋ ಗವಾಮುದಕಾನಾಂ ಧರ್ತಾ । ಗವಿ ಗನ್ ಧೃಞೋ ವ ಇತಿ ಗೋಶಬ್ದೋಪಪದಾದ್ಧೃಞ್ ಧಾರಣ ಇತ್ಯಸ್ಮಾದ್ವಪ್ರತ್ಯಯ ಉಪಪದಸ್ಯ ಗನ್ಭಾವಶ್ಚ॥ ಈದೃಶೋ ವೇನಃ ಪ್ರತ್ಯಙ್ಙಸ್ಮತ್ಪ್ರತ್ಯಂಚನೋಽಭಿಮುಖಃ ಸನ್ನಾಕೇಽಧ್ಯಂತರಿಕ್ಷೇಽಸ್ಥಾತ್ । ತಿಷ್ಠತಿ । ಕಿಂ ಕುರ್ವನ್। ಅಸ್ಯಾತ್ಮನಃ ಸ್ವಭೂತಾನಿ ಚಿತ್ರಾ ಚಿತ್ರಾಣಿ ಚಾಯನೀಯಾನ್ಯಾಶ್ಚರ್ಯಭೂತಾನಿ ವಾಯುಧಾನಿ ಬಿಭ್ರದ್ಧಾರಯನ್ ॥ ಬಿಭರ್ತೇಃ ಶತರಿ ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ನಾಭ್ಯಸ್ತಾಚ್ಛತುರಿತಿ ನುಮ್ಪ್ರತಿ-ಷೇಧಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ತಥಾ ಸುರಭಿಂ ಶೋಭನಮತ್ಕಮಾತ್ಮೀಯಂ ವ್ಯಾಪ್ತಂ ರೂಪಂ ವಸಾನಃ ಸರ್ವತ್ರಾಚ್ಛಾದಯನ್ । ಕಿಮರ್ಥಂ । ದೃಶೇ ದರ್ಶನಾರ್ಥಂ ॥ ದೃಶೇ ವಿಖ್ಯೇ ಚೇತಿ ಕೇಪ್ರತ್ಯಯಾಂತೋ ನಿಪಾತ್ಯತೇ ॥ ಕಮಿತಿ ಪೂರಣಃ । ತತ್ರ ದೃಷ್ಟಾಂತಃ । ಸ್ವರ್ಣ । ಸ್ವಃ ಶೋಭನಾರಣ ಆದಿತ್ಯಃ । ಸ ಯಥಾತ್ಮೀಯಂ ರೂಪಂ ದರ್ಶನಾಯ ಸರ್ವತ್ರಾಚ್ಛಾದಯತಿ ತದ್ವತ್ । ತದನಂತರಂ ನಾಮ ನಾಮಾನಿ ನಮನಶೀಲಾನ್ಯುದಕಾನಿ ಪ್ರಿಯಾಣಿ ಸರ್ವೇಷಾಮನುಕೂಲಾನಿ ಜನತ। ಜನಯತಿ । ವೃಷ್ಟಿಮುತ್ಪಾದಯತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಊರ್ಧ್ವಃ**— ಎತ್ತರವಾದ ಅಂತರಿಕ್ಷ ಪ್ರದೇಶದಲ್ಲಿರುವವನೂ । **ಗಂಧರ್ವಃ**— ಉದಕಗಳನ್ನು ಧರಿಸಿರುವವನೂ ಎಂದರೆ ಉದಕಗಳಿಗೆ ಆಶ್ರಯಭೂತನೂ ಆದ ಈ ವೇನನು । **ಪ್ರತ್ಯಙ್**— ನಮಗೆ ಅಭಿಮುಖವಾಗಿ ।

**ನಾಕೇಅಧಿ**— ಅಂತರಿಕ್ಷಪ್ರದೇಶದಲ್ಲಿ | **ಅಸ್ಥಾತ್**— ಇರುವನು | (**ಸಃ**— ಆ ವೇನನು) | **ಅಸ್ಯ**— ತನ್ನ | **ಚಿತ್ರಾ**—ನಾನಾವಿಧವಾದ | **ಆಯುಧಾನಿ**—ಆಯುಧಗಳನ್ನು | **ಬಿಭ್ರತ್**— ಧರಿಸಿದವನಾಗಿಯೂ | **ಸುರಭಿಂ**—ಶೋಭನವಾದ | **ಅತ್ಕಂ**—ತನ್ನರೂಪದಿಂದ | **ಸ್ವಃ ನ**—ಆದಿತ್ಯನಂತೆ | **ವಸಾನಃ**—ಸರ್ವತ್ರ ಆವರಿಸುತ್ತಲೂ | **ಪ್ರಿಯಾಣಿ**—ಸಮಸ್ತರಿಗೂ ಪ್ರಿಯಕರವಾದ | **ನಾಮ**— ಉದಕಗಳನ್ನು | **ಜನತ**— ಉತ್ಪನ್ನಮಾಡುತ್ತಾನೆ

॥ ಭಾವಾರ್ಥ ॥

ಎತ್ತರವಾದ ಅಂತರಿಕ್ಷ ಪ್ರದೇಶದಲ್ಲಿರುವವನೂ, ಉದಕಗಳಿಗೆ ಆಧಾರಭೂತನೂ ಆದ ಈ ವೇನದೇವನು ನಮಗೆ ಅಭಿಮುಖವಾಗಿ ಅಂತರಿಕ್ಷ ಪ್ರದೇಶದಲ್ಲಿ ಇರುತ್ತಾನೆ. ಆ ವೇನನು ತನ್ನ ವಿಚಿತ್ರವಾದ ಆಯುಧಗಳನ್ನು ಧರಿಸಿ ಆದಿತ್ಯನಂತೆ ತನ್ನ ಉತ್ತಮವಾದ ರೂಪದಿಂದ ಸರ್ವವನ್ನೂ ಆವರಿಸುತ್ತಾ ಸಮಸ್ತರಿಗೂ ಪ್ರಿಯಕರವಾದ ವೃಷ್ಟ್ಯು ದಕವನ್ನು ಉತ್ಪನ್ನಮಾಡುತ್ತಾನೆ ಎಂದರೆ ವೃಷ್ಟಿಯನ್ನು ಸುರಿಸುತ್ತಾನೆ.

## English Translation.

The Gandharva stood erect upon the firmament, brandishing towards us his wonderful weapons, investing all) in his beautiful diffusive (form), to make them visible, like the sun he generated the precious (rains).

॥ ಸಂಹಿತಾಪಾಠಃ ॥

ದ್ರಪ್ಸಃ ಸಮುದ್ರಮಭಿ ಯಜ್ಜಿಗಾತಿ ಪಶ್ಯನ್ಗೃಧ್ರಸ್ಯ ಚಕ್ಷಸಾ ವಿಧರ್ಮನ್ ।
ಭಾನುಃ ಶುಕ್ರೇಣ ಶೋಚಿಷಾ ಚಕಾನಸ್ತೃತೀಯೇ ಚಕ್ರೇ ರಜಸಿ ಪ್ರಿಯಾಣಿ॥

॥ ಪದಪಾಠಃ ॥

ದ್ರಪ್ಸಃ । ಸಮುದ್ರಂ । ಅಭಿ । ಯತ್ । ಜಿಗಾತಿ । ಪಶ್ಯನ್ । ಗೃಧ್ರಸ್ಯ । ಚಕ್ಷಸಾ । ವಿಽಧರ್ಮನ್ ।
ಭಾನುಃ । ಶುಕ್ರೇಣ । ಶೋಚಿಷಾ । ಚಕಾನಃ । ತೃತೀಯೇ । ಚಕ್ರೇ । ರಜಸಿ । ಪ್ರಿಯಾಣಿ ॥ ೮ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇಽಭಿಷ್ಟವೇ ದ್ರಪ್ಸಃ ಸಮುದ್ರಮಿತ್ಯೇಷಾ । ಸೂತ್ರಿತಂ ಚ । ದ್ರಪ್ಸಃ ಸಮುದ್ರಮಭಿ ಯಜ್ಜಿಗಾತಿ ಸಖೇ ಸಖಾಯಮಭ್ಯಾ ವವೃತ್ಸ್ವ । ಆ. ೪-೭ । ಇತಿ ॥

ವಿಧರ್ಮನ್ವಿಧರ್ಮಣಿ ವಿಧಾರಕೇಽಂತರಿಕ್ಷೇ ಸ್ಥಿತೋ ದ್ರಪ್ಸೋ ದ್ರವಣಶೀಲಃ । ಯದ್ವಾ । ದ್ರಪ್ಸಾ

**ಉದಕಬಿಂದವಃ । ತದ್ವಾನ್ ॥ ಅರ್ಶ ಆದಿತ್ವಾದಚ್॥ ಗೃಧ್ರಸ್ಯ ಗೃಧೋ ರಸಾನಭಿಕಾಂಕ್ಷತಃ ಸೂರ್ಯಸ್ಯ ಚಕ್ಷಸಾ ತೇಜಸಾ ಪಶ್ಯನ್ ಪ್ರಕಾಶಮಾನೋ ವೇನೋ ಯದ್ಯದಾ ಸಮುದ್ರಂ ಸಮುಂದನಶೀಲಂ ಮೇಘ- ಮಭಿ ಜಿಗಾತಿ ಅಭಿಗಚ್ಛತಿ ತದಾನೀಂ ಭಾನುಃ ಸೂರ್ಯಃ ಶುಕ್ರೇಣ ಶುಭ್ರೇಣ ಶೋಚಿಷಾ ತೇಜಸಾ ತೃತೀಯೇ ರಜಸಿ ಲೋಕೇ ಚಕಾನೋ ದೀಪ್ಯಮಾನಃ ಪ್ರಿಯಾಣಿ ಸರ್ವೇಷಾಮಭೀಷ್ಟಾನ್ಯುದಕಾನಿ ಚಕ್ರೇ । ಕರೋತಿ ॥**

॥ ಪ್ರತಿಪದಾರ್ಥ ॥

**ವಿಧರ್ಮನ್**— ಅಂತರಿಕ್ಷದಲ್ಲಿ ಇರುವವನೂ । **ದ್ರಪ್ಸಃ**— ದ್ರವರೂಪವಾದ ಉದಕಬಿಂದುಗಳುಳ್ಳವನೂ । **ಗೃಧ್ರಸ್ಯ**— ಸೂರ್ಯನ । **ಚಕ್ಷಸಾ**— ತೇಜಸ್ಸಿನಿಂದ । **ಪಶ್ಯನ್**— ಪ್ರಕಾಶಮಾನನೂ ಆದ ವೇನನು । **ಯತ್**— ಯಾವಾಗ । **ಸಮುದ್ರಂ**— ಮೇಘವನ್ನು । **ಅಭಿ** ಅಭಿಲಕ್ಷಿಸಿ ಎಂದರೆ ಮೇಘಾಭಿಮುಖವಾಗಿ । **ಜಿಗಾತಿ**— ಹೋಗುವನೋ ಆಗ । **ಭಾನುಃ**— ಸೂರ್ಯನು । **ಶುಕ್ರೇಣ**— ಶುಭ್ರವಾದ ಅಥವಾ ಪ್ರಕಾಶಮಾನವಾದ । **ಶೋಚಿಷಾ**— ತೇಜಸ್ಸಿನಿಂದ । **ತೃತೀಯೇ ರಜಸಿ**— ಸ್ವರ್ಗಲೋಕದಲ್ಲಿ (ಅಂತರಿಕ್ಷದಲ್ಲಿ) । **ಚಕಾನಃ**— ಪ್ರಕಾಶಿಸುತ್ತಾ । **ಪ್ರಿಯಾಣಿ**— ಸರ್ವರಿಗೂ ಪ್ರಿಯಕರವಾದ ಉದಕಗಳನ್ನು । **ಚಕ್ರೇ**— ಉತ್ಪತ್ತಿಮಾಡುತ್ತಾನೆ.

॥ ಭಾವಾರ್ಥ ॥

ಅಂತರಿಕ್ಷದಲ್ಲಿ ದ್ರವರೂಪವಾದ ಉದಕಬಿಂದುಗಳ ರೂಪದಲ್ಲಿರುವವನೂ ಸೂರ್ಯನ ತೇಜಸ್ಸಿನಿಂದ ಪ್ರಕಾಶಮಾನನೂ ಆದ ಈ ವೇನದೇವನು ಯಾವಾಗ ಮೇಘದ ಅಭಿಮುಖವಾಗಿ ಹೋಗುವನೋ ಆಗ ಸೂರ್ಯನು ತನ್ನ ಶುಭ್ರವಾದ ತೇಜಸ್ಸಿನಿಂದ ಮೂರನೆಯ ಲೋಕವಾದ ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಪ್ರಕಾಶಿಸುತ್ತ ಸರ್ವರಿಗೂ ಹಿತಕರವಾದ ವೃಷ್ಟ್ಯುದಕಗಳನ್ನು ಉತ್ಪತ್ತಿಮಾಡುತ್ತಾನೆ.

## English Translation

When (Vena as) the drop of rain approaches the firmament, contemplating (all things) with the eye of the hawk in the supporting (firmament), then the sun shining with brilliant radiance, makes the precious (showers) in the third sphere.

॥ ವಿಶೇಷವಿಷಯಗಳು ॥

ಪ್ರವರ್ಗ್ಯಾಭಿಷ್ಟವದಲ್ಲಿ **ದ್ರಪ್ಸಃ ಸಮುದ್ರಂ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ— **ದ್ರಪ್ಸಃ ಸಮುದ್ರಮಭಿ ಯಜ್ಜಿಗಾತಿ ಸಖೇ ಸಖಾಯಮಭ್ಯಾ ವವೃತ್ಸ್ವ** ಎಂಬ ಸೂತ್ರದಿಂದ (ಆ. ೪-೭) ವಿವೃತವಾಗಿರುವುದು

# ನೂರ ಇಪ್ಪತ್ತನಾಲ್ಕನೆಯ ಸೂಕ್ತವು

## ಪೀ ಠಿ ಕೆ

ಪೂರ್ವದಲ್ಲಿ ಅಗ್ನಿಗೆ ಮೂರು ಮಂದಿ ಜ್ಯೇಷ್ಠಸಹೋದರರಿದ್ದರು. ಅವರು ದೇವತೆಗಳಿಗೆ ಹವಿರ್ವಹನ ಕಾರ್ಯವನ್ನು ಕೈಗೊಂಡು ಯಜ್ಞಕರ್ಮವನ್ನು ನಿರ್ವಹಿಸುತ್ತಿದ್ದರು. ಹೀಗಿರುವಾಗ ಯಜ್ಞಗಳಲ್ಲಿ ಹೋಮಮಾಡುವ ವಷಟ್ಕಾರಾಹುತಿಗಳ ವಜ್ರಾಘಾತದಿಂದ ಅವರು ಮೃತರಾದರು. ಇದನ್ನು ಕಂಡು ಅಗ್ನಿಯು ಹೆದರಿ ತನಗೂ ಇದೇ ಗತಿ ಪ್ರಾಪ್ತವಾಗಬಹುದೆಂಬ ಭೀತಿಯಿಂದ ಯಾರಿಗೂ ಹೇಳದೆ ಓಡಿಹೋಗಿ ನೀರಿನಲ್ಲಿಯೂ ಓಷಧಿವನಸ್ಪತಿಗಳಲ್ಲಿಯೂ ಅವಿತುಕೊಂಡಿದ್ದನು. ಇದರಿಂದ ಯಜ್ಞಯಾಗಾದಿಗಳಲ್ಲಿ ದೇವತೆಗಳಿಗೆ ಹವಿಸ್ಸನ್ನು ವಹಿಸುವವರಿಲ್ಲದೆ ತೊಂದರೆಯಾಗಿ ಯಜ್ಞಾನುಷ್ಠಾನವು ನಿಂತುಹೋಗುವ ಸಂಭವವುಂಟಾಯಿತು. ಆದ್ದರಿಂದ ಸೋಮ, ವರುಣ, ಮೊದಲಾದ ದೇವತೆಗಳು ಅಗ್ನಿಯನ್ನು ಹುಡುಕುತ್ತಾ ಅವನು ಅಡಗಿಕೊಂಡಿದ್ದ ನೀರಿನ ಬಳಿಗೆ ಬಂದು ಅಗ್ನಿಯು ನೀರಿನಿಂದ ಎದ್ದುಬಂದು ಮುಂಚಿನಂತೆ ತಮಗೆ ಹವಿಸ್ಸನ್ನು ವಹಿಸಬೇಕೆಂದೂ ಯಜ್ಞಕರ್ಮಗಳಲ್ಲಿ ಸಹಾಯಮಾಡಬೇಕೆಂದೂ ಪ್ರಾರ್ಥಿಸಿದರು ಈ ರೀತಿ ಪ್ರಾರ್ಥಿಸಿರುವುದನ್ನೇ ಈ ಸೂಕ್ತದಲ್ಲಿ ಹೇಳಲಾಗಿದೆ. ಈ ವಿಷಯವು ಇದೇ ಹತ್ತನೆಯ ಮಂಡಲದ **ಮಹತ್ತದುಲ್ಬಂ** ಎಂಬ ೫೧ ನೇ ಸೂಕ್ತದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿರುವುದನ್ನು (ಋ. ಸಂ. ಭಾಗ ೨೮ ಪುಟ ೨೫೦-೨೫೭) ನೋಡಿ.

|| ಸಾಯಣಭಾಷ್ಯಂ ||

**ಇಮಂ ನೋ ಅಗ್ನ ಇತಿ ನವರ್ಚಂ ದ್ವಾದಶಂ ಸೂಕ್ತಂ । ದ್ವಿತೀಯಾದ್ಯಾಭಿಸ್ತಿಸೃಭಿರಗ್ನಿರ್ಋಷಿರ್ಭೂತ್ವಾ ಸ್ವಾತ್ಮಾನಂ ದೇವತಾರೂಪಿಣಮಸ್ತೌತ್ । ಅತಸ್ತಾಸಾಂ ಸ ಏವರ್ಷಿರ್ದೇವತಾ ಚ । ಶಿಷ್ಟಾಭಿರಗ್ನಿವರುಣಸೋಮಾ ಅಸ್ತುವನ್ । ಅತಸ್ತಾಸಾಂ ಷಣ್ಣಾಂ ತೇ ಋಷಯಃ । ಆದ್ಯಾಗ್ನೇಯೀ । ನವಮೀಂದ್ರದೇವತ್ಯಾ । ಶಿಷ್ಟಾಸು ಚತಸೃಷು ಲಿಂಗೋಕ್ತದೇವತಾ । ಸಪ್ತಮೀ ಜಗತೀ ಶಿಷ್ಟಾಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಇಮಂ ನೋ ನವೈಂದ್ರ್ಯ್ಯಂತ್ಯಮಾ ನಿಹವೋಽಗ್ನಿವರುಣಸೋಮಾನಾಮಾದ್ಯಾಗ್ನೇಯೀ ತಿಸ್ರಶ್ಚಾಗ್ನೇರಾತ್ಮಸ್ತವಃ ಶಿಷ್ಟಾ ಯಥಾನಿಪಾತಂ ಸಪ್ತಮೀ ಜಗತೀತಿ || ಗತೋ ವಿನಿಯೋಗಃ ||**

ಅನುವಾದವು—**ಇಮಂ ನೋ ಅಗ್ನೇ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಒಂಬತ್ತು ಋಕ್ಕುಗಳಿರುವವು ಈ ಸೂಕ್ತದಲ್ಲಿ ಎರಡನೆಯ ಋಕ್ಕಿನಿಂದ ಮುಂದಿನ ಮೂರು ಋಕ್ಕುಗಳವರಗೆ ಎಂದರೆ ೨-೪ ಋಕ್ಕುಗಳವರೆಗೆ ಅಗ್ನಿಯೇ ಋಷಿಯಾಗಿ ತನ್ನನ್ನೇ ಸ್ತುತಿಸಿರುವನು. ಆದ್ದರಿಂದ ಆ ಮೂರು ಋಕ್ಕುಗಳಿಗೆ ಅಗ್ನಿಯೇ ಋಷಿಯು ಮತ್ತು ದೇವತೆಯು. ಉಳಿದ ಋಕ್ಕುಗಳಲ್ಲಿ ೧ ನೇ ಋಕ್ಕಿಗೆ ಅಗ್ನಿಯು ಋಷಿಯು. ೫-೯ ಋಕ್ಕುಗಳಿಗೆ ಅಗ್ನಿ ವರುಣ ಸೋಮ ಎಂಬುವರು ಋಷಿಗಳು, ಮೊದಲನೆಯ ಋಕ್ಕಿಗೆ ಅಗ್ನಿಯು ದೇವತೆಯು. ಒಂಬತ್ತನೆಯ ಋಕ್ಕಿಗೆ ಇಂದ್ರನು ದೇವತೆಯು; ಉಳಿದ ನಾಲ್ಕು ಋಕ್ಕುಗಳಿಗೆ ಎಂದರೆ ೫-೮ ಋಕ್ಕುಗಳಿಗೆ ಅವುಗಳಲ್ಲಿ ಸ್ತುತರಾಗಿರುವವರೇ ದೇವತೆಗಳು. ಈ ಸೂಕ್ತದ ಏಳನೆಯ ಋಕ್ಕು ಜಗತೀ ಛಂದಸ್ಕವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಇಮಂ ನೋ ನವೈಂದ್ರ್ಯ್ಯಂತ್ಯಮಾ ನಿಹವೋಽಗ್ನಿವರುಣಸೋಮಾನಾಮಾದ್ಯಾಗ್ನೇಯೀ ತಿಸ್ರಶ್ಚಾಗ್ನೇರಾತ್ಮಸ್ತವಃ ಶಿಷ್ಟಾ ಯಥಾನಿಪಾತಂ ಸಪ್ತಮೀ ಜಗತೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೨೪

ಮಂಡಲ-೧೦ ॥ ಅನುವಾಕ-೧೦ ॥ ಸೂಕ್ತ-೧೨೪ ॥
ಅಷ್ಟಕ-೮ ॥ ಅಧ್ಯಾಯ-೭ ॥ ವರ್ಗ-೯, ೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
॥ ಋಷಿಃ—೧, ೫-೯. ಅಗ್ನಿವರುಣಸೋಮಾನಾಂ ನಿಹವಃ । ೨-೪. ಅಗ್ನಿಃ ॥
॥ ದೇವತಾ—೧-೪. ಅಗ್ನಿಃ । ೫-೮. ಯಥಾನಿಪಾತಂ । ೯. ಇಂದ್ರಃ ॥
॥ ಛಂದಃ—೧-೬, ೮, ೯. ತ್ರಿಷ್ಟುಪ್ । ೭. ಜಗತೀ ॥

॥ ಸಂಹಿತಾಪಾಠಃ ॥

ಇಮಂ ನೋ ಅಗ್ನ ಉಪ ಯಜ್ಞಮೇಹಿ ಪಂಚಯಾಮಂ ತ್ರಿವೃತಂ ಸಪ್ತ-
ತಂತುಂ ।
ಅಸೋ ಹವ್ಯವಾಳುತ ನಃ ಪುರೋಗಾ ಜ್ಯೋಗೇವ ದೀರ್ಘಂ ತಮ ಆಶ-
ಯಿಷ್ಠಾಃ ॥ ೧ ॥

॥ ಪದಪಾಠಃ ॥

ಇಮಂ । ನಃ । ಅಗ್ನೇ । ಉಪ । ಯಜ್ಞಂ । ಆ । ಇಹಿ । ಪಂಚಽಯಾಮಂ । ತ್ರಿಽವೃತಂ । ಸಪ್ತಽತಂತುಂ ।
ಅಸಃ । ಹವ್ಯಽವಾಟ್ । ಉತ । ನಃ । ಪುರಃಽಗಾಃ । ಜ್ಯೋಕ್ । ಏವ । ದೀರ್ಘಂ । ತಮಃ । ಆ ।
ಅಶಯಿಷ್ಠಾಃ ॥ ೧ ॥

॥ ಸಾಯಣಭಾಷ್ಯಂ ॥

ಭ್ರಾತೃಷು ಹವಿರ್ವಹನೇಷು ಮೃತೇಷು ಮರಣಭೀತ್ಯಾ ಕೃತಪಲಾಯನಂ ಗುಹಾಯಾಂ ನಿಗೂಢ-
ಮಗ್ನಿಮಗ್ನ್ಯಾದ್ಯಾಃ ಸೂಕ್ತದ್ರಷ್ಟಾರ ಋಷಯೋಽನಯಾಹ್ವಯನ್ । ಹೇ ಅಗ್ನೇ ನೋಽಸ್ಮಾಕಮಿಮಂ
ಯಜ್ಞಮುಪೇಹಿ । ಉಪಾಗಚ್ಛ । ಪ್ರಾಪ್ನುಹಿ । ಮಾ ಪಲಾಯಿಷ್ಠಾಃ । ಕೀದೃಶಂ । ಪಂಚಯಾಮಂ
ಯಜಮಾನಪಂಚಮೈರ್ಋತ್ವಿಗ್ಭಿರ್ನಿಯಮಿತಂ । ಯದ್ವಾ । ಧಾನಾಕರಂಭಾದಿಭಿಃ ಪಂಚಭಿರ್ಹವಿರ್ಭಿಃ
ಪಂಚಭಿಃ ಪ್ರಯಾಜೈರ್ವಾ ಪ್ರಾಪ್ತಂ । ತ್ರಿವೃತಂ ಪಾಕಯಜ್ಞಹವಿರ್ಯಜ್ಞಸೋಮಯಜ್ಞಭೇದೇನ
ಸವನತ್ರಯಾತ್ಮನಾ ವಾ ತ್ರಿಗುಣಂ ಸಪ್ತತಂತುಂ ಸಪ್ತ ತಂತನಸ್ತನಿತಾರಃ ಕರ್ಮಣಾಂ ವಿಸ್ತಾರಯಿತಾರೋ
ಹೋತ್ರಾದ್ಯಾಃ ಸಪ್ತ ವಷಟ್ಕರ್ತಾರೋ ಯಸ್ಯ । ಯದ್ವಾ । ಅಗ್ನಿಷ್ಟೋಮೋಽತ್ಯಗ್ನಿಷ್ಟೋಮ ಉಕ್ಥ್ಯಃ
ಷೋಳಶೀ ವಾಜಪೇಯೋಽತಿರಾತ್ರೋಽಪ್ತೋರ್ಯಾಮ ಇತಿ ಸಪ್ತಧಾ ವಿಸ್ತೀರ್ಯಮಾಣಂ । ಈದೃಶಂ
ಯಜ್ಞಮುಪಗತ್ಯ ಚಾನಂತರಂ ನೋಽಸ್ಮಾಕಂ ಹವ್ಯವಾಡ್ಢವ್ಯಾನಾಂ ಹವಿಷಾಂ ವೋಢಾಸಃ । ಭವ ॥
ಅಸ್ತೇರ್ಲೇಟ್ಯಡಾಗಮಃ ॥ ಉತಾಪಿ ಚ ನೋಽಸ್ಮಾಕಂ ಪುರೋಗಾಃ ಪುರತೋ ಗಂತಾ ಭವ ॥ ಜನಸನ-

ಋನಕ್ರಮಗಮೋ ವಿಟ್ । ವಿಡ್ವರೋರಸುನಾಸಿಕಸ್ಯಾದಿತ್ಯಾತ್ವಂ ॥ ಜ್ಯೋಕ್ ಚಿರಕಾಲಮೇವಾಸ್ಮಾನ್ಪರಿತ್ಯಜ್ಯ ದೀರ್ಘಂ ತಮೋ ಮಹದಂಧಕಾರಂ ಗುಹಾಯಾಮಾಶಯಿಷ್ಠಾಃ । ಅಸ್ಥಾಯ ಶಯನಮಕಾರ್ಷೀಃ। ಇತ ಊರ್ಧ್ವಂ ತಸ್ಮಾತ್ಸ್ಥಾನಾದಸ್ಮಾನಾಗಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಪಂಚಯಾಮಂ—ಹೋತೃ ಮೊದಲಾದ ನಾಲ್ಕುಮಂದಿ ಋತ್ವಿಕ್ಕುಗಳು ಮತ್ತು ಯುಜಮಾನನೂ ಸೇರಿ ಆಗುವ ಐದು ಜನರಿಂದ ನೆರವೇರಿಸಲ್ಪಡುವುದೂ । ತ್ರಿವೃತಂ—ಸವನತ್ರಯರೂಪವಾದುದೂ । ಸಪ್ತತಂತುಂ—ಸಪ್ತವಷಟ್ಕರ್ತೃಗಳಿಂದ ಸಹಿತವಾದುದೂ ಆದ । ನಃ—ನಮ್ಮ । ಇಮಂ ಯಜ್ಞಂ-ಈ ಯಜ್ಞವನ್ನು ಅನುಲಕ್ಷಿಸಿ । ಉಪ ಆ ಇಹಿ—ದಯಮಾಡು ! ನಃ—ನಮಗೆ । ಹವ್ಯವಾಟ್—ಹವಿಸ್ಸನ್ನು ವಹಿಸುವವನಾಗಿ । ಅಸಃ—ಆಗು । ಉತ—ಮತ್ತು । (ನಃ—ನಮಗೆ) । ಪುರೋಗಾಃ—ಮುಖಂಡನಾಗಿಯೂ ಆಗಿರು । ಜ್ಯೋಕ್ ಏವ—ಬಹಳ ಕಾಲದವರೆಗೂ (ನಮ್ಮನ್ನು ಬಿಟ್ಟು) । ದೀರ್ಘಂ ತಮಃ—ಬಹಳವಾದ ಅಂಧಕಾರದಲ್ಲಿ । ಆ ಅಶಯಿಷ್ಠಾಃ—ಮಲಗಿದ್ದೀಯೆ (ಆದ್ದರಿಂದ ಬೇಗನೆ ಎದ್ದು ಬಾ)

॥ ಭಾವಾರ್ಥ ॥

(ದೇವತೆಗಳವಾಕ್ಯ) ಎಲೈ ಅಗ್ನಿಯೇ, ನೀನು ಬಹುಕಾಲದಿಂದ ನಮ್ಮನ್ನು ಬಿಟ್ಟು ಬಂದು ಗಾಢಾಂಧಕಾರದಲ್ಲಿ ಮಲಗಿದ್ದೀಯೆ. ಆದ್ದರಿಂದ ಆ ಅಂಧಕಾರಾವೃತವಾದ ಪ್ರದೇಶವನ್ನು (ಉದಕಮಧ್ಯ ಪ್ರದೇಶವನ್ನು) ಬಿಟ್ಟು ಬಂದು ಹೋತೃ ಮೊದಲಾದ ನಾಲ್ವರು ಋತ್ವಿಕ್ಕುಗಳಿಂದಲೂ ಯಜಮಾನನಿಂದಲೂ ನೆರವೇರಿಸಲ್ಪಡುವುದೂ, ಸವನತ್ರಯರೂಪವಾದುದೂ, ಸಪ್ತವಷಟ್ಕರ್ತೃಗಳಿಂದ ಸಹಿತವಾದುದೂ ಆದ ಈ ನಮ್ಮ ಯಜ್ಞಕ್ಕೆ ದಯಮಾಡು ಮತ್ತು ನಮ್ಮ ಮುಂದಿದ್ದು ನಮಗೆ ಹವಿಸ್ಸನ್ನು ವಹಿಸುವವನಾಗು.

## English Translation.

Come, Agni, to this our sacrifice, which has five oblations, three-fold, spread out by seven (priests); be the bearer of our oblations, be our proceder, you have long been sleeping in profound darkness.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ ಪಂಚಯಾಮಂ ತ್ರಿವೃತಂ ಸಪ್ತತಂತುಂ ಎಂಬ ಎರಡನೆಯ ಪಾದವು ಇದೇ ಮಂಡಲದ ವಿಶ್ವೇ ದೇವಾಃ ಎಂಬ ೫೨ ನೇ ಸೂಕ್ತದ ೪ ನೆಯ ಋಕ್ಕಿನಲ್ಲಿಯೂ ನಾಲ್ಕನೆಯ ಪಾದವಾಗಿ ಪಠಿತವಾಗಿವೆ. ಈ ಪಾದದಲ್ಲಿರುವ ಮೂರು ಶಬ್ದಗಳೂ ಯಜ್ಞ ಶಬ್ದಕ್ಕೆ ವಿಶೇಷಣಪದಗಳಾಗಿವೆ. ಅವುಗಳನ್ನು ಸಾಯಣರು ಈ ರೀತಿ ವಿವರಿಸಿದಾರೆ.

ಪಂಚಯಾಮಂ—ಯಜಮಾನಪಂಚಮೈರ್ಋತ್ವಿಗ್ಭಿರ್ನಿಯಮಿತಂ । ಯದ್ವಾ । ಧಾನಾಕರಂಭಾದಿಭಿಃ ಪಂಚಭಿಃ ಹವಿರ್ಭಿಃ ಪಂಚಭಿಃ ಪ್ರಯಾಜೈರ್ವಾ ಪ್ರಾಪ್ತಂ ॥ ಪಂಚಯಾಮವೆಂದರೆ ಯಜ್ಞಮಾಡುವ

ಯಜಮಾನ, ಮತ್ತು ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ ಎಂಬ ನಾಲ್ಕುಮಂದಿ ಋತ್ವಿಕ್ಕುಗಳು, ಈ ಐವರೂ ಸೇರಿ ನೆರವೇರಿಸುವ ಯಜ್ಞ ಅಥವಾ ದಾನ, ಕರಂಭ ಮೊದಲಾದ ಐದುವಿಧ ಹವಿಸ್ಸುಗಳಿಂದ ಹೋಮ ಮಾಡಲ್ಪಡುವ ಯಜ್ಞ; ಅಥವಾ ಐದು ವಿಧವಾದ ಪ್ರಯಾಜ ಹೋಮಗಳಿಂದ ನೆರವೇರಿಸಲ್ಪಡುವ ಯಜ್ಞ.

**ತ್ರಿವೃತಂ— ಪಾಕಯಜ್ಞ ಹವಿರ್ಯಜ್ಞ ಸೋಮಯಜ್ಞ ಭೇದೇನ ಸವನತ್ರಯಾತ್ಮನಾ ವಾ ತ್ರಿಗುಣಂ ।** ಯಜ್ಞಗಳಲ್ಲಿ ಪಾಕಯಜ್ಞ, ಹವಿರ್ಯಜ್ಞ, ಸೋಮಯಜ್ಞಗಳೆಂದು ಮೂರುವಿಧ ಪಂಗಡಗಳಿರುವುವು. ಅಥವಾ ಯಜ್ಞದಲ್ಲಿ ಸೋಮರಸವನ್ನು ಹಿಂಡುವಾಗ ದಿನದ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳೆಂಬ ಮೂರು ಕಾಲಗಳಲ್ಲಿ ಸೋಮವನ್ನು ಹಿಂಡಿ ಸಿದ್ಧಪಡಿಸುವರು. ಈ ಮೂರುಕರ್ಮಗಳಿಗೂ ಕ್ರಮವಾಗಿ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನವೆಂದು ಹೆಸರು. ಈ ಮೂರುವಿಧವಾದ ಸವನಗಳಿಂದ ಕೂಡಿರುವ ಯಜ್ಞವೆಂದರ್ಥವು.

**ಸಪ್ತತಂತುಂ—ಸಪ್ತತಂತವಸ್ತನಿತಾರಃ ಕರ್ಮಣಾಂ ವಿಸ್ತಾರಯಿತಾರೋ ಹೋತ್ರಾದ್ಯಾಃ ಸಪ್ತ-ವಷಟ್ಕರ್ತಾರೋ ಯಸ್ಯ ತಂ । ಯದ್ವಾ ಅಗ್ನಿಷ್ಟೋಮೋಽತ್ಯಗ್ನಿಷ್ಟೋಮ ಉಕ್ಥ್ಯಃ ಷೋಳಶೀ ವಾಜ-ಪೇಯೋಽಪ್ತೋರ್ಯಾಮ ಇತಿ ಸಪ್ತಧಾ ವಿಸ್ತೀರ್ಯಮಾಣಂ ॥** ಯಜ್ಞದಲ್ಲಿ ವಷಟ್ಕಾರಾದ್ಯಾಹುತಿಗಳನ್ನು ಅರ್ಪಿಸುವುದಕ್ಕಾಗಿ ನಿಯೋಜಿತರಾದ ಹೋತ್ರಾದಿ ಸಪ್ತ ಋತ್ವಿಕ್ಕುಗಳಿರುವರು. ಇವರನ್ನು ಸಪ್ತ ಹೋತೃಗಳೆಂದು ಕರೆಯುವರು. ಇವರುಗಳಾರೆಂವರೆ--ಹೋತೃ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ, ಪೋತೃ, ನೇಷ್ಟೃ, ಅಚ್ಛಾವಾಕ, ಆಗ್ನೀಧ್ರ, ಎಂಬ ಏಳುಮಂದಿ ಋತ್ವಿಕ್ಕುಗಳು. ಇವರುಗಳಿಂದ ನಿರ್ವಹಿಸಲ್ಪಡುವ ಯಜ್ಞವೆಂದರ್ಥವು, ಅಥವಾ ಅಗ್ನಿಷ್ಟೋಮ ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಳಶೀ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮ ಎಂಬ ಏಳುವಿಧ ಸಂಸ್ಥೆಗಳಲ್ಲಿ ಒಂದಾದ ಯಜ್ಞವೆಂದರ್ಥವು.

॥ ಸಂಹಿತಾಪಾಠಃ ॥

ಅದೇವಾದ್ದೇವಃ ಪ್ರಚತಾ ಗುಹಾ ಯನ್ಪ್ರಪಶ್ಯಮಾನೋ ಅಮೃತತ್ವಮೇಮಿ।
ಶಿವಂ ಯತ್ಸಂತಮಶಿವೋ ಜಹಾಮಿ ಸ್ವಾತ್ಸಖ್ಯಾದರಣೀಂ ನಾಭಿಮೇಮಿ ॥

॥ ಪದಪಾಠಃ ॥

ಅದೇವಾತ್ । ದೇವಃ । ಪ್ರऽಚತಾ । ಗುಹಾ । ಯನ್ । ಪ್ರऽಪಶ್ಯಮಾನಃ । ಅಮೃತऽತ್ವಂ । ಏಮಿ ।
ಶಿವಂ । ಯತ್ । ಸಂತಂ ಅಶಿವಃ । ಜಹಾಮಿ । ಸ್ವಾತ್ । ಸಖ್ಯಾತ್ । ಅರಣೀಂ । ನಾಭಿಂ । ಏಮಿ ॥ ೨ ॥

॥ ಸಾಯಣಭಾಷ್ಯಂ ॥

**ಅದೇವಾದದೇವನಶೀಲಾದ್ಗುಹಾ ಗುಹಾಯಾಂ ವರ್ತಮಾನಾತ್ ॥ ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ ॥ ಪ್ರಚತಾ ದೇವಾನಾಂ ಪ್ರಯಾಚನೇನ ಹೇತುನಾ ಯನ್ ನಿರ್ಗಚ್ಛನ್ ದೇವೋ ದೇವನಶೀ-**

ಲೋಽಹಂ ಪ್ರಪಶ್ಯಮಾನೋ ದೇವೈರ್ಮದರ್ಥಂ ಕಲ್ಪಿತಂ ಪ್ರಯಾಜಾನುಯಾಜಾದಿಲಕ್ಷಣಂ ಹವಿರ್ಭಾಗಂ ಪ್ರಪಶ್ಯಮಾನೋ ನಿರೀಕ್ಷಮಾಣಃ ಸನ್ನಮೃತತ್ವಮೇಮಿ । ಮರಣಧರ್ಮರಾಹಿತ್ಯಂ ದೇವತ್ವಂ ಪ್ರಾಪ್ನೋಮಿ ॥ ವೃಶೇರ್ವ್ಯತ್ಯಯೇನಾತ್ಮನೇಪದಂ ॥ ಹವಿರ್ವಹನಾದ್ಭೀತಃ ಪಲಾಯಿತೋಽಬಾದಿಷು ಸ್ಥಾನೇಷು ನಿಗೂಢಃ ಪುನರ್ದೇವೈರ್ಹವಿರ್ವಹನಾಯ ಪ್ರಾರ್ಥ್ಯಮಾನಸ್ತೈರ್ದತ್ತೇನ ಹವಿಷಾಹಂ ದೇವತ್ವಂ ಪ್ರಾಪ್ತವಾನಸ್ಮೀತ್ಯರ್ಥಃ । ಯದ್ಯಪ್ಯಹಂ ಗುಹಾತೋ ನಿರ್ಗತ್ಯ ಪ್ರಕಾಶಮಾನಃ ಸಞ್ಶೋಭನಂ ಯಜ್ಞಂ ನಿರ್ವರ್ತಯಾಮಿ ತಥಾಪಿ ಶಿವಂ ಶೋಭನಂ ಸಂತಂ ಭವಂತಂ ಯಜ್ಞಮಶಿವೋಽಶೋಭನರೂಪೋಽಪ್ರಕಾಶಮಾನಃ ಸನ್ ಯದ್ಯಸ್ಮಿನ್ಸಮಾಪ್ತಿಕಾಲೇ ಜಹಾಮಿ ಪರಿತ್ಯಜಾಮಿ ತದಾನೀಂ ನಾಭಿಂ ನಹನಶೀಲಾಂ ಬಂಧನಶೀಲಾಮರಣೀಮಶ್ವತ್ಥಮೇವ ಸ್ವಾತ್ಸಖ್ಯಾದಾತ್ಮೀಯಾತ್ಸಖಿತ್ವಾಚ್ಚಿರಕಾಲಮಶ್ವರೂಪೋಽಹಂ ತತ್ರ ನ್ಯವಾತ್ಸಮಿತಿ ಸ್ನೇಹವಶಾದೇಮಿ । ಪ್ರಾಪ್ನೋಮಿ ॥

॥ ಪ್ರತಿಪದಾರ್ಥ ॥

**ಅದೇವಾತ್**—ದೇವತೆಗಳ ಸ್ವರೂಪವನ್ನು ಅಥವಾ ಹವಿರ್ವಹನಕಾರ್ಯವನ್ನು ತ್ಯಜಿಸಿ ಬಂದು । **ಗುಹಾ**—ರಹಸ್ಯಸ್ಥಳದಲ್ಲಿ (ನೀರಿನಲ್ಲಿ) ಅಡಗಿರುವವನೂ । **ಪ್ರಚೇತಾ**—ದೇವತೆಗಳು ಮಾಡುವ ಪ್ರಾರ್ಥನೆಯಿಂದ । **ಯನ್**—(ನೀರಿನಿಂದ) ಈಚೆಗೆ ಬಂದವನೂ । **ದೇವಃ**—ಪ್ರಕಾಶಮಾನನೂ ಆದ ನಾನು । **ಪ್ರಪಶ್ಯಮಾನಃ**—ದೇವತೆಗಳಿಂದ ನನಗಾಗಿ ಕಲ್ಪಿತವಾದ ಪ್ರಯಾಜಾದಿ ಲಕ್ಷಣವಾದ ಹವಿರ್ಭಾಗಗಳನ್ನು ನೋಡುತ್ತ । **ಅಮೃತತ್ವಂ**—ಮರಣಧರ್ಮರಹಿತವಾದ ದೇವತ್ವವನ್ನು । **ಏಮಿ**—ಪಡೆಯುತ್ತೇನೆ । **ಶಿವಂ**—ಮಂಗಳಕರವಾದ । **ಸಂತಂ**—ನಿಮ್ಮ ಯಜ್ಞವನ್ನು । **ಯತ್ ಅಶಿವಃ**—ಅದು ಮಂಗಳಕರವಲ್ಲದಿದ್ದಾಗ । **ಜಹಾಮಿ**—ಅದನ್ನು ತ್ಯಜಿಸುತ್ತೇನೆ ಮತ್ತು । **ನಾಭಿಂ**—ಬಂಧನರೂಪವಾದ (ನನ್ನ ನಿವಾಸಸ್ಥಾನವಾದ) । **ಅರಣೀಂ**—ಅಶ್ವತ್ಥನಿರ್ಮಿತ ಅರಣಿಯನ್ನು । **ಸ್ವಾತ್ ಸಖ್ಯಾತ್**—ನನ್ನ ಸ್ನೇಹಾಭಿಮಾನದಿಂದ। **ಏಮಿ**—ಹೊಂದುತ್ತೇನೆ (ಅದರಲ್ಲಿ ಹೋಗಿ ಸೇರುತ್ತೇನೆ.

॥ ಭಾವಾರ್ಥ ॥

(ಅಗ್ನಿಯ ವಾಕ್ಯವು) ಎಲೈ ದೇವತೆಗಳೇ, ದೇವತೆಗಳ ಕರ್ತವ್ಯವನ್ನು ಎಂದರೆ ಹವಿರ್ವಹನಾದಿ ಕಾರ್ಯವನ್ನು ತ್ಯಜಿಸಿ ರಹಸ್ಯಸ್ಥಳವಾದ ನೀರಿನಲ್ಲಿ ಇದ್ದು ನಿಮ್ಮಿಂದ (ದೇವತೆಗಳಿಂದ) ಪ್ರಾರ್ಥಿಸಲ್ಪಟ್ಟು ನನಗಾಗಿ ಕಲ್ಪಿತವಾದ ಪ್ರಯಾಜಾದ್ಯಾಹುತಿಗಳನ್ನು ವೀಕ್ಷಿಸುತ್ತ ಪುನಃ ನಿಮ್ಮ ಬಳಿಗೆ ಬಂದು ಅಮರತ್ವವನ್ನು ಪಡೆಯುತ್ತೇನೆ. ನಿಮ್ಮ ಯಜ್ಞವು ಯಾವಾಗ ಮಂಗಳಕರವಾಗಿರುವುದಿಲ್ಲವೋ ಎಂದರೆ ಯಾವಾಗ ಯಜ್ಞವು ಸಮಾಪ್ತಿಯಾಗುವುದೋ ಆಗ ನಾನು ಅದನ್ನು ತ್ಯಜಿಸಿ ನನ್ನ ಸ್ವಸ್ಥಾನವಾದ ಅರಣಿಯಲ್ಲಿ ಹಿಂದಿನ ಸ್ನೇಹವಶದಿಂದ ಹೋಗಿ ಸೇರುತ್ತೇನೆ.

## English Translation.

(Agni speaks:) From being no divinity I issue a divinity from the cave at the solication (of the gods), and being manifest I attain immortality; when being inauspicious, I abandon the sacrifice as it becomes auspicious, through my (old) friendship I come to the binding touch-wood.

॥ ವಿಶೇಷವಿಷಯಗಳು ॥

ಅಗ್ನಿಯು ಈರೀತಿ ಹೇಳುತ್ತಾನೆ—ಹವಿರ್ವಹನಕಾರ್ಯವು ಬಹಳ ಅಪಾಯಕರವಾದುದೆಂದು ಹೆದರಿ ಅಲ್ಲಿಂದ ಓಡಿಹೋಗಿ ಯಾರಿಗೂ ತಿಳಿಯದಂತೆ ರಹಸ್ಯಸ್ಥಾನವಾದ ನೀರಿನಲ್ಲಿ ಅವಿತು ಕೊಂಡಿದ್ದೆನು. ಆಗ ದೇವತೆಗಳು ನನ್ನನ್ನು ಹುಡುಕಿಕೊಂಡು ಅಲ್ಲಿಗೆ ಬಂದು, ಮತ್ತೆ ತಮಗಾಗಿ ಹವಿರ್ವಹನಕಾರ್ಯವನ್ನು ಕೈಗೊಳ್ಳಬೇಕೆಂದು ನನ್ನನ್ನು ಪ್ರಾರ್ಥಿಸಿದಾಗ ಅವರು ಅನುಗ್ರಹಿಸಿದ ಪ್ರಯಾಜಾದಿ ಆಹುತಿಗಳೇ ಮೊದಲಾದ ವರಗಳನ್ನು ಅವರಿಂದ ಸ್ವೀಕರಿಸಿ ದೇವತ್ವವನ್ನು ಪಡೆದೆನು. ಆದ್ದರಿಂದ ನಾನು ಅಡಗಿದ್ದ ರಹಸ್ಯಸ್ಥಳದಿಂದ ಈಚೆಗೆ ಎದ್ದುಬಂದು ಮುಂಚಿನಂತೆ ಪ್ರಕಾಶಮಾನನಾಗಿ ಬೆಳಗುತ್ತ ಉತ್ತಮವಾದ ಯಜ್ಞಕಾರ್ಯವನ್ನು ನಿರ್ವಹಿಸುತ್ತೇನೆ. ಮತ್ತು ಯಜ್ಞಸಮಾಪ್ತಿಯಾದನಂತರ ಆಯಜ್ಞವು ಮಂಗಳಕರವಾಗಿರುವುದಿಲ್ಲವಾದ್ದರಿಂದ ಆಗ ಅದನ್ನು ಪರಿತ್ಯಜಿಸಿ ನನಗೂ ನನ್ನ ನಿವಾಸಸ್ಥಾನವಾದ ಅರಣಿಗೂ ಇದ್ದ ಮುಂಚಿನ ಸ್ನೇಹದ ಪರಿಣಾಮವಾಗಿ ಪುನಃ ಅರಣಿಯಲ್ಲಿಯೇ ಹೋಗಿ ಸೇರುತ್ತೇನೆ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು

॥ ಸಂಹಿತಾಪಾಠಃ ॥

ಪಶ್ಯನ್ನನ್ಯಸ್ಯಾ ಅತಿಥಿಂ ವಯಾಯಾ ಋತಸ್ಯ ಧಾಮ ವಿ ಮಿಮೇ ಪುರೂಣಿ ।
ಶಂಸಾಮಿ ಪಿತ್ರೇ ಅಸುರಾಯ ಶೇವಮಯಜ್ಞಿಯಾದ್ಯಜ್ಞಿಯಂ ಭಾಗ-
ಮೇಮಿ ॥ ೩ ॥

॥ ಪದಪಾಠಃ ॥

ಪಶ್ಯನ್ । ಅನ್ಯಸ್ಯಾಃ । ಅತಿಥಿಂ । ವಯಾಯಾಃ । ಋತಸ್ಯ । ಧಾಮ । ವಿ । ಮಿಮೇ । ಪುರೂಣಿ ।
ಶಂಸಾಮಿ । ಪಿತ್ರೇ । ಅಸುರಾಯ । ಶೇವಂ । ಅಯಜ್ಞಿಯಾತ್ । ಯಜ್ಞಿಯಂ । ಭಾಗಂ । ಏಮಿ ॥ ೩ ॥

॥ ಸಾಯಣಭಾಷ್ಯಂ ॥

ಮಮ ಸ್ಥಾನಭೂತಾ ಯಾ ಪೃಥಿವೀ ತತೋಽನ್ಯಸ್ಯಾ ವಯಾಯಾ ಗಂತವ್ಯಾಯಾ ದಿವಃ ಸಂಬಂಧಿನಮತಿಥಿಂ ಸತತಗಾಮಿನಂ ಸೂರ್ಯಂ ಪಶ್ಯಞ್ಜಾನನ್ ಸೂರ್ಯಸ್ಯ ಗತಿಮನುಸೃತ್ಯ ವಸಂತಾದಿಕಾಲ ಋತಸ್ಯ ಯಜ್ಞಸ್ಯ ಧಾಮ ಧಾಮಾನಿ ಶರೀರಾಣಿ ಪುರೂಣಿ ಬಹೂನಿ ವಿ ಮಿಮೇ । ನಿರ್ಮಮೇ । ನಿಷ್ಪಾದಯಾಮಿ । ತತಃ ಪಿತ್ರೇ ಪಿತೃಭೂತಾಯ ದ್ಯುಲೋಕವರ್ತಿನೇ ದೇವಜನಾಯಾಸುರಾಯ ಶತ್ರುಕ್ಷೇಪಣಕುಶಲಾಯ ಶೇವಂ ಸುಖಮುದ್ದಿಶ್ಯ ಹೋತಾ ಭೂತ್ವಾಹಮುಕ್ಥಾನಿ ಶಂಸಾಮಿ । ಯತ ಏವಂ ತಸ್ಮಾತ್ಕಾರಣಾದಯಜ್ಞಿಯಾದ್ಯಜ್ಞಾನರ್ಹಾತ್ಪ್ರದೇಶಾನ್ನಿರ್ಗತ್ಯ ಯಜ್ಞಿಯಂ ಯಜ್ಞಾರ್ಹಂ ವೇದಿಲಕ್ಷಣಂ ಭೂಭಾಗಂ ಹವಿರ್ಲಕ್ಷಣಂ ವೈಮಿ । ಪ್ರಾಪ್ನೋಮಿ ॥ ಯಜ್ಞಶಬ್ದಾದರ್ಹಾರ್ಥೇ ಯಜ್ಞರ್ತ್ವಿಗ್ಭ್ಯಾಂ ಘಖಞಾವಿತಿ ಘಪ್ರತ್ಯಯಃ ॥

|| ಪ್ರತಿಪದಾರ್ಥ ||

**ಅನ್ಯಸ್ಯಾಃ**—ನನ್ನ ಸ್ವಸ್ಥಾನವಾದ ಭೂಮಿಯಲ್ಲದೆ| **ವಯೊಾಯಾಃ**—ಬೇರೆಯಾದ ಎಂದರೆ ಸ್ವರ್ಗಸಂಬಂಧಿಯಾದ | **ಅತಿಥಿಂ**—ಸರ್ವದಾ ಸಂಚಾರಿಯಾದ ಸೂರ್ಯನನ್ನು | **ಪಶ್ಯನ್**—ನೋಡುತ್ತಾ ಎಂದರೆ ಅವನಗತಿಯನ್ನನುಸರಿಸುತ್ತಾ | **ಋತಸ್ಯ**—ಯಜ್ಞದ | **ಪುರೂಣಿ**—ಬಹುವಿಧವಾದ | **ಧಾಮ**—ಶರೀರಗಳನ್ನು ಎಂದರೆ ರೂಪಗಳನ್ನು | **ವಿ ಮಮೇ**—ನಿರ್ಮಿಸುತ್ತೇನೆ | **ಅಸುರಾಯ**—ಶತ್ರುನಿಗ್ರಹಣಕುಶಲರಾದ | **ಪಿತ್ರೇ**—ಪಿತೃಭೂತರಾದ ಸ್ವರ್ಗದ ದೇವಜನರಿಗೆ | **ಶೇವಂ**—ಸುಖವನ್ನುಂಟುಮಾಡುವುದಕ್ಕಾಗಿ ಹೋತೃವೆಂಬ ಋತ್ವಿಜನಾಗಿ | **ಶಂಸಾಮಿ**—ಉಕ್ಥಮಂತ್ರಗಳನ್ನು ಪಠಿಸುತ್ತೇನೆ | **ಅಯಜ್ಞಿಯಾತ್**—ಯಜ್ಞಾರ್ಹವಲ್ಲದ ಪ್ರದೇಶವನ್ನು ತ್ಯಜಿಸಿ| **ಯಜ್ಞಿಯಂ**—ಯಜ್ಞಾರ್ಹವಾದ ವೇದಿಯೆಂಬ ಭೂಪ್ರದೇಶಕ್ಕೆ| **ಏಮಿ**—ಹೋಗುತ್ತೇನೆ.

|| ಭಾವಾರ್ಥ ||

(ಅಗ್ನಿಯ ವಾಕ್ಯವು) ಎಲೈ ದೇವತೆಗಳೇ, ನನ್ನ ಸ್ವಸ್ಥಾನವಾದ ಈ ಪೃಥಿವಿಯನ್ನು ಬಿಟ್ಟು ಬೇರೆಯಾದ ಸ್ವರ್ಗದಲ್ಲಿ ಸರ್ವದಾ ಸಂಚರಿಸುತ್ತಿರುವ ಸೂರ್ಯನ ಗತಿಯನ್ನನುಸರಿಸುತ್ತಾ ನಾನಾ ವಿಧವಾದ ಯಜ್ಞಸಂಸ್ಥೆಗಳನ್ನು (ಬಹುವಿಧಯಜ್ಞಗಳನ್ನು) ನಿರ್ಮಿಸುತ್ತೇನೆ. ಶತ್ರುನಿಗ್ರಹಕುಶಲರಾದ ದ್ಯುಲೋಕವಾಸಿಗಳಾದ ದೇವಜನರಿಗೆ ಸುಖವನ್ನುಂಟುಮಾಡಲು ಹೋತೃವಿನ ಪಾತ್ರವನ್ನು ವಹಿಸಿ ಉಕ್ಥಮಂತ್ರಗಳನ್ನು ಪಠಿಸುತ್ತೇನೆ ಯಜ್ಞಾರ್ಹವಲ್ಲದ ದುಷ್ಟಪ್ರದೇಶಗಳನ್ನು ಪರಿತ್ಯಜಿಸಿ ಯಜ್ಞಾರ್ಹವಾದ ಯಜ್ಞವೇದಿಗೆ ಹೋಗುತ್ತೇನೆ.

## English Translation.

Beholding the guest of another family, I have created the manifold abodes of sacrifice; I repeat praises, (wishing) good luck to the paternal foe-destroying (race of deites), I pass from a place unfit for sacrifice to a place where sacrifice can be offered.

|| ಸಂಹಿತಾಪಾಠಃ ||

ಬಹ್ವೀಃ ಸಮಾ ಅಕರಮಂತರಸ್ಮಿನ್ನಿಂದ್ರಂ ವೃಣಾನಃ ಪಿತರಂ ಜಹಾಮಿ |
ಅಗ್ನಿಃ ಸೋಮೋ ವರುಣಸ್ತೇ ಚ್ಯವಂತೇ ಪರ್ಯಾವರ್ದ್ರಾಷ್ಟ್ರಂ ತದವಾಮ್ಯಾಯನ್ || ೪ ||

|| ಪದಪಾಠಃ ||

ಬಹ್ವೀಃ | ಸಮಾಃ | ಅಕರಂ | ಅಂತಃ | ಅಸ್ಮಿನ್ | ಇಂದ್ರಂ | ವೃಣಾನಃ | ಪಿತರಂ | ಜಹಾಮಿ |

ಅಗ್ನಿಃ । ಸೋಮಃ । ವರುಣಃ । ತೇ । ಚ್ಯವಂತೇ । ಪರಿ॒ಽಆವರ್ತ್ । ರಾಷ್ಟ್ರಂ । ತತ್ । ಅವಾಮಿ । ಆಽಯನ್ ॥ ೪ ॥

॥ ಸಾಯಣಭಾಷ್ಯಂ ॥

ಅಸ್ಮಿನ್ವೇದಿಲಕ್ಷಣಸ್ಥಾನೇ ಬಹ್ವೀಃ ಸಮಾಃ ಸಂವತ್ಸರಾನಕರಂ । ಅಕಾರ್ಷಂ । ಚಿರಕಾಲಂ ನ್ಯವಾತ್ಸಂ । ತತ್ರೇಂದ್ರಂ ವೃಣಾನಃ ಸಂಭಜಮಾನಃ ಪಿತರಮುತ್ಪಾದಕಮರಣ್ಯಾತ್ಮಕಂ ಜಹಾಮಿ । ಪರಿತ್ಯಜಾಮಿ । ಯದಾ ತ್ವಹಂ ದೇವೇಭ್ಯೋ ನಿರ್ಗತ್ಯ ಗುಹಾಯಾಂ ನಿಗೂಢಃ ತದಾ ತೇ ದೇವಾ ಅಗ್ನಿಃ ಸೋಮೋ ವರುಣಶ್ಚ ಚ್ಯವಂತೇ । ರಾಷ್ಟ್ರಾತ್ತ್ರಚ್ಯುತಾ ಅಭವನ್ । ಏಕಸ್ಯಾಪ್ಯಗ್ನೇರ್ಹವಿರ್ವೋಢೃತ್ವರೂಪೇಣ ದೇವತಾತ್ಮನಾ ಚ ಪೃಥಕ್ತ್ವಾತ್ಪರೋಕ್ಷನಿರ್ದೇಶಃ । ಆಯನ್ ಪುನರಾಗಚ್ಛನ್ನಹಂ ಯದ್ರಾಷ್ಟ್ರಮಸುರೈರಪಹೃತಂ ಪರ್ಯಾವರ್ತ್ ಪರ್ಯಾವರ್ತಮಾನಂ ಮದಭಿಮುಖಂ ಪುನರಾವರ್ತಮಾನಂ ತದ್ರಾಷ್ಟ್ರಂ ರಾಜ್ಯಂ ಯಜ್ಞಭೂಮಿಮವಾಮಿ । ಅಸುರೇಭ್ಯೋ ರಕ್ಷಾಮಿ । ಪರ್ಯಾವರ್ತ್ ॥ ಉಪಸೃಷ್ಟಾದ್ವೃತೇರನ್ಯೇಭ್ಯೋಽಪಿ ದೃಶ್ಯಂತೆ ಇತಿ ವಿಚ್ । ರಾತ್ಸಸ್ಯೇತಿ ನಿಯಮಾತ್ಸಂಯೋಗಾಂತಸ್ಯೇತಿ ಲೋಪಾಭಾವಃ ॥

॥ ಪ್ರತಿಪದಾರ್ಥ ॥

**ಅಸ್ಮಿನ್**—ವೇದಿಯೆಂಬ ಈ ಯಜ್ಞಪ್ರದೇಶದಲ್ಲಿ । **ಬಹ್ವೀಃ**—ಅನೇಕ । **ಸಮಾಃ**—ಸಂವತ್ಸರಗಳನ್ನು **ಅಕರಂ**—(ವಾಸಮಾಡುತ್ತಾ)ಕಳೆದಿದ್ದೇನೆ. ಆದರೆ । **ಇಂದ್ರಂ**—ಇಂದ್ರನ ಬಳಿಗೆ । **ವೃಣಾನಃ**—ಹೋಗುವುದಕ್ಕಾಗಿ **ಪಿತರಂ**—ನನ್ನನ್ನು ಉತ್ಪತ್ತಿಮಾಡಿದ ಪಿತೃಭೂತವಾದ ಅರಣಿಯನ್ನು । **ಜಹಾಮಿ**—ಪರಿತ್ಯಜಿಸುತ್ತೇನೆ(ನಾನು ದೇವತೆಗಳನ್ನು ಬಿಟ್ಟು ಹೊರಟುಹೋಗಿ ರಹಸ್ಯ ಪ್ರದೇಶದಲ್ಲಿ ಅಡಗಿದ್ದಾಗ) **ತೇ**—ಆ ದೇವತೆಗಳು ಎಂದರೆ । **ಅಗ್ನಿಃ**—ಅಗ್ನಿಯೂ । **ಸೋಮಃ**—ಸೋಮನೂ । **ವರುಣಃ**—ವರುಣನೂ ಸಹ । **ಚ್ಯವಂತೇ**—ತಮ್ಮ ರಾಷ್ಟ್ರದಿಂದ ಅಥವಾ ಸ್ಥಾನದಿಂದ(ಹವಿರ್ಭಾಗವಿಲ್ಲದ್ದರಿಂದ)ಹೊರದೂಡಲ್ಪಡುತ್ತಾರೆ । **ಆಯನ್**—ರಹಸ್ಯಸ್ಥಳದಿಂದ ಮತ್ತೆ ನಾನು ಬಂದು । **ಪರ್ಯಾವರ್ತ್**—ಹಿಂತಿರುಗಿ ಮತ್ತೆ ಪ್ರಾಪ್ತವಾದ । **ತತ್ ರಾಷ್ಟ್ರಂ**—ನನ್ನ ರಾಜ್ಯವಾದ ಯಜ್ಞಭೂಮಿಯನ್ನು । **ಅವಾಮಿ**—ಅಸುರರಿಂದ ರಕ್ಷಿಸುತ್ತೇನೆ.

॥ ಭಾವಾರ್ಥ ॥

(ಅಗ್ನಿಯ ವಾಕ್ಯವು)ಎಲೈ ದೇವತೆಗಳೇ, ವೇದಿಯೆಂಬ ಈ ಯಜ್ಞಪ್ರದೇಶದಲ್ಲಿ ಅನೇಕ ಸಂವತ್ಸರಗಳನ್ನು ನಾನು ವಾಸಮಾಡುತ್ತಾ ಕಳೆದಿದ್ದೇನೆ. ಇಂದ್ರನ ಬಳಿಗೆ ಹೋಗುವುದಕ್ಕಾಗಿ ಎಂದರೆ ಯಜ್ಞದಲ್ಲಿ ಇಂದ್ರನ ಪ್ರೀತ್ಯರ್ಥವಾಗಿ ಯಜ್ಞನಿರ್ವಹಣೆ ಮಾಡುವಾಗ ನನ್ನ ಸ್ವಸ್ಥಾನವೂ ನನಗೆ ಜನಕನಂತೆ ಇರುವುದೂ ಆದ ಅರಣಿಯನ್ನೂ ತ್ಯಜಿಸಿ ಬರುತ್ತೇನೆ. ನಾನು ದೇವತೆಗಳನ್ನು ಬಿಟ್ಟು ಓಡಿಹೋಗಿ ರಹಸ್ಯಸ್ಥಾನದಲ್ಲಿ ಅಡಗಿದ್ದಾಗ ಅಗ್ನಿ, ಸೋಮ ವರುಣ ಮೊದಲಾದ ದೇವತೆಗಳು ಯಜ್ಞದಲ್ಲಿ(ನಾನಿಲ್ಲದುದರಿಂದ) ಹವಿರ್ಭಾಗವಿಲ್ಲದೆ ತಮ್ಮ ಸ್ಥಾನಗಳಿಂದ ಚ್ಯುತರಾಗಿದ್ದಾರೆ. ಆದರೆ ನಾನು ನನ್ನ ರಹಸ್ಯಸ್ಥಾನದಿಂದ ಎದ್ದುಬಂದು ಮುಂಚಿನಂತೆ ನನ್ನ ರಾಷ್ಟ್ರವಾದ ಯಜ್ಞಭೂಮಿಯಲ್ಲಿ ನೆಲಸಿ ಯಜ್ಞನಿರ್ವಹಣೆಮಾಡಿ ದೇವತೆಗಳಿಗೆ ಹವಿರ್ಭಾಗವನ್ನು ವಹಿಸಿ ಯಜ್ಞವನ್ನು ಅಸುರರಿಂದ ರಕ್ಷಿಸುತ್ತೇನೆ.

English Translation

I spent many years within this (altar); preferring Indra, I abandon the progenitor; Agni, Soma, Varuna, fall (from their power), returning, I protect that kingdom which awaits me

॥ ಸಂಹಿತಾಪಾಠಃ ॥

ನಿರ್ಮಾಯಾ ಉ ತ್ಯೇ ಅಸುರಾ ಅಭೂವನ್ತ್ವಂ ಚ ಮಾ ವರುಣ ಕಾಮಯಾಸೇ ।
ಋತೇನ ರಾಜನ್ನನೃತಂ ವಿವಿಂಚನ್ಮಮ ರಾಷ್ಟ್ರಸ್ಯಾಧಿಪತ್ಯಮೇಹಿ ॥ ೫ ॥

॥ ಪದಪಾಠಃ ॥

ನಿಃಽಮಾಯಾಃ । ಊಂ ಇತಿ । ತ್ಯೇ । ಅಸುರಾಃ । ಅಭೂವನ್ । ತ್ವಂ । ಚ । ಮಾ । ವರುಣ । ಕಾಮಯಾಸೇ ।
ಋತೇನ । ರಾಜನ್ । ಅನೃತಂ । ವಿಽವಿಂಚನ್ । ಮಮ । ರಾಷ್ಟ್ರಸ್ಯ । ಅಧಿಽಪತ್ಯಂ । ಆ । ಇಹಿ ॥ ೫ ॥

॥ ಸಾಯಣಭಾಷ್ಯಂ ॥

ತ್ಯೇ ತೇಽಸುರಾ ಮಯ್ಯಗ್ನಾವಾಗತೇ ಸತಿ ನಿರ್ಮಾಯಾ ಮಾಯಾರಹಿತಾ ಅಭೂವನ್ । ಅಸುರ್ಯಾಃ ಸರ್ವಾ ಮಾಯಾ ಮಯಾ ದಗ್ಧಾ ಆಸನ್ನಿತ್ಯರ್ಥಃ । ಹೇ ವರುಣ ತ್ವಂ ಚ ॥ ಅಯಂ ಚಶಬ್ದ-ಶ್ಚೇದರ್ಥೇ ವರ್ತಮಾನಶ್ಚಣಿತಿ ನಿಪಾತಾಂತರಂ । ಅನೇನ ಯುಕ್ತತ್ವಾತ್ಕಾಮಯಾಸ ಇತಿ ತಿಙ್ವಿಭಕ್ತೇರ್ನಿ-ಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ । ಪಾ. ೮-೧-೩೦ ॥ ಹೇ ವರುಣ ತ್ವಂ ಚೇನ್ಮಾ ಕಾಮಯಾಸೇ ಮಾಂ ಕಾಮಯೇಥಾಃ ತರ್ಹಿ ಹೇ ರಾಜನ್ನೀಶ್ವರ ಋತೇನ ಸತ್ಯೇನಾಸ್ಮದೀಯೇನ ಕರ್ಮಣಾನೃತಮಸ-ತ್ಯಭೂತಂ ಮಾಯಾಮಯಮಾಸುರಂ ಚರಿತ್ರಂ ವಿವಿಂಚನ್ ಪೃಥಕ್ಕುರ್ವನ್ನಪಸಾರಯನ್ ಮಮ ರಾಷ್ಟ್ರಸ್ಯ ಮಯಾ ಯತ್ಸಾಧಿತಂ ರಾಜ್ಯಂ ತಸ್ಯಾಧಿಪತ್ಯಮಧಿಪತಿತ್ವಮೀಶ್ವರತ್ವಮೇಹಿ । ಪ್ರಾಪ್ನುಹಿ ॥

॥ ಪ್ರತಿಪದಾರ್ಥ ॥

**ತ್ಯೇ ಅಸುರಾ**—ಆ ಅಸುರರು (ಅಗ್ನಿಯಾದ ನನ್ನ ಸಮೀಪಕ್ಕೆ ಬಂದಲ್ಲಿ) । **ನಿರ್ಮಾಯಾಃ**— ಮಾಯಾ ರಹಿತರಾಗಿ । **ಅಭೂವನ್**—ಆಗುತ್ತಾರೆ । **ವರುಣ**—ಎಲೈ ವರುಣನೇ । **ತ್ವಂ ಚ**—ನೀನೂ ಸಹ । **ಮಾ**—ನನ್ನನ್ನು । **ಕಾಮಯಾಸೇ**—ಅಪೇಕ್ಷಿಸುವಿಯಾದರೆ ! **ರಾಜನ್**—ಸರ್ವರಿಗೂ ಒಡೆಯನಾಗಿ । **ಋತೇನ**—

ಸತ್ಯಭೂತವಾದ ನನ್ನ ಕರ್ಮದಿಂದ । **ಅನೃತಂ**—ಅಸತ್ಯವಾದ ಅಸುರರ ಮಾಯೆಯನ್ನು । **ವಿವಿಂಚನ್**—ಬೇರ್ಪ ಡಿಸಿ । **ಮಮ**—ನನ್ನ । **ರಾಷ್ಟ್ರಸ್ಯ**—ರಾಜ್ಯದ । **ಅಧಿಪತ್ಯಂ**—ಸ್ವಾಮಿತ್ವವನ್ನು । **ಏಹಿ**—ಹೊಂದುತ್ತೀಯೆ

॥ ಭಾವಾರ್ಥ ॥

(ಅಗ್ನಿಯ ವಾಕ್ಯವು)ಆ ಅಸುರರು ಅಗ್ನಿಯಾದ ನನ್ನ ಸಮೀಪಕ್ಕೆ ಬಂದರೆ ಅವರ ಮಾಯೆಗಳೆಲ್ಲವೂ ನನ್ನಿಂದ ದಗ್ಧವಾಗಿ ನಾಶವಾಗುತ್ತವೆ. ಎಲೈ ವರುಣನೇ ನೀನೂಸಹ ನನ್ನನ್ನು ಅಪೇಕ್ಷಿಸುವಿಯಾದಸೆ ಸರ್ವರಿಗೂ ಒಡೆಯ ನಾಗಿಯೂ, ಸತ್ಯದಿಂದ ಅಸತ್ಯವನ್ನು ಬೇರೆಮಾಡಿ ನನ್ನ ರಾಜ್ಯದ ಆಧಿಪತ್ಯವನ್ನು ಪಡೆಯುತ್ತೀಯೆ.

## English Translation

These Asuras were deprived of their magical power; if you, Varuna, desire me, (then), O king, separating truth from falsehood come and enjoy sovereignty over my realm.

॥ ಸಂಹಿತಾಪಾಠಃ ॥

ಇದಂ ಸ್ವರಿದಮಿದಾಸ ವಾಮಮಯಂ ಪ್ರಕಾಶ ಉರ್ವಂ೧ತರಿಕ್ಷಂ ।
ಹನಾವ ವೃತ್ರಂ ನಿರೇಹಿ ಸೋಮ ಹವಿಷ್ಟ್ವಾ ಸಂತಂ ಹವಿಷಾ ಯಜಾಮ॥೬॥

॥ ಪದಪಾಠಃ ॥

ಇದಂ । ಸ್ವಃ । ಇದಂ । ಇತ್ । ಆಸ । ವಾಮಂ । ಅಯಂ । ಪ್ರಃಕಾಶಃ । ಉರು । ಅಂತರಿಕ್ಷಂ ।
ಹನಾವ । ವೃತ್ರಂ । ನಿಃಏಹಿ । ಸೋಮ । ಹವಿಃ । ತ್ವಾ । ಸಂತಂ । ಹವಿಷಾ । ಯಜಾಮ ॥ ೬ ॥

॥ ಸಾಯಣಭಾಷ್ಯಂ ॥

ಇಯಮೃಗಗ್ನೇರ್ವರುಣಸ್ಯ ವಾ ವಾಕ್ಯಂ । ಹೇ ಸೋಮ ಇದಂ ಸ್ವರಯಂ ದ್ಯುಲೋಕಃ ಯದ್ವಾಯಂ ಶೋಭನಾರಣಃ ಸೂರ್ಯ ಇದಮಿದಿದಮೇವ ವಾಮಂ ವನನೀಯಮಾಸ । ಬಭೂವ । ಇದಂಶಬ್ದೇನ ಪ್ರಕೃತಂ ಸ್ವಃ ಪರಾಮೃಶ್ಯತೇ । ಅಯಂ ಚ ಪ್ರಕಾಶಃ ಪ್ರಕಾಶಸ್ಯಾಧಾರಭೂತ ಉರು ವಿಸ್ತೀರ್ಣಮಿದಮಂತರಿಕ್ಷಂ ಹೇ ಸೋಮ ಏತತ್ಸರ್ವಂ ಪಶ್ಯ । ಅತ ಏವಾಸ್ಮಿನ್ಸಮಯೆ ಆವಾಂ ವೃತ್ರಂ ಹನಾವ । ಹಿನಸಾವ । ತದರ್ಥಂ ನಿರೇಹಿ । ನಿಷ್ಕ್ರಾಮ್ಯಾಗಚ್ಛ । ಹವಿಃ ಸಂತಂ ಲತಾರೂಪೇಣ ಹವಿರ್ಭವಂತಂ ದೇವತಾತ್ಮಾನಂ ತ್ವಾಂ ಹವಿಷಾ ಚರುಪುರೋಡಾಶಾದಿನಾ ವಯಂ ಯಜಾಮ ॥

|| ಪ್ರತಿಪದಾರ್ಥ ||

(ಎಲೈ ಸೋಮನೆ) **ಇದಂ ಸ್ವಃ**—ಇದೇ ಸ್ವರ್ಗಲೋಕವು (ಅಥವಾ ಸೂರ್ಯನು) | **ಇದಮಿತ್**—ಇದೇ (ಸ್ವರ್ಗವು) | **ವಾಮಂ**—ಸರ್ವರಿಂದಲೂ ಅಪೇಕ್ಷಿತವಾಗಿ | **ಆಸ**—ಆಗಿರುವುದು | **ಅಯಂ**—ಈ ಸೂರ್ಯನು | **ಪ್ರಕಾಶಃ**—ಪ್ರಕಾಶಕ್ಕೆ ಆಧಾರಭೂತನು | **ಉರು**—ವಿಸ್ತೀರ್ಣವಾದ | **ಅಂತರಿಕ್ಷಂ**—ಅಂತರಿಕ್ಷವನ್ನು (ಇವೆಲ್ಲವನ್ನು ನೋಡು ಆದ್ದರಿಂದಲೇ ಈಗ ನಾವು) | **ವೃತ್ರಂ**—ವೃತ್ರನನ್ನು | **ಹನಾವ**—ಸಂಹರಿಸೋಣ (ಅದಕ್ಕಾಗಿ) | **ನಿರೇಹಿ**—ಹೊರಟು ಸಿದ್ಧನಾಗು | **ಹವಿಃ ಸಂತಂ**—ಲತಾರೂಪದಿಂದಿದ್ದು ಹವಿಸ್ಸಾಗಿ ಆಗುವ ನಿನ್ನನ್ನು (ಚರುಪುರೋಡಾಶಾದಿದ್ರವ್ಯಗಳಿಂದ) **ಯಜಾಮ**—ನಾವು ಆರಾಧಿಸುತ್ತೇವೆ

|| ಭಾವಾರ್ಥ ||

(ಸೋಮನನ್ನುದ್ದೇಶಿಸಿ ಅಗ್ನಿ ಮತ್ತು ವರುಣರ ವಾಕ್ಯವು) ಎಲೈ ಸೋಮನೇ, ಇದು ಸ್ವರ್ಗಲೋಕವು. ಇದು ಸರ್ವರಿಂದಲೂ ಅಪೇಕ್ಷಿಸಲ್ಪಡುವುದು. ಈ ಸೂರ್ಯನು ಪ್ರಕಾಶಕ್ಕೆ(ಬೆಳಕಿಗೆ)ಆಧಾರಭೂತನು.(ಇದು) ವಿಸ್ತೀರ್ಣವಾದ ಅಂತರಿಕ್ಷವು. ಇವುಗಳನ್ನೆಲ್ಲಾ ನೋಡು, ಈಗ ನಾವು ವೃತ್ರವಧಾರ್ಥವಾಗಿ ಹೊರಡೋಣ. ಅದಕ್ಕಾಗಿ ಸಿದ್ಧನಾಗು. ಎಲೈ ಸೋಮನೇ, ಲತಾರೂಪದಿಂದಿದ್ದು ರಸರೂಪವಾಗುವ ನೀನು ಸ್ವತಃ ಹವೀರೂಪನಾಗಿರುವೆ. ಇಂತಹ ನಿನ್ನನ್ನು ನಾವು ಪೂಜಿಸುತ್ತೇವೆ.

## English Translation.

(Agni or Varuna speaks :) This, O Soma, is heaven ; this verily was beautiful, this (was) the light, the broad firmament, let us two slay Vritra ; come forth ; we worship with an oblation you who are yourself the oblation

|| ಸಂಹಿತಾಪಾಠಃ ||

ಕವಿಃ ಕವಿತ್ವಾ ದಿವಿ ರೂಪಮಾಸಜದಪ್ರಭೂತೀ ವರುಣೋ ನಿರಪಃ ಸೃಜತ್।
ಕ್ಷೇಮಂ ಕೃಣ್ವಾನಾ ಜನಯೋ ನ ಸಿಂಧವಸ್ತಾ ಅಸ್ಯ ವರ್ಣಂ ಶುಚಯೋ ಭರಿಭ್ರತಿ || ೭ ||

|| ಪದಪಾಠಃ ||

ಕವಿಃ | ಕವಿऽತ್ವಾ | ದಿವಿ | ರೂಪಂ | ಆ | ಅಸಜತ್ | ಅಪ್ರऽಭೂತೀ | ವರುಣಃ | ನಿಃ | ಅಪಃ | ಸೃಜತ್ |

ಕ್ಷೇಮಂ | ಕೃಣ್ವಾನಾಃ | ಜನಯಃ | ನ | ಸಿಂಧವಃ | ತಾಃ | ಅಸ್ಯ | ವರ್ಣಂ | ಶುಚಯಃ | ಭರಿಭ್ರತಿ ||೭||

॥ ಸಾಯಣಭಾಷ್ಯಂ ॥

**ಕವಿಃ ಕ್ರಾಂತದರ್ಶೀ ಮಿತ್ರಃ ಕವಿತ್ವಾ ಕವಿತ್ವೇನ ॥ ಸುಪಾಂ ಸುಲುಗಿತಿ ತೃತೀಯಾಯಾ ಆಕಾರಃ॥ ಕ್ರಾಂತದರ್ಶನೇನ ದಿವಿ ದ್ಯುಲೋಕೇ ರೂಪಮಾತ್ಮೀಯಂ ತೇಜ ಆಸಜತ್ । ಆಸಕ್ತಂ ಕರೋತಿ ॥ ಷಸ್ಜ ಸಂಗೇ । ಅಸ್ಮಾಲ್ಲಙಿ ಶಪಿ ದಂಶಸಂಜಷ್ವಂಜಾಂ ಶಪಿ । ಪಾ. ೬-೪-೨೫ । ಇತಿ ನಲೋಪಃ ॥ ಅಪ್ರಭೂತ್ಯ-ಪ್ರಭೂತ್ಯಾ ॥ ಸುಪಾಂ ಸುಲುಗಿತಿ ತೃತೀಯಾಯಾಃ ಪೂರ್ವಸವರ್ಣದೀರ್ಘಃ ॥ ಅಪ್ರಭೂಷ್ಣುನಾಲ್ಪೇನೈವ ಯತ್ನೇನ ವರುಣೋ ಮೇಘಾದಪೋ ನಿಃ ಸೃಜತ್ । ನಿರಗಮಯತ್ । ವರುಣೇನ ವಿಸೃಷ್ಟಾಸ್ತಾ ಆಪಃ ಸಿಂಧವಃ ಸ್ಯಂದನಶೀಲಾ ನದ್ಯೋ ಭೂತ್ವಾ ಜನಯೋ ನ ಜಾಯಾ ಇವ ಯಥಾ ಜಾಯಾಃ ಪತ್ಯುಃ ಕ್ಷೇಮಕಾರಿಣ್ಯೋ ಭವಂತಿ ತಥಾ ಕ್ಷೇಮಂ ಕುರ್ವಾಣಾ ಜಗತೋ ರಕ್ಷಣಂ ಕುರ್ವಾಣಾಃ ಶುಚಯಃ ಶುದ್ಧಾ ದೀಪ್ಯಮಾನಾ ವಾಸ್ಯ ವರುಣಸ್ಯ ವರ್ಣಂ ಶುಕ್ಲಂ ಭಾಸ್ವರರೂಪಂ ಭರಿಭ್ರತಿ । ಭೃಶಂ ಬಿಭ್ರತಿ ಧಾರಯಂತಿ ॥ ದಾಧರ್ತ್ಯಾದಿಸೂತ್ರೇ ಭರಿಭ್ರದಿತಿ ನಿಪಾತನಾದ್ಬಿಭರ್ತೇರ್ಯಙ್ಲುಕ್ಯಭ್ಯಾಸಸ್ಯ ಜಶ್ತ್ವಾಭಾವಃ ॥**

॥ ಪ್ರತಿಪದಾರ್ಥ ॥

**ಕವಿಃ**— ಕ್ರಾಂತದರ್ಶಿಯಾದ ಮಿತ್ರನು । **ಕವಿತ್ವಾ**—ತನ್ನ ಕ್ರಾಂತಪ್ರಜ್ಞೆಯಿಂದ । **ದಿವಿ**—ಸ್ವರ್ಗಲೋಕದಲ್ಲಿ (ಅಂತರಿಕ್ಷದಲ್ಲಿ) । **ರೂಪಂ**—ತನ್ನರೂಪವನ್ನು (ರೂಪವಾದ ತೇಜಸ್ಸನ್ನು) । **ಆ ಅಸಜತ್**—ಸ್ಥಿರವಾಗಿ ನಿಲ್ಲಿಸಿದ್ದಾನೆ । **ಅಪ್ರಭೂತೀ**— ಅಲ್ಪಯತ್ನದಿಂದಲೇ । **ವರುಣಃ**—ವರುಣನು । **ಅಪಃ**— ಮೇಘಗಳಲ್ಲಿರುವ ಉದಕಗಳನ್ನು । **ನಿಃಸೃಜತ್**— ಹೊರಡಿಸುತ್ತಾನೆ. (ಬೀಳುವಂತೆ ಮಾಡುತ್ತಾನೆ ಆ ಉದಕಗಳು) । **ಸಿಂಧವಃ**— ಪ್ರವಹಿಸುವ ನದಿಗಳಾಗಿ । **ಜನಯೋ ನ**— ಪತ್ನಿಯರು ಪತಿಗಳಿಗೆ ಹಿತವನ್ನುಂಟುಮಾಡುವಂತೆ । **ಕ್ಷೇಮಂ**— ಜಗತ್ತಿಗೆ ಕ್ಷೇಮವನ್ನು । **ಕೃಣ್ವಾನಾಃ**-- ಉಂಟುಮಾಡುತ್ತ । **ಶುಚಯಃ**— ಶುದ್ಧವಾದವುಗಳಾಗಿ ಅಥವ ಪ್ರಕಾಶಿಸುತ್ತಾ । **ಅಸ್ಯ**— ಈ ವರುಣನ । **ವರ್ಣಂ**— ತೇಜೋರೂಪವಾದ ಶುಭ್ರವರ್ಣವನ್ನು । **ಭರಿಭ್ರತಿ**—ಸುತ್ತಲೂ ಬೀರುತ್ತವೆ. (ಪ್ರಕಾಶ ಪಡಿಸುತ್ತವೆ)

॥ ಭಾವಾರ್ಥ ॥

ಕ್ರಾಂತದರ್ಶಿಯಾದ ಮಿತ್ರನು (ಸೂರ್ಯನು) ತನ್ನ ಅಪಾರವಾದ ಕ್ರಾಂತಪ್ರಜ್ಞೆಯಿಂದ ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ತನ್ನ ದಿವ್ಯರೂಪವನ್ನು ಸ್ಥಿರವಾಗಿ ನಿಲ್ಲಿಸಿದ್ದಾನೆ. ವರುಣನು ತನ್ನ ಅಲ್ಪ ಪ್ರಯತ್ನದಿಂದಲೇ ಮೇಘಗಳಲ್ಲಿರುವ ಉದಕಗಳನ್ನು ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಬೀಳುವಂತೆ ಮಾಡುತ್ತಾನೆ ಆ ಉದಕಗಳು ಪ್ರವಹಿಸುವ ನದಿಗಳಾಗಿ ಶುದ್ಧಜಲದಿಂದ ಕೂಡಿ, ಪತ್ನಿಯರು ತಮ್ಮ ಪತಿಯರಿಗೆ ಹಿತವನ್ನುಂಟುಮಾಡುವಂತೆ ಜಗತ್ತಿಗೆ ಕ್ಷೇಮವನ್ನುಂಟುಮಾಡುತ್ತಾ ಈ ವರುಣನ ಶುಭ್ರವಾದ ರೂಪವನ್ನು (ಅಥವಾ ವ ಹಿಮೆಯನ್ನು) ಜಗತ್ತಿಗೆ ಪ್ರಕಾಶಪಡಿಸುತ್ತವೆ.

## English Translation.

The sage (Mitra) by his wisdom fixed his body in the sky ; Varuna with but a slight effort let loose the waters, conferring happiness, like wives, the pure rivers assume his (white) tint.

|| ಸಂಹಿತಾಪಾಠಃ ||

ತಾ ಅಸ್ಯ ಜ್ಯೇಷ್ಠಮಿಂದ್ರಿಯಂ ಸಚಂತೇ ತಾ ಈಮಾ ಕ್ಷೇತಿ ಸ್ವಧಯಾ ಮದಂತೀಃ ।
ತಾ ಈಂ ವಿಶೋ ನ ರಾಜಾನಂ ವೃಣಾನಾ ಬೀಭತ್ಸುವೋ ಅಪ ವೃತ್ರಾದತಿಷ್ಠನ್ ॥ ೮ ॥

|| ಪದಪಾಠಃ ||

ತಾಃ । ಅಸ್ಯ । ಜ್ಯೇಷ್ಠಂ । ಇಂದ್ರಿಯಂ । ಸಚಂತೇ । ತಾಃ । ಈಂ । ಆ । ಕ್ಷೇತಿ । ಸ್ವಧಯಾ । ಮದಂತೀಃ ।
ತಾಃ । ಈಂ । ವಿಶಃ । ನ । ರಾಜಾನಂ । ವೃಣಾನಾಃ । ಬೀಭತ್ಸುವಃ । ಅಪ । ವೃತ್ರಾನ್ । ಅತಿಷ್ಠನ್ ॥ ೮ ॥

|| ಸಾಯಣಭಾಷ್ಯಂ ||

ತಾಃ ಪೂರ್ವೋಕ್ತಾ ವೃಷ್ಟ್ಯ ಆಪೋಽಸ್ಯ ವರುಣಸ್ಯ ಜ್ಯೇಷ್ಠಂ ವೃದ್ಧತಮಮಿಂದ್ರಿಯಂ ವೀರ್ಯಂ ಸಚಂತೇ । ಸಮವಯಂತಿ । ಸಂಭಜಂತೇ । ಧಾರಯಂತೀತ್ಯರ್ಥಃ । ಆಪೋ ವರುಣಸ್ಯ ಪತ್ನ್ಯ ಆಸನ್ನಿತಿ ಶ್ರುತೇಃ । ಸ್ವಧಯಾ । ಅನ್ನನಾಮೈತತ್ । ಹವಿರ್ಲಕ್ಷಣೇನಾನ್ನೇನ ಮದಂತೀರ್ಮಾದ್ಯಂತೀಃ । ಯದ್ವಾ । ವ್ರೀಹ್ಯಾದ್ಯುತ್ಪಾದನದ್ವಾರೇಣ ಹವಿಷಾ ಮಾದಯಂತೀಃ । ತಾ ಅಪ ಈಮಯಂ ವರುಣ ಆಕ್ಷೇತಿ । ಅಭಿಗಚ್ಛತಿ ॥ ಕ್ಷಿ ನಿವಾಸಗತ್ಯೋಃ । ಛಾಂದಸೋ ವಿಕರಣಸ್ಯ ಲುಕ್ ॥ ತಾಶ್ಚೇಮೇನಂ ವರುಣಂ ವಿಶೋ ನ ವಿಶಃ ಪ್ರಜಾ ಯಥಾ ರಾಜಾನಂ ಸ್ವಾಮಿನಂ ಸಂಭಜಂತೇ ತಥಾ ವೃಣಾನಾಃ ಸಂಭಜಮಾನಾ ಬೀಭತ್ಸುವೋ ಭಯೇನ ಕಂಪಮಾನಾಃ । ಯದ್ವಾ। ಬದ್ಧಾ ವೃತ್ರೇಣಾವೃತಾಃ ಸತ್ಯಃ । ತಸ್ಮಿನ್ಹತೇ ಸತಿ ತಸ್ಮಾದ್ವೃತ್ರಾದಪಾತಿಷ್ಠನ್ । ಅಪಕ್ರಮ್ಯ ತತ್ರ ತತ್ರಾವತಿಷ್ಠಂತೇ ॥ ಬಧ ಬಂಧನ ಇತ್ಯಸ್ಮಾದ್ಧಾತೋರ್ಮಾನ್ಬಧದಾನ್ಶಾನ್ಭ್ಯಃ । ಪಾ. ೩_೧_೬ । ಇತಿ ಸನ್ ಅಭ್ಯಾಸಸ್ಯ ಚ ದೀರ್ಘಃ । ಸನಾಶಂಸಭಿಕ್ಷ ಉರಿತ್ಯುಪ್ರತ್ಯಯಃ । ಜಸಿ ಛಾಂದಸ ಉವಙಾದೇಶಃ ॥

|| ಪ್ರತಿಪದಾರ್ಥ ||

**ತಾಃ**—ಹಿಂದೆ ಹೇಳಿದ ವೃಷ್ಟ್ಯುದಕಗಳು । **ಅಸ್ಯ**—ಈ ವರುಣನ । **ಜ್ಯೇಷ್ಠಂ**—ಶ್ರೇಷ್ಠವಾದ । **ಇಂದ್ರಿಯಂ**—ವೀರ್ಯವನ್ನು । **ಸಚಂತೇ**—ಪಡೆಯುತ್ತವೆ (ಧರಿಸುತ್ತವೆ) । **ಸ್ವಧಯಾ**—ಹವಿರ್ಲಕ್ಷಣರೂಪವಾದ ಅನ್ನದಿಂದ । **ಮದಂತೀಃ**—ಸಂತುಷ್ಟರಾಗುವ । **ತಾಃ**—ಆ ಉದಕಗಳನ್ನು । **ಈಂ**—ಈ ವರುಣನು । **ಆ ಕ್ಷೇತಿ**—ಸಮೀಪಿಸುತ್ತಾನೆ । **ವಿಶಃ**—ಪ್ರಜೆಗಳು । **ರಾಜಾನಂ ನ**—ತಮ್ಮ ಸ್ವಾಮಿಯಾದ ರಾಜನನ್ನು ಭಯ ಭಕ್ತಿಗಳಿಂದ ಸಮೀಪಿಸುವಂತೆ । **ತಾಃ**—ಈ ಉದಕಗಳು । **ಈಂ**—ತಮ್ಮ ಪತಿಯಾದ ಈ ವರುಣನನ್ನು ।

**ವೃಣಾನಾಃ**—ಸಮೀಪಿಸುತ್ತಲೂ । **ಬೀಭತ್ಸವಃ**—ಭಯದಿಂದ ನಡುಗುತ್ತಲೂ ಅಥವಾ ವೃತ್ರನಿಂದ ಆವರಿಸಲ್ಪಟ್ಟು ಭೀತರಾಗಿ । **ವೃತ್ರಾತ್**—ವೃತ್ರನಿಂದ । **ಅಪ ಅತಿಷ್ಠನ್**—ದೂರವಾಗಿ ಓಡಿಹೋದವು.

॥ ಭಾವಾರ್ಥ ॥

ಹಿಂದೆ ಹೇಳಿದ ವೃಷ್ಟ್ಯುದಕಗಳು (ಅವೂ ಅವನ ಪತ್ನಿಯರಾದ್ದರಿಂದ) ಈ ವರುಣನ ಶ್ರೇಷ್ಠವಾದ ವೀರ್ಯವನ್ನು ಧರಿಸುತ್ತವೆ. ಹವೀರೂಪವಾದ ಅನ್ನದಿಂದ ಸಂತುಷ್ಟರಾದ ಆ ಉದಕಗಳನ್ನು ವರುಣನು ಸಮೀಪಿಸುತ್ತಾನೆ. ಆ ಉದಕಗಳು ಸಹ, ಪ್ರಜೆಗಳು ತಮ್ಮ ಸ್ವಾಮಿಯಾದ ರಾಜನನ್ನು ಭಯ ಭಕ್ತಿಗಳಿಂದ ಸಮೀಪಿಸುವಂತೆ ತಮ್ಮ ಪತಿಯಾದ ವರುಣನನ್ನು ಸಮೀಪಿಸಿ ಭಯದಿಂದ ನಡುಗುತ್ತಾ ತಮ್ಮನ್ನು ಆವರಿಸುವ ವೃತ್ರನಿಂದ ದೂರ ಓಡಿಹೋಗುತ್ತವೆ.

English Translation

They sustain his most excellent energy, he approaches them delighting him with (sacrficial) food ; like subjects choosing a king, they smitten with fear, fled from Vritra.

॥ ಸಂಹಿತಾಪಾಠಃ ॥

ಬೀಭತ್ಸೂನಾಂ ಸಯುಜಂ ಹಂಸಮಾಹುರಪಾಂ ದಿವ್ಯಾನಾಂ ಸಖ್ಯೇ ಚರಂತಂ ।
ಅನುಷ್ಟುಭಮನು ಚರ್ಚೂರ್ಯಮಾಣಮಿಂದ್ರಂ ನಿ ಚಿಕ್ಯುಃ ಕವಯೋ ಮನೀಷಾ ॥ ೯ ॥

॥ ಪದಪಾಠಃ ॥

ಬೀಭತ್ಸೂನಾಂ । ಸ꠸ಯುಜಂ । ಹಂಸಂ । ಆಹುಃ । ಅಪಾಂ । ದಿವ್ಯಾನಾಂ । ಸಖ್ಯೇ । ಚರಂತಂ ।
ಅನು꠸ಸ್ತುಭಂ । ಅನು । ಚರ್ಚೂರ್ಯಮಾಣಂ । ಇಂದ್ರಂ । ನಿ । ಚಿಕ್ಯುಃ । ಕವಯಃ । ಮನೀಷಾ ॥ ೯ ॥

। ಸಾಯಣಭಾಷ್ಯಂ ॥

ಬೀಭತ್ಸೂನಾಂ ಕಂಪಮಾನಾವಯವಾನಾಂ ಯದ್ವಾ ಮೇಘೇನ ಬದ್ಧಾನಾಂ । ಹಂತಿ ಗಚ್ಛತೀತಿ ಹಂಸಃ ಸೂರ್ಯಃ । ತಂ ಸಯುಜಂ ಸಖಾಯಮಾಹುಃ । ಬ್ರಹ್ಮವಾದಿನಃ ಕಥಯಂತಿ । ಏತದೇವಾಹ । ದಿವ್ಯಾನಾಂ ದಿವಿ ಭವಾನಾಮಾಂತರಿಕ್ಷಾಣಾಮಪಾಂ ಸಖ್ಯೇ ಸಖಿತ್ವೇ ಚರಂತಂ ವರ್ತಮಾನಂ । ಅನುಷ್ಟುಭಮನುಷ್ಟೋಭನೀಯಂ ಸ್ತೋತವ್ಯಂ । ಯದ್ವಾ । ಅನುಷ್ಟುಪ್ಶಬ್ದೇನ ತತ್ಸಂಬದ್ಧೋ ಯಾಗಃ

ಸ್ತುತಿರ್ವಾ ಲಕ್ಷ್ಯತೇ । ಅನುಷ್ಟುಪ್ಸಂಬದ್ಧಂ ಯೋಗಮನುಷ್ಟುಪ್ಛಂದಸಾ ಯುಕ್ತಂ ಸ್ತುತಿವಿಶೇಷಂ ವಾ । ಅನುಲಕ್ಷ್ಯ ಚರ್ಚೂರ್ಯಮಾಣಂ ಪುನಃಪುನಶ್ಚರಂತಂ ಗಚ್ಛಂತಂ ॥ ಚರತೇರ್ಯಙ್ಲುಕ್ಯಂತ್ಸ್ಯಾತಃ । ಪಾ. ೭-೪-೮೮ । ಇತ್ಯಭ್ಯಾಸಾದುತ್ತರಸ್ಯಾಕಾರಸ್ಯೋತ್ವಂ । ಚರಫಲೋಶ್ಚ । ಪಾ. ೭-೪-೮೭ । ಇತಿ ನುಕಿ ಪ್ರಾಪ್ತೇ ವ್ಯತ್ಯಯೇನಾಭ್ಯಾಸಸ್ಯ ರುಗಾಗಮಃ ॥ ಏವಂಗುಣವಿಶಿಷ್ಟಮಿಂದ್ರಂ ಕವಯಃ ಕ್ರಾಂತದರ್ಶಿನ ಋಷಯೋ ಮನೀಷಾ ಮನೀಷಯಾ ಸ್ತುತ್ಯಾ ನಿ ಚಿಕ್ಯುಃ । ಪೂಜಯಂತಿ । ಯದ್ವಾ । ಮನೀಷಾ ಬುದ್ಧ್ಯಾ ನಿ ಚಿಕ್ಯುಃ । ಜಾನಂತಿ ॥ ಮನೀಷಾಶಬ್ದಾತ್ತೃತೀಯಾಯಾಃ ಸುಪಾಂ ಸುಲುಗಿತಿ ಲುಕ್ । ಚಾಯೃ ಪೂಜಾನಿಶಾಮನಯೋರಿತ್ಯಸ್ಮಾಚ್ಛಾಂದಸೇ ಲಿಟಿ ಚಾಯಃ ಕೀ । ಪಾ. ೬-೧-೩೫ । ಇತಿ ಪ್ರಕೃತೇಃ ಕೀಭಾವಃ । ಏರನೇಕಾಚ ಇತಿ ಯಣ್ ॥

॥ ಪ್ರತಿಪದಾರ್ಥ ॥

**ಬೀಭತ್ಸೂನಾಂ**—ಭಯದಿಂದ ನಡುಗುತ್ತಿರುವವರಿಗೆ । **ಹಂಸಂ**—ಸೂರ್ಯನನ್ನು । **ಸಯುಜಂ**—ಸ್ನೇಹಿತನೆಂದು । **ಆಹುಃ**—(ಬ್ರಹ್ಮವಾದಿಗಳು) ಹೇಳುತ್ತಾರೆ । **ದಿವ್ಯಾನಾಂ**—ಅಂತರಿಕ್ಷದಲ್ಲಿ (ಮೇಘರೂಪದಿಂದಿರುವ) । **ಅಪಾಂ**--ಉದಕಗಳ । **ಸಖ್ಯೇ**--ಸ್ನೇಹಭಾವದಲ್ಲಿ । **ಚರಂತಂ**—ಇರುವವನೂ । **ಅನುಷ್ಟುಭಂ**—ಸ್ತುತ್ಯನೂ ಅಥವಾ ಅನುಷ್ಟುಪ್ ಛಂದಸ್ಸಿನ ಮಂತ್ರಗಳಿಂದ ಸ್ತುತ್ಯನೂ । **ಅನು**—ಸ್ತುತಿಯನ್ನು ಅನುಲಕ್ಷಿಸಿ । **ಚರ್ಚೂರ್ಯಮಾಣಂ**—ಪುನಃ ಪುನ ಸಂಚರಿಸುತ್ತಿರುವವನೂ ಆದ । **ಇಂದ್ರಂ**—ಇಂದ್ರನನ್ನು । **ಕವಯಃ**—ಕ್ರಾಂತಪ್ರಜ್ಞರಾದ ಋಷಿಗಳು । **ಮನೀಷಾ**—ಸ್ತುತಿಯಿಂದ (ಬುದ್ಧಿಯಿಂದ) । **ನಿ ಚಿಕ್ಯುಃ**—ತಿಳಿಯುತ್ತಾರೆ.

॥ ಭಾವಾರ್ಥ ॥

ಭಯದಿಂದ ನಡುಗುತ್ತಿರುವವರಿಗೆ ಸೂರ್ಯನು ಸ್ನೇಹಿತನೆಂದು (ಬ್ರಹ್ಮವಾದಿಗಳು) ಹೇಳುತ್ತಾರೆ. ಅಂತರಿಕ್ಷದಲ್ಲಿರುವ (ಮೇಘದ) ಉದಕಗಳ ವಿಷಯದಲ್ಲಿ ಸ್ನೇಹಭಾವದಿಂದಿರುವವನೂ, ಸರ್ವರಿಂದಲೂ ಸ್ತುತ್ಯನೂ ಅಥವಾ ಅನುಷ್ಟುಪ್‌ಛಂದಸ್ಸಿನ ಮಂತ್ರಗಳಿಂದ ಸ್ತುತ್ಯನೂ ಸ್ತುತಿಯನ್ನು ಅನುಲಕ್ಷಿಸಿ ಪುನಃ ಪುನಃ ಸ್ತೋತೃಜನರಲ್ಲಿಗೆ ಬರುವವನೂ ಆದ ಇಂದ್ರನನ್ನು ಕ್ರಾಂತಪ್ರಜ್ಞರಾದ ಋಷಿಗಳು ತಮ್ಮ ಬುದ್ಧಿಯಿಂದ (ಅಥವಾ ಸ್ತುತಿಯಿಂದ) ತಿಳಿಯುತ್ತಾರೆ.

### English Translation.

The sages called the sun the ally of those who are affrighted, abiding in the friendship of the waters of heaven; the wise have honoured with their praise Indra, who ceaselessly moves after the Anushtubh.

## ನೂರ ಇಪ್ಪತ್ತೈದನೆಯ ಸೂಕ್ತವು



### ಪೀಠಿಕೆ.

ಹಿಂದೆ ಅಂಭೃಣ ಎಂಬ ಮಹರ್ಷಿ ಇದ್ದನು. ಅವನಿಗೆ ಬ್ರಹ್ಮವಿದ್ಯಾಪಾರಂಗತಳಾದ ವಾಕ್ ಎಂಬ ಪುತ್ರಿ ಇದ್ದಳು. ಅವಳು, ಸರ್ವಜಗದ್ರೂಪದಿಂದ ಸಮಸ್ತವಸ್ತುಗಳಲ್ಲಿಯೂ ವ್ಯಾಪಿಸಿರುವ ಸಚ್ಚಿದಾನಂದಮಯನಾದ ಪರ

ಬ್ರಹ್ಮವನ್ನು ಉಪಾಸನೆಮಾಡುತ್ತ ಅವನಲ್ಲಿಯೇ ತಾದಾತ್ಮ್ಯ (ಐಕ್ಯ) ವನ್ನುಹೊಂದಿರುವಂತೆ ಭಾವಿಸಿ ಈ ಸೂಕ್ತದಲ್ಲಿ ತನ್ನನ್ನೇ ಸ್ತುತಿಸಿರುವಳು. ಎಂದರೆ ಸರ್ವಗತನೂ ಸಚ್ಚಿದಾನಂದಾತ್ಮಕನೂ ಆದ ಪರಮಾತ್ಮನೇ ತಾನೆಂಬ ತಾದಾತ್ಮ್ಯ ಬುದ್ಧಿಯಿಂದ ಅನಂತಶಕ್ತಿಸಾಮರ್ಥ್ಯಗಳುಳ್ಳ ಪರಮಾತ್ಮನು ಮಾಡಬಲ್ಲ ಅಗಾಧಕಾರ್ಯಗಳನ್ನು ತಾನೇ ನಿರ್ವಹಿಸ ಬಲ್ಲನೆಂಬ ಭಾವವನ್ನು ವ್ಯಕ್ತಪಡಿಸಿ ಈ ಸೂಕ್ತದಲ್ಲಿ ತಾನು ಅರ್ಥಾತ್ ಪರಮಾತ್ಮನು ಎಂತಹ ಕೆಲಸವನ್ನಾದರೂ ಮಾಡಲು ಸಮರ್ಥಳಾಗಿರುವುದನ್ನು ವರ್ಣಿಸಿರುವಳು

|| ಸಾಯಣಭಾಷ್ಯಂ ||

**ಅಹಮಿತ್ಯಷ್ಟರ್ಚಂ ತ್ರಯೋದಶಂ ಸೂಕ್ತಂ | ಅಂಭೃಣಸ್ಯ ಮಹರ್ಷೇರ್ದುಹಿತಾ ವಾಙ್ನಾಮ್ನಾ ಬ್ರಹ್ಮವಿದುಷೀ ಸ್ವಾತ್ಮಾನಮಸ್ತೌತ್ | ಅತಃ ಸರ್ಷಿಃ | ಸಚ್ಚಿತ್ಸುಖಾತ್ಮಕಃ ಸರ್ವಗತಃ ಪರಮಾತ್ಮಾ ದೇವತಾ | ತೇನ ಹ್ಯೇಷಾ ತಾದಾತ್ಮ್ಯಮನುಭವಂತೀ ಸರ್ವಜಗದ್ರೂಪೇಣ ಸರ್ವಸ್ಯಾಧಿಷ್ಠಾನತ್ವೇನ ಚಾಹಮೇವ ಸರ್ವಂ ಭವಾಮೀತಿ ಸ್ವಾತ್ಮಾನಂ ಸ್ತೌತಿ | ದ್ವಿತೀಯಾ ಜಗತೀ ಶಿಷ್ಟಾಃ ಸಪ್ತ ತ್ರಿಷ್ಟುಭಃ | ತಥಾ ಚಾನುಕ್ರಾಂತಂ | ಅಹಮಷ್ಟೌ ವಾಗಾಂಭೃಣೀ ತುಷ್ಟಾವಾತ್ಮಾನಂ ದ್ವಿತೀಯಾ ಜಗತೀತಿ || ಗತೋ ವಿನಿಯೋಗಃ ||**

ಅನುವಾದವು—**ಅಹಂ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಹದಿಮೂರನೆಯಸೂಕ್ತವು. ಇದ ರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತದಲ್ಲಿ ಅಂಭೃಣ ಎಂಬ ಋಷಿಯಪುತ್ರಿಯಾದ ವಾಕ್ ಎಂಬ ಹೆಸರಿನ ಬ್ರಹ ಜ್ಞಾನಿಯು ತನ್ನನ್ನೇ ಸ್ತೋತ್ರಮಾಡಿರುವಳು. ಆದ್ದರಿಂದ ಈ ಸೂಕ್ತಕ್ಕೆ ಅವಳೇ ಋಷಿಯು, ಸರ್ವವ್ಯಾಪಿಯೂ ಸಚ್ಚಿದಾನಂದ ಸ್ವರೂಪನೂ ಆದ ಪರಮಾತ್ಮನೇ ದೇವತೆಯು, ಆ ಪರಮಾತ್ಮನೊಡನೆ ತಾದಾತ್ಮ್ಯವನ್ನು ಅನು ಭವಿಸು ತ್ತಿರುವ ಆ ಋಷಿಪುತ್ರಿಯು ಸಮಸ್ತಜಗದ್ರೂಪ ದಿಂದಲೂ ಸಮಸ್ತಕಾರ್ಯಕರ್ತೃವೇ ತಾನಾಗಿರುವೆನೆಂದು ಭಾವಿಸಿ ತನ್ನನ್ನೇ ಈ ಸೂಕ್ತದಲ್ಲಿ ಸ್ತುತಿಸಿಕೊಂಡಿರುವಳು. ಈ ಸೂಕ್ತದ ಎರಡನೆಯ ಋಕ್ಕು ಜಗತೀಛಂದಸ್ಕವು; ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಅಹಮಷ್ಟೌ ವಾಗಾಂಭೃಣೀ ತುಷ್ಟಾವಾತ್ಮಾನಂ ದ್ವಿತೀಯಾ ಜಗತೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೨೫

ಮಂಡಲ–೧೦ || ಅನುವಾಕ–೧೦ || ಸೂಕ್ತ–೧೨೫ ||

ಅಷ್ಟಕ–೮ || ಅಧ್ಯಾಯ–೭ || ವರ್ಗ–೧೧, ೧೨ ||

ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ||

ಋಷಿಃ—ವಾಗಾಂಭೃಣೀ ||

ದೇವತಾ—ವಾಗಾಂಭೃಣೀ ||

ಛಂದಃ—೧, ೩-೮ ತ್ರಿಷ್ಟುಪ್ | ೨. ಜಗತೀ ||



|| ಸಂಹಿತಾಪಾಠಃ ||

ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ |
ಅಹಂ ಮಿತ್ರಾವರುಣೋಭಾ ಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ||

|| ಪದಪಾಠಃ ||

ಅಹಂ | ರುದ್ರೇಭಿಃ | ವಸುಽಭಿಃ | ಚರಾಮಿ | ಅಹಂ | ಆದಿತ್ಯೈಃ | ಉತ | ವಿಶ್ವಽದೇವೈಃ |
ಅಹಂ | ಮಿತ್ರಾವರುಣಾ | ಉಭಾ | ಬಿಭರ್ಮಿ | ಅಹಂ | ಇಂದ್ರಾಗ್ನೀ ಇತಿ | ಅಹಂ | ಅಶ್ವಿನಾ | ಉಭಾ ||

|| ಸಾಯಣಭಾಷ್ಯಂ ||

ಅಹಂ ಸೂಕ್ತಸ್ಯ ದ್ರಷ್ಟ್ರೀ ವಾಗಾಂಭೃಣೀ ಯದ್ಬ್ರಹ್ಮ ಜಗತ್ಕಾರಣಂ ತದ್ರೂಪಾ ಭವಂತೀ ರುದ್ರೇಭೀ ರುದ್ರೈರೇಕಾದಶಭಿಃ | ಇತ್ಥಂಭಾವೇ ತೃತೀಯಾ | ತದಾತ್ಮನಾ ಚರಾಮಿ | ಏವಂ ವಸುಭಿರಿತ್ಯಾದೌ ತತ್ತದಾತ್ಮನಾ ಚರಾಮೀತಿ ಯೋಜ್ಯಂ | ತಥಾ ಮಿತ್ರಾವರುಣಾ ಮಿತ್ರಂ ಚ ವರುಣಂ ಚ || ಸುಪಾಂ ಸುಲುಗಿತಿ ದ್ವಿತೀಯಾಯಾ ಆಕಾರಃ || ಉಭೋಭಾವಹಮೇವ ಬ್ರಹ್ಮೀಭೂತಾ ಬಿಭರ್ಮಿ | ಧಾರಯಾಮಿ | ಇಂದ್ರಾಗ್ನೀ ಅಪ್ಯಹಮೇವ ಧಾರಯಾಮಿ | ಉಭೋಭಾವಶ್ವಿನಾಶ್ವಿನಾವಪ್ಯಹಮೇವ ಧಾರಯಾಮಿ | ಮಯಿ ಹಿ ಸರ್ವಂ ಜಗಚ್ಛುಕ್ತೌ ರಜತಮಿವಾಧ್ಯಸ್ತಂ ಸದ್ದೃಶ್ಯತೇ | ಮಾಯಾ ಚ ಜಗದಾಕಾರೇಣ ವಿವರ್ತತೇ | ತಾದೃಶ್ಯಾ ಮಾಯಯಾ ಆಧಾರತ್ವೇನಾಸಂಗಸ್ಯಾಪಿ ಬ್ರಹ್ಮಣ ಉಕ್ತಸ್ಯ ಸರ್ವಸ್ಯೋತ್ಪತ್ತಿಃ ||

|| ಪ್ರತಿಪದಾರ್ಥ ||

**ಅಹಂ**—ನಾನು ಎಂದರೆ ಈ ಸೂಕ್ತದ ದ್ರಷ್ಟ್ರುವೂ ಅಂಭೃಣಋಷಿಯ ಪುತ್ರಿಯೂ ಜಗತ್ಕಾರಣಭೂತವಾದ ಪರಬ್ರಹ್ಮಸ್ವರೂಪವೂ ಆಗಿರುವ ನಾನು | **ರುದ್ರೇಭಿಃ**—ಏಕಾದಶರುದ್ರರೂಪದಿಂದ | **ಚರಾಮಿ**—ಸಂಚರಿಸುತ್ತೇನೆ. ಹಾಗೆಯೇ | **ವಸುಭಿಃ**—ಅಷ್ಟವಸುಗಳಿಂದಲೂ | **ಆದಿತ್ಯೈಃ**—ದ್ವಾದಶಾದಿತ್ಯರಿಂದಲೂ | **ವಿಶ್ವದೇವೈಃ**—ಸಮಸ್ತ ದೇವತೆಗಳ ರೂಪಗಳಿಂದಲೂ | (**ಚರಾಮಿ—ಸಂಚರಿಸುತ್ತೇನೆ**) | **ಉಭೌ ಮಿತ್ರಾ ವರುಣಾ**—ಮಿತ್ರಾವರುಣರೆಂಬ ಇಬ್ಬರು ದೇವತೆಗಳನ್ನು | **ಅಹಂ**—ನಾನೇ | **ಬಿಭರ್ಮಿ**—ಧರಿಸುತ್ತೇನೆ ಹಾಗೆಯೇ | **ಇಂದ್ರಾಗ್ನೀ**—ಇಂದ್ರ ಮತ್ತು ಅಗ್ನಿ ಎಂಬ ಇಬ್ಬರು ದೇವತೆಗಳನ್ನು | **ಅಹಂ**—ನಾನೇ ಧರಿಸುತ್ತೇನೆ | **ಉಭೌ**—ಇಬ್ಬರಾದ | **ಅಶ್ವಿನಾ**—ಅಶ್ವಿನೀ ದೇವತೆಗಳನ್ನು | **ಅಹಂ**—ನಾನೇ ಧರಿಸಿ ಪೋಷಿಸುತ್ತೇನೆ,

|| ಭಾವಾರ್ಥ ||

ಈ ಸೂಕ್ತದ ದ್ರಷ್ಟ್ರುವೂ ಅಂಭೃಣಋಷಿಯ ಪುತ್ರಿಯೂ ಸಚ್ಚಿದಾನಂದಸ್ವರೂಪನಾದ ಪರಬ್ರಹ್ಮದಲ್ಲಿ ತಾದಾತ್ಮ್ಯವನ್ನು ಪಡೆದಿರುವವಳೂ ಆದ ನಾನು ಏಕಾದಶ ರುದ್ರರರೂಪದಿಂದಲೂ, ಅಷ್ಟವಸುಗಳಿಂದಲೂ, ದ್ವಾದಶಾದಿತ್ಯರ

ರೂಪದಿಂದಲೂ ಇತರ ಸಮಸ್ತ ದೇವತೆಗಳ ರೂಪದಿಂದಲೂ ಕೂಡಿ ಸಂಚರಿಸುತ್ತೇನೆ. ಎಂದರೆ ನಾನೇ ಈ ದೇವತೆಗಳ ರೂಪದಿಂದಿದ್ದು ಅವರ ಕರ್ತವ್ಯ ಕರ್ಮಗಳನ್ನು ನೆರವೇರಿಸುತ್ತೇನೆ. ಇದಲ್ಲದೆಇಬ್ಬಿಬ್ಬರಾದ ಮಿತ್ರಾವರುಣರೆಂಬ ದೇವತೆಗಳನ್ನೂ ಇಂದ್ರಾಗ್ನಿಗಳನ್ನೂ ಅಶ್ವಿನೀ ದೇವತೆಗಳನ್ನೂ ನಾನೇ ಧರಿಸಿ ಪೋಷಿಸುತ್ತೇನೆ ನನ್ನ ಆಶ್ರಯದಿಂದಲೇ ಈ ಸಮಸ್ತ ದೇವತೆಗಳು ನನ್ನನ್ನೇ ಅವಲಂಬಿಸಿ ತಮ್ಮ ಕರ್ತವ್ಯವನ್ನು ನೆರವೇರಿಸಲು ಸಮರ್ಥರಾಗುತ್ತಾರೆ.

English Translation

I proceed with the Rudras, with the Vasns, with the Adityas, and with Vishwadevas; I support both Mitra and Varuna, Agni and Indra, and the two Ashwins.

॥ ಸಂಹಿತಾಪಾಠಃ ॥

ಅಹಂ ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಂ ।
ಅಹಂ ದಧಾಮಿ ದ್ರವಿಣಂ ಹವಿಷ್ಮತೇ ಸುಪ್ರಾವ್ಯೇ೩ ಯಜಮಾನಾಯ ಸುನ್ವತೇ ॥ ೨ ॥

॥ ಪದಪಾಠಃ ॥

ಅಹಂ । ಸೋಮಂ । ಆಹನಸಂ । ಬಿಭರ್ಮಿ । ಅಹಂ । ತ್ವಷ್ಟಾರಂ । ಉತ । ಪೂಷಣಂ । ಭಗಂ ।
ಅಹಂ । ದಧಾಮಿ । ದ್ರವಿಣಂ । ಹವಿಷ್ಮತೇ । ಸುಪ್ರಽಅವ್ಯೇ । ಯಜಮಾನಾಯ । ಸುನ್ವತೇ ॥ ೨ ॥

॥ ಸಾಯಣಭಾಷ್ಯಂ ॥

ಆಹನಸಮಾಹಂತವ್ಯಮಭಿಷೋತವ್ಯಂ ಸೋಮಂ ಯದ್ವಾ ಶತ್ರೂಣಾಮಾಹಂತಾರಂ ದಿವಿ ವರ್ತಮಾನಂ ದೇವತಾತ್ಮಾನಂ ಸೋಮಮಹಮೇವ ಬಿಭರ್ಮಿ । ತಥಾ ತ್ವಷ್ಟಾರಮುತಾಪಿ ಚ ಪೂಷಣಂ ಭಗಂ ಚಾಹಮೇವ ಬಿಭರ್ಮಿ । ತಥಾ ಹವಿಷ್ಮತೇ ಹವಿರ್ಭಿರ್ಯುಕ್ತಾಯ ಸುಪ್ರಾವ್ಯೇ ಶೋಭನಂ ಹವಿರ್ದೇವಾನಾಂ ಪ್ರಾಪಯಿತ್ರೇ ತರ್ಪಯಿತ್ರೇ ॥ ಅವತೇಸ್ತರ್ಪಣಾರ್ಥಾದವಿತ್ರ್ಯಾಸ್ತೃತಂತ್ರಿಭ್ಯ ಈಃ । ಉ. ೩-೧೫೮ । ಇತೀಕಾರಪ್ರತ್ಯಯಃ । ಚತುರ್ಥ್ಯೇಕವಚನೇ ಯಣ್ಯುದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯೇತಿ ಸುಪಃ ಸ್ವರಿತತ್ವಂ ॥ ಸುನ್ವತೇ ಸೋಮಾಭಿಷವಂ ಕುರ್ವತೇ ॥ ಶತುರನುಮ ಇತಿ ಚತುರ್ಥ್ಯಾ ಉದಾತ್ತತ್ವಂ ॥ ಈದೃಶಾಯ ಯಜಮಾನಾಯ ದ್ರವಿಣಂ ಧನಂ ಯಾಗಫಲರೂಪಮಹಮೇವ ಧಾರಯಾಮಿ । ಏತಚ್ಚ ಬ್ರಹ್ಮಣಃ ಫಲದಾತೃತ್ವಂ ಫಲಮತ ಉಪಪತ್ತೇಃ । ೩-೨-೩೮ । ಇತ್ಯಧಿಕರಣೇ ಭಗವತಾ ಭಾಷ್ಯಕಾರೇಣ ಸಮರ್ಥಿತಂ ॥

॥ ಪ್ರತಿಪದಾರ್ಥ ॥

**ಆಹನಸಂ**—ಲತಾರೂಪದಿಂದಿರುವುದನ್ನು ಕಲ್ಲುಗಳಿಂದ ಪ್ರಹರಿಸಿ ರಸವನ್ನು ಹಿಂಡಿ ತೆಗೆಯಲ್ಪಡುವವನೂ ಅಥವಾ ಶತ್ರುಹಂತಕನೂ ಆದ । **ಸೋಮಂ**—ಸ್ವರ್ಗದಲ್ಲಿರುವ ದೇವತಾತ್ಮಕನಾದ ಸೋಮನನ್ನು । **ಅಹಂ**—ನಾನೇ । **ಬಿಭರ್ಮಿ**—ಧರಿಸಿ ಪೋಷಿಸುತ್ತೇನೆ. ಅದರಂತೆಯೇ । **ತ್ವಷ್ಟಾರಂ-ತ್ವಷ್ಟೃ** ಎಂಬ ದೇವನನ್ನು । **ಉತ**-ಮತ್ತು । **ಪೂಷಣಂ**—ಪೂಷನೆಂಬ ದೇವತೆಯನ್ನೂ । **ಭಗಂ**—ಭಗನೆಂಬ ದೇವತೆಯನ್ನೂ । **ಅಹಂ**—ನಾನೇ ಧರಿಸಿ ಪೋಷಿಸುತ್ತೇನೆ । **ಹವಿಷ್ಮತೇ**—ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಹವಿಸ್ಸನ್ನು ಸಿದ್ಧಪಡಿಸಿಕೊಂಡಿರುವವನೂ । **ಸುಪ್ರಾವ್ಯೇ**—ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವವನೂ । **ಸುನ್ವತೇ**—ದೇವತೆಗಳನ್ನುದ್ದೇಶಿಸಿ ಸೋಮರಸವನ್ನು ಹಿಂಡಿದವನೂ ಆದ । **ಯಜಮಾನಾಯ**—ಯಜ್ಞಮಾಡುವ ಯಜಮಾನನಿಗಾಗಿ । **ದ್ರವಿಣಂ**—ಧನವನ್ನು । **ಅಹಂ**—ನಾನು । **ದಧಾಮಿ** – ಧರಿಸುತ್ತೇನೆ ಎಂದರೆ ಕೊಡುತ್ತೇನೆ

॥ ಭಾವಾರ್ಥ ॥

ಲತಾರೂಪದಲ್ಲಿರುವುದನ್ನು ಪ್ರಹರಿಸಿ ಹಿಂಡಲ್ಪಡುವ ಸೋಮನನ್ನು ಅಥವಾ ಶತ್ರುಹಂತಕನೂ ಸ್ವರ್ಗದಲ್ಲಿರುವವನೂ ದೇವತಾತ್ಮನೂ ಆದ ಸೋಮನನ್ನು ನಾನೇ ಧರಿಸಿ ಪೋಷಿಸುತ್ತೇನೆ. ಹಾಗೆಯೇ ತ್ವಷ್ಟೃ, ಪೂಷಾ, ಭಗ, ಎಂಬ ದೇವತೆಗಳನ್ನು ನಾನೇ ಧರಿಸಿ ಪೋಷಿಸುತ್ತೇನೆ. ಮತ್ತು ಹವಿಸ್ಸನ್ನು ಸಿದ್ಧಪಡಿಸಿಕೊಂಡು ಅದನ್ನು ದೇವತೆಗಳಿಗೆ ಅರ್ಪಿಸುವವನೂ, ದೇವತೆಗಳ ಪ್ರೀತ್ಯರ್ಥವಾಗಿ ಸೋಮರಸವನ್ನು ಹಿಂಡಿ ಅರ್ಪಿಸುವವನೂ ಆದ ಯಜ್ಞಮಾಡುವ ಯಜಮಾನನಿಗೆ ನಾನೇ ಧನವನ್ನು ಕೊಡುತ್ತೇನೆ.

English Translation

I support the foe-destroying Soma, Twashtri, Pushan and Bhaga; I bestow wealth upon the institutor of the rite offering the oblation, deserving of careful protection, pouring forth the libation.

॥ ಸಂಹಿತಾಪಾಠಃ ॥

ಅಹಂ ರಾಷ್ಟ್ರೀ ಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ ಯಜ್ಞಿಯಾನಾಂ ।

ತಾಂ ಮಾ ದೇವಾ ವ್ಯದಧುಃ ಪುರುತ್ರಾ ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಂ ॥ ೩ ॥

|| ಪದಪಾಠಃ ||

ಅಹಂ । ರಾಷ್ಟ್ರೀ । ಸಂಽಗಮನೀ । ವಸೂನಾಂ । ಚಿಕಿತುಷೀ । ಪ್ರಥಮಾ । ಯಜ್ಞಿಯಾನಾಂ ।

ತಾಂ । ಮಾ । ದೇವಾಃ । ವಿ । ಅದಧುಃ । ಪುರುಽತ್ರಾ । ಭೂರಿಽಸ್ಥಾತ್ರಾಂ । ಭೂರಿ । ಆಽವೇಶಯಂತೀ ||

|| ಸಾಯಣಭಾಷ್ಯಂ ||

ಅಹಂ ರಾಷ್ಟ್ರೀ । ಈಶ್ವರನಾಮೈತತ್। ಸರ್ವಸ್ಯ ಜಗತ ಈಶ್ವರೀ । ತಥಾ ವಸೂನಾಂ ಧನಾನಾಂ ಸಂಗಮನೀ ಸಂಗಮಯಿತ್ರ್ಯುಪಾಸಕಾನಾಂ ಪ್ರಾಪಯಿತ್ರೀ । ಚಿಕಿತುಷೀ ಯತ್ಸಾಕ್ಷಾತ್ಕರ್ತವ್ಯಂ ಪರಂ ಬ್ರಹ್ಮ ತಜ್ಜ್ಞಾತವತೀ ಸ್ವಾತ್ಮತಯಾ ಸಾಕ್ಷಾತ್ಕೃತವತೀ । ಅತ ಏವ ಯಜ್ಞಿಯಾನಾಂ ಯಜ್ಞಾರ್ಹಾಣಾಂ ಪ್ರಥಮಾ ಮುಖ್ಯಾ । ಯೈವಂಗುಣವಿಶಿಷ್ಟಾಹಂ ತಾಂ ಮಾಂ ಭೂರಿಸ್ಥಾತ್ರಾಂ ಬಹುಭಾವೇನ ಪ್ರಪಂಚಾತ್ಮನಾವತಿಷ್ಠಮಾನಾಂ ಭೂರಿ ಭೂರೀಣಿ ಬಹೂನಿ ಭೂತಜಾತಾನ್ಯಾವೇಶಯಂತೀ ಜೀವಭಾವೇನಾತ್ಮಾನಂ ಪ್ರವೇಶಯಂತೀಂ ಈದೃಶೀಂ ಮಾಂ ಪುರುತ್ರಾ ಬಹುಷು ದೇಶೇಷು ವ್ಯದಧುಃ । ದೇವಾ ವಿದಧತಿ । ಕುರ್ವಂತಿ । ಉಕ್ತಪ್ರಕಾರೇಣ ವೈಶ್ವರೂಪ್ಯೇಣಾವಸ್ಥಾನಾತ್ । ಯದ್ಯತ್ಕುರ್ವಂತಿ ತತ್ಸರ್ವಂ ಮಾಮೇವ ಕುರ್ವಂತೀತ್ಯರ್ಥಃ ||

|| ಪ್ರತಿಪದಾರ್ಥ ||

**ಅಹಂ** – ನಾನು । **ರಾಷ್ಟ್ರೀ**—ಸಮಸ್ತಜಗತ್ತಿಗೂ ಸ್ವಾಮಿಯಾಗಿದ್ದೇನೆ । **ವಸೂನಾಂ**—ನನ್ನನ್ನು ಉಪಾಸಿಸುವ ಜನರಿಗೆ ಕೊಡಬೇಕಾದ ಧನಗಳ । **ಸಂಗಮನೀ**—ಸಂಗ್ರಹಸ್ಥಾನವಾಗಿದ್ದೇನೆ(ಎಂದರೆ ಅವರಿಗೆ ಕೊಡಬೇಕಾದ ಸಮಸ್ತಧನಗಳು ನನ್ನಲ್ಲಿಯೇ ಒಟ್ಟುಗೂಡಿವೆ) । **ಚಿಕಿತುಷೀ**—ಪರಬ್ರಹ್ಮವನ್ನು ಚೆನ್ನಾಗಿ ತಿಳಿದು ಸಾಕ್ಷಾತ್ಕರಿಸಿದವಳಾಗಿದೇನೆ । **ಯಜ್ಞಿಯಾನಾಂ**—ಯಜ್ಞಾರ್ಹರಾದ ದೇವತೆಗಳಿಗೆ । **ಪ್ರಥಮಾ**—ಮುಖ್ಯಳಾಗಿದ್ದೇನೆ । **ತಾಂ**—ಈ ವಿಧಗುಣ ವಿಶಿಷ್ಟಳಾದವಳೂ । **ಭೂರಿಸ್ಥಾತ್ರಾಂ**—ಬಹುಭಾವದಿಂದ ಪ್ರಪಂಚರೂಪದಲ್ಲಿರುವವಳೂ । **ಭೂರಿ**—ಬಹುವಿಧವಾದ ಪ್ರಾಣಿಗಳಲ್ಲಿ । **ಆವೇಶಯಂತೀ**—ಪ್ರವೇಶಿಸಿ ನೆಲಸಿರುವವಳೂ ಆದ । **ಮಾಂ**—ನನ್ನನ್ನು । **ದೇವಾಃ**—ದೇವತೆಗಳು । **ಪುರುತ್ರಾ**—ಅನೇಕ ಪ್ರದೇಶಗಳಲ್ಲಿ । **ವ್ಯದಧುಃ**— ಸ್ಥಾಪಿಸುತ್ತಾರೆ.

|| ಭಾವಾರ್ಥ ||

ನಾನು ಸಮಸ್ತಜನರಿಗೂ ಒಡೆಯಳಾಗಿದ್ದೇನೆ. ಸಮಸ್ತರಿಗೂ ಕೊಡಬೇಕಾದ ಧನವೆಲ್ಲವೂ ನನ್ನಲ್ಲಿಯೇ ಸಂಗ್ರಹವಾಗಿದೆ ನಾನು ಪರಬ್ರಹ್ಮನನ್ನು ಚೆನ್ನಾಗಿ ತಿಳಿದು ಸಾಕ್ಷಾತ್ಕರಿಸಿದ್ದೇನೆ. ಯಜ್ಞಾರ್ಹರಾದ ದೇವತೆಗಳಿಗೆ ನಾನೇ ಮುಖ್ಯಳಾಗಿದ್ದೇನೆ. ಪ್ರಪಂಚದಲ್ಲಿರುವ ನಾನಾವಸ್ತುಗಳ ರೂಪದಿಂದಿರುವವಳೂ, ಬಹುವಿಧ ಪ್ರಾಣಿಗಳ ಶರೀರಗಳಲ್ಲಿ ಚೈತನ್ಯರೂಪದಿಂದ ನೆಲೆಸಿರುವವಳೂ ಆದ ನನ್ನನ್ನು ದೇವತೆಗಳು ಅನೇಕ ಪ್ರದೇಶಗಳಲ್ಲಿ ಸ್ಥಾಪಿಸುತ್ತಾರೆ, ಎಂದರೆ ಅನೇಕ ಪ್ರದೇಶಗಳಲ್ಲಿ ಆಹ್ವಾನಿಸಿ ನನ್ನನ್ನು ಪೂಜಿಸುತ್ತಾರೆ.

## English Translation.

I am the sovereign queen, the collectress of treasures cognizant (of the Supreme Being), the chief of objects of worship; as such the gods have

put me in many places, abiding in manifold conditions, entering into numerous (forms).

|| ಸಂಹಿತಾಪಾಠಃ ||

ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಂ ।

ಅಮಂತವೋ ಮಾಂ ತ ಉಪ ಕ್ಷಿಯಂತಿ ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ॥

|| ಪದಪಾಠಃ ||

ಮಯಾ । ಸಃ । ಅನ್ನಂ । ಅತ್ತಿ । ಯಃ । ವಿಽಪಶ್ಯತಿ । ಯಃ । ಪ್ರಾಣಿತಿ । ಯಃ । ಈಂ । ಶೃಣೋತಿ । ಉಕ್ತಂ ।

ಅಮಂತವಃ । ಮಾಂ । ತೇ । ಉಪ । ಕ್ಷಿಯಂತಿ । ಶ್ರುಧಿ । ಶ್ರುತ । ಶ್ರದ್ಧಿಽವಂ । ತೇ । ವದಾಮಿ ॥ ೪ ॥

|| ಸಾಯಣಭಾಷ್ಯಂ ||

ಯೋಽನ್ನಮತ್ತಿ ಸ ಭೋಕ್ತೃಶಕ್ತಿರೂಪಯಾ ಮಯೈವಾನ್ನಮತ್ತಿ। ಯಶ್ಚ ವಿಪಶ್ಯತಿ । ಆಲೋಕಯತೀತ್ಯರ್ಥಃ । ಯಶ್ಚ ಪ್ರಾಣಿತಿ ಶ್ವಾಸೋಚ್ಛ್ವಾಸಾದಿವ್ಯಾಪಾರಂ ಕರೋತಿ ಸೋಽಪಿ ಮಯೈವ । ಯಶ್ಚೋಕ್ತಂ ಶೃಣೋತಿ ॥ ಶ್ರು ಶ್ರವಣೇ । ಶ್ರುವಃ ಶೃ ಚೇತಿ ಶ್ರುಧಾತೋಃ ಶೃಭಾವಃ ॥ ಯ ಈದೃಶೀಮಂತರ್ಯಾಮಿರೂಪೇಣ ಸ್ಥಿತಾಂ ಮಾಂ ನ ಜಾನಂತಿ ತೇಽಮಂತವೋಽಮನ್ಯಮಾನಾ ಅಜಾನಂತ ಉಪ ಕ್ಷಿಯಂತಿ। ಉಪಕ್ಷೀಣಾಃ ಸಂಸಾರೇಣ ಹೀನಾ ಭವಂತಿ ॥ ಮನೇರೌಣಾದಿಕಸ್ತುಪ್ರತ್ಯಯಃ । ನಞ್ಸಮಾಸೇ ವ್ಯತ್ಯಯೇನಾಂತೋದಾತ್ತತ್ವಂ । ಯದ್ವಾ। ಭಾವೇ ತುಪ್ರತ್ಯಯಃ । ತತೋ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ಮಾಮಮಂತವೋ ಮದ್ವಿಷಯಜ್ಞಾನರಹಿತಾ ಇತ್ಯರ್ಥಃ ॥ ಹೇ ಶ್ರುತ ವಿಶ್ರುತ ಸಖೇ ಶ್ರುಧಿ । ಮಯಾ ವಕ್ಷ್ಯಮಾಣಂ ಶೃಣು ॥ ಛಾಂದಸೋ ವಿಕರಣಸ್ಯ ಲುಕ್ । ಶ್ರುಶೃಣುಪೃಕೃವೃಭ್ಯ ಇತಿ ಹೇರ್ಧಿಭಾವಃ ॥ ಕಿಂ ತಚ್ಛ್ರೋತವ್ಯಂ। ಶ್ರದ್ಧಿವಂ। ಶ್ರದ್ಧಿಃ ಶ್ರದ್ಧಾ। ತಯಾ ಯುಕ್ತಂ। ಶ್ರದ್ಧಾಯತ್ನೇನ ಲಭ್ಯಮಿತ್ಯರ್ಥಃ । ಶ್ರದಂತರೋರುಪಸರ್ಗವದ್ವೃತ್ತಿರಿಷ್ಯತೇ । ಪಾ. ೧-೪-೫೭-೨ । ಇತಿ ಶ್ರಚ್ಛಬ್ದಸ್ಯೋಪಸರ್ಗವದ್ವರ್ತಮಾನತ್ವಾದುಪಸರ್ಗೇ ಘೋಃ ಕಿರಿತಿ ಕಿಪ್ರತ್ಯಯಃ । ಮತ್ವರ್ಥೀಯೋ ವಃ ॥ ಈದೃಶಂ ಬ್ರಹ್ಮಾತ್ಮಕಂ ವಸ್ತು ತೇ ತುಭ್ಯಂ ವದಾಮಿ । ಉಪದಿಶಾಮಿ ॥

|| ಪ್ರತಿಪದಾರ್ಥ ||

**ಯಃ**— ಯಾವ ಪುರುಷನು । **ಅನ್ನಂ** - ಅನ್ನವನ್ನು ಅಥವಾ ಆಹಾರವನ್ನು । **ಅತ್ತಿ**— ತಿನ್ನುತ್ತಾನೆಯೋ ಅದು । **ಮಯಾ**— ನನ್ನ ಮೂಲಕವಾಗಿಯೇ (ನನ್ನ ಸಾಮರ್ಥ್ಯದಿಂದಲೇ) ಆಗಿದೆ ಹಾಗಯೇ । **ಯಃ**—

**ಯಾವ** ಪುರುಷನು । **ವಿಪಶ್ಯತಿ**—ವಿಧವಿಧವಸ್ತುಗಳನ್ನು ನೋಡುವನೋ । **ಯಃ**- ಯಾವ ಪುರುಷನು । **ಪ್ರಾಣಿತಿ**—ಶ್ವಾಸೋಚ್ಛ್ವಾಸರೂಪದಿಂದ ಜೀವಿಸುವನೋ । **ಯಃ**—ಯಾವ ಪುರುಷನು । **ಈಂ ಉಕ್ತಂ**—ಒಬ್ಬನು ಹೇಳಿದ್ದನ್ನು । **ಶೃಣೋತಿ**—ಕಿವಿಗಳಿಂದ ಕೇಳುವನೋ (ಈ ಕಾರ್ಯಗಳೆಲ್ಲವೂ) । **ಮಯಾ**—ನನ್ನಿಂದಲೇ ನನ್ನ ಮೂಲಕವೇ ನಡೆಯುತ್ತವೆ । **ಮಾಂ**—ಈರೀತಿ ಸರ್ವರಲ್ಲಿಯೂ ಅಂತರ್ಯಾಮಿ ರೂಪದಿಂದಿರುವ ನನ್ನನ್ನು । **ಅಮಂತವಃ**—ಯಾರು ತಿಳಿಯುವುದಿಲ್ಲವೋ । **ತೇ**—ಅವರು । **ಉಪ ಕ್ಷಿಯಂತಿ**—ನಾಶವನ್ನೈದುತ್ತಾರೆ । **ಶ್ರುತ**-ನಾನು ಹೇಳುವುದನ್ನು ಕೇಳುವ ಎಲೈ ಸ್ನೇಹಿತನೇ । **ತೇ**—ನಿನಗೆ । **ವದಾಮಿ**—ಹೇಳುತ್ತೇನೆ । **ಶ್ರದ್ಧಿವಂ**—ಶ್ರದ್ಧೆಯಿಂದ ಕೇಳಬೇಕಾದ ಆ ಮಾತನ್ನು । **ಶ್ರುಧಿ**—ಕೇಳು.

॥ ಭಾವಾರ್ಥ ॥

ಪುರುಷನು ಅನ್ನಾದ್ಯಾಹಾರಗಳನ್ನು ತಿನ್ನುವುದು, ಕಣ್ಣಿನಿಂದ ನೋಡುವುದು, ಶ್ವಾಸೋಚ್ಛ್ವಾಸಮಾಡುವುದು, ಒಬ್ಬರು ಹೇಳಿದ್ದನ್ನು ತಾನು ಕಿವಿಯಿಂದ ಕೇಳುವುದು ಮುಂತಾದ ಸಕಲವ್ಯಾಪಾರಗಳೂ ನನ್ನಿಂದಲೇ ಎಂದರೆ ನನ್ನ ಮೂಲಕವಾಗಿಯೇ ನಡೆಯುತ್ತವೆ. ಇಂತಹ ಸಕಲ ಭೂತಗಳಲ್ಲಿಯೂ, ಅಂತರ್ಯಾಮಿರೂಪದಿಂದಿರುವ ನನ್ನನ್ನು ಯಾರು ತಿಳಿಯುವುದಿಲ್ಲವೋ ಅವರು ಅಧೋಗತಿಯನ್ನೈದುತ್ತಾರೆ. ಎಲೈ ಸ್ನೇಹಿತನೇ, ನಿನಗೆ ನಾನು ಹೇಳುವ ಮಾತನ್ನು ಶ್ರದ್ಧಾಯುಕ್ತನಾಗಿ ಕೇಳು.

## English Translation.

He who eats food (eats) through me, he who sees, who breathes, who hears what is spoken, does so through me, those who are ignorant of me perish; hear you who has hearing, I tell you that which is deserving of belief.

॥ ಸಂಹಿತಾಪಾಠಃ ॥

ಅಹಮೇವ ಸ್ವಯಮಿದಂ ವದಾಮಿ ಜುಷ್ಟಂ ದೇವೇಭಿರುತ ಮಾನುಷೇಭಿಃ।
ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ
ಸುಮೇಧಾಂ ॥ ೫ ॥

॥ ಪದಪಾಠಃ ॥

ಅಹಂ । ಏವ । ಸ್ವಯಂ । ಇದಂ । ವದಾಮಿ । ಜುಷ್ಟಂ । ದೇವೇಭಿಃ । ಉತ । ಮಾನುಷೇಭಿಃ ।
ಯಂ । ಕಾಮಯೇ । ತಂऽತಂ । ಉಗ್ರಂ । ಕೃಣೋಮಿ । ತಂ । ಬ್ರಹ್ಮಾಣಂ । ತಂ । ಋಷಿಂ । ತಂ ।
ಸುऽಮೇಧಾಂ ॥ ೫ ॥

|| ಸಾಯಣಭಾಷ್ಯಂ ||

**ಅಹಂ ಸ್ವಯಮೇವೇದಂ ವಸ್ತು ಬ್ರಹ್ಮಾತ್ಮಕಂ ವದಾಮಿ । ಉಪದಿಶಾಮಿ । ದೇವೇಭಿರ್ದೇವೈರೀಂದ್ರಾದಿಭಿರಪಿ ಜುಷ್ಟಂ ಸೇವಿತಂ । ಉತಾಪಿ ಚ ಮಾನುಷೇಭಿರ್ಮನುಷ್ಯೈರಪಿ ಜುಷ್ಟಂ । ಈದೃಗ್ವಸ್ತ್ವಾತ್ಮಿಕಾಹಂ ಕಾಮಯೇ ಯಂ ಪುರುಷಂ ರಕ್ಷಿತುಮಹಂ ವಾಂಛಾಮಿ ತಂ ತಂ ಪುರುಷಮುಗ್ರಂ ಕೃಣೋಮಿ । ಸರ್ವೇಭ್ಯೋಽಧಿಕಂ ಕರೋಮಿ । ತಮೇವ ಬ್ರಹ್ಮಾಣಂ ಸ್ರಷ್ಟಾರಂ ಕರೋಮಿ । ತಮೇವರ್ಷಿಮತೀಂದ್ರಿಯಾರ್ಥದರ್ಶಿನಂ ಕರೋಮಿ । ತಮೇವ ಸುಮೇಧಾಂ ಶೋಭನಪ್ರಜ್ಞಂ ಚ ಕರೋಮಿ ||**

|| ಪ್ರತಿಪದಾರ್ಥ ||

**(ಎಲೈ ಪುರುಷನೇ) ಅಹಂ ಏವ**—ನಾನೇ | **ಇದಂ**—ಈ ಬ್ರಹ್ಮಾತ್ಮಕವಸ್ತುವೆಂದು | **ಸ್ವಯಂ ಏವ**—ನಾನೇ ಸ್ವತಃ | **ವದಾಮಿ**—ಹೇಳುತ್ತೇನೆ (ಆ ಬ್ರಹ್ಮವಸ್ತುವು) | **ದೇವೇಭಿಃ** - ಇಂದ್ರಾದಿ ದೇವತೆಗಳಿಂದಲೂ | **ಉತ**—ಮತ್ತು | **ಮಾನುಷೇಭಿಃ**—ಮನುಷ್ಯರಿಂದಲೂ | **ಜುಷ್ಟಂ**—ಸೇವಿಸಲ್ಪಡುವುದು (ಈ ವಿಧವಾದ ನಾನು | **ಯಂ (ಯಂ)**—ಯಾವಯಾವ ಪುರುಷನನ್ನು | **ಕಾಮಯೇ**—ರಕ್ಷಿಸಲು ಇಚ್ಛಿಸುತ್ತೇನೆಯೋ | **ತಂ ತಂ**—ಆ ಪುರುಷನನ್ನು | **ಉಗ್ರಂ**—ಸರ್ವಶ್ರೇಷ್ಠನನ್ನಾಗಿ | **ಕೃಣೋಮಿ**—ಮಾಡುತ್ತೇನೆ | **ತಂ**—ಅವನನ್ನು | **ಬ್ರಹ್ಮಾಣಂ**—ಸೃಷ್ಟಿಕರ್ತನನ್ನಾಗಿಯೂ ಮಾಡುತ್ತೇನೆ | **ತಂ**—ಅವನನ್ನು | **ಋಷಿಂ**—ಅತೀಂದ್ರಿಯಜ್ಞಾನಿಯನ್ನಾಗಿ ಮಾಡುತ್ತೇನೆ | **ತಂ**—ಅವನನ್ನು | **ಸುಮೇಧಾಂ**—ಉತ್ತಮವಾದ ಪ್ರಜ್ಞೆ ಅಥವಾ ತಿಳಿವಳಿಕೆಯುಳ್ಳವನನ್ನಾಗಿಯೂ ಮಾಡುತ್ತೇನೆ.

|| ಭಾವಾರ್ಥ ||

ಆ ಪರಬ್ರಹ್ಮಾತ್ಮಕವಸ್ತುವೇ ನಾನೆಂದು ನಾನೇ ಸ್ವತಃ ಹೇಳುತ್ತೇನೆ. ಆ ಬ್ರಹ್ಮವು ಸಮಸ್ತ ದೇವತೆಗಳಿಂದಲೂ ಮನುಷ್ಯರಿಂದಲೂ ಸೇವಿಸಿ ಉಪಾಸಿಸಲ್ಪಡುವುದು. ಇದಲ್ಲದೆ ನಾನು ಯಾವ ಯಾವ ಪುರುಷನನ್ನು ರಕ್ಷಿಸಲು ಇಚ್ಛಿಸುವೆನೋ ಅವನನ್ನು ಸರ್ವರಲ್ಲಿಯೂ ಅಧಿಕನನ್ನಾಗಿ ಮಾಡಬಲ್ಲೆನು. ಸೃಷ್ಟಿಕರ್ತನಾದ ಬ್ರಹ್ಮನನ್ನಾಗಿಯೂ, ಅತೀಂದ್ರಿಯ ಜ್ಞಾನಿಯಾದ ಋಷಿಯನ್ನಾಗಿಯೂ ಉತ್ತಮ ಪ್ರಜ್ಞಾವಂತನನ್ನಾಗಿಯೂ (ಜ್ಞಾನಿ) ಮಾಡಬಲ್ಲೆನು.

## English Translation

I verily of myself declare this which is approved of by both gods and men ; whomsoever I will, I render formidable. I make him a Bramhan, a Rishi, or a sage.

|| ಸಂಹಿತಾಪಾಠಃ ||

ಅಹಂ ರುದ್ರಾಯ ಧನುರಾ ತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ ।
ಅಹಂ ಜನಾಯ ಸಮದಂ ಕೃಣೋಮ್ಯಹಂ ದ್ಯಾವಾಪೃಥಿವೀ ಆ ವಿವೇಶ ||

॥ ಪದಪಾಠಃ ॥

ಅಹಂ । ರುದ್ರಾಯ । ಧನುಃ । ಆ । ತನೋಮಿ । ಬ್ರಹ್ಮದ್ವಿಷೇ । ಶರವೇ । ಹಂತವೈ । ಊಂ ಇತಿ ।

ಅಹಂ । ಜನಾಯ । ಸ್ಸಮದಂ । ಕೃಣೋಮಿ । ಅಹಂ । ದ್ಯಾವಾಪೃಥಿವೀ ಇತಿ । ಆ । ವಿವೇಶ ॥ ೬ ॥

॥ ಸಾಯಣಭಾಷ್ಯಂ ॥

ಪುರಾ ತ್ರಿಪುರವಿಜಯಸಮಯೇ ರುದ್ರಾಯ ರುದ್ರಸ್ಯ । ಷಷ್ಠ್ಯರ್ಥೇ ಚತುರ್ಥೀ । ಮಹಾದೇವಸ್ಯ ಧನುಶ್ಚಾಪಮಹಮಾ ತನೋಮಿ । ಜ್ಯಯಾತತಂ ಕರೋಮಿ । ಕಿಮರ್ಥಂ । ಬ್ರಹ್ಮದ್ವಿಷೇ ಬ್ರಾಹ್ಮಣಾನಾಂ ದ್ವೇಷ್ಟಾರಂ ಶರವೇ ಶರುಂ ಹಿಂಸಕಂ ತ್ರಿಪುರನಿವಾಸಿನಮಸುರಂ ಹಂತವೈ ಹಂತುಂ ಹಿಂಸಿತುಂ ॥ ಹಂತೇಸ್ತುಮರ್ಥೇ ಸೇಸೇನಿತಿ ತವೈಪ್ರತ್ಯಯಃ । ಅಂತಶ್ಚ ತವೈ ಯುಗಪದಿತ್ಯಾದ್ಯಂತ-ಯೋರ್ಯುಗಪದುದಾತ್ತತ್ವಂ ॥ ಶೄ ಹಿಂಸಾಯಾಮಿತ್ಯಸ್ಮಾಚ್ಛೄಸ್ಸ್ನಿಹೀತ್ಯಾದಿನೋಪ್ರತ್ಯಯಃ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ ॥ ಉಶಬ್ದಃ ಪೂರಕಃ । ಅಹಮೇವ ಸಮದಂ । ಸಮಾನಂ ಮಾದ್ಯಂತ್ಯಸ್ಮಿನ್ನಿತಿ ಸಮತ್ಸಂಗ್ರಾಮಃ । ಸ್ತೋತೃಜನಾರ್ಥಂ ಶತ್ರುಭಿಃ ಸಹ ಸಂಗ್ರಾಮಮಹಮೇವ ಕೃಣೋಮಿ । ಕರೋಮಿ । ತಥಾ ದ್ಯಾವಾಪೃಥಿವೀ ದಿವಂ ಚ ಪೃಥಿವೀಂ ಚಾಂತರ್ಯಾಮಿತಯಾಹಮೇವಾ ವಿವೇಶ । ಪ್ರವಿಷ್ಟವತೀ ॥

॥ ಪ್ರತಿಪದಾರ್ಥ ॥

**ಬ್ರಹ್ಮದ್ವಿಷೇ**—ಬ್ರಾಹ್ಮಣರನ್ನು ದ್ವೇಷಿಸುವ । **ಶರವೇ**—ಹಿಂಸಕನಾದ (ತ್ರಿಪುರನಿವಾಸಿಯಾದ) ಅಸುರನನ್ನು । **ಹಂತವೈ ಉ**—ಸಂಹಾರಮಾಡುವುದಕ್ಕಾಗಿ । **ರುದ್ರಾಯ**—ರುದ್ರನ । **ಧನುಃ**—ಧನುಸ್ಸನ್ನು । **ಅಹಂ**—ನಾನು । **ಆ ತನೋಮಿ**—ಬಗ್ಗಿಸುತ್ತೇನೆ (ಬಗ್ಗಿಸಿದ್ದೇನೆ) । **ಅಹಂ**—ನಾನು । **ಜನಾಯ**—ಸ್ತೋತೃಜನರಿಗಾಗಿ । **ಸಮದಂ**—ಯುದ್ಧವನ್ನು । **ಕೃಣೋಮಿ**—ಮಾಡುತ್ತೇನೆ । **ಅಹಂ**—ನಾನು । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನು (ಅಂತರ್ಯಾಮಿ ರೂಪದಿಂದ) **ಆ ವಿವೇಶ**—ಪ್ರವೇಶಿಸಿದ್ದೇನೆ.

॥ ಭಾವಾರ್ಥ ॥

ತ್ರಿಪುರಸಂಹಾರಕಾಲದಲ್ಲಿ ಬ್ರಾಹ್ಮಣರನ್ನು ದ್ವೇಷಿಸುವ ಹಿಂಸಕನಾದ ಅಸುರನನ್ನು ಸಂಹಾರಮಾಡುವುದಕ್ಕಾಗಿ ರುದ್ರನು ಉದ್ಯುಕ್ತನಾದಾಗ ಅವನ ಧನುಸ್ಸನ್ನು ಶತ್ರುಗಳ ಮೇಲೆ ಉಪಯೋಗಿಸಲು ಅದನ್ನು ನಾನೇ ಬಗ್ಗಿಸಿ ಸಜ್ಜುಗೊಳಿಸಿದೆನು. ನನ್ನನ್ನು ಸ್ತುತಿಸುವ ಸ್ತೋತೃಜನರಿಗಾಗಿ ನಾನೇ ಯುದ್ಧವನ್ನು ಮಾಡುತ್ತೇನೆ. ಮತ್ತು ದ್ಯಾವಾಪೃಥಿವಿಗಳನ್ನು (ಸಮಸ್ತಜಗತ್ತನ್ನೂ) ಅಂತರ್ಯಾಮಿರೂಪದಿಂದ ಪ್ರವೇಶಿಸಿದ್ದೇನೆ.

## English Translation.

I bend the bow of Rudra, to slay the destrective enemy of the Brahmanas, I wage war with (hostile) men, I pervade heaven and earth,

॥ ಸಂಹಿತಾಪಾಠಃ ॥

ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮ ಯೋನಿರಪ್ಸ್ವ೧ಂತಃ ಸಮುದ್ರೇ।
ತತೋ ವಿ ತಿಷ್ಠೇ ಭುವನಾನು ವಿಶ್ವೋತಾಮೂಂ ದ್ಯಾಂ ವರ್ಷ್ಮಣೋಪ ಸ್ಪೃಶಾಮಿ ॥ ೭ ॥

॥ ಪದಪಾಠಃ ॥

ಅಹಂ । ಸುವೇ । ಪಿತರಂ । ಅಸ್ಯ । ಮೂರ್ಧನ್ । ಮಮ । ಯೋನಿಃ । ಅಪ್ऽಸು । ಅಂತಃ । ಸಮುದ್ರೇ।
ತತಃ । ವಿ । ತಿಷ್ಠೇ । ಭುವನಾ । ಅನು । ವಿಶ್ವಾ । ಉತ । ಅಮೂಂ । ದ್ಯಾಂ । ವರ್ಷ್ಮಣಾ । ಉಪ । ಸ್ಪೃಶಾಮಿ ॥ ೭ ॥

॥ ಸಾಯಣಭಾಷ್ಯಂ ॥

ದ್ಯೌಃ ಪಿತೇತಿ ಶ್ರುತೇಃ ಪಿತಾ ದ್ಯೌಃ । ಪಿತರಂ ದಿವಮಹಂ ಸುವೇ । ಪ್ರಸುವೇ । ಜನಯಾಮಿ ಆತ್ಮನ ಆಕಾಶಃ ಸಂಭೂತಃ । ತೈ. ಆ. ೮-೧ । ಇತಿ ಶ್ರುತೇಃ । ಕುತ್ರೇತಿ ತದಾಹ । ಅಸ್ಯ ಪರಮಾತ್ಮನೋ ಮೂರ್ಧನ್ಮೂರ್ಧನ್ಯುಪರಿ । ಕಾರಣಭೂತೇ ತಸ್ಮಿನ್ಹಿ ವಿಯದಾದಿಕಾರ್ಯಜಾತಂ ಸರ್ವಂ ವರ್ತತೇ ತಂತುಷು ಪಟ ಇವ । ಮಮ ಚ ಯೋನಿಃ ಕಾರಣಂ ಸಮುದ್ರೇ । ಸಮುದ್ದ್ರವಂತ್ಯಸ್ಮಾದ್ಭೂತಜಾತಾನೀತಿ ಸಮುದ್ರಃ ಪರಮಾತ್ಮಾ । ತಸ್ಮಿನ್ನಪ್ಸು ವ್ಯಾಪನಶೀಲಾಸು ಧೀವೃತ್ತಿಷ್ವಂತರ್ಮಧ್ಯೇ ಯದ್ಬ್ರಹ್ಮ ಚೈತನ್ಯಂ ತನ್ಮಮ ಕಾರಣಮಿತ್ಯರ್ಥಃ । ಯತ ಈದೃಗ್ಭೂತಾಹಮಸ್ಮಿ ತತೋ ಹೇತೋರ್ವಿಶ್ವಾ ವಿಶ್ವಾನಿ ಸರ್ವಾಣಿ ಭುವನಾನಿ ಭೂಜಾತಾನ್ಯನು ಪ್ರವಿಶ್ಯ ವಿ ತಿಷ್ಠೇ ವಿವಿಧಂ ವ್ಯಾಪ್ಯ ತಿಷ್ಠಾಮಿ ॥ ಸಮವಪ್ರವಿಭ್ಯಃ ಸ್ಥ ಇತ್ಯಾತ್ಮನೇಪದಂ ॥ ಉತಾಪಿ ಚಾಮೂಂ ದ್ಯಾಂ ವಿಪ್ರಕೃಷ್ಟದೇಶೇऽವಸ್ಥಿತಂ ಸ್ವರ್ಗಲೋಕಂ । ಉಪಲಕ್ಷಣಮೇತತ್ । ಏತದುಪಲಕ್ಷಿತಂ ಕೃತ್ಸ್ನಂ ವಿಕಾರಜಾತಂ ವರ್ಷ್ಮಣಾ ಕಾರಣಭೂತೇನ ಮಾಯಾತ್ಮಕೇನ ಮದೀಯೇನ ದೇಹೇನೋಪ ಸ್ಪೃಶಾಮಿ । ಯದ್ವಾ । ಅಸ್ಯ ಭೂಲೋಕಸ್ಯ ಮೂರ್ಧನ್ಮೂರ್ಧನ್ಯುಪರ್ಯಹಂ ಪಿತರಮಾಕಾಶಂ ಸುವೇ। ಸಮುದ್ರೇ ಜಲಧಾವಪ್ಸೂದಕೇಷ್ವಂತರ್ಮಧ್ಯೇ ಮಮ ಯೋನಿಃ ಕಾರಣಭೂತೋऽಂಭೃಣಾಖ್ಯ ಋಷಿರ್ವರ್ತತೇ । ಯದ್ವಾ । ಸಮುದ್ರೇऽಂತರಿಕ್ಷೇऽಪ್ಸ್ವಮ್ಮಯೇಷು ದೇವಶರೀರೇಷು ಮಮ ಕಾರಣಭೂತಂ ಬ್ರಹ್ಮ ಚೈತನ್ಯಂ ವರ್ತತೇ । ತತೋऽಹಂ ಕಾರಣಾತ್ಮಿಕಾ ಸತೀ ಸರ್ವಾಣಿ ಭುವನಾನಿ ವ್ಯಾಪ್ನೋಮಿ । ಅನ್ಯತ್ಸಮಾನಂ ॥

॥ ಪ್ರತಿಪದಾರ್ಥ ॥

**ಅಹಂ**—ನಾನು । **ಪಿತರಂ**—ಪಿತೃಭೂತವಾದ ಸ್ವರ್ಗವನ್ನು । **ಅಸ್ಯ**—ಈ ಪರಮಾತ್ಮನ । **ಮೂರ್ಧನ್**—ಶಿರಸ್ಸಿನಲ್ಲಿ ಎಂದರೆ ಮೇಲು ಭಾಗದಲ್ಲಿ । **ಸುವೇ**—ಉತ್ಪತ್ತಿಮಾಡುತ್ತೇನೆ । **ಮಮ**—ನನ್ನ ।

**ಯೋನಿಃ**— ಕಾರಣ ಭೂತವಾದ ಸ್ಥಾನವು । **ಸಮುದ್ರೇ**— ಪರಮಾತ್ಮಸಂಬಂಧವಾದ । **ಅಪ್ಸು ಅಂತಃ**— ಬುದ್ಧಿ ವ್ಯಾಪಾರಗಳಲ್ಲಿ ಇರುವುದು । **ತತಃ**— ಆ ಕಾರಣದಿಂದ । **ವಿಶ್ವಾ**— ಸಮಸ್ತವಾದ । **ಭುವನಾ**— ಭೂತಜಾತ ಗಳನ್ನು ಎಂದರೆ ಪ್ರಾಣಿಗಳನ್ನು । **ಅನು**— ಅಂತರ್ಯಾಮಿರೂಪದಿಂದ ಪ್ರವೇಶಿಸಿ । **ವಿ ತಿಷ್ಠೇ**— ವಿವಿಧಾಕಾರ ಗಳಿಂದ ಇರುತ್ತೇನೆ । **ಉತ**— ಮತ್ತು । **ಅಮೂಂ ದ್ಯಾಂ**— ಬಹುದೂರ ಪ್ರದೇಶದಲ್ಲಿರುವ ಸ್ವರ್ಗವನ್ನು ಕೂಡ । **ವರ್ಷ್ಮಣಾ**— ಮಾಯಾತ್ಮಕವಾದ ನನ್ನ ದೇಹದಿಂದ । **ಉಪ ಸ್ಪೃಶಾಮಿ**— ಸ್ಪರ್ಶಮಾಡು (ಮುಟ್ಟು) ತ್ತೇನೆ.

॥ ಭಾವಾರ್ಥ ॥

ನಾನು ಸ್ವರ್ಗವನ್ನು ಮೇಲುಭಾಗದಲ್ಲಿ ಉತ್ಪತ್ತಿಮಾಡಿದ್ದೇನೆ. ಇದರ ಕಾರಣವು ಎಂದರೆ ಮೂಲವು ಪರ ಮಾತ್ಮನ ಬುದ್ಧಿವ್ಯಾಪಾರಗಳಲ್ಲಡಗಿರುವುದು. ಎಂದರೆ ಪರಮಾತ್ಮನ ಬುದ್ಧಿಯೇ ಈ ಸೃಷ್ಟಿಗೆ ಕಾರಣವು. ಆದ್ದ ರಿಂದ ಸಮಸ್ತ ಪ್ರಾಣಿಗಳಲ್ಲಿಯೂ ಅಂತರ್ಯಾಮಿರೂಪದಿಂದ ಪ್ರವೇಶಿಸಿ ನಾನಾವಿಧ ಆಕಾರಗಳಿಂದ ನಾನು ಗೋಚರಿ ಸುತ್ತೇನೆ. ಮತ್ತು ಬಹು ಎತ್ತರ ಪ್ರದೇಶದಲ್ಲಿರುವ ಸ್ವರ್ಗಾದಿಲೋಕಗಳನ್ನು ಸಹ ನನ್ನ ಮಾಯಾತ್ಮಕವಾದ ದೇಹ ದಿಂದ ಸ್ಪರ್ಶಮಾಡುತ್ತೇನೆ.

## English Translation

I bring forth the paternal (heaven) upon the brow of this (Supreme Being), my birthplace is in the midst of the waters; from thence I spread through all beings, and touch this heaven with my body.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಆದ್ದರಿಂದ ಇದರ ಪ್ರತಿಯೊಂದು ಪಾದವನ್ನು ವಿವರಿಸು ವುದು ಅವಶ್ಯಕವು.

**ಅಹಂ ಸುವೇ ಪಿತರಂ ಅಸ್ಯ ಮೂರ್ಧನಿ**— ಇಲ್ಲಿ ಪಿತರಂ ಎಂಬಶಬ್ದಕ್ಕೆ ದ್ಯುಲೋಕವನ್ನು ಎಂದು ಅರ್ಥ ವಿವರಣೆಮಾಡಿದಾರೆ. ಈ ವಿಷಯದಲ್ಲಿ ತೈತ್ತಿರೀಯ ಬ್ರಾಹ್ಮಣದಲ್ಲಿ **ದ್ಯೌಃ ಪಿತಾ । ಪೃಥಿವೀ ಮಾತಾ** (ತೈ. ಬ್ರಾ. ೩-೭-೫-೪) ದ್ಯುಲೋಕವು ತಂದೆಯೆಂದೂ, ಪೃಥಿವಿಯು ತಾಯಿಯೆಂದೂ ಹೇಳಿರುವುದು. ಸರ್ವಪ್ರಾಣಿಗಳಿಗೂ ಈ ದ್ಯಾವ್ಯಾಪೃಥಿವಿಗಳು ತಂದೆತಾಯಿಗಳಂತಿರುವವು. ಬ್ರಹ್ಮನ ಶಿರಸ್ಸಿನಲ್ಲಿ; ಶಿರಸ್ಸು ಶರೀರದಲ್ಲಿರುವ ಎತ್ತರವಾದ ಭಾಗವು. ಅದರಂತೆ ದ್ಯು (ಸ್ವರ್ಗ) ಲೋಕವೂ ಪೃಥಿವ್ಯಾದಿಲೋಕಗಳಿಗಿಂತ ಎತ್ತರದಲ್ಲಿರುವುದು. ಆದ್ದರಿಂದ ನಾನು ಈ ದ್ಯುಲೋಕವನ್ನು ಬಹು ಎತ್ತರ ಪ್ರದೇಶದಲ್ಲಿರುವಂತೆಸೃಷ್ಟಿಮಾಡಿದ್ದೇನೆ ಎಂದುಈ ವಾಕ್ಯದ ಅಭಿಪ್ರಾಯವು.

**ಮಮ ಯೋನಿಃ ಅಪ್ಸು ಅಂತಃ ಸಮುದ್ರೇ**— ಯೋನಿಃ ಎಂದರೆ ಸ್ಥಾನ ಅಥವಾ ಕಾರಣಭೂತವಾದುದು. ಅಪಃ ಎಂಬ ಶಬ್ದಕ್ಕೆ ಕರ್ಮ ಎಂಬರ್ಥವು ಉಕ್ತವಾಗಿರುವುದರಿಂದ (ನಿ.೩-೯)ಅಪ್ಸು ಎಂದರೆ ಕರ್ಮಗಳಲ್ಲಿ ಎಂದರ್ಥವು, ಸಮುದ್ರಶಬ್ದಕ್ಕೆ ನಾನಾರ್ಥಗಳಿರುವವು ಸಮುದ್ರವೆಂದರೆ, ಅಂತರಿಕ್ಷ, ಜಲರಾಶಿ ಎಂಬರ್ಥಗಳಲ್ಲದೆ ಇಲ್ಲಿ ಭಾಷ್ಯ ಕಾರರು— **ಸಮುದ್ದ್ರವಂತ್ಯಸ್ಮಾದ್ಭೂತಜಾತಾನೀತಿ ಸಮುದ್ರಃ ಪರಮಾತ್ಮಾ** ಎಂದರೆ ಸಮಸ್ತ ಭೂತಜಾತ ಗಳೂ (ಪ್ರಾಣಿಗಳೂ) ಈ ಪರಮಾತ್ಮನಿಂದ ಉತ್ಪತ್ತಿಯಾಗುವುದರಿಂದ ಸಮುದ್ರಶಬ್ದಕ್ಕೆ ಪರಮಾತ್ಮನೆಂಬ ಅರ್ಥವನ್ನು

ಹೇಳಬಹುದು ಎಂದು ಹೇಳಿದಾರೆ. ಇಂತಹ ಪರಮಾತ್ಮನ ಬುದ್ಧಿ ವ್ಯಾಪಾರಗಳ ಮಧ್ಯದಲ್ಲಿ ಈ ಜಗದಾದಿ ಸೃಷ್ಟಿಯು ಕಾರಣ ವಿರುವುದು ಎಂದರೆ ಜಗದಾದಿಗಳ ಸೃಷ್ಟಿಗೆ ಪರಮಾತ್ಮನ ಬುದ್ಧಿ ವ್ಯಾಪಾರವೇ ಕಾರಣವು ಎಂದಭಿಪ್ರಾಯವು.

ಇವಲ್ಲದೆ **ಸಮುದ್ರೇ ಜಲಧಾವಪ್ಸೂದಕೇಷ್ವಂತರ್ಮಧ್ಯೇ ಮಮ ಯೋನಿಃ ಕಾರಣಭೂತಃ ಅಂಭೃಣಾಖ್ಯ ಋಷಿರ್ವರ್ತತೇ ||** ಸಮುದ್ರದ ಜಲರಾಶಿಗಳ ಮಧ್ಯದಲ್ಲಿ ನನ್ನ ಉತ್ಪತ್ತಿಗೆ ಕಾರಣ ಭೂತನಾದ ಅಂಭೃಣ ಋಷಿಯು ಉತ್ಪನ್ನನಾದನು ಎಂದು ಹೇಳಿದಾರೆ. **ಆಪೋ ವಾ ಇದಮಗ್ರೇ ಸಲಿಲಮಾಸನ್** ಇತ್ಯಾದಿ ಶ್ರುತಿ ವಾಕ್ಯಗಳಿಂದ ಸೃಷ್ಟಿಗೆ ಪೂರ್ವದಲ್ಲಿದ್ದ ಉದಕಗಳಿಂದಲೇ ಪೃಥಿವ್ಯಾದಿಲೋಕಗಳೂ ಸಮಸ್ತ ಪ್ರಾಣಿಗಳೂ ಉತ್ಪತ್ತಿಯಾದವೆಂದು ಹೇಳಿರುವುದರಿಂದ ನೀರಿನಿಂದ ಕೂಡಿದ ಸಮುದ್ರಮಧ್ಯವೇ ತನ್ನ ತಂದೆಗೂ ತನಗೂ ಉತ್ಪತ್ತಿ ಸ್ಥಾನವೆಂದು ಋಷಿಕೆಯು ಹೇಳಿರಬಹುದು.

ಅಥವಾ **ಸಮುದ್ರೇಽನ್ತರಿಕ್ಷೇಽಪ್ಸ್ವಮ್ಮಯೇಷು ದೇವಶರೀರೇಷು ಮಮ ಕಾರಣಭೂತಂ ಬ್ರಹ್ಮಚೈತನ್ಯಂ ವರ್ತತೇ । ತತೋಽಹಂ ಕಾರಣಾತ್ಮಿಕಾ ಸತೀ ಸರ್ವಾಣಿ ಭುವನಾನಿ ವ್ಯಾಪ್ನೋಮಿ**—ಸಮುದ್ರವೆಂದರೆ ಅಂತರಿಕ್ಷ, ಅಂರಿಕ್ಷದಲ್ಲಿ ಉದಕಮಯಶರೀರವುಳ್ಳ ದೇವತೆಗಳ ಶರೀರಗಳಲ್ಲಿ ಸರ್ವಕ್ಕೂ ಕಾರಣಭೂತವಾದ ಬ್ರಹ್ಮವು ಚೈತನ್ಯರೂಪದಿಂದ ಇರುವುದು. ಆದ್ದರಿಂದ ಆ ಚೈತನ್ಯರೂಪವು ನನ್ನಲ್ಲಿಯೂ ಇರುವುದು. ಇಂತಹ ಚೈತನ್ಯಯುಕ್ತಳೂ ಕಾರಣಾತ್ಮಿಕಳೂ ಆದ ನಾನು (ಋಷಿಕೆಯು) ಸಮಸ್ತಲೋಕಗಳನ್ನು ವ್ಯಾಪಿಸಿರುವೆನು ಎಂದು ಈ ವಾಕ್ಯಕ್ಕೆ ಅರ್ಥವನ್ನು ಹೇಳಬಹುದು

**ತತಃ ವಿ ತಿಷ್ಠೇ ಭುವನಾ ಅನು ವಿಶ್ವಾ**—ಪರಬ್ರಹ್ಮವು ಸರ್ವಕ್ಕೆ ಕಾರಣಭೂತವಾಗಿರುವುದು ಎಂದು ಹೇಳಿದೆಯಷ್ಟೆ. ಆದ್ದರಿಂದ ಪರಬ್ರಹ್ಮ ಸ್ವರೂಪವೇ ಆದ ನಾನು ಸಮಸ್ತಲೋಕಗಳನ್ನೂ ಅವುಗಳಲ್ಲಿರುವ ಪ್ರಾಣಿವರ್ಗವನ್ನೂ ಅಂತರ್ಯಾಮಿಯಾಗಿ ಪ್ರವೇಶಿಸಿ ನಾನಾ ವಿಧರೂಪಗಳಿಂದ ಕಾಣುತ್ತಿರುವೆನು ಎಂದರ್ಥವು. ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಗ್ಂ ಸರ್ವಾತ್ಮಾ (ತೈ. ಆ ೩-೧೧-೧)ಎಂಬ ಶ್ರುತಿವಾಕ್ಯದಂತೆಯೂ, ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್ (ತೈ. ಉ ೨-೬)ಎಂಬ ಶ್ರುತಿವಾಕ್ಯದಂತೆಯೂ ಪರಮಾತ್ಮನು ಸೃಷ್ಟಿಮಾಡಿದನಂತರ ತಾನು ಸೃಷ್ಟಿಮಾಡಿದ ಸಮಸ ವಸ್ತುಗಳಲ್ಲಿಯೂ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ ಎಂದರೆ ಚೈತನ್ಯರೂಪದಿಂದ ನೆಲೆಸಿರುವನು. ಪ್ರಾಣಿಗಳೂ ವಸ್ತುಗಳೂ ಆಕಾರದಲ್ಲಿಯೂ ರೂಪದಲ್ಲಿಯೂ ಅನೇಕವಿಧವಾಗಿದ್ದರೂ ಅವುಗಳಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನು ಒಬ್ಬನೇ ಆಗಿರುವನು ಆದ್ದರಿಂದ ಈ ವಾಕ್ಯದಲ್ಲಿ **ವಿ ತಿಷ್ಠೇ** ನಾನಾವಿಧರೂಪಗಳಿಂದ ಗೋಚರಿಸುವೆನು ಎಂದು ಹೇಳಲಾಗಿದೆ.

**ಉತ ಅಮೂಂ ದ್ಯಾಂ ವರ್ಷ್ಮಣಾ ಉಪ ಸ್ಪೃಶಾಮಿ**—ಈ ಸ್ವರ್ಗಲೋಕವನ್ನು ನಾನು ಮುಟ್ಟ ಬಲ್ಲೆನು ಎಂದು ಇಲ್ಲಿ ಹೇಳಿದೆ. ಸಾಧಾರಣ ಮನುಷ್ಯರು ತಮಗಿಂತ ಎತ್ತರವಾಗಿರುವ ವಸ್ತುಗಳ ತುದಿಯನ್ನು ಕೈಗಳಿಂದ ಮುಟ್ಟಲು ಸಾಧ್ಯವಿಲ್ಲ ದ್ಯುಲೋಕವು ಬಹು ಎತ್ತರದಲ್ಲಿರುವುದು. ಅದನ್ನು ಸ್ಪರ್ಶಿಸಲು ಯಾರಿಗೂ ಸಾಧ್ಯವಿಲ್ಲ ಆದರೆ ಪರಮಾತ್ಮನ ಶಕ್ತಿ ಸಾಮರ್ಥ್ಯಗಳು ಅದ್ಭುತವಾದವು ಎಷ್ಟೇ ಎತ್ತರದಲ್ಲಿದ್ದರೂ ಅದನ್ನು ಪರಮಾತ್ಮನು ತನ್ನ ಮಾಯಾಶಕ್ತಿಯಿಂದ ಎಂದರೆ ಅತಿಶಯಶಕ್ತಿಸಾಮರ್ಥ್ಯಗಳಿಂದ ಸ್ಪರ್ಶಮಾಡಬಲ್ಲನು. ಏಕೆಂದರೆ ಸಮಸ್ತವನ್ನು ವ್ಯಾಪಿಸಿರುವ ಪರಮಾತ್ಮನಿಗೆ ದೂರ, ಎತ್ತರ ಮುಂತಾದ ವ್ಯತ್ಯಾಸವಾಗಲಿ, ಅಸಾಧ್ಯವಾದುದಾಗಲಿ ಯಾವುದೂ ಇಲ್ಲ. ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಅಹಮೇವ ವಾತ ಇವ ಪ್ರ ವಾಮ್ಯಾರಭಮಾಣಾ ಭುವನಾನಿ ವಿಶ್ವಾ ।
ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂ ಬಭೂವ ॥ ೮ ॥

॥ ಪದಪಾಠಃ ॥

ಅಹಂ । ಏವ । ವಾತಃऽಇವ । ಪ್ರ । ವಾಮಿ । ಆऽರಭಮಾಣಾ । ಭುವನಾನಿ । ವಿಶ್ವಾ ।

ಪರಃ । ದಿವಾ । ಪರಃ । ಏನಾ । ಪೃಥಿವ್ಯಾ । ಏತಾವತೀ । ಮಹಿನಾ । ಸಂ । ಬಭೂವ ॥ ೮ ॥

॥ ಸಾಯಣಭಾಷ್ಯಂ ॥

ವಿಶ್ವಾ ವಿಶ್ವಾನಿ ಸರ್ವಾಣಿ ಭುವನಾನಿ ಭೂತಜಾತಾನಿ ಕಾರ್ಯಾಣ್ಯಾರಭಮಾಣಾ ಕಾರಣರೂಪೇಣೋತ್ಪಾದಯಂತ್ಯಹಮೇವ ಪರೇಣಾನಧಿಷ್ಠಿತಾ ಸ್ವಯಮೇವ ಪ್ರ ವಾಮಿ । ಪ್ರವರ್ತೇ । ವಾತ ಇವ ಯಥಾ ವಾತಃ ಪರೇಣಾಪ್ರೇರಿತಃ ಸನ್ ಸ್ವೇಚ್ಛಯೈವ ಪ್ರವಾತಿ ತದ್ವತ್ । ಉಕ್ತಂ ಸರ್ವಂ ನಿಗಮಯತಿ । ಪರೋ ದಿವಾ । ಪರ ಇತಿ ಸಕಾರಾಂತಂ ಪರಸ್ತಾದಿತ್ಯರ್ಥೇ ವರ್ತತೇ ಯಥಾಧ ಇತ್ಯಧಸ್ತಾದರ್ಥೇ । ತದ್ಯೋಗೇ ಚ ತೃತೀಯಾ ಸರ್ವತ್ರ ದೃಶ್ಯತೇ । ದಿವ ಆಕಾಶಸ್ಯ ಪರಸ್ತಾತ್। ಏನಾ ಪೃಥಿವ್ಯಾ॥ ದ್ವಿತೀಯಾಟೌಃಸ್ವೇನ ಇತೀದಮ ಏನಾದೇಶಃ ॥ ಅಸ್ಯಾಃ ಪೃಥಿವ್ಯಾಃ ಪರಃ ಪರಸ್ತಾತ್ । ದ್ಯಾವಾಪೃಥಿವ್ಯೋರುಪಾದಾನಮುಪಲಕ್ಷಣಂ । ಏತದುಪಲಕ್ಷಿತಾತ್ಸರ್ವಾದ್ವಿಕಾರಜಾತಾತ್ಪರಸ್ತಾದ್ವರ್ತಮಾನಾಸಂಗೋದಾಸೀನಕೂಟಸ್ಥಬ್ರಹ್ಮಚೈತನ್ಯರೂಪಾಹಂ ಮಹಿನಾ ಮಹಿಮ್ನೈತಾವತೀ ಸಂ ಬಭೂವ । ಏತಚ್ಛಬ್ದೇನೋಕ್ತಂ ಸರ್ವಂ ಪರಾಮೃಶ್ಯತೇ । ಏತತ್ಪರಿಮಾಣಮಸ್ಯಾಃ ॥ ಯತ್ತದೇತೇಭ್ಯಃ ಪರಿಮಾಣೇ । ಪಾ. ೫-೨-೩೯ । ಇತಿ ವತುಪ್ । ಆ ಸರ್ವನಾಮ್ನ ಇತ್ಯಾತ್ವಂ ॥ ಸರ್ವಜಗದಾತ್ಮನಾಹಂ ಸಂಭೂತಾಸ್ಮಿ ॥ ಮಹಚ್ಛಬ್ದಾದಿಮನಿಚಿ ಟೇರಿತಿ ಟಿಲೋಪಃ । ತತಃ ತೃತೀಯಾಯಾಮುದಾತ್ತನಿವೃತ್ತಿಸ್ವರೇಣ ತಸ್ಯಾ ಉದಾತ್ತತ್ವಂ । ಛಾಂದಸೋ ಮಲೋಪಃ ॥

॥ ಪ್ರತಿಪದಾರ್ಥ ॥

**ವಾತ ಇವ**—ಪರಪ್ರೇರಣೆ ಇಲ್ಲದೆ ಸ್ವೇಚ್ಛೆಯಿಂದ ಬೀಸುವ ವಾಯುವಿನಂತೆ । **ವಿಶ್ವಾ**—ಸಮಸ್ತವಾದ । **ಭುವನಾನಿ**— ಲೋಕಗಳನ್ನೂ ಅವುಗಳಲ್ಲಿರುವ ಪ್ರಾಣಿಗಳನ್ನೂ । **ಆರಭಮಾಣಾ**— ಉತ್ಪತ್ತಿಮಾಡುತ್ತಾ । **ಅಹಮೇವ**—ಇತರರ ಸಹಾಯವಿಲ್ಲದೆ ನಾನು ಮಾತ್ರವೇ । **ಪ್ರ ವಾಮಿ**—ಸ್ಥಿರವಾಗಿರುತ್ತೇನೆ । **ದಿವಾ**—ಆಕಾಶದಿಂದ ಅಥವಾ ಸ್ವರ್ಗಲೋಕದಿಂದ । **ಪರಃ**—ಆಚೆಗೂ । **ಏನಾ ಪೃಥಿವ್ಯಾಃ**—ಈ ವಿಸ್ತಾರವಾದ ಪೃಥಿವಿಯಿಂದ । **ಪರಃ**—ಆಚೆಗೂ । **ಮಹಿನಾ**—ನನ್ನ ಮಹಿಮೆಯಿಂದ ವ್ಯಾಪಿಸಿ । **ಏತಾವತೀ**—ಈ ರೀತಿ ಇರುವ ನಾನು । **ಸಂಬಭೂವ**—ಸರ್ವತ್ರ ಸರ್ವಕಾಲಗಳಲ್ಲಿಯೂ ಇರುತ್ತೇನೆ.

|| ಭಾವಾರ್ಥ ||

ಪರಪ್ರೇರಣೆ ಇಲ್ಲದೆ ಸ್ವೇಚ್ಛೆಯಿಂದ ವಾಯುವು ಯಾವರೀತಿ ಬೀಸುವುದೋ ಅದರಂತೆ ನಾನು ಸಹ ಯಾವ ಪ್ರೇರಣೆಯೂ ನಿಯಮನವೂ ಇಲ್ಲದೆ ನನ್ನ ಸ್ವಂತ ಪ್ರೇರಣೆಯಿಂದಲೇ ಸಮಸ್ತಲೋಕಗಳನ್ನೂ ಅವುಗಳಲ್ಲಿರುವ ಸಮಸ್ತ ಪ್ರಾಣಿಗಳನ್ನೂ ಉತ್ಪತ್ತಿಮಾಡುತ್ತಾ ಇತರರ ಸಹಾಯವಿಲ್ಲದೆ ನಾನು ಮಾತ್ರ ಸ್ಥಿರವಾಗಿರುತ್ತೇನೆ. ಆಕಾಶ ಅಥವಾ ಸ್ವರ್ಗಲೋಕದಿಂದ ಆಚೆಗೂ, ವಿಸ್ತಾರವಾದ ಈ ಪೃಥಿವಿಯಿಂದಾಚೆಗೂ ಸಹ (ಒಳಗೂ ಹೊರಗೂ ಸಹ) ನನ್ನ ಮಹಿಮೆಯಿಂದ ವ್ಯಾಪಿಸಿ ಈ ರೀತಿ ಇರುವ ನಾನು ಸರ್ವಕಾಲಗಳಲ್ಲಿಯೂ ಸರ್ವಪ್ರದೇಶಗಳಲ್ಲಿಯೂ ಇರುತ್ತೇನೆ.

## English Translation.

I breathe forth like the wind, giving form to all created worlds; beyond the heaven, beyond this earth (am I), so vast am I in greatness.

# ನೂರ ಇಪ್ಪತ್ತಾರನೆಯ ಸೂಕ್ತವು



## ಪೀಠಿಕೆ.

ಈ ಸೂಕ್ತದಲ್ಲಿ ವಿಶ್ವದೇವತೆಗಳನ್ನು ಸ್ತುತಿಸಲಾಗಿದೆ ಎಂದು ಹೇಳಿದ್ದರೂ ಮುಖ್ಯವಾಗಿ ಮಿತ್ರ, ವರುಣ, ಅರ್ಯಮಾ ಎಂಬ ಮೂವರು ದೇವತೆಗಳನ್ನೇ ವಿಶೇಷವಾಗಿ ಸ್ತುತಿಸಲಾಗಿದೆ. ಈ ಮಿತ್ರಾವರುಣಾರ್ಯಮರ ವಿಷಯ ವನ್ನು ನಾವು ಋ. ಸಂ ಭಾಗ 14 ಪುಟಗಳು 119—129 ರಲ್ಲಿ ವಿವರಿಸಿರುವುದರಿಂದ ಇಲ್ಲಿ ಪುನಃ ವಿವರಿಸುವ ಅವಶ್ಯ ಕತೆ ಇರುವುದಿಲ್ಲ.

| ಸಾಯಣಭಾಷ್ಯಂ ||

**ನ ತಮಿತ್ಯಷ್ಟರ್ಚಂ ಚತುರ್ದಶಂ ಸೂಕ್ತಂ ಶಿಲೂಷಪುತ್ರಸ್ಯ ಕುಲ್ಮಲಬರ್ಹಿಷಸ್ಯಾರ್ಷಂ ವಾಮದೇವಪುತ್ರಸ್ಯಾಂಹೋಮುಚ್ಮಾನ್ವೋ ವಾ । ವೈಶ್ವದೇವಂ । ಅಷ್ಟಮೀ ತ್ರಿಷ್ಟುಪ್ ಶಿಷ್ಟಾ ಉಪರಿಷ್ಟಾದ್ಬೃಹತ್ಯಃ । ತ್ರ್ಯಷ್ಟಕದ್ವಾದಶಕವತ್ಯುಪರಿಷ್ಟಾದ್ಬೃಹತೀ । ಅನು. ೭-೪ । ಇತಿ ಹಿ ತಲ್ಲಕ್ಷಣಂ । ತಥಾ ಚಾನುಕ್ರಾಂತಂ । ನ ತಂ ಶೈಲೂಷಃ ಕುಲ್ಮಲಬರ್ಹಿಷೋ ವಾಮದೇವ್ಯೋ ವಾಂಹೋಮುಗ್ವೈಶ್ವದೇವಮುಪರಿಷ್ಟಾದ್ಬಾರ್ಹತಮಂತ್ಯಾ ತ್ರಿಷ್ಟುಬಿತಿ || ಗತೋ ವಿನಿಯೋಗಃ ||**

ಅನುವಾದವು— **ನ ತಂ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಶಿಲೂಷಪುತ್ರನಾದ ಕುಲ್ಮಲಬರ್ಹಿಷನೆಂಬುವನು ಋಷಿಯು ಅಥವಾ ವಾಮದೇವ ಋಷಿಯ ಪುತ್ರನಾದ ಅಂಹೋಮುಕ್ ಎಂಬುವನೂ ಋಷಿಯಾಗಬಹುದು. ವಿಶ್ವೇದೇವತೆಗಳು ದೇವತೆಯು; ಈ ಸೂಕ್ತದ ಎಂಟನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಉಪರಿಷ್ಟಾದ್ಬೃಹತೀ ಎಂಬ ಛಂದಸ್ಸಿನವು. ಈ ಛಂದಸ್ಸಿನ ಋಕ್ಕುಗಳಲ್ಲಿ ನಾಲ್ಕುಪಾದಗಳಿದ್ದು ಮೊದಲ ಮೂರುಪಾದಗಳಲ್ಲಿ ಎಂಟೆಂಟು ಅಕ್ಷರಗಳೂ

ನಾಲ್ಕನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ ಇರುವವು ಛಂದೋನು ಕ್ರಮಣಿಕೆಯಲ್ಲಿ— **ಅಂತ್ಯಶ್ಚೇದುಪರಿಷ್ಟಾದ್ಬೃಹತೀ** (ಅನು. ೭-೪) ಎಂದು ಹೇಳಿರುವುದು. ಅನುಕ್ರಮಣಿಕೆಯಲ್ಲಿ— **ನ ತಂ ಶೈಲೂಷಃ ಕುಲ್ಮಲಬರ್ಹಿಷೋ ವಾಮದೇವ್ಯೋ ವಾಂಹೋಮುಗ್ವೈಶ್ವದೇವಮುಪರಿಷ್ಟಾದ್ಬಾರ್ಹತಮಂತ್ಯಾ ತ್ರಿಷ್ಟುಪ್** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೨೬

ಮಂಡಲ—೧೦ ॥ ಅನುವಾಕ—೧೦ ॥ ಸೂಕ್ತ—೧೨೬ ॥

ಅಷ್ಟಕ—೮ ॥ ಅಧ್ಯಾಯ—೭ ॥ ವರ್ಗ— ೧೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

॥ ಋಷಿಃ—ಕುಲ್ಮಲಬರ್ಹಿಷಃ ಶೈಲೂಷಿರಂಹೋಮುಗ್ವಾ ವಾಮದೇವ್ಯಃ ॥

॥ ದೇವತಾ—ವಿಶ್ವೇದೇವಾಃ ॥

॥ ಛಂದಃ—೧-೭ ಉಪರಿಷ್ಟಾದ್ಬೃಹತೀ । ೮. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ನ ತಮಂಹೋ ನ ದುರಿತಂ ದೇವಾಸೋ ಅಷ್ಟ ಮರ್ತ್ಯಂ ।**
**ಸಜೋಷಸೋ ಯಮರ್ಯಮಾ ಮಿತ್ರೋ ನಯಂತಿ ವರುಣೋ ಅತಿ ದ್ವಿಷಃ ॥ ೧ ॥**

॥ ಪದಪಾಠಃ ॥

**ನ । ತಂ । ಅಂಹಃ । ನ । ದುಃಽಇತಂ । ದೇವಾಸಃ । ಅಷ್ಟ । ಮರ್ತ್ಯಂ ।**
**ಸಽಜೋಷಸಃ । ಯಂ । ಅರ್ಯಮಾ । ಮಿತ್ರಃ । ನಯಂತಿ । ವರುಣಃ । ಅತಿ । ದ್ವಿಷಃ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ದೇವಾಸೋ ದೇವಾಃ ॥ ಆಜ್ಜಸೇರಸುಕ್ ॥ ತಂ ಮರ್ತ್ಯಂ ಮನುಷ್ಯಮಂಹಃ ಪಾಪಂ ದುರಿತಂ ತತ್ಫಲರೂಪಂ ದುರ್ಗಮನಂ ಚ ನಾಷ್ಟ । ನ ಪ್ರಾಪ್ನೋತಿ ॥ ಅಶೇಶ್ಛಾಂದಸೇ ಲುಙಿ ಝಲೋ ಝಲೀತಿ ಸಿಚೋ ಲೋಪಃ । ಅಡಭಾವಶ್ಛಾಂದಸಃ ॥ ಅರೀನ್ನಿಯಚ್ಛತೀತ್ಯರ್ಯಮಾ ಪ್ರಮೀತೇಸ್ತ್ರಾಯತೇ ಇತಿ ದೇವೋ ಮಿತ್ರಃ ಪಾಪಾನಾಂ ನಿವಾರಯಿತಾ ದೇವೋ ವರುಣಃ । ಏತೇ ತ್ರಯೋ ದೇವಾಃ ಸಜೋಷಸಃ ಸಂಗತಾಃ ಸಮಾನಂ ಪ್ರೀಯಮಾಣಾ ವಾ ಭವಂತೋ ದ್ವಿಷೋ ದ್ವೇಷ್ಟ್ರೂನ್ ಶತ್ರೂನತಿಕ್ರಮ್ಯ ಯಂ ಸ್ತೋತಾರಂ ನಯಂತ್ಯಭಿಮತಂ ದೇಶಂ ಪ್ರಾಪಯಂತಿ ತಂ ನಾಷ್ಟೇತ್ಯನ್ವಯಃ ॥**

|| ಪ್ರತಿಪದಾರ್ಥ ||

**ದೇವಾಸಃ**—ಎಲೈ ದೇವತೆಗಳೇ | **ಅರ್ಯಮಾ**—(ಮರಣಭಯದಿಂದ ಕಾಪಾಡುವ) ಅರ್ಯಮಾ ಎಂಬ ದೇವನು | **ಮಿತ್ರಃ**—(ಪಾಪವನ್ನು ಪರಿಹರಿಸುವ) ಮಿತ್ರನೆಂಬ ದೇವನು | **ವರುಣಃ**—ವರುಣನೆಂಬ ದೇವನು ಈ ಮೂವರೂ | **ಸಜೋಷಸಃ**—ಒಟ್ಟಿಗೆ ಸೇರಿ ಸಮಾನ ಪ್ರೀತಿಯುಳ್ಳವರಾಗಿ | **ದ್ವಿಷಃ**—ಶತ್ರುಗಳನ್ನು | **ಅತಿ**—ಅತಿಕ್ರಮಿಸಿ ಎಂದರೆ ಪರಿಹರಿಸಿ | **ಯಂ**—ಯಾವ ಪುರುಷನನ್ನು | **ನಯಂತಿ**—ಅಭಿಮತಪ್ರದೇಶವನ್ನು ಎಂದರೆ ಸುರಕ್ಷಿತಪ್ರದೇಶಕ್ಕೆ | **ನಯಂತಿ**—ಒಯ್ಯುವರೋ | **ತಂ ಮರ್ತ್ಯಂ**—ಆ ಪುರುಷನನ್ನು | **ಅಂಹಃ**—ಪಾಪವಾಗಲಿ | **ದುರಿತಂ**—ದುಃಖವಾಗಲಿ | **ನ ಅಷ್ಟ**—ಹೊಂದುವುದಿಲ್ಲ.

|| ಭಾವಾರ್ಥ ||

ಎಲೈ ದೇವತೆಗಳೇ, ಅರ್ಯಮಾ, ಮಿತ್ರ, ವರುಣ ಎಂಬ ಈ ಮೂವರು ದೇವತೆಗಳೂ ಒಟ್ಟಾಗಿ ಸೇರಿ, ಸಮಾನ ಪ್ರೀತಿಯಿಂದ ಯಾವ ಪುರುಷನನ್ನು ಶತ್ರುಗಳಿಂದ ಕಾಪಾಡಿ ಅವನ ಇಷ್ಟ ಪ್ರದೇಶಕ್ಕೆ ಒಯ್ಯುವರೋ ಆ ಪುರುಷನಿಗೆ ಪಾಪವಾಗಲಿ, ದುಃಖವಾಗಲಿ ಪ್ರಾಪ್ತವಾಗುವುದಿಲ್ಲ.

English Translation

Neither sin nor sorrow, O gods, affect the man whom Aryaman Mitra, and Varuna, being alike pleased by him, conduct beyond (the reach) of) his enemies.

|| ಸಂಹಿತಾಪಾಠಃ ||

ತದ್ಧಿ ವಯಂ ವೃಣೀಮಹೇ ವರುಣ ಮಿತ್ರಾರ್ಯಮನ್ |

ಯೇನಾ ನಿರಂಹಸೋ ಯೂಯಂ ಪಾಥ ನೇಥಾ ಚ ಮರ್ತ್ಯಮತಿ ದ್ವಿಷಃ ||

|| ಪದಪಾಠಃ ||

ತತ್ | ಹಿ | ವಯಂ | ವೃಣೀಮಹೇ | ವರುಣ | ಮಿತ್ರ | ಅರ್ಯಮನ್ |

ಯೇನ | ನಿಃ | ಅಂಹಸಃ | ಯೂಯಂ | ಪಾಥ | ನೇಥ | ಚ | ಮರ್ತ್ಯಂ | ಅತಿ | ದ್ವಿಷಃ || ೨ ||

|| ಸಾಯಣಭಾಷ್ಯಂ ||

ಹಿರವಧಾರಣೇ | ತದ್ಧಿ ತದೇವ ರಕ್ಷಣಂ ವಯಂ ವೃಣೀಮಹೇ | ಪ್ರಾರ್ಥಯಾಮಹೇ || ಸತಿ ಶಿಷ್ಟೇಽಪಿ ವಿಕರಣಸ್ಯ ಸ್ವರೋ ಲಸಾರ್ವಧಾತುಕಸ್ವರಂ ನ ಬಾಧತೇ | ಮ ೬-೧-೧೫೮-೧೧ | ಇತಿ ವಚನಾತ್ತಿಙ ಏವ ಸ್ವರಃ ಶಿಷ್ಯತೇ | ಹಿಚೇತಿ ನಿಘಾತಪ್ರತಿಷೇಧಃ || ಹೇ ವರುಣ ಹೇ ಮಿತ್ರ ಹೇ

ಅರ್ಯಮನ್ ಯೇನ ರಕ್ಷಣೇನ ಮರ್ತ್ಯಂ ಸ್ತೋತಾರಮಂಹಸಃ ಪಾಪಾದ್ಯೂಯಂ ನಿಃ ಪಾಥ ನಿಃಶೇಷೇಣ ರಕ್ಷಥ ॥ ಪಾ ರಕ್ಷಣೇ ಆದಾದಿಕಃ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ ॥ ಯೇನ ಚ ರಕ್ಷಣೇನ ಮರ್ತ್ಯಂ ಮನುಷ್ಯಂ ಸ್ತೋತಾರಂ ದ್ವಿಷೋಽತಿ ನೇಥ ಅತೀತ್ಯ ನಯಥ ಅಭೀಷ್ಟಂ ಪ್ರಾಪಯಥ ತದ್ವೃಣೀಮಹ ಇತ್ಯನ್ವಯಃ ॥ ನಯತೇಶ್ಛಾಂದಸಃ ಶಪೋ ಲುಕ್ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಮಿತ್ರ**—ಮಿತ್ರನೇ । **ಅರ್ಯಮನ್**—ಅರ್ಯಮನೇ । **ಯೂಯಂ**—ನೀವು । **ಯೇನ**—ಯಾವ ನಿಮ್ಮ ರಕ್ಷಣೆಯಿಂದ । **ಮರ್ತ್ಯಂ**—ಸ್ತೋತ್ರಮಾಡುವಮಾನವನನ್ನು । **ಅಂಹಸಃ**—ಪಾಪದಿಂದ । **ನಿಃ ಪಾಥ**—ನಿಶ್ಶೇಷವಾಗಿ ರಕ್ಷಿಸುತ್ತೀರೋ । **ದ್ವಿಷಃ**—ಅವನ ಶತ್ರುಗಳನ್ನು । **ಅತಿ ನೇಥ**—ಅವನ ಬಳಿಯಿಂದ ಓಡಿಸುವರೋ । **ತತ್ ಹಿ**—ಅಂತಹ ರಕ್ಷಣೆಯನ್ನೇ । **ವಯಂ**—ನಾವು । **ವೃಣೀಮಹೇ**—ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಎಲೈ ವರುಣ, ಮಿತ್ರ ಅರ್ಯಮರೇ, ನೀವು ಯಾವ ನಿಮ್ಮ ರಕ್ಷಣೆಯಿಂದ ನಿಮ್ಮನ್ನು ಸ್ತುತಿಸುವ ಮಾನವನನ್ನು ಪಾಪದಿಂದ ರಕ್ಷಿಸುತ್ತಿರೋ ಮತ್ತು ಅವನ ಶತ್ರುಗಳನ್ನು ಅವನಿಂದ ದೂರವಾಗಿ ಓಡಿಸುತ್ತಿರೋ ಅಂತಹ ರಕ್ಷಣೆಯನ್ನೇ ನಾವು ನಿಮ್ಮಿಂದ ಪ್ರಾರ್ಥಿಸುತ್ತೇವೆ.

English Translation

We implore that (protection) of yours Varuna, Mitra, and Aryaman whereby you preserve a man from sin, and lead him beyond (the reach of) his enemies.

॥ ಸಂಹಿತಾಪಾಠಃ ॥

ತೇ ನೂನಂ ನೋಽಯಮೂತಯೇ ವರುಣೋ ಮಿತ್ರೋ ಅರ್ಯಮಾ ।
ನಯಿಷ್ಠಾ ಉ ನೋ ನೇಷಣಿ ಪರ್ಷಿಷ್ಠಾ ಉ ನಃ ಪರ್ಷಣ್ಯತಿ ದ್ವಿಷಃ ॥ ೩ ॥

॥ ಪದಪಾಠಃ ॥

ತೇ । ನೂನಂ । ನಃ । ಅಯಂ । ಊತಯೇ । ವರುಣಃ । ಮಿತ್ರಃ । ಅರ್ಯಮಾ ।
ನಯಿಷ್ಠಾಃ । ಊಂ ಇತಿ । ನಃ । ನೇಷಣಿ । ಪರ್ಷಿಷ್ಠಾಃ । ಊಂ ಇತಿ । ನಃ । ಪರ್ಷಣಿ । ಅತಿ । ದ್ವಿಷಃ ॥

|| ಸಾಯಣಭಾಷ್ಯಂ ||

**ಅಯಂ ವರುಣೋ ಮಿತ್ರಶ್ಚಾರ್ಯಮಾ ಚ ದೇವಾ ನೋಽಸ್ಮಾಕಮೂತಯೇ ರಕ್ಷಣಾಯ ನೂನಮವಶ್ಯಂ ಭವಂತು । ನೇಷಣಿ ನೇತವ್ಯೇ ವಿಷಯೇ ಹೇ ವರುಣಾದಯಃ ಯೂಯಂ ನೋಽಸ್ಮಾನ್ನಯಿಷ್ಟಾಃ । ನಯತ ॥ ವಚನವ್ಯತ್ಯಯಃ । ಯದ್ವಾ । ಪ್ರತ್ಯೇಕಾಭಿಪ್ರಾಯೇಣೈಕವಚನಂ । ಛಾಂದಸೋ ಲುಙ್ ॥ ಉಶಬ್ದಃ ಸಮುಚ್ಚಯೇ ಪದಪೂರಣಾರ್ಥೋ ವಾ । ಪರ್ಷಣಿ ಪಾರಯಿತವ್ಯೇ ವಿಷಯೇ ನೋಽಸ್ಮಾನ್ದ್ವಿಷೋಽತಿ ಪರ್ಷಿಷ್ಟಾಃ । ಅತಿಪಾರಯಥ ॥ ನಯಿಷ್ಟಾ ಇತಿವತ್ಪ್ರಕ್ರಿಯಾ ॥**

|| ಪ್ರತಿಪದಾರ್ಥ ||

**ಅಯಂ ವರುಣಃ**— ಈ ವರುಣದೇವನೂ । **ಮಿತ್ರಃ**— ಮಿತ್ರನೂ । **ಅರ್ಯಮಾ**— ಅರ್ಯಮನೂ । **ತೇ**— ಈ ಮೂವರೂ । **ನಃ**— ನಮ್ಮ । **ಊತಯೇ**— ರಕ್ಷಣಾರ್ಥವಾಗಿ । **ನೂನಂ**— ಅವಶ್ಯಕವಾಗಿರಲಿ (ಎಲೈ ವರುಣಾದಿಗಳೇ) ನೀವು । **ನೇಷಣಿ**— ನಾವು ಹೋಗಿ ಸೇರಬೇಕಾದ ಪ್ರದೇಶಕ್ಕೆ । **ನಃ**— ನಮ್ಮನ್ನು । **ನಯಿಷ್ಟಾಃ**— ಕರೆದೊಯ್ಯಿರಿ । **ಉ**— ಮತ್ತು । **ಪರ್ಷಣಿ**— ನಾವು ದಾಟಿಹೋಗಬೇಕಾದ ಪ್ರದೇಶಕ್ಕೆ । **ನಃ**— ನಮ್ಮನ್ನು । **ದ್ವಿಷಃ ಅತಿ**— ಶತ್ರುಗಳಿಂದ ದೂರವಾಗಿ । **ಪರ್ಷಿಷ್ಟಾಃ**— ದಾಟಿಸಿ ಒಯ್ಯಿರಿ.

|| ಭಾವಾರ್ಥ ||

ವರುಣ, ಮಿತ್ರ, ಅರ್ಯಮಾ ಎಂಬ ಈ ಮೂವರು ದೇವತೆಗಳೂ ನಮ್ಮ ರಕ್ಷಣಾರ್ಥವಾಗಿರಲಿ ಎಲೈ ವರುಣಾದಿದೇವತೆಗಳೇ, ನಾವು ಹೋಗಿ ಸೇರಬೇಕಾದ ಪ್ರದೇಶಕ್ಕೆ ನಮ್ಮನ್ನು ಕರೆದೊಯ್ಯಿರಿ ಮತ್ತು ನಾವು ದಾಟಿಹೋಗಬೇಕಾದ ಪ್ರದೇಶಕ್ಕೆ ನಮ್ಮನ್ನು ಶತ್ರುಗಳಿಂದ ದೂರವಾಗಿರುವಂತೆ ದಾಟಿಸಿ ಒಯ್ಯಿರಿ.

English Translation

May this Varuna and Mitra and Aryaman be our protection, may they lead us to the spot to which we should be led, and make us cross over to the spot to which we should cross over beyond (the reach of) our enemies.

|| ಸಂಹಿತಾಪಾಠಃ ||

ಯೂಯಂ ವಿಶ್ವಂ ಪರಿ ಪಾಥ ವರುಣೋ ಮಿತ್ರೋ ಅರ್ಯಮಾ ।
ಯುಷ್ಮಾಕಂ ಶರ್ಮಣಿ ಪ್ರಿಯೇ ಸ್ಯಾಮ ಸುಪ್ರಣೀತಯೋಽತಿ ದ್ವಿಷಃ ॥ ೪ ॥

|| ಪದಪಾಠಃ ||

ಯೂಯಂ । ವಿಶ್ವಂ । ಪರಿ । ಪಾಥ । ವರುಣಃ । ಮಿತ್ರಃ । ಅರ್ಯಮಾ ।
ಯುಷ್ಮಾಕಂ । ಶರ್ಮಣಿ । ಪ್ರಿಯೇ । ಸ್ಯಾಮ । ಸುಽಪ್ರನೀತಯಃ । ಅತಿ । ದ್ವಿಷಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ದೇವಾ ವರುಣಾದಯಃ ಯೂಯಂ ವಿಶ್ವಂ ಸರ್ವಂ ಜಗತ್ಪರಿ ಪಾಥ । ಪರಿತೋ ರಕ್ಷಥ । ಹೇ ಸುಪ್ರಣೀತಯಃ ಶೋಭನಪ್ರಣಯನಾ ಮಿತ್ರಾದಯಃ ಯುಷ್ಮಾಕಂ ಯುಷ್ಮದೀಯೇ ಯುಷ್ಮಾಭಿರ್ದತ್ತೇ ಪ್ರಿಯೇಽನುಕೂಲೇ ವೇದ್ಯೇ ಶರ್ಮಣಿ ಸುಖೇ ವಯಂ ಸ್ಯಾಮ । ಭವೇಮ । ದ್ವಿಷೋ ದ್ವೇಷ್ಟ್ರೂಂಶ್ಚಾತಿ ಕ್ರಾಮೇಮ ॥

॥ ಪ್ರತಿಪದಾರ್ಥ ॥

(ಎಲೈ ವರುಣಾದಿ ದೇವತೆಗಳೇ) **ಯೂಯಂ**—ನೀವು । **ವಿಶ್ವಂ**—ಸರ್ವ ಜಗತ್ತನ್ನು । **ಪರಿ**—ಸುತ್ತಲೂ । **ಪಾಥ**—ರಕ್ಷಿಸಿರಿ । **ಸುಪ್ರಣೀತಯಃ**—ಉತ್ತಮ ಮಾರ್ಗದರ್ಶಕರಾದ ಎಲೈ ಮಿತ್ರಾದಿಗಳೇ । **ಯುಷ್ಮಾಕಂ**—ನಿಮ್ಮ ಅಥವಾ ನಿಮಗೆ । **ಪ್ರಿಯೇ**—ಅನುಕೂಲವಾದ । **ಶರ್ಮಣಿ**—ಸುಖದಲ್ಲಿ । **ಸ್ಯಾಮ**—ನಾವು ಇರುವಂತಾಗಲಿ । **ದ್ವಿಷಃ**—ದ್ವೇಷಿಸುವ ಶತ್ರುಗಳನ್ನು । **ಅತಿ**—ನಾವು ಅತಿಕ್ರಮಿಸುವಂತಾಗಲಿ (ನಿಗ್ರಹಿಸುವಂತಾಗಲಿ).

॥ ಭಾವಾರ್ಥ ॥

ಎಲೈ ವರುಣಾದಿದೇವತೆಗಳೇ, ನೀವು ಸಮಸ್ತಜಗತ್ತನ್ನೂ ಸುತ್ತಲೂ ಚೆನ್ನಾಗಿ ರಕ್ಷಿಸಿರಿ. ಉತ್ತಮಮಾರ್ಗದರ್ಶಕರಾದ ಎಲೈ ಮಿತ್ರಾದಿಗಳೇ, ನಿಮಗೆ ಇಷ್ಟವಾದ ಸುಖದಲ್ಲಿ ನಾವು ಇರುವಂತಾಗಲಿ ಎಂದರೆ ನಿಮ್ಮ ಅನುಗ್ರಹದಿಂದ ನಾವು ಸುಖವಾಗಿರುವಂತಾಗಲಿ ಮತ್ತು ನಮ್ಮನ್ನು ದ್ವೇಷಿಸುವ ಶತ್ರುಗಳನ್ನು ನಾವು ನಿಗ್ರಹಿಸುವಂತಾಗಲಿ.

## English Translation.

You, Varuna, Mitra, Aryaman, protect the universe; may we abide in your blessed felicity, O excellent leaders, beyond (the reach of) our enemies.

॥ ಸಂಹಿತಾಪಾಠಃ ॥

ಆದಿತ್ಯಾಸೋ ಅತಿ ಸ್ರಿಧೋ ವರುಣೋ ಮಿತ್ರೋ ಅರ್ಯಮಾ ।
ಉಗ್ರಂ ಮರುದ್ಭೀ ರುದ್ರಂ ಹುವೇಮೇಂದ್ರಮಗ್ನಿಂ ಸ್ವಸ್ತಯೇಽತಿ ದ್ವಿಷಃ ॥

॥ ಪದಪಾಠಃ ॥

ಆದಿತ್ಯಾಸಃ । ಅತಿ । ಸ್ರಿಧಃ । ವರುಣಃ । ಮಿತ್ರಃ । ಅರ್ಯಮಾ ।

ಉಗ್ರಂ । ಮರುತ್ಽಭಿಃ । ರುದ್ರಂ । ಹುವೇಮ । ಇಂದ್ರಂ । ಅಗ್ನಿಂ । ಸ್ವಸ್ತಯೇ । ಅತಿ । ದ್ವಿಷಃ ॥ ೫ ॥

॥ ಸಾಯಣಭಾಷ್ಯಂ ॥

**ಆದಿತ್ಯಾಸೋಽದಿತೇಃ ಪುತ್ರಾ ವರುಣಾದಯೋ ದೇವಾಃ ಸ್ರಿಧೋ ಹಿಂಸಕಾಞ್ಛತ್ರೂನಸ್ಮಾನತಿ ನಯಂತು । ಮರುದ್ಭಿಃ ಪುತ್ರೈಃ ಸಹಿತಮುಗ್ರಮುದ್ಗೂರ್ಣತೇಜಸಂ ರುದ್ರಮಿಂದ್ರಮಗ್ನಿಂ ಚ ಸ್ವಸ್ತಯೇ ಕ್ಷೇಮಾಯ ಹುವೇಮ । ಆಹ್ವಯೇಮಹಿ ॥ ಹ್ವಯತೇರಾಶೀರ್ಲಿಙಿ ಬಹುಲಂ ಛಂದಸೀತಿ ಸಂಪ್ರಸಾರಣಂ। ಲಿಙ್ಯಾಶಿಷ್ಯಙ್ ॥ ಆಹೂತಾಸ್ತೇಽಸ್ಮಾನ್ದ್ವಿಷೋ ದ್ವೇಷ್ಟೄನತಿ ನಯಂತು ॥**

॥ ಪ್ರತಿಪದಾರ್ಥ ॥

**ಆದಿತ್ಯಾಸಃ**— ಅದಿತಿಪುತ್ರರಾದ । **ವರುಣಃ**— ವರುಣನೂ । **ಮಿತ್ರಃ**— ಮಿತ್ರನೂ । **ಅರ್ಯಮಾ**— ಅರ್ಯಮನೂ ಈ ಮೂವರೂ। **ಸ್ರಿಧಃ**— ಹಿಂಸಕರಾದ ಶತ್ರುಗಳನ್ನು । **ಅತಿ**— ಅತಿಕ್ರಮಿಸಿ (ಅವರಿಂದ ದೂರವಾಗಿ (**ನಯಂತು**— ನಮ್ಮನ್ನು ಒಯ್ಯಲಿ) । **ಮರುದ್ಭಿಃ**— ತನ್ನ ಪುತ್ರರಾದ ಮರುದ್ದೇವತೆಗಳಿಂದ ಸಹಿತನಾದವನೂ **ಉಗ್ರಂ**— ಮಹಾತೇಜಸ್ವಿಯೂ ಆದ । **ರುದ್ರಂ**— ರುದ್ರನನ್ನೂ । **ಇಂದ್ರಂ**— ಇಂದ್ರನನ್ನೂ । **ಅಗ್ನಿಂ**— ಅಗ್ನಿಯನ್ನೂ । **ಸ್ವಸ್ತಯೇ**— ನಮ್ಮ ಕ್ಷೇಮಕ್ಕಾಗಿ । **ಹುವೇಮ**— ಪ್ರಾರ್ಥಿಸಿ ಕರೆಯುತ್ತೇವೆ । **ದ್ವಿಷಃ**— ನಮ್ಮ ಶತ್ರುಗಳನ್ನು । **ಅತಿ**— ಅತಿಕ್ರಮಿಸಿ । (**ನಯಂತು**— ನಮ್ಮನ್ನು ಒಯ್ಯಲಿ).

॥ ಭಾವಾರ್ಥ ॥

ಅದಿತಿಪುತ್ರರಾದ ಮಿತ್ರ, ವರುಣ, ಅರ್ಯಮಾ ಎಂಬ ಈ ದೇವತೆಗಳು ನಮ್ಮನ್ನು ನಮ್ಮ ಶತ್ರುಗಳ ಕೈಗೆ ಸಿಕ್ಕದಂತೆ ದೂರವಾಗಿ ಒಯ್ಯಲಿ. ತನ್ನ ಪುತ್ರರಾದ ಮರುದ್ಗಣಗಳಿಂದ ಸಹಿತನೂ ಅತಿಶಯವಾದ ತೇಜಸ್ಸಿನಿಂದ ಕೂಡಿರುವವನೂ ಆದ ರುದ್ರನನ್ನೂ ಇಂದ್ರನನ್ನೂ ಅಗ್ನಿಯನ್ನೂ ನಮ್ಮ ಕ್ಷೇಮಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ. ಅವರು ನಮ್ಮ ಶತ್ರುಗಳಿಂದ ದೂರವಾಗಿ ನಮ್ಮನ್ನು ಒಯ್ಯಲಿ.

## English Translation.

May the Adityas, Varuna, Mitra, Aryaman, (lead us) beyond (the reach of) the malignant; let us invoke the fierce Rudra with the Maruts, and Indra and Agni for our welfare, that they may place us) beyond (the reach of) our enemies.

॥ ಸಂಹಿತಾಪಾಠಃ ॥

**ನೇತಾರ ಊ ಷು ಣಸ್ತಿರೋ ವರುಣೋ ಮಿತ್ರೋ ಅರ್ಯಮಾ ।**

**ಅತಿ ವಿಶ್ವಾನಿ ದುರಿತಾ ರಾಜಾನಶ್ಚರ್ಷಣೀನಾಮತಿ ದ್ವಿಷಃ ॥ ೬ ॥**

|| ಪದಪಾಠಃ ||

ನೇತಾರಃ | ಊಂ ಇತಿ | ಸು | ನಃ | ತಿರಃ | ವರುಣಃ | ಮಿತ್ರಃ | ಅರ್ಯಮಾ |

ಅತಿ | ವಿಶ್ವಾನಿ | ದುಃऽಇತಾ | ರಾಜಾನಃ | ಚರ್ಷಣೀನಾಂ | ಅತಿ | ದ್ವಿಷಃ || ೬ ||

|| ಸಾಯಣಭಾಷ್ಯಂ ||

**ನೇತಾರೋ ನಯನಕುಶಲಾಃ || ನಯತೇಃ ಸಾಧುಕಾರಿಣಿ ತೃನ್ || ವರುಣಾದಯೋ ದೇವಾ ನೋऽಸ್ಮಾಕಂ ಪಾಪಾನಿ ಸು ಸುಷ್ಠು ತಿರಸ್ತಿರೋಧಾನಮದರ್ಶನಂ ನಯಂತು | ಉ ಇತಿ ಪೂರಣಃ | ಚರ್ಷಣೀನಾಂ ಮನುಷ್ಯಾಣಾಂ ರಾಜಾನಃ ಸ್ವಾಮಿನೋ ವರುಣಾದಯೋ ದೇವಾ ವಿಶ್ವಾನಿ ಸರ್ವಾಣಿ ದುರಿತಾ ದುರಿತಾನಿ ದುರ್ಗಮನಾನಿ ಪಾಪಫಲರೂಪಾಣ್ಯಸ್ಮಾನತಿ ನಯಂತು | ದ್ವಿಷೋ ದ್ವೇಷ್ಟ್ರ್ಯಾಞ್ಛತ್ರೂಂಶ್ಚಾತಿ ನಯಂತು || ನಾಮನ್ಯತರಸ್ಯಾಮಿತಿ ಚರ್ಷಣಿಶಬ್ದಾತ್ಪರಸ್ಯ ನಾಮ ಉದಾತ್ತತ್ವಂ ||**

|| ಪ್ರತಿಪದಾರ್ಥ ||

**ನೇತಾರಃ**— ಒಳ್ಳೆಯ ಮಾರ್ಗದರ್ಶಕರಾದ | **ವರುಣಃ**—ವರುಣನೂ | **ಮಿತ್ರಃ**—ಮಿತ್ರನೂ | **ಅರ್ಯಮಾ**—ಅರ್ಯಮನೂ | **ನಃ**—ನಮ್ಮ ಪಾಪಗಳನ್ನು | **ಸು**—ಚೆನ್ನಾಗಿ | **ತಿರಃ**—ಕಾಣಿಸದಂತೆ ಪರಿಹರಿಸಲಿ | **ಉ**—ಮತ್ತು | **ಚರ್ಷಣೀನಾಂ**—ಮಾನವರಿಗೆ | **ರಾಜಾನಃ**—ಪ್ರಭುಗಳಾದ ವರುಣಾದಿದೇವತೆಗಳು| **ವಿಶ್ವಾನಿ** —ಸಮಸ್ತವಾದ | **ದುರಿತಾನಿ**—ದುಃಖಗಳನ್ನು | **ಅತಿ**—ಹೋಗಲಾಡಿಸಲಿ | **ದ್ವಿಷಃ**—ಶತ್ರುಗಳನ್ನು| **ಅತಿ**—ದೂರವಾಗಿ ಓಡಿಸಲಿ.

|| ಭಾವಾರ್ಥ ||

ಮಾನವರನ್ನು ಒಳ್ಳೆಯ ಮಾರ್ಗದಲ್ಲಿ ಒಯ್ಯುವ ವರುಣ, ಮಿತ್ರ, ಅರ್ಯಮಾ ಎಂಬ ಈ ದೇವತೆಗಳು ನಮ್ಮ ಪಾಪಗಳನ್ನು ನಿಶ್ಶೇಷವಾಗಿ ಪರಿಹರಿಸಲಿ ಮತ್ತು ಮಾನವರಿಗೆ ಪ್ರಭುಗಳಾದ ಈ ವರುಣಾದಿದೇವತೆಗಳು ನಮ್ಮ ಸಮಸ್ತ ದುಃಖಗಳನ್ನು ಪರಿಹರಿಸಲಿ ಮತ್ತು ನಮ್ಮ ಶತ್ರುಗಳನ್ನು ದೂರವಾಗಿ ಓಡಿಸಲಿ.

## English Translation.

May the leaders Varuna, Mitra, Aryaman, (lead) us apart (from wickedness), may the kings of men lead us beyond all calamities, beyond (the reach of) of our enemies.

|| ಸಂಹಿತಾಪಾಠಃ ||

ಶುನಮಸ್ಮಭ್ಯಮೂತಯೇ ವರುಣೋ ಮಿತ್ರೋ ಅರ್ಯಮಾ |

ಶರ್ಮ ಯಚ್ಛಂತು ಸಪ್ರಥ ಆದಿತ್ಯಾಸೋ ಯದೀಮಹೇ ಅತಿ ದ್ವಿಷಃ || ೭ ||

॥ ಪದಪಾಠಃ ॥

ಶುನಂ । ಅಸ್ಮಭ್ಯಂ । ಊತಯೇ । ವರುಣಃ । ಮಿತ್ರಃ । ಅರ್ಯಮಾ ।

ಶರ್ಮ । ಯಚ್ಛಂತು । ಸಽಪ್ರಥಃ । ಆದಿತ್ಯಾಸಃ । ಯತ್ । ಈಮಹೇ । ಅತಿ । ದ್ವಿಷಃ ॥ ೭ ॥

॥ ಸಾಯಣಭಾಷ್ಯಂ ॥

ವರುಣಾದಯೋ ದೇವಾ ಊತಯೇ ರಕ್ಷಾಯೈ ಶುನಂ ಸುಖಮಸ್ಮಭ್ಯಂ ಸ್ತೋತೃಭ್ಯಃ ಪ್ರಯಚ್ಛಂತು । ತಥಾದಿತ್ಯಾಸೋಽದಿತೇಃ ಪುತ್ರಾಸ್ತೇ ಸಪ್ರಥಃ ಸರ್ವತಃ ಪೃಥು ವಿಸ್ತೀರ್ಣಂ ಶರ್ಮ ಸುಖಂ ಚ ಯಚ್ಛಂತು । ಅಸ್ಮಭ್ಯಂ ದದತು । ಯಚ್ಛರ್ಮ ವಯಮೀಮಹೇ ಯಾಚಾಮಹೇ । ದ್ವಿಷಶ್ಚಾತಿ ನಯಂತು ॥

॥ ಪ್ರತಿಪದಾರ್ಥ ॥

**ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ ಈ ಮೂವರೂ । **ಊತಯೇ**—ನಮ್ಮ ರಕ್ಷಣಾರ್ಥವಾಗಿ । **ಶುನಂ**—ಸುಖವನ್ನು । **ಅಸ್ಮಭ್ಯಂ**—ಸ್ತೋತ್ರಮಾಡುತ್ತಿರುವ ನಮಗೆ ಕೊಡಲಿ । **ಆದಿತ್ಯಾಸಃ**—ಅದಿತಿ ಪುತ್ರರಾದ ಈ ವರುಣಾದಿಗಳು । **ಸಪ್ರಥಃ**—ವಿಸ್ತೀರ್ಣವಾದ ಸಮಸ್ತ ಪ್ರದೇಶಗಳಲ್ಲಿಯೂ । **ಯತ್**—ಯಾವ ಸುಖವನ್ನು । **ಈಮಹೇ**—ನಾವು ಯಾಚಿಸುತ್ತೇವೆಯೋ ಅಂತಹ । **ಶರ್ಮ**—ಸುಖವನ್ನು । **ಯಚ್ಛಂತು**—ನಮಗೆ ಕೊಡಲಿ । **ದ್ವಿಷಃ**—ನಮ್ಮ ಶತ್ರುಗಳನ್ನು । **ಅತಿ**—ದೂರ ಓಡಿಸಲಿ.

॥ ಭಾವಾರ್ಥ ॥

ವರುಣ, ಮಿತ್ರ, ಅರ್ಯಮಾ ಎಂಬ ಈ ದೇವತೆಗಳು ನಮ್ಮ ರಕ್ಷಣಾರ್ಥವಾಗಿ ಅವರನ್ನು ಸ್ತೋತ್ರ ಮಾಡುವ ನಮಗೆ ಸುಖವನ್ನು ಕೊಡಲಿ. ಅದಿತಿಪುತ್ರರಾದ ಈ ವರುಣಾದಿಗಳು ವಿಸ್ತೀರ್ಣವಾದ ಈ ಸಮಸ್ತ ಪ್ರದೇಶಗಳಲ್ಲಿಯೂ ನಾವು ಯಾವವಿಧವಾದ ಸುಖವನ್ನು ಯಾಚಿಸುತ್ತೇವೆಯೋ ಅಂತಹ ಸುಖವನ್ನು ನಮಗೆ ಕೊಡಲಿ. ನಮ್ಮ ಶತ್ರುಗಳನ್ನು ದೂರಕ್ಕೆ ಓಡಿಸಲಿ.

English Translation

May Varuna, Mitra, Aryaman (bestow) upon us felicity for our protection; may the Adityas grant us that adundant happiness which we solicit, (and lead us) beyond (the reach of) our enemies.

॥ ಸಂಹಿತಾಪಾಠಃ ॥

ಯಥಾ ಹ ತ್ಯದ್ವಸವೋ ಗೌರ್ಯಂ ಚಿತ್ಪದಿ ಷಿತಾಮಮುಂಚತಾ ಯಜತ್ರಾಃ ।

ಏವೋ ಷ್ವ೧ ಸ್ಮನ್ಮುಂಚತಾ ವ್ಯಂಹಃ ಪ್ರ ತಾರ್ಯಗ್ನೇ ಪ್ರತರಂ ನ ಆಯುಃ॥

॥ ಪದಪಾಠಃ ॥

ಯಥಾ । ಹ । ತ್ಯತ್ । ವಸವಃ । ಗೌರ್ಯಂ । ಚಿತ್ । ಪದಿ । ಸಿತಾಂ । ಅಮುಂಚತ । ಯಜತ್ರಾಃ । ಏವೋ ಇತಿ । ಸು । ಅಸ್ಮತ್ । ಮುಂಚತ । ವಿ । ಅಂಹಃ । ಪ್ರ । ತಾರಿ । ಅಗ್ನೇ । ಪ್ರಽತರಂ । ನಃ । ಆಯುಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ವಸವೋ ವಾಸಕಾ ಹೇ ಯಜತ್ರಾ ಯಾಗಾರ್ಹಾ ಮಿತ್ರಾದಯೋ ದೇವಾಃ ॥ ಅಮಿನಕ್ಷೀತ್ಯಾದಿನಾ । ಉ. ೩-೧೦೫ । ಯಜೇರತ್ರನ್ಪ್ರತ್ಯಯಃ ॥ ತ್ಯತ್ ತೇ ಪ್ರಸಿದ್ಧಾ ಯೂಯಂ ॥ ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ ॥ ಯಥಾ ಹ ಯಥಾ ಖಲು ಪದಿ ಪಾದೇ ಸಿತಾಂ ಬದ್ಧಾಂ ॥ ಪದ್ದನ್ನಿತ್ಯಾದಿನಾ ಪಾದಶಬ್ದಸ್ಯ ಪದಾದೇಶಃ । ಊಡಿದಂಪದಾದೀತ್ಯಾದಿನಾ ಸಪ್ತಮ್ಯಾ ಉದಾತ್ತತ್ವಂ । ಷಿಞ್ ಬಂಧನ ಇತ್ಯಸ್ಮಾನ್ನಿಷ್ಠಾ ॥ ಈದೃಶೀಂ ಗೌರ್ಯಂ ಗೌರೀಂ ಗೌರವರ್ಣಾಂ ಸೋಮಕ್ರಯಣೀಂ ಗಾಂ ॥ ಷಿದ್ಗೌರಾದಿಭ್ಯಶ್ಚೇತಿ ಙೀಷ್ । ಅಮಿ ಪೂರ್ವ ಇತ್ಯತ್ರ ವಾ ಛಂದಸೀತ್ಯನುವರ್ತನಾತ್ಪೂರ್ವರೂಪಸ್ಯ ಪೂರ್ವಸವರ್ಣದೀರ್ಘಸ್ಯ ಚಾಭಾವೇ ಯಣ್ । ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ ॥ ಈದೃಶೀಂ ಗಾಮಮುಂಚತ ಯಥಾ ಖಲು ಯೂಯಂ ವಿಶ್ವಾವಸೋರ್ಗಂಧರ್ವಾನ್ಮೋಚಿತವಂತಃ ಏವೋ ಏವಮೇವಾಸ್ಮದಸ್ಮತ್ತೋಽಂಹಃ ಪಾಪಂ ಸುಷ್ಠು ವಿ ಮುಂಚತ । ವಿಶ್ಲೇಷಯತ । ಹೇ ಅಗ್ನೇ ನೋಽಸ್ಮಾಕಮಾಯುರ್ಜೀವನಂ ಪ್ರತರಂ ಪ್ರ ತಾರಿ । ಪ್ರಕರ್ಷೇಣ ತ್ವಯಾ ಪ್ರವರ್ಧತಾಂ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ ॥ ಪ್ರಶಬ್ದಾತ್ತರಪ್ಯಮು ಚ ಛಂದಸೀತ್ಯಮುಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ವಸವಃ**—ವಸತಿದಾಯಕರಾದ ಅಥವಾ ಎಲ್ಲೆಲ್ಲೂ ವಾಸಿಸುವವರೂ | **ಯಜತ್ರಾಃ**—ಯಾಗಾರ್ಹರಾದವರೂ ಆದ ಎಲೈ ಮಿತ್ರಾದಿದೇವತೆಗಳೇ | **ತ್ಯತ್**—ಪ್ರಸಿದ್ಧರಾದ ನೀವು | **ಪದಿ**—ಕಾಲಿನಲ್ಲಿ | **ಸಿತಾಂ**—(ಹಗ್ಗದಿಂದ) ಕಟ್ಟಿರುವ | **ಗೌರ್ಯಂ ಚಿತ್**—ಗೌರವರ್ಣವುಳ್ಳ ಗೋವನ್ನು | **ಯಥಾ ಹ**—ಯಾವ ಪ್ರಕಾರವಾಗಿ | **ಅಮುಂಚತ**—ಬಿಡಿಸಿದಿರೋ | **ಏವೋ**—ಅದೇ ಪ್ರಕಾರವಾಗಿ | **ಅಸ್ಮತ್**—ನಮ್ಮಿಂದ | **ಅಂಹಃ**—ನಮ್ಮ ಪಾಪಗಳನ್ನು | **ಸು**—ಚೆನ್ನಾಗಿ | **ವಿ ಮುಂಚತ**—ಬಿಡುಗಡೆಮಾಡಿ (ಪರಿಹರಿಸಿ) | **ಅಗ್ನೇ**—ಎಲೈ ಅಗ್ನಿಯೇ | **ನಃ**—ನಮ್ಮ | **ಆಯುಃ**—ಆಯುಸ್ಸು (ಜೀವಿಸುವ ಕಾಲವು) | **ಪ್ರತರಂ**—ವಿಸ್ತಾರವಾಗುವಂತೆ ದೀರ್ಘಕಾಲದವರೆಗೆ | **ಪ್ರ ತಾರಿ**—ನಿನ್ನಿಂದ ಅಭಿವೃದ್ಧಿಪಡಿಸಲ್ಪಡಲಿ.

|| ಭಾವಾರ್ಥ ||

ವಸತಿದಾಯಕರಾದ ಅಥವಾ ಸರ್ವವ್ಯಾಪ್ತರಾದವರೂ, ಯಾಗಾರ್ಹರೂ ಆದ ಎಲೈ ಮಿತ್ರಾದಿದೇವತೆಗಳೇ ಪ್ರಸಿದ್ಧರಾದ ನೀವು ಹಗ್ಗದಿಂದ ಕಾಲನ್ನು ಕಟ್ಟಿರುವ ಗೌರವರ್ಣವುಳ್ಳ ಗೋವನ್ನು ಯಾವರೀತಿ ಬಿಡಿಸಿದರೋ ಅದೇರೀತಿ ನಮ್ಮಿಂದ ನಮ್ಮ ಪಾಪಗಳನ್ನು ಪರಿಹಾರಮಾಡಿ. ಎಲೈ ಅಗ್ನಿಯೇ, ನಾವು ಬಹುಕಾಲ ಜೀವಿಸುವಂತೆ ನಮ್ಮ ಆಯುಃ ಪ್ರಮಾಣವನ್ನು ವೃದ್ಧಿಪಡಿಸು (ಹೆಚ್ಚಿಸು)

English Translation

As you, adorable Vasus, set free the cow fastened by her foot, even so remove sin away from us, and prolong, Agni, our protracted life.

|| ವಿಶೇಷವಿಷಯಗಳು ||

ಹಿಂದೆ ಸೋಮವು ಸ್ವರ್ಗದಲ್ಲಿದ್ದಾಗ ಅದನ್ನು ತರುವುದಕ್ಕಾಗಿ ದೇವತೆಗಳು ಛಂದಸ್ಸುಗಳನ್ನು ಪ್ರಾರ್ಥಿಸಲು ಅವುಗಳಲ್ಲಿ ಗಾಯತ್ರೀ ಛಂದಸ್ಸು ಶ್ಯೇನಪಕ್ಷಿರೂಪದಿಂದ ಸೋಮಲತೆಗಳನ್ನು ಭೂಮಿಗೆ ತಂದಿತು. ತರುವ ಸಮಯದಲ್ಲಿ ವಿಶ್ವಾವಸುವೆಂಬ ಗಂಧರ್ವನು ಆ ಸೋಮಲತೆಗಳನ್ನು ದಾರಿಯಲ್ಲಿಯೇ ಅಪಹರಿಸಿದನು. ಆಗ ದೇವತೆಗಳು ಒಂದು ಗೌರವರ್ಣದ ಗೋವನ್ನು ವಿಶ್ವಾವಸುವಿಗೆ ಕೊಟ್ಟು ಅವನಿಂದ ಸೋಮಲತೆಗಳನ್ನು ಕ್ರಯ ಮೂಲಕ ಹಿಂದಕ್ಕೆ ಪಡೆದರು. ಸೋಮಲತೆಗೆ ಬದಲಾಗಿ ತಾನು ಕೊಂಡಿದ್ದ ಗೋವನ್ನು ಆ ಗಂಧರ್ವನು ಅದರ ಕಾಲಿಗೆ ಹಗ್ಗವನ್ನು ಕಟ್ಟಿ ಬಂಧಿಸಿ ತನ್ನಲ್ಲಿಟ್ಟುಕೊಂಡಿದ್ದನು. ಆ ಗೋವಿನ ಪ್ರಾರ್ಥನೆಯಂತೆ ವರುಣಮಿತ್ರಾರ್ಯಮರೆಂಬ ವಿಶ್ವೇದೇವತೆಗಳು ಆ ಗೋವಿನ ಪಾಶವನ್ನು ಬಿಡಿಸಿ ಅದನ್ನು ಬಂಧಮುಕ್ತವನ್ನಾಗಿ ಮಾಡಿದರೆಂಬ ಪೂರ್ವೇತಿಹಾಸವಿದೆ. ಅದನ್ನೇ ಇಲ್ಲಿ **ಗೌರ್ಯಂ ಚಿತ್ಪದಿ ಷಿತಾಮಮುಂಚತ** ಎಂಬ ವಾಕ್ಯದಿಂದ ನಿರ್ದೇಶಿಸಿದೆ.

## ನೂರ ಇಪ್ಪತ್ತೇಳನೆಯ ಸೂಕ್ತವು



### ಪೀಠಿಕೆ

ಈ ಸೂಕ್ತದಲ್ಲಿ ರಾತ್ರಿಯನ್ನು ಸ್ತುತಿಸಲಾಗಿದೆ. ರಾತ್ರಿಯನ್ನು ಸ್ತುತಿಸುವ ಋಕ್ಕುಗಳು ಇತರ ಸೂಕ್ತಗಳಲ್ಲಿ ಅಲ್ಲಲ್ಲಿ ಇದ್ದರೂ ರಾತ್ರಿಯನ್ನು ಸ್ತುತಿಸುವ ಪೂರ್ತಿಯಾದ ಸೂಕ್ತವು ಇದನ್ನು ಬಿಟ್ಟರೆ ಬೇರೆ ಇಲ್ಲ. ಈ ಸೂಕ್ತದಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತದ ಅಂತ್ಯದಲ್ಲಿ ಪಠಿಸಬೇಕಾದ ಕೆಲವು ಖಿಲ (ಪರಿಶಿಷ್ಟ ಮಂತ್ರಗಳಲ್ಲಿಯೂ) ಮಂತ್ರಗಳಲ್ಲಿಯೂ ರಾತ್ರಿಯನ್ನು ಸ್ತುತಿಸಲಾಗಿದೆ ಈ ಖಿಲಮಂತ್ರಗಳಲ್ಲಿ ಕೆಲವು ಬಹಳ ಪ್ರಾಚೀನವಾದವುಗಳೆಂದು ಕಂಡುಬರುತ್ತವೆ. ಏಕೆಂದರೆ ರಾತ್ರಿಶಬ್ದಾರ್ಥವನ್ನು ವಿವರಿಸುವಾಗ ಉದಾಹರಣೆಗಾಗಿ ಯಾಸ್ಕರು ಈ ಖಿಲಮಂತ್ರಗಳಲ್ಲಿ ಒಂದನ್ನು ಉದಾಹರಿಸಿ ಅದಕ್ಕೆ ನಿರುಕ್ತವನ್ನು ಹೇಳಿದಾರೆ. ಆದ್ದರಿಂದ ಈ ಖಿಲ

ಮಂತ್ರಗಳು ಬಹು ಹಿಂದಿನ ಕಾಲದಲ್ಲಿಯೂ ಎಂದರೆ ಯಾಸ್ಕರ ಕಾಲದಲ್ಲಿಯೂ ಬಳಕೆಯಲ್ಲಿದ್ದವೆಂದು ಹೇಳಬಹುದು. ಈಗಲೂ ಈ ಸೂಕ್ತವನ್ನೂ ಇದಕ್ಕೆ ಸೇರಿದ ಕೆಲವು ಖಿಲಮಂತ್ರಗಳನ್ನು ಸೇರಿಸಿ ರಾತ್ರಿಸೂಕ್ತವೆಂದು ಪಠಿಸುವುದು ರೂಢಿಯಲ್ಲಿದೆ. ಯಾಸ್ಕರು ರಾತ್ರಿಶಬ್ದದ ನಿರ್ವಚನವನ್ನು ಈ ರೀತಿ ವಿವರಿಸುತ್ತಾರೆ—

**ರಾತ್ರಿಃ ಕಸ್ಮಾತ್ ಪ್ರರಮಯತಿ ಭೂತಾನಿ ನಕ್ತಂಚಾರೀಣ್ಯುಪರಮಯತೀತರಾಣಿ ಧ್ರುವೀಕರೋತಿ । ರಾತೇರ್ವಾ ಸ್ಯಾದ್ದಾನಕರ್ಮಣಃ ಪ್ರದೀಯಂತೇಽಸ್ಯಾಮವಶ್ಯಾಯಾಃ ॥**

(ನಿ. ೨-೧೮)

ರಾತ್ರಿ ಎಂದರೇನು ? ಆ ಶಬ್ದವು ಹೇಗೆ ಉಂಟಾಯಿತು ಎಂದರೆ—

**ಪ್ರರಮಯತಿ ಭೂತಾನಿ ನಕ್ತಂ ಚಾರೀಣಿ**- ಈ ರಾತ್ರಿಯು ಪ್ರಾಪ್ತವಾದಾಗ ಕೆಲವು ಪ್ರಾಣಿಗಳನ್ನು ಎಂದರೆ ಅರಣ್ಯದ ಕಾಡುಮೃಗಗಳನ್ನೂ, ಪಿಶಾಚಾದಿಗಳನ್ನೂ ರಾತ್ರಿಕಾಲದಲ್ಲಿ ಸಂಚರಿಸುವ ಅಸುರರನ್ನೂ ಸಂತೋಷಗೊಳಿಸುತ್ತದೆ. ಇವುಗಳ ಸಂಚಾರವೂ, ವಿಹಾರವೂ ರಾತ್ರಿಕಾಲದಲ್ಲಿಯೇ ನಡೆಯುವುದರಿಂದ ಹಗಲು ಕಳೆದು ರಾತ್ರಿಯು ಪ್ರಾಪ್ತವಾದಾಗ ಈ ಭೂತಗಳು ಸ್ವಾಭಾವಿಕವಾಗಿ ಸಂತೋಷಪಡುತ್ತವೆ. ಆದ್ದರಿಂದ ರಾತ್ರಿಯು ಕೆಲವು ಭೂತಗಳನ್ನೂ ರಾತ್ರಿಕಾಲದಲ್ಲಿ ಸಂಚರಿಸುವ ಪ್ರಾಣಿಗಳನ್ನೂ ರಮಿಸುತ್ತದೆ ಎಂದು ಇಲ್ಲಿ ಹೇಳಿದೆ

**ಉಪರಮಯತೀತರಾಣಿ ಧ್ರುವೀಕರೋತಿ**— ಹಾಗೆಯೇ ರಾತ್ರಿಯು ಪ್ರಾಪ್ತವಾದೊಡನೆ ಇತರ ಪ್ರಾಣಿಗಳು ಎಂದರೆ ಮನುಷ್ಯಾದಿಗಳು ತಮ್ಮತಮ್ಮ ಕೆಲಸಕಾರ್ಯಗಳನ್ನು ನಿಲ್ಲಿಸಿ ವಿರಾಮದಿಂದಿರುವಂತೆ ಮಾಡುತ್ತದೆ. ರಾತ್ರಿಕಾಲದಲ್ಲಿ ಬೆಳಕಿಲ್ಲದಿರುವುದರಿಂದ ಕಣ್ಣಿನಿಂದ ನೋಡುವುದಕ್ಕೆ ಸಾಧ್ಯವಿರುವುದಿಲ್ಲ ಆದ್ದರಿಂದ ಮನುಷ್ಯಾದಿಗಳು ಆ ರಾತ್ರಿಕಾಲದಲ್ಲಿ ಏನನ್ನೂ ಮಾಡದೆ ಒಂದೆಡೆ ಸ್ಥಿರವಾಗಿ ನಿಲ್ಲುವರು ಎಂದರೆ ನಿದ್ರಿಸುವರು. ಸಂಚಾರಾದಿಗಳನ್ನು ಮಾಡುವುದಿಲ್ಲ ಎಂದರ್ಥವು.

**ರಾತೇರ್ವಾ ಸ್ಯಾದ್ದಾನಕರ್ಮಣಃ ಪ್ರದೀಯಂತೇಽಸ್ಯಾಮವಶ್ಯಾಯಾಃ**— ಈ ರಾತ್ರಿಶಬ್ದವು ಕೊಡು ಎಂಬರ್ಥವುಳ್ಳ ರಾ-ದಾನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಏನನ್ನು ಕೊಡುವುದು ಎಂದರೆ ರಾತ್ರಿಕಾಲದಲ್ಲಿ ಸೂರ್ಯನ ಶಾಖವಿಲ್ಲದ್ದರಿಂದ ಅಂತರಿಕ್ಷದಿಂದ ಹಿಮವು ಬೀಳುವುದು. ಅವಶ್ಯಕವಾಗಿ ಬಿದ್ದೇಬೀಳುವ ಈ ಹಿಮದ ದಾನ ಅಥವಾ ಉತ್ಪತ್ತಿಯಿರುವುದರಿಂದ ಇದಕ್ಕೆ ರಾತ್ರಿಯೆಂದು ಹೆಸರು ಎಂದು ನಿರ್ವಚನಾಭಿಪ್ರಾಯವು.

**ತಸ್ಯೈಷಾ ಭವತಿ । ಆ ರಾತ್ರಿ ಪಾರ್ಥಿವಂ ರಜಃ ಪಿತುರಪ್ರಾಯಿ ಧಾಮಭಿಃ । ದಿವಃ ಸದಾಂಸಿ ಬೃಹತೀ ವಿ ತಿಷ್ಠಸ ಆ ತ್ವೇಷಂ ವರ್ತತೇ ತಮಃ ॥ ಆ ಪೂಪುರಸ್ತ್ವಂ ರಾತ್ರಿ ಪಾರ್ಥಿವಂ ರಜಃ—ಸ್ಥಾನೈರ್ಮಧ್ಯಮಸ್ಯ ದಿವಃ ಸದಾಂಸಿ ಬೃಹತೀ ಮಹತೀ ವಿತಿಷ್ಠಸ ಆವರ್ತತೇ ತ್ವೇಷಂ ತಮೋರಜಃ ॥**

(ನಿ. ೯-೨೯)

ರಾತ್ರಿಶಬ್ದಪ್ರಯೋಗವಿರುವ ಮತ್ತು ರಾತ್ರಿಯನ್ನು ಸ್ತುತಿಸುವ ಈ ಋಕ್ಕನ್ನು ಇಲ್ಲಿ ಉದಾಹರಣೆಯಾಗಿ ಕೊಡಲಾಗಿದೆ. ಆ ರಾತ್ರಿ ಎಂಬ ಈ ಮಂತ್ರವು ಋಗ್ವೇದಸಂಹಿತೆಯಲ್ಲಿಲ್ಲ. ರಾತ್ರಿಯನ್ನು ಸ್ತುತಿಸುವ ೧೦ ನೇ

ಮಂಡಲದ ೧೨೭ ನೇ ಸೂಕ್ತಕ್ಕೆ ಸೇರಿದಂತೆ ಇರುವ ಖಿಲಮಂತ್ರಗಳಲ್ಲಿ (೨೬ ನೇ ಖಿಲಸೂಕ್ತದ ಮೊದಲನೆಯ ಮಂತ್ರ) ಉಕ್ತವಾಗಿದೆ.

**ಆಪೂಪುರಸ್ತ್ವಂ ರಾತ್ರಿ ಪಾರ್ಥಿವಂ ರಜಃ** – ಎಲೈ ರಾತ್ರಿಯೇ, ನೀನು (ನಿನ್ನ ಅಂಧಕಾರದಿಂದ) ಪೃಥಿವೀಲೋಕವನ್ನೂ, **ಸ್ಥಾನೈರ್ಮರ್ಧ್ಯಮಸ್ಯ ದಿವಃ ಸದಾಂಸಿ**—ಅಂತರಿಕ್ಷ ಮತ್ತು ಸ್ವರ್ಗದ ಸ್ಥಾನಗಳನ್ನೂ ತುಂಬಿರುವೆ. ಎಲೈ ಮಹಾಮಹಿಮಾನ್ವಿತೆಯಾದ ರಾತ್ರಿಯೇ, ಭಯಂಕರವಾದ ಕತ್ತಲೆಯೂ ಎಲ್ಲ ಪ್ರದೇಶಗಳನ್ನು ಆವರಿಸಿ ನಿನ್ನ ಸಮೀಪಕ್ಕೆ ಎಲ್ಲವನ್ನೂ ಆಕರ್ಷಿಸುವುದು ಎಂದು ನಿರ್ವಚನಾಭಿಪ್ರಾಯವು.

ರಾತ್ರಿಸೂಕ್ತದ ಮಹಿಮೆಯ ಮತ್ತು ವಿನಿಯೋಗದ ವಿಷಯದಲ್ಲಿ ಶೌನಕಮಹರ್ಷಿಗಳು ತಮ್ಮ ಋಗ್ವಿಧಾನ ವೆಂಬ ಗ್ರಂಥದಲ್ಲಿ ಈ ರೀತಿ ಹೇಳುತ್ತಾರೆ—

**ರಾತ್ರೀಂ ಪ್ರಪದ್ಯೇತ ಸದಾ ಶುಚಿಶ್ಶೀರ್ಣವ್ರತೋ ನಿಶಿ** || ೨೦ ||
**ಯಃ ಕಾಮಯೇತ ನ ಪುನರ್ಜಾಯೇಯಮಿತಿ ಯೋನಿಷು |**
**ಸಹಸ್ರಕೃತ್ವೋ ಮನಸಾ ಜಪೇದ್ರಾತ್ರೀತಿ ರಾತ್ರಿಷು** || ೨೧ ||
**ಸ್ಥಾಲೀಪಾಕೇನ ರಾತ್ರೀಂ ಚ ಯಜೇತಾಹರಹರ್ನಿಶಿ |**
**ತೆನ್ಮನಾ ನಿಶಿ ಚಾಸೀನಸ್ತಿಷ್ಠೇದಹನಿ ಧಾರ್ಮಿಕಃ** || ೨೨ ||
**ಊರ್ಧ್ವಂ ಸಂವತ್ಸರಾಚ್ಚೈವ ಚರುಂ ಪಯಸಿ ಸಂಸ್ಕೃತಂ |**
**ಸಹಸ್ರಕೃತ್ವಸ್ತ್ವೇತೇನ ದಿವಾ ಹೋಮೋ ವಿಧೀಯತೇ** || ೨೩ ||
**ಜುಹುಯಾನ್ನಿಶಿ ಪೂರ್ವಸ್ಮಿನ್ ರಾತ್ರಿಭಾಗೇ ಸಮಾಹಿತಃ |**
**ದಿವಾ ಚಾವಶ್ಯಕಂ ಕಾರ್ಯಂ ಛಾಯಾಯಾಮಂಶುತೇಜಸಾ** || ೨೪ ||
**ಇತಿ ಪ್ರಯತ ಆತ್ಮಾವಾನ್ಸೂಕ್ತಂ ತು ಮನಸಾ ಜಪೇತ್ |**
**ಸಂವತ್ಸರೇ ತೃತೀಯೇ ತು ಸರ್ಪಿಷಾ ಸಾಧಯೇಚ್ಚರುಂ** || ೨೫ ||
**ಅಥಾಸ್ಯ ವರದಾ ದೇವೀ ರಾತ್ರಿರ್ಭವತಿ ಶರ್ವರೀ |**
**ವಿಜ್ಞಾಪಯೀತ ತಾಂ ದೇವೀಂ ವರದಾಂ ಸ್ವಯಮಾಗತಾಂ** || ೨೬ ||
**ಸಂವತ್ಸರ ಋತೌ ಮಾಸಿ ದಿವಸೇಽಸ್ಮಿನ್ ಕ್ಷಣೇಽಪಿ ವಾ |**
**ಪ್ರಯಾಣಕಾಲೋ ಭವಿತಾ ತವ ವತ್ಸೇತಿ ವತ್ಸಲಾ** || ೨೭ ||
**ರಾತ್ರೀಸೂಕ್ತಂ ಜಪನ್ನೇವ ತಂ ಕಾಲಂ ಪ್ರತಿಪದ್ಯತೇ |**
**ನ ಯೋನಿಂ ಪುನರಾಯಾತಿ ಸರ್ವಪಾಪೈಃ ಪ್ರಮುಚ್ಯತೇ** || ೨೮ ||

(ಋಗ್ವಿಧಾನ. ಅಧ್ಯಾಯ ೪ ಶ್ಲೋ. ೨೦–೨೮)

ಈ ರಾತ್ರೀಸೂಕ್ತವನ್ನು ಜಪಿಸಬೇಕಾದರೆ ಯಾವಾಗಲೂ ಶುಚಿರ್ಭೂತನಾಗಿ ಮಡಿಯನ್ನುಟ್ಟು ರಾತ್ರಿಕಾಲದಲ್ಲಿ ಜಪಿಸ ಬೇಕು. ನಾನು ಮತ್ತೆ ನಾನಾಪ್ರಾಣಿಗಳ ಯೋನಿಗಳಲ್ಲಿ ಹುಟ್ಟಬಾರದು, ಪುನರಾವೃತ್ತಿ ಇಲ್ಲದ ಮೋಕ್ಷವನ್ನೇ

ಪಡೆಯಬೇಕು ಎಂದಪೇಕ್ಷಿಸುವ ಪುರುಷನು ಈ ರಾತ್ರೀಸೂಕ್ತವನ್ನು ರಾತ್ರಿಕಾಲದಲ್ಲಿ ಮನಸ್ಸಿನಲ್ಲಿಯೇ ಒಂದು ಸಹಸ್ರಸಂಖ್ಯೆಯಷ್ಟು ಜಪಮಾಡಬೇಕು. ಪ್ರತಿದಿನವೂ ರಾತ್ರಿಕಾಲದಲ್ಲಿ ಸ್ಥಾಲೀಪಾಕವಿಧಾನದಿಂದ ಪ್ರತಿಷ್ಠಿತಾಗ್ನಿಯಲ್ಲಿ ಈ ರಾತ್ರೀಸೂಕ್ತದ ಮಂತ್ರಗಳಿಂದ ಹೋಮಮಾಡಬೇಕು. ರಾತ್ರಿಕಾಲದಲ್ಲಿಯೂ ಹಗಲಿನಲ್ಲಿಯೂ ಯಾವಾಗಲೂ ರಾತ್ರಿದೇವಿಯನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಿರಬೇಕು ಈ ರೀತಿ ಒಂದು ಸಂವತ್ಸರದವರೆಗೆ ಮಾಡಿ ಅನಂತರ ಕ್ಷೀರಮಿಶ್ರಿತವಾದ ಚರುವನ್ನು ಸಂಸ್ಕಾರಮಾಡಿ ಹಗಲು ಹೊತ್ತಿನಲ್ಲಿ ಒಂದು ಸಹಸ್ರ ಹೋಮಗಳನ್ನು ಮಾಡಬೇಕು. ಹೋಮಮಾಡುವಾಗ ರಾತ್ರಿಯ ಪೂರ್ವಭಾಗದಲ್ಲಿ ಎಂದರೆ ಸೂರ್ಯನ ಬೆಳಕು ಸ್ವಲ್ಪ ಇರುವಾಗಲೇ ಹೋಮಮಾಡಬೇಕು. ಮತ್ತೆ ಹೋಮಮಾಡುವಾಗ ಸೂಕ್ತವನ್ನು ಮನಸ್ಸಿನಲ್ಲಿಯೇ ಜಪಿಸುತ್ತಿರಬೇಕು. ಈರೀತಿ ಎರಡನೆಯ ಸಂವತ್ಸರದಲ್ಲಿ ಮಾಡಿ, ಬಳಿಕ ಮೂರನೆಯ ಸಂವತ್ಸರದಲ್ಲಿ ಚರುವನ್ನು ಘೃತದಿಂದ ಮಿಶ್ರಮಾಡಿ ಹೋಮ ಮಾಡಬೇಕು. ಈರೀತಿ ಮಾಡಿದರೆ ರಾತ್ರಿದೇವತೆಯು ಆ ಸಾಧಕನಿಗೆ ಪ್ರತ್ಯಕ್ಷಳಾಗಿ ವರವನ್ನು ಕೊಡುವುದಕ್ಕೆ ಸಿದ್ಧಳಾಗುವಳು. ಆಗ ಸಾಧಕನು ತನಗೆ ವರವನ್ನು ಅನುಗ್ರಹಿಸುವುದಕ್ಕೆ ಬಂದ ಆ ದೇವಿಯನ್ನು ಈರೀತಿ ಪ್ರಾರ್ಥಿಸಬೇಕು—ಎಲೌ ದೇವಿಯೇ, ಇಲ್ಲಿಂದ ಮುಂದೆ ಒಂದು ಸಂವತ್ಸರಕಾಲದಲ್ಲಿಯಾಗಲಿ, ಒಂದು ಋತು, ಅಥವಾ ಒಂದು ಮಾಸ, ಅಥವಾ ಒಂದು ದಿವಸ, ಅಥವಾ ಈ ಕ್ಷಣದಲ್ಲಿಯೇ ಆಗಲಿ ನನ್ನ ಪ್ರಯಾಣಕಾಲವು (ಮರಣ ಸಮಯವು) ಪ್ರಾಪ್ತವಾದರೆ ಅದನ್ನು ನೀನು ದಯಾರ್ದ್ರಹೃದಯಳಾಗಿ ಪರಿಹರಿಸು ನಾನು ನಿನ್ನ ಪ್ರೀತಿಗೆ ಪಾತ್ರನಾದ ಪುತ್ರನು ಎಂದು ಪ್ರಾರ್ಥಿಸಿ ರಾತ್ರೀಸೂಕ್ತವನ್ನು ಜಪಿಸುತ್ತಿದ್ದರೆ ತನಗೆ ಸಂಭವಿಸಬಹುದಾದ ಆಪತ್ತನ್ನು (ಆ ಮರಣಕಾಲವನ್ನು) ತಡೆಗಟ್ಟಲು ಸಮರ್ಥನಾಗುವನು. ಮತ್ತು ರಾತ್ರೀಸೂಕ್ತವನ್ನು ಜಪಿಸುತ್ತಲೇ ಮರಣವನ್ನು ಹೊಂದುವ ಪುರುಷನು ಸಮಸ್ತ ಪಾಪಗಳಿಂದ ನಿರ್ಮುಕ್ತನಾಗಿ ಮತ್ತೆ ಯೋನಿಯಲ್ಲಿ ಜನ್ಮವೆತ್ತುವುದಿಲ್ಲ ಇತ್ಯಾದಿ ವಿವರಣೆ ಇದೆ.

॥ ಸಾಯಣಭಾಷ್ಯಂ ॥

**ರಾತ್ರೀತ್ಯಷ್ಟರ್ಚಂ ಪ ಚದಶಂ ಸೂಕ್ತಂ ಸೋಭರಿಪುತ್ರಸ್ಯ ಕುಶಿಕಸ್ಯಾರ್ಷಂ । ಯದ್ವಾ । ಭಾರದ್ವಾಜಸ್ಯ ಸುತಾ ರಾತ್ರ್ಯಾಖ್ಯಾಸ್ಯ ಸೂಕ್ತಸ್ಯರ್ಷಿಕಾ । ಗಾಯತ್ರಂ ರಾತ್ರಿದೇವತಾಕಂ । ತಥಾ ಚಾನುಕ್ರಾಂತಂ । ರಾತ್ರೀ ಕುಶಿಕಃ ಸೌಭರೋ ರಾತ್ರಿರ್ವಾ ಭಾರದ್ವಾಜೀ ರಾತ್ರಿಸ್ತವಂ ಗಾಯತ್ರಮಿತಿ ॥ ದುಃಸ್ವಪ್ನದರ್ಶನ ಉಪೋಷಿತೇನ ಕರ್ತ್ರಾ ಪಾಯಸೇನ ಹೋತವ್ಯಂ । ತತ್ರೈತತ್ಸೂಕ್ತಂ ಕರಣತ್ವೇನ ವಿನಿಯುಕ್ತಂ । ತಥಾ ಚಾರಣ್ಯಕೇ ಶ್ರೂಯತೇ । ಸ ಯದ್ಯೇತೇಷಾಂ ಕಿಂಚಿತ್ಪಶ್ಯೇದುಪೋಷ್ಯ ಪಾಯಸಂ ಸ್ಥಾಲೀಪಾಕಂ ಶ್ರಪಯಿತ್ವಾ ರಾತ್ರೀಸೂಕ್ತೇನ ಪ್ರತ್ಯೃಚಂ ಹುತ್ವಾ । ಐ. ಆ. ೩-೨-೪ । ಇತಿ ॥**

ಅನುವಾದವು— **ರಾತ್ರೀ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು ಈ ಸೂಕ್ತಕ್ಕೆ ಸೋಭರಿಪುತ್ರನಾದ ಕುಶಿಕನೆಂಬುವನು ಋಷಿಯು; ಅಥವಾ ಭರದ್ವಾಜಋಷಿಯ ಪುತ್ರಿಯಾದ ರಾತ್ರೀ ಎಂಬ ಹೆಸರಿನ ಸ್ತ್ರೀಯು ಈ ಸೂಕ್ತಕ್ಕೆ ಋಷಿಕೆಯಾಗಬಹುದು. ಈ ಸೂಕ್ತಕ್ಕೆ ರಾತ್ರಿಯು ದೇವತೆಯು, ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ರಾತ್ರೀ ಕುಶಿಕಃ ಸೌಭರೋ ರಾತ್ರಿರ್ವಾ ಭಾರದ್ವಾಜೀ ರಾತ್ರಿಸ್ತವಂ ಗಾಯತ್ರಂ** ಎಂದು ಹೇಳಿರುವುದು. ಕೆಟ್ಟ ಸ್ವಪ್ನಗಳು ಆದಲ್ಲಿ ಉಪವಾಸ

ವಿದ್ದು ಪಾಯಸದಿಂದ ಅಗ್ನಿಯಲ್ಲಿ ಹೋಮ ಮಾಡಬೇಕು. ಹೋಮಾರ್ಥವಾಗಿ ಈ ಸೂಕ್ತದ ಮಂತ್ರಗಳನ್ನು ಪಠಿಸಬೇಕೆಂದು ಐತರೇಯಾರಣ್ಯಕದಲ್ಲಿ - **ಸ ಯದ್ಯತೇಷಾಂ ಕಿಂಚಿತ್ಪಶ್ಯೇದುಪೋಷ್ಯ ಪಾಯಸಂ ಸ್ಥಾಲೀಪಾಕಂ ಶ್ರಪಯಿತ್ವಾ ರಾತ್ರೀಸೂಕ್ತೇನ ಪ್ರತ್ಯೃಚಂ ಹುತ್ವಾ** (ಆ. ಐ ೩-೨-೪) ಎಂದು ಹೇಳಿರುವುದು.

## ಸೂಕ್ತ—೧೨೭

ಮಂಡಲ-೧೦ ॥ ಅನುವಾಕ-೧೦ ॥ ಸೂಕ್ತ-೧೨೭ ॥

ಅಷ್ಟಕ-೮ ॥ ಅಧ್ಯಾಯ-೭ ॥ ವರ್ಗ- ೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

॥ ಋಷಿಃ—ಕುಶಿಕ: ಸೌಭರೋ ರಾತ್ರಿರ್ವಾ ಭಾರದ್ವಾಜೀ ॥

॥ ದೇವತಾ—ರಾತ್ರಿಸ್ತವಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ರಾತ್ರೀ ವ್ಯಖ್ಯದಾಯತೀ ಪುರುತ್ರಾ ದೇವ್ಯ೧ಕ್ಷಭಿಃ ।

ವಿಶ್ವಾ ಅಧಿ ಶ್ರಿಯೋಽಧಿತ ॥ ೧ ॥

॥ ಪದಪಾಠಃ ॥

ರಾತ್ರೀ । ವಿ । ಅಖ್ಯತ್ । ಆಽಯತೀ । ಪುರುಽತ್ರಾ । ದೇವೀ । ಅಕ್ಷಽಭಿಃ ।

ವಿಶ್ವಾಃ । ಅಧಿ । ಶ್ರಿಯಃ । ಅಧಿತ ॥ ೧ ॥

॥ ಸಾಯಣಭಾಷ್ಯಂ ॥

ಆಯತ್ಯಾಗಚ್ಛಂತೀ ॥ ಆಙ್ಪೂರ್ವಾದೇತೇಃ ಶತರ್ಯದಾದಿತ್ವಾಚ್ಛಪೋ ಲುಕ್ । ಇಣೋ ಯಣ್ಣಿತಿ ಯಣಾದೇಶಃ । ಉಗಿತಶ್ಚೇತಿ ಙೀಪ್ । ಶತುರನುಮ ಇತಿ ನದ್ಯಾ ಉದಾತ್ತತ್ವಂ ॥ ಅಕ್ಷಭಿರಕ್ಷಿಸ್ಥಾನೀಯೈಃ ಪ್ರಕಾಶಮಾನೈರ್ನಕ್ಷತ್ರೈಃ ॥ ಛಂದಸ್ಯಪಿ ದೃಶ್ಯತ ಇತ್ಯಕ್ಷಿಶಬ್ದಸ್ಯಾನಙಾದೇಶಃ ॥ ಯದ್ವಾ। ಅಕ್ಷಭಿರಂಜಕೈಸ್ತೇಜೋಭಿಃ । ಪುರುತ್ರಾ ಬಹುಷು ದೇಶೇಷು ದೇವೀ ದೇವನಶೀಲಾ ॥ ದೇವಮನುಷ್ಯಪುರುಷಪುರುಮರ್ತ್ಯೇಭ್ಯ ಇತ್ಯಾದಿನಾ ಪುರುಶಬ್ದಾತ್ಸಪ್ತಮ್ಯರ್ಥೇ ತ್ರಾಪ್ರತ್ಯಯಃ ॥ ರಾತ್ರೀಯಂ ರಾತ್ರಿದೇವತಾ ವ್ಯಖ್ಯತ್ । ವಿಚಷ್ಟೇ । ವಿಶೇಷೇಣ ಪಶ್ಯತಿ ॥ ರಾತ್ರೇಶ್ಚಾಜಸಾವಿತಿ ಙೀಪ್। ಖ್ಯಾತೇಶ್ಛಾಂದಸೇ ಲುಙ್ಯಸ್ಯತಿವಕ್ತಿಖ್ಯಾತಿಭ್ಯೋ ಇತ್ಯಾದಿನಾ ಚ್ಲೇರಙಾದೇಶಃ ॥ ಅಪಿ ಚೈಷಾ ವಿಶ್ವಾಃ ಸರ್ವಾಃ ಶ್ರಿಯಃ ಶೋಭಾ ಅಧ್ಯಧಿತ। ಅಧಿಧಾರಯತಿ ॥ ದಧಾತೇರ್ಲುಙಿ ಸ್ಥಾಘ್ವೋರಿಚ್ಚೇತೀತ್ವಂ । ಸಿಚಃ ಕಿತ್ವಂ । ಹ್ರಸ್ವಾದಂಗಾದಿತಿ ಸಿಚೋ ಲೋಪಃ ॥

॥ ಪ್ರತಿಪದಾರ್ಥ ॥

**ಆಯತೀ**—ಬರುತ್ತಿರುವ | **ರಾತ್ರೀ ದೇವೀ**—ರಾತ್ರಿದೇವಿಯು | **ಪುರುತ್ರಾ**—ಅನೇಕ ಪ್ರದೇಶಗಳಲ್ಲಿ | **ಅಕ್ಷಭಿಃ**—ಪ್ರಕಾಶಮಾನವಾದ ನಕ್ಷತ್ರಗಳೆಂಬ ತನ್ನ ಕಣ್ಣುಗಳಿಂದ | **ವ್ಯಖ್ಯತ್**—ವಿಶೇಷವಾಗಿ ನೋಡುತ್ತಾಳೆ | **ವಿಶ್ವಾ**—ಸಮಸ್ತವಾದ | **ಶ್ರಿಯಃ**—ಸೌಂದರ್ಯಾತಿಶಯಗಳನ್ನು | **ಅಧಿ ಅಧಿತ**—ಧರಿಸುತ್ತಾಳೆ.

॥ ಭಾವಾರ್ಥ ॥

ಈಗತಾನೇ ಬರುತ್ತಿರುವ ರಾತ್ರಿದೇವಿಯು ಅನೇಕಪ್ರದೇಶಗಳಲ್ಲಿ ಪ್ರಕಾಶಮಾದವಾದ ನಕ್ಷತ್ರಗಳೆಂಬ ತನ್ನ ಕಣ್ಣುಗಳಿಂದ ನೋಡುತ್ತಾಳೆ. ತನ್ನ ಸಮಸ್ತ ಶೋಭಾದಿಗಳಿಂದ ಬೆಳಗುತ್ತಾಳೆ.

## English Translation.

The divine Night approaching looked upon many places with her eyes, she has assumed all beauties.

॥ ಸಂಹಿತಾಪಾಠಃ ॥

**ಓರ್ವಪ್ರಾ ಅಮರ್ತ್ಯಾ ನಿವತೋ ದೇವ್ಯು೧ ದ್ವತಃ ।**

**ಜ್ಯೋತಿಷಾ ಬಾಧತೇ ತಮಃ ॥ ೨ ॥**

॥ ಪದಪಾಠಃ ॥

**ಆ । ಉರು । ಅಪ್ರಾಃ । ಅಮರ್ತ್ಯಾ । ನಿऽವತಃ । ದೇವೀ । ಉತ್ऽವತಃ ।**

**ಜ್ಯೋತಿಷಾ । ಬಾಧತೇ । ತಮಃ ॥ ೨ ॥**

॥ ಸಾಯಣಭಾಷ್ಯಂ ॥

**ಅಮರ್ತ್ಯಾ ಮರಣರಹಿತಾ ದೇವೀ ದೇವನಶೀಲಾ ರಾತ್ರಿರುರು ವಿಸ್ತೀರ್ಣಮಂತರಿಕ್ಷಮಾಪ್ರಾಃ । ಪ್ರಥಮತಸ್ತಮಸಾಪೂರಯತಿ ॥ ಪ್ರಾ ಪೂರಣೇ ಅದಾದಿಕಃ । ಲಙಿ ವ್ಯತ್ಯಯೇನ ಮಧ್ಯಮಃ ॥ ತಥಾ ನಿವತೋ ನೀಚೀನಾಲ್ಲತಾಗುಲ್ಮಾದೀನುದ್ವತ ಉತ್ಥಿತಾನ್ವೃಕ್ಷಾದೀಂಶ್ಚ ಸ್ವಕೀಯೇನ ತೇಜಸಾವೃಣೋತಿ । ತದನಂತರಂ ತತ್ರಮೋऽಂಧಕಾರಂ ಜ್ಯೋತಿಷಾ ಗ್ರಹನಕ್ಷತ್ರಾದಿರೂಪೇಣ ತೇಜಸಾ ಬಾಧತೇ। ಪೀಡಯತಿ॥**

॥ ಪ್ರತಿಪದಾರ್ಥ ॥

**ಅಮರ್ತ್ಯಾ**—ಮರಣರಹಿತಳಾದ | **ದೇವೀ**—ರಾತ್ರಿದೇವಿಯು | **ಉರು**—ವಿಸ್ತೀರ್ಣವಾದ ಅಂತರಿಕ್ಷವನ್ನು | **ಆ ಅಪ್ರಾಃ**—ತುಂಬಿದ್ದಾಳೆ (ಮತ್ತು) | **ನಿವತಃ**—ಕೆಳಭಾಗದಲ್ಲಿ (ಭೂಮಿಯಮೇಲೆ) ಬೆಳೆದು ಹಬ್ಬಿರುವ

ಲತಾದಿಗಳನ್ನು | **ಉದ್ವತ**—ಎತ್ತರವಾಗಿ ಬೆಳೆದಿರುವ ವೃಕ್ಷಗಳನ್ನೂ ತನ್ನ ತೇಜಸಿನಿಂದ (ಕತ್ತಲೆಯಿಂದ)ಆವರಿಸುತ್ತಾಳೆ (ಅನಂತರ) | **ತಮಃ**—ಅಂಧಕಾರವನ್ನು | **ಜ್ಯೋತಿಷಾ**—ಗ್ರಹನಕ್ಷತ್ರಾದಿರೂಪವಾದ ತೇಜಸ್ಸಿನಿಂದ | **ಬಾಧತೇ**—ಹಿಂಸಿಸುತ್ತಾಳೆ.

॥ ಭಾವಾರ್ಥ ॥

ಮರಣರಹಿತಳಾದ ರಾತ್ರಿದೇವಿಯು ವಿಸ್ತೀರ್ಣವಾದ ಅಂತರಿಕ್ಷವೆಲ್ಲವನ್ನೂ ಕತ್ತಲಿನಿಂದ ತುಂಬಿದ್ದಾಳೆ. ನೆಲದ ಮೇಲೆ ಬೆಳೆಯುವ ಸಣ್ಣ ಗಿಡಮೂಲಿಕೆ ಬಳ್ಳಿಗಳನ್ನೂ ಎತ್ತರವಾಗಿ ಬೆಳೆಯುವ ವೃಕ್ಷಗಳನ್ನೂ ಕತ್ತಲೆಯಿಂದ ಆವರಿಸುತ್ತಾಳೆ. ಅನಂತರ ಅಂಧಕಾರವನ್ನು (ಕತ್ತಲೆ) ಗ್ರಹನಕ್ಷತ್ರರೂಪವಾದ ತೇಜಸ್ಸಿನಿಂದ ಹಿಂಸಿಸುತ್ತಾಳೆ.

## English Translation

The immortal goddess has filled the expanded (firmament), the low places and the high places, she fights the darkness with lustre.

॥ ವಿಶೇಷವಿಷಯಗಳು ॥

ಸೂರ್ಯಾಸ್ತಮಯವಾದನಂತರ ರಾತ್ರಿಯು ಪ್ರಾಪ್ತವಾದಾಗ ಆಕಾಶವೆಲ್ಲಾ ಕತ್ತಲೆಯಿಂದ ತುಂಬಿರುತ್ತದೆ. ಸಣ್ಣಗಿಡಗಳಾಗಲಿ, ದೊಡ್ಡವೃಕ್ಷಗಳಾಗಲಿ ಎಲ್ಲವೂ ಕತ್ತಲೆಯಲ್ಲಿ ಇರುತ್ತವೆ. ಅನಂತರ ಆ ಕತ್ತಲೆಯನ್ನು ಪರಿಹಾರ ಮಾಡುವಂತೆ ತೋರುವ ನಕ್ಷತ್ರಾದಿಗಳು ಗೋಚರಿಸಿ ರಾತ್ರಿಗೆ ಶೋಭೆಯನ್ನುಂಟುಮಾಡುತ್ತವೆ ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ನಿರು ಸ್ವಸಾರಮಸ್ಕೃತೋಷಸಂ ದೇವ್ಯಾಯತೀ |
ಅಪೇದು ಹಾಸತೇ ತಮಃ ॥ ೩ ॥

॥ ಪದಪಾಠಃ ॥

ನಿಃ | ಊಂ ಇತಿ | ಸ್ವಸಾರಂ | ಅಕೃತ | ಉಷಸಂ | ದೇವೀ | ಆऽಯತೀ |
ಅಪ | ಇತ್ | ಊಂ ಇತಿ | ಹಾಸತೇ | ತಮಃ ॥ ೩ ॥

॥ ಸಾಯಣಭಾಷ್ಯಂ ॥

**ಆಯತ್ಯಾಗಚ್ಛಂತೀ ದೇವೀ ದೇವನಶೀಲಾ ರಾತ್ರಿಃ ಸ್ವಸಾರಂ ಭಗಿನೀಮುಷಸಂ ನಿರಕೃತ | ನಿಷ್ಕರೋತಿ | ಪ್ರಕಾಶೇನ ಸಂಸ್ಕರೋತಿ | ನಿವರ್ತಯತೀತ್ಯರ್ಥಃ | ತಸ್ಯಾಮುಷಸಿ ಜಾತಾಯಾಂ ಸ್ವತಂ ತಮೋऽಪೇದ್ಧಾಸತೇ | ಅಪೈವ ಗಚ್ಛತಿ ॥ ಓಹಾಙ್ ಗತೌ | ಲೇಟ್ಯಡಾಗಮಃ | ಸಿಬ್ಬಹುಲಮಿತಿ ಸಿಪ್ ॥**

॥ ಪ್ರತಿಪದಾರ್ಥ ॥

**ಆಯತೀ**—ಸರ್ವತ್ರ ವ್ಯಾಪಿಸಿ ಬರುತ್ತಿರುವ | **ದೇವೀ**— ರಾತ್ರಿ ದೇವಿಯು | **ಸ್ವಸಾರಂ**—ತನ್ನ ಸಹೋದರಿಯಾದ | **ಉಷಸಂ**— ಉಷೋದೇವಿಗೆ (ಉಷಃಕಾಲಕ್ಕೆ) | **ನಿಃ ಅಕೃತ**—ಅವಕಾಶವನ್ನುಂಟುಮಾಡಿ ಕೊಡುತ್ತಾಳೆ (ಆಗ) | **ತಮಃ**—ಕತ್ತಲೆಯು | **ಅಪ ಇತ್ ಹಾಸತೇ**—ಹೊರಟೇ ಹೋಗುತ್ತದೆ.

॥ ಭಾವಾರ್ಥ ॥

ಸರ್ವತ್ರ ವ್ಯಾಪಿಸಿ ಬರುತ್ತಿರುವ ರಾತ್ರಿದೇವಿಯು ಕೆಲವು ಕಾಲದ ಮೇಲೆ ಎಂದರೆ ರಾತ್ರಿಯ ಕೊನೆಯಲ್ಲಿ ತಾನುಹೊರಟು ಹೋಗಿ ತನ್ನ ಸಹೋದರಿಯಾದ ಉಷೋದೇವಿಯು ಬರುವುದಕ್ಕೆ(ಉಷಃ ಕಾಲಪ್ರಾಪ್ತವಾಗುವುದಕ್ಕೆ) ಅವಕಾಶವನ್ನು (ಮಾರ್ಗವನ್ನು) ಮಾಡಿಕೊಡುತ್ತಾಳೆ ಮತ್ತು ಉಷಃ ಕಾಲಾನಂತರ ಕತ್ತಲೆಯು ಹೊರಟು ಹೋಗುತ್ತದೆ.

## English Translation

The advancing goddess prepared (the way for) her sister Dawn, and then the darkness departs.

॥ ಸಂಹಿತಾಪಾಠಃ ॥

ಸಾ ನೋ ಅದ್ಯ ಯಸ್ಯಾ ವಯಂ ನಿ ತೇ ಯಾಮನ್ನವಿಕ್ಷ್ಮಹಿ ।
ವೃಕ್ಷೇ ನ ವಸತಿಂ ವಯಃ ॥ ೪ ॥

॥ ಪದಪಾಠಃ ॥

ಸಾ । ನಃ । ಅದ್ಯ । ಯಸ್ಯಾಃ । ವಯಂ । ನಿ । ತೇ । ಯಾಮನ್ । ಅವಿಕ್ಷ್ಮಹಿ ।
ವೃಕ್ಷೇ । ನ । ವಸತಿಂ । ವಯಃ ॥ ೪ ॥

॥ ಸಾಯಣಭಾಷ್ಯಂ ॥

ಅದ್ಯಾಸ್ಮಿನ್ಕಾಲೇ ನೋಽಸ್ಮಾಕಂ ಸಾ ರಾತ್ರಿದೇವತಾ ಪ್ರಸೀದತು ಯಸ್ಯಾ ರಾತ್ರೇರ್ಯಾಮನ್ಯಾಮನಿ ಪ್ರಾಪ್ತೌ ಸತ್ಯಾಂ ವಯಂ ನ್ಯವಿಕ್ಷ್ಮಹಿ ನಿವಿಶಾಮಹೇ ಸುಖೇನ ಗೃಹ ಆಸ್ಮಹೇ ॥ ನಿಶೇರ್ಲುಙಿ ನೇರ್ವಿಶಃ । ಪಾ. ೧-೩-೧೭ । ಇತ್ಯಾತ್ಮನೇಪದಂ । ಛಾಂದಸಃ ಶಪೋಂ ಲುಕ್ ॥ ತತ್ರ ದೃಷ್ಟಾಂತಃ । ವಯಃ ಪಕ್ಷಿಣೋ ವೃಕ್ಷೇ ನ ಯಥಾ ವೃಕ್ಷೇ ನೀಡಾಶ್ರಯೇ ವಸತಿಂ ರಾತ್ರೌ ನಿವಾಸಂ ಕುರ್ವಂತಿ ತಥಾ ನಿವಸಾಮ ಇತ್ಯರ್ಥಃ ॥

|| ಪ್ರತಿಪದಾರ್ಥ ||

**ಯಸ್ಯಾಃ**—ಯಾವರಾತ್ರಿಯ | **ಯಾಮನ್**—ಆಗಮನ ಕಾಲದಲ್ಲಿ | **ವಯಃ**—ಪಕ್ಷಿಗಳು | **ವೃಕ್ಷೇ**-ವೃಕ್ಷದಲ್ಲಿ | **ವಸತಿಂ ನ**—ವಾಸಮಾಡುವಂತೆ | **ವಯಂ**—ನಾವು | **ನಿ ಅವಿಕ್ಷ್ಮಹಿ**—ಸುಖವಾಗಿ ಗೃಹದಲ್ಲಿ ವಾಸಮಾಡುತ್ತೇವೆಯೋ ಅಂತಹ | **ಅದ್ಯ**—ಈ ರಾತ್ರಿಕಾಲದಲ್ಲಿ | **ಸಾ**—ಆ ರಾತ್ರಿದೇವತೆಯು | **ನಃ**—ನಮಗೆ ಪ್ರಸನ್ನಳಾಗಲಿ.

|| ಭಾವಾರ್ಥ ||

ರಾತ್ರಿಕಾಲದಲ್ಲಿ ಪಕ್ಷಿಗಳು ವೃಕ್ಷದಲ್ಲಿರುವ ತಮ್ಮ ಗೂಡುಗಳಲ್ಲಿ ವಾಸಮಾಡುವಂತೆ ನಾವು ನಮ್ಮ ಗೃಹದಲ್ಲಿ ಸುಖವಾಗಿ ವಾಸಮಾಡುವೆವು. ಅಂತಹ ರಾತ್ರಿದೇವತೆಯು ಈಗ ನಮಗೆ ಪ್ರಸನ್ನಳಾಗಲಿ.

## English Translation.

May she be favourable to us to-day upon whose approach we re-enter (our dwellings), as birds (re-enter) their nest upon the tree.

|| ಸಂಹಿತಾಪಾಠಃ ||

ನಿ ಗ್ರಾಮಾಸೋ ಅವಿಕ್ಷತ ನಿ ಪದ್ವಂತೋ ನಿ ಪಕ್ಷಿಣಃ |

ನಿ ಶ್ಯೇನಾಸಶ್ಚಿದರ್ಥಿನಃ || ೫ ||

|| ಪದಪಾಠಃ ||

ನಿ | ಗ್ರಾಮಾಸಃ | ಅವಿಕ್ಷತ | ನಿ | ಪತ್ಽವಂತಃ | ನಿ | ಪಕ್ಷಿಣಃ |

ನಿ | ಶ್ಯೇನಾಸಃ | ಚಿತ್ | ಅರ್ಥಿನಃ || ೫ ||

|| ಸಾಯಣಭಾಷ್ಯಂ ||

ಗ್ರಾಮಾಸೋ ಗ್ರಾಮಾಃ | ಅತ್ರ ಗಾಮಶಬ್ದೋ ಜನಸಮೂಹೇ ವರ್ತತೇ ಯಥಾ ಗ್ರಾಮ ಆಗತ ಇತಿ | ಸರ್ವೇ ಜನಾ ನ್ಯವಿಕ್ಷತ | ತಸ್ಯಾಂ ರಾತ್ರ್ಯಾವಾಗತಾಯಾಂ ನಿವಿಶಂತೇ | ಶೇರತೇ || ನಿಪೂರ್ವಾದ್ವಿಶತೇಶ್ಛಾಂದಸೇ ಲುಙಿ ಪೂರ್ವವದಾತ್ಮನೇಪದಂ | ಶಲ ಇಗುಪಧಾದನಿಟಃ ಕ್ಸಃ | ಪಾ. ೩–೧೪–೫ | ಕ್ಸಸ್ಯಾಚಿ | ಪಾ. ೭–೩–೭೨ | ಇತ್ಯಾಕಾರಲೋಪಃ || ತಥಾ ಪದ್ವಂತಃ ಪಾದಯುಕ್ತಾ ಗವಾಶ್ವಾದಯಶ್ಚ ನಿವಿಶಂತೇ | ತಥಾ ಪಕ್ಷಿಣಃ ಪಕ್ಷೋಪೇತಾಶ್ಚ ನಿವಿಶಂತೇ | ಅರ್ಥಿನಃ | ಅರ್ತೇರರ್ಥೋ ಗಮನಂ | ಶೀಘ್ರಗಮನಯುಕ್ತಾಃ ಶ್ಯೇನಾಸಶ್ಚಿಚ್ಛ್ಯೇನಾ ಅಪಿ ತಸ್ಯಾಂ ರಾತ್ರ್ಯಾಂ ನಿವಿಶಂತೇ | ಏಷಾ ರಾತ್ರಿಃ ಸರ್ವಾಣಿ ಭೂತಜಾತಾನ್ಯಹನಿ ಸಂಚಾರೇಣ ಶ್ರಾಂತಾನಿ ಸ್ವಯಮಾಗತ್ಯ ಸುಖಯತೀತ್ಯರ್ಥಃ ||

॥ ಪ್ರತಿಪದಾರ್ಥ ॥

**ಗ್ರಾಮಾಸಃ**—ಗ್ರಾಮದಲ್ಲಿ ವಾಸಮಾಡುವ ಸಮಸ್ತ ಜನರೂ ರಾತ್ರಿಯಾದಕೂಡಲೇ। **ನಿ ಅವಿಕ್ಷತ**—ತಮ್ಮ ತಮ್ಮ ಮನೆಗಳಿಗೆ ಬಂದು ಸೇರುತ್ತಾರೆ (ಹಾಗೆಯೇ)। **ಪಕ್ಷಿಣಃ ನಿ**—ಪಕ್ಷಿಗಳೂ ತಮ್ಮ ಗೂಡನ್ನು ಸೇರುತ್ತವೆ। **ಪದ್ವಂತಃ ನಿ**—ಪಾದಯುಕ್ತವಾದ ಗೋವುಗಳೇ ಮೊದಲಾದ ಪಶುಗಳೂ ತಮ್ಮ ಕೊಟ್ಟಿಗೆಯನ್ನು ಸೇರುತ್ತವೆ। **ಅರ್ಥಿನಃ**—ವೇಗವಾಗಿ ಸಂಚರಿಸುವ। **ಶ್ಯೇನಾಸಃ ಚ**—ಶ್ಯೇನಪಕ್ಷಿಗಳೂ। **ನಿ**—ತಮ್ಮಗೂಡುಗಳನ್ನು ಸೇರುತ್ತವೆ.

॥ ಭಾವಾರ್ಥ ॥

ರಾತ್ರಿಯಾದಕೂಡಲೇ ಸಮಸ್ತ ಜನರೂ ತಮ್ಮ ಮನೆಗೆ ಬಂದು ಸೇರುತ್ತಾರೆ. ಪಕ್ಷಿಗಳು ತಮ್ಮ ಗೂಡನ್ನು ಸೇರುತ್ತವೆ. ಗವಾಶ್ವಾದಿಪಶುಗಳು ತಮ್ಮ ಕೊಟ್ಟಿಗೆಯನ್ನು ಸೇರುತ್ತವೆ ವೇಗವಾಗಿ ಸಂಚರಿಸುವ ಶ್ಯೇನಪಕ್ಷಿಗಳೂ ಸಹ ತಮ್ಮ ಗೂಡನ್ನು ಸೇರಿಕೊಳ್ಳುತ್ತವೆ.

English Translation.

Men have re-entered (their dwelling), and beasts and birds and the swift hawks.

॥ ಸಂಹಿತಾಪಾಠಃ ॥

ಯಾವಯಾ ವೃಕ್ಯಂ೧ವೃಕಂ ಯವಯ ಸ್ತೇನಮೂರ್ಮ್ಯೇ।
ಅಥಾ ನಃ ಸುತರಾ ಭವ ॥ ೬ ॥

॥ ಪದಪಾಠಃ ॥

ಯವಯ। ವೃಕ್ಯಂ। ವೃಕಂ। ಯವಯ। ಸ್ತೇನಂ। ಊರ್ಮ್ಯೇ॥
ಅಥ। ನಃ। ಸುऽತರಾ। ಭವ ॥ ೬ ॥

॥ಸಾಯಣಭಾಷ್ಯಂ॥

ಹೇ ಊರ್ಮ್ಯೇ। ರಾತ್ರಿನಾಮೈತತ್। ರಾತ್ರೇ ವೃಕ್ಯಂ ವೃಕಸ್ಯ ಸ್ತ್ರಿಯಂ ವೃಕಂ ಚಾಸ್ಮಾನ್ಹಿಂಸಂತಂ ಯವಯ। ಅಸ್ಮತ್ತಃ ಪೃಥಕ್ಕುರು। ಅಸ್ಮಾನ್ಬಾಧಿತುಂ ಯಥಾ ನ ಪ್ರಾಪ್ನೋತಿ ತಥಾ। ಸ್ತೇನಂ ತಸ್ಕರಂ ಚ ಯವಯ। ಅಸ್ಮತ್ತೋ ವಿಯೋಜಯ। ಅಥಾನಂತರಂ ನೋಽಸ್ಮಾಕಂ ಸುತರಾ ಸುಖೇನ ತರಣೀಯಾ ಕ್ಷೇಮಕರೀ ಭವ॥

|| ಪ್ರತಿಪದಾರ್ಥ ||

**ಊರ್ಮ್ಯೇ**—ಎಲೈ ರಾತ್ರಿಯೇ! **ವೃಕ್ಯಂ**—ಹೆಣ್ಣುತೋಳವನ್ನೂ | **ವೃಕಂ**—ಗಂಡುತೋಳವನ್ನೂ | **ಯವಯ**—ನಮ್ಮ ಸಮೀಪಕ್ಕೆ ಬರದಂತೆ ಮಾಡು (ಹಾಗೆಯೇ)| **ಸ್ತೇನಂ**—ಕಳ್ಳನನ್ನು ಬರದಂತೆ ಮಾಡು | **ಅಥ**—ಅನಂತರ (ರಾತ್ರಿಕಾಲವು) | **ನಃ**—ನಮಗೆ | **ಸುತರಾ**—ಸುಖವಾಗಿ ಕಳೆಯುವಂತೆ | **ಭವ**—ಆಗು (ಆಗಲಿ).

|| ಭಾವಾರ್ಥ ||

ಎಲೈ ರಾತ್ರಿಯೇ, ರಾತ್ರಿಕಾಲದಲ್ಲಿ ನಾವು ನಿದ್ರಿಸುತ್ತಿರುವಾಗ ಹೆಣ್ಣುತೋಳವೂ, ಗಂಡುತೋಳವೂ (ಇತರ ಹಿಂಸಮೃಗಗಳೂ) ಕಳ್ಳರೂ ನಮ್ಮ ಸಮೀಪಕ್ಕೆ ಬರದಿರಲಿ. ನಾವು ರಾತ್ರಿಯನ್ನು ಯಾವ ಬಾಧೆಯೂ ಇಲ್ಲದೆ ಸುಖವಾಗಿ ಕಳೆಯುವಂತಾಗಲಿ.

## English Translation.

Keep off, O Urmya, the she-wolf, keep off the wolf and the robber, and be safely passed by us.

|| ಸಂಹಿತಾಪಾಠಃ ||

ಉಪ ಮಾ ಪೇಪಿಶತ್ತಮಃ ಕೃಷ್ಣಂ ವ್ಯಕ್ತಮಸ್ಥಿತ |
ಉಷ ಋಣೇವ ಯಾತಯ || ೭ ||

|| ಪದಪಾಠಃ ||

ಉಪ | ಮಾ | ಪೇಪಿಶತ್ | ತಮಃ | ಕೃಷ್ಣಂ | ವಿಽಅಕ್ತಂ | ಅಸ್ಥಿತ ||
ಉಷಃ | ಋಣಾಽಇವ | ಯಾತಯ || ೭ ||

|| ಸಾಯಣಭಾಷ್ಯಂ ||

ಪೇಪಿಶದ್ಭೃಶಂ ಪಿಂಶತ್ ಸರ್ವವಸ್ತುಷ್ವಾಶ್ಲಿಷ್ಟಂ ತಮೋಽಂಧಕಾರಂ ಕೃಷ್ಣಂ ಕೃಷ್ಣವರ್ಣಂ ವ್ಯಕ್ತಂ ವಿಶೇಷೇಣ ಸ್ವಭಾಸಾ ಸರ್ವಸ್ಯಾಂಜಕಂ ಸ್ಪಷ್ಟರೂಪಂ ವಾ ಈದೃಶಂ ನೈಶಂ ತಮೋ ಮಾಮುಪಾಸ್ಥಿತ | ಉಪಾಗಚ್ಛತ್ || ಸಂಗತಕರಣ ಆತ್ಮನೇಪದಂ || ಹೇ ಉಷ ಉಷೋದೇವತೇ ತ್ವಮೃಣೇವರ್ಣಾನೀವ ತತ್ತಮೋ ಯಾತಯ | ಅಪಗಮಯ | ಸ್ತೋತೄಣಾಮೃಣಾನಿ ಯಥಾ ಧನಪ್ರದಾನೇನಾಪಾಕರೋಷಿ ತಥಾ ತಮೋಽಪ್ಯಪಸಾರಯೇತ್ಯರ್ಥಃ ||

॥ ಪ್ರತಿಪದಾರ್ಥ ॥

**ಮಾ**— ನನ್ನನ್ನು । **ಪೇಪಿಶತ್**— ವ್ಯಾಪಿಸಿರುವುದೂ । **ಕೃಷ್ಣಂ**— ಕಪ್ಪಾಗಿರುವುದೂ । **ವ್ಯಕ್ತಂ**—ಸ್ಪಷ್ಟವಾಗಿರುವುದೂ ಆದ । **ತಮಃ**— ಕಗ್ಗತ್ತಲೆಯು । **ಉಪ ಅಸ್ಥಿತ**— ಹೊರಟು ಹೋಯಿತು । **ಉಷಃ**— ಎಲೈ ಉಷೋದೇವತೆಯೇ, ನೀನು । **ಋಣೇವ**— ಸಾಲವನ್ನು ತೀರಿಸುವಂತೆ । **ಯಾತಯ**— ಆ ಕತ್ತಲೆಯನ್ನು ಓಡಿಸು.

॥ ಭಾವಾರ್ಥ ॥

ನನ್ನ ಸುತ್ತಲೂ ವ್ಯಾಪಿಸಿರುವ ಸ್ಪಷ್ಟವಾದ ಈ ಕಗ್ಗತ್ತಲೆಯು (ಗಾಢಾಂಧಕಾರವು) ಹೊರಟು ಹೋಯಿತು. ಎಲೈ ಉಷೋದೇವಿಯೇ (ಉಷಃಕಾಲವೇ) ಸಾಲವನ್ನು ತೀರಿಸುವಂತೆ ನೀನು ಕಗ್ಗತ್ತಲೆಯನ್ನು ಓಡಿಸು.

## English Translation

The all-embracing black diffused darkness has approached me, discharge it, Ushas, as if it were a debt.

॥ ವಿಶೇಷವಿಷಯಗಳು ॥

**ಪೇಪಿಶತ್—ಸರ್ವವಸ್ತುಷ್ವಾಶ್ಲಿಷ್ಟಂ ।** ಸಮಸ್ತವಸ್ತುಗಳಲ್ಲಿಯೂ ತುಂಬಿ ಅವುಗಳನ್ನು ಅವರಿಸಿರುವ ಕತ್ತಲೆಯು.

**ವ್ಯಕ್ತಂ—ವಿಶೇಷೇಣ ಸ್ವಭಾಸಾ ಸರ್ವಸ್ಯಾಂಜಕಂ ಸ್ಪಷ್ಟರೂಪಂ ವಾ ।** ತನ್ನ ಸ್ವರೂಪದಿಂದ ಸರ್ವಸ್ವವನ್ನೂ ಹೊಕ್ಕು ಆವರಿಸುವುದೂ ಅಥವಾ ಕಣ್ಣಿಗೆ ಕಾಣಿಸುವಂತೆ ಕಪ್ಪಗಿರುವುದು ದಟ್ಟವಾಗಿರುವ, ನಿಬಿಡವಾಗಿರುವ ಕತ್ತಲೆಯು (Thick black darkness)

**ಋಣೇವ**— ಋಣವೆಂದರೆ ಸಾಲ. ಸಾಲಮಾಡಿರುವ ಪುರುಷನು ತನ್ನ ಸಾಲವನ್ನು ತೀರಿಸುವವರೆಗೂ ಒಂದುವಿಧವಾದ ಆತಂಕಕ್ಕೆ ಒಳಗಾಗಿರುವನು. ಮನಸ್ಸಿಗೆ ನೆಮ್ಮದಿ ಇರುವುದಿಲ್ಲ. ಸಾಲಕೊಟ್ಟವನ ಬಾಧೆಯಿಂದ ನೊಂದು ತನ್ನ ಸಾಲವು ಬೇಗ ತೀರಿಹೋಗಿ ತಾನು ನಿಶ್ಚಿಂತನಾಗಿ ಇರಬೇಕೆಂದು ಬಯಸುವನು. ಅದರಂತೆ ಕತ್ತಲೆಯೂ ಸಹ ಜನರಿಗೆ ಒಂದು ವಿಧವಾದ ಹಿಂಸೆಯನ್ನು ಕೊಡುತ್ತಿರುವುದು. ಕತ್ತಲೆಯಲ್ಲಿ ದುಷ್ಟಪ್ರಾಣಿಗಳ, ಕಳ್ಳರ ಬಾಧೆಯಿರುವುದು. ಕತ್ತಲೆಯಲ್ಲಿ ಯಾವುದನ್ನೂ ಕಣ್ಣಿನಿಂದ ಸ್ಪಷ್ಟವಾಗಿ ನೋಡಲು ಸಾಧ್ಯವಿರುವುದಿಲ್ಲ. ಯಾವ ಕೆಲಸ ಕಾರ್ಯವನ್ನು ಮಾಡಲು ಆಗುವುದಿಲ್ಲ ಇಂತಹ ಕತ್ತಲೆಯು ಬೇಗ ಹೊರಟುಹೋಗಿ ಎಲ್ಲರಿಗೂ ಸುಖಕರವಾದ ಬೆಳಕಾಗಬಾರದೇ ಎಂದು ಬಯಸುವುದು ಸಹಜವು. ಆದ್ದರಿಂದ ಸಾಲದ ಹೊರೆಯಂತೆ ಯಾರಿಗೂ ಬೇಡದ ಈ ಕತ್ತಲೆಯನ್ನು ಬೇಗ ನಿವಾರಿಸಬೇಕೆಂದು ಇಲ್ಲಿ ಪ್ರಾತಃಕಾಲದ ದೇವತೆಯಾದ ಉಷೋದೇವತೆಯನ್ನು ಋಷಿಯು ಪ್ರಾರ್ಥಿಸಿರುವನು.

|| ಸಂಹಿತಾಪಾಠಃ ||

ಉಪ ತೇ ಗಾ ಇವಾಕರಂ ವೃಣೀಷ್ವ ದುಹಿತರ್ದಿವಃ ।

ರಾತ್ರಿ ಸ್ತೋಮಂ ನ ಜಿಗ್ಯುಷೇ ॥ ೮ ॥

|| ಪದಪಾಠಃ ||

ಉಪ । ತೇ । ಗಾಃऽಇವ । ಆ । ಅಕರಂ । ವೃಣಿಷ್ವ । ದುಹಿತಃ । ದಿವಃ ।

ರಾತ್ರಿ । ಸ್ತೋಮಂ । ನ । ಜಿಗ್ಯುಷೇ ॥ ೮ ॥

|| ಸಾಯಣಭಾಷ್ಯಂ ||

ಹೇ ರಾತ್ರಿ ರಾತ್ರಿದೇವತೇ ತೇ ತ್ವಾಂ ಗಾ ಇವ ಪಯಸೋ ದೋಗ್ಧ್ರೀರ್ಧೇನೂರಿವೋಪೇತ್ಯಾಕರಂ। ಸ್ತುತಿಭಿರಭಿಮುಖೀಕರೋಮಿ ॥ ಕರೋತೇಶ್ಛಾಂದಸೇ ಲುಙಿ ಕೃಮೃದೃರುಹಿಭ್ಯ ಇತಿ ಚ್ಲೇರಙಾದೇಶಃ ॥ ದಿವೋ ದುಹಿತರ್ದ್ಯೋತಮಾನಸ್ಯ ಸೂರ್ಯಸ್ಯ ಪುತ್ರಿ ಯದ್ವಾ ದಿವಸಸ್ಯ ತನಯೇ ॥ ಪರಮಪಿ ಛಂದಸಿ । ಪಾ. ೨-೧-೨-೬ । ಇತಿ ಪರಸ್ಯ ಷಷ್ಠ್ಯಂತಸ್ಯ ಪೂರ್ವಾಮಂತ್ರಿತಾಂಗವದ್ಭಾವಾತ್ಪದದ್ವಯಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ ॥ ತ್ವತ್ಪ್ರಸಾದಾಜ್ಜಿಗ್ಯುಷೇ ಶತ್ರೂಞ್ಜಿಗ್ಯುಷೋ ಮಮ ಸ್ತೋಮಂ ನ ಸ್ತೋತ್ರಮಿವ ಹವಿರಪಿ ವೃಣೀಷ್ವ । ತ್ವಂ ಭಜಸ್ವ ॥ ಜಯತೇರ್ಲಿಟಃ ಕ್ವಸುಃ । ಸನ್ಲಿಟೋರ್ಜೇರಿತ್ಯಭ್ಯಾಸಾದುತ್ತರಸ್ಯ ಜಕಾರಸ್ಯ ಕುತ್ವಂ । ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯೇತಿ ಚತುರ್ಥೀ । ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ ॥

|| ಪ್ರತಿಪದಾರ್ಥ ||

**ರಾತ್ರಿ**—ಎಲೈ ರಾತ್ರಿದೇವತೆಯೇ । **ಗಾ ಇವ**— ಹಾಲನ್ನು ಕರೆಯುವ ಗೋವಿನಂತೆ ನಿನ್ನ ಬಳಿಗೆ ಬಂದು । **ತೇ**—ನಿನಗೆ । **ಆ ಅಕರಂ**—ಸ್ತುತಿಯನ್ನರ್ಪಿಸಿದ್ದೇನೆ । **ದಿವಃ**—ಸೂರ್ಯನ । **ದುಹಿತಃ**—ಪುತ್ರಿಯಾದ ಎಲೈ ರಾತ್ರಿದೇವಿಯೇ । **ಜಿಗ್ಯುಷೇ**—ಶತ್ರುಗಳನ್ನು ಜಯಿಸುವ ನನ್ನ । **ಸ್ತೋಮಂ ನ**—ಸ್ತೋತ್ರದಂತೆ (ನಾನು ಅರ್ಪಿಸುವ ಹವಿಸ್ಸನ್ನು) । **ವೃಣೀಷ್ವ**—ಆದರದಿಂದ ಸ್ವೀಕರಿಸು.

|| ಭಾವಾರ್ಥ ||

ಎಲೈ ರಾತ್ರಿದೇವತೆಯೇ, ಹಾಲನ್ನು ಕರೆಯುವ ಗೋವಿನ ಬಳಿಗೆ ಬರುವಂತೆ ನಿನ್ನ ಬಳಿಗೆ ಬಂದು ನಿನಗಾಗಿ ಈ ಸ್ತುತಿಯನ್ನರ್ಪಿಸಿದ್ದೇನೆ ಸೂರ್ಯಪುತ್ರಿಯಾದ ಎಲೈ ರಾತ್ರಿದೇವಿಯೇ, ಶತ್ರುಗಳನ್ನು ಜಯಿಸಲಿಚ್ಛಿಸುವ ನನ್ನ ಸ್ತೋತ್ರದಂತೆ ಪ್ರಿಯಕರವಾದ ಹವಿಸ್ಸನ್ನು ಸ್ವೀಕರಿಸು.

English Translation

I have brought (these verses) before you like milch cows; accept, O Night, daughter of the sky, (my oblation) as the eulogy of one about to conquer.

॥ ವಿಶೇಷವಿಷಯಗಳು ॥

**ಗಾ ಇವ ತೇ**— ಹಾಲನ್ನು ಕೊಡುವ ಗೋವಿನ ಬಳಿಗೆ ಯಾವ ರೀತಿ ಸಂತೋಷದಿಂದ ಹಾಲನ್ನು ಕರೆಯಲು ಹೋಗುವರೋ ಅದರಂತೆ ಇಷ್ಟಾರ್ಥಗಳನ್ನು ಕೊಡುವ ನಿನ್ನ (ರಾತ್ರಿಯ) ಬಳಿಗೆ ನಾನು ಬಂದು ಸ್ತುತಿಯನ್ನರ್ಪಿಸುವೆನು ಎಂದಭಿಪ್ರಾಯವು.

**ದಿವಃ ದುಹಿತಃ**— **ದ್ಯೋತಮಾನಸ್ಯ ಸೂರ್ಯಸ್ಯ ಪುತ್ರಿ ಯದ್ವಾ ದಿವಸಸ್ಯ ತನಯೇ** । ಪ್ರಕಾಶಮಾನನಾದ ಸೂರ್ಯನ ಪುತ್ರಿ ಅಥವಾ ಹಗಲಿನ ಪುತ್ರಿ ಎಂದರ್ಥವು. ಸೂರ್ಯನಿಂದಲೇ ಹಗಲುರಾತ್ರಿಗಳುಂಟಾಗುವುವು ಸೂರ್ಯನು ಉದಯಿಸಿದಾಗ ಹಗಲೂ ಅಸ್ತಮಾನವಾದಾಗ ರಾತ್ರಿಯೂ ಉಂಟಾಗುವುದರಿಂದ ಹಗಲು ರಾತ್ರಿಗಳು ಸೂರ್ಯನ ಪುತ್ರಿಯರೆಂದು ಹೇಳಬಹುದು ಅದರಂತೆಯೇ ಹಗಲು ಮುಗಿದಮೇಲೆ ರಾತ್ರಿಯಾಗುವುದರಿಂದ ಹಗಲಿನಿಂದ ರಾತ್ರಿಯು ಉತ್ಪತ್ತಿಯಾದಂತೆ ಭಾವಿಸಬಹುದು. ಮೊದಲೊಂದು ವಸ್ತುವಿದ್ದು ಅದರಿಂದ ಮತ್ತೊಂದು ವಸ್ತುವು ಉಂಟಾದರೆ ಎರಡನೆಯ ವಸ್ತುವು ಮೊದಲ ವಸ್ತುವಿನ ಪುತ್ರಿಯೆಂದು ಹೇಳುವರೂಢಿ ಯಿದೆ, ಉಷೋದೇವತೆಯನ್ನು ವರ್ಣಿಸುವ ಸೂಕ್ತಗಳಲ್ಲಿ ರಾತ್ರಿಯಿಂದ ಹಗಲೂ ಹಗಲಿನಿಂದ ರಾತ್ರಿಯೂ ಉತ್ಪತ್ತಿಯಾಗುವವೆಂದು ವರ್ಣಿಸಲಾಗಿದೆ. ಎಂದರೆ ಹಗಲು ಕಳೆದುಹೋದನಂತರ ರಾತ್ರಿಯು ಉಂಟಾಗುವುದರಿಂದ ರಾತ್ರಿಯನ್ನು ಹಗಲಿನ ಪುತ್ರಿ ಎಂದು ಕರೆಯುವುದು ಸಹಜವಾಗಿದೆ.

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರಗಳು (ಖಿಲಮಂತ್ರಗಳು)—

**ಆ ರಾತ್ರಿ ಪಾರ್ಥಿವಂ ರಜಃ ಪಿತರಃ ಪ್ರಾಯು ಧಾಮಭಿಃ ।**
**ದಿವಃ ಸದಾಂಸಿ ಬೃಹತೀ ವಿ ತಿಷ್ಠಸ ಆ ತ್ವೇಷಂ ವರ್ತತೇ ತಮಃ** ॥ ೧ ॥

**ಯೇ ತೇ ರಾತ್ರಿ ನೃಚಕ್ಷಸೋ ಯುಕ್ತಾಸೋ ನವತಿರ್ನವ ।**
**ಅಶೀತಿಃ ಸಂತ್ವಷ್ಟಾ ಉತೋ ತೇ ಸಪ್ತ ಸಪ್ತತೀಃ** ॥ ೨ ॥

**ರಾತ್ರೀಂ ಪ್ರಪದ್ಯೇ ಜನನೀಂ ಸರ್ವಭೂತನಿವೇಶನೀಂ ।**
**ಭದ್ರಾಂ ಭಗವತೀಂ ಕೃಷ್ಣಾಂ ವಿಶ್ವಸ್ಯ ಜಗತೋ ನಿಶಾಂ** ॥ ೩ ॥

**ಸಂವೇಶಿನೀಂ ಸಂಯಮಿನೀಂ ಗ್ರಹನಕ್ಷತ್ರಮಾಲಿನೀಂ ।**
**ಪ್ರಪನ್ನೋಽಹಂ ಶಿವಾಂ ರಾತ್ರೀಂ ಭದ್ರೇ ಪಾರಮಶೀಮಹಿ**
**(ಭದ್ರೇ ಪಾರಮಶೀಮಹ್ಯೋಂ ನಮಃ** ॥ ೪ ॥

**ಸ್ತೋಷ್ಯಾಮಿ ಪ್ರಯತೋ ದೇವೀಂ ಶರಣ್ಯಾಂ ಬಹ್ವೃಚಪ್ರಿಯಾಂ ।**
**ಸಹಸ್ರಸಂಮಿತಾಂ ದುರ್ಗಾಂ ಜಾತವೇದಸೇ ಸುನವಾಮ ಸೋಮಂ** ॥ ೫ ॥

**ಶಾಂತ್ಯರ್ಥಂ ತದ್ದ್ವಿಜಾತೀನಾಮೃಷಿಭಿಃ ಸೋಮಪಾಶ್ರಿತಾಃ ।**
**ಋಗ್ವೇದೇ ತ್ವಂ ಸಮುತ್ಪನ್ನಾರಾತೀಯತೋ ನಿ ದಹಾತಿ ವೇದಃ** ॥ ೬ ॥

ಯೇ ತ್ವಾಂ ದೇವಿ ಪ್ರ ಪದ್ಯಂತಿ ಬ್ರಾಹ್ಮಣಾ ಹವ್ಯವಾಹನೀಂ ।
ಅವಿದ್ಯಾ ಬಹುವಿದ್ಯಾ ವಾ ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ॥ ೭ ॥

ಯೇ ಅಗ್ನಿವರ್ಣಾಂ ಶುಭಾಂ ಸೌಮ್ಯಾಂ ಕೀರ್ತಯಿಷ್ಯಂತಿ ಯೇ ದ್ವಿಜಾಃ ।
ತಾಂಸ್ತಾರಯತಿ ದುರ್ಗಾಣಿ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥ ೮ ॥

ದುರ್ಗೇಷು ವಿಷಮೇ ಘೋರೇ ಸಂಗ್ರಾಮೇ ರಿಪುಸಂಕಟೇ ।
ಅಗ್ನಿಚೋರನಿಪಾತೇಷು ದುಷ್ಟಗ್ರಹನಿವಾರಿಣಿ ॥ ೯ ॥

ದುರ್ಗೇಷು ವಿಷಮೇಷು ತ್ವಂ ಸಂಗ್ರಾಮೇಷು ವನೇಷು ಚ ।
ಮೋಹಯಿತ್ವಾ ಪ್ರ ಪದ್ಯಂತೇ ತೇಷಾಂ ಮೇ ಅಭಯಂ ಕುರು
(ತೇಷಾಂ ಮೇ ಅಭಯಂ ಕುರ್ವೋಂ ನಮಃ) ॥ ೧೦ ॥

ಕೇಶಿನೀಂ ಸರ್ವಭೂತಾನಾಂ ಪಂಚಮೀತಿ ಚ ನಾಮ ಚ ।
ಸಾ ಮಾಂ ಸಮಾ ನಿಶಾ ದೇವೀ ಸರ್ವತಃ ಪರಿರಕ್ಷತು
(ಸರ್ವತಃ ಪರಿ ರಕ್ಷತ್ವೋಂ ನಮಃ) ॥ ೧೧ ॥

ತಾಮಗ್ನಿವರ್ಣಾಂ ತಪಸಾ ಜ್ವಲಂತೀಂ ವೈರೋಚನೀಂ ಕರ್ಮಫಲೇಷು ಜುಷ್ಟಾಂ ।
ದುರ್ಗಾಂ ದೇವೀಂ ಶರಣಮಹಂ ಪ್ರ ಪದ್ಯೇ ಸುತರಸಿ ತರಸೇ ನಮಃ ॥ ೧೨ ॥

ದುರ್ಗಾ ದುರ್ಗೇಷು ಸ್ಥಾನೇಷು ಶಂ ನೋ ದೇವೀರಭಿಷ್ಟಯೇ ।
ಯ ಇಮಂ ದುರ್ಗಾಸ್ತವಂ ಪುಣ್ಯಂ ರಾತ್ರೌ ರಾತ್ರೌ ಸದಾ ಪಠೇತ್ ॥ ೧೩ ॥

---

॥ ರಾತ್ರಿಃ ಕುಶಿಕಃ ಸೋಭರೋ ರಾತ್ರಿರ್ವಾ ಭಾರದ್ವಾಜೋ ರಾತ್ರಿಸ್ತವೋ ಗಾಯತ್ರೀ ॥

---

ರಾತ್ರೀಸೂಕ್ತಂ ಜಪೇನ್ನಿತ್ಯಂ ತತ್ಕಾಲಮುಪಪದ್ಯತೇ ।
ನ ಯೋನಿಂ ಪುನರಾಯಾತಿ ಸರ್ವಪಾಪೈಃ ಪ್ರಮುಚ್ಯತೇ ॥ ೧೪ ॥

ಕ್ಷೀರೇಣ ಸ್ನಾಪಿತಾ ದುರ್ಗಾ ಚಂದನೇನ ವಿಲೇಪಿತಾ ।
ಬಿಲ್ವಪತ್ರಕೃತಾಪೀಡಾ ನಮೋ ದುರ್ಗೇ ನಮೋ ನಮಃ ॥ ೧೫ ॥

ಸರ್ವಭೂತಪಿಶಾಚೇಭ್ಯಃ ಸರ್ವಸರ್ಪಸರೀಸೃಪೈಃ ।
ದೈವೇಭ್ಯೋ ಮಾನುಷೇಭ್ಯಶ್ಚ ಉಭಯೇಭ್ಯೋಽಭಿರಕ್ಷ ಮಾಂ ॥ ೧೬ ॥

ಯಾ ಋಗ್ವೇದೇ ಸ್ತುತಾ ದೇವೀ ಕಾಶ್ಯಪೇನ ಉದಾಹೃತಾ ।
ಜಾತವೇದಪ್ರಭಾ ಗೌರೀ ಜಾತವೇದಸೇ ಸುನವಾಮ ಸೋಮಂ ॥ ೧೭ ॥

ಸುರಾಸುರೈರ್ದ್ವಿಜವರೈಃ ಪಿಶಾಚೋರಗರಾಕ್ಷಸೈಃ ।
ಅರಾತಿಭಯ ಉತ್ಪನ್ನೇ ಅರಾತೀಯತೋ ನಿ ದಹಾತಿ ವೇದಃ ॥ ೧೮ ॥

ಗಜದ್ವಾರೇಽಪಥೇ ಘೋರೇ ಸಂಗ್ರಾಮೇಷು ಚ ಗೌತಮಿ ।
ಸರ್ವಂ ರಕ್ಷತು ದುರಿತಂ ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ || ೧೯ ||

ಮಹಾಭಯೇ ಸಮುತ್ಪನ್ನೇ ಸ್ಮರಂತಿ ಚ ಜಪಂತಿ ಚ ।
ಸರ್ವಂ ತಾರಯತೇ ದುರ್ಗಾ ನಾವೇವ ಸಿಂಧುಂ ದುರಿತಾತ್ಯಗ್ನಿಃ || ೨೦ ||

ಯ ಇಮಂ ದುರ್ಗಾಸ್ತವಂ ಪುಣ್ಯಂ ಶೃಣ್ವಂತಿ ಚ ಜಪಂತಿ ಚ ।
ತ್ರಿಷು ಲೋಕೇಷು ವಿಖ್ಯಾತಂ ತ್ರಿಷು ಲೋಕೇಷು ಪೂಜಿತಂ || ೨೧ ||

ಅಪುತ್ರೋ ಲಭತೇ ಪುತ್ರಾನ್ ಧನಹೀನೋ ಧನಂ ಲಭೇತ್ ।
ಅಚಕ್ಷುರ್ಲಭತೇ ಚಕ್ಷುರ್ಬದ್ಧೋ ಮುಚ್ಯೇತ ಬಂಧನಾತ್ || ೨೨ ||

ವ್ಯಾಧಿತೋ ಮುಚ್ಯತೇ ರೋಗಾದರೋಗೀ ಶ್ರಿಯಮಾಪ್ನುಯಾತ್ ।
ದದಾತಿ ಕಾಮಿತಂ ಸರ್ವಂ ಕಾತ್ಯಾಯನಿ ನಮೋಽಸ್ತು ತೇ || ೨೩ ||

ಉಲೂಕಯಾತುಂ ಶುಶುಲೂಕಯಾತುಂ ಜಹಿ ಶ್ವಯಾತುಮುತ ಕೋಕಯಾತುಂ ।
ಸುಪರ್ಣಯಾತುಮುತ ಗೃಧ್ರಯಾತುಂ ದೃಷದೇವ ಪ್ರ ಮೃಣ ರಕ್ಷ ಇಂದ್ರ ||

(ಋ ಸಂ ೭-೧೦೪-೨೨.)

ಪಿಶಂಗಭೃಷ್ಟಿಮಂಭೃಣಂ ಪಿಶಾಚಿಮಿಂದ್ರ ಸಂ ಮೃಣ ।
ಸರ್ವಂ ರಕ್ಷೋ ನಿ ಬರ್ಹಯ || (ಋ. ಸಂ. ೧-೧೩೩-೫.)



## ನೂರ ಇಪ್ಪತ್ತೆಂಟನೆಯ ಸೂಕ್ತವು



### ಪೀಠಿಕೆ

ಈ ಸೂಕ್ತದಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. ಇತರ ವಿಶ್ವೇದೇವತಾಕವಾದ ಸೂಕ್ತಗಳಂತೆ ಇದರಲ್ಲಿ ನಾನಾ ದೇವತೆಗಳ ಪ್ರಶಂಸೆ ಇರುವುದರ ಜತೆಗೆ ಈ ದೇವತೆಗಳು ಸ್ತೋತೃಜನರನ್ನು ಸರ್ವವಿಧಗಳಲ್ಲಿಯೂ ರಕ್ಷಿಸಿ ಕಾಪಾಡಬೇಕೆಂದೂ ಯಜ್ಞಯಾಗಾದಿಗಳನ್ನು ರಕ್ಷಿಸಬೇಕೆಂದೂ ಧನ, ಸುಪುತ್ರರು ಮೊದಲಾದ ಕೋರಿಕೆಗಳನ್ನು ಈಡೇರಿಸಬೇಕೆಂದೂ ಋಷಿಯು ವರ್ಣಿಸಿರುವನು. ಈ ಸೂಕ್ತವು ಒಂದು ವಿಧದಲ್ಲಿ ದೇವತೆಗಳ ಅನುಗ್ರಹವನ್ನು ಪಡೆಯಬೇಕೆಂದು ಬಯಸುವವರಿಗೆ ಆಶೀರ್ವಾದರೂಪವಾಗಿದೆ. ಈ ಸೂಕ್ತದ ವಿನಿಯೋಗವಿಷಯದಲ್ಲಿ ಶೌನಕ ಮಹರ್ಷಿಗಳು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ ನಾಲ್ಕನೆಯ ಅಧ್ಯಾಯದಲ್ಲಿ ಈ ರೀತಿ ಹೇಳಿದ್ದಾರೆ--

ಮಮಾಗ್ನೇ ವರ್ಚ ಇತ್ಯೇತತ್ಸರ್ವಕಾಮೈರ್ಜಪೇದ್ದ್ವಿಜಃ ।
ಜುಹ್ವದಾಜ್ಯಮನೇನೈವ ಸರ್ವಾನ್ಕಾಮಾನವಾಪ್ನುಯಾತ್ || ೨೯ ||

ತನ್ನ ಸಮಸ್ತ ಇಷ್ಟಾರ್ಥಗಳೂ ಸಿದ್ಧಿಸಬೇಕೆಂದು ಬಯಸುವ ಪುರುಷನು **ಮಮಾಗ್ನೇ ವರ್ಚಃ** ಎಂಬ ಈ ಸೂಕ್ತವನ್ನು ಜಪಿಸಬೇಕು ಮತ್ತು ಪ್ರತಿಷ್ಠಿತಾಗ್ನಿಯಲ್ಲಿ ಈ ಸೂಕ್ತದ ಮಂತ್ರಗಳನ್ನು ಪಠಿಸುತ್ತಾ ಆಜ್ಯದಿಂದ ಹೋಮ ಮಾಡಿದರೆ ತನ್ನ ಇಷ್ಟಾರ್ಥಗಳೆಲ್ಲವನ್ನೂ ಪಡೆಯುವನು.

**ಯೊಾಂ ಕಲ್ಪಯಂತೀತಿ ಸದಾ ಜಪೇತ ನಿಯತವ್ರತಃ ।**
**ನೈನಂ ಕೃತ್ಯಾ ನಿಹಿಂಸಂತಿ ಕ್ರುದ್ಧಾಭಿಚರಿತಾನಿ ಚ ॥ ॥ ೩೦ ॥**

ಯಾವಾಗಲೂ ನಿಯಮದಿಂದ **ಯೊಾಂ ಕಲ್ಪಂತಿ** ಎಂಬ ಸೂಕ್ತವನ್ನು (**ಮಮಾಗ್ನೇ ವರ್ಚಃ** ಎಂಬ **ಸೂಕ್ತಕ್ಕೆ** ಸೇರಿದಂತಿರುವ ಖಿಲ ಸೂಕ್ತವು ಇದನ್ನು ಈ ಸೂಕ್ತದ ಕೊನೆಯ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಲಾಗಿದೆ) ಜಪಿಸುವ ಪುರುಷನಿಗೆ ಇತರರು ಕ್ರೋಧದಿಂದ ಆಚರಿಸುವ ಆಭಿಚಾರಿಕ ಕೃತ್ಯಗಳು (ಮಾಯಾ ಮಾಟ ಮೊದಲಾದುವು) ತಟ್ಟುವುದಿಲ್ಲ. ಎಂದರೆ ಅವನನ್ನು ಆ ಕೃತ್ಯಗಳು ಹಿಂಸಿಸುವುದಿಲ್ಲ.

**ಯಮಂಗಿರಸಕಲ್ಪೈಸ್ತು ತದ್ವಿದೋಽಭಿಚರಂತಿ ಸಃ ।**
**ಪ್ರತ್ಯಂಗಿರಸಕಲ್ಪೇನ ಸರ್ವಾಂಸ್ತಾನ್ ಪ್ರತಿಬಾಧತೇ ॥ ೩೧ ॥**

ಅಂಗಿರಸಕಲ್ಪಪ್ರಕಾರ (ಅಥರ್ವವೇದದಲ್ಲಿ ಹೇಳಿರುವಂತೆ) ಆಭಿಚಾರಕವಿದ್ಯೆಗಳನ್ನು ತಿಳಿದವರು ಓರ್ವ ಪುರುಷನನ್ನುದ್ದೇಶಿಸಿ ಅವನಿಗೆ ಕೇಡನ್ನುಂಟುಮಾಡುವ ಉದ್ದೇಶದಿಂದ ಆಭಿಚಾರಿಕಕೃತ್ಯಗಳನ್ನು ಮಾಡಿದಲ್ಲಿ ಆಪುರುಷನು ಅದಕ್ಕೆ ಪ್ರತಿಯಾಗಿ ಪ್ರತ್ಯಂಗಿರಸಕಲ್ಪದಲ್ಲಿ ಹೇಳಿರುವ ಕ್ರಮದಂತೆ ಆಚರಿಸಿದರೆ ಆಭಿಚಾರಕ ಕೃತ್ಯಗಳ ಬಾಧೆಗೆ ಒಳಗಾಗದೆ ಅದಕ್ಕೆ ಪ್ರತಿಯಾಗಿ ತನ್ನ ಪ್ರತಿಸ್ಪರ್ಧಿಗಳಿಗೇ ಹಿಂಸೆಯನ್ನುಂಟುಮಾಡಲು ಶಕ್ತನಾಗುವನು.

**ಪ್ರತ್ಯಂಗಿರಸವಿದ್ವಾಂಸ್ತು ನ ರಿಷ್ಯೇತ ಕದಾಚನ ।**
**ನೈನಂ ಕೃತ್ಯಾ ನಿಹಿಂಸಂತಿ ಜ್ಞಾತಾಜ್ಞಾತಾನಿ ಯಾನಿ ಚ ॥ ೩೨ ॥**
**ಅಜಾನತಾ ಜಾನತಾ ವಾ ಕ್ರುದ್ಧೇನಾಮರ್ಷಿತೇನ ವಾ**
**ಆಕ್ರುಷ್ಟಂ ವಾ ದುರುಕ್ತಂವಾ ನೈನೋ ಲಿಂಪತಿ ತದ್ವಿದಂ ॥ ೩೩ ॥**

ಪ್ರತ್ಯಂಗಿರಸಮಂತ್ರಗಳನ್ನೂ ಅವನ್ನು ಪ್ರಯೋಗಿಸುವ ವಿಧಾನವನ್ನೂ ಅರಿತ ವಿದ್ವಾಂಸನಿಗೆ ಯಾವಾಗಲೂ ಅಭಿಚಾರಿಕಕೃತ್ಯಗಳ ಬಾಧೆಯಿಲ್ಲ ಉದ್ದೇಶಪೂರ್ವಕವಾಗಲಿ ತಿಳಿಯದೆ ಮಾಡಿರುವುದಾಗಲಿ ಯಾವ ಮಂತ್ರತಂತ್ರ ಗಳೂ ಇವನನ್ನು ಹಿಂಸಿಸಲಾರವು, ಕೋಪದಿಂದ ಅಥವಾ ಅಸೂಯೆಯಿಂದ, ತಿಳಿದು ಅಥವಾ ತಿಳಿಯದೆ ಮಾಡುವ ಮಂತ್ರ ತಂತ್ರಾದಿಗಳು, ವಶೀಕರಣ, ಶಪಿಸುವುದು ಮೊದಲಾದ ತಂತ್ರಗಳು ಈ ವಿದ್ವಾಂಸನನ್ನು ಏನೂ ಮಾಡಲಾರವು.

**ಏತಮೇವ ಜಪೇನ್ನಿತ್ಯಮೃಷಿಂ ಸ್ವಸ್ತ್ಯಯನಾಯ ವೈ ।**
**ಸರ್ವಪ್ರಾಯಶ್ಚಿತ್ತಮೇತದಭಾಷತ ಋಷಿಃ ಸ್ವಯಂ ॥ ೩೪ ॥**

ಕ್ಷೇಮಾಭ್ಯುದಯಕ್ಕಾಗಿ ಈ ಸೂಕ್ತವನ್ನು ಪ್ರತಿನಿತ್ಯವೂ ಜಪಿಸಬೇಕು. ಮತ್ತು ಈ ಸೂಕ್ತವು ಸರ್ವಲೋಪ ದೋಷಗಳಿಗೂ ಪ್ರಾಯಶ್ಚಿತ್ತರೂಪವಾಗಿರುವುದು ಎಂದು ಈ ಸೂಕ್ತದ ಋಷಿಯು ತಾನೇ ಹೇಳಿರುವನು.

**ಸ್ಥಾವರಣಾಂ ನಿವೇಶೇ ತು ನಗರಾಣಾಂ ತಥೈವ ಚ ।**
**ಗ್ರಾಮಾಣಾಂ ಚ ಗೃಹಾಣಾಂ ಚ ಜಪೇದಿಮಮೃಷಿಂ ಸದಾ ॥ ೩೫ ॥**

ಪರ್ವತಪ್ರದೇಶ, ನಗರ, ಗ್ರಾಮ, ಗೃಹ ಮೊದಲಾದ ಪ್ರದೇಶಗಳಲ್ಲಿ ಅನುಕೂಲವಾದ ಸ್ಥಳಗಳಲ್ಲಿ ಈ ಸೂಕ್ತವನ್ನೇ ಯಾವಾಗಲೂ ಜಪಿಸಬೇಕು.

**ಜಾತರೂಪಮಯಂ ವಿದ್ವಾನ್ಕಾರಯೇತ್ತ್ರಿವೃತಂ ಮಣಿಂ ।**
**ಸಹಸ್ರಸಂಪಾತಹುತಮೃಷಿಣಾ ತೇನ ತಂ ತತಃ ॥ ೩೬ ॥**

**ಪ್ರತಿಮುಂಚೇತ ಶಿರಸಿ ಗ್ರೀವಾಯಾಮುಥವೋರಸಿ ।**
**ನೈನಂ ಕೃತ್ಯಾ ನಿಹಿಂಸಂತಿ ಜ್ಞಾತಾಜ್ಞಾತಾನಿ ಯಾನಿ ಚ ॥ ೩೭ ॥**

ವಿವೇಕಿಯಾದ ಸಾಧಕನು ಜಾತರೂಪವೆಂಬ ವೃಕ್ಷವಿಶೇಷದಿಂದ ಮಣಿಗಳನ್ನು ನಿರ್ಮಿಸಿ ಅಂತಹ ಸಾವಿರ ಮಣಿಗಳನ್ನು ಪೋಣಿಸಿ ಮೂರೆಳೆಯ ಸರವನ್ನು ಮಾಡಿ ಅದನ್ನು ತನ್ನ ಶಿರಸ್ಸಿನಲ್ಲಾಗಲಿ, ಕಂಠದಲ್ಲಿಯಾಗಲಿ, ಎದೆಯಮೇಲಾಗಲಿ ಧರಿಸಿದಲ್ಲಿ ಮಾಯಾಮಾಟ ಮೊದಲಾದ ಆಭಿಚಾರಕಕೃತ್ಯಗಳು ಇವನನ್ನು ಏನೂ ಮಾಡಲಾರವು

**ಅನೇನೈವ ತು ಸೂಕ್ತೇನ ರಾಜ್ಞಾಂ ಚ ಸಮುಲೋಹಿತಂ ।**
**ಕಾರಯೇತ ಮಣಿಂ ವಿದ್ವಾಂಸ್ತಾವದೇವಾನುಮಂತ್ರಣಂ ॥ ೩೮ ॥**

**ಸಂಗ್ರಾಮೇಷು ಧ್ವಜಾಗ್ರಾಣಿ ವಾದಿತ್ರಾಣ್ಯನುಮಂತ್ರಯೇತ್ ।**
**ಆಸನಾನಿ ಚ ಶಯ್ಯಾಶ್ಚ ಯಾನಾನಿ ವಿವಿಧಾನಿ ಚ ॥ ೩೯ ॥**

**ತಸ್ಯಾಭಿಚರತಃ ಸಾಕ್ಷಾದಂಗಿರಸೋಽಪ್ಯೃಷೇಃ ಸ್ವಯಂ ।**
**ಪ್ರತ್ಯಂಗಿರಸಕಲ್ಪೇನ ಸರ್ವಂ ತತ್ಪ್ರತಿಬಾಧತೇ ॥ ೪೦ ॥**

ಮೇಲೆ ಹೇಳಿದ ಪ್ರಕಾರ ಮಣಿಗಳನ್ನು ನಿರ್ಮಿಸಿ ಅವುಗಳನ್ನು ಈ ಸೂಕ್ತಮಂತ್ರಗಳಿಂದ ಅಭಿಮಂತ್ರಿಸಿ ರಾಜರು ಯುದ್ಧಾದಿಗಳಲ್ಲಿ ಉಪಯೋಗಿಸುವ ಧ್ವಜಗಳ ತುದಿಯಲ್ಲಿ ಕಟ್ಟಬೇಕು. ಹಾಗೆಯೇ ನಾನಾವಿಧ ನಗಾರಿ ಮೊದಲಾದ ವಾದ್ಯಗಳು, ಆಸನಗಳು, ಹಾಸಿಗೆ ಇತರ ವಸ್ತುಗಳಲ್ಲಿಯೂ ಆ ಮಣಿಗಳನ್ನು ಕಟ್ಟಿದ್ದರೆ ಮಾಯಾತಂತ್ರಗಳಲ್ಲಿ ಕುಶಲನಾದ ಸಾಕ್ಷಾತ್ ಅಂಗಿರಸ ಋಷಿಯೇ ಅಭಿಚಾರಿಕಕೃತ್ಯಗಳನ್ನು ಪ್ರಯೋಗಮಾಡಿದರೂ ಪ್ರತ್ಯಂಗಿರಸಕಲ್ಪ ವಿಧಾನದಿಂದ ಅವೆಲ್ಲವನ್ನೂ ತಡೆಗಟ್ಟಬಹುದು.

**ಅಮಾನುಷೀರಭಿಚರೇತ್ ಕೃತ್ಯಾಸೂಕ್ತಂ ಜಪನ್ನಿದಂ ।**
**ಮುಚ್ಯತೇ ಸರ್ವತೋಽನಿಷ್ಟಾತ್ ಕಿಂಪುನರ್ಮಾನುಷಾದ್ಭಯಂ ॥ ೪೧ ॥**

ಜನಸಂಚಾರವಿಲ್ಲದ ರಹಸ್ಯಪ್ರದೇಶದಲ್ಲಿ ಕುಳಿತು ಈ ಕೃತ್ಯಾಸೂಕ್ತವನ್ನು ಜಪಿಸಿದರೆ ಅದರಿಂದ ಸಮಸ್ತವಿಧವಾದ ಅನಿಷ್ಟ, ಭಯ ಮೊದಲಾದವು ನಾಶವಾಗುವವು. ಮನುಷ್ಯರಿಂದ ಉಂಟಾಗಬಹುದಾದ ಭಯಭೀತಿಗಳು ಈ ಮಂತ್ರಜಪದ ಮುಂದೆ ಏನುಮಾಡಬಲ್ಲವು ?

**ತಪಸ್ವೀ ನಿಯತೋ ದಾಂತಃ ಪ್ರಯೋಕ್ತಾ ಚೇದ್ಭವೇದೃಷಿಂ ।**
**ಸರ್ವಂ ತರತಿ ಶಾಂತಾತ್ಮಾ ತಪೋ ಹಿ ಸುಮಹದ್ಬಲಂ ॥ ೪೨ ॥**

**ಆಯುಷ್ಯಮಾಯುರ್ವರ್ಚಸ್ಯಂ ಸೂಕ್ತಂ ದಾಕ್ಷಾಯಣಂ ಮಹತ್ ।**
**ಅಲಂಕಾರಂ ಹಿರಣ್ಯಂ ವಾ ಪ್ರಾಪ್ಯ ದಾಕ್ಷಾಯಣಂ ಜಪೇತ್ ।**
**ಪ್ರಾಯಶ್ಚ ಶ್ರಿಯಮಾದತ್ತೇ ಬಹು ಚಾನ್ನಂ ಸಮಶ್ನುತೇ ॥ ೪೩ ॥**

ತಪಸ್ವಿಯಾದ ಪುರುಷನು ನಿಯಮದಿಂದ ಶಾಂತಮನಸ್ಕನಾಗಿ ಈ ಸೂಕ್ತವನ್ನು ಜಪಿಸಿ ಅದರಂತೆ ಕರ್ಮಗಳನ್ನು ಪ್ರಯೋಗಿಸಿದಲ್ಲಿ ಅವನ ತಪೋಬಲದಿಂದ ಸಮಸ್ತ ಅನಿಷ್ಟಗಳನ್ನೂ ಭಯಭೀತಿಗಳನ್ನೂ ಪರಿಹರಿಸಿಕೊಂಡು ಸುಖವಾಗಿರುವನು. ದಕ್ಷಿಣಾಯನ ಪುಣ್ಯಕಾಲದಲ್ಲಿ ಈ ಮಹಾಸೂಕ್ತವನ್ನು ಜಪಿಸಿದಲ್ಲಿ ಆಯುಸ್ಸು, ವರ್ಚಸ್ಸು, ಅಲಂಕಾರ, ಸುವರ್ಣಾದ್ಯೈಶ್ವರ್ಯ, ಸಂಪತ್ತು, ಧನಧಾನ್ಯಸಮೃದ್ಧಿ ಇವೆಲ್ಲವೂ ಲಭಿಸುವವು.

॥ ಸಾಯಣಭಾಷ್ಯಂ ॥

**ಮಮಾಗ್ನ ಇತಿ ನವರ್ಚಂ ಷೋಡಶಂ ಸೂಕ್ತಮಾಂಗಿರಸಸ್ಯ ವಿಹವ್ಯಸ್ಯಾರ್ಷಂ ವೈಶ್ವದೇವಂ । ಅಂತ್ಯಾ ಜಗತೀ ಶಿಷ್ಟಾಸ್ತ್ರಿಷ್ಟುಭಃ । ಅನುಕ್ರಮ್ಯತೇ ಹಿ । ಮಮಾಗ್ನೇ ನವ ವಿಹವ್ಯೋ ವೈಶ್ವದೇವಂ ಜಗತ್ಯಂತಮಿತಿ ॥ ಸಂಸವೇ ನಿಮಿತ್ತಭೂತೇ ವೈಶ್ವದೇವಸೂಕ್ತಸ್ಯ ಪುರಸ್ತಾದೇತಚ್ಛಂಸ್ಯಂ । ಸೂತ್ರಿತಂ ಚ । ಮಮಾಗ್ನೇ ವರ್ಚ ಇತಿ ವೈಶ್ವದೇವಸೂಕ್ತಸ್ಯಾಪಿ ವೈತೇಷ್ವೇವ ನಿವಿದೋ ದಧ್ಯಾತ್ । ಆ. ೬-೬ । ಇತಿ ॥ ಸಮಾವರ್ತನೇಽನೇನ ಸೂಕ್ತೇನ ಶಿಷ್ಯಾಸುನಾ ಪ್ರತ್ಯೃಚಂ ಸಮಿದಾಧಾತವ್ಯಾ । ಸೂತ್ರಿತಂ ಚ । ಮಮಾಗ್ನೇ ವರ್ಚ ಇತಿ ಪ್ರತ್ಯೃಚಂ ಸಮಿಧೋಽಭ್ಯಾದಧ್ಯಾತ್ । ಆ. ಗೃ. ೩-೯-೨ । ಇತಿ ॥**

ಅನುವಾದವು— **ಮಮಾಗ್ನೇ** ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸಗೋತ್ರದ ವಿಹವ್ಯನೆಂಬುವನು ಋಷಿಯು, ವಿಶ್ವೇದೇವತೆಗಳು ದೇವತೆಯು, ಈ ಸೂಕ್ತದ ಕೊನೆಯ ಋಕ್ಕು ಜಗತೀಛಂದಸ್ಕವು, ಉಳಿದ ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಮಮಾಗ್ನೇ ನವ ವಿಹವ್ಯೋ ವೈಶ್ವದೇವಂ ಜಗತ್ಯಂತಂ** ಎಂದು ಹೇಳಿರುವುದು. ಸಂಸವದಲ್ಲಿ ವೈಶ್ವದೇವಸೂಕ್ತವನ್ನು ಪಠಿಸುವಾಗ ಪೂರ್ವಭಾವಿಯಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ —**ಮಮಾಗ್ನೇ ವರ್ಚ ಇತಿ ವೈಶ್ವದೇವಸೂಕ್ತಸ್ಯಾಪಿ ವೈತೇಷ್ವೇವ ನಿವಿದೋ ದಧ್ಯಾತ್** ಎಂಬ ಸೂತ್ರದಿಂದ (ಆ ೬-೬) ವಿವೃತವಾಗಿರುವುದು. ಸಮಾವರ್ತನ ಕರ್ಮದಲ್ಲಿಯೂ ಈ ಸೂಕ್ತದ ಪ್ರತಿ ಋಕ್ಕಿನಿಂದಲೂ ಸಮಿತ್ತನ್ನು ಅಗ್ನಿಯಲ್ಲಿ ಹಾಕಬೇಕೆಂದು ಆಶ್ವಲಾಯನ ಗೃಹಸೂತ್ರದ— **ಮಮಾಗ್ನೇ ವರ್ಚ ಇತಿ ಪ್ರತ್ಯೃಚಂ ಸಮಿಧೋಽಭ್ಯಾದಧ್ಯಾತ್** ಎಂಬ **ಸೂತ್ರದಿಂದ** (ಆ ಗೃ ೩-೯-೨) ವಿವೃತವಾಗಿರುವುದು,

## ಸೂಕ್ತ—೧೨೮

ಮಂಡಲ-೧೦ ॥ ಅನುವಾಕ-೧೦ ॥ ಸೂಕ್ತ-೧೨೮ ॥
ಅಷ್ಟಕ-೮ ॥ ಅಧ್ಯಾಯ-೭ ॥ ವರ್ಗ-೧೫,೧೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೇ—೯ ॥
ಋಷಿಃ—ವಿಹವ್ಯಃ ॥
ದೇವತಾ—ವಿಶ್ವೇದೇವಾಃ ॥
ಛಂದಃ—೧-೮ ತ್ರಿಷ್ಟುಪ್ । ೯ ಜಗತೀ ॥

॥ ಸಂಹಿತಾಪಾಠಃ ॥

ಮಮಾಗ್ನೇ ವರ್ಚೋ ವಿಹವೇಷ್ವಸ್ತು ವಯಂ ತ್ವೇಂಧಾನಾಸ್ತನ್ವಂ ಪುಷೇಮ।
ಮಹ್ಯಂ ನಮಂತಾಂ ಪ್ರದಿಶಶ್ಚತಸ್ರಸ್ತ್ವಯಾಧ್ಯಕ್ಷೇಣ ಪೃತನಾ ಜಯೇಮ ॥

॥ ಪದಪಾಠಃ ॥

ಮಮ । ಅಗ್ನೇ । ವರ್ಚಃ । ವಿಽಹವೇಷು । ಅಸ್ತು । ವಯಂ । ತ್ವಾ । ಇಂಧಾನಾಃ । ತನ್ವಂ । ಪುಷೇಮ ।
ಮಹ್ಯಂ । ನಮಂತಾಂ । ಪ್ರಽದಿಶಃ । ಚತಸ್ರಃ । ತ್ವಯಾ । ಅಧಿಽಅಕ್ಷೇಣ । ಪೃತನಾಃ । ಜಯೇಮ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ । ವಿವಿಧಮಾಹೂಯಂತೇ ಯೇಷು ಶೂರಾ ಇತಿ ವಿಹವಾಃ ಸಂಗ್ರಾಮಾಃ । ಯದ್ವಾ । ವಿವಿಧಂ ಯಾಗಾರ್ಥಂ ದೇವಾ ಆಹೂಯಂತ ಏಷ್ವಿತಿ ವಿಹವಾ ಯಜ್ಞಾಃ ॥ ಹ್ವಃ ಸಂಪ್ರಸಾರಣಂ ಚ ನ್ಯಭ್ಯುಪವಿಷು । ಪಾ. ೩-೩-೭೨ । ಇತ್ಯಧಿಕರಣೇಽಪ್ ಸಂಪ್ರಸಾರಣಂ ಚ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥ ಸಂಗ್ರಾಮೇಷು ಯಜ್ಞೇಷು ವಾ ವರ್ಚೋ ದೀಪ್ತಿಸ್ತ್ವದನುಗ್ರಹಾನ್ಮಮಾಸ್ತು। ಭವತು । ವಯಂ ಚ ತ್ವಾ ತ್ವಾಮಿಂಧಾನಾಃ ಸಮಿದ್ಭಿರ್ದೀಪಯಂತಸ್ತನ್ವಂ ತವ ಶರೀರಂ ಪುಷೇಮ । ಹವಿರ್ಭಿರ್ವರ್ಧಯೇಮ ॥ ಇಂಧೇಃ ಶಾನಚಿ ಶ್ನಸೋರಲ್ಲೋಪ ಉದಾತ್ತನಿವೃತ್ತಿಸ್ವರೇಣ ಶಾನಚ ಆದ್ಯುದಾತ್ತತ್ವೇ ಪ್ರಾಪ್ತೇ ವಿಭಾಷಾ ವೇಣ್ವಿಂಧಾನಯೋಃ । ಪಾ. ೬-೧-೨೧೫ । ಇತ್ಯಾದ್ಯುದಾತ್ತತ್ವಂ ॥ ತನ್ವಂ ಪುಷೇಮ ॥ ಪುಷೇರ್ಲಿಙಿ ಲಿಙ್ಯಾಶಿಷ್ಯಙ್ ॥ ಅಪಿ ಚ ಮಹ್ಯಂ ಮದರ್ಥಂ ॥ ಜಯಿ ಚೇತ್ಯಸ್ಮಾದ ಆದ್ಯುದಾತ್ತತ್ವಂ ॥ ಚತಸ್ರಃ ಪ್ರದಿಶಃ ಪ್ರಕೃಷ್ಟಾ ದಿಶಃ । ತದ್ವಾಸಿನೋ ಜನಾ ಇತ್ಯರ್ಥಃ । ನಮಂತಾಂ । ಸ್ವತ ಏವ ಪ್ರಹ್ವೀಭವಂತು ॥ ನಮತೇಃ ಕರ್ಮಕರ್ತರಿ ಲೋಟಿ ನ ದುಹಸ್ನುನಮಾಮಿತಿ ಯಕ್ಪ್ರತಿಷೇಧಃ ॥ ತ್ವಯಾಸ್ಮಾಭಿರ್ಹವಿರ್ಭಿಃ ಪ್ರವರ್ಧಿತೇನಾಧ್ಯಕ್ಷಣೇಶ್ವರೇಣ ಸತಾ ಪೃತನಾಃ ಶತ್ರುಸೇನಾ ಜಯೇಮ। ಅಭಿಭವೇಮ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ (ನಿನ್ನ ಅನುಗ್ರಹದಿಂದ) । **ವಿಹವೇಷು**—ಯಜ್ಞಗಳಲ್ಲಿ ಅಥವಾ ಯುದ್ಧಗಳಲ್ಲಿ । **ವರ್ಚಃ**—ದೀಪ್ತಿಯು ಎಂದರೆ ಸಾಮರ್ಥ್ಯವು । **ಮಮ**—ನನಗೆ । **ಅಸ್ತು**—ಉಂಟಾಗಲಿ । **ವಯಂ**—ನಾವು । **ತ್ವಾ**—ನಿನ್ನನ್ನು । **ಇಂಧಾನಾಃ**—ಸಮಿಧಾದಿಗಳಿಂದ ಉಜ್ಜ್ವಲಗೊಳಿಸಿ । **ತನ್ವಂ**—ನಿನ್ನ ಶರೀರವನ್ನು । **ಪುಷೇಮ**—ಹವಿರಾದಿಗಳಿಂದಪೋಷಿಸಿ ಬೆಳೆಸುತ್ತೇವೆ । **ಚತಸ್ರಃ ಪ್ರದಿಶಃ**—ನಾಲ್ಕು ದಿಕ್ಕುಗಳೂ ಎಂದರೆ ನಾಲ್ಕು ದಿಕ್ಕುಗಳಲ್ಲಿರುವ ಜನರೂ । **ಮಹ್ಯಂ**—ನನ್ನನ್ನುದ್ದೇಶಿಸಿ । **ನಮಂತಾಂ**—ನಮಸ್ಕರಿಸಲಿ । **ಅಧ್ಯಕ್ಷೇಣ**—ಸ್ವಾಮಿಯಾದ । **ತ್ವಯಾ**—ನಿನ್ನಿಂದ ಎಂದರೆ ನಿನ್ನಸಹಾಯದಿಂದ । **ಪೃತನಾಃ**—ಶತ್ರು ಸೇನೆಗಳನ್ನು । **ಜಯೇಮ**—ನಾವು ಜಯಿಸುವಂತಾಗಲಿ.

|| ಭಾವಾರ್ಥ ||

ಎಲೈ ಅಗ್ನಿಯೇ, ನಿನ್ನ ಅನುಗ್ರಹದಿಂದ ಯಜ್ಞಗಳಲ್ಲಿ ಅಥವಾ ಯುದ್ಧಗಳಲ್ಲಿ ನನಗೆ ಶಕ್ತಿಸಾಮರ್ಥ್ಯವುಂಟಾಗಲಿ. ನಿನ್ನನ್ನು ಸಮಿದಾದಿಗಳಿಂದ ಉಜ್ಜ್ವಲಗೊಳಿಸಿ ನಿನ್ನ ಶರೀರವನ್ನು ಹವಿರಾದಿಗಳಿಂದ ಪೋಷಿಸಿ ಬೆಳೆಸುತ್ತೇವೆ. ನಾಲ್ಕು ದಿಕ್ಕುಗಳಲ್ಲಿರುವ ಜನರು ನನಗೆ ನಮಸ್ಕರಿಸಲಿ ಎಂದರೆ ನನ್ನ ಆಜ್ಞೆಗೆ ಒಳಪಟ್ಟಿರಲಿ. ಸರ್ವರಿಗೂ ಒಡೆಯನಾದ ನಿನ್ನ ಸಹಾಯದಿಂದ ನಾವು ಶತ್ರುಸೇನೆಗಳನ್ನು ಜಯಿಸುವಂತಾಗಲಿ.

## English Translation

May glory, Agni, be mine in battle, may we, kindling you, cherish your person. may the (inhabitants of the) four quarters bow down before me, may we with you for our leader overcome (hostile) armies.

|| ಸಂಹಿತಾಪಾಠಃ ||

ಮಮ ದೇವಾ ವಿಹವೇ ಸಂತು ಸರ್ವ ಇಂದ್ರವಂತೋ ಮರುತೋ ವಿಷ್ಣು-
ರಗ್ನಿಃ |
ಮಮಾಂತರಿಕ್ಷಮುರುಲೋಕಮಸ್ತು ಮಹ್ಯಂ ವಾತಃ ಪವತಾಂ ಕಾಮೇ
ಅಸ್ಮಿನ್ || ೨ ||

|| ಪದಪಾಠಃ ||

ಮಮ | ದೇವಾಃ | ವಿಽಹವೇ | ಸಂತು | ಸರ್ವೇ | ಇಂದ್ರಽವಂತಃ | ಮರುತಃ | ವಿಷ್ಣುಃ | ಅಗ್ನಿಃ |
ಮಮ | ಅಂತರಿಕ್ಷಂ | ಉರುಽಲೋಕಂ | ಅಸ್ತು | ಮಹ್ಯಂ | ವಾತಃ | ಪವತಾಂ | ಕಾಮೇ | ಅಸ್ಮಿನ್ ||

|| ಸಾಯಣಭಾಷ್ಯಂ ||

ಸರ್ವೇ ದೇವಾ ವಿಹವೇ ಸಂಗ್ರಾಮೇ ಯಜ್ಞೇ ವಾ ಮಮ ಸಂತು | ಮಮೈವ ಸಾಧಕಾ ಭವಂತು| ಕೇ ಪುನಸ್ತೇ | ಇಂದ್ರವಂತ ಇಂದ್ರೇಣ ಯುಕ್ತಾ ಮರುತೋ ವಿಷ್ಣುರಗ್ನಿಶ್ಚ| ತಥಾಂತರಿಕ್ಷಂ ಮಮೋರುಲೋಕಂ ವಿಸ್ತೀರ್ಣಪ್ರಕಾಶಕಮಸ್ತು || ಲೋಕೃ ದರ್ಶನೇ | ಭಾವೇ ಘಞ್ | ಲೋಕ ಆಲೋಕಃ ಪ್ರಕಾಶಃ | ಉರುರ್ಲೋಕೋ ಯಸ್ಯೇತಿ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ || ಅಪಿ ಚಾಸ್ಮಿನ್ಕಾಮೇ ಕಾಮಯಿತವ್ಯೇ ಫಲೇ ನಿಮಿತ್ತಭೂತೇ ಸತಿ ವಾತೋ ವಾಯುಃ ಪವತಾಂ | ಅನುಗುಣಂ ಪ್ರವಾತು || ಪೂಙ್ ಪವನೇ ಭೌವಾದಿಕಃ | ಊಡಿದಮಿತ್ಯಾದಿನೇದಮಃ ಸಪ್ತಮ್ಯಾ ಉದಾತ್ತತ್ವಂ ||

॥ ಪ್ರತಿಪದಾರ್ಥ ॥

**ಇಂದ್ರವಂತಃ**— ಇಂದ್ರನಿಂದ ಸಹಿತರಾದ । **ಮರುತಃ**—ಮರುದ್ದೇವತೆಗಳೂ । **ವಿಷ್ಣುಃ**—ವಿಷ್ಣುವೂ । **ಅಗ್ನಿಃ**—ಅಗ್ನಿಯೂ ಇವರೇ ಮೊದಲಾದ । **ಸರ್ವೇ ದೇವಾಃ**—ಸಮಸ್ತದೇವತೆಗಳೂ । **ವಿಹವೇ**—ಯುದ್ಧದಲ್ಲಿ ಅಥವಾ ಯಜ್ಞದಲ್ಲಿ । **ಮಮ**— ನನ್ನವರಾಗಿ ಎಂದರೆ ನನಗೆ ಸಹಾಯಕರಾಗಿ । **ಸಂತು**— ಇರಲಿ (ಹಾಗೆಯೇ) । **ಅಂತರಿಕ್ಷಂ**—ಅಂತರಿಕ್ಷಲೋಕವು । **ಮಮ**—ನನ್ನ ವಿಷಯದಲ್ಲಿ । **ಉರುಲೋಕಂ**—ವಿಸ್ತಾರವಾದ ಪ್ರಕಾಶವುಳ್ಳದಾಗಿ । **ಅಸ್ತು**—ಇರಲಿ । **ಮಹ್ಯಂ**—ನನಗಾಗಿ । **ಕಾಮೇ**— ಫಲಾಪೇಕ್ಷೆಯಾದ । **ಅಸ್ಮಿನ್**— ನನ್ನಲ್ಲಿ । **ವಾತಃ**—ವಾಯುವು । **ಪ್ರವತಾಂ**—ಸುಖಕರವಾಗಿ ಬೀಸಲಿ.

॥ ಭಾವಾರ್ಥ ॥

ಇಂದ್ರ, ಮರುದ್ದೇವತೆಗಳು, ವಿಷ್ಣು, ಅಗ್ನಿ ಮೊದಲಾದ ಸಮಸ್ತದೇವತೆಗಳೂ ಯುದ್ಧದಲ್ಲಿ ಅಥವಾ ಯಜ್ಞದಲ್ಲಿ ನನಗೆ ಸಹಾಯಕರಾಗಿರಲಿ ನನ್ನ ವಿಷಯದಲ್ಲಿ ಅಂತರಿಕ್ಷವೂ ಚೆನ್ನಾಗಿ ಪ್ರಕಾಶಿಸಲಿ. ಫಲಾಪೇಕ್ಷೆಯಾದ ನನಗೋಸ್ಕರ ವಾಯುವು ಹಿತಕರವಾಗಿ ಬೀಸಲಿ

English Translation.

May all the gods be on my side in battle, the Maruts with Indra, Vishnu and Agni, may the expanded firmament be mine, may the wind blow (propitiously) to this my desire.

॥ ಸಂಹಿತಾಪಾಠಃ ॥

ಮಯಿ ದೇವಾ ದ್ರವಿಣಮಾ ಯಜಂತಾಂ ಮಯ್ಯಾಶೀರಸ್ತು ಮಯಿ ದೇವಹೂತಿಃ ।
ದೈವ್ಯಾ ಹೋತಾರೋ ವನುಷಂತ ಪೂರ್ವೇಽರಿಷ್ಟಾಃ ಸ್ಯಾಮ ತನ್ವಾ ಸುವೀರಾಃ॥

॥ ಪದಪಾಠಃ ॥

ಮಯಿ । ದೇವಾಃ । ದ್ರವಿಣಂ । ಆ । ಯಜಂತಾಂ । ಮಯಿ । ಆऽಶೀಃ । ಅಸ್ತು । ಮಯಿ । ದೇವऽಹೂತಿಃ ।
ದೈವ್ಯಾಃ । ಹೋತಾರಃ । ವನುಷಂತ । ಪೂರ್ವೇ । ಅರಿಷ್ಟಾಃ । ಸ್ಯಾಮ । ತನ್ವಾ । ಸುऽವೀರಾಃ ॥ ೩ ॥

॥ ಸಾಯಣಭಾಷ್ಯಂ ॥

ದೇವಾಃ ಸರ್ವೇ ದ್ರವಿಣಂ ಧನಂ ಮಯಿ ಸ್ತೋತರ್ಯಾ ಯಜಂತಾಂ । ಗಮಯಂತು । ಮಹ್ಯಂ ದದತ್ವಿತ್ಯರ್ಥಃ । ತಥಾಶೀರಾಶಂಸನೀಯಂ ಯಜ್ಞಫಲಂ ಚ ಮಯ್ಯೇವಾಸ್ತು । ದೇವಾನಾಂ ಹೂತಿರಾ-

ಹ್ವಾನಮಸ್ಮಿನ್ನಿತಿ ದೇವಹೂತಿರ್ಯಜ್ಞಃ । ಸ ಚ ಮಯ್ಯಸ್ತು । ಅಪಿ ಚ ದೇವಾನಾಮಿಮೇ ದೈವ್ಯಾಃ ॥ ದೇವಾದ್ಯಞಞಾವಿತಿ ಯಞ್ ॥ ತಾದೃಶಾ ಹೋತಾರಃ ಸಾಧುಹೋಮನಿಷ್ಪಾದಕಾ ಮದೀಯಾ ಋತ್ವಿಜಃ ಪೂರ್ವೇಽನ್ಯದೀಯೇಭ್ಯ ಋತ್ವಿಗ್ಭ್ಯಃ ಪ್ರಥಮಭಾವಿನಃ ಸಂತೋ ವನುಷಂತ । ದೇವಾನ್ಸಂಭಜಂತಾಂ ॥ ವನತೇಶ್ಛಾಂದಸೇ ಲಙಿ ವ್ಯತ್ಯಯೋ ಬಹುಲಮಿತಿ ತ್ರಯೋ ವಿಕರಣಾ ಉಪ್ರತ್ಯಯಃ ಸಿಪ್ಶಪೌ ಚ । ಅಡಭಾವಶ್ಛಾಂದಸಃ ॥ ವಯಂ ಚ ತನ್ವಾ ಶರೀರೇಣಾರಿಷ್ಟಾ ಅಹಿಂಸಿತಾಃ ಸುವೀರಾಃ ಸುಪುತ್ರಾಶ್ಚ ಸ್ಯಾಮ । ಭವೇಮ ॥ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ದೇವಾಃ**—ಸಮಸ್ತದೇವತೆಗಳು। **ಮಯಿ**—ಸ್ತೋತ್ರಮಾಡುವ ನನ್ನಲ್ಲಿ ಅಥವಾ ನನಗೆ। **ದ್ರವಿಣಂ**—ಧನವನ್ನು । **ಆ ಯಜಂತಾಂ**—ಒದಗಿಸಿ ಕೊಡಲಿ। **ಆಶೀಃ**—ಆಶೀರ್ವಾದರೂಪವಾದ ಯಜ್ಞಫಲವು। **ಮಯಿ ಅಸ್ತು**—ನನಗೆ ಲಭಿಸಲಿ। **ದೇವಹೂತಿಃ**—ಯಜ್ಞವೂ ಸಹ। **ಮಯಿ**—ನನ್ನಿಂದ ನಡೆಸಲ್ಪಡಲಿ। **ದೈವ್ಯಾಃ**—ದೇವಸಂಬಂಧಿಗಳಾದ ನಮ್ಮ। **ಹೋತಾರಃ**—ಋತ್ವಿಕ್ಕುಗಳು। **ಪೂರ್ವೇ**--ಇತರರಿಗಿಂತಲೂ ಪೂರ್ವಭಾವಿಯಾಗಿಯೇ। **ವನುಷಂತ**—ದೇವತೆಗಳನ್ನು ಯಜಿಸಲಿ। **ತನ್ವಾ**—ನಮ್ಮ ಶರೀರದಿಂದ **ಅರಿಷ್ಟಾಃ**—ಅಹಿಂಸಿತರಾಗಿರೋಣ। **ಸುವೀರಾಃ**—ವೀರ್ಯವಂತರಾದ ಪುತ್ರರನ್ನು। **ಸ್ಯಾಮ**—ಪಡೆಯುವಂತಾಗಲಿ.

॥ ಭಾವಾರ್ಥ ॥

ಸಮಸ್ತದೇವತೆಗಳೂ ಸೋತ್ರಮಾಡುವ ನನಗೆ ಧನವನ್ನು ಒದಗಿಸಿಕೊಡಲಿ. ಅವರ ಅನುಗ್ರಹದಿಂದ ಆಶೀರ್ವಾದರೂಪವಾದ ಯಜ್ಞವೂ ಅದರ ಫಲವೂ ನನಗೆ ಲಭಿಸಲಿ. ದೇವತೆಗಳನ್ನು ಆಹ್ವಾನಮಾಡುವ ನಮ್ಮ ಋತ್ವಿಕ್ಕುಗಳು ಎಲ್ಲರಿಗಿಂತಲೂ ಮೊದಲೇ ದೇವತೆಗಳನ್ನು ಪ್ರಾರ್ಥಿಸಿ ಯಜಿಸಲಿ. ನಾವು ನಮ್ಮ ಶರೀರಗಳಲ್ಲಿ ರೋಗಾದ್ಯುಪದ್ರವಗಳಿಲ್ಲದೆ ಸುಖವಾಗಿರೋಣ ಮತ್ತು ವೀರ್ಯವಂತರಾದ ಪುತ್ರರನ್ನು ನಾವು ಪಡೆಯುವಂತಾಗಲಿ.

## English Translation.

May the gods bestow wealth upon me, may (their) blessing be upon me, may sacrifice in which the gods are invoked be (bencficial) to me, may my invokers of the gods be the first to propitiate them; may we be unharmed in body and blessed with male offspring.

॥ ಸಂಹಿತಾಪಾಠಃ ॥

ಮಹ್ಯಂ ಯಜಂತು ಮಮ ಯಾನಿ ಹವ್ಯಾಕೂತಿಃ ಸತ್ಯಾ ಮನಸೋ ಮೇ ಅಸ್ತು ।

ಏನೋ ಮಾ ನಿ ಗಾಂ ಕತಮಚ್ಚನಾಹಂ ವಿಶ್ವೇ ದೇವಾಸೋ ಅಧಿ ವೋಚತಾ ನಃ ॥ ೪ ॥

॥ ಪದಪಾಠಃ ॥

ಮಹ್ಯಂ । ಯಜಂತು । ಮಮ । ಯಾನಿ । ಹವ್ಯಾ । ಆऽಕೂತಿಃ । ಸತ್ಯಾ । ಮನಸಃ । ಮೇ । ಅಸ್ತು ।

ಏನಃ । ಮಾ । ನಿ । ಗಾಂ । ಕತಮತ್ । ಚನ । ಅಹಂ । ವಿಶ್ವೇ । ದೇವಾಸಃ । ಅಧಿ । ವೋಚತ । ನಃ ॥ ೪ ॥

॥ ಸಾಯಣಭಾಷ್ಯಂ ॥

ಮಹ್ಯಂ ಮದರ್ಥಂ ಯಜಂತು । ಋತ್ವಿಜೋ ದೇವಾನ್ಹವಿರ್ಭಿರ್ಯಜಂತು । ಯದ್ವಾ । ಷಷ್ಠ್ಯರ್ಥೇ ಚತುರ್ಥೀ । ಮಹ್ಯಂ ಮದೀಯಾ ಋತ್ವಿಜ ಇತ್ಯರ್ಥಃ । ಮಮ ಸ್ವಭೂತಾನಿ ಹವ್ಯಾನಿ ಯಾನಿ ಹವೀಂಷಿ ಚರುಪುರೋಡಾಶಾದೀನಿ ಸಂತಿ ತೈರ್ಹವಿರ್ಭಿರಿತ್ಯರ್ಥಃ । ತಥಾ ಮೇ ಮನಸ ಆಕೂತಿಃ ಸಂಕಲ್ಪನಮಭೀಷ್ಟಸ್ಯ ಪ್ರಾರ್ಥನಂ ಸತ್ಯಾ ಯಥಾರ್ಥಮಸ್ತು । ಅಪಿ ಚಾಹಂ ಕತಮಚ್ಚನ ಕಿಮಪ್ಯೇನಃ ಪಾಪಂ ಮಾ ನಿ ಗಾಂ । ಮಾ ನಿಯತಂ ನಿಕೃಷ್ಟತರಂ ವಾ ಗಚ್ಛೇಯಂ । ಪಾಪಂ ಮಾ ಕಾರ್ಷಮಿತ್ಯರ್ಥಃ ॥ ಏತೇರ್ಮಾಙಿ ಲುಙೀಣೋ ಗಾ ಲುಙೀತಿ ಗಾದೇಶಃ । ಗಾತಿಸ್ಥೇತಿ ಸಿಚೋ ಲುಕ್ ॥ ಅಪಿ ಚ ಹೇ ವಿಶ್ವೇ ಸರ್ವೇ ದೇವಾಸೋ ದೇವಾಃ ಯೂಯಂ ನೋऽಸ್ಮಾಕಮಧಿ ವೋಚತ । ವಿವಾದೇಷು ಪಕ್ಷಪಾತೇನ ಬ್ರೂತ ॥ ವಕ್ತೇರ್ಲೋಟಿ ವ್ಯತ್ಯಯೇನಾಟ್ । ವಚ ಉಮಿತ್ಯುಮಾಗಮಃ ॥

॥ ಪ್ರತಿಪದಾರ್ಥ ॥

**ಮಮ**—ನನ್ನ । **ಯಾನಿ ಹವ್ಯಾನಿ**—ಚರುಪುರೋಡಾಶಾದಿ ಯಾವ ಹವಿಸ್ಸುಗಳಿವೆಯೋ ಅವುಗಳನ್ನು । **ಮಹ್ಯಂ**—ನನಗಾಗಿ ಅಥವಾ ನನ್ನ ಋತ್ವಿಕ್ಕುಗಳು । **ಯಜಂತು**—ದೇವತೆಗಳಿಗೆ ಅರ್ಪಿಸಲಿ । **ಮೇ**—ನನ್ನ । **ಮನಸಃ**—ಮನಸ್ಸಿನ । **ಆಕೂತಿಃ**—ಅಭೀಷ್ಟಪ್ರಾರ್ಥನೆಯು । **ಸತ್ಯಾ**—ಯಥಾರ್ಥವಾಗಿ । **ಅಸ್ತು**—ನೆರವೇರಲಿ । **ಅಹಂ**—ನಾನು । **ಕತಮಚ್ಚನ**—ಯಾವವಿಧವಾದ । **ಏನಃ**—ಪಾಪವನ್ನೂ । **ಮಾ ನಿ ಗಾಂ**—ಹೊಂದದಂತಾಗಲಿ । **ವಿಶ್ವೇ ದೇವಾಸಃ**—ಎಲೈ ಸಮಸ್ತ ದೇವತೆಗಳೇ । **ನಃ**—ನಮಗೆ । **ಅಧಿ ವೋಚತ**—ಒಳ್ಳೆಯದಾಗುವಂತೆ ನುಡಿಯಿರಿ ಎಂದರೆ ಆಶೀರ್ವದಿಸಿರಿ.

॥ ಭಾವಾರ್ಥ ॥

ನಾನು ಸಿದ್ಧಪಡಿಸಿರುವ ಈ ಹವಿಸ್ಸನ್ನು ನನ್ನ ಋತ್ವಿಜರು ನನಗಾಗಿ ದೇವತೆಗಳಿಗೆ ಅರ್ಪಿಸಲಿ. ನನ್ನ ಮನಸ್ಸಿನಲ್ಲಿರುವ ಕೋರಿಕೆಯು ನೆರವೇರಲಿ. ನನಗೆ ಯಾವವಿಧವಾದ ಪಾಪವೂ ಸಂಭವಿಸದಿರಲಿ. ಎಲೈ ಸಮಸ್ತ ದೇವತೆಗಳೇ, ನೀವು ನಮಗೆ ಒಳ್ಳೆಯದಾಗಲೆಂದು ಆಶೀರ್ವದಿಸಿರಿ.

## English Translation.

May (my priests) offer for me whatever oblations of mine (there may be), may the purpose of my mind be sincere; may I not fall into any kind of sin, universal gods, bless us.

॥ ಸಂಹಿತಾಪಾಠಃ ॥

ದೇವೀಃ ಷಳುರ್ವೀರುರು ನಃ ಕೃಣೋತ ವಿಶ್ವೇ ದೇವಾಸ ಇಹ ವೀರಯಧ್ವಂ।
ಮಾ ಹಾಸ್ಮಹಿ ಪ್ರಜಯಾ ಮಾ ತನೂಭಿರ್ಮಾ ರಧಾಮ ದ್ವಿಷತೇ ಸೋಮ ರಾಜನ್ ॥ ೫ ॥

॥ ಪದಪಾಠಃ ॥

ದೇವೀಃ । ಷಟ್ । ಉರ್ವೀಃ । ಉರು । ನಃ । ಕೃಣೋತ । ವಿಶ್ವೇ । ದೇವಾಸಃ । ಇಹ । ವೀರಯಧ್ವಂ ।
ಮಾ । ಹಾಸ್ಮಹಿ । ಪ್ರಽಜಯಾ । ಮಾ । ತನೂಭಿಃ । ಮಾ । ರಧಾಮ । ದ್ವಿಷತೇ । ಸೋಮ । ರಾಜನ್ ॥

॥ ಸಾಯಣಭಾಷ್ಯಂ ॥

ಹೇ ಷಡುರ್ವೀಃ ಷಟ್ಸಂಖ್ಯಾಕಾ ಉರ್ವ್ಯಃ । ಏತಾಶ್ಚಾನ್ಯತ್ರಾಮ್ನಾಯಂತೇ । ಷಣ್ಮೋರ್ವೀರಂಹಸಃ ಪಾಂತು ದ್ಯೌಶ್ಚ ಪೃಥಿವೀ ಚಾಹಶ್ಚ ರಾತ್ರಿಶ್ಚಾಪಶ್ಚೌಷಧಯಶ್ಚೇತಿ । ಈದೃಶ್ಯೋ ಹೇ ದೇವೀರ್ದೇವ್ಯಃ ॥ ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘಃ । ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಮಿತ್ಯಸ್ಯಾವಿದ್ಯಮಾನತ್ವನಿಷೇಧೇನ ಷಳುರ್ವೀರಿತ್ಯನಯೋರಾಮಂತ್ರಿತಯೋಃ ಪದಾತ್ಪರತ್ವಾದಾಷ್ಟಮಿಕಮಾಮಂತ್ರಿತಾನುದಾತ್ತತ್ವಂ ॥ ತಾ ಯೂಯಮುರು ವಿಸ್ತೀರ್ಣಂ ಧನಂ ನೋಽಸ್ಮಾಕಂ ಕೃಣೋತ । ಕುರುತ ॥ ಕೃವಿ ಹಿಂಸಾಕರಣಯೋಃ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ತಪ್ತನಪ್ತನಥನಾಶ್ಚೇತಿ ತಸ್ಯ ತಬಾದೇಶಃ ॥ ಹೇ ವಿಶ್ವೇ ಸರ್ವೇ ದೇವಾಸೋ ದೇವಾಃ ಯೂಯಂ ಚೇಹಾಸ್ಮಿನ್ಧನೇ ಪ್ರಾಪ್ತವ್ಯೇ ವಿಷಯೇ ವೀರಯಧ್ವಂ । ವಿಕ್ರಾಮಯತ । ತಥಾ ವಯಂ ತದ್ಧನಂ ಲಭೇಮಹಿ । ತಥಾ ವೀರ್ಯವಂತೋ ಯೂಯಂ ಪ್ರಯಚ್ಛಧ್ವಮಿತ್ಯರ್ಥಃ ॥ ವೀರ ವಿಕ್ರಾಂತೌ ॥ ಅಪಿ ಚ ಪ್ರಜಯಾ ಪುತ್ರಾದಿರೂಪಯಾ ಮಾ ಹಾಸ್ಮಹಿ । ವಯಂ ಮಾ ಪರಿತ್ಯಜ್ಯೇಮಹಿ । ಮಾ ಚ ತನೂಭಿಃ ಶರೀರೈಸ್ತ್ಯಜ್ಯೇಮಹಿ । ಅಸ್ಮಾನ್ಕದಾಚಿದಪಿ ಪುತ್ರಾದಯಃ ಶರೀರಾಣಿ ಚ ಮಾ ಪರಿತ್ಯಾಕ್ಷುರಿತ್ಯರ್ಥಃ ॥ ಓ ಹಾಕ್ ತ್ಯಾಗೇ । ಅಸ್ಮಾತ್ಕರ್ಮಣಿ ಲುಙಿ ಚಿಣ್ವದ್ಭಾವಾಭಾವೇ ರೂಪಮೇತತ್ ॥ ತಥಾ ಹೇ ರಾಜನ್ರಾಜಮಾನ ಯದ್ವಾಸ್ಮಾಕಂ ಸ್ವಾಮಿನ್ ಹೇ ಸೋಮ ದ್ವಿಷತೇಽಪ್ರೀತಿಂ ಕುರ್ವತೇ ॥ ದ್ವಿಷೇಃ ಶತರ್ಯ-

**ದಾದಿತ್ವಾಚ್ಚ್ಲೇ ಲುಕ್ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯೇತಿ ಚತುರ್ಥೀ ॥ ದ್ವಿಷತೇ ಶತ್ರೋರ್ಮಾ ರಧಾಮ । ಮಾ ವಶಂ ಪ್ರಾಪ್ನುಯಾಮ। ತಥಾ ತ್ವಂ ಕುರ್ವಿತ್ಯರ್ಥಃ। ರಧ್ಯತಿರ್ವಶಗಮನ ಇತಿ ಯಾಸ್ಕಃ । ನಿ. ೬-೩೨ । ಯದ್ವಾ । ದ್ವಿಷತೇ ಶತ್ರವೇ ತದರ್ಥಂ ಮಾ ರಧಾಮ । ಪರಿಪಕ್ವಾ ಹನನಾರ್ಹಾ ಮಾ ಭೂಮ । ರಧ ಹಿಂಸಾಸಂರಾಧ್ಯೋಃ । ಸಂರಾದ್ಧಿಃ ಪಾಕ ಇತಿ ತದ್ವೃತ್ತಿಃ । ಮಾಙಿ ಲುಙಿ ಪುಷಾದಿತ್ವಾಚ್ಚ್ಲೇರಙಾದೇಶಃ ॥**

॥ ಪ್ರತಿಪದಾರ್ಥ ॥

**ಷಟ್ ಉರ್ವೀಃ**—ಷಟ್ಸಂಖ್ಯಾಕರೂ ಮಹಾಮಹಿಮರೂ ಆದ । **ದೇವೀಃ**—ದೇವಿಯರೇ ನೀವು । **ನಃ**—ನಮಗೆ । **ಉರು**—ಬಹಳವಾದ ಧನವನ್ನು । **ಕೃಣೋತ**—ಒದಗಿಸಿಕೊಡಿ । **ಇಹ**—ಈ ಧನ ಪ್ರಾಪ್ತಿ ವಿಷಯದಲ್ಲಿ । **ವಿಶ್ವೇ ದೇವಾಸಃ**- ಎಲೈ ವಿಶ್ವೇದೇವತೆಗಳೇ ನೀವು । **ವೀರಯಧ್ವಂ**—ಪ್ರಯತ್ನಪಡಿ (ಮತ್ತು ನಾವು) । **ಪ್ರಜಯಾ**--ಪುತ್ರಾದಿಗಳಿಂದ । **ಮಾ ಹಾಸ್ಮಹಿ**–ರಹಿತರಾಗದಿರೋಣವಾಗಲಿ । **ತನೂಭಿಃ**—ಶರೀರಗಳಿಂದಲೂ । **ಮಾ**—ತ್ಯಜಿಸಲ್ಪಡದಿರಲಿ । **ರಾಜನ್** –ಒಡೆಯನಾದ ಅಥವಾ ಪ್ರಕಾಶಮಾನನಾದ । **ಸೋಮ**—ಎಲೈ ಸೋಮದೇವನೇ । **ದ್ವಿಷತೇ**—ನಮ್ಮನ್ನು ದ್ವೇಷಿಸುವ ಶತ್ರುಗಳಿಗೆ । **ಮಾ ರಧಾಮ**—ನಾವು ವಶರಾಗದಿರಲಿ.

॥ ಭಾವಾರ್ಥ ॥

ಮಹಾಮಹಿಮಾನ್ವಿತೆಯರಾದ ಎಲೈ ಆರುಮಂದಿ ದೇವಿಯರೇ, ನೀವು ನಮಗೆ ಬಹಳವಾದ ಧನವನ್ನು ಒದಗಿಸಿಕೊಡಿ. ಈ ವಿಷಯದಲ್ಲಿ ವಿಶ್ವೇದೇವತೆಗಳೂ ನಮಗೆ ಸಹಾಯಮಾಡಲು ಪ್ರಯತ್ನಿಸಲಿ. ನಾವು ಪುತ್ರಾಗಳಿಲ್ಲದೆ ಇಲ್ಲದಿರಲಿ ಎಂದರೆ ನಮಗೆ ಪುತ್ರಾದಿಗಳ ಅಭಾವವಿಲ್ಲದಿರಲಿ ಮತ್ತು ಶರೀರವಿಯೋಗವೂ ಎಂದರೆ ಮರಣವೂ ಸಂಭವಿಸದಿರಲಿ ಎಲೈ ಸ್ವಾಮಿಯಾದ ಸೋಮನೇ, ನಮ್ಮನ್ನು ದ್ವೇಷಿಸುವ ಶತ್ರುಗಳ ಅಧೀನರಾಗಿ ನಾವು ಸಂಹರಿಸಲ್ಪಡದಿರಲಿ.

## English Translation.

You, six mighty goddesses, bestow upon us ample (wealth); univarsal gods display prowess here; let us not be bereft of our offspring, or be harmed in our bodies, may we not become subject to our enemy, royal Soma.

॥ ವಿಶೇಷವಿಷಯಗಳು ॥

ಇಲ್ಲಿ **ಷಟ್ ಉರ್ವೀಃ ದೇವೀಃ** ಎಂದರೆ ಭಾಷ್ಯಕಾರರು—**ಷಣ್ಮೋರ್ವೀ ರಂಹಸಃ ಪಾಂತು ದ್ಯೌಶ್ಚ ಪೃಥಿವೀ ಚಾಹಶ್ಚ ರಾತ್ರಿಶ್ಚಾಪಶ್ಚೌಷಧಯಶ್ಚ**—ದ್ಯೌಃ (ಸ್ವರ್ಗ), ಪೃಥಿವೀ, ಅಹಸ್ಸು (ಹಗಲು), ರಾತ್ರಿ, ಉದಕಗಳು, ಓಷಧಿ ವನಸ್ಪತಿಗಳು ಇವುಗಳ ಅಭಿಮಾನಿದೇವತೆಗಳಾದ ಆರುಮಂದಿ ದೇವಿಯರು ಎಂದು ಅರ್ಥಮಾಡಿ ಆ ವಿಷಯದಲ್ಲಿ ಮೇಲಿನ ಶ್ರುತಿವಾಕ್ಯವನ್ನು ಉದಾಹರಿಸಿದಾರೆ.

॥ ಸಂಹಿತಾಪಾಠಃ ॥

ಅಗ್ನೇ ಮನ್ಯುಂ ಪ್ರತಿನುದನ್ಪರೇಷಾಮದಬ್ಧೋ ಗೋಪಾಃ ಪರಿ ಪಾಹಿ ನಸ್ತ್ವಂ ।
ಪ್ರತ್ಯಂಚೋ ಯಂತು ನಿಗುತಃ ಪುನಸ್ತೇ೩ಮೈಷಾಂ ಚಿತ್ತಂ ಪ್ರಬುಧಾಂ ವಿ ನೇಶತ್ ॥ ೬ ॥

॥ ಪದಪಾಠಃ ॥

ಅಗ್ನೇ । ಮನ್ಯುಂ । ಪ್ರತಿऽನುದನ್ । ಪರೇಷಾಂ । ಅದಬ್ಧಃ । ಗೋಪಾಃ । ಪರಿ । ಪಾಹಿ । ನಃ । ತ್ವಂ ।
ಪ್ರತ್ಯಂಚಃ । ಯಂತು । ನಿऽಗುತಃ । ಪುನರಿತಿ । ತೇ । ಅಮಾ । ಏಷಾಂ । ಚಿತ್ತಂ । ಪ್ರऽಬುಧಾಂ । ವಿ । ನೇಶತ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಪರೇಷಾಂ ಶತ್ರೂಣಾಂ ಮನ್ಯುಂ ಕ್ರೋಧಂ ಪ್ರತಿನುದನ್ ಪ್ರತಿಮುಖಂ ಪ್ರೇರಯಂಸ್ತಿರಸ್ಕುರ್ವನದಬ್ಧಃ ಕೇನಾಪ್ಯಹಿಂಸಿತೋ ಗೋಪಾ ಗೋಪಾಯಿತಾ ॥ ಗುಪೂ ರಕ್ಷಣ ಇತ್ಯಸ್ಮಾದಾಯಪ್ರತ್ಯಯಾಂತಾತ್ಕ್ವಿಪಿ ವೇರಪೃಕ್ತಸ್ಯ ಲೋಪಾತ್ಪೂರ್ವಂ ವಲಿ ಲೋಪೇ ರೂಪಮೇತತ್ ॥ ಈದೃಶಸ್ತ್ವಂ ನೋऽಸ್ಮಾನ್ಪರಿ ಪಾಹಿ । ಪರಿತಃ ಸರ್ವತೋ ರಕ್ಷ । ತೇ ಶತ್ರವಃ ಪ್ರತ್ಯಂಚಃ ಪ್ರತ್ಯಂಚಂತಃ ಪ್ರತಿನಿವರ್ತಮಾನಾ ನಿಗುತಃ ॥ ಗುಙ್ ಅವ್ಯಕ್ತೇ ಶಬ್ದೇ । ಅಸ್ಮಾತ್ಕ್ವಿಪಿ ತುಕ್ ॥ ಭಯೇನ ಗದ್ಗದರೂಪಮವ್ಯಕ್ತಂ ಶಬ್ದಂ ನಿತರಾಂ ಕುರ್ವಂತಃ ಪುನರ್ಯಂತು । ಸ್ವಕೀಯಂ ಸ್ಥಾನಂ ಪುನರ್ಗಚ್ಛಂತು । ಅಪಿ ಚ ಪ್ರಬುಧಾಂ ಪ್ರಬುಧ್ಯಮಾನಾನಾಮೇತೇಷಾಂ ಶತ್ರೂಣಾಂ ಚಿತ್ತಂ ಜ್ಞಾನಸಾಧನಂ ಮನೋऽಮಾ ಸಹ ಯುಗಪದೇವ ವಿ ನೇಶತ್ । ವಿನಶ್ಯತು ॥ ಪ್ರತ್ಯೇಕಾಭಿಪ್ರಾಯೇಣೈಕವಚನಂ । ಣಶ ಅದರ್ಶನ ಇತ್ಯಸ್ಮಾಚ್ಛಾಂದಸೋ ಲುಙ್ । ಪುಷಾದಿತ್ವಾಚ್ಚ್ಲೇರಙಾದೇಶಃ । ನಶಿಮನ್ಯೋರಲಿಟ್ಯೇತ್ವಂ ವಕ್ತವ್ಯಂ । ಪಾ. ೬-೪-೧೨೦-೫ ॥ ಇತ್ಯಕಾರಸ್ಯೈತ್ವಂ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । **ಪರೇಷಾಂ**—ಶತ್ರುಗಳ । **ಮನ್ಯುಂ**—ಕ್ರೋಧವನ್ನು । **ಪ್ರತಿನುದನ್**—ತಿರಸ್ಕಾರ ಮಾಡುವವನೂ । **ಅದಬ್ಧಃ**—ಯಾರ ಹಿಂಸೆಗೂ ಒಳಪಡದವನೂ । **ಗೋಪಾಃ**—ಸ್ತೋತೃಜನರನ್ನು ರಕ್ಷಿಸುವವನೂ ಆದ । **ತ್ವಂ**—ನೀನು । **ನಃ**—ನಮ್ಮನ್ನು । **ಪರಿ**—ಸುತ್ತಲೂ । **ಪಾಹಿ**—ರಕ್ಷಿಸು । **ಪ್ರತ್ಯಂಚಃ**—ಸೋತುಹಿಂತಿರುಗುವ । **ತೇ**—ನಿನ್ನ ಶತ್ರುಗಳು । **ನಿಗುತಃ**—ಭಯದಿಂದ ಗೊಣಗುಟ್ಟುತ್ತಾ । **ಪುನಃ ಯಂತು**—

ತಮ್ಮ ಸ್ವಸ್ಥಾನಗಳಿಗೆ ಹಿಂತಿರುಗಿ ಹೋಗಲಿ। **ಪ್ರಬುಧಾಂ**—ಎಚ್ಚರಿಕೆಯಿಂದಿರುವ। **ಏಷಾಂ**—ಈ ಶತ್ರುಗಳ। **ಚಿತ್ತಂ**—ಮನಸ್ಸು (ಅಥವಾ ವಿವೇಕಜ್ಞಾನವು)। **ಅಮಾ**—ತಕ್ಷಣವೇ। **ವಿ ನೇಶತ್**—ನಾಶವನ್ನೈದಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಶತ್ರುಗಳ ಕೋಪವನ್ನು ಲಕ್ಷ್ಯಮಾಡದೆ ತಿರಸ್ಕರಿಸುವವನೂ ಯಾರ ಹಿಂಸೆಗೂ ಒಳಪಡದವನೂ ಆದ ನೀನು ನಮ್ಮನ್ನು ಸರ್ವತ್ರ ರಕ್ಷಿಸು. ಸೋತು ಹಿಂತಿರುಗುವ ಶತ್ರುಗಳು ಭಯದಿಂದ ಗೊಣಗುಟ್ಟುತ್ತಾ ಅಥವಾ ತೊದಲುಮಾತುಗಳನ್ನಾಡುತ್ತಾ ತಮ್ಮ ಸ್ಥಾನಗಳಿಗೆ ಹಿಂತಿರುಗುವಂತಾಗಲಿ. ಯಾವಾಗಲೂ ಎಚ್ಚರದಿಂದಿರುವ ಈ ಶತ್ರುಗಳ ಮನಸ್ಸು ಎಂದರೆ ವಿವೇಚನಾ ಶಕ್ತಿಯು ತಕ್ಷಣವೇ ನಾಶವನ್ನೈದಲಿ.

## English Translation.

Agni you are an invincible protector, defend us, baffling the wrath of our enemies; let them return grumbling to their homes, may the intelligence of those watchful (foes) be at once destroyed.

॥ ಸಂಹಿತಾಪಾಠಃ ॥

ಧಾತಾ ಧಾತೄಣಾಂ ಭುವನಸ್ಯ ಯಸ್ಪತಿರ್ದೇವಂ ತ್ರಾತಾರಮಭಿಮಾತಿಷಾಹಂ।
ಇಮಂ ಯಜ್ಞಮಶ್ವಿನೋಭಾ ಬೃಹಸ್ಪತಿರ್ದೇವಾಃ ಪಾಂತು ಯಜಮಾನಂ ನ್ಯರ್ಥಾತ್ ॥ ೭ ॥

॥ ಪದಪಾಠಃ ॥

ಧಾತಾ। ಧಾತೄಣಾಂ। ಭುವನಸ್ಯ। ಯಃ। ಪತಿಃ। ದೇವಂ। ತ್ರಾತಾರಂ। ಅಭಿಮಾತಿऽಸಹಂ।
ಇಮಂ। ಯಜ್ಞಂ। ಅಶ್ವಿನಾ। ಉಭಾ। ಬೃಹಸ್ಪತಿಃ। ದೇವಾಃ। ಪಾಂತು। ಯಜಮಾನಂ। ನಿऽಅರ್ಥಾತ್ ॥ ೭ ॥

॥ ಸಾಯಣಭಾಷ್ಯಂ ॥

ಧಾತೄಣಾಂ ಸ್ರಷ್ಟೄಣಾಮಪಿ ಧಾತಾ ಸ್ರಷ್ಟಾ ಭುವನಸ್ಯ ಕೃತ್ಸ್ನಸ್ಯ ಭೂತಜಾತಸ್ಯ ಯ ಇಂದ್ರಃ ಸವಿತಾ ವಾ ಪತಿಃ ಪಾಲಯಿತಾ ತಂ ದೇವಂ ದೇವನಶೀಲಂ ತ್ರಾತಾರಂ ಸರ್ವೇಭ್ಯೋ ಭಯೇಭ್ಯಃ ಪಾಲಯಿತಾರಮಭಿಮಾತಿಷಾಹಮಭಿಮಾತೀನಾಂ ಶತ್ರೂಣಾಂ ಸೋಢಾರಮಭಿಭವಿತಾರಂ ಏವಂಗುಣವಿಶಿಷ್ಟಮಿಂದ್ರಂ ಸವಿತಾರಂ ವಾ ಸ್ತೌಮೀತಿ ಶೇಷಃ ॥ ಷಹ ಅಭಿಭವೇ। ಛಂದಸಿ ಸಹ ಇತಿ ಣ್ವಿಪ್ರತ್ಯಯಃ। ಛಾಂದಸಂ ವಿಭಕ್ತ್ಯುದಾತ್ತತ್ವಂ ॥ ಉಭೋಭಾವಶ್ವಿನೌ ಬೃಹಸ್ಪತಿಶ್ಚೈತತ್ಪ್ರಮುಖಾಃ ಸರ್ವೇ ದೇವಾ ಇಮಂ

**ಯಜ್ಞಮನುಷ್ಠೀಯಮಾನಂ ಯಜಮಾನಂ ಚ ನ್ಯರ್ಥಾನ್ನಿಕೃಷ್ಟಾದರ್ಥಾತ್ಪಾಪಾತ್ । ಯದ್ವಾ । ಅರ್ಥಸ್ಯ ಪ್ರಯೋಜನಸ್ಯಾಭಾವೋ ನ್ಯರ್ಥಂ । ತಸ್ಮಾತ್ಪಾಂತು । ರಕ್ಷಂತು । ಸಫಲಂ ಕುರ್ವಂತ್ವಿತ್ಯರ್ಥಃ ॥ ನೇರನಿಧಾನೇ । ಪಾ ೬-೨-೧೯೨ । ಇತ್ಯುತ್ತರಪದಾಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಯಃ**—ಯಾವದೇವನು । **ಧಾತ್ೃಣಾಂ**—ಸೃಷ್ಟಿಕರ್ತರಿಗೂ । **ಧಾತಾ**—ಸೃಷ್ಟಿಕರ್ತನೋ । **ಭುವನಸ್ಯ**—ಸಮಸ್ತ ಪ್ರಾಣಿವರ್ಗಕ್ಕೂ। **ಪತಿಃ**—ಯಾರು ಪಾಲಕನೋ ಅಂತಹ । **ದೇವಂ**—ಪ್ರಕಾಶಮಾನನೂ । **ತ್ರಾತಾರಂ**—ಭಯಗಳಿಂದ ಕಾಪಾಡುವವನೂ । **ಅಭಿಮಾತಿಷಾಹಂ**—ಶತ್ರುಗಳನ್ನು ಸೋಲಿಸುವವನೂ ಆದ ಇಂದ್ರನನ್ನು ಅಥವಾ ಸವಿತೃದೇವನನ್ನು ಸ್ತುತಿಸುತ್ತೇನೆ । **ಉಭಾ ಅಶ್ವಿನಾ**—ಅಶ್ವಿನೀದೇವತೆಗಳಿಬ್ಬರೂ । **ಬೃಹಸ್ಪತಿಃ**—ಬೃಹಸ್ಪತಿಯೂ ಇವರೇ ಮೊದಲಾದ । **ದೇವಾಃ**—ಸಮಸ್ತದೇವತೆಗಳೂ । **ಇಮಂ ಯಜ್ಞಂ**—ನಡೆಯುತ್ತಿರುವ ಈ ಯಜ್ಞವನ್ನೂ । **ಯಜಮಾನಂ**—ಯಜ್ಞಮಾಡುವ ಈ ಯಜಮಾನನನ್ನೂ । **ನ್ಯರ್ಥಾತ್**—ಪಾಪದಿಂದ । **ಪಾಂತು**—ರಕ್ಷಿಸಲಿ.

॥ ಭಾವಾರ್ಥ ॥

ಸೃಷ್ಟಿಕರ್ತರಾದ ದೇವತೆಗಳಿಗೂ ಯಾವನು ಸೃಷ್ಟಿಕರ್ತನೋ ಸಮಸ್ತ ಪ್ರಾಣಿವರ್ಗಕ್ಕೂ ಯಾವನು ಪಾಲಕನೋ ಅಂತಹ ಪ್ರಕಾಶಮಾನನೂ, ಸಮಸ್ತ ವಿಧಭಯಗಳಿಂದ ಕಾಪಾಡುವವನೂ ಶತ್ರುಗಳನ್ನು ಪರಾಭವಗೊಳಿಸುವವನೂ ಆದ ಇಂದ್ರನನ್ನು ಅಥವಾ ಸವಿತೃದೇವನನ್ನು ಸ್ತುತಿಸುತ್ತೇನೆ. ಇಬ್ಬರು ಅಶ್ವಿನೀದೇವತೆಗಳು, ಬೃಹಸ್ಪತೀ ಮೊದಲಾದ ಸಮಸ್ತ ದೇವತೆಗಳು ಈಗ ನಡೆಯುತ್ತಿರುವ ಈ ಯಜ್ಞವನ್ನೂ ಯಜಮಾನನನ್ನೂ ಪಾಪ ಸಂಭವಿಸದಂತೆ ಕಾಪಾಡಲಿ.

## English Translation.

The creator of creators, he who is the protector of the universe, (him I praise), the divine defender, the destroyer of enemies; may the two Ashwins, Brihaspathi, and the gods, protect this sacrifice from disappointment.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧದಲ್ಲಿ ಭಾಷ್ಯಕಾರರು **ಧಾತಾ ಧಾತ್ೃಣಾಂ** ಎಂದು ಮೊದಲಾದ ಗುಣವಿಶಿಷ್ಟನಾದ ಇಂದ್ರನನ್ನು ಅಥವಾ ಸವಿತೃದೇವನನ್ನು ಸ್ತುತಿಸುತ್ತೇನೆ ಎಂಬರ್ಥವನ್ನು ಹೇಳಿದಾರೆ. ಈ ಅರ್ಥವು ಸಮಂಜಸವಾಗಿದ್ದರೂ ಇದೇ ಸೂಕ್ತವು ಅಲ್ಪಸ್ವಲ್ಪ ಬದಲಾವಣೆಗಳೊಡನೆ ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ. ೪-೭-೧೪) ಪಠಿತವಾಗಿರುವುದರಿಂದ ಅಲ್ಲಿ ಈ ಋಕ್ಕಿನಲ್ಲಿರುವ **ತ್ರಾತಾರಂ** ಎಂಬ ಶಬ್ದಕ್ಕೆ ಬದಲಾಗಿ **ಸವಿತಾರಂ** ಎಂಬ ಶಬ್ದದ ಪ್ರಯೋಗವಿದೆ. ಆದ್ದರಿಂದ ಇಲ್ಲಿ ಸವಿತೃದೇವನೇ ಉದ್ದಿಷ್ಟದೇವತೆಯಾಗಿರಬಹುದೆಂದು ತೋರುತ್ತದೆ.

|| ಸಂಹಿತಾಪಾಠಃ ||

ಉರುವ್ಯಚಾ ನೋ ಮಹಿಷಃ ಶರ್ಮ ಯಂಸದಸ್ಮಿನ್ಹವೇ ಪುರುಹೂತಃ ಪುರುಕ್ಷುಃ ।
ಸ ನಃ ಪ್ರಜಾಯೈ ಹರ್ಯಶ್ವ ಮೃಳಯೇಂದ್ರ ಮಾ ನೋ ರೀರಿಷೋ ಮಾ ಪರಾ ದಾಃ ॥ ೮ ॥

|| ಪದಪಾಠಃ ||

ಉರುऽವ್ಯಚಾಃ । ನಃ । ಮಹಿಷಃ । ಶರ್ಮ । ಯಂಸತ್ । ಅಸ್ಮಿನ್ । ಹವೇ । ಪುರುऽಹೂತಃ । ಪುರುऽಕ್ಷುಃ ।
ಸಃ । ನಃ । ಪ್ರऽಜಾಯೈ । ಹರಿऽಅಶ್ವ । ಮೃಳಯ । ಇಂದ್ರ । ಮಾ । ನಃ । ರಿರಿಷಃ । ಮಾ । ಪರಾ । ದಾಃ ॥

॥ ಸಾಯಣಭಾಷ್ಯಂ ॥

ಉರುವ್ಯಚಾ ವಿಸ್ತೀರ್ಣವ್ಯಾಪನೋ ಮಹಿಷೋ ಮಹಾನ್ಪೂಜ್ಯೋ ವಾ ಪುರುಹೂತೋ ಬಹುಭಿರ್ಯಜಮಾನೈರಾಹೂತಃ ಪುರುಕ್ಷುರ್ಬಹುನಿವಾಸಃ ॥ ಕ್ಷಿಯತೇರ್ಮಿತದ್ರ್ವಾದಿಭ್ಯ ಉಪಸಂಖ್ಯಾನಂ । ಪಾ. ೩-೨-೧೮೦-೧ । ಇತಿ ಡುಪ್ರತ್ಯಯಃ ॥ ಯದ್ವಾ। ಪುರುಭಿರ್ಬಹುಭಿಃ ಶಬ್ದ್ಯಮಾನಃ ಸ್ತೂಯಮಾನಃ ॥ ಪೂರ್ವವಡ್ಡುಪ್ರತ್ಯಯಃ । ಔಣಾದಿಕೇ ಕರ್ಮಣಿ ಕ್ವಿಪಿ ವಾನಿತ್ಯಮಾಗಮಶಾಸನಮಿತಿ ತುಗಭಾವಃ ॥ ಈದೃಶ ಇಂದ್ರೋऽಸ್ಮಿನ್ಹವೇ ಯಜ್ಞೇ । ಹೂಯಂತೇऽಸ್ಮಿನ್ಹವೀಂಷೀತಿ ಹವೋ ಯಜ್ಞಃ ॥ ಜುಹೋತೇऽರಧಿಕರಣೇऽಪ್ ॥ ಯದ್ವಾ। ಅಸ್ಮಿನ್ಹವೇ ತ್ವದ್ವಿಷಯ ಆಹ್ವಾನೇ ॥ ಭಾವೇऽನುಪಸರ್ಗಸ್ಯೇತಿ ಹ್ವಯತೇರಪ್ ಸಂಪ್ರಸಾರಣಂ ಚ ॥ ನೋऽಸ್ಮಭ್ಯಂ ಶರ್ಮ ಸುಖಂ ಯಂಸತ್ । ಯಚ್ಛತು । ದದಾತ್ವಿತ್ಯರ್ಥಃ ॥ ಯಮೇರ್ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ಹೇ ಹರ್ಯಶ್ವ ಹರೀ ಅಶ್ವೌ ಯಸ್ಯ ತಾದೃಶ ಹೇ ಇಂದ್ರ ಸ ತ್ವಂ ನೋऽಸ್ಮಾಕಂ ಪ್ರಜಾಯೈ । ದ್ವಿತೀಯಾರ್ಥೇ ಚತುರ್ಥೀ । ಪ್ರಜಾಂ ಪುತ್ರಪೌತ್ರಾದಿಕಾಂ ಮೃಳಯ । ಸುಖಯ । ನೋऽಸ್ಮಾನ್ಮಾ ರೀರಿಷಃ । ಮಾ ಹಿಂಸೀಃ । ಮಾ ಚ ಪರಾ ದಾಃ । ಪರಾದಾನಂ ಪರಿತ್ಯಾಗಃ । ಮಾ ಪರಿತ್ಯಾಕ್ಷೀರಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಉರುವ್ಯಚಾಃ—ಸರ್ವಸ್ಥಳಗಳಲ್ಲಿಯೂ ವ್ಯಾಪಿಸಿರುವವನೂ । ಮಹಿಷಃ—ಮಹತ್ಸ್ವರೂಪವುಳ್ಳವನೂ ಅಥವಾ ಪೂಜ್ಯನೂ । ಪುರುಹೂತಃ—ಅನೇಕ ಯಜಮಾನರಿಂದ ಪ್ರಾರ್ಥಿಸಿ ಕರೆಯಲ್ಪಡುವವನೂ । ಪುರುಕ್ಷುಃ—ಅನೇಕ ನಿವಾಸಸ್ಥಾನಗಳುಳ್ಳವನೂ ಅಥವಾ ಅನೇಕರ ನಿವಾಸಸ್ಥಾನಗಳಿಗೆ (ಯಜ್ಞಗೃಹಗಳಿಗೆ) ಹೋಗುವವನೂ

ಅಥವಾ ಬಹುಜನರಿಂದ ಸ್ತುತಿಸಲ್ಪಡುವವನೂ ಆದ ಇಂದ್ರನು | **ಅಸ್ಮಿನ್ ಹವೇ**—ಈ ಯಜ್ಞದಲ್ಲಿ | **ನಃ**—ನಮಗೆ | **ಶರ್ಮ**—ಸುಖವನ್ನು | **ಯಂಸತ್**—ಕೊಡಲಿ | **ಹರ್ಯಶ್ವ**—ಹರೀ ಎಂಬ ಅಶ್ವಗಳಿಂದ ಸಹಿತನಾದ | **ಇಂದ್ರ**—ಎಲೈ ಇಂದ್ರನೇ | **ಸಃ**—ಆ ನೀನು | **ನಃ**—ನಮಗೆ | **ಪ್ರಜಾಯೈ**—ಪುತ್ರಪೌತ್ರಾದಿ ಸಂತತಿಯನ್ನು ಕೊಟ್ಟು | **ಮೃಳಯ**—ಸುಖವನ್ನುಂಟುಮಾಡು | **ನಃ**—ನಮ್ಮನ್ನು | **ಮಾ ರೀರಿಷಃ**—ಹಿಂಸಿಸಬೇಡ | **ಮಾ ಪರಾ ದಾಃ**—ನಮ್ಮನ್ನು ತ್ಯಜಿಸಬೇಡ.

|| ಭಾವಾರ್ಥ ||

ಸರ್ವವ್ಯಾಪಿಯೂ ಪೂಜ್ಯನೂ ಅಥವಾ ಮಹಾಮಹಿಮನೂ, ಅನೇಕರ ಆಹ್ವಾನಕ್ಕೆ ಪಾತ್ರನೂ, ಅನೇಕ ವಾಸಸ್ಥಾನಗಳುಳ್ಳವನೂ ಅಥವಾ ಅನೇಕರಿಂದ ಸ್ತುತ್ಯನೂ ಆದ ಇಂದ್ರನು ಈ ಯಜ್ಞದಲ್ಲಿ ನಮಗೆ ಸುಖವನ್ನುಂಟು ಮಾಡಲಿ ಎಂದರೆ ಯಜ್ಞವು ಯಾವ ವಿಘ್ನವೂ ಇಲ್ಲದಂತೆ ನೆರವೇರುವಂತೆ ಮಾಡಿ ನಮಗೆ ಆ ಯಜ್ಞಫಲವಾದ ಸುಖವನ್ನು ದೊರೆಯುವಂತೆ ಮಾಡಲಿ. ಹರೀ ಎಂಬ ತನ್ನ ಎರಡು ಅಶ್ವಸಹಿತನಾದ ಎಲೈ ಇಂದ್ರನೇ, ನೀನು ನಮಗೆ ಪುತ್ರಾದಿ ಸಂತತಿಯನ್ನು ಕೊಟ್ಟು. ಸುಖವಾಗಿರುವಂತೆ ಮಾಡು. ನಮ್ಮನ್ನು ಹಿಂಸಿಸಬೇಡ ಮತ್ತು ನಮ್ಮನ್ನು ತ್ಯಜಿಸಬೇಡ.

## English Translation.

May the omnipresent (Indra), the mighty one, who is invoked by many, and lauded by many, bestow a blessing on this our sacrifice; be gracious to our offspring, Indra, lord of bay horses; harm us not, desert us not.

|| ಸಂಹಿತಾಪಾಠಃ ||

ಯೋ ನಃ ಸಪತ್ನಾ ಅಪ ತೇ ಭವಂತ್ವಿಂದ್ರಾಗ್ನಿಭ್ಯಾಮವ ಬಾಧಾಮಹೇ ತಾನ್।
ವಸವೋ ರುದ್ರಾ ಆದಿತ್ಯಾ ಉಪರಿಸ್ಪೃಶಂ ಮೋಗ್ರಂ ಚೇತ್ತಾರಮಧಿರಾಜ-
ಮಕ್ರನ್ || ೯ ||

|| ಪದಪಾಠಃ ||

ಯೇ । ನಃ । ಸಽಪತ್ನಾಃ । ಅಪ । ತೇ । ಭವಂತು । ಇಂದ್ರಾಗ್ನಿಽಭ್ಯಾಂ । ಅವ । ಬಾಧಾಮಹೇ । ತಾನ್ ।
ವಸವಃ । ರುದ್ರಾಃ । ಆದಿತ್ಯಾಃ । ಉಪರಿಽಸ್ಪೃಶಂ । ಮಾ । ಉಗ್ರಂ । ಚೇತ್ತಾರಂ । ಅಧಿಽರಾಜಂ ।
ಅಕ್ರನ್ || ೯ ||

|| ಸಾಯಣಭಾಷ್ಯಂ ||

**ನೋಽಸ್ಮಾಕಂ ಯೇ ಸಪತ್ನಾಃ ಶತ್ರವಸ್ತೇಽಪ ಭವಂತು । ಅಪಗತಾ ಭವಂತು । ಸ್ವಸ್ಥಾನಾದಪಗತಾಃ ಪ್ರಚ್ಯುತಾ ಭವಂತು । ತಾನ್ಸಪತ್ನಾನಿಂದ್ರಾಗ್ನಿಭ್ಯಾಂ ಹವಿರ್ಭಿಃ ಸ್ತುತ್ವಾ ಚ ಪ್ರಸನ್ನಾಭ್ಯಾಮನುಗೃಹೀತಾ ವಯಮುವ ಬಾಧಾಮಹೇ । ನಿಕೃಷ್ಟತರಂ ವಿನಾಶಯಾಮಃ । ಅಪಿ ಚ ವಸವೋ ರುದ್ರಾ ಆದಿತ್ಯಾಶ್ಚ ಮಾ ಮಾಮುಪರಿಸ್ಪೃಶಮುನ್ನತಪದಸ್ಯ ಸಂಸ್ಪ್ರಷ್ಟಾರಂ ಸರ್ವೇಭ್ಯಃ ಶ್ರೇಷ್ಠಮಕ್ರನ್ । ಕುರ್ವಂತು । ತಥೋಗ್ರಮುದ್ಗೂರ್ಣಬಲಂ ಚೇತ್ತಾರಂ ಚೇತಿತಾರಂ ॥ ಛಾಂದಸ ಇಡಭಾವಃ ॥ ಸರ್ವಸ್ಯ ಜ್ಞಾತಾರಮಧಿರಾಜಂ ಸರ್ವೇಷಾಮಧೀಶ್ವರಂ ಚ ಮಾಂ ಕುರ್ವಂತು ॥ ಕರೋತೇಶ್ಛಾಂದಸೇ ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ॥**

॥ ಪ್ರತಿಪದಾರ್ಥ ॥

**ನಃ**—ನಮ್ಮ । **ಯೇ ಸಪತ್ನಾಃ**—ಯಾವ ಶತ್ರುಗಳಿರುವರೋ । **ತೇ**—ಅವರು । **ಅಪ ಭವಂತು**—ಪರಾಜಿತರಾಗಿ ಹೊರಟುಹೋಗಲಿ । **ತಾನ್**—ಆ ಶತ್ರುಗಳನ್ನು । **ಇಂದ್ರಾಗ್ನಿಭ್ಯಾಂ**—ಇಂದ್ರಾಗ್ನಿಗಳ ಸಹಾಯದಿಂದ । **ಅವ ಬಾಧಾಮಹೇ**—ಹಿಂಸಿಸಿ ನಾಶಪಡಿಸುವಂತಾಗಲಿ (ಮತ್ತು) । **ವಸವಃ**—ಅಷ್ಟವಸುಗಳೂ । **ರುದ್ರಾಃ**— ಏಕಾದಶರುದ್ರರೂ । **ಆದಿತ್ಯಾಃ**— ದ್ವಾದಶಾದಿತ್ಯರೂ ಸಹ । **ಮಾಂ**— ನನ್ನನ್ನು । **ಉಪರಿಸ್ಪೃಶಂ**—ಉನ್ನತಪದವಿಗೆ ಯೋಗ್ಯನನ್ನಾಗಿ ಅಥವಾ ಸರ್ವರಿಗಿಂತ ಶ್ರೇಷ್ಠನನ್ನಾಗಿಯೂ । **ಉಗ್ರಂ**—ಅಧಿಕಶಕ್ತಿಯುತನನ್ನಾಗಿಯೂ ! **ಚೇತ್ತಾರಂ**— ಸರ್ವಜ್ಞನನ್ನಾಗಿಯೂ । **ಅಧಿರಾಜಂ**— ಸರ್ವರಿಗೂ ಒಡೆಯನನ್ನಾಗಿಯೂ । **ಅಕ್ರನ್**—ಮಾಡಲಿ.

॥ ಭಾವಾರ್ಥ ॥

ನಮ್ಮ ಶತ್ರುಗಳು ನಮ್ಮಿಂದ ಪರಾಜಿತರಾಗಿ ಹಿಂದಕ್ಕೆ ಹೊರಟುಹೋಗಲಿ. ಇಂದ್ರಾಗ್ನಿಗಳನ್ನು ಹವಿರಾದಿಗಳಿಂದ ಸ್ತುತಿಸಿ ಅವರ ಸಹಾಯದಿಂದ ನಾವು ನಮ್ಮ ಆ ಶತ್ರುಗಳನ್ನು ಹಿಂಸಿಸಿ ನಾಶಪಡಿಸುವಂತಾಗಲಿ. ಅಷ್ಟವಸುಗಳೂ, ಏಕಾದಶರುದ್ರರೂ, ದ್ವಾದಶಾದಿತ್ಯರೂ ಸಹ ನಮ್ಮನ್ನು ಉನ್ನತಪದಾರ್ಹನನ್ನಾಗಿ ಅಥವಾ ಸರ್ವಶ್ರೇಷ್ಠನನ್ನಾಗಿಯೂ, ಅಧಿಕಶಕ್ತಿಯುಳ್ಳವನನ್ನಾಗಿಯೂ, ಸರ್ವಜ್ಞನನ್ನಾಗಿಯೂ, ಸರ್ವರಿಗೂ ಒಡೆಯನನ್ನಾಗಿಯೂ ಮಾಡಲಿ.

## English Translation.

May those who are our foes be driven off ; may we through Indra and Agni destroy them ; may the Vasus, the Rudras, and the Adityas make me the high-reaching, fierce, intelligent, supreme ruler.

॥ ವಿಶೇಷವಿಷಯಗಳು ॥

**ಈ** ಸೂಕ್ತದ ಅಂತ್ಯದಲ್ಲಿ ಪಠಿಸಬೇಕಾದ ಪರಿಶಿಷ್ಟ (ಖಿಲ) ಮಂತ್ರಗಳು

**ಅರ್ವಾಂಚಮಿಂದ್ರಮಮುತೋ ಹವಾಮಹೇ ಯೋ ಗೋಜಿದ್ಧನಜಿದಶ್ವಜಿದ್ಯಃ ।**
**ಇಮಂ ನೋ ಯಜ್ಞಂ ವಿಹವೇ ಜುಷಸ್ವಾಸ್ಯ ಕುರ್ಮೋ ಹರಿವೋ ಮೇದಿನಂ ತ್ವಾ ॥ ೧ ॥**

ಆಯುಷ್ಯಂ ವರ್ಚಸ್ಯಂ ರಾಯಸ್ಪೋಷಮೌದ್ಭಿದ್ಯಂ ।
ಇದಂ ಹಿರಣ್ಯಂ ವರ್ಚಸ್ವಜ್ಜೈತ್ರಾಯಾ ವಿಶತಾದಿಮಾಂ ॥ ೧ ॥
ಉಚ್ಚೈರ್ವಾಜಿ ಪೃತನಾಷಾಟ್ ಸಭಾಸಾಹಂ ಧನಂಜಯಂ ।
ಸರ್ವಾಃ ಸಮಗ್ರಾ ಋದ್ಧಯೋ ಹಿರಣ್ಯೇಽಸ್ಮಿನ್ ಸಮಾಹಿತಾಃ ॥ ೨ ॥
ಶುನಮಹಂ ಹಿರಣ್ಯಸ್ಯ ಪಿತುರ್ನಾಮೇವ ಜಗ್ರಭ ।
ತೇನ ಮಾಂ ಸೂರ್ಯತ್ವಚಮಕರಂ ಪೂರುಷು ಪ್ರಿಯಂ ॥ ೩ ॥
ಸಾಮ್ರಾಜಂ ಚ ವಿರಾಜಂ ಚಾಭಿಷ್ಟಿರ್ಯಾ ಚ ಮೇ ಧ್ರುವಾ ।
ಲಕ್ಷ್ಮೀ ರಾಷ್ಟ್ರಸ್ಯ ಯಾ ಮುಖೇ ತಯಾ ಮಾಮಿಂದ್ರ ಸಂ ಸೃಜ ॥ ೪ ॥
ಅಗ್ನೇಃ ಪ್ರಜಾತಂ ಪರಿ ಯದ್ಧಿರಣ್ಯಮಮೃತಂ ಯಜ್ಞೇ ಅಧಿ ಮರ್ತ್ಯೇಷು ।
ಯ ಏನದ್ವೇದ ಸ ಇದೇನಮರ್ಹತಿ ಜರಾಮೃತ್ಯುರ್ಭವತಿ ಯೋ ಬಿಭರ್ತಿ ॥ ೫ ॥
ಯದ್ವೇದ ರಾಜಾ ವರುಣೋ ಯದು ದೇವೀ ಸರಸ್ವತೀ ।
ಇಂದ್ರೋ ಯದ್ವೃತ್ರಹಾ ವೇದ ತನ್ಮೇ ವರ್ಚಸ ಆಯುಷೇ ॥ ೬ ॥
ನ ತದ್ರಕ್ಷಾಂಸಿ ನ ಪಿಶಾಚಾಸ್ತರಂತಿ ದೇವಾನಾಮೋಜಃ ಪ್ರಥಮಜಂ ಹ್ಯೇ೧ತತ್ ।
ಯೋ ಬಿಭರ್ತಿ ದಾಕ್ಷಾಯಣಾ ಹಿರಣ್ಯಂ ಸ ದೇವೇಷು ಕೃಣುತೇ ದೀರ್ಘಮಾಯುಃ
ಸ ಮನುಷ್ಯೇಷು ಕೃಣುತೇ ದೀರ್ಘಮಾಯುಃ ॥೭ ॥
ಯದಾಬಧ್ನನ್ ದಾಕ್ಷಾಯಣಾ ಹಿರಣ್ಯಂ ಶತಾನೀಕಾಯ ಸುಮನಸ್ಯಮಾನಾ ।
ತನ್ನ ಆ ಬಧ್ನಾಮಿ ಶತಶಾರದಾಯಾಯುಷ್ಮಾನ್ ಜರದಷ್ಟಿರ್ಯಥಾಸತ್ ॥ ೮ ॥
ಘೃತಾದುಲ್ಲುಪ್ತಂ ಮಧುಮತ್ಸುವರ್ಣಂ ಧನಂಜಯಂ ಧರುಣಂ ಧಾರಯಿಷ್ಣು ।
ಋಣಕ್ ಸಪತ್ನಾದಧರಾಂಶ್ಚ ಕೃಣ್ವದಾರೋಹ ಮಾಂ ಮಹತೇ ಸೌಭಗಾಯ ॥ ೯ ॥
ಪ್ರಿಯಂ ಮಾ ಕುರು ದೇವೇಷು ಪ್ರಿಯಂ ರಾಜಸು ಮಾ ಕುರು ।
ಪ್ರಿಯಂ ವಿಶ್ವೇಷು ಗೋಪ್ತ್ರೇಷು ಮಯಿ ಧೇಹಿ ರುಚಾ ರುಚಂ ॥ ೧೦ ॥
ಅಗ್ನಿರ್ಯೇನ ವಿರಾಜತಿ ಸೂರ್ಯೋ ಯೇನ ವಿರಾಜತಿ ।
ವಿರಾಜ್ಯೇನ ವಿರಾಜತಿ ತೇನಾಸ್ಮಾನ್ ಬ್ರಹ್ಮಣಸ್ಪತೇ ವಿರಾಜ ಸಮಿಧಂ ಕುರು ॥ ೧೧ ॥

---

ಯಾಂ ಕಲ್ಪಯಂತಿ ನೋಽರಯಃ ಕ್ರೂರಾಂ ಕೃತ್ಯಾಂ ವಧೂಮಿವ ।
ತಾಂ ಬ್ರಹ್ಮಣಾಪ ನಿರ್ಣುದ್ಮಃ ಪ್ರತ್ಯಕ್ಕರ್ತಾರಮೃಚ್ಛತು ॥ ೧ ॥
ಶೀರ್ಷಣ್ವತೀಂ ಕರ್ಣವತೀಂ ವಿಷುರೂಪಾಂ ಭಯಂಕರೀಂ ।
ಯಃ ಪ್ರಾಹಿಣೋದಿಹಾದ್ಯ ತ್ವಾಂ ವಿ ತಂ ತ್ವಂ ಯೋಜಯಾಸುಭಿಃ ॥ ೨ ॥
ಯೇನ ದಿಷ್ಟೇಹ ವಹಸಿ ಪ್ರತಿಕೂಲಮುಖಾಯಿನಿ ।
ತಮೇವೇತೋ ನಿವರ್ತಸ್ವ ಮಾಸ್ಮಾನ್ ಮೃಚ್ಛೋ ಅನಾಗಸಃ ॥ ೩ ॥

ಅಭಿವರ್ತಸ್ವ ಕರ್ತಾರಂ ನಿರಸ್ತಾಸ್ಮಾಭಿರೋಜಸಾ ।
ಆಯುರಸ್ಯ ನಿಕೃಂತಸ್ವ ಪ್ರಜಾಂ ಚ ಪುರುಷಾದಿನಿ ॥ ೪ ॥

ಯಸ್ತ್ವಾ ಕೃತ್ಯೇ ಚಕಾರೇಹ ತಂ ತ್ವಂ ಗಚ್ಛ ಪುನರ್ನವೇ ।
ಅರಾತೀಃ ಕೃತ್ಯೇ ನಾಶಯ ಸರ್ವಾಶ್ಚ ಯಾತುಧಾನ್ಯಃ ॥ ೫ ॥

ಕ್ಷಿಪ್ರಂ ಕೃತ್ಯೇ ನಿವರ್ತಸ್ವ ಕರ್ತುರೇವ ಗೃಹಾನ್ ಪ್ರತಿ ।
ಪಶೂಂಶ್ಚೈವಾಸ್ಯ ನಾಶಯ ವೀರಾಂಶ್ಚಾಸ್ಯ ನಿ ಬರ್ಹಯ ॥ ೬ ॥

ಯಸ್ತ್ವಾ ಕೃತ್ಯೇ ಪ್ರಜಿಘಾಯ ವಿದ್ವಾಁ ಅವಿದುಷೋ ಗೃಹಾನ್ ।
ತಸ್ಯೈವೇತಃ ಪರೇತ್ಯಾಶು ತನುಂ ಕೃಧಿ ಪರುಷ್ಪರುಃ ॥ ೭ ॥

ಪ್ರತೀಚೀಂ ತ್ವಾಪಸೇಧತು ಬ್ರಹ್ಮ ರೋಚಿಷ್ಣ್ವಮಿತ್ರಹಾ ।
ಅಗ್ನಿಶ್ಚ ಕೃತ್ಯೇ ರಕ್ಷೋಹಾ ರಿಪ್ರಹಾ ಚಾಜ ಏಕಪಾತ್ ॥ ೮ ॥

ಯಥಾ ತ್ವಾಂಗಿರಸಃ ಪೂರ್ವೇ ಭೃಗವಶ್ಚಾಪ ಸೇಧಿರೇ ।
ಅತ್ರಯಶ್ಚ ವಸಿಷ್ಠಾಶ್ಚ ತಥೈವ ತ್ವಾಪ ಸೇಧಿಮ ॥ ೯ ॥

ಯಸ್ತೇ ಪರೂಂಷಿ ಸಂದಧೌ ರಥಸ್ಯೇವ ವಿಭುರ್ಧಿಯಾ ।
ತಂ ಗಚ್ಛ ತತ್ರ ತೇಽಯನಮಜ್ಞಾತಸ್ತೇ ಅಯಂ ಜನಃ ॥ ೧೦ ॥

ಯೋ ನಃ ಕಶ್ಚಿದ್ರಣಸ್ಥೋ ವಾ ಕಶ್ಚಿದ್ವಾನ್ಯೋಽಭಿ ಹಿಂಸತಿ ।
ತಸ್ಯ ತ್ವಂ ದ್ರೋರಿವೇದ್ಧೋಽಗ್ನಿಸ್ತನೂಮ್ವೃಚ್ಛಸ್ವ ಹೇಳಿತಾ ॥ ೧೧ ॥

ಭವಾಶರ್ವಾ ದೇವಹೇಳಿಮಸ್ಯತ ಪಾಪಕೃತ್ವನೇ ।
ಹರಸ್ವತೀ ತ್ವಂ ಚ ಕೃತ್ಯೇ ಮೋಚ್ಛಿಪಸ್ತಸ್ಯ ಕಿಂಚನ ॥ ೧೨ ॥

ಯೋ ನಃ ಕಶ್ಚಿದ್ರುಹಾರಾತಿರ್ಮನಸಾ ಪ್ರತಿಭೂಷತಿ ।
ದೂರಸ್ಥೋ ವಾಂತಿಕಸ್ಥೋ ವಾ ತಸ್ಯ ಹೃದ್ಯಮಸೃಕ್ ಪಿಬ ॥ ೧೩ ॥

ಯೇನಾಸಿ ಕೃತ್ಯೇ ಪ್ರಹಿತಾ ದೂಢ್ಯೇನಾಸ್ಮಜ್ಜಿಘಾಂಸಯಾ ।
ತಸ್ಯ ವ್ಯಾನಚ್ಚಾವ್ಯಾನಚ್ಚ ಹಿನಸ್ತು ಹರಸಾಶನಿಃ ॥ ೧೪ ॥

ಯೇ ನಃ ಶಿವಾಸಃ ಪಂಥಾನಃ ಪರಾಯಂತಿ ಪರಾವತಂ ।
ತೈರ್ದೇವಿ ರಾತ್ರ್ಯಾಃ ಕೃತ್ಯಾ ನೋ ಗಮಯಸ್ವಾನುಕೃತ್ತಯೇ ॥ ೧೫ ॥

ಯದಿ ವೈಷಿ ದ್ವಿಪದ್ಯಸ್ಮಾನ್ ಯದಿ ವೈಷಿ ಚತುಷ್ಪದೀ ।
ನಿರಸ್ತೇತೋ ವ್ರಜಾಸ್ಮಾಭಿಃ ಕರ್ತುರಷ್ಟಾಪದೀ ಗೃಹಾನ್ ॥ ೧೬ ॥

ಯೋ ನಃ ಶಪಾದಶಪತೋ ಯಶ್ಚ ನಃ ಶಪತಃ ಶಪಾತ್ ।
ವೃಕ್ಷಮಿವ ವಿದ್ಯುದಾಶು ತಮಾಮೂಲಾದನು ಶೋಷಯ ॥ ೧೭ ॥

ಯಂ ದ್ವಿಷ್ಮೋ ಯಶ್ಚ ನೋ ದ್ವೇಷ್ಟ್ಯ್ಯೃಘಾಯುರ್ಯಶ್ಚ ನಃ ಶಪಾತ್ ।
ಶುನೇ ಪಿಷ್ಟಮಿವ ಕ್ಷಾಮಂ ತಂ ಪ್ರತ್ಯಸ್ಯ ಸ್ವಮೃತ್ಯವೇ ॥ ೧೮ ॥

ಯಶ್ಚ ಸಾಪತ್ನಃ ಶಪಥೋ ಯಶ್ಚ ಯಾಮಿಾ ಶಪಾತಿ ನಃ ।
ಬ್ರಹ್ಮಾ ಚ ಯತ್ಕ್ರುದ್ಧಃ ಶಪಾತ್ಸರ್ವಂ ತತ್ಕೃಧ್ಯಧಸ್ಪದಂ ॥ ೧೯ ॥

ಸಬಂಧುಶ್ಚಾಸ್ಯಬಂಧುಶ್ಚ ಯೋ ಅಸ್ಮಾँ ಅಭಿದಾಸತಿ ।
ತಸ್ಯ ತ್ವಂ ಭಿಂಧ್ಯಧಿಷ್ಠಾಯ ಪದಾ ವಿಸ್ಫೂರ್ಯ ತಚ್ಛಿರಃ ॥ ೨೦ ॥

ಅಭಿ ಪ್ರೇಹಿ ಸಹಸ್ರಾಕ್ಷಂ ಯುಕ್ತ್ವಾ ತು ಶಪಥಂ ರಥೇ ।
ಶತ್ರೂನನ್ವಿಚ್ಛತೀ ಕೃತ್ಯೇ ವೃಕೀವಾವಿಮತೋ ಗೃಹಾನ್ ॥ ೨೧ ॥

ಪರಿ ಣೋ ವೃಂಗ್ಧಿ ಶಪಥಾನ್ ದಹನ್ನಗ್ನಿರಿವ ಹ್ರದಂ ।
ಶತ್ರೂನೇವಾಭಿತೋ ಜಹಿ ದಿವ್ಯಾ ವೃಕ್ಷಮಿವಾಶನಿಃ ॥ ೨೨ ॥

ಶತ್ರೂನ್ ನೋ ಪ್ರೋಢ ಶಪಥಾತ್ ಕೃತ್ಯಾಶ್ಚ ಸುಹೃದೋಽಸುಹೃತ್ ।
ಜಿಹ್ಮಾಃ ಶ್ಲಕ್ಷ್ಣಾಶ್ಚ ದುರ್ಹೃದಃ ಸಮಿದ್ಧಂ ಜಾತವೇದಸಂ ॥ ೨೩ ॥

ಅಸಪತ್ನಂ ಪುರಸ್ತಾನ್ನಃ ಶಿವಂ ದಕ್ಷಿಣತಃ ಕೃಧಿ ।
ಅಭಯಂ ಸತತಂ ಪಶ್ಚಾದ್ಭದ್ರಮುತ್ತರತೋ ಗೃಹೇ ॥ ೨೪ ॥

ಪರೇಹಿ ಕೃತ್ಯೇ ಮಾ ತಿಷ್ಠ ವಿದ್ಧಸ್ಯೇವ ಪದಂ ನಯ ।
ಮೃಗಸ್ಯ ಹಿ ಮೃಗಾರಿಪ್ರೋ ನ ತ್ವಾ ನೀಕರ್ತುಮರ್ಹತಿ ॥ ೨೫ ॥

ಅಘ್ನ್ಯಸ್ಯೇವ ಘೋರರೂಪೇ ವಿಷುರೂಪೇಽವಿನಾಶಿನಿ ।
ಜೃಂಭಿತಾ ಪ್ರತಿಗೃಭ್ಣೀಷ್ವ ಸ್ವಯಮಾದಾಯ ಚಾದ್ಭುತಂ ॥ ೨೬ ॥

ತ್ವಮಿಂದ್ರೋ ಯಮೋ ವರುಣಸ್ತ್ವಮಾಪೋಽಗ್ನಿ ರಥಾನಿಲಃ ।
ತ್ವಂ ಬ್ರಹ್ಮಾ ಚೈವ ರುದ್ರಶ್ಚ ತ್ವಷ್ಟಾ ಚೈವ ಪ್ರಜಾಪತಿಃ ॥ ೨೭ ॥

ಆವರ್ತಧ್ವಂ ನಿವರ್ತಧ್ವಮೃತವಃ ಪರಿವತ್ಸರಾಃ ।
ಅಹೋರಾತ್ರಾಶ್ಚಾಬ್ದಾಶ್ಚ ತ್ವಂ ದಿಶಃ ಪ್ರದಿಶಶ್ಚ ನೋ ॥ ೨೮ ॥

ತ್ವಂ ಯಮಂ ವರುಣಂ ಸೋಮಂ ತ್ವಮಾಪೋಽಗ್ನಿಮಥಾನಿಲಂ ।
ಅತ್ರಾಹೃತ್ಯ ಪಶೂಂಶ್ಚೈವಮುತ್ಪಾದಯಸಿ ಚಾದ್ಭುತಂ ॥ ೨೯ ॥

ಯೇ ನೋ ದನೋ ದಾರುಗರ್ಭೇ ಶಯಾನಂ ಧಿಯಾ ಸಹಿತಂ ಪುರುಷಂ ನಿಜಹ್ರುಃ ।
ಕುಂಭೀಪಾಕಂ ನರಕಂ ಗ್ರೀವಬದ್ಧಂ ಹತಾ ಏವಂ ಪುರುಷಾಸೋ ಯಮಸ್ಯ ॥ ೩೦ ॥

ಅಭ್ಯಕ್ತಾಕ್ತಾ ಸ್ವಲಂಕೃತಾ ಸರ್ವಂ ನೋ ದುರಿತಂ ದಹ ।
ಜಾನೀಥಾಶ್ಚೈವ ಕೃತ್ಯಾನಾಂ ಕರ್ತ್ಯಾನ್ ನ್ಯಾನ್ ಪಾಪಚೇತಸಃ ॥ ೩೧ ॥

ಯಥಾ ಹಂತಿ ಪುರಾಸೀನಂ ತಥೈವೇಷ್ವಾ ಸುಕೃನ್ನರಃ ।
ತಥಾ ತ್ವಯಾ ಯುಜಾ ವಯಂ ನಿಕೃಣ್ಮ ಸ್ಥಾಸ್ನು ಜಂಗಮಂ ॥ ೩೨ ॥

ಉತ್ತಿಷ್ಠೈವ ಪರೇಹಿತೋಽಜ್ಞಾತೇ ಕಿಮಿಹೇಚ್ಛಸಿ ।
ಗ್ರೀವಾಸ್ತೇ ಕೃತ್ಯೇ ಪಾದೌ ಚಾಭಿ ಕರ್ತ್ಸ್ಯಾಮಿ ವಿದ್ರವ ॥ ೩೩ ॥

ಸ್ವಾಯಸಾಃ ಸಂತಿ ನೋಽಸಯೋ ವಿದ್ಮ ಚೈವ ಪರೂಂಷಿ ತೇ ।
ತೈಸ್ತೇ ನಿಕೃಣ್ಮಸ್ತಾನ್ಯಗ್ರೇ ಯದಿ ನೋ ಜೀವಯಿಷ್ಯಸೀನ್ ॥ ೩೪ ॥

ಮಾಸ್ಯೋಚ್ಛಿಷೋ ದ್ವಿಪದಂ ಮೋತ ಕಿಂಚಿಚ್ಚತುಷ್ಪದಂ ।
ಮಾ ಜ್ಞಾತೀನನುಜಾನ್ಪೂರ್ವಾನ್ಮಾ ವೇಶಿ ಪ್ರತಿವೇಶಿನೌ ॥ ೩೫ ॥

ಶತ್ರೂಯತಾ ಪ್ರಹಿತಾಸಿ ಮೂರ್ಧ್ನೇನಾಭಿ ಯಥಾಯತಃ ।
ತತಸ್ತ್ವಥಾ ತ್ವಾ ನುದತು ಯೋಽಯಮಂತರ್ಮಯಿ ಶ್ರಿತಃ ॥ ೩೬ ॥

ಏವಂ ತ್ವಂ ನಿಕೃತಾಸ್ಮಾಭಿರ್ಬ್ರಹ್ಮಣಾ ದೇವಿ ಸರ್ವಶಃ ।
ಯಥೇತಮಾಶ್ರಿತಾ ಗತ್ವಾ ಪಾಪಧೀನಿವ ನೋ ಜಹಿ ॥ ೩೭ ॥

ಯಥಾ ವಿದ್ಯುದ್ಧತೋ ವೃಕ್ಷ ಆಮೂಲಾದನು ಶುಷ್ಯತಿ ।
ಏವಂ ಸ ಪ್ರತಿಶುಷ್ಯತು ಯೋ ಮೇ ಪಾಪಂ ಚಿಕೀರ್ಷತಿ ॥ ೩೮ ॥

ಯಥಾ ಪ್ರತಿಶುಕೋ ಭೂತ್ವಾ ತಮೇವ ಪ್ರತಿಧಾವತಿ ।
ಪಾಪಂ ತಮೇವಂ ಧಾವತು ಯೋ ಮೇ ಪಾಪಂ ಚಿಕೀರ್ಷತಿ ॥ ೩೯ ॥

ಯೋ ನಃ ಸ್ವೋ ಅರಣೋ ಯಶ್ಚ ನಿಷ್ಟ್ಯೋ ಜಿಘಾಂಸತಿ ।
ದೇವಾಸ್ತಂ ಸರ್ವೇ ಧೂರ್ವಂತು ಬ್ರಹ್ಮ ವರ್ಮ ಮಮಾಂತರಂ ॥ ೪೦ ॥

ಉತ್ವಾ ಮಂದಂತು ಸ್ತೋಮಾಃ ಕೃಣುಷ್ವ ರಾಧೋ ಅದ್ರಿವಃ ।
ಅವ ಬ್ರಹ್ಮದ್ವಿಷೋ ಜಹಿ ॥ ೪೧ ॥

ಕುಬೇರ ತೇ ಮುಖಂ ರೌದ್ರಂ ನಂದಿನ್ನಾನಂದಮಾವಹ ।
ಜ್ವರಮೃತ್ಯುಭಯಂ ಘೋರಂ ವಿಶ ನಾಶಯ ಮೇ ಜ್ವರಂ ॥ ೪೨ ॥

ಯೋ ಮೇ ಕರೋತಿ ಪ್ರದ್ವಾರೇ ಯೋ ಗೃಹೇ ಯೋ ನಿವೇಶನೇ ।
ಯೋ ಮೇ ಕೇಶನಖೇ ಕುರ್ಯಾದಂಜನೇ ದಂತಧಾವನೇ ॥ ೪೩ ॥

ಪ್ರತಿಸರ ಪ್ರತಿಧಾವ ಕುಮಾರೀವ ಪಿತುರ್ಗೃಹಾನ್ ।
ಮೂರ್ಧಾನಮೇಷಾಂ ಸ್ಫೋಟಯ ಪದಮೇಷಾಂ ಕುಲೇ ಕೃಧಿ ॥ ೪೪ ॥

ಯೇ ನೋ ರಯಿಂ ದುಶ್ಚರಿತಾಸೋ ಅಗ್ನೇ ಜುಹುರ್ಮರ್ತಾಸೋ ಅನೃತಂ ವದಂತಃ ।
ತೇಷಾಂ ವಪೂಂಷ್ಯರ್ಚಿಷಾ ಜಾತವೇದಃ ಶುಷ್ಕಂ ನ ವೃಕ್ಷಮಭಿ ಸಂ ದಹಸ್ವ ॥ ೪೫ ॥

ಕೃಷ್ಣವರ್ಣೇ ಮಹದ್ರೂಪೇ ಬೃಹತ್ಕರ್ಣೇ ಮಹದ್ಭಯೇ ।
ದೇವಿ ದೇವಿ ಮಹಾದೇವಿ ಮಮ ಶತ್ರೂನ್ವಿನಾಶಯ ॥ ೪೬ ॥
ಖಟ್ ಫಟ್ ಜಹಿ ಮಹಾಕೃತ್ಯೇ ವಿಧೂಮಾಗ್ನಿಸಮಪ್ರಭೇ ।
ಜಹಿ ಶತ್ರೂಂಸ್ತ್ರಿಶೂಲೇನ ಕ್ರುಧ್ಯಸ್ವ ಪಿಬ ಶೋಣಿತಂ ॥ ೪೭ ॥
ಯೇ ದ್ರುಹ್ಯುರ್ಯಜನೇ ಮಹ್ಯಮಗ್ನೇ ಕದಾಥಿಯೋ ದುರ್ಮದಾ ಅಶ್ಮನಾಸಃ ।
ಆಬಧ್ಯೈತಾನ್ ಶೋಚಿಷಾ ವಿಧ್ಯ ತಂತೂನ್ಸ್ವೈವಸ್ವತಸ್ಯ ಸದನಂ ನಯಸ್ವ ॥ ೪೮ ॥

## ನೂರ ಇಪ್ಪತ್ತೊಂಭತ್ತನೆಯ ಸೂಕ್ತವು



### ಪೀಠಿಕೆ

ಪ್ರಕೃತಸೂಕ್ತದಲ್ಲಿ ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯನ್ನು ವರ್ಣಿಸಲಾಗಿದೆ. ಅನಂತರ ಸೃಷ್ಟಿಯು ಹೇಗೆ ಮೊದಲಾಯಿತೆಂಬ ವಿಷಯವನ್ನು ಸೂಚಿಸಲಾಗಿದೆ. ಸೃಷ್ಟಿಯ ವಿಷಯದಲ್ಲಿ ವರ್ಣನೆ ಇರುವ ಸೂಕ್ತಗಳಲ್ಲಿ ಹತ್ತನೆಯ ಮಂಡಲದ ೮೧, ೮೨, ೯೦, ೧೨೯, ೧೩೦, ೧೯೦ ನೇ ಸೂಕ್ತಗಳು ಮುಖ್ಯವಾದವು. ಉಪನಿಷತ್ತುಗಳಲ್ಲಿಯೂ ವೇದಾಂತಥಗ್ರಂಥಗಳಲ್ಲಿಯೂ ಹೇಳಲ್ಪಟ್ಟಿರುವ ತತ್ತ್ವಗಳಿಗೂ ವೇದಾಂತವಿಷಯಗಳಿಗೂ ಈ ಸೂಕ್ತಗಳೇ ಆಧಾರವಾಗಿವೆ. ಇವುಗಳ ಆಧಾರದ ಮೇಲೆ ಪರಬ್ರಹ್ಮವಸ್ತುವನ್ನು ವರ್ಣಿಸುವ ಉಪನಿಷತ್ತುಗಳು—ಅದರಲ್ಲಿಯೂ ಮುಖ್ಯವಾಗಿ ದಶೋಪನಿಷತ್ತುಗಳು—ರಚಿತವಾಗಿವೆ. ಈ ಉಪನಿಷತ್ತುಗಳಲ್ಲಿ, ಬ್ರಹ್ಮದ ಸ್ವರೂಪ, ಅಸತ್, ಸತ್, ಪ್ರಕೃತಿ ಪುರುಷ, ಆತ್ಮ, ಪರಮಾತ್ಮ. ಜಗತ್‌ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿ, ಅನಂತರ ಜಗತ್ಸೃಷ್ಟಿಗೆ ಕಾರಣ, ಜಗತ್ಸೃಷ್ಟಿಯಾದ ವಿಚಾರ, ಸ್ಥಿತಿ, ಲಯ ಇತ್ಯಾದಿ ವಿಷಯಗಳು ನಾನಾರೀತಿಯಾಗಿ ವರ್ಣಿಸಲ್ಪಟ್ಟಿವೆ. ಅವುಗಳನ್ನೆಲ್ಲಾ ವಿಸ್ತಾರವಾಗಿ ವಿವರಿಸುವುದಾದರೆ ಅವೇ ಪ್ರತ್ಯೇಕವಾದ ಅನೇಕ ಗ್ರಂಥಗಳಾಗುವವು. ಆದ್ದರಿಂದ ಅವುಗಳನ್ನು ವಿವರಿಸುವುದು ಇಲ್ಲಿ ಸಾಧ್ಯವಿಲ್ಲ. ಪ್ರಕೃತ ಸಂದರ್ಭಕ್ಕೆ ಸೇರಿದ ವಿಷಯಗಳನ್ನು ಮಾತ್ರ ಸಂದರ್ಭೋಚಿತವಾಗಿ ವಿಮರ್ಶಿಸಲಾಗುವುದು.

ಪ್ರಕೃತಸೂಕ್ತದಲ್ಲಿ ಋಷಿಯು ಸೃಷ್ಟಿಗೆ ಪೂರ್ವವಲ್ಲಿದ್ದ ಸ್ಥಿತಿಯನ್ನು ವರ್ಣಿಸುವಾಗ ಸರ್ವವನ್ನೂ ಆವರಿಸಿದ್ದ ಬ್ರಹ್ಮವು ಹೇಗಿದ್ದಿತು? ಆಗ ದೃಶ್ಯಮಾನವಾದ ಪೃಥಿವ್ಯಂತರಕ್ಷಸ್ವರ್ಗಾದಿಲೋಕಗಳಿರಲಿಲ್ಲ. ಹಾಗಾದರೆ ಅಲ್ಲೆಲ್ಲಾ ಏನು ತುಂಬಿದ್ದಿತು ? ಮರಣ, ಅಮರಣಗಳಾಗಲಿ, ಹಗಲುರಾತ್ರಿಗಳಾಗಲಿ ಯಾವುದೂ ಇರಲಿಲ್ಲ. ಚೈತನ್ಯಸ್ವರೂಪವಾದ ಬ್ರಹ್ಮವೊಂದು ಹೊರತು ಮತ್ತೇನೂ ಇರಲಿಲ್ಲ. ಎಲ್ಲೆಲ್ಲಿಯೂ ಗಾಢಾಂಧಕಾರವೇ ಆವರಿಸಿದ್ದಿತು. ಎಲ್ಲಾ ಕಡೆಯಲ್ಲಿಯೂ ನೀರು ತುಂಬಿದ್ದಿತು. ಅನಂತರ ಆ ಪರಬ್ರಹ್ಮದಲ್ಲಿ ತಪಸ್ಸಿನ ಅಥವಾ ಧ್ಯಾನದ (ಸಂಕಲ್ಪದ) ಇಚ್ಛೆಯು ಆವಿರ್ಭವಿಸಿತು. ಆ ಇಚ್ಛೆಯೇ ಜಗತ್ಸೃಷ್ಟಿಗೆ ಮೂಲಕಾರಣವು. ಅವ್ಯಕ್ತರೂಪವಾದ ಅಸತ್ತಿನಿಂದ ವ್ಯಕ್ತರೂಪವಾದ ಸತ್ ಹೇಗೆ ಉಂಟಾಯಿತು, ಅಸತ್ತಿಗೂ ಸತ್ತಿಗೂ ಇರುವ ಸಂಬಂಧವೇನು ಎಂಬುದನ್ನು ಋಷಿಗಳು ತಮ್ಮ ಧ್ಯಾನದಿಂದ ಕಂಡುಕೊಂಡರು. ಅವರ ಧ್ಯಾನವು ಇನ್ನೂ ಮುಂದುವರೆಯಿತು. ಜಗತ್ತಿಗೆ ಕಾರಣ ಯಾವುದು ಎಂಬುದನ್ನು

ಅರಿತರು. ಭೋಕ್ತೃವು ಭೋಗ್ಯವಸ್ತುವುಗಿಂತ ಶ್ರೇಷ್ಠನೆಂಬುದನ್ನು ಅರಿತರು. ಆದರೂ ಸಹ ಈ ಸೃಷ್ಟಿವಿಚಾರವನ್ನೂ ಇವರ ಕಾರಣವನ್ನೂ ಇದರ ಸ್ಥಿತಿಗಳನ್ನೂ, ಇದರ ನಾಶವನ್ನೂ ಯಾರು ತಿಳಿದಿದ್ದಾರೆ? ದೇವತೆಗಳೂ ಆಗ ಸೃಷ್ಟಿಸಲ್ಪಟ್ಟಿರಲಿಲ್ಲ. ಈಚೆಗೆ ಸೃಷ್ಟರಾದವರು ಆದ್ದರಿಂದ ತಮ್ಮ ಸೃಷ್ಟಿಗಿಂತ ಮುಂಚೆ ಇದ್ದ ಸ್ಥಿತಿಯನ್ನು ಅವರು ತಾನೆ ಹೇಗೆ ತಿಳಿಯಬಲ್ಲರು? ಯಾವ ಪರಬ್ರಹ್ಮನಿಂದ ಈ ಜಗದಾದಿಗಳು ಉತ್ಪನ್ನವಾದವೋ ಅವನು ಮಾತ್ರವೇ ಸೃಷ್ಟಿಯ ರಹಸ್ಯವನ್ನು ಬಲ್ಲನು. ಇತರರಿಗೆ ಗೊತ್ತಿಲ್ಲ. ಇದನ್ನು ತಿಳಿದವರು ಯಾರಾದರೂ ಇರುವುದಾದರೆ ಆ ಪರಬ್ರಹ್ಮನೇ ಹೊರತು ಮತ್ತೆ ಬೇರೆ ಯಾರೂ ಇಲ್ಲ. ಅವನಿಗೇ ತಿಳಿಯದಿದ್ದರೆ ಮತ್ತೆ ಯಾರಿಗೆ ತಿಳಿಯಬೇಕು? ಯಾರಿಗೂ ತಿಳಿಯುವುದಿಲ್ಲ. ಎಂದು ಋಷಿಯು ಸಂದೇಹವನ್ನು ವ್ಯಕ್ತಪಡಿಸಿದ್ದಾನೆ

ಈ ಸೂಕ್ತದಲ್ಲಿ ೭ ಋಕ್ಕುಗಳಿವೆ. ಮೊದಲಿನ ೨ ಋಕ್ಕುಗಳಲ್ಲಿಯೂ ಮೂರನೆಯ ಋಕ್ಕಿನ ಪೂರ್ವಾರ್ಧದಲ್ಲಿಯೂ ಜಗತ್ಸೃಷ್ಟಿಗೆ ಪೂರ್ವದಲ್ಲಿ ಯಾವ ಸ್ಥಿತಿ ಇದ್ದಿತು ಎಂಬ ವರ್ಣನೆ ಇದೆ ಮೂರನೆಯ ಋಕ್ಕಿನ ಉತ್ತರಾರ್ಧದಲ್ಲಿಯೂ ನಾಲ್ಕನೆಯ ಋಕ್ಕಿನಲ್ಲಿಯೂ ಜಗತ್ಸೃಷ್ಟಿಗೆ ಪರಮಾತ್ಮನ ತಪೋರೂಪವಾದ (ಧ್ಯಾನರೂಪವಾದ) ಇಚ್ಛೆಯೇ ಕಾರಣವೆಂದು ಹೇಳಿದೆ. ಸೃಷ್ಟಿಮಾಡಬೇಕೆಂಬ ಸಂಕಲ್ಪವೇ ಜಗತ್ಸೃಷ್ಟಿಗೆ ಬೀಜವು ಎಂದರೆ ಮೂಲಭೂತ ಕಾರಣವು. ನಾಲ್ಕನೆಯ ಋಕ್ಕಿನ ಅಂತ್ಯದಲ್ಲಿ ಸತ್ ಅಸತ್‌ಗಳಿಗೆ ಇರುವ ಸಂಬಂಧವನ್ನು. ಐದನೆಯ ಋಕ್ಕಿನಲ್ಲಿ ಜಗದ್ಬೀಜವನ್ನೂ, ಭೋಕ್ತೃವಾದ ಪರಮಾತ್ಮನು ಭೋಗ್ಯವಾದ ಜಗದಾದಿಗಳಿಗಿಂತ ಶ್ರೇಷ್ಠನೆಂಬುವುದನ್ನೂ ಋಷಿಗಳು ತಮ್ಮ ಧ್ಯಾನಮಾರ್ಗದಿಂದ ಕಂಡು ಹಿಡಿದರು ಎಂದು ಹೇಳಿದೆ. ಆರನೆಯ ಋಕ್ಕಿನಲ್ಲಿ ಈ ಸೃಷ್ಟಿಯ ವಿವರವು ಯಾರಿಗೆ ತಾನೆ ಗೊತ್ತಿದೆ? ದೇವತೆಗಳಿಗೆ ಗೊತ್ತಿದೆಯೇ ಎಂದರೆ ಅವರೂ ಆಗ ಉತ್ಪನ್ನರಾಗಿರಲಿಲ್ಲವಾದ್ದರಿಂದ ಅವರಿಗೂ ತಿಳಿಯಲು ಕಾರಣವಿಲ್ಲ. ಈಚೆಗೆ ಉತ್ಪನ್ನರಾದವರಿಗೆ ಹಿಂದಿನ ವಿಷಯವು ಹೇಗೆ ತಿಳಿಯಬೇಕು? ಇತ್ಯಾದಿವರ್ಣನೆ ಇದೆ. ಏಳನೆಯ ಋಕ್ಕಿನಲ್ಲಿ ಯಾರಿಂದ ಈ ಜಗದಾದಿಗಳು ಉತ್ಪನ್ನವಾದುವೋ ಅವನಿಗೆ ಮಾತ್ರವೇ ಇದರ ರಹಸ್ಯ ತಿಳಿದಿರುವುದು. ಅವನಿಗೆ ಖಂಡಿತವಾಗಿ ತಿಳಿದಿರುವುದು. ಒಂದುವೇಳೆ ತನಗೂ ತಿಳಿಯದೆಂದು ಅವನು ಹೇಳುವುದಾದರೆ ಮತ್ತೆ ಯಾರಿಗೆ ತಿಳಿಯಬೇಕು? ಯಾರಿಗೂ ತಿಳಿಯದೆಂದು ಋಷಿಯು ಸ್ಪಷ್ಟವಾಗಿ ವಿವರಿಸಿರುವನು.

ಪ್ರಕೃತಸೂಕ್ತದಲ್ಲಿ ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯ ವಿವರಣೆ ಇದೆಯೆಂದು ಹೇಳಲಾಗಿದೆಯಷ್ಟೆ. ಅನಂತರ ಸೃಷ್ಟಿಯು ಮುಂದುವರೆಯುವುದು. ಬಳಿಕ ಸ್ಥಿತಿಯು ಎಂದರೆ ಸೃಷ್ಟಿಸಲ್ಪಟ್ಟ ಜಗದಾದಿಗಳು ಕೆಲವು ಕಾಲ ಅದೇ ಸ್ಥಿತಿಯಲ್ಲಿರುವವು. ಅನಂತರ ಅವು ನಾಶವಾಗಿ ಸೃಷ್ಟಿಗೆ ಪೂರ್ವದಲ್ಲಿ ಯಾವ ಸ್ಥಿತಿಯಲ್ಲಿದ್ದಿತೊ ಅದೇ ಸ್ಥಿತಿಗೆ ಬರುವುದು. ಕೆಲವು ಕಾಲದ ಮೇಲೆ ಅದೇ ಸ್ಥಿತಿಯಿದ್ದು ಪುನಃಸೃಷ್ಟಿ, ಪುನಃಸ್ಥಿತಿ, ಪುನಃನಾಶ(ಲಯ)ವು ನಡೆಯುವುದು. ಎಂದರೆ ಸೃಷ್ಟಿಸ್ಥಿತಿಲಯಗಳು ಒಂದಾವರ್ತಿ ಮಾತ್ರ ನಡೆಯುವುದಿಲ್ಲ. ಚಕ್ರಪರಿಭ್ರಮಣದಂತೆ ಒಂದಾಗುತ್ತಲೊಂದು ಎಡಬಿಡದೆ ನಡೆದು ಬರುತ್ತಿರುವವು. ಆದ್ದರಿಂದ ಈಗ ಇಲ್ಲಿ ವರ್ಣಿಸಿರುವ ಜಗತ್ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯೂ ಹಿಂದೆ ಅನೇಕಾವರ್ತಿ ಸಂಭವಿಸಿರುವುದು. ಮುಂದೆಯೂ ಸಂಭವಿಸುವುದು. ಆದ್ದರಿಂದ ಸೃಷ್ಟಿ ಸ್ಥಿತಿ ಲಯ, ಲಯಾನಂತರ ಸ್ಥಿತಿ ಇವೆಲ್ಲವೂ ಒಂದಾಗುತ್ತಲೊಂದರಂತೆ ಅಸಂಖ್ಯಾತವಾಗಿ ನಡೆದು ಬರುತ್ತಿರುವವು. ಇದಕ್ಕೆ ಆದಿಯೂ ಇಲ್ಲ ಅಂತ್ಯವೂ ಇಲ್ಲ. ಅಂತಹ ಅಸಂಖ್ಯಾತವಾದ ಸ್ಥಿತಿಗಳಲ್ಲಿ ಇಲ್ಲಿ ವರ್ಣಿಸಿರುವ ಸ್ಥಿತಿಯು ಒಂದುಸಲ ನಡೆದ (ಎಂದರೆ ಸಂಭವಿಸಿದ) ಸ್ಥಿತಿಮಾತ್ರ. ಇವೆಲ್ಲವೂ ಒಂದೇ ವಿಧವಾಗಿರುವುದರಿಂದ ಒಂದಾವರ್ತಿ ನಡೆದುದನ್ನು ವರ್ಣಿಸಿದ್ದರಿಂದ ಎಲ್ಲವನ್ನೂ ವರ್ಣಿಸಿದಂತಾಯಿತು.

|| ಸಾಯಣಭಾಷ್ಯಂ ||

**ಏಕಾದಶೇಽನುವಾಕೇ ತ್ರಯೋವಿಂಶತಿಸಂಖ್ಯಾನಿ ಸೂಕ್ತಾನಿ । ತತ್ರ ನಾಸದಾಸೀದಿತಿ ಸಪ್ತರ್ಚಂ ಪ್ರಥಮಂ ಸೂಕ್ತಂ ತ್ರೈಷ್ಟುಭಂ । ಪರಮೇಷ್ಠೀ ನಾಮ ಪ್ರಜಾಪತಿರ್ಋಷಿಃ । ವಿಯದಾದಿಭಾವಾನಾಂ ಸೃಷ್ಟಿಸ್ಥಿತಿಪ್ರಲಯಾದೀನಾಮತ್ರ ಪ್ರತಿಪಾದ್ಯತ್ವಾತ್ತೇಷಾಂ ಕರ್ತಾ ಪರಮಾತ್ಮಾ ದೇವತಾ । ತಥಾ ಚಾನುಕ್ರಾಂತಂ । ನಾಸತ್ಸಪ್ತ ಪ್ರಜಾಪತಿಃ ಪರಮೇಷ್ಠೀ ಭಾವವೃತ್ತಂ ತ್ವಿತಿ ॥ ಗತೋ ವಿನಿಯೋಗಃ ॥**

ಅನುವಾದವು—ಹತ್ತನೆಯ ಮಂಡಲದ ಹನ್ನೊಂದನೆಯ ಅನುವಾಕದಲ್ಲಿ ಒಟ್ಟು ಇಪ್ಪತ್ತಮೂರು ಸೂಕ್ತಗಳಿರುವವು. ಅವುಗಳಲ್ಲಿ **ನಾಸದಾಸೀತ್** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪರಮೇಷ್ಠೀ ಎಂಬ ಹೆಸರಿನಿಂದ ಪ್ರಸಿದ್ಧನಾದ ಪ್ರಜಾಪತಿಯೇ ಋಷಿಯು, ಈ ಸೂಕ್ತದಲ್ಲಿ ಆಕಾಶಾದಿ ಭೂತಗಳ ಮತ್ತು ಸೃಷ್ಟಿಸ್ಥಿತಿಪ್ರಲಯಾದಿಗಳ ವಿಷಯವು ಪ್ರತಿಪಾದಿತವಾಗಿರುವುದರಿಂದ ಅವುಗಳ ಸೃಷ್ಟಿಕರ್ತನಾದ ಪರಮಾತ್ಮನೇ ಈ ಸೂಕ್ತಕ್ಕೆ ದೇವತೆಯು, ಅನುಕ್ರಮಣಿಕೆಯಲ್ಲಿ—**ನಾಸತ್ಸಪ್ತ ಪ್ರಜಾಪತಿಃ ಪರಮೇಷ್ಠೀ ಭಾವವೃತ್ತಂ ತು** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೨೯

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೨೯ ॥

ಅಷ್ಟಕ—೮ ॥ ಅಧ್ಯಾಯ—೭ ॥ ವರ್ಗ—೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥

॥ ಋಷಿಃ—ಪ್ರಜಾಪತಿಃ ಪರಮೇಷ್ಠೀ ॥

॥ ದೇವತಾ—ಭಾವವೃತ್ತಂ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮಾ ಪರೋ ಯತ್ ।**

**ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಂ ॥೧॥**

॥ ಪದಪಾಠಃ ॥

**ನ । ಅಸತ್ । ಆಸೀತ್ । ನೋ ಇತಿ । ಸತ್ । ಆಸೀತ್ । ತದಾನೀಂ । ನ । ಆಸೀತ್ । ರಜಃ । ನೋ ಇತಿ । ವಿಽಓಮ । ಪರಃ । ಯತ್ ।**

**ಕಿಂ । ಆ । ಅವರೀವರಿತಿ । ಕುಹ । ಕಸ್ಯ । ಶರ್ಮನ್ । ಅಂಭಃ । ಕಿಂ । ಆಸೀತ್ । ಗಹನಂ । ಗಭೀರಂ ॥**

|| ಸಾಯಣಭಾಷ್ಯಂ ||

ತಪಸಸ್ತನ್ಮಹಿನಾಜಾಯತೈಕಮಿತ್ಯಾದಿನಾಗ್ರೇ ಸೃಷ್ಟಿಃ ಪ್ರತಿಪಾದಯಿಷ್ಯತೇ । ಅಧುನಾ ತತಃ
ಪ್ರಾಗವಸ್ಥಾ ನಿರಸ್ತಸಮಸ್ತಪ್ರಪಂಚಾ ಯಾ ಪ್ರಲಯಾವಸ್ಥಾ ಸಾ ನಿರೂಪ್ಯತೇ । ತದಾನೀಂ ಪ್ರಲಯದಶಾ-
ಯಾಮವಸ್ಥಿತಂ ಯದಸ್ಯ ಜಗತೋ ಮೂಲಕಾರಣಂ ತದಸಚ್ಛಶವಿಷಾಣವನ್ನಿರುಪಾಖ್ಯಂ ನಾಸೀತ್ । ನ
ಹಿ ತಾದೃಶಾತ್ಕಾರಣಾದಸ್ಯ ಸತೋ ಜಗತ ಉತ್ಪತ್ತಿಃ ಸಂಭವತಿ ॥ ತಥಾ ನೋ ಸನ್ನೈವ ಸದಾತ್ಮಕವತ್ಸತ್ತ್ವೇನ
ನಿರ್ವಾಚ್ಯಮಾಸೀತ್। ಯದ್ಯಪಿ ಸದಸದಾತ್ಮಕಂ ಪ್ರತ್ಯೇಕಂ ವಿಲಕ್ಷಣಂ ಭವತಿ ತಥಾಪಿ ಭಾವಾಭಾವಯೋಃ
ಸಹಾವಸ್ಥಾನಮಪಿ ಸಂಭವತಿ । ಕುತಸ್ತಯೋಸ್ತಾದಾತ್ಮ್ಯಮಿತಿ ಉಭಯವಿಲಕ್ಷಣಮನಿರ್ವಾಚ್ಯಮೇವಾ-
ಸೀದಿತ್ಯರ್ಥಃ । ನನು ನೋ ಸದಿತಿ ಪಾರಮಾರ್ಥಿಕಸತ್ತ್ವಸ್ಯ ನಿಷೇಧಃ । ತರ್ಹ್ಯಾತ್ಮನೋಽಪ್ಯನಿರ್ವಾಚ್ಯತ್ವ-
ಪ್ರಸಂಗಃ । ಅಥೋಚ್ಯೇತ ।'ನ । ಆನೀದವಾತಮಿತಿ ತಸ್ಯ ಸತ್ತ್ವಮಗ್ರೇ ವಕ್ಷ್ಯತೇ ಪರಿಶೇಷಾನ್ಮಾಯಾಯಾ
ಏವಾತ್ರ ಸತ್ತ್ವಂ ನಿಷಿಧ್ಯತ ಇತಿ । ಏವಮಪಿ ತದಾನೀಮಿತಿ ವಿಶೇಷಣಾನರ್ಥಕ್ಯಂ ವ್ಯವಹಾರದಶಾಯಾಮಪಿ
ತಸ್ಯಾಃ ಪಾರಮಾರ್ಥಿಕಸತ್ತ್ವಾಭಾವಾತ್ । ಅಥ ವ್ಯಾವಹಾರಿಕಸತಾಂ ಪೃಥಿವ್ಯಾದೀನಾಂ ಭಾವಾನಾಂ
ವಿದ್ಯಮಾನತ್ವಾತ್ ಕಥಂ ನೋ ಸದಿತಿ ನಿಷೇಧಃ । ತತ್ರಾಹ । ನಾಸೀದ್ರಜ ಇತ್ಯಾದಿ । ಲೋಕಾ ರಜಾಂ-
ಸ್ಯುಚ್ಯಂತೇ । ನಿ. ೪-೧೯ । ಇತಿ ಯಾಸ್ಕಃ । ಅತ್ರ ಚ ಸಾಮಾನ್ಯಾಪೇಕ್ಷಮೇಕವಚನಂ । ವ್ಯೋಮ್ನೋ
ವಕ್ಷ್ಯಮಾಣತ್ವಾತ್ತಸ್ಯಾಧಸ್ತನಾಃ ಪಾತಾಲಾದಯಃ ಪೃಥಿವ್ಯಂತಾ ನಾಸನ್ನಿತ್ಯರ್ಥಃ । ತಥಾ ವ್ಯೋಮಾಂತ-
ರಿಕ್ಷಂ ತದಪಿ ನೋ ನೈವಾಸೀತ್ । ಪರ ಇತಿ ಸಕಾರಾಂತಂ ಪರಸ್ತಾದಿತ್ಯರ್ಥೇ ವರ್ತತೇ ॥ ಪರಶಬ್ದಾ-
ಚ್ಛಾಂದಸೋಽಸ್ತಾತೇರರ್ಥೇಽಸಿಪ್ರತ್ಯಯಃ ॥ ಪರೋ ವ್ಯೋಮ್ನಃ ಪರಸ್ತಾದುಪರಿದೇಶೇ ದ್ಯುಲೋಕ-
ಪ್ರಭೃತಿಸತ್ಯಲೋಕಾಂತಂ ಯದಸ್ತಿ ತದಪಿ ನಾಸೀದಿತ್ಯರ್ಥಃ । ಅನೇನ ಚತುರ್ದಶಭುವನಗರ್ಭಂ
ಬ್ರಹ್ಮಾಂಡಂ ಸ್ವರೂಪೇಣ ನಿಷಿದ್ಧಂ ಭವತಿ । ಅಥ ತದಾವರಕತ್ವೇನ ಪುರಾಣೇಷು ಪ್ರಸಿದ್ಧಾನಿ ಯಾನಿ
ವಿಯದಾದಿಭೂತಾನಿ ತೇಷಾಮವಸ್ಥಾನಪ್ರದೇಶಂ ತದಾವರಣನಿಮಿತ್ತಂ ಚಾಕ್ಷೇಪಮುಖೇನ ಕ್ರಮೇಣ
ನಿಷೇಧಯತಿ ಕಿಮಾವರೀವರಿತಿ । ಕಿಮಾವರಣೀಯಂ ತತ್ತ್ವಮಾವರಕಭೂತಜಾತಮಾವರೀವಃ । ಅತ್ಯಂ-
ತಮಾವೃಣುಯಾತ್ । ಆವಾರ್ಯಾಭಾವಾತ್ತದಾವರಕಮಪಿ ನಾಸೀದಿತ್ಯರ್ಥಃ ॥ ವೃಣೋತೇರ್ಯಙ್‌ಲು-
ಗಂತಾಚ್ಛಾಂದಸೇ ಲಙಿ ತಿಪಿ ರೂಪಮೇತತ್ ॥ ಯದ್ವಾ । ಕಿಮಿತಿ ಪ್ರಥಮೈವ । ಕಿಂ ತತ್ತ್ವಮಾವರಕ-
ಮಾವೃಣುಯಾತ್ । ಆವಾರ್ಯಾಭಾವಾದಾವ್ರಿಯಮಾಣವತ್ತದಪಿ ಸ್ವರೂಪೇಣ ನಾಸೀದಿತ್ಯರ್ಥಃ ।
ಆವೃಣ್ವತ್ತತ್ರತ್ಯಂ ಕುಹ ಕುತ್ರ ದೇಶೇಽವಸ್ಥಾಯಾವೃಣೋತಿ । ಆಧಾರಭೂತಸ್ತಾದೃಶೋ ದೇಶೋಽಪಿ
ನಾಸೀದಿತ್ಯರ್ಥಃ ॥ ಕಿಂಶಬ್ದಾತ್ಸಪ್ತಮ್ಯರ್ಥೇ ಹಪ್ರತ್ಯಯಃ । ಕು ತಿಹೋಃ । ಪಾ. ೭-೨-೧೦೪ । ಇತಿ
ಪ್ರಕೃತೇಃ ಕ್ವಾದೇಶಃ ॥ ಕಸ್ಯ ಶರ್ಮನ್ ಕಸ್ಯ ವಾ ಭೋಕ್ತುರ್ಜೀವಸ್ಯ ಶರ್ಮಣಿ ಸುಖದುಃಖಸಾಕ್ಷಾ-
ತ್ಕಾರಲಕ್ಷಣೇ ವಾ ನಿಮಿತ್ತಭೂತೇ ಸತಿ ತದಾವರಕಂ ತತ್ತ್ವಮಾವೃಣುಯಾತ್ । ಜೀವಾನಾಮುಪಭೋ-
ಗಾರ್ಥಾ ಹಿ ಸೃಷ್ಟಿಃ । ತಸ್ಯಾಂ ಹಿ ಸತ್ಯಾಂ ಬ್ರಹ್ಮಾಂಡಸ್ಯ ಭೂತೈರಾವರಣಂ ಪ್ರಲಯದಶಾಯಾಂ ಚ
ಭೋಕ್ತಾರೋ ಜೀವಾ ಉಪಾಧಿವಿಲಯಾತ್ಪ್ರಲೀನಾ ಇತಿ ಕಸ್ಯ ಕಶ್ಚಿದಪಿ ಭೋಕ್ತಾ ನ ಸಂಭವತೀತ್ಯಾ-
ವರಣಸ್ಯ ನಿಮಿತ್ತಾಭಾವಾದಪಿ ತನ್ನ ಘಟತ ಇತ್ಯರ್ಥಃ । ಏತೇನ ಭೋಗ್ಯಪ್ರಪಂಚವದ್ಭೋಕ್ತೃಪ್ರಪಂ-

**ಚೋಽಪಿ ತದಾನೀಂ ನಾಸೀದಿತ್ಯುಕ್ತಂ ಭವತಿ ॥ ಕಿಂಶಬ್ದಾದುತ್ತರಸ್ಯ ಜಸಃ ಸಾವೇಕಾಚ ಇತಿ ಪ್ರಾಪ್ತ-ಸ್ಯೋದಾತ್ತತ್ವಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ । ಸುಪಾಂ ಸುಲುಗಿತಿ ಶರ್ಮಣಃ ಸಪ್ತಮ್ಯಾ ಲುಕ್ ॥ ಯದ್ಯಪಿ ಸಾವರಣಸ್ಯ ಬ್ರಹ್ಮಾಂಡಸ್ಯ ನಿಷೇಧೇನ ತದಂತರ್ಗತಮಪ್ಸತ್ತ್ವಮಪಿ ನಿರಾಕೃತಂ ತಥಾಪ್ಯಾಪೋ ವಾ ಇದಮಗ್ರೇ ಸಲಿಲಮಾಸೀತ್ । ತೈ. ಸಂ. ೭-೧-೫-೧ । ಇತ್ಯಾದಿಶ್ರುತ್ಯಾ ಕಶ್ಚಿದಪಾಂ ಸದ್ಭಾವಮಾಶಂಕೇತ । ತಂ ಪ್ರತ್ಯಾಚಷ್ಟೇಽಂಭಃ ಕಿಮಾಸೀದಿತಿ । ಗಹನಂ ದುಷ್ಪ್ರವೇಶಂ ಗಭೀರಂ ದುಃಖಸ್ಥಾನಮತ್ಯಗಾಧಂ ಈದೃಶಮಂಭಃ ಕಿಮಾಸೀತ್ । ತದಪಿ ನೈವಾಸೀದಿತ್ಯರ್ಥಃ । ಶ್ರುತಿಸ್ತ್ವವಾಂ-ತರಪ್ರಲಯವಿಷಯಾ ॥**

॥ ಪ್ರತಿಪದಾರ್ಥ ॥

**ತದಾನೀಂ**—ಪ್ರಲಯದೆಶೆಯಲ್ಲಿ ಎಂದರೆ ಸೃಷ್ಟಿಗೆ ಪೂರ್ವದಲ್ಲಿ । **ಅಸತ್**—ಜಗದಾದಿಗಳಿಗೆ ಕಾರಣಭೂತ ವಾದುದೂ ಅವ್ಯಕ್ತ ಸ್ವರೂಪದಿಂದಿರುವುದೂ ಇಂದ್ರಿಯಗಳಿಗೆ ಅಗ್ರಾಹ್ಯ ವಾದುದೂಆದ ಯಾವ ಹೆಸರಿನಿಂದಲೂ ಕರೆಯಲ್ಪಡಲು ಆಗದಿರುವ ಅಸತ್ ಎಂಬುದು । **ನ ಆಸೀತ್**—ಇರಲಿಲ್ಲ । **ಸತ್**—ವ್ಯಕ್ತಸ್ವರೂಪವುಳ್ಳದ್ದೂ, ಇಂದ್ರಿಯಗಮ್ಯವಾದುದೂ ಜಗದಾದಿಗಳಿಗೆ ಮೂಲಭೂತವೂ ಆದ ಸತ್ ಎಂಬ ಮೂಲವಸ್ತುವೂ । **ನೋ ಆಸೀತ್**—ಇರಲಿಲ್ಲ । **ರಜಃ**—ಲೋಕಗಳೂ । **ನ ಆಸೀತ್**—ಇರಲಿಲ್ಲ । **ವ್ಯೋಮ**—ಅಂತರಿಕ್ಷವೂ । **ನೋ**—ಇರಲಿಲ್ಲ । **ಪರಃ**—ಆ ಅಂತರಿಕ್ಷ ಪ್ರದೇಶದಿಂದ ಆಚೆಗೆ । **ಯತ್**—ಯಾವ ಸ್ವರ್ಗಾದಿಲೋಕಗಳಿರುವವೋ ಅವೂ । **ನೋ**—ಇರಲಿಲ್ಲ (ಹಾಗಾದರೆ) । **ಆವರೀವಃ**—ಆವರಣಭೂತವಾದ ಎಂದರೆ ಇವೆಲ್ಲವನ್ನು ಆವರಿಸಿರುವ । **ಕಿಂ**—ಯಾವುದಾದರೂ ವಸ್ತುವಿದ್ದಿತೇ (ಇಲ್ಲ) । **ಕುಹ**—ಯಾವ ಪ್ರದೇಶದಲ್ಲಿ । **ಕಸ್ಯ**—ಯಾವ ಭೋಕ್ತೃವಿನ । **ಶರ್ಮನ್**—ಸುಖಪ್ರದವಸ್ತುಗಳು ಇದ್ದವು ? । **ಗಹನಂ**—ಪ್ರವೇಶಿಸಲಸಾಧ್ಯವಾದುದೂ । **ಗಭೀರಂ**—ಅಗಾಧ ವಾದುದೂ ಆದ । **ಅಂಭಃ**—ಉದಕವು । **ಕಿಂ ಆಸೀತ್**—ಇದ್ದಿತೇ ? (ಯಾವುದೂ ಇರಲಿಲ್ಲ).

॥ ಭಾವಾರ್ಥ ॥

ಪ್ರಳಯದೆಶೆಯಲ್ಲಿ ಎಂದರೆ ಹಿಂದೆ ಸೃಷ್ಟಿಯಾಗಿದ್ದ ಜಗದಾದಿಗಳು ಪರಮಾತ್ಮನಲ್ಲಿ ಲೀನವಾಗಿ ಮತ್ತೆ ಪುನಃ ಸೃಷ್ಟಿಯಾಗುವುದಕ್ಕೆ ಪೂರ್ವಭಾವಿಯಾಗಿದ್ದ ಆ ಕಾಲದಲ್ಲಿ ಜಗದಾದಿಗಳಿಗೆ ಕಾರಣಭೂತವಾದುದೂ, ಅವ್ಯಕ್ತ ಸ್ವರೂಪದಿಂದಿರುವುದೂ ಇಂದ್ರಿಯಜನ್ಯಜ್ಞಾನಗಳಿಗೆ ಅಗೋಚರವೂ, ನಾಮರೂಪಾದಿಗಳಿಂದ ನಿರ್ದೇಶಿಸಲಸಾಧ್ಯ ವಾದುದೂ ಆದ ಅಸತ್ತಾಗಲಿ, ಇಂದ್ರಿಯಗಮ್ಯವಾದುದೂ, ವ್ಯಕ್ತಸ್ವರೂಪವುಳ್ಳದ್ದೂ, ಜಗದಾದಿಗಳಿಗೆ ಮೂಲಭೂತ ವಾದುದೂ ಆದ ಸತ್ ಎಂಬುದಾಗಲಿ ಇರಲಿಲ್ಲ. ಲೋಕಗಳೂ ಇರಲಿಲ್ಲ, ಅಂತರಿಕ್ಷವೂ ಇರಲಿಲ್ಲ. ಅಂತರಿಕ್ಷದಿಂದ ಆಚೆಗಿರುವ ಸ್ವರ್ಗಾದಿಲೋಕಗಳೂ ಇರಲಿಲ್ಲ. ಹಾಗಾದರೆ ಇವೆಲ್ಲವನ್ನು ಆವರಿಸಿದ್ದ ಯಾವುದಾದರೂ ವಸ್ತುವಿದ್ದಿತೇ? ಭೋಕ್ತೃವಿನ (ಜೀವರಾಶಿಗಳಿಗೆ ಅಥವಾ ಪ್ರಾಣಿಗಳಿಗೆ) ಸುಖಸಾಧನಸಾಮಗ್ರಿಗಳು ಎಲ್ಲಿದ್ದವು? ಅಥವಾ ಪ್ರವೇಶಿಸ ಲಸಾಧ್ಯವಾದುದೂ, ಅಗಾಧವಾದುದೂ ಆದ ಉದಕವಿದ್ದಿತೇ ? (ಯಾವುದೂ ಇರಲಿಲ್ಲ ಎಂದಭಿಪ್ರಾಯವು).

## English Translation

The non-existent was not, the existent was not ; then the world was not, nor the firmament, nor that which is above (the firmament.) How

could there be any investing envelope, and where? Of what (could there be) felicity? How (could there be) the deep unfathomable water?

॥ ವಿಶೇಷವಿಷಯಗಳು ॥

ಪ್ರಕೃತ ಋಕ್ಕಿನಲ್ಲಿ ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿಯ ವರ್ಣನೆ ಇದೆ. ಆ ಕಾಲದಲ್ಲಿ ಈಗಿರುವಂತೆ ಲೋಕಗಳಾಗಲಿ, ಅಂತರಿಕ್ಷ, ಸ್ವರ್ಗಾದಿಲೋಕಗಳು, ಪ್ರಾಣಿಗಳು, ಅವುಗಳಿಗೆ ಸುಖಸಾಧನಗಳಾದ ಆಹಾರಾದಿಗಳು, ಸರ್ವವ್ಯಾಪಿಯಾದ ಉದಕವು ಇವು ಯಾವುದೂ ಇರಲಿಲ್ಲವೆಂದು ಇಲ್ಲಿ ಹೇಳಿದೆ. ಇದನ್ನು ಹೇಳುವುದಕ್ಕೆ ಮೊದಲು ಅಸತ್, ಸತ್ ಎಂಬವು ಇರಲಿಲ್ಲವೆಂದು ಹೇಳಿದೆ. ಇಲ್ಲಿ ಅಸತ್ ಎಂದರೇನು, ಸತ್ ಎಂದರೇನು ಎಂಬುದನ್ನು ತಿಳಿದುಕೊಳ್ಳಬೇಕಾದುದು ಅವಶ್ಯಕವು.

**ಅಸತ್, ಸತ್**—ಯಾಸ್ಕರು ತಮ್ಮ ನಿರುಕ್ತದಲ್ಲಿ ಸತ್, ಸರ್ವಂ, ಇದಂ, ಋತಂ, ಸತ್ಯಂ, ಗಹನಂ ಗಭೀರಂ, ವ್ಯೋಮ ಇತ್ಯಾದಿ ಶಬ್ದಗಳನ್ನು ೧೦೧ ಉದಕನಾಮಗಳಲ್ಲಿ ಪಠಿಸಿದ್ದಾರೆ (ನಿ ೨-೨೪) ಸತ್ ಎಂಬ ಶಬ್ದಕ್ಕೆ ಉದಕಶಬ್ದಾರ್ಥವು ಇಲ್ಲಿ [illegible] ಎಂಬುದನ್ನು ನಾವು ಮುಂದೆ ವಿಮರ್ಶಿಸುತ್ತೇವೆ. ಸತ್‌ಶಬ್ದವು ಅಸ—[illegible] to exist ಎಂಬ [illegible]ವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಸತ್ ಶಬ್ದಕ್ಕೆ ಇರುವ ವಸ್ತುವು, ಕಣ್ಣಿಗೆ ಕಾಣುವ ವಸ್ತುವು ಎಂದರ್ಥವು. ಆದರೆ ಇಲ್ಲಿ ಸತ್ ಶಬ್ದವು ಇನ್ನೂ ವಿಶಾಲವಾದ ಅರ್ಥದಲ್ಲಿ (wider sense) ಉಪಯೋಗಿಸಲ್ಪಟ್ಟಿದೆ. ಇದಲ್ಲದೆ ಅಸತ್ ಎಂದರೆ ಸತ್‌ಶಬ್ದದ ನಿಷೇಧಾರ್ಥವಲ್ಲ. ಇವೆರಡೂ ಬೇರೆ ಬೇರೆ ವಸ್ತುಗಳಾದರೂ ಇವು ಒಂದಕ್ಕೊಂದು ವಿರುದ್ಧವಾದವುಗಳಲ್ಲ. ಇಂದ್ರಿಯಗಮ್ಯವಲ್ಲದ್ದು (ಅಸತ್) ಎಂಬರ್ಥದಲ್ಲಿ ಮಾತ್ರ ಇವುಗಳಿಗೆ ಪರಸ್ಪರ ವಿರುದ್ಧಾರ್ಥಗಳಿವೆ.

**ನಾಸದಾಸೀನ್ನೋ ಸದಾಸೀತ್ತದಾನೀಂ**—ನಮ್ಮ ಕಣ್ಣಿಗೆ ಕಾಣುವ ಜಗತ್ತಿನಲ್ಲಿರುವ ನಾನಾ ವಸ್ತುಗಳಿಗೆ ಕಾರಣವಾದ ಎಂದರೆ ಮೂಲಭೂತವಾದ ವಸ್ತುಗಳು ನಾನಾವಿಧವಾಗಿಲ್ಲ. ವಸ್ತುಗಳ ಗುಣದಲ್ಲಿ, ಆಕಾರದಲ್ಲಿ ಎಷ್ಟೇ ವೈವಿಧ್ಯತೆ ಇದ್ದರೂ ಇವುಗಳೆಲ್ಲಕ್ಕೂ ಮೂಲಭೂತವಾದ ವಸ್ತುವು ಒಂದೇ ಆಗಿರುವುದು. ಉದಾಹರಣೆಗೆ—ನೀರು, ಕಲ್ಲು, ಚಿನ್ನ, ಬೆಳ್ಳಿ, ಮಣ್ಣು ಇತ್ಯಾದಿ ವಸ್ತುಗಳ ಗುಣದಲ್ಲಿಯೂ, ಆಕಾರದಲ್ಲಿಯೂ ನಾನಾವಿಧ ವ್ಯತ್ಯಾಸಗಳು ಕಂಡುಬರುವವು. ಆದರೆ ಈ ವಸ್ತುಗಳೆಲ್ಲಕ್ಕೂ ಮೂಲವು ಒಂದೇವಸ್ತುವು. ಅದನ್ನು ಪರಮಾಣುವೆಂದು ಕರೆಯು [illegible] ಈ ಮೂಲವಸ್ತುವನ್ನು [illegible] ವರ್ಣಿಸುವುದಿಲ್ಲವಾದರೂ ಕನ್ನಡದಲ್ಲಿ ಇದನ್ನು ಸರಿಯಾಗಿ ವಿವ[illegible] ಬೇರೆ ಇಲ್ಲದ್ದರಿಂದ ಪ್ರಕೃತಸಂದರ್ಭದಲ್ಲಿ ಇದನ್ನು ಪರಮಾಣುವೆಂತಲೇ ಕರೆಯಬಹುದು. ಒಂದು ಸಾಧಾರಣವಸ್ತುವಿನಲ್ಲಿ ಅನೇಕಕೋಟಿ ಪರಮಾಣುಗಳಿರುವವು. ಆ ಅಸಂಖ್ಯಾತ ಪರಮಾಣುಗಳ ರಚನೆಯು ಎಲಾ ವಸ್ತುಗಳಲ್ಲಿಯೂ ಒಂದೇ ವಿಧವಾಗಿರುವುದಿಲ್ಲ. ಬೇರೆ ಬೇರೆ ವಸ್ತುಗಳಲ್ಲಿ ಬೇರೆಬೇರೆ ವಿಧವಾಗಿರುವವು ಮೂಲ ವಸ್ತುವು ಒಂದೇ ಆದರೂ ಅವುಗಳ ಒಳರಚನೆಯಲ್ಲಿ ವ್ಯತ್ಯಾಸವಿರುವುದರಿಂದ ವಸ್ತುಗಳೂ ವ್ಯತ್ಯಾಸವಾಗಿರುವಂತೆ ಕಾಣುವವು. ನೀರಿನಲ್ಲಿರುವ ಪರಮಾಣುಗಳೂ ಕಲ್ಲಿನಲ್ಲಿರುವ ಪರಮಾಣುಗಳೂ ಮೂಲದಲ್ಲಿ ಒಂದೇ ಆಗಿರುವವು. ಆ ಪರಮಾಣುಗಳು ಒಂದು ವಿಧವಾಗಿ ರಚನೆಯಾಗಿರುವುದರಿಂದ ನೀರು ಎಂಬ ವಸ್ತುವಾಗಿರುವುದು, ಮತ್ತೊಂದು ವಿಧವಾಗಿ ರಚನೆಯಾಗಿರುವುದರಿಂದ ಕಲ್ಲು ಎಂಬ ವಸ್ತುವಾಗಿರುವುದು ಇತ್ಯಾದಿ.

ಇದಲ್ಲದೆ ವಸ್ತುವಿಗೂ (matter) ಶಕ್ತಿಗೂ (energy) ವ್ಯತ್ಯಾಸವಿದೆಯೆಂದು ಹಿಂದೆ ನಂಬಿದ್ದಕಾಲವೊಂದಿತ್ತು. ಆದರೆ ವಿಜ್ಞಾನಿಗಳು ಇವೆರಡೂ ಮೂಲತಃ ಬೇರೆವಸ್ತುಗಳಲ್ಲವೆಂದೂ ಒಂದುವಸ್ತುವು ಮತ್ತೊಂದಾಗಿ ಪರಿವರ್ತಿತವಾಗಬಹುದೆಂದೂ ಈಚೆಗೆ ಕಂಡುಹಿಡಿದಿದ್ದಾರೆ. ಈ ವಿಷಯವು ಆಧುನಿಕ ವಿಜ್ಞಾನಕ್ಕೆ (modern science) ಹೊಸದಾದರೂ, ವೇದಗಳಿಗೂ ಉಪನಿಷತ್ತುಗಳಿಗೂ, ವೇದಾಂತಶಾಸ್ತ್ರಗಳಿಗೂ ಹೊಸದೇನೂ ಅಲ್ಲ. ಸಾವಿರಾರುವರ್ಷಗಳ ಹಿಂದೆಯೇ ಈ ವಿಷಯವು ಯಾವ ಅನುಮಾನಕ್ಕೂ ಆಸ್ಪದ ವಿಲ್ಲದಂತೆ ದೃಢವಾಗಿ ನಿರ್ಣಯಿಸಲ್ಪಟ್ಟಿದೆ. ಇದು ಹೇಗೆ ಎಂದರೆ ಒಂದು ವಸ್ತುವಿನ ಕಣವನ್ನು ವಿಭಜಿಸುತ್ತಾ ಹೋದರೆ ಅತ್ಯಂತ ಸಣ್ಣದಾಗಿರುವುದೂ ಅಲ್ಲಿಂದ ಮುಂದಕ್ಕೆ ವಿಭಜಿಸಲು ಅಸಾಧ್ಯವಾದುದೂ ಆದ ಅತಿಸೂಕ್ಷ್ಮವಾದ ಒಂದು ಭಾಗಕ್ಕೆ ಪರಮಾಣುವೆಂದು ಹೆಸರು. ಒಂದು ವಸ್ತುವನ್ನು ಪರಮಾಣುವರೆಗೆ ವಿಭಾಗಿಸಿದರೂ ಆ ಪರಮಾಣುವಿನಲ್ಲಿ ಆ ವಸ್ತುವಿನ ಗುಣಗಳು ಕಂಡುಬರುವವು. ಆದರೆ ಅಲ್ಲಿಂದ ಮುಂದಕ್ಕೆ ಆ ಪರಮಾಣುವನ್ನು ಸಾಮಾನ್ಯರೀತಿಯಲ್ಲಿ ವಿಭಾಗಿಸಲು ಸಾಧ್ಯವಿಲ್ಲದಿದ್ದರೂ ವಿಶೇಷರೀತಿಯಿಂದ ವಿಭಾಗಿಸಲು ಸಾಧ್ಯವಿದೆ. ಎಂದರೆ ಪರಮಾಣುವಿಗಿಂತಲೂ ಅತಿಸೂಕ್ಷ್ಮವಾದ ಕಣಗಳು ಇರಲು ಸಾಧ್ಯವೆಂದಾಯಿತು ಆದರೆ ಆ ಅತಿಸೂಕ್ಷ್ಮಕಣಗಳು ವಸ್ತುವಿನ(matter)ಗುಣಗಳನ್ನು ಕಳೆದುಕೊಳ್ಳುವವು. ಅವು ಶಕ್ತಿಯಾಗಿ ಪರಿವರ್ತಿತವಾಗುವವು. ಎಂದರೆ ವಸ್ತುವಿನ ಅತಿಸೂಕ್ಷ್ಮಾವಸ್ಥೆಯೇ ಶಕ್ತಿಯು. ವಸ್ತುವಿಗೂ ಶಕ್ತಿಗೂ ಭೇದವಿಲ್ಲ, ಅವಸ್ಥೆಮಾತ್ರ ಬೇರೆ ಎಂದಾಯಿತು ಪ್ರಪಂಚದಲ್ಲಿ ಕಂಡುಬರುವ ವಸ್ತುಗಳಾಗಲಿ ಶಕ್ತಿಗಳಾಗಲಿ ಇವೆಲ್ಲವೂ ಒಂದೇ ಮೂಲವಸ್ತುವಿನಿಂದ ಉತ್ಪನ್ನವಾದವು. ಆ ಮೂಲವಸ್ತುವನ್ನೇ ಇಲ್ಲಿ ಎಂದರೆ ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ **ಸತ್** ಎಂಬ ಶಬ್ದದಿಂದ ನಿರ್ದೇಶಿಸಲಾಗಿದೆ.

**ಅಸತ್** ಎಂದರೆ ಇಲ್ಲದಿರುವುದು ಎಂದರ್ಥವಲ್ಲ. ಇಂದ್ರಿಯಗಳಿಗೆ ಗೋಚರವಾಗದಿರುವುದು. ಉದಾಹರಣೆಗಾಗಿ ನಾವು ಒಂದು ವೃಕ್ಷವನ್ನಾಗಲಿ ಒಬ್ಬ ಮನುಷ್ಯನನ್ನಾಗಲಿ ನೋಡಬಲ್ಲೆವು. ಅದು ನಮ್ಮ ಕಣ್ಣಿಗೆ ಕಾಣಿಸುವುದು. ಕಣ್ಣಿಗೆ ಕಾಣಿಸದಿರುವ ವಸ್ತುಗಳೂ ಅನೇಕವಿವೆ. ಗಾಳಿಯು ಕಣ್ಣಿಗೆ ಕಾಣಿಸುವುದಿಲ್ಲ. ಹಾಗೆಯೇ ತಂತಿಗಳಲ್ಲಿ ಪ್ರವಹಿಸುವ ವಿದ್ಯುಚ್ಛಕ್ತಿಯೂ ಕಣ್ಣಿಗೆ ಕಾಣಿಸುವುದಿಲ್ಲ. ಆದರೆ ಅವುಗಳಿಲ್ಲವೆಂದು ಹೇಳಲಾದೀತೇ? ಮನುಷ್ಯನ ಅಥವಾ ಇತರ ಪ್ರಾಣಿಯ ಚಕ್ಷುರಾದೀಂದ್ರಿಯಗಳಿಗೆ ಪರಿಮಿತಿಯು ಇರುವುದರಿಂದ ಶಕ್ತಿಮೊದಲಾದ ಸೂಕ್ಷ್ಮವಸ್ತುಗಳನ್ನು ನೋಡಲು ಸಾಧ್ಯವಿಲ್ಲ. ಶಕ್ತಿಗಳಲ್ಲಿಯೂ ಪ್ರಭೇದಗಳಿರುವವು. ಸೂರ್ಯನ ಕಿರಣಶಕ್ತಿ ಅಥವಾ ಅಗ್ನಿಯ ಉಷ್ಣತ್ವ (heat) ವೈದ್ಯುತಶಕ್ತಿ (electricity), ಮನಃಶಕ್ತಿ, ಪ್ರಾಣಶಕ್ತಿ ಇತ್ಯಾದಿ ಆದ್ದರಿಂದ ನಮ್ಮ ಕಣ್ಣುಗಳಿಗೆ ಅಥವಾ ಇಂದ್ರಿಯಗಳಿಗೆ ಗೋಚರವಾಗದಿರುವ ಎಲ್ಲಕ್ಕಿಂತಲೂ ಅತಿಸೂಕ್ಷ್ಮವಾದ ಶಕ್ತಿಯನ್ನೇ **ಅಸತ್** ಎಂದು (ಸ್ಥೂಲವಾಗಿ) ಹೇಳಬಹುದು. ಇದನ್ನು ವಿವರಿಸುವ ಶಬ್ದವು ಕನ್ನಡದಲ್ಲಿಲ್ಲ. ಈ **ಅಸತ್** ಎಂಬುದೇ **ಸತ್** ಎಂಬುದಕ್ಕೆ ಮೂಲವು ಅಸತ್ತಿಗೆ ಪರಮಾತ್ಮನೇ ಕಾರಣವು ಅಥವಾ ಆ ಸ್ವರೂಪದಿಂದಲೇ ಪರಮಾತ್ಮನಿರುವನು ಎಂದು ಭಾವಿಸಬಹುದು.

ಇಲ್ಲಿ ಒಂದು ಸಂದೇಹಕ್ಕೆ ಅವಕಾಶವಿರುವುದು ಸತ್ ಎಂಬ ಇಂದ್ರಿಯಗೋಚರವಾಗುವ ವಸ್ತುಸ್ಥಿತಿಯಾಗಲಿ, ಅಸತ್ ಎಂಬ ಇಂದ್ರಿಯಗಮ್ಯವಲ್ಲದ ವಸ್ತುಸ್ಥಿತಿಯಾಗಲಿ, ಯಾವ ರೂಪದಿಂದ ಇದ್ದರೂ ಅವೆಲ್ಲ ಜಡವಸ್ತುಗಳಲ್ಲವೇ? ಎಂದರೆ ಹಾಗಲ್ಲ. ಸೂಕ್ಷ್ಮರೂಪದಲ್ಲಿರುವ ವಸ್ತುಗಳು. ಶಕ್ತಿಗಳು ಇವುಗಳ ಜತೆಗೆ ಚೈತನ್ಯವೆಂಬ ಪರಮಾತ್ಮನ ಶಕ್ತಿಯೂ ಸೇರಿಕೊಂಡೇ ಇರುವುದು. ಪರಮಾತ್ಮನ ಶಕ್ತಿಯಾದ ಚೈತನ್ಯವಿಲ್ಲದಿರುವ ವಸ್ತುವು ಪ್ರಪಂಚದಲ್ಲಿಲ್ಲ. ಚೇತನಾಚೇತನವಸ್ತುಗಳೆಂದು ನಾವು ಹೇಳುವಾಗ ಪ್ರಾಣಿಗಳನ್ನು ಚೇತನಗಳೆಂದೂ, ಇತರವಸ್ತುಗಳನ್ನು ಅಚೇತನ

ಗಳೆಂದೂ ಭಾವಿಸುವುದು ಸಾಧಾರಣವು. ಆದರೆ ವಸ್ತುಸ್ಥಿತಿಯು ಹಾಗಿಲ್ಲ. ಪ್ರಾಣಿಗಳಲ್ಲಿ ಯಾವ ವಿಧವಾದ ಚೈತನ್ಯವು ಅಡಗಿರುವುದೋ ಇತರ ವಸ್ತುಗಳಲ್ಲಿಯೂ ಅದೇ ಚೈತನ್ಯವು ಇರುವುದು. ಆದರೆ ಪರಿಮಾಣದಲ್ಲಿ ಹೆಚ್ಚುಕಡಿಮೆ ಇರುವುದು. ಪ್ರಾಣಿಗಳಿಗೆ ಚಲನವಲನಾದಿಗಳಿರುವುದರಿಂದ ಅವುಗಳಲ್ಲಿರುವ ಚೈತನ್ಯವು ಪ್ರಕಟಿತವಾಗುವುದು ಸಸ್ಯಾದಿಗಳಲ್ಲಿಯೂ ವೃಕ್ಷಗಳಲ್ಲಿಯೂ ಚೈತನ್ಯವಿದ್ದೇ ಇರುವುದು. ಆದರೆ ಪ್ರಾಣಿವರ್ಗದಲ್ಲಿರುವಷ್ಟು ಇರುವುದಿಲ್ಲ. ಲೋಹಾದಿಗಳಲ್ಲಿ ಸಸ್ಯ ವರ್ಗಕ್ಕಿಂತ ಇನ್ನೂ ಕಡಿಮೆ ಪ್ರಮಾಣದಲ್ಲಿರುವುದು. ಲೋಹವಲ್ಲದ ಕಲ್ಲು ಮೊದಲಾದ ಪದಾರ್ಥಗಳಲ್ಲಿ ಇನ್ನೂ ಕಡಿಮೆ ಯಾಗಿರುವುದು. ಪೃಥಿವ್ಯಾದಿಪಂಚಭೂತಗಳಲ್ಲಿ ಎಲ್ಲಕ್ಕಿಂತ ಕಡಿಮೆ ಪ್ರಮಾಣದಲ್ಲಿರುವುದು. ಪರಿಮಾಣವೆಷ್ಟೇ ಆಗಲಿ ಎಲ್ಲದರಲ್ಲಿಯೂ ಚೈತನ್ಯವಿದ್ದೇ ಇರುವುದು. ಚೈತನ್ಯವಿಲ್ಲದ ವಸ್ತುವಿಲ್ಲ. ಇದನ್ನೇ **ತತ್ಸೃಷ್ಟ್ವಾ ತದೇವಾನು ಪ್ರಾವಿಶತ್** | ಸೃಷ್ಟಿಮಾಡಿದ ಸಮಸ್ತ ವಸ್ತುಗಳಲ್ಲಿಯೂ (ಪ್ರಾಣಿ ಮತ್ತು ಪ್ರಾಣಿಗಳಲ್ಲದ್ದು) ಪರಮಾತ್ಮನು ಚೈತನ್ಯ ರೂಪದಿಂದ ಪ್ರವೇಶಿಸಿರುವನು ಎಂದು ಶ್ರುತಿವಾಕ್ಯವು ಹೇಳುವುದು. ಇದಕ್ಕೆ ಒಂದು ಉದಾಹರಣೆಯನ್ನು ಕೊಡ ಬಹುದು. ವಿದ್ಯುತ್ಪ್ರವಾಹಕ ಶಕ್ತಿಯು ಲೋಹ ಮೊದಲಾದ ಕೆಲವು ವಸ್ತುಗಳಲ್ಲಿ ವಿಶೇಷವಾಗಿಯೂ ಇನ್ನೂ ಕೆಲವು ವಸ್ತುಗಳಲ್ಲಿ ಏನೂ ಇಲ್ಲದಿರುವಷ್ಟು ಕಡಿಮೆಯಾಗಿಯೂ ಇರುವುದು ಅದರಂತೆ ಈ ಚೈತನ್ಯದ ವ್ಯಾಪ್ತಿಯೂ ಇರುವುದು.

ಪ್ರಾಣಿಗಳಲ್ಲಿರುವ ಚೈತನ್ಯ ಶಕ್ತಿಯು ಅವು ಮೃತವಾದಕೂಡಲೇ ಅದೃಶ್ಯವಾಗುವುದು. ಆದರೆ ಪ್ರಾಣಿಗಳ ಶರೀರಗಳಿಗೆ ಕಾರಣಭೂತವಾದ ಪಂಚಭೂತಗಳಲ್ಲಿರುವ ಅಲ್ಪ ಪ್ರಮಾಣದ ಚೈತನ್ಯವು ಹೋಗುವುದಿಲ್ಲ. ಏಕೆಂದರೆ ಪ್ರಾಣಿಗಳ ಚೈತನ್ಯವು ಅವುಗಳ ಪ್ರಾಣಶಕ್ತಿಯೊಂದಿಗೆ ಹೊರಟು ಹೋಗುವುವು. ಪಂಚಭೂತಗಳು ಶರೀರದಲ್ಲಿ ಒಂದು ರೀತಿಯಲ್ಲಿ ಮಿಶ್ರಿತವಾಗಿದ್ದು ಮರಣಾನಂತರದಲ್ಲಿ ಬೇರೆಬೇರೆಯಾಗುವುದರಿಂದ ಅವುಗಳು ಯಾವ ಬದಲಾವಣೆಯನ್ನೂ ಹೊಂದದೆ ತಮ್ಮ ಪೂರ್ವದ ಸ್ಥಿತಿಗೇ ಬರುವುದರಿಂದ ಅವುಗಳಲ್ಲಿರುವ ಚೈತನ್ಯಕ್ಕೆ ಯಾವ ಲೋಪವೂ ಉಂಟಾಗು ವುದಿಲ್ಲ. ಅವುಗಳ ಲಯಕಾಲದಲ್ಲಿ ಮಾತ್ರ ಎಲ್ಲವೂ ನಾಶವಾಗುವವು.

ಈಗ ಹೇಳಿರುವ ವಿವರಣೆಗಳಿಂದ ಅಸತ್ ಎಂದರೆ—ಸತ್ (ವಸ್ತು, ಇರುವಿಕೆಯು) ಚಿತ್ (ಚೈತನ್ಯ) ಇವುಗ ಳಿಂದ ಯುಕ್ತವಾದ ಪರಮಾತ್ಮನ ಅವ್ಯಕ್ತಸ್ವರೂಪವೆಂದು ಒಂದು ರೀತಿಯಿಂದ ಹೇಳಿದಹಾಗಾಯಿತು. ಇದನ್ನು ಪೂರ್ಣವಾಗಿ ವಿವರಿಸುವುದಕ್ಕೆ ಋಷಿಗಳಿಂದಲೇ ಸಾಧ್ಯವಾಗದಿರುವಾಗ ನಾವು ನಮ್ಮ ಅಲ್ಪ ಮತಿಯಿಂದ ಹೇಗೆ ವರ್ಣಿ ಸಲಾದೀತು? ಈ ವಿಷಯದಲ್ಲಿ ಕೆಲವು ಶ್ರುತಿವಾಕ್ಯಗಳನ್ನು ವಿವರಿಸುತ್ತೇವೆ.

**ಅಸದ್ವಾ ಇದಮಗ್ರ ಆಸೀತ್ | ತತೋ ವೈ ಸದಜಾಯತ | ತದಾತ್ಮಾನಗ್ಂ ಸ್ವಯಮಕುರುತ ||**

(ತೈ-ಉ. ೭—೭)

ಪ್ರಾರಂಭದೆಶೆಯಲ್ಲಿ ಎಂದರೆ ಸೃಷ್ಟಿಗೆ ಪೂರ್ವದಲ್ಲಿ ಅಸತ್ ಎಂದರೆ ಅವ್ಯಕ್ತಸ್ವರೂಪವಾದ ಇಂದ್ರಿಯಾತೀತವಾದ ವಸ್ತು (ಪರಮಾತ್ಮ)ಮಾತ್ರವಿದ್ದಿತು. ಅದರಿಂದ ಸತ್ ಎಂಬ ಇಂದ್ರಿಯಗೋಚರವಾದ ವಸ್ತುವು ಹುಟ್ಟಿತು ಎಂದರೆ ಅಸತ್ತೇ ಸತ್ತಾಗಿ ಪರಿಣಮಿಸಿತು ಎಂದು ಹೇಳಿದೆ. ಇಲ್ಲಿ ಇನ್ನೂ ಒಂದು ವಿಶೇಷವಿದೆ. ಅಸತ್ತೆಲ್ಲಾ ಸತ್ತಾಗಿ ಪರಿಣಮಿಸಿತೇ? ಈಗ ಕಾಣುತ್ತಿರುವ ಜಗದಾದಿಗಳೆಲ್ಲವೂ ಸೇರಿ ಅಸತ್ ಎಂಬ ಅವ್ಯಕ್ತಸ್ಥಿತಿಯಲ್ಲಿದ್ದಿತೇ? ಸತ್ತಾಗಿ ಪರಿಣಮಿಸಿದನಂತರ ಏನೂ ಉಳಿಯಲಿಲ್ಲವೇ? ಎಂದರೆ ಹಾಗಲ್ಲ. ಅಸತ್ತಿನ ಎಲ್ಲೋ ಅಲ್ಪ ಭಾಗವುಮಾತ್ರ ಸತ್ತಾಗಿ ಪರಿಣಮಿಸಿತು. ಉಳಿದ ಬಹು ಭಾಗವು ಅಸತ್ತಾಗಿಯೇ ಉಳಿಯಿತು. ಋಗ್ವೇದಸಂಹಿತೆಯ ಮತ್ತೊಂದು ಕಡೆ —

**ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ||**
**ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವತ್ಪುನಃ ||**

(ಋ. ಸಂ. ೧೦-೯೦-೩, ೪)

ಪರಮಾತ್ಮನು (ಅಸತ್ ಎಂಬ ಅವ್ಯಕ್ತಸ್ವರೂಪ) ಜಗತ್ಸೃಷ್ಟಿಮಾಡುವಾಗ ತನ್ನ ಪ್ರಮಾಣದಲ್ಲಿ ಒಂದು ಪಾದ(ಕಾಲು ಭಾಗ) ಮಾತ್ರ ಎಂದರೆ ಬಹು ಸ್ವಲ್ಪಭಾಗಮಾತ್ರ ಪ್ರಪಂಚವಾಗಿ ಪರಿವರ್ತಿತನಾದನು. ಉಳಿದ ಮೂರುಭಾಗ ಎಂದರೆ ಬಹುಭಾಗವೆಲ್ಲಾ ಯಾವಬದಲಾವಣೆಯೂ ಇಲ್ಲದೆ ಹಾಗೆಯೇ (ಅಸತ್ ಎಂಬ ಅವ್ಯಕ್ತಸ್ವರೂಪವಾಗಿಯೇ) ಉಳಿದಿರುತ್ತದೆ ಎಂದು ಮೇಲಿನ ಎರಡುವಾಕ್ಯಗಳಲ್ಲಿಯೂ ಒಂದೇವಿಧವಾಗಿ ಹೇಳಿದೆ ಇದಕ್ಕೆ ಒಂದು ಉದಾಹ ರಣೆಯನ್ನು ಕೊಡಬಹುದು. ಸಮುದ್ರದ ನೀರು(ಸೂರ್ಯ ರಶ್ಮಿಗಳಿಂದ ಕಾದು)ಆವಿಯಾಗಿ ಪರಿವರ್ತಿತವಾಗಿ ಅನಂ ತರ ಮೇಘಗಳ ಮೂಲಕ ಎಂದರೆ ವೃಷ್ಟಿಯಮೂಲಕ ಭೂಮಿಯಮೇಲೆ ಬಿದ್ದು ನದಿಗಳಾಗಿ ಪ್ರವಹಿಸಿ ಪುನಃ ಸಮುದ್ರವನ್ನೇ ಸೇರುವುದಷ್ಟೆ. ಸಮುದ್ರೋದಕದಿಂದ ಉತ್ಪನ್ನವಾಗುವ ನದಿಗಳು ಸಮುದ್ರೋದಕವನ್ನೆಲ್ಲಾ ಒಳ ಗೊಂಡಿರುವುದಿಲ್ಲ ಎಂದರೆ ಸಮುದ್ರದ ನೀರೆಲ್ಲಾ ನದಿಗಳಾಗಿ ಪರಿವರ್ತಿತವಾಗುವುದಿಲ್ಲ ಎಲ್ಲೋ ಕೆಲವು ಭಾಗ (ಬಹು ಸ್ವಲ್ಪಭಾಗ) ಮಾತ್ರ ಆವಿಯರೂಪದಲ್ಲಿ ಆಕರ್ಷಿತವಾಗಿ ಮೇಘಗಳಾಗಿಯೂ ಅನಂತರದ ನದಿ, ಜಲಾಶಯ ಮೊದ ಲಾದವುಗಳಾಗಿ ಕೆಲವು ಕಾಲವಿದ್ದು ಕೊನೆಗೆ ಸಮುದ್ರವನ್ನೇ ಸೇರುವುವು. ಅದರಂತೆ ಅವ್ಯಕ್ತಸ್ವರೂಪದ ಬಹು ಸ್ವಲ್ಪ ಭಾಗಮಾತ್ರ ಈ ಜಗದಾದಿವಿಶ್ವವಾಗಿ ಪರಿವರ್ತಿಸಲ್ಪಟ್ಟು ಕೆಲವು ಕಾಲವಿದ್ದು ಪುನಃ ಅವ್ಯಕ್ತದಲ್ಲಿಯೇ ಲೀನ ವಾಗುವವು. ಅವ್ಯಕ್ತದ (ಅಸತ್) ಬಹುಭಾಗವು ಯಾವಾಗಲೂ ಯಾವ ಬದಲಾವಣೆಯೂ ಇಲ್ಲದೆ ಅದೇ ಸ್ಥಿತಿಯ ಲ್ಲಿಯೇ ಇರುವುದು. ಇದನ್ನು ಐತರೇಯೋಪನಿಷತ್ತಿನಲ್ಲಿ ಈ ರೀತಿ ವರ್ಣಿಸಲಾಗಿದೆ—ಆತ್ಮನು (ಅಸತ್ ಅಥವಾ ಪರಮಾತ್ಮನು) ಎಲ್ಲಕ್ಕೂ ಪೂರ್ವದಲ್ಲಿ ಇದ್ದನೆಂದು ಹೇಳಿದೆಯಷ್ಟೆ. ಆದರೆ ಈ ಆತ್ಮನು ಯಾರು? ಈ ಇಂದ್ರಿಯಗಳು ಯಾರ ಬಲದಿಂದ ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವೃತ್ತವಾಗಿರುವವು? ಆತ್ಮವೆಂದರೆ ಶುದ್ಧ ಚೈತನ್ಯವು. ಅದರ ಹೆಸರೇ ಪ್ರಜ್ಞಾನವು. ಮನಸ್ಸಿನಲ್ಲಿಯೂ ಚೇತನದಲ್ಲಿಯೂ ಆಗುವ ನಾನಾವ್ಯಾಪಾರಗಳು ಕೇವಲ ಆ ಶುದ್ಧಚೈತನ್ಯದ ಪ್ರೇರಣೆಗಳೇ ಆಗಿವೆ. ಈ ಬಾಹ್ಯವಸ್ತುಗಳೂ ಈ ಶುದ್ಧಚೈತನ್ಯದಲ್ಲಿಯೇ ನೆಲೆಸಿರುವವು ಎಂದರೆ ಈ ಚೈತನ್ಯವೇ ಸಮಸ್ತ ವಸ್ತುಗಳಿಗೂ ಆಶ್ರಯವು ಮತ್ತು ಆಧಾರವು. ಈ ಚೈತನ್ಯವಿಲ್ಲದೆ ಈ ವಿಶ್ವದಲ್ಲಿ ಬೇರೆ ಯಾವ ವಸ್ತುವೂ ಇರುವುದಿಲ್ಲ, ಯಾವದಿದ್ದರೂ ಇದರ ಆಧಾರದಿಂದಲೇ ಇರಬೇಕು. ಆ ಶುದ್ಧಚೈತನ್ಯಸ್ವರೂಪವೇ ಎಲ್ಲಾ ಪದಾ ರ್ಥಗಳ ಮೂಲ, ಎಲ್ಲಾ ವಿಶ್ವದ ಮೂಲ. ಅದರ ಸ್ವಯಂಸ್ಫೂರ್ತಿಯಿಂದಲೇ ಈ ವ್ಯಕ್ತವಾದ ವಿಶ್ವದ ವ್ಯಾಪಾರಗಳೆ ಲ್ಲವೂ ನಡೆಯುವವು. ಇದೇ ಉಪನಿಷತ್ತಿನ ಮತ್ತೊಂದೆಡೆಯಲ್ಲಿ—

**ಕೋಽಯಮಾತ್ಮೇತಿ ವಯಮುಪಾಸ್ಮಹೇ ಕತರಂ ಸ ಆತ್ಮಾ ಯೇನ ವಾ ಪಶ್ಯತಿ ಯೇನ ವಾ ಶೃಣೋತಿ ಯೇನ ವಾ ಗಂಧಾನಾಜಿಘ್ರತಿ ಯೇನ ವಾ ವಾಚಂ ವ್ಯಾಕರೋತಿ ಯೇನ ವಾ ಸ್ವಾದು ಚಾಸ್ವಾದು ಚ ವಿಜಾನಾತಿ || ೧ || ಯದೇತದ್ಧೃದಯಂ ಮನಶ್ಚೈತತ್ | ಸಂಜ್ಞಾನ-ಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ ಮೇಧಾ ದೃಷ್ಟಿರ್ಧೃತಿರ್ಮತಿರ್ಮನೀಷಾ ಜೂತಿಃ ಸ್ಮೃತಿಃ ಸಂಕಲ್ಪಃ ಕ್ರತುರಸುಃ ಕಾಮೋ ವಶ ಇತಿ ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ || ೨ || ಏಷ ಬ್ರಹ್ಮೈಷ ಇಂದ್ರ ಏಷ ಪ್ರಜಾಪತಿರೇತೇ ಸರ್ವೇ ದೇವಾ ಇಮಾನಿ ಚ ಪಂಚಮಹಾಭೂತಾನಿ ಪೃಥಿವೀ ವಾಯುರಾಕಾಶ ಆಪೋ ಜ್ಯೋತೀಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ || ಬೀಜಾನೀತರಾಣಿ ಚೇತರಾಣಿ ಚಾಂಡಜಾನಿ ಚ ಜಾರುಜಾನಿ ಚ**

**ಸ್ವೇದಜಾನಿ ಚೋದ್ಭಿಜ್ಜಾನಿ ಚಾಶ್ವಾ ಗಾವಃ ಪುರುಷಾ ಹಸ್ತಿನೋ ಯತ್ಕಿಂಚೇದಂ ಪ್ರಾಣಿ ಜಂಗಮಂ ಚ ಪತತ್ರಿ ಚ ಯಚ್ಚ ಸ್ಥಾವರಂ ಸರ್ವಂ ತತ್ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ॥೩॥ ಸ ಏತೇನ ಪ್ರಾಜ್ಞೇನಾತ್ಮನಾಸ್ಮಾಲ್ಲೋಕಾದುತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ಕಾಮಾ-ನಾಪ್ತ್ವಾಮೃತಃ ಸಮಭವತ್ಸಮಭವತ್ । ಇತ್ಯೋಂ ॥ ೪ ॥**

(ಐ. ಉ. ೩-೫-೧ ರಿಂದ೪)

ಈ ಆತ್ಮನು ಯಾರು ಎಂದು ನಾವು ಉಪಾಸಿಸುವೆವು? ಯಾವನ ಸಹಾಯದಿಂದ ಪುರುಷನು ಒಂದು ವಸ್ತುವನ್ನು ನೋಡಲು ಸಮರ್ಥನೋ, ಶಬ್ದವನ್ನು ಕೇಳಲು ಸಮರ್ಥನೋ, ಗಂಧವನ್ನು ಆಘ್ರಾಣಿಸಲು ಸಮರ್ಥನೋ ಮಾತನಾಡಲು ಸಮರ್ಥನೋ, ಇದು ರುಚಿ, ಇದು ರುಚಿಯಾಗಿಲ್ಲ ಎಂದು ತಿಳಿಯಲು ಸಮರ್ಥನೋ ಆ ಆತ್ಮನು ಯಾರು? ಈ ಹೃದಯ, ಈ ಮನಸ್ಸು ಈ ಚೇತನ, ಅಜ್ಞಾನ ಜ್ಞಾನ ಪ್ರಜ್ಞಾನ, ಬುದ್ಧಿ, ದೃಷ್ಟಿ, ಧೃತಿ, ಮತಿ, ಇಚ್ಛೆ, ವ್ಯಗ್ರತೆ,ಸ್ಮೃತಿ, ಸಂಕಲ್ಪ, ನಿಶ್ಚಯ, ಪ್ರಾಣ, ಕಾಮ, ಆಕಾಂಕ್ಷೆ ಇವೆಲ್ಲವೂ ಪ್ರಜ್ಞಾನದ ಎಂದರೆ ಶುದ್ಧ ಚೈತನ್ಯದ ಬೇರೆ ಬೇರೆ ಹೆಸರುಗಳೇ ಆಗಿವೆ. ಈ ಬ್ರಹ್ಮ, ಈ ಇಂದ್ರ ಈ ಪ್ರಜಾಪತಿ, ಈ ಎಲ್ಲಾದೇವತೆಗಳೂ, ಪಂಚಮಹಾಭೂತಗಳೂ, ಪೃಥಿವಿ, ವಾಯು, ಆಕಾಶ, ಉದಕ, ಆಕಾಶದಲ್ಲಿ ಬೆಳಗುವ ಎಲ್ಲಾ ಜ್ಯೋತಿಗಳು, (ನಕ್ಷತ್ರಗಳು) ಸಣ್ಣಮತ್ತು ದೊಡ್ಡ ವಸ್ತುಗಳು, ಎಲ್ಲಾ ಧಾನ್ಯಗಳು, ನಾನಾವಿಧವಾದ ಅಂಡಜ, ಜಾರುಜ, ಸ್ವೇದಜ ಎಂಬ ಪ್ರಾಣಿಗಳೂ ಗಿಡ, ಬಳ್ಳಿಗಳು. ಅಶ್ವಗಳು, ಗೋವುಗಳು, ಪುರುಷರು, ಆನೆಗಳು, ಜೀವವುಳ್ಳ ಎಲ್ಲಾ ಪ್ರಾಣಿಗಳು, ಪಕ್ಷಿಗಳು, ಎಲ್ಲಾಸ್ಥಾವರ ವಸ್ತುಗಳು (ಚಲಿಸಲಾರದ ಪರ್ವತಾದಿಗಳು), ಇವೆಲ್ಲವುಗಳ ಪ್ರವರ್ತಕನು ಪ್ರಜ್ಞಾನವೇ ಆಗಿರುವನು. ಪ್ರಜ್ಞಾಯೇ ಇವೆಲ್ಲವುಗಳ ಕಣ್ಣು. ಇವೆಲ್ಲ ಪ್ರಜ್ಞಾನದಲ್ಲಿಯೇ ಸ್ಥಾಪಿತವಾಗಿವೆ. ವಿಶ್ವದ ಉತ್ಪತ್ತಿಯೂ ಪ್ರಜ್ಞಾನದಿಂದಲೇ ಆಗಿದೆ. ಪ್ರಜ್ಞೆಯೇ ಈ ಲೋಕದ ಕಣ್ಣು, ಪ್ರಜ್ಞೆಯೇ ಜ್ಞಾನದ, ಚೈತನ್ಯದ ನೆಲೆಯು. ಅಷ್ಟೇಕೆ ? ಪ್ರಜ್ಞಾನವೇ ಬ್ರಹ್ಮವು ಅವನು ಈ ಜ್ಞಾನಮಯ ಆತ್ಮನೊಂದಿಗೆ ಈ ಲೋಕ ದಿಂದ ಹೊರಟು ಆ ಸ್ವರ್ಗಲೋಕದಲ್ಲಿ ಎಲ್ಲಾ ಅಭೀಷ್ಟಗಳನ್ನು ಪಡೆದು ಅಮೃತವನ್ನು ಎಂದರೆ ಶಾಶ್ವತಸುಖ ವನ್ನು ಅನುಭವಿಸಿದನು (ಅನುಭವಿಸುವನು) ಎಂದು ಇದರ ಮುಖ್ಯಾಭಿಪ್ರಾಯವು. ಆದ್ದರಿಂದ ಅಸತ್, ಪ್ರಜ್ಞಾನ ಬ್ರಹ್ಮ, ಪರಬ್ರಹ್ಮ, ಆತ್ಮಾ, ಪರಮಾತ್ಮಾ ಮೊದಲಾದುವುಗಳೆಲ್ಲ ಅವ್ಯಕ್ತಸ್ವರೂಪನೂ, ಸಚ್ಚಿದಾನಂದಮಯನೂ ಆದ ಪರಬ್ರಹ್ಮನನ್ನೇ ನಿರ್ದೇಶಿಸುವವು.

**ನಾಸೀದ್ರಜೋ ನೋ ವ್ಯೋಮ ಪರೋ ಯತ್**–ಮೊದಲನೆಯ ಪಾದವಲ್ಲಿ–ಸೃಷ್ಟಿಗೆ ಪೂರ್ವದಲ್ಲಿ ಸತ್, ಅಸತ್ ಎಂಬ ವ್ಯಕ್ತಾವ್ಯಕ್ತಸ್ವರೂಪಗಳಿರಲಿಲ್ಲ, ಮತ್ತೇನಿದ್ದಿತು? ಎಂದರೆ ದೃಶ್ಯಮಾನಲೋಕಗಳಾವವೂ ಇರಲಿಲ್ಲ. ಇಲ್ಲಿ ರಜಃ ಎಂದರೆ ಲೋಕವು (ನಿ ೪-೧೯) ಎಂಧು ಯಾಸ್ಕರ ನಿರ್ವಚನವಿದೆ. ಇಲ್ಲಿ ರಜಃ ಎಂದು ಏಕವಚನಶಬ್ದ ಪ್ರಯೋಗವಿದ್ದರೂ ಲೋಕಗಳ ಸಮುದಾಯ ಎಂಬ ಭಾವವನ್ನಂಗೀಕರಿಸಿ ಇದಕ್ಕೆ ಬಹುವಚನಾರ್ಥವಿರುವುದು. ಲೋಕಗಳನ್ನು ಎಂದರ್ಥವು. ಯಾವಲೋಕಗಳನ್ನು ಎಂದರೆ, ಪೃಥಿವ್ಯಾದಿಲೋಕಗಳನ್ನು ಅಥವಾ ಪುರಾಣಾದಿಗಳಲ್ಲಿ ವಿವರಿಸಿರುವಂತೆ ಪಾತಾಳದಿಂದ ಪೃಥಿವಿಯವರೆಗಿನ ಏಳು ಲೋಕಗಳು, ವ್ಯೋಮ ಎಂದರೆ ಅಂತರಿಕ್ಷ ಅಥವಾ ಅಂತರಿಕ್ಷ

ಲೋಕವು. **ಪರಃ ಯತ್** ಎಂಬಲ್ಲಿ ಪರಃಶಬ್ದಕ್ಕೆ ಪರಸ್ತಾತ್ ಆದರಿಂದಾಚೆಗೆ ಎಂದರ್ಥಮಾಡಬೇಕು ಎಂದರೆ ಅಂತರಿಕ್ಷಲೋಕದಿಂದಾಚೆಗೆ ಯಾವ ಲೋಕವಿರುವುದೋ ಅದು ಎಂದರೆ ಸ್ವರ್ಗಲೋಕವು. ಅಥವಾ ಪುರಾಣಾದಿಗಳಂತೆ ಸ್ವರ್ಗದಿಂದ ಸತ್ಯಲೋಕದವರೆಗೆ ಇರುವ ಸಪ್ತಲೋಕಗಳು. ಎಂದರೆ ಆ ಕಾಲದಲ್ಲಿ ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕಗಳೂ ಅಥವಾ ಸಪ್ತ ಅಧೋಲೋಕಗಳೂ ಸಪ್ತಊರ್ಧ್ವಲೋಕಗಳೂ ಸೇರಿ ಆಗಿರುವ ಬ್ರಹಾಂಡವೂ ಇವು ಯಾವುದೂ ಇರಲಿಲ್ಲ ಎಂದಭಿಪ್ರಾಯವು

**ಕಿಮಾವರೀವಃ ಕುಹ ಕಸ್ಯ ಶರ್ಮನ್**— ಇಲ್ಲಿ ಆವರೀವಃ ಎಂದರೆ ಆವರಣವು. ಲೋಕಗಳನ್ನು ಆವರಿಸಿರುವ ಆಕಾಶಾದಿಪಂಚಭೂತಗಳೂ ಆಗ ಇರಲಿಲ್ಲ. ಲೋಕಗಳಿಲ್ಲದ ಮೇಲೆ ಪ್ರದೇಶಗಳೆಲ್ಲಿ ಬಂತು ? ಪ್ರದೇಶ ಅಥವಾ ನೆಲೆಯಿಲ್ಲದ ಮೇಲೆ ಅದರ ಮೇಲೆ ಜೀವಿಸುವ ಪ್ರಾಣಿಗಳೂ ಅವುಗಳಿಗೆ ಸುಖವನ್ನುಂಟುಮಾಡುವ ಆಹಾರಾದಿ ಸುಖಸಾಧನಗಳೂ ಎಲ್ಲಿದ್ದವು ? ಇವು ಯಾವವೂ ಇರಲಿಲ್ಲ.

**ಅಂಭಃ ಕಿಮಾಸೀದ್ಗಹನಂ ಗಭೀರಂ**—ಇವು ಯಾವುದೂ ಇರಲಿಲ್ಲವೆಂದಮೇಲೆ **ಇನ್ನೇನಿದ್ದಿತು?** ಪ್ರವೇಶಿಸಲಸಾಧ್ಯವಾದುದೂ, ಅಗಾಧವಾದುದೂ ಆದ ನೀರು ಎಲ್ಲೆಲ್ಲಿಯೂ ತುಂಬಿದ್ದಿತೇ ? ಆವರಣರೂಪವಾದ ಯಾವ ವಸ್ತುವೂ ಇರಲಿಲ್ಲವೆಂದು ಹಿಂದೆ ಹೇಳಿದೆಯಷ್ಟೆ? ಹಾಗಾದರೆ ಉದಕವೆಂಬ ಆವರಣವೂ ಆಗ ಹೇಗೆ ಇದ್ದಿತು ? ಕೆಲವು ಶ್ರುತಿವಾಕ್ಯಗಳಲ್ಲಿ— **ಆಪೋ ವಾ ಇದಮಗ್ರೇ ಸಲಿಲಮಾಸೀತ್** (ತೈ. ಸಂ ೭-೧-೫-೧) ಎಲ್ಲಕ್ಕೂ ಮೊದಲು ನೀರೇ ಎಲ್ಲೆಲ್ಲಿಯೂ ಆವರಿಸಿದ್ದಿತು ಎಂದು ಹೇಳಿರುವುದು ಇದಕ್ಕೆ ವಿರೋಧವಲ್ಲವೇ? ಎಂದರೆ ಅದಕ್ಕಾಗಿಯೇ ಸಮಸ್ತವನ್ನೂ ಆವರಿಸಿದ್ದ ಉದಕವೂ ಆ ಸೃಷ್ಟಿಗೆ ಪೂರ್ವದಲ್ಲಿ ಇರಲಿಲ್ಲವೆಂದು ಹೇಳಲಾಗಿದೆ. ಹಾಗಾದರೆ **ಆಪೋ ವಾ ಇದಮಗ್ರೇ ಸಲಿಲಮಾಸೀತ್** ಎಂಬ ವಾಕ್ಯಕ್ಕೆ ಏನು ಅರ್ಥವು ? ಎಲ್ಲಕ್ಕೂ ಮೊದಲು ನೀರೇ ಇದ್ದಿತೇ ? ಹಾಗಾದರೆ ಆ ನೀರೇ ಸರ್ವವ್ಯಾಪಿಯಾದ ಬ್ರಹ್ಮನಾಗಬೇಕಾಗುವುದು. ಒಂದು ವಿಧದಲ್ಲಿ ಇದು ಸಮಂಜಸವೇ ಆಗಿದೆ. ಆಪಃ ಎಂಬ ಶಬ್ದಕ್ಕೆ ಉದಕವೆಂಬರ್ಥವಿದ್ದರೂ ಈ ಶಬ್ದವು **ಆಪ್ಲೃ— ವ್ಯಾಪ್ತೌ** ವ್ಯಾಪಿಸು, ಆವರಿಸು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಆಪಃ ಎಂಬ ಶಬ್ದಕ್ಕೆ ಸರ್ವವ್ಯಾಪಿಯಾದ ಬ್ರಹ್ಮವಸ್ತುವೆಂದೂ ಸಮಂಜಸವಾದ ಅರ್ಥವನ್ನು ಹೇಳಬಹುದು **ಆಪೋ ವಾ ಇದಗ್ಂ ಸರ್ವಂ** ಇತ್ಯಾದಿ ಶ್ರುತಿವಾಕ್ಯವು ಈ ಅರ್ಥವನ್ನೇ ಸಮರ್ಥಿಸುವುದು. ಅಥವಾ ಆಪಃ ಎಂಬ ಶಬ್ದಕ್ಕೆ ಕೇವಲ ಉದಕವೆಂದು ಅರ್ಥಮಾಡಿದರೆ ಆಗ ಆ ಉದಕವು ಸೃಷ್ಟಿಗೆ ಮೊದಲು ಎಂದರೆ ಪ್ರಲಯಾವಸ್ಥೆಯಲ್ಲಿ ಇರಲಿಲ್ಲವೆಂದೂ ಅಸತ್ ಎಂಬ ಅವ್ಯಕ್ತಸ್ವರೂಪಮಾತ್ರವಿದ್ದಿತೆಂದೂ ಅನಂತರ ಪಂಚಭೂತಗಳ ಸೃಷ್ಟಿಕಾಲದಲ್ಲಿ ಇತರ ಪ್ರಪಂಚಸೃಷ್ಟಿಗೆ ಮೊದಲು ಈ ಉದಕದ ಸೃಷ್ಟಿಯಾಗಿ ಇದು ಎಲ್ಲೆಡೆಯಲ್ಲಿಯೂ ವ್ಯಾಪಿಸಿದ್ದಿತೆಂದೂ ಈ ಉದಕದಿಂದ ಮುಂದಿನ ಸೃಷ್ಟಿಯು ಮುಂದುವರೆಯಿತೆಂದೂ ಹೇಳಬಹುದು.

॥ ಸಂಹಿತಾಪಾಠಃ ॥

ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।

ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥೨॥

॥ ಪದಪಾಠಃ ॥

ನ । ಮೃತ್ಯುಃ । ಆಸೀತ್ । ಅಮೃತಂ । ನ । ತರ್ಹಿ । ನ । ರಾತ್ರ್ಯಾಃ । ಅಹ್ನಃ । ಆಸೀತ್ । ಪ್ರಽಕೇತಃ । ಆನೀತ್ । ಅವಾತಂ । ಸ್ವಧಯಾ । ತತ್ । ಏಕಂ । ತಸ್ಮಾತ್ । ಹ । ಅನ್ಯತ್ । ನ । ಪರಃ । ಕಿಂ । ಚನ । ಆಸ ॥ ೨ ॥

॥ ಸಾಯಣಭಾಷ್ಯಂ ॥

ನನೂಕ್ತಸ್ಯ ಪ್ರತಿಸಂಹಾರಸ್ಯ ಸಂಹರ್ತ್ರಪೇಕ್ಷತ್ವಾತ್ ಸ ಏವ ಸಂಹರ್ತಾ ಮೃತ್ಯುರ್ವಿದ್ಯತ ಇತ್ಯತ ಆಹ । ನ ಮೃತ್ಯುರಾಸೀದಿತಿ । ನನು ಯದಿ ಸ ನಾಸೀತ್ ತರ್ಹಿ ತದಭಾವಕೃತಮಮೃತಮಮರಣಂ ಪ್ರಾಣಿನಾಮವಸ್ಥಾನಂ ತದಾನೀಮಪಿ ಸ್ಯಾತ್ ತತ್ರಾಹ । ಅಮೃತಂ ನ ತರ್ಹೀತಿ । ತರ್ಹಿ ತಸ್ಮಿನ್ಪ್ರತಿಹಾರಸಮಯೇ । ಅಯಂ ಭಾವಃ । ಸರ್ವೇಷಾಂ ಪ್ರಾಣಿನಾಂ ಪರಿಪಕ್ವಂ ಭೋಗಹೇತುಭೂತಂ ಸರ್ವಂ ಕರ್ಮ ಯದೋಪಭುಕ್ತಮಾಸೀತ್ ತದಾ ಭೋಗಾಭಾವಾನ್ನಿಷ್ಪ್ರಯೋಜನಮಿದಂ ಜಗದಿತಿ ಪರಮೇಶ್ವರಸ್ಯ ಮನಸಿ ಸಂಜಿಹೀರ್ಷಾ ಜಾಯತೇ । ತಥೈವ ಸ ಮೃತ್ಯುಃ ಸರ್ವಂ ಜಗತ್ಸಂಹರತ ಇತಿ ಕಿಮನೇನ ಮೃತ್ಯುನಾ ಸಂಹರ್ತ್ರಾ ತದಭಾವಕೃತಂ ವಾ ಕಥಮಮರಣಂ ಸ್ಯಾದಿತಿ । ಏತದೇವಾಭಿಪ್ರೇತ್ಯ ಕಠೈರಾಮ್ನಾಯತೇ । ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಂ । ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ । ಕ. ಉ. ೨-೨೫ । ಇತಿ । ನನ್ವೇತಸ್ಯ ಸರ್ವಸ್ಯಾಧಿಕರಣಭೂತಃ ಕಾಲೋ ವಿದ್ಯತ ಇತ್ಯತ ಆಹ । ನ ರಾತ್ರ್ಯಾ ಇತಿ । ನ ರಾತ್ರ್ಯಾ ಅಹ್ನಶ್ಚ ಪ್ರಕೇತಃ ಪ್ರಜ್ಞಾನಮಾಸೀತ್ । ತದ್ಧೇತುಭೂತಯೋಃ ಸೂರ್ಯಾಚಂದ್ರಮಸೋರಭಾವಾತ್ । ಏತೇನಾಹೋರಾತ್ರನಿಷೇಧೇನ ತದಾತ್ಮಕೋ ಮಾಸರ್ತುಸಂವತ್ಸರಪ್ರಭೃತಿಕಃ ಸರ್ವಃ ಕಾಲಃ ಪ್ರತ್ಯಾಖ್ಯಾತಃ । ಕಥಂ ತರ್ಹಿ ನೋ ಸದಾಸೀತ್ತದಾನೀಮಿತಿ ಕಾಲವಾಚೀ ಪ್ರತ್ಯಯಃ । ಉಪಚಾರಾದಿತಿ ಬ್ರೂಮಃ । ಯಥೇದಾನೀಂತನನಿಷೇಧಸ್ಯ ಕಾಲೋಽವಚ್ಛೇದಕಸ್ತಥಾ ಮಾಯಾಪಿ ತದವಚ್ಛೇದಹೇತುರಿತ್ಯವಚ್ಛೇದಕತ್ವಸಾಮ್ಯೇನಾಕಾಲೇಽಪಿ ಕಾಲವಾಚೀ ಪ್ರತ್ಯಯಃ । ಯದವಾದಿಷ್ಮ ಬ್ರಹ್ಮಣಃ ಪರಮಾರ್ಥಸತ್ತ್ವಮಗ್ರೇ ವಕ್ಷ್ಯತ ಇತಿ ತದಿದಾನೀಂ ದರ್ಶಯತ್ಯಾನೀದಿತಿ । ತತ್ಸಕಲವೇದಾಂತಪ್ರಸಿದ್ಧಂ ಬ್ರಹ್ಮತತ್ತ್ವಮಾನೀತ್ । ಪ್ರಾಣಿತವತ್ । ನನ್ವೇವಂ ಪ್ರಾಣನಕರ್ತುರ್ಜೀವಭಾವಾಪನ್ನಸ್ಯೈವ ಬ್ರಹ್ಮಣಃ ಸತ್ತ್ವಂ ಸ್ಯಾತ್ ನ ವಿವಕ್ಷಿತಸ್ಯ ನಿರುಪಾಧಿಕಸ್ಯ ಬ್ರಹ್ಮಣಃ । ಅಪ್ರಾಣೋ ಹ್ಯಮನಾಃ ಶುದ್ಧ ಇತಿ ತಸ್ಯ ಪ್ರಾಣಸಂಬಂಧಾಭಾವಾತ್ ತತ್ರಾಹಾನೀದವಾತಮಿತಿ । ಅಯಮಾಶಯಃ । ಆನೀದಿತ್ಯತ್ರ ಧಾತ್ವರ್ಥಕ್ರಿಯಾ ತತ್ಕರ್ತಾ ತಸ್ಯ ಚ ಭೂತಕಾಲಸಂಬಂಧ ಇತಿ ತ್ರಯೋಽರ್ಥಾಃ ಪ್ರತೀಯಂತೇ । ತತ್ರ ಸಮುದಾಯೋ ನ ವಿಧೀಯತೇ ಯಥಾಗ್ನೇಯೋಽಷ್ಟಾಕಪಾಲ ಇತಿ ಯೇನ ಬ್ರಹ್ಮಣಃ ಸತ್ತ್ವಂ ನ ಸ್ಯಾತ್ । ಕಿಂ ತರ್ಹ್ಯನೇನ ಕರ್ತೃತ್ವಮನೂದ್ಯ ಭೂತಕಾಲಸತ್ತಾಲಕ್ಷಣೋ ಗುಣೋ ವಿಧೀಯತೇ ದಧ್ನಾ ಜುಹೋತೀತಿ ವಾಕ್ಯಾಂತರವಿಹಿತಾಗ್ನಿಹೋತ್ರಾನುವಾದೇನ ತತ್ರ ಗುಣವಿಧಾನಂ । ತತ್ರಾಪ್ಯನೇನ ಕರ್ತೃತ್ವವಿಶಿಷ್ಟಸ್ಯ ನ ಪೂರ್ವಕಾಲಸತ್ತಾ ವಿಧೀಯತೇ ತನ್ನಿಷೇಧಾನುಪಪತ್ತಿಪ್ರಸಂಗಾತ್ ಅತೋಽನೇನ ಕರ್ತೃತ್ವೇನೇದಾ-

**ನೀಂತನೇನೋಪಲಕ್ಷಿತಂ ಯನ್ನಿರುಪಾಧಿಕಂ ಪರಂ ಬ್ರಹ್ಮ ತಸ್ಯೈವ ಭೂತಕಾಲಸತ್ತಾ ವಿಧೀಯತೆ ಇತಿ ನ ಕಶ್ಚಿದ್ದೋಷ ಇತಿ । ನನ್ವೀದೃಶಸ್ಯ ಬ್ರಹ್ಮಣೋ ಮಾಯಯಾ ಸಹ ಸಂಬಂಧಾಸಂಭವಾತ್ಸಾಂಖ್ಯಾಭಿಮತಾ ಸ್ವತಂತ್ರಾ ಸದ್ರೂಪಾ ಸತ್ತ್ವರಜಸ್ತಮೋಗುಣಾತ್ಮಿಕಾ ಮೂಲಪ್ರಕೃತಿರೇವಾಭಿಮತೇತಿ ಕಥಂ ನೋ ಸದಿತಿ ನಿಷೇಧಃ । ತತ್ರಾಹ ಸ್ವಧಯೇತಿ । ಸ್ವಸ್ಮಿನ್ಧೀಯತೇ ಧ್ರಿಯತ ಆಶ್ರಿತ್ಯ ವರ್ತತ ಇತಿ ಸ್ವಧಾ ಮಾಯಾ । ತಯಾ ತದ್ಬ್ರಹ್ಮೈಕಮವಿಭಾಗಾಪನ್ನಮಾಸೀತ್ ॥ ಸಹಯುಕ್ತೇಽಪ್ರಧಾನೇ । ಪಾ. ೨-೩-೧೯ । ಇತಿ ತೃತೀಯಾ ಸಹಶಬ್ದಯೋಗಾಭಾವೇಽಪಿ ಸಹಾರ್ಥಯೋಗೇ ಭವತಿ ವೃದ್ಧೋ ಯೂನಾ । ಪಾ. ೧-೨-೬೫ । ಇತಿ ನಿಪಾತನಾಲ್ಲಿಂಗಾತ್ ॥ ಅತ್ರ ಪ್ರಕೃತಿಪ್ರತ್ಯಯಾಭ್ಯಾಂ ತಸ್ಯಾಃ ಸ್ವಾತಂತ್ರ್ಯಂ ನಿವಾರ್ಯತೇ । ಯದ್ಯಪ್ಯಸಂಗಸ್ಯ ಬ್ರಹ್ಮಣಸ್ತಯಾ ಸಹ ಸಂಬಂಧೋ ನ ಸಂಭವತಿ ತಥಾಪಿ ತಸ್ಮಿನ್ನವಿದ್ಯಯಾ ತತ್ಸ್ವರೂಪಮಿವ ಸಂಬಂಧೋಽಪ್ಯಧ್ಯಸ್ಯತೇ ಯಥಾ ಶುಕ್ತಿಕಾಯಾಂ ರಜತಸ್ಯ । ಏತೇನ ಸದ್ರೂಪತ್ವಮಪಿ ತಸ್ಯಾಃ ಪ್ರತ್ಯಾಖ್ಯಾತಂ । ನನು ಯದಿ ಮಾಯಾ ಬ್ರಹ್ಮಣಾ ಸಹಾವಿಭಾಗಾಪನ್ನಾ ತರ್ಹಿ ತಸ್ಯಾ ಅನಿರ್ವಾಚ್ಯತ್ವಾದ್ಬ್ರಹ್ಮಣೋಽಪಿ ತತ್ಪ್ರಸಂಗ ಇತಿ ಕಥಂ ತಸ್ಯ ಸತ್ತ್ವಮುಕ್ತಮಾನೀದವಾತಮಿತಿ । ಬ್ರಹ್ಮಣೋ ವಾ ಸತ್ತ್ವಾತ್ತಸ್ಯಾ ಅಪಿ ಸತ್ತ್ವಪ್ರಸಂಗ ಇತಿ ಕಥಂ ನೋ ಸದಾಸೀದಿತಿ ಸತ್ತ್ವಪ್ರತಿಷೇಧಃ । ನೈವಂ । ಅಯುಕ್ತಿದೃಷ್ಟ್ಯೈಕ್ಯಾವಭಾಸೇಽಪಿ ಯುಕ್ತ್ಯಾ ವಿವಿಚ್ಯ ಮಾಯಾಂಶಸ್ಯಾನಿರ್ವಾಚ್ಯತ್ವಂ ಬ್ರಹ್ಮಣಃ ಸತ್ತ್ವಂ ಚ ಪ್ರತಿಪಾದಿತಂ । ನನು ದೃಗ್ದೃಶ್ಯಾವಿತಿ ದ್ವಾವೇವ ಪದಾರ್ಥಾವಾನೀದವಾತಂ ಸ್ವಧಯೇತಿ ತೌ ಚೇದಂಗೀಕ್ರಿಯೇತೇ ತರ್ಹಿ ಕಿಮಪರಮವಶಿಷ್ಯತೇ ಯನ್ನಾಸೀದ್ರಜ ಇತ್ಯಾದಿನಾ ಪ್ರತಿಷಿಧ್ಯೇತ ತತ್ರಾಹ ತಸ್ಮಾದಿತಿ । ತಸ್ಮಾದ್ಧ ತಸ್ಮಾತ್ಖಲು ಪೂರ್ವೋಕ್ತಾನ್ಮಾಯಾಸಹಿತಾದ್ಬ್ರಹ್ಮಣೋಽನ್ಯತ್ಕಿಂ ಚನ ಕಿಮಪಿ ವಸ್ತು ಭೂತಭೌತಿಕಾತ್ಮಕಂ ಜಗನ್ನಾಸ । ನ ಬಭೂವ ॥ ಛಂದಸ್ಯುಭಯಥೇತಿ ಲಿಟಃ ಸಾರ್ವಧಾತುಕತ್ವಾದಸ್ತೇರ್ಭೂಭಾವಾಭಾವಃ ॥ ನನು ತದಾನೀಮನ್ಯಸ್ಯ ಸತ್ತ್ವನಿಷೇಧೋ ನ ಶಂಕ್ಯಃ । ಅಸತ್ತ್ವೇ ಚಾಪ್ರಸಕ್ತತ್ವಾನ್ನ ನಿಷೇಧೋಪಯೋಗ ಇತ್ಯತ ಆಹ ಪರ ಇತಿ । ಪರಃ ಪರಸ್ತಾತ್ಸೃಷ್ಟೇರೂರ್ಧ್ವಂ ವರ್ತಮಾನಮಿದಂ ಜಗತ್ತದಾನೀಂ ನ ಬಭೂವೇತ್ಯರ್ಥಃ । ಅನ್ಯಥೋಕ್ತರೀತ್ಯಾ ಕ್ವಚಿದಪಿ ನಿಷೇಧೋ ನ ಸ್ಯಾದಿತಿ ಭಾವಃ ॥**

॥ ಪ್ರತಿಪದಾರ್ಥ ॥

(ಸೃಷ್ಟಿಗೆ ಪೂರ್ವದಲ್ಲಿ) **ಮೃತ್ಯುಃ**-ಮರಣವು । **ನ ಆಸೀತ್**-ಇರಲಿಲ್ಲ । **ತರ್ಹಿ**-ಹಾಗಾದರೆ । **ಅಮೃತಂ**-ಮರಣವಿಲ್ಲದಿರುವಿಕೆಯೂ । **ನ**—ಇರಲಿಲ್ಲ (ಮತ್ತು ಆಗ) । **ರಾತ್ರ್ಯಾಃ**—ರಾತ್ರಿಯ ಮತ್ತು । **ಅಹ್ನಃ**—ಹಗಲಿನ । **ಪ್ರಕೇತಃ**-ಪರಿಜ್ಞಾನವು । **ನ ಆಸೀತ್**-ಇರಲಿಲ್ಲ । **ತತ್ ಏಕಂ**-ಸಕಲವೇದಾಂತಪ್ರಸಿದ್ಧವೂ ಅದ್ವಿತೀಯವೂ ಆದ ಆ ಬ್ರಹ್ಮತತ್ತ್ವವು । **ಸ್ವಧಯಾ**—ತನ್ನ ಮಾಯಾರೂಪವಾದ ಸಾಮರ್ಥ್ಯದಿಂದ । **ಅವಾತಂ**—ಶ್ವಾಸೋಚ್ಛ್ವಾಸರಹಿತವಾದ ಎಂದರೆ ಜೀವವಿಲ್ಲದ ಜಡಶರೀರವನ್ನು । **ಆನೀತ್**—ಶ್ವಾಸೋಚ್ಛ್ವಾಸಗಳಿಂದ ಜೀವಯುಕ್ತವನ್ನಾಗಿ ಮಾಡಿತು. **ತಸ್ಮಾತ್**—ಆ ಮಾಯಾಸಹಿತವಾದ ಸಾಮರ್ಥ್ಯದಿಂದ ಬ್ರಹ್ಮನನ್ನು ಬಿಟ್ಟು । **ಅನ್ಯತ್ ಕಿಂಚನ**—ಬೇರೆ ಯಾವ ಭೂತ ಭೌತಿಕವಾದ ವಸ್ತುವೂ । **ನ ಆಸ**—ಇರಲಿಲ್ಲ । **ಪರಃ** ಅನಂತರದಲ್ಲಿ ಸೃಷ್ಟವಾದ ಈ ಜಗತ್ತೂ । **ನ ಆಸ**—ಆಗ ಇರಲಿಲ್ಲ.

॥ ಭಾವಾರ್ಥ ॥

ಸೃಷ್ಟಿಗೆ ಪೂರ್ವದಲ್ಲಿದ್ದ ಲಯಾವಸ್ಥೆಯಲ್ಲಿ ಮರಣವೂ, ಮರಣವಿಲ್ಲದಿರುವಿಕೆಯೂ ಇರಲಿಲ್ಲ. ರಾತ್ರಿ ಯಾವುದು ಹಗಲು ಯಾವುದು ಎಂಬ ಪರಿಜ್ಞಾನವಿರಲಿಲ್ಲ. ಸಮಸ್ತ ವೇದಾಂತಪ್ರಸಿದ್ಧವೂ ಅದ್ವಿತೀಯವೂ ಆದ ಬ್ರಹ್ಮತತ್ತ್ವ ಒಂದುಮಾತ್ರವಿದ್ದು ಶ್ವಾಸೋಚ್ಛ್ವಾಸರಹಿತವಾದ ಎಂದರೆ ಜೀವವಿಲ್ಲದ ಜಡವಸ್ತುವನ್ನು ತನ್ನ ಮಾಯಾ ಎಂಬ ಸಾಮರ್ಥ್ಯಾತಿಶಯದಿಂದ ಸಚೇತನವನ್ನಾಗಿ ಮಾಡಿತು ಆ ಸಾಮರ್ಥ್ಯವಿರುವ ಆ ಬ್ರಹ್ಮವಸ್ತುವಿಗಿಂತ ಇತರ ಬೇರೆ ಯಾವ ವಸ್ತುವೂ ಇರಲಿಲ್ಲ. ಅನಂತರ ಸೃಷ್ಟವಾದ ಈ ಜಗತ್ತು ಆಗ ಇರಲಿಲ್ಲ.

## English Translation

Death was not nor at that period immortality, there was no indication of day or night; that one unbreathed upon breathed of his own strength, other than that thre was nothing else whatever.

॥ ವಿಶೇಷವಿಷಯಗಳು ॥

**ನ ಮೃತ್ಯುಃ ಆಸೀತ್ ಅಮೃತಂ ನ ತರ್ಹಿ**— ಆ ಕಾಲದಲ್ಲಿ ಮರಣವಾಗಲಿ ಮರಣರಾಹಿತ್ಯವಾಗಲೀ ಇರಲಿಲ್ಲವೆಂದು ಇಲ್ಲಿ ಹೇಳಿದೆ ಮರಣವೆಂದರೆ ಪ್ರಾಣಿಗಳ ಶರೀರಗಳಿಗೆ ಕೆಲವು ಕಾಲಾನಂತರ ಸಂಭವಿಸಬಹುದಾದ ಶರೀರವಿಯೋಗ. ಶರೀರಕ್ಕೂ ಪ್ರಾಣಕ್ಕೂ ಇರುವ ಸಂಬಂಧವಿಯೋಗ. ಅಥವಾ ಇಲ್ಲಿ ಮೃತ್ಯು ವೆಂದರೆ ನಾಶ ವೆಂದೂ ಅರ್ಥಮಾಡಬಹುದು. ಜಗದಾದಿಗಳ ನಾಶ ಎಂದರ್ಥವು. **ಸರ್ವೇಷಾಂ ಪ್ರಾಣಿನಾಂ ಪರಿಪಕ್ವಂ ಭೋಗ ಹೇತುಭೂತಂ ಸರ್ವಂ ಕರ್ಮ ಯದೋಪಭುಕ್ತಮಾಸೀತ್ತದಾ ಭೋಗಾಭಾವಾನ್ನಿಷ್ಪ್ರಯೋಜನಮಿದಂ ಜಗದಿತಿ ಪರಮೇಶ್ವರಸ್ಯ ಮನಸಿ ಸಂಜಿಹೀರ್ಷಾ ಜಾಯತೇ । ತಥೈವ ಸ ಮೃತ್ಯುಃ ಸರ್ವಂ ಜಗತ್ ಸಂಹರತ ಇತಿ ಕಿಮನೇನ ಮೃತ್ಯುನಾ ಸಂಹರ್ತ್ರಾ ತದಭಾವಕೃತಂ ವಾ ಕಥಮಮರಣಂ ಸ್ಯಾದಿತಿ॥** ಪರಮೇಶ್ವರನು ಜಗತ್ತನ್ನು ಸೃಷ್ಟಿಮಾಡಿ ಅದರಲ್ಲಿ ನಾನಾವಿಧ ಪ್ರಾಣಿಗಳನ್ನು ಸೃಷ್ಟಿಸಿ ಅವುಗಳು ತಮ್ಮ ಸುಖದುಃಖಗಳನ್ನು ಅನುಭವಿಸುವಂತೆ ಮಾಡಿರುವನಷ್ಟೆ. ಆ ಪ್ರಾಣಿಗಳು ತಮ್ಮ ಸುಖದುಃಖಾದಿಗಳನ್ನು ಪೂರ್ತಿಯಾಗಿ ಅನುಭವಿಸಿದ ನಂತರ ಈ ಜಗತ್ತು ನಿಷ್ಪ್ರಯೋಜನವೆಂದು ಜಿಗುಪ್ಸೆಯು ಮನಸ್ಸಿನಲ್ಲಿ ಹುಟ್ಟುವುದು. ಆಗ ಅದನ್ನು ಪರಮೇಶ್ವರನೇ ಮೃತ್ಯುರೂಪದಿಂದ (ಸಂಹಾರಕ) ನಾಶಗೊಳಿಸುವನು ಈ ರೀತಿ ನಾಶವುಂಟಾಗುವುದನ್ನು ಮೃತ್ಯುವೆಂದು ಹೇಳ ಬಹುದು ಇಂತಹ ಮೃತ್ಯುವು ಆಗ ಇರಲಿಲ್ಲವೆಂದರೆ, ಎಂದರೆ ನಾಶವಿಲ್ಲದ ಮೇಲೆ ಈ ಜಗತ್ತು ಅಮೃತವಾಗಿ ಎಂದರೆ ನಾಶವಿಲ್ಲದಂತೆ ಯಾವಾಗಲೂ ಚಿರಸ್ಥಾಯಿಯಾಗಿ ಇರುವುದೇ ಎಂದರೆ ಹಾಗೆ ಇರಲೂ ಸಾಧ್ಯವಿಲ್ಲ. ಜಗತ್ತೇ ಆಗಲಿ, ಅದರಲ್ಲಿರುವ ಪ್ರಾಣಿಗಳೇ ಆಗಲಿ ಇಲ್ಲದಿದ್ದ ಮೇಲೆ ಅದಕ್ಕೆ ಸಂಭವಿಸಬಹುದಾದ ಮೃತ್ಯುವಿನ ಪ್ರಶ್ನೆಯೇ ಏಳುವುದಿಲ್ಲ. ಹಾಗಯೇ ಅಮೃತ ಅಥವಾ ಮರಣರಾಹಿತ್ಯ (ವಿನಾಶ)ವೂ ಇರುವುದಿಲ್ಲ. ನಾಶಮಾಡುವುದಕ್ಕೆ ಯಾವುದಾದರೂ ಒಂದು ವಸ್ತುವಿದ್ದರಲ್ಲವೇ ಅದನ್ನು ನಾಶಮಾಡುವುದು ? ಯಾವವಸ್ತುವೂ ಇಲ್ಲದಿರುವಾಗ ನಾಶಮಾಡುವುದಾದರೂ ಏನನ್ನು? ಏನೂ ಇಲ್ಲ. ಆದ್ದರಿಂದ ಆ ಕಾಲದಲ್ಲಿ ಮರಣಕ್ಕಾಗಲಿ, ಮರಣರಾಹಿತ್ಯಕ್ಕಾಗಲಿ ಮಾಡಲು ಏನೂ ಕೆಲಸ ವಿರಲಿಲ್ಲ ಎಂದರೆ ಅವುಗಳ ಅವಶ್ಯಕತೆಯೇ ಇರಲಿಲ್ಲ. ಆದ್ದರಿಂದ ಅವು ಇರಲಿಲ್ಲ ಎಂದಭಿಪ್ರಾಯವು.

**ನ ರಾತ್ರ್ಯಾಃ ಅಹ್ನಃ ಆಸೀತ್ ಪ್ರಕೇತಃ**— **ಪ್ರಕೇತಃ** ಎಂದರೆ ತಿಳುವಳಿಕೆಯು, ಪರಿಜ್ಞಾನವು. ಆ ಕಾಲದಲ್ಲಿ ರಾತ್ರಿಯಾವುದು, ಹಗಲು ಯಾವುದು ಅಥವಾ ಈಗ ರಾತ್ರಿಯೋ ಹಗಲೋ ಎಂಬ ಪರಿಜ್ಞಾನವೂ ಇರಲಿಲ್ಲ ಇಲ್ಲಿ ರಾತ್ರಿ ಎಂದರೇನು ಹಗಲೆಂದರೇನು ಎಂದು ತಿಳಿದುಕೊಳ್ಳುವುದು ಅವಶ್ಯಕವು ಈಗ ನಮಗಿರುವ ಲೋಕಾನುಭವದಂತೆ ಸೂರ್ಯೋದಯದಿಂದ ಸೂರ್ಯಾಸ್ತಮಯದ ವರೆಗಿನ ಕಾಲಕ್ಕೆ ಹಗಲೆಂದೂ, ಸೂರ್ಯಾಸ್ತಮಯದಿಂದ ಪುನಃ ಸೂರ್ಯೋದಯದವರೆಗಿನ ಕಾಲಕ್ಕೆ ರಾತ್ರಿಯೆಂದೂ ತಿಳಿಯುತ್ತೇವೆ. ಈ ರಾತ್ರಿ ಹಗಲುಗಳ ಅವಶ್ಯಕತೆಯೇನು ? ಇವು ಹೇಗೆ ಉಂಟಾಗುತ್ತವೆ ? ಎಂದರೆ ಪ್ರಾಣಿಗಳು ಹಗಲಿನಲ್ಲಿ ತಮ್ಮ ಆಹಾರಾದಿಪ್ರಾಪ್ತಿಗಾಗಿ ನಾನಾ ವ್ಯಾಪಾರಗಳಲ್ಲಿ ತೊಡಗಿರುವವು. ರಾತ್ರಿಕಾಲದಲ್ಲಿ ತಮ್ಮ ಹಗಲಿನ ವ್ಯಾಪಾರಗಳನ್ನು ನಿಲ್ಲಿಸಿ ವಿಶ್ರಾಂತಿಯನ್ನು ಪಡೆಯುವವು. ಪ್ರಾಣಿಗಳಿಗೆ ವ್ಯಾಪಾರೋದ್ಯಮಗಳೂ ವಿಶ್ರಾಂತಿಯೂ ಎರಡೂ ಅವಶ್ಯಕವಾದ್ದರಿಂದ ಹಗಲು ರಾತ್ರಿಗಳೆರಡೂ ಅವಶ್ಯಕವು. ಪರಮಾತ್ಮನ ಶಕ್ತಿಸಾಮರ್ಥ್ಯಗಳಿಂದ ಉಂಟಾಗುವ ಭೂಮಿಯ ಚಲನ ವಲನಗಳಿಂದ ಹಗಲು ರಾತ್ರಿಗಳುಂಟಾಗುವವು. ಭೂಮಿಯು (ಅಥವಾ ಭೂಮಿಯಭಾಗವು) ಸೂರ್ಯಾಭಿಮುಖವಾಗಿದ್ದಾಗ ಹಗಲೆಂದೂ, ಸೂರ್ಯನ ಎದುರುಗಿಲ್ಲವೆ ಬೇರೆಕಡೆಗೆ ತಿರುಗಿದಾಗ ರಾತ್ರಿಯೆಂತಲೂ ವ್ಯವಸ್ಥೆಯು. ಭೂಮಿಯ ಚಲನ ವಲನಗಳು ಒಂದು ನಿರ್ದಿಷ್ಟಕ್ರಮವನ್ನೂ, ನಿರ್ದಿಷ್ಟಕಾಲವನ್ನೂ ಅನುಸರಿಸುವುದರಿಂದ ಹಗಲು ರಾತ್ರಿಗಳ ಕಾಲಪರಿಮಿತಿಯೂ ಸ್ವಲ್ಪ ಹೆಚ್ಚುಕಡಿಮೆ ಸಮನಾಗಿರುವುದು ಇದಲ್ಲದೆ ಭೂಮಿಯು ಸೂರ್ಯನ ಸುತ್ತ ಪರಿಭ್ರಮಣಮಾಡುವುದು. ಆ ರೀತಿ ಒಂದುಸಲ ಪರಿಭ್ರಮಣಮಾಡುವ ಕಾಲಕ್ಕೆ ಒಂದು ಸಂವತ್ಸರವೆಂದು ಹೆಸರು. ಕಾಲವು ಆದ್ಯಂತಗಳಿಲ್ಲದೆ ಅನಂತವಾಗಿರುವುದರಿಂದ ಅದರಲ್ಲಿ ಕೆಲವು ಭಾಗವನ್ನು (ಕೆಲವು ಕಾಲವನ್ನು) ಅಳತೆ ಮಾಡಲು ಸಂವತ್ಸರವನ್ನು ಅಳತೆ ಕೋಲನ್ನಾಗಿ ಪರಿಗಣಿಸುವುದು ರೂಢಿಯಾಗಿದೆ. ಒಂದಾವರ್ತಿ ಭೂಮಿಯುಸೂರ್ಯನನ್ನು ಸುತ್ತುವಾಗ ಕಳೆಯುವ ಕಾಲಕ್ಕೆ ಸಂವತ್ಸರವೆಂದೂ ಅಂತಹ ಪರಿಮಿತಿಯುಳ್ಳ ಅನೇಕ ಸಂವತ್ಸರಗಳ ಪರಿಮಿತಿಯೆಂದೂ ಕಾಲವನ್ನು ಅಳತೆ ಮಾಡಬಹುದು. ಅದರಂತೆ ಸಂವತ್ಸರಕ್ಕಿಂತಲೂ ಸಣ್ಣದಾದ ಕಾಲವಿಭಾಗವನ್ನು, ಮಾಸ, ಪಕ್ಷ, ದಿನ, ಹಗಲು, ರಾತ್ರಿ, ಮುಹೂರ್ತ, ಕ್ಷಣ, ಕಲಾ, ಕಾಷ್ಠಾ ಇತ್ಯಾದಿ ವಿಭಾಗಗಳಿಂದ ಅಳೆಯಬಹುದು ಇದೆಲ್ಲಾ ಭೂಮಿಗೆ ಸಂಬಂಧಪಟ್ಟ ವಿಷಯವಾಯಿತು. ಇತರ ಗ್ರಹಗಳಿಗೆ ಇದು ಅನ್ವಯಿಸುವುದಿಲ್ಲ. ಅವುಗಳ ಚಲನ ವಲನಗಳೂ, ಸೂರ್ಯನ ಸುತ್ತಲೂ ಮಾಡುವ ಪರಿಭ್ರಮಣವೂ ನಾನಾವಿಧವಾಗಿರುವುದರಿಂದ ಆ ಗ್ರಹಗಳಿಗೆ ಹಗಲು ರಾತ್ರಿಗಳ ಪರಿಮಾಣವೂ ಸಂವತ್ಸರದ ಪರಿಮಾಣವೂ ಭೂಮಿಗಿಂತ ಹೆಚ್ಚುಕಡಿಮೆಯಾಗಿ ನಾನಾವಿಧವಾಗಿರುವವು. ಪ್ರಕೃತ ಸಂದರ್ಭದಲ್ಲಿ ಅಹೋರಾತ್ರಿಗಳ ಪರಿಜ್ಞಾನಕ್ಕೆ ಆಗ ಅವಕಾಶವಿರಲಿಲ್ಲ ಎಂದು ಹೇಳುವಾಗ ಕಾಲವಿಭಾಗವನ್ನು ತಿಳಿಯಲು ಯಾವ ಸಾಧನವೂ ಇರಲಿಲ್ಲ ಸೂರ್ಯ ಚಂದ್ರರಾಗಲಿ, ಇತರ ಗ್ರಹನಕ್ಷತ್ರಗಳಾಗಲಿ, ಅವುಗಳ ಚಲನ ವಲನಗಳಾಗಲೀ ಯಾವುದೂ ಇಲ್ಲದ್ದರಿಂದ ಕಾಲವಿಭಾಗವನ್ನು ತಿಳಿಯಲು ಸಾಧ್ಯವಾಗುತ್ತಿರಲಿಲ್ಲ. ಆದರೆ ಕಾಲವೇ ಇರಲಿಲ್ಲವೇ ಎಂದರೆ ಕಾಲವು ಇತ್ತು ಅದು ಯಾವಾಗಲೂ ಇರುವುದು ಅದು ಅನಂತವಾಗಿಯೂ ಇದೆ. ಅದೂ ಪರಮಾತ್ಮಸ್ವರೂಪವೇ ಹೊರತು ಬೇರೆಯಲ್ಲ. ಎಂದು ಉಪನಿಷದಾದಿ ಗ್ರಂಥಗಳು ಸಾರುತ್ತಿರುವವು. ದೇಶಕಾಲವಸ್ತುಗಳಲ್ಲಿ ಅನಂತವಾಗಿರುವುದೇ ಪರಮಾತ್ಮನ ಸ್ವರೂಪವು ಎಂದು ಅನೇಕಕಡೆ ಉಕ್ತವಾಗಿದೆ.

**ಆನೀತ್ ಅವಾತಂ ಸ್ವಧಯಾ ತತ್ ಏಕಂ**— ಈ ವಾಕ್ಯದ ಅರ್ಥವನ್ನು ವಿವರಿಸುವುದಕ್ಕೆ ಪೂರ್ವಭಾವಿಯಾಗಿ ಈ ವಾಕ್ಯದಲ್ಲಿರುವ ಪ್ರತಿಪದವನ್ನು ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವು. ಆನೀತ್ ಎಂಬ ಶಬ್ದವು

ಅನು–ಪ್ರಾಣನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಭೂತಕಾಲವನ್ನು ಸೂಚಿಸುವುದು. ಯಾಸ್ಕರು **ಅನಿತಿ** ಎಂಬ ಶಬ್ದವನ್ನು (ಧಾತುವನ್ನು) ಗತ್ಯರ್ಥವಿರುವ ಶಬ್ದಗಳ ಮಧ್ಯದಲ್ಲಿ ಪಠಿಸಿರುವರು. (ನಿ. ೩-೯.) ಆದ್ದರಿಂದ **ಈ ಧಾತುವಿಗೆ ಚಲಿಸು**, ಉಸಿರಾಡು ಎಂಬರ್ಥವಿರುವುದು. ಉಸಿರಾಡುವುದೂ, ಚಲಿಸುವುದೂ ಪ್ರಾಣಿಗಳಿಗೆ ಮುಖ್ಯಕರ್ಮವಾದ್ದರಿಂದ ಅವಿಲ್ಲದಿರುವ ಪ್ರಾಣಿಗಳಿಗೆ ಜೀವವಿಲ್ಲವೆಂದೂ, ಜಡವಸ್ತುವೆಂದೂ ಹೇಳಬೇಕಾಗುವುದು. ಆದ್ದರಿಂದ ಪ್ರಾಣಿಗಳಿಗೆ ಚೈತನ್ಯಅಥವಾ ಪ್ರಾಣವಿರುವುದೆಂದುತಿಳಿಯಬೇಕಾದರೆ ಅವುಗಳು ಉಸಿರಾಡಬೇಕು ಅಥವಾ ಚಲನವಲನಗಳನ್ನು ವ್ಯಕ್ತಪಡಿಸಬೇಕು. ಇದೇ ಪ್ರಾಣವಿರುವುದಕ್ಕೆ ಗುರುತು. ಇಲ್ಲಿ **ಆನೀತ್** ಎಂಬ ಕ್ರಿಯಾಪದಕ್ಕೆ **ಆನೀದಿತ್ಯತ್ರ ಧಾತ್ವರ್ಥಕ್ರಿಯಾ, ತತ್ಕರ್ತಾ ತಸ್ಯ ಚ ಭೂತಕಾಲಸಂಬಂಧ ಇತಿ ತ್ರಯೋಽರ್ಥಾಃ ಪ್ರತೀಯಂತೇ** ಎಂಬರ್ಥವಿರುವುದು. ಎಂದರೆ, ಆ ಶಬ್ದದಲ್ಲಿ ಧಾತುವಿನ ಅರ್ಥ, ಅದನ್ನು ಮಾಡುವ ಕರ್ತೃವು, ಅದನ್ನು ಮಾಡಿದ ಭೂತಕಾಲ ಎಂಬ ಮೂರು ವಿಷಯಗಳು ಅಡಕವಾಗಿವೆ. ಎಂದರೆ ಆ ಪರಬ್ರಹ್ಮನು (ಉಸಿರಾಡುವ ಮೊದಲಾದ) ಚಲನವನ್ನುಂಟು ಮಾಡಿದನು ಎಂದು ಆನೀತ್ ಎಂಬ ಶಬ್ದದ ಮುಖ್ಯಾಭಿಪ್ರಾಯವು. ಇನ್ನು **ಅವಾತಂ** ಎಂದರೇನು ? ವಾತ ಎಂದರೆ ವಾಯುವು. ವಾತಂ ಎಂದರೆ ಇಲ್ಲಿ ವಾಯುವನ್ನು ಸೇವಿಸುವ ಎಂದರೆ ಉಸಿರಾಡುವ ಪ್ರಾಣಿಯು. ಅವಾತಂ ಎಂದರೆ ಉಸಿರಾಡದೆ ಚಲನಶಕ್ತಿಯೂ ಇಲ್ಲದೆ ಇರುವ ಜಡವಸ್ತುವೆಂದರ್ಥವು. **ಸ್ವಧಯಾ—ಸ್ವಸ್ಮಿನ್ ಧೀಯತೇ ಧ್ರಿಯತ ಆಶ್ರಿತ್ಯ ವರ್ತತ ಇತಿ ಸ್ವಧಾ ಮಾಯಾ । ತಯಾ ತದ್ಬ್ರಹ್ಮೈಕಮವಿಭಾಗಾಪನ್ನಮಾಸೀತ್ ॥** ತನ್ನಲ್ಲಿ (ಪರಮಾತ್ಮನಲ್ಲಿ) ತನ್ನನ್ನಾಶ್ರಯಿಸಿ ಇರುವ ಶಕ್ತಿಸಾಮರ್ಥ್ಯಕ್ಕೆ ಸ್ವಧಾ ಎಂದು ಹೆಸರು. ಇದನ್ನು ಕೆಲವರು ಮಾಯಾ ಎಂದೂ ಕರೆಯುವರು. ಈ ಸಾಮರ್ಥ್ಯವು ಬ್ರಹ್ಮನಲ್ಲಿ ಪ್ರತ್ಯೇಕವಾಗಿದ್ದಿತೇ ಎಂದರೆ ಇಲ್ಲ. ಬ್ರಹ್ಮನೇ ಬೇರೆ ಅವನ ಸಾಮರ್ಥ್ಯವೇ ಬೇರೆ ಎಂದು ಹೇಳುವಂತಿಲ್ಲ. ಬ್ರಹ್ಮನಲ್ಲಿಯೇ ಸಮಸ್ತವೂ ಐಕ್ಯವಾಗಿರುವುದು. ಇಂತಹ ಬ್ರಹ್ಮನ ಮಾಯಾ ಎಂಬ ಅಸಾಧಾರಣಸಾಮರ್ಥ್ಯದಿಂದ ಎಂದು ಈ ಸ್ವಧಾಶಬ್ದಕ್ಕ ಅರ್ಥವು. **ತತ್—ತತ್** ಎಂದರೆ **ಸಕಲವೇದಾಂತಪ್ರಸಿದ್ಧಂ ಬ್ರಹ್ಮತತ್ತ್ವಂ ।** ಸಕಲ ವೇದಾಂತಗಳಲ್ಲಿಯೂ ಪ್ರತಿಪಾದ್ಯವೂ ಅವ್ಯಕ್ತ ಸ್ವರೂಪವೂ ಆದ ಬ್ರಹ್ಮವೆಂಬ ಯಾವ ವಸ್ತುವಿರುವುದೋ ಅದನ್ನು ತತ್ ಎಂಬ ಶಬ್ದದಿಂದ ಕರೆಯುವರು. **ತತ್ ತ್ವಂ ಅಸಿ** ಎಂಬ ವಾಕ್ಯದಲ್ಲಿರುವ ತತ್ ಎಂಬ ಶಬ್ದದ ಅರ್ಥದಂತೆ ಇರುವ ಪರಬ್ರಹ್ಮವಸ್ತುವೆಂದರ್ಥವು. **ಏಕಂ ಅದ್ವಿತೀಯಂ ಏಕಮೇವ ।** ಬ್ರಹ್ಮವಸ್ತುವಿಗೆ ಸರಿಸಮನಾದ ಅಥವಾ ಅಧಿಕವಾದ ಬೇರೆ ವಸ್ತುವಿಲ್ಲ. ಇದಕ್ಕೆ ಹೋಲಿಕೆಯಾಗುವ ವಸ್ತುವೂ ಇಲ್ಲ. ಎಂದರೆ ಇಂತಹ ಎರಡು ವಸ್ತುಗಳಿಲ್ಲ. ಯಾವಾಗಲೂ ಒಂದೇ ಆಗಿರುವುದು. ಪ್ರತಿಪದವನ್ನೂ ವಿವರಿಸಿದನಂತರ ಇನ್ನು ವಾಕ್ಯಾರ್ಥವನ್ನು ವಿಮರ್ಶೆಮಾಡೋಣ. ಯಾವಾಗಲೂ ಅದ್ವಿತೀಯವೂ, ಏಕಮಾತ್ರವಿರುವುದೂ ಆದ ಪರಬ್ರಹ್ಮವಸ್ತುವು ತನ್ನ ಅಸಾಧಾರಣವಾದ ಮಾಯಾಶಕ್ತಿಯಿಂದ ಉಸಿರಾಡದಿರುವ ಜಡವಸ್ತುವನ್ನು ಉಸಿರಾಡುವಂತೆ ಅದಕ್ಕೆ ಚೈತನ್ಯವನ್ನು ತುಂಬಿ ಅದನ್ನು ಚಲಿಸುವ ಪ್ರಾಣಿಯನ್ನಾಗಿ ಮಾಡಿತು ಎಂದು ವಾಕ್ಯದ ಅಭಿಪ್ರಾಯವು. ಪರಬ್ರಹ್ಮನು ತಾನು ಸೃಷ್ಟಿಸಿದ ಜಗದಾದಿ ವಸ್ತುಗಳಲ್ಲಿ ತನ್ನ ಅಂಶವಾದ ಚೈತನ್ಯವನ್ನು ತುಂಬದಿದ್ದರೆ ಎಂದರೆ ತಾನು ಅವುಗಳಲ್ಲಿ ಪ್ರಜ್ಞೆಯರೂಪದಿಂದ ಪ್ರವೇಶಿಸದಿದ್ದರೆ ಅವುಗಳು ಜಡವಸ್ತುಗಳಾಗಿಯೇ ಉಳಿಯುತ್ತಿದ್ದವು. ಅವುಗಳಿಗೆ ಉಸಿರಾಡಲೂ ಚಲಿಸಲೂ ಶಕ್ತಿಯುಂಟಾಗುತ್ತಿರಲಿಲ್ಲ. ಆದ್ದರಿಂದ ಪರಬ್ರಹ್ಮನು ಮೊದಲು ತಾನು ಸೃಷ್ಟಿಸಿದ ವಸ್ತುಗಳಲ್ಲಿ ತಾನೇ ಅಂತರಾತ್ಮನಾಗಿ ಪ್ರವೇಶಿಸಿ ಪ್ರಾಣಿಗಳ ಮತ್ತು ಅಚೇತನ ವಸ್ತುಗಳ ಸಮಸ್ತ ವ್ಯವಹಾರಗಳನ್ನು ನಡೆಸುತ್ತಿರುವನು ಎಂದಭಿಪ್ರಾಯವು.

**ತಸ್ಮಾತ್ ಹ ಅನ್ಯತ್ ನ ಪರಃ ಕಿಂ ಚನ ಆಸ** – ಹಿಂದಿನ ವಾಕ್ಯದಲ್ಲಿ ಏಕಂ ಎಂಬ ಶಬ್ದಪ್ರಯೋಗವಿದೆ. ಏಕಂ ಎಂದರೆ ಅದ್ವಿತೀಯನು, ತನಗಿಂತ ಬೇರೆ ಯಾವ ವಸ್ತುವೂ ಇಲ್ಲದವನು ಎಂದರ್ಥವು. ಬ್ರಹ್ಮವನ್ನು ಬಿಟ್ಟರೆ ಬೇರೆ ವಸ್ತುವೇ ಇಲ್ಲ ಎಂದು ಈ ಏಕಂ ಶಬ್ದದ ಅರ್ಥವು. ಹೀಗಿರುವಾಗ ಬ್ರಹ್ಮನು **ಅವಾತಂ** ಎಂದರೆ ಚಲನವಿಲ್ಲದ ಜಡವಸ್ತುವನ್ನು ಚೇತನಾಯುಕ್ತವನ್ನಾಗಿ ಮಾಡಿದನು ಎಂದು ಹೇಳಿರುವುದು ಅಸಮಂಜಸವಲ್ಲವೇ? ಬ್ರಹ್ಮವೊಂದನ್ನು ಬಿಟ್ಟರೆ ಬೇರೆ ವಸ್ತುವೇ ಇಲ್ಲದಿರುವಾಗ ಜಡವಸ್ತುವೆಲ್ಲಿಂದ ಬಂತು? ಬ್ರಹ್ಮ, ಜಡವಸ್ತು ಎಂದು ಎರಡು ವಸ್ತುಗಳಾಗಲಿಲ್ಲವೇ? ಇದು ಪರಸ್ಪರವಿರೋಧವಲ್ಲವೇ ಎಂದರೆ ಅದನ್ನೇ **ತಸ್ಮಾದ್ಧಾನ್ಯನ್ನ ಪರಃ ಕಿಂಚ ನಾಸ** ಎಂಬ ವಾಕ್ಯದಲ್ಲಿ ಸ್ಪಷ್ಟವಾಗಿ ವಿವರಿಸುವರು. ಸೃಷ್ಟಿಗೆ ಪೂರ್ವದಲ್ಲಿ ಬ್ರಹ್ಮವಸ್ತುವೊಂದೇ ಇದ್ದಿತು. ಅದೂ ಸಹ ಅವ್ಯಕ್ತ (ಅಸತ್) ರೂಪದಲ್ಲಿದ್ದಿತು. ಬೇರೆ ವಸ್ತುವಿರಲಿಲ್ಲ. ಸೃಷ್ಟಿಕಾಲದಲ್ಲಿ ಈ ಬ್ರಹ್ಮವೇ ತನ್ನ ಮಾಯಾಶಕ್ತಿಯಿಂದ ಜಗದಾದಿಗಳಾಗಿ ಪರಿವರ್ತಿತವಾಯಿತು. ಆದ್ದರಿಂದ ಈ ಪರಿವರ್ತಿತವಾದ ಜಗದಾದಿಗಳೂ ಬ್ರಹ್ಮವಸ್ತುವಲ್ಲದೆ ಬೇರೆಯಲ್ಲ. ಈ ಜಗದಾದಿಗಳು ತಮ್ಮ ವ್ಯವಹಾರಾಧಿಗಳನ್ನು ನಡೆಸಲು ಅವುಗಳಲ್ಲಿ ಬ್ರಹ್ಮನು ಚೈತನ್ಯರೂಪದಿಂದ ಪ್ರವೇಶಿಸಿರುವನೆಂದು ಹೇಳಿದೆ. ಆದ ಮಾತ್ರಕ್ಕೆ ಬ್ರಹ್ಮಬೇರೆ, ಜಗದಾದಿಗಳು ಬೇರೆ, ಇವೆರಡೂ ಬೇರೆ ಬೇರೆ ಎರಡುವಸ್ತುಗಳು ಎಂದು ಹೇಳುವುದು ಸರಿಯಲ್ಲ ಒಂದೇವಸ್ತುವಿನ ಎರಡು ಪ್ರತಿಬಿಂಬಗಳು. ಅನೇಕ ಪಾತ್ರೆಗಳಲ್ಲಿ ತುಂಬಿರುವ ನೀರುಗಳಲ್ಲಿ ಸೂರ್ಯನ ಪ್ರತಿ ಬಿಂಬವು ಅನೇಕ ಸೂರ್ಯಗಳಂತೆ ಕಾಣಿಸಿದರೂ ಸೂರ್ಯನು ಒಬ್ಬನೇ ಹೊರತು ಅನೇಕ ಸೂರ್ಯರಿಲ್ಲ. ಅದರಂತೆ ಜಗದಾದಿಗಳು ವಿಧವಿಧವಾಗಿ ಕಂಡರೂ ಅವೆಲ್ಲವೂ ಒಬ್ಬನೇ ಆದ ಪರಮಾತ್ಮನ ಸ್ವರೂಪವೇ ಆಗಿರುವುದು. ಆ ಪರಮಾತ್ಮನನ್ನು ಅಥವ ಬ್ರಹ್ಮವಸ್ತುವನ್ನು ಬಿಟ್ಟು ಬೇರೆ ಯಾವ ವಸ್ತುವೂ ಇಲ್ಲವೇ ಇಲ್ಲ. ಆದ್ದರಿಂದ ಸೃಷ್ಟಿಗೆ ಪೂರ್ವದಲ್ಲಿ ಈಗ ಕಾಣುತ್ತಿರುವ ಈ ಜಗದಾದಿಗಳೂ ಇರಲೇ ಇಲ್ಲ ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

**ತಮ ಆಸೀತ್ತಮಸಾ ಗೂಳ್ಹಮಗ್ರೇಽಪ್ರಕೇತಂ ಸಲಿಲಂ ಸರ್ವಮಾ ಇದಂ ।**
**ತುಚ್ಛ್ಯೇನಾಭ್ವಪಿಹಿತಂ ಯದಾಸೀತ್ತಪಸಸ್ತನ್ಮಹಿನಾಜಾಯತೈಕಂ ॥ ೩ ॥**

॥ ಪದಪಾಠಃ ॥

**ತಮಃ । ಆಸೀತ್ । ತಮಸಾ । ಗೂಳ್ಹಂ । ಅಗ್ರೇ । ಅಪ್ರಽಕೇತಂ । ಸಲಿಲಂ । ಸರ್ವಂ । ಆಃ । ಇದಂ ।**
**ತುಚ್ಛ್ಯೇನ । ಅಭು । ಅಪಿಽಹಿತಂ । ಯತ್ । ಆಸೀತ್ । ತಪಸಃ । ತತ್ । ಮಹಿನಾ । ಅಜಾಯತ ।**
**ಏಕಂ ॥ ೩ ॥**

॥ ಸಾಯಣಭಾಷ್ಯಂ ॥

**ನನೂಕ್ತಪ್ರಕಾರೇಣ ಯದಿ ಪೂರ್ವಮಿದಂ ಜಗನ್ನಾಸೀತ್ಕಥಂ ತರ್ಹಿ ತಸ್ಯ ಜನ್ಮ । ಜಾಯಮಾನಸ್ಯ ಜನಿಕ್ರಿಯಾಯಾಂ ಕರ್ತೃತ್ವೇನ ಕಾರಕತ್ವಾತ್ ಕಾರಕಂ ಚ ಕಾರಣಾವಾಂತರವಿಶೇಷ ಇತಿ ಕಾರಕಸ್ಯ**

ಸತೋ ನಿಯತಪೂರ್ವಕ್ಷಣವರ್ತಿತ್ವಸ್ಯಾವಶ್ಯಂಭಾವಾತ್ । ಅಭ್ಯೈತದ್ದ್ವೋಷಪರಿಜಿಹೀರ್ಷಯಾ ಜನಿಕ್ರಿ-
ಯಾಯಾಃ ಪ್ರಾಗಪಿ ತದ್ವಿದ್ಯತ ಇತ್ಯುಚ್ಯತೇ । ಕಥಂ ತಸ್ಯ ಜನ್ಮ । ಅತ ಆಹ । ತಮಸಾ ಗೂಳ್ಹಮಗ್ರ
ಇತಿ । ಅಗ್ರೇ ಸೃಷ್ಟೇಃ ಪ್ರಾಕ್ ಪ್ರಲಯದಶಾಯಾಂ ಭೂತಭೌತಿಕಂ ಸರ್ವಂ ಜಗತ್ತಮಸಾ ಗೂಳ್ಹಂ ।
ಯಥಾ ನೈಶಂ ತಮಃ ಸರ್ವಪದಾರ್ಥಜಾತಮಾವೃಣೋತಿ ತದ್ವತ್ । ಆತ್ಮತತ್ತ್ವಸ್ಯಾವರಕತ್ವಾನ್ಮಾಯಾ-
ಪರಸಂಜ್ಞಂ ಭಾವರೂಪಾಜ್ಞಾನಮತ್ರ ತಮ ಇತ್ಯುಚ್ಯತೇ । ತೇನ ತಮಸಾ ನಿಗೂಢಂ ಸಂವೃತಂ
ಕಾರಣಭೂತೇನ ತೇನಾಚ್ಛಾದಿತಂ ಭವತಿ । ಆಚ್ಛಾದಕಾತ್ತಸ್ಮಾತ್ತಮಸೋ ನಾಮರೂಪಾಭ್ಯಾಂ ಯದಾ-
ವಿರ್ಭವನಂ ತದೇವ ತಸ್ಯ ಜನ್ಮೇತ್ಯುಚ್ಯತೇ । ಏತೇನ ಕಾರಣಾವಸ್ಥಾಯಾಮಸದೇವ ಕಾರ್ಯಮುತ್ಪದ್ಯತ
ಇತ್ಯಸದ್ವಾದಿನೋಽಸತ್ಕಾರ್ಯವಾದಿನೋ ಯೇ ಮನ್ಯಂತೇ ತೇ ಪ್ರತ್ಯಾಖ್ಯಾತಾಃ । ನನು ಕಾರಣೇ
ತಮಸಿ ತಜ್ಜಗದಾತ್ಮಕಂ ಕಾರ್ಯಂ ವಿದ್ಯತೇ ಚೇತ್ ಕಥಂ ನಾಸೀದ್ರಜ ಇತ್ಯಾದಿನಿಷೇಧಃ । ತತ್ರಾಹ
ತಮ ಆಸೀದಿತಿ । ತಮೋ ಭಾವರೂಪಾಜ್ಞಾನಂ ಮೂಲಕಾರಣಂ । ತದ್ರೂಪತಾ ತದಾತ್ಮನಾಂ । ಯತಃ
ಸರ್ವಂ ಜಗತ್ಪ್ರಾಕ್ ತಮ ಆಸೀದತೋ ನಿಷಿಧ್ಯತ ಇತ್ಯರ್ಥಃ । ನನ್ವಾವರಕತ್ವಾದಾವರಕಂ ತಮಃ ಕರ್ತೃ
ಆವಾರ್ಯತ್ವಾಜ್ಜಗತ್ಕರ್ಮ । ಕಥಂ ತಯೋಃ ಕರ್ಮಕರ್ತ್ರೋಸ್ತಾದಾತ್ಮ್ಯಂ । ತತ್ರಾಹ । ಅಪ್ರಕೇತಮಿತಿ ।
ಅಪ್ರಕೇತಮಪ್ರಜ್ಞಾಯಮಾನಂ । ಅಯಮರ್ಥಃ । ಯದ್ಯಪಿ ಜಗತಸ್ತಮಸಶ್ಚ ಕರ್ಮಕರ್ತೃಭಾವೋ
ಯೌಕ್ತಿಕೋ ವಿದ್ಯತೇ ತಥಾಪಿ ವ್ಯವಹಾರದಶಾಯಾಮಿವ ತಸ್ಯಾಂ ದಶಾಯಾಂ ನಾಮರೂಪಾಭ್ಯಾಂ
ವಿಸ್ಪಷ್ಟಂ ನ ಜ್ಞಾಯತ ಇತಿ ತಾದಾತ್ಮ್ಯವರ್ಣನಂ । ಅತ ಏವ ಮನುನಾ ಸ್ಮರ್ಯತೇ । ಆಸೀದಿದಂ
ತಮೋಭೂತಮಪ್ರಜ್ಞಾತಮಲಕ್ಷಣಂ । ಅಪ್ರತರ್ಕ್ಯಮನಿರ್ದೇಶ್ಯಂ ಪ್ರಸುಪ್ತಮಿವ ಸರ್ವತಃ । ಮನು
೧-೫ । ಇತಿ । ಕುತೋ ವಾ ನ ಪ್ರಜ್ಞಾಯತೇ ತತ್ರಾಹ । ಸಲಿಲಂ ॥ ಸಲ ಗತೌ । ಔಣಾದಿಕ ಇಲಚ್ ॥
ಇದಂ ದೃಶ್ಯಮಾನಂ ಸರ್ವಂ ಜಗತ್ಸಲಿಲಂ ಕಾರಣೇನ ಸಂಗತಮವಿಭಾಗಾಪನ್ನಮಾಃ । ಆಸೀತ್ ॥
ಅಸ್ತೇರ್ಲಙಿ ತಿಪಿ ಬಹುಲಂ ಛಂದಸೀತೀಡಭಾವೇ ಹಲ್ಙ್ಯಾಬ್ಭ್ಯ ಇತಿ ತಿಲೋಪೇ ತಿಪ್ಯನಸ್ತೇಃ ।
ಪಾ. ೮-೨-೭೩ । ಇತಿ ಪರ್ಯುದಾಸಾದ್ದಕಾರಾಭಾವಃ ॥ ಯದ್ವಾ ಸಲಿಲಮಿತಿ ಲುಪ್ತೋಪಮಂ । ಸಲಿಲ-
ಮಿವ । ಯಥಾ ಕ್ಷೀರೇಣಾವಿಭಾಗಾಪನ್ನಂ ನೀರಂ ದುರ್ವಿಜ್ಞಾನಂ ತಥಾ ತಮಸಾವಿಭಾಗಾಪನ್ನಂ ಜಗನ್ನ
ಶಕ್ಯವಿಜ್ಞಾನಮಿತ್ಯರ್ಥಃ । ನನು ವಿವಿಧವಿಚಿತ್ರರೂಪಭೂಯಸಃ ಪ್ರಪಂಚಸ್ಯ ಕಥಮತಿತುಚ್ಛೇನ ತಮಸಾ
ಕ್ಷೀರೇಣ ನೀರಸ್ಯೇವಾಭಿಭವಃ । ತಥಾ ತಮೋಽಪಿ ಕ್ಷೀರವದ್ಬಲವದಿತ್ಯೇವೋಚ್ಯತೇ । ತರ್ಹಿ ದುರ್ಬಲಸ್ಯ
ಜಗತಃ ಸರ್ಗಸಮಯೇಽಪಿ ನೋದ್ಭವಸಂಭವ ಇತ್ಯತ ಆಹ ತುಚ್ಛ್ಯೇನೇತಿ । ಆ ಸಮಂತಾದ್ಭವತೀತ್ಯಾ-
ಭು ತುಚ್ಛ್ಯೇನ ॥ ಛಾಂದಸೋ ಯಕಾರೋಪಜನಃ ॥ ತುಚ್ಛೇನ ತುಚ್ಛಕಲ್ಪನೇನ ಸದಸದ್ವಿಲಕ್ಷಣೇನ.
ಭಾವರೂಪಾಜ್ಞಾನೇನಾಪಿಹಿತಂ ಛಾದಿತಮಾಸೀತ್ ॥ ದಧಾತೇಃ ಕರ್ಮಣಿ ನಿಷ್ಠಾ । ದಧಾತೇರ್ಹಿ ।
ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ಏಕಮೇಕೀಭೂತಂ ಕಾರಣೇನ ತಮಸಾವಿಭಾಗತಾಂ
ಪ್ರಾಪ್ತಮಪಿ ತತ್ಕಾರ್ಯಜಾತಂ ತಪಸಃ ಸ್ರಷ್ಟವ್ಯಪರ್ಯಾಲೋಚನರೂಪಸ್ಯ ಮಹಿನಾ ಮಾಹಾತ್ಮ್ಯೇ-
ನಾಜಾಯತ । ಉತ್ಪನ್ನಂ । ತಪಸಃ ಸ್ರಷ್ಟವ್ಯಪರ್ಯಾಲೋಚನರೂಪತ್ವಂ ಚಾನ್ಯತ್ರಾಮ್ನಾಯತೇ । ಯಃ
ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ । ಮುಂ. ಉ. ೧-೧-೯ । ಇತಿ ॥

|| ಪ್ರತಿಪದಾರ್ಥ ||

**ಅಗ್ರೇ**—ಸೃಷ್ಟಿಗೆ ಪೂರ್ವದಲ್ಲಿ | **ತಮಸಾ**—ಅಂಧಕಾರದಿಂದ | **ಗೂಳ್ಹಂ**—ದಟ್ಟವಾಗಿ ಕವಿದಿರುವ | **ಅಪ್ರಕೇತಂ**—ಯಾವುದನ್ನೂ ತಿಳಿಯಲು ಸಾಧ್ಯವಾದ | **ತಮಃ**—ಕತ್ತಲೆಯು | **ಆಸೀತ್**—ಇದ್ದಿತು | **ಇದಂ ಸರ್ವಂ**—ಈಗ ಕಾಣುವ ಸಮಸ್ತಜಗತ್ತೂ (ಆ ಕಾಲದಲ್ಲಿ) | **ಸಲಿಲಂ**—ಉದಕಮಯವಾಗಿ | **ಆಃ**—ಇದ್ದಿತು | **ಆಭು**—ಸುತ್ತಲೂ | **ತುಚ್ಛ್ಯೇನ**—ಏನೂ ಇಲ್ಲದ ಅಭಾವದಿಂದಲೂ | **ಯತ್**—ಯಾವುದು | **ಅಪಿಹಿತಂ**—ಆಚ್ಛಾದಿತವಾಗಿ | **ಆಸೀತ್**—ಇದ್ದಿತೋ | **ಏಕಂ**—ಕಾರ್ಯಕಾರಣಗಳು ಸೇರಿ ಒಂದಾಗಿದ್ದ ಆ ಅಸದ್ವಸ್ತುವು | **ತಪಸಃ**—ಸೃಷ್ಟಿಮಾಡಬೇಕೆಂಬ ಧ್ಯಾನರೂಪವಾದ | **ಮಹಿಮ್ನಾ**—ಮಹಿಮೆಯಿಂದ | **ತತ್**—ಕಾರ್ಯರೂಪವಾದ ಜಗತ್ತಾಗಿ | **ಅಜಾಯತ**—ಉತ್ಪನ್ನವಾಯಿತು.

|| ಭಾವಾರ್ಥ ||

ಎಲ್ಲಕ್ಕಿಂತಲೂ ಮೊದಲು ಎಂದರೆ ಸೃಷ್ಟಿಯ ಆರಂಭದೆಶೆಯಲ್ಲಿ ಏನೊಂದನ್ನೂ ತಿಳಿಯಲು ಸಾಧ್ಯವಾಗದ ಅಂಧಕಾರದಿಂದ ವ್ಯಾಪ್ತವಾಗಿ ಕವಿದಿರುವ ಕತ್ತಲೆಯು ಎಲ್ಲೆಲ್ಲಿಯೂ ವ್ಯಾಪಿಸಿದ್ದಿತು. ಈಗ ಕಾಣುವ ಸಮಸ್ತಜಗತ್ತೂ ಈಗಿರುವಂತೆ ಇರದೆ ಎಲ್ಲವೂ ಉದಕಮಯವಾಗಿದ್ದಿತು. ಆ ನಾ ಉದಕದಂತೆ ನಿಬಿಡವಾದ ಅಂಧಕಾರದಿಂದ ವ್ಯಾಪಿಸಿತ್ತು. ಯಾವ ಆಧಾರವೂ ಆವರಣವೂ ಇಲ್ಲದ ಮತ್ತು ಕಾರ್ಯಕಾರಗಳೆಂಬ ಪ್ರತ್ಯೇಕವಿಭಾಗಗಳಿಲ್ಲದೆ ಒಂದೇ ಆಗಿದ್ದ ಅವ್ಯಕ್ತಸ್ವರೂಪವು ತನ್ನ ಸೃಷ್ಟಿಮಾಡಬೇಕೆಂಬ ಧ್ಯಾನರೂಪವಾದ ಮಹಿಮೆಯಿಂದ ಕಾರ್ಯರೂಪವಾದ ಜಗತ್ತಾಗಿ ಪರಿಣಮಿಸಿತು

## English Translation.

There was darkness covered by darkness in the beginning, all this (world) was undistinguishable water; that empty united (world) which was covered by a mere nothing, was produced through the power of austerity.

|| ವಿಶೇಷವಿಷಯಗಳು ||

ಪೂರ್ವದಲ್ಲಿ ಈ ಜಗತ್ತಿರಲಿಲ್ಲವೆಂದು ಹೇಳಿದೆಯಷ್ಟೆ. ಹಾಗಾದರೆ ಈ ಜಗತ್ತಿನ ಉತ್ಪತ್ತಿಯು ಹೇಗಾಯಿತು ? ಒಂದು ವಸ್ತುವನ್ನು ನಿರ್ಮಿಸುವಾಗ ಅದನ್ನು ನಿರ್ಮಿಸುವ ಕರ್ತೃವು ಬೇಕು, ಅದಕ್ಕೆ ಬೇಕಾದ ಮೂಲವಸ್ತುವು ಬೇಕು. ಅದಕ್ಕೆ ಕಾರಣವೂ ಬೇಕು. ಹೇಗೆಂದರೆ ಒಂದು ಮಡಕೆಯನ್ನು ನಿರ್ಮಿಸಬೇಕಾದರೆ ಅದನ್ನು ನಿರ್ಮಿಸಬಲ್ಲ ಕುಂಬಾರನಿರಬೇಕು ಅವನೇ ಕರ್ತೃವು. ಅದಕ್ಕೆ ಬೇಕಾದ ಮೂಲವಸ್ತುವೆಂದರೆ ಮಣ್ಣು ಬೇಕು ಕಾರಣವು ಬೇಕು. ಹೀಗಿರುವಾಗ ಜಗನ್ನಿರ್ಮಾಣಕಾರ್ಯಕ್ಕೆ ಕರ್ತೃವು ಯಾರೆಂದರೆ ಅವ್ಯಕ್ತಸ್ವರೂಪನಾದ ಬ್ರಹ್ಮವೇ ಕರ್ತೃವು. ಜಗನ್ನಿರ್ಮಾಣಕ್ಕೆ ಮೂಲವಸ್ತುವು ಯಾವುದು ? ಮೂಲವಸ್ತುವೆಂದರೆ ನಿರ್ಮಿತವಸ್ತುವಿಗಿಂತ (finished artiele) ಪೂರ್ವದಲ್ಲಿದ್ದ ಬೇರೆ ಪದಾರ್ಥವು (raw material) ಇಲ್ಲಿ ಪರಬ್ರಹ್ಮವು ಮಾತ್ರವಿದ್ದು ಬೇರ ವಸ್ತುವೇ ಇಲ್ಲದಿರುವುದರಿಂದ ಕರ್ತೃವಾದ ಬ್ರಹ್ಮವು ಯಾವ ಪದಾರ್ಥದ ಸಹಾಯದಿಂದ ಜಗತ್ತನ್ನು ನಿರ್ಮಿಸುವನು ? ಎಂದರೆ ಬ್ರಹ್ಮನಿಗೆ ಜಗತ್ತನ್ನು ಸೃಷ್ಟಿಮಾಡುವುದಕ್ಕೆ ಮೂಲವಸ್ತುವಿನ (raw meterial) ಆವಶ್ಯಕತೆಇಲ್ಲ.

ಅದು ಅವನಿಗೆ ಬೇಕಾಗಿಯೂ ಇಲ್ಲ. ಅವ್ಯಕ್ತಸ್ವರೂಪದಿಂದಿರುವ ಬ್ರಹ್ಮನೇ ಸದ್ರೂಪವಾಗಿ ಎಂದರೆ ಜಗದಾದಿವಸ್ತುಗಳಾಗಿ ಪರಿಣಮಿಸುವನು. ಎಂದರೆ ಬ್ರಹ್ಮನು ಬೇರೆ ಅಲ್ಲ, ಸದ್ರೂಪಗಳಾದ ಜಗದಾದಿಗಳು ಬೇರೆ ಅಲ್ಲ. ಆದ್ದರಿಂದ ಅಸತ್ತಿನ ಸ್ವಲ್ಪಭಾಗವೇ ಸತ್ತಾಗಿ ಪರಿಣಮಿಸಿತು ಎಂದು ತಿಳಿಯಬೇಕು.

**ತಮ ಆಸೀತ್ ತಮಸಾ ಗೂಳ್ಹಂ ಅಗ್ರೇ ಅಪ್ರಕೇತಂ**—ಸೃಷ್ಟಿಗೆ ಪೂರ್ವದಲ್ಲಿ ಜಗದಾದಿಗಳೊಂದೂ ಇರಲಿಲ್ಲವಷ್ಟೆ. ಜಗತ್ತಿರಲಿಲ್ಲದಿದ್ದಮಾತ್ರಕ್ಕೆ ಅದಕ್ಕೆ ಮೂಲಕಾರಣವಾದ ಸತ್ ಇರಲಿಲ್ಲವೆಂದರ್ಥವಲ್ಲ. ಅಸತ್ ಸತ್ತಾಗಿ ಪರಿಣಮಿಸಿ ಅದೇ ಜಗದಾದಿಗಳಿಗೆ ಮೂಲಕಾರಣವಾಯಿತು. ಹೀಗಾಗುವುದಕ್ಕೆ ಮೊದಲು ಪ್ರಲಯದೆಶೆಯಲ್ಲಿ ಸರ್ವವೂ ಅಂಧಕಾರಮಯವಾಗಿದ್ದಿತು. ಏನನ್ನೂ ನೋಡಿ ತಿಳಿಯಲು ಸಾಧ್ಯವಾಗುತ್ತಿರಲಿಲ್ಲ. ಸಮುದ್ರದಲ್ಲಿ ನೀರು ಎಲ್ಲೆಲ್ಲಿಯೂ ವ್ಯಾಪಿಸಿರುವಂತೆ ಸರ್ವವೂ ಜಲಮಯವಾಗಿದ್ದಿತು ಅಥವಾ ಜಲದಂತೆ ನಿಬಿಡವಾದ ತಮಸ್ಸಿನಿಂದ ಆವೃತವಾಗಿದ್ದಿತು. ಈ ಸ್ಥಿತಿಯನ್ನೇ ಶ್ರುತ್ಯಾದಿಗಳಲ್ಲಿ—**ಆಪೋ ವಾ ಇದಮಗ್ರೇ ಸಲಿಲಮಾಸೀತ್** ಇತ್ಯಾದಿ ವಾಕ್ಯಗಳಿಂದ ವಿವರಿಸಲಾಗಿದೆ. ಇಲ್ಲಿ ಭಾಷ್ಯಕಾರರು ತಮಃಶಬ್ದಕ್ಕೆ ಬೇರೆ ವಿಧವಾದ ಅರ್ಥವನ್ನು ಹೇಳಿದ್ದಾರೆ—**ಆತ್ಮತತ್ತ್ವಸ್ಯಾವರಕತ್ವಾನ್ಮಾಯಾಪರಸಂಜ್ಞಂ ಭಾವರೂಪಾಜ್ಞಾನಮತ್ರ ತಮ ಇತ್ಯುಚ್ಯತೇ । ತೇನ ತಮಸಾ ನಿಗೂಢಂ ಸಂವೃತಂ ಕಾರಣಭೂತೇನ ತೇನಾಚ್ಛಾದಿತಂ ಭವತಿ । ಆಚ್ಛಾದಕಾತ್ ತಸ್ಮಾತ್ತಮಸೋ ನಾಮರೂಪಾಭ್ಯಾಂ ಯದಾವಿರ್ಭವನಂ ತದೇವ ತಸ್ಯ ಜನ್ಮೇತ್ಯುಚ್ಯತೇ। ಏತೇನ ಕಾರಣಾವಸ್ಥಾಯಾಮಸದೇವ ಕಾರ್ಯಮುತ್ಪದ್ಯತೇ ಇತ್ಯಸದ್ವಾದಿನೋಽಸತ್ಕಾರ್ಯವಾದಿನೋ ಯೇ ಮನ್ಯಂತೇ ತೇ ಪ್ರತ್ಯಾಖ್ಯಾತಾಃ ।** ಇಲ್ಲಿ ಆತ್ಮತತ್ತ್ವವೆಂಬ ಪರಬ್ರಹ್ಮಸ್ವರೂಪವನ್ನು ತಿಳಿಯದಂತೆ ಆತ್ಮನನ್ನು ಆವರಿಸಿರುವ ಮಾಯಾ ಎಂಬುದೇ ಎಂದರೆ ಅಜ್ಞಾನವೇ ಆವರಣವೆಂದು ಹೇಳಲ್ಪಡುವುದು. ಎಂದರೆ ಅಜ್ಞಾನವೆಂಬ ಆವರಣವೇ ತಮಸ್ಸು. ಆಚ್ಛಾದಿತವಾದ ಆ ಅಜ್ಞಾನವೆಂಬ ತಮಸ್ಸಿನಿಂದ ಆವಿರ್ಭೂತವಾಗುವ ನಾಮರೂಪಗಳಿಂದ ಕೂಡಿದ ವಸ್ತುವೇ ಜಗದುತ್ಪತ್ತಿಯೆಂದು ಹೇಳಲ್ಪಡುವುದು. ಎಂದರೆ ಕಾರಣಾವಸ್ಥೆಯಲ್ಲಿರುವ ಅಸತ್ತೇ ಕಾರ್ಯರೂಪವನ್ನು ಹೊಂದುವುದು ಎಂದು ಅಸದ್ವಾದಿಗಳ ಮತವು. ಆದರೆ ಇದು **ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ** ಮೊದಲು ಅಸತ್ ಮಾತ್ರವಿದ್ದಿತು ಅನಂತರ ಅದೇ ಸತ್ತಾಗಿ ಉತ್ಪನ್ನವಾಯಿತು ಇತ್ಯಾದಿಶ್ರುತಿವಾಕ್ಯಗಳಿಗೆ ವಿರುದ್ಧವಾಗಿರುವುದು. ಮನುವೂ ಸಹ—**ಆಸೀದಿದಂ ತಮೋಭೂತಮಪ್ರಜ್ಞಾನಮಲಕ್ಷಣಂ । ಅಪ್ರತರ್ಕ್ಯಮನಿರ್ದೇಶ್ಯಂ ಪ್ರಸುಪ್ತಮಿವ ಸರ್ವತಃ** (ಮನು. ೧–೫) ಎಂದು ಅಸತ್ತಿನ ಸ್ಥಿತಿಯನ್ನು ವರ್ಣಿಸಿದಾನೆ. ಇದು ತಮಸ್ಸಿನಂತೆ ಎಲ್ಲೆಲ್ಲಿಯೂ ವ್ಯಾಪಿಸಿದೆ. ಇದನ್ನು ತಿಳಿಯುವುದಾಗಲಿ, ವಿಮರ್ಶಿಸುವುದಾಗಲಿ, ಇದು ಹೀಗೆಯೇ ಇದೆ ಎಂದು ವರ್ಣಿಸುವುದಾಗಲಿ ಸಾಧ್ಯವಿಲ್ಲ. ಯಾವ ಚಲನವಲನೆಯೂ, ಯಾವವಿಧವ್ಯಾಪಾರವೂ ಇಲ್ಲದೆ ನಿದ್ರಾವಸ್ಥೆಯಲ್ಲಿರುವ ಪುರುಷನು ಚಲನರಹಿತನಾಗಿ ನಿದ್ರಿಸುವಂತೆ ಇದು ಇರುತ್ತದೆ. ಇದನ್ನು ವಾಕ್ಯಗಳಿಂದ ವರ್ಣಿಸಲು ಸಾಧ್ಯವಿಲ್ಲ ಎಂದು ಇದರ ಅಭಿಪ್ರಾಯವು.

**ಸಲಿಲಂ ಸರ್ವಂ ಆ ಇದಂ**—ಇಲ್ಲಿ ಭಾಷ್ಯಕಾರರು ಈ ವಾಕ್ಯಕ್ಕೆ ಲುಪ್ತೋಪಮಾರ್ಥವನ್ನು ಹೇಳಿದ್ದಾರೆ. ಸಲಿಲವೆಂದರೆ ನೀರು. **ಯಥಾ ಕ್ಷೀರೇಣಾವಿಭಾಗಾಪನ್ನಂ ನೀರಂ ದುರ್ವಿಜ್ಞಾನಂ ತಥಾ ತಮಸಾವಿಭಾಗಾಪನ್ನಂ ಜಗನ್ನ ಶಕ್ಯವಿಜ್ಞಾನಮಿತ್ಯರ್ಥಃ ।** ಹಾಲುಮಿಶ್ರಿತವಾದ ನೀರಿನಲ್ಲಿ ಹಾಲು ಯಾವುದು, ನೀರು ಯಾವುದು ಎಂದು

ಪ್ರತ್ಯೇಕವಾಡಿ ಹೇಳಲಾಗುವುದಿಲ್ಲವೋ ಅದರಂತೆ ತಮಸ್ಸಿನಲ್ಲಿ ಎಂದರೆ ಅವ್ಯಕ್ತಸ್ವರೂಪದ ತಮಸ್ಸಿನಲ್ಲಿ ಬೀಜಭೂತ ವಾಗಿರುವ ಜಗತ್ತು ಯಾವುದು ಎಂದು ನಿರ್ದೇಶಿಸಿ ಹೇಳುವುದಕ್ಕಾಗುವುದಿಲ್ಲ

**ತುಚ್ಛ್ಯೇನ ಆಭು ಅಪಿಹಿತಂ ಯತ್ ಆಸೀತ್ ತಪಸಃ ತತ್ ಮಹಿನಾ ಅಜಾಯತ ಏಕಂ**— ಇಲ್ಲಿ ತುಚ್ಛಶಬ್ದಕ್ಕೆ ಏನೂ ಇಲ್ಲದಿರುವ ಅಭಾವ (nothing) ಎಂಬ ಅರ್ಥವು ಸೂಚಿತವಾಗಿದೆ. ಇಂತಹ ಅಭಾವ (ಯಾವ ವಸ್ತುವೂ ಇಲ್ಲದ) ದಿಂದ ಆವೃತವಾದ ಯಾವ ಬ್ರಹ್ಮವಸ್ತುಮಾತ್ರ ಇದ್ದಿತೋ, ಬೇರೆ ಯಾವುದೂ ಇರಲಿಲ್ಲವೋ ಆ ಒಂದೇ ಒಂದಾದ ಪರಬ್ರಹ್ಮದ ಧ್ಯಾನರೂಪವಾದ ಮಹಿಮೆಯಿಂದಲೇ, ಕಾರಣದಿಂದ ಬೇರೆಯಾದ ಕಾರ್ಯಸ್ವರೂಪವಾದ ಜಗತ್ತು ಸೃಷ್ಟಿಸಲ್ಪಟ್ಟಿತು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

**ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂ ಯದಾಸೀತ್ ।**
**ಸತೋ ಬಂಧುಮಸತಿ ನಿರವಿಂದನ್ಹೃದಿ ಪ್ರತೀಷ್ಯಾ ಕವಯೋ ಮನೀಷಾ ॥**

॥ ಪದಪಾಠಃ ॥

ಕಾಮಃ । ತತ್ । ಅಗ್ರೇ । ಸಂ । ಅವರ್ತತ । ಅಧಿ । ಮನಸಃ । ರೇತಃ । ಪ್ರಥಮಂ । ಯತ್ । ಆಸೀತ್ ।
ಸತಃ । ಬಂಧುಂ । ಅಸತಿ । ನಿಃ । ಅವಿಂದನ್ । ಹೃದಿ । ಪ್ರತಿಽಇಷ್ಯ । ಕವಯಃ । ಮನೀಷಾ ॥ ೪ ॥

॥ಸಾಯಣಭಾಷ್ಯಂ ॥

ನನೂಕ್ತರೀತ್ಯಾ ಯದೀಶ್ವರಸ್ಯ ಪರ್ಯಾಲೋಚನಂ ಜಗತಃ ಪುನರುತ್ಪತ್ತೌ ಕಾರಣಂ ತದೇವ ಕಿಂನಿಬಂಧನಮಿತ್ಯತ ಆಹ ಕಾಮಸ್ತದಗ್ರ ಇತಿ । ಅಗ್ರೇಽಸ್ಯ ವಿಕಾರಜಾತಸ್ಯ ಸೃಷ್ಟೇಃ ಪ್ರಾಗವಸ್ಥಾಯಾಂ ಪರಮೇಶ್ವರಸ್ಯ ಮನಸಿ ಕಾಮಃ ಸಮವರ್ತತ । ಸಮ್ಯಗಜಾಯತ । ಸಿಸೃಕ್ಷಾ ಜಾತೇತ್ಯರ್ಥಃ । ಈಶ್ವರಸ್ಯ ಸಿಸೃಕ್ಷಾ ವಾ ಕಿಂಹೇತುಕೇತ್ಯತ ಆಹ ಮನಸ ಇತಿ । ಮನಸೋಽಂತಃಕರಣಸ್ಯ ಸಂಬಂಧಿ ವಾಸನಾಶೇಷೇಣ ಮಾಯಾಯಾಂ ವಿಲೀನೇಽಂತಃಕರಣೇ ಸಮವೇತಂ । ಸಾಮಾನ್ಯಾಪೇಕ್ಷಮೇಕವಚನಂ । ಸರ್ವಪ್ರಾಣ್ಯಂ-ತಃಕರಣೇಷು ಸಮವೇತಮಿತ್ಯರ್ಥಃ । ಏತೇನಾತ್ಮನೋ ಗುಣಾಧಾರತ್ವಂ ಪ್ರತ್ಯಾಖ್ಯಾತಂ । ತಾದೃಶಂ ರೇತೋ ಭಾವಿನಃ ಪ್ರಪಂಚಸ್ಯ ಬೀಜಭೂತಂ ಪ್ರಥಮಮತೀತೇ ಕಲ್ಪೇ ಪ್ರಾಣಿಭಿಃ ಕೃತಂ ಪುಣ್ಯಾತ್ಮಕಂ ಕರ್ಮ ಯದ್ಯತಃ ಕಾರಣಾತ್ಸೃಷ್ಟಿಸಮಯ ಆಸೀತ್ ಅಭವತ್ । ಭೂಪ್ನು ವರ್ಧಿಷ್ಣ್ವಜಾಯತ ಪರಿಪಕ್ವಂ ಸತ್ಫಲೋನ್ಮುಖಮಾಸೀದಿತ್ಯರ್ಥಃ । ತತ್ತಸ್ಮಾತ್ ಹೇತೋಃ ಫಲಪ್ರದಸ್ಯ ಸರ್ವಸಾಕ್ಷಿಣಃ ಕರ್ಮಾಧ್ಯಕ್ಷಸ್ಯ ಪರಮೇಶ್ವರಸ್ಯ ಮನಸಿ ಸಿಸೃಕ್ಷಾಜಾಯತೇತ್ಯರ್ಥಃ । ತಸ್ಯಾಂ ಚ ಜಾತಾಯಾಂ ಸ್ರಷ್ಟವ್ಯಂ ಪರ್ಯಾ-ಲೋಚ್ಯ ತತಃ ಸರ್ವಂ ಜಗತ್ಸೃಜತಿ । ತಥಾ ಚಾಮ್ನಾಯತೇ । ಸೋಽಕಾಮಯತ ಬಹುಃ ಸ್ಯಾಂ ಪ್ರಜಾಯೇಯೇತಿ ಸ ತಪೋಽತಪ್ಯತ ಸ ತಪಸ್ತಪ್ತ್ವೇದಂ ಸರ್ವಮಸೃಜತ ಯದಿದಂ ಕಿಂ ಚ। ತೈ.ಆ. ೮-೬।

ಇತಿ ಶ್ರುತ್ಯಾತ್ಮನೇತ್ಯಮವಗಮಿತೇಽರ್ಥೇ ವಿದ್ವದನುಭವಮಪ್ಯನುಗ್ರಾಹಕತ್ವೇನ ಪ್ರಮಾಣಯತಿ ಸತ ಇತಿ । ಸತಃ ಸತ್ತ್ವೇನೇದಾನೀಮನುಭೂಯಮಾನಸ್ಯ ಸರ್ವಸ್ಯ ಜಗತೋ ಬಂಧುಂ ಬಂಧಕಂ ಹೇತು-ಭೂತಂ ಕಲ್ಪಾಂತರೇ ಪ್ರಾಣ್ಯನುಷ್ಠಿತಂ ಕರ್ಮಸಮೂಹಂ ಕವಯಃ ಕ್ರಾಂತದರ್ಶನಾ ಅತೀತಾನಾಗತವ-ರ್ತಮಾನಾಭಿಜ್ಞಾ ಯೋಗಿನೋ ಹೃದಿ ಹೃದಯೇ ನಿರುದ್ಧಯಾ ಮನೀಷಾ ಮನೀಷಯಾ ಬುದ್ಧ್ಯಾ ॥ ಸುಪಾಂ ಸುಲುಗಿತಿ ತೃತೀಯಾಯಾ ಲುಕ್ ॥ ಪ್ರತೀಷ್ಯ ವಿಚಾರ್ಯ ॥ ಅನ್ಯೇಷಾಮಪೀತಿ ಸಾಂಹಿತಿಕೋ ದೀರ್ಘಃ ॥ ಅಸತಿ ಸದ್ವಿಲಕ್ಷಣೇಽವ್ಯಾಕೃತೇ ಕಾರಣೇ ನಿರವಿಂದನ್ । ನಿಷ್ಕೃಷ್ಯಾಲಭಂತ । ವಿವಿಚ್ಯಾ-ಜಾನನ್ನಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಮನಸಃ**—ಮನಸ್ಸಿನ । **ರೇತಃ**—ಪ್ರಪಂಚಸೃಷ್ಟಿಗೆ ಬೀಜಭೂತವಾದ । **ಪ್ರಥಮಂ**—ಹಿಂದಿನ ಕಲ್ಪ ದಲ್ಲಿ ಪ್ರಾಣಿಗಳಿಂದ ಆಚರಿಸಲ್ಪಟ್ಟ ಕರ್ಮವು । **ಯತ್**—ಯಾವ ಕಾರಣದಿಂದ । **ಆಸೀತ್**—ಇದ್ದಿತೋ । **ತತ್**—ಆ ಕಾರಣದಿಂದ । **ಅಗ್ರೇ**—ಜಗತ್ಸೃಷ್ಟಿಗೆ ಪೂರ್ವದಲ್ಲಿ ಪರಮೇಶ್ವರನ ಮನಸ್ಸಿನಲ್ಲಿ । **ಕಾಮಃ**—ಸೃಷ್ಟಿ ಮಾಡಬೇಕೆಂಬ ಅಪೇಕ್ಷೆಯು । **ಸಂ ಅಧಿ ಅವರ್ತತ**—ಉಂಟಾಯಿತು । **ಸತಃ**—ಸತ್ ವಿಕಾರಭೂತವಾದ ಸಮಸ್ತ ಜಗತ್ತಿಗೆ । **ಬಂಧುಂ**—ಬಂಧುಭೂತ ಅಥವಾ ಬಂಧಕವಾದ ಪ್ರಾಣಿಗಳ ಕರ್ಮಸಮೂಹವನ್ನು । **ಕವಯಃ**—ಕ್ರಾಂತದರ್ಶಿಗಳಾದ ಋಷಿಗಳು । **ಹೃದಿ**—ತಮ್ಮ ಹೃದಯದಲ್ಲಿ । **ಮನೀಷಾ**—ಬುದ್ಧಿಯಿಂದ । **ಪ್ರತೀಷ್ಯ**—ವಿಚಾರಮಾಡಿ । **ಅಸತಿ**—ಅವ್ಯಕ್ತಸ್ವರೂಪದಲ್ಲಿ ಬೀಜಭೂತವಾಗಿರುವುದನ್ನು । **ನಿರವಿಂದನ್**—ಕಂಡು ಕೊಂಡರು.

॥ ಭಾವಾರ್ಥ ॥

ಹಿಂದಿನ ಸೃಷ್ಟಿಯಲ್ಲಿ ಪ್ರಾಣಿಗಳಿಂದ ಆಚರಿಸಲ್ಪಟ್ಟ ಪಾಪ ಪುಣ್ಯಾದಿ ಕರ್ಮಗಳು ಈಗಿನ ಸೃಷ್ಟಿಗೆ ಬೀಜ ಭೂತವಾಗಿರುವುದೆಂಬ ವಿಷಯವು ಪರಮೇಶ್ವರನ ಮನಸ್ಸಿನಲ್ಲಿ ಅಂಕುರಿಸಿದಾಗ ಜಗತ್ಸೃಷ್ಟಿಗೆ ಪೂರ್ವದಲ್ಲಿ ಜಗತ್ತನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯು ಪರಮೇಶ್ವರನ ಮನಸ್ಸಿನಲ್ಲಿ ಉಂಟಾಯಿತು. ಸತ್‌ವಸ್ತುವಿನ ವಿಕಾರವಾದ ಸಮಸ್ತ ಜಗತ್ತುಗಳಿಗೂ ಬಂಧಕವಾದ ಪ್ರಾಣಿಗಳ ಕರ್ಮಸಮೂಹವು ಅವ್ಯಕ್ತಸ್ವರೂಪದಲ್ಲಿ ಬೀಜಭೂತವಾಗಿ ನೆಲಸಿರುವು ದೆಂಬ ವಿಷಯವನ್ನು ಪ್ರಾಜ್ಞರಾದ ಋಷಿಗಳು ಅಥವ ಯೋಗಿಗಳು ತಮ್ಮ ಮನಸ್ಸಿನಲ್ಲಿ ಬುದ್ಧಿಯಿಂದ ವಿಚಾರ ಮಾಡಿ ತಿಳಿದುಕೊಂಡರು (ತಿಳಿದು ಕೊಳ್ಳುತ್ತಾರೆ)

## English Translation.

In the beginnig there was desire, which was the first seed of mind; sages having meditated in their hearts have discovered by their wisdom the connexion of the existent with the non-existent.

॥ ವಿಶೇಷವಿಷಯಗಳು ॥

ಪರಬ್ರಹ್ಮನ ಮನಸ್ಸಿನಲ್ಲಿ ಸೃಷ್ಟಿಮಾಡಬೇಕೆಂಬ ಅಪೇಕ್ಷೆಯೇ ಜಗತ್ಸೃಷ್ಟಿಗೆ ಕಾರಣವಾಯಿತೆಂಬುವುದನ್ನು ಪ್ರಕೃತ ಋಕ್ಕಿನಲ್ಲಿ ವಿವರಿಸಲಾಗಿದೆ.

**ಕಾಮಃ ತತ್ ಅಗ್ರೇ ಸಂ ಅವರ್ತತ ಅಧಿ**— ಪ್ರಪಂಚಸೃಷ್ಟಿಗೆ ಪೂರ್ವದಲ್ಲಿ ಪರಮೇಶ್ವರನ ಮನಸ್ಸಿನಲ್ಲಿ ಪ್ರಪಂಚವನ್ನು ಸೃಷ್ಟಿಮಾಡಬೇಕೆಂಬ ಅಪೇಕ್ಷೆಯು ಮೊದಲು ಉತ್ಪನ್ನವಾಯಿತು. ಏತಕ್ಕಾಯಿತು ಎಂದರೆ ಅದನ್ನು ಮುಂದಿನ ಪಾದದಲ್ಲಿ ವಿವರಿಸಿರುವರು.

**ಮನಸಃ ರೇತಃ ಪ್ರಥಮಂ ಯತ್ ಆಸೀತ್**—ಇಲ್ಲಿ **ಮನಸಃ ರೇತಃ** ಎಂಬ ಶಬ್ದಗಳಿಗೆ ಅರ್ಥವೇನೆಂದರೆ, ಅಪೇಕ್ಷೆಯು ಮನಸ್ಸಿನಲ್ಲಿ ಹುಟ್ಟುವುದು. ಯಾವುದಾದರೂ ಒಂದು ಕೆಲಸವನ್ನು ಮಾಡಬೇಕಾದರೆ ಅದನ್ನು ಮಾಡಬೇಕೆಂಬ ಇಚ್ಛೆಯು ಮೊದಲು ಮನಸ್ಸಿನಲ್ಲಿ ಹೊಳೆಯುವುದು ಎಂದರೆ ಉಂಟಾಗುವುದು. ಗಿಡವು ಹುಟ್ಟುವುದಕ್ಕೆ ಬೀಜವು ಹೇಗೆ ಅವಶ್ಯಕವೋ ಅದರಂತೆ ಕಾರ್ಯವು ನೆರವೇರುವುದಕ್ಕೆ ಕಾರಣವು ಅಥವಾ ಬೀಜವು ಅವಶ್ಯಕವು. ಅದರಂತೆ ಪರಮಾತ್ಮನು ಸೃಷ್ಟಿಮಾಡಬೇಕಾಗಿರುವಾಗ ಸೃಷ್ಟಿಮಾಡಬೇಕೆಂಬ ಇಚ್ಛೆಯೇ ಮೊದಲು ಅವನ ಮನಸ್ಸಿನಲ್ಲಿ ಹುಟ್ಟಿತು. ಆ ಇಚ್ಛೆಯೇ ಜಗತ್ಸೃಷ್ಟಿಗೆ ಕಾರಣವು. ಆದರೆ ಆ ಇಚ್ಛೆಯು ಏತಕ್ಕೆ ಉಂಟಾಯಿತು ? ಎಂದರೆ **ಪ್ರಥಮಂ ಯತ್ ಆಸೀತ್**— ಪೂರ್ವಕಲ್ಪದಲ್ಲಿ ಜಗತ್ಸೃಷ್ಟಿಯಾಗಿದ್ದಾಗ ಅದರಲ್ಲಿದ್ದ ಪ್ರಾಣಿಗಳು ತಾವು ಮಾಡಿದ ಪಾಪಪುಣ್ಯಾದಿ ಕರ್ಮಗಳನ್ನು ಅಥವ ಅವುಗಳ ಫಲಗಳನ್ನು ನಿಶ್ಶೇಷವಾಗಿ ಅನುಭವಿಸಲಾಗದೆ ಅಷ್ಟರಲ್ಲಿಯೇ ಜಗತ್ಸಂಹಾರವಾದುದರಿಂದ ಆ ಕರ್ಮಫಲಗಳು ಅನುಭವಿಸಲ್ಪಡದೆ ಹಾಗೆಯೇ ಉಳಿಯಬೇಕಾಯಿತು. ಆದ್ದರಿಂದ ಅವುಗಳನ್ನು ಪ್ರಾಣಿಗಳು ಈ ಸೃಷ್ಟಿಯಲ್ಲಿ ಅನುಭವಿಸಲಿ ಎಂಬ ಉದ್ದೇಶದಿಂದ ಜಗತ್ಸೃಷ್ಟಿಮಾಡಬೇಕೆಂಬ ಅಪೇಕ್ಷೆಯು ಪರಮಾತ್ಮನ ಮನಸ್ಸಿನಲ್ಲಿ ಉಂಟಾಯಿತು ಎಂದು ಇಲ್ಲಿ ಹೇಳಿದೆ. ಈ ವಿಷಯವನ್ನು– ಸೋಽಕಾಮಯತ |ಬಹು ಸ್ಯಾಂ ಪ್ರಜಾಯೇಯೇತಿ | ಸ ತಪೋಽತಪ್ಯತ |ಸ ತಪಸ್ತಪ್ತ್ವಾ | ಇದಗ್ಂ ಸರ್ವಮಸೃಜತ | ಯದಿದಂ ಕಿಂಚ | ಎಂಬ ಶ್ರುತಿವಾಕ್ಯವು (ತೈ. ಆ. ೮-೬) ಸಮರ್ಥಿಸುವುದು.

**ಸತಃ ಬಂಧುಂ ಅಸತಿ ನಿಃ ಅವಿಂದನ್ ಹೃದಿ ಪ್ರತೀಷ್ಯ ಕವಯಃ ಮನೀಷಾ**—ಮೇಲಿನ ವಾಕ್ಯದಲ್ಲಿ ಹಿಂದಿನ ಕಲ್ಪದ ಪ್ರಾಣಿಗಳ ಕರ್ಮಸಮೂಹವೇ ಈಗ ಮಾಡಲ್ಪಡುವ ಜಗತ್ಸೃಷ್ಟಿಗೆ ಕಾರಣವೆಂದು ಹೇಳಿದೆಯಷ್ಟೆ ? ಅದು ಹೇಗೆ ? ಎಂದರೆ ಈ ವಾಕ್ಯದಲ್ಲಿ ಆ ವಿಷಯವು ತಿಳಿದಬಗೆಯನ್ನು ವಿವರಿಸುವರು. ಅತೀತಾನಾಗತವರ್ತಮಾನ ಕಾಲಗಳ ವಿಷಯಗಳನ್ನು ತಿಳಿಯಬಲ್ಲ ಯೋಗಿಗಳು, ಋಷಿಗಳು ಮೊದಲಾದವರು ತಮ್ಮ ದಿವ್ಯದೃಷ್ಟಿಯಿಂದ ಎಂದರೆ ಮನಸ್ಸಿನಲ್ಲಿ ಧ್ಯಾನಪೂರ್ವಕವಾಗಿಯೂ, ವಿಮರ್ಶೆಯಿಂದಲೂ ಚೆನ್ನಾಗಿ ವಿಚಾರಮಾಡಿ ಒಂದು ಮುಖ್ಯವಾದ ವಿಷಯವನ್ನು ಅರಿತುಕೊಂಡರು. ಆ ಮುಖ್ಯವಿಷಯವೇನು ಎಂದರೆ ಹಿಂದೆ ಕಲ್ಪದಲ್ಲಿದ್ದ ಸದಾತ್ಮಕವಾದ ಈ ಸಮಸ್ತ ಜಗತ್ತುಗಳೂ, ಅವುಗಳಲ್ಲಿರುವ ಪ್ರಾಣಿಗಳೂ, ಅವುಗಳ ಪಾಪಪುಣ್ಯರೂಪವಾದ ಕರ್ಮಗಳೂ, ಇವೆಲ್ಲವೂ ಅವ್ಯಕ್ತರೂಪವಾದ ಅಸತ್ತಿನಲ್ಲಿ (ಬ್ರಹ್ಮದಲ್ಲಿ) ಬೀಜಭೂತವಾಗಿ (ಕಾರಣರೂಪವಾಗಿ) ಅಡಗಿರುವುದೆಂಬುದನ್ನು ತಮ್ಮ ವಿಮರ್ಶಾತ್ಮಕವಾದ ಬುದ್ಧಿಯಿಂದ ತಿಳಿದುಕೊಂಡರು. ಎಂದರೆ ಅವ್ಯಕ್ತಸ್ವರೂಪವಾದ ಅಸತ್ತಿನಲ್ಲಿ ಪ್ರಪಂಚಗಳಿಗೆ ಬೀಜಭೂತವಾದ ಕಾರಣವು ಲೀನವಾಗಿರುವುದು. ಆದ್ದರಿಂದ ಸದಾತ್ಮಕವಾದ ಜಗತ್ತಿಗೂ ಅವ್ಯಕ್ತರೂಪದಿಂದಿರುವ ಅಸತ್ತಿಗೂ ಒಂದು ವಿಧ ಬಂಧಕವು ಇದ್ದಂತಾಯಿತು. ಎಂದರೆ ಅಸತ್ತಿನಿಂದಲೇ ಸತ್ ಆವಿರ್ಭಾವವಾಗುವುದರಿಂದ ಇವೆರಡಕ್ಕೆ ಪರಸ್ಪರ ಸಂಬಂಧವಿದೆಯೆಂದು ಇಲ್ಲಿ **ಸತಃ ಬಂಧುಃ ಅಸತಿ** ಎಂಬ ಶಬ್ದಗಳಿಂದ ವಿವರಿಸಲಾಗಿದೆ.

॥ ಸಂಹಿತಾಪಾಠಃ

ತಿರಶ್ಚೀನೋ ವಿತತೋ ರಶ್ಮಿರೇಷಾಮಧಃ ಸ್ವಿದಾಸೀ೩ ದುಪರಿ ಸ್ವಿದಾಸೀ೩ತ್।
ರೇತೋಧಾ ಆಸನ್ಮಹಿಮಾನ ಆಸನ್ತ್ಸ್ವಧಾ ಅವಸ್ತಾತ್ಪ್ರಯತಿಃ ಪರಸ್ತಾತ್ ॥

॥ ಪದಪಾಠಃ ॥

ತಿರಶ್ಚೀನಃ । ವಿಽತತಃ । ರಶ್ಮಿಃ । ಏಷಾಂ । ಅಧಃ । ಸ್ವಿತ್ । ಆಸೀ೩ತ್ । ಉಪರಿ । ಸ್ವಿತ್ । ಆಸೀ೩ತ್ ।
ರೇತಃಽಧಾಃ । ಆಸನ್ । ಮಹಿಮಾನಃ । ಆಸನ್ । ಸ್ವಧಾ । ಅವಸ್ತಾತ್ । ಪ್ರಽಯತಿಃ । ಪರಸ್ತಾತ್ ॥ ೫ ॥

॥ ಸಾಯಣಭಾಷ್ಯಂ ॥

ಏವಮವಿದ್ಯಾಕಾಮಕರ್ಮಾಣಿ ಸೃಷ್ಟೇರ್ಹೇತುತ್ವೇನೋಕ್ತಾನಿ । ಅಧುನಾ ತೇಷಾಂ ಸ್ವಕಾರ್ಯಜನನೇ ಶೈಘ್ರ್ಯಂ ಪ್ರತಿಪಾದ್ಯತೇ । ಯೇಯಂ ನಾಸದಾಸೀದಿತ್ಯವಿದ್ಯಾ ಪ್ರತಿಪಾದಿತಾ ಯಶ್ಚ ಕಾಮಸ್ತದಗ್ರ ಇತಿ ಕಾಮೋ ಮನಸೋ ರೇತಃ ಪ್ರಥಮಂ ಯದಾಸೀದಿತಿ ಯತ್ಕರ್ಮೈಷಾಮವಿದ್ಯಾಕಾಮಕರ್ಮಣಾಂ ವಿಯದಾದಿಭೂತಜಾತಾನಿ ಸೃಜತಾಂ ರಶ್ಮಿಃ ರಶ್ಮಿಸದೃಶೋ ಯಥಾ ಸೂರ್ಯರಶ್ಮಿರುದಯಾನಂತರಂ ನಿಮೇಷಮಾತ್ರೇಣ ಯುಗಪತ್ಸರ್ವಂ ಜಗದ್ವ್ಯಾಪ್ನೋತಿ ತಥಾ ಶೀಘ್ರಂ ಸರ್ವತ್ರ ವ್ಯಾಪ್ನುವನ್ ಯಃ ಕಾರ್ಯವರ್ಗೋ ವಿತತೋ ವಿಸ್ತೃತ ಆಸೀತ್ । ಸ್ವಿದಾಸೀದಿತಿ ವಕ್ಷ್ಯಮಾಣಮತ್ರಾಪಿ ಸಂಬಧ್ಯತೇ ॥ ವಿಚಾರ್ಯಮಾಣಾನಾಂ । ಪಾ. ೮-೨-೯೭ । ಇತಿ ಪ್ಲುತಃ। ತತ್ರೋದಾತ್ತ ಇತ್ಯನುವೃತ್ತೇಃ ಸ ಚೋದಾತ್ತಃ। ಸ್ವಿದಿತಿ ವಿತರ್ಕೇ ॥ ಸ ಕಾರ್ಯವರ್ಗಃ ಪ್ರಥಮತಃ ಕಿಂ ತಿರಶ್ಚೀನಸ್ತಿರ್ಯಗವಸ್ಥಿತೋ ಮಧ್ಯೇ ಸ್ಥಿತ ಆಸೀತ್ ಕಿಂವಾಧೋಽಧಸ್ತಾದಾಸೀತ್ । ಅಹೋಸ್ವಿದುಪರ್ಯುಪರಿಷ್ಟಾತ್ಕಿಮಾಸೀತ್ ॥ ಉಪರಿ ಸ್ವಿದಾಸೀದಿತಿ ಚ । ಪಾ. ೮-೨-೧೦೨ । ಇತ್ಯನುದಾತ್ತಃ ಪ್ಲುತಃ ॥ ಆತ್ಮನ ಆಕಾಶಃ ಸಂಭೂತ ಆಕಾಶಾದ್ವಾಯುರ್ವಾಯೋರಗ್ನಿಃ । ತೈ. ಆ. ೮-೧ । ಇತ್ಯಾದಿಕಯಾ ಪಂಚಮೀಶ್ರುತ್ಯಾ ತತ ಉದ್ಗಾತಾರಂ ತತೋ ಹೋತಾರಮಿತಿವತ್ಕ್ರಮಪ್ರತಿಪತ್ತಾ ಸತ್ಯಾಮಪಿ ವಿದ್ಯುತ್ಪ್ರಕಾಶವತ್ಸರ್ಗಸ್ಯ ಶೀಘ್ರವ್ಯಾಪನೇನ ತಸ್ಯ ಕ್ರಮಸ್ಯ ದುರ್ಲಕ್ಷಣತ್ವಾದೇತೇಷು ತ್ರಿಷು ಸ್ಥಾನೇಷು ಪ್ರಾಥಮ್ಯಂ ಕುತ್ರೇತಿ ವಿಚಾರ್ಯತೇ । ಏವಂ ನಾಮ ಶೀಘ್ರಂ ಸರ್ವತೋ ದಿಕ್ಷು ಸರ್ಗೋ ನಿಷ್ಪನ್ನ ಇತ್ಯರ್ಥಃ । ಏತದೇವ ವಿಭಜತೇ । ಸೃಷ್ಟೇಷು ಕಾರ್ಯೇಷು ಮಧ್ಯೇ ಕೇಚಿದ್ಭಾವಾ ರೇತೋಧಾ ರೇತಸೋ ಬೀಜಭೂತಸ್ಯ ಕರ್ಮಣೋ ವಿಧಾತಾರಃ ಕರ್ತಾರೋ ಭೋಕ್ತಾರಶ್ಚ ಜೀವಾ ಆಸನ್ ಅನ್ಯೇ ಭಾವಾ ಮಹಿಮಾನಃ ॥ ಸ್ವಾರ್ಥಿಕ ಇಮನಿಚ್ ॥ ಮಹಾಂತೋ ವಿಯದಾದಯೋ ಭೋಗ್ಯಾ ಆಸನ್ । ಏವಂ ಮಾಯಾಸಹಿತಃ ಪರಮೇಶ್ವರಃ ಸರ್ವಂ ಜಗತ್ಸೃಷ್ಟ್ವಾ ಸ್ವಯಂ ಚಾನುಪ್ರವಿಶ್ಯ ಭೋಕ್ತೃಭೋಗ್ಯಾದಿರೂಪೇಣ ವಿಭಾಗಂ ಕೃತವಾನಿತ್ಯರ್ಥಃ । ಅಯಮೇವಾರ್ಥಸ್ತೈತ್ತಿರೀಯಕೇ ತತ್ಸೃಷ್ಟ್ವಾ ತದೇವಾನುಪ್ರಾವಿಶತ್ । ತೈ. ಆ. ೮-೬ । ಇತ್ಯಾರಭ್ಯ

ಪ್ರತಿಪಾದ್ಯತೇ । ತತ್ರ ಚ ಭೋಕ್ತೃಭೋಗ್ಯಯೋರ್ಮಧ್ಯೇ ಸ್ವಧಾ । ಅನ್ನನಾಮೈತತ್ । ಭೋಗ್ಯಪ್ರಪಂಚೋಽವಸ್ತಾದವರೋ ನಿಕೃಷ್ಟ ಆಸೀತ್ । ಪ್ರಯತಿಃ ಪ್ರಯತಿತಾ ಭೋಕ್ತಾ ಪರಸ್ತಾತ್ಪರ ಉತ್ಕೃಷ್ಟ ಆಸೀತ್ । ಭೋಗ್ಯಪ್ರಪಂಚಂ ಭೋಕ್ತೃಪ್ರಪಂಚಸ್ಯ ಶೇಷಭೂತಂ ಕೃತವಾನಿತ್ಯರ್ಥಃ ॥ ವಿಭಾಷಾ ಪರಾವರಾಭ್ಯಾಂ । ಪಾ. ೫-೩-೨೯ । ಇತಿ ಪ್ರಥಮಾರ್ಥೇಽಸ್ತಾತಿಃ । ಅಸ್ತಾತಿ ಚ । ಪಾ. ೫-೩-೪೦ । ಇತ್ಯವರಶಬ್ದಸ್ಯಾವಾದೇಶಃ । ಅವಸ್ತಾದಿತಿ ಸಂಹಿತಾಯಾಮಿಷಾ ಅಷ್ಟಾದಿತ್ವಾತ್ಪ್ರಕೃತಿಭಾವಃ ॥

॥ ಪ್ರತಿಪದಾರ್ಥ ॥

**ಏಷಾಂ**—ಈ ಸೃಷ್ಟಿಕಾರ್ಯಗಳ ನಿರ್ವಹಣಕ್ಕಾಗಿ । **ರಶ್ಮಿಃ**—ಕಾರ್ಯೋನ್ಮುಖರೂಪವಾದ ರಶ್ಮಿಯು ಅಥವಾ ಅತಿಶೀಘ್ರವಾಗಿ ವ್ಯಾಪಿಸುವ ಕಾರ್ಯಾರಂಭವು । **ತಿರಶ್ಚೀನಃ**-ಅಡ್ಡಲಾಗಿಯೂ । **ಅಧಃ ಸ್ವಿತ್**-ಕೆಳಭಾಗದಲ್ಲಿಯೂ । **ಉಪರಿ ಸ್ವಿತ್**—ಮೇಲುಭಾಗದಲ್ಲಿಯೂ । **ವಿತತಃ ಆಸೀತ್**—ವಿಸ್ತಾರವಾಗಿ ಹರಡಿತು (ಮತ್ತು) । **ರೇತೋಧಾಃ**-ಬೀಜಭೂತವಾದ ಕರ್ಮಗಳ ಕರ್ತೃಗಳೂ ಅವುಗಳ ಫಲಭೋಕ್ತೃ ಆದ ಜೀವರುಗಳೂ (ಪ್ರಾಣಿಗಳು) । **ಆಸನ್**—ಉತ್ಪನ್ನರಾದರು । **ಮಹಿಮಾನಃ**—ಅತಿ ದೊಡ್ಡದಾದ ಮತ್ತು ಪ್ರಾಣಿಗಳಿಗೆ ಭೋಗ್ಯರೂಪವಾದ ವಿಯದಾದಿ (ಪ್ರಪಂಚವಸ್ತುಗಳೂ) ಗಳೂ । **ಆಸನ್**—ಉತ್ಪನ್ನವಾದುವು (ಈ ಭೋಕ್ತೃಭೋಗ್ಯಗಳೆಂಬ ಎರಡು ವಿಧಗಳಲ್ಲಿ) । **ಸ್ವಧಾ**—ಅನ್ನರೂಪವಾದ ಪ್ರಪಂಚದ ಭೋಗ್ಯವಸ್ತುಗಳು । **ಅವಸ್ತಾತ್**—ಅವುಗಳನ್ನು ಭೋಗಿಸುವ ಭೋಕ್ತೃಗಳಿಗಿಂತಲೂ ಕನಿಷ್ಠವಾದುವು । **ಪ್ರಯತಿಃ**—ಭೋಕ್ತೃವು । **ಪರಸ್ತಾತ್**—ಭೋಗ್ಯವಸ್ತುವಿಗಿಂತ ಶ್ರೇಷ್ಠನಾದನು

॥ ಭಾವಾರ್ಥ ॥

ಈ ಸೃಷ್ಟಿಕಾರ್ಯಗಳ ನಿರ್ವಹಣಕ್ಕಾಗಿ ಬ್ರಹ್ಮವು ಕಾರ್ಯೋನ್ಮುಖವಾದಾಗ ಆ ಕಾರ್ಯಾರಂಭವು ಸೂರ್ಯ ರಶ್ಮಿಯಂತೆ ಮಿಂಚಿನವೇಗದಲ್ಲಿ ಅಡ್ಡಲಾಗಿಯೂ ಕೆಳಕ್ಕೂ, ಮೇಲಕ್ಕೂ ಎಲ್ಲೆಲ್ಲಿಯೂ (ಸರ್ವತ್ರ) ವಿಸ್ತಾರವಾಗಿ ವ್ಯಾಪಿಸಿತು. ಎಂದರೆ ಸೃಷ್ಟಿಕಾರ್ಯಾರಂಭವು ನಾನಾಕಡೆಗಳಲ್ಲಿ ವಿದ್ಯುದ್ವೇಗದಂತೆ ಏಕಕಾಲದಲ್ಲಿ ಅತಿಶೀಘ್ರವಾಗಿ ನಡೆಯಲುಪಕ್ರಮಿಸಿತು. ಈ ರೀತಿ ಸೃಷ್ಟಿಯಾದ ವಸ್ತುಗಳಲ್ಲಿ ಮುಖ್ಯವಾದ ಎರಡು ವಿಭಾಗಗಳಾದುವು. ವಿಯದಾದಿಪಂಚಭೂತಗಳೂ, ಜಗದಾದಿಗಳೂ ಅವುಗಳಲ್ಲಿರುವ ನಾನಾವಸ್ತುಗಳೂ ಒಂದು ವಿಭಾಗ, ಈ ವಸ್ತುಗಳನ್ನು ಉಪಭೋಗಿಸುವ ಭೋಕ್ತೃವಾದ ಎಂದರೆ ಜೀವವಿರುವ ಮತ್ತು ಸುಖದುಃಖಾದಿಗಳನ್ನು ಅನುಭವಿಸಬಲ್ಲ ಪ್ರಾಣಿ ಮೊದಲಾದವುಗಳು ಇನ್ನೊಂದು ವಿಭಾಗ, ಈ ಎರಡು ವಿಭಾಗಗಳಲ್ಲಿ ಭೋಕ್ತೃವಾದ, ಚೈತನ್ಯಯುಕ್ತವಾದ ಪ್ರಾಣಿವರ್ಗವೇ ಶ್ರೇಷ್ಠವು, (ಇಲ್ಲಿ ಪ್ರಾಣಿ ಎಂದರೆ ಮನುಷ್ಯಾದಿಗಳೂ, ದೇವತೆಗಳೂ ಎಲ್ಲರೂ ಸೇರಿರುವರು) ಭೋಗ್ಯವಸ್ತುಗಳಾದ ವಿಯದಾದಿಗಳೂ ಪ್ರಪಂಚದ ಇತರ ವಸ್ತುಗಳೂ ನಿಕೃಷ್ಟವು ಎಂದರೆ ಭೋಕ್ತೃವಿಗಿಂತ ಭೋಗ್ಯವಸ್ತುವು ಕೀಳಾದುದು ಎಂದಭಿಪ್ರಾಯವು.

## English Translation.

Their ray was stretched out, whether across, or below, or above; (some) were shedders of seed, (others) were mighty; food was inferior, the eater was superior,

॥ ವಿಶೇಷವಿಷಯಗಳು ॥

**ಈ ಋಕ್ಕಿನಲ್ಲಿ** ಎರಡು ವಿಷಯಗಳನ್ನು ಸ್ಪಷ್ಟವಾಗಿ ಹೇಳಿದೆ. ಪೂರ್ವಾರ್ಧದಲ್ಲಿ ಸೃಷ್ಟಿಯು ರೂಪುಗೊಂಡ ವಿವರವೂ, ಉತ್ತರಾರ್ಧದಲ್ಲಿ ಸೃಷ್ಟಿಸಲ್ಪಟ್ಟ ವಸ್ತುಗಳಲ್ಲಿ ಭೋಕ್ತೃ, ಭೋಗ್ಯವೆಂದು ಎರಡು ವಿಧವೆಂದೂ ಅವುಗಳಲ್ಲಿ ಭೋಕ್ತೃವು ಭೋಗ್ಯವಸ್ತುಗಳಿಗಿಂತ ಶ್ರೇಷ್ಠವೆಂದೂ ತಿಳಿಸಲ್ಪಟ್ಟದೆ.

**ತಿರಶ್ಚೀನಃ ವಿತತಃ ರಶ್ಮಿಃ ಏಷಾಂ ಅಧಃ ಸ್ವಿತ್ ಆಸೀತ್ ಉಪರಿ ಸ್ವಿತ್ ಆಸೀತ್**—ಸೃಷ್ಟಿಯು ಕಾರ್ಯರೂಪಕ್ಕೆ ಬರುವಾಗ ಹೇಗೆ ಆಯಿತು ಎಂಬುದನ್ನು ಈ ಋಕ್ಕಿನ ಪೂರ್ವಾರ್ಧದ ಈ ವಾಕ್ಯದಲ್ಲಿ ವಿವರಿಸಿದೆ. ಪರಬ್ರಹ್ಮನಲ್ಲಿ ಸೃಷ್ಟಿಮಾಡಬೇಕೆಂಬ ಅಪೇಕ್ಷೆಯುಂಟಾದ ಕೂಡಲೇ ಅದು ಕಾರ್ಯರೂಪಕ್ಕೆ ಇಳಿಯಿತು. ಆ ಕಾರ್ಯ ರೂಪವು ಬಹುಬೇಗನೆ ಎಂದರೆ ಸೂರ್ಯನಿಂದ ಹೊರಟ ಸೂರ್ಯರಶ್ಮಿಯು ಬಹು ಬೇಗನೆ ಸುತ್ತಲೂ ಹರಡುವಂತೆ ಏಕಕಾಲದಲ್ಲಿ ಕೆಳಗೆ, ಮೇಲೆ, ಮಧ್ಯಭಾಗ, ಸುತ್ತಲಿರುವ ಪ್ರದೇಶ ಎಲ್ಲಲ್ಲಿಯೂ ಹರಡಿತು. ಎಂದರೆ ಸೃಷ್ಟಿಕಾರ್ಯವು ನಿಧಾನವಾಗಿ ಎಂದರೆ ಒಂದು ಪ್ರದೇಶದಲ್ಲಿ ಆದನಂತರ ಮತ್ತೊಂದು ಪ್ರದೇಶದಲ್ಲಿ ನಡೆಯಲಿಲ್ಲ. ಎಲ್ಲೆಡೆಯಲ್ಲಿಯೂ ಏಕಕಾಲದಲ್ಲಿ ಅತಿ ಬೇಗನೆ ನಡೆಯಿತು ಎಂದಭಿಪ್ರಾಯವು.

**ರೇತೋಧಾಃ ಆಸನ್ ಮಹಿಮಾನಃ ಆಸನ್ ಸ್ವಧಾ ಅವಸ್ತಾತ್ ಪ್ರಯತಿಃ ಪರಸ್ತಾತ್**—ಈ ವಾಕ್ಯದಲ್ಲಿ ಕೆಲವು ಶಬ್ದಗಳ ವಿವರಣೆಯು ಅವಶ್ಯಕವು. **ರೇತೋಧಾಃ** ಎಂಬಶಬ್ದಕ್ಕೆ **ರೇತಸೋ ಬೀಜಭೂತಸ್ಯ ಕರ್ಮಣೋ ವಿಧಾತಾರಃ ಕರ್ತಾರೋ ಭೋಕ್ತಾರಶ್ಚ ಜೀವಾಃ** ಎಂದರೆ ರೇತಃಶಬ್ದಕ್ಕೆ ಬೀಜವೆಂದರ್ಥಮಾಡಿದೆ, ಬೀಜ ರೂಪವಾದ ಕರ್ಮವು ಎಂದರ್ಥ. ಇಂತಹ ಕರ್ಮವನ್ನು ಮಾಡುವ ಮತ್ತು ಆ ಕರ್ಮಫಲಗಳನ್ನು ಉಪಭೋಗಿಸುವ ಜೀವಗಳು ಎಂದರ್ಥವು. ಜೀವಿಗಳು ಎಂದರೆ ಜೀವವಿರುವ ಸಮಸ್ತ ಪ್ರಾಣಿಗಳು, ಮನುಷ್ಯರು, ದೇವತೆಗಳು ಇವ ರೆಲ್ಲರೂ ಎಂಬರ್ಥವು. **ಮಹಿಮಾನಃ ಎಂದರೆ ಮಹಾಂತೋ ವಿಯದಾದಯೋ ಭೋಗ್ಯಾಃ** ಅತಿ ದೊಡ್ಡ ವಸ್ತುಗಳಾದ ವಿಯದಾದಿಗಳು (ಆಕಾಶಾದಿ ಪಂಚಭೂತಗಳು), ಅವುಗಳ ಪರಿಣಾಮದಿಂದ ಉತ್ಪನ್ನವಾದ ಜಗದಾದಿಗಳು, ಅವುಗಳಲ್ಲಿರುವ ಭೋಗ್ಯ ವಸ್ತುಗಳು ಎಂದರ್ಥವು. ಹಾಗೆಯೇ **ಸ್ವಧಾ** ಎಂದರೆ ಅನ್ನವು. ತಿನ್ನಲ್ಪಡಬೇಕಾದ ವಸ್ತುವಿಗೆ ಅನ್ನವೆಂದು ಹೆಸರು. ಆದ್ದರಿಂದ ಅದು ಭೋಗ್ಯವಸ್ತುವಾಯಿತು ಸ್ವಧಾ ಎಂದರೆ ಪ್ರಾಣಿಗಳು ಅನುಭವಿಸುವ ಭೋಗ್ಯವಸ್ತುವು **ಪ್ರಯತಿಃ** ಎಂದರೆ **ಪ್ರಯತಿತಾ ಭೋಕ್ತಾ** ಪ್ರಯತ್ನಪಡುವವನು. ಪ್ರಯತ್ನದಿಂದ ತನ್ನ ಆಹಾರವನ್ನು ದೊರಕಿಸಿಕೊಳ್ಳುವವನು ಎಂದರೆ ಭೋಗ್ಯವಸ್ತುಗಳನ್ನು ಅನುಭವಿಸುವ ಭೋಕ್ತೃವು ಎಂದರ್ಥವು. ಇನ್ನು ವಾಕ್ಯಾರ್ಥವನ್ನು ವಿಮರ್ಶೆಮಾಡೋಣ. ಇದರಲ್ಲಿಯೂ ಎರಡು ವಿಭಾಗಗಳಿವೆ. ಒಂದನೆಯದು-**ರೇತೋಧಾ ಆಸನ್ ಮಹಿಮಾನ ಆಸನ್** । ಸೃಷ್ಟಿಕಾಲದಲ್ಲಿ ಸೃಷ್ಟಿಸಲ್ಪಟ್ಟ ವಸ್ತುಗಳಲ್ಲಿ ಮುಖ್ಯವಾದ ಎರಡುವಿಭಾಗಗಳಾದವು. ಕರ್ಮಗಳನ್ನು ಮಾಡಿ ಅವುಗಳ ಫಲಗಳನ್ನು ಅನುಭವಿಸುವ ಕರ್ತೃವು ಅಥವ ಭೋಕ್ತೃವು ಒಂದನೆಯದು, ಭೋಕ್ತೃವು ಅನುಭವಿಸಬೇಕಾದ ವಸ್ತುಗಳು ಎರಡನೆಯದು. ಇವುಗಳಲ್ಲಿ ಯಾವುದು ಹೆಚ್ಚು ಯಾವುದು ಕಡಿಮೆ ಎಂದರೆ **ಸ್ವಧಾ ಅವಸ್ತಾತ್ ಪ್ರಯತಿಃ ಪರಸ್ತಾತ್** ಎಂಬ ವಾಕ್ಯವು ಅದನ್ನು ತಿಳಿಸುವುದು ಭೋಕ್ತೃವಿಗೇ ಹೆಚ್ಚು ಪ್ರಾಮುಖ್ಯತೆ ಇರುವುದು ಭೋಗ್ಯವಸ್ತುವಿಗೆ ಪ್ರಾಮುಖ್ಯತೆಇಲ್ಲ. ಅದು ಭೋಕ್ತೃವಿಗಿಂತ ನಿಕೃಷ್ಟವು. ಆದರೆ ಭೋಗ್ಯವಸ್ತುಗಳು ಪರಿಮಾಣದಲ್ಲಿಯೂ ಸಂಖ್ಯೆಯಲ್ಲಿಯೂ ದೊಡ್ಡದಾಗಿರಬಹುದು, ಭೋಕ್ತೃವು ಬಹಳ ಚಿಕ್ಕದಾಗಿರಬಹುದು. ಭೋಗ್ಯ

ವಸ್ತುಗಳು ಎಂದರೆ, ಪ್ರಪಂಚಾದಿಗಳು ಅತಿದೊಡ್ಡವು. ಅವುಗಳಲ್ಲಿರುವ ಭೋಗವನ್ನನುಭವಿಸುವ ಭೋಕ್ತೃವು(ಮನುಷ್ಯ ಇತ್ಯಾದಿ) ಬಹಳ ಅಲ್ಪಪರಿಮಾಣವುಳ್ಳವನಾಗಿರುವನು. ಆದರೆ ಭೋಕ್ತೃವಿಗೇ ಪ್ರಾಶಸ್ತ್ಯವು ಹೆಚ್ಚು ಭೋಗ್ಯವಸ್ತುವಿಗೆ ಪ್ರಾಶಸ್ತ್ಯವು ಕಡಿಮೆ ಎಂದಭಿಪ್ರಾಯವು.

ಜಗದಾದಿಗಳನ್ನು ಪರಮೇಶ್ವರನು ಸೃಷ್ಟಿಮಾಡಿದ ವಿಚಾರದಲ್ಲಿ—

**ಆತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ ॥**

(ತೈ. ಉ. ೨-೧)

ಇತ್ಯಾದಿ ಉಪನಿಷತ್ತುಗಳಲ್ಲಿ ಸೃಷ್ಟಿಯು ಹೇಗೆ ಮುಂದುವರೆಯಿತೆಂದು ವರ್ಣಿಸಿದೆ. ಸೃಷ್ಟಿಕಾಲದಲ್ಲಿ ಆತ್ಮ ಅಥವ ಅವ್ಯಕ್ತರೂಪದಿಂದಿದ್ದ (ಅಸತ್) ಪರಮಾತ್ಮನಿಂದ ಮೊದಲು ಆಕಾಶವು ಉತ್ಪನ್ನವಾಯಿತು. ಆ ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಉದಕವೂ, ಉದಕದಿಂದ ಪೃಥಿವಿಯೂ, ಪೃಥಿವಿಯಿಂದ ಓಷಧಿವನಸ್ಪತಿಗಳೂ, ಅವುಗಳಿಂದ ಪ್ರಾಣಿಗಳಿಗೆ ಅವಶ್ಯಕವಾದ ಆಹಾರವೂ, ಆ ಆಹಾರದಿಂದ ಪುರುಷಮೊದಲಾದ ಪ್ರಾಣಿಗಳೂ ಉತ್ಪನ್ನವಾದವು ಎಂದು ಹೇಳಿದೆ. ಸೃಷ್ಟಿಮಾಡುವಾಗ ಮೊದಲು ಭೋಗ್ಯವಸ್ತುಗಳನ್ನು ಸೃಷ್ಟಿಮಾಡಿ ಅನಂತರ ಭೋಕ್ತೃವನ್ನು ಸೃಷ್ಟಿಮಾಡಿದನೆಂದು ಹೇಳಿದೆ. ಏಕೆಂದರೆ ಭೋಕ್ತೃವು ಹುಟ್ಟಿದ ಕೂಡಲೇ ಅವನಿಗೆ ಆಹಾರಾದಿಗಳು ಬೇಕು. ಆದ್ದರಿಂದ ಮೊದಲು ಆಹಾರಾದಿಗಳನ್ನು ಸಿದ್ಧಮಾಡಿ ಅನಂತರ ಅವುಗಳನ್ನು ಅನುಭವಿಸುವ ಭೋಕ್ತೃವನ್ನು ಸೃಷ್ಟಿಸಿರುವುದು ಸಮಂಜಸವಾಗಿಯೇ ಇದೆ. ಆದರೆ ಮೊದಲು ಸೃಷ್ಟಿಯಾದಮಾತ್ರಕ್ಕೆ ಭೋಗ್ಯವಸ್ತುಗಳಿಗೆ ಪ್ರಾಮುಖ್ಯತೆಯೇನೂ ಇಲ್ಲ. ಅನಂತರ ಸೃಷ್ಟಿಸಲ್ಪಟ್ಟ ಭೋಕ್ತೃವಿಗೇ ಶ್ರೇಷ್ಠತೆ ಇದೆ ಎಂದು ತಿಳಿಯಬೇಕು.

ಇದರಿಂದ ಅವ್ಯಕ್ತಸ್ವರೂಪದಿಂದಿದ್ದ ಆತ್ಮನಿಂದ ಸದಾತ್ಮಕವಾದ ಜಗದಾದಿಗಳೂ ಅನಂತರ ಆ ಜಗತ್ತುಗಳಲ್ಲಿ ಓಷಧಿವನಸ್ಪತಿಗಳೂ, ಅನಂತರ ದೇವಮನುಷ್ಯಾದಿಗಳೂ ಉತ್ಪನ್ನರಾದರೆಂದು ಋಕ್ಸಂಹಿತೆಯಲ್ಲಿಯೇ ಅನೇಕ ಕಡೆ ಹೇಳಿದೆ—

**ದೇವಾನಾಂ ಪೂರ್ವ್ಯೇ ಯುಗೇಽಸತಃ ಸದಜಾಯತ ।**
**ದೇವಾನಾಂ ಯುಗೇಽಪ್ರಥಮೇಽಸತಃ ಸದಜಾಯತ ।**
**ತದಾಶಾ ಅನ್ವಜಾಯಂತ ತದುತ್ತಾನಪದಸ್ಪರಿ ॥** (ಋ. ಸಂ. ೧೦-೭೨-೨, ೩)

ದೇವತೆಗಳನ್ನು ಸೃಷ್ಟಿಮಾಡುವಾಗ ಎಂದರೆ ಸೃಷ್ಟಿಗೆ ಪ್ರಾರಂಭದಲ್ಲಿ ಅಸತ್ ಎಂಬ ಅವ್ಯಕ್ತದಿಂದ ಸತ್ ಎಂಬ ವ್ಯಕ್ತರೂಪವಾದ ಜಗದಾದಿಗಳ ಆವಿರ್ಭಾವವಾಯಿತು. ಅನಂತರ ದಿಕ್ಕುಮೊದಲಾದವುಗಳೂ ಅನಂತರ ವೃಕ್ಷಾದಿಗಳೂ ಉತ್ಪನ್ನವಾದುವು. ಇದಲ್ಲದೆ—

**ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ ॥** (ಋ. ಸಂ. ೧೦-೯೭-೧)

ಓಷಧಿವನಸ್ಪತಿಗಳು ದೇವತೆಗಳ ಸೃಷ್ಟಿಗಿಂತ ಮೂರು ಯುಗಗಳಕಾಲ ಮೊದಲೇ ಉತ್ಪನ್ನವಾದವು ಎಂದು ಹೇಳಿದೆ. ಆದ್ದರಿಂದ, ಭೋಗ್ಯವಸ್ತುಗಳ ಸೃಷ್ಟಿ ಮೊದಲಾಯಿತು. ಅನಂತರ ಭೋಕ್ತೃವಿನ ಸೃಷ್ಟಿಯಾಯತು ಎಂದು ತಿಳಿಯಬೇಕು.

|| ಸಂಹಿತಾಪಾಠಃ ||

ಕೋ ಅದ್ಧಾ ವೇದ ಕ ಇಹ ಪ್ರ ವೋಚತ್ಕುತ ಆಜಾತಾ ಕುತ ಇಯಂ ವಿಸೃಷ್ಟಿಃ ।
ಅರ್ವಾಗ್ದೇವಾ ಅಸ್ಯ ವಿಸರ್ಜನೇನಾಥಾ ಕೋ ವೇದ ಯತ ಆಬಭೂವ ||೬||

|| ಪದಪಾಠಃ ||

ಕಃ । ಅದ್ಧಾ । ವೇದ । ಕಃ । ಇಹ । ಪ್ರ । ವೋಚತ್ । ಕುತಃ । ಆಽಜಾತಾ । ಕುತಃ । ಇಯಂ । ವಿಽಸೃಷ್ಟಿಃ ।
ಅರ್ವಾಕ್ । ದೇವಾಃ । ಅಸ್ಯ । ವಿಽಸರ್ಜನೇನ । ಅಥ । ಕಃ । ವೇದ । ಯತಃ । ಆಽಬಭೂವ || ೬ ||

|| ಸಾಯಣಭಾಷ್ಯಂ ||

ಏವಂ ಭೋಕ್ತೃಭೋಗ್ಯರೂಪೇಣ ಸೃಷ್ಟಿಃ ಸಂಗ್ರಹೇಣ ಪ್ರತಿಪಾದಿತಾ । ಏತಾವದ್ವಾ ಇದಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದ ಇತಿವತ್ । ಅಥೇದಾನೀಂ ಸಾ ಸೃಷ್ಟಿರ್ದುರ್ವಿಜ್ಞಾನೇತಿ ನ ವಿಸ್ತರೇಣಾಭಿಹಿತೇತ್ಯಾಹ । ಕೋ ಅದ್ಧೇತಿ । ಕಃ ಪುರುಷೋಽದ್ಧಾ ಪಾರಮಾರ್ಥ್ಯೇನ ವೇದ । ಜಾನಾತಿ । ಕೋ ವೇಹಾಸ್ಮಿಂಲ್ಲೋಕೇ ಪ್ರ ವೋಚತ್ । ಪ್ರಬ್ರೂಯಾತ್ । ಇಯಂ ದೃಶ್ಯಮಾನಾ ವಿಸೃಷ್ಟಿರ್ವಿವಿಧಾ ಭೂತಭೌತಿಕಭೋಕ್ತೃಭೋಗ್ಯಾದಿರೂಪೇಣ ಬಹುಪ್ರಕಾರಾ ಸೃಷ್ಟಿಃ ಕುತಃ ಕಸ್ಮಾದುಪಾದಾನಕಾರಣಾತ್ ಕುತಃ ಕಸ್ಮಾಚ್ಚ ನಿಮಿತ್ತಕಾರಣಾದಾಜಾತಾ । ಸಮಂತಾಜ್ಜಾತಾ । ಪ್ರಾದುರ್ಭೂತಾ । ಏತದುಭಯಂ ಸಮ್ಯಕ್ಕೋ ವೇದ ಕೋ ವಾ ವಿಸ್ತರೇಣ ವಕ್ತುಂ ಶಕ್ನುಯಾದಿತ್ಯರ್ಥಃ । ನನು ದೇವಾ ಅಜಾನಂತಃ । ಸರ್ವಜ್ಞಾಸ್ತೇ ಜ್ಞಾಸ್ಯಂತಿ ವಕ್ತುಂ ಚ ಶಕ್ನುವಂತೀತ್ಯತ ಆಹ । ಅರ್ವಾಗಿತಿ । ದೇವಾಶ್ಚಾಸ್ಯ ಜಗತೋ ವಿಸರ್ಜನೇನ ವಿಯದಾದಿಭೂತೋತ್ಪತ್ತ್ಯನಂತರಂ ವಿವಿಧಂ ಯದ್ಭೌತಿಕಂ ಸರ್ಜನಂ ಸೃಷ್ಟಿಸ್ತೇನಾರ್ವಾಗರ್ವಾಚೀನಾಃ ಕೃತಾಃ । ಭೂತಸೃಷ್ಟೇಃ ಪಶ್ಚಾಜ್ಜಾತಾ ಇತ್ಯರ್ಥಃ । ತಥಾವಿಧಾಸ್ತೇ ಕಥಂ ಸ್ವೋತ್ಪತ್ತೇಃ ಪೂರ್ವಕಾಲೀನಾಂ ಸೃಷ್ಟಿಂ ಜಾನೀಯುಃ । ಅಜಾನಂತೋ ವಾ ಕಥಂ ಪ್ರಬ್ರೂಯುಃ । ಉಕ್ತಂ ದುರ್ವಿಜ್ಞಾನತ್ವಂ ನಿರ್ಗಮಯತಿ । ಅಥೈವಂ ಸತಿ ದೇವಾ ಅಪಿ ನ ಜಾನಂತಿ ಕಿಲ । ತದ್ವ್ಯತಿರಿಕ್ತಃ ಕೋ ನಾಮ ಮನುಷ್ಯಾದಿರ್ವೇದ ತಜ್ಜಗತ್ಕಾರಣಂ ಜಾನಾತಿ ಯತಃ ಕಾರಣಾತ್ಕೃತ್ಸ್ನಂ ಜಗದಾಬಭೂವ ಅಜಾಯತ ||

|| ಪ್ರತಿಪದಾರ್ಥ ||

ಕಃ—ಯಾವ ಪುರುಷನು । ಅದ್ಧಾ—ಪಾರಮಾರ್ಥಿಕವಾಗಿ (ನಿಶ್ಚಯವಾಗಿ) । ವೇದ—ಈ ಸೃಷ್ಟಿ ಕ್ರಮವನ್ನು ತಿಳಿಯಬಲ್ಲನು? । ಕಃ—ಯಾವ ಪುರುಷನು ತಾನೇ । ಇಹ—ಈ ಲೋಕದಲ್ಲಿ । ಪ್ರ ವೋಚತ್—ಇದನ್ನು ಹೇಳಬಲ್ಲನು? । ಇಯಂ—ಈಗ ನಮ್ಮ ಕಣ್ಣಿಗೆ ಕಾಣಿಸುತ್ತಿರುವ । ವಿಸೃಷ್ಟಿಃ—ವಿಧವಿಧವಾದ ಭೂತ

ಭೌತಿಕಭೋಕ್ತೃಭೋಗ್ಯಾದಿರೂಪಗಳಿಂದ ಬಹುವಿಧವಾದ ಸೃಷ್ಟಿಯು । **ಕುತಃ**— ಯಾವುದರಿಂದ (ಯಾವ ವಸ್ತುವಿನಿಂದ) । **ಕುತಃ**— ಯಾವ ಕರ್ತೃವಿನಿಂದ । **ಆ ಜಾತಾ**— ಉತ್ಪನ್ನವಾಯಿತು ?। **ದೇವಾಃ**— ದೇವತೆಗಳು । **ಅಸ್ಯ**— ಈ ಜಗತ್ತಿನ । **ವಿಸರ್ಜನೇನ**— ವಿಯದಾದಿಭೂತೋತ್ಪತ್ತ್ಯನಂತರದಲ್ಲಿ । **ಅರ್ವಾಕ್**— ಈಚಿಗೆ ಉತ್ಪನ್ನರಾದರು । **ಅಥ**— ಆದ್ದರಿಂದ ಎಂದರೆ ವಸ್ತುಸ್ಥಿತಿಯು ಹೀಗಿರುವುದರಿಂದ । **ಯತಃ**— ಈ ಜಗತ್ತು । ಯಾರಿಂದ ಅಥವಾ ಯಾತರಿಂದ (ಹೇಗೆ) । **ಆಬಭೂವ**— ಉತ್ಪನ್ನವಾಯಿತೆಂಬ ದನ್ನು । **ಕಃ**— ಯಾವ ಪುರುಷನು ತಾನೇ । **ವೇದ**— ತಿಳಿಯಬಲ್ಲನು ?

॥ ಭಾವಾರ್ಥ ॥

ಈ ಸೃಷ್ಟಿಕ್ರಮವನ್ನು ಯಾವ ಪುರುಷನು ತಿಳಿಯಬಲ್ಲನು ? ಈ ಲೋಕದಲ್ಲಿ ಇದನ್ನು ತಿಳಿದು ಹೇಳಬಲ್ಲವನಾರು ? ಈಗ ನಮ್ಮ ಕಣ್ಣಿಗೆ ಕಾಣುತ್ತಿರುವ ಈ ವಿಧವಿಧವಸ್ತುಗಳಿಂದ ಕೂಡಿದ ಬಹುವಿಧವಾದ ಸೃಷ್ಟಿಯು ಯಾರಿಂದ ಹೇಗೆ ಉಂಟಾಯಿತು? ಸೃಷ್ಟಿ ಪ್ರಾರಂಭವಾಗಿ ವಿಯದಾದಿಪಂಚಭೂತಗಳೇ ಮೊದಲಾದ ಕೆಲವು ಸೃಷ್ಟಿಭಾಗವು ಮುಂದುವರೆದ ಮೇಲೆ ದೇವತೆಗಳ ಉತ್ಪತ್ತಿಯಾಯಿತು. ಆದ್ದರಿಂದ ದೇವತೆಗಳೂ ಇದನ್ನು ತಿಳಿದಿಲ್ಲ. ವಸ್ತುಸ್ಥಿತಿಯು ಹೀಗಿರುವಾಗ ಈ ಜಗತ್ಸೃಷ್ಟಿಯು ಯಾರಿಂದ, ಹೇಗೆ ಉತ್ಪನ್ನವಾಯಿತೆಂಬುದನ್ನು ತಿಳಿಯಬಲ್ಲ ಪುರುಷನಾರು ?

## English Translation.

Who really knows ? who in this world may declare it ? whence was this creation, whence was it engendered ? The gods (were) subsequent to the (world's) creation ; so who knows whence it arose ?

॥ ವಿಶೇಷವಿಷಯಗಳು ॥

ಹಿಂದೆ ಭೋಕ್ತೃ ಭೋಗ್ಯ ಎಂಬ ಮುಖವಾದ ಎರಡು ವಿಧ ಸೃಷ್ಟಿಗಳು ಉಂಟಾಯಿತೆಂದು ಹೇಳಲಾಯಿತಷ್ಟೆ. ಈ ಸೃಷ್ಟಿಕ್ರಮವನ್ನು ತಿಳಿದುಕೊಳ್ಳಲು ಬಹಳ ದುಸ್ಸಾಧ್ಯವೆಂಬುದನ್ನು ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಪ್ರಶ್ನೆರೂಪದಿಂದ ಋಷಿಯು ವರ್ಣಿಸಿರುವನು.

**ಕಃ ಅದ್ಧಾ ವೇದ ಕಃ ಇಹ ಪ್ರ ವೋಚತ್** — ಈ ಸೃಷ್ಟಿಕ್ರಮವನ್ನು ಯಥಾರ್ಥವಾಗಿ ತಿಳಿದಿರುವವನು ಯಾರು ಅಥವಾ ತಿಳಿದು ಇದು ಹೀಗೆಯೇ ನಡೆಯಿತು ಎಂದು ಹೇಳುವ ಪುರುಷನು ತಾನೇ ಯಾರು ? ಯಾರೂ ಇಲ್ಲ. ಈ ವಿಷಯದಲ್ಲಿ ಯಾರಿಗೂ ನಿಶ್ಚಯಜ್ಞಾನವಿರುವುದಿಲ್ಲ.

**ಕುತಃ ಆಜಾತಾ ಕುತಃ ಇಯಂ ವಿಸೃಷ್ಟಿಃ**-- ಈಗ ನಮ್ಮ ಕಣ್ಣಿಗೆ ಕಾಣುತ್ತಿರುವ ಭೂತಭೌತಿಕ ಭೋಕ್ತೃಭೋಗ್ಯವಸ್ತುಗಳೇ ಮೊದಲಾದ ಬಹುಪ್ರಕಾರವಾದ ಸೃಷ್ಟಿಯು ಯಾವ ಪದಾರ್ಥದಿಂದ ಉಂಟಾಯಿತು ? ಎಂದರೆ ಇದನ್ನು ನಿರ್ಮಿಸಲು ಇದಕ್ಕೆ ಬೇಕಾದ ಮೂಲವಸ್ತುವು ಯಾವುದು ? ಇದನ್ನು ಸೃಷ್ಟಿಮಾಡಿದ ಕರ್ತೃವು (ಪುರುಷನು) ಯಾರು ? ಇದು ಯಾವುದೂ ಯಾರಿಗೂ ತಿಳಿಯದು.

**ಅರ್ವಾಕ್ ದೇವಾಃ ಅಸ್ಯ ವಿಸರ್ಜನೇನ** — ಈ ಸೃಷ್ಟಿಯ ವಿಷಯವು ನಮ್ಮಂತಹ ಪುರುಷರಿಗೆ ತಿಳಿಯದಿರಬಹುದು. ಆದ ಮಾತ್ರಕ್ಕೆ ಇತರರಿಗೆ ಎಂದರೆ ನಮಗಿಂತಲೂ ಅಧಿಕವಾದ ತಿಳುವಳಿಕೆಯುಳ್ಳ ದೇವತೆಗಳಿಗೆ ತಿಳಿಯದೇ ? ಎಂದರೆ, ಸೃಷ್ಟಿಯು ಉಪಕ್ರಮವಾದಾಗ ದೇವತೆಗಳೂ ಇರಲಿಲ್ಲ. ದೇವತೆಗಳ ಸೃಷ್ಟಿಯು ಎಲ್ಲಕ್ಕೂ ಮೊದಲು ಆಗಲಿಲ್ಲ. ಕೆಲವು ಭಾಗ ಸೃಷ್ಟಿಯು ಎಂದರೆ ವಿಯದಾದಿಪಂಚಮಹಾಭೂತಗಳೇ ಮೊದಲಾದ ಜಗತ್ತಿನ ಸೃಷ್ಟಿಯು ನಡೆದಮೇಲೆ ದೇವತೆಗಳ ಸೃಷ್ಟಿಯಾಯಿತು. ಆದ್ದರಿಂದ ತಮ್ಮ ಕಾಲಕ್ಕಿಂತಲೂ ಮೊದಲೇ ನಡೆದು ಹೋಗಿದ್ದ ಸೃಷ್ಟಿ ವಿಷಯವನ್ನು ಆಮೇಲೆ ಜನಿಸಿದ ದೇವತೆಗಳು ಹೇಗೆ ತಾನೇ ಬಲ್ಲರು ? ಅವರೂ ಇದನ್ನು ತಿಳಿಯಲಾರರು ಎಂದಭಿಪ್ರಾಯವು

**ಅಥ ಕಃ ವೇದ ಯತಃ ಆಬಭೂವ** — ವಸ್ತು ಸ್ಥಿತಿಯು ಹೀಗಿರುವಾಗ ಈ ಜಗತ್ಸೃಷ್ಟಿಯು ಯಾರಿಂದ ಹೇಗೆ ಆಯಿತೆಂಬುದನ್ನು ಯಾವ ಪುರುಷನು ತಾನೇ ತಿಳಿಯಬಲ್ಲನು ? ಯಾರಿಂದಲೂ ತಿಳಿಯಲಸಾಧ್ಯವು ಎಂದಭಿಪ್ರಾಯವು.

|| ಸಂಹಿತಾಪಾಠಃ ||

ಇಯಂ ವಿಸೃಷ್ಟಿರ್ಯತ ಆ ಬಭೂವ ಯದಿ ವಾ ದಧೇ ಯದಿ ವಾ ನ ।
ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ತ್ಸೋ ಅಂಗ ವೇದ ಯದಿ ವಾ ನ ವೇದ || ೭ ||

|| ಪದಪಾಠಃ ||

ಇಯಂ । ವಿಽಸೃಷ್ಟಿಃ । ಯತಃ । ಆಽಬಭೂವ । ಯದಿ । ವಾ । ದಧೇ । ಯದಿ । ವಾ । ನ ।
ಯಃ । ಅಸ್ಯ । ಅಧಿಽಅಕ್ಷಃ । ಪರಮೇ । ವಿಽಓಮನ್ । ಸಃ । ಅಂಗ । ವೇದ । ಯದಿ । ವಾ । ನ । ವೇದ ||

|| ಸಾಯಣಭಾಷ್ಯಂ ||

ಉಕ್ತಪ್ರಕಾರೇಣ ಯಥೇದಂ ಜಗತ್ಸರ್ಜನಂ ದುರ್ವಿಜ್ಞಾನಂ ಏವಂ ಸೃಷ್ಟಂ ತಜ್ಜಗದ್ಧರ್ತೃರಮಪೀತ್ಯಾಹ । ಇಯಮಿತಿ । ಯತ ಉಪಾದಾನಭೂತಾತ್ಪರಮಾತ್ಮನ ಇಯಂ ವಿಸೃಷ್ಟಿರ್ವಿವಿಧಾ ಗಿರಿನದೀಸಮುದ್ರಾದಿರೂಪೇಣ ವಿಚಿತ್ರಾ ಸೃಷ್ಟಿರಾಬಭೂವ ಆಜಾತಾ ಸೋಽಪಿ ಕಿಲ ಯದಿ ವಾ ದಧೇ ಧಾರಯತಿ ಯದಿ ವಾ ನ ಧಾರಯತಿ । ಏವಂ ಚ ಕೋ ನಾಮಾನ್ಯೋ ಧರ್ತುಂ ಶಕ್ನುಯಾತ್ । ಯದಿ ಧಾರಯೇದೀಶ್ವರ ಏವ ಧಾರಯೇನ್ನಾನ್ಯ ಇತ್ಯರ್ಥಃ । ಏತೇನ ಕಾರ್ಯಸ್ಯ ಧಾರಯಿತೃತ್ವಪ್ರತಿಪಾದನೇನ ಬ್ರಹ್ಮಣ ಉಪಾದಾನಕಾರಣತ್ವಮುಕ್ತಂ ಭವತಿ । ತಥಾ ಚ ಪಾರಮಾರ್ಷಂ ಸೂತ್ರಂ । ಪ್ರಕೃತಿಶ್ಚ ಪ್ರತಿಜ್ಞಾ-ದೃಷ್ಟಾಂತಾನುಪರೋಧಾತ್ । ವೇದಾ. ೧ ೪-೨೩ । ಇತಿ । ಯದ್ವಾ । ಅನೇನಾರ್ಧರ್ಚೇನ ಪೂರ್ವೋಕ್ತಂ ಸೃಷ್ಟೇರ್ದುರ್ಜ್ಞಾನತ್ವಮೇವ ದೃಢಯತಿ । ಕೋ ವೇದೇತ್ಯನುವರ್ತತೇ । ಇಯಂ ವಿವಿಧಾ ಸೃಷ್ಟಿರ್ಯತ

ಆಬಭೂವ ಆ ಸಮಂತಾದಜಾಯತೇತಿ ಕೋ ವೇದ। ನ ಕೋಽಪಿ। ನಾಸ್ತ್ಯೇವ ಜಗತೋ ಜನ್ಮ ಕದಾಚಿದನೀದೃಶಂ ಜಗದಿತಿ ಬಹವೋ ಭ್ರಾಂತಾ ಭವಂತ್ಯಪಿ। ಯತಃ॥ ಜನಿಕರ್ತುಃ ಪ್ರಕೃತಿಃ। ಪಾ. ೧-೪-೩೦। ಇತ್ಯಪಾದಾನಸಂಜ್ಞಾಯಾಂ ಪಂಚಮ್ಯಾಸ್ತಸಿಲ್॥ ಯಸ್ಮಾತ್ಪರಮಾತ್ಮನ ಉಪಾದಾನ-ಭೂತಾದಾಬಭೂವ ತಂ ಪರಮಾತ್ಮಾನಂ ಕೋ ವೇದ। ನ ಕೋಽಪಿ। ಪ್ರಕೃತಿತಃ ಪರಮಾಣುಭ್ಯೋ ವಾ ಜಗಜ್ಜನ್ಮೇತಿ ಹಿ ಬಹವೋ ಭ್ರಾಂತಾಃ। ತಥಾ ಸ ಏವೋಪಾದಾನಭೂತಃ ಪರಮಾತ್ಮಾ ಸ್ವಯಮೇವ ನಿಮಿತ್ತಭೂತೋಽಪಿ ಸನ್ ಯದಿ ವಾ ದಧೇ ವಿದಧ ಇದಂ ಜಗತ್ಸಸರ್ಜ ಯದಿ ವಾ ನ ಸಸರ್ಜ। ಅಸಂದಿಗ್ಧೇ ಸಂದಿಗ್ಧವಚನನ್ಮೇತಚ್ಛಾಸ್ತ್ರಾಣಿ ಚೇತ್ಪ್ರಮಾಣಂ ಸ್ಯುರಿತಿ ಯಥಾ। ಸ ಏವ ವಿದಧೇ ತಂ ಕೋ ವೇದ। ಅಜಾನಂತೋಽಪಿ ಬಹವೋ ಜಡಾತ್ಪ್ರಧಾನಾದಕರ್ತೃಕಮೇವೇದಂ ಜಗತ್ಸ್ವಯಮಜಾಯತೇತಿ ವಿಪರೀತಂ ಪ್ರತಿಪನ್ನಾ ವಿದಧತೋ ವಿಧಾನಮಜಾನಂತೋಽಪಿ। ಸ ಏವೋಪಾದಾನಭೂತ ಇತ್ಯಪಿ ಕೋ ವೇದ। ನ ಕೋಽಪಿ। ಉಪಾದಾನಾದನ್ಯಸ್ತಟಸ್ಥ ಏವೇಶ್ವರೋ ವಿದಧ ಇತಿ ಹಿ ಬಹವಃ ಪ್ರತಿಪನ್ನಾಃ। ದೇವಾ ಅಪಿ ಯನ್ನ ಜಾನಂತಿ ತದರ್ವಾಚೀನಾನಾಮೇಷಾಂ ತತ್ಪರಿಜ್ಞಾನೇ ಕ್ವೈವ ಕಥೇತ್ಯರ್ಥಃ। ಯದ್ಯೇವಂ ಜಗತ್ಸೃಷ್ಟಿರತ್ಯಂತದುರವಬೋಧನಾ ತರ್ಹಿ ಸಾ ಪ್ರಮಾಣಪದ್ಧತಿಮಧ್ಯಾಸ್ತ ಇತ್ಯಾಶಂಕ್ಯ ತತ್ಸದ್ಭಾವ ಈಶ್ವರೋ ವೇದಂ ಪ್ರಮಾಣಯತಿ। ಯೋ ಅಸ್ಯೇತಿ। ಅಸ್ಯ ಭೂತಭೌತಿಕಾತ್ಮ-ಕಸ್ಯ ಜಗತೋ ಯೋಽಧ್ಯಕ್ಷ ಈಶ್ವರಃ ಪರಮ ಉತ್ಕೃಷ್ಟೇ ಸತ್ಯಭೂತೇ ವ್ಯೋಮನ್ ವ್ಯೋಮನ್ನಾಕಾಶ ಆಕಾಶವನ್ನಿರ್ಮಲೇ ಸ್ವಪ್ರಕಾಶೇ। ಯದ್ವಾ॥ ಅವತೇಸ್ತರ್ಪಣಾರ್ಥಾದನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್। ನೇಡ್ವಶಿ ಕೃತೀತೀಟ್ಪ್ರತಿಷೇಧಃ। ಜ್ವರತ್ವರೇತ್ಯಾದಿನಾ ವಕಾರೋಪಧಯೋರೂಠ್। ಸಪ್ತಮ್ಯಾ ಲುಕ್। ನ ಙಿಸಂಬುದ್ಧ್ಯೋರಿತಿ ನಲೋಪಪ್ರತಿಷೇಧಃ॥ ವ್ಯೋಮನಿ ವಿಶೇಷೇಣ ತೃಪ್ತೇ। ನಿರತಿ-ಶಯಾನಂದಸ್ವರೂಪ ಇತ್ಯರ್ಥಃ। ಯದ್ವಾ। ಅವತಿರ್ಗತ್ಯರ್ಥಃ। ವ್ಯೋಮನಿ ವಿಶೇಷೇಣ ಗಂತವ್ಯೇ। ದೇಶಕಾಲವಸ್ತುಭಿರಪರಿಚ್ಛಿನ್ನ ಇತ್ಯರ್ಥಃ। ಅಥವಾ। ಅವತಿರ್ಜ್ಞಾನಾರ್ಥಃ। ವ್ಯೋಮನಿ ವಿಶೇಷೇಣ ಜ್ಞಾತರಿ ವಿಶಿಷ್ಟಜ್ಞಾನಾತ್ಮನಿ। ಈದೃಶೇ ಸ್ವಾತ್ಮನಿ ಪ್ರತಿಷ್ಠಿತಃ। ಶ್ರೂಯತೇ ಹಿ ಸನತ್ಕುಮಾರನಾರದಯೋಃ ಸಂವಾದೇ ಸ ಭಗವಃ ಕಸ್ಮಿನ್ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ। ಛಾ. ಉ. ೭-೨೪-೧। ಇತಿ। ಈದೃಶೋ ಯಃ ಪರಮೇಶ್ವರಃ ಸೋ ಅಂಗ। ಅಂಗೇತಿ ಪ್ರಸಿದ್ಧೌ। ಸೋಽಪಿ ನಾಮ ವೇದ ಜಾನಾತಿ। ಯದಿ ವಾ ನ ವೇದ ನ ಜಾನಾತಿ। ಕೋ ನಾಮಾನ್ಯೋ ಜಾನೀಯಾತ್। ಸರ್ವಜ್ಞ ಈಶ್ವರ ಏವ ತಾಂ ಸೃಷ್ಟಿಂ ಜಾನೀಯಾತ್ ನಾನ್ಯ ಇತ್ಯರ್ಥಃ॥

॥ ಪ್ರತಿಪದಾರ್ಥ ॥

**ಯತಃ**— ಯಾವ ಪರಮಾತ್ಮನಿಂದ। **ಇಯಂ**— ನಮಗೆ ಕಾಣುತ್ತಿರುವ ಈ। **ವಿಸೃಷ್ಟಿಃ**— ನದೀ ಪರ್ವತಸಮುದ್ರಾದಿನಾನಾರೂಪಗಳಿಂದ ಕೂಡಿದ ವಿಚಿತ್ರವಾದ ಸೃಷ್ಟಿಯು। **ಆಬಭೂವ**— ಉಂಟಾಯಿತೋ (ಆ ಪರಮಾತ್ಮನೇ)। **ಯದಿ ವಾ ದಧೇ**— ಈ ಜಗತ್ತನ್ನು ಧರಿಸಿ ಪೋಷಿಸುತ್ತಾನೆ। **ಯದಿ ವಾ ನ**— ಅಥವಾ ಅವನು ಇದನ್ನು ಧರಿಸದಿರಬಹುದು (ಹಾಗಿದ್ದಲ್ಲಿ ಯಾರೂ ಇದನ್ನೂ ಧರಿಸಿ ಪೋಷಿಸಲಾರರು)। **ಅಸ್ಯ**— ಈ ಜಗತ್ತಿಗೆ। **ಅಧ್ಯಕ್ಷಃ**— ಈಶ್ವರನಾದ। **ಯಃ**— ಯಾವ ಪರಮಾತ್ಮನು। **ಪರಮೇ**— ಉತ್ಕೃಷ್ಟವಾದ ಅಥವಾ ಸತ್ಯ

ಭೂತವಾದ | **ವ್ಯೋಮನ್**—ಆಕಾಶದಂತೆ ನಿರ್ಮಲವಾದ ಸ್ವಪ್ರಕಾಶದಲ್ಲಿ ಬೆಳಗುತ್ತಿರುವನೋ | **ಸಃ**—ಆ ಪರಮಾತ್ಮನೊಬ್ಬನು ಮಾತ್ರ | **ವೇದ**—ಇದನ್ನು ತಿಳಿಯಬಲ್ಲನು | **ಅಂಗ**—ಇದು ಪ್ರಸಿದ್ಧವು | **ಯದಿ ವಾ ನ ವೇದ**—ಒಂದು ವೇಳೆ ಅವನೂ ತಿಳಿಯದಿದ್ದರೆ ಈ ವಿಷಯವು ಯಾರಿಗೂ ತಿಳಿಯುವುದಿಲ್ಲ.

|| ಭಾವಾರ್ಥ ||

ನಮ್ಮ ಕಣ್ಣಿಗೆ ಕಾಣಿಸುತ್ತಿರುವ ನದೀ ಪರ್ವತಸಮುದ್ರಾದಿ ನಾನಾರೂಪಗಳಿಂದ ಕೂಡಿದ ವಿಚಿತ್ರವಾದ ಈ ಸೃಷ್ಟಿಯು ಯಾವ ಪರಮಾತ್ಮನಿಂದ ಉಂಟಾಯಿತೋ ಆ ಪರಮಾತ್ಮನೇ ಈ ಜಗತ್ತನ್ನು ಧರಿಸಿ ಪೋಷಿಸುತ್ತಾನೆ. ಅಥವಾ ಅವನು ಇದನ್ನು ಧರಿಸದಿದ್ದಲ್ಲಿ ಮತ್ತೆ ಯಾರೂ ಇದನ್ನು ಧರಿಸಿ ಪೋಷಿಸಲಾರರು. ಈ ಜಗತ್ತಿಗೆ ಈಶ್ವರನಾದ ಯಾವ ಪರಮಾತ್ಮನು ಉತ್ಕೃಷ್ಟವಾದ ಮತ್ತು ಸತ್ಯವಾದ ಆಕಾಶದಂತೆ ನಿರ್ಮಲವಾದ ತನ್ನ ಸ್ವ ಪ್ರಕಾಶದಲ್ಲಿ ಬೆಳಗುತ್ತಿರುವನೋ ಆ ಪರಮಾತ್ಮನೊಬ್ಬನು ಮಾತ್ರ ಇದನ್ನು ನಿಶ್ಚಯವಾಗಿ ತಿಳಿಯಬಲ್ಲನು. ಒಂದು ವೇಳೆ ಅವನೂ ತಿಳಿಯದಿದ್ದರೆ ಮತ್ತಾರು ತಿಳಿಯಬಲ್ಲರು ? ಯಾರೂ ತಿಳಿಯಲಾರರು.

## English Translation

He from whom this creation arose, he may uphold it, or he may not (no one else can); he who is its superintendent in the highest heaven, he assuredly knows, or if he knows not (no one else does).

|| ವಿಶೇಷವಿಷಯಗಳು ||

ಹಿಂದಿನ ಋಕ್ಕಿನಲ್ಲಿ ಈ ಸೃಷ್ಟಿವಿಧಾನವನ್ನು ದೇವತೆಗಳೇ ಮೊದಲಾದ ಯಾರೂ ಅರಿಯರೆಂಬುದನ್ನು ಈ ಋಕ್ಕಿನಲ್ಲಿ ಇನ್ನೂ ವಿಶದವಾಗಿ ವರ್ಣಿಸಲಾಗಿದೆ.

**ಇಯಂ ವಿಸೃಷ್ಟಿಃ ಯತಃ ಆಬಭೂವ ಯದಿ ವಾ ದಧೇ ಯದಿ ವಾ ನ**—ಗಿರಿನದೀಸಮುದ್ರಗಳಿಂದ ಕೂಡಿದಈ ವಿಚಿತ್ರ ಸೃಷ್ಟಿಯು ಉಪಾದಾನ ಕಾರಣವಾದ ಪರಮಾತ್ಮನಿಂದ ವುಂಟಾಯಿತೆಂದು ಹೇಳಿದೆ. ಎಂದರೆ ಅವ್ಯಕ್ತ ಸ್ವರೂಪದಿಂದ ವ್ಯಕ್ತ ಸ್ವರೂಪವಾದ ಸತ್, ಅದರಿಂದ ಈ ಜಗದಾದಿಗಳು ಉತ್ಪನ್ನವಾಯಿತೆಂದು ಹೇಳಿದೆ. ಅಸತ್ ಅಥವಾ ಅವ್ಯಕ್ತರೂಪದಿಂದಿರುವವನು ಪರಮಾತ್ಮನೇ ಆದ್ದರಿಂದ ಈ ಸಮಸ್ತ ಜಗತ್ತೂ ಅವನಿಂದಲೇ ಉತ್ಪನ್ನವಾಗಿದೆ. ಆದರೆ ಈ ರೀತಿ ಜಗತ್ಸೃಷ್ಟಿಯಾದನಂತರ ಅದನ್ನು ಧರಿಸಿ ಪೋಷಿಸುವರಾರು ? ಈ ವಿಷಯದಲ್ಲಿ ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳುವರು ಕೆಲವರು – ಈ ಜಗತ್ತಿಗೆ ಉತ್ಪತ್ತಿನಾಶಗಳೊಂದೂ ಇಲ್ಲ. ಇದು ಹಿಂದೆಯೂ ಹೀಗೇ ಇದ್ದಿತು, ಮುಂದೆಯೂ ಹೀಗೆಯೇ ಇರುವುದು ಎಂದು ಭ್ರಾಂತಿವಶರಾದ ಅನೇಕರು ಹೇಳುವರು. ಏಕೆಂದರೆ ಪರಮಾತ್ಮನಿಂದ ಈ ಜಗತ್ತು ಸೃಷ್ಟಿಯಾಯಿತೆಂದು ಹೇಳುವುದಾದರೆ ಆ ಪರಮಾತ್ಮನೊಬ್ಬನು ಇರುವನೆಂದು ಬಲ್ಲವರಾರು ? ಯಾರೂ ಇಲ್ಲ ಆದ್ದರಿಂದ ಜಗತ್ತನ್ನು ಯಾರೂ ಸೃಷ್ಟಿಮಾಡಲಿಲ್ಲ, ಅದಕ್ಕೆ ಉತ್ಪತ್ತಿ ನಾಶಗಳೂ ಇಲ್ಲ ಎಂದು ಅವರ ವಾದವು. ಮತ್ತೆ ಕೆಲವರು – ಈ ಜಗತ್ತಿನ ವಸ್ತುಗಳೆಲ್ಲವೂ ಪರಮಾಣುಗಳಿಂದ ನಿರ್ಮಿತವಾಗಿರುವುದು. ಈ ಪರಮಾಣುಗಳೆಲ್ಲವೂ ತಮ್ಮ ಸ್ವಭಾವಕ್ಕನುಸಾರವಾಗಿ ನಾನಾವಿಧವಸ್ತುಗಳಾಗಿಯೂ ಜಗತ್ತಾಗಿಯೂ ಪರಿ

ಣಮಿಸಿರುವುದು. ಇದನ್ನು ಸೃಷ್ಟಿಮಾಡಲು ಒಬ್ಬ ಕರ್ತೃವಿನ (ಪರಮಾತ್ಮನ) ಅವಶ್ಯಕತೆ ಇಲ್ಲ ಎಂದು ಹೇಳುವರು. ಏನೂ ತಿಳಿಯದ ಇನ್ನೂ ಕೆಲವರು ಮೂಢರು – ಜಗತ್ತು ಜಡಭೂತವಾಗಿರುವುದು. ಇದನ್ನು ಯಾರೂ ನಿರ್ಮಿಸಲಿಲ್ಲ. ಇದು ತಾನಾಗಿಯೇ ಈ ವಿಧವಾಗಿ ಉತ್ಪನ್ನವಾಯಿತು ಎಂದು ಹೇಳುವರು. ಮತ್ತೆ ಕೆಲವರು – ಅಸದ್ರೂಪದಿಂದಿರುವ ಪರಮಾತ್ಮನಿಂದ ಜಗತ್ತೇನೋ ನಿರ್ಮಿತವಾಯಿತು, ಅದನ್ನು ಒಪ್ಪಿಕೊಳ್ಳೋಣ ಆದರೆ ಅದನ್ನು ಧರಿಸಿ ಪೋಷಿಸುವವನು ಆ ಪರಮಾತ್ಮನೇ ಏಕಾಗಬೇಕು? ತಟಸ್ಥನಾದ ಬೇರೊಬ್ಬ ಪುರುಷನು ಈ ಜಗದ್ಧಾರಣಾದಿ ಕಾರ್ಯಗಳನ್ನು ನಿರ್ವಹಿಸುವನು ಎಂದು ಹೇಳುವರು. ಆದರೆ ಇವರೆಲ್ಲರೂ ಭ್ರಾಂತಿವಶರಾದವರು ಎಂದು ಹೇಳಬೇಕಾಗುವುದು.

ಯಾವ ಪರಮಾತ್ಮನಿಂದ ಈ ಸೃಷ್ಟಿಯಾಯಿತೋ ಅವನೇ ಈ ಜಗತ್ತನ್ನು ಧರಿಸಿ ಪೋಷಿಸುವನು. ಅಥವಾ ಅವನು ಧರಿಸದಿದ್ದಲ್ಲಿ ಬೇರೆ ಯಾರೂ ಆ ಕಾರ್ಯವನ್ನು ಮಾಡಲು ಸಮರ್ಥರಲ್ಲ. ಸೃಷ್ಟಿಮಾಡುವುದು ಮಾತ್ರವೇ ಪರಮಾತ್ಮನ ಕಾರ್ಯವಲ್ಲ. ಅದನ್ನು ಧರಿಸಿ ಪೋಷಿಸುವವನೂ ಆ ಪರಮಾತ್ಮನೇ ಆಗಿರುವನು. ಈ ವಿಷಯದಲ್ಲಿ– **ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್** ಎಂಬಶ್ರುತಿ ವಾಕ್ಯವು ಇದನ್ನು ಸಮರ್ಥಿಸುವುದು. ತಾನು ಸೃಷ್ಟಿಸಿದ ವಸ್ತುಗಳಲ್ಲಿ ತಾನೇ ಅಂತರಾತ್ಮನಾಗಿ ಪ್ರವೇಶಿಸಿ ಅವುಗಳನ್ನು ಧರಿಸಿ ಪೋಷಿಸುವನೆಂದು ನಾನಾಕಡೆಗಳಲ್ಲಿ ಹೇಳಿದೆ. ಆದ್ದರಿಂದ ಈ ಜಗತ್ತನ್ನು ಧರಿಸಿ ಪೋಷಿಸುವವನೊಬ್ಬನಿದ್ದಲ್ಲಿ ಅವನು ಪರಮಾತ್ಮನಲ್ಲದೆ ಬೇರೆಯವನಲ್ಲ.

ಪರಮಾತ್ಮನು ಅವ್ಯಕ್ತಸ್ವರೂಪದಿಂದಿದ್ದಾಗ ಜಗದಾದಿಗಳಿಗೆ ಕಾರಣರೂಪದಲ್ಲಿರುವನು. ವ್ಯಕ್ತರೂಪದಿಂದ ತಾನೇ ಕಾರ್ಯರೂಪವಾಗಿ ಪರಿಣಮಿಸಿ ಜಗದಾದಿಗಳಾಗಿ ಇರುವನು. ಆದ್ದರಿಂದ ಈ ಜಗದಾದಿಗಳಿಗೆ ಕಾರ್ಯಕಾರಣಗಳೆರಡೂ ಈ ಪರಮಾತ್ಮನೇ ಆಗಿರುವನು. ಭೋಕ್ತೃವೂ, ಭೋಗಸಾಧನವೂ ಇವನೇ ಇವನೇ ಎಲ್ಲಕ್ಕೂ ಕರ್ತೃವು. ಜಗತ್ತನ್ನು ಸೃಷ್ಟಿಮಾಡುವವನೂ, ಅದನ್ನು ಧರಿಸಿ ಪೋಷಿಸುವವನೂ ಅಂತ್ಯದಲ್ಲಿ ಅದನ್ನು ನಾಶಗೊಳಿಸಿ ತನ್ನಲ್ಲೇ ಲಯವಾಗುವಂತೆ ಮಾಡುವವನೂ ಆ ಪರಮಾತ್ಮನೇ. ಇದನ್ನೇ ಇಲ್ಲಿ ಪ್ರಕಾರಾಂತರದಿಂದ ಹೇಳಲಾಗಿದೆ.

**ಯಃ ಅಸ್ಯ ಅಧ್ಯಕ್ಷಃ ಪರಮೇ ವ್ಯೋಮನ್ ಸಃ ಅಂಗ ವೇದ ಯದಿ ವಾ ನ ವೇದ**—ಇಲ್ಲಿ ಪರಮೇ ವ್ಯೋಮನ್ ಎಂಬ ಶಬ್ದಗಳಿಗೆ ನಾನಾವಿಧವಾದ ಅರ್ಥಗಳನ್ನು ಭಾಷ್ಯಕಾರರು ವಿವರಿಸಿದ್ದಾರೆ. ಪರಮೇ ವ್ಯೋಮನ್ ಉತ್ಕೃಷ್ಟವಾದ ಆಕಾಶದಲ್ಲಿ; ಅಥವಾ **ಆಕಾಶವನ್ನಿರ್ಮಲೇ ಸ್ವಪ್ರಕಾಶೇ**—ಆಕಾಶದಂತೆ ನಿರ್ಮಲವಾದ ತನ್ನ ಸ್ವಪ್ರಕಾಶದಲ್ಲಿ ಬೆಳಗುತ್ತಿರುವವನು.

ಈ ವಿಷಯದಲ್ಲಿ ಭಾಷ್ಯಕಾರರು ಇಲ್ಲಿ ಛಾಂದೋಗ್ಯೋಪನಿಷತ್ತಿನ ವಾಕ್ಯವನ್ನು ಉದಾಹರಿಸಿರುವರು– **ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ—ಸ್ವೇ ಮಹಿಮ್ನಿ** (ಛಾ. ಉ. ೭-೨೪-೧) ಸನತ್ಕುಮಾರನಾರದಸಂವಾದದಲ್ಲಿ ನಾರದನು ಸನತ್ಕುಮಾರನನ್ನು–ಎಲೈ, ಪೂಜ್ಯನೇ, ಆ ಭಗವಂತನು( ಪರಮಾತ್ಮನು)ಎಲ್ಲಿ ನೆಲಿಸಿರುವನು ಎಂದರೆ ಅವನಿಗೆ ಆಶ್ರಯವು ಯಾವುದು ಎಂದು ಪ್ರಶ್ನಿಸಲು, ಅದಕ್ಕೆ ಸನತ್ಕುಮಾರನು—ಆ ಪರಮಾತ್ಮನು ತನ್ನ ಸ್ವಪ್ರಕಾಶದಲ್ಲಿಯೇ ಬೆಳಗುತ್ತಿರುವನು. ಅವನಿಗೆ ಇನ್ನೊಬ್ಬರ ಆಶ್ರಯವಾಗಲೀ, ಆಧಾರವಾಗಲಿ ಬೇಕಿಲ್ಲ. ಅವನೇ ಸರ್ವರಿಗೂ ಆಧಾರವು, ಅವನಿಂದಲೇ ಸರ್ವವೂ ಬೆಳಗುತ್ತಿರುವುದು. ಅವನು ತನ್ನ ಪ್ರಕಾಶದಲ್ಲಿಯೇ, ತನ್ನ ಮಹಿಮೆಯಲ್ಲಿಯೇ ಬೆಳಗುತ್ತಿರುವನು ಎಂದು ಪ್ರಶ್ನೆಗೆ ಉತ್ತರವನ್ನು ಹೇಳಿದ್ದಾನೆ.

ಅಥವಾ **ಅವತೇಸ್ತೃಪ್ತ್ಯರ್ಥಾತ್** — ತೃಪ್ತಿಯನ್ನುಂಟುಮಾಡು ಎಂಬರ್ಥ ವಿರುವ ಅವತಿ ಧಾತುವಿನಿಂದ ವ್ಯೋಮನ್ ಶಬ್ದವು ನಿಷ್ಪನ್ನವಾಗಿರುವುದೆಂದು ಭಾವಿಸಿದರೆ ತೃಪ್ತನು, ಪೂರ್ಣಕಾಮನು,

ನಿರತಿಶಯಾನಂದಸ್ವರೂಪದಲ್ಲಿ ಬೆಳಗುತ್ತಿರುವವನು ಎಂದರ್ಥವು. ಅಥವಾ ಅವತಿಧಾತುವಿಗೆ ಗತ್ಯರ್ಥವನ್ನು ಹೇಳುವುದಾದರೆ **ವಿಶೇಷೇಣ ಗತೇ ವ್ಯಾಪ್ತೇ। ದೇಶಕಾಲವಸ್ತುಭಿರಪರಿಚ್ಛಿನ್ನ ಇತ್ಯರ್ಥಃ** ವಿಶೇಷವಾಗಿ ವ್ಯಾಪಿಸಿರುವಎಂದರೆ ದೇಶಕಾಲವಸ್ತುಗಳನ್ನು ಎಡಬಿಡದೆ ವ್ಯಾಪಿಸಿರುವವನೂ ಅವುಗಳಿಂದ ಅವಿಚ್ಛಿನ್ನನೂ ಎಂದರ್ಥವು. ಅಥವಾ **ಅವತಿ ರ್ಜ್ಞಾನಾರ್ಥಃ । ವ್ಯೋಮನಿ ವಿಶೇಷೇಣ ಜ್ಞಾತರಿ ವಿಶಿಷ್ಟಜ್ಞಾನಾತ್ಮನಿ ।** ಅವತಿ ಧಾತುವಿಗೆ ಜ್ಞಾನವೆಂಬ ಅರ್ಥವನ್ನು ಹೇಳುವ ಪಕ್ಷದಲ್ಲಿ ವಿಶಿಷ್ಟಜ್ಞಾನಾತ್ಮನು ಅಥವಾ ಸರ್ವಜ್ಞನು ಎಂದರ್ಥವು. ಈ ವಿಧವಾದ ತನ್ನ ಸ್ವಪ್ರಕಾಶದಲ್ಲಿ ತಾನೇತಾನಾಗಿ ಬೆಳಗುತ್ತಿರುವವನೂ ಈ ಜಗತ್ತಿಗೆ ಈಶ್ವರನೂ ಆದ ಯಾವ ಪರಮಾತ್ಮನಿರುವನೋ ಅವನು ಮಾತ್ರ ಈ ಸೃಷ್ಟಿವಿಷಯವನ್ನು ನಿಶ್ಚಯವಾಗಿ ಬಲ್ಲನು. ಅವನನ್ನು ಬಿಟ್ಟರೆ ಇದನ್ನು ತಿಳಿದವರು ಬೇರೊಬ್ಬರಿಲ್ಲ. ಒಂದು ವೇಳೆ ಅವನೂ ಇದನ್ನು ತಿಳಿಯಲಾರದವನಾಗಿದ್ದರೆ ಇದನ್ನು ತಿಳಿಯಬಲ್ಲ ಪುರುಷನಾರು? ಬೇರೆ ಯಾರಿಗೂ ತಿಳಿಯುವುದಿಲ್ಲ ಎಂದು ವಾಕ್ಯಾಭಿಪ್ರಾಯವು.

## ನೂರ ಮೂವತ್ತನೆಯ ಸೂಕ್ತವು



**ಯೋ ಯಜ್ಞ ಇತಿ ಸಪ್ತರ್ಚಂ ದ್ವಿತೀಯಂ ಸೂಕ್ತಂ ಪ್ರಜಾಪತಿಪುತ್ರಸ್ಯ ಯಜ್ಞಾಖ್ಯಸ್ಯಾರ್ಷಂ। ಆದ್ಯಾ ಜಗತೀ ಶಿಷ್ಟಾಸ್ತ್ರಿಷ್ಟುಭಃ। ಅತ್ರಾಪಿ ಯಜ್ಞಾದೀನಾಂ ಕೇಷಾಂಚಿದ್ಭಾವಾನಾಂ ಸೃಷ್ಟಿಃ ಪ್ರತಿಪಾದ್ಯತೇ। ಅತಃ ಸ್ರಷ್ಟವ್ಯತ್ವೇನ ಪ್ರಧಾನಭೂತೋ ಯೋಽರ್ಥಃ ಸೈವ ದೇವತಾ। ತತ್ಕರ್ತಾ ಪ್ರಜಾಪತಿರೇವ ದೇವತಾ। ತಥಾ ಚಾನುಕ್ರಾಂತಂ। ಯೋ ಯಜ್ಞೋ ಯಜ್ಞಃ ಪ್ರಾಜಾಪತ್ಯೋ ಜಗತ್ಯಾದ್ಯೇತಿ॥ ಗತೋ ವಿನಿಯೋಗಃ॥**

ಅನುವಾದವು—**ಯೋ ಯಜ್ಞಃ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ರಜಾಪತಿಪುತ್ರನಾದ ಯಜ್ಞನೆಂಬುವನು ಋಷಿಯು; ಈ ಸೂಕ್ತದ ಮೊದಲನೆಯ ಋಕ್ಕು ಜಗತೀಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತದಲ್ಲಿಯೂ ಯಜ್ಞವೇ ಮೊದಲಾದ ಕೆಲವು ಭಾವನೆಗಳ ಸೃಷ್ಟಿಕ್ರಮವನ್ನು ವಿವರಿಸಲಾಗಿದೆ. ಆದ್ದರಿಂದ ಈ ಸೂಕ್ತದಲ್ಲಿ ಸೃಷ್ಟಿಸಂಬಂಧವಾದ ಯಾವ ಅರ್ಥವು ಪ್ರತಿಪಾದಿತವಾಗಿದೆಯೋ ಅದೇ ಈ ಸೂಕ್ತಕ್ಕೆ ದೇವತೆಯು. ಅಥವಾ ಅದನ್ನು ಸೃಷ್ಟಿಮಾಡಿದ ಪ್ರಜಾಪತಿಯೇ ದೇವತೆಯು. ಅನುಕ್ರಮಣಿಕೆಯಲ್ಲಿ—**ಯೋ ಯಜ್ಞೋ ಯಜ್ಞಃ ಪ್ರಾಜಾಪತ್ಯೋ ಜಗತ್ಯಾದ್ಯಾ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೧೩೦

ಮಂಡಲ–೧೦ ॥ ಅನುವಾಕ–೧೧ ॥ ಸೂಕ್ತ–೧೩೦ ॥
ಅಷ್ಟಕ–೮ ॥ ಅಧ್ಯಾಯ–೭ ॥ ವರ್ಗ–೧೮ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ಯಜ್ಞಃ ಪ್ರಾಜಾಪತ್ಯಃ ॥
ದೇವತಾ—ಭಾವವೃತ್ತಂ ॥
ಛಂದಃ—೧ ಜಗತೀ । ೨-೭ ತ್ರಿಷ್ಟುಪ್

॥ ಸಂಹಿತಾಪಾಠಃ ॥

ಯೋ ಯಜ್ಞೋ ವಿಶ್ವತಸ್ತಂತುಭಿಸ್ತತ ಏಕಶತಂ ದೇವಕರ್ಮೇಭಿರಾಯತಃ ।
ಇಮೇ ವಯಂತಿ ಪಿತರೋ ಯ ಆಯಯುಃ ಪ್ರ ವಯಾಪ ವಯೇತ್ಯಾಸತೇ ತತೇ ॥ ೧ ॥

॥ ಪದಪಾಠಃ ॥

ಯಃ । ಯಜ್ಞಃ । ವಿಶ್ವತಃ । ತಂತುಽಭಿಃ । ತತಃ । ಏಕಽಶತಂ । ದೇವಽಕರ್ಮೇಭಿಃ । ಆಽಯತಃ ।
ಇಮೇ । ವಯಂತಿ । ಪಿತರಃ । ಯೇ । ಆಽಯಯುಃ । ಪ್ರ । ವಯ । ಅಪ । ವಯ । ಇತಿ । ಆಸತೇ । ತತೇ ॥ ೧ ॥

॥ ಸಾಯಣಭಾಷ್ಯಂ ॥

ತಂತುಭಿಸ್ತನಿತೃಭಿರ್ವಿಸ್ತಾರಯಿತೃಭಿರ್ವಿಯದಾದಿಭೂತೈರ್ಯಃ ಸರ್ಗಾತ್ಮಕೋ ಯಜ್ಞೋ ವಿಶ್ವತಃ ಸರ್ವತಸ್ತತೋ ವಿಸ್ತೃತಃ । ತಥೈಕಶತಂ । ಏಕಂ ಚ ಶತಂ ಚೈಕಶತಂ ॥ ಸಂಖ್ಯೇತಿ ಪೂರ್ವಪದಪ್ರಕೃತಿಸ್ವರತ್ವಂ ॥ ಏಕೋತ್ತರಶತಮಿತ್ಯರ್ಥಃ । ಬ್ರಹ್ಮಾ ಯೇಷು ಶತಸಂಖ್ಯೇಷ್ವಾತ್ಮೀಯಸಂವತ್ಸರೇಷು ಜೀವತಿ ತದಭಿಪ್ರಾಯೇಣಾತ್ರ ಶತಸಂಖ್ಯಾ । ಜೀವತಾ ತೇನ ಪ್ರಜಾಪತಿನಾ ಸಾರ್ಧಮೇಕಶತಮಿತ್ಯುಚ್ಯತೇ । ಯಥಾ ಶತಾಯುರ್ವೈ ಪುರುಷಃ ಶತವೀರ್ಯ ಆತ್ಮೈಕಶತ ಇತಿ । ಅತ್ಯಂತಸಂಯೋಗೇ ದ್ವಿತೀಯಾ । ಬ್ರಹ್ಮಣಃ ಶತಸಂವತ್ಸರಪರ್ಯಂತಂ ದೇವಕರ್ಮೇಭಿರ್ದೇವಾನುದ್ದಿಶ್ಯ ಭೋಕ್ತೃಭಿಃ ಕೃತೈಃ ಕರ್ಮಭಿರಾಯತಃ । ದೀರ್ಘೀಭೂತಃ । ತಾವತ್ಕಾಲಾವಸ್ಥಾಯೀ । ಏವಮಾಯಾಮವಿಸ್ತಾರವಾನ್ ।................। ಪಿತರಃ ಪಾಲಕಾಃ ಪ್ರಜಾಪತೇಃ ಪ್ರಾಣಭೂತಾ ವಿಶ್ವಸೃಜೋ ದೇವಾ ವಯಂತಿ । ನಿರ್ಮಿಮತೇ । ಯೇ ದೇವಾ ಆಯಯುಃ ಸ್ರಷ್ಟವ್ಯಂ ಸರ್ವಂ ಜಗತ್ಸ್ವವಯನೇನ ವ್ಯಾಪುಃ । ಅಪಿ ಚ ಪ್ರ ವಯಾಪ ವಯೇತಿ । ಪ್ರವಾಣಂ ನಾಮ ಪ್ರಕೃಷ್ಟಸ್ಯ ಚೇತನಸ್ಯ ಭೋಕ್ತೃಪ್ರಪಂಚಸ್ಯ ಸರ್ಜನಂ । ಅಪವಾನಂ ನಾಮಾಪಕೃಷ್ಟಸ್ಯ ನಿಕೃಷ್ಟಸ್ಯಾಚೇತನಸ್ಯ ಭೋಗ್ಯಪ್ರಪಂಚಸ್ಯ ಸರ್ಜನಂ ॥ ವೇಞ್ ತಂತುಸಂತಾನೇ । ಸಮುಚ್ಚಯೇಽನ್ಯತರಸ್ಯಾಂ । ಪಾ. ೩-೪-೩ । ಇತಿ ಲೋಟ್ । ತಸ್ಯ ಲೋಟೋ ಹಿಸ್ವಾವಿತ್ಯನುವೃತ್ತೇರ್ಹಿರಾದೇಶಃ । ಶಬ್ಗುಣಾಯಾದೇಶಾಃ । ಅತೋ ಹೇರಿತಿ ಲುಕ್ ॥ ಪ್ರ ವಯಾಪ ವಯೇತಿ ವಯಂತಃ ಪ್ರವಾಣಮುಪವಾನಂ ಚ ಕುರ್ವಂತ ಇತ್ಯರ್ಥಃ । ಏವಂಭೂತಾಃ ಸಂತಸ್ತೇ ವಿಶ್ವಸೃಜಸ್ತತೇ ವಿಸ್ತೃತೇ ಸತ್ಯಲೋಕ ಆಸತೇ । ಪ್ರಾಣರೂಪೇಣ ಪ್ರಜಾಪತಿಮುಪಾಸತೇ ॥ ಯದ್ವಾ। ಜ್ಯೋತಿಷ್ಟೋಮಾದಿರ್ಯಜ್ಞ ಏವಂರೂಪಕತ್ವೇನ ಪಟಾತ್ಮನಾ ವರ್ಣ್ಯತೇ । ಯೋ ಯಜ್ಞೋ ಜ್ಯೋತಿಷ್ಟೋಮಾದಿಸ್ತಂತುಭಿಸ್ತಂತುಸ್ಥಾನೀಯೈರಗ್ನಿಷ್ಟೋಮಾತ್ಯಗ್ನಿಷ್ಟೋಮಾದಿಸಂಸ್ಥಾಭೇದೈಃ ಸಪ್ತಭಿಶ್ಛಂದೋಭಿರ್ವಾ ಸರ್ವತೋ ವಿಶ್ವತ-

**ಸ್ತೃತೋ ವಿಸ್ತೃತಃ । ತಥೈಕಶತಂ । ತೃತೀಯಾರ್ಥೇ ಪ್ರಥಮಾ । ಏಕಾಧಿಕೇನಾಗ್ನಿಚಯನೇನ ಯುಕ್ತೈ-ರ್ದೇವಕರ್ಮಭಿರ್ಗವಾಮಯನಪ್ರಭೃತಿಕೈರ್ವಿಶ್ವಸೃಜಾಮಯನಾಂತೈರೇಕಾಹಾದಿಸತ್ರಾತ್ಮಕೈರ್ವಾಯ-ತೋ ದೀರ್ಘೀಭೂತ ಏವಮಾಯತೋ ವಿಸ್ತಾರವಾನ್ಯಜ್ಞಾತ್ಮಕೋಽಯಂ ಪಟಃ ಪ್ರಜಾಪತಿನಾ ಸೃಷ್ಟಃ । ತಂ ಪಟಂ ಪಿತರೋಽಸ್ಮಾಕಂ ಪಿತೃಭೂತಾ ಇಮೇಽಂಗಿರಸೋ ವಯಂತಿ । ತಸ್ಯ ಪಟಸ್ಯ ಪ್ರಾಚೀನತಂತು-ಸ್ಥಾನೀಯಾನಿ ಸ್ತುತಶಸ್ತ್ರಾಣಿ ಪ್ರ ವಯ ತ್ವಂ ಕುರು ಅಪ ವಯ ತಿರಶ್ಚೀನತಂತುಸ್ಥಾನೀಯಾನಿ ಯಜೂಂಷಿ ತ್ವಂ ಕುರ್ವಿತ್ಯೇವಂ ಪರಸ್ಪರಂ ನಿಯುಂಜಾನಾ ಆಸತೇ । ನಿಯುಂಜಂತಿ ॥ ಏವಂ ವಿಸ್ತೃತಸ್ಯ ಯಜ್ಞಸ್ಯ ಪ್ರಜಾಪತೇಃ ಸಕಾಶಾದುತ್ಪತ್ತಿರುತ್ತರಯಾ ಪ್ರತಿಪಾದ್ಯತೇ ॥**

॥ ಪ್ರತಿಪದಾರ್ಥ ॥

**ಯಃ**— ಯಾವ ಸೃಷ್ಟ್ಯಾತ್ಮಕವಾದ । **ಯಜ್ಞಃ**— ಯಜ್ಞವು । **ತಂತುಭಿಃ**— ವಿಯದಾದಿರೂಪದ ದಾರಗಳಿಂದ । **ವಿಶ್ವತಃ**— ಎಲ್ಲಾ ಕಡೆಯಲ್ಲಿಯೂ । **ತತಃ**— ವಿಸ್ತರಿಸಲ್ಪಡುವುದೋ । **ದೇವಕರ್ಮೇಭಿಃ**— ದೇವತೆಗಳನ್ನುದ್ದೇಶಿಸಿ ಜನರು ಮಾಡುವ ಕರ್ಮಗಳಿಂದ । **ಏಕಶತಂ**— ನೂರೊಂದು ಸಂವತ್ಸರಗಳವರೆಗೆ । **ಆಯತಃ**— ದೀರ್ಘವಾಗಿ ಅನುಷ್ಠಿಸಲ್ಪಡುವುದೋ ಅಂತಹ ಯಜ್ಞವನ್ನು । **ಇಮೇ**— ಈ । **ಪಿತರಃ**— ಪ್ರಜಾಪತಿಯ ಪ್ರಾಣಭೂತರಾದ ವಿಶ್ವಸೃಷ್ಟಿ ಮಾಡುವ ದೇವತೆಗಳು । **ವಯಂತಿ**— ನೆಯ್ದು ನಿರ್ಮಿಸುತ್ತಾರೆ । **ಯೇ ದೇವಾಃ**— ಯಾವ ದೇವತೆಗಳು । **ಪ್ರ ವಯ**— ಉತ್ಕೃಷ್ಟ ಚೇತನವಾದ ಭೋಕ್ತೃವಿನ ಸೃಷ್ಟಿಯನ್ನೂ । **ಅಪ ವಯ**— ನಿಕೃಷ್ಟ ಅಚೇತನವಾದ ಭೋಗ್ಯಪ್ರಪಂಚದ ಸೃಷ್ಟಿಯನ್ನೂ । **ಆಯಯುಃ**— ಸೃಷ್ಟಿಕಾರ್ಯದಿಂದ ವ್ಯಾಪಿಸಿದರೋ ಆ ದೇವತೆಗಳು । **ತತೇ**— ವಿಸ್ತಾರವಾದ ಸತ್ಯಲೋಕದಲ್ಲಿ । **ಆಸತೇ**— ಪ್ರಾಣರೂಪದಿಂದ ಪ್ರಜಾಪತಿಯನ್ನು ಪೂಜಿಸುತ್ತಾರೆ.

॥ ಭಾವಾರ್ಥ ॥

ಯಾವ ಸೃಷ್ಟ್ಯಾತ್ಮಕವಾದ ಯಜ್ಞವು ವಿಯದಾದಿಪಂಚಭೂತಗಳೆಂಬ ದಾರಗಳಿಂದ ಎಲ್ಲಾ ಕಡೆಯಲ್ಲಿಯೂ ವಿಸ್ತರಿಸಲ್ಪಡುವುದೋ, ದೇವತೆಗಳನ್ನುದ್ದೇಶಿಸಿ ಮಾಡುವ ಕರ್ಮಗಳಿಂದ ನೂರುವರ್ಷಗಳವರೆಗೆ ನಡೆಸಲ್ಪಡುವುದೋ ಅಂತಹ ಯಜ್ಞವನ್ನು ಪ್ರಜಾಪತಿಯ ಪ್ರಾಣಭೂತರಾದವರೂ ಸೃಷ್ಟಿಯನ್ನು ಮುಂದುವರೆಸುವರೂ ಆದ ದೇವತೆಗಳು ಬಟ್ಟೆಯನ್ನು ನೆಯ್ಯುವಂತೆ ನಿರ್ಮಿಸುತ್ತಾರೆ. ಮತ್ತು ಯಾವ ದೇವತೆಗಳು ಉತ್ಕೃಷ್ಟಚೇತವಾದ ಭೋಕ್ತೃವಿನ ಸೃಷ್ಟಿಯನ್ನೂ ನಿಕೃಷ್ಟವಾದುದೂ ಅಚೇತನವಾದುದೂ ಆದ ಭೋಗ್ಯವಸ್ತುಗಳ ಸೃಷ್ಟಿಯನ್ನೂ ಸೃಷ್ಟಿಮಾಡುವರೋ ಆ ದೇವತೆಗಳು ವಿಸ್ತಾರವಾದ ಸತ್ಯಲೋಕದಲ್ಲಿ ಪ್ರಜಾಪತಿಯನ್ನು ಧ್ಯಾನಾದಿಗಳಿಂದ ಉಪಾಸಿಸುತ್ತಾರೆ.

## English Translation

The sacrifice which is extended on every side by the threads (of created things) spread out by the worship of the gods for a hundred and one (years), these our progeniotors, who have preceded us, weave it, weaving forwards, weaving backwards, rhey worship (Prajapati) when (the world) is woven.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಸೃಷ್ಟಿಕ್ರಮವನ್ನು ಯಜ್ಞಕ್ಕೂ, ಬಟ್ಟೆಗೂ ಹೋಲಿಸಿ ವರ್ಣಿಸಲಾಗಿದೆ. ಸೃಷ್ಟಿಮಾಡುವುದೇ ಒಂದು ಯಜ್ಞವು. ದಾರಗಳಿಂದ ಬಟ್ಟೆಯನ್ನು ನೇಯುವಂತೆ ಸೃಷ್ಟಿಯನ್ನು ನಾನಾವಿಧ ಯಜ್ಞಕರ್ಮಗಳಿಂದ ದೇವತೆಗಳು ನೆರವೇರಿಸುತ್ತಾರೆ. ಪ್ರಜಾಪತಿಯು ಮೊದಲು ಪಂಚ ಭೂತಾತ್ಮಕವಾದ ಈ ಪ್ರಪಂಚವನ್ನು ಸೃಷ್ಟಿಸಿದನು. ಅನಂತರ ದೇವತೆಗಳನ್ನು ಸೃಷ್ಟಿಸಿ ಮುಂದೆ ಮಾಡಬೇಕಾದ ಇತರ ಸೃಷ್ಟಿಯನ್ನು ದೇವತೆಗಳೇ ಮುಂದುವರಿಸುವಂತೆ ಮಾಡಿದನು. ಈ ವಿಷಯವನ್ನೇ ಇಲ್ಲಿ ಹೇಳಲಾಗಿದೆ.

**ಯಃ ಯಜ್ಞಃ ವಿಶ್ವತಃ ತಂತುಭಿಃ ತತಃ**— ಇಲ್ಲಿ ಸೃಷ್ಟಿಯನ್ನು ಯಜ್ಞರೂಪವಾಗಿ ವರ್ಣಿಸಿದೆ. ಆ ಯಜ್ಞವನ್ನು ಬಟ್ಟೆಯ ನಿರ್ಮಾಣಕ್ಕೆ ಹೋಲಿಸಿದೆ. ಯಾವ ಯಜ್ಞವು ವಿಶ್ವದ ನಾನಾ ದಿಕ್ಕುಗಳಿಗೂ ಹರಡಿತೋ ಎಂದರೆ ದಾರಗಳಿಂದ ನೇಯಲ್ಪಡುವ ವಸ್ತ್ರವು ನೆಯ್ಯುತ್ತಿದ್ದಂತೆ ವಿಸ್ತಾರವಾಗುವುದೋ ಅದರಂತೆ ವಿಯದಾದಿಪಂಚ ಭೂತಗಳಿಂದ ಕೂಡಿದ ಸೃಷ್ಟಿಯು ಎಲ್ಲೆಲ್ಲಿಯೂ ಹರಡಿತು ಇಲ್ಲಿ ವಿಯದಾದಿಪಂಚಭೂತಗಳೇ ದಾರಗಳು. ವಸ್ತ್ರ ನಿರ್ಮಾಣಕ್ಕೆ ದಾರಗಳು ಹೇಗೆ ಅವಶ್ಯಕವೋ, ಅವುಗಳನ್ನೇ ಸೇರಿಸಿ ಹೇಗೆ ವಸ್ತ್ರವನ್ನು ನೇಯುವರೋ ಅದರಂತೆ ವಿಯದಾದಿಪಂಚಭೂತಗಳಿಂದ ಪ್ರಪಂಚ ಸೃಷ್ಟಿಯನ್ನು ಮಾಡಲಾಗಿದೆ.

**ಏಕಶತಂ ದೇವಕರ್ಮೇಭಿಃ ಆಯತಃ**— ಪ್ರಜಾಪತಿಯ ಆಯುಸ್ಸನ್ನು ಇಲ್ಲಿ ನೂರೊಂದು ವರ್ಷಗಳೆಂದು ಹೇಳಿದೆ. ಎಂದರೆ ಚತುರ್ಮುಖಬ್ರಹ್ಮನು ತನ್ನದೇ ಆದ (ದೇವಮಾನರೀತಿಯಿಂದ) ನೂರು ಸಂವತ್ಸರದ ವರೆಗೆ ಜೀವಿಸುವನೆಂದು ಪುರಾಣಾದಿಗಳಲ್ಲಿ ಪ್ರಸಿದ್ಧವಾಗಿದೆ. ಇಲ್ಲಿ ಏಕಶತಂ ಎಂಬ ಶಬ್ದಕ್ಕೆ ನೂರೊಂದು ವರ್ಷಗಳ ವರೆಗೆ ಎಂದು ಅರ್ಥಮಾಡವುದಕ್ಕೆ ಬದಲಾಗಿ ಬ್ರಹ್ಮನು ತನ್ನ ಆಯುಃಪರಿಮಾಣದಲ್ಲಿ ಅಥವಾ ಬಹುಕಾಲದವರಗೆ ಎಂದು ಅರ್ಥಮಾಡಬಹುದು. ಯಜ್ಞದಲ್ಲಿ ಅಗ್ನಿಮಥನ, ಸೋಮಾಹರಣ, ದೇವತಾಹ್ವಾನ ಮೊದಲಾದ ನಾನಾ ಉಪಕರ್ಮಗಳಿರುವುವು. ಅದರಂತೆ ಸೃಷ್ಟಿಕರ್ಮದಲ್ಲಿಯೂ ಜಗತ್ಸೃಷ್ಟಿಯಾದ ನಂತರ, ಓಷಧಿವನಸ್ಪತಿಗಳು, ಚೇತನಾಚೇತನಗಳು ಮೊದಲಾದುವುಗಳ ಸೃಷ್ಟಿಯಾಗಬೇಕಾಗಿರುವುದು. ಯಜ್ಞದಲ್ಲಿ ಯಾವರೀತಿ ದೇವತೆಗಳನ್ನು ದ್ದೇಶಿಸಿ ಮಾಡುವ ನಾನಾಕಾರ್ಯಕಲಾಪಗಳಿರುವುವೋ ಅದರಂತೆ ಸೃಷ್ಟಿಯಲ್ಲಿ ವಿಧವಿಧವಾದ ವಸ್ತುಗಳ ಸೃಷ್ಟಿ ಇರುವುದು. ಇಂತಹ ಉಪಸೃಷ್ಟಿಗಳಿಂದ ಸಹಿತವಾದ ಸೃಷ್ಟಿಯು ಅತಿವಿಸ್ತಾರವಾಗಿರುವುದು ಎಂದರೆ ಬಹಳವಾಗಿರುವುದು ಎಂದಭಿಪ್ರಾಯವು.

**ಇಮೇ ವಯಂತಿ ಪಿತರಃ**— ಇಲ್ಲಿ ಪಿತರಃ ಎಂಬ ಶಬ್ದಕ್ಕೆ **ಪಾಲಕಾಃ ಪ್ರಜಾಪತೇಃ ಪ್ರಾಣಭೂತಾಃ ವಿಶ್ವಸೃಜೋ ದೇವಾಃ** । ಪಾಲಕರಾದವರೂ ಪ್ರಜಾಪತಿಯ ಅಂಶಭೂತರಾದವರೂ ಆದ ದೇವತೆಗಳು ಎಂದರ್ಥಮಾಡಿದಾರೆ. ಪ್ರಜಾಪತಿಯು ವಿಯದಾದಿ ಪ್ರಪಂಚರೂಪವಾದ ಸೃಷ್ಟಿಯನ್ನು ಮಾಡಿದನಂತರ ದೇವತೆಗಳು ಮೇಲೆ ಹೇಳಿದಂತೆ ಮುಂದಿನ ಸೃಷ್ಟಿಯನ್ನು ನಿರ್ಮಿಸುತ್ತಾರೆ ಎಂದರೆ ಮುಂದುವರೆಸುತ್ತಾರೆ.

**ಯೇ ಆಯಯುಃ ಪ್ರ ವಯ ಅಪ ವಯ ಇತಿ ಆಸತೇ ತೇ**— ಇಲ್ಲಿ ಪ್ರವಯ ಎಂದರೆ **ಪ್ರವಾಣಂ ನಾಮ ಪ್ರಕೃಷ್ಟಸ್ಯ ಚೇತನಸ್ಯ ಭೋಕ್ತೃಪ್ರಪಂಚಸ್ಯ ಸರ್ಜನಂ** । ಉತ್ಕೃಷ್ಟವೂ ಚೇತನಯುಕ್ತವೂ ಆದ ಭೋಕ್ತೃವಿನ (ಪ್ರಾಣಿಯ) ಸೃಷ್ಟಿಯೆಂದರ್ಥವು. ಅದರಂತೆ **ಅಪ ವಯ** ಎಂದರೆ **ಅಪವಾನಂ ನಾಮ ಅಪಕೃಷ್ಟಸ್ಯ**

**ನಿಕೃಷ್ಟಸ್ಯ ಅಚೇತನಸ್ಯ ಭೋಗ್ಯಪ್ರಪಂಚಸ್ಯ ಸರ್ಜನಂ ।** ನಿಕೃಷ್ಟವೂ ಅಚೇತನವೂ ಆದ ಭೋಗಸಾಧನವಾದ ಇತರ ವಸ್ತುಗಳ ಸೃಷ್ಟಿಯು. ಈ ಎರಡು ವಿಧವಾದ ಸೃಷ್ಟಿಯನ್ನು ಮಾಡುವ ದೇವತೆಗಳು ವಿಸ್ತಾರವಾದ ಸತ್ಯಲೋಕದಲ್ಲಿ ಬ್ರಹ್ಮನನ್ನು ಉಪಾಸನೆಮಾಡುತ್ತಿರುತ್ತಾರೆ ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ.

ಯಜ್ಞವನ್ನು ವಸ್ತ್ರನಿರ್ಮಾಣಕ್ಕೆ ಹೋಲಿಸಿ ಈ ಋಕ್ಕಿಗೆ ಇನ್ನೊಂದು ವಿಧವಾದ ಅರ್ಥವನ್ನು ಭಾಷ್ಯಕಾರರು **ಹೇಳಿದಾರೆ ಎಂದರೆ ಜ್ಯೋತಿಷ್ಟೋಮವೇ ಮೊದಲಾದ ಯಜ್ಞವನ್ನು ವಸ್ತ್ರನಿರ್ಮಾಣಮಾಡುವ ಕಾರ್ಯಕ್ಕೆ ಹೋಲಿಸಿ ಅರ್ಥವಿವರಣೆ ಮಾಡಿದಾರೆ—**

॥ ಪ್ರತಿಪದಾರ್ಥ ॥

**ಯಃ ಯಜ್ಞಃ**—ಜ್ಯೋತಿಷ್ಟೋಮಾದಿಯಜ್ಞವೆಂಬ ವಸ್ತ್ರವು । **ತಂತುಭಿಃ**—ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ ಮೊದಲಾದ ನಾನಾ ಪ್ರಭೇದ ರೂಪವಾದ ದಾರಗಳಿಂದ ಅಥವಾ ಏಳುವಿಧ ಛಂದಸ್ಸುಗಳೆಂಬ ದಾರಗಳಿಂದ । **ವಿಶ್ವತಃ ತತಃ**—ವಿಸ್ತಾರವಾಗಿ ಮಾಡಲ್ಪಡುತ್ತದೆ ಎಂದರೆ ನೆಯ್ಯಲ್ಪಡುತ್ತದೆ. । **ಏಕಶತಂ**—ಅಗ್ನಿಚಯನವೇ ಮೊದಲಾದ । **ದೇವಕರ್ಮಭಿಃ**—ಗವಾಮಯನದಿಂದ ಮೊದಲು ವಿಶ್ವಸೃಜಾಮಯನದ ವರೆಗೆ ಇರುವ ಯಾಗಗಳಿಂದ ಅಥವ ಏಕಾಹಾದಿ ಸತ್ರಯಾಗಗಳಿಂದ । **ಆಯತಃ**—ಯಜ್ಞವೆಂಬ ಈ ವಸ್ತ್ರವು ಪ್ರಜಾಪತಿಯಿಂದ ನೆಯಿದು ನಿರ್ಮಿಸಲ್ಪಟ್ಟಿದೆ (ಇಂತಹ ಯಜ್ಞವೆಂಬ ಈ ವಸ್ತ್ರವನ್ನು) । **ಇಮೇ ಪಿತರಃ**—ನಮಗೆ ಪಿತೃಭೂತರಾದ ಅಂಗಿರಸ ಋಷಿಗಳು । **ವಯಂತಿ**—ನೆಯ್ಯುತ್ತಾರೆ (ಎಂದರೆ ಯಜ್ಞಾನುಷ್ಠಾನಮಾಡುತ್ತಾರೆ) । **ಯೇ**—ಯಾವ ಅಂಗಿರಾ ಋಷಿಗಳು । **ಆಯಯುಃ**—ಯಜ್ಞವನ್ನು ಮಾಡಿದರೋ ಆ ಯಜ್ಞರೂಪವಾದ ವಸ್ತ್ರಕ್ಕೆ । **ಪ್ರ ವಯ**—ಸ್ತೋತ್ರ ಶಸ್ತ್ರಮಂತ್ರಗಳೆಂಬ (ಹಾಸು ಎಂಬ) ಉದ್ದವಾದ ದಾರಗಳನ್ನು । **ಅಪ ವಯ**—ಯಜುರ್ವೇದ ಮಂತ್ರಗಳೆಂಬ (ಹೊಕ್ಕು ಎಂಬ) ಅಡ್ಡದಾರಗಳನ್ನು ಸೇರಿಸಿ । **ತತೇ**—ವಿಸ್ತಾರವಾಗುವಂತೆ । **ಆಸತೇ**—ನೆಯ್ಯುತ್ತಾರೆ (ಎಂದರೆ ಯಜ್ಞಮಾಡುತ್ತಾರೆ).

ಭಾವಾರ್ಥ ॥

ಇಲ್ಲಿ ಯಜ್ಞಕ್ಕೂ ವಸ್ತ್ರನಿರ್ಮಾಣಕ್ಕೂ ಸಾದೃಶ್ಯವನ್ನು ಹೇಳಿದೆ. ವಸ್ತ್ರನಿರ್ಮಾಣಮಾಡುವಾಗ ದಾರಗಳನ್ನು ಉಪಯೋಗಿಸುವರು , ಯಜ್ಞಾನುಷ್ಠಾನಮಾಡುವಾಗ ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ ಎಂಬ ನಾನಾ ವಿಧಯಜ್ಞಗಳನ್ನು ಮಾಡುವರು. ದಾರಗಳು ಹೇಗೆ ಅನೇಕವಾಗಿರುವವೋ ಹಾಗೆ ಯಜ್ಞಗಳೂ ಛಂದಸ್ಸುಗಳೂ (ಮಂತ್ರಗಳೂ) ಅನೇಕವಾಗಿರುವವು ಬಟ್ಟೆಯನ್ನು ದೊಡ್ಡದಾಗಿ ನೆಯ್ಯುವಂತೆ ಯಜ್ಞವನ್ನು ಬಹುಕಾಲದವರೆಗೆ ಆಚರಿಸುವರು. ವಸ್ತ್ರವನ್ನು ನೆಯ್ಯುವಾಗ ಹಾಸು, ಹೊಕ್ಕು ಎಂಬ ಉದ್ದವಾದ ಮತ್ತು ಅಡ್ಡಲಾದ ದಾರಗಳನ್ನು ಉಪಯೋಗಿಸಿ ನೆಯ್ಯುವರು. ಯಜ್ಞದಲ್ಲಿ ಋಗ್ವೇದ ಮಂತ್ರಗಳನ್ನು , ಯಜುರ್ವೇದಮಂತ್ರಗಳನ್ನು ಉಪಯೋಗಿಸಿ ಯಜ್ಞವನ್ನು ನೆರವೇರಿಸುವರು. ವಸ್ತ್ರವನ್ನು ನೇಯ್ಗೆಕಾರರು ನಿರ್ಮಿಸುವರು. ಯಜ್ಞವನ್ನು ಅಂಗಿರಸ ಮೊದಲಾದ ಋಷಿಗಳು ನೆರವೇರಿಸುವರು. ಈರೀತಿಯಾಗಿ ವಸ್ತ್ರನಿರ್ಮಾಣದ ಪ್ರತಿಅಂಶದಲ್ಲಿಯೂ ಯಜ್ಞದ ನಾನಾಕರ್ಮಗಳನ್ನು ದೃಷ್ಟಾಂತವಾಗಿ ವಿವರಿಸಿ ವರ್ಣಿಸಿದಾರೆ.- ಮುಖ್ಯಾಭಿಪ್ರಾಯವೇನೆಂದರೆ ಮೊದಲು ಸೃಷ್ಟಿಯನ್ನು ಯಜ್ಞಕ್ಕೆ ಹೋಲಿಸಲಾಯಿತ.. ಅನಂತರ ಆ ಯಜ್ಞವನ್ನು ವಸ್ತ್ರನಿರ್ಮಾಣಕ್ಕೆ ಹೋಲಿಸಲಾಯಿತು. ಈರೀತಿ ದೃಷ್ಟಾಂತದ್ವಯದಿಂದ ಋಷಿಯು ಸೃಷ್ಟಿಕ್ರಮವನ್ನು ವರ್ಣಿಸಿದಾನೆ ಎಂದುತಿಳಿಯಬೇಕು

॥ ಸಂಹಿತಾಪಾಠಃ ॥

ಪುಮಾ ಏನಂ ತನುತ ಉತ್ಕೃಣತ್ತಿ ಪುಮಾನ್ವಿ ತತ್ನೇ ಅಧಿ ನಾಕೇ ಅಸ್ಮಿನ್ ।
ಇಮೇ ಮಯೂಖಾ ಉಪ ಸೇದುರೂ ಸದಃ ಸಾಮಾನಿ ಚಕ್ರುಸ್ತಸರಾ-
ಣ್ಯೋತವೇ ॥ ೨ ॥

॥ ಪದಪಾಠಃ ॥

ಪುಮಾನ್ । ಏನಂ । ತನುತೇ । ಉತ್ । ಕೃಣತ್ತಿ । ಪುಮಾನ್ । ವಿ । ತತ್ನೇ । ಅಧಿ । ನಾಕೇ । ಅಸ್ಮಿನ್ ।
ಇಮೇ । ಮಯೂಖಾಃ । ಉಪ । ಸೇದುಃ । ಊಂ ಇತಿ । ಸದಃ । ಸಾಮಾನಿ । ಚಕ್ರುಃ । ತಸರಾಣಿ ।
ಓತವೇ ॥ ೨ ॥

॥ ಸಾಯಣಭಾಷ್ಯಂ ॥

ಪುಮಾನ್ ಪುರುಷ ಆದಿಪುರುಷಃ ಪ್ರಜಾಪತಿರೇನಂ ಯಜ್ಞಂ ತನುತೇ । ವಿಸ್ತಾರಯತಿ । ಸೃಷ್ಟವಾನಿತ್ಯರ್ಥಃ । ತಥಾ ಚ ಬ್ರಾಹ್ಮಣಂ । ಸ ಪ್ರಜಾಪತಿರ್ಯಜ್ಞಮತನುತ ತಮಾಹರತ್ತೇನಾಯಜತೇತಿ । ಪ್ರಜಾಪತಿರ್ಯಜ್ಞಮಸೃಜತ ಯಜ್ಞಂ ಸೃಷ್ಟಮನು ಬ್ರಹ್ಮಕ್ಷತ್ರೇ ಅಸೃಜ್ಯೇತಾಮಿತಿ ಚ । ಐ. ಬ್ರಾ. ೫-೩೨-೭-೧೯ । ಸ ಏವ ಪುಮಾನ್ ಸೃಷ್ಟಂ ತಂ ಯಜ್ಞಮುತ್ಕೃಣತ್ತಿ । ಉದ್ವೇಷ್ಟಯತಿ ॥ ಕೃತೀ ವೇಷ್ಟನೇ ರೌಧಾದಿಕಃ ॥ ಸ ಏವ ಪುಮಾನ್ ಪ್ರಜಾಪತಿರಸ್ಮಿನ್ಭೂಲೋಕೇ ನಾಕೇ । ಅಕಂ ದುಃಖಂ ನಾಸ್ತ್ಯಸ್ಮಿನ್ನಿತಿ ನಾಕಃ ಸ್ವರ್ಗಲೋಕಃ ॥ ನಭ್ರಾಣ್ನಪಾದಿತ್ಯಾದಿನಾ ನಞಃ ಪ್ರಕೃತಿಭಾವಃ ॥ ತತ್ರ ಚ ವಿ ತತ್ನೇ । ಇಮಂ ಯಜ್ಞಂ ವಿಸ್ತಾರಯತಿ । ಅಧಿಃ ಸಪ್ತಮ್ಯರ್ಥಾನುವಾದೀ ॥ ತನೋತೇರ್ಲಿಟಿ ತನಿಪ-ತ್ಯೋಶ್ಛಂದಸೀತ್ಯುಪಧಾಲೋಪಃ । ತಸ್ಯ ಸ್ಥಾನಿವದ್ಭಾವಾದ್ದ್ವಿರ್ವಚನಂ ॥ ಮಯೂಖಾ ರಶ್ಮಿಭೂತಾಸ್ತಸ್ಯ ಪ್ರಜಾಪತೇಃ ಪ್ರಾಣಾತ್ಮಕಾ ಇಮೇ ವಿಶ್ವಸೃಜೋ ದೇವಾಃ ಸದಃ ಸದನಂ ದೇವಯಜನಸ್ಥಾನಮುಪ ಸೇದುಃ । ವಿಶ್ವಸರ್ಜನಹೇತುಭೂತಂ ವಿಶ್ವಸೃಜಾಮಯನಾಖ್ಯಂ ಯಜ್ಞಂ ಕರ್ತುಮುಪಸೇದಂತಿ । ಉಪಸದ್ಯ ಚ ಸಾಮಾನಿ ರಥಂತರಾದೀನ್ಯೋತವೇ ವಯನಾಯ ಯಜ್ಞಾಖ್ಯಂ ವಸ್ತ್ರಮೋತುಂ ತಸರಾಣಿ ತಿರ್ಯಕ್ಸರಾಣಿ ತಿರಶ್ಚೀನಸೂತ್ರಾಣಿ ಚಕ್ರುಃ ॥

॥ ಪ್ರತಿಪದಾರ್ಥ ॥

**ಪುಮಾನ್**—ಆದಿಪುರುಷನಾದ ಪ್ರಜಾಪತಿಯು । **ಏನಂ**— ಈ ಯಜ್ಞವನ್ನು । **ತನುತೇ**—ಸೃಷ್ಟಿಮಾಡಿದ್ದಾನೆ (ಆ ಪ್ರಜಾಪತಿಯೇ) । **ಉತ್ಕೃಣತ್ತಿ**—ಆ ಯಜ್ಞವನ್ನು ಸುತ್ತಿಡುತ್ತಾನೆ (ಸಮಾಪ್ತಿಗೊಳಿಸುತ್ತಾನೆ) । **ಪುಮಾನ್**—ಆ ಪ್ರಜಾಪತಿಯು । **ಅಸ್ಮಿನ್**—ಈ ಭೂಲೋಕದಲ್ಲಿಯೂ । **ಅಧಿ ನಾಕೇ**—ಸ್ವರ್ಗಲೋಕ

ದಲ್ಲಿಯೂ । **ವಿ ತತ್ನೇ** - ವಿಸ್ತಾರವಮಾಡುತ್ತಾನೆ (ಅಭಿವೃದ್ಧಿಯಾಗುವಂತೆ ಮಾಡುತ್ತಾನೆ) । **ಇಮೇ—** ಈ । **ಮಯೂಖಾಃ—** ಪ್ರಜಾಪತಿಯ ರಶ್ಮಿಭೂತರೂ ಪ್ರಾಣಾತ್ಮಕರೂ ಆದ ವಿಶ್ವಸೃಷ್ಟಿಯಲ್ಲಿ ನಿರತರಾದ ದೇವತೆಗಳು **ಸದಃ ಉ—** ದೇವತೆಗಳು ಆರಾಧಿಸುವ ಯಜ್ಞಗೃಹವನ್ನು । **ಉಪ ಸೇದುಃ—** ವಿಶ್ವಸೃಷ್ಟಿರೂಪವಾದ ವಿಶ್ವಸೃಜಾಮಯನವೆಂಬ ಯಜ್ಞಮಾಡಲು ಸಮೀಪಿಸಿ ಅಲ್ಲಿ ಕುಳಿತುಕೊಂಡರು (ಕುಳಿತುಕೊಂಡ ನಂತರ) । **ಓತವೇ—** ಯಜ್ಞವೆಂಬ ವಸ್ತ್ರವನ್ನು ನೇಯ್ಯುವುದಕ್ಕಾಗಿ । **ಸಾಮಾನಿ—** ರಥಂತರಾದಿಸಾಮಮಂತ್ರಗಳನ್ನು । **ತಸರಾಣಿ—** ಅಡ್ಡಲಾಗಿ ಸೇರಿಸಿ ನೇಯ್ಯುವ (ಹೊಕ್ಕು) ದಾರಗಳನ್ನಾಗಿ । **ಚಕ್ರುಃ—** ಮಾಡಿದರು.

|| ಭಾವಾರ್ಥ ||

**ಪುಮಾನ್ ಏನಂ ತನುತೇ ಉತ್ ಕೃಣತ್ತಿ**–ಇಲ್ಲಿ **ಪುಮಾನ್** ಎಂದರೆ ಆದಿಪುರುಷನಾದ ಪ್ರಜಾಪತಿಯು; **ತನುತೇ**–ವಿಸ್ತಾರವಮಾಡುತ್ತಾನೆ, ಹರಡುತ್ತಾನೆ. **ಉತ್ಕೃಣತ್ತಿ**–ಸುತ್ತಿಡುತ್ತಾನೆ ಅಥವಾ ಸಮಾಪ್ತಿಗೊಳಿಸುತ್ತಾನೆ. ವಸ್ತ್ರವನ್ನು ನೇಯ್ಯುವ ನೇಗೆಕಾರನು ವಸ್ತ್ರವನ್ನು ನೇಯ್ಯುವಾಗ ಅದನ್ನು ಅಗಲವಾಗಿ ಹರಡಿ ಹಾಸು ಹೊಕ್ಕುಗಳೆಂಬ ಉದ್ದವಾದ ಮತ್ತು ಅಡ್ಡವಾದ ದಾರಗಳಿಂದ ಸೇರಿಸಿ ನೇಯುತ್ತಾನೆ. ವಸ್ತ್ರ ನಿರ್ಮಾಣವು ಮುಗಿದ ನಂತರ ಅದನ್ನು ಸುತ್ತಿ ತೆಗೆದಿಡುತ್ತಾನೆ ಅದರಂತೆಯೇ ಇಲ್ಲಿ ಪಜಾಪ್ರತಿಯು ಮೊದಲು ಯಜ್ಞವನ್ನು ಸೃಷ್ಟಿಸಿ ಅದನ್ನು ಎಲ್ಲರೂ ಅನುಷ್ಠಾನ ಮಾಡುವಂತೆ ವಿಸ್ತರವಾಗಿ ಪ್ರಸಿದ್ಧಿಪಡಿಸುತ್ತಾನೆ. ಯಜ್ಞಾನುಷ್ಠಾನಾನಂತರ ಅದನ್ನು ಸಮಾಪ್ತಿಗೊಳಿಸುತ್ತಾನೆ.

## English Translation

The first man spreads out this (web), the first man rolls it up, he spreads it above in this heaven; these his rays have sat down on the seat (of sacrifice), they have made the prayers serve as shuttles for weaving.

|| ವಿಶೇಷವಿಷಯಗಳು ||

**ಪುಮಾನ್ ವಿ ತತ್ನೇ ಅಧಿ ನಾಕೇ ಅಸ್ಮಿನ್—** ಆ ಪ್ರಜಾಪತಿಯು ಭೂಮಿಯಲ್ಲಿಯೂ ಸ್ವರ್ಗಲೋಕದಲ್ಲಿಯೂ ಸಹ ವಿಸ್ತೃತವಾಗುವಂತೆ ಮಾಡುತ್ತಾನೆ. ಈ ವಿಷಯದಲ್ಲಿ— **ಸ ಪ್ರಜಾಪತಿರ್ಯಜ್ಞಮತನುತ ತಮಾಹರತ್ತೇನಾಯಜತ** (ಐ. ಬ್ರಾ. ೫–೩೨) ಮತ್ತು **ಪ್ರಜಾಪತಿರ್ಯಜ್ಞಮಸೃಜತ ಯಜ್ಞಂ ಸೃಷ್ಟಮನು ಬ್ರಹ್ಮಕ್ಷತ್ರೇ ಅಸೃಜ್ಯೇತಾಂ** (ಐ. ಬ್ರಾ. ೭–೧೯) ಎಂಬ ಎರಡು ಶ್ರುತಿವಾಕ್ಯಗಳ ಉದಾಹರಣೆಯನ್ನು ಕೊಟ್ಟಿದ್ದಾರೆ. ಎಂದರೆ ಪ್ರಜಾಪತಿಯು ಮೊದಲು ಯಜ್ಞವನ್ನು ಸೃಷ್ಟಿಸಿ ಅನಂತರ ತಾನೇ ಯಜ್ಞಮಾಡಿದನು; ಪ್ರಜಾಪತಿಯು ಮೊದಲು ಯಜ್ಞವನ್ನು ಸೃಷ್ಟಿಸಿ ಅನಂತರ ಬ್ರಾಹ್ಮಣ ಕ್ಷತ್ರಿಯರನ್ನು ಸೃಷ್ಟಿಸಿದನು, ಎಂದರ್ಥವು.

**ಇಮೇ ಮಯೂಖಾ ಉಪ ಸೇದುಃ ಸದಃ—** ಇಲ್ಲಿ **ಮಯೂಖಾಃ** ಎಂದರೆ ರಶ್ಮಿಗಳು. ಯಾವ ರಶ್ಮಿಗಳು ಎಂದರೆ ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟ ಅವನ ಪ್ರಾಣಭೂತರಾದ ದೇವತೆಗಳು. ಸೂರ್ಯನಿಂದ ರಶ್ಮಿಗಳು ಹೇಗೆ ಉತ್ಪನ್ನವಾಗುವವೋ ಅದರಂತೆ ಪ್ರಜಾಪತಿಯಿಂದ ಅವನ ಚೈತನ್ಯಾಂಶಯುಕ್ತರಾದ ದೇವತೆಗಳು

ಉತ್ಪನ್ನರಾಗುವರೆಂದರ್ಥವು. **ಸದಃ** ಎಂದರೆ ಯಜ್ಞಗೃಹವು. ಪ್ರಜಾಪತಿಯ ಪ್ರಾಣಭೂತರೂ ಸೃಷ್ಟಿಕಾರ್ಯದಲ್ಲಿ ತೊಡಗಿರುವವರೂ ಆದ ಈ ದೇವತೆಗಳು ವಿಶ್ವಸೃಷ್ಟಿಯೆಂಬ ಯಜ್ಞವನ್ನು ಮಾಡುವುದಕ್ಕಾಗಿ ಯಜ್ಞಗೃಹದಲ್ಲಿ ಬಂದು ಕುಳಿತರು.

**ಸಾಮಾನಿ ಚಕ್ರುಃ ತಸರಾಣಿ ಓತವೇ**— ಯಜ್ಞಗೃಹದಲ್ಲಿ ಬಂದು ಕುಳಿತು ಏನು ಮಾಡಿದರು ಎಂದರೆ— ಬಟ್ಟೆ ನೇಯುವವರು ಬಟ್ಟೆಯನ್ನು ನೇಯುವುದಕ್ಕಾಗಿ ಮೊದಲು ಉದ್ದವಾದ ದಾರಗಳನ್ನು ಒಂದರಪಕ್ಕದಲ್ಲೊಂದರಂತೆ ಸಮನಾಗಿ ಹರಡುವರು. ಇವುಗಳಿಗೆ ಹಾಸುದಾರಗಳೆಂದು ಹೆಸರು. ಅನಂತರ ಆ ದಾರಗಳ ಮಧ್ಯದಲ್ಲಿ ಅಡ್ಡಲಾಗಿ ಬೇರೆ ದಾರಗಳನ್ನು ಒಂದೊಂದಾಗಿ ಸೇರಿಸಿ ನೇಯುವರು. ಈ ಅಡ್ಡದಾರಗಳಿಗೆ ಹೊಕ್ಕುದಾರಗಳೆಂದು ಹೆಸರು. ವಸ್ತ್ರ ನಿರ್ಮಾಣದಲ್ಲಿ ಹಾಸುದಾರಗಳೂ ಹೊಕ್ಕುದಾರಗಳೂ ಎರಡೂ ಅವಶ್ಯಕವು. ಅದರಂತೆ ಯಜ್ಞಕರ್ಮವನ್ನು ನೆರವೇರಿಸುವಾಗ ದೇವತೆಗಳು ಋಙ್ಮಂತ್ರಗಳ ಜತೆಗೆ ರಥಂತರಾದಿ ಸಾಮಮಂತ್ರಗಳನ್ನು ಪಠಿಸಿದರು. ಋಙ್ಮಂತ್ರಗಳು ಹಾಸುದಾರಗಳಾದವು. ಸಾಮಮಂತ್ರಗಳು ಹೊಕ್ಕುದಾರಗಳಾದವು. ಮುಖ್ಯಾಭಿಪ್ರಾಯವೇನೆಂದರೆ-ಪ್ರಜಾಪತಿಯಿಂದ ಮೊದಲು ಸೃಷ್ಟವಾದ ವಿಷಯದಾದಿಸಂಚಭೂತಗಳೂ ಜಗದಾದಿಗಳೂ ಹಾಸುದಾರಗಳಾದವು. ದೇವತೆಗಳಿಂದ ಸೃಷ್ಟವಾದ ಇತರ ವಸ್ತುಜಾತಗಳು ಹೊಕ್ಕುದಾರಗಳಾದವು. ವಸ್ತ್ರನಿರ್ಮಾಣಕ್ಕೆ ಹಾಸು ಹೊಕ್ಕು ದಾರಗಳೆರಡೂ ಅವಶ್ಯಕವಾಗಿರುವಂತೆ ಸೃಷ್ಟಿಕಾರ್ಯಕ್ಕೆ ಪ್ರಜಾಪತಿಯ ಮತ್ತು ದೇವತೆಗಳ ಸೃಷ್ಟಿಗಳು ಅವಶ್ಯಕವಾಗಿರುವವು.

॥ ಸಂಹಿತಾಪಾಠಃ ॥

ಕಾಸೀತ್ಪ್ರಮಾ ಪ್ರತಿಮಾ ಕಿಂ ನಿದಾನಮಾಜ್ಯಂ ಕಿಮಾಸೀತ್ಪರಿಧಿಃ ಕ ಆಸೀತ್ ।
ಛಂದಃ ಕಿಮಾಸೀತ್ಪ್ರಉಗಂ ಕಿಮುಕ್ಥಂ ಯದ್ದೇವಾ ದೇವಮಯಜಂತ
ವಿಶ್ವೇ ॥ ೩ ॥

॥ ಪದಪಾಠಃ ॥

ಕಾ । ಆಸೀತ್ । ಪ್ರಽಮಾ । ಪ್ರತಿಽಮಾ । ಕಿಂ । ನಿಽದಾನಂ । ಆಜ್ಯಂ । ಕಿಂ । ಆಸೀತ್ । ಪರಿಽಧಿಃ । ಕಃ । ಆಸೀತ್ ।

ಛಂದಃ । ಕಿಂ । ಆಸೀತ್ । ಪ್ರಉಗಂ । ಕಿಂ । ಉಕ್ಥಂ । ಯತ್ । ದೇವಾಃ । ದೇವಂ । ಅಯಜಂತ ।
ವಿಶ್ವೇ ॥ ೩ ॥

॥ ಸಾಯಣಭಾಷ್ಯಂ ॥

ವಿಶ್ವಸರ್ಜನೋಪಾಯತ್ವೇನ ಪ್ರಜಾಪತಿನಾ ಸೃಷ್ಟೇ ಯಜ್ಞೇ ವಿಶ್ವಸ್ಯ ಸ್ರಷ್ಟಾರೋ ವಿಶ್ವಸೃಜೋ ದೇವಾ ವಿಶ್ವಸರ್ಜನಾಯ ತಂ ಯಜ್ಞಮನ್ವತಿಷ್ಠತ್ । ತಸ್ಮಿನ್ನಸಮಯೇ ಜಗತೋಽನುತ್ಪತ್ತೇರ್ಜಗದಂತಃ-

ಪಾತಿನೋ ಯಾಗೋಪಕರಣಭೂತಾಃ ಪದಾರ್ಥಾಃ ಕಥಮಾಸನ್ನಿತ್ಯನಯಾ ಪ್ರಶ್ನಃ ಕ್ರಿಯತೇ । ಯದ್ಯದಾ ವಿಶ್ವೇ ಸರ್ವೇ ಸಾಧ್ಯಾ ದೇವಾ ದೇವಂ ಪ್ರಜಾಪತಿಮಯಜಂತ ತದಾನೀಂ ತಸ್ಯ ಯಜ್ಞಸ್ಯ ಪ್ರಮಾ ಪ್ರಮಾಣಮಿಯತ್ತಾ ಕಾ ಕಥಂಭೂತಾಸೀತ್ । ತಥಾ ಪ್ರತಿಮಾ ಹವಿಷ್ಪ್ರತಿಯೋಗಿತ್ವೇನ ಮೀಯತೇ ನಿರ್ಮೀಯತ ಇತಿ ಪ್ರತಿಮಾ ದೇವತಾ । ಸಾ ಚ ತಸ್ಯ ಯಜ್ಞಸ್ಯ ಕಾಸೀತ್ । ತಥಾ ನಿದಾನಮಾದಿಕಾರಣಂ ಯಾಗೇಽಪ್ರವೃತ್ತಸ್ಯ ಪ್ರವರ್ತಕಂ ಫಲಂ ಕಿಮಾಸೀತ್ । ತಥಾಜ್ಯಂ ಘೃತಮೇತದುಪಲಕ್ಷಿತಂ ಹವಿರ್ವಾ ತಸ್ಯ ಯಜ್ಞಸ್ಯ ಕಿಮಾಸೀತ್ । ತಥಾ ಪರಿಧಿಃ । ಪರಿತೋ ಧೀಯಂತ ಇತಿ ತ್ರಯಃ ಪರಿಧಯೋ ಬಾಹುಮಾತ್ರಾಃ ಪಲಾಶಾದಿವೃಕ್ಷಜನ್ಯಾಃ ॥ ಪರಿಪೂರ್ವಾದ್ದಧಾತೇರುಪಸರ್ಗೇ ಘೋಃ ಕಿರಿತಿ ಕಿಪ್ರತ್ಯಯಃ । ಸಾಮಾನ್ಯಾಪೇಕ್ಷಮೇಕವಚನಂ ॥ ಪರಿಧಯಃ ಕ ಆಸನ್ನಿತ್ಯರ್ಥಃ । ತಥಾ ತಸ್ಯ ಯಜ್ಞಸ್ಯ ಗಾಯತ್ರ್ಯಾದಿಕಂ ಛಂದಃ ಕಿಮಾಸೀತ್ । ತಥಾ ಪ್ರಉಗಮುಕ್ಥಂ । ಉಪಲಕ್ಷಣಮೇತತ್ । ಆಜ್ಯಪ್ರಉಗಾದೀನ್ಯುಕ್ಥಾನಿ ಶಸ್ತ್ರಾಣಿ ವಾ ಕಾನ್ಯಾಸನ್ । ಏತೇಷು ಪ್ರಶ್ನೇಷು ತ್ರಯಾಣಾಮುತ್ತರಂ ದ್ವ್ಯೃಚೇನಾಹ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ವಿಶ್ವೇ ದೇವಾಃ**—ಸಾಧ್ಯರೇ ಮೊದಲಾದ ದೇವತೆಗಳು । **ದೇವಂ**—ಪ್ರಜಾಪತಿಯನ್ನು । **ಅಯಜಂತ**—ಯಜ್ಞಾನುಷ್ಠಾನದಿಂದ ಆರಾಧಿಸಿದರೋ ಆಗ (ಈ ಯಜ್ಞದ) । **ಪ್ರಮಾ**—ಪ್ರಮಾಣವು (ಯಾವರೀತಿ ಎಷ್ಟು ಕಾಲದವರೆಗೆ ಮಾಡಬೇಕೆಂಬುದು) । **ಕಾ ಆಸೀತ್**—ಯಾವುದಾಗಿದ್ದಿತು ? ಅಥವಾ ಹೇಗಿದ್ದಿತು । **ಪ್ರತಿಮಾ**—ದೇವತೆಯು ಯಾವುದು । **ನಿದಾನಂ**—ಕಾರಣವು ಎಂದರೆ ಯಜ್ಞಮಾಡಿದ ಫಲವು । **ಕಿಂ ಆಸೀತ್**—ಏನಾಗಿದ್ದಿತು । **ಆಜ್ಯಂ**—ಹವಿಸ್ಸಿಗಾಗಿ ಉಪಯೋಗಿಸುವ ಘೃತವು । **ಕಿಂ ಆಸೀತ್**—ಯಾವುದಾಗಿದ್ದಿತು । **ಪರಿಧಿಃ**—ಅಗ್ನಿಕುಂಡದ ನಾಲ್ಕು ದಿಕ್ಕುಗಳಲ್ಲಿಯೂ ರಕ್ಷೋಬಾಧನಿವೃತ್ತಾಗಿ ಇಡಲ್ಪಡುವ ಪಲಾಶಾದಿ ಕಾಷ್ಠಗಳು । **ಕಿಂ ಆಸೀತ್**—ಯಾವುದು । **ಛಂದಃ**—ಮಂತ್ರಗಳ ಛಂದಸ್ಸುಗಳು । **ಕಿಂ ಆಸೀತ್**—ಯಾವುದು ? । **ಪ್ರಉಗಂ ಉಕ್ಥಂ**—ಆಜ್ಯಪ್ರಉಗ ಮೊದಲಾದ ಉಕ್ಥಮಂತ್ರಗಳೂ ಶಸ್ತ್ರಮಂತ್ರಗಳೂ । **ಕಿಂ**—ಯಾವುದು ?.

॥ ಭಾವಾರ್ಥ ॥

ಸೃಷ್ಟಿಕಾಲದಲ್ಲಿ ಸಾಧ್ಯರೇ ಮೊದಲಾದ ದೇವತೆಗಳು ಸೃಷ್ಟಿಯನ್ನು ಮುಂದುವರೆಸುವುದಕ್ಕಾಗಿ ಪ್ರಜಾಪತಿಯನ್ನುದ್ದೇಶಿಸಿ ಯಜ್ಞಮಾಡಿದಾಗ ಪ್ರಪಂಚಸೃಷ್ಟಿಯು ಪೂರ್ತಿಯಾಗಿರಲಿಲ್ಲವಾದ್ದರಿಂದ ಯಜ್ಞಸಾಮಗ್ರಿಗಳು ಎಲ್ಲಿದ್ದವು ? ಅವು ಯಾವವು ? ಯಜ್ಞದ ಪರಿಮಿತಿ ಎಷ್ಟು ? ಎಂದರೆ ಯಜ್ಞವನ್ನು ಎಷ್ಟುಕಾಲ ಹೇಗೆ ಮಾಡಬೇಕು ? ಅದಕ್ಕೆ ದೇವತೆಯಾವುದು ? ಯಜ್ಞಫಲಯಾವುದು ? ಯಜ್ಞದಲ್ಲಿ ಉಪಯೋಗಿಸುವ, ಆಜ್ಯ, ಪರಿಧಿಗಳೆಂಬ ಸಮಿತ್ತುಗಳು ಯಾವವು ? ಛಂದಸ್ಸುಗಳು ಯಾವವು ? ಪ್ರಉಗ ಮೊದಲಾದ ಉಕ್ಥಮಂತ್ರಗಳೂ ಶಸ್ತ್ರಮಂತ್ರಗಳೂ ಯಾವವು?

## English Translation

What was the authority (of the sacrifice), what was the limitation, what was the first cause, what was the clarified butter, what was the enclo-

sure, what was the metre, what was the pra-uga text, when the universal gods offered worship to the gods ?

॥ ವಿಶೇಷವಿಷಯಗಳು ॥

ಪ್ರಜಾಪತಿಯು ಮೊದಲು ಯಜ್ಞವನ್ನು ಸೃಷ್ಟಿಮಾಡಿದನೆಂದೂ, ವಿಶ್ವಸೃಷ್ಟಿಕಾರ್ಯವನ್ನು ಮುಂದುವರಿಸುವುದಕ್ಕಾಗಿ ದೇವತೆಗಳು ಪ್ರಜಾಪತಿಯಿಂದ ಸೃಷ್ಟವಾದ ಆ ಯಜ್ಞವನ್ನು ಅನುಷ್ಠಾನಮಾಡಿದರೆಂದೂ ಹಿಂದೆ ಹೇಳಿದೆಯಷ್ಟೆ. ಆ ಕಾಲದಲ್ಲಿ ಜಗತ್ತಿನ ಸೃಷ್ಟಿಯು ಪೂರ್ತಿಯಾಗಿರಲಿಲ್ಲ., ಹೀಗಿದ್ದರೂ ದೇವತೆಗಳು ಯಜ್ಞವನ್ನು ಹೇಗೆ ಮಾಡಿದರು ? ಅವರು ಯಜ್ಞಕ್ಕಾಗಿ ಯಾವ ಯಾವ ಸಾಮಗ್ರಿಗಳನ್ನು ಉಪಯೋಗಿಸಿದರು ? ಎಂದು ಋಷಿಯು ಈ ಋಕ್ಕಿನಲ್ಲಿ ಪ್ರಶ್ನೆಮಾಡಿ ಮುಂದಿನ ಎರಡು ಋಕ್ಕುಗಳಲ್ಲಿ ಅದಕ್ಕೆ ಪ್ರತ್ಯುತ್ತರವನ್ನು ಹೇಳಿದಾನೆ. ಯಜ್ಞದಲ್ಲಿ ಅವಶ್ಯಕವಾಗಿ ಬೇಕಾದ ಕೆಲವು ವಸ್ತು ಎಂದರೆ ಸಾಮಗ್ರಿಗಳ ಹೆಸರುಗಳು ಇಲ್ಲಿ ಉಕ್ತವಾಗಿವೆ, ಯಜ್ಞಮಾಡುವ ವಿಧಾನ ಮತ್ತು ಕಾಲ, ಅದರ ಫಲ, ಹೋಮಮಾಡುವುದಕ್ಕಾಗಿ ಉಪಯೋಗಿಸುವ ಆಜ್ಯ (ಘೃತ), ಅಗ್ನಿಯ ನಾಲ್ಕು ದಿಕ್ಕುಗಳಲ್ಲಿಯು ಇಡುವ ಪರಿಧಿಗಳು, ಛಂದಸ್ಸುಗಳು, ಪ್ರಉಗ, ಉಕ್ಥಮೊದಲಾದ ಶಸ್ತ್ರಮಂತ್ರಗಳು. ಇವೇ ಆ ಯಜ್ಞಸಾಮಗ್ರಿಗಳು. ಆ ಕಾಲದಲ್ಲಿ ಎಂದರೆ ದೇವತೆಗಳು ಸೃಷ್ಟಿಮಾಡುವುದಕ್ಕಾಗಿ ಅನುಷ್ಠಾನಮಾಡಿದ ಯಜ್ಞದಲ್ಲಿ ಈ ಯಜ್ಞಸಾಮಗ್ರಿಗಳಿಗೆ ಬದಲಾಗಿ ಯಾವ ಯಾವ ಸಾಮಗ್ರಿಗಳನ್ನು ಉಪಯೋಗಿಸಿದರು ಎಂಬ ಪ್ರಶ್ನೆಗಳು ಮಾತ್ರ ಈ ಋಕ್ಕಿನಲ್ಲಿ ಪ್ರತಿಪಾದಿತವಾಗಿವೆ. ಇದಕ್ಕೆ ಮುಂದಿನ ಎರಡು ಋಕ್ಕುಗಳಲ್ಲಿ ಪ್ರತ್ಯುತ್ತರವನ್ನು ಹೇಳಲಾಗಿದೆ.

॥ ಸಂಹಿತಾಪಾಠಃ ॥

ಅಗ್ನೇರ್ಗಾಯತ್ರ್ಯಭವತ್ಸಯುಗ್ವೋಷ್ಣಿಹಯಾ ಸವಿತಾ ಸಂ ಬಭೂವ ।
ಅನುಷ್ಟುಭಾ ಸೋಮ ಉಕ್ಥೈರ್ಮಹಸ್ವಾನ್ಬೃಹಸ್ಪತೇರ್ಬೃಹತೀ ವಾಚ-
ಮಾವತ್ ॥ ೪ ॥

॥ ಪದಪಾಠಃ ॥

ಅಗ್ನೇಃ । ಗಾಯತ್ರೀ । ಅಭವತ್ । ಸ಼ಯುಗ್ವಾ । ಉಷ್ಣಿಹಯಾ । ಸವಿತಾ । ಸಂ । ಬಭೂವ ।
ಅನುಽಸ್ತುಭಾ । ಸೋಮಃ । ಉಕ್ಥೈಃ । ಮಹಸ್ವಾನ್ । ಬೃಹಸ್ಪತೇಃ । ಬೃಹತೀ । ವಾಚಂ । ಅವತ್ ॥೪॥

॥ ಸಾಯಣಭಾಷ್ಯಂ ॥

ಸಯುಗ್ವಾ ಸಹಯುಕ್ತಾಗ್ನೇಃ ಸಹಾಯಭೂತಾ ಗಾಯತ್ರ್ಯಭವತ್ । ಯಷ್ಟವ್ಯಾತ್ಪ್ರಜಾಪತೇ-ರ್ಮುಖಾದಜಾಯತ । ದೇವತಾಸು ಮಧ್ಯೇಽಗ್ನಿಶ್ಛಂದಃಸು ಗಾಯತ್ರೀ ಚೋಭಾವಪ್ಯಜಾಯೇತಾಮಿ-ತ್ಯರ್ಥಃ । ತಥಾ ಚ ತೈತ್ತಿರೀಯಕಂ । ಪ್ರಜಾಪತಿರಕಾಮಯತ ಪ್ರಜಾಯೇಯೇತಿ ಸ ಮುಖತಸ್ತ್ರಿವೃತಂ

**ನಿರಮಿಮೀತ ತಮಗ್ನಿರ್ದೇವತಾನ್ವಸೃಜ್ಯತ ಗಾಯತ್ರೀ ಛಂದಃ । ತೈ. ಸಂ. ೭-೧-೧-೪ । ಇತಿ । ಉಷ್ಣಿಹ-ಯೋಷ್ಣಿಕ್ಛಂದಸಾ ಸಹ ಸವಿತಾ ದೇವಃ ಸಂ ಬಭೂವ । ತಸ್ಮಾತ್ಪ್ರಜಾಪತೇರ್ಜಜ್ಞೇ ॥ ಟಾಪಂ ಚಾಪಿ ಹಲಂತಾನಾಮಿತಿ ವಚನಾದುಷ್ಣಿಹಶಬ್ದಾಟ್ಟಾಪ್ ॥ ತಥಾ ಮಹಸ್ವಾಂಸ್ತೇಜಸ್ವೀ ಸೋಮ ಉಕ್ಥೈಃ ಸ್ತುತಶಸ್ತ್ರೈರನುಷ್ಟುಭಾನುಷ್ಟುಪ್ಛಂದಸಾ ಚ ಸಾರ್ಧಂ ತಸ್ಮಾದೇವ ಪ್ರಜಾಪತೇರಜಾಯತ । ತಥಾ ಬೃಹ-ಸ್ಪತೇರ್ದೇವಸ್ಯ ವಾಚಂ ವಾಕ್ಯಂ ಬೃಹತೀಚ್ಛಂದ ಆದತ್ । ಅರಕ್ಷತ್ । ಆಗಚ್ಛದ್ವಾ । ಬೃಹತ್ಯಾ ಸಾರ್ಧಂ ಬೃಹಸ್ಪತಿರಪಿ ತಸ್ಮಾತ್ಪ್ರಜಾಪತೇರ್ಜಜ್ಞ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಅಗ್ನೇಃ**—ಅಗ್ನಿಗೆ । **ಗಾಯತ್ರೀ**—ಗಾಯತ್ರೀಛಂದಸ್ಸು । **ಸಯುಗ್ವಾ**—ಸಹಾಯಭೂತವುಂತ್ರವಾಗಿ । **ಅಭವತ್**—ಆಯಿತು । **ಸವಿತಾ**—ಸವಿತೃದೇವನು । **ಉಷ್ಣಿಹಯಾ**—ಉಷ್ಣಿಕ್ ಛಂದಸ್ಸಿನಿಂದ ಸಹಿತವಾಗಿ । **ಸಂ ಬಭೂವ**—ಆದನು । **ಮಹಸ್ವಾನ್**—ತೇಜಸ್ವಿಯಾದ । **ಸೋಮಃ**—ಸೋಮನು । **ಉಕ್ಥೈಃ**—ಉಕ್ಥಮಂತ್ರಗಳಿಂದಲೂ / **ಅನುಷ್ಟುಭಾ**—ಅನುಷ್ಟುಪ್‌ಛಂದಸ್ಸಿನಿಂಲೂ ಯುಕ್ತನಾದನು (ಹಾಗೆಯೇ **ಬೃಹಸ್ಪತೇಃ ವಾಚಂ**—ಬೃಹಸ್ಪತಿಯನ್ನು ಸ್ತುತಿಸುವ ಮಂತ್ರವು । **ಬೃಹತೀ**—ಬೃಹತೀ ಛಂದಸ್ಸಿನದಾಗಿ । **ಆವತ್**—ಆಯಿತು.

॥ ಭಾವಾರ್ಥ ॥

ಅಗ್ನಿಗೆ ಗಾಯತ್ರೀ ಛಂದಸ್ಸು ಎಂದರೆ ಗಾಯತ್ರೀ ಛಂದಸ್ಸಿನ ಮಂತ್ರವು ಸಹಾಯಕವಾಯಿತು. ಸವಿತೃವಿಗೆ ಉಷ್ಣಕ್ ಛಂದಸ್ಸು, ತೇಜಸ್ವಿಯಾದ ಸೋಮನಿಗೆ ಉಕ್ಥ ಮಂತ್ರಗಳೂ ಮತ್ತು ಅನುಷ್ಟುಪ್ ಛಂದಸ್ಸೂ ಬೃಹಸ್ಪತಿಗೆ ಬೃಹತೀಛಂದಸ್ಸೂ ಅವರನ್ನು ಸ್ತುತಿಸಲು ಸಹಾಯಕವಾದ ಮಂತ್ರಗಳಾದವು.

## English Translation

Gayatri became the associate of Agni, Savitri became combined with Ushnik, Soma radiant with sacred praises (was united) with Anushtubh, Brihati gave efficacy to the words of Brihaspathi.

॥ ವಿಶೇಷವಿಷಯಗಳು॥

ಹಿಂದಿನ ಋಕ್ಕಿನಲ್ಲಿ ಯಜ್ಞಸಾಧನಸಾಮಗ್ರಿಗಳಾವವು. ? ದೇವತೆಗಳು ತಮ್ಮ ಯಜ್ಞಾನುಷ್ಠಾನದಲ್ಲಿ ಯಾವ ಸಾಮಗ್ರಿಗಳನ್ನು ಉಪಯೋಗಿಸಿದರು ಎಂದು ಪ್ರಶ್ನೆಮಾಡಿ ಅದಕ್ಕೆ ಪ್ರತ್ಯುತ್ತರವಾಗಿ ಈ ಋಕ್ಕಿನಲ್ಲಿ ಯಾವ ಛಂದಸ್ಸುಗಳನ್ನು ಉಪಯೋಗಿಸಿದರು ಎಂಬ ಪ್ರಶ್ನೆಗೆ ಮಾತ್ರ ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಋಷಿಯು ಪ್ರತ್ಯುತ್ತರವನ್ನು ಹೇಳಿದಾನೆ. ಆಜ್ಯ, ಪರಿಧಿ ಮೊದಲಾದ ಸಾಮಗ್ರಿಗಳ ಪ್ರಸ್ತಾಪವಿಲ್ಲ.

ಏಕೆಂದರೆ ಛಂದಸ್ಸೇ ಯಜ್ಞದ ಸಾರವು. ಆದ್ದರಿಂದ ಛಂದಸ್ಸುಗಳ ವಿಷಯವನ್ನು ವಿವರಿಸುವುದರಿಂದ ಯಜ್ಞದ ಸಮಸ್ತ ಅಂಗಗಳನ್ನೂ ವಿವರಿಸಿದಂತಾಯಿತು ಎಂಬ ಭಾವನೆಯಿಂದ ಋಷಿಯು ಇದನ್ನು ಮಾತ್ರ ವಿವರಿಸಿರ ಬಹುದು, ಯಜ್ಞಕ್ಕೂ ಛಂದಸ್ಸುಗಳಿಗೂ ಇರುವ ಸಂಬಂಧದ ವಿಷಯವಾಗಿ ತೈತ್ತಿರೀಯಸಂಹಿತೆಯಲ್ಲಿ ಈ ರೀತಿ ಹೇಳಿದೆ—

**ಪ್ರಜಾಪತಿರ್ದೇವಾಸುರಾನಸೃಜತ ತೆದನು ಯಜ್ಞೋಽಸೃಜ್ಯತ ಯಜ್ಞಂ ಛಂದಾಗ್ಂಸಿ ತೇ ವಿಷ್ವಂಚೋ ವ್ಯಕ್ರಾಮನ್ಸೋಽಸುರಾನನು ಯಜ್ಞೋಽಪಾಕ್ರಾಮದ್ಯಜ್ಞಂ ಛಂದಾಗ್ಂಸಿ ತೇ ದೇವಾ ಅಮನ್ಯಂತಾಮೀ ವಾ ಇದಮಭೂವನ್ ಯದ್ವಯಗ್ಂಸ್ಮ ಇತಿ ತೇ ಪ್ರಜಾಪತಿ-ಮುಪಧಾವನ್ಸೋಽಬ್ರವೀತ್ಪ್ರಜಾಪತಿಶ್ಛಂದಸಾಂ ವೀರ್ಯಮಾದಾಯ ತದ್ವಃ ಪ್ರದಾಸ್ಯಾಮೀತಿ ಸ ಛಂದಸಾಂ ವೀರ್ಯಮಾದಾಯ ತದೇಭ್ಯಃ ಪ್ರಾಯಚ್ಛತ್ತದನು ಛಂದಾಗ್ಸ್ಯಪಾಕ್ರಾಮಞ್ಛಂದಾಗ್ಂಸಿ ಯಜ್ಞಸ್ತತೋ ದೇವಾ ಅಭವನ್ಪರಾಸುರಾ ಯ ಏವಂ ಛಂದಸಾಂ ವೀರ್ಯಂ ವೇದಾ ಶ್ರಾವಯಾಸ್ತು ಶ್ರೌಷಡ್ಯಜ ಯೇ ಯಜಾಮಹೇ ವಷಟ್ಕಾರೋ ಭವತ್ಯಾತ್ಮನಾ ಪರಾಸ್ಯ ಭ್ರಾತೃವ್ಯೋ ಭವತಿ ।** (ತೈ. ಸಂ ೩-೩-೭-೧, ೨)

ಪೂರ್ವದಲ್ಲಿ ಪ್ರಜಾಪತಿಯು ದೇವತೆಗಳನ್ನೂ ಅಸುರರನ್ನೂ ಸೃಷ್ಟಿಮಾಡಿದನು. ಅನಂತರ ಯಜ್ಞವನ್ನು ಸೃಷ್ಟಿಸಿದನು, ಯಜ್ಞವನ್ನು ಸೃಷ್ಟಿಸಿದ ನಂತರ ಛಂದಸ್ಸುಗಳನ್ನು ಸೃಷ್ಟಿ ಮಾಡಿದನು, ಬಳಿಕ ದೇವಾಸುರರು ಪ್ರಜಾಪತಿಯ ಬಳಿಗೆ ಬಂದರು. ಆಗ ಯಜ್ಞವು ಪ್ರಜಾಪತಿಯನ್ನು ಬಿಟ್ಟು ಅಸುರರನ್ನು ಹಿಂಬಾಲಿಸಿ ಹೊರಟುಹೋಯಿತು. ಯಜ್ಞವು ಹೋದಮೇಲೆ ಯಜ್ಞವನ್ನನುಸರಿಸಿ ಛಂದಸ್ಸುಗಳೂ ಹೊರಟುಹೋದವು, ಇದನ್ನು ನೋಡಿ ದೇವತೆಗಳು ಯಜ್ಞವು ನಮ್ಮನ್ನು ಬಿಟ್ಟು ಹೊರಟುಹೋಗಿ ಅಸುರರಲ್ಲಿ ಸೇರಿದ್ದರಿಂದ ಇನ್ನು ಮುಂದೆ ಯುದ್ಧಾದಿಗಳಲ್ಲಿ ಅಸುರರು ನಮ್ಮನ್ನು ಸೋಲಿಸಿ ಜಯಶಾಲಿಗಳಾಗುವರು. ನಾವು ಪರಾಜಿತರಾಗಬೇಕಾಗುವದು ಎಂದು ಯೋಚಿಸಿ ಪ್ರಜಾಪತಿಯ ಬಳಿಗೆ ಓಡಿಬಂದು ಆ ವಿಷಯವನ್ನು ಅವನಿಗೆ ತಿಳಿಸಲು, ಪ್ರಜಾಪತಿಯು ದೇವತೆಗಳನ್ನುದ್ದೇಶಿಸಿ— ಎಲೈ ದೇವತೆಗಳೇ ಭಯಪಡಬೇಡಿ, ಆ ಛಂದಸ್ಸುಗಳ ವೀರ್ಯವನ್ನು ಎಂದರೆ ಸಾರವನ್ನು ಸಂಗ್ರಹಿಸಿ ನಿಮಗೆ ಕೊಡುವೆನು ಅದರಿಂದ ನೀವು ಜಯಶಾಲಿಗಳಾಗಬಹುದು ಎಂದು ಹೇಳಿ ಛಂದಸ್ಸುಗಳ ಸಾರವನ್ನು ತೆಗೆದು ದೇವತೆಗಳಿಗೆ ಕೊಟ್ಟನು. ಛಂದಸ್ಸುಗಳ ಸಾರವನ್ನು ಪ್ರಜಾಪತಿಯು ತೆಗೆದುಕೊಂಡದ್ದರಿಂದ ಛಂದಸ್ಸುಗಳು ನಿರ್ವೀರ್ಯವಾಗಿ ಏನೂ ಮಾಡಲಾರದೆ ಅಸುರರನ್ನು ಬಿಟ್ಟು ಪುನಃ ದೇವತೆಗಳ ಬಳಿಗೆ ಬಂದವು ಯಜ್ಞವೂ ಆ ಛಂದಸ್ಸುಗಳನ್ನೇ ಅನುಸರಿಸಿ ದೇವತೆಗಳ ಬಳಿಗೆ ಬಂದಿತು. ಯಜ್ಞವು ತಮ್ಮ ಬಳಿಗೆ ಬಂದ ಮೇಲೆ ಅದನ್ನು ಅನುಷ್ಠಾನ ಮಾಡಿ ದೇವತೆಗಳು ಅಸುರರನ್ನು ಸೋಲಿಸಿದರು. ಛಂದಸ್ಸುಗಳ ಸಾರವು (ವೀರ್ಯವು) ಯಾವುದು ಎಂದರೆ—ಆ ಶ್ರಾವಯ, ಅಸ್ತು ಶ್ರೌಷಟ್, ಯಜ, ಯೇ ಯಜಾಮಹೇ, ವಷಟ್ಕಾರಃ ಎಂಬಿವೇ ಛಂದಸ್ಸುಗಳ ಸಾರಾಂಶವಾದ ಮಂತ್ರಗಳು. ಇವುಗಳನ್ನು ತೆಗೆದು ಪ್ರಜಾಪತಿಯು ದೇವತೆಗಳಿಗೆ ಕೊಟ್ಟನು ಈ ವಿಷಯವನ್ನು ಯಾವ ಪುರುಷನು ತಿಳಿಯುವನೋ ಅವನು ಜಯಶೀಲನಾಗುವನು, ಅವನ ಶತ್ರುಗಳು ಪರಾಜಿತರಾಗುವರು ಎಂದು ಛಂದಸ್ಸುಗಳಿಗೂ ಯಜ್ಞಕ್ಕೂ ಇರುವ ಸಂಬಂಧವನ್ನು ತಿಳಿಸಿದೆ.

**ಅಗ್ನೇಃ ಗಾಯತ್ರೀ ಅಭವತ್ ಸಯುಗ್ವಾ**— ಇನ್ನು ಯಾವ ಯಾವ ದೇವತೆಗಳಿಗೆ ಯಾವ ಯಾವ ಛಂದಸ್ಸುಗಳು ಪ್ರಿಯವಾದವು ? ಆ ದೇವತೆಗಳನ್ನು ಯಾವ ಛಂದಸ್ಸಿನ ಮಂತ್ರಗಳಿಂದ ಸ್ತುತಿಸಬೇಕು ? ಎಂಬ ವಿಷಯವನ್ನು ತಿಳಿಸಲಾಗುವುದು. ಮೇಲೆ ಹೇಳಿದಂತೆ ಅಗ್ನಿಗೆ ಗಾಯತ್ರೀಛಂದಸ್ಸಿನ ಮಂತ್ರಗಳೇ ಹಿತಕರವು. ಏಕೆಂದರೆ—

**ಪ್ರಜಾಪತಿರಕಾಮಯತ ಪ್ರಜಾಯೇಯೇತಿ ಸ ಮುಖತಸ್ತ್ರಿವೃತಂ ನಿರಮಿಮೀತ ತಮಗ್ನಿರ್ದೇವತಾ-**

**ನ್ನಸೃಜ್ಯತ ಗಾಯತ್ರೀಛಂದೋ ರಥಂತರಗ್ಂ ಸಾಮ ಬ್ರಾಹ್ಮಣೋ ಮನುಷ್ಯಾಣಾಮಜಃ ಪಶೂನಾಂ ತಸ್ಮಾತ್ತೇ ಮುಖ್ಯಾ ಮುಖತೋಽಹ್ಯಸೃಜ್ಯಂತ ||**

(ತೈ. ಸಂ ೭-೧-೧-೪)

ಪ್ರಜಾಪತಿಯು ಸೃಷ್ಟಿಮಾಡುವಾಗ ತನ್ನ ಮುಖದಿಂದ ತ್ರಿವೃತ್‌ಸ್ತೋಮ, ಅಗ್ನಿ, ಗಾಯತ್ರೀಛಂದಸ್ಸು ಇವುಗಳನ್ನು ಸೃಷ್ಟಿ ಮಾಡಿದನು. ಆದ್ದರಿಂದ ಅಗ್ನಿಗೆ ತ್ರಿವೃತ್‌ಸ್ತೋಮವೂ, ಗಾಯತ್ರೀಛಂದಸ್ಸೂ ಹಿತಕರವು. ಇದಲ್ಲದೆ ಸಾಮಮಂತ್ರಗಳಲ್ಲಿ ರಥಂತರಸಾಮವೂ, ಮನುಷ್ಯರಲ್ಲಿ ಬ್ರಾಹ್ಮಣನೂ, ಪಶುಗಳಲ್ಲಿ ಆಡೂ ಪ್ರಜಾಪತಿಯ ಮುಖದಿಂದ ಉತ್ಪನ್ನವಾದ್ದರಿಂದ ಇವುಗಳಿಗೆ ವಿಶೇಷವಾಗಿ ಪ್ರಾಧಾನ್ಯತೆ ಇದೆ. ಎಂದರೆ ಯಜ್ಞದಲ್ಲಿ ಅಗ್ನಿಗೂ ತ್ರಿವೃತ್ ಸ್ತೋಮಕ್ಕೂ, ಗಾಯತ್ರೀಛಂದಸ್ಸಿಗೂ ಪ್ರಾಮುಖ್ಯತೆಯನ್ನು ಹೇಳಿದೆ.

**ಉಷ್ಣಿಹಾ ಸವಿತಾ ಸಂಬಭೂವ**—ಉಷ್ಣಿಕ್‌ಛಂದಸ್ಸಿನ ಮಂತ್ರಗಳು ಸವಿತೃದೇವನಿಗೆ ಪ್ರಿಯವಾದವು ಆದ್ದರಿಂದ ಆ ಛಂದಸ್ಸಿನ ಮಂತ್ರಗಳಿಂದ ಸವಿತೃದೇವನನ್ನು ಸ್ತುತಿಸಬೇಕು.

**ಅನುಷ್ಟುಭಾ ಸೋಮಃ ಉಕ್ಥೈಃ ಮಹಸ್ವಾನ್**—ತೇಜಸ್ವಿಯಾದ ಸೋಮದೇವನಿಗೆ ಅನುಷ್ಟುಪ್ ಛಂದಸ್ಸು ಪ್ರಿಯವು ಆದ್ದರಿಂದ ಆ ಛಂದಸ್ಸಿನ ಮಂತ್ರಗಳಿಂದ ಮಾಧ್ಯಂದಿನ ಸವನದಲ್ಲಿ ಸೋಮನನ್ನು ಸ್ತುತಿಸುವರು ಮತ್ತು ಉಕ್ಥ ಮಂತ್ರಗಳಿಂದ ಸ್ತುತಿಸುವರು ಉಕ್ಥ ಮಂತ್ರಗಳ ಸ್ವರೂಪವನ್ನು ನಾವು ಹಿಂದೆಯೇ (ಭಾಗ 8 ಪುಟ 252) ವಿಸ್ತಾರವಾಗಿ ವಿವರಿಸಿದೇವೆ.

**ಬೃಹಸ್ಪತೇಃ ಬೃಹತೀ ವಾಚಂ ಆವತ್**—ಬೃಹಸ್ಪತಿಗೆ ಬೃಹತೀಛಂದಸ್ಸು ಪ್ರಿಯವಾಯಿತು. ಆದ್ದರಿಂದ ಬೃಹಸ್ಪತಿಯನ್ನು ಬೃಹತೀ ಛಂದಸ್ಸಿನ ಮಂತ್ರಗಳಿಂದ ಸ್ತುತಿಸಬೇಕು.

|| ಸಂಹಿತಾಪಾಠಃ ||

ವಿರಾಣ್ಮಿತ್ರಾವರುಣಯೋರಭಿಶ್ರೀರಿಂದ್ರಸ್ಯ ತ್ರಿಷ್ಟುಬಿಹ ಭಾಗೋ ಅಹ್ನಃ ।
ವಿಶ್ವಾನ್ದೇವಾಞ್ಜಗತ್ಯಾ ವಿವೇಶ ತೇನ ಚಾಕ್ಲೃಪ್ರ ಋಷಯೋ ಮನುಷ್ಯಾಃ ||

|| ಪದಪಾಠಃ ||

ವಿऽರಾಟ್ । ಮಿತ್ರಾವರುಣಯೋಃ । ಅಭಿऽಶ್ರೀಃ । ಇಂದ್ರಸ್ಯ । ತ್ರಿऽಸ್ತುಪ್ । ಇಹ । ಭಾಗಃ । ಅಹ್ನಃ ।
ವಿಶ್ವಾನ್ । ದೇವಾನ್ । ಜಗತೀ । ಆ । ವಿವೇಶ । ತೇನ । ಚಾಕ್ಲೃಪ್ರೇ । ಋಷಯಃ । ಮನುಷ್ಯಾಃ ||೫||

|| ಸಾಯಣಭಾಷ್ಯಂ ||

**ಅಪಿ ಚ ಮಿತ್ರಾವರುಣಯೋರ್ದೇವಯೋರ್ವಿರಾಟ್ಛಂದೋಽಭಿಶ್ರೀಃ । ಅಭಿಶ್ರಿತಾ । ಆಶ್ರಿತಾಸೀತ್ । ವಿರಾಜಾ ಸಹ ಮಿತ್ರಾವರುಣಾವಪಿ ಪ್ರಜಾಪತೇಃ ಸಕಾಶಾದಜಾಯೇತಾಮಿತ್ಯರ್ಥಃ । ಇಹಾಸ್ಮಿನ್ಯಜ್ಞೇಽಹ್ನಃ**

ಸವನತ್ರಯರೂಪಸ್ಯ ಭಾಗೋ ಮಧ್ಯಂದಿನಸವನಾಖ್ಯೋಽಂಶಸ್ತ್ರಿಷ್ಟುಪ್ಛಂದಶ್ಚೇಂದ್ರಸ್ಯಾಭಿಶ್ರಯಣೀಯಾ-ವಾಸ್ತಾಂ । ತಾವಿಂದ್ರಶ್ಚ ಪ್ರಜಾಪತೇಃ ಸಕಾಶಾದಜಾಯಂತೇತ್ಯರ್ಥಃ । ತಥಾ ಚ ತೈತ್ತಿರೀಯಕಂ । ಉರಸೋ ಬಾಹುಭ್ಯಾಂ ಪಂಚದಶಂ ನಿರಮಿಮೀತ ತಮಿಂದ್ರೋ ದೇವತಾನ್ವಸೃಜ್ಯತ ತತ್ರ ತ್ರಿಷ್ಟುಪ್ಛಂ-ದೋ ಬೃಹತ್ಸಾಮ । ತೈ. ಸಂ. ೭-೧-೧-೪ । ಇತಿ । ತಥಾ ವಿಶ್ವಾನ್ಸರ್ವಾನ್ದೇವಾಞ್ಜಗತೀಛಂದ ಆ ವಿವೇಶ । ಪ್ರವಿಷ್ಟವತೀ । ವಿಶ್ವೇ ದೇವಾ ಜಗತೀ ಚ ಪ್ರಜಾಪತೇರಜಾಯಂತೇತ್ಯರ್ಥಃ । ತಥಾ ಚ ತೈತ್ತಿರೀಯಕಂ । ತಂ ವಿಶ್ವೇ ದೇವಾ ದೇವತಾ ಅನ್ವಸೃಜ್ಯಂತ ಜಗತೀ ಛಂದೋ ವೈರೂಪಂ ಸಾಮ । ತೈ. ಸಂ. ೭-೧ ೧-೫ । ಇತಿ । ಉಕ್ತೇನ ಪ್ರಕಾರೇಣ ಪ್ರತಿಮಾ ಕಾಸೀತ್ ಛಂದಃ ಕಿಮಾಸೀತ್ ಪ್ರಉಗಂ ಕಿಮುಕ್ಥಮಿತಿ ತ್ರಯಾ-ಣಾಮುತ್ತರಂ ಜಾತಂ । ಆಜ್ಯಂ ಕಿಮಾಸೀತ್ ಪರಿಧಿಃ ಕ ಆಸೀದಿತ್ಯನಯೋರುತ್ತರಂ ಪುರುಷಸೂಕ್ತೇ ದ್ರಷ್ಟವ್ಯಂ । ತತ್ರ ಹ್ಯೇವಮಾಮ್ನಾಯತೇ । ದೇವಾ ಯಜ್ಞಮತನ್ವತ ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ । ಋ. ೧೦-೯೦ ೬ । ಸಪ್ತಾಸ್ಯಾಸನ್ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ । ಋ. ೧೦-೯೦-೧೫ । ಇತಿ । ಅಯಮರ್ಥಃ । ಸರ್ವರಸೋತ್ಪಾದಕೋ ವಸಂತಸ್ತಸ್ಯ ಜಗತ್ಸರ್ಜನಸಾಧನಸ್ಯ ಯಜ್ಞಸ್ಯಾಜ್ಯಮಾಸೀತ್ । ಆಜ್ಯದಧ್ಯಾದಿಭೀ ರಸೈಃ ಸಾರ್ಧಂ ತಾದೃಶೋ ವಸಂತೋಽಜಾಯತೇತ್ಯರ್ಥಃ । ಸರ್ವರಸಾನಾಂ ಶೋಷಕೋ ಗ್ರೀಷ್ಮ ಋತುರಿಧ್ಮ ಆಸೀತ್ । ಶುಷ್ಕೈಃ ಕಾಷ್ಠೈಃ ಸಾರ್ಧಂ ಗ್ರೀಷ್ಮೋಽ-ಜಾಯತೇತ್ಯರ್ಥಃ । ಪಚ್ಯಮಾನವ್ರೀಹಿಯುಕ್ತಃ ಶರದೃತುಸ್ತಸ್ಯ ಯಜ್ಞಸ್ಯ ಹವಿರಾಸೀತ್ । ಸಪ್ತ ಚ್ಛಂದಾಂಸಿ ತ್ರಿಃ ಸಪ್ತೈಕವಿಂಶತಿಧಾ ಭೂತ್ವಾಷ್ಟಾದಶ ಸಮಿಧಸ್ತ್ರಯಃ ಪರಿಧಯಶ್ಚಾಸನ್ । ಕಾಸೀತ್ಪ್ರಮಾ ಪ್ರತಿಮಾ ಕಿಂ ನಿದಾನಮಿತ್ಯನಯೋರಪಿ ಪ್ರಶ್ನಯೋರಪ್ಯೇವಮುತ್ತರಂ ಪೂರ್ವೇ ವಿಶ್ವಸೃಜೋಽಮೃತಾಃ ಶತಂ ವರ್ಷಸಹಸ್ರಾಣಿ ದೀಕ್ಷಿತಾಃ ಸತ್ರಮಾಸತೇತಿ ಏತೇನ ವೈ ವಿಶ್ವಸೃಜ ಇದಂ ವಿಶ್ವಮಸೃಜಂತೇತಿ ಚ ತೈತ್ತಿರೀಯಕೇ । ತೈ. ಬ್ರಾ. ೩-೧೨ ೯-೨ ರಿಂದ ೮ । ಸಮಾಮ್ನಾಯತೇ । ಅತಸ್ತಸ್ಯ ಯಜ್ಞಸ್ಯ ಸಹಸ್ರಸಂವ-ತ್ಸರಪರಿಮಿತಃ ಕಾಲಃ ಪ್ರಮಾಣಂ । ವಿಶ್ವಸ್ಯ ಜಗತಃ ಸರ್ಜನಮಾದಿಕಾರಣಂ ಪ್ರವರ್ತಕಂ ಫಲಮಿತ್ಯರ್ಥಃ। ಏತದುಕ್ತಂ ಭವತಿ । ಯದಾ ವಿಶ್ವಸೃಜೋ ದೇವಾ ದೇವಂ ಪ್ರಜಾಪತಿಂ ವಿಶ್ವಸೃಜಾಮಯನಾಖ್ಯೇನ ಯಾಗೇನಾಯಜನ್ ತದೋಕ್ತಾಃ ಸರ್ವಯಾಗೋಪಕಾರಾಃ ಪ್ರಜಾಪತೇಃ ಸಕಾಶಾದಜಾಯಂತೇತಿ । ಯತೋಽಗ್ನ್ಯಾದಿದೇವತಾಭಿಃ ಸಹ ಗಾಯತ್ರ್ಯಾದೀನಿ ಸಪ್ತ ಚ್ಛಂದಾಂಸಿ ಜಾತಾನಿ ಅತೋ ಹೇತೋ-ಸ್ತೇಷಾಂ ಛಂದಸಾಮಗ್ನ್ಯಾದಯೋ ದೇವತಾ ಇತಿ । ಛಂದೋವಿಚಿತೌ ಸೂತ್ರಿತಂ ಚ । ಅಗ್ನಿಃ ಸವಿತಾ ಸೋಮೋ ಬೃಹಸ್ಪತಿರ್ಮಿತ್ರಾವರುಣಾವಿಂದ್ರೋ ವಿಶ್ವೇ ದೇವಾ ದೇವತಾಃ । ಪಿಂ. ೩-೬೩ । ಇತಿ । ಏವಂ ಪ್ರಾಜಾಪತ್ಯೋ ಯಜ್ಞೋಽನುಷ್ಠಿತಃ । ತೇನ ಯಜ್ಞೇನರ್ಷಯೋ ಮನುಷ್ಯಾಶ್ಚ ಚಾಕ್ಳೃಪ್ರೇ । ಚಕ್ಲೃಪಿರೇ । ಕ್ಲೃಪ್ತಾಃ ಸೃಷ್ಟಾ ಆಸನ್ ॥ ಕೃಪೇಃ ಕರ್ಮಣಿ ಲಿಟೀರಯೋರಿತಿ ರೇಆದೇಶಃ । ಕೃಪೋ ರೋ ಲಃ । ಪಾ. ೮-೨-೧೮ । ಇತಿ ಲತ್ವಂ । ತುಜಾದಿತ್ವಾದಭ್ಯಾಸದೀರ್ಘಃ ॥ ತೇನೈವ ಯಜ್ಞೇನ ಸರ್ವಂ ಜಗದಸೃಜನ್ನಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಮಿತ್ರಾವರುಣಯೋಃ — ಮಿತ್ರಾವರುಣರಿಗೆ । ವಿರಾಟ್—ವಿರಾಟ್ ಎಂಬ ಛಂದಸ್ಸು । ಅಭಿಶ್ರೀಃ—ಆಶ್ರಯಭೂತವಾಗಿದ್ದಿತು । ಇಹ—ಈ ಯಜ್ಞದಲ್ಲಿ । ತ್ರಿಷ್ಟುಪ್—ತ್ರಿಷ್ಟುಪ್ ಛಂದಸ್ಸು ।

**ಅಹ್ನಃ**—ಹಗಲಿನ | **ಭಾಗಃ**—ಮಾಧ್ಯಂದಿನಸವನದ ಅಂಶವಾಗಿದ್ದಿತು | **ಜಗತೀ**—ಜಗತೀಛಂದಸ್ಸು | **ವಿಶ್ವಾನ್ ದೇವಾನ್**—ವಿಶ್ವೇ ದೇವತೆಗಳನ್ನು | **ಆ ವಿವೇಶ**—ಪ್ರವೇಶಿಸಿ ಅವರಲ್ಲಿ ವ್ಯಾಪ್ತವಾಗಿದ್ದಿತು | **ತೇನ**—ಆ ಯಜ್ಞದಿಂದ | **ಋಷಯಃ**—ಋಷಿಗಳೂ | **ಮನುಷ್ಯಾಃ**—ಮನುಷ್ಯರೂ | **ಚಾಕ್ಲೃಪ್ರೇ**—ಸೃಷ್ಟಿಸಲಟ್ಟರು.

॥ ಭಾವಾರ್ಥ ॥

ಮಿತ್ರಾವರುಣರಿಗೆ ವಿರಾಟ್‌ಛಂದಸ್ಸು ಆಶ್ರಯವಾಯಿತು. ಯಜ್ಞದಲ್ಲಿ ಮಧ್ಯಾಹ್ನಕಾಲದಲ್ಲಿ ನಡೆಯುವ ಮಾಧ್ಯಂದಿನ ಸವನದ ಭಾಗವೇ ತ್ರಿಷ್ಟುಪ್ ಛಂದಸ್ಸಾಗಿದ್ದಿತು. ವಿಶ್ವೇದೇವತೆಗಳನ್ನು ಜಗತೀಛಂದಸ್ಸು ಪ್ರವೇಶಿಸಿತು. ದೇವತೆಗಳು ಸೃಷ್ಟ್ಯರ್ಥವಾಗಿ ನೆರವೇರಿಸಿದ ಆ ಯಜ್ಞದಿಂದ ಋಷಿಗಳೂ ಮನುಷ್ಯರೂ ಉತ್ಪನ್ನರಾದರು

## English Translation.

Viraj was the glory of Mitra and Varuna; Trishtubh was Indra's portion of the midday (oblation) at this (sacrifice). Jagati entered into the Viswedevas, by this (sacrifice) Rishis and men were created.

॥ ವಿಶೇಷವಿಷಯಗಳು ॥

**ವಿರಾಟ್ ಮಿತ್ರಾವರುಣಯೋಃ ಅಭಿಶ್ರೀಃ**—ವಿರಾಟ್‌ಛಂದಸ್ಸು ಮಿತ್ರಾವರುಣರ ಜತೆಯಲ್ಲಿಯೇ ಪ್ರಜಾಪತಿಯಿಂದ ಉತ್ಪನ್ನವಾಯಿತು.

**ಇಂದ್ರಸ್ಯ ತ್ರಿಷ್ಟುಪ್ ಇಹ ಭಾಗಃ ಅಹ್ನಃ**— ಮಾಧ್ಯಂದಿನ ಸವನದಲ್ಲಿ ಇಂದ್ರನಿಗೆ ಮುಖ್ಯವಾದ ಭಾಗವಿರುವುದು. ಈ ಸವನದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನು ಪಠಿಸಬೇಕಾಗಿರುವುದು. ಏಕೆಂದರೆ ಪ್ರಾತಃಸವನದಲ್ಲಿ ಗಾಯತ್ರೀಛಂದಸ್ಸಿನ ಮಂತ್ರಗಳನ್ನೂ, ಮಾಧ್ಯಂದಿನ ಸವನದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನೂ, ತೃತೀಯ ಸವನದಲ್ಲಿ ಜಗತೀಛಂದಸ್ಸಿನ ಮಂತ್ರಗಳನ್ನೂ ಪಠಿಸಬೇಕೆಂದು ನಿಯಮವಿರುವುದು. ಸವನತ್ರಯದಲ್ಲಿ ಪಠಿಸಬೇಕಾದ ಮಂತ್ರಗಳನ್ನೂ ಅವುಗಳ ವಿಧಿ ನಿಯಮಗಳನ್ನೂ ನಾವು ವಿಸ್ತಾರವಾಗಿ ಹಿಂದೆ (ಭಾ ೨೬ ಪುಟ 40) ವಿವರಿಸಿದೇವೆ. ಮಾಧ್ಯಂದಿನಸವನವೂ ತ್ರಿಷ್ಟುಪ್‌ಛಂದಸ್ಸೂ ಪ್ರಜಾಪತಿಯಿಂದ ಉತ್ಪನ್ನವಾದವೆಂದು ತೈತ್ತಿರೀಯ ಸಂಹಿತೆಯಲ್ಲಿಯೂ ಹೇಳಿದೆ—

> **ಉರಸೋ ಬಾಹುಭ್ಯಾಂ ಪಂಚದಶಂ ನಿರಮಿಮೀತ ತಮಿಂದ್ರೋ ದೇವತಾನ್ವಸೃಜ್ಯತ ತ್ರಿಷ್ಟುಪ್‌ಛಂದೋ ಬೃಹತ್ಸಾಮ ರಾಜನ್ಯೋ ಮನುಷ್ಯಾಣಾಮವಿಃ ಪಶೂನಾಂ ತಸ್ಮಾತ್ತೇ ವೀರ್ಯಾವಂತೋ ವೀರ್ಯಾದ್ಧ್ಯಸೃಜ್ಯಂತ ॥**
>
> (ತೈ. ಸಂ. ೭-೧-^-೪)

ಪ್ರಜಾಪತಿಯು ತನ್ನ ಎದೆಯಿಂದಲೂ ಬಾಹುಗಳಿಂದಲೂ ಪ್ರಚಂದಶ ಸ್ತೋಮವನ್ನು ನಿರ್ಮಿಸಿದನು. ಅನಂತರ ಇಂದ್ರನನ್ನೂ ತ್ರಿಷ್ಟುಪ್‌ಛಂದಸ್ಸನ್ನೂ ಬೃಹತ್ಸಾಮವೆಂಬ ಸಾಮಮಂತ್ರವನ್ನೂ ಸೃಷ್ಟಿಸಿದನು, ಆದುದರಿಂದ ಶಕ್ತಿಯುತವಾದ ಪ್ರಜಾಪತಿಯ ಬಾಹುಗಳಿಂದ ಉತ್ಪನ್ನನಾದ ಇಂದ್ರನು ಎಲ್ಲರಿಗಿಂತಲೂ ಶ್ರೇಷ್ಠನಾದನು. ಆದುದರಿಂದ ಮನುಷ್ಯರಲ್ಲಿ ರಾಜರು ಬಲಿಷ್ಠರಾದರು ಪಶುಗಳಲ್ಲಿ ಕುರಿಯು ಯಜ್ಞಾರ್ಹವಾಯಿತು.

**ವಿಶ್ವಾನ್ ದೇವಾನ್ ಜಗತೀ ಆ ವಿವೇಶ**—ವಿಶ್ವೇದೇವತೆಗಳನ್ನು ಜಗತೀಛಂದಸ್ಸು ಪ್ರವೇಶಿಸಿತು ಎಂದರೆ ವಿಶ್ವೇದೇವತೆಗಳನ್ನೂ ಜಗತೀಛಂದಸ್ಸನ್ನೂ ಪ್ರಜಾಪತಿಯು ಒಟ್ಟಿಗೆ ಸೃಷ್ಟಿಮಾಡಿದ್ದರಿಂದ ಜಗತೀಛಂದಸ್ಸು ವಿಶ್ವೇದೇವತೆಗಳಿಗೆ ಪ್ರೀತಿದಾಯಕವಾಯಿತು. ಈ ವಿಷಯದಲ್ಲಿ—

**ಮಧ್ಯತಃ ಸಪ್ತದಶಂ ನಿರಮಿಮೀತ ತಂ ವಿಶ್ವೇ ದೇವಾ ದೇವತಾ ಅನ್ವಸೃಜ್ಯಂತ ಜಗತೀಛಂದೋ ವೈರೂಪಗ್ಂ ಸಾಮ ವೈಶ್ಯೋ ಮನುಷ್ಯಾಣಾಂ ಗಾವಃ ಪಶೂನಾಂ ತಸ್ಮಾತ್ತ ಆದ್ಯಾ ಅನ್ನಧಾನಾದ್ಧ್ಯ ಸೃಜ್ಯಂತ ||**

(ತೈ. ಸಂ. ೭-೧-೧-೫)

ಪ್ರಜಾಪತಿಯು ತನ್ನ ಉದರಭಾಗದಿಂದ ಸಪ್ತದಶಸ್ತೋಮವನ್ನು ಸೃಷ್ಟಿಸಿದನು. ಅನಂತರ ವಿಶ್ವದೇವತೆಗಳನ್ನೂ ಜಗತೀಛಂದಸ್ಸನ್ನೂ ವೈರೂಪಸಾಮಮಂತ್ರವನ್ನೂ, ಸೃಷ್ಟಿಸಿದನು. ಹಾಗೆಯೇ ವೈಶ್ಯರನ್ನೂ ಗೋವುಗಳನ್ನೂ ಸೃಷ್ಟಿಸಿದನು. ಇವರು ಪ್ರಜಾಪತಿಯ ಉದರದಿಂದ ಜನಿಸಿದವರಾದ್ದರಿಂದ ವೈಶ್ಯರು ಮನುಷ್ಯರಲ್ಲಿ ಅನ್ನಧಾನ ಎಂದರೆ ಆಹಾರಾದಿಧನಧಾನ್ಯವಸ್ತುಗಳಲ್ಲಿ ಎಲ್ಲಾ ಮನುಷ್ಯರಿಗಿಂತಲೂ ಅನುಕೂಲವಾಗಿದ್ದರು. ಹಾಗೆಯೇ ಗೋವುಗಳು ಆಹಾರಾರ್ಥವಾಗಿ ಹಾಲನ್ನು ಉತ್ಪಾದನೆಮಾಡುವ ಪಶುಗಳಲ್ಲಿ ಶ್ರೇಷ್ಠವಾದುವು.

ಈ ಸೂಕ್ತದ **ಕಾಸೀತ್ಪ್ರಮಾ ಪ್ರತಿಮಾ** ಎಂಬ ಋಕ್ಕಿನಲ್ಲಿ ಯಜ್ಞಸಂಬಂಧವಾದ ದ್ರವ್ಯಗಳಾವವು ಎಂದು ಕೇಳಿರುವ ಪ್ರಶ್ನೆಗಳಲ್ಲಿ ಈಗ ಮೂರು ಪ್ರಶ್ನೆಗಳಿಗೆ ಇಲ್ಲಿ ಉತ್ತರವನ್ನು ಹೇಳಲಾಯಿತು. ಎಂದರೆ **ಪ್ರತಿಮಾ ಕಾಸೀತ್**—ದೇವತೆ ಯಾರು ? **ಛಂದಃ ಕಿಮಾಸೀತ್**—ಛಂದಸ್ಸು ಯಾವುದು ? **ಪ್ರಉಗಂ ಕಿಮುಕ್ಥಂ**—ಪ್ರಉಗ ಮತ್ತು ಉಕ್ಥಶಸ್ತ್ರಮಂತ್ರಗಳಾವುವು ? ಎಂಬ ಈ ಮೂರು ಪ್ರಶ್ನೆಗಳಿಗೆ ಹಿಂದಿನ ಋಕ್ಕಿನಲ್ಲಿಯೂ ಈ ಋಕ್ಕಿನಲ್ಲಿಯೂ ಉತ್ತರವನ್ನು ಹೇಳಲಾಗಿದೆ ಇನ್ನು **ಆಜ್ಯಂ ಕಿಮಾಸೀತ್**--ಆಜ್ಯವು ಯಾವದು ? **ಪರಿಧಿಃ ಕ ಆಸೀತ್**—ಪರಿಧಿಯು ಯಾವುದು ಎಂಬ ಎರಡು ಪ್ರಶ್ನೆಗಳಿಗೆ ಪುರುಷಸೂಕ್ತದಲ್ಲಿ (ಋ. ಸಂ. ೧೦ ನೇ ಮಂಡಲ ೯೦ ನೇ ಸೂಕ್ತ) ಉತ್ತರವನ್ನು ಈ ರೀತಿ ಹೇಳಲಾಗಿದೆ—

**....... ... ... ದೇವಾ ಯಜ್ಞಮತನ್ವತ |**
**ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ |**
**ಸಪ್ತಾಸ್ಯಾಸನ್ಪರಿಧಯಸ್ತ್ರಿಃಸಪ್ತ ಸಮಿಧಃ ಕೃತಾಃ ||**

(ಋ. ಸಂ. ೧೦-೯೦-೬ ಮತ್ತು ೧೫)

ಎಂದರೆ ಸರ್ವರಸವನ್ನು ಉತ್ಪಾದನೆ ಮಾಡುವ ಎಂದರೆ ಸಮಸ್ತ ವೃಕ್ಷಾದಿಗಳನ್ನು ಚಿಗುರುವಂತೆ ಮಾಡುವ ವಸಂತ ಋತುವು ಜಗತ್ಸೃಷ್ಟಿಸಾಧನವಾದ ಆ ಯಜ್ಞದಲ್ಲಿ ಹೋಮಮಾಡುವ ಆಜ್ಯವಾಯಿತು. ಎಂದರೆ ಆ ಯಜ್ಞದಿಂದ ಆಜ್ಯ (ತುಪ್ಪ) ಮೊಸರು ಮೊದಲಾದ ರಸಗಳಿಂದ ಸಹಿತವಾದ ವಸಂತಋತುವು ಉತ್ಪನ್ನವಾಯಿತು ಎಂದರ್ಥವು.

ಗ್ರೀಷ್ಮ ಋತುವಿನಲ್ಲಿ ಬಿಸಲು ಹೆಚ್ಚಾಗಿರುವುದರಿಂದ ಅದು ಸಮಸ್ತರಸವನ್ನು ಎಂದರೆ ದ್ರವರೂಪದಲ್ಲಿರುವ ಜಲಾದಿಗಳನ್ನೂ ವೃಕ್ಷಾದಿಗಳನ್ನೂ ಒಣಗುವಂತೆ ಮಾಡುವುದು. ಆದ್ದರಿಂದ ಆ ಕಾಲದಲ್ಲಿ ಒಣಗಿರುವ ಕಾಷ್ಠಾದಿಗಳು ವಿಶೇಷವಾಗಿ ಲಭಿಸುವವು. ಈ ಕಾರಣದಿಂದ ಗ್ರೀಷ್ಮಋತುವು ಆ ಯಜ್ಞದಲ್ಲಿ ಇಧ್ಮವೆಂಬ ಸಮಿತ್ತಾಯಿತು. ಎಂದರೆ ಆ ಯಜ್ಞದಿಂದ ಶುಷ್ಕಕಾಷ್ಠ ಸಹಿತವಾದ ಗ್ರೀಷ್ಮರ್ತುವು ಉತ್ಪನ್ನವಾಯಿತು ಎಂದಭಿಪ್ರಾಯವು.

ಶರದೃತುವಿನಲ್ಲಿ ವ್ರೀಹಿ (ಭತ್ತ) ಮೊದಲಾದ ಧಾನ್ಯಗಳು ಚೆನ್ನಾಗಿ ಬಲಿತು ಪಕ್ವವಾಗುವವು ಎಂದರೆ ತಿನ್ನುವುದಕ್ಕೆ ಯೋಗ್ಯವಾಗಿರುವವು ಆದ್ದರಿಂದ ಆ ಯಜ್ಞಕ್ಕೆ ಶರದೃತುವು ಹವಿಸ್ಸಾಯಿತು. ಎಂದರೆ ಆ ಯಜ್ಞದಿಂದ ಧಾನ್ಯಸಮೃದ್ಧಿಯಿಂದ ಕೂಡಿದ ಶರದೃತುವಿನ ಉತ್ಪತ್ತಿಯಾಯಿತು.

ಏಳು ಛಂದಸ್ಸುಗಳು ಪರಿಧಿಗಳಾದವು. ಎಂದರೆ ತ್ರಿಃ ಸಪ್ತ-ಆ ಸಪ್ತಛಂದಸ್ಸುಗಳೇ ಮೂರಾವರ್ತಿ ಪರಿವರ್ತಿತವಾಗಿ ಇಪ್ಪತ್ತೊಂದಾದವು. ಆ ಇಪ್ಪತ್ತೊಂದು ಸಂಖ್ಯೆಯಲ್ಲಿ ಮೂರು ಪರಿಧಿಗಳೂ ಹದಿನೆಂಟು ಸಮಿತ್ತುಗಳೂ ಒಟ್ಟು **ಇಪ್ಪತ್ತೊಂದಾದವು.**

ಇನ್ನು **ಕಾಸೀತ್ಪ್ರಮಾ ಪ್ರತಿಮಾ ಕಿಂ ನಿದಾನಂ**— ಯಜ್ಞದ ಕಾಲಪರಿಮಿತಿಯೆಷ್ಟು ? ದೇವತೆಗಳಾರು ? ಯಜ್ಞದ ಫಲವೇನು ? ಎಂಬ ಮೂರು ಪ್ರಶ್ನೆಗಳಿಗೆ ಉತ್ತರವನ್ನು ಹೇಳಬೇಕಾಗಿರುವುದು.

**ಪೂರ್ವೇ ವಿಶ್ವಸೃಜೋಽಮೃತಾಃ ಶತಂ ವರ್ಷಸಹಸ್ರಾಣಿ ದೀಕ್ಷಿತಾಃ ಸತ್ರಮಾಸತ ||**
ಎಂದೂ ಮತ್ತು

**ಏತೇನ ವೈ ವಿಶ್ವಸೃಜ ಇದಂ ವಿಶ್ವಮಸೃಜಂತ**(ತೈ.ಬ್ರಾ ೩-೧೨-೯-೨ ಮತ್ತು ೮)
ಎಂದು ಹೇಳಿರುವುದರಿಂದ ಪೂರ್ವದಲ್ಲಿ ವಿಶ್ವವನ್ನು ಸೃಜಿಸಬೇಕೆಂಬ ಇಚ್ಛೆಯಿಂದ ದೇವತೆಗಳು ಸಹಸ್ರವರ್ಷಗಳವರೆಗೆ ಯಜ್ಞಮಾಡಿದರು. ಆದ್ದರಿಂದ ಆ ಯಜ್ಞಕ್ಕೆ ಸಹಸ್ರವರ್ಷಗಳ ಕಾಲವು ಪರಿಮಿತಿಯು. ಈ ಯಜ್ಞಕ್ಕೆ ಜಗತ್ಸೃಷ್ಟಿಮಾಡಲು ಪ್ರವೃತ್ತಿಯೇ ಫಲವು. ಮುಖ್ಯಾಭಿಪ್ರಾಯವೇನೆಂದರೆ—ಸೃಷ್ಟಿಕಾರ್ಯವನ್ನು ಮುಂದುವರಿಸಬೇಕೆಂಬ ಇಚ್ಛೆಯಿಂದ ದೇವತೆಗಳು ಪ್ರಜಾಪತಿಯನ್ನುದ್ದೇಶಿಸಿ ವಿಶ್ವಸೃಜಾಮಯನ ವೆಂಬ ಯಾಗವನ್ನು ಮಾಡಿದಾಗ ಸಮಸ್ತ ಯಾಗೋಪಕರಣಗಳು ಎಂದರೆ ಯಜ್ಞಸಾಮಗ್ರಿಗಳು ಪ್ರಜಾಪತಿಯಿಂದಲೇ ಉತ್ಪನ್ನವಾದವು. ಆಗ ಪ್ರಜಾಪತಿಯ ಶರೀರದಿಂದ ಅಗ್ನಿಯೇ ಮೊದಲಾದ ದೇವತೆಗಳು ಗಾಯತ್ರಿಯೇ ಮೊದಲಾದ ಸಪ್ತಛಂದಸ್ಸುಗಳ ಸಹಿತವಾಗಿ ಉತ್ಪನ್ನರಾದ್ದರಿಂದ ಆ ಛಂದಸ್ಸುಗಳಿಗೆ ಅಗ್ನ್ಯಾದಿಗಳೇ ದೇವತೆಗಳು. ಛಂದೋವಿಚಿತಿ ಎಂಬ ಗ್ರಂಥದಲ್ಲಿ— **ಅಗ್ನಿಃ ಸವಿತಾ ಸೋಮೋ ಬೃಹಸ್ಪತಿರ್ಮಿತ್ರಾವರುಣಾವಿಂದ್ರೋ ವಿಶ್ವೇ ದೇವಾ ದೇವತಾಃ ||** ಅಗ್ನಿಃ (ಗಾಯತ್ರೀ) ಸವಿತಾ (ಉಷ್ಣಿಕ್) ಸೋಮಃ (ಅನುಷ್ಟುಪ್) ಬೃಹಸ್ಪತಿ (ಬೃಹತೀ)ಮಿತ್ರಾವರುಣೌ (ವಿರಾಟ್) ಇಂದ್ರಃ (ತ್ರಿಷ್ಟುಪ್) ವಿಶ್ವೇದೇವಾಃ (ಜಗತೀ) ಎಂಬ ದೇವತೆಗಳು ಆಯಾಛಂದಸ್ಸುಗಳಿಗೆ ದೇವತೆಗಳೆಂದು ಹೇಳಿದೆ. ಈ ರೀತಿಯಾಗಿ ಪ್ರಾಜಾಪತ್ಯವೆಂಬ (ಪ್ರಜಾಪತಿಯನ್ನುದ್ದೇಶಿಸಿ ಮಾಡಿದ) ಯಜ್ಞವು ಆಚರಿಸಲ್ಪಟ್ಟಿತು ಈ ಯಜ್ಞದಿಂದ ಸರ್ವಜಗತ್ಸೃಷ್ಟಿಯಾಯಿತು ಎಂದು ಇಲ್ಲಿ ವಿವರಿಸಲಾಗಿದೆ.

|| ಸಂಹಿತಾಪಾಠಃ ||

**ಚಾಕ್ಲೃಪ್ರೇ ತೇನ ಋಷಯೋ ಮನುಷ್ಯಾ ಯಜ್ಞೇ ಜಾತೇ ಪಿತರೋ ನಃ ಪುರಾಣೇ ।**

**ಪಶ್ಯನ್ಮನ್ಯೇ ಮನಸಾ ಚಕ್ಷಸಾ ತಾನ್ಯ ಇಮಂ ಯಜ್ಞಮಯಜಂತ ಪೂರ್ವೇ ॥**

|| ಪದಪಾಠಃ ||

**ಚಾಕ್ಲೃಪ್ರೇ । ತೇನ । ಋಷಯಃ । ಮನುಷ್ಯಾಃ । ಯಜ್ಞೇ । ಜಾತೇ । ಪಿತರಃ । ನಃ । ಪುರಾಣೇ । ಪಶ್ಯನ್ । ಮನ್ಯೇ । ಮನಸಾ । ಚಕ್ಷಸಾ । ತಾನ್ । ಯೇ । ಇಮಂ । ಯಜ್ಞಂ । ಅಯಜಂತ । ಪೂರ್ವೇ || ೬ ||**

|| ಸಾಯಣಭಾಷ್ಯಂ ||

**ಪುರಾಣೇ ಚಿರಂತನೇಽಸ್ಮಿನ್ಯಜ್ಞೇ ಜಾತೇ ವಿಶ್ವಸೃಡ್ಭಿರ್ದೇವೈಃ ಸಮ್ಯಗನುಷ್ಠಿತೇ ಸತಿ ತೇನ ಯಜ್ಞೇನರ್ಷಯೋ ಮನುಷ್ಯಾ ನೋಽಸ್ಮಾಕಂ ಪಿತರಃ ಪೂರ್ವಪುರುಷಾಶ್ಚ ಚಾಕ್ಲೃಪ್ರೇ । ಅಕಲ್ಪ್ಯಂತ । ಅಸೃಜ್ಯಂತ । ಇಮಮೀದೃಶಂ ಯಜ್ಞಂ ಯೇ ಪೂರ್ವೇ ಸಾಧ್ಯಾ ದೇವಾಃ ಪ್ರಜಾಪತೇಃ ಪ್ರಾಣಭೂತಾ ಅಯಜಂತ ಅನ್ವತಿಷ್ಠನ್ ತಾನ್ದೇವಾನ್ಪ್ರಾಣಾತ್ಮನಾ ಸರ್ವತ್ರ ವರ್ತಮಾನಾಂಶ್ಚಕ್ಷಸಾ ದರ್ಶನಹೇತುನಾ ಮನಸಾ ಪಶ್ಯಞ್ಜಾನನ್ಮನ್ಯೇ । ತಾನೇವ ವಿಶ್ವಸ್ರಷ್ಟೄನ್ದೇವಾನ್ ಸ್ತೌಮಿ । ಮನ್ಯತಿರರ್ಚತಿಕರ್ಮಾ ||**

|| ಪ್ರತಿಪದಾರ್ಥ ||

**ಪುರಾಣೇ**—ಅತಿಪುರಾತನಕಾಲದಲ್ಲಿ ನಡೆದ । **ಯಜ್ಞೇ**—ಈ ಯಜ್ಞವು । **ಜಾತೇ (ಸತಿ)**—ವಿಶ್ವ ಸೃಷ್ಟಿಮಾಡ ಬಯಸುವ ದೇವತೆಗಳಿಂದ ನೆರವೇರಿಸಲ್ಪಟ್ಟಾಗ । **ತೇನ**—ಆ ಯಜ್ಞದಿಂದ । **ಋಷಯಃ**—ಋಷಿ ಗಳೂ । **ಮನುಷ್ಯಾಃ**—ಮನುಷ್ಯರೂ । **ನಃ**—ನಮ್ಮ । **ಪಿತರಃ**—ಪಿತೃಭೂತರಾದ ಪೂರ್ವಪುರುಷರೂ । **ಚಾಕ್ಲೃಪ್ರೇ**—ಸೃಷ್ಟಿಸಲ್ಪಟ್ಟರು । **ಇಮಂ ಯಜ್ಞಂ**—ಈ ಯಜ್ಞವನ್ನು । **ಯೇ ಪೂರ್ವೇ**—ಪ್ರಜಾಪತಿಯ ಪ್ರಾಣಭೂತರಾದ ಸಾಧ್ಯರೆಂಬ ಪೂರ್ವಕಾಲದ ಯಾವ ದೇವತೆಗಳು । **ಅಯಜಂತ**—ಅನುಷ್ಠಾನಮಾಡಿದರೋ । **ತಾನ್**—ಪ್ರಾಣರೂಪದಿಂದ ಸರ್ವತ್ರ ಇರುವ ಆ ದೇವತೆಗಳನ್ನು । **ಚಕ್ಷಸಾ**—ನೋಡಿ ತಿಳಿದುಕೊಳ್ಳಲು ಸಮರ್ಥ ವಾದ । **ಮನಸಾ**-ಮನಸ್ಸಿನಿಂದ । **ಪಶ್ಯನ್**-ತಿಳಿದು । **ಮನ್ಯೇ**-ಆ ವಿಶ್ವಸ್ರಷ್ಟೃಗಳಾದ ದೇವತೆಗಳನ್ನು ಸ್ತುತಿಸುತ್ತೇನೆ.

|| ಭಾವಾರ್ಥ ||

ಅತಿ ಪುರಾತನಕಾಲದಲ್ಲಿ ವಿಶ್ವಸೃಷ್ಟಿ ಮಾಡಲಿಚ್ಛಿಸುವ ದೇವತೆಗಳಿಂದ ಈ ಯಜ್ಞವು ನೆರವೇರಿಸಲ್ಪಟ್ಟಾಗ ಆ ಯಜ್ಞದಿಂದ ಋಷಿಗಳೂ, ಮನುಷ್ಯರೂ ನಮ್ಮ ಪೂರ್ವಿಕರಾದ ಪಿತೃಗಳೂ ಸೃಷ್ಟಿಸಲ್ಪಟ್ಟರು. ಮತ್ತು ಪ್ರಜಾ ಪತಿಯ ಪ್ರಾಣರೂಪರಾದ ಸಾಧ್ಯರೆಂಬ ಯಾವ ಪೂರ್ವದೇವತೆಗಳು ಈ ಯಜ್ಞವನ್ನು ಅನುಷ್ಠಾನಮಾಡಿದರೋ ಆ ದೇವತೆಗಳನ್ನು ವಿಮರ್ಶೆಮಾಡಿ ನೋಡಿ ತಿಳಿಯಲು ಸಮರ್ಥವಾದ ಮನಸ್ಸಿನಿಂದ ತಿಳಿದು ಸ್ತುತಿಸುತ್ತೇನೆ.

## English Translation.

When this ancient sacrifice was accomplished, by it Rishis, men, and our progenitors were created; beholding them with the eye of the mind, I glorify those who of old celebrated this sacrifice.

॥ ಸಂಹಿತಾಪಾಠಃ ॥

ಸಹಸ್ತೋಮಾಃ ಸಹಚ್ಛಂದಸ ಆವೃತಃ ಸಹಪ್ರಮಾ ಋಷಯಃ ಸಪ್ತ ದೈವ್ಯಾಃ ।
ಪೂರ್ವೇಷಾಂ ಪಂಥಾಮನುದೃಶ್ಯ ಧೀರಾ ಅನ್ವಾಲೇಭಿರೇ ರಥ್ಯೋ೩ ನ ರಶ್ಮೀನ್ ॥ ೭ ॥

॥ ಪದಪಾಠಃ ॥

ಸಹಽಸ್ತೋಮಾಃ । ಸಹಽಛಂದಸಃ । ಆಽವೃತಃ । ಸಹಽಪ್ರಮಾಃ । ಋಷಯಃ । ಸಪ್ತ । ದೈವ್ಯಾಃ ।
ಪೂರ್ವೇಷಾಂ । ಪಂಥಾಂ । ಅನುಽದೃಶ್ಯ । ಧೀರಾಃ । ಅನುಽಆಲೇಭಿರೇ । ರಥ್ಯಃ । ನ । ರಶ್ಮೀನ್ ॥ ೭ ॥

॥ ಸಾಯಣಭಾಷ್ಯಂ ॥

ಸ್ತೋಮೈಃ ತ್ರಿವೃತ್ಪಂಚದಶಾದಿಭಿಃ ಸಹ ವರ್ತಮಾನಾಃ ಸಹಸ್ತೋಮಾಃ ಸಹಚ್ಛಂದಸೋ ಗಾಯತ್ರ್ಯಾದಿಭಿಶ್ಛಂದೋಭಿಃ ಸಹ ವರ್ತಮಾನಾ ಆವೃತ ಆವರ್ತಮಾನಾಃ ಸಹಪ್ರಮಾಃ । ಪ್ರಮಿತಿಃ ಪ್ರಮಾ ಯಜ್ಞಸ್ಯೇಯತ್ತಾಪರಿಜ್ಞಾನಂ । ತೇನ ಸಹ ವರ್ತಮಾನಾ ದೈವ್ಯಾ ದೇವಸ್ಯ ಪ್ರಜಾಪತೇಃ ಸಂಬಂಧಿನಃ ಯದ್ವಾ ದೇವಾನಾಂ ಯಷ್ಟವ್ಯಾನಾಂ ಸಂಬಂಧಿನ ಋಷಯೋ ದ್ರಷ್ಟಾರಃ ಸಪ್ತಸಂಖ್ಯಾಕಾಃ ಶೀರ್ಷಣ್ಯಾಃ । ಯದ್ವಾ । ಮರೀಚಿಪ್ರಮುಖಾಃ ಸಪ್ತರ್ಷಯೋ ಹೋತ್ರಾದಯಃ ಸಪ್ತ ವಷಟ್ಕರ್ತಾರೋ ವಾ । ಏವಂವಿಧಾ ಏತೇ ಪೂರ್ವೇಷಾಂ ಪೂರ್ವಪುರುಷಾಣಾಮಂಗಿರಃಪ್ರಭೃತೀನಾಂ ವಿಶ್ವಸೃಜಾಂ ದೇವಾನಾಂ ವಾ ಪಂಥಾಂ ಪಂಥಾನಮನುಷ್ಠಾನಮಾರ್ಗಮನುದೃಶ್ಯ ಕ್ರಮೇಣ ಜ್ಞಾತ್ವಾ ಧೀರಾ ಧೀಮಂತಃ ಸಂತೋಽನ್ವಾಲೇಭಿರೇ । ಅನುಕ್ರಮೇಣಾರಬ್ಧವಂತಃ । ಯಾಗಾನುಷ್ಠಾನೇ ಪ್ರವೃತ್ತಾ ಇತ್ಯರ್ಥಃ । ರಥ್ಯೋ ನ ಯಥಾ ರಥಿನೋ ರಥೇನ ಯುಕ್ತಾ ರಥಸ್ಯ ನೇತಾರಃ ಸೂತಾ ರಶ್ಮೀನಶ್ವನಿಯೋಜನಾರ್ಥಾನ್ಪ್ರಗ್ರಹಾನ್ ಸಮ್ಯಗ್ರಥಸ್ಯ ನಯನಾಯ ಹಸ್ತೇನಾನ್ವಾರಭಂತೇ ಅನ್ವಾರಭ್ಯ ಚ ಸಮ್ಯಕ್ ತಂ ರಥಂ ಪ್ರವರ್ತಯಂತಿ ಏವಮೇತೇಽಪ್ಯನುಷ್ಠಾನಮಾರ್ಗಂ ಶ್ರುತಿತೋಽವಗಮ್ಯ ಸಮ್ಯಗನ್ವತಿಷ್ಠನ್ನಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸಹಸ್ತೋಮಾಃ**— ತ್ರಿವೃತ್ಪಂಚದಶಾದಿ -ಸ್ತೋಮ ಪಠನದಿಂದ ಸಹಿತರಾದವರೂ । **ಸಹಚ್ಛಂದಸಃ**— ಗಾಯತ್ರ್ಯಾದಿ ಸಪ್ತ ಛಂದಸ್ಸುಗಳ ಮಂತ್ರಪಠನಯುಕ್ತರೂ । **ಆವೃತಃ**— ಮಂತ್ರಗಳನ್ನು ಪಠಿಸುವವರೂ । **ಸಹಪ್ರಮಾಃ**— ಯಜ್ಞಾನುಷ್ಠಾನಪರಿಜ್ಞಾನವುಳ್ಳವರೂ । **ದೈವ್ಯಾಃ**— ದೇವನಾದ ಪ್ರಜಾಪತಿಗೆ ಸಂಬಂಧಪಟ್ಟವರೂ ಅಥವಾ ದೇವತೆಗಳಿಗೆ ಸಂಬಂಧಪಟ್ಟವರೂ ಆದ । **ಸಪ್ತ ಋಷಯಃ**— ಮರೀಚ್ಯಾದಿ ಸಪ್ತಋಷಿಗಳು ಅಥವಾ

ಹೋತ್ರಾದಿ ಸಪ್ತವಷಟ್ಕರ್ತಾರು | **ಪೂರ್ವೇಷಾಂ**— ಪೂರ್ವ ಪುರುಷರಾದ ಅಂಗಿರಸರೇ **ಮೊದಲಾದವರ ಅಥವಾ** ವಿಶ್ವಸ್ರಷ್ಟೃಗಳಾದ ದೇವತೆಗಳ | **ಪಂಥಾಂ**— ಯಜ್ಞಾನುಷ್ಠಾನಮಾರ್ಗವನ್ನು | **ಅನುದೃಶ್ಯ**— ಕ್ರಮವಾಗಿ ತಿಳಿದು | **ಧೀರಾಃ** — ಬುದ್ಧಿವಂತರಾಗಿ | **ರಥ್ಯಃ**— ರಥವನ್ನು ನಡೆಸುವ ಸಾರಥಿಯು | **ರಶ್ಮೀನ್ನ** — ಅಶ್ವಗಳ ಲಗಾಮುಗಳನ್ನು ಹಿಡಿಯುವಂತೆ | **ಅನ್ವಾಲೇಭಿರೆ**— ಕ್ರಮವಾಗಿ ಯಜ್ಞಾನುಷ್ಠಾನವನ್ನು ಆರಂಭಿಸಿದರು ಎಂದರೆ ಪ್ರವೃತ್ತರಾದರು.

|| ಭಾವಾರ್ಥ ||

ತ್ರಿವೃತ್ಪಂಚದಶಾದಿಸ್ತೋಮ ಮಂತ್ರಗಳನ್ನೂ ಗಾಯತ್ರ್ಯಾದಿಸಪ್ತಛಂದಸ್ಸುಗಳಿಂದ ಸಹಿತವಾದ ಮಂತ್ರಗಳನ್ನೂ ಪಠಿಸುತ್ತ ಯಾಗಾನುಷ್ಠಾನ ಪರಿಜ್ಞಾನವುಳ್ಳ ದೇವತೆಗಳಿಗೆ ಸಂಬಂಧಪಟ್ಟ ಮರೀಚ್ಯಾದಿ ಸಪ್ತಋಷಿಗಳು ಅಥವಾ ಸಪ್ತ ವಷಟ್ಕಾರ ಕರ್ತರು ಹಿಂದಿನ ವಿಶ್ವ ಸ್ರಷ್ಟೃಗಳಾದ ದೇವತೆಗಳ ಅಥವಾ ಅಂಗಿರಾಪ್ರಭೃತಿಗಳ ಯಜ್ಞಾನುಷ್ಠಾನ ಮಾರ್ಗವನ್ನು ತಿಳಿದು ಬುದ್ಧಿವಂತರಾಗಿ ರಥವನ್ನು ನಡೆಸುವ ಸಾರಥಿಯು ಅಶ್ವಗಳ ಲಗಾಮನ್ನು ಹಿಡಿದು ರಥವನ್ನು ನಡೆಸುವಂತೆ ಯಜ್ಞಾನುಷ್ಠಾನ ಪ್ರವೃತ್ತರಾದರ..

## English Translation

Associated with praises, accompanied by metres invested, having authority, the seven divine Rishis, bold, and abserving the path of their predecessors like charioteers, took up the reins.

|| ವಿಶೇಷವಿಷಯಗಳು ||

**ಸಹಸ್ತೋಮಾಃ** — ಸ್ತೋಮಗಳಲ್ಲಿ ತ್ರಿವೃತ್ಸ್ತೋಮ, ಪಂಚದಶಸ್ತೋಮ ಸಪ್ತದಶಸ್ತೋಮ, ಏಕವಿಂಶಸ್ತೋಮ, ತ್ರಿಣವಸ್ತೋಮ, ತ್ರಯಸ್ತ್ರಿಂಶಸ್ತೋಮ, ಚತುರ್ವಿಂಶಸ್ತೋಮ, ಚತುಶ್ಚತ್ವಾರಿಂಶತ್ಸ್ತೋಮ ಎಂದು ಒಂಭತ್ತು ವಿಧ ಸ್ತೋಮಗಳಿವೆ. ಇವುಗಳನ್ನೂ ಇವುಗಳಲ್ಲಿರುವ ವಿಷ್ಟುತಿಪ್ರಭೇದಗಳನ್ನೂ ಉದಾಹರಣೆಸಹಿತವಾಗಿ ನಾವು ಋ. ಸಂ. ಭಾಗ ೨ ಪುಟ 137-150 ರಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಇಂತಹ ನಾನಾಸ್ತೋಮ ಮಂತ್ರಗಳನ್ನು ಪಠಿಸುವವರು ಎಂದರ್ಥವು.

**ಸಹಚ್ಛಂದಸಃ** — ಛಂದಸ್ಸುಗಳಲ್ಲಿ ಅನೇಕ ವಿಧವಿದ್ದರೂ ಯಜ್ಞಾದಿಗಳಲ್ಲಿ ಪ್ರಾತರನುವಾಕಮಂತ್ರಗಳು, ಶಸ್ತ್ರಮಂತ್ರಗಳು ಮೊದಲಾದುವುಗಳಲ್ಲಿ ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್, ಪಂಕ್ತಿ, ಉಷ್ಣಿಕ್, ಬೃಹತೀ ಎಂಬ ಏಳು ವಿಧಛಂದಸ್ಸುಗಳ ಮಂತ್ರಗಳನ್ನೇ ಮುಖ್ಯವಾಗಿ ಪಠಿಸುತ್ತಾರೆ. ಇಂತಿಂತಹ ಮಂತ್ರಗಳು ಇಂತಿಂತಹ ಛಂದಸ್ಸಿನ ಮಂತ್ರಗಳಾಗಿರಬೇಕೆಂಬ ನಿಯಮವಿದೆ. ಗಾಯತ್ರ್ಯಾದಿ ಸಪ್ತವಿಧ ಛಂದಸ್ಸುಗಳಿಂದ ಸಹಿತವಾದ ಮಂತ್ರಗಳನ್ನು ಪಠನೆ ಮಾಡುವವರು ಎಂದರ್ಥವು.

**ಸಹಪ್ರಮಾಃ** — ಯಜ್ಞಸ್ಯೇಯತ್ತಾಪರಿಜ್ಞಾನಂ | ಇಂತಹ ಯಜ್ಞವನ್ನು ಇಷ್ಟು ದಿನಗಳ ವರೆಗೆ ಮಾಡಬೇಕೆಂಬ ವಿಷಯವನ್ನೂ ಯಜ್ಞಾನುಷ್ಠಾನಕ್ರಮಗಳನ್ನೂ ತಿಳಿದ ಋಷಿಗಳೆಂದಭಿಪ್ರಾಯವು.

**ದೈವ್ಯಾಃ** — ದೇವದೇವನಾದ ಪ್ರಜಾಪತಿಗೆ ಪ್ರಾಣಭೂತರಾದ ಸಾಧ್ಯರೆಂಬ ಪೂರ್ವಕಾಲೀನ ದೇವತೆಗಳು ಅಥವಾ,

**ಋಷಯಃ ಸಪ್ತ**—ಭರದ್ವಾಜ, ಕಶ್ಯಪ, ಗೋತಮ, ಅತ್ರಿ, ವಿಶ್ವಾಮಿತ್ರ, ಜಮದಗ್ನಿ, ವಸಿಷ್ಠ ಎಂಬುವರು ಸಪ್ತ ಋಷಿಗಳೆಂದು ಹೇಳಲ್ಪಡುವರು. ಅಥವಾ ಸಪ್ತವಷಟ್ಕಾರಕರ್ತರಾದ ಹೋತೃಮೊದಲಾದ ಋತ್ವಿಕ್ಕಗಳು,

**ರಥ್ಯೋ ನ ರಶ್ಮೀನ್**—ರಥವನ್ನು ನಡೆಸುವ ಸಾರಥಿಯು ರಥವನ್ನು ನಡೆಸುವುದಕ್ಕಾಗಿ ಕುದುರೆಯ ಲಗಾಮುಗಳನ್ನು ಕೈಯಲ್ಲಿ ಹಿಡಿದು ಯಾವ ರೀತಿ ರಥವನ್ನು ನಡೆಸಲು ಪ್ರವೃತ್ತನಾಗುವನೋ ಅದರಂತೆ ಸಪ್ತ ಋಷಿಗಳು, ಹಿಂದಿನ ದೇವತೆಗಳು ಅಥವಾ ಅಂಗಿರಾಋಷಿಗಳು ಅನುಸರಿಸಿದ ಯಜ್ಞಾನುಷ್ಠಾನಮಾರ್ಗವನ್ನೇ ಅನುಸರಿಸಿ ತಾವೂ ಯಜ್ಞಾನುಷ್ಠಾನದಲ್ಲಿ ಪ್ರವೃತ್ತರಾದರು ಎಂದು ಮುಖ್ಯಾಭಿಪ್ರಾಯವು.

## ನೂರ ಮೂವತ್ತೊಂದನೆಯ ಸೂಕ್ತವು



|| ಸಾಯಣಭಾಷ್ಯಂ ||

**ಅಪ ಪ್ರಾಚ ಇತಿ ಸಪ್ತರ್ಚಂ ತೃತೀಯಂ ಸೂಕ್ತಂ ಕಕ್ಷೀವತಃ ಪುತ್ರಸ್ಯ ಸುಕೀರ್ತೇರಾರ್ಷಂ । ಚತುರ್ಥ್ಯನುಷ್ಟುಪ್ ಶಿಷ್ಟಾಃ ಷಟ್ ತ್ರಿಷ್ಟುಭಃ । ಚತುರ್ಥೀಪಂಚಮ್ಯಾವಶ್ವಿದೇವತ್ಯೇ ಶಿಷ್ಟಾ ಐಂದ್ರ್ಯಃ । ತಥಾ ಚಾನುಕ್ರಾಂತಂ । ಅಪ ಪ್ರಾಚಃ ಸುಕೀರ್ತಿಃ ಕಾಕ್ಷೀವತೋ ಮಧ್ಯೇಽನುಷ್ಟುಪ್ಪೋತ್ತರಾ ಚಾಶ್ವಿನ್ಯಾವಿತಿ ॥ ಷಷ್ಠೇಽಹನಿ ಬ್ರಾಹ್ಮಣಾಚ್ಛಂಸಿನ ಉಕ್ಥಶಸ್ತ್ರ ಏತತ್ಸೂಕ್ತಂ । ಸೂತ್ರಿತಂ ಚ । ಸುಕೀರ್ತಿಂ ಬ್ರಾಹ್ಮಣಾಚ್ಛಂಸೀ ವೃಷಾಕಪಿಂ ಚ ಪಂಕ್ತಿಶಂಸಂ । ಆ. ೮-೪ । ಇತಿ ॥ ಚಾತುರ್ವಿಂಶಿಕೇಽಹನಿ ಮಾಧ್ಯಂದಿನೇ ಸವನೇ ಮೈತ್ರಾವರುಣಸ್ಯಾಪ ಪ್ರಾಚ ಇತ್ಯೇಷಾರಂಭಣೀಯಾ ಕದ್ವತ್ಪ್ರಗಾಥಾನಂತರಂ ಶಂಸನೀಯಾ । ಸೂತ್ರಿತಂ ಚ । ಕದ್ವಂತಃ ಪ್ರಗಾಥಾ ಅಪ ಪ್ರಾಚ ಇಂದ್ರ ವಿಶ್ವಾँ ಅಮಿತ್ರಾನ್ । ಆ. ೭-೪ । ಇತಿ ॥ ಅಹರ್ಗಣೇಷ್ವಪಿ ದ್ವಿತೀಯಾದಿಷ್ವಹಃಸು ತಸ್ಯೈವ ಶಸ್ತ್ರ ಆರಂಭಣೀಯಾ । ಸೂತ್ರಿತಂ ಚ । ಆರಂಭಣೀಯಾಃ ಪರ್ಯಾಸಾನ್ಕದ್ವತೋಽಹರಹಃ ಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ । ಆ. ೭-೧ । ಇತಿ ॥**

ಅನುವಾದವು—**ಅಪ ಪ್ರಾಚ**—ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಕ್ಷೀವಾನ್ ಎಂಬ ಋಷಿಯ ಪುತ್ರನಾದ ಸುಕೀರ್ತಿ ಎಂಬುವನು ಋಷಿಯು. ಈ ಸೂಕ್ತದಲ್ಲಿ ನಾಲ್ಕನೆಯ ಋಕ್ಕು ಅನುಷ್ಟುಪ್ ಛಂದಸ್ಕವು. ಉಳಿದ ಆರು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು, ನಾಲ್ಕು ಮತ್ತು ಐದನೆಯ ಋಕ್ಕುಗಳಿಗೆ ಅಶ್ವಿನೀ ದೇವತೆಗಳು ದೇವತೆಯು. ಉಳಿದ ಋಕ್ಕುಗಳಿಗೆ ಇಂದ್ರನು ದೇವತೆಯು ಅನುಕ್ರಮಣಿಕೆಯಲ್ಲಿ—**ಅಪ ಪ್ರಾಚಃ ಸುಕೀರ್ತಿಃ ಕಾಕ್ಷೀವತೋ ಮಧ್ಯೇಽನುಷ್ಟುಪ್ಪೋತ್ತರಾ ಚಾಶ್ವಿನೌ** ಎಂದು ಹೇಳಿರುವರು ಯಜ್ಞದ ಆರನೆಯ ದಿವಸ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಉಕ್ಥಶಸ್ತ್ರಮಂತ್ರಗಳಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ— **ಸುಕೀರ್ತಿಂ ಬ್ರಾಹ್ಮಣಾಚ್ಛಂಸೀ ವೃಷಾಕಪಿಂ ಚ ಪಂಕ್ತಿಶಂಸಂ** ಎಂಬ ಸೂತ್ರದಿಂದ

(ಆ. ೮-೪) ವಿವೃತವಾಗಿರುವುದು. ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನ ಸವನದಲ್ಲಿ **ಮೈತ್ರಾವರುಣನೆಂಬ** ಋತ್ವಿಜನು ಕದ್ವತ್ಪ್ರಗಾಥಾನಂತರ **ಅಪ ಪ್ರಾಚಃ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ—**ಕದ್ವಂತಃ ಪ್ರಗಾಥಾ ಅಪ ಪ್ರಾಚ ಇಂದ್ರ ವಿಶ್ವಾಁ ಅಮಿತ್ರಾನ್** ಎಂಬ ಸೂತ್ರದಿಂದ (ಆ. ೭-೮) ವಿವೃತವಾಗಿರುವುದು. ಅಹರ್ಗಣೇಷ್ಟಿಗಳಲ್ಲಿಯೂ ಕೂಡ ಎರಡನೆಯ ದಿನ ಮೊದಲಾದ ದಿನಗಳಲ್ಲಿ ಮೈತ್ರಾವರುಣನು ಮಾಧ್ಯಂದಿನಸವನದಲ್ಲಿ ಶಸ್ತ್ರಮಂತ್ರಗಳಲ್ಲಿ ಇದನ್ನು ಆರಂಭದ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ—**ಆರಂಭಣೀಯಾಃ ಪರ್ಯಾಸಾನ್ ಕದ್ವತೋಽಹರಹಃ ಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ** ಎಂಬ ಸೂತ್ರದಿಂದ (ಆ. ೭-೧) ವಿವೃತವಾಗಿರುವುದು.

## ಸೂಕ್ತ—೧೩೧

ಮಂಡಲ— ೧೦ ॥ ಅನುವಾಕ—೧೧ ॥ ಸೂಕ್ತ—೧೩೧ ॥
ಅಷ್ಟಕ—೮ ॥ ಅಧ್ಯಾಯ—೭ ॥ ವರ್ಗ—೧೯ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
॥ ಋಷಿಃ ಸುಕೀರ್ತಿಃ ಕಾಕ್ಷೀವತಃ ॥
॥ ದೇವತಾ—೧-೩, ೬, ೭. ಇಂದ್ರಃ । ೪, ೫ ಅಶ್ವಿನೌ ॥
॥ ಛಂದಃ—೧-೩, ೫-೭. ತ್ರಿಷ್ಟುಪ್ । ೪, ಅನುಷ್ಟುಪ್ ॥

॥ ಸಂಹಿತಾಪಾಠಃ ॥

**ಅಪ ಪ್ರಾಚ ಇಂದ್ರ ವಿಶ್ವಾಁ ಅಮಿತ್ರಾನಪಾಪಾಚೋ ಅಭಿಭೂತೇ ನುದಸ್ವ ।**
**ಅಪೋದೀಚೋ ಅಪ ಶೂರಾಧರಾಚ ಉರೌ ಯಥಾ ತವ ಶರ್ಮನ್ಮದೇಮ ॥**

॥ ಪದಪಾಠಃ ॥

ಅಪ । ಪ್ರಾಚಃ । ಇಂದ್ರ । ವಿಶ್ವಾನ್ । ಅಮಿತ್ರಾನ್ । ಅಪ । ಅಪಾಚಃ । ಅಭಿಽಭೂತೇ । ನುದಸ್ವ ।
ಅಪ । ಉದೀಚಃ । ಅಪ । ಶೂರ । ಅಧರಾಚಃ । ಉರೌ । ಯಥಾ । ತವ । ಶರ್ಮನ್ । ಮದೇಮ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪ್ರಾಚಃ ಪ್ರಮುಖಮಂಚತಃ ಪ್ರಾಗ್ದೇಶೇ ವರ್ತಮಾನಾನ್। ಅಸ್ಮತ್ತಃ ಪೂರ್ವಭಾಗೇ ವರ್ತಮಾನಾನಿತ್ಯರ್ಥಃ ॥ ಪ್ರಪೂರ್ವಾದಂಚತೇಃ ಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ಶಸ್ಯಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಅನಿಗಂತೋಽಂಚತೌ ವಪ್ರತ್ಯಯೇ । ಪಾ. ೬-೨-೫೨। ಇತಿ ಗತೇಃ ಪ್ರಕೃತಿಸ್ವರತ್ವಂ ॥ ತಾದೃಶಾನ್ವಿಶ್ವಾನ್ಸರ್ವಾನಮಿತ್ರಾನ್ ಶತ್ರೂನಪ ನುದಸ್ವ । ಅಸ್ಮತ್ತೋಽಪಗಮಯ। ತಥಾ ಹೇ ಅಭಿಭೂತೇ ಶತ್ರೂಣಾಮಭಿಭವಿತರಿಂದ್ರ ಅಪಾಚೋಽಪಮುಖಮಂಚತಃ ಪೃಷ್ಠಭಾಗೇ

ವರ್ತಮಾನಾನ್ಸರ್ವಾಞ್ಛತ್ರೂನಪ ನುದಸ್ವ। ಅಪಿ ಚೋದೀಚ ಊರ್ಧ್ವಮಂಚತ ಉಪರಿವರ್ತಮಾನಾನ್ ॥ ಉತ್ಪೂರ್ವಾದಂಚತೇಃ ಪೂರ್ವವತ್ಕ್ವಿನ್ಯುದ ಈದಿತ್ಯಂಚತೇರಕಾರಸ್ಯೇಕಾರಃ। ಪೂರ್ವವತ್ಸ್ವರಃ ॥ ತಥಾವಿಧಾನಪಿ ಶತ್ರೂನಪ ನುದಸ್ವ। ತಥಾ ಹೇ ಶೂರ ಶೌರ್ಯವನ್ನಿಂದ್ರ ಅಧರಾಚೋಽಧರದೇಶಮಧೋಭಾಗಮಂಚತಶ್ಚಾಧಸ್ತನಾನಪಿ ಶತ್ರೂನಪ ನುದಸ್ವ ॥ ಅಧರಶಬ್ದೋಪಪದಾದಂಚತೇಃ ಶಸಿ ಪೂರ್ವವತ್ಪ್ರಕ್ರಿಯಾ। ಚಾವಿತಿ ಪೂರ್ವಪದಸ್ಯಾಂತೋದಾತ್ತಃ ॥ ಉರೌ ವಿಸ್ತೀರ್ಣೇ ತವ ಸಂಬಂಧಿನಿ ತ್ವಯಾ ದತ್ತೇ ಶರ್ಮಞ್ಛರ್ಮಣಿ ಗೃಹೇ ಸುಖೇ ವಾ ಯಥಾ ವಯಂ ಮದೇಮ ನಿರುಪದ್ರವಾಃ ಸಂತೋ ಹೃಷ್ಯೇಮ ತಥಾ ತ್ವಂ ಸರ್ವತ್ರ ವರ್ತಮಾನಾನಸ್ಮದೀಯಾಞ್ಛತ್ರೂನ್ವಿನಾಶಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರ**— ಎಲೈ ಇಂದ್ರನೇ। **ಪ್ರಾಚಃ**— ಪೂರ್ವದಿಕ್ಕಿನಲ್ಲಿರುವ (ನಮ್ಮ ಮುಂದುಗಡೆ ಇರುವ)। **ವಿಶ್ವಾನ್**— ಸಮಸ್ತರಾದ। **ಅಮಿತ್ರಾನ್**— ಶತ್ರುಗಳನ್ನು। **ಅಪ ನುದಸ್ವ**— ನಮ್ಮಿಂದ ಆಚೆಗೆ ಓಡಿಸು। **ಅಭಿಭೂತೇ**— ಶತ್ರುಗಳನ್ನು ಪರಾಭವಗೊಳಿಸುವ ಎಲೈ ಇಂದ್ರನೇ। **ಅಪಾಚಃ**— ನಮ್ಮ ಹಿಂದಿರುವ ಸಮಸ್ತ ಶತ್ರುಗಳನ್ನು। **ಅಪ ನುದಸ್ವ**-- ಓಡಿಸು। **ಉದೀಚಃ**— ಮೇಲು ಭಾಗದಲ್ಲಿರುವ ಶತ್ರುಗಳನ್ನು। **ಅಪ**— ಓಡಿಸು। **ಶೂರ**— ಶೂರನಾದ ಎಲೈ ಇಂದ್ರನೇ। **ಅಧರಾಚಃ**— ಅಧೋಭಾಗದಲ್ಲಿರುವ ಶತ್ರುಗಳನ್ನು। **ಅಪ**— ಓಡಿಸು। **ತವ** — ನಿನ್ನ ಸಂಬಂಧವಾದ। **ಉರೌ**— ವಿಸ್ತಾರವಾದ। **ಶರ್ಮನ್**— ಗೃಹದಲ್ಲಿ ಅಥವಾ ಸುಖದಲ್ಲಿ। **ಯಥಾ**— ಯಾವರೀತಿ। **ಮದೇಮ**— ನಾವು ಹರ್ಷದಿಂದಿರುವೆವೋ ಆ ರೀತಿ ನಮ್ಮ ಸಮಸ್ತ ಶತ್ರುಗಳನ್ನು ಓಡಿಸು.

॥ ಭಾವಾರ್ಥ ॥

ಎಲೈ ಇಂದ್ರನೇ ನಿನ್ನ ಅನುಗ್ರಹದಿಂದ ಕೊಡಲ್ಪಟ್ಟ ಗೃಹದಲ್ಲಿ ನಾವು ಸುಖವಾಗಿರುವುದಕ್ಕಾಗಿ ನಮ್ಮ ಮುಂಭಾಗದಲ್ಲಿಯೂ, ಹಿಂದುಗಡೆಯೂ, ಮೇಲೆ ಮತ್ತು ಕೆಳಭಾಗದಲ್ಲಿಯೂ ಯಾವ ಯಾವ ಶತ್ರುಗಳಿರುವರೋ ಅವರನ್ನೆಲ್ಲಾ ಹೊಡೆದೋಡಿಸು.

## English Translation.

Victorious Indra, drive off all our foes, those who dwell in the east, and those who dwell in the west, (drive) off, O hero, those who dwell in the north, those who dwell in the south, that we may rejoice in your exceeding felicity.

॥ ಸಂಹಿತಾಪಾಠಃ ॥

ಕುವಿದಂಗ ಯವಮಂತೋ ಯವಂ ಚಿದ್ಯಥಾ ದಾಂತ್ಯನುಪೂರ್ವಂ ವಿಯೂಯ ।

ಇಹೇಹ್ಯೈಷಾಂ ಕೃಣುಹಿ ಭೋಜನಾನಿ ಯೇ ಬರ್ಹಿಷೋ ನಮೋವೃಕ್ತಿಂ ನ ಜಗ್ಮುಃ ॥ ೨ ॥

॥ ಪದಪಾಠಃ ॥

ಕುವಿತ್ । ಅಂಗ । ಯವऽಮಂತಃ । ಯವಂ । ಚಿತ್ । ಯಥಾ । ದಾಂತಿ । ಅನುऽಪೂರ್ವಂ । ವಿऽಯೂಯ ।

ಇಹऽಇಹ । ಏಷಾಂ । ಕೃಣುಹಿ । ಭೋಜನಾನಿ । ಯೇ । ಬರ್ಹಿಷಃ । ನಮಃऽವೃಕ್ತಿಂ । ನ । ಜಗ್ಮುಃ ॥

॥ ಸಾಯಣಭಾಷ್ಯಂ ॥

ಅಂಗ ಹೇ ಇಂದ್ರ ಯವಮಂತೋ ಯವಾದಿಧಾನ್ಯಯುಕ್ತಾಃ ಕರ್ಷಕಾ ಯವಂ ಚಿತ್ । ಉಪಲಕ್ಷಣಮೇತತ್ । ಯವಗೋಧೂಮಾದೀನನುಪೂರ್ವಂ ಯೋ ಯೋ ಧಾನ್ಯವಿಶೇಷಃ ಪ್ರಥಮಂ ಪಚ್ಯತೇ ತೇನಾನುಪೂರ್ವ್ಯೇಣ ವಿಯೂಯ ಪೃಥಕ್ಕೃತ್ಯ ಯಥಾ ಕುವಿದ್ಬಹುಲಂ ದಾಂತಿ ಲುನಂತಿ ॥ ದಾಪ್ ಲವನೇ ಆದಾದಿಕಃ । ವಿಪೂರ್ವಾದ್ಯೌತೇರ್ಲ್ಯಪಿ ಯುಪ್ಲುವೋರ್ದೀರ್ಘಶ್ಛಂದಸಿ । ಪಾ. ೬-೪-೫೮। ಇತಿ ದೀರ್ಘಃ ॥ ಏವಮಿಹೇಹಾಸ್ಮಿನ್ನಸ್ಮಿನ್ದೇಶೇ ಸರ್ವಸ್ಮಿನ್ನೇಷಾಂ ಯಜಮಾನಾನಾಂ ಭೋಜನಾನಿ । ಧನನಾಮೈತತ್ । ಭೋಗಸಾಧನಾನಿ ಧನಾನಿ ಕೃಣುಹಿ । ಕುರು । ಯಸ್ಮಿನ್ಯಸ್ಮಿನ್ದೇಶೇ ಯದ್ಧನಮಪೇಕ್ಷಿತಂ ತದನುಗುಣಂ ಪ್ರಯಚ್ಛೇತ್ಯರ್ಥಃ ॥ ಉತಶ್ಚ ಪ್ರತ್ಯಯಾಚ್ಛಂದಸಿ ವಾವಚನಂ । ಪಾ. ೬-೪-೧೦೬-೧ । ಇತಿ ಹೇರ್ಲುಗಭಾವಃ ॥ ಏಷಾಮಿತ್ಯುಕ್ತಂ ಕೇ ಪುನರಿಮ ಇತ್ಯತ ಆಹ । ಯೇ ಯಜಮಾನಾ ಬರ್ಹಿಷೋ ಯಜ್ಞಸ್ಯ ನಮೋವೃಕ್ತಿಂ ನಮಸೋ ಹವಿರ್ಲಕ್ಷಣಸ್ಯಾನ್ನಸ್ಯ ನಮಸ್ಕಾರಾತ್ಮಕಸ್ಯ ಸ್ತೋತ್ರಸ್ಯ ವಾ ವರ್ಜನಮಕರಣಂ ನ ಜಗ್ಮುಃ ನ ಪ್ರಾಪ್ನುವಂತಿ ಕಿಂತು ಸರ್ವದಾ ಹವಿರ್ಭಿರ್ಯಜಂತಿ ಸ್ತುತಿಭಿಃ ಸ್ತುವಂತಿ ಚ । ಏಷಾಂ ಕೃಣುಹೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಅಂಗ**— ಎಲೈ ಇಂದ್ರನೇ । **ಯವಮಂತಃ**— ಯವಾದಿಧಾನ್ಯಗಳನ್ನು ಬೆಳೆಯುವ ರೈತರು । **ಯವಂ ಚಿತ್**— ಯವಾದಿ ಧಾನ್ಯಗಳನ್ನು । **ಅನುಪೂರ್ವಂ**— ಅವು ಬಲಿತು ಪಕ್ವವಾದಂತೆ । **ವಿಯೂಯ**— ಅವುಗಳನ್ನು ವಿಂಗಡಿಸಿ । **ಯಥಾ**— ಯಾವರೀತಿ । **ಕುವಿತ್** ಬಹಳವಾಗಿ । **ದಾಂತಿ**— ಪೈರಿನಿಂದ ಬೇರ್ಪಡಿಸಿ ಕತ್ತರಿಸುತ್ತಾರೆಯೋ ಆರೀತಿ । **ಯೇ**— ಯಾವ ಯಜ್ಞಮಾಡುವ ಯಜಮಾನರು । **ಬರ್ಹಿಷಃ**— ಯಜ್ಞದಲ್ಲಿ ಅರ್ಪಿಸಬೇಕಾದ । **ನಮೋವೃಕ್ತಿಂ**— ಹವಿಸ್ಸನ್ನು ಅಥವಾ ಸ್ತೋತ್ರವನ್ನು । **ನ ಜಗ್ಮುಃ**— ಬಿಡುವುದಿಲ್ಲವೋ । **ಏಷಾಂ**— ಅಂತಹ ಯಜಮಾನರಿಗೆ । **ಇಹೇಹ**— ಅವರು ಯಜ್ಞಮಾಡುವ ಆಯಾಯ ಪ್ರದೇಶಗಳಲ್ಲಿ । **ಭೋಜನಾನಿ**— ಭೋಗಸಾಧನವಾದ ಧನಗಳನ್ನು । **ಕೃಣುಹಿ** - ಒದಗಿಸಿಕೊಡು.

|| ಭಾವಾರ್ಥ ||

ಎಲೈ ಇಂದ್ರನೇ, ಧಾನ್ಯಗಳನ್ನು ಬೆಳೆಯುವ ರೈತರು ಬಲಿತು ಪಕ್ವವಾಗಿ ಕುಯ್ಯಲು ಸಿದ್ಧವಾಗಿರುವ ಧಾನ್ಯಗಳನ್ನು ವಿಂಗಡಿಸಿ ಅವನ್ನು ಯಾವ ರೀತಿ ಕ್ರಮದಿಂದ ಬೇರ್ಪಡಿಸಿ ಕತ್ತರಿಸುವರೋ ಆ ರೀತಿ ಯಜ್ಞದಲ್ಲಿ ಹವಿಸ್ಸನ್ನು ಅಥವಾ ಸ್ತೋತ್ರವನ್ನು ಮರೆಯದೆ ಅರ್ಪಿಸುವ ಯಜಮಾನರಿಗೆ ಅವರು ಎಲ್ಲಿದ್ದರೂ ಅವರಿಗೆ ಭೋಗಸಾಧನವಾದ ಧನಗಳನ್ನು ನೀನು ಒದಗಿಸಿ ಕೊಡುತ್ತೀಯೆ.

## English Translation.

As the growers of barley often cut the barley, separating it in due order, so do you, (O Indra), bestow here and there nourishment upon those who have not neglected the performance of the sacrifice.

|| ಸಂಹಿತಾಪಾಠಃ ||

ನಹಿ ಸ್ಥೂರ್ಯೃ॒ತುಥಾ ಯಾ॒ತಮಸ್ತಿ॒ ನೋತ ಶ್ರವೋ॑ ವಿವಿದೇ ಸಂಗ॒ಮೇಷು॑ ।
ಗ॒ವ್ಯಂತ॒ ಇಂದ್ರಂ॑ ಸ॒ಖ್ಯಾಯ॒ ವಿಪ್ರಾ॑ ಅಶ್ವಾ॒ಯಂತೋ॒ ವೃಷ॑ಣಂ ವಾ॒ಜ-
ಯಂ॑ತಃ ॥ ೩ ॥

|| ಪದಪಾಠಃ ||

ನ॒ಹಿ । ಸ್ಥೂರಿ॑ । ಋ॒ತು॒ಽಥಾ । ಯಾ॒ತಂ । ಅಸ್ತಿ॑ । ನ । ಉ॒ತ । ಶ್ರವಃ॑ । ವಿ॒ವಿ॒ದೇ । ಸಂ॒ಽಗ॒ಮೇಷು॑ ।
ಗ॒ವ್ಯಂತಃ॑ । ಇಂದ್ರಂ॑ । ಸ॒ಖ್ಯಾಯ॑ । ವಿಪ್ರಾಃ॑ । ಅ॒ಶ್ವ॒ಽಯಂತಃ॑ । ವೃಷ॑ಣಂ । ವಾ॒ಜ॒ಯಂತಃ॑ ॥ ೩ ॥

|| ಸಾಯಣಭಾಷ್ಯಂ ||

ಏಕೇನ ಧುರ್ಯೇಣ ಯುಕ್ತಮನಃ ಸ್ಥೂರೀತ್ಯುಚ್ಯತೇ । ಋತುಥರ್ತೌ ಯದ್ಯಸ್ಮಿನ್ಕಾಲೇ ಪ್ರಾಪ್ತವ್ಯಂ ತದ್ಯೋಗ್ಯಕಾಲೇ ಸ್ಥೂರ್ಯನೋ ಯಾತಂ ತಂ ದೇಶಂ ಪ್ರಾಪ್ತಂ ನಹ್ಯಸ್ತಿ। ನ ಹಿ ಭವತಿ। ಏಕೇನ ಧುರ್ಯೇಣ ಯುಕ್ತಃ ಶಕಟಃ ಶೀಘ್ರಂ ಗಂತವ್ಯಂ ನ ಪ್ರಾಪ್ನೋತೀತ್ಯರ್ಥಃ । ಉತಾಪಿ ಚ ಸಂಗಮೇಷು ಸಂಪ್ರಾಮೇಷು ಶ್ರವೋಽನ್ನಂ ಯಶೋ ವಾ ನ ವಿವಿದೇ । ನ ಲಭತೇ । ಇಂದ್ರಸ್ತೂಕ್ತವಿಲಕ್ಷಣಃ । ವೃಷಣಂ ವರ್ಷಿತಾರಂ ತಮಿಂದ್ರಂ ಗವ್ಯಂತೋ ಗಾ ಇಚ್ಛಂತೋ ವಿಪ್ರಾ ಮೇಧಾವಿನೋ ವಯಂ ಸಖ್ಯಾಯ ಸಖಿಕರ್ಮಣಿ ಆಹ್ವಯಾಮ ಇತಿ ಶೇಷಃ । ಕಥಂ ಭೂತಾಃ । ಅಶ್ವಾಯಂತೋಽಶ್ವಾನಸ್ಯಾತ್ಮನ ಇಚ್ಛಂತಃ ವಾಜಯಂತೋಽನ್ನಕಾಮಾ ಬಲಕಾಮಾಶ್ಚ ॥

॥ ಪ್ರತಿಪದಾರ್ಥ ॥

**ಋತುಥಾ**— ಸರಿಯಾದ ಕಾಲದಲ್ಲಿ ಬರಬೇಕಾದ । **ಸ್ಥೂರಿ**— ಒಂದು ನೊಗದ ಗಾಡಿಯು । **ಯಾತಂ**— ಹೋಗಬೇಕಾದ ಸ್ಥಳಕ್ಕೆ । **ನಹಿ ಅಸ್ತಿ**— ಹೋಗಿ ಸೇರುವುದಿಲ್ಲ । **ಉತ**— ಮತ್ತು । **ಸಂಗಮೇಷು**— ಯುದ್ಧಗಳಲ್ಲಿ । **ಶ್ರವಃ**— ಅನ್ನವನ್ನು ಅಥವಾ ಯಶಸ್ಸನ್ನು । **ನ ವಿವಿದೇ**— ಹೊಂದುವುದಿಲ್ಲ (ಆದರೆ) । **ವೃಷಣಂ**— ಇಷ್ಟಾರ್ಥಪ್ರದನಾದ । **ಇಂದ್ರಂ**— ಇಂದ್ರನನ್ನು । **ಗವ್ಯಂತಃ**— ಪೂಜಿಸಲಿಚ್ಛಿಸುವ । **ವಿಪ್ರಾಃ**— ಮೇಧಾವಿಗಳಾದ ನಾವು । **ಅಶ್ವಾಯಂತಃ**— ಅಶ್ವಗಳನ್ನು ಅಪೇಕ್ಷಿಸುತ್ತಲೂ । **ವಾಜಂಯಂತಃ**— ಅನ್ನ ಅಥವಾ ಬಲವನ್ನು ಅಪೇಕ್ಷಿಸುತ್ತಲೂ । **ಸಖ್ಯಾಯ**— ಇಂದ್ರನ ಸ್ನೇಹಲಾಭಕ್ಕಾಗಿ ಅವನನ್ನು ಪ್ರಾರ್ಥಿಸಿ ಕರೆಯುತ್ತೇವೆ

॥ ಭಾವಾರ್ಥ ॥

ಒಂದು ನೊಗಮಾತ್ರವಿರುವ ಎಂದರೆ ಒಂಟೆತ್ತಿನ ಗಾಡಿಯು ಹೋಗಬೇಕಾದ ಸ್ಥಳಕ್ಕೆ ಬೇಗನೆ ಹೋಗುವುದಿಲ್ಲ ಮತ್ತು ಅಂತಹ ಗಾಡಿಯ ಸಹಾಯದಿಂದ ಯುದ್ಧದಲ್ಲಿ ಜಯವನ್ನು ಗಳಿಸಿ ಅನ್ನಾದ್ಯಾಹಾರಗಳನ್ನು, ಪಡೆಯಲಾಗುವುದಿಲ್ಲ. ಆದರೆ ಇಷ್ಟಾರ್ಥಪ್ರದನಾದ ಇಂದ್ರನು ಒಬ್ಬನೇ ಆಗಿದ್ದರೂ ಅಶ್ವಗಳನ್ನೂ, ಅನ್ನಾದ್ಯಾಹಾರಗಳನ್ನು ಬಯಸಿ ಅವನನ್ನು ಪೂಜಿಸಲಿಚ್ಛಿಸುವ ಮೇಧಾವಿಗಳಾದ ನಾವು ಇಂದ್ರನ ಸ್ನೇಹವನ್ನಪೇಕ್ಷಿಸಿ ಅವನನ್ನು ಪ್ರಾರ್ಥಿಸಿ ಕರೆಯುತ್ತೇವೆ.

English Translation.

The cart has not arrived in due season, nor does he acquire fame in battles; (let us), the sages, desiring cattle, desiring horses, desiring food, (solicit) Indra, the showerer, for his friendship.

॥ ಸಂಹಿತಾಪಾಠಃ ॥

ಯುವಂ ಸುರಾಮಮಶ್ವಿನಾ ನಮುಚಾವಾಸುರೇ ಸಚಾ ।
ವಿಪಿಪಾನಾ ಶುಭಸ್ಪತೀ ಇಂದ್ರಂ ಕರ್ಮಸ್ವಾವತಂ ॥ ೪ ॥

॥ ಪದಪಾಠಃ ।

ಯುವಂ । ಸುರಾಮಂ । ಅಶ್ವಿನಾ । ನಮುಚೌ । ಆಸುರೇ । ಸಚಾ ।
ವಿಽಪಿಪಾನಾ । ಶುಭಃ । ಪತೀ ಇತಿ । ಇಂದ್ರಂ । ಕರ್ಮಽಸು । ಆವತಂ ॥ ೪ ॥

॥ ಸಾಯಣಭಾಷ್ಯಂ ॥

ಸೌತ್ರಾಮಣ್ಯಾಂ ಸುರಾಗ್ರಹಾಣಾಂ ಪುರೋಽನುವಾಕ್ಯಾ ಯುವಮಿತ್ಯೇಷಾ । ಸೂತ್ರಿತಂ ಚ । ಯುವಂ ಸುರಾಮಮಶ್ವಿನೇತಿ ಗ್ರಹಾಣಾಂ ಪುರೋಽನುವಾಕ್ಯಾ । ಆ. ೩-೯ । ಇತಿ ॥

ಹೇ ಅಶ್ವಿನಾಶ್ವಿನೌ ಹೇ ಶುಭಸ್ಪತೀ ಉದಕಸ್ಯ ಶೋಭನಾಲಂಕಾರಸ್ಯ ವಾ ಪತೀ ಪಾಲಯಿತಾರೌ ಸುರಾಮಂ ಸುಷ್ಠು ರಮಣಸಾಧನಮಿದಂ ಹವಿರ್ವಿಪಿಪಾನಾ ವಿಶೇಷೇಣ ಪೀತವಂತೌ ಯುವಂ ಯುವಾಂ ಸಚಾ ಸಂಗತೌ ಸಂಗತಾವಾಸುರೇಽಸುರಪುತ್ರೇ ನಮುಚಾವೇತತ್ಸಂಜ್ಞೇಽಸುರೇ ಹಂತವ್ಯೇ ಸತಿ ಕರ್ಮಸು ಯೋಧನಕರ್ಮಸ್ವಿಂದ್ರಮಾವತಂ । ಅರಕ್ಷತಂ ॥ ವಿಪಿಪಾನಾ । ಪಾ ಪಾನ ಇತ್ಯಸ್ಮಾಲ್ಲಿಟಃ ಕಾನಚ್ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಶುಭಸ್ಪತೀ ಇತಿ ಸುಬಾಮಂತ್ರಿತ ಇತಿ ಷಷ್ಠ್ಯಂತಸ್ಯ ಪರಾಂಗವದ್ಭಾವಾತ್ಷಾಷ್ಠಿಕಮಾಮಂತ್ರಿತಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಶುಭಸ್ಪತೀ**—ಉದಕಗಳಿಗೆ ಪಾಲಕರಾದ ಅಥವಾ ಶೋಭನಾಲಂಕಾರಯುಕ್ತರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಸುರಾಮಂ**—ಮನೋಹರವಾದ ಈ ಹವಿಸ್ಸನ್ನು । **ವಿಪಿಪಾನಾಂ**—ವಿಶೇಷವಾಗಿ ಪಾನ ಮಾಡಿದ । **ಯುವಂ**—ನೀವು । **ಸಚಾ**—ಒಟ್ಟಿಗಿದ್ದು । **ಆಸುರೇ**—ಅಸುರಪುತ್ರನಾದ । **ನಮುಚೌ**—ನಮುಚಿಯೆಂಬ ಅಸುರನು (ಸಂಹರಿಸಲ್ಪಡಬೇಕಾದ) । **ಕರ್ಮಸು**—ಯುದ್ಧಕರ್ಮಗಳಲ್ಲಿ (ಉದ್ಯುಕ್ತನಾಗಿದ್ದ) । **ಇಂದ್ರಂ**—ಇಂದ್ರನನ್ನು । **ಆವತಂ**—ರಕ್ಷಿಸಿದಿರಿ.

॥ ಭಾವಾರ್ಥ ॥

ಉದಕಗಳಿಗೆ ಪಾಲಕರೂ ಶೋಭನಾಲಂಕಾರಯುಕ್ತರೂ ಆದ ಎಲೈ ಅಶ್ವಿದೇವತೆಗಳೇ, ಮನೋಹರವಾದ ಈ ಹವಿಸ್ಸನ್ನು ಅಥವಾ ಸೋಮವನ್ನು ಒಟ್ಟಿಗೆ ಪಾನಮಾಡಿದನಂತರ ನಮುಚಿಯೆಂಬ ಅಸುರನೊಡನೆ ಇಂದ್ರನು ಯುದ್ಧಮಾಡುತ್ತಿದ್ದಾಗ ನೀವು ಆ ಇಂದ್ರನನ್ನು ಕಾಪಾಡಿದಿರಿ.

## English Translation

You, O Ashwins, lords of light, having drunk the grateful (libation), jointly preserved Indra in battle against the Asura Namuchi.

॥ ವಿಶೇಷವಿಷಯಗಳು ॥

ನಮುಚಿಯೆಂಬ ಅಸುರನನ್ನು ಇಂದ್ರನು ಸಂಹಾರಮಾಡಿದ ವಿವರವನ್ನು ನಾವು ಋ. ಸಂ. ಭಾಗ ೧೯, ಪುಟ 193 ರಲ್ಲಿ ವಿಸ್ತಾರವಾಗಿ ವರ್ಣಿಸಿದೇವೆ.

ಸುತ್ರಾಮಣಿ ಎಂಬ ಯಾಗದಲ್ಲಿ ಸುರಾಪಾತ್ರೆಗಳನ್ನು ತೆಗೆದುಕೊಳ್ಳುವಾಗ **ಯುವಂ** ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಯುವಂ ಸುರಾಮಮಶ್ವಿನೇತಿ ಗ್ರಹಾಣಾಂ ಪುರೋನುವಾಕ್ಯಾ** ಎಂಬ ಸೂತ್ರದಿಂದ (ಆ. ೩-೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಪುತ್ರಮಿವ ಪಿತರಾವಶ್ವಿನೋಭೇಂದ್ರಾವಥುಃ ಕಾವ್ಯೈರ್ದಂಸನಾಭಿಃ ।

ಯತ್ಸುರಾಮಂ ವ್ಯಪಿಬಃ ಶಚೀಭಿಃ ಸರಸ್ವತೀ ತ್ವಾ ಮಘವನ್ನಭಿಷ್ಣಕ್ ॥ ೫ ॥

॥ ಪದಪಾಠಃ ॥

ಪುತ್ರಂऽಇವ । ಪಿತರಾ । ಅಶ್ವಿನಾ । ಉಭಾ । ಇಂದ್ರ । ಆವಥುಃ । ಕಾವ್ಯೈಃ । ದಂಸನಾಭಿಃ ।

ಯತ್ । ಸುऽರಾಮಂ । ವಿ । ಅಪಿಬಃ । ಶಚೀಭಿಃ । ಸರಸ್ವತೀ । ತ್ವಾ । ಮಘऽವನ್ । ಅಭಿಷ್ಣಕ್ ॥ ೫ ॥

॥ ಸಾಯಣಭಾಷ್ಯಂ ॥

ಪೂರ್ವೋಕ್ತಾನಾಮೇವ ಗ್ರಹಾಣಾಂ ಪುತ್ರಮಿವೇತಿ ಯಾಜ್ಯಾ । ಸೂತ್ರಿತಂ ಚ । ಪುತ್ರಮಿವ ಪಿತರಾವಶ್ವಿನೋಭೇತಿ ಯಾಜ್ಯಾ । ಆ. ೩-೯ । ಇತಿ ॥

ಹೇ ಇಂದ್ರ ತ್ವಾಂ ಪಿತರೌ ಮಾತಾಪಿತರೌ ಪುತ್ರಮಿವ ॥ ಪಿತಾ ಮಾತ್ರಾ । ಪಾ. ೧-೨-೭೦ । ಇತಿ ಪಿತುಃ ಶೇಷಃ ॥ ಉಭೋಭಾವಶ್ವಿನೌ ಕಾವ್ಯೈಃ ಪ್ರಶಸ್ಯೈರ್ದಂಸನಾಭಿರಾತ್ಮೀಯೈಃ ಕರ್ಮಭಿರಾವಥುಃ ॥ ಮಧ್ಯಮೋ ವ್ಯತ್ಯಯೇನ ॥ ಆವತುಃ । ರರಕ್ಷತುಃ । ತ್ವಂ ಚ ಸುರಾಮಂ ಸುಖೇನ ರಮಣಸಾಧನಂ ಹವಿರ್ಯದ್ಯದಾ ಶಚೀಭಿಃ ಶಕ್ತಿಭಿಃ ಸಾರ್ಧಂ ವ್ಯಪಿಬಃ ವಿಶೇಷೇಣ ಪೀತವಾನಸಿ ತದಾ ಹೇ ಮಘವನ್ಧನವನ್ನಿಂದ್ರ ಸರಸ್ವತೀ ದೇವೀ ತ್ವಾ ತ್ವಾಮಭಿಷ್ಣಕ್ । ಉಪಾಸೇವತ ॥ ಭಿಷ್ಣಕ್ ಉಪಸೇವಾಯಾಂ । ಕಂಡ್ವಾದಿಃ । ಛಾಂದಸೋ ಯಗಭಾವಃ । ಲಙ ಬಹುಲಂ ಛಂದಸೀತಿ ಶಪೋ ಲುಕ್ । ಹಲ್ಙ್ಯಾಬ್ಭ್ಯಃ ಇತಿ ಲೋಪಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಪಿತರಾ**—ತಾಯಿ ತಂದೆಗಳು । **ಪುತ್ರಮಿವ**–ತಮ್ಮ ಪುತ್ರರನ್ನು ರಕ್ಷಿಸುವಂತೆ । **ಉಭಾ ಅಶ್ವಿನಾ**—ಅಶ್ವಿನೀ ದೇವತೆಗಳಿಬ್ಬರೂ । **ಕಾವ್ಯೈಃ**—ಪ್ರಶಂಸಾರ್ಹವಾದ । **ದಂಸನಾಭಿಃ**—ತಮ್ಮ ಸಾಹಸ ಕಾರ್ಯಗಳಿಂದ । **ಆವಥುಃ**—ನಿನ್ನನ್ನು ರಕ್ಷಿಸಿದರು । **ಮಘವನ್**—ಧನವಂತನಾದ ಎಲೈ ಇಂದ್ರನೇ ನೀನು । **ಸುರಾಮಂ**—ಹರ್ಷದಾಯಕವಾದ ಹವಿಸ್ಸನ್ನು । **ಯತ್**—ಯಾವಾಗ । **ಶಚೀಭಿಃ**—ನಿನ್ನ ಪರಾಕ್ರಮಗಳೊಡನೆ । **ವಿ ಅಪಿಬಃ**—ಪಾನಮಾಡಿದೆಯೋ ಆಗ । **ಸರಸ್ವತೀ**—ಸರಸ್ವತೀದೇವಿಯು । **ತ್ವಾ**—ನಿನ್ನನ್ನೂ । **ಅಭಿಷ್ಣಕ್**—ಸಮೀಪಿಸಿ ಬಂದಳು.

॥ ಭಾವಾರ್ಥ ॥

ಎಲೈ ಇಂದ್ರನೇ, ತಾಯಿ ತಂದೆಗಳ ತಮ್ಮ ಪುತ್ರರನ್ನು ರಕ್ಷಿಸುವಂತೆ ಇಬ್ಬರು ಅಶ್ವಿನೀ ದೇವತೆಗಳೂ ಪ್ರಶಂಸಾರ್ಹವಾದ ತಮ್ಮ ಸಾಹಸ ಕಾರ್ಯಗಳಿಂದ ನಿನ್ನನ್ನು ರಕ್ಷಿಸಿದರು. ಎಲೈ ಧನವಂತನಾದ ಇಂದ್ರನೇ, ಯಾವಾಗ ನೀನು ಹರ್ಷದಾಯಕವಾದ ಹವಿಸ್ಸನ್ನು ನಿನ್ನ ಪರಾಕ್ರಮಾಭಿವೃದ್ಧಿಗಾಗಿ ಪಾನಮಾಡಿದೆಯೋ ಆಗ ಸರಸ್ವತೀ ದೇವಿಯು ನಿನ್ನ ಬಳಿಗೆ ಬಂದು ನಿನ್ನನ್ನು ಸೇವಿಸಿದಳು.

## English Translation.

Both the Ashwins defended (thee), Indra, like two fathers (defending) a son with glorious exploits; when (triumphing) through the deeds of valour, you drank the grateful libation, Saraswati approached you, O Maghavat.

॥ ವಿಶೇಷವಿಷಯಗಳು ॥

ಹಿಂದೆ ಹೇಳಿದ ಸೌತ್ರಾಮಣಿಗ್ರಹಾದಾನದಲ್ಲಿ **ಪುತ್ರಮಿವ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪುತ್ರಮಿವ ಪಿತರಾವಶ್ವಿನೋಭೇತಿ ಯಾಜ್ಯಾ** ಎಂಬ ಸೂತ್ರದಿಂದ (೮೩-೯) ವಿವೃತವಾಗಿರುವುದು

॥ ಸಂಹಿತಾಪಾಠಃ ॥

**ಇಂದ್ರಃ ಸುತ್ರಾಮಾ ಸ್ವವಾಁ ಅವೋಭಿಃ ಸುಮೃಳೀಕೋ ಭವತು ವಿಶ್ವವೇದಾಃ ।**
**ಬಾಧತಾಂ ದ್ವೇಷೋ ಅಭಯಂ ಕೃಣೋತು ಸುವೀರ್ಯಸ್ಯ ಪತಯಃ ಸ್ಯಾಮ ॥ ೬ ॥**

॥ ಪದಪಾಠಃ ॥

**ಇಂದ್ರಃ । ಸುಽತ್ರಾಮಾ । ಸ್ವಽವಾನ್ । ಅವಃಽಭಿಃ । ಸುಽಮೃಳೀಕಃ । ಭವತು । ವಿಶ್ವಽವೇದಾಃ ।**
**ಬಾಧತಾಂ । ದ್ವೇಷಃ । ಅಭಯಂ । ಕೃಣೋತು । ಸುಽವೀರ್ಯಸ್ಯ । ಪತಯಃ । ಸ್ಯಾಮ ॥ ೬ ॥**

॥ ಸಾಯಣಭಾಷ್ಯಂ ॥

**ಸುತ್ರಾಮಾ ಸುಷ್ಠು ತ್ರಾತಾ ಸ್ವವಾನ್ಧನವಾನ್ ಸ ಇಂದ್ರೋಽವೋಭೀ ರಕ್ಷಣೈಃ ಸುಮೃಳೀಕಃ ಸುಷ್ಠು ಸುಖಯಿತಾ ಭವತು । ತಥಾ ಚ ವಿಶ್ವವೇದಾಃ ಸರ್ವಧನಃ ಸರ್ವವಿದ್ವಾನ್ವಾ ಸ ಇಂದ್ರೋ ದ್ವೇಷೋ ದ್ವೇಷ್ಟ್ಯನ್ ಶತ್ರೂನ್ ಬಾಧತಾಂ । ಹಿನಸ್ತು । ಅಭಯಂ ಭಯರಹಿತಂ ಚಾಸ್ಮಾಕಂ ಕೃಣೋತು । ಕರೋತು । ವಯಂ ಚ ತತ್ಪ್ರಸಾದಾತ್ಸುವೀರ್ಯಸ್ಯ ಶೋಭನವೀರ್ಯಸ್ಯ ಪತಯಃ ಸ್ಯಾಮ । ಭವೇಮ ॥**

॥ ಪ್ರತಿಪದಾರ್ಥ ॥

**ಸುತ್ರಾಮಾ**—ಅತಿಶಯವಾಗಿ ರಕ್ಷಿಸುವವನೂ । **ಸ್ವವಾನ್**—ಧನವಂತನೂ ಆದ । **ಇಂದ್ರಃ**—ಇಂದ್ರನು । **ಅವೋಭಿಃ**—ತನ್ನ ರಕ್ಷಣೆಗಳೊಡನೆ । **ಸುಮೃಳೀಕಃ**-ಉತ್ತಮವಾದ ಸುಖವನ್ನುಂಟುಮಾಡುವವನಾಗಿ ।

**ಭವತು**—ಆಗಲಿ। **ವಿಶ್ವವೇದಾಃ**—ಸಮಸ್ತವನ್ನೂ ತಿಳಿದ ಇಂದ್ರನು। **ದ್ವೇಷಃ**—ನಮ್ಮನ್ನು ದ್ವೇಷಿಸುವ ಶತ್ರುಗಳನ್ನು। **ಬಾಧತಾಂ**—ಹಿಂಸಿಸಲಿ। **ಅಭಯಂ**—ನಮಗೆ ಭಯರಾಹಿತ್ಯವನ್ನು। **ಕೃಣೋತು**—ಉಂಟುಮಾಡಲಿ। **ಸುವೀರ್ಯಸ್ಯ**—ಉತ್ತಮವಾದುದೂ ಶಕ್ತಿಯುತವಾದುದೂ ಆದ ಸಂಪತ್ತಿಗೆಲ್ಲಾ। **ಪತಯಃ**—ಒಡೆಯರಾಗಿ। **ಸ್ಯಾಮ**—ನಾವು ಆಗುವಂತೆ ಅನುಗ್ರಹಿಸಲಿ.

॥ ಭಾವಾರ್ಥ ॥

ಅತಿಶಯವಾಗಿ ರಕ್ಷಿಸುವವನೂ, ಧನವಂತನೂ ಆದ ಇಂದ್ರನು ತನ್ನ ರಕ್ಷಣೆಗಳೊಡನೆ ಉತ್ತಮವಾದ ಸುಖವನ್ನುಂಟುಮಾಡುವವನಾಗಲಿ. ಸಮಸ್ತವನ್ನೂ ತಿಳಿದ ಇಂದ್ರನು ನಮ್ಮನ್ನು ದ್ವೇಷಿಸುವ ಶತ್ರುಗಳನ್ನು ಹಿಂಸಿಸಲಿ. ನಮಗೆ ಭಯರಾಹಿತ್ಯವನ್ನುಂಟುಮಾಡಲಿ ಉತ್ತಮವಾದದೂ, ಶಕ್ತಿಯುತವಾದುದೂ ಆದ ಸಂಪತ್ತಿಗೆಲ್ಲಾ ನಾವು ಒಡೆಯರಾಗುವಂತಾಗಲಿ.

English Translation

May Indra, the protector, the possessor of great wealth, the all-knowing, be favourable ( to us ) with his protections; may he confound our enemies, may he make us free from fear, may we be the parents of excellent male offspring.

॥ ಸಂಹಿತಾಪಾಠಃ ॥

ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।
ಸ ಸುತ್ರಾಮಾ ಸ್ವವಾँ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥ ೭ ॥

॥ ಪದಪಾಠಃ ॥

ತಸ್ಯ । ವಯಂ । ಸುऽಮತೌ । ಯಜ್ಞಿಯಸ್ಯ । ಅಪಿ । ಭದ್ರೇ । ಸೌಮನಸೇ । ಸ್ಯಾಮ ॥
ಸಃ । ಸುऽತ್ರಾಮಾ । ಸ್ವऽವಾನ್ । ಇಂದ್ರಃ । ಅಸ್ಮೇ ಇತಿ । ಆರಾತ್ । ಚಿತ್ । ದ್ವೇಷಃ । ಸನುತಃ । ಯುಯೋತು ॥ ೭ ॥

॥ ಸಾಯಣಭಾಷ್ಯಂ ॥

ಯಜ್ಞಿಯಸ್ಯ ಯಜ್ಞಾರ್ಹಸ್ಯ ಸುಮತೌ ಶೋಭನಾಯಾಮನುಗ್ರಹಾತ್ಮಿಕಾಯಾಂ ಬುದ್ಧೌ ವಯಂ ಸ್ಯಾಮ। ತದ್ವಿಷಯಭೂತಾ ಭವೇಮ। ತಥಾ ಭದ್ರೇ ಕಲ್ಯಾಣೇ ಸೌಮನಸೇ ಸುಮನೋ

ಭಾವೇಽಪಿ ತದೀಯೇ ಸ್ಯಾಮ । ಭವೇಮ । ಸ ಇಂದ್ರೋಽಸ್ಮಾಸ್ವನುಗ್ರಹಾತ್ಮಿಕಾಂ ಬುದ್ಧಿಂ ಸೌಮನಸ್ಯಂ ಚ ಕರೋತ್ವಿತ್ಯರ್ಥಃ । ಸುತ್ರಾಮಾ ಸುಷ್ಠು ತ್ರಾತಾ ಸ್ವವಾನ್ಧನವಾನ್ ಸ ಇಂದ್ರಶ್ಚಾಸ್ಮೇ ಅಸ್ಮತ್ತ ಆರಾಚ್ಚಿತ್ ದೂರದೇಶ ಏವ ದ್ವೇಷೋ ದ್ವೇಷ್ಟ್ರೄನ್ ಸನುತಃ। ಅಂತರ್ಹಿತನಾಮ್ನೈತತ್ । ಅಂತರ್ಹಿತಾನ್ಯುಯೋತು । ಪೃಥಕ್ಕರೋತು ॥

ತ್ರಾತಾರಮಿಂದ್ರಮಿತ್ಯಸ್ಮಿನ್ವರ್ಗೇ । ೪-೭-೩೨ । ವ್ಯಾಖ್ಯಾತೇ । ಅಕ್ಷರಾರ್ಥಸ್ತು । ಸುತ್ರಾತಾ ಧನವಾನ್ ಸರ್ವಸ್ಯ ವೇದಿತೇಂದ್ರೋ ರಕ್ಷಣೈಃ ಸುಷ್ಠು ಸುಖಯಿತಾ ಭವತು ಶತ್ರೂಂಶ್ಚ ಹಿನಸ್ತು ಭಯರಾಹಿತ್ಯಂ ಚ ಕರೋತ್ವಸ್ಮಾಕಂ । ಅತೋ ವಯಂ ಶೋಭನವೀರ್ಯೋಪೇತಸ್ಯ ಧನಸ್ಯ ಸ್ವಾಮಿನೋ ಭವೇಮೇತಿ ॥ ಸಪ್ತಮ್ಯಾಸ್ತು । ತಸ್ಯ ಯಜ್ಞಾರ್ಹಸ್ಯೇಂದ್ರಸ್ಯಾನುಗ್ರಹಬುದ್ಧೌ ಭಜನೀಯೇ ಸೌಮನಸ್ಯೇ ಚ ವಯಂ ವಿಷಯಭೂತಾ ಭವೇಮ । ಸುಷ್ಠು ತ್ರಾತಾ ಧನವಾನ್ ಸ ಇಂದ್ರೋಽಸ್ಮತ್ತೋ ದೂರದೇಶೇ ದ್ವೇಷ್ಟ್ರೄನಂತರ್ಧಾನಂ ಯೋಜಯತ್ವಿತಿ ॥

॥ ಪ್ರತಿಪದಾರ್ಥ ॥

**ತಸ್ಯ ಯಜ್ಞಿಯಸ್ಯ**—ಪೂಜಾರ್ಹನಾದ ಆ ಇಂದ್ರನ । **ಸುಮತೌ**—ಅನುಗ್ರಹಾತ್ಮಕವಾದ ಬುದ್ಧಿಗೆ ವಿಷಯರಾಗಿ । **ವಯಂ**—ನಾವು । **ಸ್ಯಾಮ**— ಇರುವಂತಾಗಲಿ । **ಭದ್ರೇ**—ಕಲ್ಯಾಣಕಾರಕವಾದ । **ಸೌಮನಸೇ ಅಪಿ**—ಅವನ ಪ್ರೀತಿವಿಷಯರಾಗಿಯೂ ಇರುವಂತಾಗಲಿ । **ಸುತ್ರಾಮಾ**—ಅತಿಶಯವಾಗಿ ರಕ್ಷಿಸುವವನೂ । **ಸ್ವವಾನ್**—ಧನವಂತನೂ ಆದ । **ಸ ಇಂದ್ರಃ** –ಅದೇ ಇಂದ್ರನು । **ದ್ವೇಷಃ**—ನಮ್ಮನ್ನು ದ್ವೇಷಿಸತಕ್ಕ ಶತ್ರುಗಳನ್ನು । **ಅಸ್ಮೇ**—ನಮಗಿಂತಲೂ । **ಆರಾಚ್ಚಿತ್**—ಅತ್ಯಂತ ದೂರ ಪ್ರದೇಶದಲ್ಲಿಯೇ । **ಸನುತಃ**—ಕಣ್ಣಿಗೆ ಕಾಣದಿರುವಂತೆಯೂ । **ಯುಯೋತು**—ನಮ್ಮೊಂದಿಗೆ ಸೇರದಿರುವಂತೆಯೂ ಬೇರೆಯಾಗಿಟ್ಟಿರಲಿ.

॥ ಭಾವಾರ್ಥ ॥

ಪೂಜಾರ್ಹನಾದ ಅದೇ ಇಂದ್ರನ ಅನುಗ್ರಹಾತ್ಮಕವಾದ ಬುದ್ಧಿಗೆ ವಿಷಯರಾಗಿ ನಾವು ಇರುವಂತಾಗಲಿ. ಕಲ್ಯಾಣಕಾರಕವಾದ ಅವನ ಪ್ರೀತಿವಿಷಯರಾಗಿಯೂ ಇರುವಂತಾಗಲಿ ಅತಿಶಯವಾಗಿ ರಕ್ಷಿಸುವವನೂ ಧನವಂತನೂ ಆದ ಅದೇ ಇಂದ್ರನು ನಮ್ಮನ್ನು ದ್ವೇಷಿಸತಕ್ಕ ಶತ್ರುಗಳನ್ನು ನಮಗಿಂತಲೂ ಅತ್ಯಂತ ದೂರ ಪ್ರದೇಶದಲ್ಲಿಯೇ ನಮ್ಮ ಕಣ್ಣಿಗೆ ಕಾಣದಂತೆಯೂ ನಮ್ಮೊಂದಿಗೆ ಸೇರದಿರುವಂತೆಯೂ ಬೇರೆಯಾಗಿಟ್ಟಿರಲಿ.

## English Translation.

May we be ever in ( the enjoyment of ) the favour of that adorable divinity (retained) in his favourable thoughts, and may the protecting and opulent Indra drive away far off from us those who hate us

॥ ವಿಶೇಷವಿಷಯಗಳು॥

**ಅಸ್ಮೇ**—ಈ ಶಬ್ದಕ್ಕೆ ಏಳು ವಿಭಕ್ತ್ಯರ್ಥಗಳಲ್ಲಿಯೂ ಪ್ರಯೋಗವಿರುವುದೆಂದು ಯಾಸ್ಕರು ಹೇಳಿ ಉದಾಹರಣೆಗಾಗಿ ಈ ಋಕ್ಕಿನ **ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು** ಎಂಬ ವಾಕ್ಯವನ್ನು ಉದಾಹರಿಸಿ

ದ್ವಾರೆ ಅಸ್ಮೇ ಎಂಬ ಶಬ್ದದ ಏಳು ವಿಧವಾದ ವಿಭಕ್ತಿಪ್ರಯೋಗಗಳನ್ನು ನಾವು ಋ. ಸಂ. ಭಾಗ. ೧,೦ ಪುಟ 170 ಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

ಈ ಸೂಕ್ತದ ಕೊನೆಯ ಎರಡು ಋಕ್ಕುಗಳು ಎಂದರೆ ೬-೭ನೇ ಋಕ್ಕುಗಳು ಹಿಂದೆ ೬ನೇ ಮಂಡಲದ ೪೭ನೇ ಸೂಕ್ತದಲ್ಲಿ ೧೨ ಮತ್ತು ೧೩ನೇ ಋಕ್ಕು ಗಳಾಗಿ ಪಠಿತವಾಗಿವೆ.

## ನೂರ ಮೂವತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಈಜಾನಮಿತಿ ಸಪ್ತರ್ಚಂ ಚತುರ್ಥಂ ಸೂಕ್ತಂ ನೃಮೇಧಪುತ್ರಸ್ಯ ಶಕಪೂತಸ್ಯಾರ್ಷಂ ಮಿತ್ರಾವರುಣದೇವತಾಕಂ । ಆದ್ಯಾ ತು ಲಿಂಗೋಕ್ತದ್ಯುಭೂಮ್ಯಶ್ವಿದೇವತಾಕಾ ನ್ಯಂಕುಸಾರಿಣೀ ದ್ವಿತೀಯದ್ವಾದಶಕತ್ರ್ಯಷ್ಟಕವತೀ । ದ್ವಿತೀಯಾಷಷ್ಠ್ಯೌ ಪ್ರಸ್ತಾರಪಂಕ್ತೀ ದ್ವಿದ್ವಾದಶಕದ್ವ್ಯಷ್ಟಕವತೀ । ಸಪ್ತಮೀ ಮಹಾಸತೋ ಬೃಹತೀ ತ್ರ್ಯಷ್ಟಕದ್ವಿದ್ವಾದಶಕವತೀ । ಶಿಷ್ಟಾಸ್ತಿಸ್ರೋ ವಿರಾಡ್ರೂಪಾ ಏಕಾದಶಿನಸ್ತ್ರಯೋಽಷ್ಟಕಶ್ಚೇತಿ ಲಕ್ಷಣಲಕ್ಷಿತಾಃ । ತಥಾ ಚಾನುಕ್ರಾಂತಂ । ಈಜಾನಂ ಶಕಪೂತೋ ನಾರ್ಮೇಧೋ ಮೈತ್ರಾವರುಣಂ ನ್ಯಂಕುಸಾರಿಣ್ಯಾದ್ಯಾ ಲಿಂಗೋಕ್ತದೇವತಾಂತ್ಯಾ ಮಹಾಸತೋಬೃಹತ್ಯುಪಾದ್ಯೋಪಾಂತ್ಯೇ ಪ್ರಸ್ತಾರಪಂಕ್ತೀ ಶೇಷಾ ವಿರಾಡ್ರೂಪಾ ಇತಿ ॥ ಗತೋ ವಿನಿಯೋಗಃ ॥**

ಅನುವಾದವು— **ಈಜಾನಂ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ನೃಮೇಧಪುತ್ರನಾದ ಶಕಪೂತನೆಂಬುವನು ಋಷಿಯು; ಮಿತ್ರಾವರುಣರು ದೇವತೆಗಳು; ಈ ಸೂಕ್ತದ ಮೊದಲನೆಯ ಋಕ್ಕಿಗೆ ಲಿಂಗೋಕ್ತದೇವತೆಗಳು (ದ್ಯೌಃ, ಭೂಮಿ, ಅಶ್ವಿನೀದೇವತೆಗಳು) ದೇವತೆಯು, ಉಳಿದ ೨-೭ ಋಕ್ಕುಗಳಿಗೆ ಮಿತ್ರಾವರುಣರು ದೇವತೆಯು; ಈ ಸೂಕ್ತದಲ್ಲಿ ಮೊದಲನೆಯ ಋಕ್ಕು ನ್ಯಂಕುಸಾರಿಣೀ ಎಂಬ ಛಂದಸ್ಸಿನದು ಈ ಛಂದಸ್ಸಿನ ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಅವುಗಳಲ್ಲಿ ಎರಡನೆಯ ಪಾದದಲ್ಲಿ ೧೨ ಅಕ್ಷರಗಳೂ ಉಳಿದ ಮೂರು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇರುವವು. ಎರಡು ಮತ್ತು ಆರನೆಯ ಋಕ್ಕುಗಳು ಪ್ರಸ್ತಾರಪಂಕ್ತೀ ಎಂಬ ಛಂದಸ್ಸಿನದು ಈ ಛಂದಸ್ಸಿನ ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಅವುಗಳಲ್ಲಿ ಮೊದಲ ಎರಡು ಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ, ಕೊನೆಯ ಎರಡು ಪಾದ ಗಳಲ್ಲಿ ಎಂಟೆಂಟು ಅಕ್ಷರಗಳೂ ಇರುವವು. ಏಳನೆಯ ಋಕ್ಕು ಮಹಾಸತೋಬೃಹತೀ ಎಂಬ ಛಂದಸ್ಸಿನದು. ಈ ಛಂದಸ್ಸಿನ ಋಕ್ಕಿನಲ್ಲಿ ಐದು ಪಾದಗಳಿದ್ದು ಮೊದಲಿನ ಎರಡು ಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ ಕೊನೆಯ ಮೂರು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇರುವವು. ಉಳಿದ ಮೂರು ಋಕ್ಕುಗಳೂ ವಿರಾಡ್ರೂಪಾ ಎಂಬ ಛಂದಸ್ಸಿದವು. ಈ ಛಂದಸ್ಸಿನ ಋಕ್ಕಿನಲ್ಲಿ ಮೊದಲ ಮೂರು ಪಾದಗಳಲ್ಲಿ ಹನ್ನೊಂದು ಹನ್ನೊಂದು ಅಕ್ಷರ ಗಳೂ ಕೊನೆಯ ಪಾದದಲ್ಲಿ ಎಂಟು ಅಕ್ಷರಗಳೂ ಇರುವವು ಅನುಕ್ರಮಣಿಕೆಯಲ್ಲಿ— **ಈಜಾನಂ ಶಾಕಪೂತೋ ನಾರ್ಮೇಧೋ ಮೈತ್ರಾವರುಣಂ ನ್ಯಂಕುಸಾರಿಣ್ಯಾದ್ಯಾ ಲಿಂಗೋಕ್ತದೇವತಾಂತ್ಯಾ ಮಹಾಸತೋಬೃಹತ್ಯುಪಾದ್ಯೋಪಾಂತ್ಯೇ ಪ್ರಸ್ತಾರಪಂಕ್ತೀ ಶೇಷಾ ವಿರಾಡ್ರೂಪಾಃ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ

## ಸೂಕ್ತ—೧೩೨

ಮಂಡಲ-೧೦ ॥ ಅನುವಾಕ-೧೧ ॥ ಸೂಕ್ತ-೧೩೨ ॥
ಅಷ್ಟಕ-೮ ॥ ಅಧ್ಯಾಯ-೭ ॥ ವರ್ಗ-೨೦, ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ಶಾಕಪೂತೋ ನಾರ್ಮೇಧಃ ॥
ದೇವತಾ—೧. ಲಿಂಗೋಕ್ತದೇವತಾಃ ೨-೭. ಮಿತ್ರಾವರುಣೌ ॥
ಛಂದಃ—೧ ನ್ಯಂಕುಸಾರಿಣೀ ೨, ೬. ಪ್ರಸ್ತಾರಪಂಕ್ತಿಃ । ೩-೫. ವಿರಾಡ್ರೂಪಾ ।
೭ ಮಹಾಸತೋಬೃಹತೀ ॥

॥ ಸಂಹಿತಾಪಾಠಃ ॥

**ಈಜಾನಮಿದ್ದ್ಯೌರ್ಗೂರ್ತಾವಸುರೀಜಾನಂ ಭೂಮಿರಭಿ ಪ್ರಭೂಷಣಿ ।**
**ಈಜಾನಂ ದೇವಾವಶ್ವಿನಾವಭಿ ಸುಮ್ನೈರವರ್ಧತಾಂ ॥ ೧ ॥**

॥ ಪದಪಾಠಃ ॥

ಈಜಾನಂ । ಇತ್ । ದ್ಯೌಃ । ಗೂರ್ತಽವಸುಃ । ಈಜಾನಂ । ಭೂಮಿಃ । ಅಭಿ । ಪ್ರಽಭೂಷಣಿ ।
ಈಜಾನಂ । ದೇವಾ । ಅಶ್ವಿನಾ । ಅಭಿ । ಸುಮ್ನೈಃ । ಅವರ್ಧತಾಂ ॥ ೧ ॥

॥ ಸಾಯಣಭಾಷ್ಯಂ ॥

ಗೂರ್ತವಸುಃ । ಗೂರ್ತಮುದ್ಯತಂ ಸ್ತೋತೃಭ್ಯೋ ದಾನಾಯ ಹಸ್ತೇ ಧೃತಂ ವಸು ಧನಂ ಯಸ್ಯಾಃ ಸಾ ತಥೋಕ್ತಾ ॥ ಗುರೀ ಉದ್ಯಮನೇ । ನಿಷ್ಠಾ । ಶ್ವೀದಿತೋ ನಿಷ್ಠಾಯಾಮಿತೀಟ್ಪ್ರತಿಷೇಧಃ । ನಸತ್ತನಿಷತ್ತೇತ್ಯಾದಿನಾ ನಿಪಾತನಾನ್ನಿಷ್ಠಾನತ್ವಾಭಾವಃ । ಅನ್ಯೇಷಾಮಪೀತಿ ಸಾಂಹಿತಿಕೋ ದೀರ್ಘಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥ ಈದೃಶೀ ದ್ಯೌರ್ದ್ಯುಲೋಕಾಭಿಮಾನಿನೀ ದೇವತೇಜಾನಮಿದ್ಯಜ್ಞೈರಿಷ್ಟವಂತಮೇವ ಪುರುಷಮಭಿವರ್ಧಯತಿ ॥ ಯಜೇರ್ಲಿಟಃ ಕಾನಚ್ । ವಚಿಸ್ವಪೀತಿ ಸಂಪ್ರಸಾರಣೇ ದ್ವಿರ್ವಚನಂ ॥ ತಥಾ ಭೂಮಿಶ್ಚ ಪ್ರಭೂಷಣಿ ಪ್ರಭವನೇ ಯದ್ವಾ ಪ್ರಕೃಷ್ಟಭೂಷಣೇಽಲಂಕಾರೇ ನಿಮಿತ್ತಭೂತೇ ಸತೀಜಾನಮಭಿವರ್ಧಯತಿ । ಅಪಿ ಚ ದೇವೌ ದಾನಾದಿಗುಣಯುಕ್ತಾವಶ್ವಿನಾವೀಜಾನಮಿಷ್ಟವಂತಂ ಪುರುಷಂ ಸುಮ್ನೈರ್ಧನೈರಭ್ಯವರ್ಧತಾಂ । ಅಭಿವರ್ಧಯತಃ ॥ ವೃಧೇರಂತರ್ಭಾವಿತಣ್ಯರ್ಥಾಚ್ಛಾಂದಸೋ ಲಙ್ ॥

॥ ಪ್ರತಿಪದಾರ್ಥ ॥

**ಗೂರ್ತವಸುಃ**—ಧನವನ್ನು ಕೊಡುವುದಕ್ಕಾಗಿ ಅದನ್ನು ಕೈಯಲ್ಲಿ ಎತ್ತಿ ಹಿಡಿದುಕೊಂಡಿರುವ । **ದ್ಯೌಃ**—ದ್ಯುಲೋಕಾಭಿಮಾನಿದೇವತೆಯು । **ಈಜಾನಂ ಇತ್**—ಯಜ್ಞಮಾಡುವ ಯಜಮಾನನನ್ನೇ ಧನಾದಿಗಳಿಂದ

ಅಭಿವೃದ್ಧಿ ಪಡಿಸುತ್ತಾಳೆ | **ಪ್ರಭೂಷಣಿ**--ವಿಶೇಷ ಅಲಂಕಾರಗಳಿಂದ ಶೋಭಿಸುವ | **ಭೂಮಿಃ**—ಭೂಮಿದೇವತೆಯು | **ಈಜಾನಂ**—ಯಜ್ಞಮಾಡುವ ಯಜಮಾನನನ್ನು | **ಅಭಿ**—ಅಭಿವೃದ್ಧಿ ಪಡಿಸುತ್ತಾಳೆ | **ದೇವೌ**—ದಾನಾದಿಗುಣವಿಶಿಷ್ಟರಾದ | **ಅಶ್ವಿನಾ**—ಅಶ್ವಿನೀ ದೇವತೆಗಳು | **ಈಜಾನಂ**—ಯಜ್ಞಮಾಡುವ ಯಜಮಾನನನ್ನು | **ಸುಮ್ನೈಃ**—ಧನಗಳಿಂದ | **ಅಭಿ ಅವರ್ಧತಾಂ**—ಅಭಿವೃದ್ಧಿಗೊಳಿಸುತ್ತಾರೆ.

|| ಭಾವಾರ್ಥ ||

ಧನವನ್ನು ಕೊಡುವುದಕ್ಕಾಗಿಯೇ ಧನವನ್ನು ಕೈಯಲ್ಲೆತ್ತಿ ಹಿಡಿದಿರುವ ದ್ಯುಲೋಕಾಭಿಮಾನಿ ದೇವತೆಯು ಯಜ್ಞಮಾಡುವ ಪುರುಷನಿಗೇ ಧನವನ್ನು ಕೊಡುತ್ತಾಳೆ ಸಸ್ಯಾಲಂಕಾರಶೋಭಿತಳಾದ ಭೂಮಿದೇವಿಯೂ ಯಜ್ಞಮಾಡುವ ಪುರುಷನಿಗೆ ಧಾನ್ಯಾದಿಸಂಪತ್ತನ್ನು ಕೊಟ್ಟು ವೃದ್ಧಿಯಾಗುವಂತೆ ಮಾಡುತ್ತಾಳೆ. ದಾನಾದಿಗುಣಯುಕ್ತರಾದ ಅಶ್ವಿನೀದೇವತೆಗಳು ಯಜ್ಞಮಾಡುವ ಪುರುಷನಿಗೆ ಧನಗಳನ್ನು ಕೊಟ್ಟು ಅಭಿವೃದ್ಧಿಯಾಗುವಂತೆ ಮಾಡುತ್ತಾರೆ.

English Translation

The Heaven liberal of treasure (prospers) the sacrificer, the Earth (prospers) the sacificer because of the ornament, the divine Ashwins prospered the sacrificer with blessings.

|| ಸಂಹಿತಾಪಾಠಃ ||

ತಾ ವಾಂ ಮಿತ್ರಾವರುಣಾ ಧಾರಯತ್ಕ್ಷಿತೀ ಸುಷುಮ್ನೇಷಿತತ್ವತಾ ಯಜಾಮಸಿ |
ಯುವೋಃ ಕ್ರಾಣಾಯ ಸಖ್ಯೈರಭಿ ಷ್ಯಾಮ ರಕ್ಷಸಃ || ೨ ||

|| ಪದಪಾಠಃ ||

ತಾ | ವಾಂ | ಮಿತ್ರಾವರುಣಾ | ಧಾರಯತ್ಕ್ಷಿತೀ ಇತಿ ಧಾರಯತ್ಽಕ್ಷಿತೀ | ಸುಽಸುಮ್ನಾ | ಇಷಿತತ್ವತಾ | ಯಜಾಮಸಿ |
ಯುವೋಃ | ಕ್ರಾಣಾಯ | ಸಖ್ಯೈಃ | ಅಭಿ | ಸ್ಯಾಮ | ರಕ್ಷಸಃ || ೨ ||

|| ಸಾಯಣಭಾಷ್ಯಂ ||

ಹೇ ಮಿತ್ರಾವರುಣೌ ಧಾರಾಯತ್ಕ್ಷಿತೀ ಧ್ರಿಯಮಾಣಭೂಮಿಕೌ | ಯದ್ವಾ | ಕ್ಷಿತಿರಿತಿ ಮನುಷ್ಯನಾಮ | ಹವೀಂಷಿ ಧಾರಯಂತಃ ಕ್ಷಿತಯೋ ಮನುಷ್ಯಾ ಯಯೋಃ ಸ್ವಭೂತಾಸ್ತಥಾವಿಧೌ | ಸುಷುಮ್ನಾ ಸುಷುಮ್ನೌ ಸುಧನೌ ಸುಸುಖೌ ವಾ ತಾ ತೌ ವಾಂ ಯುವಾಮಿಷಿತತ್ವತೇಷಿತತ್ವೇನ ||

ತೃತೀಯೈಕವಚನೇ ಛಾಂದಸಸ್ತ್ಕಕಾರೋಪಜನಃ । ಯದ್ವಾ । ಭಾವಪ್ರತ್ಯಯೋಂತಾತ್ಪುನರಪಿ ಭಾವಪ್ರ। ತ್ಯಯೋ ವಿಕರಣದ್ವಯವತ್ ॥ ಇಷಿತತ್ವತ್ವೇನ ಪ್ರಾಪ್ತತ್ವತ್ವೇನ । ಹೇತೌ ತೃತೀಯಾ । ಯತೋ ಯುವಾಂ ದೇವೇಷು ಮಧ್ಯೇ ಪ್ರಾಪ್ತವ್ಯೌ ತತೋ ಹೇತೋರ್ಯಜಾಮಸಿ । ಹವಿರ್ಭಿರ್ಯಜಾಮಃ ॥ ಇದಂತೋ ಮಸೀತಿ ಮಸ ಇಕಾರಾಗಮಃ । ಏವಂ ಚ ಯುವೋರ್ಯುವಯೋಃ ಸಖ್ಯೈಃ ಸಖಿತ್ವೈಃ ॥ ಸಖ್ಯುರ್ಯಃ॥ ಕ್ರಾಣಾಯ ಕುರ್ವತೇ ಯಜಮಾನಾಯ ॥ ಕರೋತೇಃ ಶಾನಚಿ ಛಾಂದಸೋ ವಿಕರಣಸ್ಯ ಲುಕ್ । ತಾದರ್ಥ್ಯೇ ಚತುರ್ಥೀ ॥ ಯಜಮಾನಾರ್ಥಂ ರಕ್ಷಸೋ ಯಜ್ಞಸ್ಯ ಬಾಧಕಾನ್ರಾಕ್ಷಸಾನಭಿ ಷ್ಯಾಮ । ಅಭಿಭವೇಮ ॥ ಉಪಸರ್ಗಪ್ರಾದುರ್ಭ್ಯಾಂ । ಪಾ. ೮-೩-೮೭ । ಇತ್ಯಸ್ತೇಃ ಸಕಾರಸ್ಯ ಷತ್ವಂ ॥

॥ ಪ್ರತಿಪದಾರ್ಥ ॥

**ಮಿತ್ರಾವರುಣಾ**— ಎಲೈ ಮಿತ್ರಾವರುಣರೇ (ನೀವು) । **ಧಾರಯತ್ಕ್ಷಿತೀ**— ಈ ಭೂಮಿಯನ್ನು ಧರಿಸಿ ಪೋಷಿಸುವವರು । **ಸುಷುಮ್ನಾ**— ಧನ ಅಥವಾ ಸುಖವನ್ನು ಕೊಡುವವರು । **ಇಷಿತತ್ವತಾ**— ದೇವತೆಗಳ ಮಧ ದಲ್ಲಿ ಆಹ್ವಾನಿಸಲ್ಪಡುವವರು । **ತಾ ವಾಂ**— ಇಂತಹ ನಿಮ್ಮನ್ನು । **ಯಜಾಮಸಿ**— ಹವಿಸ್ಸುಗಳಿಂದ ಆರಾಧಿಸ್ಯು ತ್ತೇವೆ । **ಯುವೋಃ**— ನಿಮ್ಮಿಬ್ಬರ । **ಸಖ್ಯೈಃ**— ಸ್ನೇಹರೂಪವಾದ ಅನುಗ್ರಹಗಳಿಂದ । **ಕ್ರಾಣಾಯ**— ಯಜ್ಞಮಾಡುವ ಯಜಮಾನನಿಗೋಸ್ಕರ । **ರಕ್ಷಸಃ**— ಯಜ್ಞಕ್ಕೆ ವಿಘ್ನವನ್ನುಂಟುಮಾಡುವ ರಾಕ್ಷಸರನ್ನು । **ಅಭಿ ಸ್ಯಾಮ**— ಸೋಲಿಸಿ ಓಡಿಸೋಣ.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ನೀವು ಈ ಭೂಮಿಯನ್ನು ಧರಿಸಿ ಪೋಷಿಸುವವರು ಎಂದರೆ ಈ ಭೂಮಿಗೆ ನೀವೇ ಆಧಾರಭೂತರು. ಅಥವಾ ಮನುಷ್ಯರು ನಿಮಗಾಗಿ ಹವಿಸ್ಸನ್ನು ಅರ್ಪಿಸುವರು. ಧನ ಅಥವಾ ಸುಖವನ್ನು ಕೊಡು ವವರು. ದೇವತೆಗಳ ಮಧ್ಯದಲ್ಲಿ ಜನರು ನಿಮ್ಮನ್ನೇ ಬಯಸಿ ಪ್ರಾರ್ಥಿಸಿ ಕರೆಯುವರು. ಇಂತಹ ನಿಮ್ಮನ್ನು ನಾವು ಹವಿಸ್ಸುಗಳಿಂದ ಪೂಜಿಸುತ್ತೇವೆ ನಿಮ್ಮ ಸ್ನೇಹರೂಪವಾದ ಅನುಗ್ರಹದಿಂದ ನಾವು ಯಜಮಾನನ ಯಜ್ಞಕ್ಕೆ ವಿಘ್ನ ವನ್ನುಂಟುಮಾಡುವ ರಾಕ್ಷಸರನ್ನು ಸೋಲಿಸಿ ಓಡಿಸೋಣ

## English Translation

Mitra and Varuna, who sustain the earth, we worship you, the givers of felicity, for the sake of attaining our desires: may we, through your favour for the perfomer (of the sacrifice), overcome the Rakshasas.

॥ ಸಂಹಿತಾಪಾಠಃ ॥

ಅಧಾ ಚಿನ್ನು ಯದ್ದಿಧಿಷಾಮಹೇ ವಾಮಭಿ ಪ್ರಿಯಂ ರೇಕ್ಣಃ ಪತ್ಯಮಾನಾಃ ।
ದದ್ವಾ ವಾ ಯತ್ಪುಷ್ಯತಿ ರೇಕ್ಣಃ ಸಮ್ವಾರನ್ನಕಿರಸ್ಯ ಮಘಾನಿ ॥ ೩ ॥

|| ಪದಪಾಠಃ ||

ಅಧ । ಚಿತ್ । ನು । ಯತ್ । ದಿಧಿಷಾಮಹೇ । ವಾಂ । ಅಭಿ । ಪ್ರಿಯಂ । ರೇಕ್ಣಃ । ಪತ್ಯಮಾನಾಃ ।

ದದ್ವಾನ್ । ವಾ । ಯತ್ । ಪುಷ್ಯತಿ । ರೇಕ್ಣಃ । ಸಂ । ಊಂ ಇತಿ । ಆರನ್ । ನಕಿಃ । ಅಸ್ಯ । ಮಘಾನಿ ॥

|| ಸಾಯಣಭಾಷ್ಯಂ ||

ಹೇ ಮಿತ್ರಾವರುಣೌ ವಾಂ ಯುವಾಭ್ಯಾಂ ಯುವಯೋರರ್ಥಂ ಯದ್ಯದಾ ದಿಧಿಷಾಮಹೇ ಹವೀಂಷಿ ಧಾರಯಾಮಃ । ಯದ್ವಾ ।' ಧಿಷ ಶಬ್ದೇ ॥ ವಾಂ ಯುವಾಂ ಸ್ತುಮಹೇ । ಅಧಾ ಚಿದನಂತರಮೇವ ನು ಕ್ಷಿಪ್ರಂ ಪ್ರಿಯಮಭೀಷ್ಟಂ ರೇಕ್ಣಃ । ಧನನಾಮೈತತ್ । ಧನಮಭಿ ಪತ್ಯಮಾನಾ ಅಭಿಪತಂತೋಽಭಿಪ್ರಾಪ್ನುವಂತೋ ಭವಾಮಃ । ದದ್ವಾನ್ ದದಿವಾನ್ ॥ ದದಾತೇರ್ಲಿಟಃ ಕ್ವಸುಃ । ಛಂದಸ್ಯುಭಯಥೇತಿ ವಸೋಃ ಸಾರ್ವಧಾತುಕತ್ವಾಚ್ಛ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಅತ ಏವೇಡಭಾವಶ್ಚ । ಸಂಹಿತಾಯಾಂ ನಕಾರಸ್ಯ ದೀರ್ಘಾದಟಿ ಸಮಾನಪಾದ ಇತಿ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ ॥ ವಾಶಬ್ದಶ್ಚಾರ್ಥೇ । ಹವೀಂಷಿ ದತ್ತವಾಂಶ್ಚ ಯದ್ಯೋ ಯಜಮಾನೋ ರೇಕ್ಣೋ ಧನಂ ಪುಷ್ಯತಿ ವರ್ಧಯತಿ ಅಸ್ಯ ದತ್ತವತೋ ಯಜಮಾನಸ್ಯ ಮಘಾನಿ ಧನಾನಿ ನಕಿಃ ಸಮಾರನ್ । ನೈವಾಪಗಚ್ಛಂತಿ । ಕಿಂತು ತಮೇವ ಸರ್ವದಾ ಭಜಂತೇ । ಸಮಿತ್ಯೇದಪೇತ್ಯೇತಸ್ಯಾರ್ಥೇ । ಉ ಇತಿ ಪೂರಣಃ ॥ ಅರ್ತೇಶ್ಛಾಂದಸೇ ಲುಙಿ ಸರ್ತಿಶಾಸ್ತ್ಯರ್ತಿಭ್ಯಶ್ಚೇತಿ ಚ್ಲೇರಙಾದೇಶಃ । ಋದೃಶೋಽಙಿ ಗುಣಃ । ಪಾ. ೭-೪-೧೬ ॥

|| ಪ್ರತಿಪದಾರ್ಥ ||

(ಎಲೈ ಮಿತ್ರಾವರುಣರೇ) **ವಾಂ**—ನಿಮ್ಮನ್ನುದ್ದೇಶಿಸಿ । **ಯತ್**—ಯಾವಾಗ (ನಾವು)। **ದಿಧಿಷಾಮಹೇ**—ಹವಿಸ್ಸನ್ನು ಧರಿಸಿ ಅರ್ಪಿಸುವೆವೋ ಅಥವಾ ಸ್ತುತಿಸುವೆವೋ । **ಅಧ ಚಿತ್**—ಅನಂತರವೇ । **ನು**—ಬೇಗನೇ । **ಪ್ರಿಯಂ**—ಅಭೀಷ್ಟವಾದ । **ರೇಕ್ಣಃ**—ಧನವನ್ನು । **ಅಭಿ ಪತ್ಯಮಾನಾಃ**—ನಾವು ಪಡೆಯುವಂತಾಗಲಿ। **ದದ್ವಾನ್ ವಾ**—ನಿಮಗೆ ಹವಿಸ್ಸನ್ನು ಅರ್ಪಿಸುವ । **ಯತ್**—ಯಾವ ಯಜಮಾನನು । **ರೇಕ್ಣಃ**—ತನ್ನ ಧನವನ್ನು । **ಪುಷ್ಯತಿ**—ಅಭಿವೃದ್ಧಿಗೊಳಿಸುವನೋ । **ಅಸ್ಯ**—ಅಂತಹ ಯಜಮಾನನ । **ಮಘಾನಿ**—ಧನಗಳನ್ನು । **ನಕಿಃ ಸಂ ಆರನ್**—ಯಾರೂ ಅಪಹರಿಸದಿರಲಿ.

|| ಭಾವಾರ್ಥ ||

ಎಲೈ ಮಿತ್ರಾವರುಣರೇ, ನಿಮ್ಮನ್ನುದ್ದೇಶಿಸಿ ನಾವು ಹವಿಸ್ಸನ್ನು ಅಥವಾ ಸ್ತೋತ್ರವನ್ನು ಅರ್ಪಿಸಿದ ಕೂಡಲೇ ನಮಗೆ ಅಭೀಷ್ಟವಾದ ಧನವನ್ನು ನಾವು ಪಡೆಯುವಂತಾಗಲಿ. ನಿಮಗೆ ಹವಿಸ್ಸನ್ನರ್ಪಿಸುವ ಯಜಮಾನನ ಅಭಿವೃದ್ಧಿಯನ್ನೈದುವ ಧನಗಳನ್ನು ಯಾರೂ ಕಸಿದುಕೊಳ್ಳದಂತಾಗಲಿ.

## English Translation

May we, when we present to you (oblations), quickly alight upon desirable wealth, and the generous man who fosters his wealth, may his riches not depart from him.

॥ ಸಂಹಿತಾಪಾಠಃ ॥

ಅಸಾವನ್ಯೋ ಅಸುರ ಸೂಯತ ದ್ಯೌಸ್ತ್ವಂ ವಿಶ್ವೇಷಾಂ ವರುಣಾಸಿ ರಾಜಾ ।
ಮೂರ್ಧಾ ರಥಸ್ಯ ಚಾಕನ್ನೈತಾವತೈನಸಾಂತಕಧ್ರುಕ್ ॥ ೪ ॥

॥ ಪದಪಾಠಃ ॥

ಅಸೌ । ಅನ್ಯಃ । ಅಸುರ । ಸೂಯತ । ದ್ಯೌಃ । ತ್ವಂ । ವಿಶ್ವೇಷಾಂ । ವರುಣ । ಅಸಿ । ರಾಜಾ ॥
ಮೂರ್ಧಾ । ರಥಸ್ಯ । ಚಾಕನ್ । ನ । ಏತಾವತಾ । ಏನಸಾ । ಅಂತಕऽಧ್ರುಕ್ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಸುರ ತಮಸಃ ಕ್ಷೇಪಕ । ಯದ್ವಾ । ಅಸವಃ ಪ್ರಾಣಾಃ । ತಾನ್ದದಾತಿ ಮನುಷ್ಯೇಭ್ಯಃ ಸ್ವೋದಯೇನ ಪ್ರಯಚ್ಛತೀತ್ಯಸುರಃ । ಈದೃಶ ಹೇ ಮಿತ್ರ ದ್ಯೌರ್ದ್ಯುಲೋಕೋ ದೇವನಶೀಲಾದಿತಿರ್ವಾನ್ಯಃ ॥ ಸುಪಾಂ ಸುಲುಗಿತಿ ದ್ವಿತೀಯಾಯಾಃ ಸ್ವಾದೇಶಃ ॥ ವರುಣಾಪೇಕ್ಷಯಾನ್ಯಮಸಾವಸುಂ ನಭಸಿ ದೃಶ್ಯಮಾನಂ ತ್ವಾಂ ಸೂಯತ । ಅಸೂತ ॥ ಷೂಙ್ ಪ್ರಾಣಿಪ್ರಸವೇ । ಛಾಂದಸೋऽಡಭಾವಃ ॥ ಹೇ ವರುಣ ತ್ವಂ ಚ ವಿಶ್ವೇಷಾಂ ಸರ್ವೇಷಾಂ ಪ್ರಾಣಿನಾಂ ರಾಜಾಸಿ । ಈಶ್ವರೋ ಭವಸಿ । ತಾದೃಶಯೋರ್ಯುವಯೋ ರಥಸ್ಯ ಮೂರ್ಧಾ ಶಿರಶ್ಚಾಕನ್ । ಅಸ್ಮದ್ಯಜ್ಞಂ ಕಾಮಯತೇ । ಯದ್ವಾ । ರಥಸ್ಯ ರಂಹಣಶೀಲಸ್ಯ ಯಜ್ಞಸ್ಯ ಮೂರ್ಧಾ ನ ಮೂರ್ಧೇವ ಪ್ರಧಾನಃ ಸೋಮಶ್ಚಾಕನ್ । ಯುವಾಂ ಕಾಮಯತೇ ॥ ಕನ ದೀಪ್ತಿಕಾಂತಿಗತಿಷು । ಅಸ್ಮಾದ್ವ್ಯತ್ಯಯೇನ ಲುಙಂತಾಚ್ಛಾಂದಸೋ ಲಙ್ ॥ ಯತ ಏವಮತಃ ಕಾರಣಾದಂತಕಧ್ರುಗಂತಕಸ್ಯ ಹನನಶೀಲಸ್ಯ ರಾಕ್ಷಸಾದೇರ್ಯಮಸ್ಯೈವ ವಾ ದ್ರೋಗ್ಧಾ ॥ ದ್ರುಹ ಜಿಘಾಂಸಾಯಾಂ । ಸತ್ಸೂದ್ವಿಷೇತ್ಯಾದಿನಾ ಕ್ವಿಪ್ । ವಾ ದ್ರುಹಮುಹಷ್ಣುಹಷ್ಣಿಹಾಂ । ಪಾ. ೮-೨-೩೩ । ಇತಿ ಘತ್ವಂ । ಭಷ್ಭಾವಃ ॥ ಈದೃಶಃ ಸ ಯಜ್ಞ ಏತಾವತೈನಸೇಯತ್ಪರಿಮಾಣೇನಾಪಿ ಪಾಪಲೇಶೇನಾಪಿ ನ ಯುಜ್ಯತೇ ॥

॥ ಪ್ರತಿಪದಾರ್ಥ ॥

ಅಸುರ—ತಮೋನಿವಾರಕನಾದ ಅಥವಾ ಪ್ರಾಣದಾಯಕನಾದ ಎಲೈ ಮಿತ್ರನೇ । ದ್ಯೌಃ—ದ್ಯುಲೋಕವು। ಅನ್ಯಃ—ಮಿತ್ರಾವರುಣರಲ್ಲಿ ಒಬ್ಬನಾದ । ಅಸೌ—ಅಂತರಿಕ್ಷದಲ್ಲಿ ಪ್ರಕಾಶಿಸುವ ಈ ನಿನ್ನನ್ನು । **ಸೂಯತ**—

ಉತ್ಪನ್ನಮಾಡಿತು | **ವರುಣ**—ಎಲೈ ವರುಣನೇ | **ತ್ವಂ**—ನೀನು | **ವಿಶ್ವೇಷಾಂ**—ಸರ್ವ ಪ್ರಾಣಿಗಳಿಗೂ | **ರಾಜಾ ಅಸಿ**—ಸ್ವಾಮಿಯಾಗಿದ್ದೀಯೆ | **ರಥಸ್ಯ**—ಯಜ್ಞದ | **ಮೂರ್ಧಾ**—ಪ್ರಧಾನಭೂತವಾದ ಸೋಮವು | **ಚಾಕನ್**—ನಿಮ್ಮನ್ನು ಅಪೇಕ್ಷಿಸುತ್ತದೆ | **ಅಂತಕಧ್ರುಕ್**—ರಾಕ್ಷಸಾದಿಗಳನ್ನು ಧ್ವಂಸಮಾಡುವ ಈ ಯಜ್ಞವು | **ಏತಾವತಾ ಏನಸಾ**—ಸ್ವಲ್ಪವಾದ ಪಾಪದಿಂದಲೂ ಕೂಡ | **ನ**—ಲಿಪ್ತವಾಗುವುದಿಲ್ಲ.

|| ಭಾವಾರ್ಥ ||

ತಮೋನಿವಾರಕನಾದ ಎಲೈ ಮಿತ್ರನೇ, ದ್ಯುಲೋಕವು ಮಿತ್ರವರುಣರಲ್ಲಿ ಒಬ್ಬನಾದ ನಿನ್ನನ್ನು ಉತ್ಪನ್ನ ಮಾಡಿತು ಎಲೈ ವರುಣನೇ, ನೀನು ಸರ್ವಪ್ರಾಣಿಗಳಿಗೂ ಪ್ರಭುವಾಗಿದ್ದೀಯೆ. ಈ ಯಜ್ಞದಲ್ಲಿ ಪ್ರಧಾನಭೂತ ವಾದ ಸೋಮಾದಿಹವಿಸ್ಸುಗಳು ಮಿತ್ರಾವರುಣರಾದ ನಿಮ್ಮನ್ನು ಅಪೇಕ್ಷಿಸುತ್ತವೆ. ರಾಕ್ಷಸಾದಿಗಳ ನಾಶಕ್ಕೆ ಕಾರಣ ವಾದ ಈ ಯಜ್ಞವು ಸ್ವಲ್ಪಪಾಪದಿಂದಲೂ ಕೂಡಿರುವುದಿಲ್ಲ.

English Translation

(Mitra), scatterer of darkness, the Heaven gave birth to you the other; you, Varuna, are sovereign over all. The head of (your) chariot desired (this sacrifice); opposing the destroyer, (the rite) is not (vitiated) by the smallest defect.

|| ಸಂಹಿತಾಪಾಠಃ ||

ಅಸ್ಮಿನ್ತ್ಸ್ವೇ೩ತಚ್ಛಕಪೂತ ಏನೋ ಹಿತೇ ಮಿತ್ರೇ ನಿಗತಾನ್ಹಂತಿ ವೀರಾನ್ |
ಅವೋರ್ವಾ ಯದ್ಧಾತ್ತನೂಷ್ವವಃ ಪ್ರಿಯಾಸು ಯಜ್ಞಿಯಾಸ್ವರ್ವಾ || ೫ ||

|| ಪದಪಾಠಃ ||

ಅಸ್ಮಿನ್ | ಸು | ಏತತ್ | ಶಕऽಪೂತೇ | ಏನಃ | ಹಿತೇ | ಮಿತ್ರೇ | ನಿऽಗತಾನ್ | ಹಂತಿ | ವೀರಾನ್ ||
ಅವೋಃ | ವಾ | ಯತ್ | ಧಾತ್ | ತನೂಷು | ಅವಃ | ಪ್ರಿಯಾಸು | ಯಜ್ಞಿಯಾಸು | ಅರ್ವಾ || ೫ ||

|| ಸಾಯಣಭಾಷ್ಯಂ ||

ಯೋऽಯಂ ಶಕಪೂತಾಖ್ಯ ಋಷಿರಸ್ಮಿನ್ಶಕಪೂತೇ ಸ್ಥಿತಮೇತದೇನಃ ಪಾಪಂ ಶತ್ರೂಣಾಂ ಪಾಪಕರಮಾಯುಧಂ ವಾ ಮಿತ್ರೇ ದೇವೇ ಹಿತೇ ಹಿತಾಚರಣಪರೇऽನುಕೂಲೇ ಸತಿ ನಿಗತಾನ್ನಿಗಂತವ್ಯಾ-ಹ್ನನನಾರ್ಥಂ ನಿಯಮೇನ ಪ್ರಾಪ್ತವ್ಯಾನ್ವೀರಾಞ್ಶತ್ರೋಃ ಪುತ್ರಾದೀನ್ ಸು ಸುಷ್ಠು ಹಂತಿ | ಹಿನಸ್ತಿ | ಅಸ್ಮಿನ್ನೃಷೌ ಸಮವೇತಂ ಯತ್ಪಾಪಂ ತನ್ಮಿತ್ರಸ್ಯ ಪ್ರಸಾದೇನ ತದೀಯೇಷು ಶತ್ರುಷು ಸ್ವಕಾರ್ಯಂ

**ದುಃಖಂ ಜನಯತೀತ್ಯರ್ಥಃ ॥ ನಿಗತಾನ್ । ನಿಪೂರ್ದಾರ್ದ್ಗಮೇಃ ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ಕದೇತ್ಯತ ಆಹ । ಅವೋರ್ಹವಿರ್ಭಿಸ್ತರ್ಪಯಿತುಃ ॥ ಅವತೇರೌಣಾದಿಕ ಉಪ್ರತ್ಯಯಃ ॥ ತಸ್ಯ ಯಜಮಾನಸ್ಯ ಯಜ್ಞಿಯಾಸು ಯಜ್ಞಾರ್ಹಾಸು ಕ್ರಿಯಾಸು ತನೂಷು ಶರೀರೇಷ್ವರ್ವಾಭಿಗಂತಾ ಮಿತ್ರೋ ವರುಣೋ ವಾ ಯದ್ಯದಾವೋ ರಕ್ಷಣಂ ಧಾತ್ ದಧಾತಿ ನಿದಧಾತಿ ಸ್ಥಾಪಯತಿ। ಯದ್ವಾ । ಯದಾರ್ವಾಭಿಗಂತಾ ಸ ಋಷಿರವಿತೂ ರಕ್ಷಿತುರ್ಮಿತ್ರಸ್ಯ ವರುಣಸ್ಯ ವಾ ಯಾಗಾರ್ಹಾಸು ಪ್ರಿಯಾಸು ತನೂಷು ಶರೀರೇಷ್ವವೋ ಹವಿರ್ಲಕ್ಷಣಮನ್ನಂ ಧಾತ್ ಧಾರಯತಿ । ತದಾನೀಂ ಮಿತ್ರೇ ವರುಣೇ ಚಾನುಕೂಲೇ ಸತಿ ತದೇನೋ ವೀರಾನ್ಹಂತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಅವೋಃ**—ಹವಿಸ್ಸನ್ನರ್ಪಿಸುವ ಯಜಮಾನನ । **ಯಜ್ಞಿಯಾಸು**—ಯಜ್ಞಾರ್ಹವಾದ । **ಪ್ರಿಯಾಸು ತನೂಷು**—ಶೋಭನ ಕರ್ಮಗಳಲ್ಲಿ । **ಅರ್ವಾ**—ಯಜ್ಞಕ್ಕೆ ಬರುವ ಮಿತ್ರನಾಗಲಿ ವರುಣನಾಗಲಿ । **ಯತ್**—ಯಾವಾಗ । **ಅವಃ**—ರಕ್ಷಣೆಯನ್ನು । **ಧಾತ್**—ಸ್ಥಾಪಿಸುವನೋ ಅಥವಾ, [**ಅರ್ವಾ**—ಯಜ್ಞಕರ್ತನಾದ ಶಕಪೂತಋಷಿಯು । **ಅವೋಃ**—ರಕ್ಷಕನಾದ ಮಿತ್ರನಿಗೆ ಅಥವಾ ವರುಣನಿಗೆ । **ಪ್ರಿಯಾಸು**—ಪ್ರೀತಿಪಾತ್ರವಾದ। **ಯಜ್ಞಿಯಾಸು ತನೂಷು**—ಯಜ್ಞಕರ್ಮಗಳಲ್ಲಿ । **ಅವಃ**—ಹವಿರ್ಲಕ್ಷಣರೂಪವಾದ ಅನ್ನವನ್ನು । **ಧಾತ್**—ಧರಿಸುವನೋ ಎಂದರೆ ಸಿದ್ಧಪಡಿಸಿ ಅರ್ಪಿಸುವನೋ ಆಗ] । **ಮಿತ್ರೇ**—ಮಿತ್ರದೇವನು । **ಹಿತೇ**—ಈ ಸೂಕ್ತ ದ್ರಷ್ಟೃವಾದ ಶಕಪೂತಋಷಿಯ ವಿಷಯದಲ್ಲಿ ಅನುಕೂಲನಾಗಿರುವುದರಿಂದ । **ಅಸ್ಮಿನ್ ಶಕಪೂತೇ**—ಈ ಶಕಪೂತಋಷಿಯಲ್ಲಿರುವ । **ಏತತ್**—ಈ । **ಏನಃ**—ಶತ್ರುಗಳಿಗೆ ಪಾಪಕರವಾದ ಆಯುಧವು । **ನಿಗತಾನ್**—ಮುಂದೆ ನುಗ್ಗಿ ಬರುವ । **ವೀರಾನ್**—ಶತ್ರುವೀರರನ್ನು ಅಥವಾ ಅವರ ಪುತ್ರರನ್ನು । **ಸು**—ಚೆನ್ನಾಗಿ । **ಹಂತಿ**—ಕೊಲ್ಲುತ್ತದೆ.

॥ ಭಾವಾರ್ಥ ॥

ಮಿತ್ರಾವರುಣರನ್ನುದ್ದೇಶಿಸಿ ಯಜಮಾನನು ಮಾಡುವ ಪ್ರೀತಿಕರವಾದ ಯಜ್ಞಕರ್ಮಗಳಲ್ಲಿ ಮಿತ್ರಾವರಣರು ಯಜಮಾನನಿಗೆ ರಕ್ಷಣೆಯನ್ನು ನೀಡಿದಾಗ ಅಥವಾ ಮಿತ್ರಾವರುಣರಿಗೆ ಪ್ರಿಯವಾದ ಯಜ್ಞಕರ್ಮಗಳಲ್ಲಿ ಸೂಕ್ತ ದ್ರಷ್ಟೃವಾದ ಶಕಪೂತಋಷಿಯು ಅವರಿಗೆ ಹವಿಸ್ಸನ್ನರ್ಪಿಸಿದಾಗ ಮಿತ್ರನು ಆ ಋಷಿಯ ವಿಷಯದಲ್ಲಿ ಅನುಗ್ರಹ ಬುದ್ಧಿಯುಳ್ಳವನಾಗಿರುವುದರಿಂದ ಅವನಲ್ಲಿರುವ ಆಯುಧವು ಶತ್ರುವೀರರನ್ನು ಕೊಲ್ಲುತ್ತದೆ.

## English Translation.

This iniquity (found) in this Shakaputha, when Mitra is propitious, destroys opposing heroes, when the approaching (Rishi) places food in the dear adorable bodies of the protector (Mitra).

॥ ಸಂಹಿತಾಪಾಠಃ ॥

ಯುವೋರ್ಹಿ ಮಾತಾದಿತಿರ್ವಿಚೇತಸಾ ದ್ಯೌರ್ನ ಭೂಮಿಃ ಪಯಸಾ ಪುಪೂತನಿ ।
ಅವ ಪ್ರಿಯಾ ದಿದಿಷ್ಟನ ಸೂರೋ ನಿನಿಕ್ತ ರಶ್ಮಿಭಿಃ ॥ ೬ ॥

॥ ಪದಪಾಠಃ ॥

ಯುವೋಃ । ಹಿ । ಮಾತಾ । ಅದಿತಿಃ । ವಿಽಚೇತಸಾ । ದ್ಯೌಃ । ನ । ಭೂಮಿಃ । ಪಯಸಾ । ಪುಪೂತನಿ ।
ಅವ । ಪ್ರಿಯಾ । ದಿದಿಷ್ಟನ । ಸೂರಃ । ನಿನಿಕ್ತ । ರಶ್ಮಿಽಭಿಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ವಿಚೇತಸಾ ವಿಶಿಷ್ಟಜ್ಞಾನೌ ಮಿತ್ರಾವರುಣೌ ಯುವೋರ್ಹಿ ಯುವಯೋಃ ಖಲು ಮಾತಾ ಜನನ್ಯದಿತಿರದೀನಾಖಂಡನೀಯಾ ವಾ ಭವತಿ । ಸೈವ ಭೂಮಿಃ । ಇಯಂ ವಾ ಅದಿತಿರಿತಿ ಶ್ರುತೇಃ । ದ್ಯೌರ್ನ ಯಥಾ ದ್ಯುಲೋಕಃ ಪಯಸಾ ವೃಷ್ಟ್ಯುದಕೇನ ಸರ್ವಂ ಜಗತ್ಪುನಾತಿ ಏವಮೇಷಾ ಸಾ ಭೂಮಿಃ ಪಯಸಾತ್ಮೀಯೇನ ರಸೇನ ಹವಿರಾತ್ಮನಾ ಪರಿಣತೇನ ಪುಪೂತಾನಿ ಪರಿಪವನೇ ಯಜಮಾನಾನಾಂ ಪಾಪಸ್ಯ ಶೋಧನೇ ಹೇತುರ್ಭವತೀತ್ಯರ್ಥಃ ॥ ಪೂತಶಬ್ದಾದಾಚಾರೇ ಕ್ವಿಬಂತಾದೌಣಾದಿಕಃ ಕನಿಪ್ರತ್ಯಯಃ । ಛಾಂದಸಂ ದ್ವಿರ್ವಚನಂ ॥ ತೌ ಯುವಾಮತಿದಿಶ್ಯ ಯೂಯಂ ಪ್ರಿಯಾ ಪ್ರಿಯಾಣಿ ಧನಾನ್ಯವ ದಿದಿಷ್ಟನ । ಅವಾಙ್ಮುಖಮಸ್ಮದಭಿಮುಖಂ ದಿಶತ । ದತ್ತ ॥ ದಿಶ ಅತಿಸರ್ಜನೇ । ಅಸ್ಮಾಲ್ಲೋಟಿ ಚ್ಛಾಂದಸಃ ಶಪಃ ಶ್ಲುಃ । ತಪ್ತನಪ್ತನಥನಾಶ್ಚೇತಿ ತಶಬ್ದಸ್ಯ ತನಾದೇಶಃ ॥ ಅಪಿ ಚ ಸೂರಃ ಸೂರ್ಯಸ್ಯ ರಶ್ಮಿಭಿಃ ಕಿರಣೈರ್ನಿನಿಕ್ತ । ಅಸ್ಮಾಞ್ಛೋಧಯತ ಪೋಷಯತ ವಾ ॥ ಣಿಜಿರ್ ಶೌಚಪೋಷಣಯೋಃ ಜುಹೋತ್ಯಾದಿಕಃ । ಸಂಜ್ಞಾಪೂರ್ವಕೋ ವಿಧಿರನಿತ್ಯಃ ಇತಿ ನಿಜಾಂ ತ್ರಯಾಣಾಂ । ಪಾ. ೭-೪-೭೫ । ಇತ್ಯಭ್ಯಾಸಸ್ಯ ಗುಣೋ ನ ಕ್ರಿಯತೇ ॥

॥ ಪ್ರತಿಪದಾರ್ಥ ॥

**ವಿಚೇತಸಾ**—ವಿಶಿಷ್ಟಜ್ಞಾನಯುಕ್ತರಾದ ಎಲೈ ಮಿತ್ರಾವರುಣರೇ । **ದ್ಯೌಃ**—ದ್ಯುಲೋಕವು (ಅಂತರಿಕ್ಷವು) । **ಪಯಸಾ ನ**—ವೃಷ್ಟ್ಯುದಕದಿಂದ ಸಮಸ್ತ ಜಗತ್ತನ್ನು ಯಾವರೀತಿ ಶುದ್ಧಗೊಳಿಸುವುದೋ ಅದರಂತೆ । **ಯುವೋಃ ಹಿ**—ನಿಮ್ಮ । **ಮಾತಾ**—ಜನನಿಯಾದ । **ಅದಿತಿಃ**—ಅದೀನಳಾದ (ಅಖಂಡಳಾದ) । **ಭೂಮಿಃ**—ಭೂಮಿದೇವತೆಯು । **ಪಯಸಾ**—ಹವಿರಾದಿಗಳಿಂದ । **ಪುಪೂತನಿ**—ಯಜಮಾನರ ಪಾಪಗಳನ್ನು ಪರಿಹರಿಸಿ ಶುದ್ಧರನ್ನಾಗಿ ಮಾಡುತ್ತಾಳೆ । (ಎಲೈ ಮಿತ್ರಾವರುಣರೇ) । **ಪ್ರಿಯಾ**—ಪ್ರಿಯಕರವಾದ ಧನಗಳನ್ನು । **ಅವ ದಿದಿಷ್ಟನ**—ನಮ್ಮೆದುರಿಗೆ ತಂದುಕೊಡಿ (ಮತ್ತು) । **ಸೂರಃ**—ಸೂರ್ಯನ । **ರಶ್ಮಿಭಿಃ**—ಕಿರಣಗಳಿಂದ । **ನಿನಿಕ್ತ**—ನಮ್ಮನ್ನು ಪುನೀತರನ್ನಾಗಿ ಮಾಡಿ.

|| ಭಾವಾರ್ಥ ||

ಎಲೈ ಸರ್ವಜ್ಞರಾದ ಮಿತ್ರಾವರುಣರೇ, ಅಂತರಿಕ್ಷವು ತನ್ನ ವೃಷ್ಟ್ಯುದಕದಿಂದ ಸಮಸ್ತಜಗತ್ತನ್ನು ಶುದ್ಧಿಗೊಳಿಸುವಂತೆ ಅಖಂಡವಾದ ಈ ಭೂಮಿಯು ತನ್ನಲ್ಲಿ ಉತ್ಪನ್ನವಾದ ಓಷಧಿವನಸ್ಪತಿಗಳಿಂದ ಪ್ರಾಪ್ತವಾದ ಹವಿರಾದಿಗಳಿಂದ ಯಜಮಾನರ ಪಾಪಗಳನ್ನು ಪರಿಹಾರಮಾಡಿ ಅವರನ್ನು ಪರಿಶುದ್ಧರನ್ನಾಗಿ ಮಾಡುತ್ತದೆ. ಎಲೈ ಮಿತ್ರಾವರುಣರೇ, ನಮಗೆ ಪ್ರಿಯವಾದ ಧನವನ್ನು ತಂದುಕೊಡಿ ಮತ್ತು ಸೂರ್ಯಕಿರಣಗಳಿಂದ ನಮ್ಮನ್ನು ಶುದ್ಧರನ್ನಾಗಿ ಮಾಡಿ.

## English Translation.

O (Mitra and Varuna), endowed with various wisdom, your mother Aditi, the earth, (is) for the purification (of all things) by its libation, as the heaven (purifies by its rain); you display before us precious (treasures), and wash us with the sun's rays.

|| ಸಂಹಿತಾಪಾಠಃ ||

ಯುವಂ ಹ್ಯಪ್ನರಾಜಾವಸೀದತಂ ತಿಷ್ಠದ್ರಥಂ ನ ಧೂರ್ಷದಂ ವನರ್ಷದಂ ।
ತಾ ನಃ ಕಣೂಕಯಂತೀರ್ನೃಮೇಧಸ್ತತ್ರೇ ಅಂಹಸಃ ಸುಮೇಧಸ್ತತ್ರೇ
ಅಂಹಸಃ ॥ ೭ ॥

|| ಪದಪಾಠಃ ||

ಯುವಂ । ಹಿ । ಅಪ್ನಽರಾಜೌ । ಅಸೀದತಂ । ತಿಷ್ಠತ್ । ರಥಂ । ನ । ಧೂಃಽಸದಂ । ವನಽಸದಂ ।
ತಾಃ । ನಃ । ಕಣೂಕಽಯಂತೀಃ । ನೃಽಮೇಧಃ । ತತ್ರೇ । ಅಂಹಸಃ । ಸುಽಮೇಧಃ । ತತ್ರೇ । ಅಂಹಸಃ ॥

|| ಸಾಯಣಭಾಷ್ಯಂ ||

ಹೇ ಮಿತ್ರಾವರುಣೌ ಯುವಂ ಹಿ ಯುವಾಂ ಖಲ್ವಪ್ನರಾಜಾವಪ್ನಸಾ ಕರ್ಮಣಾ ಪ್ರವರ್ಷಣ-ಪ್ರಕಾಶನಾದಿನಾ ರಾಜಮಾನೌ ದೀಪ್ಯಮಾನೌ ಸಂತಾವಸೀದತಂ। ಸ್ವಕೀಯೇ ಸ್ಥಾನೇ ನಿಷೀದಥಃ। ಆಸಾಥೇ॥ ಅಪ್ನ ಇತಿ ಕರ್ಮನಾಮ। ಕರ್ಮಾಖ್ಯಾಯಾಂ ಹ್ರಸ್ವೋ ನುಟ್ಚ ವಾ। ಉ. ೪-೨೦೭। ಇತ್ಯಾಪ್ನೋತೇರಸುನ್ ತಸ್ಯ ನುಡಾಗಮೋ ಧಾತೋರ್ಹ್ರಸ್ವಶ್ಚ। ತಸ್ಮಿನ್ನುಪಪದೇ ರಾಜತೇಃ ಸತ್ಸೂ-ದ್ವಿಷೇತ್ಯಾದಿನಾ ಕ್ವಿಪ್। ಪೀವೋಪವಸನಾದೀನಾಂ ಛಂದಸಿ ಲೋಪೋ ವಕ್ತವ್ಯಃ। ಮ. ೬-೩-೧೦೯-೬। ಇತ್ಯಪ್ನಸಃ ಸಕಾರಲೋಪಃ॥ ತೌ ಮಿತ್ರಾವರುಣೌ ಕಣೂಕಯಂತೀಃ। ಕಣತಿಃ ಶಬ್ದಾರ್ಥಃ। ಕಣನಮಾಕ್ರೋಶರೂಪಂ ಶಬ್ದನಮಿಚ್ಛಂತೀಸ್ತಾಃ ಪ್ರಸಿದ್ಧಾಃ ಶಾತ್ರವೀಃ ಪ್ರಜಾ ಅಭಿಭವಿತುಂ। ನ

ಸಂಪ್ರತ್ಯರ್ಥೇ । ಸಂಪ್ರತಿ ರಥಂ ತಿಷ್ಠತ್ । ಅಧಿತಿಷ್ಠತಾಂ ॥ ತಿಷ್ಠತೇರ್ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಪ್ರತ್ಯೇಕಾಭಿಪ್ರಾಯೇಣೈಕವಚನಂ ॥ ಕೀದೃಶಂ ರಥಂ । ಧೂರ್ಷದಂ ಧರ್ಯೋಶ್ವಯೋರ್ವಹನದೇಶೇ ಸೀದಂತಂ ವನರ್ಷದಂ ವನೇಷೂದ್ಯಾನೇಷು ಕ್ರೀಡಾರ್ಥಂ ನಿಷೀದಂತಂ । ಯದ್ವಾ । ವನಮಿತ್ಯುದಕನಾಮ । ಸಮುದ್ರಮಧ್ಯೇ ಹಿ ವರುಣೋ ನಿವಸತಿ । ವನೇ ಸಮುದ್ರೋದಕೇ ನಿಷೀದಂತಂ॥ ಉಭಯತ್ರಾಪಿ ಪೂರ್ವವತ್ಕ್ವಿಪ್ । ವನಸದಮಿತ್ಯತ್ರ ಛಾಂದಸಃ ಸಾಂಹಿತಿಕೋ ರೇಫೋಪಜನಃ ॥ ಹೇ ಮಿತ್ರಾವರುಣೌ ಯುವಾಭ್ಯಾಂ ನೃಮೇಧೋ ಮಮ ಪಿತಾಂಹಸಃ ಪಾಪಾತ್ತತ್ರೇ । ರರಕ್ಷೇ । ರಕ್ಷಿತೋ ಬಭೂವ ॥ ತ್ರೈಙ್ ಪಾಲನ ಇತ್ಯಸ್ಮಾತ್ಕರ್ಮಣಿ ಲಿಟ್ । ಯದ್ವಾ । ಉಪಚಾರಾಜ್ಜನ್ಯೇ ಜನಕಶಬ್ದಃ । ನೃಮೇಧಸ್ಯ ಪುತ್ರಃ ಶಕಪೂತೋಽಹಂ ಪಾಪಾದ್ಯುವಾಭ್ಯಾಂ ತತ್ರೇ । ರಕ್ಷಿತೋಽಸ್ಮಿ । ಸುಮೇಧೋಽನ್ಯೋಽಪಿ ಸುಯಜ್ಞೋ ಯಜಮಾನೋಽಂಹಸಃ ಪಾಪಾತ್ತತ್ರೇ । ಯುವಾಭ್ಯಾಮೇವಾರಕ್ಷ್ಯತ ॥ ಭೀತ್ರಾರ್ಥಾನಾಂ । ಪಾ. ೧-೪-೨೫ । ಇತ್ಯಂಹಸೋಽಪಾದಾನಸಂಜ್ಞಾ ॥

॥ ಪ್ರತಿಪದಾರ್ಥ ॥

(ಎಲೈ ಮಿತ್ರಾವರುಣರೇ) ಯುವಂ ಹಿ —ನೀವು । ಅಪ್ನರಾಜೌ—ವೃಷ್ಟಿಪ್ರಕಾಶನಾದಿಕರ್ಮಗಳಿಂದ ಪ್ರಕಾಶಿಸುತ್ತಾ ।ಅಸೀದತಂ—ಸ್ವಸ್ಥಾನದಲ್ಲಿ ಕುಳಿತಿರುತ್ತೀರಿ। ಕಣೂಕಯಂತೀಃ—ಯುದ್ಧಾರ್ಥವಾಗಿ ಕೋಲಾಹಲ ಮಾಡುತ್ತಿರುವ । ತಾಃ ನಃ—ನಮ್ಮ ಶತ್ರುಪ್ರಜೆಗಳನ್ನು ಸೋಲಿಸುವುದಕ್ಕಾಗಿ । ನ—ಈಗ । ಧೂರ್ಷದಂ—ನೊಗದಲ್ಲಿ ಅಶ್ವಗಳನ್ನು ಹೂಡಿರುವುದೂ । ವನರ್ಷದಂ—ವನ ಅಥವಾ ಸಮುದ್ರದಲ್ಲಿ ನಿಂತಿರುವುದೂ ಆದ । ರಥಂ—ನಿಮ್ಮ ರಥವನ್ನು । ತಿಷ್ಠತ್—ಹತ್ತಿ ಕುಳಿತುಕೊಳ್ಳಿ । ನೃಮೇಧಃ—ನಮ್ಮ ತಂದೆಯಾದ ನೃಮೇಧ ಋಷಿಯು । ಅಂಹಸಃ—ಪಾಪದಿಂದ । ತತ್ರೇ—ನಿಮ್ಮಿಂದ ರಕ್ಷಿಸಲ್ಪಟ್ಟನು । ಸುಮೇಧಃ—ಯಜ್ಞಕರ್ತೃವಾದ ಯಜಮಾನನು ( ನಾನೂ ) । ಅಂಹಸಃ—ಪಾಪದಿಂದ । ತತ್ರೇ—ರಕ್ಷಿಸಲ್ಪಟ್ಟನು.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ವೃಷ್ಟಿಪ್ರಕಾಶನಾದಿ ನಿಮ್ಮ ಕರ್ಮಗಳನ್ನು ನೆರವೇರಿಸುತ್ತಾ ನಿಮ್ಮ ಸ್ವಸ್ಥಾನದಲ್ಲಿ ನೀವು ಕುಳಿತಿರುತ್ತೀರಿ. ಯುದ್ಧಾರ್ಥವಾಗಿ ಕೋಲಾಹಲ ಶಬ್ದವನ್ನು ಮಾಡುತ್ತಾ ಇರುವ ನಮ್ಮ ಶತ್ರುಜನರನ್ನು ಸೋಲಿಸುವುದಕ್ಕಾಗಿ ಈಗ ಅಶ್ವಗಳನ್ನು ನೊಗದಲ್ಲಿ ಹೂಡಿರುವುದೂ ವನ ಅಥವಾ ಸಮುದ್ರೋದಕದ ಮಧ್ಯದಲ್ಲಿ ನಿಂತಿರುವುದೂ ಆದ ನಿಮ್ಮ ರಥವನ್ನು ಹತ್ತಿ ಕುಳಿತುಕೊಳ್ಳಿ. ನಮ್ಮ ತಂದೆಯಾದ ನೃಮೇಧಋಷಿಯು ನಿಮ್ಮ ಅನುಗ್ರಹದಿಂದ ಪಾಪದಿಂದ ಮುಕ್ತನಾದನು. ಯಜ್ಞ ಮಾಡುವ ಯಜಮಾನನೂ ( ನಾನೂ ) ಪಾಪದಿಂದ ರಕ್ಷಿಸಲ್ಪಟ್ಟನು.

## English Translation.

For you, brilliant throngh your functions, have sat down; now mount (each of you, his) chariot, which rests on the yoke, which abides in the forests, (to overcome) those (people) who clamour against us; Nrimedha was preserved (by you) from sin, the pious worshipper was preserved from sin.

# ನೂರ ಮೂವತ್ತಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪ್ರೋ ಷ್ವಿತಿ ಸಪ್ತರ್ಚಂ ಪಂಚಮಂ ಸೂಕ್ತಂ ಪಿಜವನಪುತ್ರಸ್ಯ ಸುದಾಸ ಆರ್ಷಮೈಂದ್ರಂ। ಆದ್ಯಸ್ತ್ರ್ಯೃಚಃ ಶಾಕ್ವರಃ। ಷಟ್‌ಪಂಚಾಶದಕ್ಷರೀ ಶಕ್ವರೀ। ದ್ವಿತೀಯಸ್ತ್ರ್ಯೃಚೋ ಮಹಾಪಾಂಕ್ತಃ। ಷಳಷ್ಟಕಾ ಮಹಾಪಂಕ್ತಿಃ। ಸಪ್ತಮೀ ತ್ರಿಷ್ಟುಪ್। ತಥಾ ಚಾನುಕ್ರಾಂತಂ। ಪ್ರೋ ಷು ಸುದಾಃ ಪೈಜವನಃ ಶಾಕ್ವರಮಹಾಪಾಂಕ್ತಾವಾದ್ಯೌ ತೃಚಾವಂತ್ಯಾ ತ್ರಿಷ್ಟುಬಿತಿ॥ ಷೋಳಶಿಶಸ್ತ್ರ ಆದ್ಯಸ್ತ್ರ್ಯೃಚಃ ಶಂಸನೀಯಃ। ಸೂತ್ರಿತಂ ಚ। ತ್ರಿಕದ್ರುಕೇಷು ಮಹಿಷೋ ಯವಾಶಿರಂ ಪ್ರೋ ಷ್ವಸ್ಮೈ ಪುರೋರಥಮಿತಿ ತೃಚಾವಾತಿಚ್ಛಂದಸೌ। ಆ. ೬-೨। ಇತಿ॥ ಮಹಾವ್ರತೇ ಮಾಧ್ಯಂದಿನಸವನೇ ಬ್ರಹ್ಮಶಸ್ತ್ರೇಽನುರೂಪತೃಚಸ್ಯ ಪ್ರೋ ಷ್ವಸ್ಮಾ ಇತ್ಯೇಕಾ। ತಥೈವ ಪಂಚಮಾರಣ್ಯಕೇ ಸೂತ್ರಿತಂ ಚ। ಪ್ರೋ ಷ್ವಸ್ಮೈ ಪುರೋರಥಮಿತ್ಯೇತೋಽನುರೂಪಃ। ಐ. ಆ. ೫-೧-೧। ಇತಿ॥**

ಅನುವಾದವು—**ಪ್ರೋ ಷು** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾದಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪಿಜವನಪುತ್ರನಾದ ಸುದಾಸನೆಂಬುವನು ಋಷಿಯು; ಇಂದ್ರನು ದೇವತೆಯು; ಈ ಸೂಕ್ತದ ಮೊದಲಿನ ಮೂರು ಋಕ್ಕುಗಳು ಶಕ್ವರೀಛಂದಸ್ಕವು. ಈ ಶಕ್ವರೀಛಂದಸ್ಸಿನ ಋಕ್ಕಿನಲ್ಲಿ ಐವತ್ತಾರು ಅಕ್ಷರಗಳಿರುವವು. ನಾಲ್ಕರಿಂದ ಆರನೆಯ ಋಕ್ಕಿನವರಗೆ ಇರುವ ಮೂರು ಋಕ್ಕುಗಳು ಮಹಾಪಂಕ್ತಿ ಎಂಬ ಛಂದಸ್ಸಿನವು ಈ ಮಹಾಪಂಕ್ತಿ ಎಂಬ ಛಂದಸ್ಸಿನ ಋಕ್ಕಿನಲ್ಲಿ ಎಂಟೆಂಟು ಅಕ್ಷರಗಳ ಆರು ಪಾದಗಳಿರುವವು. ಏಳನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಪ್ರೋ ಷು ಸುದಾಃ ಪೈಜವನಃ ಶಾಕ್ವರಮಹಾಪಾಂಕ್ತಾವಾದ್ಯೌ ತೃಚಾವಂತ್ಯಾ ತ್ರಿಷ್ಟುಪ್** ಎಂದು ಹೇಳಿರುವುದು. ಷೋಳಶಿ ಎಂಬ ಯಾಗದಲ್ಲಿ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತ್ರಿಕದ್ರುಕೇಷು ಮಹಿಷೋ ಯವಾಶಿರಂ ಪ್ರೋ ಷ್ವಸ್ಮೈ ಪುರೋರಥಮಿತಿ ತೃಚಾವಾತಿಚ್ಛಂದಸೌ** ಎಂಬ ಸೂತ್ರದಿಂದ (ಆ ೯-೨) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿ ಮಾಧ್ಯಂದಿನಸವನಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಅನುರೂಪತೃಚ (ಮೂರುಋಕ್ಕುಗಳು)ಕ್ಕಾಗಿ **ಪ್ರೋ ಷ್ವಸ್ಮೈ** ಎಂಬ ಒಂದು ಋಕ್ಕಿನ ವಿನಿಯೋಗವಿರುವುದೆಂದು ಐತರೇಯಾರಣ್ಯಕ ಪಂಚಮಾರಣ್ಯಕದಲ್ಲಿ—**ಪ್ರೋ ಷ್ವಸ್ಮೈ ಪುರೋರಥಮಿತ್ಯೇತೋಽನುರೂಪಃ** ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು (ಐ. ಆ. ೫-೧-೧)

## ಸೂಕ್ತ—೧೩೩

ಮಂಡಲ-೧೦ ॥ ಅನುವಾಕ-೧೧ ॥ ಸೂಕ್ತ-೧೩೩ ॥

ಅಷ್ಟಕ-೮ ॥ ಅಧ್ಯಾಯ-೭ ॥ ವರ್ಗ- ೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥

॥ ಋಷಿಃ—ಸುದಾಃ ಪೈಜವನಃ ॥

॥ ದೇವತಾ—ಇಂದ್ರಃ ॥

॥ ಛಂದಃ—೧-೩ ಶಕ್ವರೀ ॥ ೪-೬ ಮಹಾಪಂಕ್ತಿಃ। ೭. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರೋ ಷ್ವಸ್ಮೈ ಪುರೋರಥಮಿಂದ್ರಾಯ ಶೂಷಮರ್ಚತ ।
ಅಭೀಕೇ ಚಿದು ಲೋಕಕೃತ್ಸಂಗೇ ಸಮತ್ಸು ವೃತ್ರಹಾಸ್ಮಾಕಂ ಬೋಧಿ
ಚೋದಿತಾ ನಭಂತಾಮನ್ಯಕೇಷಾಂ ಜ್ಯಾಕಾ ಅಧಿ ಧನ್ವಸು ॥ ೧ ॥

॥ ಪದಪಾಠಃ ॥

ಪ್ರೋ ಇತಿ । ಸು । ಅಸ್ಮೈ । ಪುರಃಽರಥಂ । ಇಂದ್ರಾಯ । ಶೂಷಂ । ಅರ್ಚತ ।
ಅಭೀಕೇ । ಚಿತ್ । ಊಂ ಇತಿ । ಲೋಕಽಕೃತ್ । ಸಂಽಗೇ । ಸಮತ್ಽಸು । ವೃತ್ರಽಹಾ । ಅಸ್ಮಾಕಂ ।
ಬೋಧಿ । ಚೋದಿತಾ । ನಭಂತಾಂ । ಅನ್ಯಕೇಷಾಂ । ಜ್ಯಾಕಾಃ । ಅಧಿ । ಧನ್ವಽಸು ॥ ೧ ॥

॥ ಸಾಯಣಭಾಷ್ಯಂ ॥

ಅಸ್ಮಾ ಇಂದ್ರಾಯ । ಷಷ್ಠ್ಯರ್ಥೇ ಚತುರ್ಥೀ । ಅಸ್ಯೇಂದ್ರಸ್ಯ ಪುರೋರಥಂ ರಥಸ್ಯ ಪುರಃ ಪುರತಃ ॥ ಪುರೋಽವ್ಯಯಮಿತಿ ಗತಿತ್ವಾದ್ಗತಿಸಮಾಸಃ ॥ ರಥಸ್ಯಾಗ್ರತೋ ವರ್ತಮಾನಂ ಶೂಷಂ ಬಲಂ ಸು ಪ್ರೋ ಅರ್ಚತ । ಹೇ ಸ್ತೋತಾರಃ ಸುಷ್ಠು ಪ್ರಪೂಜಯತ । ಪ್ರ ಉ ಇತಿ ನಿಪಾತಸಮುದಾಯಃ ಪ್ರೋ ಇತಿ ॥ ಓದಿತಿ ಪ್ರಗೃಹ್ಯಸಂಜ್ಞಾ ॥ ಇಂದ್ರೋ ವಿಶೇಷ್ಯತೇ । ಸಮತ್ಸು । ಸಮಾನಂ ಮಾದ್ಯಂತ್ಯತ್ರೇತಿ ಸಮದಃ ಸಂಗ್ರಾಮಾಃ ॥ ಔಣಾದಿಕೋಽಧಿಕರಣೇ ಕ್ವಿಪ್ । ಸಮಾನಸ್ಯ ಛಂದಸೀತಿ ಸಭಾವಃ ॥ ಸಮತ್ಸು ಸಂಗ್ರಾಮೇಷು ಸಂಗೇ ಸಂಗಮನೀಯೇ ಶತ್ರುಬಲೇ ॥ ಡೋಽನ್ಯತ್ರಾಪಿ ದೃಶ್ಯತೇ । ಪಾ. ೩-೨-೪೮ । ಇತಿ ಗಮೇರ್ಡಃ ॥ ಅಭೀಕೇ ಚಿದಭ್ಯರ್ಣೇಽಪಿ ನಿಕಟಂ ಪ್ರಾಪ್ತೇಽಪಿ ಕೇಶಾಕೇಶ್ಯವಸ್ಥಾಯಾಮಪಿ ಲೋಕಕೃತ್ಸ್ಥಿತಿಕೃನ್ನ ಪಲಾಯಿತಾ ಸ್ಥಿತ್ವಾ ವೃತ್ರಹಾ ವೃತ್ರಾಣಾಮಾವರಕಾಣಾಂ ಹಂತಾ ಏವಂವಿಧಃ ಸ ಇಂದ್ರೋಽಸ್ಮಾಕಂ ಸ್ತೋತೄಣಾಂ ಚೋದಿತಾ ಧನಾನಾಂ ಪ್ರೇರಿತಾ ಸನ್ಬೋಧಿ । ಅಸ್ಮಾಭಿಃ ಕೃತಾನಿ ಪರಿಚರಣಾನಿ ಬುಧ್ಯತಾಂ ॥ ಬುಧೇಶ್ಛಂದಸೇ ಲುಙ್ । ದೀಪಜನಬುಧೇತ್ಯಾದಿನಾ ಕರ್ತರಿ ಚ್ಲೇಶ್ಚಿಣಾದೇಶಃ। ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ ॥ ಅಪಿ ಚಾನ್ಯಕೇಷಾಂ ಕುತ್ಸಿತಾನಾಮನ್ಯೇಷಾಂ ಶತ್ರೂಣಾಮಧಿ ಧನ್ವಸು ಧನುಃಷ್ವಧಿರೋಪಿತಾ ಜ್ಯಾಕಾಃ ಕುತ್ಸಿತಾ ಜ್ಯಾ ನಭಂತಾಂ । ಹಿಂಸ್ಯಂತಾಂ । ನಶ್ಯಂತು ॥ ಜ್ಯಾಶಬ್ದಾತ್ಕುತ್ಸಾಯಾಂ ಪ್ರಾಗಿವಾತ್ಕಃ । ಪಾ. ೫-೩-೭೦-೭೪ । ನಭ ತುಭ ಹಿಂಸಾಯಾಂ ಕ್ರ್ಯಾದಿಕಃ । ವ್ಯತ್ಯಯೇನ ಶಪ್ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಜನರೇ) **ಅಸ್ಮೈ ಇಂದ್ರಾಯ** – ಈ ಇಂದ್ರನ । **ಪುರೋರಥಂ**—ರಥದ ಮುಂಭಾಗದಲ್ಲಿರುವ । **ಶೂಷಂ**—ಬಲವನ್ನು । **ಸು ಪ್ರೋ ಅರ್ಚತ**—ಚೆನ್ನಾಗಿ ಪೂಜಿಸಿರಿ । **ಸಮತ್ಸು**—ಯುದ್ಧಗಳಲ್ಲಿ । **ಸಂಗೇ**—ಶತ್ರುಬಲಗಳು ಒಟ್ಟಿಗೆ ಸೇರಿ । **ಅಭೀಕೇ ಚಿತ್**—ಹತ್ತಿರಕ್ಕೆ ಬಂದಿದ್ದಾಗಲೂ । **ಲೋಕಕೃತ್**—ಯುದ್ಧದಲ್ಲಿ ಓಡಿಹೋಗದೆ ನಿಲ್ಲುವ । **ವೃತ್ರಹಾ** – ಶತ್ರುಹಂತಕನಾದ ಇಂದ್ರನು । **ಅಸ್ಮಾಕಂ**—ನಮಗೆ । **ಚೋದಿತಾ**—ಪ್ರೇರಕನಾಗಿ ( ಹುರಿದುಂಬಿಸುತ್ತಾ) । **ಬೋಧಿ**—ನಾವು ಮಾಡುವ ಪರಿಚರಣಕರ್ಮವನ್ನು ತಿಳಿಯಲಿ । **ಅನ್ಯಕೇಷಾಂ**—ಕುತ್ಸಿತರಾದ ಶತ್ರುಜನರ । **ಅಧಿ ಧನ್ವಸು**—ಧನಸ್ಸುಗಳಲ್ಲಿ ಹೂಡಲ್ಪಟ್ಟಿರುವ । **ಜ್ಯಾಕಾಃ**—ಹೆದೆಗಳು । **ನಭಂತಾಂ**—ನಾಶವನ್ನೈದಲಿ

॥ ಭಾವಾರ್ಥ ॥

ಎಲೈ ಸ್ತೋತೃಜನರೇ, ಈ ಇಂದ್ರನ ರಥದ ಮುಂಭಾಗದಲ್ಲಿರುವ ಬಲವನ್ನು ಚೆನ್ನಾಗಿ ಪೂಜಿಸಿರಿ. ಯುದ್ಧಗಳಲ್ಲಿ ಶತ್ರುಜನರು ಒಟ್ಟಿಗೆ ಸೇರಿ ಕಲೆತಾಗ ನಡೆಯುವ ಕೈಕೈಯುದ್ಧಗಳಲ್ಲಿ ಯುದ್ಧಸ್ಥಿತಿಯನ್ನು ಕೆಡದಂತೆ ಕಾಪಾಡಬಲ್ಲ ಶತ್ರುಹಂತಕನಾದ ಇಂದ್ರನು ನಮಗೆ ಪ್ರೇರಕನಾಗಿ ಎಂದರೆ ಯುದ್ಧಗಳಲ್ಲಿ ನಮ್ಮನ್ನು ಹುರಿದುಂಬಿಸುತ್ತಾ ನಾವು ಮಾಡುವ ಸೇವಾಕರ್ಮಗಳನ್ನು ಅರಿಯಲಿ. ಕುತ್ಸಿತರಾದ ಶತ್ರುಜನರ ಬಿಲ್ಲಿನ ಸುಸಜ್ಜಿತವಾದ ಹೆದೆಗಳು ನಾಶವನ್ನೈದಲಿ.

English Translation

Adore fervently the might of that Indra which goes before his chariot; he who makes room for us in the hand to hand conflict, who slays the Vritra in the hostile army in battles, he who is our simulator, may he know (the adoration paid by us); may the bowstrings on the bows of our enemies be destroyed.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ **ಅಭೀಕೇ ಚಿತ್** ಎಂಬ ಶಬ್ದಗಳಿಗೆ ಭಾಷ್ಯಕಾರರು **ಅಭ್ಯಕ್ತೇಽಪಿ ನಿಕಟಂ ಪ್ರಾಪ್ತೇಽಪಿ ಕೇಶಾಕೇಶ್ಯವಸ್ಥಾಯಾಮಪಿ** । ತೀರಾ ಸಮೀಪಕ್ಕೆ ಬಂದು ಪರಸ್ಪರ ಜುಟ್ಟುಗಳನ್ನು ಹಿಡಿದು ( ಹೊಡೆದಾಡುತ್ತಲಿರುವ ಶತ್ರುಗಳು) ಎಂದು ಅರ್ಥವಿವರಣೆ ಮಾಡಿದಾರೆ. ಯಾಸ್ಕರು ಅಭೀಕೇ ಎಂಬ ಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾ—

**ಪ್ರಪಿತ್ವೇಽಭೀಕ ಇತ್ಯಾಸನ್ನಸ್ಯ । ಪ್ರಪಿತ್ವೇ ಪ್ರಾಪ್ತೇ । ಅಭೀಕೇ ಅಭ್ಯಕ್ತೇ । ಆಪಿತ್ವೇ ನಃ ಪ್ರಪಿತ್ವೇ ತೂಯಮಾಗಹಿ । ಅಭೀಕೇ ಚಿದುಲೋಕಕೃತ್ । ಇತ್ಯಪಿ ನಿಗಮೌ ಭವತಃ ॥**

**(ನಿ. ೩–೨೦)**

ಪ್ರಪಿತ್ವೇ ಅಭೀಕೇ ಇತ್ಯಾದಿ ಇಪ್ಪತ್ತಾರು ಶಬ್ದಗಳಲ್ಲಿ ಎರಡೆರಡು ಶಬ್ದಗಳು ಎಂದರೆ ಪ್ರಪಿತ್ವೇ ಅಭೀಕೇ ಎಂಬ ಎರಡು

ಶಬ್ದಗಳೂ (ಅದರಂತೆ ದಭ್ರಂ ಅರ್ಭಕಂ ಎಂಬ ಎರಡು ಶಬ್ದಗಳೂ, ಒಂದೇ ವಿಧವಾದ ಅರ್ಥವನ್ನು ಸೂಚಿಸುವವು. **ಪ್ರಪಿತ್ವೇ** ಎಂದರೆ **ಪ್ರಾಪ್ತೇ** ಸಮೀಪಕ್ಕೆ ಬಂದಿರುವ; **ಅಭೀಕೇ** ಎಂದರೆ **ಅಭ್ಯಕ್ತೇ** ಅಭಿಮುಖವಾಗಿ ಎಂದರೆ ಎದುರಿಗೆ ಸಮೀಪದಲ್ಲಿ ಬಂದುನಿಂತಿರುವ ಎಂದರ್ಥವು. ಈ ವಿಷಯದಲ್ಲಿ– **ಆಪಿತ್ವೇ ನಃ ಪ್ರಪಿತ್ವೇ ತೂಯಮಾಗಹಿ** ಎಂಬ ಶ್ರುತಿವಾಕ್ಯವು **ಪ್ರಪಿತ್ವೇ** ಎಂಬ ಶಬ್ದಪ್ರಯೋಗವಿರುವ ವಾಕ್ಯಕ್ಕೆ ಉದಾಹರಣೆಯಾಗಿಯೂ, **ಅಭೀಕೇ ಚಿದು ಲೋಕಕೃತ್** ಎಂಬ ಶ್ರುತಿವಾಕ್ಯವು **ಅಭೀಕೇ** ಎಂಬ ಶಬ್ದಪ್ರಯೋಗವಿರುವ ವಾಕ್ಯಕ್ಕೆ ಉದಾಹರಣೆಯಾಗಿಯೂ ಇರುವುದೆಂದು ಇಲ್ಲಿ ಸೂಚಿಸಲಾಗಿದೆ.

|| ಸಂಹಿತಾಪಾಠಃ ||

ತ್ವಂ ಸಿಂಧೂರವಾಸೃಜೋಽಧರಾಚೋ ಅಹನ್ನಹಿಂ ॥

ಅಶತ್ರುರಿಂದ ಜಜ್ಞಿಷೇ ವಿಶ್ವಂ ಪುಷ್ಯಸಿ ವಾರ್ಯಂ ತಂ ತ್ವಾ ಪರಿ ಷ್ವಜಾಮಹೇ

ನಭಂತಾಮನ್ಯಕೇಷಾಂ ಜ್ಯಾಕಾ ಅಧಿ ಧನ್ವಸು॥ ೨ ॥

|| ಪದಪಾಠಃ ||

ತ್ವಂ । ಸಿಂಧೂನ್ । ಅವ । ಅಸೃಜಃ । ಅಧರಾಚಃ । ಅಹನ್ । ಅಹಿಂ ।

ಅಶತ್ರುಃ । ಇಂದ್ರ । ಜಜ್ಞಿಷೇ । ವಿಶ್ವಂ । ಪುಷ್ಯಸಿ । ವಾರ್ಯಂ । ತಂ । ತ್ವಾ । ಪರಿ । ಸ್ವಜಾಮಹೇ ।

ನಭಂತಾಂ । ಅನ್ಯಕೇಷಾಂ । ಜ್ಯಾಕಾಃ । ಅಧಿ । ಧನ್ವಽಸು ॥ ॥ ೨ ॥

। ಸಾಯಣಭಾಷ್ಯಂ ॥

ಹೇ ಇಂದ್ರ ಸಿಂಧೂನ್ ಸ್ಯಂದನಶೀಲಾ ಜ್ಜಲಪೂರಾನಧರಾಚೋಽಧರಮಧೋಮುಖಮಂಚತೋ ಗಂತ್ವಾನವಾಸೃಜಃ । ಮೇಘಾನ್ನಿರಗಮಯಃ । ಯತಸ್ತ್ವಮಹಿಮಂತರಿಕ್ಷೇ ಗತಂ ಮೇಘಮಹನ್ ಹತವಾನಸಿ । ಯದ್ವಾ । ಅಹಿಮಾಗತ್ಯ ಹಂತಾರಂ ಸರ್ವಸ್ಯ ಜಗತ ಆವರಕಂ ವೃತ್ರಮಸುರಮಹನ್ ಹತವಾನಸಿ । ಅತೋ ಹೇ ಇಂದ್ರ ತ್ವಮಶತ್ರುಃ ಶತ್ರುರಹಿತೋ ಜಜ್ಞಿಷೇ । ಜಾಯಸೇ ॥ ನ ಸಂತಿ ಶತ್ರವೋಽಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಜನೇರ್ಲಿಟಿ ಗಮಹನೇತ್ಯಾದಿನೋಪಧಾಲೋಪಃ । ದ್ವಿರ್ವಚನೇಽಚೀತಿ ಸ್ಥಾನಿವದ್ಭಾವಾದ್ದ್ವಿರ್ವಚನಂ ॥ ತಥಾ ವಿಶ್ವಂ ಸರ್ವಂ ವಾರ್ಯಂ ವರಣೀಯಂ ಸಂಭಜನೀಯಂ ಧನಂ ಪುಷ್ಯಸಿ । ವರ್ಧಯಸಿ ॥ ವೃಙ್ ಸಂಭಕ್ತೌ । ಋಹಲೋರ್ಣ್ಯತ್ । ಈಡವಂದವೃಶಂಸದುಹಾಂ ಣ್ಯತ ಇತ್ಯಾದ್ಯುದಾತ್ತತ್ವಂ ॥ ತಾದೃಶಂ ತ್ವಾಂ ಪರಿ ಷ್ವಜಾಮಹೇ । ಹವಿರ್ಭಿಃ ಸ್ತುತಿಭಿಶ್ಚಾಲಿಂಗನಂ ಕುರ್ಮಃ । ವಶೀಕುರ್ಮ ಇತ್ಯರ್ಥಃ ॥ ಷ್ವಂಜ ಪರಿಷ್ವಂಗೇ । ದಂಶಸಂಜಷ್ವಂಜಾಂ ಶಪಿ । ಪಾ. ೬-೪-೨೫ । ಇತ್ಯನುನಾಸಿಕಲೋಪಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಸಿಂಧೂನ್**—ಪ್ರವಹಿಸುವ ಉದಕಗಳನ್ನು । **ಅಧರಾಚೀಃ**—ಅಧೋಮುಖವಾಗಿ ಎಂದರೆ ತಗ್ಗಿನಲ್ಲಿ ಹರಿಯುವ ನದಿಗಳನ್ನಾಗಿ । **ಅವಾಸೃಜಃ**—ಸೃಷ್ಟಿಸಿದ್ದೀಯೆ । **ಅಹಿಂ**—ಅಂತರಿಕ್ಷದಲ್ಲಿರುವ ಮೇಘವನ್ನು । **ಅಹನ್**—ಪ್ರಹರಿಸಿದ್ದೀಯೆ (ವೃಷ್ಟಿಯನ್ನು ಸುರಿಸುವಂತೆ ಮಾಡಿದ್ದೀಯೆ) ಅಥವಾ ಮೇಘವನ್ನು ಆವರಿಸಿರುವ ವೃತ್ರನನ್ನು ಕೊಂದಿದ್ದೀಯೆ । **ಇಂದ್ರ**—(ಆದ್ದರಿಂದ) ಎಲೈ ಇಂದ್ರನೇ (ನೀನು) । **ಅಶತ್ರುಃ**—ಶತ್ರುರಹಿತನಾಗಿ । **ಜಜ್ಞಿಷೇ**—ಉತ್ಪನ್ನನಾಗಿದ್ದೀಯೆ (ಮತ್ತು) । **ವಿಶ್ವಂ**—ಸಮಸ್ತವಾದ । **ವಾರ್ಯಂ**—ಎಲ್ಲರೂ ಅಪೇಕ್ಷಿಸುವ ಧನವನ್ನು । **ಪುಷ್ಯಸಿ**—ಅಭಿವೃದ್ಧಿಪಡಿಸುತ್ತೀಯೆ । **ತಂ**—ಅಂತಹ । **ತ್ವಾ**—ನಿನ್ನನ್ನು । **ಪರಿ ಷ್ವಜಾಮಹೇ**—ಹವಿರಾದಿಗಳಿಂದ ಸೇವಿಸಿ ಆಲಿಂಗಿಸುತ್ತೇವೆ ಎಂದರೆ ನಮ್ಮ ವಶಮಾಡಿಕೊಳ್ಳುತ್ತೇವೆ । **ಅನ್ಯಕೇಷಾಂ**—ನಮ್ಮ ಶತ್ರುಗಳ । **ಅಧಿ ಧನ್ವಸು**—ಬಿಲ್ಲುಗಳಲ್ಲಿ ಸುಸಜ್ಜಿತವಾದ । **ಜ್ಯಾಕಾಃ**—ಹೆದೆಗಳು । **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಮೇಘವನ್ನು ಆವರಿಸಿದ್ದ ವೃತ್ರಾಸುರನನ್ನು ಸಂಹಾರ ಮಾಡಿ ಅವನು ತಡೆದಿದ್ದ ಹರಿಯುವ ಸ್ವಭಾವವುಳ್ಳ ವೃಷ್ಟ್ಯುದಕಗಳನ್ನು ಭೂಮಿಯಮೇಲೆ ಬಿದ್ದು ತಗ್ಗಾದ ಪ್ರದೇಶಗಳಲ್ಲಿ ನದಿಗಳಾಗಿ ಹರಿಯುವಂತೆ ಮಾಡಿದ್ದೀಯೆ. ಎಲೈ ಇಂದ್ರನೇ, ನೀನು ಶತ್ರುರಹಿತನಾಗಿ ಜನಿಸಿದ್ದೀಯೆ. ಎಲ್ಲರೂ ಅಪೇಕ್ಷಿಸುವ ಧನವನ್ನು ಅಭಿವೃದ್ಧಿಮಾಡುತ್ತೀಯೆ. ಅಂತಹ ನಿನ್ನನ್ನು ಹವಿರಾದಿಗಳಿಂದ ಸೇವಿಸಿ ನಿನ್ನನ್ನು ಆಲಿಂಗನ ಮಾಡುತ್ತೇವೆ ಎಂದರೆ ವಶಮಾಡಿಕೊಳ್ಳುತ್ತೇವೆ. ನಮ್ಮ ಶತ್ರುಗಳ ಬಿಲ್ಲಿನ ಹೆದೆಗಳು ನಾಶವಾಗಲಿ

## English Translation.

You have sent the rivers away downwards, you have slain Ahi ; you are born, Indra. without an enemy, you grant all that is desirable as such we embrace you, may the bowstrings on the bows of our enemies be destroyed.

॥ ವಿಶೇಷವಿಷಯಗಳು ॥

ಪರಸ್ಪರ ವಿರುದ್ಧಾರ್ಥಗಳಿರುವ ವಾಕ್ಯಗಳನ್ನು ಉದಹರಿಸುತ್ತಾ ಯಾಸ್ಕರು **ಅಶತ್ರುರಿಂದ್ರ ಜಜ್ಞಿಷೇ** ಎಂಬ ವಾಕ್ಯವನ್ನು ಇಲ್ಲಿ ವಿವರಿಸಿದ್ದಾರೆ—

> **ಅಥಾಪಿ ವಿಪ್ರತಿಷಿದ್ಧಾರ್ಥಾ ಭವಂತಿ । ಏಕ ಏವ ರುದ್ರೋಽವತಸ್ಥೇ ನ ದ್ವಿತೀಯಃ । ಅಸಂಖ್ಯಾತಾಃ ಸಹಸ್ರಾಣಿ ಯೇ ರುದ್ರಾ ಅಧಿ ಭೂಮ್ಯಾಂ ॥ ಅಶತ್ರುರಿಂದ್ರ ಜಜ್ಞಿಷೇ । ಶತಂ ಸೇನಾ ಅಜಯತ್ಸಾಕಮಿಂದ್ರಃ ॥ ಇತಿ ॥** (ನಿ. ೧-೧೫)

ಇಲ್ಲಿ ಪರಸ್ಪರವಿರುದ್ಧಾರ್ಥವನ್ನು ಸೂಚಿಸುವ ಎರಡೆರಡು ವಾಕ್ಯಗಳು ಉದಾಹೃತವಾಗಿವೆ— **ಏಕ ಏವ ರುದ್ರೋಽವತಸ್ಥೇ ನ ದ್ವಿತೀಯಃ ।ಅಸಂಖ್ಯಾತಾ ಸಹಸ್ರಾಣಿ ಯೇ ರುದ್ರಾ ಅಧಿ ಭೂಮ್ಯಾಂ ।** (ವಾ. ಸಂ ೧೬-೫೪) ಎಂಬ

ಎರಡು ಶ್ರುತಿವಾಕ್ಯಗಳಲ್ಲಿ ಪರಸ್ಪರ ವಿರುದ್ಧಾಭಿಪ್ರಾಯಗಳಿವೆ. ಮೊದಲನೆಯ ವಾಕ್ಯದಲ್ಲಿ ರುದ್ರನು ಒಬ್ಬನೇ ಇರುವನು ಅವನಿಗೆ ಸಮಾನರಾದ ಮತ್ತೊಬ್ಬರಿಲ್ಲ ಎಂಬ ಅರ್ಥವಿರುವುದು. ಎರಡನೆಯ ವಾಕ್ಯದಲ್ಲಿ ಭೂಮಿಯಲ್ಲಿರುವ ರುದ್ರರ ಸಂಖ್ಯೆಯು ಅಸಂಖ್ಯಾತವಾಗಿರುವುದು ಎಂದಿದೆ. ಇವೆರಡು ಅರ್ಥಗಳು ಪರಸ್ಪರ ವಿರೋಧವಾಗಿವೆ. ಹಾಗೆಯೇ **ಅಶತ್ರುರಿಂದ್ರ ಜಜ್ಞಿಷೇ** (ಋ ಸಂ ೧೦-೧೩೩-೨) ಎಂಬಲ್ಲಿ ಇಂದ್ರನು ಶತ್ರುರಹಿತನಾಗಿ ಹುಟ್ಟಿದನು ಎಂಬರ್ಥವೂ **ಶತಂ ಸೇನಾ ಅಜಯತ್ಸಾಕಮಿಂದ್ರಃ** (ಋ. ಸಂ ೧೦-೧೦೩-೧) ಎಂಬಲ್ಲಿ ಇಂದ್ರನು ನೂರಾರು ಶತ್ರು ಸೇನೆಗಳನ್ನು ಜಯಿಸಿದನು ಎಂದೂ ಇದೆ. ಇಂದ್ರನು ಹುಟ್ಟುವಾಗಲೇ ಶತ್ರುರಹಿತನಾಗಿದ್ದಲ್ಲಿ ಎಂದರೆ ಅವನಿಗೆ ಶತ್ರುಗಳೇ ಇಲ್ಲದಿರುವಾಗ ನೂರಾರು ಶತ್ರುಸೇನೆಗಳನ್ನು ಜಯಿಸಿದನು ಎಂದು ಹೇಳಿರುವುದು ಪರಸ್ಪರ ವಿರುದ್ಧವಲ್ಲವೇ ? ಶತ್ರುವಿಲ್ಲದವನು ಶತ್ರುಗಳನ್ನು ಜಯಿಸಿದನು ಎಂದರೆ ಅವನಿಗೆ ಶತ್ರುಗಳಿದ್ದಂತಾಯಿತು. ಶತ್ರುಗಳಿದ್ದಮೇಲೆ ಅವನು ಶತ್ರುರಹಿತನು ಹೇಗಾದನು ? ಈ ಎರಡು ವಾಕ್ಯಗಳಲ್ಲಿರುವ ಅಭಿಪ್ರಾಯವು ಪರಸ್ಪರ ವಿರುದ್ಧವಾಗಿರುವುದು

॥ ಸಂಹಿತಾಪಾಠಃ ॥

ವಿ ಷು ವಿಶ್ವಾ ಅರಾತಯೋಽರ್ಯೋ ನಶಂತ ನೋ ಧಿಯಃ ॥
ಅಸ್ತಾಸಿ ಶತ್ರವೇ ವಧಂ ಯೋ ನ ಇಂದ್ರ ಜಿಘಾಂಸತಿ ಯಾ ತೇ ರಾತಿರ್ದ-
ದಿರ್ವಸು ನಭಂತಾಮನ್ಯಕೇಷಾಂ ಜ್ಯಾಕಾ ಅಧಿ ಧನ್ವಸು ॥ ೩ ॥

॥ ಪದಪಾಠಃ ॥

ವಿ । ಸು । ವಿಶ್ವಾಃ । ಅರಾತಯಃ । ಅರ್ಯಃ । ನಶಂತ । ನಃ । ಧಿಯಃ ।
ಅಸ್ತಾ । ಅಸಿ । ಶತ್ರವೇ । ವಧಂ । ಯಃ । ನಃ । ಇಂದ್ರ । ಜಿಘಾಂಸತಿ । ಯಾ । ತೇ । ರಾತಿಃ । ದದಿಃ ।
ವಸು । ನಭಂತಾಂ । ಅನ್ಯಕೇಷಾಂ । ಜ್ಯಾಕಾಃ । ಅಧಿ । ಧನ್ವಽಸು ॥ ೩ ॥

॥ ಸಾಯಣಭಾಷ್ಯಂ ॥

ವಿಶ್ವಾಃ ಸರ್ವಾ ಅರಾತಯೋಽದಾತ್ರ್ಯೋಽರ್ಯೋಽಭಿಗಂತ್ರ್ಯೋ ನೋಽಸ್ಮಾಕಂ ಶತ್ರುಭೂತಾಃ ಪ್ರಜಾಃ ಸು ಸುಷ್ಠು ವಿ ನಶಂತ । ವಿನಶ್ಯಂತು । ಹೇ ಇಂದ್ರ ತ್ವದರ್ಥಂ ಧಿಯಃ ಕರ್ಮಾಣಿ ಸ್ತುತಯೋ ವಾ ಪ್ರವರ್ತಂತಾಂ । ಹೇ ಇಂದ್ರ ಯೋ ನೋಽಸ್ಮಾಞ್ಜಿಘಾಂಸತಿ ಹಂತುಮಿಚ್ಛತಿ ॥ ಹಂತೇಃ ಸನ್ಯಜ್ಝನ-ಗಮಾಂ ಸನೀತಿ ದೀರ್ಘಃ । ಅಭ್ಯಾಸಾಚ್ಚೇತಿ ಕುತ್ವಂ ॥ ತಸ್ಮೈ ಶತ್ರವೇ ವಧಂ ಹನನಸಾಧನಮಾಯುಧ-ಮಸ್ತಾಸಿ । ಕ್ಷೇಪ್ತಾ ಭವಸಿ ॥ ಅಸು ಕ್ಷೇಪಣೇ । ತಾಚ್ಛೀಲಿಕಸ್ತೃನ್ ॥ ತೇ ತವ ಯಾ ರಾತಿರ್ಧನಪ್ರದಾನಹೇ-

ತುರ್ದಸ್ತ್ಯಃ ॥ ರಾ ದಾನೇ । ಕರಣೇ ಕ್ತಿನ್ । ಮಂತ್ರೇ ವೃಷೇಷಪಚಮನವಿದಭೂವೀರಾ ಉದಾತ್ತ ಇತಿ ಕ್ತಿನ ಉದಾತ್ತತ್ವಂ ॥ ಸಾ ರಾತಿರ್ವಸು ಧನಂ ದದಿಃ । ಅಸ್ಮಭ್ಯಂ ದಾತಾ ಭವತು ॥ ಆದೃಗಮಹನ ಇತಿ ದದಾತೇಃ ಕಿಪ್ರತ್ಯಯಃ । ನ ಲೋಕಾವ್ಯಯೇತಿ ವಸುಶಬ್ದಾತ್ಷಷ್ಠ್ಯಭಾವಃ ॥ ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಅರ್ಯಃ**—ನಮ್ಮ ಮೇಲೆ ನುಗ್ಗಿಬರುತ್ತಿರುವ । **ವಿಶ್ವಾಃ**—ಸಮಸ್ತರಾದ । **ನಃ ಅರಾತಯಃ**—ನಮ್ಮ ಶತ್ರುಗಳು । **ಸು ವಿ ನಶಂತ**—ಚೆನ್ನಾಗಿ ನಾಶವಾಗಲಿ । **ಧಿಯಃ**—ಶತ್ರುಹನನಕಾರ್ಯಗಳು ನಡೆಯಲಿ । **ಇಂದ್ರ**—ಎಲೈ ಇಂದ್ರನೇ । **ಯಃ**- ಯಾವಶತ್ರುವು । **ನಃ**—ನಮ್ಮನ್ನು । **ಜಿಘಾಂಸತಿ**—ಕೊಲ್ಲಲಿಚ್ಛಿಸುವನೋ । **ಶತ್ರವೇ**—ಆ ಶತ್ರುವನ್ನು ಕೊಲ್ಲುವುದಕ್ಕಾಗಿ । **ವಧಂ**—ಹನನಸಾಧನವಾದ ನಿನ್ನ ವಜ್ರಾಯುಧವನ್ನು । **ಅಸ್ತಾ ಅಸಿ**—ಅವನ ಮೇಲೆ ಎಸೆಯುತ್ತೀಯೆ । **ತೇ**—ನಿನ್ನ । **ಯಾ ರಾತಿಃ**—ನಮಗೆ ಧನವನ್ನು ಕೊಡುವ ಯಾವ ನಿನ್ನ ಹಸ್ತವಿದೆಯೋ ಆ ಹಸ್ತವು । **ವಸು**—ಧನವನ್ನು । **ದದಿಃ**—ನಮಗೆ ಕೊಡುವುದಾಗಲಿ । **ಅನ್ಯಕೇಷಾಂ**—ಶತ್ರುಗಳ । **ಅಧಿ ಧನ್ವಸು**—ಧನುಸ್ಸಿನಲ್ಲಿ ಸಜ್ಜಿತವಾದ । **ಜ್ಯಾಕಾಃ**—ಹೆದೆಗಳು । **ನಭಂತಾಂ**—ನಾಶವನ್ನೈದಲಿ.

॥ ಭಾವಾರ್ಥ ॥

ನಮ್ಮ ಮೇಲೆ ನುಗ್ಗಿಬರುವ ನಮ್ಮ ಸಮಸ್ತಶತ್ರುಗಳೂ ನಾಶವಾಗಲಿ. ಶತ್ರುಹನನಕಾರ್ಯವು ಮುಂದುವರೆಯಲಿ. ಎಲೈ ಇಂದ್ರನೇ ಯಾವ ಶತ್ರುವು ನಮ್ಮನ್ನು ಕೊಲ್ಲಲಿಚ್ಛಿಸುವನೋ ಅವನ ಸಂಹಾರಕ್ಕಾಗಿ ನಿನ್ನ ವಜ್ರಾಯುಧವು ಪ್ರಯೋಗಿಸಲ್ಪಡಲಿ. ಧನವನ್ನು ಕೊಡುವ ನಿನ್ನ ಹಸ್ತವು ನಮಗೆ ಧನವನ್ನು ನೀಡಲಿ. ಶತ್ರುಗಳ ಧನಸ್ಸುಗಳಲ್ಲಿ ಸಜ್ಜಿತವಾದ ಹೆದೆಗಳು ನಾಶವಾಗಲಿ.

## English Translation.

May all our assailants, who make no offerings, puickly perish, may our praises (be successful); you, Indra, hurl the weapon at the foe who seeks to slay us, may that liberal (hand) of yours be the giver of wealth (to us); may the bowstrings on the bows of our enemies be destroyed.

॥ ಸಂಹಿತಾಪಾಠಃ ॥

ಯೋ ನ ಇಂದ್ರಾಭಿತೋ ಜನೋ ವೃಕಾಯುರಾದಿದೇಶತಿ ।

ಅಧಸ್ಪದಂ ತಮೀಂ ಕೃಧಿ ವಿಬಾಧೋ ಅಸಿ ಸಾಸಹಿರ್ನಭಂತಾಮನ್ಯಕೇಷಾಂ

ಜ್ಯಾಕಾ ಅಧಿ ಧನ್ವಸು ॥ ೪ ॥

|| ಪದಪಾಠಃ ||

ಯಃ । ನಃ । ಇಂದ್ರ । ಅಭಿತಃ । ಜನಃ । ವೃಕಽಯುಃ । ಆಽದಿದೇಶತಿ ।

ಅಧಃಽಪದಂ । ತಂ । ಈಂ । ಕೃಧಿ । ವಿಽಬಾಧಃ । ಅಸಿ । ಸಸಹಿಃ । ನಭಂತಾಂ । ಅನ್ಯಕೇಷಾಂ । ಜ್ಯಾಕಾಃ ।

ಅಧಿ । ಧನ್ವಽಸು || ೪ ||

|| ಸಾಯಣಭಾಷ್ಯಂ ||

ಹೇ ಇಂದ್ರ ಯೋ ಜನೋ ವೃಕಾಯುಃ । ವೃಕೋ ಹಿಂಸಕೋಽರಣ್ಯಶ್ವಾ ಸ್ತೇನೋ ವಾ । ಸ ಇವಾಚರನ್ನೋಽಸ್ಮಾನಭಿತಃ ಸರ್ವತ ಆದಿದೇಶತಿ ಅಭಿಲಕ್ಷ್ಯಾಯುಧಾನ್ಯತಿಸೃಜತಿ || ದಿಶತೇರ್ಲೇ-ಟ್ಯಡಾಗಮಃ । ಛಾಂದಸಃ ಶಪಃ ಶ್ಲುಃ । ನಾಭ್ಯಸ್ತಸ್ಯಾಚಿ ಪಿತಿ‌ಽತ್ಯತ್ರ ಬಹುಲಂ ಛಂದಸೀತಿ ವಕ್ತ-ವ್ಯಮಿತಿ ವಚನಾತ್ಪ್ರತಿಷೇಧಾಭಾವೇ ಲಘೂಪಧಗುಣಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ || ತಮೀಂ ತಮಿಮಂ ಜನಮಧಸ್ಪದಂ ಪಾದಸ್ಯಾಧಸ್ತಾದ್ವರ್ತಮಾನಂ ಕೃಧಿ । ಕುರು || ಕರೋತೇ-ಶ್ಛಾಂದಸೋ ವಿಕರಣಸ್ಯ ಲುಕ್ ಶ್ರುಶೃಣುಪೃಕೃವೃಭ್ಯ ಇತಿ ಹೇರ್ಧಿಃ || ಯತಸ್ತ್ವಂ ವಿಬಾಧೋ ವಿಶೇಷೇಣ ಬಾಧಿತಾ ಶತ್ರೂಣಾಂ ಸಾಸಹಿರಭಿಭವಿತಾ ಚಾಸಿ । ಸಿದ್ಧಃ ಶೇಷಃ ||

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ವೃಕಾಯುಃ**—ತೋಳದಂತೆ ಅಥವಾ ಕಳ್ಳನಂತೆ ನಮಗೆ ಹಿಂಸೆಯನ್ನು ಕೊಡುವ । **ಯಃ ಜನಃ**—ಯಾವ ಶತ್ರುವು । **ನಃ ಅಭಿತಃ**—ನಮ್ಮ ಸುತ್ತಲೂ । **ಆದಿದೇಶತಿ**—ತನ್ನ ಆಯುಧವನ್ನು ಬೀಸಿ ಎಸೆಯುವನೋ । **ತಂ ಈಂ**—ಆ ಶತ್ರುವನ್ನು । **ಅಧಸ್ಪದಂ**—ನಮ್ಮ ಕಾಲ ಕೆಳಗೆ ಬೀಳುವಂತೆ । **ಕೃಧಿ**—ಮಾಡು (ಎಲೈ ಇಂದ್ರನೇ ನೀನು) । **ವಿಬಾಧಃ**—ಶತ್ರುಗಳಿಂದ ವಿಶೇಷವಾಗಿ ಬಾಧಿತನಾದರೂ ಅವರುಗಳನ್ನು । **ಸಾಸಹಿಃ ಅಸಿ**—ಸೋಲಿಸುತ್ತೀಯೆ । **ಅನ್ಯಕೇಷಾಂ**—ಶತ್ರುಗಳ । **ಅಧಿ ಧನ್ವಸು**—ಧನಸ್ಸುಗಳಲ್ಲಿ ಸಜ್ಜಿತವಾದ । **ಜ್ಯಾಕಾಃ**— ಹೆದೆಗಳು । **ನಭಂತಾಂ**—ನಾಶವನ್ನೈವಲಿ.

|| ಭಾವಾರ್ಥ ||

ಎಲೈ ಇಂದ್ರನೇ, ತೋಳದಂತೆ ಅಥವಾ ಕಳ್ಳನಂತೆ ನಮಗೆ ಹಿಂಸೆಕೊಡುವ ಯಾವ ಶತ್ರುವು ನಮ್ಮ ಸುತ್ತಲೂ ತನ್ನ ಆಯುಧವನ್ನು ಬೀಸಿ ಎಸೆಯುವನೋ ಆ ಶತ್ರುವನ್ನು ನಮ್ಮ ಕಾಲ ಕೆಳಗೆ ಬೀಳುವಂತೆ ಮಾಡು. ಎಲೈ ಇಂದ್ರನೇ, ಶತ್ರುಗಳು ನಿನ್ನನ್ನು ವಿಶೇಷವಾಗಿ ಹಿಂಸಿಸಿದರೂ ನೀನು ಅವರನ್ನು ಸೋಲಿಸುತ್ತೀಯೆ. ಶತ್ರುಗಳ ಧನಸ್ಸುಗಳಲ್ಲಿ ಸುಸಜ್ಜಿತವಾದ ಹೆದೆಗಳು ನಾಶವಾಗಲಿ.

## English Translation.

The man who, like a wolf, prowls around us, O Indra, cast him beneath our feet, for you are the resister, the overcomer (of foes); may the bowstrings on the bows of our enemies be destroyed.

|| ಸಂಹಿತಾಪಾಠಃ ||

ಯೋ ನ ಇಂದ್ರಾಭಿದಾಸತಿ ಸನಾಭಿರ್ಯಶ್ಚ ನಿಷ್ಟ್ಯಃ ।
ಅವ ತಸ್ಯ ಬಲಂ ತಿರ ಮಹೀವ ದ್ಯೌರಧ ತ್ಮನಾ ನಭಂತಾಮನ್ಯಕೇಷಾಂ
ಜ್ಯಾಕಾ ಅಧಿ ಧನ್ವಸು ॥ ೫ ॥

॥ ಪದಪಾಠಃ ॥

ಯಃ । ನಃ । ಇಂದ್ರ । ಅಭಿऽದಾಸತಿ । ಸऽನಾಭಿಃ । ಯಃ । ಚ । ನಿಷ್ಟ್ಯಃ ।
ಅವ । ತಸ್ಯ । ಬಲಂ । ತಿರ । ಮಹೀऽಇವ । ದ್ಯೌಃ । ಅಧ । ತ್ಮನಾ । ನಭಂತಾಂ । ಅನ್ಯಕೇಷಾಂ ।
ಜ್ಯಾಕಾಃ । ಅಧಿ । ಧನ್ವऽಸು ॥ ೫ ॥

|| ಸಾಯಣಭಾಷ್ಯಂ ||

ಹೇ ಇಂದ್ರ ಯಃ ಸನಾಭಿಃ ಸಮಾನಜನ್ಮಾ ಶತ್ರುರ್ನೋऽಸ್ಮಾನಭಿದಾಸತಿ ಉಪಕ್ಷಯತಿ ಯಶ್ಚ ನಿಷ್ಟ್ಯೋ ನಿಕೃಷ್ಟಜನ್ಮಾಸ್ಮಾನುಪಕ್ಷಯತಿ ॥ ಜಾತಾರ್ಥೇ ನಿಕೃಷ್ಟವಾಚಿನೋ ನಿಃಶಬ್ದಾದವ್ಯಯಾತ್ತ್ಯಪ್ । ಪಾ. ೪-೨-೧೦೪ । ಹ್ರಸ್ವಾತ್ತಾದೌ ತದ್ಧಿತೇ । ಪಾ. ೮-೩-೧೦೧ । ಇತಿ ಷತ್ವಂ ॥ ಅಧಾನಂತರಮೇವ ಮಹೀವ ದ್ಯೌರ್ಮಹತೀ ದ್ಯೌರಿವ ವಿಸ್ತೃತಂ ತಸ್ಯ ಶತ್ರೋರ್ಬಲಂ ತ್ಮನಾತ್ಮನಾ ॥ ಮಂತ್ರೇಷ್ವಾಙ್ಯಾದೇರಾತ್ಮನ ಇತ್ಯಾಕಾರಲೋಪಃ ॥ ಸ್ವಯಮೇವಾವ ತಿರ । ಜಹಿ । ಅವತಿರತಿರ್ವಧಕರ್ಮಾ । ಗತಮನ್ಯತ್ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯಃ—ಯಾವ । ಸನಾಭಿಃ—ನಮ್ಮ ಜಾತಿಗೇ ಸೇರಿದ ಶತ್ರುವು । ಯಶ್ಚ—ಯಾವ । ನಿಷ್ಟ್ಯಃ—ನಮಗಿಂತಲೂ ನೀಚ ಕುಲದಲ್ಲಿ ಜನಿಸಿದ ಶತ್ರುವು । ನಃ—ನಮ್ಮನ್ನು । ಅಭಿದಾಸತಿ—ನಮಗೆ ಕಿರುಕುಳವನ್ನು ಕೊಡುವನೋ । ಮಹೀವ ದ್ಯೌಃ—ವಿಸ್ತಾರವಾದ ಅಂತರಿಕ್ಷದಂತೆ ಬಹಳವಾದ । ತಸ್ಯ—ಆ ಶತ್ರುವಿನ । ಬಲಂ—ಶಕ್ತಿಯನ್ನು । ತ್ಮನಾ—ನೀನೇ ಸ್ವತಃ । ಅವ ತಿರ—ನಾಶಮಾಡು । ಅನ್ಯಕೇಷಾಂ—ಶತ್ರುಜನರ । ಅಧಿ ಧನ್ವಸು—ಧನುಸ್ಸುಗಳಲ್ಲಿ ಬಿಗಿದು ಕಟ್ಟಿರುವ । ಜ್ಯಾಕಾಃ—ಹೆದೆಗಳು (ಹಗ್ಗಗಳು) । ನಭಂತಾಂ—ನಾಶವಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಮಗೆ ಕಿರುಕುಳವನ್ನು ಕೊಡುವ ಶತ್ರುವು ನಮ್ಮ ಜಾತಿಯವನೇ ಆಗಲಿ, ನೀಚ ಜಾತಿಯವನೇ ಆಗಲಿ ವಿಸ್ತಾರವಾದ ಅಂತರಿಕ್ಷದಂತೆ ಹೆಚ್ಚಾಗಿರುವ ಆ ಶತ್ರುವಿನ ಬಲವನ್ನು ನೀನೇ ಸ್ವತಃ ಕುಗ್ಗಿಸಿ ನಾಶ ಮಾಡು. ಶತ್ರುಜನರ ಧನುಸ್ಸುಗಳಲ್ಲಿ ಸುಸಜ್ಜಿತವಾದ ಹೆದೆಗಳು ನಾಶವಾಗಲಿ.

## English Translation.

He who assails us, Indra, whether he be of the same caste or of degraded caste—scatter of yourself his host, (though it be vast) as the wide heaven; may the bowstrings on the bows of our enemies be destroyed.

॥ ಸಂಹಿತಾಪಾಠಃ ॥

ವಯಮಿಂದ್ರ ತ್ವಾಯವಃ ಸಖಿತ್ವಮಾ ರಭಾಮಹೇ ।
ಋತಸ್ಯ ನಃ ಪಥಾ ನಯಾತಿ ವಿಶ್ವಾನಿ ದುರಿತಾ ನಭಂತಾಮನ್ಯಕೇಷಾಂ
ಜ್ಯಾಕಾ ಅಧಿ ಧನ್ವಸು ॥ ೬ ॥

॥ ಪದಪಾಠಃ ॥

ವಯಂ । ಇಂದ್ರ । ತ್ವಾಯವಃ । ಸಖಿಽತ್ವಂ । ಆ । ರಭಾಮಹೇ ।
ಋತಸ್ಯ । ನಃ । ಪಥಾ । ನಯ । ಅತಿ । ವಿಶ್ವಾನಿ । ದುಃಽಇತಾ । ನಭಂತಾಂ । ಅನ್ಯಕೇಷಾಂ । ಜ್ಯಾಕಾಃ ।
ಅಧಿ । ಧನ್ವಽಸು ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾಯವಸ್ತ್ವಾಮಾತ್ಮನ ಇಚ್ಛಂತೋ ವಯಂ ಸಖಿತ್ವಂ ಸಖಿಕರ್ಮ ಯಜ್ಞಾತ್ಮಕಮಾ ರಭಾಮಹೇ । ಉಪಕ್ರಮಾಮಹೇ । ಋತಸ್ಯ ಸತ್ಯಸ್ಯ ಯಜ್ಞಸ್ಯ ಪಥಾ ಮಾರ್ಗೇಣ ॥ ಭಸ್ಯ ಟೇರ್ಲೋಪಃ ಉದಾತ್ತನಿವೃತ್ತಿಸ್ವರೇಣ ತೃತೀಯಾಯಾ ಉದಾತ್ತತ್ವಂ ॥ ವಿಶ್ವಾನಿ ಸರ್ವಾಣಿ ದುರಿತಾ ದುರಿತಾನಿ ದುರ್ಗಮನಾನಿ ಪಾಪಾನಿ ತತ್ಫಲಾನಿ ಚ ನೋಽಸ್ಮಾನತಿ ನಯ । ಅತಿಪಾರಯ । ಗತಮನ್ಯತ್ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಾಯವಃ**—ನಿನ್ನನ್ನು ಅಪೇಕ್ಷಿಸುತ್ತಿರುವ । **ವಯಂ**—ನಾವು । **ಸಖಿತ್ವಂ**—ನಿನ್ನ ಸ್ನೇಹಕ್ಕೆ ಸಾಧನವಾದ ಯಜ್ಞಕರ್ಮವನ್ನು । **ಆ ರಭಾಮಹೇ**—ಪ್ರಾರಂಭಿಸುತ್ತೇವೆ । **ಋತಸ್ಯ ಪಥಾ**—ಸತ್ಯಮಾರ್ಗದಿಂದ ಅಥವಾ ಯಜ್ಞದ ಮೂಲಕವಾಗಿ । **ವಿಶ್ವಾನಿ**—ಸಮಸ್ತವಾದ । **ನಃ ದುರಿತಾ**—ನಮ್ಮ ಪಾಪಗಳನ್ನು ಅಥವಾ ಕಷ್ಟಗಳನ್ನು (ಪರಿಹರಿಸಿ) । **ಅತಿ ನಯ**—ನಮ್ಮನ್ನು ದಾಟಿಸು । **ಅನ್ಯಕೇಷಾಂ**—ನಮ್ಮ ಶತ್ರುಗಳ । **ಅಧಿ ಧನ್ವಸು**—ಧನುಸ್ಸುಗಳ ಹೆದೆಗಳಲ್ಲಿ ಸಜ್ಜಿತವಾದ । **ಜ್ಯಾಕಾಃ**—ಹೆದೆಗಳು । **ನಭಂತಾಂ**—ನಾಶವಾಗಲಿ.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನನ್ನು ಅಪೇಕ್ಷಿಸುತ್ತಿರುವ ನಾವು ನಿನ್ನ ಸ್ನೇಹಕ್ಕೆ ಸಾಧನಭೂತವಾದ ಯಜ್ಞಕರ್ಮವನ್ನು ಆರಂಭಿಸುವೆವು. ಸತ್ಯ ಮಾರ್ಗದಿಂದ ಅಥವಾ ಯಜ್ಞದ ಮೂಲಕವಾಗಿ ನಮ್ಮ ಸಮಸ್ತ ಪಾಪಗಳನ್ನು ಅಥವಾ ಕಷ್ಟಗಳನ್ನು ಪರಿಹರಿಸಿ ನಮ್ಮನ್ನೂ ಅವುಗಳಿಂದ ದಾಟಿಸು. ನಮ್ಮ ಶತ್ರುಗಳ ಧನುಸ್ಸುಗಳಲ್ಲಿರುವ ಹೆದೆಗಳು ನಾಶವಾಗಲಿ.

## English Translation

Devoted to you, Indra, we strive after your friendship; lead us by the path of sacrifice beyond all evils; may the bowstrings on the bows of our enemies be destroyed.

|| ಸಂಹಿತಾಪಾಠಃ ||

ಅಸ್ಮಭ್ಯಂ ಸು ತ್ವಮಿಂದ್ರ ತಾಂ ಶಿಕ್ಷ ಯಾ ದೋಹತೇ ಪ್ರತಿ ವರಂ ಜರಿತ್ರೇ ।
ಅಚ್ಛಿದ್ರೋಧ್ನೀ ಪೀಪಯದ್ಯಥಾ ನಃ ಸಹಸ್ರಧಾರಾ ಪಯಸಾ ಮಹೀ ಗೌಃ ॥

|| ಪದಪಾಠಃ ||

ಅಸ್ಮಭ್ಯಂ । ಸು । ತ್ವಂ । ಇಂದ್ರ । ತಾಂ । ಶಿಕ್ಷ । ಯಾ । ದೋಹತೇ । ಪ್ರತಿ । ವರಂ । ಜರಿತ್ರೇ ।
ಅಚ್ಛಿದ್ರಽಊಧ್ನೀ । ಪೀಪಯತ್ । ಯಥಾ । ನಃ । ಸಹಸ್ರಽಧಾರಾ । ಪಯಸಾ । ಮಹೀ । ಗೌಃ ॥ ೭ ॥

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಂ ತಾಂ ಗಾಮಸ್ಮಭ್ಯಂ ಸ್ತೋತೃಭ್ಯಃ ಸು ಶಿಕ್ಷ । ಪ್ರದೇಹಿ । ಶಿಕ್ಷತಿರ್ದಾನಕರ್ಮಾ । ಯಾ ಗೌರ್ಜರಿತ್ರೇ ಸ್ತೋತ್ರೇ ವರಂ ವರಣೀಯಂ ಪಯಃ ಪ್ರತಿ ದೋಹತೇ ಪ್ರತಿದಿನಂ ನೈರಂತರ್ಯೇಣ ದುಗ್ಧೇ ॥ ದುಹೇರ್ಬಹುಲಂ ಛಂದಸೀತಿ ಶಪೋ ಲುಗಭಾವಃ। ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶಪಃ ಪಿತ್ತ್ವಾದನುದಾತ್ತತ್ವಂ । ಧಾತುಸ್ವರಃ ಶಿಷ್ಯತೇ । ವರಂ । ವೃಞ್ ವರಣ ಇತ್ಯಸ್ಮಾದ್ಗ್ರಹವೃದೃನಿಶ್ಚಿಗಮಶ್ಚೇತಿ ಕರ್ಮಣ್ಯಪ್ ॥ ಸಾ ಪ್ರತ್ತಾ ಗೌರಚ್ಛಿದ್ರೋಧ್ನೀ ನಿಬಿಡೋಧಸ್ಕಾ ಅತ ಏವ ಸಹಸ್ರಧಾರಾ ಬಹುಭಿಃ ಕ್ಷೀರಧಾರಾಭಿರುಪೇತಾ ಮಹೀ ಮಹತೀ ಸತೀ ಯಥಾ ನೋಽಸ್ಮಾನ್ಪಯಸಾ ಕ್ಷೀರೇಣ ಪೀಪಯತ್ ಪ್ರವರ್ಧಯೇತ್ ತಥಾ ತಾಂ ಕುರ್ವಿತಿ ಶೇಷಃ ॥ ಓಪ್ಯಾಯೀ ವೃದ್ಧೌ । ಣ್ಯಂತಾಚ್ಛಾಂದಸೋ ಲುಙ್ । ವ್ಯತ್ಯಯೇನ ಧಾತೋಃ ಪೀಭಾವಃ । ಅಡಭಾವಶ್ಛಾಂದಸಃ ॥

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ | **ತ್ವಂ**—ನೀನು | **ಯಾ**—ಯಾವ ಗೋವು | **ಜರಿತ್ರೇ**—ಸ್ತೋತ್ರ ಮಾಡುವವನಿಗೆ | **ವರಂ**—ಶ್ರೇಷ್ಠವಾದ ಅಥವಾ ಅಪೇಕ್ಷಿಸಿದಷ್ಟು ಹಾಲನ್ನು | **ಪ್ರತಿ**—ಪ್ರತಿದಿನವೂ | **ದೋಹತೇ**—ಕರೆಯುವುದೋ | **ತಾಂ**—ಅಂತಹ ಗೋವನ್ನು | **ಅಸ್ಮಭ್ಯಂ**—ನಮಗೆ | **ಸುಶಿಕ್ಷ**—ಕೊಡು | **ಗೌಃ**—ಹಾಗೆ ನೀನು ನಮಗೆ ಕೊಡುವ ಗೋವು | **ಮಹೀ**—ಬಹಳವಾದ | **ಸಹಸ್ರಧಾರಾ**—ಅನೇಕಕ್ಷೀರಧಾರೆಗಳಿಂದ ಸಹಿತವಾಗಿ | **ಅಚ್ಛಿದ್ರೋಧ್ನೀ**—ಯಾವಾಗಲೂ ಎಡಬಿಡದೆ (ಪ್ರತಿದಿನವೂ) ಹಾಲನ್ನು ಕರೆಯುತ್ತಾ | **ಯಥಾ**—ಯಾವ ರೀತಿ | **ನಃ**—ನಮ್ಮನ್ನು | **ಪಯಸಾ**—ಹಾಲಿನಿಂದ | **ಪೀಪಯತ್**—ಪೂರೈಸುವುದೋ ಆ ರೀತಿ ಮಾಡು |

|| ಭಾವಾರ್ಥ ||

ಎಲೈ ಇಂದ್ರನೇ, ಸ್ತೋತ್ರಮಾಡುವವನಿಗೆ ಅವನು ಅಪೇಕ್ಷಿಸುವಷ್ಟು ಹಾಲನ್ನು ಪ್ರತಿದಿನವೂ ಯಾವ ಗೋವು ಕರೆಯುವುದೋ ಅಂತಹ ಗೋವನ್ನು ನೀನು ನಮಗೆ ಕೊಡು. ನೀನು ಕೊಡುವ ಆ ಗೋವು ಅನೇಕ ಕ್ಷೀರ ಧಾರೆಗಳಿಂದ ಬಹಳವಾದ ಹಾಲನ್ನು ಎಡಬಿಡದೆ ಕರೆಯುತ್ತಾ ನಮ್ಮನ್ನು ಹಾಲಿನಿಂದ ಪೂರೈಸುವಂತೆ ಮಾಡು.

## English Translation.

Give to us, Indra (the cow) which gives milk to the worshipper according to his desire, so that the mighty cow possessed of an unfailing udder, the shedder of a thousand streams, may supply us plentifully with milk.

## ನೂರ ಮೂವತ್ತನಾಲ್ಕನೆಯ ಸೂಕ್ತವು



|| ಸಾಯಣಭಾಷ್ಯಂ ||

**ಉಭೇ ಯದಿತಿ ಸಪ್ತರ್ಚಂ ಷಷ್ಠಂ ಸೂಕ್ತಂ | ಯುವನಾಶ್ವಪುತ್ರಸ್ಯ ಮಾಂಧಾತುರಾರ್ಷಂ | ಪೂರ್ವೇಣೇತ್ಯರ್ಧರ್ಚಸಹಿತಾಯಾಃ ಸಪ್ತಮ್ಯಾಸ್ತು ಗೋಧಾ ನಾಮ ಬ್ರಹ್ಮವಾದಿನ್ಯೃಷಿಃ | ಸಪ್ತಮೀ ಪಂಕ್ತಿಃ | ಶಿಷ್ಟಾಃ ಷಳಷ್ಟಕಾ ಮಹಾಪಂಕ್ತಯಃ | ಇಂದ್ರೋ ದೇವತಾ | ತಥಾ ಚಾನುಕ್ರಾಂತಂ | ಉಭೇ ಯನ್ಮಾಂಧಾತಾ ಯೌವನಾಶ್ವೋ ಮಹಾಪಾಂಕ್ತಂ ಪಂಕ್ತ್ಯಂತ್ಯಾ ತಾಮರ್ಧರ್ಚಾಂ ಗೋಧಾಪಶ್ಯದಿತಿ || ಗತಃ ಸೂಕ್ತವಿನಿಯೋಗಃ || ಚಾತುರ್ವಿಂಶಿಕೇಽಹನಿ ಮಾಧ್ಯಂದಿನೇಽಚ್ಛಾವಾಕಸ್ಯಾದ್ಯಸ್ತೃಚೋ ವೈಕಲ್ಪಿಕಃ ಸ್ತೋತ್ರಿಯಃ | ಸೂತ್ರಿತಂ ಚ | ಉಭೇ ಯದಿಂದ್ರ ರೋದಸೀ ಅವ ಯತ್ತ್ವಂ ಶತಕ್ರತೋ | ಆ. ೭-೪ | ಇತಿ ||**

ಅನುವಾದವು—**ಉಭೇ ಯತ್** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಯುವನಾಶ್ವಪುತ್ರನಾದ ಮಾಂಧಾತಾ ಎಂಬುವನು ಋಷಿಯು.

ಈ ಸೂಕ್ತದ ಆರನೆಯ ಋಕ್ಕಿನ **ಪೂರ್ವೀಣ** ಎಂದು ಪ್ರಾರಂಭವಾಗುವ ಉತ್ತರಾರ್ಧಕ್ಕೂ ಏಳನೆಯ ಋಕ್ಕಿಗೂ **ಗೋಧಾ** ಎಂಬುವನು ಋಷಿಯು; ಈ ಸೂಕ್ತದ ಏಳನೆಯ ಋಕ್ಕು ಪಂಕ್ತಿಶ್ಛಂದಸ್ಕವು. ಉಳಿದ ಆರು ಋಕ್ಕುಗಳು ಮಹಾಪಂಕ್ತಿ ಎಂಬ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—**ಉಭೇ ಮಾನ್ಧಾತಾ ಯೌವನಾಶ್ವೋ ಮಹಾಪಾಙ್ಕ್ತಂ ಪಙ್ಕ್ತಿರನ್ತ್ಯಾ ತಾಮಧ್ಯರ್ಧಾಂ ಗೋಧಾಪಶ್ಯತ್** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಸ್ತೋತ್ರಿಯ ತೃಚಕ್ಕಾಗಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ವಿಕಲ್ಪವಾಗಿ ಪಠಿಸಬಹುದೆಂದು ಆಶ್ವಲಾಯನ ಶ್ರೌತಸೂತ್ರದ **ಉಭೇ ಯದಿಂದ್ರ ರೋದಸೀ ಅವ ಯತ್ತ್ವಂ ಶತಕ್ರತೋ** ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು.

## ಸೂಕ್ತ ೧೩೪

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೩೪ ॥
ಅಷ್ಟಕ—೮ ॥ ಅಧ್ಯಾಯ—೭ ॥ ವರ್ಗ—೨೨ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೭ ॥
॥ ಋಷಿಃ—೧—೫, ೬ ರಲ್ಲಿ ಪೂರ್ವಾರ್ಧ. ಮಾಂಧಾತಾ ಯೌವನಾಶ್ವಃ । ೬ ರಲ್ಲಿ ಉತ್ತರಾರ್ಧ, ೭. ಗೋಧಾ ॥
॥ ದೇವತಾ—ಇಂದ್ರಃ ॥
॥ ಛಂದಃ—೧-೬ ಮಹಾಪಂಕ್ತಿಃ । ೭. ಪಂಕ್ತಿಃ ॥



॥ ಸಂಹಿತಾಪಾಠಃ ॥

ಉಭೇ ಯದಿಂದ್ರ ರೋದಸೀ ಆಪಪ್ರಾಥೋಷಾ ಇವ ।
ಮಹಾಂತಂ ತ್ವಾ ಮಹೀನಾಂ ಸಮ್ರಾಜಂ ಚರ್ಷಣೀನಾಂ ದೇವೀ ಜನಿತ್ರ್ಯ-
ಜೀಜನದ್ಭದ್ರಾ ಜನಿತ್ರ್ಯಜೀಜನತ್ ॥ ೧ ॥

॥ ಪದಪಾಠಃ ॥

ಉಭೇ ಇತಿ । ಯತ್ । ಇಂದ್ರ । ರೋದಸೀ ಇತಿ । ಆऽಪಪ್ರಾಥ । ಉಷಾಃऽಇವ ।
ಮಹಾಂತಂ । ತ್ವಾ । ಮಹೀನಾಂ । ಸಂऽರಾಜಂ । ಚರ್ಷಣೀನಾಂ । ದೇವೀ । ಜನಿತ್ರೀ । ಅಜೀಜನತ್ ।
ಭದ್ರಾ । ಜನಿತ್ರೀ । ಅಜೀಜನತ್ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಉಭೇ ರೋದಸೀ ದ್ಯಾವಾಪೃಥಿವ್ಯೌ ಯದ್ಯಸ್ತ್ವಮಾಪಪ್ರಾಥ ತೇಜಸಾಪ್ರಥಯಸಿ ಆಪೂರಯಸಿ ॥ ಪ್ರಾ ಪೂರಣೇ ಅದಾದಿಕಃ । ಛಾಂದಸೋ ಲಿಟ್ ॥ ಉಷಾ ಇವ ಯಥೋಷಾಃ ಸ್ವಭಾಸಾ ಸರ್ವಂ ಜಗದಾಪೂರಯತಿ ತದ್ವತ್ । ತಂ ಮಹೀನಾಂ ಮಹತಾಂ ದೇವಾನಾಮಪಿ ಮಹಾಂತಮಧಿಕಂ ಚರ್ಷಣೀನಾಂ ಮನುಷ್ಯಾಣಾಮಪಿ ಸಮ್ರಾಜಮೀಶ್ವರಮಿಂದ್ರಂ ತ್ವಾ ತ್ವಾಂ ದೇವೀ ದೇವನಶೀಲಾ ಜನಿತ್ರ್ಯದಿತಿರಜೀಜನತ್ । ಅಜನಯತ್ ॥ ಜನೇರ್ಣ್ಯಂತಾಲ್ಲುಙಿ ಚಙಿ ರೂಪಮೇತತ್ ॥ ಯಸ್ಮಾದೇಷಾ ಜನಿತ್ರೀದೃಶಂ ಪುತ್ರಮಜೀಜನತ್ ಅತಃ ಕಾರಣಾತ್ಸಾ ಭದ್ರಾ ಕಲ್ಯಾಣೀ ಪ್ರಶಸ್ತಾ ಜಾತಾ ॥ ಜನೇರ್ಣ್ಯಂತಾತ್ಸಾಧುಕಾರಿಣಿ ತೃನ್ । ಜನಿತಾ ಮಂತ್ರ ಇತೀಡಾದೌ ಣಿಲೋಪೋ ನಿಪಾತ್ಯತೇ । ಋನ್ನೇಭ್ಯ ಇತಿ ಙೀಪ್ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಯತ್**—ಯಾವ ನೀನು । **ಉಷಾ ಇವ**—ಉಷಃಕಾಲವು ತನ್ನ ಪ್ರಭೆಯಿಂದ ಜಗತ್ತನ್ನೆಲ್ಲಾ ತುಂಬುವಂತೆ । **ಉಭೇ ರೋದಸೀ**—ದ್ಯಾವಾಪೃಥಿಗಳೆರಡನ್ನೂ । **ಆಪಪ್ರಾಥ**—ನಿನ್ನ ತೇಜಸ್ಸಿನಿಂದ ತುಂಬುವೆಯೋ । (**ತಂ**—ಅಂತಹ) । **ಮಹೀನಾಂ**—ಶ್ರೇಷ್ಠರಾದ ದೇವತೆಗಳಿಗೂ । **ಮಹಾಂತಂ**—ಅಧಿಕನಾದವನೂ । **ಚರ್ಷಣೀನಾಂ**—ಮನುಷ್ಯರಿಗೆಲ್ಲಾ । **ಸಮ್ರಾಜಂ**—ಸ್ವಾಮಿಯಾದವನೂ ಆದ । **ತ್ವಾ**—ನಿನ್ನನ್ನು । **ದೇವೀ**—ದೇವತಾತ್ಮಳೂ । **ಜನಿತ್ರೀ**—ಸುಪುತ್ರರನ್ನು ಉತ್ಪತ್ತಿಮಾಡುವವಳೂ ಆದ ಅದಿತಿಯು । **ಅಜೀಜನತ್**—ಪ್ರಸವಿಸಿದಳು । **ಜನಿತ್ರೀ**—ಸುಪುತ್ರನಾದ ಇಂದ್ರನನ್ನು । **ಅಜೀಜನತ್** —ಯಾವ ಕಾರಣದಿಂದ ಪ್ರಸವಿಸಿದಳೋ ಆ ಕಾರಣದಿಂದ ಅದಿತಿಯು । **ಭದ್ರಾ**—ಪ್ರಶಂಸಾರ್ಹಳಾದಳು.

॥ ಭಾವಾರ್ಥ ॥

ಎಲೈ ಇಂದ್ರನೇ, ಉಷಃಕಾಲವು ತನ್ನ ಪ್ರಭೆಯಿಂದ ಜಗತ್ತನ್ನೆಲ್ಲಾ ತುಂಬುವಂತೆ ನೀನು ದ್ಯಾವಾಪೃಥವಿಗಳೆರಡನ್ನೂ ನಿನ್ನ ತೇಜಸ್ಸಿನಿಂದ(ಸ್ವಸಾಮರ್ಥ್ಯದಿಂದ) ತುಂಬುತ್ತೀಯೆ. ದೇವತೆಗಳಿಗೆಲ್ಲಾ ಅಧಿಕನಾದವನೂ, ಮನುಷ್ಯರಿಗೂ ಸ್ವಾಮಿಯಾದವನೂ ಆದ ಇಂತಹ ನಿನ್ನನ್ನು ದೇತಾತ್ಮಳಾದ ಅದಿತಿಯು ಪ್ರಸವಿಸಿದಳು ನಿನ್ನನ್ನು ಪ್ರಸವಿಸಿದ ಈ ಕಾರಣ ದಿಂದಲೇ ಅದಿತಿಯು ಪ್ರಶಂಸಾರ್ಹಳಾದಳು.

## English Translation

You, Indra, who fill both heaven and earth (with light) like the dawn—the devine progenitress has given birth to you, the mighty of the mighty (gods), the sovereign of men; auspicious progenitress has given you birth.

|| ಸಂಹಿತಾಪಾಠಃ ||

ಅವ ಸ್ಮ ದುರ್ಹಣಾಯತೋ ಮರ್ತಸ್ಯ ತನುಹಿ ಸ್ಥಿರಂ ।
ಅಧಸ್ಪದಂ ತಮೀಂ ಕೃಧಿ ಯೋ ಅಸ್ಮಾಁ ಆದಿದೇಶತಿ ದೇವೀ ಜನಿತ್ರ್ಯಜೀಜ-
ನದ್ಭದ್ರಾ ಜನಿತ್ರ್ಯಜೀಜನತ್ ॥ ೨ ॥

|| ಪದಪಾಠಃ ||

ಅವ । ಸ್ಮ । ದುಃऽಹನಾಯತಃ । ಮರ್ತಸ್ಯ । ತನುಹಿ । ಸ್ಥಿರಂ ।
ಅಧಃऽಪದಂ । ತಂ । ಈಂ । ಕೃಧಿ । ಯಃ । ಅಸ್ಮಾನ್ । ಆऽದಿದೇಶತಿ । ದೇವೀ । ಜನಿತ್ರೀ । ಅಜೀಜನತ್ ।
ಭದ್ರಾ । ಜನಿತ್ರೀ । ಅಜೀಜನತ್ ॥ ೨ ॥

|| ಸಾಯಣಭಾಷ್ಯಂ ||

ದುರ್ಹಣಾಯತೋ ದುಃಖಪ್ರದಂ ಹನನಮಾಚರತೋ ಮರ್ತಸ್ಯ ಮನುಷ್ಯಸ್ಯ ಶತ್ರೋಃ ಸ್ಥಿರಂ ದೃಢಂ ಬಲಮವ ತನುಹಿ । ಅವತತಂ ನೀಚೀನಂ ಕುರು । ಸ್ಮೇತಿ ಪೂರಕಃ । ತಂ ಶತ್ರುಮೀಮೇನಮಧಸ್ಪದಂ ಪಾದಯೋರಧಸ್ತಾದ್ವರ್ತಮಾನಂ ಕೃಧಿ । ಕುರು । ಯಃ ಶತ್ರುರಸ್ಮಾನಾದಿದೇಶತಿ ಜಿಘಾಂಸತಿ । ಸಮಾನಮನ್ಯತ್ ॥

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ದುರ್ಹಣಾಯತಃ**—ದುಃಖಪ್ರದವಾದ ವಧಕರ್ಮದಲ್ಲಿ ಉದ್ಯುಕ್ತನಾದ । **ಮರ್ತಸ್ಯ**-ಶತ್ರುವಿನ । **ಸ್ಥಿರಂ**—ದೃಢವಾದ ಬಲವನ್ನು ಅಥವಾ ಸ್ಥೈರ್ಯವನ್ನು । **ಅವ ತನುಹಿ ಸ್ಮ**—ನಾಶಪಡಿಸು । **ಯಃ**—ಯಾವ ಶತ್ರುವು । **ಅಸ್ಮಾನ್**—ನಮ್ಮನ್ನು । **ಆದಿದೇಶತಿ**—ಕೊಲ್ಲಲಿಚ್ಛಿಸುವನೋ । **ತಂ ಏನಂ**—ಆ ಶತ್ರುವನ್ನು । **ಅಧಸ್ಪದಂ**—ನಮ್ಮ ಕಾಲ ಕೆಳಗೆ ಬಿದ್ದಿರುವಂತೆ । **ಕೃಧಿ** -ಮಾಡು । **ದೇವೀ**—ದೇವತಾತ್ಮಳಾದ । **ಜನಿತ್ರೀ** - ನಿನ್ನ ತಾಯಿಯಾದ ಅದಿತಿಯು । **ಅಜೀಜನತ್**—ನಿನ್ನನ್ನು ಹಡೆದಳು । **ಜನಿತ್ರೀ ಅಜೀಜನತ್** - ಇಂತಹ ಸುಪುತ್ರನನ್ನು ಹಡೆದ ನಿನ್ನ ತಾಯಿಯು । **ಭದ್ರಾ**—ಪ್ರಶಂಸಾರ್ಹಳು.

|| ಭಾವಾರ್ಥ ||

ಎಲೈ ಇಂದ್ರನೇ, ಮತ್ತೊಬ್ಬರನ್ನು ಕೊಲ್ಲಬೇಕೆಂದೇ ಪ್ರಯತ್ನಿಸುವ ಶತ್ರುವಿನ ಸ್ಥೈರ್ಯವನ್ನು ನಾಶಮಾಡು. ಯಾವ ಶತ್ರುವು ನಮ್ಮನ್ನು ಕೊಲ್ಲಲಿಚ್ಛಿಸುವನೋ ಆ ಶತ್ರುವನ್ನು ನಮ್ಮ ಕಾಲಕೆಳಗೆ ಬೀಳುವಂತೆ ಮಾಡು. ದೇವತಾತ್ಮಳಾದ ಅದಿತಿಯು ಇಂತಹ ಸುಪುತ್ರನಾದ ನಿನ್ನನ್ನು ಹಡೆದದ್ದರಿಂದಲೇ ಪ್ರಶಂಸಾರ್ಹಳಾದಳು.

English Translation

Enfeeble the strength of malicious man, cast under foot him who tries to kill us; the devine progenitress has given you birth, the auspicious progenitress has given you birth.

॥ ಸಂಹಿತಾಪಾಠಃ ॥

ಅವ ತ್ಯಾ ಬೃಹತೀರಿಷೋ ವಿಶ್ವಶ್ಚಂದ್ರಾ ಅಮಿತ್ರಹನ್ ।

ಶಚೀಭಿಃ ಶಕ್ರ ಧೂನುಹೀಂದ್ರ ವಿಶ್ವಾಭಿರೂತಿಭಿರ್ದೇವೀ ಜನಿತ್ರ್ಯಜೀಜ-

ನದ್ಭದ್ರಾ ಜನಿತ್ರ್ಯಜೀಜನತ್ ॥ ೩ ॥

॥ ಪದಪಾಠಃ ॥

ಅವ । ತ್ಯಾಃ । ಬೃಹತೀಃ । ಇಷಃ । ವಿಶ್ವಽಚಂದ್ರಾಃ । ಅಮಿತ್ರಽಹನ್ ।

ಶಚೀಭಿಃ । ಶಕ್ರ । ಧೂನುಹಿ । ಇಂದ್ರ । ವಿಶ್ವಾಭಿಃ । ಊತಿಽಭಿಃ । ದೇವೀ । ಜನಿತ್ರೀ । ಅಜೀಜನತ್ ।

ಭದ್ರಾ । ಜನಿತ್ರೀ । ಅಜೀಜನತ್ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಮಿತ್ರಹನ್ನಮಿತ್ರಾಣಾಂ ಶತ್ರೂಣಾಂ ಹಂತರ್ಹೇ ಶಕ್ರೇಂದ್ರ ಶಚೀಭಿರಾತ್ಮೀಯಾಭಿಃ ಶಕ್ತಿಭಿರಾತ್ಮೀಯೈಃ ಕರ್ಮಭಿರ್ವಾ ತ್ಯಾಸ್ತಾಃ ಪ್ರಸಿದ್ಧಾ ಬೃಹತೀರ್ಮಹತೀಃ ॥ ಬೃಹನ್ಮಹತೋರುಪಸಂಖ್ಯಾನಮಿತಿ ಙೀಪ ಉದಾತ್ತತ್ವಂ ॥ ವಿಶ್ವಶ್ಚಂದ್ರಾಃ । ವಿಶ್ವಾನಿ ಸರ್ವಾಣಿ ಚಂದ್ರಾಣಿ ಹಿರಣ್ಯಾನಿ ಯಾಸಾಂ ತಾದೃಶೀಃ ॥ ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರ ಇತಿ ಸುಡಾಗಮಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ ॥ ಏವಂಭೂತಾ ಇಷೋಽನ್ನಾನಿ ವಿಶ್ವಾಭಿಃ ಸರ್ವಾಭಿರೂತಿಭೀ ರಕ್ಷಾಭಿಃ ಸಾರ್ಧಮವ ಧೂನುಹಿ । ಅಸ್ಮಾಸ್ವವಾಙ್ಮುಖಂ ಕಂಪಯ । ಅಸ್ಮದಭಿಮುಖಂ ಗಮಯೇತ್ಯರ್ಥಃ । ಗತಮನ್ಯತ್ ॥

॥ ಪ್ರತಿಪದಾರ್ಥ ॥

ಅಮಿತ್ರಹನ್—ಶತ್ರುಸಂಹಾರಕನಾದ । ಶಕ್ರ ಇಂದ್ರ—ಶಕ್ತಿಯುತನಾದ ಎಲೈ ಇಂದ್ರನೇ। ಶಚೀಭಿಃ—ನಿನ್ನ ಸ್ವಸಾಮರ್ಥ್ಯಗಳಿಂದ । ತ್ಯಾಃ—ಪ್ರಸಿದ್ಧವಾದವೂ । ಬೃಹತೀಃ—ಬಹಳವಾದವೂ । ವಿಶ್ವಶ್ಚಂದ್ರಾಃ—ಸಮಸ್ತಧನಗಳನ್ನೂ । ಇಷಃ—ಅನ್ನಾದ್ಯಾಹಾರಗಳನ್ನೂ । ವಿಶ್ವಾಭಿಃ—ಸಮಸ್ತವಾದ । ಊತಿಭಿಃ—ನಿನ್ನ ರಕ್ಷಣೆಗಳೊಡನೆ ಕೂಡಿ । ಅವ ಧೂನುಹಿ—ನಮ್ಮ ಬಳಿ ಬಂದು ಬೀಳುವಂತೆ ಮಾಡು । ದೇವೀ—ದೇವಾತ್ಮಳಾದ ।

**ಜನಿತ್ರೀ**—ನಿನ್ನ ಜನನಿಯಾದ ಅದಿತಿಯು । **ಅಜೀಜನತ್**—ನಿನ್ನನ್ನು ಹಡೆದಳು । **ಜನಿತ್ರೀ ಅಜೀಜನತ್**—ಇಂತಹ ಸುಪುತ್ರನನ್ನು ಹಡೆದ ಕಾರಣದಿಂದಲೇ ನಿನ್ನ ತಾಯಿಯು । **ಭದ್ರಾ**—ಪ್ರಶಂಸಾರ್ಹಳಾದಳು.

॥ ಭಾವಾರ್ಥ ॥

ಶತ್ರುಸಂಹಾರಕನೂ ಶಕ್ತಿಯುತನೂ ಆದ ಎಲೈ ಇಂದ್ರನೇ, ನಿನ್ನ ಸ್ವಸಾಮರ್ಥ್ಯಗಳಿಂದ ಪ್ರಸಿದ್ಧವೂ ಬಹಳವೂ ಆದ ಸುವರ್ಣಾದಿಧನಗಳನ್ನೂ ಅನ್ನಾದ್ಯಾಹಾರಗಳನ್ನೂ ನಿನ್ನ ಸಮಸ್ತ ರಕ್ಷಣೆಗಳೊಡನೆ ನಮ್ಮ ಬಳಿ ಬಂದು ಬೀಳುವಂತೆ ಮಾಡು. ದೇವತಾತ್ಮಳಾದ ಅದಿತಿಯು ನಿನ್ನಂತಹ ಸುಪುತ್ರನನ್ನು ಹಡೆದ ಕಾರಣದಿಂದಲೇ ಪ್ರಶಂಸಾರ್ಹಳಾದಳು.

## English Translation.

Destroyer of enemies, Indra, Shakra, shake down upon us by your exploits those abundant, all-shining viands, (accompanied) with all your protections; the divine progenitress has given you birth, the avspicious progenitress has given you birth.

॥ ಸಂಹಿತಾಪಾಠಃ ॥

ಅವ ಯತ್ತ್ವಂ ಶತಕ್ರತವಿಂದ್ರ ವಿಶ್ವಾನಿ ಧೂನುಷೇ ।
ರಯಿಂ ನ ಸುನ್ವತೇ ಸಚಾ ಸಹಸ್ರಿಣೀಭಿರೂತಿಭಿರ್ದೇವೀ ಜನಿತ್ರ್ಯಜೀಜನ-
ದ್ಭದ್ರಾ ಜನಿತ್ರ್ಯಜೀಜನತ್ ॥ ೪ ॥

॥ ಪದಪಾಠಃ ॥

ಅವ । ಯತ್ । ತ್ವಂ । ಶತಕ್ರತೋ ಇತಿ ಶತऽಕ್ರತೋ । ಇಂದ್ರ । ವಿಶ್ವಾನಿ । ಧೂನುಷೇ ।
ರಯಿಂ । ನ । ಸುನ್ವತೇ । ಸಚಾ । ಸಹಸ್ರಿಣೀಭಿಃ । ಊತಿऽಭಿಃ । ದೇವೀ । ಜನಿತ್ರೀ । ಅಜೀಜನತ್ ।
ಭದ್ರಾ । ಜನಿತ್ರೀ । ಅಜೀಜನತ್ ॥ ೪ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇऽಹನಿ ಮಾಧ್ಯಂದಿನೇऽಚ್ಛಾವಾಕಸ್ಯಾವ ಯತ್ತ್ವಮಿತಿ ತೃಚೋ ವೈಕಲ್ಪಿಕೋऽನುರೂಪಃ । ಸೂತ್ರಂ ತು ಸೂಕ್ತಾದಾವುದಾಹೃತಂ ॥

ಹೇ ಶತಕ್ರತೋ ಬಹುಕರ್ಮನ್ ಬಹುಪ್ರಜ್ಞ ವೇಂದ್ರ ಸುನ್ವತೇ ಸೋಮಾಭಿಷವಂ ಕುರ್ವತೇ ॥ ಸುನೋತೇರ್ಲಟಃ ಶತೃ । ಹುಶ್ನುವೋಃ ಸಾರ್ವಧಾತುಕ ಇತಿ ಯಣ್ । ಶತುರನುಮ ಇತಿ ವಿಭಕ್ತೇ-ರುದಾತ್ತತ್ವಂ ॥ ಈದೃಶಾಯ ಯಜಮಾನಾಯ ಯದ್ಯದಾ ತ್ವಂ ವಿಶ್ವಾನಿ ವ್ಯಾಪ್ತಾನ್ಯನ್ನಾನಿ ವಾವ ಧೂನುಷೇ ಅಭಿಗಮಯಸಿ । ದದಾಸೀತ್ಯರ್ಥಃ । ತದಾ ರಯಿಂ ನ ರಯಿಂ ಚ ಪುತ್ರರೂಪಂ ಧನಂ ಚ ಸಹಸ್ರಿಣೇಭಿಃ ಸಹಸ್ರಸಂಖ್ಯಾಯುಕ್ತಾಭಿರೂತಿಭೀ ರಕ್ಷಾಭಿಃ ಸಚಾ ಸಹ ಪ್ರದೇಹಿ । ಗತಮನ್ಯತ್ ॥

॥ ಪ್ರತಿಪದಾರ್ಥ ॥

**ಶತಕ್ರತೋ**— ಅನೇಕ ಸಾಹಸಕೃತ್ಯಗಳನ್ನೆಸಗಿದ ಅಥವಾ ಬಹು ಪ್ರಜ್ಞನಾದ । **ಇಂದ್ರ**— ಎಲೈ ಇಂದ್ರನೇ । **ಸುನ್ವತೇ**— ಸೋಮರಸವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ । **ಯತ್**— ಯಾವಾಗ । **ತ್ವಂ** — ನೀನು । **ವಿಶ್ವಾನಿ** — ಸಮಸ್ತವಾದ ಧನಗಳನ್ನು ಅಥವಾ ಅನ್ನಗಳನ್ನು । **ಅವ ಧೂನುಷೇ**— ಒದಗಿಸಿ ಕೊಡುತ್ತೀಯೋ ಆಗ । **ರಯಿಂ**— ಪುತ್ರರೂಪವಾದ ಧನವನ್ನು । **ಸಹಸ್ರಿಣೇಭಿಃ**— ಸಹಸ್ರಸಂಖ್ಯಾಕವಾಗಿ । **ಊತಿಭಿಃ ಸಚಾ**— ನಿನ್ನ ರಕ್ಷಣೆಗಳೊಡಗೂಡಿ ಒದಗಿಸಿ ಕೊಡು । **ದೇವೀ** — ದೇವತಾತ್ಮಳಾದ । **ಜನಿತ್ರೀ**— ನಿನ್ನ ಜನನಿಯಾದ ಅದಿತಿಯು । **ಅಜೀಜನತ್**— ನಿನ್ನನ್ನು ಹಡೆದಳು । **ಅಜೀಜನತ್**— ನಿನ್ನನ್ನು ಹಡೆದದ್ದರಿಂದಲೇ । **ಜನಿತ್ರೀ**— ನಿನ್ನ ತಾಯಿಯು । **ಭದ್ರಾ**— ಪ್ರಶಂಸಾರ್ಹಳು.

॥ ಭಾವಾರ್ಥ ॥

ಅನೇಕ ಸಾಹಸಕೃತ್ಯಗಳನ್ನು ಮಾಡಿದ ಅಥವಾ ಬಹುಪ್ರಾಜ್ಞನಾದ ಎಲೈ ಇಂದ್ರನೇ, ನಿನಗಾಗಿ ಸೋಮ ರಸವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ ಯಾವಾಗ ನೀನು ಸಮಸ್ತ ಧನವನ್ನು ಅಥವಾ ಅನ್ನಾದ್ಯಾಹಾರವನ್ನು ಒದಗಿಸಿ ಕೊಡುತ್ತೀಯೋ ಆಗ ಅದರ ಜತೆಯಲ್ಲಿಯೇ ಪುತ್ರನನ್ನೂ ಸಹಸ್ರಸಂಖ್ಯೆಯಲ್ಲಿ ನಿನ್ನ ರಕ್ಷಣೆಗಳನ್ನೂ ಒದಗಿಸಿ ಕೊಡು. ನಿನ್ನ ಜನನಿಯಾದ ಅದಿತಿಯು ಸುಪುತ್ರನಾದ ನಿನ್ನನ್ನು ಹಡೆದಕಾರಣದಿಂದ ಪ್ರಶಂಸಾರ್ಹಳಾದಳು.

## English Translation.

When you, Indra, Shatakrathu, shake down (upon us) all blessings, (then bestow) upon the offerer of the libation wealth also, together with your thousandfold protections; the divine progenitress has given you birth, the auspicious progenitress has given you birth.

॥ ಸಂಹಿತಾಪಾಠಃ ॥

ಅವ ಸ್ವೇದಾ ಇವಾಭಿತೋ ವಿಷ್ವಕ್ಪತಂತು ದಿದ್ಯವಃ ।

ದೂರ್ವಾಯಾ ಇವ ತಂತವೋ ವ್ಯ೧ಸ್ಮದೇತು ದುರ್ಮತಿರ್ದೇವೀ ಜನಿತ್ರ್ಯ-

ಜೀಜನದ್ಭದ್ರಾ ಜನಿತ್ರ್ಯ ಜೀಜನತ್ ॥ ೫ ॥

॥ ಪದಪಾಠಃ ॥

ಅವ । ಸ್ವೇದಾಃಽಇವ । ಅಭಿತಃ । ವಿಷ್ವಕ್ । ಪತಂತು । ದಿದ್ಯವಃ ।

ದೂರ್ವಾಯಾಃಽಇವ । ತಂತವಃ । ವಿ । ಅಸ್ಮತ್ । ಏತು । ದುಃಽಮತಿಃ । ದೇವೀ । ಜನಿತ್ರೀ । ಅಜೀಜ-

ನತ್ । ಭದ್ರಾ । ಜನಿತ್ರೀ । ಅಜೀಜನತ್ ॥ ೫ ॥

॥ ಸಾಯಣಭಾಷ್ಯಂ ॥

ಸ್ವೇದಾ ಇವ ಗಾತ್ರಾತ್ಸ್ವೇದಬಿಂದವ ಇವಾಭಿತಃ ಸರ್ವತೋ ದಿದ್ಯವೋ ದ್ಯೋತಮಾನಾನ್ಯಾ-ಯುಧಾನೀಂದ್ರಸ್ಯ ದೀಪ್ತಯೋ ವಾ ವಿಷ್ವಗ್ನಾನಾಮುಖಾ ಅವ ಪತಂತು । ನಿಪತಂತು । ದೂರ್ವಾಯಾ ಇವ ತಂತವಃ । ಯಥಾ ದೂರ್ವಾಕಾಂಡಾ ಬಹುಶಃ ಪ್ರರೋಹಂತಿ ಏವಂ ಬಹುಶೋ ವಿಸ್ತೃತಾ ದೃಶ್ಯಂತೇ । ದುರ್ಮತಿರ್ದುಷ್ಟಾಭಿಸಂಧಿಃ ಶತ್ರುರಸ್ಮದಸ್ಮತ್ತೋ ವ್ಯೇತು । ವಿಯತಾ ಗಚ್ಛತು । ಗತಮನ್ಯತ್ ॥

॥ ಪ್ರತಿಪದಾರ್ಥ ॥

**ಸ್ವೇದಾ ಇವ**—ಶರೀರದಿಂದ ಬೆವರು ಹನಿಗಳು ತೊಟ್ಟಿಕ್ಕುವಂತೆ । **ದಿದ್ಯವಃ**—ಪ್ರಕಾಶಮಾನವಾದ ಇಂದ್ರನ ಆಯುಧಗಳು । **ಅಭಿತಃ**—ಸುತ್ತಲೂ । **ವಿಷ್ವಕ್**—ನಾನಾಮುಖವಾಗಿ । **ಅವ ಪತಂತು**—ಶತ್ರುಗಳ ಮೇಲೆ ಬೀಳಲಿ । **ದೂರ್ವಾಯಾ ಇವ ತಂತವಃ**—ದೂರ್ವಾ ಎಂಬ ಹುಲ್ಲುಕಡ್ಡಿಗಳು ಬಹುಬೇಗನೆ ಬೆಳೆಯುವಂತೆ । **ದುರ್ಮತಿಃ**—ದುರ್ಬುದ್ಧಿಯುಳ್ಳ ಶತ್ರುವು । **ಅಸ್ಮತ್**—ನಮ್ಮಿಂದ । **ವಿ ಏತು**—ಬೇಗನೆ ಹೊರಟುಹೋಗಲಿ । **ದೇವೀ**—ದೇವತಾತ್ಮಳಾದ । **ಜನಿತ್ರೀ**—ನಿನ್ನ ಜನನಿಯಾದ ಅದಿತಿಯು । **ಅಜೀಜನತ್**—ನಿನ್ನನ್ನು ಹಡೆದಳು । **ಅಜೀಜನತ್**—ನಿನ್ನನ್ನು ಹಡೆದ ಕಾರಣದಿಂದಲೇ । **ಜನಿತ್ರೀ**—ನಿನ್ನ ತಾಯಿಯು । **ಭದ್ರಾ**—ಪ್ರಶಂಸಾರ್ಹಳಾದಳು.

॥ ಭಾವಾರ್ಥ ॥

ಶರೀರದಿಂದ ಬೆವರುಹನಿಗಳು ತೊಟ್ಟಿಕ್ಕುವಂತೆ ಪ್ರಕಾಶಮಾನವಾದ ಇಂದ್ರನ ಆಯುಧಗಳು ಸುತ್ತಲೂ ನಾನಾಮುಖವಾಗಿ ಶತ್ರುಗಳ ಮೇಲೆ ಬೀಳಲಿ, ದುರ್ಬುದ್ಧಿಯುಳ್ಳ ಶತ್ರುವು ದೂರ್ವಾ ಎಂಬ ಹುಲ್ಲು ಬೇಗನೆ ಬೆಳೆಯುವಂತೆ ನಮ್ಮಿಂದ ಬೇಗನೆ ಹೊರಟುಹೋಗಲಿ. ನಿನ್ನನ್ನು ಹಡೆದ ದೇವತಾತ್ಮಳಾದ ಅದಿತಿಯು ನಿನ್ನನ್ನು ಹಡೆದ ಕಾರಣದಿಂದಲೇ ಪ್ರಶಸ್ಯಳಾದಳು.

## English Translation

Let your radiant (weapons) fall down everywhere round about like drops of perspiration; let the enemy depart from us like the stems of the durva grass; the divine progenitress has given you birth, the auspicios progenitress has given you birth.

॥ ಸಂಹಿತಾಪಾಠಃ ॥

ದೀರ್ಘಂ ಹ್ಯಂಕುಶಂ ಯಥಾ ಶಕ್ತಿಂ ಬಿಭರ್ಷಿ ಮಂತುಮಃ ।

ಪೂರ್ವೇಣ ಮಘವನ್ಪದಾಜೋ ವಯಾಂ ಯಥಾ ಯಮೋ ದೇವೀ ಜನಿ-

ತ್ರ್ಯಜೀಜನದ್ಭದ್ರಾ ಜನಿತ್ರ್ಯಜೀಜನತ್ ॥ ೬ ॥

॥ ಪದಪಾಠಃ ॥

ದೀರ್ಘಂ । ಹಿ । ಅಂಕುಶಂ । ಯಥಾ । ಶಕ್ತಿಂ । ಬಿಭರ್ಷಿ । ಮಂತುಽಮಃ ।

ಪೂರ್ವೇಣ । ಮಘಽವನ್ । ಪದಾ । ಅಜಃ । ವಯಾಂ । ಯಥಾ । ಯಮಃ । ದೇವೀ । ಜನಿತ್ರೀ ।

ಅಜೀಜನತ್ । ಭದ್ರಾ । ಜನಿತ್ರೀ । ಅಜೀಜನತ್ ॥ ೬ ॥

॥ ಸಾಯಣಭಾಷ್ಯಂ ॥

ದೀರ್ಘಮಾಯತಮಂಕುಶಂ ಸೃಣಿಂ ಯಥಾ ಬಿಭರ್ಷಿ ಏವಮಾಯತಾಂ ಶಕ್ತಿಂ ಹೇ ಮಂತುಮಃ। ಮಂತುರ್ಜ್ಞಾನಂ । ತದ್ವನ್ ॥ ಮತುವಸೋ ರುರಿತಿ ಸಂಬುದ್ಧೌ ನಕಾರಸ್ಯ ರುತ್ವಂ ॥ ಈದೃಶೇಂದ್ರ ಬಿಭರ್ಷಿ । ಧಾರಯಸಿ ॥ ಡುಭೃಞ್ ಧಾರಣಪೋಷಣಯೋಃ ಜೌಹೋತ್ಯಾದಿಕಃ । ಶ್ಲೌ ಭೃಞಾಮಿದಿ- ತ್ಯಭ್ಯಾಸಸ್ಯೇತ್ವಂ ॥ ಹೇ ಮಘವನ್ಧನವನ್ನಿಂದ್ರ ಯಥಾ ಪೂರ್ವೇಣ ದೇಹಸ್ಯ ಪೂರ್ವಭಾಗೇ ವರ್ತಮಾ- ನೇನ ಪದಾ ಪಾದೇನಾಜಶ್ಛಾಗೋ ವಯಾಂ ಶಾಖಾಮಾಕರ್ಷತಿ ತಥಾ ಪೂರ್ವೋಕ್ತಯಾ ಶಕ್ತ್ಯಾಕೃಷ್ಯ ಯಮಃ । ಶತ್ರೂನ್ನಿಯಚ್ಛಸಿ ॥ ಯಮೋರ್ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪೋ ಲುಕ್ ॥ ಗತಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ದೀರ್ಘಂ**—ಉದ್ದವಾದ । **ಅಂಕುಶಂ**—ಕೊಕ್ಕೆಯ ಕೋಲನ್ನು (ದೋಟಿಯನ್ನು) । **ಮಂತುಮಃ**—ಬುದ್ಧಿವಂತನಾದವನು । **ಯಥಾ**—ಯಾವರೀತಿ ಹಿಡಿದು ಉಪಯೋಗಿಸುವನೋ ಅದರಂತೆ ನೀನು ।

**ಶಕ್ತಿಂ**—ನಿನ್ನ ಶಕ್ತಿಯನ್ನು | **ಬಿಭರ್ಷಿ**—ಧರಿಸುತ್ತೀಯೆ | **ಮಘವನ್**—ಧನವಂತನಾದ ಎಲೈ ಇಂದ್ರನೇ | **ಯಥಾ**—ಯಾವ ಪ್ರಕಾರವಾಗಿ | **ಅಜಃ**—ಆಡು | **ಪೂರ್ವೇಣ ಪದಾ**—ತನ್ನ ಮುಂಗಾಲಿನಿಂದ | **ವಯಾಂ**—ಮರದ ಕೊಂಬೆಯನ್ನು ಬಗ್ಗಿಸುವುದೋ ಆದರಂತೆ ನೀನು | **ಯಮಃ**—ಶತ್ರುಗಳನ್ನು ಬಗ್ಗಿಸುವೆ | **ದೇವೀ**—ದೇವತಾತ್ಮಳಾದ (ನಿನ್ನ) | **ಜನಿತ್ರೀ**—ಜನನಿಯಾದ ಅದಿತಿಯು | **ಅಜೀಜನತ್**—ನಿನ್ನನ್ನು ಹಡೆದಳು | **ಅಜೀಜನತ್** - ನಿನ್ನನ್ನು ಹಡೆದ ಕಾರಣದಿಂದಲೇ | **ಜನಿತ್ರೀ**—ನಿನ್ನ ತಾಯಿಯು | **ಭದ್ರಾ**—ಪ್ರಶಂಸಾರ್ಹಳಾಗಿದ್ದಾಳೆ.

|| ಭಾವಾರ್ಥ ||

ಎಲೈ ಇಂದ್ರನೇ, ಬುದ್ಧಿವಂತನಾದ ಮನುಷ್ಯನು ಉದ್ದವಾದ ಕೊಕ್ಕೆಯ ಕೋಲನ್ನು ಯಾವರೀತಿ ಕೈಯಲ್ಲಿ ಹಿಡಿದು ಉಪಯೋಗಿಸುವನೋ ಅದರಂತೆ ನೀನು ನಿನ್ನ ಶಕ್ತಿಯನ್ನು ಉಪಯೋಗಿಸುತ್ತೀಯೆ. ಧನವಂತನಾದ ಎಲೈ ಇಂದ್ರನೇ, ಆಡು ತನ್ನ ಮುಂಗಾಲಿನಿಂದ ವೃಕ್ಷದ ಕೊಂಬೆಯನ್ನು ಯಾವರೀತಿ ಬಗ್ಗಿಸುವುದೋ ಆದರಂತೆ ನೀನು ನಿನ್ನ ಶತ್ರುಗಳನ್ನು ಬಗ್ಗಿಸುವೆ. (ಸೋಲಿಸುವೆ) ದೇವತಾತ್ಮಳಾದ ನಿನ್ನ ಜನನಿಯಾದ ಆದಿತಿಯು ನಿನ್ನನ್ನು ಹಡೆದದ್ದರಿಂದಲೇ ಪ್ರಶಂಸಾರ್ಹಳಾದಳು.

## English Translation.

For you, sapient (Indra), wield your might like a long hook; you drag (your foes), Maghavan, as a goat with its fore-foot (drags) a branch; the divine pragenitress has given you birth, the auspicious progenitress has givee you birth.

|| ಸಂಹಿತಾಪಾಠಃ ||

ನಕಿರ್ದೇವಾ ಮಿನೀಮಸಿ ನಕಿರಾ ಯೋಪಯಾಮಸಿ ಮಂತ್ರಶ್ರುತ್ಯಂ ಚರಾಮಸಿ |
ಪಕ್ಷೇಭಿರಪಿಕಕ್ಷೇಭಿರತ್ರಾಭಿ ಸಂ ರಭಾಮಹೇ || ೭ ||

|| ಪದಪಾಠಃ ||

ನಕಿಃ | ದೇವಾಃ | ಮಿನೀಮಸಿ | ನಕಿಃ | ಆ | ಯೋಪಯಾಮಸಿ | ಮಂತ್ರಽಶ್ರುತ್ಯಂ | ಚರಾಮಸಿ |
ಪಕ್ಷೇಭಿಃ | ಅಪಿಽಕಕ್ಷೇಭಿಃ | ಅತ್ರ | ಅಭಿ | ಸಂ | ರಭಾಮಹೇ || ೭ ||

|| ಸಾಯಣಭಾಷ್ಯಂ ||

ಹೇ ದೇವಾ ಇಂದ್ರಾದಯಃ ಯುಷ್ಮದ್ವಿಷಯೇ ನಕಿರ್ಮಿನೀಮಸಿ | ನ ಕಿಮಪಿ ಹಿಂಸ್ಮಃ || ಮೀಞ್ ಹಿಂಸಾಯಾಂ ಕ್ರ್ಯಾದಿಕಃ || ಮೀನಾತೇರ್ನಿಗಮ ಇತಿ ಹ್ರಸ್ವಃ | ಇದಂತೋ ಮಸಿಃ || ಅಥಾಥಃ

ಸಮುಚ್ಛ್ರಯೇ । ನಕಿರ್ನ ಕಿಂಚ ಯೋಪಯಾಮಸಿ । ಯೋಪಯಾಮಃ । ಅನನುಷ್ಠಾನೇನ ವಿಮೋಹಯಾಮಃ ॥ ಯುಷ್ಮ ವಿಮೋಹನೇ ॥ ಕಿಂ ತರ್ಹಿ ಮಂತ್ರಶ್ರುತ್ಯಂ ಮಂತ್ರೇಣ ಸ್ಮಾರ್ಯಂ ಶ್ರುತೌ ವಿಧಿವಾಕ್ಯೇ ಪ್ರತಿಪಾದ್ಯಂ ಯುಷ್ಮದ್ವಿಷಯಂ ಕರ್ಮ ತಚ್ಚರಾಮಸಿ । ಆಚರಾಮಃ । ಅನುತಿಷ್ಠಾಮಃ । ಅಪಿ ಚ ಪಕ್ಷೇಭಿಃ ಪಕ್ಷೈಃ ಪಕ್ಷಸ್ಥಾನೀಯೈಃ ಸ್ತುತಶಸ್ತ್ರೈರಪಿಕಕ್ಷೇಭಿಃ । ಅಪಿಕಕ್ಷೋ ನಾಮ ಬಾಹ್ವೋರ್ಮಧ್ಯಭಾಗಃ । ಯಜ್ಞಸ್ಯಾಪಿಕಕ್ಷಭೂತೈರ್ಹವಿರ್ಭಿರತ್ರಾಸ್ಮಿನ್ಯಜ್ಞೇಽಭಿತಃ ಸರ್ವತೋ ಯುಷ್ಮಾನ್ಸಂರಭಾಮಹೇ । ಸಮ್ಯಗವಲಂಬಾಮಹೇ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ಇಂದ್ರಾದಿದೇವತೆಗಳೇ (ನಿಮ್ಮ ವಿಷಯದಲ್ಲಿ ನಾವು) । **ನಕಿಃ ಮಿನೀಮಸಿ**—ಸ್ವಲ್ಪವೂ ಹಿಂಸೆಯನ್ನು ಮಾಡುವುದಿಲ್ಲ । **ನಕಿಃ ಆ ಯೋಪಯಾಮಸಿ**—ಕರ್ಮಾನುಷ್ಠಾನಮಾಡದೆ ನಿಮಗೆ ತೊಂದರೆಯನ್ನುಂಟುಮಾಡುವುದಿಲ್ಲ. (ಆದರೆ) । **ಮಂತ್ರಶ್ರುತ್ಯಂ**—ಶ್ರುತಿಮಂತ್ರಗಳಲ್ಲಿ ಹೇಳಿರುವಂತೆ । **ಚರಾಮಸಿ**—ಯಜ್ಞಾದಿಕರ್ಮಗಳನ್ನು ಆಚರಿಸುತ್ತೇವೆ ಮತ್ತು । **ಪಕ್ಷೇಭಿಃ**—ಪಕ್ಷಸ್ಥಾನೀಯವಾದ ಶಸ್ತ್ರಮಂತ್ರಗಳಿಂದಲೂ । **ಅಪಿಕಕ್ಷೇಭಿಃ**—ಬಾಹುಗಳಿಂದ ಅರ್ಪಿಸಲ್ಪಡುವ ಹವಿರಾದಿಗಳಿಂದಲೂ । **ಅತ್ರ**—ಈ ಯಜ್ಞದಲ್ಲಿ । **ಅಭಿ**—ಸರ್ವಪ್ರದೇಶಗಳಲ್ಲಿಯೂ ನಿಮ್ಮನ್ನು । **ಸಂ ರಭಾಮಹೇ**—ಆಶ್ರಯಿಸುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರಾದಿ ದೇವತೆಗಳೇ, ನಿಮ್ಮ ವಿಷಯದಲ್ಲಿ ನಾವು ಹಿಂಸೆಯನ್ನುಂಟುಮಾಡುವ ಯಾವ ಕಾರ್ಯವನ್ನೂ ಮಾಡುವುದಿಲ್ಲ. ನಿಮಗೆ ಯಾವ ವಿಧವಾದ ತೊಂದರೆಯನ್ನೂ ಕೊಡುವುದಿಲ್ಲ. ಆದರೆ :ಶ್ರುತಿವಾಕ್ಯಗಳಲ್ಲಿ ವಿಧಿಸಿರುವಂತೆ ನಿಮ್ಮನ್ನುದ್ದೇಶಿಸಿ ಯಜ್ಞಕರ್ಮಗಳನ್ನು ಆಚರಿಸುತ್ತೇವೆ. ಈ ಯಜ್ಞದಲ್ಲಿ ಶಸ್ತ್ರಮಂತ್ರಗಳಿಂದಲೂ ಹವಿಸ್ಸುಗಳಿಂದಲೂ ನಿಮ್ಮನ್ನು ವಿಶೇಷವಾಗಿ ಉಪಚರಿಸಿ ಆಶ್ರಯಿಸುತ್ತೇವೆ.

## English Translation.

O gods, we never injure (you), we never inflict annoyance (on you), we follow the teaching of the mantra ; we take hold of you at this (sacrifice) with wings and arms.

## ನೂರ ಮೂವತ್ತೈದನೆಯ ಸೂಕ್ತವು



### ಪೀಠಿಕೆ.

ಕಠೋಪನಿಷತ್ತಿನಲ್ಲಿ ಒಂದು ಉಪಾಖ್ಯಾನವಿದೆ. ವಾಜಶ್ರವಸ್ಸೆಂಬ ಋಷಿಗೆ ನಚಿಕೇತನೆಂಬ ಪುತ್ರನಿದ್ದನು. ಅವನು ಇನ್ನೂ ಕುಮಾರನಾಗಿರುವಾಗ ಎಂದರೆ ಎಳೆವಯಸ್ಸಿನಲ್ಲಿರುವಾಗ ಅವನ ತಂದೆಯು ಯಜ್ಞವನ್ನು ಮಾಡಿ ತನ್ನಲ್ಲಿದ್ದ ಬಡಕಲಾದ ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು. ಅದನ್ನು ನೋಡಿದ ನಚಿಕೇತನು—ನಮ

ತಂದೆಯು ಈ ರೀತಿ ಏಕೆ ಮಾಡುತ್ತಿರುವನು? ಈ ಬಡಕಲಾದ ಗೋವುಗಳಿಂದ ಆ ಬ್ರಾಹ್ಮಣರಿಗೆ ಏನು ಉಪಯೋಗವಾದೀತು ಎಂದು ಯೋಚಿಸಿ ತನ್ನ ತಂದೆಯನ್ನು ಕುರಿತು— ಎಲೈ ತಂದೆಯೇ, ಇಂತಹ ಗೋವುಗಳನ್ನು ದಾನಮಾಡುವುದರಿಂದ ನಿನಗೆ ಒರುವ ಪುಣ್ಯವೇನು ? ಒಳ್ಳೆಯ ವಸ್ತುಗಳನ್ನು ದಾನಮಾಡು ಎಂದನು. ಅದಕ್ಕೆ ತಂದೆಯು ನಚಿಕೇತನಾದ ನಿನ್ನನ್ನು ಬಿಟ್ಟರೆ ನನಲ್ಲಿ ಏನೂ ಉಳಿದಿಲ್ಲವೆಂದು ಹೇಳಲು. ನಚಿಕೇತನು ನನ್ನನ್ನು ಯಾರಿಗಾದರೂ ದಾನಮಾಡು ಎಂದನು. ತಂದೆಯು ಅವನ ಬಾಲಭಾಷೆಗೆ ಗಮನಕೊಡದೆ ಸುಮ್ಮನಿದ್ದನು ಆದರೂ ನಚೀಕೇತನು ಅಷ್ಟಕ್ಕೆ ಬಿಡದೆ ನನ್ನನ್ನು ಯಾರಿಗೆ ಕೊಡುವೆ ಎಂದು ತಂದೆಯನ್ನು ಪೀಡಿಸತೊಡಗಿದನು. ಆದರಿಂದ ತಂದೆಗೆ ಕೋಪ ಬಂದು ಆ ಕೋಪದ ಭರದಲ್ಲಿ ಏನನ್ನು ಹೇಳುವುದಕ್ಕೂ ತೋರದೆ ಎಲೈ ಬಾಲಕನೇ, ನಿನ್ನನ್ನು ಮೃತ್ಯುವಿಗೆ (ಯಮನಿಗೆ) ಕೊಟ್ಟಿರುವೆನು ಎಂದು ಹೇಳಿದನು. ಅದನ್ನೇ ನಿಜವೆಂದು ನಂಬಿ ನಚಿಕೇತನು ಯಮನ ಬಳಿಗೆ ಹೋದನು. ಆಗ ಯಮನು ಮನೆಯಲ್ಲಿಲ್ಲದ್ದರಿಂದ ಅವನು ಬರುವವರೆಗೂ ಮೂರುದಿನ ಪರ್ಯಂತರ ಉಪವಾಸವಿದ್ದು ಅಲ್ಲಿಯೇ ಯಮನ ಆಗಮನಕ್ಕಾಗಿ ಕಾದುಕೊಂಡಿದ್ದನು. ಮೂರುದಿನಗಳನಂತರ ಯಮನು ಮನೆಗೆ ಬಂದು ತನ್ನ ಮನೆಯ ಬಾಗಿಲಿನಲ್ಲಿ ಉಪವಾಸದಿಂದ ತನ್ನ ಆಗಮನವನ್ನು ನಿರೀಕ್ಷಿಸುತ್ತಿರುವ ಬಾಲಕನನ್ನು ಕಂಡು ಬಹಳವಾಗಿ ಮರುಕಗೊಂಡು ಎಲೈ ಬಾಲಕನೇ, ಬ್ರಾಹ್ಮಣನೂ ಬ್ರಹ್ಮಚಾರಿಯೂ ಆದ ನೀನು ನನ್ನ ಮನೆಗೆ ಅತಿಥಿಯಾಗಿ ಬಂದು ಮೂರು ದಿನಗಳಿಂದ ಉಪವಾಸದಿಂದಿದ್ದೀಯೆ. ಇದು ಸರಿಯಲ್ಲ ಇದರಿಂದ ನನಗೆ ಬಹಳ ಕೆಡಕಾಗುವುದು ಅತಿಥಿಸತ್ಕಾರ ಮಾಡದ ನನಗೆ ಎಂತಹ ಪಾಪವು ಸಂಭವಿಸಬಹುದೋ ಎಂದು ಬಹಳವಾಗಿ ಪಶ್ಚಾತ್ತಾಪಪಟ್ಟು ಎಲೈ ಬಾಲಕನೇ, ನೀನು ಮೂರುದಿನಗಳವರೆಗೆ ನನ್ನ ಮನೆಯಲ್ಲಿ ಉಪವಾಸವಿದ್ದುದರ ಪಾಪಪರಿಹಾರಾರ್ಥವಾಗಿ ನಿನಗೆ ಬೇಕಾದ ಮೂರು ವರಗಳನ್ನು ಕೊಡುತ್ತೇನೆ, ಅವುಗಳನ್ನು ತೆಗೆದುಕೊಂಡು ಸುಖವಾಗಿ ಹಿಂತಿರುಗು ಎಂದನು. ನಚಿಕೇತನು ಅದರಂತೆ ಮೂರು ವರಗಳನ್ನು ಕೇಳಿದನು. ತನ್ನ ಮೇಲೆ ತನ್ನ ತಂದೆಯ ಪ್ರೀತಿಯು ಇರಬೇಕೆಂದೂ ತನ್ನ ತಂದೆಯ ದಾರಿದ್ರ್ಯವು ನಾಶವಾಗಿ ಸಂಪದೈಶ್ವರ್ಯಾದಿಗಳು ಲಭಿಸಬೇಕೆಂದೂ ಎರಡು ವರಗಳನ್ನು ಕೇಳಿ ಮೂರನೆಯ ವರಕ್ಕಾಗಿ ತನಗೆ— ಜನರು ಮೃತ್ಯುವಶರಾದನಂತರ ಅವರ ಗತಿಯು ಯಾವರೀತಿ ಆಗುವುದು ಎಂದರೆ ಮರಣಾನಂತರ ಸ್ಥಿತಿಯೇನು ? ಸ್ವರೂಪವೇನು ? ಮುಂತಾದ ಆತ್ಮತತ್ತ್ವಗಳಿಗೆ ಸಂಬಂಧಪಟ್ಟ ವಿಷಯಗಳನ್ನು ವಿವರಿಸಬೇಕೆಂದು ಕೇಳಿದನು. ಆ ವರವನ್ನು ಬಿಟ್ಟು ಬೇರೆ ವರವನ್ನು ಕೇಳಬೇಕೆಂದೂ ಅದನ್ನು ತಿಳಿದುಕೊಳ್ಳಲು ದೇವತೆಗಳಿಗೂ ಸಾಧ್ಯವಿಲ್ಲವೆಂದೂ ಯಮನು ಎಷ್ಟುವಿಧವಾಗಿ ಸಮಾಧಾನಮಾಡಿದರೂ ನಚಿಕೇತನು ಒಪ್ಪಲಿಲ್ಲ. ತನಗೆ ಆ ವಿಷಯವನ್ನೇ ತಿಳಿಸಬೇಕೆಂದು ಮತ್ತೆ ಪ್ರಾರ್ಥಿಸಿದನು. ಆದ್ದರಿಂದ ಯಮನು ಕೊನೆಗೆ ಅವನ ಅಪೇಕ್ಷೆಯಂತೆ ಮೃತ್ಯುಸ್ವರೂಪವನ್ನು ವಿವರಿಸಿದನು. ಅನಂತರ ನಚಿಕೇತನು ಯಮನ ಅಪ್ಪಣೆಯನ್ನು ಪಡೆದು ತನ್ನ ತಂದೆಯ ಬಳಿಗೆ ಬಂದನು ಎಂಬ ವರ್ಣನೆಯನ್ನು ಕಠೋಪನಿಷತ್ತಿನಲ್ಲಿ ವಿವೃತವಾಗಿದೆ. ಆ ವಿಷಯವನ್ನೇ ಈ ಸೂಕ್ತದ ಋಕ್ಕುಗಳಲ್ಲಿ ಪ್ರಸ್ತಾಪಿಸಲಾಗಿದೆಯೆಂದು ಭಾಷ್ಯಕಾರರು ಹೇಳಿದ್ದಾರೆ. ಈ ಕಠೋಪನಿಷತ್ತಿನ ಸಾರಾಂಶವನ್ನೂ ನಚಿಕೇತನಿಗೂ ಯಮನಿಗೂ ನಡೆದ ಸಂಭಾಷಣೆಯನ್ನೂ ನಾವು ಋ. ಸಂ. ಭಾಗ ೨೭ ಪುಟ 582–594 ಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

ನಚಿಕೇತನಿಗೂ ಯಮನಿಗೂ ನಡೆದ ಸಂಭಾಷಣೆಯ ವಿಷಯವಾಗಿ ತೈತ್ತಿರೀಯ ಬ್ರಾಹ್ಮಣದ ಮೂರನೇ ಕಾಂಡದ ೧೧ ನೇ ಪ್ರಪಾಠಕದ ೮ ನೆಯ ಅನುವಾಕದಲ್ಲಿ ಈ ರೀತಿ ಹೇಳಿದೆ--

ಉಶನ್ ಹ ವೈ ವಾಜಶ್ರವಸಸ್ಸರ್ವವೇದಸಂ ದದೌ। ತಸ್ಯ ಹ ನಚಿಕೇತಾ ನಾಮ ಪುತ್ರ ಆಸ। ತಗ್ಂ ಹ ಕುಮಾರಗ್ಂ ಸಂತಂ। ದಕ್ಷಿಣಾಸು ನೀಯಮಾನಾಸು ಶ್ರದ್ಧಾವಿವೇಶ। ಸ ಹೋವಾಚ। ತತ ಕಸ್ಮೈ ಮಾಂ ದಾಸ್ಯಸೀತಿ। ದ್ವಿತೀಯಂ ತೃತೀಯಂ। ತಗ್ಂ ಹ ಪರೀತ ಉವಾಚ। ಮೃತ್ಯವೇ ತ್ವಾ ದದಾಮೀತಿ। ತಗ್ಂ ಹ ಸ್ಮೋತ್ಥಿತಂ ವಾಗಭಿವದತಿ ॥ ೧ ॥ ಗೌತಮ-ಕುಮಾರಮಿತಿ। ಸ ಹೋವಾಚ। ಪರೇಹಿ ಮೃತ್ಯೋರ್ಗೃಹಾನ್। ಮೃತ್ಯವೇ ವೈ ತ್ವಾದಾ-ಮೀತಿ। ತಂ ವೈ ಪ್ರವಸಂತಂ ಗಂತಾಸೀತಿ ಹೋವಾಚ। ತಸ್ಯ ಸ್ಮ ತಿಸ್ರೋ ರಾತ್ರೀರ-ನಾಶ್ವಾನ್ಗೃಹೇ ವಸತಾತ್। ಸ ಯದಿ ತ್ವಾ ಪೃಚ್ಛೇತ್। ಕುಮಾರ ಕತಿ ರಾತ್ರೀರವಾ-ತ್ಸೀರಿತಿ। ತಿಸ್ರ ಇತಿ ಪ್ರತಿ ಬ್ರೂತಾತ್। ಕಿಂ ಪ್ರಥಮಾಗ್ಂ ರಾತ್ರಿಮಾಶ್ನಾ ಇತಿ ॥ ೨ ॥ ಪ್ರಜಾಂ ತ ಇತಿ। ಕಿಂ ದ್ವಿತೀಯಾಮಿತಿ। ಪಶೂಗ್‌ಸ್ತ ಇತಿ। ಕಿಂ ತೃತೀಯಾಮಿತಿ। ಸಾಧುಕೃತ್ಯಾಂತ ಇತಿ। ತಂ ವೈ ಪ್ರವಸಂತಂ ಜಗಾಮ। ತಸ್ಯ ಹ ತಿಸ್ರೋ ರಾತ್ರೀರನಾಶ್ವಾ-ನ್ಗೃಹ ಉವಾಸ। ತಮಾಗತ್ಯ ಪಪ್ರಚ್ಛ। ಕುಮಾರ ಕತಿ ರಾತ್ರೀರವಾತ್ಸೀರಿತಿ। ತಿಸ್ರ ಇತಿ ಪ್ರತ್ಯುವಾಚ ॥ ೩ ॥ ಕಿಂ ಪ್ರಥಮಾಗ್ಂ ರಾತ್ರಿಮಾಶ್ನಾ ಇತಿ। ಪ್ರಜಾಂ ತ ಇತಿ। ಕಿಂ ದ್ವಿತೀಯಾಮಿತಿ। ಪಶೂಗ್‌ಸ್ತ ಇತಿ। ಕಿಂ ತೃತೀಯಾಮಿತಿ। ಸಾಧುಕೃತ್ಯಾಂ ತ ಇತಿ। ನಮಸ್ತೇ ಅಸ್ತು ಭಗವ ಇತಿ ಹೋವಾಚ। ವರಂ ವೃಣೀಷ್ವೇತಿ। ಪಿತರಮೇವ ಜೀವನ್ನಯಾನೀತಿ। ದ್ವಿತೀಯಂ ವೃಣೀಷ್ವೇತಿ ॥ ೪ ॥ ಇಷ್ಟಾಪೂರ್ತಯೋರ್ಮೇಽಕ್ಷಿತಿಂ ಬ್ರೂಹೀತಿ ಹೋವಾಚ। ತಸ್ಮೈ ಹೈತಮಗ್ನಿಂ ನಾಚಿಕೇತಮುವಾಚ। ತತೋ ವೈ ತಸ್ಯೇಷ್ಟಾಪೂರ್ತೇ ನಾ ಕ್ಷೀಯೇತೇ। ನಾಸ್ಯೇಷ್ಟಾಪೂರ್ತೇಕ್ಷೀಯೇತೇ। ಯೋಽಗ್ನಿಂ ನಾಚಿಕೇತಂ ಚಿನುತೇ। ಯ ಉ ಚೈನಮೇವಂ ವೇದ। ತೃತೀಯಂ ವೃಣೀಷ್ವೇತಿ। ಪುನರ್ಮೃತ್ಯೋರ್ಮೇಽಪಜಿತಿಂ ಬ್ರೂಹೀತಿ ಹೋ-ವಾಚ। ತಸ್ಮೈ ಹೈತಮಗ್ನಿಂ ನಾಚಿಕೇತಮುವಾಚ। ತತೋ ವೈ ಸೋಽಪ ಪುನರ್ಮೃತ್ಯುಮ-ಜಯತ್ ॥ ೫ ॥ ಅಪ ಪುನರ್ಮೃತ್ಯುಂ ಜಯತಿ। ಯೋಽಗ್ನಿಂ ನಾಚಿಕೇತಂ ಚಿನುತೇ। ಯ ಉ ಚೈನಮೇವಂ ವೇದ ॥ ( ತೈ. ಬ್ರಾ. ೩-೧೧-೮-೧, ೨, ೩, ೪, ೫. )

ಪೂರ್ವದಲ್ಲಿ ಗೌತಮಗೋತ್ರದ ವಾಜಶ್ರವಾಃ ಎಂಬ ಋಷಿಯಿದ್ದನು. ಅವನಿಗೆ ಉದ್ದಾಲಕನೆಂಬ ಪುತ್ರನಿದ್ದನು. ಆ ಉದ್ದಾಲಕನು ಒಂದು ಸಮಯದಲ್ಲಿ ವಿಶ್ವಜಿತ್ ಎಂಬ ಯಾಗವಿಶೇಷವನ್ನು ಮಾಡಲುದ್ಯುಕ್ತನಾದನು. ತನ್ನಲ್ಲಿರುವ ಸರ್ವಸ್ವವನ್ನೂ ಋತ್ವಿಗಾದಿ ಬ್ರಾಹ್ಮಣರಿಗೆ ದಾನ ಮಾಡುವುದೇ ಈ ಯಾಗದ ವೈಶಿಷ್ಟ್ಯವು. ಆದ್ದರಿಂದ ಉದ್ದಾಲಕಮುನಿಯು ತಾನು ಮಾಡುವ ಯಾಗದ ಸಂಪೂರ್ಣಫಲವು ತನಗೆ ಪ್ರಾಪ್ತವಾಗಬೇಕೆಂದು ಬಯಸಿ ತನ್ನಲ್ಲಿದ್ದ ಸಮಸ್ತ ದ್ರವ್ಯವನ್ನೂ ಇತರ ವಸ್ತುಗಳನ್ನೂ ಬ್ರಾಹ್ಮಣರಿಗೆ ದಾನ ಮಾಡಿದನು. ಆ ಕಾಲದಲ್ಲಿ ಇದೆಲ್ಲವನ್ನೂ ನೋಡುತ್ತಿದ್ದ ಉದ್ದಾಲಕನ ಮಗನಾದ ನಚಿಕೇತನೆಂಬ ಬಾಲಕನ ಮನಸ್ಸಿನಲ್ಲಿ ಒಂದು ವಿಶೇಷ ಪರಿಣಾಮವುಂಟಾಯಿತು. ಆ ಬಾಲಕನಿಗೆ ಇನ್ನು ಉಪನಯನವಾಗಿರಲಿಲ್ಲ. ದಾನ ಮಾಡುವ ವಿಚಾರದಲ್ಲಿ ಇವನಿಗೂ ವಿಶೇಷವಾದ ಶ್ರದ್ಧೆಯು ಹುಟ್ಟಿತು. ಪುತ್ರನಾದ ತಾನು ತನ್ನ ತಂದೆಗೆ ಸೇರಿದ ಸ್ವತ್ತೆಂದು ಭಾವಿಸಿ ಈ ಬಾಲಕನು ತನ್ನ ತಂದೆಯನ್ನು ಕುರಿತು, ಎಲೈ ತಂದೆಯೇ, ನೀನು ನಿನ್ನಲ್ಲಿದ್ದ ಸರ್ವಸ್ವವನ್ನು ದಾನ ಮಾಡಿರುವೆ.

ನಿನ್ನ ಪುತ್ರನಾದ ನಾನು ನಿನಗೆ ಸೇರಿದ ಸ್ವತ್ತಲ್ಲವೇ? ಅದನ್ನು ಏಕೆ ದಾನ ಮಾಡಲಿಲ್ಲ? ನನ್ನನ್ನು ಯಾರಿಗೆ ಕೊಡಬೇಕೆಂದಿರುವೆ? ಎಂದು ಕೇಳಿದನು ಮಗನ ಮಾತನ್ನು ಕೇಳಿ ತಂದೆಯು ಇವನು ಇನ್ನೂ ಏನೂ ಅರಿಯದ ಬಾಲಕನು. ಇವನು ಕೇಳುವ ಪ್ರಶ್ನೆಯಲ್ಲಿ ಔಚಿತ್ಯವಿಲ್ಲ. ಇವಕ್ಕೆ ಏಕೆ ಉತ್ತರವನ್ನು ಹೇಳಬೇಕೆಂದು ಅವನ ಮಾತನ್ನು ಅಲಕ್ಷ್ಯಮಾಡಿ ಏನೂ ಪ್ರತ್ಯುತ್ತರವನ್ನು ಹೇಳಲಿಲ್ಲ. ಆದರೆ ಆ ಬಾಲಕನು ಅಷ್ಟಕ್ಕೆ ಬಿಡದೆ ಅದೇ ಪ್ರಶ್ನೆಯನ್ನು ಎರಡನೆಯ ಸಲ, ಮೂರನೆಯ ಸಲ ಮತ್ತೂ ಮತ್ತೂ ಕೇಳಿದನು. ಇದರಿಂದ ತಂದೆಗೆ ಕೋಪ ಬಂದು–ಇವನು ಏನೂ ಅರಿಯದ ಬಾಲಕನೆಂದಿದ್ದೆ. ಆದರೆ ಇವನು ಹಟವಾದಿಯಾದ ಶುದ್ಧ ಮೂರ್ಖನು ಎಂದು ಬಗೆದು–ನಿನ್ನನ್ನು ಮೃತ್ಯುವಿಗೆ ಕೊಡವೆನು ಎಂದನು. ತಂದೆಯು ಮಾತನ್ನು ಕೇಳಿ ಮೃತ್ಯುವಿನ ಬಳಿಗೆ ಹೋಗಲು ಸಿದ್ಧನಾದ ಪುತ್ರನನ್ನು ಕುರಿತು ಆಗ ಒಂದು ಅಶರೀರವಾಣಿಯು ಹೀಗೆ ಹೇಳಿತು—ಎಲೈ ಗೋತಮವಂಶಜನಾದ ಬಾಲಕನೇ, (ನಚಿಕೇತನೇ) ನಿನ್ನ ತಂದೆಯು ನಿನ್ನನ್ನು ಮೃತ್ಯುವಿಗೆ ಕೊಟ್ಟಿರುವೆನೆಂದು ಹೇಳಿರುವನಷ್ಟೆ. ಆದ್ದರಿಂದ ಈಗ ನೀನು ಮೃತ್ಯುವಿನ (ಯಮನ) ಮನೆಗೆ ಹೊರಡು. ನೀನು ಯಮನ ಮನೆಗೆ ಹೋದಾಗ ಯಮನು ಪ್ರವಾಸಾರ್ಥವಾಗಿ ಹೊರಗೆ ಹೋಗಿರುವನು ಅವನು ಮೂರು ದಿನಗಳವರೆಗೂ ಬರುವುದಿಲ್ಲ. ಆದರೂ ನೀನು ಅಲ್ಲಿಗೆ ಹೋಗಿ ಅವನ ಮನೆಯಲ್ಲಿ ಅವನು ಬರುವ ತನಕ ಮೂರು ರಾತ್ರಿಗಳು ಕಳೆಯುವ ವರೆಗೂ ಅಲ್ಲಿಯೇ ಉಪವಾಸದಿಂದಿರು. ಏನು ಕೊಟ್ಟರೂ ತಿನ್ನಬೇಡ. ಅನಂತರ ಯಮನು ಬಂದಮೇಲೆ ನಿನ್ನನ್ನು ಈ ರೀತಿ ಕೇಳುವನು—ಎಲೈ ಬಾಲಕನೇ, ನೀನು ಬಂದು ಎಷ್ಟು ದಿವಸವಾಯಿತು? ಅದಕ್ಕೆ ನೀನು—ನಾನು ಬಂದು ಮೂರು ರಾತ್ರಿಗಳು ಕಳೆದುಹೋದವು ಎಂದು ಹೇಳಬೇಕು. ಪುನಃ–ಮೊದಲನೆಯ ದಿನ (ಅಥವಾ ರಾತ್ರಿ) ನೀನು ಏನನ್ನು ತಿಂದೆ? ಎಂದು ಕೇಳಿದರೆ ನಿನ್ನ ಪ್ರಜೆಯನ್ನು ತಿಂದೆ ಎಂದೂ, ಎರಡನೆಯ ರಾತ್ರಿ ಏನನ್ನು ತಿಂದೆ ಎಂದರೆ, ನಿನ್ನ ಪಶು ಮೊದಲಾದ ಸಂಪತ್ತನ್ನು ತಿಂದೆ ಎಂದೂ, ಮೂರನೆಯ ರಾತ್ರಿ ಏನನ್ನು ತಿಂದೆ ಎಂದರೆ ನೀನು ಮಾಡಿದ ಸತ್ಕರ್ಮಗಳನ್ನು ತಿಂದೆನೆಂದೂ ಹೇಳಬೇಕು ಎಂದು ಆ ವಾಗ್ದೇವತೆಯು ನಚಿಕೇತನಿಗೆ ಹಿತೋಪದೇಶಮಾಡಿ ಕಳುಹಿಸಿ ಕೊಟ್ಟಿತು.

[ಇಲ್ಲಿ ಸ್ವಲ್ಪ ವಿವರಣೆಯು ಅವಶ್ಯಕವು. ಕಾರ್ಯಾರ್ಥಿಯಾಗಿ ಗೃಹಸ್ಥನ ಮನೆಗೆ ಬಂದ ಅತಿಥಿಗೆ ಸತ್ಕಾರವನ್ನು ಮಾಡದೆ, ಆಹಾರಾದಿಗಳಿಂದ ತೃಪ್ತಿಪಡಿಸದಿದ್ದರೆ ಆ ಗೃಹಸ್ಥನಿಗೆ ಬಹಳವಾದ ಪಾಪವು ಬರುವುದು. ಎಂದರೆ ಅತಿಥಿಯು ತನ್ನ ಗೃಹದಲ್ಲಿ ಒಂದು ರಾತ್ರೆ (ಎಂದರೆ ಒಂದು ದಿನ) ಉಪವಾಸವಿದ್ದರೆ ಅದರಿಂದ ಯಜಮಾನನ ಪುತ್ರಾದಿ ಸಂತತಿಯು ನಾಶವಾಗುವುದು, ಎರಡನೆಯ ದಿನವೂ ಉಪವಾಸವಿದ್ದರೆ ಯಜಮಾನನ ಪಶು, ಧನ ಧಾನ್ಯ ಮೊದಲಾದ ಸಂಪತ್ತುಗಳು ನಾಶವಾಗುವವು. ಮೂರನೆಯ ದಿನವೂ ಉಪವಾಸವಿದ್ದರೆ ಯಜಮಾನನು ಅದುವರೆಗೂ ಮಾಡಿರುವ ಯಾಗಾದಿಸತ್ಕರ್ಮಾನುಷ್ಠಾನಗಳ ಪುಣ್ಯವೆಲ್ಲವೂ ನಾಶವಾಗುವುದು ಎಂದು ಧರ್ಮಶಾಸ್ತ್ರದಲ್ಲಿ ಹೇಳಿರುವುದನ್ನು ಇಲ್ಲಿ ವಿವರಿಸಲಾಗಿದೆ. ಯಮನು ಈ ರೀತಿ ಕೇಳುವ ಪ್ರಶ್ನೆಗೆ ಈ ರೀತಿ ಉತ್ತರವನ್ನು ಹೇಳು ಎಂದು ವಾಗ್ದೇವತೆಯು ನಚಿಕೇತನಿಗೆ ಹಿತೋಪದೇಶ ಮಾಡಿದಳು ಎಂಬುದನ್ನು ಇಲ್ಲಿ ತಿಳಿಸಿದೆ]

ವಾಗ್ದೇವತೆಯ ಹಿತೋಪದೇಶವನ್ನು ಗಮನದಲ್ಲಿಟ್ಟುಕೊಂಡು ನಚಿಕೇತನು ಯಮನ ಮಂದಿರಕ್ಕೆ ಬಂದನು. ಆಗ ಯಮನು ಪ್ರವಾಸಾರ್ಥವಾಗಿ ಹೋಗಿದ್ದನು. ಮೂರು ದಿನ ಕಳೆದ ಮೇಲೆ ತನ್ನ ಮನೆಗೆ ಬಂದು—ಅಲ್ಲಿ ಮೂರು ದಿವಸಗಳಿಂದಲೂ ಉಪವಾಸಮಾಡುತ್ತಾ ಕುಳಿತಿದ್ದ ಬಾಲಕನನ್ನು ನೋಡಿ ಎಲೈ ಬಾಲಕನೇ, ನೀನು ಇಲ್ಲಿಗೆ

ಒಂದು ಎಷ್ಟು ದಿನವಾಯಿತು ಎಂದು ಕೇಳಲು, ನಚಿಕೇತನು ಮೂರು ರಾತ್ರಿಗಳು ಕಳೆಯಿತೆಂದನು. ಅನಂತರ ಮೊದಲ ರಾತ್ರಿ ಏನನ್ನು ಭೋಜನ ಮಾಡಿದೆ ಎಂದು ಕೇಳಲು, ನಿನ್ನ ಪ್ರಜಾಸಂತತಿಯನ್ನೇ ಭಕ್ಷಿಸಿದೆ ಎಂದನು. ಅನಂತರ, ಎರಡನೆಯ ದಿವಸ ಏನನ್ನು ತಿಂದೆ ಎಂದು ಕೇಳಲು ಪಶು ಮೊದಲಾದ ಧನಸಂಪತ್ತನ್ನು ಎಂದನು. ಮೂರನೆಯ ದಿವಸ ಏನನ್ನು ತಿಂದೆ ಎಂದು ಕೇಳಲು, ನೀನು ಆಚರಿಸಿದ ಸತ್ಕರ್ಮಗಳ ಫಲಗಳನ್ನು ಎಂದನು. ಇದನ್ನೆಲ್ಲಾ ಕೇಳಿ ಯಮನು ಮನಸ್ಸಿನಲ್ಲಿ ಬಹಳವಾಗಿ ನೊಂದುಕೊಂಡು, ಎಲೈ ಪೂಜ್ಯನೇ, ನಿನಗೆ ನಮಸ್ಕಾರವು. ನೀನು ನನ್ನ ಮನೆಯಲ್ಲಿ ಮೂರು ದಿನಗಳ ವರೆಗೆ ಉಪವಾಸ ಮಾಡಿ ಬಳಲಿದ್ದೀಯೆ ಇದರಿಂದ ನನಗೆ ಮಹಾಪಾಪವು ಸಂಭವಿಸಿತು. ಆ ಪಾಪ ಪರಿಹಾರಾರ್ಥವಾಗಿ ನೀನು ಉಪವಾಸ ಮಾಡಿದ ಮೂರು ದಿನಗಳಿಗೂ ಮೂರು ವರಗಳನ್ನು ಕೊಡುವೆನು, ಕೇಳಿಕೋ ಎಂದನು. ನಚಿಕೇತನು ತನಗೆ ಬೇಕಾದ ಮೂರು ವರಗಳನ್ನು ಈ ರೀತಿ ಕೇಳಿದನು— ಎಲೈ ಯಮನೇ, ನೀನು ನನಗೆ ವರಗಳನ್ನು ಕೊಡುವುದಾದರೆ ನಾನು ಮೃತ್ಯುವಶನಾಗದೆ (ಸಾಯದೆ) ಈಗಿರು ವಂತೆಯೇ ನನ್ನ ತಂದೆಯ ಬಳಿಗೆ ಹೋಗಬೇಕು ಎಂದನು. ಯಮನು ಹಾಗೆಯೇ ಆಗಲೆಂದು ವರವನ್ನು ಕೊಟ್ಟು, ಇನ್ನು ಎರಡನೆಯ ವರವನ್ನು ಕೇಳು ಎಂದನು. ನಚಿಕೇತನು—ಶ್ರೌತಸ್ಮಾರ್ತಕರ್ಮಗಳು ಅಕ್ಷಯವಾದ ಫಲಗಳನ್ನು ಕೊಡುವ ವಿಧಾನವನ್ನು ಹೇಳಬೇಕು ಎಂದನು ಯಮನು ಅದರಂತೆ ಅವನಿಗೆ ಅಗ್ನಿಚಯನವಿಧಾನವನ್ನು ವಿವರಿಸಿ ಆ ಅಗ್ನಿಚಯನವು ನಚಿಕೇತ ಎಂಬ ಹೆಸರಿನಿಂದಲೇ (ನಾಚಿಕೇತಾಗ್ನಿ) ಪ್ರಸಿದ್ಧವಾಗಲೆಂದು ಹೇಳಿದನು. ನಾಚಿಕೇತಾಗ್ನಿಚಯನವನ್ನು ಅನುಷ್ಠಾನ ಮಾಡುವ ಪುರುಷನು ತಾನು ಮಾಡುವ ಶ್ರೌತಸ್ಮಾರ್ತಕರ್ಮಗಳಿಗೆ ಅತಿಶಯವಾದ ಫಲವನ್ನು ಪಡೆಯುವನು ಎಂದು ಎರಡನೆಯ ವರವನ್ನು ಕರುಣಿಸಿ ಅನಂತರ ಮೂರನೆಯ ವರವನ್ನು ಕೇಳೆಂದು ಹೇಳಿದನು. ಅದಕ್ಕೆ ನಚಿಕೇತನು—ಎಲೈ ಯಮನೇ, ಪುರುಷನು ತಾನು ಮಾಡುವ ಕರ್ಮಾದಿ ಗಳಿಂದ ಅನೇಕ ಜನ್ಮಗಳನ್ನು ಪಡೆದು ಅನೇಕ ಸಾರಿ ಮೃತ್ಯುವಶನಾಗುವನು. ಅದ್ದರಿಂದ ಸಂಸಾರದಿಂದ ಮುಕ್ತ ನಾಗಲು ಮೃತ್ಯುವನ್ನು ಜಯಿಸುವ ಉಪಾಯವನ್ನು ಹೇಳು. ಇದೇ ನಾನು ಕೇಳುವ ಮೂರನೆಯ ವರವು ಎಂದನು. ಅದಕ್ಕೆ ಯಮನು ನಚಿಕೇತನಿಗೆ ಮೃತ್ಯುವನ್ನು ಜಯಿಸುವ ಉಪಾಯವನ್ನೂ ಪರಬ್ರಹ್ಮಸ್ವರೂಪವನ್ನೂ ವಿಸ್ತಾರವಾಗಿ ವಿವರಿಸಿದನು ಎಂದು ಹೇಳಿದೆ.

ಈ ಸೂಕ್ತಕ್ಕೆ ಎರಡು ವಿಧವಾಗಿ ಅರ್ಥವಿವರಣೆ ಮಾಡಬಹುದೆಂದು ಭಾಷ್ಯಕಾರರು ಹೇಳಿ ಅದರಂತೆ ಯಮನ ಪರವಾಗಿ ಒಂದು ವಿಧ ಅರ್ಥವನ್ನೂ ಆದಿತ್ಯಪರವಾಗಿ ಇನ್ನೊಂದು ವಿಧ ಅರ್ಥವನ್ನೂ ವಿವರಿಸಿದ್ದಾರೆ. ಯಾಸ್ಕರೂ ಈ ಆದಿತ್ಯಪರವಾದ ಅರ್ಥವನ್ನು ಅನುಮೋದಿಸಿ ಸೂಕ್ತದ ಮೊದಲನೆಯ ಋಕ್ಕಿಗೆ ಅದರಂತೆ ನಿರ್ವಚನ ವನ್ನು ಹೇಳಿರುವರು. ಇದನ್ನನುಸರಿಸಿ ನಾವೂ ಈ ಸೂಕ್ತದ ಋಕ್ಕುಗಳಿಗೆ ಯಮ ಮತ್ತು ಆದಿತ್ಯಪರವಾದ ಎರಡು ವಿಧ ಅರ್ಥಗಳನ್ನು ವಿವರಿಸಿದ್ದೇವೆ.

॥ ಸಾಯಣಭಾಷ್ಯಂ ॥

**ಯಸ್ಮಿನ್ನಿತಿ ಸಪ್ತರ್ಚಂ ಸಪ್ತಮಂ ಸೂಕ್ತಂ ಯಮಗೋತ್ರಸ್ಯ ಕುಮಾರಸ್ಯಾರ್ಷಂ । ಆನುಷ್ಟುಭಂ ಯಮದೇವತ್ಯಂ । ತಥಾ ಚಾನುಕ್ರಾಂತಂ । ಯಸ್ಮಿನ್ಕುಮಾರೋ ಯಾಮಾಯನೋ ಯಾಮಮಾನು- ಷ್ಟುಭಂ ತ್ವಿತಿ ॥**

ಅನುವಾದವು—**ಯಸ್ಮಿನ್** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾದದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಯಮ ಗೋತ್ರದ ಕುಮಾರನೆಂಬುವನು ಋಷಿಯು; ಯಮನು ದೇವತೆಯು; ಅನುಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯಸ್ಮಿನ್ ಕುಮಾರೋ ಯಾಮಾಯನೋ ಯಾಮಮಾನುಷ್ಟುಭಂ ತು** ಎಂದು ಹೇಳಿರುವುದು.

## ಸೂಕ್ತ—೧೩೫

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೩೫ ॥
ಅಷ್ಟಕ—೮ ॥ ಅಧ್ಯಾಯ—೭ ॥ ವರ್ಗ—೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
॥ ಋಷಿಃ—ಕುಮಾರೋ ಯಾಮಾಯನಃ ॥
॥ ದೇವತಾ—ಯಮಃ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಯಸ್ಮಿನ್ವೃಕ್ಷೇ ಸುಪಲಾಶೇ ದೇವೈಃ ಸಂಪಿಬತೇ ಯಮಃ ।
ಅತ್ರಾ ನೋ ವಿಶ್ಪತಿಃ ಪಿತಾ ಪುರಾಣಾँ ಅನು ವೇನತಿ ॥ ೧ ॥

॥ ಪದಪಾಠಃ ॥

ಯಸ್ಮಿನ್ । ವೃಕ್ಷೇ । ಸುऽಪಲಾಶೇ । ದೇವೈಃ । ಸಂऽಪಿಬತೇ । ಯಮಃ ।
ಅತ್ರ । ನಃ । ವಿಶ್ಪತಿಃ । ಪಿತಾ । ಪುರಾಣಾನ್ । ಅನು । ವೇನತಿ ॥ ೧ ॥

॥ ಸಾಯಣಭಾಷ್ಯಂ ॥

ವೃಕ್ಷೇ । ಲುಪ್ತೋಪಮಮೇತತ್ । ವೃಕ್ಷವತ್ಸುಪಲಾಶೇ ಶೋಭನಪಲಾಶೋಪೇತೇ ಶೋಭನೋದ್ಯಾನಸಹಿತೇ । ಯದ್ವಾ । ಶೋಭನಪರ್ಣೋಪೇತೇ ವೃಕ್ಷೇ । ತಾದೃಶಸ್ಯ ವೃಕ್ಷಸ್ಯ ಮೂಲಂ ಯಥೌಷ್ಣ್ಯಜನಿತಶ್ರಮಾಪನೋದನೇನ ಸುಖಕರಂ ಭವತಿ ತದ್ವತ್ಸುಖಕರೇ ಯಸ್ಮಿನ್ಸ್ಥಾನೇ ದೇವೈಃ ಪರಿಜನಭೂತೈರ್ಯಮೋ ನಿಯಂತಾ ವೈವಸ್ವತಃ ಸಂಪಿಬತೇ ಸಹ ಭುಂಕ್ತೇ । ಪಿಬತೀತ್ಯರ್ಥಃ । ವಿಶ್ಪತಿರ್ವಿಶಾಂ ಪ್ರಜಾನಾಮಧಿಪತಿಃ ಪಿತಾ ನಃ ॥ ವ್ಯತ್ಯಯೇನ ಬಹುವಚನಂ ॥ ಮಮ ನಚಿಕೇತಸೋ ಜನಕೋ ವಾಜಶ್ರವಸೋಽತ್ರಾಸ್ಮಿನ್ಯಮಸ್ಯ ಸ್ಥಾನೇ ಪುರಾಣಾನ್ಪುರಾತನಾನತ್ರ ಚಿರಕಾಲಂ ನಿವಸತಃ ಪಿತ್ರ್ಯಾನನು ತೇಷಾಂ ಪಶ್ಚಾತ್ತತ್ಸಮೀಪೇ ನಿವಸತ್ವಯಮಿತಿ ವೇನತಿ । ಮಾಂ ಕಾಮಯತೇ । ನಚಿಕೇತಾ ನಾಮ ಕುಮಾರೋ ವಾಜಶ್ರವಸೇನ ಪಿತ್ರಾ ಯಮಲೋಕಂ ಪ್ರಸ್ಥಾಪಿತಃ ಸನ್ ಯಮಮಂ ದೃಷ್ಟ್ವಾ ಪ್ರಸಾದ್ಯ ಪುನರಪೀಮಂ ಲೋಕಮಾಜಗಾಮ । ಅಯಮರ್ಥ ಇದಮಾದಿಕೈರ್ಮಂತ್ರೈಃ ಪ್ರತಿಪಾದ್ಯತೇ । ಯದ್ವಾ । ಕುಮಾರೋ

ನಾಮ ನಚಿಕೇತಸೋಽನ್ಯಃ ಕಶ್ಚಿದೃಷಿಃ । ಯಚ್ಛತೀತಿ ಯಮ ಆದಿತ್ಯಃ । ತಮನೇನ ಸೂಕ್ತೇನ ತುಷ್ಟಾವ । ಸುಪಲಾಶೇ ವೃಕ್ಷ ಇವ ಯಸ್ಮಿಞ್ಶೋಭನೇ ಸ್ಥಾನೇ ಯಮ ಆದಿತ್ಯೋ ದೇವೈಃ । ದೀವ್ಯಂತೀತಿ ದೇವಾ ರಶ್ಮಯಃ । ತೈಃ ಸಂಪಿಬತೇ ಸಂಗಚ್ಛತೇ ॥ ಉಪಸರ್ಗವಶಾತ್ಪಿಬತಿರತ್ರ ಗತ್ಯರ್ಥಃ । ವ್ಯತ್ಯಯೇನಾತ್ಮನೇಪದಂ ॥ ಅತ್ರಾಸ್ಮಿನ್ಸ್ಥಾನೇ ಸ್ಥಿತೋ ವಿಶ್ಪತಿರ್ವಿಶಾಂ ಪ್ರಜಾನಾಂ ಪ್ರಕಾಶನಪ್ರವರ್ಷಣಾದಿನಾ ಪಾಲಯಿತಾ ಪ್ರಾಣಾತ್ಮನಾ ಸರ್ವೇಷಾಂ ಜನಕಃ ಸ ಆದಿತ್ಯಃ ಪುರಾಣಾಂಶ್ಚಿರಂತನಾನ್ ಸ್ತೋತೄನ್ನೋಽಸ್ಮಾನಪಿ ವೇನತಿ । ಅನುಗ್ರಾಹ್ಯತ್ವೇನ ಕಾಮಯತೇ । ಯದ್ವಾ । ಅತ್ರ ಸ್ಥಾನೇ ಸ್ಥಿತಾನ್ನೋಽಸ್ಮಾಕಂ ಪುರಾಣಾನ್ಪೂರ್ವಪುರುಷಾನನು ವೇನತಿ । ಅನುಕ್ರಮೇಣ ಕಾಮಯತೇ ॥

॥ ಪ್ರತಿಪದಾರ್ಥ— ಯಮನಪರವಾಗಿ ॥

**ಸುಪಲಾಶೇ**—ಉತ್ತಮವಾದ ಎಲೆಗಳಿಂದ ನಿಬಿಡವಾದ । **ವೃಕ್ಷೇ**— ವೃಕ್ಷದ ನೆರಳಿನಂತೆ ಸುಖಕರವಾದ । **ಯಸ್ಮಿನ್**—ಯಾವ ಸ್ಥಾನದಲ್ಲಿ । **ಯಮಃ**—ವಿವಸ್ವಂತನ ಪುತ್ರನಾದ ಯಮನು । **ದೇವೈಃ**—ತನ್ನ ಪರಿಜನರಿಂದ ಸಹಿತನಾಗಿ । **ಸಂಪಿಬತೇ**—ಪಾನವಮಾಡುತ್ತಾನೆಯೋ ಎಂದರೆ ಭೋಗವನ್ನು ಅನುಭವಿಸುತ್ತಾನೆಯೋ । **ಅತ್ರ**—ಅಂತಹ ಯಮನ ಸ್ಥಾನದಲ್ಲಿ । **ಪುರಾಣಾನ್ ಅನು**—ಬಹುಕಾಲದಿಂದ ಅಲ್ಲಿಯೇ ವಾಸವಮಾಡುತ್ತಿರುವ ಪಿತೃಗಳ ಸಮೀಪದಲ್ಲಿ ನಾನು ವಾಸಮಾಡಬೇಕೆಂದು । **ವಿಶ್ಪತಿಃ**—ಪ್ರಜೆಗಳಲ್ಲಿ ಎಂದರೆ ಜನರಲ್ಲಿ ಶ್ರೇಷ್ಠನಾದ । **ನಃ ಪಿತಾ**—ನನ್ನ ತಂದೆಯು । **ವೇನತಿ**—ಅಪೇಕ್ಷಿಸುತ್ತಾನೆ

॥ ಭಾವಾರ್ಥ ॥

ಉತ್ತಮವಾದ ಎಲೆಗಳಿಂದ ದಟ್ಟವಾಗಿ ನಿಬಿಡವಾದ ವೃಕ್ಷದ ನೆರಳು ಯಾವರೀತಿ ವಿಶ್ರಾಂತಿಗೆ ಸುಖಕರವಾಗಿರುವುದೋ ಅದರಂತೆ ಸುಖಕರವಾದ ಯಮನ ಸ್ಥಾನದಲ್ಲಿ (ಯಮಲೋಕದಲ್ಲಿ) ವಿವಸ್ವಂತನ ಪುತ್ರನಾದ ಯಮನು ತನ್ನ ಪರಿಜನರೊಡನೆ ಸುಖವಾಗಿ ವಾಸಮಾಡುತ್ತಾನೆ. ಇಂತಹ ಈ ಯಮಲೋಕದಲ್ಲಿ ಬಹುಕಾಲದಿಂದ ವಾಸಮಾಡುತ್ತಿರುವ ಪಿತೃಗಳ ಸಮೀಪದಲ್ಲಿಯೇ ನಾನೂ ವಾಸಮಾಡಬೇಕೆಂದು ಜನರಲ್ಲಿ ಶ್ರೇಷ್ಠವಾದ ನನ್ನ ತಂದೆಯು ಅಪೇಕ್ಷಿಸುತ್ತಾನೆ.

## English Translation.

In that leafy tree where Yama drinks with the gods, there the progenitor, the lord of the house, invites us to join the men of old.

॥ ವಿಶೇಷವಿಷಯಗಳು ॥

ಪೂರ್ವದಲ್ಲಿ ವಾಜಶ್ರವಾಃ ಎಂಬ ಋಷಿಗೆ ನಚಿಕೇತನೆಂಬ ಪುತ್ರನಿದ್ದನು. ಅವನು ಒಂದು ಸಮಯದಲ್ಲಿ ಯಾವುದೋ ಕಾರಣಕ್ಕಾಗಿ ತನ್ನ ತಂದೆಯನ್ನು ಬೇಜಾರಾಗುವಂತೆ ಮಾಡಲು ತಂದೆಯು ಕೋಪದ ಭರದಲ್ಲಿ ತನ್ನ ಕುಮಾರನಿಗೆ ಯಮಲೋಕಕ್ಕೆ ಹೋಗೆಂದು ಹೇಳಿದನು. ನಚಿಕೇತನು ತನ್ನ ತಂದೆಯ ಮಾತನ್ನೇ ನಿಜವೆಂದು ತಿಳಿದು ಅದರಂತೆ ಯಮಲೋಕಕ್ಕೆ ಹೋಗಿ ಅಲ್ಲಿ ಯಮನೊಡನೆ ಸಂಭಾಷಣೆಮಾಡಿ ಅವನ ಅನುಗ್ರಹದಿಂದ ಮತ್ತೆ ಈ ಭೂಲೋಕಕ್ಕೆ ಬಂದನು. ಈ ವಿಷಯವು ಈ ಋಕ್ಕಿನಲ್ಲಿಯೂ ಈ ಸೂಕ್ತದ ಮುಂದಿನ ಋಕ್ಕುಗಳಲ್ಲಿಯೂ ಹೇಳಲಾಗಿದೆ

**ಯಸ್ಮಿನ್ ವೃಕ್ಷೇ ಸುಪಲಾಶೇ— ಶೋಭನಪರ್ಣೋಪೇತಸ್ಯ ವೃಕ್ಷಸ್ಯ ಮೂಲಂ ಯಥೌಷ್ಣ್ಯಜನಿತ-ಶ್ರಮಾಪನೋದನೇನ ಸುಖಕರಂ ಭವತಿ ತದ್ವತ್ ಸುಖಕರೇ ಯಸ್ಮಿನ್ ಸ್ಥಾನೇ||** ಇಲ್ಲಿ ವೃಕ್ಷಶಬ್ದವನ್ನು ದೃಷ್ಟಾಂತರೂಪವಾಗಿ ಹೇಳಿವೆ ಬಿಸಲಿನಲ್ಲಿ ನಡೆಯುವ ಪುರುಷನು ಮಾರ್ಗಾಯಾಸದಿಂದ ಬಳಲಿರುವಾಗ ದಟ್ಟವಾದ ಎಲೆಗಳಿಂದ ಕೂಡಿದ ವೃಕ್ಷದ ಬುಡದಲ್ಲಿ ಎಂದರೆ ನೆರಳಿನಲ್ಲಿ ಆಯಾಸಪರಿಹಾರಾರ್ಥವಾಗಿ ಎಂದರೆ ವಿಶ್ರಾಂತಿಗಾಗಿ ಕುಳಿತುಕೊಳ್ಳುವುದು ಸಹಜವು. ಆರೀತಿ ಎಲೆಗಳಿಂದ ನಿಬಿಡವಾದ ವೃಕ್ಷದ ಬುಡವು ಕುಳಿತುಕೊಳ್ಳುವುದಕ್ಕೆ ಸುಖಕರವಾಗಿರುವುದು. ಯಮನ ಸ್ಥಾನವೂ ಅದರಂತೆ ಸುಖಕರವಾಗಿರುವುದು ಎಂದು ಯಮನ ಸ್ಥಾನಕ್ಕೆ ವೃಕ್ಷವನ್ನು ಹೋಲಿಸಿ ವರ್ಣಿಸಲಾಗಿದೆ.

**ದೇವೈಃ ಸಂಪಿಬತೇ ಯಮಃ— ಪರಿಜನಭೂತೈಃ ಯಮಃ ನಿಯಂತಾ ವೈವಸ್ವತಃ ಸಹ ಭುಂಕ್ತೇ |** ವಿವಸ್ವಂತನ ಪುತ್ರನಾದ ಯಮನು ತನ್ನ ಸ್ವಸ್ಥಾನವಾದ ಯಮಲೋಕದಲ್ಲಿ ತನ್ನ ಪರಿಜನರೊಡನೆ ಎಂದರೆ ಪಿತೃಗಳೊಡನೆ ಸುಖವಾಗಿ ವಾಸಮಾಡುತ್ತಿರುವನು ಎಂದಭಿಪ್ರಾಯವು

**ಅತ್ರ ನಃ ವಿಶ್ಪತಿಃ ಪಿತಾ ಪುರಾಣಾನ್ ಅನು ವೇನತಿ**— ಪುರಾಣಾನ್ ಎಂದರೆ **ಅತ್ರ ಚಿರಕಾಲಂ ನಿವ-ಸತಃ ಪಿತೄನ್**— ಈ ಯಮಲೋಕದಲ್ಲಿ ಬಹುಕಾಲದಿಂದಲೂ ವಾಸಮಾಡುತ್ತಿರುವ ಪಿತೃಗಳು. ಇಂತಹ ಪಿತೃಗಳ ಬಳಿ ನಾನು (ನಚಿಕೇತನಾದ ನಾನು) ವಾಸಮಾಡಬೇಕೆಂದು ಎಂದರೆ ಇರಬೇಕೆಂದು ನನ್ನ ತಂದೆಯು ಅಪೇಕ್ಷಿಸುವನು ಎಂದರೆ ನನ್ನ ತಂದೆಯ ಮಾತಿನ ಪ್ರಕಾರವೇ ನಾನು ಇಲ್ಲಿಗೆ ಬಂದಿರುವೆನು ಎಂದು ನಚಿಕೇತನು ಹೇಳುತ್ತಾನೆ.

|| ಆದಿತ್ಯಪರವಾದ ಅರ್ಥವು ||

ಈ ಸೂಕ್ತದ ೩, ೪, ೫ ನೇ ಋಕ್ಕುಗಳಲ್ಲಿ ಇರುವ ಕುಮಾರಶಬ್ದಕ್ಕೆ ಯಮನ ಪರವಾಗಿ ಅರ್ಥವಿವರಣೆ ಮಾಡುವಾಗ ವಿಶ್ರವಸ ಪುತ್ರನಾದ ನಚಿಕೇತನೆಂದೂ, ಆದಿತ್ಯ ಪರವಾಗಿ ಅರ್ಥಮಾಡುವಾಗ ನಚಿಕೇತನಲ್ಲದ ಕುಮಾರನೆಂಬ ಹೆಸರಿನ ಬೇರೊಬ್ಬ ಋಷಿಯೆಂದೂ ಅರ್ಥಮಾಡಬೇಕು. ಈ ಕುಮಾರನೆಂಬ ಋಷಿಯು ಈ ಸೂಕ್ತದಲ್ಲಿ ಆದಿತ್ಯನನ್ನು ಸ್ತುತಿಸಿರುವನು.

**ಸುಪಲಾಶೇ**— ಉತ್ತಮವಾದ ಎಲೆಗಳಿಂದ ನಿಬಿಡವಾದ | **ವೃಕ್ಷೇ**— ವೃಕ್ಷಮೂಲದಂತೆ ಸುಖಕರವಾದ | **ಯಸ್ಮಿನ್**— ಯಾವ ಅಂತರಿಕ್ಷ ಅಥವಾ ಸ್ವರ್ಗಸ್ಥಾನದಲ್ಲಿ | **ಯಮಃ**— ಆದಿತ್ಯನು | **ದೇವೈಃ**— ಪ್ರಕಾಶಮಾನವಾದ ತನ್ನ ಕಿರಣಗಳಿಂದ ಸಹಿತನಾಗಿ | **ಸಂಪಿಬತೇ**— ಸಂಚರಿಸುವನೋ | **ಅತ್ರ**— ಅಂತಹ ಸ್ಥಾನದಲ್ಲಿರುವ | **ವಿಶ್ಪತಿಃ**— ಪ್ರಜೆಗಳನ್ನು ವೃಷ್ಟಿಪ್ರಕಾಶನಾದಿಗಳಿಂದ ಪಾಲಿಸುವವನೂ | **ಪಿತಾ ನಃ**— ಸರ್ವರಿಗೂ ಪ್ರಾಣಭೂತನೂ ಜನಕನೂ ಆದ ಆದಿತ್ಯನು | **ಪುರಾಣಾನ್**— ಪುರಾತನರಾದ ಸ್ತೋತೃಜನರನ್ನು | **ನಃ**— ನಮ್ಮನ್ನೂ | **ಅನು ವೇನತಿ**— ಅನುಗ್ರಹಿಸಬೇಕೆಂಬ ಬುದ್ಧಿಯಿಂದ ಅಪೇಕ್ಷಿಸುತ್ತಾನೆ.

|| ಭಾವಾರ್ಥ ||

ಉತ್ತಮವಾದ ಎಲೆಗಳಿಂದ ನಿಬಿಡವಾದ ವೃಕ್ಷದ ನೆರಳಿನಂತೆ ಸುಖಕರವಾದ ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಪ್ರಕಾಶಮಾನವಾದ ತನ್ನ ಕಿರಣಗಳಿಂದ ಆದಿತ್ಯನು ಬೆಳಗುತ್ತಿರುವನು. ಪ್ರಜೆಗಳಿಗೆ ವೃಷ್ಟಿಪ್ರಕಾಶನಾದಿಗಳನ್ನು ಕೊಟ್ಟು ಸಲಹುವವನೂ ಸರ್ವರಿಗೂ ಪ್ರಾಣಭೂತನೂ ಜನಕನೂ ಆದ ಆ ಆದಿತ್ಯನು ಹಿಂದಿನ ಸ್ತೋತೃಜನರನ್ನೂ ನಮ್ಮನ್ನೂ ಅನುಗ್ರಹಮಾಡಬೇಕೆಂದು ಬಯಸುತ್ತಾನೆ.

॥ ವಿಶೇಷವಿಷಯಗಳು ॥

ಯಮ ಶಬ್ದಕ್ಕೆ ನಿರ್ವಚನವನ್ನು ಹೇಳುವ ಸಂದರ್ಭದಲ್ಲಿ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ-

**ಯಮಃ । ಯಮೋ ಯಚ್ಛತೀತಿ ಸತಃ । ತಸ್ಯೈಷಾ ಭವತಿ ॥** (ನಿ. ೧೦-೧೯)

**ಯಚ್ಛತಿ** ಎಂದರೆ **ಉಪರಮಯತಿ ಜೀವಿತಾನ್** ಪ್ರಾಣಿಗಳ ಜೀವನವನ್ನು ಅಂತ್ಯಗೊಳಿಸುವವನಾದ್ದರಿಂದ ಯಮನೆಂದು ಹೆಸರು. ಇಲ್ಲಿ ಯಮಶಬ್ದಕ್ಕೆ ಆದಿತ್ಯನೆಂದು ಅರ್ಥಮಾಡಿದಾರೆ. ಈ ಶಬ್ದಪ್ರಯೋಗವಿರುವ ಋಕ್ಕಿನ ನಿರ್ವಚನವನ್ನು ಇಲ್ಲಿ ವಿವರಿಸಲಾಗಿದೆ—

**ಯಸ್ಮಿನ್ ವೃಕ್ಷೇ ಸುಪಲಾಶೇ ಸ್ಥಾನೇಽವೃತಕ್ಷಯೇ ವಾಪಿ ವೋಪಮಾರ್ಥೇ ಸ್ಯಾತ್ ವೃಕ್ಷ ಇವ ಸುಪಲಾಶ ಇತಿ ವೃಕ್ಷೋ ವ್ರಶ್ಚನಾತ್ಪಲಾಶಂ ಪಲಾಶನಾದ್ದೇವೈಃ ಸಂಗಚ್ಛತೇ ಯಮೋ ರಶ್ಮಿಭಿರಾದಿತ್ಯಸ್ತತ್ರ ನಃ ಸರ್ವಸ್ಯ ಪಾತಾ ವಾ ಪಾಲಯಿತಾ ಪಾ ಪುರಾಣಾನನುಕಾಮಯೇತ ॥**
(ನಿ. ೧೨-೨೯)

**ಯಸ್ಮಿನ್ ವೃಕ್ಷೇ ಸುಪಲಾಶೇ ಸ್ಥಾನೇ ವೃತಕ್ಷಯೇ ವಾಪಿ ವೋಪಮಾರ್ಥೇ ಸ್ಯಾತ್ ವೃಕ್ಷ ಇವ ಸುಪಲಾಶ ಇತಿ**—ಉತ್ತಮವಾದ ಎಲೆಗಳಿಂದ ಕೂಡಿದ ವೃಕ್ಷದಲ್ಲಿ ಎಂದರೆ ವೃಕ್ಷಗಳ ಮನೋಹರವಾದ ಮತ್ತು ಸುಖಕರವಾದ ಸ್ಥಾನದಲ್ಲಿ ಎಂದರ್ಥವು. ಅಥವಾ **ವೃತಕ್ಷಯೇ**—ಎಂದರೆ ಉತ್ತಮವಾದ ಸತ್ಕರ್ಮಗಳನ್ನು ಮಾಡಿರುವ ಜನರು ವಾಸಿಸುವ ಸ್ಥಾನದಲ್ಲಿ ಎಂದರೆ ಉತ್ತಮಲೋಕದಲ್ಲಿ. ಅಥವಾ ವೃಕ್ಷಶಬ್ದವನ್ನು ಇಲ್ಲಿ ಉಪಮಾನಾರ್ಥವಾಗಿ ಉಪಯೋಗಿಸಲಾಗಿದೆ. ವೃಕ್ಷದ ನೆರಳಿನಂತೆ ಹಿತಕರವಾದ ಸ್ಥಾನವನ್ನು ವರ್ಣಿಸುವುದಕ್ಕಾಗಿ ವೃಕ್ಷಶಬ್ದದ ಪ್ರಯೋಗವಿದೆ ಎಂದು ತಿಳಿಯಬೇಕು

**ವೃಕ್ಷೋ ವ್ರಶ್ಚನಾತ್ಪಲಾಶಂ ಪಲಾಶನಾತ್**—ಕಾಷ್ಠಾದಿಗಳಿಗಾಗಿ ವೃಕ್ಷವನ್ನು **ವ್ರಶ್ಚನ**—ಎಂದರೆ ಜನರು ಕತ್ತರಿಸುವುದರಿಂದ ಗಿಡಕ್ಕೆ ವೃಕ್ಷವೆಂದು ಹೆಸರು. ವೃಕ್ಷದ ಎಲೆಗಳು **ಪಲಾಶನಾತ್**—ಕೆಳಗೆ ಉದುರುವುದರಿಂದ ಎಂದರೆ ಬೀಳುವುದರಿಂದ ಎಲೆಗಳಿಗೆ ಪಲಾಶವೆಂದು ಹೆಸರು,

**ದೇವೈಃ ಸಂಗಚ್ಛತೇ ಯಮೋ ರಶ್ಮಿಭಿರಾದಿತ್ಯಃ**—**ದೇವೈಃ** ಎಂದರೆ ಪ್ರಕಾಶಮಾನವಾದ ರಶ್ಮಿಗಳಿಂದ; **ಯಮಃ** ಎಂದರೆ ಆದಿತ್ಯನು. **ಸಂಪಿಬತೇ** ಎಂದರೆ **ಸಂಗಚ್ಛತೇ** ಸಂಚರಿಸುತ್ತಾನೆ ಅಥವಾ ಅಸ್ತಂಗತನಾಗುತ್ತಾನೆ. ಆದಿತ್ಯನು ತನ್ನ ಪ್ರಕಾಶಮಾನವಾದ ಕಿರಣಗಳಿಂದ ಬೆಳಗುತ್ತಾ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ ಅಥವಾ ರಶ್ಮಿಗಳಿಂದ ಸಹಿತನಾಗಿ ಅಸ್ತಂಗತನಾಗುತ್ತಾನೆ (ಮುಳುಗುತ್ತಾನೆ) ಎಂದಭಿಪ್ರಾಯವು.

**ತತ್ರ ನಃ ಸರ್ವಸ್ಯ ಪಾತಾ ವಾ ಪಾಲಯಿತಾ ವಾ ಪುರಾಣಾನನುಕಾಮಯೇತ**—ತತ್ರ ಎಂದರೆ ಸೂರ್ಯನು ಪ್ರಕಾಶಿಸುತ್ತಿರುವ ಸ್ವರ್ಗಸ್ಥಾನದಲ್ಲಿ; **ವಿಶ್ಪತಿಃ** ಎಂದರೆ ಸರ್ವರನ್ನೂ ಕಾಪಾಡುವವನು, ಸಂರಕ್ಷಕನು, ಎಂದರ್ಥವು. **ಪತಿಃ** ಮತ್ತು **ಪಿತಾ** ಎಂಬ ಶಬ್ದಗಳಿಗೆ ಪಾಲಿಸುವವನು ಅಥವಾ ಸಂರಕ್ಷಕನು ಎಂದರ್ಥಮಾಡಿದ್ದಾರೆ. ಇಂತಹ ಆದಿತ್ಯನು ಬಹುಕಾಲದಿಂದಲೂ ಸ್ವರ್ಗದಲ್ಲಿ (ಅಥವಾ ಭೂಮಿಯ ಮೇಲೆ) ವಾಸಿಸುತ್ತಿರುವ ಜನರನ್ನು ಸಂತೋಷಪಡಿಸುತ್ತಾನೆ ಎಂದು ನಿರುಕ್ತಾಭಿಪ್ರಾಯವು

|| ಸಂಹಿತಾಪಾಠಃ ||

ಪುರಾಣಾ ಅನುವೇನಂತಂ ಚರಂತಂ ಪಾಪಯಾಮುಯಾ ।
ಅಸೂಯನ್ನಭ್ಯಚಾಕಶಂ ತಸ್ಮಾ ಅಸ್ಪೃಹಯಂ ಪುನಃ || ೨ ||

|| ಪದಪಾಠಃ ||

ಪುರಾಣಾನ್ । ಅನುಽವೇನಂತಂ । ಚರಂತಂ । ಪಾಪಯಾ । ಅಮುಯಾ ।
ಅಸೂಯನ್ । ಅಭಿ । ಅಚಾಕಶಂ । ತಸ್ಮೈ । ಅಸ್ಪೃಹಯಂ । ಪುನರಿತಿ || ೨ ||

|| ಸಾಯಣಭಾಷ್ಯಂ ||

ಪುರಾಣಾನ್ಪುರಾತನಾನ್ಪಿತ್ರ್ಯಾನನುವೇನಂತಂ ಮಾಮನುಗತಂ ಕಾಮಯಮಾನಮಮುಯಾನಯಾ ಪಾಪಯಾ ನಿಕೃಷ್ಟಯಾ ಬುದ್ಧ್ಯಾ ಸಹ ಚರಂತಂ ವರ್ತಮಾನಂ ಪಿತರಂ ವಾಜಶ್ರವಸಮಸೂಯನ್ ಸುಖೇನ ಜೀವಂತಂ ಮಾಂ ಮೃತ್ಯುಸಮೀಪಂ ಪ್ರೇಹೀತ್ಯುಕ್ತವಾನಿತಿ ಮಾನಸೇನೋಪತಾಪೇನ ಯುಕ್ತಃ ಸನ್ ಪ್ರಥಮಮಭ್ಯಚಾಕಶಂ । ಅಯಂ ಪಶ್ಯತಿಕರ್ಮಾ । ಅಭ್ಯಪಶ್ಯಂ || ಅಸುಞ್ ಮಾನಸ ಉಪತಾಪೇ । ಕಂಡ್ವಾದಿಃ || ಪುನಃ ಪಶ್ಚಾತ್ತಸ್ಮಾ ಅಸ್ಪೃಹಯಂ । ಪಿತುರಾಜ್ಞಯಾ ತಂ ಮೃತ್ಯುಂ ಪ್ರಾಪ್ತುಮೈಚ್ಛಂ || ಸ್ಪೃಹ ಈಪ್ಸಾಯಾಂ । ಚುರಾದಿರದಂತಃ । ಸ್ಪೃಹೇರೀಪ್ಸಿತಃ । ಪಾ. ೧-೪-೩೬ । ಇತಿ ಸಂಪ್ರದಾನಸಂಜ್ಞಾಯಾಂ ತಚ್ಛಬ್ದಾಚ್ಚತುರ್ಥೀ || ಯದ್ವಾ । ಪುರಾಣಾಂಶ್ಚಿರಂತನಾನ್ ಸ್ತೋತೄನ್ಪೂರ್ವಪುರುಷಾನ್ಪಿತ್ರ್ಯಾನ್ವಾನುವೇನಂತಮನುಕ್ರಮೇಣ ಕಾಮಯಮಾನಂ ಚರಂತಮುದಯಾಸ್ತಮಯಾಭ್ಯಾಂ ದಿವಿ ಪರಿವರ್ತಮಾನಮನಯಾ ಪಾಪಯಾ ನಿಕೃಷ್ಟಯಾ ಸ್ತೋತುಮಸಮರ್ಥಯಾ ಬುದ್ಧ್ಯಾಸೂಯನ್ । ಗುಣೇಷು ದೋಷಾವಿಷ್ಕರಣಮಸೂಯಾ । ಪರಕೀಯಗುಣೇಷು ದೂಷಣಾನ್ಯಾವಿಷ್ಕುರ್ವನ್ನಭ್ಯಚಾಕಶಂ । ಅಯಮಪಿ ಕಶ್ಚಿದಿತಿ ಸಾಮಾನ್ಯರೂಪೇಣಾಭ್ಯಪಶ್ಯಂ । ಇದಾನೀಂ ತು ಪುನಸ್ತಸ್ಯಾದಿತ್ಯಸ್ಯ ಮಾಹಾತ್ಮ್ಯಂ ಜಾನಂಸ್ತಸ್ಮಾ ಅಸ್ಪೃಹಯಂ । ತಮೇವಾದಿತ್ಯಂ ಸ್ತುತಿಭಿಃ ಪರಿಚರಣಾತ್ಮಿಕೈಃ ಕರ್ಮಭಿಶ್ಚ ಪ್ರಾಪ್ತುಮೈಚ್ಛಂ ||

|| ಯಮುನಪರವಾದ ಅರ್ಥ ||

**ಪುರಾಣಾನ್**— ಪುರಾತನರಾದ ಪಿತೃಗಳನ್ನು । **ಅನುವೇನಂತಂ**— ನಾನು ಅನುಸರಿಸಿ ಹೋಗಲೆಂದು ಅಪೇಕ್ಷಿಸುತ್ತಿರುವವನೂ । **ಅಮುಯಾ**— ಈ ವಿಧವಾದ । **ಪಾಪಯಾ**— ಕೆಟ್ಟ ಬುದ್ಧಿಯಿಂದ । **ಚರಂತಂ**— ಇರುವವನೂ ಆದ ನನ್ನ ತಂದೆ ವಾಜಶ್ರವಸ್ಸನನ್ನು (ಮೊದಲು) । **ಅಸೂಯನ್**— ಮನಸ್ಸಿನ ಉದ್ವೇಗದಿಂದ ಯುಕ್ತನಾಗಿ । **ಅಭಿ ಅಚಾಕಶಂ**— ನೋಡಿದೆನು । **ಪುನಃ**— ಅನಂತರ । **ತಸ್ಮೈ**— ಪಿತುರಾಜ್ಞೆಗೆ ಒಳಪಟ್ಟು ಆ ಮೃತ್ಯುವಿನ ಬಳಿಗೆ ಹೋಗಬೇಕೆಂದು । **ಅಸ್ಪೃಹಯಂ**— ಬಯಸಿದೆನು.

॥ ಭಾವಾರ್ಥ ॥

(ನಚಿಕೇತನ ವಾಕ್ಯ) ಪುರಾತನರಾದ ಪಿತೃಗಳನ್ನು ನಾನು ಅನುಸರಿಸಿ ಹೋಗಲೆಂದು ಬಯಸುತ್ತಿರುವ ದುರ್ಬುದ್ಧಿಯುಕ್ತನಾದ ವಾಜಶ್ರವಸ್ಸೆಂಬ ನನ್ನ ತಂದೆಯನ್ನು ಮೊದಲು ನಾನು ನನ್ನ ಮನಸ್ಸಿನ ಉದ್ವೇಗದಿಂದ (ಕೋಪದಿಂದ) ನೋಡಿದೆನು. ಅನಂತರ ಪಿತುರಾಜ್ಞೆಯನ್ನು ಪಾಲಿಸಬೇಕೆಂಬ ಕರ್ತವ್ಯದಿಂದ ಮೃತ್ಯುವಿನ ಬಳಿಗೆ ಹೋಗಲು ಇಷ್ಟಪಟ್ಟೆನು.

## English Translation

(At first) I beheld him with anguish inviting me to join the men of olden time, and walking with that fell design; but afterwards I longed for him.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ ವಾಕ್ಯವನ್ನು ನಚಿಕೇತನು ಆಡಿರುವನು—ನನ್ನ ತಂದೆಯಾದ ವಾಜಶ್ರವನೆಂಬುವನು ದುರ್ಬುದ್ಧಿಯಿಂದ ಪಿತೃಗಳ ಬಳಿ ವಾಸಿಸೆಂದು ಬಯಸಿರುವನ. ಇದನ್ನು ಕೇಳಿ ಮೊದಲು ನನ್ನ ಮನಸ್ಸಿಗೆ ಬಹಳ ವ್ಯಥೆಯೂ ಕೋಪವೂ ಉಂಟಾಯಿತು. ತಂದೆಯಾದವನೇ ತನ್ನ ಮಗನನ್ನು ಮೃತ್ಯುವಿನ ಸಮೀಪಕ್ಕೆ ಕಳಿಹಿಸು ವುದುಂಟೇ? ಇದೇಕೆ ಇವನಿಗೆ ಈ ದುರ್ಬುದ್ಧಿಯುಂಟಾಯಿತು ಎಂಬ ಆಕ್ರೋಶವು ನನ್ನ ಮನಸ್ಸಿನಲ್ಲಿ ಉಂಟಾಯಿತು. ಅನಂತರ ಹಾಗೆಯೇ ಯೋಚಿಸುವಲ್ಲಿ ತಂದೆಯ ಆಜ್ಞೆಯನ್ನು ಪಾಲಿಸುವುದೇ ಪುತ್ರನ ಕರ್ತವ್ಯವೆಂದು ತಿಳಿದು ಮೃತ್ಯುವಿನ ಬಳಿಗೆ ಹೋಗುವೆನೆಂದು ಮನಸ್ಸಿನಲ್ಲಿ ನಿಶ್ಚಯಿಸಿದೆನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

॥ ಆದಿತ್ಯಪರವಾದ ಅರ್ಥವು ॥

**ಪುರಾಣಾನ್**—ಪುರಾತನರಾದ ಸ್ತೋತೃಜನರನ್ನು ಎಂದರೆ ಪೂರ್ವಕಾಲದಲ್ಲಿದ್ದ ಋಷಿಗಳನ್ನು ಅಥವಾ ಪೂರ್ವಕಾಲೀನರಾದ ಪಿತೃಗಳನ್ನು । **ಅನುವೇನಂತಂ**—ಅಪೇಕ್ಷಿಸುತ್ತಿರುವವನೂ । **ಚರಂತಂ**—ಉದಯಾಸ್ತಮಯಗಳ ಮಧ್ಯಕಾಲದಲ್ಲಿ ಅಂತರಿಕ್ಷದಲ್ಲಿ ಸಂಚರಿಸುತ್ತಿರುವವನೂ ಆದ ಆದಿತ್ಯನನ್ನು । **ಪಾಪಯಾ**—ಸ್ತೋತ್ರ ಮಾಡಲು ಅಸಮರ್ಥವಾದ ಅಥವಾ ಮನಸ್ಸಿಲ್ಲದ । **ಬುದ್ಧ್ಯಾ**—ನೀಚಬುದ್ಧಿಯಿಂದ । **ಅಸೂಯೆನ್**—ಅಸೂಯೆಯಿಂದ ಯುಕ್ತನಾಗಿ (ಮೊದಲು) । **ಅಭಿ ಅಚಾಕಶಂ**—ನೋಡಿದೆನು । **ಪುನಃ**—ಈಗಲಾದರೋ (ಆದಿತ್ಯನ ಮಹಾತ್ಮೆಯನ್ನು ತಿಳಿದವನಾಗಿ) । **ತಸ್ಮೈ**—ಆದಿತ್ಯನನ್ನು ಸ್ತುತಿಗಳಿಂದಲೂ ಪರಿಚರಣಕರ್ಮಗಳಿಂದಲೂ । **ಅಸ್ಪೃಹಯಂ**—ಪಡೆಯಲಿಚ್ಛಿಸಿದೆನು ।

॥ ಭಾವಾರ್ಥ ॥

(ಕುಮಾರ ಋಷಿಯ ವಾಕ್ಯ) ತನ್ನನ್ನು ಹಿಂದಿನಿಂದಲೂ ಸ್ತೋತ್ರ ಮಾಡುತ್ತಿರುವ ಪುರಾತನ ಋಷಿಗಳನ್ನು ಅಥವಾ ಪಿತೃಗಳನ್ನು ಅನುಗ್ರಹಿಸಬೇಕೆಂದು ಅಪೇಕ್ಷಿಸುತ್ತಿರುವವನೂ ಉದಯಕಾಲದಿಂದ ಅಸ್ತಮಯಕಾಲದ ವರೆವಿಗೂ ಅಂತರಿಕ್ಷದಲ್ಲಿ ಸಂಚರಿಸುತ್ತಿರುವವನೂ ಆದ ಆದಿತ್ಯನನ್ನು ನಾನು ಸ್ತೋತ್ರಮಾಡಲು ಕೈಯಲ್ಲಾಗದ ದುರ್ಬುದ್ಧಿಯಿಂದಲೂ ಅಸೂಯೆಯಿಂದಲೂ ಯುಕ್ತನಾಗಿ ಈ ಸೂರ್ಯನೇನು ಮಹಾ? ಪ್ರಪಂಚದಲ್ಲಿ ಕಂಡುಬರುವ

ವಸ್ತುಗಳಲ್ಲಿ ಇವನೂ ಒಂದು ಎಂಬ ಅಸೂಯೆಯಿಂದ ನೋಡಿದೆನು. ಅನಂತರ ಈ ಆದಿತ್ಯನ ಮಾಹಾತ್ಮ್ಯೆಯನ್ನು ತಿಳಿದ ಬಳಿಕ ನನ್ನ ಆ ಕೆಟ್ಟ ಬುದ್ಧಿಯನ್ನು ಬಿಟ್ಟು ಆದಿತ್ಯನನ್ನು ಸ್ತೋತ್ರಗಳಿಂದಲೂ ಪರಿಚರಣಕರ್ಮಗಳಿಂದಲೂ ಪ್ರಸನ್ನನಾಗುವಂತೆ ಮಾಡಿಕೊಳ್ಳಲು ಬಯಸಿದೆನು.

॥ ವಿಶೇಷವಿಷಯಗಳು ॥

ಈ ಮೇಲಿನ ವಾಕ್ಯವನ್ನು ಕುಮಾರನೆಂಬ ಋಷಿಯು ಆಡಿದಾನೆ. ಆದಿತ್ಯನ ಮಾಹಾತ್ಮ್ಯೆಯು ಮೊದಲು ತನಗೆ ಗೊತ್ತಿಲ್ಲದ್ದರಿಂದ ಅವನನ್ನು ಅಲಕ್ಷ್ಯದಿಂದಲೂ ದುರ್ಬುದ್ಧಿಯಿಂದಲೂ ಮೊದಲು ನೋಡಿದೆನೆಂದೂ ಅನಂತರ ಜ್ಞಾನೋದಯವಾದ ಮೇಲೆ ಆದಿತ್ಯನ ಮಹಿಮೆಯ ಅರಿವುಂಟಾಗಿ ಅವನನ್ನು ಸ್ತೋತ್ರಾದಿಗಳಿಂದ ಸ್ತುತಿಸಿ ಅವನ ಅನುಗ್ರಹವನ್ನು ಪಡೆಯಬೇಕೆಂದು ಇಚ್ಛಿಸಿದೆನು ಎಂದು ಕುಮಾರ ಋಷಿಯು ಹೇಳಿಕೊಂಡಿದಾನೆ.

॥ ಸಂಹಿತಾಪಾಠಃ ॥

ಯಂ ಕುಮಾರ ನವಂ ರಥಮಚಕ್ರಂ ಮನಸಾಕೃಣೋಃ ।
ಏಕೇಷಂ ವಿಶ್ವತಃ ಪ್ರಾಂಚಮಪಶ್ಯನ್ನಧಿ ತಿಷ್ಠಸಿ ॥ ೩ ॥

॥ ಪದಪಾಠಃ ॥

ಯಂ । ಕುಮಾರ । ನವಂ । ರಥಂ । ಅಚಕ್ರಂ । ಮನಸಾ । ಅಕೃಣೋಃ ।
ಏಕಽಈಷಂ । ವಿಶ್ವತಃ । ಪ್ರಾಂಚಂ । ಅಪಶ್ಯನ್ । ಅಧಿ । ತಿಷ್ಠಸಿ ॥ ೩ ॥

॥ ಸಾಯಣಭಾಷ್ಯಂ ॥

ನಚಿಕೇತಃಸಂಜ್ಞಂ ಕುಮಾರಂ ಯಮೋಽನಯೋತ್ತರಯಾ ಚ ಪ್ರಲೋಭಯತಿ । ಹೇ ಕುಮಾರ ನವಮಭಿನವಮಿತಃ ಪೂರ್ವಮದೃಷ್ಟಂ । ಅಭಿನವತ್ವಮೇವ ವ್ಯನಕ್ತಿ । ಅಚಕ್ರಂ ಚಕ್ರರಹಿತಂ ತಮೇಕೇಷಮೇಕೇಷಾ ಯಸ್ಯ ತಾದೃಶಂ ತಥಾಪಿ ವಿಶ್ವತಃ ಸರ್ವತಃ ಪ್ರಾಂಚಂ ಪ್ರಕರ್ಷೇಣಾಂಚಂತಂ ಗಚ್ಛಂತಂ ಯಂ ರಥಂ ಮನಸಾಕೃಣೋರ್ಮತ್ಸಮೀಪಂ ಪ್ರತಿಗಮನಾಯಾಧ್ಯವಸಾಯಾತ್ಮಕಮೀದೃಶಂ ಯಂ ರಥಮಕರೋಃ ಕೃತ್ವಾ ಚಾಪಶ್ಯನ್ ಕರ್ತವ್ಯಾಕರ್ತವ್ಯವಿಭಾಗಮಜಾನನ್ನಧಿ ತಿಷ್ಠಸಿ। ರಥಮಾರೋಹಸಿ । ಯದ್ವಾ । ಸ್ತೋತಾರಂ ಕುಮಾರಾಖ್ಯಮೃಷಿಮಾದಿತ್ಯಃ ಪ್ರತ್ಯಕ್ಷಃ ಸನ್ ದೇಹಾತ್ಮನೋರ್ವಿವೇಕಂ ಬೋಧಯತಿ । ಹೇ ಕುಮಾರರ್ಷೇ ಚಕ್ರರಹಿತಮೇಕೇಷಂ । ಏಕಃ ಪ್ರಾಣ ಈಷಾಸ್ಥಾನೀಯೋ ಯಸ್ಯ। ಈದೃಶಮಭಿನವಂ ಸರ್ವತೋ ಗಚ್ಛಂತಂ ಶರೀರಾತ್ಮಕಂ ಯಂ ರಥಂ ಮನಸಾಂತಃಕರಣೇನಾಕೃಣೋಃ ಅಕರೋಃ । ಸಂಕಲ್ಪಾತ್ಮಕೇನ ಮನಸಾ ಹಿ ಕಾಮೋ ಜಾಯತೇ । ಸತ್ಯಾಂ ಹಿ ಕಾಮನಾಯಾಂ ಪುಣ್ಯಾಪುಣ್ಯಾತ್ಮಕಂ ಕರ್ಮ ಕ್ರಿಯತೇ। ತೇನ ಚ ಭೋಗಪ್ರದಾನಾಯೇದಂ ಶರೀರಮಾರಭ್ಯತ ಇತಿ ಪರಂಪರಯಾ

**ಮನಸಃ ಶರೀರನಿಷ್ಪಾದಕತ್ವಂ । ತಂ ಶರೀರಾತ್ಮಕಂ ರಥಮಪಶ್ಯನ್ನಜಾನನ್ ॥ ಲಕ್ಷಣಹೇತ್ವೋಃ । ಪಾ. ೩-೨-೧೨೬ । ಇತಿ ಹೇತೌ ಶತೃಪ್ರತ್ಯಯಃ ॥ ಮತ್ಸ್ವರೂಪಾಪರಿಜ್ಞಾನಾದ್ಧೇತೋರಧಿತಿಷ್ಠಸಿ । ಭೋಗಾಯತನತ್ವೇನ ಸ್ವೀಕರೋಷಿ ॥**

ಯಮುನಪರವಾದ ಅರ್ಥ

**ಕುಮಾರ**—ಎಲೈ ನಚಿಕೇತಕುಮಾರನೇ । **ನವಂ**—ಹೊಸದಾದ ಎಂದರೆ ಇದುವರೆಗೆ ನೋಡದಿರುವುದೂ । **ಅಚಕ್ರಂ**—ಚಕ್ರವಿಲ್ಲದ್ದೂ । **ಏಕೇಷಂ**—ಒಂದೇ ಅಚ್ಚಿನ ಮರವುಳ್ಳದ್ದೂ ಆದರೂ । **ವಿಶ್ವತಃ** – ಸಮಸ್ತ ಪ್ರದೇಶಗಳಲ್ಲಿಯೂ । **ಪ್ರಾಂಚಂ**—ಚೆನ್ನಾಗಿ ಸಂಚರಿಸಬಲ್ಲದ್ದೂ ಆದ । **ಯಂ ರಥಂ**—ಯಾವ ರಥವನ್ನು ಹತ್ತಿ । **ಮನಸಾ**—ನನ್ನ ಬಳಿಗೆ ಬರಬೇಕೆಂದು ಮನಸ್ಸಿನಲ್ಲಿ । **ಅಕೃಣೋಃ**—ನಿಶ್ಚಯಮಾಡಿದಿಯೋ । (**ತಂ** – ಅಂತಹ ರಥವನ್ನು) । **ಅಪಶ್ಯನ್**—ವಿವೇಚನಾಶಕ್ತಿರಹಿತನಾಗಿ । **ಅಧಿ ತಿಷ್ಠಸಿ**—ಹತ್ತಿ ಕುಳಿತಿದ್ದೀಯೆ.

॥ ಭಾವಾರ್ಥ ॥

(ಯಮನ ವಾಕ್ಯ) ಎಲೈ ನಚಿಕೇತಕುಮಾರನೇ, ನೀನು ನನ್ನ ಬಳಿಗೆ ಬರಬೇಕೆಂದು ಮನಸ್ಸಿನಲ್ಲಿ ಆಲೋಚಿಸಿ ಅದಕ್ಕಾಗಿ ನಿನ್ನ ಮನಸ್ಸಿನಲ್ಲಿಯೇ ಒಂದು ಹೊಸರಥವನ್ನು ಕಲ್ಪನೆಮಾಡಿಕೊಂಡಿದ್ದೀಯೆ. ಆ ರಥದ ಸ್ವರೂಪವು ಬಹುವಿಚಿತ್ರವಾದದ್ದು. ಅದು ಯಾರೂ ಎಂದೂ ನೋಡಿರದೆ ಹೊಸದಾಗಿರಬೇಕು. ಅದಕ್ಕೆ ಚಕ್ರಗಳಿಲ್ಲ, ಒಂದೇ ಅಚ್ಚಿನ ಮರ. ಆದರೂ ಅದು ಸಮಸ್ತ ಪ್ರದೇಶಗಳಲ್ಲಿಯೂ ಸಂಚರಿಸುವಂತಿರಬೇಕು. ಇಂತಹ ರಥವನ್ನು ನಿನ್ನ ಮನಸ್ಸಿನಲ್ಲಿ ಕಲ್ಪನೆಮಾಡಿಕೊಂಡು ಹತ್ತಿಕುಳಿತಿರುವೆ. ಎಂದರೆ ನನ್ನ (ಮೃತ್ಯು) ಬಳಿಗೆ ಬರುವುದು ಯುಕ್ತವೇ ಅಲ್ಲವೇ ಎಂದು ವಿವೇಚನೆಮಾಡದೆ ಸುಮ್ಮನೆ ಹೊರಡಲೇಬೇಕೆಂಬ ಸ್ಥಿರಮನಸ್ಸಿನಿಂದ ಆ ರಥವನ್ನು ಹತ್ತಿ ಕುಳಿತಿರುವೆ ಎಂದರೆ ನನ್ನ ಬಳಿಗೆ ಬರಬೇಕೆಂದು ಮನಸ್ಸಿನಲ್ಲಿ ನಿಶ್ಚಯಮಾಡಿರುವೆ

## English Translation.

The new chariot, wheelless, single-poled, but turning everywhere, which you, my child, has mentally formed–you stand thereon though you see it not.

॥ ಆದಿತ್ಯಪರವಾದ ಅರ್ಥ ॥

ತನ್ನನ್ನು ಸ್ತೋತ್ರಮಾಡುತ್ತಿರುವ ಕುಮಾರಋಷಿಯನ್ನು ಸಂಬೋಧಿಸಿ ಆದಿತ್ಯನು ಅವನಿಗೆ ಪ್ರತ್ಯಕ್ಷನಾಗಿ ದೇಹ ಮತ್ತು ಆತ್ಮಗಳಿಗಿರುವ ಭೇದಭಾವವನ್ನು ತಿಳಿಸಿ ವಿವೇಕಜ್ಞಾನವನ್ನು ಬೋಧಿಸುವನು.

**ಕುಮಾರ**—ಎಲೈ ಕುಮಾರಋಷಿಯೇ । **ಅಚಕ್ರಂ**—ಚಕ್ರರಹಿತವಾದ । **ನವಂ**—ನೂತನವಾದ । **ಏಕೇಷಂ**—ಪ್ರಾಣಸಹಿತವಾದ । **ವಿಶ್ವತಃ ಪ್ರಾಂಚಂ**—ಸರ್ವತ್ರ ಸಂಚರಿಸಬಲ್ಲ । **ಯಂ ರಥಂ**—ಶರೀರ ವೆಂಬ ಈ ರಥವನ್ನು । **ಮನಸಾ**—ಅಂತಃಕರಣದಿಂದ (ಸಂಕಲ್ಪದಿಂದ) । **ಅಕೃಣೋಃ**—ನಿರ್ಮಿಸಿಕೊಂಡಿದ್ದೀಯೋ (**ತಂ**—ಅಂತಹ ಶರೀರರಾತ್ಮಕವಾದ ರಥವನ್ನು) । **ಅಪಶ್ಯನ್**—ನನ್ನ ಸ್ವರೂಪವನ್ನು ತಿಳಿಯದೆ । **ಅಧಿ ತಿಷ್ಠಸಿ**—ಹತ್ತಿ ಕುಳಿತಿದ್ದೀಯೆ.

॥ ಭಾವಾರ್ಥ ॥

ಆದಿತ್ಯನು ಕುಮಾರಋಷಿಗೆ ಈ ರೀತಿ ಹೇಳುವನು—ಎಲೈ ಕುಮಾರಋಷಿಯೇ, ಈ ದೇಹವೇ ಒಂದು ರಥದಂತಿರುವುದು, ಇದಕ್ಕೆ ಚಕ್ರವಿಲ್ಲ, ಒಂದೇ ಅಚ್ಚಿನ ಮರವಿರುವುದು ಎಂದರೆ ರಥಕ್ಕೆ ಅಚ್ಚಿನಮರವು ಆಧಾರಭೂತವಾಗಿರುವಂತೆ ಶರೀರಕ್ಕೆ ಪ್ರಾಣವೇ ಆಧಾರವಾಗಿರುವುದು. ಈ ಶರೀರವು ಪಾದಗಳ ಸಹಾಯದಿಂದ ಸರ್ವತ್ರ ಸಂಚರಿಸಬಲ್ಲದು. ಇದು ನಿನಗೆ ಹೇಗೆ ಪ್ರಾಪ್ತವಾಯಿತೆಂಬುದನ್ನು ಹೇಳುವೆನು ಕೇಳು. ಮನಸ್ಸಿನಲ್ಲಿ ಹುಟ್ಟುವ ಸಂಕಲ್ಪದಿಂದ ಕಾರ್ಯವನ್ನು ಮಾಡಬೇಕೆಂಬ ಕಾಮವೂ (ಅಪೇಕ್ಷೆಯೂ) ಉಂಟಾಗುವುದು ಅಪೇಕ್ಷೆಯುಂಟಾದರೆ ಪುಣ್ಯಾಪಾಪಾತ್ಮಕವಾದ ಕರ್ಮಗಳು ಮಾಡಲ್ಪಡುವುವು. ಆ ಪುಣ್ಯಪಾಪಾತ್ಮಕವಾದ ಕರ್ಮಗಳನ್ನು ಅನುಭೋಗಿಸುವುದಕ್ಕಾಗಿ ಶರೀರವು ಪ್ರಾಪ್ತವಾಗುವುದು. ಈ ರೀತಿ ಮನಸ್ಸಂಕಲ್ಪದ ಪ್ರಭಾವದಿಂದಲೇ ಪ್ರಾಣಿಗೆ ಶರೀರ ಪ್ರಾಪ್ತಿಯಾಗುವುದು. ಈ ಶರೀರವನ್ನು ನಿನ್ನ ಮನಸ್ಸಿನ ಸಂಕಲ್ಪದಿಂದಲೇ ನಿರ್ಮಿಸಿಕೊಂಡಿರುವೆ. ಮತ್ತು ಪರಬ್ರಹ್ಮನಾದ ನನ್ನ ಸ್ವರೂಪವನ್ನು ತಿಳಿಯದೆ ಆ ದೇಹವೆಂಬ ರಥದಲ್ಲಿಯೇ ಕುಳಿತಿರುವೆ. ಎಂದರೆ ಬ್ರಹ್ಮಜ್ಞಾನವನ್ನು ಪಡೆಯದೆ ಮುಕ್ತಿಯನ್ನೂ ಪಡೆಯದೆ ಶರೀರದಲ್ಲಿಯೇ ನೆಲಸಿದ್ದು ಸಂಸಾರ ಸಾಗರದಲ್ಲಿ ಬಳಲುತ್ತಿರುವೆ ಎಂದು ಆದಿತ್ಯನು ಕುಮಾರ ಋಷಿಗೆ ದೇಹಾತ್ಮವಿವೇಕವನ್ನು ಉಪದೇಶಿಸಿರುವನು ಎಂಬಭಿಪ್ರಾಯವು ಈ ಋಕ್ಕಿನಲ್ಲಿ ಸೂಚಿತವಾಗಿದೆ.

॥ ಸಂಹಿತಾಪಾಠಃ ॥

ಯಂ ಕುಮಾರ ಪ್ರಾವರ್ತಯೋ ರಥಂ ವಿಪ್ರೇಭ್ಯಸ್ಪರಿ ।
ತಂ ಸಾಮಾನು ಪ್ರಾವರ್ತತ ಸಮಿತೋ ನಾವ್ಯಾಹಿತಂ ॥ ೪ ॥

॥ ಪದಪಾಠಃ ॥

ಯಂ । ಕುಮಾರ । ಪ್ರ । ಅವರ್ತಯಃ । ರಥಂ । ವಿಪ್ರೇಭ್ಯಃ । ಪರಿ ।
ತಂ । ಸಾಮ । ಅನು । ಪ್ರ । ಅವರ್ತತ । ಸಂ । ಇತಃ । ನಾವಿ । ಆऽಹಿತಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಕುಮಾರ ನಚಿಕೇತಃ ಯಂ ಪೂರ್ವೋಕ್ತಮಧಿಷ್ಠಿತಂ ರಥಂ ಪ್ರಾವರ್ತಯಃ ಮತ್ಸಮೀಪಂ ಪ್ರತ್ಯಾಗಮಯೋ ವಿಪ್ರೇಭ್ಯೋ ಮೇಧಾವಿಭ್ಯಃ ಪರ್ಯುಪರಿ ಭೂಲೋಕೇ ವರ್ತಮಾನಾನಾಂ ಮೇಧಾವಿನಾಂ ಬಾಂಧವಾನಾಮುಪರಿಷ್ಟಾತ್ । ಅಂತರಿಕ್ಷ ಇತ್ಯರ್ಥಃ ॥ ಪಂಚಮ್ಯಾಃ ಪರಾವಧ್ಯರ್ಥ ಇತಿ ವಿಸರ್ಜನೀಯಸ್ಯ ಸತ್ವಂ ॥ ತಂ ರಥಂ ಸಾಮ ಪಿತ್ರಾ ಕೃತಂ ಸಾಂತ್ವನಂ ಯಮಸಮೀಪಂ ಗತ್ವೈವಮೇವ ತ್ವಯಾ ವಕ್ತವ್ಯಮಿತಿ ಪ್ರತ್ಯಾಗಮನಕಾರಣಮುಪಾಯೋಪದೇಶನಮನು ಪ್ರಾವರ್ತತ । ಇತೋಽಸ್ಮಾಲ್ಲೋಕಾದನ್ಯಗಚ್ಛತ್ । ಕಥಂಭೂತಂ । ನಾವಿ ನೌವತ್ತಾರಣಸಾಧನಾಯಾಂ ಬುದ್ಧೌ ಸಮಾಹಿತಂ ಸಮ್ಯ-

ಗೃಹೀತಂ । ಯದ್ವಾ । ಹೇ ಕುಮಾರರ್ಷೇ ಯಂ ಶರೀರಾತ್ಮಕಂ ರಥಮಧಿಷ್ಠಿತಂ ಪ್ರಾವರ್ತಯಃ ಸಂಸಾರೇ ಪ್ರವರ್ತಿತವಾನಸಿ ಮೇಧಾವಿನಾಂ ಮಧ್ಯೇ ತಂ ರಥಮನು ಸಾಮ । ಉಪಲಕ್ಷಣಮೇತತ್ । ಋಕ್ಸಾಮಾದಿಸಾಧ್ಯಂ ಸ್ತೋತ್ರಂ ನಾವಿ ನೌವತ್ತಾರಯಿತ್ರ್ಯಾಂ ವಾಚಿ ವೇದಾತ್ಮಿಕಾಯಾಂ ಸಮಾಹಿತಂ ಸಮ್ಯಕ್ಪ್ರತಿಪಾದ್ಯತ್ವೇನ ಹಿತಂ ಕರ್ಮ ಚೇತೋಽಸ್ಮಾಲ್ಲೋಕಾತ್ಪ್ರಾವರ್ತತ । ಪ್ರವೃತ್ತಮಭೂತ್ । ಇತ್ಥಮಾತ್ಮಸ್ವರೂಪಾಪರಿಜ್ಞಾನೇನ ಶರೀರಬಂಧನಂ ತೇನ ಕರ್ತವ್ಯಂ ವ್ಯವಹಾರಜಾತಂ ಚೋಕ್ತಂ । ಅಥ ತು ಸತ್ಯಜ್ಞಾನಾದಿಸ್ವರೂಪಮಕರ್ತಾರಂ ಪರಮಾತ್ಮಾನಂ ಯದಿ ಸ್ವಾತ್ಮತಯಾ ಸಾಕ್ಷಾತ್ಕರೋತಿ ತದೋಕ್ತಂ ನ ಸಂಭವತೀತ್ಯಭಿಪ್ರಾಯಃ॥

ಯಮನ ಪರವಾದ ಅರ್ಥ

**ಕುಮಾರ**— ಎಲೈ ನಚಿಕೇತಕುಮಾರನೇ । **ಯಂ ರಥಂ**— ನನ್ನ ಬಳಿಗೆ ಬರುವದಕ್ಕಾಗಿ ನೀನು ಹತ್ತಿ ಕುಳಿತಿದ್ದ ಯಾವ ರಥವನ್ನು ಹತ್ತಿ । **ವಿಪ್ರೇಭ್ಯಃ**— ಭೂಲೋಕದಲ್ಲಿರುವ ಮೇಧಾವಿಜನರ । **ಪರಿ**— ಮೇಲುಭಾಗದಲ್ಲಿ ಎಂದರೆ ಅಂತರಿಕ್ಷದಲ್ಲಿ । **ಪ್ರ ಅವರ್ತಯಃ**— ನನ್ನ ಸಮೀಪಕ್ಕೆ ಬಂದಿಯೋ । **ತಂ**— ಅಂತಹ ರಥವನ್ನು । **ನಾವಿ ಸಂ ಆಹಿತಂ**— ನಿನ್ನ ತಂದೆಯಿಂದ ನಿನಗೆ ಹಿತೋಪದೇಶರೂಪವಾಗಿ ಮಾಡಿದ । **ಸಾಮ**— ಯಮನ ಸಮೀಪಕ್ಕೆ ಹೋಗಿ ಅವನೊಡನೆ ಈ ರೀತಿ ಮಾತನಾಡು ಎಂಬ ಸಾಂತ್ವವಚನವು । **ಇತಃ**— ಈ ಭೂಲೋಕದಿಂದ । **ಅನು ಪ್ರ ಅವರ್ತತ**— ಅನುಸರಿಸಿ ಬಂದಿತು.

॥ ಭಾವಾರ್ಥ ॥

(ಯಮನ ವಾಕ್ಯವು) ಎಲೈ ಕುಮಾರನೇ, ನನ್ನ ಬಳಿಗೆ ಬರುವುದಕ್ಕಾಗಿ ನೀನು ರಥವನ್ನು ಹತ್ತಿ ಅದರ ಸಹಾಯದಿಂದ ಭೂಮಿಯ ಮೇಲಿರುವ ಬುದ್ಧಿವಂತರಾದ ಜನರಮೇಲೆ ಅಂತರಿಕ್ಷದಲ್ಲಿ ಹಾದು ಬಂದು ನನ್ನ ಸಮೀಪಕ್ಕೆ ಬಂದಿರುವೆ. ಆ ಕಾಲದಲ್ಲಿ ನಿನ್ನ ತಂದೆಯು ಮಾಡಿದ ಹಿತೋಪದೇಶರೂಪವಾದ ಸಾಂತ್ವವಚನವೂ ಆ ರಥದ ಜತೆಯಲ್ಲಿಯೇ ನಿನ್ನನ್ನು ಅನುಸರಿಸಿ ಬಂದಿತು. ಎಂದರೆ ತಂದೆಯ ಹಿತೋಪದೇಶವು ನಿನಗೆ ಜ್ಞಾಪಕವಿದ್ದಿತು.

## English Translation.

The chariot which you, my child, has driven down to me from the sages above, the Saman has driven it back again from hence placed on a ship.

॥ ವಿಶೇಷವಿಷಯಗಳು॥

**ಯಂ ಕುಮಾರ ಪ್ರ ಅವರ್ತಯಃ ರಥಂ ವಿಪ್ರೇಭ್ಯಃ ಪರಿ**— ಇಲ್ಲಿ ವಿಪ್ರೇಭ್ಯಃ ಪರಿ ಎಂಬ ಶಬ್ದಗಳ ಉಪಯೋಗವೇನು ಎಂಬುದು ಸ್ಪಷ್ಟವಾಗಿಲ್ಲ. ಸಾಧಾರಣವಾಗಿ ಪಿತೃಲೋಕವೂ (ಯಮಲೋಕವೂ) ಸ್ವರ್ಗಲೋಕವೂ ಎತ್ತರವಾದ ಪ್ರದೇಶದಲ್ಲಿ ಇರುವವೆಂದು ಪ್ರಸಿದ್ಧಿಯು. ಆದ್ದರಿಂದ ಎತ್ತರದಲ್ಲಿರುವ ಯಮಲೋಕಕ್ಕೆ ಹೋಗಬೇಕಾದರೆ ಭೂಮಿಯ ಮೇಲಿರುವ ಮನುಷ್ಯರು ಮೊದಲಾದವರ ಮೇಲೆ ಹಾದು ಹೋಗಬೇಕು ಇದಲ್ಲದೇ ವಿಪ್ರಶಬ್ದಕ್ಕೆ ಮೇಧಾವಿಗಳು, ಬುದ್ಧಿವಂತರು ಎಂಬರ್ಥವಿರುವುದು. ಮನುಷ್ಯರು ಎಷ್ಟೇ ಬುದ್ಧಿವಂತರಾದಾಗ್ಯೂ ಯಾವ ಸಾಧನಸಹಾಯವೂ ಇಲ್ಲದೆ ಅಂತರಿಕ್ಷದ ಮೇಲುಭಾಗಕ್ಕೆ (ಇತರಲೋಕಕ್ಕೆ) ಹೋಗಲು ಸಾಧ್ಯವಿಲ್ಲ.

ಆದ್ದರಿಂದ ಜನರು ಬುದ್ಧಿವಂತರಾದರೂ ಅವರು ಕೆಳಭಾಗದಲ್ಲಿ ಭೂಮಿಯ ಮೇಲೆಯೇ ಇರುವರು. ನಚಿಕೇತನು ಯಮಲೋಕಕ್ಕೆ ಹೋಗುವಾಗ ಭೂಮಿಯ ಮೇಲಿರುವ ಪರ್ವತಾದಿಗಳು, ಪ್ರಾಣಿಗಳು, ಮನುಷ್ಯರು ಮುಂತಾದ ವರನ್ನು ಕೆಳಗೆ ಬಿಟ್ಟು ತಾನು ಮೇಲೆ ಹೋದನು ಎಂಬುದನ್ನು ತಿಳಿಸುವುದಕ್ಕಾಗಿಯೇ ಇಲ್ಲಿ **ವಿಪ್ರೇಭ್ಯಃ ಪರಿ** ಎಂಬ ಶಬ್ದಗಳನ್ನು ಋಷಿಯು ಉಪಯೋಗಿಸಿರುವನು.

**ತಂ ಸಾಮ ಅನು ಪ್ರ ಅವರ್ತತ ಸಂ ಇತಃ ನಾವಿ ಆಹಿತಂ**—ಈ ವಾಕ್ಯದಲ್ಲಿರುವ ಕೆಲವು ಶಬ್ದಗಳಿಗೆ ವಿವರಣೆಯು ಅವಶ್ಯಕವು. ಋಷಿಯ ಅಭಿಪ್ರಾಯವೇನಿದ್ದಿತೆಂಬುದನ್ನು ತಿಳಿಯಲು ಸಾಧ್ಯವಿಲ್ಲ ಆದ್ದರಿಂದ ಭಾಷ್ಯಕಾರರು ವಿವರಿಸಿರುವ ವಿವರಣೆಯನ್ನೇ ಇಲ್ಲಿ ಅನುಸರಿಸಬೇಕಾಗಿರುವುದು. **ಸಾಮ** ಎಂಬ ಶಬ್ದಕ್ಕೆ **ಪಿತ್ರಾ ಕೃತಂ ಸಾಂತ್ವನಂ, ಯಮಸಮೀಪಂ ಗತ್ವಾ, ಏವಮೇವ ತ್ವಯಾ ವಕ್ತವ್ಯಮಿತಿ ಪ್ರತ್ಯಾಗಮನಕಾರಣ-ಮುಪಾಯೋಪದೇಶಂ** ಎಂದು ಅರ್ಥವಿವರಣೆ ಮಾಡಿದಾರೆ ಎಂದರೆ ಸಾಮ ಎಂದರೆ ಸಾಂತ್ವವಚನ, ಸಮಾಧಾನ; ಎಲೈ ಪುತ್ರನೇ, ನೀನು ಯಮನ ಬಳಿಗೆ ಹೋಗಿ ಅವನೊಡನೆ ವಿಧೇಯನಾಗಿ ಮಾತನಾಡಬೇಕು. ನನ್ನ ಆಜ್ಞೆಯಂತೆ ಅವನ ಬಳಿಗೆ ಬಂದಿರುವುದನ್ನೂ ಒಳ್ಳೆಯ ಮಾತುಗಳಿಂದ ಅವನಿಗೆ ತಿಳಿಸಿ ಅವನ ಅನುಗ್ರಹವನ್ನು ಸಂಪಾದಿಸಬೇಕು ಇತ್ಯಾದಿ ಬುದ್ಧಿವಾದ ಎಂದರ್ಥವು. **ನಾವಿ-ನೌವತ್ತರಣಸಾಧನಾಯಾಂ ಬುದ್ಧೌ** ನಾವಿ ಎಂದರೆ ದೋಣಿಯಲ್ಲಿ ಎಂದರ್ಥವು. ಇಲ್ಲಿ ಈ ಶಬ್ದವು ಕೇವಲ ಸಾಧನಾರ್ಥವಾಗಿ ಉಪಯೋಗಿಸಲ್ಪಟ್ಟಿರುವುದು. ಹೇಗೆಂದರೆ ಸಮುದ್ರವನ್ನು ಅಥವಾ ನದಿಯನ್ನು ದಾಟಲು ನಾವೆಯು ಹೇಗೆ ಅವಶ್ಯಕವೋ, ಆ ನಾವೆಯ ಸಹಾಯದಿಂದ ನಾವು ನದಿಯನ್ನು ಹೇಗೆ ಸುಲಭವಾಗಿ ದಾಟುವೆವೋ ಅದರಂತೆ ನಮ್ಮ ಕಷ್ಟಕಾಲದಲ್ಲಿ ನಮ್ಮ ಬುದ್ಧಿಯ ಸಹಾಯದಿಂದ ನಮ್ಮ ಕಷ್ಟಗಳನ್ನು ದಾಟುತ್ತೇವೆ ಎಂದರೆ ಪರಿಹರಿಸಿಕೊಳ್ಳುತ್ತೇವೆ. ನಾವೆಯು ನದಿಯನ್ನು ದಾಟುವ ಸಾಧನ, ಬುದ್ಧಿಯು ಕಷ್ಟಗಳನ್ನು ದಾಟುವ ಸಾಧನ **ಆಹಿತಂ-ಸಮ್ಯಗ್ಧೃತಂ।** ಇಡಲ್ಪಟ್ಟಿರುವುದು ಎಂದರೆ ಬುದ್ಧಿಯಲ್ಲಿ ಅಥವಾ ಮನಸ್ಸಿನಲ್ಲಿ ಇಡಲ್ಪಟ್ಟಿರುವ ಮನಸ್ಸಿನಲ್ಲಿ ಜ್ಞಾಪಕವಿರುವ ಎಂದರ್ಥವು. ತಂದೆಯು ತನ್ನ ಪುತ್ರನಾದ ನಚಿಕೇತನಿಗೆ ಅವನು ಯಮಲೋಕಕ್ಕೆ ಹೋಗುವಾಗ ಮಾಡಿದ ಹಿತೋಪದೇಶವು ಅವನು ರಥದಲ್ಲಿ ಕುಳಿತಾಗ ಅವನನ್ನೇ ಅನುಸರಿಸಿ ಬಂದಿತು. ಎಂದರೆ ತಂದೆಯ ಹಿತೋಪದೇಶವನ್ನು ನಚಿಕೇತನು ತನ್ನ ಮನಸ್ಸಿನಲ್ಲಿಟ್ಟುಕೊಂಡಿದ್ದನು, ಮರೆಯಲಿಲ್ಲ ಎಂದಭಿಪ್ರಾಯವು

ಆದಿತ್ಯಪರವಾದ ಅರ್ಥವು

**ಕುಮಾರ**—ಎಲೈ ಕುಮಾರಾಖ್ಯ ಋಷಿಯೇ ನೀನು। **ಯಂ ರಥಂ** – ಶರೀರವೆಂಬ ರಥವನ್ನು ಹತ್ತಿ (ಶರೀರಧಾರಿಯಾಗಿ)। **ವಿಪ್ರೇಭ್ಯಃ ಪರಿ**—ಮೇಧಾವಿಗಳಾದ ಜನರ ಮಧ್ಯದಲ್ಲಿ। **ಪ್ರ ಅವರ್ತಯಃ**—ಸಂಸಾರದಲ್ಲಿ ಪ್ರವರ್ತನಾಗಿರುವೆ। **ತಂ**—ಆ ಶರೀರದಲ್ಲಿದ್ದುಕೊಂಡು। **ಸಾಮ**—ಋಕ್ಸಾಮಾದಿ ಮಂತ್ರಗಳಿಂದ ನೆರವೇರಿಸಲ್ಪಡುವುದೂ। **ನಾವಿ ಸಮಾಹಿತಂ**—ವೇದಾತ್ಮಕವಾದ ವಾಕ್ಯಗಳಲ್ಲಿ ಅಡಕವಾಗಿರುವುದೂ ಆದ ಯಜ್ಞಾದಿ ಕರ್ಮವನ್ನು। **ಅನು**—ಅನುಸರಿಸಿ ಮಾಡುತ್ತಾ। **ಇತಃ**—ಈ ಲೋಕದಿಂದ। **ಪ್ರ ಅವರ್ತತ**—ಪರಮಾತ್ಮನ ಬಳಿಗೆ ಹೋಗುತ್ತೀಯೆ।

॥ ಭಾವಾರ್ಥ ॥

(ಆದಿತ್ಯನ ವಾಕ್ಯವು) ಎಲೈ ಕುಮಾರನೆಂಬ ಋಷಿಯೇ, ನೀನು ಶರೀರವೆಂಬ ರಥದಲ್ಲಿ ಹತ್ತಿ ಕುಳಿತು ಎಂದರೆ ಶರೀರಧಾರಿಯಾದ ಮಾನವನಾಗಿ ಮೇಧಾವಿಗಳಾದ ಜನರ ಮಧ್ಯದಲ್ಲಿ ಸಂಸಾರಕರ್ಮಗಳಲ್ಲಿ ತೊಡಗಿರುವೆ ಮತ್ತು

ವೇದವಾಕ್ಯಗಳಲ್ಲಿ ಅಡಕವಾಗಿರುವುದೂ ಋಕ್ಸಾಮಮಂತ್ರಗಳಿಂದ ನೆರವೇರಿಸಲ್ಪಡುವುದೂ ಆದ ಯಜ್ಞಾದಿಕರ್ಮವನ್ನು ಮಾಡುತ್ತೀಯೆ. ಈ ಕರ್ಮಗಳನ್ನು ಮಾಡಿ ಬಳಿಕ ಆ ಕರ್ಮಫಲರೂಪವಾಗಿ ಸತ್ಯಜ್ಞಾನಾದಿಸ್ವರೂಪನೂ, ನಿರ್ಲಿಪ್ತನೂ ಆದ ಪರಮಾತ್ಮನನ್ನು ನಿನ್ನ ಶುದ್ಧ ಬುದ್ಧಿಯಿಂದ ಸಾಕ್ಷಾತ್ಕರಿಸಿ ಪರಮಾತ್ಮನನ್ನು ಸೇರುವೆ ಎಂದಭಿಪ್ರಾಯವು.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧದಲ್ಲಿ ಶರೀರಧಾರಿಯಾದ ಮಾನವನು ಸಂಸಾರದಲ್ಲಿ ಪ್ರವೃತ್ತನಾಗುವುದನ್ನೂ ಉತ್ತರಾರ್ಧದಲ್ಲಿ ಸಂಸಾರದಿಂದ ಮುಕ್ತನಾಗಿ ನಿವೃತ್ತಿಮಾರ್ಗದಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿ ಸದ್ಗತಿಯನ್ನು ಪಡೆಯುವುದನ್ನೂ ವಿವರಿಸಲಾಗಿದೆ.

॥ ಸಂಹಿತಾಪಾಠಃ ॥

ಕಃ ಕುಮಾರಮಜನಯದ್ರಥಂ ಕೋ ನಿರವರ್ತಯತ್ ।

ಕಃ ಸ್ವಿತ್ತದದ್ಯ ನೋ ಬ್ರೂಯಾದನುದೇಯೀ ಯಥಾಭವತ್ ॥ ೫ ॥

॥ ಪದಪಾಠಃ ॥

ಕಃ । ಕುಮಾರಂ । ಅಜನಯತ್ । ರಥಂ । ಕಃ । ನಿಃ । ಅವರ್ತಯತ್ ।

ಕಃ । ಸ್ವಿತ್ । ತತ್ । ಅದ್ಯ । ನಃ । ಬ್ರೂಯಾತ್ । ಅನುऽದೇಯೀ । ಯಥಾ । ಅಭವತ್ ॥ ೫ ॥

॥ ಸಾಯಣಭಾಷ್ಯಂ ॥

ಕಃ ಪುರುಷ ಇಮಂ ಕುಮಾರಮಜನಯತ್ । ಅಧಿಕ್ಷೇಪೇ ಕಿಂಶಬ್ದಃ । ಈದೃಶಂ ಬಾಲಂ ಯಮಸಮೀಪಂ ಪ್ರಹಿಣ್ವನ್ ಕಥಂ ಪಿತಾ ಸಮೀಚೀನಃ ಸ್ಯಾತ್ । ತಿಷ್ಠತ್ವಾವದಾಸ್ತಾಂ । ಕೋ ವಾ ಪುರುಷೋಽಸ್ಯ ಬಾಲಸ್ಯ ಯಮಸಮೀಪಂ ಪ್ರತಿಗಮನಾಯ ತಂ ರಥಂ ನಿರವರ್ತಯತ್ । ನಿರ್ವರ್ತಿತವಾನ್ । ಸೋಽಪಿ ಮೂರ್ಖ ಇತ್ಯರ್ಥಃ । ಯಥಾ ಯೇನ ಪ್ರಕಾರೇಣಾಯಂ ಕುಮಾರೋಽನುದೇಯ್ಯನುದಾತವ್ಯೋಽಭವತ್ ಭವತಿ ತತ್ತದನುಗುಣಂ ವಚನಮುಪಾಯಕಥನಮದ್ಯಾಸ್ಮಿನ್ಕಾಲೇ ನೋಽಸ್ಮಾಕಂ ಕಃ ಸ್ವಿತ್ ಕೋ ನಾಮ ಬ್ರೂಯಾತ್ । ಅಭಿದಧ್ಯಾತ್ । ಪ್ರಥಮಂ ಯಮಸಮೀಪಂ ಗತ್ವಾ ಪಶ್ಚಾತ್ತತೋ ನಿರ್ಗಮನೋಪಾಯಂ ಬ್ರುವನ್ನಪಿ ನ ಪ್ರಾಜ್ಞ ಇತ್ಯರ್ಥಃ । ಅಥವಾ । ಕುಮಾರಾಖ್ಯ ಋಷಿರಾತ್ಮನಃ ಸರ್ವಾತ್ಮ್ಯಮವಗಚ್ಛನ್ ಸ್ವವ್ಯತಿರಿಕ್ತಸ್ಯಾನ್ಯಸ್ಯಾಸಂಭವಂ ಕಿಂಶಬ್ದೇನಾಕ್ಷೇಪವಾಚಿನಾ ದರ್ಶಯತಿ । ಕುಮಾರಂ ಮಾಂ ಕಃ ಪಿತಾಜನಯತ್ । ನ ಕೋಽಪಿ । ಅಜೋ ನಿತ್ಯಃ ಶಾಶ್ವತಃ । ಕ. ಉ. ೨-೧೮ । ಇತಿ ಶ್ರುತ್ಯುಕ್ತರೂಪೋಽಹಂ ಭವಾಮಿ । ಕಶ್ಚ ಶರೀರಾತ್ಮಕಂ ರಥಂ ನಿರವರ್ತಯತ್ । ನಿರ್ವರ್ತಯತಿ । ಮದ್ವ್ಯತಿರಿಕ್ತಸ್ಯ ನಿರ್ವರ್ತಯಿತುರಭಾವಾತ್ ತಥಾ ನಿರ್ವರ್ತ್ಯಸ್ಯಾನ್ಯಸ್ಯಾಸಂಭವಾಚ್ಚ ।

**ಅದ್ಯಾಸ್ಮಿನ್ಕಾಲೇ ಸರ್ವಾತ್ಮ್ಯಾನುಭವದಶಾಯಾಂ ತಂ ತಂ ಪ್ರಕಾರಂ ಕಃ ಸ್ವಿತ್ಕೋ ನಾಮ ನೋಽಸ್ಮಾಕಂ ಬ್ರೂಯಾತ್ ಯಥಾ ಯೇನ ಪ್ರಕಾರೇಣಾನುದೇಯ್ಯನುದಾತವ್ಯಾ ಮದ್ವ್ಯತಿರಿಕ್ತಾನ್ಯಪದಾರ್ಥಸತ್ತಾಭವತ್ ಭವತಿ । ಸ ಪ್ರಕಾರೋಽಪಿ ದುರ್ವಚನ ಇತ್ಯರ್ಥಃ ॥**

॥ ಯಮನ ಪರವಾದ ಅರ್ಥ ॥

**ಕಃ**—ಯಾವ ಪುರುಷನು । **ಕುಮಾರಂ**—ಈ ಕುಮಾರನನ್ನು (ಯಮನ ಬಳಿಗೆ ಕಳುಹಿಸುವುದಕ್ಕಾಗಿ) । **ಅಜನಯತ್**—ಉತ್ಪತ್ತಿಮಾಡುತ್ತಾನೆ । **ಕಃ**—ಯಾವ ಪುರುಷನು (ಬಾಲಕನನ್ನು ಯಮನ ಸಮೀಪಕ್ಕೆ ಕಳುಹಿಸುವುದಕ್ಕಾಗಿ) । **ರಥಂ**—ರಥವನ್ನು । **ನಿಃ ಅವರ್ತಯತ್**—ಸಿದ್ಧಗೊಳಿಸುತ್ತಾನೆ ? । **ಯಥಾ**—ಯಾವ ರೀತಿ । **ಅನುದೇಯೀ**—ಕುಮಾರನು ಯಮನಿಗೆ ಒಪ್ಪಿಸಲ್ಪಡುವವನಾಗಿ । **ಅಭವತ್**—ಆಗುತ್ತಾನೆಯೋ (ಅನಂತರ ಅಲ್ಲಿಂದ ಹಿಂದಕ್ಕೆ ಬರಲು) । **ತತ್**—ಅನುಗುಣವಾದ ಉಪಾಯವನ್ನು । **ಅದ್ಯ**—ಈಗ । **ನಃ**—ನಮಗೆ । **ಕಃ ಸ್ವಿತ್**—ಯಾವ ಪುರುಷನು ತಾನೇ । **ಬ್ರೂಯಾತ್**—ಹೇಳುತ್ತಾನೆ.

॥ ಭಾವಾರ್ಥ ॥

ಪ್ರಪಂಚವ್ಯವಹಾರದಲ್ಲಿ ಮೃತ್ಯುವಿನ ವಶಕ್ಕೆ ಒಪ್ಪಿಸುವುದಕ್ಕಾಗಿ ಯಾವ ಪುರುಷನು ತಾನೆ ಪುತ್ರನನ್ನು ಉತ್ಪತ್ತಿಮಾಡುವನು ? ತಾನು ಪಡೆದ ಪುತ್ರನನ್ನು ರಥದಲ್ಲಿ ಕುಳ್ಳಿರಿಸಿ ಯಮನ ಸಮೀಪಕ್ಕೆ ಹೋಗುವಂತೆ ಯಾವ ಪುರುಷನು ಕಳುಹಿಸುವನು ? ಮತ್ತು ಯಮನ ಬಳಿಗೆ ಕಳುಹಿಸಿದನಂತರ ತನ್ನ ಪುತ್ರನು ಹಿಂದಕ್ಕೆ ಬರುವ ಉಪಾಯವನ್ನು ಯಾವ ಪುರುಷನು ಹೇಳಿಕೊಡುವನು ?

## English Translation.

Who has begotton the youth ? Who has driven the chariot of ? Who can tell us how restitution was made ?

॥ ವಿಶೇಷವಿಷಯಗಳು ॥

ತಾನೇ ಹಡೆದ ತನ್ನ ಸ್ವಂತ ಪುತ್ರನನ್ನು ಮೃತ್ಯುವಿನ ವಶಕ್ಕೆ ಒಪ್ಪಿಸುವ ಪುರುಷನು ಪ್ರಪಂಚದಲ್ಲಿ ಉಂಟೇ? ಮತ್ತು ತಂದೆಯೇ ಸ್ವತಃ ಮಗನನ್ನು ಯಮನ ಬಳಿಗೆ ಹೋಗೆಂದು ಹೇಳಿ, ಅವನು ಹೋಗುವುದಕ್ಕೆ ರಥವನ್ನು ಸಿದ್ಧತೆಮಾಡಿಕೊಟ್ಟು ಅಲ್ಲಿಂದಮತ್ತೆ ಹಿಂತಿರುಗಿ ಬರುವ ಉಪಾಯವನ್ನು ಹೇಳಿಕೊಟ್ಟು ಮಗನನ್ನು ಯಮನ ಬಳಿಗೆ ಕಳುಹಿಸುವ ತಂದೆಯೂ ಪ್ರಪಂಚದಲ್ಲಿರುವನೇ ? ಒಂದುವೇಳೆ ಇದ್ದರೆ ಅವನು ಶುದ್ಧ ಮೂರ್ಖನು. ನ್ಯಾಯಕ್ಕೂ ಲೋಕವ್ಯವಹಾರಕ್ಕೂ ವಿರುದ್ಧವಾಗಿ ನಡೆಯುವ ಪುರುಷನು ಪ್ರಾಜ್ಞನಲ್ಲ, ಶುದ್ಧಮೂರ್ಖನೇ ಸರಿ ಎಂದಭಿಪ್ರಾಯವು.

॥ ಆದಿತ್ಯ ಪರವಾದ ಅರ್ಥ ॥

ಕುಮಾರನೆಂಬ ಋಷಿಯು ತಾನು ಪರಮಾತ್ಮನ ಅಂಶವೇ ಎಂದೂ ಪರಮಾತ್ಮನಿಗೂ ತನಗೂ ತಾದಾತ್ಮ್ಯವಿರುವುದೆಂದೂ ಪರಮಾತ್ಮನನ್ನು ಬಿಟ್ಟು ಅನ್ಯವಸ್ತುವು ಇಲ್ಲವೆಂದೂ ಎಲ್ಲವೂ ಪರಮಾತ್ಮನ ಸ್ವತ್ತೇ ಆಗಿರುವುದೆಂದೂ ತಿಳಿದು ಈ ಋಕ್ಕಿನಲ್ಲಿ ಅದಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಖಂಡಿಸುವನು.

**ಕುಮಾರಂ**—ಕುಮಾರನೆಂಬ ಹೆಸರಿನ ನನ್ನನ್ನು । **ಕಃ**—ಯಾವ ತಂದೆಯು । **ಅಜನಯತ್**—ಉತ್ಪತ್ತಿ ಮಾಡಿದನು; (ಯಾರೂ ಇಲ್ಲ) । **ಕಃ**—ಯಾರು । **ರಥಂ**—ಶರೀರವೆಂಬ ರಥದಲ್ಲಿ ಇರುವಂತೆ। **ನಿರವರ್ತಯತ್**—ಮಾಡುತ್ತಾನೆ । **ಅದ್ಯ**—ಈಗ । **ಯಥಾ**—ಯಾವರೀತಿ । **ಅನುದೇಯೀ**—ನನ್ನನ್ನು (ಆತ್ಮವನ್ನು) ಬಿಟ್ಟು ಬೇರೆ ವಸ್ತುವು । **ಅಭವತ್**—ಇರುವುದೆಂಬುದನ್ನು । **ಕಃ ಸ್ವಿತ್**—ಯಾವ ಪುರುಷನು । **ನಃ**—ನಮಗೆ । **ಬ್ರೂಯಾತ್**—ಹೇಳುತ್ತಾನೆಯೋ । **ತತ್**—ಆ ವಚನವು ದುರ್ವಚನವೇ (ಸುಳ್ಳೇ) ಸರಿ. (ಏಕೆಂದರೆ ಆತ್ಮವಸ್ತುವನ್ನು ಬಿಟ್ಟು ಬೇರೇ ವಸ್ತುವೇ ಇಲ್ಲ.)

॥ ಭಾವಾರ್ಥ ॥

ಕುಮಾರನೆಂಬ ನನ್ನನ್ನು ಯಾವ ತಂದೆಯು ಉತ್ಪತ್ತಿಮಾಡಿದನು? ಪ್ರಪಂಚವೂ ಪ್ರಪಂಚದಲ್ಲಿರುವ ವಸ್ತುಗಳೂ ಸಮಸ್ತಪುರುಷರೂ ಪ್ರಾಣಿಗಳೂ ಎಲ್ಲವೂ ಪರಮಾತ್ಮಸ್ವರೂಪವೇ ಆಗಿ ಪರಮಾತ್ಮನನ್ನು ಬಿಟ್ಟು ಬೇರೆ ವಸ್ತುವೇ ಇಲ್ಲದ್ದರಿಂದ ಪುತ್ರನಾರು? ತಂದೆಯಾರು? ತಂದೆಯು ಪುತ್ರನನ್ನು ಉತ್ಪತ್ತಿ ಮಾಡುವುದೆಂದರೇನು? ಇದೆಲ್ಲಾ ಬರೇ ಭ್ರಾಂತಿಯು. ನಮ್ಮ ಶರೀರವೇ ಒಂದು ರಥ. ಅದರಲ್ಲಿ ಪರಮಾತ್ಮನ ಅಂಶವಾದ ನಾನು (ಕುಮಾರ ಋಷಿಯು) ನೆಲೆಸಿರುವೆನು. ಇದನ್ನು ಈ ರೀತಿ ಇರುವಂತೆ ಮಾಡಿರುವವನು ಯಾರು? ಪರಮಾತ್ಮನೇ ಹೊರತು ಬೇರೆ ಅಲ್ಲ ಪ್ರಪಂಚದಲ್ಲಿ ಆತ್ಮವನ್ನು (ಪರಮಾತ್ಮನನ್ನು) ಬಿಟ್ಟು ಬೇರೆವಸ್ತುವಿರುವುದೆಂದು ಯಾವ ಪುರುಷನು ಹೇಳುತ್ತಾನೆ? ಹಾಗೆ ಹೇಳುವವನು ಮೂರ್ಖನು ಮತ್ತು ಅವನ ವಾಕ್ಯವು ಶುದ್ಧಸುಳ್ಳು ಏಕೆಂದರೆ, ಆತ್ಮವಸ್ತು (ಪರಮಾತ್ಮನನ್ನು) ವನ್ನು ಬಿಟ್ಟು ಬೇರೇ ವಸ್ತುವೇ ಇರುವುದಿಲ್ಲ ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಯಥಾಭವದನುದೇಯೀ ತತೋ ಅಗ್ರಮಜಾಯತ ।
ಪುರಸ್ತಾದ್ಬುಧ್ನ ಆತತಃ ಪಶ್ಚಾನ್ನಿರಯಣಂ ಕೃತಂ ॥ ೬ ॥

॥ ಪದಪಾಠಃ ॥

ಯಥಾ । ಅಭವತ್ । ಅನುಽದೇಯೀ । ತತಃ । ಅಗ್ರಂ । ಅಜಾಯತ ।
ಪುರಸ್ತಾತ್ । ಬುಧ್ನಃ । ಆಽತತಃ । ಪಶ್ಚಾತ್ । ನಿಃಽಅಯನಂ । ಕೃತಂ ॥ ೬ ॥

॥ ಸಾಯಣಭಾಷ್ಯಂ ॥

ಅನುದೇಯ್ಯನುದಾತವ್ಯೋ ಯಥಾ ಯೇನ ಪ್ರಕಾರೇಣ ಪಿತರಮನುಲಕ್ಷ್ಯಾಯಂ ಕುಮಾರೋ ಯಮೇನ ದತ್ತೋಽಭವತ್ ಭವತಿ ತಥಾ ತತಸ್ತಸ್ಮಾದ್ವಾಜಶ್ರವಸಾತ್ಪಿತುರಗ್ರಂ ಯಮಸಮೀಪಂ ಗಚ್ಛೇತಿ ವಚನಸ್ಯಾಗ್ರತೋ ವರ್ತಮಾನಂ ನಚಿಕೇತಸಾ ಯಮೇನ ಸಹ ವದಿತವ್ಯಂ ತಂ ವೈ ಪ್ರವಸಂತಂ ಗಂತಾಸೀತಿ

ಹೋವಾಚೇತ್ಯಾದಿಕಂ । ತೈ. ಬ್ರಾ. ೩-೧೧-೮-೨ । ಬ್ರಾಹ್ಮಣಾಂತರೋಕ್ತಮಜಾಯತ । ಪ್ರಾದುರಭವತ್। ಪಿತ್ರೋಪದಿಷ್ಟವಾನಿತ್ಯರ್ಥಃ । ಪುರಸ್ತಾತ್ತತಃ ಪೂರ್ವಂ ಬುಧ್ನ ಉಕ್ತಸ್ಯಾಗ್ರಸ್ಯ ಮೂಲಭೂತಂ ಯಮಸ್ಯ ಗೃಹಂ ಪ್ರತಿಗಚ್ಛೇತಿ ವಚನಮಾತತಃ । ಅತಿವಿಸ್ತೃತಮಾಸೀತ್ । ಅತಸ್ತದಶಕ್ಯಪರಿಹಾರಮಿತಿ ಪಶ್ಚಾತ್ಕ್ರೋಧಂ ಪರಿತ್ಯಜ್ಯ ನಿರಯಣಂ ತಸ್ಮಾದ್ಯಮಾನ್ನಿರ್ಗಮನೋಪಾಯಂ ಕೃತಂ । ಪಿತ್ರಾ ಚರಿತಂ॥ ಯದ್ವಾ । ಅನುದೇಯ್ಯಾತ್ಮಾನಮನು ದಾತವ್ಯಾತ್ಮಸ್ವರೂಪವ್ಯತಿರಿಕ್ತಾನ್ಯಪದಾರ್ಥಸತ್ತಾ ಯಥಾಭವತ್ ಭವತಿ ತದನುಗುಣಂ ತತಸ್ತಸ್ಮಾನ್ಮಾಯಾವಿಶಿಷ್ಟಾದಾತ್ಮನೋಽಗ್ರಂ ಸ್ರಷ್ಟವ್ಯಸ್ಯ ವಿಕಾರಜಾತಸ್ಯಾದ್ಯಂ ಮನಸ್ತತ್ತ್ವಂ ಸಿಸೃಕ್ಷಾಕಾರಣಮಜಾಯತ। ಉದಪದ್ಯತ। ಪುರಸ್ತಾತ್ಸೃಷ್ಟೇಃ ಪ್ರಾಗವಸ್ಥಾಯಾಂ ಬುಧ್ನೋ ಮೂಲಮವ್ಯಾಕೃತಂ ಮಾಯಾತ್ಮಕಂ ಕಾರಣಮೇವಾತತಃ । ಆ ಸಮಂತಾತ್ತತಂ ವಿಸ್ತೃತಮಾಸೀತ್ । ಪಶ್ಚಾತ್ತಮಸ ಉತ್ಪತ್ತ್ಯನಂತರಂ ನಿರಯಣಂ ತದ್ಗತಾನಾಂ ಕಾರ್ಯಾಣಾಂ ತಸ್ಮಾತ್ಕಾರಣಾನ್ನಿರ್ಗಮನಂ ಘಟಪಟಾದಿಭೇದೇನ ಸ್ವರೂಪಾಲಂಭನಂ ಕೃತಂ । ಬ್ರಹ್ಮಣಾ ನಿರ್ಮಿತಂ । ತಥಾ ಮೃದ್ವಿಕಾರೋ ಘಟಾದಿರ್ಮೃದೋಽನ್ಯೋ ನ ಭವತಿ । ಆದಿತ್ಯಾನುಗ್ರಹಾದ್ಬ್ರಹ್ಮಭಾವಂ ಪ್ರಾಪ್ತಸ್ಯ ಮಮ ವಿಕಾರಃ ಪ್ರಪಂಚೋ ಮದನ್ಯೋ ನ ಭವತೀತಿ ವ್ಯತಿರಿಕ್ತಸ್ಯ ಪಿತ್ರಾದೇರಾಕ್ಷೇಪಃ ಪೂರ್ವೋಕ್ತಃ ಸಮರ್ಥಿತಃ ॥

॥ ಯಮನಪರವಾದ ಅರ್ಥ ॥

**ಅನುದೇಯೀ**— ಈ ಕುಮಾರನು (ನಚಿಕೇತನು) ತನ್ನ ತಂದೆಯ ಬಳಿಗೆ ಮತ್ತೆ ಯಮನಿಂದ ಹಿಂದಕ್ಕೆ ಕಳು ಹಿಸಲ್ಪಡುವವನು । **ಯಥಾ**— ಯಾವರೀತಿ । **ಅಭವತ್**— ಆಗುವನೋ ಆ ರೀತಿ । **ತತಃ**— ನಚಿಕೇತನ ತಂದೆಯಾದ ವಾಜಶ್ರವಸ್ಸಿನಿಂದ । **ಅಗ್ರಂ**— ಮೊದಲೇ ಎಂದರೆ ಯಮನ ಬಳಿಗೆ ಹೋಗು ಎಂದು ಹೇಳುವುದಕ್ಕೆ ಮೊದಲೇ । **ಅಜಾಯತ**— ಯೋಚನೆಯು ಮನಸ್ಸಿನ ಉತ್ಪನ್ನವಾಯಿತು । **ಪುರಸ್ತಾತ್**— ಅದಕ್ಕೆ ಮೊದಲೇ । **ಬುಧ್ನಃ**— ಯಮನ ಮನೆಗೆ ಹೋಗು ಎಂಬ ಮೂಲ ಭೂತವಾದ ವಾಕ್ಯವು । **ಆತತಃ**— ಮನಸ್ಸಿನಲ್ಲಿ ವ್ಯಾಪಿಸಿದ್ದಿತು (ನೆಟ್ಟಿದ್ದಿತು) । **ಪಶ್ಚಾತ್**— ಅನಂತರ (ಕೋಪವನ್ನು ಬಿಟ್ಟಮೇಲೆ) । **ನಿರಯಣಂ**— ಯಮನ ಗೃಹದಿಂದ ಪುನಃ ಹಿಂದಕ್ಕೆ ಬರಲು ಉಪಾಯವು । **ಕೃತಂ**— ತಂದೆಯಿಂದ ನಿಶ್ಚಯಿಸಲ್ಪಟ್ಟಿತು.

॥ ಭಾವಾರ್ಥ ॥

ತಂದೆಯಾದ ವಾಜಶ್ರವಸ್ಸು ತನ್ನ ಮಗನಾದ ನಚಿಕೇತನಿಗೆ ಯಮನ ಮನೆಗೆ ಹೋಗು ಎಂದು ಹೇಳುವುದಕ್ಕೆ ಮೊದಲೇ ನಚಿಕೇತನು ಯಮನ ಗೃಹದಿಂದ ಹಿಂದಕ್ಕೆ ಬರುವ ಉಪಾಯವು ಅವನ ಮನಸ್ಸಿನಲ್ಲಿ ಹೊಳೆಯಿತು. ಆದ್ದರಿಂದ ಯಮನ ಮನೆಗೆ ಹೋಗು ಎಂದು ಹೇಳುವುದಕ್ಕಿಂತ ಮೊದಲೇ ತಂದೆಯು ಮಗನ ಪುನರಾಗಮನದ ಉಪಾಯವನ್ನು ನಿಶ್ಚಯಿಸಿದ್ದನು

## English Translation.

How restitution was made appeared from the (command given) at first; before that the depth was outstretched, afterwards a means of returning (from Yama) was provided.

‖ ವಿಶೇಷವಿಷಯಗಳು ‖

ತಂದೆಯು ಮಗನಾದ ನಚಿಕೇತನನ್ನು ಯಮನ ಗೃಹಕ್ಕೆ ಹೋಗು ಎಂದು ಹೇಳಿದನಷ್ಟೆ. ಆದರೆ ಹಾಗೆ ಹೇಳುವುದಕ್ಕಿಂತ ಮುಂಚೆಯೇ ಅವನು ಅಲ್ಲಿಂದ ಹಿಂದಕ್ಕೆ ಹೇಗೆ ತನ್ನ ಬಳಿಗೆ ಬರಬೇಕೆಂಬ ವಿಷಯದಲ್ಲಿ ಉಪಾಯ ವನ್ನು ಯೋಚಿಸಿಯೇ ಹಾಗೆ ಹೇಳಿದನು. ಕೋಪದ ಭರದಲ್ಲಿ ಯಮನ ಮನೆಗೆ ಹೋಗು ಎಂದು ಹೇಳಿದರೂ ಅನಂತರ ಕೋಪವನ್ನು ತ್ಯಜಿಸಿ ಸಮಾಧಾನ ಮನಸ್ಸಿನಿಂದ ತನ್ನ ಪುತ್ರನು ಯಮನ ಗೃಹದಿಂದ ಹಿಂದಕ್ಕೆ ಬರಲು ತಕ್ಕ ಉಪಾಯವನ್ನು ಮಾಡಿದನು ಎಂದು ಮುಖ್ಯಾಭಿಪ್ರಾಯವು.

ಆದಿತ್ಯಪರವಾದ ಅರ್ಥವು

**ಅನುದೇಯೀ**—ಆತ್ಮಸ್ವರೂಪವ್ಯತಿರಿಕ್ತಪದಾರ್ಥವಿರುವುದು ಎಂಬ ಮಿಥ್ಯಾಬುದ್ಧಿಯು | **ಯಥಾ**—ಯಾವ ಪ್ರಕಾರವಾಗಿ | **ಅಭವತ್**—ಉಂಟಾಗುವುದೋ | **ತತಃ**—ಆ ಮಾಯಾವಿಶಿಷ್ಟಬುದ್ಧಿಗಿಂತ | **ಅಗ್ರಂ**—ಮೊದಲೇ | **ಅಜಾಯತ**—ಮನಸ್ತತ್ತ್ವವು ಸೃಷ್ಟಿಸಲ್ಪಟ್ಟಿತು | **ಪುರಸ್ತಾತ್**—ಸೃಷ್ಟಿಗೆ ಪೂರ್ವದಲ್ಲಿದ್ದ ಅವಸ್ಥೆಯಲ್ಲಿ | **ಬುಧ್ನಃ**—ಅವ್ಯಕ್ತದಶೆಯಲ್ಲಿದ್ದ ಮಾಯಾತ್ಮಕವಾದ ಕಾರಣವು | **ಆತತಃ**—ಸರ್ವತ್ರ ವ್ಯಾಪಿಸಿದ್ದಿತು | **ಪಶ್ಚಾತ್**—ಅನಂತರ ಎಂದರೆ ಕಾರಣವು ಕಾರ್ಯರೂಪಕ್ಕೆ ಬರಲು ಪ್ರಾರಂಭಿಸಿದ ಮೇಲೆ | **ನಿರಯಣಂ**—ಕಾರಣರೂಪವಾದ ಅವ್ಯಕ್ತದಿಂದ ಕಾರ್ಯರೂಪವಾದ ವ್ಯಕ್ತವು ಎಂದರೆ ಜಗದಾದಿಗಳು ಆವಿರ್ಭವಿಸುವಂತೆ | **ಕೃತಂ**—ಮಾಡಲ್ಪಟ್ಟಿತು (ಸೃಷ್ಟಿಸಲ್ಪಟ್ಟಿತು) |

‖ ಭಾವಾರ್ಥ ‖

ಆತ್ಮವ್ಯತಿರಿಕ್ತವಾದ ವಸ್ತುವು ಈ ಜಗತ್ತಿನಲ್ಲಿ ಇದೆ ಎಂದು ಸಾಮಾನ್ಯಮನುಷ್ಯರ ಮನಸ್ಸಿನಲ್ಲಿ ತೋರುವುದಷ್ಟೆ. ಈ ರೀತಿ ಮಿಥ್ಯಾಬುದ್ಧಿಯು ಮನಸ್ಸಿನಲ್ಲಿ ಉಂಟಾಗುವುದಕ್ಕೆ ಮೊದಲೇ ಮನಸ್ತತ್ತ್ವವು (ಎಂದರೆ ಪ್ರಾಣಿಗಳ ಮನಸ್ಸು) ಸೃಷ್ಟಿಸಲ್ಪಟ್ಟಿತು. ಮನಸ್ಸು ಸೃಷ್ಟಿಸಲ್ಪಟ್ಟಮೇಲೆ ತಾನೇ ಮನಸ್ಸಿನ ವ್ಯಾಪಾರಗಳು ನಡೆಯುವವು. ಆದ್ದರಿಂದ ಮೊದಲು ಮನಸ್ತತ್ತ್ವವು ಸೃಷ್ಟಿಸಲ್ಪಟ್ಟಿತು. ಅನಂತರ ಮನಸ್ಸಿನ ವ್ಯಾಪಾರದ ಆಲೋಚನೆಯು ಎಂದರೆ ಆತ್ಮವ್ಯತಿರಿಕ್ತವಾದ ವಸ್ತುಗಳು ಇರುವವು ಎಂಬ ಮಿಥ್ಯಾಬುದ್ಧಿಯು ಉತ್ಪನ್ನವಾಯಿತು. ಸೃಷ್ಟಿಗೆ ಪೂರ್ವದಲ್ಲಿ ಬ್ರಹ್ಮವು ಅವ್ಯಕ್ತಾವಸ್ಥೆಯಲ್ಲಿದ್ದಾಗ ಈ ಜಗದಾದಿಗಳು ಆ ಅವ್ಯಕ್ತಾವಸ್ಥೆಯಲ್ಲಿ ಕಾರಣರೂಪದಿಂದ ಇದ್ದವು. ಅನಂತರ ಅವ್ಯಕ್ತವು ವ್ಯಕ್ತಾವಸ್ಥೆಗೆ ಬಂದಾಗ ಜಗದಾದಿವಸ್ತುಗಳು (ಘಟಪಟಾದಿವಸ್ತುಗಳು) ಕಾರಣಾವಸ್ಥೆಯಿಂದ ಕಾರ್ಯಾವಸ್ಥೆಗೆ ಬಂದವು. ಇದೆಲ್ಲವೂ ಬ್ರಹ್ಮನ ಸೃಷ್ಟಿಯು. ಉದಾಹರಣೆಗೆ ಘಟ (ಮಡಕೆ) ಮೊದಲಾದ ಮೃದ್ವಿಕಾರ (ಮಣ್ಣಿನ) ವಸ್ತುಗಳು ಮಡಕೆ, ಹೆಂಚು ಮೊದಲಾದ ಅನೇಕ ವಿಧ ಆಕಾರಗಳಿಂದ ಕಾಣುತ್ತಿದ್ದರೂ ಅವುಗಳಿಗೆ ಮೂಲ ವಸ್ತುವು (ಮಣ್ಣು) ಒಂದೇ ಆಗಿರುವುದು. ಅದರಂತೆ ಈ ಜಗತ್ತಿನಲ್ಲಿ ಕಾಣುವ ವಸ್ತುಗಳೂ ನಾನಾವಿಧವಾಗಿದ್ದರೂ ಅವುಗಳಿಗೆಲ್ಲಾ ಬ್ರಹ್ಮವೇ ಮೂಲಕಾರಣವಾಗಿರುವುದು ಆದ್ದರಿಂದ ಆದಿತ್ಯನ ಅನುಗ್ರಹದಿಂದ ಬ್ರಹ್ಮ ಭಾವವನ್ನು ಪಡೆದಿರುವ ನನಗೆ ನನಗಿಂತ ಬೇರೆಯಾದ ವಸ್ತುವು ಈ ಪ್ರಪಂಚದಲ್ಲಿ ಇಲ್ಲವೆಂಬ ಪರಿಜ್ಞಾನವು ಉಂಟಾಗಿರುವುದೆಂದು ಋಷಿಯು ವರ್ಣಿಸಿರುವನು.

॥ ಸಂಹಿತಾಪಾಠಃ ॥

ಇದಂ ಯಮಸ್ಯ ಸಾದನಂ ದೇವಮಾನಂ ಯದುಚ್ಯತೇ ।

ಇಯಮಸ್ಯ ಧಮ್ಯತೇ ನಾಳೀರಯಂ ಗೀರ್ಭಿಃ ಪರಿಷ್ಕೃತಃ ॥ ೭ ॥

॥ ಪದಪಾಠಃ ॥

ಇದಂ । ಯಮಸ್ಯ । ಸದನಂ । ದೇವಽಮಾನಂ । ಯತ್ । ಉಚ್ಯತೇ ।

ಇಯಂ । ಅಸ್ಯ । ಧಮ್ಯತೇ । ನಾಳೀಃ । ಅಯಂ । ಗೀಃಽಭಿಃ । ಪರಿಽಕೃತಃ ॥ ೭ ॥

॥ ಸಾಯಣಭಾಷ್ಯಂ ॥

ಇದಂ ಯಮಸ್ಯ ನಿಯಂತುರಾದಿತ್ಯಸ್ಯ ವೈವಸ್ವತಸ್ಯ ವಾ ಸದನಂ ಸ್ಥಾನಂ ॥ ಛಾಂದಸಃ ಸಾಂಹಿತಿಕೋ ದೀರ್ಘಃ ॥ ಯತ್ಸದನಂ ದೇವಮಾನಂ ದೇವೈರ್ನಿರ್ಮಿತಮಿತ್ಯುಚ್ಯತೇ ಸರ್ವತ್ರಾಭಿಧೀಯತೇ । ಯದ್ವಾ । ದೇವಾನಾಂ ರಶ್ಮೀನಾಂ ನಿರ್ಮಾಣಸಾಧನಮಿತಿ ಗೀಯತೇ । ಅಸ್ಯ ಯಮಸ್ಯ ಪ್ರೀಣನಾಯೇಯಂ ನಾಳೀರ್ವಾದ್ಯವಿಶೇಷೋ ವೇಣುರ್ಧಮ್ಯತೇ । ವಾದ್ಯತೇ । ಯದ್ವಾ । ನಾಳೀತಿ ವಾಙ್ನಾಮ । ಇಯಂ ಸ್ತುತಿರೂಪಾ ವಾಗಸ್ಯ ಪ್ರೀಣನಾಯ ಧಮ್ಯತೇ । ಉಚ್ಚಾರ್ಯತೇ । ಏವಂ ಸತ್ಯಯಂ ಯಮೋ ಗೀರ್ಭಿಃ ಸ್ತುತಿಭಿಃ ಪರಿಷ್ಕೃತಃ । ಅಲಂಕೃತೋಽಭೂತ್ ॥ ಸಂಪರ್ಯುಪೇಭ್ಯ ಇತಿ ಸುಡಾಗಮಃ । ಪರಿನಿವಿಭ್ಯ ಇತಿ ಷತ್ವಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥

ಯಮನ ಪರವಾದ ಅರ್ಥ

**ಯತ್**—ಯಾವ ಲೋಕವು । **ದೇವಮಾನಂ**—ದೇವತೆಗಳಿಂದ ನಿರ್ಮಿತವಾದುದೆಂದು । **ಉಚ್ಯತೇ**—ಹೇಳಲ್ಪಡುವುದೋ ಅಂತಹ । **ಇದಂ**—ಈ ಯಮಲೋಕವು । **ಯಮಸ್ಯ**—ಯಮನ । **ಸದನಂ**—ಸ್ಥಾನವಾಗಿರುವುದು । **ಅಸ್ಯ**—ಈ ಯಮನ ಪ್ರೀತ್ಯರ್ಥವಾಗಿ । **ಇಯಂ ನಾಳೀಃ**—ವೇಣುವೆಂಬ ಈ ವಾದ್ಯವಿಶೇಷವು । **ಧಮ್ಯತೇ**—ಊದಲ್ಪಡುತ್ತದೆ । **ಅಯಂ**—ಈ ಯಮನು । **ಗೀರ್ಭಿಃ**—ಸ್ತುತಿರೂಪವಾದ ವಾಕ್ಯಗಳಿಂದ । **ಪರಿಷ್ಕೃತಃ**—ಅಲಂಕೃತನಾಗುತ್ತಾನೆ (ಸ್ತುತಿಸಲ್ಪಡುತ್ತಾನೆ)

॥ ಭಾವಾರ್ಥ ॥

ದೇವತೆಗಳಿಂದ ನಿರ್ಮಿತವಾದ ಈ (ಯಮ) ಲೋಕವೇ ಯಮನ ನಿವಾಸಸ್ಥಾನವೆಂದು ಪ್ರಸಿದ್ಧವಾಗಿದೆ. ಈ ಯಮನ ಪ್ರೀತ್ಯರ್ಥವಾಗಿ ವೇಣುವೆಂಬ ವಾದ್ಯವಿಶೇಷವನ್ನು ಊದುತ್ತಾರೆ ಮತ್ತು ಈ ಯಮನು ಸ್ತುತಿರೂಪವಾದ ವಾಕ್ಯಗಳಿಂದ ಪ್ರಶಂಸಿಸಲ್ಪಡುತ್ತಾನೆ.

English Translation

This is the dwelling of Yama, which is called the fabric of the gods; this pipe is sounded for his (gratification) he is propitiated by hymns.

|| ಆದಿತ್ಯಪರವಾದ ಅರ್ಥ ||

**ಯತ್**— ಯಾವ (ಸೂರ್ಯ) ಮಂಡಲವು | **ದೇವಮಾನಂ**— ಪ್ರಕಾಶಮಾನವಾದ ರಶ್ಮಿಗಳಿಂದ ಅಥವ ದೇವತೆಗಳಿಂದ ನಿರ್ಮಿತವಾದುದೆಂದು | **ಉಚ್ಯತೇ**— ಹೇಳಲ್ಪಡುವುದೋ | **ಇದಂ**— ಆ ಸೂರ್ಯಮಂಡಲವು | **ಯಮಸ್ಯ**— ನಿಯಂತೃವಾದ ಆದಿತ್ಯನ | **ಸದನಂ**— ಸ್ಥಾನವು | **ಅಸ್ಯ**— ಈ ಆದಿತ್ಯನ ಪ್ರೀತ್ಯರ್ಥವಾಗಿ | **ನಾಳೀಃ**— ಸ್ತುತಿರೂಪವಾದ ವಾಕ್ಯವು | **ಧಮ್ಯತೇ**— ಉಚ್ಚರಿಸಲ್ಪಡುತ್ತದೆ | **ಅಯಂ** ಈ ಆದಿತ್ಯನು | **ಗೀರ್ಭಿಃ**— ಸ್ತೋತ್ರಗಳಿಂದ | **ಪರಿಷ್ಕೃತಃ**— ಅಲಂಕೃತನಾಗುತ್ತಾನೆ (ಸ್ತುತಿಸಲ್ಪಡುತ್ತಾನೆ).

|| ಭಾವಾರ್ಥ ||

ದೇವತೆಗಳಿಂದ ಅಥವಾ ಪ್ರಕಾಶಮಾನವಾದ ರಶ್ಮಿಗಳಿಂದ ಯಾವ ಸ್ಥಾನವು ನಿರ್ಮಿತವಾಗಿದೆಯೋ ಅದು ಆದಿತ್ಯಮಂಡಲವೆಂದು ಪ್ರಸಿದ್ಧವಾಗಿದೆ. ಆ ಆದಿತ್ಯಮಂಡಲವೇ ಆದಿತ್ಯನ ಸ್ಥಾನವು. ಈ ಆದಿತ್ಯನ ಪ್ರೀತ್ಯರ್ಥವಾಗಿ ಸ್ತುತಿರೂಪವಾದ ವಾಕ್ಯಗಳನ್ನು ಪಠಿಸುತ್ತಾ ಸ್ತೋತ್ರಾದಿಗಳಿಂದ ಜನರು ಆದಿತ್ಯನನ್ನು ಸ್ತುತಿಸುತ್ತಾರೆ.



## ನೂರ ಮೂವತ್ತಾರನೆಯ ಸೂಕ್ತವು

### ಪೀಠಿಕೆ.

ಈ ಸೂಕ್ತಕ್ಕೆ ಕೇಶಿನಃ ಎಂಬುವರು ದೇವತೆಗಳು. ಯಾಸ್ಕರು ಕೇಶಿಶಬ್ದಾರ್ಥವಿವರಣೆಯನ್ನು ಮಾಡುತ್ತಾ ಈ ರೀತಿ ಹೇಳಿದಾರೆ—

**ಕೇಶೀ ಕೇಶಾ, ರಶ್ಮಯಸ್ತೈಸ್ತದ್ವಾನ್ ಭವತಿ | ಕಾಶನಾದ್ವಾ ಪ್ರಕಾಶನದ್ವಾ || (ನಿ. ೧೨-೨೫)** ಕೇಶಾಃ ಎಂದರೆ ಕೂದಲುಗಳು, ರೋಮಗಳು. ಕೇಶವೆಂದರೆ ರಶ್ಮಿಗಳಿಗೂ ಹೆಸರು. ಏಕೆಂದರೆ ಕೇಶಗಳು ಸಣ್ಣನಾಗಿ ಉದ್ದವಾಗಿರುತ್ತವೆ. ರಶ್ಮಿಗಳೂ ಅವುಗಳಂತೆ ಇರುವುದರಿಂದ ರಶ್ಮಿಗಳಿಗೂ ಕೇಶಾಃ ಎಂದು ಹೇಳುವ ರೂಢಿ ಇದೆ. ಇಂತಹ ಕೇಶಗಳುಳ್ಳವನಿಗೆ ಅಥವಾ ರಶ್ಮಿಗಳುಳ್ಳವನಿಗೆ ಕೇಶೀ ಎಂದು ಹೆಸರು. ರಶ್ಮಿಗಳುಳ್ಳವನು ಸೂರ್ಯನಾಗ ಬಹುದು, ಅಗ್ನಿಯಾಗಬಹುದು, ವಾಯುವಾಗಬಹುದು. ಆದ್ದರಿಂದ ಈ ಸೂಕ್ತಕ್ಕೆ ಅಗ್ನಿಸೂರ್ಯವಾಯುಗಳೇ ದೇವತೆಗಳೆಂದು ಹೇಳಿದೆ. ಮುಖ್ಯವಾಗಿ ಈ ಸೂಕ್ತಕ್ಕೆ ಸೂರ್ಯನೇ ದೇವತೆಯು. ಕಾಶ್–ಪ್ರಕಾಶಿಸು ಎಂಬ ಧಾತುವಿನಿಂದ ಕೇಶಶಬ್ದವು ನಿಷ್ಪನ್ನವಾಗಿದೆ. ಕೇಶಾಃ ಎಂದರೆ ಹೊಳೆಯುತ್ತಿರುವ ಅಥವಾ ಪ್ರಕಾಶಿಸುತ್ತಿರುವ ರಶ್ಮಿಗಳು ಎಂದರ್ಥವು. ಬೃಹದ್ದೇವತಾಗ್ರಂಥದಲ್ಲಿ ಕೇಶಿಶಬ್ದಾರ್ಥವಿವರಣೆಯು ಈ ರೀತಿ ಇದೆ—

**ಕೃತ್ವಾ ಸಾಯಂ ಪೃಥಗ್ವ್ಯಾಕಿ ಭೂತೇಭ್ಯಸ್ತಮಸೋಽತ್ಯಯೇ |**
**ಪ್ರಕಾಶಂ ಕಿರಣೈಃ ಕುರ್ವಂಸ್ತೇನೈನಂ ಕೇಶಿನಂ ವಿದುಃ ||** (ಬೃ. ದೇ- ೨-೬೫)

ಕೇಶಿಶಬ್ದಾರ್ಥವಿವರಣೆ— ಸಾಯಂಕಾಲದಲ್ಲಿ ಅಸ್ತಮಯವನ್ನು ಹೊಂದಿ ಕತ್ತಲೆಯುಂಟಾಗಿ, ಆ ಕತ್ತಲೆಯು ಕಾಲಕ್ರಮದಲ್ಲಿ ಕಳೆದುಹೋಗಿ ಬೆಳಕಾದ ನಂತರ ತನ್ನ ಕಿರಣಗಳಿಂದ ಸಮಸ್ತ ಪ್ರಾಣಿಗಳ ಉಪಕಾರಾರ್ಥವಾಗಿ ಬೆಳಕನ್ನುಂಟುಮಾಡುವವನಾದ್ದರಿಂದ ಈ ದೇವನನ್ನು (ಸೂರ್ಯನನ್ನು) ಕೇಶೀ ಎಂದು ಕರೆಯುವರು, ಎಂದಿದೆ.

ಇದಲ್ಲದೆ ಪ್ರಥಮಮಂಡಲದ ೧೬೪ ನೇ ಸೂಕ್ತದ ೪೪ ನೇ ಋಕ್ಕಿನಲ್ಲಿ **ತ್ರಯಃ ಕೇಶಿನಃ-ಕೇಶಸ್ಥಾನೀಯ-ಪ್ರಕೃಷ್ಟರಶ್ಮಿಯುಕ್ತಾಃ** ಎಂದು ಹೇಳಿದೆ. ಕೇಶಸ್ಥಾನಗಳಿಗೆ ಬದಲಾಗಿ ಅತಿಶಯವಾದ ರಶ್ಮಿಗಳುಳ್ಳವರೆಂದು ಅಗ್ನಿ, ವಾಯು ಮತ್ತು ಸೂರ್ಯ ಎಂಬ ಮೂವರು ದೇವತೆಗಳಿಗೂ **ಕೇಶಿನಃ** ಎಂಬ ಶಬ್ದವು ಅನ್ವಯಿಸುವುದು. ಇದೇ ವರ್ಣನೆಯನ್ನು ಬೃಹದ್ದೇವತೆಯಲ್ಲಿಯೂ ತಿಳಿಸುತ್ತಾ ಅಗ್ನಿವಾಯ್ವಾದಿತ್ಯರ ವಿಶೇಷಸ್ವರೂಪವನ್ನು ತಿಳಿಸಿದೆ—

**ಅರ್ಚಿಭಿಃ ಕೇಶ್ಯಯಂ ತ್ವಗ್ನಿರ್ವಿದ್ಯುದ್ಭಿಶ್ಚೈವ ಮಧ್ಯಮಃ ।**
**ನಿಪಾತಮಾತ್ರೇ ಕಥ್ಯಂತೇ ತಥಾಗ್ನೇಯಾನಿ ಕಾನಿಚಿತ್ ॥** (ಬೃ. ದೇ. ೧-೯೪)

ಪಾರ್ಥಿವಾಗ್ನಿಯ ಜ್ವಾಲೆಯು ಕೇಶಗಳಂತಿರುವುದರಿಂದ ಅಗ್ನಿಗೆ ಕೇಶಿಯೆಂದು ಹೆಸರು. ಅಂತರಿಕ್ಷಸ್ಥನಾದ ವಾಯುವು ವಿದ್ಯುದ್ರೂಪವಾದ ಪ್ರಭೆಗಳಿಂದಲೂ ದ್ಯುಲೋಕಸ್ಥನಾದ ಆದಿತ್ಯನು ತನ್ನ ರಶ್ಮಿಗಳಿಂದಲೂ ತಮ್ಮ ತಮ್ಮ ಪ್ರಭಾವವನ್ನು ವೃದ್ಧಿಮಾಡುತ್ತಿರುವುದರಿಂದ ಅಗ್ನಿವಾಯ್ವಾದಿತ್ಯರಿಗೆ ಕೇಶಿಗಳೆಂದು ಹೆಸರು.

**ಏತೇಷಾಂ ತು ಪೃಥಕ್ತ್ವೇನ ತ್ರಯಾಣಾಂ ಕೇಶಿನಾಮಿಹ ।**
**ಸಂಲಕ್ಷ್ಯಂತೇ ಪ್ರಕ್ರಿಯಾಸು ತ್ರಯಃ ಕೇಶಿನ ಇತ್ಯೃಚಿ ॥** (ಬೃ. ದೇ. ೧-೯೫)

ಈ ಮೂರುವಿಧ ಕೇಶಿಗಳ ಸ್ವರೂಪಗಳು ಬೇರೆಬೇರೆಯಾಗಿರುವುದರಿಂದ ಅವರವರ ಕ್ರಿಯೆಗಳೂ ಸಹ ಭಿನ್ನವಾಗಿವೆಯೆಂದು **ತ್ರಯಃ ಕೇಶಿನಃ** (೧-೧೬೪-೪೪) ಎಂಬ ಋಕ್ಕಿನಲ್ಲಿ ಹೇಳಿದೆ. ಆದರೆ ಅವರ ಕ್ರಿಯಾ, ವ್ಯಾಪ್ತಿ ಇವುಗಳನ್ನು ವಿಭಾಗಿಸಿ, ಇದು ಹೀಗೆಯೇ ಸರಿ ಎಂದು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ. ಎಲ್ಲರೂ ಸರ್ವವ್ಯಾಪಿಗಳಾದುದರಿಂದ ಸ್ಥಾನವಿಭಾಗವೂ ಸಾಧ್ಯವಿಲ್ಲ.

**ನ ಚೈವೈಷಾಂ ಪ್ರಸೂತಿರ್ವಾ ವಿಭೂತಿಸ್ಥಾನಜನ್ಮ ವಾ ।**
**ನಿರ್ವಕ್ತುಂ ಶಕ್ಯಮೇತೈರ್ಹಿ ಕೃತ್ಸ್ನಂ ವ್ಯಾಪ್ತಮಿದಂ ಜಗತ್ ॥** (ಬೃ. ದೇ. ೧-೯೬)

ಇವರ ಉತ್ಪತ್ತಿ, ಪ್ರಭಾವ, ಸ್ಥಾನ ಇವುಗಳನ್ನು ಪಿಂಗಡಿಸಿ ಹೇಳುವುದು ಸಾಧ್ಯವಿಲ್ಲ. ಸಮಸ್ತ ಜಗತ್ತೂ ಇವರಿಂದ ವ್ಯಾಪ್ತವಾಗಿದೆ. ಇವರ ಪ್ರಭಾವವೂ, ಕ್ರಿಯೆಗಳೂ ಸ್ಥಾನದ ದೃಷ್ಟಿಯಿಂದಾಗಲಿ, ಕಾಲದೃಷ್ಟಿಯಿಂದಾಗಲಿ ಪರಿಮಿತವಾದುದಲ್ಲ.

ಅಗ್ನಿ, ವಾಯು, ಆದಿತ್ಯ ಎಂಬ ಹೆಸರುಗಳಿಂದ ಮೂರು ಲೋಕಗಳಲ್ಲಿಯೂ ಮೂರು ವಿಧವಾಗಿ ತಮ್ಮ ಕರ್ತವ್ಯಗಳನ್ನು ಕಾಲಾನುಸಾರವಾಗಿ ನಡೆಸುತ್ತಿರುವ ಈ ಮೂರು ದೇವತೆಗಳೂ ಭಿನ್ನಾತ್ಮಕರೇ ಅಥವಾ ಒಂದೇ ತತ್ತ್ವದ ಮೂರು ಬೇರೆ ಸ್ವರೂಪಗಳೇ ಎಂಬುದನ್ನು ಪರಿಶೀಲಿಸಬೇಕು. ೧-೧೬೪ ನೇ ಸೂಕ್ತದಲ್ಲಿ ಮೊದಲಿನಿಂದಲೂ ಸಹ ಸಕಲ ವಿಶ್ವವ್ಯಾಪಿಯಾದ ಏಕತತ್ತ್ವದ ಪ್ರತಿಪಾದನೆಯೇ ಮುಖ್ಯವಾದ ಗುರಿಯೆಂದು ತಿಳಿದುಬರುತ್ತದೆ. ಕೆಲವು ಋಕ್ಕುಗಳಲ್ಲಿ ಅದನ್ನು ಪರಬ್ರಹ್ಮವೆಂದೂ, ಇನ್ನು ಕೆಲವೆಡೆಗಳಲ್ಲಿ ಆದಿತ್ಯಾಂತರ್ಗತನೂ, ಹಿರಣ್ಯರೂಪನೂ ಆದ ಪರಮಪುರುಷನೆಂದೂ ವರ್ಣಿಸಿದೆ ಪ್ರಕೃತ ಋಕ್ಕಿನಲ್ಲಿ ಭಿನ್ನಾತ್ಮಕರಾದ ದೇವತೆಗಳ ವರ್ಣನೆಯಿರುವಂತೆ ಕಂಡರೂ ಸಹ ಇವರೆಲ್ಲರಿಗೂ ಮೂಲತತ್ತ್ವವು ಒಂದೇ ಎಂದೂ ಇವರೆಲ್ಲರೂ ಆ ಮೂಲತತ್ತ್ವದ ಬೇರೆ ಬೇರೆ ಸ್ವರೂಪಗಳೆಂದೂ ಅನೇಕಕಡೆಗಳಲ್ಲಿ ವರ್ಣಿತವಾಗಿದೆ. ಆ ಮೂಲತತ್ತ್ವವನ್ನು ಕೆಲವು ಸ್ಥಳದಲ್ಲಿ ಆದಿತ್ಯನೆಂದೂ, ಕೆಲವೆಡೆಗಳಲ್ಲಿ ಅಗ್ನಿಯೆಂದೂ ಹೇಳಿದೆ.

ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ ।
ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ॥
ಅಸತಶ್ಚ ಸತಶ್ಚೈವ ಯೋನಿರೇಷಾ ಪ್ರಜಾಪತಿಃ ।
ಯದಕ್ಷರಂ ಚ ವಾಚ್ಯಂ ಚ ಯಥೈತದ್ಬ್ರಹ್ಮ ಶಾಶ್ವತಂ ॥
ಕೃತ್ವೈಷ ಹಿ ತ್ರಿಧಾತ್ಮಾನಂ ಏಷ ಲೋಕೇಷು ತಿಷ್ಠತಿ ।
ದೇವಾನ್ಯಥಾಯಥಂ ಸರ್ವಾನ್ ನಿವೇಶ್ಯ ಸ್ವೇಷು ರಶ್ಮಿಷು ॥
ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ ।
ಋಷಯೋ ಗೀರ್ಭಿರರ್ಚಂತಿ ಹೋತ್ರಾಯೋಂ ವೃಕ್ತಬರ್ಹಿಷಃ ॥

(ಬೃ. ದೇ. ೧-೬೧ ರಿಂದ ೬೪)

ವರ್ತಮಾನ, ಭೂತಕಾಲ, ಭವಿಷ್ಯತ್ಕಾಲಗಳಲ್ಲಿ ಇರುವ ಸಮಸ್ತ ಚರಾಚರ ಪ್ರಪಂಚದ ಸ್ಥಿತಿಗೂ ಲಯಕ್ಕೂ (ವಿನಾಶಕ್ಕೂ) ಸೂರ್ಯ (ಪ್ರಜಾಪತಿ) ನೊಬ್ಬನೇ ಮುಖ್ಯ ಕಾರಣನಾಗಿರುವನು. ಅವ್ಯಕ್ತಸ್ವರೂಪ ಮತ್ತು ವ್ಯಕ್ತಸ್ವರೂಪದಿಂದಿರುವ ಅಸತ್, ಸತ್ ಎಂಬ ತತ್ತ್ವಗಳಿಗೆ (ಸ್ಥಿತಿಗಳಿಗೆ) ಪ್ರಜಾಪತಿಯೇ ಮೂಲವು. ಎಂದರೆ ಪ್ರಜಾಪತಿಯಿಂದಲೇ ವ್ಯಕ್ತಾವ್ಯಕ್ತಸ್ವರೂಪಗಳ ಆವಿರ್ಭಾವವಾಗುವುದು. ಈ ಪ್ರಜಾಪತಿಯೇ ನಾಶರಹಿತನಾದ, ನಿತ್ಯನಾದ ಪರಬ್ರಹ್ಮಶಬ್ದವಾಚ್ಯನಾಗಿರುವನು. ಈ ಪ್ರಜಾಪತಿಯು ಅಥವಾ ಸೂರ್ಯನು ತನ್ನ ಸ್ವರೂಪವನ್ನೇ ಮೂರು ಭಾಗವಾಗಿ ವಿಭಾಗಿಸಿಕೊಂಡು ಈ ಲೋಕದಲ್ಲಿ ಸ್ಥಾಪಿತನಾಗಿದ್ದಾನೆ ಸಮಸ್ತ ದೇವತೆಗಳನ್ನೂ ಸಹ ತನ್ನ ರಶ್ಮಿಗಳಲ್ಲಿ ಎಂದರೆ ತನ್ನ ಸಾಮರ್ಥ್ಯದ ಬಂಧನದಲ್ಲಿ ಇಟ್ಟಿದ್ದಾನೆ. ಈ ಪ್ರಜಾಪತಿ ಅಥವಾ ಸೂರ್ಯನೇ ಈ ಲೋಕಗಳಲ್ಲಿ ಮೂರು ವಿಧವಾಗಿ ಸ್ಥಾಪಿತನಾಗಿರುವನು. ಭೂಮಿಯಲ್ಲಿ ಅಗ್ನಿಯಂತೆಯೂ, ಅಂತರಿಕ್ಷದಲ್ಲಿ ವಿದ್ಯುತ್ತಿನಂತೆಯೂ, ಸ್ವರ್ಗದಲ್ಲಿ ಸೂರ್ಯನಂತೆಯೂ ಮೂರು ವಿಧವಾಗಿ ಬೆಳಗುತ್ತಿರುವನು ಋಷಿಗಳು ಇವನನ್ನೇ ವೇದ ವಾಕ್ಯಗಳಿಂದಲೂ ಸಾಮಗಾನಗಳಿಂದಲೂ ಸ್ತುತಿಸಿ ಆರಾಧಿಸುವರು. ಪ್ರಕೃತಋಕ್ಕಿನಲ್ಲಿ ಅಗ್ನಿವಾಯ್ವಾದಿತ್ಯರೆಂಬ ಮೂರು ರೂಪಗಳಲ್ಲಿ ವರ್ಣಿತವಾಗಿರುವ ಮೂರು ದೇವತೆಗಳಿಗೂ ಇವನೇ ಮೂಲತತ್ತ್ವವು. ಇವರೆಲ್ಲರೂ ಇವನ ಬೇರೆ ಬೇರೆ ರೂಪಗಳು.

॥ ಸಾಯಣಭಾಷ್ಯಂ ॥

**ಕೇಶೀತಿ ಸಪ್ತರ್ಚಮಷ್ಟಮಂ ಸೂಕ್ತಮಗ್ನಿಸೂರ್ಯವಾಯುದೇವತಾಕಂ । ವಾತರಶನಪುತ್ರಾ ಜೂತಿವಾತಜೂತಿಪ್ರಭೃತಯಃ ಪ್ರತ್ಯೃಚಂ ಕ್ರಮೇಣರ್ಷಯಃ । ತಥಾ ಚಾನುಕ್ರಾಂತಂ । ಕೇಶೀ ಮುನಯೋ ವಾತರಶನಾ ಜೂತಿರ್ವಾತಜೂತಿರ್ವಿಪ್ರಜೂತಿರ್ವೃಷಾಣಕಃ ಕರಿಕ್ರತ ಏತಶ ಋಷ್ಯಶೃಂಗ-ಶ್ಚೈಕರ್ಚಾಃ ಕೈಶಿನಮಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ಕೇಶೀ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗ್ನಿ ಸೂರ್ಯ ವಾಯುಗಳು ದೇವತೆಯು; ವಾತರಶನ ಎಂಬ ಋಷಿಯ ಪುತ್ರರಾದ ಜೂತಿ, ವಾತಜೂತಿ, ವಿಪ್ರಜೂತಿ, ವೃಷಾಣಕ, ಕರಿಕ್ರತ, ಏತಶ, ಋಷ್ಯಶೃಂಗ ಎಂಬ ಏಳು ಮಂದಿ ಋಷಿಗಳು ಈ ಸೂಕ್ತದ ಒಂದೊಂದು ಋಕ್ಕಿಗೆ ಕ್ರಮವಾಗಿ ಋಷಿಗಳು ಅನುಕ್ರಮಣಿಕೆಯಲ್ಲಿ—**ಕೇಶೀ ಮುನಯೋ**

ವಾತರಶನಾ ಜೂತಿರ್ವಾತಜೂತಿರ್ವಿಪ್ರಜೂತಿರ್ವೃಷಾಣಕಃ ಕರಿಕ್ರತ ಏತಶ ಋಷ್ಯಶೃಂಗಶ್ಚೈಕರ್ಚಾಃ ಕೈಶಿನಂ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೩೬

ಮಂಡಲ-೧೦ ॥ ಅನುವಾಕ-೧೧ ॥ ಸೂಕ್ತ-೧೩೬ ॥
ಅಷ್ಟಕ-೮ ॥ ಅಧ್ಯಾಯ-೭ ॥ ವರ್ಗ-೨೪, ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ಮುನಯೋ ವಾತರಶನಾಃ । ೧. ಜೂತಿಃ। ೨. ವಾತಜೂತಿಃ। ೩. ವಿಪ್ರಜೂತಿಃ। ೪ ವೃಷಾಣಕಃ । ೫. ಕರಿಕ್ರತಃ । ೬. ಏತಶಃ । ೭. ಋಷ್ಯಶೃಂಗಃ ॥
ದೇವತಾ—ಕೇಶಿನಃ ॥
ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಕೇಶ್ಯ೧ಗ್ನಿಂ ಕೇಶೀ ವಿಷಂ ಕೇಶೀ ಬಿಭರ್ತಿ ರೋದಸೀ ।
ಕೇಶೀ ವಿಶ್ವಂ ಸ್ವರ್ದೃಶೇ ಕೇಶೀದಂ ಜ್ಯೋತಿರುಚ್ಯತೇ ॥ ೧ ॥

॥ ಪದಪಾಠಃ ॥

ಕೇಶೀ । ಅಗ್ನಿಂ । ಕೇಶೀ । ವಿಷಂ । ಕೇಶೀ । ಬಿಭರ್ತಿ । ರೋದಸೀ ಇತಿ ।
ಕೇಶೀ । ವಿಶ್ವಂ । ಸ್ವಃ । ದೃಶೇ । ಕೇಶೀ । ಇದಂ । ಜ್ಯೋತಿಃ । ಉಚ್ಯತೇ ॥ ೧ ॥

॥ ಸಾಯಣಭಾಷ್ಯಂ ॥

ಕೇಶಾಃ ಕೇಶಸ್ಥಾನೀಯಾ ರಶ್ಮಯಃ । ತದ್ವಂತಃ ಕೇಶಿನೋಽಗ್ನಿರ್ವಾಯುಃ ಸೂರ್ಯಶ್ಚ । ಏತೇ ತ್ರಯಃ ಸ್ತೂಯಂತೇ । ಕೇಶೀ ರಶ್ಮಿಭಿರ್ಯುಕ್ತಃ ಪ್ರಕಾಶಮಾನೋ ವಾ ಸೂರ್ಯೋಽಗ್ನಿಂ ಬಿಭರ್ತಿ । ಹವಿರ್ಭಿಃ ಪೋಷಯತಿ । ಧಾರಯತಿ ವಾ । ಕಾಲವಿಶೇಷೇ ಹ್ಯಗ್ನೇಃ ಪೋಷಣಾಯ ಹೋಮಃ । ಸ ಚ ಕಾಲವಿಶೇಷಃ ಸೂರ್ಯಗತ್ಯಧೀನ ಇತಿ ಸೂರ್ಯ ಏವ ಬಿಭರ್ತೀತ್ಯುಚ್ಯತೇ । ತಥಾ ವಿಷಂ । ಉದಕನಾಮೈತತ್ । ಉದಕಂ ರಶ್ಮಿಭಿರ್ಘರ್ಮಸಮಯ ಆಹೃತಮಯನೇವ ಕೇಶೀ ಬಿಭರ್ತಿ ವಿಸೃಷ್ಟಂ । ತಥಾ ರೋದಸೀ ದ್ಯಾವಾಪೃಥಿವ್ಯಾವಪ್ಯಯನೇವ ಬಿಭರ್ತಿ । ಅಪಿ ಚ ವಿಶ್ವಂ ವ್ಯಾಪ್ತಂ ಸ್ವಃ ಸರ್ವಂ ಜಗದ್ದೃಶೇ ದರ್ಶನಾಯಾಯನೇವ ಕೇಶೀ ಕರೋತಿ । ಪ್ರಕಾಶಯತೀತ್ಯರ್ಥಃ । ಇತ್ಥಂಮಹಾನುಭಾವಃ ಕೇಶೀ ಕೋ ನಾಮೇತ್ಯತ ಆಹ । ಇದಂ ದೃಶ್ಯಮಾನಂ ಮಂಡಲಸ್ಥಂ ಯಜ್ಜ್ಯೋತಿರಿದನೇವ ಕೇಶೀತ್ಯುಚ್ಯತೇ । ನಾನ್ಯ ಇತ್ಯರ್ಥಃ ॥

|| ಪ್ರತಿಪದಾರ್ಥ ||

**ಕೇಶೀ**—ರಶ್ಮಿಗಳಿಂದ ಯುಕ್ತನಾದ ಅಥವಾ ಪ್ರಕಾಶಮಾನನಾದ ಸೂರ್ಯನು | **ಅಗ್ನಿಂ**—ಅಗ್ನಿಯನ್ನು | **ಬಿಭರ್ತಿ**—(ಹವಿಸ್ಸುಗಳಿಂದ) ಪೋಷಿಸುತ್ತಾನೆ | **ಕೇಶೀ**—ಸೂರ್ಯನು | **ವಿಷಂ**—ಉದಕವನ್ನು ಧರಿಸುತ್ತಾನೆ | **ಕೇಶೀ**—ಸೂರ್ಯನು | **ರೋದಸೀ**—ದ್ಯಾವಾಪೃಥಿವಿಗಳನ್ನು | **ಬಿಭರ್ತಿ**—ಧರಿಸುತ್ತಾನೆ | **ಕೇಶೀ**—ಸೂರ್ಯನು | **ವಿಶ್ವಂ**—ವ್ಯಾಪ್ತವಾದ | **ಸ್ವಃ**—ಸ್ವರ್ಗಲೋಕವನ್ನು | **ದೃಶೇ**—ಸಮಸ್ತರಿಗೂ ಕಾಣಿಸುವಂತೆ ಮಾಡುತ್ತಾನೆ | **ಇದಂ**—ಕಾಣಿಸುವ ಈ | **ಜ್ಯೋತಿಃ**— ಪ್ರಕಾಶಮಾನವಾದ ಸೂರ್ಯಮಂಡಲವೇ | **ಕೇಶೀ**—ಸೂರ್ಯನೆಂದು | **ಉಚ್ಯತೇ**—ಹೇಳಲ್ಪಡುತ್ತದೆ.

|| ಭಾವಾರ್ಥ ||

ಪ್ರಕಾಶಮಾನವಾದ ಮತ್ತು ರಶ್ಮಿಯುಕ್ತನಾದ ಸೂರ್ಯನು ಅಗ್ನಿಯನ್ನು ಹವಿಸ್ಸಿನಿಂದ ಪೋಷಿಸುತ್ತಾನೆ. ಅದೇ ಸೂರ್ಯನು ಉದಕವನ್ನು ಆಕರ್ಷಿಸಿ ಧರಿಸುತ್ತಾನೆ, ದ್ಯಾವಾಪೃಥಿವಿಗಳನ್ನು ಧರಿಸುತ್ತಾನೆ. ಸ್ವರ್ಗಲೋಕವನ್ನು ಎಲ್ಲರಿಗೂ ಕಾಣುವಂತೆ ಬೆಳಗುತ್ತಾನೆ. ನಮ್ಮ ಕಣ್ಣಿಗೆ ಕಾಣುತ್ತಿರುವ ಈ ಜ್ಯೋತಿರ್ಮಂಡಲವೇ ಸೂರ್ಯನು.

English Translation

The radiant (Sun supports) Agni, the radiant one (supports) water, the the radiant one supports the heaven and earth, the radiant one is for the visibility of the whole diffused (universe)—the light is called the radiant one.

ವಿಶೇಷ ವಿಷಯಗಳು

**ಕೇಶೀ ಅಗ್ನಿಂ ಕೇಶೀ ವಿಷಂ (ಬಿಭರ್ತಿ)**— ಕೇಶಃ ಎಂದರೆ ರಶ್ಮಿಗಳು. ಆ ರಶ್ಮಿಗಳುಳ್ಳವರಿಗೆ ಕೇಶಿನಃ ಎಂದು ಹೆಸರು. ಪ್ರಕೃತ ಋಕ್ಕಿನಲ್ಲಿ ಅಗ್ನಿ, ವಾಯು, ಸೂರ್ಯ ಎಂಬವರನ್ನು ಕೇಶಿನಃ ಎಂದು ಕರೆಯಲಾಗಿದೆ. ಈ ವಾಕ್ಯದಲ್ಲಿ ಸೂರ್ಯನು ಅಗ್ನಿಯನ್ನು ಧರಿಸುತ್ತಾನೆ ಎಂದಿದೆ. ಅಗ್ನಿಯಲ್ಲಿ ಹೋಮ ಮಾಡಬೇಕಾದರೂ, ಯಜ್ಞಯಾಗಾದಿಗಳನ್ನು ಮಾಡಬೇಕಾದರೂ ಕೆಲವು ನಿರ್ದಿಷ್ಟ ಕಾಲಗಳಲ್ಲಿ ಮಾಡುವರು ಯಜ್ಞಯಾಗಾದಿಗಳನ್ನು ಮಾಡುವಾಗ ಮಾಸ, ಪಕ್ಷ, ತಿಥಿ, ನಕ್ಷತ್ರ, ಪೌರ್ಣಮಾಸ್ಯ, ಅಮಾವಾಸ್ಯ, ಪ್ರಾತಃಕಾಲ, ಮಧ್ಯಾಹ್ನ ಸಾಯಂಕಾಲ, ರಾತ್ರಿ ಇತ್ಯಾದಿ ಕಾಲವಿಭಾಗಗಳನ್ನು ವಿವೇಚಿಸಬೇಕು ಇಂತಹ ಕರ್ಮಗಳು ಇಂತಹ ಕಾಲಗಳಲ್ಲಿಯೇ ಮಾಡಬೇಕೆಂಬ ನಿಯಮವಿರುವುದು. ಈ ಕಾಲವಿಭಾಗಗಳು ಸೂರ್ಯನ ಗತಿಯಿಂದಲೇ ಉಂಟಾಗುವುದರಿಂದಲೂ ಅವುಗಳಿಗೆ ಅಧಿಪತಿಯಾಗಿರುವುದರಿಂದಲೂ ಆಯಾಕಾಲಗಳಲ್ಲಿ ಮಾಡಲ್ಪಡುವ ಹೋಮಾದಿಗಳಿಗೆ ಸೂರ್ಯನ ಸಹಾಯವು ಬೇಕು. ಆದ್ದರಿಂದ ಸೂರ್ಯನ ಸಹಾಯದಿಂದ ನಡೆಸಲ್ಪಡುವ ಹೋಮಾದಿಗಳಿಂದ ಅಗ್ನಿಯು ಪೋಷಿಸಲ್ಪಡುವುದರಿಂದ ಇಲ್ಲಿ ಸೂರ್ಯನು ಅಗ್ನಿಯನ್ನು ಪೋಷಿಸಿ ಧರಿಸುವನೆಂದು ಹೇಳಲಾಗಿದೆ.

**ವಿಷಂ** ಎಂಬ ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ. ಸಮುದ್ರಾದಿಜಲಾಶಯಗಳಲ್ಲಿರುವ ಉದಕವನ್ನು ಸೂರ್ಯನು ಬೇಸಿಗೆಯಲ್ಲಿ ತನ್ನ ರಶ್ಮಿಗಳಿಂದ ಆಕರ್ಷಿಸಿ, ಆವಿಯರೂಪದಲ್ಲಿ ಅದು ವರ್ಷಾಕಾಲದಲ್ಲಿ ಮೇಘಗಳಾಗಿ ಪರಿವರ್ತಿಸುವಂತೆ ಮಾಡುವನು. ಆದ್ದರಿಂದ ವೃಷ್ಟ್ಯರ್ಥವಾಗಿ ಸೂರ್ಯನು ಉದಕವನ್ನು ಧರಿಸುವನು ಎಂದು ಇಲ್ಲಿ ಹೇಳಿದೆ.

**ಕೇಶೀ ಬಿಭರ್ತಿ ರೋದಸೀ**—ಸೂರ್ಯನು ದ್ಯಾವಾಪೃಥಿವಿಗಳನ್ನು ಧರಿಸಿ ಪೋಷಿಸುವನು. ಸೂರ್ಯನು ತನ್ನ ಪ್ರಕಾಶದಿಂದ ಭೂಮ್ಯಂತರಿಕ್ಷಗಳನ್ನು ಬೆಳಗುವನು ಮತ್ತು ತನ್ನ ರಶ್ಮಿಗಳ ಮೂಲಕ ಉದಕದನ್ನು ಆಕರ್ಷಿಸಿ ಆ ಉದಕವನ್ನು ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಬೀಳುವಂತೆ ಮಾಡಿ ಆ ಮೂಲಕ ಭೂಮಿಯ ಮೇಲೆ ಸಸ್ಯಾದಿಗಳು ಬೆಳೆಯುವಂತೆ ಮಾಡುವನು. ಈ ರೀತಿ ಬೆಳಕು, ವೃಷ್ಟ್ಯುದಕ, ಆಹಾರಾರ್ಥವಾಗಿ ಸಸ್ಯಾದಿಗಳು ಇವುಗಳನ್ನೆಲ್ಲಾ ಒದಗಿಸುವುದರಿಂದ ಸೂರ್ಯನು ದ್ಯಾವಾಪೃಥಿವಿಗಳನ್ನು ಧರಿಸಿ ಪೋಷಿಸುವನು ಎಂದು ಹೇಳಿದೆ.

**ಕೇಶೀ ವಿಶ್ವಂ ಸ್ವಃ ದೃಶೇ ಕೇಶೀ ಇದಂ ಜ್ಯೋತಿಃ ಉಚ್ಯತೇ**—ಪ್ರಪಂಚದಲ್ಲಿರುವ ಸಮಸ್ತ ಜನರೂ ತಮ್ಮ ಕಣ್ಣುಗಳಿಂದ ಇತರ ವಸ್ತುಗಳನ್ನು ನೋಡಲು ಸಹಾಯವಾಗುವಂತೆ ಸೂರ್ಯನು ತನ್ನ ಪ್ರಕಾಶವನ್ನು ಎಲ್ಲಾ ಕಡೆಯಲ್ಲಿಯೂ ಬೀರುವನು. ಸೂರ್ಯನ ಪ್ರಕಾಶವಿಲ್ಲದಿದ್ದರೆ ಯಾವ ಪ್ರಾಣಿಗಳೂ ಏನನ್ನೂ ನೋಡಲಾಗುವುದಿಲ್ಲ. ಯಾವ ಕಾರ್ಯವನ್ನೂ ಮಾಡಲಾಗುವುದಿಲ್ಲ. ಸೂರ್ಯನ ಪ್ರಕಾಶವು ಎಲ್ಲರಿಗೂ ಅತ್ಯವಶ್ಯಕವು. ನಮ್ಮ ಕಣ್ಣೆದುರಿಗೆ ಕಾಣುತ್ತಿರುವ ಈ ಜ್ಯೋತಿರ್ಮಂಡಲವೇ ಸೂರ್ಯನು.

ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

**ಕೇಶ್ಯಗ್ನಿಂ ಚ ವಿಷಂ ಚ । ವಿಷಮಿತ್ಯುದಕನಾಮ। ವಿಷ್ಣಾತೇರ್ವಿಪೂರ್ವಸ್ಯ ಸ್ನಾತೇಃ ಶುದ್ಧ್ಯರ್ಥಸ್ಯ ವಿಪೂರ್ವಸ್ಯ ವಾ ಸಚತೇಃ । ದ್ಯಾವಾಪೃಥಿವ್ಯೌ ಚ ಧಾರಯತಿ ಕೇಶೀದಂ ಸರ್ವಮಿದಮಭಿವಿಪಶ್ಯತಿ, ಕೇಶೀದಂ ಜ್ಯೋತಿರುಚ್ಯತ ಇತ್ಯಾದಿತ್ಯಮಾಹ ॥ ಅಥಾಪ್ಯೇತೇ ಇತರೇ ಜ್ಯೋತಿಷೀ ಕೇಶಿನೀ ಉಚ್ಯೇತೇ । ಧೂಮೇನಾಗ್ನೀ ರಜಸಾ ಚ ಮಧ್ಯಮಃ ॥**

(ನಿ. ೧೨-೩೬)

ಈ ಕೇಶಿಯು (ಆದಿತ್ಯನು) ಅಗ್ನಿಯನ್ನೂ ಉದಕವನ್ನೂ ಧರಿಸುತ್ತಾನೆ. ವಿಷವೆಂದರೆ ಉದಕಕ್ಕೆ ಹೆಸರು. ಶುದ್ಧಿಮಾಡು ಎಂಬರ್ಥವುಳ್ಳ ವಿ ಎಂಬ ಉಪಸರ್ಗಪೂರ್ವಕವಾದ **ಸ್ನಾ** ಎಂಬ ಧಾತುವಿನಿಂದ **ವಿಷಂ** ಎಂಬ ಶಬ್ದದ ನಿಷ್ಪತ್ತಿಯಾಗಿದೆ. ಅಥವಾ ಅನುಸರಿಸು ಜತೆಯಲ್ಲಿರು ಎಂಬರ್ಥವುಳ್ಳ **ಸಚ್** ಧಾತುವಿನಿಂದಲಾದರೂ ವಿಷಶಬ್ದದ ನಿಷ್ಪತ್ತಿಯಾಗಬಹುದು. ಈ ಕೇಶಿಯು (ಆದಿತ್ಯನು) ದ್ಯಾವಾಪೃಥಿವಿಗಳನ್ನು ಧರಿಸಿ ಪೋಷಿಸುತ್ತಾನೆ ಮತ್ತು ಈ ಸಮಸ್ತ ಜಗತ್ತನ್ನೂ ನೋಡುತ್ತಾನೆ (ರಶ್ಮಿಗಳಿಂದ ವ್ಯಾಪಿಸುತ್ತಾನೆ) ನಮಗೆ ಕಾಣುತ್ತಿರುವ ಈ ಜ್ಯೋತಿರ್ಮಂಡಲವೇ ಆದಿತ್ಯನು ಎಂದು ಹೇಳುವರು. ಇದಲ್ಲದೆ ಇನ್ನೆರಡು ವಿಧವಾದ ಜ್ಯೋತಿಗಳು ಇರುವವು. ಅವುಗಳನ್ನು ಕೇಶೀ ಎಂದು ಕರೆಯುವರು. ಅವು ಯಾವುವೆಂದರೆ ಭೂಮಿಯಲ್ಲಿರುವ ಪ್ರಸಿದ್ಧವಾದ ಅಗ್ನಿಯು. ಈ ಅಗ್ನಿಯ ಧೂಮವು (ಹೊಗೆ) ಕೇಶದಂತೆ ಇರುವುದು. ಆದ್ದರಿಂದ ಅಗ್ನಿಗೂ ಕೇಶಿಯೆಂದು ಹೆಸರು. ಮಧ್ಯಮಸ್ಥಾನದೇವತೆಯಾದ ವಾಯುವು. ಈ ವಾಯುವು ವಿದ್ಯುದಗ್ನಿಯಿಂದ ಕೂಡಿರುವನು. ಅಂತರಿಕ್ಷದಲ್ಲಿ ವಾಯುವು ಮಂಜಿನಿಂದ ಕೂಡಿರುವುದು. ಈ ಮಂಜು ಕೇಶರೂಪದಲ್ಲಿರುವುದು. ಆದ್ದರಿಂದ ವಾಯುವನ್ನೂ ಕೇಶೀ ಎಂದು ಕರೆಯಬಹುದು. ಈ ಕೇಶಿನಃ ಎಂಬ ಹೆಸರಿನ ದೇವತೆಗಳನ್ನು ಸ್ತುತಿಸುವ ಮತ್ತೊಂದು ಋಕ್ಕಿರುವುದು—

**ತ್ರಯಃ ಕೇಶಿನ ಋತುಥಾ ವಿ ಚಕ್ಷತೇ ಸಂವತ್ಸರೇ ವಪತ ಏಕ ಏಷಾಂ ।**
**ವಿಶ್ವಮೇಕೋ ಅಭಿ ಚಷ್ಟೇ ಶಚೀಭಿರ್ಧ್ರಾಜಿರೇಕಸ್ಯ ದದೃಶೇ ನ ರೂಪಂ ॥**

( ಋ. ಸಂ. ೧-೧೬೪-೪೪)

ತ್ರಯಃ ಕೇಶಿನ ಋತುಥಾ ವಿಚಕ್ಷತೇ ಕಾಲೇಕಾಲೇಽಭಿವಿಪಶ್ಯಂತಿ ಸಂವತ್ಸರೇ ವಪತೆ ಏಕ ಏಷಾಮಿತ್ಯಗ್ನಿಃ ಪೃಥಿವೀಂ ದಹತಿ ಸರ್ವಮೇಕೋಽಭಿವಿಪಶ್ಯತಿ ಕರ್ಮಭಿರಾದಿತ್ಯೋ ಗತಿರೇಕಸ್ಯ ದೃಶ್ಯತೇ ನ ರೂಪಂ ಮಧ್ಯಮಸ್ಯ ॥ (ನಿ. ೧೨-೨೭)

ಕೇಶಿನಃ ಎಂಬ ಹೆಸರಿನಿಂದ ಕರೆಯಲ್ಪಡುವ ಮೂರುಮಂದಿ ದೇವತೆಗಳು (ಅಗ್ನಿ, ಸೂರ್ಯ, ವಾಯುಗಳು) ಆಯಾ ಕಾಲಗಳಲ್ಲಿ ತಮ್ಮ ಕೆಲಸಕಾರ್ಯಗಳನ್ನು ನಿರ್ವಹಿಸುವರು. ಅವರಲ್ಲಿ ಒಬ್ಬನು ಭೂಮಿಯಲ್ಲಿ ದಹಿಸುವನು ಇವನೇ ಅಗ್ನಿಯು; ಇನ್ನೊಬ್ಬನು ತನ್ನ ವೃಷ್ಟಿಪ್ರಕಾಶನಾದಿಕರ್ಮಗಳಿಂದ ಸಮಸ್ತ ಜಗತ್ತನ್ನೂ ಅನುಗ್ರಹಬುದ್ಧಿಯಿಂದ ನೋಡುವನು. ಇವನೇ ಆದಿತ್ಯನು, ಇನ್ನೊಬ್ಬನ ಗಮನವು ಮಾತ್ರ ಕಾಣಲ್ಪಡುವುದು ರೂಪವು ಕಾಣಿಸುವುದಿಲ್ಲ ಇವನೇ ವಾಯುವು. ಎಂದರೆ ಗಾಳಿಯು ಬೀಸುವುದನ್ನು ನಾವು ತಿಳಿಯಬಲ್ಲೆವು. ಆದರೆ ಅದರ ರೂಪವನ್ನು ಕಣ್ಣಿನಿಂದ ನೋಡಲು ಸಾಧ್ಯವಿಲ್ಲ ಎಂದು ನಿರ್ವಚನಾಭಿಪ್ರಾಯವು.

॥ ಸಂಹಿತಾಪಾಠಃ ॥

ಮುನಯೋ ವಾತರಶನಾಃ ಪಿಶಂಗಾ ವಸತೇ ಮಲಾ ।
ವಾತಸ್ಯಾನು ಧ್ರಾಜಿಂ ಯಂತಿ ಯದ್ದೇವಾಸೋ ಅವಿಕ್ಷತ ॥ ೨ ॥

॥ ಪದಪಾಠಃ ॥

ಮುನಯಃ । ವಾತಽರಶನಾಃ । ಪಿಶಂಗಾ । ವಸತೇ । ಮಲಾ ।
ವಾತಸ್ಯ । ಅನು । ಧ್ರಾಜಿಂ । ಯಂತಿ । ಯತ್ । ದೇವಾಸಃ । ಅವಿಕ್ಷತ ॥ ೨ ॥

॥ ಸಾಯಣಭಾಷ್ಯಂ ॥

ವಾತರಶನಾ ವಾತರಶನಸ್ಯ ಪುತ್ರಾ ಮುನಯೋಽತೀಂದ್ರಿಯಾರ್ಥದರ್ಶಿನೋ ಜೂತಿವಾತಜೂತಿಪ್ರಭೃತಯಃ ಪಿಶಂಗಾ ಪಿಶಂಗಾನಿ ಕಪಿಲವರ್ಣಾನಿ ಮಲಾ ಮಲಿನಾನಿ ವಲ್ಕಲರೂಪಾಣಿ ವಾಸಾಂಸಿ ವಸತೇ। ಆಚ್ಛಾದಯಂತಿ ॥ ವಸ ಆಚ್ಛಾದನೇ ಆದಾದಿಕಃ ॥ ಈದೃಶಾಸ್ತೇ ಯದ್ಯದಾ ದೇವಾಸೋ ದೇವಾಸ್ತಪಸೋ ಮಹಿಮ್ನಾ ದೀಪ್ಯಮಾನಾಃ ಸಂತೋಽವಿಕ್ಷತ ದೇವತಾಸ್ವರೂಪಂ ಪ್ರಾವಿಶನ್ ॥ ವಿಶೇರ್ಲುಙಿ ಶಲ ಇಗುಪಧಾದನಿಟಃ ಕ್ಸಃ । ವ್ಯತ್ಯಯೇನಾತ್ಮನೇಪದಂ ॥ ತದಾ ತೇ ವಾತಸ್ಯ ವಾಯೋರ್ಧ್ರಾಜಿಂ ಗತಿಮನು ಯಂತಿ । ಅನುಗಚ್ಛಂತಿ । ಪ್ರಾಣೋಪಾಸನಯಾ ಪ್ರಾಣರೂಪಿಣೋ ವಾಯುಭಾವಂ ಪ್ರಪನ್ನಾ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಾತರಶನಾಃ**—ವಾತರಶನ ಎಂಬ ಋಷಿಯ ಪುತ್ರರಾದ । **ಮುನಯಃ**—ಅತೀಂದ್ರಿಯಾರ್ಥದರ್ಶಿಗಳಾದ **ಜೂತಿವಾತಜೂತಿ** ಮೊದಲಾದ ಋಷಿಗಳು । **ಪಿಶಂಗಾಃ**—ಕಪಿಲವರ್ಣವುಳ್ಳ (ಮಾಸಲು ಬಣ್ಣದ) । **ಮಲಾ**—

ಮಲಿನವಾದ ಎಂದರೆ ಕೊಳಕಾದ ವಸ್ತ್ರಗಳನ್ನು । **ವಸತೇ**— ಹೊದ್ದಿರುತ್ತಾರೆ (ಈ ಋಷಿಗಳ) । **ಯತ್**— ಯಾವಾಗ । **ದೇವಾಸಃ**— ತಮ್ಮ ತಪಸ್ಸಿನಿಂದಲೂ, ಮಹಿಮೆಯಿಂದಲೂ ಪ್ರಕಾಶಿಸುತ್ತಾ । **ಅವಿಕ್ಷತ**—ದೇವತಾಸ್ವರೂಪವನ್ನು ಪ್ರವೇಶಿಸುವರೋ ಆಗ । **ವಾತಸ್ಯ**— ವಾಯುವಿನ । **ಧ್ರಾಜಿಂ**— ಗತಿಯನ್ನು । **ಅನು ಯಂತಿ**— ಅನುಸರಿಸುತ್ತಾರೆ.

॥ ಭಾವಾರ್ಥ ॥

ಅತೀಂದ್ರಿಯಜ್ಞಾನಿಗಳೂ, ವಾತರಶನಋಷಿಯ ಪುತ್ರರೂ ಆದ ಜೂತಿ ಮೊದಲಾದ ಋಷಿಗಳು ಮಾಸಲು ಬಣ್ಣದ ಕೊಳಕಾದ ವಲ್ಕಲವಸ್ತ್ರಗಳನ್ನು (ನಾರುಬಟ್ಟೆಗಳನ್ನು) ಧರಿಸುತ್ತಾರೆ. ಆದರೆ ಅವರು ತಮ್ಮ ತಪಸ್ಸಿನ ಮಹಿಮೆಯಿಂದ ದೇವತಾಸ್ವರೂಪವನ್ನು ಪಡೆದಾಗ ವಾಯುವಿನ ಗತಿಯನ್ನು ಅನುಸರಿಸುತ್ತಾರೆ.

## English Translation

The Munis, the sons of Vatarashana, wear the yellow dirty (vestments of bark), they follow the course of the wind, when they have assumed the (power of) gods.

॥ ವಿಶೇಷವಿಷಯಗಳು ॥

ವಾತರಶನ ಋಷಿಯ ಪುತ್ರರಾದ ಈ ಸೂಕ್ತದ್ರಷ್ಟೃಗಳಾದ ಜೂತಿ ಮೊದಲಾದ ಋಷಿಗಳು ಕಾಡಿನಲ್ಲಿ ತಮ್ಮ ಆಶ್ರಮದಲ್ಲಿ ವಾಸಿಸುವುದರಿಂದ ನಗರವಾಸಿಗಳಂತೆ ಅವರು ಶುಭ್ರವಾದ ಸುತ್ತು ಬೆಲೆಬಾಳುವ ವಸ್ತ್ರಗಳನ್ನು ಧರಿಸಲು ಸಾಧ್ಯವಿಲ್ಲ. ಆದ್ದರಿಂದ ಮಾಸಲುಬಣ್ಣದ ನಾರುಮಡಿಗಳನ್ನು ಮಾತ್ರ ಧರಿಸುತ್ತಾರೆ ಪೂರ್ವದಲ್ಲಿ ವಸ್ತ್ರವು ದೊರೆಯದ ಸ್ಥಳಗಳಲ್ಲಿ ಕಾಡುಜನರು ಕೆಲವು ಮರದ ತೊಗಟೆಗಳನ್ನು ಜಜ್ಜಿ ಹದಮಾಡಿ ಅದನ್ನು ವಸ್ತ್ರಾರ್ಥವಾಗಿ ಉಪಯೋಗಿಸುತ್ತಿದ್ದರು. ಈಗಲೂ ಅನೇಕ ದೇಶಗಳಲ್ಲಿನ ಕಾಡುಜನರು ಈ ವಿಧವಾದ ಮರದ ತೊಗಟೆಯನ್ನು ಅಥವಾ ಕೆಲವು ಜಾತಿಯ ಹುಲ್ಲನ್ನು ಬಟ್ಟೆಗೆ ಬದಲಾಗಿ ಉಪಯೋಗಿಸುತ್ತಾರೆ. ಆದರೆ ಜೂತಿ ಮೊದಲಾದ ಆ ಋಷಿಗಳ ತಪೋಮಹಿಮೆಯು ಅಗಾಧವಾದದ್ದು. ಅವರು ತಮ್ಮ ತಪಸ್ಸಿನಿಂದ ಪ್ರಾಣವಾಯುವನ್ನು ಪ್ರಾಣಾಯಾಮಾದಿಗಳಿಂದ ವಶಪಡಿಸಿಕೊಂಡು ವಾಯುಭಾಗವನ್ನು ಎಂದರೆ ಸೂಕ್ಷ್ಮರೂಪದ ದೇವತಾಸ್ವರೂಪವನ್ನು ಪಡೆದಿರುವದು. ಇವರು ವಾಯುವಿನ ಗತಿಯನ್ನು ಅನುಸರಿಸುವರು ಎಂದರೆ ಇತರ ಸಾಮಾನ್ಯಮನುಷ್ಯರಿಗೆ ಅಗೋಚರವಾದ ವಾಯುವಿನ ಗತಿಯು ಇವರಿಗೆ ಗೋಚರವಾಗುವುದು. ಇತರರಿಗೆ ಸಾಧ್ಯವಾಗದ ಕಾರ್ಯವು ದೇವತಾಸ್ವರೂಪದಿಂದಿರುವ ಇವರಿಗೆ ಸಾಧ್ಯವಾಗುವುದು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಉನ್ಮದಿತಾ ಮೌನೇಯೇನ ವಾತಾ ಆ ತಸ್ಥಿಮಾ ವಯಂ ।

ಶರೀರೇದಸ್ಮಾಕಂ ಯೂಯಂ ಮರ್ತಾಸೋ ಅಭಿ ಪಶ್ಯಥ ॥ ೩ ॥

|| ಪದಪಾಠಃ ||

**ಉತ್ऽಮದಿತಾಃ । ಮೌನೇಯೇನ । ವಾತಾನ್ । ಆ । ತಸ್ಥಿಮ । ವಯಂ ।**

**ಶರೀರಾ । ಇತ್ । ಅಸ್ಮಾಕಂ । ಯೂಯಂ । ಮರ್ತಾಸಃ । ಅಭಿ । ಪಶ್ಯಥ || ೩ ||**

। ಸಾಯಣಭಾಷ್ಯಂ ॥

**ಮೌನೇಯೇನ ಮುನಿಭಾವೇನ ಲೌಕಿಕಸರ್ವವ್ಯವಹಾರವಿಸರ್ಜನೇನೋನ್ಮದಿತಾ ಉನ್ಮತ್ತಾ ಉನ್ಮತ್ತವದಾಚರಂತಃ । ಯದ್ವಾ । ಉತ್ಕೃಷ್ಟಂ ಮದಂ ಹರ್ಷಂ ಪ್ರಾಪ್ತಾಃ । ವಯಂ ವಾತಾನ್ವಾಯೂನಸ್ಮಾಭಿರುಪಾಸ್ಯಮಾನಾನಾ ತಸ್ಥಿಮ । ಆಸ್ಥಿತವಂತಃ । ಹೇ ಮರ್ತಾಸೋ ಮನುಷ್ಯಾಃ ಅಸ್ಮಾಕಂ ಶರೀರೇಚ್ಛರೀರಾಣ್ಯೇವ ಯೂಯಂ ಕೇವಲಮಭಿ ಪಶ್ಯಥ । ನಾಸ್ಮಾನ್ । ಯತೋ ವಯಂ ನೀರೂಪೇಣ ವಾಯುನಾ ಸಾಯುಜ್ಯಂ ಪ್ರಾಪ್ತಾಃ ॥**

॥ ಪ್ರತಿಪದಾರ್ಥ ॥

**ಮೌನೇಯೇನ**—ಲೌಕಿಕವ್ಯವಹಾರಗಳನ್ನು ಬಿಟ್ಟು ಮುನಿಭಾವದಿಂದ । **ಉನ್ಮದಿತಾಃ**—ಉನ್ಮತ್ತರಂತಿರುವ ಅಥವಾ ಉತ್ಕೃಷ್ಟವಾದ ಹರ್ಷವನ್ನನುಭವಿಸುತ್ತಿರುವ । **ವಯಂ**—ನಾವು । **ವಾತಾನ್**—(ನಾವು ಉಪಾಸಿಸುವ) ವಾಯುಗಳನ್ನು । **ಆ ತಸ್ಥಿಮ**—ಹತ್ತಿ ಕುಳಿತಿದ್ದೇವೆ । **ಮರ್ತಾಸಃ**—ಎಲೈ ಮನುಷ್ಯರೇ । **ಅಸ್ಮಾಕಂ**—ನಮ್ಮ । **ಶರೀರಾ ಇತ್**—ಶರೀರಗಳನ್ನು । **ಯೂಯಂ**—ನೀವು । **ಪಶ್ಯಥ**—ನೋಡಿರಿ.

|| ಭಾವಾರ್ಥ ||

ಲೌಕಿಕವ್ಯವಹಾರಗಳನ್ನು ಬಿಟ್ಟು ಮುನಿಭಾವದಿಂದ ಇರುತ್ತಾ ಹರ್ಷಚಿತ್ತರಾಗಿರುವ ನಾವು ಉಪಾಸನೆ ಮಾಡುತ್ತಿರುವ ವಾಯುವಿನ ಮೇಲೆ ಹತ್ತಿ ಕುಳಿತಿದ್ದೇವೆ. ಎಲೈ ಮನುಷ್ಯರೇ, ನಮ್ಮ ಶರೀರಗಳನ್ನು ನೀವು ನೋಡಿರಿ.

## English Translation

Exhilarated by the sanctity of the Muni we have mounted upon the winds, behold, mortals, (in them) our forms !

॥ ವಿಶೇಷವಿಷಯಗಳು ॥

**ಉನ್ಮದಿತಾಃ-ಉನ್ಮತ್ತಾ ಉನ್ಮತ್ತವದಾಚರಂತಃ ಯದ್ವಾ ಉತ್ಕೃಷ್ಟಂ ಮದಂ ಹರ್ಷಂ ಪ್ರಾಪ್ತಾಃ ।** ತಾವು ಧರಿಸಿರುವ ಮಲಿನ ವಸ್ತ್ರಗಳಿಂದ ಉನ್ಮತ್ತರಂತೆ (ಹುಚ್ಚರಂತೆ) ಕಾಣುತ್ತಿರುವವರು ಅಥವಾ ಮದವೆಂದರೆ ಹರ್ಷ. ಹರ್ಷಚಿತ್ತರಾಗಿರುವವರು.

**ವಾತಾನ್ ಆ ತಸ್ಥಿಮ ವಯಂ**—ವಾಯುವಿನ ಮೇಲೆ ಹತ್ತಿಕುಳಿತಿರುವುದು ಎಂದರೇನು. ಇವರು ವಾಯುವನ್ನು ಉಪಾಸನೆ ಮಾಡುತ್ತಾ ವಾಯುಸ್ವರೂಪವನ್ನು ಪಡೆದು ಸೂಕ್ಷ್ಮರೂಪದಿಂದ ವಾಯುವಿನಲ್ಲಿ ಅಂತರ್ಗತರಾ

ಗಿರುವರೆಂದಭಿಪ್ರಾಯವು. ತಪೋ ಮಹಿಮೆಯಿಂದ ತಪಸ್ವಿಯು ಎಂತಹ ಸೂಕ್ಷ್ಮರೂಪವನ್ನಾದರೂ ಧರಿಸಬಲ್ಲನು. ಈ ಋಷಿಗಳು ತಮ್ಮ ತಪೋ ಮಹಿಮೆಯಿಂದ ವಾಯುವಿನಂತೆ ಸೂಕ್ಷ್ಮವಾದ ರೂಪಗಳನ್ನು ಧರಿಸಿರುವರು. ಅದನ್ನೇ ಇಲ್ಲಿ ವಾಯುವಿನ ಮೇಲೆ ಕುಳಿತಿರುವರೆಂದು ವರ್ಣಿಸಿರಬಹುದು.

॥ ಸಂಹಿತಾಪಾಠಃ ॥

ಅಂತರಿಕ್ಷೇಣ ಪತತಿ ವಿಶ್ವಾ ರೂಪಾವಚಾಕಶತ್ ।
ಮುನಿರ್ದೇವಸ್ಯದೇವಸ್ಯ ಸೌಕೃತ್ಯಾಯ ಸಖಾ ಹಿತಃ ॥ ೪ ॥

॥ ಪದಪಾಠಃ ॥

ಅಂತರಿಕ್ಷೇಣ । ಪತತಿ । ವಿಶ್ವಾ । ರೂಪಾ । ಅವಽಚಾಕಶತ್ ।
ಮುನಿಃ । ದೇವಸ್ಯಽದೇವಸ್ಯ । ಸೌಕೃತ್ಯಾಯ । ಸಖಾ । ಹಿತಃ ॥ ೪ ॥

॥ ಸಾಯಣಭಾಷ್ಯಂ ॥

**ಮುನಿರಸ್ಯ ರ್ಚೋ ದ್ರಷ್ಟಾ ವೃಷಾಣಕ ಋಷಿರ್ವಾತರೂಪತಾಂ ಸೂರ್ಯಾತ್ಮತಾಂ ವಾ ತತ್ತದುಪಾಸನಯಾ ಪ್ರಾಪ್ತಃ ಸನ್ನಂತರಿಕ್ಷೇಣಾಕಾಶೇನ ಪತತಿ । ಗಚ್ಛತಿ । ಕಿಂ ಕುರ್ವನ್ । ವಿಶ್ವಾ ವಿಶ್ವಾನಿ ಸರ್ವಾಣಿ ರೂಪಾಣಿ ರೂಪ್ಯಮಾಣಾನಿ ಪದಾರ್ಥಜಾತಾನ್ಯವಚಾಕಶದಭಿಪಶ್ಯನ್ ಸ್ವತೇಜಸಾ ದರ್ಶಯನ್ । ತಥಾ ದೇವಸ್ಯದೇವಸ್ಯ ॥ ನಿತ್ಯವೀಪ್ಸಯೋರಿತಿ ದ್ವಿರ್ವಚನಂ । ಅನುದಾತ್ತಂ ಚೇತಿ ಪರಸ್ಯಾಮ್ರೇಡಿತಸ್ಯಾನುದಾತ್ತತ್ವಂ ॥ ಸರ್ವಸ್ಯಾಪಿ ದೇವಸ್ಯ ಸಖಾ ಸಖಿಭೂತಃ ಅತ ಏವ ಸೌಕೃತ್ಯಾಯ । ಸುಷ್ಠು ದೇವಾನುದ್ದಿಶ್ಯ ಕ್ರಿಯಮಾಣಂ ಯಾಗಾತ್ಮಕಂ ಕರ್ಮ ಸುಕೃತಂ । ತಸ್ಯ ಭಾವಾಯ ಸಮ್ಯಗನುಷ್ಠಾಪನಾಯ ಹಿತಃ । ಸಹಿತಃ ಸ್ಥಾಪಿತೋ ಭವತಿ ॥**

॥ ಪ್ರತಿಪದಾರ್ಥ ॥

**ಮುನಿಃ**— ಈ ಋಕ್ಕಿನ ದ್ರಷ್ಟೃವಾದ ವೃಷಾಣಕನೆಂಬ ಋಷಿಯು (ವಾಯು ಅಥವಾ ಸೂರ್ಯನಲ್ಲಿ ಐಕ್ಯವಾಗಿ) । **ವಿಶ್ವಾ** — ಸಮಸ್ತವಾದ । **ರೂಪಾ**— ಆಕಾರಗಳಿಂದ ಕೂಡಿದ ವಸ್ತುಗಳನ್ನು । **ಅವಚಾಕಶನ್**— ನೋಡುತ್ತಾ । **ಅಂತರಿಕ್ಷೇಣ**— ಅಂತರಿಕ್ಷಮಾರ್ಗದಲ್ಲಿ । **ಪತತಿ** – ಸಂಚರಿಸುತ್ತಾನೆ (ಹಾಗೆಯೇ) । **ದೇವಸ್ಯದೇವಸ್ಯ**— ಪ್ರತಿಯೊಂದುದೇವತೆಯ । **ಸಖಾ**— ಮಿತ್ರನಾಗಿ । **ಸೌಕೃತ್ಯಾಯ**— ಯಾಗಾದಿಸತ್ಕರ್ಮಗಳ ನಿರ್ವಹಣೆಗಾಗಿ । **ಹಿತಃ**— ಸ್ಥಾಪಿತನಾಗಿದ್ದಾನೆ.

॥ ಭಾವಾರ್ಥ ॥

ಈ ಋಕ್ಕಿನ ದ್ರಷ್ಟೃವಾದ ವೃಷಾಣಕನೆಂಬ ಋಷಿಯು ತನ್ನ ಉಪಾಸನಾಸಾಮರ್ಥ್ಯದಿಂದ ಸೂರ್ಯ ಅಥವಾ ವಾಯುವಿನಲ್ಲಿ ತಾದಾತ್ಮ್ಯವನ್ನು ಪಡೆದು ಸಮಸ್ತ ವಸ್ತುಗಳ ರೂಪಗಳನ್ನು ನೋಡುತ್ತಾ ಆಕಾಶಮಾರ್ಗದಲ್ಲಿ

ಸಂಚರಿಸುತ್ತಾನೆ. ಹಾಗೆಯೇ ಪ್ರತಿದೇವತೆಯ ವಿಷಯದಲ್ಲಿಯೂ ಸ್ನೇಹಭಾವದಿಂದ ವರ್ತಿಸುತ್ತಾ ಯಾಗಾದಿ ಕರ್ಮಾನುಷ್ಠಾನ ನಿರ್ವಹಣೆಗಾಗಿ ನಿಯೋಜಿತನಾಗಿದ್ದಾನೆ.

English Translation

The Muni flies through the firmament, illumining all objects, the friend of each deity, appointed for pious works.

॥ ಸಂಹಿತಾಪಾಠಃ ॥

ವಾತಸ್ಯಾಶ್ವೋ ವಾಯೋಃ ಸಖಾಥೋ ದೇವೇಷಿತೋ ಮುನಿಃ ।
ಉಭೌ ಸಮುದ್ರಾವಾ ಕ್ಷೇತಿ ಯಶ್ಚ ಪೂರ್ವ ಉತಾಪರಃ ॥ ೫ ॥

॥ ಪದಪಾಠಃ ॥

ವಾತಸ್ಯ । ಅಶ್ವಃ । ವಾಯೋಃ । ಸಖಾ । ಅಥೋ ಇತಿ । ದೇವಽಇಷಿತಃ । ಮುನಿಃ ।

ಉಭೌ । ಸಮುದ್ರೌ । ಆ । ಕ್ಷೇತಿ । ಯಃ । ಚ । ಪೂರ್ವಃ । ಉತ । ಅಪರಃ ॥ ೫ ॥

॥ ಸಾಯಣಭಾಷ್ಯಂ ॥

ವಾತಸ್ಯ ವಾಯೋರ್ಗತಿರಿವಾಶ್ವೋ ವ್ಯಾಪ್ತಃ । ಯದ್ವಾ । ವಾಯೋರಶಿತಾ ಭೋಕ್ತಾ। ವಾಯುರೇವ ತಸ್ಯಾಹಾರ ಇತ್ಯರ್ಥಃ । ಅತ ಏವ ವಾಯೋಃ ಸಖಾ ಮಿತ್ರಭೂತಃ ಅಥೋ ಅಪಿ ಚ ದೇವೇಷಿತೋ ದೇವೇನ ದ್ಯೋತಮಾನೇನ ವಾಯುನಾ ಸೂರ್ಯೇಣ ವೇಷಿತಃ ಪ್ರಾಪ್ತಃ ॥ ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥ ಈದೃಶೋ ಮುನಿಃ ಕರಿಕ್ರತಾಖ್ಯ ಋಷಿರುಕ್ತಪ್ರಕಾರೇಣ ವಾಯುರೂಪಃ ಸೂರ್ಯರೂಪೋ ವಾ ಸನ್ನುಭೌ ಸಮುದ್ರಾವುದಧೀ ಆ ಕ್ಷೇತಿ । ಅಭಿಗಚ್ಛತಿ॥ ಕ್ಷಿ ನಿವಾಸಗತ್ಯೋಃ। ಛಾಂದಸೋ ವಿಕರಣಸ್ಯ ಲುಕ್ ॥ ಕೌ ತೌ ಸಮುದ್ರೌ। ಯಶ್ಚ ಪೂರ್ವಃ ಸಮುದ್ರಃ । ಉತಶಬ್ದಶ್ಚಾರ್ಥೇ। ಯಶ್ಚಾಪರಃ ಸಮುದ್ರಃ ॥

॥ ಪ್ರತಿಪದಾರ್ಥ ॥

**ವಾತಸ್ಯ**— ವಾಯುವಿನ ಗತಿಯಂತೆ । **ಅಶ್ವಃ**— ಸರ್ವವ್ಯಾಪ್ತನಾದ (ಅಥವಾ) । [**ವಾತಸ್ಯ**— ವಾಯುವನ್ನೇ । **ಅಶ್ವಃ**—ಆಹಾರವಾಗಿವುಳ್ಳ] ಆದ್ದರಿಂದಲೇ । **ವಾಯೋಃ**— ವಾಯುವಿಗೆ । **ಸಖಾ**—ಸ್ನೇಹಿತನಾದ । **ಅಥೋ**— ಮತ್ತು । **ದೇವೇಷಿತಃ**— ಪ್ರಕಾಶಮಾನನಾದ ಸೂರ್ಯನಿಂದ ಅಥವಾ ವಾಯುವಿನಿಂದ ಪ್ರಾಪ್ತನಾದ **ಮುನಿಃ**— ಈ ಋಕ್ಕಿನ ದ್ರಷ್ಟೃವಾದ ಕರಿಕ್ರತನೆಂಬ ಮುನಿಯು । **ಯಃ ಚ ಪೂರ್ವಃ**— ಪೂರ್ವದಿಕ್ಕಿನಲ್ಲಿ ಯಾವ ಸಮುದ್ರವಿರುವುದೋ । **ಉತ**— ಮತ್ತು । **ಅಪರಃ**— ಬೇರೇ ದಿಕ್ಕಿನಲ್ಲಿ ಎಂದರೆ ಪಶ್ಚಿಮದಿಕ್ಕಿನಲ್ಲಿರುವ । **ಉಭೌ ಸಮುದ್ರೌ**— ಈ ಎರಡು ಸಮುದ್ರಗಳನ್ನು । **ಆ ಕ್ಷೇತಿ**— ಸಮೀಪಿಸಿ ಹೋಗುತ್ತಾನೆ.

॥ ಭಾವಾರ್ಥ ॥

ವಾಯುವಿನಂತೆ ಸರ್ವವ್ಯಾಪ್ತನಾದ ಅಥವಾ ವಾಯುವೇ ಆಹಾರವಾಗಿವುಳ್ಳವನೂ ಮತ್ತು ವಾಯುವಿಗೆ ಸ್ನೇಹಿತನಾದವನೂ, ಪ್ರಕಾಶಮಾನನಾದ ಸೂರ್ಯನಲ್ಲಿ ಅಥವಾ ವಾಯುವಿನಲ್ಲಿ ತಾದಾತ್ಮ್ಯವನ್ನು ಪಡೆದವನೂ ಆದ ಈ ಋಕ್ಕಿನ ದ್ರಷ್ಟೃವಾದ ಕರಿಕ್ರತನೆಂಬ ಋಷಿಯು ಪೂರ್ವ ಮತ್ತು ಪಶ್ಚಿಮ ಸಮುದ್ರಗಳೆಂಬ ಎರಡು ಸಮುದ್ರಗಳ ಬಳಿಗೂ ಹೋಗುತ್ತಾನೆ.

English Translation.

The steed of the wind, the friend of Vayu, the Muui, who is instigated by the deity, repairs to both oceans, the eastern and the western.

॥ ಸಂಹಿತಾಪಾಠಃ ॥

ಅಪ್ಸರಸಾಂ ಗಂಧರ್ವಾಣಾಂ ಮೃಗಾಣಾಂ ಚರಣೇ ಚರನ್ ।
ಕೇಶೀ ಕೇತಸ್ಯ ವಿದ್ವಾನ್ತ್ಸಖಾ ಸ್ವಾದುರ್ಮದಿಂತಮಃ ॥ ೬ ॥

॥ ಪದಪಾಠಃ ॥

ಅಪ್ಸರಸಾಂ । ಗಂಧರ್ವಾಣಾಂ । ಮೃಗಾಣಾಂ । ಚರಣೇ । ಚರನ್ ।
ಕೇಶೀ । ಕೇತಸ್ಯ । ವಿದ್ವಾನ್ । ಸಖಾ । ಸ್ವಾದುಃ । ಮದಿನ್ऽತಮಃ ॥ ೬ ॥

॥ ಸಾಯಣಭಾಷ್ಯಂ ॥

ಅಪ್ಸರಸಾಂ ದೇವಸ್ತ್ರೀಣಾಂ ಗಂಧರ್ವಾಣಾಂ ಚರಣೇ ಸಂಚಾರಭೂತೇ ದಿವ್ಯಂತರಿಕ್ಷೇ ಚ ತಥಾ ಮೃಗಾಣಾಂ ಸಿಂಹಾದೀನಾಂ ಸಂಚಾರಸ್ಥಲೇ ಪೃಥಿವ್ಯಾಂ ಚರನ್ ವ್ಯಾಪ್ಯ ಸಂಚರನ್ಕೇಶ್ಯಗ್ನಿರ್ವಾಯುಃ ಸೂರ್ಯೋ ವಾ ಕೇತಸ್ಯ ಜ್ಞಾತವ್ಯಸ್ಯ ಸರ್ವಸ್ಯಾರ್ಥಜಾತಸ್ಯ ವಿದ್ವಾನ್ ಯದ್ವಾ ಜ್ಞಾತವ್ಯಸ್ಯಾಸ್ಯರ್ಷೇರೇತಶಸ್ಯ ಸಖಾ ವಿದ್ವಾನವಿಶೇಷಾತ್ಸರ್ವಂ ಜಾನನ್ ಸ್ವಾದುಃ ಸ್ವಾದಯಿತಾ ರಸಯಿತಾ ಸರ್ವಸ್ಯ ರಸಸ್ಯೋತ್ಪಾದಕಃ ಅತ ಏವ ಮದಿಂತಮೋ ಮಾದಯಿತೃತಮೋ ಭವತಿ ॥ ನಾದ್ಘಸ್ಯೇತಿ ನುಡಾಗಮಃ ॥

॥ ಪ್ರತಿಪದಾರ್ಥ ॥

**ಅಪ್ಸರಸಾಂ**— ಅಪ್ಸರಸ್ತ್ರೀಯರ ಮತ್ತು । **ಗಂಧರ್ವಾಣಾಂ**— ಗಂಧರ್ವರ । **ಚರಣೇ**— ಸಂಚಾರ ಪ್ರದೇಶವಾದ ಅಂತರಿಕ್ಷದಲ್ಲಿಯೂ । **ಮೃಗಾಣಾಂ**— ಸಿಂಹಾದಿ ಮೃಗಗಳು ಸಂಚರಿಸುವ ಭೂಮಿಯ ಮೇಲೂ । **ಚರನ್**— ವ್ಯಾಪಿಸಿ ಸಂಚರಿಸುವವನೂ । **ಕೇತಸ್ಯ**— ತಿಳಿಯಬೇಕಾದ ಸಮಸ್ತ ವಿಷಯಗಳನ್ನೂ । **ವಿದ್ವಾನ್**— ತಿಳಿದಿರುವವನೂ । **ಸಖಾ**— ಈ ಋಕ್ಕಿನ ದ್ರಷ್ಟೃವಾದ ಏತಶಋಷಿಗೆ ಸ್ನೇಹಿತನೂ ಆದ । **ಕೇಶೀ**— ಅಗ್ನಿ,

ವಾಯು ಅಥವಾ ಸೂರ್ಯನು | **ಸ್ವಾದುಃ**—ಸಮಸ್ತ ಮಧುರರಸಗಳನ್ನು ಉತ್ಪಾದನೆಮಾಡುತ್ತಾ | **ಮದಿಂತಮಃ**— ಹರ್ಷವನ್ನುಂಟುಮಾಡುವವನಾಗುತ್ತಾನೆ.

|| ಭಾವಾರ್ಥ ||

ಅಪ್ಸರಸ್ತ್ರೀಯರೂ ಗಂಧರ್ವರೂ ಸಂಚಾರಮಾಡುವ ಅಂತರಿಕ್ಷದಲ್ಲಿಯೂ, ಸಿಂಹಾದಿ ಮೃಗಗಳು ಸಂಚರಿಸುವ ಭೂಪ್ರದೇಶಗಳಲ್ಲಿಯೂ ವ್ಯಾಪಿಸಿ ಸಂಚರಿಸುವವನೂ, ಸಮಸ್ತವನ್ನೂ ತಿಳಿದವನೂ ಈ ಋಕ್ಕಿನ ದ್ರಷ್ಟೃವಾದ ಏತಶಋಷಿಗೆ ಸ್ನೇಹಿತನೂ ಆದ ಅಗ್ನಿ, ವಾಯು ಅಥವಾ ಸೂರ್ಯನು ಈ ಏತಶಋಷಿಗೆ ಹಿತಕರನೂ, ಸಂತೋಷವನ್ನುಂಟುಮಾಡುವ ಸ್ನೇಹಿತನೂ ಆಗಿರುತ್ತಾನೆ,

## English Translation.

Wandering in the track of the Apsarasas and the Ghanharvas, and the wild beasts, the radiant (Sun), cognizant of all that is knowable, (is my) sweet and most delightful friend.

|| ಸಂಹಿತಾಪಾಠಃ ||

ವಾಯುರಸ್ಮಾ ಉಪಾಮಂಥತ್ಪಿನಷ್ಟಿ ಸ್ಮಾ ಕುನಂನಮಾ |
ಕೇಶೀ ವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ಸಹ || ೭ ||

|| ಪದಪಾಠಃ ||

ವಾಯುಃ | ಅಸ್ಮೈ | ಉಪ | ಅಮಂಥತ್ | ಪಿನಷ್ಟಿ | ಸ್ಮ | ಕುನಂನಮಾ |
ಕೇಶೀ | ವಿಷಸ್ಯ | ಪಾತ್ರೇಣ | ಯತ್ | ರುದ್ರೇಣ | ಅಪಿಬತ್ | ಸಹ || ೭ ||

|| ಸಾಯಣಭಾಷ್ಯಂ ||

ಕೇಶೀ ರಶ್ಮಿಭಿರ್ಯುಕ್ತಃ ಸೂರ್ಯೋ ರುದ್ರೇಣ ರುದ್ರಪುತ್ರೇಣ ಮರುದ್ಗಣೇನ | ಯದ್ವಾ | ರುದ್ರೋ ವಾ ಏಷ ಯದಗ್ನಿಃ | ತೈ. ಸಂ. ೫-೪-೩-೧ | ಇತಿ ಶ್ರವಣಾದ್ರುದ್ರೋ ವೈದ್ಯುತಾಗ್ನಿಃ | ತೇನ ಸಹ ವರ್ತಮಾನೋ ವಿಷಸ್ಯ | ಉದಕನಾಮೈತತ್ || ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ || ವಿಷಮುದಕಂ ಪಾತ್ರೇಣ ಪಾನಸಾಧನೇನ ರಶ್ಮಿಜಾಲೇನ ಯದ್ಯದಾಪಿಬತ್ ಪಿಬತಿ ತದಾಸ್ಮೈ ಕೇಶಿನೇ ವಾಯುರೂಪಾಮಂಥತ್ | ಭೂಗತಂ ಸರ್ವಂ ರಸಮುಪಮಥ್ನಾತಿ | ಯದ್ವಾ | ಯದಾಪಿಬತ್ ಪೀತವಾನ್ಭವತಿ ತದಾ ಸೂರ್ಯಮಂಡಲೇ ಘನೀಭೂತಮಸ್ಯ ತದುದಕಂ ವಾಯುರುಪಮಥ್ನಾತಿ | ಮಂಥನೇನ ವೈದ್ಯುತಾಗ್ನಿನಾಲೋಡಯತಿ | ತಥಾ ಕುನಂನಮಾ ಕುತ್ಸಿತಮಪಿ ಭೃಶಂ ನಮಯಿತ್ರೀ ಸ್ವಯಂ ನಮಯಿತುಮಶಕ್ಯಾ ಸ್ವತಂತ್ರಾ ಮಾಧ್ಯಮಿಕಾ ವಾಕ್ ಪಿನಷ್ಟಿ ಸ್ಮ |

ಯಥಾಧಸ್ತಾತ್ಸ್ರವತಿ ತಥಾ ಚೂರ್ಣೀಕರೋತಿ । ಸ್ಮೇತಿ ಪ್ರಸಿದ್ಧೌ ॥ ಕುಪೂರ್ವಾನ್ನಮಯತೇಃ ಪಚಾದ್ಯಚಿ ಯಙೋಽಚಿ ಚೇತಿ ಯಙೋ ಲುಕ್ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಕೇಶೀ**—ರಶ್ಮಿಯುಕ್ತನಾದ ಸೂರ್ಯನು । **ರುದ್ರೇಣ**--ರುದ್ರಪುತ್ರರಾದ ಮರುದ್ಗಣದಿಂದ ಅಥವಾ ಅಂತರಿಕ್ಷಸ್ಥವಾದ ವೈದ್ಯುತಾಗ್ನಿಯಿಂದ (ಮಿಂಚಿನಿಂದ) । **ಸಹ**—ಸಹಿತನಾಗಿ । **ವಿಷಸ್ಯ**--ಉದಕವನ್ನು । **ಪಾತ್ರೇಣ**—ಪಾನಸಾಧನಭೂತವಾದ ಎಂದರೆ, ಹೀರಲು ಸಾಧನಭೂತವಾದ ತನ್ನ ರಶ್ಮಿಗಳ ಮೂಲಕ । **ಯತ್**—ಯಾವಾಗ । **ಅಪಿಬತ್**—ಪಾನಮಾಡುವನೋ ಎಂದರೆ ಆಕರ್ಷಿಸುವನೋ ಆಗ । **ಅಸ್ಮೈ**—ಈ ಸೂರ್ಯನ ಸಹಾಯಕ್ಕಾಗಿ । **ವಾಯುಃ**—ವಾಯುವು । **ಉಪ ಅಮಂಥತ್**—ಭೂಮಿಯಮೇಲಿರುವ ಸಮುದ್ರಾದಿ ಜಲಾಶಯಗಳ ಉದಕವನ್ನು ಮಥಿಸಿ (ಅಲ್ಲೋಲಕಲ್ಲೋಲಮಾಡಿ) ಶೋಷಿಸುತ್ತಾನೆ ಅಥವಾ ಸೂರ್ಯನಿಂದ ಆರ್ಷಿತವಾದ ಉದಕವು ಮೇಘರೂಪದಲ್ಲಿರುವಾಗ ಅದನ್ನು ವಾಯುವು ಚದುರಿಸುತ್ತಾನೆ ಅಥವಾ ವೈದ್ಯುತಾಗ್ನಿಯು ಕಲಕುತ್ತಾನೆ । **ಕುನಂನಮಾ**—ಕುತ್ಸಿತರಾದವರನ್ನು ಬಗ್ಗಿಸುವವಳಾದರೂ ತಾನು ಯಾರಿಂದಲೂ ನಿಯಂತ್ರಣಕ್ಕೆ ಒಳಪಡದವಳೂ ಆದ ಮಾಧ್ಯಮಿಕಾ ವಾಗ್ದೇವತೆಯು । **ಪಿನಷ್ಟಿ ಸ್ಮ**--ಮೇಘೋದಕವನ್ನು ಪುಡಿಪುಡಿಮಾಡುತ್ತಾಳೆ ಎಂದರೆ ವೃಷ್ಟ್ಯುದಕವನ್ನು ಹನಿಹನಿಯಾಗಿ ಭೂಮಿಯಮೇಲೆ ಬೀಳುವಂತೆ ಮಾಡುತ್ತಾಳೆ

॥ ಭಾವಾರ್ಥ ॥

ರಶ್ಮಿಯುಕ್ತನಾದ ಸೂರ್ಯನು ರುದ್ರಪುತ್ರರಾದ ಮರುದ್ದೇವತೆಗಳಿಂದ (ವಾಯುವಿನಿಂದ) ಸಹಿತನಾಗಿ ಸಮುದ್ರಾದಿಜಲಾಶಯಗಳ ನೀರನ್ನು ಆಕರ್ಷಿಸುವಾಗ, ಈ ಸೂರ್ಯನ ಸಹಾಯಕ್ಕಾಗಿ, ವಾಯುವು ಉದಕವನ್ನು ಅಲ್ಲೋಲ ಕಲ್ಲೋಲಮಾಡುವುದು ಅಥವಾ ಮೇಘರೂಪದಲ್ಲಿರುವ ಉದಕವನ್ನು ಸುತ್ತಲೂ ಹರಡುವಂತೆ ಚದುರಿಸುವುದು. ಎಲ್ಲರನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡು ತಾನು ಮಾತ್ರ ಇತರರ ನಿಯಂತ್ರಣಕ್ಕೆ ಒಳಪಡದಿರುವ ಅಂತರಿಕ್ಷಸ್ಥಳಾದ ಆ ವಾಗ್ದೇವತೆಯು (ಮಿಂಚು ?) ಮೇಘಸ್ಥವಾದ ವೃಷ್ಟ್ಯುದಕವನ್ನು ಭೂಮಿಯಮೇಲೆ ಸಣ್ಣ ಸಣ್ಣ ಹನಿಗಳಾಗಿ ಬೀಳುವಂತೆ ಮಾಡುತ್ತಾಳೆ.

## English Translation.

Vayu churned for him, the inflexible (thunder) ground it when the radiant (Sun), along with Rudra, drink the water with his cup.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಋಷಿಯು—ಸೂರ್ಯನು ವಾಯ್ವಗ್ನಿಗಳ ಸಹಾಯದಿಂದ ವೃಷ್ಟಿಗೆ ಹೇಗೆ ಕಾರಣನಾಗುತ್ತಾನೆ ಎಂಬುದನ್ನು ವಿವರಿಸಿದಾನೆ. ಪ್ರಾರಂಭದಲ್ಲಿ ಸೂರ್ಯನ ತೀಕ್ಷ್ಣವಾದ ರಶ್ಮಿಗಳು ಸಮುದ್ರಾದಿ ಜಲಾಶಯಗಳಮೇಲೆ ಬಿದ್ದು ಅವುಗಳ ಉದಕವನ್ನು ಆವಿಯರೂಪದಲ್ಲಿ ಆಕರ್ಷಿಸುತ್ತವೆ. ಆಕರ್ಷಿಸಲ್ಪಟ್ಟ ಆವಿಯ ರೂಪದ ಉದಕಗಳು ಅಂತರಿಕ್ಷದಲ್ಲಿ ವಾಯುವಿನ ಸಹಾಯದಿಂದ ಮೇಘಗಳಾಗಿ ಪರಿವರ್ತಿತವಾಗಿ ಅಲ್ಲಿಯೇ ನೆಲೆಸಿರುತ್ತವೆ. ಮತ್ತು ಆ ವಾಯುವೇ ಮೇಘಗಳನ್ನು ಒಂದೇಕಡೆ ನಿಲ್ಲದಂತೆ ಚದುರಿಸಿ ಸಂಚರಿಸುವಂತೆ ಮಾಡುತ್ತದೆ ಎಂದರೆ ಗಾಳಿಯು

ಬೀಸುವುದರಿಂದ ಮೇಘಗಳು ಮುಂದು ಮುಂದಕ್ಕೆ ಸರಿಯುತ್ತವೆ. ಇಂತಹ ಮೇಘಸಮೂಹದಲ್ಲಿ ವೈದ್ಯುತಾಗ್ನಿಯು (ಮಿಂಚು) ಆವಿರ್ಭವಿಸಿ ವೃಷ್ಟಿಕಾರ್ಯಕ್ಕೆ ಸಹಾಯಕನಾಗುತ್ತಾನೆ. ಈ ವೈದ್ಯುತಾಗ್ನಿಯ ಸ್ವರೂಪವೇ ಆದ ಮಾಧ್ಯಮಿಕಾ ವಾಕ್ ಯಾರ ನಿಯಂತ್ರಣಕ್ಕೂ ಎಂದರೆ ಆಧೀನಕ್ಕೂ ಒಳಪಟ್ಟಿರುವುದಿಲ್ಲ. ಅದರೆ ತಾನು ಮಾತ್ರ ಎಲ್ಲರನ್ನೂ ಆಧೀನದಲ್ಲಿಟ್ಟುಕೊಳ್ಳುವ ಸಾಮರ್ಥ್ಯವನ್ನು ಪಡೆದಿರುವಳು. ಇಂತಹ ವಾಗ್ದೇವತೆಯ ಸಹಾಯದಿಂದ ಮೇಘಸ್ಥವಾದ ಉದಕವು ಭೂಮಿಯ ಮೇಲೆ ಹನಿಹನಿಯಾಗಿ ಬೀಳುವುದು ಎಂದು ಮುಖ್ಯಾಭಿಪ್ರಾಯವು.

---

## ನೂರ ಮೂವತ್ತೇಳನೆಯ ಸೂಕ್ತವು

### ಪೀ ಠಿ ಕೆ

ಈ ಸೂಕ್ತದಲ್ಲಿ ರೋಗಾದಿಗಳಿಂದ ಬಾಧೆಪಡುತ್ತಿರುವವರಿಗೆ ರೋಗಪರಿಹಾರ ಮಾಡಬೇಕೆಂದು ದೇವತೆಗಳನ್ನು ಪ್ರಾರ್ಥಿಸಲಾಗಿದೆ. ಆದ್ದರಿಂದ ಈ ಸೂಕ್ತಕ್ಕೆ ರೋಗಪರಿಹಾರಶಕ್ತಿ ಇರುವುದೆಂದು ಹೇಳಲಾಗಿದೆ. ಶೌನಕ ಮಹರ್ಷಿಯು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ ಈ ಸೂಕ್ತದ ವಿಷಯದಲ್ಲಿ ಈರೀತಿ ಹೇಳಿದಾರೆ—

**ಉತ ದೇವಾ ಇತಿ ಜಪೇದಾಮಯಾವೀ ಯತವ್ರತಃ || ೪೬ ||**
**ಘೃತಕುಂಭಂ ನಿಧಾಯಾಥ ಜುಹುಯಾಜ್ಜಾತವೇದಸಿ ।**
**ಕುಂಭಾತ್ಸಂಪಾತಮನ್ಯಸ್ಮಿನ್ ಕಾಂಸ್ಯೇ ಪಾತ್ರೇ ನಿಧಾಪಯೇತ್ || ೪೭ ||**
**ಯನ್ನ ಪಾನಂ ನ ಚಾನ್ನಂ ಸ್ಯಾತ್ಸ ಇದಂ ಸಂಪ್ರಕಲ್ಪಯೇತ್ ।**
**ತೇನಾಜ್ಯೇನಾಂಗಮಭ್ಯಜ್ಯ ಶನಕೈರನ್ನಭಾಗ್ಭವೇತ್ || ೪೮ ||**
**ರೋಗಾರ್ತಸ್ಯಾಪ್ಯನೇನೈವ ಗಾತ್ರಮುಂಕ್ತ್ವಾ ಜಪೇದಿದಂ ।**
**ಅಜೀರ್ಣಾನ್ನೋಽಪ್ಯಂಜಯಿತ ಸುಖಂ ಭವತಿ ತೇನ ಹ || ೪೯ ||**

(ಋಗ್ವಿಧಾನ. ಅಧ್ಯಾಯ. ೪. ಶ್ಲೋಕ ೪೬–೪೯)

ರೋಗಾದಿಗಳಿಂದ ನರಳುತ್ತಿರುವ ಪುರುಷನು ನಿಯಮದಿಂದ ಈ ಸೂಕ್ತವನ್ನು ಜಪಿಸಬೇಕು. ಒಂದು ಪಾತ್ರೆಯಲ್ಲಿ ಶುದ್ಧವಾದ ಘೃತ (ತುಪ್ಪ) ವನ್ನು ತುಂಬಿ ಅದನ್ನು ಸಂಸ್ಕರಿಸಿ ಪ್ರತಿಷ್ಠಿತಾಗ್ನಿಯಲ್ಲಿ ಈ ಸೂಕ್ತದ ಮಂತ್ರಗಳಿಂದ ಹೋಮಮಾಡಬೇಕು. ಹೋಮಮಾಡುವಾಗ ಪಾತ್ರೆಯಿಂದ ಹೊರಕ್ಕೆ ಚೆಲ್ಲಿಹೋಗುವ ತುಪ್ಪವನ್ನು ಸಂಗ್ರಹಿಸಿ ಬೇರೊಂದು ತಾಮ್ರದ ಪಾತ್ರೆಯಲ್ಲಿ ಹಾಕಿಡಬೇಕು. ರೋಗಾಧಿಕ್ಯದಿಂದ ಅನ್ನಪಾನಗಳು ಸೇರದಿರುವ ಪುರುಷನ ಶರೀರವನ್ನು ಈ ಘೃತದಿಂದ ತಿಕ್ಕಿದರೆ ಕ್ರಮಕ್ರಮವಾಗಿ ಅನ್ನಾದ್ಯಾಹಾರಗಳು ರುಚಿಸುವವು. ರೋಗವು ಗುಣವಾಗುವುದಕ್ಕಾಗಿಯೂ ರೋಗಾರ್ತನಾದವನ ಶರೀರವನ್ನು ಈ ಘೃತದಿಂದ ಲೇಪನಮಾಡಿ ಈ ಸೂಕ್ತದ ಮಂತ್ರಗಳನ್ನು ಜಪಿಸಬೇಕು. ಅಜೀರ್ಣವಾಗಿದ್ದರೂ ಈ ರೀತಿ ಮಾಡಬೇಕು. ಇದರಿಂದ ರೋಗವು ವಾಸಿಯಾಗಿ ಸುಖವುಂಟಾಗುವುದು

|| ಸಾಯಣಭಾಷ್ಯಂ ||

ಉತ ದೇವಾ ಇತಿ ಸಪ್ತರ್ಚಂ ನವಮಂ ಸೂಕ್ತಮಾನುಷ್ಟುಭಂ ವೈಶ್ವದೇವಂ ಭರದ್ವಾಜಕಶ್ಯಪ-ಗೋತಮಾತ್ರಿವಿಶ್ವಾಮಿತ್ರಜಮದಗ್ನಿವಸಿಷ್ಠಾ ಇತಿ ಕ್ರಮೇಣ ಪ್ರತ್ಯೃಚಮೃಷಯಃ । ತಥಾ ಚಾನುಕ್ರಾಂತಂ। ಉತ ದೇವಾಃ ಸಪ್ತರ್ಷಯ ಏಕರ್ಚಾ ವೈಶ್ವದೇವಮಿತಿ || ಗತೋ ವಿನಿಯೋಗಃ ||

ಅನುವಾದವು— **ಉತ ದೇವಾಃ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತದಲ್ಲಿ ಭರದ್ವಾಜಕಶ್ಯಪಗೋತಮವಿಶ್ವಾಮಿತ್ರಜಮದಗ್ನಿವಸಿಷ್ಠರೆಂಬ ಸಪ್ತರ್ಷಿಗಳಲ್ಲಿ ಪ್ರತಿಒಬ್ಬರೂ ಒಂದೊಂದು ಋಕ್ಕಿಗೆ ಋಷಿಯು; ವಿಶ್ವೇದೇವತೆಗಳು ದೇವತೆಯು. ಅನುಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಉತ ದೇವಾಃ ಸಪ್ತರ್ಷಯ ಏಕರ್ಚಾ ವೈಶ್ವದೇವಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ ೧೩೭

ಮಂಡಲ—೧೦ || ಅನುವಾಕ—೧೧ || ಸೂಕ್ತ- ೧೩೭ ||
ಅಷ್ಟಕ—೮ || ಅಧ್ಯಾಯ—೭ || ವರ್ಗ—೨೫ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ||
|| ಋಷಿಃ—ಸಪ್ತ ಋಷಯ ಏಕರ್ಚಾಃ || ೧. ಭರದ್ವಾಜಃ । ೨ ಕಶ್ಯಪಃ । ೩. ಗೋತಮಃ । ೪ ಅತ್ರಿಃ । ೫. ವಿಶ್ವಾಮಿತ್ರಃ । ೬. ಜಮದಗ್ನಿಃ । ೭. ವಸಿಷ್ಠಃ ||
|| ದೇವತಾ—ವಿಶ್ವೇದೇವಾಃ ||
|| ಛಂದಃ—ಅನುಷ್ಟುಪ್ ||

|| ಸಂಹಿತಾಪಾಠಃ ||

ಉತ ದೇವಾ ಅವಹಿತಂ ದೇವಾ ಉನ್ನಯಥಾ ಪುನಃ ।
ಉತಾಗಶ್ಚಕ್ರುಷಂ ದೇವಾ ದೇವಾ ಜೀವಯಥಾ ಪುನಃ || ೧ ||

|| ಪದಪಾಠಃ ||

ಉತ । ದೇವಾಃ । ಅವಽಹಿತಂ । ದೇವಾಃ । ಉತ್ । ನಯಥ । ಪುನರಿತಿ ।
ಉತ । ಆಗಃ । ಚಕ್ರುಷಂ । ದೇವಾಃ । ದೇವಾಃ । ಜೀವಯಥ । ಪುನರಿತಿ || ೧ ||

|| ಸಾಯಣಭಾಷ್ಯಂ ||

ಉತಾಪಿ ಚ ಹೇ ದೇವಾಃ ಅವಹಿತಮುನ್ನಯಥ । ಉತಾಪಿ ಚ ಹೇ ದೇವಾಃ ಆಗೋಽಪರಾಧಂ ಚಕ್ರುಷಂ ಕೃತವಂತಂ ಮಾಂ ತಸ್ಮಾದಾಗಸೋ ರಕ್ಷತ । ಹೇ ದೇವಾಃ ರಕ್ಷಿತ್ವಾ ಚ ಪುನಃ ಪಶ್ಚಾಜ್ಜೀವ-ಯಥ । ಚಿರಜೀವಿನಂ ಕುರುತ ||

|| ಪ್ರತಿಪದಾರ್ಥ ||

**ಉತ**—ಮತ್ತು | **ದೇವಾಃ**—ಎಲೈ ದೇವತೆಗಳೇ | **ಅವಹಿತಂ**—ರೋಗಾದಿಗಳಿಂದ ನರಳುತ್ತ ಏಳಲಾರದೆ ಬಿದ್ದಿರುವ ಪುರುಷನನ್ನು | **ಪುನಃ**—ಮತ್ತೆ ಎಂದರೆ ಮುಂಚಿನಂತೆ | **ಉನ್ನಯಥ**—(ಶಕ್ತಿಯನ್ನು ಕೊಟ್ಟು) ಏಳುವಂತೆ ಮಾಡಿರಿ | **ಉತ**—ಮತ್ತು | **ದೇವಾಃ**—ಎಲೈ ದೇವತೆಗಳೇ | **ಆಗಃ**—ಪಾಪವನ್ನು ಅಥವಾ ಅಪರಾಧವನ್ನು | **ಚಕ್ರುಷಂ**—ಮಾಡುತ್ತಿರುವ ನನ್ನನ್ನು ರಕ್ಷಿಸಿರಿ | **ದೇವಾಃ**—ಎಲೈ ದೇವತೆಗಳೇ | **ಪುನಃ**—ಅನಂತರ | **ಜೀವಯಥ**—ಬಹುಕಾಲ ಜೀವಿಸುವಂತೆ ಅನುಗ್ರಹಿಸಿ

|| ಭಾವಾರ್ಥ ||

ಎಲೈ ದೇವತೆಗಳೇ, ರೋಗಾದಿಗಳಿಂದ ನರಳುತ್ತ ಏಳಲಾರದೆ ಬಿದ್ದಿರುವ ಪುರುಷನನ್ನು ಪುನಃ ಎಂದರೆ ಮುಂಚಿನಂತೆ ಶಕ್ತಿಯನ್ನು ಕೊಟ್ಟು ಎಬ್ಬಿಸಿರಿ. ಎಲೈ ದೇವತೆಗಳೇ, ನಾನು ಮಾಡುತ್ತಿರುವ ಅಥವಾ ಮಾಡಿರುವ ಪಾಪವನ್ನು ಅಥವಾ ಅಪರಾಧವನ್ನು ಮನ್ನಿಸಿ ರಕ್ಷಿಸಿರಿ. ಅನಂತರ ಎಲೈ ದೇವತೆಗಳೇ, ಬಹುಕಾಲ ಜೀವಿಸುವಂತೆ ಅನುಗ್ರಹಿಸಿರಿ

English Translation.

O gods, raise again the man, O gods, who has sunk, O gods, give life again to the man, O gods, who has committed sin.

|| ಸಂಹಿತಾಪಾಠಃ ||

ದ್ವಾವಿಮೌ ವಾತೌ ವಾತ ಆ ಸಿಂಧೋರಾ ಪರಾವತಃ |
ದಕ್ಷಂ ತೇ ಅನ್ಯ ಆ ವಾತು ಪರಾನ್ಯೋ ವಾತು ಯದ್ರಪಃ || ೨ ||

|| ಪದಪಾಠಃ ||

ದ್ವೌ | ಇಮೌ | ವಾತೌ | ವಾತಃ | ಆ | ಸಿಂಧೋಃ | ಆ | ಪರಾऽವತಃ |
ದಕ್ಷಂ | ತೇ | ಅನ್ಯಃ | ಆ | ವಾತು | ಪರಾ | ಅನ್ಯಃ | ವಾತು | ಯತ್ | ರಪಃ || ೨ ||

|| ಸಾಯಣಭಾಷ್ಯಂ ||

ಇಮೌ ದೃಶ್ಯಮಾನೌ ದ್ವೌ ವಾತೌ ಪುರೋವಾತಃ ಪಶ್ಚಾದ್ವಾತಶ್ಚಾ ಸಿಂಧೋರಾ ಸಮುದ್ರಾತ್ | ಮರ್ಯಾದಾಯಾಮಾಕಾರಃ | ಯದ್ವಾ | ಪರಾವತಃ ಸಮುದ್ರಾದಪಿ ಯೋ ದೂರದೇಶಸ್ತಂ ದೇಶಮವಧೀಕೃತ್ಯ ವಾತಃ | ಗಚ್ಛತಃ || ವಾ ಗತಿಗಂಧನಯೋಃ ಅದಾದಿಕಃ || ತಯೋರ್ವಾತಯೋರನ್ಯ ಏಕೋ ಹೇ ಸ್ತೋತಃ ತೇ ತವ ದಕ್ಷಂ ಬಲಮಾ ವಾತು | ಆಗಮಯತು | ಅನ್ಯಶ್ಚ ತ್ವದೀಯಂ ಯದ್ರಪಃ ಪಾಪಂ ತತ್ಪರಾ ವಾತು | ಪರಾಗಮಯತು ||

॥ ಪ್ರತಿಪದಾರ್ಥ ॥

**ಇಮೌ**— ಇಲ್ಲಿ ಕಾಣುತ್ತಿರುವ | **ದ್ವೌ ವಾತೌ**— ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿ ಬೀಸುವ ಎರಡು ವಿಧ ಗಾಳಿಗಳು | **ಆ ಸಿಂಧೋಃ**—ಸಮುದ್ರದ ದಡದವರೆಗೂ | **ಆ ಪರಾವತಃ**—ಸಮುದ್ರಕ್ಕಿಂತ ದೂರದ ಪ್ರದೇಶದವರೆಗೂ | **ವಾತಃ**—ಬೀಸುತ್ತವೆ | **ಅನ್ಯಃ**—ಆ ಗಾಳಿಗಳಲ್ಲಿ ಒಂದು | **ತೇ**—ನಿನಗೆ | **ದಕ್ಷಂ**—ಬಲವನ್ನು | **ಆ ವಾತು**—ಒದಗಿಸಿಕೊಡಲಿ | **ಅನ್ಯಃ** –ಮತ್ತೊಂದು | **ಯತ್ ರಪಃ**—ನಿನ್ನ ಸಂಬಂಧವಾದ ಯಾವ ಪಾಪವಿರುವುದೋ ಅದನ್ನು | **ಪರಾ ವಾತು**—ದೂರಕ್ಕೆ ಓಡಿಸಲಿ.

॥ ಭಾವಾರ್ಥ ॥

ಪೂರ್ವಮತ್ತು ಪಶ್ಚಿಮಾಭಿಮುಖವಾಗಿ ಬೀಸುತ್ತಿರುವ ಈ ಎರಡುವಾಯುಗಳು ಸಮುದ್ರದವರೆಗೂ ಅಥವಾ ಅದಕ್ಕಿಂತ ಇನ್ನು ದೂರಪ್ರದೇಶದವರೆಗೂ ಬೀಸುತ್ತವೆ. ಅವುಗಳಲ್ಲಿ ಒಂದು ಗಾಳಿಯು ನಿನಗೆ ಬಲವನ್ನು ಒದಗಿಸಿ ಕೊಡಲಿ, ಇನ್ನೊಂದು ನಿನ್ನ ಪಾಪವನ್ನು ದೂರ ಓಡಿಸಲಿ.

## English Translation

These two winds blow to the regions which are far beyond the ocean; may the one bring you vigour, may the other blow away all evil.

॥ ಸಂಹಿತಾಪಾಠಃ ॥

ಆ ವಾತ ವಾಹಿ ಭೇಷಜಂ ವಿ ವಾತ ವಾಹಿ ಯದ್ರಪಃ ।
ತ್ವಂ ಹಿ ವಿಶ್ವಭೇಷಜೋ ದೇವಾನಾಂ ದೂತ ಈಯಸೇ ॥ ೩ ॥

॥ ಪದಪಾಠಃ ॥

ಆ । ವಾತ । ವಾಹಿ । ಭೇಷಜಂ । ವಿ । ವಾತ । ವಾಹಿ । ಯತ್ । ರಪಃ ।
ತ್ವಂ । ಹಿ । ವಿಶ್ವऽಭೇಷಜಃ । ದೇವಾನಾಂ । ದೂತಃ । ಈಯಸೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ವಾತ ಭೇಷಜಂ ಸುಖಂ ವ್ಯಾಧ್ಯುಪಶಮನಮೌಷಧಂ ವಾ ವಾಹಿ । ಆಗಮಯ । ಹೇ ವಾತ ಯದ್ರಪೋऽಸ್ಮದೀಯಂ ಪಾಪಂ ತದ್ವಿ ವಾಹಿ । ವಿಗಮಯ । ಅಸ್ಮತ್ತೋ ವಿಶ್ಲೇಷಯ । ತ್ವಂ ಹಿ ಖಲು ದೇವಾನಾಂ ದೂತೋ ವಿಶ್ವಭೇಷಜಃ । ವಿಶ್ವಾನಿ ಭೇಷಜಾನಿ ಯಸ್ಮಿನ್ ॥ ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ ॥ ಈದೃಶಸ್ತ್ವಂ ಸನ್ನೀಯಸೇ । ಸತತಂ ಗಚ್ಛಸಿ ॥ ಈಜ್

ಗತೌ ದೈವಾದಿಕಃ । ಶ್ಯನೋ ನಿತ್ತ್ವಾತ್ ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ಹಿ ಚೇತಿ ನಿಘಾತಪ್ರತಿಷೇಧಃ ॥

॥ ಪ್ರತಿಪದಾರ್ಥ ॥

**ವಾತ**— ಎಲೈ ವಾಯುವೇ । **ಭೇಷಜಂ**— ವ್ಯಾಧಿಶಮನ ಮಾಡಿ ಸುಖವನ್ನುಂಟುಮಾಡುವ ಔಷಧವನ್ನು । **ಆ ವಾಹಿ**— ನಮ್ಮ ಸಮೀಪಕ್ಕೆ ವಹಿಸಿಕೊಂಡುಬಾ । **ವಾತ**— ಎಲೈ ವಾಯುವೇ । **ಯತ್ ರಪಃ**— ಯಾವ ನಮ್ಮ ಪಾಪವಿದೆಯೋ ಅದನ್ನು । **ವಿ ವಾಹಿ**— ಹಿಂದಕ್ಕೆ ಅಟ್ಟು । **ತ್ವಂ ಹಿ**— ನೀನು । **ದೇವಾನಾಂ**— ದೇವತೆಗಳಿಗೆ । **ದೂತಃ**— ದೂತನಾಗಿಯೂ । **ವಿಶ್ವಭೇಷಜಃ**— ಸಮಸ್ತ ಸುಖ ಅಥವಾ ಔಷಧಗಳನ್ನು ಒದಗಿಸುವವನಾಗಿಯೂ । **ಈಯಸೇ**— ಸಂಚರಿಸುತ್ತೀಯೆ.

॥ ಭಾವಾರ್ಥ ॥

ಎಲೈ ವಾಯುವೇ, ವ್ಯಾಧಿಶಮನವಮಾಡಬಲ್ಲ ಔಷಧವನ್ನು ನಮ್ಮ ಬಳಿಗೆ ವಹಿಸಿಕೊಂಡುಬಾ. ಎಲೆ ವಾಯುವೇ, ನಮ್ಮ ಪಾಪವನ್ನು ನಮ್ಮ ಬಳಿಗೆ ಬರದಂತೆ ಹಿಂದಕ್ಕೆ ಅಟ್ಟು. ನೀನು ದೇವತೆಗಳಿಗೆ ದೂತನಾಗಿಯೂ, ಸಮಸ್ತ ಸುಖ ಅಥವಾ ಔಷಧಿಗಳನ್ನು ಒದಗಿಸುವವನಾಗಿಯೂ ಸಂಚರಿಸುತ್ತೀಯೆ.

English Translation.

Breathe, wind, medicinal balm; blow away, wind, all evil; for you are the univarsal medicine, you move as the messenger of the gods.

॥ ಸಂಹಿತಾಪಾಠಃ ॥

ಆ ತ್ವಾಗಮಂ ಶಂತಾತಿಭಿರಥೋ ಅರಿಷ್ಟತಾತಿಭಿಃ ।
ದಕ್ಷಂ ತೇ ಭದ್ರಮಾಭಾರ್ಷಂ ಪರಾ ಯಕ್ಷ್ಮಂ ಸುವಾಮಿ ತೇ ॥ ೪ ॥

॥ ಪದಪಾಠಃ ॥

ಆ । ತ್ವಾ । ಅಗಮಂ । ಶಂತಾತಿऽಭಿಃ । ಅಥೋ ಇತಿ । ಅರಿಷ್ಟತಾತಿऽಭಿಃ ।
ದಕ್ಷಂ । ತೇ । ಭದ್ರಂ । ಆ । ಅಭಾರ್ಷಂ । ಪರಾ । ಯಕ್ಷ್ಮಂ । ಸುವಾಮಿ । ತೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಃ ತ್ವಾ ತ್ವಾಂ ಶಂತಾತಿಭಿಃ ಸುಖಕರೈರಥೋ ಅಪಿ ಚಾರಿಷ್ಟತಾತಿಭಿರಹಿಂಸಾಕರೈಶ್ಚ ರಕ್ಷಣೈರಾಗಮಂ । ಆಗತವಾನಸ್ಮಿ ॥ ಶಿವಶಮರಿಷ್ಟಸ್ಯ ಕರೇ । ಪಾ. ೪-೪-೧೪೩ । ಇತ್ಯುಭಯತ್ರ ತಾತಿಲ್ಪ್ರತ್ಯಯಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ॥ ಅಪಿ ಚ ಭದ್ರಂ ಕಲ್ಯಾಣಂ ತೇ ತವ ದಕ್ಷಂ

**ಬಲಮಾಭಾರ್ಷಂ । ಆಹಾರ್ಷಂ । ವಾಯುಸಕಾಶಾದಾನೈಷಂ । ತಥಾ ತೇ ತವ ಯಕ್ಷ್ಮಂ ರೋಗಂ ಚ ಪರಾ ಸುವಾಮಿ । ವಿನಾಶಯಾಮಿ ॥**

॥ ಪ್ರತಿಪದಾರ್ಥ ॥

(ಎಲೈ ಸ್ತೋತೃವೇ) **ತ್ವಾ**—ನಿನ್ನನ್ನು । **ಶಂತಾತಿಭಿಃ**—ಸುಖಕರವಾದುವೂ । **ಅಥೋ**— ಮತ್ತು । **ಅರಿಷ್ಟತಾತಿಭಿಃ**—ಅಹಿಂಸಾತ್ಮಕವೂ ಆದ ರಕ್ಷಣೆಗಳಿಂದ । **ಆ ಅಗಮಂ**- ಸಮೀಪಿಸುತ್ತಿದ್ದೇನೆ (ಮತ್ತು) । **ತೇ**—ನಿನಗೆ । **ಭದ್ರಂ**—ಶ್ರೇಯಸ್ಸನ್ನೂ । **ದಕ್ಷಂ**—ಬಲವನ್ನೂ । **ಆಭಾರ್ಷಂ**—ವಹಿಸಿ ತಂದಿದ್ದೇನೆ (ಹಾಗೆಯೇ) । **ತೇ**—ನಿನ್ನ । **ಯಕ್ಷ್ಮಂ**—ರೋಗವನ್ನು । **ಪರಾ ಸುವಾಮಿ**—ನಾಶಮಾಡುತ್ತೇನೆ ।

॥ ಭಾವಾರ್ಥ ॥

(ವಾಯುವಿನ ವಾಕ್ಯವು) ಎಲೈ ಸ್ತೋತೃವೇ, ಸುಖಕರವೂ ಅಹಿಂಸಾತ್ಮಕವೂ ಆದ ರಕ್ಷಣೆಗಳಿಂದ ನಿನ್ನ ಬಳಿಗೆ ಬರುತ್ತಿದ್ದೇನೆ. ನಿನಗೆ ಮಂಗಳವನ್ನೂ, ಬಲವನ್ನೂ ವಹಿಸಿ ತಂದಿದೇನೆ. ಹಾಗೆಯೇ ನಿನ್ನ ರೋಗವನ್ನು ನಾಶಮಾಡುತ್ತೇನೆ.

## English Translation.

(The wind speaks:) I have come to you with pleasures and with protections; I have brought you fortunate vigour, I drive away your disease.

॥ ಸಂಹಿತಾಪಾಠಃ ॥

ತ್ರಾಯಂತಾಮಿಹ ದೇವಾಸ್ತ್ರಾಯತಾಂ ಮರುತಾಂ ಗಣಃ ।
ತ್ರಾಯಂತಾಂ ವಿಶ್ವಾ ಭೂತಾನಿ ಯಥಾಯಮರಪಾ ಅಸತ್ ॥ ೫ ॥

॥ ಪದಪಾಠಃ ॥

ತ್ರಾಯಂತಾಂ । ಇಹ । ದೇವಾಃ । ತ್ರಾಯತಾಂ । ಮರುತಾಂ । ಗಣಃ ।
ತ್ರಾಯಂತಾಂ । ವಿಶ್ವಾ । ಭೂತಾನಿ । ಯಥಾ । ಅಯಂ । ಅರಪಾಃ । ಅಸತ್ ॥ ೫ ॥

॥ ಸಾಯಣಭಾಷ್ಯಂ ॥

ಇಹಾಸ್ಮಿನ್ದೇಶೇ ಸರ್ವೇ ದೇವಾಸ್ತ್ರಾಯಂತಾಂ । ಅಸ್ಮಾನ್ಪಾಲಯಂತಾಂ । ತಥಾ ಮರುತಾಂ ಗಣಃ ಸಂಘಃ ಸ ತ್ರಾಯತಾಂ । ವಿಶ್ವಾನಿ ಸರ್ವಾಣ್ಯನ್ಯಾನಿ ಚ ಭೂತಾನಿ ಭೂತಜಾತಾನಿ ತ್ರಾಯಂತಾಂ । ಅಸ್ಮಾನ್ರಕ್ಷಂತು । ಯಥಾಯಮಸ್ಮದೀಯಃ ಶರೀರಾದಿರರಪಾ ಅಸತ್ ಪಾಪರಹಿತೋ ಭವತಿ ತಥೇತ್ಯರ್ಥಃ ।'

ರಪ ಇತಿ ಪಾಪನಾಮ । ನಞೋ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಅಸ್ತೇ-ರ್ಲೇಟ್ಯಡಾಗಮಃ । ಯಾವದ್ಯಥಾಭ್ಯಾಂ । ಪಾ. ೮-೧-೩೬ । ಇತಿ ನಿಘಾತಾಭಾವಃ ॥

॥ ಪ್ರತಿಪದಾರ್ಥ ॥

**ಇಹ**— ಈ ದೇಶದಲ್ಲಿ । **ದೇವಾಃ** – ಸಮಸ್ತದೇವತೆಗಳೂ । **ತ್ರಾಯಂತಾಂ**— ನಮ್ಮನ್ನು ರಕ್ಷಿಸಲಿ ಮತ್ತು । **ಮರುತಾಂ**— ಮರುದ್ದೇವತೆಗಳ । **ಗಣಃ**— ಸಂಘವು । **ತ್ರಾಯತಾಂ**— ನಮ್ಮನ್ನು ರಕ್ಷಿಸಲಿ । **ಯಥಾ**— ಯಾವ ಪ್ರಕಾರವಾಗಿ । **ಅಯಂ**— ಈ ಶರೀರವು (ಅಥವಾ ಈ ಜನವು) । **ಅರಪಾಃ**— ಪಾಪರಹಿತವಾಗಿ । **ಅಸತ್**— ಆಗುವುದೋ ಆರೀತಿಯಾಗಿ । **ವಿಶ್ವಾ**— ಸಮಸ್ತವಾದ । **ಭೂತಾನಿ**— ದೇವಮಾನವಾದಿ ಪ್ರಾಣಿವರ್ಗಗಳೆಲ್ಲವೂ । **ತ್ರಾಯಂತಾಂ**— ನಮ್ಮನ್ನು ರಕ್ಷಿಸಲಿ.

॥ ಭಾವಾರ್ಥ ॥

ಸಮಸ್ತ ದೇವತೆಗಳೂ, ಮರುದ್ಗಣಗಳೂ ಈ ದೇಶದಲ್ಲಿ ನಮ್ಮನ್ನು ಸಲಹಲಿ. ಈ ಶರೀರವು ಯಾವರೀತಿ ಪಾಪರಹಿತವಾಗಿ ಆಗುವುದೋ (ಎಂದರೆ ಪಾಪವು ಬರದಂತೆ) ಆರೀತಿ ಸಮಸ್ತ ದೇವಮಾನವಾದಿ ಪ್ರಾಣಿವರ್ಗಗಳೆಲ್ಲವೂ ನಮ್ಮನ್ನು ರಕ್ಷಿಸಲಿ.

## English Translation.

May the gods give (us) protection in this world, may the company of the Maruts protect us, may all beings grant protection so that this (person) may be free from sin.

॥ ಸಂಹಿತಾಪಾಠಃ ॥

ಆಪ ಇದ್ವಾ ಉ ಭೇಷಜೀರಾಪೋ ಅಮೀವಚಾತನೀಃ ।
ಆಪಃ ಸರ್ವಸ್ಯ ಭೇಷಜೀಸ್ತಾಸ್ತೇ ಕೃಣ್ವಂತು ಭೇಷಜಂ ॥ ೬ ॥

॥ ಪದಪಾಠಃ ॥

ಆಪಃ । ಇತ್ । ವೈ । ಊಂ ಇತಿ । ಭೇಷಜೀಃ । ಆಪಃ । ಅಮೀವಽಚಾತನೀಃ ।
ಆಪಃ । ಸರ್ವಸ್ಯ । ಭೇಷಜೀಃ । ತಾಃ । ತೇ । ಕೃಣ್ವಂತು । ಭೇಷಜಂ ॥ ೬ ॥

॥ ಸಾಯಣಭಾಷ್ಯಂ ॥

ಆಪ ಇದ್ವಾ ಆಪ ಏವ ಖಲು ಭೇಷಜೀರ್ಭೇಷಜಭೂತಾಃ । ಸ್ನಾನಪಾನಾದಿನಾ ಸುಖಹೇತವಃ । ಯದ್ವಾ। ಓಷಧಿರೂಪೇಣ ಪರಿಣತಾ ರೋಗೋಪಶಮನಹೇತವೋ ಭವಂತಿ ॥ ಕೇವಲಮಾಮಕೇತ್ಯಾದಿನಾ।

ಪಾ. ೪-೧-೩೦ । ಭೇಷಜಶಬ್ದಾದ್ಘಸ್ । ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವಂ । ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ ॥ ಯ ಏವಮುತಃ ಕಾರಣಾದಾಪೋಽಮೀವಚಾತನೀರಮೀವಚಾತನ್ಯೋ ರೋಗಾಣಾಂ ನಾಶಯಿತ್ರ್ಯೋ ಭವಂತಿ । ಚಾತಯತಿರ್ವಧಕರ್ಮಾ । ಕಿಂಚಾಪಃ ಸರ್ವಸ್ಯ ಪ್ರಾಣಿಜಾತಸ್ಯ ಭೇಷಜೀರ್ಭೇಷಜಭೂತಾ ಭವಂತಿ ನ ಕತಿಪಯಸ್ಯ । ತಾಸ್ತಥಾವಿಧಾ ಆಪಸ್ತೇ ತವ ಭೇಷಜಂ ಕೃಣ್ವಂತು । ಕುರ್ವಂತು ॥

॥ ಪ್ರತಿಪದಾರ್ಥ ॥

ಆಪ ಇತ್ ವೈ—ಆ ಉದಕಗಳೇ । ಭೇಷಜೀಃ ಉ—ಔಷಧಿರೂಪವಾಗಿವೆ ಮತ್ತು ಸ್ನಾನಪಾನಾದಿ ಗಳಿಂದ ನಮಗೆ ಸುಖಕರವಾಗಿವೆ । ಆಪಃ—ಉದಕಗಳು । ಅಮೀವಚಾತನೀಃ—ರೋಗಗಳನ್ನು ನಾಶಮಾಡುವುವಾಗಿವೆ । ಆಪಃ—ಉದಕಗಳು । ಸರ್ವಸ್ಯ—ಸಮಸ್ತ ಪ್ರಾಣಿವರ್ಗಕ್ಕೂ । ಭೇಷಜೀಃ—ಔಷಧಿ ಭೂತ ವಾಗಿವೆ । ತಾಃ—ಇಂತಹ ಗುಣವಿಶಿಷ್ಟವಾದ ಉದಕಗಳು । ತೇ—ನಿನಗೆ । ಭೇಷಜಂ - ವ್ಯಾಧಿಶಮನಮಾಡಿ ಸುಖವನ್ನು । ಕೃಣ್ವಂತು—ಉಂಟುಮಾಡಲಿ.

॥ ಭಾವಾರ್ಥ ॥

ಆ ಉದಕಗಳೇ ನಮಗೆ ಸ್ನಾನಪಾನಾದಿಗಳಿಗೆ ಸಾಧನವಾಗಿ ಸುಖಕರವಾಗಿರುವವು ಮತ್ತು ನಮ್ಮ ರೋಗ ಗಳನ್ನು ನಾಶಮಾಡುವವು. ಈ ಉದಕಗಳು ಸಮಸ್ತ ಪ್ರಾಣಿವರ್ಗಕ್ಕೆ ಔಷಧಿರೂಪವಾಗಿವೆ. ಇಂತಹ ಉದಕಗಳು ನಿನ್ನ ವ್ಯಾಧಿಯನ್ನು ಶಮನಮಾಡಿ ಸುಖವನ್ನುಂಟುಮಾಡಲಿ.

English Translation

Waters verily are medicinal; waters are the dissipators of disease; waters are the medicines for everything; may they act as medicine to you

॥ ಸಂಹಿತಾಪಾಠಃ ॥

ಹಸ್ತಾಭ್ಯಾಂ ದಶಶಾಖಾಭ್ಯಾಂ ಜಿಹ್ವಾ ವಾಚಃ ಪುರೋಗವೀ ।
ಅನಾಮಯಿತ್ನುಭ್ಯಾಂ ತ್ವಾ ತಾಭ್ಯಾಂ ತ್ವೋಪ ಸ್ಪೃಶಾಮಸಿ ॥ ೭ ॥

॥ ಪದಪಾಠಃ ॥

ಹಸ್ತಾಭ್ಯಾಂ । ದಶಽಶಾಖಾಭ್ಯಾಂ । ಜಿಹ್ವಾ । ವಾಚಃ । ಪುರಃಽಗವೀ ।
ಅನಾಮಯಿತ್ನುಽಭ್ಯಾಂ । ತ್ವಾ । ತಾಭ್ಯಾಂ । ತ್ವಾ । ಉಪ । ಸ್ಪೃಶಾಮಸಿ ॥ ೭ ॥

॥ ಸಾಯಣಭಾಷ್ಯಂ ॥

ದಶಶಾಖಾಭ್ಯಾಂ । ದಶಾಂಗುಲಯಃ ಶಾಖಾಭೂತಾ ಯಯೋಃ ತಾದೃಶಾಭ್ಯಾಂ ಪ್ರಜಾಪತೇರ್ಹಸ್ತಾಭ್ಯಾಂ ಸೃಜ್ಯಮಾನಾ ಜಿಹ್ವಾ ರಸನಾ ವಾಚಃ ಶಬ್ದಸ್ಯ ಪುರೋಗವೀ ಪುರತೋ ಗಂತ್ರೀ ಜಾತಾ । ಯತ್ರ

**ಯತ್ರ ಶಬ್ದಸ್ತತ್ರ ಸರ್ವತ್ರ ತಸ್ಯ ಶಬ್ದಸ್ಯೋಚ್ಚಾರಣಾಯ ಪುರತೋ ವ್ಯಾಪ್ರಿಯತ ಇತ್ಯರ್ಥಃ । ಅನಾಮಯಿತ್ನುಭ್ಯಾಂ ಸಮ್ಯಗಾರೋಗ್ಯಹೇತುಭ್ಯಾಂ ತಾಭ್ಯಾಂ ಹಸ್ತಾಭ್ಯಾಂ ಹೇ ಸ್ತೋತಃ ತ್ವಾಮುಪ ಸ್ಪೃಶಾಮಸಿ । ಉಪಸ್ಪೃಶಾಮಃ ॥ ಇದಂತೋ ಮಸಿಃ । ತ್ವೇತಿ ಪುನರುಕ್ತಿಃ ಪಾದಪೂರಣಾರ್ಥಾ ॥**

॥ ಪ್ರತಿಪದಾರ್ಥ ॥

**ವಾಚಃ**—ಶಬ್ದೋಚ್ಚಾರಣೆಗೆ | **ಪುರೋಗವೀ**—ಪೂರ್ವಭಾವಿಯಾಗಿ ಚಲಿಸುವ | **ಜಿಹ್ವಾ**—ನಾಲಗೆಯು । **ದಶಶಾಖಾಭ್ಯಾಂ** ಹತ್ತು ಬೆರಳುಗಳಿಂದ ಕೂಡಿದ | **ಹಸ್ತಾಭ್ಯಾಂ**—ಪ್ರಜಾಪತಿಯ ಎರಡು ಹಸ್ತಗಳಿಂದ ಸೃಷ್ಟಿಸಲ್ಪಟ್ಟಿದೆ | **ಅನಾಮಯಿತ್ನುಭ್ಯಾಂ**—ಆರೋಗ್ಯಕ್ಕೆ ಕಾರಣಭೂತವಾದ | **ತಾಭ್ಯಾಂ**—ಆ ಹಸ್ತಗಳಿಂದ (**ಹೇ ಸ್ತೋತಃ**--ಎಲೈ ಸ್ತೋತೃವೇ) । **ತ್ವಾ ತ್ವಾ**—ನಿನ್ನನ್ನು । **ಉಪಸ್ಪೃಶಾಮಸಿ**—ಸ್ಪರ್ಶಿಸುತ್ತೇವೆ.

॥ ಭಾವಾರ್ಥ ॥

ಶಬ್ದೋಚ್ಚಾರಣೆಗೆ ಪೂರ್ವಭಾವಿಯಾಗಿ ನಾಲಗೆಯು ಚಲಿಸುತ್ತದೆ ಎಂದರೆ ನಾಲಗೆಯ ಚಲನದಿಂದ ಶಬ್ದೋಚ್ಚಾರಣೆಯಾಗುತ್ತದೆ. ಅಂತಹ ಆ ನಾಲಗೆಯು ಹತ್ತುಬೆರಳುಗಳಿಂದ ಸಹಿತವಾದ ಪ್ರಜಾಪತಿಯ ಎರಡು ಹಸ್ತಗಳಿಂದ ನಿರ್ಮಿತವಾಗಿದೆ. ಎಲೈ ಸ್ತೋತೃವೇ, ಅಂತಹ ಪ್ರಜಾಪತಿಯ ಆರೋಗ್ಯಹೇತುವಾದ ಹಸ್ತಗಳಿಂದ ನಿನಗೆ ಸುಖವುಂಟಾಗುವುದಕ್ಕಾಗಿ ನಿನ್ನನ್ನು ಸ್ಪರ್ಶಿಸುತ್ತೇವೆ.

## English Translation.

The tongue (being cleansed) by the ten-branched hands (of Prajapathi is) the forerunner of speach ; with those (hands) the removers of disease we touch you.

---

# ನೂರ ಮೂವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ತವ ತ್ಯ ಇತಿ ಷಡೃಚಂ ದಶಮಂ ಸೂಕ್ತಮುರುನಾಮ್ನಃ ಪುತ್ರಸ್ಯಾಂಗಾಖ್ಯಸ್ಯಾರ್ಷಂ ಜಾಗತಮೈಂದ್ರಂ । ತಥಾ ಚಾನುಕ್ರಾಂತಂ । ತವ ತ್ಯೇ ಷಳಂಗ ಔರವೋ ಜಾಗತಮಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ತವ ತ್ಯೇ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಉರು ಎಂಬ ಋಷಿಯ ಪುತ್ರನಾದ ಅಂಗ ಎಂಬುವನು ಋಷಿಯು. ಇಂದ್ರನು ದೇವತೆಯು; ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ-**ತವ ತ್ಯೇ ಷಳಂಗ ಔರವೋ ಜಾಗತಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೩೮

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೩೮ ॥
ಅಷ್ಟಕ ೮ ॥ ಅಧ್ಯಾಯ—೭ ॥ ವರ್ಗ—೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಅಂಗ ಔರವಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ತವ ತ್ಯ ಇಂದ್ರ ಸಖ್ಯೇಷು ವಹ್ನಯ ಋತಂ ಮನ್ವಾನಾ ವ್ಯದರ್ದಿರುರ್ವಲಂ ।
ಯತ್ರಾ ದಶಸ್ಯನ್ನುಷಸೋ ರಿಣನ್ನಪಃ ಕುತ್ಸಾಯ ಮನ್ಮನ್ನಹ್ಯಶ್ಚ
ದಂಸಯಃ ॥ ೧ ॥

॥ ಪದಪಾಠಃ ॥

ತವ । ತ್ಯೇ । ಇಂದ್ರ । ಸಖ್ಯೇಷು । ವಹ್ನಯಃ । ಋತಂ । ಮನ್ವಾನಾಃ । ವಿ । ಅದರ್ದಿರುಃ । ವಲಂ ।
ಯತ್ರ । ದಶಸ್ಯನ್ । ಉಷಸಃ । ರಿಣನ್ । ಅಪಃ । ಕುತ್ಸಾಯ । ಮನ್ಮನ್ । ಅಹ್ಯಃ । ಚ । ದಂಸಯಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತವ ಸಖ್ಯೇಷು ಸಖಿತ್ವೇಷು ಸತ್ಸು ತ್ಯೇ ತೇ ಪ್ರಸಿದ್ಧಾ ವಹ್ನಯೋ ವೋಢಾರೋ ಹವಿಷಾಂ ಸ್ತುತೀನಾಂ ವಾ ಅತ ಏವರ್ತಂ ಯಜ್ಞಂ ಮನ್ವಾನಾ ಅವಬುಧ್ಯಮಾನಾ ಅಂಗಿರಸೋ ವಲಂ ಗವಾಮಪಹರ್ತಾರಮೇತತ್ಸಂಜ್ಞಕಮಸುರಂ ವ್ಯವರ್ದಿರುಃ । ಅತ್ಯರ್ಥಂ ವ್ಯದಾರಯನ್ ॥ ದೄ ವಿದಾರಣೇ । ಅಸ್ಮಾದ್ಯಙ್ಲುಗಾಂತಾಲ್ಲುಙ್ । ಸಿಜಭ್ಯಸ್ತೇತಿ ಝೇರ್ಜುಸ್ । ಜುಸಿ ಚೇತಿ ಗುಣಃ । ವ್ಯತ್ಯಯೇನೇತ್ವಂ ॥ ಅಪಿ ಚ ಯತ್ರ ಯಸ್ಮಿನ್ಕಾಲೇ ಮನ್ಮನ್ ಮನ್ಮನಿ ಸ್ತೋತ್ರೇ ಸತಿ ಕುತ್ಸಾಯ ಮಹರ್ಷಯೆ ಉಷಸ ಉಷಃಕಾಲಾನ್ವೃತ್ರೇಣಾವೃತತ್ವಾತ್ಪೂರ್ವಮಸತ್ತ್ವಾಯಾಂಸ್ತದಪನೋದನೇನ ದಶಸ್ಯನ್ಪ್ರಯಚ್ಛನ್ ತಥಾಪೋ ವೃತ್ರೇಣಾವೃತಾನ್ಯುದಕಾನಿ ಚ ರಿಣಂಸ್ತಸ್ಮಾನ್ನಿರ್ಗಮಯನ್ವರ್ತಸೇ ॥ ರೀ ಗತಿರೇಷಣಯೋಃ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವತ್ವಂ ॥ ತದಾನೀಮಹ್ಯೋಽಹೇರ್ವೃತ್ರಸ್ಯ ಚ ದಂಸಯಃ ಕರ್ಮಾಣಿ ವಿತಥಾನ್ಯಾಕಸನ್ನಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತವ**—ನಿನ್ನ । **ಸಖ್ಯೇಷು**—ಸ್ನೇಹವಿರಲಾಗಿ । **ತ್ಯೇ**—ಪ್ರಸಿದ್ಧರಾದವರೂ । **ವಹ್ನಯಃ**—ಸ್ತುತಿಯನ್ನು ಅಥವಾ ಹವಿಸ್ಸನ್ನು ವಹಿಸಿ ದೇವತೆಗಳಿಗೆ ಅರ್ಪಿಸುವವರೂ । **ಋತಂ**—

ಯಜ್ಞಾನುಷ್ಠಾನಕ್ರಮವನ್ನು | **ಮನ್ವಾನಾಃ**— ತಿಳಿದವರೂ ಆದ ಅಂಗಿರಸಋಷಿಗಳು | **ವಲಂ**– (ದೇವತೆಗಳ ಗೋವುಗಳನ್ನು ಅಪಹರಿಸಿದ್ದ) ವಲನೆಂಬ ಅರಸನನ್ನು | **ವಿ ಅದರ್ದಿರಾಃ**— ಸೀಳಿಹಾಕಿದರು (ಮತ್ತು) | **ಯತ್ರ**— ಯಾವಾಗ | **ಮನ್ಮನ್**— ಸ್ತುತನಾಗುವಿಯೇ ಆಗ (ನೀನು) | **ಕುತ್ಸಾಯ**— ಕುತ್ಸನೆಂಬ ಮಹರ್ಷಿಗೋಸ್ಕರ | **ಉಷಸಃ**— ಉಷಃಕಾಲಗಳನ್ನು (ಬೆಳಕನ್ನು) | **ದಶಸ್ಯನ್**— ಉಂಟುಮಾಡುತ್ತಾ | **ಅಪಃ**— ವೃತ್ರನಿಂದ ಆವರಿಸಲ್ಪಟ್ಟ ಉದಕಗಳನ್ನು | **ರಿಣನ್**— ಅಲ್ಲಿಂದ ಬಿಡಿಸಿ ಹೊರಡಿಸಿದೆ | **ಅಹ್ಯಃ ಚ**— ವೃತ್ರನ | **ದಂಸಯಃ**— ಉದಕಗಳನ್ನು ತಡೆಯುವ ಕರ್ಮಗಳೂ ವ್ಯರ್ಥವಾದವು.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ಸ್ನೇಹವಿರಲಾಗಿ ಸ್ತುತಿಗಳನ್ನು ಹವಿಸ್ಸುಗಳನ್ನು ದೇವತೆಗಳಿಗೆ ಅರ್ಪಿಸುವವರೂ, ಯಜ್ಞಾನುಷ್ಠಾನವನ್ನು ತಿಳಿದವರೂ ಆದ ಆ ಅಂಗೀರಸ ಋಷಿಗಳು ದೇವತೆಗಳ ಗೋವುಗಳನ್ನು ಅಪಹರಿಸಿದ್ದ ವಲನೆಂಬ ಅಸುರನನ್ನು ಸೀಳಿಹಾಕಿದರು. ಕುತ್ಸನು ನಿನ್ನನ್ನು ಸ್ತುತಿಸಿದಾಗ ಅವನಿಗಾಗಿ ಉಷಃಕಾಲಗಳನ್ನು ಉಂಟುಮಾಡಿ ಎಂದರೆ ಬೆಳಕನ್ನುಂಟುಮಾಡಿ ವೃತ್ರನಿಂದ ಆವರಿಸಲ್ಪಟ್ಟಿದ್ದ ಉದಕಗಳನ್ನು ಬಿಡಿಸಿ ಅಲ್ಲಿಂದ ಈಚೆಗೆ ಹೊರಡಿಸಿದೆ ಮತ್ತು ಉದಕಗಳನ್ನು ತಡೆಗಟ್ಟುವ ವೃತ್ರಾಸುರನ ಕಾರ್ಯಗಳೆಲ್ಲವೂ ವ್ಯರ್ಥವಾದವು.

## English Translation

The bearers of oblations (the Angirasas), Indra honouring the sacrifice, have through your friendship torn Vala to pieces, when praise (being offered) desiring to give the dawns to Kutsa (you were engaged in) freeing the waters, and Ahi's expolits (were foiled).

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿರುವ **ದಂಸಯಃ** — ಎಂಬ ಶಬ್ದಕ್ಕೆ ಯಾಸ್ಕರು **ದಂಸಯಃ — ಕರ್ಮಾಣಿ ದಂಸಯಂತ ಏತಾನಿ | ಕುತ್ಸಾಯ ಮನ್ಮನ್ನಹ್ಯಶ್ಚ ದಂಸಯಃ | ಇತ್ಯಪಿ ನಿಗಮೋ ಭವತಿ |** (ನಿ. ೪ - ೨೫) ಎಂದು ಹೇಳಿದಾರೆ. ದಂಸಯಃ ಎಂದರೆ ಕೆಲಸಗಳು ಇವು ಮಾಡಿ ಮುಗಿಸಲ್ಪಡುವುದರಿಂದ ಕೆಲಸಗಳಿಗೆ ದಂಸಯಃ ಎಂದು ಹೆಸರು. ಸಾಧಾರಣವಾಗಿ ದಂಸಯಃ ಎಂದರೆ ದಾಸರು (ಶೂದ್ರರು, ಕೃಷಿಕರು, ವ್ಯವಸಾಯಗಾರರು) ಮಾಡುವ ಕೆಲಸಗಳಿಗೆ ದಂಸಯಃ ಎಂದು ಹೆಸರು.

ಈ ಋಕ್ಕಿಗೆ ಸಾಯಣರು ಹೇಳಿರುವ ಅರ್ಥವಿವರಣೆಗೂ ನಿರುಕ್ತಭಾಷ್ಯಕಾರರಾದ ದುರ್ಗಾಚಾರ್ಯರ ಅರ್ಥವಿವರಣೆಗೂ ವ್ಯತ್ಯಾಸವಿದೆ. ವೋಢಾರಃ ಎಂಬ ಶಬ್ದಕ್ಕೆ ಸಾಯಣರು ಹವಿಸ್ಸನ್ನು ಅಥವಾ ಸ್ತುತಿಯನ್ನು ವಹಿಸುವ ಅಂಗಿರಸ ಋಷಿಗಳೆಂದು ಅರ್ಥಮಾಡಿದಾರೆ. ದುರ್ಗಾಚಾರ್ಯರು ಈ ಶಬ್ದಕ್ಕೆ ಇಂದ್ರನ ರಥವನ್ನು ವಹಿಸುವ ಇಂದ್ರನ ಕುದುರೆಗಳು ಎಂದು ಅರ್ಥಮಾಡಿ ಅದಕ್ಕನುಸಾರವಾಗಿ ಋಕ್ಕಿಗೆ ಅರ್ಥವಿವರಣೆ ಮಾಡಿದಾರೆ —

ಎಲೈ ಇಂದ್ರನೇ, ನಿನ್ನನ್ನು ವಹಿಸುವ ಅಶ್ವಗಳು ನಿನ್ನ ಪ್ರೀತ್ಯರ್ಥವಾಗಿ ಮೇಘಗಳಲ್ಲಿರವ ಉದಕವನ್ನು ಬಿಡಿಸುವುದಕ್ಕಾಗಿ ಮೇಘವನ್ನು (ವಲ) ಸೀಳಿ ಹಾಕಿದುವು ಮತ್ತು ನೀನು ಕೃಷಿಕನಿಗೆ (ವ್ಯವಸಾಯಗಾರನಿಗೆ)

ಅವನ ಕೆಲಸಗಳನ್ನು ಸುಲಭಗೊಳಿಸುವುದಕ್ಕಾಗಿ ಉಷಃಕಾಲವನ್ನುಂಟುಮಾಡಿ. ಕೃಷಿಕರ್ಮಕ್ಕೆ ಅವಶ್ಯಕವಾದ ಉದಕವನ್ನು, ಅವುಗಳನ್ನು ತಡೆದಿಟ್ಟಿದ್ದ ಮೇಘವನ್ನು ಸೀಳಿ ಈಚೆಗೆ ಹೊರಡಿಸಿರುವೆ ಮತ್ತು ಮೇಘಗಳಿಂದ ಹೊರಡಿಸಲ್ಪಟ್ಟ ಮೇಘದ ಉದಕಗಳು ವೃಷ್ಟಿರೂಪದಲ್ಲಿ ಭೂಮಿಯ ಮೇಲೆ ಬಿದ್ದು ಕೃಷಿಕಾರನಿಗೆ ಅವನ ಕೃಷಿಕರ್ಮದಲ್ಲಿ ಸಹಾಯಮಾಡಿದವು ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಅವಾಸೃಜಃ ಪ್ರಸ್ವಃ ಶ್ವಂಚಯೋ ಗಿರೀನುದಾಜ ಉಸ್ರಾ ಅಪಿಬೋ ಮಧು ಪ್ರಿಯಂ ।
ಅವರ್ಧಯೋ ವನಿನೋ ಅಸ್ಯ ದಂಸಸಾ ಶುಶೋಚ ಸೂರ್ಯ ಋತಜಾತಯಾ ಗಿರಾ ॥ ೨ ॥

॥ ಪದಪಾಠಃ ॥

ಅವ । ಅಸೃಜಃ । ಪ್ರಽಸ್ವಃ । ಶ್ವಂಚಯಃ । ಗಿರೀನ್ । ಉತ್ । ಆಜಃ । ಉಸ್ರಾಃ । ಅಪಿಬಃ । ಮಧು । ಪ್ರಿಯಂ ।
ಅವರ್ಧಯಃ । ವನಿನಃ । ಅಸ್ಯ । ದಂಸಸಾ । ಶುಶೋಚ । ಸೂರ್ಯಃ । ಋತಽಜಾತಯಾ । ಗಿರಾ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪ್ರಸ್ವಃ । ಪ್ರಸೂತಿರ್ಜನ್ಮ । ತದ್ಧೇತುಭೂತಾ ಅಪೋಽವಾಸೃಜಃ । ಆವಾರಕಾನ್ಮೇಘಾದಧಃ ಪಾತಿತವಾನಸಿ । ತಥಾ ಗಿರೀನ್ಪರ್ವತಾನ್ಬಲೇನ ಗೋಮತೋ ಬಿಲಸ್ಯ ಪಿಧಾನಾಯ ನಿಹಿತಾಞ್ಶ್ವಂಚಯಃ । ಅಭೈತ್ಸೀರಿತ್ಯರ್ಥಃ ॥ ಶ್ವಚಿ ಗತೌ । ಅಸ್ಮಾಣ್ಣ್ಯಂತಾಲ್ಲಙಿ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಸಮಾನವಾಕ್ಯೇ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾಃ। ಪಾ. ೮-೧ ೧೮-೩। ಇತಿ ವಚನಾತ್ಪೂರ್ವಪದಸ್ಯಾಸಮಾನವಾಕ್ಯಗತತ್ವೇನಾಸ್ಯ ತಿಙ್ಙತಿಙ ಇತಿ ನಿಘಾತಾಭಾವಃ ॥ ತಥಾ ವಲಾಸುರೇಣ ಬಿಲೇ ನಿಹಿತಾ ಉಸ್ರಾ ಗಾಃ ಪರ್ವತಭೇದಾನಾನಂತರಮುದಾಜಃ । ಉದಗಮಯಃ । ತತ್ರ ಪಯೋದಧ್ಯಾಜ್ಯಾದಿಕಂ ಪ್ರಿಯಮನುಕೂಲಂ ಮಧು ಮಧುರಂ ಹವಿರಪಿಬಃ । ಪೀತವಾನಸಿ । ಯದ್ವಾ । ಶ್ರಯಣಸಾಧನಾಸು ತಾಸು ಗೋಷ್ವಾಗತಾಸು ಯಜಮಾನೈಃ ಪ್ರಿಯಮಭೀಷ್ಟಂ ಮಧು ಸೋಮಾತ್ಮಕಮಪಿಬಃ । ಪಿಬಸಿ । ತಥಾ ವನಿನೋ ವನಸಂಬದ್ಧಾನ್ವೃಕ್ಷಾನ್ । ಯದ್ವಾ । ವನಮಿತ್ಯುದಕನಾಮ । ತದ್ಯುಕ್ತಾನ್ಸಮುದ್ರಾನ್ ಅವರ್ಧಯಃ । ವೃಷ್ಟಿಪ್ರದಾನೇನ ವರ್ಧಯಸಿ । ಋತಜಾತಯಾ । ಋತಂ ಯಜ್ಞಂ । ತದರ್ಥಂ ಜಾತಂ ಜನ್ಮ ಯಸ್ಯಾಃ ತಯಾ ಗಿರಾ ವೇದಾತ್ಮಿಕಯಾ ವಾಚಾ ಸ್ತೂಯಮಾನಸ್ಯಾಸ್ಯೇಂದ್ರಸ್ಯ ದಂಸಸಾ ಕರ್ಮಣಾವೃಣ್ವತೋ ವೃತ್ರಾದೇರಪಿ ನೋದನಾತ್ಮಕೇನ ಸೂರ್ಯಃ ಶುಶೋಚ । ನಭಸಿ

**ಪ್ರದಿದೀಪೇ । ಯದ್ವಾ । ಋತಜಾತಯಾ ಗಿರೇತಿ ಸೂರ್ಯಸ್ಯೈವ ವಿಶೇಷಣಂ । ತ್ರಯೀರೂಪಯಾ ವಾಚಾ ಪ್ರದೀಪ್ಯತ ಇತ್ಯರ್ಥಃ ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತ ಇತ್ಯಾದಿಕಂ ತೈತ್ತಿರೀಯಕ-ಮತ್ರಾನುಸಂಧೇಯಂ । ತೈ. ಬ್ರಾ. ೩-೧೨-೯-೧ ॥ ಶುಶೋಚೇತ್ಯಸ್ಯ ಪದಾತ್ಪರತ್ವೇಽಪಿ ಪಾದಾದಿತ್ವಾದ-ಪಾದಾದಾವಿತಿ ಪರ್ಯುದಾಸಸ್ಯಾನುವೃತ್ತೇರ್ನಿಘಾತಾಭಾವಃ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಪ್ರಸ್ವಃ**— ಮೇಘಗಳಲ್ಲಿ ಸಂಗೃಹೀತವಾದ ಉದಕಗಳನ್ನು । **ಅವಾಸೃಜಃ**— ಭೂಮಿಯ ಮೇಲೆ ಅಧೋಮುಖವಾಗಿ ಬೀಳುವಂತೆ ಮಾಡಿರುವೆ । **ಗಿರೀನ್**— ಗೋವುಗಳನ್ನು ಬಚ್ಚಿಟ್ಟಿರುವ ಪರ್ವತ ಗಳನ್ನು । **ಶ್ವಂಚಯಃ**— ಸವಿಾಪಿಸಿರುವೆ (ಪರ್ವತ ಭೇದನಾನಂತರ) । **ಉಸ್ರಾಃ**— ವಲನಿಂದ ಬಚ್ಚಿಡಲ್ಪಟ್ಟಿದ್ದ ಗೋವುಗಳನ್ನು । **ಉದಾಜಃ**— ಬಿಡಿಸಿ ಗುಹೆಯಿಂದ ಹೊರ ಹೊಡಿಸಿದೆ (ಅನಂತರ) । **ಪ್ರಿಯಂ**— ಹಿತಕರವಾದ । **ಮಧು**— ಮಧುರವಾದ ಹವಿಸ್ಸನ್ನು । **ಅಪಿಬಃ** – ಪಾನಮಾಡಿದೆ । **ವನಿನಃ**— ವೃಕ್ಷಗಳನ್ನು ಅಥವಾ ಉದಕ ಪೂರ್ಣವಾದ ಸಮುದ್ರಗಳನ್ನು । **ಅವರ್ಧಯಃ**— ವೃಷ್ಟಿಪ್ರದಾನದಿಂದ ವೃದ್ಧಿಗೊಳಿಸಿರುವೆ । **ಋತಜಾತಯಾ**— ಯಜ್ಞಾರ್ಥವಾಗಿ ರಚಿತವಾದ । **ಗಿರಾ**— ವೇದ ವಾಕ್ಯದಿಂದ ಸ್ತುತನಾದ । **ಅಸ್ಯ**— ಈ ಇಂದ್ರನ । **ದಸಂಸಾ**— ವೃತ್ರಾದಿವಧಕರ್ಮದಿಂದ । **ಸೂರ್ಯಃ**— ಸೂರ್ಯನು । **ಶುಶೋಚ**— ಅಂತರಿಕ್ಷದಲ್ಲಿ ಪ್ರಕಾಶಮಾನವಾಗಿ ಬೆಳ ಗಿದನು ಅಥವಾ । [**ಋತಜಾತಯಾ**— ಯಜ್ಞಾರ್ಥವಾಗಿ ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ । **ಗಿರಾ**— ಋಗ್ಯಜು ಸಾಮಾತ್ಮಕವಾದ ಸ್ತುತಿವಾಕ್ಯದಿಂದ । **ಸೂರ್ಯಃ**— ಸೂರ್ಯನು । **ಶುಶೋಚ**— ಅಂತರಿಕ್ಷದಲ್ಲಿ ಪ್ರಕಾಶಿಸಿದನು.]

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಮೇಘಗಳಲ್ಲಿ ಒಟ್ಟು ಗೂಡಿದ್ದ ಉದಕಗಳನ್ನು ಭೂಮಿಯ ಮೇಲೆ ವೃಷ್ಟಿರೂಪದಲ್ಲಿ ಬೀಳುವಂತೆ ಮಾಡಿದೆ ವಲನು ದೇವತೆಗಳ ಗೋವುಗಳನ್ನು ಬಚ್ಚಿಟ್ಟಿದ್ದ ಪರ್ವತಗಳನ್ನು ಸವಿಾಪಿಸಿ ಅವುಗಳಲ್ಲಿದ್ದ ಗೋವುಗಳನ್ನು ಬಿಡಿಸಿ ಹೊರ ಹೊರಡಿಸಿದೆ. ಅನಂತರ ಯಜ್ಞದಲ್ಲಿ ನಿನಗಾಗಿ ಅರ್ಪಿಸಿದ ಮಧುರವಾದ ಹವಿಸ್ಸನ್ನು ಪಾನಮಾಡಿದೆ. ವನದಲ್ಲಿರುವ ವೃಕ್ಷಗಳನ್ನು ಅಥವಾ ಉದಕಪೂರ್ಣವಾದ ಸಮುದ್ರಗಳನ್ನು ವೃಷ್ಟಿಪ್ರದಾನದಿಂದ ಅಭಿವೃದ್ಧಿಗೊಳಿಸಿದೆ. ಯಜ್ಞಾರ್ಥವಾಗಿ ಪರಮೇಶ್ವರನಿಂದ ಸೃಷ್ಟವಾದ ವೇದವಾಕ್ಯದಿಂದ ಸ್ತುತನಾದ ನಿನ್ನ ವೃತ್ರ ವಧಾದಿಕರ್ಮದಿಂದ ಅಥವಾ ಋಗ್ಯಜುಸ್ಸಾಮಾತ್ಮಕವಾದ ವೇದವಾಕ್ಯದಿಂದ ಸೂರ್ಯನು ಅಂತರಿಕ್ಷದಲ್ಲಿ ಪ್ರಕಾಶ ಮಾನವಾಗಿ ಬೆಳಗಿದನು.

## English Translation.

You has sent forth the generative (waters), you have cleft the mountains you have fetched forth the cows, you have quaffed the delicions Soma, you have caused the trees of the forest to grow; through his expolits by means of the voice produced for the sacrifice the sun has shone bright.

॥ ವಿಶೇಷವಿಷಯಗಳು ॥

ಸೂರ್ಯನು ವೇದರೂಪವಾದ ವಾಕ್ಯದಿಂದ ಅಂತರಿಕ್ಷದಲ್ಲಿ ಬೆಳಗುತ್ತಿರುವನು ಎಂಬ ವಿಷಯದಲ್ಲಿ ಭಾಷ್ಯಕಾರರು ತೈತ್ತಿರೀಯ ಬ್ರಾಹ್ಮಣದ ವಾಕ್ಯವನ್ನು ಉದಾಹರಿಸಿದಾರೆ—

**ಋಚಾಂ ಪ್ರಾಚೀ ಮಹತೀ ದಿಗುಚ್ಯತೇ । ದಕ್ಷಿಣಾಮಾಹುರ್ಯಜುಷಾಮಪಾರಾಂ। ಅಥರ್ವಣಾಮಂಗಿರಸಾಂ ಪ್ರತೀಚೀ । ಸಾಮ್ನಾಮುದೀಚೀ ಮಹತೀ ದಿಗುಚ್ಯತೇ ॥**

(ತೈ. ಬ್ರಾ. ೩-೧೨-೯-೧)

ಋಗ್ವೇದಾಭಿಮಾನಿ ದೇವತೆಗಳಿಗೆ ಪೂರ್ವದಿಕ್ಕು ಪ್ರಿಯವಾಗಿರುವುದು. ಹಾಗೆಯೇ ಯಜುರಭಿಮಾನಿ ದೇವತೆಗಳಿಗೆ ದಕ್ಷಿಣದಿಕ್ಕೂ ಅಥರ್ವವೇದಾಭಿಮಾನಿ ದೇವತೆಗಳಿಗೆ ಪಶ್ಚಿಮದಿಕ್ಕೂ , ಸಾಮವೇದಾಭಿಮಾನಿ ದೇವತೆಗಳಿಗೆ ಉತ್ತರ ದಿಕ್ಕು ಪ್ರಿಯವಾಗಿರುವುದು.

**ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ । ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ । ಸಾಮವೇದೇನಾಸ್ತಮಯೇ ಮಹೀಯತೇ । ವೇದೈರಶೂನ್ಯಸ್ತ್ರಿಭಿರೇತಿ ಸೂರ್ಯಃ ॥**

(ತೈ. ಬ್ರಾ. ೩-೧೨-೯-೧)

ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವ ಸೂರ್ಯನು ದಿವಸದ ಪೂರ್ವಾಹ್ಣದಲ್ಲಿ ಋಗ್ದೇವತಾಭಿಮಾನಿದೇವತೆಗಳೊಡನೆ ಸಂಚರಿಸುತ್ತಾನೆ. ಮಧ್ಯಾಹ್ನಕಾಲದಲ್ಲಿ ಯಜುರಾಭಿಮಾನಿದೇವತೆಗಳ ಸಮೀಪದಲ್ಲಿರುತ್ತಾನೆ. ಅಸ್ತಮಯಕಾಲದಲ್ಲಿ ಸಾಮವೇದಾಭಿಮಾನಿದೇವತೆಯಿಂದ ಪೂಜಿಸಲ್ಪಡುತ್ತಾನೆ ಈ ರೀತಿ ಮೂರು ವೇದಗಳಿಂದ ಯುಕ್ತನಾದ ಸೂರ್ಯನು ಸರ್ವಕಾಲದಲ್ಲಿಯೂ ಸಂಚರಿಸುತ್ತಾನೆ.

**ಋಗ್ಭ್ಯೋ ಜಾತಾಗ್ಂ ಸರ್ವಶೋ ಮೂರ್ತಿಮಾಹುಃ । ಸರ್ವಾ ಗತಿರ್ಯಾಜುಷೀ ಹೈವ ಶಶ್ವತ್ ॥ ಸರ್ವಂ ತೇಜಃ ಸಾಮರೂಪ್ಯಗ್ಂ ಹ ಶಶ್ವತ್ । ಸರ್ವಗ್ಂ ಹೇದಂ ಬ್ರಹ್ಮಣಾ ಹೈವ ಸೃಷ್ಟಂ ॥**

(ತೈ. ಬ್ರಾ. ೩-೧೨-೯-೧, ೨)

ಆದಿತ್ಯನ ಅಥವಾ ಇತರ ದೇವತೆಯ ಯಾವ ಯಾವ ಮೂರ್ತಿಗಳಿರುವವೋ ಅವೆಲ್ಲವೂ ಋಙ್ಮಂತ್ರಗಳಿಂದ ಉತ್ಪನ್ನವಾಗಿವೆಯೆಂದು ಪ್ರಾಜ್ಞರು ಹೇಳುವರು. ದೇವತೆಗಳ ಗಮನಾದಿಗಳು ಯಜುರ್ಮಂತ್ರಗಳಿಂದ ಲಬ್ಧವಾಗಿರುವವು. ದೇವತೆಗಳಲ್ಲಿರುವ ತೇಜಸ್ಸು ಸಾಮವೇದದ ಪ್ರಭಾವದಿಂದ ಸ್ಥಾಪಿತವಾಗಿರುವುದು ಈ ರೀತಿಯಾಗಿ ಸರ್ವವೂ ಬ್ರಹ್ಮನಿಂದಲೇ ಸೃಷ್ಟಿಸಲ್ಪಟ್ಟಿದೆ. ಇತ್ಯಾದಿ.

॥ ಸಂಹಿತಾಪಾಠಃ ॥

ವಿ ಸೂರ್ಯೋ ಮಧ್ಯೇ ಅಮುಚದ್ರಥಂ ದಿವೋ ವಿದದ್ದಾಸಾಯ ಪ್ರತಿಮಾನಮಾರ್ಯಃ ।

ದೃಳ್ಹಾನಿ ಪಿಪ್ರೋರಸುರಸ್ಯ ಮಾಯಿನ ಇಂದ್ರೋ ವ್ಯಾಸ್ಯಚ್ಚಕೃವಾಁ ಋಜಿ-
ಶ್ವನಾ ॥ ೩ ॥

॥ ಪದಪಾಠಃ ॥

ವಿ । ಸೂರ್ಯಃ । ಮಧ್ಯೇ । ಅಮುಚತ್ । ರಥಂ । ದಿವಃ । ವಿದತ್ । ದಾಸಾಯ । ಪ್ರತಿಽಮಾನಂ ।
ಆರ್ಯಃ ।
ದೃಳ್ಹಾನಿ । ಪಿಪ್ರೋಃ । ಅಸುರಸ್ಯ । ಮಾಯಿನಃ । ಇಂದ್ರಃ । ವಿ । ಅಸ್ಯತ್ । ಚಕೃಽವಾನ್ । ಋಜಿಶ್ವನಾ ॥

॥ ಸಾಯಣಭಾಷ್ಯಂ ॥

ದಿವೋ ದ್ಯುಲೋಕಸ್ಯ ಮಧ್ಯೇ ಸೂರ್ಯ ಆದಿತ್ಯೋ ರಥಂ ಪ್ರಸ್ಥಾನಾಯ ವ್ಯಮುಚತ್ । ವಿಮುಕ್ತವಾನ್ ॥ ಮುಚೇರ್ಲುಙಿ ಲೃದಿತ್ವಾಚ್ಚ್ಲೇರಙಾದೇಶಃ ॥ ಕದೇತಿ ಚೇದುಚ್ಯತೇ । ಯದಾರ್ಯೋಽಭಿಜ್ಞ ಇಂದ್ರೋ ದಾಸಾಯೋಪಕ್ಷಪಯಿತ್ರೇ ವೃತ್ರಾದಯೇ ಪ್ರತಿಮಾನಂ ಪ್ರತಿಕೃತಿಂ ಪ್ರತೀಕಾರಂ ವಿದತ್ ವೇತ್ತಿ ಜಾನಾತಿ । ಅಲಭತ ವಾ । ಅಪಿ ಚ ಮಾಯಿನೋ ಮಾಯಾವಿನಃ ॥ ಮಾಯಾಶಬ್ದಸ್ಯ ವ್ರೀಹ್ಯಾದಿಷು ಪಾಠಾದ್ವ್ರೀಹ್ಯಾದಿಭ್ಯಶ್ಚೇತೀನಿಪ್ರತ್ಯಯಃ ॥ ಪಿಪ್ರೋರೇತನ್ನಾಮ್ನೋಽಸುರಸ್ಯ ದೃಳ್ಹಾನಿ ದೃಢಾನಿ ಸ್ಥಿರಾಣಿ ಪುರಾಣಿ ಬಲಾನಿ ವರ್ಜಿಶ್ವನಾ ರಾಜರ್ಷಿಣಾ ಚಕೃವಾನ್ ಸಖ್ಯಂ ಕುರ್ವನ್ನಿಂದ್ರೋ ವ್ಯಾಸ್ಯತ್ । ವ್ಯಕ್ಷಿಪತ್ । ವಿವಿಧಮಾಕ್ಷಿಪ್ತವಾನ್ । ವ್ಯನೀನಶದಿತ್ಯರ್ಥಃ ॥ ಅಸು ಕ್ಷೇಪಣೇ ॥

॥ ಪ್ರತಿಪದಾರ್ಥ ॥

**ಆರ್ಯಃ**— ಅಭಿಜ್ಞನಾದ ಇಂದ್ರನು । **ದಾಸಾಯ**— ವಿನಾಶಕನಾದ ವೃತ್ರಾದಿಶತ್ರುವಿಷಯದಲ್ಲಿ । **ಪ್ರತಿಮಾನಂ**— ಪ್ರತೀಕಾರವನ್ನು । **ವಿದತ್**— ಮಾಡಬೇಕೆಂದು ತಿಳಿದಾಗ (ನಿಶ್ಚಯಿಸಿದಾಗ) । **ದಿವಃ**— ದ್ಯುಲೋಕದ (ಅಂತರಿಕ್ಷದ) । **ಮಧ್ಯೇ**— ಮಧ್ಯದಲ್ಲಿ । **ಸೂರ್ಯಃ**— ಆದಿತ್ಯನು । **ರಥಂ**— ತನ್ನ ರಥವನ್ನು (ರಥದ ಕುದುರೆಗಳನ್ನು ಬಿಚ್ಚಿ) । **ವಿ ಅಮುಂಚತ್**— ಬಿಟ್ಟು ನಿಲ್ಲಿಸಿದನು (ಮತ್ತು) । **ಮಾಯಿನಃ** — ಮಾಯಾವಿಯಾದ । **ಪಿಪ್ರೋಃ**— ಪಿಪ್ರುವೆಂಬ ಹೆಸರಿನ । **ಅಸುರಸ್ಯ**— ಅಸುರನ । **ದೃಳ್ಹಾನಿ**— ದೃಢವಾದ ಪಟ್ಟಣಗಳನ್ನು ಅಥವಾ ಸೈನ್ಯಗಳನ್ನು । **ಋಜಿಶ್ವನಾ**— ಋಜಿಶ್ವನೆಂಬ ರಾಜರ್ಷಿಯೊಡನೆ । **ಚಕೃವಾನ್**— ಸ್ನೇಹಮಾಡಿ । **ಇಂದ್ರಃ**— ಇಂದ್ರನು । **ವಿ ಅಸ್ಯತ್**— ನಾಶಮಾಡಿದನು.

॥ ಭಾವಾರ್ಥ ॥

ಅಭಿಜ್ಞನಾದ ಇಂದ್ರನು ಶತ್ರುವಾದ ವೃತ್ರಾದಿಜನರಿಗೆ ಪ್ರತೀಕಾರವನ್ನು ಮಾಡಬೇಕೆಂದು ನಿಶ್ಚಯಿಸಿದಾಗ ಅಂತರಿಕ್ಷದ ಮಧ್ಯದಲ್ಲಿ ಆದಿತ್ಯನು ತನ್ನ ರಥದ ಅಶ್ವಗಳನ್ನು ಬಿಚ್ಚಿ ರಥವನ್ನು ನಿಲ್ಲಿಸಿದನು. ಇಂದ್ರನು ಋಜಿಶ್ವನೆಂಬ ರಾಜರ್ಷಿಯೊಡನೆ ಸ್ನೇಹಮಾಡಿ ಮಾಯಾವಿಯಾದ ಪಿಪ್ರುವೆಂಬ ಅಸುರನ ಬಲವಾದ ಕೋಟೆಗಳಿಂದ ಕೂಡಿದ ಪಟ್ಟಣಗಳನ್ನು ಅಥವಾ ಅವನ ಬಲವಾದ ಸೈನ್ಯಗಳನ್ನು ನಾಶಮಾಡಿದನು.

## English Translation

The sun unyoked his chariot in the midst of the sky, (when) the Arya (Indra) eucountered the Dasa; associated with Rijiswan, Indra destroyed the stronghold of the guileful Asura, Pipru.

॥ ಸಂಹಿತಾಪಾಠಃ ॥

ಅನಾಧೃಷ್ಟಾನಿ ಧೃಷಿತೋ ವ್ಯಾಸ್ಯನ್ನಿಧೀಂರದೇವಾಁ ಅಮೃಣದಯಾಸ್ಯಃ ।
ಮಾಸೇವ ಸೂರ್ಯೋ ವಸು ಪುರ್ಯಮಾ ದದೇ ಗೃಣಾನಃ ಶತ್ರೂಁರಶೃಣಾ-
ದ್ವಿರುಕ್ಮತಾ ॥ ೪ ॥

॥ ಪದಪಾಠಃ ॥

ಅನಾಧೃಷ್ಟಾನಿ । ಧೃಷಿತಃ । ವಿ । ಆಸ್ಯತ್ । ನಿಽಧೀನ್ । ಅದೇವಾನ್ । ಅಮೃಣತ್ । ಅಯಾಸ್ಯಃ ।
ಮಾಸಾಽಇವ । ಸೂರ್ಯಃ । ವಸು । ಪುರ್ಯಂ । ಆ । ದದೇ । ಗೃಣಾನಃ । ಶತ್ರೂನ್ । ಅಶೃಣಾತ್ ।
ವಿರುಕ್ಮತಾ ॥ ೪ ॥

॥ ಸಾಯಣಭಾಷ್ಯಂ ॥

ಧೃಷಿತಃ ಶತ್ರೂಣಾಂ ಧರ್ಷಯಿತಾ ಪ್ರಗಲ್ಭ ಇಂದ್ರೋಽನಾಧೃಷ್ಟಾನೀತಃ ಪೂರ್ವಂ ಶತ್ರುಭಿರಪ್ರಧೃಷ್ಟಾನ್ಯಬಾಧಿತಾನ್ಯಸುರಬಲಾನಿ ವ್ಯಾಸ್ಯತ್ । ವ್ಯಾಕ್ಷಿಪ್ತವಾನ್ । ತಥಾಯಾಸ್ಯೋಽಯಾಸನೀಯಶ್ಚಾಲಯಿತುಮಶಕ್ಯಃ । ಯದ್ವಾ । ಅಯಾಸ್ಯೋಽಂಗಿರಾಃ । ಸ್ತೋತೃವಾಚಿನಾ ಶಬ್ದೇನ ಸ್ತುತ್ಯೋ ಲಕ್ಷ್ಯತೇ । ಅಯಾಸ್ಯೇನರ್ಷಿಣಾ ಸ್ತುತ್ಯ ಇಂದ್ರೋ ನಿಧೀನಸುರೈರ್ನಿಹಿತಾನ್ಧನಸಮೂಹಾನ್ ಯದ್ವಾ ನಿಧಾತ್ರೂನ್ನಿತರಾಂ ಬಲಾನಾಂ ಧಾರಯಿತ್ರೂನದೇವಾನ್ದೇವವಿರೋಧಿನೋಽಸುರಾನಮೃಣತ್ । ಅಹಿಂಸೀತ್॥ ಮೃಣ ಹಿಂಸಾಯಾಂ । ತೌದಾದಿಕಃ ॥ ಅಪಿ ಚ ಸೂರ್ಯೋ ಮಾಸೇವ ಮಾಸೇನೇವ ॥ ಪದ್ದನ್ನಿತ್ಯಾದಿನಾ ಮಾಸಶಬ್ದಸ್ಯ ಮಾಸ್ಭಾವಃ । ಸ ಯಥಾ ಮಾಸವಿಶೇಷೇಣ ಭೌಮಾನ್ರಸಾನಾದತ್ತೇ ತಥಾ ಪುರ್ಯಮಸುರಾಣಾಂ ಪುರಿ ಭವಂ ॥ ಭವೇ ಛಂದಸೀತಿ ಯತ್ । ಹಲಿ ಚೇತಿ ದೀರ್ಘಸ್ಯ ನ ಭಕುರ್ಛುರಾಂ । ಪಾ. ೮-೨-೭೯ । ಇತಿ ಪ್ರತಿಷೇಧಃ । ಯತೋಽನಾವ ಇತ್ಯಾದ್ಯುದಾತ್ತತ್ವಂ ॥ ಈದೃಶಂ ವಸು ಧನಮಾದದೇ । ಆದತ್ತೇ ಸ್ಮ ॥ ಆಙೋ ದೋಽನಾಸ್ಯವಿಹರಣ ಇತ್ಯಾತ್ಮನೇಪದಂ ॥ ತಥಾ ಗೃಣಾನಃ ಸ್ತೋತೃಭಿಃ ಸ್ತೂಯಮಾನಃ ಸನ್ ॥ ವ್ಯತ್ಯಯೇನ ಕರ್ಮಣಿ ಕರ್ತೃಪ್ರತ್ಯಯಃ ॥ ಶತ್ರೂಞ್ಛಾತಯಿತೄನಸುರಾನ್ವಿರುಕ್ಮತಾ ವಿರೋಚಮಾನೇನ ವಜ್ರೇಣಾಶೃಣಾತ್ । ಅಹಿಂಸೀತ್ ॥

॥ ಪ್ರತಿಪದಾರ್ಥ ॥

**ಧೃಷಿತಃ**— ಶತ್ರುಗಳನ್ನು ಸದೆಬಡಿಯುವ ಬಲಶಾಲಿಯಾದ ಇಂದ್ರನು । **ಅನಾಧೃಷ್ಟಾನಿ**— ಇದುವರೆಗೂ ಸೋಲಿಸಲ್ಪಡದಿರುವ ಶತ್ರುಸೇನೆಗಳನ್ನು । **ವಿ ಅಸ್ಯತ್**— ನಾಶಮಾಡಿದನು (ಹಾಗೆಯೇ) । **ಅಯಾಸ್ಯಃ**— ಕದಲಿಸಲ್ಪಡಲು ಅಶಕ್ಯನಾದ ಇಂದ್ರನು ಅಥವಾ ಅಂಗಿರಾಋಷಿಯಿಂದ ಸ್ತುತ್ಯನಾದ ಇಂದ್ರನು । **ನಿಧೀನ್**— ಅಸುರರ ಧನಗಳನ್ನು ಅಥವಾ ಅತ್ಯಂತ ಬಲಶಾಲಿಗಳಾದ । **ಅದೇವಾನ್**— ದೇವತೆಗಳಿಗೆ ವಿರೋಧಿಗಳಾದ ಅಸುರರನ್ನು । **ಅಮೃಣತ್**— ಹಿಂಸಿಸಿದನು (ಕೊಂದನು) । **ಸೂರ್ಯಃ**— ಸೂರ್ಯನು । **ಮಾಸೇವ**— ಬೇಸಿಗೆಯ ತಿಂಗಳಲ್ಲಿ ಭೂಮಿಯ ರಸಗಳನ್ನು ಹೀರಿ ಆಕರ್ಷಿಸುವಂತೆ ಇಂದ್ರನು । **ಪುರ್ಯಂ**— ಅಸುರರ ಪಟ್ಟಣಗಳಲ್ಲಿದ್ದ । **ವಸು**— ಧನವನ್ನು । **ಆ ದದೇ ಸ್ವ**— ದೋಚಿಕೊಂಡನು । **ಗೃಣಾನಃ**— ಸ್ತೋತೃಜನರಿಂದ ಸ್ತುತಿಸಲ್ಪಟ್ಟವನಾಗಿ । **ಶತ್ರೂನ್**— ಶತ್ರುಗಳಾದ ಅಸುರರನ್ನು । **ವಿರುಕ್ಮತಾ**— ಹೊಳೆಯುತ್ತಿರುವ ತನ್ನ ವಜ್ರಾಯುಧದಿಂದ । **ಅಶೃಣಾತ್**— ಹಿಂಸಿಸಿ ಕೊಂದನು ।

॥ ಭಾವಾರ್ಥ ॥

ಶತ್ರುಗಳನ್ನು ಸದೆಬಡಿಯುವ ಶೂರನಾದ ಇಂದ್ರನು ಇದುವರೆಗೂ ಯಾರಿಂದಲೂ ಸೋಲಿಸಲ್ಪಡದಿರುವ ಶತ್ರುಸೇನೆಗಳನ್ನು ಸೋಲಿಸಿ ನಾಶಮಾಡಿದನು. ಯಾರಿಂದಲೂ ಕದಲಿಸಲ್ಪಡಲು ಅಶಕ್ಯನಾದ ಇಂದ್ರನು ಅಸುರರ ಧನಗಳನ್ನು ಅಪಹರಿಸಿ ತಂದನು. ದೇವತೆಗಳಿಗೆ ವಿರೋಧಿಗಳಾಗಿದ್ದ ಅಸುರರನ್ನು ಹಿಂಸಿಸಿ ಕೊಂದನು. ಸೂರ್ಯನು ಬೇಸಿಗೆಯಕಾಲದಲ್ಲಿ ಭೂಮಿಯ ಮೇಲಿರುವ ರಸರೂಪದಲ್ಲಿರುವ ದ್ರವಗಳನ್ನು (ಉದಕಗಳನ್ನು) ಆಕರ್ಷಿಸಿ ಹೀರುವಂತೆ ಇಂದ್ರನು ಶತ್ರುಪಟ್ಟಣಗಳಲ್ಲಿದ್ದ ಧನವನ್ನು ದೋಚಿಕೊಂಡನು. ಸ್ತೋತೃಜನರಿಂದ ಸ್ತುತ್ಯನಾದ ಇಂದ್ರನು ಥಳಥಳನೆ ಹೊಳೆಯುತ್ತಿರುವ ತನ್ನ ವಜ್ರಾಯುಧದಿಂದ ಶತ್ರುಗಳಾದ ಅಸುರರನ್ನು ಹಿಂಸಿಸಿ ಕೊಂದನು.

English Translation.

Bold (Indra) has annihilated the (hitherto) unbaffled (hosts of the Asura), the objeet of Ayasya's adoration has despoiled the impious of their treasurers; the sun as if with the (aid of the) moon has seized upon the wealth of the cities (of the Asuras), glorified (by his worshippers,) he has demolished the foe with his blaziug (thunderbolt).

॥ ಸಂಹಿತಾಪಾಠಃ ॥

ಅಯುದ್ಧಸೇನೋ ವಿಭ್ವಾ ವಿಭಿಂದತಾ ದಾಶದ್ವೃತ್ರಹಾ ತುಜ್ಯಾನಿ ತೇಜತೇ ।
ಇಂದ್ರಸ್ಯ ವಜ್ರಾದಬಿಭೇದಭಿಶ್ನಥಃ ಪ್ರಾಕ್ರಾಮಚ್ಛುಂಧ್ಯೂರಜಹಾದುಷಾ ಅನಃ ॥ ೫ ॥

॥ ಪದಪಾಠಃ ॥

ಅಯುದ್ಧ್ಽಸೇನಃ । ವಿ॒ಽಭ್ವಾ । ವಿ॒ಽಭಿಂ॒ದ॒ತಾ । ದಾಶ॑ತ್ । ವೃ॒ತ್ರ॒ಽಹಾ । ತುಜ್ಯಾ॑ನಿ । ತೇ॒ಜ॒ತೇ॒ ।

ಇಂದ್ರ॑ಸ್ಯ । ವಜ್ರಾ॑ತ್ । ಅ॒ಬಿ॒ಭೇ॒ತ್ । ಅ॒ಭಿ॒ಽಶ್ನಥಃ॑ । ಪ್ರ । ಅ॒ಕ್ರಾ॒ಮ॒ತ್ । ಶು॒ಂಧ್ಯುಃ । ಅಜ॑ಹಾತ್ ।

ಉ॒ಷಾಃ । ಅನಃ॑ ॥ ೫ ॥

॥ ಸಾಯಣಭಾಷ್ಯಂ ॥

ವಿಭ್ವಾ ವಿಭುನಾ ವ್ಯಾಪ್ತೇನ ವಿಭಿಂದತಾ ವಿದಾರಯತಾ ಏವಂವಿಧೇನಾಪಿ ಪರಕೀಯಬಲೇನಾ-ಯುದ್ಧಸೇನೋಽಪ್ರಹೃತಸೇನಃ । ಯದ್ವಾ । ವಿಭ್ವಾ ವಿಭುರ್ವ್ಯಾಪ್ತೋ ವಿಭಿಂದತಾ ಶತ್ರುಬಲಾನಿ ವಿದಾರ-ಯತಾ ವಜ್ರೇಣ । ವೃತ್ರಹಾ ವೃತ್ರಂ ಹತವಾನ್ ಏವಂವಿಧ ಇಂದ್ರೋ ದಾಶತ್ । ದಾಶತಿ । ಸ್ತೋತೃಭ್ಯೋ ಧನಂ ಪ್ರಯಚ್ಛತಿ ॥ ದಾಶೃ ದಾನೇ । ಲೇಟ್ಯಡಾಗಮಃ । ತಥಾ ತುಜ್ಯಾನಿ ಪ್ರೇರ್ಯಾಣಿ ಶತ್ರುಬಲಾನಿ ತೇಜತೇ । ತನೂಕರೋತಿ । ಅಲ್ಪೀಕರೋತಿ ॥ ತಿಜ ನಿಶಾನೇ ॥ ಯದ್ವಾ । ಶತ್ರೂನ್ಪ್ರತಿ ಪ್ರೇರ್ಯಾಣ್ಯಾ-ಯುಧಾನಿ ತೇಜತೇ । ನಿಶ್ಯತಿ । ತೀಕ್ಷ್ಣೀಕರೋತಿ । ಈದೃಶಸ್ಯೇಂದ್ರಸ್ಯಾಭಿಶ್ನಥೋಽಭಿತೋ ಹಿಂಸಕಾ-ದ್ವಜ್ರಾತ್ಸರ್ವಂ ಶತ್ರುಜಾತಮಬಿಭೇತ್ । ಭೀತಿಂ ಪ್ರಾಪ್ನೋತ್ । ಏವಮಸುರೇಷ್ವಿಂದ್ರೇಣ ನಿರಸ್ತೇಷು ಶುಂಧ್ಯುಃ ಶೋಧಯಿತಾದಿತ್ಯಃ ಪ್ರಾಕ್ರಾಮತ್ । ಜಗತ್ಪ್ರಕಾಶನಾಯ ಗಂತುಂ ಪ್ರಕ್ರಾಂತವಾನ್ । ಉಷಾ ಉಷೋದೇವತಾ ಚಾನಃ ಸ್ವಕೀಯಂ ಶಕಟಂ ರಥಮಜಹಾತ್ । ಗಂತುಂ ಪರ್ಯತ್ಯಜತ್ ॥ ಓಹಾಕ್ ತ್ಯಾಗೇ ॥

॥ ಪ್ರತಿಪದಾರ್ಥ ॥

**ವಿಭ್ವಾ**— ಸರ್ವತ್ರವ್ಯಾಪ್ತವಾದ । **ವಿಭಿಂದತಾ**— ಶತ್ರುಸೇನೆಗಳನ್ನು ಸೀಳುವ ವಜ್ರಾಯುಧದಿಂದ **ಅಯುದ್ಧಸೇನಃ**— ಸಹಿಸಲಶಕ್ಯವಾದ ಬಲವುಳ್ಳವನೂ । **ವೃತ್ರಹಾ**— ವೃತ್ರಹಂತಕನೂ ಆದ 'ಇಂದ್ರನು । **ದಾಶತ್**— ಸ್ತೋತೃಜನರಿಗೆ ಧನವನ್ನು ಕೊಡುತ್ತಾನೆ. । **ತುಜ್ಯಾನಿ**— ಉತ್ಸಾಹದಿಂದ ನುಗ್ಗಿ ಬರುತ್ತಿರುವ ಶತ್ರು ಸೇನೆಗಳನ್ನು । **ತೇಜತೇ**— ಕಮ್ಮಿಯಾಗುವಂತೆ ಮಾಡುತ್ತಾನೆ ಅಥವಾ । [**ತುಜ್ಯಾನಿ**— ಶತ್ರುಗಳ ಮೇಲೆ ಉಪಯೋಗಿಸುವ ತನ್ನ ಆಯುಧಗಳನ್ನು । **ತೇಜತೇ**— ಹರಿತಮಾಡುತ್ತಾನೆ] । **ಇಂದ್ರಸ್ಯ**— ಇಂತಹ ಇಂದ್ರನ **ಅಭಿಶ್ನಥಃ**— ಶತ್ರುನಾಶಕವಾದ । **ವಜ್ರಾತ್**— ವಜ್ರಾಯುಧದಿಂದ । **ಅಬಿಭೇತ್**— ಶತ್ರುಗಳಿಗೆ ಭಯವನ್ನುಂಟುಮಾಡಿದನು. (ಅನಂತರ) । **ಶುಂಧ್ಯುಃ**— ಸರ್ವವನ್ನೂ ತನ್ನ ಪ್ರಕಾಶದಿಂದ ಶುದ್ಧಿಗೊಳಿಸುವ ಆದಿತ್ಯನು । **ಪ್ರ ಅಕ್ರಾಮತ್**— ಪ್ರಕಾಶಿಸುವುದಕ್ಕೆ ಪ್ರಾರಂಭಿಸಿದನು । **ಉಷಾಃ**— ಉಷೋದೇವತೆಯು ಸಹ । **ಅನಃ**— ತನ್ನ ಗಾಡಿಯನ್ನು ಎಂದರೆ ರಥವನ್ನು । **ಅಜಹಾತ್**— ತ್ಯಜಿಸಿ ಹೊರಟುಹೋದಳು.

॥ ಭಾವಾರ್ಥ ॥

ಸಹಿಸಲಶಕ್ಯವಾದ ಪರಾಕ್ರಮವುಳ್ಳವನೂ, ವೃತ್ರಸಂಹಾರಕನೂ ಆದ ಇಂದ್ರನು ಸರ್ವತ್ರ ವ್ಯಾಪ್ತವಾದುದೂ ಶತ್ರುಸೇನೆಗಳನ್ನು ಸೀಳಿಹಾಕಬಲ್ಲುದೂ ಆದ ತನ್ನ ವಜ್ರಾಯುಧದಿಂದ ತನ್ನ ಮೇಲೆ ಉತ್ಸಾಹದಿಂದ ನುಗ್ಗಿಬರುತ್ತಿರುವ

ಶತ್ರುಸೇನೆಗಳನ್ನು ಕೊಂದು ಕಮ್ಮಿಮಾಡುತ್ತಾನೆ ಅಥವಾ ಶತ್ರುಗಳ ಮೇಲೆ ಉಪಯೋಗಿಸುವುದಕ್ಕಾಗಿ ತನ್ನ ಆಯುಧಗಳನ್ನು ಹರಿತಮಾಡುತ್ತಾನೆ ತನ್ನನ್ನು ಸ್ತುತಿಸುವ ಜನರಿಗೆ ಧನವನ್ನು ಕೊಡುತ್ತಾನೆ. ಶತ್ರುನಾಶಕವಾದ ತನ್ನ ವಜ್ರಾಯುಧದಿಂದ ಶತ್ರುಗಳಿಗೆ ಭೀತಿಯನ್ನುಂಟುಮಾಡುತ್ತಾನೆ. ಈ ರೀತಿ ಇಂದ್ರನು ಶತ್ರುಸಂಹಾರ ಮಾಡಿದನಂತರ ಉಷೋದೇವತೆಯು ತನ್ನ ರಥವನ್ನು ತ್ಯಜಿಸಿ ಹೊರಟುಹೋದಳು ಎಂದರೆ ಉಷಃಕಾಲವು ಹೊರಟುಹೋಗಿ ಶುದ್ಧಿಕಾರಕನಾದ ಸೂರ್ಯನು ಉದಯಿಸಿ ತನ್ನ ಪ್ರಕಾಶದಿಂದ ಸಮಸ್ತ ಜಗತ್ತನ್ನೂ ಬೆಳಗಿದನು.

## English Translation.

(Indra), leading an irresistible army, slaying Vritra with the pervading piercing (bolt), gives (wealth to his worshippers), thins the (hosts of the Asuras) which have to be attacked; (the whole host of the enemy) was afraid of Indra's wide-destroying thunderbolt, the purifying (Sun) came forth, Ushas left her waggon.

॥ ಸಂಹಿತಾಪಾಠಃ ॥

ಏತಾ ತ್ಯಾ ತೇ ಶ್ರುತ್ಯಾನಿ ಕೇವಲಾ ಯದೇಕ ಏಕಮಕೃಣೋರಯಜ್ಞಂ ।
ಮಾಸಾಂ ವಿಧಾನಮದಧಾ ಅಧಿ ದ್ಯವಿ ತ್ವಯಾ ವಿಭಿನ್ನಂ ಭರತಿ ಪ್ರಧಿಂ ಪಿತಾ ॥ ೬ ॥

॥ ಪದಪಾಠಃ ॥

ಏತಾ । ತ್ಯಾ । ತೇ । ಶ್ರುತ್ಯಾನಿ । ಕೇವಲಾ । ಯತ್ । ಏಕಃ । ಏಕಂ । ಅಕೃಣೋಃ । ಅಯಜ್ಞಂ ।
ಮಾಸಾಂ । ವಿಽಧಾನಂ । ಅದಧಾಃ । ಅಧಿ । ದ್ಯವಿ । ತ್ವಯಾ । ವಿಽಭಿನ್ನಂ । ಭರತಿ । ಪ್ರಽಧಿಂ । ಪಿತಾ ॥೬॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ಯಾ ತಾನಿ ತೇ ತವ ತ್ವದೀಯಾನಿ ವೀರ್ಯಕರ್ಮಾಣ್ಯೇತೈತಾನ್ಯೇವ ಕೇವಲಾ ಕೇವಲಾನಿ ಶ್ರುತ್ಯಾನಿ ಶ್ರೋತವ್ಯಾನಿ ಸ್ತುತ್ಯರ್ಹಾಣಿ । ನಾನ್ಯದೀಯಾನಿ । ಕಾನಿ ಪುನಸ್ತಾನಿ । ಏಕೋಽಸಹಾಯಸ್ತ್ವಮೇಕಂ ಪ್ರಧಾನಭೂತಮಯಜ್ಞಂ ಯಜ್ಞರಹಿತಮಸುರಮಕೃಣೋಃ ಅಹಿಂಸೀರಿತಿ ಯದೇತದೇಕಂ ಕರ್ಮ ॥ ಕೃವಿ ಹಿಂಸಾಕರಣಯೋಃ । ಅತ್ರ ಹಿಂಸಾರ್ಥಃ । ಇದಿತ್ತ್ವಾನ್ನುಮ್ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯೋಽಕಾರಾಂತಾದೇಶಶ್ಚ । ತಸ್ಯ ಲೋಪೇ ಸತಿ ಸ್ಥಾನಿವದ್ಭಾವಾಲ್ಲಘೂಪಧಗುಣಾಭಾವಃ ॥ ತಥಾ ಮಾಸಾಂ ಮಾಸಾನಾಂ ॥ ಪದ್ದನ್ನಿತ್ಯಾದಿನಾ ಮಾಸಶಬ್ದಸ್ಯ ಮಾಸ್ಭಾವಃ । ಊಡಿದಮಿತ್ಯಾದಿನಾ

**ವಿಭಕ್ತೇರುದಾತ್ತತ್ವಂ ॥ ಮಾಸಾನಾಂ ವಿಧಾನಂ ವಿಧಾತಾರಂ ಕರ್ತಾರಂ ಸೂರ್ಯಮಧಿ ದ್ಯವಿ ದ್ಯುಲೋಕೇ ಉಪರ್ಯದಧಾಃ । ಅಧಾರಯಃ ॥ ವಿಪೂರ್ವಾದ್ದಧಾತೇಃ ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಲ್ಯುಟ್ ॥ ಇದಮಪರಂ ಕರ್ಮ। ತಥಾ ಪಿತಾ ಪಾಲಕೋ ದ್ಯುಲೋಕೋ ವಿಭಿನ್ನಂ ವಿದಾರಿತಂ ವೃತ್ರಾದ್ವಿಭಕ್ತಂ ಪ್ರಧಿಂ ರಥಚಕ್ರಸ್ಯ ಪಾರ್ಶ್ವಂ । ಪಾರ್ಶ್ವಫಲಕೇ ಪ್ರಧೀ ಇತ್ಯುಚ್ಯೇತೇ । ಈದೃಶಂ ಸೂರ್ಯರಥಸಂಬಂಧಿನಂ ಪ್ರಧಿಮನ್ಯೈರ್ಧಾರಯಿತುಮಶಕ್ಯಂ ತ್ವಯ್ಯೈವ ಭರತಿ । ಧಾರಯತಿ । ಇದಮಪರಂ ಕರ್ಮ । ಏತತ್ಪ್ರಭೃತೀನಿ ತ್ವಯಾ ಕೃತಾನಿ ಕರ್ಮಾಣಿ ಪರೇಷಾಮಸಾಧಾರಣಾನಿ ಸರ್ವದಾಮ್ನಾತವ್ಯಾನೀತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತ್ಯಾ**—ಪ್ರಸಿದ್ಧವಾದ । **ತೇ**—ನಿನ್ನ । **ಏತಾ**—ಸಾಹಸಕೃತ್ಯಗಳು । **ಕೇವಲಾ**—ಮುಖ್ಯವಾಗಿ (ಇತರರಿಂದ ಮಾಡಲು ಅಸಾಧ್ಯವಾದ) । **ಶ್ರುತ್ಯಾನಿ**—ಪ್ರಶಂಸಿಸಲ್ಪಡಬೇಕಾದವುಗಳು । **ಏಕಃ**—ಅಸಹಾಯಶೂರನಾದ ನೀನು । **ಏಕಂ**—ಮುಖ್ಯನಾದ । **ಅಯಜ್ಞಂ**—ಯಜ್ಞಮಾಡದಿರುವ ಅಸುರನನ್ನು **ಅಕೃಣೋಃ**—ಹಿಂಸಿಸಿ ಕೊಂದೆಯೆಂಬುದು । **ಯತ್**—ಯಾವುದುಂಟೋ ಅದೇ ಪ್ರಶಂಸಾರ್ಹವಾದ ಕರ್ಮವು । **ಮಾಸಾಂ**—ಮಾಸಾದಿಕಾಲವಿಭಾಗಗಳ । **ವಿಧಾನಂ**—ಕರ್ತೃವಾದ ಸೂರ್ಯನನ್ನು । **ಅಧಿ ದ್ಯವಿ**—ಸ್ವರ್ಗದ ಮೇಲುಭಾಗದಲ್ಲಿ । **ಅದಧಾಃ**-ನೀನು ಸ್ಥಾಪಿಸಿರುವೆ । **ಪಿತಾ**—ಸರ್ವರನ್ನೂ ಪಾಲಿಸುವ ದ್ಯುಲೋಕವು । **ವಿಭಿನ್ನಂ**—ವೃತ್ರನಿಂದ ಸೀಳಲ್ಪಟ್ಟ । **ಪ್ರಧಿಂ**—ಸೂರ್ಯನ ರಥಚಕ್ರದ ಪರಿಧಿಯನ್ನು । **ತ್ವಯಾ**—ನಿನ್ನ ಸಹಾಯದಿಂದ । **ಭರತಿ**—ಧರಿಸುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಪ್ರಸಿದ್ಧವಾದ ಈ ಸಾಹಸಕೃತ್ಯಗಳನ್ನು ಬೇರೊಬ್ಬರು ಮಾಡಲು ಸಾಧ್ಯವಿಲ್ಲ. ನೀನೊಬ್ಬನುಮಾತ್ರ ಮಾಡಬಲ್ಲೆ. ಇಂತಹ ಈ ಕಾರ್ಯಗಳು ಪ್ರಶಂಸಾರ್ಹವಾದವು. ಇತರರ ಸಹಾಯವಿಲ್ಲದೆ ನೀನೊಬ್ಬನೇ ಯಜ್ಞವಿರೋಧಿಯಾದ ಅಸುರರನ್ನು ಕೊಂದ ಕರ್ಮವು ಸಹ ಪ್ರಶಂಸಾರ್ಹವೇ ಆಗಿದೆ. ಮಾಸಾದಿಕಾಲವಿಭಾಗ ಕರ್ತನಾದ ಸೂರ್ಯನನ್ನು ಸ್ವರ್ಗಲೋಕದ ಮೇಲುಭಾಗದಲ್ಲಿ ನೀನು ಸ್ಥಾಪಿಸಿರುವೆ. ಸಮಸ್ತರನ್ನೂ ವೃಷ್ಟಿಪ್ರದಾನಾದಿಗಳಿಂದ ರಕ್ಷಿಸುವ ದ್ಯುಲೋಕವು ವೃತ್ರನಿಂದ ಸೀಳಲ್ಪಟ್ಟ ಸೂರ್ಯನ ರಥಚಕ್ರದ ಪರಧಿಯನ್ನು ನಿನ್ನ ಸಹಾಯದಿಂದಲೇ ಎತ್ತಿ ಹಿಡಿದಿರುತ್ತದೆ.

## English Translation.

These wondrous exploits are yours alone, in that you unaided has injured the chief neglector of sacrifice; you have placed in the sky the regulator of the months, through your aid the paternal (heaven) upholds the circumference of the wheel (of the Sun's car) which had been shattered (by Vritra).

# ನೂರ ಮೂವತ್ತೊಂಭತ್ತನೆಯ ಸೂಕ್ತವು

|| ಸಾಯಣಭಾಷ್ಯಂ ||

ಸೂರ್ಯರಶ್ಮಿರಿತಿ ಷಡೃಚಮೇಕಾದಶಂ ಸೂಕ್ತಂ ತ್ರೈಷ್ಟುಭಂ । ವಿಶ್ವಾವಸುರ್ನಾಮ ಗಂಧರ್ವ ಋಷಿಃ । ಸ ಚ ಪೂರ್ವೇಣ ತೃಚೇನ ಸವಿತಾರಂ ಸ್ತುತವಾನ್ ಉತ್ತರೇಣ ಸ್ವಾತ್ಮಾನಂ । ಅತಃ ಪ್ರಥಮ-ತೃಚಸ್ಯ ಸವಿತಾ ದೇವತಾ ದ್ವಿತೀಯಸ್ಯ ಗಂಧರ್ವಃ । ತಥಾ ಚಾನುಕ್ರಾಂತಂ । ಸೂರ್ಯರಶ್ಮಿರ್ದೇವಗಂಧರ್ವೋ ವಿಶ್ವಾವಸುರಾತ್ಮಾನಮಸ್ತೌತ್ಪೂರ್ವಾರ್ಧೇ ಸವಿತಾರಮಿತಿ । ಗತೋ ವಿನಿಯೋಗಃ ||

ಅನುವಾದವು— **ಸೂರ್ಯರಶ್ಮಿಃ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವಾವಸು ಎಂಬ ಹೆಸರಿನ ಗಂಧರ್ವನು ಋಷಿಯು; ಆ ಗಂಧರ್ವನು ಈ ಸೂಕ್ತದ ಮೊದಲಮೂರು ಋಕ್ಕುಗಳಿಂದ ಸವಿತೃದೇವತೆಯನ್ನೂ, ಕೊನೆಯ ಮೂರು ಋಕ್ಕುಗಳಿಂದ ತನ್ನನ್ನೂ ಸ್ತುತಿಸಿರುವನು. ಆದ್ದರಿಂದ ಮೊದಲ ಮೂರು ಋಕ್ಕುಗಳಿಗೆ ಸವಿತೃವೂ ಕೊನೆಯ ಮೂರು ಋಕ್ಕುಗಳಿಗೆ ಗಂಧರ್ವನೂ ದೇವತೆಯು, ತ್ರಿಷ್ಟುಪ್‌ಛಂದಸ್ಸು ಅನುಕ್ರಮಣಿಕೆಯಲ್ಲಿ— **ಸೂರ್ಯರಶ್ಮಿರ್ದೇವಗಂಧರ್ವೋ ವಿಶ್ವಾವಸುರಾತ್ಮಾನಮಸ್ತೌತ್ ಪೂರ್ವಾರ್ಧೇ ಸವಿತಾರಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.



## ಸೂಕ್ತ— ೧೩೯

ಮಂಡಲ-೧೦ || ಅನುವಾಕ-೧೧ || ಸೂಕ್ತ-೧೩೯ ||
ಅಷ್ಟಕ-೮ || ಅಧ್ಯಾಯ-೭ || ವರ್ಗ-೨೭, ||

ಸೂಕ್ತದಲ್ಲಿರುವ ಋಕ್ಸಂಖ್ಯೆ— ೬ ||
ಋಷಿಃ— ವಿಶ್ವಾವಸುರ್ದೇವಗಂಧರ್ವಃ ||
ದೇವತಾ— ೧-೩. ಸವಿತಾ | ೪-೬. ವಿಶ್ವಾವಸುಃ ||
ಛಂದಃ— ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಸೂರ್ಯರಶ್ಮಿರ್ಹರಿಕೇಶಃ ಪುರಸ್ತಾತ್ಸವಿತಾ ಜ್ಯೋತಿರುದಯಾ ಅಜಸ್ರಂ ।
ತಸ್ಯ ಪೂಷಾ ಪ್ರಸವೇ ಯಾತಿ ವಿದ್ವಾನ್ತ್ಸಂಪಶ್ಯನ್ವಿಶ್ವಾ ಭುವನಾನಿ ಗೋಪಾಃ||

|| ಪದಪಾಠಃ ||

ಸೂರ್ಯಽರಶ್ಮಿಃ । ಹರಿಽಕೇಶಃ । ಪುರಸ್ತಾತ್ । ಸವಿತಾ । ಜ್ಯೋತಿಃ । ಉತ್ । ಅಯಾನ್ । ಅಜಸ್ರಂ ।
ತಸ್ಯ । ಪೂಷಾ । ಪ್ರಽಸವೇ । ಯಾತಿ । ವಿದ್ವಾನ್ । ಸಂಽಪಶ್ಯನ್ । ವಿಶ್ವಾ । ಭುವನಾನಿ । ಗೋಪಾಃ ||೧||

। ಸಾಯಣಭಾಷ್ಯಂ ।।

**ಸೂರ್ಯರಶ್ಮಿಃ । ಉಷಸಃ ಪ್ರಾದುರ್ಭಾವಾನಂತರಂ ಸೂರ್ಯಸ್ಯೋದಯಾತ್ಪೂರ್ವಂ ಯಃ ಕಾಲಸ್ತಸ್ಯ ಕಾಲಸ್ಯಾಭಿಮಾನೀ ದೇವಃ ಸವಿತೇತ್ಯುಚ್ಯತೇ । ಸೂರ್ಯರಶ್ಮಿಃ ಸೂರ್ಯಸ್ಯ ಸರ್ವಸ್ಯ ಪ್ರೇರಕಸ್ಯಾದಿತ್ಯಸ್ಯ ರಶ್ಮಿರೇವ ರಶ್ಮಿರ್ಯಸ್ಯ ಸ ತಥೋಕ್ತಃ ಹರಿಕೇಶಃ ಹರಯೋ ಹರಣಶೀಲಾ ಹರಿತವರ್ಣಾ ವಾ ಕೇಶಾಃ ಕೇಶಸ್ಥಾನೀಯಾಃ ಪ್ರಕಾಶಮಾನಾ ವಾ ದೀಪ್ತಯೋ ಯಸ್ಯ ಈದೃಶಃ ಸವಿತಾ ಸರ್ವಸ್ಯ ಪ್ರೇರಕೋ ದೇವಃ ಪುರಸ್ತಾತ್ಪೂರ್ವಸ್ಯಾಂ ದಿಶ್ಯಜಸ್ರಮನವರತಂ ಜ್ಯೋತಿಸ್ತೇಜ ಉದಯಾನ್। ಉದ್ಯಾತಿ । ಉದ್ಗಮಯತಿ ।। ಯಾತೇರಂತರ್ಭಾವಿತಣ್ಯರ್ಥಾಚ್ಛಾಂದಸೋ ಲಙ್ । ವ್ಯತ್ಯಯೇನ ಬಹುವಚನಂ । ಸಂಹಿತಾಯಾಂ ದೀರ್ಘಾದಟಿ ಸಮಾನಪಾದ ಇತಿ ನಕಾರಸ್ಯ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ।। ತಸ್ಯ ಸವಿತುಃ ಪ್ರಸವೇ ಪ್ರೇರಣೇಽನುಜ್ಞಾಯಾಂ ಸತ್ಯಾಂ ವಿದ್ವಾಞ್ಜ್ಞಾನನ್ಗೋಪಾ ಗೋಪಾಯಿತಾ ರಕ್ಷಿತಾ ಪೂಷಾ ಪೋಷಕೋ ದೇವ ಆದಿತ್ಯೋ ಯಾತಿ । ನಭಸಿ ಗಚ್ಛತಿ । ಕಿಂ ಕುರ್ವನ್। ವಿಶ್ವಾ ವಿಶ್ವಾನಿ ಸರ್ವಾಣಿ ಭುವನಾನಿ ಭೂತಜಾತಾನಿ ಸಂಪಶ್ಯನ್ । ಸಮ್ಯಕ್ ಪ್ರಕಾಶಯನ್ ।।**

।। ಪ್ರತಿಪದಾರ್ಥ ।।

**ಸೂರ್ಯರಶ್ಮಿಃ**— ಸೂರ್ಯನ ರಶ್ಮಿಗಳಿಂದ ಯುಕ್ತನಾದವನೂ । **ಹರಿಕೇಶಃ**— ಹರಿತವರ್ಣವುಳ್ಳ ಕೇಶಗಳಂತಿರುವ ಕಾಂತಿಗಳುಳ್ಳವನೂ ಆದ । **ಸವಿತಾ**— ಸವಿತೃದೇವನು । **ಪುರಸ್ತಾತ್**— ಪೂರ್ವದಿಕ್ಕಿನಲ್ಲಿ । **ಅಜಸ್ರಂ**— ಸರ್ವಕಾಲದಲ್ಲಿಯೂ ಎಂದರೆ ಪ್ರತಿ ದಿನ ಪ್ರಾತಃಕಾಲದಲ್ಲಿಯೂ । **ಜ್ಯೋತಿಃ**— ತನ್ನ ತೇಜಸ್ಸನ್ನು **ಉದಯಾನ್**— ಬೀರುತ್ತಾನೆ । **ತಸ್ಯ**— ಆ ಸವಿತೃದೇವನ । **ಪ್ರಸವೇ**— ಪ್ರೇರಣೆಯಿಂದ । **ವಿದ್ವಾನ್**— ಸರ್ವವನ್ನೂ ತಿಳಿದವನೂ । **ಗೋಪಾಃ**— ರಕ್ಷಕನೂ ಆದ । **ಪೂಷಾ**— ಸಮಸ್ತರನ್ನೂ ಪೋಷಿಸುವ ಆದಿತ್ಯನು । **ವಿಶ್ವಾ**— ಸಮಸ್ತವಾದ । **ಭುವನಾನಿ**— ಪ್ರಾಣಿಗಳನ್ನು ಅಥವಾ ಲೋಕಗಳನ್ನು । **ಸಂಪಶ್ಯನ್**— ನೋಡುತ್ತಾ (ಕಿರಣಗಳಿಂದ ವ್ಯಾಪಿಸುತ್ತಾ) । **ಯಾತಿ** - ಅಂತರಿಕ್ಷದಲ್ಲಿ ಸಂಚರಿಸುತ್ತಾನೆ ।

। ಭಾವಾರ್ಥ ।।

ಸೂರ್ಯನ ರಶ್ಮಿಗಳಿಂದ ಕೂಡಿ ಕೇಶಗಳಂತಿರುವ ತನ್ನ ಹರಿತವರ್ಣದ (ಹೊಂಬಣ್ಣದ) ಕಾಂತಿಯಿಂದ ಬೆಳಗುತ್ತಿರುವ ಸವಿತೃದೇವನು ಉಷಃಕಾಲಾನಂತರ ಪೂರ್ವದಿಕ್ಕಿನಲ್ಲಿ ಪ್ರತಿದಿನವೂ ಉದಯಿಸಿ ತನ್ನ ತೇಜಸ್ಸನ್ನು ಹರಡುತ್ತಾನೆ ಈ ಸವಿತೃದೇವನ ಪ್ರೇರಣೆಯಿಂದಲೇ ಸರ್ವವನ್ನು ತಿಳಿದವನೂ ಸಮಸ್ತರನ್ನು ಪೋಷಿಸುವವನೂ ಆದ ಆದಿತ್ಯನು ಸಮಸ್ತ ಲೋಕಗಳನ್ನೂ ಅವುಗಳಲ್ಲಿರುವ ಪ್ರಾಣಿಗಳನ್ನೂ ನೋಡುತ್ತಾ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ.

## English Translation

Savitri, the solar-rayed, the yellow-haired, sent up the undying light from the east; at his command the sage Pushan, the preserver, follows, looking upon all creatures.

॥ ವಿಶೇಷವಿಷಯಗಳು ॥

ಸವಿತೃವಿಗೂ ಸೂರ್ಯ ಅಥವಾ ಆದಿತ್ಯನಿಗೂ ಇರುವ ವ್ಯತ್ಯಾಸವೇನೆಂದರೆ— **ಉಷಸಃ ಪ್ರಾದುರ್ಭಾವಾನಂತರಂ ಸೂರ್ಯಸ್ಯೋದಯಾತ್ಪೂರ್ವಂ ಯಃ ಕಾಲಃ ತಸ್ಯಾಭಿಮಾನೀ ದೇವಃ ಸವಿತೇತ್ಯುಚ್ಯತೇ—** ರಾತ್ರಿಯು ಕಳೆದು ಉಷಃಕಾಲವು ಪ್ರಾಪ್ತವಾಗಿ ಆ ಉಷಃಕಾಲದ ಕೊನೆಯಲ್ಲಿ ಆಗತಾನೇ ಉದಯಿಸುತ್ತಿರುವ ಸೂರ್ಯನನ್ನೇ ಸವಿತೃವೆಂದು ಹೇಳುವರು ಅನಂತರ ಚೆನ್ನಾಗಿ ಉದಯಿಸಿ ಅಂತರಿಕ್ಷದಲ್ಲಿ ಬೆಳಗುವ ಸೂರ್ಯನನ್ನು ಸೂರ್ಯ ಅಥವಾ ಆದಿತ್ಯನೆಂದು ಕರೆಯುವರು. ಸೂರ್ಯೋದಯದ ಪ್ರಾರಂಭಕಾಲದಲ್ಲಿ ಕಿರಣಗಳು ಸ್ವಲ್ಪ ಕೆಂಪು ಮತ್ತು ಹಳದಿಯ ಛಾಯೆಯುಳ್ಳದ್ದಾಗಿರುವುದರಿಂದ ಇಲ್ಲಿ ಸವಿತೃವನ್ನು ಹರಿಕೇಶಃ—ಹೊಂಬಣ್ಣದ ಕೇಶಗಳುಳ್ಳವನು ಎಂದು ವರ್ಣಿಸಲಾಗಿದೆ. ರಾತ್ರಿಯು ಕೊನೆಗೊಂಡಮೇಲೆ ಉಷಃಕಾಲವು ಪ್ರಾದುರ್ಭೂತವಾಗುವುದು. ರಾತ್ರಿಯ ಕತ್ತಲೆಯು ಹೊರಟುಹೋಗಿ ಬೆಳಕಾಗುವುದು. ಆದರೆ ಸೂರ್ಯನು ಇನ್ನೂ ಉದಯಿಸಿರುವುದಿಲ್ಲ. ಇಂತಹ ಸೂರ್ಯರಶ್ಮಿಗಳಿಲ್ಲದೆ ಕೇವಲ ಬೆಳಕಿನಿಂದ ಕೂಡಿದ ಕಾಲಕ್ಕೆ ಉಷಃಕಾಲವೆಂದು ಹೆಸರು. ಉಷಃಕಾಲಾನಂತರ ಪೂರ್ವದಿಕ್ಕಿನಲ್ಲಿ ಹೊಂಬಣ್ಣದ ಕಿರಣಗಳು ಸ್ವಲ್ಪಸ್ವಲ್ಪವಾಗಿ ಕಂಡುಬರುವವು. ಈ ರೀತಿ ನಿಧಾನವಾಗಿ ಉದಯಿಸುತ್ತಿರುವ ಸೂರ್ಯನಿಗೆ ಆ ಕಾಲದಲ್ಲಿ ಮಾತ್ರ ಸವಿತೃವೆಂದು ಹೆಸರು, ಚೆನ್ನಾಗಿ ಉದಯಿಸಿದ ನಂತರ ಅವನೇ ಸೂರ್ಯನೆಂದು ವ್ಯವಹರಿಸಲ್ಪಡುವನು. ಈ ಋಕ್ಕಿನಲ್ಲಿ ಹೇಳಿರುವ ವಿಷಯವನ್ನೇ ಅನುಕ್ರಮವಾಗಿ ಹಿರಣ್ಯಸ್ತೂಪನೆಂಬ ಋಷಿಯು ಈ ರೀತಿ ವರ್ಣಿಸಿರುವನು—

**ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ ಹ್ವಯಾಮಿ ಮಿತ್ರಾವರುಣಾವಿಹಾವಸೇ ।**
**ಹ್ವಯಾಮಿ ರಾತ್ರೀಂ ಜಗತೋ ನಿವೇಶನೀಂ ಹ್ವಯಾಮಿ ದೇವಂ ಸವಿತಾರಮೂತಯೇ ॥**
**ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।**
**ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾನಿ ಪಶ್ಯನ್ ॥**

( ಋ. ಸಂ. ೧-೩೫-೧, ೨ )

ಇಲ್ಲಿ ಮೊದಲು ರಾತ್ರಿಕಾಲದಲ್ಲಿ ಬೆಳಗುವ ಅಗ್ನಿಯನ್ನು ಸ್ತುತಿಸಿ ಹಗಲುರಾತ್ರಿಗಳಿಗೆ ಅಭಿಮಾನಿ ದೇವತೆಗಳಾದ ಮಿತ್ರಾವರುಣರನ್ನೂ ಅನಂತರ ರಾತ್ರಿಯನ್ನೂ ಅನಂತರ ಸವಿತೃದೇವನನ್ನೂ ಕ್ರಮವಾಗಿ ಸ್ತುತಿಸಲಾಗಿದೆ. ಆ ಸವಿತೃದೇವನು ಉದಯಿಸಿ ತನ್ನ ತೇಜಸ್ಸಿನಿಂದ ರಾತ್ರಿಯ ಅಂಧಕಾರವನ್ನು ಪರಿಹರಿಸಿ ಸುವರ್ಣಕಾಂತಿಯಿಂದ ಬೆಳಗುವ ರಥದಿಂದ (ಪ್ರಕೃತಋಕ್ಕಿನಲ್ಲಿ ಸವಿತೃವಿನ ಕಿರಣಗಳನ್ನು ಹೊಂಬಣ್ಣದ ಕೇಶಗಳೆಂದು ವರ್ಣಿಸಿದೆ) ಸಮಸ್ತ ಲೋಕಗಳನ್ನು ನೋಡುತ್ತಾ ಉದಯಿಸಿ ಬರುತ್ತಾನೆ ಎಂದಿದೆ. ಇದರ ಕ್ರಮವೇನೆಂದರೆ—ಮೊದಲು ರಾತ್ರಿ ಅನಂತರ ರಾತ್ರಿ ಕಳೆದು ಉಷಃಕಾಲ, ಅನಂತರ ಸವಿತೃವಿನ ಆವಿರ್ಭಾವ, ಅನಂತರ ಸೂರ್ಯೋದಯ ಅನಂತರ ಹಗಲು ಮತ್ತೆ ರಾತ್ರಿ ಈ ರೀತಿ ಈ ವಿಧವಾದ ಕಾಲವಿಭಾಗಗಳು ಒಂದಾಗುತ್ತಲೊಂದು ಎಡಬಿಡದೆ ಅನುಸರಿಸಿ ನಡೆದು ಬರುತ್ತಿರುವವು ಇಲ್ಲಿ ಉಷಃಕಾಲಾನಂತರ ಆಗತಾನೇ ಉದಯಿಸುವ ಸೂರ್ಯನನ್ನೇ ಸವಿತೃದೇವನೆಂದು ಕರೆಯುವ ರೂಢಿ ಇದೆ.

|| ಸಂಹಿತಾಪಾಠಃ ||

ನೃಚಕ್ಷಾ ಏಷ ದಿವೋ ಮಧ್ಯ ಆಸ್ತ ಆಪಪ್ರಿವಾನ್ರೋದಸೀ ಅಂತರಿಕ್ಷಂ ।
ಸ ವಿಶ್ವಾಚೀರಭಿ ಚಷ್ಟೇ ಘೃತಾಚೀರಂತರಾ ಪೂರ್ವಮ-ಪರಂ ಚ ಕೇತುಂ ॥

|| ಪದಪಾಠಃ ||

ನೃऽಚಕ್ಷಾಃ । ಏಷಃ । ದಿವಃ । ಮಧ್ಯೇ । ಆಸ್ತೇ । ಆಪಪ್ರಿऽವಾನ್ । ರೋದಸೀ ಇತಿ । ಅಂತರಿಕ್ಷಂ ।
ಸಃ । ವಿಶ್ವಾಚೀಃ । ಅಭಿ । ಚಷ್ಟೇ । ಘೃತಾಚೀಃ । ಅಂತರಾ । ಪೂರ್ವಂ । ಅಪರಂ । ಚ । ಕೇತುಂ ॥ ೨ ॥

|| ಸಾಯಣಭಾಷ್ಯಂ ||

ನೃಚಕ್ಷಾ ನೄನ್ಮನುಷ್ಯಾನ್ಪಶ್ಯನ್ ಯದ್ವಾ ನೃಭಿರ್ನೇತೃಭೀ ರಶ್ಮಿಭಿಃ ಪ್ರಕಾಶಮಾನ ಏಷ ಸವಿತಾ ದಿವೋ ದ್ಯುಲೋಕಸ್ಯ ಮಧ್ಯ ಆಸ್ತೇ । ನಿಷೀದತಿ । ಕಿಂ ಕುರ್ವನ್ । ರೋದಸೀ ದ್ಯಾವಾಪೃಥಿವ್ಯಾವಂತರಿಕ್ಷಂ ಚಾಪಪ್ರಿವಾನ್ ಸ್ವತೇಜಸಾಪೂರಯನ್ ॥ ಪ್ರಾ ಪೂರಣೇ । ಅಸ್ಮಾಚ್ಛಾಂದಸೋ ಲಿಟ್ । ಕ್ವಸುಶ್ಚೇತಿ ತಸ್ಯ ಕ್ವಸುರಾದೇಶಃ । ವಸ್ವೇಕಾಜಾದ್ಘಸಾಮಿತೀಡಾಗಮಃ ॥ ಸ ದೇವೋ ವಿಶ್ವಾಚೀರ್ವಿಶ್ವಮಂಚಂತೀಃ ಸರ್ವವ್ಯಾಪಿನೀಃ ಪ್ರಾಚ್ಯಾದಿಮಹಾದಿಶೋऽಭಿ ಚಷ್ಟೇ । ಪ್ರಕಾಶಯತಿ । ತಥಾ ಘೃತಾಚೀರ್ಘೃತಂ ದೀಪ್ತಂ ರೂಪಮಂಚಂತೀರಾಗ್ನೇಯ್ಯಾದಿವಿದಿಶಶ್ಚ ಪ್ರಕಾಶಯತಿ ॥ ಅಂಚತೇಃ ಕ್ವಿನಂತಾದಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ತತೋ ಭಸಂಜ್ಞಾಯಾಮಚ ಇತ್ಯಾಕಾರಲೋಪೇ ಚಾವಿತಿ ದೀರ್ಘತ್ವಂ । ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವೇ ಪ್ರಾಪ್ತೇ ಚಾವಿತಿ ಪೂರ್ವಸ್ಯಾಚ ಉದಾತ್ತತ್ವಂ ।' ತಥಾ ಪೂರ್ವಂ ಪೂರ್ವಭಾಗಂ ಕೇತುಂ ಪ್ರಜ್ಞಾಪನೀಯಮಪರಂ ಪೃಷ್ಠಭಾಗಂ ಚಾಂತರಾಂತರಾಲಂ ಚಾಭಿ ಚಷ್ಟೇ । ಪ್ರಕಾಶಯತಿ ॥

|| ಪ್ರತಿಪದಾರ್ಥ ||

**ನೃಚಕ್ಷಾಃ**—ಮನುಷ್ಯರನ್ನು ನೋಡುತ್ತಿರುವ ಅಥವಾ ರಶ್ಮಿಗಳಿಂದ ಪ್ರಕಾಶಮಾನನಾದ । **ಏಷಃ**—ಈ ಸವಿತೃದೇವನು । **ರೋದಸೀ**—ದ್ಯಾವಾಪೃಥಿವಿಗಳನ್ನೂ । **ಅಂತರಿಕ್ಷಂ** ಅಂತರಿಕ್ಷವನ್ನೂ । **ಆಪಪ್ರಿವಾನ್**—ತನ್ನ ತೇಜಸ್ಸಿನಿಂದ ತುಂಬುತ್ತಾ (ಬೆಳಗುತ್ತಾ) । **ದಿವಃ**—ದ್ಯುಲೋಕದ (ಅಂತರಿಕ್ಷದ) । **ಮಧ್ಯೇ**—ಮಧ್ಯದಲ್ಲಿ । **ಆಸ್ತೇ**—ಕುಳಿತಿರುತ್ತಾನೆ । **ಸಃ**—ಆ ಸವಿತೃದೇವನು । **ವಿಶ್ವಾಚೀಃ**—ಸರ್ವಪ್ರದೇಶಗಳನ್ನು ವ್ಯಾಪಿಸಿರುವ ಪ್ರಾಚ್ಯಾದಿ ದಿಕ್ಕುಗಳನ್ನು । **ಅಭಿ ಚಷ್ಟೇ**—ಪ್ರಕಾಶಪಡಿಸುತ್ತಾನೆ. । **ಘೃತಾಚೀಃ**—ಆಗ್ನೇಯಾದಿ ವಿದಿಕ್ಕುಗಳನ್ನೂ ಬೆಳಗುತ್ತಾನೆ. । ಹಾಗೆಯೇ । **ಕೇತುಂ**—ಧ್ವಜಸ್ಥಾನೀಯವಾದ । **ಪೂರ್ವಂ**—ಪೂರ್ವಭಾಗವನ್ನೂ (ಮುಂದುಗಡೆಯಲ್ಲಿರುವ ಪ್ರದೇಶವನ್ನು) । **ಅಪರಂ ಚ**—ಹಿಂಭಾಗವನ್ನೂ । **ಅಂತರಾ**—ಇವುಗಳ ಮಧ್ಯಭಾಗವನ್ನು ಸಹ । (**ಅಭಿ ಚಷ್ಟೇ**—ಬೆಳಗುತ್ತಾನೆ.)

|| ಭಾವಾರ್ಥ ||

ರಶ್ಮಿಗಳಿಂದ ಪ್ರಕಾಶಮಾನನಾದವನೂ ಅಥವಾ ಮನುಷ್ಯರನ್ನು ವೀಕ್ಷಿಸುತ್ತಿರುವವನೂ ಆದ ಈ ಸವಿತ ದೇವನು ದ್ಯಾವಾಪೃಥಿವಿಗಳನ್ನೂ ಅಂತರಿಕ್ಷವನ್ನೂ ತನ್ನ ತೇಜಸ್ಸಿನಿಂದ ತುಂಬುತ್ತಾ ಅಂತರಿಕ್ಷದ ಮಧ್ಯದಲ್ಲಿ ಕುಳಿತಿರುತ್ತಾನೆ. ಆ ಸವಿತೃದೇವನು ಪ್ರಾಚ್ಯಾದಿಸರ್ವದಿಕ್ಕುಗಳನ್ನೂ ಆಗ್ನೇಯಾದಿವಿಕ್ಕುಗಳನ್ನೂ ಮುಂಭಾಗವನ್ನೂ ಹಿಂಭಾಗವನ್ನೂ ಇವುಗಳ ಮಧ್ಯದಲ್ಲಿರುವ ಪ್ರದೇಶವನ್ನೂ ಸಹ ತನ್ನ ಪ್ರಕಾಶದಿಂದ ಬೆಳಗುತ್ತಾನೆ.

## English Translation

Beholding mankind he sits in the midst of the sky, filling (with light) the heaven and earth and the firmament; he illumines the all-pervading (quarters of space) the bright-pervading (intermediate points), and the midmost, the foremost, and the hindmost mark.

|| ಸಂಹಿತಾಪಾಠಃ ||

ರಾಯೋ ಬುಧ್ನಃ ಸಂಗಮನೋ ವಸೂನಾಂ ವಿಶ್ವಾ ರೂಪಾಭಿ ಚಷ್ಟೇ ಶಚೀಭಿಃ |
ದೇವ ಇವ ಸವಿತಾ ಸತ್ಯಧರ್ಮೇಂದ್ರೋ ನ ತಸ್ಥೌ ಸಮರೇ ಧನಾನಾಂ ||೩||

|| ಪದಪಾಠಃ ||

ರಾಯಃ | ಬುಧ್ನಃ | ಸಂऽಗಮನಃ | ವಸೂನಾಂ | ವಿಶ್ವಾ | ರೂಪಾ | ಅಭಿ | ಚಷ್ಟೇ | ಶಚೀಭಿಃ |
ದೇವಃऽಇವ | ಸವಿತಾ | ಸತ್ಯಽಧರ್ಮಾ | ಇಂದ್ರಃ | ನ | ತಸ್ಥೌ | ಸಂऽಅರೇ | ಧನಾನಾಂ || ೩ ||

|| ಸಾಯಣಭಾಷ್ಯಂ ||

ರಾಯೋ ಧನಸ್ಯ ಬುಧ್ನೋ ಬಂಧಕೋ ಮೂಲಭೂತೋ ವಾ || ಊಡಿದಮಿತ್ಯಾದಿನಾ ರೈಶಬ್ದಾದ್ವಿಭಕ್ತೇರುದಾತ್ತತ್ವಂ || ತಥಾ ವಸೂನಾಂ ಧನಾನಾಂ ಸಂಗಮನಃ ಸಂಗಮಯಿತಾ ಪ್ರಾಪಯಿತಾ ಈದೃಶಃ ಸವಿತಾ ಶಚೀಭಿರ್ದೀಪ್ತಿಭಿರ್ವಿಶ್ವಾ ರೂಪಾ ಸರ್ವಾಣಿ ರೂಪಾಣಿ ನಿರೂಪಣೀಯಾನಿ ಪದಾರ್ಥಜಾತಾನ್ಯಭಿಚಷ್ಟೇ | ಅಭಿಪಶ್ಯತಿ | ಪ್ರಕಾಶಯತಿ | ಅಪಿ ಚ ದೇವ ಇವಾಯಂ ಸವಿತಾ ಸಾವಕೋ ದೇವಃ ಸತ್ಯಧರ್ಮಾ ಸತ್ಯಮವಿತಥಂ ಧರ್ಮ ಧಾರಣಂ ಧಾರಣಹೇತುಭೂತಂ ಕರ್ಮ ವಾ ಯಸ್ಯ ತಾದೃಶೋ ಭವತಿ ತಥೇಂದ್ರೋ ನೇಂದ್ರ ಇವ ಧನಾನಾಂ ಸಮರೇ ಸಂಗ್ರಾಮೇ ಸಮ್ಯಕ್ಪ್ರಾಪಣೇ ತಸ್ಥೌ | ಅಯಂ ಸವಿತೋದ್ಯುಕ್ತಃ ಸಂಸ್ತಿಷ್ಠತಿ ||

|| ಪ್ರತಿಪದಾರ್ಥ ||

**ರಾಯಃ**—ಧನಕ್ಕೆ | **ಬುಧ್ನಃ**—ಮೂಲಭೂತನಾದವನೂ ಎಂದರೆ ಆಧಾರ ಭೂತನಾದವನೂ | **ವಸೂನಾಂ**—ನಾನಾವಿಧಧನಗಳನ್ನು | **ಸಂಗಮನಃ**—ಒದಗಿಸಿ ಕೊಡುವವನೂ ಆದ ಸವಿತೃದೇವನು | **ಶಚೀಭಿಃ**—ತನ್ನ ಕಾಂತಿಗಳಿಂದ | **ವಿಶ್ವಾ**—ಸಮಸ್ತವಾದ | **ರೂಪಾ**—ಈ ರೂಪಗಳನ್ನು ಎಂದರೆ ಕಣ್ಣಿನಿಂದ ನೋಡಬಹುದಾದ ಪದಾರ್ಥಗಳನ್ನು | **ಅಭಿ ಚಷ್ಟೇ**—ಸುತ್ತಲೂ ನೋಡುತ್ತಾನೆ (ಅಥವಾ ಬೆಳಗುತ್ತಾನೆ) | **ದೇವ ಇವ**—ದೇವನಂತೆ ಇರುವ | **ಸವಿತಾ**—ಈ ಸವಿತೃವು | **ಸತ್ಯಧರ್ಮಾ**—ಸತ್ಯವೇ ಸ್ವರೂಪ ಅಥವಾ ಕರ್ಮವಾಗಿ ವುಳ್ಳವನಾಗಿದ್ದಾನೆ (ಈ ಸವಿತೃದೇವನು) | **ಧನಾನಾಂ**-ಧನಗಳ ಪ್ರಾಪ್ತಿಗಾಗಿ ಮಾಡುವ | **ಸಮರೇ**—ಯುದ್ಧದಲ್ಲಿ | **ಇಂದ್ರಃ ನ**—ಇಂದ್ರನಂತೆ | **ತಸ್ಥೌ**—ಸ್ಥಿರವಾಗಿ ನಿಂತಿರುತ್ತಾನೆ.

|| ಭಾವಾರ್ಥ ||

ಧನಕ್ಕೆ ಆಧಾರಭೂತನೂ, ನಾನಾವಿಧಧನಗಳನ್ನು ಒದಗಿಸಿಕೊಡುವವನೂ ಆದ ಈ ಸವಿತೃದೇವನು ತನ್ನ ಕಾಂತಿಗಳಿಂದ ಸಮಸ್ತವಸ್ತುಜಾತಗಳನ್ನು ಬೆಳಗುತ್ತಾನೆ. ಧರ್ಮದೇವತೆಯಂತಿರುವ ಈ ಸವಿತೃವು ಧನಪ್ರಾಪ್ತಿಗಾಗಿ ಮಾಡುವ ಯುದ್ಧದಲ್ಲಿ ಇಂದ್ರನಂತೆ ಸ್ಥಿರವಾಗಿ ನಿಂತಿರುತ್ತಾನೆ.

English Translation.

The root of riches, the aquirer of treasure illumines by his functions all (visible) forms[1], Savitri, like a god, whose attribute is truth, stands like Indra in the battle for riches.

|| ಸಂಹಿತಾಪಾಠಃ ||

ವಿಶ್ವಾವಸುಂ ಸೋಮ ಗಂಧರ್ವಮಾಪೋ ದದೃಶುಷೀಸ್ತದೃತೇನಾ ವ್ಯಾಯನ್ |
ತದನ್ವವೈದಿಂದ್ರೋ ರಾರಹಾಣ ಆಸಾಂ ಪರಿ ಸೂರ್ಯಸ್ಯ ಪರಿಧೀಂರಪಶ್ಯತ್ ||

|| ಪದಪಾಠಃ ||

ವಿಶ್ವಽವಸುಂ | ಸೋಮ | ಗಂಧರ್ವಂ | ಆಪಃ | ದದೃಶುಷೀಃ | ತತ್ | ಋತೇನ | ವಿ | ಆಯನ್ |
ತತ್ | ಅನುಽಅವೈತ್ | ಇಂದ್ರಃ | ರರಹಾಣಃ | ಆಸಾಂ | ಪರಿ | ಸೂರ್ಯಸ್ಯ | ಪರಿಽಧೀನ್ | ಅಪಶ್ಯತ್ || ೪ ||

|| ಸಾಯಣಭಾಷ್ಯಂ ||

ಹೇ ಸೋಮ ತ್ವಯಾ ಸಹಿತಂ ಗಂಧರ್ವಂ ಗೀತರೂಪಾಂ ಗಾಂ ಶಬ್ದಂ ಧಾರಯಂತಂ ವಿಶ್ವಾವಸುನಾಮೇತತ್ಸಂಜ್ಞಂ ಮಾಂ || ಉತ್ತರತ್ರ ತಚ್ಛಬ್ದಶ್ರುತೇರ್ಯಚ್ಛಬ್ದಾಧ್ಯಾಹಾರಃ || ಯದಾಪೋ ವಸತೀವರ್ಯಾಖ್ಯಾ ದದೃಶುಷೀರ್ದೃಷ್ಟವತ್ಯಃ || ದೃಶೇರ್ಲಿಟಃ ಕ್ವಸುಃ | ಉಗಿತಶ್ಚೇತಿ ಙೀಪ್ | ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ | ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘಃ || ತತ್ತದಾನೀಮೃತೇನ ಯಜ್ಞೇನ ಹೇತುನಾ ವ್ಯಾಯನ್ | ವಿವಿಧಮಗಚ್ಛನ್ಯಷ್ಟೃಜನಾಃ | ತದ್ಗಮನಮಾಸಾಮಪಾಂ ರರಹಾಣೋ ಗಮಯಿತೇಂದ್ರೋಽನ್ವವೈತ್ | ಅನ್ವಬುಧ್ಯತ | ಬುದ್ಧ್ವಾ ಚ ಕುತ್ರ ಯಜ್ಞಃ ಪ್ರವೃತ್ತ ಇತಿ ಸೂರ್ಯಸ್ಯ ಪರಿಧೀನ್ಪರಿತೋ ಧೀಯಮಾನಾನ್ಪ್ರಾಚ್ಯಾದಿದಿಗ್ವಿಭಾಗಾನ್ಪರ್ಯಪಶ್ಯತ್ | ಪರಿತೋ ದೃಷ್ಟವಾನ್ ||

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೆ | **ಗಂಧರ್ವಂ**—ಗಾನಮಾಡುತ್ತಿರುವ(ನಿನ್ನಿಂದ ಸಹಿತನಾದ) | **ವಿಶ್ವಾವಸುಂ**—ವಿಶ್ವಾವಸುವೆಂಬ ಹೆಸರಿನ ನನ್ನನ್ನು | (**ಯತ್**—ಯಾವಾಗ) | **ಆಪಃ**—ವಸತೀವರ್ಯಾಖ್ಯವಾದ ಉದಕಗಳು | **ದದೃಶುಷೀಃ**—ನೋಡಿದವೋ | **ತತ್**—ಆಗ | **ಋತೇನ**—ಯಜ್ಞಕ್ಕಾಗಿ | **ವ್ಯಾಯನ್**—ವಿವಿಧ ಜನರು ಅಲ್ಲಿಗೆ ಬಂದರು | **ತತ್**—ಅವರ ಆಗಮನವನ್ನು | **ಆಸಾಂ**—ಉದಕಗಳನ್ನು | **ರರಹಾಣಃ**—ಪ್ರೇರಿಸಿ ಹೊರಡಿಸುವ | **ಇಂದ್ರಃ**—ಇಂದ್ರನು | **ಅನ್ವವೈತ್**—ತಿಳಿದನು (ಅನಂತರ) ಯಜ್ಞವು ಎಲ್ಲಿ ನಡೆಯುತ್ತದೆ ಎಂಬುದನ್ನು ತಿಳಿದುಕೊಳ್ಳುವುದಕ್ಕಾಗಿ) | **ಸೂರ್ಯಸ್ಯ**—ಸೂರ್ಯನ | **ಪರಿಧೀನ್**—ಸುತ್ತಲೂ ಇರುವ ಪೂರ್ವಾದಿದಿಕ್ಕುಗಳನ್ನು | **ಪರಿ**-ಸುತ್ತಲೂ | **ಅಪಶ್ಯತ್**—ನೋಡಿದನು.

|| ಭಾವಾರ್ಥ ||

(ವಿಶ್ವಾವಸುವೆಂಬ ಗಂಧರ್ವನ ವಾಕ್ಯವು) ಎಲೈ ಸೋಮದೇವನೇ, ನಿನ್ನೊಡನಿರುವ ನನ್ನನ್ನು ವಸತೀವರ್ಯಾದ್ಯುದಕಗಳೂ ಯಜ್ಞಕ್ಕಾಗಿ ಬಂದಿರುವ ಜನರೂ ನೋಡಿದಾಗ ವೃಷ್ಟ್ಯುದಕಗಳ ಪ್ರೇರಕನಾದ ಇಂದ್ರನು ಯಜ್ಞವು ನಡೆಯುವುದೆಂಬುದನ್ನು ತಿಳಿದನು ಮತ್ತು ಆ ಯಜ್ಞವು ಎಲ್ಲಿ ನಡೆಯುತ್ತದೆ ಎಂಬುದನ್ನು ತಿಳಿಯುವುದಕ್ಕಾಗಿ ಸೂರ್ಯನ ಸುತ್ತಲೂ ಇರುವ ಪೂರ್ವಾದಿದಿಗ್ಭಾಗಗಳಲ್ಲಿ ಸುತ್ತಲೂ ಹುಡುಕಿ ನೋಡಿದನು.

English Translation

Beholding Soma, the Gandharva Viswavasu, the waters have come forth by means of the sacrifice; Indra impelling them knew of this (their approach), and looked round the rims of the sun.

|| ಸಂಹಿತಾಪಾಠಃ ||

ವಿಶ್ವಾವಸುರಭಿ ತನ್ನೋ ಗೃಣಾತು ದಿವ್ಯೋ ಗಂಧರ್ವೋ ರಜಸೋ ವಿಮಾನಃ |

ಯದ್ವಾ ಘಾ ಸತ್ಯಮುತ ಯನ್ನ ವಿದ್ಮ ಧಿಯೋ ಹಿನ್ವಾನೋ ಧಿಯ

ಇನ್ನೋ ಅವ್ಯಾಃ ॥ ೫ ॥

॥ ಪದಪಾಠಃ ॥

ವಿಶ್ವಽವಸುಃ । ಅಭಿ । ತತ್ । ನಃ । ಗೃಣಾತು । ದಿವ್ಯಃ । ಗಂಧರ್ವಃ । ರಜಸಃ । ವಿಽಮಾನಃ ।

ಯತ್ । ವಾ । ಘ । ಸತ್ಯಂ । ಉತ । ಯತ್ । ನ । ವಿದ್ಮ । ಧಿಯಃ । ಹಿನ್ವಾನಃ । ಧಿಯಃ । ಇತ್ । ನಃ । ಅವ್ಯಾಃ ॥ ೫ ॥

॥ ಸಾಯಣಭಾಷ್ಯಂ ॥

ವಿಶ್ವಾವಸುರ್ಗಂಧರ್ವೋ ನೋಽಸ್ಮಾಕಂ ತದಭಿ ಗೃಣಾತು । ಅಭಿಮುಖಂ ಬ್ರವೀತು ॥ ಗೄ ಶಬ್ದೇ । ಕ್ರ್ಯಾದಿಕಃ । ಪ್ವಾದಿತ್ವಾದ್ಧ್ರಸ್ವಃ ॥ ಕೀದೃಶಃ । ದಿವ್ಯೋ ದಿವಿ ಭವಃ ತಥಾ ರಜಸ ಉದಕಸ್ಯ ವಿಮಾನೋ ನಿರ್ಮಾತಾ । ಕಿಂ ಪುನಸ್ತತ್ । ಯದ್ವಾ ಘ ಯಚ್ಚ ಖಲು ಸತ್ಯಮವಿತಥಂ ಯಥಾರ್ಥಫಲಂ ಕರ್ಮಜಾತಂ । ಉತಶಬ್ದಶ್ಚಾರ್ಥೇ । ಯಚ್ಚ ನ ವಿದ್ಮ ನ ಜಾನೀಮಃ ತದುಭಯಂ ಬ್ರವೀತ್ವಿತ್ಯರ್ಥಃ॥ ಋಚಿ ತುನುಘೇತ್ಯಾದಿನಾ ಘಶಬ್ದಸ್ಯ ಸಾಂಹಿತಿಕೋ ದೀರ್ಘಃ ॥ ಶಿಷ್ಟಃ ಪಾದಃ ಪ್ರತ್ಯಕ್ಷಕೃತಃ । ಹೇ ವಿಶ್ವಾವಸೋ ಧಿಯಃ ಕರ್ಮಾಣಿ ಹಿನ್ವಾನಃ ಸೋಮೇನ ಪ್ರವರ್ಧಯನ್ ॥ ಹಿ ಗತೌ ವೃದ್ಧೌ ಚ ॥ ಯದ್ವಾ । ಧಿಯಃ ಸ್ತುತೀರ್ಹಿನ್ವಾನಃ ಪ್ರಾಪ್ನುವನ್ನೋಽಸ್ಮಾಕಂ ಧಿಯ ಇತ್ಕರ್ಮಾಣ್ಯೇವ ಬುದ್ಧೀರೇವ ವಾವ್ಯಾಃ । ರಕ್ಷ ॥

। ಪ್ರತಿಪದಾರ್ಥ ॥

**ವಿಶ್ವಾಸುಃ ಗಂಧರ್ವಃ** —ವಿಶ್ವಾವಸುವೆಂಬ ಗಂಧರ್ವನು । **ದಿವ್ಯಃ**—ಸ್ವರ್ಗ (ಅಂತರಿಕ್ಷ) ದಲ್ಲಿರುವ । **ರಜಸಃ**—ಉದಕದ । **ವಿಮಾನಃ**—ನಿರ್ಮಾತೃವು ಮತ್ತು ಅವನು । **ಸತ್ಯಂ**—ನಿಶ್ಚಯವಾಗಿ । **ಯತ್ವಾ ಘ**—ಯಾವುದು ಎಂಬುದನ್ನು । **ಉತ**—ಮತ್ತು । **ಯತ್**—ಯಾವುದನ್ನು । **ನ ವಿದ್ಮ**—ನಾವು ತಿಳಿಯಲಾರೆವೋ । **ತತ್**—ಅದನ್ನು । **ನಃ**—ನಮಗೆ । **ಅಭಿಗೃಣಾತು**—ಅಭಿಮುಖವಾಗಿ ಹೇಳಲಿ (ಎಲೈ ವಿಶ್ವಾವಸುವೇ) । **ಧಿಯಃ**—ಸ್ತೋತ್ರಗಳನ್ನು । **ಹಿನ್ವಾನಃ**—ಸೋಮದಿಂದ ವೃದ್ಧಿಗೊಳಿಸುತ್ತಾ । **ನಃ**—ನಮ್ಮ । **ಧಿಯ ಇತ್**—ಯಜ್ಞಾದಿ ಕರ್ಮಗಳನ್ನು । **ಅವ್ಯಾಃ**—ರಕ್ಷಿಸು. ।

॥ ಭಾವಾರ್ಥ ॥

ಸ್ವರ್ಗದಲ್ಲಿರುವ ಎಂದರೆ ಅಂತರಿಕ್ಷದಲ್ಲಿರುವ ಉದಕಗಳ ನಿರ್ಮಾತೃವು ಯಾರು ಎಂಬುದನ್ನೂ ಮತ್ತು ನಮಗೆ ತಿಳಿಯದಿರುವ ವಿಷಯವನ್ನೂ ವಿಶ್ವಾವಸುವೆಂಬ ಗಂಧರ್ವನು ನಮಗೆ ಹೇಳಲಿ ಎಲೈ ವಿಶ್ವಾವಸುವೇ, ಸೋಮಸಹಿತನಾದ ನೀನು ನಮ್ಮ ಸ್ತೋತ್ರಗಳನ್ನೂ ಯಜ್ಞಕರ್ಮಗಳನ್ನು ವೃದ್ಧಿಗೊಳಿಸುತ್ತಾ ಅವುಗಳನ್ನು ರಕ್ಷಿಸು

## English Translation

May the celestial Gandharva Viswavasu, the measurer of the water, declare to us that which is the truth, and that which we do not know; accepting our praises, (Viswavasu), protect our sacrifices.

|| ಸಂಹಿತಾಪಾಠಃ ||

ಸಸ್ನಿಮವಿಂದಚ್ಚರಣೇ ನದೀನಾಮಪಾವೃಣೋದ್ದುರೋ ಅಶ್ಮವ್ರಜಾನಾಂ ।
ಪ್ರಾಸಾಂ ಗಂಧರ್ವೋ ಅಮೃತಾನಿ ವೋಚದಿಂದ್ರೋ ದಕ್ಷಂ ಪರಿ ಜಾನಾ-
ದಹೀನಾಂ || ೬ ||

|| ಪದಪಾಠಃ ||

ಸಸ್ನಿಂ । ಅವಿಂದತ್ । ಚರಣೇ । ನದೀನಾಂ । ಅಪ । ಅವೃಣೋತ್ । ದುರಃ । ಅಶ್ಮऽವ್ರಜಾನಾಂ ।
ಪ್ರ । ಆಸಾಂ । ಗಂಧರ್ವಃ । ಅಮೃತಾನಿ । ವೋಚತ್ । ಇಂದ್ರಃ । ದಕ್ಷಂ । ಪರಿ । ಜಾನಾತ್ ।
ಅಹೀನಾಂ || ೬ ||

|| ಸಾಯಣಭಾಷ್ಯಂ ||

ಸಸ್ನಿಮದ್ಭಿಃ ಸಂಸ್ನಾತಂ ಪ್ರಕರ್ಷೇಣ ಸರ್ವಸ್ಯ ಜಗತಃ ಸ್ನಾಪಯಿತಾರಂ ಮೇಘಂ || ಸ್ನಾ ಶೌಚೇ । ಆದೃಗಮಹನ ಇತಿ ಕಿನ್ಪ್ರತ್ಯಯಃ । ಲಿಡ್ವದ್ಭಾವಾದ್ದ್ವಿರ್ವಚನಂ || ನದೀನಾಂ ಶಬ್ದಕಾರಿಣೀನಾಮಪಾಂ ಚರಣೇ ಸಂಚರಣಸ್ಥಾನೇಽಂತರಿಕ್ಷೇಽವಿಂದತ್। ಇಂದ್ರೋಽಲಭತ । ಲಬ್ಧ್ವಾ ಚಾಶ್ಮವ್ರಜಾನಾಂ । ಅಶ್ಮಾ ವ್ಯಾಪ್ತೋ ಮೇಘಃ ತತ್ರ ವ್ರಜಂತೀನಾಂ । ಯದ್ವಾ । ಮೇಘೋ ವ್ರಜೋ ಗೋಷ್ಠಂ ನಿವಾಸಸ್ಥಾನಂ ಯಾಸಾಂ ತಾದೃಶೀನಾಂ ಅಪಾಂ । ದುರೋ ದ್ವಾರಾಣಿ ಮೇಘಾನ್ನಿರ್ಗಮನಪ್ರದೇಶಾನಪಾವೃಣೋತ್। ಅಪಾವೃತವಾನ್। ಯದ್ವಾ। ಅಶ್ಮಸು ಶಿಲಾಸು ವ್ರಜಂತೀನಾಂ ಗಚ್ಛಂತೀನಾಂ ವ್ಯಾಪ್ತಗಮನಾನಾಂ ವಾ ನದೀನಾಂ ಗಂಗಾಯಮುನಾದೀನಾಂ ಚರಣೇ ಸಂಚರಣೇ ಪ್ರವಹಣನನಿಮಿತ್ತಭೂತೇ ಸತಿ ತದರ್ಥಮಿಂದ್ರಃ ಸಸ್ನಿಂ ಮೇಘಮವಿಂದತ್। ಅಲಭತ । ಲಬ್ಧ್ವಾ ಚಾಂತರ್ಗತಾನಾಮಪಾಂ ನಿರ್ಗಮನಸಾಧನಾನಿ ಮೇಘಸ್ಯ ದುರೋ ದ್ವಾರಾಣ್ಯಪಾವೃಣೋತ್ । ಅಪಾವೃತವಾನ್ । ತಥಾಸಾಂ ನದೀನಾಮಮೃತಾನ್ಯಮರಣಸಾಧಕಾನ್ಯುದಕಾನಿ ಗಂಧರ್ವೋ ಗೋರ್ವಜ್ರಸ್ಯ ಧರ್ತಾ ವಿಶ್ವಾವಸುರೂಪೇಣ ವರ್ತಮಾನ ಇಂದ್ರಃ ಪ್ರ ವೋಚತ್ । ಪ್ರಬ್ರವೀತಿ । ಪ್ರವೋಢುಮನುಜಾನಾತಿ । ತಥಾ ದಕ್ಷಂ । ದಕ್ಷತ್ಯುದಕಂ ಪ್ರಯಚ್ಛತೀತಿ

**ದಕ್ಷೋ ವರ್ಷಣಸಮರ್ಥೋ ಮೇಘಃ । ತಾದೃಶಂ ಮೇಘಮಹೀನಾಂ ಮೇಘಾನಾಂ ಮಧ್ಯೇ ಪರಿ ಜಾನಾತ್ । ಪರಿತಃ ಸರ್ವತೋ ಜಾನಾತಿ ॥ ಜ್ಞಾ ಅವಬೋಧನೇ । ಲೇಟ್ಯಡಾಗಮಃ । ಜ್ಞಾಜನೋರ್ಜಾ ಇತಿ ಜಾದೇಶಃ ॥**

॥ ಪ್ರತಿಪದಾರ್ಥ ॥

**ಸಸ್ನಿಂ**— ಉದಕಧಾರೆಗಳಿಂದ ಸಮಸ್ತವನ್ನೂ ತೋಯಿಸುವ ಮೇಘವನ್ನು (ಮೇಘವು) । **ನದೀನಾಂ**— ಶಬ್ದಮಾಡುತ್ತಿರುವ ಉದಕಗಳ । **ಚರಣೇ**— ಸಂಚಾರಸ್ಥಾನವಾದ ಅಂತರಿಕ್ಷದಲ್ಲಿರುವುದನ್ನು । **ಅವಿಂದತ್**- ಇಂದ್ರನು ಕಂಡುಕೊಂಡನು (ತಿಳಿದನು) । **ಅಶ್ಮವ್ರಜಾನಾಂ** - ಮೇಘಸಮೂಹಗಳಲ್ಲಿರುವ ಉದಕಗಳ । **ದುರಃ**— ಈಚೆಗೆ ಬರುವ ದ್ವಾರಗಳನ್ನು । **ಅಪ ಅವೃಣೋತ್**— ಬಿಡಿಸಿ ತೆರೆದನು । **ಆಸಾಂ**— ಈ ನದಿಗಳ । **ಅಮೃತಾನಿ**— ಅಮೃತಸದೃಶವಾದ ಉದಕಗಳನ್ನು । **ಗಂಧರ್ವಃ** ವಿಶ್ವಾವಸುಗಂಧರ್ವರೂಪದಿಂದಿರುವ । **ಇಂದ್ರಃ**— ಇಂದ್ರನು । **ಪ್ರ ವೋಚತ್**— ವಹಿಸುವುದನ್ನು ತಿಳಿದಿದ್ದಾನೆ । **ಅಹೀನಾಂ** -- ಮೇಘಗಳ ಮಧ್ಯದಲ್ಲಿ । **ದಕ್ಷಂ**— ಯಾವ ಮೇಘವು ವೃಷ್ಟಿಯನ್ನು ಸುರಿಸಬಲ್ಲದು ಎಂಬುದನ್ನು । **ಪರಿ ಜಾನಾತ್**— ಇಂದ್ರನು ತಿಳಿಯುತ್ತಾನೆ ।

॥ ಭಾವಾರ್ಥ ॥

ಸಿಡಿಲು ಗುಡುಗು ಮೊದಲಾದ ಶಬ್ದಗಳನ್ನು ಮಾಡುತ್ತಿರುವ ಮತ್ತು ಅಂತರಿಕ್ಷದಲ್ಲಿ ಸಂಚರಿಸುತ್ತಿರುವ ಉದಕಗಳ ಮಧ್ಯದಲ್ಲಿ ಮಳೆಯನ್ನು ಸುರಿದು ಸಮಸ್ತವನ್ನು ನೆನೆಸಬಲ್ಲ ಮೇಘವಿರುವುದನ್ನು ಇಂದ್ರನು ಕಂಡುಕೊಂಡನು ಮತ್ತೆ ಆ ಮೇಘಗಳಲ್ಲಿರುವ ಉದಕಗಳು ಈಚೆಗೆ ಬರುವುದಕ್ಕಾಗಿ ದ್ವಾರಗಳನ್ನು ಬಿಡಿಸಿ ತೆರೆದನು. ಅಮೃತಸದೃಶವಾದ ಈ ವೃಷ್ಟ್ಯುದಕಗಳು ನದಿಗಳಾಗಿ ಪ್ರವಹಿಸುವಂತೆ ಮಾಡುವುದನ್ನು ವಿಶ್ವಾವಸುಗಂಧರ್ವರೂಪದಿಂದಿರುವ ಇಂದ್ರನು ತಿಳಿದಿದ್ದಾನೆ ಮತ್ತು ಅಂತರಿಕ್ಷದಲ್ಲಿರುವ ಅನೇಕ ಮೇಘಗಳ ಮಧ್ಯದಲ್ಲಿ ಯಾವ ಮೇಘವು ಉದಕಪೂರ್ಣವಾಗಿ ವೃಷ್ಟಿಯನ್ನು ಸುರಿಸಬಲ್ಲದೆಂಬುದನ್ನು ತಿಳಿದಿದ್ದಾನೆ.

## English Translation.

(Indra) discovered the cloud in the region of the rivers, he set open the portals of (the waters) whose dwelling is in the clouds; Indra, (in the form of) the Gandharva (Viswavasu), proclaimed the ambrosial (waters), he knew the strength of the dragons

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ— **ಸಸ್ನಿಮವಿಂದಚ್ಚರಣೇ ನದೀನಾಂ** ಎಂಬ ವಾಕ್ಯಕ್ಕೆ ಯಾಸ್ಕರು ನಿರುಕ್ತವನ್ನು ಹೇಳಿದ್ದಾರೆ—

**ಸಸ್ನಿಮವಿಂದಚ್ಚರಣೇ ನದೀನಾಂ । ಸಸ್ನಿಂ ಸಂಸ್ನಾತಂ ಮೇಘಂ ॥** (ನಿ. ೫-೧) ಉದಕಗಳಿಂದ ಸ್ನಾನಮಾಡಿದಂತಿರುವ, ನೆನೆದಿರುವ ಎಂದು ಸಸ್ನಿಶಬ್ದಕ್ಕೆ ಅರ್ಥವು. ಅಥವಾ ಉದಕಧಾರೆಗಳಿಂದ ಸರ್ವವನ್ನೂ ನೆನೆಯಿಸುವ ಸಾಮರ್ಥ್ಯವಿರುವುದರಿಂದ ಮೇಘಕ್ಕೆ ಸಸ್ನಿ ಎಂದು ಹೆಸರು. ನೆನೆಯಿಸುವ ಸಾಮರ್ಥ್ಯವು ನದಿ

ಮೊದಲಾದ ಜಲಾಶಯುಗಳಿಗೂ ಇರುವುದು ಆದರೆ ಇಲ್ಲಿ—**ಪ್ರಕರಣಸಾಮರ್ಥ್ಯಾಚ್ಚೈಚ್ಛೋಽಪ್ಯರ್ಥಾಂತರಂ ಭಜತೇ**—ಸಂದರ್ಭಾನುಸಾರವಾಗಿ ಶಬ್ದಗಳಿಗೆ ಅರ್ಥವನ್ನು ಅನೇಕವಿಧವಾಗಿ ಹೇಳಬಹುದು ಆದ್ದರಿಂದ ಇಲ್ಲಿ ಸಸ್ನಿಶಬ್ದಕ್ಕೆ ಮೇಘವೆಂದೇ ಅರ್ಥಮಾಡಿದಾರೆ.

**ಸಸ್ನಿಂ ಅವಿದತ್ ಚರಣೇ ನದೀನಾಂ**—ಇಲ್ಲಿ ನದ-ಶಬ್ದೇ ಎಂಬ ಧಾತುವಿನಿಂದ ನದೀನಾಂ ಎಂಬ ಶಬ್ದವು ನಿಷ್ಪನ್ನವಾಗಿದೆಯೆಂದು ಭಾಷ್ಯಕಾರರು ಹೇಳಿದ್ದಾರೆ. ಅಂತರಿಕ್ಷದಲ್ಲಿ ಮೇಘರೂಪದಿಂದಿರುವ ಉದಕಗಳು ಸಿಡಿಲು, ಗುಡುಗು ಎಂಬ ಶಬ್ದಗಳನ್ನು ಮಾಡುವುದರಿಂದ ಶಬ್ದಮಾಡುವ ಉದಕಗಳು ಎಂದು ಇಲ್ಲಿ ಹೇಳಿದೆ. **ಸಸ್ನಿಂ** ಎಂದರೆ ನೆನೆಯಿಸುವ ಸಾಮರ್ಥ್ಯವುಳ್ಳ ಎಂದರೆ ನೀರಿನಿಂದ ಪೂರ್ಣವಾದ ಎಂದರ್ಥವು. ಅಂತರಿಕ್ಷದಲ್ಲಿ ಅನೇಕ ಮೇಘ ಸಮೂಹಗಳಿದ್ದರೂ ಅವೆಲ್ಲವೂ ಮಳೆಯನ್ನು ಹುಯ್ಯಲು ಸಮರ್ಥವಾಗಿರುವುದಿಲ್ಲ. ಅವುಗಳಲ್ಲಿ ಕೆಲವು ಮಾತ್ರ ಉದಕಪೂರ್ಣವಾಗಿ (ಕಪ್ಪಗೆ ಕಾಣುತ್ತಾ) ವೃಷ್ಟಿವರ್ಷಣಸಾಮರ್ಥ್ಯವನ್ನು ಹೊಂದಿರುವವು. ಅಂತಹ ಸಾಮರ್ಥ್ಯವನ್ನು ಪಡೆದಿರುವ ಮೇಘವು ಯಾವುದು ಎಂಬುದನ್ನು ಇಂದ್ರನು ತಿಳಿದಿರುವನು ಎಂದು ವಾಕ್ಯದ ಮುಖ್ಯಾಭಿಪ್ರಾಯವು.

**ಅಪಾವೃಣೋತ್ ದುರೋ ಅಶ್ಮವ್ರಜಾನಾಂ**— ಇಲ್ಲಿ ಅಶ್ಮಶಬ್ದವೂ, ವ್ರಜಶಬ್ದವೂ ಮೇಘನಾಮಗಳಲ್ಲಿ ಪಠಿತವಾಗಿವೆ. ಆದ್ದರಿಂದ ಅಶ್ಮಶಬ್ದಕ್ಕೆ ಮೇಘವೆಂದೂ ವ್ರಜಶಬ್ದಕ್ಕೆ ಸಮೂಹವೆಂದೂ ಅರ್ಥಮಾಡಬಹುದು. ಮೇಘಸಮೂಹಗಳ ಎಂದರ್ಥವು. ಮೇಘಗಳಲ್ಲಿರುವ ಉದಕಗಳು ವೃಷ್ಟಿರೂಪವಾಗಿ ಯಾವಾಗಲೂ ಬೀಳುವುದಿಲ್ಲ. ಬಹುಕಾಲ ಮೇಘಗಳಲ್ಲಿಯೇ ಇರಬಹುದು. ಆದ್ದರಿಂದ ಇಂದ್ರನು ಅವುಗಳಲ್ಲಿರುವ ಉದಕಗಳು ಅಧೋಮುಖವಾಗಿ (ಕೆಳಕ್ಕೆ) ಭೂಮಿಯಮೇಲೆ ಬೀಳಲು ಅನುಕೂಲವಾಗುವಂತೆ ಮೇಘಗಳ ಕೆಳಭಾಗದಲ್ಲಿ ಕಂಡಿಯನ್ನು ಮಾಡಿ ಅದನ್ನು ವಿಶಾಲವಾಗಿ ತೆರೆದನೆಂದು ಇಲ್ಲಿ ಹೇಳಿದೆ.

**ಪ್ರ ಆಸಾಂ ಗಂಧರ್ವೋ ಅಮೃತಾನಿ ವೋಚತ್**—ಇಲ್ಲಿ ಗಂಧರ್ವಶಬ್ದಕ್ಕೆ ಇಂದ್ರ ಅಥವಾ ಗಂಧರ್ವರೂಪದಲ್ಲಿರುವ ಇಂದ್ರನೆಂದು ಅರ್ಥಮಾಡಿದೆ. **ಇಂದ್ರೋ ಗಂಧರ್ವಃ ತಸ್ಯ ಮರುತೋಽಪ್ಸರಸಃ**—ಗಂಧರ್ವರು ಯಾವಾಗಲೂ ಅಪ್ಸರಸ್ತ್ರೀಯರಿಂದ ಸಹಿತರಾಗಿರುವರು ಎಂದು ಪ್ರತೀತಿಯಿರುವುದಷ್ಟೆ. ಇಲ್ಲಿ ಇಂದ್ರನು ಗಂಧರ್ವನಾದರೆ ಮರುದ್ದೇವತೆಗಳೇ ಅವನೊಡನಿರುವುದರಿಂದ ಅವರೇ ಅಪ್ಸರಸ್ಸುಗಳು ಎಂದು ಭಾವಿಸಿ ಇಂದ್ರನನ್ನು ಗಂಧರ್ವಶಬ್ದದಿಂದ ವಿವರಿಸಲಾಗಿದೆ ಅಮೃತಶಬ್ದಕ್ಕೆ ಉದಕಗಳು, ಸಿಹಿಯಾದ ಅಮೃತಸದೃಶವಾದ ಉದಕಗಳು ಎಂದರ್ಥವು. ಅಮೃತಶಬ್ದವೂ ಉದಕನಾಮಗಳಲ್ಲಿ ಪಠಿತವಾಗಿದೆ. **ಪ್ರ ವೋಚತ್** ಇಂದ್ರನು ಹೇಳಿದನು ಎಂದರೆ— **ಆಸಾಂ ಪ್ರಜಾನಾಂ ಜೀವಧ್ವಮೇಭಿರುದುಕೈರಸ್ಮದ್ದತ್ತೈರಿತಿ।** ಎಲೈ ಪ್ರಜೆಗಳೇ ನಮ್ಮ (ಇಂದ್ರ) ಅನುಗ್ರಹದಿಂದ ಲಬ್ಧವಾದ ಈ ಉದಕಗಳಿಂದ ನೀವು ಜೀವಿಸಿರಿ ಎಂದು ಇಂದ್ರನು ಹೇಳಿದನು ಎಂದು **ಪ್ರ ವೋಚತ್** ಎಂಬ ಶಬ್ದಗಳಿಗೆ ಅರ್ಥವು.

**ಇಂದ್ರೋ ದಕ್ಷಂ ಪರಿ ಜಾನಾದಹೀನಾಂ**— ಅಂತರಿಕ್ಷದಲ್ಲಿರುವ ಮೇಘಗಳಲ್ಲಿ ಕೆಲವು ಮಳೆಯನ್ನು ಸುರಿಸಲಾರವು, ಕೆಲವು ಉದಕಪೂರ್ಣವಾಗಿ ವೃಷ್ಟಿಯನ್ನು ಸುರಿಸಬಲ್ಲವು ಆದ್ದರಿಂದ ಅನೇಕ ಮೇಘಗಳ ಮಧ್ಯದಲ್ಲಿ ಯಾವ ಮೇಘವು ವೃಷ್ಟಿಯನ್ನು ಸುರಿಸಬಲ್ಲುದು ಎಂಬುದನ್ನು ಇಂದ್ರನು ತಿಳಿಯಬಲ್ಲನು ಎಂದು ಈ ವಾಕ್ಯದ ಅಭಿಪ್ರಾಯವು. ದಕ್ಷಂ ಎಂಬ ಶಬ್ದಕ್ಕೆ ವೃಷ್ಟಿವರ್ಷಣಸಾಮರ್ಥ್ಯವುಳ್ಳ ಮೇಘವು ಎಂದರ್ಥವು.

# ನೂರ ನಲವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಗ್ನೇ ತವೇತಿ ಷಡೃಚಂ ದ್ವಾದಶಂ ಸೂಕ್ತಂ । ಪಾವಕಗುಣವಿಶಿಷ್ಟೋಽಗ್ನಿರ್ಋಷಿಃ । ಶುದ್ಧಾಗ್ನಿ-ರ್ದೇವತಾ। ಆದ್ಯಾ ವಿಷ್ಟಾರಪಂಕ್ತಿರಷ್ಟಕದ್ವಿದ್ವಾದಶಾಷ್ಟಕವತೀ । ಅಥ ತಿಸ್ರಃ ಸತೋಬೃಹತ್ಯೋಽಯುಜೌ ಜಾಗತೌ । ಅನು ೮-೪ । ಇತಿ ಲಕ್ಷಣೋಪೇತಾಃ । ಪಂಚಮ್ಯುಪರಿಷ್ಟಾಜ್ಜ್ಯೋತಿಃ । ಷಷ್ಠೀ ತ್ರಿಷ್ಟುಪ್ । ತಥಾ ಚಾನುಕ್ರಾಂತಂ । ಅಗ್ನೇ ತವಾಗ್ನಿಃ ಪಾವಕ ಆಗ್ನೇಯಂ ವಿಷ್ಟಾರಪಂಕ್ತಿಸ್ತಿಸ್ರಃ ಸತೋಬೃಹತ್ಯ ಉಪ-ರಿಷ್ಟಾಜ್ಜ್ಯೋತಿರಿತಿ ॥ ಮಹಾವ್ರತೇ ಆಗ್ನಿಮಾರುತಶಸ್ತ್ರ ಇದಂ ಸೂಕ್ತಂ ಸ್ತೋತ್ರಿಯಾನುರೂಪಾರ್ಥಂ । ತಥೈವ ಪಂಚಮಾರಣ್ಯಕೇ ಸೂತ್ರಿತಂ ॥ ಐ. ಆ. ೫-೩-೨ ।**

ಅನುವಾದವು—**ಅಗ್ನೇ ತವ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು ಈ ಸೂಕ್ತಕ್ಕೆ ಪಾವಕಗುಣವಿಶಿಷ್ಟನಾದ ಎಂದರೆ ಶುದ್ಧಿಕಾರಕನಾದ ಅಗ್ನಿಯೇ ಋಷಿಯು, ಅಗ್ನಿಯು ದೇವತೆಯು, ಈ ಸೂಕ್ತದ ಮೊದಲ ಋಕ್ಕು ವಿಷ್ಟಾರಪಂಕ್ತಿ ಎಂಬ ಛಂದಸಿನದು. ಈ ಛಂದಸ್ಸಿನ ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಮೊದಲನೆಯ ಪಾದದಲ್ಲಿ ಎಂಟು ಅಕ್ಷರಗಳೂ ಎರಡ ಮತ್ತು ಮೂರನೆಯ ಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ, ಕೊನೆಯ ಪಾದದಲ್ಲಿ ಎಂಟು ಅಕ್ಷರಗಳೂ ಇರುವವು. ಅಲ್ಲಿಂದ ಮುಂದಿನ ಮೂರು ಋಕ್ಕುಗಳೂ ಎಂದರೆ ೨-೪ ಋಕ್ಕುಗಳು ಸತೋಬೃಹತೀಛಂದಸ್ಕವು. ಈ ಛಂದಸ್ಸಿನ ಲಕ್ಷಣವು—ಅಯುಜೌ ಜಾಗತೌ (ಅನು. ೮-೪) ಎಂದರೆ ಈ ಛಂದಸ್ಸಿನ ಋಕ್ಕಿನಲ್ಲಿ ಅಸಮಸಂಖ್ಯೆಯ (೧ ಮತ್ತೂ ೩) ಪಾದಗಳು ಜಗತೀಛಂದಸ್ಸಿನಂತೆ ಇರುವವು ಎಂದು ಇದರ ಲಕ್ಷಣವು. ಐದನೆಯ ಋಕ್ಕು **ಉಪರಿಷ್ಟಾಜ್ಜ್ಯೋತಿಃ** ಎಂಬ ಛಂದಸ್ಸಿನದು. ಆರನೆಯ ಋಕ್ಕು **ತ್ರಿಷ್ಟುಪ್**ಛಂದಸ್ಕವು. ಅನುಕ್ರಮಣಿಕೆಯಲ್ಲಿ – **ಅಗ್ನೇ ತವಾಗ್ನಿಃ ಪಾವಕ ಆಗ್ನೇಯಂ ವಿಷ್ಟಾರಪಂಕ್ತಿಸ್ತಿಸ್ರಃ ಸತೋಬೃಹತ್ಯ ಉಪರಿಷ್ಟಾಜ್ಜ್ಯೋತಿಃ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲ ಆಗ್ನಿಮಾರುತಶಸ್ತ್ರಮಂತ್ರಪಠನಕಾಲದಲ್ಲಿ ಸ್ತೋತ್ರಿಯಾನುರೂಪಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯ ಆರಣ್ಯಕದ ಪಂಚಮಾರಣ್ಯಕದಲ್ಲಿ ನಿರ್ದೇಶಿಸಲಾಗಿದೆ. (ಐ. ಆ. ೫-೩-೨)

## ಸೂಕ್ತ—೧೪೦

ಮಂಡಲ-೧೦ ॥ ಅನುವಾಕ-೧೧ ॥ ಸೂಕ್ತ-೧೪೦ ॥
ಅಷ್ಟಕ-೮ ॥ ಅಧ್ಯಾಯ-೭ ॥ ವರ್ಗ- ೨೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಅಗ್ನಿಃ ಪಾವಕಃ ॥
॥ ದೇವತಾ—ಅಗ್ನಿಃ ॥
॥ ಛಂದಃ—೧. ವಿಷ್ಟಾರಪಂಕ್ತಿಃ । ೨-೪. ಸತೋಬೃಹತೀ । ೫. ಉಪರಿಷ್ಟಾಜ್ಜ್ಯೋತಿಃ
೬. ತ್ರಿಷ್ಟುಪ್

॥ ಸಂಹಿತಾಪಾಠಃ ॥

ಅಗ್ನೇ ತವ ಶ್ರವೋ ವಯೋ ಮಹಿ ಭ್ರಾಜಂತೇ ಅರ್ಚಯೋ ವಿಭಾವಸೋ ।

ಬೃಹದ್ಭಾನೋ ಶವಸಾ ವಾಜಮುಕ್ಥ್ಯಂ೧ ದಧಾಸಿ ದಾಶುಷೇ ಕವೇ ॥ ೧ ॥

॥ ಪದಪಾಠಃ ॥

ಅಗ್ನೇ । ತವ । ಶ್ರವಃ । ವಯಃ । ಮಹಿ । ಭ್ರಾಜಂತೇ । ಅರ್ಚಯಃ । ವಿಭಾವಸೋ ಇತಿ ವಿಭಾऽವಸೋ ।

ಬೃಹದ್ಭಾನೋ ಇತಿ ಬೃಹತ್ऽಭಾನೋ । ಶವಸಾ । ವಾಜಂ । ಉಕ್ಥ್ಯಂ । ದಧಾಸಿ । ದಾಶುಷೇ । ಕವೇ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತವ ವಯೋऽನ್ನಂ ಶ್ರವಃ ಶ್ರವಣೀಯಂ ಪ್ರಶಸ್ಯಂ । ಹವಿರಾತ್ಮಕಸ್ಯ ತಸ್ಯ ಮಂತ್ರ-ಸಂಸ್ಕೃತತ್ವೇನ ಪ್ರಶಸ್ತತ್ವಾತ್ । ಅನ್ನೇಷು ಮಧ್ಯೇ ತವೈವಾನ್ನಂ ಶ್ರೇಷ್ಠಮಿತ್ಯರ್ಥಃ । ಹೇ ವಿಭಾವಸೋ । ವಿಶಿಷ್ಟಾ ದೀಪ್ತಿರ್ವಿಭಾ । ಸೈವ ವಸುರ್ಧನಂ ಯಸ್ಯ ತಾದೃಶಾಗ್ನೇ ಅರ್ಚಯೋ ದೀಪ್ತಯೋ ಮಹಿ ಮಹದ್ಬಹುಲಂ ಭ್ರಾಜಂತೇ । ದೀಪ್ಯಂತೇ ॥ ಭ್ರಾಜೃ ದೀಪ್ತೌ । ಅನುದಾತ್ತೇತ್ । ಭೌವಾದಿಕಃ ॥ ಹೇ ಬೃಹದ್ಭಾನೋ ಪ್ರೌಢದೀಪ್ತೇ ಕವೇ ಕ್ರಾಂತದರ್ಶಿನ್ನಗ್ನೇ ಏವಂ ಮಹಾನುಭಾವಸ್ತ್ವಂ ಶವಸಾ ಬಲೇನೋಪೇತಮುಕ್ಥ್ಯಂ ಪ್ರಶಸ್ಯಂ । ಯದ್ವಾ । ಉಕ್ಥ್ಯೇ ಯಜ್ಞಃ । ತದ್ಯೋಗ್ಯಂ ವಾಜಮನ್ನಂ ದಾಶುಷೇ ಹವೀಂಷಿ ದತ್ತವತೇ ಯಜಮಾನಾಯ ದಧಾಸಿ । ದದಾಸಿ । ಪ್ರಯಚ್ಛಸಿ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತವ**—ನಿನ್ನ (ನಿನಗೆ ಅರ್ಪಿಸುವ ಹವಿರಾತ್ಮಕವಾದ) । **ವಯಃ**—ಅನ್ನವು । **ಶ್ರವಃ**—ಪ್ರಶಸ್ಯವಾದುದು । **ವಿಭಾವಸೋ**—ಕಾಂತಿಯೇ ಧನವಾಗಿವುಳ್ಳ ಎಲೈ ಅಗ್ನಿಯೇ । **ಅರ್ಚಯಃ**—ನಿನ್ನ ಕಾಂತಿಗಳು । **ಮಹಿ**—ಬಹಳವಾಗಿ । **ಭ್ರಾಜಂತೇ**—ಪ್ರಕಾಶಿಸುತ್ತವೆ । **ಬೃಹದ್ಭಾನೋ**—ಅತಿಶಯವಾದ ತೇಜಸ್ಸಿನಿಂದ ಬೆಳಗುವವನೂ । **ಕವೇ**—ಕ್ರಾಂತದರ್ಶಿಯೂ ಆದ ಎಲೈ ಅಗ್ನಿಯೇ ನೀನು । **ಶವಸಾ**—ಬಲಯುತವಾದುದೂ (ಪುಷ್ಟಿಪ್ರದವಾದುದೂ) ॥ **ಉಕ್ಥ್ಯಂ**—ಪ್ರಶಸ್ಯವಾದುದೂ ಆದ । **ವಾಜಂ**—ಅನ್ನವನ್ನು । **ದಾಶುಷೇ**—ನಿನಗೆ ಹವಿಸ್ಸನ್ನರ್ಪಿಸುವ ಯಜಮಾನನಿಗೆ । **ದಧಾಸಿ**—ಕೊಡುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನಗೆ ಅರ್ಪಿಸುವ ಹವಿರಾತ್ಮಕವಾದ ಅನ್ನವು ಪ್ರಶಸ್ಯವಾದುದು. ಕಾಂತಿಯೇ ಧನವಾಗಿವುಳ್ಳ ಎಲೈ ಅಗ್ನಿಯೇ, ನಿನ್ನ ಕಾಂತಿಗಳು ಅಧಿಕವಾಗಿ ಪ್ರಕಾಶಿಸುತ್ತವೆ ಅತಿಶಯವಾದ ತೇಜಸ್ಸಿನಿಂದ ಬೆಳಗುವವನೂ ಕ್ರಾಂತದರ್ಶಿಯೂ ಆದ ಎಲೈ ಅಗ್ನಿಯೇ, ಪುಷ್ಟಿಪ್ರದವಾದುದೂ ಪ್ರಶಸ್ಯವಾದುದೂ ಆದ ಅನ್ನವನ್ನು (ಅಥವಾ ಯಜ್ಞವನ್ನು) ನಿನಗೆ ಹವಿಸ್ಸನ್ನರ್ಪಿಸುವ ಯಜಮಾನನಿಗೆ ನೀನು ಕೊಡುತ್ತೀಯೆ

## English Translation

Yours, Agni, is the most excellent sacrificial food; your flames, O opulent in radiance, blaze fiercely; wise and widely luminous (Agni), you bestow upon the donor (of the oblation) the choicest food with strength

॥ ಸಂಹಿತಾಪಾಠಃ ॥

ಪಾವಕವರ್ಚಾಃ ಶುಕ್ರವರ್ಚಾ ಅನೂನವರ್ಚಾ ಉದಿಯರ್ಷಿ ಭಾನುನಾ ।
ಪುತ್ರೋ ಮಾತರಾ ವಿಚರನ್ನುಪಾವಸಿ ಪೃಣಕ್ಷಿ ರೋದಸೀ ಉಭೇ ॥ ೨ ॥

॥ ಪದಪಾಠಃ ॥

ಪಾವಕಽವರ್ಚಾಃ । ಶುಕ್ರಽವರ್ಚಾಃ । ಅನೂನಽವರ್ಚಾಃ । ಉತ್ । ಇಯರ್ಷಿ । ಭಾನುನಾ ।
ಪುತ್ರಃ । ಮಾತರಾ । ವಿಽಚರನ್ । ಉಪ । ಅವಸಿ । ಪೃಣಕ್ಷಿ । ರೋದಸೀ ಇತಿ । ಉಭೇ ಇತಿ ॥ ೨ ॥

॥ ಸಾಯಣಭಾಷ್ಯಂ ॥

ಪಾವಕವರ್ಚಾಃ ಶೋಧಕದೀಪ್ತಿಃ ಶುಕ್ರವರ್ಚಾ ನಿರ್ಮಲತೇಜಸ್ಕೋಽನೂನವರ್ಚಾಃ ಸಂಪೂರ್ಣತೇಜಸ್ಕಃ । ಹೇ ಅಗ್ನೇ ಈದೃಶಸ್ತ್ವಂ ಭಾನುನಾ ತೇಜಸೋದಿಯರ್ಷಿ । ಉದ್ಗಚ್ಛಸಿ ॥ ಋ ಸೃ ಗತೌ ಜೌಹೋತ್ಯಾದಿಕಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ ॥ ಸ ತ್ವಂ ಪುತ್ರಃ ಸನ್ ಮಾತರಾ ಮಾತೃಭೂತೇ ಅರಣ್ಯೌ ವಿಚರನ್ ಯಾಗಾವಸಾನೇ ವಿಶೇಷೇಣ ಪ್ರಾಪ್ನುವನ್ನುಪಾವಸಿ । ಉಪಗತಾನ್ಯಜಮಾನಾನ್ರಕ್ಷಸಿ । ತಥೋಭೇ ರೋದಸೀ ದ್ಯಾವಾಪೃಥಿವ್ಯೌ ಪೃಣಕ್ಷಿ । ಸಂಯೋಜಯಸಿ । ಹವಿಷಾ ದ್ಯುಲೋಕಂ ವೃಷ್ಟ್ಯೇಮಂ ಲೋಕಂ ಚ ಪೂರಯಸೀತ್ಯರ್ಥಃ ॥ ಪೃಚೀ ಸಂಪರ್ಕೇ । ರೌಧಾದಿಕಃ ॥

॥ ಪ್ರತಿಪದಾರ್ಥ ॥

**ಪಾವಕವರ್ಚಾಃ**— ಶುದ್ಧಿಕಾರಕವಾದ ಕಾಂತಿಯುಳ್ಳವನೂ । **ಶುಕ್ರವರ್ಚಾಃ**— ನಿರ್ಮಲವಾದ ತೇಜಸ್ಸಿನಿಂದ ಬೆಳಗುವವನೂ । **ಅನೂನವರ್ಚಾಃ**— ಸಂಪೂರ್ಣ (ಕಮ್ಮಿಯಾಗದ) ಪ್ರಕಾಶದಿಂದ ಬೆಳಗುವವನೂ ಆದ ಎಲೈ ಅಗ್ನಿಯೇ ನೀನು । **ಭಾನುನಾ**— ತೇಜಸ್ಸಿನಿಂದ ಸಹಿತವಾಗಿಯೇ । **ಉದಿಯರ್ಷಿ**— ಆವಿರ್ಭೂತನಾಗುತ್ತೀಯೆ (ಅರಣಿಗಳಿಂದ ಎದ್ದು ಬರುತ್ತೀಯೆ) । **ಪುತ್ರಃ**— ಪುತ್ರಸ್ಥಾನೀಯನಾದ ನೀನು । **ಮಾತರಾ**— ನಿನಗೆ ಮಾತೃಪ್ರಾಯರಾದ ಅರಣಿಗಳಲ್ಲಿ । **ವಿಚರನ್**— (ಯಜ್ಞಾಂತ್ಯದಲ್ಲಿ) ಹೋಗಿ ಸೇರಿ । **ಉಪ ಅವಸಿ**— ಸಮೀಪವರ್ತಿಗಳಾದ ಯಜಮಾನರನ್ನು ರಕ್ಷಿಸುತ್ತೀಯೆ ಮತ್ತು । **ಉಭೇ ರೋದಸೀ**— ದ್ಯಾವಾಪೃಥಿವಿಗಳೆರಡನ್ನೂ । **ಪೃಣಕ್ಷಿ**— ಹವಿಸ್ಸಿನಿಂದ ದ್ಯುಲೋಕವನ್ನೂ, ವೃಷ್ಟಿಯಿಂದ ಪೃಥಿವಿಯನ್ನೂ ತುಂಬುತ್ತೀಯೆ.

|| ಭಾವಾರ್ಥ ||

ಶುದ್ಧಿಕಾರಕವಾದ ಕಾಂತಿಯುಳ್ಳವನೂ, ನಿರ್ಮಲತೇಜಸ್ಸಿನಿಂದ ಬೆಳಗುವವನೂ ಸಂಪೂರ್ಣಪ್ರಕಾಶದಿ ಬೆಳಗುತ್ತಿರುವವನೂ ಆದ ಎಲೈ ಅಗ್ನಿಯೇ, ನಿನ್ನ ತೇಜಸ್ಸಿನಿಂದ ಸಹಿತನಾಗಿಯೇ ಅರಣಿಗಳಿಂದ ಉತ್ಪನ್ನನಾ ತ್ತೀಯೆ. ಅರಣಿಗಳಿಗೆ ಪುತ್ರಸ್ಥಾನೀಯನಾದ ನೀನು ನಿನಗೆ ಮಾತೃಪ್ರಾಯರಾದ ಅರಣಿಗಳಲ್ಲಿ ಯಜ್ಞಾವಸಾನ ಕ ದಲ್ಲಿ ಪುನ ಹೋಗಿ ಸೇರಿ ಯಜ್ಞಮಾಡುವ ಯಜಮಾನನನ್ನು ರಕ್ಷಿಸುತ್ತೀಯೆ. ದ್ಯಾವಾಪೃಥಿವಿಗಳೆರಡನ್ನೂ ತುಂ ತ್ತೀಯೆ ಎಂದರೆ ದ್ಯುಲೋಕವನ್ನು (ದೇವತೆಗಳನ್ನು) ಹವಿಸ್ಸಿನಿಂದಲೂ, ಪೃಥಿವಿಯನ್ನು ವೃಷ್ಟಿಯಿಂದಲೂ, ಸೇ ಪೋಷಿಸುತ್ತೀಯೆ.

## English Translation.

Agni you are of purifying radiance, of unsoiled lnstre, of full brigh ness, you issue forth with splendour; visiting your parents (like) a so you protect (the worshippers), you unite both heaven and earth.

|| ಸಂಹಿತಾಪಾಠಃ ||

ಊರ್ಜೋ ನಪಾಜ್ಜಾತವೇದಃ ಸುಶಸ್ತಿಭಿರ್ಮಂದಸ್ವ ಧೀತಿಭಿರ್ಹಿತಃ ।
ತ್ವೇ ಇಷಃ ಸಂ ದಧುರ್ಭೂರಿವರ್ಪಸಶ್ಚಿತ್ರೋತಯೋ ವಾಮಜಾತಾಃ ॥ ೩

|| ಪದಪಾಠಃ ||

ಊರ್ಜಃ । ನಪಾತ್ । ಜಾತsವೇದಃ । ಸುಶಸ್ತಿsಭಿಃ । ಮಂದಸ್ವ । ಧೀತಿsಭಿಃ । ಹಿತಃ ।
ತ್ವೇ ಇತಿ । ಇಷಃ । ಸಂ । ದಧುಃ । ಭೂರಿsವರ್ಪಸಃ । ಚಿತ್ರsಊತಯಃ । ವಾಮsಜಾತಾಃ ॥ ೩ ॥

|| ಸಾಯಣಭಾಷ್ಯಂ ||

ಹೇ ಊರ್ಜೋ ನಪಾದೂರ್ಜೋsನ್ನಸ್ಯ ಪಾರ್ಥಿವಸ್ಯಾರಣ್ಯಾದೇಃ ಪುತ್ರ ಹೇ ಜಾತವೇದೋ ಜಾತಾನಾಂ ವೇದಿತರಗ್ನೇ ಸುಶಸ್ತಿಭಿರಸ್ಮಾಭಿಃ ಕ್ರಿಯಮಾಣೈರ್ಮಂದಸ್ವ । ಮೋದಸ್ವ । ತಥಾ ಧೀತಿಭಿ ಕರ್ಮಭಿರಸ್ಮಾಭಿಃ ಕ್ರಿಯಮಾಣೈರಗ್ನಿಹೋತ್ರಾದಿಭಿಃ ಕರ್ಮಭಿರ್ಹಿತಃ ಸುಹಿತಸ್ತೃಪ್ತೋ ಭವ । ಅಪಿ ಭೂರಿವರ್ಪಸಃ । ವರ್ಪ ಇತಿ ರೂಪನಾಮ । ಬಹುವಿಧರೂಪಾಶ್ಚಿತ್ರೋತಯಃ ಚಿತ್ರಾ ವಿಚಿತ್ರೋತಿಸ್ತ್ರ ಪ್ತಿರ್ಯೇಷಾಂ ತಾಸ್ತಥೋಕ್ತಾ ವಾಮಜಾತಾಃ ವಾಮಂ ವನನೀಯಂ ಜಾತಂ ಜನ್ಮ ಯಾಸಾ ತಾದೃಶೀರಿಷೋsನ್ನಾನಿ ಹವಿರ್ಲಕ್ಷಣಾನಿ ತ್ವೇ ತ್ವಯ್ಯೇವ ಸಂ ದಧುಃ । ಸಂದಧತಿ । ಸಮ್ಯಗ್ಸ್ಥಾಪ ಯಜಮಾನಾಃ । ಯದ್ವಾ । ಭೂರಿವರ್ಪಸ ಇತ್ಯಾದಿಕಂ ಕರ್ತೃವಿಶೇಷಣಂ । ತದಾನೀಂ ಚಿತ್ರೋತಯ ಇತ್ಯಸ್ಯ ವಿಚಿತ್ರರಕ್ಷಾ ಇತಿ ಯೋಜ್ಯಂ ॥

|| ಪ್ರತಿಪದಾರ್ಥ ||

**ಊರ್ಜಃ**— ಅನ್ನದ ಅಥವಾ ಪೃಥಿವಿಯಲ್ಲಿ ಬೆಳೆಯುವ ಅರಣಿಯ (ವೃಕ್ಷದ) | **ನಪಾತ್**— ಪುತ್ರನಾದವನೂ | **ಜಾತವೇದಃ**— ಉತ್ಪನ್ನವಾದ ಸಮಸ್ತವಸ್ತುಗಳನ್ನು ತಿಳಿದಿರುವ ಎಲೈ ಅಗ್ನಿಯೇ| **ಸುಶಸ್ತಿಭಿಃ**— ನಮ್ಮಿಂದ ಅರ್ಪಿತವಾಗುವ ಸ್ತುತಿಗಳಿಂದ | **ಮಂದಸ್ವ**— ಹರ್ಷಿತನಾಗು (ಹಾಗೆಯೇ) | **ಧೀತಿಭಿಃ**— ನಾವು ಮಾಡುವ ಅಗ್ನಿಹೋತ್ರಾದಿ ಕರ್ಮಗಳಿಂದ | **ಹಿತಃ**— ತೃಪ್ತನಾಗು (ಮತ್ತು) | **ಭೂರಿವರ್ಪಸಃ**— ಬಹುವಿಧ ರೂಪಗಳಿಂದ ಶೋಭಿಸುವವೂ | **ಚಿತ್ರೋತಯಃ**— ವಿಧವಿಧವಾಗಿ (ಅನೇಕಪ್ರಕಾರವಾಗಿ) ತೃಪ್ತಿಯನ್ನುಂಟು ಮಾಡುವವೂ | **ವಾಮಜಾತಾಃ**— ಉತ್ತಮನಾಗಿ ಸಂಸ್ಕೃತವಾದವೂ ಆದ | **ಇಷಃ** -- ಹವಿರ್ಲಕ್ಷಣಾನ್ನಗಳನ್ನು | **ತ್ವೇ**— ನಿನ್ನಲ್ಲಿಯೇ | **ಸಂ ದಧುಃ**— ಯಜಮಾನರು ಹೋಮಮಾಡಿ ಅರ್ಪಿಸುತ್ತಾರೆ.

|| ಭಾವಾರ್ಥ ||

ಅನ್ನದ (ಶಕ್ತಿಯ) ಅಥವಾ ಅರಣಿಯ ಪುತ್ರನಾದವನೂ, ಜಾತಪ್ರಜ್ಞನೂ ಆದ ಎಲೈ ಅಗ್ನಿಯೇ, ನಾವು ಅರ್ಪಿಸುವ ಸ್ತುತಿಗಳಿಂದ ಹರ್ಷಿತನಾಗು, ನಾವು ಮಾಡುವ ಅಗ್ನಿಹೋತ್ರಾದಿಕರ್ಮಗಳಿಂದ ತೃಪ್ತನಾಗು. ಬಹುವಿಧರೂಪಗಳಿಂದ ಕೂಡಿಯೂ ಅನೇಕವಿಧವಾಗಿ ತೃಪ್ತಿಯನ್ನುಂಟುಮಾಡುವವೂ, ಸುಸಂಸ್ಕೃತವೂ ಆದ ಹವಿರ್ಲಕ್ಷಣ ರೂಪವಾದ ಅನ್ನಗಳನ್ನು ಯಜಮಾನರು ನಿನ್ನಲ್ಲಿಯೇ ಹೋಮಮಾಡಿ ಅರ್ಪಿಸುತ್ತಾರೆ.

## English Translation.

Son of strength, Jatavedas, rejoice in our adorations, (be) satisfied by our offerings; (the worshippers) have placed before you viands of many sorts of wonderful efficacy, of excellent origin.

|| ಸಂಹಿತಾಪಾಠಃ ||

ಇರಜ್ಯನ್ನಗ್ನೇ ಪ್ರಥಯಸ್ವ ಜಂತುಭಿರಸ್ಮೇ ರಾಯೋ ಅಮರ್ತ್ಯ |
ಸ ದರ್ಶತಸ್ಯ ವಪುಷೋ ವಿ ರಾಜಸಿ ಪೃಣಕ್ಷಿ ಸಾನಸಿಂ ಕ್ರತುಂ || ೪ ||

|| ಪದಪಾಠಃ ||

ಇರಜ್ಯನ್ | ಅಗ್ನೇ | ಪ್ರಥಯಸ್ವ | ಜಂತುऽಭಿಃ | ಅಸ್ಮೇ ಇತಿ | ರಾಯಃ | ಅಮರ್ತ್ಯ |
ಸಃ | ದರ್ಶತಸ್ಯ | ವಪುಷಃ | ವಿ | ರಾಜಸಿ | ಪೃಣಕ್ಷಿ | ಸಾನಸಿಂ | ಕ್ರತುಂ || ೪ ||

|| ಸಾಯಣಭಾಷ್ಯಂ ||

ಹೇ ಅಗ್ನೇ ಜಂತುಭಿರ್ಜಾತೈಃ ಶತ್ರುಭಿಃ ಸಹೇರಜ್ಯನ್ನೀರ್ಷ್ಯನ್ ಸ್ಪರ್ಧಾಂ ಕುರ್ವನ್ || ಇರಜ್ ಈರ್ಷ್ಯಾಯಾಂ | ಕಂಡ್ವಾದಿಃ || ಯದ್ವಾ| ಇರಜ್ಯತಿರೈಶ್ವರ್ಯಕರ್ಮಾ| ಜಂತುಭಿರ್ಜಾಯಮಾನೈರಾತ್ಮೀಯೈಸ್ತೇಜೋಭಿರಿರಜ್ಯನ್ನೀಶ್ವರೋ ಭವನ್ | ಹೇ ಅಮರ್ತ್ಯ ಮರಣರಹಿತಾಗ್ನೇ ಅಸ್ಮೇ ಅಸ್ಮಾಕಂ || ಸುಪಾಂ ಸುಲುಗಿತಿ ಷಷ್ಠ್ಯಾಃ ಶೇಆದೇಶಃ || ರಾಯೋ ಧನಾನಿ ಪ್ರಥಯಸ್ವ| ವಿಸ್ತಾರಯ || ರಯಿಶಬ್ದಾಚ್ಛಸಃ ಸ್ಥಾನೇ ವ್ಯತ್ಯಯೇನ ಜಸ್ | ಶಸೋ ವಾ ವ್ಯತ್ಯಯೇನೋಡಿದಮಿತಿ ವಿಭಕ್ತ್ಯುದಾತ್ತತ್ವಂ ನ ಕ್ರಿಯತೇ || ಸ ತ್ವಂ ದರ್ಶತಸ್ಯ ದರ್ಶನೀಯಸ್ಯ ವಪುಷಸ್ತೇಜೋಮಯಸ್ಯ ಶರೀರಸ್ಯ ವಿ ರಾಜಸಿ | ತೃತೀಯಾರ್ಥೇ ಷಷ್ಠೀ ವಾ | ಈದೃಶೇನ ಶರೀರೇಣ ವಿಶೇಷೇಣ ದೀಪ್ಯಸೇ | ಯದ್ವಾ | ರಾಜತಿರೈಶ್ವರ್ಯಕರ್ಮಾ ವಪುರಿತಿ ಚ ರೂಪನಾಮ | ದರ್ಶನೀಯೇನ ರೂಪೇಣ ವಿ ರಾಜಸಿ | ವಿಶೇಷೇಣೇಶಿಷೇ | ಅತ ಏವ ಸಾನಸಿಂ ಸಂಭಜನೀಯಂ ಕ್ರತುಂ ಕರ್ಮ ಪೃಣಕ್ಷಿ | ಅಸ್ಮಾಭಿಃ ಸಂಪರ್ಚಯಸಿ | ಫಲೇನ ವಾ ಸಂಯೋಜಯಸಿ ||

|| ಪ್ರತಿಪದಾರ್ಥ ||

**ಜಂತುಭಿಃ**—ಶತ್ರುಗಳೊಡನೆ | **ಇರಜ್ಯನ್**—ಹೋರಾಡುವವನೂ | **ಅಮರ್ತ್ಯ**—ಮರಣರಹಿತನೂ ಆದ | **ಅಗ್ನೇ**—ಎಲೈ ಅಗ್ನಿಯೇ | **ಅಸ್ಮೇ**—ನಮಗೆ | **ರಾಯಃ**—ಧನವನ್ನು | **ಪ್ರಥಯಸ್ವ**—ಬಹಳವಾಗಿ ಕೊಡು (ಅಥವಾ ನಮ್ಮಲ್ಲಿರುವ ಧನವನ್ನು ವೃದ್ಧಿಗೊಳಿಸು) | **ಸಃ (ತ್ವಂ)**—ಅಂತಹ ನೀನು | **ದರ್ಶತಸ್ಯ**—ಆಕರ್ಷಕವಾದ | **ವಪುಷಃ**—ತೇಜೋಮಯವಾದ, ನಿನ್ನ ಶರೀರದಿಂದ | **ವಿರಾಜಸಿ**—ವಿಶೇಷವಾಗಿ ಬೆಳಗುತ್ತೀಯೆ [ಅಥವಾ | **ದರ್ಶತಸ್ಯ ವಪುಷಃ**—ನಿನ್ನ ಆಕರ್ಷಕವಾದ ರೂಪದಿಂದ | **ವಿ ರಾಜಸಿ**—ಸರ್ವರಿಗೂ ಪ್ರಭುವಾಗಿದ್ದೀಯೆ.] (ಆದ್ದರಿಂದಲೇ) | **ಸಾನಸಿಂ**—ಲಭಿಸಬೇಕಾದ | **ಕ್ರತುಂ**—ಕರ್ಮ ಫಲವನ್ನು | **ಪೃಣಕ್ಷಿ**—ನಮಗೆ ಸೇರುವಂತೆ ಮಾಡುತ್ತೀಯೆ |

|| ಭಾವಾರ್ಥ ||

ಶತ್ರುಗಳೊಡನೆ ಹೋರಾಡುವವನೂ, ಮರಣರಹಿತನೂ ಆದ ಎಲೈ ಅಗ್ನಿಯೇ, ನಮಗೆ ಧನವನ್ನು ಅತಿಶಯವಾಗಿ ಕೊಡು ಅಥವಾ ನಮ್ಮಲ್ಲಿರುವ ಧನವನ್ನು ವಿಸ್ತಾರಗೊಳಿಸು ಎಂದರೆ ಅಭಿವೃದ್ಧಿಮಾಡು. ಆಕರ್ಷಕವಾದ ರೂಪವುಳ್ಳ ನೀನು ತೇಜೋಮಯವಾದ ನಿನ್ನ ಶರೀರಕಾಂತಿಯಿಂದ ವಿಶೇಷವಾಗಿ ಬೆಳಗುತ್ತೀಯೆ. ಅಥವಾ ನಿನ್ನ ಆಕರ್ಷಕವಾದ ರೂಪದಿಂದ ಸರ್ವರಿಗೂ ಪ್ರಭುವಾಗಿದ್ದೀಯೆ. ಆದ್ದರಿಂದಲೇ ನಮಗೆ ಲಭಿಸಬೇಕಾಗ ಯಜ್ಞ ಫಲಗಳನ್ನು ನಮಗೆ ಸೇರಿಸು. (ಸೇರುವಂತೆ ಮಾಡು).

## English Translation.

Contending with enemies, bestow upon us, immortal Agni, riches; you shine with a graceful person, you fulfill (the purpose of) the enjoyable rite.

॥ ಸಂಹಿತಾಪಾಠಃ ॥

ಇಷ್ಕರ್ತಾರಮಧ್ವರಸ್ಯ ಪ್ರಚೇತಸಂ ಕ್ಷಯಂತಂ ರಾಧಸೋ ಮಹಃ ।
ರಾತಿಂ ವಾಮಸ್ಯ ಸುಭಗಾಂ ಮಹೀಮಿಷಂ ದಧಾಸಿ ಸಾನಸಿಂ ರಯಿಂ ॥೫॥

॥ ಪದಪಾಠಃ ॥

ಇಷ್ಕರ್ತಾರಂ । ಅಧ್ವರಸ್ಯ । ಪ್ರಽಚೇತಸಂ । ಕ್ಷಯಂತಂ । ರಾಧಸಃ । ಮಹಃ ।
ರಾತಿಂ । ವಾಮಸ್ಯ । ಸುಽಭಗಾಂ । ಮಹೀಂ । ಇಷಂ । ದಧಾಸಿ । ಸಾನಸಿಂ । ರಯಿಂ ॥ ೫ ॥

॥ ಸಾಯಣಭಾಷ್ಯಂ ॥

ಇಷ್ಕರ್ತಾರಂ ನಿಷ್ಕರ್ತಾರಂ ॥ ಛಾಂದಸೋ ವರ್ಣಲೋಪಃ ॥ ಅಧ್ವರಸ್ಯ ಯಜ್ಞಸ್ಯ ನಿಷ್ಕರ್ತಾರಂ ಸಂಸ್ಕರ್ತಾರಂ ಪ್ರಚೇತಸಂ ಪ್ರಕೃಷ್ಟಜ್ಞಾನಂ ಮಹೋ ಮಹತೋ ರಾಧಸೋ ಧನಸ್ಯ ಕ್ಷಯಂತಮೀಶ್ವರಂ । ಕ್ಷಯತಿರೈಶ್ವರ್ಯಕರ್ಮಾ । ವಾಮಸ್ಯ ವನನೀಯಸ್ಯ ಧನಸ್ಯ ರಾತಿಂ ದಾತಾರಂ ॥ ರಾತೇಃ ಕರ್ತರಿ ಕ್ತಿಚ್ ॥ ಈದೃಶಂ ತ್ವಾಂ ಸ್ತುಮ ಇತಿ ಶೇಷಃ । ಸ ತ್ವಂ ಸುಭಗಾಂ ಸೌಭಾಗ್ಯೋಪೇತಾಂ ಮಹೀಂ ಮಹತೀಮಿಷಮನ್ನಂ ಸಾನಸಿಂ ಸಂಭಕ್ತವ್ಯಂ ರಯಿಂ ಧನಂ ಚ ದಧಾಸಿ । ಸ್ತೋತೃಭ್ಯೋ ದದಾಸಿ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಅಧ್ವರಸ್ಯ**—ಯಜ್ಞದ । **ಇಷ್ಕರ್ತಾರಂ**—ಸಂಸ್ಕಾರಕರ್ತೃವೂ (ಚೆನ್ನಾಗಿ ನಡೆಯುವಂತೆ ಮಾಡುವವನೂ) । **ಪ್ರಚೇತಸಂ**—ಉತ್ತಮವಾದ ಜ್ಞಾನಸಂಪನ್ನನೂ । **ಮಹಃ**—ಹೆಚ್ಚಾದ । **ರಾಧಸಃ**—ಧನಕ್ಕೆ । **ಕ್ಷಯಂತಂ**—ಸ್ವಾಮಿಯೂ । **ವಾಮಸ್ಯ**—ಸರ್ವರಿಂದಲೂ ಅಪೇಕ್ಷಿತವಾದ ಧನದ । **ರಾತಿಂ**—ದಾತೃವೂ (ಕೊಡುವವನೂ) ಆದ ನಿನ್ನನ್ನು ಸ್ತುತಿಸುತ್ತೇವೆ (ಇಂತಹ ನೀನು) । **ಸುಭಗಾಂ**—ಸೌಭಾಗ್ಯ ಯುಕ್ತವಾದುದೂ । **ಮಹೀಂ**—ಬಹಳವಾದುದೂ ಆದ । **ಇಷಂ**—ಅನ್ನವನ್ನು । **ಸಾನಸಿಂ**—ನಾವು ಪಡಯ ಬೇಕಾದ । **ರಯಿಂ**—ದನವನ್ನೂ । **ದಧಾಸಿ**—ಸ್ತೋತೃಜನರಿಗೆ ಕೊಡುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಜ್ಞವನ್ನು ಸಂಸ್ಕಾರಮಾಡಿ ಚೆನ್ನಾಗಿ ನಡೆಯುವಂತೆ ಮಾಡುವವನೂ, ಉತ್ತಮ ತಿಳುವಳಿಕೆಯುಳ್ಳವನೂ, ಅತಿಶಯವಾದ ಧನಕ್ಕೆ ಒಡೆಯನೂ, ಸರ್ವರೂ ಅಪೇಕ್ಷಿಸುವ ಧನವನ್ನು ಅವರವರಿಗೆ ಕೊಡುವವನೂ ಆದ ನಿನ್ನನ್ನು ಸ್ತುತಿಸುತ್ತೇವೆ. ಇಂತಹ ನೀನು ಶೋಭನಕರವಾದುದೂ ಅತಿಶಯವಾದುದೂ ಆದ ಅನ್ನವನ್ನೂ ನಾವು ಪಡೆಯಬೇಕಾದ ಧನವನ್ನೂ ಸ್ತೋತ್ರಮಾಡುವ ನಮಗೆ ಕೊಡುತ್ತೀಯೆ.

## English Translation

(We praise you), the perfector of the sacrifice, the sage, the lord of great wealth, the giver of what is desirable; you bestow auspicious and abundant food, and enjoyable riches.

॥ ಸಂಹಿತಾಪಾಠಃ ॥

ಋತಾವಾನಂ ಮಹಿಷಂ ವಿಶ್ವದರ್ಶತಮಗ್ನಿಂ ಸುಮ್ನಾಯ ದಧಿರೇ ಪುರೋ ಜನಾಃ ।

ಶ್ರುತ್ಕರ್ಣಂ ಸಪ್ರಥಸ್ತಮಂ ತ್ವಾ ಗಿರಾ ದೈವ್ಯಂ ಮಾನುಷಾ ಯುಗಾ ॥ ೬ ॥

॥ ಪದಪಾಠಃ ॥

ಋತಽವಾನಂ । ಮಹಿಷಂ । ವಿಶ್ವಽದರ್ಶತಂ । ಅಗ್ನಿಂ । ಸುಮ್ನಾಯ । ದಧಿರೇ । ಪುರಃ । ಜನಾಃ ।

ಶ್ರುತ್ಽಕರ್ಣಂ । ಸಪ್ರಥಃಽತಮಂ । ತ್ವಾ । ಗಿರಾ । ದೈವ್ಯಂ । ಮಾನುಷಾ । ಯುಗಾ ॥ ೬ ॥

॥ ಸಾಯಣಭಾಷ್ಯಂ ॥

ಋತಾವಾನಂ ಸತ್ಯವಂತಂ ಯಜ್ಞವಂತಂ ವಾ ॥ ಛಂದಸೀವನಿಪಾವಿತಿ ಮತ್ವರ್ಥೀಯೋ ವನಿಪ್ ॥ ಮಹಿಷಂ ಮಹಾಂತಂ ಪೂಜ್ಯಂ ವಾ ವಿಶ್ವದರ್ಶತಂ ವಿಶ್ವೈಃ ಸರ್ವೈರ್ದರ್ಶನೀಯಂ । ಯದ್ವಾ । ವಿಶ್ವಂ ದರ್ಶನಂ ಯಸ್ಯ ॥ ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ ॥ ಈದೃಶಮಗ್ನಿಂ ಸುಮ್ನಾಯ ಸುಖಾರ್ಥಂ ಜನಾ ಋತ್ವಿಗ್ಯಜಮಾನರೂಪಾಃ ಪುರೋ ದಧಿರೇ । ಪುರೋ ದಧತೇ । ಸರ್ವ-ಕರ್ಮಭ್ಯಃ ಪುರಸ್ತಾದ್ಧಾರಯಂತಿ । ಯದ್ವಾ । ಪುರಃ ಪುರಸ್ತಾತ್ಪೂರ್ವಸ್ಯಾಂ ದಿಶ್ಯಾಹವನೀಯರೂಪೇಣ ಧಾರಯಂತಿ । ಪರೋಽರ್ಧರ್ಚಃ ಪ್ರತ್ಯಕ್ಷಕೃತಃ । ಅಪಿ ಚ ಹೇ ಅಗ್ನೇ ಶ್ರುತ್ಕರ್ಣಂ ಶ್ರುತ್ ಸ್ತುತೀಃ ಸಮ್ಯಕ್ ಶೃಣ್ವನ್ಕರ್ಣಃ ಶ್ರೋತ್ರೇಂದ್ರಿಯಂ ಯಸ್ಯ ತಾದೃಶಂ ಸಪ್ರಥಸ್ತಮಮತಿಶಯೇನ ಪ್ರಖ್ಯಾತಂ ಯದ್ವಾ ಸರ್ವತೋ ವಿಸ್ತಾರ್ಯಮಾಣಂ ದೈವ್ಯಂ ದೇವಾನಾಂ ಹವಿರ್ವೋಢೃತ್ವೇನ ಸಂಬಂಧಿನಂ ಈದೃಶಂ ತ್ವಾ ತ್ವಾಂ ಮಾನುಷಾ ಮಾನುಷಾಣಿ ಮನೋರಪತ್ಯಾನಿ ಯುಗಾ ಯುಗಾನಿ ಯುಗಲಾನಿ ಪತ್ನೀಯಜ-ಮಾನರೂಪಾಣಿ ಗಿರಾ ಸ್ತುತ್ಯಾ ಸ್ತುವಂತೀತಿ ಶೇಷಃ ॥

॥ ಪ್ರತಿಪದಾರ್ಥ ॥

**ಋತಾವಾನಂ**—ಸತ್ಯವಂತನಾದವನೂ ಅಥವಾ ಯಜ್ಞಾರ್ಹನೂ । **ಮಹಿಷಂ**—ಪೂಜ್ಯನೂ । **ವಿಶ್ವದರ್ಶತಂ**—ಸರ್ವರಿಂದಲೂ ಪ್ರೇಕ್ಷಣೀಯನೂ ಆದ । **ಅಗ್ನಿಂ**—ಅಗ್ನಿಯನ್ನು । **ಸುಮ್ನಾಯ**—ಸರ್ವರಿಗೂ

ಸುಖವಾಗಲೆಂದು | **ಜನಾಃ**—ಋತ್ವಿಗ್ಯಜಮಾನರು | **ಪುರಃ**—ಸರ್ವಕರ್ಮಗಳ ಪ್ರಾರಂಭದಲ್ಲಿಯೂ | **ದಧಿರೇ**—ಸ್ಥಾಪಿಸುತ್ತಾರೆ [ಅಥವಾ | **ಪುರಃ**—ಪೂರ್ವದಿಕ್ಕಿನಲ್ಲಿರುವ ಆಹವನೀಯಾಗ್ನಿಯಲ್ಲಿ | **ದಧಿರೇ**—ಸ್ಥಾಪಿಸುತ್ತಾರೆ (ಎಲೈ ಅಗ್ನಿಯೇ) | **ಶ್ರುತ್ಕರ್ಣಂ**—ನಿನ್ನ ಕಿವಿಗಳಿಂದ ಸ್ತುತಿಗಳನ್ನು ಆಲಿಸಿ ಕೇಳುವವನೂ | **ಸಪ್ರಥಸ್ತಮಂ**—ಸುಪ್ರಸಿದ್ಧನೂ ಅಥವಾ ಸರ್ವತ್ರ ಹರಡುವವನೂ | **ದೈವ್ಯಂ**—ದೇವತೆಗಳಿಗೆ ಹವಿಸ್ಸನ್ನು ವಹಿಸುವುದರಿಂದ ದೇವತೆಗಳಿಗೆ ಸಂಬಂಧಿಸಿದವನೂ ಆದ | **ತ್ವಾ**—ನಿನ್ನನ್ನು | **ಮಾನುಷಾ**—ಮಾನವರಾದ | **ಯುಗಾ**—ಯಜಮಾನ ಮತ್ತು ಅವನ ಪತ್ನಿ ಎಂಬ ಇಬ್ಬರೂ | **ಗಿರಾ**—ಸ್ತುತಿರೂಪವಾದ ವಾಕ್ಯದಿಂದ ಸ್ತುತಿಸುತ್ತಾರೆ.

|| ಭಾವಾರ್ಥ ||

ಸತ್ಯವಂತನೂ ಅಥವಾ ಯಜ್ಞಾರ್ಹನೂ, ಪೂಜ್ಯನೂ ಸರ್ವರಿಂದಲೂ ನೋಡಲ್ಪಡಲು ಅರ್ಹನೂ ಆದ ಅಗ್ನಿಯನ್ನು ಸರ್ವರ ಸುಖಕ್ಕಾಗಿ ಋತ್ವಿಗ್ಯಜಮಾನರು ಸರ್ವಕರ್ಮಗಳ ಪ್ರಾರಂಭದಲ್ಲಿಯೂ ಪೂರ್ವದಿಕ್ಕಿನಲ್ಲಿ ಆಹವನೀಯಾಗ್ನಿಕುಂಡದಲ್ಲಿ ಸ್ಥಾಪಿಸುತ್ತಾರೆ. ಎಲೈ ಅಗ್ನಿಯೇ, ನಿನ್ನ ಕಿವಿಗಳಿಂದ ಸ್ತುತಿಯನ್ನು ಆಲಿಸಿ ಕೇಳುವವನೂ ಸುಪ್ರಸಿದ್ಧನೂ ಅಥವಾ ಬೇಗನೆ ವ್ಯಾಪಿಸಿ ಹರಡುವವನೂ, ದೇವತೆಗಳಿಗೆ ಸಂಬಂಧಪಟ್ಟವನೂ ಆದ ನಿನ್ನನ್ನು ಮಾನವರಾದ ಯಜಮಾನ ಮತ್ತು ಅವನ ಪತ್ನಿಯರೆಂಬ ದಂಪತಿಗಳು ಸ್ತೋತ್ರಾದಿಗಳಿಂದ ಸ್ತುತಿಸುತ್ತಾರೆ.

English Translation

Men for the sake of happiness place before them Agni, the speaker of truth, the mighty, the contemplator of all; the posterity of Manu in pairs (propitiate) with praises you, whose ears are open (to their praises), who are most renowned, and the (minister) of the gods.

## ನೂರ ನಲವತ್ತೊಂದನೆಯ ಸೂಕ್ತವು

---

### ಪೀಠಿಕೆ

ಶೌನಕಮಹರ್ಷಿಗಳು ತಮ್ಮ ಋಗ್ವಿಧಾನವೆಂಬ ಗ್ರಂಥದಲ್ಲಿ ಈ ಸೂಕ್ತವನ್ನು ಈ ರೀತಿ ಪ್ರಶಂಸಿಸಿದ್ದಾರೆ—

ಅಗ್ನೇ ಅಚ್ಛಾ ವದೇತ್ಯೇತದ್ಧನಕಾಮಃ ಪ್ರಯೋಜಯೇತ್ |
ನಿಯತಃ ಸರ್ಪಿಷಾ ಹುತ್ವಾ ಜಪೇದಯುತಶಃ ಪುನಃ || ೫೦ ||

ಖಾದಿರೀಣಾಂ ಹಿ ಸಮಿಧಾಂ ಜುಹುಯಾದ್ದಶತೀರ್ದಶ |
ದಶಕೃತ್ವಃ ಸದಾರೇಣ ರಾಯಸ್ಪೋಷೇಣ ಪುಷ್ಯತಿ || ೫೧ ||

ಬಿಲ್ವೋದುಂಬರಪಾಲಾಶೀಸ್ತಥಾ ರೌಹಿತಕೀಶ್ಚ ಯಾಃ |
ಜುಹುಯಾದ್ಧನಕಾಮಸ್ತು ರಾಯಸ್ಪೋಷೇಣ ಪುಷ್ಯತಿ || ೫೨ ||

**ವೈಭೀದಕೇಧ್ಮೋ ಬೈಲ್ವಕೇರ್ಜುಹುಯಾದರ್ಧಮಾಸಭುಕ್ ।**
**ದ್ವಿಷದ್ದ್ವೇಷೇಣ ತಸ್ಯಾಂತೇ ಸೂಕ್ತಮೇತತ್ತ್ರಯೋಜಯೇತ್ ॥ ೫೩ ॥**
**ದ್ವಿಷಂತಂ ಧನಿನಂ ಹತ್ವಾ ದ್ವಿಷತೋ ವಿಂದತೇ ಧನಂ ।**
**ಅಥವಾ ಜಪ್ಯಮೇವ ಸ್ಯಾದ್ರಾಯಸ್ಪೋಷಧನಾರ್ಥಿಭಿಃ ॥ ೫೪ ॥**

(ಋಗ್ವಿಧಾನ· ಅಧ್ಯಾಯ ೪ ಶ್ಲೋ. ೫೧–೫೪)

ಧನವನ್ನಪೇಕ್ಷಿಸುವವನು **ಅಗ್ನೇ ಅಚ್ಛಾ** ಎಂಬ ಈ ಸೂಕ್ತದ ಮಂತ್ರಗಳನ್ನು ಪ್ರಯೋಗಿಸಿ ಶುದ್ಧಮನಸ್ಕನಾಗಿ ಅಗ್ನಿಯಲ್ಲಿ ಹೋಮಮಾಡಬೇಕು ಮತ್ತು ಸೂಕ್ತವನ್ನು ಹತ್ತುಸಾವಿರದಷ್ಟು ಜಪಿಸಬೇಕು ಹೋಮಮಾಡುವಾಗ ಖಾದಿರಸಮಿತ್ತುಗಳಿಂದ ಸಾವಿರ ಸಂಖ್ಯೆಯಷ್ಟು ಪತ್ನೀಸಹಿತನಾಗಿ ಹೋಮಮಾಡಬೇಕು ಮತ್ತು ಬಿಲ್ವ ಉದುಂಬರ, ಮುತ್ತುಗ ಮೊದಲಾದ ವೃಕ್ಷದ ಸಮಿತ್ತುಗಳಿಂದಲೂ ಹೋಮಮಾಡಬೇಕು. ಹೀಗೆ ಹೋಮಮಾಡಿದರೆ ಧನವೂ ಪುಷ್ಟಿಯೂ ಲಭಿಸುವವು. ತನ್ನನ್ನು ದ್ವೇಷಿಸುವ ಶತ್ರುಗಳ ಪರಿಹಾರಾರ್ಥವಾಗಿ ಸಾಧಕನು ವೈಭೀದಕ ವೃಕ್ಷದ ಮತ್ತು ಬಿಲ್ವವೃಕ್ಷದ ಸಮಿತ್ತುಗಳಿಂದ ಹದಿನೈದು ದಿನಗಳ ವರೆಗೂ ದಿನದಲ್ಲಿ ಒಪ್ಪತ್ತು ಊಟಮಾಡುತ್ತಾ ಹೋಮಮಾಡಬೇಕು. ಹೋಮಾನಂತರ ಈ ಸೂಕ್ತವನ್ನು ಜಪಿಸಬೇಕು. ಹೀಗೆ ಮಾಡಿದರೆ ತನ್ನ ಶತ್ರುವು ಐಶ್ವರ್ಯವಂತನಾಗಿದ್ದರೂ ಅವನು ನಾಶವನ್ನು ಹೊಂದಿ ಅವನ ಧನವೆಲ್ಲವನ್ನೂ ಸಾಧಕನು ಪಡೆಯುವನು ಇತ್ಯಾದಿ.

॥ ಸಾಯಣಭಾಷ್ಯಂ ॥

**ಅಗ್ನ ಇತಿ ಷಡೃಚಂ ತ್ರಯೋದಶಂ ಸೂಕ್ತಂ । ತಾಪಸಗುಣವಿಶಿಷ್ಟಸ್ಯಾಗ್ನೇರಾರ್ಷಂ ವೈಶ್ವದೇವಮಾನುಷ್ಟುಭಂ । ತಥಾ ಚಾನುಕ್ರಾಂತಂ । ಅಗ್ನೇಽಚ್ಛಾಗ್ನಿಸ್ತಾಪಸೋ ವೈಶ್ವದೇವಮಾನುಷ್ಟುಭಂ ಹೀತಿ ॥ ಗತೋ ವಿನಿಯೋಗಃ ॥**

ಅನುವಾದವು— **ಅಗ್ನೇ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ತಾಪಸಗುಣವಿಶಿಷ್ಟನಾದ ಅಗ್ನಿಯು ಋಷಿಯು ; ವಿಶ್ವೇದೇವತೆಗಳು ದೇವತೆಯು ; ಅನುಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಅಗ್ನೇಽಚ್ಛಾಗ್ನಿಸ್ತಾಪಸೋ ವೈಶ್ವದೇವಮಾನುಷ್ಟುಭಂ ಹಿ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

---

## ಸೂಕ್ತ ೧೪೧

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೪೧ ॥
ಅಷ್ಟಕ—೮ ॥ ಅಧ್ಯಾಯ—೭ ॥ ವರ್ಗ—೨೯ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಅಗ್ನಿಸ್ತಾಪಸಃ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—ಅನುಷ್ಟುಪ್ ॥

|| ಸಂಹಿತಾಪಾಠಃ ||

ಅಗ್ನೇ ಅಚ್ಛಾ ವದೇಹ ನಃ ಪ್ರತ್ಯಙ್ನಃ ಸುಮನಾ ಭವ |
ಪ್ರ ನೋ ಯಚ್ಛ ವಿಶಸ್ಪತೇ ಧನದಾ ಅಸಿ ನಸ್ತ್ವಂ || ೧ ||

|| ಪದಪಾಠಃ ||

ಅಗ್ನೇ | ಅಚ್ಛ | ವದ | ಇಹ | ನಃ | ಪ್ರತ್ಯಙ್ | ನಃ | ಸುऽಮನಾಃ | ಭವ |
ಪ್ರ | ನಃ | ಯಚ್ಛ | ವಿಶಃ | ಪತೇ | ಧನಽದಾಃ | ಅಸಿ | ನಃ | ತ್ವಂ || ೧ ||

|| ಸಾಯಣಭಾಷ್ಯಂ ||

ಹೇ ಅಗ್ನೇ ಇಹಾಸ್ಮಿನ್ದೇಶೇ ನೋಽಸ್ಮಾನಚ್ಛ ವದ | ಅಭಿಮುಖ್ಯೇನ ಪ್ರಿಯಂ ಬ್ರೂಹಿ | ತಥಾ ಪ್ರತ್ಯಙ್ನೋಽಸ್ಮಾನ್ಪ್ರತ್ಯಂಚನ್ ಸುಮನಾಃ ಶೋಭನಮನಸ್ಕೋ ಭವ | ಹೇ ವಿಶಸ್ಪತೇ ಯಜಮಾನಲಕ್ಷಣಾಯಾಃ ಪ್ರಜಾಯಾಃ ಪಾಲಯಿತಃ ನೋಽಸ್ಮಭ್ಯಂ ಪ್ರ ಯಚ್ಛ ಧನಾನಿ ಪ್ರದೇಹಿ ಯತಸ್ತ್ವಂ ನೋಽಸ್ಮಾಕಂ ಧನದಾ ಅಸಿ ಧನಾನಾಂ ದಾತಾ ಭವಸಿ ||

| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ಇಹ**— ಈ ಪ್ರದೇಶದಲ್ಲಿ | **ನಃ**--ನಮಗೆ | **ಅಚ್ಛ ವದ**—ಹಿತಕರವಾದ ವಚನವನ್ನು ಹೇಳು ಹಾಗೆಯೇ | **ಪ್ರತ್ಯಙ್ ನಃ**— ನಮ್ಮ ವಿಷಯದಲ್ಲಿ | **ಸುಮನಾಃ**—ಅನುಗ್ರಹ ಬುದ್ಧಿಯುಳ್ಳವನಾಗಿ | **ಭವ**-- ಆಗಿರು | **ವಿಶಸ್ಪತೇ**— ಯಜಮಾನ ಮೊದಲಾದ ಪ್ರಜೆಗಳ ಪಾಲಕನಾದ ಎಲೈ ಅಗ್ನಿಯೇ | **ನಃ**—ನಮಗೆ | **ಪ್ರಯಚ್ಛ**— ಧನಾದಿಗಳನ್ನು ಕೊಡು | **ತ್ವಂ**— ನೀನು | **ನಃ** –ನಮಗೆ | **ಧನದಾಃ ಅಸಿ**— ಧನದಾತೃವಾಗಿದ್ದೀಯೆ.

|| ಭಾವಾರ್ಥ ||

ಎಲೈ ಅಗ್ನಿಯೇ, ಈ ಪ್ರದೇಶದಲ್ಲಿದ್ದು ನಮ್ಮನ್ನು ಪ್ರೀತಿಯುಕ್ತವಾದ ಮಾತುಗಳಿಂದ ಸಂತೋಷಗೊಳಿಸು. ನಮ್ಮ ವಿಷಯದಲ್ಲಿ ಅನುಗ್ರಹ ಬುದ್ಧಿಯುಳ್ಳವನಾಗಿರು. ಎಲೈ ಪ್ರಜಾಪಾಲಕನೇ, ನಮಗೆ ಧನಾದಿಗಳನ್ನು ಕೊಡು. ಏಕೆಂದರೆ ನೀನು ನಮಗೆ ಧನದಾತೃವಾಗಿದ್ದೀಯೆ.

## English Translation.

Agni, speak out to us hero, be favourably disposed towards us; bestow upon us (riches), lord of men, for you are the giver of wealth to us.

|| ಸಂಹಿತಾಪಾಠಃ ||

ಪ್ರ ನೋ ಯಚ್ಛತ್ವರ್ಯಮಾ ಪ್ರ ಭಗಃ ಪ್ರ ಬೃಹಸ್ಪತಿಃ |

ಪ್ರ ದೇವಾಃ ಪ್ರೋತ ಸೂನೃತಾ ರಾಯೋ ದೇವೀ ದದಾತು ನಃ ॥ ೨ ॥

॥ ಪದಪಾಠಃ ॥

ಪ್ರ । ನಃ । ಯಚ್ಛತು । ಅರ್ಯಮಾ । ಪ್ರ । ಭಗಃ । ಪ್ರ । ಬೃಹಸ್ಪತಿಃ ।

ಪ್ರ । ದೇವಾಃ । ಪ್ರ । ಉತ । ಸೂನೃತಾ । ರಾಯಃ । ದೇವೀ । ದದಾತು । ನಃ ॥ ೨ ॥

॥ ಸಾಯಣಭಾಷ್ಯಂ ॥

ಅರ್ಯಮಾರೀಣಾಂ ನಿಯಂತಾರ್ಯೋಣಾಂ ನಿರ್ಮಾತಾ ವೈತತ್ಸಂಜ್ಞೋ ದೇವೋ ನೋಽಸ್ಮಭ್ಯಂ ಪ್ರ ಯಚ್ಛತು ಧನಂ । ತಥಾ ಭಗ ಏತತ್ಸಂಜ್ಞಕೋ ದೇವಶ್ಚ ಪ್ರಯಚ್ಛತು । ಬೃಹಸ್ಪತಿಶ್ಚ ಪ್ರಯಚ್ಛತು । ಸರ್ವೇ ದೇವಾಶ್ಚ ಪ್ರಯಚ್ಛಂತು । ಉತಾಪಿ ಚ ಸೂನೃತಾ ಪ್ರಿಯಸತ್ಯವಾಗ್ರೂಪಾ ದೇವೀ ದೇವನಶೀಲಾ ಸರಸ್ವತೀ ರಾಯೋ ಧನಾನಿ ನೋಽಸ್ಮಭ್ಯಂ ಪ್ರ ದದಾತು ॥ ಊಡಿದಮಿತ್ಯಾದಿನಾ ರಾಯೋ ವಿಭಕ್ತಿರುದಾತ್ತಾ ॥

॥ ಪ್ರತಿಪದಾರ್ಥ ॥

**ಅರ್ಯಮಾ**—ಅರ್ಯಮನೆಂಬ ದೇವನು । **ನಃ**—ನಮಗೆ । **ಪ್ರ ಯಚ್ಛತು**—ಧನವನ್ನು ಕೊಡಲಿ । **ಭಗಃ**—ಭಗನಾಮಕದೇವನೂ । **ಬೃಹಸ್ಪತಿಃ**—ಬೃಹಸ್ಪತಿಯೂ । **ದೇವಾಃ**—ಸಮಸ್ತದೇವತೆಗಳಿಗೂ । **ಉತ**—ಮತ್ತು । **ಸೂನೃತಾ**—ಪ್ರಿಯಸತ್ಯವಾಗ್ರೂಪಿಯಾದ । **ದೇವೀ**—ಸರಸ್ವತೀದೇವಿಯೂ । **ನಃ**—ನಮಗೆ । **ರಾಯಃ**—ಧನವನ್ನು । **ಪ್ರ ದದಾತು**—ಕೊಡಲಿ ।

॥ ಭಾವಾರ್ಥ ॥

ಅರ್ಯಮನೂ, ಭಗನೂ, ಬೃಹಸ್ಪತಿಯೂ, ಸಮಸ್ತದೇವತೆಗಳೂ ಮತ್ತು ಯಾವಾಗಲೂ ಪ್ರಿಯವಾದ ಮತ್ತು ಸತ್ಯವಾದ ಮಾತುಗಳನ್ನಾಡುವ ಸರಸ್ವತಿದೇವಿಯೂ ನಮಗೆ ಧನವನ್ನು ಕೊಡಲಿ.

English Translation

May Aryaman, may Bhaga, may Brihaspati, may the gods give liberally to us; may the truth-speaking goddess (Saraswati) bestow riches upon us.

॥ ಸಂಹಿತಾಪಾಠಃ ॥

ಸೋಮಂ ರಾಜಾನಮವಸೇಽಗ್ನಿಂ ಗೀರ್ಭಿರ್ಹವಾಮಹೇ ।

ಆದಿತ್ಯಾನ್ವಿಷ್ಣುಂ ಸೂರ್ಯಂ ಬ್ರಹ್ಮಾಣಂ ಚ ಬೃಹಸ್ಪತಿಂ ॥ ೩ ॥

॥ ಪದಪಾಠಃ ॥

ಸೋಮಂ । ರಾಜಾನಂ । ಅವಸೇ । ಅಗ್ನಿಂ । ಗೀಃऽಭಿ । ಹವಾಮಹೇ ।

ಆದಿತ್ಯಾನ್ । ವಿಷ್ಣುಂ । ಸೂರ್ಯಂ । ಬ್ರಹ್ಮಾಣಂ । ಚ । ಬೃಹಸ್ಪತಿಂ ॥ ೩ ॥

॥ ಸಾಯಣಭಾಷ್ಯಂ ॥

ರಾಜಾನಂ ರಾಜಮಾನಮೀಶ್ವರಂ ವಾ ಸೋಮಮಗ್ನಿಂ ಚ ಗೀರ್ಭಿಃ ಸ್ತುತಿಭಿರವಸೇ ರಕ್ಷಣಾರ್ಥಂ ಹವಾಮಹೇ । ಆಹ್ವಯಾಮಹೇ । ತಥಾದಿತ್ಯಾನದಿತೇಃ ಪುತ್ರಾನ್ ಮಿತ್ರಾದೀನ್ ವಿಷ್ಣುಂ ಸೂರ್ಯಂ ಬ್ರಹ್ಮಾಣಂ ಪ್ರಜಾಪತಿಂ ಬೃಹಸ್ಪತಿಂ ಚ ರಕ್ಷಣಾರ್ಥಮಾಹ್ವಯಾಮಹೇ ॥

॥ ಪ್ರತಿಪದಾರ್ಥ ॥

**ರಾಜಾನಂ**— ಪ್ರಕಾಶಮಾನನಾದ ಅಥವಾ ಸರ್ವರಿಗೂ ಪ್ರಭುವಾದ । **ಸೋಮಂ**—ಸೋಮನನ್ನೂ । **ಅಗ್ನಿಂ**—ಅಗ್ನಿಯನ್ನೂ । **ಗೀರ್ಭಿಃ** - ಸ್ತುತಿಗಳಿಂದ । **ಅವಸೇ**—ರಕ್ಷಣಾರ್ಥವಾಗಿ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ ಹಾಗೆಯೇ **ಆದಿತ್ಯಾನ್**—ಅದಿತಿಯ ಪುತ್ರರಾದ ಮಿತ್ರಾದಿದೇವತೆಗಳನ್ನೂ । **ವಿಷ್ಣುಂ**—ವಿಷ್ಣುವನ್ನೂ । **ಸೂರ್ಯಂ** -ಸೂರ್ಯನನ್ನೂ । **ಬ್ರಹ್ಮಾಣಂ**— ಪ್ರಜಾಪತಿಯನ್ನೂ । **ಬೃಹಸ್ಪತಿಂ ಚ**—ಬೃಹಸ್ಪತಿಯನ್ನೂ ಸಹ ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಅಥವಾ ಎಲ್ಲರಿಗೂ ಒಡೆಯನಾದ ಸೋಮನನ್ನೂ ಅಗ್ನಿಯನ್ನೂ ರಕ್ಷಣಾರ್ಥವಾಗಿ ಸ್ತುತಿಗಳಿಂದ ಪ್ರಾರ್ಥಿಸಿ ಕರೆಯುತ್ತೇವೆ. ಹಾಗೆಯೇ, ಅದಿತಿಯ ಪುತ್ರರಾದ ಮಿತ್ರಾದಿ ದೇವತೆಗಳನ್ನೂ, ವಿಷ್ಣು, ಸೂರ್ಯ, ಪ್ರಜಾಪತಿ, ಬೃಹಸ್ಪತಿ ಎಂಬ ದೇವತೆಗಳನ್ನೂ ಸಹ ನಮ್ಮ ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ.

## English Translation

We invoke for our protection the royal Soma, (we invoke) Agni with praises (we invoke) the Adityas, Vishnu, Surya, Brahma and Brihaspati.

॥ ಸಂಹಿತಾಪಾಠಃ ॥

ಇಂದ್ರವಾಯೂ ಬೃಹಸ್ಪತಿಂ ಸುಹವೇಹ ಹವಾಮಹೇ ।

ಯಥಾ ನಃ ಸರ್ವ ಇಜ್ಜನಃ ಸಂಗತ್ಯಾಂ ಸುಮನಾ ಅಸತ್ ॥ ೪ ॥

॥ ಪದಪಾಠಃ ॥

ಇಂದ್ರವಾಯೂ ಇತಿ । ಬೃಹಸ್ಪತಿಂ । ಸುಽಹವಾ । ಇಹ । ಹವಾಮಹೇ ।

ಯಥಾ । ನಃ । ಸರ್ವಃ । ಇತ್ । ಜನಃ । ಸಂಽಗತ್ಯಾಂ । ಸುಽಮನಾಃ । ಅಸತ್ ।' ೪ ॥

॥ ಸಾಯಣಭಾಷ್ಯಂ ॥

ಇಂದ್ರಶ್ಚ ವಾಯುಶ್ಚೇಂದ್ರವಾಯೂ ॥ ಉಭಯತ್ರ ವಾಯೋಃ ಪ್ರತಿಷೇಧೋ ವಕ್ತವ್ಯಃ । ಪಾ ೬-೩-೨೬-೧ । ಇತ್ಯಾನಙಃ ಪ್ರತಿಷೇಧಃ । ನೋತ್ತರಪದೇಽನುದಾತ್ತಾದಾವಿತಿ ದೇವತಾದ್ವಂದ್ವೇ ಚೇತಿ ಪ್ರಾಪ್ತಸ್ಯೋಭಯಪದಪ್ರಕೃತಿಸ್ವರಸ್ಯ ನಿಷೇಧಃ । ಸಮಾಸಸ್ಯೇತ್ಯಂತೋದಾತ್ತತ್ವಂ ॥ ಬೃಹಸ್ಪತಿಂ ಬೃಹತಾಂ ದೇವಾನಾಂ ಪಾಲಕಂ ॥ ತದ್ಬೃಹತೋಃ ಕರಪತ್ಯೋಃ । ಪಾ. ೬-೧-೫೭ । ಇತಿ ಸುಟ್-ತಲೋಪೌ । ವನಸ್ಪತ್ಯಾದಿತ್ವಾದುಭಯಪದಪ್ರಕೃತಿಸ್ವರತ್ವಂ ॥ ಸುಹವಾ ಸುಹವೌ ಸುಹ್ವಾನಾವಿಂದ್ರ-ವಾಯೂ ಬೃಹಸ್ಪತಿಂ ಚೇಹಾಸ್ಮಿನ್ಕರ್ಮಣಿ ಹವಾಮಹೇ । ಆಹ್ವಯಾಮಹೇ । ಯಥಾ ನೋಽಸ್ಮಾಕಂ ಸರ್ವ ಇತ್ ಸರ್ವ ಏವ ಜನಃ ಸಂಗತ್ಯಾಂ ಸಂಗಮನೇ ಧನಸ್ಯ ಪ್ರಾಪ್ತೌ ಸುಮನಾ ಅಸತ್ ಶೋಭನಮನಸ್ಕೋ ಭವೇತ್ ತಥಾಹ್ವಯಾಮಹ ಇತ್ಯರ್ಥಃ ॥ ಅಸ್ತೇರ್ಲೇಟ್ಯಡಾಗಮಃ ॥

॥ ಪ್ರತಿಪದಾರ್ಥ ॥

**ಯಥಾ**— ಯಾವ ರೀತಿಯಾಗಿ । **ಸರ್ವ ಇತ್**—ಸಮಸ್ತರಾದ । **ಜನಃ**—ಜನರೂ । **ಸಂಗತ್ಯಾಂ**—ನಮಗೆ ಧನಪ್ರಾಪ್ತಿಗಾಗಿ ಒಂದೆಡೆ ಸೇರಿ । **ನಃ**— ನಮ್ಮ ವಿಷಯದಲ್ಲಿ । **ಸುಮನಾಃ**—ಒಳ್ಳೆಯ ಬುದ್ಧಿಯುಳ್ಳವರಾಗಿ । **ಅಸತ್**—ಆಗುವರೋ ಆ ರೀತಿ । **ಇಹ**— ಈ ಕರ್ಮದಲ್ಲಿ । **ಸುಹವಾ**— ಉತ್ತಮ ಆಹ್ವಾನಕ್ಕೆ ಪಾತ್ರರಾದ । **ಇಂದ್ರವಾಯೂ**—ಇಂದ್ರ ಮತ್ತು ವಾಯು ಎಂಬ ದೇವತೆಗಳನ್ನೂ । **ಬೃಹಸ್ಪತಿಂ**—ಬೃಹಸ್ಪತಿಯನ್ನೂ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ

॥ ಭಾವಾರ್ಥ ॥

ನಮಗೆ ಧನಪ್ರಾಪ್ತಿಗಾಗಿ ಸಮಸ್ತ ಜನರೂ ಒಂದೆಡೆ ಸೇರಿ, ನಮ್ಮ ವಿಷಯದಲ್ಲಿ ಅನುಗ್ರಹ ಬುದ್ಧಿಯುಳ್ಳವರಾಗುವುದಕ್ಕಾಗಿ ಉತ್ತಮ ಆಹ್ವಾನಕ್ಕೆ ಅರ್ಹರಾದ ಇಂದ್ರ ಮತ್ತು ವಾಯುಗಳನ್ನೂ ಬೃಹಸ್ಪತಿಯನ್ನೂ ಈ ಕರ್ಮದಲ್ಲಿ ಪ್ರಾರ್ಥಿಸಿ ಕರೆಯುತ್ತೇವೆ.

## English Translation

We invoke the adorable Indra and Vayu and Brihaspati on this occasion, that all our race may be favourably inclined to us in the aquisition (of wealth).

॥ ಸಂಹಿತಾಪಾಠಃ ॥

ಅರ್ಯಮಣಂ ಬೃಹಸ್ಪತಿಮಿಂದ್ರಂ ದಾನಾಯ ಚೋದಯ ।
ವಾತಂ ವಿಷ್ಣುಂ ಸರಸ್ವತೀಂ ಸವಿತಾರಂ ಚ ವಾಜಿನಂ ॥ ೫ ॥

॥ ಪದಪಾಠಃ ॥

ಅರ್ಯಮಣಂ । ಬೃಹಸ್ಪತಿಂ । ಇಂದ್ರಂ । ದಾನಾಯ । ಚೋದಯ ।
ವಾತಂ । ವಿಷ್ಣುಂ । ಸರಸ್ವತೀಂ । ಸವಿತಾರಂ । ಚ । ವಾಜಿನಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಃ ಅರ್ಯಮಾದೀನ್ದೇವಾನ್ದಾನಾಯ ಧನಪ್ರದಾನಾಯ ಚೋದಯ । ಸ್ತುತ್ಯಾ ಪ್ರೇರಯ । ತಥಾ ವಾತಂ ವಾಯುಂ ವಿಷ್ಣುಂ ಸರಸ್ವತೀಂ ವಾಜಿನಮನ್ನವಂತಂ ಬಲವಂತಂ ವಾ ಸವಿತಾರಂ ಚ ದಾನಾಯ ಪ್ರೇರಯ ॥

॥ ಪ್ರತಿಪದಾರ್ಥ ॥

ಎಲೈ ಸ್ತೋತೃವೇ । **ಅರ್ಯಮಣಂ**—ಅರ್ಯಮನನ್ನೂ । **ಬೃಹಸ್ಪತಿಂ**—ಬೃಹಸ್ಪತಿಯನ್ನೂ । **ಇಂದ್ರಂ**—ಇಂದ್ರನನ್ನೂ । **ವಾತಂ**—ವಾಯುವನ್ನೂ । **ವಿಷ್ಣುಂ**—ವಿಷ್ಣುವನ್ನೂ । **ಸರಸ್ವತೀಂ**—ಸರಸ್ವತೀದೇವಿಯನ್ನೂ । **ವಾಜಿನಂ**—ಶಕ್ತಿಯುತನಾದ ಅಥವಾ ಅನ್ನ ಪ್ರದನಾದ । **ಸವಿತಾರಂ ಚ**—ಸವಿತೃದೇವನನ್ನೂ ಸಹ । **ದಾನಾಯ**—ನಮಗೆ ಧನಾದಿಗಳನ್ನು ಕೊಡುವಂತೆ । **ಚೋದಯ**—ಸ್ತುತಿಗಳಿಂದ ಪ್ರೇರಿಸು.

॥ ಭಾವಾರ್ಥ ॥

ಎಲೈ ಸ್ತೋತೃವೇ, ನಮಗೆ ಧನಾದಿಗಳನ್ನು ಕೊಡುವುದಕ್ಕಾಗಿ, ಅರ್ಯಮಾ, ಬೃಹಸ್ಪತಿ, ಇಂದ್ರ, ವಾಯು, ವಿಷ್ಣು, ಸರಸ್ವತೀ, ಅನ್ನಪ್ರದನಾದ ಸವಿತೃ ಎಂಬ ಈ ದೇವತೆಗಳನ್ನು ಸ್ತುತಿಗಳಿಂದ ಪ್ರೇರಿಸು.

English Translation.

Stimulate to liberality Aryaman Brihaspathi, Indra, Vata, Vishnu, Saraswati, and the food-bestowing Savitri.

॥ ಸಂಹಿತಾಪಾಠಃ ॥

ತ್ವಂ ನೋ ಅಗ್ನೇ ಅಗ್ನಿಭಿರ್ಬ್ರಹ್ಮ ಯಜ್ಞಂ ಚ ವರ್ಧಯ ।

ತ್ವಂ ನೋ ದೇವತಾತಯೇ ರಾಯೋ ದಾನಾಯ ಚೋದಯ ॥ ೬ ॥

॥ ಪದಪಾಠಃ ॥

ತ್ವಂ । ನಃ । ಅಗ್ನೇ । ಅಗ್ನಿಽಭಿಃ । ಬ್ರಹ್ಮ । ಯಜ್ಞಂ । ಚ । ವರ್ಧಯ ।

ತ್ವಂ । ನಃ । ದೇವಽತಾತಯೇ । ರಾಯಃ । ದಾನಾಯ । ಚೋದಯ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಮಗ್ನಿಭಿಸ್ತ್ವದ್ವಿಭೂತಿಭೂತೈರನ್ಯೈರಗ್ನಿಭಿಃ ಸಾರ್ಧಂ ನೋಽಸ್ಮಾಕಂ ಬ್ರಹ್ಮ ಸ್ತೋತ್ರಂ ಯಜ್ಞಂ ಚ ವರ್ಧಯ । ತಥಾ ತ್ವಂ ನೋಽಸ್ಮಾಕಂ ದೇವತಾತಯೇ । ಯಜ್ಞನಾಮೈತತ್ । ಯಾಗಾರ್ಥಂ ರಾಯೋ ಧನಸ್ಯ ದಾನಾಯ ಪ್ರದಾನಾಯ ಚೋದಯ । ದಾತೄನ್ಪ್ರೇರಯ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಅಗ್ನಿಭಿಃ**—ನಿನ್ನ ವಿಭೂತಿವಿಶೇಷಗಳಾದ ಇತರ ಅಗ್ನಿಗಳಿಂದ (ಅಗ್ನಿಯ ರೂಪಾಂತರಗಳಿಂದ) ಸಹಿತನಾಗಿ । **ನಃ**—ನಮ್ಮ । **ಬ್ರಹ್ಮ**—ಸ್ತೋತ್ರವನ್ನೂ । **ಯಜ್ಞಂ ಚ**—ಯಜ್ಞವನ್ನೂ । **ವರ್ಧಯ**—ವೃದ್ಧಿಪಡಿಸು (ಸಾಂಗವಾಗಿ ನೆರವೇರುವಂತೆ ಮಾಡು) । **ತ್ವಂ**—ನೀನು । **ನಃ**—ನಮಗೆ । **ದೇವತಾತಯೇ**—ಯಜ್ಞಾರ್ಥವಾಗಿ । **ರಾಯಃ**—ಧನದ । **ದಾನಾಯ**—ದಾನಕ್ಕಾಗಿ । **ಚೋದಯ**—ದಾತೃಜನರನ್ನು ಪ್ರೇರಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ನಿನ್ನ ವಿಭೂತಿವಿಶೇಷಗಳಾದ ಎಂದರೆ ನಿನ್ನ ರೂಪಾಂತರಗಳಾದ (ವೈದ್ಯುತಾಗ್ನಿ, ವೈಶ್ವಾನರಾಗ್ನಿ, ಪಾವಕಾಗ್ನಿ ಇತ್ಯಾದಿ) ಇತರ ಅಗ್ನಿಗಳಿಂದ ಸಹಿತನಾಗಿ ನಾವು ಮಾಡುವ ಸ್ತೋತ್ರವನ್ನೂ ಯಜ್ಞವನ್ನು ಮುಂದುವರೆಯುವಂತೆ ಮಾಡಿ ಸಮಾಪ್ತಿಗೊಳಿಸು. ನಾವು ಮಾಡುವ ಯಜ್ಞಕ್ಕೆ ಧನಸಹಾಯವನ್ನು ಮಾಡುವಂತೆ ದಾತೃಜನರನ್ನು ಪ್ರೇರಿಸು.

## English Translation.

Augment our prayer and sacrifice, Agni, with your fires; do you at our sacrifice stimulate (the gods) to give us wealth.

## ನೂರ ನಲವತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಯಮಗ್ನ ಇತ್ಯಷ್ಟರ್ಚಂ ಚತುರ್ದಶಂ ಸೂಕ್ತಮಾಗ್ನೇಯಂ । ಶಾರ್ಙ್ಗ ಇತಿ ಪಕ್ಷಿವಿಶೇಷಸ್ಯಾಖ್ಯಾ । ಶಾರ್ಙ್ಗಜಾತಯೋ ಜರಿತೃಪ್ರಭೃತಯಶ್ಚತ್ವಾರಶ್ಚತುರ್ಣಾಂ ದ್ವ್ಯೃಚಾನಾಂ ಕ್ರಮೇಣ

**ದ್ರಷ್ಟಾರಃ । ಆದಿತೋ ದ್ವೇ ಜಗತ್ಯೌ । ಅಥ ಚತಸ್ರಸ್ತ್ರಿಷ್ಟುಭಃ । ತತೋ ದ್ವೇ ಅನುಷ್ಟುಭೌ । ತಥಾ ಚಾನುಕ್ರಾಂತಂ । ಅಯಮಷ್ಟೌ ದ್ವ್ಯೃಚಾಃ ಶಾರ್ಙ್ಗಾ ಜರಿತಾ ದ್ರೋಣಃ ಸಾರಿಸೃಕ್ವಃ ಸ್ತಂಬಮಿತ್ರಶ್ಚಾಗ್ನೇಯಮಾದ್ಯೇ ಜಗತ್ಯೌ ಚತಸ್ರಶ್ಚ ತ್ರಿಷ್ಟುಭ ಇತಿ ॥ ಗತೋ ವಿನಿಯೋಗಃ ॥**

ಅನುವಾದವು—**ಅಯಮಗ್ನೇ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಶಾರ್ಙ್ಗಜಾತಿಗೆ ಸೇರಿದ ಜರಿತೃ ಮೊದಲಾದ ನಾಲ್ವರ ಈ ಸೂಕ್ತದ ಎರಡೆರಡು ಋಕ್ಕುಗಳಿಗೆ ಒಬ್ಬೊಬ್ಬರಂತೆ ಕ್ರಮವಾಗಿ ಋಷಿಗಳು. **ಶಾರ್ಙ್ಗ** ಎಂದರೆ ಒಂದು ಪಕ್ಷಿಯ ಹೆಸರು; ಅಗ್ನಿಯು ದೇವತೆಯು, ಈ ಸೂಕ್ತದ ಮೊದಲಿನ ಎರಡು ಋಕ್ಕುಗಳು ಜಗತೀಛಂದಸ್ಕವು; ಅನಂತರು ಮುಂದಿನ ನಾಲ್ಕು ಋಕ್ಕುಗಳು (೩-೬) ತ್ರಿಷ್ಟುಪ್‌ಛಂದಸ್ಕವು. ಅನಂತರ ಮುಂದಿನ ಎರಡು ಋಕ್ಕುಗಳು (೭-೮) ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಅಯಮಷ್ಟಾದ್ವ್ಯೃಚಾಃ ಶಾರ್ಙ್ಗಾ ಜರಿತಾ ದ್ರೋಣಃ ಸಾರಿಸೃಕ್ವಃ ಸ್ತಂಬಮಿತ್ರಶ್ಚಾಗ್ನೇಯಮಾದ್ಯೇ ಜಗತ್ಯೌ ಚತಸ್ರಶ್ಚ ತ್ರಿಷ್ಟುಭಃ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೪೨

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೪೨ ॥
ಅಷ್ಟಕ—೮ ॥ ಅಧ್ಯಾಯ—೭ ॥ ವರ್ಗ—೩೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೮ ॥
॥ ಋಷಿಃ—ಶಾರ್ಙ್ಗಾಃ ॥೧-೨, ಜರಿತಾ । ೩-೪, ದ್ರೋಣಃ । ೫-೬, ಸಾರಿಸೃಕ್ವಃ । ೭-೮, ಸ್ತಂಬಮಿತ್ರಃ ॥
॥ ದೇವತಾ—ಅಗ್ನಿಃ ॥
॥ ಛಂದಃ—೧-೨, ಜಗತೀ । ೩-೬ ತ್ರಿಷ್ಟುಪ್ । ೭-೮, ಅನುಷ್ಟುಪ್ ॥

॥ ಸಂಹಿತಾಪಾಠಃ ॥

**ಅಯಮಗ್ನೇ ಜರಿತಾ ತ್ವೇ ಅಭೂದಪಿ ಸಹಸಃ ಸೂನೋ ನಹ್ಯ೧ನ್ಯದಸ್ತ್ಯಾಪ್ಯಂ ।**
**ಭದ್ರಂ ಹಿ ಶರ್ಮ ತ್ರಿವರೂಥಮಸ್ತಿ ತ ಆರೇ ಹಿಂಸಾನಾಮಪ ದಿದ್ಯುಮಾ ಕೃಧಿ ॥೧॥**

॥ ಪದಪಾಠಃ ॥

**ಅಯಂ । ಅಗ್ನೇ । ಜರಿತಾ । ತ್ವೇ ಇತಿ । ಅಭೂತ್ । ಅಪಿ । ಸಹಸಃ । ಸೂನೋ ಇತಿ । ನಹಿ । ಅನ್ಯತ್ । ಅಸ್ತಿ । ಅಪ್ಯಂ ।**

ಭದ್ರಂ । ಹಿ । ಶರ್ಮ। ತ್ರಿವರೂಥಂ । ಅಸ್ತಿ। ತೇ । ಆರೇ । ಹಿಂಸಾನಾಂ। ಅಪ । ದಿದ್ಯುಂ । ಆ । ಕೃಧಿ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವೇ ತ್ವಯಿ ॥ ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇಆದೇಶಃ ॥ ಅಯಮೃಷಿರ್ಜರಿತಾ ಸ್ತೋತಾಭೂದಪಿ । ಅಪಿಶಬ್ದಃ ಸಂಭಾವನಾಯಾಂ । ಇದಾನೀಂ ಸ್ತೋತೃತ್ವೇನ ಸಂಭಾವ್ಯತೇ । ತತ್ರ ಕಾರಣಮಾಹ । ಹೇ ಸಹಸಃ ಸೂನೋ ಬಲಸ್ಯ ಪುತ್ರ ತ್ವತ್ತೋಽನ್ಯದಾಪ್ಯಮಾಪ್ತವ್ಯಂ ನ ಹ್ಯಸ್ತಿ । ನ ಖಲು ವಿದ್ಯತೇ । ಅತಃ ಪ್ರಾಪ್ತವ್ಯಂ ತ್ವಾಮೇವ ಸ್ತುತ್ವಾ ಪ್ರಾಪ್ನೋಮಿ । ಭದ್ರಂ ಕಲ್ಯಾಣಂ ತ್ರಿವರೂಥಂ ದುಃಖತ್ರಯಸ್ಯ ನಿವಾರಕಂ ಶರ್ಮ ಸುಖಂ ಹಿ ಯಸ್ಮಾತ್ತೇ ತವಾಸ್ತಿ ವಿದ್ಯತೇ । ಅಥವಾ ಶೋಭನಂ ತ್ರಿವರೂಥಂ ತ್ರಿಭೂಮಿಕಂ ಗೃಹಂ ತವಾಸ್ತಿ ಹಿ । ಅತೋ ಹಿಂಸಾನಾಂ ಹಿಂಸ್ಯಮಾನಾನಾಮಸ್ಮಾಕಮಾರೇ ದೂರೇ ದಿದ್ಯುಂ ದೀಪ್ಯಮಾನಾಮಾತ್ಮೀಯಾಂ ಜ್ವಾಲಾಮಪಾ ಕೃಧಿ । ಅಪಾಕುರು । ನಿವಾರಯ ॥ ಕರೋತೇಶ್ಛಾಂದಸೋ ವಿಕರಣಸ್ಯ ಲುಕ್ । ಶ್ರುಶೃಣುಪೃಕೃವೃಭ್ಯ ಇತಿ ಹೇರ್ಧಿಭಾವಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವೇ**—ನಿನ್ನಲ್ಲಿ (ನಿನ್ನನ್ನೇ) । **ಅಯಂ**— ಈ ಋಷಿಯು (ಜರಿತೃವೆಂಬ ಈ ಋಷಿಯು) । **ಜರಿತಾ**—ಸ್ತೋತ್ರಮಾಡುವವನು । **ಅಭೂದಪಿ**—ಆಗಿರುತ್ತಾನೆ । **ಸಹಸಃ**—ಬಲದ । **ಸೂನೋ**—ಪುತ್ರನಾದ ಎಲೈ ಅಗ್ನಿಯೇ । **ಅನ್ಯತ್**—ನಿನ್ನನ್ನು ಬಿಟ್ಟು ಬೇರೆ । **ಆಪ್ಯಂ**—ಹೊಂದಬೇಕಾದ ವಸ್ತುವು । **ನಹಿ ಅಸ್ತಿ**—ಇಲ್ಲವೇ ಇಲ್ಲ । **ಭದ್ರಂ**—ಕಲ್ಯಾಣಾತ್ಮಕವಾದುದೂ । **ತ್ರಿವರೂಥಂ**—ಮೂರುವಿಧ ದುಃಖಗಳನ್ನು ಹೋಗಲಾಡಿಸುವುದೂ ಆದ । **ಶರ್ಮ**—ಸುಖವು । **ಹಿ** ಯಾವಕಾರಣದಿಂದ । **ತೇ**—ನಿನ್ನ ಬಳಿ । **ಅಸ್ತಿ**—ಇರುವುದೋ ಆದ್ದರಿಂದ । **ಹಿಂಸಾನಾಂ**—ನಮಗೆ ಹಿಂಸಕರವಾದುದೂ । **ಆರೇ**—ದೂರದಲ್ಲಿ । **ದಿದ್ಯುಂ**—ಪ್ರಕಾಶಮಾನವಾಗಿ ಬೆಳಗುತ್ತಿರುವುದೂ ಆದ ನಿನ್ನ ಜ್ವಾಲೆಯನ್ನು । **ಅಪ ಆ ಕೃಧಿ**—ನಿವಾರಣೆ ಮಾಡು ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಈ ಜರಿತೃವೆಂಬ ಮಂತ್ರದ್ರಷ್ಟೃವಾದ ಋಷಿಯು ನಿನ್ನನ್ನೇ ಸ್ತೋತ್ರಮಾಡುತ್ತಾನೆ ಎಲೈ ಶಕ್ತಿಪುತ್ರನೇ, ನಿನ್ನನ್ನು ಬಿಟ್ಟರೆ ನಾವು ಪಡೆಯಬೇಕಾದ ಬೇರೆ ವಸ್ತುವೇ ಇಲ್ಲ ಕಲ್ಯಾಣಾತ್ಮಕವಾದುದೂ, ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ಮೂರುವಿಧ ದುಃಖಗಳನ್ನು ಪರಿಹರಿಸುವುದೂ ಆದ ಸುಖವು ನಿನ್ನ ಬಳಿ ಇರುವುದು. ಆದ್ದರಿಂದ ದೂರದಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಿರುವುದೂ ನಮಗೆ ಹಿಂಸಕರವಾದುದೂ ಆದ ನಿನ್ನ ತೀಕ್ಷ್ಣಜ್ವಾಲೆಯನ್ನು ನಮ್ಮ ಸಮೀಪಕ್ಕೆ ಬರದಂತೆ ನಿವಾರಣೆಮಾಡು.

## English Translation.

This person, Agni, was your praiser, for there is nothing else attainable, O son of strength; holy is the happiness derived from you, a triple

defence ; remove far from us, who are susceptible of harm, your scorching flame.

‖ ವಿಶೇಷವಿಷಯಗಳು ‖

ಈ ಸೂಕ್ತದ ಮೊದಲ ಆರು ಋಕ್ಕುಗಳಲ್ಲಿ ದಾವಾಗ್ನಿಯನ್ನು ಹೃದಯಂಗಮವಾಗಿ ವರ್ಣಿಸಲಾಗಿದೆ. ಕೊನೆಯ ಎರಡು ಋಕ್ಕುಗಳಲ್ಲಿ ದಾವಾಗ್ನಿಯಿಂದ ತಮಗೂ ತಮ್ಮ ಗೃಹಗಳಿಗೂ ಯಾವ ಬಾಧೆಯೂ ಉಂಟಾಗ ದಂತೆಯೂ ತಮ್ಮ ಗೃಹದ ಸುತ್ತಮುತ್ತಲ ಪ್ರದೇಶಗಳು ಜಲತೃಣಕಾಷ್ಠಸಮೃದ್ಧಿಯಾಗಿ ಅಗ್ನಿಭಯದಿಂದ ಸುರಕ್ಷಿತ ವಾಗಿರಬೇಕೆಂದೂ ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

‖ ಸಂಹಿತಾಪಾಠಃ ‖

ಪ್ರವತ್ತೇ ಅಗ್ನೇ ಜನಿಮಾ ಪಿತೂಯತಃ ಸಾಚೀವ ವಿಶ್ವಾ ಭುವನಾ ನ್ಯೃಂಜಸೇ ।
ಪ್ರ ಸಪ್ತಯಃ ಪ್ರ ಸನಿಷಂತ ನೋ ಧಿಯಃ ಪುರಶ್ಚರಂತಿ ಪಶುಪಾ ಇವ ತ್ಮನಾ ‖ ೨ ‖

‖ ಪದಪಾಠಃ ‖

ಪ್ರಽವತ್ । ತೇ । ಅಗ್ನೇ । ಜನಿಮ । ಪಿತುಽಯತಃ । ಸಾಚೀಽಇವ । ವಿಶ್ವಾ । ಭುವನಾ । ನಿ । ಋಂಜಸೇ ।
ಪ್ರ । ಸಪ್ತಯಃ । ಪ್ರ । ಸನಿಷಂತ । ನಃ । ಧಿಯಃ । ಪುರಃ । ಚರಂತಿ । ಪಶುಪಾಃಽಇವ । ತ್ಮನಾ ‖ ೨ ‖

‖ ಸಾಯಣಭಾಷ್ಯಂ ‖

ಹೇ ಅಗ್ನೇ ಪಿತೂಯತಃ ಪಿತುಮನ್ನಂ ಭಕ್ಷ್ಯಮಿಚ್ಛತಸ್ತೇ ತವ ಜನಿಮ ಜನ್ಮ ಪ್ರಾದುರ್ಭಾವಂ ಪ್ರವತ್ಪ್ರಕೃಷ್ಟಮುತ್ಕೃಷ್ಟಂ ಭವತಿ ‖ ಉಪಸರ್ಗಾಚ್ಛಂದಸಿ ಧಾತ್ವರ್ಥ ಇತಿ ವತಿಃ ‖ ಸ ತ್ವಂ ಸಾಚೀವ ಸಚಿವ ಇವ ವಿಶ್ವಾ ವಿಶ್ವಾನಿ ವ್ಯಾಪ್ತಾನಿ ಭುವನಾನಿ ಭೂತಜಾತಾನಿ ನ್ಯೃಂಜಸೇ । ಪ್ರಸಾಧಯಸಿ । ವಶೀಕ-ರೋಷೀತ್ಯರ್ಥಃ । ಸಪ್ತಯಃ ಸರ್ಪಣಶೀಲಾ ನೋಽಸ್ಮಾಕಂ ಧಿಯಃ ಸ್ತುತಯಸ್ತ್ವಾದೃಶಂ ತ್ವಾಂ ಪ್ರ ಸನಿಷಂತ । ಪ್ರಕರ್ಷೇಣ ಸಂಭಜಂತೇ । ಏಕಃ ಪ್ರಶಬ್ದಃ ಪೂರಕಃ । ಯದ್ವಾ । ಸಪ್ತಯಃ । ಲುಪ್ತೋಪ-ಮಮೇತತ್ । ಸರ್ಪಣಶೀಲಾ ಅಶ್ವಾ ಯಥಾಜಂ ಪ್ರಕರ್ಷೇಣ ಸಂಭಜಂತೇ ತಥಾಸ್ಮದೀಯಾ ಧಿಯ ಇತ್ಯರ್ಥಃ । ಅನಂತರಂ ಪುರಸ್ತ್ವವ ಪುರಸ್ತಾತ್ ತ್ಮನಾತ್ಮನಾ ಸ್ವಯಮೇವ ಚರಂತಿ । ವ್ಯಾಪ್ಯ ವರ್ತಂತೇ । ಪಶುಪಾ ಇವ । ಯಥಾ ಪಶೂನಾಂ ಪಾಲಕಾ ಗೋಪಾಲಾಃ ಪಾಲಯಿತವ್ಯಾನಾಂ ಪುರಸ್ತಾತ್ಸಂಚರಂತಿ ತದ್ವತ್ ‖

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ | **ಪಿತೋಯತಃ**—ಹವಿರ್ಲಕ್ಷಣರೂಪವಾದ ಅನ್ನವನ್ನು ಇಚ್ಛಿಸುವ | **ತೇ**—ನಿನ್ನ | **ಜನಿಮ**—ಉತ್ಪತ್ತಿಯು (ಪ್ರಾದುರ್ಭಾವವು) | **ಪ್ರವತ್**—ಉತ್ಕೃಷ್ಟವಾಗಿದೆ (ಅಂತಹ ನೀನು) | **ಸಾಚೀವ**—ಸಚಿವನಂತೆ | **ವಿಶ್ವಾ**—ಸಮಸ್ತ ಪ್ರಾಣಿವರ್ಗಗಳನ್ನು | **ನ್ಯೃಂಜಸೇ**—ವಶವಮಾಡಿಕೊಳ್ಳುತ್ತೀಯೆ | **ಸಪ್ತ್ಯಃ**—ನಿನ್ನಸಮೀಪಕ್ಕೆ ಹೋಗುವ | **ನಃ**—ನಮ್ಮ | **ಧಿಯಃ**—ಸ್ತುತಿಗಳು | **ಪ್ರ ಸನಿಷಂತ**—ನಿನ್ನ ಬಳಿಗೆ ಬಂದು ಸೇರುತ್ತವೆ [ಅಥವಾ | **ಸಪ್ತ್ಯಯಃ**—ಮುನ್ನುಗ್ಗಲು ಹಾತೊರೆಯುತ್ತಿರುವ ಅಶ್ವಗಳು | **ಪ್ರ ಸನಿಷಂತ**—ಯುದ್ಧ ಭೂಮಿಗೆ ಹೋಗಿ ಸೇರುವಂತೆ ನಮ್ಮ ಸ್ತುತಿಗಳು ನಿನ್ನನ್ನು ಸೇರುತ್ತವೆ] ಆ ಸ್ತುತಿಗಳು | **ಪುರಃ**—ತನ್ನ ಮಂದೆಯ ಮುಂಭಾಗದಲ್ಲಿ | **ಪಶುಪಾ ಇವ**—ಗೋಪಾಲಕನು ಹೋಗುವಂತೆ | **ತ್ಮನಾ**—ತಾವಾಗಿಯೇ | **ಚರಂತಿ**—ಅಗ್ನಿಯ ಬಳಿಗೆ ಹೋಗಿ ಸೇರುತ್ತವೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ಹವಿರ್ಲಕ್ಷಣರೂಪವಾದ ಅನ್ನವನ್ನು ಇಚ್ಛಿಸುವ ನಿನ್ನ ಉತ್ಪತ್ತಿಯು ಉತ್ಕೃಷ್ಟವಾಗಿದೆ ನೀನು ಸಮಸ್ತಪ್ರಾಣಿಗಳನ್ನು ಸಚಿವನಂತೆ (ಮಂತ್ರಿ) ನಿನ್ನ ವಶಮಾಡಿ ಕೊಳ್ಳುತ್ತೀಯೆ. ಯುದ್ಧಭೂಮಿಗೆ ಮುನ್ನುಗ್ಗಲು ಹಾತೊರೆಯುತ್ತಿರುವ ಅಶ್ವಗಳಂತೆ ನಮ್ಮ ಸ್ತುತಿಗಳು ನಿನ್ನನ್ನು ಸೇರುತ್ತವೆ ಮತ್ತು ಗೋಪಾಲಕನು ತನ್ನ ಮಂದೆಯ ಮುಂದೆ ಹೋಗುವಂತೆ ನಮ್ಮ ಸ್ತುತಿಗಳು ತಾವಾಗಿಯೇ ನಿನ್ನ ಬಳಿಗೆ ಬಂದು ಸೇರುತ್ತವೆ.

## English Translation.

Exalted is the birth of you, Agni, who are desirous of (sacrificial) food; you preside like a councillor over all created beings, our praises flowing smoothly proceed to you, as herdsmen of their own will (go slowly) before (their flocks).

॥ ಸಂಹಿತಾಪಾಠಃ ॥

ಉತ ವಾ ಉ ಪರಿ ವೃಣಕ್ಷಿ ಬಪ್ಸದ್ಬಹೋರಗ್ನ ಉಲಪಸ್ಯ ಸ್ವಧಾವಃ ।
ಉತ ಖಿಲ್ಯಾ ಉರ್ವರಾಣಾಂ ಭವಂತಿ ಮಾ ತೇ ಹೇತಿಂ ತವಿಷೀಂ ಚುಕ್ರುಧಾಮ ॥ ೩ ॥

॥ ಪದಪಾಠಃ ॥

ಉತ । ವೈ । ಊಂ ಇತಿ । ಪರಿ । ವೃಣಕ್ಷಿ । ಬಪ್ಸತ್ । ಬಹೋಃ । ಅಗ್ನೇ । ಉಲಪಸ್ಯ । ಸ್ವಧಾऽವಃ ।
ಉತ । ಖಿಲ್ಯಾಃ । ಉರ್ವರಾಣಾಂ । ಭವಂತಿ । ಮಾ । ತೇ । ಹೇತಿಂ । ತವಿಷೀಂ । ಚುಕ್ರುಧಾಮ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸ್ವಧಾವೋ ದೀಪ್ತಿಮನ್ನಗ್ನೇ ಬಪ್ಸದ್ದಹನ್ ॥ ಭಸ ಭರ್ತ್ಸನದೀಪ್ತ್ಯೋಃ । ಜುಹೋತ್ಯಾದಿಕಃ । ಶತರಿ ಘಸಿಭಸೋರ್ಹಲಿ ಚ । ಪಾ. ೬-೪-೧೦೦ । ಇತ್ಯುಪಧಾಲೋಪಃ । ನಾಭ್ಯಸ್ತಾಚ್ಛತುರಿತಿ ನುಮಃ ಪ್ರತಿಷೇಧಃ ॥ ಬಹೋರ್ಬಹುಲಸ್ಯೋಲಪಸ್ಯ ತೃಣಜಾತಸ್ಯ ॥ ಕರ್ಮಣಿ ಷಷ್ಠೀ ॥ ಸರ್ವಂ ವನಮುತ ವಾ ಅಪಿ ಖಲು ಪರಿ ವೃಣಕ್ಷಿ । ಪರಿವರ್ಜಯಸಿ । ವಿನಾಶಯಸಿ । ಉ ಇತಿ ಪೂರಕಃ । ಉತಾಪಿ ಚೋರ್ವರಾಣಾಂ । ಸಸ್ಯಾಢ್ಯಾ ಭೂಮಯ ಉರ್ವರಾಃ । ತಾಸಾಂ ಸಂಬಂಧಿನಃ ಪ್ರದೇಶಾಃ ಖಿಲ್ಯಾಃ ಖಿಲಾಃ ಪ್ರಾಣಿಭಿರ್ಗಂತುಂ ಯೋಗ್ಯಾ ಭವಂತಿ । ತ್ವಯಾ ದಗ್ಧಾ ಇತಿ ಶೇಷಃ । ತವಿಷೀಂ ಮಹತೀಂ ತೇ ತವ ಹೇತಿಂ ಹನನಹೇತುಭೂತಾಂ ಜ್ವಾಲಾಂ ಮಾ ಚುಕ್ರುಧಾಮ । ಮಾ ಕ್ರೋಧಯಾಮ । ಅಪಿ ತು ಸ್ತುತಿಭಿಃ ಪ್ರಸಾಧಯಾಮ ॥ ಊತಿಯೂತೀತ್ಯಾದಿನಾ ಹಂತೇಃ ಕ್ತಿನಿ ಹೇತಿರಿತ್ಯಂತೋದಾತ್ತೋ ನಿಪಾತ್ಯತೇ । ಚುಕ್ರುಧಾಮೇತಿ ಕ್ರುಧೇರ್ಣ್ಯಂತಾಲ್ಲುಙಿ ಚಙಿ ರೂಪಂ ॥

॥ ಪ್ರತಿಪದಾರ್ಥ ॥

**ಸ್ವಧಾವಃ**—ಪ್ರಕಾಶಮಾನವಾದ । **ಅಗ್ನೇ**—ಎಲೈ ಅಗ್ನಿಯೇ, ನೀನು । **ಬಹೋಃ**—ಬಹಳವಾದ । **ಉಲಪಸ್ಯ**—ತೃಣಸಮೂಹವನ್ನು (ಹುಲ್ಲನ್ನು) । **ಉತ ವೈ**—ಎಲ್ಲವನ್ನೂ । **ಬಪ್ಸತ್**—ಭಕ್ಷಿಸುತ್ತಾ ಎಂದರೆ ದಹಿಸುತ್ತಾ । **ಪರಿ ವೃಣಕ್ಷಿ**—ನಾಶಮಾಡುತ್ತೀಯೆ । **ಉ**—ನಿಶ್ಚಯವು । **ಉತ**—ಮತ್ತು । **ಉರ್ವರಾಣಾಂ**—ಸಸ್ಯಾದಿಗಳಿಂದ ನಿಬಿಡವಾದ ಪ್ರದೇಶಗಳು । **ಖಿಲ್ಯಾಃ**—(ನಿನ್ನಿಂದ ದಹಿಸಲ್ಪಟ್ಟು) ಬಯಲು ಪ್ರದೇಶಗಳಾಗಿ । **ಭವಂತಿ**—ಆಗುತ್ತವೆ (ಎಲೈ ಅಗ್ನಿಯೇ) । **ತೇ**—ನಿನ್ನ । **ತವಿಷೀಂ**—ದೊಡ್ಡದಾದ । **ಹೇತಿಂ**—ನಾಶಹೇತುವಾದ ಜ್ವಾಲೆಯನ್ನು । **ಮಾ ಚುಕ್ರುಧಾಮ**—ನಾವು ಕೋಪಗೊಳ್ಳುವಂತೆ ಮಾಡುವುದಿಲ್ಲ ಎಂದರೆ ಸ್ತುತಿಗಳಿಂದ ಶಾಂತಗೊಳಿಸುತ್ತೇವೆ.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಅಗ್ನಿಯೇ, ನೀನು ಬಹಳವಾದ ತೃಣಸಮೂಹವನ್ನು ಸುಟ್ಟು ನಾಶಮಾಡುತ್ತೀಯೆ. ಗಿಡಮರಗಳಿಂದ ದಟ್ಟವಾಗಿ ಬೆಳೆದಿರುವ ಭೂಪ್ರದೇಶಗಳು ನಿನ್ನಿಂದ ದಹಿಸಲ್ಪಟ್ಟನಂತರ ಅವು ಪ್ರಾಣಿಗಳು ಸಂಚರಿಸಲು ಯೋಗ್ಯವಾದ ಬಯಲುಪ್ರದೇಶಗಳಾಗುತ್ತವೆ ಎಲೈ ಅಗ್ನಿಯೇ, ಸಮಸ್ತವನ್ನೂ ನಾಶಮಾಡಲು ಸಮರ್ಥವಾದ ನಿನ್ನ ಜ್ವಾಲೆಯನ್ನು ನಾವು ಕೋಪಗೊಳ್ಳುವಂತೆ ಮಾಡುವುದಿಲ್ಲ.

## English Translation

Blazing Agni, you destroy many a shrub, as you burn; and (the sites) of the tilled fields are laid waste, many we never rouse to anger your terrible flame.

॥ ಸಂಹಿತಾಪಾಠಃ ॥

ಯದುದ್ವತೋ ನಿವತೋ ಯಾಸಿ ಬಪ್ಸತ್ಪೃಥಗೇಷಿ ಪ್ರಗರ್ಧಿನೀವ ಸೇನಾ ।
ಯದಾ ತೇ ವಾತೋ ಅನುವಾತಿ ಶೋಚಿರ್ವಪ್ತೇವ ಶ್ಮಶ್ರು ವಪಸಿ ಪ್ರ ಭೂಮ ॥ ೪ ॥

॥ ಪದಪಾಠಃ ॥

ಯತ್ । ಉತ್ಽವತಃ । ನಿಽವತಃ । ಯಾಸಿ । ಬಪ್ಸತ್ । ಪೃಥಕ್ । ಏಷಿ । ಪ್ರಗರ್ಧಿನೀಽಇವ । ಸೇನಾ ।
ಯದಾ । ತೇ । ವಾತಃ । ಅನುಽವಾತಿ । ಶೋಚಿಃ । ವಪ್ತಾಽಇವ । ಶ್ಮಶ್ರು । ವಪಸಿ । ಪ್ರ । ಭೂಮ ॥ ೪ ॥

॥ ಸಾಯಣಭಾಷ್ಯಂ ॥

ಯದ್ಯದೋದ್ವತ ಉದ್ಗತಾನುಚ್ಛ್ರಿತಾನ್ ನಿವತೋ ನೀಚೀನಾಂಸ್ತರುಗುಲ್ಮಾದೀನ್ ಹೇ ಅಗ್ನೇ ಬಪ್ಸದ್ದಹನ್ಯಾಸಿ ಪ್ರಾಪ್ನೋಷಿ ತದಾನೀಂ ಬಹ್ವೀಭಿರ್ಜ್ವಾಲಾಭಿಃ ಪೃಥಗ್ವಿಭಿನ್ನಃ ಸನ್ನೇಷಿ । ಗಚ್ಛಸಿ । ತತ್ರ ದೃಷ್ಟಾಂತಃ । ಪ್ರಗರ್ಧಿನೀವ ಸೇನಾ ॥ ಗೃಧು ಅಭಿಕಾಂಕ್ಷಾಯಾಂ ॥ ಪರರಾಷ್ಟ್ರಂ ಗಚ್ಛತೋ ರಾಜ್ಞಃ ಸೇನಾ ತತ್ರತ್ಯಂ ಧನಜಾತಮಭಿಕಾಂಕ್ಷಮಾಣೇತಸ್ತತಃ ಸಂಘಶೋ ಗಚ್ಛತಿ ತದ್ವತ್ । ವಾತೋ ವಾಯುಶ್ಚ ತೇ ತವ ಶೋಚಿಃ ದೀಪ್ತಿಂ ಯದಾ ಯಸ್ಮಿನ್ಕಾಲೇಽನುವಾತಿ ಅನುಗುಣಂ ಪ್ರವರ್ತತೇ ತದಾ ಶ್ಮಶ್ರು । ಶ್ಮ ಶರೀರಂ । ತತ್ರ ಶ್ರಿತಂ ಸ್ಥಿತಂ ಕೇಶರೋಮಾದಿಕಂ ವಪ್ತೇವ ಯಥಾ ವಪ್ತಾ ನಾಪಿತೋ ವಪತಿ ಮುಂಡಯತಿ ತಥಾ ಭೂಮ ಭೂಮಿಂ ಪ್ರ ವಪಸಿ । ಪ್ರಕರ್ಷೇಣ ಮುಂಡಯಸಿ । ಸರ್ವಂ ವನಂ ನಿಃಶೇಷೇಣ ದಹಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಯತ್**—ಯಾವಾಗ । **ಉದ್ವತಃ**—ಎತ್ತರವಾಗಿ ಬೆಳೆದಿರುವ ವೃಕ್ಷಾದಿಗಳನ್ನೂ । **ನಿವತಃ**—ಕೆಳಗಡೆ ಸಣ್ಣದಾಗಿ ಬೆಳೆದಿರುವ ಗಿಡಬಳ್ಳಿಗಳನ್ನೂ । **ಬಪ್ಸತ್**—(ಭಕ್ಷಿಸುತ್ತಾ) ದಹಿಸುತ್ತಾ । **ಯಾಸಿ**—ಮುಂದಕ್ಕೆ ಹೋಗುವಿಯೋ ಆಗ । **ಪ್ರಗರ್ಧಿನೀವ**—ತಮ್ಮೆದುರಿಗೆ ಸಿಕ್ಕುವ ಸಕಲವನ್ನೂ ಧ್ವಂಸ ಮಾಡುವ । **ಸೇನಾ**—ಸೇನೆಯಂತೆ । **ಪೃಥಕ್**—ಬೇರೆಬೇರೆಯಾಗಿ (ಅನೇಕಭಾಗಗಳಾಗಿ) । **ಏಷಿ**—ಹೋಗಿ ಸುಡುತ್ತೀಯೆ । **ಯದಾ**—ಯಾವಾಗ । **ವಾತಃ**—ವಾಯುವು । **ತೇ**—ನಿನ್ನ । **ಶೋಚಿಃ**—ಕಾಂತಿಯನ್ನು । **ಅನುವಾತಿ**—ಅನುಸರಿಸಿ ಬೀಸುವುದೋ ಆಗ । **ಶ್ಮಶ್ರು**-ಮುಖದ ಮೇಲಿನ ಕೂದಲುಗಳನ್ನು । **ವಪ್ತೇವ**—ಕ್ಷೌರಕನು ಕ್ಷೌರಮಾಡುವಂತೆ । **ಭೂಮ**—ಭೂಮಿಯನ್ನು । **ಪ್ರ ವಪಸಿ**—ಸರ್ವವನ್ನೂ ದಹಿಸಿ ಚೊಕ್ಕಟವಾಗುವಂತೆ ಮಾಡುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ವನವನ್ನು ದಹಿಸುವಾಗ ಎತ್ತರವಾಗಿ ಬೆಳೆದು ಮುಗಿಲನ್ನು ಮುಟ್ಟುತ್ತಿರುವ ವೃಕ್ಷಗಳನ್ನೂ, ನೆಲದ ಮೇಲೆಯೇ ಸಣ್ಣದಾಗಿ ಬೆಳೆದಿರುವ ಸಸ್ಯವರ್ಗವನ್ನೂ ಬಳ್ಳಿಗಳನ್ನೂ, ಸುಡುತ್ತಾ ಮುಂದೆ ಮುಂದೆ ಹೋಗುತ್ತೀಯೆ. ರಾಜನ ಸೇನೆಯು ಶತ್ರುಸಂಹಾರಾನಂತರ ಅನೇಕಗುಂಪುಗಳಾಗಿ ತಮ್ಮೆದುರಿಗೆ ಸಿಕ್ಕುವ ಸಮಸ್ತವನ್ನೂ ಕೊಳ್ಳೆಹೊಡೆದು ಧ್ವಂಸಮಾಡುವಂತೆ ನೀನು (ಅಗ್ನಿಯು) ಅನೇಕಭಾಗಗಳಾಗಿ ಅಲ್ಲಲ್ಲಿ ಇರುವ ಗಿಡಮರಗಳನ್ನು ದಹಿಸುತ್ತಾ ಮುಂದುವರೆಯುತ್ತೀಯೆ. ನೀನು ವನವನ್ನು ದಹಿಸುತ್ತಿರುವಾಗ ವಾಯುವೂ ನಿನ್ನ ಸಹಾಯಕ್ಕೆ ಬಂದರೆ (ಎಂದರೆ ಗಾಳಿಯು ಬೀಸುತ್ತಿದ್ದರೆ) ಆಗ ಕ್ಷೌರಿಕನು ಕ್ಷೌರಮಾಡುವಾಗ ಮುಖದ ಮೇಲಿರುವ ಗಡ್ಡಮೀಸೆಗಳನ್ನು ನುಣ್ಣಗೆ ಬೋಳಿಸುವಂತೆ ನೀನು (ಅಗ್ನಿಯು) ಭೂಮಿಯಮೇಲೆ ಬೆಳೆದಿರುವ ವೃಕ್ಷಾದಿಗಳನ್ನೆಲ್ಲಾ ಚೆನ್ನಾಗಿ ದಹಿಸಿ ಏನೂ ಇಲ್ಲದ ಕೇವಲ ಬಯಲುಪ್ರದೇಶವನ್ನಾಗಿ ಮಾಡುತ್ತೀಯೆ.

## English Translation.

When you move burning above and burning below, you scatter yourself like a devastating host; when the wind fans your flame you shave the earth as a barber shaves a beard.

॥ ಸಂಹಿತಾಪಾಠಃ ॥

ಪ್ರತ್ಯಸ್ಯ ಶ್ರೇಣಯೋ ದದೃಶ್ರ ಏಕಂ ನಿಯಾನಂ ಬಹವೋ ರಥಾಸಃ ।
ಬಾಹೂ ಯದಗ್ನೇ ಅನುಮರ್ಮೃಜಾನೋ ನ್ಯಙ್ಙುತ್ತಾನಾಮನ್ವೇಷಿ
ಭೂಮಿಂ ॥ ೫ ॥

॥ ಪದಪಾಠಃ ॥

ಪ್ರತಿ । ಅಸ್ಯ । ಶ್ರೇಣಯಃ । ದದೃಶ್ರೇ । ಏಕಂ । ನಿಽಯಾನಂ । ಬಹವಃ । ರಥಾಸಃ ।
ಬಾಹೂ ಇತಿ । ಯತ್ । ಅಗ್ನೇ । ಅನುಽಮರ್ಮೃಜಾನಃ । ನ್ಯಙ್ । ಉತ್ತಾನಾಂ । ಅನುಽಏಷಿ ।
ಭೂಮಿಂ ॥ ೫ ॥

॥ ಸಾಯಣಭಾಷ್ಯಂ ॥

ಅಸ್ಯಾಗ್ನೇರ್ದಹತಃ ಶ್ರೇಣಯೋ ಜ್ವಾಲಾಪಂಕ್ತಯಃ ಪ್ರತಿ ದದೃಶ್ರೇ । ಪ್ರತಿದೃಶ್ಯಂತೇ । ........ ................ । ತದ್ವತ್ । ಅತ್ರ ಸಾಮರ್ಥ್ಯಾದುಪಮಾನಪ್ರತೀತಿಃ । ಹೇ ಅಗ್ನೇ ಬಾಹೂ । ತೃತೀಯಾರ್ಥೇ ಪ್ರಥಮಾ । ಬಾಹುಭ್ಯಾಂ ಬಾಹುಸ್ಥಾನೀಯೈರ್ಜ್ವಾಲಾಸಮೂಹೈರನುಮರ್ಮೃಜಾನಃ ಸರ್ವಂ ವನಂ

ಮೃಜಞ್ಛ್ಯೋಧಯನ್ । ದಹನ್ನಿತ್ಯರ್ಥಃ । ನ್ಯಜ್ ನ್ಯಂಚನ್ ಪ್ರಹ್ವೀಭವನ್ನುತ್ತಾನಾಮೂರ್ಧ್ವಾಭಿಮುಖಾಂ ಭೂಮಿಂ ಯದ್ಯದಾನ್ವೇಷಿ ಅನುಗಚ್ಛಸಿ ತದಾನೀಮಸ್ಯ ಶ್ರೇಣಯೋ ದದೃಶ್ರ ಇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ; ನೀನು । **ಯತ್**—ಯಾವಾಗ । **ಬಾಹೂ**—ಬಾಹುಗಳಂತಿರುವ ನಿನ್ನ ಜ್ವಾಲೆಗಳಿಂದ । **ಅನುಮರ್ಮೃಜ್ಯಮಾನಃ**—ವನವನ್ನು ಶೋಧಿಸುತ್ತಾ ಎಂದರೆ ದಹಿಸುತ್ತಾ । **ಉತ್ತಾನಾಂ**—ಎತ್ತರವಾದ ವೃಕ್ಷಾದಿಗಳಿಂದ ಕೂಡಿದ । **ಭೂಮಿಂ**—ಭೂಮಿಯನ್ನು । **ನ್ಯಜ್**—(ವೃಕ್ಷಾದಿಗಳನ್ನು ಸುಡುವುದರಿಂದ) ಮಟ್ಟವಾಗುವಂತೆ ಮಾಡುತ್ತಾ । **ಅನ್ವೇಷಿ**—ಮುಂದುವರೆಯುತ್ತೀಯೋ ಆಗ । **ಅಸ್ಯ**—ಈ ಅಗ್ನಿಯ । **ಶ್ರೇಣಯಃ**—ದಹಿಸುತ್ತಿರುವ ಜ್ವಾಲಾಪಂಕ್ತಿಗಳು । **ಬಹವಃ**—ಅನೇಕವಾದ । **ರಥಾಸಃ**—ರಥಗಳಿಂದ ಸಹಿತವಾದ । **ಏಕಂ ನಿಯಾನಂ** - ಚಲಿಸುತ್ತಿರುವ ಸಾಲಿನಂತೆ । **ಪ್ರತಿ ದದೃಶ್ರೇ**—ಕಾಣುತ್ತವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಬಾಹುಗಳಂತಿರುವ ನಿನ್ನ ಅನೇಕ ಜ್ವಾಲೆಗಳಿಂದ ಭೂಮಿಯ ಎತ್ತರವಾದ ವೃಕ್ಷಗಳನ್ನು ದಹಿಸಿ ಮಟ್ಟವಾಗಿ ಮಾಡುತ್ತಾ ಮುಂದುಮುಂದಕ್ಕೆ ಹೋಗುವಾಗ ನಿನ್ನ ಅನೇಕ ಜ್ವಾಲೆಗಳು, ಒಂದರ ಪಕ್ಕದಲೊಂದರಂತೆ ಅನೇಕ ರಥಗಳು ಸಾಲುಗಟ್ಟಿ ಹೋಗುತ್ತಿರುವ ಸೇನಾ ಪಂಕ್ತಿಗಳಂತೆ ಕಂಗೊಳಿಸುತ್ತವೆ.

## English Translation.

His lines (of flame) are visible, like one array of many chariots, when clearing away (the forests) with your arms (of flame) you march, Agni, over the prostrate earth.

॥ ಸಂಹಿತಾಪಾಠಃ ॥

ಉತ್ತೇ ಶುಷ್ಮಾ ಜಿಹತಾಮುತ್ತೇ ಅರ್ಚಿರುತ್ತೇ ಅಗ್ನೇ ಶಶಮಾನಸ್ಯ ವಾಜಾಃ ।
ಉಚ್ಛ್ವಂಚಸ್ವ ನಿ ನಮ ವರ್ಧಮಾನ ಆ ತ್ವಾದ್ಯ ವಿಶ್ವೇ ವಸವಃ ಸದಂತು ॥

॥ ಪದಪಾಠಃ ॥

ಉತ್ । ತೇ । ಶುಷ್ಮಾಃ । ಜಿಹತಾಂ । ಉತ್ । ತೇ । ಅರ್ಚಿಃ । ಉತ್ । ತೇ । ಅಗ್ನೇ । ಶಶಮಾನಸ್ಯ । ವಾಜಾಃ ।

ಉತ್ । ಶ್ವಂಚಸ್ವ । ನಿ । ನಮ । ವರ್ಧಮಾನಃ । ಆ । ತ್ವಾ । ಅದ್ಯ । ವಿಶ್ವೇ । ವಸವಃ । ಸದಂತು ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತೇ ತವ ಶುಷ್ಮಾಃ ಶೋಷಕಾ ಜ್ವಾಲಾ ಉಜ್ಜಿಹತಾಂ । ಉದ್ಗಚ್ಛಂತು । ತಥಾ ತೇ ತವಾರ್ಚಿರ್ದೀಪ್ತಿರ್ಉದ್ಗಚ್ಛತು । ಶಶಮಾನಸ್ಯ ಸ್ತೂಯಮಾನಸ್ಯ । ಯದ್ವಾ ॥ ಶಶ ಪ್ಲುತಗತೌ । ಅಸ್ಮಾತ್ತಾಚ್ಛೀಲಿಕಶ್ಚಾನಶ್ । ತಸ್ಯ ಸಾರ್ವಧಾತುಕತ್ವೇ ಸತಿ ಲಸಾರ್ವಧಾತುಕತ್ವಾಭಾವಾಚ್ಚಿತ ಇತ್ಯಂತೋದಾತ್ತತ್ವಮೇವ ಶಿಷ್ಯತೇ ॥ ಶಶಮಾನಸ್ಯ ಸರ್ವಂ ವನಮಭಿಕ್ರಮ್ಯ ಶೀಘ್ರಂ ಗಚ್ಛತಃ । ತವ ವಾಜಾ ವೇಗಾ ಹೇ ಅಗ್ನೇ ಉಜ್ಜಿಹತಾಂ । ಸ ತ್ವಂ ವರ್ಧಮಾನಃ ಸನ್ನುಚ್ಛ್ವಂಚಸ್ವ । ವನ ಉದ್ಗಚ್ಛಸ್ವ । ಶ್ವಚಿ ಗತೌ ಭೌವಾದಿಕಃ । ಇದಿತ್ವಾನ್ನುಮ್ ॥ ತಥಾ ನಿ ನಮ । ಪ್ರಹ್ವೀಭವ । ಉನ್ನತಂ ವೃಕ್ಷಾದಿಕಂ ಪ್ರಾಪ್ಯೋಚ್ಛ್ರಿತೋ ಭವ । ಅವನತಂ ಗುಲ್ಮಾದಿಕಂ ಪ್ರಾಪ್ಯಾವನತೋ ಭವೇತ್ಯರ್ಥಃ । ಈದೃಶಂ ತ್ವಾ ತ್ವಾಮದ್ಯಾಸ್ಮಿನ್ಕಾಲೇ ವಿಶ್ವೇ ಸರ್ವೇ ವಸವೋ ವಾಸಯಿತಾರೋ ರಶ್ಮಯೋ ದೇವಾ ವಾ ಸದಂತು । ಆಸೀದಂತು । ಪ್ರಾಪ್ನುವಂತು ॥ ಸದೇರ್ವ್ಯತ್ಯಯೇನ ಸೀದಾದೇಶಾಭಾವಃ । ಶಪಿ ಪ್ರಾಪ್ತೇ ವ್ಯತ್ಯಯೇನಾಜ್ವಾ ಕರ್ತವ್ಯಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ತೇ—ನಿನ್ನ । ಶುಷ್ಮಾಃ—ದಹಿಸುವ ಜ್ವಾಲೆಗಳು । ಉತ್ ಜಿಹತಾಂ—ಮೇಲೆದ್ದು ಬೆಳಗಲಿ । ತೇ—ನಿನ್ನ । ಅರ್ಚಿಃ—ಪ್ರಕಾಶವೂ ಹೆಚ್ಚಾಗಲಿ । ತೇ—ನಿನ್ನ । ಶಶಮಾನಸ್ಯ—ಪ್ರಶಸ್ಯವಾದ ಅಥವಾ ವನವನ್ನು ದಹಿಸಿ ಮುಂದುವರೆಯುತ್ತಿರುವ । ವಾಜಾಃ—ಪ್ರಶಸ್ಯವಾದ ಅಥವಾ ವೇಗಗತಿಗಳೂ ಸಹ ವೃದ್ಧಿಯಾಗಲಿ (ಇಂತಹ ನೀನು) । ವರ್ಧಮಾನಃ—ವೃದ್ಧಿಯಾಗುತ್ತಾ । ಉತ್ ಶ್ವಂಚಸ್ವ—ವನದಲ್ಲಿ ಎತ್ತರವಾದ ವೃಕ್ಷಗಳನ್ನು ದಹಿಸು । ನಿ ನಮ—ಸಣ್ಣ ಲತಾದಿಗಳನ್ನು ದಹಿಸು । ತ್ವಾ—ನಿನ್ನನ್ನು । ಅದ್ಯ—ಈಗ । ವಿಶ್ವೇ—ಸಮಸ್ತರಾದ । ವಸವಃ—ರಶ್ಮಿಗಳು ಅಥವಾ ದೇವತೆಗಳು । ಆ ಸದಂತು—ಓಲೈಸಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ದಹಿಸುತ್ತಿರುವ ನಿನ್ನ ಜ್ವಾಲೆಗಳು ಮೇಲೆ ಮೇಲಕ್ಕೆ ಏಳಲಿ. ನಿನ್ನ ಕಾಂತಿಯೂ ಹೆಚ್ಚಾಗಿ ಪ್ರಸರಿಸಲಿ. ಪ್ರಶಸ್ಯವಾದ ನಿನ್ನ ಗಮನವು ಮುಂದುವರೆಯಲಿ. ನೀನು ವೃದ್ಧಿಯಾಗುತ್ತಾ ಎತ್ತರವಾದ ವೃಕ್ಷಗಳನ್ನೂ, ಲತಾದಿಗಳನ್ನೂ ದಹಿಸುತ್ತಾ ಕೆಲವು ವೇಳೆ ಎತ್ತರದಲ್ಲಿಯೂ ಕೆಲವು ವೇಳೆ ಕೆಳಭಾಗದಲ್ಲಿಯೂ ವ್ಯಾಪಿಸಿ ಸಂಚರಿಸು. ಎಲೈ ಅಗ್ನಿಯೇ, ಸಮಸ್ತ ರಶ್ಮಿಗಳು ಅಥವಾ ಸಮಸ್ತ ದೇವತೆಗಳೂ ಈಗ ನಿನ್ನನ್ನು ಓಲೈಸಲಿ.

## English Translation

May your withering flames, Agni, arise, may your light (arise), and the swift movements of you when you are praised; rise up, stoop down, increasing in might; may all the Vasus this day attend upon you.

॥ ಸಂಹಿತಾಪಾಠಃ ॥

ಅ॒ಪಾಮಿ॒ದಂ ನ್ಯಯ॑ನಂ ಸಮು॒ದ್ರಸ್ಯ॑ ನಿ॒ವೇಶ॑ನಂ ।

ಅ॒ನ್ಯಂ ಕೃ॑ಣುಷ್ವೇ॒ತಃ ಪಂಥಾಂ॒ ತೇನ॑ ಯಾಹಿ॒ ವಶಾँ॒ ಅನು॑ ॥ ೭ ॥

॥ ಪದಪಾಠಃ ॥

ಅ॒ಪಾಂ । ಇ॒ದಂ । ನಿ॒ऽಅಯ॑ನಂ । ಸ॒ಮು॒ದ್ರಸ್ಯ॑ । ನಿ॒ऽವೇಶ॑ನಂ ।

ಅ॒ನ್ಯಂ । ಕೃ॒ಣು॒ಷ್ವ॒ । ಇ॒ತಃ । ಪಂಥಾಂ॑ । ತೇನ॑ । ಯಾ॒ಹಿ॒ । ವಶಾ॑ನ್ । ಅನು॑ ॥ ೭ ॥

। ಸಾಯಣಭಾಷ್ಯಂ ॥

ಇತ್ಥಂ ಖಾಂಡವವನಸ್ಯ ದಾಹೇ ಪ್ರವೃತ್ತಮಗ್ನಿಂ ಜರಿತೃಪ್ರಭೃತಯಃ ಸ್ವಾತ್ಮನೋ ರಕ್ಷಣಕಾಮಾಸ್ತುಷ್ಟುವುಃ । ಇದಾನೀಂ ಚ ಸ್ತಂಬಮಿತ್ರಃ ಸ್ವನಿವಾಸಭೂಮೇರ್ದಹನಾಭಾವಾಯಾಗ್ನೇರನ್ಯತ್ರ ಗಮನಂ ಪ್ರಾರ್ಥಯತೇ । ಇದಮಸ್ಮದೀಯಂ ನಿವಾಸಸ್ಥಾನಮಪಾಮುದಕಾನಾಂ ನ್ಯಯನಂ । ನಿಯಂತಿ ನಿತರಾಂ ಗಚ್ಛಂತ್ಯಸ್ಮಿನ್ನಿತಿ ನ್ಯಯನಂ ಹ್ರದಃ । ತಥಾ ಸಮುದ್ರಸ್ಯೋದಧೇಶ್ಚ ನಿವೇಶನಂ ಗೃಹಂ । ಯಥಾ ಹ್ರದಃ ಸಮುದ್ರಸ್ಯ ಸ್ಥಾನಂ ಚ ಯಥಾ ದಗ್ಧುಂ ನ ಶಕ್ಯತೇ ತಥಾ ದಾಹಯೋಗ್ಯಂ ನ ಭವತೀತ್ಯರ್ಥಃ । ಇತೋಽಸ್ಮಾದಸ್ಮದೀಯಾತ್ಸ್ಥಾನಾದನ್ಯಂ ಪಂಥಾಂ ಪಂಥಾನಂ ಮಾರ್ಗಂ ಹೇ ಅಗ್ನೇ ಕೃಣುಷ್ವ। ಕುರುಷ್ವ। ತೇನ ಪಥಾ ವಶಾನನು ಯಥಾಕಾಮಂ ಯಾಹಿ । ಗಚ್ಛ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಇದಂ**—ಈ ನಮ್ಮ ನಿವಾಸಸ್ಥಾನವು । **ಅಪಾಂ**-- ಉದಕಗಳ । **ನ್ಯಯನಂ**—ಸಮಾಗಮಸ್ಥಾನವಾದ । **ಸಮುದ್ರಸ್ಯ**—ಸಮುದ್ರದ । **ನಿವೇಶನಂ**—ಗೃಹವು (ನಿಮ್ಮ ನಿವಾಸಸ್ಥಾನವು ಜಲರಾಶಿಯಾದ ಸಮುದ್ರದಂತೆ ದಹಿಸಲು ಯೋಗ್ಯವಲ್ಲ ಆದ್ದರಿಂದ) । **ಇತಃ**—ನಮ್ಮ ನಿವಾಸಸ್ಥಾನದಿಂದ (ದೂರವಾದ) **ಅನ್ಯಂ ಪಂಥಾಂ** - ಬೇರೆ ಮಾರ್ಗವನ್ನು (ಮಾರ್ಗದಲ್ಲಿ) । **ಕೃಣುಷ್ವ**--ಸಂಚಾರಮಾಡು । **ತೇನ**—ಆ ಬೇರೆ ಮಾರ್ಗದಿಂದ । **ವಶಾನ್ ಅನು**—ನಿನ್ನಿಷ್ಟಬಂದಂತೆ । **ಯಾಹಿ**—ಹೋಗು ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಇದು ಎಂದರೆ ನಮ್ಮ ನಿವಾಸಸ್ಥಾನವು (ಗೃಹವು) ಉದಕಗಳ ಸಮಾಗಮ ಸ್ಥಾನವಾದ ಸಮುದ್ರವು ಎಂದರೆ ಸಮುದ್ರವನ್ನು ದಹಿಸಲು ಯಾವ ರೀತಿ ಸಾಧ್ಯವಿಲ್ಲವೋ ಅದರಂತೆ ನಮ್ಮ ಗೃಹವನ್ನು ದಹಿಸಬೇಡ. ಆದ್ದರಿಂದ ನಮ್ಮ ನಿವಾಸಸ್ಥಾನವನ್ನು ಬಿಟ್ಟು ದೂರ ಇರುವ ಬೇರೆ ಮಾರ್ಗದಲ್ಲಿ ನಿನ್ನಿಷ್ಟಬಂದಂತೆ ಹೋಗು.

## English Translation

This is the abode of the waters, the dwelling of the ocean ; pursue, Agni, a different path from this ; go by this (path) according to your pleasure.

॥ ವಿಶೇಷವಿಷಯಗಳು ॥

ಇದುವರೆಗೂ ಎಂದರೆ ಈ ಸೂಕ್ತದ ಆರು ಋಕ್ಕುಗಳಲ್ಲಿಯೂ ದಾವಾಗ್ನಿಯನ್ನು ನಾನಾವಿಧವಾಗಿ ಜರಿತೃ, ದ್ರೋಣ, ಸಾರಿಸೃಕ್ವ ಎಂಬ ಋಷಿಗಳು ಸ್ತುತಿಸಿರುವರು ಈಗ ಈ ಋಕ್ಕಿನ ಮತ್ತು ಮುಂದಿನ ಋಕ್ಕಿನ ದ್ರಷ್ಟೃವಾದ ಸ್ತಂಬಮಿತ್ರನೆಂಬ ಋಷಿಯು, ಅಗ್ನಿಯು ಇತರ ಪ್ರದೇಶಗಳಲ್ಲಿ ದಹಿಸಿದರೂ ತಮ್ಮ ನಿವಾಸಸ್ಥಾನವನ್ನು ಮಾತ್ರ ದಹಿಸಬಾರದೆಂದೂ ಅದನ್ನು ಬಿಟ್ಟು ಬೇರೆ ಮಾರ್ಗದಲ್ಲಿ ಹೋಗಬೇಕೆಂದೂ ಪ್ರಾರ್ಥಿಸಿದಾನೆ. ಭೂಮಿಯ ಮೇಲೆ ಬೆಳೆದಿರುವ ಸಮಸ್ತವಿಧ ವೃಕ್ಷಾದಿಗಳನ್ನು ಅಗ್ನಿಯು ದಹಿಸುವನಾದರೂ ಉದಕಪೂರ್ಣವಾದ ಸಮುದ್ರವನ್ನು ಮಾತ್ರ ದಹಿಸಲಾಗುವುದಿಲ್ಲ ಆದ್ದರಿಂದ ಅಗ್ನಿಯು ಸಮುದ್ರವನ್ನು ಯಾವ ರೀತಿ ದಹಿಸದೆ ಬಿಟ್ಟು ಬೇರೆ ಕಡೆಗೆ ಹೋಗುವುದೋ ಆ ರೀತಿ ತಮ್ಮ ಗೃಹವನ್ನು ಸುಡದೆ ಹಾಗೆಯೇ ಬಿಟ್ಟು ಬೇರೆ ಮಾರ್ಗದಲ್ಲಿ ಇಷ್ಟಬಂದಂತೆ ಹೋಗಬಹುದೆಂದು ಋಷಿಯು ತನ್ನ ಗೃಹಕ್ಕೆ ಸಮುದ್ರದ ದೃಷ್ಟಾಂತವನ್ನು ಕೊಟ್ಟು ಅಗ್ನಿಯನ್ನು ಪ್ರಾರ್ಥಿಸಿದ್ದಾನೆ.

॥ ಸಂಹಿತಾಪಾಠಃ ॥

ಆಯನೇ ತೇ ಪರಾಯಣೇ ದೂರ್ವಾ ರೋಹಂತು ಪುಷ್ಪಿಣೀಃ ।
ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ॥ ೮ ॥

॥ ಪದಪಾಠಃ ॥

ಆಽಅಯನೇ । ತೇ । ಪರಾಽಅಯನೇ । ದೂರ್ವಾಃ । ರೋಹಂತು । ಪುಷ್ಪಿಣೀಃ ।
ಹ್ರದಾ । ಚ । ಪುಂಡರೀಕಾಣಿ । ಸಮುದ್ರಸ್ಯ । ಗೃಹಾಃ । ಇಮೇ ॥ ೮ ॥

॥ ಸಾಯಣಭಾಷ್ಯಂ ॥

ಅನಯಾಪಿ ಸ್ವನಿವಾಸಸ್ಯ ದಾಹಾನರ್ಹತಾ ಪ್ರತಿಪಾದ್ಯತೇ । ಹೇ ಅಗ್ನೇ ತೇ ತವಾಯನ ಆಗಮನೇ ಪರಾಯಣೇ ಪರಾಗಮನೇ ವಾ ಸತ್ಯಸ್ಯಾಂ ನಿವಾಸಭೂಮೌ ಪುಷ್ಪಿಣೀಃ ಪುಷ್ಪವತ್ಯೋ ದೂರ್ವಾ ರೋಹಂತು । ಪ್ರರೋಹಂತು । ತಥಾ ಹ್ರದಾ ಅಶೋಷ್ಯೋದಕಾ ಜಲಾಶಯಾಶ್ಚ ಭವಂತು । ಪುಂಡರೀಕಾಣಿ ಪದ್ಮಾನಿ ಚ ತೇಷು ಪ್ರದೇಷು ಜಾಯಂತಾಂ । ಕಿಂ ಬಹುನಾ । ಸಮುದ್ರಸ್ಯ ಜಲಧೇರಿಮೇಽಸ್ಮಿನ್ನಿವಾಸಪ್ರದೇಶೇ ಗೃಹಾ ಆಶ್ರಯಭೂತಾ ಭವಂತು । ಯಥಾ ಸಮುದ್ರಾವಾಸಭೂಮಿಃ ಕದಾಚಿದಪಿ ನ ದಹ್ಯತೇ ಏವಂ ಕದಾಚಿದಸ್ಮತ್ಸ್ಥಾನಂ ನ ದಹ್ಯತಾಮಿತ್ಯರ್ಥಃ । ಏತದುಕ್ತಂ ಭವತಿ । ದೂರ್ವಾ-

**ಕಾಂಡಪ್ರರೋಹಣಪ್ರಾರ್ಥನೇನ ಸ್ವಾಶ್ರಯಸ್ಯ ಶೀತಲತ್ವಂ ಹ್ರದಪ್ರಾರ್ಥನೇನ ತೃಷ್ಣೋಪಶಮನಕಾರಣಸ್ಯ ಜಲಸ್ಯ ಸತ್ತ್ವಂ ಪುಂಡರೀಕಸದ್ಭಾವಪ್ರಾರ್ಥನೇನೋಪಭೋಗ್ಯಸ್ಯ ಫಲಾದೇಃ ಸತ್ತಾ ಸಮುದ್ರಗೃಹತ್ವ-ಪ್ರಾರ್ಥನೇನ ದಾಹಾನರ್ಹತಾ ಚೇತ್ಯೇತತ್ಸರ್ವಂ ಪ್ರತಿಪಾದ್ಯತ ಇತಿ ||**

|| ಪ್ರತಿಪದಾರ್ಥ ||

(ಎಲೈ ಅಗ್ನಿಯೇ) **ತೇ**—ನಿನ್ನ | **ಆಯನೇ**—ಆಗಮನಕಾಲದಲ್ಲಿಯೂ | **ಪರಾಯಣೇ**—ನಿರ್ಗಮನ (ಹಿಂದಕ್ಕೆ ಹೋಗುವ) ಕಾಲದಲ್ಲಿಯೂ ನಮ್ಮ ನಿವಾಸಪ್ರದೇಶಗಳಲ್ಲಿ | **ದೂರ್ವಾಃ**—ತೃಣಾದಿ ಸಸ್ಯಗಳು | **ಪುಷ್ಪಿಣೀಃ**—ಪುಷ್ಪಗಳನ್ನು ಬಿಡುತ್ತಾ | **ರೋಹಂತು**—ಬೆಳೆಯಲಿ. ಹಾಗೆಯೇ | **ಹ್ರದಾಃ ಚ**—ಜಲಾಶಯಗಳು (ಕೆರೆ, ಕೊಳ) ನೀರಿನಿಂದ ತುಂಬಿರಲಿ | **ಪುಂಡರೀಕಾಣಿ**—(ಮತ್ತು ಅವುಗಳಲ್ಲಿ) ಕಮಲಗಳು ಬೆಳೆಯಲಿ | **ಇಮೇ ಗೃಹಾಃ**—ಈ ನಮ್ಮ ಮನೆಗಳು | **ಸಮುದ್ರಸ್ಯ**—ಸಮುದ್ರದಂತೆ ದಹಿಸಲ್ಪಡದಿರಲಿ.

|| ಭಾವಾರ್ಥ ||

ಎಲೈ ಅಗ್ನಿಯೇ, ನಿನ್ನ ಆಗಮನ ಕಾಲದಲ್ಲಿಯೂ, ನಿರ್ಗಮನಕಾಲದಲ್ಲಿಯೂ ನಮ್ಮ ಗೃಹಗಳಿಗೆ ಯಾವ ವಿಧವಾದ ತೊಂದರೆಯೂ ಉಂಟಾಗದಿರಲಿ. ತೃಣಾದಿಸಸ್ಯಗಳು ಹೂವುಗಳನ್ನು ಬಿಡುತ್ತಾ ಸಮೃದ್ಧಿಯಾಗಿ ಬೆಳೆಯಲಿ. ಜಲಾಶಯಗಳು ನೀರಿನಿಂದ ಪೂರ್ಣವಾಗಿ ಕಮಲಪುಷ್ಪಗಳಿಂದ ಕಂಗೊಳಿಸಲಿ. ಸಮುದ್ರಕ್ಕೆ ಯಾವ ರೀತಿ ಅಗ್ನಿ ಭಯವಿರುವುದಿಲ್ಲವೋ ಅದರಂತೆ ನಮ್ಮ ಮನೆಗಳಿಗೂ ಅಗ್ನಿಭಯವಿಲ್ಲದೆ ಸುರಕ್ಷಿತವಾಗಿರಲಿ.

## English Translation.

Both at your arrival, Agni, and at your departure. may the flowering durva grasses spring up; may lakes (be formed) and lotuses (therein); may these be the dwellings of the ocean.

|| ವಿಶೇಷವಿಷಯಗಳು ||

ದಾವಾಗ್ನಿಯು ವನವನ್ನೆಲ್ಲಾ ದಹಿಸುವನಾದರೂ ತಮ್ಮ ನಿವಾಸಸ್ಥಾನಗಳನ್ನು ಮಾತ್ರ ದಹಿಸಬಾರದೆಂದು ಋಷಿಯು ಪ್ರಾರ್ಥಿಸಿದಾನೆ. ತಮ್ಮ ಗೃಹಗಳ ಸುತ್ತಮುತ್ತಲ ಪ್ರದೇಶಗಳಲ್ಲಿ ದಾವಾಗ್ನಿಯು ವನಗಳನ್ನು ದಹಿಸುವಾಗಲೂ, ಅನಂತರವೂ ತಮಗೆ ಅಗ್ನಿಭಯವು ಉಂಟಾಗಬಾರದೆಂದೂ ಗೃಹದ ಸುತ್ತಲೂ ಇರುವ ಪ್ರದೇಶಗಳಲ್ಲಿ ತೃಣಸಸ್ಯಾದಿಗಳು ಯಥೇಷ್ಟವಾಗಿ ಬೆಳೆದು ಫಲಪುಷ್ಪಗಳನ್ನು ಬಿಡುವಂತಾಗಲೆಂದೂ, ಜಲಾಶಯಗಳು ಬತ್ತಿಹೋಗದೆ ಉದಕದಿಂದ ಸಮೃದ್ಧವಾಗಿ ಕಮಲಗಳಿಂದ ಕಂಗೊಳಿಸುವಂತೆಯೂ, ಸಮುದ್ರಕ್ಕೆ ಯಾವ ರೀತಿ ಅಗ್ನಿಭಯವಿಲ್ಲವೋ ಆ ರೀತಿ ತಮ್ಮ ಗೃಹಗಳಿಗೂ ಅಗ್ನಿಭಯವಿಲ್ಲದಂತೆಯೂ ಆಗಿರಬೇಕೆಂದು ಋಷಿಯು ಆಶ್ವಾಸನೆಯನ್ನು ವ್ಯಕ್ತಪಡಿಸಿದಾನೆ.

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟ ಮಂತ್ರಗಳು—

**ಹಿಮಸ್ಯ ತ್ವಾ ಜರಾಯುಣಾ ಶಾಲೇ ಪರಿವ್ಯಯಾಮಸಿ |**
**ಉತ ಹ್ರದೋ ಹಿ ನೋ ಧಿಯೋಽಗ್ನಿರ್ದದಾತು ಭೇಷಜಂ** || ೧ ||

ಶೀತಹ್ರದೋ ಹಿ ನೋ ಧಿಯೋಽಗ್ನಿರ್ದದಾತು ಭೇಷಜಂ ।
ಅಂತಿಕಾಮಗ್ನಿಮಜನಯ ದೂರ್ವಾದಃ ಶಶಹಾಗಮತ್ ॥ ೨ ॥
ಅಜಾತಪುತ್ರಪಕ್ಷಾಯಾ ಹೃದಯಂ ಮಮ ದೂಯತೇ ।
ವಿಪುಲಂ ವನಂ ಬಹ್ವಾಕಾಶಂ ಚರ ಜಾತವೇದಃ ಕಾಮಾಯ ॥ ೩ ॥
ಮಾಂ ಚ ರಕ್ಷ ಪುತ್ರಾಂಶ್ಚ ಶರಣಮಭೂತ್ತವ ।
ಪಿಂಗಾಕ್ಷ ಲೋಹಿತಗ್ರೀವ ಕೃಷ್ಣವರ್ಣ ನಮೋಽಸ್ತು ತೇ ॥ ೪ ॥
ಅಸ್ಮಾನ್ನಿಬರ್ಹರಸ್ಯೇನಾಂ ಸಾಗರಸ್ಯೋರ್ಮಯೋ ಯಥಾ ।
ಇಂದ್ರಃ ಕ್ಷತ್ರಂ ದದಾತು ವರುಣಮಭಿ ಷಿಂಚತು ॥ ೫ ॥
ಶತ್ರವೋ ನಿಧನಂ ಯಾಂತು ಜಯ ತ್ವಂ ಬ್ರಹ್ಮತೇಜಸಾ । ॥ ೬ ॥
ಕಪಿಲಜಟೀಂ ಸರ್ವಭಕ್ಷಂ ಚಾಗ್ನಿಂ ಪ್ರತ್ಯಕ್ಷದೈವತಂ ॥ ೭ ॥
ವರುಣಂ ಚ ವಶಾಮ್ಯಗ್ರೇ ಮಮ ಪುತ್ರಾಂಶ್ಚ ರಕ್ಷತು ।
ಮಮ ಪುತ್ರಾಂಶ್ಚ ರಕ್ಷತ್ಯೋಂ ನಮಃ ॥ ೮ ॥
ಸಾಗ್ರಂ ವರ್ಷಶತಂ ಜೀವ ಪಿಬ ಖಾದ ಚ ನೋದ ಚ ॥ ೯ ॥
ದುಃಖಿತಾಂಶ್ಚ ದ್ವಿಜಾಂಶ್ಚೈವ ಪ್ರಜಾಂ ಚ ಪಶು ಪಾಲಯ ॥ ೧೦ ॥
ಯಾವದಾದಿತ್ಯಸ್ತಪತಿ ಯಾವದ್ಭ್ರಾಜತಿ ಚಂದ್ರಮಾಃ ।
ಯಾವದ್ವಾಯುಃ ಪ್ಲಾಯತಿ ತಾವಜ್ಜೀವ ಜಯಾ ಜಯ ॥ ೧೧ ॥
ಯೇನ ಕೇನ ಪ್ರಕಾರೇಣ ಕೋ ಹಿ ನಾಮ ನು ಜೀವತಿ ।
ಪರೇಷಾಮುಪಕಾರಾರ್ಥಂ ಯಜ್ಜೀವತಿ ಸ ಜೀವತಿ ।
ಏತಾಂ ವೈಶ್ವಾನರೀಂ ಸರ್ವದೇವಾನ್ನಮೋಽಸ್ತು ತೇ ॥ ೧೨ ॥
ನ ಚೋರಭಯಂ ನ ಚ ಸರ್ಪಭಯಂ ನ ಚ ವ್ಯಾಘ್ರಭಯಂ ನ ಚ ಮೃತ್ಯುಭಯಂ ।
ಯಸ್ಯಾಪಮೃತ್ಯುರ್ನ ಚ ಮೃತ್ಯುಃ ಸರ್ವಂ ಲಭತೇ ಸರ್ವಂ ಜಯತೇ ॥ ೧೩ ॥

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕವರ್ಗಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಋಕ್ಸಂಹಿತಾಭಾಷ್ಯೇಽಷ್ಟಮಾಷ್ಟಕೇ ಸಪ್ತಮೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಎಂಟನೆಯ ಅಷ್ಟಕದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್॥
ಸಪ್ತಮಂ ಶ್ರುತಿತತ್ತ್ವಜ್ಞಾಃ ಹ್ಯಷ್ಟಮಸ್ಯಾಷ್ಟಕಸ್ಯ ಚ ।
ವ್ಯಾಖ್ಯಾಯ ಸಾಯಣಾಮಾತ್ಯೋ ಽಷ್ಟಕಂ ವ್ಯಾಚಿಕೀರ್ಷತಿ ॥

ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

ಭಾಗ- ೩೦



## ॥ ಅಥಾಷ್ಟಮಾಷ್ಟಕೇಽಷ್ಟಮೋಽಧ್ಯಾಯಃ ॥

### ಎಂಟನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು.

## ಹತ್ತನೆಯ ಮಂಡಲದಲ್ಲಿ ನೂರ ನಲವತ್ತಮೂರನೆಯ ಸೂಕ್ತವು

### ಪೀಠಿಕೆ

ಈ ಸೂಕ್ತದಲ್ಲಿ ಅತ್ರಿಋಷಿಯು ಅಶ್ವಿನೀದೇವತೆಗಳನ್ನು ಸ್ತುತಿಸಿದಾನೆ ಅಶ್ವಿನೀದೇವತೆಗಳು ಮನುಷ್ಯರಿಗೂ ಪ್ರಾಣಿಗಳಿಗೂ ನಾನಾವಿಧ ಸಹಾಯಗಳನ್ನೂ ಉಪಕಾರಗಳನ್ನೂ ಮಾಡಿರುವ ವಿವರವನ್ನು ನಾವು ಹಿಂದೆ ಅನೇಕ ಕಡೆ ತಿಳಿಸಿದೇವೆ. ಪ್ರಕೃತಸೂಕ್ತದಲ್ಲಿ ಅತ್ರಿಋಷಿಗೂ ಭುಜ್ಯುವೆಂಬ ರಾಜನಿಗೂ ಮಾಡಿದ ಸಹಾಯದ ವರ್ಣನೆ ಇದೆ. ಅವರು ಜನರಿಗೆ ಕಷ್ಟಕಾಲದಲ್ಲಿ ನೆರವಾಗುತ್ತಾರೆ ಎಂಬುದಕ್ಕೆ ಅನೇಕ ಇತಿಹಾಸಗಳಿವೆ. ಅವುಗಳನ್ನು ಆಯಾ ಸಂದರ್ಭದಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ. ಆದರೂ ಅವುಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ಇಲ್ಲಿ ವಿವರಿಸಿದೇವೆ-

**ಜುಜುರುಷೋ ನಾಸತ್ಯೋತ ವವ್ರಿಂ ಪ್ರಾಮುಂಚತಂ ದ್ರಾಪಿಮಿವ ಚ್ಯವಾನಾತ್ ।**
**ಪ್ರಾತಿರತಂ ಜಹಿತಸ್ಯಾಯುರ್ದಸ್ರಾದಿತ್ಪತಿಮಕೃಣುತಂ ಕನೀನಾಂ ॥**

(ಋ ಸಂ. ೧–೧೧೬–೧೦)

ಚ್ಯವನನೆಂಬ ಋಷಿಯು ಬಹಳ ವೃದ್ಧನಾಗಿ, ದೇಹವು ಶಿಥಿಲವಾಗಿ ಶಕ್ತಿಯಿಲ್ಲದಿರುವಾಗ ಅವನ ಜನರು ಅವನನ್ನು ತ್ಯಜಿಸಿದರು. ಈ ಋಷಿಯು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು ಇವನ ಶಿಥಿಲವಾದ ದೇಹವನ್ನು ಕಳೆದು ಯುವಕನನ್ನಾಗಿ ಮಾಡಿ ಇವನ ಪತ್ನಿಗೆ ಪ್ರಿಯನನ್ನಾಗಿ ಮಾಡಿದರು ಮತ್ತು ಅವನ ಆಯುಸ್ಸನ್ನು ಹೆಚ್ಚಿಸಿದರು ಎಂದಿದೆ. ಇದಲ್ಲದೆ—

**ಯುವಂ ಚ್ಯವಾನಮಶ್ವಿನಾ ಜರಂತಂ ಪುನರ್ಯುವಾನಂ ಚಕ್ರಥುಃ ಶಚೀಭಿಃ ।**

(ಋ. ಸಂ. ೧–೧೧೭–೧೩)

**ನಿಷ್ಟೌಗ್ರ್ಯಂ ಪಾರಯಥಃ ಸಮುದ್ರಾತ್ಪು ನಶ್ಚ್ಯವಾನಂ ಚಕ್ರಥುರ್ಯುವಾನಂ ।**

(ಋ. ಸಂ. ೧–೧೧೮–೬)

**ಪ್ರ ಚ್ಯವಾನಾಜ್ಜುಜುರುಷೋ ವವ್ರಿಮತ್ಕಂ ನ ಮುಂಚಥಃ ।**
**ಯುವಾ ಯದೀ ಕೃಥಃ ಪುನರಾ ಕಾಮಮೃಣ್ವೇ ವಧ್ವಃ ॥**

(ಋ. ಸಂ. ೫–೭೪–೫)

**ಉತ ತ್ಯದ್ವಾಂ ಜುರತೇ ಅಶ್ವಿನಾ ಭೂಚ್ಚ್ಯವಾನಾಯ ಪ್ರತೀತ್ಯಂ ಹವಿರ್ದೇ ।**

(ಋ. ಸಂ. ೭–೬೮–೬)

**ಯುವಂ ಚ್ಯವಾನಂ ಜರಸೋಽಮುಮುಕ್ತಂ ನಿ ಪೇದವ ಊಹಥುರಾಶುಮಶ್ವಂ ।**

(ಋ. ಸಂ. ೭–೭೧–೫)

**ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ ॥**

(ಋ. ಸಂ. ೧೦–೩೯–೪)

ಎಂಬ ಈ ಋಕ್ಕುಗಳಲ್ಲಿಯೂ ವೃದ್ಧನಾದ ಚ್ಯವನಋಷಿಯನ್ನು ಯುವಕನನ್ನಾಗಿ ಮಾಡಿದ ವಿಷಯದ ವರ್ಣನೆ ಇದೆ ಶತಪಥಬ್ರಾಹ್ಮಣದಲ್ಲಿಯೂ ಈ ವಿಷಯಕವಾದ ವಿಸ್ತಾರವಾದ ಇತಿಹಾಸವಿದೆ. ಅದರಂತೆಯೇ,

**ಯುವಂ ವಿಪ್ರಸ್ಯ ಜರಣಾಮುಪೇಯುಷಃ ಪುನಃ ಕಲೇರಕೃಣುತಂ ಯುವದ್ವಯಃ**

(ಋ. ಸಂ. ೧೦–೩೯–೮)

ಎಂಬ ಋಕ್ಕಿನಲ್ಲಿ ಕಲಿ ಎಂಬುವನ ಮುಪ್ಪನ್ನು ಹೋಗಲಾಡಿಸಿ ಅವನನ್ನು ಮತ್ತೆ ಯುವಕನನ್ನಾಗಿ ಮಾಡಿದ ವಿಷಯದ ಪ್ರಸ್ತಾಪವಿದೆ.

**ಯಾಭಿರ್ವಮ್ರಂ ವಿಪಿಪಾನಮುಪಸ್ತುತಂ ಕಲಿಂ ಯಾಭಿರ್ವಿತ್ತಜಾನಿಂ ದುವಸ್ಯಥಃ ॥**

(ಋ. ಸಂ. ೧–೧೧೨–೧೫)

ಎಂಬ ಋಕ್ಕಿನಲ್ಲಿ ಮೇಲೆ ಹೇಳಿದ ಕಲಿ ಎಂಬುವನು ಪತ್ನಿಯನ್ನು ಪರಿಗ್ರಹಿಸಿ ಮದುವೆಯಾದಾಗ ಅವನಿಗೆ ತಮ್ಮ ನೆರವನ್ನು ನೀಡಿ ಅನೇಕಸಹಾಯಗಳನ್ನು ಮಾಡಿದರೆಂದು ಹೇಳಿದೆ.

ಮತ್ತು ಅವರು **ವಿಮದನೆ** ಪತ್ನಿಯರಾದ ಯುವತಿಯರಿಗೋಸ್ಕರ ಒಂದು ರಥವನ್ನೂ (೧-೧೧೨-೧೯) ಅಥವಾ ಅವನಿಗೆ ಓರ್ವ ಪತ್ನಿಯನ್ನೂ (೧-೧೧೬-೧) ಅನುಗ್ರಹಿಸಿದರು. ಅವಳು ಪುರುಮಿತ್ರನ ಪುತ್ರಿಯಾಗಿದ್ದಳೆಂದು ತೋರುತ್ತದೆ. (ಋ. ಸಂ. ೧-೧೧೭-೨೦; ೧೦-೩೯-೭) ಮತ್ತು ಅವಳ ಹೆಸರು ಕಮದ್ಯು (೧೦-೬೫-೧೨).

**ಕೃಷ್ಣ** ಎಂಬುವನ ಮಗನಾದ ವಿಶ್ವಕನಿಗೆ ಕಳೆದುಹೋಗಿದ್ದ ಅವನ ಪುತ್ರನನ್ನು ತಂದು ಒಪ್ಪಿಸಿದರು. (ಋ. ಸಂ. ೧-೧೧೬-೨೩; ೧೦-೬೫-೧೨) ಮತ್ತು, ಋ. ಸಂ. ೮-೭೫ ೧, ೨ ,೩ನೆಯ ಋಕ್ಕುಗಳಲ್ಲಿ ವಿಶ್ವಕ ಮತ್ತು ವಿಷ್ಣಾಪುಗಳ ಹೆಸರುಗಳು ಸೂಚಿತವಾಗಿವೆ.

**ಭುಜ್ಯುವಿನ** ಕಥೆಯು ಪದೇಪದೆ ಹೇಳಲ್ಪಟ್ಟಿದೆ. ಭುಜ್ಯುವು **ತುಗ್ರ** ಎಂಬ ರಾಜನ ಪುತ್ರನು. ಇವನು ಸಮುದ್ರಯಾನಮಾಡುತ್ತಿರುವಾಗ ಮುಳುಗಿಹೋಗುತ್ತಿರಲು, ಅಲೆಗಳ ಮಧ್ಯದಲ್ಲಿದ್ದ ಒಂದು ಮರದ ತುಂಡನ್ನು ಹಿಡಿದುಕೊಂಡು ತೇಲಾಡುತ್ತಿದ್ದನು. ಆಗ ಅವನು ಅಶ್ವಿನೀದೇವತೆಗಳನ್ನು ಮರೆಹೊಕ್ಕನು. ಆಗ ಅವರು ಅಲ್ಲಿಗೆ ಬಂದು ಆಳವೇ ತಿಳಿಯದ ಮಹಾಸಾಗರದಲ್ಲಿ ನೂರು ಹುಟ್ಟುಗಳಿಂದ ಕೂಡಿದ ನೌಕೆಯಲ್ಲಿ ಅವನನ್ನು ಕೂಡಿಸಿಕೊಂಡು ಅವನ ಮನೆಗೆ ಕರೆದುಕೊಂಡು ಹೋದರು ಮತ್ತೊಂದು ಕಡೆ ಈ ವಿಷಯವು ಈ ರೀತಿ ವರ್ಣಿತವಾಗಿದೆ. ಆಕಾಶದಲ್ಲಿ ಹಾರುವಂತೆ ತೋರುತ್ತಿದ್ದ, ಒಡಕುಗಳಿಲ್ಲದ ಹಡಗಿನಲ್ಲಿ ಅಥವಾ ರೆಕ್ಕೆಗಳುಳ್ಳ ನಾಲ್ಕು ದೋಣಿಗಳಲ್ಲಿ, ಅಥವಾ ನೂರು ಪಾದಗಳು ಮತ್ತು ಆರು ಕುದುರೆಗಳುಳ್ಳ ಹಾರುವ ಮೂರು ರಥಗಳಲ್ಲಿ ಅಥವಾ ಮನೋವೇಗವುಳ್ಳ ತಮ್ಮ ರಥದಲ್ಲಿ ಶೀಘ್ರವಾಗಿ ಹಾರಿಹೋಗುವ ತಮ್ಮ ಅಶ್ವಗಳ ಸಹಾಯದಿಂದ ಭುಜ್ಯುವನ್ನು ಕುಳ್ಳಿರಿಸಿಕೊಂಡು ಬಂದು ಅವನ ಮನೆಗೆ ಸೇರಿದರು. (ಋ. ಸಂ. ೧-೧೧೬-೩, ४, ೫ ; ೧-೧೧೭-೧४, ೧೫; ೧-೧೮೨-೫, ೬, ೭, ೭-೬೮-೭; ೧-೧೧೨-೬, ೨೦, ೧-೧೧೮-೬, ೧-೧೧೯-४, ೧-೧೫೮-೩, ೭-೬೨-೬, ೭-೬೯-೭, ೮-೫-೨೨, ೧೦-೩೯-४ ೧೦-४೭-೭; ೧೦-೬೫-೧೨; ೧೦-೧೪೩-೫)

ಯುದ್ಧದಲ್ಲಿ **ವಿಶ್ಪಲಾ** ಎಂಬ ಸ್ತ್ರೀಯ ಕಾಲು ಕತ್ತರಿಸಿ ಹೋಗಲು ಅವಳು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದಾಗ ಅವರು ಬಂದು ಅವಳಿಗೆ ಕಬ್ಬಿಣದ ಕಾಲನ್ನು ಒದಗಿಸಿಕೊಟ್ಟು ಕಾಪಾಡಿದರೆಂದು ಋ. ಸಂ. ೧-೧೧೨-೧೦ ; ೧-೧೧೬-೧೫ ; ೧-೧೧೭-೧೧ ; ೧-೧೧೮-೮ ; ೧೦-೩೯-೮ ಎಂಬ ಋಕ್ಕುಗಳಲ್ಲಿ ಹೇಳಿದೆ.

ಅಶ್ವಿನೀ ದೇವತೆಗಳ ವಾಹನವಾದ ರಾಸಭವು (ಕತ್ತೆಯು) ತೋಳನ ರೂಪದಲ್ಲಿದ್ದಾಗ **ಋಜ್ರಾಶ್ವ** ಎಂಬುವನು ತಾನು ಕಾಯುತ್ತಿದ್ದ ಕುರಿಗಳ ಮಂದೆಯಲ್ಲಿ ಒಂದು ನೂರು ಕುರಿಗಳನ್ನು ಕತ್ತರಿಸಿ ಆ ತೋಳಕ್ಕೆ ಆಹಾರವಾಗಿ ಕೊಟ್ಟನು ಅದರಿಂದ ಅವನ ತಂದೆಗೆ ಕೋಪಬಂದು ಋಜ್ರಾಶ್ವನ ಕಣ್ಣನ್ನು ಕೀಳಿಸಿ ಕುರುಡನಾಗುವಂತೆ ಮಾಡಿದನು. ಆಗ ತೋಳವು ಅಶ್ವಿನೀದೇವತೆಗಳನ್ನು ಸ್ತುತಿಸಿತು. ಅವರು ಸಂತುಷ್ಟರಾಗಿ ಋಜ್ರಾಶ್ವನಿಗೆ ಕಣ್ಣನ್ನು ಕೊಟ್ಟರು (ಋ. ಸಂ. ೧-೧೧೬-೧೬ ; ೧-೧೧೭-೧೭,೧೮) ಋ. ಸಂ. ೧-೧೦೦-೧೭ನೇ ಋಕ್ಕಿನಲ್ಲಿ ಋಜ್ರಾಶ್ವನೆಂಬುವನು ಇಂದ್ರನನ್ನು ಸ್ತೋತ್ರಮಾಡಿದ ವಿಷಯವಿದೆ.

**ಪಾರಾವೃಜ** ನೆಂಬುವನು ಕುರುಡನೂ ಕುಂಟನೂ ಆಗಿದ್ದನು. ಮತ್ತು ಅವನು ಜಾತಿಯಲ್ಲಿ ಸೇರಿಸಲ್ಪಟ್ಟಿರಲಿಲ್ಲ ಅವನಿಗೆ ಅಶ್ವಿನೀದೇವತೆಗಳು ನೋಡುವ ದೃಷ್ಟಿಯನ್ನೂ ನಡೆಯುವ ಶಕ್ತಿಯನ್ನೂ ಕೊಟ್ಟರು. ಎಂದರೆ ಕಣ್ಣು

ಗಳನ್ನೂ ಕಾಲುಗಳನ್ನೂ ಕೊಟ್ಟು ಅನುಗ್ರಹಿಸಿದರು (ಋ. ಸಂ. ೧-೧೧೨-೮) ಪಾರಾವೃಜನೆಂಬುವನ ಹೆಸರು ಇಂದ್ರನ ವಿಷಯದಲ್ಲಿ ಪ್ರಸ್ತಾಪ ಬಂದಾಗ ಋ. ಸಂ. ೨-೧೩-೧೨ ; ೨ ೧೫-೭ ಎಂಬ ಋಕ್ಕುಗಳಲ್ಲಿ ಸೂಚಿತವಾಗಿರುವುದು.

**ರೇಭ** ನೆಂಬ ಋಷಿಯನ್ನು ದುಷ್ಟರು ಕೈ ಕಾಲು ಕಟ್ಟಿಹಾಕಿ ಒಂದು ಪಾಳುಭಾವಿಯಲ್ಲಿ ಹಾಕಿದ್ದರು. ಒಂಭತ್ತು ಹಗಲು ಹತ್ತು ರಾತ್ರಿಗಳ ಪರ್ಯಂತರ ಅವನು ಅಲ್ಲಿಯೇ ಬಿದ್ದಿದ್ದು ಸಾಯುವ ಸ್ಥಿತಿಯಲ್ಲಿದ್ದನು. ಅವನನ್ನು ಅಶ್ವಿನೀದೇವತೆಗಳು, ಸೋಮರಸವನ್ನು ಸೌಟಿನಿಂದ ಎತ್ತುವಂತೆ ಭಾವಿಯಿಂದ ಮೇಲಕ್ಕೆತ್ತಿ ಬದುಕಿಸಿದರು (ಋ ಸಂ ೧-೧೧೨-೫ ; ೧-೧೧೬-೨೪ ; ೧-೧೧೭-೧೨ ; ೧-೧೧೭-೪ , ೧-೧೧೮-೬ ; ೧-೧೧೯-೬ ; ೧೦-೩೯-೯)

**ವಂದನ** ಎಂಬುವನೂ ಇದೇರೀತಿ ದುಷ್ಟರಿಂಧ ಅಪಹರಿಸಲ್ಪಟ್ಟು ಕತ್ತಲೆಯ ಪ್ರದೇಶದಲ್ಲಿ (ಹಳ್ಳದಲ್ಲಿ) ಹಾಕಲ್ಪಟ್ಟಿದ್ದಾಗ ಅವನನ್ನು ಅಶ್ವಿನೀದೇವತೆಗಳು ಅಪಾಯದಿಂದ ಪಾರುಮಾಡಿ ಅವನನ್ನು ಬೆಳಕಿಗೆ ತಂದರು(ಋ. ಸಂ. ೧-೧೧೨-೫ , ೧-೧೧೬-೧೧ ; ೧-೧೭-೫ ; ೧-೧೧೮-೬ ; ೧೦-೩೯-೮ ; ೧-೧೧೯-೬, ೭)

ಪಜ್ರವಂಶೀಯನಾದ **ಕಕ್ಷೀವಂತ** ನಿಗೆ ಯಥೇಚ್ಛವಾಗಿ ವರಗಳನ್ನು ಕೊಟ್ಟು ನೂರಾರು ಜಾಡಿ ತುಂಬ ಮದ್ಯ ಅಥವಾ ಮಧುವನ್ನು ಜರಡಿಯಿಂದ ಸುರಿಯುವಂತೆ ಕುದುರೆಯ ಕಾಲು ಗೊರಸಿನಿಂದ ಸುರಿಸಿದರು (ಋ. ಸಂ. ೧-೧೧೬-೭ ; ೧-೧೧೭-೬)

**ಅತ್ರಿ** ಎಂಬ ಋಷಿಯನ್ನು ಅಸುರರು ದ್ವೇಷಾಸೂಯೆಯಿಂದ ಅಂಧಕಾರಾವೃತವಾದ ಮತ್ತು ಬೆಂಕಿಯಿಂದ ಉರಿಯುತ್ತಿರುವ ದೊಡ್ಡ ಕಮರಿಯಲ್ಲಿ ಹಾಕಿದ್ದರು ಅಲ್ಲಿ ಅವನು ತೊಂದರೆಪಡುತ್ತಿರುವಾಗ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಬಂದು ಬೆಂಕಿಯನ್ನು ಹಿಮದಿಂದ ಶಮನಮಾಡಿ, ಆಹಾರಾದಿಗಳನ್ನು ಕೊಟ್ಟು ಸಂತೈಸಿ ಅವನನ್ನು ಆ ಅವಸ್ಥೆಯಿಂದ ಪಾರುಮಾಡಿದರು (ಋ. ಸಂ. ೧-೧೧೨--೭, ೧-೧೧೬-೮; ೧-೧೧೭-೩, ೧-೧೧೮-೭; ೧-೧೧೯-೬; ೫-೭೮-೪, ೫, ೬, ೭-೭೧-೫; ೮-೬೨-೩, ೭, ೮, ೯; ೧೦-೩೯-೯) ಋ ಸಂ. ೧೦-೮೦-೩ ನೇ ಋಕ್ಕಿನಲ್ಲಿ ಅತ್ರಿಯನ್ನು ರಕ್ಷಿಸಿದನೆಂದು ಹೇಳಿದೆ.

**ವಧ್ರಿಮತೀ** ಎಂಬ ಸ್ತ್ರೀಯು ತನಗೆ ಮಕ್ಕಳಿಲ್ಲದೆ ಬಂಜೆಯಾಗಿದ್ದುದರಿಂದ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಲು ಅವರು ಅವಳಿಗೆ ಹಿರಣ್ಯಹಸ್ತನೆಂಬ ಓರ್ವ ಪುತ್ರನನ್ನು ಅನುಗ್ರಹಿಸಿದರು. (ಋ. ಸಂ. ೧-೧೧೬-೧೩; ೧-೧೧೭-೨೪; ೬-೬೨-೭, ೧೦-೩೯-೭)

**ಘೋಷಾ** ಎಂಬ ಸ್ತ್ರೀಯು ಕುಷ್ಠರೋಗದಿಂದ ಮದುವೆಯಾಗದೆ ತನ್ನ ತಂದೆಯಮನೆಯಲ್ಲಿಯೇ ಇದ್ದಳು. ಅವಳ ಪ್ರಾರ್ಥನೆಯಂತೆ ಅಶ್ವಿನೀದೇವತೆಗಳು ಅವಳಿಗೆ ಯೋಗ್ಯನಾದ ಪತಿಯನ್ನು ಅನುಗ್ರಹಿಸಿದರು. (ಋ ಸಂ. ೧-೧೧೭-೭; ೧೦-೩೯-೩, ೬: ೧೦-೪-೫). ಋ. ಸಂ. ೧-೧೧೭-೭ ನೇ ಋಕ್ಕಿನ ಭಾಷ್ಯದಲ್ಲಿ ಈ ಘೋಷಾ ಎಂಬ ಸ್ತ್ರೀಯು ಕುಷ್ಠರೋಗದಿಂದ ನರಳುತಿದ್ದಳೆಂದೂ ಆ ರೋಗವನ್ನು ಅಶ್ವಿನೀದೇವತೆಗಳು ಬಂದು ವಾಸಿಮಾಡಿದರೆಂದೂ ಸಾಯಣರು ಹೇಳಿದ್ದಾರೆ. ೧೦ನೇ ಮಂಡಲದಲ್ಲಿ ಈ ಘೋಷಾ ಎಂಬ ಸ್ತ್ರೀಯಿಂದ ದೃಷ್ಟವಾದ ಎರಡು ಸೂಕ್ತಗಳಿವೆ. (೩೯, ೪೦ ಸೂಕ್ತಗಳು)

**ಶಯು** ಎಂಬುವನ ಹಸುವು ಮುದಿಯಾಗಿ ಕರುವನ್ನು ಹಾಕದಿರುವಾಗ ಅಶ್ವಿನೀದೇವತೆಗಳು ಅದಕ್ಕೆ ಹಾಲು ಕೊಡುವ ಶಕ್ತಿಯನ್ನುಂಟುಮಾಡಿದರು (ಋ. ಸಂ ೧-೧೧೬-೨೨; ೧-೧೧೭-೨೦; ೧-೧೧೮-೮; ೧-೧೧೯-೭: ೧೦-೩೯-೧೩)

**ಪೇದು** ಎಂಬ ರಾಜನಿಗೆ ಅಶ್ವಿನೀದೇವತೆಗಳು ಇಂದ್ರನಂತೆ ಅತಿಬಲಶಾಲಿಯಾದ ಒಂದು ಬಿಳೀಕುದುರೆಯನ್ನು ಕೊಟ್ಟರೆಂದೂ, ಅದರಿಂದ ಅವನು ತನ್ನ ಶತ್ರುಗಳನ್ನು ಗೆದ್ದು ಬಹಳವಾದ ವಸ್ತುವಾಹನಾದಿಗಳನ್ನು ಪಡೆದನೆಂದೂ ಹೇಳಿದೆ. (ಋ. ಸಂ. ೧-೧೧೬-೬; ೧-೧೧೭-೯, ೧-೧೧೮-೯; ೧-೧೧೯-೧೦; ೭-೭೧-೫; ೧೦-೩೯-೧೦)

ಇದಲ್ಲದೆ ಈ ಅಶ್ವಿನೀದೇವತೆಗಳು ಅನೇಕ ಮನುಷ್ಯರಿಗೆ ಸಹಾಯಮಾಡಿರುವುದಲ್ಲದೆ ಪಶುಪಕ್ಷ್ಯಾದಿಗಳಿಗೂ ಉಪಕಾರಮಾಡಿರುವರೆಂದು ಹೇಳಿದೆ. ಈ ಸಂದರ್ಭದಲ್ಲಿ ಒಂದು ತೋಳವು ಒಂದು ಗುಬ್ಬಚ್ಚಿಯನ್ನು ಕಚ್ಚಿಕೊಂಡು ಹೋಗುತ್ತಿರುವಾಗ ಆ ಗುಬ್ಬಚ್ಚಿಯ ಪ್ರಾರ್ಥನೆಯಂತೆ ಅದನ್ನು ಆ ತೋಳನ ಬಾಯಿಂದ ಬಿಡಿಸಿ ಕಾಪಾಡಿದರೆಂದು ಅನೇಕ ಋಕ್ಕುಗಳಲ್ಲಿ ಹೇಳಿದೆ (ಋ. ಸಂ ೧-೧೧೬-೧೪; ೧-೧೧೭-೧೬; ೧-೧೧೮-೮; ೧೦-೩೯-೧೩) ಈ ವಿಷಯಗಳಲ್ಲದೆ ಅಶ್ವಿನೀದೇವತೆಗಳ ಸಂಬಂಧವಾದ ಇನ್ನೂ ಅನೇಕ ವಿಷಯಗಳಿರುವವು. ಅವುಗಳನ್ನು ಆಯಾ ಸಂದರ್ಭಗಳಲ್ಲಿ ವಿವರಿಸಲಾಗಿದೆ.

॥ ಸಾಯಣಭಾಷ್ಯಂ ॥

**ದಶಮೇ ಮಂಡಲ ಏಕಾದಶೇಽನುವಾಕೇ ಚತುರ್ದಶ ಸೂಕ್ತಾನಿ ವ್ಯಾಖ್ಯಾತಾನಿ । ತ್ಯಂ ಚಿದಿತಿ ಷಡೃಚಂ ಪಂಚದಶಂ ಸೂಕ್ತಂ ಸಂಖ್ಯಪುತ್ರಸ್ಯಾತ್ರೇರಾರ್ಷಮಾನುಷ್ಟುಭಮಶ್ವಿದೇವತಾಕಂ । ತಥಾ ಚಾನುಕ್ರಾಂತಂ । ತ್ಯಂ ಷಟ್ ಸಾಂಖ್ಯೋಽತ್ರಿರಾಶ್ವಿನಮಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಾನುಷ್ಟುಭೇ ಛಂದಸೀದಂ ಸೂಕ್ತಂ । ಸೂತ್ರ್ಯತೇ ಹಿ । ಆ ನೋ ವಿಶ್ವಾಭಿಸ್ತ್ಯಂ ಚಿದತ್ರಿಮಿತ್ಯಾನುಷ್ಟುಭಂ । ಆ. ೪-೧೫ । ಇತಿ ॥**

ಅನುವಾದವು- ಹತ್ತನೆಯ ಮಂಡಲದ ಹನ್ನೊಂದನೆಯ ಅನುವಾಕದಲ್ಲಿ ಮೊದಲ ಹದಿನಾಲ್ಕು ಸೂಕ್ತಗಳನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈಗ ಈ ಅಧ್ಯಾಯದಲ್ಲಿ ಹದಿನೈದನೆಯ ಸೂಕ್ತದಿಂದ ಮುಂದಕ್ಕೆ ವಿವರಿಸಲಾಗುವುದು. **ತ್ಯಂ ಚಿತ್** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸಂಖ್ಯಪುತ್ರನಾದ ಅತ್ರಿಯು ಋಷಿಯು ; ಅಶ್ವಿನೀದೇವತೆಗಳು ದೇವತೆಯು ; ಅನುಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ತ್ಯಂ ಷಟ್ ಸಾಂಖ್ಯೋಽತ್ರಿರಾಶ್ವಿನಂ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳನ್ನು ಪಠಿಸುವಾಗ ಅನುಷ್ಟುಪ್ ಛಂದಸ್ಸಿನ ಋಕ್ಕುಗಳಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಅಶ್ವಲಾಯನಶ್ರೌತಸೂತ್ರದ— **ಆ ನೋ ವಿಶ್ವಾಭಿಸ್ತ್ಯಂ ಚಿದತ್ರಿಮಿತ್ಯಾನುಷ್ಟುಭಂ** ಎಂಬ ಸೂತ್ರದಿಂದ (ಆ. ೪-೧೫) ವಿವೃತವಾಗಿರುವುದು

## ಸೂಕ್ತ—೧೪೩

**ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೪೩ ॥**
**ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೧ ॥**

**॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೬ ॥**
**॥ ಋಷಿಃ—ಅತ್ರಿಃ ಸಾಂಖ್ಯಃ ॥**
**॥ ದೇವತಾ—ಅಶ್ವಿನಾ ॥**
**॥ ಛಂದಃ—ಅನುಷ್ಟುಪ್ ॥**

॥ ಸಂಹಿತಾಪಾಠಃ ॥

ತ್ಯಂ ಚಿದತ್ರಿಮೃತಜುರಮರ್ಥಮಶ್ವಂ ನ ಯಾತವೇ ।

ಕಕ್ಷೀವಂತಂ ಯದೀ ಪುನಾ ರಥಂ ನ ಕೃಣುಥೋ ನವಂ ॥ ೧ ॥

॥ ಪದಪಾಠಃ ॥

ತ್ಯಂ । ಚಿತ್ । ಅತ್ರಿಂ । ಋತಽಜುರಂ । ಅರ್ಥಂ । ಅಶ್ವಂ । ನ । ಯಾತವೇ ।

ಕಕ್ಷೀವಂತಂ । ಯದಿ । ಪುನರಿತಿ । ರಥಂ । ನ । ಕೃಣುಥಃ । ನವಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಶತದ್ವಾರೇ ಪೀಡಾಯಂತ್ರಗೃಹೇಽಸುರೈಃ ಪ್ರಕ್ಷಿಪ್ತೋ ಬದ್ಧಾಂಗೋ ಯೋಽತ್ರಿರಸ್ತಿ ತ್ಯಂ ಚಿತ್ತಮಪ್ಯತ್ರಿಮೃತಜುರಂ । ಋತಂ ಸ್ತೋತ್ರಂ ಯಜ್ಞೋ ವಾ । ತೇನ ಜೀರ್ಯಂತಂ । ಸರ್ವದಾ ಯುವಯೋಃ ಪರಿಚರಣಶೀಲಮಿತ್ಯರ್ಥಃ ॥ ಜೀರ್ಯತೇಃ ಕ್ವಿಪಿ ಬಹುಲಂ ಛಂದಸೀತ್ಯುತ್ವಂ ॥ ಯದ್ವಾ। ಋತೇನ ಪ್ರಾಪ್ತೇನಾಸುರಕೃತೋಪದ್ರವೇಣ ಜ್ವರಿತಂ ರುಗ್ಣಂ ॥ ಜ್ವರ ರೋಗೇ । ಜ್ವರತ್ವರೇತ್ಯಾದಿನಾ ವಕಾರಸ್ಯೋಪಧಾಯಾಶ್ಚ ಸ್ಥಾನ ಊಟ್ । ಜೂರೀ ಹಿಂಸಾಗತ್ಯೋರಿತ್ಯಸ್ಮಾದ್ವಾ ಕ್ವಿಪ್ । ಅನಯೋಃ ಪಕ್ಷಯೋಶ್ಛಾಂದಸೋ ಹ್ರಸ್ವಃ ॥ ಈದೃಶಂ ತಮತ್ರಿಮರ್ಥಮರ್ಥನೀಯಂ ಪ್ರಾಪ್ತವ್ಯಂ ಯಾತವೇ ಗಂತುಂ ಯುವಾಂ ಕೃತವಂತೌ । ತತ್ರ ದೃಷ್ಟಾಂತಃ । ಅಶ್ವಂ ನ । ಯಥಾಶ್ವೋ ಬಂಧನಾದ್ವಿಮುಕ್ತಃ ಸನ್ ಶೀಘ್ರಂ ಗಚ್ಛತಿ ಏವಮಯಮಪಿ ಯುವಯೋಃ ಪ್ರಸಾದಾದಸುರಕೃತಾದುಪದ್ರವಜಾತಾದ್ವಿಮುಚ್ಯಮಾನೋ ಯಥಾಸ್ಥಾನಮಗಚ್ಛದಿತ್ಯರ್ಥಃ ॥ ಯಾ ಪ್ರಾಪಣ ಇತ್ಯಸ್ಮಾತ್ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ ॥ ಯದಿ । ಅಪಿ ಚೇತ್ಯರ್ಥಃ । ಕಕ್ಷೀವಂತಂ । ಕಕ್ಷ್ಯಾ ರಜ್ಜುರಶ್ವಸ್ಯ । ತದ್ವಂತಂ ॥ ಆಸಂದೀವದಷ್ಠೀವದಿತ್ಯಾದೌ ನಿಪಾತನಾತ್ಸಂಪ್ರಸಾರಣಂ ॥ ದೀರ್ಘತಮಸಃ ಪುತ್ರಮುಶಿಕ್ಪ್ರಸೂತಮೃಷಿಂ ಮಂದಬುದ್ಧಿಂ ಸಂತಂ ಯುವಾಂ ಪುನರ್ನವಂ ಪುನರಭಿನವಪ್ರಜ್ಞಂ ಕೃಣುಥಃ । ಅಕೃಣುತಂ । ಅಕುರುತಂ । ರಥಂ ನ । ಯಥಾ ಕಶ್ಚಿಚ್ಛಿಲ್ಪೀ ಜೀರ್ಣಂ ರಥಂ ಪುನರಭಿನವಂ ಕರೋತಿ ತದ್ವತ್ ॥ ಕೃವಿ ಹಿಂಸಾಕರಣಯೋಶ್ಚ । ಇದಿತ್ತ್ವಾನ್ನುಮ್ । ಲಙರ್ಥೇ ವ್ಯತ್ಯಯೇನ ಲಟ್ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ತತ್ಸಂನಿಯೋಗೇನಾಕಾರಾಂತಾದೇಶಶ್ಚ। ತಸ್ಯಾತೋ ಲೋಪೇ ಸತಿ ಸ್ಥಾನಿವದ್ಭಾವಾಲ್ಲಘೂಪಧಗುಣಾಭಾವಃ । ಸತಿ ಶಿಷ್ಟೋಽಪಿ ವಿಕರಣಸ್ವರೋ ಲಸಾರ್ವಧಾತುಕಸ್ವರಂ ನ ಬಾಧತೇ । ಪಾ. ೬-೧-೧೫೮-೧೧ । ಇತಿ ವಚನಾತ್ತಿಙ ಏವ ಸ್ವರಃ ಶಿಷ್ಯತೇ । ನಿಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಋತಜುರಂ**—ನಿಮ್ಮನ್ನು ಸ್ತುತಿಸುತ್ತಾ ಜೀರ್ಣಶರೀರಿಯಾದ । **ತ್ಯಂ ಚಿತ್**—ಪ್ರಸಿದ್ಧನಾದ । **ಅತ್ರಿಂ**—ಈ ಸೂಕ್ತದ್ರಷ್ಟೃವಾದ ಅತ್ರಿಋಷಿಯನ್ನು । **ಅಶ್ವಂ ನ**—ಕಟ್ಟಿಹಾಕಿದ್ದ

ಅಶ್ವವನ್ನು ಬಿಚ್ಚಿಬಿಟ್ಟರೆ ಅದು ಓಡಿಹೋಗುವಂತೆ | **ಅರ್ಥಂ** -- ತಾನು ಹೋಗಬೇಕಾದ ಸ್ಥಳಕ್ಕೆ | **ಯಾತವೇ**— ಹೋಗುವುದಕ್ಕಾಗಿ ಅಸುರರಿಂದ ಬಿಡಿಸಿದಿರಿ | **ಯದಿ**—ಮತ್ತು | **ರಥಂ ನ**—ಶಿಲ್ಪಿಯು ಮುರಿದುಹೋದ ರಥವನ್ನು ಸರಿಮಾಡುವಂತೆ | **ಕಕ್ಷೀವಂತಂ**—ಕಕ್ಷೀವಂತನೆಂಬ ಮಂದಬುದ್ಧಿಯಾದ ಋಷಿಯನ್ನು | **ಪುನಃ**— ಮತ್ತೆ | **ನವಂ**—ಅಭಿನವಪ್ರಜ್ಞನನ್ನಾಗಿ (ಹೊಸಬನನ್ನಾಗಿ) | **ಕೃಣುಥಃ**--ಮಾಡಿದಿರಿ.

|| ಭಾವಾರ್ಥ ||

ಹಗ್ಗವನ್ನು ಬಿಚ್ಚಿದ ಅಶ್ವವು ಸ್ವೇಚ್ಛೆಯಾಗಿ ಹೋಗುವಂತೆ ನಿಮ್ಮನ್ನೇ ಯಾವಾಗಲೂ ಸ್ತುತಿಸಿ ಜೀರ್ಣ ಶರೀರಿಯಾದ ಪ್ರಸಿದ್ಧನಾದ ಅತ್ರಿಋಷಿಯನ್ನು ಅಸುರರ ಬಂಧನದಿಂದ ಬಿಡಿಸಿ ಅವನ ಸ್ಥಳಕ್ಕೆ ಹೋಗುವಂತೆ ಮಾಡಿದಿರಿ. ಶಿಲ್ಪಿಯು ಜೀರ್ಣವಾದ ರಥವನ್ನು ಸರಿಪಡಿಸಿ ಹೊಸದಾಗಿ ಮಾಡುವಂತೆ ಮಂದಬುದ್ಧಿಯಾದ ಕಕ್ಷೀವಂತ ನೆಂಬ ಋಷಿಯನ್ನು ಪ್ರಾಜ್ಞನಾದ ಹೊಸಋಷಿಯನ್ನಾಗಿ ಮಾಡಿದಿರಿ.

## English Translation.

You made this Atri, ever diligent in worship, (swift) to run to the goal like a horse, and you renewed Kakshivat as (a wheelwright renews) a car.

|| ವಿಶೇಷವಿಷಯಗಳು ||

ಅತ್ರಿಋಷಿಗೆ ಅಸುರರು ತೊಂದರೆ ಕೊಟ್ಟ ವಿಷಯವು ಋ. ಸಂ. ೧–೧೧೨–೭, ೧–೧೧೬–೮, ೧–೧೧೭–೩, ೧–೧೧೮–೭, ೧–೧೧೯–೬, ೫–೭೮–೪, ೫, ೬; ೭–೭೧–೫, ೮–೬೨–೩, ೭, ೮, ೯; ೧೦–೩೯–೯ ಇತ್ಯಾದಿ ಋಕ್ಕುಗಳಲ್ಲಿ ಉಕ್ತವಾಗಿದೆ. ಆದರೆ ಈ ಅತ್ರಿಋಷಿಯು ಯಾರು? ೫ ನೇ ಮಂಡಲದ್ರಷ್ಟೃ ವಾದ ಅತ್ರಿರ್ಭೌಮಃ ಎಂಬ ಋಷಿಯೇ? ಅಥವಾ ಪ್ರಕೃತ ಸೂಕ್ತದ ದ್ರಷ್ಟೃವಾದ ಸಂಖ್ಯಋಷಿಯ ಪುತ್ರನಾದ ಅತ್ರಿಯೇ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ೫ ನೇ ಮಂಡಲದಲ್ಲಿ ಅತ್ರಿಋಷಿಯು ಈ ವಿಷಯವನ್ನು ಎಲ್ಲಿಯೂ ಹೇಳಿಕೊಂಡಿಲ್ಲ. ಅತ್ರಿವಂಶದ ಸಪ್ತವಧ್ರಿ ಎಂಬ ಋಷಿಯು ಮಾತ್ರ ೫ ನೇ ಮಂಡಲದ ೭೮ ನೇ ಸೂಕ್ತದ ೪, ೫, ೬ ನೇ ಋಕ್ಕುಗಳಲ್ಲಿ ಈ ವಿಷಯವನ್ನು ವರ್ಣಿಸಿರುವನು. ಬೇರೆ ಸ್ಥಳಗಳಲ್ಲಿ ಈ ವಿಷಯವಾಗಿ ಅನೇಕ ವರ್ಣನೆಗಳಿದ್ದರೂ ಅವುಗಳಲ್ಲೆಲ್ಲಾ ಅತ್ರಿಋಷಿಯೆಂದು ಮಾತ್ರ ಹೇಳಿರುವುದರಿಂದ ಯಾವ ಅತ್ರಿಋಷಿಯು ಎಂಬುದು ಸ್ಪಷ್ಟವಾಗಿಲ್ಲ. ಆದರೂ ಪ್ರಕೃತಸೂಕ್ತದ ಋಷಿಯಾದ ಅತ್ರಿಃ ಸಾಂಖ್ಯಃ ಎಂಬ ಋಷಿಯೇ ಆ ವಿಷಯ ವನ್ನು ಹೇಳಿರುವುದರಿಂದ ಈ ಋಷಿಯೇ ಇಲ್ಲಿ ನಿರ್ದಿಷ್ಟನಾಗಿರಬೇಕೆಂದು ಊಹಿಸಬಹುದು.

ಈ ಋಕ್ಕಿನ ಪೂರ್ವಾರ್ಧದಲ್ಲಿಯೂ ಉತ್ತರಾರ್ಧದಲ್ಲಿಯೂ ಒಂದೊಂದು ದೃಷ್ಟಾಂತದ ಮೂಲಕ ವಿಷಯ ವನ್ನು ನಿರೂಪಿಸಲಾಗಿದೆ. ಹಗ್ಗದಿಂದ ಕಟ್ಟಿಹಾಕಿದ್ದ ಅಶ್ವವನ್ನು ಹಗ್ಗದಿಂದ ಬಿಚ್ಚಿದಕೂಡಲೇ ಅದು ಸ್ವೇಚ್ಛೆಯಾಗಿ ಓಡಿಹೋಗುವಂತೆ ಹಗ್ಗಗಳಿಂದ ಕಟ್ಟಿ ಪೀಡಾಯಂತ್ರಗೃಹದಲ್ಲಿ ಹಾಕಲ್ಪಟ್ಟು ಅಸುರರಿಂದ ನಾನಾವಿಧ ಚಿತ್ರಹಿಂಸೆಗ ಳನ್ನು ಅನುಭವಿಸುತ್ತಿದ್ದ ಅತ್ರಿಋಷಿಯನ್ನು ಅಶ್ವಿನೀದೇವತೆಗಳು ಬಂದು ಬಿಡಿಸಿದರು. ಅದರಿಂದ ಅತ್ರಿಋಷಿಯು ಬಂಧವಿಮುಕ್ತನಾಗಿ ತನಗೆ ಬೇಕಾದ ಸ್ಥಳಕ್ಕೆ ಹೋಗಲು ಅವಕಾಶವಾಯಿತು.

ಉತ್ತರಾರ್ಧದಲ್ಲಿ ಕಕ್ಷೀವಾನ್ ಎಂಬ ಋಷಿಯ ಪ್ರಸ್ತಾಪವಿದೆ ಈ ಋಷಿಯು ದೀರ್ಘತಮಾಃ ಎಂಬ ಪ್ರಸಿದ್ಧನಾದ ಋಷಿಯ ಪುತ್ರನು. ಇವನು ಮಂದಬುದ್ಧಿಯುಳ್ಳವನಾಗಿದ್ದನು. ಶಿಲ್ಪಿಯು ಮುರಿದುಹೋಗಿರುವ ರಥವನ್ನು ಸರಿಪಡಿಸಿ ಹೊಸದಾಗಿರುವಂತೆ ಹೇಗೆ ಮಾಡುವನೋ ಅದರಂತೆ ಅಶ್ವಿನೀದೇವತೆಗಳು ಬುದ್ಧಿಶೂನ್ಯನಾಗಿದ್ದ ಎಂದರೆ ಅಲ್ಪಮತಿಯಾಗಿದ್ದ ಕಕ್ಷೀವಾನ್ ಎಂಬ ಋಷಿಯನ್ನು ಪ್ರಜ್ಞಾವಂತನನ್ನಾಗಿ (ಬುದ್ಧಿವಂತನನ್ನಾಗಿ) ಮಾಡಿದರು.

|| ಸಂಹಿತಾಪಾಠಃ ||

ತ್ಯಂ ಚಿದಶ್ವಂ ನ ವಾಜಿನಮರೇಣವೋ ಯಮತ್ನತ ।
ದೃಳ್ಹಂ ಗ್ರಂಥಿಂ ನ ವಿ ಷ್ಯತಮತ್ರಿಂ ಯವಿಷ್ಠಮಾ ರಜಃ ॥ ೨ ॥

|| ಪದಪಾಠಃ ||

ತ್ಯಂ । ಚಿತ್ । ಅಶ್ವಂ । ನ । ವಾಜಿನಂ । ಅರೇಣವಃ । ಯಂ । ಅತ್ನತ ।
ದೃಳ್ಹಂ । ಗ್ರಂಥಿಂ । ನ । ವಿ । ಸ್ಯತಂ । ಅತ್ರಿಂ । ಯವಿಷ್ಠಂ । ಆ । ರಜಃ ॥ ೨ ॥

|| ಸಾಯಣಭಾಷ್ಯಂ ||

ಅರೇಣವೋಽಹಿಂಸ್ಯಮಾನಾಃ ಪ್ರಬಲಾ ಅಸುರಾ ವಾಜಿನಂ ವೇಗವಂತಮಶ್ವಂ ನಾಶ್ವಮಿವ ಯಮತ್ರಿಮತ್ನತ ಅತನ್ವತ ಬದ್ಧಮಕೃಷತ ॥ ತನೋತೇರ್ಲುಙಿ ತನಿಪತ್ಯೋಶ್ಛಂದಸೀತ್ಯುಪಧಾಲೋಪಃ॥ ತ್ಯಂ ಚಿತ್ತಂ ಚಾತ್ರಿಂ ಯವಿಷ್ಠಂ ಯುವತಮಂ ಸ್ತುತೇರ್ಮಿಶ್ರಯಿತೃತಮಂ ವಾ ರಜಃ ॥ ರಜಂತ್ಯಸ್ಮಿನ್ನಿತಿ ರಜೋ ಭೂಲೋಕಃ ॥ ರಜ ಇಮಂ ಲೋಕಮಾಭಿ ಹೇ ಅಶ್ವಿನೌ ವಿ ಷ್ಯತಂ । ವ್ಯಮುಂಚತಂ । ದೃಢಂ ಸ್ಥಿರತರಂ ಗ್ರಂಥಿಂ ನ ಗ್ರಂಥಿಮಿವ । ಯಥಾ ಕಶ್ಚಿತ್ತ್ವಾದೃಶಂ ಗ್ರಂಥಿಮಯತ್ನೇನ ವಿಮುಂಚತಿ ತಥಾ ಯುವಾಂ ತಮೃಷಿಮಸುರಕೃತಾದ್ಬಂಧನಾನ್ಮೋಚಿತವಂತಾವಿತ್ಯರ್ಥಃ ॥ ಸ್ಯತಮಿತಿ ಷೋಽಂತಕರ್ಮಣೀತ್ಯಸ್ಮಾಲ್ಲಙಿ ಶ್ಯನ್ಯೋತಃ ಶ್ಯನೀತ್ಯೋಕಾರಲೋಪೇ ರೂಪಂ । ಛಾಂದಸೋಽಡಭಾವಃ ॥ ಯದ್ವಾ । ಅತ್ರಿಂ ಮಾಂ ಬಂದಾದ್ವಿ ಷ್ಯತಂ ವಿಮುಂಚತಮಿತ್ಯೃಷಿರಸುರೈರ್ಬದ್ಧಃ ಸನ್ನಶ್ವಿನೌ ಪ್ರಾರ್ಥಯತೇ ॥

|| ಪ್ರತಿಪದಾರ್ಥ ||

(ಎಲೈ ಅಶ್ವಿನೀದೇವತೆಗಳೇ) ವಾಜಿನಂ—ವೇಗಗಮನವುಳ್ಳ । ಅಶ್ವಂ ನ—ಅಶ್ವವನ್ನು ಹಗ್ಗದಿಂದ ಕಟ್ಟಿ ಹಾಕುವಂತೆ । ಅರೇಣವಃ—ಪ್ರಬಲರಾದ ಅಸುರರು । ಯಂ—ಯಾವ ಅತ್ರಿಋಷಿಯನ್ನು । ಅತ್ನತ—ಹಗ್ಗಗಳಿಂದ ಕಟ್ಟಿಹಾಕಿದ್ದರೋ ಅತಂಹ । ತ್ಯಂ ಚಿತ್—ಪ್ರಸಿದ್ಧನಾದ ಪುತ್ರ। ಯವಿಷ್ಠಂ—ಅತ್ಯಂತಯುವಕನಾದ । ಅತ್ರಿಂ—ಅತ್ರಿಯನ್ನು । ಆ ರಜಃ—ಭೂಮಿಯ ಮೇಲೆ ಸ್ವೇಚ್ಛೆಯಾಗಿ ಸಂಚರಿಸುವಂತೆ । ದೃಳ್ಹಂ—ದೃಢವಾಗಿ ಕಟ್ಟಿದ । ಗ್ರಂಥಿಂ ನ—ಗಂಟನ್ನು ಬಿಚ್ಚುವಂತೆ । ವಿಷ್ಯತ—ಬಿಡಿಸಿದಿರಿ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ವೇಗಗಮನವುಳ್ಳ ಅಶ್ವವನ್ನು ಓಡಿಹೋಗದಂತೆ ಹಗ್ಗದಿಂದ ಹೇಗೆ ಕಟ್ಟಿಹಾಕುವರೋ ಅದರಂತೆ ಪ್ರಬಲರಾದ ಅಸುರರು ಯುವಕನಾದ ಅತ್ರಿಋಷಿಯನ್ನು ಹಗ್ಗಗಳಿಂದ ಕಟ್ಟಿಹಾಕಿದ್ದರು. ಎಲೈ ಅಶ್ವಿನೀ ದೇವತೆಗಳೇ, ನೀವು ಆ ಅತ್ರಿಋಷಿಯನ್ನು ಕಟ್ಟಿದ ಹಗ್ಗದ ಬಲವಾದ ಗಂಟುಗಳನ್ನು ಬಿಚ್ಚಿ ಅವನನ್ನು ಬಂಧಮುಕ್ತನನ್ನಾಗಿ ಮಾಡಿದಿರಿ.

English Translation

This Atri, whom the irresistible (Asuras) dragged bound like a swift horse, you unloosed like a strong knot, (setting him) the youngest born upon the earth.

|| ಸಂಹಿತಾಪಾಠಃ ||

ನರಾ ದಂಸಿಷ್ಠಾವತ್ರಯೇ ಶುಭ್ರಾ ಸಿಷಾಸತಂ ಧಿಯಃ ।
ಅಥಾ ಹಿ ವಾಂ ದಿವೋ ನರಾ ಪುನಃ ಸ್ತೋಮೋ ನ ವಿಶಸೇ ॥ ೩ ॥

|| ಪದಪಾಠಃ ||

ನರಾ । ದಂಸಿಷ್ಠೌ । ಅತ್ರಯೇ । ಶುಭ್ರಾ । ಸಿಸಾಸತಂ । ಧಿಯಃ ।
ಅಥ । ಹಿ । ವಾಂ । ದಿವಃ । ನರಾ । ಪುನರಿತಿ । ಸ್ತೋಮಃ । ನ । ವಿऽಶಸೇ ॥ ೩ ॥

|| ಸಾಯಣಭಾಷ್ಯಂ ||

ಹೇ ನರಾ ನರೌ ನೇತಾರೌ ಹೇ ದಂಸಿಷ್ಠೌ ದರ್ಶನೀಯತಮೌ ಶುಭ್ರಾ ಶೋಭಮಾನೌ ಈದೃಶೌ ಹೇ ಅಶ್ವಿನೌ ಅತ್ರಯ ಋಷಯೇ ಮಹ್ಯಂ ಧಿಯಃ ಕರ್ಮಾಣಿ ಬುದ್ಧೀರ್ವಾ ಸಿಷಾಸತಂ । ದಾತುಮಿಚ್ಛತಂ ॥ ಷಣು ದಾನೇ ॥ ಯದ್ವಾ। ಅತ್ರಯ ಇತಿ ಷಷ್ಠ್ಯರ್ಥೇ ಚತುರ್ಥೀ । ಅತ್ರೇರ್ಮಮ ಧಿಯಃ ಸ್ತುತೀಃ ಕರ್ಮಾಣಿ ವಾ ಸಿಷಾಸತಂ । ಸಂಭಕ್ತುಮಿಚ್ಛತಂ । ಸೇವೇಥಾಮಿತ್ಯರ್ಥಃ ॥ ವನ ಷಣ ಸಂಭಕ್ತೌ । ಅಸ್ಮಾತ್ಸನತೇಃ ಸನೋತೇರ್ವಾ ಸನಿ ಸನೀವಂತರ್ಧೇತಿ ವಿಕಲ್ಪನಾದಿಡಭಾವೇ ಜನಸನಖನಾಮಿತ್ಯಾತ್ವಂ । ಶುಭ್ರೇತ್ಯಸ್ಯಾಮಂತ್ರಿತಸ್ಯಾಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವತ್ತ್ವೇನ ಪದಾದಪರತ್ವೇನ ಪಾದಾದಿತ್ವಾತ್ತಿಙ್ಙತಿಙ ಇತಿ ನಿಘಾತಾಭಾವಃ । ಅಮುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಸನೋ ನಿತ್ತ್ವಾದಾದ್ಯುದಾತ್ತತ್ವಂ ॥ ಅಥಾ ಹ್ಯನಂತರಮೇವ ದಿವಃ। ದೀವ್ಯತೀತಿ ಸ್ತೌತೀತಿ ದ್ಯೌಃ ಸ್ತೋತಾ । ತಸ್ಯ ಮಮ ಸ್ತೋಮೋ ನ । ನಶಬ್ದಶ್ಚಾರ್ಥೇ । ಸ್ತೋತ್ರಂ ಚ ಹೇ ನರಾ ನೇತಾರಾವಶ್ವಿನೌ ವಾಂ ಯುವಾಂ ಪುನರ್ವಿಶಸೇ । ಪುನರೇವಾದ್ಯಾಪಿ ವಿಶೇಷೇಣ ಶಂಸಿತುಂ ಪ್ರಭವತೀತಿ ಶೇಷಃ ॥

|| ಪ್ರತಿಪದಾರ್ಥ ||

**ನರಾ**—ಕರ್ಮನೇತೃಗಳೂ | **ದಂಸಿಷ್ಠೌ**—ಆಕರ್ಷಕವಾದ ರೂಪವುಳ್ಳವರೂ | **ಶುಭ್ರಾ**—ನಿರ್ಮಲ ತೇಜಸ್ಸಿನಿಂದ ಪ್ರಕಾಶಿಸುವವರೂ ಆದ ಎಲೈ ಅಶ್ವಿನೀದೇವತೆಗಳೇ, ನೀವು | **ಅತ್ರಯೇ**—ಅತ್ರಿಯೆಂಬ ಹೆಸರಿನ ನನಗೆ | **ಧಿಯಃ**—ಬುದ್ಧಿಗಳನ್ನು (ಹಿತೋಪದೇಶಗಳನ್ನು) | **ಸಿಷಾಸತಂ**—ಕೊಡಬೇಕೆಂದು ಇಚ್ಛಿಸಿದಿರಿ [ಅಥವಾ | **ಅತ್ರೇಃ**—ಅತ್ರಿಯಾದ ನನ್ನ | **ಧಿಯಃ**—ಸ್ತುತಿಗಳನ್ನು ಅಥವಾ ಕರ್ಮಗಳನ್ನು | **ಸಿಷಾಸತಂ**—ಸೇವಿಸಲು ಇಚ್ಛಿಸಿದಿರಿ] | **ಅಥ** ಇ—ಅನಂತರ | **ದಿವಃ**—ಸ್ತುತಿಸುತ್ತಿರುವ ನನ್ನ | **ಸ್ತೋಮಃ ನ**—ಸ್ತೋತ್ರವೂ ಕೂಡ | **ನರಾ**—ನೇತೃಗಳಾದ | **ವಾಂ**—ನಿಮ್ಮನ್ನು | **ಪುನಃ**—ಮತ್ತೆ | **ವಿಶಸೇ**—ಪ್ರಶಂಸಿಸುತ್ತದೆ.

|| ಭಾವಾರ್ಥ ||

ಕರ್ಮನೇತೃಗಳೂ, ಆಕರ್ಷಿತವಾದ ರೂಪವುಳ್ಳವರೂ, ದಿವ್ಯ ತೇಜಸ್ಸಿನಿಂದ ಬೆಳಗುವವರೂ ಆದ ಎಲೈ ಅಶ್ವಿನೀದೇವತೆಗಳೇ, ನೀವು ಅತ್ರಿಋಷಿಯಾದ ನನಗೆ ಬುದ್ಧಿವಾದಗಳನ್ನು ಎಂದರೆ ವಿವೇಕಬುದ್ಧಿಯನ್ನು ಕೊಡಲು ಇಚ್ಛಿಸಿದಿರಿ. ಅಥವಾ ನನ್ನ ಸ್ತುತಿತಿಗಳನ್ನು ಕೇಳಲು ಇಚ್ಛಿಸಿದಿರಿ. ಅನಂತರ ನಿಮ್ಮನ್ನು ಸ್ತುತಿಸುತ್ತಿರುವ ನನ್ನ ಸ್ತುತಿಯೂ ಸಹ ನೇತೃಗಳಾದ ನಿಮ್ಮನ್ನು ಪ್ರಶಂಸೆಮಾಡುತ್ತದೆ.

## English Translation

Leaders (of rites), of goodly aspect and radiant, deign to accept Atri's praises, and so the praise of your worshipper (is) to be sung again to you leaders (of rites).

|| ಸಂಹಿತಾಪಾಠಃ ||

ಚಿತೇ ತದ್ವಾಂ ಸುರಾಧಸಾ ರಾತಿಃ ಸುಮತಿರಶ್ವಿನಾ |
ಆ ಯನ್ನಃ ಸದನೇ ಪೃಥೌ ಸಮನೇ ಪರ್ಷಥೋ ನರಾ || ೪ ||

|| ಪದಪಾಠಃ ||

ಚಿತೇ | ತತ್ | ವಾಂ | ಸುऽರಾಧಸಾ | ರಾತಿಃ | ಸುऽಮತಿಃ | ಅಶ್ವಿನಾ |
ಆ | ಯತ್ ನಃ | ಸದನೇ | ಪೃಥೌ | ಸಮನೇ | ಪರ್ಷಥಃ | ನರಾ || ೪ ||

|| ಸಾಯಣಭಾಷ್ಯಂ ||

ಹೇ ಸುರಾಧಸಾ ಶೋಭನದಾನಾವಶ್ವಿನಾ ಹೇ ಅಶ್ವಿನೌ ಸುಮತಿಃ ಶೋಭನಾ ಸ್ತುತಿರಸ್ಮದೀಯಾ ರಾತಿರ್ಹವಿರ್ದಾನಂ ಚ ತತ್ತಸ್ಮಾತ್ಕಾರಣಾದ್ವಾಂ ಯುವಯೋಶ್ಚಿತ್ತೇ ಜ್ಞಾನಾಯ ಭವತಿ || ಚಿತೇ

**ಸಂಜ್ಞಾನೇ । ಅಸ್ಮಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥ ಯದ್ಯಸ್ಮಾತ್ಕಾರಣಾತ್ಸದನೇ ಯಜ್ಞಗೃಹೇ ಪೃಥೌ ವಿಸ್ತೀರ್ಣೇ ಸಮನೇ ಯಜ್ಞೇ ನೋಽಸ್ಮಾನ್ ಹೇ ನರಾ ನೇತಾರಾವಾ ಪರ್ಷಥಃ ಅಪೂರಯಥಃ ಅಭಿತೋ ರಕ್ಷಥೋ ವಾ ತಸ್ಮಾದ್ಯುವಾಮಸ್ಮದೀಯಂ ಪರಿಚರಣಂ ಜ್ಞಾತವಂತಾವಿತ್ಯನುಮಿಮಹೇ ॥ ಪೄ ಪಾಲನಪೂರಣಯೋರಿತ್ಯಸ್ಮಾಲ್ಲೇಟಿ ಸಿಬ್ಬಹುಲಮಿತಿ ಸಿಪ್ । ತತಃ ಶಪ್ ॥**

॥ ಪ್ರತಿಪದಾರ್ಥ ॥

**ಸುರಾಧಸಾ—** ಉತ್ತಮಧನದಾತೃಗಳಾದವರೂ । **ನರಾ—**ನೇತೃಗಳಾದವರೂ ಆದ । **ಅಶ್ವಿನಾ—** ಎಲೈ ಅಶ್ವಿನೀದೇವತೆಗಳೇ । **ಯತ್—**ಯಾವಕಾರಣಕ್ಕಾಗಿ । **ಪೃಥೌ—**ವಿಸ್ತೀರ್ಣವಾದ । **ಸದನೇ—**ಯಜ್ಞ ಗೃಹದಲ್ಲಿಯೂ । **ಸಮನೇ—**ಅಲ್ಲಿ ನಡೆಯುತ್ತಿರುವ ಯಜ್ಞದಲ್ಲಿಯೂ । **ನಃ—**ನಮ್ಮನ್ನು । **ಆ ಪರ್ಷಥಃ—** ರಕ್ಷಿಸುತ್ತೀರೋ । **ತತ್—**ಆ ಕಾರಣಕ್ಕಾಗಿ । **ವಾಂ—**ನಿಮಗೆ । **ಚಿತೇ—**ನಮ್ಮ ವಿಷಯದಲ್ಲಿ ತಿಳಿವಳಿಕೆ ಇದೆ.

॥ ಭಾವಾರ್ಥ ॥

ಉತ್ತಮಧನದಾತೃಗಳೂ, ಕರ್ಮನೇತೃಗಳೂ ಆದ ಎಲೈ ಅಶ್ವಿನೀದೇವತೆಗಳೇ, ನಮ್ಮ ವಿಚಾರದಲ್ಲಿ ನಿಮಗೆ ತಿಳಿವಳಿಕೆ (ಅಥವಾ ಅನುಗ್ರಹಬುದ್ಧಿಯು) ಇದ್ದೇ ಇದೆ. ಏಕೆಂದರೆ ವಿಸ್ತೀರ್ಣವಾದ ನಮ್ಮ ಯಜ್ಞಗೃಹದಲ್ಲಿಯೂ, ಯಜ್ಞಕರ್ಮಗಳಲ್ಲಿಯೂ ನಮಗೆ ಬಾಧೆಯುಂಟಾಗದಂತೆ ನೀವು ನಮ್ಮನ್ನು ರಕ್ಷಿಸುತ್ತೀರಿ.

## English Translation.

Munificent Ashwins, my offering and praise (is) for your recognition because, leaders (of rites), you protect us at the sacrifice in the spacious sacrificial hall.

॥ ಸಂಹಿತಾಪಾಠಃ ॥

ಯುವಂ ಭುಜ್ಯುಂ ಸಮುದ್ರ ಆ ರಜಸಃ ಪಾರ ಈಂಖಿತಂ ।
ಯಾತಮಚ್ಛಾ ಪತತ್ರಿಭಿರ್ನಾಸತ್ಯಾ ಸಾತಯೇ ಕೃತಂ ॥ ೫ ॥

॥ ಪದಪಾಠಃ ॥

ಯುವಂ । ಭುಜ್ಯುಂ । ಸಮುದ್ರೇ । ಆ । ರಜಸಃ । ಪಾರೇ । ಈಂಖಿತಂ ।
ಯಾತಂ । ಅಚ್ಛ । ಪತತ್ರಿಽಭಿಃ । ನಾಸತ್ಯಾ । ಸಾತಯೇ । ಕೃತಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಂ ಸಮುದ್ರೇ ಉದಧೌ ನಿಮಗ್ನಂ ರಜಸ ಉದಕಸ್ಯ ಪಾರೇ ಪ್ರಾಂತೇ ತರಂಗಸಮೂಹ ಈಂಖಿತಂ ಡೋಲಾಯಿತಂ ಏವಂಭೂತಂ ಭುಜ್ಯುಂ ತುಗ್ರಪುತ್ರಮಚ್ಛಾಭಿ ಪತತ್ರಿಭಿಃ ಪಕ್ಷೋಪೇತೈರ್ನೌರ್ವಿಶೇಷೈಃ ಸಹಾ ಯಾತಂ । ಆಗತವಂತೌ ಸ್ಥಃ । ಆಗತ್ಯ ಚ ಹೇ ನಾಸತ್ಯಾ ಸತ್ಯಸ್ಯ ನೇತಾರೌ ಸತ್ಯಸ್ವಭಾವೌ ವಾ ಹೇ ಅಶ್ವಿನೌ ಸಾತಯೇ ಯುವಯೋಃ ಸಂಭಜನಾಯ ಸಮರ್ಥಂ ಕೃತಂ । ಪುನರ್ಯುವಾನಂ ಕುರುತಂ ॥ ಕರೋತೇರ್ಲಙಿ ಛಾಂದಸೋ ವಿಕರಣಸ್ಯ ಲುಕ್। ಅಡಭಾವಶ್ಚ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ), **ಯುವಂ**—ನೀವು । **ಸಮುದ್ರೇ**—ಸಮುದ್ರದಲ್ಲಿ । **ರಜಸಃ ಪಾರೇ**—ಉದಕಗಳ ತುದಿಯಲ್ಲಿ ಎಂದರೆ ಅಲೆಗಳ ಮಧ್ಯದಲ್ಲಿ ಬಿದ್ದು । **ಈಂಖಿತಂ**—ಒದ್ದಾಡುತ್ತಿದ್ದ । **ಭುಜ್ಯುಂ**—ತುಗ್ರಪುತ್ರನಾದ ಭುಜ್ಯುವನ್ನು । **ಅಚ್ಛ**—ಅವನ ಅಭಿಮುಖವಾಗಿ ಬಂದು । **ಪತತ್ರಿಭಿಃ**—ರೆಕ್ಕೆಗಳಂತಿರುವ ನಿಮ್ಮ ದೋಣಿಗಳ ಮೂಲಕ । **ಆ ಯಾತಂ**—ಕರೆದುಕೊಂಡುಬಂದಿರಿ, ಅನಂತರ । **ನಾಸತ್ಯಾ**—ಸತ್ಯಸ್ವಭಾವದವರಾದ ಎಲೈ ಅಶ್ವಿನೀದೇವತೆಗಳೇ । **ಸಾತಯೇ**—ನಿಮ್ಮನ್ನು ಸ್ತುತಿಸಲು ಸಮರ್ಥನಾಗುವಂತೆ । **ಕೃತಂ**—ಆ ಭುಜ್ಯುವನ್ನು ಮಾಡಿದಿರಿ

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಸಮುದ್ರದಲ್ಲಿ ಅಲೆಗಳ ಮಧ್ಯದಲ್ಲಿ ಬಿದ್ದು ಒದ್ದಾಡುತ್ತಿದ್ದ ತುಗ್ರಪುತ್ರನಾದ ಭುಜ್ಯುವೆಂಬುವನನ್ನು ನೀವು ರೆಕ್ಕೆಗಳಂತಿರುವ ನಿಮ್ಮ ದೋಣಿಗಳ ಸಹಾಯದಿಂದ ರಕ್ಷಿಸಿ ಅಲ್ಲಿಂದ ಕರೆದುಕೊಂಡು ಬಂದಿರಿ ಮತ್ತು ಆ ಭುಜ್ಯುವು ನಿಮ್ಮನ್ನು ಸ್ತುತಿಸಲು ಸಮರ್ಥನಾಗುವಂತೆ ಮಾಡಿದಿರಿ.

## English Translation.

You came with winged (steeds) to Bhujyu (immersed) in the ocean, at the world's end, perturbed; and, leaders of truth, you restored him to your worship.

॥ ವಿಶೇಷವಿಷಯಗಳು ॥

ಭುಜ್ಯುವನ್ನು ಅಶ್ವಿನೀದೇವತೆಗಳು ಸಮುದ್ರಮಧ್ಯದಿಂದ ಕಾಪಾಡಿದ ವಿಷಯವನ್ನು ನಾವು ಈ ಸೂಕ್ತದ ಪೀಠಿಕೆಯಲ್ಲಿಯೂ, ಇತರ ಸ್ಥಳಗಳಲ್ಲಿಯೂ ವಿವರಿಸಿದ್ದೇವೆ. ಈ ವಿಷಯವು ಋ. ಸಂ. ೧-೧೧೬-೩, ೪, ೫; ೧-೧೧೭-೧೪, ೧೫, ೧-೧೮೨-೫, ೬, ೭; ೭-೬೮-೭, ೧-೧೧೨-೬, ೨೦, ೧-೧೧೮-೬; ೧-೧೧೯-೪; ೧-೧೫೮-೩, ೬-೬೨-೬; ೭-೬೯-೭; ೮-೫-೨೨; ೧೦-೩೯-೪; ೧೦-೪೭-೭; ೧೦-೬೫-೧೨; ೧೦-೧೪೩-೫ ಎಂಬ ಈ ಋಕ್ಕುಗಳಲ್ಲಿಯೂ ಉಕ್ತವಾಗಿದೆ.

॥ ಸಂಹಿತಾಪಾಠಃ ॥

ಆ ವಾಂ ಸುಮ್ನೈಃ ಶಂಯೂ ಇವ ಮಂಹಿಷ್ಠಾ ವಿಶ್ವವೇದಸಾ ।

ಸಮಸ್ಮೇ ಭೂಷತಂ ನರೋತ್ಸಂ ನ ಪಿಪ್ಯುಷೀರಿಷಃ ॥ ೬ ॥

॥ ಪದಪಾಠಃ ॥

ಆ । ವಾಂ । ಸುವ್ನೈಃ । ಶಂಯೂಽಇವೇತಿ ಶಂಯೂಽಇವ । ಮಂಹಿಷ್ಠಾ । ವಿಶ್ವಽವೇದಸಾ ।

ಸಂ । ಅಸ್ಮೇ ಇತಿ । ಭೂಷತಂ । ನರಾ । ಉತ್ಸಂ । ನ । ಪಿಪ್ಯುಷೀಃ । ಇಷಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ವಿಶ್ವವೇದಸಾ ಸರ್ವಜ್ಞೌ ಸರ್ವಧನೌ ವಾ ಹೇ ನರಾ ನೇತಾರೌ ವಾಂ ಯುವಾಂ ಶಂಯೂ ಇವ ಸುಖಯುಕ್ತೌ ರಾಜಾನಾವಿವ ಮಂಹಿಷ್ಠಾ ದಾತೃತಮಾವತಿಶಯೇನ ಪೂಜ್ಯೌ ವಾ ಸಂತೌ ಸುವ್ನೈ-ರಸ್ಮಭ್ಯಂ ದಾತವ್ಯೈಃ ಸುಖೈಃ ಸಾರ್ಧಮಾ । ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ಆಗಚ್ಛತಂ। ಯದ್ವಾ । ಉಪಸರ್ಗಸ್ಯ ಭೂಷತಮಿತ್ಯನೇನ ಸಂಬಂಧಃ । ಮಂಹಿಷ್ಠೇತ್ಯಪಿ ಸಂಬೋಧನಂ । ಹೇ ಮಂಹಿಷ್ಠಾ ದಾತೃತಮಾವುಕ್ತಗುಣಾವಶ್ವಿನೌ ವಾಂ ಯುವಾಂ ಸುವ್ನೈಃ ಸಾರ್ಧಂ ಶಂಯೂ ಇವಾಸ್ಮೇ ಅಸ್ಮಾನ್ ಸಮ್ಯಗಾ ಭೂಷತಂ । ಅಭಿಪ್ರಾಪ್ನುತಂ ॥ ಭೂ ಪ್ರಾಪ್ತೌ । ಅಸ್ಮಾಲ್ಲೋಟಿ ವ್ಯತ್ಯಯೇನ ಸಿಪ್ಶಪೌ ॥ ಭೂಷ ಅಲಂಕಾರೇ ॥ ಆ ಸಮಂತಾತ್ಸಮ್ಯಗ್ಭೂಷತಂ । ಅಲಂಕುರುತಂ । ಪಿಪ್ಯುಷೀಃ ಪ್ರವೃ-ದ್ಧಾನೀಷ ಇಷ್ಯಮಾಣಾನಿ ಪಯಾಂಸ್ಯುತ್ಸಂ ನ । ಗೋರೂಧ ಇವ । ಯಥಾ ಬಹುಭಿಃ ಪಯೋಭಿರೂ-ಧೋಽಲಂಕೃತಂ ಸದೃಶ್ಯತೇ ಅಸ್ಮಾನಪ್ಯೇವಂ ಬಹುಭಿರ್ಧನೈರಲಂಕುರುತಮಿತ್ಯರ್ಥಃ ॥ ಪಿಪ್ಯುಷೀರಿತಿ ಪ್ಯಾಯತೇರ್ಲಿಟಃ ಕ್ವಸುಃ । ಲಿಡ್ಯಙೋಶ್ಚೇತಿ ಪೀಭಾವಃ । ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘಃ॥ ಯದ್ವಾ । ಉತ್ಸಃ ಪ್ರವಾಹೋ ಯಥಾ ಪಿಪ್ಯುಷೀರ್ವೃದ್ಧಾನೀಷೋಽನ್ನಾನ್ಯಲಂಕರೋತಿ ತದ್ವತ್ ॥

॥ ಪ್ರತಿಪದಾರ್ಥ ॥

**ವಿಶ್ವವೇದಸಾ**—ಸರ್ವಜ್ಞರಾದವರೂ ಅಥವಾ ಸಮಸ್ತ ಧನಸಂಪತ್ತಿನಿಂದ ಕೂಡಿರುವರೂ । **ನರಾ**—ಕರ್ಮನೇತೃಗಳೂ । **ಶಂಯೂ ಇವ**—ಸುಖಯುಕ್ತರಾದ ರಾಜರಂತೆ । **ಮಂಹಿಷ್ಠಾ**—ಪೂಜ್ಯರೂ ಅಥವಾ ಉದಾರದಾತೃಗಳೂ ಆದ ಎಲೈ ಅಶ್ವಿನೀದೇವತೆಗಳೇ । **ವಾಂ**—ನೀವು । **ಪಿಪ್ಯುಷೀಃ**—ಬಹಳವಾದ । **ಇಷಃ**—ಹಾಲುಗಳು । **ಉತ್ಸಂನ**—ಹಸುವಿನ ಕೆಚ್ಚಲನ್ನು ಅಲಂಕರಿಸುವಂತೆ । **ಸುವ್ನೈಃ**—ನಮಗೆ ಕೊಡಬೇಕಾದ ಸುಖಸಂಪತ್ತುಗಳೊಡನೆ । **ಅಸ್ಮಾನ್**—ನಮ್ಮನ್ನು । **ಆ ಭೂಷತಂ**—ಅಲಂಕರಿಸಿರಿ ಎಂದರೆ ನಮ್ಮ ಬಳಿಗೆ ಬನ್ನಿರಿ.

॥ ಭಾವಾರ್ಥ ॥

ಸರ್ವಜ್ಞರಾದವರೂ ಅಥವಾ ಸಕಲಸಂಪತ್ತಿನಿಂದ ಕೂಡಿದವರೂ ಕರ್ಮನೇತೃಗಳೂ ಸುಖಯುಕ್ತರಾದ ರಾಜರಂತೆ ಪೂಜ್ಯರೂ ಅಥವಾ ಉದಾರದಾತೃಗಳೂ ಆದ ಎಲೈ ಅಶ್ವಿನೀದೇವತೆಗಳೇ ನೀವು, ಹಸುವಿನ ಕೆಚ್ಚಲಿನಲ್ಲಿ ಬಹಳ

ವಾದ ಹಾಲನ್ನು ತುಂಬಿ ಅಲಂಕರಿಸುವಂತೆ ಅನೇಕವಿಧವಾದ ಸುಖಸಂಪತ್ತುಗಳೊಡನೆ ನಮ್ಮನ್ನೂ ಅಲಂಕರಿಸಿ ಎಂದರೆ ಸುಖಸಂಪತ್ತುಗಳನ್ನು ಕೊಡುವುದಕ್ಕಾಗಿ ನಮ್ಮ ಬಳಿಗೆ ದಯಮಾಡಿಸಿ.

### English Translation.

Prosperous, most adorable, all-knowing, come to us and decorate us with blessings, as a (cow's) udder is adorned with abundant food.

## ನೂರ ನಲವತ್ತನಾಲ್ಕನೆಯ ಸೂಕ್ತವು

### ಪೀಠಿಕೆ.

ಈ ಸೂಕ್ತದ ಋಷಿಯು ತಾರ್ಕ್ಷ್ಯಪುತ್ರನಾದ ಸುಪರ್ಣನೆಂದು ಹೇಳಿದೆ. ಇದೇ ಮಂಡಲದ ೧೭೮ನೇ ಸೂಕ್ತಕ್ಕೆ ತಾರ್ಕ್ಷ್ಯನೇ ದೇವತೆಯೆಂದೂ ಇವನ ಪುತ್ರನಾದ ಅರಿಷ್ಟನೇಮಿಯೆಂಬುವನು ಆ ಸೂಕ್ತದ ಋಷಿಯೆಂದೂ ಹೇಳಿದೆ. ಆದ್ದರಿಂದ ಇಲ್ಲಿ ತಾರ್ಕ್ಷ್ಯ, ಸುಪರ್ಣ, ಅರಿಷ್ಟನೇಮಿ ಎಂಬುವರ ವಿಷಯದಲ್ಲಿ ಸೂಕ್ಷ್ಮವಿವರಣೆಯು ಅವಶ್ಯಕವು. ಯಾಸ್ಕರು ತಮ್ಮ ನಿರುಕ್ತದಲ್ಲಿ ತಾರ್ಕ್ಷ್ಯಶಬ್ದದ ನಿಷ್ಪತ್ತಿಯನ್ನು ಈ ರೀತಿ ವಿವರಿಸಿದಾರೆ—

**ತಾರ್ಕ್ಷ್ಯಸ್ತ್ವಷ್ಟ್ರಾ ವ್ಯಾಖ್ಯಾತಃ । ತೀರ್ಣೇ ಅಂತರಿಕ್ಷೇ ಕ್ಷಯತಿ । ತೂರ್ಣಮರ್ಥಂ ರಕ್ಷತಿ, ಅಶ್ನೋತೇರ್ವಾ ॥** (ನಿ. ೧೦-೨೭)

**ತಾರ್ಕ್ಷ್ಯ**ಶಬ್ದವನ್ನು ಹಿಂದೆಯೇ ಎಂದರೆ, **ತ್ವಷ್ಟಾ** ಎಂಬ ಶಬ್ದವನ್ನು ವಿವರಿಸಿದಾಗ ಅರ್ಥವಿವರಣೆಮಾಡಿದೇವೆ. ಎಂದರೆ, **ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ । ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ ಕರೋತಿಕರ್ಮಣಃ** (ನಿ ೮-೧೪) ತ್ವಷ್ಟಾ ಎಂಬ ಶಬ್ದದ ವಿವರಣೆಯೇ ತಾರ್ಕ್ಷ್ಯಶಬ್ದಕ್ಕೆ ಅನ್ವಯಿಸುವುದು ಬೇಗನೆ ವ್ಯಾಪಿಸುವುದರಿಂದ ತ್ವಷ್ಟಾ ಎಂಬ ಹೆಸರು ಬಂದಿದೆಯೆಂದು ನೈರುಕ್ತಕಾರರು ಹೇಳುವರು ಅಥವಾ ಪ್ರಕಾಶಿಸು ಎಂಬರ್ಥವುಳ್ಳ **ತ್ವಿಷಿ** ಶಬ್ದದಿಂದಾಗಲಿ, ಮಾಡು ಎಂಬರ್ಥವುಳ್ಳ ತ್ವಕ್ಷತಿ ಧಾತುವಿನಿಂದಾಗಲಿ ತ್ವಷ್ಟಾ ಎಂಬ ಶಬ್ದದ ನಿಷ್ಪತ್ತಿಯಾಗಬಹುದು.

ತಾರ್ಕ್ಷ್ಯ ಶಬ್ದದ ಅರ್ಥವೂ ಇದೇ ರೀತಿ ಇದೆ. ತಾರ್ಕ್ಷ್ಯ ಎಂಬ ದೇವನು ವಿಸ್ತಾರವಾದ ಅಂತರಿಕ್ಷದಲ್ಲಿ ವಾಸ ಮಾಡುವವನಾದ್ದರಿಂದ ಇವನನ್ನು ತಾರ್ಕ್ಷ್ಯನೆಂದು ಕರೆಯುವರು. ಅಥವಾ ಅಂತರಿಕ್ಷದಲ್ಲಿ ಉದಕವನ್ನು ರಕ್ಷಿಸುವುದರಿಂದ ಅಥವಾ ಅಂತರಿಕ್ಷದಲ್ಲಿ ವ್ಯಾಪಿಸಿರುವುದರಿಂದ ತಾರ್ಕ್ಷ್ಯನೆಂಬ ಹೆಸರು ಬಂದಿದೆ. ಬೃಹದ್ದೇವತಾಗ್ರಂಥದಲ್ಲಿ—

**ಸ್ತೀರ್ಣೇಽನ್ತರಿಕ್ಷೇ ಕ್ಷಯತಿ ಯದ್ವಾ ತೂರ್ಣಂ ಕ್ಷರತ್ಯಸೌ ।**
**ಅರಿಷ್ಟನೇಮಿಸ್ತಾರ್ಕ್ಷ್ಯರ್ಷಿಸ್ತಾರ್ಕ್ಷ್ಯಂ ತೇನೈವಮುಕ್ತವಾನ್ ॥**

(ಬೃ. ದೇ. ೨-೫೮)

ವಿಸ್ತಾರವಾದ ಅಂತರಿಕ್ಷಪ್ರದೇಶದಲ್ಲಿ ವಾಸಿಸುವುದರಿಂದ ಅಥವಾ ವೇಗವಾಗಿ ಸಂಚರಿಸುವುದರಿಂದ ಅಥವಾ ಉದಕವನ್ನು ಸಿಂಪಡಿಸುವುದರಿಂದ ಈ ದೇವತೆಗೆ ತಾರ್ಕ್ಷ್ಯನೆಂಬ ಹೆಸರುಬಂದಿದೆಯೆಂದು ಅರಿಷ್ಟನೇಮಿಸ್ತಾರ್ಕ್ಷ್ಯ ಎಂಬ ಋಷಿಯು ಹೇಳಿರುವನು ಇದಲ್ಲದೆ, **ಸುಪರ್ಣ, ತಾರ್ಕ್ಷ್ಯ, ದಧಿಕ್ರಾಃ** ಎಂಬ ಶಬ್ದಗಳು ಅಶ್ವನಾಮಗಳಲ್ಲಿ ಪಠಿತವಾಗಿರುವುದನ್ನು ಗಮನಿಸಬಹುದು (ನಿ. ೨-೨೨).

ಸುಪರ್ಣಶಬ್ದಾರ್ಥವಿವರಣೆ

ಸುಪರ್ಣಶಬ್ದವು ರಶ್ಮಿನಾಮಗಳಲ್ಲಿಯೂ (ನಿ. ೨-೧೫) ಅಶ್ವನಾಮಗಳಲ್ಲಿಯೂ (ನಿ ೨-೨೭) ಪಠಿತವಾಗಿದೆ. ಮತ್ತು

**ಸುಪರ್ಣಾಃ ಸುಪತನಾ ಆದಿತ್ಯರಶ್ಮಯಃ** (ನಿ. ೪-೩) ಮತ್ತು (ನಿ. ೩-೧೨) ಬೇಗನೆ ವ್ಯಾಪಿಸುವ ಸೂರ್ಯನ ರಶ್ಮಿಗಳು ಎಂದು ಅರ್ಥವಿವರಣೆಮಾಡಲಾಗಿದೆ

ಅರಿಷ್ಟನೇಮಿಶಬ್ದದವಿವರಣೆ

**ರಥಚಕ್ರಸ್ಯ ಧಾರಾ ನೇಮಿಃ । ಅರಿಷ್ಟೋಽಹಿಂಸತೋ ನೇಮಿರ್ಯಸ್ಯ । ಯತ್ಸಂಬಂಧಿನೋ ರಥಸ್ಯ ನೇಮಿರ್ನ ಹಿಂಸ್ಯತೇ ಸೋಽರಿಷ್ಟನೇಮಿಃ ॥**

ನೇಮಿ ಎಂದರೆ ರಥಚಕ್ರವು. ಅರಿಷ್ಟನೇಮಿ ಎಂದರೆ ಹಿಂಸಿಸಲ್ಪಡದಿರುವ ಎಂದರೆ ತಡೆಯಿಲ್ಲದ, ಅಪ್ರತಿಹತವಾದ ಗಮನವುಳ್ಳ ರಥಚಕ್ರಗಳುಳ್ಳವನು ಎಂದಭಿಪ್ರಾಯವು. ಸ್ಕಂದಸ್ವಾಮಿಯು ನೇಮಿಶಬ್ದಕ್ಕೆ ವಜ್ರಾಯುಧವೆಂದು ಅರ್ಥಮಾಡಿರುವರು. ಅರಿಷ್ಟನೇಮಿ ಎಂಬುವುದು ತೃಕ್ಷನ ಮಗನಾದ ಒಬ್ಬ ಋಷಿಯ ಹೆಸರು. ಈ ಋಷಿಯು ಅರಿಷ್ಟನೇಮಿಸ್ತಾರ್ಕ್ಷ್ಯಃ ಎಂಬ ಹೆಸರಿನಿಂದ ೧೦ನೇ ಮಂಡಲದ ೧೭೮ನೇ ಸೂಕ್ತಕ್ಕೆ ದ್ರಷ್ಟೃವಾಗಿರುವನು. ಪ್ರಕೃತಸೂಕ್ತಕ್ಕೆ ಸುಪರ್ಣಸ್ತಾರ್ಕ್ಷ್ಯ ಎಂಬುವನು ಋಷಿಯೆಂದು ಹೇಳಲ್ಪಟ್ಟಿರುವುದರಿಂದ ಸುಪರ್ಣ ಮತ್ತು ಅರಿಷ್ಟನೇಮಿ ಎಂಬಿಬ್ಬರೂ ತೃಕ್ಷನ ಪುತ್ರರೆಂದು ಹೇಳಬಹುದು

ತಾರ್ಕ್ಷ್ಯ ಎಂದರೆ ತೃಕ್ಷನ ಪುತ್ರನು. ಭಾಷ್ಯಕಾರರು ಗರುತ್ಮಾನ್-ಗರುಡನು ಎಂದು ಅರ್ಥವನ್ನು ಹೇಳಿರುವರು. ಈ ಶಬ್ದವು ಆದಿತ್ಯನನ್ನೇ ಸೂಚಿಸುವುದು. ತೃಕ್ಷನೆಂದರೆ ಕಶ್ಯಪನೆಂದು ಕೆಲವರು ಹೇಳುವರು. ಆದಿತ್ಯನು ಅವನ ಪುತ್ರನಾದುದರಿಂದ ಆದಿತ್ಯನೇ ತಾರ್ಕ್ಷ್ಯನೆಂದು ಕರೆಯಲ್ಪಡುವನು. ತಾರ್ಕ್ಷ್ಯ ಎಂದರೆ ದೇವಲೋಕದ ಕುದುರೆಯೆಂದೂ (ದಧಿಕ್ರಾಃ), ಸೂರ್ಯನೇ ಈ ರೂಪದಿಂದ ಸ್ತುತಿಸಲ್ಪಡುವನೆಂದೂ ಕೆಲವರು ಅಭಿಪ್ರಾಯಪಡುವರು. ಮತ್ತೆ ಕೆಲವರು ತ್ರಸದಸ್ಯು ಎಂಬುವನ ವಂಶಸ್ಥನಾದ ತೃಕ್ಷಿ ಎಂಬುವನ ಪುತ್ರನೆಂದೂ ಹೇಳುವರು. ಖಿಲಮಂತ್ರಗಳಲ್ಲಿಯೂ (೨-೪-೧) ಆಶ್ವಲಾಯನಶ್ರೌತಸೂತ್ರದಲ್ಲಿಯೂ (ಆ ೧೦-೭) ತಾರ್ಕ್ಷ್ಯ ಎಂಬ ಶಬ್ದಕ್ಕೆ ಪಕ್ಷಿಶ್ರೇಷ್ಠವು, ಪಕ್ಷಿವಿಶೇಷವು ಎಂಬರ್ಥವು ಸೂಚಿತವಾಗಿರುವುದು. ಈ ಶಬ್ದದ ಅರ್ಥವು ಸಂದಿಗ್ಧವಾಗಿಯೇ ಇದೆ. ಋ, ಸಂ. ೧೦-೧೭೮ ನೇಸೂಕ್ತಕ್ಕೆ ತಾರ್ಕ್ಷ್ಯನೇ ದೇವತೆಯು

ಸುಪರ್ಣ ಎಂಬ ಶಬ್ದದ ವಿಚಾರದಲ್ಲಿ ನಾವು ಹಿಂದೆ ಬರೆದಿರುವ ವಿವರಣೆಯನ್ನು ಋ. ಸಂ. ಭಾಗ ೧೨ ಪುಟ 421 ರಲ್ಲಿಯೂ, ತಾರ್ಕ್ಷ್ಯ ಎಂಬ ದೇವತೆಯ ವಿಷಯದಲ್ಲಿ ಋ. ಸಂ. ಭಾಗ ೫ ಪುಟ 681 ರಲ್ಲಿಯೂ ಇರುವ ವಿವರಣೆಯನ್ನು ನೋಡಬಹುದು.

॥ ಸಾಯಣಭಾಷ್ಯಂ ॥

**ಅಯಂ ಹೀತಿ ಷಡೃಚಂ ಷೋಡಶಂ ಸೂಕ್ತಂ ತಾರ್ಕ್ಷ್ಯಪುತ್ರಸ್ಯ ಸುಪರ್ಣಸ್ಯಾರ್ಷಂ ಯಮಗೋತ್ರಸ್ಯೋರ್ಧ್ವಕೃಶನಸ್ಯ ವಾ । ಆದ್ಯಾ ಗಾಯತ್ರೀ ದ್ವಿತೀಯಾ ಬೃಹತೀ ತೃತೀಯಾಚತುರ್ಥ್ಯೌ ಗಾಯತ್ರ್ಯೌ ಪಂಚಮೀ ಸತೋಬೃಹತೀ ಷಷ್ಠೀ ವಿಷ್ಟಾರಪಂಕ್ತಿರಷ್ಟಕದ್ವಿದ್ವಾದಶಾಷ್ಟಕವತೀ । ಅನಾದೇಶಪರಿಭಾಷಯೇಂದ್ರೀ ದೇವತಾ । ತಥಾ ಚಾನುಕ್ರಾಂತಂ । ಅಯಂ ಹಿ ತಾರ್ಕ್ಷ್ಯಪುತ್ರಃ ಸುಪರ್ಣೋ ಯಾಮಾಯನೋ ವೋರ್ಧ್ವಕೃಶನೋ ಗಾಯತ್ರೀ ಬೃಹತೀ ಗಾಯತ್ರ್ಯೌ ಸತೋಬೃಹತೀ ವಿಷ್ಟಾರಪಂಕ್ತಿರಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ಅಯಂ ಹಿ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ತಾರ್ಕ್ಷ್ಯಪುತ್ರನಾದ ಸುಪರ್ಣನೆಂಬುವನು ಋಷಿಯು ಅಥವಾ ಯಮಗೋತ್ರದವನಾದ ಊರ್ಧ್ವಕೃಶನ ಎಂಬುವನು ಋಷಿಯು; ಅನುಕ್ರಮಣಿಕೆಯಲ್ಲಿ ದೇವತಾನಿರ್ದೇಶವಿಲ್ಲದ್ದರಿಂದ ಈ ಸೂಕ್ತಕ್ಕೆ ಇಂದ್ರನೇ ದೇವತೆಯೆಂದು ಹೇಳಬಹುದು. ಈ ಸೂಕ್ತದ ಮೊದಲನೆಯ, ಮೂರು ಮತ್ತು ನಾಲ್ಕನೆಯ ಋಕ್ಕುಗಳು ಗಾಯತ್ರೀ ಛಂದಸ್ಕವು; ಎರಡನೆಯ ಋಕ್ಕು ಬೃಹತೀಛಂದಸ್ಕವು; ಐದನೆಯದು ಸತೋ ಬೃಹತೀ ಛಂದಸ್ಕವು; ಆರನೆಯದು ವಿಷ್ಟಾರಪಂಕ್ತಿ ಎಂಬ ಛಂದಸ್ಸಿನದು. ಈ ಛಂದಸ್ಸಿನ ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಅವುಗಳಲ್ಲಿ ಮೊದಲು ಮತ್ತು ಕೊನೆಯ ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ, ಎರಡು ಮತ್ತು ಮೂರನೆಯ ಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ ಇರುವವು. ಅನುಕ್ರಮಣಿಕೆಯಲ್ಲಿ—**ಅಯಂ ಹಿ ತಾರ್ಕ್ಷ್ಯಪುತ್ರಃ ಸುಪರ್ಣೋ ಯಾಮಾಯನೋ ವೋರ್ಧ್ವಕೃಶಾನೋ ಗಾಯತ್ರೀ ಬೃಹತೀ ಗಾಯತ್ರ್ಯೌ ಸತೋಬೃಹತೀ ವಿಷ್ಟಾರಪಂಕ್ತಿಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ ೧೪೪

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೪೪ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಸುಪರ್ಣಸ್ತಾರ್ಕ್ಷ್ಯಪುತ್ರ ಊರ್ಧ್ವಕೃಶಾನೋ ವಾ ಯಾಮಾಯನಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧, ೩, ೪, ಗಾಯತ್ರೀ । ೨. ಬೃಹತೀ । ೫. ಸತೋಬೃಹತೀ । ೬. ವಿಷ್ಟಾರಪಂಕ್ತಿಃ ॥

॥ ಸಂಹಿತಾಪಾಠಃ ॥

ಅಯಂ ಹಿ ತೇ ಅಮರ್ತ್ಯ ಇಂದುರತ್ಯೋ ನ ಪತ್ಯತೇ ।
ದಕ್ಷೋ ವಿಶ್ವಾಯುರ್ವೇಧಸೇ ॥ ೧ ॥

॥ ಪದಪಾಠಃ ॥

ಅ॒ಯಂ । ಹಿ । ತೇ॒ । ಅಮರ್ತ್ಯಃ । ಇಂದುಃ । ಅತ್ಯಃ । ನ । ಪತ್ಯತೇ ।

ದಕ್ಷಃ । ವಿ॒ಶ್ವಽಆಯುಃ । ವೇ॒ಧಸೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವೇಧಸೇ ವಿಧಾತ್ರೇ ತೇ ತುಭ್ಯಂ ತ್ವದರ್ಥಮಮರ್ತ್ಯೋ ಮರಣರಹಿತೋಽಮೃತತ್ವಪ್ರಾಪಕೋಽಯಂ ಹ್ಯಯಂ ಖಲ್ವಿಂದುಃ ಸೋಮೋಽತ್ಯೋ ನ ಸತತಗಾಮ್ಯಶ್ವ ಇವ ಪತ್ಯತೇ । ಗಚ್ಛತಿ । ಯದ್ವಾ । ಪತ್ಯತಿರೈಶ್ವರ್ಯಕರ್ಮಾ । ತವ ಸ್ವಭೂತೋಽಯಂ ಸೋಮೋ ವೇಧಸೇ ವಿಧಾನಾಯ ಮದಸ್ಯ ಕರಣಾಯೇಷ್ಟೇ । ಕೀದೃಶ ಇಂದುಃ । ದಕ್ಷಃ ಪ್ರವೃದ್ಧೋ ಬಲಹೇತುರ್ವಾ ವಿಶ್ವಾಯುರ್ವಿಶ್ವೈಃ ಸರ್ವೈರೇತವ್ಯಃ ಪ್ರಾಪ್ತವ್ಯಃ । ಯದ್ವಾ । ವಿಶ್ವೇಷಾಮಾಯುರ್ಜೀವನಹೇತುಃ । ಅಥವಾ । ಆಯುರಿತ್ಯನ್ನನಾಮ । ಸರ್ವೈಶ್ಚರುಪುರೋಡಾಶಾದಿಭಿರನ್ನೈರ್ಹವಿರ್ಭಿರುಪೇತಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಅಮರ್ತ್ಯಃ**— ಮರಣರಹಿತನೂ ಅಮೃತತ್ವವೆಂಬ ಪದವಿಯನ್ನು ದೊರಕಿಸಿ ಕೊಡುವವನೂ | **ದಕ್ಷಃ**— ಬಲಪ್ರದನೂ | **ವಿಶ್ವಾಯುಃ**— ಸರ್ವರಿಂದಲೂ ಅಪೇಕ್ಷಿಸಲ್ಪಡುವವನೂ ಅಥವಾ ಸರ್ವರಿಗೂ ಜೀವನ ಹೇತುವಾದ ಅನ್ನಪ್ರದನೂ ಆದ | **ಇಂದುಃ**— ಸೋಮನು | **ತೇ**— ನಿನಗೋಸ್ಕರ | **ವೇಧಸೇ**— ಜಗನ್ನಿರ್ಮಾತೃವಿನ ಬಳಿಗೆ | **ಅತ್ಯಃ ನ**— ವೇಗಗಮನವುಳ್ಳ ಅಶ್ವದಂತೆ | **ಪತ್ಯತೇ**— ಹೋಗುತ್ತಾನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಮರಣರಹಿತನೂ ಇತರರಿಗೆ ಅಮೃತತ್ವವನ್ನು ದೊರಕಿಸಿಕೊಡುವವನೂ ಪುಷ್ಟಿಪ್ರದನೂ, ಸರ್ವರಿಂದಲೂ ಅಪೇಕ್ಷಿಸಲ್ಪಡುವವನೂ ಅಥವಾ ಸರ್ವರಿಗೂ ಜೀವನಹೇತುವಾದ ಅನ್ನಪ್ರದನೂ ಆದ ಸೋಮನು ನಿನಗೋಸ್ಕರ ಜಗನ್ನಿರ್ಮಾತೃವಾದ ಪ್ರಜಾಪತಿಯ ಬಳಿಗೆ ವೇಗಗಮನವುಳ್ಳ ಅಶ್ವದಂತೆ ಹೋಗುತ್ತಾನೆ.

English Translation.

This immortal Soma, the giver of strength, the giver of long life to all, hastens like a swift horse to you (Indra), the creator.

॥ ಸಂಹಿತಾಪಾಠಃ ॥

ಅ॒ಯಮ॒ಸ್ಮಾಸು॒ ಕಾವ್ಯ ಋ॒ಭುರ್ವಜ್ರೋ॒ ದಾಸ್ವತೇ ।

ಅ॒ಯಂ ಬಿಭರ್ತ್ಯೂ॒ರ್ಧ್ವಕೃಶನಂ॒ ಮದ॒ಮೃಭುರ್ನ ಕೃತ್ವ್ಯಂ॒ ಮದಂ ॥ ೨ ॥

|| ಪದಪಾಠಃ ||

**ಅಯಂ । ಅಸ್ಮಾಸು । ಕಾವ್ಯಃ । ಋಭುಃ । ವಜ್ರಃ । ದಾಸ್ವತೇ ।**

**ಅಯಂ । ಬಿಭರ್ತಿ । ಊರ್ಧ್ವऽಕೃಶನಂ । ಮದಂ । ಋಭುಃ । ನ । ಕೃತ್ವ್ಯಂ । ಮದಂ ॥ ೨ ॥**

| ಸಾಯಣಭಾಷ್ಯಂ ||

**ಅಸ್ಮಾಸು ಸ್ತೋತೃಷು ಕಾವ್ಯಃ ಸ್ತುತ್ಯೋऽಯಮಿಂದ್ರಃ ಋಭುರ್ದೀಪ್ತಃ ಸನ್ದಾಸ್ವತೇ ದಾನ-ಯುಕ್ತಾಯ ಯಜಮಾನಾಯ ವಜ್ರಃ ಶತ್ರೂಣಾಂ ವರ್ಜಕೋ ಭವತಿ । ಯದ್ವಾ । ದಾಸ್ವತ ಇತಿ ಷಷ್ಠ್ಯರ್ಥೇ ಚತುರ್ಥೀ । ಅಸ್ಮಾಸು ದಾಸ್ವತೇ ದಾನವತ ಇಂದ್ರಸ್ಯ ವಜ್ರಃ ಕುಲಿಶ ಋಭುರುರು ಭಾಸಮಾನೋ ಭವತಿ । ಅಪಿ ಚಾಯಮೂರ್ಧ್ವಕೃಸನಮುದ್ಗತೈಶ್ವರ್ಯಮೇತತ್ಸಂಜ್ಞಂ ವಾ ಯಾಮಾ-ಯನಮೃಷಿಂ ಮದಂ ಸ್ತೋತಾರಂ ಬಿಭರ್ತಿ । ಪೋಷಯತಿ । ತಥರ್ಭುರ್ನ ಸೌಧನ್ವನಃ । ಪುತ್ರಾಣಾಮಾದ್ಯ ಋಭುಃ । ಸ ಇವ ಕೃತ್ವ್ಯಂ ಕರ್ಮಣಾಂ ಕರ್ತಾರಂ ಅತ ಏವ ಮದಂ ಮೋದಯಿತಾರಂ ಯಜಮಾನಂ ಬಿಭರ್ತಿ ॥**

|| ಪ್ರತಿಪದಾರ್ಥ ||

**ಅಸ್ಮಾಸು**—ಸ್ತೋತ್ರಮಾಡುವ ನಮ್ಮ ಮಧ್ಯದಲ್ಲಿ । **ಅಯಂ**—ಈ ಇಂದ್ರನು । **ಕಾವ್ಯಃ**—ಸ್ತುತ್ಯ ರ್ಹನು । **ದಾಸ್ವತೇ**—ಇಷ್ಟಪ್ರದನಾದ ಇಂದ್ರನ । **ವಜ್ರಃ**—ವಜ್ರಾಯುಧವು । **ಋಭುಃ**—ಪ್ರಕಾಶಮಾನ ವಾಗಿ ಬೆಳಗುತ್ತದೆ [ಅಥವಾ । **ಅಸ್ಮಾಸು**—ಸ್ತೋತೃಜನರಮಧ್ಯದಲ್ಲಿ । **ಕಾವ್ಯಃ**—ಪ್ರಶಂಸಿಸಲ್ಪಡುವ । **ಅಯಂ**—ಈ ಇಂದ್ರನು । **ಋಭುಃ**—ಪ್ರಕಾಶಮಾನವಾಗಿ ಬೆಳಗುತ್ತ । **ದಾಸ್ವತೇ**—ಹವಿಸ್ಸನ್ನರ್ಪಿಸುವ ಯಜಮಾನನನಿಗಾಗಿ । **ವಜ್ರಃ**—ವಜ್ರಾಯುಧದಂತೆ ಶತ್ರುಹಂತಕನಾಗುತ್ತಾನೆ ।] **ಅಯಂ**—ಈ ಇಂದ್ರನು । **ಮದಂ**—ಸ್ತುತಿ ಕರ್ತನಾದ । **ಊರ್ಧ್ವಕೃಶನಂ**—ಯಮುನಪುತ್ರನಾದ ಊರ್ಧ್ವಕೃಶನನೆಂಬ ಋಷಿಯನ್ನು (ನನ್ನನ್ನು) । **ಬಿಭರ್ತಿ**—ಧರಿಸಿ ಪೋಷಿಸುತ್ತಾನೆ (ಮತ್ತು) । **ಋಭುಃ ನ**—ಸುಧನ್ವನ ಪುತ್ರನಾದ ಋಭುವಿನಂತೆ । **ಕೃತ್ವ್ಯಂ**—ಕರ್ಮಾನುಷ್ಠಾನಮಾಡುವ (ಆದ್ದರಿಂದಲೇ) । **ಮದಂ**—ನಿನಗೆ ಹರ್ಷವನ್ನುಂಟುಮಾಡುವ ಯಜಮಾನನನ್ನು ಪೋಷಿಸುತ್ತಾನೆ.

|| ಭಾವಾರ್ಥ ||

ಸ್ತೋತ್ರಮಾಡುವ ನಮ್ಮಿಂದ ಈ ಇಂದ್ರನು ಪ್ರಶಂಸಾರ್ಹನು. ಈ ಇಂದ್ರನ ವಜ್ರಾಯುಧವು ಪ್ರಕಾಶ ಮಾನವಾಗಿ ಬೆಳಗುತ್ತಿದೆ ಅಥವಾ ಸ್ತೋತೃಜನರ ಮಧ್ಯದಲ್ಲಿ ಸ್ತುತ್ಯನಾಗಿ ಪ್ರಕಾಶಮಾನವಾಗಿ ಬೆಳಗುತ್ತಿರುವ ಈ ಇಂದ್ರನು ಹವಿಸ್ಸನ್ನರ್ಪಿಸುವ ಯಜಮಾನನಿಗಾಗಿ ವಜ್ರಾಯುಧವಂತೆ ಶತ್ರುಹಿಂಸಕನಾಗುತ್ತಾನೆ. ಈ ಇಂದ್ರನು ಸ್ತುತಿಕರ್ತನೂ ಯಮಪುತ್ರನೂ ಆದ ಊರ್ಧ್ವಕೃಶನನೆಂಬ ಋಷಿಯನ್ನೂ, ಸುಧನ್ವಪುತ್ರನಾದ ಋಭುವಿನಂತೆ ಕರ್ಮಾನುಷ್ಠಾನದಿಂದ ಇಂದ್ರನಿಗೆ ಹರ್ಷವನ್ನುಂಟುಮಾಡುವವನೂ ಆದ ಯಜಮಾನನನ್ನೂ ಧರಿಸಿ ಪೋಷಿಸುತ್ತಾನೆ.

## English Translation

This (Indra), adorable among us and brilliant, is a thunderbolt for the donor (of the oblation against his foes); he cherishes the exhilarating (worshipper) Urdhwakrishana, as Ribhu (cherishes) the exhilarating celebrator of holy rites.

॥ ಸಂಹಿತಾಪಾಠಃ ॥

ಘೃಷುಃ ಶ್ಯೇನಾಯ ಕೃತ್ವನ ಆಸು ಸ್ವಾಸು ವಂಸಗಃ ।
ಅವ ದೀಧೇದಹೀಶುವಃ ॥ ೩ ॥

॥ ಪದಪಾಠಃ ॥

ಘೃಷುಃ । ಶ್ಯೇನಾಯ । ಕೃತ್ವನೇ । ಆಸು । ಸ್ವಾಸು । ವಂಸಗಃ ।
ಅವ । ದೀಧೇತ್ । ಅಹೀಶುವಃ ॥ ೩ ॥

॥ ಸಾಯಣಭಾಷ್ಯಂ ॥

ಘೃಷುರ್ಘರ್ಷಯಿತಾ ದೀಪ್ತೋ ವಾ ಸ್ವಾಸು ಸ್ವಕೀಯಾಸ್ವಾಸು ಯಜಮಾನಲಕ್ಷಣಾಸು ಪ್ರಜಾಸು ವಂಸಗೋ ವನನೀಯಗತಿಃ ಏವಂಭೂತ ಇಂದ್ರಃ ಕೃತ್ವನೇ ಕರ್ಮಣಾಂ ಕರ್ತ್ರೇ ॥ ಕರೋತೇರನ್ಯೇಭ್ಯೋಽಪಿ ದೃಶ್ಯಂತ ಇತಿ ಕ್ವನಿಪ್ ॥ ಶ್ಯೇನಾಯ ಸುಪರ್ಣಾಯ ತಾರ್ಕ್ಷ್ಯಪುತ್ರಾಯ ಮಹ್ಯಮೃಷಯೇಽಹೀಶುವೋಽಹೀನವ್ಯಾಪನಾನಹೀನವೃದ್ಧೀನ್ಸ್ವಾಸ್ಮದೀಯಾನ್ಪುತ್ರಾದೀನವ ದೀಧೇತ್ । ದೀಪಯತು ॥ ದೀಧೀಙ್ ದೀಪ್ತಿದೇವನಯೋಃ । ಅಸ್ಮಾಚ್ಛಾಂದಸೇ ಲಿಙ್ ವ್ಯತ್ಯಯೇನ ಪರಸ್ಮೈಪದಂ ॥ ಯದ್ವಾ । ಹೇ ಇಂದ್ರ ತ್ವದೀಯಃ ಸೋಮೋ ಘೃಷ್ವ್ಯಾದಿಗುಣಯುಕ್ತಃ ಸನ್ ದೀಪ್ಯತ ಇತಿ ಯೋಜ್ಯಂ ॥

॥ ಪ್ರತಿಪದಾರ್ಥ ॥

**ಘೃಷುಃ**— ಪ್ರಕಾಶಮಾನನಾದವನೂ । **ಸ್ವಾಸು** — ಸ್ವಕೀಯರಾದ । **ಆಸು**— ಯಜಮಾನರೇ ಮೊದಲಾದ ಪ್ರಜೆಗಳಲ್ಲಿ । **ವಂಸಗಃ**— ಉಪಕಾರಮಾಡುವವನೂ ಆದ ಇಂದ್ರನು । **ಕೃತ್ವನೇ**— ಯಜ್ಞಾದಿಕರ್ಮ ಕರ್ತೃವಾದ । **ಶ್ಯೇನಾಯ**— ತಾರ್ಕ್ಷ್ಯಪುತ್ರನೂ ಸುಪರ್ಣಸಂಜ್ಞಕನೂ ಆದ ನನಗೆ । **ಅಹೀಶುವಃ**— ಕ್ಷೀಣವಾಗದ ಸಂಪತ್ತನ್ನು ಅಥವಾ ಪುತ್ರಾದಿ ಸಂತತಿಯನ್ನು । **ಅವ ದೀಧೇತ್**— ಕೊಟ್ಟು ಬೆಳಗಿಸಲಿ.

॥ ಭಾವಾರ್ಥ ॥

ಪ್ರಕಾಶಮಾನನಾದವನೂ, ಸ್ವಕೀಯರಾದ ಯಜಮಾನಾದಿ ಜನರಿಗೆ ಉಪಕಾರ ಮಾಡುವವನೂ ಆದ

ಇಂದ್ರನು, ತಾರ್ಕ್ಷ್ಯ ಪುತ್ರನೂ ಯಜ್ಞಾದಿಕರ್ಮಕರ್ತೃವೂ, ಸುಪರ್ಣ ನಾಮಕನೂ ಆದ ನನಗೆ ಕಡಮೆಯಾಗದ ಧನ ಸಂಪತ್ತನ್ನು ಅಥವಾ ಪುತ್ರಾದಿಸಂತಿಯನ್ನು ಕೊಟ್ಟು ಬೆಳಗುವಂತೆ ಮಾಡಲಿ

## English Translation.

May the brilliant (Indra), who is a benefactor amongst these his own (people), for the sake of Suparna, the offerer of the oblation, bestow light upon our prgeny.

॥ ಸಂಹಿತಾಪಾಠಃ ॥

ಯಂ ಸುಪರ್ಣಃ ಪರಾವತಃ ಶ್ಯೇನಸ್ಯ ಪುತ್ರ ಆಭರತ್ ।
ಶತಚಕ್ರಂ ಯೋ೩ ಹ್ಯೋ೩ ವರ್ತನಿಃ ॥ ೪ ॥

॥ ಪದಪಾಠಃ ॥

ಯಂ । ಸುಽಪರ್ಣಃ । ಪರಾಽವತಃ । ಶ್ಯೇನಸ್ಯ । ಪುತ್ರಃ । ಆ । ಅಭರತ್ ।
ಶತಽಚಕ್ರಂ । ಯಃ । ಅಹ್ಯಃ । ವರ್ತನಿಃ ॥ ೪ ॥

॥ ಸಾಯಣಭಾಷ್ಯಂ ॥

ಶ್ಯೇನಸ್ಯ ತಾರ್ಕ್ಷ್ಯಸ್ಯ ಪುತ್ರಸ್ತನಯಃ ಸುಪರ್ಣೋ ಯಂ ಸೋಮಂ ಪರಾವತಃ ಪರಾಗತಾದ್ದೂರಾದ್ದ್ಯುಲೋಕಾದಾಭರತ್ ಆಹರತ್ । ಕೀದೃಶಂ । ಶತಚಕ್ರಂ । ಶತಮಿತಿ ಬಹುನಾಮ । ಬಹುಧನಸ್ಯ ಕರ್ತಾರಂ ॥ ಮೂಲವಿಭುಜಾದಿತ್ವಾತ್ಕಪ್ರತ್ಯಯಃ । ಪಾ. ೩-೨-೫-೨ ॥ ಯದ್ವಾ । ಶತಕರಣಸಾಧನಂ । ಬಹುಯೋಗನಿಷ್ಪಾದನಮಿತ್ಯರ್ಥಃ ॥ ಘಞರ್ಥೇ ಕವಿಧಾನಮ್ । ಪಾ. ೩-೩-೫೮-೪ । ಇತಿ ಕಪ್ರತ್ಯಯಃ । ಕೃಞಾದೀನಾಂ ಕೇ । ಕಾ. ೬-೧-೧೨-೧ । ಇತಿ ದ್ವಿರ್ವಚನಂ । ಯಃ ಸೋಮೋಽಹ್ಯೋಽಹೇರ್ವೃತ್ರಸ್ಯ ವರ್ತನಿರ್ವರ್ತಯಿತಾ ಪ್ರೇರಯಿತಾ । ಯದ್ವಾ ॥ ಅಹ ಗತೌ ॥ ಅಹ್ಯೋ ಗಂತವ್ಯೋ ವರ್ತನಿರ್ಮಾರ್ಗಭೂತಃ । ಏನಾ ವಯ ಇತಿ ವಕ್ಷ್ಯಮಾಣೇನೈಕವಾಕ್ಯತಾ ॥

॥ ಪ್ರತಿಪದಾರ್ಥ ॥

ಶ್ಯೇನಸ್ಯ—ತಾರ್ಕ್ಷ್ಯನ । ಪುತ್ರಃ—ಪುತ್ರನಾದ । ಸುಪರ್ಣಃ—ಸುಪರ್ಣನು । ಯಂ—ಯಾವ ಸೋಮವನ್ನು । ಪರಾವತಃ—ದೂರಪ್ರದೇಶದಲ್ಲಿರುವ ಸ್ವರ್ಗದಿಂದ । ಆಭರತ್—ಅಪಹರಿಸಿ ತಂದನೋ । ಯಃ—ಯಾವ ಸೋಮನು । ಅಹ್ಯಃ—ವೃತ್ರನ । ವರ್ತನಿಃ—ಪ್ರೇರಕನೋ (ಮುಂದಿನ ಋಕ್ಕಿನೊಡನೆ ಅನ್ವಯ)

|| ಭಾವಾರ್ಥ ||

ತಾರ್ಕ್ಷ್ಯಪುತ್ರನಾದ ಸುಪರ್ಣನು ಯಾವ ಸೋಮವನ್ನು ದೂರಪ್ರದೇಶವಾದ ಸ್ವರ್ಗದಿಂದ ತಂದನೋ ಮತ್ತು ಯಾವ ಸೋಮನು ವೃತ್ರನ ಪ್ರೇರಕನೋ,

## English Translation.

The Soma whom Suparna, the son of the falcon, brought from afar, the bestower of many boons, who is the stimulator of Ahi.—

|| ಸಂಹಿತಾಪಾಠಃ ||

ಯಂ ತೇ ಶ್ಯೇನಶ್ಚಾರುಮವೃಕಂ ಪದಾಭರದರುಣಂ ಮಾನಮಂಧಸಃ ।
ಏನಾ ವಯೋ ವಿ ತಾರ್ಯಾಯುರ್ಜೀವಸ ಏನಾ ಜಾಗಾರ ಬಂಧುತಾ ॥೫॥

|| ಪದಪಾಠಃ ||

ಯಂ । ತೇ । ಶ್ಯೇನಃ । ಚಾರುಂ । ಅವೃಕಂ । ಪದಾ । ಆ । ಅಭರತ್ । ಅರುಣಂ । ಮಾನಂ । ಅಂಧಸಃ ।
ಏನಾ । ವಯಃ । ವಿ । ತಾರಿ । ಆಯುಃ । ಜೀವಸೇ । ಏನಾ । ಜಾಗಾರ । ಬಂಧುತಾ ॥ ೫ ॥

|| ಸಾಯಣಭಾಷ್ಯಂ ||

ಹೇ ಇಂದ್ರ ತೇ ತುಭ್ಯಂ ತ್ವದರ್ಥಂ ಶ್ಯೇನಃ ಸುಪರ್ಣಃ ಪಕ್ಷಿರಾಡ್ಯಂ ಸೋಮಂ ಪದಾ । ವಚನ ವ್ಯತ್ಯಯಃ । ಪದ್ಭ್ಯಾಮಾಭರತ್ ದ್ಯುಲೋಕಾದಾಹರತ್ । ದಿವಂ ಸುಪರ್ಣೋ ಗತ್ವಾಯ ಸೋಮಂ ವಜ್ರಿಣ ಆಭರತ್ । ಋ. ೮-೧೦೦-೮ । ಇತಿ ನಿಗಮಾಂತರಂ । ಕೀದೃಶಂ । ಚಾರುಂ ಶೋಭನಂ ಅವೃಕಂ ಬಾಧಕರಹಿತಂ ಅರುಣಮರೋಚಮಾನಮರುಣವರ್ಣಂ ವಾ ಅಂಧಸೋಽನ್ನಸ್ಯ ಮಾನಂ ಯಾಗದ್ವಾರಾ ನಿರ್ಮಾತಾರಂ । ಏನ್ನೈತೇನಾನೇನ ಸೋಮೇನ ತುಭ್ಯಂ ದೀಯಮಾನೇನ ವಯೋಽನ್ನಂ ಜೀವಸೇ ಜೀವನಾಯಾಯುರ್ಜೀವಿತಂ ಚ ವಿ ತಾರಿ । ಪ್ರಾದಾಯಿ । ತಥೈನ್ಯೈತೇನ್ನೈವ ಸೋಮೇನ ಬಂಧುತಾ ಬಂಧುಸಮೂಹೋ ಜಾಗಾರ । ಜಾಗ್ರತ್ಪ್ರಬುದ್ಧಃ ಸನ್ವರ್ತತೇ ॥ ಜಾಗರ್ತೇರ್ಲಿಟಿ ಛಂದಸಿ ವೇತಿ ವಕ್ತವ್ಯಂ । ಪಾ. ೬-೧-೮-೧ । ಇತಿ ದ್ವಿರ್ವಚನಾಭಾವಃ ॥

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) ತೇ—ನಿನಗೋಸ್ಕರ । ಶ್ಯೇನಃ—ಪಕ್ಷಿಶ್ರೇಷ್ಠನಾದ ಸುಪರ್ಣನು । ಯಂ – ಯಾವ ಸೋಮವನ್ನು । ಪದಾ—ಪಾದಗಳಿಂದ ಹಿಡಿದುಕೊಂಡು । ಆ ಅಭರತ್—ದ್ಯುಲೋಕದಿಂದ ತಂದನೋ ಅಂತಹ । ಚಾರುಂ—ಶೋಭನಕರವಾದುದೂ । ಅವೃಕಂ—ಬಾಧಾರಹಿತವಾದುದೂ । ಅರುಣಂ– ಅರುಣ (ಮಾಸಲು

ಕೆಂಪು) ವರ್ಣದಿಂದಿರುವುದೂ । **ಅಂಧಸಃ**— ಯಜ್ಞದ ಹವಿರ್ಲಕ್ಷಣರೂಪವಾದ ಅನ್ನದ ಎಂದರೆ ಸೋಮರಸದ । **ಮಾನಂ**— ನಿರ್ಮಾತೃವಾದುದೂ । ಏನಾ— ನಿನಗಾಗಿ ಅರ್ಪಿಸಲ್ಪಡುವ (ಯಾವ) ಸೋಮರಸದಿಂದ । **ಜೀವಸೇ**— ಜೀವಿಸುವುದಕ್ಕಾಗಿ । **ವಯಃ**— ಅನ್ನವೂ । **ಆಯುಃ** - ಆಯುಸ್ಸೂ (ಜೀವಿತಕಾಲವೂ) । **ವಿ ತಾರಿ**— ನಿನ್ನಿಂದ ಕೊಡಲ್ಪಟ್ಟಿತೋ । **ಏನಾ**— ಅಂತಹ ಸೋಮದಿಂದ । **ಬಂಧುತಾ**— ಇಂದ್ರನಿಗೂ ಸ್ತೋತೃಜನರಿಗೂ ಸ್ತುತ್ಯಸ್ತೋತೃವೆಂಬ ಪರಸ್ಪರ ಬಂಧುತ್ವವು । **ಜಾಗಾರ**— ಪ್ರಬುದ್ಧಮಾನವಾಗಿ ಬೆಳೆಯುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೋಸ್ಕರ ಪಕ್ಷಿಶ್ರೇಷ್ಠನಾದ ಸುಪರ್ಣನು ಯಾವ ಸೋಮವನ್ನು ಪಾದನಖಗಳಿಂದ ಹಿಡಿದುಕೊಂಡು ಸ್ವರ್ಗದಿಂದ ತಂದನೋ ಅಂತಹ ಶೋಭನಕರವಾದುದೂ ಬಾಧಾರಹಿತವಾದುದೂ ಅರುಣವರ್ಣದಿಂದಿರುವುದೂ ಯಜ್ಞದಲ್ಲಿ ಹವಿಸ್ಸಿಗಾಗಿ ಉಪಯೋಗಿಸಲ್ಪಡುವುದೂ ಆದ ಸೋಮರಸವು ನಿನಗೆ ಅರ್ಪಿಸಲ್ಪಡುವುದರಿಂದ ನೀನು ತೃಪ್ತನಾಗಿ ನಾವು ಬಹುಕಾಲ ಜೀವಿಸುವಂತೆ ಅನ್ನವನ್ನು ಕೊಡುತ್ತೀಯೆ. ಮತ್ತು ಇಂತಹ ಸೋಮವನ್ನು ನಿನಗೆ ಅರ್ಪಿಸುವುದರಿಂದ ಇಂದ್ರನಿಗೂ ಸ್ತೋತೃಜನರಿಗೂ ಸ್ತುತ್ಯಸ್ತೋತೃಸಂಬಂಧವೆಂಬ ಪರಸ್ಪರ ಬಂಧುತ್ವವು ಬೆಳೆಯುತ್ತದೆ.

English Translation

Whom the falcon brought to you (Indra) with his claw, beautiful, unassilable, purple-tinted, the measurer of food—by it, food and old age was prolonged for living, by it affinity was awaked.

॥ ಸಂಹಿತಾಪಾಠಃ ॥

ಏವಾ ತದಿಂದ್ರ ಇಂದುನಾ ದೇವೇಷು ಚಿದ್ಧಾರಯಾತೇ ಮಹಿ ತ್ಯಜಃ ।
ಕ್ರತ್ವಾ ವಯೋ ವಿ ತಾರ್ಯಾಯುಃ ಸುಕ್ರತೋ ಕ್ರತ್ವಾಯಮಸ್ಮದಾ ಸುತಃ॥

॥ ಪದಪಾಠಃ ॥

ಏವ । ತತ್ । ಇಂದ್ರಃ । ಇಂದುನಾ । ದೇವೇಷು । ಚಿತ್ । ಧಾರಯಾತೇ । ಮಹಿ । ತ್ಯಜಃ ।
ಕ್ರತ್ವಾ । ವಯಃ । ವಿ । ತಾರಿ । ಆಯುಃ । ಸುಕ್ರತೋ ಇತಿ ಸುಽಕ್ರತೋ । ಕ್ರತ್ವಾ । ಅಯಂ । ಅಸ್ಮತ್ । ಆ । ಸುತಃ ॥ ೬ ॥

॥ ಸಾಯಣಭಾಷ್ಯಂ ॥

ಏವ್ಮೈವಮುಕ್ತೇನ ಪ್ರಕಾರೇಣ ತತ್ತೇನೇಂದುನಾ ಸೋಮೇನ ತೃಪ್ಯನ್ನಿಂದ್ರೋ ದೇವೇಷು ಚಿದ್ದೇವೇಷ್ವಸ್ಮಾಸು ಚ ಮಹಿ ಮಹತ್ತ್ಯಜಸ್ತೇಜೋ ದುಃಖಸ್ಯ ವರ್ಜಯಿತೃ ರಕ್ಷಣಂ ವಾ ಧಾರಯಾತೇ ।

**ಧಾರಯತಿ । ಶಿಷ್ಟಃ ಪ್ರತ್ಯಕ್ಷಕೃತಃ । ಹೇ ಸುಕ್ರತೋ ಶೋಭನಕರ್ಮನ್ನಿಂದ್ರ ಕ್ರತ್ವಾ ಕ್ರತುನಾಸ್ಮಾಭಿರನು-ಷ್ಠಿತೇನ ಕರ್ಮಣಾ ಪ್ರೀತೇನ ತ್ವಯಾ ವಯೋಽನ್ನಮಾಯುರ್ಜೀವನಂ ಚ ವಿ ತಾರಿ । ಅಸ್ಮಭ್ಯಂ ಪ್ರಾದಾಯಿ । ಯೋಽಯಮಿಂದುಃ ಕ್ರತ್ವಾ ಕರ್ಮಣಾ ಪ್ರಜ್ಞಾನೇನ ವಾಸ್ಮದಸ್ಮಾಭಿರಾ ಸುತೋಽಭಿಷುತಃ । ಯದ್ವಾ । ಅಸ್ಮದಸ್ಮತ್ತಸ್ತ್ವದಾಭಿಮುಖ್ಯೇನ ಸುತಃ ಪ್ರೇರಿತಃ ತೇನೇಂದುನೇತ್ಯನ್ವಯಃ ॥**

॥ ಪ್ರತಿಪದಾರ್ಥ ॥

**ಏವ**— ಈ ಪ್ರಕಾರವಾಗಿ । **(ಯಃ) ಅಯಂ**— ಯಾವ ಸೋಮರಸವು । **ಕ್ರತ್ವಾ**— ಯಜ್ಞಾದಿಕರ್ಮ ಸಹಿತವಾಗಿ ಅಥವಾ ವಿಧ್ಯುಕ್ತಜ್ಞಾನದಿಂದ । **ಅಸ್ಮತ್**— ನಮ್ಮಿಂದ । **ಆ ಸುತಃ**— ಹಿಂಡಲ್ಪಟ್ಟಿತೋ ಅಂತಹ । **ತೇನ ಇಂದುನಾ**— ಆ ಸೋಮದಿಂದ ತೃಪ್ತನಾದ । **ಇಂದ್ರಃ**— ಇಂದ್ರನು । **ದೇವೇಷು ಚಿತ್**— ದೇವತೆಗಳಲ್ಲಿಯೂ ಸ್ತೋತೃಜನರಾದ ನಮ್ಮಲ್ಲಿಯೂ । **ಮಹಿ**— ಮಹತ್ತಾದ । **ತ್ಯಜಃ**— ದುಃಖನಾಶಕವಾದ ರಕ್ಷಣೆಯನ್ನು । **ಧಾರಯತೇ**— ಒದಗಿಸಿಕೊಡುತ್ತಾನೆ । **ಸುಕ್ರತೋ**— ಉತ್ತಮ ಕರ್ಮಕರ್ತೃವಾದ ಎಲೈ ಇಂದ್ರನೇ । **ಕ್ರತ್ವಾ**— ನಾವು ಮಾಡುವ ಕರ್ಮದಿಂದ ಪ್ರೀತನಾದ ನಿನ್ನಿಂದ । **ವಯಃ**— ಅನ್ನಾದ್ಯಾಹಾರವೂ । **ಆಯುಃ** । ಆಯುರ್ವೃದ್ಧಿಯೂ **ವಿ ತಾರಿ**— ಕೊಡಲ್ಪಡಲಿ.

॥ ಭಾವಾರ್ಥ ॥

ಯಜ್ಞಾನುಷ್ಠಾನ ಕರ್ಮಸಹಿತವಾಗಿ ನಮ್ಮಿಂದ ಹಿಂಡಿ ಅರ್ಪಿಸಲ್ಪಟ್ಟ ಸೋಮರಸಪಾನದಿಂದ ತೃಪ್ತನಾದ ಇಂದ್ರನು ದೇವತೆಗಳಿಗೂ ಸ್ತೋತೃಜನರಾದ ನಮಗೂ ದುಃಖಪರಿಹಾರಕವಾದ ರಕ್ಷಣೆಯನ್ನು ಒದಗಿಸಿ ಕೊಡುತ್ತಾನೆ ಉತ್ತಮ ಕರ್ಮಕರ್ತೃವಾದ ಎಲೈ ಇಂದ್ರನೇ, ನಾವು ಮಾಡುವ ಕರ್ಮದಿಂದ ಪ್ರೀತನಾದ ನೀನು ನಮಗೆ ಅನ್ನಾದ್ಯಾಹಾರವನ್ನೂ ದೀರ್ಘಾಯುಸ್ಸನ್ನೂ ಸಹ ಕೊಟ್ಟು ಅನುಗ್ರಹಿಸು.

### English Translation

So then by Indu Indra obtains among the gods great brilliancy; by our sacrifice, O doer of good deeds, food and old age is prolonged, by our sacrifice, this (Soma) is poured out by us.



## ನೂರ ನಲವತ್ತೈದನೆಯ ಸೂಕ್ತವು

### ಟೀ ಕಿ ಕೆ

ಈ ಸೂಕ್ತದಲ್ಲಿ ಸೂಕ್ತದ ಋಷಿಕೆಯಾದ ಇಂದ್ರಾಣಿಯು ಸಪತ್ನಿ ಎಂದರೆ ಸವತಿಯ ಬಾಧೆಪರಿಹಾರಾರ್ಥವಾಗಿಯೂ ತನ್ನ ಪತಿಯ ಪ್ರೇಮವು ಸವತಿಯಲ್ಲಿ ತಪ್ಪಿ ಹೋಗಿ ತನ್ನ ಮೇಲೆ ಉಂಟಾಗುವುದಕ್ಕಾಗಿಯೂ ಪಾಠಾ ಎಂಬ ಒಂದು ವಿಧವಾದ ಗಿಡಮೂಲಿಕೆಯನ್ನು ಅಗೆದು ಅದನ್ನು ಉಪಯೋಗಿಸುವ ವಿಧಾನವನ್ನು ವಿವರಿಸಿ ಆ ಮೂಲಿಕೆಯನ್ನು ಸ್ತುತಿಸಿದಾಳೆ. ಇದು ಒಂದುವಿಧವಾದ ಆಭಿಚಾರಿಕಕ್ರಿಯೆಯು. ಋಗ್ವಿಧಾನವೆಂಬ ಗ್ರಂಥದಲ್ಲಿ ಈ ರೀತಿ ಹೇಳಿದೆ.

ಇಮಾಮಿತಿ ತು ಸೂಕ್ತೇನ ಶತಕೃತ್ವೋ ದಶಾವರಂ ।
ಸಪತ್ನೀಂ ಬಾಧತೇ ತೇನ ಪತಿಶ್ಚಾತೀವ ಮನ್ಯತೇ ॥ ೬೪ ॥
ಪತಿಸ್ತು ಪರಿಜಪ್ಯೈನಂ ಪಾಠಾಮೇತೇನ ವೈ ಪಿಬೇತ್ ।
ಪಯಸಾ ಸಪ್ತರಾತ್ರಂ ತು ಸಪತ್ನಾನ್ಪ್ರತಿಭಾಧತೇ ॥ ೬೫ ॥
ಮೂಲಮಂತ್ರಜಪೈರನ್ಯೈರ್ಯಾ ಪತಿಂ ಜೇತುಮಿಚ್ಛತಿ ।
ಅಲೋಕಾ ಯಮಲೋಕಸ್ಥಾ ಮಜ್ಜತೇ ನರಕೇ ಹಿ ಸಾ ॥ ೬೬ ॥
ಅನ್ಯಥಾ ವೋಪನೀತಾನಿ ಚೂರ್ಣಮೂಲೌಷಧಾನ್ಯಪಿ ।
ವಿನಾಶಯೇಯುಃ ಪುರುಷಂ ತಸ್ಮಾನ್ನಾನ್ಯಂ ಸಮಾಚರೇತ್ ॥ ೬೭ ॥
ಪ್ರಿಯವಂದಾ ಭರ್ತರಿ ಯಾ ಭರ್ತಾ ಯಸ್ಯಾಃ ಪರಾಯಣಂ ।
ವಾಕ್ ಚೈವ ಮಧುರಾ ಯಸ್ಯಾಃ ಪತ್ಯುಃ ಸಂವನನಂ ಮಹತ್ ॥ ೬೮ ॥
ಪ್ರಿಯಂ ಭರ್ತಾರಮಾಸಾದ್ಯ ಪಿಬೇದೇವೌಷಧೀಮಿಮಾಂ ।
ಪ್ರಿಯಂವದಾಂ ಧರ್ಮಪರಾಂ ಧರ್ಮಪತ್ನೀಮನಿಂದಿತಾಂ ॥ ೬೯ ॥
ಅವಮನ್ಯೇತ ಯೋ ಮೋಹಾತ್ತಮಾಹುಃ ಪುರುಷಾಧಮಂ ॥

(ಋಗ್ವಿಧಾನ. ಅಧ್ಯಾಯ ೪ ಶ್ಲೋ ೬೪–೬೯)

**ಇಮಾಂ ಖನಾಮಿ** ಎಂಬ ಈ ಸೂಕ್ತವನ್ನು ನೂರಾವರ್ತಿ ಜಪಮಾಡುವುದರಿಂದ ಸವತಿಯ ಕಾಟವು ತಪ್ಪುವುದು ಮತ್ತು ತನ್ನ ಪತಿಯು ತನ್ನಲ್ಲಿ ಅನುರಕ್ತನಾಗುವನು. ಪತಿಯು ಸಹ ಈ ಸೂಕ್ತವನ್ನು ಜಪಿಸಿ ಪಾಠಾ ಎಂಬ ಮೂಲಿಕೆಯಿಂದ ಮಿಶ್ರಿತವಾದ ಹಾಲನ್ನು ಏಳು ರಾತ್ರಿಗಳು ಪಾನಮಾಡಿದರೆ ಅವನ ಶತ್ರುಗಳೆಲ್ಲರೂ ನಾಶವಾಗುವರು. ಈ ಸೂಕ್ತದ ಮಂತ್ರಗಳನ್ನು ಬಿಟ್ಟು ಬೇರೆ ಮಂತ್ರಗಳಿಂದ ಯಾವ ಸ್ತ್ರೀಯು ತನ್ನ ಪತಿಯನ್ನು ವಶಮಾಡಿಕೊಳ್ಳಲಿಚ್ಛಿಸುವಳೋ ಆ ಸ್ತ್ರೀಗೆ ದುರ್ಗತಿಯು ಪ್ರಾಪ್ತವಾಗುವುದು ಮತ್ತು ಯಮಲೋಕದಲ್ಲಿರುವ ನರಕದಲ್ಲಿ ಮುಳುಗಿ ದುಃಖಪಡುವಳು. ಇಲ್ಲಿ ಹೇಳಿರುವ ಪಾಠಾ ಎಂಬ ಮೂಲಿಕೆಯನ್ನು ಬಿಟ್ಟು ಬೇರೇ ಮೂಲಿಕೆ, ಚೂರ್ಣ, ಇತರ ಔಷಧಿಗಳನ್ನು ಉಪಯೋಗಿಸಿದರೂ ಆ ಚೂರ್ಣ ಮೊದಲಾದ ಔಷಧಿಗಳು ಆ ಸ್ತ್ರೀಯ ಪತಿಯನ್ನು ನಾಶಮಾಡುವವು. ಆದ್ದರಿಂದ ಇಲ್ಲಿ ಹೇಳಿರುವ ಮಂತ್ರವನ್ನೂ ಮೂಲಿಕೆಯನ್ನೂ ಉಪಯೋಗಿಸಬೇಕು, ಬೇರೇ ಮಂತ್ರವನ್ನೂ ಮೂಲಿಕೆಯನ್ನೂ ಉಪಯೋಗಿಸಬಾರದು. ಯಾವ ಸ್ತ್ರೀಯು ತನ್ನ ಪತಿಯೊಡನೆ ಪ್ರಿಯವಾದ ಮಾತುಗಳನ್ನಾಡುತ್ತಿರುವಳೋ ಯಾವ ಸ್ತ್ರೀಯ ಪತಿಯು ತನ್ನ ಪತ್ನಿಯೊಡನೆ ಆಸಕ್ತನಾಗಿರುವನೋ ಯಾವ ಸ್ತ್ರೀಯು ತನ್ನ ಪತಿಯ ಸಂಗಡ ಮಧುರವಾದ ಒಳ್ಳೆಯ ಮಾತುಗಳನ್ನೇ ಸದಾ ಆಡುವಳೋ ಆ ಸ್ತ್ರೀಯೊಡನೆ ಅವಳ ಪತಿಯು ಆಸಕ್ತನಾಗಿಯೂ ಪ್ರೀತಿಯುಳ್ಳವನಾಗಿಯೂ ಇರುವನು. ಪತಿಯ ಪ್ರೇಮವನ್ನಪೇಕ್ಷಿಸುವ ಸ್ತ್ರೀಯು ಪತಿಯ ಸಮೀಪದಲ್ಲಿ ಈ ಔಷಧಿಯನ್ನು ಪಾನಮಾಡಬೇಕು. ಪ್ರಿಯವಾಕ್ಯಗಳನ್ನಾಡುವವಳೂ ಧರ್ಮಪರಾಯಣಳೂ ದೋಷರಹಿತಳೂ ಆದ ಧರ್ಮಪತ್ನಿಯನ್ನು ಯಾವಪುರುಷನು ಮೋಹದಿಂದ ತಿರಸ್ಕರಿಸಿ ಅವಮಾನಮಾಡುವನೋ ಅವನನ್ನು ಪುರುಷಾಧಮನೆಂದು ಹೇಳುವರು.

ಬೃಹದ್ದೇವತೆಯಲ್ಲಿ ಈ ರೀತಿ ಹೇಳಿದೆ—

ಇಮಾಂ ಖನಾಮೀತಿ ಸೂಕ್ತಮಿಂದ್ರಾಣೀ ಯತ್ಸ್ವಯಂ ಜಗೌ ॥ ೫೫ ॥
ತದೌಪನಿಷದಂ ಷಟ್ಕಂ ಭಾವವೃತ್ತಂ ಪ್ರಚಕ್ಷತೇ ॥
ಉತ್ತಾನಪರ್ಣಾಂ ಪಾಠಾಂ ತು ಸ್ತೌತಿ ಸೂಕ್ತೇ ಮಹೌಷಧಿಂ ॥ ೫೬ ॥
ಪತಿಸಂವನನೀ ತ್ವಂತ್ಯಾನ್ಯಾಃ ಸಪತ್ನ್ಯಪನೋದಿಕಾಃ ॥

(ಬೃ. ದೇ. ೮–೫೫, ೫೬)

ಇಮಾಂ ಖನಾಮಿ ಎಂಬ ಈ ಸೂಕ್ತವನ್ನು ಇಂದ್ರಾಣಿಯೇ (ಇಂದ್ರಸಪತ್ನಿ) ಪಠಿಸಿ ಸ್ತುತಿಸಿದಾಳೆ. ಈ ಸೂಕ್ತವು ಆರು ಋಕ್ಕುಗಳುಳ್ಳ ಉಪನಿಷತ್‌ಭಾವವೃತ್ತಸೂಕ್ತವೆಂದು ಹೇಳಲ್ಪಡುವುದು. ಈ ಸೂಕ್ತದಲ್ಲಿ ಋಷಿಕೆಯು ಮಹೌಷಧಿರೂಪವಾದ ಲತೆಗಳ ಉದ್ದವಾದ ಮತ್ತು ವಿಸ್ತೃತವಾದ ಎಲೆಗಳನ್ನೂ ಕಾಂಡಗಳನ್ನೂ ಅವುಗಳ ಶಕ್ತಿಯನ್ನೂ ವರ್ಣಿಸಿ ಸ್ತುತಿಸಿರುವಳು. ಈ ಸೂಕ್ತದ ಕೊನೆಯ ಋಕ್ಕಿನಲ್ಲಿ ಪತಿಯ ಪ್ರೇಮವನ್ನು ಪತ್ನಿಗೆ ದೊರಕಿಸಿಕೊಡುವುದಾಗಿ ಹೇಳಿದೆ. ಉಳಿದ ಋಕ್ಕುಗಳಲ್ಲಿ ಸಪತ್ನಿಯ (ಸವತಿಯ) ಬಾಧೆಯನ್ನು ತಡೆಗಟ್ಟುವ ವಿಷಯದ ವಿವರಣೆ ಇದೆ. ಈ ಸೂಕ್ತದ ವಿಷಯದಲ್ಲಿ ಆಪಸ್ತಂಬಮಹರ್ಷಿಗಳೂ, ಭಾಷ್ಯಕಾರರೂ ಹೇಳಿರುವುದನ್ನು ಈ ಸೂಕ್ತದ ವಿನಿಯೋಗದ ಅನುವಾದದಲ್ಲಿ ತಿಳಿಸಿದೆ.

॥ ಸಾಯಣಭಾಷ್ಯಂ ॥

ಇಮಾಮಿತಿ ಷಡೃಚಂ ಸಪ್ತದಶಂ ಸೂಕ್ತಮಿಂದ್ರಾಣ್ಯಾ ಆರ್ಷಂ' ಷಷ್ಠೀ ಪಂಕ್ತಿಃ ಶಿಷ್ಟಾ ಅನುಷ್ಟುಭಃ । ಅನೇನ ಸೂಕ್ತೇನ ಸಪತ್ನ್ಯಾ ಬಾಧನಂ ಪ್ರತಿಪಾದ್ಯತೇ । ಅತ ಏವ ಸೂಕ್ತಜಪಾದಿನಾ ಸಪತ್ನ್ಯಾ-ವಿನಾಶೋ ಭವತಿ । ಅತಸ್ತದ್ದೇವತಾಕಮಿದಂ । ತಥಾ ಚಾನುಕ್ರಾಂತಂ । ಇಮಾಮಿಂದ್ರಾಣ್ಯುಪನಿಷತ್ಸ-ಪತ್ನೀಬಾಧನಮಾನುಷ್ಟುಭಂ ತು ಪಂಕ್ತ್ಯಂತಮಿತಿ ॥ ಅಸ್ಯ ಸೂಕ್ತಸ್ಯ ವಿನಿಯೋಗೋ ಭಗವತಾಪಸ್ತಂ-ಬೇನ ಕಸ್ಮಿಂಶ್ಚಿತ್ಸಪತ್ನೀಘ್ನಪ್ರಯೋಗವಿಶೇಷೇ ದರ್ಶಿತಃ । ತ್ರಿಃ ಸಪ್ತೈರ್ಯವೈಃ ಪಾಠಾಂ ಪರಿಕಿರತಿ ಯದಿ ವಾರುಣ್ಯಸಿ ವರುಣಾತ್ತ್ವಾ ನಿಷ್ಕ್ರೀಣಾಮಿ ಯದಿ ಸೌಮ್ಯಸಿ ಸೋಮಾತ್ತ್ವಾ ನಿಷ್ಕ್ರೀಣಾಮೀತಿ । ಶ್ವೋಭೂತ ಉತ್ತರಯೋತ್ಥಾಪ್ಯೋತ್ತರಾಭಿಸ್ತಿಸೃಭಿರಭಿಮಂತ್ರ್ಯೋತ್ತರಯಾ ಪ್ರತಿಚ್ಛನ್ನಾಂ ಹಸ್ತಯೋ-ರಾಬಧ್ಯ ಶಯ್ಯಾಕಾಲೇ ಬಾಹುಭ್ಯಾಂ ಭರ್ತಾರಂ ಪರಿಗೃಹ್ಣೀಯಾದುಪಧಾನಲಿಂಗಯಾ । ವಶ್ಯೋ ಭವತಿ । ಸಪತ್ನೀಬಾಧನಂ ಚ । ಆಪ. ಗೃ. ೯–೫ ರಿಂದ ೮ । ಇತಿ । ಅಯಮರ್ಥಃ । ಆದ್ಯಯಾ ಪಾಠಾ ನಾಮೌಷಧಿಃ ಖಾತವ್ಯಾ । ತತಸ್ತಿಸೃಭಿರೋಷಧೇರಭಿಮಂತ್ರಣಂ । ಷಷ್ಠ್ಯಾ ಬದ್ಧಾ ಸೌಷಧಿರ್ಯಥಾ ಭರ್ತಾರಂ ಸ್ಪೃಶತಿ ತಥಾ ತಸ್ಯ ಭರ್ತುರಾಲಿಂಗನಮಿತಿ ॥

ಅನುವಾದವು—**ಇಮಾಂ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಇಂದ್ರಾಣಿಯು ಋಷಿಕೆಯು ; ಈ ಸೂಕ್ತದ ಆರನೆಯ ಋಕ್ಕು ಪಂಕ್ತಿಛಂದವು; ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಈ ಸೂಕ್ತದಲ್ಲಿ ಸಪತ್ನಿಯ (ಸವತಿಯ) ಬಾಧೆಯು ಪರಿಹಾರವಾಗಬೇಕೆಂಬ ವಿಷಯವು ಪ್ರತಿಪಾದಿತವಾಗಿದೆ. ಈ ಸೂಕ್ತಜಪದಿಂದ ಸವತಿಯ ವಿನಾಶವು ಆಗುವುದು. ಆದ್ದರಿಂದ ಈ ಸೂಕ್ತಕ್ಕೆ ಸಪತ್ನೀಬಾಧನವೇ ದೇವತೆಯು. ಅನುಕ್ರಮಣಿಕೆಯಲ್ಲಿ—**ಇಮಾಮಿಂದ್ರಾಣ್ಯುಪನಿಷತ್ಸ-**

**ಪತ್ನೀಬಾಧನಮಾನುಷ್ಟುಭಂ ತು ಪಂಕ್ತ್ಯಂತಂ** ಎಂದು ಹೇಳಿರುವುದು. ಈ ಸೂಕ್ತದ ವಿನಿಯೋಗ ವಿಷಯದಲ್ಲಿ ಆಪಸ್ತಂಬಮಹರ್ಷಿಗಳು ಸಪತ್ನೀಪರಿಹಾರಸಂಬಂಧವಾದ ಪ್ರಯೋಗವಿಷಯದಲ್ಲಿ ಈ ರೀತಿ ತಿಳಿಸಿದ್ದಾರೆ-ಸವತಿಯ ತೊಂದರೆಯು ಪರಿಹಾರವಾಗಬೇಕೆಂದೂ ಪತಿಯು ತನ್ನ ವಶನಾಗಬೇಕೆಂದೂ ಬಯಸುವ ಸ್ತ್ರೀಯು ಇಪ್ಪತ್ತೊಂದು ಯವಧಾನ್ಯಗಳಿಂದ ಸಹಿತವಾಗಿ ಪಾಠಾ ಎಂಬ ಮೂಲಿಕೆಯ ಚೂರ್ಣವನ್ನು—**ಯದಿ ವಾರುಣ್ಯಸಿ ವರುಣಾತ್ತ್ವಾ ನಿಷ್ಕ್ರೀಣಾಮಿ ಯದಿ ಸೌಮ್ಯಸಿ ಸೋಮಾತ್ತ್ವಾ ನಿಷ್ಕ್ರೀಣಾಮಿ** ಎಂಬ ಮಂತ್ರವನ್ನು ಪಠಿಸುತ್ತಾ ಸುತ್ತಲೂ ಎರಚಬೇಕು ಮಾರನೆಯದಿನ ಬೆಳಗ್ಗೆ ಎದ್ದು ಈ ಸೂಕ್ತದ ಮೂರು ಋಕ್ಕುಗಳಿಂದ ಅಭಿಮಂತ್ರಿಸಿ ಮುಂದಿನ ಋಕ್ಕಿನಿಂದ ಆ ಪಾಠಾ ಎಂಬ ಮೂಲಿಕೆಯನ್ನು ಕೈಯಲ್ಲಿ ಮುಚ್ಚುವಂತೆ ಹಿಡಿದುಕೊಂಡು ಮಲಗುವ ಸಮಯದಲ್ಲಿ ತನ್ನ ಪತಿಯನ್ನು ಬಾಹುಗಳಿಂದ ಆಲಿಂಗನೆ ಮಾಡಿಕೊಂಡರೆ ಪತಿಯು ವಶನಾಗುವನು ಮತ್ತು ಸವತಿಯ ಕಾಟವು ತಪ್ಪುವುದು ಎಂದು ಹೇಳಿದ್ದಾರೆ. ಮುಖ್ಯಾಭಿಪ್ರಾಯವೇನೆಂದರೆ—ಈ ಸೂಕ್ತದ ಮೊದಲನೆಯ ಋಕ್ಕನ್ನು ಪಠಿಸಿ ಪಾಠಾ ಎಂಬ ಈ ಮೂಲಿಕೆಯನ್ನು ಭೂಮಿಯನ್ನು ಅಗೆದು ತೆಗೆಯಬೇಕು. ಅನಂತರ ಮುಂದಿನ ಮೂರು ಋಕ್ಕುಗಳಿಂದ (೨-೪) ಆ ಮೂಲಿಕೆಯನ್ನು ಅಭಿಮಂತ್ರಿಸಬೇಕು. ಆರನೆಯ ಋಕ್ಕಿನಿಂದ ಮೂಲಿಕೆಯನ್ನು ಬಾಹುವಿನಲ್ಲಿ ಕಟ್ಟಿಕೊಂಡು ಆ ಮೂಲಿಕೆಯು ಪತಿಯ ದೇಹಕ್ಕೆ ಸೇರುವಂತೆ ಪತಿಯನ್ನು ಆಲಿಂಗನಮಾಡಿಕೊಂಡರೆ ಪತಿಯು ವಶನಾಗುವನು ಎಂದು ಹೇಳಿದೆ.

## ಸೂಕ್ತ ೧೪೫

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೪೫ ॥
ಅಷ್ಟಕ—೮ ॥ ಅಧ್ಯಾಯ - ೮ ॥ ವರ್ಗ—೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಇಂದ್ರಾಣೀ ॥
॥ ದೇವತಾ—ಉಪನಿಷತ್ಸಪತ್ನೀಬಾಧನಂ ॥
॥ ಛಂದಃ—೧-೫. ಅನುಷ್ಟುಪ್ । ೬. ಪಂಕ್ತಿಃ ॥

॥ ಸಂಹಿತಾಪಾಠಃ ॥

ಇಮಾಂ ಖನಾಮ್ಯೋಷಧಿಂ ವೀರುಧಂ ಬಲವತ್ತಮಾಂ ।
ಯಯಾ ಸಪತ್ನೀಂ ಬಾಧತೇ ಯಯಾ ಸಂವಿಂದತೇ ಪತಿಂ ॥ ೧ ॥

॥ ಪದಪಾಠಃ ॥

ಇಮಾಂ । ಖನಾಮಿ । ಓಷಧಿಂ । ವೀರುಧಂ । ಬಲವತ್ಽತಮಾಂ ।
ಯಯಾ । ಸಽಪತ್ನೀಂ । ಬಾಧತೇ । ಯಯಾ । ಸಂಽವಿಂದತೇ । ಪತಿಂ ॥ ೧ ॥

|| ಸಾಯಣಭಾಷ್ಯಂ ||

ಇಮಾಮೋಷಧಿಂ ಪಾಠಾಖ್ಯಾಂ ವೀರುಧಂ ಲತಾರೂಪಾಂ ಬಲವತ್ತಮಾಂ ಸ್ವಕಾರ್ಯಕರಣೇಽತಿಶಯೇನ ಬಲವತೀಂ ಖನಾಮಿ । ಉನ್ಮೂಲಯಾಮಿ । ಯಯೌಷಧ್ಯಾ ಸಪತ್ನೀಂ । ಸಮಾನ ಏಕಃ ಪತಿರ್ಯಸ್ಯಾಃ ಸಾ ಸಪತ್ನೀ । ತಾಮೇಷಾ ವಧೂರ್ಬಾಧತೇ ಹಿನಸ್ತಿ । ಯಯಾ ಚ ಪತಿಂ ಭರ್ತಾರಂ ಸಂವಿಂದತೇ ಸಮ್ಯಗಸಾಧಾರಣ್ಯೇನ ಲಭತೇ ||

|| ಪ್ರತಿಪದಾರ್ಥ ||

**ಯಯಾ**—ಯಾವ ಓಷಧಿ (ಮೂಲಿಕೆ) ಯಿಂದ । **ಸಪತ್ನೀಂ**—ಸವತಿಯನ್ನು । **ಬಾಧತೇ**—ಹಿಂಸಿಸಲಾಗುವುದೋ (ನಾಶಮಾಡಲಾಗುವುದೋ) । **ಯಯಾ**—ಯಾವ ಓಷಧಿಯ ಸಹಾಯದಿಂದ । **ಪತಿಂ**—ತನ್ನ ಪತಿಯನ್ನೂ । **ಸಂವಿಂದತೇ**—ಪಡೆಯಲಾಗುವುದೋ ಅಂತಹ । **ವೀರುಧಂ**—ಬಳ್ಳಿಯ ರೂಪದಲ್ಲಿರುವುದೂ । **ಬಲವತ್ತಮಾಂ**—ಕಾರ್ಯಸಾಧನೆಯಲ್ಲಿ ಅತಿಶಯವಾದ ಶಕ್ತಿಯುಳ್ಳದ್ದೂ ಆದ । **ಇಮಾಂ ಓಷಧಿಂ**—ಈ ಪಾಠಾ ಎಂಬ ಮೂಲಿಕೆಯನ್ನು । **ಖನಾಮಿ**—ಭೂಮಿಯಿಂದ ಅಗೆದು ತೆಗೆಯುತ್ತೇನೆ.

|| ಭಾವಾರ್ಥ ||

ಯಾವ ಓಷಧಿಯ (ಮೂಲಿಕೆಯ) ಸಹಾಯದಿಂದ ಸವತಿಯನ್ನು ನಾಶಗೊಳಿಸಲು ಸಾಧ್ಯವೋ ಯಾವ ಓಷಧಿಯ ಸಹಾಯದಿಂದ ತನ್ನ ಪತಿಯನ್ನು (ಮತ್ತು ಅವನ ಪ್ರೇಮವನ್ನು) ಪಡೆಯಲು ಸಾಧ್ಯವೋ ಅಂತಹ ಬಳ್ಳಿಯ (ಲತಾ) ರೂಪದಲ್ಲಿರುವುದೂ ಅತಿಶಯವಾದ ಶಕ್ತಿಯುಳ್ಳದ್ದೂ ಆದ ಪಾಠಾ ಎಂಬ ಮೂಲಿಕೆಯನ್ನು ಭೂಮಿಯಿಂದ ಅಗೆದು ತೆಗೆಯುತ್ತೇನೆ

## English Translation.

I dig up this most potent medicinal creeper, by which (a wife) destroyes a rival wife, by which she secures to herself her husband.

|| ಸಂಹಿತಾಪಾಠಃ ||

ಉತ್ತಾನಪರ್ಣೇ ಸುಭಗೇ ದೇವಜೂತೇ ಸಹಸ್ವತಿ ।

ಸಪತ್ನೀಂ ಮೇ ಪರಾ ಧಮ ಪತಿಂ ಮೇ ಕೇವಲಂ ಕುರು ॥ ೨ ॥

|| ಪದಪಾಠಃ ||

ಉತ್ತಾನಽಪರ್ಣೇ । ಸುಽಭಗೇ । ದೇವಽಜೂತೇ । ಸಹಸ್ವತಿ ।

ಸಽಪತ್ನೀಂ । ಮೇ । ಪರಾ । ಧಮ । ಪತಿಂ । ಮೇ । ಕೇವಲಂ । ಕುರು ॥ ೨ ॥

|| ಸಾಯಣಭಾಷ್ಯಂ ||

**ಹೇ ಉತ್ತಾನಪರ್ಣೇ । ಉತ್ತಾನಾನ್ಯೂರ್ಧ್ವಮುಖಾನಿ ಪರ್ಣಾನಿ ಪತ್ರಾಣಿ ಯಸ್ಯಾಃ ತಾದೃಶಿ ಹೇ ಸುಭಗೇ ಸೌಭಾಗ್ಯಹೇತುಭೂತೇ ಹೇ ದೇವಜೂತೇ ದೇವೇನ ಸ್ರಷ್ಟ್ರಾ ಪ್ರೇರಿತೇ ಹೇ ಸಹಸ್ವತ್ಯಭಿಭವನವತಿ ಈದೃಶೀ ಹೇ ಪಾಠೇ ಮೇ ಮಮ ಸಪತ್ನೀಂ ಸ್ತ್ರಿಯಂ ಪರಾ ಧಮ । ಪರಾಗಮಯ । ಧಮತಿರ್ಗತಿಕರ್ಮಾ । ಪತಿಂ ಚ ಮೇ ಮಮೈವ ಕೇವಲಮಸಾಧಾರಣಂ ಕುರು ||**

|| ಪ್ರತಿಪದಾರ್ಥ ||

**ಉತ್ತಾನಪರ್ಣೇ**—ಊರ್ಧ್ವಮುಖವಾಗಿ ಬೆಳೆದಿರುವ ಎಲೆಗಳಿಂದ ಕೂಡಿರುವುದೂ । **ಸುಭಗೇ**—ಸೌಭಾಗ್ಯಪ್ರದವೂ । **ದೇವಜೂತೇ**—ಸೃಷ್ಟಿಕರ್ತನಿಂದ ಪ್ರೇರಿತವಾದುದೂ । **ಸಹಸ್ವತಿ**—ಶತ್ರುವನ್ನು ಪರಾಭವಗೊಳಿಸುವುದೂ ಆದ ಎಲೈ ಪಾಠವೆಂಬ ಮೂಲಿಕೆಯೇ, । **ಮೇ**—ನನ್ನ । **ಸಪತ್ನೀಂ**—ಸವತಿಯನ್ನು । **ಪರಾ ಧಮ**—ಓಡಿಸು । **ಪತಿಂ ಚ**—ನನ್ನ ಪತಿಯನ್ನು । **ಮೇ ಕೇವಲಂ**—ನನ್ನವನು ಮಾತ್ರನೇ ಆಗುವಂತೆ । **ಕುರು**—ಮಾಡು.

| ಭಾವಾರ್ಥ ||

ಮೇಲ್ಮುಖವಾಗಿ ಬೆಳೆದಿರುವ ಎಲೆಗಳಿಂದ ಕೂಡಿರುವುದೂ ಸೌಭಾಗ್ಯಹೇತುಕವೂ, ಶತ್ರುವಾದ ಸವತಿಯನ್ನು ಪರಾಭವಗೊಳಿಸುವುದೂ ಆದ ಪಾಠವೆಂಬ ಎಲೈ ಮೂಲಿಕೆಯೇ, ನನ್ನ ಸವತಿಯನ್ನು ನನ್ನ ಪತಿಯ ಸಮೀಪದಿಂದ ದೂರ ಓಡಿಸು ಮತ್ತು ನನ್ನ ಪತಿಯು ನನ್ನವನೇ ಆಗುವಂತೆ ಎಂದರೆ ಇನ್ನೊಬ್ಬ ಸ್ತ್ರೀಯಲ್ಲಿ ಅನುರಕ್ತನಾಗದೆ ನನ್ನಲ್ಲಿ ಮಾತ್ರ ಪ್ರೀತಿಯುಕ್ತನಾಗಿರುವಂತೆ ಮಾಡು.

## English Translation.

O (plant) with up-turned leaves, auspicious, sent by the gods, powerful, remove my rival and make my husband mine alone.

|| ಸಂಹಿತಾಪಾಠಃ ||

ಉತ್ತ॒ರಾಹಮು॑ತ್ತರ ಉತ್ತ॒ರೇದುತ್ತ॑ರಾಭ್ಯಃ ।
ಅಥಾ॑ ಸ॒ಪತ್ನೀ॒ ಯಾ ಮಮಾಧ॑ರಾ॒ ಸಾಧ॑ರಾಭ್ಯಃ ॥ ೩ ॥

|| ಪದಪಾಠಃ ||

ಉತ್ऽತ॑ರಾ । ಅ॒ಹಂ । ಉ॒ತ್ऽತ॒ರೇ॒ । ಉತ್ऽತ॑ರಾ । ಇತ್ । ಉತ್ऽತ॑ರಾಭ್ಯಃ ।
ಅಥ॑ । ಸ॒ऽಪ॑ತ್ನೀ । ಯಾ । ಮಮ॑ । ಅಧ॑ರಾ । ಸಾ । ಅಧ॑ರಾಭ್ಯಃ ॥ ೩ ॥

|| ಸಾಯಣಭಾಷ್ಯಂ ||

**ಹೇ ಉತ್ತರ ಉತ್ಕೃಷ್ಟತರೇ ಪಾಠೇ ಅಹಮುತ್ತರೋತ್ಕೃಷ್ಟತರಾ ಭೂಯಾಸಂ | ಉತ್ತರಾಭ್ಯೋ ಲೋಕೇ ಯಾ ಉತ್ಕೃಷ್ಟತರಾಃ ಸಂತಿ ತಾಭ್ಯೋಽಪ್ಯಹಮುತ್ತರೋತ್ಕೃಷ್ಟತರೈವ ತ್ವತ್ಪ್ರಸಾದಾದ್ಭವೇಯಂ| ಅಥಾನಂತರಂ ಮಮ ಯಾ ಸಪತ್ನೀ ಸಾಧರಾಭ್ಯೋ ನಿಕೃಷ್ಟಾಭ್ಯೋಽಪ್ಯಧರಾ ನಿಕೃಷ್ಟತರಾ ಭವತು ||**

|| ಪ್ರತಿಪದಾರ್ಥ ||

**ಉತ್ತರೇ**—ಉತ್ಕೃಷ್ಟವಾದ ಎಲ್ಪೆ ಪಾಠವೆಂಬ ಓಷಧಿಯೇ | **ಅಹಂ**—ನಾನು | **ಉತ್ತರಾ**—ಎಲ್ಲರಿಗಿಂತಲೂ ಉತ್ಕೃಷ್ಟಳಾಗಲಿ | **ಉತ್ತರಾಭ್ಯಃ**—ಲೋಕದಲ್ಲಿ ಯಾರು ಅತ್ಯಂತ ಉತ್ಕೃಷ್ಟರಾಗಿರುವರೋ ಅವರಿಗಿಂತಲೂ ನಾನು | **ಉತ್ತರಾ ಇತ್**—ಉತ್ಕೃಷ್ಟಳಾಗಿರುವಂತಾಗಲಿ | **ಅಥ**—ಅನಂತರ | **ಮಮ**—ನನ್ನ | **ಯಾ ಸಪತ್ನೀ**—ಯಾವ ಸವತಿಯಿರುವಳೋ | **ಸಾ**—ಅವಳು | **ಅಧರಾಭ್ಯಃ**—ನಿಕೃಷ್ಟರಾದ (ನೀಚರಾದ) ಜನರಿಗಿಂತಲೂ | **ಅಧರಾ**—ಅತ್ಯಂತ ನಿಕೃಷ್ಟಳಾಗಿರಲಿ

|| ಭಾವಾರ್ಥ ||

ಉತ್ಕೃಷ್ಟವಾದ (ಶ್ರೇಷ್ಠವಾದ) ಪಾಠವೆಂಬ ಎಲ್ಪೆ ಮೂಲಿಕೆಯೇ, ನಾನು ಎಲ್ಲರಿಗಿಂತಲೂ ಉತ್ಕೃಷ್ಟಳಾಗಲಿ. ಲೋಕದಲ್ಲಿ ಯಾರು ಅತ್ಯಂತ ಉತ್ಕೃಷ್ಟರೆನಿಸಿರುವರೋ ಅವರಿಗಿಂತಲೂ ನಾನು ಉತ್ಕೃಷ್ಟಳಾಗುವಂತಾಗಲಿ. ಅನಂತರ ನನ್ನ ಸವತಿಯೆಂಬುವಳು ಯಾವಳಿರುವಳೋ ಅವಳು ಲೋಕದಲ್ಲಿ ನಿಕೃಷ್ಟರಾದ ಜನರಿಗಿಂತಲೂ ಅತ್ಯಂತ ನಿಕೃಷ್ಟಳಾಗಲಿ.

## English Translation.

Exallent (plant), may I too be excellent, excellent among the excellent and may she who is my rival be vile amongst the vile.

|| ಸಂಹಿತಾಪಾಠಃ ||

ನಹ್ಯಸ್ಯಾ ನಾಮ ಗೃಭ್ಣಾಮಿ ನೋ ಅಸ್ಮಿನ್ರಮತೇ ಜನೇ |
ಪರಾಮೇವ ಪರಾವತಂ ಸಪತ್ನೀಂ ಗಮಯಾಮಸಿ || ೪ ||

|| ಪದಪಾಠಃ ||

ನಹಿ | ಅಸ್ಯಾಃ | ನಾಮ | ಗೃಭ್ಣಾಮಿ | ನೋ ಇತಿ | ಅಸ್ಮಿನ್ | ರಮತೇ | ಜನೇ |
ಪರಾಂ | ಏವ | ಪರಾಽವತಂ | ಸ್ಽಪತ್ನೀಂ | ಗಮಯಾಮಸಿ || ೪ ||

॥ ಸಾಯಣಭಾಷ್ಯಂ ॥

ಅಸ್ಯಾಃ ಸಪತ್ನ್ಯಾ ನಾಮ ಸಂಜ್ಞಾಮಪಿ ನಹಿ ಗೃಭ್ಣಾಮಿ । ನೈವ ಗೃಹ್ಣಾಮಿ । ಉಚ್ಚಾರಯಾಮಿ। ನೋ ಖಲು ಕಾಚಿದಸ್ಮಿಞ್ಜನೇ ಸಪತ್ನ್ಯಾಖ್ಯೇ ರಮತೇ । ಕ್ರೀಡತಿ । ಅಪಿ ಚ ತಾಂ ಸಪತ್ನೀಂ ಪರಾಂ ಪರಾವತಮೇವಾತಿಶಯೇನ ದೂರದೇಶಮೇವ ಗಮಯಾಮಸಿ । ಪ್ರಾಪಯಾಮಃ । ಅತಿಶಯೇನ ಭರ್ತ್ರಾ ವಿಯೋಜಯಾಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಸ್ಯಾಃ—ಈ ಸವತಿಯ । ನಾಮ—ಹೆಸರನ್ನೂ । ನಹಿ ಗೃಭ್ಣಾಮಿ—ಬಾಯಿಂದಲೂ ಉಚ್ಚರಿಸುವುದಿಲ್ಲ । ಅಸ್ಮಿನ್ ಜನೇ—ಈ ಸವತಿಯ ವಿಷಯದಲ್ಲಿ । ನೋ ರಮತೇ—ಯಾರಿಗೂ ಸಂತೋಷ (ಸಹನೆ) ಇರುವುದಿಲ್ಲ । ಪರಾಂ—ನನಗಿಂತಲೂ ಬೇರೆಯಾದ । ಸಪತ್ನೀಂ—ಸವತಿಯನ್ನು । ಪರಾವತಂ ಏವ—ಅತಿದೂರಪ್ರದೇಶಕ್ಕೆ (ಪತಿಯಿಂದ ದೂರವಾಗಿರುವಂತೆ) । ಗಮಯಾಮಸಿ—ಓಡಿಸಿಬಿಡೋಣ.

। ಭಾವಾರ್ಥ ॥

ಈ ಸವತಿಯ ಹೆಸರನ್ನು ಸಹ ನಾನು ಉಚ್ಚಾರಮಾಡುವುದಿಲ್ಲ. ಈ ಸವತಿಯ ವಿಷಯದಲ್ಲಿ ಯಾರೂ ಸಂತೋಷಪಡುವುದಿಲ್ಲ. ನನಗಿಂತಲೂ ಬೇರೆಯಾದ ಈ ಸವತಿಯನ್ನು ಅತಿದೂರಪ್ರದೇಶಕ್ಕೆ (ಪತಿಯಿಂದ ದೂರ ವಿರುವಂತೆ) ಓಡಿಸಿಬಿಡೋಣ.

English Translation

I will not even utter her name, no (woman) takes pleasure in that person ; may we remove the other rival wife to a distance.

॥ ಸಂಹಿತಾಪಾಠಃ ॥

ಅಹಮಸ್ಮಿ ಸಹಮಾನಾಥ ತ್ವಮಸಿ ಸಾಸಹಿಃ ।
ಉಭೇ ಸಹಸ್ವತೀ ಭೂತ್ವೀ ಸಪತ್ನೀಂ ಮೇ ಸಹಾವಹೈ ॥ ೫ ॥

॥ ಪದಪಾಠಃ ॥

ಅಹಂ । ಅಸ್ಮಿ । ಸಹಮಾನಾ । ಅಥ । ತ್ವಂ । ಅಸಿ । ಸಸಹಿಃ ।
ಉಭೇ ಇತಿ । ಸಹಸ್ವತೀ ಇತಿ । ಭೂತ್ವೀ । ಸ್ಽಪತ್ನೀಂ । ಮೇ । ಸಹಾವಹೈ ॥ ೫ ॥

|| ಸಾಯಣಭಾಷ್ಯಂ ||

**ಹೇ ಓಷಧಿ ಅಹಂ ತ್ವತ್ಪ್ರಸಾದಾತ್ಸಹಮಾನಾಸ್ಮಿ । ಸಪತ್ನ್ಯಾ ಅಭಿಭವಿತ್ರೀ ಭವಾಮಿ । ಅಥಾಪಿ ಚ ತ್ವಮಪಿ ಸಾಸಹಿರಸಿ । ತಸ್ಯಾ ಅಭಿಭವಿತ್ರೀ ಭವಸಿ । ಆವಾಮುಭೇ ಅಪಿ ಸಹಸ್ವತೀ ಅಭಿಭವಿತ್ರ್ಯೌ ಭೂತ್ವೀ ಭೂತ್ವಾ ಮೇ ಮಮ ಸಪತ್ನೀಂ ಸಹಾವಹೈ । ಅಭಿಭವಾವ ||**

|| ಪ್ರತಿಪದಾರ್ಥ ||

(ಎಲೈ ಓಷಧಿಯೇ) **ಅಹಂ**—ನಾನು (ನಿನ್ನ ಅನುಗ್ರಹದಿಂದ) । **ಸಹಮಾನಾ ಅಸ್ಮಿ**—ಸವತಿಯನ್ನು ಪರಾಭವಗೊಳಿಸುತ್ತೇನೆ । **ಅಥ**—ಮತ್ತು । **ತ್ವಂ**—ನೀನೂ ಸಹ । **ಸಾಸಹಿಃ ಅಸಿ**—ಆ ಸವತಿಯನ್ನು ಪರಾಭವಗೊಳಿಸುತ್ತೀಯೆ । **ಉಭೇ**—ನಾವಿಬ್ಬರೂ । **ಸಹಸ್ವತೀ ಭೂತ್ವೀ**—ಶಕ್ತರಾಗಿ । **ಮೇ**—ನನ್ನ । **ಸಪತ್ನೀಂ**—ಸವತಿಯನ್ನು । **ಸಹಾವಹೈ**—ಪರಾಭವಗೊಳಿಸೋಣ

|| ಭಾವಾರ್ಥ ||

ಎಲೈ ಓಷಧಿಯೇ, ನಿನ್ನ ಅನುಗ್ರಹದಿಂದ ನಾನು ನನ್ನ ಸವತಿಯನ್ನು ಪರಾಭವಗೊಳಿಸುತ್ತೇನೆ. ಮತ್ತು ನೀನೂ ಸಹ ಅವಳನ್ನು ಪರಾಭವಗೊಳಿಸುತ್ತೀಯೆ ನಾವಿಬ್ಬರೂ ಸೇರಿ ನಮ್ಮ ಶಕ್ತಿಸಾಮರ್ಥ್ಯಗಳಿಂದ ಆ ನನ್ನ ಸವತಿಯನ್ನು ಪರಾಭವಗೊಳಿಸೋಣ

English Translation

I am triumphing, you are triumphant; we two being powerfull will triumph over my rival.

|| ಸಂಹಿತಾಪಾಠಃ ||

ಉಪ ತೇಽಧಾಂ ಸಹಮಾನಾಮಭಿ ತ್ವಾಧಾಂ ಸಹೀಯಸಾ ।
ಮಾಮನು ಪ್ರ ತೇ ಮನೋ ವತ್ಸಂ ಗೌರಿವ ಧಾವತು ಪಥಾ ವಾರಿವ ಧಾವತು || ೬ ||

|| ಪದಪಾಠಃ ||

ಉಪ । ತೇ । ಅಧಾಂ । ಸಹಮಾನಾಂ । ಅಭಿ । ತ್ವಾ । ಅಧಾಂ । ಸಹೀಯಸಾ ।
ಮಾಂ । ಅನು । ಪ್ರ । ತೇ । ಮನಃ । ವತ್ಸಂ । ಗೌಃಽಇವ । ಧಾವತು । ಪಥಾ । ವಾಃಽಇವ । ಧಾವತು ||

|| ಸಾಯಣಭಾಷ್ಯಂ ||

**ಹೇ ಪತೇ ತೇ ತವ ಸಹಮಾನಾಂ ಸಪತ್ನ್ಯಾ ಅಭಿಭವಿತ್ರೀಮಿಮಾಮೋಷಧಿಮುಪಾಧಾಂ । ಶಿರಸ ಉಪಾಧಾನಂ ಕರೋಮಿ । ಸಹೀಯಸಾಭಿಭವಿತೃತರೇಣ ತೇನೋಪಧಾನೇನ ತ್ವಾಮಭ್ಯಧಾಂ । ಅಭಿತೋ**

**ಧಾರಯಾಮಿ। ತೇ ತವ ಭರ್ತುರ್ಮನೋ ಮಾಮನುಲಕ್ಷ್ಯ ಪ್ರ ಧಾವತು। ಪ್ರಕರ್ಷೇಣ ಶೀಘ್ರಂ ಗಚ್ಛತು। ತತ್ರ ನಿದರ್ಶನದ್ವಯಮುಚ್ಯತೇ । ಗೌರಿವ ಯಥಾ ಗೌರ್ವತ್ಸಂ ಶೀಘ್ರಂ ಗಚ್ಛತಿ ಪಥಾ ನಿಮ್ನೇನ ಮಾರ್ಗೇಣ ವಾರಿವ ವಾರುದಕಂ ಯಥಾ ಸ್ವಭಾವತೋ ಗಚ್ಛತಿ ತದ್ವತ್ । ಅನೇನ ನಿದರ್ಶನದ್ವಯೇನಾತ್ಸುಕ್ಯಾತಿಶಯಃ ಸ್ವಾಭಾವಿಕತ್ವಂ ಚ ಪ್ರತಿಪಾದ್ಯತೇ ॥**

॥ ಪ್ರತಿಪದಾರ್ಥ ॥

(ಎಲೈ ಓಷಧಿಯೇ), **ತೇ**—ನಿನ್ನ। **ಸಹಮಾನಾಂ**—ಸವತಿಯನ್ನು ಪರಾಭವಗೊಳಿಸುವ ಈ ಓಷಧಿಯನ್ನು (ಶಕ್ತಿಯನ್ನು)। **ಉಪ ಅಧಾಂ**—ಶಿರಸ್ಸಿನಲ್ಲಿ ಧರಿಸುತ್ತೇನೆ। **ಸಹೀಯಸಾ**—ಸವತಿಯನ್ನು ಪರಾಭವಗೊಳಿಸು ಆ ಸಾಮರ್ಥ್ಯದಿಂದ ನಿನ್ನನ್ನು। **ಅಭಿ ಅಧಾಂ**—ಚೆನ್ನಾಗಿ ಧರಿಸುತ್ತೇನೆ। **ತೇ**—(ನನ್ನ ಪತಿಯಾದ) ನಿನ್ನ। **ಮನಃ**—ಮನಸ್ಸು। **ಮಾಂ**—ನನ್ನ ಬಳಿಗೆ। **ಗೌರಿವ**—ಹಸುವು। **ವತ್ಸಂ**—ತನ್ನ ಕರುವಿನ ಬಳಿಗೆ ಓಡಿ ಹೋಗುವಂತೆಯೂ। **ಪಥಾ**—ತಗ್ಗುಪ್ರದೇಶದಲ್ಲಿ। **ವಾರಿವ**—ಹರಿಯುವ ನೀರಿನಂತೆಯೂ। **ಪ್ರ ಧಾವತು**—ಓಡಿಬರಲಿ.

॥ ಭಾವಾರ್ಥ ॥

ಎಲೈ ಓಷಧಿಯೇ. ಸವತಿಯನ್ನು ಪರಾಭವಗೊಳಿಸುವ ಶಕ್ತಿಯುಳ್ಳ ಈ ಓಷಧಿಯನ್ನು ನನ್ನ ಶಿರಸ್ಸಿನಲ್ಲಿ ಧರಿಸುತ್ತೇನೆ ಮತ್ತು ಆ ಸಾಮರ್ಥ್ಯವಿರುವ ನಿನ್ನನ್ನು (ಓಷಧಿಯನ್ನು) ಶರೀರದ ಇತರ ಭಾಗಗಳಲ್ಲಿಯೂ ಧರಿಸುತ್ತೇನೆ ಎಲೈ ನನ್ನ ಪತಿಯೇ, ಹಸುವು ತನ್ನ ಕರುವಿನ ಬಳಿಗೆ ಓಡಿಹೋಗುವಂತೆಯೂ, ಇಳಿಜಾರಿನಲ್ಲಿ ಹರಿಯುವ ನೀರು ವೇಗವಾಗಿ ಹರಿದುಹೋಗುವಂತೆಯೂ ನಿನ್ನ ಮನಸ್ಸು ನನ್ನ ಬಳಿಗೆ ಓಡಿಬರಲಿ.

## English Translation.

I make you the triumphant (herb) my pillow, I support you with that more triumphant (pillow); let your mind hasten to me as a cow to her calf, let it speed on its way like water.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧದಲ್ಲಿ ಓಷಧಿಯನ್ನು ಸ್ತುತಿಸಲಾಗಿದೆ. ಉತ್ತರಾರ್ಧದಲ್ಲಿ ಪತಿಯನ್ನು ಸಂಬೋಧಿಸಿ ಅವನ ಮನಸ್ಸು ತನ್ನ ಬಳಿಗೆ ಬಹುಬೇಗನೆ ಬರುವಂತೆ ಎಂದರೆ ತನ್ನ ಪತಿಯ ಪ್ರೇಮವು ತನ್ನ ಮೇಲೆ ಉಂಟಾಗುವಂತೆ ಪ್ರಾರ್ಥಿಸಲಾಗಿದೆ.

# ನೂರ ನಲವತ್ತಾರನೆಯ ಸೂಕ್ತವು

## ಪೀಠಿಕೆ

ಈ ಸೂಕ್ತದಲ್ಲಿ ಅರಣ್ಯಾನೀ ಎಂಬ ದೇವತೆಯನ್ನು ಸ್ತುತಿಸಲಾಗಿದೆ. ಅರಣ್ಯಾನೀ ಎಂಬುವುದು ಅರಣ್ಯಾಭಿಮಾನಿದೇವತೆಯ (ಅರಣ್ಯದ) ಪತ್ನಿಯು. ಯಾಸ್ಕರು—

**ಅರಣ್ಯಾನೀ । ಅರಣ್ಯಾನ್ಯರಣ್ಯಸ್ಯ ಪತ್ನೀ । ಅರಣ್ಯಮಪಾರ್ಣಂ ಗ್ರಾಮಾದರಮಣಂ ಭವತೀತಿ ವಾ ॥**

(ನಿ ೯-೨೯)

ಅರಣ್ಯಾನೀ ಎಂಬುವುದು ಅರಣ್ಯದ ಪತ್ನಿಯು. ಅರಣ್ಯವೆಂದರೆ ಗ್ರಾಮ, ನಗರ, ಪಟ್ಟಣ ಇವುಗಳಿಂದ ದೂರವಾಗಿರುವ ಪ್ರದೇಶವು ಅಥವಾ ಗ್ರಾಮದಲ್ಲಿರುವಂತೆ ಇಲ್ಲಿ ಯಾವ ವಿಧವಾದ ಮನರಂಜನೆಯೂ ಇಲ್ಲದಿರುವ ಬೇಜಾರನ್ನುಂಟು ಮಾಡುವ ನಿರ್ಜನಪ್ರದೇಶಕ್ಕೆ ಅರಣ್ಯವೆಂದು ಹೆಸರು. ಋಗ್ವಿಧಾನದಲ್ಲಿ—

**ಅರಣ್ಯಾನೀತ್ಯರಣ್ಯೇಷು ಜಪೇತ್ಸೂಕ್ತಮನೇಕಶಃ।**
**ಅರಣ್ಯಾನೀಂ ನಮಸ್ಕೃತ್ವಾ ಸೋಽರಣ್ಯಾತ್ಪ್ರತಿಮುಚ್ಯತೇ ॥**

(ಋಗ್ವಿಧಾನ. ೪-೭೦)

ಅರಣ್ಯದಲ್ಲಿ ಸಂಚರಿಸುವಾಗ ದಾರಿತಪ್ಪಿಹೋದರೆ ಅರಣ್ಯಾನೀ ಎಂಬ ಈ ಸೂಕ್ತವನ್ನೇ ಅನೇಕವಾರ್ತಿ ಪಠಿಸಿ ಈ ಅರಣ್ಯಾನೀಂ ಎಂಬ ದೇವತೆಯನ್ನು ಮನಸ್ಸಿನಲ್ಲಿಯೇ ನಮಸ್ಕರಿಸಿದರೆ ಸರಿಯಾದ ದಾರಿಯು ಸಿಕ್ಕಿ ಅರಣ್ಯಪ್ರದೇಶದಿಂದ ಹೊರಬರುವಂತಾಗುವುದು. ಈ ಸೂಕ್ತದಲ್ಲಿ ಋಷಿಯು ಕಾಣಬರುವ ದೃಶ್ಯಗಳನ್ನು ಹೃದಯಂಗಮವಾಗಿ ದೃಷ್ಟಾಂತಗಳ ಮೂಲಕ ವಿವರಿಸಿರುವನು

॥ ಸಾಯಣಭಾಷ್ಯಂ ॥

**ಅರಣ್ಯಾನೀತಿ ಷಡೃಚಮಷ್ಟಾದಶಂ ಸೂಕ್ತಮಿರಂಮದಪುತ್ರಸ್ಯ ದೇವಮುನೇರಾರ್ಷಂ । ಮಹದರಣ್ಯಮರಣ್ಯಾನೀ । ತದ್ದೇವತಾಕಂ । ಆನುಷ್ಟುಭಂ । ತಥಾ ಚಾನುಕ್ರಾಂತಂ । ಅರಣ್ಯಾನ್ಯೈರಂಮದೋ ದೇವಮುನಿರರಣ್ಯಾನೀಂ ತುಷ್ಟಾವೇತಿ ॥ ಗತೋ ವಿನಿಯೋಗಃ ॥**

ಅನುವಾದವು— **ಅರಣ್ಯಾನಿ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹದಿನೆಂಟನೆಯ **ಸೂಕ್ತವು.** ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಇರಂಮದ ಪುತ್ರನಾದ ದೇವಮುನಿ ಎಂಬುವನು ಋಷಿಯು ; ಅರಣ್ಯಾನೀ ಎಂಬುವುದು ದೇವತೆಯು ; ಅನುಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಅರಣ್ಯಾನ್ಯೈರಂಮದೋ ದೇವಮುನಿರರಣ್ಯಾನೀಂ ತುಷ್ಟಾವ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೪೬

ಮಂಡಲ-೧೦ ॥ ಅನುವಾಕ-೧೧ ॥ ಸೂಕ್ತ-೧೪೬ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ- ೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ದೇವಮುನಿರೈರಂಮದಃ ॥
॥ ದೇವತಾ—ಅರಣ್ಯಾನೀ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

**ಅರಣ್ಯಾನ್ಯರಣ್ಯಾನ್ಯಸೌ ಯಾ ಪ್ರೇವ ನಶ್ಯಸಿ ।**
**ಕಥಾ ಗ್ರಾಮಂ ನ ಪೃಚ್ಛಸಿ ನ ತ್ವಾ ಭೀರಿವ ವಿಂದತೀಂ೩ ॥ ೧ ॥**

॥ ಪದಪಾಠಃ ॥

ಅರಣ್ಯಾನಿ । ಅರಣ್ಯಾನಿ । ಅಸೌ । ಯಾ । ಪ್ರಇವ । ನಶ್ಯಸಿ ।

ಕಥಾ । ಗ್ರಾಮಂ । ನ । ಪೃಚ್ಛಸಿ । ನ । ತ್ವಾ । ಭೀಃಇವ । ವಿಂದತೀಂ೩ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅರಣ್ಯಾನಿ । ಅರಣ್ಯಸ್ಯ ಪಾಲಯಿತ್ರೀ ಕಾಚಿದಧಿದೇವತಾರಣ್ಯಾನೀತಿ ನೈರುಕ್ತಾಃ । ವೈಯಾಕರಣಾಸ್ತು ಹಿಮಾರಣ್ಯಯೋರ್ಮಹತ್ತ್ವೇ । ಪಾ. ೪–೧–೪೯–೧ । ಇತ್ಯರಣ್ಯಸ್ಯ ಮಹತ್ತ್ವೇ ಙೀಷಂ ಸ್ಮರಂತಿ । ಅರಣ್ಯಾಧಿದೇವತೇ ಅರಣ್ಯಾನಿ ಕಾಂತಾರಾಣಿ ಪ್ರತಿ ಯಾಸೌ ತ್ವಂ ಪ್ರೇವ ನಶ್ಯಸಿ । ಇವಃ ಸಂಪ್ರತ್ಯರ್ಥೇ । ನಶತಿಃ ಪ್ರಾಪ್ತಿಕರ್ಮಾ ॥ ಅತ್ರ ವ್ಯತ್ಯಯೇನ ಶ್ಯನ್ ॥ ಸಂಪ್ರತಿ ರಕ್ಷಣಾಯ ಪ್ರಾಪ್ನೋಷಿ। ಯದ್ವಾ। ನಿರ್ಜನೇ ದೇಶೇ ವರ್ತಮಾನತ್ವಾನ್ನಷ್ಟೇವ ಪ್ರತೀಯಸೇ । ಸಾ ತ್ವಂ ಕಥಾ ಕಥಂ ಗ್ರಾಮಂ ನ ಪೃಚ್ಛಸಿ । ನಿರ್ಜನೇಽರಣ್ಯೇ ಕಥಂ ರಮಸೇ । ನೂನಂ ತ್ವಾ ತ್ವಾಂ ಭೀರ್ಭಯಂ ನ ವಿಂದತಿ । ನ ಲಭತೇ ಕಿಂ । ವಿತರ್ಕೇ ಪ್ಲುತಃ । ಇವಃ ಸಂಪ್ರತ್ಯರ್ಥೇ ಪರಿಭಯಾರ್ಥೇ ವಾ । ಅತ್ರ ನಿರುಕ್ತಂ । ಅರಣ್ಯಾನ್ಯರಣ್ಯಸ್ಯ ಪತ್ನ್ಯರಣ್ಯಮಪಾರ್ಣಂ ಭವತಿ ಗ್ರಾಮಾದರಮಣಂ ಭವತೀತಿ ವಾ । ಅರಣ್ಯಾನೀತ್ಯೇನಾಮಾಮಂತ್ರಯತೇ । ಯಾಸಾವರಣ್ಯಾನಿ ವನಾನಿ ಪರಾಚೀವ ನಶ್ಯಸಿ ಕಥಂ ಗ್ರಾಮಂ ನ ಪೃಚ್ಛಸಿ ನ ತ್ವಾ ಭೀರ್ವಿಂದತೀವೇತೀವಃ ಪರಿಭಯಾರ್ಥೇ ವಾ । ನಿ. ೯–೩೦ । ಇತಿ ॥

॥ ಪ್ರತಿಪದಾರ್ಥ ॥

**ಅರಣ್ಯಾನಿ** – ಎಲೈ ಅರಣ್ಯದ ಪಾಲಕಳಾದ ಅರಣ್ಯಾಭಿಮಾನಿದೇವತೆಯೇ, । **ಅರಣ್ಯಾನಿ**—ಅರಣ್ಯಾಭಿಮಾನಿಯಾದ ನಿನ್ನನ್ನು ಕೇಳುತ್ತೇನೆ— । **ಯಾ ಅಸೌ**—ನೀನು । **ಪ್ರೇವ**—ಈಗ । **ನಶ್ಯಸಿ**—ಕಾಣಿಸುವುದಿಲ್ಲ ಅಥವಾ ರಕ್ಷಣೆಗಾಗಿ ಇಲ್ಲಿಗೆ ಬರುವುದಿಲ್ಲ । **ಕಥಾ**—ಏತಕ್ಕಾಗಿ । **ಗ್ರಾಮಂ**—ಗ್ರಾಮವು ಎಲ್ಲಿರುವುದೆಂಬುದನ್ನು **ನ ಪೃಚ್ಛಸಿ**—ಕೇಳುವುದಿಲ್ಲ ? । **ತ್ವಾ**—ನಿನ್ನನ್ನು । **ಭೀಃಇವ**—ಭಯವು । **ನ ವಿಂದತಿ**—ಆವರಿಸುವುದಿಲ್ಲವೇ ?

॥ ಭಾವಾರ್ಥ ॥

ಅರಣ್ಯದ ಪಾಲಕಳಾದ ಎಲೈ ಅರಣ್ಯಾಭಿಮಾನಿದೇವತೆಯೇ, ನೀನು ಈಗ ಎಲ್ಲಿಯೂ ಕಾಣಿಸುವುದಿಲ್ಲ. ನೀನು ಏತಕ್ಕಾಗಿ ಗ್ರಾಮವು ಎಲ್ಲಿರುವುದೆಂಬುದನ್ನು ಯಾರನ್ನೂ ಕೇಳುವುದಿಲ್ಲ ? ನಿನಗೆ ಭಯವಾಗುವುದಿಲ್ಲವೇ ?

## English Translation

Aranyani, Aranyani, who are, as it were, perishing there, why do you not inquire of the village? does not fear assail you ?

॥ ವಿಶೇಷವಿಷಯಗಳು ॥

ಯಾಸ್ಕರು ಅರಣ್ಯಾನೀ ಎಂಬ ಶಬ್ದವನ್ನು ವಿವರಿಸುವಾಗ ಈ ಋಕ್ಕಿಗೆ ನಿರುಕ್ತವನ್ನು ಹೇಳಿದ್ದಾರೆ—

**ಅರಣ್ಯಾನೀತ್ಯೇನಾಮಾಮಂತ್ರಯೀ ಯಾಸಾವರಣ್ಯಾನಿ ವನಾನಿ ಪರಾಚೀವ ನಶ್ಯಸಿ ಕಥಂ ಗ್ರಾಮಂ ನ ಪೃಚ್ಛಸಿ ನ ತ್ವಾ ಭೀರ್ವಿಂದತೀವೇತೀವಃ ಪರಿಭಯಾರ್ಥೀ ವಾ ॥** (ನಿ. ೯–೩೦)

ಇಲ್ಲಿ **ಅರಣ್ಯಾನಿ ಅರಣ್ಯಾನಿ** ಎಂದು ದ್ವಿರುಕ್ತಿ ಇದೆ. ಈ ಎರಡು ಶಬ್ದಗಳಲ್ಲಿ ಮೊದಲನೆಯ **ಅರಣ್ಯಾನಿ** ಎಂಬ ಶಬ್ದದಿಂದ ಋಷಿಯು ಅರಣ್ಯಾಭಿಮಾನಿ ದೇವತೆಯನ್ನು ಸಂಬೋಧಿಸಿ ಕರೆದಿರುವನು. ಎರಡನೆಯ ಅರಣ್ಯಾನಿ ಎಂಬ ಶಬ್ದವು ಅರಣ್ಯಶಬ್ದದ ದ್ವಿತೀಯಾ ಬಹುವಚನವಾಗಿದೆ. ಎಂದರೆ **ಅರಣ್ಯಾನಿ** ಎಂದರೆ **ವನಾನಿ** ಎಂದರ್ಥವು. ಅರಣ್ಯದಲ್ಲಿ ಏಕಾಂಗಿಯಾಗಿ ಸಂಚರಿಸುತ್ತಿದ್ದ ಮಂತ್ರದ್ರಷ್ಟೃವಾದ ದೇವಮುನಿಯೆಂಬ ಋಷಿಯು ನಿರ್ಜನಪ್ರದೇಶವಾದ ಆ ಕಾಡನ್ನು ನೋಡಿ ಬಹಳ ಭೀತನಾಗಿ ಅರಣ್ಯಾಭಿಮಾನಿದೇವತೆಯನ್ನು ಈ ರೀತಿ ಪ್ರಶ್ನಿಸುವನು— ಎಲೈ ಅರಣ ದೇವತೆಯೇ, ನಿನಗೆ ಭಯವಾಗುವುದಿಲ್ಲವೇ? ಈ ಅರಣ್ಯಗಳಲ್ಲಿ ನೀನು ಎಲ್ಲಿಯೂ ಕಾಣಿಸದಂತೆ ಮರೆಯಾಗಿದ್ದೀಯೆ. ಗ್ರಾಮವು ಎಲ್ಲಿದೆ ಎಂದು ತಿಳಿದುಕೊಳ್ಳಲು ಯಾರನ್ನೂ ಪ್ರಶ್ನಿಸುವುದಿಲ್ಲವೇ? ನಿನಗೆ ಭಯವೇ ಆಗುವುದಿಲ್ಲವೆಂದು ಕಾಣುತ್ತೆ. ಆದರೂ ಅಲ್ಪಸ್ವಲ್ಪ ಭಯವಾಗಬಹುದು ಎಂದು—ವಾ ಇವಃ ಎಂಬ ಶಬ್ದಗಳು ಸ್ವಲ್ಪವಾದರೂ ಭಯವಾಗುತ್ತದೆ ಎಂಬರ್ಥವನ್ನು ಸೂಚಿಸುವವು. ಇಲ್ಲಿ ಪ್ಲುತವು (೩ ಎಂಬ ಕಾಲನಿರ್ದೇಶವು) ವಿತರ್ಕ ಎಂದರೆ ಅನುಮಾನವನ್ನು ವ್ಯಕ್ತಪಡಿಸುವುದಕ್ಕಾಗಿ ಉಪಯೋಗಿಸಲಾಗಿದೆ.

॥ ಸಂಹಿತಾಪಾಠಃ ॥

ವೃಷಾರವಾಯ ವದತೇ ಯದುಪಾವತಿ ಚಿಚ್ಚಿಕಃ ।
ಆಘಾಟಿಭಿರಿವ ಧಾವಯನ್ನರಣ್ಯಾನಿರ್ಮಹೀಯತೇ ॥ ೨ ॥

॥ ಪದಪಾಠಃ ॥

ವೃಷऽರವಾಯ । ವದತೇ । ಯತ್ । ಉಪऽಅವತಿ । ಚಿಚ್ಚಿಕಃ ।
ಆಘಾಟಿಭಿಃऽಇವ । ಧಾವಯನ್ । ಅರಣ್ಯಾನಿಃ । ಮಹೀಯತೇ ॥ ೨ ॥

॥ ಸಾಯಣಭಾಷ್ಯಂ ॥

**ವೃಷಾರವಾಯ । ವೃಷಾ ಸೇಚನಸಮರ್ಥೋ ರವಃ ಶಬ್ದೋ ಯಸ್ಯ ಸೂಕ್ಷ್ಮಜಂತುವಿಶೇಷಸ್ಯ ಝಿಲ್ಲ್ಯಾಖ್ಯಸ್ಯ ಸ ತಥೋಕ್ತಃ । ಕಟುಕಶಬ್ದವಾನಿತ್ಯರ್ಥಃ । ತಸ್ಮೈ ವೃಷಾರವಾಖ್ಯಾಯ ವದತೇ ಚೀಚೀ-ಶಬ್ದಂ ಕುರ್ವತೇ ಚಿಚ್ಚಿಕಶ್ಚೀಚೀಶಬ್ದಂ ಕುರ್ವನ್ನನ್ಯೋ ಜಂತುರ್ಯದ್ಯದೋಪಾವತಿ ವೃಷಾರವಾಯ ಸ್ವಶಬ್ದಸ್ಯ ಪ್ರತ್ಯುತ್ತರರೂಪೇಣ ಚೀಚೀಶಬ್ದಕರೇಣೋಪಗಚ್ಛತಿ । ಉಪೇತ್ಯ ಪಾಲಯತಿ ವಾ । ತತ್ರ**

**ದೃಷ್ಟಾಂತಃ । ಆಘಾಟಿಭಿರಿವ । ಆಘಾಟಯೋ ಘಾಟಲಿಕಾಃ ಕಾಂಡವೀಣಾಃ । ತಾಭಿರ್ಧಾವಯನ್ನಿ-ಷಾದಾದಿಸಪ್ತಸ್ವರಾಣಿ ಶೋಧಯನ್ಗಾಯಕ ಇವ । ತದಾರಣ್ಯಾನಿಃ ಸಾರಣ್ಯಾನೀ ಮಹೀಯತೇ । ಪೂಜ್ಯತೇ ॥ ಇಂದ್ರವರುಣೇತ್ಯಾದಿನಾ ಙೀಷ್ । ಪಾ. ೪-೧-೪೯ । ತತ್ಸಂನಿಯೋಗೇನಾನುಗಾಗಮಃ । ಛಾಂದಸೋ ಹ್ರಸ್ವಃ । ಅತ ಏವ ಹಲ್ಙ್ಯಾದಿಸುಲೋಪಾಭಾವಃ ॥**

॥ ಪ್ರತಿಪದಾರ್ಥ ॥

(ಅರಣ್ಯದಲ್ಲಿ) **ವದತೇ**—ಚೀಚೀ ಎಂಬ ಕಟುಶಬ್ದವನ್ನು ಮಾಡುತ್ತಿರುವ । **ವೃಷಾರವಾಯ**—ವೃಷಾರವವೆಂಬ ಸಣ್ಣ ಪ್ರಾಣಿಯ ಶಬ್ದಕ್ಕೆ ಪ್ರತ್ಯುತ್ತರವಾಗಿ । **ಚಿಚ್ಚಿಕಃ**—ಮತ್ತೊಂದು ಸಣ್ಣ ಪ್ರಾಣಿಯು । **ಯತ್**—ಯಾವಾಗ । **ಉಪಾವತಿ**—ತಾನೂ ಚೀಚೀಶಬ್ದವನ್ನು ಮಾಡುವುದೋ ಆಗ । **ಅರಣ್ಯಾನಿಃ**—ಅರಣ್ಯಾಭಿಮಾನಿ ದೇವತೆಯು । **ಆಘಾಟಿಭಿಃ**—ದೊಡ್ಡ ಬುರುಡೆಗಳಿಂದ ಯುಕ್ತವಾದ ವೀಣಾವಾದ್ಯಗಳಿಂದ । **ಧಾವಯನ್**—ನಿಷಾದಾದಿ ಸಪ್ತಸ್ವರಗಳನ್ನು ನುಡಿಸುವ ಗಾಯಕರಂತೆ । **ಮಹೀಯತೇ**—ಬೆಳಗುತ್ತಾಳೆ.

॥ ಭಾವಾರ್ಥ ॥

(ಅರಣ್ಯದಲ್ಲಿ ಕೇಳಿಬರುವ ಪ್ರಾಣಿಗಳ ಶಬ್ದವನ್ನು ಋಷಿಯು ಗಾಯಕರ ವೀಣಾವಾದನಕ್ಕೆ ಹೋಲಿಸಿ ಪ್ರಕಾರಾಂತವಾಗಿ ವರ್ಣಿಸಿದಾನೆ) ಒಂದು ಪ್ರದೇಶದಲ್ಲಿ ವೃಷಾರವವೆಂಬ ಸಣ್ಣಪ್ರಾಣಿಯು ಚೀಚೀ ಎಂಬ ಕರ್ಣಕಠೋರವಾದ ಶಬ್ದವನ್ನು ಮಾಡುತ್ತಿರುವುದು ಅದಕ್ಕೆ ಪ್ರತ್ಯುತ್ತರವಾಗಿ ಎಂಬಂತೆ ಚಿಚ್ಚಿಕ ಎಂಬ ಮತ್ತೊಂದು ಸಣ್ಣ ಪ್ರಾಣಿಯು ಅದರಂತೆಯೇ ಚೀಚೀ ಎಂಬ ಶಬ್ದವನ್ನೇ ಅನುಸರಿಸಿ ನುಡಿಯುತ್ತಿರುವುದು. ಈರೀತಿ ಕೇಳಿಬರುವ ಶಬ್ದವು ದೊಡ್ಡಬುರುಡೆ (ಘಟ) ಗಳಿಂದ ಸಜ್ಜಿತವಾದ ವೀಣೆಗಳಿಂದ ಗಾಯಕರು ನಿಷಾದಾದಿ ಸಪ್ತಸ್ವರಗಳನ್ನು ನುಡಿಸುತ್ತಿರುವಂತೆ ತೋರುವುದು ಅರಣ್ಯದಲ್ಲಿ ಕೇಳಿಬರುವ ಇಂತಹ ನಾನಾವಿಧ ಶಬ್ದಗಳಿಂದ ಅರಣ್ಯವು ಶೋಭಿಸುತ್ತದೆ.

English Translation

When the chichchika replies to the crying vrisharava, Aranyani is exalted, resonant, as with cymbals.

॥ ಸಂಹಿತಾಪಾಠಃ ॥

**ಉತ ಗಾವ ಇವಾದಂತ್ಯುತ ವೇಶ್ಮೇವ ದೃಶ್ಯತೇ ।**

**ಉತೋ ಅರಣ್ಯಾನಿಃ ಸಾಯಂ ಶಕಟೀರಿವ ಸರ್ಜತಿ ॥ ೩ ॥**

॥ ಪದಪಾಠಃ ॥

**ಉತ । ಗಾವಃऽಇವ । ಅದಂತಿ । ಉತ । ವೇಶ್ಮऽಇವ । ದೃಶ್ಯತೇ ।**

ಉತೋ ಇತಿ । ಅರಣ್ಯಾನಿಃ । ಸಾಯಂ । ಶಕಟೀಃऽಇವ । ಸರ್ಜತಿ ॥ ೩ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಗಾವ ಇವ ಗವಯಾದ್ಯಾ ಮೃಗಾ ಅಸ್ಯಾಮರಣ್ಯಾನ್ಯಾಮದಂತಿ । ತೃಣಾದಿಕಂ ಭಕ್ಷಯಂತಿ । ಉತಾಪಿ ಚ ಲತಾಗುಲ್ಮಾದಿಕಂ ವೇಶ್ಮೇವ ಗೃಹಮಿವ ದೃಶ್ಯತೇ । ಉತೋ ಅಪಿ ಚಾರಣ್ಯಾನಿರಿಯಮರಣ್ಯಾನೀ ಸಾಯಂ ಸಾಯಂಕಾಲೇ । ಇವಃ ಸಂಪ್ರತ್ಯರ್ಥೇ । ಸಂಪ್ರತಿ ಶಕಟೀಃ ಶಕಟಾನ್ ದಾರ್ವಾದ್ಯಾಹರಣಾಯಾಗತಾನ್ಸರ್ಜತಿ । ವಿಸರ್ಜಯತಿ । ಯದ್ವಾ । ಶಕಟೀಃ ಸರ್ಜತೀವ ದೃಶ್ಯತೇ । ಅಹನಿ ಮಹದರಣ್ಯಂ ಶಕಟೀಭಿಃ ಪ್ರಾಪ್ಯ ಸರ್ವೇ ಜನಾ ಅರಣ್ಯೇ ಕ್ಷತಂ ಕಾಷ್ಠಾದಿಕಂ ಶಕಟೀಷ್ವಧ್ಯಾರೋಪ್ಯ ಸಾಯಂಕಾಲೇ ತಸ್ಮಾನ್ನಿರ್ಗಚ್ಛಂತಿ । ತದಭಿಪ್ರಾಯೇಣೇದಂ ವಚನಂ ॥

॥ ಪ್ರತಿಪದಾರ್ಥ ॥

**ಉತ**—ಮತ್ತು । **ಗಾವ ಇವ**—(ವನದಲ್ಲಿರುವ ವನ್ಯಮೃಗಗಳು) ಗೋವು ಮೊದಲಾದ ಸಾಧುಮೃಗಗಳಂತೆ । **ಅದಂತಿ**—ಹುಲ್ಲುಮೇಯುತ್ತವೆ । **ಉತ**—ಮತ್ತು (ಲತಾಗುಲ್ಮಾದಿಗಳು) । **ವೇಶ್ಮೇವ**—ಗೃಹದಂತೆ । **ದೃಶ್ಯತೇ**—ಕಾಣುತ್ತದೆ । **ಉತೋ**—ಮತ್ತೂ । **ಅರಣ್ಯಾನಿಃ** – ಈ ಅರಣ್ಯವು । **ಸಾಯಂ**—ಸಾಯಂಕಾಲದಲ್ಲಿ । **ಶಕಟೀರಿವ**--ಅರಣ್ಯದಿಂದ ಕಾಷ್ಠಾದಿಗಳನ್ನು ತುಂಬಿ ತಂದ ಗಾಡಿಗಳನ್ನು । **ಸರ್ಜತಿ**—ಬಿಚ್ಚಿಬಿಟ್ಟಿರುವಂತೆ ಕಾಣುತ್ತದೆ

॥ ಭಾವಾರ್ಥ ॥

(ಈ ಋಕ್ಕಿನಲ್ಲಿ ಋಷಿಯು ಅರಣ್ಯವನ್ನು ಗ್ರಾಮಕ್ಕೆ ಹೋಲಿಸಿ ವರ್ಣಿಸಿದಾನೆ) ಅರಣ್ಯದಲ್ಲಿ ಜಿಂಕೆ ಮೊದಲಾದ ವನ್ಯಮೃಗಗಳು ಹುಲ್ಲು ಮೇಯುತ್ತಿರುವುದನ್ನು ನೋಡಿದರೆ ಗ್ರಾಮಗಳ ಹುಲ್ಲುಗಾವಲುಗಳಲ್ಲಿ ಗೋವುಗಳು, ಅಶ್ವಗಳೇ ಮೊದಲಾದ ಸಾಧುಪ್ರಾಣಿಗಳು ಹುಲ್ಲು ಮೇಯುತ್ತಿರುವಂತೆ ಕಾಣುತ್ತದೆ ಮತ್ತು ಸಣ್ಣಗಿಡಬಳ್ಳಿಗಳಿಂದ ಸಿಬಿಡವಾದ ಪೊದೆಗಳು ಮನೆಗಳಂತೆ ಕಾಣುತ್ತವೆ. ಸಾಯಂಕಾಲದಲ್ಲಿ ಅರಣ್ಯದಿಂದ ಕಾಷ್ಠಾದಿಗಳನ್ನು ತುಂಬಿಕೊಂಡು ಗಾಡಿಗಳು ಹೊರಟುಹೋಗುವಾಗ ಈ ಅರಣ್ಯವು ಸಾಯಂಕಾಲದಲ್ಲಿ ಗ್ರಾಮದಲ್ಲಿ ಜನರು ತಮ್ಮ ಮನೆಯಮುಂದೆ ಹೊರೆಯನ್ನು ತಂದ ಗಾಡಿಗಳ ಎತ್ತುಗಳನ್ನು ಬಿಚ್ಚಿ ನಿಲ್ಲಿಸಿರುವಂತೆ ಇರುವ ಗ್ರಾಮದಂತೆ ಕಾಣುತ್ತದೆ.

## English Translation

It is as if cows were grazing, and it looks like a dwelling, and Arayani at eventide, as it were, dismissed the waggons.

॥ ಸಂಹಿತಾಪಾಠಃ ॥

ಗಾಮಂಗೈಷ ಆ ಹ್ವಯತಿ ದಾರ್ವಂಗೈಷೋ ಅಪಾವಧೀತ್ ।

ವಸನ್ನರಣ್ಯಾನ್ಯಾಂ ಸಾಯಮಕ್ರುಕ್ಷದಿತಿ ಮನ್ಯತೇ ॥ ೪ ॥

॥ ಪದಪಾಠಃ ॥

ಗಾಂ । ಅಂಗ । ಏಷಃ । ಆ । ಹ್ವಯತಿ । ದಾರು । ಅಂಗ । ಏಷಃ । ಅಪ । ಅವಧೀತ್ ।

ವಸನ್ । ಅರಣ್ಯಾನ್ಯಾಂ । ಸಾಯಂ । ಅಕ್ರುಕ್ಷತ್ । ಇತಿ । ಮನ್ಯತೇ ॥ ೪ ॥

॥ ಸಾಯಣಭಾಷ್ಯಂ ॥

**ಅಂಗ ಹೇ ಅರಣ್ಯಾನಿ ಏಷ ತ್ವದಧಿಷ್ಠಿತೇ ಮಹಾರಣ್ಯೇ ಸಂಪ್ರತಿ ವರ್ತಮಾನೋ ಗಾಮಾ ಹ್ವಯತಿ । ಏಷ ಚಾನ್ಯೋ ದಾರು ಕಾಷ್ಠಮಪಾವಧೀತ್ । ಅಪಹಂತಿ । ತಥಾ ಸಾಯಂ ಸಾಯಂಕಾಲೇ ರಾತ್ರಾವರಣ್ಯಾನ್ಯಾಂ ಮಹಾರಣ್ಯೇ ನಿವಸನ್ಮನುಷ್ಯೋ ನಾನಾವಿಧಂ ಪಕ್ಷಿಮೃಗಾದಿಕಂ ಶಬ್ದಂ ಶೃಣ್ವನ್ ಅಕ್ರುಕ್ಷತ್ ಕಶ್ಚಿತ್ತಸ್ಕರಾದಿರಾಕ್ರೋಶತೀತಿ ಭೀತಃ ಸನ್ಮನ್ಯತೇ । ಬುಧ್ಯತೇ ॥**

॥ ಪ್ರತಿಪದಾರ್ಥ ॥

**ಅಂಗ**—ಎಲೈ ವನಾಭಿಮಾನಿದೇವತೆಯೇ । **ಏಷಃ**—ಈ ಅರಣ್ಯದಲ್ಲಿರುವ ಓರ್ವ ಪುರುಷನು । **ಗಾಂ**—(ದೂರದಲ್ಲಿ ಹುಲ್ಲುಮೇಯುತ್ತಿರುವ) ತನ್ನ ಗೋವನ್ನು । **ಆ ಹ್ವಯತಿ** ತನ್ನ ಬಳಿಗೆ ಬರುವಂತೆ ಕೂಗಿ ಕರೆಯುತ್ತಾನೆ । **ಅಂಗ**—ಎಲೈ ದೇವತೆಯೇ । **ಏಷಃ**—ಮತ್ತೊಬ್ಬ ಪುರುಷನು । **ದಾರು**—ಕಾಷ್ಠಾದಿಗಳಿಗಾಗಿ ವೃಕ್ಷವನ್ನು । **ಅಪ ಅವಧೀತ್**—ಕಡಿಯುತ್ತಾನೆ. ಹಾಗೆಯೇ । **ಸಾಯಂ**—ಸಾಯಂಕಾಲದಲ್ಲಿ ಎಂದರೆ ರಾತ್ರಿಕಾಲದಲ್ಲಿ । **ಅರಣ್ಯಾನ್ಯಾಂ**—ಈ ಮಹಾರಣ್ಯದಲ್ಲಿ । **ವಸನ್**—ವಾಸಮಾಡುವ ಪುರುಷನು (ಅಲ್ಲಿ ವನ್ಯಮೃಗಗಳ ಭಯಂಕರವಾದ ಶಬ್ದಗಳನ್ನು ಕೇಳಿ) । **ಅಕ್ರುಕ್ಷತ್ ಇತಿ**—ಕಳ್ಳನು ಕೂಗಿಕೊಳ್ಳುತ್ತಾನೆಂದು । **ಮನ್ಯತೇ**—ತಿಳಿಯುತ್ತಾನೆ.

॥ ಭಾವಾರ್ಥ ॥

ಎಲೈ ವನಾಭಿಮಾನಿದೇವತೆಯೇ, ಈ ಅರಣ್ಯದಲ್ಲಿ ಜನರು ನಾನಾವಿಧಕಾರ್ಯಗಳಲ್ಲಿ ಪ್ರವೃತ್ತರಾಗಿದಾರೆ. ಒಬ್ಬನು ದೂರದಲ್ಲಿ ಹುಲ್ಲುಮೇಯುತ್ತಿರುವ ತನ್ನ ಗೋವನ್ನು ಮನೆಗೆ ಕೊಡೆದುಕೊಂಡು ಹೋಗುವುದಕ್ಕಾಗಿ ಘಟ್ಟಿಯಾಗಿ ಕೂಗಿ ಕರೆಯುತ್ತಾನೆ ಮತ್ತೊಬ್ಬನು ಸೌದೆಗಾಗಿ ವೃಕ್ಷವನ್ನು ಕಡಿಯುತ್ತಾನೆ. ಸಾಯಂಕಾಲದಲ್ಲಿ ಕತ್ತಲಾದ ಮೇಲೆ ಈ ಮಹಾರಣ್ಯದಲ್ಲಿ ದುಷ್ಟಮೃಗಗಳು ಘರ್ಜಿಸುತ್ತಿರುವುದನ್ನು ಆ ಕಾಲದಲ್ಲಿ ಅಲ್ಲಿರುವ ಯಾವನಾದರೂ ಕೇಳಿದರೆ ಕಳ್ಳನು ಪ್ರಯಾಣಿಕರನ್ನು ಹೆದರಿಸುವುದಕ್ಕಾಗಿ ಕೂಗುತ್ತಿರುವನೆಂದು ಭ್ರಾಂತಿವಶನಾಗುತ್ತಾನೆ.

## English Translation.

This man calls his cow, another cuts down the timber; tarrying in the forest at eventide, one thinks there is a cry.

|| ಸಂಹಿತಾಪಾಠಃ ||

ನ ವಾ ಅರಣ್ಯಾನಿರ್ಹಂತ್ಯನ್ಯಶ್ಚೇನ್ನಾಭಿಗಚ್ಛತಿ ।
ಸ್ವಾದೋಃ ಫಲಸ್ಯ ಜಗ್ಧ್ವಾಯ ಯಥಾಕಾಮಂ ನಿ ಪದ್ಯತೇ || ೫ ||

|| ಪದಪಾಠಃ ||

ನ । ವೈ । ಅರಣ್ಯಾನಿಃ । ಹಂತಿ । ಅನ್ಯಃ । ಚ । ಇತ್ । ನ । ಅಭಿಽಗಚ್ಛತಿ ।
ಸ್ವಾದೋಃ । ಫಲಸ್ಯ । ಜಗ್ಧ್ವಾಯ । ಯಥಾಽಕಾಮಂ । ನಿ । ಪದ್ಯತೇ || ೫ ||

|| ಸಾಯಣಭಾಷ್ಯಂ ||

ನ ವೈ ನ ಖಲ್ವರಣ್ಯಾನಿರರಣ್ಯಾನೀ ಹಂತಿ । ತತ್ರ ನಿವಸಂತಂ ಹಿನಸ್ತಿ । ಯದ್ಯನ್ಯೋ ವ್ಯಾಘ್ರಚೌರಾದಿರ್ನಾಭಿಗಚ್ಛತಿ । ತರ್ಹಿ ಸ್ವಾದೋ ರಸವತ ಆಮ್ರಾದೇಃ ಫಲಸ್ಯ || ದ್ವಿತೀಯಾರ್ಥೇ ಷಷ್ಠೀ । ಫಲಂ ಜಗ್ಧ್ವಾಯ ಭಕ್ಷಯಿತ್ವಾ ತತ್ರ ನಿವಸನ್ಪುರುಷೋ ಯಥಾಕಾಮಂ ಯಥೇಚ್ಛಂ ನಿ ಪದ್ಯತೇ । ನಿಗಚ್ಛತಿ । ವರ್ತತೇ || ಕ್ತ್ವಾಪ್ರತ್ಯಯೇಽದೋ ಜಗ್ಧಿರ್ಲ್ಯಪ್ತಿ ಕಿತಿ । ಪಾ. ೨-೪-೩೬ । ಇತಿ ಜಗ್ಧ್ಯಾದೇಶಃ । ಕ್ತ್ವೋ ಯಕ್ । ಪಾ. ೭-೧-೪೭ । ಇತಿ । ಯಕ್ ||

|| ಪ್ರತಿಪದಾರ್ಥ ||

**ಅರಣ್ಯಾನಿಃ**— ಅರಣ್ಯವು । **ನ ವೈ ಹಂತಿ**— ಯಾರನ್ನೂ ಹಿಂಸಿಸುವುದಿಲ್ಲ । **ಅನ್ಯಃ ಚ**— ವ್ಯಾಘ್ರ ಮೊದಲಾದ ದುಷ್ಟಜಂತುವಾಗಲಿ, ಕಳ್ಳನಾಗಲಿ । **ನ ಅಭಿಗಚ್ಛಂತಿ ಇತ್**— ಇವನ (ಅಲ್ಲಿರುವ ಪುರುಷನ) ಸಮೀಪಕ್ಕೆ ಬರುವುದೇ ಇಲ್ಲ, ಆ ಪುರುಷನು । **ಸ್ವಾದೋಃ**— ರುಚಿಕರವಾದ । **ಫಲಸ್ಯ**— ಅರಣ್ಯವೃಕ್ಷಗಳಲ್ಲಿರುವ ಫಲವನ್ನು । **ಜಗ್ಧ್ವಾಯ**— ಭಕ್ಷಿಸುತ್ತಾ । **ಯಥಾಕಾಮಂ**— ತನ್ನಿಷ್ಟಬಂದಂತೆ । **ನಿ ಪದ್ಯತೇ**— ಹೋಗುತ್ತಾನೆ.

|| ಭಾವಾರ್ಥ ||

ಈ ಮಹಾರಣ್ಯವು ಯಾರನ್ನೂ ಹಿಂಸಿಸುವುದಿಲ್ಲ, ಯಾರಿಗೂ ತೊಂದರೆ ಕೊಡುವುದಿಲ್ಲ, ವ್ಯಾಘ್ರ ಮೊದಲಾದ ದುಷ್ಟಜಂತುವಾಗಲಿ, ಕಳ್ಳನಾಗಲಿ ಅಲ್ಲಿರುವ ಪುರುಷನ ಸಮೀಪಕ್ಕೆ ಬರುವುದಿಲ್ಲ. ಇಷ್ಟೇ ಅಲ್ಲದೆ ಈ ಅರಣ್ಯದ ವೃಕ್ಷಗಳಲ್ಲಿರುವ ರುಚಿಕರವಾದ ಫಲಗಳನ್ನು ಭಕ್ಷಿಸುತ್ತಾ ತನ್ನಿಷ್ಟಬಂದಂತೆ ಆ ಪುರುಷನು ಎಲ್ಲಿಗೆ ಬೇಕಾದರೂ ಹೋಗಬಹುದು.

## English Translation.

But Aryanyani injures no one unless some other assail him; feeding upon the sweet fruit, he penetrates at will.

॥ ಸಂಹಿತಾಪಾಠಃ ॥

ಆಂಜನಗಂಧಿಂ ಸುರಭಿಂ ಬಹ್ವನ್ನಾಮಕೃಷೀವಲಾಂ ।
ಪ್ರಾಹಂ ಮೃಗಾಣಾಂ ಮಾತರಮರಣ್ಯಾನಿಮಶಂಸಿಷಂ ॥ ೬ ॥

॥ ಪದಪಾಠಃ ॥

ಆಂಜನಽಗಂಧಿಂ । ಸುರಭಿಂ । ಬಹುಽಅನ್ನಾಂ । ಅಕೃಷಿಽವಲಾಂ ।
ಪ್ರ । ಅಹಂ । ಮೃಗಾಣಾಂ । ಮಾತರಂ । ಅರಣ್ಯಾನಿಂ । ಅಶಂಸಿಷಂ ॥ ೬ ॥

॥ ಸಾಯಣಭಾಷ್ಯಂ ॥

ಆಂಜನಗಂಧಿಂ । ಅಂಜನಸ್ಯೇದಮಾಂಜನಂ ಕಸ್ತೂರ್ಯಾದಿ । ತಸ್ಯ ಗಂಧ ಇವ ಗಂಧೋ ಯಸ್ಯಾಸ್ತಾದೃಶೀ ॥ ಉಪಮಾನಾಚ್ಚ । ಪಾ. ೫-೪-೧೩೭ । ಇತಿ ಗಂಧಸ್ಯೇದಂತಾದೇಶಃ ॥ ಅತ ಏವ ಸುರಭಿಂ ಸೌರಭ್ಯೋಪೇತಾಂ ಬಹ್ವನ್ನಾಂ ಬಹುಭಿರನ್ನೈರದನೀಯೈಃ ಫಲಮೂಲಾದಿಭಿರುಪೇತಾಮಕೃಷೀವಲಾಂ । ಕೃಷಿರೇಷಾಮಸ್ತೀತಿ ಕೃಷೀವಲಾಃ ಕರ್ಷಕಾಃ ॥ ರಜಃ ಕೃಷೀತ್ಯಾದಿನಾ । ಪಾ. ೫-೨-೧೧೨ । ವಲಚ್ । ವಲೇ । ಪಾ. ೬-೩-೧೧೮ । ಇತಿ ದೀರ್ಘಃ ॥ ತೈರ್ವಿಯುಕ್ತಾಂ ತಾದೃಶೀಂ ಮೃಗಾಣಾಂ ಮಾತರಂ ಜನಯಿತ್ರೀಮರಣ್ಯಾನಿಮರಣ್ಯಾನೀಮಹಂ ಪ್ರಾಶಂಸಿಷಂ । ಉಕ್ತೇನ ಪ್ರಕಾರೇಣ ಸ್ತುತವಾನಸ್ಮಿ ॥

॥ ಪ್ರತಿಪದಾರ್ಥ ॥

**ಆಂಜನಗಂಧಿಂ**— ಕಸ್ತೂರ್ಯಾದಿ ಸುಗಂಧ ಪರಿಮಳದಿಂದ ಸುವಾಸನೆಯನ್ನು ಬೀರುತ್ತಿರುವುದೂ । **ಸುರಭಿಂ**— ಪುಷ್ಪಗಳ ಸುರಭಿಯಿಂದ ಘಮಘಮಿಸುತ್ತಿರುವುದೂ । **ಅಕೃಷೀವಲಾಂ**— ವ್ಯವಸಾಯ ಮಾಡುವ ಬೇಸಾಯಗಾರರಿಂದ ಉಳುಮೆ ಮೊದಲಾದ ಕೃಷಿಕರ್ಮರಹಿತವಾದದ್ದೂ ಆದರೂ । **ಬಹ್ವನ್ನಾಂ**— ಭಕ್ಷಿಸುವುದಕ್ಕೆ ಯೋಗ್ಯವಾದ ನಾನಾವಿಧ ಫಲಮೂಲಾದಿಗಳಿಂದ ತುಂಬಿರುವುದೂ । **ಮೃಗಾಣಾಂ**— ವನ್ಯಮೃಗಗಳಿಗೆ । **ಮಾತರಂ**— ಜನನಿಯಂತಿರುವುದೂ ಆದ । **ಅರಣ್ಯಾನಿಂ**— ಈ ಮಹಾರಣ್ಯವನ್ನು (ಅರಣ್ಯಾಭಿಮಾನಿ ದೇವತೆಯನ್ನು) । **ಅಹಂ**— ನಾನು । **ಪ್ರ ಅಶಂಸಿಷಂ**— ಸ್ತುತಿಸುತ್ತಿದ್ದೇನೆ.

॥ ಭಾವಾರ್ಥ ॥

ಕಸ್ತೂರ್ಯಾದಿ ದಿವ್ಯಪರಿಮಳಯುಕ್ತವಾದುದೂ, ಪುಷ್ಪಗಳ ಸೌರಭದಿಂದ ಘಮಘಮಿಸುತ್ತಿರುವುದೂ, ವ್ಯವಸಾಯಕರ್ಮರಹಿತವಾದುದೂ, ಭಕ್ಷಿಸಲು ಯೋಗ್ಯವಾದ ನಾನಾವಿಧ ಫಲಮೂಲಾದಿಗಳಿಂದ ಪೂರ್ಣವಾದುದೂ ವನ್ಯಮೃಗಗಳಿಗೆ ಜನನಿಯಂತಿರುವುದೂ ಆದ ಈ ಮಹಾರಣ್ಯವನ್ನು ನಾನು ಸ್ತುತಿಸುತ್ತಿದ್ದೇನೆ.

## English Translation.

I praise the musk-sented, fragrant, fertile, uncultivated Aranyani, the mother of wild animals.

# ನೂರ ನಲವತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಶ್ರತ್ತೆ ಇತಿ ಪಂಚರ್ಚಮೇಕೋನವಿಂಶಂ ಸೂಕ್ತಂ ಶಿರೀಷಪುತ್ರಸ್ಯ ಸುವೇದಸ ಆರ್ಷಂ ಪಂಚಮೀ ತ್ರಿಷ್ಟುಪ್ ಶಿಷ್ಟಾ ಜಗತ್ಯಃ । ಇಂದ್ರೋ ದೇವತಾ । ಅನುಕ್ರಮ್ಯತೇ ಹಿ । ಶ್ರತ್ತೇ ಪಂಚ ಸುವೇದಾಃ ಶೈರೀಷಿಸ್ತ್ರಿಷ್ಟುಬಂತಮಿತಿ ॥ ತೃತೀಯೇ ರಾತ್ರಿಪರ್ಯಾಯೇ ಪ್ರಶಾಸ್ತುಃ ಶಸ್ತ್ರ ಇದಂ ಸೂಕ್ತಂ । ಸೂತ್ರಿತಂ ಚ । ಶ್ರತ್ತೇ ದಧಾಮೀದಂ ತ್ಯತ್ಪಾತ್ರಮಿಂದ್ರಪಾನಮಿತಿ ಯಾಜ್ಯಾ । ಆ. ೬-೪ । ಇತಿ ॥**

ಅನುವಾದವು—**ಶ್ರತ್ತೇ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಹತ್ತೊಂಭತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು ಈ ಸೂಕ್ತಕ್ಕೆ ಶಿರೀಷಪುತ್ರನಾದ ಸುವೇದಾಃ ಎಂಬುವನು ಋಷಿಯು , ಇಂದ್ರನು ದೇವತೆಯು , ಈ ಸೂಕ್ತದ ಐದನೆಯ ಋಕ್ಕು ತ್ರಿಷ್ಟುಪ್ಛಂದಸ್ಕವು , ಉಳಿದ ಋಕ್ಕುಗಳು ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಶ್ರತ್ತೇ ಪಂಚ ಸುವೇದಾಃ ಶೈರೀಷಿಸ್ತ್ರಿಷ್ಟುಬಂತಂ** ಎಂದು ಹೇಳಿರುವುದು. ಯಾಗದ ಮೂರನೆ ರಾತ್ರಿಪರ್ಯಾಯದಲ್ಲಿ ಪ್ರಶಾಸ್ತೃವೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ— **ಶ್ರತ್ತೇ ದಧಾಮೀದಂ ತ್ಯತ್ಪಾತ್ರಮಿಂದ್ರಪಾನಮಿತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

## ಸೂಕ್ತ—೧೪೭

ಮಂಡಲ-೧೦ ॥ ಅನುವಾಕ-೧೧ ॥ ಸೂಕ್ತ-೧೪೭ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ॥
॥ ಋಷಿಃ—ಸುವೇದಾಃ ಶೈರೀಷಿಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧-೪. ಜಗತೀ । ೫. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಶ್ರತ್ತೇ ದಧಾಮಿ ಪ್ರಥಮಾಯ ಮನ್ಯವೇಽಹನ್ಯದ್ವೃತ್ರಂ ನರ್ಯಂ ವಿವೇರಪಃ।
ಉಭೇ ಯತ್ವಾ ಭವತೋ ರೋದಸೀ ಅನು ರೇಜತೇ ಶುಷ್ಮಾತ್ಪೃಥಿವೀ
ಚಿದದ್ರಿವಃ ॥ ೧ ॥

॥ ಪದಪಾಠಃ ॥

ಶ್ರತ್ । ತೇ । ದಧಾಮಿ । ಪ್ರಥಮಾಯ । ಮನ್ಯವೇ । ಅಹನ್ । ಯತ್ । ವೃತ್ರಂ । ನರ್ಯಂ । ವಿವೇಃ । ಅಪಃ ।

ಉಭೇ ಇತಿ । ಯತ್ । ತ್ವಾ । ಭವತಃ । ರೋದಸೀ ಇತಿ । ಅನು । ರೇಜತೇ । ಶುಷ್ಮಾತ್ । ಪೃಥಿವೀ । ಚಿತ್ । ಅದ್ರಿವಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಮನ್ಯವೇ ಕೋಪಾಯ ತೇಜಸೇ ವಾ ಪ್ರಥಮಾಯ ಮುಖ್ಯಾಯ ಶ್ರದ್ದಧಾಮಿ । ಶ್ರದ್ಧಾ ನಾಮಾದರಾತಿಶಯಃ । ತದ್ವಿಷಯಂ ಕರೋಮಿ । ಯದ್ಯೇನ ಮನ್ಯುನಾ ತ್ವಂ ವೃತ್ರಮಾವರಕಮಸುರಂ ಮೇಘಂ ವಾ ನರ್ಯಂ ನೇತವ್ಯಮಹನ್ ಅವಧೀಃ । ಹತ್ವಾ ಚ ತೇನಾವೃತಾ ಅಪ ಉದಕಾನಿ ಚ ವಿವೇಃ ಇಮಂ ಲೋಕಂ ಪ್ರತ್ಯಾಗಮಯಃ । ತಸ್ಮೈ ಮನ್ಯವ ಇತ್ಯನ್ವಯಃ । ಯದ್ಯದೋಭೇ ರೋದಸೀ ದ್ಯಾವಾಪೃಥಿವ್ಯೌ ತ್ವಾ ತ್ವಾಮನುಸೃತ್ಯ ಭವತಃ ವರ್ತೇತೇ । ತ್ವದಧೀನೇ ಅಭೂತಾಮಿತ್ಯರ್ಥಃ । ತದಾನೀಂ ಪೃಥಿವೀ ಚಿತ್ । ಪೃಥಿವೀತ್ಯಂತರಿಕ್ಷನಾಮ । ಪ್ರಥಿತಂ ವಿಸ್ತೀರ್ಣಮಂತರಿಕ್ಷಮಪಿ ಹೇ ಅದ್ರಿವೋ ವಜ್ರವನ್ನಿಂದ್ರ ಶುಷ್ಮಾತ್ತ್ವದೀಯಾದ್ಬಲಾದ್ರೇಜತೇ । ಕಂಪತೇ ॥

। ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯತ್**—ಯಾವ ನಿನ್ನ ಕೋಪದಿಂದ ನೀನು । **ವೃತ್ರಂ**—ಮೇಘವನ್ನು ಅಥವಾ ಮೇಘವನ್ನು ಆವರಿಸಿದ್ದ ವೃತ್ರನನ್ನು । **ನರ್ಯಂ**—ಮಾನವರಿಗೆ ಹಿತವನ್ನುಂಟುಮಾಡಲು । **ಅಹನ್**—ಸಂಹಾರ ಮಾಡಿದೆಯೋ, ಅನಂತರ । **ಅಪಃ**—ಅವನು ಆವರಿಸಿದ್ದ ಉದಕಗಳನ್ನು । **ವಿವೇಃ**—ಭೂಮಿಯ ಮೇಲೆ ಬೀಳುವಂತೆ ಮಾಡಿದೆಯೋ ಅಂತಹ । **ಪ್ರಥಮಾಯ**—ಮುಖ್ಯವಾದ । **ತೇ**—ನಿನ್ನ । **ಮನ್ಯವೇ**—ಕೋಪಕ್ಕಾಗಿ (ಕೋಪದವಿಷಯದಲ್ಲಿ) । **ಶ್ರತ್**—ಶದ್ಧೆಯನ್ನು ಎಂದರೆ ಗೌರವವನ್ನು । **ದಧಾಮಿ**— ವಹಿಸುತ್ತೇನೆ । **ಯತ್**—ಯಾವಾಗ । **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡೂ । **ತ್ವಾ**—ನಿನ್ನನ್ನನುಸರಿಸಿ । **ಭವತಃ**—ಇರುವವೋ ಆಗ । **ಅದ್ರಿವಃ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ಪೃಥಿವೀ ಚಿತ್**—ವಿಸ್ತಾರವಾದ ಅಂತರಿಕ್ಷವೂ ಸಹ । **ಶುಷ್ಮಾತ್**—ನಿನ್ನ ಬಲಕ್ಕಾಗಿ (ನಿನ್ನ ಬಲವನ್ನು ನೋಡಿ) । **ರೇಜತೇ**—ನಡುಗುತ್ತದೆ.

॥ ಭಾವಾರ್ಥ ॥

ಮಾನವರಿಗೆ ಹಿತವನ್ನುಂಟುಮಾಡುವುದಕ್ಕಾಗಿ ಮೇಘವನ್ನಾವರಿಸಿದ್ದ ವೃತ್ರನನ್ನು ಸಂಹಾರಮಾಡಿ ಅವನು ತಡೆಗಟ್ಟಿದ್ದ ಉದಕಗಳನ್ನು ಭೂಮಿಯು ಬೀಳುವಂತೆ ಮಾಡಿದಾಗ ನೀನು ಪ್ರಕಟಿಸಿದ ಕೋಪದ ವಿಷಯದಲ್ಲಿ ಬಹಳ ಮುಖ್ಯವಾಗಿ ಆದರಾತಿಶಯವನ್ನು ಸೂಚಿಸುತ್ತೇನೆ. ಎಂದರೆ ನಿನ್ನ ಕೋಪದ ವಿಷಯದಲ್ಲಿ ನನಗೆ ಬಹಳವಾದ ಆದರವಿದೆ ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ದ್ಯಾವಾಪೃಥಿವಿಗಳೆರಡೂ ನಿನ್ನ ವಶವರ್ತಿಯಾಗಿರುವಾಗ ವಿಸ್ತಾರವಾದ ಅಂತರಿಕ್ಷವೂ ಸಹ ನಿನ್ನ ಅಗಾಧವಾದ ಬಲವನ್ನು ನೋಡಿ ನಡುಗುತ್ತದೆ.

## English Translation.

I have faith, Indra, in your first wrath, whereby :you slew Vritra, and undertook a work friendly to man; when both heaven and earth were inferior to you, the firmament trembled at your might, O wielder of the thunderbolt.

॥ ಸಂಹಿತಾಪಾಠಃ ॥

ತ್ವಂ ಮಾಯಾಭಿರನವದ್ಯ ಮಾಯಿನಂ ಶ್ರವಸ್ಯತಾ ಮನಸಾ ವೃತ್ರಮರ್ದಯಃ।
ತ್ವಾಮಿನ್ನರೋ ವೃಣತೇ ಗವಿಷ್ಟಿಷು ತ್ವಾಂ ವಿಶ್ವಾಸು ಹವ್ಯಾಸ್ವಿಷ್ಟಿಷು ॥ ೨ ॥

॥ ಪದಪಾಠಃ ॥

ತ್ವಂ । ಮಾಯಾಭಿಃ । ಅನವದ್ಯ । ಮಾಯಿನಂ । ಶ್ರವಸ್ಯತಾ । ಮನಸಾ । ವೃತ್ರಂ । ಅರ್ದಯಃ ।
ತ್ವಾಂ । ಇತ್ । ನರಃ । ವೃಣತೇ । ಗೋಽಇಷ್ಟಿಷು । ತ್ವಾಂ । ವಿಶ್ವಾಸು । ಹವ್ಯಾಸು ।ಇಷ್ಟಿಷು ॥ ೨ ॥

॥ ಸಾಯಣಭಾಷ್ಯಂ ॥

ಹೇ ಅನವದ್ಯಾವದ್ಯರಹಿತ ಪ್ರಶಸ್ಯೇಂದ್ರ ತ್ವಂ ಮಾಯಿನಂ ಮಾಯಾವಿನಂ ವೃತ್ರಂ ಮಾಯಾಭಿರ್ವಂಚನಾಭಿರ್ಬುದ್ಧಿವಿಶೇಷೈರ್ವಾ ಶ್ರವಸ್ಯತಾ ಶ್ರವಃ ಶ್ರವಣೀಯಂ ಯಶೋಽನ್ನಂ ವೇಚ್ಛತಾ ಮನಸಾರ್ದಯಃ । ಅಹಿಂಸೀಃ । ಅಪಿ ಚ ನರೋ ನೇತಾರೋಽಂಗಿರಸಸ್ತ್ವಾಮಿತ್ತ್ವಾಮೇವ ಗವಿಷ್ಟಿಷು ಗವಾಂ ಪಣಿಭಿರಪಹೃತಾನಾಮೇಷಣೇಷು ಪ್ರಾಪಣೇಷು ವಿಷಯಭೂತೇಷು ವೃಣತೇ । ಸಂಭಜಂತೇ । ತಥಾ ವಿಶ್ವಾಸು ಸರ್ವಾಸು ಹವ್ಯಾಸ್ವಾಹ್ವಾತವ್ಯಾಸು ಪ್ರಾರ್ಥನೀಯಾಸ್ವಿಷ್ಟಿಷು ಯಾಗಕ್ರಿಯಾಸು ತ್ವಾಮೇವ ವೃಣತೇ ॥

॥ ಪ್ರತಿಪದಾರ್ಥ ॥

**ಅನವದ್ಯ**—ದೋಷರಹಿತನಾದ ಎಲೈ ಇಂದ್ರನೇ । **ತ್ವಂ**—ನೀನು । **ಮಾಯಿನಂ**—ವಂಚಕನಾದ । **ವೃತ್ರಂ**—ವೃತ್ರನನ್ನು । **ಮಾಯಾಭಿಃ**—ವಂಚನೋಪಾಯಗಳಿಂದಲೇ । **ಶ್ರವಸ್ಯತಾ**—ಅನ್ನಾದ್ಯಾಹಾರವನ್ನು ಇಚ್ಛಿಸುವ । **ಮನಸಾ**—ಮನಸ್ಸಿನಿಂದ । **ಅರ್ದಯಃ**—ಸಂಹರಿಸಿದ್ದೀಯೆ (ಮತ್ತು) । **ನರಃ**—ಯಜ್ಞಾನುಷ್ಠಾನನೇತ್ರಗಳಾದ ಅಂಗಿರಾ ಋಷಿಗಳು । **ಗವಿಷ್ಟಿಷು**—ಪಣಿಗಳು ಅಪಹರಿಸಿದ್ದ ಗೋವುಗಳನ್ನು ಹುಡುಕುವ ಕಾರ್ಯದಲ್ಲಿಯೂ । **ವಿಶ್ವಾಸು**—ಸಮಸ್ತವಾದ । **ಹವ್ಯಾಸು**—ದೇವತೆಗಳನ್ನು ಪ್ರಾರ್ಥಿಸಿ ಕರೆಯಲ್ಪಡುವ । **ಇಷ್ಟಿಷು**—ಯಾಗಕರ್ಮಗಳಲ್ಲಿಯೂ ಕೂಡ । **ತ್ವಾಮಿತ್**—ನಿನ್ನನ್ನೇ (ಸಹಾಯಕ್ಕಾಗಿ) । **ವೃಣತೇ**—ಅಪೇಕ್ಷಿಸುತ್ತಾರೆ.

|| ಭಾವಾರ್ಥ ||

ದೋಷರಹಿತನಾದ (ಪೂಜ್ಯನಾದ) ಎಲೈ ಇಂದ್ರನೇ, ನೀನು ಅನ್ನಪ್ರದವಾದ ವೃಷ್ಟಿಯನ್ನುಂಟುಮಾಡಬೇಕೆಂಬ ಮನಸ್ಸಿನಿಂದ ವಂಚಕನಾದ ವೃತ್ರನನ್ನು ವಂಚನೋಪಾಯಗಳಿಂದಲೇ ಸಂಹಾರಮಾಡಿದ್ದೀಯೆ. ಯಜ್ಞಕರ್ಮನೇತೃಗಳಾದ ಅಂಗಿರಾ ಋಷಿಗಳು, ಪಣಿಗಳು ಅಪಹರಿಸಿದ್ದ ಗೋವುಗಳನ್ನು ಹುಡುಕುವ ಕಾರ್ಯದಲ್ಲಿಯೂ ದೇವತೆಗಳನ್ನು ಪ್ರಾರ್ಥಿಸಿ ಆಹ್ವಾನಿಸಲ್ಪಡುವ ಯಾಗಕ್ರಿಯೆಗಳಲ್ಲಿಯೂ ಸಹ ನಿನ್ನನ್ನೇ (ನಿನ್ನ ಸಹಾಯವನ್ನೇ) ಅಪೇಕ್ಷಿಸುತ್ತಾರೆ.

## English Translation

Irreproachable Indra, with mind intent on glory, you have by your deceptions slain the deceptive Vritra. The worshipper chooses you when he seeks for his (stolen) cattle, and in all sacrifices accompanied with invocations.

|| ಸಂಹಿತಾಪಾಠಃ ||

ಐಷು ಚಾಕಂಧಿ ಪುರುಹೂತ ಸೂರಿಷು ವೃಧಾಸೋ ಯೇ ಮಘವನ್ನಾನ-
ಶುರ್ಮಘಂ ।
ಅರ್ಚಂತಿ ತೋಕೇ ತನಯೇ ಪರಿಷ್ಟಿಷು ಮೇಧಸಾತಾ ವಾಜಿನಮಹ್ರಯೇ
ಧನೇ ॥ ೩ ॥

|| ಪದಪಾಠಃ ||

ಆ । ಏಷು । ಚಾಕಂಧಿ । ಪುರುऽಹೂತ । ಸೂರಿಷು । ವೃಧಾಸಃ । ಯೇ । ಮಘऽವನ್ । ಆನಶುಃ ।
ಮಘಂ ।
ಅರ್ಚಂತಿ । ತೋಕೇ । ತನಯೇ । ಪರಿಷ್ಟಿಷು । ಮೇಧऽಸಾತಾ । ವಾಜಿನಂ । ಅಹ್ರಯೇ । ಧನೇ ॥ ೩ ॥

|| ಸಾಯಣಭಾಷ್ಯಂ ||

ಹೇ ಪುರುಹೂತೇಂದ್ರ ಏಷು ಸೂರಿಷ್ವಾ ಚಾಕಂಧಿ । ಅತ್ಯರ್ಥಮಭಿದೀಪ್ಯಸ್ವ। ಅಭಿಕಾಮಯಸ್ವ॥ ಕನೀ ದೀಪ್ತಿಕಾಂತಿಗತಿಷು । ಅಸ್ಮಾಚ್ಛ್ಲೌ ಕರೀತವೇತತ್ ॥ ಹೇ ಮಘವನ್ಧನವನ್ನಿಂದ್ರ ಯೇ ಸೂರಯೋ ವೃಧಾಸಸ್ತ್ವತ್ಪ್ರಸಾದಾದ್ವರ್ಧಮಾನಾಃ ಸಂತೋ ಮಘಂ ಧನಮಾನಶುಃ ಪ್ರಾಪ್ನುವಂತಿ । ಅಪಿ ಚ ಮೇಧಸಾತಾ ಮೇಧಸಾತೌ ಯಜ್ಞೇ ವಾಜಿನಂ ಬಲವಂತಮನ್ನವಂತಂ ವೇಜನವಂತಂ ವಾ ತ್ವಾಂ ಯೇಽರ್ಚಂತಿ

**ಪೂಜಯಂತಿ ತೋಕೇ ಪುತ್ರೇ ತನಯೇ ತತ್ಪುತ್ರೇ ಪರಿಷ್ಟಿಷು ಪರಿತ ಇಷ್ಯಮಾಣೇಷ್ವನ್ಯೇಷ್ವಪಿ ಫಲೇಷ್ವಹ್ರಯೇಽಲಜ್ಜಾಕರೇ ಧನೇ ಚ । ಏತೇಷು ನಿಮಿತ್ತೇಷು ಸತ್ಸು ತ್ವಾಮೇವ ಸ್ತುತ್ಯಾದಿಭಿಃ ಪೂಜಯಂತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ । **ಏಷು ಸೂರಿಷು**—ಈ ಸ್ತೋತೃ ಜನರ ವಿಷಯದಲ್ಲಿ । **ಆ ಚಾಕಂಧಿ**—ಬಹಳವಾಗಿ ಅಭಿಮಾನವುಳ್ಳವನಾಗಿರು । **ಮಘವನ್**—ಎಲೈ ಧನವಂತ ನಾದ ಇಂದ್ರನೇ । **ಯೇ**—ಆ ಸ್ತೋತೃಜನರು । **ವೃಧಾಸಃ**—ನಿನ್ನ ಅನುಗ್ರಹದಿಂದ ಪ್ರವೃದ್ಧಮಾನರಾಗಿ । **ಮಘಂ**—ಧನವನ್ನು । **ಆನಶುಃ**—ಪಡೆಯುತ್ತಾರೆ ಮತ್ತು । **ಮೇಧಸಾತಾ**—ಯಜ್ಞದಲ್ಲಿ । **ವಾಜಿನಂ**—ಬಲಯುತನಾದ ಅಥವಾ ಅನ್ನಯುತನಾದ ನಿನ್ನನ್ನು । **(ಯೇ**—ಯಾರು) । **ಅರ್ಚಂತಿ**—ಪೂಜಿಸುವರೋ ಅವರು । **ತೋಕೇ**—ಪುತ್ರಪ್ರಾಪ್ತಿಯಲ್ಲಿಯೂ । **ತನಯೇ**—ಮೊಮ್ಮಗನನ್ನು ಪಡೆಯುವಾಗಲೂ । **ಪರಿಷ್ಟಿಷು**—ಇತರ ಇಷ್ಟಾರ್ಥ ಫಲಸಿದ್ಧಿಗಳಲ್ಲಿಯೂ । **ಅಹ್ರಯೇ**—ಲಜ್ಜಾರಹಿತವಾದ ಎಂದರೆ ನ್ಯಾಯಲಬ್ಧವಾದ । **ಧನೇ**—ಧನಪ್ರಾಪ್ತಿಯಲ್ಲಿಯೂ । **ಅರ್ಚಂತಿ**—ಆ ಸ್ತೋತೃಜನರು ನಿನ್ನನ್ನೇ ಪೂಜಿಸುತ್ತಾರೆ.

॥ ಭಾವಾರ್ಥ ॥

ಅನೇಕರಿಂದ ಆಹ್ವಾನಿಸಿ ಕರೆಯಲ್ಪಡುವ ಎಲೈ ಇಂದ್ರನೇ, ನಿನ್ನನ್ನು ಸ್ತುತಿಸುವ ಜನರ ವಿಷಯದಲ್ಲಿ ಅಭಿಮಾನವುಳ್ಳವನಾಗಿರು. ಧನವಂತನಾದ ಎಲೈ ಇಂದ್ರನೇ, ಆ ಸ್ತೋತೃಜನರು ನಿನ್ನ ಅನುಗ್ರಹದಿಂದ ಪ್ರವೃದ್ಧಮಾನರಾಗಿ ಧನವನ್ನು ಪಡೆಯುತ್ತಾರೆ. ಯಜ್ಞಗಳಲ್ಲಿ ಬಲ ಅಥವಾ ಅನ್ನಪ್ರದನಾದ ನಿನ್ನನ್ನು ಪೂಜಿಸುವ ಜನರು ಮಕ್ಕಳನ್ನೂ, ಮೊಮ್ಮಕ್ಕಳನ್ನೂ, ಇಷ್ಟಾರ್ಥಗಳನ್ನೂ, ನ್ಯಾಯಲಬ್ಧವಾದ ಧನವನ್ನೂ ಪಡೆದಾಗಲೂ ಅಥವಾ ಪಡೆಯುವುದಕ್ಕಾಗಿಯೂ ನಿನ್ನನ್ನೇ ಪೂಜಿಸುತ್ತಾರೆ.

## English Translation

Indra the invoked of many, be gracious to these Suris, who thereby prospering attain, O Maghavan, to opulence; (who) adore the powerful one at the sacrifice (for the sake of obtaining) a son a grand son, the fulfilment of their desires, and honourable wealth.

॥ ಸಂಹಿತಾಪಾಠಃ ॥

**ಸ ಇನ್ನು ರಾಯಃ ಸುಭೃತಸ್ಯ ಚಾಕನನ್ಮದಂ ಯೋ ಅಸ್ಯ ರಂಹ್ಯಂ ಚಿಕೇತತಿ ।**
**ತ್ವಾವೃಧೋ ಮಘವನ್ದಾಶ್ವಧ್ವರೋ ಮಕ್ಷೂ ಸ ವಾಜಂ ಭರತೇ ಧನಾ ನೃಭಿಃ ॥ ೪ ॥**

|| ಪದಪಾಠಃ ||

**ಸಃ । ಇತ್ । ನು । ರಾಯಃ । ಸುऽಭೃತಸ್ಯ । ಚಾಕನತ್ । ಮದಂ । ಯಃ । ಅಸ್ಯ । ರಂಹ್ಯಂ । ಚಿಕೇತತಿ ।**

**ತ್ವಾऽವೃಧಃ । ಮಘऽವನ್ । ದಾಶುऽಅಧ್ವರಃ । ಮಕ್ಷು । ಸಃ । ವಾಜಂ । ಭರತೇ । ಧನಾ । ನೃऽಭಿಃ ||೪||**

|| ಸಾಯಣಭಾಷ್ಯಂ ||

**ಸ ಇತ್ ಸ ಏವ ಸ್ತೋತಾ ಸುಭೃತಸ್ಯ ಸುಷ್ಠು ಸಂಪಾದಿತಸ್ಯ ರಾಯೋ ಧನಸ್ಯ । ದ್ವಿತೀಯಾರ್ಥೇ ಷಷ್ಠೀ । ಈದೃಶಂ ಧನಂ ನು ಕ್ಷಿಪ್ರಂ ಚಾಕನತ್। ಕಾಮಯತೇ । ಲಭತ ಇತ್ಯರ್ಥಃ । ರಂಹ್ಯಂ । ರಂಹೋ ವೇಗಃ । ತದರ್ಹಮಸ್ಯೇಂದ್ರಸ್ಯ ಮದಂ ಸೋಮಪಾನಜನ್ಯಂ ಹರ್ಷಂ ಯಃ ಸ್ತೋತಾ ಚಿಕೇತತಿ ಸ್ತುತಿಪದೈರ್ಜಾನಾತಿ । ಹೇ ಮಘವನ್ ತ್ವಾವೃಧಸ್ತ್ವಯಾ ವರ್ಧಿತೋ ದಾಶ್ವಧ್ವರೋ ದತ್ತಯಜ್ಞೋ ಯಜಮಾನೋ ನೃಭಿರ್ನೇತೃಭಿರೃತ್ವಿಗ್ಭಿರ್ಭೃತ್ಯೈರ್ವಾ ಧನಾ ಧನಾನಿ ವಾಜಮನ್ನಂ ಚ ಮಕ್ಷು ಶೀಘ್ರಂ ಭರತೇ । ಸಂಪಾದಯತಿ ||**

|| ಪ್ರತಿಪದಾರ್ಥ ||

**ಅಸ್ಯ**—ಈ ಇಂದ್ರನ । **ರಂಹ್ಯಂ**—ಬೇಗನೆ ಉಂಟಾಗುವ । **ಮದಂ**—ಸೋಮಪಾನದಿಂದುಂಟಾಗುವ ಹರ್ಷವನ್ನು । **ಯಃ**—ಯಾವ ಪುರುಷನು । **ಚಿಕೇತತಿ**—ತಿಳಿಯುತ್ತಾನೆಯೋ । **ಮಘವನ್**—ಎಲೈ ಧನವಂತನಾದ ಇಂದ್ರನೇ । **ತ್ವಾವೃಧಃ** ನಿನ್ನಿಂದ ಪ್ರವೃದ್ಧಮಾನನಾದವನೂ । **ದಾಶ್ವಧ್ವರಃ**—ಯಜ್ಞಾನುಷ್ಠಾನಫಲವನ್ನು ಪಡೆದವನೂ ಆದ ಆ ಯಜಮಾನನು । **ನೃಭಿಃ**—ಕರ್ಮನೇತೃಗಳಾದ ಋತ್ವಿಗ್ಜನರಿಂದ ಸಹಿತನಾಗಿ । **ಧನಾ**—ಧನಗಳನ್ನೂ । **ವಾಜಂ**—ಅನ್ನವನ್ನೂ । **ಮಕ್ಷು**—ಶೀಘ್ರವಾಗಿ । **ಭರತೇ**—ಸಂಪಾದಿಸುತ್ತಾನೆ ।

|| ಭಾವಾರ್ಥ ||

ಎಲೈ ಧನವಂತನಾದ ಇಂದ್ರನೇ, ಸೋಮಪಾನದಿಂದ ನಿನಗೆ ಬೇಗನೆ ಹರ್ಷವುಂಟಾಗುವುದನ್ನು ತಿಳಿಯುವವನೂ, ನಿನ್ನಿಂದ ಪ್ರವೃದ್ಧಮಾನನಾಗಿ ಯಜ್ಞಾನುಷ್ಠಾನಫಲವನ್ನು ಪಡೆದವನೂ ಆದ ಯಜಮಾನನು ಕರ್ಮನೇತೃಗಳಾದ ಋತ್ವಿಗ್ಜನರೇ ಮೊದಲಾದ ತನ್ನ ಜನರೊಡನೆ ಧನಗಳನ್ನೂ, ಅನ್ನವನ್ನೂ ಬೇಗ ಪಡೆಯುತ್ತಾನೆ.

## English Translation.

He obtains well-procured riches, who studies to promote Indra's rapid exhilaration. Exalted by (your favour), O Maghavan, (the worshipper), celebrating the sacrifice, speedily obtains through the officiating priests, food and wealth,

॥ ಸಂಹಿತಾಪಾಠಃ ॥

ತ್ವಂ ಶರ್ಧಾಯ ಮಹಿನಾ ಗೃಣಾನ ಉರು ಕೃಧಿ ಮಘವಞ್ಛಗ್ಧಿ ರಾಯಃ ।
ತ್ವಂ ನೋ ಮಿತ್ರೋ ವರುಣೋ ನ ಮಾಯೀ ಪಿತ್ವೋ ನ ದಸ್ಮ ದಯಸೇ ವಿಭಕ್ತಾ ॥ ೫ ॥

॥ ಪದಪಾಠಃ ॥

ತ್ವಂ । ಶರ್ಧಾಯ । ಮಹಿನಾ । ಗೃಣಾನಃ । ಉರು । ಕೃಧಿ । ಮಘ್ಽವನ್ । ಶಗ್ಧಿ । ರಾಯಃ ।
ತ್ವಂ । ನಃ । ಮಿತ್ರಃ । ವರುಣಃ । ನ । ಮಾಯೀ । ಪಿತ್ವಃ । ನ । ದಸ್ಮ । ದಯಸೇ । ವಿಽಭಕ್ತಾ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಮಹಿನಾ ಮಹತಾ ಸ್ತೋತ್ರೇಣ ಗೃಣಾನಃ ಸ್ತೂಯಮಾನಃ ಸಞ್ಶರ್ಧಾಯ ಶರ್ಧಂ ಬಲಮುರು ಕೃಧಿ । ವಿಸ್ತೀರ್ಣಂ ಕುರು । ಹೇ ಮಘವನ್ ರಾಯೋ ಧನಾನಿ ಚ ಶಗ್ಧಿ। ಅಸ್ಮಭ್ಯಂ ಪ್ರಯಚ್ಛ। ಹೇ ದಸ್ಮ ದರ್ಶನೀಯೇಂದ್ರ ವಿಭಕ್ತಾ ವಿಶೇಷೇಣ ಧನಾನಾಂ ಭಾಜಯಿತಾ ತ್ವಂ ಮಿತ್ರೋ ವರುಣೋ ನ ಮಿತ್ರವದ್ವರುಣವಚ್ಚ ಮಾಯೀ ಪ್ರಜ್ಞಾಯುಕ್ತಃ ಸನ್ನೋಽಸ್ಮಭ್ಯಂ । ನಃ ಸಂಪ್ರತ್ಯರ್ಥೇ । ಸಂಪ್ರತಿ ಪಿತ್ವೋಽನ್ನಾನಿ ದಯಸೇ । ಪ್ರಯಚ್ಛಸಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ), **ತ್ವಂ**—ನೀನು । **ಮಹಿನಾ**—ದೊಡ್ಡದಾದ ಸ್ತೋತ್ರದಿಂದ । **ಗೃಣಾನಃ**—ಸ್ತುತಿಸಲ್ಪಟ್ಟವನಾಗಿ । **ಶರ್ಧಾಯ**—ಬಲವನ್ನು । **ಉರು ಕೃಧಿ**—ವಿಸ್ತರಿಸು ಎಂದರೆ ವೃದ್ಧಿಗೊಳಿಸು । **ಮಘವನ್**—ಧನವಂತನಾದ ಎಲೈ ಇಂದ್ರನೇ । **ರಾಯಃ**—ಧನಗಳನ್ನೂ । **ಶಗ್ಧಿ**—ನಮಗೆ ಕೊಡು । **ದಸ್ಮ**—ಆಕರ್ಷಕ ರೂಪವುಳ್ಳ ಎಲೈ ಇಂದ್ರನೇ, । **ವಿಭಕ್ತಾ**—ಸ್ತೋತೃಜನರಿಗೆ ವಿಶೇಷವಾಗಿ ಧನವನ್ನು ಹಂಚುವ । **ತ್ವಂ**—ನೀನು । **ಮಿತ್ರಃ ನ**—ಮಿತ್ರನಂತೆಯೂ । **ವರುಣಃ**—ವರುಣನಂತೆಯೂ । **ಮಾಯೀ**—ಪ್ರಜ್ಞಾಯುಕ್ತನಾಗಿ । **ನಃ**—ನಮಗೆ । **ನ**—ಈಗ । **ಪಿತ್ವಃ**—ಅನ್ನಗಳನ್ನು । **ದಯಸೇ**—ಕೊಡುತ್ತೀಯೆ ।

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ದೊಡ್ಡದೊಡ್ಡ ಸ್ತೋತ್ರಗಳಿಂದ ಸ್ತುತನಾಗಿ ನಮ್ಮ ಶಕ್ತಿಯನ್ನು ವೃದ್ಧಿಗೊಳಿಸು. ಎಲೈ ಧನವಂತನಾದ ಇಂದ್ರನೇ, ನಮಗೆ ಧನಗಳನ್ನೂ ಕೊಡು ದರ್ಶನೀಯ ರೂಪವುಳ್ಳ ಎಲೈ ಇಂದ್ರನೇ, ಸ್ತೋತೃಜನರಿಗೆ ಧನಗಳನ್ನು ಹಂಚಿಕೊಡುವ ನೀನು ಮಿತ್ರಾವರುಣರಂತೆ ವಿವೇಕಜ್ಞಾನಯುತನಾಗಿ ಈಗ ನಮಗೆ ಅನ್ನಾದ್ಯಾಹಾರಗಳನ್ನು ಒದಗಿಸಿ ಕೊಡುತ್ತೀಯೆ.

## English Translation.

Glorified by great (praise), Maghavan, spread forth your might, bestow riches (upon us); beautıful Indra, you are wise like Mitra and Varuna, the distributer (of riches), you give us food now.

## ನೂರ ನಲವತ್ತೆಂಟನೆಯ ಸೂಕ್ತವು

। ಸಾಯಣಭಾಷ್ಯಂ ॥

**ಸುಷ್ವಾಣಾಸ ಇತಿ ಪಂಚರ್ಚಂ ವಿಂಶಂ ಸೂಕ್ತಂ ವೇನಪುತ್ರಸ್ಯ ಪೃಥೋರಾರ್ಷಂ ತ್ರೈಷ್ಟುಭಮೈಂದ್ರಂ । ಅನುಕ್ರಾಂತಂ ಚ । ಸುಷ್ವಾಣಾಸಃ ಪೃಥುರ್ವೈನ್ಯ ಇತಿ । ಗತೋ ವಿನಿಯೋಗಃ ॥**

ಅನುವಾದವು—**ಸುಷ್ವಾಣಾಸಃ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಇಪ್ಪತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವೇನಪುತ್ರನಾದ ಪೃಥು ಎಂಬುವನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಸುಷ್ವಾಣಾಸಃ ಪೃಥುರ್ವೈನ್ಯಃ** ಎಂದು ಹೇಳಿರುವುದು ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ - ೧೪೮

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೪೮ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ॥
॥ ಋಷಿಃ—ಪೃಥುರ್ವೈನ್ಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಸುಷ್ವಾಣಾಸ ಇಂದ್ರ ಸ್ತುಮಸಿ ತ್ವಾ ಸಸವಾಂಸಶ್ಚ ತುವಿನೃಮ್ಣ ವಾಜಂ ।**
**ಆ ನೋ ಭರ ಸುವಿತಂ ಯಸ್ಯ ಚಾಕನ್ತ್ಮನಾ ತನಾ ಸನುಯಾಮ ತ್ವೋತಾಃ ॥**

॥ ಪದಪಾಠಃ ॥

ಸುಸ್ವಾನಾಸಃ । ಇಂದ್ರ । ಸ್ತುಮಸಿ । ತ್ವಾ । ಸಸ್ಽವಾಂಸಃ । ಚ । ತುವಿಽನೃಮ್ಣ । ವಾಜಂ ।
ಆ । ನಃ । ಭರ । ಸುವಿತಂ । ಯಸ್ಯ । ಚಾಕನ್ । ತ್ಮನಾ । ತನಾ । ಸನುಯಾಮ । ತ್ವಾಽಊತಾಃ ॥೧॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಸುಷ್ವಾಣಾಸಃ ಸೋಮಮಭಿಷುತವಂತೋ ವಯಂ ತ್ವಾಂ ಸ್ತುಮಸಿ । ಸ್ತುಮಃ । ಹೇ ತುವಿನೃಮ್ಣ ಬಹುಲಧನ ವಾಜಂ ಚರುಪುರೋಡಾಶಾದಿಲಕ್ಷಣಮನ್ನಂ ಸಸವಾಂಸಃ ಸಂಭಕ್ತವಂತಶ್ಚ ವಯಂ ತ್ವಾಂ ಸ್ತುಮಃ । ಯತ ಏವಮತೋ ಹೇತೋರ್ನೋಽಸ್ಮಭ್ಯಂ ಸುವಿತಂ ಸುಷ್ಠು ಪ್ರಾಪ್ತವ್ಯಂ ಶೋಭನಂ ಧನಮಾ ಭರ । ಆಹರ । ಪ್ರಯಚ್ಛ । ಯದ್ವಾ । ಯಸ್ಯ ಯದ್ಧನಮತಿಪ್ರಿಯತ್ವೇನ ಚಾಕನ್ ತ್ವಂ ಕಾಮಯಸೇ ತದ್ಧನಮಾ ಭರೇತ್ಯರ್ಥಃ । ವಯಂ ಚ ತ್ವೋತಾಸ್ತ್ವಯಾ ರಕ್ಷಿತಾಃ ಸಂತಸ್ತನಾ । ಧನನಾಮೈತತ್ । ವಿಸ್ತೃತಾನಿ ಧನಾನಿ ತ್ಮನಾತ್ಮನಾ ಸ್ವಯಮೇವಾನ್ಯನೈರಪೇಕ್ಷ್ಯೇಣೈವ ಸನುಯಾಮ । ತವ ಪ್ರಸಾದಾಲ್ಲಭೇಮಹಿ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಸುಷ್ವಾಣಾಸಃ**—ಸೋಮರಸವನ್ನು ಹಿಂಡುತ್ತಿರುವ ನಾವು । **ತ್ವಾ**—ನಿನ್ನನ್ನು । **ಸ್ತುಮಸಿ**—ಸ್ತುತಿಸುತ್ತೇವೆ । **ತುವಿನೃಮ್ಣ**—ಬಹಳವಾದ ಬಲ ಅಥವಾ ಧನವುಳ್ಳ ಎಲೈ ಇಂದ್ರನೇ। **ವಾಜಂ**—ಅನ್ನವನ್ನು । **ಸಸವಾಂಸಃ ಚ**—ಪಡೆಯಬೇಕೆಂಬ ಇಚ್ಛೆಯುಳ್ಳವರಾಗಿಯೂ ನಿನ್ನನ್ನು ಸ್ತುತಿಸುತ್ತೇವೆ । **ಯಸ್ಯ** -ಯಾವ ಧನವನ್ನು । **ಚಾಕನ್**—ನಮಗೆ ನೀನು ಕೊಡಲಿಚ್ಛಿಸುವೆಯೋ । **ಸುವಿತಂ**—ನಮಗೆ ಲಭಿಸಬೇಕಾದ ಅಂತಹ ಧನವನ್ನು । **ನಃ**—ನಮಗೆ । **ಆ ಭರ**—ತಂದೊದಗಿಸು (ನಾವೂ ಸಹ) । **ತ್ವೋತಾಃ**—ನಿನ್ನಿಂದ ರಕ್ಷಿತರಾಗಿ । **ತನಾ**—ಅತಿಶಯವಾದ ಧನವನ್ನು । **ತ್ಮನಾ**—ನಿನ್ನ ಮೂಲಕವಾಗಿಯೇ । **ಸನುಯಾಮ**—ಪಡೆಯುವಂತಾಗಲಿ ।

॥ ಭಾವಾರ್ಥ ॥

ಎಲೈ ಇಂದ್ರನೇ, ಸೋಮರಸವನ್ನು ಹಿಂಡುತ್ತಿರುವ ನಾವು ನಿನ್ನನ್ನು ಸ್ತುತಿಸುತ್ತೇವೆ. ಅಧಿಕಬಲ ಅಥವಾ ಧನವುಳ್ಳ ಎಲೈ ಇಂದ್ರನೇ, ಅನ್ನವನ್ನು ಪಡೆಯಬೇಕೆಂಬ ಇಚ್ಛೆಯುಳ್ಳವರಾಗಿಯೂ ನಿನ್ನನ್ನು ಸ್ತುತಿಸುತ್ತೇವೆ. ನೀನು ನಮಗೆ ಯಾವ ಧನವನ್ನು ಕೊಡಬೇಕೆಂದು ಅಪೇಕ್ಷಿಸುತ್ತೀಯೋ ಆ ಧನವನ್ನೇ ನಮಗೆ ತಂದೊದಗಿಸು. ನಿನ್ನಿಂದ ರಕ್ಷಿತರಾದ ನಾವು ನಿನ್ನ ಮೂಲಕವಾಗಿಯೇ ಧನವನ್ನು ಪಡೆಯುವಂತಾಗಲಿ.

English Translation

Having poured out the libation, we praise you, Indra; having presented the sacrificial food, we (praise you), granter of abundant wealth; bring us the wealth which one longs for; protected by you may we acquire riches through yourself alone.

॥ ಸಂಹಿತಾಪಾಠಃ ॥

**ಋಷ್ವಸ್ತ್ವಮಿಂದ್ರ ಶೂರ ಜಾತೋ ದಾಸೀರ್ವಿಶಃ ಸೂರ್ಯೇಣ ಸಹ್ಯಾಃ ।**

ಗುಹಾ ಹಿತಂ ಗುಹ್ಯಂ ಗೂಳ್ಹಮಪ್ಸು ಬಿಭೃಮಸಿ ಪ್ರಸ್ರವಣೇ ನ ಸೋಮಂ॥

॥ ಪದಪಾಠಃ ॥

ಋಷ್ವಃ । ತ್ವಂ । ಇಂದ್ರ । ಶೂರ । ಜಾತಃ । ದಾಸೀಃ । ವಿಶಃ । ಸೂರ್ಯೇಣ । ಸಹ್ಯಾಃ ।

ಗುಹಾ । ಹಿತಂ । ಗುಹ್ಯಂ । ಗೂಳ್ಹಂ । ಅಪ್ಽಸು । ಬಿಭೃಮಸಿ । ಪ್ರಽಸ್ರವಣೇ । ನ । ಸೋಮಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಶೂರ ಶೌರ್ಯವನ್ನಿಂದ್ರ ಋಷ್ವೋ ಮಹಾನ್ದರ್ಶನೀಯೋ ವಾ ತ್ವಂ ಜಾತೋ ಜಾತಮಾತ್ರ ಏವ ದಾಸೀಃ । ಉಪಕ್ಷಯಕಾರಿಣೋ ದಾಸಾ ಅಸುರಾಃ । ತತ್ಸಂಬಂಧಿನೀರ್ವಿಶಃ ಪ್ರಜಾಃ ಸೂರ್ಯೇಣ ಸೂರ್ಯಾತ್ಮನಾ ಸಹ್ಯಾಃ । ಅಭ್ಯಭವಃ । ತಥಾ ಗುಹಾ ಗುಹಾಯಾಂ ಹಿತಂ ನಿಹಿತಂ ಅತ ಏವ ಗುಹ್ಯಮದೃಶ್ಯಂ ವಲಾಖ್ಯಮಸುರಮಪ್ಸೂದಕೇಷು ಗೂಢಂ ನಿಗೂಢಂ ಕುಯವಾಖ್ಯಂ ಚ ತ್ವಮಭಿಭೂತವಾನಸಿ । ವಯಮಪಿ ಪ್ರಸ್ರವಣೇ ಪ್ರವರ್ಷಣೇ ಸತಿ। ನಃ ಸಂಪ್ರತ್ಯರ್ಥೇ । ಸಂಪ್ರತಿ ಸೋಮಂ ಬಿಭೃಮಸಿ । ತ್ವದರ್ಥಂ ಬಿಭೃಮಃ । ಧಾರಯಾಮಃ ॥

॥ ಪ್ರತಿಪದಾರ್ಥ ॥

**ಶೂರ**— ಪರಾಕ್ರಮಶಾಲಿಯಾದ । **ಇಂದ್ರ**— ಎಲೈ ಇಂದ್ರನೇ । **ಋಷ್ವಃ**— ಮಹತ್ತ್ವರೂಪವುಳ್ಳ ಅಥವಾ ಆಕರ್ಷಕವಾದ ರೂಪವುಳ್ಳ । **ತ್ವಂ**— ನೀನು । **ಜಾತಃ**— ಉತ್ಪನ್ನನಾದಕೂಡಲೇ । **ದಾಸೀಃ**— ದಾಸ ಜನಾಂಗಕ್ಕೆ ಸೇರಿದ । **ವಿಶಃ**— ಪ್ರಜೆಗಳನ್ನು ಎಂದರೆ ಜನರನ್ನು । **ಸೂರ್ಯೇಣ**— ಸೂರ್ಯಾತ್ಮಕನಾಗಿ । **ಸಹ್ಯಾಃ**— ಪರಾಭವಗೊಳಿಸಿದ್ದೀಯೆ ಹಾಗೆಯೇ । **ಗುಹಾ**— ರಹಸ್ಯಪ್ರದೇಶದಲ್ಲಿ । **ಹಿತಂ**— ಅಡಗಿದ್ದ । **ಗುಹ್ಯಂ**— ಯಾರ ದೃಷ್ಟಿಗೂ ಬೀಳದಿದ್ದ ವಲನೆಂಬ ಅಸುರನನ್ನು । **ಅಪ್ಸು**— ಉದಕಗಳಲ್ಲಿ । **ಗೂಳ್ಹಂ**— ಗೂಢವಾಗಿ ಅಡಗಿದ್ದ ಕುಯವನೆಂಬ ಅಸುರನನ್ನೂ ನೀನು ಪರಾಭವಗೊಳಿಸಿದ್ದೀಯೆ. ನಾವೂ ಸಹ । **ನ**— ಈಗ । **ಪ್ರಸ್ರವಣೇ**— (ಹಿಂಡಿದ ರಸವು) ಧಾರೆಯಾಗಿ ಹರಿಯುತ್ತಿರುವಾಗ । **ಸೋಮಂ**— ಆ ಸೋಮರಸವನ್ನು । **ಬಿಭೃಮಸಿ**— ನಿನಗಾಗಿ ಹಿಡಿದು ನಿಂತಿದ್ದೇವೆ.

॥ ಭಾವಾರ್ಥ ॥

ಪರಾಕ್ರಮಶಾಲಿಯಾದ ಎಲೈ ಇಂದ್ರನೇ, ಸುಂದರಾಕಾರನಾದ ನೀನು ಉತ್ಪನ್ನನಾದಕೂಡಲೇ ಸೂರ್ಯರೂಪದಿಂದ ದಸ್ಯುಜನರನ್ನು ಪರಾಭವಗೊಳಿಸಿದ್ದೀಯೆ, ಹಾಗೆಯೇ ಯಾರದೃಷ್ಟಿಗೂ ಬೀಳದಂತೆ ರಹಸ್ಯ ಪ್ರದೇಶದಲ್ಲಿ ಅಡಗಿದ್ದ ವಲನೆಂಬ ಅಸುರನನ್ನೂ ಉದಕಗಳಲ್ಲಿ ರಹಸ್ಯವಾಗಿ ಅಡಗಿದ್ದ ಕುಯವನೆಂಬ ಅಸುರನನ್ನೂ ಸೋಲಿಸಿದ್ದೀಯೆ. ಸೋಮರಸವು ಹಿಂಡಲ್ಪಟ್ಟು ಧಾರೆಧಾರೆಯಾಗಿ ಹರಿಯುತ್ತಿರುವಾಗ ಅದನ್ನು ನಿನಗೆ ಅರ್ಪಿಸುವುದಕ್ಕಾಗಿ ಕೈಗಳಲ್ಲಿ ಹಿಡಿದು ನಿಂತಿದ್ದೇವೆ.

## Englisl Translation

Hero Indra, you are mighty, may you as soon as you are born you overcome with Surya the races of the Dasas, and the fugitive (Vala) lurking in secrecy, hidden in the waters; we now present to you the Soma in a copious stream.

|| ಸಂಹಿತಾಪಾಠಃ ||

ಅಯೋರ್ವಾ ಗಿರೋ ಅಭ್ಯರ್ಚ ವಿದ್ವಾನೃಷೀಣಾಂ ವಿಪ್ರಃ ಸುಮತಿಂ ಚಕಾನಃ ।
ತೇ ಸ್ಯಾಮ ಯೇ ರಣಯಂತ ಸೋಮೈರೇನೋತ ತುಭ್ಯಂ ರಥೋಳ್ಹ ಭಕ್ಷೈಃ ॥ ೩ ॥

|| ಪದಪಾಠಃ ||

ಅಯೋಃ । ವಾ । ಗಿರಃ । ಅಭಿ । ಅರ್ಚ । ವಿದ್ವಾನ್ । ಋಷೀಣಾಂ । ವಿಪ್ರಃ । ಸುಽಮತಿಂ । ಚಕಾನಃ ।
ತೇ । ಸ್ಯಾಮ । ಯೇ । ರಣಯಂತ । ಸೋಮೈಃ । ಏನಾ । ಉತ । ತುಭ್ಯಂ । ರಥಽಓಳ್ಹ । ಭಕ್ಷೈಃ ॥೩॥

|| ಸಾಯಣಭಾಷ್ಯಂ ||

ವಿಪ್ರೋ ಮೇಧಾವ್ಯೃಷೀಣಾಂ ಮಂತ್ರದರ್ಶಿನಾಂ ಸುಮತಿಂ ಸುಷ್ಟುತಿಂ ಚಕಾನಃ ಕಾಮಯಮಾನೋ ವಿದ್ವಾಞ್ಜಾನನ್ನಯೋರ್ವಾ ಸ್ವಾಮಿಾ ಚ ಭವನ್ ಹೇ ಇಂದ್ರ ಈದೃಶಸ್ತ್ವಂ ಗಿರಃ ಸ್ತೋತೃಣಾಂ ಸ್ತುತೀರ್ವಾಭ್ಯರ್ಚ । ಸಮ್ಯಕ್ಸ್ತುತಮಿತ್ಯಭಿಪೂಜಯ । ಅಪಿ ಚ ತೇ ವಯಂ ಸ್ಯಾಮ ಭವೇಮ ಯೇ ಸೋಮೈಸ್ತ್ವಾಂ ರಣಯಂತ ರಮಯಂತಿ । ಉತಾಪಿ ಚ ಹೇ ರಥೋಳ್ಹ ರಥೈರಭ್ಯುಹ್ಯಮಾನ ॥ ಅ ಊಢ ಓಢಃ । ರಥೇನ ಓಢೋ ರಥೋಢಃ । ಓಮಾಙೋಶ್ಚ । ಪಾ. ೬-೧-೯೫ । ಇತಿ ಪರರೂಪಂ ॥ ಈದೃಶೇಂದ್ರ ಭಕ್ಷೈರ್ಭಕ್ಷಣೀಯೈಶ್ಚರುಪುರೋಡಾಶಾದಿಭಿಃ ಸಾರ್ಧಮೇನೇಮಾನಿ ಸ್ತೋತ್ರಾಣಿ ತುಭ್ಯಂ ತ್ವದರ್ಥಂ ಕ್ರಿಯಂತೇ ॥

|| ಪ್ರತಿಪದಾರ್ಥ ||

**ವಿಪ್ರಃ**—ಮೇಧಾವಿಯೂ । **ಋಷೀಣಾಂ**—ಮಂತ್ರದರ್ಶಿಗಳ । **ಸುಮತಿಂ**—ಒಳ್ಳೆಯ ಸ್ತುತಿಯನ್ನು । **ಚಕಾನಃ**—ಇಚ್ಛಿಸುವವನೂ । **ವಿದ್ವಾನ್**—ತಿಳುವಳಿಕೆಯುಳ್ಳವನೂ । **ಅಯೋಃ ವಾ**—ಸಕಲರಿಗೂ ಸ್ವಾಮಿಯೂ ಆಗಿರುವ ಎಲೈ ಇಂದ್ರನೇ ಈ ರೀತಿ ಇರುವ ನೀನು । **ಗಿರಃ**—ಸ್ತೋತೃಜನರು ಮಾಡುವ ಸ್ತುತಿ

ಗಳನ್ನು | **ಅಭ್ಯರ್ಚ**—ಅನುಮೋದಿಸು | **ಯೇ**—ಯಾರು | **ಸೋಮ್ಯೈಃ**—ಸೋಮರಸಗಳಿಂದ | **ರಣ-ಯಂತ**—ನಿನ್ನನ್ನು ಹರ್ಷಗೊಳಿಸುವರೋ | **ತೇ**—ಅಂತಹ ನಾವು | **ಸ್ಯಾಮ**—ನಿನ್ನ ಅನುಗ್ರಹಕ್ಕೆ ಪಾತ್ರರಾಗಿರೋಣ | **ಉತ**—ಮತ್ತು | **ರಥೋಷ್ಠ**—ರಥದಿಂದ ವಹಿಸಲ್ಪಡುವ ಎಲೈ ಇಂದ್ರನೇ | **ಭಕ್ಷೈಃ**—ಭಕ್ಷಿಸುವುದಕ್ಕೆ ಯೋಗ್ಯವಾದ ಚರುಪುರೋಡಾಶಾದಿಗಳಿಂದ ಸಹಿತವಾದ | **ಏನಾ**—ಈ ಸ್ತೋತ್ರಗಳು | **ತುಭ್ಯಂ**—ನಿನಗೋಸ್ಕರ ಅರ್ಪಿಸಲ್ಪಡುತ್ತವೆ |

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಮೇಧಾವಿಯು, ಋಷಿಗಳು ಮಾಡುವ ಒಳ್ಳೆಯ ಸ್ತುತಿಗಳನ್ನು ಅಪೇಕ್ಷಿಸುವವನು, ವಿವೇಕಿಯು, ಸಕಲರಿಗೂ ಸ್ವಾಮಿಯು. ಇಂತಹ ನೀನು ಸ್ತೋತೃಜನರು ಮಾಡುವ ಸ್ತುತಿಗಳನ್ನು ಮೆಚ್ಚಿ ಅನುಮೋದಿಸು. ಸೋಮರಸಗಳಿಂದ ನಿನ್ನನ್ನು ಹರ್ಷಗೊಳಿಸುವ ನಾವು ನಿನ್ನ ಅನುಗ್ರಹಕ್ಕೆ ಪಾತ್ರರಾಗಿರೋಣ ಮತ್ತು ರಥದಿಂದ ವಹಿಸಲ್ಪಡುವ ಎಲೈ ಇಂದ್ರನೇ, ಭಕ್ಷಣಯೋಗ್ಯವಾದ ಈ ಚರುಪುರೋಡಾಶಾದಿಗಳೂ ಈ ಸ್ತುತಿಗಳೂ ನಿನಗಾಗಿಯೇ ಸಿದ್ಧಪಡಿಸಲ್ಪಟ್ಟಿವೆ.

English Translation

Do you, who are the lord, who are wise, a sage desirous of the good opinion of the Rishis, do honour to your praisers; may we be of those who gratify (you) with soma libations; to you, O car-borne Indra, these (praises are offered) with sacrificial viands.

॥ ಸಂಹಿತಾಪಾಠಃ ॥

ಇಮಾ ಬ್ರಹ್ಮೇಂದ್ರ ತುಭ್ಯಂ ಶಂಸಿ ದಾ ನೃಭ್ಯೋ ನೃಣಾಂ ಶೂರ ಶವಃ |
ತೇಭಿರ್ಭವ ಸಕ್ರತುರ್ಯೇಷು ಚಾಕನ್ನುತ ತ್ರಾಯಸ್ವ ಗೃಣತ ಉತ ಸ್ತೀನ್ ॥ ೪ ॥

॥ ಪದಪಾಠಃ ॥

ಇಮಾ | ಬ್ರಹ್ಮ | ಇಂದ್ರ | ತುಭ್ಯಂ | ಶಂಸಿ | ದಾಃ | ನೃಽಭ್ಯಃ | ನೃಣಾಂ | ಶೂರ | ಶವಃ |
ತೇಭಿಃ | ಭವ | ಸಽಕ್ರತುಃ | ಯೇಷು | ಚಾಕನ್ | ಉತ | ತ್ರಾಯಸ್ವ | ಗೃಣತಃ | ಉತ | ಸ್ತೀನ್ ॥೪॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವದರ್ಥಮಿಮೇಮಾನಿ ಪುರೋವರ್ತೀನಿ ಬ್ರಹ್ಮ ಬ್ರಹ್ಮಾಣಿ ಪರಿವೃಢಾನಿ ಸ್ತೋತ್ರಾಣಿ ಶಂಸಿ | ಅಶಂಸಿಷತ | ಶಸ್ಯಂತೇ || ಶಂಸೇಶ್ಛಾಂದಸೇ ಕರ್ಮಣಿ ಲುಙಿ ವ್ಯತ್ಯಯೇನೈಕವಚನಂ || ಹೇ

ಶೂರ ಶೌರ್ಯವನ್ನಿಂದ್ರ ತ್ವಂ ನೃಣಾಂ ಮನುಷ್ಯಾಣಾಂ ಮಧ್ಯೇ ನೃಭ್ಯಃ ಸ್ತುತ್ಯಾದೇರ್ನೇತೃಭ್ಯಃ ಶವೋ ಬಲಂ ದಾಃ। ದೇಹಿ। ಅಪಿ ಚ ತೇಭಿಸ್ತ್ಯೈಃ ಸಕ್ರತುಃ ಸಮಾನಕರ್ಮಾ ಸಮಾನಪ್ರಜ್ಞೋ ವಾ ಭವ ಯೇಷು ಸ್ತೋತೃಷು ಚಾಕನ್ ಹವಿರಾದಿ ಕಾಮಯಸೇ ॥ ಕನ ದೀಪ್ತಿಕಾಂತಿಗತಿಷು । ಅಸ್ಮಾದ್ವ್ಯಙ್ಲುಗಂತಾಚ್ಛಾಂದಸೇ ಲಙಿ ಸಿಪಿ ರೂಪಮೇತತ್। ಕಮೇರ್ವಾ ಪೂರ್ವವತ್। ಸಿಪಿ ಮೋ ನೋ ಧಾತೋರಿತಿ ನತ್ವಂ ॥ ಉತಾಪಿ ಚ ಗೃಣತಃ ಸ್ತೋತೄಂಸ್ತ್ರಾಯಸ್ವ । ಪಾಲಯ । ಉತಾಪಿ ಚ ಸ್ತ್ರೀನ್ ॥ ಸ್ತ್ಯೈ ಯತೇರೇತದ್ರೂಪಂ ॥ ಸಂಘೀಭೂಯ ಸ್ಥಿತಾನ್ಯಜಮಾನಾನಪಿ ತ್ರಾಯಸ್ವ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತುಭ್ಯಂ**—ನಿನಗಾಗಿ । **ಇಮಾ ಬ್ರಹ್ಮ**—ಈ ಸ್ತೋತ್ರಗಳು । **ಶಂಸಿ**—ಸ್ತುತಿಸಲ್ಪಡುತ್ತವೆ । **ಶೂರ**—ಶೂರನಾದ ಎಲೈ ಇಂದ್ರನೇ ನೀನು । **ನೃಣಾಂ**—ಮನುಷ್ಯರ ಮಧ್ಯದಲ್ಲಿ । **ನೃಭ್ಯಃ**—ಮುಖ್ಯರಾದ ಸ್ತುತಿಕರ್ತರಿಗೆ । **ಶವಃ**—ಬಲವನ್ನು । **ದಾಃ**—ಕೊಡು (ಮತ್ತು) । **ಯೇಷು**—ಯಾವಸ್ತೋತೃ ಜನರಲ್ಲಿ । **ಚಾಕನ್** ಹವರಾದಿಗಳನ್ನು ಪಡೆಯಲಿಚ್ಛಿಸುವೆಯೋ । **ತೇಭಿಃ**—ಆ ಸ್ತೋತೃಜನರಿಂದ । **ಸುಕ್ರತುಃ**—ಒಳ್ಳೆಯ ಕರ್ಮಾನುಷ್ಠಾನಗಳಿಂದ ಪೂಜ್ಯನಾಗಿ । **ಭವ**—ಆಗು । **ಉತ**—ಮತ್ತು । **ಗೃಣತಃ**—ಸ್ತೋತ್ರಮಾಡುವ ಜನರನ್ನೂ । **ಉತ**—ಮತ್ತು । **ಸ್ತ್ರೀನ್**—ಯಜಮಾನರನ್ನು । **ತ್ರಾಯಸ್ವ**—ಸಂರಕ್ಷಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಪ್ರೀತ್ಯರ್ಥವಾಗಿಯೇ ಈ ದೊಡ್ಡಸ್ತೋತ್ರಗಳು ಸ್ತುತಿಸಲ್ಪಡುತ್ತವೆ. ಎಲೈ ಶೂರನೇ, ಮನುಷ್ಯರ ಮಧ್ಯದಲ್ಲಿ ಯಾರು ನಿನ್ನನ್ನು ವಿಶೇಷವಾಗಿ ಸ್ತುತಿಸುವರೋ ಅವರಿಗೆ ಶಕ್ತಿಯನ್ನು ಕೊಡು. ಯಾವ ಸ್ತೋತೃ ಜನರ ಯಜ್ಞಾದಿಕರ್ಮಗಳಲ್ಲಿ ಹವಿಸ್ಸನ್ನು ಪಡೆಯಲಿಚ್ಛಿಸುವೆಯೋ ಆ ಜನರ ಕರ್ಮಗಳಲ್ಲಿ ಪೂಜ್ಯನಾಗು. ಮತ್ತು ನಿನ್ನನ್ನು ಸ್ತೋತ್ರಮಾಡುವ ಸ್ತೋತೃಜನರನ್ನೂ ಯಜಮಾನರನ್ನೂ ಕಾಪಾಡು

## English Translation

To you, Indra, have these prayers been addressed; grant, O hero, strength to the leaders of men; be of one mind with those in whome you delighted, and protect those who praise you, and the worshippers who stand round about.

॥ ಸಂಹಿತಾಪಾಠಃ ॥

ಶ್ರುಧೀ ಹವಮಿಂದ್ರ ಶೂರ ಪೃಥ್ಯಾ ಉತ ಸ್ತವಸೇ ವೇನ್ಯಸ್ಯಾರ್ಕೈಃ ।

ಆ ಯಸ್ತೇ ಯೋನಿಂ ಘೃತವಂತಮಸ್ವಾರೂರ್ಮಿರ್ನ ನಿಮ್ನೈರ್ದ್ರವಯಂತ ವಕ್ವಾಃ ॥ ೫ ॥

॥ ಪದಪಾಠಃ ॥

**ಶ್ರುಧಿ । ಹವಂ । ಇಂದ್ರ । ಶೂರ । ಪೃಥ್ಯಾಃ । ಉತ । ಸ್ತವಸೇ । ವೇನ್ಯಸ್ಯ । ಅರ್ಕೈಃ । ಆ । ಯಃ । ತೇ । ಯೋನಿಂ । ಘೃತಽವಂತಂ । ಅಸ್ವಾಃ । ಊರ್ಮಿಃ । ನ । ನಿಮ್ನೈಃ । ದ್ರವಯಂತ । ವಕ್ವಾಃ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಶೂರೇಂದ್ರ ಪೃಥ್ಯಾಃ ಪೃಥೋರ್ಋಷೇರ್ಮಮ ಹವಮಾಹ್ವಾನಂ ಶ್ರುಧಿ । ಶೃಣು । ಉತಾಪಿ ಚ ವೇನ್ಯಸ್ಯ ವೇನಪುತ್ರಸ್ಯ ಮಮಾರ್ಕೈರ್ಮಂತ್ರೈಃ ಸ್ತವಸೇ । ಸ್ತೂಯಸೇ ॥ ಯಕಿ ಪ್ರಾಪ್ತೇ ವ್ಯತ್ಯಯೇನ ಶಪ್ ॥ ಯಃ ಸ್ತೋತಾ ಘೃತವಂತಮುದಕವಂತಂ ತೇ ತವ ಯೋನಿಂ ನಿವಾಸಭೂಮಿಮಾಸ್ವಾಃ ಅಭ್ಯಸ್ವಾರ್ಷೀತ್ ಅಭ್ಯಷ್ಟೌತ್ ॥ ಸ್ವೃ ಶಬ್ದೋಪತಾಪಯೋಃ । ಅಸ್ಮಾಲ್ಲುಙಿ ತಿಪಿ ಬಹುಲಂ ಛಂದಸೀತೀಡಭಾವೇ ಹಲ್ಙ್ಯಾದಿಲೋಪೇ ಚ ರಾತ್ಸಸ್ಯೇತಿ ಸಲೋಪಃ ॥ ಯದ್ವಾ । ಘೃತವಂತಮಾಜ್ಯಾದಿನಾ ಹವಿಷೋಪೇತಂ ಯೋನಿಂ । ಗೃಹನಾಮೈತತ್ । ಯಜ್ಞಗೃಹಂ ಪ್ರಾಪ್ಯ ತೇ ತ್ವಾಂ ಯೋಽಭಿಷ್ಟೌತಿ ತಸ್ಯ ವೇನ್ಯಸ್ಯಾರ್ಕೈರಿತ್ಯನ್ವಯಃ । ಅಪಿ ಚ ವಕ್ವಾ ವಕ್ವಾನಃ ॥ ವಚೇರನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ಅಂತ್ಯವಿಕಾರಶ್ಛಾಂದಸಃ । ಜಸಿ ಪೃಷೋದರಾದಿತ್ವಾದ್ವರ್ಣಲೋಪಃ ॥ ಅನ್ಯೇಽಪಿ ಸರ್ವೇ ಸ್ತೋತಾರೋ ನಿಮ್ನೈಃ ಪ್ರವಣೈರ್ಮಾರ್ಗೈರೂರ್ಮಿರ್ನೋದಕಸಂಘ ಇವ ದ್ರವಯಂತ । ಸ್ತುತಿಭಿಸ್ತ್ವಾಮೇವಾಭಿದ್ರವಂತಿ । ಅಭಿಗಚ್ಛಂತಿ ॥**

॥ ಪ್ರತಿಪದಾರ್ಥ ॥

**ಶೂರ**— ಪರಾಕ್ರಮಶಾಲಿಯಾದ । **ಇಂದ್ರ**— ಎಲೈ ಇಂದ್ರನೇ । **ಪೃಥ್ಯಾಃ**— ಪೃಥು ಎಂಬ ಹೆಸರಿನವನಾದ ನನ್ನ । **ಹವಂ**— ಆಹ್ವಾನವನ್ನು । **ಶ್ರುಧಿ**— ಕೇಳು । **ಉತ**— ಮತ್ತು । **ಯಃ**— ಯಾವ ಸ್ತೋತೃವು । **ಘೃತವಂತಂ**— ಉದಕಪೂರ್ಣವಾದ । **ತೇ ಯೋನಿಂ**— ನಿನ್ನ ನಿವಾಸ ಭೂಮಿಯನ್ನು । **ಆ ಸ್ವಾಃ**— ಸ್ತುತಿಸುವನೋ [ಅಥವಾ । **ಘೃತವಂತಂ**— ಆಜ್ಯಾದಿ ಹವಿಸ್ಸುಗಳಿಂದ ಯುಕ್ತವಾದ । **ಯೋನಿಂ**— ಯಜ್ಞಗೃಹವನ್ನು ಸೇರಿ । **ತೇ**— ನಿನ್ನನ್ನು । **ಆ ಸ್ವಾಃ**— ಸ್ತುತಿಸುವನೋ] ಅಂತಹ । **ವೇನ್ಯಸ್ಯ**— ವೇನಪುತ್ರನಾದ ನನ್ನ । **ಅರ್ಕೈಃ**— ಮಂತ್ರಗಳಿಂದ । **ಸ್ತವಸೇ**— ಸ್ತುತಿಸಲ್ಪಡುತ್ತೀಯೆ । **ವಕ್ವಾಃ**— ಇತರ ಸ್ತೋತೃಜನರೂ ಸಹ । **ನಿಮ್ನೈಃ**— ಇಳಿಜಾರಾದ ಪ್ರದೇಶಗಳಿಂದ । **ಊರ್ಮಿಃ ನ**— ನೀರು ವೇಗವಾಗಿ ಹರಿಯುವಂತೆ । **ದ್ರವಯಂತ**— ಸ್ತುತಿಗಳಿಂದ ನಿನ್ನನ್ನೇ ಸಮೀಪಿಸುತ್ತಾರೆ.

॥ ಭಾವಾರ್ಥ ॥

ಪರಾಕ್ರಮಶಾಲಿಯಾದ ಎಲೈ ಇಂದ್ರನೇ, ಪೃಥು ಎಂಬ ಹೆಸರಿನವನಾದ ನನ್ನ ಆಹ್ವಾನವನ್ನು ಕೇಳು. ಉದಕಪೂರಿತವಾದ ನಿನ್ನ ನಿವಾಸಭೂಮಿಯನ್ನು ಸ್ತುತಿಸುವವನೂ ಅಥವಾ ಆಜ್ಯಾದಿ ಹವಿಸ್ಸುಗಳಿಂದ ಪೂರ್ಣವಾದ ಯಜ್ಞಗೃಹವನ್ನು ಸೇರಿ ಅಲ್ಲಿ ನಿನ್ನನ್ನು ಸ್ತುತಿಸುವವನೂ ಆದ ವೇನಪುತ್ರನಾದ ನನ್ನ ಮಂತ್ರಗಳಿಂದ ಸ್ತುತಿಸಲ್ಪ

ದುತ್ತೀಯೆ ಇತರ ಸ್ತೋತೃಜನರೂ ಸಹ ಇಳಿಜಾರಾದ ತಗ್ಗುಪ್ರದೇಶದಲ್ಲಿ ವೇಗವಾಗಿ ಹರಿಯುವ ನೀರಿನಂತೆ ಸ್ತುತಿಗಳಿಂದ ನಿನ್ನನ್ನೇ ಬೇಗನೆ ಸಮೀಪಿಸುತ್ತಾರೆ.

### English Translation

Hear, hero Indra, the invocation of Prithu; you are glorified by the praises of the son of Vena, who celebrated your hall of sacrifice, full of ghi; your praisers rush to you like a torrent through precipitous banks.

## ನೂರ ನಲವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಸವಿತಾ ಯಂತ್ರೈರಿತಿ ಪಂಚರ್ಚಮೇಕವಿಂಶಂ ಸೂಕ್ತಂ ಹಿರಣ್ಯಸ್ತೂಪಪುತ್ರಸ್ಯಾರ್ಚತ ಆರ್ಷಂ ತ್ರೈಷ್ಟುಭಂ ಸವಿತೃದೇವತ್ಯಂ । ಅನುಕ್ರಾಂತಂ ಚ । ಸವಿತಾರ್ಚನ್ಹೈರಣ್ಯಸ್ತೂಪಃ ಸಾವಿತ್ರಮಿತಿ । ಗತೋ ವಿನಿಯೋಗಃ ॥

ಅನುವಾದವು— **ಸವಿತಾ ಯಂತ್ರೈಃ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಇಪ್ಪತ್ತೊಂದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿರಣ್ಯಸ್ತೂಪಋಷಿಯ ಪುತ್ರನಾದ ಅರ್ಚನ್ ಎಂಬುವನು ಋಷಿಯು; ಸವಿತೃವು ದೇವತೆಯು, ತ್ರಿಷ್ಟುಪ್‌ಛಂದಸ್ಸು. ಆನುಕ್ರಮಣಿಕೆಯಲ್ಲಿ— **ಸವಿತಾರ್ಚನ್ ಹೈರಣ್ಯಸ್ತೂಪಃ ಸಾವಿತ್ರಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೧೪೯

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೪೯ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ॥
॥ ಋಷಿಃ—ಅರ್ಚನ್ ಹೈರಣ್ಯಸ್ತೂಪಃ ॥
॥ ದೇವತಾ—ಸವಿತಾ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭನೇ ಸವಿತಾ ದ್ಯಾಮದೃಂಹತ್।
ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಂ॥೧॥

|| ಪದಪಾಠಃ ||

ಸವಿತಾ । ಯಂತ್ರೈಃ । ಪೃಥಿವೀಂ । ಅರಮ್ಣಾತ್ । ಅಸ್ಕಂಭನೇ । ಸವಿತಾ । ದ್ಯಾಂ । ಅದೃಂಹತ್ ।

ಅಶ್ವಂऽಇವ । ಅಧುಕ್ಷತ್ । ಧುನಿಂ । ಅಂತರಿಕ್ಷಂ । ಅತೂರ್ತೇ । ಬದ್ಧಂ । ಸವಿತಾ । ಸಮುದ್ರಂ ॥ ೧ ॥

|| ಸಾಯಣಭಾಷ್ಯಂ ||

ಸವಿತಾ ಸರ್ವಸ್ಯ ಪ್ರಸವಿತಾ ಪ್ರೇರಕೋ ಮಧ್ಯಮಸ್ಥಾನೋ ದೇವಃ ಸೋऽಯಂ ಯಂತ್ರೈರ್ಯಮನಸಾಧನೈರ್ವೃಷ್ಟಿಪ್ರದಾನಾದಿಭಿರುಪಾಯೈರ್ವಾಯವೀಯೈಃ ಪಾಶೈರ್ವಾ ಪೃಥಿವೀಂ ಪ್ರಥಿತಾಂ ಭೂಮಿಮರಮ್ಣಾತ್ । ಅರಮಯತ್ । ಸುಖೇನಾವಸ್ಥಾಪಯತಿ । ತಥಾ ಸ ಏವ ಸವಿತಾಸ್ಕಂಭನೇ । ಪತನಪ್ರತಿಬಂಧಕಮಾಲಂಬನಂ ಸ್ಕಂಭನಂ । ತದ್ರಹಿತೇ ಸ್ಥಲೇ ದ್ಯಾಂ ದ್ಯುಲೋಕಮಪ್ಯದೃಂಹತ್ । ದೃಢೀಕೃತವಾನ್ । ಯಥಾಧೋ ನ ಪತತಿ ತಥಾತ್ಮೀಯೈರೇವೋಪಾಯೈರವಸ್ಥಾಪಿತವಾನಿತ್ಯರ್ಥಃ । ಅಶ್ವಮಿವ ಧುನಿಂ ಕಂಪಯಿತವ್ಯಂ ಕಂಪಯಿತಾರಂ ವಾಂತರಿಕ್ಷಮಂತರಾ ಕ್ಷಾಂತಂ ಮಧ್ಯಮಸ್ಥಾನಗತಮತೂರ್ತೇ ಕೇನಾಪ್ಯಹಿಂಸಿತೇऽತ್ವರಮಾಣೇ ವಾ ನಭಸಿ ವಾಯವೀಯೈಃ ಪಾಶೈರ್ಬದ್ಧಂ ಸಮುದ್ರಂ ಮೇಘಮಯನೇವ ಸವಿತಾಧುಕ್ಷತ್ । ಉದಕಾನಿ ದೋಗ್ಧಿ । ಯದ್ವಾ । ಅಂತರಿಕ್ಷಮಿತಿ ಸಪ್ತಮ್ಯರ್ಥೇ ಪ್ರಥಮಾ । ಅತೂರ್ತೇऽಂತರಿಕ್ಷೇ ಬದ್ಧಂ ಸಮುದಿತಾರಂ ಧುನಿಂ ಕಂಪನೀಯಂ ಮೇಘಮಶ್ವಮಿವಾಧುಕ್ಷತ್ । ಸವಿತಾ ಕ್ಲೇಶಯತಿ ॥ ಧುಕ್ಷ ಸಂದೀಪನಕ್ಲೇಶನಜೀವನೇಷು ॥ ಯಥಾ ಶಿಕ್ಷಕೋऽಶ್ವಂ ಕ್ಲೇಶಯತ್ಯೇವಂ ವರ್ಷಣಾಯ ಮೇಘಂ ಕ್ಲೇಶಯತೀತ್ಯರ್ಥಃ । ಅಥ ನಿರುಕ್ತಂ । ಸವಿತಾ ಯಂತ್ರೈಃ ಪೃಥಿವೀಮರಮಯದನಾರಂಭಣೇऽಂತರಿಕ್ಷೇ ಸವಿತಾ ದ್ಯಾಮದೃಂಹದಶ್ವಮಿವಾಧುಕ್ಷದ್ಧುನಿಮಂತರಿಕ್ಷೇ ಮೇಘಂ ಬದ್ಧಮತೂರ್ತೇ ಬದ್ಧಮಕೂರ್ಣ ಇತಿ ವಾತ್ವರಮಾಣ ಇತಿ ವಾ ಸವಿತಾ ಸಮುದಿತಾರಂ । ನಿ. ೧೦-೩೨ । ಇತಿ ॥

|| ಪ್ರತಿಪದಾರ್ಥ ||

**ಸವಿತಾ**—ಸರ್ವವನ್ನೂ ಉತ್ಪತ್ತಿಮಾಡುವ ಅಥವಾ ಸರ್ವಕ್ಕೂ ಪ್ರೇರಕನಾದ ಮಧ್ಯಮಸ್ಥಾನದೇವತೆಯಾದ ಈ ಸವಿತೃದೇವನು । **ಯಂತ್ರೈಃ**—ವೃಷ್ಟಿಪ್ರದಾನಾದಿ ಉಪಾಯಗಳಿಂದ ಅಥವಾ ವಾಯುಗಳೆಂಬ ಪಾಶಗಳಿಂದ । **ಪೃಥಿವೀಂ**—ವಿಸ್ತಾರವಾದ ಈ ಭೂಮಿಯನ್ನು । **ಅರಮ್ಣಾತ್**—ದೃಢವಾಗಿ ಸ್ಥಾಪಿಸಿದ್ದಾನೆ । **ಸವಿತಾ**—ಆ ಸವಿತೃದೇವನೇ । **ಅಸ್ಕಂಭನೇ**—ಆಧಾರರಹಿತವಾದ ಅಂತರಿಕ್ಷದಲ್ಲಿ । **ದ್ಯಾಂ**—ದ್ಯು(ಸ್ವರ್ಗ)ಲೋಕವನ್ನು । **ಅದೃಂಹತ್**—ಕೆಳಗೆ ಬೀಳದಂತೆ ದೃಢವಾಗಿ ನಿಲ್ಲಿಸಿದ್ದಾನೆ । **ಧುನಿಂ**—ನಡುಗುತ್ತಿರುವ । **ಅಶ್ವಮಿವ**—ಕುದುರೆಯಂತೆ । **ಅತೂರ್ತೇ**—ಅಬಾಧಿತವಾದ । **ಅಂತರಿಕ್ಷಂ**—ಅಂತರಿಕ್ಷದಲ್ಲಿ । **ಬದ್ಧಂ**—ವಾಯುವೆಂಬ ಹಗ್ಗದಿಂದ ಬಿಗಿಯಲ್ಪಟ್ಟ । **ಸಮುದ್ರಂ**—ಮೇಘವನ್ನು (ಮೇಘದಿಂದ) । **ಸವಿತಾ**—ಈ ಸವಿತೃದೇವನು । **ಅಧುಕ್ಷತ್**—(ಹಾಲುಕರೆಯುವಂತೆ) ಉದಕಗಳನ್ನು ಕರೆದನು.

॥ ಭಾವಾರ್ಥ ॥

ಸರ್ವಪ್ರಾಣಿಗಳನ್ನೂ ಪ್ರೇರಿಸುವ ಅಥವಾ ಉತ್ಪತ್ತಿಮಾಡುವ ಈ ಸವಿತೃದೇವನು ಈ ವಿಸ್ತಾರವಾದ ಭೂಮಿಯನ್ನು ವಾಯುಗಳೆಂಬ ಪಾಶಗಳಿಂದ(ಅಥವಾ ವೃಷ್ಟಿಪ್ರದಾನಾದಿ ಸಾಧನಗಳಿಂದ)ಬಲವಾಗಿ ಬಿಗಿದು ದೃಢವಾಗಿ ಅಲುಗಾಡದಂತೆಸ್ಥಾಪಿಸಿದ್ದಾನೆ. ಯಾವ ಆಧಾರವೂ ಇಲ್ಲದ ಅಂತರಿಕ್ಷದಲ್ಲಿ ದ್ಯುಲೋಕವನ್ನು ಕೆಳಕ್ಕೆ ಬೀಳದಂತೆ ನಿಲ್ಲಿಸಿದ್ದಾನೆ. ನಡುಗುತ್ತಿರುವ ಅಶ್ವದಂತೆ ಯಾವ ಆಶ್ರಯವೂ ಇಲ್ಲದೆ ನಿರ್ಬಾಧಿತವಾದ ಆಕಾಶದಲ್ಲಿ ವಾಯುವೆಂಬ ಹಗ್ಗದಿಂದ ಬಿಗಿದು ನಿಂತಿರುವ ಮೇಘದಿಂದ ಈ ಸವಿತೃವದೇವನು ವೃಷ್ಟ್ಯುದಕವನ್ನು ಭೂಮಿಯ ಮೇಲೆ ಬೀಳುವಂತೆ ಕರೆಯುತ್ತಾನೆ.

## English Translation

Savitri has fixed the earth with fetters; Savitri has made the heaven firm in a place where there was no support; Savitri has milked the cloud of the firmament bound to the indestructible (ether) like a trembling horse.

॥ ವಿಶೇಷವಿಷಯಗಳು ॥

ಸವಿತೃಶಬ್ದದ ರೂಪನಿಷ್ಪತ್ತಿಯನ್ನು ಹೇಳುತ್ತಾ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದ್ದಾರೆ--

**ಸವಿತಾ । ಸವಿತಾ ಸರ್ವಸ್ಯ ಪ್ರಸವಿತಾ ॥** (ನಿ. ೧೦-೩೧)

ಸವಿತಾ ಎಂದರೆ ಸಮಸ್ತವನ್ನೂ ಉತ್ಪತ್ತಿಮಾಡುವ ಅಥವಾ ಸಮಸ್ತಪ್ರಾಣಿಗಳ ಉತ್ಪತ್ತಿಗೆ ಕಾರಣನಾದ ದೇವನು.

**ತಸ್ಯೈಷಾ ಭವತಿ ॥ ಸವಿತಾ ಯಂತ್ರೈಃ ಪೃಥಿವೀಮರಮಯದನಾರಂಭಣೇಽನ್ತರಿಕ್ಷೇ ಸವಿತಾ ದ್ಯಾಮದೃಂಹದಶ್ವಮಿವಾಧುಕ್ಷದ್ಧುನಿಮಂತರಿಕ್ಷೇ ಮೇಘಂ ಬದ್ಧಮತೂರ್ತೇ ಬದ್ಧಮತೂರ್ಣ ಇತಿ ವಾತ್ವರಮಾಣ ಇತಿ ವಾ ಸವಿತಾ ಸಮುದಿತಾರಮಿತಿ ॥** (ನಿ. ೧೦-೩೨)

**ಸವಿತಾ ಯಂತ್ರೈಃ** ಎಂಬ ಪ್ರಕೃತ ಋಕ್ಕು ಈ ಸವಿತೃದೇವತೆಯನ್ನು ಸ್ತುತಿಸುವುದು ಇಲ್ಲಿ ಯಂತ್ರಶಬ್ದವು ನಿಯಮನ ಮಾಡು, ಅಧೀನದಲ್ಲಿಟ್ಟುಕೋ ಎಂಬರ್ಥವಿರುವ ಯಮ್ ಧಾತುವಿನಿಂದ ನಿಷ್ಪನ್ನನಾಗಿದೆ. ಯಂತ್ರವೆಂದರೆ ನಿಯಮನ, ವಶ, (Control) ಅಧೀನ ಎಂದರ್ಥವು

**ಸವಿತಾ ಯಂತ್ರೈಃ ಪೃಥಿವೀಂ ಅರಮ್ಣಾತ್—ಸವಿತಾ ಯಂತ್ರೈಃ ಪೃಥಿವೀಮರಮಯತ್ ।** ಈ ಸವಿತೃದೇವತೆಯು ಈ ಭೂಮಿಯನ್ನು ಕೆಲವು ಸಾಧನೋಪಾಯಗಳಿಂದ ತನ್ನ ಅಧೀನದಲ್ಲಿಟ್ಟುಕೊಂಡಿದ್ದಾನೆ ಮತ್ತು ಅದನ್ನು ದೃಢವಾಗಿ ಸ್ಥಾಪಿಸಿದಾನೆ. ಸಾಧನೋಪಾಯಗಳೆಂದರೇನು, ಎಂದರೆ ವೃಷ್ಟಿಪ್ರಧಾನ, ಪ್ರಕಾಶನ, ಇತ್ಯಾದಿ. ಬೆಳಕು ಮತ್ತು ಮಳೆ ಇಲ್ಲದಿದ್ದರೆ ಭೂಮಿಯ ಮೇಲಿರುವ ಪ್ರಾಣಿಗಳು ಜೀವಿಸುವುದಕ್ಕಾಗುವುದಿಲ್ಲ.

ಸವಿತೃವಿನ ಅಧೀನಕ್ಕೆ ಒಳಪಟ್ಟಂತಾಯಿತು. ಇಂತಹ ಭೂಮಿಯು ಅಲುಗಾಡದಂತೆ ನಿಶ್ಚಲವಾಗಿ ಎಂದರೆ ಸ್ಥಿರವಾಗಿ ಇರುವಂತೆ ಆ ಸವಿತೃದೇವನೇ ಮಾಡಿರುವನು.

**ಅನಾರಂಭಣೇಽನ್ತರಿಕ್ಷೇ ಸವಿತಾದ್ಯಾಮದೃಂಹತ್**— ಈ ಸವಿತೃದೇವನು ದ್ಯುಲೋಕವನ್ನು ಯಾವ ಆಧಾರವೂ ಇಲ್ಲದ ಆಕಾಶದಲ್ಲಿ ದೃಢವಾಗಿರುವಂತೆ ಸ್ಥಾಪಿಸಿದನು. ಆಕಾಶದಲ್ಲಿ ಯಾವ ವಸ್ತುವನ್ನೂ ಇಡುವುದಕ್ಕಾಗುವುದಿಲ್ಲ. ಒಂದು ಹುಲ್ಲುಕಡ್ಡಿಯನ್ನು ಆಕಾಶದಲ್ಲಿ ಹಾಕಿದರೆ ಅದು ಅಲ್ಲಿ ನಿಲ್ಲದೆ ತಕ್ಷಣ ಕೆಳಕ್ಕೆ ಬೀಳುವುದು ಹೀಗಿರುವಾಗ ಇಷ್ಟು ದೊಡ್ಡದಾಗಿರುವ ದ್ಯುಲೋಕವು ಕೆಳಕ್ಕೆ ಬೀಳದಂತೆ ಯಾವ ಆಧಾರವೂ ಇಲ್ಲದೆ ಆಕಾಶದಲ್ಲಿ ದೃಢವಾಗಿ ಈ ಸವಿತೃದೇವನು ಸ್ಥಾಪಿಸಿರುವನು.

**ಅಶ್ವಮಿವಾಧುಕ್ಷದ್ಧುನಿಮಂತರಿಕ್ಷೇ ಮೇಘಂ ಬದ್ಧಮತೂರ್ತೇ ಬದ್ಧಮತೂರ್ಣ ಇತಿ ವಾತ್ವ-ರಮಾಣ ಇತಿ ವಾ ಸವಿತಾ ಸಮುದಿತಾರಮಿತಿ** – **ಅತೂರ್ತೇ** ಎಂದರೆ ಅಹಿಂಸಿತೇ, ನಿರ್ಬಾಧಿತವಾದ ಸ್ಥಳದಲ್ಲಿ. ಆಕಾಶದಲ್ಲಿ ಯಾವುದು ಬೇಕಾದರೂ ನಿರ್ಬಾಧಕವಾಗಿ ಸಂಚರಿಸಬಹುದು ಅದನ್ನು ಅಲ್ಲಿ ತಡೆಗಟ್ಟುವ ವಸ್ತುವು ಯಾವುದೂ ಇರುವುದಿಲ್ಲ. ಭೂಮಿಯ ಮೇಲೆ ಒಂದು ಪ್ರಾಣಿಯು ಸಂಚರಿಸುವಾಗ ದಾರಿಗೆ ಅಡ್ಡಲಾಗಿ ಸಿಕ್ಕುವ ಪರ್ವತ, ವೃಕ್ಷ, ನದಿ ಮೊದಲಾದವು ಆ ಪ್ರಾಣಿಯ ಗತಿಯನ್ನು ತಡೆಗಟ್ಟಬಲ್ಲದು. ಆದರೆ ಆಕಾಶದಲ್ಲಿ (ಪಕ್ಷ್ಯಾದಿಗಳು) ಸಂಚರಿಸುವಾಗ ಅದನ್ನು ಅಲ್ಲಿ ತಡೆಗಟ್ಟುವ ಯಾವ ವಸ್ತುವೂ ಇರುವುದಿಲ್ಲ ಆದ್ದರಿಂದ ಅತೂರ್ತೇ ಎಂದರೆ ಅಹಿಂಸಿತವಾದ, ನಿರ್ಬಾಧಕವಾದ, ತಡೆ ಇಲ್ಲದ ಎಂದರ್ಥವು. ಇಂತಹ ಆಕಾಶದಲ್ಲಿ ವಾಯುವಿನಿಂದ ಬಂಧಿಸಲ್ಪಟ್ಟ ಮೇಘಗಳಲ್ಲಿರುವ ಉದಕವನ್ನು ಈ ಸವಿತೃವು ವೃಷ್ಟಿರೂಪದಲ್ಲಿ ಕರೆಯುವನು. ಇದಕ್ಕೆ ಒಂದು ದೃಷ್ಟಾಂತವನ್ನು ಇಲ್ಲಿ ಹೇಳಿದೆ. **ಅಶ್ವಮಿವ**— ಕುದುರೆಯಂತೆ. ಕುದುರೆಯು ತನ್ನ ಮೈಮೇಲಿರುವ ಧೂಳನ್ನು ಕಂಪನದಿಂದ (ಶರೀರವನ್ನು ಅಲುಗಾಡಿಸುವುದರಿಂದ) ಕೆಳಕ್ಕೆ ಬೀಳುವಂತೆ ಮಾಡುವುದು. ಅದರಂತೆ ಮೇಘಗಳಲ್ಲಿರುವ ಉದಕಗಳನ್ನು ಸವಿತೃವು ಮಳೆಯ ಹನಿಗಳಾಗಿ ಭೂಮಿಯ ಮೇಲೆ ಬೀಳುವಂತೆ ಮಾಡುವನು ಎಂದಭಿಪ್ರಾಯವು.

**ಕಮನ್ಯಂ ಮಧ್ಯಮಾದೇವಮವಕ್ಷ್ಯತ್ । ಆದಿತ್ಯೋಽಪಿ ಸವಿತೋಚ್ಯತೇ । ತಥಾ ಚ ಹೈರಣ್ಯ-ಸ್ತೂಪೇ ಸ್ತುತೋಽರ್ಚನ್ ಹಿರಣ್ಯಸ್ತೂಪಋಷಿರಿದಂ ಸೂಕ್ತಂ ಪ್ರೋವಾಚ ॥** (ನಿ ೧೦-೩೨)

ಮಧ್ಯಮಸ್ಥಾನ ದೇವತೆಯಾದ ಈ ಸವಿತೃವನ್ನಲ್ಲದೆ ಬೇರೆ ಯಾವ ದೇವತೆಯನ್ನು ಈ ಸೂಕ್ತದಲ್ಲಿ ಋಷಿಯು ಸ್ತುತಿಸಿರಬಹುದು? ಆದಿತ್ಯನಿಗೂ ಸವಿತೃವೆಂದು ಹೆಸರು. ಹಿರಣ್ಯಸ್ತೂಪನೆಂಬ ಋಷಿಯು ಸವಿತೃದೇವನನ್ನು ಸ್ತುತಿಸುವಾಗ ಈ ಸೂಕ್ತದಲ್ಲಿರುವುದನ್ನೇ ಹೇಳಿರುವನು ಮುಂದಿನ ಋಕ್ಕಿನಲ್ಲಿ (ಈ ಸೂಕ್ತದ ೫ ನೇ ಋಕ್ಕು) ಈ ವಿಷಯದ ಪ್ರಸ್ತಾಪವಿರುವುದು.

॥ ಸಂಹಿತಾಪಾಠಃ ॥

## ಯತ್ರಾ ಸಮುದ್ರಃ ಸ್ಕಭಿತೋ ವ್ಯೌನದಪಾಂ ನಪಾತ್ಸವಿತಾ ತಸ್ಯ ವೇದ ।

## ಅತೋ ಭೂರತ ಆ ಉತ್ಥಿತಂ ರಜೋಽತೋ ದ್ಯಾವಾಪೃಥಿವೀ ಅಪ್ರಥೇತಾಂ॥

॥ ಪದಪಾಠಃ ॥

ಯತ್ರ । ಸಮುದ್ರಃ । ಸ್ಕಭಿತಃ । ವಿ । ಔನತ್ । ಅಪಾಂ । ನಪಾತ್ । ಸವಿತಾ । ತಸ್ಯ । ವೇದ ।

ಅತಃ । ಭೂಃ । ಅತಃ । ಆಃ । ಉತ್ಥಿತಂ । ರಜಃ । ಅತಃ । ದ್ಯಾವಾಪೃಥಿವೀ ಇತಿ । ಅಪ್ರಥೇತಾಂ ॥ ೨ ॥

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿನ್ನಂತರಿಕ್ಷೇ ಸಮುದ್ರಃ ಸಮುಂದನಶೀಲೋ ಮೇಘಃ ಸ್ಕಭಿತಃ ಸ್ತಂಭಿತೋ ವಾಯುಪಾಶೈರ್ಬದ್ಧಃ ಸನ್ ವ್ಯೌನತ್ ವಿಶೇಷೇಣ ಭೂಮಿಮುನತ್ತಿ ಉದಕೈಃ ಕ್ಲೇದಯತಿ ॥ ಉಂದೀ ಕ್ಲೇದನೇ । ಅಸ್ಮಾಚ್ಛಾಂದಸೇ ಲಙಿ ರೂಪಮೇತತ್ ॥ ಹೇ ಅಪಾಂ ನಪಾನ್ಮಧ್ಯಮಸ್ಥಾನ ವೈದ್ಯುತಾಗ್ನೇ ತವ ಸಂಬಂಧೀ ಸವಿತಾ ಪ್ರೇರಕೋ ದೇವಸ್ತಸ್ಯ ತತ್ಸ್ಥಾನಂ ವೇದ । ವೇತ್ತಿ । ಜಾನಾತಿ । ಅತೋಽಸ್ಮಾದೇವ ಸವಿತುರ್ಭೂರ್ಭೂಮಿರಾಸೀತ್ । ಅತ ಏವೋತ್ಥಿತಮೂರ್ಧ್ವಮೇವ ಸ್ಥಿತಂ ರಜೋಽಂತರಿಕ್ಷಮಾಃ । ಆಸೀತ್ । ಅಜಾಯತ ॥ ಅಸ್ತೇರ್ಲಙಿ ಬಹುಲಂ ಛಂದಸೀತೀಡಭಾವಃ । ಹಲ್ ಙ್ಯಾಬ್ಭ್ಯ ಇತಿ ಲೋಪಃ ॥ ಅತೋಽಸ್ಮಾದೇವ ಸವಿತುರ್ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವಪ್ರಥೇತಾಂ । ವಿಸ್ತೀರ್ಣೇ ಅಭೂತಾಂ॥

॥ ಪ್ರತಿಪದಾರ್ಥ ॥

**ಅಪಾಂ ನಪಾತ್**—ಮಧ್ಯಮಸ್ಥಾನದೇವತೆಯಾದ ಎಲೈ ಅಗ್ನಿಯೇ, ನಿನ್ನ ಸಂಬಂಧಿಯಾದ । **ಸವಿತಾ**—ಸರ್ವಪ್ರೇರಕನಾದ ಸವಿತೃವು । **ಯತ್ರ**—ಯಾವ ಅಂತರಿಕ್ಷದಲ್ಲಿ । **ಸಮುದ್ರಃ**—ಮೇಘವು । **ಸ್ಕಭಿತಃ**—ವಾಯುವಿನ ಆಧಾರದಿಂದ ದೃಢವಾಗಿ ನಿಂತಿರುತ್ತಾ । **ವ್ಯೌನತ್**—(ವೃಷ್ಟಿಯಿಂದಭೂಮಿಯನ್ನು) ನೆನೆಯಿಸುವುದೋ **ತಸ್ಯ**—ಅಂತಹ (ಅಂತರಿಕ್ಷ) ಸ್ಥಾನವನ್ನು । **ವೇದ**—ತಿಳಿಯಬಲ್ಲನು । **ಅತಃ**—ಆ ಸವಿತೃನಿಂದಲೇ । **ಭೂಃ**—ಭೂಮಿಯು ಉತ್ಪನ್ನವಾಯಿತು । **ಅತಃ**—ಈ ಸವಿತೃನಿಂದಲೇ । **ಉತ್ಥಿತಂ**—ಎತ್ತರದಲ್ಲಿರುವ । **ರಜಃ**—ಅಂತರಿಕ್ಷಲೋಕವು । **ಆಃ**—ಉಂಟಾಯಿತು । **ಅತಃ**—ಈ ಸವಿತೃವಿನಿಂದಲೇ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು (ಸ್ವರ್ಗ ಮತ್ತು ಭೂಲೋಕಗಳು) । **ಅಪ್ರಥೇತಾಂ**—(ಉತ್ಪನ್ನವಾಗಿ) ವಿಸ್ತಾರವಾಗಿ ಹರಡಿದವು.

॥ ಭಾವಾರ್ಥ ॥

ಮಧ್ಯಮಸ್ಥಾನದೇವತೆಯಾದ ಎಲೈ ಅಗ್ನಿಯೇ, ನಿನ್ನ ಸಂಬಂಧಿಯಾದ ಸವಿತೃವು ಯಾವ ಅಂತರಿಕ್ಷದಲ್ಲಿ ವಾಯುವಿನ ಸಹಾಯದಿಂದ ಇರುವ ಮೇಘವು ವೃಷ್ಟಿಯಿಂದ ಭೂಮಿಯನ್ನು ನೆನೆಯಿಸುವವೋ ಅಂತಹ ಅಂತರಿಕ್ಷದ ಸ್ವರೂಪವನ್ನು ತಿಳಿದಿರುವನು. ವಿಸ್ತಾರವಾಗಿ ಹರಡಿರುವ ಈ ದ್ಯಾವಾಪೃಥಿವಿಗಳ ಉತ್ಪತ್ತಿಗೂ ಈ ಸವಿತೃವೇ ಕಾರಣನು.

## English Translation

Where the cloud thus arrested shed moisture (on the earth) Savitri, O grandson of the waters, knew that (place); from thence proceeded the

earth, thence arose the firmament, thence the heaven and earth were spread out.

॥ ವಿಶೇಷವಿಷಯಗಳು ॥

ಸವಿತೃವು ಮಧ್ಯಮಾಗ್ನಿಗೆ ಹೇಗೆ ಸಂಬಂಧ ಎಂದರೆ— **ಆದಿತ್ಯೋಽಪಿ ಸವಿತೋಚ್ಯತೇ** (ನಿ. ೧೦-೩೨) ಎಂದು ಹೇಳಿರುವಂತೆ ಈ ಸವಿತೃವೇ ಆದಿತ್ಯನು. ಆದಿತ್ಯನಿಗೂ ಸವಿತೃವಿಗೂ ಹೆಚ್ಚು ವ್ಯತ್ಯಾಸವಿಲ್ಲ. ಉದಯಿಸುತ್ತಿರುವ ಆದಿತ್ಯನಿಗೆ ಸವಿತೃವೆಂದು ಹೆಸರು. ಅಗ್ನಿಯು ಮೂರು ರೂಪಗಳಿಂದ ಪ್ರಸಿದ್ಧನಾಗಿರುವನು. ಪೃಥ್ವಿಯಲ್ಲಿ ಅಗ್ನಿ (ಪಾರ್ಥಿವಾಗ್ನಿ) ಯೆಂದೂ, ಅಂತರಿಕ್ಷದಲ್ಲಿ ವೈದ್ಯುತಾಗ್ನಿಯೆಂದೂ (ಮಿಂಚು) ಸ್ವರ್ಗದಲ್ಲಿ ಆದಿತ್ಯನೆಂದೂ ಪ್ರಸಿದ್ಧನಾಗಿರುವನು ಆದ್ದರಿಂದ ಆದಿತ್ಯನನ್ನು ಅಥವಾ ಸವಿತೃವನ್ನು ಅಗ್ನಿಗೆ ಸಂಬಂಧಪಟ್ಟವನೆಂದು ಇಲ್ಲಿ ಹೇಳಲಾಗಿದೆ.

ಈ ಭೂಮಿಯೇ ಮೊದಲಾದ ಲೋಕಗಳು ಸೂರ್ಯನಿಂದ ಉತ್ಪನ್ನವಾದವೆಂದು ಇಲ್ಲಿ ಹೇಳಿರುವುದು ಆಧುನಿಕವಿಜ್ಞಾನಶಾಸ್ತ್ರಕ್ಕೆ (Modern Science) ಅನುಸಾರವಾಗಿಯೇ ಇರುವುದು.

॥ ಸಂಹಿತಾಪಾಠಃ ॥

ಪಶ್ಚೇದಮನ್ಯದಭವದ್ಯಜತ್ರಮಮರ್ತ್ಯಸ್ಯ ಭುವನಸ್ಯ ಭೂನಾ ।
ಸುಪರ್ಣೋ ಅಂಗ ಸವಿತುರ್ಗರುತ್ಮಾನ್ಪೂರ್ವೋ ಜಾತಃ ಸ ಉ ಅಸ್ಯಾನು ಧರ್ಮ ॥ ೩ ॥

॥ ಪದಪಾಠಃ ॥

ಪಶ್ಚಾ । ಇದಂ । ಅನ್ಯತ್ । ಅಭವತ್ । ಯಜತ್ರಂ । ಅಮರ್ತ್ಯಸ್ಯ । ಭುವನಸ್ಯ । ಭೂನಾ ।
ಸುಽಪರ್ಣಃ । ಅಂಗ । ಸವಿತುಃ । ಗರುತ್ಮಾನ್ । ಪೂರ್ವಃ । ಜಾತಃ । ಸಃ । ಊಂ ಇತಿ । ಅಸ್ಯ । ಅನು । ಧರ್ಮ ॥ ೩ ॥

। ಸಾಯಣಭಾಷ್ಯಂ ॥

ಅನ್ಯತ್ಸವಿತೃವ್ಯತಿರಿಕ್ತಮಿದಂ ದೇವತಾಂತರಂ ಪಶ್ಚಾ ಪಶ್ಚಾತ್ ॥ ಪಶ್ಚ ಪಶ್ಚಾ ಚ ಛಂದಸಿ । ಪಾ. ೫-೩-೩೩ । ಇತಿ ನಿಪಾತ್ಯತೇ ॥ ಸವಿತೃಪ್ರೇರಣಾನಂತರಮೇವ ಯಜತ್ರಂ ಯಷ್ಟವ್ಯಮಭವತ್ । ಕೇನ ಸಾಧನೇನ । ಅಮರ್ತ್ಯಸ್ಯ ಮರಣರಹಿತಸ್ಯ ಭುವನಸ್ಯ ಲೋಕಸ್ಯ ಸ್ವರ್ಗಾಖ್ಯಸ್ಯ ಸಂಬಂಧಿನಾ ಭೂನಾ ಭೂತೇನ ಸ್ವರ್ಗ ಉತ್ಪನ್ನೇನ ಸೋಮೇನೇತ್ಯರ್ಥಃ । ಯದ್ವಾ । ಅಮರ್ತ್ಯಸ್ಯ ಭುವನಸ್ಯ ಸಂಬಂಧೀದಂ ದೇವತಾಂತರಂ ಭೂನಾ ಭೂಮ್ನಾ ಬಹುತ್ವೇನ ಯುಕ್ತಂ ಯಷ್ಟವ್ಯಮಭವತ್ । ಕುತ ಇತ್ಯತ ಆಹ । ಹೇ ಅಂಗ ಸ್ತೋತಃ ಸುಪರ್ಣಃ ಶೋಭನಪತನೋ ಗರುತ್ಮಾನ್ಸೋಮಸ್ಯಾಪಹರ್ತಾ ತಾರ್ಕ್ಷ್ಯಃ ಸವಿತುಃ ಪ್ರೇರ-

**ಕಾದಸ್ಮಾದ್ದೇವಾತ್ಪೂರ್ವಃ ಪ್ರಥಮಭಾವೀ ಸಞ್ಜಾತಃ । ಅತೋ ಹೇತೋಃ ಸುಪರ್ಣೋ ಗರುತ್ಮಾನಸ್ಯ ಸವಿತುರ್ಧರ್ಮ ಧಾರಣಮನುಸೃತ್ಯ ವರ್ತತೇ । ಸವಿತೃಪ್ರೇರಣಾಧೀನತ್ವಾತ್ಸರ್ವಗತೀನಾಂ ಸೋಮಾಹರಣಮಪಿ ತದಧೀನಮಿತಿ ಸವಿತೃಪ್ರೇರಣಾನಂತರಮೇವ ಸರ್ವೇ ಸೋಮಯಾಗಾಃ ಪ್ರವರ್ತಂತ ಇತ್ಯರ್ಥಃ । ಉ ಇತಿ ಪೂರಕಃ ॥**

॥ ಪ್ರತಿಪದಾರ್ಥ ॥

**ಅನ್ಯತ್**—ಸವಿತೃವಲ್ಲದ । **ಇದಂ**– ಬೇರೇ ದೇವತೆಯು । **ಪಶ್ಚಾ** – ಅನಂತರ । **ಅಮರ್ತ್ಯಸ್ಯ**—ಮರಣರಹಿತವಾದ । **ಭುವನಸ್ಯ**—ಸ್ವರ್ಗಲೋಕದ ।**ಭೂನಾ**—ಸಂಬಂಧಿಯಾದ ಎಂದರೆ ಸ್ವರ್ಗದಲ್ಲಿ ಉತ್ಪನ್ನ ವಾದ ಸೋಮದಿಂದ । **ಯಜತ್ರಂ**—ಯಜ್ಞಾರ್ಹವಾಗಿ । **ಅಭವತ್**—ಆಯಿತು । **ಅಂಗ**– ಎಲೈ ಸ್ತೋತೃವೆ । **ಸುಪರ್ಣಃ**—ವೇಗಗಮನವುಳ್ಳ । **ಗರುತ್ಮಾನ್**—ಸ್ವರ್ಗದಿಂದ ಸೋಮವನ್ನು ತಂದ ತಾರ್ಕ್ಷ್ಯನು (ಶ್ಯೇನಪಕ್ಷಿಯು)। **ಸವಿತುಃ**—ಈ ಸವಿತೃವಿನ ಪ್ರೇರಣೆಯಿಂದ । **ಪೂರ್ವಃ**—ಮೊದಲು । **ಜಾತಃ**—ಉತ್ಪನ್ನನಾದನು ಆದ್ದರಿಂದ । **ಸಃ**—ಈ ತಾರ್ಕ್ಷ್ಯನು । **ಅಸ್ಯ**—ಈ ಸವಿತೃವಿನ । **ಧರ್ಮ ಅನು**—ಧೋರಣೆಯನ್ನನುಸರಿಸಿ ಇರುತ್ತಾನೆ । **ಉ**—ನಿಶ್ಚಯವು.

॥ ಭಾವಾರ್ಥ ॥

ಸೋಮವು ಸವಿತೃವಲ್ಲದ ಬೇರೇ ದೇವತೆಯು ಇದು ಮರಣರಹಿತರಾದವರಿರುವ ಸ್ವರ್ಗದಲ್ಲಿದ್ದುದರಿಂದ ಅದನ್ನು ಸವಿತೃವಿನ ಪ್ರೇರಣೆಯಿಂದ ತಾರ್ಕ್ಷ್ಯವು (ಶ್ಯೇನಪಕ್ಷಿಯು) ಭೂಮಿಗೆ ತಂದಿತು. ಮತ್ತು ಈ ತಾರ್ಕ್ಷ್ಯವು ಸವಿತೃವಿನಿಂದ ಉತ್ಪನ್ನವಾಗಿ ಅವನ ಪ್ರೇರಣೆಯಿಂದಲೇ ಸ್ವರ್ಗದಿಂದ ಸೋಮವನ್ನು ತಂದಿತು. ಈ ಕಾರಣದಿಂದ ಸೋಮವು ಯಜ್ಞಾರ್ಹವಾಗಿ ಆಯಿತು ಮತ್ತು ತಾರ್ಕ್ಷ್ಯವೂ ಸಹ ಸವಿತೃವಿನ ಅಧೀನದಲ್ಲಿದ್ದು ಅವನನ್ನು ಅನುಸರಿಸಿ ಇರುತ್ತದೆ.

## English Translation.

Afterwards arose this other adorable (deity), together with the host of the immortal world, the bright-winged Garutmat, born before Savitri obeyed his law.

॥ ವಿಶೇಷವಿಷಯಗಳು ॥

ಸವಿತೃದೇವನ ಪ್ರೇರಣೆಯಿಂದಲೇ ಸಕಲವೂ ಉತ್ಪನ್ನವಾಗಿ ಅವನ ಪ್ರೇರಣೆಯಿಂದಲೇ ಸಕಲವ್ಯಾಪಾರವೂ ನಡೆಯುತ್ತದೆ. ಆದ್ದರಿಂದ ಸೋಮವನ್ನು ಸ್ವರ್ಗದಿಂದ ಭೂಮಿಗೆ ತಂದ ತಾರ್ಕ್ಷ್ಯನು ಸವಿತೃವಿನಿಂದಲೇ ಉತ್ಪನ್ನನಾದನು ಮತ್ತು ಸವಿತೃವಿನ ಪ್ರೇರಣೆಯಿಂದಲೇ ಸೋಮವನ್ನು ಸ್ವರ್ಗದಿಂದ ಭೂಮಿಗೆ ತಂದನು. ಈ ರೀತಿ ತಂದ ಸೋಮವು ಯಜ್ಞಾದಿಗಳಲ್ಲಿ ಪೂಜಾರ್ಹವಾಗಿ ಆಯಿತು ಎಂದರೆ ಅದಕ್ಕೆ ಯಜ್ಞಾದಿಗಳಲ್ಲಿ ಗಣ್ಯಸ್ಥಾನವೂ, ಪ್ರಶಂಸಾರ್ಹತೆಯೂ ದೊರೆಕಿತು. ಈ ರೀತಿ ಸವಿತೃದೇವನ ಪ್ರೇರಣೆಯಿಂದಲೇ ಸೋಮಯಾಗಗಳ ಅನುಷ್ಠಾನವು ನಡೆದು ಬರುತ್ತಿರುವುದು ಎಂದು ಮುಖ್ಯಾಭಿಪ್ರಾಯವು.

|| ಸಂಹಿತಾಪಾಠಃ ||

ಗಾವ ಇವ ಗ್ರಾಮಂ ಯೂಯುಧಿರಿವಾಶ್ವಾನ್ವಾಶ್ರೇವ ವತ್ಸಂ ಸುಮನಾ ದುಹಾನಾ |
ಪತಿರಿವ ಜಾಯಾಮಭಿ ನೋ ನ್ಯೇತು ಧರ್ತಾ ದಿವಃ ಸವಿತಾ ವಿಶ್ವವಾರಃ ||೪||

|| ಪದಪಾಠಃ ||

ಗಾವಃऽಇವ | ಗ್ರಾಮಂ | ಯುಯುಧಿಃऽಇವ | ಅಶ್ವಾನ್ | ವಾಶ್ರಾऽಇವ | ವತ್ಸಂ | ಸುऽಮನಾಃ | ದುಹಾನಾ |
ಪತಿಃऽಇವ | ಜಾಯಾಂ | ಅಭಿ | ನಃ | ನಿ | ಏತು | ಧರ್ತಾ | ದಿವಃ | ಸವಿತಾ | ವಿಶ್ವऽವಾರಃ || ೪ ||

|| ಸಾಯಣಭಾಷ್ಯಂ ||

ಗಾವ ಇವ ಯಥಾರಣ್ಯೇ ಸಂಚರಂತೋ ಗಾವೋ ಗ್ರಾಮಂ ಶೀಘ್ರಮಭಿಗಚ್ಛಂತಿ | ಯುಯುಧಿರಿವ ಯಥಾ ಚ ಯುದ್ಧಾರ್ಥಮಶ್ವಾನಭಿಗಚ್ಛತಿ || ಯುಧ ಸಂಪ್ರಹಾರೇ | ಆದೃಗಮಹನಜನೇತ್ಯತ್ರೋತ್ಸರ್ಗಶ್ಛಂದಸಿ | ಪಾ. ೩-೨-೧೭೧-೨ | ಇತಿ ವಚನಾತ್ಕಿನ್ಪ್ರತ್ಯಯಃ | ಛಾಂದಸಂ ಸಾಂಹಿತಿಕಮಭ್ಯಾಸದೀರ್ಘತ್ವಂ || ಸುಮನಾಃ ಶೋಭನಮನಸ್ಕಾ ದುಹಾನಾ ದೋಗ್ಧ್ರೀ ಬಹುಪಯಸ್ಕಾ ವಾಶ್ರೇವ ಹಂಭಾರವಾತ್ಮಕಂ ಶಬ್ದಂ ಕುರ್ವತೀ ಗೌರ್ಯಥಾತ್ಮೀಯಂ ವತ್ಸಮಭಿಗಚ್ಛತಿ | ಪತಿರಿವ ಯಥಾ ಭರ್ತಾ ಜಾಯಾಂ ಸ್ವಭಾರ್ಯಾಂ ಶೀಘ್ರಮಭಿಗಚ್ಛತಿ ಏವಮೇವ ಸವಿತಾ ನೋऽಸ್ಮಾನ್ನ್ಯಭ್ಯೇತು | ನಿತರಾಮಭಿಗಚ್ಛತು | ಕೀದೃಶಃ | ದಿವೋ ದ್ಯುಲೋಕಸ್ಯ ಧರ್ತಾ ಧಾರಯಿತಾವಸ್ಥಾಪಯಿತಾ ವಾ ಅತ ಏವ ವಿಶ್ವವಾರಃ ಸರ್ವೈರ್ವರಣೀಯಃ ||

|| ಪ್ರತಿಪದಾರ್ಥ ||

**ಗಾವಇವ**—ಅರಣ್ಯದಲ್ಲಿ ಮೇಯುವುದಕ್ಕಾಗಿ ಹೋಗಿದ್ದ ಗೋವುಗಳು | **ಗ್ರಾಮಂ**—ಊರಿಗೆ ಹಿಂತಿರುಗುವಂತೆಯೂ | **ಯುಯುಧಿರಿವ**—ಯುದ್ಧಾರ್ಥವಾಗಿ ಹೊರಟಿರುವ ಯೋಧನು ! **ಅಶ್ವಾನ್**—ತನ್ನ ಕುದುರೆಗಳ ಬಳಿಗೆ ಹೋಗುವಂತೆಯೂ | **ಸುಮನಾಃ**—ಉಪಕಾರಬುದ್ಧಿಯುಳ್ಳುದೂ | **ದುಹಾನಾ**—ಬಹಳವಾಗಿ ಹಾಲನ್ನು ಕರೆಯುವುದೂ | **ವಾಶ್ರೇವ**—ಕೂಗುತ್ತಿರುವುದೂ ಆದ ಹಸುವು | **ವತ್ಸಂ**—ತನ್ನ ಕರುವಿನ ಬಳಿಗೆ ಕೂಗಿಕೊಂಡು ಹೋಗುವಂತೆಯೂ | **ಪತಿರಿವ**—ಪತಿಯಾದ ಪುರುಷನು | **ಜಾಯಾಂ**—ತನ್ನ ಪತ್ನಿಯ ಬಳಿಗೆ ಶೀಘ್ರವಾಗಿ ಹೋಗುವಂತೆಯೂ | **ದಿವಃ**—ದ್ಯುಲೋಕದ | **ಧರ್ತಾ**—ಧಾರಕನಾದ | **ವಿಶ್ವವಾರಃ**—ಆದ್ದರಿಂದ ಸರ್ವರಿಗೂ ಬೇಕಾದವನಾದ | **ಸವಿತಾ**—ಈ ಸವಿತೃದೇವನು | **ನಃ**—ನಮ್ಮನ್ನು | **ನಿ ಅಭಿ ಏತು**—(ಆದರಾತಿಶಯದಿಂದ) ಸಮೀಪಿಸಲಿ.

| ಭಾವಾರ್ಥ ||

ಅರಣ್ಯದಲ್ಲಿ ಮೇಯುವುದಕ್ಕಾಗಿ ಹೋಗಿದ್ದ ಗೋವುಗಳು ಸಾಯಂಕಾಲದಲ್ಲಿ ಊರಿಗೆ ಬೇಗನೆ ಹಿಂತಿರುಗುವಂತೆಯೂ, ಯುದ್ಧಕ್ಕಾಗಿ ಹೊರಟಿರುವ ಯುದ್ಧಭಟನು ತನ್ನ ಕುದುರೆಗಳ ಬಳಿಗೆ ಹೋಗುವಂತೆಯೂ, ಉಪಕಾರ ಬುದ್ಧಿಯುಳ್ಳುದೂ ಬಹಳವಾಗಿ ಹಾಲನ್ನು ಕರೆಯುವುದೂ ತನ್ನ ಕರುವಿಗಾಗಿ ಆತುರದಿಂದ ಕೂಗುತ್ತಿರುವುದೂ ಆದ ಹಸುವು ತನ್ನ ಕರುವಿನ ಬಳಿಗೆ ಆತುರದಿಂದ ಹೋಗುವಂತೆಯೂ, ಪುರುಷನು ತನ್ನ ಪ್ರಿಯಪತ್ನಿಯ ಬಳಿಗೆ ಆಸಕ್ತಿಯಿಂದ ಹೋಗುವಂತೆಯೂ, ದ್ಯುಲೋಕದ ಧಾರಕನೂ (ಪೋಷಕನೂ) ಸರ್ವರಿಗೂ ಬೇಕಾದವನೂ ಆದ ಈ ಸವಿತೃದೇವನು ನಮ್ಮ ಬಳಿಗೆ ಶೀಘ್ರವಾಗಿ ಅಥವಾ ಅನುಗ್ರಹಾರ್ಥವಾಗಿ ಬರಲಿ.

English Translation

As cattle hasten to the village, as the warrior to his horses, as affectionate milk-giving cows to the calf, as a husband to his wife, so may Savitri, the upholder of the sky, the desired of all, hasten to us

|| ಸಂಹಿತಾಪಾಠಃ ||

ಹಿರಣ್ಯಸ್ತೂಪಃ ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ |
ಏವಾ ತ್ವಾರ್ಚನ್ನವಸೇ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ ಜಾಗರಾಹಂ || ೫ ||

|| ಪದಪಾಠಃ ||

ಹಿರಣ್ಯಽಸ್ತೂಪಃ | ಸವಿತಃ | ಯಥಾ | ತ್ವಾ | ಆಂಗಿರಸಃ | ಜುಹ್ವೇ | ವಾಜೇ | ಅಸ್ಮಿನ್ |
ಏವ | ತ್ವಾ | ಅರ್ಚನ್ | ಅವಸೇ | ವಂದಮಾನಃ | ಸೋಮಸ್ಯಽಇವ | ಅಂಶುಂ | ಪ್ರತಿ | ಜಾಗರ | ಅಹಂ || ೫ ||

|| ಸಾಯಣಭಾಷ್ಯಂ ||

ಹೇ ಸವಿತಃ ಪ್ರೇರಕ ತ್ವಾ ತ್ವಾಮಾಂಗಿರಸೋಽಂಗಿರಸಃ ಪುತ್ರೋ ಹಿರಣ್ಯಸ್ತೂಪೋ ಮಮ ಪಿತಾಸ್ಮಿನ್ವಾಜೇಽನ್ನೇ ನಿಮಿತ್ತಭೂತೇ ಸತಿ ಯಥಾ ಜುಹ್ವೇ ಆಹೂತವಾನ್ ಏವೈವಮರ್ಚನ್ನೇತತ್ಸಂಜ್ಞೋಽಹಂ ತ್ವಾ ತ್ವಾಮವಸೇಽವನಾಯ ರಕ್ಷಣಾರ್ಥಂ ವಂದಮಾನಃ ಸ್ತುವನ್ ಆಹ್ವಯಾಮೀತಿ ಶೇಷಃ| ಆಹೂಯ ಚ ಸೋಮಸ್ಯೇವಾಂಶುಂ ಯಥಾ ಸೋಮಲತಾಂ ಪ್ರತಿ ಯಜಮಾನಾ ಜಾಗ್ರತಿ ಯಾಗಪರ್ಯಂತಂ ತದ್ರಕ್ಷಣೇ ಪ್ರಬುದ್ಧಾ ವರ್ತಂತೇ ತಥಾಹಂ ತ್ವತ್ಪರಿಚರ್ಯಾಂ ಪ್ರತಿ ಜಾಗರ | ಜಾಗರ್ಮಿ || ಜಾಗರ್ತೇರ್ಣಲ್ಯುತ್ತಮೈಕವಚನೇ ರೂಪಂ || ಅತ್ರ ನಿರುಕ್ತಂ | ಹಿರಣ್ಯಸ್ತೂಪೋ ಹಿರಣ್ಯಮಯಸ್ತೂಪೋ

**ಹಿರಣ್ಯಮಯಃ ಸ್ತೂಪೋಽಸ್ಯೇತಿ ವಾ । ಸ್ತೂಪಃ ಸ್ತ್ಯಾಯತೇಃ ಸಂಘಾತಃ । ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇಽಸ್ಮಿನ್ನೇವಂ ತ್ವಾರ್ಚನ್ನವನಾಯ ವಂದಮಾನಃ ಸೋಮಸ್ಯೇವಾಂಶುಂ ಪ್ರತಿಜಾಗರ್ಮ್ಯಹಂ । ನಿ. ೧೦-೩೩ । ಇತಿ ॥**

॥ ಪ್ರತಿಪದಾರ್ಥ ॥

**ಸವಿತಃ**—ಸರ್ವಪ್ರೇರಕನಾದ ಎಲೈ ಸವಿತೃವೇ । **ಆಂಗಿರಸಃ**—ಅಂಗಿರಸಋಷಿಯ ಪುತ್ರನಾದ । **ಹಿರಣ್ಯಸ್ತೂಪಃ**—ಹಿರಣ್ಯಸ್ತೂಪನೆಂಬ ನನ್ನ ತಂದೆಯು । **ಅಸ್ಮಿನ್ ವಾಜೇ**—ಅನ್ನಾದ್ಯಾಹಾರ ನಿಮಿತ್ತವಾಗಿ । **ಯಥಾ**—ಯಾವರೀತಿ । **ತ್ವಾಂ**—ನಿನ್ನನ್ನು । **ಜುಹ್ವೇ**—ಪ್ರಾರ್ಥಿಸಿ ಕರೆದನೋ । **ಏವ**—ಅದೇರೀತಿಯಾಗಿ । **ಅರ್ಚನ್**—ಅರ್ಚನ್ ಎಂಬ ಹೆಸರಿನಿಂದ ಪ್ರಸಿದ್ಧನಾದ ನಾನು । **ತ್ವಾ**—ನಿನ್ನನ್ನು । **ಅವಸೇ**—ರಕ್ಷಣಾರ್ಥವಾಗಿ । **ವಂದಮಾನಃ**– ನಿನ್ನನ್ನು ಸ್ತುತಿಸುತ್ತಾ ಆಹ್ವಾನಮಾಡುತ್ತೇನೆ (ಆಹ್ವಾನಾನಂತರ) । **ಸೋಮಸ್ಯೇವ ಅಂಶುಂ**—ಯಜ್ಞಮಾಡುವ ಯಜಮಾನರು ಯಜ್ಞದಲ್ಲಿ ಅವಶ್ಯಕವಾದ ಸೋಮಲತೆಗಳನ್ನು ಯಾವ ರೀತಿ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾರೆಯೋ ಅದರಂತೆ । **ಅಹಂ**—ನಾನು । **ಪ್ರತಿ**—ನಿನ್ನ ಶುಶ್ರೂಷೆಯ ವಿಷಯದಲ್ಲಿ । **ಜಾಗರ**—ಎಚ್ಚರಿಕೆಯಿಂದ ಇರುತ್ತೇನೆ.

॥ ಭಾವಾರ್ಥ ॥

ಸರ್ವಪ್ರೇರಕನಾದ ಎಲೈ ಸವಿತೃದೇವನೇ, ಅಂಗಿರಸಋಷಿಯ ಪುತ್ರನಾದ ಹಿರಣ್ಯಸ್ತೂಪನೆಂಬ ನನ್ನತಂದೆಯು ಅನ್ನಾದ್ಯಾಹಾರ ನಿಮಿತ್ತವಾಗಿ ನಿನ್ನನ್ನು ಪ್ರಾರ್ಥಿಸಿ ಕರೆದಂತೆ ನಾನೂ ನನ್ನ ರಕ್ಷಣೆಗಾಗಿ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇನೆ. ಯಜ್ಞದಲ್ಲಿ ಯಜಮಾನರು ಸೋಮಲತೆಗಳನ್ನು ಯಾವ ರೀತಿ ಬಹುಎಚ್ಚರಿಕೆಯಿಂದ ಕಾಪಾಡುವರೋ ಅದರಂತೆ ನಾನೂ ನಿನ್ನ ಶುಶ್ರೂಷೆಯ (ಸ್ತುತಿಸುವ) ವಿಷಯದಲ್ಲಿ ಬಹು ಎಚ್ಚರಿಕೆಯಿಂದ ಇರುತ್ತೇನೆ.

English Translation

As Hiranyastupa, the Angirasa, Summoned you to this food, so I, praising you for your protection, watch before you as (worshippers) watch before the filment of the Soma.

॥ ವಿಶೇಷವಿಷಯಗಳು ॥

ಪ್ರಸಿದ್ಧ ಅಂಗಿರಾಋಷಿಯ ಪುತ್ರನಾದ ಹಿರಣ್ಯಸ್ತೂಪನೆಂಬ ಋಷಿಗೆ ಈ ಸೂಕ್ತದ್ರಷ್ಟೃವಾದ ಅರ್ಚನ್ ಎಂಬ ಋಷಿಯು ಪುತ್ರನು. ಎಂದರೆ ಅಂಗಿರಾ ಋಷಿಗೆ ಅರ್ಚನ್ ಋಷಿಯು ಮೊಮ್ಮಗನು. ಈ ಋಷಿಯು ಪ್ರಕೃತಋಕ್ಕಿನಲ್ಲಿ ತನ್ನ ತಂದೆಯಾದ ಹಿರಣ್ಯಸ್ತೂಪಋಷಿಯು ಋಗ್ವೇದಸಂಹಿತೆಯ ೧ನೆಯ ಮಂಡಲದ ೩೫ನೇ ಸೂಕ್ತದಲ್ಲಿ ಸವಿತೃದೇವತೆಯನ್ನು ಸ್ತುತಿಸಿರುವುದನ್ನು ಇಲ್ಲಿ ಪ್ರಸ್ತಾಪಮಾಡಿದಾನೆ. ಅಂಗಿರಾ ಋಷಿಯ ವಂಶವು ಬಹುದೊಡ್ಡದು ಮತ್ತು ಪ್ರಸಿದ್ಧವಾದುದು. ಋಗ್ವೇದದಲ್ಲಿ ಸೂಕ್ತ ದ್ರಷ್ಟೃಗಳಾಗಿರುವ ಈ ಋಷಿಯ ವಂಶದವರು ೪೪ ಮಂದಿ ಇರುವರು. ಪ್ರಕೃತಸೂಕ್ತದ ದ್ರಷ್ಟೃವಾದ ಅರ್ಚನ್ ಎಂಬ ಋಷಿಯ ತಂದೆಯಾದ ಹಿರಣ್ಯಸ್ತೂಪನು ಇವರಲ್ಲಿ ಒಬ್ಬನು. ಈ ಹಿರಣ್ಯಸ್ತೂಪ ಋಷಿದೃಷ್ಟವಾದ ಸೂಕ್ತಗಳು—೧ನೇ ಮಂಡಲದಲ್ಲಿ ೩೧–೩೫

ಸೂಕ್ತಗಳು (೭೧ ಋಕ್ಕುಗಳು) ; ೯ನೇ ಮಂಡಲದಲ್ಲಿ ೪ನೇ ಸೂಕ್ತ (೧೦ ಋಕ್ಕುಗಳು) ; ೭೯ನೇ ಸೂಕ್ತ (೧೦ಋಕ್ಕು ಗಳು); ಅಂತು ಒಟ್ಟು ೭ ಸೂಕ್ತಗಳು (ಒಟ್ಟು ೯೧ ಋಕ್ಕುಗಳು) ಪ್ರಕೃತಸೂಕ್ತದ ಅರ್ಚನ್ ಎಂಬ ಋಷಿದೃಷ್ಟವಾದ ಸೂಕ್ತವು ಇದೊಂದೇ ಎಂದರೆ ೫ ಋಕ್ಕುಗಳುಳ್ಳ ೧೦ನೇ ಮಂಡಲದ ೧೪೯ನೇ ಸೂಕ್ತಮಾತ್ರ.

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ಹಿರಣ್ಯಸ್ತೂಪೋ ಹಿರಣ್ಮಯಸ್ತೂಪೋ ಹಿರಣ್ಮಯಃ ಸ್ತೂಪೋऽಸ್ಯೇ ತಿ ವಾ। ಸ್ತೂಪಃ ಸ್ತ್ಯಾಯತೇಃ ಸಂಘಾತಃ । ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ನೇವಂ ತ್ವಾರ್ಚನ್ನವನಾಯ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ ಜಾಗರ್ಮ್ಯಹಂ ॥**

(ನಿ. ೧೦–೩೩)

ಹಿರಣ್ಯ ಎಂದರೆ ಚಿನ್ನದ ಅಥವಾ ಚಿನ್ನದಂತೆ ಥಳಥಳಿಸುವ , ಸ್ತೂಪವೆಂದರೆ ಕೇಶಸಮೂಹ, ಜುಟ್ಟು. ಸ್ತ್ಯೈ— ಒಂದಾಗಿ ಸೇರಿಸು ಎಂಬ ಧಾತುವಿನಿಂದ ಸ್ತೂಪಶಬ್ದವು ನಿಷ್ಪನ್ನವಾಗಿದೆ. ಶಿರಸ್ಸಿನಲ್ಲಿರುವ ಕೇಶಗಳನ್ನು ಒಟ್ಟಾಗಿ ಸೇರಿಸಿ ಗಂಟುಹಾಕಿರುವುದಕ್ಕೆ ಜುಟ್ಟೆಂದು ಹೆಸರು. ಸ್ತೂಪವೆಂದರೆ ಜುಟ್ಟು. ಈ ಹಿರಣ್ಯಸ್ತೂಪನೆಂಬ ಋಷಿಗೆ ಇದ್ದ ಜುಟ್ಟು ಚಿನ್ನದಂತೆ ಥಳಥಳಿಸುತ್ತಿದ್ದುದರಿಂದ ಈ ಋಷಿಗೆ ಈ ಹೆಸರು ಬಂದಿದೆ. ಎಲೈ ಸವಿತೃವೇ, ಈಗ ನಾನು ಈ ಯಜ್ಞದಲ್ಲಿ ಸಿದ್ಧಪಡಿಸಿರುವ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇನೆ. ಯಜ್ಞ ಮಾಡುವಾಗ ಯಜಮಾನರು ಸೋಮಲತೆಗಳನ್ನು ಬಹು ಎಚ್ಚರಿಕೆಯಿಂದ ನೋಡಿಕೊಳ್ಳುವರಷ್ಟೆ. ಅದರಂತೆ ನಾನು ನಿನ್ನನ್ನು ರಕ್ಷಣಾರ್ಥವಾಗಿ ಸ್ತುತಿಸಿ ಪಾರ್ಥಿಸುವ ವಿಷಯದಲ್ಲಿ ಬಹು ಜಾಗರೂಕನಾಗಿರುತ್ತೇನೆ ಎಂದು ಇಲ್ಲಿ ಋಷಿಯು ಹೇಳಿರುವನು.

## ನೂರ ಐವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸಮಿದ್ಧ ಇತಿ ಪಂಚರ್ಚಂ ದ್ವಾವಿಂಶಂ ಸೂಕ್ತಂ ವಸಿಷ್ಠಪುತ್ರಸ್ಯ ಮೃಳೀಕಸ್ಯಾರ್ಷಮಾಗ್ನೇಯಂ । ಚತುರ್ಥೀಪಂಚಮ್ಯಾವುಪರಿಷ್ಟಾಜ್ಜ್ಯೋತಿಷೀ ತ್ರಿದ್ವಾದಶಾಷ್ಟಕವತ್ಯೌ । ಅಕ್ಷರವ್ಯೂಹೇನ ಚತುರ್ಥೀ ಜಗತೀ ವಾ । ಶಿಷ್ಟಾ ಬೃಹತ್ಯಃ । ತಥಾ ಚಾನುಕ್ರಾಂತಂ । ಸಮಿದ್ಧೋ ಮೃಳೀಕೋ ವಾಸಿಷ್ಠ ಆಗ್ನೇಯಂ ಬಾರ್ಹತಮಂತ್ಯೇ ಉಪರಿಷ್ಟಾಜ್ಜ್ಯೋತಿಷೀ ಜಗತ್ಯುಪಾಂತ್ಯಾ ವೇತಿ ॥ ಗತೋ ವಿನಿಯೋಗಃ ॥**

ಅನುವಾದವು—**ಸಮಿದ್ಧಃ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಇಪ್ಪತ್ತೆರಡನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠಋಷಿಯ ಪುತ್ರನಾದ ಮೃಳೀಕನೆಂಬುವನು ಋಷಿಯು ; ಅಗ್ನಿಯು ದೇವತೆಯು ; ಈ ಸೂಕ್ತದ ನಾಲ್ಕು ಮತ್ತು ಐದನೆಯ ಋಕ್ಕುಗಳು ಉಪರಿಷ್ಟಾಜ್ಜ್ಯೋತಿಃ ಎಂಬ ಛಂದಸ್ಸಿನದು, ಈ ಛಂದಸ್ಸಿನ ಋಕ್ಕುಗಳಲ್ಲಿ ನಾಲ್ಕು ಪಾದಗಳಿದ್ದು ಮೊದಲ ಮೂರು ಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ ಕೊನೆಯ ಪಾದದಲ್ಲಿ ಎಂಟು ಅಕ್ಷರಗಳೂ ಇರುವವು. ಅಕ್ಷರಸಂಖ್ಯೆಯ ಪ್ರಕಾರ ಈ ಸೂಕ್ತದ ನಾಲ್ಕನೆಯ ಋಕ್ಕು ಜಗತೀಛಂದಸ್ಕವೂ ಆಗಬಹುದು ಉಳಿದ ಋಕ್ಕುಗಳು ಬೃಹತೀಛಂದಸ್ಕವು ಅನುಕ್ರಮಣಿಕೆ

ಯಲ್ಲಿ **ಸಮಿದ್ಧೋ ಮೃಳೀಕೋ ವಸಿಷ್ಠ ಆಗ್ನೇಯಂ ಬಾರ್ಹತಮಂತ್ಯೇ ಉಪರಿಷ್ಟಾಜ್ಜ್ಯೋತಿಷೀ ಜಗತ್ಯ್ಯ-ಪಾಂತ್ಯಾ ವಾ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ - ೧೫೦

ಮಂಡಲ—೧೦ ॥ ಅನುವಾಕ—೧೧ ॥ ಸೂಕ್ತ—೧೫೦ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ— ೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಮೃಳೀಕೋ ವಾಸಿಷ್ಠಃ ॥
॥ ದೇವತಾ—ಅಗ್ನಿಃ ॥
॥ ಛಂದಃ—೧-೩. ಬೃಹತೀ । ೪. ಉಪರಿಷ್ಟಾಜ್ಜ್ಯೋತಿರ್ಜಗತೀ ವಾ ।
೫. ಉಪರಿಷ್ಟಾಜ್ಜ್ಯೋತಿಃ ॥

॥ ಸಂಹಿತಾಪಾಠಃ ॥

ಸಮಿದ್ಧಶ್ಚಿತ್ಸಮಿಧ್ಯಸೇ ದೇವೇಭ್ಯೋ ಹವ್ಯವಾಹನ ।
ಆದಿತ್ಯೈ ರುದ್ರೈರ್ವಸುಭಿರ್ನ ಆ ಗಹಿ ಮೃಳೀಕಾಯ ನ ಆ ಗಹಿ ॥ ೧ ॥

॥ ಪದಪಾಠಃ ॥

ಸಂಽಇದ್ಧಃ । ಚಿತ್ । ಸಂ । ಇಧ್ಯಸೇ । ದೇವೇಭ್ಯಃ । ಹವ್ಯಽವಾಹನ ।
ಆದಿತ್ಯೈಃ । ರುದ್ರೈಃ । ವಸುಽಭಿಃ । ನಃ । ಆ । ಗಹಿ । ಮೃಳೀಕಾಯ । ನಃ । ಆ । ಗಹಿ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಹವ್ಯವಾಹನ ಹವ್ಯಾನಾಂ ಹವಿಷಾಂ ವೋಢರಗ್ನೇ ಸಮಿದ್ಧಶ್ಚಿತ್ ಸಂದೀಪ್ತೋಽಪಿ ದೇವೇಭ್ಯೋ ಯಾಗಾರ್ಥಂ ಸಮಿಧ್ಯಸೇ । ಪುನರಪ್ಯೃತ್ವಿಗ್ಭಿಃ ಸಮಿದ್ಭಿಃ ಸಂದೀಪ್ಯಸೇ । ಸ ತ್ವಮಾದಿತ್ಯೈ-ರಾದಿತ್ಯಾದಿಭಿಸ್ತ್ರಿಭಿರ್ಗಣೈಃ ಸಾರ್ಧಂ ನೋಽಸ್ಮಾನಾ ಗಹಿ । ಆಗಚ್ಛ । ತಥಾ ನೋಽಸ್ಮಾಕಂ ಮೃಳೀಕಾಯ ಸುಖಾಯ ತದರ್ಥಮಪ್ಯಾ ಗಹಿ । ಯದ್ವಾ । ಮೃಳೀಕಾಯೈತತ್ಸಂಜ್ಞಾಯ ನೋ ಮಹ್ಯಮೃಷಯೇ ಶ್ರೇಯಾಂಸಿ ಕರ್ತುಮಾಗಚ್ಛ ॥**

॥ ಪ್ರತಿಪದಾರ್ಥ ॥

**ಹವ್ಯವಾಹನ**—ದೇವತೆಗಳಿಗೆ ಹವಿಸ್ಸನ್ನು ವಹಿಸುವ ಎಲೈ ಅಗ್ನಿಯೇ । **ಸಮಿದ್ಧಃ ಚಿತ್**—ನೀನು ಚೆನ್ನಾಗಿ ಪ್ರಜ್ವಲಿಸಲ್ಪಟ್ಟವನಾದರೂ । **ದೇವೇಭ್ಯಃ**—ಯಜ್ಞದಲ್ಲಿ ದೇವತೆಗಳ ಅನುಕೂಲಕ್ಕಾಗಿ । **ಸಂ ಇಧ್ಯಸೇ**—ಋತ್ವಿಗ್ಜನರಿಂದ ಮತ್ತೆ ಪ್ರಜ್ವಲಿತನಾಗಿರುತ್ತೀಯೆ ಅಂತಹ ನೀನು । **ಆದಿತ್ಯೈಃ**—ದ್ವಾದಶಾದಿತ್ಯರು

ಗಳಿಂದಲೂ | **ರುದ್ರೈಃ**—ಏಕಾದಶರುದ್ರರು ಗಳಿಂದಲೂ | **ವಸುಭಿಃ**—ಅಷ್ಟವಸುಗಳಿಂದಲೂ | **ನಃ**—ನಮ್ಮ ಸಮಿಾಪಕ್ಕೆ | **ಆ ಗಹಿ**—ದಯಮಾಡು | **ನಃ**—ನಮ್ಮ | **ಮೃಳೀಕಾಯ**—ಸುಖಾರ್ಥವಾಗಿ ಅಥವಾ ಮೃಳೀಕ ನೆಂಬ ಹೆಸರಿನ ನನ್ನ ಅನುಗ್ರಹಾರ್ಥವಾಗಿ | **ಆ ಗಹಿ**—ನನ್ನ ಸಮಿಾಪಕ್ಕೆ ದಯಮಾಡು.

|| **ಭಾವಾರ್ಥ** ||

ದೇವತೆಗಳಿಗೆ ಹವಿಸ್ಸನ್ನು ವಹಿಸುವ ಎಲೈ ಅಗ್ನಿಯೇ. ನೀನು ಚೆನ್ನಾಗಿ ಪ್ರಜ್ವಲನಗೊಳಿಸಲ್ಪಟ್ಟು ಉರಿಯು ತ್ತಿರುವವನಾದರೂ ಈಗ ಈ ಯಜ್ಞದಲ್ಲಿ ದೇವತೆಗಳ ಪ್ರೀತ್ಯರ್ಥವಾಗಿ ಋತ್ವಿಗ್ಜನರಿಂದ ಮತ್ತೆ ಪ್ರಕಾಶಮಾನನಾಗಿ ಬೆಳಗುವಂತೆ ಪ್ರಜ್ವಲಗೊಳಿಸಲ್ಪಟ್ಟಿದ್ದೀಯೆ (ಹೊತ್ತಿಸಲ್ಪಟ್ಟಿರುತ್ತೀಯೆ). ಇಂತಹ ನೀನು ವಸು, ರುದ್ರ ಆದಿತ್ಯರೆಂಬ ಮೂರುಗಣಗಳಿಂದ ಕೂಡಿದ ದೇವತೆಗಳೊಡನೆ ಯಾಗಾರ್ಥವಾಗಿ ನಮ್ಮಬಳಿಗೆ ಬಾ ಮತ್ತು ನಮಗೆ ಸುಖವನ್ನುಂಟು ಮಾಡುವುದಕ್ಕಾಗಿಯೂ ಅಥವಾ ಮೃಳೀಕನೆಂಬ ನನಗೆ ಅನುಗ್ರಹ ಮಾಡುವುದಕ್ಕಾಗಿಯೂ ನಮ್ಮ ಬಳಿಗೆ ದಯಮಾಡು.

## English Translation.

Berrer of oblations, being kindled you burn for the gods; come to us with the Adityas, the Rudras, the Vasus; come for our felicity.

|| **ಸಂಹಿತಾಪಾಠಃ** ||

**ಇಮಂ ಯಜ್ಞಮಿದಂ ವಚೋ ಜುಜುಷಾಣ ಉಪಾಗಹಿ |**

**ಮರ್ತಾಸಸ್ತ್ವಾ ಸಮಿಧಾನ ಹವಾಮಹೇ ಮೃಳೀಕಾಯ ಹವಾಮಹೇ ||೨||**

|| **ಪದಪಾಠಃ** ||

**ಇಮಂ | ಯಜ್ಞಂ | ಇದಂ | ವಚಃ | ಜುಜುಷಾಣಃ | ಉಪಽಆಗಹಿ |**

**ಮರ್ತಾಸಃ | ತ್ವಾ | ಸಂಽಇಧಾನ | ಹವಾಮಹೇ | ಮೃಳೀಕಾಯ | ಹವಾಮಹೇ || ೨ ||**

|| **ಸಾಯಣಭಾಷ್ಯಂ** ||

**ಹೇ ಅಗ್ನೇ ಇಮಮಸ್ಮಾಭಿಃ ಕ್ರಿಯಮಾಣಂ ಪುರೋವರ್ತಿನಂ ಯಜ್ಞಮಿದಂ ವಚಃ ಸ್ತೋತ್ರಂ ಚ ಜುಜುಷಾಣಃ ಸೇವಮಾನ ಉಪಾಗಹಿ | ಉಪಾಗಚ್ಛ | ಹೇ ಸಮಿಧಾನ ಸಮಿಧ್ಯಮಾನ ಮರ್ತಾಸೋ ಮಾರ್ತಾ ಮನುಷ್ಯಾಸ್ತ್ವಾ ತ್ವಾಂ ಹವಾಮಹೇ | ಆಹ್ವಯಾಮಹೇ | ಮೃಳೀಕಾಯ ಸುಖಾಯೈತತ್ಸಂ-ಜ್ಞಾಯ ವರ್ಷಯೇ ತ್ವಾಮೇವಾಹ್ವಯಾಮಹೇ ||**

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಇಮಂ**—ನಾವು ಮಾಡುತ್ತಿರುವ | **ಯಜ್ಞಂ**—ಈ ಯಜ್ಞವನ್ನೂ | **ಇದಂ ವಚಃ**—ಈ ಸ್ತೋತ್ರವನ್ನೂ | **ಜುಜುಷಾಣಃ**—ಸೇವಿಸುತ್ತಾ (ಸ್ವೀಕರಿಸುತ್ತ) | **ಉಪಾಗಹಿ**—ನಮ್ಮ ಸಮೀಪಕ್ಕೆ ದಯ ಮಾಡು | **ಸಮಿಧಾನ**—ಪ್ರಜ್ವಲಿತನಾದ ಎಲೈ ಅಗ್ನಿಯೇ | **ಮರ್ತಾಸಃ**—ಮಾನವರಾದ ನಾವು | **ತ್ವಾ**—ನಿನ್ನನ್ನು | **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ | **ಮೃಳೀಕಾಯ**—ಸುಖಾರ್ಥವಾಗಿ ಅಥವಾ ಮೃಳೀಕನಾದ ನನಗೆ ಸುಖವನ್ನುಂಟುಮಾಡುವುದಕ್ಕಾಗಿ | **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

। ಭಾವಾರ್ಥ ॥

ಎಲೈ ಅಗ್ನಿಯೇ, ಈಗ ನಾವು ಮಾಡುತ್ತಿರುವ ಯಜ್ಞವನ್ನು ಸೇವಿಸುವ ಇಚ್ಛೆಯುಳ್ಳವನಾಗಿ ನಮ್ಮ ಸಮೀಪಕ್ಕೆ ದಯಮಾಡು ಪ್ರಜ್ವಲಿತನಾದ ಎಲೈ ಅಗ್ನಿಯೇ, ಮಾನವರಾದ ನಾವು ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ. ಮೃಳೀಕನೆಂಬ ನನಗೆ ಸುಖವನ್ನುಂಟುಮಾಡುವುದಕ್ಕಾಗಿ ಪ್ರಾರ್ಥಿಸಿ ಕರೆಯುತ್ತೇವೆ.

English Translation

Being gratified by this sacrifice, this praise, approach; we mortals invoke you, blazing (Agni), we invoke you for felicity.

॥ ಸಂಹಿತಾಪಾಠಃ ॥

**ತ್ವಾಮು ಜಾತವೇದಸಂ ವಿಶ್ವವಾರಂ ಗೃಣೇ ಧಿಯಾ ।**

**ಅಗ್ನೇ ದೇವಾँ ಆ ವಹ ನಃ ಪ್ರಿಯವ್ರತಾನ್ಮೃಳೀಕಾಯ ಪ್ರಿಯವ್ರತಾನ್॥೩॥**

॥ ಪದಪಾಠಃ ॥

**ತ್ವಾಂ । ಊಂ ಇತಿ । ಜಾತಽವೇದಸಂ । ವಿಶ್ವಽವಾರಂ । ಗೃಣೇ । ಧಿಯಾ ।**

**ಅಗ್ನೇ । ದೇವಾನ್ । ಆ । ವಹ । ನಃ । ಪ್ರಿಯಽವ್ರತಾನ್ । ಮೃಳೀಕಾಯ । ಪ್ರಿಯಽವ್ರತಾನ್ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ವಿಶ್ವವಾರಂ ವಿಶ್ವೈಃ ಸರ್ವೈರ್ವರಣೀಯಂ ಜಾತವೇದಸಂ ಜಾತಾನಾಂ ವೇದಿತಾರಂ ಜಾತಪ್ರಜ್ಞಂ ಜಾತಧನಂ ವಾ ತ್ವಾಮು ತ್ವಾಮೇವ ಧಿಯಾ ಸ್ತುತ್ಯಾ ಗೃಣೇ । ಸ್ತೌಮಿ ॥ ಗೄ ಶಬ್ದೇ । ಕ್ರ್ಯಾದಿಕಃ । ಪ್ವಾದಿತ್ವಾದ್ಧ್ರಸ್ವಃ ॥ ಪ್ರಿಯವ್ರತಾನ್ ಪ್ರಿಯಾಣಿ ವ್ರತಾನಿ ಕರ್ಮಾಣಿ ಯೇಷಾಂ ತಾದೃಶಾನ್ದೇವಾನ್ನೋಽಸ್ಮದರ್ಥಮಾ ವಹ । ಆನಯ । ಅಸ್ಮದ್ಯಜ್ಞಂ ಪ್ರಾಪಯ । ಮೃಳೀಕಾಯ ಸುಖಾರ್ಥಮೇತತ್ಸಂಜ್ಞಾಯ ವಾ ಮಹ್ಯಂ ಪ್ರಿಯವ್ರತಾಂಸ್ತಾನೇವಾವಹ ॥**

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೇ, । **ವಿಶ್ವವಾರಂ**— ಸರ್ವರಿಂದಲೂ ಅಪೇಕ್ಷಿಸಲ್ಪಡುವವನೂ । **ಜಾತವೇದಸಂ** — ಉತ್ಪನ್ನವಾದ ಸಮಸ್ತ ವಸ್ತುಜಾತವನ್ನೂ ತಿಳಿದವನೂ ಅಥವಾ ಧನವುಳ್ಳವನೂ ಆದ । **ತ್ವಾಂ ಉ**— ನಿನ್ನನ್ನೇ । **ಧಿಯಾ**— ಸ್ತುತಿಯಿಂದ । **ಗೃಣೇ**— ಸ್ತುತಿಸುತ್ತೇನೆ । **ಪ್ರಿಯವ್ರತಾನ್**— ಮನುಷ್ಯರಿಗೆ ಹಿತಕರವಾದ ಕರ್ಮಗಳನ್ನು ಮಾಡುವ । **ದೇವಾನ್**— ದೇವತೆಗಳನ್ನು । **ನಃ**— ನಮಗೋಸ್ಕರ । **ಆ ವಹ**— ಇಲ್ಲಿಗೆ ಕರೆದುಕೊಂಡು ಬಾ । **ಮೃಳೀಕಾಯ**— ನಮ್ಮ ಸುಖಾರ್ಥವಾಗಿ । **ಪ್ರಿಯವ್ರತಾನ್**— ನಮಗೆ ಹಿತಕಾರಿಗಳಾದ ದೇವತೆಗಳನ್ನು ಕರೆದುಕೊಂಡು ಬಾ ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಸರ್ವರಿಗೂ ಬೇಕಾದವನೂ ಉತ್ತಮವಾದ ಪ್ರಜ್ಞೆಯುಳ್ಳವನೂ ಅಥವಾ ಸರ್ವವನ್ನು ತಿಳಿದವನೂ ಆದ ನಿನ್ನನ್ನೇ ಸ್ತುತಿಯಿಂದ ಸ್ತುತಿಸುತ್ತೇನೆ. ಮನುಷ್ಯರಿಗೆ ಹಿತಕರವಾದ ಕರ್ಮಗಳನ್ನು ಮಾಡುವ ದೇವತೆಗಳನ್ನು ನಮಗೋಸ್ಕರ ಈ ನಮ್ಮ ಯಜ್ಞಭೂಮಿಗೆ ಕರೆದುಕೊಂಡು ಬಾ ನಮಗೆ ಸುಖವನ್ನುಂಟುಮಾಡುವುದಕ್ಕಾಗಿಯೂ ಇಲ್ಲಿಗೆ ಕರೆದುಕೊಂಡು ಬಾ.

English Translation

I glorify with my praise you, Jatavedas, desired by all; bring hither, Agni, to us the gods who are gratified by offerings, (bring) those gratified by offerings for our felicity.

॥ ಸಂಹಿತಾಪಾಠಃ ॥

ಅಗ್ನಿರ್ದೇವೋ ದೇವಾನಾಮಭವತ್ಪುರೋಹಿತೋಽಗ್ನಿಂ ಮನುಷ್ಯಾ ಋಷಯಃ ಸಮೀಧಿರೇ ।

ಅಗ್ನಿಂ ಮಹೋ ಧನಸಾತಾವಹಂ ಹುವೇ ಮೃಳೀಕಂ ಧನಸಾತಯೇ ॥ ೪ ॥

॥ ಪದಪಾಠಃ ॥

ಅಗ್ನಿಃ । ದೇವಃ । ದೇವಾನಾಂ । ಅಭವತ್ । ಪುರಃऽಹಿತಃ । ಅಗ್ನಿಂ । ಮನುಷ್ಯಾಃ । ಋಷಯಃ । ಸಂ । ಈಧಿರೇ ।

ಅಗ್ನಿಂ । ಮಹಃ । ಧನऽಸಾತೌ । ಅಹಂ । ಹುವೇ । ಮೃಳೀಕಂ । ಧನऽಸಾತಯೇ ।

॥ ಸಾಯಣಭಾಷ್ಯಂ ॥

ದೇವೋ ದಾನಾದಿಗುಣಯುಕ್ತೋಽಗ್ನಿರ್ದೇವಾನಾಮನ್ಯೇಷಾಂ ಪುರೋಹಿತಃ ಪುರಸ್ತಾದ್ಧೃತೋಽಭವತ್ । ಯದ್ವಾ । ಪುರೋಹಿತವದ್ಧಿತಕಾರ್ಯಭವತ್ । ಯತ ಏವಮತಃ ಕಾರಣಾತ್ತ್ವಮೇವಾಗ್ನಿಮೃಷಯೋಽತೀಂದ್ರಿಯಾರ್ಥದರ್ಶಿನೋ ಮನುಷ್ಯಾ ಮಾನವಾ ಯಜಮಾನಾಃ ಸಮೀಧಿರೇ । ಸಂದೀಪಯಂತಿ । ಅಪಿ ಚ ತಮಗ್ನಿಂ ಮಹೋ ಮಹತೋ ಧನಸಾತೌ ಧನಸ್ಯ ಸಂಭಜನೇ ನಿಮಿತ್ತಭೂತೇಽಹಂ ಹುವೇ । ಆಹ್ವಯೇ ॥ ವಿಶೇಷಣಸಾಪೇಕ್ಷಸ್ಯಾಪಿ ಧನಶಬ್ದಸ್ಯ ಛಾಂದಸಃ ಸಮಾಸಃ ॥ ಯದ್ವಾ । ಮಹತೋ ಯಾಗಸ್ಯ ಕರ್ತಾರಮಗ್ನಿಮಿತ್ಯರ್ಥಃ । ಧನಸ್ಯ ಸಾತಯೇ ಧನಲಾಭಾರ್ಥಂ ಮೃಳೀಕಂ ಸುಖಮೇತತ್ಸಂಜ್ಞಂ ವಾ ಮಾಂ ಸೋಽಗ್ನಿಃ ಕರೋತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವಃ**— ಪ್ರಕಾಶಮಾನನಾದ ಅಥವಾ ದಾನಾದಿಗುಣವಿಶಿಷ್ಟನಾದ । **ಅಗ್ನಿಃ**— ಅಗ್ನಿಯು । **ದೇವಾನಾಂ**— ಇತರ ದೇವತೆಗಳಿಗಿಂತ । **ಪುರೋಹಿತಃ**— ಮುಂದುಗಡೆ ಸ್ಥಾಪಿತನಾಗಿ । **ಅಭವತ್**— ಇರುತ್ತಾನೆ ಅಥವಾ ದೇವತೆಗಳ ವಿಷಯದಲ್ಲಿ ಪುರೋಹಿತನಂತೆ ಹಿತಕಾರಿಯಾಗುತ್ತಾನೆ. ಮತ್ತು । **ಋಷಯಃ**— ಅತೀಂದ್ರಿಯಾರ್ಥ ದರ್ಶಿಗಳಾದ ಋಷಿಗಳೂ । **ಮನುಷ್ಯಾಃ**— ಮಾನವರಾದ ಯಜಮಾನರೂ । **ಅಗ್ನಿಂ**— ಈ ಅಗ್ನಿಯನ್ನು । **ಸಂ ಈಧಿರೇ**— ಹೊತ್ತಿಸಿ ಪ್ರಜ್ವಲಗೊಳಿಸುತ್ತಾರೆ । **ಅಗ್ನಿಂ**— ಇಂತಹ ಅಗ್ನಿಯನ್ನು । **ಮಹಃ**— ಅತಿಶಯವಾದ । **ಧನಸಾತೌ**— ಧನಪ್ರಾಪ್ತಿಗಾಗಿ । **ಅಹಂ** ನಾನು । **ಹುವೇ**— ಪ್ರಾರ್ಥಿಸಿ ಕರೆಯುತ್ತೇನೆ । **ಧನಸಾತಯೇ**— ಧನಲಾಭಾರ್ಥವಾಗಿ (ನನ್ನನ್ನು) । **ಮೃಳೀಕಂ**— ಸುಖವಾಗಿರುವಂತೆ ಅಗ್ನಿಯು ಮಾಡಲಿ ।

॥ ಭಾವಾರ್ಥ ॥

ದಾನಾದಿಗುಣವಿಶಿಷ್ಟನಾದ ಅಗ್ನಿಯು ಎಲ್ಲಾ ದೇವತೆಗಳಿಗಿಂತ ಮೊದಲು ಅಥವಾ ಎಲ್ಲರಿಗಿಂತಲೂ ಮುಂಭಾಗದಲ್ಲಿ ಸ್ಥಾಪಿತನಾಗಿದ್ದಾನೆ. ಅತೀಂದ್ರಿಯಜ್ಞಾನಿಗಳಾದ ಋಷಿಗಳೂ, ಮಾನವರಾದ ಯಜಮಾನರೂ ಸಹ ಈ ಅಗ್ನಿಯನ್ನು ಹೊತ್ತಿಸಿ ಚೆನ್ನಾಗಿ ಬೆಳಗುವಂತೆ ಮಾಡುತ್ತಾರೆ. ಇಂತಹ ಅಗ್ನಿಯನ್ನು ಧನಲಾಭಕ್ಕಾಗಿ ನಾನು ಪ್ರಾರ್ಥಿಸಿ ಕರೆಯುತ್ತೇನೆ. ಧನಲಾಭದಿಂದ ನನಗೆ ಸುಖವುಂಟಾಗುವುದಕ್ಕಾಗಿಯೂ ಪ್ರಾರ್ಥಿಸಿ ಕರೆಯುತ್ತೇನೆ

## English Translation

The divine Agni, was the purohita of the gods; the Rishis, the descendents of Manu, kindled Agni. I invoke Agni for the acquisition of abundant wealth, (may he make me) happy for the acquisition of wealth.

॥ ಸಂಹಿತಾಪಾಠಃ ॥

ಅಗ್ನಿರತ್ರಿಂ ಭರದ್ವಾಜಂ ಗವಿಷ್ಠಿರಂ ಪ್ರಾವನ್ನಃ ಕಣ್ವಂ ತ್ರಸದಸ್ಯುಮಾಹವೇ ।

ಅ॒ಗ್ನಿಂ ವಸಿ॑ಷ್ಠೋ ಹವತೇ ಪು॒ರೋಹಿ॑ತೋ ಮೃ॒ಳೀ॒ಕಾಯ॑ ಪು॒ರೋಹಿ॑ತಃ॥೫॥

॥ ಪದಪಾಠಃ ॥

ಅ॒ಗ್ನಿಃ । ಅತ್ರಿ॑ಂ । ಭ॒ರತ್ऽವಾ॑ಜಂ । ಗವಿಷ್ಠಿ॑ರಂ । ಪ್ರ । ಆ॒ವ॒ತ್ । ನ॒ಃ । ಕಣ್ವ॑ಂ । ತ್ರ॒ಸದ॑ಸ್ಯುಂ । ಆ॒ऽಹ॒ವೇ ।

ಅ॒ಗ್ನಿಂ । ವಸಿ॑ಷ್ಠಃ । ಹ॒ವ॒ತೇ॒ । ಪು॒ರಃऽಹಿ॑ತಃ । ಮೃ॒ಳೀ॒ಕಾಯ॑ । ಪು॒ರಃऽಹಿ॑ತಃ ॥ ೫ ॥

॥ ಸಾಯಣಭಾಷ್ಯಂ ॥

ಅತ್ರಿಂ ಭರದ್ವಾಜಂ ಗವಿಷ್ಠಿರಂ ಕಣ್ವಂ ತ್ರಸದಸ್ಯುಂ ಚ ನೋಽಸ್ಮಾನಾಹವೇ ಸಂಗ್ರಾಮೇಽಯಮಗ್ನಿಃ ಪ್ರಾವತ್ । ಪ್ರರಕ್ಷತು । ಪುರೋಹಿತಃ ಪುರೋಹಿತವದ್ಧಿತಕಾರೀ ಮಮ ಪಿತಾ ವಸಿಷ್ಠ ಋಷಿರಗ್ನಿಂ ಹವತೇ । ಸ್ತುತಿಭಿರಾಹ್ವಯತಿ । ಸ ಚಾಹೂತೋ ಮೃಳೀಕಾಯ ಸುಖಾರ್ಥಮೇತತ್ಸಂಜ್ಞಾಯ ವಾ ಮಹ್ಯಂ ಪುರೋಹಿತಃ ಪುರೋಧಾ ದೇವಾನಾಂ ಪುರಃ ಸ್ಥಾಪಯಿತಾ ಭವತು ॥

॥ ಪ್ರತಿಪದಾರ್ಥ ॥

**ಅಗ್ನಿಃ**— ಈ ಅಗ್ನಿಯು । **ಅತ್ರಿಂ**— ಅತ್ರಿಋಷಿಯನ್ನೂ । **ಭರದ್ವಾಜಂ**— ಭರದ್ವಾಜಋಷಿಯನ್ನೂ । **ಗವಿಷ್ಠಿರಂ**— ಗವಿಷ್ಠಿರನೆಂಬ ಋಷಿಯನ್ನೂ । **ಕಣ್ವಂ**— ಕಣ್ವಋಷಿಯನ್ನೂ । **ತ್ರಸದಸ್ಯುಂ**— ತ್ರಸದಸ್ಯುವನ್ನೂ । **ನಃ**— ನಮ್ಮನ್ನೂ । **ಆಹವೇ**— ಯುದ್ಧದಲ್ಲಿ । **ಪ್ರ ಆವತ್**— ರಕ್ಷಿಸಲಿ । **ಪುರೋಹಿತಃ**— ಪುರೋಹಿತನಂತೆ ತಕಾರಿಯಾದ । **ವಸಿಷ್ಠಃ**— ನನ್ನ ತಂದೆಯಾದ ವಸಿಷ್ಠಋಷಿಯು । **ಅಗ್ನಿಂ**— ಅಗ್ನಿಯನ್ನು । **ಹವತೇ**— ಸ್ತುತಿಗಳಿಂದ ಸ್ತುತಿಸಿ ಆಹ್ವಾನಿಸುತ್ತಾನೆ । **ಮೃಳೀಕಾಯ**— ಸುಖಾರ್ಥವಾಗಿ ಅಥವಾ ಮೃಳೀಕನೆಂಬ ನನಗೆ ಅನುಗ್ರಹ ಮಾಡುವುದಕ್ಕಾಗಿ । **ಪುರೋಹಿತಃ**— ಈ ಅಗ್ನಿಯು ದೇವತೆಗಳ ಮುಂಭಾಗದಲ್ಲಿ ಸ್ಥಾಪಿತನಾಗಲಿ.

॥ ಭಾವಾರ್ಥ ॥

ಈ ಅಗ್ನಿಯು, ಅತ್ರಿ, ಭರದ್ವಾಜ, ಗವಿಷ್ಠಿರ, ಕಣ್ವ, ತ್ರಸದಸ್ಯು ಎಂಬುವರನ್ನೂ ನಮ್ಮನ್ನೂ ಯುದ್ಧದಲ್ಲಿ ಕಾಪಾಡಲಿ. ಪುರೋಹಿತರಂತೆ ಹಿತಕಾರಿಯಾದ ನನ್ನ ತಂದೆಯಾದ ವಸಿಷ್ಠಋಷಿಯು ಸ್ತುತಿಗಳಿಂದ ಅಗ್ನಿಯನ್ನು ಸ್ತುತಿಸಿ ಆಹ್ವಾನಿಸುತ್ತಾನೆ. ನನ್ನ ಸುಖಾರ್ಥವಾಗಿ ಈ ಅಗ್ನಿಯು ದೇವತೆಗಳ ಪುರೋಭಾಗದಲ್ಲಿ ಸ್ಥಾಪಿತನಾಗಿರಲಿ.

## English Translation

May Agni protect in war Atri, Bharadwaja, Gavishthira, ourselves, Kanwa and Trasadasyu; Vasishtha as the Purohita invokes Agni the purohitha for our felicity.

# ನೂರ ಐವತ್ತೊಂದನೆಯ ಸೂಕ್ತವು

## ಪೀ ಠಿ ಕೆ

ಈ ಸೂಕ್ತಕ್ಕೆ ಶ್ರದ್ಧೆಯೆಂಬುದು ದೇವತೆಯು. ಶ್ರದ್ಧೆಯೆಂದರೆ ಒಂದು ಕಾರ್ಯವನ್ನು ಮಾಡುವಾಗ ಪ್ರದರ್ಶಿಸುವ ಆದರಾತಿಶಯವು. ಈ ಭಾವನೆಯನ್ನೇ ದೇವತೆಯೆಂದು ಪರಿಗಣಿಸಿ ಈ ಸೂಕ್ತದಲ್ಲಿ ಸ್ತುತಿಸಲಾಗಿರುವುದು. ಇಂತಹ ಭಾವನಾ ದೇವತೆಗಳನ್ನು ಸ್ತುತಿಸಿರುವ ಸೂಕ್ತಗಳು ಋಗ್ವೇದದಲ್ಲಿ ಅನೇಕವಿವೆ. ಈ ವಿಷಯವನ್ನು ನಾವು ಋ. ಸಂ. ಭಾಗ ೨೯ ಪುಟಗಳು, 310—319 ರಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ. ಈ ಮಂಡಲದ ೮೩ ನೇ ಸೂಕ್ತಕ್ಕೆ ಬರೆದಿರುವ ಪೀಠಿಕೆಯೇ ಈ ಸೂಕ್ತಕ್ಕೂ ಅನ್ವಯಿಸುವುದು. ಈ ಸೂಕ್ತದ ವಿನಿಯೋಗವಿಷಯದಲ್ಲಿ ಋಗ್ವಿಧಾನವೆಂಬ ಗ್ರಂಥದಲ್ಲಿ ಈ ರೀತಿ ಹೇಳಿದೆ—

ಶ್ರದ್ಧಾಸೂಕ್ತಂ ಜಪೇನ್ನಿತ್ಯಂ ಶ್ರದ್ಧಾಕಾಮಃ ಸಮಾಹಿತಃ ॥ ೭೧ ॥
ಸರ್ವತ್ರ ಲಭತೇ ಶ್ರದ್ಧಾಂ ಮೇಧಾಸೂಕ್ತಂ ತಥೈವ ಚ ।
ಬ್ರಾಹ್ಮೀಮಾಸಾದ್ಯ ಸೂಕ್ತೇ ದ್ವೇ ಜಪೇತ ನಿಯತವ್ರತಃ ॥ ೭೨ ॥
ತಾಂ ಪಿಬೇತ್ತು ಯಥಾಶಕ್ತ್ಯಾ ತ್ರ್ಯಹಾತ್ಸಿದ್ಧಿಂ ನಿಯಚ್ಛತಿ ।
ಶಂಖಪುಷ್ಪೀಂ ತು ಪಯಸಾ ಬ್ರಾಹ್ಮೀಪುಷ್ಪಾಣಿ ಸರ್ಪಿಷಾ ॥ ೭೩ ॥
ಶತಾವರೀಂ ತು ಪಯಸಾ ವಚಾಮದ್ಭಿರ್ಘೃತೇನ ಚ ।
ಸೂಕ್ತಾಭ್ಯಾಮನುಮಂತ್ರ್ಯಾಭ್ಯಾಮೇಕೈಕಾಂ ತು ತ್ರ್ಯಹಂ ಪಿಬೇತ್ ॥ ೭೪ ॥
ಶ್ರದ್ಧಾಂ ಮೇಧಾಂ ಸ್ಮೃತಿಂ ಪುಷ್ಟಿಂ ಬಲಂ ಲಕ್ಷ್ಮೀಂ ಚ ವಿಂದತಿ ।
ಸಿದ್ಧಿಂ ಪ್ರಾಪ್ನೋತಿ ಚ ಪರಾಂ ದೀರ್ಘಂ ಚಾಯುಃ ಸಮಶ್ನುತೇ ॥ ೭೫ ॥
ಅಥವಾ ಮನಸಾ ಧ್ಯಾಯೇತ್ಸೂಕ್ತೇ ಸಿದ್ಧಿಂ ನಿಯಚ್ಛತಿ ।

(ಋಗ್ವಿಧಾನ. ಅಧ್ಯಾಯ ೪. ಶ್ಲೋ. ೭೧–೭೫)

ಶ್ರದ್ಧಾದೇವತೆಯ ಅನುಗ್ರಹವನ್ನು ಬಯಸುವ ಪುರುಷನು ನಿಯಮದಿಂದ ಈ ಶ್ರದ್ಧಾಸೂಕ್ತವನ್ನು ಪ್ರತಿನಿತ್ಯವೂ ಜಪಿಸಬೇಕು, ಅದರಂತೆ ಮೇಧಾಸೂಕ್ತವನ್ನು (ಮೇಧಾಂ ಮಹ್ಯಮಂಗಿರಸಃ ಎಂಬ ಖಿಲಸೂಕ್ತ) ಜಪಿಸಬೇಕು. ಈ ರೀತಿ ಮಾಡಿದರೆ ಆ ಪುರುಷನಿಗೆ ಸರ್ವಕಾರ್ಯಗಳಲ್ಲಿಯೂ ಸಿದ್ಧಿಯುಂಟಾಗುವುದು. ಇದಲ್ಲದೆ ಬ್ರಾಹ್ಮೀ ಎಂಬ ಮೂಲಿಕೆಯ ಪುಷ್ಪವನ್ನು ತಂದು ಅದನ್ನು ನೀರಿನಲ್ಲಿ ಬೆರಸಿ ಈ ಎರಡು ಸೂಕ್ತಜಪದಿಂದ ಅಭಿಮಂತ್ರಿಸಿ ಪಾನಮಾಡಿದಲ್ಲಿ ಮೂರು ದಿನಗಳಲ್ಲಿ ಹಿಡಿದ ಕೆಲಸವು ಕೈಗೂಡುವುದು. ಇದಲ್ಲದೆ ಶಂಖಪುಷ್ಪವನ್ನು ಹಾಲಿನಲ್ಲಿಯೂ ಬ್ರಾಹ್ಮೀ ಪುಷ್ಪವನ್ನು ತುಪ್ಪದಲ್ಲಿಯೂ, ಶತಾವರಿಯನ್ನು ಹಾಲಿನಲ್ಲಿಯೂ ವಚಾ ಎಂಬುದನ್ನು ನೀರಿನಲ್ಲಿ ಅಥವಾ ತುಪ್ಪದಲ್ಲಿಯೂ ಬೆರಸಿ ಈ ಎರಡು ಸೂಕ್ತಗಳ ಜಪದಿಂದ ಅಭಿಮಂತ್ರಿಸಿ ಪ್ರತಿಯೊಂದನ್ನು ಮೂರು ಮೂರು ದಿನಗಳವರೆಗೆ ಪಾನ ಮಾಡಿದಲ್ಲಿ ಆ ಪುರುಷನು ಶ್ರದ್ಧಾ (ಸರ್ವಕಾರ್ಯಗಳಲ್ಲಿಯೂ ಆಸಕ್ತಿ) ಮೇಧಾ (ಬುದ್ಧಿವಂತಿಕೆ) ಸ್ಮೃತಿ (ಜ್ಞಾಪಕ

ಶಕ್ತಿ) ಪುಷ್ಟಿ, ಬಲ, ಸಂಪತ್ತು ಇವುಗಳನ್ನು ಪಡೆಯುತ್ತಾನೆ. ಮತ್ತು ಸಮಸ್ತಕಾರ್ಯಗಳಲ್ಲಿ ಸಿದ್ಧಿಯನ್ನೂ ದೀರ್ಘಾಯುಸ್ಸನ್ನೂ ಪಡೆದು ಸುಖಿಸುವನು. ಅಥವಾ ಕೇವಲ ಮನಸ್ಸಿನಲ್ಲಿಯೇ ಈ ಸೂಕ್ತವನ್ನು **ಜಪಿಸುವುದರಿಂದಲೇ ಅಪೇಕ್ಷಿಸಿದ ಕೆಲಸವು ಕೈಗೂಡುವುದು.**

|| ಸಾಯಣಭಾಷ್ಯಂ ||

**ಶ್ರದ್ಧಯೇತಿ ಪಂಚರ್ಚಂ ತ್ರಯೋವಿಂಶಂ ಸೂಕ್ತಮಾನುಷ್ಟುಭಂ ಶ್ರದ್ಧಾದೇವತ್ಯಂ । ಕಾಮಗೋತ್ರಜಾ ಶ್ರದ್ಧಾ ನಾಮರ್ಷಿಕಾ । ತಥಾ ಚಾನುಕ್ರಮ್ಯತೇ । ಶ್ರದ್ಧಯಾ ಶ್ರದ್ಧಾ ಕಾಮಾಯನೀ ಶ್ರಾದ್ಧಮಾನುಷ್ಟುಭಂ ತ್ವಿತಿ ॥ ಲೈಂಗಿಕೋ ವಿನಿಯೋಗಃ ॥**

ಅನುವಾದವು—**ಶ್ರದ್ಧಯಾ** ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಇಪ್ಪತ್ತಮೂರನೆಯ **ಸೂಕ್ತವು.** ಇದರಲ್ಲಿ ಐದು ಋಕ್ಕುಗಳಿರುವವು ಈ ಸೂಕ್ತಕ್ಕೆ ಕಾಮಗೋತ್ರದ ಶ್ರದ್ಧಾ ಎಂಬ ಸ್ತ್ರೀಯು **ಋಷಿಕೆಯು ;** ಶ್ರದ್ಧಾ ಎಂಬುದೇ ದೇವತೆಯು ; ಅನುಷ್ಟುಪ್‌ಛಂದಸ್ಸು ಅನುಕ್ರಮಣಿಕೆಯಲ್ಲಿ—**ಶ್ರದ್ಧಯಾ ಶ್ರದ್ಧಾ ಕಾಮಾಯನೀ ಶ್ರಾದ್ಧಮಾನುಷ್ಟುಭಂ** ತು ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೧೫೧

ಮಂಡಲ-೧೦ || ಅನುವಾಕ-೧೧ || ಸೂಕ್ತ-೧೫೧ ||
ಅಷ್ಟಕ-೮ || ಅಧ್ಯಾಯ-೮ || ವರ್ಗ-೯ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ||
|| ಋಷಿಃ—ಶ್ರದ್ಧಾ ಕಾಮಾಯನೀ ||
|| ದೇವತಾ—ಶ್ರದ್ಧಾ ||
|| ಛಂದಃ—ಅನುಷ್ಟುಪ್ ||

|| ಸಂಹಿತಾಪಾಠಃ ||

**ಶ್ರದ್ಧಯಾಗ್ನಿಃ ಸಮಿಧ್ಯತೇ ಶ್ರದ್ಧಯಾ ಹೂಯತೇ ಹವಿಃ ।**
**ಶ್ರದ್ಧಾಂ ಭಗಸ್ಯ ಮೂರ್ಧನಿ ವಚಸಾ ವೇದಯಾಮಸಿ ॥ ೧ ॥**

|| ಪದಪಾಠಃ ||

**ಶ್ರದ್ಧಯಾ । ಅಗ್ನಿಃ । ಸಂ । ಇಧ್ಯತೇ । ಶ್ರದ್ಧಯಾ । ಹೂಯತೇ । ಹವಿಃ ।**
**ಶ್ರದ್ಧಾಂ । ಭಗಸ್ಯ । ಮೂರ್ಧನಿ । ವಚಸಾ । ಆ । ವೇದಯಾಮಸಿ ॥ ೧ ॥**

|| ಸಾಯಣಭಾಷ್ಯಂ ||

**ಪುರುಷಗತೋಽಭಿಲಾಷವಿಶೇಷಃ ಶ್ರದ್ಧಾ । ತಯಾ ಶ್ರದ್ಧಯಾಗ್ನಿರ್ಗಾರ್ಹಪತ್ಯಾದಿಃ ಸಮಿಧ್ಯತೇ । ಸಂದೀಪ್ಯತೇ । ಯದಾ ಹಿ ಪುರುಷೇ ಶ್ರದ್ಧಾಗ್ನಿಗೋಚರ ಆದರಾತಿಶಯೋ ಜಾಯತೇ ತದೈಷ ಪುರು-**

**ಹೋಽಗ್ನಿಃ ಪ್ರಜ್ವಾಲಯತಿ ನಾನ್ಯದಾ । ಶ್ರದ್ಧಯೈವ ಹವಿಃ ಪುರೋಡಾಶಾದಿಹವಿಶ್ಚ ಹೂಯತೇ । ಆಹವನೀಯೇ ಪ್ರಕ್ಷಿಪ್ಯತೇ । ಯದ್ವಾ । ಅ ಸೂಕ್ತಸ್ಯ ದ್ರಷ್ಟ್ರ್ಯಾ ಶ್ರದ್ಧಾಖ್ಯಯಾಗ್ನಿಃ ಸಮಿಧ್ಯತೇ । ಶ್ರದ್ಧಾಮುಕ್ತಲಕ್ಷಣಾಯಾಃ ಶ್ರದ್ಧಾಯಾ ಅಭಿಮಾನಿದೇವತಾಂ ಭಗಸ್ಯ ಭಜನೀಯಸ್ಯ ಧನಸ್ಯ ಮೂರ್ಧನಿ ಪ್ರಧಾನಭೂತೇ ಸ್ಥಾನೇಽವಸ್ಥಿತಾಂ ವಚಸಾ ವಚನೇನ ಸ್ತೋತ್ರೇಣ ವೇದಯಾಮಸಿ । ಅಭಿತಃ ಪ್ರಖ್ಯಾಪಯಾಮಃ ॥ ಇದಂತೋ ಮಸಿಃ ॥**

॥ ಪ್ರತಿಪದಾರ್ಥ ॥

**ಶ್ರದ್ಧಯಾ**—ಶ್ರದ್ಧೆಯಿಂದಲೇ (ಅತಿಶಯವಾದ ಆಸಕ್ತಿಯಿಂದಲೇ) । **ಅಗ್ನಿಃ** ಗಾರ್ಹಪತ್ಯಾದ್ಯಗ್ನಿಯು । **ಸಂ ಇಧ್ಯತೇ**—ಹೊತ್ತಿಸಲ್ಪಡುತ್ತದೆ । **ಶ್ರದ್ಧಯಾ**—ಶ್ರದ್ಧೆಯಿಂದಲೇ । **ಹವಿಃ**—ಪುರೋಡಾಶಾದಿ ಹವಿಸ್ಸು । **ಹೂಯತೇ**—ಹೋಮಮಾಡಲ್ಪಡುತ್ತದೆ । [**ಅಥವಾ ಶ್ರದ್ಧಯಾ**—ಶ್ರದ್ಧಾ ಎಂಬ ಈ ಸೂಕ್ತದ್ರಷ್ಟ್ರ್ಯವಾದ ಋಷಿಕೆಯಿಂದಲೇ । **ಅಗ್ನಿಃ**—ಅಗ್ನಿಯು । **ಸಂ ಇಧ್ಯತೇ**—ಹೊತ್ತಿಸಲ್ಪಡುತ್ತದೆ । **ಶ್ರದ್ಧಯಾ**—ಶ್ರದ್ಧಾ ಎಂಬ ಋಷಿಕೆಯಿಂದಲೇ । **ಹವಿಃ**—ಪುರೋಡಾಶಾದಿ ಹವಿಸ್ಸು । **ಹೂಯತೇ**—ಅಗ್ನಿಯಲ್ಲಿ ಹೋಮಮಾಡಲ್ಪಡುತ್ತದೆ] । **ಭಗಸ್ಯ**—ಲಭಿಸಬೇಕಾದ ಧನದ । **ಮೂರ್ಧನಿ**—ಮುಖ್ಯಸ್ಥಾನದಲ್ಲಿರುವ । **ಶ್ರದ್ಧಾಂ**—ಶ್ರದ್ಧಾಭಿಮಾನಿ ದೇವತೆಯನ್ನು । **ವಚಸಾ**—ಸ್ತೋತ್ರರೂಪವಾದ ವಾಕ್ಯದಿಂದ । **ಆ ವೇದಯಾಮಸಿ**—ಚೆನ್ನಾಗಿ ಪ್ರಶಂಸೆಮಾಡುತ್ತೇವೆ.

॥ ಭಾವಾರ್ಥ ॥

ಶ್ರದ್ಧೆ (ಆಸಕ್ತಿ) ಯಿಂದಲೇ ಅಗ್ನಿಯು ಪ್ರಜ್ವಲನಗೊಳಿಸಲ್ಪಡುತ್ತದೆ. ಶ್ರದ್ಧೆಯಿಂದಲೇ ಹವಿಸ್ಸು ಅಗ್ನಿಯಲ್ಲಿ ಹೋಮಮಾಡಲ್ಪಡುತ್ತದೆ ಅಥವಾ ಶ್ರದ್ಧಾ ಎಂಬ ಈ ಸೂಕ್ತದ್ರಷ್ಟ್ರ್ಯವಾದ ಋಷಿಕೆಯಿಂದಲೇ ಅಗ್ನಿಯು ಪ್ರಜ್ವಲಿತವಾಗಿ ಅದರಲ್ಲಿ ಹವಿರಾದಿಗಳು ಹೋಮಮಾಡಲ್ಪಡುತ್ತವೆ. ಧನಾದಿಗಳನ್ನು ಲಭಿಸುವುದಕ್ಕೆ ಮುಖ್ಯ ಸಾಧನವಾಗಿರುವ ಈ ಶ್ರದ್ಧಾಭಿಮಾನಿದೇವತೆಯನ್ನು ಸ್ತುತಿರೂಪವಾದ ವಾಕ್ಯದಿಂದ ನಾವು ಚೆನ್ನಾಗಿ ಪ್ರಶಂಸೆಮಾಡೋಣ.

## English Translation.

Agni is kindled by Shraddha, by Shradda is the oblation offered; with our praise we glorify Shraddha, (who is seated) on Bhaga's head.

॥ ವಿಶೇಷವಿಷಯಗಳು ॥

ಶ್ರದ್ಧಾ ಶಬ್ದದ ನಿಷ್ಪತ್ತಿಯನ್ನು ಹೇಳುತ್ತಾ ಯಾಸ್ಕರು—

**ಶ್ರದ್ಧಾ । ಶ್ರದ್ಧಾ ಶ್ರದ್ಧಾನಾತ್ । ತಸ್ಯೈಷಾ ಭವತಿ ॥** (ನಿ. ೯-೩೦)

**ಶ್ರದ್ಧಾ** ಎಂಬ ಶಬ್ದದಲ್ಲಿ ಶ್ರತ್ ಎಂಬ ಪದಕ್ಕೆ ಸತ್ಯ ಎಂದರ್ಥವು. **ಶ್ರತ್ ಅಸ್ಯಾಂ ಧೀಯತೆ ಇತಿ ಶ್ರದ್ಧಾ ।** ಈ ಸತ್ಯವಿರುವುದರಿಂದಲೇ ಇವಕ್ಕೆ ಶ್ರದ್ಧಾ ಎಂಬ ಹೆಸರು. ಧರ್ಮಾರ್ಥಕಾಮಮೋಕ್ಷಗಳಲ್ಲಿ ಯಾವ ಬುದ್ಧಿಯು ಉತ್ಪನ್ನವಾಗುವುದೋ ಅದಕ್ಕೆ ಶ್ರದ್ಧೆಯೆಂದು ಹೆಸರು. ಎಂದರೆ ನಂಬಿಕೆ, ಆದರಾತಿಶಯ, ಅಭಿಲಾಷೆ ಎಂದರ್ಥವು. ಒಂದು ಕಾರ್ಯವನ್ನು ಮಾಡುವಾಗ ಅದು ಸತ್ಯವಾದದ್ದೆಂದು ನಂಬಿಕೆ ಇರಬೇಕು ಮತ್ತೂ ಆ ಕಾರ್ಯವನ್ನು ಮನಃಪೂರ್ವಕ

ವಾಗಿ ಆದರದಿಂದ ಮಾಡಬೇಕು ಈ ರೀತಿ ಮಾಡಬೇಕೆಂಬ ಭಾವನೆಗೆ ಶ್ರದ್ಧಾ ಎಂದು ಹೆಸರು. ಈ ಶಬ್ದ ಪ್ರಯೋಗವಿರುವ ಈ ಕೆಳಗಿನ ಋಕ್ಕನ್ನು ಉದಾಹರಣೆಗಾಗಿ ಕೊಡಲಾಗಿದೆ—

**ಶ್ರದ್ಧಯಾಗ್ನಿಃ ಸಾಧು ಸಮಿಧ್ಯತೇ ಶ್ರದ್ಧಯಾ ಹವಿಃ ಸಾಧು ಹೂಯತೇ ಶ್ರದ್ಧಾಂ ಭಗಸ್ಯ ಭಾಗಧೇಯಸ್ಯ ಮೂರ್ಧನಿ ಪ್ರಧಾನಾಂಗೇ ವಚನೇನಾವೇದಯಾಮಃ ||** (ನಿ. ೯-೩೧)

ಶ್ರದ್ಧೆಯಿಂದ ಅಗ್ನಿಯು ಚೆನ್ನಾಗಿ ಹೊತ್ತಿಸಲ್ಪಡುತ್ತದೆ ಎಂದರೆ ಅಗ್ನಿಯನ್ನು ಹೊತ್ತಿಸುವಾಗ ಶ್ರದ್ಧೆಯಿದ್ಧರೆ ಎಂದರೆ ನಂಬಿಕೆ, ಆದರ, ಇವಿದ್ದರೆ ಅಗ್ನಿಯು ಚೆನ್ನಾಗಿ ಪ್ರಜ್ವಲನವಾಗುವುದು. ಅದರಂತೆ ಶ್ರದ್ಧೆಯಿಂದ ಮಾಡಲ್ಪಡುವ ಹವಿರರ್ಪಣವು ಚೆನ್ನಾಗಿ ಅರ್ಪಿತವಾಗುತ್ತದೆ ಯಾವ ಕೆಲಸ ಮಾಡಿದರೂ ಅದನ್ನು ಶ್ರದ್ಧೆಯಿಂದ ಮಾಡಿದರೆ ಅದನ್ನು ಚೆನ್ನಾಗಿ ಮಾಡಿದಂತಾಗುವುದು. ನಾವು ಧನವನ್ನು ಸಂಪಾದಿಸುವುದಕ್ಕೆ ಮಾಡುವ ಪ್ರಯತ್ನದಲ್ಲಿ ಶ್ರದ್ಧೆಯೇ ಮುಖ್ಯವು. ಎಂದರೆ ಆ ಕೆಲಸದಲ್ಲಿ ಶ್ರದ್ಧೆ ಇದ್ದರೇನೇ ಧನವನ್ನು ಸಂಪಾದಿಸಲು ಸಾಧ್ಯವಾಗುವುದು ಕರ್ಮಾನುಷ್ಠಾನದಲ್ಲಿಯೂ ಇದೇ ರೀತಿ. ಶ್ರದ್ಧೆಯಿಂದ ಮಾಡಿದ ಕರ್ಮವೇ ಪೂರ್ಣಫಲವನ್ನು ಕೊಡುವುದು. ಇಂತಹ ಶ್ರದ್ಧಾಭಿಮಾನಿ ದೇವತೆಯನ್ನು ನಾವು ಸ್ತುತಿವಾಕ್ಯಗಳಿಂದ ಪ್ರಶಂಸೆಮಾಡೋಣ ಎಂದು ಮುಖ್ಯಾಭಿಪ್ರಾಯವು

|| ಸಂಹಿತಾಪಾಠಃ ||

ಪ್ರಿಯಂ ಶ್ರದ್ಧೇ ದದತಃ ಪ್ರಿಯಂ ಶ್ರದ್ಧೇ ದಿದಾಸತಃ |
ಪ್ರಿಯಂ ಭೋಜೇಷು ಯಜ್ವಸ್ವಿದಂ ಮ ಉದಿತಂ ಕೃಧಿ || ೨ ||

|| ಪದಪಾಠಃ ||

ಪ್ರಿಯಂ | ಶ್ರದ್ಧೇ | ದದತಃ | ಪ್ರಿಯಂ | ಶ್ರದ್ಧೇ | ದಿದಾಸತಃ |
ಪ್ರಿಯಂ | ಭೋಜೇಷು | ಯಜ್ವಽಸು | ಇದಂ | ಮೇ | ಉದಿತಂ | ಕೃಧಿ || ೨ ||

|| ಸಾಯಣಭಾಷ್ಯಂ ||

**ಹೇ ಶ್ರದ್ಧೇ ದದತಶ್ಚರುಪುರೋಡಾಶಾದೀನಿ ಪ್ರಯಚ್ಛತೋ ಯಜಮಾನಸ್ಯ ಪ್ರಿಯಮಭೀಷ್ಟ-ಫಲಂ ಕುರು | ದಿದಾಸತೋ ದಾತುಮಿಚ್ಛತಶ್ಚ ಹೇ ಶ್ರದ್ಧೇ ಪ್ರಿಯಂ ಕುರು | ಮೇ ಮಮ ಸಂಬಂಧಿಷು ಭೋಜೇಷು ಭೋಕ್ತೃಷು ಭೋಗಾರ್ಥಿಷು ಯಜ್ವಸು ಕೃತಯಜ್ಞೇಷು ಜನೇಷು ಚೇದಮುದಿತಮುಕ್ತಂ ಪ್ರಿಯಂ ಕೃಧಿ | ಕುರು ||**

|| ಪ್ರತಿಪದಾರ್ಥ ||

**ಶ್ರದ್ಧೇ**— ಎಲೈ ಶ್ರದ್ಧಾಭಿಮಾನಿದೇವತೆಯೇ | **ದದತಃ**— ಚರುಪುರೋಡಾಶಾದಿಗಳನ್ನು ಅರ್ಪಿಸುವ ಯಜಮಾನನಿಗೆ | **ಪ್ರಿಯಂ**—ಅಭೀಷ್ಟಫಲವನ್ನು ಕೊಡು | **ಶ್ರದ್ಧೇ**—ಎಲೈ ಶ್ರದ್ಧಾದೇವತೆಯೇ | **ದಿದಾ**

**ಸತಃ**— ಕೊಡಬೇಕೆಂದು ಇಚ್ಛಿಸುವವನಿಗೂ | **ಪ್ರಿಯಂ**— ಹಿತವನ್ನುಂಟುಮಾಡು | **ಮೇ**— ನನ್ನ ಸಂಬಂಧಿಗಳಾದ | **ಭೋಜೇಷು**— ಭೋಗಾರ್ಥಿಗಳಾದವರಲ್ಲಿಯೂ | **ಯಜ್ವಸು**— ಯಜ್ಞಮಾಡಿದ ಜನರಲ್ಲಿಯೂ | **ಇದಂ ಉದಿತಂ**— ಈಗ ಹೇಳಿದ ವಚನವನ್ನು | **ಪ್ರಿಯಂ ಕೃಧಿ**— ಹಿತವಾಗುವಂತೆ ಮಾಡು.

|| ಭಾವಾರ್ಥ ||

ಎಲೈ ಶ್ರದ್ಧಾಭಿಮಾನಿದೇವತೆಯೇ, ಚರುಪುರೋಡಾಶಾದಿಗಳನ್ನು ಅರ್ಪಿಸುವ ಯಜಮಾನನಿಗೂ ಅವುಗಳನ್ನು ಅರ್ಪಿಸಬೇಕೆಂದು ಇಚ್ಛಿಸುವವನಿಗೂ ಹಿತವನ್ನುಂಟುಮಾಡು. ನನ್ನ ಸಂಬಂಧಿಗಳಾದ ಜನರಲ್ಲಿ ಭೋಗಾಪೇಕ್ಷಿಯಾದವರಿಗೂ, ಯಜ್ಞಮಾಡಿದ ಜನರಿಗೂ ಮೇಲೆ ಹೇಳಿದಂತೆ ಹಿತವನ್ನುಂಟುಮಾಡು.

English Translation

O Shraddha, grant the desire of the donor (of the oblation), grant O Shraddha, the desire of him who wishes to give, grant this boon which I have mentioned to my sacrificers who solicit happiness.

|| ಸಂಹಿತಾಪಾಠಃ ||

ಯಥಾ ದೇವಾ ಅಸುರೇಷು ಶ್ರದ್ಧಾಮುಗ್ರೇಷು ಚಕ್ರಿರೇ |
ಏವಂ ಭೋಜೇಷು ಯಜ್ವಸ್ವಸ್ಮಾಕಮುದಿತಂ ಕೃಧಿ || ೩ ||

|| ಪದಪಾಠಃ ||

ಯಥಾ | ದೇವಾಃ | ಅಸುರೇಷು | ಶ್ರದ್ಧಾಂ | ಉಗ್ರೇಷು | ಚಕ್ರಿರೇ |
ಏವಂ | ಭೋಜೇಷು | ಯಜ್ವಽಸು | ಅಸ್ಮಾಕಂ | ಉದಿತಂ | ಕೃಧಿ || ೩ ||

|| ಸಾಯಣಭಾಷ್ಯಂ ||

ದೇವಾ ಇಂದ್ರಾದಯೋಽಸುರೇಷೂದ್ಗೂರ್ಣಬಲೇಷು ಯಥಾ ಶ್ರದ್ಧಾಂ ಚಕ್ರಿರೇ ಅವಶ್ಯಮಿಮೇ ಹಂತವ್ಯಾ ಇತ್ಯಾದರಾತಿಶಯಂ ಕೃತವಂತಃ ಏವಂ ಶ್ರದ್ಧಾವತ್ಸು ಭೋಜೇಷು ಭೋಕ್ತೃಷು ಭೋಗಾರ್ಥಿಷು ಯಜ್ವಸು ಯಷ್ಟೃಷ್ವಸ್ಮಾಕಮಸ್ಮತ್ಸಂಬಂಧಿಷು ತೇಷೂದಿತಂ ತ್ವೈರುಕ್ತಂ ಪ್ರಾರ್ಥಿತಂ ಫಲಜಾತಂ ಕೃಧಿ | ಕುರು ||

|| ಪ್ರತಿಪದಾರ್ಥ ||

**ದೇವಾಃ**— ಇಂದ್ರಾದಿದೇವತೆಗಳು | **ಅಸುರೇಷು**— ದೇವತೆಗಳನ್ನು ಜಯಿಸುವ ವಿಷಯದಲ್ಲಿ | **ಯಥಾ**— ಯಾವ ಪ್ರಕಾರವಾಗಿ | **ಶ್ರದ್ಧಾಂ**— ಶ್ರದ್ಧೆಯನ್ನು (ದೃಢವಾದ ವಿಶ್ವಾಸವನ್ನು) | **ಚಕ್ರಿರೇ**— ವ್ಯಕ್ತ

ಪಡಿಸಿದರೋ । **ಏವಂ**—ಆ ಪ್ರಕಾರವಾಗಿ । **ಭೋಜೇಷು**--ಭೋಗಾರ್ಥಿಗಳಾದ ಜನರಲ್ಲಿಯೂ । **ಯಜ್ವಸು**—ಯಜ್ಞಾನುಷ್ಠಾನ ಮಾಡುವ ಜನರಲ್ಲಿಯೂ । **ಅಸ್ಮಾಕಂ**—ನಮ್ಮ ವಿಷಯದಲ್ಲಿಯೂ । **ಉದಿತಂ**—ಅವರವರು ಅಪೇಕ್ಷಿಸುವ ಫಲವನ್ನು । **ಕೃಧಿ**—ಸಿದ್ಧಿಸುವಂತೆ ಮಾಡು.

॥ ಭಾವಾರ್ಥ ॥

ಇಂದ್ರಾದಿದೇವತೆಗಳು ಅಸುರರನ್ನು ಜಯಿಸುವ ವಿಷಯದಲ್ಲಿ ಯಾವರೀತಿ ದೃಢವಾದ ನಂಬಿಕೆಯನ್ನು ವ್ಯಕ್ತಪಡಿಸಿ ಕಾರ್ಯವನ್ನು ಸಾಧಿಸಿದರೋ ಅದರಂತೆ ಶ್ರದ್ಧೆಯನ್ನು ಪ್ರದರ್ಶಿಸುವ ನಮ್ಮ ಸಂಬಂಧಿಗಳಾದ ಭೋಗಾಪೇಕ್ಷಿಗಳಾದ ಜನರೂ, ಯಜ್ಞಾನುಷ್ಠಾನುಕರ್ತರಾದ ಜನರೂ ನಾವೂ ಸಹ ಯಾವುದನ್ನು ಬಯಸುವೆವೋ ಅದನ್ನು ಸಿದ್ಧಿಸುವಂತೆ ಮಾಡು.

## English Translation.

As the gods had faith in (their fight with) the Asuras so grant the boon which has been asked for to our sacrificers who solicit happiness.

॥ ಸಂಹಿತಾಪಾಠಃ ॥

ಶ್ರದ್ಧಾಂ ದೇವಾ ಯಜಮಾನಾ ವಾಯುಗೋಪಾ ಉಪಾಸತೇ ।
ಶ್ರದ್ಧಾಂ ಹೃದಯ್ಯ೧ಯಾಕೂತ್ಯಾ ಶ್ರದ್ಧಯಾ ವಿಂದತೇ ವಸು ॥ ೪ ॥

॥ ಪದಪಾಠಃ ॥

ಶ್ರದ್ಧಾಂ । ದೇವಾಃ । ಯಜಮಾನಾಃ । ವಾಯುಽಗೋಪಾಃ । ಉಪ । ಆಸತೇ ।
ಶ್ರದ್ಧಾಂ । ಹೃದಯ್ಯಯಾ । ಆಽಕೂತ್ಯಾ । ಶ್ರದ್ಧಯಾ । ವಿಂದತೇ । ವಸು ॥ ೪ ॥

॥ ಸಾಯಣಭಾಷ್ಯಂ ॥

ದೇವಾ ಯಜಮಾನಾ ಮನುಷ್ಯಾಶ್ಚ ವಾಯುಗೋಪಾ ವಾಯುರ್ಗೋಪಾ ರಕ್ಷಿತಾ ಯೇಷಾಂ ತೇ ತಾದೃಶಾಃ ಸಂತಃ ಶ್ರದ್ಧಾಂ ದೇವೀಮುಪಾಸತೇ । ಪ್ರಾರ್ಥಯಂತೇ । ಹೃದಯ್ಯಯಾ । ಹೃದಯೇ ಭವಾ ಹೃದಯ್ಯಾ । ತಥಾವಿಧಯಾಕೂತ್ಯಾ ಸಂಕಲ್ಪರೂಪಯಾ ಕ್ರಿಯಯಾ ಶ್ರದ್ಧಾಮೇವ ಪರಿಚರಂತಿ ಸರ್ವೇ ಜನಾಃ । ಕುತ ಇತ್ಯತ ಆಹ । ಯತಃ ಕಾರಣಾಚ್ಛ್ರದ್ಧಯಾ ಹೇತುಭೂತಯಾ ವಸು ಧನಂ ವಿಂದತೇ ಲಭತೇ ಶ್ರದ್ಧಾವಾಞ್ಜನಃ । ತತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವಾಃ**--ದೇವತೆಗಳೂ । **ಯಜಮಾನಾಃ**—ಯಜ್ಞಮಾಡುವ ಯಜಮಾನರೂ । **ವಾಯುಗೋಪಾಃ**—ವಾಯುದೇವತೆಯಿಂದ ರಕ್ಷಿಸಲ್ಪಟ್ಟು । **ಶ್ರದ್ಧಾಂ**—ಶ್ರದ್ಧಾಭಿಮಾನಿದೇವತೆಯನ್ನು । **ಉಪಾಸತೇ**—ಪ್ರಾರ್ಥಿ

ಸುತ್ತಾರೆ (ಮತ್ತು ಜನರು) | **ಹೃದಯ್ಯೆಯಾ**—ಮನಸ್ಸಿನಲ್ಲಿ ಉತ್ಪನ್ನವಾದುದೂ ಎಂದರೆ ಮನಃಪೂರ್ವಕವಾಗಿ ಮಾಡಲ್ಪಡುವುದೂ | **ಆಕೂತ್ಯಾ**—ಸಂಕಲ್ಪರೂಪವಾದುದೂ ಆದ ಕ್ರಿಯೆಯಿಂದ | **ಶ್ರದ್ಧಾಂ**—ಈ ಶ್ರದ್ಧಾ ದೇವತೆಯನ್ನು ಉಪಾಸನೆಮಾಡುತ್ತಾರೆ | **ಶ್ರದ್ಧಯಾ**—ಶ್ರದ್ಧೆಯಿಂದ ಮಾಡಲ್ಪಡುವ ಆ ಕ್ರಿಯೆಯಿಂದಲೇ | **ವಸು**—ಧನವನ್ನು | **ವಿಂದತೇ**—ಹೊಂದುತ್ತಾರೆ.

|| ಭಾವಾರ್ಥ ||

ವಾಯುದೇವತೆಯ ರಕ್ಷಣೆಗೆ ಒಳಗಾದ ದೇವತೆಗಳೂ, ಯಜ್ಞಮಾಡುವ ಯಜಮಾನರೂ ಈ ಶ್ರದ್ಧಾದೇವತೆಯನ್ನೇ ಪ್ರಾರ್ಥಿಸುತ್ತಾರೆ. ಮತ್ತು ಸಮಸ್ತಜನರೂ ಶ್ರದ್ಧೆಯಿಂದ ಮಾಡಲ್ಪಡುವ ಮತ್ತುಶ್ರದ್ಧೆಯಿಂದ ಮಾಡಬೇಕೆಂಬ ಸಂಕಲ್ಪದಿಂದ ಕೂಡಿದ ಕ್ರಿಯೆಯಿಂದಲೇ ಈ ಶ್ರದ್ಧಾದೇವತೆಯನ್ನು ಉಪಾಸಿಸುತ್ತಾರೆ ಎಂದರೆ ಜನರು ತಮ್ಮ ಇಷ್ಟಾರ್ಥಪ್ರಾಪ್ತಿಗಾಗಿ ಈ ಶ್ರದ್ಧಾದೇವತೆಯನ್ನು ಮನಃಪೂರ್ವಕವಾದ ನಂಬಿಕೆಯಿಂದಲೂ ದೃಢವಾದ ವಿಶ್ವಾಸದಿಂದಲೂ ಪ್ರಾರ್ಥಿಸುತ್ತಾರೆ. ಈರೀತಿ ವ್ಯಕ್ತಪಡಿಸುವ ಶ್ರದ್ಧೆಯಿಂದಲೇ ಎಂದರೆ ಶ್ರದ್ಧೆಯಿಂದ ಮಾಡಿದ ಕೆಲಸದಿಂದಲೇ ಜನರು ಧನವನ್ನು ಪಡೆಯುತ್ತಾರೆ.

## English Translation.

Gods, worshippers, and those who are protected by Vayu, Solicit Shraddha, (they chesish) Shradaha with heartfelt desire, through Shraddha a man aquires wealth.

|| ಸಂಹಿತಾಪಾಠಃ ||

ಶ್ರದ್ಧಾಂ ಪ್ರಾತರ್ಹವಾಮಹೇ ಶ್ರದ್ಧಾಂ ಮಧ್ಯಂದಿನಂ ಪರಿ |
ಶ್ರದ್ಧಾಂ ಸೂರ್ಯಸ್ಯ ನಿಮ್ರುಚಿ ಶ್ರದ್ಧೇ ಶ್ರದ್ಧಾಪಯೇಹ ನಃ || ೫ ||

|| ಪದಪಾಠಃ ||

ಶ್ರದ್ಧಾಂ | ಪ್ರಾತಃ | ಹವಾಮಹೇ | ಶ್ರದ್ಧಾಂ | ಮಧ್ಯಂದಿನಂ | ಪರಿ |
ಶ್ರದ್ಧಾಂ | ಸೂರ್ಯಸ್ಯ | ನಿಽಮ್ರುಚಿ | ಶ್ರದ್ಧೇ | ಶ್ರತ್ | ಧಾಪಯ | ಇಹ | ನಃ || ೫ ||

|| ಸಾಯಣಭಾಷ್ಯಂ ||

ಶ್ರದ್ಧಾಂ ದೇವೀಂ ಪ್ರಾತಃ ಪೂರ್ವಾಹ್ಣೇ ಹವಾಮಹೇ | ತಥಾ ಮಧ್ಯಂದಿನಂ ಪರಿ || ಲಕ್ಷಣೇ ಪರೇಃ ಕರ್ಮಪ್ರವಚನೀಯತ್ವಂ || ಮಧ್ಯಂದಿನಂ ಪರಿಲಕ್ಷ್ಯ | ಮಧ್ಯಂದಿನ ಇತ್ಯರ್ಥಃ | ಮಧ್ಯಾಹ್ನೇಽಪಿ ತಾಂ ಶ್ರದ್ಧಾಮಾಹ್ವಯಾಮಹೇ | ಸೂರ್ಯಸ್ಯ ಸರ್ವಸ್ಯ ಪ್ರೇರಕಸ್ಯಾದಿತ್ಯಸ್ಯ ನಿಮ್ರುಚ್ಯಸ್ತಮಯವೇ-

ಲಾಯಾಂ ಸಾಯಂಸಮಯೇಽಪಿ ತಾಮೇವ ಶ್ರದ್ಧಾಮಾಹ್ವಯಾಮಹೇ । ಈದೃಗ್ರೂಪೇ ಹೇ ಶ್ರದ್ಧೇ ನೋಽಸ್ಮಾನಿಹ ಲೋಕೇ ಕರ್ಮಣಿ ವಾ ಶ್ರದ್ಧಾಪಯ । ಶ್ರದ್ಧಾವತಃ ಕುರು ॥

॥ ಪ್ರತಿಪದಾರ್ಥ ॥

**ಶ್ರದ್ಧಾಂ**—ಈ ಶ್ರದ್ಧಾದೇವತೆಯನ್ನು । **ಪ್ರಾತಃ**—ಪ್ರಾತಃಕಾಲದಲ್ಲಿ (ಪೂರ್ವಾಹ್ನದಲ್ಲಿ) । **ಹವಾಮಹೇ**—ನಾವು ಪ್ರಾರ್ಥಿಸಿ ಕರೆಯುತ್ತೇವೆ, ಹಾಗೆಯೇ । **ಮಧ್ಯಂದಿನಂ ಪರಿ** ಮಧ್ಯಾಹ್ನಕಾಲದಲ್ಲಿಯೂ । **ಶ್ರದ್ಧಾಂ**—ಈ ಶ್ರದ್ಧಾಭಿಮಾನಿದೇವತೆಯನ್ನು ಪ್ರಾರ್ಥಿಸಿ ಕರೆಯುತ್ತೇವೆ (ಮತ್ತು) । **ಸೂರ್ಯಸ್ಯ**—ಸರ್ವರನ್ನೂ ಪ್ರೇರಿಸುವ ಆದಿತ್ಯನ । **ನಿಮ್ರುಚಿ**—ಅಸ್ತಮಯಕಾಲದಲ್ಲಿ । **ಶ್ರದ್ಧಾಂ**—ಆ ಶ್ರದ್ಧಾದೇವತೆಯನ್ನೇ ಪ್ರಾರ್ಥಿಸಿ ಕರೆಯುತ್ತೇವೆ । **ಶ್ರದ್ಧೇ**—ಎಲೈ ಶ್ರದ್ಧಾದೇವತೆಯೇ । **ನಃ**—ನಮ್ಮನ್ನು । **ಇಹ**—ಈ ಲೋಕದಲ್ಲಿ ಅಥವಾ ಈ ಕರ್ಮದಲ್ಲಿ । **ಶ್ರತ್ ಧಾಪಯ**—ಶ್ರದ್ಧಾವಂತರನ್ನಾಗಿ ಮಾಡು ।

॥ ಭಾವಾರ್ಥ ॥

ಈ ಶ್ರದ್ಧಾಭಿಮಾನಿದೇವತೆಯನ್ನು ನಾವು ಪ್ರಾತಃಕಾಲದಲ್ಲಿಯೂ ಮಧ್ಯಾಹ್ನಸಮಯದಲ್ಲಿಯೂ ಸೂರ್ಯನ ಅಸ್ತಮಯಕಾಲದಲ್ಲಿಯೂ ಎಂದರೆ ಸಾಯಂಕಾಲದಲ್ಲಿಯೂ ಪ್ರಾರ್ಥಿಸಿ ಕರೆಯುತ್ತೇವೆ. ಎಲೈ ಶ್ರದ್ಧಾದೇವತೆಯೇ, ನಮ್ಮನ್ನು ಈ ಲೋಕದಲ್ಲಿ ಅಥವಾ ನಾವು ಮಾಡುತ್ತಿರುವ ಈ ಕಾರ್ಯದಲ್ಲಿ ಶ್ರದ್ಧೆಯಿಂದಿರುವಂತೆ ಮಾಡು.

## English Translation

We invoke Shraddha at dawn, and again at midday, and also at the setting of the sun ; inspire us in this world, Shraddha, with faith.

॥ ವಿಶೇಷವಿಷಯಗಳು ॥

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಖಿಲಮಂತ್ರಗಳು—

॥ ಮೇಧಾಸೂಕ್ತಂ ॥

ಮೇಧಾಂ ಮಹ್ಯಮಂಗಿರಸೋ ಮೇಧಾಂ ಸಪ್ತ ಋಷಯೋ ದದುಃ ।
ಮೇಧಾಮಿಂದ್ರಶ್ಚಾಗ್ನಿಶ್ಚ ಮೇಧಾಂ ಧಾತಾ ದದಾತು ಮೇ ॥ ೧ ॥
ಮೇಧಾಂ ಮೇ ವರುಣೋ ರಾಜಾ ಮೇಧಾಂ ದೇವೀ ಸರಸ್ವತೀ ।
ಮೇಧಾಂ ಮೇ ಅಶ್ವಿನೌ ದೇವಾವಾಧತ್ತಾಂ ಪುಷ್ಕರಸ್ರಜಾ ॥ ೨ ॥
ಯಾ ಮೇಧಾ ಅಪ್ಸರಸ್ಸು ಗಂಧರ್ವೇಷು ಚ ಯನ್ಮನಃ ।
ದೈವೀ ಯಾ ಮಾನುಷೀ ಮೇಧಾ ಸಾ ಮಾಮಾ ವಿಶತಾದಿಮಾಂ ॥ ೩ ॥
ಯನ್ಮೇ ನೋಕ್ತಂ ತದ್ರಮತಾಂ ಶಕೇಯಂ ಯದನುಬ್ರುವೇ ।
ನಿಶಾಮಿತಂ ನಿ ಶಾಮಹೈ ಮಯಿ ವ್ರತಂ ಸಹ ವ್ರತೇಷು ಭೂಯಾಸಂ
[ಬ್ರಹ್ಮಣಾ ಸಂ ಗಮೇಮಹಿ ॥ ೪ ॥

ಶರೀರಂ ಮೇ ವಿಚರ್ಷಣಂ ವಾಙ್ಮೇ ಮಧುಮದ್ದುಹಾಂ ।
ಅವೃದ್ಧಮಹಮಸೌ ಸೂರ್ಯೋ ಬ್ರಹ್ಮಣಾನೀ ಸ್ಥಃ ಶ್ರುತಂ ಮೇ ಮಾ ಪ್ರಹಾಸೀಃ ॥ ೫ ॥

ಮೇಧಾಂ ದೇವೀಂ ಮನಸಾ ರೇಜಮಾನಾಂ ಗಂಧರ್ವಜುಷ್ಟಾಂ ಪ್ರತಿ ನೋ ಜುಷಸ್ವ ।
ಮಹ್ಯಂ ಮೇಧಾಂ ವದ ಮಹ್ಯಂ ಶ್ರಿಯಂ ವದ ಮೇಧಾವೀ ಭೂಯಾಸಮಜರಾಜರಿಷ್ಣು ॥ ೬ ॥

ಸದಸಸ್ಪತಿಮದ್ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ ।
ಸನಿಂ ಮೇಧಾಮಯಾಸಿಷಂ ॥ ೭ ॥

ಯಾಂ ಮೇಧಾಂ ದೇವಗಣಾಃ ಪಿತರಶ್ಚೋಪಾಸತೇ ।
ತಯಾ ಮಾಮದ್ಯಮೇಧಯಾಗ್ನೇ ಮೇಧಾವಿನಂ ಕುರು ॥ ೮ ॥

ಮೇಧಾವ್ಯ೧ಹಂ ಸುಮನಾಃ ಸುಪ್ರತೀಕಃ ಶ್ರದ್ಧಾಮನಾಃ ಸತ್ಯಮತಿಃ ಸುಶೇವಃ ।
ಮಹಾಯಶಾ ಧಾರಯಿಷ್ಣುಃ ಪ್ರವಕ್ತಾ ಭೂಯಾಸಮಸ್ಮಿನ್ ಶರಯಾ ಪ್ರಯೋಗೇ ॥ ೯ ॥

ನಾಶಾಯಿತ್ರೀ ಪಲಾಶಸ್ಯಾರುಷಸೌ ಪಥಿಕಾಮುಸು ।
ಅಥೋ ತತಸ್ಯ ಯಕ್ಷ್ಮಾಣಮಪಾಪಾ ರೋಗನಾಶಿನೀ ॥ ೧೦ ॥

ಬ್ರಹ್ಮವೃಕ್ಷ ಪಲಾಶ ತ್ವಂ ಶ್ರದ್ಧಾಂ ಮೇಧಾಂ ಚ ದೇಹಿ ಮೇ ।
ವೃಕ್ಷಾಧಿಪ ನಮಸ್ತೇಽಸ್ತು ಅತ್ರ ತ್ವಂ ಸಂನಿಧೌ ಭವ ॥ ೧೧ ॥



## ನೂರ ಐವತ್ತೆರಡನೆಯ ಸೂಕ್ತವು

### ಪೀಠಿಕೆ.

ಈ ಸೂಕ್ತದ ವಿಷಯದಲ್ಲಿ ಋಗ್ವಿಧಾನದಲ್ಲಿ ಈ ರೀತಿ ಹೇಳಿದೆ—

ಶಾಸ ಇತ್ಥಾ ಸಪತ್ನಘ್ನಂ ಸಂಗ್ರಾಮಂ ವಿಜಿಗೀಷತಃ ॥ ೭೬ ॥
ಪ್ರಯೋಕ್ತವ್ಯಂ ತು ಶುಚಿನಾ ಜುಹುಯಾತ್ತತ್ರ ಸಿದ್ಧಯೇ
ಅಥವಾ ಜಪ್ಯಮೇವ ಸ್ಯಾತ್ಸಂಗ್ರಾಮಮಭಿಗಚ್ಛತಃ ॥ ೭೭ ॥
ಶಾಸ ಇತ್ಥೇತಿ ಯೋ ಹಂತುಂ ಶತ್ರೂನ್ಸರ್ವಾನ್ನಿವಾರಯೇತ್ ॥

(ಋಗ್ವಿಧಾನ ಅಧ್ಯಾಯ-೪. ಶ್ಲೋ ೭೬—೭೭)

ಯುದ್ಧದಲ್ಲಿ ಜಯವನ್ನು ಪಡೆಯಬೇಕೆಂದು ಅಪೇಕ್ಷಿಸುವ ಪುರುಷನು ಶುಚಿರ್ಭೂತನಾಗಿ **ಶಾಸ ಇತ್ಥಾ** ಎಂಬ ಈ **ಸೂಕ್ತವನ್ನು** ಪಠಿಸಬೇಕು. ಇದು ಶತ್ರುಗಳನ್ನು ನಾಶಮಾಡುವುದು. ಈ ಸೂಕ್ತದ ಮಂತ್ರಗಳಿಂದ ಪ್ರತಿಷ್ಠಿತಾಗ್ನಿಯಲ್ಲಿ ಹೋಮಮಾಡಿದರೆ ಶತ್ರುನಿಗ್ರಹ ಮೊದಲಾದ ಇಷ್ಟಸಿದ್ಧಿಯಾಗುವುದು. ಅಥವಾ ಯುದ್ಧಕ್ಕೆ ಹೊರಟಿರುವ ಪುರುಷನು ಈ ಸೂಕ್ತವನ್ನು ಜಪಮಾಡಿದರೆ ಅವನು ಯುದ್ಧದಲ್ಲಿ ಶತ್ರುಗಳನ್ನು ಸಂಹಾರ ಮಾಡಲು ಸಮರ್ಥನಾಗುವನು.

॥ ಸಾಯಣಭಾಷ್ಯಂ ॥

**ದ್ವಾದಶೇಽನುವಾಕೇ ಚತ್ವಾರಿಂಶತ್ಸೂಕ್ತಾನಿ । ತತ್ರ ಶಾಸ ಇತ್ಥೇತಿ ಪಂಚರ್ಚಂ ಪ್ರಥಮಂ ಸೂಕ್ತಂ ಶಾಸನಾಮ್ನ ಆರ್ಷಮಾನುಷ್ಟುಭಮೈಂದ್ರಂ । ಅನುಕ್ರಾಂತಂ ಚ । ಶಾಸಃ ಶಾಸೋ ಭಾರದ್ವಾಜ ಇತಿ ॥ ಯುದ್ಧಾಯ ಸಂನದ್ಧಂ ರಾಜಾನಮನೇನೇಕ್ಷೇತ । ತಥಾ ಚ ಸೂತ್ರಿತಂ । ಅಥೈನಮನ್ವೀಕ್ಷೇತಾಪ್ರತಿರಥಶಾಸಸೌಪರ್ಣೈಃ । ಆ. ಗೃ. ೩-೧೨-೧೩ । ಇತಿ ॥**

ಅನುವಾದವು—ಹತ್ತನೆಯ ಮಂಡಲದ ಹನ್ನೆರಡನೆಯ ಅನುವಾಕದಲ್ಲಿ ನಲವತ್ತು ಸೂಕ್ತಗಳಿರುವವು. ಅವುಗಳಲ್ಲಿ **ಶಾಸ ಇತ್ಥಾ** ಎಂಬ ಈ ಸೂಕ್ತವು ಮೊದಲನೆಯದು ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜಋಷಿಯ ಪುತ್ರನಾದ ಶಾಸನೆಂಬುವನು ಋಷಿಯು; ಇಂದ್ರನು ದೇವತೆಯು, ಅನುಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಶಾಸಃ ಶಾಸೋ ಭಾರದ್ವಾಜಃ** ಎಂದು ಹೇಳಿರುವುದು ಈ ಸೂಕ್ತಪಠನಪೂರ್ವಕವಾಗಿ ಯುದ್ಧಕ್ಕೆ ಸನ್ನದ್ಧನಾಗಿ ಹೊರಟಿರುವ ರಾಜನನ್ನು ನೋಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ—**ಅಥೈನಮನ್ವೀಕ್ಷೇತಾಪ್ರತಿರಥಶಾಸಸೌಪರ್ಣೈಃ** ಎಂಬ ಸೂತ್ರದಿಂದ (ಆ. ಗೃ. ೩-೧೨-೧೩) ವಿವೃತವಾಗಿರುವುದು.

## ಸೂಕ್ತ ೧೫೨

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೫೨ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ॥
॥ ಋಷಿಃ—ಶಾಸೋ ಭಾರದ್ವಾಜಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಶಾಸ ಇತ್ಥಾ ಮಹಾಁ ಅಸ್ಯಮಿತ್ರಖಾದೋ ಅದ್ಭುತಃ ।
ನ ಯಸ್ಯ ಹನ್ಯತೇ ಸಖಾ ನ ಜೀಯತೇ ಕದಾ ಚನ ॥ ೧ ॥

॥ ಪದಪಾಠಃ ॥

ಶಾಸಃ । ಇತ್ಥಾ । ಮಹಾನ್ । ಅಸಿ । ಅಮಿತ್ರಽಖಾದಃ । ಅದ್ಭುತಃ ।
ನ । ಯಸ್ಯ । ಹನ್ಯತೇ । ಸಖಾ । ನ । ಜೀಯತೇ । ಕದಾ । ಚನ ॥ ೧ ॥

॥ ಸಾಯಣಭಾಷ್ಯಂ ॥

**ಶಾಸಸ್ತತ್ಸಂಜ್ಞೋಽಹಮಿತ್ಥಮನೇನ ವಕ್ಷ್ಯಮಾಣಪ್ರಕಾರೇಣೇಂದ್ರಂ ಸ್ತೌಮೀತಿ ಶೇಷಃ । ಹೇ ಇಂದ್ರ ತ್ವಂ ಮಹಾ ಅಸಿ । ಸರ್ವೇಭ್ಯೋಽಧಿಕೋ ಭವಸಿ । ಅಮಿತ್ರಖಾದೋಽಮಿತ್ರಾಣಾಂ ಶತ್ರೂಣಾಂ**

ಖಾದಿತಾ ವಿನಾಶಯಿತಾ ಅತ ಏವಾದ್ಭುತ ಆಶ್ಚರ್ಯಭೂತಶ್ಚ ಭವಸೀತಿ। ಯಸ್ಯೇಂದ್ರಸ್ಯ ಸಖಾ ಮಿತ್ರಭೂತಃ ಪುರುಷಃ ಕದಾ ಚನ ಕದಾಚಿದಪಿ ನ ಹನ್ಯತೇ ನ ಹಿಂಸ್ಯತೇ ನ ಜೀಯತೇ ನ ಚ ಶತ್ರುಭಿಃ ಪರಾಜಿತೋ ಭವತಿ ಸ ತ್ವಂ ಮಹಾँ ಅಸೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಶಾಸಃ**—ಶಾಸನೆಂಬ ಹೆಸರಿನಿಂದ ಪ್ರಸಿದ್ಧನಾದ ನಾನು । **ಇತ್ಥಾ**—ಈ ಪ್ರಕಾರವಾಗಿ ಇಂದ್ರನನ್ನು ಸ್ತುತಿಸುತ್ತೇನೆ । ಎಲೈ ಇಂದ್ರನೇ, **ಯಸ್ಯ**—ಯಾವ ನಿನ್ನ । **ಸಖಾ**—ಮಿತ್ರಭೂತನಾದ ಪುರುಷನು । **ಕದಾ ಚನ**—ಯಾವಾಗಲೂ । **ನ ಹನ್ಯತೇ**—ಹಿಂಸಿಸಲ್ಪಡುವುದಿಲ್ಲವೋ । **ನ ಜೀಯತೇ**—ಶತ್ರುಗಳಿಂದ ಜಯಿಸಲ್ಪಡುವುದಿಲ್ಲವೋ ಅಂತಹ ಇಂದ್ರನಾದ ನೀನು । **ಮಹಾನ್ ಅಸಿ** ಸರ್ವರಿಗಿಂತಲೂ ಅಧಿಕನಾಗಿದ್ದೀಯೆ । **ಅಮಿತ್ರಖಾದಃ**—ಶತ್ರುಗಳನ್ನು ವಿನಾಶಮಾಡುವವನೂ । **ಅದ್ಭುತಃ**—ಆಶ್ಚರ್ಯಕರವಾದ ಮಹಿಮೆಯುಳ್ಳವನೂ ಆಗಿದ್ದೀಯೆ

॥ ಭಾವಾರ್ಥ ॥

ಶಾಸನೆಂಬ ಹೆಸರಿನ ಈ ಸೂಕ್ತದ್ರಷ್ಟೃ ಋಷಿಯಾದ ನಾನು ಇಂದ್ರನನ್ನು ಈ ರೀತಿ ಸ್ತುತಿಸುತ್ತೇನೆ. ಇಂದ್ರನಿಗೆ ಯಾವ ಪುರುಷನು ಸ್ನೇಹಿತನಾಗಿರುವನೋ ಅವನು ಯಾವಾಗಲೂ ಯಾರಿಂದಲೂ ಹಿಂಸಿಸಲ್ಪಡುವುದಿಲ್ಲ ಶತ್ರುಗಳಿಂದ ಪರಾಜಿತನಾಗುವುದಿಲ್ಲ. ಇಂತಹ ಮಹಿಮೆಯುಳ್ಳ ಎಲೈ ಇಂದ್ರನೇ, ನೀನು ಸರ್ವರಿಗಿಂತಲೂ ಅಧಿಕನಾಗಿದ್ದೀಯೆ, ಮತ್ತು ನಿನ್ನ ಮಹಿಮೆಯು ಆಶ್ಚರ್ಯಕರವಾಗಿದೆ

## English Translation

(I) Shasa thus (praise Indra), you are mighty, the destroyer of foes the wonderful, (he) whose friend is not killed nor ever overpowered.

॥ ಸಂಹಿತಾಪಾಠಃ ॥

ಸ್ವಸ್ತಿದಾ ವಿಶಸ್ಪತಿರ್ವೃತ್ರಹಾ ವಿಮೃಧೋ ವಶೀ ।
ವೃಷೇಂದ್ರಃ ಪುರ ಏತು ನಃ ಸೋಮಪಾ ಅಭಯಂಕರಃ ॥ ೨ ॥

॥ ಪದಪಾಠಃ ॥

ಸ್ವಸ್ತಿಽದಾಃ । ವಿಶಃ । ಪತಿಃ । ವೃತ್ರಽಹಾ । ವಿಽಮೃಧಃ । ವಶೀ ।
ವೃಷಾ । ಇಂದ್ರಃ । ಪುರಃ । ಏತು । ನಃ । ಸೋಮಽಪಾಃ । ಅಭಯಂಽಕರಃ ॥ ೨ ॥

|| ಸಾಯಣಭಾಷ್ಯಂ ||

**ಸ್ವಸ್ತಿದಾಃ ಸ್ವಸ್ತೇರವಿನಾಶಸ್ಯ ದಾತಾ ವಿಶಸ್ಪತಿಃ ಸರ್ವಸ್ಯಾಃ ಪ್ರಜಾಯಾಃ ಪಾಲಯಿತಾ ವೃತ್ರಹಾ ವೃತ್ರಾಣಾಂ ಶತ್ರೂಣಾಂ ಹಂತಾ ವಿಮೃಧಃ ಸಂಗ್ರಾಮಕಾರೀ ವಶೀ ವಶೀಕರ್ತಾ ವೃಷಾ ವರ್ಷಿತಾ ಕಾಮಾನಾಂ ಸೋಮಪಾಃ ಸೋಮಸ್ಯ ಪಾತಾ ಏವಂವಿಧ ಇಂದ್ರೋಽಭಯಂಕರೋಽಭಯಸ್ಯ ಭಯ-ರಾಹಿತ್ಯಸ್ಯ ಕರ್ತಾ ನನ್ನೋಽಸ್ಮಾಕಂ ಪುರ ಏತು । ಪುರತೋ ಗಚ್ಛತು ॥**

|| ಪ್ರತಿಪದಾರ್ಥ ||

**ಸ್ವಸ್ತಿದಾಃ**—ಕ್ಷೇಮವನ್ನುಂಟುಮಾಡುವವನೂ । **ವಿಶಃ ಪತಿಃ** ಸಮಸ್ತ ಪ್ರಜೆಗಳಿಗೂ ಒಡೆಯನಾದವನೂ ಅಥವಾ ಪಾಲಕನಾದವನೂ । **ವೃತ್ರಹಾ**—ಶತ್ರುಹಂತಕನೂ । **ವಿಮೃಧಃ**—ಯುದ್ಧಮಾಡುವವನೂ । **ವಶೀ**—ಶತ್ರುಗಳನ್ನು ತನ್ನ ವಶಮಾಡಿಕೊಳ್ಳುವವನೂ । **ವೃಷಾ** ಇಷ್ಟಾರ್ಥಪ್ರದನೂ । **ಸೋಮಪಾಃ**—ಸೋಮರಸವನ್ನು ಪಾನಮಾಡುವವನೂ ಆದ । **ಇಂದ್ರಃ**—ಇಂದ್ರನು । **ಅಭಯಂಕರಃ**—ನಮಗೆ ಅಭಯವನ್ನು (ರಕ್ಷಣೆಯನ್ನು) ನೀಡುತ್ತಾ । **ನಃ**—ನಮ್ಮ । **ಪುರಃ**—ಮುಂಭಾಗದಲ್ಲಿ । **ಏತು**—ನಮ್ಮ ನಾಯಕನಂತೆ ಹೊರಡಲಿ.

|| ಭಾವಾರ್ಥ ||

ಸಮಸ್ತಪ್ರಜೆಗಳಿಗೂ ಪಾಲಕನೂ ಅವರಿಗೆ ಕ್ಷೇಮವನ್ನುಂಟುಮಾಡುವವನೂ, ಶತ್ರುಹಂತಕನೂ, ಯುದ್ಧಕುಶಲನೂ ಶತ್ರುಗಳನ್ನು ವಶಮಾಡಿಕೊಳ್ಳುವವನೂ ಇಷ್ಟಾರ್ಥವನ್ನು ಸುರಿಸುವವನೂ ಸೋಮಪಾನ ಮಾಡುವವನೂ ಆದ ಇಂದ್ರನು ನಮಗೆ ಅಭಯವನ್ನು ನೀಡುತ್ತಾ ನಮ್ಮ ಮುಂಭಾಗದಲ್ಲಿ ನಾಯಕನಾಗಿ (ಯುದ್ಧಕ್ಕೆ) ಹೊರಡಲಿ.

## English Translation

May Indra, the granter of prosperity, the lord of men, the slayer of Vritra, the warrior, the subduer, the showerer, the drinker of the Soma, the assurer of safety, come to our presence.

|| ಸಂಹಿತಾಪಾಠಃ ||

ವಿ ರಕ್ಷೋ ವಿ ಮೃಧೋ ಜಹಿ ವಿ ವೃತ್ರಸ್ಯ ಹನೂ ರುಜ ।
ವಿ ಮನ್ಯುಮಿಂದ್ರ ವೃತ್ರಹನ್ನಮಿತ್ರಸ್ಯಾಭಿದಾಸತಃ ॥ ೩ ॥

|| ಪದಪಾಠಃ ||

ವಿ । ರಕ್ಷಃ । ವಿ । ಮೃಧಃ । ಜಹಿ । ವಿ । ವೃತ್ರಸ್ಯ । ಹನೂ ಇತಿ । ರುಜ ।
ವಿ । ಮನ್ಯುಂ । ಇಂದ್ರ । ವೃತ್ರಽಹನ್ । ಅಮಿತ್ರಸ್ಯ । ಅಭಿಽದಾಸತಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ರಕ್ಷೋ ರಾಕ್ಷಸಜಾತಂ ವಿ ಜಹಿ । ವಿನಾಶಯ । ಮೃಧಃ ಸಂಗ್ರಾಮಕಾರಿಣಃ ಶತ್ರೂಂಶ್ಚ ವಿ ಜಹಿ । ವೃತ್ರಸ್ಯಾವರಕಸ್ಯಾಸುರಸ್ಯ ಹನೂ ಕಪೋಲಪ್ರಾಂತೌ ವಿ ರುಜ । ವಿಶೇಷೇಣ ಭಗ್ನೌ ಕುರು । ಹೇ ವೃತ್ರಹನ್ನಿಂದ್ರ ಅಭಿದಾಸತೋಽಸ್ಮಾನುಪಕ್ಷಯತೋ ಮಿತ್ರಸ್ಯ ಶತ್ರೋರ್ಮನ್ಯುಂ ಕ್ರೋಧಮಪಿ ವಿನಾಶಯ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ರಕ್ಷಃ**—ರಾಕ್ಷಸಸಮೂಹವನ್ನು । **ವಿ ಜಹಿ**—ನಾಶಮಾಡು । **ಮೃಧಃ**—ಯುದ್ಧ ಮಾಡುವ ಶತ್ರುಗಳನ್ನು । **ವಿ ಜಹಿ**—ಸೋಲಿಸು । **ವೃತ್ರಸ್ಯ**—ಮುತ್ತಿರುವ ಅಸುರನ । **ಹನೂ**—ಕೆನ್ನೆಗಳನ್ನು । **ವಿ ರುಜ**—ಪ್ರಹರಿಸಿ ಘಾಸಿಮಾಡು । **ವೃತ್ರಹನ್**—ಶತ್ರುಹಂತಕನಾದ । **ಇಂದ್ರ**—ಎಲೈ ಇಂದ್ರನೇ । **ಅಭಿದಾಸತಃ**—ನಮ್ಮನ್ನು ನಾಶಮಾಡುವ । **ಅಮಿತ್ರಸ್ಯ**—ಶತ್ರುವಿನ । **ಮನ್ಯುಂ**—ಕೋಪವನ್ನು ನಾಶಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ರಾಕ್ಷಸ ಸಮೂಹವನ್ನು ನಾಶಮಾಡು. ಯುದ್ಧಮಾಡುತ್ತಿರುವ ಈ ಶತ್ರುಗಳನ್ನು ಸೋಲಿಸು. ಮುತ್ತಿರುವ ಈ ಅಸುರನ ಕೆನ್ನೆಗಳಿಗೆ ಹೊಡೆದು ಘಾಸಿಮಾಡು. ಶತ್ರುಹಂತಕನಾದ ಎಲೈ ಇಂದ್ರನೇ, ನಮ್ಮನ್ನು ನಾಶಮಾಡಲೆಳಸುವ ಈ ಶತ್ರುವಿನ ಕೋಪವನ್ನು ನಾಶಮಾಡು.

## English Translation.

Destroy, Indra, the Rakshasas, the enemies; fracture the jaws of Vritra; baffle, Indra, slayer of Vritra, the wrath of (our) menacing foe.

॥ ಸಂಹಿತಾಪಾಠಃ

ವಿ ನ ಇಂದ್ರ ಮೃಧೋ ಜಹಿ ನೀಚಾ ಯಚ್ಛ ಪೃತನ್ಯತಃ ।
ಯೋ ಅಸ್ಮಾँ ಅಭಿದಾಸತ್ಯಧರಂ ಗಮಯಾ ತಮಃ ॥ ೪ ॥

॥ ಪದಪಾಠಃ ॥

ವಿ । ನಃ । ಇಂದ್ರ । ಮೃಧಃ । ಜಹಿ । ನೀಚಾ । ಯಚ್ಛ । ಪೃತನ್ಯತಃ ।
ಯಃ । ಅಸ್ಮಾನ್ । ಅಭಿಽದಾಸತಿ । ಅಧರಂ । ಗಮಯ । ತಮಃ ॥ ೪ ॥

॥ ಸಾಯಣಭಾಷ್ಯಂ ॥

**ವಿ ನ ಇಂದ್ರೇತಿ ವೈಮೃಧಸ್ಯ ಹವಿಷೋಽನುವಾಕ್ಯಾ । ಸೂತ್ರಿತಂ ಚ । ವಿ ನ ಇಂದ್ರ ಮೃಧೋ ಜಹಿ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ । ಆ. ೨-೧೦ । ಇತಿ ॥**

**ಹೇ ಇಂದ್ರ ನೋಽಸ್ಮಾಕಂ ಮೃಧಃ ಸಂಗ್ರಾಮಕಾರಿಣಃ ಶತ್ರೂನ್ವಿ ಜಹಿ । ವಿನಾಶಯ । ತಥಾ ಪೃತನ್ಯತಃ ಪೃತನಾಃ ಸೇನಾ ಆತ್ಮನ ಇಚ್ಛತೋ ಯುಯುತ್ಸಮಾನಾನಪಿ ನೀಚಾ ಯಚ್ಛ । ನೀಚೀನಮ-ವಾಙ್ಮುಖಂ ಯಚ್ಛ। ಗಮಯ । ಯಃ ಶತ್ರುರಸ್ಮಾನಭಿದಾಸತಿ ಅಭಿತ ಉಪಕ್ಷಪಯತಿ ತಮಧರಂ ನಿಕೃಷ್ಟಂ ತಮೋಽಂಧಕಾರಂ ಮರಣಲಕ್ಷಣಂ ಗಮಯ । ಪ್ರಾಪಯ ॥**

॥ ಪ್ರತಿಪದಾರ್ಥ ॥

**ಇಂದ್ರಃ**—ಎಲೈ ಇಂದ್ರನೇ । **ನಃ**—ನಮ್ಮ (ನಮ್ಮೊಡನೆ) । **ಮೃಧಃ**—ಯುದ್ಧಮಾಡುವ ಶತ್ರುಗಳನ್ನು । **ವಿ ಜಹಿ**—ನಾಶಮಾಡು (ಹಾಗೆಯೇ) । **ಪೃತನ್ಯತಃ**—ಶತ್ರುಸೇನೆಯಲ್ಲಿ ನಮ್ಮ ಅಭಿಮುಖವಾಗಿ ಯುದ್ಧಮಾಡುವ ಈ ಶತ್ರುಗಳನ್ನು । **ನೀಚಾ ಯಚ್ಛ**—ಕೆಳಗೆ ಬೀಳುವಂತೆ ಮಾಡು । **ಯಃ**—ಯಾವ ನಮ್ಮ ಶತ್ರುವು । **ಅಸ್ಮಾನ್**—ನಮ್ಮನ್ನು । **ಅಭಿದಾಸತಿ**—ಸುತ್ತಲೂ ಮುತ್ತಿ ಕೊಲ್ಲಲೆಳಿಸುವನೋ ಅವನನ್ನು । **ಅಧರಂ**—ನಿಕೃಷ್ಟವಾದ । **ತಮಃ**—ಅಂಧಕಾರರೂಪವಾದ ಮರಣವನ್ನು । **ಗಮಯ**—ಹೊಂದಿಸು (ಕೆಳಗೆ ಬಿದ್ದು ಮೃತನಾಗುವಂತೆ ಮಾಡು.)

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮೊಡನೆ ಯುದ್ಧಮಾಡುತ್ತಿರುವ ಶತ್ರುಗಳನ್ನು ನಾಶಮಾಡು. ಹಾಗಯೇ ಶತ್ರುಸೇನೆಯಲ್ಲಿ ನಮ್ಮ ಅಭಿಮುಖವಾಗಿ ಹೋರಾಡುತ್ತಿರುವ ಶತ್ರುಗಳನ್ನು ಕೆಳಗೆ ಬೀಳುವಂತೆ ಮಾಡು. ಯಾವ ಶತ್ರುವು ನಮ್ಮನ್ನು ಸುತ್ತಲೂ ಮುತ್ತಿ ನಾಶಮಾಡಲಿಚ್ಛಿಸುವನೋ ಅವನು ಕೆಳಗೆ ಬಿದ್ದು ಕತ್ತಲುನಂತಿರುವ ಮರಣಕ್ಕೆ ಈಡಾಗುವಂತೆ ಮಾಡು.

## English Translation.

Destroy, Indra, our enemies; hunt down those who are in array against us; consign to lower darkness him who seeks to harm us.

॥ ವಿಶೇಷವಿಷಯಗಳು ॥

**ವಿ ನ ಇಂದ್ರ** ಎಂಬ ಈ ಋಕ್ಕನ್ನು ವೈಮೃಧೇಷ್ಟಿಯಲ್ಲಿ ಹವಿಸ್ಸನ್ನು ಹೋಮಮಾಡುವಾಗ ಅನುವಾಕ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ವಿ ನ ಇಂದ್ರ ಮೃಧೋ ಜಹಿ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ** ಎಂಬ ಸೂತ್ರದಿಂದ (ಆ. ೨-೧೦) ವಿವೃತವಾಗಿರುವುದು.

|| ಸಂಹಿತಾಪಾಠಃ ||

ಅಪೇಂದ್ರ ದ್ವಿಷತೋ ಮನೋಽಪ ಜಿಜ್ಯಾಸತೋ ವಧಂ ।
ವಿ ಮನ್ಯೋಃ ಶರ್ಮ ಯಚ್ಛ ವರೀಯೋ ಯವಯಾ ವಧಂ || ೫ ||

|| ಪದಪಾಠಃ ||

ಅಪ । ಇಂದ್ರ । ದ್ವಿಷತಃ । ಮನಃ । ಅಪ । ಜಿಜ್ಯಾಸತಃ । ವಧಂ ।
ವಿ । ಮನ್ಯೋಃ । ಶರ್ಮ । ಯಚ್ಛ । ವರೀಯಃ । ಯವಯ । ವಧಂ || ೫ ||

|| ಸಾಯಣಭಾಷ್ಯಂ ||

ಹೇ ಇಂದ್ರ ದ್ವಿಷತೋ ದ್ವೇಷ್ಟುಃ ಶತ್ರೋರ್ಮನೋಽಪ ಜಹಿ । ಜಿಜ್ಯಾಸತೋಽಸ್ಮಾಕಂ ವಯೋಹಾನಿಮಿಚ್ಛತಶ್ಚ ವಧಂ ಹನನಸಾಧನಮಾಯುಧಂ ಚಾಪ ಜಹಿ । ಮನ್ಯೋಃ ಶತ್ರುಸಂಬಂಧಿನಃ ಕ್ರೋಧಾಚ್ಚಾಸ್ಮಾನ್ರಕ್ಷ । ವರೀಯ ಉರುತರಂ ಶರ್ಮ ಸುಖಂ ವಿಶೇಷೇಣ ಯಚ್ಛ । ದೇಹಿ । ವಧಂ ಶತ್ರುಕೃತಂ ಹನನಂ ಚ ಯವಯ । ಅಸ್ಮತ್ತಃ ಪೃಥಕ್ಕುರು ||

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ದ್ವಿಷತಃ**—ನಮ್ಮನ್ನು ದ್ವೇಷಿಸುವ ಶತ್ರುವಿನ । **ಮನಃ**—ಮನಸ್ಸನ್ನು (ಬುದ್ಧಿಯನ್ನು ಅಥವಾ ವಿವೇಚನಾಶಕ್ತಿಯನ್ನು) । **ಅಪ**—ಕೆಡಿಸು । **ಜಿಜ್ಯಾಸತಃ**—ನಮ್ಮನ್ನು ಕೊನೆಗಾಣಿಸ ಬೇಕೆಂದು ಇಚ್ಛಿಸುತ್ತಿರುವ ಶತ್ರುವಿನ । **ವಧಂ**—ಹನನಸಾಧನವಾದ ಆಯುಧವನ್ನು । **ಅಪ**—ಉಪಯೋಗ ವಿಲ್ಲದಂತೆ ಮಾಡು । **ಮನ್ಯೋಃ**—ಶತ್ರುವಿನ ಕೋಪದಿಂದ ನಮ್ಮನ್ನು ರಕ್ಷಿಸು । **ವರೀಯಃ**—ಅತಿಶಯವಾದ । **ಶರ್ಮ**—ಸುಖವನ್ನು । **ವಿ ಯಚ್ಛ**—ವಿಶೇಷವಾಗಿ ಕೊಡು । **ವಧಂ**—ಶತ್ರುವು ನಮ್ಮನ್ನು ಕೊಲ್ಲಬೇಕೆಂದಿರುವು ದನ್ನು । **ಯವಯ**—ಆಗದಂತೆ ಮಾಡು.

|| ಭಾವಾರ್ಥ ||

ಎಲೈ ಇಂದ್ರನೇ, ನಮ್ಮನ್ನು ದ್ವೇಷಿಸುತ್ತಿರುವ ಶತ್ರುವಿನ ಮನಸ್ಸನ್ನು ಎಂದರೆ ವಿವೇಚನಾಶಕ್ತಿಯನ್ನು ಕೆಡಿಸು. ನಮ್ಮ ಆಯುಸ್ಸನ್ನು ಕೊನೆಗಾಣಿಸಬೇಕೆಂದು ಬಯಸುವ ಶತ್ರುವಿನ ಆಯುಧವನ್ನು ಉಪಯೋಗವಿಲ್ಲದಂತೆ ಮಾಡು. ಶತ್ರುವಿನ ಕೋಪದಿಂದ ನಮ್ಮನ್ನು ರಕ್ಷಿಸು. ಅತಿಶಯವಾದ ಸುಖವನ್ನು ಕೊಡು ಮತ್ತು ಶತ್ರುವು ನಮ್ಮನ್ನು ಕೊಲ್ಲದಂತೆ ತಡೆಗಟ್ಟು.

## English Translation

Frustrate the purpose of him who hates us, (baffle) the weapon of him who seeks to overpower us; grant us entire security from his warth, ward off (his) weapon.

## ನೂರ ಐವತ್ತಮೂರನೆಯ ಸೂಕ್ತವು

|| ಸಾಯಣಭಾಷ್ಯಂ ||

**ಈಂಖಯಂತೀರಿತಿ ಪಂಚರ್ಚಂ ಗಾಯತ್ರಮೈಂದ್ರಂ ದ್ವಿತೀಯಂ ಸೂಕ್ತಂ। ದೇವಾನಾಂ ಸ್ವಸೃಭೂತಾ ಇಂದ್ರಮಾತರೋ ನಾಮರ್ಷಿಕಾಃ। ತಥಾ ಚಾನುಕ್ರಾಂತಂ। ಈಂಖಯಂತೀರ್ದೇವಜಾಮಯ ಇಂದ್ರಮಾತರೋ ಗಾಯತ್ರಮಿತಿ॥ ದ್ವಿತೀಯೇ ಪರ್ಯಾಯೇ ಪ್ರಶಾಸ್ತುಃ ಶಸ್ತ್ರ ಇದಂ ಸೂಕ್ತಂ। ಸೂತ್ರಿತಂ ಚ। ಈಂಖಯಂತೀರಹಂ ದಾಂ ಪಾತಾ ಸುತಂ। ಆ. ೬-೪। ಇತಿ॥ ಮಹಾವ್ರತೇಽಪಿ ಪ್ರಾತಃ-ಸವನಿಕೇ ಬ್ರಹ್ಮಶಸ್ತ್ರ ಏತತ್ಸೂಕ್ತಂ॥**

ಅನುವಾದವು—**ಈಂಖಯಂತೀಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು, ಈ ಸೂಕ್ತಕ್ಕೆ ದೇವತೆಗಳಿಗೆ ಸಹೋದರಿಯರಾದ ಇಂದ್ರಮಾತರಃ ಎಂಬ ಸ್ತ್ರೀಯರು ಋಷಿಕೆಯರು ಇಂದ್ರನು ದೇವತೆಯು, ಗಾಯತ್ರೀಛಂದಸ್ಸು, ಅನುಕ್ರಮಣಿಕೆಯಲ್ಲಿ—**ಈಂಖಯಂತೀರ್ದೇವಜಾಮಯ ಇಂದ್ರಮಾತರೋ ಗಾಯತ್ರಂ** ಎಂದು ಹೇಳಿರುವುದು. ಎರಡನೇ ಪರ್ಯಾಯದಲ್ಲಿ ಪ್ರಶಾಸ್ತೃವೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುನೆಂದು ಆಶ್ವಲಾಯನಶ್ರೌತಸೂತ್ರದ— **ಈಂಖಯಂತೀರಹಂ ದಾಂ ಪಾತಾ ಸುತಂ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

---

### ಸೂಕ್ತ—೧೫೩

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೫೩ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ- ೧೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಇಂದ್ರಮಾತರೋ ದೇವಜಾಮಯಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಈಂಖಯಂತೀರಪಸ್ಯುವ ಇಂದ್ರಂ ಜಾತಮುಪಾಸತೇ ।
ಭೇಜಾನಾಸಃ ಸುವೀರ್ಯಂ ॥ ೧ ॥

॥ ಪದಪಾಠಃ ॥

ಈಂಖಯಂತೀಃ । ಅಪಸ್ಯುವಃ । ಇಂದ್ರಂ । ಜಾತಂ । ಉಪ । ಆಸತೇ ।

ಭೇಜಾನಾಸಃ । ಸುಽವೀರ್ಯಂ ॥ ೧ ॥

॥ ಸಾಯಣಭಾಷ್ಯಂ ॥

**ಈಂಖಯಂತೀರ್ಗಚ್ಛಂತ್ಯಃ ಸ್ತುತ್ಯಾದಿಭಿರಿಂದ್ರಂ ಪ್ರಾಪ್ನುವತ್ಯೋಽಪಸ್ಯುವೋಽಪಃ ಕರ್ಮಾತ್ಮನ ಇಚ್ಛಂತ್ಯ ಇಂದ್ರಮಾತರೋಽಸ್ಯ ಸೂಕ್ತಸ್ಯ ದ್ರಷ್ಟ್ರ್ಯಃ ಜಾತಂ ಪ್ರಾದುರ್ಭೂತಮಿಂದ್ರಮುಪಾಸತೇ । ಪರಿಚರಂತಿ । ಸುವೀರ್ಯಂ ಶೋಭನವೀರ್ಯೋಪೇತಂ ಧನಂ ಚ ಭೇಜಾನಾಸಃ । ತಸ್ಮಾದಿಂದ್ರಾತ್ಸಂಭಕ್ತವತ್ಯೋ ಭವಂತಿ ॥**

॥ ಪ್ರತಿಪದಾರ್ಥ ॥

**ಈಂಖಯಂತೀಃ**— ಸ್ತುತ್ಯಾದಿಗಳಿಂದ ಇಂದ್ರನಸಮೀಪಕ್ಕೆ ಹೋಗುವವರೂ । **ಅಪಸ್ಯುವಃ**— ಕರ್ಮವನ್ನು ಮಾಡಲು ಇಚ್ಛಿಸುವವರೂ ಆದ ಈ ಸೂಕ್ತದ ದ್ರಷ್ಟೃಗಳಾದ ಇಂದ್ರಮಾತೆಯರು । **ಜಾತಂ**— ಉತ್ಪನ್ನನಾದ **ಇಂದ್ರಂ**— ಇಂದ್ರನನ್ನು । **ಉಪಾಸತೇ**— ಉಪಚರಿಸುತ್ತಾರೆ । **ಸುವೀರ್ಯಂ**— ಶ್ರೇಷ್ಠವಾದ ಧನವನ್ನೂ । **ಭೇಜಾನಾಸಃ** — ಪಡೆಯುತ್ತಾರೆ.

॥ ಭಾವಾರ್ಥ ॥

ಇಂದ್ರನನ್ನು ಸ್ತುತಿಸಲು ಸ್ತುತ್ಯಾದಿಗಳಿಂದ ಅವನನ್ನು ಸಮೀಪಿಸಿಸುವವರೂ ಕರ್ಮೇಚ್ಛುಗಳೂ ಈ ಸೂಕ್ತ ದ್ರಷ್ಟೃಗಳೂ ಆದ ಇಂದ್ರಮಾತೆಯರು ಆಗತಾನೆ ಉತ್ಪನ್ನನಾದ ಇಂದ್ರನನ್ನು ಉಪಚರಿಸಿ ಸೇವಿಸುತ್ತಾರೆ. ಮತ್ತು ಶ್ರೇಷ್ಠವಾದ ಧನವನ್ನು ಪಡೆಯುತ್ತಾರೆ.

English Translation

Desirous of fulfilling their functions (the mothers of Indra) approaching, worship him as soon as born, and enjoy (affluence) together with male progeny.

॥ ಸಂಹಿತಾಪಾಠಃ ॥

ತ್ವಮಿಂದ್ರ ಬಲಾದಧಿ ಸಹಸೋ ಜಾತ ಓಜಸಃ ।

ತ್ವಂ ವೃಷನ್ವೃಷೇದಸಿ ॥ ೨ ॥

॥ ಪದಪಾಠಃ ॥

ತ್ವಂ । ಇಂದ್ರ । ಬಲಾತ್ । ಅಧಿ । ಸಹಸಃ । ಜಾತಃ । ಓಜಸಃ ।

ತ್ವಂ । ವೃಷನ್ । ವೃಷಾ । ಇತ್ । ಅಸಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಸಹಸಃ ಪರೇಷಾಮಭಿಭಾವುಕಾದ್ಬಲಾದಧಿ ಜಾತೋಽಸಿ । ಅಧಿಃ ಪಂಚಮ್ಯರ್ಥಾನುವಾದಕಃ । ವೃತ್ರಾತಿವಧಹೇತುಭೂತಾದ್ಬಲಾದ್ಧೇತೋಸ್ತ್ವಂ ಪ್ರಖ್ಯಾತೋ ಭವಸೀತ್ಯರ್ಥಃ । ಅಪಿ ಚೌಜಸಃ । ಓಜೋ ನಾಮ ಬಲಹೇತು ಹೃದಯಗತಂ ಧೈರ್ಯಂ । ತಸ್ಮಾದಪಿ ತ್ವಂ ಜಾತೋಽಸಿ । ಹೇ ವೃಷನ್ವರ್ಷಿತಃ ತ್ವಂ ವೃಷೇದಸಿ । ಕಾಮಾನಾಂ ವರ್ಷಿತೈವ ಭವಸಿ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಸಹಸಃ**—ಇತರರನ್ನು ಸೋಲಿಸುವ ಶಕ್ತಿಯುಳ್ಳ । **ಬಲಾತ್**—ಬಲದಿಂದ । **ಅಧಿ ಜಾತಃ**—ಉತ್ಪನ್ನನಾಗಿದ್ದೀಯೆ । **ಓಜಸಃ**—ಧೈರ್ಯದಿಂದಲೂ ಸಹ ಉತ್ಪನ್ನನಾಗಿದ್ದೀಯೆ । **ವೃಷನ್**—ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ । **ತ್ವಂ**—ನೀನು । **ವೃಷಾ ಇತ್**—ಇಷ್ಟಾರ್ಥಗಳನ್ನು ಸುರಿಸುವವನಾಗಿ । **ಅಸಿ**—ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಹುಟ್ಟುವಾಗಲೇ ವೃತ್ರವಧಾದಿಗಳಿಗೆ ಆವಶ್ಯಕವಾದ ಶತ್ರುನಿಗ್ರಹ ಶಕ್ತಿಯಿಂದಲೂ, ಮನಸ್ಸಿನ ಅಪಾರವಾದ ಧೈರ್ಯದಿಂದ ಸಹಿತನಾಗಿಯೂ ಉತ್ಪನ್ನನಾಗಿದ್ದೀಯೆ. ಕಾಮಪ್ರದನಾದ ಎಲೈ ಇಂದ್ರನೇ, ನೀನು ಇಷ್ಟಾರ್ಥಗಳನ್ನು ಸುರಿಸುವವನಾಗಿಯೂ ಇದ್ದೀಯೆ.

English Translation

You, Indra, were born from overpowering strength and energy ; yon, O showerer, are indeed a showerer (of blessings).

॥ ಸಂಹಿತಾಪಾಠಃ ॥

ತ್ವಮಿಂದ್ರಾಸಿ ವೃತ್ರಹಾ ವ್ಯಂ೧ತರಿಕ್ಷಮತಿರಃ ।

ಉದ್ದ್ಯಾಮಸ್ತಭ್ನಾ ಓಜಸಾ ॥ ೩ ॥

|| ಪದಪಾಠಃ ||

ತ್ವಂ । ಇಂದ್ರ । ಅಸಿ । ವೃತ್ರ್ರಹಾ । ವಿ । ಅಂತರಿಕ್ಷಂ । ಅತಿರಃ ।

ಉತ್ । ದ್ಯಾಂ । ಅಸ್ತಭ್ನಾಃ । ಓಜಸಾ || ೩ ||

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಂ ವೃತ್ರಹಾಸಿ । ಶತ್ರೂಣಾಂ ಹಂತಾ ಭವಸಿ । ಅಂತರಿಕ್ಷಂ ಮಧ್ಯಮಸ್ಥಾನಂ ಚ ವ್ಯತಿರಃ । ಆವಾರಕಾಪನೋದನೇನ ಪ್ರಾವರ್ಧಯಃ । ದ್ಯಾಂ ದ್ಯುಲೋಕಂ ಚೌಜಸಾ ಬಲೇನೋದಸ್ತಭ್ನಾಃ । ಊರ್ಧ್ವಮಸ್ತಂಭೀಃ । ಯಥಾಧೋ ನ ಪತತಿ ತಥೋಪರ್ಯವಸ್ಥಾಪಿತವಾನಿತ್ಯರ್ಥಃ ||

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ವೃತ್ರಹಾ—ಶತ್ರುಗಳ ಹಂತಕನಾಗಿ । ಅಸಿ—ಆಗಿದ್ದೀಯೆ । ಅಂತರಿಕ್ಷಂ—ಮಧ್ಯಮಸ್ಥಾನವಾದ ಅಂತರಿಕ್ಷವನ್ನು । ವಿ ಅತಿರಃ—ತೆರೆದಿದ್ದೀಯೆ । ಓಜಸಾ—ನಿನ್ನ ಬಲದಿಂದ । ದ್ಯಾಂ—ದ್ಯುಲೋಕವನ್ನು । ಉತ್ ಅಸ್ತಭ್ನಾಃ—ಕೆಳಕ್ಕೆ ಬೀಳದಂತೆ ಸ್ಥಾಪಿಸಿದ್ದೀಯೆ.

|| ಭಾವಾರ್ಥ ||

ಎಲೈ ಇಂದ್ರನೇ, ನೀನು ಶತ್ರುಗಳನ್ನು ಸಂಹಾರಮಾಡುವವನಾಗಿದ್ದೀಯೆ. ಅಂತರಿಕ್ಷವನ್ನು ತೆರೆದಿದ್ದೀಯೆ ನಿನ್ನ ಬಲದಿಂದ ದ್ಯುಲೋಕವನ್ನು ಕೆಳಗೆ ಬೀಳದಂತೆ ಎತ್ತರವಾದ ಪ್ರದೇಶದಲ್ಲಿ ಸ್ಥಾಪಿಸಿದ್ದೀಯೆ.

## English Translation.

You, Indra, are the slayer of Vritra, you have spread out the firmament; you have unheld the heaven by your power.

|| ಸಂಹಿತಾಪಾಠಃ ||

ತ್ವಮಿಂದ್ರ ಸಜೋಷಸಮರ್ಕಂ ಬಿಭರ್ಷಿ ಬಾಹ್ವೋಃ ।

ವಜ್ರಂ ಶಿಶಾನ ಓಜಸಾ || ೪ ||

|| ಪದಪಾಠಃ ||

ತ್ವಂ । ಇಂದ್ರ । ಸ್ವಜೋಷಸಂ । ಅರ್ಕಂ । ಬಿಭರ್ಷಿ । ಬಾಹ್ವೋಃ ।

ವಜ್ರಂ । ಶಿಶಾನಃ । ಓಜಸಾ || ೪ ||

|| ಸಾಯಣಭಾಷ್ಯಂ ||

**ಹೇ ಇಂದ್ರ ತ್ವಂ ಸಜೋಷಸಂ ಸಹ ಪ್ರೀಯಮಾಣಮರ್ಕಂ ಸ್ತುತ್ಯಂ ವಜ್ರಮಾತ್ಮೀಯಮಾಯುಧಮೋಜಸಾ ಬಲೇನ ಶಿಶಾನೋ ನಿಶ್ಯಂಸ್ತೀಕ್ಷ್ಣೀಕುರ್ವನ್ಬಾಹ್ವೋರ್ಹಸ್ತಯೋರ್ಬಿಭರ್ಷಿ । ಧಾರಯಸಿ ಶತ್ರೂಣಾಂ ವಧಾರ್ಥಂ ||**

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಸಜೋಷಸಂ**—ನಿನಗೆ ಪ್ರೀತಿಪಾತ್ರವಾದ ಮತ್ತು । **ಅರ್ಕಂ**—ಪ್ರಶಸ್ತ್ಯವಾದ । **ವಜ್ರಂ**—ನಿನ್ನ ವಜ್ರಾಯುಧವನ್ನು । **ಓಜಸಾ**—ಬಲಪ್ರಯೋಗದಿಂದ । **ಶಿಶಾನಃ**-ಹರಿತವಮಾಡಿದವನಾಗಿ ಅದನ್ನು । **ಬಾಹ್ವೋಃ**—ನಿನ್ನ ಹಸ್ತಗಳಲ್ಲಿ । **ಬಿಭರ್ಷಿ**—ಶತ್ರುವಧಾರ್ಥವಾಗಿ ಧರಿಸಿದ್ದೀಯೆ.

|| ಭಾವಾರ್ಥ ||

ಎಲೈ ಇಂದ್ರನೇ, ನಿನಗೆ ಪ್ರೀತಿಪಾತ್ರವಾದುದೂ ಪ್ರಶಸ್ತ್ಯವಾದುದೂ ಆದ ನಿನ್ನ ವಜ್ರಾಯುಧವನ್ನು ಬಲವಾಗಿ ಉಜ್ಜಿ ಹರಿತಮಾಡಿ ಅದನ್ನು ಶತ್ರುವಧಾರ್ಥವಾಗಿ ನಿನ್ನ ಕೈಗಳಲ್ಲಿ ಧರಿಸಿದ್ದೀಯೆ.

## English Translation.

You, Indra, bear your well-beloved and adorable thunderbolt in your arms, sharpening it with your might.

|| ಸಂಹಿತಾಪಾಠಃ ||

ತ್ವಮಿಂದ್ರಾಭಿಭೂರಸಿ ವಿಶ್ವಾ ಜಾತಾನ್ಯೋಜಸಾ ।

ಸ ವಿಶ್ವಾ ಭುವ ಆಭವಃ || ೫ ||

|| ಪದಪಾಠಃ ||

ತ್ವಂ । ಇಂದ್ರ । ಅಭಿऽಭೂಃ । ಅಸಿ । ವಿಶ್ವಾ । ಜಾತಾನಿ । ಓಜಸಾ ।

ಸಃ । ವಿಶ್ವಾಃ । ಭುವಃ । ಆ । ಅಭವಃ || ೫ ||

|| ಸಾಯಣಭಾಷ್ಯಂ ||

**ಹೇ ಇಂದ್ರ ತ್ವಂ ವಿಶ್ವಾ ಸರ್ವಾಣಿ ಜಾತಾನಿ ಜನಿಮಂತಿ ಭೂತಾನ್ಯೋಜಸಾ ಬಲೇನಾಭಿಭೂರಭಿಭವಿತಾ ಭವಸಿ । ತಥಾ ಸ ತಾದೃಶಸ್ತ್ವಂ ವಿಶ್ವಾ ಭುವಃ ಸರ್ವಾ ಭೂಮೀಃ ಪ್ರಾಪ್ತವ್ಯಾನಿ ಸರ್ವಾಣ್ಯಪಿ ಸ್ಥಾನಾನ್ಯಾಭವಃ । ಅಭಿತಃ ಪ್ರಾಪ್ನೋಃ || ಭೂ ಪ್ರಾಪ್ತೌ ||**

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ವಿಶ್ವಾ**—ಸಮಸ್ತವಾದ । **ಜಾತಾನಿ**—ಉತ್ಪನ್ನವಾದ ಪ್ರಾಣಿಗಳನ್ನು । **ಓಜಸಾ**—ನಿನ್ನ ಶಕ್ತಿಯಿಂದ । **ಅಭಿಭೂಃ ಅಸಿ**—ಸೋಲಿಸಿದ್ದೀಯೆ ಹಾಗಯೇ । **ಸಃ**—ಅಂತಹ ನೀನು । **ವಿಶ್ವಾ**—ಸಮಸ್ತವಾದ । **ಭುವಃ**—ಭೂಮಿಗಳನ್ನು ಎಂದರೆ ಲೋಕಗಳನ್ನು । **ಆ ಅಭವಃ**—ವ್ಯಾಪಿಸಿರುತ್ತೀಯೆ.

|| ಭಾವಾರ್ಥ ||

ಎಲೈ ಇಂದ್ರನೆ, ನೀನು ನಿನ್ನ ಶಕ್ತಿ ಸಾಮರ್ಥ್ಯಗಳಿಂದ ಹುಟ್ಟಿರುವ ಸಮಸ್ತರನ್ನೂ ಸೋಲಿಸುತ್ತೀಯೆ ಮತ್ತು ಸಮಸ್ತಲೋಕಗಳನ್ನು ನಿನ್ನ ಸಾಮರ್ಥ್ಯದಿಂದ ವ್ಯಾಪಿಸುತ್ತೀಯೆ

**English Translation.**

You, Indra, overpower all beings by your might, you have reached all worlds.

## ನೂರ ಐವತ್ತನಾಲ್ಕನೆಯ ಸೂಕ್ತವು



|| ಸಾಯಣಭಾಷ್ಯಂ ||

**ಸೋಮ ಇತಿ ಪಂಚರ್ಚಂ ತೃತೀಯಂ ಸೂಕ್ತಮಾನುಷ್ಟುಭಂ । ವಿವಸ್ವತೋ ದುಹಿತಾ ಯಮ್ಯೃಷಿಃ । ಮ್ರಿಯಮಾಣಾನಾಂ ಯಜಮಾನಾದೀನಾಂ ವರ್ತನಮತ್ರ ಪ್ರತಿಪಾದ್ಯತೇ । ಅತಸ್ತದ್ದೇವತಾಕಮಿದಂ । ತಥಾ ಚಾನುಕ್ರಾಂತಂ । ಸೋಮೋ ಯಮೀ ಭಾವವೃತ್ತಮಾನುಷ್ಟುಭಂ ತ್ವಿತಿ ॥ ಪ್ರೇತೋಪಸ್ಥಾನ ಏತತ್ಸೂಕ್ತಂ । ಸೂತ್ರಿತಂ ಚ । ಸೋಮ ಏಕೇಭ್ಯ ಉರೂಣಸಾವಸುತೃಪಾ ಉದುಂಬಲೌ । ಆ. ೬-೧೦ । ಇತಿ ॥**

ಅನುವಾದವು—**ಸೋಮಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವವು ಅನುಷ್ಟುಪ್‌ಛಂದಸ್ಸು ಈ ಸೂಕ್ತಕ್ಕೆ ವಿವಸ್ವಂತನ ಪುತ್ರಿಯಾದ ಯಮೀ ಎಂಬುವಳು ಋಷಿಕೆಯು ಮೃತರಾಗುವ ಯಜಮಾನಾದಿಜನರ ಸ್ವಭಾವವು ಈ ಸೂಕ್ತದಲ್ಲಿ ಪ್ರತಿಪಾದಿತವಾಗಿದೆ. ಆದ್ದರಿಂದ ಆ ವರ್ತನವೇ ಈ ಸೂಕ್ತಕ್ಕೆ ದೇವತೆಯು. ಅನುಕ್ರಮಣಿಕೆಯಲ್ಲಿ—**ಸೋಮೋ ಯಮೀ ಭಾವವೃತ್ತಮಾನುಷ್ಟುಭಂ ತು** ಎಂದು ಹೇಳಿರುವುದು ಪ್ರೇತೋಪಸ್ಥಾನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಸೋಮ ಏಕೇಭ್ಯ ಉರೂಣಸಾವಸುತೃಪಾ ಉದುಂಬಲೌ** ಎಂಬ ಸೂತ್ರದಿಂದ (ಆ. ೬-೧೦) ವಿವೃತವಾಗಿರುವುದು

## ಸೂಕ್ತ - ೧೫೪

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೫೪ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೧೨ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ॥
॥ ಋಷಿಃ—ಯಮೀಃ ॥
॥ ದೇವತಾ—ಭಾವವೃತ್ತಂ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಸೋಮ ಏಕೇಭ್ಯಃ ಪವತೇ ಘೃತಮೇಕ ಉಪಾಸತೇ ।
ಯೇಭ್ಯೋ ಮಧು ಪ್ರಧಾವತಿ ತಾಂಶ್ಚಿದೇವಾಪಿ ಗಚ್ಛತಾತ್ ॥ ೧ ॥

॥ ಪದಪಾಠಃ ॥

ಸೋಮಃ । ಏಕೇಭ್ಯಃ । ಪವತೇ । ಘೃತಂ । ಏಕೇ । ಉಪ । ಆಸತೇ ।
ಯೇಭ್ಯಃ । ಮಧು । ಪ್ರಽಧಾವತಿ । ತಾನ್ । ಚಿತ್ । ಏವ । ಅಪಿ । ಗಚ್ಛತಾತ್ । ೧ ॥

॥ ಸಾಯಣಭಾಷ್ಯಂ ॥

ಏಕೇಭ್ಯಃ ಕೇಭ್ಯಶ್ಚಿತ್ಪಿತೃಭ್ಯಃ ಸೋಮಃ ಪವತೇ । ಉಪಭೋಗಾಯ ಕುಲ್ಯಾರೂಪೇಣ ಪ್ರವಹತಿ । ಏಷಾಂ ಗೋತ್ರಜಾಃ ಸಾಮಾನಿ ಬ್ರಹ್ಮಯಜ್ಞಸಮಯೇಽಧೀಯತೇ । ಶ್ರೂಯತೇ ಹಿ । ಯತ್ಸಾಮಾನಿ ಸೋಮ ಏಭ್ಯಃ ಪವತ ಇತಿ । ಏಕೇಽನ್ಯೇ ಪಿತರೋ ಘೃತಮಾಜ್ಯಮುಪಾಸತೇ । ಉಪಗಚ್ಛಂತಿ । ಉಪಭುಂಜತ ಇತ್ಯರ್ಥಃ । ಏಷಾಂ ಪುತ್ರಾದಯೋ ಯಜೂಂಷಿ ಬ್ರಹ್ಮಯಜ್ಞಕಾಲೇಽಧೀಯತೇ । ಶ್ರುತಿಶ್ಚ ಭವತಿ । ಯದ್ಯಜೂಂಷಿ ಘೃತಸ್ಯ ಕುಲ್ಯಾ ಇತಿ । ಯೇಭ್ಯಃ ಪಿತೃಭ್ಯಃ । ತಾದರ್ಥ್ಯೇ ಚತುರ್ಥೀ । ಉಪಭೋಗಾರ್ಥಂ ಮಧು ಕ್ಷೌದ್ರಂ ಪ್ರಧಾವತಿ ಪ್ರವಾಹರೂಪೇಣ ಶೀಘ್ರಂ ಗಚ್ಛತಿ । ಯ ಆಥರ್ವಣಾನ್ಮಂತ್ರಾನ್ಬ್ರಹ್ಮಯಜ್ಞಾರ್ಥಮಧೀಯತೇ ತೇಷಾಂ ಪಿತ್ನ್ಮಧುಕುಲ್ಯಾ ಪ್ರವಹತಿ । ತಥಾ ಚಾಮ್ನಾಯತೇ । ಯದಾಥರ್ವಣಾಂಗಿರಸೋ ಮಧೋಃ ಕುಲ್ಯಾ ಇತಿ । ತಾಂಶ್ಚಿದೇವ ತಾನ್ಪೂರ್ವೋಕ್ತಾನ್ಸರ್ವಾನೇವ ಹೇ ಪ್ರೇತ ತ್ವಂ ಪ್ರತ್ಯಪಿ ಗಚ್ಛತಾತ್ । ಅಪಿಗಚ್ಛ । ಪ್ರಾಪ್ನುಹಿ ॥

॥ ಪ್ರತಿಪದಾರ್ಥ ॥

**ಏಕೇಭ್ಯಃ**—ಕೆಲವು ಪಿತೃಗಳ ಭೋಗಾರ್ಥವಾಗಿ । **ಸೋಮಃ**—ಸೋಮರಸವು । **ಪವತೇ**—ಪ್ರವಾಹ ರೂಪದಲ್ಲಿ ಹರಿಯುತ್ತದೆ । **ಏಕೇ**—ಇನ್ನು ಕೆಲವುಮಂದಿ ಪಿತೃಗಳು । **ಘೃತಂ**—ತುಪ್ಪವನ್ನು । **ಉಪಾಸತೇ**—

ಬಯಸುತ್ತಾರೆ ಅಥವಾ ಭೋಗಿಸುತ್ತಾರೆ । **ಯೇಭ್ಯಃ**— ಮತ್ತೆ ಕೆಲವು ಪಿತೃಗಳ ಭೋಗಾರ್ಥವಾಗಿ । **ಮಧು**— ಜೇನುತುಪ್ಪವು । **ಪ್ರಧಾವತಿ**— ಪ್ರವಾಹರೂಪದಲ್ಲಿ ಶೀಘ್ರವಾಗಿ ಹರಿಯುತ್ತದೆ (ಎಲೈ ಪ್ರೇತನೇ) । **ತಾನ್ ಚಿತ್ ಏವ**— ಮೇಲೆ ಹೇಳಿದ ದೇವತೆಗಳ ಬಳಿಗೆ (ನೀನು) । **ಅಪಿ ಗಚ್ಛತಾತ್**— ಹೋಗು

॥ ಭಾವಾರ್ಥ ॥

ಕೆಲವು ಪಿತೃಗಳ ಭೋಗಾರ್ಥವಾಗಿ ಸೋಮರಸವು ಪ್ರವಾಹರೂಪದಲ್ಲಿ ಹರಿಯುತ್ತದೆ. ಮತ್ತೆ ಕೆಲವು ಮಂದಿ ಪಿತೃಗಳು ಘೃತ (ತುಪ್ಪ) ವನ್ನು ಸೇವಿಸುತ್ತಾರೆ. ಮತ್ತೆ ಕೆಲವು ಮಂದಿ ಪಿತೃಗಳ ಭೋಗಾರ್ಥವಾಗಿ ಮಧುವು ಜೇನುತುಪ್ಪವು) ಪ್ರವಾಹರೂಪದಲ್ಲಿ ಶೀಘ್ರವಾಗಿ ಹರಿಯುತ್ತದೆ. ಎಲೈ ಪ್ರೇತನೇ, ಈ ಎಲ್ಲಾ ವಿಧ ಪಿತೃಗಳ ಬಳಿಗೂ ನೀನು ಹೋಗಿ ಸೇರು.

## Englisl Translation

Soma is filtered for some (of the Pitris), others accept clarified butter; go (O dead one) to those to whom the honey flows.

॥ ವಿಶೇಷವಿಷಯಗಳು ॥

ಪಿತೃಗಳ ಭೋಗಾರ್ಥವಾಗಿ ಸೋಮಾದಿರಸಗಳು ಹರಿಯುವುದೆಂದರೇನು ? ಅವು ಏತಕ್ಕಾಗಿ ಹರಿಯುತ್ತವೆ ಎಂಬ ವಿಷಯವು ತೈತ್ತಿರೀಯ ಆರಣ್ಯಕದ ಬ್ರಹ್ಮಯಜ್ಞಕರ್ಮವಿವರಣೆಯಲ್ಲಿ ಈ ರೀತಿ ಉಕ್ತವಾಗಿದೆ—

**ಯತ್ಸ್ವಾಧ್ಯಾಯಮಧೀಯೀತೈಕಾಮಪ್ಯೃಚಂ ಯಜುಃ ಸಾಮ ವಾ ತದ್ಬ್ರಹ್ಮಯಜ್ಞಃ ಸಂತಿಷ್ಠತೇ ।** (ತೈ. ಆ. ೨-೧೦)

ಬ್ರಹ್ಮಯಜ್ಞವೆಂಬುದು ಬ್ರಾಹ್ಮಣನಾದವನು ಪ್ರತಿದಿನವೂ ಮಾಡಬೇಕಾದ ಕರ್ಮವು. ಇದು ಮುಖ್ಯವಾಗಿ ಸ್ವಾಧ್ಯಾಯ ಎಂದರೆ ವೇದಪಠನವನ್ನು ಮಾಡುವ ಕ್ರಮವನ್ನೊಳಗೊಂಡಿರುವುದು ಈ ಬ್ರಹ್ಮಯಜ್ಞವು—

**ಪಂಚ ವಾ ಏತೇ ಮಹಾಯಜ್ಞಾಃ ಸತತಿ ಪ್ರತಾಯಂತೇ ಸತತಿ ಸಂತಿಷ್ಠಂತೇ ದೇವಯಜ್ಞಃ ಪಿತೃಯಜ್ಞೋ ಭೂತಯಜ್ಞೋ ಮನುಷ್ಯಯಜ್ಞೋ ಬ್ರಹ್ಮಯಜ್ಞ ಇತಿ ॥**

(ತೈ. ಆ. ೨-೧೦)

ಬ್ರಹ್ಮಯಜ್ಞವು ಪಂಚಮಹಾ ಯಜ್ಞಗಳಲ್ಲಿ ಒಂದಾಗಿರುವುದು. ಈ ಪಂಚಮಹಾಯಜ್ಞಗಳನ್ನು ಪ್ರತಿ ದಿವಸವೂ ಮಾಡಬೇಕು. ಆದಿನವೇ ಪ್ರಾರಂಭಿಸಿ ಆದಿನವೇ ಮುಗಿಸಬೇಕು. ಆ ಪಂಚಮಹಾಯಜ್ಞಗಳ ಸ್ವರೂಪ ವೇನು? ಅವುಗಳನ್ನು ಮಾಡುವ ಬಗೆ ಹೇಗೆ ಎಂದರೆ—

**(೧) ದೇವಯಜ್ಞ— ಯದಗ್ನೌ ಜುಹೋತ್ಯಪಿ ಸಮಿಧಂ ತದ್ದೇವಯಜ್ಞಃ ಸಂತಿಷ್ಠತೇ ।**

ಪುರೋಡಶಾದಿ ಹವಿಸ್ಸನ್ನು ಅದು ಸಾಧ್ಯವಾಗದಿದ್ದರೆ ಒಂದು ಸಮಿತ್ತನ್ನಾದರೂ (ಕಾಷ್ಠ) ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಹೋಮಮಾಡಿದರೆ ಅದು ದೇವಯಜ್ಞವೆನಿಸುವುದು. ಈ ಒಂದು ಹೋಮದಿಂದಲೇ ಇದು ಸಮಾಪ್ತಿಯಾಗುವುದು.

**(೨) ಪಿತೃಯಜ್ಞ—ಯತ್ಪಿತೃಭ್ಯಃ ಸ್ವಧಾ ಕರೋತ್ಯಪ್ಯಪಸ್ತತ್ಪಿತೃಯಜ್ಞಃ ಸಂತಿಷ್ಠತೇ ॥**

ಪಿತೃಗಳನ್ನುದ್ದೇಶಿಸಿ ಪಿಂಡಾದಿಗಳನ್ನು ಕೊಡಲಾಗದಿದ್ದರೆ ಕೇವಲ ಜಲದಿಂದ **ಪಿತೃಭ್ಯಃ ಸ್ವಧಾಸ್ತು** ಎಂದು ಹೇಳಿ ಜಲತರ್ಪಣವನ್ನು ಮಾಡಿದರೆ ಅದು ಪಿತೃಯಜ್ಞವೆನಿಸುವುದು.

**(೩) ಭೂತಯಜ್ಞ—ಯದ್ಭೂತೇಭ್ಯೋ ಬಲಿಗ್ಂ ಹರತಿ ತದ್ಭೂತಯಜ್ಞಃ ಸಂತಿಷ್ಠತೇ ॥**

ವೈಶ್ವದೇವಕರ್ಮಾನಂತರ ಮಧ್ಯಾಹ್ನ ಕಾಲದಲ್ಲಿ ಕಾಗೆಮೊದಲಾದ ಪ್ರಾಣಿಗಳಿಗೆ ಬಲಿಯನ್ನು ಎಂದರೆ ಸ್ವಲ್ಪ ಅನ್ನ ವನ್ನು ಹಾಕಿದರೆ ಆ ಬಲಿಪ್ರಧಾನವು ಭೂತಯಜ್ಞವೆನಿಸುವುದು.

**(೪) ಮನುಷ್ಯಯಜ್ಞ-ಯದ್ಬ್ರಾಹ್ಮಣೇಭ್ಯೋಽನ್ನಂ ದದಾತಿ ತನ್ಮನುಷ್ಯಯಜ್ಞಃ ಸಂತಿಷ್ಠತೇ ॥**

ವೈಶ್ವದೇವಕರ್ಮಾನಂತರ ಬ್ರಾಹ್ಮಣನೇ ಮೊದಲಾದ ಅತಿಥಿಗೆ ಅನ್ನವನ್ನು ಎಂದರೆ ಭೋಜನಮಾಡಿಸುವುದು ಮನುಷ್ಯಯಜ್ಞವೆನಿಸುವುದು.

**(೫) ಬ್ರಹ್ಮಯಜ್ಞ— ಯತ್ಸ್ವಾಧ್ಯಾಯಮಧೀಯೀತೈಕಾಮಪ್ಯೃಚಂ ಯಜುಃ ಸಾಮ ವಾ ತದ್ಬ್ರಹ್ಮಯಜ್ಞಃ ಸಂತಿಷ್ಠತೇ ॥**

ಸ್ವಾಧ್ಯಾಯವೆಂದರೆ ಪಿತೃಪಿತಾಮಹಾದಿ ಹಿರಿಯರಿಂದ ಪರಂಪರಾಪ್ರಾಪ್ತವಾಗಿ ಬಂದ ವೇದಾಧ್ಯಯನವು. ಪ್ರತಿದಿನವೂ ತಪ್ಪದೆ ಈ ವೇದಾಧ್ಯಯನಕ್ರಮವನ್ನು ಸ್ವಲ್ಪವಾದರೂ ಎಂದರೆ ಋಗ್ವೇದದಲ್ಲಿ ಒಂದು ಋಕ್ಕು, ಯಜುರ್ವೇದದಲ್ಲಿ ಒಂದು ವಾಕ್ಯ, ಸಾಮವೇದದಲ್ಲಿ ಒಂದು ಮಂತ್ರ, ಇಷ್ಟನ್ನಾದರೂ ಪಠಿಸಿದರೆ ಅದು ಬ್ರಹ್ಮಯಜ್ಞವೆನಿಸುವುದು. ಈ ಐದೂ ಪಂಚಮಹಾಯಜ್ಞಗಳು ಇವನ್ನು ಪ್ರತಿದಿನವೂ ಆಚರಿಸಬೇಕು.

ಈರೀತಿ ಅಧ್ಯಯನಮಾಡಿದರೆ ಉಂಟಾಗುವ ಫಲವೇನೆಂಬುದನ್ನು ಇಲ್ಲಿ ಇನ್ನೂ ವಿಶದವಾಗಿ ವರ್ಣಿಸಲಾಗಿದೆ—

**ಯದೃಚೋಽಧೀತೇ ಪಯಸಃ ಕೂಲ್ಯಾ ಅಸ್ಯ ಪಿತೄನ್ತ್ಸ್ವಧಾ ಅಭಿವಹಂತಿ, ಯದ್ಯಜೂಗ್ಂಷಿ ಘೃತಸ್ಯ ಕೂಲ್ಯಾ, ಯತ್ಸಾಮಾನಿ ಸೋಮ ಏಭ್ಯಃ ಪವತೇ, ಯದಥರ್ವಾಂಗಿರಸೋ ಮಧೋಃ ಕೂಲ್ಯಾ, ಯದ್ಬ್ರಾಹ್ಮಣಾನೀತಿಹಾಸಾನ್ಪುರಾಣಾನಿ ಕಲ್ಪಾನ್ಗಾಥಾ ನಾರಾಶಗ್ಂಸೀರ್ಮೇದಸಃ ಕೂಲ್ಯಾ ಅಸ್ಯ ಪಿತೄನ್ತ್ಸ್ವಧಾ ಅಭಿವಹಂತಿ**

(ತೈ. ಆ. ೨-೧೦)

ಒಬ್ಬ ಪುರುಷನು ಋಗ್ವೇದಾಧ್ಯಯನವನ್ನು ನಿಯಮದಿಂದ ಮಾಡಿದರೆ ಅದರಿಂದ ಪಿತೃಲೋಕದಲ್ಲಿರುವ ಅವನ ಪಿತೃಗಳ ಬಳಿಗೆ ಹಾಲಿನ ನದಿಯು ಪ್ರವಾಹರೂಪದಲ್ಲಿ ಹರಿದು ಆ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವುದು. ಯಜುರ್ವೇದಾಧ್ಯಯನದಿಂದ ಘೃತವು ನದಿಯಾಗಿ ಹರಿದು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವುದು ಸಾಮವೇದಾಧ್ಯಯನದಿಂದ ಸೋಮರಸವು ಪ್ರವಾಹರೂಪದಲ್ಲಿ ಹರಿದು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವುದು. ಅಥರ್ವವೇದದ ಅಧ್ಯಯನದಿಂದ ಮಧುವು (ಜೇನುತುಪ್ಪವು) ಪ್ರವಾಹರೂಪದಲ್ಲಿ ಹರಿದು ಪಿತೃಗಳಿಗೆ ಆನಂದವನ್ನುಂಟುಮಾಡುವುದು ಬ್ರಾಹ್ಮಣ, ಇತಿಹಾಸಪುರಾಣಗಳು, ಕಲ್ಪಸೂತ್ರಗಳು ಗಾಥಾ ನಾರಾಶಂಸೀ ಮಂತ್ರಗಳು ಇವುಗಳ ಅಧ್ಯಯನದಿಂದ ಮಾಂಸದಿಂದ ಸಹಿತವಾದ ಪ್ರವಾಹವುಂಟಾಗಿ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವುದು

ಯದೃಚೋಽಧೀತೇ ಪಯ ಆಹುತಿಭಿರೇವ ತದ್ದೇವಾಗ್‌ಸ್ತರ್ಪಯತಿ, ಯದ್ಯಜೂಗ್‌ಂಷಿ ಘೃತಾಹುತಿಭಿರ್ಯತ್ಸಾಮಾನಿ ಸೋಮಾಹುತಿಭಿರ್ಯದಥರ್ವಾಂಗಿರಸೋ ಮಧ್ವಾಹುತಿಭಿರ್ಯದ್ಬ್ರಾಹ್ಮಣಾನೀತಿಹಾಸಾನ್ಪುರಾಣಾನಿ ಕಲ್ಪಾನ್ಗಾಥಾ ನಾರಾಶಗ್‌ಂಸೀರ್ಮೇದಾಹುತಿಭಿರೇವ ತದ್ದೇವಾಗ್‌ಸ್ತರ್ಪಯತಿ ತ ಏನಂ ತೃಪ್ತಾ ಆಯುಷಾ ತೇಜಸಾ ವರ್ಚಸಾ ಶ್ರಿಯಾ ಯಶಸಾ ಬ್ರಹ್ಮವರ್ಚಸೇನಾನ್ನಾದ್ಯೇನ ಚ ತರ್ಪಯಂತಿ ॥ (ತೈ. ಆ. ೨-೧೦)

ಋಗ್ವೇದಾಧ್ಯಯನವು ಕ್ಷೀರಾಹುತಿಗೆ ಸಮಾನವಾಗಿ ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವುದು. ಅದರಂತೆ ಯಜುರ್ವೇದಾಧ್ಯಯನವು ಘೃತಾಹುತಿಗೆ ಸಮಾನವಾಗಿಯೂ, ಸಾಮವೇದಾಧ್ಯಯನವು ಸೋಮಾಹುತಿಗೆ ಸಮಾನವಾಗಿಯೂ, ಅಥರ್ವವೇದಾಧ್ಯಯನವು ಮಧ್ವಾಹುತಿಗೆ ಸಮನವಾಗಿಯೂ ಬ್ರಾಹ್ಮಣಾದಿಗಳ ಅಧ್ಯಯನವು ಮೇದಾ (ಮಾಂಸ) ಹುತಿಗಳಿಗೆ ಸಮಾನವಾಗಿಯೂ ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವುದು. ಈ ವಿಧ ಆಹುತಿಗಳಿಂದ ದೇವತೆಗಳು ತೃಪ್ತರಾಗಿ ಅಧ್ಯಯನಮಾಡಿದ ಪುರುಷರಿಗೆ ಆಯುಸ್ಸು, ತೇಜಸ್ಸು, ವರ್ಚಸ್ಸು, ಸಂಪತ್ತು, ಕೀರ್ತಿ ಬ್ರಹ್ಮವರ್ಚಸ್ಸು, ಅನ್ನಾದ್ಯಾಹಾರ ಇವುಗಳನ್ನು ಕೊಟ್ಟು ಅನುಗ್ರಹಿಸುವರು ಎಂದಭಿಪ್ರಾಯವು.

ಪ್ರಕೃತ ಋಕ್ಕಿನಲ್ಲಿ ಸೋಮ, ಘೃತ, ಮಧು ಎಂಬ ಆಹುತಿಗಳ ವಿಷಯವನ್ನು ಮಾತ್ರ ಪ್ರಸ್ತಾಪಮಾಡಲಾಗಿದೆ ಪಯ ಆಹುತಿ ವಿಚಾರವಿಲ್ಲ ಆದರೂ ಅದನ್ನು ಇಲ್ಲಿ ಅಧ್ಯಾಹಾರಮಾಡಿಕೊಳ್ಳಬೇಕು.

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕುಗಳಲ್ಲಿಯೂ "ಎಭ್ಯೈ ಪ್ರೇತವೇ," ಎಂದು ಪ್ರೇತಶರೀರದಿಂದಿರುವ ಜೀವವನ್ನು ಸಂಬೋಧಿಸಲಾಗಿದೆ. ಮರಣಾನಂತರ ಪಾರ್ಥಿವಶರೀರವು ಹೋದಮೇಲೆ ಜೀವವು ಸೂಕ್ಷ್ಮರೂಪಧಾರಿಯಾಗಿ ತಾನು ಮಾಡಿದ ಕರ್ಮಫಲವನ್ನು ಅನುಭವಿಸುವುದಕ್ಕಾಗಿ ಸ್ವರ್ಗಾದಿಲೋಕಗಳಿಗೆ ಹೋಗಬೇಕಾಗುವುದು ಮರಣಾನಂತರ ತಕ್ಷಣವೇ ಸ್ವರ್ಗಾದಿಲೋಕಗಳಿಗೆ ಹೋಗಲಾಗುವುದಿಲ್ಲ ಕೆಲವು ಕಾಲದ ವರೆಗೆ ಸೂಕ್ಷ್ಮಶರೀರದಿಂದ ಇರಬೇಕಾಗಿರುವುದು ಇಂತಹ ಅವಸ್ಥೆಯಲ್ಲಿರುವ ಜೀವಿಗೆ ಪ್ರೇತವೆಂದು ಕರೆಯುವ ರೂಢಿ ಇದೆ. ಮರಣಾನಂತರ ಪಾರ್ಥಿವ ಶರೀರದಿಂದ ಈಚೆಗೆ ಹೊರಟು ಬಂದ ಜೀವಕ್ಕೆ ಪ್ರೇತವೆಂದು ಹೇಳಬಹುದು.

॥ ಸಂಹಿತಾಪಾಠಃ ॥

ತಪಸಾ ಯೇ ಅನಾಧೃಷ್ಯಾಸ್ತಪಸಾ ಯೇ ಸ್ವರ್ಯಯುಃ ।
ತಪೋ ಯೇ ಚಕ್ರಿರೇ ಮಹಸ್ತಾಂಶ್ಚಿದೇವಾಪಿ ಗಚ್ಛತಾತ್ ॥ ೨ ॥

॥ ಪದಪಾಠಃ ॥

ತಪಸಾ । ಯೇ । ಅನಾಧೃಷ್ಯಾಃ । ತಪಸಾ । ಯೇ । ಸ್ವಃ । ಯಯುಃ ।
ತಪಃ । ಯೇ । ಚಕ್ರಿರೇ । ಮಹಃ । ತಾನ್ । ಚಿತ್ । ಏವ । ಅಪಿ । ಗಚ್ಛತಾತ್ ॥ ೨ ॥

॥ ಸಾಯಣಭಾಷ್ಯಂ ॥

**ಯೇ ಜನಾಸ್ತಪಸಾ ಕೃಚ್ಛ್ರಚಾಂದ್ರಾಯಣಾದಿನಾ ಯುಕ್ತಾಃ ಸಂತೋಽನಾಧೃಷ್ಯಾಃ ಪಾಪೈರ-ಪ್ರಧೃಷ್ಯಾ ಭವಂತಿ । ಯೇ ಚ ತಪಸಾ ಯಾಗಾದಿರೂಪೇಣ ಸಾಧನೇನ ಸ್ವರ್ಯಯುಃ ಸ್ವರ್ಗಂ ಯಾಂತಿ ಪ್ರಾಪ್ನುವಂತಿ । ಯೇ ಚ ಮಹೋ ಮಹತ್ತಪೋಽನ್ಯೈರ್ದುಷ್ಕರಂ ರಾಜಸೂಯಾಶ್ವಮೇಧಾದಿಕಂ ಹಿರಣ್ಯಗರ್ಭಾದ್ಯುಪಾಸನಂ ವಾ ಚಕ್ರಿರೇ ಕುರ್ವಂತಿ ಏತೇಷು ಪ್ರವರ್ತಂತೇ ತೇಷು ಲೋಕೇಷು । ತಾಂಶ್ಚಿ-ತ್ತಾನೇವ ತಪಸ್ವಿನೋ ಹೇ ಪ್ರೇತ ಅಪಿಗಚ್ಛ ॥**

॥ ಪ್ರತಿಪದಾರ್ಥ ॥

(ಎಲೈ ಪ್ರೇತವೇ), **ಯೇ**—ಯಾರು । **ತಪಸಾ**—ಕೃಚ್ಛ್ರಚಾಂದ್ರಾಯಣಾದಿಗಳಿಂದ ಸಹಿತವಾದ ತಪಶ್ಚರಣೆಯಿಂದ । **ಅನಾಧೃಷ್ಯಾಃ**—ಪಾಪದಿಂದ ಅಸ್ಪೃಶ್ಯರಾಗಿರುವರೋ । **ಯೇ**—ಯಾರು । **ತಪಸಾ**—ಯಜ್ಞಯಾಗಾದಿ ರೂಪವಾದ ತಪಸ್ಸಿನಿಂದ । **ಸ್ವಃ**--ಸ್ವರ್ಗಲೋಕವನ್ನು । **ಯಯುಃ**—ಹೊಂದಿರುವರೋ । **ಯೇ**—ಯಾರು । **ಮಹಃ**—ಮಹತ್ತಾದ । **ತಪಃ**—ಇತರರಿಂದ ಮಾಡಲು ಸುಲಭಸಾಧ್ಯವಲ್ಲದ ರಾಜಸೂಯಾಶ್ವಮೇಧಯಾಗರೂಪವಾದ ಅಥವಾ ಹಿರಣ್ಯಗರ್ಭಾದು ಪಾಸನರೂಪವಾದ ತಪಸ್ಸನ್ನು । **ಚಕ್ರಿರೇ**—ಮಾಡುತ್ತಿರುವರೋ । **ತಾನ್ ಚಿತ್ ಏವ**—ಅಂತಹ ತಪಸ್ವಿಗಳಾದ ಪಿತೃಗಳ ಬಳಿಗೆ । **ಅಪಿ ಗಚ್ಛತಾತ್**—ಹೋಗು.

। ಭಾವಾರ್ಥ ॥

ಎಲೈ ಪ್ರೇತವೇ, ಯಾವ ಪುರುಷರು ಈ ಲೋಕದಲ್ಲಿದ್ದಾಗ ತಪಶ್ಚರಣೆಯಿಂದ ಪಾಪರಹಿತರಾಗಿ ಉತ್ತಮ ಲೋಕವನ್ನು ಹೊಂದಿದರೋ ಯಾರು ಯಜ್ಞಯಾಗಾದಿರೂಪವಾದ ತಪಸ್ಸಿನಿಂದ ಸ್ವರ್ಗಲೋಕವನ್ನು ಪಡೆದು ಸುಖಿಸುತ್ತಿರುವರೋ ಯಾರು ಇತರರಿಂದ ದುಸ್ಸಾಧ್ಯವಾದ ಮಹಾತಪಸ್ಸನ್ನು ಮಾಡಿ ಬ್ರಹ್ಮೋಪಾಸನೆಯಲ್ಲಿ ನಿರತರಾಗಿರುವರೋ ಅಂತಹ ಪಿತೃಗಳ ಬಳಿಗೆ ಹೋಗು.

## English Translation.

Those who through penance are unassailable (by sin), to those who through penance have gone to heaven, to those who have performed abundant penance, do you (O dead one) repair.

॥ ಸಂಹಿತಾಪಾಠಃ ॥

**ಯೇ ಯುಧ್ಯಂತೇ ಪ್ರಧನೇಷು ಶೂರಾಸೋ ಯೇ ತನೂತ್ಯಜಃ ।**

**ಯೇ ವಾ ಸಹಸ್ರದಕ್ಷಿಣಾಸ್ತಾಂಶ್ಚಿದೇವಾಪಿ ಗಚ್ಛತಾತ್ ॥ ೩ ॥**

॥ ಪದಪಾಠಃ ॥

ಯೇ । ಯುಧ್ಯಂತೇ । ಪ್ರಽಧನೇಷು । ಶೂರಾಸಃ । ಯೇ । ತನೂಽತ್ಯಜಃ ।

ಯೇ । ವಾ । ಸಹಸ್ರಽದಕ್ಷಿಣಾಃ । ತಾನ್ । ಚಿತ್ । ಏವ । ಅಪಿ । ಗಚ್ಛತಾತ್ ॥ ೩ ॥

॥ ಸಾಯಣಭಾಷ್ಯಂ ॥

ಪ್ರಧನೇಷು । ಪ್ರಕೀರ್ಣಾನ್ಯಸ್ಮಿನ್ಧನಾನಿ ಭವಂತೀತಿ ಪ್ರಧನಾಃ ಸಂಗ್ರಾಮಾಃ । ತೇಷು ಶೂರಾಸಃ ಶೌರ್ಯವಂತೋ ಯೇ ಯುಧ್ಯಂತೇ ಶತ್ರೂನ್ಸಂಪ್ರಹರಂತಿ । ಯೇ ಚ ತನೂತ್ಯಜಃ ಶರೀರಾಣಾಂ ತತ್ರ ತ್ಯಕ್ತಾರೋ ಭವಂತಿ । ಯೇ ವಾ ಯೇ ಚ ಸಹಸ್ರದಕ್ಷಿಣಾಃ ಸಹಸ್ರದಕ್ಷಿಣಾನ್ಕ್ರತೂನನುಷ್ಠಿತವಂತಃ । ತಾನ್ಸರ್ವಾನೇವ ತ್ವಮಪಿಗಚ್ಛ । ಯೇಷೂತ್ತಮೇಷು ಲೋಕೇಷು ತೇ ನಿವಸಂತಿ ತಂ ಲೋಕಂ ಪ್ರಾಪ್ನುಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಪ್ರೇತವೇ), **ಯೇ**— ಯಾರು । **ಪ್ರಧನೇಷು**- ಯುದ್ಧಗಳಲ್ಲಿ । **ಶೂರಾಸಃ**—ಶೌರ್ಯವಂತರಾಗಿ । **ಯುಧ್ಯಂತೇ**—ಯುದ್ಧಮಾಡಿ ಶತ್ರುಗಳನ್ನು ಸಂಹರಿಸುವರೋ । **ಯೇ**— ಯಾರು । **ತನೂತ್ಯಜಃ**— ಆ ಯುದ್ಧದಲ್ಲಿ ಶರೀರತ್ಯಾಗಮಾಡುವರೋ (ಮೃತರಾಗುವರೋ) । **ಯೇ ವಾ**— ಇನ್ನು ಯಾರು । **ಸಹಸ್ರದಕ್ಷಿಣಾಃ**— ಸಹಸ್ರ ಸಂಖ್ಯೆಯಲ್ಲಿ ದಕ್ಷಿಣಾದಿ ದಾನಗಳನ್ನು ಕೊಡುವ ಯಾಗಗಳನ್ನು ಮಾಡಿರುವರೋ । **ತಾನ್ ಚಿತ್ ಏವ**—ಅಂತಹ ಪಿತೃಗಳ ಬಳಿಗೆ । **ಅಪಿ ಗಚ್ಛತಾತ್**— ಹೋಗಿ ಸೇರು.

॥ ಭಾವಾರ್ಥ ॥

ಎಲೈ ಪ್ರೇತವೇ, ಯಾರು ಯುದ್ಧಗಳಲ್ಲಿ ಪರಾಕ್ರಮದಿಂದ ಕಾದಾಡಿ ಮೃತರಾಗಿ ವೀರಸ್ವರ್ಗದಲ್ಲಿ ವಾಸಿಸುತ್ತಿರುವರೋ ಯಾರು ಸಹಸ್ರಸಂಖ್ಯೆಯಲ್ಲಿ ದಕ್ಷಿಣಾದಾನಮಾಡಿ ಯಜ್ಞಾನುಷ್ಠಾನಕರ್ಮವನ್ನು ಮಾಡಿ ಉತ್ತಮ ಲೋಕಗಳಲ್ಲಿ ವಾಸಿಸುತ್ತಿರುವರೋ ಅಂತಹ ಪಿತೃಗಳ ಬಳಿಗೆ ಹೋಗು.

## English Translation.

To those who engage in battles, heroes who have given up their lives, or who have presented thousands of offerrings, to them (O dead one) repair.

॥ ಸಂಹಿತಾಪಾಠಃ ॥

ಯೇ ಚಿತ್ಪೂರ್ವ ಋತಸಾಪ ಋತಾವಾನ ಋತಾವೃಧಃ ।

ಪಿತೄನ್ತಪಸ್ವತೋ ಯಮ ತಾಂಶ್ಚಿದೇವಾಪಿ ಗಚ್ಛತಾತ್ ॥ ೪ ॥

॥ ಪದಪಾಠಃ ॥

ಯೇ । ಚಿತ್ । ಪೂರ್ವೇ । ಋತಽಸಾಪಃ । ಋತಽವಾನಃ । ಋತಽವೃಧಃ ।

ಪಿತೄನ್ । ತಪಸ್ವತಃ । ಯಮ । ತಾನ್ । ಚಿತ್ । ಏವ । ಅಪಿ । ಗಚ್ಛತಾತ್ ॥ ೪ ॥

॥ ಸಾಯಣಭಾಷ್ಯಂ ॥

ಯೇ ಚಿದ್ಯೇ ಚ ಪೂರ್ವೇ ಪೂರ್ವಪುರುಷಾ ಋತಸಾಪ ಋತಂ ಸತ್ಯಂ ಯಜ್ಞಂ ವಾ ಸ್ಪೃಶಂತಃ ಅತ ಏವರ್ತವಾನ ಋತೇನ ಯುಕ್ತಾ ಋತವೃಧ ಋತಸ್ಯ ವರ್ಧಕಾಶ್ಚ ಭವಂತಿ ತಪಸ್ವತಸ್ತಪಸಾ ಯುಕ್ತಾಂಸ್ತಾನೇವ ಪಿತೄನ್ ಹೇ ಯಮ ನಿಯತ ತ್ವಮಪಿಗಚ್ಛ ॥

॥ ಪ್ರತಿಪದಾರ್ಥ ॥

**ಯಮ**—ನಿಯಮಾಚರಣೆಯಿಂದಿರುವ ಅಥವಾ ನಿಂ‍ಮುಕ್ಕೆ ಒಳಪಟ್ಟಿರುವ ಪ್ರೇತವೇ । **ಯೇ ಚಿತ್**—ಯಾವ । **ಪೂರ್ವೇ**—ಪೂರ್ವಪುರುಷರು । **ಋತಸಾಪಃ**—ಸತ್ಯಾಚರಣೆ ಅಥವಾ ಯಜ್ಞಾಚರಣೆಯುಳ್ಳವರೋ । **ಋತಾವಾನಃ**—ಆದ್ದರಿಂದಲೇ ಸತ್ಯವಂತರಾಗಿರುವರೋ । **ಋತಾವೃಧಃ**- ಸತ್ಯಕರ್ಮಾನುಷ್ಠಾನದಲ್ಲಿ ಆಸಕ್ತರಾಗಿ ಅದನ್ನು ವೃದ್ಧಿಪಡಿಸುತ್ತಿರುವರೋ । **ತಪಸ್ವತಃ**—ತಪಸ್ಸನ್ನು ಮಾಡಿರುವರೋ । **ತಾನ್ ಚಿತ್ ಏವ**—ಅಂತಹ ಪಿತೃಗಳನ್ನೇ । **ಅಪಿ ಗಚ್ಛತಾತ್**—ಸಮೀಪಿಸು ।

॥ ಭಾವಾರ್ಥ ॥

ನಿಯಮಾಧೀನವಾದ ಎಲೈ ಪ್ರೇತವೇ, ಯಾವ ಪೂರ್ವಪುರುಷರು ಸತ್ಯಾಚರಣೆಯಿಂದಲೂ ಯಜ್ಞಾಚರಣೆಯಿಂದಲೂ ಯುಕ್ತರಾಗಿ ಸತ್ಯವನ್ನೇ ನುಡಿಯುತ್ತಾ ಸತ್ಕರ್ಮಗಳಲ್ಲಿ ಆಸಕ್ತರಾಗಿ ಅವುಗಳನ್ನೇ ಅನುಷ್ಠಾನಮಾಡುತ್ತಾ ಉತ್ತಮವಾದ ತಪಸ್ಸನ್ನು ಮಾಡಿ ಸ್ವರ್ಗಾದಿ ಉತ್ತಮ ಲೋಕಗಳಲ್ಲಿ ವಾಸಿಸುತ್ತಿರುವರೋ ಅಂತಹ ಪಿತೃಗಳ ಬಳಿಗೆ ಹೋಗು.

## English Translation.

Repair, Yama, to those ascetic Pitris who are ancient, observers of truth, speakers of truth, and augmenters of truth.

॥ ಸಂಹಿತಾಪಾಠಃ ॥

ಸಹಸ್ರಣೀಥಾಃ ಕವಯೋ ಯೇ ಗೋಪಾಯಂತಿ ಸೂರ್ಯಂ ।

ಋಷೀನ್ತಪಸ್ವತೋ ಯಮ ತಪೋಜಾँ ಅಪಿ ಗಚ್ಛತಾತ್ ॥ ೫ ॥

|| ಪದಪಾಠಃ ||

ಸಹಸ್ರऽನೀಥಾಃ । ಕವಯಃ । ಯೇ । ಗೋಪಾಯಂತಿ । ಸೂರ್ಯಂ ।

ಋಷೀನ್ । ತಪಸ್ವತಃ । ಯಮ । ತಪಃऽಜಾನ್ । ಅಪಿ । ಗಚ್ಛತಾತ್ || ೫ ||

|| ಸಾಯಣಭಾಷ್ಯಂ ||

ಸಹಸ್ರನೀಥಾಃ ಸಹಸ್ರನಯನಾಃ ಕವಯಃ ಕ್ರಾಂತದರ್ಶಿನೋ ಯೇ ಸೂರ್ಯಮಮುಮಾದಿತ್ಯಂ ಗೋಪಾಯಂತಿ ರಕ್ಷಂತಿ ತಪಸ್ವತಸ್ತಪಸಾ ಯುಕ್ತಾಂಸ್ತಪೋಜಾಂಸ್ತಪಸಃ ಸಕಾಶಾದೇವೋತ್ಪನ್ನಾಂ-ಸ್ತಾನೃಷೀನ್ ಹೇ ಯಮ ನಿಯತ ತ್ವಮಪಿಗಚ್ಛ ||

|| ಪ್ರತಿಪದಾರ್ಥ ||

**ಯಮ**—ನಿಯಮಾಧೀನನಾದ ಎಲೈ ಪ್ರೇತವೇ । **ಸಹಸ್ರನೀಥಾಃ**—ಅಸಂಖ್ಯಾತನಯನವುಳ್ಳವರೂ । **ಕವಯಃ**—ಅತೀಂದ್ರಿಯಾರ್ಥದರ್ಶಿಗಳೂ ಆದ । **ಯೇ**—ಯಾವ ಮಹಾಮಹಿಮರು । **ಸೂರ್ಯಂ**—ಈ ಆದಿತ್ಯನನ್ನು । **ಗೋಪಾಯಂತಿ**—ರಕ್ಷಿಸುವರೋ । **ತಪಸ್ವತಃ**—ತಪಸ್ಸಿನಿಂದ ಯುಕ್ತರಾದವರೂ । **ತಪೋಜಾನ್**—ತಪಸ್ಸಿನಿಂದಲೇ ಉತ್ಪನ್ನರಾದವರೂ ಆದ । **ಋಷೀನ್**—ಆ ಋಷಿಗಳನ್ನು । **ಅಪಿ ಗಚ್ಛತಾತ್**—ಹೋಗಿ ಸೇರು.

|| ಭಾವಾರ್ಥ ||

ಎಲೈ ನಿಯಮಾಧೀನನಾದ ಪ್ರೇತವೇ, ಅಸಂಖ್ಯಾತನಯನವುಳ್ಳವರೂ ಎಂದರೆ ವಿಶಾಲದೃಷ್ಟಿಯುಳ್ಳವರೂ, ಸರ್ವತೋಮುಖವಾದ ಜ್ಞಾನವುಳ್ಳವರೂ, ಅತೀಂದ್ರಿಯಜ್ಞಾನಿಗಳೂ ಆದ ಯಾವ ಮಹಾನುಭಾವರು ಈ ಆದಿತ್ಯನನ್ನು ರಕ್ಷಿಸುವರೋ ಅಂತಹ ತಪೋಯುಕ್ತರೂ ತಪಸ್ಸಿನ ಮಹಿಮೆಯಿಂದಲೇ ಉತ್ಪನ್ನರಾದವರೂ ಆದ ಋಷಿಗಳು ವಾಸಿಸುತ್ತಿರುವ ಉತ್ತಮಲೋಕದಲ್ಲಿ ಅವರ ಬಳಿಗೆ ಹೋಗು

English Translation

Repair, Yama, to those ascetic Rishis, the sons of penance, who protect the sun, being leaders of thousands, and intelligent.

## ನೂರ ಐವತ್ತೈದನೆಯ ಸೂಕ್ತ

### ಪೀಠಿಕೆ.

ಈ ಸೂಕ್ತದಲ್ಲಿ ಅಲಕ್ಷ್ಮಿಯನ್ನು ಸ್ತುತಿಸಲಾಗಿದೆ. ಅಲಕ್ಷ್ಮಿ (ಅಶ್ರೀಃ) ಎಂದರೆ ದಾರಿದ್ರ್ಯ, ದೇಹಾಲಸ್ಯ, ದುಃಖ, ವ್ಯಸನ ಆಹಾರಾಭಾವ ಅಥವಾ ಕ್ಷಾಮ ಇತ್ಯಾದಿ ದುರದೃಷ್ಟಗಳಿಗೆ ಅಭಿಮಾನಿಯಾದ ದೇವತೆಯು. ಇವುಗಳನ್ನು

ಯಾರೂ ಅಪೇಕ್ಷಿಸುವುದಿಲ್ಲವಾದ್ದರಿಂದ ಈ ದೇವತೆಯನ್ನು ಹೊರಟುಹೋಗೆಂದು ಇಲ್ಲಿ ಆಶಿಸಲಾಗಿದೆ. ಈ ಸೂಕ್ತದ ವಿಷಯದಲ್ಲಿ ಋಗ್ವಿಧಾನವೆಂಬ ಗ್ರಂಥದಲ್ಲಿ ಈರೀತಿ ಹೇಳಿದೆ—

**ಅಲಕ್ಷ್ಮೀನಾಶನಾರ್ಥಂ ತು ಜಪೇನ್ನಿತ್ಯಂ ಶಿರಿಂಬಿಠಂ** || ೭೮ ||
**ಅಪಾಮಾರ್ಗಮಯೀಂ ಶಾಖಾಂ ಸದರ್ಭಾಂ ಸಹವೀರಣಾಂ |**
**ಗೃಹೀತ್ವಾತ್ಮಾನಂ ಪಾವಯೇದಧಶ್ಚೋರ್ಧ್ವಂ ಚ ನಿತ್ಯಶಃ** || ೭೯ ||
**ಆಜ್ಯಂ ಚಾನೇನ ಜುಹುಯಾತ್ಸಹಸ್ರಂ ದಶತೀರ್ದಶ |**
**ತ್ರ್ಯಹೇಣ ನುದತೇ ದೇಹಾದಲಕ್ಷ್ಮೀಂ ಶತವಾರ್ಷಿಕೀಂ** || ೮೦ ||
**ಚಾಂದ್ರಾಯಣಂ ಚರನ್ನೇತತ್ಸೂಕ್ತಂ ಸಿದ್ಧಿಕರಂ ಜಪೇತ್ |**
**ಅಲಕ್ಷ್ಮೀಂ ನುದತೇ ದೇಹಾದಪಿ ವರ್ಷಸಹಸ್ರಿಕೀಂ** || ೮೧ ||

(ಋಗ್ವಿಧಾನ. ಅ. ೪. ಶ್ಲೋ ೭೮–೮೧)

ಅಲಕ್ಷ್ಮಿಯ ನಾಶನಾರ್ಥನವಾಗಿ **ಅರಾಯಿ ಕಾಣೇ** ಎಂಬ ಈ ಸೂಕ್ತವನ್ನು ಪ್ರತಿದಿನವೂ ಜಪಮಾಡಬೇಕು. ಅಪಾಮಾರ್ಗವೃಕ್ಷದ ಸಮಿತ್ತುಗಳನ್ನೂ ದರ್ಭೆಗಳನ್ನೂ ತಂದು ಅವುಗಳಿಂದ ಅಗ್ನಿಯಲ್ಲಿ ಆಜ್ಯಸಹಿತವಾಗಿ ಹತ್ತು ಸಹಸ್ರ ಆಹುತಿಗಳನ್ನು ಹೋಮಮಾಡಬೇಕು. ಈರೀತಿ ಮಾಡಿದರೆ ಮೂರುದಿನಗಳಲ್ಲಿಯೇ ನೂರಾರುವರ್ಷಗಳಿಂದ ಅನುಸರಿಸಿ ಬಂದಿದ್ದ ದಾರಿದ್ರ್ಯ, ರೋಗ ಮೊದಲಾದವು ಪರಿಹಾರವಾಗುವವು. ಚಾಂದ್ರಾಯಣವ್ರತನಿಯಮಗಳಿಂದ ಈ ಸೂಕ್ತವನ್ನು ಜಪಿಸಿದರೆ ಸಾವಿರಾರುವರ್ಷಗಳಿಂದ ಪರಂಪರಾಗತವಾಗಿ ಬಂದಿರುವ ಸಮಸ್ತರೋಗಗಳೂ ನಾಶವಾಗಿ ದಾರಿದ್ರ್ಯವೂ ನಾಶವಾಗುವುದು

|| ಸಾಯಣಭಾಷ್ಯಂ ||

**ಅರಾಯೀತಿ ಪಂಚರ್ಚಂ ಚತುರ್ಥಂ ಸೂಕ್ತಂ ಭರದ್ವಾಜಪುತ್ರಸ್ಯ ಶಿರಿಂಬಿಠಸ್ಯಾರ್ಷಮಾನುಷ್ಟುಭಂ | ಜಪಹೋಮಾದಿಭಿರಿದಂ ಸೂಕ್ತಮಶ್ರೀನಾಶಕರಂ | ತತ್ರಾದ್ಯೋಪಾಂತ್ಯಯೋಸ್ತ್ವದೃಷೋಽರ್ಥ ಏವ ದೇವತಾ | ದ್ವಿತೀಯಾತೃತೀಯೇ ಬ್ರಾಹ್ಮಣಸ್ಪತ್ಯೇ | ಪಂಚಮೀ ವೈಶ್ವದೇವೀ | ಅನುಕ್ರಮ್ಯತೇ ಹಿ | ಅರಾಯಿ ಶಿರಿಂಬಿಠೋ ಭಾರದ್ವಾಜೋಽಲಕ್ಷ್ಮೀಘ್ನಂ ದ್ವಿತೀಯಾತೃತೀಯೇ ಬ್ರಾಹ್ಮಣಸ್ಪತ್ಯೇ ಅಂತ್ಯಾ ವೈಶ್ವದೇವೀತಿ || ಗತೋ ವಿನಿಯೋಗಃ ||**

ಅನುವಾದವು—**ಅರಾಯಿ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭರದ್ವಾಜ ಋಷಿಯ ಪುತ್ರನಾದ ಶಿರಿಂಬಿಠನೆಂಬುವನು ಋಷಿಯು, ಅನುಷ್ಟುಪ್‌ಛಂದಸ್ಸು. ಈ ಸೂಕ್ತದ ಜಪಹೋಮಾದಿಗಳಿಂದ ಅಲಕ್ಷ್ಮಿಯು ನಾಶವಾಗುವುದೆಂದು ಹೇಳಿರುವುದರಿಂದ ಮೊದಲು ಮತ್ತು ನಾಲ್ಕನೆಯ ಋಕ್ಕುಗಳಿಗೆ ಅಲಕ್ಷ್ಮಿನಾಶನವೇ ದೇವತೆಯು ; ಎರಡು ಮತ್ತು ಮೂರನೆಯ ಋಕ್ಕುಗಳಿಗೆ ಬ್ರಹ್ಮಣಸ್ಪತಿಯು ದೇವತೆಯು ; ಐದನೆಯ ಋಕ್ಕು ವಿಶ್ವೇದೇವತಾಕವು. ಅನುಕ್ರಮಣಿಕೆಯಲ್ಲಿ—**ಅರಾಯಿ ಶಿರಿಂಬಿಠೋ ಭಾರದ್ವಾಜೋಽಲಕ್ಷ್ಮೀಘ್ನಂ ದ್ವಿತೀಯಾತೃತೀಯೇ ಬ್ರಾಹ್ಮಣಸ್ಪತ್ಯೇ ಅಂತ್ಯಾ ವೈಶ್ವದೇವೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೪೬

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೪೬ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೧೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೪ ॥
॥ ಋಷಿಃ—ಶಿರಿಂಬಿಠೋ ಭಾರದ್ವಾಜಃ ॥
॥ ದೇವತಾ—೧, ೪ ಅಲಕ್ಷ್ಮೀಘ್ನಂ । ೨-೩. ಬ್ರಹ್ಮಣಸ್ಪತಿಃ । ೪. ವಿಶ್ವೇ ದೇವಾಃ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಪಾಠಃ ॥

ಅರಾಯಿ ಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ ।
ಶಿರಿಂಬಿಠಸ್ಯ ಸತ್ವಭಿಸ್ತೇಭಿಷ್ಟ್ವಾ ಚಾತಯಾಮಸಿ ॥ ೧ ॥

॥ ಪದಪಾಠಃ ॥

ಅರಾಯಿ । ಕಾಣೇ । ವಿऽಕಟೇ । ಗಿರಿಂ । ಗಚ್ಛ । ಸದಾನ್ವೇ ।
ಶಿರಿಂಬಿಠಸ್ಯ । ಸತ್ವऽಭಿಃ । ತೇಭಿಃ । ತ್ವಾ । ಚಾತಯಾಮಸಿ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅರಾಯ್ಯದಾಯಿನಿ ದಾನವಿರೋಧಿನಿ ಹೇ ಕಾಣೇ ಕುತ್ಸಿತಶಬ್ದಕಾರಿಣಿ ಕುತ್ಸಿತದರ್ಶನೇ ವಾ ಹೇ ವಿಕಟೇ ವಿಕೃತಗಮನೇ ವಿಕೃತಾಂಗೇ ವಾ ಹೇ ಸದಾನ್ವೇ ಸದಾನೋನುವೇ ಸರ್ವದಾಕ್ರೋಶಕಾರಿಣಿ ದುರ್ಭಿಕ್ಷಾದಿದೇವತೇ ಗಿರಿಂ ಪರ್ವತಂ ನಿರ್ಜನದೇಶಂ ಗಚ್ಛ । ಅಸ್ಮಾನ್ಮಾ ಬಾಧಿಷ್ಠಾಃ । ಶಿರಿಂಬಿಠಸ್ಯ । ಬಿಠಮಂತರಿಕ್ಷಂ । ಶೀರ್ಯತೇ ಬಿಠೇऽಂತರಿಕ್ಷ ಇತಿ ಶಿರಿಂಬಿಠೋ ಮೇಘಃ । ತಸ್ಯ ಸತ್ವಭಿರಂತರ್ವರ್ತಮಾನೈರುದಕೈಸ್ತೇಭಿಸ್ತೈಃಸ್ತ್ವಾ ತ್ವಾಂ ಚಾತಯಾಮಸಿ । ಚಾತಯಾಮಃ । ವಿನಾಶಯಾಮಃ । ಯದ್ವಾ । ಶಿರಿಂಬಠಸ್ಯೈತತ್ಸಂಜ್ಞಕಸ್ಯ ಭರದ್ವಾಜಪುತ್ರಸ್ಯ ತೇಭಿಸ್ತೈರನುಷ್ಠಿತೈಃ ಸತ್ವಭಿಃ ಕರ್ಮಭಿರ್ಹೇ ಅಲಕ್ಷ್ಮಿ ತ್ವಾಂ ವಿನಾಶಯಾಮಃ । ಇತಸ್ತ್ವಮೇವ ಶೀಘ್ರಂ ಗಿರಿಂ ಗಚ್ಛ ॥

॥ ಪ್ರತಿಪದಾರ್ಥ ॥

**ಅರಾಯಿ**—ದಾನವಿರೋಧಿನಿಯೂ । **ಕಾಣೇ**—ಕುತ್ಸಿತಶಬ್ದವಾಚ್ಯಳೂ ಅಥವಾ ವಿಕಾರವಾಗಿ ನಡೆಯುವವಳೂ । **ವಿಕಟೇ**—ವಿಕೃತಾಂಗವುಳ್ಳವಳೂ ಅಥವಾ ವಿಕಾರವಾಗಿ ನಡೆಯುವವಳೂ । **ಸದಾನ್ವೇ**—ಸರ್ವದಾ ಅಳುತ್ತಿರುವವಳೂ ಆದ ಎಲೈ ದುರ್ಭಿಕ್ಷ ದೇವತೆಯೇ । **ಗಿರಿಂ** ನಿರ್ಜನಪ್ರದೇಶವಾದ ಪರ್ವತಕ್ಕೆ । **ಗಚ್ಛ**—ಹೊರಟುಹೋಗು (ನಮಗೆ ತೊಂದರೆಮಾಡಬೇಡ) । **ಶಿರಿಂಬಿಠಸ್ಯ**—ಮೇಘದ । **ಸತ್ವಭಿಃ ತೈಃ**—ಸಾರಭೂತ

ವಾದ ಉದಕಗಳಿಂದ | **ತ್ವಾ**– ನಿನ್ನನ್ನು | **ಚಾತಯಾಮಸಿ**—ನಾಶಮಾಡುತ್ತೇವೆ [ಅಥವಾ | **ಶಿರಿಂಬಿಠಸ್ಯ**—ಭರದ್ವಾಜಪುತ್ರನಾದ ಶಿರಿಂಬಿಠಋಷಿಯ | **ತೈಃ ಸತ್ವಭಿಃ**—ಸತ್ಕರ್ಮಾನುಷ್ಠಾನಗಳಿಂದ | **ತ್ವಾ**—ಅಲಕ್ಷ್ಮಿಯಾದ ನಿನ್ನನ್ನು | **ಚಾತಯಾಮಸಿ**—ನಾಶಮಾಡುತ್ತೇವೆ (ಆದ್ದರಿಂದ ನೀನು ಬೇಗನೆ ನಿರ್ಜನವಾದ ಪರ್ವತಾದಿಗಳಿಗೆ ಹೊರಟುಹೋಗು).

|| ಭಾವಾರ್ಥ ||

ಎಲೈ ದುರ್ಭಿಕ್ಷ (ಕ್ಷಾಮ) ದೇವತೆಯೇ, ನೀನು ದಾನವಿರೋಧಿಯು, ಕುತ್ಸಿತಶಬ್ದವಾಚ್ಯಳು ಅಥವಾ ಕೆಟ್ಟ ರೂಪವುಳ್ಳವಳು, ವಿಕಲವಾದ ಅಂಗಗಳುಳ್ಳವಳು ಅಥವಾ ವಿಕಾರವಾದ ಗಮನವುಳ್ಳವಳು. ಯಾವಾಗಲೂ ಅಳುತ್ತಿರುವವಳು. ಇಂತಹ ನೀನು ನಿರ್ಜನವಾದ ಪರ್ವತ ಪ್ರದೇಶಕ್ಕೆ ಹೊರಟುಹೋಗು. ನಮಗೆ ತೊಂದರೆಮಾಡಬೇಡ. ಮೇಘದಲ್ಲಿರುವ ಉದಕಗಳಿಂದ ನಿನ್ನ ಉಗ್ರತೆಯನ್ನು ನಾಶವಮಾಡುತ್ತೇವೆ ಅಥವಾ ಶಿರಿಂಬಿಠಋಷಿಯು ನೆರವೇರಿಸುವ ಸತ್ಕರ್ಮಾನುಷ್ಠಾನಗಳಿಂದ ಅಲಕ್ಷ್ಮಿಯಾದ ನಿನ್ನನ್ನು ನಾಶವಮಾಡುತ್ತೇವೆ.

## English Translation.

Miserable, ill-favoured, deformed, ever-railing (goddess) go to the mountain ; with these exploits of Shirimbitha we scare you away.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ದುರ್ಭಿಕ್ಷ (ಕ್ಷಾಮ) ದೇವತೆಯನ್ನು ವರ್ಣಿಸಲಾಗಿದೆ. ಕ್ಷಾಮಕಾಲದಲ್ಲಿ ಜನರಿಗೆ ತಿನ್ನಲು ಆಹಾರವಿರುವುದಿಲ್ಲವಾದ್ದರಿಂದ ಮತ್ತೊಬ್ಬರಿಗೆ ದಾನವಮಾಡುವ ಮನಸ್ಸೇ ಇರುವುದಿಲ್ಲ ಮನಸ್ಸಿದ್ದರೂ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಈ ಕ್ಷಾಮ ದೇವತೆಯನ್ನು ದಾನವಿರೋಧಿನಿ ಎಂದು ಕರೆಯಲಾಗಿದೆ, ಆಹಾರವಿಲ್ಲದ್ದರಿಂದ ಜನರು ಈ ಕ್ಷಾಮವನ್ನು ಕೆಟ್ಟಮಾತುಗಳಿಂದ ಶಪಿಸುವರು, ಜನರು ಕೃಶರಾಗಿಯೂ ವಿಕಲಾಂಗವುಳ್ಳವರಾಗಿಯೂ ನಡೆಯುವುದಕ್ಕೆ ಶಕ್ತಿಯಿಲ್ಲದವರಾಗಿಯೂ ಆಹಾರಾರ್ಥವಾಗಿ ರೋದಿಸುತ್ತಲೂ ಇರುವರು. ಆದ್ದರಿಂದ ಈ ದೇವತೆಯನ್ನು ಇಲ್ಲಿ ಕಾಣೇ, ವಿಕಟೇ, ಸದಾನ್ವೇ ಎಂಬ ಶಬ್ದಗಳಿಂದ ವರ್ಣಿಸಲಾಗಿದೆ. ಮತ್ತು ಈ ದುರ್ಭಿಕ್ಷದಿಂದ ಜನರು ತುಂಬಿರುವ ಗ್ರಾಮನಗರಗಳಿಗೆ ತೊಂದರೆಯುಂಟಾಗುವುದರಿಂದ ನಿರ್ಜನ ಪ್ರದೇಶವಾದ ಗಿರಿದುರ್ಗಗಳಿಗೆ ಹೊರಟುಹೋಗೆಂದು ಆಶಿಸಲಾಗಿದೆ. ಮತ್ತು ಕ್ಷಾಮವು ನಿವಾರಣೆಯಾಗಬೇಕಾದರೆ ಯಥೇಷ್ಟವಾಗಿ ವೃಷ್ಟಿಯಾಗಬೇಕು. ಆದ್ದರಿಂದ ಮೇಘದಲ್ಲಿರುವ ಸಾರಭೂತವಾದ ಉದಕಗಳಿಂದ ವೃಷ್ಟಿಯಮೂಲಕ ಕ್ಷಾಮವನ್ನು ನಾಶವಮಾಡುತ್ತೇವೆಂದು ಋಷಿಯು ಹೇಳಿದಾನೆ ಅಥವಾ ಸೂಕ್ತದ್ರಷ್ಟೃವಾದ ಶಿರಿಂಬಿಠಋಷಿಯ ಯಜ್ಞಾದಿ ಕರ್ಮಾಚರಣೆಯಿಂದ ಕ್ಷಾಮವು ನಿವಾರಣೆಯಾಗಲೆಂದು ಆಶಿಸಲಾಗಿದೆ. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿ ಮುಖ್ಯವಾದ ಶಬ್ದಗಳಿಗೆ ನಿರ್ವಚನವನ್ನು ಹೇಳಿದಾರೆ—

**ಸದಾನ್ವೇ | ಶಿರಿಂಬಿಠಃ || ಅರಾಯಿ ಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ | ಶಿರಿಂಬಿಠಸ್ಯ ಸತ್ವಭಿಸ್ತೇಭಿಷ್ಟ್ವಾ ಚಾತಯಾಮಸಿ || ಅದಾಯಿನಿ ಕಾಣೇ ವಿಕಟೇ | ಕಾಣೋಽವಿಕ್ರಾಂತದರ್ಶನ ಇತ್ಯೌಪಮನ್ಯವಃ | ಕಣತೇರ್ವಾ ಸ್ಯಾದಣೂಭಾವಕರ್ಮಣಃ | ಕಣತಿಃ ಶಬ್ದಾಣೂಭಾವೇ**

**ಭಾಷ್ಯತೇಽನು ಕಣತೀತಿ। ಮಾತ್ರಾಣೂಭಾವಾತ್ಕಣೋ ದರ್ಶನಾಣೂಭಾವಾತ್ಕಾಣಃ ॥ ವಿಕಟೋ ವಿಕ್ರಾಂತಗತಿರಿತ್ಯೌಪಮನ್ಯವಃ । ಕಟತೇರ್ವಾ ಸ್ಯಾದ್ವಿಪರೀತಸ್ಯ ವಿಕುಟಿತೋ ಭವತಿ । ಗಿರಿಂ ಗಚ್ಛ ಸದಾನೋನುವೇ ಶಬ್ದಕಾರಿಕೇ । ಶಿರಿಂಬಿಠಸ್ಯ ಸತ್ವಭಿಃ । ಶಿರಿಂಬಿಠೋ ಮೇಘಃ । ಶೀರ್ಯತೇ ಬಿಠೇ । ಬಿಠಮಂತರಿಕ್ಷಂ ಬಿಠಂ ಬೀರಿಟೇನ ವ್ಯಾಖ್ಯಾತಂ ॥ ತಸ್ಯ ಸತ್ವೈರುದಕೈರಿತಿ ಸ್ಯಾತ್ತೈಃ ಷ್ಟ್ವಾ ಚಾತಯಾಮಃ, ಅಪಿ ವಾ ಶಿರಿಂಬಿಠೋ ಭಾರದ್ವಾಜಃ । ಕಾಳಕರ್ಣೋಪೇತೋಽಲಕ್ಷ್ಮೀರ್ನಿರ್ಣಾಶಯಾಂಚಕಾರ ತಸ್ಯ ಸತ್ವೈಃ ಕರ್ಮಭಿರಿತಿಸ್ಯಾತ್ತೈಃ ಷ್ಟ್ವಾ ಚಾತಯಾಮಃ ॥ ಚಾತಯತಿರ್ನಾಶನೇ ॥** (ನಿ. ೬-೩೦)

ಈ ಋಕ್ಕಿನಲ್ಲಿ ಅಲಕ್ಷ್ಮಿಯನ್ನು ಅಥವಾ ದುರ್ಭಿಕ್ಷದೇವತೆಯನ್ನು ವರ್ಣಿಸಲಾಗಿದೆ. ಸದಾನ್ವೇ ಎಂದರೆ ಸದಾನೋನುವೇ—ಹಸಿವಿನಿಂದ ರೋದಿಸುತ್ತಿರುವ ಎಂದರ್ಥವು.

**ಅರಾಯಿ—ಅದಾಯಿನಿ** ದಾನವನ್ನು ಕೊಡದಿರುವ ಎಂದರ್ಥವು ಕ್ಷಾಮಕಾಲದಲ್ಲಿ ಒಬ್ಬರಿಗೊಬ್ಬರಿಗೆ ದಾನವಮಾಡುವುದಕ್ಕೆ ಮನಸ್ಸು ಬರುವುದಿಲ್ಲ. ತಮಗೇ ಇಲ್ಲದ್ದರಿಂದ ಇತರರಿಗೆ ಏನು ಕೊಡಲು ಸಾಧ್ಯ? ಅಲಕ್ಷ್ಮಿ ಎಂದರೆ ದಾರಿದ್ರ್ಯಪೀಡಿತರಾಗಿರುವವರ ವಿಷಯವೂ ಹಾಗೆಯೇ. ತಮಗೇ ಇಲ್ಲದ್ದರಿಂದ ದರಿದ್ರರು ಇತರರಿಗೆ ದಾನ ಮಾಡಲು ಸಾಧ್ಯವಿಲ್ಲ.

**ಕಾಣೇ । ಕಾಣೋಽವಿಕ್ರಾಂತದರ್ಶನ ಇತ್ಯೌಪಮನ್ಯವಃ ।** ಕಾಣ ಎಂದರೆ ಅಂಧಕ, ಕಣ್ಣುಕಾಣಿಸದಿರುವ ; ದುರ್ಭಿಕ್ಷದಲ್ಲಿ ಅನ್ನಾಭಾವದಿಂದ ದೃಷ್ಟಿಮಾಂದ್ಯವಾಗುವುದು ಸಹಜವು. ದರಿದ್ರರ ವಿಷಯವೂ ಹಾಗೆಯೇ. ಇದು ಔಪಮನ್ಯವ ಎಂಬ ಆಚಾರ್ಯರ ಅಭಿಪ್ರಾಯವು **ಕಣತೇರ್ವಾ ಸ್ಯಾದಣೂಭಾವಕರ್ಮಣಃ । ಕಣತಿಃ ಶಬ್ದಾಣೂಭಾವೇ ಭಾಷ್ಯತೇಽನು ಕಣತೀತಿ । ಮಾತ್ರಾಣೂಭಾವಾತ್ಕಣೋ ದರ್ಶನಾಣೂಭಾವಾತ್ಕಾಣಃ । ಕಣ್** ಎಂಬ ಧಾತುವು ಅತಿಸ್ವಲ್ಪವಾದ ಎಂದರೆ ಬಹಳ ಮೆತ್ತನೆಯ ಧ್ವನಿಯಲ್ಲಿ ಹೇಳುವ ಶಬ್ದವನ್ನು ಸೂಚಿಸುವುದು. ಅಥವಾ ಸ್ವಲ್ಪವೂ ಕೇಳಿಸದಿರುವ ಎಂಬರ್ಥವನ್ನು ಸೂಚಿಸಬಹುದು. ಬಹಳ ಸಣ್ಣದಾದ ಆಕಾರದಿಂದಿರುವ ಪುರುಷನನ್ನು **ಕಣ** ಎಂದು ಕರೆಯುವರು. **ಕಾಣ** ಎಂದರೆ ಕಣ್ಣುಕಾಣಿಸದಿರುವ ಅಥವಾ ಒಂದುಕಣ್ಣು ಮಾತ್ರವಿರುವ ಪುರುಷನು ಎಂದರ್ಥವು.

**ವಿಕಟೋ ವಿಕ್ರಾಂತಗತಿರಿತ್ಯೌಪಮನ್ಯವಃ । ಕುಟತೇರ್ವಾ ಸ್ಯಾದ್ವಿಪರೀತಸ್ಯ ವಿಕುಟಿತೋ ಭವತಿ । ವಿಕಟ** ಎಂದರೆ ವಿಕಾರವಾದ ಅಂಗವುಳ್ಳ ಕೈ ಸೊಟ್ಟಾಗಿರುವುದು, ಕಾಲು ಕುಂಟಾಗಿರುವುದು ಇತ್ಯಾದಿ. ಅಥವಾ ನಡೆಯುವಾಗ ವಿಕಾರವಾದ ಗತಿಯುಳ್ಳವನು ಎಂದೂ ಅರ್ಥವು ಎಂದು ಔಪಮನ್ಯವರ ಅಭಿಪ್ರಾಯವು. ಸೊಟ್ಟಾಗಿರು ಎಂಬರ್ಥವುಳ್ಳ **ಕುಟ್** ಧಾತುವಿನಿಂದ ವಿಕಟ ಶಬ್ದವು ನಿಷ್ಪನ್ನವಾಗಿದೆ ಅಥವಾ **ವಿಕುಟಿತಃ** ಎಂಬ ಶಬ್ದದ ಅಕ್ಷರಗಳು ವ್ಯತ್ಯಸ್ತವಾಗಿ **ವಿಕಟ** ಎಂದಾಗಿರಬಹುದು. ಬಹಳ ಸೊಟ್ಟಾಗಿರುವ ಎಂದರ್ಥವು.

**ಗಿರಿಂ ಗಚ್ಛ ಸದಾನೋನುವೇ ಶಬ್ದಕಾರಿಕೇ ।** ಯಾವಾಗಲೂ ಅಳುತ್ತಾ, ಕಿರಿಚುತ್ತಾ, ಶಬ್ದಮಾಡುತ್ತಾ ಇರುವ ಎಲೈ ದುರ್ಭಿಕ್ಷ ದೇವತೆಯೇ, ನಿರ್ಜನವಾದ ಬೆಟ್ಟಕ್ಕೆ ಹೊರಟುಹೋಗು.

**ಶಿರಿಂಬಿಠಸ್ಯ ಸತ್ವಭಿಃ । ಶಿರಿಂಬಿಠೋ ಮೇಘಃ । ಶೀರ್ಯತೇ ಬಿಠೇ ಬಿಠಮಂತರಿಕ್ಷಂ ಬಿಠಂ ಬೀರಿಟೇನ ವ್ಯಾಖ್ಯಾತಂ । ತಸ್ಯ ಸತ್ತ್ವೈರುದಕೈರಿತಿ ಸ್ಯಾತ್ತ್ವೈಷ್ಟ್ವಾ ಚಾತಯಾಮಃ ।** ಶಿರಿಂಬಿಠವೆಂದರೆ ಮೇಘವು. ಬಿಠವೆಂದರೆ ಅಂತರಿಕ್ಷದಲ್ಲಿ ಈ ಮೇಘವು ಶೀಳಲ್ಪಡುವುದರಿಂದ ಎಂದರೆ ಚದುರಿಸಲ್ಪಡುವುದರಿಂದ ಮೇಘಕ್ಕೆ ಶಿರಿಂಬಿಠವೆಂದು ಹೆಸರು. ಬಿಠಂ ಎಂಬ ಶಬ್ದದ ವಿವರಣೆಯನ್ನು ಹಿಂದೆ ಬೀರಿಟಶಬ್ದವನ್ನು ವಿವರಿಸುವಾಗ (ನಿ. ೫-೨೮) ಹೇಳಲಾಗಿದೆ. ಇಂತಹ ಮೇಘದ ಸಾರಭೂತವಾದ ಉದಕಗಳಿಂದ ನಿನ್ನನ್ನು ನಾಶಮಾಡುತ್ತೇವೆ ಎಂದರೆ ವೃಷ್ಟಿವರ್ಷಣದಿಂದ ಕ್ಷಾಮವನ್ನು ನಾಶಮಾಡುತ್ತೇವೆ.

**ಅಪಿ ವಾ ಶಿರಿಂಬಿಠೋ ಭಾರದ್ವಾಜಃ । ಕಾಳಕರ್ಣೋಪೇತೋಽಲಕ್ಷ್ಮೀರ್ನಿರ್ನಾಶಯಾಂಚಕಾರ ತಸ್ಯ ಸತ್ತ್ವೈಃ ಕರ್ಮಭಿರಿತಿ ಸ್ಯಾತ್ತ್ವೈಷ್ಟ್ವಾ ಚಾತಯಾಮಃ । ಚಾತಯತಿರ್ನಾಶನೇ ॥** ಅಥವಾ ಶಿರಿಂಬಿಠ ಎಂದರೆ ಭರದ್ವಾಜಋಷಿಯ ಪುತ್ರನು. ಇವನು ತನ್ನ ಕಪ್ಪಗಿರುವ ಕಿವಿಗಳಿಂದ ವಿಕಾರರೂಪನಾಗಿ ಅಲಕ್ಷ್ಮಿ ಎಂದರೆ ದರಿದ್ರದೇವತೆಯನ್ನು ನಾಶಮಾಡಿದನು. ಎಂದರೆ ಹೆದರಿಸಿ ಓಡಿಸಿದನು. ಆ ಋಷಿಯ ಕರ್ಮಗಳಿಂದಲೂ ನಾವು ಈ ದುರ್ಭಿಕ್ಷದೇವತೆಯನ್ನು ನಾಶಮಾಡುತ್ತೇವೆ ಎಂದರೆ ಓಡಿಸುತ್ತೇವೆ ಚಾತಯತಿ ಧಾತುವಿಗೆ ನಾಶಮಾಡುವುದು, ಹೆದರಿಸಿ ಓಡಿಸುವುದು ಎಂಬರ್ಥವಿರುವುದು.

॥ ಸಂಹಿತಾಪಾಠಃ ॥

ಚತ್ತೋ ಇತಶ್ಚತ್ತಾಮುತಃ ಸರ್ವಾ ಭ್ರೂಣಾನ್ಯಾರುಷೀ ।

ಅರಾಯ್ಯಂ ಬ್ರಹ್ಮಣಸ್ಪತೇ ತೀಕ್ಷ್ಣಶೃಂಗೋದೃಷನ್ನಿಹಿ ॥ ೨ ॥

॥ ಪದಪಾಠಃ ॥

ಚತ್ತೋ ಇತಿ । ಇತಃ । ಚತ್ತಾ । ಅಮುತಃ । ಸರ್ವಾ । ಭ್ರೂಣಾನಿ । ಆರುಷೀ ।

ಅರಾಯ್ಯಂ । ಬ್ರಹ್ಮಣಃ । ಪತೇ । ತೀಕ್ಷ್ಣಽಶೃಂಗ । ಉತ್ಽಋಷನ್ । ಇಹಿ ॥ ೨ ॥

॥ ಸಾಯಣಭಾಷ್ಯಂ ॥

**ಸಾಲಕ್ಷ್ಮೀರಿತೋಽಸ್ಮಾಲ್ಲೋಕಾಚ್ಚತ್ತೋ ಚತ್ತೈವಾಸ್ಮಾಭಿರ್ನಾಶಿತೈವಾಮುತೋಽಮುಷ್ಮಾದಪಿ ಲೋಕಾಚ್ಚತ್ತಾ ಹಿಂಸಿತಾ ಭವತು । ಯಾಲಕ್ಷ್ಮೀಃ ಸರ್ವಾ ಸರ್ವಾಣಿ ಭ್ರೂಣಾನಿ ಗರ್ಭಜಾತಾನಿ ಸರ್ವಾಸಾಮೋಷಧೀನಾಮಂಕುರಾಣಿ ಯಾ ದುರ್ಭಿಕ್ಷಾಧಿದೇವತಾರುಷ್ಯಾಹಂತ್ರೀ ಭವತಿ ಅರಾಯ್ಯಂ ದಾನವಿರೋಧಿನೀಂ ತಾಂ ಹೇ ಬ್ರಹ್ಮಣಸ್ಪತೇ ಮಂತ್ರಪಾಲಯಿತರ್ದೇವ ಹೇ ತೀಕ್ಷ್ಣಶೃಂಗ ತೀಕ್ಷ್ಣತೇಜಸ್ಕ ಉದೃಷನ್ನಸ್ಮಾತ್ಸ್ಥಾನಾದುದ್ಗಮಯನ್ನಿಹಿ । ಗಚ್ಛ ॥**

|| ಪ್ರತಿಪದಾರ್ಥ ||

(ಆ ಅಲಕ್ಷ್ಮಿಯು ಅಥವಾ ದುರ್ಭಿಕ್ಷದೇವತೆಯು) **ಇತಃ**—ಈ ಲೋಕದಿಂದ | **ಚತ್ತಃ**—ಹೆದರಿಸಿ ಓಡಿಸಲ್ಪಡಲಿ (ನಾಶಮಾಡಲ್ಪಡಲಿ) | **ಅಮುತಃ**—ಸ್ವರ್ಗಲೋಕದಿಂದಲೂ | **ಚತ್ತಾ**—ಹಿಂಸಿಸಲ್ಪಡಲಿ (ಓಡಿಸಲ್ಪಡಲಿ) ಯಾವ ದುರ್ಭಿಕ್ಷದೇವತೆಯು | **ಬ್ರಹ್ಮಣಸ್ಪತೇ**—ಮಂತ್ರಗಳ ಪಾಲಕನಾದ ಎಲೈ ಬ್ರಹ್ಮಣಸ್ಪತಿಯೆಂಬ ದೇವತೆಯೇ | **ತೀಕ್ಷ್ಣಶೃಂಗ**—ತೀಕ್ಷ್ಣವಾದ ತೇಜಸುಳ್ಳ | **ಸರ್ವಾ**—ಸಮಸ್ತವಾದ | **ಭ್ರೂಣಾನಿ**—ಗರ್ಭಸ್ಥ ಶಿಶುಗಳನ್ನು ಅಥವಾ ವನಸ್ಪತಿಗಳ ಮೊಳಕೆಗಳನ್ನು | **ಆರುಷೀ**—ನಾಶಮಾಡುವಳೋ | **ಅರಾಯ್ಯಂ**—ದಾನವಿರೋಧಿನಿಯಾದ ಆ ದುರ್ಭಿಕ್ಷದೇವತೆಯನ್ನು | **ಉದ್ವೃಷನ್**—ಓಡಿಸುತ್ತಾ | ಇಹಿ—ನಮ್ಮ ಬಳಿಗೆ ಬಾ.

|| ಭಾವಾರ್ಥ ||

ಈ ದುರ್ಭಿಕ್ಷದೇವತೆಯು ಈ ಲೋಕದಿಂದಲೂ ಸ್ವರ್ಗಲೋಕದಿಂದಲೂ ಹಿಂಸಿತಳಾಗಿ ಓಡಿಸಲ್ಪಡಲಿ. ತೀಕ್ಷ್ಣವಾದ ತೇಜಸ್ಸಿನಿಂದ ಬೆಳಗುವ ಎಲೈ ಬ್ರಹ್ಮಣಸ್ಪತಿಯೇ, ನೀನು ಸಮಸ್ತಗರ್ಭಸ್ಥಶಿಶುಗಳನ್ನೂ ವೃಕ್ಷಗಳ ಬೀಜಾಂಕುರಗಳನ್ನೂ ನಾಶಮಾಡುವ ದಾನವಿರೋಧಿಯಾದ ಈ ದುಭಿರ್ಕ್ಷದೇವತೆಯನ್ನು ಓಡಿಸುತ್ತಾ ನಮ್ಮ ಬಳಿಗೆ ಬಾ.

English Translation

May she be scared away from this (world), scared away from the next (world), the desructress of a embryos; sharp-horned Brihaspatı, approach, drıving away Distress.

|| ಸಂಹಿತಾಪಾಠಃ ||

ಅದೋ ಯದ್ದಾರು ಪ್ಲವತೇ ಸಿಂಧೋಃ ಪಾರೇ ಅಪೂರುಷಂ |
ತದಾ ರಭಸ್ವ ದುರ್ಹಣೋ ತೇನ ಗಚ್ಛ ಪರಸ್ತರಂ || ೩ ||

|| ಪದಪಾಠಃ ||

ಅದಃ | ಯತ್ | ದಾರು | ಪ್ಲವತೇ | ಸಿಂಧೋಃ | ಪಾರೇ | ಅಪುರುಷಂ |
ತತ್ | ಆ | ರಭಸ್ವ | ದುರ್ಹನೋ ಇತಿ ದುಃऽಹನೋ | ತೇನ | ಗಚ್ಛ | ಪರಃऽತರಂ || ೩ ||

|| ಸಾಯಣಭಾಷ್ಯಂ ||

ಅದೋ ವಿಪ್ರಕೃಷ್ಟದೇಶೇ ವರ್ತಮಾನಮಪೂರುಷಂ ನಿರ್ಮಾತ್ರಾ ಪುರುಷೇಣ ರಹಿತಂ ಯದ್ದಾರು ದಾರುಮಯಂ ಪುರುಷೋತ್ತಮಾಖ್ಯಂ ದೇವತಾಶರೀರಂ ಸಿಂಧೋಃ ಪಾರೇ ಸಮುದ್ರತೀರೇ ಪ್ಲವತೇ ಜಲಸ್ಯೋಪರಿ ವರ್ತತೇ ತದ್ದಾರು ಹೇ ದುರ್ಹಣೋ ದುಃಖೇನ ಹನನೀಯ ಕೇನಾಪಿ ಹಂತುಮಶಕ್ಯ ಹೇ

**ಸ್ತೋತಃ ಆ ರಭಸ್ವ । ಆಲಂಬಸ್ವ । ಉಪಾಸ್ಸ್ವೇತ್ಯರ್ಥಃ । ತೇನ ದಾರುಮಯೇಣ ದೇವೇನೋಪಾಸ್ಯಮಾನೇನ ಪರಸ್ತರಮತಿಶಯೇನ ತರಣೀಯಮುತ್ಕೃಷ್ಟಂ ವೈಷ್ಣವಂ ಲೋಕಂ ಗಚ್ಛ ॥ ಅಪರ ಆಹ । ಹೇ ದುರ್ಹಣೋ ದುಃಖೇನ ಹನನೀಯೇ ದುಷ್ಟಹನುಯುಕ್ತೇ ವಾ ಹೇ ಅಲಕ್ಷ್ಮಿ ಸಿಂಧೋಃ ಪಾರೇ ಸಮುದ್ರತೀರಪ್ರಾಂತೇಽಪೂರುಷಂ ಪುರುಷೈರ್ಜನೈರ್ವಿಯುಕ್ತಮದೋಽಸ್ಮತ್ತೋ ದೂರೇ ದೇಶೇ ವರ್ತಮಾನಂ ಯದ್ದಾರು ದಾರುಮಯೀ ನೌಃ ಪ್ಲವತೇ ತದ್ದ್ವಾರ್ವಾ ರಭಸ್ವ । ಪರಿಗೃಹಾಣ । ಗೃಹೀತ್ವಾ ಚ ತೇನ ದಾರುಣಾ ಪರಸ್ತರಮತಿಶಯೇನ ತರಣೀಯಂ ಬೃಹ್ಮಣಸ್ಪತಿನಾ ಪ್ರೇರಿತಾ ಸತೀ ದ್ವೀಪಾಂತರಂ ಗಚ್ಛ ॥**

ಅಧ್ಯಾತ್ಮಪರವಾದ ಅರ್ಥ

**ಅದಃ**—ದೂರಪ್ರದೇಶದಲ್ಲಿರುವ । **ಅಪೂರುಷಂ**—ಪುರುಷನಿರ್ಮಿತವಲ್ಲದ । **ಯತ್ ದಾರು**—ದಾರುಮಯವಾದ ಯಾವ ದೇವತಾಶರೀರವು । **ಸಿಂಧೋಃ ಪಾರೇ**—ಸಮುದ್ರತೀರದಲ್ಲಿ । **ಪ್ಲವತೇ**—ತೇಲುತ್ತಿರುವುದೋ । **ತತ್**—ಆ ದಾರುವನ್ನು । **ದುರ್ಹನೋ**—ಕೊಲ್ಲಲ್ಪಡಲಸಾಧ್ಯವಾದ ಎಲೈ ಸ್ತೋತೃವೇ । **ಆ ರಭಸ್ವ**—ಆಶ್ರಯಿಸು (ಉಪಾಸನೆಮಾಡು) । **ತೇನ**—ಆ ದಾರುಮಯವಾದ ದೇವತೆಯಿಂದ ಉಪಾಸಿಸಲ್ಪಡುವ । **ಪರಸ್ತರಂ**—ಉತ್ಕೃಷ್ಟವಾದ ವಿಷ್ಣುಲೋಕವನ್ನು । **ಗಚ್ಛ**—ಹೋಗಿಸೇರು.

॥ ಭಾವಾರ್ಥ ॥

ಎಲೈ ಜೀವವೇ ಅಥವಾ ಆತ್ಮವೇ. ನೀನು (ಆತ್ಮವು) ಕೊಲ್ಲಲ್ಪಡಲು ಅಸಾಧ್ಯನು. ಇಂತಹ ನೀನು ದೇವತಾಶರೀರವನ್ನು ಆಶ್ರಯಿಸಿ ಸಮುದ್ರಮಧ್ಯದಲ್ಲಿ ಸ್ಥಾಪಿತವಾಗಿರುವ ಅತ್ಯುತ್ಕೃಷ್ಟವಾದ ವಿಷ್ಣುಲೋಕಕ್ಕೆ ಹೋಗಿಸೇರು.

ದುರ್ಭಿಕ್ಷ ದೇವತೆಯ ಪರವಾದ ಅರ್ಥ

**ದುರ್ಹಣೋ**—ಅತಿ ದುಃಖದಿಂದ ಸಾಯುತ್ತಿರುವ ಅಥವಾ ವಿಕಾರವಾದ ಹನುಪ್ರದೇಶವುಳ್ಳ ಎಲೈ ಕ್ಷಾಮದೇವತೆಯೇ ಅಥವಾ ಅಲಕ್ಷ್ಮಿಯೇ । **ಸಿಂಧೋಃ ಪಾರೇ**—ಸಮುದ್ರತೀರಪ್ರದೇಶದಲ್ಲಿ । **ಅಪೂರುಷಂ**—ಜನರಹಿತವಾದ । **ಅದಃ**—ಇಲ್ಲಿಗೆ ಅತಿದೂರದಲ್ಲಿರುವ । **ಯತ್ ದಾರು**—ಯಾವದಾರು (ಮರ) ಮಯವಾದ ದೋಣಿಯು। **ಪ್ಲವತೇ**—ತೇಲುತ್ತಿರುವುದೋ । **ತತ್**—ಆ ದೋಣಿಯನ್ನು । **ಆ ರಭಸ್ವ**—ಆಶ್ರಯಿಸು ಎಂದರೆ ಹತ್ತಿ ಕುಳಿತುಕೋ ! **ತೇನ**—ಆ ದೋಣಿಯ ಸಹಾಯದಿಂದ (ಬ್ರಹ್ಮಣಸ್ಪತಿಯಿಂದ ಪ್ರೇರಿತಳಾಗಿ) । **ಪರಸ್ತರಂ**—ದಾಟಿ ಹೋಗಬೇಕಾದ ಸಮುದ್ರದ ಆಚೆದಡದಲ್ಲಿರುವ ದ್ವೀಪಾಂತರಕ್ಕೆ । **ಗಚ್ಛ**—ಹೊರಟುಹೋಗು.

॥ ಭಾವಾರ್ಥ ॥

ಅತಿದುಃಖದಿಂದ ಮೃತಳಾಗುವ ಎಲೈ ಕ್ಷಾಮದೇವತೆಯೇ, ಅಥವಾ ಅಲಕ್ಷ್ಮಿಯೇ, ಇಲ್ಲಿಗೆ ಅತಿದೂರಪ್ರದೇಶದಲ್ಲಿರುವ ಸಮುದ್ರತೀರದಲ್ಲಿರುವ ನೀರಿನಮೇಲೆ ತೇಲುತ್ತಿರುವ ದೋಣಿಯನ್ನಾಶ್ರಯಿಸಿ ಅದರಲ್ಲಿ ಕುಳಿತು ಸಮುದ್ರದ ಆಚೆ ದಡದ ಬಳಿ ಇರುವ ದ್ವೀಪಾಂತರಕ್ಕೆ ಹೊರಟು ಹೋಗು.

### English Translation

The wood which floats by the sea-shore far off, remote from man, seize that, (O goddess), hard to destroy, and therewith go to a distant shore.

॥ ಸಂಹಿತಾಪಾಠಃ ॥

ಯದ್ಧ ಪ್ರಾಚೀರಜಗಂತೋರೋ ಮಂಡೂರಧಾಣಿಕೀಃ ।

ಹತಾ ಇಂದ್ರಸ್ಯ ಶತ್ರವಃ ಸರ್ವೇ ಬುದ್ಬುದಯಾಶವಃ ॥ ೪ ॥

॥ ಪದಪಾಠಃ ॥

ಯತ್ । ಹ । ಪ್ರಾಚೀಃ । ಅಜಗಂತ । ಉರಃ । ಮಂಡೂರಧಾಣಿಕೀಃ ।

ಹತಾಃ । ಇಂದ್ರಸ್ಯ । ಶತ್ರವಃ । ಸರ್ವೇ । ಬುದ್ಬುದಯಾಶವಃ ॥ ೪ ॥

॥ ಸಾಯಣಭಾಷ್ಯಂ ॥

ಷಷ್ಠೇಽಹನಿ ತೃತೀಯಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ಯದ್ಧ ಪ್ರಾಚೀರಿತ್ಯೇಷಾ । ಸೂತ್ರಿತಂ ಚ । ಕಪೃನ್ನರೋ ಯದ್ಧ ಪ್ರಾಚೀರಜಗಂತೇತಿ ಚೈತೇ । ಆ. ೮-೩ । ಇತಿ ॥

ಹೇ ಮಂಡೂರಧಾಣಿಕೀರ್ಮಂಡೂರವತ್ಕುತ್ಸಿತಶಬ್ದಕಾರಿಣ್ಯೋ ಮಂದನಸ್ಯ ಧನಸ್ಯ ಧಾರಯಿತ್ರ್ಯೋ ವಾಲಕ್ಷ್ಮ್ಯ ಉರಃ ॥ ಉರ್ವೀ ಹಿಂಸಾರ್ಥಃ । ಅಸ್ಮಾತ್ಕ್ವಿಪಿ ರಾಲ್ಲೋಪ ಇತಿ ವಲೋಪಃ । ತತೋ ಜಸಿ ರೂಪಮೇತತ್ ॥ ಹಿಂಸಿತ್ರ್ಯೋ ಯೂಯಂ ಪ್ರಾಚೀಃ ಪ್ರಕರ್ಷೇಣಾಂಚಂತ್ಯಃ ಪ್ರಕೃಷ್ಟಗಮನಾಃ ಸತ್ಯೋ ಯದ್ಧ ಯದಾ ಖಲ್ವಜಗಂತ ಅಗಚ್ಛತ॥ ಗಮೇರ್ಲಙಿ ಮಧ್ಯಮಬಹುವಚನೇ ಛಾಂದಸಃ ಶಪಃ ಶ್ಲುಃ । ತಪ್ತನಪ್ತನಥನಾಶ್ಚೇತಿ ತಸ್ಯ ತನಬಾದೇಶಃ । ಅತ ಏವ ಙಿತ್ತ್ವಾಭಾವಾದನುನಾಸಿಕಲೋಪೋ ನ ಭವತಿ ॥ ತದಾನೀಮೇವ ಸರ್ವ ಇಂದ್ರಸ್ಯ ಶತ್ರವೋ ಬುದ್ಬುದಯಾಶವಃ ॥ ಯಾಂತಿ ಗಚ್ಛಂತೀತಿ ಯಾಃ । ಅಶ್ನುವತ ಇತ್ಯಾಶವಃ । ಯಾಶ್ಚ ತ ಆಶವಶ್ಚ ಯಾಶವಃ । ಬುದ್ಬುದವದ್ಯಾತಾರೋ ವ್ಯಾಪನಶೀಲಾಶ್ಚ ಸಂತೋ ಹತಾ ನಷ್ಟಾ ಆಸನ್ ॥

॥ ಪ್ರತಿಪದಾರ್ಥ ॥

**ಉರಃ**— ಜನರನ್ನು ಹಿಂಸಿಸುವವರೂ । **ಮಂಡೂರಧಾಣಿಕೀಃ**— ವಿಕಾರವಾದ ಧ್ವನಿಯಿಂದ ಕಿರುಚುತ್ತಿರುವವರೂ ಆದ ಕ್ಷಾಮದೇವತೆ ಅಥವಾ ಅಲಕ್ಷ್ಮಿಯೆಂಬ ದೇವತೆಗಳು । **ಯತ್**— ಯಾವಾಗ । **ಪ್ರಾಚೀಃ**— ಬೇಗಬೇಗನೆ ನಡೆಯುತ್ತಾ । **ಅಜಗಂತ ಹ**— ಓಡಿಹೋಗುತ್ತಾರೆಯೋ ಆಗ । **ಇಂದ್ರಸ್ಯ** ಇಂದ್ರನ । **ಸರ್ವೇ**— ಸಮಸ್ತರಾದ । **ಶತ್ರವಃ** — ಶತ್ರುಗಳು । **ಬುದ್ಬುದಯಾಶವಃ**— ನೀರಿನ ಮೇಲಿರುವ ಗುಳ್ಳೆಗಳಂತೆ **ಹತಾಃ**— ನಾಶವಾಗುತ್ತಾರೆ ।

|| ಭಾವಾರ್ಥ ||

ಜನರನ್ನು ಹಿಂಸಿಸುವವರೂ, ವಿಕಾರಧ್ವನಿಯಿಂದ ಅರುಚುತ್ತಿರುವವರೂ ಆದ ಈ ಕ್ಷಾಮದೇವತೆಗಳು (ಅಥವಾ ದರಿದ್ರದೇವತೆಗಳು) ಬೇಗನೆ ಮುಂದೆ ಸರಿಯುತ್ತಾ ಹೊರಟುಹೋಗುವಾಗ ಇಂದ್ರನ (ಎಂದರೆ ಜನರ) ಸಮಸ್ತ ಶತ್ರುಗಳೂ ನೀರಿನ ಮೇಲಿರುವ ಗುಳ್ಳೆಗಳಂತೆ ನಾಶವಾಗುತ್ತಾರೆ. ಕ್ಷಾಮವು ಹೋಗಿ ಸುಭಿಕ್ಷವು ಪ್ರಾಪ್ತವಾದರೆ ಜನರ ಕಷ್ಟಗಳು ಪರಿಹಾರವಾಗುವವು ಎಂದಭಿಪ್ರಾಯವು.

## English Translation

Utterers of discordant sounds, when swiftly moving you departed, all the enemies of Indra were slain, disappearing like bubbles.

|| ವಿಶೇಷವಿಷಯಗಳು ||

ಯಾಗದ ಆರನೆಯ ದಿವಸ ತೃತೀಯಸವನದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಯದ್ಧ ಪ್ರಾಚೀಃ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಕಪೃನ್ನರೋ ಯದ ಪ್ರಾಚೀರಜಗಂತೇತಿ ಚೈತೇ** ಎಂಬ ಸೂತ್ರದಿಂದ (ಆ. ೮–೩) ವಿವೃತವಾಗಿರುವುದು.

|| ಸಂಹಿತಾಪಾಠಃ ||

ಪರೀಮೇ ಗಾಮನೇಷತ ಪರ್ಯಗ್ನಿಮಹೃಷತ ।
ದೇವೇಷ್ವಕ್ರತ ಶ್ರವಃ ಕ ಇಮಾँ ಆ ದಧರ್ಷತಿ ॥ ೫ ॥

|| ಪದಪಾಠಃ ||

ಪರಿ । ಇಮೇ । ಗಾಂ । ಅನೇಷತ । ಪರಿ । ಅಗ್ನಿಂ । ಅಹೃಷತ ।
ದೇವೇಷು । ಅಕ್ರತ । ಶ್ರವಃ । ಕಃ । ಇಮಾನ್ । ಆ । ದಧರ್ಷತಿ ॥ ೫ ॥

|| ಸಾಯಣಭಾಷ್ಯಂ ||

ಇಮೇ ವಿಶ್ವೇ ದೇವಾ ಗಾಂ । ಜಾತ್ಯಭಿಪ್ರಾಯಮೇಕವಚನಂ । ಪಣಿಭಿರಪಹೃತಾಃ ಸರ್ವಾ ದೇವಗವೀಃ ಪರ್ಯನೇಷತ । ಪರ್ಯನಯನ್ । ಯಷ್ಟ್ರ್ಯಾನಂಗಿರಸಃ ಪರಿಪ್ರಾಪಯನ್ । ತತೋಽಗ್ನಿಂ ಚ ಪರ್ಯಹೃಷತ । ಪರಿತೋ ವ್ಯಹರನ್ । ಯಾಗಾರ್ಥಂ ತತ್ರ ತತ್ರ ಗಾರ್ಹಪತ್ಯಾದಿರೂಪೇಣ ಸ್ಥಾಪಿತವಂತ ಇತ್ಯರ್ಥಃ । ಏವಂ ಕೃತ್ವಾ ದೇವೇಷು ಯಷ್ಟವ್ಯೇಷ್ವಿಂದ್ರಾದಿಷು ಶ್ರವೋಽನ್ನಮಕ್ರತ । ಅಕೃಷತ । ಕಃ ಶತ್ರುರಸುರಾದಿರಿಮಾನ್ವಿಶ್ವಾನ್ದೇವಾನಾ ದಧರ್ಷತಿ । ಅಭಿಭವಿತುಂ ಶಕ್ನೋತಿ । ನ ಕಶ್ಚಿದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಮೇ**— ಈ ವಿಶ್ವೇದೇವತೆಗಳು | **ಗಾಂ**— ಪಣಿಗಳಿಂದ ಅಪಹೃತವಾಗಿದ್ದ ಗೋವುಗಳ ಸಮೂಹವನ್ನು | **ಪರಿ ಅನೇಷತ**—ಹಿಂದಕ್ಕೆ ತಂದು ಅಂಗಿರಸ ಋಷಿಗಳ ವಶವಾಡಿದರು | **ಅಗ್ನಿಂ**— ಗಾರ್ಹಪತ್ಯಾದ್ಯಗ್ನಿಗಳನ್ನು | **ಪರಿ ಅಹೃಷತ**— ಅಲ್ಲಲ್ಲಿ ಸ್ಥಾಪಿಸಿದರು (ಅನಂತರ) | **ದೇವೇಷು**— ಯಜ್ಞಾರ್ಹರಾದ ಇಂದ್ರಾದಿ ದೇವತೆಗಳಲ್ಲಿ | **ಶ್ರವಃ**— ಹವಿರ್ಲಕ್ಷಣರೂಪವಾದ ಅನ್ನವನ್ನು (ಅರ್ಪಿಸಲು) | **ಅಕ್ರತ**— ಸಿದ್ಧಮಾಡಿದರು | **ಇಮಾನ್**— ಇಂತಹ ಈ ವಿಶ್ವೇದೇವತೆಗಳನ್ನು | **ಕಃ**— ಯಾವ ಶತ್ರುವಾಗಲಿ ಅಥವಾ ಅಸುರನಾಗಲಿ | **ಆ ದಧರ್ಷತಿ** — ತಡೆಯಬಲ್ಲನು ?

॥ ಭಾವಾರ್ಥ ॥

ಈ ವಿಶ್ವೇದೇವತೆಗಳು ಪಣಿಗಳಿಂದ ಅಪಹೃತವಾಗಿದ್ದ ಗೋವುಗಳನ್ನು ಹಿಂದಕ್ಕೆ ತಂದು ಅಂಗಿರಸಋಷಿಗಳ ವಶಮಾಡಿದರು. ಯಜ್ಞವೇದಿಯಲ್ಲಿ ಗಾರ್ಹಪತ್ಯಾದ್ಯಗ್ನಿಗಳನ್ನು ಸ್ಥಾಪಿಸಿದರು ಯಜ್ಞದಲ್ಲಿ ಯಷ್ಟವ್ಯರಾದ ಇಂದ್ರಾದಿ ದೇವತೆಗಳಿಗಾಗಿ ಹವಿರ್ಲಕ್ಷಣರೂಪವಾದ ಅನ್ನವನ್ನು ಸಿದ್ಧಪಡಿಸಿದರು. ಇಂತಹ ವಿಶ್ವೇದೇವತೆಗಳನ್ನು ಯಾವ ಶತ್ರುವಾಗಲಿ, ಅಸುರನಾಗಲಿ ತಡೆಯಬಲ್ಲನು ?

## English Translation.

These (Vishwadevas) have brought back the (stolen) cattle ; they have built up the fire ; they have provided food for the gods. Who will overcome them ?

# ನೂರ ಐವತ್ತಾರನೆಯ ಸೂಕ್ತವು



॥ ಸಾಯಣಭಾಷ್ಯಂ ॥

**ಅಗ್ನಿಂ ಹಿನ್ವಂತು ನ ಇತಿ ಪಂಚರ್ಚಂ ಪಂಚಮಂ ಸೂಕ್ತಮಗ್ನಿಪುತ್ರಸ್ಯ ಕೇತುನಾಮ್ನ ಆರ್ಷಂ ಗಾಯತ್ರಮಾಗ್ನೇಯಂ, ತಥಾ ಚಾನುಕ್ರಾಂತಂ । ಅಗ್ನಿಂ ಕೇತುರಾಗ್ನೇಯ ಆಗ್ನೇಯಂ ಗಾಯತ್ರಮಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಗಾಯತ್ರೇ ಛಂದಸೀದಂ ಶಸ್ಯಂ । ಸೂತ್ರಿತಂ ಚ । ಅಗ್ನಿಂ ಹಿನ್ವಂತು ನಃ ಪ್ರಾಗ್ನಯೇ ವಾಚಮಿತಿ ಸೂಕ್ತೇ । ಆ. ೪-೧೩ । ಇತಿ ॥**

ಅನುವಾದವು— **ಅಗ್ನಿಂ ಹಿನ್ವಂತು** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗ್ನಿಪುತ್ರನಾದ ಕೇತು ಎಂಬುವನು ಋಷಿಯು ; ಅಗ್ನಿಯು ದೇವತೆಯು ; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ಅಗ್ನಿಂ ಕೇತುರಾಗ್ನೇಯ ಆಗ್ನೇಯಂ ಗಾಯತ್ರಂ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ— **ಅಗ್ನಿಂ ಹಿನ್ವಂತು ನಃ ಪ್ರಾಗ್ನಯೇ ವಾಚಮಿತಿ ಸೂಕ್ತೇ** ಎಂಬ ಸೂತ್ರದಿಂದ (ಆ ೪-೧೩) ವಿವೃತವಾಗಿರುವುದು.

## ಸೂಕ್ತ—೧೫೬

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೫೬ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಕೇತುರಾಗ್ನೇಯಃ
॥ ದೇವತಾ—ಅಗ್ನಿಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಅಗ್ನಿಂ ಹಿನ್ವಂತು ನೋ ಧಿಯಃ ಸಪ್ತಿಮಾಶುಮಿವಾಜಿಷು ।
ತೇನ ಜೇಷ್ಮ ಧನಂಧನಂ ॥ ೧ ॥

॥ ಪದಪಾಠಃ ॥

ಅಗ್ನಿಂ । ಹಿನ್ವಂತು । ನಃ । ಧಿಯಃ । ಸಪ್ತಿಂ । ಆಶುಂಽಇವ । ಆಜಿಷು ।
ತೇನ । ಜೇಷ್ಮ । ಧನಂಽಧನಂ ॥ ೧ ॥

॥ ಸಾಯಣಭಾಷ್ಯಂ ॥

ನೋಽಸ್ಮಾಕಂ ಧಿಯಃ ಕರ್ಮಾಣಿ ಸ್ತುತಯೋ ವಾಗ್ನಿಂ ಹಿನ್ವಂತು । ಪ್ರೇರಯಂತು । ಯಾಗಾರ್ಥಮುದ್ಯೋಜಯಂತು ವರ್ಧಯಂತು ವಾ ॥ ಹಿ ಗತೌ ವೃದ್ಧೌ ಚ ॥ ತತ್ರ ದೃಷ್ಟಾಂತಃ । ಆಜಿಷು ಸಂಗ್ರಾಮೇಷ್ವಾಶುಮಿವ ಯಥಾಶುಂ ಶೀಘ್ರಗಾಮಿನಂ ಸಪ್ತಿಂ ಸರ್ಪಣಶೀಲಮಶ್ವಂ ಯೋದ್ಧಾರಃ ಪ್ರೇರಯಂತಿ ತದ್ವತ್ । ತೇನಾಗ್ನಿನಾ ಧನಂಧನಂ ಸರ್ವಂ ಧನಂ ಜೇಷ್ಮ । ವಯಂ ಜಯೇಮ ॥

॥ ಪ್ರತಿಪದಾರ್ಥ ॥

**ಆಜಿಷು**—ಯುದ್ಧಗಳಲ್ಲಿ । **ಆಶುಮಿವ**—ಶೀಘ್ರಗತಿಯುಳ್ಳ । **ಸಪ್ತಿಂ**—ಅಶ್ವವನ್ನು ಯುದ್ಧಭಟರು ಪ್ರೇರಿಸುವಂತೆ । **ನಃ**—ನಮ್ಮ । **ಧಿಯಃ**—ಯಜ್ಞಾದಿಕರ್ಮಗಳು ಅಥವಾ ಸ್ತುತಿಗಳು । **ಅಗ್ನಿಂ**—ಅಗ್ನಿಯನ್ನು । **ಹಿನ್ವಂತು**—ಯಾಗಾರ್ಥವಾಗಿ ಪ್ರೇರಿಸಲಿ । **ತೇನ**—ಆ ಅಗ್ನಿಯಿಂದ । **ಧನಂಧನಂ**—ಸಮಸ್ತವಿಧ ಧನವನ್ನೂ । **ಜೇಷ್ಮ**—ನಾವು ಗೆಲ್ಲುವಂತಾಗಲಿ

॥ ಭಾವಾರ್ಥ ॥

ಯುದ್ಧಗಳಲ್ಲಿ ಶೀಘ್ರಗತಿಯುಳ್ಳ ಅಶ್ವವನ್ನು ಸೈನಿಕರು ಪ್ರೇರಿಸುವಂತೆ ನಮ್ಮ ಯಜ್ಞಾದಿಕರ್ಮಗಳು ಅಥವಾ ಸ್ತುತಿಗಳು ಯಾಗಾರ್ಥವಾಗಿ ಅಗ್ನಿಯನ್ನು ಪ್ರೇರಿಸಲಿ. ಆ ಅಗ್ನಿಯ ಸಹಾಯದಿಂದ ನಾವು ಸಮಸ್ತ ಧನವನ್ನೂ ಗೆಲ್ಲುವಂತಾಗಲಿ,

### English Translation.

May our rites bring Agnı hither like a swift charger in battle, may we through him acquire all wealth.

॥ ಸಂಹಿತಾಪಾಠಃ ॥

ಯಯಾ ಗಾ ಆಕರಾಮಹೇ ಸೇನಯಾಗ್ನೇ ತವೋತ್ಯಾ ।
ತಾಂ ನೋ ಹಿನ್ವ ಮಘತ್ತಯೇ ॥ ೨ ॥

॥ ಪದಪಾಠಃ ॥

ಯಯಾ । ಗಾಃ । ಆऽಕರಾಮಹೇ । ಸೇನಯಾ । ಅಗ್ನೇ । ತವ । ಊತ್ಯಾ ।
ತಾಂ । ನಃ । ಹಿನ್ವ । ಮಘತ್ತಯೇ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸೇನಯೇನೇನ ಸಹ ವರ್ತಮಾನಯಾ ಸೇನಾರೂಪಯಾ ವಾ ಯಯಾ ತವೋತ್ಯಾ ರಕ್ಷಯಾ ಗಾ ಆಕರಾಮಹೇ ಅಭಿಮುಖ್ಯೇನ ಕುರ್ಮಹೇ । ಲಭಾಮಹ ಇತ್ಯರ್ಥಃ । ತಾಮೂತಿಂ ನೋऽಸ್ಮಾನ್ಹಿನ್ವ । ಗಮಯ । ಕಿಮರ್ಥಂ । ಮಘತ್ತಯೇ । ಧನಸ್ಯ ದಾನಾರ್ಥಂ । ಅಸ್ಮಾಕಂ ಧನಲಾಭಾಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತವ**—ನಿನ್ನ । **ಯಯಾ**—ಯಾವ । **ಸೇನಯಾ**—ಸೇನಾರೂಪವಾದ **ಊತ್ಯಾ**—ರಕ್ಷಣೆಯಿಂದ । **ಗಾಃ**—ಗೋವುಗಳನ್ನು । **ಆಕರಾಮಹೇ**—ಪಡೆಯುತ್ತೇವೆಯೋ । **ತಾಂ**—ಅಂತಹ ರಕ್ಷಣೆಯನ್ನು । **ನಃ**—ನಮಗೆ । **ಮಘತ್ತಯೇ**—ಧನಾರ್ಥವಾಗಿ । **ಹಿನ್ವ**—ಒದಗಿಸಿಕೊಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸೇನಾರೂಪವಾದ ಯಾವ ನಿನ್ನ ರಕ್ಷಣೆಯಿಂದ ನಾವು ಗೋವುಗಳನ್ನು ಪಡೆಯುತ್ತೇವೆಯೋ ಅಂತಹ ರಕ್ಷಣೆಯನ್ನು ಧನಲಾಭಾರ್ಥವಾಗಿಯೂ ನಮಗೆ ಒದಗಿಸಿಕೊಡು.

### English Translation

Send us, Agni, for the acquisition of wealth, that army with which we may acquire cattle through your protection.

॥ ಸಂಹಿತಾಪಾಠಃ ॥

ಆಗ್ನೇ ಸ್ಥೂರಂ ರಯಿಂ ಭರ ಪೃಥುಂ ಗೋಮಂತಮಶ್ವಿನಂ ।

ಅಂಗ್ಧಿ ಖಂ ವರ್ತಯಾ ಪಣಿಂ ॥ ೩ ॥

॥ ಪದಪಾಠಃ ॥

ಆ । ಅಗ್ನೇ । ಸ್ಥೂರಂ । ರಯಿಂ । ಭರ । ಪೃಥುಂ । ಗೋऽಮಂತಂ । ಅಶ್ವಿನಂ ।

ಅಂಗ್ಧಿ । ಖಂ । ವರ್ತಯ । ಪಣಿಂ ॥ ೩ ॥

॥ ಸಾಯಣಭಾಷ್ಯಂ ॥

ಅಭಿಪ್ಲವಿಕೇಷೂಕ್ಥ್ಯೇಷು ಪ್ರಶಾಸ್ತುಃ ಶಸ್ತ್ರ ಆಗ್ನೇ ಸ್ಥೂರಮಿತಿ ತೃಚೋ ವೈಕಲ್ಪಿಕೋऽನುರೂಪಃ । ಸೂತ್ರಿತಂ ಚ । ಆ ತೇ ವತ್ಸೋ ಮನೋ ಯಮದಾಗ್ನೇ ಸ್ಥೂರಂ ರಯಿಂ ಭರ । ಆ. ೭-೮। ಇತಿ ॥

ಹೇ ಅಗ್ನೇ ಸ್ಥೂರಂ ಸ್ಥೂಲಂ ವೃದ್ಧಂ ಪೃಥುಂ ವಿಸ್ತೀರ್ಣಂ ಗೋಮಂತಂ ಗೋಭಿರ್ಯುಕ್ತಮಶ್ವಿನಮಶ್ವೋಪೇತಂ ರಯಿಂ ಧನಮಾ ಭರ । ಅಸ್ಮಭ್ಯಮಾಹರ । ಪ್ರಯಚ್ಛ । ಖಮಂತರಿಕ್ಷಮಂಗ್ಧಿ । ವೃಷ್ಟ್ಯುದಕೈಃ ಸಿಂಚ । ಯದ್ವಾ । ಆತ್ಮೀಯೈಸ್ತೇಜೋಭಿರ್ವ್ಯಂಜಯ । ಪ್ರಕಾಶಯ । ಪಣಿಂ ವಣಿಜಮದಾತಾರಮಸುರಂ ವಾ ವರ್ತಯ । ಇತೋ ನಿರ್ಗಮಯ । ಯದ್ವಾ । ದಾನೇ ಪ್ರವರ್ತಯ ॥

॥ ಪ್ರತಿಪದಾರ್ಥ ॥

**ಅಗ್ನೇ**--ಎಲೈ ಅಗ್ನಿಯೇ । **ಸ್ಥೂರಂ**—ಬಹಳವಾದುದೂ । **ಪೃಥುಂ**—ವಿಸ್ತೀರ್ಣವಾದುದೂ । **ಗೋಮಂತಂ**—ಗೋವುಗಳಿಂದ ಸಹಿತವಾದುದೂ । **ಅಶ್ವಿನಂ**—ಅಶ್ವಗಳಿಂದ ಸಹಿತವಾದುದೂ ಆದ । **ರಯಿಂ**—ಧನವನ್ನು । **ಆ ಭರ**—ನಮಗೆ ತಂದುಕೊಡು । **ಖಂ**—ಅಂತರಿಕ್ಷವನ್ನು । **ಅಂಗ್ಧಿ**—ವೃಷ್ಟ್ಯುದಕಗಳಿಂದ ತೋಯಿಸು ಅಥವಾ ನಿನ್ನ ಪ್ರಕಾಶದಿಂದ ತುಂಬು । **ಪಣಿಂ**—ಲೋಭಿಯಾದ ಅಸುರನನ್ನು । **ವರ್ತಯ**—ಇಲ್ಲಿಂದ ಹೊರಡಿಸು ।

॥ ಭಾವಾರ್ಥ ॥

ಎಲೈ ಅಗ್ನಿಯೇ, ಬಹಳವಾದ ಮತ್ತು ಅತಿಶಯವಾದ ಧನವನ್ನೂ, ಗೋವುಗಳನ್ನೂ ಅಶ್ವಗಳನ್ನೂ ನಮಗೆ ತಂದುಕೊಡು. ಅಂತರಿಕ್ಷವನ್ನು ಮೇಘಗಳಿಂದ ಅಥವಾ ನಿನ್ನ ಪ್ರಕಾಶದಿಂದ ತುಂಬು. ಲೋಭಿಯನ್ನು ಇಲ್ಲಿಂದ ಹೊರಡಿಸು ಅಥವಾ ಅವನಿಗೆ ದಾನಮಾಡುವಂತೆ ಬುದ್ಧಿಯನ್ನು ಪ್ರೇರಿಸು.

## English Translation

Bring us, Agni, substantial and extensive wealth, consistlng of cattle and horses, sprinkle the sky (with rain), expel Pani.

॥ ವಿಶೇಷವಿಷಯಗಳು ॥

ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ಪ್ರಶಾಸ್ತ್ರವೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ **ಆಗ್ನೇ ಸ್ಥೂರಂ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೩-೫ ಋಕ್ಕುಗಳಲ್ಲಿ) ವಿಕಲ್ಪದಿಂದ ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಆ ತೇ ವತ್ಸೋ ಮನೋ ಯಮದಾಗ್ನೇ ಸ್ಥೂರಂ ರಯಿಂ ಭರ** ಎಂಬ ಸೂಕ್ತದಿಂದ (ಆ. ೭-೮) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಅಗ್ನೇ ನಕ್ಷತ್ರಮಜರಮಾ ಸೂರ್ಯಂ ರೋಹಯೋ ದಿವಿ ।**

**ದಧಜ್ಜ್ಯೋತಿರ್ಜನೇಭ್ಯಃ ॥ ೪ ॥**

॥ ಪದಪಾಠಃ ॥

**ಅಗ್ನೇ । ನಕ್ಷತ್ರಂ । ಅಜರಂ । ಆ । ಸೂರ್ಯಂ । ರೋಹಯಃ । ದಿವಿ ।**

**ದಧತ್ । ಜ್ಯೋತಿಃ । ಜನೇಭ್ಯಃ ॥ ೪ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ನಕ್ಷತ್ರಂ । ನಕ್ಷತಿ ಸತತಂ ಗಚ್ಛತೀತಿ ನಕ್ಷತ್ರಃ ॥ ನಕ್ಷ ಗತೌ । ಅಮಿನಕ್ಷೀತ್ಯಾದಿನಾತ್ರನ್ಪ್ರತ್ಯಯಃ ॥ ಸತತಂ ಗಂತಾರಮಜರಂ ಜರಾರಹಿತಂ ಸೂರ್ಯಂ ಸರ್ವಸ್ಯ ಪ್ರೇರಕಮಾದಿತ್ಯಂ ದಿವ್ಯಂತರಿಕ್ಷ ಆ ರೋಹಯಃ । ಉಪರ್ಯವಸ್ಥಿತವಾನಸಿ । ಯದ್ವಾ । ನಕ್ಷತ್ರಂ ಕೃತ್ತಿಕಾದಿಕಂ ಸೂರ್ಯಂ ಚ ದಿವ್ಯಾರೋಹಯಃ । ಕಿಂ ಕುರ್ವನ್ । ಜನೇಭ್ಯಃ ಸರ್ವೇಭ್ಯಃ ಪ್ರಾಣಿಭ್ಯೋ ವ್ಯವಹಾರಾರ್ಥಂ ಜ್ಯೋತಿಃ ಪ್ರಕಾಶಂ ದಧದ್ವಿದಧತ್ ಕುರ್ವನ್ । ಯಥಾ ಸರ್ವೇಷಾಂ ಪ್ರಕಾಶೋ ಭವತಿ ತಥೋನ್ನತೇ ದೇಶೇ ಸೂರ್ಯಮಗಮಯ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಜನೇಭ್ಯಃ**—ಸಮಸ್ತ ಜನರಿಗೂ ಮತ್ತು ಪ್ರಾಣಿಗಳಿಗೂ ವ್ಯವಹಾರಾರ್ಥವಾಗಿ । **ಜ್ಯೋತಿಃ**—ಪ್ರಕಾಶವನ್ನು (ಬೆಳಕನ್ನು) । **ದಧತ್**— ಉಂಟುಮಾಡುವುದಕ್ಕಾಗಿ । **ನಕ್ಷತ್ರಂ**—ಸತತಗಾಮಿಯೂ । **ಅಜರಂ**—ಜರಾರಹಿತನೂ ಎಂದರೆ ವೃದ್ಧಿಹ್ರಾಸಗಳಿಲ್ಲದೆ ಯಾವಾಗಲೂ ಒಂದೇ ಸಮನಾಗಿರುವವನೂ ಆದ । **ಸೂರ್ಯಂ**—ಸರ್ವರನ್ನೂ ಪ್ರೇರಿಸುವ ಸೂರ್ಯನನ್ನು । **ದಿವಿ**—ಅಂತರಿಕ್ಷದಲ್ಲಿ । **ಆ ರೋಹಯಃ**—ಮೇಲುಭಾಗದಲ್ಲಿ ಸ್ಥಾಪಿಸಿದ್ದೀಯೆ [ಅಥವಾ । **ನಕ್ಷತ್ರಂ**—ಕೃತ್ತಿಕಾದಿನಕ್ಷತ್ರ ಸಮೂಹವನ್ನು । **ಆ ರೋಹಯಃ**—ಸ್ಥಾಪಿಸಿದ್ದೀಯೆ ]

॥ ಭಾವಾರ್ಥ ॥

ಎಲೈ ಅಗ್ನಿಯೇ, ಸಮಸ್ತಪ್ರಾಣಿಗಳೂ ತಮ್ಮ ತಮ್ಮ ವ್ಯವಹಾರಗಳಲ್ಲಿ ಪ್ರವರ್ತಿಸಲು ಅನುಕೂಲವಾಗುವಂತೆ ಸರ್ವತ್ರ ಬೆಳಕನ್ನುಂಟುಮಾಡುವುದಕ್ಕಾಗಿ, ಸದಾ ಸಂಚಾರಶೀಲನೂ ವೃದ್ಧಿಹ್ರಾಸಗಳಿಲ್ಲದೆ ಒಂದೇ ಸಮನಾಗಿ ಬೆಳಗುವವನೂ ಸರ್ವಪ್ರೇರಕನೂ ಆದ ಸೂರ್ಯನನ್ನು ಅಂತರಿಕ್ಷದ ಮೇಲುಭಾಗದಲ್ಲಿ ಸ್ಥಾಪಿಸಿದ್ದೀಯೆ, ಅಥವಾ ಕೃತ್ತಿಕಾದಿ ನಕ್ಷತ್ರಗಳನ್ನು ಸಹ ಸ್ಥಾಪಿಸಿದ್ದೀಯೆ.

English Translation

You, Agni, have elevated the imperishable planet, the Sun, in the firmament, giving light to the people.

॥ ಸಂಹಿತಾಪಾಠಃ ॥

ಅಗ್ನೇ ಕೇತುರ್ವಿಶಾಮಸಿ ಪ್ರೇಷ್ಠಃ ಶ್ರೇಷ್ಠ ಉಪಸ್ಥಸತ್ ।
ಬೋಧಾ ಸ್ತೋತ್ರೇ ವಯೋ ದಧತ್ ॥ ೫ ॥

॥ ಪದಪಾಠಃ ॥

ಅಗ್ನೇ । ಕೇತುಃ । ವಿಶಾಂ । ಅಸಿ । ಪ್ರೇಷ್ಠಃ । ಶ್ರೇಷ್ಠಃ । ಉಪಸ್ಥsಸತ್ ।
ಬೋಧ । ಸ್ತೋತ್ರೇ । ವಯಃ । ದಧತ್ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಿಶಾಂ ಪ್ರಜಾನಾಂ ಯಜಮಾನಾನಾಂ ಕೇತುಃ ಕೇತಯಿತಾಸಿ। ಜ್ಞಾಪಯಿತಾ ಭವಸಿ । ಅತ ಏವ ಪ್ರೇಷ್ಠಃ ಪ್ರಿಯತಮಃ ಶ್ರೇಷ್ಠಃ ಪ್ರಶಸ್ಯತಮಶ್ಚ ಭವಸಿ । ಸ ತ್ವಮುಪಸ್ಥಸದುಪಸ್ಥಾನೇ ಯಜ್ಞಗೃಹೇ ನಿಷೀದನ್ಬೋಧ । ಅಸ್ಮದೀಯಂ ಸ್ತೋತ್ರಮುವಗಚ್ಛ। ಕಿಂ ಕುರ್ವನ್ । ಸ್ತೋತ್ರೇ ಸ್ತುವತೇ ಜನಾಯ ವಯೋಽನ್ನಂ ದಧದ್ವಿದಧತ್ ಕುರ್ವನ್ ಪ್ರಯಚ್ಛನ್ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ ನೀನು । **ವಿಶಾಂ**—ಯಜಮಾನರೇ ಮೊದಲಾದ ಪ್ರಜೆಗಳಿಗೆ । **ಕೇತುಃ**—ಧ್ವಜಸ್ಥಾನೀಯನಾಗಿ ಅಥವಾ ಪ್ರಜ್ಞಾಪಕನಾಗಿ । **ಅಸಿ**— ಇದ್ದೀಯೆ (ಆದ್ದರಿಂದಲೇ)। **ಪ್ರೇಷ್ಠಃ**—ಪ್ರೀತ್ಯಾದರಗಳಿಗೆ ಅರ್ಹನೂ । **ಶ್ರೇಷ್ಠಃ**—ಪ್ರಶಸ್ಯತಮನೂ ಆಗಿದ್ದೀಯೆ (ಅಂತಹ ನೀನು) । **ಉಪಸ್ಥಸತ್**— ಯಜ್ಞಗೃಹದಲ್ಲಿ ಕುಳಿತು । **ಸ್ತೋತ್ರೇ**—ನಿನ್ನನ್ನು ಸ್ತುತಿಸುವ ಜನಕ್ಕೆ । **ವಯಃ**—ಅನ್ನವನ್ನು । **ದಧತ್**—ಒದಗಿಸಿಕೊಡುತ್ತಾ **ಬೋಧ**—ನಾವು ಮಾಡುವ ಸ್ತುತಿಯನ್ನು ತಿಳಿ (ಕೇಳು).

|| ಭಾವಾರ್ಥ ||

ಎಲೈ ಅಗ್ನಿಯೇ, ನೀನು ಯಜಮಾನನೇ ಮೊದಲಾದ ಸಮಸ್ತ ಪ್ರಜೆಗಳಿಗೂ ಧ್ವಜಸ್ಥಾನೀಯನಾಗಿ ಅಥವಾ ಪ್ರಜ್ಞಾಪಕನಾಗಿ ಇದ್ದೀಯೆ. ಮತ್ತು ಪ್ರಶಸ್ಯನೂ ಪ್ರೀತ್ಯಾದರಗಳಿಗೆ ಅರ್ಹನೂ ಆಗಿದ್ದೀಯೆ. ಇಂತಹ ನೀನು ಯಜ್ಞಗೃಹದಲ್ಲಿ ಕುಳಿತು ನಿನ್ನನ್ನು ಸ್ತುತಿಸುವ ಜನರಿಗೆ ಅನ್ನಾದ್ಯಾಹಾರವನ್ನು ಒದಗಿಸಿಕೊಡುತ್ತಾ ನಾವು ಮಾಡುವ ಸ್ತುತಿಗಳನ್ನು ಕೇಳಿ ತಿಳಿದುಕೊ.

### English Translation·

You› Agni› are the best beloved and most excellent benner of the people; understand (our praise) giving food to the praiser·



## ನೂರ ಐವತ್ತೇಳನೆಯ ಸೂಕ್ತವು

|| ಸಾಯಣಭಾಷ್ಯಂ ||

ಇಮಾ ನು ಕಮಿತಿ ಪಂಚರ್ಚಂ ಷಷ್ಠಂ ಸೂಕ್ತಮಪ್ತ್ಯಪುತ್ರಸ್ಯ ಭುವನಸ್ಯಾರ್ಷಂ ಭುವನಪುತ್ರಸ್ಯ ಸಾಧನಸಂಜ್ಞಸ್ಯ ವಾ ವೈಶ್ವದೇವಂ । ಸರ್ವಾ ದ್ವಿಪದಾಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಇಮಾ ನು ಭುವನ ಆಪ್ತ್ಯಃ ಸಾಧನೋ ವಾ ಭೌವನೋ ವೈಶ್ವದೇವಂ ದ್ವೈಪದಂ ತ್ರೈಷ್ಟುಭಮಿತಿ || ದಶರಾತ್ರಸ್ಯ ದ್ವಿತೀಯೇ ಛಂದೋಮೇ ವೈಶ್ವದೇವಶಸ್ತ್ರೇ ವೈಶ್ವದೇವಾನ್ನಿವಿದ್ಧಾನಾತ್ಪೂರ್ವಮಿದಂ ಶಂಸನೀಯಂ । ಸೂತ್ರಿತಂ ಚ । ಆ ಯಾಹಿ ವನಸೇಮಾ ನು ಕಂ ಬಭ್ರುರೇಕ ಇತಿ ದ್ವಿಪದಾಸೂಕ್ತಾನಿ । ಆ. ೮-೭ । ಇತಿ || ಷಷ್ಠೇಽಹನಿ ತೃತೀಯೇ ಸವನೇ ಬ್ರಾಹ್ಮಣಾಚ್ಛಂಸಿನ ಉಕ್ಥ್ಯಶಸ್ತ್ರ ಆದ್ಯಸ್ತೃಚಃ ಸ್ತೋತ್ರಿಯಃ । ತತೋ ದ್ವೇ ಅನುರೂಪಾರ್ಥೇ । ಸೂತ್ರಿತಂ ಚ । ಬ್ರಾಹ್ಮಣಾಚ್ಛಂಸಿನ ಇಮಾ ನು ಕಂ ಭುವನಾ ಸೀಷಧಾಮೇತಿ ಪಂಚ । ಆ. ೮-೩ । ಇತಿ ||

ಅನುವಾದವು—**ಇಮಾ ನು ಕಂ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಪ್ತ್ಯಪುತ್ರನಾದ ಭುವನನೆಂಬುವನು ಋಷಿಯು; ಅಥವಾ ಭುವನಪುತ್ರನಾದ ಸಾಧನನೆಂಬುವನು ಋಷಿಯು; ವಿಶ್ವೇದೇವತೆಗಳು ದೇವತೆಯು; ಈ ಸೂಕ್ತದ ಎಲ್ಲಾ ಋಕ್ಕುಗಳೂ ದ್ವಿಪದಾತ್ರಿಷ್ಟುಪ್ ಎಂಬ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ— **ಇಮಾ ನು ಕಂ ಭುವನ ಆಪ್ತ್ಯಃ ಸಾಧನೋ ವಾ ಭೌವನೋ ವೈಶ್ವದೇವಂ ದ್ವೈಪದಂ ತ್ರೈಷ್ಟುಭಂ** ಎಂದು ಹೇಳಿರುವುದು. ದಶರಾತ್ರವೆಂಬ ಯಾಗದ ದ್ವಿತೀಯ ಛಂದೋಮದಲ್ಲಿ ವೈಶ್ವದೇವ ಶಸ್ತ್ರಮಂತ್ರಗಳನ್ನು ಪಠಿಸುವಾಗ ಆ ಮಂತ್ರಗಳ ಮಧ್ಯದಲ್ಲಿ ಸೇರಿಸಿ ಪಠಿಸುವ ನಿವಿದ್ಧಾನಸೂಕ್ತಕ್ಕೆ ಪೂರ್ವಭಾವಿಯಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಅಶ್ವಲಾಯನ ಶ್ರೌತಸೂತ್ರದ—**ಆ ಯಾಹಿ ವನಸೇಮಾ ನು ಕಂ ಬಭ್ರುರೇಕ ಇತಿ ದ್ವಿಪದಾಸೂಕ್ತಾನಿ** ಎಂಬ ಸೂತ್ರದಿಂದ (ಆ ೮-೭) ವಿವೃತವಾಗಿರುವುದು. ಯಾಗದ ಆರನೆಯ ದಿವಸ ತೃತೀಯ ಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ

ಋತ್ವಿಜನು ಪಠಿಸಬೇಕಾದ ಉಕ್ಥ್ಯಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಸ್ತೋತ್ರಿಯ ತೃಚವನ್ನಾಗಿಯೂ ಮುಂದಿನ ಎರಡು ಋಕ್ಕುಗಳನ್ನು (೪-೫ ಋಕ್ಕುಗಳನ್ನು) ಅನುರೂಪಋಕ್ಕುಗಳನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಬ್ರಾಹ್ಮಣಾಚ್ಛಂಸಿನ ಇಮಾ ನು ಕಂ ಭುವನಾ ಸೀಷಧಾಮೇತಿ ಪಂಚ** ಎಂಬ ಸೂತ್ರದಿಂದ (ಆ. ೮-೩)ವಿವೃತವಾಗಿರುವುದು.

## ಸೂಕ್ತ ೧೫೭

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೫೭ ॥

ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೧೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಭುವನ ಆಪ್ತ್ಯಃ ಸಾಧನೋ ವಾ ಭೌವನಃ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—ದ್ವಿಪದಾ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಮಾ ನು ಕಂ ಭುವನಾ ಸೀಷಧಾಮೇಂದ್ರಶ್ಚ ವಿಶ್ವೇ ಚ ದೇವಾಃ ॥ ೧ ॥

॥ ಪದಪಾಠಃ ॥

ಇಮಾ । ನು । ಕಂ । ಭುವನಾ । ಸೀಸಧಾಮ । ಇಂದ್ರಃ । ಚ । ವಿಶ್ವೇ । ಚ । ದೇವಾಃ ॥ ೧ ॥

॥ ಸಾಯಣಭಾಷ್ಯಂ ॥

**ಇಮೇಮಾನಿ ಪ್ರದೃಶ್ಯಮಾನಾನಿ ಭುವನಾ ಭುವನಾನಿ ನು ಕ್ಷಿಪ್ರಂ ಸೀಷಧಾಮ । ಸಾಧಯಾಮಃ । ವಶೀಕುರ್ಮಃ । ಕಮಿತಿ ಪೂರಕಃ । ಯದ್ವಾ । ಇಮಾನಿ ಸರ್ವಾಣಿ ಭೂತಜಾತಾನ್ಯಸ್ಮಭ್ಯಂ ಕಂ ಸುಖಂ ಸೀಷಧಾಮ । ಸಾಧಯಂತು ॥ ಪುರುಷವ್ಯತ್ಯಯಃ ॥ ಇಂದ್ರಶ್ಚ ವಿಶ್ವೇ ಸರ್ವೇಽನ್ಯೇ ದೇವಾಶ್ಚ ಸ್ತುತ್ಯಾ ಪ್ರೀತಾ ಇಮಮರ್ಥಂ ಸಾಧಯಂತು ॥**

॥ ಪ್ರತಿಪದಾರ್ಥ ॥

**ಇಮಾ**—ನಾವು ನೋಡುತ್ತಿರುವ ಈ । **ಭುವನಾ**—ಲೋಕಗಳನ್ನು । **ನು**—ಬೇಗನೆ । **ಸೀಷಧಾಮ**—ವಶಮಾಡಿಕೊಳ್ಳೋಣ । [**ಅಥವಾ ಇಮಾ**— ಈ । **ಭುವನಾ**—ಭೂತವರ್ಗಗಳೆಲ್ಲವೂ (ನಮಗೆ) । **ನು**—ಬೇಗನೆ । **ಕಂ**—ಸುಖವನ್ನು । **ಸೀಷಧಾಮ**—ಸಾಧಿಸಿಕೊಡಲಿ] । **ಇಂದ್ರಃ ಚ**—ಇಂದ್ರನೂ । **ವಿಶ್ವೇ ಚ ದೇವಾಃ**—ಇತರ ಸಮಸ್ತದೇವತೆಗಳೂ ನಮ್ಮ ಸ್ತುತಿಯಿಂದ ಪ್ರೀತರಾಗಿ ಇದನ್ನನುಮೋದಿಸಲಿ.

॥ ಭಾವಾರ್ಥ ॥

ನಾವು ನೋಡುತ್ತಿರುವ ಈ ಲೋಕಗಳೆಲ್ಲವನ್ನೂ ಬೇಗನೆ ವಶಮಾಡಿಕೊಳ್ಳೋಣ. ಅಥವಾ ಈ ಸಮಸ್ತ ಭೂತ

ಜಾತಗಳೂ (ಪ್ರಾಣಿವರ್ಗಗಳು) ನಮಗೆ ಬೇಗನೆ ಸುಖವನ್ನು ಸಾಧಿಸಿ ಕೊಡಲಿ ಈ ನಮ್ಮ ಕೋರಿಕೆಯನ್ನು ಇಂದ್ರನೂ ಇತರ ಎಲ್ಲಾ ದೇವತೆಗಳೂ ಸಾಧಿಸಿಕೊಡಲಿ.

## English Translation.

May we, along with Indra and the universal gods, possess all these worlds.

॥ ಸಂಹಿತಾಪಾಠಃ ॥

ಯಜ್ಞಂ ಚ ನಸ್ತನ್ವಂ ಚ ಪ್ರಜಾಂ ಚಾದಿತ್ಯೈರಿಂದ್ರಃ ಸಹ ಚೀಕ್ಲೃಪಾತಿ ॥

॥ ಪದಪಾಠಃ ॥

ಯಜ್ಞಂ । ಚ । ನಃ । ತನ್ವಂ । ಚ । ಪ್ರಽಜಾಂ । ಚ । ಆದಿತ್ಯೈಃ । ಇಂದ್ರಃ । ಸಹ । ಚೀಕ್ಲೃಪಾತಿ ॥ ೨ ॥

॥ ಸಾಯಣಭಾಷ್ಯಂ ॥

ನೋಽಸ್ಮಾಕಂ ಯಜ್ಞಂ ಜ್ಯೋತಿಷ್ಟೋಮಾದಿಕಂ ಯಾಗಂ ತನ್ವಂ ಶರೀರಂ ಚ ಪ್ರಜಾಂ। ಪುತ್ರಾದಿಕಾಂ ಚಾದಿತ್ಯೈರದಿತಿಪುತ್ರೈರನ್ಯೈರ್ದೇವೈಃ ಸಹ ವರ್ತಮಾನ ಇಂದ್ರಶ್ಚೀಕ್ಲೃಪಾತಿ । ಕಲ್ಪಯತು। ಯಜ್ಞಾದಿಕಂ ಸ್ವವ್ಯಾಪಾರಸಮರ್ಥಂ ಕರೋತು ॥

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು । **ಆದಿತ್ಯೈಃ**—ಅದಿತಿಪುತ್ರರಾದ ಇತರ ದೇವತೆಗಳಿಂದ । **ಸಹ**—ಸಹಿತನಾಗಿ **ನಃ**—ನಮ್ಮ । **ಯಜ್ಞಂ**—ಜ್ಯೋತಿಷ್ಟೋಮಾದಿಯಜ್ಞವನ್ನೂ । **ತನ್ವಂ ಚ**—ಶರೀರವನ್ನೂ । **ಪ್ರಜಾಂ ಚ**—ಪುತ್ರಾದಿಸಂತತಿಯನ್ನೂ । **ಚೀಕ್ಲೃಪಾತಿ**—ಸ್ವವ್ಯಾಪಾರಗಳಲ್ಲಿ ಸಮರ್ಥರನ್ನಾಗಿ ಮಾಡಲಿ.

॥ ಭಾವಾರ್ಥ ॥

ಇಂದ್ರನು ಅದಿತಿಪುತ್ರರಾದ ಇತರ ದೇವತೆಗಳಿಂದ ಸಹಿತನಾಗಿ ನಮ್ಮ ಯಜ್ಞವನ್ನೂ ಶರೀರವನ್ನೂ ಪ್ರಜಾ ಸಂತತಿಯನ್ನೂ ಸ್ವವ್ಯಾಪಾರಗಳಲ್ಲಿ ಸಮರ್ಥರನ್ನಾಗಿ ಮಾಡಲಿ. (ವೃದ್ಧಿಯಾಗುವಂತೆ ಮಾಡಲಿ.)

## English Translation.

May Indra with the Adityas perfect our sacrifice and our bodies and our offspring.

॥ ಸಂಹಿತಾಪಾಠಃ ॥

ಆದಿತ್ಯೈರಿಂದ್ರಃ ಸಗಣೋ ಮರುದ್ಭಿರಸ್ಮಾಕಂ ಭೂತ್ವವಿತಾ ತನೂನಾಂ ॥೩॥

॥ ಪದಪಾಠಃ ॥

ಆದಿತ್ಯೈಃ । ಇಂದ್ರಃ । ಸಽಗಣಃ । ಮರುತ್ಽಭಿಃ । ಅಸ್ಮಾಕಂ । ಭೂತು । ಅವಿತಾ । ತನೂನಾಂ ॥ ೩ ॥

॥ ಸಾಯಣಭಾಷ್ಯಂ ॥

ಆದಿತ್ಯೈರದಿತಿಪುತ್ರೈರ್ಮಿತ್ರಾದಿಭಿರ್ಮರುದ್ಭಿಶ್ಚ ಸಗಣಃ ಸಹಿತ ಇಂದ್ರೋಽಸ್ಮಾಕಂ ತನೂನಾಂ ಶರೀರಾಣಾಂ ತನಯಾನಾಂ ವಾವಿತಾ ಭೂತು । ರಕ್ಷಿತಾ ಭವತು ॥

॥ ಪ್ರತಿಪದಾರ್ಥ ॥

**ಆದಿತ್ಯೈಃ**—ಅದಿತಿಪುತ್ರರಾದ ಮಿತ್ರಾದಿದೇವತೆಗಳಿಂದಲೂ । **ಮರುದ್ಭಿಃ ಸಗಣಃ**—ಮರುದ್ಗಣಗಳಿಂದಲೂ ಸಹಿತನಾದ । **ಇಂದ್ರಃ**—ಇಂದ್ರನು । **ಅಸ್ಮಾಕಂ**— ನಮ್ಮ । **ತನೂನಾಂ**—ಶರೀರಗಳ ಅಥವಾ ತನಯರ (ಪುತ್ರರ) । **ಅವಿತಾ**—ರಕ್ಷಕನಾಗಿ । **ಭೂತು**—ಆಗಲಿ.

॥ ಭಾವಾರ್ಥ ॥

ಅದಿತಿಪುತ್ರರಾದ ಮಿತ್ರಾದಿದೇವತೆಗಳಿಂದಲೂ ಮದ್ಗಣಗಳಿಂದಲೂ ಸಹಿತನಾದ ಇಂದ್ರನು ನಮ್ಮ ಶರೀರಗಳ ಅಥವಾ ಪುತ್ರರ ರಕ್ಷಕನಾಗಿರಲಿ.

English Translation

May Indra with the Adityas, and attended by the Maruts be the protector of our bodies.

॥ ಸಂಹಿತಾಪಾಠಃ ॥

ಹತ್ವಾಯ ದೇವಾ ಅಸುರಾನ್ಯದಾಯನ್ದೇವಾ ದೇವತ್ವಮಭಿರಕ್ಷಮಾಣಾಃ ॥

॥ ಪದಪಾಠಃ ॥

ಹತ್ವಾಯ । ದೇವಾಃ । ಅಸುರಾನ್ । ಯತ್ । ಆಯನ್ । ದೇವಾಃ । ದೇವಽತ್ವಂ । ಅಭಿರಕ್ಷಮಾಣಾಃ ॥

॥ ಸಾಯಣಭಾಷ್ಯಂ ॥

ದೇವಾ ಇಂದ್ರಾದಯೋಽಸುರಾನ್ ಕ್ಷೇಪ್ತೄನ್ವೃತ್ರಾದೀನ್ಹತ್ವಾಯ ಹತ್ವಾ ವಿನಾಶ್ಯ ಯದ್ಯದಾಯನ್ ಆಗಚ್ಛನ್ ಸ್ವಕೀಯಂ ಸ್ಥಾನಂ ಪ್ರಾಪ್ನುವನ್ ತದಾನೀಂ ತೇ ದೇವಾ ದೇವತ್ವಮಾತ್ಮೀಯಮಮೃತತ್ವಮಭಿರಕ್ಷಮಾಣಾ ಅಭಿತಃ ಸರ್ವತೋ ರಕ್ಷಂತೋಽಭೂವನ್ । ಬಾಧಕಾಭಾವಾತ್ಸರ್ವತ್ರ ಪ್ರಖ್ಯಾಪಿತವಂತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವಾಃ**—ಇಂದ್ರಾದಿದೇವತೆಗಳು । **ಅಸುರಾನ್**—ವೃತ್ರಾದಿ ಅಸುರರನ್ನು । **ಹತ್ವಾಯ**—ಸಂಹಾರ ಮಾಡಿ । **ಯತ್**—ಯಾವಾಗ । **ಆಯನ್**—ತಮ್ಮ ಸ್ವಸ್ಥಾನಗಳಿಗೆ ಬಂದರೋ ಆಗ । **ದೇವಾಃ**—ಆ ದೇವತೆಗಳು । **ದೇವತ್ವಂ**—ಮರಣರಹಿತವಾದ ದೇವಪದವಿಯನ್ನು (ಪಡೆದು ಅದನ್ನು) । **ಅಭಿರಕ್ಷಮಾಣಾಃ**—ರಕ್ಷಿಸಿಕೊಳ್ಳುವಂತಾದರು.

॥ ಭಾವಾರ್ಥ ॥

ಇಂದ್ರಾದಿದೇವತೆಗಳು ವೃತ್ರಾದಿಅಸುರರನ್ನು ನಾಶಮಾಡಿ ತಮ್ಮ ಸ್ಥಾನಗಳಿಗೆ ಹಿಂತಿರುಗಿ ಬಂದಾಗ ಆ ದೇವತೆಗಳು ತಮ್ಮ ಮರಣರಹಿತವಾದ ದೇವಪದವಿಯನ್ನು ಸ್ಥಿರಗೊಳಿಸಿ ಪ್ರಸಿದ್ಧರಾದರು. ಶತ್ರುರಹಿತರಾದ್ದರಿಂದ ತಮ್ಮ ಪದವಿಯನ್ನು ರಕ್ಷಿಸಿಕೊಳ್ಳಲೂ ಸಮರ್ಥರಾದರು.

## English Translation.

When the gods returned (home), after slaying the Asuras, (then were) the deities protecting their divinity.

॥ ವಿಶೇಷವಿಷಯಗಳು ॥

ದೇವತೆಗಳು ಅಸುರರನ್ನು ಸಂಹಾರಮಾಡಿ ತಮಗೆ ಶತ್ರುಗಳು ಯಾರೂ ಇಲ್ಲದಂತೆ ಮಾಡಿಕೊಂಡಾಗ ಅವರಿಗೆ ದೇವತೆಗಳು ಎಂಬ ಹೆಸರು ಸಾರ್ಥಕವಾಯಿತು. ಶತ್ರುರಹಿತರಾದ್ದರಿಂದ ಅವರಿಗೆ ಯಾವ ಭಯವೂ ಇರಲಿಲ್ಲ ಮತ್ತು ಅವರು ಮರಣರಹಿತರೂ ಆದರು. ಈ ದೇವಪದವಿಯನ್ನು ಮುಂದೆಯೂ ರಕ್ಷಿಸಿಕೊಂಡು ಎಂದರೆ ಉಳಿಸಿಕೊಂಡು ಬಂದರು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಪ್ರತ್ಯಂಚಮರ್ಕಮನಯಞ್ಛಚೀಭಿರಾದಿತ್ಸ್ವಧಾಮಿಷಿರಾಂ ಪರ್ಯಪಶ್ಯನ್॥

॥ ಪದಪಾಠಃ ॥

ಪ್ರತ್ಯಂಚಂ । ಅರ್ಕಂ । ಅನಯನ್ । ಶಚೀಭಿಃ । ಆತ್ । ಇತ್ । ಸ್ವಧಾಂ । ಇಷಿರಾಂ । ಪರಿ । ಅಪಶ್ಯನ್॥

॥ ಸಾಯಣಭಾಷ್ಯಂ ॥

ಶಚೀಭಿಃ ಕರ್ಮಭಿಃ ಪರಿಚರಣಾತ್ಮಕೈಃ ಸಾರ್ಧಮರ್ಕಮರ್ಚನಸಾಧನಂ ಸ್ತೋತ್ರಂ ಪ್ರತ್ಯಂಚಮಿಂದ್ರಾದೀನ್ಪ್ರತ್ಯಂಚದನಯನ್ । ಸ್ತೋತಾರಃ ಪ್ರಾಪಯನ್ । ಯದ್ವೈವಂ ಆದಿದನಂತರಮೇವೇಷಿರಾಂ ಗಮನಶೀಲಂ ಸ್ವಧಾಂ ವೃಷ್ಟ್ಯುದಕಂ ಪರ್ಯಪಶ್ಯನ್ । ಸರ್ವೇ ಜನಾಃ ಪರಿತಃ ಪಶ್ಯಂತಿ । ಯದ್ವಾ । ಇಷಿರಾಮೇಷಣೀಯಾಂ ಸ್ವಧಾಂ । ಅನ್ನನಾಮೈತತ್ । ಹವಿರ್ಲಕ್ಷಣಮನ್ನಂ ಸರ್ವೇ ದೇವಾಃ ಪರಿಪಶ್ಯಂತಿ ॥

|| ಪ್ರತಿಪದಾರ್ಥ ||

**ಶಚೀಭಿಃ**—ಪರಿಚರಣಾತ್ಮಕಕರ್ಮಗಳಿಂದ ಸಹಿತವಾದ | **ಅರ್ಕಂ**—ಸ್ತೋತ್ರವು | **ಪ್ರತ್ಯಂಚಂ**—ಇಂದ್ರಾದಿದೇವತೆಗಳಿಗೆ ಸೇರುವಂತೆ | **ಅನಯನ್**—ಸ್ತೋತೃಜನರು ವಹಿಸಿದರೋ (ಮಾಡಿದರೋ)| **ಆತ್ ಇತ್**—ಆಗ ಎಂದರೆ ಅನಂತರ (ಸಮಸ್ತಜನರೂ) | **ಇಷಿರಾಂ**—ಬೀಳುತ್ತಿರುವ | **ಸ್ವಧಾಂ**—ವೃಷ್ಟ್ಯುದಕವನ್ನು **ಪರಿ ಅಪಶ್ಯನ್**—ಸುತ್ತಲೂ ನೋಡಿದರು | [**ಅಥವಾ ಇಷಿರಾಂ**—ಅಪೇಕ್ಷಿಸಲ್ಪಡುವ | **ಸ್ವಧಾಂ**—ಹವಿರ್ಲಕ್ಷಣ ರೂಪವಾದ ಅನ್ನವನ್ನು | **ಪರಿ ಅಪಶ್ಯನ್**—ದೇವತೆಗಳು ನೋಡಿದರು.]

|| ಭಾವಾರ್ಥ ||

ಸ್ತೋತೃಜನರು ತಮ್ಮ ಪರಿಚರಣಾತ್ಮಕವಾದ (ಸೇವಾಸಹಿತವಾದ) ಸ್ತೋತ್ರವನ್ನು ಇಂದ್ರಾದಿದೇವತೆಗಳ ಬಳಿಗೆ ಸೇರುವಂತೆ ಮಾಡಿದನಂತರ (ಅದರಫಲವಾಗಿ) ಸುತ್ತಲೂ ವೃಷ್ಟಿಧಾರೆಯು ಸುರಿಯುತ್ತಿರುವುದನ್ನು ನೋಡಿದರು. ಅಥವಾ ಸ್ತೋತೃಜನರು ಅರ್ಪಿಸುವ ಹವಿರಾದಿ ಅನ್ನಗಳನ್ನು ದೇವತೆಗಳು ನೋಡಿದರು.

## English Translation

When (the worshippers) with their pious acts offered praise in honour (of the gods) then (men) beheld around them the swift descending rain

|| ವಿಶೇಷವಿಷಯಗಳು ||

ಜನರು ಇಂದ್ರಾದಿದೇವತೆಗಳನ್ನು ಇತರವಿಧವಾದ ಸೇವೆಯನ್ನು ಅರ್ಪಿಸಿದನಂತರ ಅದರ ಫಲರೂಪವಾಗಿ ವೃಷ್ಟಿವರ್ಷಣವುಂಟಾಯಿತು. ಅದನ್ನು ಜನರು ನೋಡಿದರು ಅಥವಾ ಜನರು ಸ್ತೋತ್ರಾದಿಗಳಿಂದ ಸಹಿತವಾಗಿ ಹವಿರಾದಿ ಅನ್ನಗಳನ್ನು ತಮಗೆ ಅರ್ಪಿಸುತ್ತಿರುವುದನ್ನು ದೇವತೆಗಳು ನೋಡಿದರು ಎಂದು ಮುಖ್ಯಾಭಿಪ್ರಾಯವು.

## ನೂರ ಐವತ್ತೆಂಟನೆಯ ಸೂಕ್ತವು

|| ಸಾಯಣಭಾಷ್ಯಂ ||

**ಸೂರ್ಯ ಇತಿ ಪಂಚರ್ಚಂ ಸಪ್ತಮಂ ಸೂಕ್ತಂ ಸೂರ್ಯಪುತ್ರಸ್ಯ ಚಕ್ಷುಃಸಂಜ್ಞಸ್ಯಾರ್ಷಂ ಸೂರ್ಯದೇವತ್ಯಂ ಗಾಯತ್ರಂ | ತಥಾ ಚಾನುಕ್ರಾಂತಂ | ಸೂರ್ಯೋ ನಶ್ಚಕ್ಷುಃ ಸೌರ್ಯಃ ಸೌರ್ಯಂ ಗಾಯತ್ರಮಿತಿ || ಆಶ್ವಿನಶಸ್ತ್ರೇ ಸೂರ್ಯೋದಯಾದುತ್ತರಕಾಲೇ ಸೌರ್ಯಕಾಂಡ ಇದಂ ಸೂಕ್ತಂ | ಸೂತ್ರಿತಂ ಚ | ಸೂರ್ಯೋ ನೋ ದಿವ ಉದು ತ್ಯಂ ಜಾತವೇದಸಮಿತಿ ನವ | ಆ. ೬-೫ | ಇತಿ || ದರ್ಶಪೂರ್ಣಮಾಸಯೋಃ ಸ್ರುಗಾದಾಪನಾತ್ಪೂರ್ವಭಾವಿನಿ ಜಪೇ ಸೂರ್ಯೋ ನ ಇತ್ಯೇಷಾ | ಸೂತ್ರಿತಂ ಚ | ಸೂರ್ಯೋ ನೋ ದಿವಸ್ಪಾತು ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯಃ | ಆ. ೧-೪ | ಇತಿ ||**

ಅನುವಾದವು—**ಸೂರ್ಯಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸೂರ್ಯಪುತ್ರನಾದ ಚಕ್ಷುಃ ಎಂಬುವನು ಋಷಿಯು ; ಸೂರ್ಯನು

ದೇವತೆಯು ; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಸೂರ್ಯೋ ನಃ ಪಞ್ಚ ಚಕ್ಷುಃ ಸೌರ್ಯಃ ಸೌರ್ಯಂ ಗಾಯತ್ರಂ** ಎಂದು ಹೇಳಿರುವುದು. ಆಶ್ವಿನಶಸ್ತ್ರಮಂತ್ರಗಳನ್ನು ಪಠಿಸುವಾಗ ಸೂರ್ಯೋದಯಾನಂತರ ಪಠಿಸುವ ಸೌರ್ಯಕಾಂಡಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಅಶ್ವಲಾಯನ ಶ್ರೌತಸೂತ್ರದ—**ಸೂರ್ಯೋ ನೋ ದಿವ ಉದು ತ್ಯಂ ಜಾತವೇದಸಮಿತಿ ನವ** ಎಂಬ ಸೂತ್ರದಿಂದ (ಆ ೬-೫) ವಿವೃತವಾಗಿರುವುದು. ಮತ್ತು ದರ್ಶಪೂರ್ಣಮಾಸೇಷ್ಟಿಗಳಲ್ಲಿ ಸ್ರುಗಾದಾಪನಕ್ಕೆ ಪೂರ್ವಭಾವಿಯಾಗಿ ಮಾಡುವ ಜಪದಲ್ಲಿ **ಸೂರ್ಯೋ ನಃ** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ - **ಸೂರ್ಯೋ ನೋ ದಿವಸ್ಪಾತು ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯಃ** ಎಂಬ ಸೂತ್ರದಿಂದ (ಆ. ೧-೪) ವಿವೃತವಾಗಿರುವುದು.

## ಸೂಕ್ತ - ೧೫೮

ಮಂಡಲ—೧೦ || ಅನುವಾಕ—೧೨ || ಸೂಕ್ತ—೧೫೮ ||
ಅಷ್ಟಕ—೮ || ಅಧ್ಯಾಯ—೮ || ವರ್ಗ—೧೬ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ||
|| ಋಷಿಃ—ಚಕ್ಷುಃ ಸೌರ್ಯಃ ||
|| ದೇವತಾ—ಸೂರ್ಯಃ ||
|| ಛಂದಃ—ಗಾಯತ್ರೀ ||

|| ಸಂಹಿತಾಪಾಠಃ ||

**ಸೂರ್ಯೋ ನೋ ದಿವಸ್ಪಾತು ವಾತೋ ಅಂತರಿಕ್ಷಾತ್ ।**

**ಅಗ್ನಿರ್ನಃ ಪಾರ್ಥಿವೇಭ್ಯಃ ॥ ೧ ॥**

|| ಪದಪಾಠಃ ||

**ಸೂರ್ಯಃ । ನಃ । ದಿವಃ । ಪಾತು । ವಾತಃ । ಅಂತರಿಕ್ಷಾತ್ ।**

**ಅಗ್ನಿಃ । ನಃ । ಪಾರ್ಥಿವೇಭ್ಯಃ ॥ ೧ ॥**

|| ಸಾಯಣಭಾಷ್ಯಂ ||

**ಸೂರ್ಯಃ ಸರ್ವಸ್ಯ ಪ್ರೇರಕಃ ಶೋಭನೀಯೋ ವಾ ದೇವೋ ದಿವೋ ದ್ಯುಲೋಕಾದ್ದ್ಯುಲೋಕವರ್ತಿನೋ ಜನಾನ್ನೋಽಸ್ಮಾನ್ಪಾತು । ರಕ್ಷತು । ವಾತೋ ವಾಯುಶ್ಚಾಂತರಿಕ್ಷಾನ್ಮಧ್ಯಮಸ್ಥಾನಗತಾದ್ಬಾಧಕಾದಸ್ಮಾನ್ರಕ್ಷತು । ತಥಾ ಪೃಥಿವೀಸ್ಥಾನೋಽಗ್ನಿಶ್ಚ ಪಾರ್ಥಿವೇಭ್ಯಃ ಪೃಥಿವ್ಯಾಂ ವರ್ತಮಾನೇಭ್ಯಃ ಶತ್ರುಭ್ಯೋ ನೋಽಸ್ಮಾನ್ರಕ್ಷತು ॥**

|| ಪ್ರತಿಪದಾರ್ಥ ||

**ಸೂರ್ಯಃ**—ಸರ್ವರನ್ನೂ ಪ್ರೇರಿಸುವ ಸೂರ್ಯನು | **ದಿವಃ**—ದ್ಯುಲೋಕದಲ್ಲಿರುವ ಶತ್ರುಜನರಿಂದ | **ನಃ**—ನಮ್ಮನ್ನು | **ಪಾತು**—ರಕ್ಷಿಸಲಿ | **ವಾತಃ**—ವಾಯುವು | **ಅಂತರಿಕ್ಷಾತ್**—ಮಧ್ಯಮಸ್ಥಾನವಾದ ಅಂತರಿಕ್ಷ

ದಲ್ಲಿರಬಹುದಾದ ಶತ್ರುಗಳಿಂದ ನಮ್ಮನ್ನು ರಕ್ಷಿಸಲಿ ಮತ್ತು | **ಅಗ್ನಿಃ**—ಪಾರ್ಥಿವಾಗ್ನಿಯು | **ನಃ**—ನಮ್ಮನ್ನು | **ಪಾರ್ಥಿವೇಭ್ಯಃ**—ಪೃಥ್ವಿಯಲ್ಲಿರುವ ಶತ್ರುಗಳಿಂದ ರಕ್ಷಿಸಲಿ.

|| ಭಾವಾರ್ಥ ||

ಸರ್ವರನ್ನೂ ಪ್ರೇರಿಸುವ ಸೂರ್ಯನು ದ್ಯುಲೋಕವಾಸಿಗಳಿಂದ ನಮಗೆ ಕೇಡಾಗದಂತೆ ನಮ್ಮನ್ನು ರಕ್ಷಿಸಲಿ. ಹಾಗೆಯೇ ವಾಯುವು ಮಧ್ಯಮಸ್ಥಾನವಾದ ಅಂತರಿಕ್ಷದಲ್ಲಿರುವ ಶತ್ರುಗಳಿಂದಲೂ, ಪಾರ್ಥಿವಾಗ್ನಿಯು ಪೃಥ್ವಿಯಲ್ಲಿರುವ ಶತ್ರುಗಳಿಂದಲೂ ನಮ್ಮನ್ನು ರಕ್ಷಿಸಲಿ.

## English Translation.

May Surya protect us from (foes dwelling in) heaven, Vayu from (those dwelling in) the firmament, and Agni from those upon earth

|| ಸಂಹಿತಾಪಾಠಃ ||

**ಜೋಷಾ ಸವಿತರ್ಯಸ್ಯ ತೇ ಹರಃ ಶತಂ ಸವಾ ಅರ್ಹತಿ |**
**ಪಾಹಿ ನೋ ದಿದ್ಯುತಃ ಪತಂತ್ಯಾಃ || ೨ ||**

|| ಪದಪಾಠಃ ||

**ಜೋಷ | ಸವಿತಃ | ಯಸ್ಯ | ತೇ | ಹರಃ | ಶತಂ | ಸವಾನ್ | ಅರ್ಹತಿ |**
**ಪಾಹಿ | ನಃ | ದಿದ್ಯುತಃ | ಪತಂತ್ಯಾಃ || ೨ ||**

|| ಸಾಯಣಭಾಷ್ಯಂ ||

**ಹೇ ಸವಿತಃ ಸರ್ವಸ್ಯ ಪ್ರೇರಕ ಸೂರ್ಯ ಜೋಷ | ಅಸ್ಮತ್ಸ್ತುತ್ಯಾದಿಕಂ ಸೇವಸ್ವ | ಯಸ್ಯ ತೇ ತವ ಹರೋ ರಸಹರಣಶೀಲಂ ತೇಜಃ ಶತಂ ಸವಾನ್ಬಹೂನ್ಯಜ್ಞಾನ್ಪ್ರತ್ಯರ್ಹತಿ ಯೋಗ್ಯಂ ಭವತಿ | ಯದ್ವಾ | ಪ್ರಕಾಶನಾದಿದ್ವಾರಾ ಪೂಜಯತಿ | ಸ ತ್ವಂ ನೋಽಸ್ಮಾನ್ಪತಂತ್ಯಾ ನಿಪತಂತ್ಯಾಃ ಶತ್ರುಭಿರಸ್ಮಾಸು ಕ್ಷಿಪ್ಯಮಾಣಾಯಾ ದಿದ್ಯುತಃ | ವಜ್ರನಾಮೈತತ್ | ದ್ಯೋತಮಾನಾಯಾಃ ಶಕ್ತೇರಾಯುಧಾತ್ಪಾಹಿ | ರಕ್ಷ ||**

|| ಪ್ರತಿಪದಾರ್ಥ ||

**ಸವಿತಃ**—ಸರ್ವರ ಪ್ರೇರಕನಾದ ಎಲೈ ಸೂರ್ಯನೇ | **ಜೋಷ**—ನಮ್ಮಸ್ತುತಿಗಳನ್ನು ಸೇವಿಸು | **ಯಸ್ಯ ತೇ**—ಯಾವ ನಿನ್ನ | **ಹರಃ**—ರಸಾಹರಣಶೀಲವಾದ ತೇಜಸ್ಸು | **ಶತಂ**—ಅನೇಕವಾದ | **ಸವಾನ್ ಅರ್ಹತಿ**—ಯಜ್ಞಗಳಲ್ಲಿ ಸ್ತುತ್ಯರ್ಹವಾಗಿದೆಯೋ ಅಂತಹ ನೀನು | **ಪತಂತ್ಯಾಃ**—ಶತ್ರುಗಳಿಂದ ನಮ್ಮ ಮೇಲೆ ಎಸೆಯಲ್ಪಡುವ | **ದಿದ್ಯುತಃ**—ಹೊಳೆಯುವ ಆಯುಧಗಳಿಂದ| **ನಃ**—ನಮ್ಮನ್ನು | **ಪಾಹಿ** ರಕ್ಷಿಸು.

|| ಭಾವಾರ್ಥ ||

ಸರ್ವಪ್ರೇರಕನಾದ ಎಲೈ ಸೂರ್ಯದೇವನೆ, ನಾವು ಮಾಡುವ ಸ್ತುತಿಗಳನ್ನು ಸೇವಿಸು ಎಂದರೆ ಸ್ವೀಕರಿಸು. ರಸಾ (ದ್ರವ) ಹರಣಶೀಲವಾದ ಯಾವ ನಿನ್ನ ಬಹಳವಾದ ಮತ್ತು ತೀಕ್ಷ್ಣವಾದ ತೇಜಸ್ಸು ಯಜ್ಞಗಳಲ್ಲಿ ಪ್ರಶಂಸಿತವಾಗಿರುವುದೋ ಅಂತಹ ನೀನು ಶತ್ರುಗಳು ನಮ್ಮ ಮೇಲೆ ಎಸೆಯುವ (ಬೀಳಿಸುವ) ಹೊಳೆಯುತ್ತಿರುವ ಆಯುಧಗಳಿಂದ ನಮ್ಮನ್ನು ರಕ್ಷಿಸು.

English Translation.

Savitri, whose radiance merits a hundred acknowledgments, be propitiated (by our praises); protect us from the falling bolts (of uur enemies.)

|| ಸಂಹಿತಾಪಾಠಃ ||

ಚಕ್ಷುರ್ನೋ ದೇವಃ ಸವಿತಾ ಚಕ್ಷುರ್ನ ಉತ ಪರ್ವತಃ ।
ಚಕ್ಷುರ್ಧಾತಾ ದಧಾತು ನಃ ॥ ೩ ॥

|| ಪದಪಾಠಃ ||

ಚಕ್ಷುಃ । ನಃ । ದೇವಃ । । ಸವಿತಾ । ಚಕ್ಷುಃ । ನಃ । ಉತ । ಪರ್ವತಃ ।
ಚಕ್ಷುಃ । ಧಾತಾ । ದಧಾತು । ನಃ ॥ ೩ ॥

|| ಸಾಯಣಭಾಷ್ಯಂ ||

ಸವಿತಾ ಪ್ರೇರಕೋ ದೇವೋ ನೋಽಸ್ಮಾಕಂ ಚಕ್ಷುಃ ಪ್ರಕಾಶಕಮಿಂದ್ರಿಯಮಿಂದ್ರಿಯಾನುಗ್ರಾಹಕಂ ತೇಜೋ ವಾ ದಧಾತು । ಉತಾಪಿ ಚ ಪರ್ವತ ಇಂದ್ರಸಹಚರಃ ಪರ್ವತಾಖ್ಯೋಽಪಿ ದೇವೋ ನೋಽಸ್ಮಾಕಂ ಚಕ್ಷುರ್ದಧಾತು । ಧಾತಾ ಸರ್ವಸ್ಯ ವಿಧಾತಾದಿತ್ಯಾನಾಮನ್ಯತಮಶ್ಚ ನೋಽಸ್ಮಾಕಂ ಚಕ್ಷುರ್ವಿದಧಾತು ॥

|| ಪ್ರತಿಪದಾರ್ಥ ||

**ಸವಿತಾ ದೇವಃ**—ಸರ್ವಪ್ರೇರಕನಾದ ಈ ಸೂರ್ಯದೇವನು । **ನಃ**—ನಮಗೆ । **ಚಕ್ಷುಃ**—ಕಣ್ಣನ್ನು, ದೃಷ್ಟಿಯನ್ನು ಅಥವಾ ನೋಡಲು ಶಕ್ತಿಯನ್ನು । **ದಧಾತು**—ಕೊಡಲಿ । **ಉತ**—ಮತ್ತು । **ಪರ್ವತಃ**—ಇಂದ್ರನ ಸಹಚರನಾದ (ಸ್ನೇಹಿತನಾದ) ಪರ್ವತ ಎಂಬ ಹೆಸರಿನ ದೇವನೂ । **ನಃ**—ನಮಗೆ । **ಚಕ್ಷುಃ**—ದೃಷ್ಟಿಯನ್ನು ಅನುಗ್ರಹಿಸಲಿ । **ಧಾತಾ**—ಸೃಷ್ಟಿಕರ್ತನು । **ನಃ**—ನಮಗೆ । **ಚಕ್ಷುಃ**—ದೃಷ್ಟಿಯನ್ನು । **ದಧಾತು**—ಕೊಡಲಿ.

|| ಭಾವಾರ್ಥ ||

ಸರ್ವಪ್ರೇರಕನಾದ ಈ ಸೂರ್ಯದೇವನೂ, ಇಂದ್ರನ ಸಹಚರನಾದ ಪರ್ವತಾಖ್ಯದೇವನೂ, ಸೃಷ್ಟಿಕರ್ತನಾದ ಧಾತೃವೂ ನಮಗೆ ಕಣ್ಣನ್ನು ಎಂದರೆ ನೋಡುವ ಸಾಮರ್ಥ್ಯವನ್ನು ಅನುಗ್ರಹಿಸಲಿ

## English Translation.

May the divine Savitri grant us sight, may Parvata (grant) us sight; may Dhatri (grant) us sight.

|| ಸಂಹಿತಾಪಾಠಃ ||

**ಚಕ್ಷುರ್ನೋ ಧೇಹಿ ಚಕ್ಷುಷೇ ಚಕ್ಷುರ್ವಿಖ್ಯೈ ತನೂಭ್ಯಃ ।**

**ಸಂ ಚೇದಂ ವಿ ಚ ಪಶ್ಯೇಮ || ೪ ||**

|| ಪದಪಾಠಃ ||

**ಚಕ್ಷುಃ । ನಃ । ಧೇಹಿ । ಚಕ್ಷುಷೇ । ಚಕ್ಷುಃ । ವಿಽಖ್ಯೈ । ತನೂಭ್ಯಃ ।**
**ಸಂ । ಚ । ಇದಂ । ವಿ । ಚ । ಪಶ್ಯೇಮ || ೪ ||**

|| ಸಾಯಣಭಾಷ್ಯಂ ||

**ನೋಽಸ್ಮಾಕಂ ಚಕ್ಷುಷೇ ರೂಪೋಪಲಬ್ಧಿಕಾರಣಾಯೇಂದ್ರಿಯಾಯ ಚಕ್ಷುಃ ಪ್ರಕಾಶಕಂ ತದಾನುಗ್ರಾಹಕಂ ತೇಜೋ ಹೇ ಸೂರ್ಯ ಧೇಹಿ । ವಿಧೇಹಿ । ಕುರು । ಯದ್ವಾ ॥ ನ ಇತಿ ವ್ಯತ್ಯಯೇನ ಬಹುವಚನಂ ॥ ಚಕ್ಷುಷೇ ಚಕ್ಷುಃಸಂಜ್ಞಾಯ ನೋ ಮಹ್ಯಂ ಚಕ್ಷುರಿಂದ್ರಿಯಂ ವಾ ತೇಜೋ ವಾ ಹೇ ಸೂರ್ಯ ಧೇಹಿ । ಪ್ರಯಚ್ಛ । ತನೂಭ್ಯೋಽಸ್ಮಾಕಂ ಶರೀರೇಭ್ಯಸ್ತನಯೇಭ್ಯೋ ವಾ ವಿಖ್ಯೈ ವಿಖ್ಯಾನಾಯ ಪ್ರಕಾಶನಾಯ ಚಕ್ಷುಸ್ತ್ವದೀಯಂ ಪ್ರಕಾಶಂ ವಿಧೇಹಿ । ಯತ ಏವಂ ತಸ್ಮಾತ್ಕಾರಣಾತ್ತ್ವದೀಯೇನ ತೇಜಸಾ ವಯಂ ಚೇದಂ ಸರ್ವಂ ಜಗತ್ಸಂ ಪಶ್ಯೇಮ । ಸಮ್ಯಗ್ದ್ರಷ್ಟಾರೋ ಭವೇಮ । ವಿ ಪಶ್ಯೇಮ ಚ । ವಿವಿಧಂ ಚ ಸವಿಶೇಷಂ ದ್ರಷ್ಟಾರೋ ಭವೇಮ ॥**

|| ಪ್ರತಿಪದಾರ್ಥ ||

(ಎಲೈ ಸೂರ್ಯನೇ) **ನಃ**—ನಮಗೆ । **ಚಕ್ಷುಷೇ**—ವಸ್ತುಗಳ ರೂಪಗಳನ್ನು ನೋಡಲು ಸಾಧನಭೂತವಾದ । **ಚಕ್ಷುಃ**—ಪ್ರಕಾಶವನ್ನು ಅಥವಾ ದೃಷ್ಟಿಯನ್ನು । **ಧೇಹಿ**—ಉಂಟುಮಾಡು । [ಅಥವಾ **ಚಕ್ಷುಷೇ**—ಚಕ್ಷುಃ ಎಂಬ ಹೆಸರಿನ । **ನಃ**—ನನಗೆ । **ಚಕ್ಷುಃ**—ದೃಷ್ಟಿಯನ್ನು ಅಥವಾ ತೇಜಸ್ಸನ್ನು । **ಧೇಹಿ**—ಕೊಡು] **ತನೂಭ್ಯಃ**—ನಮ್ಮ ಶರೀರಗಳ ರಕ್ಷಣೆಗೋಸ್ಕರಲೂ । **ವಿಖ್ಯೈ**—ಪ್ರಕಾಶಕ್ಕಾಗಿಯೂ । **ಚಕ್ಷುಃ**—ನಿನ್ನ

ಪ್ರಕಾಶವನ್ನು ಸುತ್ತಲೂ ಹರಡು ಅದರಿಂದ ನಾವು | **ಇದಂ ಚ**—ಈ ಸಮಸ್ತ ಜಗತ್ತನ್ನೂ | **ಸಂ ಪಶ್ಯೇಮ**—ಚೆನ್ನಾಗಿ ನೋಡುವಂತಾಗಲಿ | **ವಿ ಪಶ್ಯೇಮ**—ವಿವಿಧವಾದ ವಸ್ತುಗಳನ್ನೂ ನೋಡುವಂತಾಗಲಿ |

| ಭಾವಾರ್ಥ ||

ಎಲೈ ಸೂರ್ಯನೇ, ನಾವು ವಸ್ತುಗಳ ರೂಪಗಳನ್ನು ನೋಡಲು ಸಾಧನಭೂತವಾದ ಚಕ್ಷುರಿಂದ್ರಿಯವನ್ನು ಕೊಡು ಮತ್ತು ಅವುಗಳನ್ನು ನೋಡಲು ಸಹಾಯವಾಗುವಂತೆ ನಿನ್ನ ಪ್ರಕಾಶವನ್ನುಂಟುಮಾಡು. ಅಥವಾ ಚಕ್ಷು ಎಂಬ ಹೆಸರಿನ ಈ ಸೂಕ್ತದ್ರಷ್ಟೃವಾದ ನನಗೆ ನಿನ್ನ ತೇಜಸ್ಸನ್ನೂ ದೃಷ್ಟಿಯನ್ನೂ ಕೊಡು. ನಮ್ಮ ಶರೀರಂಕ್ಷಣೆಗಾಗಿಯೂ ನೋಡುವುದಕ್ಕಾಗಿಯೂ ನಿನ್ನ ತೇಜಸ್ಸನ್ನು ಸುತ್ತಲೂ ಹರಡು. ಅದರಿಂದ ಈ ಸಮಸ್ತ ಜಗತ್ತಿನಲ್ಲಿರುವ ವಿವಿಧ ವಸ್ತುಗಳನ್ನು ನಾವು ಚೆನ್ನಾಗಿ ನೋಡುವಂತಾಗಲಿ

## English Translation

Give sight, Surya, to our eyes, (bestow) sight for the illumination of our bodies, so that we may look upon and into this (world).

|| ಸಂಹಿತಾಪಾಠಃ ||

ಸುಸಂದೃಶಂ ತ್ವಾ ವಯಂ ಪ್ರತಿ ಪಶ್ಯೇಮ ಸೂರ್ಯ |
ವಿ ಪಶ್ಯೇಮ ನೃಚಕ್ಷಸಃ || ೫ ||

|| ಪದಪಾಠಃ ||

ಸುಽಸಂದೃಶಂ | ತ್ವಾ | ವಯಂ | ಪ್ರತಿ | ಪಶ್ಯೇಮ | ಸೂರ್ಯ |
ವಿ | ಪಶ್ಯೇಮ | ನೃಽಚಕ್ಷಸಃ || ೫ ||

|| ಸಾಯಣಭಾಷ್ಯಂ ||

ಹೇ ಸೂರ್ಯ ಸುಸಂದೃಶಂ ಸುಷ್ಠು ಸಂದ್ರಷ್ಟಾರಂ ತ್ವಾ ತ್ವಾಂ ವಯಂ ಪ್ರತಿ ಪಶ್ಯೇಮ | ಪ್ರತ್ಯೇಕಂ ದ್ರಷ್ಟಾರೋ ಭೂಯಾಸ್ಮ | ತಥಾ ನೃಚಕ್ಷಸೋ ನೃಭಿರ್ಮನುಷ್ಯೈರಸ್ಮಾಭಿರ್ದ್ರಷ್ಟವ್ಯಾನ್ಪದಾರ್ಥಾನ್ವಿ ಪಶ್ಯೇಮ | ವಿದ್ರಷ್ಟಾರೋ ಭವೇಮ | ಯದ್ವಾ | ನೃಚಕ್ಷಸೋ ನೃಣಾಂ ಶತ್ರುಮನುಷ್ಯಾಣಾಂ ಹಿಂಸಕಾಃ ಸಂತೋ ವಯಂ ವಿಶಿಷ್ಟಜ್ಞಾನಾ ಭವೇಮ ||

|| ಪ್ರತಿಪದಾರ್ಥ ||

**ಸೂರ್ಯ**—ಎಲೈ ಸೂರ್ಯನೇ | **ಸುಸಂದೃಶಂ**—ಎಲ್ಲವನ್ನೂ ಚೆನ್ನಾಗಿ ನೋಡಬಲ್ಲ | **ತ್ವಾ**—ನಿನ್ನನ್ನು | **ವಯಂ**—ನಾವು | **ಪ್ರತಿ ಪಶ್ಯೇಮ**—ಪ್ರತ್ಯೇಕವಾಗಿ ನೋಡುವಂತಾಗಲಿ ಮತ್ತು | **ನೃಚಕ್ಷಸಃ**—ಮನುಷ್ಯರಿಂದ

ನೋಡಬಹುದಾದ ಸಮಸ್ತ ವಸ್ತುಗಳನ್ನು । ವಿ ಪಶ್ಯೇಮ—ನಾವು ವಿಶೇಷವಾಗಿ ನೋಡುವಂತಾಗಲಿ। **[ಅಥವಾ ನೃಚಕ್ಷಸಃ**—ಶತ್ರುಜನರಿಗೆ ಹಿಂಸೆಯನ್ನುಂಟುಮಾಡುತ್ತಾ ನಾವು । **ವಿಪಶ್ಯೇಮ**—ವಿಶಿಷ್ಟಜ್ಞಾನಯುಕ್ತರಾಗಿ ಆಗೋಣ].

॥ ಭಾವಾರ್ಥ ॥

ಎಲೈ ಸೂರ್ಯನೇ, ಎಲ್ಲರನ್ನೂ ನೋಡುವ ನಿನ್ನನ್ನು ನಾವು ಪ್ರತ್ಯೇಕವಾಗಿ ನೋಡುವಂತಾಗಲಿ. ಮನುಷ್ಯರಿಂದ ನೋಡಬಹುದಾದ ಸಮಸ್ತವಸ್ತುಗಳನ್ನು ನಾವು ನೋಡುವಂತಾಗಲಿ ಅಥವಾ ನಾವು ಶತ್ರುಜನರನ್ನು ಹಿಂಸಿಸುತ್ತಾ ವಿಶೇಷಜ್ಞಾನಯುಕ್ತರಾಗಿರುವಂತಾಗಲಿ.

## English Translation.

May we look upon you, Surya, the bright beholder (of all), may we look into the things which are visible to mankind.

## ನೂರ ಐವತ್ತೊಂಭತ್ತನೆಯ ಸೂಕ್ತ

॥ ಸಾಯಣಭಾಷ್ಯಂ ॥

**ಉದಸಾವಿತಿ ಷಡೃಚಮಷ್ಟಮಂ ಸೂಕ್ತಮಾನುಷ್ಟುಭಂ । ಪುಲೋಮತನಯಾ ಶಚೀ ಸ್ವಾತ್ಮಾನಮನೇನಾಸ್ತೌತ್ । ಅತಃ ಸೈವರ್ಷಿಃ ಸೈವ ದೇವತಾ । ತಥಾ ಚಾನುಕ್ರಾಂತಂ । ಉದಸೌ ಷಟ್ ಪೌಲೋಮೀ ಶಚ್ಯಾತ್ಮಾನಂ ತುಷ್ಟಾವಾನುಷ್ಟುಭಮಿತಿ ॥ ವಿನಿಯೋಗೋ ಲಿಂಗಾದವಗಂತವ್ಯಃ ॥ ಆಪಸ್ತಂಬಸ್ತು ಸಪತ್ನೀನಾಶನೇ ಸೂರ್ಯೋಪಸ್ಥಾನ ಇದಂ ಸೂಕ್ತಂ ವಿನಿಯುಕ್ತವಾನ್ । ಸೂತ್ರ್ಯತೇ ಹಿ । ಏತೇನೈವ ಕಾಮೇನೋತ್ತರೇಣಾನುವಾಕೇನ ಸದಾದಿತ್ಯಮುಪತಿಷ್ಠತೇ । ಆಪ. ಗೃ ೯-೯ । ಇತಿ । ಅತ್ರೈತೇನೇತಿ ಪ್ರಕೃತಂ ಸಪತ್ನೀಬಾಧನಂ ಪರಾಮೃಶ್ಯತೇ ॥**

ಅನುವಾದವು—**ಉದಸೌ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತದಲ್ಲಿ ಪುಲೋಮನ ಪುತ್ರಿಯಾದ ಶಚೀ ಎಂಬ ಸ್ತ್ರೀಯು ತನ್ನನ್ನೇ ಪ್ರಶಂಸೆಮಾಡಿಕೊಂಡಿರುವಳು. ಆದ್ದರಿಂದ ಶಚೀ ಪೌಲೋಮಿಯೇ ಈ ಸೂಕ್ತಕ್ಕೆ ಋಷಿಯೂ, ದೇವತೆಯೂ ಆಗಿರುವಳು. ಅನುಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಉದಸೌ ಷಟ್ ಪೌಲೋಮೀ ಶಚ್ಯಾತ್ಮಾನಂ ತುಷ್ಟಾವಾನುಷ್ಟುಭಂ** ಎಂದು ಹೇಳಿರುವುದು. ಸೂಕ್ತದಲ್ಲಿ ಹೇಳಿರುವ ವಿಷಯಗಳಿಂದ ವಿನಿಯೋಗವನ್ನು ತಿಳಿದುಕೊಳ್ಳಬೇಕು. ಆಪಸ್ತಂಬಮಹರ್ಷಿಯು, ಸಪತ್ನಿ (ಸವತಿಯು) ಬಾಧಾಪರಿಹಾರಕ್ಕೋಸ್ಕರ ಮಾಡುವ ಕರ್ಮದಲ್ಲಿ ಉಪಸ್ಥಾನಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಪಸ್ತಂಬಗೃಹ್ಯಸೂತ್ರದ—**ಏತೇನೈವ ಕಾಮೇ**

**ಸೋತ್ತ್ರೇಣಾನುವಾಕೇನ ಸದಾದಿತ್ಯಮುಪತಿಷ್ಠತೇ** ಎಂಬ ಸೂತ್ರದಿಂದ (ಆಪ. ಗೃ. ೯-೯) ನಿರ್ದೇಶಿಸಿರುವರು ಇದರಿಂದ ಈ ಸೂಕ್ತದಲ್ಲಿ ಸಪತ್ನೀಬಾಧನವು ವಿವೃತವಾಗಿದೆಯೆಂದು ತಿಳಿಯಬಹುದು.

## ಸೂಕ್ತ - ೧೫೯

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೫೯ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೬ ॥
॥ ಋಷಿಃ—ಶಚೀ ಪೌಲೋಮೀ ॥
॥ ದೇವತಾ—ಶಚೀ ಪೌಲೋಮೀ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಉದಸೌ ಸೂರ್ಯೋ ಅಗಾದುದಯಂ ಮಾಮಕೋ ಭಗಃ ।
ಅಹಂ ತದ್ವಿದ್ವಲಾ ಪತಿಮಭ್ಯಸಾಕ್ಷಿ ವಿಷಾಸಹಿಃ ॥ ೧ ॥

॥ ಪದಪಾಠಃ ॥

ಉತ್ । ಅಸೌ । ಸೂರ್ಯಃ । ಅಗಾತ್ । ಉತ್ । ಅಯಂ । ಮಾಮಕಃ । ಭಗಃ ।
ಅಹಂ । ತತ್ । ವಿದ್ವಲಾ । ಪತಿಂ । ಅಭಿ । ಅಸಾಕ್ಷಿ । ವಿऽಸಸಹಿಃ ॥ ೧ ॥

॥ ಸಾಯಣಭಾಷ್ಯಂ ॥

ಅಸೌ ದ್ಯುಲೋಕಸ್ಥಃ ಸೂರ್ಯ ಉದಗಾತ್ । ಉದಯಂ ಪ್ರಾಪ್ತವಾನ್ । ಮಾಮಕೋ ಮದೀಯೋ ಭಗೋ ಭಜನೀಯೋऽಯಮಿಂದ್ರಶ್ಚ ಸೂರ್ಯಾತ್ಮನೋದಗಾತ್ । ಯದ್ವಾ । ಮಾಮಕೋ ಭಗೋ ಮದೀಯಮಿದಂ ಸೌಭಾಗ್ಯಮುದಗಾತ್ । ತದುದ್ಯತಂ ಸೂರ್ಯಸ್ಯ ತೇಜೋ ವಿದ್ವಲಾ ಜ್ಞಾತೆ-ವತೀ ಯದ್ವಾ ಪತಿಂ ಭರ್ತಾರಂ ವಿದ್ವಲಾ ಲಬ್ಧವತ್ಯಹಂ ವಿಷಾಸಹಿರ್ವಿಶೇಷೇಣಾಭಿಭವಿತ್ರೀ ಸತ್ಯಭ್ಯ-ಸಾಕ್ಷಿ । ಅಭ್ಯಭೂವಂ । ಸಪತ್ನೀರಿತಿ ಶೇಷಃ ॥ ಸಹತೇರಭಿಭವಾರ್ಥಸ್ಯ ಲುಙ್ಯೇತದ್ರೂಪಂ ॥ ಯದ್ವಾ । ವಿಷಾಸಹಿಃ ಸಪತ್ನೀನಾಮಭಿಭವಿತ್ರೀ ಸತೀ ಪತಿಮಭ್ಯಸಾಕ್ಷಿ । ಭರ್ತಾರಮಭ್ಯಭೂವಂ । ಯಥಾ ಮಯ್ಯೇವ ವಶೀಕೃತಶ್ಚಿರಂ ವರ್ತತೇ ತಥಾಕಾರ್ಷಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಸೌ**— ಅಂತರಿಕ್ಷದಲ್ಲಿ ಬೆಳಗುವ ಈ । **ಸೂರ್ಯಃ**— ಸೂರ್ಯನು । **ಉತ್ ಅಗಾತ್**— ಉದಯಿಸಿದ್ದಾನೆ । **ಮಾಮಕಃ** —ನನ್ನ ಸಂಬಂಧವಾದ । **ಭಗಃ**—ನನಗೆ ಪೂಜ್ಯನಾದ । **ಅಯಂ**— ಈ ಸೂರ್ಯಾತ್ಮಕ

ನಾದ ಇಂದ್ರನು ಉದಯಿಸಿದ್ದಾನೆ । [ಅಥವಾ ಮಾಮಕೋ ಭಗಃ—ನನ್ನ ಸೌಭಾಗ್ಯವು । **ಉತ್ ಅಗಾತ್**—ಉದಯಿಸಿದೆ ಎಂದರೆ ಪ್ರಾಪ್ತವಾಗಿದೆ] । **ತತ್**—ಉದಯಿಸಿದ ಸೂರ್ಯನ ತೇಜಸ್ಸನ್ನು ಅಥವಾ ನನ್ನ ಪತಿಯನ್ನು। **ವಿದ್ವಲಾ**—ಪಡೆದವಳಾಗಿ । **ಅಹಂ**—ನಾನು । **ವಿಷಾಸಹಿಃ**—ವಿಶೇಷವಾಗಿ ಸೋಲಿಸುತ್ತಾ । **ಅಭಿ ಅಸಾಕ್ಷಿ**—ನನ್ನ ಸವತಿಯರನ್ನು ಪರಾಭವಗೊಳಿಸಿದ್ದೇನೆ.

॥ ಭಾವಾರ್ಥ ॥

ಈಗ ಅಂತರಿಕ್ಷದಲ್ಲಿ ಸೂರ್ಯನು ಉದಯಿಸಿದ್ದಾನೆ. ನನ್ನ ಸೌಭಾಗ್ಯವೂ ಉದಯಿಸಿದೆ. ನನ್ನ ಪತಿಯನ್ನೂ ನಾನು ಪಡೆದು ನನ್ನ ಸವತಿಯರನ್ನು ಪರಾಭವಗೊಳಿಸಿದ್ದೇನೆ.

ಅಥವಾ ನನ್ನ ಪತಿಯಾದ ಇಂದ್ರನೇ ಈ ಸೂರ್ಯರೂಪದಿಂದ ಉದಯಿಸಿದಾನೆ. ಅವನ ತೇಜಸ್ಸನ್ನು ನಾನು ತಿಳಿದಿದ್ದೇನೆ. ನಾನು ನನ್ನ ಪತಿಯನ್ನು ಪಡೆದು ನನ್ನ ಸವತಿಯರನ್ನು ಸೋಲಿಸಿದ್ದೇನೆ.

English Translation

The sun has risen; my good fortune has dawned; I, knowing this, have obtained my husband triumphing (over my rivals).

॥ ಸಂಹಿತಾಪಾಠಃ ॥

ಅಹಂ ಕೇತುರಹಂ ಮೂರ್ಧಾಹಮುಗ್ರಾ ವಿವಾಚನೀ ।

ಮಮೇದನು ಕ್ರತುಂ ಪತಿಃ ಸೇಹಾನಾಯಾ ಉಪಾಚರೇತ್ ॥ ೨ ॥

॥ ಪದಪಾಠಃ ॥

ಅಹಂ । ಕೇತುಃ । ಅಹಂ । ಮೂರ್ಧಾ । ಅಹಂ । ಉಗ್ರಾ । ವಿऽವಾಚನೀ ।

ಮಮ । ಇತ್ । ಅನು । ಕ್ರತುಂ । ಪತಿಃ । ಸೇಹಾನಾಯಾಃ । ಉಪऽಆಚರೇತ್ ॥ ೨ ॥

॥ ಸಾಯಣಭಾಷ್ಯಂ ॥

ಅಹಂ ಕೇತುಃ ಕೇತಯಿತ್ರೀ ಸರ್ವಸ್ಯ ಜ್ಞಾಪಯಿತ್ರೀ ಭವಾಮಿ । ಅಹಂ ಮೂರ್ಧಾ ಸರ್ವೇಷ್ವವಯವೇಷು ಶಿರ ಇವ ಪ್ರಧಾನಭೂತಾ ಚ ಭವಾಮಿ । ಅಹಮುಗ್ರೋದ್ಗೂರ್ಣಾ ಸತೀ ವಿವಾಚನೀ ವಿಶೇಷೇಣ ಪತಿಂ ವಾಚಯಿತ್ರೀ ಭವಾಮಿ । ಕ್ರೋಧಾವಿಷ್ಟಮಪಿ ಪತಿಂ ಮಯಿ ಸರ್ವದಾ ಪ್ರಿಯವಚನಯುಕ್ತಂ ಕರೋಮೀತ್ಯರ್ಥಃ । ಸೇಹಾನಾಯಾಃ ಸಪತ್ನೀನಾಮಭಿಭವಿತ್ರ್ಯಾ ಮಮೇನ್ಮಮೈವ ಕ್ರತುಂ ಕರ್ಮ ಬುದ್ಧಿಂ ವಾನುಲಕ್ಷ್ಯ ಪತಿಃ ಪಾಲಯಿತಾ ಭರ್ತೋಪಾಚರೇತ್ । ಉಪಾಗಚ್ಛೇತ್ । ನಾನ್ಯಾಸಾಂ ಪತ್ನೀನಾಂ ॥

॥ ಪ್ರತಿಪದಾರ್ಥ ॥

**ಅಹಂ**—ನಾನು | **ಕೇತುಃ**—ಸರ್ವವನ್ನೂ ತಿಳಿದವಳಾಗಿದ್ದೇನೆ | **ಅಹಂ** ನಾನು | **ಮೂರ್ಧಾ**—ಶಿರಸ್ಸಿನಂತೆ ಪ್ರಧಾನಭೂತಳಾಗಿದ್ದೇನೆ | **ಅಹಂ**—ನಾನು | **ಉಗ್ರಾ**—ಸಾಹಸಯುಕ್ತಳಾಗಿಯೂ | **ವಿವಾಚಿನೀ**—ಪತಿಯನ್ನು ಸಂತೈಸುವವಳಾಗಿಯೂ ಇದ್ದೇನೆ | **ಸೇಹಾನಾಯಾಃ**—ಸವತಿಯರನ್ನು ಪರಾಭವಗೊಳಿಸುವ | **ಮಮ ಇತ್**—ನನ್ನ | **ಕ್ರತುಂ**—ಮನಸ್ಸನ್ನೇ ಅನುಸರಿಸಿ | **ಪತಿಃ**—ನನ್ನ ಪತಿಯು | **ಉಪಾಚರೇತ್**—ನನ್ನ ಸಮೀಪಕ್ಕೆ ಬರಲಿ.

॥ ಭಾವಾರ್ಥ ॥

ನಾನು ಸರ್ವವನ್ನು ತಿಳಿದಿದ್ದೇನೆ. ನಾನು ಶಿರಸ್ಸಿನಂತೆ ಪ್ರಧಾನಭೂತಳಾಗಿದ್ದೇನೆ ನಾನು ನನ್ನ ಸಾಹಸದಿಂದ ನನ್ನ ಪತಿಯನ್ನು ಸಂತೈಸಿ ಅವನು ನನ್ನ ವಿಷಯದಲ್ಲಿ ಪ್ರಿಯವಚನಗಳನ್ನು ಆಡುವಂತೆ ಮಾಡಿದ್ದೇನೆ. ನನ್ನ ಸವತಿಯರನ್ನು ಪರಾಭವಗೊಳಿಸಿದ ನನ್ನ ಮನಸ್ಸನ್ನೇ ಅನುಸರಿಸಿ ಎಂದರೆ ನನ್ನಲ್ಲೇ ಆಸಕ್ತನಾಗಿ ಸವತಿಯರ ಬಳಿಗೆ ಹೋಗದೆ ನನ್ನ ಬಳಿಗೇ ಬರಲಿ.

English Translation

I am the banner, I am the head, I am exalted, soothing (my lord); my husband must conform to my will, as I am victorious over my rivals.

॥ ಸಂಹಿತಾಪಾಠಃ ॥

ಮಮ ಪುತ್ರಾಃ ಶತ್ರುಹಣೋಽಥೋ ಮೇ ದುಹಿತಾ ವಿರಾಟ್ |
ಉತಾಹಮಸ್ಮಿ ಸಂಜಯಾ ಪತ್ಯೌ ಮೇ ಶ್ಲೋಕ ಉತ್ತಮಃ ॥ ೩ ॥

॥ ಪದಪಾಠಃ ॥

ಮಮ | ಪುತ್ರಾಃ | ಶತ್ರುಽಹನಃ | ಅಥೋ ಇತಿ | ಮೇ | ದುಹಿತಾ | ವಿಽರಾಟ್ |
ಉತ | ಅಹಂ | ಅಸ್ಮಿ | ಸಂಽಜಯಾ | ಪತ್ಯೌ | ಮೇ | ಶ್ಲೋಕಃ | ಉತ್ಽತಮಃ ॥ ೩ ॥

॥ ಸಾಯಣಭಾಷ್ಯಂ ॥

**ಮಮೈವ ಪುತ್ರಾಸ್ತನಯಾಃ ಶತ್ರುಹಣಃ ಶತ್ರೂಣಾಂ ಸಪತ್ನಾನಾಂ ಹಂತಾರೋ ಭವಂತಿ | ಅಥೋ ಅಪಿ ಚ ಮೇ ಮದೀಯಾ ದುಹಿತಾ ಪುತ್ರೀ ವಿರಾಡ್ವಿಶೇಷೇಣ ರಾಜಮಾನಾ ಭವತಿ | ಉತಾಪಿ ಚಾಹಂ ಸಂಜಯಾ ಸಮ್ಯಗ್ಜೇತ್ರೀ ಸಪತ್ನೀನಾಮಸ್ಮಿ| ತಾ ಅಭಿಭವಾಮಿ | ಅತೋ ಹೇತೋಃ ಪತ್ಯೌ ಭರ್ತರೀಂದ್ರೇ ಮೇ ಮಮ ಶ್ಲೋಕ ಉಪಶ್ಲೋಕನೀಯಂ ಯಶ ಉತ್ತಮ ಉದ್ಗತತಮಮತಿಶಯೇನೋತ್ಕೃಷ್ಟಂ ವಿದ್ಯತೇ ॥**

॥ ಪ್ರತಿಪದಾರ್ಥ ॥

**ಮಮ**—ನನ್ನ। **ಪುತ್ರಾಃ**—ಪುತ್ರರು। **ಶತ್ರುಹಣಃ**—ಶತ್ರುಗಳನ್ನು ಸಂಹಾರಮಾಡುವವರಾಗಿದ್ದಾರೆ **ಅಥೋ**—ಇದಲ್ಲದೆ। **ಮೇ**—ನನ್ನ। **ದುಹಿತಾ**—ಪುತ್ರಿಯು। **ವಿರಾಟ್**—ಸಮ್ರಾಜ್ಞಿಯಾಗಿ ಬೆಳಗುತ್ತಿದ್ದಾಳೆ। **ಉತ**—ಮತ್ತು। **ಅಹಂ**—ನಾನು। **ಸಂಜಯಾ**—ನನ್ನ ಸವತಿಯರನ್ನು ಜಯಿಸಿದವಳಾಗಿ। **ಅಸ್ಮಿ**—ಇದ್ದೇನೆ। **ಪತ್ಯೌ**—ನನ್ನ ಪತಿಯಾದ ಇಂದ್ರನಲ್ಲಿ। **ಮೇ**—ನನ್ನ। **ಶ್ಲೋಕಃ**—ಕೀರ್ತಿಯು। **ಉತ್ತಮಃ**—ಉತ್ಕೃಷ್ಟವಾಗಿದೆ.

॥ ಭಾವಾರ್ಥ ॥

ನನ್ನ ಪುತ್ರರು ಶತ್ರುಸಂಹಾರಕರು, ನನ್ನ ಪುತ್ರಿಯು ಸಮ್ರಾಜ್ಞಿಯಾಗಿ ಬೆಳಗುತ್ತಿದ್ದಾಳೆ. ಮತ್ತು ನಾನು ನನ್ನ ಸವತಿಯರನ್ನೆಲ್ಲಾ ಪರಾಭವಗೊಳಿಸಿದ್ದೇನೆ. ನನ್ನ ಯಶಸ್ಸು (ಪ್ರಾಮುಖ್ಯತೆಯು) ನನ್ನ ಪತಿಯಲ್ಲಿ ಉತ್ಕೃಷ್ಟವಾಗಿದೆ ಎಂದರೆ ನನ್ನ ಕೀರ್ತಿಯು ನನ್ನ ಪತಿಗೆ ಹರ್ಷಪ್ರದವಾಗಿದೆ.

English Translation

My sons are the destroyers of my enemies, my daughter is an empress; and I am victorious, my fame is most precious to my husband.

॥ ಸಂಹಿತಾಪಾಠಃ ॥

ಯೇನೇಂದ್ರೋ ಹವಿಷಾ ಕೃತ್ವ್ಯಭವದ್ದ್ಯುಮ್ನ್ಯುತ್ತಮಃ ।

ಇದಂ ತದಕ್ರಿ ದೇವಾ ಅಸಪತ್ನಾ ಕಿಲಾಭುವಂ ॥ ೪ ॥

॥ ಪದಪಾಠಃ ॥

ಯೇನ । ಇಂದ್ರಃ । ಹವಿಷಾ । ಕೃತ್ವೀ । ಅಭವತ್ । ದ್ಯುಮ್ನೀ । ಉತ್ಽತಮಃ ।

ಇದಂ । ತತ್ । ಅಕ್ರಿ । ದೇವಾಃ । ಅಸಪತ್ನಾ । ಕಿಲ । ಅಭುವಂ ॥ ೪ ॥

॥ ಸಾಯಣಭಾಷ್ಯಂ ॥

**ಯೇನ ಹವಿಷೇಂದ್ರೋ ಮಮ ಭರ್ತಾ ಕೃತ್ವೀ ಕರ್ಮಣಾಂ ಕರ್ತಾಭವತ್ ಭವತಿ। ತಥಾ ದ್ಯುಮ್ನೀ। ದ್ಯುಮ್ನಂ ದ್ಯೋತಮಾನಂ ಯಶೋಽನ್ನಂ ವಾ। ತದ್ವಾನುತ್ತಮ ಉತ್ಕೃಷ್ಟತಮಶ್ಚ ಯೇನ ಹವಿಷಾ ಭವತಿ। ಹೇ ದೇವಾಃ ಸ್ತೋತಾರ ಋತ್ವಿಜಃ ತದಿದಂ ಹವಿರಕ್ರಿ। ಅಕಾರಿ। ಜಯಾಥಿರ್ಭರ್ಭಿವದ್ಭಿಃ ಕ್ರಿಯತಾಂ। ಯದ್ವಾ। ಹೇ ಯಷ್ಟವ್ಯಾ ದೇವಾಃ ತದಿದಂ ಹವಿರಕ್ರ್ಯಹಮಪಿ॥ ಕರೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್॥ ಅತ ಏವ ಕಾರಣಾದಹಮಸಪತ್ನಾ ಕಿಲ ಶತ್ರುರಹಿತಾ ಖಲ್ವಭುವಂ। ಅಭೂವಂ॥ ಛಾಂದಸೋ ಹ್ರಸ್ವಃ॥**

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ। **ಯೇನ ಹವಿಷಾ**—ಯಾವ ಹವಿಸ್ಸಿನಿಂದ। **ಇಂದ್ರಃ**—ನನ್ನ ಪತಿಯಾದ ಇಂದ್ರನು। **ಕೃತ್ವೀ**—ಸಾಹಸಕೃತ್ಯಗಳನ್ನು ಮಾಡುವವನು। **ಅಭವತ್**—ಆಗುತ್ತಾನೆಯೋ। **ದ್ಯುಮ್ನೀ**—ಕೀರ್ತಿಶಾಲಿಯೂ। **ಉತ್ತಮಃ**—ಸರ್ವರಲ್ಲಿಯೂ ಶ್ರೇಷ್ಠನೂ ಆಗುತ್ತಾನೆಯೋ। **ತತ್ ಇದಂ**—ಅಂತಹ ಈ ಹವಿಸ್ಸು। **ಅಕ್ರಿ**—ನಿಮ್ಮಿಂದ ಸಿದ್ಧಗೊಳಿಸಲ್ಪಡಲಿ। [ಅಥವಾ **ದೇವಾಃ**—ಎಲೈ ದೇವತೆಗಳೇ। **ತತ್ ಇದಂ**—ಅಂತಹ ಹವಿಸ್ಸು। **ಅಕ್ರಿ**—ನನ್ನಿಂದ ಸುಸಜ್ಜಿತವಾಗಲಿ. ಆದ್ದರಿಂದ ನಾನು। **ಅಸಪತ್ನಾ ಕಿಲ**—ಶತ್ರುಗಳಾದ ಸವತಿಯರ ಬಾಧೆಯಿಂದ ಮುಕ್ತಳಾಗಿ। **ಅಭುವಂ**—ಆಗಿದ್ದೇನೆ

॥ ಭಾವಾರ್ಥ ॥

ಎಲೈ ದೇವತೆಗಳೇ, ಯಾವ ಹವಿಸ್ಸನ್ನು ಸೇವಿಸಿ ನನ್ನ ಪತಿಯಾದ ಇಂದ್ರನು ಸಾಹಸಕೃತ್ಯಗಳನ್ನು ಮಾಡುವನೋ, ಕೀರ್ತಿಶಾಲಿಯೂ ಗಣ್ಯನೂ ಆಗುತ್ತಾನೆಯೋ ಅಂತಹ ಹವಿಸ್ಸನ್ನು ಸಿದ್ಧಗೊಳಿಸಿರಿ ಅಥವಾ ನಾನು ಸಿದ್ಧಗೊಳಿಸುತ್ತೇನೆ ಅದರಿಂದ ನಾನು ನನ್ನ ಸವತಿಯರ ಕಾಟದಿಂದ ವಿಮುಕ್ತಳಾಗಿದ್ದೇನೆ

English Translation.

That oblation, O gods has been offered by which Indra offering it has become renowned and most powerful; I freed myself from my rival wives.

॥ ಸಂಹಿತಪಾಠಃ ॥

ಅಸಪತ್ನಾ ಸಪತ್ನಘ್ನೀ ಜಯಂತ್ಯಭಿಭೂವರೀ ।
ಆವೃಕ್ಷಮನ್ಯಾಸಾಂ ವರ್ಚೋ ರಾಧೋ ಅಸ್ಥೇಯಸಾಮಿವ ॥ ೫ ॥

॥ ಪದಪಾಠಃ ॥

ಅಸಪತ್ನಾ । ಸಪತ್ನಽಘ್ನೀ । ಜಯಂತೀ । ಅಭಿಽಭೂವರೀ ।
ಆ । ಅವೃಕ್ಷಂ । ಅನ್ಯಾಸಾಂ । ವರ್ಚಃ । ರಾಧಃ । ಅಸ್ಥೇಯಸಾಂಽಇವ ॥ ೫ ॥

॥ ಸಾಯಣಭಾಷ್ಯಂ ॥

ಅಸಪತ್ನಾಽಶತ್ರುಕಾ ಭವಾಮಿ । ಕುತ ಇತ್ಯತ ಆಹ । ಸಪತ್ನಘ್ನೀ ಶತ್ರೂಣಾಂ ಹಂತ್ರೀ ಅತ ಏವ ಜಯಂತೀ ಜಯಂ ಪ್ರಾಪ್ನುವತ್ಯಭಿಭೂವರ್ಯಭಿಭವಿತ್ರೀ ॥ ಭವತೇರನ್ಯೇಭ್ಯೋಽಪಿ ದೃಶ್ಯಂತ ಇತಿ ಕ್ವನಿಪ್ । ವನೋ ರ ಚೇತಿ ಙೀಬ್ರೇಫೌ ॥ ಈದೃಶ್ಯಹಮನ್ಯಾಸಾಂ ಸಪತ್ನೀನಾಂ ವರ್ಚಸ್ತೇಜೋ ರಾಧೋ ಧನಂ ಚಾವೃಕ್ಷಂ । ಆ ಸಮಂತಾದವೃಕ್ಷಂ । ಅವೃಶ್ಚಿಷಂ । ಅಚ್ಛಿದಂ ॥ ವ್ರಶ್ಚೇರ್ಲುಙ್ಯ್ಯಾದಿತ್ವಾದಿಡಭಾವೇ

ಸಂಯೋಗಾದಿಲೋಪೇ ಛಾಂದಸಂ ಸಂಪ್ರಸಾರಣಂ ॥ ತತ್ರ ದೃಷ್ಟಾಂತಃ । ಅಸ್ಥೇಯಸಾಮಿವಾಸ್ಥಿರತ-ರಾಣಾಂ ಶತ್ರೂಣಾಂ ಯಥಾ ಧನಮಪ್ರಯತ್ನೇನ ವೃಶ್ಚ್ಯತೇ ತಥೇತ್ಯರ್ಥಃ ॥ ಸ್ಥಿರಶಬ್ದಾದೀಯಸುನಿ ಪ್ರಿಯಸ್ಥಿರೇತ್ಯಾದಿನಾ ಸ್ಥಾದೇಶಃ ॥

॥ ಪ್ರತಿಪದಾರ್ಥ ॥

(ನಾನು) **ಸಪತ್ನಘ್ನೀ**—ಶತ್ರುಗಳಾದ ಸವತಿಯರನ್ನು ನಾಶಮಾಡಿದ್ದೇನೆ । **ಜಯಂತೀ**—ಜಯಶೀಲಳಾಗಿದ್ದೇನೆ । **ಅಭಿಭೂವರೀ**—ಆ ಸವತಿಯರನ್ನು ಸೋಲಿಸಿದ್ದೇನೆ. ಆದುದರಿಂದಲೇ । **ಅಸಪತ್ನಾ**–ನಾನು ಶತ್ರುರಹಿತಳೆಂದು ಅಥವಾ ಸವತಿಯರ ಕಾಟವಿಲ್ಲದವಳೆಂದು ಹೆಮ್ಮೆಪಡುತ್ತೇನೆ. ಇಂತಹ ನಾನು । **ಅನ್ಯಾಸಾಂ** – ಇತರ ನನ್ನ ಸವತಿಯರ। **ವರ್ಚಃ**—ತೇಜಸ್ಸನ್ನೂ । **ರಾಧಃ**—ಧನವನ್ನೂ । **ಅಸ್ಥೇಯಸಾಮಿವ**—ಸ್ಥಿರವಾಗಿ ನಿಲ್ಲಲಾರದ ಶತ್ರುಗಳ ಧನವು ಯಾವರೀತಿ ಅಪಹರಿಸಲ್ಪಡುವುದೋ ಅದರಂತೆ । **ಅವೃಕ್ಷಂ**—ಕತ್ತರಿಸಿ ಹಾಕಿದ್ದೇನೆ (ನಾಶಮಾಡಿದ್ದೇನೆ).

॥ ಭಾವಾರ್ಥ ॥

ನಾನು ಶತ್ರುಗಳಾದ ಸಪತ್ನಿಯರನ್ನು ನಾಶಮಾಡಿ : ಜಯಶೀಲಳಾಗಿದ್ದೇನೆ. ಅವರನ್ನು ನಾನಾವಿಧವಾಗಿ ಸೋಲಿಸಿದ್ದೇನೆ. ಆದ್ದರಿಂದಲೇ ನನಗೆ ಶತ್ರುಗಳಾದ ಸವತಿಯರ ಕಾಟವಿಲ್ಲದವಳಾಗದ್ದೇನೆ, ಇಂತಹ ನಾನು ನನ್ನ ಇತರ ಸಪತಿಯರ ತೇಜಸ್ಸನ್ನೂ ಧನವನ್ನೂ ಯುದ್ಧದಲ್ಲಿ ಸ್ಥಿರವಾಗಿ ನಿಲ್ಲಲಾರದ ಶತ್ರುಗಳ ಧನವು ನಾಶವಾಗುವಂತೆ ಕತ್ತರಿಸಿ ಹಾಕಿದ್ದೇನೆ ಎಂದರೆ ನಾಶಮಾಡಿದ್ದೇನೆ.

English Translation

Free from rivals, the destructress of rivals, victorious, triumphant, I cut up the brilliance and wealth of the other (wives of Indra) as if it were the wealth of (enemies) who do not endure long.

॥ ಸಂಹಿತಾಪಾಠಃ ॥

ಸಮಜೈಷಮಿಮಾ ಅಹಂ ಸಪತ್ನೀರಭಿಭೂವರೀ ।
ಯಥಾಹಮಸ್ಯ ವೀರಸ್ಯ ವಿರಾಜಾನಿ ಜನಸ್ಯ ಚ ॥ ೬ ॥

॥ ಪದಪಾಠಃ ॥

ಸಂ । ಅಜೈಷಂ । ಇಮಾಃ । ಅಹಂ । ಸ್ಽಪತ್ನೀಃ । ಅಭಿಽಭೂವರೀ ।
ಯಥಾ । ಅಹಂ । ಅಸ್ಯ । ವೀರಸ್ಯ । ವಿಽರಾಜಾನಿ । ಜನಸ್ಯ । ಚ ॥ ೬ ॥

॥ ಸಾಯಣಭಾಷ್ಯಂ ॥

ಅಭಿಭೂವರ್ಯಭಿಭವಿತ್ರ್ಯಹಮಿಮಾಃ ಸಪತ್ನೀಃ ಸಮವಿಕ್ಷಂ । ಸಮ್ಯಗಭ್ಯಭೂವಂ । ಯಥಾ ಯೇನ ಪ್ರಕಾರೇಣಾಹಮಸ್ಯ ವೀರಸ್ಯೇಂದ್ರಸ್ಯ ತದೀಯಪರಿಜನಸ್ಯ ಚ ವಿರಾಜಾನಿ ವಿಶೇಷೇಣ ರಾಜಮಾನಾ ಭವಾನಿ । ತಥಾ ಸಮವಿಕ್ಷಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಥಾ**—ಯಾವ ಪ್ರಕಾರವಾಗಿ । **ಅಹಂ**—ನಾನು । **ವೀರಸ್ಯ**—ವೀರನಾದ ಇಂದ್ರನ । **ಚ**—ಮತ್ತು । **ಜನಸ್ಯ**—ಅವನ ಪರಿಜನರ । **ವಿರಾಜಾನಿ**—ವಿಶ್ವಾಸಾದರಗಳಿಗೆ ಪಾತ್ರಳಾಗಿ ಬೆಳಗುವೆನೋ ಆರೀತಿ । **ಅಭಿಭೂವರೀ**—ಸೋಲಿಸುವ ಸ್ವಭಾವವುಳ್ಳ । **ಅಹಂ**—ನಾನು । **ಇಮಾಃ ಸಪತ್ನೀಃ**—ಈ ನನ್ನ ಸವತಿಯರನ್ನು । **ಸಂ ಅಕ್ಷಿಕ್ಷಂ**—ಚೆನ್ನಾಗಿ ಪರಾಭವಗೊಳಿಸಿದ್ದೇನೆ.

॥ ಭಾವಾರ್ಥ ॥

ಸವತಿಯರನ್ನು ಸೋಲಿಸುವ ಕಾರ್ಯದಲ್ಲಿ ದಕ್ಷಳಾದ ನಾನು ಈ ನನ್ನ ಸವತಿಯರನ್ನು ಚೆನ್ನಾಗಿ ಪರಾಭವಗೊಳಿಸಿದ್ದೇನೆ. ಅದರಿಂದ ನಾನು ನಿರ್ಬಾಧಿತಳಾಗಿ ವೀರನಾದ ನನ್ನ ಪತಿ ಇಂದ್ರನ ಮತ್ತು ಅವನ ಪರಿಜನರ ಪ್ರೀತ್ಯಾದರಗಳಿಗೆ ಪಾತ್ರಳಾಗಿ ಬೆಳಗುತ್ತಿದ್ದೇನೆ.

English Translation

Triumphant, I conquered these my rivals, so that I might rule this hero and his people.

## ನೂರ ಅರವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ತೀವ್ರಸ್ಯೇತಿ ಪಂಚರ್ಚಂ ನವಮಂ ಸೂಕ್ತಂ ವೈಶ್ವಾಮಿತ್ರಸ್ಯ ಪೂರಣಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ತಥಾ ಚಾನುಕ್ರಾಂತಂ । ತೀವ್ರಸ್ಯ ಪಂಚ ಪೂರಣೋ ವೈಶ್ವಾಮಿತ್ರ ಇತಿ ॥ ತೀವ್ರಸೋಮಾಖ್ಯ ಏಕಾಹ ಇದಂ ನಿಷ್ಕೇವಲ್ಯನಿವಿದ್ಧಾನಂ । ಸೂತ್ರಿತಂ ಚ । ಕ್ವಸ್ಯ ವೀರಸ್ತೀವ್ರಸ್ಯಾಭಿವಯಸ ಇತಿ ಮಧ್ಯಂದಿನಃ । ಆ. ೯-೭ । ಇತಿ ॥ ಮಹಾವ್ರತೇಽಪಿ ಮಾಧ್ಯಂದಿನೇ ಸವನೇ ಬ್ರಹ್ಮಶಸ್ತ್ರೇಽಪ್ಯೇತತ್ಸೂಕ್ತಂ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ತೀವ್ರಸ್ಯಾಭಿವಯಸೋ ಅಸ್ಯ ಪಾಹೀತಿ ಮಾಧ್ಯಂದಿನೇ । ಐ. ಆ. ೫-೧-೧। ಇತಿ ॥

ಅನುವಾದವು-- **ತೀವ್ರಸ್ಯ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರಗೋತ್ರದ ಪೂರಣನೆಂಬುವನು ಋಷಿಯು; ಇಂದ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ - **ತೀವ್ರಸ್ಯ ಪಂಚ ಪೂರಣೋ ವೈಶ್ವಾಮಿತ್ರಃ** ಎಂದು

ಹೇಳಿರುವುದು. ತೀವ್ರಸೋಮವೆಂಬ ಏಕಾಹೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳ ಮಧ್ಯದಲ್ಲಿ ಸೇರಿಸಿ ಪಠಿಸಬೇಕಾದ ನಿವಿದ್ಧಾನಸೂಕ್ತಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಕ್ವ ಸ್ಯ ವೀರಸ್ತೀವ್ರಸ್ಯಾಭಿವಯಸ ಇತಿ ಮಧ್ಯಂದಿನಃ** ಎಂಬ ಸೂತ್ರದಿಂದ (ಆ. ೯-೭) ವಿವೃತವಾಗಿರುವುದು ಮಹಾವ್ರತೇಷ್ಟಿಯ ಮಾಧ್ಯಂದಿನಸವನಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ತೀವ್ರಸ್ಯಾಭಿವಯಸೋ ಅಸ್ಯ ಪಾಹೀತಿ ಮಾಧ್ಯಂದಿನೇ** ಎಂಬ ವಾಕ್ಯದಿಂದ (ಐ. ಆ. ೫-೧-೧) ನಿರ್ದಿಷ್ಟವಾಗಿರುವುದು

## ಸೂಕ್ತ - ೧೬೦

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೬೦ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೧೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಪೂರಣೋ ವೈಶ್ವಾಮಿತ್ರಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತೀವ್ರಸ್ಯಾಭಿವಯಸೋ ಅಸ್ಯ ಪಾಹಿ ಸರ್ವರಥಾ ವಿ ಹರೀ ಇಹ ಮುಂಚ ।
ಇಂದ್ರ ಮಾ ತ್ವಾ ಯಜಮಾನಾಸೋ ಅನ್ಯೇ ನಿ ರೀರಮನ್ತುಭ್ಯಮಿಮೇ ಸುತಾಸಃ ॥ ೧ ॥

॥ ಪದಪಾಠಃ ॥

ತೀವ್ರಸ್ಯ । ಅಭಿಽವಯಸಃ । ಅಸ್ಯ । ಪಾಹಿ । ಸರ್ವಽರಥಾ । ವಿ । ಹರೀ ಇತಿ । ಇಹ । ಮುಂಚ ।
ಇಂದ್ರ । ಮಾ । ತ್ವಾ । ಯಜಮಾನಾಸಃ । ಅನ್ಯೇ । ನಿ । ರೀರಮನ್ । ತುಭ್ಯಂ । ಇಮೇ । ಸುತಾಸಃ ॥೧॥

॥ ಸಾಯಣಭಾಷ್ಯಂ ॥

ತೀವ್ರಸ್ಯ ತೀಕ್ಷ್ಣಸ್ಯ ಕ್ಷಿಪ್ರಂಮದಕರಸ್ಯಾಭಿವಯಸಃ । ವಯ ಇತ್ಯನ್ನನಾಮ । ಅಭಿಗತಂ ಚರುಪುರೋಡಾಶಾದ್ಯನ್ನಂ ಯಸ್ಯ ತಾದೃಶಸ್ಯಾಸ್ಯ ಸೋಮಸ್ಯ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ ॥ ಈದೃಶಂ ಸೋಮಂ ಹೇ ಇಂದ್ರ ಪಾಹಿ । ಪಿಬ ॥ ಪಿಬತೇಶ್ಛಾಂದಸಃ ಶಪೋ ಲುಕ್ ॥ ತದರ್ಥಂ ಸರ್ವರಥಾ ಸರಣಶೀಲರಥೌ ಹರೀ ಅಶ್ವಾವಿಹಾಸ್ಮಿನ್ಯಜ್ಞಗೃಹೇ ವಿ ಮುಂಚ । ರಥಾದ್ವಿಸೃಜ । ಹೇ ಇಂದ್ರ ಅಸ್ಮತ್ತೋಽನ್ಯೇ ಯಜಮಾನಾಸೋ ಯಜಮಾನಾಸ್ತ್ವಾ ತ್ವಾಂ

**ಮಾ ನಿ ರೀರಮನ್ । ನಿತರಾಂ ಮಾ ರಮಯಂತು । ವಯಮೇವ ರಮಯಾಮ ಇತ್ಯರ್ಥಃ । ತತಸ್ತುಭ್ಯಂ ತ್ವದರ್ಥಮೇವ ಸುತಾಸಃ ಸುತಾ ಅಭಿಷುತಾ ಇಮೇ ಪ್ರತ್ಯಕ್ಷೇಣೋಪಲಭ್ಯಮಾನಾಃ ಸೋಮಾ ವರ್ತಂತೇ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತೀವ್ರಸ್ಯ**—ತೀಕ್ಷ್ಣವಾದ ಎಂದರೆ ಬೇಗನೆ ಮದವನ್ನುಂಟುಮಾಡುವ । **ಅಭಿವಯಸಃ**—ಚರುಪುರೋಡಾಶಾದ್ಯನ್ನ ಸಹಿತವಾದ । **ಅಸ್ಯ**—ಈ ಸೋಮರಸವನ್ನು । **ಪಾಹಿ**—ಪಾನಮಾಡು (ಅದಕ್ಕಾಗಿ) । **ಸರ್ವರಥಾ**—ವೇಗವಾಗಿ ಸಂಚರಿಸುವ ನಿನ್ನ ರಥಕ್ಕೆ ಕಟ್ಟಿದ । **ಹರೀ**—ಅಶ್ವಗಳನ್ನು । **ಇಹ**—ಈ ಯಜ್ಞಗೃಹದ ಸಮೀಪದಲ್ಲಿ । **ವಿ ಮುಂಚ**—ರಥದಿಂದ ಬಿಚ್ಚಿಬಿಡು । **ಇಂದ್ರ**—ಎಲೈ ಇಂದ್ರನೇ । **ಅನ್ಯೇ**—ಇತರ (ನಾವಲ್ಲದ) । **ಯಜಮಾನಾಸಃ**—ಯಜ್ಞಮಾಡುವ ಯಜಮಾನರು । **ತ್ವಾ**—ನಿನ್ನನ್ನು । **ಮಾ ನಿ ರೀರಮನ್**—ಹರ್ಷಗೊಳಿಸಿದಿರಲಿ । **ತುಭ್ಯಂ**—ನಿನಗೋಸ್ಕರವಾಗಿಯೇ । **ಇಮೇ**—ಈ ಸೋಮರಸಗಳು । **ಸುತಾಸಃ**—ಹಿಂಡಲ್ಪಟ್ಟು ಸಿದ್ಧವಾಗಿವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ತೀಕ್ಷ್ಣವಾದ ಎಂದರೆ ಬೇಗನೆ ಮದವನ್ನುಂಟುಮಾಡುವ ಮತ್ತು ಚರುಪುರೋಡಾಶಾದ ನ್ನ ಸಹಿತವಾದ ಈ ಸೋಮರಸವನ್ನು ಪಾನಮಾಡು ಅದಕ್ಕಾಗಿ ಶೀಘ್ರಗತಿಯುಳ್ಳ ನಿನ್ನ ರಥದ ಕುದುರೆಗಳನ್ನು ಈ ಯಜ್ಞಗೃಹದ ಸಮೀಪದಲ್ಲಿಯೇ ಬಿಚ್ಚಿಬಿಡು. ಎಲೈ ಇಂದ್ರನೇ, ಯಜ್ಞಮಾಡುವ ಇತರ ಯಜಮಾನರು ದಾರಿಯಲ್ಲಿ ನಿನ್ನನ್ನು ತಡೆದು ನಿನಗೆ ಹರ್ಷವನ್ನುಂಟುಮಾಡದಿರಲಿ. ಎಂದರೆ ಎಲ್ಲಿಯೂ ನಿಲ್ಲದೆ ನಮ್ಮ ಬಳಿಗೆ ಬೇಗನೆ ಬಾ. ನಿನಗೋಸ್ಕರವಾಗಿಯೇ ಈ ಸೋಮರಸಗಳು ಸಿದ್ಧವಾಗಿವೆ.

English Translation

Drink, Indra, of this sharp (Soma-juice, wich is) combined with sacrificial food, unyoke here your bay steeds yoked to your swift chariot; let no other worshippers detain you, Indra; these libations are for you.

॥ ವಿಶೇಷವಿಷಯಗಳು ॥

ಸೋಮರಸವನ್ನು ಪಾನಮಾಡುವಾಗ ಅದು ರುಚಿಕರವಾಗುವಂತೆ ಮಾಡುವುದಕ್ಕಾಗಿ ಅದಕ್ಕೆ ಹಾಲು, ಮೊಸರು, ಹಿಟ್ಟು ಎಂಬ ಆಶಿರದ್ರವ್ಯಗಳನ್ನು ಬೆರೆಸುವುದುಂಟು ಹಾಲುಬೆರೆಸಿದ ಸೋಮರಸಕ್ಕೆ ಗವಾಶಿರವೆಂದೂ, ಮೊಸರನ್ನು ಬೆರೆಸಿದ ಸೋಮರಸಕ್ಕೆ ದಧ್ಯಾಶಿರವೆಂದೂ ಹಿಟ್ಟನ್ನು ಬೆರೆಸಿದ ಸೋಮರಸಕ್ಕೆ ಯವಾಶಿರವೆಂದೂ ಹೆಸರು. ಏನನ್ನೂ ಬೆರೆಸದೆ ಹಾಗೆಯೇ ಇರುವ ಸೋಮರಸವು ಬಹಳ ಶಕ್ತಿಯುತವಾಗಿ ಬೇಗನೆ ಮದವನ್ನುಂಟುಮಾಡುವುದರಿಂದ ಇದನ್ನು ತೀವ್ರ, ತೀಕ್ಷ್ಣ ಇತ್ಯಾದಿ ಹೆಸರುಗಳಿಂದ ಕರೆಯುವರು.

॥ ಸಂಹಿತಾಪಾಠಃ ॥

ತುಭ್ಯಂ ಸುತಾಸ್ತುಭ್ಯಮು ಸೋತ್ವಾಸಸ್ತ್ವಾಂ ಗಿರಃ ಶ್ವಾತ್ರ್ಯಾ ಆ ಹ್ವಯಂತಿ ।

ಇಂದ್ರೇದಮದ್ಯ ಸವನಂ ಜುಷಾಣೋ ವಿಶ್ವಸ್ಯ ವಿದ್ವಾ ಇಹ ಪಾಹಿ ಸೋಮಂ॥

॥ ಪದಪಾಠಃ ॥

ತುಭ್ಯಂ । ಸುತಾಃ । ತುಭ್ಯಂ । ಊಂ ಇತಿ । ಸೋತ್ವಾಸಃ । ತ್ವಾಂ । ಗಿರಃ । ಶ್ವಾತ್ರ್ಯಾಃ । ಆ । ಹ್ವಯಂತಿ ।

ಇಂದ್ರ । ಇದಂ । ಅದ್ಯ । ಸವನಂ । ಜುಷಾಣಃ । ವಿಶ್ವಸ್ಯ । ವಿದ್ವಾನ್ । ಇಹ । ಪಾಹಿ । ಸೋಮಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತುಭ್ಯಂ ತ್ವದರ್ಥಮೇವ ಸುತಾ ಅಭಿಷುತಾಃ ಸರ್ವೇ ಸೋಮಾಃ ಸೋತ್ವಾಸ ಇತಃ ಪರಮಭಿಷೋತವ್ಯಾಶ್ಚ ತುಭ್ಯಮು ತ್ವದರ್ಥಮೇವ॥ ಸುನೋತೇಃ ಕೃತ್ಯಾರ್ಥೇ ತವೈಕೇನಿತಿ ತ್ವನ್ಪ್ರತ್ಯಯಃ॥ ಶ್ವಾತ್ರ್ಯಾಃ ಶ್ವ ಆಶು ಶೀಘ್ರಮುತಂತ್ಯಃ ಪ್ರವರ್ತಮಾನಾ ಗಿರಃ ಸ್ತುತಿರೂಪಾ ವಾಚಶ್ಚ ತ್ವಾಮೇವಾ ಹ್ವಯಂತಿ। ಆಕ್ರೋಶಯಂತಿ। ಹೇ ಇಂದ್ರ ಅದ್ಯಾಸ್ಮಿನ್ಕಾಲ ಇದಂ ಸವನಂ ಪ್ರಾತಃಸವನಾದಿಕಂ ಜುಷಾಣಃ ಸೇವಮಾನೋ ವಿಶ್ವಸ್ಯ ಸರ್ವಸ್ಯ ವಿದ್ವಾಇಜ್ಞಾತಾ ತ್ವಮಿಹಾಸ್ಮಿನ್ಯಜ್ಞೇ ಸೋಮಂ ಪಾಹಿ । ಪಿಬ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತುಭ್ಯಂ**—ನಿನಗೋಸ್ಕರ । **ಸುತಾಃ**—ಈಗ ಹಿಂಡಲ್ಪಟ್ಟಿರುವ ಸೋಮರಸಗಳು ಇಲ್ಲಿವೆ । **ಸೋತ್ವಾಸಃ**—ಈಗ ಇನ್ನೂ ಹಿಂಡಲ್ಪಡಬೇಕಾದ ಸೋಮರಸಗಳೂ । **ತುಭ್ಯಂ ಉ**—ನಿನಗಾಗಿಯೇ । **ಶ್ವಾತ್ರ್ಯಾಃ**—ಬೇಗಬೇಗನೆ ಪರಿಸಲ್ಪಡುವ । **ಗಿರಃ**—ಸ್ತುತಿರೂಪವಾದ ಈ ವಾಕ್ಯಗಳೂ । **ತ್ವಾ**—ನಿನ್ನನ್ನೇ । **ಆ ಹ್ವಯಂತಿ**—ಕರೆಯುತ್ತವೆ । **ಇಂದ್ರ**—ಎಲೈ ಇಂದ್ರನೇ । **ಅದ್ಯ**—ಈಗ । **ಇದಂ ಸವನಂ**—ಈ ಪ್ರಾತಸ್ಸವನಾದಿಕರ್ಮವನ್ನು । **ಜುಷಾಣಃ**—ಸೇವಿಸುತ್ತಾ । **ವಿಶ್ವಸ್ಯ ವಿದ್ವಾನ್**—ಸಕಲವನ್ನು ತಿಳಿದಿರುವ ನೀನು । **ಇಹ**—ಈ ಯಜ್ಞದಲ್ಲಿ । **ಸೋಮಂ**—ಸೋಮರಸವನ್ನು । **ಪಾಹಿ**—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೋಸ್ಕರವಾಗಿಯೇ ಈ ಸೋಮರಸಗಳು ಹಿಂಡಿ ಸಿದ್ಧಪಡಿಸಲ್ಪಟ್ಟಿವೆ. ಇನ್ನು ಮೇಲೆ ಹಿಂಡಲ್ಪಡುವ ಸೋಮರಸಗಳೂ, ನಿನಗಾಗಿಯೇ ಬೇಗಬೇಗನೆ ಪರಿಸಲ್ಪಡುವ ಈ ಸ್ತುತಿರೂಪವಾದ ವಾಕ್ಯಗಳೂ ನಿನ್ನನ್ನೇ ಕರೆಯುತ್ತವೆ. ಎಲೈ ಇಂದ್ರನೇ, ಈ ಪ್ರಾತಸ್ಸವನಕರ್ಮವನ್ನು ಸೇವಿಸುತ್ತಾ ಸಕಲವನ್ನು ತಿಳಿದ ನೀನು ಈ ಯಜ್ಞದಲ್ಲಿ ಸೋಮವನ್ನು ಪಾನಮಾಡು.

## English Translation.

For you are the libations that have been poured out, for you are those which are to be poured out; you do our quickly uttered praises invoke;

Indra, you are cognizant of all things, taking pleasure in this present sacrifice, drink the Soma here.

|| ಸಂಹಿತಾಪಾಠಃ ||

ಯ ಉಶತಾ ಮನಸಾ ಸೋಮಮಸ್ಮೈ ಸರ್ವಹೃದಾ ದೇವಕಾಮಃ ಸುನೋತಿ |

ನ ಗಾ ಇಂದ್ರಸ್ತಸ್ಯ ಪರಾ ದದಾತಿ ಪ್ರಶಸ್ತಮಿಚ್ಚಾರುಮಸ್ಮೈ ಕೃಣೋತಿ ||೪||

|| ಪದಪಾಠಃ ||

ಯಃ | ಉಶತಾ | ಮನಸಾ | ಸೋಮಂ | ಅಸ್ಮೈ | ಸರ್ವಽಹೃದಾ | ದೇವಽಕಾಮಃ | ಸುನೋತಿ |

ನ | ಗಾಃ | ಇಂದ್ರಃ | ತಸ್ಯ | ಪರಾ | ದದಾತಿ | ಪ್ರಽಶಸ್ತಂ | ಇತ್ | ಚಾರುಂ | ಅಸ್ಮೈ | ಕೃಣೋತಿ ||೪||

|| ಸಾಯಣಭಾಷ್ಯಂ ||

ಯ ಉಶತಾ ಕಾಮಯಮಾನೇನ ಸರ್ವಹೃದಾ | ಸರ್ವಮವಿಕಲಂ ಹೃದಯಂ ಯಸ್ಯ | ಯದ್ವಾ| ಸರ್ವೇಷಾಮೃತ್ವಿಜಾಂ ಹೃದಯೇನ | ಸಾಮರ್ಥ್ಯಾನ್ಮತ್ವರ್ಥೋ ಲಕ್ಷ್ಯತೇ | ಹೃದಯವತಾ ಮನಸಾಸ್ಮಾ ಇಂದ್ರಾಯ ದೇವಕಾಮೋ ದೇವಮಿಂದ್ರಂ ಕಾಮಯಮಾನೋ ಯಜಮಾನಃ ಸೋಮಂ ಸುನೋತಿ ಅಭಿಷುಣೋತಿ | ಇಂದ್ರಸ್ತಸ್ಯ ಯಜಮಾನಸ್ಯ ಗಾ ನ ಪರಾ ದದಾತಿ | ಪರಾದಾನಂ ವಿನಾಶಃ | ನ ವಿನಾಶಯತಿ | ಅಸ್ಮೈ ಯಜಮಾನಾಯ ಚಾರುಂ ಶೋಭನಂ ಅತ ಏವ ಪ್ರಶಸ್ತಂ | ಇದಿತ್ಯವಧಾರಣೇ | ಪ್ರಶಂಸನೀಯಮೇವ ಧನಂ ಕೃಣೋತಿ | ಕರೋತಿ ||

|| ಪ್ರತಿಪದಾರ್ಥ ||

**ದೇವಕಾಮಃ**—ಇಂದ್ರನನ್ನು ಪೂಜಿಸಲಿಚ್ಛಿಸುವ | **ಯಃ**—ಯಾವ ಯಜಮಾನನು | **ಉಶತಾ**—ಸೋಮವನ್ನು ಅರ್ಪಿಸಬೇಕೆಂಬ ಅಭಿಲಾಷೆಯುಳ್ಳ | **ಸರ್ವಹೃದಾ**—ಮನಃಪೂರ್ವಕವಾದ | **ಮನಸಾ**—ಬುದ್ಧಿಯಿಂದ | **ಅಸ್ಮೈ**—ಈ ಇಂದ್ರನಿಗಾಗಿ | **ಸೋಮಂ**—ಸೋಮರಸವನ್ನು | **ಸುನೋತಿ**—ಹಿಂಡುವನೋ | **ತಸ್ಯ**—ಆ ಯಜಮಾನನ | **ಗಾಃ**—ಗೋವುಗಳನ್ನು | **ಇಂದ್ರಃ**—ಇಂದ್ರನು | **ನ ಪರಾ ದದಾತಿ**- ನಾಶಮಾಡುವುದಿಲ್ಲ. ಅಲ್ಲದೆ | **ಅಸ್ಮೈ**—ಆ ಯಜಮಾನನಿಗೆ | **ಚಾರುಂ**—ಶೋಭನವಾದ ಮತ್ತು | **ಪ್ರಶಸ್ತಂ ಇತ್**—ಶ್ರೇಷ್ಠವಾದ ಧನವನ್ನೇ | **ಕೃಣೋತಿ**—ಒದಗಿಸಿಕೊಡುತ್ತಾನೆ

|| ಭಾವಾರ್ಥ ||

ಇಂದ್ರನನ್ನು ಆರಾಧಿಸಬೇಕೆಂದು ಇಚ್ಛಿಸಿ ತನ್ನ ಮನಃಪೂರ್ವಕವಾದ ಬಯಕೆಯಿಂದಲೂ ಬುದ್ಧಿಯಿಂದಲೂ ಇಂದ್ರನಿಗಾಗಿ ಸೋಮರಸವನ್ನು ಹಿಂಡುವ ಯಜಮಾನನ ಗೋವುಗಳನ್ನು ಇಂದ್ರನು ನಾಶಮಾಡುವುದಿಲ್ಲ ಮತ್ತು ಆ ಯಜಮಾನನಿಗೆ ಶ್ರೇಷ್ಠವೂ ಶೋಭನವೂ ಆದ ಧನವನ್ನೇ ಒದಗಿಸಕೊಡುತ್ತಾನೆ.

## English Translation.

He who devoted to the deity with a willing mind offers the Soma to him with all his heart, Indra does not destroy his cattle, but gives him beautiful excellent (wealth).

|| ಸಂಹಿತಾಪಾಠಃ ||

ಅನುಸ್ಪಷ್ಟೋ ಭವತ್ಯೇಷೋ ಅಸ್ಯ ಯೋ ಅಸ್ಮೈ ರೇವಾನ್ನ ಸುನೋತಿ ಸೋಮಂ ।
ನಿರರತ್ನೌ ಮಘವಾ ತಂ ದಧಾತಿ ಬ್ರಹ್ಮದ್ವಿಷೋ ಹಂತ್ಯನಾನುದಿಷ್ಟಃ ॥ ೪ ॥

|| ಪದಪಾಠಃ ||

ಅನುಽಸ್ಪಷ್ಟಃ । ಭವತಿ । ಏಷಃ । ಅಸ್ಯ । ಯಃ । ಅಸ್ಮೈ । ರೇವಾನ್ । ನ । ಸುನೋತಿ । ಸೋಮಂ ।
ನಿಃ । ಅರತ್ನೌ । ಮಘಽವಾ । ತಂ । ದಧಾತಿ । ಬ್ರಹ್ಮಽದ್ವಿಷಃ । ಹಂತಿ । ಅನನುಽದಿಷ್ಟಃ ॥ ೪ ॥

|| ಸಾಯಣಭಾಷ್ಯಂ ||

ಅಸ್ಯ ಯಜಮಾನಸ್ಯೈಷ ಇಂದ್ರೋಽನುಸ್ಪಷ್ಟೋ ದೃಷ್ಟಿಗೋಚರೋ ಭವತಿ ಯೋ ರೇವಾನ್ಧನವಾನಸ್ಮಾ ಇಂದ್ರಾಯ ಸೋಮಂ ಸುನೋತಿ ಅಭಿಷುಣೋತಿ । ಮಘವಾ ಧನೋಪೇತ ಇಂದ್ರಸ್ತಂ ಯಜಮಾನಮರತ್ನೌ ಹಸ್ತೇ ನಿರ್ದಧಾತಿ ಭಯಾನ್ನಿಷ್ಕೃಷ್ಯ ಧಾರಯತಿ ರಕ್ಷಿತಾ ಸನ್ ಧೃತ್ವಾ ಚಾನನುದಿಷ್ಟಸ್ತೇನಾನುಕ್ತೋಽಪ್ರಾರ್ಥಿತ ಏವ ಸನ್ಬ್ರಹ್ಮದ್ವಿಷೋ ಬ್ರಾಹ್ಮಣದ್ವೇಷ್ಟ್ರೂನ್ ಶತ್ರೂನ್ಹಂತಿ । ಹಿನಸ್ತಿ ॥

|| ಪ್ರತಿಪದಾರ್ಥ ||

**ರೇವಾನ್**—ಧನವಂತನಾದ । **ಯಃ**—ಯಾವ ಯಜಮಾನನು । **ಅಸ್ಮೈ**—ಈ ಇಂದ್ರನಿಗಾಗಿ । **ಸೋಮಂ**—ಸೋಮರಸವನ್ನು । **ಸುನೋತಿ**—ಹಿಂಡಿ ಅರ್ಪಿಸುವನೋ । **ಅಸ್ಯ**—ಆ ಯಜಮಾನನಿಗೆ । **ಏಷಃ**—ಈ ಇಂದ್ರನು । **ಅನುಸ್ಪಷ್ಟಃ**—ದೃಷ್ಟಿಗೆ ಗೋಚರನಾಗುತ್ತಾನೆ । **ಮಘವಾ**—ಧನವಂತನಾದ ಇಂದ್ರನು । **ತಂ**—

ಆ ಯಜಮಾನನನ್ನು । **ಅರತ್ನೌ**—ಹಸ್ತದಲ್ಲಿ । **ನಿಃ ದಧಾತಿ**—ಪ್ರೀತ್ಯಾದರಗಳಿಂದ ಭಯನಿವಾರಣೆಮಾಡಿ ಧರಿಸುತ್ತಾನೆ (ಅನಂತರ) । **ಅನನುದಿಷ್ಟಃ**—ಅವನಿಂದ ಪ್ರಾರ್ಥಿತನಾಗದಿದ್ದರೂ । **ಬ್ರಹ್ಮದ್ವಿಷಃ**—ಬ್ರಾಹ್ಮಣ ದ್ವೇಷಿಗಳಾದ ಅವನ ಶತ್ರುಗಳನ್ನು । **ಹಂತಿ**—ಕೊಲ್ಲುತ್ತಾನೆ

॥ ಭಾವಾರ್ಥ ॥

ಧನವಂತನಾದ ಯಾವ ಯಜಮಾನನು ಈ ಇಂದ್ರನಿಗಾಗಿ ಸೋಮರಸವನ್ನು ಹಿಂಡಿ ಅರ್ಪಿಸುವನೋ ಆ ಯಜಮಾನನಿಗೆ ಇಂದ್ರನು ದೃಷ್ಟಿಗೋಚರನಾಗುತ್ತಾನೆ ಎಂದರೆ ಅವನಿಗೆ ಅನುಗ್ರಹಮಾಡುತ್ತಾನೆ. ಆ ಧನವಂತನಾದ ಇಂದ್ರನು ಅಂತಹ ಯಜಮಾನನ ಭಯನಿವಾರಣೆಮಾಡಿ ವಿಶ್ವಾಸದಿಂದ ಅವನನ್ನು ಹಸ್ತದಲ್ಲಿ ಧರಿಸುತ್ತಾನೆ. ಎಂದರೆ ಅವನನ್ನು ಆಸಕ್ತಿಯಿಂದ ರಕ್ಷಿಸಿ ಪೋಷಿಸುತ್ತಾನೆ ಮತ್ತು ಬ್ರಾಹ್ಮಣದ್ವೇಷಿಗಳಾದ ಅವನ ಶತ್ರುಗಳನ್ನು ಸಂಹರಿಸುತ್ತಾನೆ.

## English Translation.

He is mindful of him who, as a rich man, offers Soma to him; possessed of riches (Indra) holds him in his hand, and unsolicited destroys (his enemies) who hate the Brahmin

॥ ಸಂಹಿತಾಪಾಠಃ ॥

ಅಶ್ವಾಯಂತೋ ಗವ್ಯಂತೋ ವಾಜಯಂತೋ ಹವಾಮಹೇ ತ್ವೋಪಗಂತವಾ ಉ ।
ಆಭೂಷಂತಸ್ತೇ ಸುಮತೌ ನವಾಯಾಂ ವಯಮಿಂದ್ರ ತ್ವಾ ಶುನಂ ಹುವೇಮ ॥ ೫ ॥

॥ ಪದಪಾಠಃ ॥

ಅಶ್ವಽಯಂತಃ । ಗವ್ಯಂತಃ । ವಾಜಯಂತಃ । ಹವಾಮಹೇ । ತ್ವಾ । ಉಪಽಗಂತವೈ । ಊಂ ಇತಿ ।
ಆಽಭೂಷಂತಃ । ತೇ । ಸುಽಮತೌ । ನವಾಯಾಂ । ವಯಂ । ಇಂದ್ರ । ತ್ವಾ । ಶುನಂ । ಹುವೇಮ ॥ ೫ ॥

॥ ಸಾಯಣಭಾಷ್ಯಂ ॥

ಶುನಾಸೀರೀಯೇ ಪರ್ವಣೀಂದ್ರಾಯ ಶುನಾಸೀರಾಯ ಪುರೋಡಾಶಂ ದ್ವಾದಶಕಪಾಲಮಿತ್ಯ- ಸ್ಯಾಶ್ವಾಯಂತ ಇತ್ಯೇಷಾ ಯಾಜ್ಯಾ । ಇಂದ್ರೋ ದೇವಾ ಶುನ ಇತಿ ವೈಕಲ್ಪಿಕಸ್ಯಾಪಿ ಹವಿಷ ಇಯಮೇವ

ಯಾಜ್ಯಾ । ಸೂತ್ರಿತಂ ಚ । ಅಶ್ವಾಯಂತೋ ಗವ್ಯಂತೋ ವಾಜಯಂತಃ ಶುನಂ ಹುವೇಮ ಮಘವಾನಮಿಂದ್ರಂ । ಆ. ೨-೨೦ । ಇತಿ ॥

ಅಶ್ವಾಯಂತೋಽಶ್ವಾನಿಚ್ಛಂತಃ ॥ ಕ್ಯಚ್ಯಶ್ವಾಘಸ್ಯಾತ್ । ಪಾ. ೭-೪-೩೭ । ಇತ್ಯಾತ್ವಂ ॥ ಗವ್ಯಂತೋ ಗಾ ಆತ್ಮನ ಇಚ್ಛಂತಃ ॥ ವಾಂತೋ ಯಿ ಪ್ರತ್ಯಯೇ ಇತ್ಯವಾದೇಶಃ ॥ ವಾಜಯಂತೋಽಗ್ನೀನ್ವಾಜನೇನ ಶೂರ್ಪಾದಿನಾ ಪ್ರಜ್ವಲಯಂತಃ ॥ ವಾ ಗತಿಗಂಧನಯೋಃ । ಣಿಚಿ ವೋ ವಿಧೂನನೇ । ಪಾ. ೭-೩-೩೮ । ಇತಿ ಜುಗಾಗಮಃ । ಅಸ್ಮಾಚ್ಛತರ್ಯದುಪದೇಶಾಲ್ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಶಪಶ್ಚ ಪಿತ್ತ್ವಾದನುದಾತ್ತತ್ವೇ ತತೋ ಣಿಚ ಏವ ಸ್ವರಃ ಶಿಷ್ಯತೇ ॥ ಅಪರ ಆಹ । ವಾಜಮನ್ನಮಾತ್ಮನ ಇಚ್ಛಂತ ಇತಿ । ತದಾನೀಮವಗ್ರಹಾಭಾವಸ್ವರೌ ಛಾಂದಸೌ ದ್ರಷ್ಟವ್ಯೌ । ಏವಂಭೂತಾ ವಯಂ ಹೇ ಇಂದ್ರ ತ್ವಾಮುಪಗಂತವಾ ಉಪಗಂತುಂ ಪ್ರಾಪ್ತುಂ ಹವಾಮಹೇ । ಆಹ್ವಯಾಮಹೇ ॥ ಗಮೇಸ್ತುಮರ್ಥೇ ಸೇಸೇನಿತಿ ತವೈಪ್ರತ್ಯಯಃ । ಗತಿಸಮಾಸೇ ತವೈ ಚಾಂತಶ್ಚ ಯುಗಪದಿತಿ ಗತೇಃ ಪ್ರಕೃತಿಸ್ವರತ್ವಮುತ್ತರಪದಸ್ಯಾಂತೋದಾತ್ತತ್ವಂ ॥ ಉ ಇತಿ ಪೂರಕಃ । ಹೇ ಇಂದ್ರ ತೇ ತವ ನವಾಯಾಮಭಿನವಾಯಾಂ ಪ್ರಶಸ್ತಾಯಾಂ ಸುಮತೌ ಶೋಭನಬುದ್ಧಾವಾಭೂಷಂತ ಆ ಸಮಂತಾದ್ಭವಂತೋ ವರ್ತಮಾನಾಃ । ಯದ್ವಾ । ಆ ಸಮಂತಾದ್ಭೂಷಯಂತೋಽಲಂಕುರ್ವಂತಸ್ತವಾನುಗ್ರಹಬುದ್ಧೌ ವರ್ತಮಾನಾ ವಯಂ ಶುನಂ ಸುಖಕರಂ ತ್ವಾಂ ಹುವೇಮ । ಆಹ್ವಯೇಮ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಅಶ್ವಾಯಂತಃ**—ಅಶ್ವಗಳನ್ನು ಅಪೇಕ್ಷಿಸುವವರೂ । **ಗವ್ಯಂತಃ**—ಗೋವುಗಳನ್ನು ಅಪೇಕ್ಷಿಸುವವರೂ । **ವಾಜಯಂತಃ**—ಅನ್ನವನ್ನು ಇಚ್ಛಿಸುವವರೂ ಅಥವಾ ಯಜ್ಞಾಗ್ನಿಯನ್ನು ಬೀಸಣಿಗೆಯಿಂದ ಬೀಸಿ ಉರಿಮಾಡುವವರೂ ಆದ ನಾವು । **ತ್ವಾ**—ನಿನ್ನನ್ನು । **ಉಪಗಂತವೈ ಉ**—ನಮ್ಮ ಸಮೀಪಕ್ಕೆ ಬರುವುದಕ್ಕಾಗಿ । **ಹವಾಮಹೇ**- ಪ್ರಾರ್ಥಿಸಿ ಕರೆಯುತ್ತೇವೆ । **ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ನವಾಯಾಂ**—ಪ್ರಶಸ್ತವಾದ । **ಸುಮತೌ**—ಶೋಭನವಾದ ಅಥವಾ ಅನುಗ್ರಹಾತ್ಮಕವಾದ ಬುದ್ಧಿಯಲ್ಲಿ । **ಆಭೂಷಂತಃ**—ಇರುತ್ತಿರುವ (ಅಲಂಕಾರಪ್ರಾಯರಾಗಿ ಇರುವ) । **ವಯಂ** - ನಾವು । **ಶುನಂ** — ಸುಖಕರವಾದ ನಿನ್ನನ್ನು । **ಹುವೇಮ** - ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಅಶ್ವಗಳನ್ನೂ ಗೋವುಗಳನ್ನೂ ಅನ್ನವನ್ನೂ ಅಪೇಕ್ಷಿಸುತ್ತಿರುವ ನಾವು ನಮ್ಮ ಸಮೀಪಕ್ಕೆ ಬರುವಂತೆ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ. ಎಲೈ ಇಂದ್ರನೇ, ನಾವು ನಿನ್ನ ಪ್ರಶಸ್ತವಾದ ಅನುಗ್ರಹಾತ್ಮಕವಾದ ಬುದ್ಧಿಯಲ್ಲಿ ಅಲಂಕರಪ್ರಾಯರಾಗಿದೇವೆ ಎಂದರೆ ನಿನ್ನ ಅನುಗ್ರಹಕ್ಕೆ ಪಾತ್ರರಾಗಿದೇವೆ ಸುಖಕರನಾದ ನಿನ್ನನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ

English Translation

Wishing for horses, for cattle, for food, we invoke you, Indra, that you may come; abiding within your new favour we invoke you, Indra, the giver of happiness.

# ನೂರ ಅರವತ್ತೊಂದನೆಯ ಸೂಕ್ತವು

## ಪೀಠಿಕೆ.

ಈ ಸೂಕ್ತದಲ್ಲಿ ರಾಜಯಕ್ಷ್ಮವೆಂಬ ಹೃದಯರೋಗವನ್ನು ಅಥವಾ ಕ್ಷಯರೋಗವನ್ನು (Consumption) ನಾಶಮಾಡುವಂತೆ ಪ್ರಾರ್ಥಿಸಲಾಗಿದೆ ಈ ಸೂಕ್ತದ ಜಪಹೋಮಾದಿಗಳಿಂದ ಈ ವ್ಯಾಧಿಯು ಶಮನವಾಗುವುದೆಂದು ಹೇಳಿದೆ. ಋಗ್ವಿಧಾನಗ್ರಂಥದಲ್ಲಿಯೂ ಈ ರೀತಿ ಈ ಸೂಕ್ತದ ವಿನಿಯೋಗವನ್ನು ಹೇಳಿದೆ—

**ಮುಂಚಾಮಿ ತ್ವಾ ಹವಿಷೇತಿ ಯಕ್ಷ್ಮಾಣಮುಪಕರ್ಷತಿ** || ೬೨ ||

**ಸಮಿದ್ಧಮಗ್ನಿಂ ಜುಹುಯಾದಾಜ್ಯೇನೈವ ಯಥಾವಿಧಿ ।**

**ಸಂಪಾತಮಾಜ್ಯೇ ನಿನಯೇತ್ಸಂಪಾತೈಶ್ಚ ಪಯಃ ಪಿಬೇತ್** || ೬೩ ||

**ಸಂಪಾತಭಾಜನೇ ಸರ್ಪಿಶ್ಚೂರ್ಣಂ ತತ್ರ ನಿಧಾಪಯೇತ್ ।**

**ತತ್ರಾಸ್ಯ ಭೋಜನೀಯಂ ಸ್ಯಾತ್ಪಾನೀಯಂ ಚಾನುಮಂತ್ರಿತಂ** || ೬೪ ||

**ಖಾದಿರಾಣಿ ತು ಕಾಷ್ಠಾನಿ ಚೂರ್ಣಂ ಕೃತ್ವಾ ಸಹಾಂಬುಭಿಃ ।**

**ಸಾಧಯಿತ ರಸಂ ಚೈಷಾಂ ಮಧ್ವಾಜ್ಯಾಭ್ಯಾಂ ಪಿಬೇತ್ಸಹ** || ೬೫ ||

**ಮುಂಚಾಮಿ ತ್ವಾ ಹವಿಷೇತಿ ತತ್ರ ತತ್ರ ಪ್ರಯೋಜಯೇತ್ ।**

**ಯಕ್ಷ್ಮಾಣಮುಪಕರ್ಷತಿ ಶರೀರಾತ್ತೇನ ಕರ್ಮಣಾ** || ೬೬ ||

(ಋಗ್ವಿಧಾನ. ಅಧ್ಯಾಯ. ೪ ಶ್ಲೋ. ೬೨–೬೬)

**ಮುಂಚಾಮಿ ತ್ವಾ ಹವಿಷಾ** ಎಂಬ ಈ ಸೂಕ್ತದಿಂದ ಅಗ್ನಿಯಲ್ಲಿ ಸಮಿತ್ತು ಮತ್ತು ಆಜ್ಯಸಹಿತವಾಗಿ ವಿಧ್ಯುಕ್ತವಾಗಿ ಹೋಮಮಾಡಿದರೆ ಅದರಿಂದ ಯಕ್ಷ್ಮರೋಗವು (ಕ್ಷಯರೋಗವು) ಪರಿಹಾರವಾಗುವುದು. ಹೋಮಶೇಷವಾದ ಆಜ್ಯದೊಡನೆ ಹಾಲನ್ನು ಸೇರಿಸಿ ಪಾನಮಾಡಬೇಕು. ಹೋಮಶೇಷವಿರುವ ಆಜ್ಯಪಾತ್ರೆಯಲ್ಲಿ ಸರ್ಪಿಚೂರ್ಣವನ್ನು ಹಾಕಿ ಅದಕ್ಕೆ ನೀರನ್ನು ಬೆರಸಿ ಈ ಸೂಕ್ತದ ಮಂತ್ರಗಳಿಂದ ಅಭಿಮಂತ್ರಿಸಿ ಪಾನಮಾಡಬೇಕು ಮತ್ತು ಖಾದಿರವೃಕ್ಷದ ಚೆಕ್ಕೆಗಳನ್ನು ತಂದು ನೀರಿನಲ್ಲಿ ತೇಯಿದು ಆ ರಸವನ್ನು ಮಧು ಆಜ್ಯ ಇವುಗಳಿಂದ ಮಿಶ್ರಮಾಡಿ **ಮುಂಚಾಮಿ ತ್ವಾ ಹವಿಷಾ** ಎಂಬ ಮಂತ್ರಪುರಸ್ಸರವಾಗಿ ಪಾನಮಾಡಬೇಕು. ಹೀಗೆ ಮಾಡಿದರೆ ಶರೀರದಲ್ಲಿ ಬೇರು ಬಿಟ್ಟಿರುವ ಯಕ್ಷ್ಮರೋಗವು ನಾಶವಾಗುವುದು ಇದೇ ಮಂಡಲದ **ಅಕ್ಷೀಭ್ಯಾಂ ತೇ** ಎಂಬ ೧೬೩ನೇ ಸೂಕ್ತವೂ ಈ ಸೂಕ್ತದಂತೆಯೇ ಯಕ್ಷ್ಮಪರಿಹಾರಕವಾಗಿರುವುದು.

|| ಸಾಯಣಭಾಷ್ಯಂ ||

**ಮುಂಚಾಮೀತಿ ಪಂಚರ್ಚಂ ದಶಮಂ ಸೂಕ್ತಂ ಪ್ರಜಾಪತಿಪುತ್ರಸ್ಯ ಯಕ್ಷ್ಮನಾಶನಾಖ್ಯಸ್ಯಾರ್ಷಂ। ಅಂತ್ಯಾನುಷ್ಟುಪ್ ಶಿಷ್ಟಾಸ್ತ್ರಿಷ್ಟುಭಃ । ಅನಾದೇಶೇ ತ್ವಿಂದ್ರೋ ದೇವತಾ । ತಥಾ ಚಾನುಕ್ರಾಂತಂ। ಮುಂಚಾಮಿ ಪ್ರಾಜಾಪತ್ಯೋ ಯಕ್ಷ್ಮನಾಶನೋ ರಾಜಯಕ್ಷ್ಮಘ್ನಮಂತ್ಯಾನುಷ್ಟುಬಿತಿ ॥ ಹೃದಯರೋಗ-**

**ಪ್ರಮುಖಸ್ಯ ವ್ಯಾಧಿಜಾತಸ್ಯೋಪಶಮನಾರ್ಥಮನೇನ ಸೂಕ್ತೇನ ಹೋತವ್ಯಂ। ಸೂತ್ರ್ಯತೇ ಹಿ। ವ್ಯಾಧಿತಸ್ಯಾತುರಸ್ಯ ಯಕ್ಷ್ಮಗೃಹೀತಸ್ಯ ವಾ ಷಳಾಹುತಿಶ್ಚರುರ್ಮುಂಚಾಮಿ ತ್ವಾ ಹವಿಷಾ ಜೀವನಾಯ ಕಮಿತ್ಯೇತೇನ। ಆ. ಗೃ. ೩-೬-೪। ಇತಿ॥**

ಅನುವಾದವು—**ಮುಂಚಾಮಿ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು ಈ ಸೂಕ್ತಕ್ಕೆ ಪ್ರಜಾಪತಿಪುತ್ರನಾದ ಯಕ್ಷ್ಮನಾಶನನೆಂಬುವನು ಋಷಿಯು ; ಅನುಕ್ರಮಣಿಕೆಯಲ್ಲಿ ದೇವತಾನಿರ್ದೇಶವಿಲ್ಲದ್ದರಿಂದ ಇಂದ್ರನನ್ನೇ ದೇವತೆಯೆಂದು ಹೇಳಬಹುದು. ಈ ಸೂಕ್ತದ ಕೊನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಮುಂಚಾಮಿ ಪ್ರಾಜಾಪತ್ಯೋ ಯಕ್ಷ್ಮನಾಶನೋ ರಾಜಯಕ್ಷ್ಮಘ್ನಮಂತ್ಯಾನುಷ್ಟುಪ್** ಎಂದು ಹೇಳಿರುವುದು ಹೃದಯರೋಗಪೀಡಿತನಾದ ಪುರುಷನ ವ್ಯಾಧಿಪರಿಹಾರಾರ್ಥವಾಗಿ ಈ ಸೂಕ್ತದ ಮಂತ್ರಗಳಿಂದ ಹೋಮಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದ-**ವ್ಯಾಧಿತಸ್ಯಾತುರಸ್ಯ ಯಕ್ಷ್ಮಗೃಹೀತಸ್ಯ ವಾ ಷಳಾಹುತಿಶ್ಚರುರ್ಮುಂಚಾಮಿ ತ್ವಾ ಹವಿಷಾ ಜೀವನಾಯ ಕಮಿತ್ಯೇತೇನ** ಎಂಬ ಸೂತ್ರದಿಂದ (ಆ. ಗೃ ೩-೬-೪,೫) ವಿವೃತವಾಗಿರುವುದು.

## ಸೂಕ್ತ—೧೬೧

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೬೧ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ- ೧೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಯಕ್ಷ್ಮನಾಶನಃ ಪ್ರಾಜಾಪತ್ಯಃ ॥
॥ ದೇವತಾ—ರಾಜಯಕ್ಷ್ಮಘ್ನಂ ॥
॥ ಛಂದಃ—೧-೪. ತ್ರಿಷ್ಟುಪ್ । ೫. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಮುಂಚಾಮಿ ತ್ವಾ ಹವಿಷಾ ಜೀವನಾಯ ಕಮಜ್ಞಾತಯಕ್ಷ್ಮಾದುತ ರಾಜಯಕ್ಷ್ಮಾತ್ ।
ಗ್ರಾಹಿರ್ಜಗ್ರಾಹ ಯದಿ ವೈತದೇನಂ ತಸ್ಯಾ ಇಂದ್ರಾಗ್ನೀ ಪ್ರ ಮುಮುಕ್ತಮೇನಂ ॥ ೧ ॥

॥ ಪದಪಾಠಃ ॥

ಮುಂಚಾಮಿ । ತ್ವಾ । ಹವಿಷಾ । ಜೀವನಾಯ । ಕಂ । ಅಜ್ಞಾತಽಯಕ್ಷ್ಮಾತ್ । ಉತ । ರಾಜಽಯಕ್ಷ್ಮಾತ್ ।

ಗ್ರಾಹಿಃ । ಜಗ್ರಾಹ । ಯದಿ । ವಾ । ಏತತ್ । ಏನಂ । ತಸ್ಯಾಃ । ಇಂದ್ರಾಗ್ನೀ ಇತಿ । ಪ್ರ । ಮುಮುಕ್ತಂ । ಏನಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಯಕ್ಷ್ಮಾಭಿಭೂತ ಹವಿಷಾನೇನ ಚರುಣಾ ಸಾಧನೇನ ಹೋಮೇನ ತ್ವಾ ತ್ವಾಮಜ್ಞಾತಯಕ್ಷ್ಮಾತ್ । ಅಯಮೇತತ್ಸಂಜ್ಞ ಇತ್ಯಪ್ರಜ್ಞಾತಃ ಶರೀರಗತೋ ರೋಗೋಽಜ್ಞಾತಯಕ್ಷ್ಮಃ । ತಾದೃಶಾದ್ರೋಗಾನ್ಮುಂಚಾಮಿ । ವಿಶ್ಲೇಷಯಾಮಿ । ಕಿಮರ್ಥಂ । ಜೀವನಾಯ ಕಂ ಜೀವನಾರ್ಥಂ । ಇಹ ಲೋಕೇ ಚಿರಕಾಲಾವಸ್ಥಾನಾರ್ಥಮಿತ್ಯರ್ಥಃ । ಕಮಿತಿ ಪೂರಕಃ । ಉತಾಪಿ ಚ ರಾಜಯಕ್ಷ್ಮಾತ್ । ಯಕ್ಷ್ಮಾಣಾಂ ರಾಜಾ ಯಕ್ಷ್ಮರೋಗೋ ರಾಜಯಕ್ಷ್ಮಃ ॥ ರಾಜದಂತಾದಿತ್ವಾದುಪಸರ್ಜನಸ್ಯ ಪರನಿಪಾತಃ । ಪಾ. ೨-೨-೩೧ ॥ ತಸ್ಮಾದಪಿ ತ್ವಾಂ ಮುಂಚಾಮಿ । ಯದಿ ವಾ ।ಯದಿ ಚೈತದೇತಸ್ಮಿನ್ಸಮಯ ಏನಂ ವ್ಯಾಧಿತಂ ಪುರುಷಂ ಗ್ರಾಹಿರ್ಗ್ರಹಣಶೀಲಾ ಗ್ರಹರೂಪಾ ದೇವತಾ ಜಗ್ರಾಹ ಗೃಹೀತವತೀ ತಸ್ಯಾ ದೇವತಾಯಾಃ ಸಕಾಶಾದ್ಧೇ ಇಂದ್ರಾಗ್ನೀ ಏನಂ ಪ್ರ ಮುಮುಕ್ತಂ । ಪ್ರಮೋಚಯತಂ ॥

॥ ಪ್ರತಿಪದಾರ್ಥ ॥

(ಎಲೈ ಯಕ್ಷ್ಮರೋಗದಿಂದ ಪೀಡಿತನಾದವನೇ) **ಹವಿಷಾ**— ಚರುವೊದಲಾದ ಹೋಮಸಾಧನ ದ್ರವ್ಯದಿಂದ ಮಾಡುವ ಹೋಮದಿಂದ । **ತ್ವಾ**— ನಿನ್ನನ್ನು । **ಜೀವನಾಯ ಕಂ**— ಬಹುಕಾಲ ಸುಖದಿಂದ ಜೀವಿಸುವುದಕ್ಕಾಗಿ । **ಅಜ್ಞಾತಯಕ್ಷ್ಮಾತ್**— ಶರೀರದಲ್ಲಿ ಇನ್ನೂ ಹೆಚ್ಚಾಗಿ ವ್ಯಾಪಿಸದಿರುವ ಯಕ್ಷ್ಮ ರೋಗದಿಂದ (ಕ್ಷಯರೋಗದಿಂದ) । **ಮುಂಚಾಮಿ**— ಮುಕ್ತನನ್ನಾಗಿ ಮಾಡುತ್ತೇನೆ (ಪಾರುಮಾಡುತ್ತೇನೆ) । **ಉತ**— ಮತ್ತು । **ರಾಜಯಕ್ಷ್ಮಾತ್**— ಉಗ್ರಕರವಾದ ಯಕ್ಷ್ಮರೋಗದಿಂದಲೂ ಪಾರುಮಾಡುತ್ತೇನೆ । **ಯದಿ ವಾ**— ಒಂದು ವೇಳೆ । **ಏತತ್**— ಈ ಸಮಯದಲ್ಲಿ । **ಏನಂ**— ವ್ಯಾಧಿಪೀಡಿತನಾದ ಈ ಪುರುಷನನ್ನು । **ಗ್ರಾಹಿಃ**— ಹಿಡಿಯುವ ಸ್ವಭಾವವುಳ್ಳ ಈ ವ್ಯಾಧಿ ದೇವತೆಯು । **ಜಗ್ರಾಹ**— ಚೆನ್ನಾಗಿ ಹಿಡಿದೇ ಇದ್ದರೆ ಆಗ । **ಇಂದ್ರಾಗ್ನೀ**— ಎಲೈ ಇಂದ್ರಾಗ್ನಿದೇವತೆಗಳೇ । **ತಸ್ಯಾಃ**— ಆ ವ್ಯಾಧಿಯ ಹಿಡಿತದಿಂದ । **ಏನಂ**— ಈ ಪುರುಷನನ್ನು । **ಪ್ರ ಮುಮುಕ್ತಂ**— ಬಿಡುಗಡೆಮಾಡಲಿ.

॥ ಭಾವಾರ್ಥ ॥

ಎಲೈ ಯಕ್ಷ್ಮ (ಕ್ಷಯ) ರೋಗಪೀಡಿತನೆ, ನೀನು ಸುಖವಾಗಿ ಬಹುಕಾಲ ಜೀವಿಸುವುದಕ್ಕಾಗಿ ನಿನ್ನ ಶರೀರದಲ್ಲಿ ಹೆಚ್ಚಾಗಿ ವ್ಯಾಪಿಸದಿರುವ ಅಥವಾ ವ್ಯಾಪಿಸಿದ್ದರೂ ಕಾಣದಿರುವ ಯಕ್ಷ್ಮರೋಗದಿಂದಲೂ ಮತ್ತು ರಾಜಯಕ್ಷ್ಮವೆಂಬ ಉಗ್ರತರವಾದ ರೋಗದಿಂದಲೂ ಮುಕ್ತನನ್ನಾಗಿ ಮಾಡುವುದಕ್ಕಾಗಿ ಈ ಹವಿಸ್ಸಿನಿಂದ ಅಗ್ನಿಯಲ್ಲಿ ಹೋಮ ಮಾಡಿ ನಿನ್ನನ್ನು ರೋಗರಹಿತನನ್ನಾಗಿ ಮಾಡುತ್ತೇನೆ. ಒಂದುವೇಳೆ ವ್ಯಾಧಿಯು ಪ್ರಬಲವಾಗಿದ್ದರೆ ಆಗ ಆ ವ್ಯಾಧಿಯ ಹಿಡಿತದಿಂದ ಈ ಪುರುಷನನ್ನು ಇಂದ್ರಾಗ್ನಿಗಳು ಬಿಡುಗಡೆಮಾಡಲಿ,

## English Translation

By means of the oblation I set you free to live safe from undeveloped cnsumption and from royal consumption; and if the seizer have already seized him, then do you, Indra and Agni, set him free.

॥ ವಿಶೇಷವಿಷಯಗಳು ॥

**ಅಜ್ಞಾತಯಕ್ಷ್ಮಾತ್**— ಕ್ಷಯರೋಗವು ಶರೀರವನ್ನು ವ್ಯಾಪಿಸಿದ್ದರೆ ಆ ಕೂಡಲೇ ಗೊತ್ತಾಗುವುದಿಲ್ಲ. ಕ್ರಮೇಣ ವ್ಯಾಧಿಯು ಉಲ್ಬಣವಾದಾಗ ಅದು ಗೊತ್ತಾಗುವುದು ಆದ್ದರಿಂದ ವ್ಯಾಧಿಯು ಆವರಿಸಿದ ಪ್ರಥಮ ಹಂತಗಳಲ್ಲಿ (Early Stages) ಇದು ಗೊತ್ತಾಗುವುದಿಲ್ಲವಾದ್ದರಿಂದ ಈ ವ್ಯಾಧಿಯ ಆರಂಭಕಾಲದಲ್ಲಿ ಇದನ್ನು ಅಜ್ಞಾತಯಕ್ಷ್ಮ ಎಂದು ಇಲ್ಲಿ ನಿರ್ದೇಶಿಸಲಾಗಿದೆ. ಇಂತಹ ಪ್ರಥಮ ಹಂತಗಳಲ್ಲಿ ಇದನ್ನು ಸುಲಭವಾಗಿ ಗುಣಪಡಿಸ ಬಹುದು. ವ್ಯಾಧಿಯು ಬಲಿತು ಉಲ್ಬಣಾವಸ್ಥೆಗೆ ಬಂದಾಗ ಅದನ್ನು ವಾಸಿಮಾಡುವುದು ಕಷ್ಟಸಾಧ್ಯವು. ಕೆಲವು ಸಂದರ್ಭಗಳಲ್ಲಿ ವಾಸಿಯಾಗುವುದೇ ಇಲ್ಲ. ಇಂತಹ ಕಠಿಣಪರಿಸ್ಥಿತಿಯಲ್ಲಿರುವ ಪುರುಷನ ರೋಗವು ಪುರುಷಯತ್ನ ಗಳಿಗೆ ಮೀರಿರುವುದರಿಂದ ಅದನ್ನು ದೇವತೆಗಳೇ ಅನುಗ್ರಹಮಾಡಿ ಪರಿಹರಿಸಬೇಕೆಂದು ಇಲ್ಲಿ ಇಂದ್ರಾಗ್ನಿಗಳನ್ನು ಪ್ರಾರ್ಥಿಸಲಾಗಿದೆ. ಈ ಕ್ಷಯರೋಗಕ್ಕೆ ಸರಿಯಾದ ಆಧುನಿಕವೈದ್ಯಚಿಕಿತ್ಸೆಯು ಇನ್ನೂ ಕಂಡುಹಿಡಿಯಲ್ಪಟ್ಟಿಲ್ಲದಿರು ವುದು ಗಮನಾರ್ಹವಾದುದು.

**ರಾಜಯಕ್ಷ್ಮಾತ್**—ಅತಿದಾರುಣವಾದ ಕ್ಷಯರೋಗ, ಎಂದರೆ ಪ್ರಥಮ ಹಂತಗಳನ್ನು ದಾಟಿ ರೋಗವು ಶರೀರದಲ್ಲಿ ಚೆನ್ನಾಗಿ ವ್ಯಾಪಿಸಿ ತೀವ್ರಾವಸ್ಥೆಗೆ ಬಂದಿರುವ ಹಂತವು. ಅಥವಾ ಯಕ್ಷ್ಮರೋಗದಲ್ಲಿಯೇ ನಾನಾವಿಧ ಗಳಿದ್ದು ಅವುಗಳಲ್ಲಿ ಒಂದು ಪ್ರತ್ಯೇಕವಿಧಕ್ಕೆ ರಾಜಯಕ್ಷ್ಮವೆಂದು ಹೆಸರು. ಈ ಯಕ್ಷ್ಮರೋಗದ ಪ್ರಸ್ತಾಪವು ಋಗ್ವೇದ ಮತ್ತು ಯಜುರ್ವೇದಗಳಲ್ಲಿ ಅನೇಕಕಡೆ ಇರುವುದರಿಂದ ಈ ರೋಗದ ಹಾವಳಿಯು ಆ ಕಾಲದಲ್ಲಿ ವಿಶೇಷವಾಗಿದ್ದಿ ತೆಂದು ಊಹಿಸಬಹುದು.

॥ ಸಂಹಿತಾಪಾಠಃ

ಯದಿ ಕ್ಷಿತಾಯುರ್ಯದಿ ವಾ ಪರೇತೋ ಯದಿ ಮೃತ್ಯೋರಂತಿಕಂ ನೀತ ಏವ ।
ತಮಾ ಹರಾಮಿ ನಿರ್ಋತೇರುಪಸ್ಥಾದಸ್ಪಾರ್ಷಮೇನಂ ಶತಶಾರದಾಯ ॥೨॥

॥ ಪದಪಾಠಃ ॥

ಯದಿ । ಕ್ಷಿತಽಆಯುಃ । ಯದಿ । ವಾ । ಪರಾಽಇತಃ । ಯದಿ । ಮೃತ್ಯೋಃ । ಅಂತಿಕಂ । ನಿಽಇತಃ । ಏವ।
ತಂ । ಆ । ಹರಾಮಿ । ನಿಃಽಋತೇಃ । ಉಪಽಸ್ಥಾತ್ । ಅಸ್ಪಾರ್ಷಂ । ಏನಂ । ಶತಽಶಾರದಾಯ ॥ ೬ ॥

॥ ಸಾಯಣಭಾಷ್ಯಂ ॥

**ಯದಿ ಸ ರೋಗಗ್ರಸ್ತಃ ಕ್ಷಿತಾಯುಃ ಕ್ಷೀಣಾಯುರ್ಭವತಿ ಯದಿ ವಾ ಪರೇತೋಽಸ್ಮಾಲ್ಲೋಕಾತ್ಪರಾಗತೋ ಭವತಿ ಯದಿ ಚ ಮೃತ್ಯೋರ್ನೈರವಸ್ತತಸ್ಯಾಂತಿಕಂ ನಿಕಟಂ ನೀತೋ ನಿತರಾಂ ಪ್ರಾಪ್ತ ಏವ ಭವತಿ ಏವಂಭೂತಮಪಿ ತಂ ಪುರುಷಂ ನಿರ್ಋತೇಃ ಪಾಪದೇವತಾಯಾ ಆಯುಷಃ ಕ್ಷಯಕಾರಿಣ್ಯಾ ಉಪಸ್ಥಾದುಪಸ್ಥಾನಾದಾ ಹರಾಮಿ । ಆನಾಯಯಾಮಿ । ಆವರ್ತಯಾಮಿ । ಆಹೃತ್ಯ ಚೈನಂ ಶತಶಾರದಾಯ ಶತಸಂವತ್ಸರಜೀವನಾರ್ಥಮಸ್ಪಾರ್ಷಂ । ಪ್ರಬಲಂ ಕರೋಮಿ ॥ ಸ್ಪೃ ಪ್ರೀತಿಬಲನಯೋಃ ॥**

॥ ಪ್ರತಿಪದಾರ್ಥ ॥

(ಆ ರೋಗಗ್ರಸ್ತನಾದ ಪುರುಷನು) **ಯದಿ**—ಒಂದುವೇಳೆ । **ಕ್ಷಿತಾಯುಃ**—ಕೃಶನಾಗಿ ಸಾಯುವ ಸ್ಥಿತಿಯಲ್ಲಿದ್ದರೂ । **ಯದಿ ವಾ**—ಅಥವಾ । **ಪರೇತಃ**—ಮೃತನಾಗಿ ಈ ಲೋಕವನ್ನು ಬಿಟ್ಟುಹೋಗಿದ್ದರೂ । **ಯದಿ ಚ**—ಅಥವಾ । **ಮೃತ್ಯೋಃ**—ಮೃತ್ಯುವಿನ । **ಅಂತಿಕಂ**—ಸಮೀಪಕ್ಕೆ । **ನೀತಃ ಏವ**—ಒಯ್ಯಲ್ಪಟ್ಟಿದ್ದರೂ . **ತಂ**—ಅಂತಹ ಪುರುಷನನ್ನು । **ನಿರ್ಋತೇಃ**—ಆಯುಸ್ಸನ್ನು ಕ್ಷಯಿಸುವ ನಿರ್ಋತಿ ಎಂಬ ಪಾಪದೇವತೆಯ । **ಉಪಸ್ಥಾತ್**—ಸಮೀಪದಿಂದ (ತೊಡೆಯಿಂದ) । **ಆ ಹರಾಮಿ**—ಹಿಂತಿರುಗಿ ಕರೆತರುತ್ತೇನೆ (ಅನಂತರ) । **ಏನಂ**—ಆ ವ್ಯಾಧಿಗ್ರಸ್ತಪುರುಷನನ್ನು । **ಶತಶಾರದಾಯ**—ನೂರುವರ್ಷಗಳವರೆಗ ಜೀವಿಸುವುದಕ್ಕಾಗಿ । **ಅಸ್ಪಾರ್ಷಂ**—ಶಕ್ತಿಯುತನನ್ನಾಗಿ ಮಾಡುತ್ತೇನೆ.

॥ ಭಾವಾರ್ಥ ॥

ಆ ಕ್ಷಯರೋಗಪೀಡಿತದಾದ ಪುರುಷನ ಆಯುಸ್ಸು ಕ್ಷೀಣವಾಗುತ್ತಾ ಬಂದು ಶರೀರವು ಕೃಶವಾಗಿ ಸಾಯುವ ಸ್ಥಿತಿಯಲ್ಲಿದ್ದರೂ, ಅಥವಾ ಮೃತನಾಗಿ ಈ ಲೋಕವನ್ನು ಬಿಟ್ಟು ಹೊರಟೇಹೋಗಿದ್ದರೂ, ಅಥವಾ ಮೃತ್ಯುವಿನ ಸಮೀಪವನ್ನು ಸೇರಿದ್ದರೂ ಅಂತಹ ಪುರುಷನನ್ನು ಆಯುಃಕ್ಷಯಕಾರಿಯೂ ಪಾಪದೇವತೆಯೂ ಆದ ನಿರ್ಋತಿಯ ಉಪಸ್ಥೆಯಿಂದ ಹಿಂತಿರಿಗಿ ಕರೆತರುತ್ತೇನೆ ಮತ್ತು ಆ ಪುರುಷನು ನೂರುವರ್ಷಗಳವರೆಗೆ ಒದುಕುವಂತೆ ಶಕ್ತಿಯುತನನ್ನಾಗಿ ಮಾಡುತ್ತೇನೆ.

## English Translation.

If he be of wasted life, or already dead, or be come to the verge of death, I bring him back from the lap of Nirriti; I have made him strong enough to live for a hundred years.

॥ ವಿಶೇಷವಿಷಯಗಳು ॥

**ನಿರ್ಋತೇಃ ಉಪಸ್ಥಾತ್—ನಿರ್ಋತಿ** ಎಂದರೆ ಪಾಪದೇವತೆ. ಈ ದೇವತೆಗೂ ಮೃತ್ಯುವಿಗೂ ನಿಕಟ ಸಂಬಂಧವಿರುವುದು ನಿರ್ಋತಿಯ ಉಪಸ್ಥೇ ಎಂದರೆ ಮರಣಶಯ್ಯೆ ಎಂದರ್ಥವು. ಈ ಮಂಡಲದ ೫೯ನೇ ಸೂಕ್ತದಲ್ಲಿ ಈ ನಿರ್ಋತಿಯ ಪ್ರಸ್ತಾಪವಿರುವುದನ್ನು ಆ ಸೂಕ್ತದ ವಿಶೇಷ ವಿಷಯಗಳಲ್ಲಿ ನೋಡಿ ತಿಳಿಯಬಹುದು. ಮತ್ತು ನಿರ್ಋತಿ ಶಬ್ದಾರ್ಥವಿವರಣೆಗಾಗಿ ಋ. ಸಂ. ಭಾಗ ೩ ಪುಟ 272ನ್ನು ನೋಡಿ.

॥ ಸಂಹಿತಾಪಾಠಃ ॥

ಸಹಸ್ರಾಕ್ಷೇಣ ಶತಶಾರದೇನ ಶತಾಯುಷಾ ಹವಿಷಾಹಾರ್ಷಮೇನಂ ।
ಶತಂ ಯಥೇಮಂ ಶರದೋ ನಯಾತೀಂದ್ರೋ ವಿಶ್ವಸ್ಯ ದುರಿತಸ್ಯ ಪಾರಂ ॥

॥ ಪದಪಾಠಃ ॥

ಸಹಸ್ರಽಅಕ್ಷೇಣ । ಶತಽಶಾರದೇನ । ಶತಽಆಯುಷಾ । ಹವಿಷಾ । ಆ । ಅಹಾರ್ಷಂ । ಏನಂ ।
ಶತಂ । ಯಥಾ । ಇಮಂ । ಶರದಃ । ನಯಾತಿ । ಇಂದ್ರಃ । ವಿಶ್ವಸ್ಯ । ದುಃಽಇತಸ್ಯ । ಪಾರಂ ॥ ೩ ॥

॥ ಸಾಯಣಭಾಷ್ಯಂ ॥

ಸಹಸ್ರಮಿತಿ ಬಹುನಾಮ । ಸಹಸ್ರಮಕ್ಷೀಣಿ ಚಕ್ಷೂಂಷಿ ಯಸ್ಯ ಹವಿಷಃ ಫಲತ್ವೇನ ವಿದ್ಯಂತೇ ತತ್ಸಹಸ್ರಾಕ್ಷಂ ॥ ಬಹುವ್ರೀಹೌ ಸಕ್ಥ್ಯಕ್ಷ್ಣೋರಿತಿ ಷಟ್ ಸಮಾಸಾಂತಃ ॥ ಶರದಃ ಸಂಬಂಧೀ ಶಾರದಃ ಸಂವತ್ಸರಃ । ಶತಂ ಶಾರದಾ ಯಸ್ಯ ತತ್ತಥೋಕ್ತಂ ॥ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥ ಅತ ಏವ ಶತಾಯುಷಾ ಶತಸಂವತ್ಸರಪರಿಮಿತಮಾಯುರ್ಜೀವನಂ ಫಲಭೂತಂ ಯಸ್ಯ ತಾದೃಶೇನ ಹವಿಷಾ । ಯದ್ವಾ । ಸಹಸ್ರಾಕ್ಷ ಇಂದ್ರಃ । ತೇನ ಶತಶಾರದೇನ ಶರದಾಂ ಸಂವತ್ಸರಾಣಾಂ ಶತಸ್ಯ ದಾತೃತ್ವೇನ ಸಂಬಂಧಿನಾ ಕರ್ತ್ರಾ ಶತಾಯುಷಾ ಹವಿಷಾ ಕರಣಭೂತೇನ ಏನಂ ಯಕ್ಷ್ಮಗೃಹೀತಮಾಹಾರ್ಷಂ । ರೋಗಾದನೈಷಂ । ಯಥಾ ಯೇನ ಪ್ರಕಾರೇಣೇಮಂ ಪುರುಷಂ ಶತಂ ಶರದಃ ಸಂವತ್ಸರಾನ್ ॥ ಅತ್ಯಂತಸಂಯೋಗೇ ದ್ವಿತೀಯಾ ॥ ಏತಾವಂತಂ ಕಾಲಮಿಂದ್ರೋ ವಿಶ್ವಸ್ಯ ಸರ್ವಸ್ಯ ದುರಿತಸ್ಯ ದುಃಖಸ್ಯ ಪಾರಮವಸಾನಂ ದುಃಖರಾಹಿತ್ಯಂ ನಯಾತಿ ನಯೇತ್ ತಥಾಹಾರ್ಷಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಥಾ**—ಯಾವಪ್ರಕಾರವಾಗಿ । **ಇಮಂ**—ಈ ವ್ಯಾಧಿಗ್ರಸ್ತ ಪುರುಷನನ್ನು । **ಶರದಃ ಶತಂ**—ನೂರು ಸಂವತ್ಸರಕಾಲಪರ್ಯಂತರ । **ಇಂದ್ರಃ**—ಇಂದ್ರನು । **ವಿಶ್ವಸ್ಯ**—ಸಮಸ್ತವಾದ । **ದುರಿತಸ್ಯ**—ದುಃಖದ । **ಪಾರಂ**—ಕೊನೆಯನ್ನು ಎಂದರೆ ಕೊನೆಗೆ । **ನಯಾತಿ**—ಒಯ್ಯುವನೋ ಆ ಪ್ರಕಾರವಾಗಿ । **ಸಹಸ್ರಾಕ್ಷೇಣ**—ಇಂದ್ರನಿಂದ (ಇಂದ್ರನ ಅನುಗ್ರಹದಿಂದ) ಅಥವಾ ಕಣ್ಣುಗಳೆಂಬ ಸಾವಿರಾರು ಫಲಗಳುಳ್ಳದ್ದೂ । **ಶತಶಾರದೇನ**—ನೂರುಸಂವತ್ಸರ ಅವಧಿಯುಳ್ಳದ್ದೂ । **ಶತಾಯುಷಾ**—ನೂರು ಸಂವತ್ಸರ ಆಯುಃಪ್ರಮಾಣವುಳ್ಳದ್ದೂ ಆದ । **ಹವಿಷಾ**—ಈ ಹವಿಸ್ಸಿನಿಂದ । **ಏನಂ**—ಈ ಯಕ್ಷ್ಮ (ಕ್ಷಯ) ವ್ಯಾಧಿಪೀಡಿತನಾದ ಪುರುಷನನ್ನು । **ಆಹಾರ್ಷಂ**—ರೋಗದಿಂದ ಮುಕ್ತನನ್ನಾಗಿ ಮಾಡಿದ್ದೇನೆ ।

॥ ಭಾವಾರ್ಥ ॥

ಯಾವ ಪ್ರಕಾರವಾಗಿ ಇಂದ್ರನು ವ್ಯಾಧಿಗ್ರಸ್ತಪುರುಷನನ್ನು ನೂರುವರ್ಷಗಳ ವರೆಗೆ ದುಃಖರಹಿತನನ್ನಾಗಿ ಮಾಡುವನೋ ಆ ಪ್ರಕಾರವಾಗಿ ಸಾವಿರಾರು ವಿಧ ಆರೋಗ್ಯಾಧಿಫಲಗಳನ್ನು ಕೊಡುವುದಕ್ಕೂ ನೂರು ಸಂವತ್ಸರಗಳ ವರೆಗೆ ವ್ಯಾಧಿರಾಹಿತ್ಯವನ್ನು ಎಂದರೆ ಆರೋಗ್ಯದಿಂದಿರುವಂತೆ ಮಾಡಬಲ್ಲುದೂ, ನೂರು ಸಂವತ್ಸರಗಳವರೆಗೆ ಆಯುಃ ಪ್ರಮಾಣವನ್ನು ಹೆಚ್ಚಿಸಬಲ್ಲುದೂ ಆದ ಈ ಹವಿಸ್ಸಿನಿಂದ ಈ ಯಕ್ಷ್ಮರೋಗಪೀಡಿತನಾದ ಪುರುಷನನ್ನು ರೋಗರಹಿತ ನನ್ನಾಗಿ ಮಾಡಿದ್ದೇನೆ.

## English Translation

I have rescued him with an oblation having a thousand eyes, conferring a hundred years, giving life for a century, so that Indra may condnct him beyond all harm for a hundred years.

॥ ವಿಶೇಷವಿಷಯಗಳು ॥

**ಸಹಸ್ರಾಕ್ಷೇಣ**— ಇಲ್ಲಿ ಸಹಸ್ರ ಎಂದರೆ ಅನೇಕ, ಅಪರಿಮಿತ ; ಅಕ್ಷಿ ಎಂದರೆ ಕಣ್ಣುಗಳು. ಕಣ್ಣುಗಳ ಎಂದರೆ ಉತ್ತಮಫಲಗಳು. ಸಾವಿರಾರು ಕಣ್ಣುಗಳುಳ್ಳ ಹವಿಸ್ಸು ಎಂದರೆ, ಈ ಹವಿರ್ಹೋಮದಿಂದ ಸಾವಿರಾರು ಉತ್ತಮ ಫಲಗಳ ಪ್ರಾಪ್ತಿಯಾಗುವುದು. ಮತ್ತು,

ಶತಶಾರದೇನ, ಶತಾಯುಷಾ— ಈ ಎರಡು ಶಬ್ದಗಳೂ ಒಂದೇವಿಧವಾದ ಅರ್ಥವನ್ನು ಸೂಚಿಸುವವು. ನೂರು ವರ್ಷಗಳ ವರೆಗೆ ಆಯುಃಪ್ರಮಾಣವನ್ನು ಹೆಚ್ಚಿಸುವ ಸಾಮರ್ಥ್ಯವು ಈ ಹವಿಸ್ಸಿಗಿರುವುದು ಎಂದಭಿಪ್ರಾಯವು. ಶರತ್ ಎಂದರೆ ಶರತ್ಕಾಲ ಅಥವಾ ಛಳಿಗಾಲ. ಶರತ್ಕಾಲವು ಒಂದು ವರ್ಷದಲ್ಲಿ ಒಂದಾವರ್ತಿ ಮಾತ್ರ ಬರುವುದ ರಿಂದ ಸಂವತ್ಸರ ಎಂಬ ಅರ್ಥವದ್ನು ಸೂಚಿಸುವಾಗ ಅನೇಕ ಸಂದರ್ಭಗಳಲ್ಲಿ ಶರತ್ ಎಂಬ ಶಬ್ದವನ್ನೇ ಉಪಯೋಗಿ ಸುವ ರೂಢಿ ಇರುವುದು. ಆದ್ದರಿಂದ **ಶರದಃ ಶತಂ** ಎಂದರೆ ನೂರು ವರ್ಷಗಳು ಎಂದರ್ಥವು.

॥ ಸಂಹಿತಾಪಾಠಃ ॥

ಶತಂ ಜೀವ ಶರದೋ ವರ್ಧಮಾನಃ ಶತಂ ಹೇಮಂತಾಞ್ಛತಮು ವಸಂತಾನ್।
ಶತಮಿಂದ್ರಾಗ್ನೀ ಸವಿತಾ ಬೃಹಸ್ಪತಿಃ ಶತಾಯುಷಾ ಹವಿಷೇಮಂ ಪುನರ್ದುಃ॥

॥ ಪದಪಾಠಃ ॥

ಶತಂ । ಜೀವ । ಶರದಃ । ವರ್ಧಮಾನಃ । ಶತಂ । ಹೇಮಂತಾನ್ । ಶತಂ । ಊಂ ಇತಿ । ವಸಂತಾನ್ ।
ಶತಂ । ಇಂದ್ರಾಗ್ನೀ ಇತಿ । ಸವಿತಾ । ಬೃಹಸ್ಪತಿಃ । ಶತऽಆಯುಷಾ । ಹವಿಷಾ । ಇಮಂ । ಪುನಃ । ದುಃ ॥

॥ ಸಾಯಣಭಾಷ್ಯಂ ॥

**ಹೇ ಯಕ್ಷ್ಮಾದ್ವಿಮುಕ್ತ ವರ್ಧಮಾನೋಽಹರಹರಭಿವೃದ್ಧಿಂ ಪ್ರಾಪ್ನುವಂಸ್ತ್ವಂ ಶತಂ ಶರದಃ ಶತಸಂಖ್ಯಾಕಾಞ್ಶರದೃತೂಞ್ಜೀವ । ಪ್ರಾಣಾನ್ಧಾರಯ ॥ ಪೂರ್ವವದತ್ಯಂತಸಂಯೋಗೇ ದ್ವಿತೀಯಾ ॥ ಶತಂ ಹೇಮಂತಾನ್ ಹೇಮಂತರ್ತೂಂಶ್ಚ ಜೀವ ಶತಂ ವಸಂತಾಂಶ್ಚ । ಉಶಬ್ದಃ ಸಮುಚ್ಚಯೇ । ಅಪಿ ಚೇಂದ್ರಾಗ್ನೀ ಇಂದ್ರಶ್ಚಾಗ್ನಿಶ್ಚ ಸವಿತಾ ಪ್ರೇರಕೋ ದೇವಶ್ಚ ಬೃಹಸ್ಪತಿರ್ಬೃಹತಾಂ ದೇವಾನಾಂ ಪಾಲಯಿತಾ ದೇವಶ್ಚ ಶತಾಯುಷಾ ಶತಸಂವತ್ಸರಪರಿಮಿತಸ್ಯಾಯುಷೋ ಹೇತುಭೂತೇನ ಹವಿಷಾ ತರ್ಪ್ಯಮಾಣಾಃ ಸಂತ ಇಮಂ ಜನಂ ಪುನರ್ದುಃ । ಪುನರಸ್ಮಭ್ಯಂ ಪ್ರಾದುಃ ॥**

॥ ಪ್ರತಿಪದಾರ್ಥ ॥

(ಕ್ಷಯರೋಗದಿಂದ ಮುಕ್ತನಾದ ಎಲೈ ಪುರುಷನೇ, ನೀನು) **ವರ್ಧಮಾನಃ**—ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತಾ ಎಂದರೆ ಕ್ರಮಕ್ರಮವಾಗಿ ಶರೀರಾರೋಗ್ಯವನ್ನು ಪಡೆಯುತ್ತಾ । **ಶತಂ ಶರದಃ**—ನೂರು ಶರದೃತುಗಳವರೆಗೆ (ನೂರು ಸಂವತ್ಸರಗಳವರೆಗೆ) । **ಜೀವ**—ಜೀವಿಸು । **ಶತಂ ಹೇಮಂತಾನ್**—ನೂರು ಹಿಮಂತಋತುಗಳು ಕಳೆಯುವವರೆಗೂ ಜೀವಿಸು । **ಶತಂ ವಸಂತಾನ್**—ನೂರು ವಸಂತಋತುಗಳು ಕಳೆಯುವವರೆಗೂ ಜೀವಿಸು (ಮತ್ತು) । **ಇಂದ್ರಾಗ್ನೀ**—ಇಂದ್ರಾಗ್ನಿಗಳೂ । **ಸವಿತಾ**—ಸರ್ವ ಪ್ರೇರಕನಾದ ಸವಿತೃದೇವನೂ । **ಬೃಹಸ್ಪತಿಃ**—ಬೃಹಸ್ಪತಿಯೂ ಸಹ । **ಶತಾಯುಷಾ**—ನೂರು ಸಂವತ್ಸರಗಳವರೆಗೆ ಬದುಕುವಂತೆ ಆಯುಃಪರಿಮಿತಿಯನ್ನು ಹೆಚ್ಚಿಸುವ ಸಾಮರ್ಥ್ಯವುಳ್ಳ । **ಹವಿಷಾ**—ಈ ಹವಿಸ್ಸಿನಿಂದ ತೃಪ್ತರಾಗಿ । **ಇಮಂ**—ಈ ಕ್ಷಯರೋಗದಿಂದ ಈಗತಾನೆ ಮುಕ್ತನಾದ ಪುರುಷನನ್ನು । **ಪುನರ್ದುಃ**—ಮತ್ತೆ ನಮಗೆ ಕೊಟ್ಟರು ಎಂದರೆ ನಮ್ಮ ಮಧ್ಯದಲ್ಲಿ ಜೀವಿಸುವಂತೆ ಅನುಗ್ರಹಿಸಿದರು.

॥ ಭಾವಾರ್ಥ ॥

ಕ್ಷಯರೋಗನಿರ್ಮುಕ್ತನಾದ ಎಲೈ ಪುರುಷನೇ, ನೀನು ದಿನೇ ದಿನೇ ಅಭಿವೃದ್ಧಿಯನ್ನು ಎಂದರೆ ಕ್ರಮಕ್ರಮವಾಗಿ ಶರೀರಾರೋಗ್ಯವನ್ನು ಪಡೆಯುತ್ತಾ ನೂರು ಶರದೃತುಗಳು ಕಳೆಯುವ ಪರ್ಯಂತರ ಎಂದರೆ ನೂರು ಸಂವತ್ಸರಗಳ ಕಾಲ ಜೀವಿಸು. ಹಾಗೆಯೇ ನೂರು ಹಿಮಂತಋತುಗಳು, ನೂರು ವಸಂತಋತುಗಳು ಕಳೆದುಹೋಗುವ ಕಾಲಪರ್ಯಂತರ ಎಂದರೆ ನೂರು ವರ್ಷಗಳವರೆಗೆ ಜೀವಿಸು. ಮತ್ತು ಇಂದ್ರ, ಅಗ್ನಿ, ಸವಿತೃ, ಬೃಹಸ್ಪತಿ ಈ ದೇವತೆಗಳೆಲ್ಲರೂ ನೂರು ಸಂವತ್ಸರಗಳವರೆಗೆ ಬದುಕುವಂತೆ ಆಯುಃಪ್ರಮಾಣವನ್ನು ಹೆಚ್ಚಿಸುವ ಸಾಮರ್ಥ್ಯವುಳ್ಳ ಈ ಹವಿಸ್ಸಿನಿಂದ ತೃಪ್ತರಾಗಿ ರೋಗಗ್ರಸ್ತನಾಗಿ ಅದರಿಂದ ಚೇತರಿಸಿಕೊಂಡಿರುವ ಈ ಪುರುಷನು ಪುನಃ ನಮ್ಮ ಮಧ್ಯದಲ್ಲಿ ಜೀವಿಸಿರುವಂತೆ ಅನುಗ್ರಹಿಸಿದರು.

## English Translation.

Regaining your strength, live for a hundred autumns, a hundred winters, a hundred springs; may Indra, Agni, Savitri, and Brihaspati, (propitiated) by this century-yielding oblation, give this man back (to us) for a hundred years.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ಶತಂ ಶರದಃ, ಶತಂ ಹೇಮಂತಾನ್, ಶತಂ ವಸಂತಾನ್** ಎಂದು ಕಾಲಪ್ರಮಾಣವನ್ನು ನಿರ್ದೇಶಿಸಿದೆ. ಒಂದು ಸಂವತ್ಸರದಲ್ಲಿ ಶರದೃತುವಾಗಲಿ, ಹಿಮಂತಋತುವಾಗಲಿ, ವಸಂತಋತುವಾಗಲಿ, ಒಂದಾವರ್ತಿ ಮಾತ್ರ ಪ್ರಾಪ್ತವಾಗುವುದರಿಂದ ಸಂವತ್ಸರಕಾಲಪ್ರಮಾಣವನ್ನು ನಿರ್ದೇಶಿಸುವುದಕ್ಕಾಗಿ **ಶತಂ ಶರದಃ** ನೂರ ಶರದೃತುಗಳು ಕಳೆದುಹೋಗುವಕಾಲ ಎಂದು ಹೇಳುವ ರೂಢಿ ಇದೆ ಮತ್ತು **ಶರದಃ ಶತಂ** ಎಂಬ ಶಬ್ದಗಳು ಋಗ್ವೇದದಲ್ಲಿ ಅನೇಕ ಕಡೆ ಈ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ. ಆದರೆ ಈ ಋಕ್ಕಿನಲ್ಲಿ **ಶರದಃ ಶತಂ** ಎಂಬ ಶಬ್ದಗಳ ಜೊತೆಗೆ **ಶತಂ ಹೇಮಂತಾನ್, ಶತಂ ವಸಂತಾನ್** ಎಂಬ ಶಬ್ದಗಳ ಪ್ರಯೋಗವೂ ಇದೆ. ಈ ಶಬ್ದಗಳಿಗೂ **ಶರದಃ ಶತಂ** ಎಂಬ ಶಬ್ದಗಳಿಗೆ ಹೇಳಿರುವ ಅರ್ಥವೇ ಅನ್ವಯಿಸುವುದು ಮನುಷ್ಯನ ಆಯುಃಪ್ರಮಾಣವು ಎಂದರೆ ಜೀವಿತಕಾಲವು ನೂರು ವರ್ಷಗಳೆಂದೂ ಅದೇ ಪೂರ್ಣಾಯುಸ್ಸೆಂದೂ ಪರಿಗಣಿಸಲ್ಪಟ್ಟಿರುವುದರಿಂದ ಪೂರ್ಣಾಯುಸ್ಸಿನವರೆಗೆ ಜೀವಿಸಬೇಕೆಂದು ಆಶಿಸುವ ಸಂದರ್ಭಗಳಲ್ಲೆಲ್ಲಾ ನೂರವರ್ಷಗಳವರೆಗೆ ಜೀವಿಸಲೆಂದು ಪ್ರಾರ್ಥಿಸುವುದು ಸಹಜವಾಗಿದೆ. ಪ್ರಕೃತ ಋಕ್ಕಿನಲ್ಲಿ **ಶರದಃ ಶತಂ** ಎಂಬ ಶಬ್ದಗಳೇ ಈ ಅರ್ಥವನ್ನು ಸೂಚಿಸಿರುವುದರಿಂದ ಅಷ್ಟೇಸಾಕಾಗಿದ್ದಿತು. ಆದರೂ ಇಲ್ಲಿ ನೂರು ಸಂವತ್ಸರಗಳೆಂಬ ಕಾಲ ಪ್ರಮಾಣವನ್ನು ಒತ್ತಿಹೇಳಬೇಕೆಂಬ ಉದ್ದಿಶ್ಯದಿಂದ ಋಷಿಯು, **ಶತಂ ಹೇಮಾಂತಾನ್, ಶತಂ ವಸಂತಾನ್** ಎಂಬ ಮತ್ತೆರಡು ಪ್ರಯೋಗಗಳನ್ನು ಉದಹರಿಸಿ ವರ್ಣಿಸಿರುವನು.

ಈ ಋಕ್ಕಿಗೆ ನಿರುಕ್ತ ಪರಿಶಿಷ್ಟದಲ್ಲಿ ಈ ರೀತಿ ನಿರ್ವಚನವನ್ನು ಹೇಳಲಾಗಿದೆ—

**ಶತಂ ಜೀವ ಶರದೋ ವರ್ಧಮಾನಃ ಶತಂ ಹೇಮಂತಾನ್ ಶತಮು ವಸಂತಾನ್ ।**
**ಶತಮಿಂದ್ರಾಗ್ನೀ ಸವಿತಾ ಬೃಹಸ್ಪತಿಃ ಶತಾಯುಷಾ ಹವಿಷೇಮಂ ಪುನರ್ದುಃ ॥**

**ಶತಂ ಜೀವ ಶರದೋ ವರ್ಧಮಾನ ಇತ್ಯಪಿ ನಿಗಮೋ ಭವತಿ ಶತಮಿತಿ ಶತಂ ದೀರ್ಘಮಾಯು—ರ್ಮರುತ ಏನಾ ವರ್ಧಯಂತಿ ಶತಮೇನಮೇವ ಶತಾತ್ಮಾನಂ ಭವತಿ ಶತಮನಂತಂ ಭವತಿ ಶತಮೈಶ್ವರ್ಯಂ ಭವತಿ ಶತಮಿತಿ ಶತಂ ದೀರ್ಘಮಾಯುಃ ॥**

(ನಿರುಕ್ತಪರಿಶಿಷ್ಟ. ೧೪-೩೬)

ಇಲ್ಲಿ **ಶತಂ** ಎಂಬ ಶಬ್ದಕ್ಕೆ ಅನೇಕ ಅರ್ಥಗಳಿರುವವು. ಅವುಗಳಲ್ಲಿ ದೀರ್ಘಾಯುಸ್ಸು ಎಂಬುದು ಮುಖ್ಯವಾದುದು. **ಮರುತ ಏನಾ ವರ್ಧಯಂತಿ**—ವೃದ್ಧಿಪಡಿಸುವವರು ಮರುತ್ತುಗಳು. ಮನುಷ್ಯರು ಅಥವಾ ಪ್ರಾಣಿಗಳು ಜೀವಿಸಿರುವವರೆಗೂ ಉಚ್ಛ್ವಾಸನಿಃಶ್ವಾಸಗಳು ಎಡಬಿಡದೆ ನಡೆಯುತ್ತಿರಬೇಕು. ಇವುಗಳಿಗೆ ವಾಯುವು (ಗಾಳಿಯು) ಅವಶ್ಯಕವು ಆದ್ದರಿಂದ ಮರುತ್ತುಗಳು(ಗಾಳಿಗಳು) ಈ ಉಚ್ಛ್ವಾಸ ನಿಃಶ್ವಾಸಗಳಿಗೆ ಸಹಾಯಭೂತವಾಗಿ ಆ ಮೂಲಕ ಆಯುಸ್ಸನ್ನು ವೃದ್ಧಿಪಡಿಸುವವು. **ಶತಂ** ಎಂದರೆ ಅನೇಕವಿಧವಾಗಿ ಎಂದರೆ ರೋಗಗ್ರಸ್ತನಾದ ಪುರುಷನಿಗೆ ಶತಮಾತ್ಮಾನಂ— ಶರೀರ ಪುಷ್ಟಿ ಅಥವಾ ಶರೀರಾರೋಗ್ಯವನ್ನು, ಅನಂತಂ— ಅಪರಿಮಿತವಾದ ಇತರ ಅನುಕೂಲಗಳನ್ನೂ, **ಶತಂ ಐಶ್ವರ್ಯಂ** ಅಪರಿಮಿತವಾದ ಐಶ್ವರ್ಯವನ್ನೂ, **ಶತಮಿತಿ ಶತಂ ದೀರ್ಘಮಾಯುಃ** - ಎಲ್ಲಕ್ಕಿಂತಲೂ ಮುಖ್ಯವಾಗಿ ದೀರ್ಘಾಯುಸ್ಸನ್ನು ದೇವತೆಗಳು ಅನುಗ್ರಹಿಸಲಿ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

|| ಸಂಹಿತಾಪಾಠಃ ||

ಆಹಾರ್ಷಂ ತ್ವಾವಿದಂ ತ್ವಾ ಪುನರಾಗಾಃ ಪುನರ್ನವ ।

ಸರ್ವಾಂಗ ಸರ್ವಂ ತೇ ಚಕ್ಷುಃ ಸರ್ವಮಾಯುಶ್ಚ ತೇಽವಿದಂ || ೫ ||

|| ಪದಪಾಠಃ ||

ಆ । ಅಹಾರ್ಷಂ । ತ್ವಾ । ಅವಿದಂ । ತ್ವಾ । ಪುನಃ । ಆ । ಅಗಾಃ । ಪುನಃಽನವ ।

ಸರ್ವಽಅಂಗ । ಸರ್ವಂ । ತೇ । ಚಕ್ಷುಃ । ಸರ್ವಂ । ಆಯುಃ । ಚ । ತೇ । ಅವಿದಂ || ೫ ||

|| ಸಾಯಣಭಾಷ್ಯಂ ||

ಹೇ ವ್ಯಾಧಿಗೃಹೀತ ತ್ವಾ ತ್ವಾಮಾಹಾರ್ಷಂ । ಮೃತ್ಯೋಃ ಸಕಾಶಾದಾಹೃತವಾನಸ್ಮಿ । ಅತ ಏವ ತ್ವಾ ತ್ವಾಮವಿದಂ । ಅಲಪ್ಸಿ । ಹೇ ಪುನರ್ನವ ಪುನರಭಿನವ ಪುನರಾಗಾಃ । ಪುನರಸ್ಮತ್ಸಮೀಪಮಾಗಚ್ಛ । ಹೇ ಸರ್ವಾಂಗ ಸರ್ವೈರವಿಕಲ್ಪೈರಂಗೈರುಪೇತ ತೇ ತವ ಸರ್ವಂ ಚಕ್ಷುಃ । ಉಪಲಕ್ಷಣಮೇತತ್ । ಇಂದ್ರಿಯವರ್ಗಂ ಸಕಲಮವಿದಂ । ಲಬ್ಧವಾನಸ್ಮಿ । ತೇ ತವಾಯುರ್ಜೀವನಂ ಚ ಸರ್ವಂ ಸಂಪೂರ್ಣಮವಿದಂ ||

|| ಪ್ರತಿಪದಾರ್ಥ ||

(ಎಲೈ ವ್ಯಾಧಿಗ್ರಸ್ತನಾದ ಪುರುಷನೇ) **ತ್ವಾ**—ನಿನ್ನನ್ನು । **ಆಹಾರ್ಷಂ**—ಮೃತ್ಯುವಿನಿಂದ ಬಿಡಿಸಿ ತಂದಿದ್ದೇನೆ (ಆದ್ದರಿಂದಲೇ) । **ತ್ವಾ**—ನಿನ್ನನ್ನು । **ಅವಿದಂ**—ಮತ್ತೆ ಪಡೆದಿದ್ದೇನೆ । **ಪುನರ್ನವ**—ವ್ಯಾಧಿಯಿಂದ ಚೇತರಿಸಿಕೊಂಡಿರುವುದರಿಂದ ಹೊಸಮನುಷ್ಯನಂತಿರುವ ಎಲೈಪುರುಷನೇ । **ಪುನಃ ಆಗಾಃ**—ಮತ್ತೆ ನಮ್ಮ ಸಮೀಪಕ್ಕೆ ಬಾ । **ಸರ್ವಾಂಗ**—ವಿಕಲವಾದ ಅಂಗಗಳಿಲ್ಲದೆ ಸರ್ವಾಂಗಗಳಲ್ಲಿಯೂ ಪುಷ್ಟನಾಗಿರುವ ಎಲೈ ಪುರುಷನೇ । **ತೇ**—ನಿನ್ನ । **ಸರ್ವಂ ಚಕ್ಷುಃ**—ಕಣ್ಣುಮೊದಲಾದ ಸರ್ವೇಂದ್ರಿಯಗಳನ್ನು । **ಅವಿದಂ**—ಪಡೆದಿದ್ದೇನೆ । **ತೇ**—ನಿನ್ನ । **ಆಯುಃ ಚ**—ಜೀವಿತಕಾಲವು ಅಥವಾ ಆಯುಃಪ್ರಮಾಣವು । **ಸರ್ವಂ** ಸಂಪೂರ್ಣವಾಗಿರುವುದನ್ನು । **ಅವಿದಂ**—ಪಡೆದಿದ್ದೇನೆ.

|| ಭಾವಾರ್ಥ ||

ಎಲೈ ವ್ಯಾಧಿಗ್ರಸ್ತಪುರುಷನೇ, ಮೃತ್ಯುವಿನ ಮುಖದಿಂದ ನಿನ್ನನ್ನು ಬಿಡಿಸಿ ತಂದಿದ್ದೇನೆ ಆದ್ದರಿಂದ ನೀನು ಪುನಃ ಉತ್ಪನ್ನನಾದಂತಾಯಿತು. ವ್ಯಾಧಿಯಿಂದ ಚೇತರಿಸಿಕೊಂಡ ನೀನು ಹೊಸಬನಾಗಿ ಎಂದರೆ ಆರೋಗ್ಯದಿಂದ ಪುಷ್ಟಿವಂತನಾಗಿ ನಮ್ಮ ಬಳಿಗೆ ಬಾ. ಸರ್ವಾಂಗಗಳಲ್ಲಿಯೂ ನ್ಯೂನತೆ ಇಲ್ಲದೆ ಧಷ್ಟಪುಷ್ಟನಾಗಿಯೂ, ಕಣ್ಣು ಮೊದಲಾದ ಸರ್ವೇಂದ್ರಿಯಗಳಲ್ಲಿ ಲೋಪದೋಷಗಳಿಲ್ಲದಂತೆಯೂ, ನಿನ್ನ ಆಯುಃಪ್ರಮಾಣವು ಪೂರ್ಣವಾಗಿರುವಂತೆಯೂ ಮಾಡಿರುತ್ತೇನೆ

## English Translation

I have rescued you, I have found you; come back again, you who are young again; sound in body, I have obtained for you all your senses, your whole life.

॥ ವಿಶೇಷವಿಷಯಗಳು ॥

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಖಿಲಮಂತ್ರ—

ಊರ್ಧ್ವರೇಖಾ ಪ್ರ ದಹಂತೇ ವಿಷ್ಣುರಿಮಮಿಂದ್ರಾಗ್ನೀ ಅಮೃತಂ ಜುಷೇಥಾಂ ।
ಮಹ್ಯಂ ದಧಾನಾ ಉಪ ದೀರ್ಘಮಾಯುರಸ್ಮೇ ಧತ್ತಂ ಪುರುಭುಜಾ ಪುರಂಧಿಃ ॥ ೧೫ ॥

---

# ನೂರ ಅರವತ್ತೆರಡನೆಯ ಸೂಕ್ತವು

## ಪೀಠಿಕೆ.

ಈ ಸೂಕ್ತದಲ್ಲಿ ಪ್ರಸವಕಾಲಕ್ಕೆ ಮೊದಲೇ ಗರ್ಭಸ್ರಾವ(ಗರ್ಭಪಾತ) ವಾಗದಿರುವುದಕ್ಕಾಗಿ (abortion)ದೇವತೆಗಳನ್ನು ಪ್ರಾರ್ಥಿಸಲಾಗಿದೆ. ಗರ್ಭಸ್ರಾವವುಂಟಾಗದಿರುವುದಕ್ಕಾಗಿ ಪ್ರಾಯಶ್ಚಿತ್ತರೂಪವಾಗಿ ಅಗ್ನಿಯಲ್ಲಿ ಹೋಮವೇ ಮೊದಲಾದ ಕೆಲವು ಕರ್ಮಗಳನ್ನು ಮಾಡಬೇಕೆಂದು ಋಗ್ವಿಧಾನ ಮೊದಲಾದ ಕೆಲವು ಗ್ರಂಥಗಳಲ್ಲಿ ಹೇಳಿದೆ—

ಯಸ್ಯಾಃ ಗರ್ಭಃ ಪ್ರಮೀಯೇತ ತತ್ರಾಗ್ನೌ ಜುಹುಯಾದ್ಧವಿಃ ।
ಬ್ರಹ್ಮಣಾಗ್ನಿಃ ಸಂವಿದಾನ ಇತ್ಯಾಜ್ಯೇನ ಯಥಾವಿಧಿ ॥ ೮೭ ॥
ಆಜ್ಯಶೇಷೇಣ ಚಾಭ್ಯಜ್ಯ ಗರ್ಭಿಣೀ ಪ್ರಸವೇತ್ತತಃ ।
ಪಿಬೇದೇವಾಜ್ಯಶೇಷಂ ತು ಜೀವಂಸ್ತಸ್ಯಾಃ ಪ್ರಜಾಯತೇ ॥ ೮೮ ॥
ಜಾತಾನಿ ಚೇತ್ಪ್ರಮೀಯೇರನ್ನಾಜ್ಯಂ ಕೃತ್ವಾನುಮಂತ್ರಿತಂ ।
ಬ್ರಹ್ಮಣಾಗ್ನಿರಿತಿ ಹುತ್ವಾ ಸಂಪಾತಾನ್ನಿನಯೇನ್ಮಣೌ ॥ ೮೯ ॥
ಮಣಿಂ ತು ತ್ರಿವೃತಿ ಸೂತ್ರೇ ವಾಸಯೇದ್ವಾಸಸಾ ಸಹ ।
ನ್ಯಗ್ರೋಧಶುಂಗಯಾ ತತ್ರ ಶುಕ್ಲಲೋಹಿತವೇಷ್ಟಿತಂ ॥ ೯೦ ॥
ತಂ ಸಾವಿತ್ರ್ಯಯುತೇನಾಥ ಅನುಮಂತ್ರ್ಯ ಯಥಾವಿಧಿ ।
ಸಂಪಾತೈರಯುತೇನೈವ ಬ್ರಹ್ಮಣೇತಿ ಚ ಸಂಸ್ತುತಂ ॥ ೯೧ ॥
ಉಪರಿಷ್ಟಾಚ್ಚ ಸಾವಿತ್ರ್ಯಾ ತಾವದೇವಾನುಮಂತ್ರಣಂ ।
ಸರ್ವೈಃ ಸ್ವಸ್ತ್ಯಯನೈಶ್ಚೈತಜ್ಜಪೇದಭಿಹುತಂ ಮಣಿಂ ॥ ೯೨ ॥
ಶಿರಸಾ ಧಾರಯೇನ್ನಾರೀ ಪ್ರಯತಾ ಗರ್ಭಿಣೀ ಸತೀ ।
ತೃತೀಯೇ ಗರ್ಭಮಾಸೇ ತು ಮಣಿಮೇತಂ ಸಮಾಸಜೇತ್ ॥ ೯೩ ॥
ಪುಷ್ಯಂತೀ ಶರದಂ ನಾರೀ ಗೌಃ ಸವತ್ಸಾ ವಸೇದ್ಯಥಾ ।

ಬಹುಪಾಣೀಯಯವಸಾ ವತ್ಸೇನ ಪಿಬತಾ ಸಹ ॥ ೯೪ ॥

ಜಾತಸ್ಯ ತು ಕುಮಾರಸ್ಯ ಕಂಠೇ ತಂ ಮಣಿಮಾಸಜೇತ್ ।
ಆಜ್ಯಶೇಷಂ ಪುರಸ್ಕೃತ್ಯ ತಮಭ್ಯಜ್ಯ ಕುಮಾರಕಂ ॥ ೯೫ ॥

ಹುತ್ವಾ ಸ್ವಸ್ತ್ಯಯನೈರೇವ ಸ್ತ್ರೀ ಪುಮಾಂಸಂ ಪ್ರಸೂಯತೇ ।
ಊರ್ಧ್ವಂ ವರ್ಷಾತ್ಸ್ವಸ್ತ್ಯಯನಂ ಪುನರೇವ ವಿಧೀಯತೇ ॥ ೯೬ ॥

ಪುರಾ ಸ್ತನಪ್ರದಾನಾತ್ತಂ ಶ್ರದ್ಧಾಸೂಕ್ತೇನ ಪಾಯಯೇತ್ ।
ಮೇಧಾಸೂಕ್ತೇನ ಚೈವೈನಂ ಪಿಷ್ಟಂ ವ್ರೀಹಿಮಯಂ ಚರುಂ ॥ ೯೭ ॥

ಮಧುಮಿಶ್ರಂ ಜಾತರೂಪಂ ಮೇಧಾವೀ ತೇನ ಜಾಯತೇ ।
ಶತಂ ವರ್ಷಾಣಿ ಜೀವೇತ ಮ್ರಿಯತೇ ನ ಪುರಾಯುಷಃ ॥ ೯೮ ॥

(ಋಗ್ವಿಧಾನ. ಅಧ್ಯಾಯ. ೪. ಶ್ಲೋ ೮೭-೯೮)

ಸ್ತ್ರೀಯು ಗರ್ಭವತಿಯೆಂದು ತಿಳಿದಾಗ ಆ ಗರ್ಭವು ಅಕಾಲದಲ್ಲಿ ಸ್ರಾವವಾಗದಿರುವುದಕ್ಕಾಗಿಯೂ ಗರ್ಭರಕ್ಷಣಾರ್ಥವಾಗಿಯೂ ಕೆಲವು ಪ್ರಾಯಶ್ಚಿತ್ತಾದಿ ಕರ್ಮಗಳನ್ನು ಮಾಡುವುದು ಒಳ್ಳೆಯದು. ಇಂತಹ ಸಂದರ್ಭದಲ್ಲಿ **ಬ್ರಹ್ಮಣಾಗ್ನಿಃ** ಎಂಬ ಈ ಸೂಕ್ತದ ಮಂತ್ರಪಠನಸಹಿತವಾಗಿ ಆಜ್ಯದಿಂದ ಅಗ್ನಿಯಲ್ಲಿ ಹೋಮಮಾಡಬೇಕು. ಹೋಮಶೇಷವಾದ ಆ ಆಜ್ಯವನ್ನು ಗರ್ಭಿಣಿಯು ಪಾನಮಾಡಬೇಕು ಮತ್ತು ಶರೀರಕ್ಕೆ ಲೇಪನಮಾಡಿಕೊಳ್ಳಬೇಕು. ಹೀಗೆ ಮಾಡಿದರೆ ಹುಟ್ಟುವ ಶಿಶುವು ಜೀವಂತವಾಗಿಯೇ ಹುಟ್ಟುವುದು. ಮತ್ತು ಗರ್ಭರಕ್ಷಣಾರ್ಥವಾಗಿ ಈ ಮುಂದಿನ ಕ್ರಮವನ್ನು ಅನುಸರಿಸಬಹುದು. **ಬ್ರಹ್ಮಣಾಗ್ನಿಃ** ಎಂಬ ಈ ಸೂಕ್ತದ ಮಂತ್ರಗಳಿಂದ ಹೋಮಮಾಡಿ ಹೋಮಶೇಷವಾದ ಆಜ್ಯದಲ್ಲಿ ಒಂದು ಮಣಿ (ಅಥವಾ ಒಡವೆ) ಯನ್ನು ಇಡಬೇಕು. ಮತ್ತು ಆ ಮಣಿಯನ್ನು ಮೂರು ಎಳೆಯನ್ನು ಕೂಡಿಸಿದ ದಾರದಿಂದ ಕಟ್ಟಬೇಕು. ಮತ್ತು ಆ ಮಣಿಯ ಜತೆಗೆ ಆಲದಮರದ ಎಳೆಯ ಕಾಯನ್ನು ಬಟ್ಟೆಯಲ್ಲಿ ಸುತ್ತಿ ಅದನ್ನೂ ಮಣಿಯನ್ನೂ ಈ ಸೂಕ್ತಮಂತ್ರಗಳಿಂದಲೂ ಹತ್ತು ಸಹಸ್ರ ಗಾಯತ್ರೀ ಜಪದಿಂದಲೂ ಅಭಿಮಂತ್ರಿಸಿ ಬ್ರಾಹ್ಮಣರಿಂದ ಸ್ವಸ್ತಿವಾಚನಜಪಹೋಮಾದಿಗಳಿಂದ ಸಂಸ್ಕರಿಸಿದ ಆ ಮಣಿಯನ್ನು ಗರ್ಭಿಣಿಯಾದ ಸ್ತ್ರೀಯು ತನ್ನ ಶಿರಸ್ಸಿನಲ್ಲಿ ಧರಿಸಬೇಕು. ಈ ಕಾರ್ಯವನ್ನು ಗರ್ಭವಾದ ಮೂರನೇ ತಿಂಗಳಲ್ಲಿ ಮಾಡಬೇಕು. ಹೀಗೆ ಮಾಡಿದರೆ ಆ ಸ್ತ್ರೀಯು ಗಂಡುಮಗುವನ್ನು ಹಡೆಯುವಳು. ಹುಟ್ಟಿದ ಮಗುವನ್ನು ಆಜ್ಯಶೇಷದಿಂದ ಲೇಪಿಸಬೇಕು. ವರ್ಷತುಂಬಿದನಂತರ ಹಿಂದಿನಂತೆಯೇ ಬ್ರಾಹ್ಮಣರಿಂದ ಸ್ವಸ್ತಿವಾಚನಪುರಸ್ಸರವಾಗಿ ಜಪಹೋಮಾದಿಗಳನ್ನು ನೆರವೇರಿಸಬೇಕು. ಮಗುವಿಗೆ ಸ್ತನ್ಯಪಾನಮಾಡಿಸುವುದಕ್ಕೆ ಪೂರ್ವಭಾವಿಯಾಗಿ **ಶ್ರದ್ಧಯಾಗ್ನಿಃ ಸಮಿಧ್ಯತೇ** (ಋ. ಸಂ. ೧೦-೧೫೧) ಎಂಬ ಶ್ರದ್ಧಾಸೂಕ್ತವನ್ನು ಪಠಿಸಿ ಅನಂತರ ಸ್ತನ್ಯಪಾನಮಾಡಿಸಬೇಕು. ಮತ್ತು **ಮೇಧಾಂ ಮಹ್ಯಂ** (ಖಿಲಸೂಕ್ತ) ಎಂಬ ಮೇಧಾಸೂಕ್ತಪಠನದಿಂದ ಜೇನುತುಪ್ಪದಿಂದ ಬೆರಸಿದ ಹಿಟ್ಟು ಅಥವಾ ಅಕ್ಕಿಯ ಅನ್ನವನ್ನು ಪ್ರಾಶನ ಮಾಡಿಸಬೇಕು. ಹೀಗೆ ಮಾಡುವುದರಿಂದ ಆ ಶಿಶುವು ಚೆನ್ನಾಗಿ ಬೆಳೆದು ಮುಂದೆ ಬಹಳ ಮೇಧಾವಿ ಎಂದರೆ ಬಹಳ ಬುದ್ಧಿವಂತನಾಗುವನು. ಮತ್ತು ಪೂರ್ಣಾಯುಸ್ಸು ಎಂದರೆ ನೂರು ವರ್ಷಗಳು ಕಳೆಯುವುದಕ್ಕೆ ಮುಂಚಿತವಾಗಿ ಮೃತನಾಗುವುದಿಲ್ಲ ಎಂದು ಮುಖ್ಯಾಭಿಪ್ರಾಯವು.

॥ ಸಾಯಣಭಾಷ್ಯಂ ॥

**ಬ್ರಹ್ಮಣಾಗ್ನಿರಿತಿ ಷಡೃಚಮೇಕಾದಶಂ ಸೂಕ್ತಮಾನುಷ್ಟುಭಂ । ಬ್ರಹ್ಮಪುತ್ರೋ ರಕ್ಷೋಹಾ ನಾಮರ್ಷಿಃ । ಅಪಪ್ರಸವಸಮಾಧಾನರೂಪಸ್ಯ ಗರ್ಭರಕ್ಷಣಸ್ಯ ಪ್ರತಿಪಾದ್ಯತ್ವಾತ್ತದ್ದೇವತಾಕಮಿದಂ । ಅನುಕ್ರಾಂತಂ ಚ । ಬ್ರಹ್ಮಣಾ ಷಟ್ ಬ್ರಾಹ್ಮೋ ರಕ್ಷೋಹಾ ಗರ್ಭಸಂಸ್ರಾವೇ ಪ್ರಾಯಶ್ಚಿತ್ತಮಾನುಷ್ಟುಭಂ ಹೀತಿ ॥ ವಿನಿಯೋಗೋ ಲಿಂಗಾದವಗಂತವ್ಯಃ ॥**

ಅನುವಾದವು—ಬ್ರಹ್ಮಣಾಗ್ನಿಃ ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಬ್ರಹ್ಮಪುತ್ರನಾದ ರಕ್ಷೋಹಾ ಎಂಬುವನು ಋಷಿಯು, ಅಪಪ್ರಸವಾಗದಿರುವಂತೆ ಗರ್ಭರಕ್ಷಣದ ಉಪಾಯವು ಈ ಸೂಕ್ತದಲ್ಲಿ ಪ್ರತಿಪಾದಿತವಾಗಿರುವುದರಿಂದ ಆ ವಿಷಯವೇ ದೇವತೆಯು, ಅನುಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಬ್ರಹ್ಮಣಾ ಷಡ್ ಬ್ರಾಹ್ಮೋ ರಕ್ಷೋಹಾ ಗರ್ಭಸಂಸ್ರಾವೇ ಪ್ರಾಯಶ್ಚಿತ್ತಮಾನುಷ್ಟುಭಂ** ಎಂದು ಹೇಳಿರುವುದು. ವಿನಿಯೋಗವನ್ನು ಮಂತ್ರಗಳ ಅರ್ಥಾನುಸಾರವಾಗಿ ತಿಳಿದುಕೊಳ್ಳಬೇಕು

## ಸೂಕ್ತ - ೧೬೨

ಮಂಡಲ–೧೦ ॥ ಅನುವಾಕ–೧೨ ॥ ಸೂಕ್ತ–೧೬೨ ॥

ಅಷ್ಟಕ–೮ ॥ ಅಧ್ಯಾಯ–೮ ॥ ವರ್ಗ–೨೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥

॥ ಋಷಿಃ—ರಕ್ಷೋಹಾ ಬ್ರಾಹ್ಮಃ ॥

॥ ದೇವತಾ—ಗರ್ಭಸಂಸ್ರಾವೇ ಪ್ರಾಯಶ್ಚಿತ್ತಂ ॥

॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಬ್ರಹ್ಮಣಾಗ್ನಿಃ ಸಂವಿದಾನೋ ರಕ್ಷೋಹಾ ಬಾಧತಾಮಿತಃ ।

ಅಮೀವಾ ಯಸ್ತೇ ಗರ್ಭಂ ದುರ್ಣಾಮಾ ಯೋನಿಮಾಶಯೇ ॥ ೧ ॥

॥ ಪದಪಾಠಃ॥

ಬ್ರಹ್ಮಣಾ । ಅಗ್ನಿಃ । ಸಂಽವಿದಾನಃ । ರಕ್ಷಃಽಹಾ । ಬಾಧತಾಂ । ಇತಃ ।

ಅಮೀವಾ । ಯಃ । ತೇ । ಗರ್ಭಂ । ದುಃಽನಾಮಾ । ಯೋನಿಂ । ಆಽಶಯೇ ॥ ೧ ॥

॥ ಸಾಯಣಭಾಷ್ಯಂ ॥

ಬ್ರಹ್ಮಣಾ ಮಂತ್ರೇಣ ಸಹ ಸಂವಿದಾನ ಐಕಮತ್ಯಂ ಪ್ರಾಪ್ತೋ ರಕ್ಷೋಹಾ ರಕ್ಷಸಾಂ ಹಂತಾಗ್ನಿರಿತೋಽಸ್ಮಾತ್ಸ್ಥಾನಾದ್ರಾಕ್ಷಸಾದಿಕಂ ಬಾಧತಾಂ । ಹಿನಸ್ತು । ಯೋ ರಾಕ್ಷಸೋಽಮೀವಾ ರೋಗರೂಪಃ

**ಸಂಸ್ತ್ರೇ ತವ ಗರ್ಭಮಾಶಯೇ ಆಶೇತೇ || ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ || ಹಂತುಂ ಪ್ರಾಪ್ನೋತಿ | ದುರ್ನಾಮಾರ್ಶ ಆಖ್ಯೋ ರೋಗಃ | ತದ್ರೂಪಃ ಸನ್ ಯಶ್ಚ ತೇ ತವ ಯೋನಿಂ ರೇತಸ ಆಧಾನಂ ಗರ್ಭಸ್ಥಾನಮಾಶೇತೇ ತಂ ಬಾಧತಾಮಿತ್ಯನ್ವಯಃ ||**

|| ಪ್ರತಿಪದಾರ್ಥ ||

(ಎಲೈ ಸ್ತ್ರೀಯೇ) **ಯಃ**—ಯಾವ ರಾಕ್ಷಸನು | **ಅಮೀವಾ**—ರೋಗರೂಪದಿಂದಿರುತ್ತಾ | **ತೇ**—ನಿನ್ನ | **ಗರ್ಭಂ**—ಗರ್ಭದಲ್ಲಿ | **ಆಶಯೇ**—ನೆಲೆಸಿದ್ದಾನೆಯೋ ಮತ್ತು | **ದುರ್ನಾಮಾ**—ಅರ್ಶವೆಂಬ ರೋಗರೂಪ ದಿಂದ | **ಯೋನಿಂ**—ನಿನ್ನ ಯೋನಿಯಲ್ಲಿ ವಾಸಿಸುವನೋ ಅಂತಹ ರಾಕ್ಷಸನನ್ನು ಅಥವಾ ವ್ಯಾಧಿಯನ್ನು | **ಬ್ರಹ್ಮಣಾ**—ಮಂತ್ರದಿಂದ | **ಸಂವಿದಾನಃ**—ಐಕಮತ್ಯವನ್ನು ಹೊಂದಿದ | **ರಕ್ಷೋಹಾ ಅಗ್ನಿಃ**—ರಾಕ್ಷಸರನ್ನು ನಾಶಮಾಡುವ ರಕ್ಷೋಹಾಗ್ನಿಯು | **ಇತಃ**—ಈ ಸ್ಥಾನದಿಂದ | **ಬಾಧತಾಂ**—ಹಿಂಸಿಸಲಿ.

|| ಭಾವಾರ್ಥ ||

ಎಲೈ ಸ್ತ್ರೀಯೇ, ರೋಗರೂಪದಿಂದಿರುವ ಯಾವ ರಾಕ್ಷಸನು ಅಥವಾ ರೋಗವು ಗರ್ಭದಲ್ಲಿ ನೆಲೆಸಿರುವುದೋ ಅರ್ಶವೆಂಬ ರೋಗವು ನಿನ್ನ ಯೋನಿಯನ್ನು ಆವರಿಸಿರುವುದೋ ಆ ವ್ಯಾಧಿಯನ್ನೆಲ್ಲಾ ಮಂತ್ರಸಹಿತನಾದ ರಕ್ಷೋಹಾಗ್ನಿಯು ಇಲ್ಲಿಂದ ಹಿಂಸಿಸಿ ಓಡಿಸಲಿ.

English Translation

May Agni, the destroyer of the Rakshasas, consenting to our prayer. drive hence (the evil spirit) who (in the form of) sickness assails your embryo, who. as the disease durnaman, assails your womb.

|| ಸಂಹಿತಾಪಾಠಃ ||

ಯಸ್ತೇ ಗರ್ಭಮಮೀವಾ ದುರ್ಣಾಮಾ ಯೋನಿಮಾಶಯೇ |
ಅಗ್ನಿಷ್ಟಂ ಬ್ರಹ್ಮಣಾ ಸಹ ನಿಷ್ಕ್ರವ್ಯಾದಮನೀನಶತ್ || ೨ ||

|| ಪದಪಾಠಃ ||

ಯಃ | ತೇ | ಗರ್ಭಂ | ಅಮೀವಾ | ದುಃऽನಾಮಾ | ಯೋನಿಂ | ಆऽಶಯೇ |
ಅಗ್ನಿಃ | ತಂ | ಬ್ರಹ್ಮಣಾ | ಸಹ | ನಿಃ | ಕ್ರವ್ಯऽಅದಂ | ಅನೀನಶತ್ || ೨ ||

॥ ಸಾಯಣಭಾಷ್ಯಂ ॥

**ಗತಃ ಪೂರ್ವೋಽರ್ಧರ್ಚಃ । ತಂ ಕ್ರವ್ಯಾದಂ ಮಾಂಸಾಶಿನಂ ರಾಕ್ಷಸಾದಿಕಂ ಬ್ರಹ್ಮಣಾ ಸಹಿತೋಽಗ್ನಿರ್ನಿಃಶೇಷೇಣಾನೀನಶತ್ । ನಾಶಯತು ॥**

॥ ಪ್ರತಿಪದಾರ್ಥ ॥

(ಎಲೈ ಸ್ತ್ರೀಯೇ) **ಯಃ ಅಮೀವಾ**—ಯಾವ ವ್ಯಾಧಿರೂಪದಿಂದಿರುವ ರಾಕ್ಷಸನು ಅಥವಾ ವ್ಯಾಧಿಯು । **ತೇ**—ನಿನ್ನ । **ಗರ್ಭಂ**—ಗರ್ಭಕೋಶದಲ್ಲಿ । **ಆಶಯೇ**—ನೆಲಸಿರುವುದೋ (ಮತ್ತು)। **ದುರ್ಣಾಮಾ**—ಅರ್ಶವೆಂಬ ರೋಗವು । **ಯೋನಿಂ**—ನಿನ್ನ ಯೋನಿಪ್ರದೇಶವನ್ನು ಆವರಿಸಿರುವುದೋ । **ಕ್ರವ್ಯಾದಂ**—(ಶರೀರದ) ಮಾಂಸವನ್ನೇ ತಿನ್ನುತ್ತಿರುವ । **ತಂ**—ಆ ವ್ಯಾಧಿಯನ್ನು ಅಥವಾ ರಾಕ್ಷಸನನ್ನು । **ಬ್ರಹ್ಮಣಾ ಸಹ**—ಮಂತ್ರದಿಂದ ಸಹಿತನಾದ । **ಅಗ್ನಿಃ**—ರಕ್ಷೋಹಾಗ್ನಿಯು । **ನಿಃ ಅನೀನಶತ್**—ನಿಶ್ಶೇಷವಾಗಿ ನಾಶಮಾಡಲಿ.

॥ ಭಾವಾರ್ಥ ॥

ಎಲೈ ಸ್ತ್ರೀಯೇ, ನಿನ್ನ ಗರ್ಭಕೋಶದಲ್ಲಿಯೂ, ಯೋನಿಸ್ಥಾನದಲ್ಲಿಯೂ ಆವರಿಸಿ ನೆಲೆಸಿ ಮಾಂಸವನ್ನೇ ತಿನ್ನುತ್ತಿರುವ ಆ ವ್ಯಾಧಿಯನ್ನು ಮಂತ್ರಸಹಿತನಾದ ರಕ್ಷೋಹಾಗ್ನಿಯು ನಿಶ್ಶೇಷವಾಗಿ ನಾಶಮಾಡಲಿ

## English Translation.

May Agni, concurring in our prayer, destroy the cannibal who, as sickness, assails your embryo, who, as the disease durnaman, assails your womb.

॥ ವಿಶೇಷವಿಷಯಗಳು ॥

ಯಾಸ್ಕರು ಈ ಋಕ್ಕಿನಲ್ಲಿರುವ **ಅಮೀವಾ** ಮತ್ತು **ದುರ್ಣಾಮಾ** ಎಂಬ ಶಬ್ದಗಳನ್ನು ವಿವರಿಸುವುದಕ್ಕಾಗಿ ನಿರ್ವಚನವನ್ನು ಹೇಳಿದಾರೆ—

> **ಅಮೀವಾ । ಯಸ್ತೇ ಗರ್ಭಮಮೀವಾ ದುರ್ಣಾಮಾ ಯೋನಿಮಾಶಯೇ । ಅಮೀವಾಭ್ಯಮನೇನ ವ್ಯಾಖ್ಯಾತಃ । ದುರ್ಣಾಮಾ ಕ್ರಿಮಿರ್ಭವತಿ ಪಾಪನಾಮಾ । ಕ್ರಿಮಿಃ ಕ್ರವ್ಯೇ ಮೇದ್ಯತಿ ಕ್ರಮತೇರ್ವಾ ಸ್ಯಾತ್ಸರಣಕರ್ಮಣಃ ಕ್ರಾಮತೇರ್ವಾ ॥**

(ನಿ. ೬-೧೨)

**ಅಮೀವಾ** ಎಂದರೆ ಅಮವಾನ್, **ಅಭ್ಯಮನವಾನ್** ಎಂದರೆ **ಪರೇಭ್ಯೋ ಭಯದಾತಾ ಯಾಯಾತ್** ಇತರರಿಗೆ ಭಯವನ್ನುಂಟುಮಾಡುತ್ತಾ ಇರುವುದು ಎಂದರೆ ರೋಗವು, **ದುರ್ಣಾಮಾ** ಎಂದರೆ ಪಾಪ ಎಂಬ ಒಂದುವಿಧ ಕ್ರಿಮಿಯು (ಹುಳು germ) ಕ್ರಿಮಿಯೆಂದರೆ—**ಕ್ರವ್ಯೇ ಮೇದ್ಯತಿ** ಮಾಂಸದಲ್ಲಿಯೇ ಇದ್ದು ಅದನ್ನೇ ತಿಂದು ಬೆಳೆಯುತ್ತಿರುವ ಹುಳುವಿಗೆ ಕ್ರಿಮಿಯೆಂದು ಹೆಸರು. ಅಥವಾ ಮೆಲ್ಲನೆ ಸರಿ ಎಂಬರ್ಥವಿರುವ ಕ್ರಮ್ ಧಾತುವಿನಿಂದಾಗಲಿ, ಹರಿದಾಡು ಎಂಬರ್ಥವುಳ್ಳ ಕ್ರಮ್ ಧಾತುವಿನಿಂದಾಗಲಿ ಕ್ರಿಮಿ ಶಬ್ದವು ನಿಷ್ಪನ್ನವಾಗಬಹುದು.

|| ಸಂಹಿತಾಪಾಠಃ ||

ಯಸ್ತೇ ಹಂತಿ ಪತಯಂತಂ ನಿಷತ್ಸ್ನುಂ ಯಃ ಸರೀಸೃಪಂ ।

ಜಾತಂ ಯಸ್ತೇ ಜಿಘಾಂಸತಿ ತಮಿತೋ ನಾಶಯಾಮಸಿ ॥ ೩ ॥

|| ಪದಪಾಠಃ ||

ಯಃ । ತೇ । ಹಂತಿ । ಪತಯಂತಂ । ನಿ್ಽಸತ್ಸ್ನುಂ । ಯಃ । ಸರೀಸೃಪಂ ।

ಜಾತಂ । ಯಃ । ತೇ । ಜಿಘಾಂಸತಿ । ತಂ । ಇತಃ । ನಾಶಯಾಮಸಿ ॥ ೩ ॥

|| ಸಾಯಣಭಾಷ್ಯಂ ||

ಹೇ ಯೋಷಿತ್ ತೇ ತವ ಗರ್ಭಾಶಯೇ ಪತಯಂತಂ ಪತಂತಂ ರೇತೋರೂಪೇಣ ಗಚ್ಛಂತಂ ತದನಂತರಂ ತತ್ರ ನಿಷತ್ಸ್ನುಂ ನಿಷೀದಂತಂ ಚ ಗರ್ಭಂ ಯೋ ರಾಕ್ಷಸಾದಿರ್ಹಂತಿ ಹಿನಸ್ತಿ ತತೋ ಮಾಸತ್ರಯಾದೂರ್ಧ್ವಂ ಪ್ರಾಪ್ತಸರ್ವಾವಯವಂ ಸರೀಸೃಪಂ ಸರ್ಪಣಶೀಲಂ ಚ ಗರ್ಭಂ ಯೋ ಹಂತಿ ಜಾತಂ ದಶಸು ಮಾಸೇಷೂತ್ಪನ್ನಂ ತೇ ತವ ಶಿಶುಂ ಯೋ ರಾಕ್ಷಸಾದಿರ್ಜಿಘಾಂಸತಿ ಹಂತುಮಿಚ್ಛತಿ ತಮಿತಃ ಸ್ಥಾನಾನ್ನಾಶಯಾಮಸಿ । ನಾಶಯಾಮಃ ॥

|| ಪ್ರತಿಪದಾರ್ಥ ||

(ಎಲೈ ಸ್ತ್ರೀಯೇ) **ತೇ**—ನಿನ್ನ ಗರ್ಭಾಶಯದಲ್ಲಿ । **ಪತಯಂತಂ**—ರೇತೋರೂಪದಿಂದ ಬಿದ್ದು । **ನಿಷತ್ಸ್ನುಂ**—ಅಲ್ಲಿಯೇ ನಿಂತಿರುವ ಗರ್ಭಪಿಂಡವನ್ನು । **ಯಃ**—ಯಾವ ರಾಕ್ಷಸನು ಅಥವಾ ವ್ಯಾಧಿಯು । **ಹಂತಿ**—ಹಿಂಸಿಸುವುದೋ (ಅನಂತರ ಮೂರು ತಿಂಗಳಾದ ಮೇಲೆ) । **ಸರೀಸೃಪಂ**—ಗರ್ಭಕೋಶದಲ್ಲಿ ಅಲುಗಾಡುತ್ತಿರುವ ಶಿಶುವನ್ನು । **ಯಃ**—ಯಾವ ವ್ಯಾಧಿಯು । **ಹಂತಿ**—ಹಿಂಸಿಸುವುದೋ (ಅನಂತರ) । **ಜಾತಂ**—ಹತ್ತು ತಿಂಗಳು ಕಳೆದಮೇಲೆ ಉತ್ಪನ್ನವಾಗುವ । **ತೇ**—ನಿನ್ನ ಶಿಶುವನ್ನು । **ಯಃ**—ಯಾವ ರಾಕ್ಷಸನು ಅಥವಾ ವ್ಯಾಧಿಯು । **ಜಿಘಾಂಸತಿ**—ಕೊಲ್ಲಲಿಚ್ಛಿಸುವುದೋ । **ತಂ**—ಆ ವ್ಯಾಧಿಯನ್ನು । **ಇತಃ**—ಈ ಸ್ಥಾನದಿಂದ । **ನಾಶಯಾಮಸಿ**—ಓಡಿಸಿ ನಾವು ನಾಶಮಾಡುವಂತಾಗಲಿ.

|| ಭಾವಾರ್ಥ ||

ಎಲೈ ಸ್ತ್ರೀಯೇ, ನಿನ್ನ ಗರ್ಭಾಶಯದಲ್ಲಿ ರೇತೋರೂಪದಿಂದ ಬಿದ್ದು ಅಲ್ಲಿಯೇ ನೆಲಸಿರುವ ಗರ್ಭಪಿಂಡವನ್ನು ಯಾವ ವ್ಯಾಧಿಯು (ಅಥವಾ ವ್ಯಾಧಿರೂಪದಿಂದಿರುವ ರಾಕ್ಷಸನು evil spirit) ನಾಶಮಾಡುವುದೋ ಅನಂತರ ಮೂರು ತಿಂಗಳು ಕಳೆದ ಮೇಲೆ ಗರ್ಭಕೋಶದಲ್ಲಿ ಅಲುಗಾಡುತ್ತಿರುವ ಶಿಶುವನ್ನು ಯಾವ ವ್ಯಾಧಿಯು ಹಿಂಸಿಸುವುದೋ

ಅನಂತರ ಹತ್ತು ತಿಂಗಳು ಕಳೆದ ಮೇಲೆ ಹುಟ್ಟುವ ಶಿಶುವನ್ನು ಯಾವ ವ್ಯಾಧಿಯು ಹಿಂಸಿಸಿ ಕೊಲ್ಲಲಿಚ್ಛಿಸುವುದೋ ಆ ವ್ಯಾಧಿಯನ್ನು ಇಲ್ಲಿಂದ ಓಡಿಸಿ ನಾವು ನಾಶಮಾಡುವಂತಾಗಲಿ.

## English Translation.

May we exterminate from hence (the evil spirit) who destroys the impregnating energy, the germ as it settles, the moving embryo, who seeks to destroy (the babe) when born.

॥ ಸಂಹಿತಾಪಾಠಃ ॥

ಯಸ್ತ ಊರೂ ವಿಹರತ್ಯಂತರಾ ದಂಪತೀ ಶಯೇ ।

ಯೋನಿಂ ಯೋ ಅಂತರಾರೇಳ್ಹಿ ತಮಿತೋ ನಾಶಯಾಮಸಿ ॥ ೪ ॥

॥ ಪದಪಾಠಃ ॥

ಯಃ । ತೇ । ಊರೂ ಇತಿ । ವಿऽಹರತಿ । ಅಂತರಾ । ದಂಪತೀ ಇತಿ ದಂऽಪತೀ । ಶಯೇ ।

ಯೋನಿಂ । ಯಃ । ಅಂತಃ । ಆऽರೇಳ್ಹಿ । ತಂ । ಇತಃ । ನಾಶಯಾಮಸಿ ॥ ೪ ॥

॥ ಸಾಯಣಭಾಷ್ಯಂ ।

ಹೇ ಯೋಷಿತ್ ತವೋರೂ ಪಾದಮೂಲೇ ಯೋ ರಾಕ್ಷಸಾದಿರ್ವಿಹರತಿ ಗರ್ಭಘಾತಾಯ ವಿಶ್ಲಿಷ್ಟೌ ಕರೋತಿ ದಂಪತೀ ಅಂತರಾ ಜಾಯಾಪತ್ಯೋರ್ಮಧ್ಯೇ ಗರ್ಭಹನನಾರ್ಥಂ ಯಶ್ಚ ಶಯೇ ಶೇತೇ ಯಶ್ಚ ಯೋನಿಮಂತಃ ಪ್ರವಿಶ್ಯಾರೇಳ್ಹಿ ನಿಷಿಕ್ತಂ ರೇತೋ ,ಲಿಹ್ಯಯಾಸ್ವಾದಯತಿ । ಭಕ್ಷಯತೀತ್ಯರ್ಥಃ ॥ ಲಿಹ ಆಸ್ವಾನನೇ ಅದಾದಿಕಃ । ಕಪಿಲಕಾದಿತ್ವಾಲ್ಲತ್ವವಿಕಲ್ಪಃ ॥ ತಂ ಸರ್ವಮಿತೋ ನಾಶಯಾಮಃ ॥

॥ ಪ್ರತಿಪದಾರ್ಥ ॥

(ಎಲೈ ಸ್ತ್ರೀಯೇ) **ತೇ**—ನಿನ್ನ । **ಊರೂ**—ತೊಡೆಗಳಲ್ಲಿ । **ಯಃ**—ರೋಗರೂಪದ ರಾಕ್ಷಸನು (ಅಥವಾ ರೋಗವು) । **ವಿಹರತಿ**—ಗರ್ಭನಾಶಕ್ಕಾಗಿ ಅಂಟಿಕೊಂಡಿರುವುದೋ । **ದಂಪತೀ ಅಂತರಾ**—ಗಂಡ ಹೆಂಡಿರ ಮಧ್ಯವಲ್ಲಿ ಗರ್ಭನಾಶಕ್ಕಾಗಿ । **ಶಯೇ**—ಯಾವ ವ್ಯಾಧಿಯು ಆವರಿಸಿ ನೆಲೆಸಿರುವುದೋ । **ಯೋನಿಂ ಅಂತಃ**—ಯೋನಿಯನ್ನು ಪ್ರವೇಶಿಸಿ । **ಆರೇಳ್ಹಿ**—ಅಲ್ಲಿರುವ ರೇತಸ್ಸನ್ನು ಯಾವ ವ್ಯಾಧಿಯು ನೆಕ್ಕುವುದೋ । **ತಂ**—ಆ ವ್ಯಾಧಿಯನ್ನು । **ಇತಃ**—ಈ ಸ್ಥಾನದಿಂದ । **ನಾಶಯಾಮಸಿ**—ನಾವು ನಾಶಮಾಡುವಂತಾಗಲಿ.

। ಭಾವಾರ್ಥ ॥

ಎಲೈ ಸ್ತ್ರೀಯೇ, ನಿನ್ನ ತೊಡೆಗಳಲ್ಲಿ ಅಂಟಿಕೊಂಡಿರುವ ಗರ್ಭನಾಶಕವಾದ ರೋಗವನ್ನೂ ಗಂಡಹೆಂಡಿರಲ್ಲಿ ಆವರಿಸಿರುವ ಗರ್ಭನಾಶಕವಾದ ವ್ಯಾಧಿಯನ್ನೂ ನಿನ್ನ ಯೋನಿಪ್ರದೇಶದಲ್ಲಿ ನೆಲೆಸಿರುವ ರೇತಸ್ಸನ್ನು ಹೀರುವ ರೋಗವನ್ನು ಅಲ್ಲಿಂದ ನಾವು ಓಡಿಸಿ ನಾಶಪಡಿಸುವಂತಾಗಲಿ.

## English Translation.

May we exterminate from hence (the evil spirit) who separates your thighs, who lies between husband and wife, who, entering your womb devours (the seed).

॥ ಸಂಹಿತಪಾಠಃ ॥

**ಯಸ್ತ್ವಾ ಭ್ರಾತಾ ಪತಿರ್ಭೂತ್ವಾ ಜಾರೋ ಭೂತ್ವಾ ನಿಪದ್ಯತೇ ।**

**ಪ್ರಜಾಂ ಯಸ್ತೇ ಜಿಘಾಂಸತಿ ತಮಿತೋ ನಾಶಯಾಮಸಿ ॥ ೫ ॥**

॥ ಪದಪಾಠಃ ॥

**ಯಃ । ತ್ವಾ । ಭ್ರಾತಾ । ಪತಿಃ । ಭೂತ್ವಾ । ಜಾರಃ । ಭೂತ್ವಾ । ನಿऽಪದ್ಯತೇ ।**

**ಪ್ರऽಜಾಂ । ಯಃ । ತೇ । ಜಿಘಾಂಸತಿ । ತಂ । ಇತಃ । ನಾಶಯಾಮಸಿ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಯೋಷಿತ್ ಯೋ ರಾಕ್ಷಸೋ ಭ್ರಾತಾ ಭ್ರಾತೃರೂಪೋ ಭೂತ್ವಾ ಪತಿರ್ಭರ್ತೃರೂಪೋ ವಾ ಭೂತ್ವಾ ತ್ವಾಂ ನಿಪದ್ಯತೇ ಅಭಿಗಚ್ಛತಿ । ಅಥವಾ ಜಾರ ಉಪಪತಿರೂಪೋ ವಾ ಭೂತ್ವಾಭಿಗಚ್ಛತಿ । ಏವಂಭೂತೋ ಯೋ ರಾಕ್ಷಸಾದಿಸ್ತೇ ತವ ಪ್ರಜಾಂ ಜಿಘಾಂಸತಿ ಹಂತುಮಿಚ್ಛತಿ । ಸ್ಪಷ್ಟಮನ್ಯತ್ ॥**

॥ ಪ್ರತಿಪದಾರ್ಥ ॥

(ಎಲೈ ಸ್ತ್ರೀಯೇ) **ಯಃ**— ಯಾವ ರಾಕ್ಷಸನು (evil spirit) । **ಭ್ರಾತಾ** — ನಿನ್ನ ಸಹೋದರನ ರೂಪದಿಂದ । **ಭೂತ್ವಾ**- ಇದ್ದಾಗಲೀ । **ಪತಿಃ**— ನಿನ್ನ ಪತಿರೂಪದಿಂದ ಇದ್ದಾಗಲಿ (ಅಥವಾ) । **ಜಾರಃ**— ಪ್ರಿಯನಾದ ಉಪಪತಿರೂಪದಿಂದ । **ಭೂತ್ವಾ**— ಇದ್ದಾಗಲಿ ನಿನ್ನನ್ನು ಸಮೀಪಿಸಿ । **ಯಃ**— ಯಾವರಾಕ್ಷಸನು । **ತೇ**- ನಿನ್ನ । **ಪ್ರಜಾಂ** – ಗರ್ಭಸ್ಥ ಶಿಶುವನ್ನು । **ಜಿಘಾಂಸತಿ** – ಕೊಲ್ಲಲಿಚ್ಛಿಸುವನೋ । **ತಂ** – ಆ ರಾಕ್ಷಸನನ್ನು । **ಇತಃ** – ಇಲ್ಲಿಂದ । **ನಾಶಯಾಮಸಿ** – ಓಡಿಸಿ ನಾವು ನಾಶಮಾಡುವಂತಾಗಲಿ.

॥ ಭಾವಾರ್ಥ ॥

ಎಲೈ ಸ್ತ್ರೀಯೇ, ಯಾವ ರಾಕ್ಷಸನು (evil spirit) ನಿನ್ನ ಸಹೋದರನ ರೂಪದಿಂದ ಅಥವಾ ನಿನ್ನ ಪತಿಯ ರೂಪದಿಂದ ಅಥವಾ ನಿನ್ನ ಪ್ರಿಯನಾದ ಉಪಪತಿಯ ರೂಪದಿಂದ ನಿನ್ನ ಬಳಿಗೆ ಬಂದು ನಿನ್ನ ಗರ್ಭಸ್ಥ ಶಿಶುವನ್ನು ಕೊಲ್ಲಲಿಚ್ಛಿಸುವನೋ ಆ ರಾಕ್ಷಸನ್ನು ಇಲ್ಲಿಂದ ಓಡಿಸಿ ನಾವು ನಾಶಪಡಿಸುವಂತಾಗಲಿ

English Translation.

May we exterminate from hence (the evil spirit), who in the form of brother, husbaud, or paramour, approaches you, and seeks to destroy your offspring.

॥ ಸಂಹಿತಾಪಾಠಃ ॥

ಯಸ್ತ್ವಾ॒ ಸ್ವಪ್ನೇ॑ನ॒ ತಮ॑ಸಾ ಮೋಹ॒ಯಿತ್ವಾ ನಿ॒ಪದ್ಯ॑ತೇ ।
ಪ್ರ॒ಜಾಂ ಯಸ್ತೇ॒ ಜಿಘಾಂ॑ಸತಿ॒ ತಮಿ॒ತೋ ನಾ॑ಶಯಾಮಸಿ ॥ ೬ ॥

॥ ಪದಪಾಠಃ ॥

ಯಃ । ತ್ವಾ॒ । ಸ್ವಪ್ನೇ॑ನ । ತಮ॑ಸಾ । ಮೋ॒ಹ॒ಯಿ॒ತ್ವಾ । ನಿ॒ऽಪದ್ಯ॑ತೇ ।
ಪ್ರ॒ಜಾಂ । ಯಃ । ತೇ॒ । ಜಿಘಾಂ॑ಸತಿ । ತಂ । ಇ॒ತಃ । ನಾ॒ಶ॒ಯಾ॒ಮ॒ಸಿ॒ ॥ ೬ ॥

॥ ಸಾಯಣಭಾಷ್ಯಂ ॥

ಹೇ ಯೋಷಿತ್ ಯೋ ರಾಕ್ಷಸಾದಿಃ ಸ್ವಪ್ನೇನ ಸ್ವಪ್ನಾವಸ್ಥಯಾ ತಮಸಾ ನಿದ್ರಯಾ ತ್ವಾ ತ್ವಾಂ ಮೋಹಯಿತ್ವಾ ಮೂಢತಾಂ ಪ್ರಾಪಯ್ಯ ನಿಪದ್ಯತೇ ಗರ್ಭಘಾತಾಯ ಗಚ್ಛತಿ । ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

(ಎಲೈ ಸ್ತ್ರೀಯೆ) **ಯಃ**—ಯಾವ ರಾಕ್ಷಸನು । **ಸ್ವಪ್ನೇನ** - ಸ್ವಪ್ನಾವಸ್ಥೆಯಲ್ಲಿಯೂ । **ತಮಸಾ**—ನಿದ್ರೆಯಲ್ಲಿಯೂ । **ತ್ವಾ**—ನಿನ್ನನ್ನು । **ಮೋಹಯಿತ್ವಾ**—ಮೂಢಳನ್ನಾಗಿ (ಬುದ್ಧಿಶೂನ್ಯಳನ್ನಾಗಿ) ಮಾಡಿ । **ನಿಪದ್ಯತೇ**—ಗರ್ಭನಾಶನಕ್ಕಾಗಿ ನಿನ್ನ ಬಳಿಗೆ ಬರುವನೋ । **ತ್ವಂ**—ಆ ರಾಕ್ಷಸನನ್ನು । **ಇತಃ**—ಇಲ್ಲಿಂದ । **ನಾಶಯಾಮಸಿ**—ಓಡಿಸಿ ನಾಶಮಾಡುವಂತಾಗಲಿ.

॥ ಭಾವಾರ್ಥ ॥

ಎಲೈ ಸ್ತ್ರೀಯೇ, ಯಾವ ರಾಕ್ಷಸನು ಸ್ವಪ್ನಾವಸ್ಥೆಯಲ್ಲಿಯೂ ನಿದ್ರಾವಸ್ಥೆಯಲ್ಲಿಯೂ ನಿನಗೆ ಮಂಕು ಕವಿಯುವಂತೆ ಮಾಡಿ ಎಂದರೆ ಬುದ್ಧಿಭ್ರಮಣೆಯನ್ನುಂಟುಮಾಡಿ ನಿನ್ನ ಗರ್ಭಗತವಾದ ಶಿಶುವನ್ನು ನಾಶಮಾಡಲು ನಿನ್ನ ಬಳಿಗೆ ಬರುವನೋ ಆ ರಾಕ್ಷಸನನ್ನು ನಾವು ಇಲ್ಲಿಂದ ಓಡಿಸಿ ನಾಶಪಡಿಸುವಂತಾಗಲಿ.

## English Translation

May we exterminate from hence (the evil spirit) who, having beguiled you by sleep or darkness, approaches you, and seeks to destroy your offspring



## ನೂರ ಅರವತ್ತಮೂರನೆಯ ಸೂಕ್ತ

### ಪೀಠಿಕೆ.

**ಮುಂಚಾಮಿ ತ್ವಾ** ಎಂಬ ೧೬೧ನೇ ಸೂಕ್ತದಲ್ಲಿ ಹೇಳಿರುವಂತೆ ಈ ಸೂಕ್ತದಲ್ಲಿಯೂ ಯಕ್ಷ್ಮ (ಕ್ಷಯ) ರೋಗನಿವಾರಣೋಪಾಯವನ್ನು ಪ್ರತಿಪಾದಿಸಲಾಗಿದೆ ಋಗ್ವಿಧಾನದಲ್ಲಿ ಈ ರೀತಿ ಇದೆ—

**ಆಜ್ಯಂ ಸಂಸ್ಕೃತ್ಯ ಜುಹುಯಾದಕ್ಷೀಭ್ಯಾಂ ತ ಇತಿ ದ್ವಿಜಃ** ॥ ೯೯ ॥
**ಪಾಣಿನಾ ತು ಘೃತಾಕ್ತೇನ ಮೂರ್ಧಾನಂ ಸಂಸ್ಪೃಶೇತ್ತತಃ ॥**
**ಕರ್ಣೌ ನೇತ್ರೇ ಚ ಚುಬುಕಂ ನಾಸಿಕೇ ಚೈವ ಸಂಸ್ಪೃಶೇತ್** ॥ ೧೦೦ ॥
**ಏತದೇವ ಜಪೇನ್ನಿತ್ಯಂ ಯಕ್ಷ್ಮಣೋ ವಿಪ್ರಮುಚ್ಯತೇ ।**
**ಪೂರ್ವೋಕ್ತೇನೈವ ಕಲ್ಪೇನ ಯಕ್ಷ್ಮನಾಶನಮಾಚರೇತ್** ॥ ೧೦೧ ॥
**ಹೋಮೇನ ಚ ಜಪೈಶ್ಚೈವ ಯಕ್ಷ್ಮನಾಶನಮಾಚರೇತ್ ॥**

(ಋಗ್ವಿಧಾನ. ಅಧ್ಯಾಯ. ೪. ಶ್ಲೋ ೯೯–೧೦೧)

ಯಕ್ಷ್ಮ ಅಥವಾ ಕ್ಷಯರೋಗ ಪರಿಹಾರಾರ್ಥವಾಗಿ ದ್ವಿಜನಾದವನು ಆಜ್ಯವನ್ನು ವಿಧಿಪೂರ್ವಕವಾಗಿ ಸಂಸ್ಕಾರಮಾಡಿ ಅಗ್ನಿಯಲ್ಲಿ **ಅಕ್ಷೀಭ್ಯಾಂ** ಎಂಬ ಈ ಸೂಕ್ತದ ಮಂತ್ರಗಳಿಂದ ಹೋಮಮಾಡಬೇಕು. ಬಳಿಕ ಹೋಮಶೇಷವಾದ ಆಜ್ಯವನ್ನು ಕೈಗಳಿಗೆ ಸವರಿಕೊಂಡು ಅದರಿಂದ ರೋಗಪೀಡಿತನಾದವನ ಶಿರಸ್ಸು, ಕಿವಿಗಳು, ನೇತ್ರಗಳು, ಗಲ್ಲ, ನಾಸಿಕ ಮೊದಲಾದ ಅಂಗಗಳನ್ನು ಸ್ಪರ್ಶಮಾಡಬೇಕು. ಈ ಪ್ರಕಾರವಾಗಿ ಪ್ರತಿನಿತ್ಯವೂ ಮಾಡುತ್ತಿದ್ದರೆ ಆ ಪುರುಷನು ರೋಗ ಮುಕ್ತನಾಗುತ್ತಾನೆ. ಹಿಂದೆ ಯಕ್ಷ್ಮರೋಗ ನಾಶಾರ್ಥವಾಗಿ ಹೇಳಿದ ಜಪಹೋಮಾದಿವಿಧಿಗಳಿಂದಲೇ ಈ ರೋಗ ವನ್ನು ನಾಶಮಾಡಬೇಕು.

॥ ಸಾಯಣಭಾಷ್ಯಂ ॥

**ಅಕ್ಷೀಭ್ಯಾಮಿತಿ ಷಡೃಚಂ ದ್ವಾದಶಂ ಸೂಕ್ತಮಾನುಷ್ಟುಭಂ । ಕಶ್ಯಪಗೋತ್ರೋತ್ಪನ್ನೋ ವಿವೃಹಾ ನಾಮರ್ಷಿಃ । ಯಕ್ಷ್ಮನಾಶನಪ್ರತಿಪಾದ್ಯತ್ವಾತ್ತದ್ದೇವತಾಕಂ ಕೃತ್ಸ್ನಂ ಸೂಕ್ತಂ । ಅನುಕ್ರಾಂತಂ ಚ । ಅಕ್ಷೀಭ್ಯಾಂ ವಿವೃಹಾ ಕಾಶ್ಯಪೋ ಯಕ್ಷ್ಮಘ್ನಮಿತಿ ॥ ಲೈಂಗಿಕೋ ವಿನಿಯೋಗಃ ॥**

ಅನುವಾದವು— **ಅಕ್ಷೀಭ್ಯಾಂ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಶ್ಯಪಗೋತ್ರದವನಾದ ವಿವೃಹಾ ಎಂಬುವನು ಋಷಿಯು.

ಸೂಕ್ತದಲ್ಲಿ ಯಕ್ಷ್ಮರೋಗವನ್ನು ನಾಶಮಾಡುವ ವಿಷಯವು ಪ್ರತಿಪಾದಿತವಾಗಿರುವುದರಿಂದ ಯಕ್ಷ್ಮನಾಶನವೇ ಈ ಸೂಕ್ತಕ್ಕೆ ದೇವತೆಯು , ಅನುಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಕ್ಷೀಭ್ಯಾಂ ವಿವೃಹಾ ಕಾಶ್ಯಪೋ ಯಕ್ಷ್ಮಘ್ನಂ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ - ೧೬೩

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೬೩ ॥

ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೬ ॥

॥ ಋಷಿಃ—ವಿವೃಹಾ ಕಾಶ್ಯಪಃ ॥

॥ ದೇವತಾ—ಯಕ್ಷ್ಮಘ್ನಂ ॥

॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಅಕ್ಷೀಭ್ಯಾಂ ತೇ ನಾಸಿಕಾಭ್ಯಾಂ ಕರ್ಣಾಭ್ಯಾಂ ಛುಬುಕಾದಧಿ ।

ಯಕ್ಷ್ಮಂ ಶೀರ್ಷಣ್ಯಂ ಮಸ್ತಿಷ್ಕಾಜ್ಜಿಹ್ವಾಯಾ ವಿ ವೃಹಾಮಿ ತೇ ॥ ೧ ॥

॥ ಪದಪಾಠಃ ॥

ಅಕ್ಷೀಭ್ಯಾಂ । ತೇ । ನಾಸಿಕಾಭ್ಯಾಂ । ಕರ್ಣಾಭ್ಯಾಂ । ಛುಬುಕಾತ್ । ಅಧಿ ।

ಯಕ್ಷ್ಮಂ । ಶೀರ್ಷಣ್ಯಂ । ಮಸ್ತಿಷ್ಕಾತ್ । ಜಿಹ್ವಾಯಾಃ । ವಿ । ವೃಹಾಮಿ । ತೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಯಕ್ಷ್ಮಗೃಹೀತ ತೇ ತವಾಕ್ಷೀಭ್ಯಾಂ ಚಕ್ಷುರ್ಭ್ಯಾಂ ಯಕ್ಷ್ಮರೋಗಂ ವಿ ವೃಹಾಮಿ । ಉದ್ಧರಯಾಮಿ । ವಿಶ್ಲೇಷಯಾಮೀತ್ಯರ್ಥಃ ॥ ಈ ಚ ದ್ವಿವಚನ ಇತ್ಯಕ್ಷಿಶಬ್ದಸ್ಯೇಕಾರಾಂತಾದೇಶಃ । ಸ ಚೋದಾತ್ತಃ ॥ ತಥಾ ನಾಸಿಕಾಭ್ಯಾಂ ಘ್ರಾಣೇಂದ್ರಿಯಾಚ್ಚ ಕರ್ಣಾಭ್ಯಾಂ ಶ್ರೋತ್ರಾಭ್ಯಾಂ ಚ ಛುಬುಕಾಚ್ಚುಬುಕಾದೋಷ್ಠಸ್ಯಾಧಃಪ್ರದೇಶಾಚ್ಚ । ಅಧಿರನರ್ಥಕಃ । ಅಪಿ ಚ ಶೀರ್ಷಣ್ಯಂ । ಶಿರಸಿ ಭವೋ ರೋಗಃ ಶೀರ್ಷಣ್ಯಃ ॥ ಭವೇ ಛಂದಸೀತಿ ಯತ್ । ಯೇ ಚ ತದ್ಧಿತೇ । ಪಾ. ೬-೧-೬೧ । ಇತಿ ಶಿರಸಃ ಶೀರ್ಷನ್ನಾದೇಶಃ । ಯೇ ಚಾಭಾವಕರ್ಮಣೋರಿತಿ ಪ್ರಕೃತಿಭಾವಃ ॥ ಈದೃಶಂ ಯಕ್ಷ್ಮಂ ರೋಗಂ ತೇ ತವ ಮಸ್ತಿಷ್ಕಾತ್ । ಶಿರಸೋಽಂತರವಸ್ಥಿತೋ ಮಾಂಸವಿಶೇಷೋ ಮಸ್ತಿಷ್ಕಃ । ತಸ್ಮಾಜ್ಜಿಹ್ವಾಯಾ ರಸನಾಯಾಶ್ಚ ಸಕಾಶಾದ್ವಿ ವೃಹಾಮಿ । ಉದ್ಧಾರಯಾಮಿ । ಪೃಥಕ್ಕರೋಮೀತ್ಯರ್ಥಃ ॥ ವೃಹೂ ಉದ್ಯಮನ ಇತಿ ಧಾತುಃ ॥

॥ ಪ್ರತಿಪದಾರ್ಥ ॥

(ಎಲೈ ಕ್ಷಯರೋಗಗ್ರಸ್ತನೇ) **ತೇ** - ನಿನ್ನ । **ಅಕ್ಷೀಭ್ಯಾಂ**—ಕಣ್ಣುಗಳಿಂದ । **ಯಕ್ಷ್ಮಂ**—ಯಕ್ಷ್ಮರೋಗವನ್ನು । **ವಿ ವೃಹಾಮಿ**—ಕಿತ್ತುಹಾಕುತ್ತೇನೆ (ಹಾಗೆಯೇ) । **ನಾಸಿಕಾಭ್ಯಾಂ**—ಘ್ರಾಣೇಂದ್ರಿಯಗಳಿಂದಲೂ । **ಕರ್ಣಾಭ್ಯಾಂ**—ಶ್ರೋತ್ರೇಂದ್ರಿಯಗಳಿಂದಲೂ । **ಛುಬುಕಾತ್**—ಗಲ್ಲಪ್ರದೇಶದಿಂದಲೂ ಯಕ್ಷ್ಮರೋಗವನ್ನು ಕಿತ್ತು ಹಾಕುತ್ತೇನೆ । **ಶೀರ್ಷಣ್ಯಂ**—ಶಿರಸ್ಸಿನಲ್ಲಿ ಇರುವ ಯಕ್ಷ್ಮರೋಗವನ್ನು । **ತೇ**—ನಿನ್ನ । **ಮಸ್ತಿಷ್ಕಾತ್**—ಮೆದುಳಿನಿಂದಲೂ । **ಜಿಹ್ವಾಯಾಃ**—ನಾಲಿಗೆಯಿಂದಲೂ ಕಿತ್ತುಹಾಕುತ್ತೇನೆ

॥ ಭಾವಾರ್ಥ ॥

ಎಲೈ ಯಕ್ಷ್ಮರೋಗಪೀಡಿತನೇ, ನಿನ್ನ ಕಣ್ಣುಗಳಿಂದಲೂ, ನಾಸಿಕದಿಂದಲೂ ಕಿವಿಗಳಿಂದಲೂ ಗಲ್ಲದಿಂದಲೂ ಶಿರಸ್ಸಿನಲ್ಲಿರುವ ಮೆದುಳಿನಿಂದಲೂ, ನಾಲಿಗೆಯಿಂದಲೂ ಆ ಅವಯವಗಳಲ್ಲಿ ವ್ಯಾಪಿಸಿರುವ ಈ ಯಕ್ಷ್ಮರೋಗವನ್ನು ಕಿತ್ತುಹಾಕುತ್ತೇನೆ,

## English Translation.

I banish disease from your eyes, from your nose, from your ears, from your chin, from your head, from your brain, from your tongue.

॥ ಸಂಹಿತಾಪಾಠಃ ॥

ಗ್ರೀವಾಭ್ಯಸ್ತ ಉಷ್ಣಿಹಾಭ್ಯಃ ಕೀಕಸಾಭ್ಯೋ ಅನೂಕ್ಯಾತ್ ।
ಯಕ್ಷ್ಮಂ ದೋಷಣ್ಯ೧ಮಂಸಾಭ್ಯಾಂ ಬಾಹುಭ್ಯಾಂ ವಿ ವೃಹಾಮಿ ತೇ ॥೨॥

॥ ಪದಪಾಠಃ ॥

ಗ್ರೀವಾಭ್ಯಃ । ತೇ । ಉಷ್ಣಿಹಾಭ್ಯಃ । ಕೀಕಸಾಭ್ಯಃ । ಅನೂಕ್ಯಾತ್ ।
ಯಕ್ಷ್ಮಂ । ದೋಷಣ್ಯಂ । ಅಂಸಾಭ್ಯಾಂ । ಬಾಹುಽಭ್ಯಾಂ । ವಿ । ವೃಹಾಮಿ । ತೇ ॥ ೨ ॥

॥ ಸಾಯಣಭಾಷ್ಯಂ ॥

ಯೋ ವ್ಯಾಧಿಗೃಹೀತ ಉಷ್ಣಿಹಾಭ್ಯ ಊರ್ಧ್ವಾಭಿಮುಖಂ ಸ್ನಿಗ್ಧಾಭ್ಯ ಉತ್ಸ್ನಾತಾಭ್ಯೋ ವಾ ಸ್ನಾಯುಭ್ಯೋ ಗ್ರೀವಾಭ್ಯೋ ಗಲಗತಾಭ್ಯೋ ಧಮನೀಭ್ಯಸ್ತೇ ತವ ಯಕ್ಷ್ಮಂ ವಿ ವೃಹಾಮಿ । ತಥಾ ಕೀಕಸಾಭ್ಯೋಽಸ್ಥಿಭ್ಯೋಽನೂಕ್ಯಾದಸ್ಥಿಸಂಧೇಶ್ಚ ಯಕ್ಷ್ಮಂ ವಿ ವೃಹಾಮಿ ॥ ಉಚ ಸಮವಾಯೇ । ಅನೂಚ್ಯತೇ ಸಮವೇಯತ ಇತ್ಯಸ್ಥ್ನಃ ಸಂಧಿರನೂಕ್ಯಃ । ಋಹಲೋರ್ಣ್ಯತ್ । ಚಜೋಃ ಕು ಘಿಣ್ಯ-

ತೋರಿತಿ ಕುತ್ವಂ । ತಿತ್ಸ್ವರಿತಃ ॥ ಅಪಿ ಚ ದೋಷ್ಣೋರ್ಭವಂ ದೋಷಣ್ಯಂ ॥ ಪೂರ್ವವದ್ಯತಿ ಪದ್ದನ್ನಿ-ತ್ಯಾದಿನಾ ದೋಃಶಬ್ದಸ್ಯ ದೋಷನ್ನಾದೇಶಃ । ಪೂರ್ವವತ್ಪ್ರಕೃತಿಭಾವಃ ॥ ತಮಪಿ ಯಕ್ಷ್ಮಂ ರೋಗಂ ತೇ ತವಾಂಸಾಭ್ಯಾಂ ಬಾಹುಭ್ಯಾಂ ಚ ವಿ ವೃಹಾಮಿ । ಹಸ್ತಯೋರೂರ್ಧ್ವಭಾಗಾವಂಸಾವಧೋಭಾಗೌ ಬಾಹೂ ॥

॥ ಪ್ರತಿಪದಾರ್ಥ ॥

(ಎಲೈ ಯಕ್ಷ್ಮರೋಗಪೀಡಿತನೇ.) **ತೇ**— ನಿನ್ನ । **ಗ್ರೀವಾಭ್ಯಃ**— ಕತ್ತಿನಲ್ಲಿರುವ ರಕ್ತನಾಳಗಳಿಂದಲೂ । **ಉಷ್ಣಿಹಾಭ್ಯಃ**— ಸ್ನಾಯು (ನರ) ಗಳಿಂದಲೂ । **ಕೀಕಸಾಭ್ಯಃ**— ಮೂಳೆಗಳಿಂದಲೂ । **ಅನೂಕ್ಯಾತ್**— ಅಸ್ಥಿಸಂಧಿ ಅಥವಾ ಕೀಲುಗಳಿಂದಲೂ । **ಅಂಸಾಭ್ಯಾಂ**— ಹೆಗಲುಗಳಿಂದಲೂ । **ಬಾಹುಭ್ಯಾಂ**— ಬಾಹುಗಳಿಂದಲೂ । **ತೇ**— ನಿನ್ನ । **ದೋಷಣ್ಯಂ**— ಬಾಹುಮೂಲಗಳಲ್ಲಿರುವ । **ಯಕ್ಷ್ಮಂ**— ಯಕ್ಷ್ಮರೋಗವನ್ನು । **ವಿ ವೃಹಾಮಿ**— ಕಿತ್ತುಹಾಕುತ್ತೇನೆ.

॥ ಭಾವಾರ್ಥ ॥

ಎಲೈ ಕ್ಷಯರೋಗಪೀಡಿತನೆ, ನಿನ್ನ ಕತ್ತಿನಲ್ಲಿರುವ ರಕ್ತನಾಳಗಳಿಂದಲೂ, ನರಗಳಿಂದಲೂ, ಮೂಳೆಗಳಿಂದಲೂ, ಅವುಗಳ ಸಂಧಿ ಅಥವಾ ಕೀಲುಗಳಿಂದಲೂ, ಹೆಗಲುಗಳಿಂದಲೂ, ಬಾಹುಗಳಿಂದಲೂ, ನಿನ್ನ ಬಾಹುಮೂಲದಲ್ಲಿರುವ ಯಕ್ಷ್ಮರೋಗವನ್ನು ಬೇರ್ಪಡಿಸಿ ಕಿತ್ತುಹಾಕುತ್ತೇನೆ.

English Translation

I banish disease from your neck, from your sinews, from your bones, from your joints, from your upper arms, from your shoulders, and from your fore-arms.

॥ ಸಂಹಿತಾಪಾಠಃ ॥

ಆಂತ್ರೇಭ್ಯಸ್ತೇ ಗುದಾಭ್ಯೋ ವನಿಷ್ಠೋರ್ಹೃದಯಾದಧಿ ।
ಯಕ್ಷ್ಮಂ ಮತಸ್ನಾಭ್ಯಾಂ ಯಕ್ನಃ ಪ್ಲಾಶಿಭ್ಯೋ ವಿ ವೃಹಾಮಿ ತೇ ॥೩॥

॥ ಪದಪಾಠಃ ॥

ಆಂತ್ರೇಭ್ಯಃ । ತೇ । ಗುದಾಭ್ಯಃ । ವನಿಷ್ಠೋಃ । ಹೃದಯಾತ್ । ಅಧಿ ।
ಯಕ್ಷ್ಮಂ । ಮತಸ್ನಾಭ್ಯಾಂ । ಯಕ್ನಃ । ಪ್ಲಾಶಿಽಭ್ಯಃ । ವಿ । ವೃಹಾಮಿ । ತೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ಯಕ್ಷ್ಮಾಭಿಭೂತ ತೇ ತವಾಂತ್ರೇಭ್ಯಃ । ಆಂತ್ರಂ ಪುರೀತದನ್ನಪಾನಯೋರಾಧಾನಭೂತಂ । ತತ್ಸಂಬಂಧಿಭ್ಯಃ ಸ್ನಾಯುಭ್ಯೋ ಗುದಾಭ್ಯಃ ಯಾಭಿರ್ನಾಡೀಭಿರನ್ನರಸಃ ಸಮಾನವಾಯುನಾ ಧಾತುಷು

ನೀಯತೇ ತಾಭ್ಯೋ ನಾಡೀಭ್ಯಶ್ಚ ಸಕಾಶಾದ್ಯಕ್ಷ್ಮಂ ವಿ ವೃಹಾಮಿ । ತಥಾ ವನಿಷ್ಠೋಃ ಸ್ಥವಿರಾಂತ್ರಾ-ದ್ಧೃದಯಾದಧಿ ಹೃತ್ಪುಂಡರೀಕಾಚ್ಚ ಯಕ್ಷ್ಮಂ ವಿ ವೃಹಾಮಿ । ಅಪಿ ಚ ತೇ ತವ ಮತಸ್ನಾಭ್ಯಾಂ। ಮತಸ್ನೌ ಪಾರ್ಶ್ವಯೋರ್ವರ್ತಮಾನಾವಾಮ್ರಫಲಾಕೃತೀ ವೃಕ್ಕೌ। ತಾಭ್ಯಾಂ ಯಕ್ನಃ। ಹೃದಯಸಮೀಪೇ ವರ್ತಮಾನಃ ಕಾಲಮಾಂಸವಿಶೇಷೋ ಯಕೃತ್ । ತಸ್ಮಾಚ್ಚ ॥ ಪದ್ದನ್ನಿತ್ಯಾದಿನಾ ಯಕೃಚ್ಛಬ್ದಸ್ಯ ಯಕನ್ನಾದೇಶಃ ॥ ಪ್ಲಾಶಿಭ್ಯೋಽನ್ಯೇಭ್ಯೋಽಪಿ ಕ್ಲೋಮಪ್ಲೀಹಾದಿಸಂಜ್ಞೇಭ್ಯಶ್ಚ ಮಾಂಸೇಭ್ಯಶ್ಚ ಯಕ್ಷ್ಮಂ ರೋಗಂ ವಿ ವೃಹಾಮಿ । ಉತ್‌ಕ್ಷಿಪಾಮಿ ॥

॥ ಪ್ರತಿಪದಾರ್ಥ ॥

(ಎಲೈ ವ್ಯಾಧಿಗ್ರಸ್ತನೇ), **ತೇ**—ನಿನ್ನ । **ಅಂತ್ರೇಭ್ಯಃ**—ಕರಳುಗಳಿಂದಲೂ (entrails) । **ಗುದಾ-ಭ್ಯಃ**—ಗುದಪ್ರದೇಶದ ನಾಡಿಗಳಿಂದಲೂ (anus) । **ವನಿಷ್ಠೋಃ**—ಉದರದ ಪಾರ್ಶ್ವಪ್ರದೇಶಗಳಿಂದಲೂ (abdomen) । **ಹೃದಯಾತ್ ಅಧಿ**—ಹೃದಯದಿಂದಲೂ (heart) । **ತೇ**—ನಿನ್ನ । **ಮತಸ್ನಾಭ್ಯಾಂ**—ಮೂತ್ರಜನಕಾಂಗಗಳಿಂದಲೂ (kidneys) । **ಯಕ್ನಃ**—ಪಿತ್ತಜನಕಾಂಗದಿಂದಲೂ (liver) । **ಪ್ಲಾಶಿಭ್ಯಃ**—ಇತರ ಮಾಂಸಖಂಡಗಳಿಂದಲೂ । **ಯಕ್ಷ್ಮಂ**—ಯಕ್ಷ್ಮರೋಗವನ್ನು । **ವಿ ವೃಹಾಮಿ**—ಬೇರ್ಪಡಿಸಿ ಕಿತ್ತು ಹಾಕುತ್ತೇನೆ.

॥ ಭಾವಾರ್ಥ ॥

(ಎಲೈ ವ್ಯಾಧಿಗ್ರಸ್ತನೇ), ನಿನ್ನ ಕರುಳುಗಳು, ಗುದಪ್ರದೇಶ, ಉದರಪಾರ್ಶ್ವಗಳು, ಹೃದಯ. ಮೂತ್ರಜನಕಾಂಗ, ಪಿತ್ತಕೋಶ, ಇತರ ಮಾಂಸಖಂಡಗಳು, ಇವುಗಳಲ್ಲಿ ವ್ಯಾಪಿಸಿರುವ ರಕ್ತನಾಳಗಳು ಮತ್ತು ನರಗಳು ಇವುಗಳಲ್ಲೆಲ್ಲಾ ವ್ಯಾಪಿಸಿರುವ ಯಕ್ಷ್ಮರೋಗವನ್ನು ಬೇರ್ಪಡಿಸಿ ಕಿತ್ತುಹಾಕುತ್ತೇನೆ.

## English Translation.

I banish disease from your entrails, from your anus, from your abdomen, and from your heart, from your kidneys, from your liver, from your (other) viscera.

॥ ಸಂಹಿತಾಪಾಠಃ ॥

ಊರುಭ್ಯಾಂ ತೇ ಅಷ್ಠೀವದ್ಭ್ಯಾಂ ಪಾರ್ಷ್ಣಿಭ್ಯಾಂ ಪ್ರಪದಾಭ್ಯಾಂ ।
ಯಕ್ಷ್ಮಂ ಶ್ರೋಣಿಭ್ಯಾಂ ಭಾಸದಾದ್ಭಂಸಸೋ ವಿ ವೃಹಾಮಿ ತೇ ॥ ೪ ॥

॥ ಪದಪಾಠಃ ॥

ಊರುಽಭ್ಯಾಂ । ತೇ । ಅಷ್ಠೀವತ್‌ಽಭ್ಯಾಂ । ಪಾರ್ಷ್ಣಿಽಭ್ಯಾಂ । ಪ್ರಽಪದಾಭ್ಯಾಂ ।

**ಯಕ್ಷ್ಮಂ । ಶ್ರೋಣಿಽಭ್ಯಾಂ । ಭಾಸದಾತ್ । ಭಂಸಸಃ । ವಿ । ವೃಹಾಮಿ । ತೇ ॥ ೪ ॥**

॥ ಸಾಯಣಭಾಷ್ಯಂ ॥

**ಹೇ ರುಗ್ಣ ತೇ ತವೋರುಭ್ಯಾಮಷ್ಠೀವದ್ಭ್ಯಾಂ ಜಾನುಭ್ಯಾಂ ಚ ಯಕ್ಷ್ಮಂ ವಿ ವೃಹಾಮಿ । ತಥಾ ಪಾರ್ಷ್ಣಿಭ್ಯಾಂ ಪಾದಸ್ಯಾಪರಭಾಗಾಭ್ಯಾಂ ಪ್ರಪದಾಭ್ಯಾಂ ಪಾದಾಗ್ರಾಭ್ಯಾಂ ಚ ಯಕ್ಷ್ಮಂ ವಿ ವೃಹಾಮಿ । ಅಪಿ ಚ ಶ್ರೋಣಿಭ್ಯಾಂ ಜಂಘನಾಭ್ಯಾಂ ಚ ಯಕ್ಷ್ಮಂ ವಿ ವೃಹಾಮಿ । ತಥಾ ಭಾಸದಾತ್ । ಭಸತ್ಕಟಿಪ್ರದೇಶಃ । ತತ್ಸಂಬಂಧಾದ್ಭಂಸಸೋ ಭಾಸಮಾನಾತ್ಪಾಯೋಸ್ತೇ ತವ ಯಕ್ಷ್ಮಂ ವಿ ವೃಹಾಮಿ ॥**

॥ ಪ್ರತಿಪದಾರ್ಥ ॥

(ಎಲೈ ವ್ಯಾಧಿಗ್ರಸ್ತನೇ) **ತೇ**—ನಿನ್ನ । **ಊರುಭ್ಯಾಂ** - ಎರಡು ತೊಡೆಗಳಿಂದಲೂ (thighs) । **ಅಷ್ಠೀವದ್ಭ್ಯಾಂ**–ಜಾನುಪ್ರದೇಶಗಳಿಂದಲೂ (ಮೊಣಕಾಲು knees) । **ಪಾರ್ಷ್ಣಿಭ್ಯಾಂ**— ಹಿಮ್ಮಡಿಗಳಿಂದಲೂ (heels) **ಪ್ರಪದಾಭ್ಯಾಂ**— ಪಾದಗಳ ಹೆಬ್ಬೆಟ್ಟುಗಳಿಂದಲೂ (toes) । **ಶ್ರೋಣಿಭ್ಯಾಂ**— ಜಘನಪ್ರದೇಶಗಳಿಂದಲೂ (buttocks) । **ಭಾಸದಾತ್**— ಸೊಂಟದಿಂದಲೂ (loins) । **ತೇ** —ನಿನ್ನ । **ಭಂಸಸಃ**— ಪಾಯುಪ್ರದೇಶದಿಂದಲೂ । **ಯಕ್ಷ್ಮಂ**— ಯಕ್ಷ್ಮರೋಗವನ್ನು । **ವಿ ವೃಹಾಮಿ**— ಬೇರ್ಪಡಿಸಿ ಕಿತ್ತು ಹಾಕುತ್ತೇನೆ.

॥ ಭಾವಾರ್ಥ ॥

(ಎಲೈ ವ್ಯಾಧಿಗ್ರಸ್ತನೇ), ನಿನ್ನ ಎರಡು ತೊಡೆಗಳು, ಮೊಣಕಾಲುಗಳು, ಹಿಮ್ಮಡಿಗಳು, ಪಾದಗಳ ಹೆಬ್ಬೆರಳುಗಳು, ಜಘನಪ್ರದೇಶಗಳು, ಸೊಂಟ, ಪಾಯು ಈ ಪ್ರದೇಶಗಳಲ್ಲಿ ವ್ಯಾಪಿಸಿರುವ ಯಕ್ಷ್ಮರೋಗವನ್ನು ಬೇರ್ಪಡಿಸಿ ಕಿತ್ತುಹಾಕುತ್ತೇನೆ.

## English Translation.

I banish disease from your thighs, from your knees, from your heels, from your toes, from your loins, from your buttocks, from your private parts.

॥ ಸಂಹಿತಾಪಾಠಃ ॥

ಮೇಹನಾದ್ವನಂಕರಣಾಲ್ಲೋಮಭ್ಯಸ್ತೇ ನಖೇಭ್ಯಃ ।
ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿದಂ ವಿ ವೃಹಾಮಿ ತೇ ॥ ೫ ॥

॥ ಪದಪಾಠಃ ॥

**ಮೇಹನಾತ್ । ವನಂಽಕರಣಾತ್ । ಲೋಮಽಭ್ಯಃ । ತೇ । ನಖೇಭ್ಯಃ ।**

**ಯಕ್ಷ್ಮಂ । ಸರ್ವಸ್ಮಾತ್ । ಆತ್ಮನಃ । ತಂ । ಇದಂ । ವಿ । ವೃಹಾಮಿ । ತೇ ॥ ೫ ॥**

॥ ಸಾಯಣಭಾಷ್ಯಂ ॥

ವನಂಕರಣಾತ್ । ವನಮುದಕಂ ಶಾರೀರಂ । ತತ್ಕ್ರಿಯತೇ ವಿಸೃಜ್ಯತೇ ಯೇನ ತದ್ವನಂಕರಣಂ। ತಸ್ಮಾತ್ಸ್ನೇಹನಾನ್ಮೇಢ್ರಾತ್ತೇ ತವ ಲೋಮಭ್ಯೋ ನಖೇಭ್ಯಶ್ಚ ಯಕ್ಷ್ಮಂ ವಿ ವೃಹಾಮಿ । ಕಿಂ ಬಹುನಾ । ಇದಮಿದಾನೀಂ ತಂ ಯಕ್ಷ್ಮಂ ಸರ್ವಸ್ಮಾದಾತ್ಮನಃ ಕೃತ್ಸ್ನಾದೇವ ತೇ ತವ ಶರೀರಾದ್ವಿ ವೃಹಾಮಿ ॥

॥ ಪ್ರತಿಪದಾರ್ಥ ॥

(ಎಲೈ ಯಕ್ಷ್ಮರೋಗಪೀಡಿತನೇ) **ತೇ**—ನಿನ್ನ । **ವನಂಕರಣಾತ್**—ಮೂತ್ರಕೋಶದಿಂದಲೂ (bladder) **ಮೇಹನಾತ್**—ಮೂತ್ರವಿಸರ್ಜನಾಂಗದಿಂದಲೂ (urethra) । **ಲೋಮಭ್ಯಃ**—ಕೂದಲುಗಳಿಂದಲೂ (hair) **ನಖೇಭ್ಯಃ**—ಉಗುರುಗಳಿಂದಲೂ (nails) । **ತೇ**—ನಿನ್ನ । **ಸರ್ವಸ್ಮಾತ್ ಆತ್ಮನಃ**—ಸಮಸ್ತಶರೀರಾವಯವಗಳಿಂದಲೂ । **ತಂ ಇದಂ ಯಕ್ಷ್ಮಂ**—ಈ ಯಕ್ಷ್ಮರೋಗವನ್ನು । **ವಿ ವೃಹಾಮಿ**—ಬೇರ್ಪಡಿಸಿ ಕಿತ್ತುಹಾಕುತ್ತೇನೆ.

॥ ಭಾವಾರ್ಥ ॥

ಎಲೈ ಯಕ್ಷ್ಮರೋಗಪೀಡಿತನೇ, ನಿನ್ನ ಮೂತ್ರಕೋಶ, ಮೂತ್ರವಿಸರ್ಜನಾಂಗ, ಕೂದಲು, ಉಗುರು, ಇವುಗಳಿಂದಲೂ ಮತ್ತು ಶರೀರದ ಇತರ ಸಮಸ್ತ ಪ್ರದೇಶಗಳಿಂದಲೂ ಈ ಯಕ್ಷ್ಮರೋಗವನ್ನು ಬೇರ್ಪಡಿಸಿ ಕಿತ್ತುಹಾಕುತ್ತೇನೆ.

English Translation.

I banish disease from your urethra, from your bladder, from your hair, from your nails, from your whole person.

॥ ಸಂಹಿತಾಪಾಠಃ ॥

ಅಂಗಾದಂಗಾಲ್ಲೋಮ್ನೋಲೋಮ್ನೋ ಜಾತಂ ಪರ್ವಣಿಪರ್ವಣಿ ।
ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿದಂ ವಿ ವೃಹಾಮಿ ತೇ ॥ ೬ ॥

॥ ಪದಪಾಠಃ ॥

ಅಂಗಾತ್ऽಅಂಗಾತ್ । ಲೋಮ್ನಃऽಲೋಮ್ನಃ । ಜಾತಂ । ಪರ್ವಣಿऽಪರ್ವಣಿ ।
ಯಕ್ಷ್ಮಂ । ಸರ್ವಸ್ಮಾತ್ । ಆತ್ಮನಃ । ತಂ । ಇದಂ । ವಿ । ವೃಹಾಮಿ । ತೇ ॥ ೬ ॥

॥ ಸಾಯಣಭಾಷ್ಯಂ ॥

ಅಂಗಾದಂಗಾತ್ ಸರ್ವೇಭ್ಯೋಽಂಗೇಭ್ಯೋ ಲೋಮ್ನೋ ಲೋಮ್ನಃ ಸರ್ವೇಭ್ಯೋ ಲೋಮಭ್ಯಶ್ಚ ಪರ್ವಣಿ ಪರ್ವಣ್ಯವಯವಾನಾಂ ಸಂಧೌ ಜಾತಮುತ್ಪನ್ನಂ ಯಕ್ಷ್ಮಂ ವಿ ವೃಹಾಮಿ । ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

(ಎಲೈ ವ್ಯಾಧಿಪೀಡಿತನೇ) **ತೇ**—ನಿನ್ನ । **ಅಂಗಾದಂಗಾತ್**—ಪ್ರತಿಅಂಗದಿಂದಲೂ (ಸಮಸ್ತ ಅವಯವಗಳಿಂದಲೂ) । **ಲೋಮ್ನೋಲೋಮ್ನಃ**—ಪ್ರತಿಕೂದಲಿನಿಂದಲೂ (ಸಮಸ್ತ ರೋಮಗಳಿಂದಲೂ) । **ಪರ್ವಣಿಪರ್ವಣಿ**—ಸಮಸ್ತ ಸಂಧಿ ಅಥವಾ ಕೀಲುಗಳಲ್ಲಿ । **ಜಾತಂ**—ಉತ್ಪನ್ನವಾದ (ವ್ಯಾಪಿಸಿರುವ) । **ಇದಂ ತಂ ಯಕ್ಷ್ಮಂ**—ಆ ಯಕ್ಷ್ಮರೋಗವನ್ನು । **ತೇ**—ನಿನ್ನ । **ಸರ್ವಸ್ಮಾತ್ ಆತ್ಮನಃ**—ಶರೀರದ ಸಮಸ್ತ ಭಾಗಗಳಿಂದಲೂ **ವಿ ವೃಹಾಮಿ**—ಬೇರ್ಪಡಿಸಿ ಕಿತ್ತು ಹಾಕುತ್ತೇನೆ.

॥ ಭಾವಾರ್ಥ ॥

ಎಲೈ ವ್ಯಾಧಿಪೀಡಿತನೇ, ನಿನ್ನ ಸಮಸ್ತಅವಯವಗಳು, ಸಮಸ್ತ ರೋಮಕೂಪಗಳು ಸಮಸ್ತ ಸಂಧಿ ಅಥವಾ ಕೀಲುಗಳು ಇವುಗಳಲ್ಲಿ ಉತ್ಪನ್ನವಾದ ಅಥವಾ ವ್ಯಾಪಿಸಿರುವ ಈ ಯಕ್ಷ್ಮರೋಗವನ್ನು ನಿನ್ನ ಶರೀರದ ಸಮಸ್ತ ಭಾಗಗಳಿಂದಲೂ ಬೇರ್ಪಡಿಸಿ ಕಿತ್ತುಹಾಕುತ್ತೇನೆ.

English Translation.

I banish disease from each limb, from each hair, from each joint where it is generated, from your whole person

---

## ನೂರ ಅರವತ್ತನಾಲ್ಕನೆಯ ಸೂಕ್ತವು

। ಸಾಯಣಭಾಷ್ಯಂ ॥

**ಅಪೇಹೀತಿ ಪಂಚರ್ಚಂ ತ್ರಯೋದಶಂ ಸೂಕ್ತಂ । ಆಂಗಿರಸಸ್ಯ ಪ್ರಚೇತಸ ಆರ್ಷಂ । ತೃತೀಯಾ ತ್ರಿಷ್ಟುಪ್ । ಪಂಚಮೀ ಪಂಕ್ತಿಃ । ದುಃಸ್ವಪ್ನನಾಶನಂ ದೇವತಾ । ತಥಾ ಚಾನುಕ್ರಾಂತಂ । ಅಪೇಹಿ ಪಂಚ ಪ್ರಚೇತಾ ದುಃಸ್ವಪ್ನಘ್ನಂ ಪಂಕ್ತ್ಯಂತಂ ತ್ರಿಷ್ಟುಮ್ಮಧ್ಯಮಿತಿ ॥ ಲೈಂಗಿಕೋ ವಿನಿಯೋಗಃ ॥**

ಅನುವಾದವು—**ಅಪೇಹಿ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸಗೋತ್ರದ ಪ್ರಚೇತಾಃ ಎಂಬುವನು ಋಷಿಯು; ದುಃಸ್ವಪ್ನನಾಶನವು ದೇವತೆಯು; ಈ ಸೂಕ್ತದ ಮೂರನೆಯ ಋಕ್ಕು ತ್ರಿಷ್ಟುಪ್‌ಛಂದಸ್ಸವು, ಐದನೆಯ ಋಕ್ಕು ಪಂಕ್ತಿಛಂದಸ್ಸವು; ಅನುಕ್ರಮಣಿಕೆಯಲ್ಲಿ-**ಅಪೇಹಿ ಪಂಚ ಪ್ರಚೇತಾ ದುಃಸ್ವಪ್ನಘ್ನಂ ಪಂಕ್ತ್ಯಂತಂ ತ್ರಿಷ್ಟುಮ್ಮಧ್ಯಂ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೧೬೪

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೬೪ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೨೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ॥
॥ ಋಷಿಃ—ಪ್ರಚೇತಾಃ ॥
॥ ದೇವತಾ—ದುಃಸ್ವಪ್ನಘ್ನಂ ॥
॥ ಛಂದಃ—೧, ೨, ೪. ಅನುಷ್ಟುಪ್ । ೩. ತ್ರಿಷ್ಟುಪ್ ॥ ೫. ಪಂಕ್ತಿಃ ॥

॥ ಸಂಹಿತಾಪಾಠಃ ॥

ಅಪೇಹಿ ಮನಸಸ್ಪತೇಽಪ ಕ್ರಾಮ ಪರಶ್ಚರ ।
ಪರೋ ನಿರ್ಋತ್ಯಾ ಆ ಚಕ್ಷ್ವ ಬಹುಧಾ ಜೀವತೋ ಮನಃ ॥ ೧ ॥

॥ ಪದಪಾಠಃ ॥

ಅಪ । ಇಹಿ । ಮನಸಃ । ಪತೇ । ಅಪ । ಕ್ರಾಮ । ಪರಃ । ಚರ ।
ಪರಃ । ನಿಃऽಋತ್ಯೈ । ಆ । ಚಕ್ಷ್ವ । ಬಹುಧಾ । ಜೀವತಃ । ಮನಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮನಸಸ್ಪತೇ ಸ್ವಪ್ನಾವಸ್ಥಸ್ಯ ಮನಸಃ ಸ್ವಾಮಿನ್ ದುಃಸ್ವಪ್ನಾಧಿದೇವ ಅಪೇಹಿ । ಅಪಗಚ್ಛ । ಸ್ವಪ್ನಾವಸ್ಥಾವತೋ ಮತ್ತೋ ನಿರ್ಗಚ್ಛ । ನಿರ್ಗತ್ಯ ಚಾಪ ಕ್ರಾಮ । ದೇಶಾಂತರಂ ಗಂತುಂ ಪಾದೌ ವಿಕ್ಷಿಪ । ದೂರದೇಶಂ ಗಚ್ಛೇತ್ಯರ್ಥಃ । ಅಪಕ್ರಮ್ಯ ಚ ಪರಃ ಪರಸ್ತಾದ್ವಿಪ್ರಕೃಷ್ಟೇ ದೇಶೇ ಚರ । ಯಥೇಚ್ಛಂ ವರ್ತಸ್ವ । ಅಪಿ ಚ ನಿರ್ಋತ್ಯೈ ಪಾಪದೇವತಾಯೈ ಪರಃ ಪರಸ್ತಾದ್ವರ್ತಮಾನಾಯೈ ಆ ಚಕ್ಷ್ವ । ವಯಂ ನ ಬಾಧನೀಯಾ ಇತಿ ಪ್ರಬ್ರೂಹಿ । ಜೀವತೋ ಮಮ ಮನೋ ಬಹುಧಾ ಬಹುಪ್ರಕಾರಂ ಭವತಿ । ಭೋಕ್ತವ್ಯೇಷು ಬಹುಷು ವಿಷಯೇಷೂತ್ಸುಕಂ ಸದ್ವರ್ತತೇ । ಅತಸ್ತದ್ವಿನಾಶಕಂ ದುಃಸ್ವಪ್ನದರ್ಶನಂ ನಶ್ಯತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಮನಸಃ ಪತೇ**— ಸ್ವಪ್ನಾವಸ್ಥೆಯಲ್ಲಿರುವ ಮನಸ್ಸಿಗೆ ಸ್ವಾಮಿಯಾದ ಎಲೈ ದುಃಸ್ವಪ್ನದೇವತೆಯೇ, । **ಅಪೇಹಿ**—ಸ್ವಪ್ನಾವಸ್ಥೆಯಲ್ಲಿರುವ ನನ್ನ ಸಮೀಪದಿಂದ ಹೊರಟುಹೋಗು । **ಅಪ ಕ್ರಾಮ**— ಬೇರೆ ಕಡೆಗೆ ಹೊರಟುಹೋಗು । **ಪರಃ**—ಅಲ್ಲಿಂದ ಇನ್ನೂ ದೂರದೇಶಕ್ಕೆ । **ಚರ**—ನಿನ್ನಿಷ್ಟಬಂದಂತೆ ಹೋಗು । **ನಿರ್ಋತ್ಯೈ**—ನಿರ್ಋತಿ ಎಂಬ ಪಾಪದೇವತೆಗೆ । **ಆ ಚಕ್ಷ್ವ**—ನಮ್ಮನ್ನು ಹಿಂಸೆಪಡಿಸಬಾರದೆಂದು ಹೇಳು । **ಜೀವಿತಃ**—ಜೀವಿಸುತ್ತಿರುವ ನನ್ನ । **ಮನಃ**—ಮನಸ್ಸು । **ಬಹುಧಾ**—ಅನೇಕಪ್ರಕಾರವಾಗಿ ಎಂದರೆ ಅನೇಕವಿಷಯಗಳಲ್ಲಿ ಆಸಕ್ತವಾಗಿರುತ್ತದೆ.

॥ ಭಾವಾರ್ಥ ॥

ಎಲೈ ದುಃಸ್ವಪ್ನದೇವತೆಯೇ, ಸ್ವಪ್ನಾವಸ್ಥೆಯಲ್ಲಿರುವ ನನ್ನನ್ನು ಬಿಟ್ಟು ದೂರ ಸರಿ. ದೂರದೇಶಕ್ಕೆ ನಿನ್ನಿಷ್ಟ ಬಂದೆಡೆಗೆ ಹೊರಟುಹೋಗು. ನಮ್ಮನ್ನು ಹಿಂಸಿಸಬಾರದೆಂದು ಪಾಪದೇವತೆಯಾದ ನಿರ್ಋತಿಗೆ ಹೇಳು. ಜೀವಿಸುತ್ತಿರುವ ನನ್ನ ಮನಸ್ಸು ಅನೇಕವಿಷಯಾದಿಗಳಲ್ಲಿ ಆಸಕ್ತವಾಗಿರುತ್ತದೆ.

English Translation

Lord of the mind, begone, depart, proceed to a dis-tance: look at Nirriti far off; the mind of a living being is manifold.

॥ ಸಂಹಿತಾಪಾಠಃ ॥

ಭದ್ರಂ ವೈ ವರಂ ವೃಣತೇ ಭದ್ರಂ ಯುಂಜಂತಿ ದಕ್ಷಿಣಂ ।
ಭದ್ರಂ ವೈವಸ್ವತೇ ಚಕ್ಷುರ್ಬಹುತ್ರಾ ಜೀವತೋ ಮನಃ ॥ ೨ ॥

॥ ಪದಪಾಠಃ ॥

ಭದ್ರಂ । ವೈ । ವರಂ । ವೃಣತೇ । ಭದ್ರಂ । ಯುಂಜಂತಿ । ದಕ್ಷಿಣಂ ।
ಭದ್ರಂ । ವೈವಸ್ವತೇ । ಚಕ್ಷುಃ । ಬಹುऽತ್ರಾ । ಜೀವತಃ । ಮನಃ ॥ ೨ ॥

॥ ಸಾಯಣಭಾಷ್ಯಂ ॥

**ಭದ್ರಂ ವೈ ಶೋಭನಮೇವ ವರಂ ವರಣೀಯಂ ದುಃಸ್ವಪ್ನವಿನಾಶರೂಪಂ ಫಲಂ ವೃಣತೇ । ಸರ್ವೇ ಜನಾಃ ಪ್ರಾರ್ಥಯಂತೇ । ದಕ್ಷಿಣಂ ಪ್ರವೃದ್ಧಂ ಭದ್ರಂ ಶೋಭನಂ ತತ್ಫಲಂ ಯುಂಜಂತಿ । ಪ್ರಾಪ್ನುವಂತಿ ಚ । ವೈವಸ್ವತೇ ವಿವಸ್ವತಃ ಪುತ್ರೇ ಯಮೇ ವಿಷಯೇ ಭದ್ರಂ ಶೋಭನಮೇವ ಚಕ್ಷುರ್ದರ್ಶನಮಹಂ ಪ್ರಾರ್ಥಯೇ । ದುಃಸ್ವಪ್ನಾಧಿದೇವೋ ವೈವಸ್ವತೋऽಸ್ಮಾನ್ಮಾ ಬಾಧತಾಂ । ಭದ್ರಮೇವ ದರ್ಶನಮಿಹ ಲೋಕೇऽವಸ್ಥಾನಲಕ್ಷಣಂ ಕರೋತ್ವಿತ್ಯರ್ಥಃ । ಬಹುತ್ರಾ ಬಹುಷು ಹಿ ವಿಷಯೇಷು ಜೀವತೋ ಮಮ ಮನೋ ವರ್ತತೇ ॥**

॥ ಪ್ರತಿಪದಾರ್ಥ ॥

**ಭದ್ರಂ ವೈ**—ಮಂಗಳಕರವಾದ । **ವರಂ**—ಎಲ್ಲರಿಗೂ ಬೇಕಾದ ದುಃಸ್ವಪ್ನವಿನಾಶನರೂಪವಾದ ಫಲವನ್ನು । **ವೃಣತೇ**—ಸಮಸ್ತಜನರೂ ಅಪೇಕ್ಷಿಸುತ್ತಾರೆ । **ದಕ್ಷಿಣಂ**—ಅತಿಶಯವಾದ । **ಭದ್ರಂ**—ಆ ಮಂಗಳವನ್ನು । **ಯುಂಜಂತಿ**—ಎಲ್ಲರೂ ಪಡೆಯುತ್ತಾರೆ । **ವೈವಸ್ವತೇ**— ವಿವಸ್ವಂತನ ಪುತ್ರನಾದ ಯಮನ ವಿಷಯದಲ್ಲಿ । **ಭದ್ರಂ**—ಮಂಗಳಕರವಾದ । **ಚಕ್ಷುಃ**—ದೃಷ್ಟಿಯನ್ನು ನಾನು ಬಯಸುತ್ತೇನೆ । **ಜೀವತಃ**—ಜೀವಿಸುತ್ತಿರುವ ನನ್ನ । **ಮನಃ**—ಮನಸ್ಸು । **ಬಹುತ್ರಾ**—ಬಹಳ ವಿಷಯಗಳಲ್ಲಿ ಪ್ರವರ್ತಿಸುತ್ತದೆ.

|| ಭಾವಾರ್ಥ ||

ಮಂಗಳಕರವಾದ ಮತ್ತು ದುಃಸ್ವಪ್ನನಾಶನರೂಪವಾದ ಫಲವನ್ನು ಎಲ್ಲರೂ ಬಯಸುತ್ತಾರೆ ಮತ್ತು ಅತಿಶಯವಾದ ಆ ಮಂಗಳವನ್ನು ಎಲ್ಲರೂ ಪಡೆಯುತ್ತಾರೆ ವಿವಸ್ವಂತನ ಪುತ್ರನಾದ ಯಮನ ವಿಷಯದಲ್ಲಿ ಮಂಗಳಕರವಾದ ದೃಷ್ಟಿಯನ್ನು ನಾನು ಬಯಸುತ್ತೇನೆ. ಬದುಕಿರುವ ನನ್ನ ಮನಸ್ಸು ನಾನಾ ವಿಷಯಗಳಲ್ಲಿ ಪ್ರವರ್ತಿಸುತ್ತದೆ.

English Translation

Men solicit the boon of good fortune, they acquire abundant good fortune, (I desire) the auspicious sight of Vaivaswat; the mind of a living is variously (directed).

|| ಸಂಹಿತಾಪಾಠಃ ||

ಯದಾಶಸಾ ನಿಃಶಸಾಭಿಶಸೋಪಾರಿಮ ಜಾಗ್ರತೋ ಯತ್ಸ್ವಪಂತಃ ।
ಅಗ್ನಿರ್ವಿಶ್ವಾನ್ಯಪ ದುಷ್ಕೃತಾನ್ಯಜುಷ್ಟಾನ್ಯಾರೇ ಅಸ್ಮದ್ದಧಾತು ॥ ೩ ॥

|| ಪದಪಾಠಃ ||

ಯತ್ । ಆಽಶಸಾ । ನಿಃಽಶಸಾ । ಅಭಿಽಶಸಾ । ಉಪಽಆರಿಮ । ಜಾಗ್ರತಃ । ಯತ್ । ಸ್ವಪಂತಃ ।
ಅಗ್ನಿಃ । ವಿಶ್ವಾನಿ । ಅಪ । ದುಃಽಕೃತಾನಿ । ಅಜುಷ್ಟಾನಿ । ಆರೇ । ಅಸ್ಮತ್ । ದಧಾತು ॥ ೩ ॥

|| ಸಾಯಣಭಾಷ್ಯಂ ||

ಯದ್ದುಷ್ಕೃತಮಾಶಸಾಶಂಸನೇನಾಭಿಲಾಷೇಣ ಜಾಗ್ರತೋ ಜಾಗರಣಾವಸ್ಥಾಯಾಂ ವರ್ತಮಾನಾ ವಯಮುಪಾರಿಮ ಉಪಗತವಂತಃ ಸ್ಮ ಯಚ್ಚ ಸ್ವಪಂತಃ ಸ್ವಪ್ನಾವಸ್ಥಾಂ ಪ್ರಾಪ್ತಾ ಉಪಗತವಂತಃ ಸ್ಮ । ತಥಾ ನಿಃಶಸಾ ನಿಃಶಂಸನೇನ ನಿರ್ಗತಾಭಿಲಾಷೇಣಾಭಿಶಸಾಭಿಗತಾಭಿಲಾಷೇಣ ಚ ಕಾರಣೇನಾವಸ್ಥಾದ್ವಯೇ ಯದ್ದುಷ್ಕೃತಮುಪಾಗಚ್ಛೇಮ । ತಾನಿ ವಿಶ್ವಾನಿ ಸರ್ವಾಣ್ಯಜುಷ್ಟಾನ್ಯಸೇವ್ಯಾನ್ಯಪ್ರಿಯಾಣಿ ವಾ ದುಷ್ಕೃತಾನಿ ದುಷ್ಕರ್ಮಾಣ್ಯಗ್ನಿರಸ್ಮದಾರೇಽಸ್ಮತ್ತೋ ದೂರದೇಶೇಽಪ ದಧಾತು । ಅಪಕೃಷ್ಯ ಸ್ಥಾಪಯತು ॥

|| ಪ್ರತಿಪದಾರ್ಥ ||

**ಜಾಗ್ರತಃ**— ಜಾಗ್ರದವಸ್ಥೆ (ಎಚ್ಚರವಾಗಿರುವಾಗ) ಯಲ್ಲಿರುವಾಗ ಅಥವಾ । **ಸ್ವಪಂತಃ**— ಸ್ವಪ್ನಾವಸ್ಥೆಯಲ್ಲಿರುವಾಗ ನಾವು । **ಯತ್**— ಯಾವ ಪಾಪವನ್ನು । **ಆಶಸಾ**— ಇತರರೊಡನೆ ಮಾತನಾಡುವುದರಿಂದ । **ಉಪಾರಿಮ**— ಹೊಂದಿರುತ್ತೇವೆಯೋ । **ಯತ್**— ಯಾವ ಪಾಪವನ್ನು । **ನಿಃಶಸಾ**— ಇತರರಿಗೆ ವಿರೋಧವಾಗುವಂತೆ ಮಾತನಾಡುವುದರಿಂದ ಪಡೆಯುತ್ತೇವೆಯೋ । **ಅಭಿಶಸಾ**— ಈ ಎರಡುವಿಧದಿಂದಲೂ ನಾವು ಯಾವ ಪಾಪ

ವನ್ನು ಹೊಂದಿರುತ್ತೇವೆಯೋ । **ಅಜುಷ್ಟಾನಿ**—ಅಪ್ರಿಯವಾದ । **ವಿಶ್ವಾನಿ**—ಸಮಸ್ತವಾದ । **ದುಷ್ಕೃತಾನಿ**—ಆ ದುಷ್ಕರ್ಮಗಳನ್ನು (ಪಾಪಗಳನ್ನು) । **ಅಗ್ನಿಃ**—ಅಗ್ನಿಯು । **ಅಸ್ಮತ್ ಆರೇ**—ನಮ್ಮಿಂದ ದೂರವಾಗಿ । **ಅಪ ದಧಾತು**—ಕೊಂಡೊಯ್ಯಲಿ.

॥ ಭಾವಾರ್ಥ ॥

ನಾವು ಜಾಗ್ರದವಸ್ಥೆಯಲ್ಲಿಯೂ ಸ್ವಪ್ನಾವಸ್ಥೆಯಲ್ಲಿಯೂ ಇತರ ಜನರ ಕೂಡ ಮಾತನಾಡುವುದರಿಂದ, ಇತರರಿಗೆ ವಿರೋಧವಾಗಿ ಮಾತನಾಡುವುದರಿಂದ ಮತ್ತು ಈ ಎರಡು ವಿಧ ಮಾರ್ಗಗಳಿಂದ ಯಾವ ಪಾಪವನ್ನು ಗಳಿಸುತ್ತೇವೆಯೋ, ಅಪ್ರಿಯವಾದ ಆ ಸಮಸ್ತ ಪಾಪಗಳನ್ನು ಅಥವಾ ದುಷ್ಕರ್ಮಗಳನ್ನು ಅಗ್ನಿಯು ನಮ್ಮಿಂದ ದೂರಪ್ರದೇಶಕ್ಕೆ ಕೊಂಡೊಯ್ಯಲಿ.

## English Translation.

Whatever sin we have committed by speaking to (others), speaking against (others), speaking (evil) about (others), whether waking or sleeping, may Agni remove all such hateful sins for from us.

॥ ಸಂಹಿತಾಪಾಠಃ ॥

ಯದಿಂದ್ರ ಬ್ರಹ್ಮಣಸ್ಪತೇಽಭಿದ್ರೋಹಂ ಚರಾಮಸಿ ।
ಪ್ರಚೇತಾ ನ ಆಂಗಿರಸೋ ದ್ವಿಷತಾಂ ಪಾತ್ವಂಹಸಃ ॥ ೪ ॥

॥ ಪದಪಾಠಃ ॥

ಯತ್ । ಇಂದ್ರ । ಬ್ರಹ್ಮಣಃ । ಪತೇ । ಅಭಿಽದ್ರೋಹಂ । ಚರಾಮಸಿ ।
ಪ್ರಽಚೇತಾಃ । ನಃ । ಆಂಗಿರಸಃ । ದ್ವಿಷತಾಂ । ಪಾತು । ಅಂಹಸಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಹೇ ಬ್ರಹ್ಮಣಸ್ಪತೇ ಯುವಯೋರ್ವಿಷಯೇ ಯದಭಿದ್ರೋಹಮಭಿತೋ ದ್ರೋಹಂ ಪಾಪಂ ದುಃಸ್ವಪ್ನಕಾರಣಂ ಚರಾಮಸಿ ಆಚರಾಮಃ ಕುರ್ಮಃ ತಸ್ಮಾದಭಿದ್ರೋಹಾದಸ್ಮಾನ್ರಕ್ಷತಮಿತಿ ಶೇಷಃ । ಅಪಿ ಚಾಂಗಿರಸೋಽಂಗಿರೋಽಭಿಃ ಸ್ತೋತೃಭಿಃ ಸಬಾಂಧವಃ ಪ್ರಚೇತಾಃ ಪ್ರಕೃಷ್ಟಜ್ಞಾನೋ ವರುಣಶ್ಚ ದ್ವಿಷತಾಂ ದ್ವೇಷ್ಟ್ರೂಣಾಮಂಹಸಸ್ತತ್ಕರ್ತೃಕಾದಸ್ಮದ್ವಿಷಯಾತ್ಪಾಪಾನ್ನೋಽಸ್ಮಾನ್ಪಾತು । ರಕ್ಷತು ॥ ಯದ್ವಾ ॥ ವಿಭಕ್ತಿವ್ಯತ್ಯಯಃ ॥ ಆಂಗಿರಸಮಂಗಿರೋಗೋತ್ರಂ ಪ್ರಚೇತಸಮೃಷಿಂ ನಃ ॥ ವಚನವ್ಯತ್ಯಯಃ ॥ ಮಾಂ ದ್ವಿಷತಾಮಂಹಸಃ ಪಾತು । ಪ್ರಕೃತತ್ವಾದಿಂದ್ರ ಇತಿ ಗಮ್ಯತೇ ॥

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ | **ಬ್ರಹ್ಮಣಃ ಪತೇ**—ಎಲೈ ಬ್ರಹ್ಮಣಸ್ಪತಿಯೇ (ನಾವು) | **ಅಭಿದ್ರೋಹಂ**—ಇತರರಿಗೆ ದ್ರೋಹವನ್ನುಂಟುಮಾಡುವ | **ಯತ್**—ದುಃಸ್ವಪ್ನಕ್ಕೆ ಕಾರಣಭೂತವಾದ ಯಾವ ಪಾಪವನ್ನು | **ಚರಾಮಸಿ**—ಮಾಡುತ್ತೇವೆಯೋ ಅಂತಹ ದ್ರೋಹದಿಂದ ನಮ್ಮನ್ನು ರಕ್ಷಿಸಿರಿ (ಮತ್ತು) | **ಆಂಗಿರಸಃ**—ಸ್ತೋತೃಗಳಿಂದ ಸ್ತುತ್ಯನಾದ | **ಪ್ರಚೇತಾಃ**—ಪ್ರಕೃಷ್ಟಜ್ಞಾನಯುಕ್ತನಾದ ವರುಣನು | **ದ್ವಿಷತಾಂ**—ನಮ್ಮನ್ನು ದ್ವೇಷಿಸುವ ಶತ್ರುಗಳ | **ಅಂಹಸಃ**—ಪಾಪದಿಂದ | **ನಃ**—ನಮ್ಮನ್ನು | **ಪಾತು**—ರಕ್ಷಿಸಲಿ | [**ಅಥವಾ ಆಂಗಿರಸಃ** ಅಂಗಿರಸಗೋತ್ರದ | **ಪ್ರಚೇತಾಃ**—ಪ್ರಚೇತಸನೆಂಬ ಈ ಸೂಕ್ತದ್ರಷ್ಟೃವಾದ ನನ್ನನ್ನು | **ದ್ವಿಷತಾಂ ಅಂಹಸಃ** ದ್ವೇಷರೂಪವಾದ ಪಾಪದಿಂದ | **ಪಾತು**—ರಕ್ಷಿಸಲಿ]

|| ಭಾವಾರ್ಥ ||

ಎಲೈ ಇಂದ್ರನೇ, ಎಲೈ ಬ್ರಹ್ಮಣಸ್ಪತಿಯೇ, ನಾವು ಮಾಡಬಹುದಾದ ಇತರರಿಗೆ ದ್ರೋಹವೆಸಗುವ ಪಾಪದಿಂದ ನಮ್ಮನ್ನು ರಕ್ಷಿಸಿರಿ ಸ್ತೋತೃಗಳಿಂದ ಸ್ತುತ್ಯನಾದವನೂ ಪ್ರಕೃಷ್ಟಜ್ಞಾನಯುಕ್ತನೂ ಆದ ವರುಣನು ನಾವು ದ್ವೇಷಿಸುವ ಶತ್ರುಗಳಿಂದ ಅಥವಾ ಪಾಪದಿಂದ ನಮ್ಮನ್ನು ರಕ್ಷಿಸಲಿ ಅಥವಾ ಅಂಗಿರಗೋತ್ರದ ಪ್ರಚೇತಾಃ ಎಂಬ ಹೆಸರಿನ ಈ ಸೂಕ್ತದೃಷ್ಟೃವಾದ ನನ್ನನ್ನು ಶತ್ರುವಿನ ವಿಷಯದಲ್ಲಿ ದ್ವೇಷರೂಪವಾದ ಪಾಪದಿಂದ ಇಂದ್ರನು ರಕ್ಷಿಸಲಿ.

## English Translation

O Indra, O Brahmanaspati, whatever sin we run into, (save us therefrom), and may the Prachetas of the Angirasas protect us from the malignity of our enemies.

|| ಸಂಹಿತಾಪಾಠಃ ||

ಅಜೈಷ್ಮಾದ್ಯಾಸನಾಮ ಚಾಭೂಮಾನಾಗಸೋ ವಯಂ |
ಜಾಗ್ರತ್ಸ್ವಪ್ನಃ ಸಂಕಲ್ಪಃ ಪಾಪೋ ಯಂ ದ್ವಿಷ್ಮಸ್ತಂ ಸ ಋಚ್ಛತು ಯೋ
ನೋ ದ್ವೇಷ್ಟಿ ತಮೃಚ್ಛತು || ೫ ||

|| ಪದಪಾಠಃ ||

ಅಜೈಷ್ಮ | ಅದ್ಯ | ಅಸನಾಮ | ಚ | ಅಭೂಮ | ಅನಾಗಸಃ | ವಯಂ |
ಜಾಗ್ರತ್ऽಸ್ವಪ್ನಃ | ಸಂऽಕಲ್ಪಃ | ಪಾಪಃ | ಯಂ | ದ್ವಿಷ್ಮಃ | ತಂ | ಸಃ | ಋಚ್ಛತು | ಯಃ | ನಃ | ದ್ವೇಷ್ಟಿ |
ತಂ | ಋಚ್ಛತು || ೫ ||

|| ಸಾಯಣಭಾಷ್ಯಂ ||

**ಅದ್ಯಾಸ್ಮಿನ್ಕಾಲೇಽಜೈಷ್ಮ । ಜೇತವ್ಯಾನಿ ಸರ್ವಾಣಿ ಜಿತವಂತೋಽಭೂಮ ದುಃಸ್ವಪ್ನಸ್ಯ ನಷ್ಟತ್ವಾತ್ । ತದನಂತರಮಸನಾಮ ಚ ಸಂಭಕ್ತವ್ಯಾನಿ ಚ ಸಮಭಜಾಮ । ತಥಾ ವಯಮನಾಗಸೋಽನಪರಾಧಾಶ್ಚಾಭೂಮ । ಜಾಗ್ರತ್ಸ್ವಪ್ನಾವಸ್ಥಯೋಃ ಸಂಬಂಧೀ ಪಾಪಃ ಪಾಪಫಲರೂಪಃ ಸ ಸಂಕಲ್ಪೋ ದುಃಸ್ವಪ್ನಾಧ್ಯವಸಾಯೋ ಯಂ ಶತ್ರುಂ ವಯಂ ದ್ವಿಷ್ಮಃ ತಮೃಚ್ಛತು । ಪ್ರಾಪ್ನೋತು । ಯಶ್ಚ ನೋಽಸ್ಮಾನ್ದ್ವೇಷ್ಟಿ ತಮೃಚ್ಛತು । ಪ್ರಾಪ್ನೋತು ||**

|| ಪ್ರತಿಪದಾರ್ಥ ||

**ವಯಂ**—ನಾವು । **ಅದ್ಯ**—ಈಗ । **ಅಜೈಷ್ಮ**—ದುಃಸ್ವಪ್ನನಾಶದಿಂದ ಸಕಲವನ್ನು ಜಯಿಸಿದ್ದೇವೆ । **ಅಸನಾಮ ಚ** –ಹೊಂದಬೇಕಾದದ್ದೆಲ್ಲವನ್ನೂ ಹೊಂದಿದ್ದೇವೆ । **ಅನಾಗಸಃ**—ಪಾಪರಹಿತರಾಗಿಯೂ (ಅಪರಾಧ ರಹಿತರಾಗಿಯೂ) । **ಅಭೂಮ**—ಆಗಿದ್ದೇವೆ । **ಜಾಗ್ರತ್ಸ್ವಪ್ನಃ**–ಜಾಗ್ರತ್ ಮತ್ತು ಸ್ವಪ್ನಾವಸ್ಥೆಗಳಿಗೆ ಸಂಬಂಧಿಸಿದ । **ಪಾಪಃ**—ನಮ್ಮ ಪಾಪವೂ । **ಸಃ ಸಂಕಲ್ಪಃ**—ಪಾಪ ಮಾಡಬೇಕೆಂಬ ಕೆಟ್ಟ ಅಭಿಲಾಷೆಯೂ ಸಹ । **ಯಂ**—ಯಾವ ಪುರುಷನನ್ನು । **ದ್ವಿಷ್ಮಃ**–ನಾವು ದ್ವೇಷಿಸುತ್ತೇವೆಯೋ । **ಸಃ**—ಆ ಪುರುಷನು । **ತಂ**—ಆ ಪಾಪಫಲವನ್ನು । **ಋಚ್ಛತು**—ಹೊಂದಲಿ (ಮತ್ತು) । **ಯಃ**—ಯಾವ ಪುರುಷನು । **ನಃ**—ನಮ್ಮನ್ನು । **ದ್ವೇಷ್ಟಿ**—ದ್ವೇಷಿಸುತ್ತಾನೆಯೋ । **ತಂ** –ಅವನನ್ನು । **ಋಚ್ಛತು**–ಆ ಪಾಪಫಲವು ಹೋಗಿ ಸೇರಲಿ.

|| ಭಾವಾರ್ಥ ||

ಈಗ ನಾವು ದುಃಸ್ವಪ್ನನಾಶದಿಂದ ಸಕಲವನ್ನೂ ಗೆದ್ದಂತಾಗಿದೆ. ಹೊಂದ ಬೇಕಾದದ್ದೆಲ್ಲವನ್ನೂ ಹೊಂದಿದ್ದೇವೆ ಪಾಪರಹಿತರಾಗಿಯೂ ಅಥವಾ ನಿರಪರಾಧಿಗಳಾಗಿಯೂ ಆಗಿದ್ದೇವೆ. ಜಾಗ್ರದವಸ್ಥೆಯಲ್ಲಿಯೂ ಸ್ವಪ್ನಾವಸ್ಥೆಯಲ್ಲಿಯೂ ನಾವು ಮಾಡಿರಬಹುದಾದ ಪಾಪವು ಮತ್ತು ದ್ರೋಹಮಾಡಬೇಕೆಂಬ ಕೆಟ್ಟ ಬುದ್ಧಿಯೂ ಸಹ ನಾವು ದ್ವೇಷಿಸುವ ಮತ್ತು ನಮ್ಮನ್ನು ದ್ವೇಷಿಸುವ ಶತ್ರುವನ್ನು ಹೋಗಿ ಸೇರಲಿ.

English Translation.

We have triumphed to day, we have won, we have become free from guilt; may evil designs formed in waking or sleep be transferred to him whom we hate, be transferred to him who hates us

## ನೂರ ಅರವತ್ತೈದನೆಯ ಸೂಕ್ತವು

### ಪೀಠಿಕೆ

ವೈದಿಕ ಇತಿಹಾಸದಲ್ಲಿ ಪಕ್ಷಿಗಳಿಗೂ ಒಂದು ಪಾತ್ರವಿದೆ. ಸೋಮವನ್ನು ಅನೇಕಕಡೆ ಪಕ್ಷಿಗೆ ಹೋಲಿಸಿದಾರೆ, ಪಕ್ಷಿಯೆಂದೇ ಕರೆದಿದ್ದಾರೆ. ವಿಶೇಷವಾಗಿ ಅಗ್ನಿಯನ್ನು ಪಕ್ಷಿಗಳಿಗೆ ಹೋಲಿಸಿರುವುದು ಅಥವಾ ಪಕ್ಷಿ ಎಂದು ಕರೆದಿರು

ವುದೂ ಕಂಡು ಬರುತ್ತದೆ. ಸೂರ್ಯನಿಗೂ ಪಕ್ಷಿಯೆಂಬ ಹೆಸರಿದೆ ಎರಡು ಸಂದರ್ಭಗಳಲ್ಲಿ ಗುರುತ್ಮಾನ್ ಎಂಬ ಹೆಸರಿದೆ. ವೇದದಲ್ಲಿ ಪಕ್ಷಿಯ ಮುಖ್ಯಕರ್ಮವೆಂದರೆ (ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪದಲ್ಲಿ) ಸ್ವರ್ಗದಲ್ಲಿದ್ದ ಸೋಮಲತೆಗಳನ್ನು ಭೂಮಿಗೆ ತರುವುದು ಕಾಠಕೋಪನಿಷತ್ತಿನ ಪ್ರಕಾರ ಇಂದ್ರನೇ ಶ್ಯೇನರೂಪವಾಗಿ ಸೋಮ ಅಥವಾ ಅಮೃತವನ್ನು ತೆಗೆದುಕೊಂಡು ಬಂದನೆಂದು ಉಕ್ತವಾಗಿದೆ.

ಇದಲ್ಲದೆ ಇತರ ಪಕ್ಷಿಗಳ ವಿಷಯವೂ ಅಲ್ಲಿಲ್ಲಿ ಸೂಚಿತವಾಗಿದೆ. ಶಕುನಪಕ್ಷಿಗಳು, ಮತ್ತು ಕೆಲವು ಪ್ರಾಣಿಗಳು ದೆ ವತೆಗಳಿಂದ ಕಳುಹಿಸಲ್ಪಡುತ್ತವೆ. ಗೂಬೆ ಮತ್ತು ಪಾರಿವಾಳಪಕ್ಷಿಗಳು ಯಮನ ದೂತರು. ಸೂತ್ರಗ್ರಂಥದಲ್ಲಿ ಗೂಬೆಯು ದುರ್ದೇವತೆಗಳ ದೂತನೆಂದೂ, ರಕ್ತಸಿಕ್ತವಾದ ಹಿಂಸ್ರಪಕ್ಷಿಯೆಂದೂ, ರಣಹದ್ದುಗಳು ಯಮನ ದೂತ ರೆಂದೂ ಹೇಳಿದೆ. ಪ್ರಕೃತಸೂಕ್ತದಲ್ಲಿ ಪ್ರಸ್ತಾಪಿಸಿರುವ ಪಾರಿವಾಳಪಕ್ಷಿಯು ಪಾಪದೇವತೆಯಾದ ನಿರ್ಋತಿಯ ಅಥವಾ ಮೃತ್ಯುದೇವತೆಯಾದ ಯಮನ ದೂತನೆಂದು ಪ್ರಸಿದ್ಧಿಯಾಗಿದೆ. ಆದ್ದರಿಂದಲೇ ಪಾರಿವಾಳಪಕ್ಷಿಯ ಆಗಮನವು ಕೆಟ್ಟ ಶಕುನವೆಂದೂ, ಮೃತ್ಯುಸೂಚಕವೆಂದೂ ಹೇಳಲಾಗಿದೆ. ಋಗ್ವೇದದ ಎರಡನೆಯ ಮಂಡಲದ ಕೊನೆಯ ಸೂಕ್ತ ದಲ್ಲಿ ಉತ್ತಮಶಕುನಗಳನ್ನೇ ಸೂಚಿಸಬೇಕೆಂದು ಶಕುನ ಪಕ್ಷಿಗೆ ಪ್ರಾರ್ಥನೆಯನ್ನು ಸಲ್ಲಿಸಲಾಗಿದೆ. ಈ ಸೂಕ್ತದ ವಿಷಯವಾಗಿ ಬೃಹದ್ದೇವತಾಗ್ರಂಥದಲ್ಲಿ—

**ಆಸೀದೃಷಿರ್ದೀರ್ಘತಪಾಃ ಕಪೋತೋ ನಾಮ ನೈರ್ಋತಃ ॥ ೬೬ ॥**
**ಅಕರೋತ್ಕಪೋತಸ್ತಸ್ಯಾಪ್ಯ್ಯಮಗ್ನಿಧಾನೇ ಪದಂ ಕಿಲ ।**
**ಸ ತದಾತ್ಮಹಿತೈರ್ವಾಕ್ಯೈಃ ಕಪೋತಂ ಸ್ತುತವಾನೃಷಿಃ ॥ ೬೭ ॥**
**ದೇವಾ ಇತಿ ತು ಸೂಕ್ತೇನ ಪ್ರಾಯಶ್ಚಿತ್ತಾರ್ಥಮುಚ್ಯತೇ ।**

(ಬೃ. ದೇ ೮-೬೬,೬೭)

ಪೂರ್ವದಲ್ಲಿ ಕಪೋತ ನೈರ್ಋತ ಎಂಬ ಹೆಸರಿನ ಒಬ್ಬ ಋಷಿಯಿದ್ದನು. ಅವನು ದೀರ್ಘಕಾಲ ತಪಸ್ಸುಮಾಡುತ್ತಿದ್ದನು. ಒಂದು ಸಮಯದಲ್ಲಿ ಒಂದು ಕಪೋತವು (ಪಾರಿವಾಳದ ಹಕ್ಕಿಯು) ಈ ಋಷಿಯು ವಾಸವಾಗಿದ್ದ ವನದಲ್ಲಿ ಈ ಋಷಿಯ ಅಗ್ನಿ ಕುಂಡದಲ್ಲಿ ತನ್ನ ಕಾಲನ್ನು ಇಟ್ಟಿತು ಪಾರಿವಾಳದ ಹಕ್ಕಿಯು ಆಗಮನವು ದುಃಶಕುನ ಸೂಚಕ ವೆಂದು ಅರಿತಿದ್ದ ಆ ಋಷಿಯು ತನಗೆ ಹಿತಕರವಾದ ವಾಕ್ಯಗಳಿಂದ ಈ ಕಪೋತವನ್ನು ಸ್ತುತಿಸಿದನು **ದೇವಾಃ ಕಪೋತ** ಎಂಬ ೧೬೫ನೇ ಸೂಕ್ತವನ್ನು ತಾನುಮಾಡಿದ ತಪ್ಪುಗಳ (ದೋಷಗಳ) ಪರಿಹಾರಕ್ಕೆ ಪ್ರಾಯಶ್ಚಿತ್ತಾರ್ಥವಾಗಿ ಪಠಿಸಲ್ಪಡಬೇಕು ಎಂದು ಹೇಳಿದೆ ಮತ್ತು ಋಗ್ವಿಧಾನದಲ್ಲಿ

**ದೇವಾಃ ಕಪೋತ ಇತಿ ತು ಕಪೋತಸ್ಯೋಪವೇಶನೇ ।**
**ಸೂಕ್ತೇನ ಜುಹುಯಾದಾಜ್ಯಂ ಯಮದೂತಂ ಹಿ ತಂ ವಿದುಃ ॥ ೧೦೩ ॥**

(ಋಗ್ವಿಧಾನ ಅಧ್ಯಾಯ. ೪. ಶ್ಲೋ ೧೦೩)

ಪಾರಿವಾಳದ ಪಕ್ಷಿಯು ಯಮನ ಎಂದರೆ ಮೃತ್ಯುವಿನ ದೂತನೆಂದು ಭಾವಿಸಲ್ಪಟ್ಟಿದೆ. ಈ ಹಕ್ಕಿಯು ಗೃಹಾದಿಗಳನ್ನು ಪ್ರವೇಶಿಸಿದರೆ ಆ ಗೃಹದಲ್ಲಿ ಮೃತ್ಯುವೇ ಮೊದಲಾದ ಅನಿಷ್ಟಗಳು ಪ್ರಾಪ್ತವಾಗುವ ಸಂಭವವಿರುವುದು ಆದ್ದರಿಂದ ಈ ದುಃಶಕುನದೋಷದ ಪ್ರಾಯಶ್ಚಿತ್ತಾರ್ಥವಾಗಿ **ದೇವಾಃ ಕಪೋತ** ಎಂಬ ಈ ಸೂಕ್ತದ ಮಂತ್ರ ಗಳಿಂದ ಪ್ರತಿಷ್ಠಿತಾಗ್ನಿಯಲ್ಲಿ ಆಜ್ಯದಿಂದ ಹೋಮಮಾಡಬೇಕು ಎಂದು ಹೇಳಿದೆ.

॥ ಸಾಯಣಭಾಷ್ಯಂ ॥

**ದೇವಾ ಇತಿ ಪಂಚರ್ಚಂ ಚತುರ್ದಶಂ ಸೂಕ್ತಂ ನಿರ್ಋತಿಪುತ್ರಸ್ಯ ಕಪೋತಾಖ್ಯಸ್ಯಾರ್ಷಂ ತ್ರೈಷ್ಟುಭಂ ವೈಶ್ವದೇವಂ । ತಥಾ ಚಾನುಕ್ರಾಂತಂ । ದೇವಾ ನೈರ್ಋತಃ ಕಪೋತಃ ಕಪೋತೋಪಹತೌ ಪ್ರಾಯಶ್ಚಿತ್ತಮಿದಂ ವೈಶ್ವದೇವಮಿತಿ ॥ ಕಪೋತೋ ಯದಿ ಗೃಹಂ ಪ್ರವಿಶೇತ್ ತದಾನೇನ ಸೂಕ್ತೇನ ಹೋತವ್ಯಂ । ಸೂತ್ರ್ಯತೇ ಹಿ । ಕಪೋತಶ್ಚೇದಗಾರಮುಪಹನ್ಯಾದನುಪತೇದ್ವಾ ದೇವಾಃ ಕಪೋತ ಇತಿ ಪ್ರತ್ಯೃಚಂ ಜುಹುಯಾಜ್ಜಪೇದ್ವಾ । ಆ. ಗೃ. ೩-೭-೭ । ಇತಿ ॥**

ಅನುವಾದವು— **ದೇವಾಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು; ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಪೋತನೆಂಬುವನು ಋಷಿಯು. ವಿಶ್ವೇದೇವತೆಗಳು ದೇವತೆಯು ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ— **ದೇವಾ ನೈರ್ಋತಃ ಕಪೋತಃ ಕಪೋತೋಪಹತೌ ಪ್ರಾಯಶ್ಚಿತ್ತಂ ವೈಶ್ವದೇವಂ** ಎಂದು ಹೇಳಿರುವುದು. ಕಪೋತ (ಪಾರಿವಾಳ) ಪಕ್ಷಿಯು ಗೃಹವನ್ನು ಪ್ರವೇಶಿಸಿದರೆ ಆಗ ಈ ಸೂಕ್ತದ ಮಂತ್ರಗಳಿಂದ ಅಗ್ನಿಯಲ್ಲಿ ಹೋಮಮಾಡಬೇಕೆಂದು ಆಶ್ವಲಾಯನಗೃಹ್ಯಸೂತ್ರದ— **ಕಪೋತಶ್ಚೇದಗಾರಮುಪಹನ್ಯಾದನುಪತೇದ್ವಾ ದೇವಾಃ ಕಪೋತ ಇತಿ ಪ್ರತ್ಯೃಚಂ ಜುಹುಯಾಜ್ಜಪೇದ್ವಾ ॥** ಎಂಬ ಸೂತ್ರದಿಂದ (ಆ ಗೃ. ೩-೭-೭) ವಿವೃತವಾಗಿರುವುದು.

## ಸೂಕ್ತ - ೧೬೫

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ— ೧೬೫ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ॥
॥ ಋಷಿಃ—ಕಪೋತೋ ನೈರ್ಋತಃ ॥
॥ ದೇವತಾ—ಕಪೋತೋಪಹತೌ ಪ್ರಾಯಶ್ಚಿತ್ತಂ ವೈಶ್ವದೇವಂ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ದೇವಾಃ ಕಪೋತ ಇಷಿತೋ ಯದಿಚ್ಛನ್ದೂತೋ ನಿರ್ಋತ್ಯಾ ಇದಮಾಜಗಾಮ ।
ತಸ್ಮಾ ಅರ್ಚಾಮ ಕೃಣವಾಮ ನಿಷ್ಕೃತಿಂ ಶಂ ನೋ ಅಸ್ತು ದ್ವಿಪದೇ ಶಂ ಚತುಷ್ಪದೇ ॥ ೧ ॥

॥ ಪದಪಾಠಃ ॥

ದೇವಾಃ । ಕಪೋತಃ । ಇಷಿತಃ । ಯತ್ । ಇಚ್ಛನ್ । ದೂತಃ । ನಿಃऽಋತ್ಯಾಃ । ಇದಂ । ಆऽಜಗಾಮ ।

ತಸ್ಮೈ । ಅರ್ಚಾಮ । ಕೃಣವಾಮ । ನಿಃಽಕೃತಿಂ । ಶಂ । ನಃ । ಅಸ್ತು । ದ್ವಿಽಪದೇ । ಶಂ । ಚತುಃಽಪದೇ॥

॥ ಸಾಯಣಭಾಷ್ಯಂ ॥

ಹೇ ದೇವಾಃ ಇಷಿತಃ ಪ್ರಾಪ್ತೋ ನಿರ್ಋತ್ಯಾಃ ಪಾಪದೇವತಾಯಾ ದೂತೋಽನುಚರಃ ಕಪೋತೋ ಯದ್ಬಾಧನಮಿಚ್ಛನ್ನಭಿಲಷನ್ನಿದಮಸ್ಮದೀಯಂ ಗೃಹಮಾಜಗಾಮ ಪ್ರಾಪ್ನೋತ್ ತಸ್ಮೈ ಬಾಧನಾಯ ತದ್ಬಾಧನನಿವೃತ್ತ್ಯರ್ಥಮರ್ಚಾಮ । ಯುಷ್ಮಾನ್ಹವಿಷಾ ಪೂಜಯಾಮ । ತತೋ ನಿಷ್ಕೃತಿಂ ಕಪೋತಪ್ರವೇಶಜನ್ಯಸ್ಯ ದೋಷಸ್ಯ ಪರಿಹೃತಿಂ ಕೃಣವಾಮ । ಅನೇನ ಹವಿರ್ದಾನೇನ ಕರವಾಮ । ಅತೋ ನೋಽಸ್ಮಾಕಂ ದ್ವಿಪದೇ ಪುತ್ರಾಯ ಶಂ ಸುಖಮಸ್ತು ಚತುಷ್ಪದೇ ಗವಾಶ್ವಪ್ರಭೃತಯೇ ಚ ಶಂ ಸುಖಮಸ್ತು ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ । **ಇಷಿತಃ**—ಇಲ್ಲಿಗೆ ಬಂದಿರುವ । **ನಿರ್ಋತ್ಯಾಃ**—ನಿರ್ಋತಿಯೆಂಬ ಪಾಪದೇವತೆಯ (ಮೃತ್ಯುವಿನ) । **ದೂತಃ**—ಅನುಚರನೆನಿಸಿದ । **ಕಪೋತಃ**—ಈ ಪಾರಿವಾಳವು । **ಯತ್**—ನಮಗೆ ಯಾವ ಬಾಧೆಯನ್ನು । **ಇಚ್ಛನ್**—ಮಾಡಲಿಚ್ಛಿಸಿ । **ಇದಂ**—ನಮ್ಮ ಗೃಹಕ್ಕೆ । **ಆಜಗಾಮ**-ಬಂದಿದೆಯೋ **ತಸ್ಮೈ**—ಆ ಬಾಧಾನಿವೃತ್ತ್ಯರ್ಥವಾಗಿ । **ಅರ್ಚಾಮ**—ನಿಮ್ಮನ್ನು ಹವಿಸ್ಸಿನಿಂದ ಪೂಜಿಸುತ್ತೇವೆ (ಅನಂತರ) **ನಿಷ್ಕೃತಿಂ**—ಕಪೋತಪ್ರವೇಶನದಿಂದ ಉಂಟಾದ ದೋಷಪರಿಹಾರಾರ್ಥವಾಗಿ ಪ್ರಾಯಶ್ಚಿತ್ತವನ್ನು । **ಕೃಣವಾಮ**-ಹವಿರ್ದಾನಾದಿಗಳಿಂದ ಆಚರಿಸೋಣ (ಅದರಿಂದ) । **ನಃ**—ನಮ್ಮ । **ದ್ವಿಪದೇ**—ಪುತ್ರಾದಿಗಳಿಗೆ । **ಶಂ ಅಸ್ತು** ಸುಖವುಂಟಾಗಲಿ । **ಚತುಷ್ಪದೇ**—ನಾಲ್ಕುಕಾಲುಗಳುಳ್ಳ ಗವಾದಿಪಶುಗಳಿಗೂ । **ಶಂ**—ಸುಖವುಂಟಾಗಲಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ಈಗ ಇಲ್ಲಿಗೆ ಬಂದಿರುವ ಪಾಪದೇವತೆಯಾದ ನಿರ್ಋತಿಯ ದೂತನೆನಿಸಿದ ಈ ಪಾರಿವಾಳವು ನಮಗೆ ಯಾವ ಬಾಧೆಯನ್ನು ಮಾಡಲಿಚ್ಛಿಸಿ ನಮ್ಮ ಗೃಹಕ್ಕೂ ಬಂದಿದೆಯೋ ಆ ಬಾಧಾನಿವೃತ್ತಿಗಾಗಿ ನಿಮ್ಮನ್ನು ಹವಿರಾದಿಗಳಿಂದ ಪೂಜಿಸುತ್ತೇವೆ. ಮತ್ತೂ ಆ ಕಪೋತಪ್ರವೇಶದಿಂದ ಉಂಟಾದ ದೋಷಪರಿಹಾರಾರ್ಥವಾಗಿ ಹವಿರಾದಿಗಳಿಂದ ಪ್ರಾಯಶ್ಚಿತ್ತವನ್ನೂ ಆಚರಿಸುತ್ತೇವೆ. ಅದರಿಂದ ನಮ್ಮ ಪುತ್ರಾದಿಗಳಿಗೂ ಗವಾಶ್ವಾದಿ ಪಶುಗಳಿಗೂ ಏನೂ ಕೆಡುಕು ಸಂಭವಿಸದಂತೆ ಸುಖವುಂಟಾಗಲಿ.

## English Translation

O gods, let us worship for that, desiring which the pigeon sent as Nirriti's messenger, has come to this (ceremony); let us make atonement, may prosperity be given to our bipeds and quadrupeds.

॥ ಸಂಹಿತಾಪಾಠಃ ॥

ಶಿವಃ ಕಪೋತ ಇಷಿತೋ ನೋ ಅಸ್ತ್ವನಾಗಾ ದೇವಾಃ ಶಕುನೋ ಗೃಹೇಷು।
ಅಗ್ನಿರ್ಹಿ ವಿಪ್ರೋ ಜುಷತಾಂ ಹವಿರ್ನಃ ಪರಿ ಹೇತಿಃ ಪಕ್ಷಿಣೀ ನೋ ವೃಣಕ್ತು ॥ ೨ ॥

॥ ಪದಪಾಠಃ ॥

ಶಿವಃ । ಕಪೋತಃ । ಇಷಿತಃ । ನಃ । ಅಸ್ತು । ಅನಾಗಾಃ । ದೇವಾಃ । ಶಕುನಃ । ಗೃಹೇಷು ।
ಅಗ್ನಿಃ । ಹಿ । ವಿಪ್ರಃ । ಜುಷತಾಂ । ಹವಿಃ । ನಃ । ಪರಿ । ಹೇತಿಃ। ಪಕ್ಷಿಣೀ । ನಃ । ವೃಣಕ್ತು ॥ ೨ ॥

॥ ಸಾಯಣಭಾಷ್ಯಂ ॥

ಹೇ ದೇವಾಃ ನೋಽಸ್ಮಾಕಂ ಗೃಹೇಷ್ವಿಷಿತಃ ಕಪೋತಾಖ್ಯಃ ಶಕುನಃ ಪಕ್ಷೀ ಶಿವಃ ಸುಖಕರೋಽನಾಗಾ ಅಪಾಪಹೇತುಶ್ಚಾಸ್ತು । ಹಿ ಯಸ್ಮಾದ್ವಿಪ್ರೋ ಮೇಧಾವ್ಯಗ್ನಿರ್ನೋಽಸ್ಮಾಕಂ ಹವಿರ್ಯುಷ್ಮಭ್ಯಂ ಪರಿಕಲ್ಪಿತಂ ಜುಷತಾಂ ಜುಷತೇ ಅತೋ ಯುಷ್ಮತ್ಪ್ರಸಾದಾತ್ಪಕ್ಷಿಣೀ ಪಕ್ಷೋಪೇತಾ ಹೇತಿರ್ಹನನಹೇತುಃ ಕಪೋತೋ ನೋಽಸ್ಮಾನ್ಪರಿ ವೃಣಕ್ತು । ಅಸ್ಮಾನ್ಪರಿತ್ಯಜತು । ಮಾ ಬಾಧತಾಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ದೇವತೆಗಳೇ । **ನಃ**—ನಮ್ಮ । **ಗೃಹೇಷು**—ಗೃಹಗಳಲ್ಲಿ । **ಇಷಿತಃ**—ಬಂದು ಕುಳಿತಿರುವ । **ಕಪೋತಃ ಶಕುನಃ**—ಕಪೋತವೆಂಬ ಈ ಪಕ್ಷಿಯು । **ಶಿವಃ ಅಸ್ತು**—ಮಂಗಳಕರವಾಗಿ ಇರಲಿ (ಮಂಗಳವನ್ನೇ ಉಂಟುಮಾಡಲಿ) ಮತ್ತು । **ಅನಾಗಾಃ**—ಪಾಪಕರವಲ್ಲದ್ದಾಗಿಯೂ ಆಗಲಿ । **ಹಿ**—ಆದ್ದರಿಂದ **ವಿಪ್ರ**—ಮೇಧಾವಿಯಾದ । **ಅಗ್ನಿಃ**—ಅಗ್ನಿಯು । **ನಃ**—ನಮ್ಮ । **ಹವಿಃ**—ಹವಿಸ್ಸನ್ನು । **ಜುಷತಾಂ**—ಸೇವಿಸಲಿ (ಮತ್ತು ನಿಮ್ಮ ಅನುಗ್ರಹದಿಂದ) । **ಪಕ್ಷಿಣೀ**—ರೆಕ್ಕೆಗಳಿಂದ ಕೂಡಿದ । **ಹೇತಿ**—ನಮ್ಮನ್ನು ಕೊಲ್ಲುವುದಕ್ಕಾಗಿ ಬಂದಿರುವ ಈ ಪಾರಿವಾಳವು । **ನಃ**—ನಮ್ಮನ್ನು । **ಪರಿ ವೃಣಕ್ತು**—ತ್ಯಜಿಸಿ ಹೊರಟುಹೋಗಲಿ

॥ ಭಾವಾರ್ಥ ॥

ಎಲೈ ದೇವತೆಗಳೇ, ನಮ್ಮ ಗೃಹಗಳಲ್ಲಿ ಬಂದು ಕುಳಿತಿರುವ ಈ ಪಾರಿವಾಳವು ನಮಗೆ ಕೆಟ್ಟದ್ದನ್ನು ಮಾಡದೆ ಒಳ್ಳೆಯದನ್ನೇ ಮಾಡಲಿ. ನಮಗೆ ಪಾಪವು ಸಂಭವಿಸದಂತೆಯೂ ಮಾಡಲಿ. ಆದ್ದರಿಂದ ಮೇಧಾವಿಯಾದ ಅಗ್ನಿಯು ನಾವು ಅರ್ಪಿಸುವ ಹವಿಸ್ಸನ್ನು ಸೇವಿಸಲಿ. ರೆಕ್ಕೆಗಳಿಂದ ಕೂಡಿದ ಮತ್ತು ನಮ್ಮನ್ನು ಕೊಲ್ಲಲು ಬಂದಿರುವ ಈ ದುಷ್ಟಪಾರಿವಾಳವು ನಮ್ಮನ್ನು ಬಿಟ್ಟು ಹೊರಟುಹೋಗಲಿ.

## English Translation

May the bird sent to our dwellings, the pigeon, be ausqicious, O gods and void of offence, so that the wise Agni may approve of our oblation, and the winged weapon (of mischief) depart from us.

॥ ಸಂಹಿತಾಪಾಠಃ ॥

ಹೇತಿಃ ಪಕ್ಷಿಣೀ ನ ದಭಾತ್ಯಸ್ಮಾನಾಷ್ಟ್ರ್ಯಾಂ ಪದಂ ಕೃಣುತೇ ಅಗ್ನಿಧಾನೇ ।
ಶಂ ನೋ ಗೋಭ್ಯಶ್ಚ ಪುರುಷೇಭ್ಯಶ್ಚಾಸ್ತು ಮಾ ನೋ ಹಿಂಸೀದಿಹ ದೇವಾಃ
ಕಪೋತಃ ॥ ೩ ॥

॥ ಪದಪಾಠಃ ॥

ಹೇತಿಃ । ಪಕ್ಷಿಣೀ । ನ । ದಭಾತಿ । ಅಸ್ಮಾನ್ । ಆಷ್ಟ್ರ್ಯಾಂ । ಪದಂ । ಕೃಣುತೇ । ಅಗ್ನಿಽಧಾನೇ ।
ಶಂ । ನಃ । ಗೋಭ್ಯಃ । ಚ । ಪುರುಷೇಭ್ಯಃ । ಚ । ಅಸ್ತು । ಮಾ । ನಃ । ಹಿಂಸೀತ್ । ಇಹ । ದೇವಾಃ ।
ಕಪೋತಃ ॥ ೩ ॥

॥ ಸಾಯಣಭಾಷ್ಯಂ ॥

ಪಕ್ಷಿಣೀ ಪಕ್ಷೋಪೇತಾ ಹೇತಿರ್ಹನನಹೇತುಃ ಕಪೋತೋಽಸ್ಮಾನ್ನ ದಭಾತಿ । ನ ಹಿನಸ್ತು । ಆಷ್ಟ್ರ್ಯಾಂ ವ್ಯಾಪ್ತಾಯಾಮರಣ್ಯಾನ್ಯಾಮಗ್ನಿಧಾನೇ । ಅಗ್ನಿರ್ನಿಧೀಯತೇಽಸ್ಮಿನ್ನಿತ್ಯಗ್ನಿಸಹಿತೇ ಪ್ರದೇಶೇ ಪದಂ ಸ್ಥಾನಂ ಕೃಣುತೇ । ಕರೋತಿ । ತತ್ರೈವ ಪ್ರದೇಶೇ ನಿವಸತ್ವಿತ್ಯರ್ಥಃ। ಯದ್ವಾ। ಅಶ್ನಂತ್ಯಸ್ಮಿನ್ನಿತ್ಯಾಷ್ಟ್ರೀ ಪಚನಶಾಲಾ । ತಸ್ಯಾಂ। ಅಗ್ನಿಧಾನೇ ಯತ್ರ ಪಚನಾಗ್ನಿರ್ನಿಧೀಯತೇ ತಸ್ಮಿನ್ಪ್ರದೇಶೇ ಪದಂ ಪಾದನಿಧಾನಂ ಕೃಣುತೇ। ಕರೋತಿ। ತದ್ಧೇತುಕೋ ಬಾಧೋ ನೋಽಸ್ಮಾಕಂ ನ ಭವತ್ವಿತ್ಯರ್ಥಃ । ಅಪಿ ಚ ನೋಽಸ್ಮಾಕಂ ಗೋಭ್ಯಶ್ಚ ಪುರುಷೇಭ್ಯಶ್ಚ ಶಂ ಸುಖಂ ಶಂಸನೀಯಾನಾಂ ದೋಷಾಣಾಂ ಶಾಂತಿರ್ವಾಸ್ತು। ಭವತು । ಹೇ ದೇವಾಃ ಇಹಾಸ್ಮಿನ್ಗೃಹೇ ಕಪೋತೋ ನೋಽಸ್ಮಾನ್ಮಾ ಹಿಂಸೀತ್ । ಯೂಯಮ್ಮದನುಗೃಹಾಣಾ ಬಾಧತಾಂ ॥

॥ ಪ್ರತಿಪದಾರ್ಥ ॥

**ಹೇತಿಃ**—ನಮ್ಮನ್ನು ಕೊಲ್ಲಲು ಬಂದಿರುವ । **ಪಕ್ಷಿಣೀ**—ರೆಕ್ಕೆಗಳುಳ್ಳ ಈ ಪಾರಿವಾಳವು । **ಅಸ್ಮಾನ್**—ನಮ್ಮನ್ನು । **ನ ದಭಾತಿ**—ಹಿಂಸಿಸದಿರಲಿ । **ಆಷ್ಟ್ರ್ಯಾಂ**—ಈ ವನದಲ್ಲಿ (ಆಶ್ರಮದಲ್ಲಿರುವ)ರುವ । **ಅಗ್ನಿಧಾನೇ**—ಅಗ್ನಿಕುಂಡದಲ್ಲಿ (ಈ ಪಾರಿವಾಳವು) । **ಪದಂ ಕೃಣುತೇ**—ತನ್ನ ಕಾಲನ್ನು ಇಡುತ್ತದೆ । **ನಃ**--ನಮಗೆ । **ಗೋಭ್ಯಃ**

**ಚ**—ಗೋವುಗಳಿಂದಲೂ । **ಪುರುಷೇಭ್ಯಃ ಚ**—ಪುರುಷರಿಂದಲೂ । **ಶಂ ಅಸ್ತು**—ಸುಖವುಂಟಾಗಲಿ । **ದೇವಾಃ** ಎಲೈ ದೇವತೆಗಳೇ, (ನಿಮ್ಮ ಅನುಗ್ರಹದಿಂದ) । **ಇಹ** ಈ ನಮ್ಮ ಗೃಹದಲ್ಲಿ । **ಕಪೋತಃ**—ಈ ಪಾರಿವಾಳವು । **ನಃ**—ನಮ್ಮನ್ನು । **ಮಾ ಹಿಂಸೀತ್**—ಹಿಂಸಿಸದಿರಲಿ.

॥ ಭಾವಾರ್ಥ ॥

ನಮ್ಮನ್ನು ಕೊಲ್ಲಲು ಬಂದಿರುವ ರೆಕ್ಕೆಗಳುಳ್ಳ ಈ ಪಾರಿವಾಳವು ನಮ್ಮನ್ನು ಹಿಂಸಿಸದಿರಲಿ. ಈ ವನಮಧ್ಯದಲ್ಲಿ (ನಮ್ಮ ಆಶ್ರಮದಲ್ಲಿರುವ) ಈ ಅಗ್ನಿಕುಂಡದಲ್ಲಿ ಈ ದುಷ್ಟಪಾರಿವಾಳವು ತನ್ನ ಕಾಲನ್ನು ಇಡುತ್ತದೆ. ಇದರಿಂದ ನಮಗೆ ಕೆಡುಕಾಗದೆ ನಮ್ಮ ಗೋವುಗಳಿಂದಲೂ ಪುರುಷರಿಂದಲೂ ನಮಗೆ ಸುಖವೇ ಉಂಟಾಗಲಿ. ಈ ನಮ್ಮ ಗೃಹದಲ್ಲಿ ಈ ಪಾರಿವಾಳವು ನಮ್ಮನ್ನು ಹಿಂಸಿಸದಿರಲಿ.

## English Translation.

May the winged weapon (of mischief) do us no harm; he takes his place upon the touchwood, the seat of Agni; may prosperity attend our cattle and our people, let not the pigon, gods, do us harm in this (dwelling)

॥ ಸಂಹಿತಾಪಾಠಃ ॥

ಯದುಲೂಕೋ ವದತಿ ಮೋಘಮೇತದ್ಯತ್ಕಪೋತಃ ಪದಮಗ್ನೌ ಕೃಣೋತಿ।
ಯಸ್ಯ ದೂತಃ ಪ್ರಹಿತ ಏಷ ಏತತ್ತಸ್ಮೈ ಯಮಾಯ ನಮೋ ಅಸ್ತು
ಮೃತ್ಯವೇ ॥ ೪ ॥

॥ ಪದಪಾಠಃ ॥

ಯತ್ । ಉಲೂಕಃ । ವದತಿ । ಮೋಘಂ । ಏತತ್ । ಯತ್ । ಕಪೋತಃ । ಪದಂ । ಅಗ್ನೌ । ಕೃಣೋತಿ ।
ಯಸ್ಯ । ದೂತಃ । ಪ್ರಽಹಿತಃ । ಏಷಃ । ಏತತ್ । ತಸ್ಮೈ । ಯಮಾಯ । ನಮಃ । ಅಸ್ತು । ಮೃತ್ಯವೇ ॥

॥ ಸಾಯಣಭಾಷ್ಯಂ ॥

ಉಲೂಕೋ ಘೂಕಸಂಜ್ಞಃ ಪಕ್ಷೀ ಯದಶೋಭನಂ ವದತಿ ಬ್ರವೀತಿ ಆತ್ಮೀಯೇನ ಶಬ್ದೇನ ಸೂಚಯತಿ ಏತನ್ಮೋಘಂ ನಿಷ್ಫಲಮಸ್ತು। ಕಪೋತಶ್ಚಾಗ್ನಾವಗ್ನಿಮತಿ ಗೃಹಮಧ್ಯೇ ಯತ್ಪದಂ ಕೃಣೋತಿ ಕರೋತಿ ಏತದಪಿ ಮೋಘಂ ನಿರ್ವೀರ್ಯಮಸ್ತು । ಪ್ರಹಿತಃ ಪ್ರೇಷಿತಃ ಏಷ ಕಪೋತೋ ಯಸ್ಯ ಸ್ವಾಮಿನೋ ದೂತೋಽನುಚರೋ ಭವತಿ ತಸ್ಮೈ ನಾಮ ಮೃತ್ಯವೇ ಮಾರಯಿತ್ರೇ ಯಮಾಯೈತನ್ನಮಃ ಪ್ರಣಾಮೋಽಸ್ತು । ಭವತು ॥

॥ ಪ್ರತಿಪದಾರ್ಥ ॥

**ಉಲೂಕಃ**—ಗೂಬೆಯು । **ಯತ್**—ಯಾವಅಪಶಕುನವಾದ ಕೆಟ್ಟ ಧ್ವನಿಯಿಂದ । **ವದತಿ**—ಕೂಗುವುದೋ । **ಏತತ್**—ಅದರ ಆ ಕೆಟ್ಟ ಧ್ವನಿಯು । **ಮೋಘಂ**—ವ್ಯರ್ಥವಾಗಲಿ । **ಕಪೋತಃ**—ಈ ಪಾರಿವಾಳವು । **ಯತ್ ಪದಂ**—ತನ್ನ ಯಾವ ಕಾಲನ್ನು । **ಅಗ್ನೌ ಕೃಣೋತಿ**—ಅಗ್ನಿಕುಂಡದಲ್ಲಿ ಇಡುವುದೋ ಅದೂ ವ್ಯರ್ಥವಾಗಲಿ । **ಪ್ರಹಿತಃ**—ಇಲ್ಲಿಗೆ ಕಳುಹಿಸಲ್ಪಟ್ಟ । **ಏಷಃ**—ಈ ಪಾರಿವಾಳವು । **ಯಸ್ಯ**—ಯಾವ ಸ್ವಾಮಿಯ । **ದೂತಃ**—ಅನುಚರವಾಗಿರುವುದೋ । **ತಸ್ಮೈ ಮೃತ್ಯವೇ**—ಅಂತಹ ಮೃತ್ಯುದೇವತೆಯಾದ ಯಮನಿಗೆ । **ಏತತ್ ನಮಃ**—ಈ ನಮಸ್ಕಾರವು । **ಅಸ್ತು**—ಸಲ್ಲಲಿ ।

॥ ಭಾವಾರ್ಥ ॥

ಗೂಬೆಯು ಅಪಶಕುನಾರ್ಥವಾಗಿ ಕೆಟ್ಟ ಧ್ವನಿಯಿಂದ ಕೂಗುವುದು ವ್ಯರ್ಥವಾಗಲಿ. ಅದರಂತೆ ಈ ಪಾರಿವಾಳವು ಕೆಡಕನ್ನುಂಟುಮಾಡುವುದಕ್ಕಾಗಿ ಅಗ್ನಿಕುಂಡದಲ್ಲಿ ತನ್ನ ಕಾಲನ್ನು ಇಡುವುದೂ ವ್ಯರ್ಥವಾಗಲಿ. ಇಲ್ಲಿಗೆ ಕಳುಹಲ್ಪಟ್ಟಿರುವ ಈ ಪಾರಿವಾಳವು ಯಾವ ಯಮನ ದೂತನೋ ಅಂತಹ ಮೃತ್ಯುದೇವತೆಯಾದ ಯಮನಿಗೆ ಇದೋ ಈ ನಮಸ್ಕಾರವು ಸಲ್ಲಲಿ. (ಅರ್ಪಿತವಾಗಲಿ)

English Translation

May that which the owl shrieks be in vain, (and may it be in vain) that the pigeon takes his place upon the fire; may this reverence be paid to Yama, (the god of) Death, as whose messenger he is sent.

॥ ಸಂಹಿತಾಪಾಠಃ ॥

ಋಚಾ ಕಪೋತಂ ನುದತ ಪ್ರಣೋದಮಿಷಂ ಮದಂತಃ ಪರಿ ಗಾಂ ನಯಧ್ವಂ ।
ಸಂಯೋಪಯಂತೋ ದುರಿತಾನಿ ವಿಶ್ವಾ ಹಿತ್ವಾ ನ ಊರ್ಜಂ ಪ್ರ ಪತಾತ್ಪತಿಷ್ಠಃ ॥ ೫ ॥

॥ ಪದಪಾಠಃ ॥

ಋಚಾ । ಕಪೋತಂ । ನುದತ । ಪ್ರಽನೋದಂ । ಇಷಂ । ಮದಂತಃ । ಪರಿ । ಗಾಂ । ನಯಧ್ವಂ ।
ಸಂಽಯೋಪಯಂತಃ । ದುಃಽಇತಾನಿ । ವಿಶ್ವಾ । ಹಿತ್ವಾ । ನಃ । ಊರ್ಜಂ । ಪ್ರ । ಪತಾತ್ । ಪತಿಷ್ಠಃ ॥೫॥

॥ ಸಾಯಣಭಾಷ್ಯಂ ॥

ಹೇ ದೇವಾಃ ಋಚಾ ಮಂತ್ರೇಣ ಸ್ತೂಯಮಾನಾಃ ಸಂತೋ ಯೂಯಂ ಪ್ರಣೋದಂ ಪ್ರಕರ್ಷೇಣ ನೋದನೀಯಂ ಬಹಿಷ್ಕರ್ತವ್ಯಂ ಕಪೋತಂ ಪಕ್ಷಿಣಂ ನುದತ । ಅಸ್ಮದ್ಗೃಹಾತ್ಪ್ರೇರಯತ । ನಿರ್ಗಮಯತ । ತಥಾ ಮದಂತೋಽಸ್ಮಾಭಿರ್ದತ್ತೈರ್ಹವಿರ್ಭಿರ್ಮಾದ್ಯಂತ ಇಷಮನ್ನಂ ಗಾಂ ಚ ಪರಿ ಣಯಧ್ವಂ। ಪರಿತೋಽಸ್ಮಭ್ಯಂ ಪ್ರಾಪಯತ । ಕಿಂ ಕುರ್ವಂತಃ । ವಿಶ್ವಾ ಸರ್ವಾಣಿ ದುರಿತಾನಿ ಕಪೋತೋಪಹತಿಜನ್ಯಾನಿ ದೋಷಜಾತಾನಿ ಸಂಯೋಪಯಂತೋಽದೃಶ್ಯಾನಿ ಕುರ್ವಂತಃ । ಅಪಿ ಚ ಪತಿಷ್ಠೋಽತಿಶಯೇನ ಪತಿತಾ ಶೀಘ್ರೋತ್ಪಾತಕಃ ಕಪೋತೋ ನೋಽಸ್ಮಾಕಮೂರ್ಜಮನ್ನಂ ಹಿತ್ವಾ ಪರಿತ್ಯಜ್ಯ ಪ್ರ ಪತಾತ್ । ಪ್ರಕರ್ಷೇಣ ಪತತು । ಪಕ್ಷಾಭ್ಯಾಮುತ್ಪತತು ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ಋಚಾ**—ಮಂತ್ರದಿಂದ ಸ್ತುತಿಸಲ್ಪಟ್ಟ ನೀವು । **ಪ್ರಣೋದಂ**—ನಮಗೆ ಅತಿಯಾಗಿ ಹಿಂಸೆಕೊಡುತ್ತಿರುವ । **ಕಪೋತಂ**—ಈ ಪಾರಿವಾಳವನ್ನು । **ನುದತ**—ನಮ್ಮ ಗೃಹದಿಂದ ಹೋಗುವಂತೆ ಪ್ರೇರಿಸಿ ಓಡಿಸಿರಿ (ಹಾಗೆಯೇ) । **ಮದಂತಃ**—ನಾವು ಅರ್ಪಿಸಿದ ಹವಿರಾದಿಗಳಿಂದ ಹರ್ಷಿತರಾಗಿ । **ವಿಶ್ವಾ**—ಸಮಸ್ತವಾದ । **ದುರಿತಾನಿ**—ಕಪೋತಪ್ರದೇಶದಿಂದ ಉಂಟಾಗಬಹುದಾದ ಕೆಡಕುಗಳನ್ನು । **ಸಂಯೋಪಯಂತಃ**—ನಿವಾರಣೆಮಾಡುತ್ತಾ । **ಇಷಂ**—ಅನ್ನವನ್ನೂ । **ಗಾಂ**—ಗೋವನ್ನೂ । **ಪರಿ ನಯಧ್ವಂ**—ನಮಗೆ ಒದಗಿಸಿಕೊಡಿ । **ಪತಿಷ್ಠಃ**—ಶೀಘ್ರವಾಗಿ ಹಾರಬಲ್ಲ ಈ ಪಾರಿವಾಳವು । **ನಃ**—ನಮ್ಮ । **ಊರ್ಜಂ**—ಅನ್ನಾದ್ಯಾಹಾರವನ್ನು । **ಹಿತ್ವಾ**—ಬಿಟ್ಟು (ತ್ಯಜಿಸಿ) । **ಪ್ರ ಪತಾತ್**—ಬೇಗನೆ ಹಾರಿಹೋಗಲಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ಮಂತ್ರದಿಂದ ಸ್ತುತರಾದ ನೀವು ನಮಗೆ ಅತಿಯಾಗಿ ಹಿಂಸಿಕೊಡುತ್ತಿರುವ ಈ ಕಪೋತವನ್ನು ನಮ್ಮ ಮನೆಯಿಂದ ಹೊರಟುಹೋಗುವಂತೆ ಪ್ರೇರಿಸಿ ಓಡಿಸಿರಿ. ಮತ್ತು ನಾವು ಅರ್ಪಿಸುವ ಹವಿರಾದಿಗಳಿಂದ ಹರ್ಷಿತರಾದ ನೀವು ಕಪೋತಪ್ರವೇಶದಿಂದ ಉಂಟಾದ ಸಮಸ್ತದೋಷವನ್ನು ನಿವಾರಣೆಮಾಡುತ್ತಾ ನಮಗೆಅನ್ನವನ್ನೂ, ಗೋವನ್ನೂ ಒದಗಿಸಿಕೊಡಿ. ಶೀಘ್ರವಾಗಿ ಹಾರಬಲ್ಲ ಈ ಪಾರಿವಾಳವು ನಮ್ಮ ಅನ್ನವನ್ನೂ ತ್ಯಜಿಸಿ ಬೇಗನೆ ಹಾರಿಹೋಗಲಿ.

## English Translation

(Praised) by our hymn, O gods, drive out the pigeon who deserves to be driven out, exhilarated (by our oblation), bring us food and cattle, dissipating all our misfortunes; abandoning our food, may the swift (pigeon) fly away.

## ನೂರ ಅರವತ್ತಾರನೆಯ ಸೂಕ್ತ



॥ ಸಾಯಣಭಾಷ್ಯಂ ॥

**ಋಷಭಮಿತಿ ಪಂಚರ್ಚಂ ಪಂಚದಶಂ ಸೂಕ್ತಂ ವೈರಾಜಸ್ಯ ಶಾಕ್ವರಸ್ಯ ವರ್ಷಭಾಖ್ಯಸ್ಯಾರ್ಷಂ ಪಂಚಮೀ ಷಡಷ್ಟಕಾ ಮಹಾಪಂಕ್ತಿಃ । ಸಪತ್ನನಾಶನರೂಪೋಽರ್ಥೋ ದೇವತಾ । ತಥಾ ಚಾನುಕ್ರಾಂತಂ। ಋಷಭಮೃಷಭೋ ವೈರಾಜಃ ಶಾಕ್ವರೋ ವಾ ಸಪತ್ನಘ್ನಮಾನುಷ್ಟುಭಂ ಮಹಾಪಂಕ್ತ್ಯಂತಮಿತಿ ॥ ಪ್ರಯಾಣಸಮಯೇ...........ಜಪೇತ್ । ಸೂತ್ರಿತಂ ಚ । ಋಷಭಂ ಮಾ ಸಮಾನಾನಾಮಿತ್ಯಭಿಕ್ರಾಮನ್ । ಆ. ಗೃ-. ೨-೬-೧೩ । ಇತಿ ॥**

ಅನುವಾದವು– **ಋಷಭಂ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಭಃ ವೈರಾಜಃ ಶಾಕ್ವರೋ ವಾ ಎಂಬುವನು ಋಷಿಯು; ಈ ಸೂಕ್ತದಲ್ಲಿ ಸಪತ್ನ (ಪ್ರತಿಸ್ಪರ್ಧಿ)ಯನ್ನು ನಾಶಮಾಡುವ ವಿಷಯದ ಪ್ರಸ್ತಾಪವಿರುವುದರಿಂದ ಸಪತ್ನನಾಶನವೇ ದೇವತೆಯು, ಈ ಸೂಕ್ತದ ಐದನೆಯ ಋಕ್ಕು ಮಹಾಪಂಕ್ತಿಶ್ಛಂದಸ್ಕವು. ಮಹಾಪಂಕ್ತಿ ಎಂಬ ಹೆಸರಿನ ಈ ಛಂದಸ್ಸಿನ ಋಕ್ಕಿನಲ್ಲಿ ಎಂಟೆಂಟು ಅಕ್ಷರಗಳ ಆರುಪಾದಗಳಿರುವವು. ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ— **ಋಷಭಮೃಷಭೋ ವೈರಾಜಃ ಶಾಕ್ವರೋ ವಾ ಸಪತ್ನಘ್ನಮಾನುಷ್ಟುಭಂ ಮಹಾಪಂಕ್ತ್ಯಂತಂ** ಎಂದು ಹೇಳಿರುವುದು. ಪ್ರಯಾಣಕಾಲದಲ್ಲಿ ಶತ್ರುಗಳ ಕಳ್ಳರ, ದುಷ್ಟಪ್ರಾಣಿಗಳ ಮತ್ತು ಇತರ ವಿಘ್ನಗಳ ಬಾಧೆಯುಂಟಾಗದಿರುವುದಕ್ಕಾಗಿ ಈ ಸೂಕ್ತವನ್ನು ಜಪಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ— **ಋಷಭಂ ಮಾ ಸಮಾನಾನಾಮಿತ್ಯಭಿಕ್ರಾಮನ್** ಎಂಬ ಸೂತ್ರದಿಂದ (ಆ. ಗೃ ೨-೬-೧೩) ವಿವೃತವಾಗಿರುವುದು

### ಸೂಕ್ತ — ೧೬೬

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೬೬ ॥

ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೨೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ॥
॥ ಋಷಿಃ—ಋಷಭೋ ವೈರಾಜಃ ಶಾಕ್ವರೋ ವಾ ॥
॥ ದೇವತಾ—ಸಪತ್ನಘ್ನಂ ॥
॥ ಛಂದಃ—೧-೪. ಅನುಷ್ಟುಪ್ । ೫. ಮಹಾಪಂಕ್ತಿಃ ॥

॥ ಸಂಹಿತಾಪಾಠಃ ॥

**ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾಸಹಿಂ ।**

**ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಂ ॥ ೧ ॥**

॥ ಪದಪಾಠಃ ॥

ಋಷಭಂ । ಮಾ । ಸಮಾನಾನಾಂ । ಸಽಪತ್ನಾನಾಂ । ವಿಽಸಸಹಿಂ ।

ಹಂತಾರಂ । ಶತ್ರೂಣಾಂ । ಕೃಧಿ । ವಿಽರಾಜಂ । ಗೋಽಪತಿಂ । ಗವಾಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸಪತ್ನನಾಶನಾಭಿಮಾನಿನ್ನಿಂದ್ರ ಮಾ ಮಾಂ ಸಮಾನಾನಾಂ ಸದೃಶಾನಾಮಸ್ಮತ್ಕುಲೀನಾನಾಂ ಮಧ್ಯ ಋಷಭಮೃಷಭವತ್ಪ್ರಶಸ್ತಂ ಕೃಧಿ । ಕುರು । ತಥಾ ಸಪತ್ನಾನಾಂ ಶತ್ರೂಣಾಂ ವಿಷಾಸಹಿಂ ವಿಶೇಷೇಣಾಭಿಭವಿತಾರಂ ಕುರು । ಯೇಽಸ್ಮತ್ಕುಲ ಏವ ಜಾತಾ ಅಸ್ಮಾಕಮನೇವಾನಿಷ್ಟಮಾಚರಂತಿ ತೇ ಸಪತ್ನಾಃ । ಅಪಿ ಚ ಶತ್ರೂಣಾಮನ್ಯೇಷಾಮಪಿ ಶಾತಯಿತ್ರೂಣಾಂ ವೈರಿಣಾಂ ಹಂತಾರಂ ಹಿಂಸಿತಾರಂ ಕೃಧಿ । ಕುರು । ತಥಾ ವಿರಾಜಂ ವಿಶೇಷೇಣ ರಾಜಮಾನಂ ಗೋಪತಿಂ ಗೋಸ್ವಾಮಿನಂ ಚ ಮಾಂ ಕುರು । ನ ಕೇವಲಮೇಕಸ್ಯಾ ಏವ ಗೋಃ ಪತಿಂ ಅಪಿ ತು ಸರ್ವಾಸಾಮಿತ್ಯಾಹ ಗವಾಮಿತಿ ॥

॥ ಪ್ರತಿಪದಾರ್ಥ ॥

(ಎಲೈ ಶತ್ರುನಾಶಕನಾದ ಇಂದ್ರನೇ), **ಮಾ**— ನನ್ನನ್ನು । **ಸಮಾನಾನಾಂ**— ನಮ್ಮ ಸಮಾನರಾದವರ ಮಧ್ಯದಲ್ಲಿ । **ಋಷಭಂ**— ಗೋವುಗಳ ಮಧ್ಯದಲ್ಲಿ ವೃಷಭವು ಪ್ರಶಸ್ತವಾಗಿರುವಂತೆ ಶ್ರೇಷ್ಠನನ್ನಾಗಿ । **ಕೃಧಿ**— ಮಾಡು (ಮತ್ತು) । **ಸಪತ್ನಾನಾಂ**— ಶತ್ರುಗಳನ್ನು ಎಂದರೆ ಪ್ರತಿಸ್ಪರ್ಧಿಗಳನ್ನು । **ವಿಷಾಸಹಿಂ** – ಸೋಲಿಸುವವನನ್ನಾಗಿಯೂ ಮಾಡು । **ಶತ್ರೂಣಾಂ**— ಇತರ ಶತ್ರುಜನರ । **ಹಂತಾರಂ**— ಸಂಹಾರಕನನ್ನಾಗಿಯೂ ಮಾಡು । **ಗವಾಂ**— ಗೋವುಗಳ । **ವಿರಾಜಂ**— ವಿಶೇಷವಾಗಿ ಪ್ರಕಾಶಿಸುವ (ಪ್ರಸಿದ್ಧವಾದ) । **ಗೋಪತಿಂ**— ಗೋವುಗಳಿಗೆ ಒಡೆಯನನ್ನಾಗಿಯೂ ಮಾಡು ।

॥ ಭಾವಾರ್ಥ ॥

ಎಲೈ ಶತ್ರುನಾಶಕನಾದ ಇಂದ್ರನೇ, ಕುಲದಲ್ಲಿಯೂ, ಆರ್ಥಿಕ, ನೈತಿಕ ಸಾಮಾಜಿಕಾದಿವ್ಯವಹಾರಗಳಲ್ಲಿಯೂ ನಮಗೆ ಸಮಾನರೆನಿಸಿರುವವರ ಮಧ್ಯದಲ್ಲಿ ವೃಷಭವು ಗೋವುಗಳ ಹಿಂಡಿಗೆ ಹೇಗೆ ಶ್ರೇಷ್ಠವಾಗಿ ಮೆರೆಯುವುದೋ ಅದರಂತೆ ನನ್ನನ್ನು ಶ್ರೇಷ್ಠನನ್ನಾಗಿ ಮಾಡು. ನಮ್ಮ ಪ್ರತಿಸ್ಪರ್ಧಿಗಳನ್ನು ಸೋಲಿಸುವಂತೆ ಮಾಡು, ಶತ್ರುಗಳ ಸಂಹಾರಕನನ್ನಾಗಿಯೂ ಅನೇಕ ಗೋವುಗಳಿಗೆ ಒಡೆಯನನ್ನಾಗಿಯೂ ಮಾಡು.

## English Translation

Make me, Indra, (renowned like) a bull amongst my equals, victor over my rivals, the slayer of my enemies, a sovereign, a lord of cattle.

॥ ಸಂಹಿತಾಪಾಠಃ ॥

ಅಹಮಸ್ಮಿ ಸಪತ್ನಹೇಂದ್ರ ಇವಾರಿಷ್ಟೋ ಅಕ್ಷತಃ ।

ಅಧಃ ಸಪತ್ನಾ ಮೇ ಪದೋರಿಮೇ ಸರ್ವೇ ಅಭಿಷ್ಠಿತಾಃ ॥ ೨ ॥

॥ ಪದಪಾಠಃ ॥

ಅಹಂ । ಅಸ್ಮಿ । ಸಪತ್ನಽಹಾ । ಇಂದ್ರಃಽಇವ । ಅರಿಷ್ಟಃ । ಅಕ್ಷತಃ ।

ಅಧಃ । ಸಽಪತ್ನಾಃ । ಮೇ । ಪದೋಃ । ಇಮೇ । ಸರ್ವೇ । ಅಭಿಽಸ್ಥಿತಾಃ ॥ ೨ ॥

॥ ಸಾಯಣಭಾಷ್ಯಂ ॥

ಅಹಂ ಸಪತ್ನಹಾ ಸಪತ್ನಾನಾಂ ಶತ್ರೂಣಾಂ ಹಂತಾಸ್ಮಿ। ಭವಾಮಿ । ಇಂದ್ರ ಇವೇಂದ್ರೋ ಯಥಾ ಕೇನಾಪ್ಯಹಿಂಸಿತೋ ಭವತಿ ತಥಾಹಮಪ್ಯರಿಷ್ಟೋಽಹಿಂಸಿತೋಽಕ್ಷತೋಽವ್ರಣಶ್ಚ ಭವಾಮಿ । ಇಮೇ ದೃಶ್ಯಮಾನಾಃ ಸರ್ವೇ ಸಪತ್ನಾ ಮೇ ಮಮ ಪದೋಃ ಪಾದಯೋರಧೋಽಧಸ್ತಾದಭಿಷ್ಠಿತಾ ಆಕ್ರಾಂತಾ ಭವಂತು ॥

॥ ಪ್ರತಿಪದಾರ್ಥ ॥

**ಅಹಂ**—ನಾನು । **ಸಪತ್ನಹಾ**—ಶತ್ರುಗಳ ಹಂತಕನಾಗಿ । **ಅಸ್ಮಿ**—ಆಗಿದ್ದೇನೆ । **ಇಂದ್ರ ಇವ**—ಇಂದ್ರನಂತೆ । **ಅರಿಷ್ಟಃ**—ಇತರರ ಹಿಂಸೆಗೆ ಒಳಗಾಗದವನೂ । **ಅಕ್ಷತಃ**—ಇತರರ ಘಾಸಿಗೆ ಒಳಗಾಗದವನೂ ಆಗಿದ್ದೇನೆ । **ಇಮೇ**—ಇಲ್ಲಿ ಕಾಣುವ । **ಸರ್ವೇ ಸಪತ್ನಾಃ**—ನನ್ನ ಸಮಸ್ತ ಶತ್ರುಗಳೂ । **ಮೇ**—ನನ್ನ । **ಪದೋಃ ಅಧಃ**—ಕಾಲುಗಳ ಕೆಳಗೆ । **ಅಭಿಷ್ಠಿತಾಃ**—ಬಿದ್ದಿರುವಂತಾಗಲಿ.

॥ ಭಾವಾರ್ಥ ॥

ನಾನು ಶತ್ರುಗಳ ಸಂಹಾರಕನಾಗಿದ್ದೇನೆ ಇಂದ್ರನಂತೆ ಶತ್ರುಗಳ ಹಿಂಸೆಗೂ ಘಾಸಿಗೂ ಒಳಪಡದವನೂ ಆಗಿದ್ದೇನೆ. ಇಲ್ಲಿರುವ ಈ ಸಮಸ್ತ ಶತ್ರುಗಳೂ ನನ್ನ ಪಾದತಲದಲ್ಲಿ ಬಿದ್ದಿರುವಂತಾಗಲಿ.

## English Translation.

I am the destroyer of my enemies, like Indra unharmed and unwounded ; may all these my foes be cast down under my feet.

॥ ಸಂಹಿತಾಪಾಠಃ ॥

ಅತ್ರೈವ ವೋಽಪಿ ನಹ್ಯಾಮ್ಯುಭೇ ಆರ್ತ್ನೀ ಇವ ಜ್ಯಯಾ ।

ವಾಚಸ್ಪತೇ ನಿ ಷೇಧೇಮಾನ್ಯಥಾ ಮದಧರಂ ವದಾನ್ ॥ ೩ ॥

॥ ಪದಪಾಠಃ ॥

ಅತ್ರ । ಏವ । ವಃ । ಅಪಿ । ನಹ್ಯಾಮಿ । ಉಭೇ ಇತಿ । ಆರ್ತ್ನೀ ಇವೇತ್ಯಾರ್ತ್ನೀಽಇವ । ಜ್ಯಯಾ ॥

ವಾಚಃ । ಪತೇ । ನಿ । ಸೇಧ । ಇಮಾನ್ । ಯಥಾ । ಮತ್ । ಅಧರಂ । ವದಾನ್ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸಪತ್ನಾಃ ಯತ್ರ ದೇಶೇ ಯೂಯಂ ನಿವಸಥ ಅತ್ರೈವಾಸ್ಮಿನ್ನೇವ ದೇಶೇ ವೋ ಯುಷ್ಮಾನಪಿ ನಹ್ಯಾಮಿ । ಅಪಿನದ್ಧಾನ್ಪಾಶೈರ್ಬದ್ಧಾನ್ಕರೋಮಿ ಜ್ಯಯಾ ಮೌರ್ವ್ಯಾರ್ತ್ನೀ ಇವ । ಯಥಾ ದ್ವೇ ಧನುಷಃ ಕೋಟೀ ದೃಢಂ ಬಧ್ಯೇತೇ ತಥೇತ್ಯರ್ಥಃ । ಹೇ ವಾಚಸ್ಪತೇ ವಾಚಃ ಶಬ್ದಸ್ಯ ಪಾಲಯಿತರ್ದೇವ ಇಮಾನ್ಸಪತ್ನಾನ್ನಿ ಷೇಧ । ಪ್ರತಿಷೇಧ । ಯಥಾ ಯೇನ ಪ್ರಕಾರೇಣ ಮನ್ಮತ್ತೋಽಧರಂ ನಿಕೃಷ್ಟತರಂ ವದಾನ್ ವದಂತಿ ತಥಾ ನಿರುದ್ಧವಾಚಃ ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಶತ್ರುಗಳೇ ನೀವು ಎಲ್ಲೇ ಇರಲಿ) **ಅತ್ರ ಏವ**—ಆ ಸ್ಥಳದಲ್ಲಿಯೇ । **ವಃ ಅಪಿ**—ನಿಮ್ಮನ್ನು । **ಜ್ಯಯಾ**—ಬಿಲ್ಲಿನ ಹೆದೆಯು ಎರಡು ತುದಿಗಳನ್ನು । **ಉಭೇ ಆರ್ತ್ನೀ ಇವ**—ಬಿಲ್ಲಿನ ಎರಡು ತುದಿಗಳಿಗೆ ಸೇರಿಸಿ ಕಟ್ಟುವಂತೆ । **ನಹ್ಯಾಮಿ**—(ಪಾಶಗಳಿಂದ ಬಿಗಿದು) ಬಂಧಿಸುತ್ತೇನೆ । **ವಾಚಃ ಪತೇ**—ವಾಕ್ಕುಗಳಿಗೆ ಪಾಲಕನಾದ ಎಲೈ ವಾಚಸ್ಪತಿದೇವನೇ । **ಯಥಾ**—ಯಾವ ಪ್ರಕಾರವಾಗಿ ಈ ಶತ್ರುಗಳು । **ಮತ್**—ನನ್ನ ವಿಷಯದಲ್ಲಿ । **ಅಧರಂ**—ಕೆಟ್ಟಮಾತುಗಳನ್ನು । **ವದಾನ್**—ಹೇಳುತ್ತಾರೆಯೋ (ಆ ರೀತಿ ಹೇಳದಂತೆ) । **ಇಮಾನ್**—ಈ ಶತ್ರುಗಳನ್ನು । **ನಿ ಷೇಧ**—ಅಡ್ಡಿಪಡಿಸು.

॥ ಭಾವಾರ್ಥ ॥

ಎಲೈ ಶತ್ರುಗಳೇ, ನೀವು ಎಲ್ಲಿಯೋ ಇರಲಿ ಅಲ್ಲೆಲ್ಲಾ ನಿಮ್ಮನ್ನು ಬಿಲ್ಲಿನ ಎರಡುತುದಿಗಳಿಗೆ ಹೆದೆಯು(ಹಗ್ಗದ) ಎರಡು ತುದಿಗಳನ್ನು ಕಟ್ಟುವಂತೆ ಪಾಶಗಳಿಂದ ಬಿಗಿದು ಬಂಧಿಸುತ್ತೇನೆ. ಎಲೈ ವಾಚಸ್ಪತಿದೇವನೇ, ಈ ನನ್ನ ಶತ್ರುಗಳು ನನ್ನ ವಿಷಯದಲ್ಲಿ ದುಷ್ಟಮಾತುಗಳನ್ನಾಡದಿರುವಂತೆ ಅವರನ್ನು ಪ್ರತಿಬಂಧಿಸು.

## English Translation

I bind you here, like the two extremities of the bow by the bowstring; restrain them, lord of speech, that they may speak humbly to me.

॥ ಸಂಹಿತಪಾಠಃ ॥

ಅಭಿಭೂರಹಮಾಗಮಂ ವಿಶ್ವಕರ್ಮೇಣ ಧಾಮ್ನಾ ।
ಆ ವಶ್ಚಿತ್ತಮಾ ವೋ ವ್ರತಮಾ ವೋಽಹಂ ಸಮಿತಿಂ ದದೇ ॥ ೪ ॥

॥ ಪದಪಾಠಃ ॥

ಅಭಿಽಭೂಃ । ಅಹಂ । ಆ । ಅಗಮಂ । ವಿಶ್ವಽಕರ್ಮೇಣ । ಧಾಮ್ನಾ ।

ಆ । ವಃ । ಚಿತ್ತಂ । ಆ । ವಃ । ವ್ರತಂ । ಆ । ವಃ । ಅಹಂ । ಸಂಽಇತಿಂ । ದದೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸಪತ್ನಾಃ ಅಭಿಭೂರಭಿಭವಿತಾಹಂ ವಿಶ್ವಕರ್ಮೇಣ ಸರ್ವಕರ್ಮಕ್ಷಮೇಣ ಧಾಮ್ನಾ ಧಾರಕೇಣ ತೇಜಸಾ ಬಲೇನ ವಾ ಸಾರ್ಧಮಾಗಮಂ । ಆಗತವಾನಸ್ಮಿ । ಅತೋ ವೋ ಯುಷ್ಮಾಕಂ ಚಿತ್ತಂ ಮನ ಆ ದದೇ । ಗೃಹ್ಣಾಮಿ । ಮನೋಗತಂ ಧೈರ್ಯಂ ಹರಾಮೀತ್ಯರ್ಥಃ । ವೋ ಯುಷ್ಮಾಕಂ ವ್ರತಂ ಕರ್ಮ ಚಾಹಮಾ ದದೇ । ವೋ ಯುಷ್ಮದೀಯೋ ಯಃ ಸಮಿತಿಃ ಸಂಗ್ರಾಮಃ ತಂ ಚಾಹಮಾ ದದೇ । ಅಪಹರಾಮಿ ॥

॥ ಪ್ರತಿಪದಾರ್ಥ ॥

(ಎಲೈ ಶತ್ರುಗಳೇ) **ಅಭಿಭೂಃ**—ನಿಮ್ಮನ್ನು ಸೋಲಿಸುವ । **ಅಹಂ**—ನಾನು । **ವಿಶ್ವಕರ್ಮೇಣ**—ಸಮಸ್ತಕೆಲಸಗಳನ್ನು ಮಾಡಲು ಸಮರ್ಥವಾದ । **ಧಾಮ್ನಾ**—ತೇಜಸ್ಸಿನಿಂದ ಎಂದರೆ ಶಕ್ತಿಯಿಂದ (ಬಲದಿಂದ) ಸಹಿತನಾಗಿ । **ಆಗಮಂ**—ಇಲ್ಲಿಗೆ ಬಂದಿದ್ದೇನೆ (ಆದ್ದರಿಂದ) । **ವಃ**—ನಿಮ್ಮ । **ಚಿತ್ತಂ**—ಮನಸ್ಸನ್ನು ಎಂದರೆ ಮನಸ್ಸಿನ ಧೈರ್ಯವನ್ನೂ । **ಆ ದದೇ**—ಅಪಹರಿಸಿದ್ದೇನೆ । **ವಃ**—ನಿಮ್ಮ । **ವ್ರತಂ**—ಶೌರ್ಯದಿಂದ ಮಾಡಲ್ಪಟ್ಟ ಕಾರ್ಯವನ್ನು । **ಆ ದದೇ**—ವಶಪಡಿಸಿಕೊಂಡಿದ್ದೇನೆ । **ವಃ**—ನಿಮ್ಮ । **ಸಮಿತಿಂ**—ಯುದ್ಧ ಮಾಡುವ ಶಕ್ತಿಯನ್ನು । **ಅಹಂ**—ನಾನು । **ಆ ದದೆ**—ಅಪಹರಿಸಿ ವಶಪಡಿಸಿಕೊಂಡಿದ್ದೇನೆ.

॥ ಭಾವಾರ್ಥ ॥

ಎಲೈ ಶತ್ರುಗಳೇ, ನಿಮ್ಮನ್ನು ಸೋಲಿಸುವ ನಾನು ಸಮಸ್ತಕಾರ್ಯಗಳನ್ನು ಮಾಡುವ ಸಾಮರ್ಥ್ಯವುಳ್ಳ ಶಕ್ತಿಯೊಡಗೂಡಿ ಇಲ್ಲಿಗೆ ಬಂದಿದ್ದೇನೆ. ಆದ್ದರಿಂದ ನಿಮ್ಮ ಮನಃಸ್ಥೈರ್ಯವನ್ನೂ, ನಿಮ್ಮ ಶೌರ್ಯವನ್ನೂ, ಕಾರ್ಯವನ್ನೂ, ಯುದ್ಧಮಾಡುವ ಶಕ್ತಿಯನ್ನೂ ಅಪಹರಿಸಿ ನನ್ನ ವಶಮಾಡಿಕೊಂಡಿದ್ದೇನೆ

## English Translation

I have come triumphant with power, epual to any exploit ; I seize upon your minds, your pious observances, your prowess in war·

॥ ಸಂಹಿತಾಪಾಠಃ ॥

ಯೋಗಕ್ಷೇಮಂ ವ ಆದಾಯಾಹಂ ಭೂಯಾಸಮುತ್ತಮ ಆ ವೋ ಮೂರ್ಧಾನಮಕ್ರಮೀಂ ।
ಅಧಸ್ಪದಾನ್ಮ ಉದ್ವದತ ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ ॥ ೫ ॥

॥ ಪದಪಾಠಃ ॥

ಯೋಗಽಕ್ಷೇಮಂ । ವಃ । ಆಽದಾಯ । ಅಹಂ । ಭೂಯಾಸಂ । ಉತ್ಽತಮಃ । ಆ । ವಃ । ಮೂರ್ಧಾನಂ । ಅಕ್ರಮೀಂ ।
ಅಧಃಽಪದಾತ್ । ಮೇ । ಉತ್ । ವದತ । ಮಂಡೂಕಾಃಽಇವ । ಉದಕಾತ್ । ಮಂಡೂಕಾಃ । ಉದಕಾತ್ಽಇವ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸಪತ್ನಾಃ ವೋ ಯುಷ್ಮಾಕಂ ಯೋಗಕ್ಷೇಮಂ । ಅಪ್ರಾಪ್ತಸ್ಯ ಧನಸ್ಯ ಪ್ರಾಪ್ತಿರ್ಯೋಗಃ । ಪ್ರಾಪ್ತಸ್ಯ ರಕ್ಷಣಂ ಕ್ಷೇಮಃ । ತದುಭಯಮಾದಾಯ ಯುಷ್ಮತ್ತೋ ಗೃಹೀತ್ವಾಹಮುತ್ತಮಃ ಶ್ರೇಷ್ಠೋ ಭೂಯಾಸಂ । ತತೋ ವೋ ಯುಷ್ಮಾಕಂ ಮೂರ್ಧಾನಂ ಶಿರ ಅಕ್ರಮೀಂ । ಆಕ್ರಮಿಷಂ । ಪಾದೇನಾಧಿತಿಷ್ಠಾಮಿ ॥ ಕ್ರಮೇರ್ಲುಙ್ಯಮೋ ಮಶ್। ಪಾ. ೭-೧-೪೦ । ಇಟ ಈಟೀತಿ ಸಿಚೋ ಲೋಪಃ ॥ ಅದಂತರಂ ಮೇ ಮಮಾಧಸ್ಪದಾತ್ಪಾದಸ್ಯಾಧಸ್ತಾದ್ವರ್ತಮಾನಾ ಯೂಯಮುದ್ವದತ । ಉಚ್ಚೈರಾಕ್ರೋಶತ । ಉದಕಾದ್ವೃಷ್ಟಿಜಲಾದಧಃ ಪ್ರದೇಶೇ ವರ್ತಮಾನಾ ಮಂಡೂಕಾ ಇವ । ಯಥಾ ತೇ ಭೃಶಮಾಕ್ರೋಶಂತಿ ತಥೋದ್ವದತೇತ್ಯರ್ಥಃ । ಮಂಡೂಕಾ ಉದಕಾದಿವೇತಿ ಪುನರುಕ್ತಿರಾದರಾರ್ಥಾ ॥

॥ ಪ್ರತಿಪದಾರ್ಥ ॥

(ಎಲೈ ಶತ್ರುಗಳೇ,) **ವಃ**—ನಿಮ್ಮ । **ಯೋಗಕ್ಷೇಮಂ**—ಧನಸಂಪಾದಿಸುವ ಶಕ್ತಿಯನ್ನೂ ಅದರ ರಕ್ಷಣೆಯನ್ನೂ । **ಆದಾಯ**—ನಿಮ್ಮಿಂದ ಕಸಿದುಕೊಂಡು । **ಅಹಂ**—ನಾನು । **ಉತ್ತಮಃ**—ಶ್ರೇಷ್ಠನಾಗಿ ಎಂದರೆ ಗಣ್ಯನಾಗಿ । **ಭೂಯಾಸಂ**—ಆಗಿರುವಂತಾಗಲಿ (ಅನಂತರ) । **ವಃ**—ನಿಮ್ಮ । **ಮೂರ್ಧಾನಂ**—ಶಿರಸ್ಸನ್ನು । **ಆ ಅಕ್ರಮೀತ್**—(ಕಾಲಿನಿಂದ) ಮೆಟ್ಟುತ್ತೇನೆ । **ಮೇ**—ನನ್ನ । **ಅಧಸ್ಪದಾತ್**—ಕಾಲಕೆಳಗೆ ಬಿದ್ದಿರುವ ನೀವು । **ಉದಕಾತ್**—ಮಳೆಯನೀರಿನ ಕೆಳಭಾಗದಲ್ಲಿ ಇರುವ । **ಮಂಡೂಕಾ ಇವ**—ಕಪ್ಪೆಗಳು ಕಿರುಚುವಂತೆ । **ಮಂಡೂಕಾ**—ಕಪ್ಪೆಗಳು । **ಉದಕಾದಿವ**—ನೀರಿನಲ್ಲಿದ್ದೇ ಅರಚುತ್ತಿರುವಂತೆ । **ಉತ್ ವದತ**—ಘಟ್ಟಿಯಾಗಿ ಕಿರಿಚಿಕೊಳ್ಳುತ್ತೀರಿ.

॥ ಭಾವಾರ್ಥ ॥

ಎಲೈ ಶತ್ರುಗಳೇ, ನಿಮ್ಮ ಧನ ಸಂಪಾದಿಸುವ ಮತ್ತು ಅದನ್ನು ಕಾಪಾಡಿಕೊಳ್ಳುವ ಶಕ್ತಿಯನ್ನು ನಿಮ್ಮಿಂದ ಕಸಿದುಕೊಂಡು ನಾನು ಜನರಲ್ಲಿ ಗಣ್ಯನಾಗಿರುವಂತಾಗಲಿ ನಿಮ್ಮ ಶಿರಸ್ಸನ್ನು ನಾನು ಕಾಲಿನಲ್ಲಿ ಮೆಟ್ಟಿ ನಿಲ್ಲುತ್ತೇನೆ. ನನ್ನ ಕಾಲಕೆಳಗೆ ಬಿದ್ದಿರುವ ನೀವು ಮಳೆಯ ನೀರಿನಲ್ಲಿ ಕಪ್ಪೆಗಳು ಅರಚುತ್ತಿರುವಂತೆ ಘಟ್ಟಿಯಾಗಿ ಕಿರಿಚಿಕೊಳ್ಳುತ್ತೀರಿ.

## English Translation.

Seizing upon your goods and chattels, may I be victorious; I walk upon your heads; cry aloud from beneath my feet, like frogs from (below) the water, like frogs from (below) the water

॥ ವಿಶೇಷವಿಷಯಗಳು ॥

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಖಿಲಮಂತ್ರಗಳು—

ಯೇನೇದಂ ಭೂತಂ ಭುವನಂ ಭವಿಷ್ಯತ್ಪರಿಗೃಹೀತಮಮೃತೇನ ಸರ್ವಂ ।
ಯೇನ ಯಜ್ಞಸ್ತಾಯತೇ ಸಪ್ತಹೋತಾ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧ ॥

ಯೇನ ಕರ್ಮಾಣ್ಯಪಸೋ ಮನೀಷಿಣೋ ಯಜ್ಞೇ ಕೃಣ್ವಂತಿ ವಿದಥೇಷು ಧೀರಾಃ ।
ಯದಪೂರ್ವಂ ಯಕ್ಷಮಂತಃ ಪ್ರಜಾನಾಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೨ ॥

ಯಜ್ಜಾಗ್ರತೋ ದೂರಮುದೈತಿ ದೈವಂ ತದು ಸುಪ್ತಸ್ಯ ತಥೈವೇತಿ ।
ದೂರಂಗಮಂ ಜ್ಯೋತಿಷಾಂ ಜ್ಯೋತಿರೇಕಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೩ ॥

ಯತ್ಪ್ರಜ್ಞಾನಮುತ ಚೇತೋ ಧೃತಿಶ್ಚ ಯಜ್ಜ್ಯೋತಿರಂತರಮೃತಂ ಪ್ರಜಾಸು ।
ಯಸ್ಮಾನ್ನ ಋತೇ ಕಿಂಚನ ಕರ್ಮ ಕ್ರಿಯತೇ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೪ ॥

ಯಸ್ಮಿನ್ನೃಚಃ ಸಾಮ ಯಜೂಂಷಿ ಯಸ್ಮಿನ್ಪ್ರತಿಷ್ಠಿತಾ ರಥನಾಭಾವಿವಾರಾಃ ।
ಯಸ್ಮಿಂಶ್ಚಿತ್ತಂ ಸರ್ವಮೋತಂ ಪ್ರಜಾನಾಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೫ ॥

ಸುಷಾರಥಿರಶ್ವಾನಿವ ಯನ್ಮನುಷ್ಯಾನ್ನೇನೀಯತೇಽಭೀಶುಭಿರ್ವಾಜಿನ ಇವ ।
ಹೃತ್ಪ್ರತಿಷ್ಠಂ ಯದಜಿರಂ ಯವಿಷ್ಠಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೬ ॥

ಯೇ ಪಂಚ ಪಂಚಾಶತಃ ಶತಂ ಚ ಸಹಸ್ರಂ ಚ ನಿಯುತಂ ಚಾರ್ಬುದಂ ಚ ।
ಯೇ ಯಜ್ಞಚಿತ್ತೇಷ್ಟಕಾಟಂ ಶರೀರಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೭ ॥

ವೇದಾಹಮೇತಂ ಪುರುಷಂ ಮಹಾಂತಮಾದಿತ್ಯವರ್ಣಂ ತಮಸಃ ಪರಸ್ತಾತ್ ।
ತಸ್ಯ ಯೋನಿಂ ಪರಿಪಶ್ಯಂತಿ ಧೀರಾಸ್ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೮ ॥

ಯೇನ ಕರ್ಮಾಣಿ ಪ್ರಚರಂತಿ ಧೀರಾ ವಿಪ್ರಾ ವಾಚಾ ಮನಸಾ ಕರ್ಮಣಾ ವಾ ।
ಯತ್ಸಾಂ ದಿಶಮನು ಸಂಯಂತಿ ಪ್ರಾಣಿನಸ್ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೯ ॥

ಯೇ ಮೇ ಮನೋ ಹೃದಯಂ ಯೇ ಚ ದೇವಾ ಯೇ ಅಂತರಿಕ್ಷಂ ಬಹುಧಾ ಕಲ್ಪಯಂತಿ ।
ಯೇ ಶ್ರೋತ್ರಂ ಚ ಚಕ್ಷುಷೀ ಸಂಚರಂತಿ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೦ ॥

ಯಸ್ಯೇದಂ ಧೀರಾಃ ಪುನಂತಿ ಕವಯೋ ಬ್ರಹ್ಮಾಣಮೇತಂ ವ್ಯಾವೃಣುತ ಇಂದುಂ ।
ಸ್ಥಾವರಂ ಜಂಗಮಂ ಚ ದ್ಯೌರಾಕಾಶಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೧ ॥

ಯೇನ ದ್ಯೌರುಗ್ರಾ ಪೃಥಿವೀ ಚಾಂತರಿಕ್ಷಂ ಯೇನ ಪರ್ವತಾಃ ಪ್ರದಿಶೋ ದಿಶಶ್ಚ ।
ಯೇನೇದಂ ಸರ್ವಂ ಜಗದ್ವ್ಯಾಪ್ತಂ ಪ್ರಜಾನತ್ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೨ ॥

ಅವ್ಯಕ್ತಂ ಚಾಪ್ರಮೇಯಂ ಚ ವ್ಯಕ್ತಾವ್ಯಕ್ತಪರಂ ಶಿವಂ ।
ಸೂಕ್ಷ್ಮಾತ್ ಸೂಕ್ಷ್ಮತರಂ ಜ್ಞೇಯಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೩ ॥

ಕೈಲಾಸಶಿಖರೇ ರಮ್ಯೇ ಶಂಕರಸ್ಯ ಗೃಹಾಲಯಂ ।
ದೇವತಾಸ್ತತ್ರ ಮೋದಂತೇ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೪ ॥

ಆದಿತ್ಯವರ್ಣಂ ತಪಸಾ ಜ್ವಲಂತಂ ಯತ್ಪಶ್ಯಸಿ ಗುಹಾಸು ಜಾಯಮಾನಃ ।
ಶಿವರೂಪಂ ಶಿವಮುದಿತಂ ಶಿವಾಲಯಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೫ ॥

ಯೇನೇದಂ ಸರ್ವಂ ಜಗತೋ ಬಭೂವ ಯದ್ದೇವಾ ಅಪಿ ಮಹತೋ ಜಾತವೇದಾಃ ।
ಯದೇವಾಗ್ರ್ಯಂ ತಪಸೋ ಜ್ಯೋತಿರೇಕಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೬ ॥

ಗೋಭಿರ್ಜುಷ್ಟೋ ಧನೇನ ಹ್ಯಾಯುಷಾ ಚ ಬಲೇನ ಚ ।
ಪ್ರಜಯಾ ಪಶುಭಿಃ ಪುಷ್ಕರಾರ್ಥಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೭ ॥

ಯೋಽಸೌ ಸರ್ವೇಷು ವೇದೇಷು ಪಠ್ಯತೇಽನದ ಈಶ್ವರಃ ।
ಅಕಾಯೋ ನಿರ್ಗುಣೋ ಹ್ಯಾತ್ಮಾ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೮ ॥

ಯೋ ವೇದಾದಿಷು ಗಾಯತ್ರೀ ಸರ್ವವ್ಯಾಪೀ ಮಹೇಶ್ವರಃ ।
ತದುಕ್ತಂ ಚ ಯದಾ ಜ್ಞೇಯಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೧೯ ॥

ಪ್ರಯತಪ್ರಾಣ ಓಂಕಾರಂ ಪ್ರಣವಂ ಚ ಮಹೇಶ್ವರಂ ।
ಯಃ ಸರ್ವಂ ಯಸ್ಯ ಚಿತ್ಸರ್ವಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೨೦ ॥

ಯೋ ವೈ ವೇದ ಮಹಾದೇವಂ ಪ್ರಣವಂ ಪುರುಷೋತ್ತಮಂ ।
ಓಂಕಾರಂ ಪರಮಾತ್ಮಾನಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೨೧ ॥

ಓಂಕಾರಂ ಚತುರ್ಭುಜಂ ಲೋಕನಾಥಂ ನಾರಾಯಣಂ ।
ಸರ್ವಸ್ಥಿತಂ ಸರ್ವಗತಂ ಸರ್ವವ್ಯಾಪ್ತಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೨೨ ॥

ತತ್ಪರಾತ್ಪರತೋ ಬ್ರಹ್ಮಾ ತತ್ಪರಾತ್ಪರತೋ ಹರಿಃ ।
ಪರಾತ್ಪರತರಂ ಜ್ಞಾನಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೨೩ ॥

ಯ ಇದಂ ಶಿವಸಂಕಲ್ಪಂ ಸದಾಧೀಯಂತಿ ಬ್ರಾಹ್ಮಣಾಃ ।
ತೇ ಪರಂ ಮೋಕ್ಷಮಾಪ್ಸ್ಯಂತಿ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೨೪ ॥

ಅಸ್ತಿ ನಾಸ್ತಿ ಶಯಿತ್ವಾ ಸರ್ವಮಿದಂ ನಾಸ್ತಿ ಪುನಸ್ತಥೈವ ದೃಷ್ಟಂ ಧ್ರುವಂ ।
ಅಸ್ತಿ ನಾಸ್ತಿ ಹಿತಂ ಮಧ್ಯಮಂ ಪದಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೨೫ ॥

ಅಸ್ತಿ ನಾಸ್ತಿ ವಿಪರೀತೋ ಪ್ರವಾದೋಽಸ್ತಿ ನಾಸ್ತಿ ಗುಹ್ಯಂ ವಾ ಇದಂ ಸರ್ವಂ ।
ಅಸ್ತಿ ನಾಸ್ತಿ ಪರಾತ್ಪರೋ ಯತ್ಪರಂ ತನ್ಮೇ ಮನಃ ಶಿವಸಂಕಲ್ಪಮಸ್ತು ॥ ೨೬ ॥

## ನೂರ ಅರವತ್ತೇಳನೆಯ ಸೂಕ್ತ

। ಸಾಯಣಭಾಷ್ಯಂ ॥

**ತುಭ್ಯೇದಮಿತಿ ಚತುರ್ಋಚಂ ಷೋಡಶಂ ಸೂಕ್ತಂ ವಿಶ್ವಾಮಿತ್ರಜಮದಗ್ನ್ಯೋರಾರ್ಷಂ ಜಾಗತಮೈಂದ್ರಂ । ಸೋಮಸ್ಯ ರಾಜ್ಞ ಇತ್ಯೇಷಾ ತೃತೀಯಾ ವರುಣವಿಧಾತ್ರನುಮತಿಧಾತೃಸೋಮಬೃಹಸ್ಪತೀತಿಲಿಂಗೋಕ್ತದೇವತಾಕಾ । ತಥಾ ಚಾನುಕ್ರಾಂತಂ । ತುಭ್ಯೇದಂ ಚತುಷ್ಕಂ ವಿಶ್ವಾಮಿತ್ರಜಮದಗ್ನೀ ಜಾಗತಂ ತೃತೀಯಾ ಲಿಂಗೋಕ್ತದೇವತಾ ವೇತಿ । ಪಕ್ಷ ಇಂದ್ರ ಏವ ದೇವತಾನ್ಯೇ ತು ನಿಪಾತಭಾಜ ಇತಿ ವಾಶಬ್ದಸ್ಯಾರ್ಥಃ ॥ ಗತೋ ವಿನಿಯೋಗಃ ॥**

ಅನುವಾದವು—**ತುಭ್ಯೇದಂ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರ ಮತ್ತು ಜಮದಗ್ನಿ ಎಂಬುವರು ಋಷಿಗಳು; ಇಂದ್ರನು ದೇವತೆಯು, ಜಗತೀಛಂದಸ್ಸು. ಸೋಮಸ್ಯ ಎಂಬ ಮೂರನೇಯ ಋಕ್ಕಿಗೆ ವರುಣ ವಿಧಾತೃ ಅನುಮತಿ ಧಾತೃ ಸೋಮ ಬೃಹಸ್ಪತಿ ಎಂಬ ಲಿಂಗೋಕ್ತದೇವತೆಗಳು ದೇವತೆಯು; ಅನುಕ್ರಮಣಿಕೆಯಲ್ಲಿ—**ತುಭ್ಯೇದಂ ಚತುಷ್ಕಂ ವಿಶ್ವಾಮಿತ್ರಜಮದಗ್ನೀ ಜಾಗತಂ ತೃತೀಯಾ ಲಿಂಗೋಕ್ತದೇವತಾ ವಾ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಮುಖ್ಯವಾಗಿ ಇಂದ್ರನೇ ದೇವತೆಯು. ಇತರ ದೇವತೆಗಳು ಪ್ರಾಸಂಗಿಕವಾಗಿ ಸ್ತುತರಾಗಿರುವರು ಎಂದು ವಾಶಬ್ದದ ಅರ್ಥವು. ವಿನಿಯೋಗವನ್ನು ಹಿಂದೆಯೆ ಹೇಳಲಾಗಿದೆ.

### ಸೂಕ್ತ - ೧೬೭

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೬೭ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೨೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೪ ॥
॥ ಋಷಿಃ—ವಿಶ್ವಾಮಿತ್ರಜಮದಗ್ನೀ ॥
॥ ದೇವತಾ—೧. ೨. ೪ ಇಂದ್ರಃ । ೩. ಲಿಂಗೋಕ್ತದೇವತಾ.
॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ತುಭ್ಯೇದಮಿಂದ್ರ ಪರಿ ಷಿಚ್ಯತೇ ಮಧು ತ್ವಂ ಸುತಸ್ಯ ಕಲಶಸ್ಯ ರಾಜಸಿ ।

ತ್ವಂ ರಯಿಂ ಪುರುವೀರಾಮು ನಸ್ಕೃಧಿ ತ್ವಂ ತಪಃ ಪರಿತಪ್ಯಾಜಯಃ ಸ್ವಃ ॥

॥ ಪದಪಾಠಃ ॥

ತುಭ್ಯ । ಇದಂ । ಇಂದ್ರ । ಪರಿ । ಸಿಚ್ಯತೇ । ಮಧು । ತ್ವಂ । ಸುತಸ್ಯ । ಕಲಶಸ್ಯ । ರಾಜಸಿ ।

ತ್ವಂ । ರಯಿಂ । ಪುರುऽವೀರಾಂ । ಊಂ ಇತಿ । ನಃ । ಕೃಧಿ । ತ್ವಂ । ತಪಃ । ಪರಿऽತಪ್ಯ । ಅಜಯಃ ।

ಸ್ವ೧ ರಿತಿ ಸ್ವಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಇದಂ ಮಧು ಸೋಮಲಕ್ಷಣಂ ತುಭ್ಯಂ ತ್ವದರ್ಥಂ ಪರಿ ಷಿಚ್ಯತೇ । ಆಹವನೀಯೇ ಪ್ರಕ್ಷಿಪ್ಯತೇ । ತ್ವಮೇವ ಸುತಸ್ಯಾಭಿಷುತಸ್ಯ ಕಲಶಸ್ಯ ದ್ರೋಣಕಲಶಾವಸ್ಥಿತಸ್ಯ ಸೋಮಸ್ಯ ರಾಜಸಿ । ಈಶಿಷೇ । ರಾಜತಿರೈಶ್ವರ್ಯಕರ್ಮಾ । ಸ ತ್ವಂ ನೋಽಸ್ಮಾಕಂ ಪುರುವೀರಾಂ ಬಹುಪುತ್ರಾಂ ರಯಿಂ ಧನಂ ಕೃಧಿ । ಕುರು । ಉಶಬ್ದಃ ಪೂರಕಃ । ಯದ್ವಾ । ಅವಧಾರಣೇ । ಬಹುಪುತ್ರೋಪೇತಮೇವ ಧನಂ ಕುರು ನಃ ಕೇವಲಮಿತ್ಯರ್ಥಃ । ತಥಾ ತ್ವಂ ತಪಃ ಶತಸಂಖ್ಯಾಶ್ವಮೇಧಲಕ್ಷಣಂ ಪರಿತಪ್ಯಾನುಷ್ಠಾಯ ಸ್ವಃ ಸ್ವರ್ಗಮಜಯಃ । ಜಿತವಾನಸಿ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ, । **ಇದಂ ಮಧು**—ಈ ಮಧುರವಾದ ಸೋಮರಸವು । **ತುಭ್ಯ**—ನಿನ ಗೋಸ್ಕರ । **ಪರಿ ಸಿಚ್ಯತೇ**—ಆಹವನೀಯಾಗ್ನಿಯಲ್ಲಿ ಅರ್ಪಿಸಲ್ಪಡುತ್ತದೆ । **ತ್ವಂ**—ನೀನು । **ಸುತಸ್ಯ**—ಹಿಂಡಿ ಸಿದ್ಧವಾದುದೂ । **ಕಲಶಸ್ಯ**—ದ್ರೋಣಕಲಶದಲ್ಲಿ ತುಂಬಿರುವುದೂ ಆದ ಸೋಮಕ್ಕೆ। **ರಾಜಸಿ**—ಪ್ರಭುವಾಗಿದ್ದೀಯೆ **ತ್ವಂ**—ನೀನು । **ನಃ**—ನಮಗೆ । **ಪುರುವೀರಾಂ**—ಅನೇಕ ಪುತ್ರರನ್ನೂ । **ರಯಿಂ**—ಧನವನ್ನೂ। **ಕೃಧಿ**—ಒದಗಿಸಿಕೊಡು । **ತ್ವಂ**—ನೀನು । **ತಪಃ**—ತಪಸ್ಸನ್ನೂ (ಎಂದರೆ ಅನೇಕಸಾಹಸಕಾರ್ಯಗಳನ್ನೂ) । **ಪರಿ ತಪ್ಯ**—ಮಾಡಿ । **ಸ್ವಃ**—ಸ್ವರ್ಗವನ್ನು । **ಅಜಯಃ**—ಜಯಿಸಿದ್ದೀಯೆ ( ಪಡೆದಿದ್ದೀಯೆ).

। ಭಾವಾರ್ಥ ॥

ಎಲೈ ಇಂದ್ರನೇ, ಈ ಮಧುರವಾದ ಸೋಮರಸವು ನಿನಗೋಸ್ಕರವಾಗಿ ಹಿಂಡಿ ಸಿದ್ಧಪಡಿಸಲ್ಪಟ್ಟು ಅಗ್ನಿಗೆ ಅರ್ಪಿತವಾಗುತ್ತದೆ. ಈಗತಾನೆ ಹಿಂಡಿ ಈ ದ್ರೋಣಕಲಶದಲ್ಲಿ ತುಂಬಿರುವ ಈ ಸೋಮರಸಕ್ಕೆ ನೀನೇ ಪ್ರಭುವಾಗಿ ಇದ್ದೀಯೆ (ಎಂದರೆ ಈ ಸೋಮರಸವು ನಿನಗೆ ಸೇರತಕ್ಕದ್ದಾಗಿದೆ). ನೀನು ನಮಗೆ ಅನೇಕವುಂದಿ ವೀರಪುತ್ರರನ್ನೂ ಧನವನ್ನೂ ಒದಗಿಸಿಕೊಡು. ನೀನು (ನೂರು ಅಶ್ವಮೇಧಯಾಗರೂಪವಾದ) ತಪಸ್ಸನ್ನು ಮಾಡಿಯೇ ಸ್ವರ್ಗವನ್ನು ಜಯಿಸಿದ್ದೀಯೆ ಎಂದರೆ ಪಡೆದಿದ್ದೀಯೆ.

**English Translation.**

For you, Indra, is this Soma poured forth, You rule over the effused (Soma of) the jar; bestow upon us riches with numerous sons, you won heaven, performing arduous penence.

॥ ವಿಶೇಷವಿಷಯಗಳು ॥

ಪುರಾಣಾದಿಗಳಲ್ಲಿ ಇಂದ್ರನು ಇಂದ್ರಪದವಿಯನ್ನು ಪಡೆಯುವುದಕ್ಕಿಂತ ಮುಂಚೆ ಎಂದರೆ ಹಿಂದಿನ ಜನ್ಮದಲ್ಲಿ ನೂರು ಅಶ್ವಮೇಧಯಾಗಗಳನ್ನು ಮಾಡಿದ್ದನೆಂದೂ ಆ ಯಾಗಗಳ ಫಲವಾಗಿ ಇಂದ್ರನಿಗೆ ಇಂದ್ರಪದವಿಯು ದೊರೆಯಿತೆಂದೂ ಹೇಳಿದೆ. **ಶತಕ್ರತು** ಎಂಬ ಶಬ್ದದ ಅರ್ಥವನ್ನು ಅಲ್ಲಿ ಈ ರೀತಿ ವಿವರಿಸಿದೆ ಎಂದರೆ ನೂರುಯಾಗ ಗಳನ್ನು ಮಾಡಿದವನು ಎಂದರ್ಥವು. ಮುಂದೆಯೂ ನೂರು ಅಶ್ವಮೇಧಯಾಗಗಳನ್ನು ಮಾಡುವವನು ಇಂದ್ರ ಪದವಿಯನ್ನು ಪಡೆಯಲು ಅರ್ಹನಾಗುತ್ತಾನೆಂದೂ ಹೇಳಿದೆ. ಈ ವಿಷಯಗಳಿಗೆ ವೇದಗಳಲ್ಲಿ ಸಮರ್ಥನೆಯು ದೊರೆತಿರುವುದಿಲ್ಲ.

॥ ಸಂಹಿತಾಪಾಠಃ ॥

ಸ್ವರ್ಜಿತಂ ಮಹಿ ಮಂದಾನಮಂಧಸೋ ಹವಾಮಹೇ ಪರಿ ಶಕ್ರಂ ಸುತಾँ ಉಪ ।
ಇಮಂ ನೋ ಯಜ್ಞಮಿಹ ಬೋಧ್ಯಾ ಗಹಿ ಸ್ಪೃಧೋ ಜಯಂತಂ ಮಘವಾನಮೀಮಹೇ ॥ ೨ ॥

॥ ಪದಪಾಠಃ ॥

ಸ್ವಃಽಜಿತಂ । ಮಹಿ । ಮಂದಾನಂ । ಅಂಧಸಃ । ಹವಾಮಹೇ । ಪರಿ । ಶಕ್ರಂ । ಸುತಾನ್ । ಉಪ ।
ಇಮಂ । ನಃ । ಯಜ್ಞಂ । ಇಹ । ಬೋಧಿ । ಆ । ಗಹಿ । ಸ್ಪೃಧಃ । ಜಯಂತಂ । ಮಘಽವಾನಂ । ಈಮಹೇ ॥ ೨ ॥

॥ ಸಾಯಣಭಾಷ್ಯಂ ॥

ಉಕ್ತಪ್ರಕಾರೇಣ ಸ್ವರ್ಗಸ್ಯ ಜೇತಾರಂ ಮಹಿ ಮಹಾಂತಮಂಧಸೋಽನ್ನಸ್ಯ ಸೋಮಸ್ಯ ಪಾನೇನ ಮಂದಾನಂ ಮೋದಮಾನಂ ಹೃಷ್ಯಂತಂ ಶಕ್ರಂ ಸರ್ವಕಾರ್ಯೇಷು ಶಕ್ತಮಿಂದ್ರಂ ಸುತಾನುಪಾಭಿಷುತಾನ್ಸೋಮಾನ್ಪ್ರತಿ ಪರಿ ಹವಾಮಹೇ । ಪರಿತ ಆಹ್ವಯಾಮಹೇ । ಹೇ ಇಂದ್ರ ಇತ್ಥಮಾಹೂಯಮಾನಸ್ತ್ವಂ

**ನೋಽಸ್ಮಾಕಮಿಮಂ ಯಜ್ಞಮಿಹಾಸ್ಮಿನ್ಯಜ್ಞೇ ಬೋಧಿ । ಬುಧ್ಯಸ್ವ । ಬುದ್ಧ್ವಾ ಚಾ ಗಹಿ । ಆಗಚ್ಛ । ಸ್ಪೃಧಃ ಸ್ಪರ್ಧಮಾನಾಃ ಶತ್ರುಸೇನಾ ಜಯಂತಮಭಿಭವಂತಂ ಮಘವಾನಂ ಧನವಂತಂ ತ್ವಾಮಿಮಾಮಹೇ । ಅಪೇಕ್ಷಿತಾನಿ ಧನಾನಿ ಯಾಚಾಮಹೇ ॥**

॥ ಪ್ರತಿಪದಾರ್ಥ ॥

**ಸ್ವರ್ಜಿತಂ**—ಹಿಂದೆ ಹೇಳಿದಂತೆ ಸ್ವರ್ಗಲೋಕವನ್ನು ಜಯಿಸಿರುವವನೂ । **ಮಹಿ** – ಮಹತ್ಸ್ವರೂಪವುಳ್ಳವನೂ । **ಅಂಧಸಃ**—ಅನ್ನರೂಪವಾದ ಸೋಮರಸಪಾನದಿಂದ । **ಮಂದಾನಂ** - ಹರ್ಷಿತನಾಗಿರುವವನೂ । **ಶಕ್ರಂ**--ಸಮಸ್ತಕಾರ್ಯಗಳಲ್ಲಿಯೂ ಸಮರ್ಥನಾದ ಇಂದ್ರನನ್ನು । **ಸುತಾನ್ ಉಪ**--ಹಿಂದೆ ಸಿದ್ಧಪಡಿಸಿರುವ ಸೋಮರಸಗಳನ್ನು ಪಾನಮಾಡುವುದಕ್ಕಾಗಿ । **ಪರಿ ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ. । (ಎಲೈ ಇಂದ್ರನೇ) **ನಃ**—ನಮ್ಮ । **ಇಮಂ ಯಜ್ಞಂ**—ಈ ಯಜ್ಞವನ್ನು । **ಇಹ**– ಈ ಪ್ರದೇಶದಲ್ಲಿ (ನಡೆಯುತ್ತಿರುವುದನ್ನು) । **ಬೋಧಿ**—ತಿಳಿದುಕೋ (ತಿಳಿದನಂತರ) । **ಆ ಗಹಿ**—ಇಲ್ಲಿಗೆ ದಯಮಾಡು । **ಸ್ಪೃಧಃ**—ನಮ್ಮೊಡನೆ ಹೋರಾಡುವ ಶತ್ರು ಸೇನೆಗಳನ್ನು । **ಜಯಂತಂ**—ಜಯಿಸುವವನೂ । **ಮಘವಾನಂ**—ಧನವಂತನೂ ಆದ ನಿನ್ನನ್ನು। **ಈಮಹೇ** —ಧನಾರ್ಥವಾಗಿ ಯಾಚಿಸುತ್ತೇವೆ.

॥ ಭಾವಾರ್ಥ ॥

ಹಿಂದೆ ಹೇಳಿದಂತೆ ಸ್ವರ್ಗಲೋಕವನ್ನು ಜಯಿಸುವವನೂ, ಅತಿಶಯವಾದ ಮಹತ್ವವುಳ್ಳವನೂ, ಅನ್ನರೂಪವಾದ ಸೋಮರಸಪಾನದಿಂದ ಹರ್ಷಿತನಾಗಿರುವವನೂ ಸಮಸ್ತ ಕಾರ್ಯಸಮರ್ಥನೂ ಆದ ಇಂದ್ರನನ್ನು ಇಲ್ಲಿ ಸಿದ್ಧಪಡಿಸಿರುವ ಸೋಮರಸಪಾನಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ. ಎಲೈ ಇಂದ್ರನೇ, ನಾವು ಇಲ್ಲಿ ಯಜ್ಞಮಾಡುತ್ತಿರುವುದನ್ನು ತಿಳಿದು ಇಲ್ಲಿಗೆ ಬಾ. ಎಲೈ ಇಂದ್ರನೇ, ನಮ್ಮೊಡನೆ ಹೋರಾಡುತ್ತಿರುವ ಶತ್ರು ಸೇನೆಗಳನ್ನು ಜಯಿಸುವವನೂ ಧನವಂತನೂ ಆದ ನಿನ್ನನ್ನು ಧನಾರ್ಥವಾಗಿ ಯಾಚಿಸುತ್ತೇವೆ.

## English Translation

We summon to the libations the mighty Shukra, the conqueror of heaven, exhilarated by sacrificial food ; take notice of this our sacrifice here and come, we solicit (for wealth) Maghavan, Victorious over his foes.

॥ ಸಂಹಿತಾಪಾಠಃ ॥

**ಸೋಮಸ್ಯ ರಾಜ್ಞೋ ವರುಣಸ್ಯ ಧರ್ಮಣಿ ಬೃಹಸ್ಪತೇರನುಮತ್ಯಾ ಉ ಶರ್ಮಣಿ ।**

**ತವಾಹಮದ್ಯ ಮಘವನ್ನುಪಸ್ತುತೌ ಧಾತರ್ವಿಧಾತಃ ಕಲಶಾ ಅಭಕ್ಷಯಂ ॥**

॥ ಪದಪಾಠಃ ॥

ಸೋಮಸ್ಯ । ರಾಜ್ಞಃ । ವರುಣಸ್ಯ । ಧರ್ಮಣಿ । ಬೃಹಸ್ಪತೇಃ । ಅನುऽಮತ್ಯಾಃ । ಊಂ ಇತಿ । ಶರ್ಮಣಿ । ತವ । ಅಹಂ । ಅದ್ಯ । ಮಘऽವನ್ । ಉಪऽಸ್ತುತೌ । ಧಾತಃ । ವಿಧಾತರಿತಿ ವಿऽಧಾತಃ । ಕಲಶಾನ್ । ಅಭಕ್ಷಯಂ ॥ ೩ ॥

॥ ಸಾಯಣಭಾಷ್ಯಂ ॥

ರಾಜ್ಞೋ ರಾಜಮಾನಸ್ಯ ಸೋಮಸ್ಯ ವರುಣಸ್ಯ ಚ ಸಂಬಂಧಿನಿ ಧರ್ಮಣಿ ಧಾರಕೇ ಯಜ್ಞೇ ವರ್ತಮಾನಸ್ತಥಾ ಬೃಹಸ್ಪತೇರನುಮತ್ಯಾಃ ಸಂಬಂಧಿನಿ ಶರ್ಮಣಿ ಶರಣೇ ಯಜ್ಞಗೃಹೇ ವರ್ತಮಾನೋऽಹಂ ಹೇ ಮಘವನ್ನಿಂದ್ರ ತವೋಪಸ್ತುತೌ ಸ್ತೋತ್ರೇऽದ್ಯೇದಾನೀಂ ಪ್ರವೃತ್ತೋऽಸ್ಮಿ । ಹೇ ಧಾತಹೇ ಏತತ್ಸಂಜ್ಞಕ ದೇವ ಹೇ ವಿಧಾತರೇತತ್ಸಂಜ್ಞಕ ದೇವ ಯುವಾಭ್ಯಾಮನುಜ್ಞಾತಃ ಕಲಶಾನ್ಕಲಶಸ್ಥಾನ್ಹುತಶಿಷ್ಟಾನ್ಸೋಮಾನಭಕ್ಷಯಂ । ಭಕ್ಷಿತವಾನಸ್ಮಿ ॥

॥ ಪ್ರತಿಪದಾರ್ಥ ॥

**ಮಘವನ್**— ಎಲೈ ಇಂದ್ರನೇ । **ರಾಜ್ಞಃ**— ಪ್ರಕಾಶಮಾನನಾದ । **ಸೋಮಸ್ಯ**—ಸೋಮದೇವನ ಮತ್ತು । **ವರುಣಸ್ಯ**— ವರುಣನ ಸಂಬಂಧವಾದ । **ಧರ್ಮಣಿ**— ಯಜ್ಞದಲ್ಲಿ ಪ್ರವೃತ್ತನಾದವನೂ । **ಬೃಹಸ್ಪತೇಃ**— ಬೃಹಸ್ಪತಿಯ ಮತ್ತು । **ಅನುಮತ್ಯಾಃ**— ಅನುಮತಿಯ ಸಂಬಂಧವಾದ । **ಶರ್ಮಣಿ**— ಯಜ್ಞಗೃಹದಲ್ಲಿ ಇರುವವನೂ ಆದ । **ಅಹಂ** —ನಾನು । **ತವ**—ನಿನ್ನ । **ಉಪಸ್ತುತೌ**—ಸ್ತೋತ್ರಮಾಡುವುದರಲ್ಲಿ । **ಅದ್ಯ**— ಈಗ ಪ್ರವೃತ್ತನಾಗಿದೇನೆ । **ಧಾತಃ**—ಎಲೈ ಧಾತೃದೇವನೇ । **ವಿಧಾತಃ**— ವಿಧಾತೃದೇವನೇ (ನಿಮ್ಮ ಸಮ್ಮತಿಯಿಂದ) । **ಕಲಶಾನ್**— ಕಲಶದಲ್ಲಿ ಉಳಿದಿರುವ ಹೋಮಶೇಷವಾದ ಸೋಮವನ್ನು । **ಅಭಕ್ಷಯಂ**—ಭಕ್ಷಿಸಿದ್ದೇನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಪ್ರಕಾಶಮಾನವಾದ ಸೋಮ ಮತ್ತು ವರುಣನನ್ನು ಉದ್ದೇಶಿಸಿ ಮಾಡುವ ಯಜ್ಞದಲ್ಲಿಯೂ ಬೃಹಸ್ಪತಿ ಮತ್ತು ಅನುಮತಿಯನ್ನು ಉದ್ದೇಶಿಸಿ ಮಾಡುವ ಯಜ್ಞದಲ್ಲಿಯೂ ಪ್ರವೃತ್ತನಾಗಿರುವ ನಾನು ಈಗ ನಿನ್ನನ್ನು ಸ್ತೋತ್ರಮಾಡಲು ಪ್ರವೃತ್ತನಾಗಿದ್ದೇನೆ. ಎಲೈ ಧಾತೃವೇ, ಎಲೈ ವಿಧಾತೃವೇ, ನಿಮ್ಮ ಸಮ್ಮತಿಯಿಂದ ನಾನು ಕಲಶದಲ್ಲಿ ಉಳಿದಿರುವ ಹೋಮಶೇಷವಾದ ಸೋಮರಸವನ್ನು ಪಾನಮಾಡಿದ್ದೇನೆ.

## English Translation.

(Engaged) in the worship of the royal Soma and of Varuna, (present) in the protecting (dwelling) of Brihaspati and Anumati, (I am assiduous) in your praise, Maghavan ; Datri and Vidhatri, I have fed on the pitcher.

॥ ವಿಶೇಷವಿಷಯಗಳು ॥

ಕಲಶ ಶಬ್ದನಿರ್ವಚನವನ್ನು ಹೇಳುತ್ತಾ ಯಾಸ್ಕರು—

> ಸೋಮಸ್ಯ ರಾಜ್ಞೋ ವರುಣಸ್ಯ ಧರ್ಮಣಿ ಬೃಹಸ್ಪತೇರನುಮತ್ಯಾ ಉ ಶರ್ಮಣಿ । ತವಾಹ-ಮದ್ಯ ಮಘವನ್ನುಪಸ್ತುತೌ ಧಾತರ್ವಿಧಾತಃ ಕಲಶಾ ಅಭಕ್ಷಯಂ॥ ಇತ್ಯೇತಾಭಿರ್ದೇವತಾಭಿ-ರಭಿಪ್ರಸೂತಃ ಸೋಮಕಲಶಾನಭಕ್ಷಯಮಿತಿ । ಕಲಶಃ ಕಸ್ಮಾತ್ ಕಲಾ ಅಸ್ಮಿಞ್ಛೇರತೇ ಮಾತ್ರಾಃ । ಕಲಿಶ್ಚ ಕಲಾಶ್ಚ ಕಿರತೇರ್ವಿ ಕೀರ್ಣಮಾತ್ರಾಃ ॥
>
> (ನಿ. ೧೧-೧೨)

ಎಂದು ಹೇಳಿದಾರೆ. ಎಂದರೆ ಸೋಮ, ವರುಣ, ಬೃಹಸ್ಪತಿ, ಅನುಮತಿ ಎಂಬ ದೇವತೆಗಳನ್ನು ದ್ದೇಶಿಸಿ ಮಾಡುವ ಯಜ್ಞದಲ್ಲಿ ಈ ದೇವತೆಗಳ ಒಪ್ಪಿಗೆಯಿಂದ ಕಲಶದಲ್ಲಿ ಮಿಕ್ಕಿರುವ ಸೋಮರಸವನ್ನು ಭಕ್ಷಿಸಿದೆನು (ಪಾನಮಾಡಿದೆನು). ಮುಖ್ಯಾಭಿಪ್ರಾಯವೇನೆಂದರೆ ಈ ದೇವತೆಗಳ ಪ್ರೇರಣೆಯಿಂದ ಕಲಶದಲ್ಲಿರುವುದನ್ನು ಭಕ್ಷಿಸಿದೆನು ಕಲಶಕ್ಕೆ ಕಲಶ ವೆಂಬ ಹೆಸರು ಬರಲು ಕಾರಣವೇನು ? **ಕಲಾ** ಎಂದರೆ ಒಂದು ನಿರ್ದಿಷ್ಟವಾದ ಅಳತೆಯು. ಇಂತಹ ಅಳತೆಯಿಂದ ಕೂಡಿದ ಅನೇಕ ಸೋಮರಸಗಳು ಈ ಪಾತ್ರೆಯಲ್ಲಿ ತುಂಬಿರುವುದರಿಂದ ಇದಕ್ಕೆ ಕಲಶವೆಂದು ಹೆಸರು. **ಕಲಿಃ** ಮತ್ತು **ಕಲಾಃ** ಎಂಬ ಎರಡುಶಬ್ದಗಳೂ ಎರಚು, ಪ್ರತ್ಯೇಕವಾಗಿ ಇಡು ಎಂಬರ್ಥವುಳ್ಳ ಕಿರ್ ಧಾತುವಿನಿಂದ ನಿಷ್ಪನ್ನವಾಗಿವೆ

॥ ಸಂಹಿತಾಪಾಠಃ ॥

ಪ್ರಸೂತೋ ಭಕ್ಷಮಕರಂ ಚರಾವಪಿ ಸ್ತೋಮಂ ಚೇಮಂ ಪ್ರಥಮಃ ಸೂರಿ-
ರುನ್ಮೃಜೇ ।
ಸುತೇ ಸಾತೇನ ಯದ್ಯಾಗಮಂ ವಾಂ ಪ್ರತಿ ವಿಶ್ವಾಮಿತ್ರಜಮದಗ್ನೀ
ದಮೇ ॥ ೪ ॥

॥ ಪದಪಾಠಃ ॥

ಪ್ರಽಸೂತಃ । ಭಕ್ಷಂ । ಅಕರಂ । ಚರೌ । ಅಪಿ । ಸ್ತೋಮಂ । ಚ । ಇಮಂ । ಪ್ರಥಮಃ । ಸೂರಿಃ । ಉತ್ । ಮೃಜೇ ।

ಸುತೇ । ಸಾತೇನ । ಯದಿ । ಆ । ಅಗಮಂ । ವಾಂ । ಪ್ರತಿ । ವಿಶ್ವಾಮಿತ್ರಜಮದಗ್ನೀ ಇತಿ । ದಮೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪ್ರಸೂತಸ್ತ್ವಯಾ ಪ್ರೇರಿತೋಽಹಂ ಚರೌ ಚರಣೀಯೇ ಚರುಣಾ ವಾ ಯುಕ್ತೇ ಯಜ್ಞೇ ಭಕ್ಷಮಪಿ ಭಕ್ಷಣೀಯಂ ಚರ್ವಾದಿ ಹವಿಶ್ಚಾಕರಂ । ತ್ವದರ್ಥಮಕಾರ್ಷಂ । ಪ್ರಥಮೋ ಮುಖ್ಯಃ

**ಸೂರಿಃ ಸ್ತೋತಾಹಮಿಮಂ ಸ್ತೋಮಂ ಸ್ತೋತ್ರಂ ಚ ತ್ವದರ್ಥಮುನ್ಮೃಜೇ । ಉನ್ಮಾರ್ಜ್ಮಿ । ಸಂಸ್ಕರೋಮಿ । ಉಚ್ಚಾರಯಾಮೀತ್ಯರ್ಥಃ । ಇದಾನೀಮಿಂದ್ರೋಽಂತರಾತ್ಮರೂಪಃ ಸನ್ । ಸೂಕ್ತಸ್ಯ ದ್ರಷ್ಟಾರಾವೃಷೀ ಸಂಬೋಧ್ಯ ಬ್ರೂತೇ । ಹೇ ವಿಶ್ವಾಮಿತ್ರಜಮದಗ್ನೀ ವಾಂ ಯುವಾಂ ಪ್ರತಿ ದಮೇ ಯಜ್ಞಗೃಹೇ ಸುತೇಽಭಿಷುತೇ ಸೋಮೇ ಸತಿ ಸಾತೇನ ಸಂಭಕ್ತವ್ಯೇನ ಧನೇನ ಸಾರ್ಧಂ ಯದಿ ಯದಾ ಯಸ್ಮಿನ್ಕಾಲೇಽಹಮಾಗಮಂ ಆಗಚ್ಛಾಮಿ ತದಾ ಯುವಾಂ ಸ್ತೋತ್ರಂ ಕುರುತಮಿತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಪ್ರಸೂತಃ**—ನಿನ್ನಿಂದ ಪ್ರೇರಿತನಾದ ನಾನು । **ಚರೌ**—ಯಜ್ಞದಲ್ಲಿ । **ಭಕ್ಷಂ ಅಪಿ**—ಭಕ್ಷಣಯೋಗ್ಯವಾದ ಹವಿಸ್ಸನ್ನು । **ಅಕರಂ**—ನಿನಗಾಗಿ ಸಿದ್ಧಪಡಿಸಿದ್ದೇನೆ (ಈ ಯಜ್ಞದಲ್ಲಿ) । **ಪ್ರಥಮಃ ಸೂರಿಃ**—ಮುಖ್ಯ ಸ್ತೋತೃವಾದ ನಾನು । **ಇಮಂ ಸ್ತೋತ್ರಂ ಚ**—ಈ ಸ್ತೋತ್ರವನ್ನೂ ಸಹ । **ಉತ್ ಮೃಜೇ**—ಸಂಸ್ಕಾರವಮಾಡುತ್ತೇನೆ ಎಂದರೆ ಉಚ್ಚರಿಸುತ್ತೇನೆ । (ಇಂದ್ರನ ವಾಕ್ಯವು)— **ವಿಶ್ವಾಮಿತ್ರಜಮದಗ್ನೀ**—ಎಲೈ ವಿಶ್ವಾಮಿತ್ರ ಜಮದಗ್ನಿ ಋಷಿಗಳೇ, । **ವಾಂ**—ನಿಮ್ಮ । **ಪ್ರತಿ ದಮೇ**—ಬೇರೆಬೇರೆ ಯಜ್ಞಗೃಹದಲ್ಲಿ । **ಸುತೇ**—ಸೋಮರಸವು ಹಿಂಡಿ ಸಿದ್ಧಪಡಿಸಲ್ಪಟ್ಟಾಗ । **ಸಾತೇನ**—ನಿಮಗೆ ಕೊಡಬೇಕಾದ ಧನದಿಂದ ಸಹಿತನಾಗಿ । **ಯದಿ**—ಯಾವಾಗ । **ಆಗಮಂ**—ನಾನು ಬರುವೆನೋ ಆಗ ನನ್ನನ್ನು ಸ್ತುತಿಸಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನಿಂದ ಪ್ರೇರಿತನಾದ ನಾನು ಯಜ್ಞದಲ್ಲಿ ಭಕ್ಷಣಯೋಗ್ಯವಾದ ಹವಿಸ್ಸನ್ನು ನಿನಗಾಗಿ ಸಿದ್ಧಪಡಿಸಿದ್ದೇನೆ. ಈ ಯಜ್ಞದಲ್ಲಿ ಮುಖ್ಯ ಸ್ತೋತೃವಾದ ನಾನು ಈ ಸ್ತೋತ್ರವನ್ನು ಉಚ್ಚರಿಸುತ್ತೇನೆ. (ಇಂದ್ರನ ವಾಕ್ಯ-) ಎಲೈ ವಿಶ್ವಾಮಿತ್ರ ಜಮದಗ್ನಿ ಋಷಿಗಳೇ, ನಿಮ್ಮ ಬೇರೆಬೇರೆ ಯಜ್ಞಗೃಹದಲ್ಲಿ ಸೋಮರಸವು ಹಿಂಡಿ ಸಿದ್ಧಪಡಿಸಲ್ಪಟ್ಟಾಗ ನಿಮಗೆ ಕೊಡಬೇಕಾದ ಧನಸಹಿತನಾಗಿ ನಾನು ಅಲ್ಲಿಗೆ ಬರುವೆನು. ಆಗ ನನ್ನನ್ನು ಸ್ತುತಿಸಿರಿ.

English Translation

Enjoined by you, I have prepared the food at the (sacrifice) about to e performed, and as chief worshipper I complete this hymn of praise. [Indra peaks :] The Soma being poured out in your respective dwellings, O 'iswamitra and Jamadagni, (offer praise) when I come with (the wealth) ·hich I am going to distribute.



## ನೂರ ಅರವತ್ತೆಂಟನೆಯ ಸೂಕ್ತವು

### ಪೀಠಿಕೆ.

ವಾಯು ಮತ್ತು ವಾತ ಎಂಬ ಎರಡು ಶಬ್ದಗಳೂ ವಾಯುದೇವತೆ ಮತ್ತು ಗಾಳಿ ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ. ಆದರೆ ವಾಯುವು ದೇವತೆ, ವಾತವು ಅಚೇತನವಾದ ಗಾಳಿ. ವಾಯುದೇವತಾಕವಾಗಿ ಎರಡು

ಪೂರ್ತ ಸೂಕ್ತಗಳು (ಋ ಸಂ ೧೦-೧೬೮ ಮತ್ತು ೧೦-೧೮೬) ಕೆಲವು ಸೂಕ್ತಭಾಗಗಳೂ, ಇಂದ್ರನ ಜತೆಯಲ್ಲಿ ಸುಮಾರು ಹನ್ನೆರಡು ಸೂಕ್ತಗಳೂ ಇವೆ ವಾತ, ವಾಯು ಎಂಬ ಎರಡು ಶಬ್ದಗಳ ಪ್ರಯೋಗವೂ ಒಂದೇ ಋಕ್ಕಿನಲ್ಲಿ ಬರುವುದೂ ಉಂಟು (೬-೫೦-೧೨; ೧೦-೯೨-೧೩). ಇವೆರಡರಲ್ಲಿ ವಾಯುವನ್ನೇ ಇಂದ್ರನ ಜತೆಯಲ್ಲಿ ಸ್ತುತಿಸಲಾಗಿದೆ. ನಿರುಕ್ತದಲ್ಲಿ (ನಿ. ೭-೫) ವಾಯುವು ಪೃಥಿವೀ, ಅಂತರಿಕ್ಷ, ಸ್ವರ್ಗ ಎಂಬ ಮೂರು ಸ್ಥಾನಗಳಲ್ಲಿರುವ ಮೂರು ಬೇರೆಬೇರೆ ಗುಂಪುಗಳ ದೇವತೆಗಳಲ್ಲಿ ಮಧ್ಯಮಸ್ಥಾನವಾದ ಅಂತರಿಕ್ಷದೇವತೆಯೆಂದು ಹೇಳಿದೆ—**ಅಗ್ನಿಃ ಪೃಥಿವೀಸ್ಥಾನೋ ವಾಯುರ್ವೇಂದ್ರೋ ವಾಂತರಿಕ್ಷಸ್ಥಾನಃ ಸೂರ್ಯೋ ದ್ಯುಸ್ಥಾನಃ ||** ಎಂದರೆ ಅಗ್ನಿಯು ಪೃಥಿವೀಸ್ಥಾನದೇವತೆಯು; ವಾಯು ಅಥವಾ ಇಂದ್ರನು ಅಂತರಿಕ್ಷರಸ್ಥಾನದೇವತೆಯು; ಸೂರ್ಯನು ದ್ಯುಸ್ಥಾನ ದೇವತೆಯು. ಮತ್ತು ಅದೇ ನಿರುಕ್ತದ ಮತ್ತೊಂದು ಕಡೆ—

**ತಾಸಾಂ ವಾಯುಃ ಪ್ರಥಮಾಗಾಮೀ ಭವತಿ। ವಾಯುಃ। ವಾಯುರ್ವಾತೇರ್ವೇತೇರ್ವಾ ಸ್ಯಾದ್ಗತಿಕರ್ಮಣಃ ಏತೇರಿತಿ ಸ್ಥೌಲಾಷ್ಠೀವಿಃ ಅನರ್ಥಕೋ ವಕಾರಃ ||** (ನಿ. ೧೦-೧)

ಮಧ್ಯಮಸ್ಥಾನದೇವತೆಗಳಲ್ಲಿ ವಾಯುವೇ ಮೊದಲನೆಯವನು. ಈ ವಾಯುಶಬ್ದವು ಬೀಸು ಎಂಬರ್ಥವುಳ ವಾ-ಗತಿಗಂಧನಯೋಃ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಅಥವಾ ಗತ್ಯರ್ಥವನ್ನು ಸೂಚಿಸುವ ವೇತಿಧಾತುವಿನಿಂದಲೂ ನಿಷ್ಪನ್ನವಾಗಿದೆಯೆಂದು ಸ್ಥೌಲಾಷ್ಠೀವಿ ಎಂಬ ಆಚಾರ್ಯರ ಮತವು. ಈ ಸಂದರ್ಭದಲ್ಲಿ ವಕಾರಕ್ಕೆ ಯಾವ ಅರ್ಥವೂ ಇರುವುದಿಲ್ಲ. ಮತ್ತು ವಾತಶಬ್ದದ ವಿಷಯದಲ್ಲಿ—

**ವಾತಃ । ವಾತೋ ವಾತೀತಿ ಸತಃ ||** (ನಿ. ೧೦-೩೪)

ವಾತಶಬ್ದವು ಬೀಸು ಎಂಬರ್ಥವುಳ್ಳ ವಾ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ ಬೀಸುವುದರಿಂದ ಇದಕ್ಕೆ (ಗಾಳಿಗೆ) ವಾತವೆಂದು ಹೆಸರು.

ವಾತ, ವಾಯು ಎಂಬ ಎರಡು ಶಬ್ದಗಳಿಗೂ ಉಪಯೋಗಿಸುವ ವಿಶೇಷಗುಣಗಳು ಸಾಧಾರಣವಾಗಿ ಭಿನ್ನವಾಗಿವೆ. ವಾತದ ವಿಶೇಷಣಗಳು ವೇಗ ಮತ್ತು ರಭಸವನ್ನೇ ವಿಶೇಷವಾಗಿ ಸೂಚಿಸುತ್ತವೆ.

ವಾಯುವಿನ ಮೂಲದ ವಿಷಯವಾಗಿ ಹೆಚ್ಚು ಆಧಾರಗಳಿಲ್ಲ ದ್ಯಾವಾಪೃಥಿವಿಗಳು ಐಶ್ವರ್ಯಕ್ಕೋಸ್ಕರ ಅವನನ್ನು ಸೃಜಿಸಿದವು (೭-೯೦-೩) ವಾಯುವಿನ ಪತ್ನಿಯ ಹೆಸರು ಉಕ್ತವಾಗಿಲ್ಲದಿದ್ದರೂ ವಾಯುವು ತ್ವಷ್ಟೃವಿನ ಅಳಿಯನೆಂದು ಹೇಳಲಾಗಿದೆ (೮-೨೬-೨೧, ೨೨) ಪುರುಷಸೂಕ್ತದಲ್ಲಿ (೧೦-೯೦-೧೩) ವಾಯುವು ವಿರಾಟ್ಪುರುಷನ ಉಸುರಿನಿಂದ ಉದ್ಭವಿಸಿದನೆಂದು ಹೇಳಿದೆ. ವಾಯುವಿಗೂ ಮರುತ್ತುಗಳಿಗೂ ಸಂಬಂಧವೇ ಉಕ್ತವಾಗಿಲ್ಲವೆನ್ನಬಹುದು. ಒಂದು ಕಡೆ ಮಾತ್ರ (೧-೧೩೪-೪) ವಾಯುವು ಅಂತರಿಕ್ಷದ ಯೋನಿಯಿಂದ ಮರುತ್ತುಗಳನ್ನು ಉತ್ಪತ್ತಿಮಾಡಿದನೆಂದೂ ಅವರು ಮತ್ತು ವಿಶ್ವೇದೇವತೆಗಳು ವಾಯುವನ್ನು ಹಿಂಬಾಲಿಸಿದರೆಂದೂ ಹೇಳಿದೆ. ವಾಯುವಿನ ಗುಣಗಳೂ ಅಥವಾ ಲಕ್ಷಣಗಳೂ ಅಸ್ಪಷ್ಟವಾಗಿದೆ. ಇವನು ಸ್ಪುರದ್ರೂಪಿ (೧-೨-೧), ಸಹಸ್ರಾಕ್ಷನು, ಮನೋವೇಗದಿಂದ ಇಂದ್ರಸಹಿತನಾಗಿ ಆಕಾಶವನ್ನು ಸ್ಪರ್ಶಿಸಿದನು (೧-೨೩-೨, ೩); ವಾಯುವಿನ ರಥವು ಹೊಳೆಯುತ್ತಿದೆ. ಅದಕ್ಕೆ ಕಂದುಬಣ್ಣದ ಅಥವಾ ಕೆಂಪುಬಣ್ಣದ ಒಂದು ಜತೆ ಅಶ್ವಗಳಿವೆ ವಾಯುವಿನ ಅಶ್ವಗಳಿಗೆ ನಿಯುತಗಳೆಂದು ಹೆಸರು (ನಿ. ೨-೨೮) ವಾಯುವಿನ ಅಶ್ವಸಮೂಹದಲ್ಲಿ ೯೯ (೪-೪೮-೪) ಅಥವಾ ನೂರು, ಸಾವಿರ

ಅಶ್ವಗಳಿವೆ (೪-೪೬-೩) ; ಅವನ ಅಶ್ವಗಳು ಅವನ ಇಚ್ಛಾಮಾತ್ರದಿಂದಲೇ ರಥಕ್ಕೆ ತಾವೇ ಹೂಡಿಕೊಳ್ಳುತ್ತವೆ. (ನಿಯುಕ್ತವಾಗುತ್ತವೆ). ಆದ್ದರಿಂದಲೇ ಅವುಗಳಿಗೆ ನಿಯುತಃ ಎಂಬ ಹೆಸರು ಬಂದಿದೆ. ರಥದಲ್ಲಿ ಕುಳಿತಾಗ ಇವನಿಗೆ ಇಂದ್ರನು ಸಹಚರನು (೪-೪೬-೨, ೪-೪೮-೨; ೭-೯೧-೫.) ರಥದಲ್ಲಿ ಬಂಗಾರದ ಆಸನವಿದೆ. ಆ ರಥವು ಆಕಾಶವನ್ನು ಮುಟ್ಟುತ್ತದೆ (೪-೪೬-೪.) ಇತರ ದೇವತೆಗಳಂತೆ ಇವನಿಗೂ ಸೋಮರಸವು ಪ್ರಿಯವಾದುದು. ತನ್ನ ಅಶ್ವಗಳೊಡನೆಯೂ, ಇಂದ್ರನೊಡನೆಯೂ ಬಂದು ಎಲ್ಲರಿಗಿಂತ ಮೊದಲು ಸೋಮಪಾನಮಾಡಬೇಕೆಂದು ಪ್ರಾರ್ಥಿತನಾಗಿದಾನೆ (೧-೧೩೫.-೪) ಐತರೇಯ ಬ್ರಾಹ್ಮಣದಲ್ಲಿ (ಐ. ಬ್ರಾ ೨-೨೨) ಸೋಮರಸದ ಪ್ರಥಮಪಾನಕ್ಕಾಗಿ ದೇವತೆಗಳಲ್ಲಿ ಸ್ಪರ್ಧೆಯು ಏರ್ಪಟ್ಟು ಅದರಲ್ಲಿ ವಾಯುವು ಮೊದಲನೆಯವನೂ, ಇಂದ್ರನು ಎರಡನೆಯವನೂ ಆದರು ಎಂಬ ಒಂದು ಇತಿಹಾಸವಿದೆ (ಇದನ್ನು ನಾವು ಹಿಂದೆ ವಿವರಿಸಿದ್ದೇವೆ). ಅವನು ಸೋಮರಕ್ಷಕ (೧೦-೮೫-೫); ಅವನೊಬ್ಬನಿಗೇ ಶುಚಿಪಾ ಎಂದರೆ ಆಶಿರದ್ರವ್ಯಗಳನ್ನು ಬೆರಸದ ಶುದ್ಧವಾದ ಸೋಮವನ್ನು ಪಾನಮಾಡುವವನು ಎಂಬ ವಿಶೇಷಣವಿದೆ. ಕೆಲವು ಸಂದರ್ಭಗಳಲ್ಲಿ ಇಂದ್ರವಾಯುಗಳಿಗಿಬ್ಬರಿಗೂ ಈ ವಿಶೇಷಣವಿದೆ. ವಾಯುವು, ಯಶಸ್ಸು, ಸಂತಾನ, ಅಶ್ವಗಳು, ಗೋವುಗಳು, ಸುವರ್ಣ ಮೊದಲಾದವನ್ನು ಅನುಗ್ರಹಿಸುತ್ತಾನೆ (೭-೯೦-೨, ೬); ಶತ್ರುಗಳನ್ನು ಚದುರಿಸುತ್ತಾನೆ (೪-೪೮-೨), ದುರ್ಬಲರನ್ನು ರಕ್ಷಿಸಬೇಕೆಂದು ಪ್ರಾರ್ಥಿತನಾಗಿದಾನೆ (೧-೧೩೪-೫).

ಗಾಳಿಯ ಮತ್ತೊಂದು ಹೆಸರಾದ ವಾತ ಎಂಬ ಶಬ್ದವು **ವಾ-ಗತಿಗಂಧನಯೋಃ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಪ್ರಕೃತ ಸೂಕ್ತದಲ್ಲಿ (೧೦-೧೬೮) ಈ ರೀತಿ ವರ್ಣನೆ ಇದೆ—ಎಲ್ಲವನ್ನೂ ಪುಡಿಪುಡಿಮಾಡುತ್ತಾ ಜೋರಾಗಿ ಶಬ್ದಮಾಡುತ್ತಾ ಧೂಳೆಬ್ಬಿಸುತ್ತಾ ವಾಯುಮಂಡಲದಲ್ಲಿ ಸಂಚರಿಸುತ್ತಾನೆ. ಒಂದು ದಿನವೂ ವಿಶ್ರಾಂತನಾಗುವುದಿಲ್ಲ. ಆದಿಯಲ್ಲಿ ಜನಿಸಿದ ಇವನು ನೀರಿಗೆ ಮಿತ್ರನು. ಅವನ ಜನ್ಮಸ್ಥಾನವು ತಿಳಿಯದು, ಇವನು ಮನಬಂದಕಡೆ ಹೋಗುತ್ತಾನೆ. ಇವನು ಮಾಡುವ ಶಬ್ದವು ಎಲ್ಲರಿಗೂ ಕೇಳಿಸುತ್ತದೆ. ಆದರೆ ಇವನನ್ನು ಕಂಡವರಿಲ್ಲ (೧-೧೬೪-೪೪). ಇವನು ದೇವತೆಗಳ ಉಸಿರು (೧-೯೨-೧೩). ಯಾಗಗಳಲ್ಲಿ ಇವನನ್ನುದ್ದೇಶಿಸಿ ಹೋಮಮಾಡುತ್ತಾರೆ.

ರುದ್ರನಂತೆ ವಾತನೂ (ವಾಯುವೂ) ಜನಗಳಿಗೆ ಔಷಧಗಳನ್ನು ಕೊಡುತ್ತಾನೆ. ಅವರ ಆಯುಸ್ಸನ್ನು ಹೆಚ್ಚಿಸುತ್ತಾನೆ. ಇವನ ಮನೆಯಲ್ಲಿ ಅಮೃತದ ನಿಧಿ ಇದೆ (೧೦-೧೮೬) ಗಾಳಿಯ ಕಾರ್ಯಗಳೆಲ್ಲವೂ ಚಂಡಮಾರುತಕ್ಕೆ ಸಂಬಂಧಿಸಿದೆ (೪-೧೭-೨೨ ; ೫-೮೩-೪ ; ೧೦-೧೬೮-೧, ೨) ಸಿಡಿಲು ಹೊಡೆಯುವುದಕ್ಕೆ ಮತ್ತು ಸೂರ್ಯೋದಯಕ್ಕೆ ಪುರ್ವಭಾವಿಯಾಗಿ ಗಾಳಿಯು ವೇಗವಾಗಿ ಬೀಸುವುದರಿಂದ ವಾಯುವು ರಕ್ತವರ್ಣದ ತೇಜಸ್ಸನ್ನು ಉತ್ಪತ್ತಿ ಮಾಡುತ್ತಾನೆ (೧೦-೧೬೮-೧) ಮತ್ತು ಉಷಸ್ಸನ್ನು ಪ್ರಕಾಶಿಸುವಂತೆ ಮಾಡುತ್ತಾನೆ (೧-೧೩೪-೩) ಎಂದು ಹೇಳಿದೆ. ವಾಯುವೇಗವೇ ದೇವತೆಗಳ ವೇಗ (೪-೧೭-೧೨; ೫-೪೧-೩, ೯-೯೭-೫೫) ಇತ್ಯಾದಿ ಅನೇಕ ವರ್ಣಗಳಿವೆ.

|| ಸಾಯಣಭಾಷ್ಯಂ ||

**ವಾತಸ್ಯೇತಿ ಚತುರ್ಋಚಂ ಸಪ್ತದಶಂ ಸೂಕ್ತಂ ವಾತಗೋತ್ರಸ್ಯಾನಿಲಾಖ್ಯಸ್ಯಾರ್ಷಂ ತ್ರೈಷ್ಟುಭಂ ವಾಯುದೇವತಾಕಂ। ತಥಾ ಚಾನುಕ್ರಾಂತಂ। ವಾತಸ್ಯಾನಿಲೋ ವಾತಾಯನೋ ವಾಯವ್ಯಮಿತಿ। ಗತೋ ವಿನಿಯೋಗಃ ||**

ಅನುವಾದವು—ವಾತಸ್ಯ ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾತಗೋತ್ರದ ಅನಿಲನೆಂಬುವನು ಋಷಿಯು; ವಾಯುವು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ವಾತಸ್ಯಾನಿಲೋ ವಾತಾಯನೋ ವಾಯವ್ಯಂ ಎಂದು ಹೇಳಿರುವುದು ವಿನಿಯೋಗವನ್ನು ಹಿಂದಯೇ ಹೇಳಲಾಗಿದೆ.

## ಸೂಕ್ತ - ೧೬೮

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೬೮ ॥

ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೪ ॥

॥ ಋಷಿಃ—ಅನಿಲೋ ವಾತಾಯನಃ ॥

॥ ದೇವತಾ—ವಾಯುಃ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ವಾತಸ್ಯ ನು ಮಹಿಮಾನಂ ರಥಸ್ಯ ರುಜನ್ನೇತಿ ಸ್ತನಯನ್ನಸ್ಯ ಘೋಷಃ ।
ದಿವಿಸ್ಪೃಗ್ಯಾತ್ಯರುಣಾನಿ ಕೃಣ್ವನ್ನುತೋ ಏತಿ ಪೃಥಿವ್ಯಾ ರೇಣುಮಸ್ಯನ್ ॥೧॥

॥ ಪದಪಾಠಃ ॥

ವಾತಸ್ಯ । ನು । ಮಹಿಮಾನಂ । ರಥಸ್ಯ । ರುಜನ್ । ಏತಿ । ಸ್ತನಯನ್ । ಅಸ್ಯ । ಘೋಷಃ ।
ದಿವಿಸ್ಪೃಕ್ । ಯಾತಿ । ಅರುಣಾನಿ । ಕೃಣ್ವನ್ । ಉತೋ ಇತಿ । ಏತಿ । ಪೃಥಿವ್ಯಾ । ರೇಣುಂ ।
ಅಸ್ಯನ್ ॥ ೧ ॥

॥ ಸಾಯಣಭಾಷ್ಯಂ ॥

ವಾತಸ್ಯ ವಾಯೋಃ ರಥಸ್ಯ ರಂಹಣಶೀಲಸ್ಯ ಮಹಿಮಾನಂ ಮಾಹಾತ್ಮ್ಯಂ ನು ಕ್ಷಿಪ್ರಂ ಪ್ರಬ್ರವೀಮಿ । ಅಸ್ಯ ವಾಯೋರ್ಘೋಷಃ ಶಬ್ದಃ ಸ್ತನಯನ್ ಗಿರಿಗಹ್ವರಾದಿಷು ವಿವಿಧಂ ಶಬ್ದಮುತ್ಪಾದಯನ್ ರುಜನ್ ಸರ್ವಂ ಸ್ಥಾವರಜಂಗಮಜಾತಂ ಭಂಜನ್ನೇತಿ । ಗಚ್ಛತಿ । ಸ ಚ ವಾಯುರ್ದಿವಿಸ್ಪೃಗ್ದಿವಮಾಕಾಶಂ ಸ್ಪೃಶನ್ ವ್ಯಾಪ್ನುವನ್ನರುಣಾನ್ಯರುಣವರ್ಣಾನಿ ವಿಕೃತರೂಪಾಣಿ ದಿಗಂತರಾಣಿ ಕೃಣ್ವನ್ಕುರ್ವನ್ಯಾತಿ । ಪ್ರಾಪ್ನೋತಿ । ಉತೋ ಅಪಿ ಚ ಪೃಥಿವ್ಯಾ ಭೂಮೇಃ ರೇಣುಂ ಪಾಂಸುಮಸ್ಯನ್ ಗೃಹೀತ್ವಾ ಸರ್ವತ್ರ ವಿಕ್ಷಿಪನ್ನೇತಿ । ಗಚ್ಛತಿ । ಅತ ಏವಾರುಣಾನಿ ಕೃಣ್ವನ್ನಿತ್ಯುಕ್ತಂ ॥

|| ಪ್ರತಿಪದಾರ್ಥ ||

**ವಾತಸ್ಯ**—ವಾಯುವಿನ | **ರಥಸ್ಯ**—ರಥದ | **ಮಹಿಮಾನಂ**—ಮಾಹಾತ್ಮ್ಯೆಯನ್ನು | **ನು**—ಬೇಗನೆ ಹೇಳುತ್ತೇನೆ | **ಅಸ್ಯ**—ಈ ವಾಯುವಿನ | **ಘೋಷಃ**—ಶಬ್ದವು | **ಸ್ತನಯನ್**—ಪರ್ವತ ಗುಹೆ ಮೊದಲಾದವು ಗಳಲ್ಲಿ ಗರ್ಜಿಸುತ್ತಾ | **ರುಜನ್**—ಸ್ಥಾವರಜಂಗಮವಸ್ತುಗಳನ್ನು ಮುರಿದು ಹಾಕುತ್ತಾ | **ಏತಿ**— ಹೋಗುತ್ತದೆ (ಆ ವಾಯುವು) | **ದಿವಿಸ್ಪೃಕ್**—ಎತ್ತರವಾದ ಆಕಾಶವನ್ನು ಸ್ಪರ್ಶಿಸುತ್ತಾ | **ಅರುಣಾನಿ**—ದಿಗಂತರಗಳನ್ನು ಕೆಂಪು ಬಣ್ಣವಾಗಿರುವಂತೆ | **ಕೃಣ್ವನ್**—ಮಾಡುತ್ತಾ | **ಯಾತಿ**—ಮುಂದುವರೆಯುತ್ತದೆ | **ಉತೋ**— ಮತ್ತು | **ಪೃಥಿವ್ಯಾಃ**—ಭೂಮಿಯ ಮೇಲಿರುವ | **ರೇಣುಂ**—ಧೂಳನ್ನು | **ಅಸ್ಯನ್**—ಸುತ್ತಲೂ ಎತ್ತಿಹಾಕುತ್ತಾ **ಏತಿ**—ಹೋಗುತ್ತದೆ.

|| ಭಾವಾರ್ಥ ||

ವಾಯುವಿನ ರಥದ ಮಹಿಮೆಯನ್ನು ಬೇಗನೆ ಹೇಳುತ್ತೇನೆ. ಈ ವಾಯುವಿನ ಶಬ್ದವು ಪರ್ವತ, ಗುಹೆ ಮೊದಲಾದ ಪ್ರದೇಶಗಳಲ್ಲಿ ಗರ್ಜಿಸುತ್ತಾ ಎದುರಿಗೆ ಸಿಕ್ಕಿದ ವಸ್ತುಗಳನ್ನು ನುಚ್ಚು ನೂರುಮಾಡುತ್ತ ಹೋಗುತ್ತದೆ. ಮತ್ತು ಆ ವಾಯುವು ಎತ್ತರವಾದ ಆಕಾಶವನ್ನು ಮುಟ್ಟುತ್ತಾ ಸಮಸ್ತದಿಗಂತರಗಳನ್ನು ಕೆಂಬಣ್ಣವಾಗಿರುವಂತೆ ಮಾಡುತ್ತಾ ಮುಂದುವರೆಯುತ್ತದೆ. ಇದಲ್ಲದೆ ಭೂಮಿಯ ಮೇಲಿರುವ ಧೂಳನ್ನು ಸುತ್ತಲೂ ಎರಚುತ್ತಾ ಹೋಗುತ್ತದೆ.

## English Translation.

(I proclaim) the greatness of the impetuous Vayu; his voice spreads thundering around; he moves along sweeping the sky, tinting purple (the quarters of the horizon), he advances, raising the dust of the earth.

|| ಸಂಹಿತಾಪಾಠಃ ||

ಸಂ ಪ್ರೇರತೇ ಅನು ವಾತಸ್ಯ ವಿಷ್ಠಾ ಐನಂ ಗಚ್ಛಂತಿ ಸಮನಂ ನ ಯೋಷಾಃ|
ತಾಭಿಃ ಸಯುಕ್ಸರಥಂ ದೇವ ಈಯತೇಽಸ್ಯ ವಿಶ್ವಸ್ಯ ಭುವನಸ್ಯ ರಾಜಾ || ೨ ||

|| ಪದಪಾಠಃ ||

ಸಂ | ಪ್ರ | ಈರತೇ | ಅನು | ವಾತಸ್ಯ | ವಿಽಸ್ಥಾಃ | ಆ | ಏನಂ | ಗಚ್ಛಂತಿ | ಸಮನಂ | ನ | ಯೋಷಾಃ|
ತಾಭಿಃ | ಸಽಯುಕ್ | ಸಽರಥಂ | ದೇವಃ | ಈಯತೇ | ಅಸ್ಯ | ವಿಶ್ವಸ್ಯ | ಭುವನಸ್ಯ | ರಾಜಾ || ೨ ||

|| ಸಾಯಣಭಾಷ್ಯಂ ||

ವಿಷ್ಠಾ ವಿಶೇಷೇಣಾವಸ್ಥಿತಾಃ ಪರ್ವತಾದ್ಯಾ ವಾತಸ್ಯ ವಾಯೋರನುಗುಣಂ ಸಂ ಪ್ರೇರತೇ |

ಸಂಪ್ರಗಚ್ಛಂತಿ । ಯದಭಿಮುಖೋ ವಾಯುರ್ವರ್ತತೇ ತದಭಿಮುಖಾಃ ಪ್ರಕಂಪಂತ ಇತ್ಯರ್ಥಃ । ಸಮನಂ ನ ಸಂಗ್ರಾಮಮಿವೈನಂ ವಾಯುಂ ಯೋಷಾ ಅಶ್ವಯೋಷಿತೋ ವಡವಾ ಆ ಗಚ್ಛಂತಿ । ತಾಭಿರ್ವಡವಾಭಿಃ ಸಯುಕ್ ಸ್ವಯಮೇವ ಯುಜ್ಯಮಾನಂ ಸರಥಂ ಸಮಾನಮೇಕಂ ರಥಮಾರುಹ್ಯ ದೇವೋ ದೀಪ್ಯಮಾನೋ ವಾಯುರೀಯತೇ । ಗಚ್ಛತಿ ॥ ಈಙ್ ಗತೌ ॥ ಅಸ್ಯ ವಿಶ್ವಸ್ಯ ಸರ್ವಸ್ಯ ಭುವನಸ್ಯ ದ್ವಿತೀಯವಿಕಾರಭಾಜೋ ಭೂತಜಾತಸ್ಯ ರಾಜಾ ಸ್ವಾಮೀ ಭವತಿ । ಯದ್ವಾ । ಸಮನಂ ಧೃಷ್ಟಂ ಪುರುಷಂ ಯೋಷಾಃ ಕಾಮಿನ್ಯ ಇವ ಏವಂ ವಾಯುಂ ತರುಗುಲ್ಮಾದಿರೂಪಾಃ ಸ್ತ್ರಿಯೋಽಭಿಗಚ್ಛಂತಿ । ತಾಭಿಃ ಸರಥಂ ಸಹರಥಂ ದೇವ ಈಯತ ಇತಿ ॥

॥ ಪ್ರತಿಪದಾರ್ಥ ॥

ವಿಷ್ಠಾಃ—ವಿಶೇಷರೀತಿಯಿಂದ ಸ್ಥಿರವಾಗಿ ನಿಂತಿರುವ ವೃಕ್ಷಾದಿಗಳು । **ವಾತಸ್ಯ**—ವಾಯುವಿನ ಗತಿಯನ್ನನುಸರಿಸಿ । **ಸಂಪ್ರೇರತೇ**—ಕಂಪಿಸುತ್ತದೆ । **ಸಮನಂ ನ**—ಯುದ್ಧದಂತೆ । **ಏನಂ**—ಈ ವಾಯುವನ್ನು । **ಯೋಷಾಃ**—ಹೆಣ್ಣು ಕುದುರೆಗಳು । **ಆ ಗಚ್ಛಂತಿ**—ಸಮೀಪಿಸುತ್ತವೆ । **ತಾಭಿಃ**—ಆ ಅಶ್ವಗಳಿಂದ । **ಸ್ವಯುಕ್**—ತಾವಾಗಿಯೇ ಹೂಡಲ್ಪಡುವ । **ಸರಥಂ**—ರಥಸಹಿತನಾಗಿ ಎಂದರೆ ರಥವನ್ನು ಹತ್ತಿ । **ದೇವಃ**—ಪ್ರಕಾಶಮಾನನಾದ । **ವಾಯುಃ**—ವಾಯುವು । **ಈಯತೇ**—ಸಂಚರಿಸುತ್ತಾನೆ (ಈ ವಾಯುವು) । **ಅಸ್ಯ ವಿಶ್ವಸ್ಯ**—ಈ ಸಮಸ್ತನಾದ । **ಭುವನಸ್ಯ**—ಜಗತ್ತಿಗೆ । **ರಾಜಾ**—ಸ್ವಾಮಿಯಾಗಿದ್ದಾನೆ । [ಅಥವಾ **ಸಮನಂ**—ಧಷ್ಟಪುಷ್ಟನಾದ ಪುರುಷನನ್ನು ಸ್ತ್ರೀಯರು ಕಾಮಿಸುವಂತೆ । **ಏನಂ**—ಈ ವಾಯುವನ್ನು । **ಯೋಷಾಃ**—ತರುಲತಾದಿಗಳು । **ಆ ಗಚ್ಛಂತಿ**—ಸ್ವಾಗತಿಸುತ್ತವೆ ] **ತಾಭಿಃ**—ಆ ತರುಲತಾದಿಗಳಿಂದ ಸಹಿತನಾಗಿ । **ಸರಥಂ**—ರಥದಲ್ಲಿ ಕುಳಿತು ವಾಯುವು । **ಈಯತೇ**—ಸಂಚರಿಸುತ್ತಾನೆ.

॥ ಭಾವಾರ್ಥ ॥

ಸ್ಥಿರವಾಗಿ ನಿಂತಿರುವ ವೃಕ್ಷಾದಿಗಳು ವಾಯುವಿನ ಗತಿಯನ್ನನುಸರಿಸಿ ತಾವೂ ಕಂಪಿಸುತ್ತವೆ. ಎಂದರೆ ಗಾಳಿ ಬೀಸಿದಂತೆ ವೃಕ್ಷಗಳು ಅಳ್ಳಾಡುತ್ತವೆ. ಯುದ್ಧಭೂಮಿಗೆ ಅಶ್ವಗಳು ಆತುರದಿಂದ ಹೋಗುವಂತೆ ಈ ವಾಯುವನ್ನು ಅವನ ಅಶ್ವಗಳು ಸಮೀಪಿಸುತ್ತವೆ. ಅಶ್ವಗಳು ತಾವಾಗಿಯೇ ಹೂಡಿಕೊಳ್ಳುವ ರಥವನ್ನು ಹತ್ತಿ ಪ್ರಕಾಶಮಾನನಾದ ಈ ವಾಯುವು ಸಂಚರಿಸುತ್ತಾನೆ ಮತ್ತು ಸಮಸ್ತಜಗತ್ತಿಗೂ ಸ್ವಾಮಿಯಾಗಿದ್ದಾನೆ. ಅಥವಾ ಧಷ್ಟಪುಷ್ಟನಾದ ಪುರುಷನನ್ನು ಸ್ತ್ರೀಯು ಕಾಮಿಸುವಂತೆ ತರುಲತಾದಿಗಳು ಈ ವಾಯುವನ್ನು ಸ್ವಾಗತಿಸುತ್ತವೆ. ಮತ್ತು ರಥದಲ್ಲಿ ಕುಳಿತು ವಾಯುವು ತರುಲತಾದಿಗಳಲ್ಲಿ ಸಂಚರಿಸುತ್ತಾನೆ.

## English Translation

Solid masses advance to meet the wind, the mares come to him as to battle; associoted with them and in the same car the divinity proceeds, the sovereign of all this world.

|| ಸಂಹಿತಾಪಾಠಃ ||

ಅಂತರಿಕ್ಷೇ ಪಥಿಭಿರೀಯಮಾನೋ ನ ನಿ ವಿಶತೇ ಕತಮಚ್ಚನಾಹಃ |
ಅಪಾಂ ಸಖಾ ಪ್ರಥಮಜಾ ಋತಾವಾ ಕ್ವ ಸ್ವಿಜ್ಜಾತಃ ಕುತ ಆ ಬಭೂವ ||೩||

|| ಪದಪಾಠಃ ||

ಅಂತರಿಕ್ಷೇ | ಪಥಿಽಭಿಃ | ಈಯಮಾನಃ | ನ | ನಿ | ವಿಶತೇ | ಕತಮತ್ | ಚನ | ಅಹರಿತಿ |
ಅಪಾಂ | ಸಖಾ | ಪ್ರಥಮಽಜಾಃ | ಋತಽವಾ | ಕ್ವ | ಸ್ವಿತ್ | ಜಾತಃ | ಕುತಃ | ಆ | ಬಭೂವ ||೩||

|| ಸಾಯಣಭಾಷ್ಯಂ ||

ಅಂತರಿಕ್ಷೇ ನಭಸಿ ವಿದ್ಯಮಾನೈಃ ಪಥಿಭಿರ್ಮಾರ್ಗೈರೀಯಮಾನೋ ಗಚ್ಛನ್ವಾಯುಃ ಕತಮಚ್ಚನಾಹರೇಕಮಪಿ ದಿನಂ ನ ನಿ ವಿಶತೇ | ನೋಪವಿಶತಿ | ಕಿಂತು ಸರ್ವದೈವ ಗಚ್ಛತಿ || ನೇರ್ವಿಶಃ | ಪಾ. ೧-೩-೧೭ | ಇತ್ಯಾತ್ಮನೇಪದಂ || ಅಪಿ ಚಾಪಾಮುದಕಾನಾಂ ಸಖಾ | ವಾಯುರ್ವೈ ವೃಷ್ಟ್ಯಾ ಈಶ ಇತಿ ಶ್ರುತೇಃ | ಪ್ರಥಮಜಾಃ ಸರ್ವೇಭ್ಯಃ ಪ್ರಾಣಿಭ್ಯಃ ಪೂರ್ವೋತ್ಪನ್ನ ಋತಾವಾ ಸತ್ಯವಾನ್ ಏವಂಭೂತೋ ವಾಯುಃ ಕ್ವ ಸ್ವಿತ್ ಕುತ್ರ ಖಲು ದೇಶೇ ಜಾತ ಉತ್ಪನ್ನಃ ಕುತಃ ಕಸ್ಮಾಚ್ಚ ದೇಶಾನ್ನಿಷ್ಕ್ರಮ್ಯಾ ಬಭೂವ | ಇದಂ ಸರ್ವಂ ಜಗದ್ವ್ಯಾಪ್ನೋತ್ | ಸರ್ವದಾ ಸರ್ವತ್ರ ವರ್ತಮಾನತ್ವಾದಸ್ಯೋತ್ಪತ್ತಿರ್ವ್ಯಾಪ್ತಿಪ್ರಕಾರಶ್ಚ ನ ಕೇನಾಪಿ ಜ್ಞಾತುಂ ಶಕ್ಯತ ಇತ್ಯರ್ಥಃ ||

|| ಪ್ರತಿಪದಾರ್ಥ ||

**ಅಂತರಿಕ್ಷೇ**—ಆಕಾಶದಲ್ಲಿ ಇರುವ | **ಪಥಿಭಿಃ**—ಮಾರ್ಗಗಳಿಂದ | **ಈಯಮಾನಃ**—ಹೋಗುತ್ತಿರುವ ವಾಯುವು | **ಕತಮತ್ ಚನ ಅಹಃ**—ಒಂದು ದಿವಸದ ಮಟ್ಟಿಗಾದರೂ | **ನ ನಿ ವಿಶತೇ**—ಸುಮ್ಮನೆ ಕುಳಿತುಕೊಳ್ಳುವುದಿಲ್ಲ | **ಅಪಾಂ**—ಉದಕಗಳಿಗೆ | **ಸಖಾ**—ಸ್ನೇಹಿತನಾದ ವಾಯುವು | **ಪ್ರಥಮಜಾಃ**—ಸಮಸ್ತ ಪ್ರಾಣಿಗಳಿಗಿಂತಲೂ ಮೊದಲೇ ಉತ್ಪನ್ನನಾಗಿದ್ದಾನೆ | **ಋತಾವಾ**—ಸತ್ಯ ಅಥವಾ ಯಜ್ಞಸ್ವರೂಪನಾದ ಈ ವಾಯುವು | **ಕ್ವ ಸ್ವಿತ್**—ಯಾವ ಪ್ರದೇಶದಲ್ಲಿ | **ಜಾತಃ**—ಉತ್ಪನ್ನನಾದನು? | **ಕುತಃ**—ಯಾವ ಪ್ರದೇಶದಿಂದ ಹೊರಟುಬಂದು | **ಆ ಬಭೂವ**—ಈ ಸಮಸ್ತ ಜಗತ್ತನ್ನೂ ವ್ಯಾಪಿಸಿದ್ದಾನೆ? |

|| ಭಾವಾರ್ಥ ||

ಆಕಾಶದಲ್ಲಿರುವ ಮಾರ್ಗಗಳಿಂದ ಸರ್ವದಾ ಸಂಚರಿಸುತ್ತಿರುವ ಈ ವಾಯುವು ಒಂದು ದಿನದ ಮಟ್ಟಿಗಾದರೂ ಕುಳಿತುಕೊಳ್ಳುವುದೇ ಇಲ್ಲ. ಯಾವಾಗಲೂ ಸಂಚರಿಸುತ್ತಲೇ ಇರುತ್ತಾನೆ. ಉದಕಗಳಿಗೆ ಮಿತ್ರನಾದ ಈ ವಾಯುವು ಸಮಸ್ತ ಪ್ರಾಣಿಗಳಿಗಿಂತಲೂ ಮೊದಲೇ ಉತ್ಪನ್ನನಾಗಿದ್ದಾನೆ. ಇಂತಹ ಸತ್ಯ ಅಥವಾ ಯಜ್ಞಾರ್ಹನಾದ ವಾಯುವು ಯಾವ ಪ್ರದೇಶದಲ್ಲಿ ಹುಟ್ಟಿದನು? ಎಲ್ಲಿಂದ ಬಂದು ಈ ಜಗತ್ತನ್ನೆಲ್ಲಾ ವ್ಯಾಪಿಸಿದನು?

## English Translation

Traversing the firmament by its paths, (Vayu) rests not for a single day; the friend of the waters, the first-born, the utterer of truth—where has he been generated, whence was he manifested?

॥ ಸಂಹಿತಾಪಾಠಃ ॥

**ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ।**
**ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ॥**

॥ ಪದಪಾಠಃ ॥

**ಆತ್ಮಾ । ದೇವಾನಾಂ । ಭುವನಸ್ಯ । ಗರ್ಭಃ । ಯಥಾಽವಶಂ । ಚರತಿ । ದೇವಃ । ಏಷಃ ।**
**ಘೋಷಾಃ । ಇತ್ । ಅಸ್ಯ । ಶೃಣ್ವಿರೇ । ನ । ರೂಪಂ । ತಸ್ಮೈ । ವಾತಾಯ । ಹವಿಷಾ । ವಿಧೇಮ ॥ ೪ ॥**

॥ ಸಾಯಣಭಾಷ್ಯಂ ॥

**ಅಯಂ ವಾಯುರ್ದೇವಾನಾಮಿಂದ್ರಾದೀನಾಮಪ್ಯಾತ್ಮಾ ಜೀವರೂಪೇಣ ತೇಷ್ವವಸ್ಥಾನಾದ್ಭುವನಸ್ಯಾಪಿ ಭೂತಜಾತಸ್ಯ ಗರ್ಭೋ ಗರ್ಭವತ್ಪ್ರಾಣರೂಪೇಣಾಂತರ್ವರ್ತಮಾನ ಏಷ ಈದೃಶೋ ದೇವೋ ಯಥಾವಶಂ ಯಥಾಕಾಮಂ ಯಥೇಚ್ಛಂ ಚರತಿ । ವರ್ತತೇ । ಅನಿವಾರಿತಗತಿಃ ಸನ್ ಕ್ವಚಿಚ್ಛೀಘ್ರಂ ಗಚ್ಛತಿ ಕ್ವಚಿಚ್ಛನೈರ್ಗತಿಃ ಕುತಶ್ಚಿಚ್ಛರೀರಾನ್ನಿಷ್ಕ್ರಾಮತ್ಯನ್ಯಚ್ಛ ಶರೀರಂ ಪ್ರವಿಶತೀತ್ಯೇವಂ ಯಥೇಚ್ಛಂ ವರ್ತತ ಇತ್ಯರ್ಥಃ । ಅಸ್ಯ ವಾಯೋರಾಗಚ್ಛತೋ ಘೋಷಾ ಇಚ್ಛಬ್ದಾ ಏವ ಶೃಣ್ವಿರೇ । ಶ್ರೂಯಂತೇ । ರೂಪಂ ಸ್ವರೂಪಂ ತು ನ ದೃಶ್ಯತೇ ನೀರೂಪತ್ವಾತ್ । ಅದೃಗ್ವಿಷಯತ್ವೇನ ಶಬ್ದೇನೈವಾನುಮೀಯತ ಇತ್ಯರ್ಥಃ । ತಸ್ಮೈ ವಾತಾಯ ವಾಯವೇ ಹವಿಷಾ ಚರುಪುರೋಡಾಶಾದಿಲಕ್ಷಣೇನ ವಿಧೇಮ । ಪರಿಚರೇಮ ॥**

॥ ಪ್ರತಿಪದಾರ್ಥ ॥

(ಈ ವಾಯುವು) **ದೇವಾನಾಂ**—ಇಂದ್ರಾದಿ ದೇವತೆಗಳಿಗೂ ಸಹ । **ಆತ್ಮಾ**—ಜೀವರೂಪದಿಂದ ಅವರಲ್ಲಿ ಇರುವವನೂ । **ಭುವನಸ್ಯ**—ಸಮಸ್ತ ಪ್ರಾಣಿವರ್ಗದ ಮಧ್ಯದಲ್ಲಿ । **ಗರ್ಭಃ**—ಗರ್ಭದಂತೆ ಪ್ರಾಣರೂಪದಿಂದಿರುವವನೂ ಆದ । **ಏಷಃ ದೇವಃ**—ಈ ವಾಯುದೇವನು । **ಯಥಾವಶಂ**—ತನ್ನಿಷ್ಟಬಂದಂತೆ । **ಚರತಿ**—ಸಂಚರಿಸುತ್ತಾನೆ । **ಅಸ್ಯ**—ಈ ವಾಯುವಿನ । **ಘೋಷಾ ಇತ್**—ಬೀಸುವ ಶಬ್ದವು ಮಾತ್ರ । **ಶೃಣ್ವಿರೇ**—ಕೇಳಿಸಲ್ಪಡುತ್ತದೆ । **ರೂಪಂ**—ಈ ವಾಯುವಿನ ರೂಪವು । **ನ ದೃಶ್ಯತೇ**—ಕಾಣಲ್ಪಡುವುದಿಲ್ಲ । **ತಸ್ಮೈ ವಾತಾಯ**—ಇಂತಹ ಮಹಿಮಾನ್ವಿತನಾದ ವಾಯುವಿಗೆ । **ಹವಿಷಾ**—ಹವಿಸ್ಸಿನಿಂದ । **ವಿಧೇಮ**—ಉಪಚರಿಸುತ್ತೇವೆ.

|| ಭಾವಾರ್ಥ ||

ಈ ವಾಯುವು ಇಂದ್ರಾದಿದೇವತೆಗಳಿಗೂ ಸಹ ಜೀವರೂಪದಿಂದ ಅವರಲ್ಲಿರುವನು. ಸಮಸ್ತ ಪ್ರಾಣಿವರ್ಗದ ಶರೀರಮಧ್ಯದಲ್ಲಿ ಗರ್ಭದಂತೆ ಪ್ರಾಣರೂಪದಿಂದಿರುವನು. ಇಂತಹ ವಾಯುದೇವನು ತನ್ನಿಷ್ಟಬಂದಂತೆ ಸಂಚರಿಸುತ್ತಾನೆ. ಈ ವಾಯುವಿನ ಬೀಸುವ ಶಬ್ದವು ಮಾತ್ರ ಎಲ್ಲರಿಗೂ ಕೇಳಿಸುತ್ತದೆ. ಆದರೆ ಇವನ ರೂಪವನ್ನು ಯಾರೂ ನೋಡಲಾರರು. ಇಂತಹ ಮಹಿಮಾನಿತ್ವನಾದ ವಾಯುವನ್ನು ಚರುಪುರೋಡಾಶಾದಿ ಹವಿಸ್ಸಿನಿಂದ ಸೇವಿಸುತ್ತೇವೆ.

English Translation

The soul of the gods, the germ of the world, this divinity moves according to his pleasure ; his voices are heard, his form is not (seen); let us worship that Vata with oblations.

## ನೂರ ಅರವತ್ತೊಂಭತ್ತನೆಯ ಸೂಕ್ತವು

### ಪೀಠಿಕೆ

ಈ ಸೂಕ್ತದಲ್ಲಿ ಗೋವುಗಳನ್ನು ಸ್ತುತಿಸಲಾಗಿದೆ. ಪ್ರಪಂಚದಲ್ಲಿ ಗೋವುಗಳ ಹೆಚ್ಚಾದ ಉಪಯೋಗಕ್ಕನುಸಾರವಾಗಿ ವೈದಿಕ ಇತಿಹಾಸದಲ್ಲಿಯೂ ಅದಕ್ಕೆ ಮುಖ್ಯಸ್ಥಾನವಿದೆ. ಉಷಃಕಾಲದ ಹೊಂಬಣ್ಣದ ಕಿರಣಗಳನ್ನು ಗೋವುಗಳೆಂದೂ ಅವುಗಳೇ ಉಷೋದೇವಿಯ ರಥವನ್ನು ಎಳೆಯುತ್ತವೆಂದೂ ವರ್ಣನೆ ಇದೆ. ಮಳೆ ಮೋಡವೂ ಒಂದು ಗೋವಿನಂತೆ ಇದೆ. ಅದಕ್ಕೆ ಸಿಡಿಲೇ ಕರುವು. ವೃಷ್ಟಿಯೇ ಹಾಲು. ಈ ಮೇಘರೂಪವಾದ ಗೋವಿಗೆ ಪೃಶ್ನಿ ಎಂಬ ಹೆಸರು ರೂಢಿಯಾಗಿದೆ ಈ ಪೃಶ್ನಿಯು ಮರುದ್ದೇವತೆಗಳ ಮಾತೆಯು. ಅದಿತಿಯನ್ನು, ಭೂಮಿಯನ್ನು ಗೋವೆಂದು ಕೆಲವು ಕಡೆ ಕರೆದಿದೆ. ಮುಖ್ಯವಾಗಿ ವೇದದಲ್ಲಿ ಪಣಿಗಳು ಅಪಹರಿಸಿದ್ದ ದೇವತೆಗಳ ಗೋವುಗಳ ವಿಷಯ ಮತ್ತು ಅವುಗಳನ್ನು ಇಂದ್ರಾದಿಗಳು ಬಿಡಿಸಿ ತಂದ ವಿಚಾರ ಇವುಗಳ ವರ್ಣನೆಯೇ ವಿಶೇಷವಾಗಿದೆ.

ಭೂಲೋಕದ ಗೋವುಗಳಿಗೂ ಪಾವಿತ್ರ್ಯತೆ ಇದೆ ಯಜ್ಞಯಾಗಾದಿಗಳಲ್ಲಿ ಬಳಸುವ ಹಾಲು, ಮೊಸರು, ತುಪ್ಪ ಮೊದಲಾದ ವಸ್ತುಗಳು ಗೋವುಗಳದ್ದೇ ಆಗಿರಬೇಕೆಂಬ ನಿಯಮವಿದೆ. ಗೋದೋಹನ (ಹಾಲು ಕರೆಯುವುದು) ವತ್ಸಾಪಾಕರಣ ಇತ್ಯಾದಿ ಕಾರ್ಯಗಳು ಯಜ್ಞಾಂಗಕರ್ಮಗಳಾಗಿವೆ ಗೋವಧೆ ಮಾಡಬಾರದೆಂದು ಹೇಳಿದೆ. (೮-೯೦-೧೫, ೧೬, ವಾ. ಸಂ. ೪-೧೯, ೨೦) ಆದ್ದರಿಂದಲೇ ಗೋವುಗಳಿಗೆ ಅಘ್ನಾ–ಕೊಲ್ಲಲ್ಪಡದಿರುವ ಪ್ರಾಣಿಗಳು ಎಂಬ ಹೆಸರಿದೆ. ಗೋವು ಪವಿತ್ರವಾದ ಪ್ರಾಣಿಯೆಂದೂ ಅದನ್ನು ಪೂಜಿಸಬೇಕೆಂದೂ ಅಥರ್ವವೇದದಲ್ಲಿ ಸ್ಪಷ್ಟವಾಗಿ ಹೇಳಿದೆ (೧೨-೪-೫). ಪುರಾಣಾದಿಗಳಲ್ಲಿಯೂ ಗೋವುಗಳಿಗೆ ಪೂಜ್ಯ ಭಾವನೆಯನ್ನು ಹೇಳಲಾಗಿದೆ. ಈಗಲೂ ಭರತ ಖಂಡದಲ್ಲಿ ಆರ್ಯರು ಎಂದರೆ ಹಿಂದುಗಳು ಗೋವುಗಳನ್ನು ಬಹು ಭಕ್ತಿಭಾವದಿಂದ ಪೂಜಿಸುವರು, ಅವುಗಳನ್ನು ಕಾಪಾಡುವುದಕ್ಕಾಗಿ ತಮ್ಮ ಪ್ರಾಣವನ್ನು ತೆತ್ತ ನಿದರ್ಶನಗಳಿವೆ ಹಿಂದೂಗಳಾದವರು ಯಾರೂ ಗೋವನ್ನು ಕೊಲ್ಲುವುದಿಲ್ಲ ಮತ್ತು ಅದರ ಮಾಂಸವನ್ನು ಭಕ್ಷಿಸುವುದಿಲ್ಲ. ಈ ಭಾವನೆಯು ಈ ದೇಶದಲ್ಲಿ ಬಹುಕಾಲದಿಂದಲೂ ಬೆಳೆದು

ಬಂದಿದೆ. ಈ ಕಾರಣದಿಂದಲೇ ವೇದಮತಗಳಿಗೆ ವಿರುದ್ಧವಾದ ಈ ಗೋಹತ್ಯೆಯನ್ನು ಮಾಡುವವರೂ ಗೋಮಾಂಸವನ್ನು ತಿನ್ನುವವರೂ ಜನರಿಂದ ಬಹಿಷ್ಕೃತರಾಗಿ ಅವರನ್ನು ದಸ್ಯುಜನರೆಂದು ಕರೆಯುವುದಲ್ಲದೆ ಅವರೊಡನೆ ಸಾಮಾಜಿಕ ವ್ಯವಹಾರವನ್ನು ನಿಲ್ಲಿಸಿ ಆ ಜನರೇ ಪ್ರತ್ಯೇಕವಾಗಿರುವಂತೆ ಬಹುಕಾಲದಿಂದ ನಡೆದುಬಂದಿರುವುದು. ಈಗಿನ ಹರಿಜನರೆಂದು ಹೇಳಲ್ಪಡುವ ಜನರ ಅಸ್ಪೃಶ್ಯತೆಗೆ ಇದೇ ಕಾರಣವಿರಬಹುದು.

॥ ಸಾಯಣಭಾಷ್ಯಂ ॥

**ಮಯೋಭೂರಿತಿ । ಚತುರ್ಋಚಮಷ್ಟಾದಶಂ ಸೂಕ್ತಂ ಕಕ್ಷೀವದ್ಗೋತ್ರಸ್ಯ ಶಬರಸ್ಯಾರ್ಷಂ ತ್ರೈಷ್ಟುಭಂ ಗೋದೇವತ್ಯಂ । ಅನುಕ್ರಾಂತಂ ಚ । ಮಯೋಭೂಃ ಶಬರಃ ಕಾಕ್ಷೀವತೋ ಗವ್ಯಮಿತಿ ॥ ಘಾಸಾಯ ವನಂ ಪ್ರತಿಷ್ಠಮಾನಾ ಗಾ ಆದಿತೋ ದ್ವಾಭ್ಯಾಮಭಿಮಂತ್ರಣೀಯಾಃ । ಸೂತ್ರಿತಂ ಚ । ಗಾಃ ಪ್ರತಿಷ್ಠಮಾನಾ ಅನುಮಂತ್ರಯೇತ ಮಯೋಭೂರ್ವಾತೋ ಅಭಿ ವಾತೂಸ್ರಾ ಇತಿ ದ್ವಾಭ್ಯಾಂ । ಆ. ಗೃ. ೨-೧೦-೫ । ಇತಿ ॥**

ಅನುವಾದವು—**ಮಯೋಭೂಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹದಿನೆಂಟನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕಕ್ಷೀವದ್ಗೋತ್ರದ ಶಬರನೆಂಬುವನು ಋಷಿಯು ; ಗೋವುಗಳು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಮಯೋಭೂಃ ಶಬರಃ ಕಾಕ್ಷೀವತೋ ಗವ್ಯಂ** ಎಂದು ಹೇಳಿರುವುದು. ಹುಲ್ಲು ಮೇಯುವುದಕ್ಕಾಗಿ ವನಕ್ಕೆ ಹೋಗುವ ಗೋವುಗಳನ್ನು ಈ ಸೂಕ್ತದ ಮೊದಲಿನ ಎರಡು ಋಕ್ಕುಗಳಿಂದ ಅಭಿಮಂತ್ರಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಗಾಃ ಪ್ರತಿಷ್ಠಮಾನಾ ಅನುಮಂತ್ರಯೇತ ಮಯೋಭೂರ್ವಾತೋ ಅಭಿ ವಾತೂಸ್ರಾ ಇತಿ ದ್ವಾಭ್ಯಾಂ** ಎಂಬ ಸೂತ್ರದಿಂದ (ಆ.ಗೃ.೨-೧೦-೫) ವಿವೃತವಾಗಿರುವುದು.

## ಸೂಕ್ತ—೧೬೯

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೬೯ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೨೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
॥ ಋಷಿಃ—ಶಬರಃ ಕಾಕ್ಷೀವತಃ ॥
॥ ದೇವತಾ—ಗಾವಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಮಯೋಭೂರ್ವಾತೋ ಅಭಿ ವಾತೂಸ್ರಾ ಊರ್ಜಸ್ವತೀರೋಷಧೀರಾ ರಿಶಂತಾಂ ।
ಪೀವಸ್ವತೀರ್ಜೀವಧನ್ಯಾಃ ಪಿಬಂತ್ವವಸಾಯ ಪದ್ವತೇ ರುದ್ರ ಮೃಳ ॥ ೧ ॥

॥ ಪದಪಾಠಃ ॥

ಮಯಃಽಭೂಃ । ವಾತಃ । ಅಭಿ । ವಾತು । ಉಸ್ರಾಃ । ಊರ್ಜಸ್ವತೀಃ । ಓಷಧೀಃ । ಆ । ರಿಶಂತಾಂ ।
ಪೀವಸ್ವತೀಃ । ಜೀವಽಧನ್ಯಾಃ । ಪಿಬಂತು । ಅವಸಾಯ । ಪತ್ಽವತೇ । ರುದ್ರ । ಮೃಳ ॥ ೧ ॥

॥ ಸಾಯಣಭಾಷ್ಯಂ ॥

ವಾತೋ ವಾಯುರ್ಮಯೋಭೂಃ ಸುಖಸ್ಯ ಭಾವಯಿತಾ ಸನ್ನುಸ್ರಾ ಗಾ ಅಭಿ ವಾತು । ಅಭಿಗಚ್ಛತು । ತಾಶ್ಚ ಗಾವ ಊರ್ಜಸ್ವತೀ ರಸವತೀರೋಷಧೀರ್ಬಲವಂತಿ ತೃಣಾನ್ಯಾ ರಿಶಂತಾಂ । ಅಭಿತಃ ಸ್ವಾದಯಂತು । ತಥಾ ಪೀವಸ್ವತೀಃ ಪ್ರವೃದ್ಧಾ ಜೀವಧನ್ಯಾ ಜೀವಾನಾಂ ಪ್ರಾಣಯಿತ್ರೀರಪಶ್ಚ ಪಿಬಂತು । ಹೇ ರುದ್ರ ಜ್ವರಾದಿರೋಗಸ್ಯ ಪ್ರೇಕ್ಷಣೇನ ಸಂಹರ್ತರ್ದೇವ ಪದ್ವತೇ ಪಾದಯುಕ್ತಾಯಾವಸಾಯಾನ್ನಾಯ ಗೋರೂಪಾಯ ಮೃಳ । ಉಪದಯಾಂ ಕುರು ! ಮಾ ಬಾಧಸ್ವೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಾತಃ**—ವಾಯುವು । **ಮಯೋಭೂಃ**—ಸುಖಕರವಾಗಿ ಬೀಸುತ್ತಾ । **ಉಸ್ರಾಃ**—ಗೋವುಗಳನ್ನು । **ಅಭಿ ವಾತು**—ಸಮೀಪಿಸಲಿ । **ಊರ್ಜಸ್ವತೀಃ**—ರಸವತ್ತಾದ (ಪುಷ್ಟಿಪ್ರದವಾದ) । **ಓಷಧೀಃ**—ಹುಲ್ಲುಗಳನ್ನು । **ಆ ರಿಶಂತಾಂ**—ಚೆನ್ನಾಗಿ ತಿನ್ನಲಿ । **ಪೀವಸ್ವತೀಃ**—ಪ್ರವೃದ್ಧವಾದ । **ಜೀವಧನ್ಯಾಃ**—ಜೀವಕ್ಕೆ ಹಿತಕರವಾದ ಉದಕಗಳನ್ನು । **ಪಿಬಂತು**—ಕುಡಿಯಲಿ । **ರುದ್ರ**—ಎಲೈ ರುದ್ರನೇ । **ಪದ್ವತೇ**—ಪಾದಗಳುಳ್ಳ । **ಅವಸಾಯ**—ಅನ್ನರೂಪವಾದ ಎಂದರೆ ಅನ್ನರೂಪವಾದ ಹಾಲನ್ನು ಒದಗಿಸುವ ಈ ಗೋವುಗಳಿಗೆ । **ಮೃಳ**—ಸುಖವನ್ನುಂಟುಮಾಡು.

॥ ಭಾವಾರ್ಥ ॥

ವಾಯುವು ಗೋವುಗಳ ಸಮೀಪದಲ್ಲಿ ಹಿತಕರವಾಗಿ ಬೀಸಲಿ, ರಸವತ್ತಾದ ಮತ್ತು ಪುಷ್ಟಿಪ್ರದವಾದ ಹುಲ್ಲನ್ನು ಗೋವುಗಳು ತಿನ್ನಲಿ. ಪ್ರಾಣಾಧಾರಭೂತವಾದ ನೀರನ್ನು ಯಥೇಚ್ಛವಾಗಿ ಕುಡಿಯಲಿ. ಎಲೈ ರುದ್ರನೇ, ನಮಗೆ ಹಾಲಿನ ರೂಪದಲ್ಲಿ ಆಹಾರವನ್ನು ಒದಗಿಸುವ ಈ ಗೋವುಗಳಿಗೆ ಸುಖವನ್ನುಂಟುಮಾಡು, ತೊಂದರೆ ಮಾಡಬೇಡ.

## English Translation.

May the refreshing wind blow upon the cows, may they crop the juicy grass; let them drink the nutritious life-sustaining (waters); Rudra, have compassion upon the food which has feet.

॥ ವಿಶೇಷವಿಷಯಗಳು ॥

ಯಾಸ್ಕರು ಈ ಋಕ್ಕಿನಲ್ಲಿರುವ **ಅವಸಾಯ** ಎಂಬ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಈ ರೀತಿ ನಿರ್ವಚನವನ್ನು ಹೇಳಿದಾರೆ—

ಅವಸಾಯ ಪದ್ವತೇ ರುದ್ರ ಮೃಳ ಇತಿ । ಪದ್ವದವಸಂ ಗಾವಃ ಪಥ್ಯದನಂ ಅವತೇರ್ಗತ್ಯರ್ಥಸ್ಯಾಸೌ ನಾಮಕರಣಃ । ತಸ್ಮಾನ್ನಾವಗೃಹ್ಣಂತಿ । ಅವಸಾಯಾಶ್ವಾನ್ ಇತಿ ಸ್ಯತಿರುಪಸೃಷ್ಟೋ ವಿಮೋಚನೇ ತಸ್ಮಾದವಗೃಹ್ಣಂತಿ ॥

(ನಿ. ೧-೧೭)

ಅವಸಾಯ ಎಂಬ ಶಬ್ದವು ಹೋಗು ಎಂಬಂರ್ಥವುಳ್ಳ ಅವತಿಧಾತುವಿಗೆ ಅಸ ಎಂಬ ಉಪಸರ್ಗವು ಸೇರಿ ನಿಷ್ಪನ್ನವಾಗಿರುವುದು. ಈ ಉಪಸರ್ಗವು ಕ್ರಿಯೆಯ ಹಿಂದಿರದೆ ಮುಂದಿರುವುದು. ಆದ್ದರಿಂದ ಪದಪಾಠದಲ್ಲಿ ಶಬ್ದಕ್ಕೆ ಪದಾವಚ್ಛೇದನೆ ಮಾಡಿಲ್ಲ. **ಅವಸಾಯ ಪದ್ವತೇ** ಎಂದರೆ ಕಾಲುಗಳುಳ್ಳದ್ದು (ಆಹಾರಾರ್ಥವಾಗಿ) ಸಂಚರಿಸುವುದೂ ಆದ ಎಂದರ್ಥವು. ಹುಲ್ಲು ಮೇಯುವುದಕ್ಕಾಗಿ ಅಲ್ಲಲ್ಲಿ ತಿರುಗುತ್ತಿರುವ, ಕಾಲುಗಳುಳ್ಳ ಈ ಗೋವಿಗೆ ಸುಖವನ್ನುಂಟುಮಾಡಬೇಕೆಂದು ರುದ್ರದೇವನನ್ನು ಪ್ರಾರ್ಥಿಸಲಾಗಿದೆ. **ಅವಸಾಯಾಶ್ವಾನ್** ಎಂಬ ಸ್ಥಳದಲ್ಲಿಯೂ ಇದೇ ವಿಧವಾದವಾದ ನಿಯಮವು ಅನ್ವಯಿಸುವುದು.

॥ ಸಂಹಿತಾಪಾಠಃ ॥

ಯಾಃ ಸರೂಪಾ ವಿರೂಪಾ ಏಕರೂಪಾ ಯಾಸಾಮಗ್ನಿರಿಷ್ಟ್ಯಾ ನಾಮಾನಿ ವೇದ ।
ಯಾ ಅಂಗಿರಸಸ್ತಪಸೇಹ ಚಕ್ರುಸ್ತಾಭ್ಯಃ ಪರ್ಜನ್ಯ ಮಹಿ ಶರ್ಮ ಯಚ್ಛ ॥

॥ ಪದಪಾಠಃ ॥

ಯಾಃ । ಸಽರೂಪಾಃ । ವಿಽರೂಪಾಃ । ಏಕಽರೂಪಾಃ । ಯಾಸಾಂ । ಅಗ್ನಿಃ । ಇಷ್ಟ್ಯಾ । ನಾಮಾನಿ । ವೇದ।

ಯಾಃ । ಅಂಗಿರಸಃ । ತಪಸಾ । ಇಹ । ಚಕ್ರುಃ । ತಾಭ್ಯಃ । ಪರ್ಜನ್ಯ । ಮಹಿ । ಶರ್ಮ । ಯಚ್ಛ ॥ ೨ ॥

॥ ಸಾಯಣಭಾಷ್ಯಂ ॥

ಯಾ ಗಾವಃ ಸರೂಪಾಃ ಸಮಾನರೂಪಾ ಯಾಶ್ಚ ವಿರೂಪಾ ವಿಭಿನ್ನರೂಪಾ ಯಾಶ್ಚೈಕರೂಪಾ ಏಕೇನೈವ ವರ್ಣೇನೋಪೇತಾ ಯಾಸಾಂ ಚ ಗವಾಂ ನಾಮಾನೀಡೇ ರಂತೇಽದಿತ ಇತ್ಯಾದೀನೀಷ್ಟ್ಯಾ ಯಾಗೇನ ಹೇತುನಾಗ್ನಿರ್ವೇದ ಜಾನಾತಿ ಯಾಶ್ಚ ಗಾ ಅಂಗಿರಸ ಋಷಯಸ್ತಪಸಾ ಪಶುಪ್ರಾಪ್ತಿಸಾಧನೇನ ಚಿತ್ರಾಯಾಗಾದಿಲಕ್ಷಣೇನೇಹಾಸ್ಮಿಂಲ್ಲೋಕೇ ಚಕ್ರುಃ ಕೃತವಂತಃ ತಾಭ್ಯಃ ಸರ್ವಾಭ್ಯೋ ಗೋಭ್ಯೋ ಹೇ ಪರ್ಜನ್ಯ ಮಹಿ ಮಹಚ್ಛರ್ಮ ಸುಖಂ ಯಚ್ಛ । ಪ್ರದೇಹಿ ॥

॥ ಪ್ರತಿಪದಾರ್ಥ ॥

ಯಾಃ—ಯಾವ ಗೋವುಗಳು । ಸರೂಪಾಃ—ಸಮಾನರೂಪದಿಂದಿರುವವೋ । ವಿರೂಪಾಃ—ಯಾವ ಗೋವುಗಳು ಬೇರೆಬೇರೆ ರೂಪಗಳಿಂದಿರುವವೋ । ಏಕರೂಪಾಃ—ಯಾವ ಗೋವುಗಳು ಒಂದೇ ವಿಧವಾದ ಬಣ್ಣ

ದ್ದಾಗಿರುವವೋ। **ಯಾಸಾಂ**—ಯಾವ ಗೋವುಗಳ। **ನಾಮಾನಿ**—ಹೆಸರುಗಳನ್ನು। **ಇಷ್ಟ್ಯಾ**—ಯಾಗ ಮೂಲಕವಾಗಿ। **ಅಗ್ನಿಃ**—ಅಗ್ನಿಯು। **ವೇದ**—ತಿಳಿಯುವನೋ। **ಯಾಃ**—ಯಾವ ಗೋವುಗಳನ್ನು। **ಅಂಗಿರಸಃ**—ಅಂಗಿರಸ ಋಷಿಗಳು। **ತಪಸಾ**—ಚಿತ್ರಾಯಾಗಾದಿರೂಪವಾದ ತಪಸ್ಸಿನಿಂದ। **ಇಹ**—ಈ ಲೋಕ ದಲ್ಲಿ। **ಚಕ್ರುಃ**—ಸೃಷ್ಟಿಸಿದರೋ। **ತಾಭ್ಯಃ**—ಅಂತಹ ಗೋವುಗಳಿಗಾಗಿ। **ಪರ್ಜನ್ಯ**—ಎಲೈ ಪರ್ಜನ್ಯ ದೇವನೇ। **ಮಹಿ**—ಮಹತ್ತಾದ। **ಶರ್ಮ**—ಸುಖವನ್ನು। **ಯಚ್ಛ**—ಕೊಡು.

॥ ಭಾವಾರ್ಥ ॥

ಕೆಲವು ಗೋವುಗಳು ಸಮಾನವಾದ ಆಕಾರದಿಂದಿರುವುವು. ಕೆಲವು ಗೋವುಗಳು ಭಿನ್ನ ಆಕಾರಗಳಿಂದ ಇರುವುವು ಎಂದರೆ ಕೆಲವು ದೊಡ್ಡದಾಗಿಯೂ ಕೆಲವು ಚಿಕ್ಕವಾಗಿಯೂ ಇರುವುವು. ಅಥವಾ ಕೆಲವು ಒಂದು ಬಣ್ಣ ದ್ದಾಗಿಯೂ ಕೆಲವು ಬೇರೆ ಬಣ್ಣದ್ದಾಗಿಯೂ ಇರುವುವು ಮತ್ತೆ ಕೆಲವು ಒಂದೇ ಬಣ್ಣದ್ದಾಗಿರುವುವು. ಎಂದರೆ ಆಕಾರ ದಲ್ಲಿಯೂ ಬಣ್ಣದಲ್ಲಿಯೂ ವಿವಿಧರೂಪಗಳಿಂದಲೂ ಸಮಾನರೂಪದಿಂದಲೂ ಇರುವ ಗೋವುಗಳ ಹೆಸರುಗಳನ್ನು ಅಗ್ನಿಯು ತನ್ನ ಯಾಗದ ಸಾಮರ್ಥ್ಯದಿಂದ ತಿಳಿಯಬಲ್ಲನು. ಮತ್ತು ಅಂಗಿರಸ ಋಷಿಗಳು ತಮ್ಮ ತಪಃಸಾಮರ್ಥ್ಯ ದಿಂದಲೂ ಯಜ್ಞನಿರ್ವಹಣೆಯಿಂದಲೂ ಈ ಲೋಕದಲ್ಲಿ ಗೋವುಗಳನ್ನು ಸೃಷ್ಟಿಸಿದರು. ಈ ಎಲ್ಲಾ ವಿಧವಾದ ಗೋವು ಗಳಿಗೂ ಪರ್ಜನ್ಯದೇವನು ಸುಖವನ್ನುಂಟುಮಾಡಲಿ.

## English Translation

Grant great felicity, Parjanya, to those cows who are of similar forms, of different forms, or of single forms, whose names Agni knows through the sacrifice, or those whom the Angirasas created in this world by penance.

॥ ಸಂಹಿತಾಪಾಠಃ ॥

ಯಾ ದೇವೇಷು ತನ್ವ೧ಮೈರಯಂತ ಯಾಸಾಂ ಸೋಮೋ ವಿಶ್ವಾ ರೂಪಾಣಿ ವೇದ।

ತಾ ಅಸ್ಮಭ್ಯಂ ಪಯಸಾ ಪಿನ್ವಮಾನಾಃ ಪ್ರಜಾವತೀರಿಂದ್ರ ಗೋಷ್ಠೇ ರಿರೀಹಿ॥

॥ ಪದಪಾಠಃ ॥

ಯಾಃ। ದೇವೇಷು। ತನ್ವಂ। ಐರಯಂತ। ಯಾಸಾಂ। ಸೋಮಃ। ವಿಶ್ವಾ। ರೂಪಾಣಿ। ವೇದ॥

ತಾಃ। ಅಸ್ಮಭ್ಯಂ। ಪಯಸಾ। ಪಿನ್ವಮಾನಾಃ। ಪ್ರಜಾऽವತೀಃ। ಇಂದ್ರ। ಗೋऽಸ್ಥೇ। ರಿರೀಹಿ॥ ೩॥

॥ ಸಾಯಣಭಾಷ್ಯಂ ॥

**ದ್ವಾಭ್ಯಾಂ ಸಾಯಂ ಗೃಹಮಾಗಚ್ಛಂತೀರ್ಗಾ ಅನುಮಂತ್ರಯೀತ । ಸೂತ್ರ್ಯತೇ ಹಿ । ಯಾ ದೇವೇಷು ತನ್ವಮೈರಯಂತೇತಿ ಚ ಸೂಕ್ತಶೇಷಂ । ಆಗಾವೀಯಮೇಕೇ । ಆ. ಗೃ. ೨-೧೦-೬, ೭ । ಇತಿ ॥**

**ಯಾ ಗಾವೋ ದೇವೇಷು ಯಜ್ಞನ್ಯೇಷು ತನ್ವಮಾತ್ಮೀಯಂ ಶರೀರಮೈರಯಂತ ಹವೀರೂಪೇಣ ಪ್ರೇರಯಂತಿ ಯಾಸಾಂ ಚ ಗವಾಂ ವಿಶ್ವಾ ಸರ್ವಾಣಿ ರೂಪಾಣಿ ರೂಪ್ಯಮಾಣಾನಿ ಕ್ಷೀರಾದೀನಿ ಶ್ರಯಣ-ದ್ರವ್ಯಾಣಿ ಸೋಮೋ ವೇದ ಜಾನಾತಿ ಅಸ್ಮಭ್ಯಮಸ್ಮದರ್ಥಂ ಪಯಸಾ ಕ್ಷೀರೇಣ ಪಿನ್ವಮಾನಾ ವರ್ಧಮಾನಾಃ ಅತ ಏವ ಪ್ರಜಾವತೀಃ ಪ್ರಜಾಭಿರ್ವತ್ಸೈರುಪೇತಾಸ್ತಾ ಗಾ ಹೇ ಇಂದ್ರ ಗೋಷ್ಠೇಽಸ್ಮದೀಯೇ ರಿರೀಹಿ । ಗಮಯ ॥ ರೀ ಗತಿರೇಷಣಯೋಃ । ಛಾಂದಸೋ ವಿಕರಣಸ್ಯ ಶ್ಲುಃ ॥**

॥ ಪ್ರತಿಪದಾರ್ಥ ॥

**ಯಾಃ**— ಯಾವ ಗೋವುಗಳು । **ದೇವೇಷು**— ಯಾಗಾರ್ಹರಾದ ದೇವತೆಗಳಲ್ಲಿ ಎಂದರೆ ದೇವತೆಗಳಿಗಾಗಿ **ತನ್ವಂ**— ತಮ್ಮ ಶರೀರವನ್ನು (ಶರೀರಗತವಾದ ಹಾಲನ್ನು) । **ಐರಯಂತ**— ಪ್ರೇರಿಸಿ ಅರ್ಪಿಸುವವೋ । **ಯಾಸಾಂ**— ಯಾವ ಗೋವುಗಳ । **ವಿಶ್ವಾ**— ಸಮಸ್ತವಾದ । **ರೂಪಾಣಿ**— ಕ್ಷೀರಾದಿ ಶ್ರಯಣದ್ರವ್ಯಗಳನ್ನು । **ಸೋಮಃ**— ಸೋಮನು । **ವೇದ**— ತಿಳಿಯುವನೋ । **ಅಸ್ಮಭ್ಯಂ**— ನಮಗಾಗಿ । **ಪಯಸಾ**— ಕ್ಷೀರದಿಂದ । **ಪಿನ್ವಮಾನಾಃ**— ಪ್ರವರ್ಧಮಾನವಾದ (ಪೂರ್ಣವಾದ) । **ಪ್ರಜಾವತೀಃ**— ಕರುಗಳಿಂದ ಸಹಿತವಾದ । **ತಾಃ**— ಆ ಗೋವುಗಳನ್ನು । **ಇಂದ್ರ**— ಎಲೈ ಇಂದ್ರನೇ । **ಗೋಷ್ಠೇ**— ನಮ್ಮ ಕೊಟ್ಟಿಗೆಯಲ್ಲಿ । **ರಿರೀಹಿ**— ತಂದು ಸೇರಿಸು.

॥ ಭಾವಾರ್ಥ ॥

ಯಾವ ಗೋವುಗಳು ತಮ್ಮ ಶರೀರಗಳನ್ನು ಎಂದರೆ ಶರೀರಜನ್ಯವಾದ ಕ್ಷೀರಾದಿಗಳನ್ನು ಯಾಗಾರ್ಹರಾದ ದೇವತೆಗಳಿಗಾಗಿ ಅರ್ಪಿಸುವವೋ, ಯಾವ ಗೋವುಗಳ ಸಮಸ್ತವಾದ ಮತ್ತು ವಿಧವಿಧರೂಪಗಳಿಂದಿರುವ ಹಾಲು, ಮೊಸರು, ಆಜ್ಯ ಎಂಬ ಶ್ರಯಣದ್ರವ್ಯಗಳನ್ನು ಸೋಮದೇವನು ತಿಳಿದಿರುವನೋ ಪಯಃಪೂರ್ಣವಾದ ಮತ್ತು ಕರುಗಳಿಂದ ಕೂಡಿರುವ ಆ ಗೋವುಗಳನ್ನು ಎಲೈ ಇಂದ್ರನೇ, ನಮ್ಮ ಕೊಟ್ಟಿಗೆಯಲ್ಲಿ ತಂದು ಸೇರಿಸು.

## English Translation.

Bring, Indra, to the cow-house (the cows) who offer their bodies to the gods, those of whom Soma knows all the properties, those that nourish us with their milk, and those that have calves.

॥ ವಿಶೇಷವಿಷಯಗಳು ॥

**ಯಾ ದೇವೇಷು** ಎಂದು ಮೊದಲಾಗುವ ಎರಡು ಋಕ್ಕುಗಳಿಂದ ಸಾಯಂಕಾಲದಲ್ಲಿ ಮನೆಗೆ ಬರುತ್ತಿರುವ ಗೋವುಗಳನ್ನು ಅನುಮಂತ್ರಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ— **ಯಾ ದೇವೇಷು ತನ್ವಮೈರಯಂತೇತಿ ಚ ಸೂಕ್ತಶೇಷಂ ಆಗಾವೀಯಮೇಕೇ** ಎಂಬ ಸೂತ್ರದಿಂದ (ಆ. ಗೃ. ೨-೧೦-೬, ೭) ವಿವೃತವಾಗಿರುವುದು,

|| ಸಂಹಿತಾಪಾಠಃ ||

ಪ್ರಜಾಪತಿರ್ಮಹ್ಯಮೇತಾ ರರಾಣೋ ವಿಶ್ವೈರ್ದೇವೈಃ ಪಿತೃಭಿಃ ಸಂವಿದಾನಃ|
ಶಿವಾಃ ಸತೀರುಪ ನೋ ಗೋಷ್ಠಮಾಕಸ್ತಾಸಾಂ ವಯಂ ಪ್ರಜಯಾ ಸಂ ಸದೇಮ || ೪ ||

|| ಪದಪಾಠಃ ||

ಪ್ರಜಾऽಪತಿಃ । ಮಹ್ಯಂ । ಏತಾಃ । ರರಾಣಃ । ವಿಶ್ವೈಃ । ದೇವೈಃ । ಪಿತೃऽಭಿಃ । ಸಂऽವಿದಾನಃ ।
ಶಿವಾಃ । ಸತೀಃ । ಉಪ । ನಃ । ಗೋऽಸ್ಥಂ । ಆ । ಅಕರಿತ್ಯಕಃ । ತಾಸಾಂ । ವಯಂ । ಪ್ರऽಜಯಾ ।
ಸಂ । ಸದೇಮ || ೪ ||

|| ಸಾಯಣಭಾಷ್ಯಂ ||

ಪ್ರಜಾಪತಿರ್ವಿಧಾತಾ ಮಹ್ಯಂ ಸ್ತೋತ್ರೇ ಏತಾ ಗಾ ರರಾಣಃ ಪ್ರಯಚ್ಛನ್ || ರಾತೇರ್ವ್ಯತ್ಯಯೇನ ಶಾನಚ್ । ಛಾಂದಸಃ ಶಪಃ ಶ್ಲುಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ || ವಿಶ್ವೈಃ ಸರ್ವೈರ್ದೇವೈಃ ಪಿತೃಭಿಶ್ಚ ಸಂವಿದಾನ ಐಕಮತ್ಯಂ ಗತಃ ಸನ್ ಶಿವಾಃ ಸತೀಃ ಕಲ್ಯಾಣೀರ್ಭವಂತೀರ್ಗಾ ನೋಽಸ್ಮಾಕಂ ಗೋಷ್ಠಂ ವ್ರಜಮುಪ ಗೋಷ್ಠಸಮೀಪೇऽಕಃ । ಕರೋತು । ತಾಸಾಂ ಗವಾಂ ಪ್ರಜಯಾ ಸಂತಾನೇನ ವಯಂ ಸಂ ಸದೇಮ । ಸಂಗಚ್ಛೇಮಹಿ || ಸದೇರಾಶಿಷಿ ಲಿಙಿ ಲಿಙ್ಯಾಶಿಷ್ಯಙ್ ||

|| ಪ್ರತಿಪದಾರ್ಥ ||

**ಪ್ರಜಾಪತಿಃ**—ವಿಧಾತನು (ಸೃಷ್ಟಿಕರ್ತನು) | **ಮಹ್ಯಂ**—ಸ್ತೋತ್ರಮಾಡುವ ನನಗಾಗಿ | **ಏತಾಃ** ಈ ಗೋವುಗಳನ್ನು | **ರರಾಣಃ**—ಕೊಡುತ್ತಲೂ | **ವಿಶ್ವೈಃ**—ಸಮಸ್ತರಾದ | **ದೇವೈಃ**—ದೇವತೆಗಳಿಂದಲೂ **ಪಿತೃಭಿಃ**—ಪಿತೃದೇವತೆಗಳಿಂದಲೂ | **ಸಂವಿದಾನಃ**—ಸಮ್ಮತಿಯನ್ನು ಪಡೆದು | **ಶಿವಾಃ ಸತೀಃ**—ಮಂಗಳ ಕರವಾದ ಆ ಗೋವುಗಳನ್ನು | **ನಃ**—ನಮ್ಮ | **ಗೋಷ್ಠಂ ಉಪ**—ಕೊಟ್ಟಿಗೆಯ ಸಮೀಪಕ್ಕೆ | **ಅಕಃ**—ತಂದು ಸೇರಿಸಲಿ | **ತಾಸಾಂ**—ಆ ಗೋವುಗಳ | **ಪ್ರಜಯಾ** ಸಂತತಿಯಿಂದ | **ವಯಂ**—ನಾವು | **ಸಂ ಸದೇಮ** (ಸುಖವಾಗಿ) ಇರುವಂತಾಗಲಿ.

|| ಭಾವಾರ್ಥ ||

ಸೃಷ್ಟಿಕರ್ತನಾದ ಪ್ರಜಾಪತಿಯು ಸಮಸ್ತ ದೇವತೆಗಳ ಮತ್ತು ಪಿತೃಗಳ ಸಂಮತಿಯಿಂದ ಸ್ತೋತ್ರಮಾಡುವ ನನಗೆ ಆ ಮಂಗಳಕರವಾದ ಗೋವುಗಳನ್ನು ಕೊಡುವುದಲ್ಲದೆ ಅವುಗಳನ್ನು ನಮ್ಮ ಕೊಟ್ಟಿಗೆ ಸಮೀಪಕ್ಕೆ ತಂದು ಸೇರಿಸಲಿ. ಆ ಗೋವುಗಳ ಸಂತತಿಯಿಂದ ನಾವು ಸುಖವಾಗಿರುವಂತಾಗಲಿ.

## English Translation

May Prajapati bestowing these (cows) upon me, concurring with the universal gods and the Pitris, bring the auspicious cattle to our cow-pen, may we be in possession of their progeny.

# ನೂರ ಎಪ್ಪತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ವಿಭ್ರಾಡಿತಿ ಚತುರ್ಋಚಮೇಕೋನವಿಂಶಂ ಸೂಕ್ತಂ ಸೂರ್ಯಪುತ್ರಸ್ಯ ವಿಭ್ರಾಟ್ಸಂಜ್ಞಕಸ್ಯಾರ್ಷಂ ಸೂರ್ಯದೇವತ್ಯಂ । ಆದ್ಯಾ ತಿಸ್ರೋ ಜಗತ್ಯಃ । ದ್ವ್ಯಷ್ಟಕದ್ವಿದ್ವಾದಶಕವತ್ಯಾಸ್ತಾರಪಂಕ್ತಿಶ್ಚತುರ್ಥೀ । ತಥಾ ಚಾನುಕ್ರಾಂತಂ । ವಿಭ್ರಾಡ್ವಿಭ್ರಾಟ್ ಸೌರ್ಯಃ ಸೌರ್ಯಂ ಜಾಗತಮಾಸ್ತಾರಪಂಕ್ತ್ಯಂತಮಿತಿ ॥ ವಿಷುವತಿ ನಿಷ್ಕೇವಲ್ಯ ಆದ್ಯಸ್ತೃಚಃ ಸ್ತೋತ್ರಿಯಃ । ಸೂತ್ರಿತಂ ಚ । ವಿಭ್ರಾಡ್ಬೃಹತ್ಪಿಬತು ಸೋಮ್ಯಂ ಮಧು ನಮೋ ಮಿತ್ರಸ್ಯ ವರುಣಸ್ಯ ಚಕ್ಷಸ ಇತಿ ಸ್ತೋತ್ರಿಯಾನುರೂಪೌ । ಆ. ೮-೬ । ಇತಿ ॥ ವಾಜಪೇಯೇಽತಿರಿಕ್ತೋಕ್ಥಸ್ಯ ವಿಭ್ರಾಡಿತ್ಯೇಷಾ ಶಸ್ತ್ರೇ ಯಾಜ್ಯಾ । ಸೂತ್ರ್ಯತೇ ಹಿ । ವಿಭ್ರಾಡ್ಬೃಹತ್ಪಿಬತು ಸೋಮ್ಯಂ ಮಧ್ವಿತಿ ಯಾಜ್ಯಾ ತಸ್ಯ ಗವಾಂ ಶತಾನಾಂ । ಆ. ೯-೯ । ಇತಿ ॥**

ಅನುವಾದವು—**ವಿಭ್ರಾಟ್** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಹತ್ತೊಂಬತ್ತನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸೂರ್ಯಪುತ್ರನಾದ ವಿಭ್ರಾಟ್ ಎಂಬುವನು ಋಷಿಯು ; ಸೂರ್ಯನು ದೇವತೆಯು ; ಈ ಸೂಕ್ತದ ಮೊದಲು ಮೂರು ಋಕ್ಕುಗಳು ಜಗತೀಛಂದಸ್ಕವು. ನಾಲ್ಕನೆ ಯದು ಆಸ್ತಾರಾಪಂಕ್ತಿ ಎಂಬ ಛಂದಸ್ಸಿನದು ಈ ಛಂದಸ್ಸಿನ ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಮೊದಲು ಎರಡು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಕೊನೆಯ ಎರಡುಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ ಇರುವವು. ಅನುಕ್ರಮಣಿಕೆಯಲ್ಲಿ—**ವಿಭ್ರಾಟ್ ವಿಭ್ರಾಟ್ ಸೌರ್ಯಃ ಸೌರ್ಯಂ ಜಾಗತಮಾಸ್ತಾರಪಂಕ್ತ್ಯಂತಂ** ಎಂದು ಹೇಳಿರುವುದು. ವಿಷುವತಿ ಎಂಬ ಯಾಗದ ದಿವಸದಲ್ಲಿ ನಿಷ್ಕೇವಲ್ಯ ಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ—**ವಿಭ್ರಾಡ್ಬೃಹತ್ಪಿಬತು ಸೋಮ್ಯಂ ಮಧು ನಮೋ ಮಿತ್ರಸ್ಯ ವರುಣಸ್ಯ ಚಕ್ಷಸ ಇತಿ ಸ್ತೋತ್ರಿಯಾನುರೂಪೌ** ಎಂಬ ಸೂತ್ರ ದಿಂದ (ಆ. ೮-೬) ವಿವೃತವಾಗಿರುವುದು. ಮತ್ತು ವಾಜಪೇಯವೆಂಬ ಯಜ್ಞದಲ್ಲಿ ಅತಿರಿಕ್ತೋಕ್ಥ ಮಂತ್ರಗಳ ಪಠನ ಕಾಲದಲ್ಲಿ ವಿಭ್ರಾಟ್ ಎಂಬ ಈ ಋಕ್ಕನ್ನು ಶಸ್ತ್ರಮಂತ್ರಗಳಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಅಶ್ವಲಾಯನ ಶ್ರೌತಸೂತ್ರದ—**ವಿಭ್ರಾಡ್ಬೃಹತ್ಪಿಬತು ಸೋಮ್ಯಂ ಮಧ್ವಿತಿ ಯಾಜ್ಯಾ ತಸ್ಯ ಗವಾಂ ಶತಾನಾಂ** ಎಂಬ ಸೂತ್ರ ದಿಂದ (ಆ. ೯-೯) ವಿವೃತವಾಗಿರುವುದು

## ಸೂಕ್ತ - ೧೭೦

ಮಂಡಲ—೧೦ ‖ ಅನುವಾಕ—೧೨ ‖ ಸೂಕ್ತ—೧೭೦ ‖
ಅಷ್ಟಕ—೮ ‖ ಅಧ್ಯಾಯ—೮ ‖ ವರ್ಗ—೨೮ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೇ—೪ ‖
‖ ಋಷಿಃ—ವಿಭ್ರಾಟ್ ಸೌರ್ಯಃ ‖
‖ ದೇವತಾ—ಸೂರ್ಯಃ ‖
‖ ಛಂದಃ—೧–೩. ಜಗತೀ । ೪. ಆಸ್ತಾರಪಂಕ್ತಿಃ ‖

‖ ಸಂಹಿತಾಪಾಠಃ ‖

ವಿಭ್ರಾಡ್ಬೃಹತ್ಪಿಬತು ಸೋಮ್ಯಂ ಮಧ್ವಾಯುರ್ದಧದ್ಯಜ್ಞಪತಾವವಿ-
ಹ್ರುತಂ ।
ವಾತಜೂತೋ ಯೋ ಅಭಿರಕ್ಷತಿ ತ್ಮನಾ ಪ್ರಜಾಃ ಪುಪೋಷ ಪುರುಧಾ
ವಿ ರಾಜತಿ ‖ ೧ ‖

‖ ಪದಪಾಠಃ ‖

ವಿऽಭ್ರಾಟ್ । ಬೃಹತ್ । ಪಿಬತು । ಸೋಮ್ಯಂ । ಮಧು । ಆಯುಃ । ದಧತ್ । ಯಜ್ಞऽಪತೌ । ಅವಿऽ-
ಹ್ರುತಂ ।
ವಾತऽಜೂತಃ । ಯಃ । ಅಭಿऽರಕ್ಷತಿ । ತ್ಮನಾ । ಪ್ರऽಜಾಃ । ಪುಪೋಷ । ಪುರುಧಾ । ವಿ । ರಾಜತಿ ‖ ೧ ‖

‖ ಸಾಯಣಭಾಷ್ಯಂ ‖

ವಿಭ್ರಾಡ್ವಿಭ್ರಾಜಮಾನೋ ವಿಶೇಷೇಣ ದೀಪ್ಯಮಾನಃ ಸೂರ್ಯೋ ಬೃಹನ್ಮಹತ್ಪರಿವೃಢಂ ಸೋಮ್ಯಂ ಸೋಮಮಯಂ ಮಧು ಪಿಬತು । ಕಿಂ ಕುರ್ವನ್ । ಯಜ್ಞಪತೌ ಯಜಮಾನೇऽವಿಹ್ರುತಮಕುಟಿಲ-ಮಾಯುರ್ದಧತ್ ಕುರ್ವನ್ । ಯಃ ಸೂರ್ಯೋ ವಾತಜೂತೋ ವಾತೇನ ಮಹಾವಾಯುನಾ ಪ್ರೇರ್ಯ-ಮಾಣಃ ಸಂಸ್ಪೃಷ್ಟನಾತ್ಮನಾ ಸ್ವಯಮೇವಾಭಿರಕ್ಷತಿ ಸರ್ವಂ ಜಗದಭಿಪಶ್ಯನ್ಪಾಲಯತಿ । ರಾಶಿಚಕ್ರಸ್ಯ ವಾಯುಪ್ರೇರ್ಯತ್ವಾತ್ತತ್ಸ್ಥಸ್ಯ ಸೂರ್ಯಸ್ಯಾಪಿ ತತ್ಪ್ರೇರ್ಯತ್ವಂ । ಸ ಸೂರ್ಯಃ ಪ್ರಜಾಃ ಪುಪೋಷ । ವೃಷ್ಟ್ಯಾದಿ-ಪ್ರದಾನೇನ ಪೋಷಯತಿ । ಪುರುಧಾ ಬಹುಧಾ ವಿ ರಾಜತಿ । ವಿಶೇಷೇಣ ದೀಪ್ಯತೇ ಚ ‖

‖ ಪ್ರತಿಪದಾರ್ಥ ‖

**ವಿಭ್ರಾಟ್**—ಕಾಂತಿಯುತನಾಗಿ ಬೆಳಗುತ್ತಿರುವ ಸೂರ್ಯನು । **ಯಜ್ಞಪತೌ**—ಯಜಮಾನನ ವಿಷಯದಲ್ಲಿ । **ಅವಿಹ್ರುತಂ**—ಅವಿಚ್ಛಿನ್ನವಾದ । **ಆಯುಃ**—ಆಯಸ್ಸನ್ನು । **ದಧತ್**—ಉಂಟುಮಾಡುತ್ತಾ ।

**ಬೃಹತ್**—ಮಹತ್ತಾದ | **ಸೋಮ್ಯಂ**—ಸೋಮಮಯವಾದ | **ಮಧು**—ಮಧುರವಾದ ಪಾನೀಯವನ್ನು | **ಪಿಬತು**—ಪಾನಮಾಡಲಿ | **ಯಃ**—ಯಾವ ಸೂರ್ಯನು | **ವಾತಜೂತಃ**—ವಾಯುವಿನಿಂದ ಪ್ರೇರಿತನಾಗಿ | **ತ್ಮನಾ**—ತಾನಾಗಿಯೇ | **ಅಭಿರಕ್ಷತಿ**—ಸಮಸ್ತಜಗತ್ತನ್ನು ಪಾಲಿಸುತ್ತಾನೆಯೋ ಆ ಸೂರ್ಯನು | **ಪ್ರಜಾಃ**—ಪ್ರಜೆಗಳನ್ನು (ಜನರನ್ನು) | **ಪುಪೋಷ**—ವೃಷ್ಟ್ಯಾದಿಗಳಿಂದ ಪೋಷಿಸುತ್ತಾನೆ | **ಪುರುಧಾ**—ಬಹಳವಾಗಿ | **ವಿ ರಾಜತಿ**—ವಿಶೇಷರೀತಿಯಿಂದ ಬೆಳಗುತ್ತಾನೆ.

|| ಭಾವಾರ್ಥ ||

ಅತಿಪ್ರಕಾಶಮಾನವಾಗಿ ಬೆಳಗುತ್ತಿರುವ ಸೂರ್ಯನು ಯಜ್ಞಮಾಡುವ ಯಜಮಾನರಿಗೆ ಅವಿಚ್ಛಿನ್ನವಾದ ಆಯುಸ್ಸನ್ನು ಅನುಗ್ರಹಿಸುತ್ತಾ ಮಹತ್ತಾದುದೂ ರುಚಿಕರವಾದುದೂ ಆದ ಸೋಮರಸವನ್ನು ಪಾನಮಾಡಲಿ ಯಾವ ಸೂರ್ಯನು ವಾಯುವಿನಿಂದ ಪ್ರೇರಿತನಾಗಿ ತಾನಾಗಿಯೇ ಸಮಸ್ತಜಗತ್ತನ್ನು ಪಾಲಿಸುವನೋ ಆ ಸೂರ್ಯನು ಪ್ರಜೆಗಳನ್ನು ವೃಷ್ಟಿಪ್ರದಾನಾದಿಗಳಿಂದ ಪೋಷಿಸುತ್ತಾನೆ ಮತ್ತು ವಿಶೇಷರೀತಿಯಿಂದ ಬೆಳಗುತ್ತಾನೆ.

## English Translation.

Let the radiant (Surya) drink much sweet Soma juice, bestowing unbroken life upon the lord of the sacrifice; (Surya), who impelled by the wind protects his people of his own accord, nourishes them and shines in various places.

|| ಸಂಹಿತಾಪಾಠಃ ||

ವಿಭ್ರಾಡ್ಬೃಹತ್ಸುಭೃತಂ ವಾಜಸಾತಮಂ ಧರ್ಮನ್ದಿವೋ ಧರುಣೇ ಸತ್ಯ-
ಮರ್ಪಿತಂ |
ಅಮಿತ್ರಹಾ ವೃತ್ರಹಾ ದಸ್ಯುಹಂತಮಂ ಜ್ಯೋತಿರ್ಜಜ್ಞೇ ಅಸುರಹಾ ಸಪ-
ತ್ನಹಾ || ೨ ||

|| ಪದಪಾಠಃ ||

ವಿಽಭ್ರಾಟ್ | ಬೃಹತ್ | ಸುಽಭೃತಂ | ವಾಜಽಸಾತಮಂ | ಧರ್ಮನ್ | ದಿವಃ | ಧರುಣೇ | ಸತ್ಯಂ
ಅರ್ಪಿತಂ |
ಅಮಿತ್ರಽಹಾ | ವೃತ್ರಽಹಾ | ದಸ್ಯುಹನ್ಽತಮಂ | ಜ್ಯೋತಿಃ | ಜಜ್ಞೇ | ಅಸುರಽಹಾ | ಸಪತ್ನಽಹಾ ||

॥ ಸಾಯಣಭಾಷ್ಯಂ ॥

ವಿಭ್ರಾಡ್ವಿಭ್ರಾಜಮಾನಂ ಬೃಹತ್ಪ್ರೌಢಂ ಸುಭೃತಂ ಸುಪುಷ್ಟಂ ವಾಜಸಾತಮಂ ವಾಜಸ್ಯಾನ್ನಸ್ಯ ಬಲಸ್ಯ ವಾ ದಾತೃತಮಂ ಧರ್ಮನ್ಧರ್ಮಣಿ ವಾಯುನಾ ಧಾರಯಿತವ್ಯೇ ದಿವೋ ದ್ಯುಲೋಕಸ್ಯ ಧರುಣೇ ಧಾರಕೇ ಸೂರ್ಯಮಂಡಲೇಽರ್ಪಿತಂ ನಿಕ್ಷಿಪ್ತಂ ಸತ್ಯಮವಿನಶ್ವರಮಮಿತ್ರಹಾಮಿತ್ರಾಣಾಮಪ್ರಿಯಾಣಾಂ ಹಂತೃ ವೃತ್ರಹಾ ವೃತ್ರಾಣಾಮಾವೃಣ್ವತಾಂ ಹಂತೃ ದಸ್ಯುಹಂತಮಂ ದಸ್ಯೂನಾಮುಪಕ್ಷಯಿತೄಣಾಂ ಹಂತೃತಮಮಸುರಹಾಸುರಾಣಾಂ ಕ್ಷೇಪ್ತೄಣಾಂ ಘಾತಕಂ ಸಪತ್ನಹಾ ಸಪತ್ನಾನಾಂ ಸಹಜಶತ್ರೂಣಾಮಪಿ ಘಾತಕಮೀದೃಗ್ಭೂತಂ ಜ್ಯೋತಿಃ ಸೌರಂ ತೇಜೋ ಜಜ್ಞೇ । ಪ್ರಾದುರ್ಭವತಿ ॥

॥ ಪ್ರತಿಪದಾರ್ಥ ॥

ವಿಭ್ರಾಟ್— ಪ್ರಕಾಶಮಾನವಾದುದೂ । **ಬೃಹತ್**— ಪ್ರೌಢವಾದುದೂ । **ಸುಭೃತಂ**— ಒಳ್ಳೆಯಪುಷ್ಟಿಯನ್ನುಂಟುಮಾಡುವುದೂ । **ವಾಜಸಾತಮಂ**— ಅನ್ನ ಅಥವಾ ಬಲವನ್ನು ಅತಿಶಯವಾಗಿ ಕೊಡುವುದೂ । **ಧರ್ಮನ್**— ಅಂತರಿಕ್ಷದಲ್ಲಿ ವಾಯುವಿನಿಂದ ಧರಿಸಲ್ಪಟ್ಟಿರುವುದೂ । **ದಿವಃ**— ದ್ಯುಲೋಕದ । **ಧರುಣೇ**— ಧಾರಕವಾದ ಸೂರ್ಯಮಂಡಲದಲ್ಲಿ । **ಅರ್ಪಿತಂ**— ಸ್ಥಾಪಿತವಾಗಿರುವುದೂ । **ಸತ್ಯಂ**— ನಾಶರಹಿತವಾದುದೂ । **ಅಮಿತ್ರಹಾ**— ಶತ್ರುನಾಶಕವಾದುದೂ । **ಅಸುರಹಾ**— ಅಸುರರನ್ನು ಹಿಂಸಿಸಿಕೊಳ್ಳುವುದೂ । **ಸಪತ್ನಹಾ**— ಸ್ಪರ್ಧಿಸುವವರನ್ನು ನಾಶಮಾಡುವುದೂ ಆದ । **ಜ್ಯೋತಿಃ**— ಸೂರ್ಯನ ಜ್ಯೋತಿಯು ಅಥವಾ ತೇಜಸ್ಸು । **ಜಜ್ಞೇ**— ಉದಯಿಸುತ್ತಿದೆ.

॥ ಭಾವಾರ್ಥ ॥

ಅತಿಪ್ರಕಾಶಮಾನವಾದುದೂ ಪ್ರೌಢವಾದುದೂ ಒಳ್ಳೆಯ ಪುಷ್ಟಿ, ಅನ್ನ ಅಥವಾ ಬಲವನ್ನು ಅತಿಶಯವಾಗಿ ಕೊಡುವುದೂ, ಅಂತರಿಕ್ಷದಲ್ಲಿ ವಾಯುವಿನಿಂದ ಧರಿಸಲ್ಪಟ್ಟಿರುವುದೂ ದುಲೋಕದ ಸೂರ್ಯಮಂಡಲದಲ್ಲಿ ನಿಕ್ಷಿಪ್ತವಾದುದೂ, ನಾಶರಹಿತವೂ, ಶತ್ರುನಾಶಕವೂ, ಅಸರರನ್ನೂ, ಪ್ರತಿಸ್ಪರ್ಧಿಗಳನ್ನೂ ಹಿಂಸಿಸಿಕೊಳ್ಳುವುದೂ ಆದ ಸೂರ್ಯನ ತೇಜಸ್ಸು ಉದಯಿಸುತ್ತಿದೆ.

## English Translation.

The radiant light is born mighty, well-cherished, the abundant bestower of food, eternal, deposited in the supporting sustainer of the sky, the slayer of adversaries, the slayer of the Vitras, abundantly slaying the Dasyus, the slayer of the Asuras, the slayer of rivals

॥ ಸಂಹಿತಾಪಾಠಃ ॥

ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರುತ್ತಮಂ ವಿಶ್ವಜಿದ್ಧನಜಿದುಚ್ಯತೇ ಬೃಹತ್ ।

ವಿಶ್ವಭ್ರಾಡ್ಭ್ರಾಜೋ ಮಹಿ ಸೂರ್ಯೋ ದೃಶ ಉರು ಪಪ್ರಥೇ ಸಹ ಓಜೋ ಅಚ್ಯುತಂ ॥ ೩ ॥

॥ ಪದಪಾಠಃ ॥

ಇದಂ । ಶ್ರೇಷ್ಠಂ । ಜ್ಯೋತಿಷಾಂ । ಜ್ಯೋತಿಃ । ಉತ್ऽತಮಂ । ವಿಶ್ವऽಜಿತ್ । ಧನऽಜಿತ್ । ಉಚ್ಯತೇ । ಬೃಹತ್ ।

ವಿಶ್ವऽಭ್ರಾಟ್ । ಭ್ರಾಜಃ । ಮಹಿ । ಸೂರ್ಯಃ । ದೃಶೇ । ಉರು । ಪಪ್ರಥೇ । ಸಹಃ । ಓಜಃ । ಅಚ್ಯುತಂ ॥

॥ ಸಾಯಣಭಾಷ್ಯಂ ॥

ಇದಂ ಸೌರಂ ತೇಜಃ ಶ್ರೇಷ್ಠಂ ಪ್ರಶಸ್ಯತಮಂ ಜ್ಯೋತಿಷಾಮನ್ಯೇಷಾಂ ಗ್ರಹನಕ್ಷತ್ರಾದೀನಾಮಪಿ ಜ್ಯೋತಿಃ ಪ್ರಕಾಶಕಂ ಅತ ಏವೋತ್ತಮಮುತ್ಕೃಷ್ಟಂ ವಿಶ್ವಜಿದ್ವಿಶ್ವಸ್ಯ ಸರ್ವಸ್ಯ ಜೇತೃ ಧನಜಿದ್ಧನಸ್ಯ ಚ ಜೇತೃ ಬೃಹತ್ಪ್ರಭೂತಮುಚ್ಯತೇ । ಏವಂ ಗುಣವಿಶಿಷ್ಟಮಿತಿ ಸರ್ವೈರಭಿಧೀಯತೇ । ಅಪಿ ಚ ವಿಶ್ವಭ್ರಾ-ಡ್ವಿಶ್ವಸ್ಯ ಪ್ರಕಾಶಯಿತಾ ಭ್ರಾಜೋ ಭ್ರಾಜಮಾನೋ ಮಹಿ ಮಹಾನ್ಸೂರ್ಯೋ ದೃಶೇ ದರ್ಶನಾಯೋರು ವಿಸ್ತೀರ್ಣಂ ಸಹಸ್ತಮಸೋऽಭಿಭವಿತ್ರಚ್ಯುತಂ ಚ್ಯುತಿರಹಿತಮವಿನಾಶನಮೋಜಸ್ತೇಜೋರೂಪಂ ಬಲಂ ಪಪ್ರಥೇ । ವಿಸ್ತಾರಯತಿ ॥

॥ ಪ್ರತಿಪದಾರ್ಥ ॥

**ಇದಂ**—ಈ ಸೂರ್ಯತೇಜಸ್ಸು । **ಜ್ಯೋತಿಷಾಂ**—ಇತರ ಗ್ರಹನಕ್ಷತ್ರಾದಿಗಳ ತೇಜಸ್ಸುಗಳಿಗಿಂತಲೂ । **ಶ್ರೇಷ್ಠಂ ಜ್ಯೋತಿಃ**—ಬಹಳ ಹೆಚ್ಚು ಪ್ರಕಾಶವುಳ್ಳದ್ದೂ । **ಉತ್ತಮಂ**—ಉತ್ಕೃಷ್ಟವಾದುದೂ । **ವಿಶ್ವಜಿತ್**—ಸಮಸ್ತವನ್ನೂ ಗೆಲ್ಲುವುದೂ । **ಧನಜಿತ್**—ಧನವನ್ನು ಗೆದ್ದುಕೊಡುವುದೂ । **ಬೃಹತ್**—ಪ್ರಭೂತವಾದುದೂ ಆಗಿರುವುದೆಂದು । **ಉಚ್ಯತೇ**—ಹೇಳಲ್ಪಡುತ್ತದೆ (ಮತ್ತೂ) । **ವಿಶ್ವಭ್ರಾಟ್**—ಸರ್ವಜಗತ್ತನ್ನೂ ಬೆಳಗುವ । **ಭ್ರಾಜಃ**—ಪ್ರಕಾಶಮಾನನಾದ । **ಮಹಿ**—ಮಹಾತ್ಮನಾದ । **ಸೂರ್ಯಃ**—ಸೂರ್ಯನು । **ದೃಶೇ**—ಸಮಸ್ತ ಜನರ ದರ್ಶನಕ್ಕಾಗಿ । **ಉರು**—ವಿಸ್ತಾರವಾದ । **ಸಹಃ**—ತಮೋನಿವಾರಕವಾದುದೂ । **ಅಚ್ಯುತಂ**—ನಾಶ ರಹಿತವಾದುದೂ ಆದ । **ಓಜಃ**—ತೇಜೋರೂಪವಾದ ಬಲವನ್ನು । **ಪಪ್ರಥೇ**—ಹರಡುತ್ತಾನೆ.

॥ ಭಾವಾರ್ಥ ॥

ಈ ಸೂರ್ಯತೇಜಸ್ಸು ಗ್ರಹನಕ್ಷತ್ರಾದಿ ಇತರ ಎಲ್ಲಾವಿಧ ತೇಜಸ್ಸುಗಳಿಗಿಂತಲೂ ಬಹಳ ಹೆಚ್ಚುಪ್ರಕಾಶ ವುಳ್ಳದ್ದು ಮತ್ತು ಉತ್ಕೃಷ್ಟವಾದುದು. ಧನವೇ ಮೊದಲಾದ ಸಮಸ್ತವನ್ನು ದೊರಕಿಸಿಕೊಡುವುದು, ಮತ್ತು ಎಲ್ಲೆಲ್ಲೂ ಬಹಳವಾಗಿ ವ್ಯಾಪಿಸಿರುವುದೆಂದು ಹೇಳಲ್ಪಡುತ್ತದೆ. ಸರ್ವಜಗತ್ತನ್ನೂ ಬೆಳಗುವ ಪ್ರಕಾಶಮಾದನಾದ ಈ ಸೂರ್ಯನ ಸಮಸ್ತಜನರೂ ನೋಡುವಂತೆ ವಿಸ್ತಾರವಾಗಿ ಹಬ್ಬಿರುವ ಈ ಅಂಧಕಾರವನ್ನು ನಾಶಮಾಡುವ ಮತ್ತು ನಾಶರಹಿತವಾದ ತೇಜೋರೂಪವಾದ ತನ್ನ ಬಲವನ್ನು ಎಲ್ಲೆಲ್ಲಿಯೂ ಹರಡುತ್ತಾನೆ.

English Translation

This light, the best of lights, the most excellent, is called the conqueror of all, the conqueror of wealth, mighty; all illumining, radiant, mighty Surya displays to view his vast power, his unfailing lustre.

॥ ಸಂಹಿತಾಪಾಠಃ ॥

ವಿಭ್ರಾಜಞ್ಜ್ಯೋತಿಷಾ ಸ್ವ೧ ರಗಚ್ಛೋ ರೋಚನಂ ದಿವಃ |
ಯೇನೇಮಾ ವಿಶ್ವಾ ಭುವನಾನ್ಯಾಭೃತಾ ವಿಶ್ವಕರ್ಮಣಾ ವಿಶ್ವದೇವ್ಯಾ-
ವತಾ || ೪ ||

॥ ಪದಪಾಠಃ ॥

ವಿಽಭ್ರಾಜನ್ | ಜ್ಯೋತಿಷಾ | ಸ್ವ೧ಃ | ಅಗಚ್ಛಃ | ರೋಚನಂ | ದಿವಃ |
ಯೇನ | ಇಮಾ | ವಿಶ್ವಾ | ಭುವನಾನಿ | ಆಽಭೃತಾ | ವಿಶ್ವಽಕರ್ಮಣಾ | ವಿಶ್ವದೇವ್ಯಽವತಾ || ೪ ||

॥ ಸಾಯಣಭಾಷ್ಯಂ ॥

ಹೇ ಸೂರ್ಯ ಜ್ಯೋತಿಷಾ ತೇಜಸಾ ಸ್ವಃ ಸರ್ವಂ ಜಗದ್ವಿಭ್ರಾಜನ್ವಿಭ್ರಾಜಯನ್ದಿವಃ ಸಂಬಂಧಿ ರೋಚನಂ ಸ್ಥಾನಮಗಚ್ಛಃ | ಪ್ರಾಪ್ನೋಃ | ವಿಶ್ವಕರ್ಮಣಾ ಸರ್ವವ್ಯಾಪಾರಹೇತುನಾ ವಿಶ್ವದೇವ್ಯಾವತಾ | ವಿಶ್ವೇಷಾಂ ದೇವಾನಾಂ ಹಿತೋ ಯಾಗಾದಿರ್ವಿಶ್ವದೇವ್ಯಃ | ತದ್ವತಾ ಯೇನ ಸೌರೇಣ ತೇಜಸೇಮೇಮಾನಿ ಪರಿದೃಶ್ಯಮಾನಾನಿ ವಿಶ್ವಾ ಸರ್ವಾಣಿ ಭುವನಾನ್ಯುದಕಾನಿ ಭೌಮಾನ್ಯಾಭೃತಾ ಘರ್ಮಕಾಲ ಆಭೃತಾನಿ ಭವಂತಿ | ಯದ್ವಾ | ಸರ್ವಾಣಿ ಭೂತಜಾತಾನ್ಯಾಭೃತಾ ಸಮಂತಾದ್ಭೃತಾನಿ ಪೋಷಿತಾನಿ ಭವಂತಿ | ತೇನ ಜ್ಯೋತಿಷೇತ್ಯನ್ವಯಃ ||

॥ ಪ್ರತಿಪದಾರ್ಥ ॥

(ಎಲೈ ಸೂರ್ಯನೇ) ವಿಶ್ವಕರ್ಮಣಾ—ಸರ್ವವ್ಯಾಪಾರಗಳಿಗೂ ಕಾರಣಭೂತವಾದ | ವಿಶ್ವದೇವ್ಯಾವತಾ—ಸಮಸ್ತದೇವತೆಗಳಿಗೂ ಹಿತಕರವಾದ ಯಾಗಾದಿಗಳನ್ನು ಬೆಳಗಿಸುವ | ಯೇನ—ಯಾವ ಸೂರ್ಯತೇಜಸ್ಸಿನಿಂದ | ಇಮಾ—ಇಲ್ಲಿ ನಮ್ಮ ಕಣ್ಣಿಗೆ ಕಾಣುತ್ತಿರುವ | ವಿಶ್ವಾ—ಸಮಸ್ತವಾದ | ಭುವನಾನಿ—ಭೂಮಿಯಲ್ಲಿರುವ ಉದಕಗಳು | ಆಭೃತಾ—ಬೇಸಗೆಕಾಲದಲ್ಲಿ ಆಕರ್ಷಿಸಿ ಧರಿಸಲ್ಪಡುವವೋ | [ಅಥವಾ ಇಮಾ—ನಮ್ಮ ಕಣ್ಣೆದುರಿಗೆ ಇರುವ | ವಿಶ್ವಾ ಭುವನಾನಿ—ಸಮಸ್ತ ಭೂತಜಾತಗಳು (ಪ್ರಾಣಿಗಳು) | ಆಭೃತಾ—ಪೋಷಿಸಲ್ಪಡುವವೋ ಅಂತಹ] ಜ್ಯೋತಿಷಾ—ನಿನ್ನ ತೇಜಸ್ಸಿನಿಂದ | ಸ್ವಃ—ಸಮಸ್ತ ಜಗತ್ತನ್ನು | ವಿಭ್ರಾಜನ್—ಬೆಳಗುತ್ತಾ | ದಿವಃ—ದ್ಯುಲೋಕಸಂಬಂಧವಾದ | ರೋಚನಂ—ಪ್ರಕಾಶಮಾನವಾದ ಸ್ಥಾನವನ್ನು | ಅಗಚ್ಛಃ—ಹೋಗಿ ಸೇರಿದ್ದೀಯೆ.

॥ ಭಾವಾರ್ಥ ॥

ಎಲೈ ಸೂರ್ಯನೇ, ಸರ್ವವ್ಯಾಪಾರಗಳಿಗೂ ಕಾರಣಭೂತವಾದುದೂ ಸಕಲದೇವತೆಗಳಿಗೂ ಹಿತಕರವಾದ ಯಾಗಾದಿಕರ್ಮಗಳನ್ನು ಪೋಷಿಸುವುದೂ ಆದ ಯಾವ ನಿನ್ನ ತೇಜಸ್ಸಿನಿಂದ ನಮ್ಮೆದುರಿಗೆ ಇರುವ ಸಮಸ್ತ ಭೂಮ್ಯುದಕಗಳು ಆಕರ್ಷಿತವಾಗಿ ಮೇಘರೂಪದಲ್ಲಿ ಧರಿಸಲ್ಪಡುವವೋ ಅಥವಾ ಸಮಸ್ತ ಪ್ರಾಣಿಗಳೂ ಪೋಷಿಸಲ್ಪಡುವವೋ ಅಂತಹ ನಿನ ದಿವ್ಯತೇಜಸ್ಸಿನಿಂದ ಸಮಸ್ತಜಗತ್ತನ್ನು ಬೆಳಗುತ್ತಾ ಸ್ವರ್ಗಲೋಕದಲ್ಲಿರುವ ಪ್ರಕಾಶಮಾನವಾದ ನಿನ್ನ ಸ್ಥಾನಕ್ಕೆ ಹೋಗಿ ಸೇರಿದ್ದೀಯೆ.

English Translation.

Illumining the whole (world) with your radiance, you have attained (**Surya**) the luminous region of heaven, by which (radiance) animating all pious acts and addressed to the universal gods, all living beings are cherished

## ನೂರ ಎಪ್ಪತ್ತೊಂದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ತ್ವಂ ತ್ಯಮಿತಿ ಚತುರ್ಋಚಂ ವಿಂಶಂ ಸೂಕ್ತಂ ಭೃಗುಪುತ್ರಸ್ಯೇಟಸ್ಯಾರ್ಷಂ ಗಾಯತ್ರಮೈಂದ್ರಂ । ಅನುಕ್ರಾಂತಂ ಚ । ತ್ವ ತ್ಯಮಿಟೋ ಭಾರ್ಗವೋ ಗಾಯತ್ರಮಿತಿ ॥ ಗತೋ ವಿನಿಯೋಗಃ ॥**

ಅನುವಾದವು—**ತ್ವಂ ತ್ಯಂ** ಎಂಬ ಈ ಸೂಕ್ತವು ಹನ್ನೆರಡನೇ ಅನುವಾಕದಲ್ಲಿ ಇಪ್ಪತ್ತನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಭೃಗುಋಷಿಯ ಪುತ್ರನಾದ ಇಟನೆಂಬುವನು ಋಷಿಯು. ಇಂದ್ರನು ದೇವತೆಯು. ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ತ್ವಂ ತ್ಯಮಿಟೋ ಭಾರ್ಗವೋ ಗಾಯತ್ರಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೧೭೧

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೭೧ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೨೯ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೪ ॥
॥ ಋಷಿಃ—ಇಟೋ ಭಾರ್ಗವಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಪಾಠಃ ॥

ತ್ವಂ ತ್ಯಮಿಟತೋ ರಥಮಿಂದ್ರ ಪ್ರಾವಃ ಸುತಾವತಃ ।

ಅಶೃಣೋಃ ಸೋಮಿನೋ ಹವಂ ॥ ೧ ॥

॥ ಪದಪಾಠಃ ॥

ತ್ವಂ । ತ್ಯಂ । ಇಟತಃ । ರಥಂ । ಇಂದ್ರ । ಪ್ರ । ಆವಃ । ಸುತ್ಽವತಃ ।

ಅಶೃಣೋಃ । ಸೋಮಿನಃ । ಹವಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸುತಾವತಃ ಸುತೇನಾಭಿಷುತೇನ ಸೋಮೇನ ಯುಕ್ತಸ್ಯೇಟತ ಇಟಸ್ಯ ॥ ಸುಪಾಂ ಸುಲುಗಿತಿ ಜಸಸ್ತುಸ್ ॥ ಏತತ್ಸಂಜ್ಞಸ್ಯರ್ಷೇಸ್ತ್ಯಂ ತಂ ಪ್ರಸಿದ್ಧಂ ರಥಂ ಪ್ರಾವಃ । ಪ್ರಾರಕ್ಷಃ । ಸೋಮಿನಃ ಸೋಮಯುಕ್ತಸ್ಯ ಮಮ ಹವಮಾಹ್ವಾನಮಶೃಣೋಃ । ಶೃಣು ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಸುತಾವತಃ—ನಿನಗೆ ಅರ್ಪಿಸುವುದಕ್ಕಾಗಿ ಸೋಮರಸವನ್ನು ಸಿದ್ಧಪಡಿಸಿಕೊಂಡಿರುವ । ಇಟತಃ—ಇಟನೆಂಬ ಋಷಿಯ (ನನ್ನ) । ತ್ಯಂ—ಪ್ರಸಿದ್ಧವಾದ । ರಥಂ—ರಥವನ್ನು । ಪ್ರಾವಃ—ರಕ್ಷಿಸಿದ್ದೀಯೆ । ಸೋಮಿನಃ—ಸೋಮರಸವನ್ನು ಸಿದ್ಧಪಡಿಸಿರುವ ನನ್ನ । ಹವಂ—ಆಹ್ವಾನವನ್ನು । ಅಶೃಣೋಃ—ಕೇಳು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೆ ಅರ್ಪಿಸುವುದಕ್ಕಾಗಿ ಸೋಮರಸವನ್ನು ಸಿದ್ಧಪಡಿಸಿ ಇಟ್ಟುಕೊಂಡಿರುವ ಇಟನೆಂಬ ನನ್ನ ಪ್ರಸಿದ್ಧವಾದ ರಥವನ್ನು ರಕ್ಷಿಸಿದ್ದೀಯೆ. ಸೋಮರಸಸಹಿತನಾದ ನನ್ನ ಆಹ್ವಾನವನ್ನು ಕೇಳು.

## English Translation.

You have protected, Indra· this chariot of Ita, who offered libations; hear the invocation of the presenter of the Snma.

॥ ಸಂಹಿತಾಪಾಠಃ ॥

ತ್ವಂ ಮಖಸ್ಯ ದೋಧತಃ ಶಿರೋಽವ ತ್ವಚೋ ಭರಃ ।

ಅಗಚ್ಛಃ ಸೋಮಿನೋ ಗೃಹಂ ॥ ೨ ॥

॥ ಪದಪಾಠಃ ॥

ತ್ವಂ । ಮುಖಸ್ಯ । ದೋಧತಃ । ಶಿರಃ । ಅವ । ತ್ವಚಃ । ಭರಃ ।

ಅಗಚ್ಛಃ । ಸೋಮಿನಃ । ಗೃಹಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಮುಖಸ್ಯ ಯಜ್ಞಸ್ಯ ದೋಧತಃ ಕಂಪಮಾನಸ್ಯ ದೇವೇಭ್ಯಃ ಪಲಾಯಮಾನಸ್ಯ ಶಿರಃ ಪ್ರವರ್ಗ್ಯರೂಪಂ ತ್ವಚಸ್ತ್ವಗುಪಲಕ್ಷಿತಾಚ್ಛರೀರಾದವ ಭರಃ । ಅವಯುತ್ಯ ಪೃಥಕ್ಕೃತ್ಯ ಹೃತವಾನಸಿ। ದೇವೇಭ್ಯೋ ನಿಷ್ಕ್ರಾಂತಸ್ಯ ಪುರುಷಾಕಾರಸ್ಯ ಧನ್ವಿನೋ ಯಜ್ಞಸ್ಯ ಶಿರ ಇಂದ್ರೋ ವಮ್ರಿರೂಪೇಣ ಜ್ಯಾಘಾತನದ್ವಾರಾ ಪುರಾ ಚಿಚ್ಛೇದ । ತದಭಿಪ್ರಾಯೇಣೇದಮುಕ್ತಂ । ಶ್ರೂಯತೇ ಹಿ । ತಸ್ಯೇಂದ್ರೋ ವಮ್ರಿರೂಪೇಣ ಧನುರ್ಜ್ಯಾಮಚ್ಛಿನದ್ರುದ್ರಸ್ಯ ಕ್ಷೇವ ಧನುರಾರ್ತ್ನಿಃ ಶಿರ ಉತ್ಪಿಪೇಷ ಸ ಪ್ರವರ್ಗ್ಯೋಽಭವದಿತಿ । ಸ ತ್ವಂ ಸೋಮಿನಃ ಸೋಮವತೋ ಮಮ ಗೃಹಮಗಚ್ಛಃ । ಆಗಚ್ಛ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತ್ವಂ**—ನೀನು । **ದೋಧತಃ**—ದೇವತೆಗಳನ್ನು ತ್ಯಜಿಸಿ ನಡಗುತ್ತಾ ಓಡಿಹೋಗುತ್ತಿರುವ । **ಮಖಸ್ಯ**—ಯಜ್ಞದ । **ಶಿರಃ**—ಪ್ರವರ್ಗ್ಯರೂಪವಾದ ಯಾಗವನ್ನು। **ತ್ವಚಃ**—ಚರ್ಮದಿಂದ ಎಂದರೆ ಶರೀರದಿಂದ । **ಅವ ಭರಃ**—ಬೇರ್ಪಡಿಸಿ ತಂದಿದ್ದೀಯೆ (ಅಂತಹ ನೀನು) । **ಸೋಮಿನಃ**—ಸೋಮರಸಯುಕ್ತನಾದ ನನ್ನ । **ಗೃಹಂ**—ಮನೆಗೆ । **ಅಗಚ್ಛಃ**—ದಯಮಾಡು

॥ ಭಾವಾರ್ಥ ॥

ಎಲೈ ಇಂದ್ರನೇ, ದೇವತೆಗಳನ್ನು ತ್ಯಜಿಸಿ ನಡುಗುತ್ತಾ ಓಡಿಹೋಗುತ್ತಿರುವ ಯಜ್ಞದ ಶರೀರದಿಂದ ಅದರ ಶಿರೋರೂಪವಾದ ಪ್ರವರ್ಗ್ಯವೆಂಬ ಯಾಗವನ್ನು ಬೇರ್ಪಡಿಸಿ ಕಿತ್ತು ತಂದಿದ್ದೀಯೆ. ಇಂತಹ ನೀನು ಸೋಮರಸವನ್ನು ಸಿದ್ಧಪಡಿಸಿಟ್ಟುಕೊಂಡಿರುವ ನನ್ನ ಮನೆಗೆ ದಯಮಾಡು

## English Translation

You have carried off the head of the trembling sacrifice from his skin; come to the dwelling of the presenter of the Soma.

॥ ವಿಶೇಷವಿಷಯಗಳು ॥

ಪೂರ್ವದಲ್ಲಿ ಯಜ್ಞವು ಕಾರಣಾಂತರದಿಂದ ದೇವತೆಗಳನ್ನು ತ್ಯಜಿಸಿ ಪುರುಷಧಾರಿಯಾಗಿ ಹೊರಟುಹೋಯಿತು. ಈ ಯಜ್ಞವನ್ನೇ ರುದ್ರನೆಂದು ಹೇಳುವರು. ಈ ಯಜ್ಞದ ಅಥವಾ ರುದ್ರನ ಸಮೀಪದಲ್ಲಿ ಒಂದು ಧನುಸ್ಸಿದ್ದಿತು. ಇಂದ್ರನು ಗೆದ್ದಲುಹುಳುಗಳ ರೂಪದಿಂದ ಆ ಧನುಸ್ಸಿನ ಜ್ಯಾ (ಹೆದೆ) ಎಂದರೆ ಹಗ್ಗವನ್ನು ಕತ್ತರಿಸಿದನು. ಎರಡು ತುದಿಗಳನ್ನು ಹಗ್ಗದಿಂದ ಸೇರಿಸಿ ಬಿಗಿದಿದ್ದ ಧನುಸ್ಸು ಹಗ್ಗವು ಕತ್ತರಿಸಿ ಹೋದದ್ದರಿಂದ ಚಂಗನೆ ಹಾರಿತು. ಅದರ

ಒಂದು ತುದಿಯು ಸಮೀಪಾಗದಲ್ಲಿದ್ದ ರುದ್ರನ (ಯಜ್ಞದ) ಶಿರಸ್ಸನ್ನು ಕತ್ತರಿಸಿ ಮೇಲಕ್ಕೆ ಎಸೆಯಿತು. ಆ ಶಿರಸ್ಸು ಕೆಳಕ್ಕೆ ಬಿದ್ದಮೇಲೆ ಅದಕ್ಕೆ ಪ್ರವರ್ಗ್ಯವೆಂದು ಹೆಸರಾಯಿತು. ಅದನ್ನು ಇಂದ್ರನು ಯಜ್ಞಶರೀರದಿಂದ ಬೇರ್ಪಡಿಸಿ ತಂದನೆಂದು ಇಲ್ಲಿ ಹೇಳಿದೆ. ಪ್ರವರ್ಗ್ಯಸಹಿತವಾಗಿ ಯಜ್ಞಮಾಡುವ ಪುರುಷನು ಯಜ್ಞದ ಶಿರಸ್ಸನ್ನು ಪುನಃ ಕೂಡಿಸಿ ದಂತಾಗುವುದು. ಅವನಿಗೆ ರುದ್ರನು ಎಂದರೆ ಯಜ್ಞವು ಯಾವ ವಿಧವಾದ ಹಿಂಸೆಯನ್ನು ಮಾಡುವುದಿಲ್ಲ ಎಂದು

ತಸ್ಯೇಂದ್ರೋ ವಮ್ರಿರೂಪೇಣ । ಧನುರ್ಜ್ಯಾಮಭಿನತ್ಸ್ವಯಂ....ರುದ್ರಸ್ಯತ್ವೇವ ಧನುರಾರ್ತ್ನಿಃ ।
ಶಿರ ಉತ್ಪಿಪೇಷ । ಸ ಪ್ರವರ್ಗ್ಯೋಽಭವತ್ । ತಸ್ಮಾದ್ಯಃ ಸಪ್ರವರ್ಗ್ಯೇಣ ಯಜ್ಞೇನ ಯಜತೇ ।
ರುದ್ರಸ್ಯ ಸ ಶಿರಃ ಪ್ರತಿ ದಧಾತಿ । ನೈನಗ್ಂ ರುದ್ರ ಆರುಕೋ ಭವತಿ । ಯ ಏವಂ ವೇದ ॥
(ತೈ. ಆ. ೧-೫-೨)

ತೈತ್ತಿರೀಯ ಆರಣ್ಯಕದಲ್ಲಿ ಈ ರೀತಿ ಹೇಳಿದೆ. ಆ ಅಭಿಪ್ರಾಯವನ್ನೇ ಋಷಿಯು ಇಲ್ಲಿ ವ್ಯಕ್ತಪಡಿಸಿದ್ದಾನೆ.

॥ ಸಂಹಿತಾಪಾಠಃ ॥

ತ್ವಂ ತ್ಯಮಿಂದ್ರ ಮರ್ತ್ಯಮಾಸ್ತ್ರಬುಧ್ನಾಯ ವೇನ್ಯಂ ।
ಮುಹುಃ ಶ್ರಥ್ನಾ ಮನಸ್ಯವೇ ॥ ೩ ॥

॥ ಪದಪಾಠಃ ॥

ತ್ವಂ । ತ್ಯಂ । ಇಂದ್ರ । ಮರ್ತ್ಯಂ । ಆಸ್ತ್ರಽಬುಧ್ನಾಯ । ವೇನ್ಯಂ ।
ಮುಹುಃ । ಶ್ರಥ್ನಾಃ । ಮನಸ್ಯವೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ತ್ಯಂ ತಂ ಮರ್ತ್ಯಂ ಮನುಷ್ಯಂ ವೇನ್ಯಂ ವೇನಸ್ಯ ಪುತ್ರಂ ಪೃಥುಮಾಸ್ತ್ರಬುಧ್ನಾಯ । ಅಸ್ತ್ರಬುಧ್ನೋ ನಾಮ ಕಶ್ಚಿತ್ । ತಸ್ಯ ಪುತ್ರಾಯ ಮನಸ್ಯವೇ ಮನನೀಯಂ ಸ್ತೋತ್ರಮಿಚ್ಛತೇ ಮುಹುಃ ಶಶ್ವಚ್ಛ್ರಥ್ನಾಃ । ಅಹಿಂಸೀಃ । ವಶಮನಯ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ತ್ಯಂ—ಪ್ರಸಿದ್ಧನಾದ । ಮರ್ತ್ಯಂ—ಮಾನವನಾದ । ವೇನ್ಯಂ—ವೇನನೆಂಬುವನ ಪುತ್ರನಾದ ಪೃಥುವೆಂಬುವನನ್ನು । ಮನಸ್ಯವೇ—ಸ್ತೋತ್ರಮಾಡುವ । ಆಸ್ತ್ರಬುಧ್ನಾಯ—ಅಸ್ತ್ರಬುಧ್ನನೆಂಬುವನ ಪುತ್ರನಿಗೆ । ಮುಹುಃ—ಮತ್ತೆ । ಶ್ರಥ್ನಾಃ—ವಶಮಾಡಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಪ್ರಸಿದ್ಧನಾದ ವೇನನ ಪುತ್ರನಾದ ಪೃಥು ವೆಂಬುವನನ್ನು, ನಿನ್ನನ್ನು ಸ್ತುತಿಸಲಿಚ್ಛಿಸುವ ಅಸ್ತ್ರಬುಧ್ನನೆಂಬುವನ ಪುತ್ರನ ವಶಮಾಡಿರುವೆ.

## English Translation.

You have often, Indra, let loose the mortal Venya, against Manasyu, the son of Astrabudhna.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಸ್ತ್ರಬುಧ್ನನ ಪುತ್ರನೆಂದೂ, ವೇನನ ಪುತ್ರನಾದ ಪೃಥುವೆಂದೂ ಇಬ್ಬರು ಪುರುಷರ ಹೆಸರುಗಳು ಪ್ರಸಕ್ತವಾಗಿವೆ. ಅಸ್ತ್ರಬುಧ್ನನೆಂಬುವನ ಹೆಸರು ಈ ಋಕ್ಕಿನಲ್ಲಲ್ಲದೆ ಬೇರೆಲ್ಲಿಯೂ ಋಗ್ವೇದದಲ್ಲಿ ಕಂಡುಬರುವುದಿಲ್ಲವಾದ್ದರಿಂದ ಇವನ ವಿಷಯವು ಹೆಚ್ಚಿಗೆ ತಿಳಿಯುವಂತಿಲ್ಲ. ಆದರೆ ವೇನನ ಪುತ್ರನಾದ ಪೃಥುವಿನ ವಿಷಯವು ಅನೇಕ ಕಡೆ ಉಕ್ತವಾಗಿದೆ. ಈ ಋಷಿಯು (ಪೃಥುವಿನ) ೧೦ನೇ ಮಂಡಲದ ೧೪೮ನೇ ಸೂಕ್ತದ (೫ ಋಕ್ಕುಗಳಿಗೆ) ಋಷಿಯಾಗಿದಾನೆ. ಈ ಸೂಕ್ತದಲ್ಲಿ ಇಂದ್ರನನ್ನು ಸ್ತುತಿಸಿದಾನೆ. ತೈತ್ತಿರೀಯ ಬ್ರಾಹ್ಮಣದಲ್ಲಿಯೂ ಈ ಪೃಥುವಿನ ಪ್ರಸ್ತಾಪವು ಎರಡುಕಡೆ ಇದೆ. ಅಲ್ಲಿ ಪೃಥು ಎಂಬುವುದಕ್ಕೆ ಬದಲಾಗಿ ಪೃಥಿ ಎಂದು ಕರೆಯಲಾಗಿದೆ—

> **ಪೃಥಿರ್ವೈನ್ಯಃ । ಅಭ್ಯಷಿಚ್ಯತ । ಸ ರಾಷ್ಟ್ರಂ ನಾಭವತ್ । ಸ ಏತಾನಿ ಪಾರ್ಥಾನ್ಯಪಶ್ಯತ್ । ತಾನ್ಯಜುಹೋತ್ । ತೈರ್ವೈ ಸ ರಾಷ್ಟ್ರಮಭವತ್ ॥** (ತೈ. ಬ್ರಾ. ೧-೭-೭-೪)

ಪೃಥಿ (ಪೃಥು) ಎಂಬುವನು ವೇನನ ಪುತ್ರನು. ಅವನು ರಾಜ್ಯಾಭಿಷಿಕ್ತನಾದ ಕಾಲದಲ್ಲಿ **ಅಗ್ನಯೇ ಸ್ವಾಹಾ** ಎಂದು ಮೊದಲಾಗುವ ಆರು ಪಾರ್ಥಹೋಮಗಳನ್ನು ಮಾಡಲಿಲ್ಲ ಆದ್ದರಿಂದ ಅವನಿಗೆ ರಾಜ್ಯ ಪ್ರಾಪ್ತಿಯಾಗಲಿಲ್ಲ. ಈ ಪಾರ್ಥಹೋಮಗಳ ಸ್ವರೂಪವನ್ನರಿತು ಅವನು ಆ ಮಂತ್ರಗಳಿಂದ ಹೋಮಮಾಡಿದನಂತರ ಅವನಿಗೆ ರಾಜ್ಯ ಪ್ರಾಪ್ತಿಯಾಯಿತು ಎಂದು ಹೇಳಿದೆ.

ಇದೇ ತೈತ್ತಿರೀಯಬ್ರಾಹ್ಮಣದ ಮತ್ತೊಂದೆಡೆಯಲ್ಲಿ—

> **ಯೋ ವೈ ಸೋಮೇನ ಸೂಯತೇ । ಸ ದೇವಸವಃ । ಯಃ ಪಶುನಾ ಸೂಯತೇ । ಸ ದೇವಸವಃ। ಯ ಇಷ್ಟ್ಯಾ ಸೂಯತೇ । ಸ ಮನುಷ್ಯಸವಃ । ಏತಂ ವೈ ಪೃಥಯೇ ದೇವಾಃ ಪ್ರಾಯಚ್ಛನ್ । ತತೋ ವೈ ಸೋಽಸ್ಯಾರಣ್ಯಾನಾಂ ಪಶೂನಾಮಸೂಯತ । ಯಾವತೀಃ ಕಿಯತೀಶ್ಚ ಪ್ರಜಾ ವಾಚಂ ವದಂತಿ । ತಾಸಾಗ್ಂ ಸರ್ವಾಸಾಗ್ಂ ಸೂಯತೇ । ಯ ಏತೇನ ಯಜತೇ । ಯ ಉ ಚೈನಮೇವಂ ವೇದ ॥** (ತೈ. ಬ್ರಾ. ೨-೭-೫-೧)

ಯಾರು ಸೋಮರಸದಿಂದ ಸಹಿತವಾಗಿ ಯಜ್ಞಮಾಡುವನೋ ಆ ಯಜ್ಞವು ದೇವಸವವೆನಿಸುವುದು. ಪಶು ಹೋಮ ಸಹಿತವಾಗಿ ಮಾಡುವ ಯಜ್ಞವು ದೇವಸವವೆನಿಸುವುದು. ಇಷ್ಟಿವಿಧಾನದಿಂದ ಮಾಡುವ ಯಜ್ಞವು ಮನುಷ್ಯಸವವೆನಿಸುವುದು ಈ ಇಷ್ಟಿವಿಧಾನವು ಬಹುಸುಲಭವಾಗಿರುವುದು. ಇದನ್ನು ದೇವತೆಗಳು ವೇನಪುತ್ರನಾದ ಪೃಥಿ ಎಂಬ ಒಬ್ಬ ರಾಜನಿಗೆ ಅನುಗ್ರಹಮಾಡಿ ಕೊಟ್ಟರು. ಆದ್ದರಿಂದ ಇದಕ್ಕೆ ಮನುಷ್ಯಸವವೆಂದು ಹೆಸರಾಯಿತು. ದೇವತೆಗಳು ಪೃಥಿಗೆ ಕೊಟ್ಟಿದ್ದರಿಂದ ಇದಕ್ಕೆ ಪೃಥಿಸವವೆಂದೂ ಹೆಸರಿರುವುದು. ಈ ಪೃಥಿಸವವೆಂಬ ಇಷ್ಟಿವಿಧಾನದಿಂದ ಪೃಥಿಯು ಯಜ್ಞಮಾಡಿ ಸಮಸ್ತ ಅರಣ್ಯ (ಮತ್ತು ಗ್ರಾಮ್ಯ) ಪಶುಗಳಿಗೂ ಅಧಿಪತಿಯಾದನು ಇತ್ಯಾದಿ ವಿವರಣೆ ಇದೆ.

॥ ಸಂಹಿತಾಪಾಠಃ ॥

ತ್ವಂ ತ್ಯಮಿಂದ್ರ ಸೂರ್ಯಂ ಪಶ್ಚಾ ಸಂತಂ ಪುರಸ್ಕೃಧಿ ।
ದೇವಾನಾಂ ಚಿತ್ತಿರೋ ವಶಂ ॥ ೪ ॥

॥ ಪದಪಾಠಃ ॥

ತ್ವಂ । ತ್ಯಂ । ಇಂದ್ರ । ಸೂರ್ಯಂ । ಪಶ್ಚಾ । ಸಂತಂ । ಪುರಃ । ಕೃಧಿ ।
ದೇವಾನಾಂ । ಚಿತ್ । ತಿರಃ । ವಶಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ತ್ಯಂ ಸೂರ್ಯಮಸ್ತಸಮಯೇ ಪಶ್ಚಾ ಪಶ್ಚಾತ್ಸಂತಂ ಭವಂತಂ ಪುರಃ ಪರೇ-ದ್ಯುರುದಯಕಾಲೇ ಪುರಸ್ತಾತ್ಕೃಧಿ । ಕರೋಷಿ ॥ ಲಕಾರವ್ಯತ್ಯಯಃ ॥ ಕೀದೃಶಂ । ದೇವಾನಾಂ ಚಿದ್ದೇವಾನಾಮಪಿ ತಿರಸ್ತಿರೋಹಿತಂ ತೈರಪಿ ಕ್ವ ಗತ ಇತಿ ದುರ್ವಿಜ್ಞಾತಂ ವಶಂ ಕಾಂತಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು ತ್ಯಂ—ಪ್ರಸಿದ್ಧನಾದ । ದೇವಾನಾಂ ಚಿತ್—ದೇವತೆಗಳಿಗೂ ಸಹ (ರಾತ್ರಿಕಾಲದಲ್ಲಿ ಎಲ್ಲಿರುವನೆಂಬುದನ್ನು) । ತಿರಃ—ಕಾಣದಂತಿರುವ । ವಶಂ—ಪ್ರಕಾಶಮಾನನಾದ ಸೂರ್ಯಂ—ಸೂರ್ಯನನ್ನು (ಸಾಯಂಕಾಲದಲ್ಲಿ) । ಪಶ್ಚಾ—ಪಶ್ಚಿಮದಿಕ್ಕಿನಲ್ಲಿ । ಸಂತಂ—ಇರುವಂತೆಯೂ । ಪುರಃ—(ಮಾರನೆಯ ದಿವಸ ಪ್ರಾತಃಕಾಲದಲ್ಲಿ) ಪೂರ್ವದಿಕ್ಕಿನಲ್ಲಿರುವಂತೆಯೂ । ಕೃಧಿ—ಮಾಡುತ್ತೀಯೆ ।

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಪ್ರಸಿದ್ಧನೂ ರಾತ್ರಿಕಾಲದಲ್ಲಿ ಎಲ್ಲಿರುವನೆಂಬುದನ್ನು ದೇವತೆಗಳಿಗೂ ಸಹ ತಿಳಿಯದಂತೆ ಇರುವವನೂ, ಪ್ರಕಾಶಮಾನನಾದವನೂ ಆದ ಸೂರ್ಯನನ್ನು ಸಾಯಂಕಾಲದಲ್ಲಿ ಪಶ್ಚಿಮದಿಕ್ಕಿನಲ್ಲಿರುವಂತೆಯೂ, ಮಾರನೆಯ ದಿನ ಪ್ರಾತಃಕಾಲದಲ್ಲಿ ಪೂರ್ವದಿಕ್ಕಿನಲ್ಲಿರುವಂತೆಯೂ ಮಾಡುತ್ತೀಯೆ

## English Translation.

Bring forward that Surya, Indra, who is lingering behind, the beloved of the gods, (awhile) concealed from them.



# ನೂರ ಎಪ್ಪತ್ತೆರಡನೆಯ ಸೂಕ್ತವು

|| ಸಾಯಣಭಾಷ್ಯಂ ||

**ಆ ಯಾಹೀತಿ ಚತುರ್ಋಚಮೇಕವಿಂಶಂ ಸೂಕ್ತಮಾಂಗಿರಸಸ್ಯ ಸಂವರ್ತಸ್ಯಾರ್ಷಮುಷೋದೇವತಾಕಂ। ಚತಸ್ರೋಽಪಿ ವಿಂಶತಿಕಾ ದ್ವಿಪದಾ ವಿರಾಜಃ। ತಥಾ ಚಾನುಕ್ರಾಂತಂ। ಆ ಯಾಹಿ ಸಂವರ್ತ ಉಷಸ್ಯಂ ದ್ವೈಪದಮಿತಿ॥ ಪ್ರಥಮೇ ಛಂದೋಮೇ ವೈಶ್ವದೇವಸೂಕ್ತಾತ್ಪೂರ್ವಮಿದಂ ಸೂಕ್ತಂ। ಸೂತ್ರಿತಂ ಚ। ಆ ಯಾಹಿ ವನಸೇಮಾ ನು ಕಂ ಬಭ್ರುರೇಕ ಇತಿ ದ್ವಿಪದಾಸೂಕ್ತಾನಿ। ಆ. ೮-೭। ಇತಿ॥ ಮಹಾವ್ರತೇಽಪಿ ನಿಷ್ಕೇವಲ್ಯ ಏತತ್। ತಥೈವ ಪಂಚಮಾರಣ್ಯಕೇ ಸೂತ್ರಿತಂ॥ ಐ. ಆ. ೫-೨-೨॥**

ಅನುವಾದವು—**ಆ ಯಾಹಿ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಇಪ್ಪತ್ತೊಂದನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸಗೋತ್ರದ ಸಂವರ್ತನೆಂಬುವನು ಋಷಿಯು; ಉಷಸ್ಸು ದೇವತೆಯು; ಈ ಸೂಕ್ತದಲ್ಲಿರುವ ನಾಲ್ಕು ಋಕ್ಕುಗಳೂ ಇಪ್ಪತ್ತು ಅಕ್ಷರಗಳ ದ್ವಿಪದಾ ವಿರಾಟ್ ಎಂಬ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—**ಆ ಯಾಹಿ ಸಂವರ್ತ ಉಷಸ್ಯಂ ದ್ವೈಪದಂ** ಎಂದ ಹೇಳಿರುವುದು. ಪ್ರಥಮ ಛಂದೋಮದಲ್ಲಿ ವೈಶ್ವದೇವಸೂಕ್ತ ಪಠನಕ್ಕೆ ಪೂರ್ವಭಾವಿಯಾಗಿ ಈ ಸೂಕ್ತವನ್ನು ಪಠಿಸಬೇಕೆಂದು—**ಆ ಯಾಹಿ ವನಸೇಮಾ ನು ಕಂ ಬಭ್ರುರೇಕ ಇತಿ ದ್ವಿಪದಾಸೂಕ್ತಾನಿ** ಎಂಬ ಸೂತ್ರದಿಂದ (ಆ. ೮-೭) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ನಿಷ್ಕೇವಲ್ಯ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಆ ಯಾಹಿ ವನಸಾ ಸಹೇತಿ ನವ ಸಮಾಮ್ನಾತಾಃ** ಎಂಬ ವಾಕ್ಯದಿಂದ (ಐ. ಆ. ೫-೨-೨) ನಿರ್ದಿಷ್ಟವಾಗಿರುವುದು.

## ಸೂಕ್ತ—೧೭೨

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೭೨ ॥

ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೩೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೪ ॥
॥ ಋಷಿಃ—ಸಂವರ್ತಃ ॥
॥ ದೇವತಾ—ಉಷಾಃ ॥
॥ ಛಂದಃ—ದ್ವಿಪದಾ ॥

॥ ಸಂಹಿತಾಪಾಠಃ ॥

**ಆ ಯಾಹಿ ವನಸಾ ಸಹ ಗಾವಃ ಸಚಂತ ವರ್ತನಿಂ ಯದೂಧಭಿಃ ॥ ೧ ॥**

॥ ಪದಪಾಠಃ ॥

ಆ । ಯಾಹಿ । ವನಸಾ । ಸಹ । ಗಾವಃ । ಸಚಂತ । ವರ್ತನಿಂ । ಯತ್ । ಊಧಃಽಭಿಃ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಉಷಃ ವನಸಾ ವನನೀಯೇನ ತೇಜಸಾ ಧನೇನ ಸಾರ್ಧಮಾ ಯಾಹಿ । ಆಗಚ್ಛ । ಗಾವ ಉಷಸೋ ವಾಹನಭೂತಾ ವರ್ತನಿಂ ರಥಂ ಸಚಂತ । ಸೇವಂತೇ । ಅತಸ್ತೇನ ರಥೇನಾಯಾಹೀತ್ಯರ್ಥಃ । ಯದ್ವಾ ಗಾವ ಊಧಭಿರುಪಲಕ್ಷಿತಾಃ ಪ್ರಭೂತಾಃ । ಪೀನಾ ಇತ್ಯರ್ಥಃ । ತಾ ಗಾವ ಇತಿ ಸಂಬಂಧಃ ॥**

॥ ಪ್ರತಿಪದಾರ್ಥ ॥

(ಎಲೈ ಉಷೋದೇವತೆಯೇ) **ಯತ್ ಗಾವಃ**—ಉಷೋದೇವತೆಗಳವಾಹನಭೂತಗಳಾದ ಯಾವ ಗೋವುಗಳು । **ಊಧಭಿಃ**—ಕ್ಷೀರಪೂರ್ಣವಾದ ಕೆಚ್ಚಲುಗಳಿಂದ ಕೂಡಿ । **ವರ್ತನಿಂ**—ನಿನ್ನ ರಥವನ್ನು । **ಸಚಂತ**—ಸೇವಿಸುತ್ತವೆಯೋ ಎಂದರೆ ವಹಿಸುತ್ತವೆಯೋ ಆಗ । **ವನಸಾ**—ಎಲ್ಲರಿಗೂ ಬೇಕಾದ ತೇಜಸ್ಸಿನಿಂದ (ಬೆಳಕಿನಿಂದ) ಅಥವಾ ಧನದಿಂದ ಸಹಿತವಾಗಿ । **ಆ ಯಾಹಿ**—ದಯಮಾಡು.

॥ ಭಾವಾರ್ಥ ॥

ಎಲೈ ಉಷೋದೇವತೆಯೇ, ನಿನ್ನ ವಾಹನಭೂತಗಳಾದ ಗೋವುಗಳು ನಿನ್ನ ರಥವನ್ನು ಸೇವಿಸುವಾಗ ಎಂದರೆ ವಹಿಸಿ ಬರುವಾಗ ಎಲ್ಲರಿಗೂ ಬೇಕಾದ ತೇಜಸ್ಸಿನಿಂದ ಅಥವಾ ಧನದಿಂದ ಸಹಿತವಾಗಿ ಇಲ್ಲಿಗೆ ದಯಮಾಡು.

## English Translation.

Come, (Ushas), with the desirabie (radiance); let the cows who are of full udders accompany your chariot.

॥ ಸಂಹಿತಾಪಾಠಃ ॥

ಆ ಯಾಹಿ ವಸ್ವ್ಯಾ ಧಿಯಾ ಮಂಹಿಷ್ಠೋ ಜಾರಯನ್ಮಖಃ ಸುದಾನುಭಿಃ ॥೨॥

॥ ಪದಪಾಠಃ ॥

ಆ । ಯಾಹಿ । ವಸ್ವ್ಯಾ । ಧಿಯಾ । ಮಂಹಿಷ್ಠಃ । ಜಾರಯತ್ಽಮಖಃ । ಸುದಾನುಽಭಿಃ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಉಷಃ ವಸ್ವ್ಯಾ ಪ್ರಶಸ್ತಯಾ ಧಿಯಾನುಗ್ರಹಬುದ್ಧ್ಯಾ ಕರ್ಮಣಾ ಸ್ತುತ್ಯಾ ವಾ ಸಾರ್ಧಮಾ ಯಾಹಿ । ಆಗಚ್ಛ । ಸ ಚೋಷಃಕಾಲಃ ಸುದಾನುಭಿಃ ಶೋಭನದಾನೈರ್ದಾತೃಭಿಃ ಪುರುಷೈರ್ಮಂಹಿಷ್ಠೋ ಧನಾನಾಂ ದಾತೃತಮಃ ಅತ ಏವ ಜಾರಯನ್ಮಖಃ ಸಮಾಪಯದ್ಯಜ್ಞಃ ಭವತಿ ॥**

॥ ಪ್ರತಿಪದಾರ್ಥ ॥

(ಎಲೈ ಉಷೋದೇವತೆಯೇ) **ವಸ್ವ್ಯಾ**—ಪ್ರಶಸ್ತವಾದ । **ಧಿಯಾ**—ನಿನ್ನ ಅನುಗ್ರಹಬುದ್ಧಿಯಿಂದ ಕೂಡಿ ಅಥವಾ ಕರ್ಮಸ್ತೋತ್ರಾದಿಗಳಿಂದ ಸ್ತುತಳಾಗಿ । **ಆ ಯಾಹಿ**—ದಯಮಾಡು (ಆ ಉಷಃಕಾಲವು) **ಸುದಾನುಭಿಃ**—

ಒಳ್ಳೆಯದಾತೃಗಳಾದ ಪುರುಷರಿಂದ | **ಮಂಹಿಷ್ಠಃ**— ಪೂಜ್ಯವಾದುದೂ | **ಪಾರಯಜ್ಞಾಃ**— ಯಜ್ಞವನ್ನು ಸಮಾಪ್ತಿಗೊಳಿಸುವುದೂ ಆಗಿದೆ.

॥ ಭಾವಾರ್ಥ ॥

ಎಲೈ ಉಷೋದೇವತೆಯೇ, ನಿನ್ನ ಅನುಗ್ರಹಾತ್ಮಕವಾದ ಬುದ್ಧಿಯಿಂದ ಕೂಡಿ ಇಲ್ಲಿಗೆ ದಯಮಾಡು. ಅಥವಾ ಕರ್ಮದಿಂದ ಅಥವಾ ಸ್ತೋತ್ರದಿಂದ ಸ್ತುತಳಾಗಿ ಇಲ್ಲಿಗೆ ದಯಮಾಡು ನಿನ್ನಾಗಮನದಿಂದ ಪ್ರಾಪ್ತವಾಗುವ ಉಷಃ ಕಾಲವು ಉದಾರದಾನಿಗಳಿಂದ ಗೌರವಿಸಲ್ಪಡುವುದೂ ಯಜ್ಞವನ್ನು ಸಮಾಪ್ತಿಗೊಳಿಸುವುದೂ ಆದ ಕಾಲವಾಗಿದೆ.

## English Translation

Come (Ushas), with kindly thoughts; (it is the season) most honoured by the generous, and which bring the sacrifice to completion.

॥ ಸಂಹಿತಾಪಾಠಃ ॥

**ಪಿತುಭೃತೋ ನ ತಂತುಮಿತ್ಸುದಾನವಃ ಪ್ರತಿ ದಧ್ಮೋ ಯಜಾಮಸಿ ॥ ೩ ॥**

॥ ಪದಪಾಠಃ ॥

**ಪಿತುऽಭೃತಃ । ನ । ತಂತುಂ । ಇತ್ । ಸುऽದಾನವಃ । ಪ್ರತಿ । ದಧ್ಮಃ । ಯಜಾಮಸಿ ॥ ೩ ॥**

॥ ಸಾಯಣಭಾಷ್ಯಂ ॥

**ಪಿತೃಭೃತೋ ನಾನ್ನಸ್ಯ ಭರ್ತಾರ ಇವ ಸುದಾನವಃ ಶೋಭನದಾನಾ ವಯಂ ತಂತುಮಿತ್ತಂತುಂ ವಿಸ್ತೀರ್ಣಮೇವ ಪ್ರತಿ ದಧ್ಮಃ । ಉಷಸಂ ಪ್ರತ್ಯುಪಾಯನರೂಪೇಣ ಧಾರಯಾಮಃ । ತೇನ ಚ ಯಜ್ಞೇನ ತಾಮುಷಸಂ ಯಜಾಮಸಿ ॥**

॥ ಪ್ರತಿಪದಾರ್ಥ ॥

(ಎಲೈ ಉಷೋದೇವತೆಯೇ) **ಪಿತುಭೃತಃ ನ**— ನಿನಗೆ ಅರ್ಪಿಸುವುದಕ್ಕಾಗಿ ಹವಿರ್ಲಕ್ಷಣರೂಪವಾದ ಅನ್ನ ವನ್ನು ಹಿಡಿದು ನಿಂತಿರುವಂತೆ ಇರುವ | **ಸುದಾನವಃ**- ಶೋಭನದಾನೋಪೇತರಾದ ನಾವು | **ತಂತುಮಿತ್**— ವಿಸ್ತಾರವಾಗಿಯೇ (ಬಹಳವಾಗಿಯೇ) | **ಪ್ರತಿ ದಧ್ಮಃ**— ಅರ್ಪಿಸುವುದಕ್ಕಾಗಿ ಹವಿರಾದಿಗಳನ್ನು ಹಿಡಿದು ನಿಂತಿದ್ದೇವೆ ಆ ಹವಿರಾದಿಗಳಿಂದ | **ಯಜಾಮಸಿ**— ಉಷೋದೇವತೆಯನ್ನು ಯಜ್ಞಮುಖೇನ ಆರಾಧಿಸುತ್ತೇವೆ.

॥ ಭಾವಾರ್ಥ ॥

ಎಲೈ ಉಷೋದೇವತೆಯೇ, ನಿನಗೆ ಅರ್ಪಿಸುವುದಕ್ಕಾಗಿಯೇ ಹವೀರೂಪದ ಅನ್ನವನ್ನು ಹಿಡಿದು ನಿಂತಿರುವ ನಾವು ಶೋಭನದಾನಯುಕ್ತರಾಗಿ ಬಹಳವಾದ ಹವಿರಾದಿಗಳನ್ನು ಅರ್ಪಿಸುವುದಕ್ಕಾಗಿ ಹಸ್ತಗಳಲ್ಲಿ ಧರಿಸಿದ್ದೇವೆ. ಮತ್ತು ಅವುಗಳಿಂದ ಉಷೋದೇವತೆಯನ್ನು ಯಜ್ಞಮುಖೇನ ಆರಾಧಿಸುತ್ತೇವೆ.

## English Translation.

Like beares of food, liberal in our gifts, we spread the thread (of sacrifice before the dawn), and worship (her.)

॥ ಸಂಹಿತಾಪಾಠಃ ॥

ಉಷಾ ಅಪ ಸ್ವಸುಸ್ತಮಃ ಸಂ ವರ್ತಯತಿ ವರ್ತನಿಂ ಸುಜಾತತಾ ॥ ೪ ॥

॥ ಪದಪಾಠಃ ॥

ಉಷಾಃ । ಅಪ । ಸ್ವಸುಃ । ತಮಃ । ಸಂ । ವರ್ತಯತಿ । ವರ್ತನಿಂ । ಸುऽಜಾತತಾ ॥ ೪ ॥

॥ ಸಾಯಣಭಾಷ್ಯಂ ॥

ದಶಮೇಽಹನಿ ಪ್ರಾತರನುವಾಕ ಉಷಸ್ಯೇ ಕ್ರತಾವುಷೋ ಭದ್ರೇಭಿರಿತ್ಯಸ್ಯಾಃ ಸ್ಥಾನ ಉಷಾ ಅಪ ಸ್ವಸುರಿತ್ಯೇಷಾ । ಸೂತ್ರಿತಂ ಚ । ಉಷಾ ಅಪ ಸ್ವಸುಸ್ತಮ ಇತಿ ಪಚ್ಛೋ ದ್ವಿಪದಾಂ ತ್ರಿರುಷಸ್ಯೇ । ಆ. ೮-೧೨ ।ಇತಿ ॥

ಇಯಮುಷಾಃ ಸ್ವಸುರ್ಭಗಿನ್ಯಾ ರಾತ್ರ್ಯಾಃ ಸಂಬಂಧಿ ತಮೋಽಂಧಕಾರಮಪ ಸಂ ವರ್ತಯತಿ । ಆತ್ಮೀಯೇನ ತೇಜಸಾಪಗಮಯತಿ । ಸುಜಾತತಾ ಸುಜಾತತ್ವಮಾತ್ಮನಃ ಸುಪ್ರಜಾತತ್ವಂ ಚ ವರ್ತನಿಂ ರಥಂ ಪ್ರಾಪಯತಿ ॥

॥ ಪ್ರತಿಪದಾರ್ಥ ॥

**ಉಷಾಃ**—ಈ ಉಷೋದೇವತೆಯು । **ಸ್ವಸುಃ**—ತನ್ನ ಸಹೋದರಿಯಾದ ರಾತ್ರಿಕಾಲದ । **ತಮಃ**—ಕತ್ತಲೆಯನ್ನು । **ಅಪ ಸಂ ವರ್ತಯತಿ**—ತನ್ನ ತೇಜಸ್ಸಿನಿಂದ ಓಡಿಸುತ್ತಾಳೆ । **ಸುಜಾತತಾ**—ತನ್ನ ಉತ್ತಮ ಜನ್ಮವು (ಅವಿರ್ಭಾವವು) ತನಗೆ । **ವರ್ತನಿಂ**—ತನ್ನ ರಥವನ್ನು ಒದಗಿಸಿಕೊಡುತ್ತದೆ.

॥ ಭಾವಾರ್ಥ ॥

ಈ ಉಷೋದೇವತೆಯು ತನ್ನ ಸಹೋದರಿಯಂತಿರುವ ರಾತ್ರಿಕಾಲದ ಕತ್ತಲನ್ನು ತನ್ನ ತೇಜಸ್ಸಿನಿಂದ ಚದುರಿಸಿ ಓಡಿಸುತ್ತಾಳೆ. ತನ್ನ ಉತ್ತಮವಾದ ಆವಿರ್ಭಾವವು ತನಗೆ ರಥವನ್ನು ಸಜ್ಜುಗಳಿಸಿ ಕೊಡುತ್ತದೆ.

## English Translation

Ushas drives away the darkness of her sister (night); her generative benevolence (harnesses) her chariot.

# ನೂರ ಎಪ್ಪತ್ತಮೂರನೆಯ ಸೂಕ್ತ

## ಪೀಠಿಕೆ.

ಈ ಸೂಕ್ತದಲ್ಲಿಯೂ ಮುಂದಿನ ಸೂಕ್ತದಲ್ಲಿಯೂ ರಾಜನನ್ನು ರಾಜ್ಯದಲ್ಲಿ ಅಭಿಷಿಕ್ತನನ್ನಾಗಿ ಮಾಡಿ ಅವನು ಯುದ್ಧಕ್ಕಾಗಿ ಹೊರಡುವ ಸಮಯದಲ್ಲಿ ಪುರೋಹಿತನು ರಾಜನಿಗೆ ಹಿತೋಪದೇಶವನ್ನು ಮಾಡಿ ಆಶೀರ್ವಾದ ಮಾಡಿ ಕಳುಹಿಸುವುದನ್ನು ಹೇಳಿದೆ ಋಗ್ವಿಧಾನದಲ್ಲಿ ಈ ವಿಷಯವಾಗಿ ಈ ರೀತಿ ಹೇಳಿದೆ—

ರಾಜಾನಮಭಿಷಿಚ್ಯೇತ ತಿಷ್ಯೇಣ ಶ್ರವಣೇನ ವಾ ।
ಪೌಷ್ಣಾ ಸಾವಿತ್ರಸೌಮ್ಯಾಶ್ವಿರೋಹಿಣೀಷೂತ್ತರಾಸು ಚ ॥ ೧೦೭ ॥

ಹುತ್ವಾಗ್ನಿಂ ರಾಜಲಿಂಗಾಭಿಃ ಸಾವಿತ್ರ್ಯಾ ಪ್ರಯತಃ ಶುಚಿಃ ।
ಮಹಾವ್ಯಾಹೃತಿಭಿಶ್ಚೈವ ಸಂಪಾತಾಭಿಹುತೋ ಭವೇತ್ ॥ ೧೦೮ ॥

ಸರ್ವೌಷಧಿರಸೈಃ ಶ್ಲಕ್ಷ್ಣೈರ್ನದೀನಾಂ ಸಲಿಲೇನ ಚ ।
ವ್ಯಾಘ್ರಚರ್ಮಣ್ಯಥಾಸೀನಮಾಸಂಧ್ಯಾಮಭಿಷಿಚ್ಯ ತಂ ॥ ೧೦೯ ॥

ತಿಷ್ಠನ್ಪ್ರತ್ಯಙ್ಮುಖೋ ಬ್ರೂಯಾಜ್ಜಯ ತ್ವಂ ಪೃಥಿವೀಮಿಮಾಂ ।
ಧರ್ಮಸ್ತೇ ನಿಖಿಲೋ ರಾಜನ್ ವರ್ಧತಾಂ ಪಾಲಯ ಪ್ರಜಾಃ ॥ ೧೧೦ ॥

ವರ್ಧಸ್ವ ತ್ವಂ ಶ್ರಿಯೈ ಪುಷ್ಟ್ಯೈ ಜಯಾಯಾಭ್ಯುದಯಾಯ ಚ ।
ರಾಜಾನಃ ಸಂತು ತೇ ಗೋತ್ರೇ ತತೋಽಪ್ರತಿರಥಂ ಜಪೇತ್ ॥ ೧೧೧ ॥

ವೈಯಾಘ್ರಂ ತು ಭವೇಚ್ಚರ್ಮ ಸಮಿದೌದುಂಬರೀ ಭವೇತ್ ।
ತ್ರಿರೇನಮಭಿಷಿಚ್ಯೈವಂ ದುಂದುಭೀನಭಿಮಂತ್ರಯೇತ್ ॥ ೧೧೨ ॥

ಪ್ರಾಚ್ಯಾಂ ತ್ವಾ ದಿಶಿ ವಸವೋ ಅಭಿಷಿಂಚಂತು ತೇಜಸೇ ।
ದಕ್ಷಿಣಸ್ಯಾಂ ತ್ವಾ ದಿಶಿ ರುದ್ರಾ ಅಭಿಷಿಂಚಂತು ವೃದ್ಧಯೇ ॥ ೧೧೩ ॥

ಪ್ರತೀಚ್ಯಾಂ ತ್ವಾ ದಿಶ್ಯಾದಿತ್ಯಾ ಅಭಿಷಿಂಚಂತು ಪುಷ್ಟಯೇ ।
ವಿಶ್ವೇದೇವಾ ಉದೀಚ್ಯಾಂ ತು ಅಭಿಷಿಂಚಂತು ಶ್ರೇಯಸೇ ॥ ೧೧೪ ॥

ಅಭಿಷಿಚ್ಯ ಚ ರಾಜಾನಮಾಶೀರ್ಭಿರಭಿನಂದ್ಯ ಚ ।
ಆ ತ್ವಾಹಾರ್ಷಮಂತರೇಧೀತ್ಯೇನಮಭಿಮಂತ್ರಯೇತ್ ॥ ೧೧೫ ॥

(ಋಗ್ವಿಧಾನ ಅಧ್ಯಾಯ ೪. ಶ್ಲೋ ೧೦೭–೧೧೫)

ತಿಷ್ಯ, ಶ್ರವಣ ಮೊದಲಾದ ಕೆಲವು ಪ್ರಶಸ್ತನಕ್ಷತ್ರಯುಕ್ತವಾದ ಶುಭದಿನದಲ್ಲಿ ರಾಜನಿಗೆ ರಾಜ್ಯಾಭಿಷೇಕವನ್ನು ಮಾಡಬೇಕು. ಅಭಿಷಿಕ್ತವಾಗುವ ರಾಜನು ಶುಚಿರ್ಭೂತನಾಗಿ ನಿಯಮದಿಂದ ರಾಜಚಿಹ್ನೆಗಳಿಂದ ಕೂಡಿದವನಾಗಿ ಅಗ್ನಿಯಲ್ಲಿ ವಿಧ್ಯುಕ್ತವಾಗಿ ಆಜ್ಯದಿಂದ ಹೋಮಮಾಡಬೇಕು. ಬಳಿಕ ಪುರೋಹಿತನು ವ್ಯಾಘ್ರಚರ್ಮದಿಂದ

ನಿರ್ಮಿತವಾದ ಆಸನದಲ್ಲಿ ರಾಜನನ್ನು ಕೂಡಿಸಿ ಸಮಸ್ತ ಔಷಧಿರಸಗಳಿಂದಲೂ ಉತ್ತಮವಾದ ನದಿಗಳ ಉದಕ ದಿಂದಲೂ ಅಭಿಷೇಕಮಾಡಬೇಕು ಅನಂತರ ಆ ರಾಜನ ಎದುರಿಗೆ ನಿಂತು ಈ ರೀತಿ ಹೇಳಬೇಕು— ಎಲೈ ರಾಜನೇ, ಈ ಸಮಸ್ತ ಪೃಥಿವಿಯನ್ನೂ ಜಯಿಸು. ನಿನ್ನ ದೇಶದಲ್ಲಿ ಧರ್ಮವು ವೃದ್ಧಿಯಾಗಲಿ. ಪ್ರಜೆಗಳನ್ನು ಧರ್ಮದಿಂದ ಪಾಲಿಸು. ನಿನ್ನ ವಂಶವು ಅಭಿವೃದ್ಧಿಯಾಗಲಿ ಎಂದು ಹೇಳಿ **ಆಶುಃ ಶಿಶಾನಃ** ಎಂಬ ಅಪ್ರತಿರಥ ಸೂಕ್ತವನ್ನು (೧೦-೧೦೩) ಜಪಿಸಬೇಕು. ರಾಜನು ಕುಳಿತುಕೊಳ್ಳುವುದಕ್ಕೆ ವ್ಯಾಘ್ರಚರ್ಮದ ಆಸನವೂ ಹೋಮದ ಸಮಿತ್ತುಗಳಿಗೆ ಔದುಂಬರೀಸಮಿತ್ತೂ ಶ್ರೇಷ್ಠವು. ಮೂರಾವರ್ತಿ ರಾಜನನ್ನು ಅಭಿಷೇಕ ಮಾಡಿದ ನಂತರ ನಗಾರಿ ಯನ್ನು ಅಭಿಮಂತ್ರಿಸಬೇಕು ಬಳಿಕ—ಎಲೈ ರಾಜನೇ, ಪೂರ್ವದಿಕ್ಕಿನಲ್ಲಿರುವ ಅಷ್ಟವಸುಗಳು ನಿನ್ನ ತೇಜೋಭಿ ವೃದ್ಧಿಗಾಗಿ ನಿನಗೆ ಅಭಿಷೇಕಮಾಡಲಿ ಹಾಗೆಯೇ ದಕ್ಷಿಣದಿಕ್ಕಿನಲ್ಲಿರುವ ಏಕಾದಶರುದ್ರರು ನಿನ್ನ ಪುರೋಭಿವೃದ್ಧಿ ಗಾಗಿ ಅಭಿಷೇಕಮಾಡಲಿ. ಪಶ್ಚಿಮದಿಕ್ಕಿನಲ್ಲಿರುವ ದ್ವಾದಶಾದಿತ್ಯರು ನಿನ್ನ ಪುಷ್ಟಿಗಾಗಿ ಅಭಿಷೇಕಮಾಡಲಿ, ಉತ್ತರ ದಿಕ್ಕಿನಲ್ಲಿ ವಿಶ್ವೇದೇವತೆಗಳು ನಿನ್ನ ಶ್ರೇಯೋಽಭಿವೃದ್ಧಿಗಾಗಿ ಅಭಿಷೇಕ ಮಾಡಲಿ ಎಂದು ಮಂತ್ರಗಳನ್ನು ಪಠಿಸಿ ಅಭಿಷೇಕಮಾಡಬೇಕು. ಅನಂತರ ರಾಜನಿಗೆ ಆಶೀರ್ವಾದ ಮಾಡಿ ಅಭಿನಂದನೆ ಮಾಡಬೇಕು ಬಳಿಕ ಯುದ್ಧಾರ್ಥ ವಾಗಿ ಹೊರಟು ನಿಂತಿರುವ ಆ ರಾಜನನ್ನು **ಆ ತ್ವಾಹಾರ್ಷಮಂತರೇಧಿ** ಎಂಬ ಪ್ರಕೃತಸೂಕ್ತದಿಂದ ಅಭಿಮಂತ್ರಿಸ ಬೇಕು ಎಂದು ಹೇಳಿದೆ.

॥ ಸಾಯಣಭಾಷ್ಯಂ ॥

**ಆ ತ್ವೇತಿ ಷಡೃಚಂ ದ್ವಾವಿಂಶಂ ಸೂಕ್ತಮಾಂಗಿರಸಸ್ಯ ಧ್ರುವಸ್ಯಾರ್ಷಮಾನುಷ್ಟುಭಂ । ಅಭಿ- ಷಿಕ್ತಸ್ಯ ರಾಜ್ಞಃ ಸ್ತುತಿರೂಪೋಽರ್ಥೋ ದೇವತಾ । ತಥಾ ಚಾನುಕ್ರಾಂತಂ । ಆ ತ್ವಾ ಷಟ್ ಧ್ರುವೋ ರಾಜ್ಞಃ ಸ್ತುತಿಸ್ತ್ವಾನುಷ್ಟುಭಂ ತ್ವಿತಿ ॥ ರಾಜ್ಞೋ ಯುದ್ಧಾಯ ಸಂನಹನೇಽನೇನ ಸೂಕ್ತೇನಾಭಿ- ಮಂತ್ರಣಂ ಪುರೋಧಸಾ ಕರ್ತವ್ಯಂ । ಸೂತ್ರಿತಂ ಚ । ಆ ತ್ವಾಹಾರ್ಷಮಂತರೇಧೀತಿ ಪಶ್ಚಾದ್ರಥಸ್ಯಾವ- ಸ್ಥಾಯ । ಆ. ಗೃ. ೩-೧೨-೨ । ಇತಿ ॥**

ಅನುವಾದವು—**ಆ ತ್ವಾ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಇಪ್ಪತ್ತೆರಡನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸ ಪುತ್ರನಾದ ಧ್ರುವನೆಂಬುವನು ಋಷಿಯು , ಅನುಷ್ಟುಪ್ ಛಂದಸ್ಸು. ಈ ಸೂಕ್ತದಲ್ಲಿ ರಾಜ್ಯಾಭಿಷಿಕ್ತನಾದ ರಾಜನನ್ನು ಸ್ತುತಿಸಿರುವುದರಿಂದ ಆ ಸ್ತುತಿರೂಪವಾದ ಅರ್ಥವೇ ಈ ಸೂಕ್ತಕ್ಕೆ ದೇವತೆಯು ; ಅನುಕ್ರಮಣಿಕೆಯಲ್ಲಿ—**ಆ ತ್ವಾ ಷಟ್ ಧ್ರುವೋ ರಾಜ್ಞಃ ಸ್ತುತಿಸ್ತ್ವಾನುಷ್ಟುಭಂ ತು** ಎಂದು ಹೇಳಿರುವುದು. ರಾಜನು ಯುದ್ಧಾರ್ಥವಾಗಿ ಹೊರಡುವಾಗ ಅವನ ಪುರೋಹಿತನು ಈ ಸೂಕ್ತದಿಂದ ರಾಜನನ್ನು ಅಭಿಮಂತ್ರಿಸಿ ಆಶೀರ್ವದಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ – **ಆ ತ್ವಾಹಾರ್ಷಮಂತರೇಧೀತಿ ಪಶ್ಚಾದ್ರಥ- ಸ್ಯಾವಸ್ಥಾಯ** ಎಂಬ ಸೂತ್ರದಿಂದ (ಆ. ಗೃ. ೩-೧೨-೨) ವಿವೃತವಾಗಿರುವುದು

## ಸೂಕ್ತ - ೧೭೩

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೭೩ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೩೧ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೬ ॥
॥ ಋಷಿಃ—ಧ್ರುವಃ ॥
॥ ದೇವತಾ—ರಾಜ್ಞಃ ಸ್ತುತಿಃ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಆ ತ್ವಾಹಾರ್ಷಮಂತರೇಧಿ ಧ್ರುವಸ್ತಿಷ್ಠಾವಿಚಾಚಲಿಃ ।
ವಿಶಸ್ತ್ವಾ ಸರ್ವಾ ವಾಂಛಂತು ಮಾ ತ್ವದ್ರಾಷ್ಟ್ರಮಧಿ ಭ್ರಶತ್ ॥ ೧ ॥

॥ ಪದಪಾಠಃ ॥

ಆ । ತ್ವಾ । ಅಹಾರ್ಷಂ । ಅಂತಃ । ಏಧಿ । ಧ್ರುವಃ । ತಿಷ್ಠ । ಅವಿsಚಾಚಲಿಃ ।
ವಿಶಃ । ತ್ವಾ । ಸರ್ವಾಃ । ವಾಂಛಂತು । ಮಾ । ತ್ವತ್ । ರಾಷ್ಟ್ರಂ । ಅಧಿ । ಭ್ರಶತ್ ॥ ೧ ॥

॥ ಸಾಯಣಭಾಷ್ಯಂ ॥

ಹೇ ರಾಜನ್ ತ್ವಾ ತ್ವಾಮಾಹಾರ್ಷಂ। ಅಸ್ಮದ್ರಾಷ್ಟ್ರಸ್ಯ ಸ್ವಾಮಿತ್ವೇನಾನ್ವೈಷಂ। ಸ ತ್ವಮಂತರಸ್ಮಾಸು ಮಧ್ಯ ಏಧಿ। ಸ್ವಾಮೀ ಭವ। ಧ್ರುವೋ ನಿತ್ಯಃ ಸನ್ನವಿಚಾಚಲಿರತಿಶಯೇನ ಚಲನರಹಿತ ಏವ ಸಂಸ್ತಿಷ್ಠ। ರಾಷ್ಟ್ರಮಧಿತಿಷ್ಠ। ಸರ್ವಾಶ್ಚ ವಿಶಃ ಪ್ರಜಾಸ್ತ್ವಾಂ ವಾಂಛಂತು। ಅಯಮೇವಾಸ್ಮಾಕಂ ರಾಜಾಸ್ತ್ವಿತಿ ಕಾಮಯಂತು॥ ವಾಛಿ ಇಚ್ಛಾಯಾಂ॥ ತ್ವತ್ ತ್ವತ್ತಃ ಸಕಾಶಾದ್ರಾಷ್ಟ್ರಂ ರಾಜ್ಯಂ ಮಾಧಿ ಭ್ರಶತ್। ಮಾ ಭ್ರಶ್ಯತು। ಮಾ ವಿಯುಕ್ತಂ ಭವತು॥ ಭ್ರಂಶು ಅಧಃಪತನೇ॥

॥ ಪ್ರತಿಪದಾರ್ಥ ॥

(ಎಲೈ ರಾಜನೇ) **ತ್ವಾ**—ನಿನ್ನನ್ನು। **ಆ ಅಹಾರ್ಷಂ**—ಈ ರಾಷ್ಟ್ರಕ್ಕೆ ಅಧಿಪತಿಯನ್ನಾಗಿ ಮಾಡಿ ಕರೆ ತಂದಿದ್ದೇನೆ. ಅಂತಹ ನೀನು। **ಅಂತಃ**—ನಮ್ಮ ಮಧ್ಯದಲ್ಲಿ। **ಏಧಿ**—ನಮ್ಮಗಳಿಗೆ ಸ್ವಾಮಿಯಾಗಿರು। **ಧ್ರುವಃ**—ಸ್ಥಿರಚಿತ್ತನಾಗಿಯೂ। **ಅವಿಚಾಚಲಿಃ**—ಚಲನರಹಿತನಾಗಿಯೂ (ಎಂದರೆ ಯಾರಿಂದಲೂ ಬಾಧಿಸಲ್ಪಡದೆ)। **ತಿಷ್ಠ**—ರಾಷ್ಟ್ರದಲ್ಲಿ ಸ್ಥಿರವಾಗಿರು। **ಸರ್ವಾಃ ವಿಶಃ**—ಸಮಸ್ತ ಪ್ರಜೆಗಳೂ। **ತ್ವಾ**—ನಿನ್ನನ್ನು। **ವಾಂಛಂತು**—(ನೀನೇ ನಮಗೆ ರಾಜನಾಗಿರಬೇಕೆಂದು) ಅಪೇಕ್ಷಿಸಲಿ। **ತ್ವತ್**—ನಿನ್ನಿಂದ। **ರಾಷ್ಟ್ರಂ**—ರಾಜ್ಯವು। **ಮಾ ಅಧಿ ಭ್ರಶತ್**—ಕೈಬಿಟ್ಟು ಹೋಗದಿರಲಿ.

॥ ಭಾವಾರ್ಥ ॥

ಎಲೈ ರಾಜನೇ, ನಿನ್ನನ್ನು ಈ ರಾಷ್ಟ್ರಕ್ಕೆ ಅಧಿಪತಿಯಾಗಿ ಅಭಿಷಿಕ್ತನನ್ನಾಗಿ ಮಾಡಿ ಕರೆತಂದಿದ್ದೇನೆ. ನಮ್ಮ ಮಧ್ಯದಲ್ಲಿ ನಮಗೆ ಸ್ವಾಮಿಯಾಗಿರು. ಸ್ಥಿರಚಿತ್ತನಾಗಿಯೂ ಶತ್ರುಗಳಿಂದ ಅಹಿಂಸಿತನಾಗಿಯೂ ಸ್ಥಾನಭ್ರಷ್ಟನಾಗದೆ ಈ ರಾಷ್ಟ್ರದಲ್ಲಿಯೇ ಸ್ಥಿರವಾಗಿದ್ದು ನಮ್ಮನ್ನು ಸಲಹು. ಸಮಸ್ತ ಪ್ರಜೆಗಳೂ ನೀನೇ ನಮಗೆ ರಾಜನಾಗಿರಬೇಕೆಂದು ನಿನ್ನನ್ನೇ ಅಪೇಕ್ಷಿಸಲಿ. ನಿನ್ನಿಂದ ಈ ರಾಜ್ಯವು ಕೈಬಿಟ್ಟು ಹೋಗದಿರಲಿ.

## English Translation

I have consecrated you, (Raja); come amongst us, be steady and unvacillating; may all your subjects desire you (for their king), may the kingdom never fall from you.

॥ ವಿಶೇಷವಿಷಯಗಳು ॥

ಈ ಸೂಕ್ತವು ರಾಜನ ಪುರೋಹಿತನಿಂದ ಆಶೀರ್ವಾದರೂಪವಾಗಿ ಉಚ್ಚರಿಸಲ್ಪಟ್ಟಿದೆ. ಮತ್ತು ರಾಜನಿಗೆ ಹಿತೋಪದೇಶವನ್ನು ಮಾಡಲಾಗಿದೆ. ರಾಜನನ್ನು ರಾಜ್ಯದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡುವ ಕರ್ಮಾದಿಗಳೂ ಮಂತ್ರಗಳೂ ಐತರೇಯಬ್ರಾಹ್ಮಣದ ೩೭ ನೆಯ ಅಧ್ಯಾಯದಲ್ಲಿ ಉಕ್ತವಾಗಿವೆ.

॥ ಸಂಹಿತಾಪಾಠಃ ॥

ಇಹೈವೈಧಿ ಮಾಪ ಚ್ಯೋಷ್ಠಾಃ ಪರ್ವತ ಇವಾವಿಚಾಚಲಿಃ ।
ಇಂದ್ರ ಇವೇಹ ಧ್ರುವಸ್ತಿಷ್ಠೇಹ ರಾಷ್ಟ್ರಮು ಧಾರಯ ॥ ೨ ॥

॥ ಪದಪಾಠಃ ॥

ಇಹ । ಏವ । ಏಧಿ । ಮಾ । ಅಪ । ಚ್ಯೋಷ್ಠಾಃ । ಪರ್ವತಃಽಇವ । ಅವಿಽಚಾಚಲಿಃ ।
ಇಂದ್ರಃಽಇವ । ಇಹ । ಧ್ರುವಃ । ತಿಷ್ಠ । ಇಹ । ರಾಷ್ಟ್ರಂ । ಊಂ ಇತಿ । ಧಾರಯ ॥ ೨ ॥

॥ ಸಾಯಣಭಾಷ್ಯಂ ॥

ಹೇ ರಾಜನ್ ಇಹಾಸ್ಮಿನ್ನೇವ ರಾಜ್ಯ ಏಧಿ । ಸ್ವಾಮಿತ್ವೇನ ಸರ್ವದಾ ವರ್ತಮಾನೋ ಭವ । ಮಾಪ ಚ್ಯೋಷ್ಠಾಃ । ಅಪಚ್ಯುತೋ ಮಾ ಭೂಃ । ಮಾಪಗಮಃ । ಪರ್ವತ ಇವ ಯಥಾ ಪರ್ವತೋ ನೈಶ್ಚಲ್ಯೇನಾವತಿಷ್ಠತೇ ಏವಮವಿಚಾಚಲಿಶ್ಚಲನರಹಿತೋ ಭವ । ಇಂದ್ರ ಇವ ಯಥಾ ಸ್ವರ್ಗ ಇಂದ್ರಃ ಏವಮಿಹ ಲೋಕೇ ತ್ವಂ ಧ್ರುವಸ್ತಿಷ್ಠ । ಸ್ಥಿರೋ ಭವ । ರಾಷ್ಟ್ರಸು ರಾಷ್ಟ್ರಂ ಚೇಹ ಲೋಕೇ ಧಾರಯ । ಸ್ವೇ ಸ್ವೇ ಕರ್ಮಣ್ಯವಸ್ಥಾಪಯ ॥

॥ ಪ್ರತಿಪದಾರ್ಥ ॥

(ಎಲೈ ರಾಜನೇ) **ಇಹ ಏವ**—ಈ ರಾಜ್ಯದಲ್ಲಿ । **ಏಧಿ**—ಯಾವಾಗಲೂ ಪ್ರಭುವಾಗಿ ಇರು । **ಮಾ ಅಪ ಚ್ಯೋಷ್ಠಾಃ**—ರಾಜ್ಯಭ್ರಷ್ಟನಾಗಬೇಡ । **ಪರ್ವತ ಇವ** – ಪರ್ವತದಂತೆ । **ಅವಿಚಾಚಲಿಃ**—ಸ್ಥಿರವಾಗಿರು । **ಇಂದ್ರ ಇವ**—ಇಂದ್ರನು ಸ್ವರ್ಗಲೋಕದಲ್ಲಿರುವಂತೆ (ನೀನು) । **ಇಹ**—ಈ ಲೋಕದಲ್ಲಿ । **ಧ್ರುವಃ ತಿಷ್ಠ**—ಸ್ಥಿರವಾಗಿರು । **ಇಹ**—ಈ ಲೋಕದಲ್ಲಿ । **ರಾಷ್ಟ್ರಂ ಉ**— ರಾಜ್ಯಭಾರವನ್ನು । **ಧಾರಯ**— ನಿರ್ವಹಿಸು.

॥ ಭಾವಾರ್ಥ ॥

ಎಲೈ ರಾಜನೇ, ಈ ರಾಜ್ಯದಲ್ಲಿ ಯಾವಾಗಲೂ ನೀನು ಸ್ವಾಮಿಯಾಗಿರು, ರಾಜ್ಯಭ್ರಷ್ಟನಾಗಬೇಡ. ಪರ್ವತದಂತೆ ಸ್ಥಿರವಾಗಿರು. ಇಂದ್ರನು ಸ್ವರ್ಗಲೋಕದಲ್ಲಿ ರಾಜ್ಯಭಾರಮಾಡುವಂತೆ ನೀನು ಈ ಲೋಕದಲ್ಲಿ ರಾಜ್ಯಭಾರವನ್ನು ನಿರ್ವಹಿಸು.

## English Translation.

Come into this (kingdom), may you never be deposed, unvacillating as a mountain ; stand firm here like Indra ; establish your kingdom in this world.

॥ ಸಂಹಿತಾಪಾಠಃ ॥

ಇಮಮಿಂದ್ರೋ ಅದೀಧರದ್ಧ್ರುವಂ ಧ್ರುವೇಣ ಹವಿಷಾ ।
ತಸ್ಮೈ ಸೋಮೋ ಅಧಿ ಬ್ರವತ್ತಸ್ಮಾ ಉ ಬ್ರಹ್ಮಣಸ್ಪತಿಃ ॥ ೩ ॥

॥ ಪದಪಾಠಃ ॥

ಇಮಂ । ಇಂದ್ರಃ । ಅದೀಧರತ್ । ಧ್ರುವಂ । ಧ್ರುವೇಣ । ಹವಿಷಾ ।
ತಸ್ಮೈ । ಸೋಮಃ । ಅಧಿ । ಬ್ರವತ್ । ತಸ್ಮೈ । ಊಂ ಇತಿ । ಬ್ರಹ್ಮಣಃ । ಪತಿಃ ॥ ೩ ॥

॥ ಸಾಯಣಭಾಷ್ಯಂ ॥

ಇಮಮಭಿಷಿಕ್ತಂ ಧ್ರುವೇಣ ಸ್ಥಿರೇಣ ಹವಿಷಾ ತರ್ಪ್ಯಮಾಣ ಇಂದ್ರೋ ಧ್ರುವಂ ಸ್ಥಿರಮದೀಧರತ್ । ಧಾರಯತು । ಸೋಮಶ್ಚ ತಸ್ಮೈ ರಾಜ್ಞೇಽಧಿ ಬ್ರವತ್ । ಅಧಿಬ್ರವೀತು । ಮದೀಯೋಽಯಮಿತಿ ಪಕ್ಷಪಾತವಚನಂ ಕರೋತು । ತಸ್ಮಾ ಉ ತಸ್ಮಾ ಏವ ಬ್ರಹ್ಮಣಸ್ಪತಿರ್ಮಂತ್ರಸ್ಯ ಪಾಲಕೋ ದೇವಶ್ಚಾಧಿ ಬ್ರವೀತು ॥

॥ ಪ್ರತಿಪದಾರ್ಥ ॥

ಧ್ರುವೇಣ—ಸ್ಥಿರವಾದ । ಹವಿಷಾ—ಹವಿಸ್ಸಿನಿಂದ ತೃಪ್ತನಾದ । ಇಂದ್ರಃ—ಇಂದ್ರನು । ಇಮಂ—ಅಭಿಷಿಕ್ತನಾದ ಈ ರಾಜನನ್ನು । ಧ್ರುವಂ—ರಾಜ್ಯದಲ್ಲಿ ಸ್ಥಿರವಾಗಿರುವಂತೆ । ಅದೀಧರತ್—ಸ್ಥಾಪಿಸಲಿ । ಸೋಮಃ—ಸೋಮದೇವನು । ತಸ್ಮೈ—ಈ ರಾಜನಿಗೆ । ಅಧಿ ಬ್ರವತ್—ಹಿತವಚನಗಳನ್ನು ಹೇಳಲಿ । ತಸ್ಮೈ ಉ—ಈ ರಾಜನಿಗೇ । ಬ್ರಹ್ಮಣಸ್ಪತಿಃ—ಮಂತ್ರಪಾಲಕನಾದ ಬ್ರಹ್ಮಣಸ್ಪತಿಯೂ ಹಿತಕರವಾದ ವಾಕ್ಯಗಳನ್ನಾಡಲಿ.

॥ ಭಾವಾರ್ಥ ॥

ಸ್ಥಿರವಾದ ಹವಿಸ್ಸಿನಿಂದ ತೃಪ್ತನಾದ ಇಂದ್ರನು ಅಭಿಷಿಕ್ತನಾದ ಈ ರಾಜನನ್ನು ರಾಜ್ಯದಲ್ಲಿ ಸ್ಥಿರವಾಗಿರುವಂತೆ ಸ್ಥಾಪಿಸಲಿ ಸೋಮನೂ, ಮಂತ್ರಪಾಲಕನಾದ ಬ್ರಹ್ಮಣಸ್ಪತಿಯೂ ಈ ರಾಜನಿಗೆ ಹಿತಕರವಚನಗಳನ್ನು ಹೇಳಿ ಸಂತೈಸಲಿ

English Translation

May Indra, gratified by the perpetual oblation, firmly establish this (prince); may Soma, may Brahmanaspati address him (as their votary).

॥ ಸಂಹಿತಾಪಾಠಃ ॥

ಧ್ರುವಾ ದ್ಯೌರ್ಧ್ರುವಾ ಪೃಥಿವೀ ಧ್ರುವಾಸಃ ಪರ್ವತಾ ಇಮೇ ।
ಧ್ರುವಂ ವಿಶ್ವಮಿದಂ ಜಗದ್ಧ್ರುವೋ ರಾಜಾ ವಿಶಾಮಯಂ ॥ ೪ ॥

॥ ಪದಪಾಠಃ ॥

ಧ್ರುವಾ । ದ್ಯೌಃ । ಧ್ರುವಾ । ಪೃಥಿವೀ । ಧ್ರುವಾಸಃ । ಪರ್ವತಾಃ । ಇಮೇ ।
ಧ್ರುವಂ । ವಿಶ್ವಂ । ಇದಂ । ಜಗತ್ । ಧ್ರುವಃ । ರಾಜಾ । ವಿಶಾಂ । ಅಯಂ ॥ ೪ ॥

॥ ಸಾಯಣಭಾಷ್ಯಂ ॥

ದ್ಯೌರ್ಧ್ರುವಾ ಸ್ಥಿರಾ ಭವತಿ । ಪೃಥಿವೀ ಚ ಧ್ರುವಾ ಸ್ಥಿರಾ ಭವತಿ । ಇಮೇ ದೃಶ್ಯಮಾನಾಃ ಪರ್ವತಾ ಮಹೀಧರಾಶ್ಚ ಧ್ರುವಾಸಃ ಸ್ಥಿರಾಃ । ಇದಂ ವಿಶ್ವಂ ಸರ್ವಂ ಜಗದ್ಧ್ರುವಂ ಸ್ಥಿರಂ ಭವತಿ । ಏವಮೇವಾಯಂ ವಿಶಾಂ ಪ್ರಜಾನಾಂ ರಾಜಾ ಸ್ವಾಮೀ ಸನ್ ಧ್ರುವಃ ಸ್ಥಿರೋ ಭವತು ॥

॥ ಪ್ರತಿಪದಾರ್ಥ ॥

ದ್ಯೌಃ—ದ್ಯುಲೋಕವು । ಧ್ರುವಾ—ಸ್ಥಿರವಾಗಿರುವುದು । ಪೃಥಿವೀ—ಈ ಭೂಮಿಯು । ಧ್ರುವಾ—ಸ್ಥಿರವಾಗಿಯೇ ಇರುವುದು । ಇಮೇ ಪರ್ವತಾಃ—ನಮ್ಮೆದುರಿಗಿರುವ ಈ ಪರ್ವತಗಳೂ । ಧ್ರುವಾಸಃ—ಸ್ಥಿರವಾಗಿರುವವು । ವಿಶ್ವಂ—ಸಮಸ್ತವಾದ । ಇದಂ ಜಗತ್—ಈ ಜಗತ್ತು । ಧ್ರುವಂ—ಸ್ಥಿರವಾಗಿರುವುದು (ಈ ಪ್ರಕಾರವಾಗಿಯೇ) । ಅಯಂ—ಈ ರಾಜನು । ವಿಶಾಂ—ಪ್ರಜೆಗಳಿಗೆ । ರಾಜಾ—ಸ್ವಾಮಿಯಾಗಿ । ಧ್ರುವಃ—ಸ್ಥಿರವಾಗಿರಲಿ.

॥ ಭಾವಾರ್ಥ ॥

ಈ ದ್ಯುಲೋಕ, ಪೃಥಿವಿ, ಈ ಪರ್ವತಗಳು, ಈ ಸಕಲ ಜಗತ್ತೂ ಸ್ಥಿರವಾಗಿರುವವು. ಅದರಂತೆಯೇ ಪ್ರಜೆಗಳ ಪಾಲಕನಾದ ಈ ರಾಜನೂ ಸ್ಥಿರವಾಗಿರಲಿ.

## English Translation

Firm is the heaven, firm is the earth, firm are these mountains, firm is this entire world, so may this king of men be firm.

|| ಸಂಹಿತಾಪಾಠಃ ||

ಧ್ರುವಂ ತೇ ರಾಜಾ ವರುಣೋ ಧ್ರುವಂ ದೇವೋ ಬೃಹಸ್ಪತಿಃ ।
ಧ್ರುವಂ ತ ಇಂದ್ರಶ್ಚಾಗ್ನಿಶ್ಚ ರಾಷ್ಟ್ರಂ ಧಾರಯತಾಂ ಧ್ರುವಂ || ೫ ||

|| ಪದಪಾಠಃ ||

ಧ್ರುವಂ । ತೇ । ರಾಜಾ । ವರುಣಃ । ಧ್ರುವಂ । ದೇವಃ । ಬೃಹಸ್ಪತಿಃ ।
ಧ್ರುವಂ । ತೇ । ಇಂದ್ರಃ । ಚ । ಅಗ್ನಿಃ । ಚ । ರಾಷ್ಟ್ರಂ । ಧಾರಯತಾಂ । ಧ್ರುವಂ || ೫ ||

|| ಸಾಯಣಭಾಷ್ಯಂ ||

ಹೇ ರಾಜನ್ ತೇ ತವ ರಾಷ್ಟ್ರಂ ರಾಜಾ ರಾಜಮಾನೋ ವರುಣೋ ಧ್ರುವಂ ಸ್ಥಿರಂ ಧಾರಯತು । ದೇವೋ ದಾನಾದಿಗುಣಯುಕ್ತೋ ಬೃಹಸ್ಪತಿರ್ಧ್ರುವಂ ಧಾರಯತು । ಇಂದ್ರಶ್ಚಾಗ್ನಿಶ್ಚೋಭಾವಪಿ ತೇ ತವ ರಾಷ್ಟ್ರಂ ಧ್ರುವಂ ಸ್ಥಿರಂ ಧಾರಯತಾಂ । ಇಂದ್ರಾಗ್ನ್ಯೋರುಭಯೋರಪೇಕ್ಷಯಾ ಧ್ರುವಶಬ್ದಸ್ಯ ದ್ವಿಃ ಪ್ರಯೋಗಃ ||

|| ಪ್ರತಿಪದಾರ್ಥ ||

(ಎಲೈ ರಾಜನೇ) **ತೇ**—ನಿನ್ನ । **ರಾಷ್ಟ್ರಂ**—ರಾಜ್ಯವನ್ನು। **ರಾಜಾ**—ಪ್ರಕಾಶಮಾನನಾದ । **ವರುಣಃ**—ವರುಣನು । **ಧ್ರುವಂ**—ಸ್ಥಿರವಾಗಿರುವಂತೆ ಧರಿಸಲಿ । **ದೇವಃ**—ದಾನಾದಿಗುಣಯುಕ್ತನಾದ । **ಬೃಹಸ್ಪತಿಃ**—ಬೃಹಸ್ಪತಿಯೂ । **ಧ್ರುವಂ**—ಸ್ಥಿರವಾಗಿರುವಂತೆ ಮಾಡಲಿ । **ಇಂದ್ರಃ ಚ**—ಇಂದ್ರನೂ । **ಅಗ್ನಿಃ ಚ**—ಅಗ್ನಿಯೂ ಇಬ್ಬರೂ । **ತೇ ರಾಷ್ಟ್ರಂ**—ನಿನ್ನ ರಾಜ್ಯವನ್ನು। **ಧ್ರುವಂ**—ಸ್ಥಿರವಾಗಿರುವಂತೆ । **ಧಾರಯತಾಂ**—ಧರಿಸಲಿ.

|| ಭಾವಾರ್ಥ ||

(ಎಲೈ ರಾಜನೇ) ನಿನ್ನ ರಾಜ್ಯವನ್ನು ಪ್ರಕಾಶಮಾನನಾದ ವರುಣನೂ, ದಾನಾದಿ ಗುಣಯುಕ್ತನಾದ ಬೃಹಸ್ಪತಿಯೂ, ಇಂದ್ರಾಗ್ನಿಗಳೂ ಸ್ಥಿರವಾಗಿರುವಂತೆ ಧರಿಸಿ ಕಾಪಾಡಲಿ.

## English Translation.

May the royal Varuna, the divine Brihaspati, may Indra and Agni ever give stability to your kingddom.

॥ ಸಂಹಿತಾಪಾಠಃ ॥

ಧ್ರುವಂ ಧ್ರುವೇಣ ಹವಿಷಾಭಿ ಸೋಮಂ ಮೃಶಾಮಸಿ ।
ಅಥೋ ತ ಇಂದ್ರಃ ಕೇವಲೀರ್ವಿಶೋ ಬಲಿಹೃತಸ್ಕರತ್ ॥ ೬ ॥

॥ ಪದಪಾಠಃ ॥

ಧ್ರುವಂ । ಧ್ರುವೇಣ । ಹವಿಷಾ । ಅಭಿ । ಸೋಮಂ । ಮೃಶಾಮಸಿ ।
ಅಥೋ ಇತಿ । ತೇ । ಇಂದ್ರಃ । ಕೇವಲೀಃ । ವಿಶಃ । ಬಲಿऽಹೃತಃ । ಕರತ್ ॥ ೬ ॥

॥ ಸಾಯಣಭಾಷ್ಯಂ ॥

ಧ್ರುವೇಣ ಸ್ಥಿರೇಣ ಹವಿಷಾ ಪುರೋಡಾಶಾದಿನಾ ಯುಕ್ತಂ ಧ್ರುವಂ ಸ್ಥಿರಂ ಸೋಮಮಭಿ ಮೃಶಾಮಸಿ । ಅಭಿಮೃಶಾಮಃ । ದೇವತಾಮುಭಿಲಕ್ಷ್ಯ ಯಾಗಾರ್ಥಂ ವಯಮೃತ್ವಿಜಃ ಸಂಸ್ಪೃಶಾಮಃ । ಅಥೋ ಅಥಾನಂತರಮೇವೇಂದ್ರೋ ವಿಶಃ ಪ್ರಜಾಸ್ತೇ ತವೈವ ಕೇವಲೀರಸಾಧಾರಣಾಃ ಸತೀರ್ಬಲಿಹೃತಃ ಕರಸ್ಯ ಪ್ರದಾತ್ರೀಃ ಕರತ್ । ಕರೋತು ॥

॥ ಪ್ರತಿಪದಾರ್ಥ ॥

**ಧ್ರುವೇಣ**—ಸ್ಥಿರವಾದುದೂ । **ಹವಿಷಾ**—ಪುರೋಡಾಶಾದಿ ಹವಿಸ್ಸಿನಿಂದ ಯುಕ್ತವಾದುದೂ । **ಧ್ರುವಂ**—ಸ್ಥಿರವಾದುದೂ ಆದ । **ಸೋಮಂ**—ಸೋಮರಸವನ್ನು । **ಅಭಿ ಮೃಶಾಮಸಿ**—ಅಭಿಮರ್ಶನಮಾಡುತ್ತೇವೆ (ಸ್ಪರ್ಶ ಮಾಡುತ್ತೇವೆ) । **ಅಥೋ**—ಅನಂತರ । **ಇಂದ್ರಃ**—ಇಂದ್ರನು । **ವಿಶಃ**—ಪ್ರಜೆಗಳನ್ನು । **ತೇ ಕೇವಲೀಃ**—ನಿನ್ನಲ್ಲಿಯೇ ನಿಷ್ಠೆಯುಳ್ಳವರನ್ನಾಗಿಯೂ । **ಬಲಿಹೃತಃ**—ನಿನಗೆ ಕರಾದಿಗಳನ್ನು (ಕಂದಾಯಾದಿಗಳನ್ನು) ಕೊಡುವಂತೆಯೂ । **ಕರತ್**—ಮಾಡಲಿ.

॥ ಭಾವಾರ್ಥ ॥

ಸ್ಥಿರವಾದ ಪುರೋಡಾಶಾದಿಹವಿಸ್ಸಿನಿಂದ ಕೂಡಿದುದೂ, ಸ್ಥಿರವಾದುದೂ ಆದ ಸೋಮವನ್ನು ಯಾಗಾರ್ಥವಾಗಿ ಋತ್ವಿಜರಾದ ನಾವು ಸ್ಪರ್ಶಮಾಡುತ್ತೇವೆ. ಅನಂತರ ಪ್ರಜೆಗಳು ನಿನಗೆ ರಾಜಭಕ್ತಿಯನ್ನೂ ಕರಾದಿ ರಾಜಾದಾಯಗಳನ್ನು ಸಲ್ಲಿಸುವಂತೆ ಇಂದ್ರನು ಅನುಗ್ರಹಮಾಡಲಿ.

English Translation

With a constant oblation we handle the constant Soma; therefore may Indra render your subject people payers of (their) taxes.

# ನೂರ ಎಪ್ಪತ್ತನಾಲ್ಕನೆಯ ಸೂಕ್ತ

॥ ಸಾಯಣಭಾಷ್ಯಂ ॥

ಅಭೀವರ್ತೇನೇತಿ ಪಂಚರ್ಚಂ ತ್ರಯೋವಿಂಶಂ ಸೂಕ್ತಮಾಂಗಿರಸಸ್ಯಾಭೀವರ್ತಾಖ್ಯಸ್ಯಾರ್ಷಮಾನುಷ್ಟುಭಂ । ಪೂರ್ವವದ್ರಾಜಸ್ತುತಿರ್ದೇವತಾ । ತಥಾ ಚಾನುಕ್ರಾಂತಂ । ಅಭೀವರ್ತೇನ ಪಂಚಾಭೀವರ್ತ ಇತಿ ॥ ಪುರೋಹಿತ ಇದಂ ಸೂಕ್ತಂ ರಾಜಾನಂ ಯುದ್ಧಾಯ ಕೃತಸಂನಾಹಂ ವಾಚಯಿತಾ । ಸೂತ್ರ್ಯತೇ ಹಿ । ಅಥೈನಂ ಸಾರಯಮಾಣಮುಪಾರುಹ್ಯಾಭೀವರ್ತಂ ವಾಚಯತಿ । ಆ. ಗೃ. ೩-೧೨-೧೨ । ಇತಿ ॥

ಅನುವಾದವು—**ಅಭೀವರ್ತೇನ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಇಪ್ಪತ್ತಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸಗೋತ್ರದ ಅಭೀವರ್ತನೆಂಬುವನು ಋಷಿಯು, ಹಿಂದಿನ ಸೂಕ್ತದಂತೆ ಈ ಸೂಕ್ತಕ್ಕೆ ರಾಜನ ಸ್ತುತಿಯೇ ದೇವತೆಯು; ಅನುಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಭಿವರ್ತೇನ ಪಂಚಾಭೀವರ್ತಃ** ಎಂದು ಹೇಳಿರುವುದು ರಾಜನು ಯುದ್ಧಸನ್ನದ್ಧನಾಗಿ ಹೊರಟಾಗ ಪುರೋಹಿತನು ಈ ಸೂಕ್ತವನ್ನು ರಾಜನಿಂದ ಹೇಳಿಸಬೇಕು. ಈ ವಿಷಯವು ಆಶ್ವಲಾಯನಗೃಹ್ಯ ಸೂತ್ರದ—**ಅಥೈನಂ ಸಾರಯಮಾಣಮುಪಾರುಹ್ಯಾಭೀವರ್ತಂ ವಾಚಯತಿ** ಎಂಬ ಸೂತ್ರದಿಂದ (ಆ. ಗೃ. ೩-೧೨-೧೨) ವಿವೃತವಾಗಿರುವುದು.

## ಸೂಕ್ತ—೧೭೪

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೭೪ ॥

ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೩೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಅಭೀವರ್ತಃ ॥
॥ ದೇವತಾ—ರಾಜ್ಞಃ ಸ್ತುತಿಃ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಅಭೀವರ್ತೇನ ಹವಿಷಾ ಯೇನೇಂದ್ರೋ ಅಭಿವಾವೃತೇ ।
ತೇನಾಸ್ಮಾನ್ಬ್ರಹ್ಮಣಸ್ಪತೇಽಭಿ ರಾಷ್ಟ್ರಾಯ ವರ್ತಯ ॥ ೧ ॥

॥ ಪದಪಾಠಃ ॥

ಅಭಿऽವರ್ತೇನ । ಹವಿಷಾ । ಯೇನ । ಇಂದ್ರಃ । ಅಭಿऽವವೃತೇ ।
ತೇನ । ಅಸ್ಮಾನ್ । ಬ್ರಹ್ಮಣಃ । ಪತೇ । ಅಭಿ । ರಾಷ್ಟ್ರಾಯ । ವರ್ತಯ ।

॥ ಸಾಯಣಭಾಷ್ಯಂ ॥

ಅಭೀವರ್ತೇನ ಅಭಿಗಚ್ಛತ್ಯನೇನೇತ್ಯಭೀವರ್ತಃ ॥ ಕರಣೇ ಘಞ್ । ಥಾಥಾದಿಸ್ವರೇಣೋತ್ತರ-ಪದಾಂತೋದಾತ್ತತ್ವಂ । ಉಪಸರ್ಗಸ್ಯ ಘಞ್ಯಮನುಷ್ಯೇ ಬಹುಲಂ । ಪಾ. ೬-೩-೧೨೨ । ಇತಿ ದೀರ್ಘಃ ॥ ಈದೃಶೇನ ಯೇನ ಹವಿಷಾ ಸಾಧನೇನೇಂದ್ರೋಽಭಿವವೃತೇ ಸರ್ವಮಭಿಜಗಾಮ ತೇನ ಹವಿಷೇಷ್ಟವ-ತೋಽಸ್ಮಾನ್ ಹೇ ಬ್ರಹ್ಮಣಸ್ಪತೇ ರಾಷ್ಟ್ರಾಯ ರಾಜ್ಯಂ ಪ್ರಾಪ್ತುಮಭಿ ವರ್ತಯ । ಅಭಿಗಮಯ ॥

॥ ಪ್ರತಿಪದಾರ್ಥ ॥

**ಅಭೀವರ್ತೇನ**— ಅಭೀವರ್ತಸಂಜ್ಞಕವಾದ ಅಥವಾ ಅಭೀವರ್ತನೆಂಬ ನಾನು ಅರ್ಪಿಸುವ । **ಯೇನ ಹವಿಷಾ**— ಯಾವ ಹವಿಸ್ಸಿನಿಂದ । **ಇಂದ್ರಃ**— ಇಂದ್ರನು । **ಅಭಿವವೃತೇ**— ಸಮಸ್ತವನ್ನೂ ಜಯಿಸಿದನೋ । **ತೇನ**— ಆ ಹವಿಸ್ಸಿನಿಂದ ಹೋಮಮಾಡುವ । **ಅಸ್ಮಾನ್**— ನಮ್ಮನ್ನು । **ಬ್ರಹ್ಮಣಸ್ಪತೇ**— ಎಲೈ ಬ್ರಹ್ಮಣಸ್ಪತಿಯೇ । **ರಾಷ್ಟ್ರಾಯ**— ರಾಜ್ಯ ಪ್ರಾಪ್ತಿಗಾಗಿ । **ಅಭಿ ವರ್ತಯ**— ಪ್ರಚೋದಿಸು.

॥ ಭಾವಾರ್ಥ ॥

ಎಲೈ ಬ್ರಹ್ಮಣಸ್ಪತಿಯೇ, ಅಭೀವರ್ತಸಂಜ್ಞಕವಾದ ಯಾವ ಹವಿಸ್ಸಿನಿಂದ ಇಂದ್ರನು ಸಮಸ್ತಜಗತ್ತನ್ನೂ ಜಯಿಸಲು ಸಮರ್ಥನಾದನೋ ಅಂತಹ ಆ ಹವಿಸ್ಸಿನಿಂದ ಹೋಮಮಾಡುವ ನಮ್ಮನ್ನು ರಾಜ್ಯಪ್ರಾಪ್ತಿಗಾಗಿ ಉದ್ಯೋಗೋನ್ಮುಖರಾಗುವಂತೆ ಮಾಡು.

## English Translation.

By the abhivarta oblation, whereby Indra has conquered (everything) do you, O Brahmanaspati, bring us to sovereign rule.

॥ ಸಂಹಿತಾಪಾಠಃ ॥

ಅಭಿವೃತ್ಯ ಸಪತ್ನಾನಭಿ ಯಾ ನೋ ಅರಾತಯಃ ।
ಅಭಿ ಪೃತನ್ಯಂತಂ ತಿಷ್ಠಾಭಿ ಯೋ ನ ಇರಸ್ಯತಿ ॥ ೨ ॥

॥ ಪದಪಾಠಃ ॥

ಅಭಿಽವೃತ್ಯ । ಸ್ಽಪತ್ನಾನ್ । ಅಭಿ । ಯಾಃ । ನಃ । ಅರಾತಯಃ ।
ಅಭಿ । ಪೃತನ್ಯಂತಂ । ತಿಷ್ಠ । ಅಭಿ । ಯಃ । ನಃ । ಇರಸ್ಯತಿ ॥ ೨ ॥

॥ ಸಾಯಣಭಾಷ್ಯಂ ॥

**ಹೇ ರಾಜನ್ ಸಪತ್ನಾನ್ ಶತ್ರೂನ್ ಅಭಿವೃತ್ಯ ಅಭಿತೋ ಗಮಯಿತ್ವಾ ನಃ ಅಸ್ಮಾಕಂ ಯಾಃ ಅರಾತಯಃ ಅದಾನಶೀಲಾಃ ಪ್ರಜಾಃ ಸಂತಿ ತಾ ಅಪಿ ಅಭಿ ತಿಷ್ಠ ಅಭಿಭವ। ಪೃತನ್ಯಂತಂ ಪೃತನಾಃ ಸೇನಾ ಆತ್ಮನ ಇಚ್ಛಂತಂ ಯುಯುತ್ಸುಂ ಚ ಅಭಿ ತಿಷ್ಠ ॥ ಪೃತನಾಶಬ್ದಾತ್ ಕ್ಯಚಿ ಕವ್ಯಧ್ವರಪೃತನಸ್ಯ ಇತ್ಯಂತಲೋಪಃ ॥ ಯಃ ಚ ನಃ ಅಸ್ಮಭ್ಯಂ ಇರಸ್ಯತಿ ಈರ್ಷ್ಯತಿ। ಇರಸ್ ತಿರಸ್ ಈರ್ಷ್ಯಾಯಾಂ ಕಂಡ್ವಾದಿಃ। ತಮಪಿ ಅಭಿ ತಿಷ್ಠ। ಯದ್ವಾ। ಪ್ರಕೃತೋ ಬ್ರಹ್ಮಣಸ್ಪತಿರೇವಾತ್ರಾಪಿ ಸಂಬೋಧ್ಯಃ ॥**

॥ ಪ್ರತಿಪದಾರ್ಥ ॥

(ಎಲೈ ರಾಜನೇ) **ಸಪತ್ನಾನ್**—ಶತ್ರುಗಳನ್ನು । **ಅಭಿವೃತ್ಯ**—ಸುತ್ತಲೂ ಮುತ್ತಿಗೆ ಹಾಕಿ। **ನಃ**—ನಮಗೆ। **ಯಾಃ ಅರಾತಯಃ**—ಏನನ್ನು ಕೊಡದಿರುವ ಯಾವ ಪ್ರಜೆಗಳಿರುವರೋ (ಅಥವಾ ಶತ್ರುಗಳಿರುವರೋ) ಅವರನ್ನು ಸಹ। **ಅಭಿತಿಷ್ಠ**—ಸೋಲಿಸು। **ಪೃತನ್ಯಂತಂ**—ಸೇನಾಸಹಿತನಾಗಿ ಯುದ್ಧಮಾಡುವ ಶತ್ರುವನ್ನು। **ಅಭಿ ತಿಷ್ಠ**—ಸೋಲಿಸು। **ಯಃ**—ಯಾರು। **ನಃ**—ನಮ್ಮನ್ನು। **ಇರಸ್ಯತಿ**—ನೀಚವಾಕ್ಯಗಳಿಂದ ಅವಹೇಳನ ಮಾಡುವನೋ ಅವನನ್ನೂ। **ಅಭಿ**—ಸೋಲಿಸು.

॥ ಭಾವಾರ್ಥ ॥

ಎಲೈ ರಾಜನೇ, ಶತ್ರುಗಳನ್ನು ಮುತ್ತಿ ಅವರನ್ನು ಸೋಲಿಸು ಮತ್ತು ಇತರ ವಿಧವಾದ ಶತ್ರುಗಳನ್ನೂ ಸೋಲಿಸು, ಸೇನಾಸಹಿತನಾಗಿ ಯುದ್ಧಮಾಡುವ ಶತ್ರುವನ್ನು ಸೋಲಿಸು, ಯಾರು ನಮ್ಮನ್ನು ತುಚ್ಛಭಾಷೆಯಿಂದ ಅವಹೇಳನ ಮಾಡುವನೋ ಅವನನ್ನೂ ಸೋಲಿಸು.

## English Translation.

Having overcome our rivals, and those who are our enemies, do you, attack him who assails us, and him who behaves insolently towards us.

॥ ಸಂಹಿತಾಪಾಠಃ ॥

ಅಭಿ ತ್ವಾ ದೇವಃ ಸವಿತಾಭಿ ಸೋಮೋ ಅವೀವೃತತ್ ।
ಅಭಿ ತ್ವಾ ವಿಶ್ವಾ ಭೂತಾನ್ಯಭೀವರ್ತೋ ಯಥಾಸಸಿ ॥ ೩ ॥

॥ ಪದಪಾಠಃ ॥

**ಅಭಿ । ತ್ವಾ । ದೇವಃ । ಸವಿತಾ । ಅಭಿ । ಸೋಮಃ । ಅವೀವೃತತ್ ।**
**ಅಭಿ । ತ್ವಾ । ವಿಶ್ವಾ । ಭೂತಾನಿ । ಅಭಿಽವರ್ತಃ । ಯಥಾ । ಅಸಸಿ ॥ ೩ ॥**

|| ಸಾಯಣಭಾಷ್ಯಂ ||

**ಹೇ ರಾಜನ್ ದೇವೋ ದಾನಾದಿಗುಣಯುಕ್ತಃ ಸವಿತಾ ತ್ವಾ ತ್ವಾಮಭ್ಯವೀವೃತತ್ । ಅಭಿವರ್ತಯತು । ಅಭಿಗಮಯತು ರಾಷ್ಟ್ರಂ । ಸೋಮಸ್ತ್ವಾಭಿವರ್ತಯತು । ವಿಶ್ವಾ ವಿಶ್ವಾನಿ ಸರ್ವಾಣ್ಯಪಿ ಭೂತಾನಿ ಪೃಥಿವ್ಯಾದೀನಿ ತ್ವಾಮಭಿ ವರ್ತಯಂತು । ಯಥಾ ಯೇನ ಪ್ರಕಾರೇಣ ತ್ವಮಭೀವರ್ತೋಽಸಿ । ಅಭಿತಃ ಸರ್ವತ್ರ ವರ್ತಮಾನೋ ಭವಸಿ || ಅಸ್ತೇಶ್ಛಾಂದಸಃ ಶಪೋ ಲುಗಭಾವಃ ||**

|| ಪ್ರತಿಪದಾರ್ಥ ||

(ಎಲೈ ರಾಜನೇ) **ದೇವಃ**—ದಾನಾದಿಗುಣಯುಕ್ತನಾದ ಅಥವಾ ಪ್ರಕಾಶಮಾನನಾದ । **ಸವಿತಾ**—ಸವಿತೃ ದೇವನು । **ತ್ವಾ**—ನಿನ್ನನ್ನು । **ಅಭಿ ಅವೀವೃತತ್**—ರಾಜ್ಯದಲ್ಲಿ ಸ್ಥಿರವಾಗಿ ಸ್ಥಾಪಿಸಲಿ । **ಸೋಮಃ**—ಸೋಮನೂ । **ಅಭಿ**—ಸ್ಥಾಪಿಸಲಿ । **ಯಥಾ**—ಯಾವಪ್ರಕಾರವಾಗಿ ನೀನು । **ಅಭೀವರ್ತಃ ಅಸಸಿ**—ಸರ್ವತ್ರ ಸ್ಥಿತನಾಗಿರುವೆಯೋ ಆರೀತಿ । **ವಿಶ್ವಾ**—ಸಮಸ್ತವಾದ । **ಭೂತಾನಿ**—ಪೃಥಿವ್ಯಾದಿಭೂತಗಳು । **ಅಭಿ**—ನಿನ್ನನ್ನು ರಾಜ್ಯದಲ್ಲಿ ಸ್ಥಾಪಿಸಲಿ

|| ಭಾವಾರ್ಥ ||

ಎಲೈ ರಾಜನೇ, ದಾನಾದಿಗುಣಯುಕ್ತನಾದ ಅಥವಾ ಪ್ರಕಾಶಮಾನನಾದ ಸವಿತೃದೇವನೂ, ಸೋಮನೂ ನಿನ್ನನ್ನು ರಾಜ್ಯದಲ್ಲಿ ಸ್ಥಿರವಾಗಿರುವಂತೆ ಸ್ಥಾಪಿಸಲಿ. ಯಾವರೀತಿ ನೀನು ಸರ್ವತ್ರ ಅಧಿಕಾರವಿಶಿಷ್ಟನಾಗಿ ಇರುವೆಯೋ ಆರೀತಿ ಸಮಸ್ತ ಪೃಥಿವ್ಯಾದಿ ಭೂತಗಳೂ ನಿನ್ನನ್ನು ರಾಜ್ಯದಲ್ಲಿ ಶಾಶ್ವತವಾಗಿರುವಂತೆ ಸ್ಥಾಪಿಸಲಿ.

English Translation

May the divine Savitri, may Soma establish you, (raja); may all beings establish you, so that you may be supreme.

|| ಸಂಹಿತಾಪಾಠಃ ||

**ಯೇನೇಂದ್ರೋ ಹವಿಷಾ ಕೃತ್ವ್ಯಭವದ್ದ್ಯುಮ್ನ್ಯುತ್ತಮಃ ।**

**ಇದಂ ತದಕ್ರಿ ದೇವಾ ಅಸಪತ್ನಃ ಕಿಲಾಭುವಂ || ೪ ||**

|| ಪದಪಾಠಃ ||

**ಯೇನ । ಇಂದ್ರಃ । ಹವಿಷಾ । ಕೃತ್ವೀ । ಅಭವತ್ । ದ್ಯುಮ್ನೀ । ಉತ್ಽತಮಃ ।**

**ಇದಂ । ತತ್ । ಅಕ್ರಿ । ದೇವಾಃ । ಅಸಪತ್ನಃ । ಕಿಲ । ಅಭುವಂ || ೪ ||**

|| ಸಾಯಣಭಾಷ್ಯಂ ||

ಯೇನ ಹವಿಷಾಸ್ಮಾಭಿರ್ದತ್ತೇನ ಮಾದ್ಯನ್ನಿಂದ್ರಃ ಕೃತ್ವೀ ವೃತ್ರವಧಾದೇಃ ಕರ್ಮಣಃ ಕರ್ತಾಭವತ್ ದ್ಯುಮ್ನೀ । ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವಾ । ತದ್ವಾನ್ ಅತ ಏವೋತ್ತಮ ಉತ್ಕೃಷ್ಟತಮಶ್ಚಾಭವತ್ ತದಿದಂ ಹವಿರ್ಹೇ ದೇವಾಃ ಅಕ್ರಿ । ಅಕಾರಿ । ಯದ್ವಾ । ಅಹಮಕಾರ್ಷಂ । ಅತ ಏವಾಹಮಸಪತ್ನಃ ಕಿಲಾಭುವಂ । ಶತ್ರುರಹಿತೋಽಸ್ಯಭವಂ ಖಲು ||

|| ಪ್ರತಿಪದಾರ್ಥ ||

**ಯೇನ ಹವಿಷಾ**— ನಾವು ಅರ್ಪಿಸಿದ ಯಾವ ಹವಿಸ್ಸಿನಿಂದ ಹರ್ಷಿತನಾಗಿ । **ಇಂದ್ರಃ**— ಇಂದ್ರನು । **ಕೃತ್ವೀ**— ವೃತ್ರವಧಾದಿಸಾಹಸಕರ್ಮಗಳನ್ನು ಮಾಡಲು ಸಮರ್ಥನಾಗಿ । **ಅಭವತ್**— ಆದನೋ । **ದ್ಯುಮ್ನೀ**— ಕೀರ್ತಿಯುತನೂ ಆದನೋ ಅಂತಹ । **ಉತ್ತಮಃ**— ಉತ್ಕೃಷ್ಟವಾದ । **ತತ್ ಇದಂ**— ಈ ಹವಿಸ್ಸನ್ನು । **ದೇವಾಃ**— ಎಲೈ ದೇವತೆಗಳೇ । **ಅಕ್ರಿ**— ನಿಮಗೆ ಅರ್ಪಿಸಿದ್ದೇನೆ (ಆದ್ದರಿಂದ ನಾನು) । **ಅಸಪತ್ನಃ ಕಿಲ**— ಶತ್ರುರಹಿತನಾಗಿ । **ಅಭುವಂ**— ಆಗಿದ್ದೇನೆ

|| ಭಾವಾರ್ಥ ||

ನಾವು ಅರ್ಪಿಸಿದ ಯಾವ ಹವಿಸ್ಸಿನಿಂದ ತೃಪ್ತನಾಗಿ ಇಂದ್ರನು ವೃತ್ರವಧಾದಿಸಾಹಸಕೃತ್ಯಗಳನ್ನು ಮಾಡಲು ಸಮರ್ಥನಾದನೋ ಮತ್ತು ಕೀರ್ತಿವಂತನಾದನೋ ಅಂತಹ ಉತ್ಕೃಷ್ಟವಾದ ಈ ಹವಿಸ್ಸನ್ನು, ಎಲೈ ದೇವತೆಗಳೇ, ನಿಮಗೆ ಅರ್ಪಿಸಿದ್ದೇನೆ. ಆದ್ದರಿಂದ ನಾನು ಶತ್ರುರಹಿತನಾಗಿ ಆಗಿದ್ದೇನೆ.

## English Translation.

The oblation whereby Indra became heroic, renowned and eminent, I have offered, O gods, (to you), may I become freed from my rivals.

|| ಸಂಹಿತಾಪಾಠಃ ||

ಅಸಪತ್ನಃ ಸಪತ್ನಹಾಭಿರಾಷ್ಟ್ರೋ ವಿಷಾಸಹಿಃ ।
ಯಥಾಹಮೇಷಾಂ ಭೂತಾನಾಂ ವಿರಾಜಾನಿ ಜನಸ್ಯ ಚ || ೫ ||

|| ಪದಪಾಠಃ ||

ಅಸಪತ್ನಃ । ಸಪತ್ನಽಹಾ । ಅಭಿಽರಾಷ್ಟ್ರಃ । ವಿಽಸಸಹಿಃ ।
ಯಥಾ । ಅಹಂ । ಏಷಾಂ । ಭೂತಾನಾಂ । ವಿಽರಾಜಾನಿ । ಜನಸ್ಯ । ಚ || ೫ ||

॥ ಸಾಯಣಭಾಷ್ಯಂ ॥

**ಸಪತ್ನಹಾ ಸಪತ್ನಾನಾಂ ಶತ್ರೂಣಾಂ ಹಂತಾ ಅತ ಏವಾಸಪತ್ನಃ ಶತ್ರುರಹಿತೋಽಹಮಭೂವಂ। ಅಭಿರಾಷ್ಟ್ರೋಽಭಿಗತರಾಷ್ಟ್ರಃ ಪ್ರಾಪ್ತರಾಜ್ಯಃ ಸನ್ ವಿಷಾಸಹಿಃ ಶತ್ರೂಣಾಂ ವಿಶೇಷೇಣಾಭಿಭವಿತಾ ಚಾಭೂವಂ। ಯಥಾ ಯೇನ ಪ್ರಕಾರೇಣಾಹಮೇಷಾಂ ದೃಶ್ಯಮಾನಾನಾಂ ಸರ್ವೇಷಾಂ ಭೂತಾನಾಂ ಪ್ರಾಣಿನಾಂ ಜನಸ್ಯ ಚ ಸೇವಕಸ್ಯಾಮಾತ್ಯಾದೇಶ್ಚ ವಿರಾಜಾನಿ ಯಥೇಶ್ವರೋ ಭವಾನಿ ತಥಾ ಸಪತ್ನಹಾ ವಿಷಾಸಹಿಶ್ಚಾಭೂವಮಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಯಥಾ**—ಯಾವಪ್ರಕಾರವಾಗಿ। **ಅಹಂ**—ನಾನು। **ಏಷಾಂ**—ನಮ್ಮೆದುರಿಗಿರುವ। **ಭೂತಾನಾಂ**—ಸಮಸ್ತಪ್ರಾಣಿಗಳಿಗೂ। **ಜನಸ್ಯ ಚ**—ಜನರಿಗೂ ಸಹ। **ವಿರಾಜಾನಿ**—ಪ್ರಭುವಾಗಿ ಆಗುವೆನೋ ಆ ರೀತಿ। **ಸಪತ್ನಹಾ**—ಶತ್ರುಗಳ ಹಂತಕನಾಗಿಯೂ। **ಅಸಪತ್ನಃ**—ಪ್ರತಿಸ್ಪರ್ಧಿರಹಿತನಾಗಿಯೂ। **ಅಭಿರಾಷ್ಟ್ರಃ**—ರಾಜ್ಯವನ್ನು ವಶದಲ್ಲಿಟ್ಟುಕೊಂಡಿರುವವನಾಗಿಯೂ। **ವಿಷಾಸಹಿಃ**—ಶತ್ರುಗಳನ್ನು ಸೋಲಿಸುವವನಾಗಿಯೂ ಆಗಿದ್ದೇನೆ.

॥ ಭಾವಾರ್ಥ ॥

ಶತ್ರುಗಳ ಹಂತಕನೂ, ಪ್ರತಿಸ್ಪರ್ಧಿರಹಿತನೂ, ರಾಜ್ಯವನ್ನು ವಶದಲ್ಲಿಟ್ಟುಕೊಂಡಿರುವವನೂ ಶತ್ರುಗಳನ್ನು ಸೋಲಿಸುವವನೂ ಆದ ನಾನು ನಮ್ಮೆದುರಿಗೆ ಈ ಸಮಸ್ತ ಪ್ರಾಣಿಗಳಿಗೂ, ಸೇವಕಾಮಾತ್ಯಮೊದಲಾದ ಸರ್ವಜನರಿಗೂ ಪ್ರಭುವಾಗಿ ಬೆಳಗುತ್ತಿದ್ದೇನೆ.

English Translation

May I become without a rival, the destroyer of my rivals, obtaining the sovereignty, overcoming (my foes) so that I may reign over these beings and over my people.

## ನೂರ ಎಪ್ಪತ್ತೈದನೆಯ ಸೂಕ್ತವು

### ಪೀಠಿಕೆ

ಈ ಸೂಕ್ತದಲ್ಲಿ ಸೋಮಲತೆಗಳನ್ನು ಜಜ್ಜುವ ಗ್ರಾವಾಣಃ ಎಂಬ ಕಲ್ಲುಗಳನ್ನು ಸ್ತುತಿಸಲಾಗಿದೆ. ಈ ದೇವತೆಗಳನ್ನು ಅನೇಕ ಋಕ್ಕುಗಳಲ್ಲಿ ಸ್ತುತಿಸಲಾಗಿದ್ದರೂ ಇವುಗಳನ್ನೇ ಪ್ರತ್ಯೇಕವಾಗಿ ಸ್ತುತಿಸಿರುವ ಸೂಕ್ತಗಳು ಋಗ್ವೇದದಲ್ಲಿ ಮೂರು ಮಾತ್ರ. ಇವೆಲ್ಲವೂ ಹತ್ತನೆಯ ಮಂಡಲದಲ್ಲಿಯೇ ಇವೆ. ಋ. ಸಂ. ೧೦-೭೬; ೧೦-೯೪; ಮತ್ತು ೧೦-೧೭೫. ಈ ಗ್ರಾವ ಅಥವಾ ಅದ್ರಿಗಳ ವಿಷಯದಲ್ಲಿ ವಿಸ್ತಾರವಾದ ವಿವರಣೆಯನ್ನು ಈ ಸೂಕ್ತಗಳ ಪೀಠಿಕೆಯಲ್ಲಿ ಎಂದರೆ ಋ. ಸಂ. ಭಾಗ ೨೯ ರಲ್ಲಿ 115-119 ನೇ ಪುಟಗಳಲ್ಲಿಯೂ, ಅದೇ ಭಾಗದ 1003-1005 ನೇ ಪುಟಗಳಲ್ಲಿಯೂ ವಿವರಿಸಿದ್ದೇವೆ.

|| ಸಾಯಣಭಾಷ್ಯಂ ||

**ಪ್ರ ವ ಇತಿ ಚತುರ್ಋಚಂ ಚತುರ್ವಿಂಶಂ ಸೂಕ್ತಂ ಗಾಯತ್ರಂ । ಅರ್ಬುದಸ್ಯ ಸರ್ಪರ್ಷೇಃ ಪುತ್ರ ಊರ್ಧ್ವಗ್ರಾವಾ ನಾಮರ್ಷಿಃ । ಸೋಮಾಭಿಷವಾರ್ಥಾ ಗ್ರಾವಾಣೋ ದೇವತಾ । ತಥಾ ಚಾನುಕ್ರಾಂತಂ । ಪ್ರ ವಶ್ಚತುಷ್ಕಮೂರ್ಧ್ವಗ್ರಾವಾರ್ಬುದಿರ್ಗ್ರಾವ್ಣೋಽಸ್ತೌದ್ಗಾಯತ್ರಮಿತಿ ॥ ಗ್ರಾವಸ್ತೋತ್ರೇ ಏತತ್ಸೂಕ್ತಂ । ಸೂತ್ರಿತಂ ಚ । ಆ ವ ಋಂಜಸೇ ಪ್ರ ವೋ ಗ್ರಾವಾಣ ಇತಿ ಸೂಕ್ತಯೋಃ । ಆ. ೫-೧೨ । ಇತಿ । ಯದ್ವಾ। ಇದಮೇಕಮೇವ ಸೂಕ್ತಂ ಗ್ರಾವಸ್ತೋತ್ರಂ । ಸೂತ್ರ್ಯತೇ ಹಿ ।-ಪ್ರ ವೋ ಗ್ರಾವಾಣ ಇತ್ಯೇಕ ಉಕ್ತಂ ಸರ್ಪಣಂ । ಆ. ೫-೧೨ । ಇತಿ ॥**

ಅನುವಾದವು— **ಪ್ರ** ವಃ ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಇಪ್ಪತ್ತನಾಲ್ಕನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅರ್ಬುದಪುತ್ರನಾದ ಊರ್ಧ್ವಗ್ರಾವಾ ಎಂಬುವನು ಋಷಿಯು. ಸೋಮಾಭಿಷವಾರ್ಥವಾಗಿ ಉಪಯೋಗಿಸುವ ಗ್ರಾವಾಣಃ ಎಂಬ ಕಲ್ಲುಗಳೇ ದೇವತೆಯು. ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ಪ್ರ ವಶ್ಚತುಷ್ಕಮೂರ್ಧ್ವಗ್ರಾವಾರ್ಬುದಿರ್ಗ್ರಾವ್ಣೋಽಸ್ತೌದ್ಗಾಯತ್ರಂ** ಎಂದು ಹೇಳಿರುವುದು. ಈ ಸೂಕ್ತದಲ್ಲಿ ಗ್ರಾವವನ್ನು ಸ್ತುತಿಸಲಾಗಿದೆ. ಆಶ್ವಲಾಯನ ಶ್ರೌತಸೂತ್ರದಲ್ಲಿ— **ಆ ವ ಋಂಜಸೇ ಪ್ರ ವೋ ಗ್ರಾವಾಣ ಇತಿ ಸೂಕ್ತಯೋಃ** ಎಂಬ ಸೂತ್ರದಲ್ಲಿ (ಆ ೫-೧೨) ದಲ್ಲಿ ಈ ವಿಷಯವು ವಿವೃತವಾಗಿದೆ. ಅಥವಾ ಈ ಒಂದು ಸೂಕ್ತ ಮಾತ್ರವೇ ಗ್ರಾವಸ್ತೋತ್ರವು ಎಂದು ಆಶ್ವಲಾಯನಶ್ರೌತಸೂತ್ರದ— **ಪ್ರ ವೋ ಗ್ರಾವಾಣ ಇತ್ಯೇಕ ಉಕ್ತಂ ಸರ್ಪಣಂ** ಎಂಬ ಸೂತ್ರವು (ಆ. ೫-೧೨) ನಿರ್ದೇಶಿಸುವುದು.

## ಸೂಕ್ತ - ೧೭೫

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೭೫ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೩೩ ॥

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ||
|| ಋಷಿಃ—ಊರ್ಧ್ವಗ್ರಾವಾರ್ಬುದಿಃ ||
|| ದೇವತಾ—ಗ್ರಾವಾಣಃ ||
|| ಛಂದಃ—ಗಾಯತ್ರೀ ||

|| ಸಂಹಿತಾಪಾಠಃ ||

ಪ್ರ ವೋ ಗ್ರಾವಾಣಃ ಸವಿತಾ ದೇವಃ ಸುವತು ಧರ್ಮಣಾ ।
ಧೂರ್ಷು ಯುಜ್ಯಧ್ವಂ ಸುನುತ ॥ ೧ ॥

|| ಪದಪಾಠಃ ||

ಪ್ರ । ವಃ । ಗ್ರಾವಾಣಃ । ಸವಿತಾ । ದೇವಃ । ಸುವತು । ಧರ್ಮಣಾ ।
ಧೂಃಽಸು । ಯುಜ್ಯಧ್ವಂ । ಸುನುತ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಗ್ರಾವಾಣಃ ಸೋಮಾಭಿಷವಾರ್ಥಾಃ ಪಾಷಾಣಾಃ ವೋ ಯುಷ್ಮಾನ್ಸವಿತಾ ಪ್ರೇರಕೋ ದೇವೋ ಧರ್ಮಣಾತ್ಮೀಯೇನ ಧಾರಣೇನ ಕರ್ಮಣಾ ಪ್ರ ಸುವತು । ಅಭಿಷವಾರ್ಥಂ ಪ್ರೇರಯತು ॥ ಷೂ ಪ್ರೇರಣೇ । ತೌದಾದಿಕಃ ॥ ಯೂಯಂ ಚ ಧೂರ್ಷ್ವಭಿಷವಸ್ಥಾನೇಷು ಪ್ರಾಚ್ಯಾದಿಮಹಾದಿಕ್ಷು ಯುಜ್ಯಧ್ವಂ । ಯುಕ್ತಾ ಭವತ । ಅನಂತರಂ ಸುನುತ । ಅಭಿಷುಣುತ ಸೋಮಂ ॥**

॥ ಪ್ರತಿಪದಾರ್ಥ ॥

**ಗ್ರಾವಾಣಃ**—ಸೋಮಾಭಿಷವಾರ್ಥವಾಗಿ ಉಪಯೋಗಿಸಲ್ಪಡುವ ಎಲೈ ಕಲ್ಲುಗಳೇ । **ವಃ**—ನಿಮ್ಮನ್ನು । **ಸವಿತಾ ದೇವಃ**—ಸರ್ವಪ್ರೇರಕನಾದ ಸವಿತೃದೇವನು । **ಧರ್ಮಣಾ**—ತನ್ನ ಕರ್ಮದಿಂದ । **ಪ್ರ ಸುವತು**—ಅಭಿಷವಾರ್ಥವಾಗಿ ಪ್ರೇರಿಸಲಿ (ನೀವೂ ಸಹ) । **ಧೂರ್ಷು**—ಸೋಮಲತೆಗಳನ್ನು ಜಜ್ಜುವ ಪ್ರಾಚ್ಯಾದಿ ದಿಕ್ಕುಗಳಲ್ಲಿ । **ಯುಜ್ಯಧ್ವಂ**—ನಿಯೋಜಿತರಾಗಿ ಮತ್ತು । **ಸುನುತ**—ಸೋಮಲತೆಗಳನ್ನು ಜಜ್ಜಿರಿ.

॥ ಭಾವಾರ್ಥ ॥

ಸೋಮಲತೆಗಳನ್ನು ಜಜ್ಜುವುದಕ್ಕಾಗಿ ಉಪಯೋಗಿಸಲ್ಪಡುವ ಎಲೈ ಗ್ರಾವಗಳೇ, ಸರ್ವಪ್ರೇರಕನಾದ ಸವಿತೃದೇವನು ನಿಮ್ಮನ್ನು ತನ್ನ ಧಾರಣರೂಪವಾದ ಕರ್ಮದಿಂದ ಅಭಿಷವಾರ್ಥವಾಗಿ ಪ್ರೇರಿಸಲಿ. ನೀವೂ ಸಹ ಸೋಮಲತೆಗಳನ್ನು ಜಜ್ಜುವ ಪ್ರಾಚ್ಯಾದಿ ಪ್ರದೇಶಗಳಲ್ಲಿ ನಿಯೋಜಿತರಾಗಿ ಸೋಮಲತೆಗಳನ್ನು ಜಜ್ಜಿರಿ.

## English Translation

May the divine Savitri urge you stones, by his sustaining (action), be yoked to the chariot-poles, express (the juice).

॥ ವಿಶೇಷವಿಷಯಗಳು ॥

ಈ ಸೂಕ್ತದಲ್ಲಿ ಅಚೇತನವಸ್ತುಗಳಾದ ಗ್ರಾವಾಣಃ ಎಂಬ ಕಲ್ಲುಗಳನ್ನು ಚೇತನಯುಕ್ತರಾದ ದೇವತೆಗಳಂತೆ ಭಾವಿಸಿ ಸ್ತುತಿಸಲಾಗಿದೆ. ಈ ವಿಧವಾದ ಸೂಕ್ತಗಳು ಋಗ್ವೇದದಲ್ಲಿ ಬಹಳವಾಗಿವೆ. ಯಜ್ಞವೇದಿ, ದರ್ಭಾಸನ ವನಸ್ಪತಿ ಅಥವಾ ಯೂಪವೆಂಬ ಪಶುವನ್ನು ಕಟ್ಟುವ ಮರದಕಂಭ, ಪರ್ವತ, ಗಿಡಬಳ್ಳಿಗಳು ಇತ್ಯಾದಿಗಳನ್ನೆಲಾ ಚೇತನ ಯುಕ್ತರಾದ ದೇವತೆಗಳಂತೆ ಅಥವಾ ಆಯಾ ವಸ್ತುಗಳ ಅಭಿಮಾನಿದೇವತೆಗಳಂತೆ ಭಾವಿಸಿ ಸ್ತುತಿಸಲಾಗಿದೆ. ಸಮಸ್ತ ಕಾರ್ಯಗಳನ್ನು ಪ್ರೇರಿಸುವವನು ಸೂರ್ಯ ಅಥವಾ ಸವಿತೃವಾದ್ದರಿಂದ (Sun is the Source of all energy) ಸೋಮಲತೆಗಳನ್ನು ಜಜ್ಜುವಂತೆ ಪ್ರೇರಿಸಬೇಕೆಂದು ಸವಿತೃವನ್ನು ಪ್ರಾರ್ಥಿಸಲಾಗಿದೆ. ಧೂರ್ಷು ಎಂಬ ಶಬ್ದವು ಸಪ್ತಮೀಬಹುವಚನಾಂತಶಬ್ದವು. ನೊಗಗಳಲ್ಲಿ ಎಂದು ಇದರ ಅರ್ಥವು. ಗಾಡಿಯ ನೊಗಗಳಲ್ಲಿ ಎತ್ತುಗಳನ್ನು ಅಥವಾ ಅಶ್ವಗಳನ್ನು ಗಾಡಿಯನ್ನು ಎಳೆಯುವುದಕ್ಕಾಗಿ ಹೂಡುವರಷ್ಟೆ. ಅದರಂತೆ ಸೋಮಲತೆಗಳನ್ನು ಜಜ್ಜುವ ಈ ಕರ್ಮದಲ್ಲಿ ಈ ಕಲ್ಲುಗಳನ್ನು ಹೂಡಿ ಅಥವಾ ನಿಯೋಜಿಸಿ ಸೋಮರಸವನ್ನು ಹಿಂಡಬೇಕೆಂದು ಇಲ್ಲಿ ಪ್ರಾರ್ಥಿಸಲಾಗಿದೆ.

॥ ಸಂಹಿತಾಪಾಠಃ ॥

ಗ್ರಾವಾ॑ಣೋ॒ ಅಪ॑ ದು॒ಚ್ಛುನಾ॒ಮಪ॑ ಸೇಧತ ದುರ್ಮ॒ತಿಂ ।

ಉ॒ಸ್ರಾಃ ಕ॑ರ್ತನ ಭೇ॒ಷಜಂ ॥ ೨ ॥

॥ ಪದಪಾಠಃ ॥

ಗ್ರಾವಾ॑ಣಃ । ಅಪ॑ । ದು॒ಚ್ಛುನಾ॑ಂ । ಅಪ॑ । ಸೇ॒ಧ॒ತ॒ । ದುಃ॒ಽಮ॒ತಿಂ॒ ।
ಉ॒ಸ್ರಾಃ । ಕ॒ರ್ತ॒ನ॒ । ಭೇ॒ಷ॒ಜಂ ॥ ೨ ।

॥ ಸಾಯಣಭಾಷ್ಯಂ ॥

ಹೇ ಗ್ರಾವಾಣಃ ದುಚ್ಛುನಾಂ ದುಃಖಕಾರಿಣೀಂ ಶತ್ರುಭೂತಾಂ ಪ್ರಜಾಮಪ ಸೇಧತ । ಅಸ್ಮತ್ತೋಽಪಗಮಯತ ॥ ಷಿಧು ಗತ್ಯಾಂ ॥ ತಥಾ ದುರ್ಮತಿಂ ದುಷ್ಟಾಭಿಸಂಧಿಂ ಚಾಪ ಸೇಧತ । ಭೇಷಜಂ ಸುಖಮಸ್ಮಾಕಂ ಯಥಾ ಭವತಿ ತಥೋಸ್ರಾ ಗಾಃ ಕರ್ತನ । ಕುರುತ ॥ ಕರೋತೇಶ್ಛಾಂದಸೋ ವಿಕರಣಸ್ಯ ಲುಕ್ । ತಪ್ತನಪ್ತನಥನಾಶ್ಚೇತಿ ತನಬಾದೇಶಃ ॥

॥ ಪ್ರತಿಪದಾರ್ಥ ॥

**ಗ್ರಾವಾಣಃ**—ಎಲೈ ಗ್ರಾವಗಳೇ । **ದುಚ್ಛುನಾಂ**—ದುಃಖವನ್ನು ಅಥವಾ ಸೋಮಾಭಿಷವಕರ್ಮಕ್ಕೆ ಕೆಡಕನ್ನುಂಟುಮಾಡುವ ಶತ್ರುಜನರನ್ನು । **ಅಪ ಸೇಧತ**— ಇಲ್ಲಿಂದ ಓಡಿಸಿರಿ । **ದುರ್ಮತಿಂ**— ಜನರಲ್ಲಿರುವ ದುಷ್ಟಬುದ್ಧಿ ಅಥವಾ ಕೆಟ್ಟ ಉದ್ದೇಶವನ್ನೂ । **ಅಪ**—ಓಡಿಸಿ (ನಿವಾರಣೆಮಾಡಿ) । **ಭೇಷಜಂ**— ನಮಗೆ ಸುಖವನ್ನುಂಟುಮಾಡುವಂತೆ । **ಉಸ್ರಾಃ**—ಗೋವುಗಳನ್ನು । **ಕರ್ತನ**—ಮಾಡಿರಿ.

॥ ಭಾವಾರ್ಥ ॥

ಎಲೈ ಗ್ರಾವಗಳೇ, ಸೋಮಾಭಿಷವಕರ್ಮದಲ್ಲಿ ದುಃಖವನ್ನು ಅಥವಾ ಕೆಡುಕನ್ನು ಮಾಡುವ ಶತ್ರುಜನರನ್ನೂ ಅವರ ದುಷ್ಟಬುದ್ಧಿ ಅಥವಾ ದುರುದ್ದೇಶವನ್ನೂ ಓಡಿಸಿರಿ. ಗೋವುಗಳು ಕ್ಷೀರಪ್ರದಾನಾದಿಗಳಿಂದ ನಮಗೆ ಸುಖವನ್ನುಂಟುಮಾಡುವಂತೆ ಮಾಡಿರಿ.

## English Translation

Drive away, stones, the malevolent (folk), drive away evil intention, make our cattle a remedy (against distress).

॥ ಸಂಹಿತಾಪಾಠಃ ॥

ಗ್ರಾವಾಣ ಉಪರೇಷ್ವಾ ಮಹೀಯಂತೇ ಸಜೋಷಸಃ ।
ವೃಷ್ಣೇ ದಧತೋ ವೃಷ್ಣ್ಯಂ ॥ ೩ ॥

॥ ಪದಪಾಠಃ ॥

ಗ್ರಾವಾಣಃ । ಉಪರೇಷು । ಆ । ಮಹೀಯಂತೇ । ಸಽಜೋಷಸಃ ।
ವೃಷ್ಣೇ । ದಧತಃ । ವೃಷ್ಣ್ಯಂ ॥ ೩ ॥

॥ ಸಾಯಣಭಾಷ್ಯಂ ॥

ಗ್ರಾವಾಣೋ ದಿಕ್ಷ್ವವಸ್ಥಿತಾಃ ಪಾಷಾಣಾಃ ಸಜೋಷಸಃ ಸಹ ಪ್ರೀಯಮಾಣಾಃ ಸಂಗತಾಃ ಸಂತೋ ವೋಪರೇಷು । ಉಪರೋ ನಾಮಾಭಿಷವಾಯ ಚತುರ್ಣಾಂ ಗ್ರಾವ್ಣಾಂ ಮಧ್ಯೇ ಸ್ಥಾಪಿತೋ ವಿಸ್ತೃತಃ ಪಾಷಾಣಃ । ಪ್ರದೇಶಾಪೇಕ್ಷಂ ಬಹುವಚನಂ । ಉಪರಸ್ಯ ಪ್ರಾಂತೇಷು ಮಹೀಯಂತೇ । ಪ್ರಕಾಶಂತೇ । ಆಕಾರಃ ಪೂರಣಃ । ಕಿಂ ಕುರ್ವಂತಃ । ವೃಷ್ಣೇ ವರ್ಷಿತ್ರೇ ಸೋಮಾಯ ವೃಷ್ಣ್ಯಂ ವೀರ್ಯಂ ದಧತಃ ಪ್ರಯಚ್ಛಂತಃ ॥

॥ ಪ್ರತಿಪದಾರ್ಥ ॥

**ಗ್ರಾವಾಣಃ**—ದಿಕ್ಕುಗಳಲ್ಲಿ ಸೋಮಾಭಿಷವಾರ್ಥವಾಗಿ ಸ್ಥಾಪಿತವಾಗಿರುವ ಕಲ್ಲುಗಳು । **ಸಜೋಷಸಃ**—ಸಂತೋಷದಿಂದ ಸಹಕರಿಸುತ್ತಾ । **ವೃಷ್ಣೇ**—ಜಜ್ಜಿದಲತೆಗಳಿಂದ ಜಿನುಗುತ್ತಿರುವ ಸೋಮರಸಕ್ಕೆ । **ವೃಷ್ಣ್ಯಂ**–ಶಕ್ತಿಯನ್ನು (ಮಾದಕಶಕ್ತಿಯನ್ನು) । **ದಧತಃ**—ಉಂಟುಮಾಡುತ್ತಾ । **ಉಪರೇಷು**—ಮಧ್ಯದಲ್ಲಿರುವ ಕಲ್ಲಿನ ಮೇಲೆ । **ಮಹೀಯಂತೇ**—ಬೆಳಗುತ್ತವೆ.

॥ ಭಾವಾರ್ಥ ॥

ಸೋಮಾಭಿಷವಾರ್ಥವಾಗಿ ಉಪಯೋಗಿಸುವ ಕಲ್ಲುಗಳು ಸಂತೋಷದಿಂದ ಪರಸ್ಪರ ಸಹಕರಿಸುತ್ತಾ ಮಧ್ಯದಲ್ಲಿರುವ ಕಲ್ಲಿನ ಮೇಲೆ ಸೋಮಲತೆಗಳನ್ನು ಜಜ್ಜಿ ಅವುಗಳಿಂದ ಹೊರಸೂಸುವ ರಸಗಳಿಗೆ ಮಾದಕಶಕ್ತಿಯನ್ನುಂಟು ಮಾಡುತ್ತಾ ಜನರಿಂದ ಗೌರವಿಸಲ್ಪಡುತ್ತವೆ

English Translation.

The stones consentient with the central pivot are honoured, giving energy to the sprinkling (juice).[3]

॥ ವಿಶೇಷವಿಷಯಗಳು ॥

ಸೋಮಲತೆಗಳನ್ನು ಜಜ್ಜುವಾಗ ನಾಲ್ಕು ಕಲ್ಲುಗಳನ್ನು ಉಪಯೋಗಿಸುವರು. ಅವುಗಳಲ್ಲಿ ನೆಲದಮೇಲೆ ಇದ್ದು ಅಗಲವಾಗಿರುವ ಚಪ್ಪಡಿಮೇಲೆ ಸೋಮಲತೆಗಳನ್ನು ಇಟ್ಟು ಗುಂಡುಕಲ್ಲಿನಂತೆ ಉದ್ದವಾಗಿ ಕೈಗಳಿಂದ ಹಿಡಿದು

ಕೊಳ್ಳಲು ಅನುಕೂಲವಾಗಿರುವ ಬೇರೆ ಕಲ್ಲುಗಳಿಂದ ಲತೆಗಳನ್ನು ಜಜ್ಜುವರು. ಮಧ್ಯದಲ್ಲಿರುವ ಚಪ್ಪಡಿಕಲ್ಲನ್ನೇ ಇಲ್ಲಿ ಉಪರೇಷು ಎಂದು ಕರೆದಿದೆ. ಇದರ ಮಧ್ಯಭಾಗದಲ್ಲಿ ರಸವು ನಿಲ್ಲುವುದಕ್ಕಾಗಿ ಸ್ವಲ್ಪಹಳ್ಳವಾಗಿರುವುದು. ಕಲ್ಲಿನಿಂದ ಜಜ್ಜಿದನಂತರ ಜಿನುಗಿ ಹರಿದುಬರುತ್ತಿರುವ ಸೋಮರಸಕ್ಕೆ ಕಲ್ಲುಗಳು ಶಕ್ತಿಯನ್ನು ಕೊಡುವವು ಎಂಬುದು ಕಲ್ಲುಗಳನ್ನು ಪ್ರಶಂಸಿಸುವುದಕ್ಕಾಗಿ ಮಾಡಿರುವ ಕೇವಲ ಉತ್ಪ್ರೇಕ್ಷೆಯು ಕಲ್ಲುಗಳಿಂದ ಜಜ್ಜಿದ ಮಾತ್ರಕ್ಕೆ ರಸಕ್ಕೆ ಹೆಚ್ಚು ಶಕ್ತಿ ಬರುವುದಿಲ್ಲ.

|| ಸಂಹಿತಾಪಾಠಃ ||

**ಗ್ರಾವಾಣಃ ಸವಿತಾ ನು ವೋ ದೇವಃ ಸುವತು ಧರ್ಮಣಾ ।**

**ಯಜಮಾನಾಯ ಸುನ್ವತೇ || ೪ ||**

|| ಪದಪಾಠಃ ||

**ಗ್ರಾವಾಣಃ । ಸವಿತಾ । ನು । ವಃ । ದೇವಃ । ಸುವತು । ಧರ್ಮಣಾ ।**

**ಯಜಮಾನಾಯ । ಸುನ್ವತೇ || ೪ ||**

|| ಸಾಯಣಭಾಷ್ಯಂ ||

**ದೇವೋ ದಾನಾದಿಗುಣಯುಕ್ತಃ ಸವಿತಾ ಹೇ ಗ್ರಾವಾಣೋ ವೋ ಯುಷ್ಮಾನ್ಧರ್ಮಣಾತ್ಮೀಯೇನ ಧಾರಣೇನ ನು ಕ್ಷಿಪ್ರಂ ಪ್ರ ಸುವತು । ಅಭಿಷವೇ ಪ್ರೇರಯತು । ಕಿಮರ್ಥಂ । ಸುನ್ವತೇ ಸೋಮಾಭಿಷವಂ ಕುರ್ವತೇ ಯಾಜಮಾನಾಯ ಯಜಮಾನಾರ್ಥಂ । ತಸ್ಯ ಯಾಗನಿಷ್ಪತ್ತ್ಯೆ ಇತ್ಯರ್ಥಃ ||**

|| ಪ್ರತಿಪದಾರ್ಥ ||

**ಗ್ರಾವಾಣಃ**—ಎಲೈ ಕಲ್ಲುಗಳೇ । **ಸುನ್ವತೇ**—ಸೋಮರಸವನ್ನು ಹಿಂಡುವ । **ಯಜಮಾನಾಯ**—ಯಜಮಾನನ ಪ್ರಯೋಜನಾರ್ಥವಾಗಿ । **ದೇವಃ**—ದಾನಾದಿಗುಣವಿಶಿಷ್ಟನಾದ । **ಸವಿತಾ**—ಸವಿತೃದೇವನು । **ವಃ**—ನಿಮ್ಮನ್ನು । **ಧರ್ಮಣಾ**—ತನ್ನ ಧಾರಣಶಕ್ತಿಯಿಂದ । **ನು**—ಬೇಗನೆ । **ಸುವತು**—ಅಭಿಷವಕರ್ಮದಲ್ಲಿ ಪ್ರೇರಿಸಲಿ ।

। ಭಾವಾರ್ಥ ||

ಎಲೈ ಕಲ್ಲುಗಳೇ, ಸೋಮರಸವನ್ನು ಹಿಂಡುವ ಯಜ್ಞಮಾಡುವ ಯಜಮಾನನಿಗೋಸ್ಕರ ದಾನಾದಿಗುಣವಿಶಿಷ್ಟನಾದ ಸವಿತೃದೇವನು ತನ್ನ ಧಾರಣ (ಪ್ರಚೋದನ) ಶಕ್ತಿಯಿಂದ ನಿಮ್ಮನ್ನು ಬೇಗನೆ ಸೋಮಾಭಿಷವಕರ್ಮದಲ್ಲಿ ಪ್ರವೃತ್ತರಾಗುವಂತೆ ಪ್ರೇರಿಸಲಿ.

## English Translation.

May the divine Savitri quickly urge you, stones, by his sustaining (action) for the sake of the worshipper, who makes the libation.

# ನೂರ ಎಪ್ಪತ್ತಾರನೆಯ ಸೂಕ್ತ

॥ ಸಾಯಣಭಾಷ್ಯಂ ॥

**ಪ್ರ ಸೂನವ ಇತಿ ಚತುರ್ಋಚಂ ಷಂಚವಿಂಶಂ ಸೂಕ್ತಂ । ಋಭುಪುತ್ರಃ ಸೂನುರ್ನಾಮರ್ಷಿಃ । ದ್ವಿತೀಯಾ ಗಾಯತ್ರೀ ಶಿಷ್ಟಾಸ್ತಿಸ್ರೋಽನುಷ್ಟುಭಃ । ಆದ್ಯರ್ಭುದೇವತ್ಯಾ ಶಿಷ್ಟಾ ಆಗ್ನೇಯ್ಯಃ । ತಥಾ ಚಾನುಕ್ರಾಂತಂ । ಪ್ರ ಸೂನವಃ ಸೂನುರಾರ್ಭವ ಆಗ್ನೇಯಮಾನುಷ್ಟುಭಂ ದ್ವಿತೀಯಂ ಗಾಯತ್ರ್ಯಾದ್ಯಾರ್ಭವೀತಿ ॥ ಗತೋ ವಿನಿಯೋಗಃ ॥**

ಅನುವಾದವು– **ಪ್ರ ಸೂನವಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಇಪ್ಪತ್ತೈದನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಭುಪುತ್ರನಾದ ಸೂನುಃ ಎಂಬುವನು ಋಷಿಯು. ಈ ಸೂಕ್ತದಲ್ಲಿ ಮೊದಲನೆಯ ಋಕ್ಕು ಋಭುದೇವತಾಕವು. ಉಳಿದ ಋಕ್ಕುಗಳು ಅಗ್ನಿದೇವತಾಕವು. ಎರಡನೆಯ ಋಕ್ಕು ಗಾಯತ್ರೀಛಂದಸ್ಕವು. ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ— **ಪ್ರ ಸೂನವಃ ಸೂನುರಾರ್ಭವ ಆಗ್ನೇಯಮಾನುಷ್ಟುಭಂ ದ್ವಿತೀಯಾ ಗಾಯತ್ರ್ಯಾದ್ಯಾರ್ಭವೀ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ — ೧೭೬

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೭೬ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೩೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೪ ॥
॥ ಋಷಿಃ—ಸೂನುರಾರ್ಭವಃ ॥
॥ ದೇವತಾ—೧. ಋಭವಃ । ೨-೪. ಅಗ್ನಿಃ ॥
॥ ಛಂದಃ—೧, ೩, ೪. ಅನುಷ್ಟುಪ್ । ೨. ಗಾಯತ್ರೀ ॥

॥ ಸಂಹಿತಾಪಾಠಃ ॥

ಪ್ರ ಸೂನವ ಋಭೂಣಾಂ ಬೃಹನ್ನವಂತ ವೃಜನಾ ।
ಕ್ಷಾಮಾ ಯೇ ವಿಶ್ವಧಾಯಸೋಽಶ್ನನ್ಧೇನುಂ ನ ಮಾತರಂ ॥ ೧ ॥

॥ ಪದಪಾಠಃ ॥

ಪ್ರ । ಸೂನವಃ । ಋಭೂಣಾಂ । ಬೃಹತ್ । ನವಂತ । ವೃಜನಾ ।
ಕ್ಷಾಮ । ಯೇ । ವಿಶ್ವಧಾಯಸಃ । ಅಶ್ನನ್ । ಧೇನುಂ । ನ । ಮಾತರಂ ॥ ೧ ॥

॥ ಸಾಯಣಭಾಷ್ಯಂ ॥

**ಸೂನವ ಏತತ್ಸಂಜ್ಞಾ ಋಭೂಣಾಂ । ಋಭುರ್ವಿಭ್ವಾ ವಾಜ ಇತಿ ತ್ರಯಾಣಾಮಪಿ ಪ್ರಥಮೇನ ವ್ಯಪದೇಶಃ । ತೇಷಾಂ ಪುತ್ರಾ ಬೃಹತ್ಪ್ರಭೂತಂ ವೃಜನಾ । ಸಂಗ್ರಾಮನಾಮೈತತ್ । ವೃಜನಂ ಸಂಗ್ರಾಮಂ ಪ್ರ ನವಂತ । ನವತಿರ್ಗತಿಕರ್ಮಾ । ಪ್ರಗಚ್ಛಂತಿ । ಪ್ರಕರ್ಷೇಣ ಗಚ್ಛಂತಿ । ಪ್ರಕೃಷ್ಟಗಮನೇನ ಜಯೋ ಲಕ್ಷ್ಯತೇ । ತತ್ರ ಶತ್ರೂನ್ ಜಯಂತೀತ್ಯರ್ಥಃ । ಸೂನುರ್ನಾಮರ್ಷಿರಾತ್ಮಾನಮೇವ ಪರೋಕ್ಷೇಣ ನಿರದಿಶತ್ । ಏಕಸ್ಮಿನ್ನಪಿ ಪೂಜಾರ್ಥಂ ಬಹುವಚನಂ ' ಯೇ ಋಭವೋ ವಿಶ್ವಧಾಯಸೋ ವಿಶ್ವಸ್ಯ ಧಾರಕಾಃ ಕ್ಷಾಮ ಭೂಮಿಮಶ್ನನ್ ವ್ಯಾಪ್ನುವನ್ ॥ ಅಶೂ ವ್ಯಾಪ್ತೌ । ವ್ಯತ್ಯಯೇನ ಶ್ನಾ ॥ ಧೇನುಂ ನ । ಧೇನುಃ ಪ್ರೀಣಯಿತ್ರೀ ಗೌಃ । ತಾಮಿವ ತೇಷಾಮೃಭೂಣಾಮಿತ್ಯನ್ವಯಃ । ಯದ್ವಾ । ಸೂರ್ಯರಶ್ಮಯೋಽಸ್ಯೃಭವ ಉಚ್ಯಂತೇ । ಯ ಉರು ಭಾಸಮಾನಾಃ ಸೂರ್ಯರಶ್ಮಯೋ ವಿಶ್ವಧಾಯಸೋ ವಿಶ್ವಂ ಸರ್ವಂ ರಸಂ ಧಯಂತಃ ಪಿಬಂತಃ । ಯದ್ವಾ। ವೃಷ್ಟ್ಯಾದಿಪ್ರದಾನೇನ ಸರ್ವಸ್ಯ ಧಾರಕಾಃ। ಏವಂಭೂತಾಃ ಸಂತಃ ಕ್ಷಾಮ ಭೂಮಿಮಶ್ನನ್ ಅಭುಂಜತ ತದೀಯಂ ಸರ್ವಂ ರಸಮಪಿಬನ್ । ತತ್ರ ದೃಷ್ಟಾಂತಃ । ಮಾತರಂ ಜನನೀಂ ಧೇನುಂ ಪಯಸ್ವಿನೀಂ ಗಾಂ ಯಥಾ ವತ್ಸಃ ಪಿಬತಿ ತಥಾ । ಯ ಋಭವೋಽಶ್ನಂತಿ ತೇಷಾಮೃಭೂಣಾಮಿತ್ಯನ್ವಯಃ ॥**

॥ ಪ್ರತಿಪದಾರ್ಥ ॥

**ಯೇ**—ಯಾವ ಋಭುಗಳು । **ವಿಶ್ವಧಾಯಸಃ**—ಸಮಸ್ತವನ್ನೂ ಧರಿಸಿ ಪೋಷಿಸುವವರಾಗಿ । **ಮಾತರಂ**—ತಾಯಿಯಾದ । **ಧೇನುಂ ನ**—ಗೋವನ್ನು ಅದರ ಕರುವು ಸವಿಾಪಿಸುವಂತೆ । **ಕ್ಷಾಮ**—ಭೂಮಿಯನ್ನು **ಅಶ್ನನ್**—ವ್ಯಾಪಿಸುವರೋ ಅಂತಹ । **ಋಭೂಣಾಂ**—ಋಭು, ವಿಭು, ವಾಜ ಎಂಬ ಮೂವರು ಋಭು ದೇವತೆಗಳ । **ಸೂನವಃ**—ಪುತ್ರರಾದ ಸೂನುಗಳೆಂಬುವರು । **ಬೃಹತ್**—ದೊಡ್ಡದಾದ । **ವೃಜನಾ**—ಯುದ್ಧಕ್ಕಾಗಿ **ಪ್ರ ನವಂತ**—ಉತ್ಸಾಹಭರಿತರಾಗಿ ಹೋಗುತ್ತಾರೆ । [**ಅಥವಾ ಮಾತರಂ**—ತನ್ನ ತಾಯಿಯಾದ । **ಧೇನುಂ ನ** ಗೋವಿನ ಕ್ಷೀರವನ್ನು ಅದರ ಕರುವು ಕುಡಿಯುವಂತೆ । **ಯೇ ಋಭೂಣಾಂ ಸೂನವಃ**--ಯಾವ ಪ್ರಕಾಶಮಾನವಾದ ಸೂರ್ಯರಶ್ಮಿಗಳು । **ವಿಶ್ವಧಾಯಸಃ**—ಸಮಸ್ತರಸ ಎಂದರೆ ಜಲವನ್ನು ಹೀರಿಕುಡಿಯುತ್ತಾ ಅಥವಾ । **ವಿಶ್ವಧಾಯಸಃ**—ವೃಷ್ಟಿಪ್ರದಾನಾದಿಗಳಿಂದ ಸರ್ವವನ್ನು ಧರಿಸಿ ಪೋಷಿಸುತ್ತಾ । **ಕ್ಷಾಮ**—ಭೂಮಿಯಲ್ಲಿರುವ ಜಲವನ್ನು **ಅಶ್ನನ್**—ಪಾನಮಾಡುತ್ತವೆಯೋ ಎಂದರೆ ಆಕರ್ಷಿಸಿ ಹೀರುತ್ತವೆಯೋ ಅಂತಹ ಋಭುಪುತ್ರರಾದ ಸೂನುಗಳು ಯುದ್ಧಕ್ಕೆ ಹೋಗುತ್ತಾರೆ]

॥ ಭಾವಾರ್ಥ ॥

ತನ್ನ ತಾಯಿಯಾದ ಗೋವನ್ನು ಕರುವು ಸವಿಾಪಿಸುವಂತೆ ಸಮಸ್ತವನ್ನು ಧರಿಸಿ ಪೋಷಿಸುವ ಋಭುಗಳು ಭೂಮಿಯನ್ನು ಸರ್ವತ್ರ ವ್ಯಾಪಿಸಿರುವರು. ಅಥವಾ ಕರುವು ತನ್ನ ಜನನಿಯಾದ ಗೋವಿನ ಕ್ಷೀರವನ್ನು ಪಾನಮಾಡುವಂತೆ ಪ್ರಕಾಶಮಾನವಾದ ಸೂರ್ಯರಶ್ಮಿಗಳು ವೃಷ್ಟಿಪ್ರದಾನಾದಿಗಳಿಂದ ಸಮಸ್ತಜಗತ್ತನ್ನೂ ಧರಿಸಿ ಪೋಷಿಸುತ್ತಾ ಭೂಮಿಯಮೇಲಿರುವ ರಸರೂಪವಾದ ಜಲವನ್ನೆಲ್ಲಾ ಆಕರ್ಷಿಸಿ ಹೀರುವವು. ಇಂತಹ ಋಭುಗಳ ಪುತ್ರರಾದ ಸೂನುಗಳೆಂಬುವರು ಯುದ್ಧಾರ್ಥವಾಗಿ ಯುದ್ಧಭೂಮಿಗೆ ಉತ್ಸಾಹಭರಿತರಾಗಿ ಹೊರಡುತ್ತಾರೆ.

English Translation

The Sunus, (the sons) of the Ribhus, advance boldly to battle; supporters of all, they have spread over the earth as (a calf) over the mother cow.

॥ ಸಂಹಿತಾಪಾಠಃ ॥

ಪ್ರ ದೇವಂ ದೇವ್ಯಾ ಧಿಯಾ ಭರತಾ ಜಾತವೇದಸಂ ।

ಹವ್ಯಾ ನೋ ವಕ್ಷದಾನುಷಕ್ ॥ ೧ ॥

॥ ಪದಪಾಠಃ ॥

ಪ್ರ । ದೇವಂ । ದೇವ್ಯಾ । ಧಿಯಾ । ಭರತ । ಜಾತಽವೇದಸಂ ।
ಹವ್ಯಾ । ನಃ । ವಕ್ಷತ್ । ಆನುಷಕ್ ॥ ೧ ॥

॥ ಸಾಯಣಭಾಷ್ಯಂ ॥

ಅಗ್ನಿಪ್ರಣಯನೇ ಪ್ರ ದೇವಮಿತಿ ತೃಚೋಽನುವಕ್ತವ್ಯಃ । ಸೂತ್ರಿತಂ ಚ । ಪ್ರೇಷಿತೋಽಗ್ನಿಪ್ರಣಯನೀಯಾಃ ಪ್ರತಿಪದ್ಯತೇ ಪ್ರ ದೇವಂ ದೇವ್ಯಾ ಧಿಯೇತಿ ತಿಸ್ರಃ । ಆ. ೨-೧೭ । ಇತಿ ॥

ಹೇ ಋತ್ವಿಗ್ಯಜಮಾನಾಃ ದೇವಂ ದಾನಾದಿಗುಣಯುಕ್ತಂ ಜಾತವೇದಸಂ ಜಾತಾನಾಂ ವೇದಿತಾರಂ ಜಾತಪ್ರಜ್ಞಂ ಜಾತಧನಂ ವೇಮಮಗ್ನಿಂ ಪ್ರ ಭರತ । ಪ್ರಕರ್ಷೇಣ ಹರತ । ಯದ್ವಾ। ಪ್ರಾಂಚಂ ನಯತ । ಕೇನ ಸಾಧನೇನೇತಿ ತದಾಹ । ದೇವ್ಯಾ ದೀಪ್ತ್ಯಯಾ ಧಿಯಾ ಪ್ರಜ್ಞಯಾ ಕರ್ಮಣಾ ವಾ । ಯದ್ವಾ। ಏಷಾ ಸಹಯೋಗೇ ತೃತೀಯಾ । ದೇವ್ಯಾ ಧಿಯಾ ಯುಕ್ತಂ । ಕಿಂ ಪ್ರಯೋಜನಮಿತಿ ಚೇತ್ । ನೋಽಸ್ಮಾಕಂ ಹವ್ಯಾ ಹವ್ಯಾನಿ ಹವೀಂಷ್ಯಾನುಷಗಾನುಪೂರ್ವ್ಯಾದನುಕ್ರಮೇಣ ವಕ್ಷತ್ । ಅಯಮಗ್ನಿರ್ವಹೇತ್ । ದೇವಾನ್ಪ್ರಾಪಯೇತ್ ॥ ವಹೇರ್ಲೇಟಿ ಸಿಬ್ಬಹುಲಮಿತಿ ಸಿಪ್ ॥

॥ ಪ್ರತಿಪದಾರ್ಥ ॥

( ಎಲೈ ಋತ್ವಿಗ್ಯಜಮಾನರೇ ), **ದೇವಂ** – ದಾನಾದಿಗುಣಯುಕ್ತನಾದ ಅಥವಾ ಪ್ರಕಾಶಮಾನನಾದ | **ಜಾತವೇದಸಂ**— ಸರ್ವಜ್ಞನಾದ ಈ ಅಗ್ನಿಯನ್ನು | **ದೇವ್ಯಾ**— ಪ್ರಕಾಶಮಾನವಾದ | **ಧಿಯಾ**— ಅಗ್ನಿಪ್ರಣಯನಾದಿ ಕರ್ಮದಿಂದ ಅಥವಾ ಪ್ರಜ್ಞೆಯಿಂದ (ಎಂದರೆ ಸ್ತುತಿಪೂರ್ವಕವಾಗಿ) | **ಪ್ರ ಭರತ**— ವಹಿಸಿ ಉತ್ತರ ವೇದಿಗೆ ತನ್ನಿರಿ (ಈ ಅಗ್ನಿಯು) | **ನಃ**— ನಮ್ಮ | **ಹವ್ಯಾ**— ಹವಿಸ್ಸುಗಳನ್ನು | **ಆನುಷಕ್**— ಕ್ರಮವಾಗಿ | **ವಕ್ಷತ್**— ದೇವತೆಗಳ ಬಳಿಗೆ ಒಯ್ಯಲಿ |

|| ಭಾವಾರ್ಥ ||

ಎಲೈ ಋತ್ವಿಗ್ಯಜಮಾನರೇ, ದಾನಾದಿಗುಣಯುಕ್ತನೂ ಅಥವಾ ಪ್ರಕಾಶಮಾನನೂ ಸರ್ವವನ್ನು ತಿಳಿದವನೂ ಅಥವಾ ಸಮಸ್ತಧನವನ್ನು ಹೊಂದಿರುವವನೂ ಆದ ಈ ಅಗ್ನಿಯನ್ನು ಅಗ್ನಿಪ್ರಣಯನಾದಿಕರ್ಮದಿಂದ ಅಥವಾ ಸ್ತುತಿಪೂರ್ವಕವಾಗಿ ಉತ್ತರವೇದಿಗೆ ವಹಿಸಿ ತೆಗೆದುಕೊಂಡು ಬನ್ನಿ. ಈ ಅಗ್ನಿಯು ನಾವು ಅರ್ಪಿಸುವ ಹವಿಸ್ಸುಗಳನ್ನು ಉದ್ದಿಷ್ಟದೇವತೆಗಳ ಬಳಿಗೆ ಒಯ್ಯಲಿ.

English Translation

Bring forward the divine Jatavedas by means of divine wisdom; may he bear our oblations (to the gods) in succession.

|| ವಿಶೇಷವಿಷಯಗಳು ||

ಅಗ್ನಿಪ್ರಣಯನಕರ್ಮದಲ್ಲಿ **ಪ್ರ ದೇವಃ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ — **ಪ್ರೇಷಿತೋಽಗ್ನಿಪ್ರಣಯನೀಯಾಃ ಪ್ರತಿಪದ್ಯತೇ ಪ್ರ ದೇವಂ ದೇವ್ಯಾ ಧಿಯೇತಿ ತಿಸ್ರಃ** ಎಂಬ ಸೂತ್ರದಿಂದ (ಆ. ೨-೧೭) ವಿವೃತವಾಗಿರುವುದು.

|| ಸಂಹಿತಪಾಠಃ ||

**ಅಯಮು ಷ್ಯ ಪ್ರ ದೇವಯುರ್ಹೋತಾ ಯಜ್ಞಾಯ ನೀಯತೇ ।**
**ರಥೋ ನ ಯೋರಭೀವೃತೋ ಘೃಣೀವಾಞ್ಚೇತತಿ ತ್ಮನಾ ॥ ೩ ॥**

|| ಪದಪಾಠಃ ||

**ಅಯಂ । ಊಂ ಇತಿ । ಸ್ಯಃ । ಪ್ರ । ದೇವಽಯುಃ । ಹೋತಾ । ಯಜ್ಞಾಯ । ನೀಯತೇ ।**
**ರಥಃ । ನ । ಯೋಃ । ಅಭಿಽವೃತಃ । ಘೃಣಿಽವಾನ್ । ಚೇತತಿ । ತ್ಮನಾ ॥ ೩ ॥**

|| ಸಾಯಣಭಾಷ್ಯಂ ||

**ಅಯಮು ಅಯಮೇವ ಸ್ಯ ಸೋಽಗ್ನಿರ್ದೇವಯುರ್ದೇವಾನ್ಯಷ್ಟುಮಿಚ್ಛನ್ಭವತಿ ॥ ದೇವಶಬ್ದಾತ್ಕ್ಯಚಿ ನ ಛಂದಸ್ಯಪುತ್ರಸ್ಯೇತೀತ್ವದೀರ್ಘಯೋಃ ಪ್ರತಿಷೇಧಃ ॥ ಅಯಮೇವ ಹೋತಾ ದೇವಾನಾಮಾಹ್ವಾತಾ। ಅಯಮೇವ ಯಜ್ಞಾಯ ಯಾಗಾರ್ಥಂ ಪ್ರ ಣೀಯತೇ । ಆಹವನೀಯದೇಶಂ ಪ್ರತಿ ಪ್ರಕರ್ಷೇಣ ನೀಯತೇ । ಅಪಿ ಚ ರಥೋ ರಂಹಣಶೀಲಃ ಸೂರ್ಯೋ ರಥವಾನ್ವಾ ॥ ಛಾಂದಸೋ ಮತ್ವರ್ಥೀಯಸ್ಯ ಲೋಪಃ ।' ಸ ಯಥಾ ಘೃಣೀವಾನ್ದೀಪ್ತಿಮಾನ್ ತದ್ವದ್ದೀಪ್ತೋ ಯೋರ್ಮಿಶ್ರಯಿತಾ ಹವಿಷಾಂ ದೇವೈಃ ಸಂಗಮಯಿತಾ ॥ ಯಾತೇರನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ ॥ ಅಭೀವೃತ ಋತ್ವಿಗ್ಯಜಮಾನೈರಾ—**

ವೇಷ್ಟಿತಃ ॥ ವೃಞೋತೇಃ ಕರ್ಮಣ್ಯನ್ಯೇಷಾಮಪೀತಿ ಪೂರ್ವಪದಸ್ಯ ದೀರ್ಘಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ಏವಂಭೂತೋಽಗ್ನಿಸ್ತ್ಮನಾತ್ಮನಾ । ಸ್ವಯಮೇವ ಚೇತತಿ । ಸಮ್ಯಗ್ದೇವಾನ್ಯಷ್ಟುಂ ಜಾನಾತಿ ॥ ಮಂತ್ರೇಷ್ವಾಙ್ಯಾದೇರಾತ್ಮನ ಇತ್ಯಾಕಾರಲೋಪಃ ॥

॥ ಪ್ರತಿಪದಾರ್ಥ ॥

ಸ್ಯಃ—ಪ್ರಸಿದ್ಧನಾದ । ಅಯಂ ಉ—ಈ ಅಗ್ನಿಯೇ । ದೇವಯುಃ—ದೇವತೆಗಳನ್ನು ಪೂಜಿಸಲು ಇಚ್ಛಿಸುತ್ತಾನೆ (ಈ ಅಗ್ನಿಯೇ) । ಹೋತಾ—ದೇವತೆಗಳನ್ನು ಯಜ್ಞಭೂಮಿಗೆ ಆಹ್ವಾನಮಾಡುವವನೂ ಆಗಿದ್ದಾನೆ (ಈ ಅಗ್ನಿಯೇ) ಯಜ್ಞಾಯ—ಯಜ್ಞಾರ್ಥವಾಗಿ । ಪ್ರ ನೀಯತೇ—ತನ್ನ ಉತ್ಪತ್ತಿಸ್ಥಾನವಾದ ಅರಣಿಗಳ ಸಮೀಪದಿಂದ ಉತ್ತರವೇದಿಯಲ್ಲಿರುವ ಆಹವನೀಯಾಗ್ನಿಯ ಸಮೀಪಕ್ಕೆ ಒಯ್ಯಲ್ಪಡುತ್ತಾನೆ । ರಥಃ ನ—ರಂಹಣ ಶೀಲನಾದ ಅಥವಾ ರಥದಲ್ಲಿ ಸಂಚರಿಸುವ ಸೂರ್ಯನಂತೆ । ಘೃಣೀವಾನ್—ಪ್ರಕಾಶಮಾನನಾಗಿ ಬೆಳಗುತ್ತಲೂ । ಯೋಃ—ಹವಿಸ್ಸುಗಳನ್ನು ದೇವತೆಗಳಿಗೆ ಹಂಚುತ್ತಲೂ । ಅಭೀವೃತಃ—ಋತ್ವಿಗ್ಯಜಮಾನರಿಂದ ಪರಿವೃತನಾಗಿಯೂ ಇರುವ ಈ ಅಗ್ನಿಯು । ತ್ಮನಾ—ತಾನಾಗಿಯೇ (ಅನ್ಯರಪ್ರೇರಣೆ ಇಲ್ಲದೆ) । ಚೇತತಿ—ಯಜ್ಞದಲ್ಲಿ ದೇವತೆಗಳನ್ನು ಪೂಜಿಸುವ ವಿಧಾನವನ್ನು ತಿಳಿಯುತ್ತಾನೆ.

॥ ಭಾವಾರ್ಥ ॥

ಪ್ರಸಿದ್ಧನಾದ ಈ ಅಗ್ನಿಯೇ ದೇವತೆಗಳನ್ನು ಪೂಜಿಸಲಿಚ್ಛಿಸುತ್ತಾನೆ. ಈ ಅಗ್ನಿಯೇ ಯಜ್ಞಭೂಮಿಗೆ ದೇವತೆಗಳನ್ನು ಆಹ್ವಾನಮಾಡುತ್ತಾನೆ. ಈ ಅಗ್ನಿಯನ್ನು ಯಜ್ಞಾರ್ಥವಾಗಿ ಆಹವನೀಯಸ್ಥಾನಕ್ಕೆ ಒಯ್ಯುತ್ತಾರೆ. ರಥಸಂಚಾರಿಯಾದ ಸೂರ್ಯನಂತೆ ಪ್ರಕಾಶಿಸುವವನೂ ಹವಿಸ್ಸುಗಳನ್ನು ದೇವತೆಗಳಿಗೆ ಹಂಚುವವನೂ, ಋತ್ವಿಗ್ಯಜಮಾನರಾದಿ ಪರಿಜನರಿಂದ ಆವೃತನಾದವನೂ ಆದ ಈ ಅಗ್ನಿಯು ಯಜ್ಞದಲ್ಲಿ ಯಾವರೀತಿ ದೇವತೆಗಳನ್ನು ಪೂಜಿಸಬೇಕೆಂಬುದನ್ನು ಯಾರ ಪ್ರೇರಣೆಯೂ ಇಲ್ಲದೆ ತಾನಾಗಿಯೇ ತಿಳಿಯುತ್ತಾನೆ.

## English Translation.

This ministrant priest devoted to the gods is brought (hither) for the sacrifice; radiant as the swift-moving sun, uniting (the oblation and the gods) surrounded (by the priests, Agni) knows of himself (how to worship the gods).

॥ ಸಂಹಿತಾಪಾಠಃ ॥

ಅಯಮುಗ್ನಿರುರುಷ್ಯತ್ಯಮೃತಾದಿವ ಜನ್ಮನಃ ।
ಸಹಸಶ್ಚಿತ್ಸಹೀಯಾನ್ದೇವೋ ಜೀವಾತವೇ ಕೃತಃ ॥ ೪ ॥

|| ಪದಪಾಠಃ ||

ಅಯಂ । ಅಗ್ನಿಃ । ಉರುಷ್ಯತಿ । ಅಮೃತಾತ್ऽಇವ । ಜನ್ಮನಃ ।

ಸಹಸಃ । ಚಿತ್ । ಸಹೀಯಾನ್ । ದೇವಃ । ಜೀವಾತವೇ । ಕೃತಃ ॥ ೪ ॥

|| ಸಾಯಣಭಾಷ್ಯಂ ||

ಅಯಮಗ್ನಿರಮೃತಾದಮರಣಾದ್ದೇವನಿಮಿತ್ತಾದ್ಭಯಾದಿವ ಜನ್ಮನೋ ಜಾಯಮಾನಾನ್ಮನುಷ್ಯನಿಮಿತ್ತಾದ್ಭಯಾದಪ್ಯುರುಷ್ಯತಿ । ತಸ್ಮಾದ್ರಕ್ಷತಿ । ಉರುಷ್ಯತೀ ರಕ್ಷಾಕರ್ಮೇತಿ ಯಾಸ್ಕಃ । ನಿ. ೫-೨೩ ॥ ಭಾವವಾಚಿನೋಽಮೃತಶಬ್ದಸ್ಯ ನಞಾ ಬಹುವ್ರೀಹೌ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ಭೀತ್ರಾರ್ಥಾನಾಂ । ಪಾ. ೧-೪-೨೫ । ಇತ್ಯಪಾದಾನಸಂಜ್ಞಾ ॥ ಅಪಿ ಚಾಯಂ ದೇವಃ ಸಹಸಶ್ಚಿತ್ ॥ ಸಹ ಇತಿ ಬಲನಾಮ । ತಸ್ಮಾದುತ್ತರಸ್ಯ ಮತ್ವರ್ಥೀಯಸ್ಯ ಬಹುಲಂ ಛಂದಸೀತಿ ಲುಕ್ ॥ ಚಿಚ್ಛಬ್ದೋಽಪ್ಯರ್ಥಃ । ಸಹಸ್ವತೋ ಬಲವತೋಽಪಿ ಸಹೀಯಾನ್ ಬಲವತ್ತರಃ ॥ ಸಹಸ್ವಿಶಬ್ದಾದೀಯಸುನಿ ವಿನ್ಮತೋರಿತಿ ವಿನೋ ಲುಕ್ । ಟೇರಿತಿ ಟಿಲೋಪಃ ॥ ಏವಂಭೂತೋ ದೇವೋ ಜೀವಾತವೇ ಜೀವನಹೇತವೇ ಯಾಗಾಯ ಕೃತಃ । ಬ್ರಹ್ಮಣಾ ಸೃಷ್ಟಃ ॥

|| ಪ್ರತಿಪದಾರ್ಥ ||

**ಅಯಂ ಅಗ್ನಿಃ**—ಈ ಅಗ್ನಿಯು । **ಅಮೃತಾತ್ ಇವ**—ಮರಣರಹಿತರಾದ ದೇವತೆಗಳಿಂದ ಸಂಭವಿಸಬಹುದಾದ ಭಯದಿಂದ ರಕ್ಷಿಸುವಂತೆ । **ಜನ್ಮನಃ**—ಜನ್ಮವುಳ್ಳ ಮಾನವರಿಂದ ಉಂಟಾಗುವ ಭಯದಿಂದಲೂ । **ಉರುಷ್ಯತಿ**—ರಕ್ಷಿಸುತ್ತಾನೆ । **ದೇವಃ**—ಪ್ರಕಾಶಮಾನನಾದ ಈ ಅಗ್ನಿಯು । **ಸಹಸಃ ಚಿತ್**—ಅತ್ಯಂತ ಬಲಶಾಲಿಗಳಿಗಿಂತಲೂ । **ಸಹೀಯಾನ್** ಬಲವುಳ್ಳವನು (ಇಂತಹ ಅಗ್ನಿಯು) । **ಜೀವಾತವೇ**—ಜೀವನಾಧಾರವಾದ ಯಾಗಾರ್ಥವಾಗಿ । **ಕೃತಃ**—ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದ್ದಾನೆ.

|| ಭಾವಾರ್ಥ ||

ಈ ಅಗ್ನಿಯು ದೇವತೆಗಳಿಂದ ಸಂಭವಿಸುವ ಭಯದಿಂದ ರಕ್ಷಿಸುವಂತೆಯೇ ಮನುಷ್ಯರಿಂದ ಸಂಭವಿಸುವ ಭಯದಿಂದಲೂ ನಮ್ಮನ್ನು ರಕ್ಷಿಸುತ್ತಾನೆ ಪ್ರಕಾಶಮಾನನಾದ ಈ ಅಗ್ನಿಯು ಅತ್ಯಂತಬಲಶಾಲಿಗಳಿಗಿಂತಲೂ ಅಧಿಕಬಲಶಾಲಿಯು. ಇಂತಹ ಅಗ್ನಿಯು ಮಾನವರಿಗೆ ಜೀವನಹೇತುವಾದ ಯಾಗಾರ್ಥವಾಗಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿದ್ದಾನೆ.

## English Translation.

This Agni saves from peril caused by man as (well as) from peril caused by the immortals, a god, stronger than strength, created for life-producing (sacrifice)

# ನೂರ ಎಪ್ಪತ್ತೇಳನೆಯ ಸೂಕ್ತವು

## ಪೀಠಿಕೆ.

ಈ ಸೂಕ್ತದಲ್ಲಿ ಮಾಯಾಭೇದವೆಂಬ ಭಾವನಾದೇವತೆಯನ್ನು ಸ್ತುತಿಸಲಾಗಿದೆ. ಈ ಸೂಕ್ತಕ್ಕೆ ದೇವತಾಪರ ಮತ್ತು ಅಧ್ಯಾತ್ಮಪರ ಎಂಬ ಎರಡುವಿಧ ಅರ್ಥಗಳನ್ನು ಸಾಯಣರು ವಿವರಿಸಿದ್ದಾರೆ. ಅಪಶ್ಯಂ ಎಂಬ ಕೊನೆಯ ಋಕ್ಕಿಗೆ ನಿರುಕ್ತಪರಿಶಿಷ್ಟದಲ್ಲಿ ವಿಸ್ತಾರವಾದ ವಿವರಣೆ ಇದೆ. ಶೌನಕಪ್ರೋಕ್ತವಾದ ಬೃಹದ್ದೇವತೆಯೆಂಬ ಗ್ರಂಥದಲ್ಲಿ ಈ ಸೂಕ್ತದ ವಿಷಯವಾಗಿ ಈ ರೀತಿ ಹೇಳಿದೆ—

**ಋಷಿರ್ಜಗೌ ಪತಂಗಸ್ತು ಪತಂಗಮಿತಿ ಯತ್ಪರಂ ।**
**ತತ್ಸೌರ್ಯಮೇಕೇ ಮನ್ಯಂತೇ ಮಾಯಾಭೇದಂ ತಥಾಪರೇ ॥ ೭೫ ॥**
**ಮಾಯಾಭೇದೇ ದ್ವಿತೀಯಾಯಾಂ ವಾಕ್ ಸ್ತುತೇತ್ಯಾಹ ಶೌನಕಃ ।**
**ದೇವೀಂ ಬಿಭರ್ತಿ ಮನಸಾ ಯಾ ವಾಚಂ ವಿದಿತಾಂ ಸತೀಂ ॥ ೭೬ ॥**

ಪತಂಗನೆಂಬ ಋಷಿಯು ಪತಂಗಮಕ್ತಂ ಎಂಬ ಸೂಕ್ತದ ದ್ರಷ್ಟೃವಾಗಿರುವನು. ಈ ಸೂಕ್ತದಲ್ಲಿ ಸೂರ್ಯನನ್ನು ಸ್ತುತಿಸಿಲಾಗಿದೆಯೆಂದು ಕೆಲವರು ಹೇಳುವರು ಮತ್ತೆ ಕೆಲವರು ಮಾಯಾಭೇದವನ್ನು ಎಂದರೆ ಮಾಟ ಮಂತಾದ ಅಭಿಚಾರಿಕಕರ್ಮಗಳಿಗೆ ಪ್ರತೀಕಾರವನ್ನು ಹೇಳಿದೆಯೆಂದು ಹೇಳುವರು. ಈ ಸೂಕ್ತದಲ್ಲಿ ಹೇಳಿರುವ ಮಾಯಾಭೇದ ಸ್ತುತಿಯ ಸಂದರ್ಭದಲ್ಲಿ ಎರಡನೆಯ ಋಕ್ಕಿನಲ್ಲಿ ವಾಕ್ಕನ್ನು (ವಾಗ್ದೇವತೆಯನ್ನು) ಸ್ತುತಿಸಲಾಗಿದೆ ಎಂದು ಶೌನಕರು ಹೇಳುವರು ಈ ವಾಗ್ದೇವತೆಯು ಸರ್ವರಿಗೂ ತಿಳಿದಿರುವ ಎಂದರೆ ಪ್ರಸಿದ್ಧವಾದ ವಾಕ್ಕನ್ನು (ಮಾತನ್ನು, ಭಾಷೆಯನ್ನು) ಮನಸ್ಸಿನಲ್ಲಿ ಧರಿಸಿರುವಳು-ಎಂದರೆ ಸರ್ವರ ಮನಸ್ಸಿನಲ್ಲಿಯೂ ಇದ್ದುಕೊಂಡು ಅವರವರು ಆಡುವ ಮಾತುಗಳನ್ನು ಪ್ರೇರಿಸುವಳು. ಇಂತಹ ಈ ವಾಗ್ದೇವತೆಯನ್ನು ಎರಡನೇ ಋಕ್ಕಿನಲ್ಲಿ ಸ್ತುತಿಸಲಾಗಿದೆಯೆಂದು ಶೌನಕರ ಅಭಿಪ್ರಾಯವು.

॥ ಸಾಯಣಭಾಷ್ಯಂ ॥

**ಪತಂಗಮಿತಿ ತೃಚಂ ಷಡ್ವಿಂಶಂ ಸೂಕ್ತಂ ಪ್ರಜಾಪತಿಪುತ್ರಸ್ಯ ಪತಂಗಸ್ಯಾರ್ಷಂ । ಆದ್ಯಾ ಜಗತೀ ತತಸ್ತ್ರಿಷ್ಟುಭೌ । ಮಾಯಾಭೇದಸ್ಯ ಪ್ರತಿಪಾದ್ಯತ್ವಾತ್ತದ್ದೇವತ್ಯಮಿದಂ ಸೂಕ್ತಂ । ಅನುಕ್ರಾಂತಂ ಚ । ಪತಂಗಂ ತೃಚಂ ಪತಂಗಃ ಪ್ರಾಜಾಪತ್ಯೋ ಮಾಯಾಭೇದಂ ಜಗತ್ಯಾದೀತಿ ॥ ಪ್ರವರ್ಗ್ಯೇಽಭಿಷ್ಟವ ಆದ್ಯೇ ಋಚೌ । ಸೂತ್ರಿತಂ ಚ । ಪತಂಗಮಕ್ತಮಸುರಸ್ಯ ಮಾಯಯಾ ಯೋ ನಃ ಸನುತ್ಯಃ । ಆ. ೪-೭। ಇತಿ ॥**

ಅನುವಾದವು—**ಪತಂಗಂ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಇಪ್ಪತ್ತಾರನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ರಜಾಪತಿಪುತ್ರನಾದ ಪತಂಗನೆಂಬುವನು ಋಷಿಯು; ಈ ಸೂಕ್ತದಲ್ಲಿ ಮಾಯಾಭೇದವನ್ನು ಪ್ರತಿಪಾದಿಸಿರುವುದರಿಂದ ಈ ಸೂಕ್ತಕ್ಕೆ ಮಾಯಾಭೇದವೇ ದೇವತೆಯು; ಈ ಸೂಕ್ತದ ಮೊದಲನೆಯ ಋಕ್ಕು ಜಗತೀಛಂದಸ್ಕವು, ಮುಂದಿನ ಎರಡು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಪತಂಗಂ ತೃಚಂ ಪತಂಗಃ ಪ್ರಾಜಾಪತ್ಯೋ ಮಾಯಾಭೇದಂ ಜಗತ್ಯಾದಿ** ಎಂದು

ಹೇಳಿರುವುದು. ಪ್ರವರ್ಗ್ಯ ಎಂಬ ಇಷ್ಟಿಯ ಅಭಿಷ್ಟವದಲ್ಲಿ ಈ ಸೂಕ್ತದ ಮೊದಲಿನ ಎರಡು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಪತಂಗಮಕ್ತಮಸುರಸ್ಯ ಮಾಯಯಾ ಯೋ ನಃ ಸನುತ್ಯಃ ಎಂಬ ಸೂತ್ರದಿಂದ (ಆ. ೪-೭) ವಿವೃತವಾಗಿರುವುದು.

## ಸೂಕ್ತ—೧೭೭

ಮಂಡಲ—೧೦ || ಅನುವಾಕ--೧೨ || ಸೂಕ್ತ—೧೭೭ ||
ಅಷ್ಟಕ—೮ || ಅಧ್ಯಾಯ—೮ || ವರ್ಗ—೩೫ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ||
|| ಋಷಿಃ--ಪತಂಗಃ ಪ್ರಾಜಾಪತ್ಯಃ ||
|| ದೇವತಾ—ಮಾಯಾಭೇದಃ ||
|| ಛಂದಃ—೧. ಜಗತೀ | ೨, ೩. ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಪತಂಗಮಕ್ತಮಸುರಸ್ಯ ಮಾಯಯಾ ಹೃದಾ ಪಶ್ಯಂತಿ ಮನಸಾ ವಿಪಶ್ಚಿತಃ |
ಸಮುದ್ರೇ ಅಂತಃ ಕವಯೋ ವಿ ಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ || ೧ ||

|| ಪದಪಾಠಃ ||

ಪತಂಗಂ | ಅಕ್ತಂ | ಅಸುರಸ್ಯ | ಮಾಯಯಾ | ಹೃದಾ | ಪಶ್ಯಂತಿ | ಮನಸಾ | ವಿಪಃಽಚಿತಃ |
ಸಮುದ್ರೇ | ಅಂತರಿತಿ | ಕವಯಃ | ವಿ | ಚಕ್ಷತೇ | ಮರೀಚೀನಾಂ | ಪದಂ | ಇಚ್ಛಂತಿ | ವೇಧಸಃ ||೧||

| ಸಾಯಣಭಾಷ್ಯಂ ||

ಅಸುರಸ್ಯಾಸನಕುಶಲಸ್ಯ ಸರ್ವೋಪಾಧಿವಿಹೀನಸ್ಯ ಪರಬ್ರಹ್ಮಣಃ ಸಂಬಂಧಿನ್ಯಾ ಮಾಯಯಾ ತ್ರಿಗುಣಾತ್ಮಿಕಯಾಕ್ತಂ ವ್ಯಕ್ತಮಭಿವ್ಯಕ್ತಂ | ಯದ್ವಾ | ಮಾಯೇತಿ ಪ್ರಜ್ಞಾನಾಮ | ಪ್ರಜ್ಞಯಾ ಸಂಬದ್ಧಂ ಸರ್ವಜ್ಞಂ ಪತಂಗಂ | ಪತತಿ ಗಚ್ಛತೀತಿ ಪತಂಗಃ ಸೂರ್ಯಃ | ತಂ ವಿಪಶ್ಚಿತೋ ವಿದ್ವಾಂಸೋ ಹೃದಾ ಹೃತ್ಸ್ಥೇನ || ತಾತ್ಸ್ಥ್ಯಾತ್ತಾಚ್ಛಬ್ದ್ಯಂ || ಹೃದಿ ನಿರುದ್ಧೇನ ಮನಸಾ ಪಶ್ಯಂತಿ| ಜಾನಂತಿ | ಕವಯಃ ಕ್ರಾಂತದರ್ಶಿನಸ್ತೇ ಸಮುದ್ರೇ | ಸಮುದ್ದ್ರವಂತ್ಯಸ್ಮಾದ್ರಶ್ಮಯ ಇತಿ ಸಮುದ್ರಂ ಸೂರ್ಯಮಂಡಲಂ | ತಸ್ಮಿನ್ನಂತರ್ಮಧ್ಯೇ ವಿ ಚಕ್ಷತೇ | ವಿಪಶ್ಯಂತಿ | ಮಂಡಲಾಂತರ್ವರ್ತಿನಂ ಹಿರಣ್ಮಯಂ ಪುರುಷಮಪಿ ಜಾನಂತೀತ್ಯರ್ಥಃ | ಯ ಏವಂ ವೇಧಸೋ ವಿಧಾತಾರ ಉಕ್ತಪ್ರಕಾರೇಣ ಸೂರ್ಯೋಪಾಸನಸ್ಯ ಕರ್ತಾರಃ ತೇ ಮರೀಚೀನಾಂ ರಶ್ಮೀನಾಂ ಪದಂ ಸ್ಥಾನಂ ಸೂರ್ಯಮಂಡಲಮಿಚ್ಛಂತಿ | ಅಭಿಲಷಂತಿ | ತಮುಪಾಸ-

ನಯಾ ಪ್ರಾಪ್ನುವಂತೀತ್ಯರ್ಥಃ । ಯದ್ವಾ! ಮಾಯಯಾಕ್ತಂ ಜೀವರೂಪೇಣಾಭಿವ್ಯಕ್ತಮಾತ್ಮಾನಂ ವಿಪಶ್ಚಿತೋ ವೇದಾಂತಾಭಿಜ್ಞಾ ಹೃತ್ಸ್ಥೇನಾಂತರ್ಮುಖೇನ ಮನಸಾ ಪತಂಗಂ । ಪತತಿ ವ್ಯಾಪ್ನೋತೀತಿ ಪತಂಗಃ ಪರಮಾತ್ಮಾ । ತಂ ಪಶ್ಯಂತಿ । ಉಪಾಧಿಪರಿತ್ಯಾಗೇನ ಜೀವಾತ್ಮನಃ ಪರಮಾತ್ಮನಾ ತಾದಾತ್ಮ್ಯಂ ಸಾಕ್ಷಾತ್ಕುರ್ವಂತೀತ್ಯರ್ಥಃ । ಅಪಿ ಚ ತೇ ಕವಯಃ ಕ್ರಾಂತದರ್ಶಿನೋ ವೇದಾಂತಾಭಿಜ್ಞಾಃ ಸಮುದ್ರೇ । ಸಮುದ್ದ್ರವಂತ್ಯಸ್ಮಾದ್ಭೂತಾನೀತಿ ಸಮುದ್ರಃ ಪರಮಾತ್ಮಾ । ತಸ್ಮಿನ್ನಧಿಷ್ಠಾನಭೂತೇಽಂತರ್ಮಧ್ಯೇ ಸರ್ವಂ ದೃಶ್ಯಜಾತಮಧ್ಯಸ್ತತ್ವೇನ ವಿ ಚಕ್ಷತೇ । ವಿ ಪಶ್ಯಂತೀತಿ । ಅತೋ ದೃಗ್ವ್ಯತಿರಿಕ್ತಸ್ಯ ಸರ್ವಸ್ಯ ಮಿಥ್ಯಾತ್ವಾದ್ವೇಧಸೋ ವಿಧಾತಾರಸ್ತೇ ಮರೀಚೀನಾಂ ವೃತ್ತಿಜ್ಞಾನಾನಾಂ ಪದಮಧಿಷ್ಠಾನಭೂತಂ ಸಚ್ಚಿತ್ಸುಖಾತ್ಮಕಂ ಯತ್ಪರಂ ಬ್ರಹ್ಮ ತದೇವೇಚ್ಛಂತಿ । ತದ್ಭಾವಪ್ರಾಪ್ತಿಮೇವ ಕಾಮಯಂತೇ ॥

### ದೇವತಾಪರವಾದ ಅರ್ಥ

**ಅಸುರಸ್ಯ**—ಸರ್ವೋಪಾಧಿರಹಿತನಾದ ಪರಬ್ರಹ್ಮನ ಸಂಬಂಧವಾದ । **ಮಾಯಯಾ**—ತ್ರಿಗುಣಾತ್ಮಕವಾದ ಮಾಯೆಯಿಂದ ಅಥವಾ ಪ್ರಜ್ಞೆಯಿಂದ । **ಅಕ್ತಂ**—ಅಭಿವ್ಯಕ್ತನಾದ । **ಪತಂಗಂ**—ಸೂರ್ಯನನ್ನು । **ವಿಪಶ್ಚಿತಃ**—ವಿದ್ವಾಂಸರು । **ಹೃದಾ**—ಹೃದಯದ ಚಿತ್ತವೃತ್ತಿನಿರೋಧಾತ್ಮಕವಾದ । **ಮನಸಾ**—ಏಕಾಗ್ರತೆಯುಳ್ಳ ಮನಸ್ಸಿನಿಂದ । **ಪಶ್ಯಂತಿ**—ತಿಳಿಯುತ್ತಾರೆ । **ಕವಯಃ**—ಕ್ರಾಂತದರ್ಶಿಗಳಾದ ಅವರು । **ಸಮುದ್ರೇ ಅಂತಃ** ರಶ್ಮಿಗಳಿಗೆ ಆಕರವಾದ ಸೂರ್ಯಮಂಡಲದ ಮಧ್ಯದಲ್ಲಿ । **ವಿ ಚಕ್ಷತೇ**—ಮಂಡಲಾಂತವರ್ತಿಯಾದ ಹಿರಣ್ಮಯ ಪುರುಷನನ್ನು ಎಂದರೆ ಬ್ರಹ್ಮನನ್ನು ನೋಡಿ ತಿಳಿಯುತ್ತಾರೆ । **ವೇಧಸಃ**—ಈ ಪ್ರಕಾರವಾಗಿ ಸೂರ್ಯೋಪಾಸನೆಯನ್ನೂ ಮಾಡುವವರು । **ಮರೀಚೀನಾಂ**—ರಶ್ಮಿಗಳ । **ಪದಂ**—ಆವಾಸಸ್ಥಾನವಾದ ಸೂರ್ಯಮಂಡಲವನ್ನು (ಸೂರ್ಯಲೋಕವನ್ನು) । **ಇಚ್ಛಂತಿ**—ಅಪೇಕ್ಷಿಸುತ್ತಾರೆ ಎಂದರೆ ಪಡೆಯುತ್ತಾರೆ

### ॥ ಭಾವಾರ್ಥ ॥

ಸರ್ವೋಪಾಧಿರಹಿತನಾದ ಪರಬ್ರಹ್ಮನ ತ್ರಿಗುಣಾತ್ಮಕವಾದ ಮಾಯೆಯಿಂದ ಅಭಿವ್ಯಕ್ತನಾದ ಸೂರ್ಯನನ್ನು ವಿದ್ವಾಂಸರು ಮನಸ್ಸಿನ ಏಕಾಗ್ರತೆಯಿಂದ ತಿಳಿಯುತ್ತಾರೆ ಕ್ರಾಂತಿದರ್ಶಿಗಳಾದ ಅವರು ರಶ್ಮಿಗಳಿಗೆ ಆಕರವಾದ ಸೂರ್ಯಮಂಡಲಮಧ್ಯದಲ್ಲಿ ಅಂತರ್ವರ್ತಿಯಾಗಿರುವ ಹಿರಣ್ಮಯ ಪುರುಷನನ್ನು ಎಂದರೆ ಪರಬ್ರಹ್ಮನೆಂದು ತಿಳಿಯುತ್ತಾರೆ ಈ ಪ್ರಕಾರವಾಗಿ ಸೂರ್ಯೋಪಾಸನೆಯನ್ನು ಮಾಡುವವರು ರಶ್ಮಿಗಳ ಆವಾಸಸ್ಥಾನವಾದ ಸೂರ್ಯಲೋಕವನ್ನು ಎಂದರೆ ಪರಮಪದವನ್ನು ಪಡೆಯುತ್ತಾರೆ

### English Translation

The wice behold with their mind (seated) in their heart the Sun made manifeast by the illusion of the Asura; the sages look into the solar orb, the ordainers (of solar worship) desire the region of his rays.

॥ ವಿಶೇಷವಿಷಯಗಳು ॥

**ಪತಂಗಂ ಅಕ್ತಂ ಅಸುರಸ್ಯ ಮಾಯಯಾ**—ಇಲ್ಲಿ **ಅಸುರಸ್ಯ** ಎಂಬ ಶಬ್ದಕ್ಕೆ ಸರ್ವೋಪಾಧಿವಿಹೀನ ನಾದ ಪರಬ್ರಹ್ಮ ಎಂದು ಅರ್ಥಮಾಡಿದ್ದಾರೆ. ಸರ್ವೋಪಾಧಿರಹಿತ ಎಂದರೆ ಅವ್ಯಕ್ತಸ್ವರೂಪದಲ್ಲಿರುವ ಪರಬ್ರಹ್ಮನು. ಈ ಬ್ರಹ್ಮನ **ಮಾಯಯಾ** ಎಂದರೆ ಸತ್ತ್ವರಜಸ್ತಮೋರೂಪಗಳೆಂಬ ತ್ರಿಗುಣಾತ್ಮಕವಾದ ಮಾಯೆಯಿಂದ ಅಥವಾ ಸಂಕಲ್ಪರೂಪವಾದ ಪ್ರಜ್ಞೆಯಿಂದ. ಅವ್ಯಕ್ತಸ್ವರೂಪದಲ್ಲಿರುವ ಬ್ರಹ್ಮನಲ್ಲಿ ಸತ್ತ್ವರಜಸ್ತಮಸ್ಸುಗಳೆಂಬ ಮೂರುವಿಧ ಗುಣಗಳು ಒಂದೇ ಸಮನಾದ ಸ್ಥಿತಿಯಲ್ಲಿರುವವು ಆಗ ಜಗದಾದಿಗಳೊಂದೂ ಇರುವುದಿಲ್ಲ. ಎಲ್ಲವೂ ಶಾಂತವಾಗಿ ಬ್ರಹ್ಮವಸ್ತುವೊಂದೇ ಇರುವುದು. ಇದನ್ನು ಲಯಸ್ಥಿತಿಯೆಂದು ಹೇಳಬಹುದು ಪರಮಾತ್ಮನ ಸಂಕಲ್ಪದಿಂದ ಎಂದರೆ ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ ಈ ಅವ್ಯಕ್ತದೆಸೆಯಲ್ಲಿ ಸಮಾವಸ್ಥೆಯಲ್ಲಿರುವ ಸತ್ತ್ವರಜಸ್ತಮೋಗುಣಗಳಲ್ಲಿ ಕಂಪನ ಉಂಟಾಗಿ ಅವು ವಿಷಮಾವಸ್ಥೆಗೆ ಬರುವವು ಎಂದರೆ ಈ ಮೂರು ಗುಣಗಳಲ್ಲಿ ಎಲ್ಲವೂ ಒಂದೇ ಪ್ರಮಾಣಗಳಲ್ಲಿರದೆ ಹೆಚ್ಚುಕಡಿಮೆಯಾಗಿ ಪರಿವರ್ತಿತವಾಗುವುದು. ಆಗ ಅವ್ಯಕ್ತವು ವ್ಯಕ್ತರೂಪವಾಗಿ ಪರಿಣಮಿಸುವುದು. ಇದನ್ನೇ ಸೃಷ್ಟಿಯೆಂದು ಹೇಳುವರು. ಇನ್ನು **ಪತಂಗಂ ಅಕ್ತಂ** ಎಂಬ ಶಬ್ದಗಳ ವಿವರಣೆಯನ್ನು ಮಾಡುವಾಗ ಪತಂಗಶಬ್ದಕ್ಕೆ—**ಪತತಿ ಗಚ್ಛತೀತಿ ಪತಂಗಃ ಸೂರ್ಯಃ**—ಸರ್ವದಾ ಸಂಚರಿಸುವವನಾದ್ದರಿಂದ ಪತಂಗ ಎಂದರೆ ಸೂರ್ಯನು **ಅಕ್ತಂ** ಎಂದರೆ ಅಭಿವ್ಯಕ್ತನು, ಕಣ್ಣಿಗೆ ಕಾಣಿಸುವವನು. ಅವ್ಯಕ್ತಾವಸ್ಥೆಯಲ್ಲಿ ಬ್ರಹ್ಮಮಾತ್ರವಿದ್ದು ನಾಮರೂಪಗಳಿಂದ ಕೂಡಿದ ಯಾವವಸ್ತುಗಳೂ ಇಲ್ಲದಿರುವುದರಿಂದ ಆಗ ಸೂರ್ಯನೂ ಇರುವುದಿಲ್ಲ. ಆ ಅವ್ಯಕ್ತವು ವ್ಯಕ್ತಾವಸ್ಥೆಗೆ ಬಂದಾಗ ಈ ಜಗದಾದಿಗಳೂ ಸೂರ್ಯನೂ ಕಣ್ಣಿಗೆ ಕಾಣಿಸುವಂತೆ ವ್ಯಕ್ತವಾಗುವವು. ಇದನ್ನೇ ಇಲ್ಲಿ ಅಭಿವ್ಯಕ್ತನಾದ ಸೂರ್ಯನೆಂದು ಕರೆಯಲಾಗಿದೆ. ಈ ಜಗದಾದಿ ಸೃಷ್ಟಿಗಳೆಲ್ಲವೂ ಪರಬ್ರಹ್ಮನ ಮಾಯಾಶಕ್ತಿಯಿಂದ ಎಂದರೆ ಪ್ರಜ್ಞಾನ ದಿಂದ ನಡೆಯುವುವು

**ಹೃದಾ ಪಶ್ಯಂತಿ ಮನಸಾ ವಿಪಶ್ಚಿತಃ**—ಇಲ್ಲಿ **ಹೃದಾ ಮನಸಾ** ಎಂಬ ಶಬ್ದಗಳಿಗೆ ವಿಶೇಷವಾದ ಅರ್ಥ ವಿರುವುದು. ಲೋಕವ್ಯವಹಾರದಲ್ಲಿ ಒಂದು ವಸ್ತುವಿನ ಸ್ವರೂಪವನ್ನು ತಿಳಿಯಬೇಕಾದರೆ ಅದನ್ನು ಕಣ್ಣಿನಿಂದ ಅಥವಾ ಇಂದ್ರಿಯದ ಸಹಾಯದಿಂದ ತಿಳಿಯತ್ತೇವೆ. ಚಕ್ಷುರಾದಿಜ್ಞಾನೇಂದ್ರಿಯಗಳಿಂದ ವಸ್ತುಸ್ವರೂಪವನ್ನು ತಿಳಿಯಬೇಕಾದರೆ ಅದಕ್ಕೆ ಮನಸ್ಸಿನ ಸಹಾಯವೂ ಅವಶ್ಯಕವು. ಮನಸ್ಸಿನ ಸಹಾಯವಿಲ್ಲದೆ ಯಾವುದನ್ನೂ ತಿಳಿಯಲಾಗುವುದಿಲ್ಲ. ನಮ್ಮ ಮನಸ್ಸು ಎಲ್ಲಿಯೋ ಇದ್ದು ಕಣ್ಣುಗಳಿಂದ ವಸ್ತುವನ್ನು ನೋಡುತ್ತಿದ್ದರೂ ವಸ್ತುಸ್ವರೂಪವು ತಿಳಿಯುವುದಿಲ್ಲ. ಇದು ಎಲ್ಲರಿಗೂ ಅನುಭವವೇದ್ಯವಾದ ವಿಷಯ. ಒಂದು ವಸ್ತುವನ್ನು ಪರಿಶೀಲಿಸುವಾಗ ಅಥವಾ ಧ್ಯಾನಿಸುವಾಗ ಮನಸ್ಸಿನಲ್ಲಿ ಆ ವಸ್ತುವಿನ ವಿಷಯ ಒಂದನ್ನು ಬಿಟ್ಟು ಬೇರೆ ವೃತ್ತಿಗಳಿಗೆ ಅವಕಾಶವಿರಬಾರದು. ಎಂದರೆ ಚಿತ್ತೈಕಾಗ್ರತೆ ಇರಬೇಕು. ಈ ಚಿತ್ತೈಕಾಗ್ರತೆಯನ್ನೇ ಯೋಗವೆಂದೂ ಹೇಳುವರು. **ಯೋಗಶ್ಚಿತ್ತವೃತ್ತಿ-ನಿರೋಧಃ** ಎಂಬ ಯೋಗಸೂತ್ರದಂತೆ ಮನಸ್ಸಿನಲ್ಲಿರುವ ಇತರ ಪ್ರವೃತ್ತಿಗಳನ್ನು (ಇತರ ವಿಷಯಗಳಲ್ಲಿ ಗಮನ ವಿರುವುದನ್ನು) ತಡೆಗಟ್ಟಿ ಆ ಮನಸ್ಸು ಒಂದೇಕಡೆ ಸ್ಥಿರವಾಗಿ ನೆಲಸಿರುವಂತೆ ಮಾಡುವುದೇ ಯೋಗವು. ಇದನ್ನು ಚಿತ್ತೈಕಾಗ್ರತೆಯೆಂದೇ ಸ್ಥೂಲವಾಗಿ ಹೇಳಬಹುದು. ತಪಸ್ವಿಗಳೂ ಯೋಗಿಗಳೂ ಪರಮಾತ್ಮನನ್ನು ಧ್ಯಾನಿಸುವಾಗ ಈ ವಿಧವಾದ ಚಿತ್ತೈಕಾಗ್ರತೆಯಿಂದ ಧ್ಯಾನಿಸುವರು. ಇದರಿಂದ ಅವರು ಧ್ಯಾನಿಸುವ ವಸ್ತುವಿನ ಎಂದರೆ ಬ್ರಹ್ಮನ ಅಥವಾ ಇತರದೇವತೆಯ ಸಾಕ್ಷಾತ್ಕಾರವಾಗುವುದು. ಇದನ್ನೇ ಇಲ್ಲಿ **ವಿಪಶ್ಚಿತಃ** ಎಂದರೆ ಜ್ಞಾನಿಗಳು ಅಥವಾ

ದ್ವಾಂಸರು ಅನನ್ಯಮನಸ್ಕರಾಗಿ ಅಥವಾ ಚಿತ್ತೈಕಾಗ್ರತೆಯಿಂದ ಪರಬ್ರಹ್ಮನಲ್ಲಿಯೇ ನೆಲೆಗೊಳಿಸಿ ಅದನ್ನು ಸತತ ಾಗಿ ಧ್ಯಾನಮಾಡುವುದರಿಂದ ಈ ಸೂರ್ಯಮಂಡಲದಲ್ಲಿ ಅಂತರ್ಯಾಮಿಯಾಗಿರುವ ಹಿರಣ್ಯಪುರುಷನನ್ನು ಎಂದರೆ ರಬ್ರಹ್ಮನನ್ನು ಸಾಕ್ಷಾತ್ಕರಿಸುವರು. ಪರಬ್ರಹ್ಮನಿಂದ ಸೃಷ್ಟವಾದ ಸಮಸ್ತವಸ್ತುಗಳಲ್ಲಿಯೂ ಪರಮಾತ್ಮನು ಅಂತ ರ್ಯಾಮಿಯಾಗಿ ನೆಲೆಸಿರುವನೆಂದೂ ಆದ್ದರಿಂದ ಈ ಸೂರ್ಯಮಂಡಲಾಂತರ್ವರ್ತಿಯಾಗಿ ಅಲ್ಲಿಯೂ ಪರಮಾತ್ಮನು ರುವನೆಂದೂ ತಿಳಿಯಬೇಕು. ಈ ವಿಷಯದಲ್ಲಿ—

**ಅಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವ ಸನ್ಬ್ರಹ್ಮಾಪ್ಯೇತಿ ಯ ಏವಂ ವೇದ ॥**

**(ತೈ. ಆ. ೨-೨)**

ಗ ನಮ್ಮ ಕಣ್ಣಿಗೆ ಕಾಣುತ್ತಿರುವ ಈ ಆದಿತ್ಯನೇ (ಸೂರ್ಯನೇ) ಪರಬ್ರಹ್ಮವು. ಈ ಬ್ರಹ್ಮವನ್ನು ಉಪಾಸಿಸುವವನು ಹ್ಮನೇ ಆಗಿ ಬ್ರಹ್ಮನಲ್ಲಿ ಐಕ್ಯನಾಗುವನು ಎಂದು ಹೇಳಿದೆ ಮತ್ತು—

**ಆದಿತ್ಯೋ ವಾ ಏಷ ಏತನ್ಮಂಡಲಂ ತಪತಿ ತತ್ರ ತಾ ಋಚಸ್ತದೃಚಾ ಮಂಡಲಗ್ಂ ಸ ಋಚಾಂ ಲೋಕೋಽಥ ಯ ಏಷ ಏತಸ್ಮಿನ್ಮಂಡಲೇಽರ್ಚಿರ್ದೀಪ್ಯತೇ ತಾನಿ ಸಾಮಾನಿ ಸ ಸಾಮ್ನಾಂ ಲೋಕೋಽಥ ಯ ಏಷ ಏತಸ್ಮಿನ್ಮಂಡಲೇಽರ್ಚಿಷಿ ಪುರುಷಸ್ತಾನಿ ಯಜೂಗ್ಂಷಿ ಸ ಯಜು-ಷಾ ಮಂಡಲಗ್ಂ ಸ ಯಜುಷಾಂ ಲೋಕಸ್ಸೈಷಾ ತ್ರಯ್ಯೇವ ವಿದ್ಯಾ ತಪತಿ ಯ ಏಷೋಽ-ನ್ತರಾದಿತ್ಯೇ ಹಿರಣ್ಮಯಃ ಪುರುಷಃ ॥**

**(ತೈ. ಉ. ೪-೧೪)**

ಂಬ ತೈತ್ತಿರೀಯೋಪನಿಷದ್ವಾಕ್ಯದಲ್ಲಿ ಈ ಸೂರ್ಯಮಂಡಲದ ಮಧ್ಯದಲ್ಲಿ ಹಿರಣ್ಮಯನಾದ ಪುರುಷನು ಎಂದರೆ ಹ್ಮನೇ ಸೂರ್ಯರೂಪದಿಂದ ಬೆಳಗುತ್ತಿರುವನು ಎಂದು ಹೇಳಿದೆ.

**ಸಮುದ್ರೇ ಅಂತಃ ಕವಯೋ ವಿ ಚಕ್ಷತೇ**—ಇಲ್ಲಿ ಸಮುದ್ರಶಬ್ದಕ್ಕೆ—**ಸಮುದ್ದ್ರವಂತ್ಯಸ್ಮಾದ್ರಶ್ಮಯ ತಿ ಸಮುದ್ರಂ ಸೂರ್ಯಮಂಡಲಂ । ತಸ್ಮಿನ್ ಅಂತಃ ಮಧ್ಯೇ ।** ಸೂರ್ಯಮಂಡಲದಿಂದ ರಶ್ಮಿಗಳು ಹೊರ ೊರಟು ಬರುವುದರಿಂದ ಇದಕ್ಕೆ ಸಮುದ್ರವೆಂದು ಹೆಸರು ಎಂಬರ್ಥಮಾಡಿದಾರೆ. ಸಮುದ್ರವೆಂದರೆ ಸೂರ್ಯಮಂಡಲ. ದರ ಮಧ್ಯದಲ್ಲಿ ಅಂತರ್ವರ್ತಿಯಾಗಿ ಬೆಳಗುವ ಹಿರಣ್ಮಯಪುರುಷನೆಂಬ ಪರಬ್ರಹ್ಮನನ್ನು ಕ್ರಾಂತದರ್ಶಿಗಳು ಎಂದರೆ ತೀತಾಗತವರ್ತಮಾನಕಾಲಗಳಲ್ಲಿ ನಡೆಯುವ ಸಮಸ್ತವನ್ನೂ ತಮ್ಮ ಅಂತರ್ದೃಷ್ಟಿಯಿಂದ ತಿಳಿಯುವ ಜ್ಞಾನಿಗಳು ಾಕ್ಷಾತ್ಕರಿಸುತ್ತಾರೆ ಎಂದಭಿಪ್ರಾಯವು.

**ಮರೀಚೀನಾಂ ಪದಂ ಇಚ್ಛಂತಿ ವೇಧಸಃ—ಮರೀಚೀನಾಂ ಪದಂ** ಎಂದರೆ ರಶ್ಮಿಗಳ ಆಕರಸ್ಥಾನವಾದ ೂರ್ಯಮಂಡಲ, ಅಥವಾ ಸೂರ್ಯಲೋಕ, ಪರಮಪದ, ಅರ್ಥಾತ್ ಪರಬ್ರಹ್ಮ ಎಂದರ್ಥವು. ಸೂರ್ಯಮಂಡಲಾಂತ ರ್ತನಾದ ಪರಬ್ರಹ್ಮನನ್ನು ಉಪಾಸಿಸುವವರು ಆ ಪರಬ್ರಹ್ಮನೇ ಆಗಿ ಅದರಲ್ಲಿ ಐಕ್ಯರಾಗಿ ಮುಕ್ತಿಯನ್ನು ಪಡೆಯುವರು ಂದು ಇಲ್ಲಿ ಹೇಳಿದೆ. ಮೇಲೆ ಉದಾಹರಿಸಿದ—

**ಉದ್ಯಂತಮಸ್ತಂಯಂತಮಾದಿತ್ಯಮಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇಽಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವ ಸನ್ಬ್ರಹ್ಮಾಪ್ಯೇತಿ ॥**

**(ತೈ. ಆ. ೨-೨)**

ಎಂಬ ಶ್ರುತಿವಾಕ್ಯವು ಸಮರ್ಥಿಸುವುದು ಎಂದರೆ ಉದಯಾಸ್ತಮಯಕಾಲಗಳಲ್ಲಿ ಆದಿತ್ಯನನ್ನೇ ಧ್ಯಾನಿಸಿ ಉಪಾಸಿಸುವ ಜ್ಞಾನಿಯಾದ ಬ್ರಾಹ್ಮಣನು ಸಕಲ ಶ್ರೇಯಸ್ಸನ್ನೂ ಪಡೆಯುವುದಲ್ಲದೆ ಆದಿತ್ಯಸ್ವರೂಪದಿಂದಿರುವ ಈ ಬ್ರಹ್ಮನೇ ಆಗಿ ಅವನಲ್ಲಿಯೇ ಐಕ್ಯನಾಗುವನು.

ಅಧ್ಯಾತ್ಮಪರವಾದ ಅರ್ಥವು

**ಅಸುರಸ್ಯ**—ಪರಬ್ರಹ್ಮನ | **ಮಾಯಯಾ**—ಮಾಯೆಯಿಂದ | **ಅಕ್ತಂ**—ಜೀವರೂಪದಿಂದ ಅಭಿವ್ಯಕ್ತನಾದ ಆತ್ಮನನ್ನು (ಜೀವನನ್ನು) | **ವಿಪಶ್ಚಿತಃ**—ವೇದಾಂತಜ್ಞರು | **ಹೃದಾ ಮನಸಾ**—ಅಂತರ್ಮುಖವಾದ ಪ್ರಜ್ಞೆಯಿಂದ ಅಥವಾ ಮನಸ್ಸಿನಿಂದ | **ಪತಂಗಂ**—ಸರ್ವವ್ಯಾಪಕನಾದ ಪರಮಾತ್ಮನನ್ನಾಗಿ | **ಪಶ್ಯಂತಿ**—ತಿಳಿಯುತ್ತಾರೆ ಮತ್ತು) | **ಕವಯಃ**—ಕ್ರಾಂತದರ್ಶಿಗಳಾದ ವೇದಾಂತಿಗಳು | **ಸಮುದ್ರೇ ಅಂತಃ**—ಸಮಸ್ತ ಭೂತಗಳಿಗೂ) ಕಾರಣನಾದ ಪರಮಾತ್ಮನಲ್ಲಿ ಈ ಸಮಸ್ತಜಗದಾದಿಗಳೂ ಇರುವುದನ್ನು | **ವಿಚಕ್ಷತೇ**—ನೋಡಿ (ಧ್ಯಾನಿಸಿ) ತಿಳಿಯುತ್ತಾರೆ | **ವೇಧಸಃ**—ಈ ಸಮಸ್ತ ಜಗದಾದಿಗಳೂ ಮಿಥ್ಯವೆಂದು ತಿಳಿದಿರುವ ಈ ವೇದಾಂತಿಗಳು | **ಮರೀಚೀನಾಂ**—ವೃತ್ತಿಜ್ಞಾನಗಳಿಗೆ | **ಪದಂ**—ಅಧಿಷ್ಠಾನಭೂತವಾದ ಸಚ್ಚಿತ್ಸುಖಾತ್ಮಕವೂ ಶಾಶ್ವತವೂ ಆದ ಯಾವ ಪರಬ್ರಹ್ಮವಿರುವುದೋ ಅದನ್ನು ಎಂದರೆ ಪರಬ್ರಹ್ಮನಲ್ಲಿ ಐಕ್ಯವನ್ನು | **ಇಚ್ಛಂತಿ**—ಪಡೆಯಲಿಚ್ಛಿಸುತ್ತಾರೆ

|| ಭಾವಾರ್ಥ ||

ಪರಮಾತ್ಮನ ಮಾಯೆಯಿಂದ ಸೃಷ್ಟಿಸಲ್ಪಟ್ಟ ಈ ಜಗತ್ತಿನಲ್ಲಿ ಸಮಸ್ತ ಪ್ರಾಣಿಗಳಲ್ಲಿರುವ ಆತ್ಮನೂ ಪರಮಾತ್ಮನೂ ಒಂದೇ ಎಂದು ತಿಳಿಯುತ್ತಾರೆ. ಈ ವೇದಾಂತಿಗಳು ತಮ್ಮ ಅಂತರ್ಮುಖವಾದ ಪ್ರಜ್ಞೆಯಿಂದ ಅಥವಾ ಪರಿಪಕ್ವವಾದ ಬುದ್ಧಿಯಿಂದ ಜೀವಾತ್ಮನಿಗೂ ಪರಮಾತ್ಮನಿಗೂ ಭೇದವಿಲ್ಲ, ಇಬ್ಬರೂ ಒಂದೇ, ಪರಮಾತ್ಮನೇ ನಾನಾ ಪ್ರಾಣಿಗಳ ಶರೀರದಲ್ಲಿ ಅಂತರ್ಯಾಮಿಯಾಗಿದ್ದು ಜೀವಾತ್ಮನೆಂಬ ಅಭಿಧಾನದಿಂದ ವ್ಯವಹರಿಸಲ್ಪಡುವನು. ಆದ್ದರಿಂದ ಜೀವಾತ್ಮಪರಮಾತ್ಮರಿಗೆ ಯಾವ ಭೇದವೂ ಇಲ್ಲ. ಜೀವಾತ್ಮನೇ ಪರಮಾತ್ಮನು, ಪರಮಾತ್ಮನೇ ಜೀವಾತ್ಮನು. ಇವನು ಸರ್ವವ್ಯಾಪಕನು ಎಂಬ ಜೀವಾತ್ಮ ಪರಮಾತ್ಮರುಗಳಿಗೆ ಇರುವ ತಾದಾತ್ಮ್ಯವನ್ನು ಈ ವೇದಾಂತಿಗಳು ತಿಳಿಯುತ್ತಾರೆ. ಮತ್ತು ಈ ಪರಮಾತ್ಮನು ಅವ್ಯಕ್ತಾವಸ್ಥೆಯಲ್ಲಿರುವಾಗ ಸಮಸ್ತ ಭೂತಗಳೂ ಜಗದಾದಿಗಳೂ ಎಲ್ಲವೂ ಆ ಪರಮಾತ್ಮನಲ್ಲಿ ಬೀಜರೂಪದಿಂದ ಅಥವಾ ಸೂಕ್ಷ್ಮರೂಪದಿಂದ ಅಡಗಿರುವವು. ವ್ಯಕ್ತಾವಸ್ಥೆಯಲ್ಲಿ ಅಥವಾ ಸೃಷ್ಟಿ. ಕಾಲದಲ್ಲಿ ಜಗದಾದಿಗಳೆಲ್ಲವೂ ಅಭಿವ್ಯಕ್ತವಾಗುವವು ಎಂದರೆ ದೃಷ್ಟಿಗೋಚರವಾಗುವವು ಎಂಬುದನ್ನು ತಿಳಿಯುತ್ತಾರೆ. ಇದಲ್ಲದೆ ಕಣ್ಣಿಗೆ ಕಾಣುವ ಈ ಸಮಸ್ತ ಜಗದಾದಿಗಳೂ ಶಾಶ್ವತವಲ್ಲದ್ದರಿಂದ ಎಂದರೆ ಪ್ರಳಯಕಾಲದಲ್ಲಿ ಪರಮಾತ್ಮನಲ್ಲಿ ಲೀನವಾಗುವುದರಿಂದ ಯಾವಾಗಲೂ ನಾಶವಿಲ್ಲದೆ ಶಾಶ್ವತವಾಗಿರುವ ಪರಬ್ರಹ್ಮವಸ್ತುವನ್ನು ಮಾತ್ರ ಈ. ವೇದಾಂತಿಗಳು ಪಡೆಯಲು ಇಚ್ಛಿಸುತ್ತಾರೆ ಮತ್ತು ಬ್ರಹ್ಮೋಪಾಸನೆಯಿಂದ ಬ್ರಹ್ಮಪ್ರಾಪ್ತಿಯನ್ನೇ ಪಡೆಯುತ್ತಾರೆ

|| ವಿಶೇಷ ವಿಷಯಗಳು ||

**ಅಸುರಸ್ಯ ಮಾಯಯಾ ಅಕ್ತಂ ವಿಪಶ್ಚಿತಃ ಹೃದಾ ಮನಸಾ ಪತಂಗಂ ಪಶ್ಯಂತಿ**—ಸೃಷ್ಟಿಗೆ ಪೂರ್ವದಲ್ಲಿ ಪರಬ್ರಹ್ಮ ಅಥವಾ ಪರಮಾತ್ಮನೊಬ್ಬನೇ ಇದ್ದನು. ಅವನು ಅವ್ಯಕ್ತಾವಸ್ಥೆಯಲ್ಲಿದ್ದುದರಿಂದ ಈ ಜಗದಾದಿಗಳೊಂದೂ ಇರಲಿಲ್ಲ. ಆಗ ಪರಮಾತ್ಮನು ತನ್ನ ಮಾಯೆಯಿಂದ ಎಂದರೆ ಶಕ್ತಿ ಅಥವಾ ಪ್ರಜ್ಞೆಯಿಂದ ಅಥವಾ ಸಂಕಲ್ಪದಿಂದ ಜಗದಾದಿಗಳನ್ನು ಸೃಷ್ಟಿಸಬೇಕೆಂದು ಬಯಸಿದನು—

**ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದಗ್‌ಂ ಸರ್ವಮಸೃಜತ । ಯದಿದಂ ಕಿಂಚ । ತತ್ಸೃಷ್ಟ್ವಾ । ತದೇವಾನು ಪ್ರಾವಿಶತ್ ।**

**(ತೈ. ಉ. ೨-೬)**

ಸೃಷ್ಟಿಗೆ ಪೂರ್ವದಲ್ಲಿ ಅವ್ಯಕ್ತಾವಸ್ಥೆಯಲ್ಲಿದ್ದ ಪರಮಾತ್ಮನು ಸೃಷ್ಟಿಮಾಡಬೇಕೆಂದು ಎಂದರೆ ತಾನೇ ಬಹುವಿಧವಾಗಿ ವ್ಯಕ್ತನಾಗಬೇಕೆಂದು (ಬಹು ಸ್ಯಾಂ ಪ್ರಜಾಯೇಯೇತಿ) ಅಪೇಕ್ಷಿಸಿ ತಪಸ್ಸನ್ನು ಮಾಡಿದನು ಇಲ್ಲಿ ತಪಸ್ಸೆಂದರೆ ಧ್ಯಾನವೆಂದರ್ಥವು. ಲೌಕಿಕ ವ್ಯವಹಾರದಲ್ಲಿ ಒಂದು ವಸ್ತುವನ್ನು ನಿರ್ಮಿಸಬೇಕಾದರೆ-ಅದಕ್ಕೆ ನಿರ್ಮಿಸುವವನೂ ಎಂದರೆ ಕರ್ತೃವೂ, ಮೂಲವಸ್ತುವೂ, ನಿರ್ಮಾಣಸಾಧನವೂ ಬೇಕು ಆದರೆ ಪರಮಾತ್ಮನ ವಿಷಯದಲ್ಲಿ ಹಾಗಲ್ಲ. ಅವನು ಕೇವಲ ಧ್ಯಾನಮಾತ್ರದಿಂದ ಎಂದರೆ ಈ ರೀತಿ ಆಗಬೇಕು ಎಂದು ಧ್ಯಾನಮಾಡುವುದರಿಂದ ಅಥವಾ ಸಂಕಲ್ಪ (ನಿಶ್ಚಯ) ಮಾಡುವುದರಿಂದ ಎಲ್ಲವೂ ಸೃಷ್ಟಿಯಾಗುವುದು. ಎಂದರೆ ಪರಮಾತ್ಮನೇ ವ್ಯಕ್ತರೂಪನಾಗಿ ಗೋಚರಿಸುವನು. ಆದ್ದರಿಂದ ಅವ್ಯಕ್ತದೆಸೆಯಲ್ಲಿರುವ ಪರಮಾತ್ಮನಿಗೂ ವ್ಯಕ್ತನಾಗಿ ಜಗದಾದಿಗಳಾಗಿ ಪರಿವರ್ತಿತನಾಗಿರುವ ಪರಮಾತ್ಮನಿಗೂ ಯಾವ ಭೇದವೂ ಇಲ್ಲ. ಎಂದರೆ ಅವ್ಯಕ್ತಾವಸ್ಥೆಯಲ್ಲಿರುವ ಪರಮಾತ್ಮನಿಗೂ ವ್ಯಕ್ತಾವಸ್ಥೆಯಲ್ಲಿರುವ ಜೀವಾತ್ಮನಿಗೂ ಯಾವ ವ್ಯತ್ಯಾಸವೂ ಅಥವಾ ಭೇದವೂ ಇರುವುದಿಲ್ಲ. ಈ ತತ್ತ್ವವನ್ನು ವೇದಾಂತಿಗಳು ವೇದಾಧ್ಯಯನ, ಶಾಸ್ತ್ರಾಭ್ಯಾಸ, ಮನನಧ್ಯಾನಾದಿಗಳಿಂದ ಪರಿಪಕ್ವವಾದ ಬುದ್ಧಿಯಿಂದ ತಿಳಿಯುವರು. ಇಲ್ಲಿ **ಪತಂಗಂ** ಎಂದರೆ **ಪತತಿ ವ್ಯಾಪ್ನೋತೀತಿ ಪತಂಗಃ ಪರಮಾತ್ಮಾ** ಸಮಸ್ತವಸ್ತುಗಳಲ್ಲಿಯೂ ವ್ಯಾಪಿಸಿರುವ ಎಂದರೆ ಅವುಗಳಲ್ಲಿ ಅಂತರ್ಯಾಮಿ ರೂಪದಿಂದಿರುವ ಪರಮಾತ್ಮನು ಎಂದರ್ಥವು. ಪರಮಾತ್ಮನು ಎಲ್ಲಾ ಪ್ರಾಣಿಗಳಲ್ಲಿಯೂ ಇದ್ದು ಅವುಗಳ ಚಲನ ವಲನಗಳನ್ನು ಪ್ರೇರಿಸುವುದರಿಂದ—**ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾನ್ ಸರ್ವಾತ್ಮಾ** (ತೈ ಆ. ೩) ಜೀವಾತ್ಮನಿಗೂ ಪರಮಾತ್ಮನಿಗೂ ಭೇದವಿಲ್ಲ, ಜೀವಾತ್ಮನು ವ್ಯಕ್ತವಾಗಿರುವನು ಎಂದರೆ ಕಣ್ಣಿಗೆ ಕಾಣಿಸುತ್ತಿರುವನು. ಪರಮಾತ್ಮನು ಅವ್ಯಕ್ತರೂಪದಲ್ಲಿರುವುದರಿಂದ ಇಂದ್ರಿಯಾತೀತನು. ಇದನ್ನೆಲ್ಲಾ ವೇದಾಂತತತ್ತ್ವಜ್ಞರಾದವರು ತಿಳಿಯುವರು ಎಂದಭಿಪ್ರಾಯವು.

**ಸಮುದ್ರೇ ಅಂತಃ ಕವಯೋ ವಿ ಚಕ್ಷತೇ**—ಇಲ್ಲಿ ಸಮುದ್ರವೆಂದರೆ—**ಸಮುದ್ದ್ರವಂತ್ಯಸ್ಮಾದ್ಭೂತಾನೀತಿ ಸಮುದ್ರಃ ಪರಮಾತ್ಮಾ.** ಈ ಪರಮಾತ್ಮನಿಂದ ಸಮಸ್ತಭೂತಜಾತಗಳೂ ಹೊರಟುಬರುವುದರಿಂದ, ಹೊರಸೂಸುವುದರಿಂದ ಎಂದರೆ ಇವುಗಳ ಉತ್ಪತ್ತಿಗೆ ಪರಮಾತ್ಮನೇ ಕಾರಣವಾಗಿರುವುದರಿಂದ ಸಮುದ್ರವೆಂದರೆ ಪರಮಾತ್ಮನು. ಇಂತಹ ಪರಮಾತ್ಮನಲ್ಲಿ ಎಂದರೆ ಅವ್ಯಕ್ತಾವಸ್ಥೆಯಲ್ಲಿರುವ ಪರಮಾತ್ಮನಲ್ಲಿ ಜಗದಾದಿಗಳು ಅಡಗಿರುವವು ಎಂದೂ ಸೃಷ್ಟಿಕಾಲದಲ್ಲಿ ಅವು ಆ ಪರಮಾತ್ಮನಿಂದಲೇ ಹೊರಸೂಸಿ ಬಂದು ಅಭಿವ್ಯಕ್ತವಾಗುವವು ಎಂದೂ ವೇದಾಂತಿಗಳು ತಿಳಿಯುತ್ತಾರೆ. **ಕವಯಃ** ಎಂದರೆ ಕ್ರಾಂತದರ್ಶಿಗಳು. ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ನಡೆದ ನಡೆಯುವ ನಡೆಯುತ್ತಿರುವ ಸಮಸ್ತವನ್ನೂ ತಮ್ಮ ದಿವ್ಯದೃಷ್ಟಿ ಅಥವಾ ಜ್ಞಾನದಿಂದ ತಿಳಿಯಬಲ್ಲವರು. ಇಂತಹ ವೇದಾಂತ ಜ್ಞಾನಿಗಳು ಇವೆಲ್ಲವನ್ನೂ ತಿಳಿಯುತ್ತಾರೆ.

**ಮರೀಚೀನಾಂ ಪದಂ ಇಚ್ಛಂತಿ ವೇಧಸಃ**—ಇಲ್ಲಿ ಮರೀಚಿನಾಂ ಎಂಬ ಶಬ್ದಕ್ಕೆ **ವೃತ್ತಿಜ್ಞಾನಾನಾಂ** ಎಂದರ್ಥಮಾಡಿದ್ದಾರೆ. ವೃತ್ತಿ ಎಂದರೆ ನಾನಾವಿಧಕಾರ್ಯಗಳಲ್ಲಿ ಪ್ರವೃತ್ತಿಯು, ಕಾರ್ಯಗಳನ್ನು ಮಾಡುವುದು. ಜ್ಞಾನವೆಂದರೆ ತಿಳಿವಳಿಕೆಯು. ಇವುಗಳಿಗೆಲ್ಲಾ ಮೂಲಸ್ಥಾನವು ಬ್ರಹ್ಮವೇ ಆಗಿರುವುದರಿಂದ **ಮರೀಚೀನಾಂ ಪದಂ** ಎಂದರೆ ಪ್ರವೃತ್ತಿನಿವೃತ್ತಿಮಾರ್ಗಗಳಿಗೆ ಮೂಲಕಾರಣವಾದ ಪರಬ್ರಹ್ಮವು. ಈ ಬ್ರಹ್ಮಕ್ಕೆ ನಾಶವಿಲ್ಲ ಸೃಷ್ಟವಾದ ಜಗ

ದಾದಿಗಳಿಗೆ ನಾಶವಿರುವುದು. ಆದರೆ ಬ್ರಹ್ಮವಸ್ತುವಿಗೆ ನಾಶವಿಲ್ಲ, ಶಾಶ್ವತವಾಗಿರುವುದು ಆದ್ದರಿಂದ ವೇದಾಂತಜ್ಞರು ಈ ಬ್ರಹ್ಮವನ್ನು ಉಪಾಸನೆಮಾಡಿ ಶಾಶ್ವತವಾದ ಬ್ರಹ್ಮವನ್ನೇ ಪಡೆದು ಅದರಲ್ಲಿ ಐಕ್ಯವಾಗಬೇಕೆಂದು ಅಪೇಕ್ಷಿಸುವರು. ಈ ಬ್ರಹ್ಮೈಕ್ಯ, ಪರಮಪದಪ್ರಾಪ್ತಿ ಎಂದರೆ ಮುಕ್ತಿಯು ಇದನ್ನೇ ಬಯಸುವರು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ಪತಂಗೋ ವಾಚಂ ಮನಸಾ ಬಿಭರ್ತಿ ತಾಂ ಗಂಧರ್ವೋಽವದದ್ಗರ್ಭೇ ಅಂತಃ ।
ತಾಂ ದ್ಯೋತಮಾನಾಂ ಸ್ವರ್ಯಂ ಮನೀಷಾಮೃತಸ್ಯ ಪದೇ ಕವಯೋ ನಿ ಪಾಂತಿ ॥ ೨ ॥

॥ ಪದಪಾಠಃ ॥

ಪತಂಗಃ । ವಾಚಂ । ಮನಸಾ । ಬಿಭರ್ತಿ । ತಾಂ । ಗಂಧರ್ವಃ । ಅವದತ್ । ಗರ್ಭೇ । ಅಂತರಿತಿ ।
ತಾಂ । ದ್ಯೋತಮಾನಾಂ । ಸ್ವರ್ಯಂ । ಮನೀಷಾಂ । ಋತಸ್ಯ । ಪದೇ । ಕವಯಃ । ನಿ । ಪಾಂತಿ ॥ ೨ ॥

॥ ಸಾಯಣಭಾಷ್ಯಂ ॥

ವಾಗ್ದೇವತ್ಯೇ ಪಶೌ ಪತಂಗೋ ವಾಚಮಿತಿ ಪುರೋಡಾಶಸ್ಯಾನುವಾಕ್ಯಾ । ಸೂತ್ರಿತಂ ಚ । ಯದ್ವಾಗ್ವದಂತ್ಯವಿಚೇತನಾನಿ ಪತಂಗೋ ವಾಚಂ ಮನಸಾ ಬಿಭರ್ತಿ । ಆ. ೩-೮ । ಇತಿ ॥

ಪತಂಗಃ ಸೂರ್ಯೋ ವಾಚಂ ತ್ರಯೀರೂಪಾಂ ಮನಸಾ ಪ್ರಜ್ಞಯಾ ಬಿಭರ್ತಿ । ಧಾರಯತಿ । ಶ್ರೂಯತೇ ಹಿ । ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ ಸಾಮವೇದೇನಾಸ್ತಮಯೇ ಮಹೀಯತೇ ವೇದೈರಶೂನ್ಯಸ್ತ್ರಿಭಿರೇತಿ ಸೂರ್ಯಃ । ತೈ. ಬ್ರಾ. ೩-೧೨-೯-೧। ಇತಿ । ತಾಮೇವ ವಾಚಂ ಗರ್ಭೇ ಶರೀರಸ್ಯ ಮಧ್ಯೇ ವರ್ತಮಾನೋ ಗಂಧರ್ವಃ । ಗಾಃ ಶಬ್ದಾನ್ಧಾರಯತೀತಿ ಗಂಧರ್ವಃ ಪ್ರಾಣವಾಯುಃ । ಅಂತರ್ಮಧ್ಯೇಽವದತ್ । ವದತಿ । ಪ್ರೇರಯತಿ । ಮಾರುತಸ್ತೂರಸಿ ಚರನ್ಮಂದ್ರಂ ಜನಯತಿ ಸ್ವರಂ । ಪಾ. ಶಿ. ೭. । ಇತಿ ಸ್ಮರಣಾತ್ । ದ್ಯೋತಮಾನಾಂ ಸ್ವರ್ಯಂ ಸ್ವರ್ಗಮಯಿತ್ರೀಂ ಸ್ವರ್ಗಾಯ ಹಿತಾಂ ವಾ ಮನೀಷಾಂ ಮನಸ ಈಶಿತ್ರೀಂ ತಾಂ ತ್ರಯೀರೂಪಾಂ ವಾಚಮೃತಸ್ಯ ಯಜ್ಞಸ್ಯ ಸತ್ಯಭೂತಸ್ಯ ಸೂರ್ಯಸ್ಯ ವಾ ಪದೇ ಸ್ಥಾನೇ ಕವಯೋ ಮೇಧಾವಿನ ಋಷಯೋ ನಿ ಪಾಂತಿ । ಅಧ್ಯಾಪನೇನ ನಿತರಾಂ ರಕ್ಷಂತಿ । ಯದ್ವಾ । ಪತಂಗಃ ಸರ್ವೋಪಾಧಿಶೂನ್ಯೋ ವ್ಯಾಪ್ತಃ ಪರಮಾತ್ಮಾ । ಸ ಸೃಷ್ಟ್ಯಾದೌ ವಾಚಂ ಮನಸಾ ಬಿಭರ್ತಿ । ಕಾನಿ ಕಾನಿ ಸ್ರಷ್ಟವ್ಯಾನೀತಿ ಪರ್ಯಾಲೋಚನೇನ ಮನಸಾ ಸಕಲಾರ್ಥಪ್ರತಿಪಾದಕಂ ವೇದಂ ಪರಾಮೃಷ್ಟವಾನಿತ್ಯರ್ಥಃ । ಸ್ಮರ್ಯತೇ ಹಿ । ವೇದಶಬ್ದೇಭ್ಯ ಏವಾದೌ

**ನಿರ್ಮಾಣೋ ಸ ಮಹೇಶ್ವರ ಇತಿ । ಗರ್ಭೇ ಹಿರಣ್ಮಯೇ ಬ್ರಹ್ಮಾಂಡೇಽಂತರ್ವರ್ತಮಾನೋ ಗಂಧರ್ವೋ ಹಿರಣ್ಯಗರ್ಭಸ್ತಾಂ ವಾಚಮವದತ್ । ಪ್ರಥಮಮುಚ್ಚಾರಿತವಾನ್ । ದ್ಯೋತಮಾನತ್ವಾದಿಗುಣವಿಶಿಷ್ಟಾಂ ತಾಂ ವಾಚಂ ಕವಯಃ ಕ್ರಾಂತದರ್ಶಿನೋ ದೇವಾ ಋತಸ್ಯ ಸತ್ಯಸ್ಯ ಬ್ರಹ್ಮಣಃ ಪದೇ ಸ್ಥಾನೇ ನಿ ಪಾಂತಿ । ನಿಭೃತಂ ರಕ್ಷಂತಿ ॥**

॥ ದೇವತಾಪರವಾದ ಅರ್ಥ ॥

**ಪತಂಗಃ**—ಸತತಸಂಚಾರಿಯಾದ ಸೂರ್ಯನು । **ವಾಚಂ**—ಮೂರು ವೇದಗಳ ರೂಪವಾದ ವಾಕ್ಯವನ್ನು । **ಮನಸಾ**—ಪ್ರಜ್ಞೆಯಿಂದ । **ಬಿಭರ್ತಿ**—ಧರಿಸುತ್ತಾನೆ । **ತಾಂ**—ಆ ವಾಕ್ಯವನ್ನೇ । **ಗರ್ಭೇ**—ಶರೀರ ಮಧ್ಯದಲ್ಲಿರುವ । **ಗಂಧರ್ವಃ**—ಪ್ರಾಣವಾಯುವು । **ಅಂತಃ**—ಶರೀರದ ಒಳಗಿನಿಂದಲೇ । **ಅವದತ್**—ಪ್ರೇರಿಸುತ್ತದೆ (ಮತ್ತು) । **ದ್ಯೋತಮಾನಾಂ**—ಪ್ರಕಾಶಮಾನವಾದುದೂ । **ಸ್ವರ್ಯಂ**—ಸ್ವರ್ಗಸಾಧನಭೂತವಾದುದೂ । **ಮನೀಷಾಂ**—ಮನಸ್ಸಿನಲ್ಲಿ ಧ್ಯಾನಿಸಲ್ಪಡುವುದೂ ಅಥವಾ ಮನಃಪೂರ್ವಕವಾಗಿ ಉಚ್ಚರಿಸಲ್ಪಡುವುದೂ ಆದ । **ತಾಂ**—ಆ ಮೂರುವೇದಗಳ ರೂಪವಾದ ವಾಕ್ಯವನ್ನು । **ಋತಸ್ಯ**—ಯಜ್ಞದ ಅಥವಾ ಸೂರ್ಯನ । **ಪದೇ**—ಸ್ಥಾನದಲ್ಲಿ । **ಕವಯಃ**—ಮೇಧಾವಿಗಳಾದ ಋಷಿಗಳು । **ನಿ ಪಾಂತಿ**—ಅಧ್ಯಾಪನದಿಂದ ರಕ್ಷಿಸುತ್ತಾರೆ.

॥ ಭಾವಾರ್ಥ ॥

ಸದಾ ಸಂಚರಿಸುವ ಸೂರ್ಯನು ಋಗ್ಯಜುಸ್ಸಾಮಗಳೆಂಬ ಮೂರು ವೇದಗಳ ಮಹಿಮೆಯಿಂದಲೇ ತನ್ನ ಗತಿಯನ್ನು ನಿರ್ವಹಿಸಲು ಸಮರ್ಥನಾಗುತ್ತಾನೆ. ಶರೀರ ಮಧ್ಯದಲ್ಲಿರುವ ಪ್ರಾಣವಾಯುವು ಶರೀರದ ಒಳಗೆ ಇದ್ದುಕೊಂಡು ವಾಕ್ಯವನ್ನು ಎಂದರೆ ವೇದದ ಉಚ್ಚಾರಣೆಯನ್ನು ಪ್ರೇರಿಸುತ್ತದೆ. ಇಂತಹ ಪ್ರಕಾಶಮಾನವಾದುದೂ ಎಂದರೆ ಉತ್ಕೃಷ್ಟವಾದುದೂ, ಸ್ವರ್ಗಪ್ರಾಪ್ತಿಗೆ ಸಾಧನಭೂತವಾದುದೂ ಆದ ಆ ಮೂರುವೇದಗಳನ್ನು ಋಷಿಗಳು ಯಜ್ಞವೇದಿಯಲ್ಲಿ ಪಠಿಸುತ್ತಾ ಮತ್ತು ಶಿಷ್ಯರಿಗೆ ಅಧ್ಯಯನ ಮಾಡಿಸುತ್ತಾ ಅವು ನಾಶವಾಗದಂತೆ ರಕ್ಷಿಸುತ್ತಾರೆ.

## English Translation.

The Sun beares the (sacred) word in his mind, the Gandharva has spoken it (abiding) within the womb; sages cherish it in the place of sacrifice brilliant, heavenly, ruling the mind.

॥ ವಿಶೇಷವಿಷಯಗಳು ॥

**ಪತಂಗಃ ವಾಚಂ ಮನಸಾ ಬಿಭರ್ತಿ**—ಸೂರ್ಯನು ಋಗ್ಯಜುಃಸಾಮಗಳೆಂಬ ತ್ರಯೀಮಯವಾದ ವಾಕ್ಯ ಅಥವಾ ಮಂತ್ರವನ್ನು ತನ್ನ ಪ್ರಜ್ಞೆಯಿಂದ ಧರಿಸುತ್ತಾನೆ ಎಂದರೆ ಋಗ್ಯಜುಸ್ಸಾಮಗಳೆಂಬ ವೇದವಾಕ್ಯಗಳ ಪ್ರಜ್ಞೆಯಿಂದ ಎಂದರೆ ಅವುಗಳನ್ನು ಮನಸ್ಸಿನಲ್ಲಿ ಧ್ಯಾನಿಸುವದರಿಂದ ತನ್ನ ಸಂಚಾರಸಾಮರ್ಥ್ಯವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ—

**ಋಚಾಂ ಪ್ರಾಚೀ ಮಹತೀ ದಿಗುಚ್ಯತೇ । ದಕ್ಷಿಣಾಮಾಹುರ್ಯಜುಷಾಮಪಾರಾಂ । ಅಥರ್ವಣಾ-ಮಂಗಿರಸಾಂ ಪ್ರತೀಚೀ । ಸಾಮ್ನಾಮುದೀಚೀ ಮಹತೀ ದಿಗುಚ್ಯತೇ ॥**

(ತೈ. ಬ್ರಾ. ೩-೧೨-೯-೧)

ಎಂದು ತೈತ್ತಿರೀಯಬ್ರಾಹ್ಮಣದಲ್ಲಿ ಹೇಳಿದೆ ಋಗ್ವೇದಕ್ಕೆ ಅಥವಾ ಋಗ್ವೇದಾಭಿಮಾನಿದೇವತೆಗೆ ಪೂರ್ವದಿಕ್ಕು ಪ್ರಿಯವಾಗಿದೆ. ಹಾಗೆಯೇ ಯಜುರ್ವೇದಕ್ಕೆ ದಕ್ಷಿಣದಿಕ್ಕೂ, ಅಥರ್ವಣವೇದಕ್ಕೆ ಪಶ್ಚಿಮದಿಕ್ಕೂ ಸಾಮವೇದಕ್ಕೆ ಉತ್ತರದಿಕ್ಕೂ ನಿರ್ದಿಷ್ಟವಾಗಿವೆ.

**ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೆ । ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ । ಸಾಮವೇದೇನಾಸ್ತಮಯೇ ಮಹೀಯತೇ । ವೇದೈರಶೂನ್ಯಸ್ತ್ರಿಭಿರೇತಿ ಸೂರ್ಯಃ ॥**

(ತೈ. ಬ್ರಾ. ೩-೧೨-೯-೧)

ಸೂರ್ಯನು ಪೂರ್ವಾಹ್ಣದಲ್ಲಿ ಋಗ್ದೇವತೆಗಳೊಡನೆ ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಸಂಚಾರಮಾಡುತ್ತಾನೆ ಮಧ್ಯಾಹ್ನಕಾಲದಲ್ಲಿ ಯಜುರ್ವೇದಾಭಿಮಾನಿದೇವತೆಯ ಸಮೀಪದಲ್ಲಿ ದಕ್ಷಿಣದಿಕ್ಕಿನಲ್ಲಿರುತ್ತಾನೆ ಸಾಯಂಕಾಲದಲ್ಲಿ ಸಾಮವೇದಾಭಿಮಾನಿದೇವತೆಗಳೊಡನೆ ಪೂಜಿಸಲ್ಪಡುತ್ತಾನೆ. ಈ ರೀತಿ ಮೂರುವೇದಗಳ ಸಹಾಯದಿಂದ ಸೂರ್ಯನು ಆಯಾಕಾಲಗಳಲ್ಲಿ ಆಯಾಪ್ರದೇಶಗಳಲ್ಲಿ ಅಭಿವ್ಯಕ್ತನಾಗುತ್ತಾನೆ ಎಂದರೆ ಸಂಚಾರಕ್ರಮವನ್ನು ಅನುಸರಿಸುತ್ತಾನೆ. ಮತ್ತು ತೈತ್ತಿರೀಯೋಪನಿಷತ್ತಿನಲ್ಲಿ—

**ಆದಿತ್ಯೋ ವಾ ಏಷ ಏತನ್ಮಂಡಲಂ ತಪತಿ ತತ್ರ ತಾ ಋಚಸ್ತದೃಚಾ ಮಂಡಲಗ್‍ಂ ಸ ಋಚಾಂ ಲೋಕೋಽಥ ಯ ಏಷ ಏತಸ್ಮಿನ್ಮಂಡಲೇಽರ್ಚಿರ್ದೀಪ್ಯತೇ ತಾನಿ ಸಾಮಾನಿ ಸ ಸಾಮ್ನಾಂ ಲೋಕೋಽಥ ಯ ಏಷ ಏತಸ್ಮಿನ್ಮಂಡಲೇಽರ್ಚಿಷಿ ಪುರುಷಸ್ತಾನಿ ಯಜೂಗ್‍ಂಷಿ ಸ ಯಜುಷಾ ಮಂಡಲಗ್‍ಂ ಸ ಯಜುಷಾಂ ಲೋಕಸ್ಸೈಷಾ ತ್ರಯ್ಯೇವ ವಿದ್ಯಾ ತಪತಿ ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷಃ ॥** (ತೈ. ಉ. ೪-೧೪)

ಎಂದು ಹೇಳಿದೆ. ಇಲ್ಲಿಯೂ ಸಹ ಆದಿತ್ಯನು ಋಗ್ಯಜುಸ್ಸಾಮಗಳೆಂಬ ತ್ರಯೀವೇದಗಳ ಮಹಿಮೆಯಿಂದಲೇ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ ಎಂದು ವರ್ಣಿಸಿದೆ ಎಂದರೆ ಸೂರ್ಯಗತಿಗೆ ಈ ಮೂರುವೇದಗಳೇ ಆಶ್ರಯಭೂತವಾಗಿವೆ. ವೇದಗಳ ಸಹಾಯದಿಂದಲೇ ಸೂರ್ಯನ ಸಂಚಾರವು ನಡೆಯುವುದು.

**ತಾಂ ಗಂಧರ್ವಃ ಅವದತ್ ಗರ್ಭೇ ಅಂತಃ**—ಇಲ್ಲಿ ಗಂಧರ್ವಶಬ್ದಕ್ಕೆ **ಗಾಃ ಶಬ್ದಾನ್ ಧಾರಯತೀತಿ ಗಂಧರ್ವಃ ಪ್ರಾಣವಾಯುಃ**—ಶಬ್ದಗಳನ್ನು ಧರಿಸುವುದರಿಂದ ಎಂದರೆ ಪ್ರೇರಿಸುವುದರಿಂದ, ಉಚ್ಚರಿಸುವುದಕ್ಕೆ ಸಹಾಯಮಾಡುವುದರಿಂದ ಗಂಧರ್ವನೆಂದರೆ ಪ್ರಾಣವಾಯುವು ಎಂದರ್ಥಮಾಡಿದ್ದಾರೆ. ಪಾಣಿನೀಯ ಶಿಕ್ಷೆಯಲ್ಲಿ—**ಮಾರುತಸ್ತೂರಸಿ ಚರನ್ ಮಂದ್ರಂ ಜನಯತಿ ಸ್ವರಂ** (ಪಾ. ಶಿ. ೭) ಹೃದಯದಲ್ಲಿ ವಾಯುವು ಸಂಚರಿಸುತ್ತಾ ಮಂದ್ರಸ್ವರವನ್ನು ಉತ್ಪಾದನೆ ಮಾಡುತ್ತದೆ ಎಂದು ಹೇಳಿದೆ. ನಾವು ಬಾಯಿಸಿಂದ ಮಾತನಾಡುವುದಾದರೂ ಮಾತನಾಡುವುದಕ್ಕೆ ಎಂದರೆ ಶಬ್ದಗಳನ್ನು ಉಚ್ಚರಿಸುವುದಕ್ಕೂ ವಾಯುವಿನ ಸಹಾಯವು ಬೇಕೇ ಬೇಕು. ಆ ವಾಯುವು

ಹೃದಯದಿಂದ ಹೊರಟು ಬರುವುದು ಆದ್ದರಿಂದ ಶರೀರ ಅಥವಾ ಹೃದಯಮಧ್ಯದಲ್ಲಿ ಸಂಚರಿಸುತ್ತಿರುವ (ಉಸಿರು ಆಡುವ) ಪ್ರಾಣವಾಯುವು ಶಬ್ದಗಳನ್ನು ಎಂದರೆ ವೇದಮಂತ್ರಗಳನ್ನು ಉಚ್ಚರಿಸಲು ಸಹಾಯಮಾಡುವುದು ಎಂದು ಅಭಿಪ್ರಾಯವು

**ತಾಂ ದ್ಯೋತಮಾನಾಂ ಸ್ವರ್ಯಂ ಮನೀಷಾಂ—** ಈ ವೇದಮಂತ್ರವು ಪ್ರಕಾಶಮಾನವಾದುದು ಎಂದರೆ ಉತ್ಕೃಷ್ಟವಾದುದು, ಶ್ರೇಷ್ಠವಾದುದು. **ಸ್ವರ್ಯಂ** ಎಂದರೆ ಸ್ವರ್ಗಪ್ರಾಪ್ತಿಸಾಧನವಾದುದು. ವೇದಮಂತ್ರಗಳನ್ನು ಅಧ್ಯಯನಮಾಡುವುದರಿಂದಲೂ, ಯಜ್ಞಾದಿಗಳಲ್ಲಿ ಅವನ್ನು ಪಠಿಸುವುದರಿಂದಲೂ ಈ ವೇದಮಂತ್ರಗಳು ಅವುಗಳನ್ನು ಪಠಿಸುವವನಿಗೆ ಯಜ್ಞಫಲರೂಪವಾದ ಸ್ವರ್ಗವನ್ನು ಸಾಧಿಸಿಕೊಡುವುದು **ಮನೀಷಾಂ** ಎಂದರೆ **ಮನಸಾ ಈಶಿತ್ರೀಂ-** ಮಂತ್ರಗಳು ಕೇವಲ ಉಚ್ಚಾರಣೆಯಿಂದ ಮಾತ್ರ ಪೂರ್ಣಫಲಗಳನ್ನು ಕೊಡುವುದಿಲ್ಲ. ಅವುಗಳ ಅರ್ಥವನ್ನು ಮನಸ್ಸಿನಲ್ಲಿ ಚಿಂತಿಸಬೇಕು ಮತ್ತು ಅವುಗಳನ್ನು ಶ್ರದ್ಧೆಯಿಂದ ಮನಃಪೂರ್ವಕವಾಗಿ ಉಚ್ಚರಿಸಬೇಕು. ಈ ವಿಧವಾದ ವೇದ ಮಂತ್ರಗಳನ್ನು,

**ಋತಸ್ಯ ಪದೇ ಕವಯಃ ನಿ ಪಾಂತಿ—** ಋಷಿಗಳು ಯಜ್ಞವೇದಿಕೆಯಲ್ಲಿ ಪಠಿಸುವುದರಿಂದಲೂ, ಶಿಷ್ಯರುಗಳಿಗೆ ಅಧ್ಯಯನಮಾಡಿಸುವುದರಿಂದಲೂ ಕ್ಷೀಣವಾಗದಂತೆ ಕಾಪಾಡುತ್ತಾರೆ ವೇದಮಂತ್ರಗಳು ಗುರುವಿನಿಂದ ಶಿಷ್ಯರುಗಳಿಗೆ ಅಧ್ಯಯನರೂಪವಾಗಿ ಉಪದೇಶಿಸಲ್ಪಡುತ್ತವೆ. ಆ ಶಿಷ್ಯರು ದೊಡ್ಡವರಾದಮೇಲೆ ಅವರು ತಮ್ಮ ಶಿಷ್ಯರಿಗೆ ಅಧ್ಯಯನಮಾಡಿಸುತ್ತಾರೆ. ಈ ರೀತಿ ಪರಂಪರೆಯಿಂದ (ಒಬ್ಬರಿಂದ ಮತ್ತೊಬ್ಬರಿಗೆ) ವೇದವಿದ್ಯೆಯು ಉಪದೇಶಿಸಲ್ಪಡುವುದರಿಂದ ಅದು ನಶಿಸದೆ ಉಳಿಯುತ್ತದೆ. ಈ ಅಧ್ಯಾಪನಕ್ರಮವನ್ನೇ ಇಲ್ಲಿ ಋಷಿಗಳು ವೇದವಿದ್ಯೆಯನ್ನು ಕಾಪಾಡಿಕೊಂಡು ಬರುತ್ತಾರೆ ಎಂದು ವಿವರಿಸಲಾಗಿದೆ.

ಅಧ್ಯಾತ್ಮಪರವಾದ ಅರ್ಥ

**ಪತಂಗಃ—** ಸರ್ವವ್ಯಾಪ್ತನಾದ ಪರಮಾತ್ಮನು (ಸೃಷ್ಟಿಗೆ ಪೂರ್ವದಲ್ಲಿ ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ) | **ವಾಚಂ**—ಏನೇನನ್ನು ಯಾವರೀತಿ ಸೃಷ್ಟಿಸಬೇಕೆಂಬ ಯೋಚನೆಯಿಂದ ವೇದರೂಪವಾದ ವಾಕ್ಯವನ್ನು ಎಂದರೆ ವೇದವನ್ನು | **ಮನಸಾ ಬಿಭರ್ತಿ—** ಪರಾಮರ್ಶಿಸಿದನು ಎಂದರೆ ಸೃಷ್ಟಿಸಬೇಕೆಂದು ಸಂಕಲ್ಪಮಾಡಿದನು, ಮನಸ್ಸಿನಲ್ಲಿ ನಿಶ್ಚಯಿಸಿದನು | **ಗರ್ಭೇ ಅಂತಃ—** ಹಿರಣ್ಯರೂಪವಾದ ಬ್ರಹ್ಮಾಂಡದಲ್ಲಿ ಇರುವ | **ಗಂಧರ್ವಃ—** ಹಿರಣ್ಯಗರ್ಭನು (ಬ್ರಹ್ಮನು) | **ತಾಂ—** ಆ ವೇದವನ್ನು | **ಅವದತ್—** ಮೊದಲು ಪಠಿಸಿದನು | **ದ್ಯೋತಮಾನಾಂ—** ಪ್ರಕಾಶಮಾನವಾದ | **ಸ್ವರ್ಯಂ—** ಸ್ವರ್ಗಸಾಧನವಾದ | **ಮನೀಷಾಂ—** ಮನಸ್ಸಿನಲ್ಲಿ ಧ್ಯಾನಿಸಲ್ಪಡುವ | **ತಾಂ—** ಆ ವೇದವಾಕ್ಯವನ್ನು | **ಕವಯಃ—** ಕ್ರಾಂತದರ್ಶಿಗಳಾದ ಋಷಿಗಳು | **ಋತಸ್ಯ ಪದೇ**— ಸತ್ಯರೂಪವಾದ ಬ್ರಹ್ಮನ ಸ್ಥಾನದಲ್ಲಿ | **ನಿ ಪಾಂತಿ—** ವಿಶೇಷವಾಗಿ ರಕ್ಷಿಸುತ್ತಾರೆ.

|| ಭಾವಾರ್ಥ ||

ಸರ್ವವ್ಯಾಪ್ತನಾದ ಪರಮಾತ್ಮನು ಸೃಷ್ಟಿಗೆ ಪೂರ್ವದಲ್ಲಿ ಸೃಷ್ಟಿಮಾಡುವುದಕ್ಕಾಗಿ, ಯಾವರೀತಿ ಯಾವ ಯಾವ ವಸ್ತುಗಳನ್ನು ಸೃಷ್ಟಿಸಬೇಕೆಂದು ಆಲೋಚಿಸಿ ಅದಕ್ಕಾಗಿ ವೇದವನ್ನು ಪರಾಮರ್ಶಿಸಿ ಮನಸ್ಸಿನಲ್ಲಿ ಈ ರೀತಿ ಮಾಡಬೇಕೆಂದು ಸಂಕಲ್ಪಿಸಿದನು ಬ್ರಹ್ಮಾಂಡದಲ್ಲಿರುವ ಹಿರಣ್ಯಗರ್ಭನು ಆ ವೇದವನ್ನು ಮೊದಲು ಪಠಿಸಿದನು. ಅನಂತರ

ಸೃಷ್ಟಿಯನ್ನು ಮುಂದುವರೆಸಿದನು. ಇಂತಹ ಉತ್ಕೃಷ್ಟವಾದುದೂ, ಸ್ವರ್ಗಸಾಧನಭೂತವಾದುದೂ, ಮನಸ್ಸಿನಲ್ಲಿ ಧ್ಯಾನಿಸಲ್ಪಡುವುದೂ ಎಂದರೆ ಅರ್ಥಸಹಿತವಾಗಿರುವುದೂ ಆದ ವೇದವನ್ನು ಋಷಿಗಳು ಬ್ರಹ್ಮನ ಪರಮಪದವಿಯಲ್ಲಿದ್ದುಕೊಂಡು ರಕ್ಷಿಸುತ್ತಿರುವರು.

|| ವಿಶೇಷ ವಿಷಯಗಳು ||

ಈ ಋಕ್ಕಿನ ಪೂರ್ವಾರ್ಧದಲ್ಲಿ ಸೃಷ್ಟಿಗೆ ಪೂರ್ವದಲ್ಲಿ ಪರಮಾತ್ಮನು ವೇದವನ್ನು ಮನಸ್ಸಿನಲ್ಲಿ ಪರಾಮರ್ಶಿಸಿ ಸೃಷ್ಟಿಸಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಅನಂತರ ಆ ಸೃಷ್ಟಿಯನ್ನು ಕಾರ್ಯರೂಪಕ್ಕೆ ತರುವುದಕ್ಕಾಗಿ ಮೊದಲು ವೇದಮಂತ್ರಗಳನ್ನು ಪಠಿಸಿದನೆಂದು ಉಕ್ತವಾಗಿದೆ. ಉತ್ತರಾರ್ಧದ ಅರ್ಥದಲ್ಲಿ ದೇವತಾಪರವಾದ ಅರ್ಥಕ್ಕೂ ಅಧ್ಯಾತ್ಮಪರವಾದ ಅರ್ಥಕ್ಕೂ ವ್ಯತ್ಯಾಸವಿಲ್ಲ. ಪೂರ್ವಾರ್ಧದಲ್ಲಿ ಹೇಳಿರುವ ವಿಷಯವು ಲೋಕವ್ಯವಹಾರದಲ್ಲಿಯೂ ಬಳಕೆಯಲ್ಲಿರುವುದು. ಒಬ್ಬ ಪುರುಷನು ಒಂದು ಕಾರ್ಯವನ್ನು ಮಾಡುವಾಗ ಮೊದಲು ಅದನ್ನು ಹೇಗೆ ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಅನಂತರ ಅದನ್ನು ಮಾತಿನಲ್ಲಿ ಹೇಳುವನು. ಇದನ್ನೇ ಇಲ್ಲಿ ಆ ರೀತಿ ಹೇಳಿದೆ.

ವಾಗ್ದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ **ಪತಂಗೋ ವಾಚಂ** ಎಂಬ ಈ ಋಕ್ಕನ್ನು ಪುರೋಡಾಶ ಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯದ್ವಾಗ್ವದಂತ್ಯವಿಚೇತನಾನಿ ಪತಂಗೋ ವಾಚಂ** ಮನಸಾ ಬಿಭರ್ತಿ ಎಂಬ ಸೂತ್ರದಿಂದ(ಆ ೩-೮)ವಿವೃತವಾಗಿರುವುದು.

|| ಸಂಹಿತಾಪಾಠಃ ||

**ಅಪಶ್ಯಂ ಗೋಪಾಮನಿಪದ್ಯಮಾನಮಾ ಚ ಪರಾ ಚ ಪಥಿಭಿಶ್ಚರಂತಂ ।**

**ಸ ಸಧ್ರೀಚೀಃ ಸ ವಿಷೂಚೀರ್ವಸಾನ ಆ ವರೀವರ್ತಿ ಭುವನೇಷ್ವಂತಃ ॥ ೩ ॥**

|| ಪದಪಾಠಃ ||

**ಅಪಶ್ಯಂ । ಗೋಽಪಾಂ । ಅನಿಽಪದ್ಯಮಾನಂ । ಆ । ಚ । ಪರಾ । ಚ । ಪಥಿಽಭಿಃ । ಚರಂತಂ ।**

**ಸಃ । ಸಧ್ರೀಚೀಃ । ಸಃ । ವಿಷೂಚೀಃ । ವಸಾನಃ । ಆ । ವರೀವರ್ತಿ । ಭುವನೇಷು । ಅಂತರಿತಿ ॥ ೩ ॥**

|| ಸಾಯಣಭಾಷ್ಯಂ ||

**ಪ್ರವರ್ಗ್ಯೇಽಭಿಷ್ಟವೇಽಪಶ್ಯಂ ಗೋಪಾಮಿತ್ಯೇಷಾ । ಸೂತ್ರಿತಂ ಚ । ಅಪಶ್ಯಂ ಗೋಪಾಮನಿಪದ್ಯಮಾನಂ ಸೃಕ್ವೇ ದ್ರಪ್ಸಸ್ಯ । ಆ. ೪-೬ । ಇತಿ ॥**

**ವ್ಯಾಖ್ಯಾತೇಯಮಸ್ಯವಾಮೀಯಸೂಕ್ತೇ । ೧-೧೬೪-೩೧ । ಗೋಪಾಂ ಗೋಪಾಯಿತಾರಮಾದಿತ್ಯಮಪಶ್ಯಂ । ಅಜ್ಞಾಸಿಷಂ । ಏಷ ಹಿ ಸರ್ವಾಣಿ ಭೂತಜಾತಾನ್ಯುದಯಾಸ್ತಮಯಾದಿಕರ್ಮಣಾ ಗೋಪಾಯತಿ । ಕೀದೃಶಂ । ಅನಿಪದ್ಯಮಾನಮುಚ್ಚೈರ್ಗಚ್ಛಂತಂ । ನ ಹ್ಯಸೌ ಕದಾಚಿನ್ನೀಚೈಃ**

**ಪದ್ಯತೇ । ಪಥಿಭಿರಾಕಾಶಮಾರ್ಗೈಃ ಪೂರ್ವಾಹ್ಣ ಆ ಚರಂತಮಸ್ಮಾನಭಿಲಕ್ಷ್ಯ ಗಚ್ಛಂತಂ ಸಾಯಂ-ಸಮಯೇ ಪರಾ ಚರಂತಂ । ಪರಾಙ್ಮುಖಂ ಗಚ್ಛಂತಂ । ಪ್ರಕಾರದ್ವಯಸಮುಚ್ಚಯಾರ್ಥೌ ಚಶಬ್ದೌ । ಸ ಸೂರ್ಯಃ ಸಧ್ರೀಚೀಃ ಸಹಾಂಚಂತೀಃ ವಿಷೂಚೀರ್ವಿವಿಧಂ ಪೃಥಕ್ಪೃಥಗಂಚಂತೀಃ ಸ್ವಸ್ವವ್ಯಾಪಾರಾಯ ಗಚ್ಛಂತೀಃ । ಪ್ರಾಚ್ಯಾದ್ಯಾ ಮಹಾದಿಶಃ ಸಧ್ರೀಚ್ಯೋ ವಿಷೂಚ್ಯಃ ಕೋಣದಿಶಃ । ವಸಾನಃ ಸ್ವಭಾಸಾ-ಚ್ಛಾದಯನ್ ಪ್ರಕಾಶಯನ್ಭುವನೇಷು ಲೋಕೇಷ್ವಂತರ್ಮಧ್ಯ ಆ ವರೀವರ್ತಿ । ಪುನಃಪುನರುದ್ಯನ್ನಸ್ತಂ ಗಚ್ಛನ್ನಾವರ್ತತೇ । ಯದ್ವಾ । ಗೋಪಾಂ ಶರೀರಸ್ಯ ಗೋಪಾಯಿತಾರಮನಿಪದ್ಯಮಾನಮವಿನಾಶನಮ-ವಿಪನ್ನಮಾ ಚ ಪರಾ ಚಾಭಿಮುಖೇನ ಚ ಪರಾಙ್ಮುಖೇನ ಚ ಪಥಿಭಿರ್ನಾಡೀಲಕ್ಷಣೈರ್ಮಾರ್ಗೈಶ್ಚರಂತಂ ಶರೀರೇ ವರ್ತಮಾನಂ ಪ್ರಾಣಮಪಶ್ಯಂ । ಅಹಮದರ್ಶಂ ॥**

॥ ದೇವತಾಪರವಾದ ಅರ್ಥ ॥

**ಗೋಪಾಂ**— ವೃಷ್ಟಿಪ್ರಕಾಶನಾದಿಕರ್ಮಗಳಿಂದ ಜನರನ್ನು ರಕ್ಷಿಸುವವನೂ । **ಅನಿಪದ್ಯಮಾನಂ**— ಬಹು ಎತ್ತರದಲ್ಲಿ (ಅಂತರಿಕ್ಷದಲ್ಲಿ) ಸಂಚರಿಸುವವನೂ । **ಪಥಿಭಿಃ**— ಆಕಾಶಮಾರ್ಗದಲ್ಲಿ ಪೂರ್ವಾಹ್ಣಸಮಯದಲ್ಲಿ । **ಆ ಚರಂತಂ ಚ**— ನಮ್ಮ ಎದುರಿಗೆ ಸಂಚರಿಸುವವನೂ । **ಪರಾ ಚ**— ಸಾಯಂಕಾಲವಲ್ಲಿ ಪರಾಙ್ಮುಖನಾಗಿ ಎಂದರೆ ಪಶ್ಚಿಮಾಭಿಮುಖವಾಗಿ ಸಂಚರಿಸುವವನೂ ಆದ ಈ ಆದಿತ್ಯನನ್ನು (ಆದಿತ್ಯನ ಸ್ವರೂಪವನ್ನು) । **ಅಪಶ್ಯಂ**— ತಿಳಿದಿದ್ದೇನೆ । **ಸಃ**— ಆ ಸೂರ್ಯನು । **ಸಧ್ರೀಚೀಃ**— ಪ್ರಾಚ್ಯಾದಿಮಹಾದಿಕ್ಕುಗಳನ್ನೂ । **ವಿಷೂಚೀಃ**— ದಿಕ್ಕುಗಳ ಮಧ್ಯದಲ್ಲಿರುವ ವಿದಿಕ್ಕುಗಳನ್ನೂ । **ವಸಾನಃ**— ತನ್ನ ಕಾಂತಿಯಿಂದ ಆವರಿಸುತ್ತ । **ಭುವನೇಷು ಅಂತಃ**— ಲೋಕಗಳ (ದ್ಯಾವಾಪೃಥಿವಿಗಳ) ಮಧ್ಯದಲ್ಲಿ । **ಆ ವರೀವರ್ತಿ**— ಪುನಃ ಪುನಃ ಸುತ್ತುತ್ತಿರುತ್ತಾನೆ.

॥ ಭಾವಾರ್ಥ ॥

ವೃಷ್ಟಿಪ್ರದಾನಾದಿ ಕರ್ಮಗಳಿಂದ ಸಮಸ್ತ ಪ್ರಾಣಿಗಳನ್ನು ಕಾಪಾಡುವವನೂ, ಅತಿ ಎತ್ತರವಾದ ಅಂತರಿಕ್ಷ ಪ್ರದೇಶದಲ್ಲಿ ಸಂಚರಿಸುವವನೂ, ಆಕಾಶಮಾರ್ಗದಲ್ಲಿ ಪೂರ್ವಾಹ್ಣದಲ್ಲಿ ನಮಗೆ ಅಭಿಮುಖವಾಗಿ ಸಂಚರಿಸುವವನೂ, ಸಾಯಂಕಾಲದಲ್ಲಿ ಪರಾಙ್ಮುಖನಾಗಿ ಎಂದರೆ ಪಶ್ಚಿಮಾಭಿಮುಖನಾಗಿ ಅಸ್ತಂಗತನಾಗುವವನೂ ಆಗುವ ಈ ಆದಿತ್ಯನನ್ನು (ಸೂರ್ಯನನ್ನು) ತಿಳಿದಿದ್ದೇನೆ. ಆ ಸೂರ್ಯನು ಪ್ರಾಚ್ಯಾದಿ ದಿಕ್ಕುಗಳನ್ನೂ ಆಗ್ನೇಯಾದಿ ವಿದಿಕ್ಕುಗಳನ್ನೂ ತನ್ನ ಪ್ರಕಾಶದಿಂದ ಬೆಳಗುತ್ತಾ ಲೋಕಗಳ ಮಧ್ಯದಲ್ಲಿ ಪುನಃ ಪುನಃ ಸುತ್ತುತ್ತಲೇ ಇರುತ್ತಾನೆ.

## English Translation.

I beheld the protector (the Sun), never descending, going by his paths to the east and to the west; clothing (with light) the (four) quarters of heaven and the intermediate spaces, he constantly revolves in the midst of the world.

‖ ವಿಶೇಷವಿಷಯಗಳು ‖

**ಅಪಶ್ಯಂ ಗೋಪಾಂ** ಎಂಬ ಈ ಋಕ್ಕು ಪ್ರಥಮಮಂಡಲದ ೧೬೪ ನೇ ಸೂಕ್ತದಲ್ಲಿ ೩೧ ನೇ ಋಕ್ಕಾಗಿ ಪಠಿತವಾಗಿದೆ. ಅಲ್ಲಿ ಈ ಋಕ್ಕಿನ ವಿಷಯಗಳನ್ನು ನಾವು ವಿಸ್ತಾರವಾಗಿ ವಿವರಿಸಿದೇವೆ. ಆ ಋಕ್ಕಿನ ಸಾಯಣ ಭಾಷ್ಯದಲ್ಲಿಯೂ ಪ್ರಕೃತ ಋಕ್ಕಿಗೆ ಇರುವ ಭಾಷ್ಯದಲ್ಲಿಯೂ ಕೆಲವು ವ್ಯತ್ಯಾಸಗಳಿವೆ.

ಪ್ರವರ್ಗ್ಯದಲ್ಲಿ ಅಭಿಷ್ಟವಕಾಲದಲ್ಲಿ **ಅಪಶ್ಯಂ ಗೋಪಾಂ** ಎಂಬ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಅಪಶ್ಯಂ ಗೋಪಾಮನಿಪದ್ಯಮಾನಂ ಸ್ರಕ್ವೇ ದ್ರಪ್ಸಸ್ಯ** ಎಂಬ ಸೂತ್ರದಿಂದ (ಆ. ೪–೬) ವಿವೃತವಾಗಿರುವುದು.

**ಗೋಪಾಂ**—ಸಂರಕ್ಷಕನು. ಆದಿತ್ಯನು ಹೇಗೆ ರಕ್ಷಕನು ಎಂದರೆ ಜಗತ್ತಿನ ಸಮಸ್ತ ಪ್ರಾಣಿಗಳಿಗೂ ಅತ್ಯವಶ್ಯಕವಾದ ವೃಷ್ಟಿ (ಮಳೆ) ಯನ್ನೂ, ಸ್ವವ್ಯಾಪಾರಾದಿಗಳಿಗೆ ಬೇಕಾಗುವ ಬೆಳಕನ್ನೂ ಒದಗಿಸಿ ಕಾಪಾಡುವವನು ಎಂದರ್ಥವು ಈ ವಿಷಯವು ತೈತ್ತಿರೀಯಾರಣ್ಯಕದಲ್ಲಿ—

**ಅಪಶ್ಯಂ ಗೋಪಾಮಿತ್ಯಾಹ । ಅಸೌ ವಾ ಆದಿತ್ಯೋ ಗೋಪಾಃ । ಸ ಹೀಮಾಃ ಪ್ರಜಾ ಗೋಪಾಯಂತಿ । ತಮೇವ ಪ್ರಜಾನಾಂ ಗೋಪ್ತಾರಂ ಕುರುತೇ ॥** (ತೈ. ಆ. ೫–೬–೪)

ಎಂಬ ವಾಕ್ಯಗಳಿಂದ ಮೇಲಿನ ವಿಷಯವನ್ನೇ ಸಮರ್ಥಿಸಲಾಗಿದೆ ಇದಲ್ಲದೆ ಉದಯಾಸ್ತಮಯಗಳಿಂದಲೂ ಪ್ರಜೆಗಳನ್ನು ಕಾಪಾಡುತ್ತಾನೆಂದು ಹೇಳಬಹುದು. ಉದಯಾನಂತರ ಹಗಲಿನಲ್ಲಿ ಪ್ರಾಣಿಗಳು ಸ್ವವ್ಯಾಪಾರದಲ್ಲಿ ಮಗ್ನವಾಗಿರುವವು. ಅಸ್ತಮಯಾನಂತರ ರಾತ್ರಿಕಾಲದಲ್ಲಿ ಹಗಲಿನಲ್ಲಿ ಮಾಡಿದ ಕಾರ್ಯಗಳಿಂದ ಬಳಲಿದ ಪ್ರಾಣಿಗಳು ವಿಶ್ರಾಂತಿಯನ್ನು ಪಡೆಯುವವು. ಆದ್ದರಿಂದ ಪ್ರಾಣಿಗಳಿಗೆ ಆಹಾರಾದಿಗಳನ್ನು ಸಂಪಾದಿಸುವ ಕಾರ್ಯಗಳಲ್ಲಿಯೂ ಆ ಕಾರ್ಯಗಳಿಂದ ದಣಿಗಾಗ ವಿಶ್ರಾಂತಿಯನ್ನು ಕೊಡುವುದಕ್ಕಾಗಿಯೂ ಉದಯಾಸ್ತಮಯಗಳೆಂಬ ತನ್ನ ಗತಿಗಳಿಂದ ಪ್ರಾಣಿಗಳಿಗೆ ಸಹಾಯಕನಾಗಿ ಅವರನ್ನು ಕಾಪಾಡುವನು ಎಂದು ಹೇಳಬಹುದು.

**ಅನಿಪದ್ಯಮಾನಂ**—ಬಹು ಎತ್ತರದಲ್ಲಿ ಸಂಚರಿಸುವವನು. ಇಷ್ಟು ಎತ್ತರದಲ್ಲಿ ಸಂಚರಿಸುತ್ತಿದ್ದರೂ ಯಾವಾಗಲೂ ಕೆಳಕ್ಕೆ ಬೀಳುವುದಿಲ್ಲ. **ಅನಿಪದ್ಯಮಾನಮಿತ್ಯಾಹ । ನ ಹ್ಯೇಷ ನಿಪದ್ಯತೇ** (ತೈ. ಆ. ೫–೬–೪, ೫) ಅಂತರಿಕ್ಷಸ್ಥನಾದ ಆದಿತ್ಯನು ಯಾವಾಗಲೂ ಭೂಮಿಯ ಮೇಲೆ ಬೀಳುವುದಿಲ್ಲ.

**ಆ ಚ ಪರಾ ಚ ಪಥಿಭಿಃ ಚರಂತಂ**—ಇಲ್ಲಿ **ಪಥಿಭಿಃ** ಎಂದರೆ ಮಾರ್ಗಗಳಿಂದ ಎಂದರ್ಥವು. ಅಂತರಿಕ್ಷದಲ್ಲಿ ಮಾರ್ಗವಿರುವುದೇ ? ಇದ್ದರೆ ಕಾಣಿಸುವುದಿಲ್ಲವಲ್ಲಾ ಎಂದರೆ ಅಂತರಿಕ್ಷದಲ್ಲಿ ಮಾರ್ಗಗಳಿರುವುದಿಲ್ಲ. ಇದ್ದರೂ ಗುರುತಿಸುವುದಕ್ಕಾಗುವುದಿಲ್ಲ. ಆದರೆ ಸೂರ್ಯನು ಯಾವಾಗಲೂ ಪೂರ್ವದಿಕ್ಕಿನಲ್ಲಿ ಉದಯಿಸಿ ಅನಂತರ ದಕ್ಷಿಣ ದಿಕ್ಕಿಗೆ ಬಂದು ಕೊನೆಗೆ ಪಶ್ಚಿಮ ದಿಕ್ಕಿನಲ್ಲಿ ಅಸ್ತಂಗತನಾಗುವನು. ಪ್ರತಿದಿನವೂ ಹೀಗೆಯೇ ಏನೂ ವ್ಯತ್ಯಾಸವಿಲ್ಲದೆ ಉದಯಾಸ್ತಮಯಗಳು ಎಡಬಿಡದೆ ನಡೆದುಬರುತ್ತಿರುವುದರಿಂದ ಸೂರ್ಯನ ಗತಿ ಅಥವಾ ಸಂಚಾರಮಾರ್ಗವು ಒಂದೇ ವಿಧವಾಗಿರುವುದು ಎಂಬುವನ್ನು ಸೂಚಿಸುವುದಕ್ಕೋಸ್ಕರ ಪಥಿಭಿಃ ಎಂಬ ಶಬ್ದಪ್ರಯೋಗವಿದೆ. **ಆ ಚ**

ಎಂದರೆ ಅಭಿಮುಖವಾಗಿಯೂ **ಪರಾ ಚ** ಎಂದರೆ ಪ್ರತ್ಯಙ್ಮುಖವಾಗಿಯೂ ಎಂದರ್ಥವು. ಉದಯಕಾಲವು ಅಭಿಮುಖ, ಅಸ್ತಮಯಕಾಲವು ಪರಾಙ್ಮುಖವೆಂದು ಹೇಳಲ್ಪಡುವುದು. ಈ ಎರಡುವಿಧ ಗತಿಕ್ರಮದಿಂದ ಸಂಚರಿಸುವವನೆಂದರ್ಥವು.

**ಸ ಸಧ್ರೀಚೀಃ ಸ ವಿಷೂಚೀಃ ವಸಾನಃ**—ನಾಲ್ಕು ದಿಕ್ಕು ನಾಲ್ಕು ವಿದಿಕ್ಕುಗಳನ್ನು ಎಂದರೆ ಸಮಸ್ತ ಪ್ರದೇಶವನ್ನು ತನ್ನ ಪ್ರಕಾಶದಿಂದ ಆವರಿಸುವನು ಎಂದಭಿಪ್ರಾಯವು.

**ಆ ವರೀವರ್ತಿ ಭುವನೇಷು ಅಂತಃ**—ಈ ವಿಧವಾದ ಗಮನವುಳ್ಳ ಸೂರ್ಯನು ಲೋಕಗಳ ಮಧ್ಯದಲ್ಲಿ ಎಂದರೆ ಕೆಳಗಿರುವ ಭೂಮಿ, ಮೇಲಿರುವ ಅಂತರಿಕ್ಷ ಅಥವಾ ಸ್ವರ್ಗಗಳೆಂಬ ಲೋಕಗಳ ಮಧ್ಯದಲ್ಲಿ ಪುನಃ ಪುನಃ ಸಂಚರಿಸುವನು ಪ್ರತಿದಿನವೂ ಎಡಬಿಡದೆ, ವಿಶ್ರಾಂತಿ ಇಲ್ಲದೆ ಇದೇ ಕ್ರಮದಿಂದ ಸುತ್ತುತ್ತಲೇ ಇರುವನು. ಇಂತಹ ಮಹಾಮಹಿಮಾನ್ವಿತನಾದ ಸೂರ್ಯನ ಸ್ವರೂಪವನ್ನು ನಾನು ತಿಳಿದಿದ್ದೇನೆ ಎಂದು ಋಷಿಯು ಇಲ್ಲಿ ವರ್ಣಿಸಿರುವನು.

|| ಅಧ್ಯಾತ್ಮಪರವಾದ ಅರ್ಥ ||

**ಗೋಪಾಂ**—ತಾನು ನೆಲಸಿರುವ ಶರೀರವನ್ನು ಅಥವಾ ಅದರ ಆರೋಗ್ಯವನ್ನು ಕಾಪಾಡುವವನೂ | **ಅನಿಪದ್ಯಮಾನಂ**—ನಾಶರಹಿತನಾದವನೂ | **ಆ ಚ**—ಪ್ರವೃತ್ತಿಮಾರ್ಗದಿಂದಲೂ | **ಪರಾ ಚ**—ನಿವೃತ್ತಿಮಾರ್ಗದಿಂದಲೂ | **ಪಥಿಭಿಃ**—ನಾನಾಜನ್ಮರೂಪವಾದ ಮಾರ್ಗಗಳಿಂದ (ಸಂಸಾರದಲ್ಲಿ) ಅಥವಾ ನಾಡೀರೂಪವಾದ ಮಾರ್ಗಗಳಿಂದ ಶರೀರದಲ್ಲಿ | **ಚರಂತಂ**—ಇರುವವನೂ ಆದ ಆತ್ಮನನ್ನು | **ಅಪಶ್ಯಂ**—ನೋಡಿ ತಿಳಿದಿದ್ದೇನೆ | **ಸಃ**—ಪ್ರಾಣರೂಪದಿಂದಿರುವ ಆ ಆತ್ಮನು | **ಸಧ್ರೀಚೀಃ**—ಉತ್ತಮವಾದ ಮನುಷ್ಯಾದಿ ಜನ್ಮಗಳನ್ನೂ | **ವಿಷೂಚೀಃ**—ನಿಕೃಷ್ಟವಾದ ಪಶ್ವಾದಿ ಜನ್ಮಗಳನ್ನೂ | **ವಸಾನಃ**—ಆವರಿಸುತ್ತಾ ಎಂದರೆ ಹೊಂದುತ್ತಾ | **ಭುವನೇಷು ಅಂತಃ**—ಭೂಮಿ ಸ್ವರ್ಗಮೊದಲಾದ ಲೋಕಗಳ ನಡುವೆ | **ಆ ವರೀವರ್ತಿ**—ಜನನ ಮರಣರೂಪದಿಂದ ಸುತ್ತುತ್ತಿರುತ್ತಾನೆ.

|| **ಭಾವಾರ್ಥ** ||

ತಾನು ನೆಲಸಿರುವ ಶರೀರವನ್ನು ರಕ್ಷಿಸುತ್ತಿರುವವನೂ, ನಾಶರಹಿತನೂ, ಪ್ರವೃತ್ತಿ ನಿವೃತ್ತಿ ಮಾರ್ಗಗಳಲ್ಲಿ ಅಥವಾ ಶರೀರದ ನಾಡಿಗಳಲ್ಲಿ ಸಂಚರಿಸುವವನೂ ಆದ ಪ್ರಾಣರೂಪದಿಂದಿರುವ ಆತ್ಮನನ್ನು ನಾನು ನೋಡಿ ತಿಳಿದಿದ್ದೇನೆ. ಆ ಆತ್ಮನು ಉತ್ತಮವಾದ ದೇವಮನುಷ್ಯಾದಿಜನ್ಮಗಳನ್ನೂ ನಿಕೃಷ್ಟವಾದ ಪಶ್ವಾದಿಜನ್ಮಗಳನ್ನೂ ಹೊಂದುತ್ತಾ ಭೂಲೋಕ ಸ್ವರ್ಗಲೋಕಗಳ ನಡವೆ ಜನನ ಮರಣರೂಪವಾದ ಗತಿಯಿಂದ ಪುನಃಪುನಃ ಸುತ್ತುತ್ತಿರುತ್ತಾನೆ.

|| **ವಿಶೇಷವಿಷಯಗಳು** ||

**ಅಪಶ್ಯಂ ಗೋಪಾಂ ಅನಿಪದ್ಯಮಾನಂ—ಗೋಪಾಂ** ಎಂದರೆ ಶರೀರವನ್ನು ರಕ್ಷಿಸುವವನು. ಪ್ರಾಣವಾಯುವು ಶರೀರದಲ್ಲಿ ನೆಲೆಸಿರುವವರೆಗೂ ಶರೀರವು ಇರುವುದು. ಅದು ನಾಶವಾಗುವುದಿಲ್ಲ. ಪ್ರಾಣವು ಹೊರಟು ಹೋಯಿತೆಂದರೆ ಶರೀರವು ನಾಶವಾಗಿ ಪಂಚಭೂತಗಳಲ್ಲಿ ಸೇರಿ ಹೋಗುವುದು. ಆದ್ದರಿಂದ ಪ್ರಾಣದಿಂದಲೇ ಶರೀರದ ರಕ್ಷಣೆಯಾಗುವುದು **ಅನಿಪದ್ಯಮಾನಂ— ಅವಿನಾಶಿನಮವಿಪನ್ನಂ** ನಾಶರಹಿತನು. ಶರೀರಕ್ಕೆ ನಾಶವಿದ್ದರೂ ಆತ್ಮನಿಗೆ ನಾಶವಿಲ್ಲ.

**ಆ ಚ ಪರಾ ಚ ಪಥಿಭಿಃ ಚರಂತಂ**— ಅಭಿಮುಖೇನ ಚ ಪರಾಙ್ಮುಖೇನ ಚ । ಅಭಿಮುಖ ಎಂದರೆ– ಪ್ರವೃತ್ತಿಮಾರ್ಗ, ಸೃಷ್ಟವಾದ ಪ್ರಾಣಿಗಳು, ಪುರುಷರು ಲೋಕವ್ಯವಹಾರಗಳಲ್ಲಿ ತೊಡಗಿರುವುದೇ ಪ್ರವೃತ್ತಿಮಾರ್ಗವು. ತನಗೆ ಕಾರಣಭೂತವಾದ ಬ್ರಹ್ಮನಲ್ಲಿ ಐಕ್ಯವಾಗಬೇಕೆಂಬ (ಮುಕ್ತಿಯನ್ನು ಪಡೆಯಬೇಕೆಂಬ) ಇಚ್ಛೆಯಿಂದ ಬ್ರಹ್ಮೋಪಾಸನೆಯಲ್ಲಿ ತೊಡಗುವುದೇ ನಿವೃತ್ತಿಮಾರ್ಗವು. ಪ್ರವೃತ್ತಿಯೆಂದರೆ ಪರಬ್ರಹ್ಮನಿಂದ ಸೃಷ್ಟಿಯಾಗಿ ಈಚೆಗೆ ಬರುವುದು ಎಂದರೆ ಲೋಕವ್ಯವಹಾರದಲ್ಲಿ ಪ್ರವರ್ತಿಸುವುದು. ನಿವೃತ್ತಿಯೆಂದರೆ, ಹಿಂತಿರುಗುವುದು, ತಾವು ಹೊರಸೂಸಿ ಬಂದ ಬ್ರಹ್ಮನಲ್ಲಿ ಸೇರಬೇಕೆಂದು ಹಿಂತಿರುಗುವುದೇ ಎಂದರೆ ಮುಕ್ತಿಸಾಧನವಾದ ಜ್ಞಾನಾರ್ಜನೆಗೆ ಪ್ರಯತ್ನಿಸುವುದೇ ನಿವೃತ್ತಿಮಾರ್ಗವು. ಸಕಲ ಪ್ರಾಣಿಗಳೂ ಪುರುಷರೂ ಈ ಎರಡು ವಿಧಗಳಲ್ಲಿ ಒಂದನ್ನು ಆಶ್ರಯಿಸಿಯೇ ಇರುವರು. ಆದ್ದರಿಂದ ಈ ಪ್ರವೃತ್ತಿನಿವೃತ್ತಿ ಮಾರ್ಗಗಳಿಂದ ವ್ಯವಹರಿಸುವ ಆತ್ಮನೆಂದು ಇಲ್ಲಿ ಹೇಳಿದೆ. ಅಥವಾ ಈ ಪ್ರಾಣ ವಾಯುವು (ಎಂದರೆ ಆತ್ಮನು) ಶರೀರದ ನಾನಾ ನಾಡಿಗಳಲ್ಲಿ ಸಂಚರಿಸುವನು. ತಪಸ್ವಿಗಳಾದ ಯೋಗಿಗಳು ಇದರ ಸಂಚಾರ ಕ್ರಮವನ್ನು ಅರಿತಿರುವರು. ಇಂತಹ ಆತ್ಮನೆಂದೂ ಹೇಳಬಹುದು.

**ಸಃ ಸಧ್ರೀಚೀಃ ಸ ವಿಷೂಚೀಃ ವಸಾನಃ ಆ ವರೀವರ್ತಿ ಭುವನೇಷು ಅಂತಃ**—ಲೋಕದಲ್ಲಿರುವ ಪ್ರಾಣಿಗಳಲ್ಲಿ ಎರಡುವಿಧ. ದೇವಮನುಷ್ಯಾದಿಗಳು ಮತ್ತು ಪಶುಪಕ್ಷ್ಯಾದಿ ಪ್ರಾಣಿಗಳು, ದೇವಮನುಷ್ಯಾದಿಗಳಿಗೆ ಬುದ್ಧಿಯೂ ಜ್ಞಾನವೂ ಇರುವುದರಿಂದ ಅವರು ಶ್ರೇಷ್ಠರೆನಿಸುವರು ಪಶುಪಕ್ಷ್ಯಾದಿಗಳಿಗೆ ಆಹಾರಸಂಪಾದನೆಯಲ್ಲಿ ಮಾತ್ರ ಬುದ್ಧಿಯಿದ್ದು ಇತರ ಗಹನವಿಷಯಗಳನ್ನು ತಿಳಿಯುವ ವಿವೇಚನಾಶಕ್ತಿಯೂ ಜ್ಞಾನವೂ ಇಲ್ಲದಿರುವುದರಿಂದ ಅವು ನಿಕೃಷ್ಟವೆನಿಸುವವು. ಉತ್ತಮ ಕರ್ಮಗಳನ್ನು ಎಂದರೆ ಯಜ್ಞಾನುಷ್ಠಾನ, ತಪಸ್ಸು ಮೊದಲಾದ ಸತ್ಕರ್ಮ ಗಳನ್ನು ಮಾಡುವವರಿಗೆ ದೇವಮನುಷ್ಯಾದಿ ಶರೀರಗಳಲ್ಲಿ ಜನ್ಮವುಂಟಾಗುವುದಲ್ಲದೆ ಅವರು ತಾವು ಮಾಡುವ ಸತ್ಕರ್ಮ ಫಲರೂಪವಾಗಿ ಸ್ವರ್ಗಾದಿ ಉತ್ತಮ ಲೋಕಗಳಲ್ಲಿಯೂ ಸುಖಿಸುವರು. ಮನುಷ್ಯರಲ್ಲಿ ಎಲ್ಲರೂ ಉತ್ತಮ ಕರ್ಮ ಗಳನ್ನೇ ಮಾಡುವುದಿಲ್ಲ. ಪಾಪಕರ್ಮಗಳನ್ನು ಮಾಡುವವರನೇಕರಿರುವರು. ಇವರು ತಮ್ಮ ಪಾಪಕೃತ್ಯಗಳಿಂದ ನರಕಾದಿ ಅಧೋಲೋಕಗಳಲ್ಲಿ ಶಿಕ್ಷೆಯನ್ನನುಭವಿಸಿ ಪಶ್ವಾದಿತಿರ್ಯಗ್ಯೋನಿಗಳಲ್ಲಿ ಜನ್ಮವನ್ನು ಪಡೆಯುವರು. ಪಶು ಪಕ್ಷ್ಯಾದಿಗಳೂ ಸಹ ಉತ್ತಮ ಕರ್ಮವನ್ನು ಮಾಡಲು ಸಾಧ್ಯವಿಲ್ಲದ್ದರಿಂದ ಅವುಗಳಿಗೆ ಉತ್ತಮ ಲೋಕಪ್ರಾಪ್ತಿಯೂ ಸಾಧ್ಯವಿಲ್ಲ. ಆದ್ದರಿಂದ ಮನುಷ್ಯಾದಿಗಳು ಉತ್ತಮ ಕರ್ಮಾದಿಗಳಿಂದಲೂ ಜ್ಞಾನಾರ್ಜನೆಯಿಂದಲೂ ಸ್ವರ್ಗಲೋಕ ಗಳನ್ನೂ, ದೇವಮನುಷ್ಯಾದಿ ಜನ್ಮಗಳನ್ನೂ, ಪಾಪಕೃತ್ಯಾಚರಣೆಯಿಂದ ನರಕಾದಿ ಅಧೋಲೋಕಗಳನ್ನೂ ತಿರ್ಯ ಗ್ಯೋನಿಗಳಲ್ಲಿ ಜನ್ಮವನ್ನೂ ಪಡೆಯುತ್ತಿರುವರು ಎಂದರೆ ಒಂದು ಸಲ ಉತ್ತಮಜನ್ಮವನ್ನೂ ಮತ್ತೊಂದುಸಲ ತಿರ್ಯಗ್ಜನ್ಮವನ್ನೂ ಅವರವರ ಕರ್ಮಕ್ಕನುಸಾರವಾಗಿ ಪಡೆಯುತ್ತಿರುವರು. ಈ ಕಾರ್ಯವು ಎಡಬಿಡದೆ ನಡೆಯುತ್ತಿ ರುವುದು. ಈ ಜನನಮರಣರೂಪವಾದ ಸಂಸಾರಲ್ಲಿ ಸ್ವರ್ಗದಿಂದ ಭೂಮಿಗೂ, ಭೂಮಿಯಿಂದ ಸ್ವರ್ಗಕ್ಕೂ ಅಥವಾ ಇತರ ಲೋಕಕ್ಕೂ ಸರ್ವದಾ ಪ್ರಾಣಿಗಳು ಯಾವಾಗಲೂ ಸುತ್ತುತ್ತಲೇ ಇರುವವು. ಈ ಕಾರ್ಯವು ಒಂದಾವರ್ತಿ ನಡೆದು ಕೊನೆಗೊಳ್ಳುವುದಿಲ್ಲ. ಮತ್ತೆ ಮತ್ತೆ ನಡೆಯುತ್ತಲೇ ಇರುವುದರಿಂದ ಆತ್ಮನು ನಾನಾಶರೀರಧಾರಿಯಾಗಿ ಅನೇಕ ಲೋಕಗಳ ಮಧ್ಯದಲ್ಲಿ ಸುತ್ತುತ್ತಿರುವನು ಎಂದು ಇಲ್ಲಿ ವರ್ಣಿಸಿದೆ.

ಈ ಋಕ್ಕಿನ ವಿಷಯದಲ್ಲಿ ಆತ್ಮಪರವಾಗಿ ಅರ್ಥವನ್ನು ಹೇಳುವಾಗ ಯಾಸ್ಕರು ನಿರುಕ್ತಪರಿಶಿಷ್ಟವೆಂಬ ನಿರುಕ್ತದ ೧೪ ನೇಅಧ್ಯಾಯದ ೩-೯ ನೇಖಂಡಗಳಲ್ಲಿ ಆತ್ಮಸ್ವರೂಪವನ್ನು ವಿವರಿಸಿರುವರು, ಈ ವಿಷಯವು ಈ

ಋಕ್ಕಿನ ಅರ್ಥಕ್ಕೆ ಪ್ರತ್ಯಕ್ಷವಾಗಿ ಸಂಬಂಧಪಟ್ಟಿರುವುದಿಲ್ಲವಾದ್ದರಿಂದಲೂ, ಅತಿವಿಸ್ತಾರವಾಗಿ ಇಲ್ಲಿ ವಿವರಿಸಲು ಸಾಧ್ಯವಿಲ್ಲದ್ದರಿಂದಲೂ ಈ ನಿರುಕ್ತದ ಮೂಲವನ್ನು ಮಾತ್ರ ಬರೆದಿದ್ದೇವೆ. ಇವುಗಳ ವಿಸ್ತಾರವಾದ ಅನುವಾದವನ್ನು ನಿರುಕ್ತ ಗ್ರಂಥವನ್ನು ವ್ಯಾಖ್ಯಾನಮಾಡುವಾಗ ವಿವರಿಸಲಾಗುವುದು—

ಅಪಶ್ಯಂ ಗೋಪಾಮನಿಪದ್ಯಮಾನಮಾ ಚ ಪರಾ ಚ ಪಥಿಭಿಶ್ಚರಂತಂ। ಸ ಸಧ್ರೀಚೀಃ ಸ ವಿಷೂಚೀರ್ವಸಾನ ಆ ವರೀವರ್ತಿ ಭುವನೇಷ್ವಂತಃ॥ ಆವರೀವರ್ತಿ ಭುವನೇಷ್ವಂತರಿತ್ಯಥೈಷ ಮಹಾನಾತ್ಮಾ ಸತ್ತ್ವಲಕ್ಷಣಸ್ತತ್ಪರಂ ತದ್ಬ್ರಹ್ಮ ತತ್ಸತ್ಯಂ ತತ್ಸಲಿಲಂ ತದವ್ಯಕ್ತಂ ತದಸ್ಪರ್ಶಂ ತದರೂಪಂ ತದ್ರಸಂ ತದಗಂಧಂ ತದಮೃತಂ ತಚ್ಛುಕ್ಲಂ ತನ್ನಿಷ್ಠೋ ಭೂತಾತ್ಮಾ ಸೈಷಾ ಭೂತಪ್ರಕೃತಿರಿತ್ಯೇಕೇ। ತತ್ ಕ್ಷೇತ್ರಂ ತಜ್ಜ್ಞಾನಾತ್ ಕ್ಷೇತ್ರಜ್ಞಮನುಪ್ರಾಪ್ಯ ನಿರಾತ್ಮಕಮಥೈಷ ಮಹಾನಾತ್ಮಾ ತ್ರಿವಿಧೋ ಭವತಿ ಸತ್ತ್ವಂ ರಜಸ್ತಮ ಇತಿ। ಸತ್ತ್ವಂ ತು ಮಧ್ಯೇ ವಿಶುದ್ಧಂ ತಿಷ್ಠತ್ಯಭಿತೋ ರಜಸ್ತಮಸೀ। ರಜಃ ಇತಿ ಕಾಮದ್ವೇಷಸ್ತಮ ಇತ್ಯವಿಜ್ಞಾತಸ್ಯ ವಿಶುಧ್ಯತೋ ವಿಭೂತಿಂ ಕುರ್ವತಃ ಕ್ಷೇತ್ರಜ್ಞಪೃಥಕ್ತ್ವಾಯ ಕಲ್ಪತೇ ಪರಿಭಾತಿ ಲಿಂಗೋ ಮಹಾನಾತ್ಮಾ ತಮೋಲಿಂಗೋ ವಿದ್ಯಾ ಪ್ರಕಾಶಲಿಂಗಸ್ತಮೋಽಪಿ ನಿಶ್ಚಯಲಿಂಗ ಆಕಾಶಃ॥

(ನಿ. ೧೪-೩)

ಆಕಾಶಗುಣಃ ಶಬ್ದ ಆಕಾಶಾದ್ವಾಯುರ್ದ್ವಿಗುಣಃ ಸ್ಪರ್ಶೇನ ವಾಯೋರ್ಜ್ಯೋತಿಸ್ತ್ರಿಗುಣಂ ರೂಪೇಣ ಜ್ಯೋತಿಷ ಆಪಶ್ಚತುರ್ಗುಣಾ ರಸೇನಾದ್ಭ್ಯಃ ಪೃಥಿವೀ ಪಂಚಗುಣಾ ಗಂಧೇನ ಪೃಥಿವ್ಯಾ ಭೂತಗ್ರಾಮಸ್ಥಾವರಜಂಗಮಾಸ್ತದೇತದಹರ್ಯುಗಸಹಸ್ರಂ ಜಾಗರ್ತಿ ತಸ್ಯಾಂತೇ ಸುಷುಪ್ಸ್ಯನ್ನಂಗಾನಿ ಪ್ರತ್ಯಾಹರತಿ ಭೂತಗ್ರಾಮಾಃ ಪೃಥಿವೀಮಪಿ ಯಂತಿ ಪೃಥಿವ್ಯಪ ಆಪೋ ಜ್ಯೋತಿಷಂ ಜ್ಯೋತಿರ್ವಾಯುಂ ವಾಯುರಾಕಾಶಮಾಕಾಶೋ ಮನೋ ಮನೋ ವಿದ್ಯಾಂ ವಿದ್ಯಾ ಮಹಾಂತಮಾತ್ಮಾನಂ ಮಹಾನಾತ್ಮಾ ಪ್ರತಿಭಾಂ ಪ್ರತಿಭಾ ಪ್ರಕೃತಿಂ ಸಾ ಸ್ವಪಿತಿ ಯುಗಸಹಸ್ರಂ ರಾತ್ರಿಸ್ತಾವೇತಾವಹೋರಾತ್ರಾವಜಸ್ರಂ ಪರಿವರ್ತೇತೇ ಸ ಕಾಲಸ್ತದೇತದಹರ್ಭವತಿ॥

ಯುಗಸಾಹಸ್ರಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ।
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥ ಇತಿ॥

(ನಿ. (೧೪-೪)

ತಂ ಪರಿವರ್ತಮಾನಮನ್ಯೋಽನುಪ್ರವರ್ತತೇ ಸ್ರಷ್ಟಾ ದ್ರಷ್ಟಾ ವಿಭಕ್ತಾತಿಮಾತ್ರೋಽಹಮಿತಿ ಗಮ್ಯತೇ ಸ ಮಿಥ್ಯಾದರ್ಶನೇದಂ ಪಾವಕಂ ಮಹಾಭೂತೇಷು ಚಿರೋಣ್ವಾಕಾಶಾದ್ವಾಯೋಃ ಪ್ರಾಣಾಃ ಚಕ್ಷುಶ್ಚ ವಕ್ತಾರಂ ಚ ತೇಜಸೋಽದ್ಭ್ಯಃ ಸ್ನೇಹಂ ಪೃಥಿವ್ಯಾಃ ಮೂರ್ತಿಃ ಪಾರ್ಥಿವಾಂಸ್ತ್ವಷ್ಟೌ ಗುಣಾನ್ ವಿದ್ಯಾತ್ ತ್ರೀನ್ಮಾತೃತಸ್ತ್ರೀನ್ ಪಿತೃತೋಽಸ್ಥಿಸ್ನಾಯುಮಜ್ಜಾನಃ ಪಿತೃತಸ್ತ್ವಙ್ಮಾಂಸಶೋಣಿತಾನಿ ಮಾತೃತೋಽನ್ನಂ ಪಾನಮಿತ್ಯಷ್ಟೌ ಸೋಽಯಂ ಪುರುಷಃ ಸರ್ವಮಯಃ ಸರ್ವಜ್ಞಾನೋಽಪಿ ಕ್ಲೃಪ್ತಃ॥ (ನಿ. ೧೪-೫)

ಸ ಯದ್ಯನುರುಧ್ಯತೇ ತದ್ಭವತಿ ಯದಿ ಧರ್ಮೋಽನುರುಧ್ಯತೇ ತದ್ದೇವೋ ಭವತಿ ಯದಿ ಜ್ಞಾನಮ-ನುರುಧ್ಯತೇ ತದಮೃತೋ ಭವತಿ ಯದಿ ಕಾಮಮನುರುಧ್ಯತೇ ಸಂಚ್ಯವತ ಇಮಾಂ ಯೋನಿಂ ಸಂದಧ್ಯಾತ್ ತದಿದಮತ್ರ ಮತಂ ಶ್ಲೇಷ್ಮಾ ರೇತಸಃ ಸಂಭವತಿ, ಶ್ಲೇಷ್ಮಣೋ ರಸಃ ರಸಾಚ್ಛೋ-ಣಿತಂ ಶೋಣಿತಾನ್ಮಾಂಸಂ ಮಾಂಸಾನ್ಮೇದಃ ಮೇದಸಃ ಸ್ನಾವಾ ಸ್ನಾವ್ನೋಽಸ್ಥೀನಿ ಅಸ್ಥಿಭ್ಯೋ ಮಜ್ಜಾ ಮಜ್ಜಾತೋ ರೇತಃ ತದಿದಂ ಯೋನೌ ರೇತಃ ಸಿಕ್ತಂ ಪುರುಷಃ ಸಂಭವತಿ। ಶುಕ್ರಾತಿ-ರೇಕೇ ಪುಮಾನ್ ಭವತಿ ಶೋಣಾತಿರೇಕೇ ಸ್ತ್ರೀ ಭವತಿ, ದ್ವಾಭ್ಯಾಂ ಸಮೇನ ನಪುಂಸಕೋ ಭವತಿ ಶುಕ್ರೇಣ ಭಿನ್ನೇನ ಯಮೋ ಭವತಿ ಶುಕ್ರಶೋಣಿತಸಂಯೋಗಾನ್ಮಾತೃಪಿತೃಸಂ-ಯೋಗಾಚ್ಚ ತತ್ ಕಥಮಿದಂ ಶರೀರಂ ಪರಂ ಸಂಯಮ್ಯತೇ, ಸೌಮ್ಯೋ ಭವತ್ಯೇಕರಾತ್ರೋ-ಷಿತಂ ಕಲಲಂ ಭವತಿ, ಪಂಚರಾತ್ರಾದ್ಬುದ್ಬುದಾಃ, ಸಪ್ತರಾತ್ರಾತ್ ಪೇಶೀ, ದ್ವಿಸಪ್ತರಾತ್ರಾ-ದರ್ಬುದಃ, ಪಂಚವಿಂಶತಿರಾತ್ರಃ ಸ್ವಸ್ಥಿತೋ ಘನೋ ಭವತಿ, ಮಾಸಮಾತ್ರಾತ್ಕಠಿನೋ ಭವತಿ, ದ್ವಿಮಾಸಾಭ್ಯಂತರೇ ಶಿರಃ ಸಂಪದ್ಯತೇ, ಮಾಸತ್ರಯೇಣ ಗ್ರೀವಾವ್ಯಾದೇಶಃ, ಮಾಸಚ-ತುಷ್ಕೇಣ ತ್ವಗ್ವ್ಯಾದೇಶಃ, ಪಂಚಮೇ ಮಾಸೇ ನಖರೋಮವ್ಯಾದೇಶಃ ಷಷ್ಠೇ ಮುಖನಾಸಿ-ಕಾಕ್ಷಿಶ್ರೋತ್ರಂ ಚ ಸಂಭವತಿ, ಸಪ್ತಮೇ ಚಲನಸಮರ್ಥೋ ಭವತಿ, ಅಷ್ಟಮೇ ಬುದ್ಧ್ಯಾ-ಧ್ಯವಸ್ಯತಿ, ನವಮೇ ಸರ್ವಾಂಗಸಂಪೂರ್ಣೋ ಭವತಿ ॥

ಮೃತಶ್ಚಾಹಂ ಪುನರ್ಜಾತೋ ಜಾತಶ್ಚಾಹಂ ಪುನರ್ಮೃತಃ ।
ನಾನಾಯೋನಿಸಹಸ್ರಾಣಿ ಮಯೋಷಿತಾನಿ ಯಾನಿ ವೈ ॥

ಆಹಾರಾ ವಿವಿಧಾ ಭುಕ್ತಾಃ ಪೀತಾ ನಾನಾವಿಧಾಃ ಸ್ತನಾಃ ।
ಮಾತರೋ ವಿವಿಧಾ ದೃಷ್ಟಾಃ ಪಿತರಃ ಸುಹೃದಸ್ತಥಾ ॥

ಅವಾಙ್ಮುಖಃ ಪೀಡ್ಯಮಾನೋ ಜಂತುಶ್ಚೈವ ಸಮನ್ವಿತಃ
ಸಾಂಖ್ಯಂ ಯೋಗಂ ಸಮಭ್ಯಸ್ಯೇತ್ಪುರುಷಂ ವಾ ಪಂಚವಿಂಶಕಂ ॥ ಇತಿ ॥

ತತಶ್ಚ ದಶಮೇ ಮಾಸೇ ಪ್ರಜಾಯತೇ । ಜಾತಶ್ಚ ವಾಯುನಾ ಸ್ಪೃಶಸ್ತನ್ನ ಸ್ಮರತಿ ಜನ್ಮಮರಣ-ಮಂತೇ ಚ ಶುಭಾಶುಭಂ ಕರ್ಮೈತಚ್ಛರೀರಸ್ಯ ಪ್ರಾಮಾಣ್ಯಂ ॥ (ನಿ. ೧೪-೬)

ಅಷ್ಟೋತ್ತರಂ ಸಂಧಿಶತಮಷ್ಟಾಕಪಾಲಂ ಶಿರಃ ಸಂಪದ್ಯತೇ ಷೋಡಶ ವಪಾಪಲಾನಿ ನವ ಸ್ನಾಯುಶತಾನಿ ಸಪ್ತಶತಂ ಪುರುಷಸ್ಯ ಮರ್ಮಣಾಮರ್ಧಚತಸ್ರೋ ರೋಮಾಣಿ ಕೋ-ಟ್ಯೋ ಹೃದಯಂ ಹ್ಯಷ್ಟಕಪಾಲಾನಿ ದ್ವಾದಶಕಪಾಲಾನಿ ಜಿಹ್ವಾ ವೃಷಣೌ ಹ್ಯಷ್ಟಸುಪರ್ಣೌ ತಥೋಪಸ್ಥಗುದಪಾಯ್ವೇತನ್ಮೂತ್ರಪುರೀಷಂ ಕಸ್ಮಾದಾಹಾರಪಾನಸಿಕ್ತತ್ವಾನುಪಚಿತಕರ್ಮಾ-ಣಾವನ್ಯೋನ್ಯಂ ಜಯೇತೇ ಇತಿ ತಂ ವಿದ್ಯಾಕರ್ಮಣೀ ಸಮನ್ವಾರಭೇತೇ ಪೂರ್ವಪ್ರಜ್ಞಾ ಚ ಮಹತ್ಯಜ್ಞಾನತಮಸಿ ಮಗ್ನೋ ಜರಾಮರಣಕ್ಷುತ್ಪಿಪಾಸಾಶೋಕಕ್ರೋಧಲೋಭಮೋಹ-ಮದಭಯಮತ್ಸರಹರ್ಷವಿಷಾದೇರ್ಷ್ಯಾಸೂಯಾತ್ಮಕೈರ್ದ್ವಂದ್ವೈರಭಿಭೂಯಮಾನಃ ಸೋಽ-

ಸ್ಮಾದಾರ್ಜವಜವೀಭಾವಾನಾಂ ತನ್ನಿರ್ಮುಚ್ಯತೇ ಸೋಽಸ್ಮಾತ್ಪಾನ್ನಂ ಮಹಾಭೂಮಿಕಾವಚ್ಛರೀರಾನ್ನಿನೋಷವಮಾತ್ರೈಃ ಪ್ರಕ್ರಮ್ಯ ಪ್ರಕೃತಿರಧಿಪರೀತ್ಯ ತೈಜಸಂ ಶರೀರಂ ಕೃತ್ವಾ ಕರ್ಮಣೋಽನುರೂಪಂ ಫಲಮನುಭೂಯ ತಸ್ಯ ಸಂಕ್ಷಯೇ ಪುನರಿಮಂ ಲೋಕಂ ಪ್ರತಿಪದ್ಯತೇ ॥
(ನಿ. ೧೪-೭)

ಅಥ ಯೇ ಹಿಂಸಾಮಾಶ್ರಿತ್ಯ ವಿದ್ಯಾಮುತ್ಸೃಜ್ಯ ಮಹತ್ತಪಸ್ತೇಪಿರೇ ಚಿರೇಣ ವೇದೋಕ್ತಾನಿ ವಾ ಕರ್ಮಾಣಿ ಕುರ್ವಂತಿ, ತೇ ಧೂಮಮಭಿಸಂಭವಂತಿ, ಧೂಮಾದ್ರಾತ್ರಿಂ, ರಾತ್ರೇರಪಕ್ಷೀಯಮಾಣಪಕ್ಷಂ, ಅಪಕ್ಷೀಯಮಾಣಪಕ್ಷಾದ್ದಕ್ಷಿಣಾಯನಂ, ದಕ್ಷಿಣಾಯನಾತ್ ಪಿತೃಲೋಕಂ ಪಿತೃಲೋಕಾಚ್ಚಂದ್ರಮಸಂ, ಚಂದ್ರಮಸೋ ವಾಯುಂ, ವಾಯೋರ್ವೃಷ್ಟಿಂ, ವೃಷ್ಟೇರೋಷಧಯಶ್ಚೈತದ್ಭೂತ್ವಾ ತಸ್ಯ ಸಂಕ್ಷಯೇ ಪುನರೇವೇಮಂ ಲೋಕಂ ಪ್ರತಿಪದ್ಯತೇ ॥
(ನಿ. ೧೪-೮)

ಅಥ ಯೇ ಹಿಂಸಾಮುತ್ಸೃಜ್ಯ ವಿದ್ಯಾಮಾಶ್ರಿತ್ಯ ಮಹತ್ತಪಸ್ತೇಪಿರೇ ಜ್ಞಾನೋಕ್ತಾನಿ ವಾ ಕರ್ಮಾಣಿ ಕುರ್ವಂತಿ ತೇಽರ್ಚಿರಭಿಸಂಭವಂತಿ ಅರ್ಚಿಷೋಽಹಃ ಅಹ್ನ ಆಪೂರ್ಯಮಾಣಪಕ್ಷಂ, ಆಪೂರ್ಯಮಾಣಪಕ್ಷಾದುದಗಯನಂ, ಉದಗಯನಾದ್ದೇವಲೋಕಂ ದೇವಲೋಕಾದಾದಿತ್ಯಂ, ಆದಿತ್ಯಾದ್ವೈದ್ಯುತಂ ವೈದ್ಯುತಾನ್ಮಾನಸಂ, ಮಾನಸಃ ಪುರುಷೋ ಭೂತ್ವಾ ಬ್ರಹ್ಮಲೋಕಮಭಿಸಂಭವಂತಿ, ತೇ ನ ಪುನರಾವರ್ತಂತೇ ಶಿಷ್ಟಾ ದಂದಶೂಕಾ ಯತ ಇದಂ ನ ಜಾನಂತಿ ತಸ್ಮಾದಿದಂ ವೇದಿತವ್ಯಂ ॥
(ನಿ. ೧೪-೯)

## ನೂರ ಎಪ್ಪತ್ತೆಂಟನೆಯ ಸೂಕ್ತ

### ಪೀಠಿಕೆ.

ಈ ಸೂಕ್ತದಲ್ಲಿ ತಾರ್ಕ್ಷ್ಯನೆಂಬ ದೇವತೆಯನ್ನು ಸ್ತುತಿಸಲಾಗಿದೆ. ತಾರ್ಕ್ಷ್ಯಅರಿಷ್ಟನೇಮಿಯೆಂಬುವನು, ಈ ಸೂಕ್ತದ ಋಷಿಯು ಈ ತಾರ್ಕ್ಷ್ಯದೇವತೆಯ ವಿಷಯವನ್ನೂ ಸೂಕ್ತದ ಋಷಿಯಾದ ಅರಿಷ್ಟನೇಮಿಯ ವಿಷಯವನ್ನೂ ನಾವು ಇದೇಮಂಡಲದ ೧೪೪ ನೇ ಸೂಕ್ತದ ಪೀಠಿಕೆಯಲ್ಲಿ ಎಂದರೆ 954-956 ನೇ ಪುಟಗಳಲ್ಲಿ ವಿವರಿಸಿದ್ದೇವೆ.

॥ ಸಾಯಣಭಾಷ್ಯಂ ॥

ತ್ಯಮೂ ಷ್ವಿತಿ ತೃಚಂ ಸಪ್ತವಿಂಶಂ ಸೂಕ್ತಂ ತಾರ್ಕ್ಷ್ಯಪುತ್ರಸ್ಯಾರಿಷ್ಟನೇಮೇರಾರ್ಷಂ ತ್ರೈಷ್ಟುಭಂ ತಾರ್ಕ್ಷ್ಯದೇವತಾಕಂ । ತಥಾ ಚಾನುಕ್ರಾಂತಂ । ತ್ಯಮೂ ಷ್ವರಿಷ್ಟನೇಮಿಸ್ತಾರ್ಕ್ಷ್ಯಸ್ತಾರ್ಕ್ಷ್ಯಮಿತಿ ॥ ಅಹರ್ಗಣೇಷು ದ್ವಿತೀಯಾದಿಷ್ವಹಃಸು ನಿಷ್ಕೇವಲ್ಯಸೂಕ್ತಾನಾಂ ಪುರಸ್ತಾದಿದಂ ಸೂಕ್ತಂ ಶಂಸನೀಯಂ । ಸೂತ್ರಿತಂ ಚ । ತ್ಯಮೂ ಷು ವಾಜಿನಂ ದೇವಜೂತಮಿತಿ ತಾರ್ಕ್ಷ್ಯಮಗ್ರೇ ನಿಷ್ಕೇವಲ್ಯಸೂಕ್ತಾನಾಂ । ಆ. ೭-೧ । ಇತಿ ॥ ವಿಷುವತಿ ತು ನಿಷ್ಕೇವಲ್ಯಸೂಕ್ತಾನಾಮಂತ ಏವ ತತ್ಸೂಕ್ತಂ । ಸೂತ್ರ್ಯತೇ ಹಿ । ತ್ಯಮೂ ಷ್ವಿತೀಹ ತಾರ್ಕ್ಷ್ಯಮಂತತಃ । ಆ. ೮-೬ । ಇತಿ ॥ ಮಹಾವ್ರತೇಽಪಿ ನಿಷ್ಕೇವಲ್ಯ ಏತತ್ । ತಥೈವ ಪಂಚಮಾರಣ್ಯಕೇ ಸೂತ್ರ್ಯತೇ । ಐ. ಆ. ೫-೩-೧. ॥

ಅನುವಾದವು— **ತ್ಯಮೂ ಷು** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಇಪ್ಪತ್ತೇಳನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ತಾರ್ಕ್ಷ್ಯಪುತ್ರನಾದ ಅರಿಷ್ಟನೇಮಿಯೆಂಬುವನು ಋಷಿಯು; ತಾರ್ಕ್ಷ್ಯನು ದೇವತೆಯು; ತ್ರಿಷ್ಟುಪ್ಛಂದಸ್ಸು ಅನುಕ್ರಮಣಿಕೆಯಲ್ಲಿ—**ತ್ಯಮೂ ಷ್ವರಿಷ್ಟನೇಮಿಸ್ತಾರ್ಕ್ಷ್ಯಸ್ತಾರ್ಕ್ಷ್ಯಂ** ಎಂದು ಹೇಳಿರುವುದು. ಅಹರ್ಗಣೇಷ್ಟಿಗಳಲ್ಲಿ ಎರಡನೆಯ ದಿನಗಳಲ್ಲಿಯೂ ಅಲ್ಲಿಂದ ಮುಂದಿನ ದಿನಗಳಲ್ಲಿಯೂ ಪಠಿಸುವ ನಿಷ್ಕೇವಲ್ಯ ಶಸ್ತ್ರಮಂತ್ರಗಳ ಸೂಕ್ತಗಳಿಗೆ ಪೂರ್ವಭಾವಿಯಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ತ್ಯಮೂ ಷು ವಾಜಿನಂ ದೇವಜೂತಮಿತಿ ತಾರ್ಕ್ಷ್ಯಮಗ್ರೇ ನಿಷ್ಕೇವಲ್ಯಸೂಕ್ತಾನಾಂ** ಎಂಬ ಸೂತ್ರದಿಂದ (ಆ. ೭-೧) ವಿವೃತವಾಗಿರುವುದು. ವಿಷುವತಿ ಎಂಬ ಯಾಗದ ದಿವಸದಲ್ಲಿ ನಿಷ್ಕೇವಲ್ಯ ಸೂಕ್ತಗಳ ಕೊನೆಯಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತ್ಯಮೂ ಷ್ವಿತೀಹ ತಾರ್ಕ್ಷ್ಯಮಂತತಃ** ಎಂಬ ಸೂತ್ರದಿಂದ (ಆ. ೮-೬) ವಿವೃತವಾಗಿರುವುದು. ಮತ್ತು ನಿಷ್ಕೇವಲ್ಯ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ ಐ. ಆ. ೫-೩-೧ ನೇ ಸೂತ್ರದಲ್ಲಿ ನಿರ್ದಿಷ್ಟವಾಗಿದೆ.

## ಸೂಕ್ತ—೧೭೮

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೭೮ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೩೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೩ ॥
॥ ಋಷಿಃ—ಅರಿಷ್ಟನೇಮಿಸ್ತಾರ್ಕ್ಷ್ಯಃ ॥
॥ ದೇವತಾ—ತಾರ್ಕ್ಷ್ಯಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತ್ಯಮೂ ಷು ವಾಜಿನಂ ದೇವಜೂತಂ ಸಹಾವಾನಂ ತರುತಾರಂ ರಥಾನಾಂ ।
ಅರಿಷ್ಟನೇಮಿಂ ಪೃತನಾಜಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿಹಾ ಹುವೇಮ ॥

॥ ಪದಪಾಠಃ ॥

ತ್ಯಂ । ಊಂ ಇತಿ । ಸು । ವಾಜಿನಂ । ದೇವಽಜೂತಂ । ಸಹಽವಾನಂ । ತರುತಾರಂ । ರಥಾನಾಂ ।
ಅರಿಷ್ಟನೇಮಿಂ । ಪೃತನಾಜಂ । ಆಶುಂ । ಸ್ವಸ್ತಯೇ । ತಾರ್ಕ್ಷ್ಯಂ । ಇಹ । ಹುವೇಮ ॥ ೧ ॥

॥ ಸಾಯಣಭಾಷ್ಯಂ ॥

ತ್ಯಮು ತಂ ಪ್ರಸಿದ್ಧಮೇವ ತಾರ್ಕ್ಷ್ಯಂ ತೃಕ್ಷಪುತ್ರಂ ಸುಪರ್ಣಂ ॥ ತೃಕ್ಷಾದ್ಯಞ್ । ಗರ್ಗಾದಿಃ ।' ಸ್ವಸ್ತಯೇ ಕ್ಷೇಮಾಯೇಹಾಸ್ಮಿನ್ಕರ್ಮಣಿ ಹುವೇಮ । ಭೃಶಮಾಹ್ವಯೇಮಹಿ ॥ ಬಹುಲಂ ಛಂದಸೀತಿ

ಹ್ವಯತೇಃ ಸಂಪ್ರಸಾರಣಂ । ಲಿಜ್ಯಾಶಿಷ್ಯಙ್ । ಯದ್ವಾ । ಪ್ರಾರ್ಥನಾಯಾಂ ಲಿಙ್ । ವ್ಯತ್ಯಯೇನ ಶಃ ॥ ಶೀಘ್ರಗಾಮಿನಂ । ವಾಜಿನಂ ಬಲವಂತಮನ್ನವಂತಂ ವಾ ದೇವಜೂತಂ ದೇವೈಃ ಸೋಮಾಹರಣಾರ್ಥಂ ಪ್ರೇರಿತಂ॥ ಜು ಇತಿ ಗತ್ಯರ್ಥಃ ಸೌತ್ರೋ ಧಾತುಃ । ಅಸ್ಮಾತ್ಕರ್ಮಣಿ ನಿಷ್ಠಾ ।ತೃತೀಯಾ ಕರ್ಮಣೀತಿ ಪೂರ್ವಪದ-ಪ್ರಕೃತಿಸ್ವರತ್ವಂ ॥ ಯದ್ವಾ । ದೇವೈಃ ಪ್ರೀಯಮಾಣಂ ತರ್ಪ್ಯಮಾಣಂ । ಯದಾಹ ಯಾಸ್ಕಃ । ಜೂತಿ-ರ್ಗತಿಃ ಪ್ರೀತಿರ್ವಾ ದೇವಜೂತಂ ದೇವಪ್ರೀತಂ ವಾ । ನಿ. ೧೦–೨೮ । ಇತಿ । ಸಹಾವಾನಂ ಸಹಸ್ವಂತಂ ಬಲವಂತಮಭಿಭವನವಂತಂ ವಾ ಅತ ಏವ ರಥಾನಾಮನ್ಯದೀಯಾನಾಂ ತರುತಾರಂ ಸಂಗ್ರಾಮೇ ಜೇತಾರಂ । ಯದ್ವಾ । ರಂಹಣಶೀಲಾ ಇಮೇ ಲೋಕಾ ರಥಾಃ । ತಾನ್ಸೋಮಾಹರಣಸಮಯೇ ಶೀಘ್ರಂ ತರೀತಾರಂ । ಶ್ರೂಯತೇ ಹಿ । ಏಷ ಹೀಮಾಂಲ್ಲೋಕಾನ್ಸದ್ಯಸ್ತರತೀತಿ । ಐ. ಬ್ರಾ. ೪–೨೦ ॥ ತರತೇಸ್ತೃಚಿ ಗ್ರಸಿತಸ್ಕಭಿತೇತ್ಯಾದಾವುಡಾಗಮೋ ನಿಪಾತ್ಯತೇ । ಪಾ. ೭–೨–೩೪ ॥ ಅರಿಷ್ಟನೇಮಿಮಹಿಂಸಿತರಥಂ । ಯದ್ವಾ।.ನೇಮಿರ್ನಮನಶೀಲಮಾಯುಧಂ । ಅಹಿಂಸಿತಾಯುಧಂ । ಅಥವಾ । ಉಪಚಾರಾಜ್ಜನಕೇ ಜನ್ಯಶಬ್ದಃ । ಅರಿಷ್ಟನೇಮೇರ್ಮಮ ಜನಕಂ । ಪೃತನಾಜಂ ಪೃತನಾನಾಂ ಶತ್ರುಸೇನಾನಾಂ ಪ್ರಾಜಿತಾರಂ ಪ್ರಗಮಯಿತಾರಂ ಜೇತಾರಂ ವಾ ॥ ಅಜ ಗತಿಕ್ಷೇಪಣಯೋಃ । ಅಸ್ಮಾತ್ಕ್ವಿಪ್ । ವಲಾದಾವಾರ್ಧಧಾತುಕೇ ವಿಕಲ್ಪ ಇಷ್ಯತೇ । ಕಾ. ೨–೪–೫೬–೨ । ಇತಿ ವಚನಾದ್ವೀಭಾವಾಭಾವಃ । ಜಯತೇರ್ವಾ ಡಪ್ರತ್ಯಯಃ ॥ ಆಶುಂ ಶೀಘ್ರಗಾಮಿನಂ ॥

॥ ಪ್ರತಿಪದಾರ್ಥ ॥

**ತ್ಯಂ ಉ**—ಪ್ರಸಿದ್ಧನಾದವನೂ । **ವಾಜಿನಂ**—ಶಕ್ತಿಯುತನೂ ಅಥವಾ ಅನ್ನಯುತನೂ । **ದೇವ-ಜೂತಂ**—ಸೋಮಾಹರಣಕ್ಕಾಗಿ ದೇವತೆಗಳಿಂದ ಪ್ರಾರ್ಥಿತನಾದವನೂ ಅಥವಾ ದೇವತೆಗಳ ಪ್ರೀತಿಗೆ ಪಾತ್ರನಾದವನೂ । **ಸಹಾವಾನಂ**—ಬಲವುಳ್ಳವನೂ ಅಥವಾ ಶತ್ರುಗಳನ್ನು ಸೋಲಿಸುವವನೂ । **ರಥಾನಾಂ**—ಶತ್ರುಗಳ ರಥಗಳನ್ನು । **ತರುತಾರಂ**—ಯುದ್ಧದಲ್ಲಿ ಜಯಿಸುವವನೂ । **ಅರಿಷ್ಟನೇಮಿಂ**—ನಿರ್ಬಾಧಿತವಾದ ರಥವುಳ್ಳವನೂ ಅಥವಾ ಅರಿಷ್ಟನೇಮಿಯೆಂಬ ಹೆಸರಿನ ನನ್ನ ತಂದೆಯಾದವನೂ । **ಪೃತನಾಜಂ**—ಶತ್ರುಸೇನೆಗಳನ್ನು ಜಯಿಸುವವನೂ । **ಆಶುಂ**—ಶೀಘ್ರಗಮನವುಳ್ಳವನೂ ಆದ । **ತಾರ್ಕ್ಷ್ಯಂ**—ತಾರ್ಕ್ಷ್ಯನೆಂಬ ದೇವನನ್ನು ಅಥವಾ ತೃಕ್ಷಪುತ್ರನಾದ ಸುಪರ್ಣನೆಂಬ ದೇವನನ್ನು । **ಸ್ವಸ್ತಯೇ**—ನಮ್ಮ ಕ್ಷೇಮಾಭ್ಯುದಯಕ್ಕಾಗಿ । **ಇಹ**—ಈ ಕರ್ಮದಲ್ಲಿ । **ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಅತ್ಯಂತ ಪ್ರಸಿದ್ಧನೂ ಶಕ್ತಿಯುತನೂ ಸೋಮಾಹರಣಕ್ಕಾಗಿ ದೇವತೆಗಳಿಂದ ಪ್ರಾರ್ಥಿತನಾದವನೂ ಅಥವಾ ದೇವತೆಗಳ ಪ್ರೀತಿಗೆ ಪಾತ್ರನಾದವನೂ, ಶತ್ರುಗಳನ್ನು ಸೋಲಿಸುವವನೂ, ಯುದ್ಧದಲ್ಲಿ ಶತ್ರುಗಳ ರಥವನ್ನು ಜಯಿಸುವವನೂ, ಅಹಿಂಸಿತವಾದ ಎಂದರೆ ತಡೆಯಿಲ್ಲದ ರಥ ಅಥವಾ ಆಯುಧವುಳ್ಳವನೂ ಅಥವಾ ಅರಿಷ್ಟನೇಮಿಯೆಂಬ ನನ್ನ ತಂದೆಯಾದವನೂ, ಶತ್ರುಸೇನೆಗಳನ್ನು ಜಯಿಸುವವನೂ, ಶೀಘ್ರಗಮನವುಳ್ಳವನೂ ತಾರ್ಕ್ಷ್ಯನೆಂಬ ಅಥವಾ ತೃಕ್ಷಪುತ್ರನೂ ಆದ ಸುಪರ್ಣನೆಂಬ ದೇವನನ್ನು ನಮ್ಮ ಕ್ಷೇಮಾಭ್ಯುದಯಕ್ಕಾಗಿ ಪ್ರಾರ್ಥಿಸಿ ಕರೆಯುತ್ತೇವೆ.

## English Translation

Let us invoke hither for our welfare that Tarkshya, who is mighty, the commissioned of the gods, the victorious, the outstripper of chariots, of irressitable car, the overthro wer of hosts, the swift.

॥ ವಿಶೇಷವಿಷಯಗಳು ॥

ತಾರ್ಕ್ಷ್ಯಶಬ್ದನಿರ್ವಚನವನ್ನು ನಾವು ಇದೇ ಮಂಡಲದ ೧೪೪ ನೇ ಸೂಕ್ತದ ಪೀಠಿಕೆಯಲ್ಲಿ ವಿವರಿಸಿದೇವೆ. ಋಕ್ಕಿಗೆ ಯಾಸ್ಕರು ಹೇಳಿರುವ ನಿರ್ವಚನವು ಈ ರೀತಿ ಇದೆ—

**ತಂ ಭೃಶಮನ್ನವಂತಂ । ಜೂತಿರ್ಗತಿಃ ಪ್ರೀತಿರ್ವಾ । ದೇವಜೂತಂ ದೇವಗತಂ ದೇವಪ್ರೀತಂ ವಾ । ಸಹಸ್ವಂತಂ ತಾರಯಿತಾರಂ ರಥಾನಾಮರಿಷ್ಟನೇಮಿಂ ಪೃತನಾಜಿತಮಾಶುಂ ಸ್ವಸ್ತಯೇ ತಾರ್ಕ್ಷ್ಯಮಿಹ ಹ್ವಯೇಮೇತಿ । ಕಮನ್ಯಂ ಮಧ್ಯಮಾದೇವಮವಕ್ಷ್ಯತ್ ॥** (ನಿ. ೧೦-೨೮)

ಯಾಸ್ಕರು ಹೇಳಿರುವ ಅರ್ಥಕ್ಕೂ ಸಾಯಣರ ವಿವರಣೆಗೂ ಏನೂ ವ್ಯತ್ಯಾಸವಿಲ್ಲದ್ದರಿಂದ ನಿರುಕ್ತದ ಅರ್ಥವನ್ನು ವಿವರಿಸಬೇಕಾದ ಅವಶ್ಯಕತೆ ಇರುವುದಿಲ್ಲ. ಇದರ ಅರ್ಥವು ನಾವು ಬರೆದಿರುವ ಪ್ರತಿಪದಾರ್ಥದಂತೇ ಇದೆ. ಈ ದೇವತೆಯ ವಿಷಯವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಸೂಕ್ತದ ಮೂರನೆಯ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೂ ನಿರ್ವಚನವನ್ನು ಹೇಳಿರುವರು. ಅದನ್ನು ಮೂರನೆಯ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗಿದೆ.

॥ ಸಂಹಿತಾಪಾಠಃ ॥

ಇಂದ್ರಸ್ಯೇವ ರಾತಿಮಾಜೋಹುವಾನಾಃ ಸ್ವಸ್ತಯೇ ನಾವಮಿವಾ ರುಹೇಮ।
ಉರ್ವೀ ನ ಪೃಥ್ವೀ ಬಹುಲೇ ಗಭೀರೇ ಮಾ ವಾಮೇತೌ ಮಾ ಪರೇತೌ
ರಿಷಾಮ ॥ ೨ ॥

॥ ಪದಪಾಠಃ ॥

ಇಂದ್ರಸ್ಯಽಇವ । ರಾತಿಂ । ಆಽಜೋಹುವಾನಾಃ । ಸ್ವಸ್ತಯೇ । ನಾವಂಽಇವ । ಆ । ರುಹೇಮ ।
ಉರ್ವೀ ಇತಿ । ನ । ಪೃಥ್ವೀ ಇತಿ । ಬಹುಲೇ ಇತಿ । ಗಭೀರೇ ಇತಿ । ಮಾ । ವಾಂ । ಆಽಇತೌ । ಮಾ ।
ಪರಾಽಇತೌ । ರಿಷಾಮ ॥ ೨ ॥

|| ಸಾಯಣಭಾಷ್ಯಂ ||

**ಇಂದ್ರಸ್ಯೇವ ತಾರ್ಕ್ಷ್ಯಸ್ಯ ರಾತಿಂ ದಾನಮಾಜೋಹುವಾನಾಃ ಪುನಃ ಪುನರಾಹ್ವಯಂತೋ ವಯಂ ಸ್ವಸ್ತಯೇಽವಿನಾಶಾಯ ನಾವಮಿವ ನೌರ್ಯಥಾ ದುರವಗಾಹಂ ಸಮುದ್ರಂ ತಾರಯತಿ ತಥಾ ದುಃಖಸ್ಯ ತಾರಯಿತ್ರೀಂ ತಾಮಾ ರುಹೇಮ | ಆರೂಢಾ ಭೂಯಾಸ್ಮ || ರುಹೇರಾಶೀರ್ಲಿಙಿ ಲಿಙ್ಯಾಶಿಷ್ಯಙ್ || ಹೇ ಉರ್ವೀ ಉರ್ವ್ಯೌ ವಿಸ್ತೀರ್ಣೇ ಹೇ ಪೃಥ್ವೀ ಪೃಥಿವೀ ಪ್ರಥಿತೇ ವಿಖ್ಯಾತೇ ಹೇ ಬಹುಲೇ ಅನಂತೇ ಗಭೀರೇ ಗಾಂಭೀರ್ಯೋಪೇತೇ ಈದೃಶ್ಯೌ ಹೇ ದ್ಯಾವಾಪೃಥಿವ್ಯೌ | ನಶಬ್ದಃ ಸಂಪ್ರತ್ಯರ್ಥೇ | ಸಂಪ್ರತಿ ವಾಂ ಯುವಯೋಃ ಸಂಬಂಧಿನ್ಯೇತೌ ತಾರ್ಕ್ಷ್ಯಸ್ಯಾಗಮೇ ಪರೇತೌ ಪರಾಗಮನೇ ಚ ವಯಂ ಮಾ ರಿಷಾಮ | ಹಿಂಸಿತಾ ಮಾ ಭೂಮ || ಅಙ್ಪರಾಭ್ಯಾಮುತ್ತರಸ್ಯೇಣೋ ಭಾವೇ ಕ್ತಿನ್ | ತಾದೌ ಚ ನಿತೀತಿ ಗತೇಃ ಪ್ರಕೃತಿಸ್ವರತ್ವಂ ||**

|| ಪ್ರತಿಪದಾರ್ಥ ||

**ಇಂದ್ರಸ್ಯೇವ**—ಇಂದ್ರನ ದಾನದಂತೆಯೇ ಇರುವ ಈ ತಾರ್ಕ್ಷ್ಯದೇವನ | **ರಾತಿಂ**—ದಾನವನ್ನು | **ಆಜೋಹುವಾನಾಃ**—ಮತ್ತೆಮತ್ತೆ ಬಯಸುವ ನಾವು | **ಸ್ವಸ್ತಯೇ**—ನಮ್ಮ ಕ್ಷೇಮಾಭ್ಯುದಯಕ್ಕಾಗಿ | **ನಾವಮಿವ**—ನಾವೆಯು (ದೋಣಿಯು) ಸಮುದ್ರವನ್ನು ದಾಟಿಸುವಂತೆ ದುಃಖದಿಂದ ದಾಟಿಸುವ | **ತಾಂ**— ಆ ದಾನವನ್ನು | **ಆ ರುಹೇಮ**—ಆರೋಹಣ ಮಾಡುತ್ತೇವೆ ಎಂದರೆ ಪಡೆಯುತ್ತೇವೆ | **ಉರ್ವೀ** –ವಿಸ್ತಾರವಾದವೂ | **ಪೃಥ್ವೀ**— ಪ್ರಸಿದ್ಧವಾದವೂ | **ಬಹುಲೇ**—ಅನಂತವಾದವೂ | **ಗಭೀರೇ**—ಗಂಭೀರವಾದವೂ ಎಂದರೆ ಅಗಾಧವಾದವೂ ಆದ ಎಲೈ ದ್ಯಾವಾಪೃಥಿವಿಗಳೇ | **ವಾಂ**—ನಿಮ್ಮ ಸಮೀಪಕ್ಕೆ | **ಏತೌ**—ಈ ತಾರ್ಕ್ಷ್ಯದೇವನ ಆಗಮನಸಮಯದಲ್ಲಿಯೂ | **ಪರೇತೌ**—ಹೊರಟುಹೋಗುವ ಸಮಯದಲ್ಲಿಯೂ (ನಾವು) | **ಮಾ ರಿಷಾಮ**—ಹಿಂಸಿಸಲ್ಪಡದಿರಲಿ.

|| ಭಾವಾರ್ಥ ||

ಇಂದ್ರನ ದಾನದಂತೆಯೇ ಪ್ರಶಸ್ತವಾದ ಈ ತಾರ್ಕ್ಷ್ಯದೇವನ (ಧನಾದಿ) ದಾನವನ್ನು ಪುನಃಪುನಃ ಬೇಕೆಂದು ಬಯಸುವ ನಾವು ನಮ್ಮ ಕ್ಷೇಮಾಭ್ಯುದಯಕ್ಕಾಗಿ, ನಾವೆಯು ಸಮುದ್ರವನ್ನು ದಾಟಿಸುವಂತೆ ದುಃಖದಿಂದ ದಾಟಿಸಬಲ್ಲ ಈ ತಾರ್ಕ್ಷ್ಯದೇವನ ಧನದಾನವನ್ನು ಪಡೆಯುತ್ತೇನೆ. ವಿಸ್ತಾರವೂ, ಪ್ರಸಿದ್ಧವೂ, ಅಗಾಧವೂ ಆದ ಎಲೈ ದ್ಯಾವಾಪೃಥಿವಿಗಳೇ, ಈ ತಾರ್ಕ್ಷ್ಯದೇವನು ನಿಮ್ಮ ಸಮೀಪಕ್ಕೆ ಬರುವಾಗಲೂ, ಹೊರಟುಹೋಗುವಾಗಲೂ ನಮಗೆ ಯಾವ ಬಾಧೆಯೂ ಉಂಟಾಗದಿರಲಿ.

## English Translation

Repeatedly invoking the liberality (of Tarkshya), as (we do that) of Indra, let us mount upon it for our welfare as upon a ship; O heaven and earth, vast, expanded, mainfold, profound, may we not suffer harm now from (Tarakshya's) comming to or departing from you.

॥ ಸಂಹಿತಾಪಾಠಃ ॥

ಸದ್ಯಶ್ಚಿದ್ಯಃ ಶವಸಾ ಪಂಚ ಕೃಷ್ಟೀಃ ಸೂರ್ಯ ಇವ ಜ್ಯೋತಿಷಾಪಸ್ತತಾನ ।
ಸಹಸ್ರಸಾಃ ಶತಸಾ ಅಸ್ಯ ರಂಹಿರ್ನ ಸ್ಮಾ ವರಂತೇ ಯುವತಿಂ ನ ಶರ್ಯಾಂ॥

॥ ಪದಪಾಠಃ ॥

ಸದ್ಯಃ । ಚಿತ್ । ಯಃ । ಶವಸಾ । ಪಂಚ । ಕೃಷ್ಟೀಃ । ಸೂರ್ಯಃऽಇವ । ಜ್ಯೋತಿಷಾ । ಅಪಃ । ತತಾನ।
ಸಹಸ್ರऽಸಾಃ । ಶತऽಸಾಃ । ಅಸ್ಯ । ರಂಹಿಃ । ನ । ಸ್ಮ । ವರಂತೇ । ಯುವತಿಂ । ನ । ಶರ್ಯಾಂ ॥ ೩ ॥

॥ ಸಾಯಣಭಾಷ್ಯಂ ॥

ಯಶ್ಚಿದ್ಯೋऽಪಿ ತಾರ್ಕ್ಷ್ಯಃ ಸದ್ಯಃ ಶೀಘ್ರಂ ಶವಸಾತ್ಮೀಯೇನ ಬಲೇನಾಪ ಉದಕಾನ್ಯಮೃತಲಕ್ಷಣಾನಿ ತತಾನ ವಿಸ್ತಾರಿತವಾನ್ ಸೂರ್ಯ ಇವ ಯಥಾ ಸೂರ್ಯಃ ಸರ್ವಸ್ಯ ಪ್ರೇರಕ ಆದಿತ್ಯೋ ಜ್ಯೋತಿಷಾತ್ಮೀಯೇನ ತೇಜಸಾ ವರ್ಷಕಾಲೇಽಪೋ ವಿಸ್ತಾರಯತಿ ತದ್ವತ್ । ಕೃಷ್ಟಯೋ ಮನುಷ್ಯಾಃ । ಪಂಚಕೃಷ್ಟೀಃ ಪಂಚವಿಧಾನ್ಕೃಷ್ಟೀನ್ಮನುಷ್ಯಾನ್ಪ್ರತಿ । ನಿಷಾದಪಂಚಮಾಂಶ್ಚತುರೋ ವರ್ಣಾನಿತ್ಯರ್ಥಃ । ಅಸ್ಯ ತಾರ್ಕ್ಷ್ಯಸ್ಯ ರಂಹಿರ್ಗತಿಃ ಸಹಸ್ರಸಾಃ ಸಹಸ್ರಸಂಖ್ಯಸ್ಯ ಧನಸ್ಯ ದಾತ್ರೀ ಸಂಭಕ್ತ್ರೀ ವಾ ಭವತಿ । ತಥಾ ಶತಸಾಃ ಶತಸ್ಯ ಚ ದಾತ್ರೀ ಸಂಭಕ್ತ್ರೀ ವಾ ಭವತಿ ॥ ಸನತೇಃ ಸನೋತೇರ್ವಾ ಜನಸನಖನೇತಿ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ ॥ ನ ಸ್ಮ ನ ಖಲ್ವೀದೃಶೀಂ ತಾರ್ಕ್ಷ್ಯಸ್ಯ ತೇ ಗತಿಂ ವರಂತೇ । ಕೇಚನ ವಾರಯಂತಿ । ತತ್ರ ದೃಷ್ಟಾಂತಃ । ಶರ್ಯಾಂ ಶರಕಾಂಡಮಯೀಮಿಷುಂ ಧನುಷೋ ಮುಕ್ತಾಂ ಯುವತಿಂ ನ ಲಕ್ಷ್ಯೇಣ ಮಿಶ್ರೀಭವಂತೀಮಿವ । ಸಾ ಯಥಾ ದುರ್ನಿವಾರಾ ತದ್ವದೇಷಾ ಕೈಶ್ಚಿದಪಿ ವಾರಯಿತುಮಶಕ್ಯೇತ್ಯರ್ಥಃ । ಅತ್ರ ನಿರುಕ್ತಂ । ಸದ್ಯೋऽಪಿ ಯಃ ಶವಸಾ ಬಲೇನ ತನೋತ್ಯಪಃ ಸೂರ್ಯ ಇವ ಜ್ಯೋತಿಷಾ ಪಂಚ ಮನುಷ್ಯಜಾತಾನಿ ಸಹಸ್ರಸಾನಿನೀ ಶತಸಾನಿನ್ಯಸ್ಯ ಸಾ ಗತಿರ್ನ ಸ್ಮೈನಾಂ ವಾರಯಂತಿ ಪ್ರಯುವತೀಮಿವ ಶರಮಯೀಮಿಷುಂ । ನಿ. ೧೦-೨೯ । ಇತಿ ॥

॥ ಪ್ರತಿಪದಾರ್ಥ ॥

**ಯಃ ಚಿತ್**—ಯಾವ ತಾರ್ಕ್ಷ್ಯದೇವನು । **ಸದ್ಯಃ**—ಬೇಗನೆ । **ಶವಸಾ**—ತನ್ನ ಶಕ್ತಿಯಿಂದ । **ಸೂರ್ಯ ಇವ**—ಸೂರ್ಯನು । **ಜ್ಯೋತಿಷಾ**—ತನ್ನ ತೇಜಸ್ಸಿನಿಂದ ಉದಕಗಳನ್ನು ವೃಷ್ಟಿರೂಪದಲ್ಲಿ ಹರಡುವಂತೆ । **ಅಪಃ**—ಉದಕಗಳನ್ನು । **ಪಂಚ ಕೃಷ್ಟೀಃ**—ಪಂಚವಿಧ ಜನರ ಅನುಕೂಲಕ್ಕಾಗಿ । **ತತಾನ**—ವಿಸ್ತರಿಸಿ ಹರಡುವನೋ । **ಅಸ್ಯ**—ಅಂತಹ ತಾರ್ಕ್ಷ್ಯದೇವನ । **ರಂಹಿಃ**—ಗತಿಯು (ಗಮನವು) । **ಸಹಸ್ರಸಾಃ**—ಸಹಸ್ರ ಸಂಖ್ಯೆಯ ಧನವನ್ನು ಕೊಡುವುದು । **ಶತಸಾಃ**—ಶತಸಂಖ್ಯೆಯ ಧನವನ್ನು ಕೊಡುವುದು ।

**ಶರ್ಯೋಃ**—ಧನುಸ್ಸಿನಿಂದ ಬಿಡಲ್ಪಟ್ಟ ಬಾಣವನ್ನು । **ಇಷುಮತೀಂ ನ**—ತನ್ನ ಲಕ್ಷ್ಯವಾದ ಗುರಿಮುಟ್ಟುವುದನ್ನು ಯಾರೂ ತಡೆಯಲಾಗದಂತೆ ಈ ತಾರ್ಕ್ಷ್ಯದೇವನು ನಮಗೆ ಕೊಡುವ ದಾನವನ್ನು । **ನ ಸ್ಮ ವರಂತೇ**—ಯಾರೂ ತಡೆಗಟ್ಟಲಾರರು (ಅಡ್ಡಿಪಡಿಸಲಾರರು).

॥ ಭಾವಾರ್ಥ ॥

ಸೂರ್ಯನು ತನ್ನ ತೇಜಸ್ಸಿನಿಂದ ಉದಕಗಳನ್ನು ಭೂಮಿಯಮೇಲೆ ವೃಷ್ಟಿರೂಪದಿಂದ ಹರಡುವಂತೆ ಯಾವ ತಾರ್ಕ್ಷ್ಯದೇವನು ತನ್ನ ಶಕ್ತಿಯಿಂದ ಪಂಚವಿಧ ಜನರ ಅನುಕೂಲಕ್ಕಾಗಿ ಉದಕಗಳನ್ನು ಭೂಮಿಯ ಮೇಲೆ ವಿಸ್ತರಿಸಿ ಹರಡುವನೋ ಅಂತಹ ತಾರ್ಕ್ಷ್ಯದೇವನ ಆಗಮನವು ನಮಗೆ ನೂರಾರು, ಸಾವಿರಾರುಪಾಲಿನಷ್ಟು ಧನವನ್ನು ಕೊಡುವುದು. ಬಿಲ್ಲಿನಿಂದ ಹೊರಹೊರಟ ಬಾಣವು ತನ್ನ ಗುರಿಮುಟ್ಟುವುದನ್ನು ಹೇಗೆ ತಡೆಯಲಾಗುವುದಿಲ್ಲವೋ ಅದರಂತೆ ತಾರ್ಕ್ಷ್ಯದೇವನು ನಮಗೆ ಕೊಡಲಿರುವ ದಾನವನ್ನು ಯಾರೂ ತಡೆಗಟ್ಟಲಾರರು (ಅಡ್ಡಿಪಡಿಸಲಾರರು).

## English Translation.

He who has by his strength rapidly spread out waters for the five castes like the sun by his light—you sand-yiealding, hundred-bestowing is his course like an unfailing arrow, none can stop it.

॥ ವಿಶೇಷವಿಷಯಗಳು ॥

**ಪಂಚ ಕೃಷ್ಟೀಃ**—ಪಂಚವಿಧ ಜನರು. ಐದು ಗುಂಪುಗಳ ಜನರು. ಬ್ರಾಹ್ಮಣಾದಿ ನಾಲ್ಕುವರ್ಣದ ಜನರು ಮತ್ತು ಬೇಡರೂ ಸೇರಿ ಐದು ವಿಧವಾದ ಜನರು. ಈ ಪಂಚಜನರ ವಿಷಯದಲ್ಲಿ ವಿಸ್ತಾರವಾದ ವಿವರಣೆಯನ್ನು ಋ. ಸಂ. ಭಾಗ ೧೩-407. ೧೪-710 ಪುಟಗಳಲ್ಲಿರುವುದನ್ನು ನೋಡಿ.

ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

> **ಸದ್ಯೋಽಪಿ ಯಃ ಶವಸಾ ಬಲೇನ ತನೋತ್ಯಪಃ ಸೂರ್ಯಇವ ಜ್ಯೋತಿಷಾ ಪಂಚ ಮನುಷ್ಯಜಾತಾನಿ ಸಹಸ್ರಸಾನಿನೀ ಶತಸಾನಿನ್ಯಸ್ಯ ಸಾ ಗತಿರ್ನ ಸ್ಮೈನಾಂ ವಾರಯಂತಿ ಪ್ರಯುವತೀಮಿವ ಶರಮಯೀಮಿಷುಂ ॥** (ನಿ. ೧೦-೨೯)

ನಾವು ವಿವರಿಸಿರುವ ಸಾಯಣಭಾಷ್ಯದ ಅರ್ಥಕ್ಕೂ ಯಾಸ್ಕರ ವಿವರಣೆಗೂ ಏನೂ ವ್ಯತ್ಯಾಸವಿಲ್ಲದಿರುವುದರಿಂದ ಇದನ್ನು ಪುನಃ ವಿವರಿಸುವ ಅವಶ್ಯಕತೆ ಇರುವುದಿಲ್ಲ.



# ನೂರ ಎಪ್ಪತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಉತ್ತಿಷ್ಠತೇತಿ ತೃಚಮಷ್ಟಾವಿಂಶಂ ಸೂಕ್ತಮೈಂದ್ರಂ । ಆದ್ಯಾನುಷ್ಟುಪ್ ಶಿಷ್ಟೇ ತ್ರಿಷ್ಟುಭೌ । ಉಶೀನರಪುತ್ರಃ ಶಿಬಿರ್ನಾಮ ರಾಜಾ ಪ್ರಥಮಾಯಾ ಋಷಿಃ । ಕಾಶೀನಾಮಧಿಪತಿಃ ಪ್ರತರ್ದನೋ ನಾಮ**

**ದ್ವಿತೀಯಾಯಾಃ । ರೋಹಿದಶ್ವಪುತ್ರೋ ವಸುಮನಾ ನಾಮ ತೃತೀಯಾಯಾಃ । ತಥಾ ಚಾನುಕ್ರಾಂತಂ । ಉತ್ತಿಷ್ಠತ್ಯೈಕರ್ಚಾಃ ಶಿಬಿರೌಶೀನರಃ ಕಾಶಿರಾಜಃ ಪ್ರತರ್ದನೋ ರೌಹಿದಶ್ವೋ ವಸುಮನಾ ಅದ್ಯಾನುಷ್ಟು-ಬಿತಿ ॥ ದಧಿಘರ್ಮ ಆದ್ಯಾ ವಕ್ತವ್ಯಾ। ಸೂತ್ರಿತಂ ಚ । ಹೋತರ್ವದಸ್ವೇತ್ಯುಕ್ತ ಉತ್ತಿಷ್ಠತಾವ ಪಶ್ಯತೇ-ತ್ಯಾಹ । ಆ. ೫-೧೩ । ಇತಿ ॥**

ಅನುವಾದವು—**ಉತ್ತಿಷ್ಠತ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಇಪ್ಪತ್ತೆಂಟನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತದ ಋಕ್ಕುಗಳಲ್ಲಿ ಮೊದಲನೆಯ ಋಕ್ಕಿಗೆ ಉಶೀನರ ಪುತ್ರನಾದ ಶಿಬಿ ಎಂಬ ರಾಜನು ಋಷಿಯು ; ಎರಡನೆಯ ಋಕ್ಕಿಗೆ ಕಾಶೀನರೆಂಬ ಜನತೆಗೆ ಅಧಿಪತಿಯಾದ ಪ್ರತರ್ದನ ನೆಂಬುವನು ಋಷಿಯು ; ಮೂರನೆಯ ಋಕ್ಕಿಗೆ ರೋಹಿದಶ್ವಪುತ್ರನಾದ ವಸುಮನಾಃ ಎಂಬುವನು ಋಷಿಯು ; ಇಂದ್ರನು ದೇವತೆಯು ; ಮೊದಲನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಉಳಿದ ಎರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಉತ್ತಿಷ್ಠತ್ಯೈಕರ್ಚಾಃ ಶಿಬಿರೌಶೀನರಃ ಕಾಶಿರಾಜಃ ಪ್ರತರ್ದನೋ ರೌಹಿದ-ಶ್ವೋ ವಸುಮನಾ ಆದ್ಯಾನುಷ್ಟುಪ್** ಎಂದುಹೇಳಿರುವುದು. ಈ ಸೂಕ್ತದ ಮೊದಲನೆಯ ಋಕ್ಕನ್ನು ದಧಿಘರ್ಮ ವೆಂಬ ಹವಿಸ್ಸನ್ನು ಅರ್ಪಿಸುವಾಗ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಹೋತರ್ವದಸ್ವೇತ್ಯುಕ್ತ ಉತ್ತಿಷ್ಠತಾವ ಪಶ್ಯತೇತ್ಯಾಹ** ಎಂಬ ಸೂತ್ರದಿಂದ (ಆ. ೫-೧೩) ವಿವೃತವಾಗಿರುವುದು.

## ಸೂಕ್ತ—೧೭೯

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೭೯ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೩೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೩ ॥
॥ ಋಷಿಃ—೧. ಶಿಬಿರೌಶೀನರಃ । ೨. ಪ್ರತರ್ದನಃ ಕಾಶಿರಾಜಃ । ೩. ವಸುಮನಾ ರೌಹಿದಶ್ವಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧. ಅನುಷ್ಟುಪ್ । ೨, ೩. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಉತ್ತಿಷ್ಠತಾವ ಪಶ್ಯತೇಂದ್ರಸ್ಯ ಭಾಗಮೃತ್ವಿಯಂ ।
ಯದಿ ಶ್ರಾತೋ ಜುಹೋತನ ಯದ್ಯಶ್ರಾತೋ ಮಮತ್ತನ ॥ ೧ ॥

॥ ಪದಪಾಠಃ ॥

ಉತ್ । ತಿಷ್ಠತ । ಅವ । ಪಶ್ಯತ । ಇಂದ್ರಸ್ಯ । ಭಾಗಂ । ಋತ್ವಿಯಂ ।
ಯದಿ । ಶ್ರಾತಃ । ಜುಹೋತನ । ಯದಿ । ಅಶ್ರಾತಃ । ಮಮತ್ತನ ॥ ೧ ॥

|| ಸಾಯಣಭಾಷ್ಯಂ ||

ಹೇ ಋತ್ವಿಜಃ ಉತ್ತಿಷ್ಠತ । ಆಸನಾದೂರ್ಧ್ವಮುತ್ತಿಷ್ಠತ । ನೋಪವಿಶತ ॥ ಊರ್ಧ್ವಕರ್ಮತ್ವಾದಾತ್ಮನೇಪದಾಭಾವಃ । ಪಾ. ೧-೩-೨೪ ॥ ಉತ್ಥಾಯರ್ತ್ವಿಯಮೃತೌ ವಸಂತಾದಿಕಾಲೇ ಭವಮಿಂದ್ರಸ್ಯ ಭಾಗಂ ಭಜನೀಯಂ ದಧಿಘರ್ಮಂ ಪಚ್ಯಮಾನಮವ ಪಶ್ಯತ । ನಿರೀಕ್ಷಧ್ವಂ ॥ ಋತುಶಬ್ದಾದ್ಭವಾರ್ಥೇ ಛಂದಸಿ ಘಸ್ । ಸಿತಿ ಚೇತಿ ಪದಸಂಜ್ಞಯಾ ಭಸಂಜ್ಞಾಯಾ ಬಾಧಾದೋರ್ಗುಣಾಭಾವಃ । ಭಜೇಃ ಕರ್ಮಣಿ ಘಞಂತೋ ಭಾಗಶಬ್ದಃ । ಕರ್ಷಾತ್ವತ ಇತ್ಯಂತೋದಾತ್ತತ್ವಂ ॥ ಯದಿ ಸ ಭಾಗಃ ಶ್ರಾತಃ ಪಕ್ವಃ ತರ್ಹಿ ಜುಹೋತನ । ಇಂದ್ರಾರ್ಥಮಗ್ನೌ ಜುಹುತ ॥ ತಪ್ತನಪ್ತನಥನಾಶ್ಚೇತಿ ತಸ್ಯ ತನಬಾದೇಶಃ । ಭೀಹ್ರೀತ್ಯಾದಿನಾ । ಪಾ. ೬-೧-೧೯೨ ॥ ಪಿತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ॥ ಯದ್ಯಶ್ರಾತೋಽಪಕ್ವಃ ತರ್ಹಿ ಮಮತ್ತನ । ಮಾದ್ಯತ । ಯದ್ವಾ । ಸ್ತುತಿಭಿರ್ಮಾದಯತ ॥ ಅತ್ರ ತೇನೈವ ಸೂತ್ರೇಣ ತನಬಾದೇಶಃ ॥

|| ಪ್ರತಿಪದಾರ್ಥ ||

(ಎಲೈ ಋತ್ವಿಕ್ಕುಗಳೇ) **ಉತ್ತಿಷ್ಠತ**—ನಿಮ್ಮ ಆಸನಗಳಿಂದ ಎದ್ದೇಳಿ । **ಇಂದ್ರಸ್ಯ**—ಇಂದ್ರನಿಗೆ । **ಭಾಗಂ**—ಅರ್ಪಿಸಬೇಕಾದ । **ಋತ್ವಿಯಂ**—ಹವಿರ್ಭಾಗವು ಸಿದ್ಧವಾಗಿದೆಯೆಂಬುದನ್ನು । **ಅವ ಪಶ್ಯತ**—ನೋಡಿರಿ । **ಯದಿ**—ಒಂದು ವೇಳೆ ಆ ಭಾಗವು । **ಶ್ರಾತಃ**—ಪಕ್ವವಾಗಿದ್ದಲ್ಲಿ । **ಜುಹೋತನ**—ಇಂದ್ರನಿಗಾಗಿ ಅದನ್ನು ಅಗ್ನಿಯಲ್ಲಿ ಹೋಮಮಾಡಿ । **ಯದಿ**—ಒಂದುವೇಳೆ । **ಅಶ್ರಾತಃ** – ಪಕ್ವವಾಗಿಲ್ಲದಿದ್ದರೆ । **ಮಮತ್ತನ**-ಇಂದ್ರನನ್ನು ಸ್ತುತಿಗಳಿಂದ ಸ್ತುತಿಸಿ ಹರ್ಷಗೊಳಿಸಿ.

|| ಭಾವಾರ್ಥ ||

ಎಲೈ ಋತ್ವಿಕ್ಕುಗಳೇ, ನಿಮ್ಮ ಆಸನಗಳಲ್ಲಿ ಕುಳಿತುಕೊಳ್ಳಬೇಡಿ, ಎದ್ದೇಳಿ, ಕಾರ್ಯೋನ್ಮುಖರಾಗಿರಿ. ಇಂದ್ರನಿಗೆ ಅರ್ಪಿಸಬೇಕಾದ ಹವಿರ್ಭಾಗವು ಸಿದ್ಧವಾಗಿದೆಯೇ ಇಲ್ಲವೇ ಎಂಬುದನ್ನು ನೋಡಿರಿ. ಅದು ಒಂದುವೇಳೆ ಪಕ್ವವಾಗಿದ್ದರೆ ಅದನ್ನು ಇಂದ್ರನಿಗಾಗಿ ಅಗ್ನಿಯಲ್ಲಿ ಹೋಮಮಾಡಿರಿ. ಅದು ಪಕ್ವವಾಗಿಲ್ಲದಿದ್ದರೆ ಇಂದ್ರನನ್ನು ಸ್ತುತಿಗಳಿಂದಲಾದರೂ ಸ್ತುತಿಸಿ ಸಂತೋಷಗೊಳಿಸಿರಿ.

English Translation

Rise up, look to the portion of Indra suitable to the season; if it be cooked, offer it; if uncooked, gratify him (by praise).

|| ಸಂಹಿತಾಪಾಠಃ ||

ಶ್ರಾತಂ ಹವಿರೋ ಷ್ವಿಂದ್ರ ಪ್ರ ಯಾಹಿ ಜಗಾಮ ಸೂರೋ ಅಧ್ವನೋ ವಿಮಧ್ಯಂ ।
ಪರಿ ತ್ವಾಸತೇ ನಿಧಿಭಿಃ ಸಖಾಯಃ ಕುಲಪಾ ನ ವ್ರಾಜಪತಿಂ ಚರಂತಂ ॥ ೨ ॥

॥ ಪದಪಾಠಃ ॥

ಶ್ರಾತಂ । ಹವಿಃ । ಓ ಇತಿ । ಸು । ಇಂದ್ರ । ಪ್ರ । ಯಾಹಿ । ಜಗಾಮ । ಸೂರಃ । ಅಧ್ವನಃ । ವಿಽಮಧ್ಯಂ ।

ಪರಿ । ತ್ವಾ । ಆಸತೇ । ನಿಧಿಽಭಿಃ । ಸಖಾಯಃ । ಕುಲಽಪಾಃ । ನ । ವ್ರಾಜಽಪತಿಂ । ಚರಂತಂ ॥ ೨ ॥

॥ ಸಾಯಣಭಾಷ್ಯಂ ॥

ತಸ್ಯೈವ ದಧಿಘರ್ಮಸ್ಯ ಶ್ರಾತಂ ಹವಿರಿತ್ಯೇಷಾನುವಾಕ್ಯಾ । ಸೂತ್ರಿತಂ ಚ । ಶ್ರಾತಂ ಹವಿರಿತ್ಯುಕ್ತಃ ಶ್ರಾತಂ ಹವಿರಿತ್ಯನ್ವಾಹ । ಆ. ೫-೧೩ । ಇತಿ ॥

ಹೇ ಇಂದ್ರ ಹವಿರ್ದಧಿಘರ್ಮಾಖ್ಯಂ ತ್ವದೀಯಂ ಶ್ರಾತಂ । ಪಕ್ವಂ ॥ ಶ್ರೀಞ್ ಪಾಕ ಇತ್ಯಸ್ಮಾನ್ನಿಷ್ಠಾಯಾಮುಪಸ್ಪೃಧೇಥಾಮಿತ್ಯಾದೌ ಶ್ರಾಭಾವೋ ನಿಪಾತ್ಯತೇ ॥ ಓ ಆ ಉ ಸು ಸುಷ್ಠು ಪ್ರ ಯಾಹಿ । ಪ್ರಕರ್ಷೇಣ ಶೀಘ್ರಮಾಗಚ್ಛ । ಸೂರಃ ಸೂರ್ಯೋಽಧ್ವನೋ ಗಂತವ್ಯಸ್ಯ ಮಾರ್ಗಸ್ಯ ವಿಮಧ್ಯಂ ವಿಕಲಮಧ್ಯಮಿಷದೂನಂ ಮಧ್ಯಭಾಗಂ ಜಗಾಮ । ಗತವಾನ್ । ತವ ಯಾಗಾರ್ಥಂ ಮಧ್ಯಾಹ್ನೋ ಜಾತ ಇತ್ಯರ್ಥಃ । ಸಖಾಯಃ ಸಮಾನಖ್ಯಾನಾ ಋತ್ವಿಜಶ್ಚ ನಿಧಿಭಿರ್ನಿಹಿತೈರಭಿಷವಾಸಾದಿತೈಃ ಸೋಮೈಃ ಸಾರ್ಧಂ ತ್ವಾ ತ್ವಾಂ ಪರ್ಯಾಸತೇ । ಪರ್ಯುಪಾಸತೇ । ತತ್ರ ದೃಷ್ಟಾಂತಃ । ಕುಲಪಾ ನ ಕುಲಸ್ಯ ವಂಶಸ್ಯ ರಕ್ಷಕಾಃ ಪುತ್ರಾ ಯಥಾ ವ್ರಾಜಪತಿಂ । ವ್ರಾಜಾ ಗಂತವ್ಯಾ ಗೃಹಾಃ । ತೇಷಾಂ ಪತಿಂ ಚರಂತಂ ಗಚ್ಛಂತಮುಪಾಸತೇ ತಥೇತ್ಯರ್ಥಃ ॥ ವ್ರಜ ಗತೌ । ಅಸ್ಮಾತ್ಕರ್ಮಣಿ ಘಞ್ । ಅಜಿವ್ರಜ್ಯೋಶ್ಚ । ಪಾ. ೭-೩-೬೦ । ಇತಿ ಕುತ್ವನಿಷೇಧಃ । ಕರ್ಷಾತ್ವತ ಇತ್ಯಂತೋದಾತ್ತತ್ವೇ ಪತ್ಯಾವೈಶ್ವರ್ಯೇ ಇತಿ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಹವಿಃ**—ದಧಿಘರ್ಮಾಖ್ಯವಾದ ಹವಿಸ್ಸು ನಿನಗಾಗಿ । **ಶ್ರಾತಂ**—ಪಕ್ವವಾಗಿದೆ (ಆದ್ದರಿಂದ) । **ಓ**—ಬೇಗನೇ । **ಸು ಪ್ರ ಯಾಹಿ**—ಇಲ್ಲಿಗೆ ದಯಮಾಡು । **ಸೂರಃ**—ಸೂರ್ಯನು **ಅಧ್ವನಃ**—ತಾನು ಸಂಚರಿಸುವ ಮಾರ್ಗದ । **ವಿಮಧ್ಯಂ**—ಮಧ್ಯಭಾಗವನ್ನು । **ಜಗಾಮ**—ಸೇರಿದ್ದಾನೆ (ಎಂದರೆ ಈಗ ಮಧ್ಯಾಹ್ನವಾಗಿದೆ) । **ಕುಲಪಾಃ** ವಂಶರಕ್ಷಕರಾದ ಪುತ್ರರು । **ವ್ರಾಜಪತಿಂ**—ತಮ್ಮ ಮನೆಯ ಯಜಮಾನನನ್ನು । **ಚರಂತಂ**—ಸಮೀಪಿಸಿ ಉಪಚರಿಸುವಂತೆ । **ಸಖಾಯಃ** ನಿನಗೆ ಸ್ನೇಹಿತರಂತಿರುವ ಋತ್ವಿಕ್ಕುಗಳು । **ನಿಧಿಭಿಃ**—ಸಿದ್ಧಪಡಿಸಿ ಕೆಳಗೆ ಇಟ್ಟುಕೊಂಡಿರುವ ಸೋಮರಸಗಳಿಂದ ಸಹಿತರಾಗಿ । **ತ್ವಾ**—ನಿನ್ನನ್ನು । **ಪರಿ ಆಸತೇ**—ಸೇವಿಸುವುದಕ್ಕಾಗಿ ಕಾದಿದ್ದಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ದಧಿಘರ್ಮಾಖ್ಯವಾದ ಹವಿಸ್ಸು ನಿನಗೋಸ್ಕರ ಪಕ್ವವಾಗಿದೆ. ಆದ್ದರಿಂದ ಶೀಘ್ರವಾಗಿ ಇಲ್ಲಿಗೆ ದಯಮಾಡು ಸೂರ್ಯನು ಆಗಲೇ ತನ್ನ ಮಾರ್ಗಮಧ್ಯದಲ್ಲಿದ್ದಾನೆ ಎಂದರೆ ಈಗ ಮಧ್ಯಾಹ್ನಸಮಯವಾಗಿದೆ. ವಂಶರಕ್ಷಕರಾದ ಕುಲಪುತ್ರರು ತಮ್ಮ ಮನೆಯ ಯಜಮಾನರನ್ನು ಸಮೀಪಿಸಿ ಉಪಚರಿರುವಂತೆ, ನಿನಗೆ ಸ್ನೇಹಿತ

ರಾದ ಋತ್ವಿಕ್ಕುಗಳು ನಿನಗೆ ಅರ್ಪಿಸುವುದಕ್ಕಾಗಿ ಸಿದ್ಧಪಡಿಸಿರುವ ಸೋಮರಸಸಹಿತರಾಗಿ ನಿನ್ನನ್ನು ಉಪಚರಿಸುವುದಕ್ಕಾಗಿ ಕಾದು ನಿಂತಿದ್ದಾರೆ.

**English Translation.**

Repair, Indra, quickly to the oblation which is cooked, the sun is advanced nearly to the middle of his road; your friends sit arround you with their offerings as the protectors of a family (attend upon) the migrating lord of the mansion.

॥ ವಿಶೇಷ ವಿಷಯಗಳು ॥

ದಧಿಘರ್ಮವೆಂಬ ಹವಿಸ್ಸನ್ನು ಹೋಮಮಾಡುವಾಗ **ಶ್ರಾತಂ ಹವಿಃ** ಎಂಬ ಈ ಋಕ್ಕನ್ನು ಅನುವಾಕ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಶ್ರಾತಂ ಹವಿರಿತ್ಯುಕ್ತಃ ಶ್ರಾತಂ ಹವಿರಿತ್ಯನ್ವಾಹ** ಎಂಬಸೂತ್ರದ (ಆ. ೪-೧೩) ವಿವೃತವಾಗಿರುವುದು

॥ ಸಂಹಿತಾಪಾಠಃ ॥

ಶ್ರಾತಂ ಮನ್ಯ ಊಧನಿ ಶ್ರಾತಮಗ್ನೌ ಸುಶ್ರಾತಂ ಮನ್ಯೇ ತದೃತಂ ನವೀಯಃ।
ಮಾಧ್ಯಂದಿನಸ್ಯ ಸವನಸ್ಯ ದಧ್ನಃ ಪಿಬೇಂದ್ರ ವಜ್ರಿನ್ಪುರುಕೃಜ್ಜುಷಾಣಃ ॥ ೩ ॥

॥ ಪದಪಾಠಃ ॥

ಶ್ರಾತಂ । ಮನ್ಯೇ । ಊಧನಿ । ಶ್ರಾತಂ । ಅಗ್ನೌ । ಸುಽಶ್ರಾತಂ । ಮನ್ಯೇ । ತತ್ । ಋತಂ । ನವೀಯಃ।
ಮಾಧ್ಯಂದಿನಸ್ಯ । ಸವನಸ್ಯ । ದಧ್ನಃ । ಪಿಬ । ಇಂದ್ರ । ವಜ್ರಿನ್ । ಪುರುಽಕೃತ್ । ಜುಷಾಣಃ ॥ ೩ ॥

॥ ಸಾಯಣಭಾಷ್ಯಂ ॥

**ತಸ್ಯೈವ ದಧಿಘರ್ಮಸ್ಯ ಶ್ರಾತಂ ಮನ್ಯ ಇತ್ಯೇಷಾ ಯಾಜ್ಯಾ। ಸೂತ್ರ್ಯತೇ ಹಿ। ಶ್ರಾತಂ ಮನ್ಯ ಊಧನಿ ಶ್ರಾತಮಗ್ನಾವಿತಿ ಯಜತಿ। ಆ. ೫-೧೩। ಇತಿ॥**

**ಊಧನಿ ಗೋರೂಧಸ್ಯೇತದ್ಧಧಿಘರ್ಮಮಾಖ್ಯಂ ಹವಿಃ ಪಯೋರೂಪೇಣ ಶ್ರಾತಂ ಪಕ್ವಮಿತಿ ಮನ್ಯೇ। ಜಾನೇ। ಪುನಶ್ಚ ದುಗ್ಧಂ ಪಯೋಽಗ್ನಾವಪಿ ಶ್ರಾತಂ ಪಕ್ವಂ। ಇದಾನೀಂ ದಧ್ಯವಸ್ಥಮಪ್ಯಗ್ನೌ ಪಚ್ಯತೇ। ಅತಃ ಸುಶ್ರಾತಂ ಸುಪಕ್ವಮಿತಿ ಮನ್ಯೇ। ಜಾನೇ। ಅತ ಏತದ್ಧವಿರ್ಋತಂ ಸತ್ಯಭೂತಂ ನವೀಯೋ ನವತರಂ ಪ್ರತ್ಯಗ್ರತರಂ ಭವತಿ। ಹೇ ವಜ್ರಿನ್ ವಜ್ರವನ್ ಹೇ ಪುರುಕೃದ್ಬಹುಕರ್ಮಕೃದಿಂದ್ರ ಜುಷಾಣಃ ಪ್ರೀಯಮಾಣಸ್ತ್ವಂ ಮಾಧ್ಯಂದಿನಸ್ಯ ಮಾಧ್ಯಂದಿನೇ ಭವಸ್ಯ ಸವನಸ್ಯ ಸೋಮಸ್ಯ ಸಂಬಂಧಿನೋ ದಧ್ನಃ॥ ಕರ್ಮಣಿ ಷಷ್ಠೀ॥ ದಧಿಘರ್ಮಾಖ್ಯಂ ಹವಿಃ ಪಿಬ॥**

॥ ಪ್ರತಿಪದಾರ್ಥ ॥

(ದಧಿಘರ್ಮಾಖ್ಯವಾದ ಈ ಹವಿಸ್ಸು) **ಊಧನಿ**—ಗೋವಿನ ಕೆಚ್ಚಲಿನಲ್ಲಿಯೇ ಹಾಲಿನ ರೂಪದಿಂದ | **ಶ್ರಾತಂ**—ಪಕ್ವವಾಗಿರುವುದೆಂದು | **ಮನ್ಯೇ**—ತಿಳಿಯುತ್ತೇನೆ (ಮತ್ತು ಆ ಕರೆದ ಹಾಲು) | **ಅಗ್ನೌ**—ಅಗ್ನಿಯಲ್ಲಿ ಕೂಡ | **ಶ್ರಾತಂ**—ಪಕ್ವವಾಗಿದೆ, (ಆದ್ದರಿಂದ ಅದನ್ನು) | **ಸುಶ್ರಾತಂ**—ಚೆನ್ನಾಗಿ ಪಕ್ವಮಾಡಲ್ಪಟ್ಟಿದೆಯೆಂದು | **ಮನ್ಯೇ** -ತಿಳಿಯುತ್ತೇನೆ. (ಆದ್ದರಿಂದ ಈ ಹವಿಸ್ಸು) | **ಋತಂ**—ಸತ್ಯಭೂತವಾಗಿಯೂ ಅಥವಾ ಯಜ್ಞಾರ್ಹವಾಗಿಯೂ | **ನವೀಯಃ**—ಹೊಸದಾಗಿಯೂ ಇರುವುದು | **ವಜ್ರಿನ್**—ವಜ್ರಾಯುಧಧಾರಿಯಾದವನೂ | **ಪುರುಕೃತ್**— ಅನೇಕ ಸಾಹಸಕರ್ಮಕರ್ತನಾದವನೂ ಆದ | **ಇಂದ್ರ**— ಎಲೈ ಇಂದ್ರನೇ | **ಜುಷಾಣಃ**—ಸಂತೋಷಚಿತ್ತನಾದ ನೀನು | **ಮಾಧ್ಯಂದಿನಸ್ಯ**— ಮಧ್ಯಾಹ್ನಕಾಲದಲ್ಲಿ ನೆರವೇರಿಸಲ್ಪಡುವ | **ಸವನಸ್ಯ**— ಮಾಧ್ಯಂದಿನಸವನಸಂಬಂಧವಾದ | **ದಧ್ನಃ**— ದಧಿಘರ್ಮಾಖ್ಯವಾದ ಹವಿಸ್ಸನ್ನು | **ಪಿಬ**—ಪಾನಮಾಡು.

॥ ಪದಪಾಠಃ ॥

ದಧಿಘರ್ಮಾಖ್ಯವಾದ ಈ ಹವಿಸ್ಸು ಗೋವಿನ ಕೆಚ್ಚಲಿನಲ್ಲಿಯೇ ಹಾಲಿನ ರೂಪದಿಂದ ಪಕ್ವವಾಗಿದೆಯೆಂದೂ, ಅನಂತರ ಕರೆದ ಆ ಹಾಲು (ಅಥವಾ ಮೊಸರು) ಅಗ್ನಿಯಲ್ಲಿಯೂ ಸಹ ಚೆನ್ನಾಗಿ ಪಕ್ವವಾಗಿದೆಯೆಂದೂ ತಿಳಿಯುತ್ತೇನೆ. ಆದ್ದರಿಂದ ಈ ಹವಿಸ್ಸು ಯಜ್ಞಾರ್ಹವಾಗಿಯೂ ಹೊಸದಾಗಿಯೂ ಇರುವುದು ವಜ್ರಾಯುಧದಾರಿಯೂ, ಅನೇಕ ಸಾಹಸಕೃತ್ಯಗಳನ್ನು ಮಾಡಿದವನೂ ಆದ ಎಲೈ ಇಂದ್ರನೇ, ನೀನು ಪ್ರೀತನಾಗಿ ಮಾಧ್ಯಂದಿನಸವನಕಾಲದಲ್ಲಿ ಈ ದಧಿಘರ್ಮಾಖ್ಯವಾದ ಹವಿಸ್ಸನ್ನು ಪಾನಮಾಡು

## English Translation

I consider (the oblation) as cooked in the udder (of the cow), I consider it cooked in the fire, I consider this pure and fresh (oblation) well-cooked; Indra wielder of the thunderbolt, doer of many deeds, drink well pleased of the curd of the noon day sacrifice.

॥ ವಿಶೇಷ ವಿಷಯಗಳು ॥

ಹಿಂದೆ ಹೇಳಿದ ದಧಿಘರ್ಮಹೋಮದಲ್ಲಿ **ಶ್ರಾತಂ ಮನ್ಯೇ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಶ್ರಾತಂ ಮನ್ಯ ಊಧನಿ ಶ್ರಾತಮಗ್ನಾವಿತಿ ಯಜತಿ** ಎಂಬ ಸೂತ್ರದಿಂದ (ಆ. ೫–೧೩) ವಿವೃತವಾಗಿರುವುದು.

# ನೂರ ಎಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಪ್ರ ಸಸಾಹಿಷ ಇತಿ ತೃಚಮೇಕೋನತ್ರಿಂಶಂ ಸೂಕ್ತಮಿಂದ್ರಪುತ್ರಸ್ಯ ಜಯಸ್ಯಾರ್ಷಂ ತ್ರೈಷ್ಟುಭ-**

**ಮೈಂದ್ರಂ । ತಥಾ ಚಾನುಕ್ರಾಂತಂ । ಪ್ರ ಸಸಾಹಿಷೇ ಜಯ ಐಂದ್ರ ಇತಿ ॥ ಗತಃ ಸೂಕ್ತವಿನಿಯೋಗಃ ॥ ದರ್ಶ ಇಂದ್ರಸ್ಯ ಹವಿಷಃ ಪ್ರ ಸಸಾಹಿಷ ಇತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಪ್ರ ಸಸಾಹಿಸೇ ಪುರುಹೂತ ಶತ್ರೂನ್ ಮಹಾँ ಇಂದ್ರೋ ಯ ಓಜಸಾ । ಆ. ೧–೬ । ಇತಿ ॥ ಏಕಾದಶಿನ ಐಂದ್ರಪಶೌ ಪುರೋಡಾಶಸ್ಯೇಯಮೇವ ಯಾಜ್ಯಾ । ಸೂತ್ರಿತಂ ಚ । ಪ್ರ ಸಸಾಹಿಷೇ ಪುರುಹೂತ ಶತ್ರೂನ್ಸ್ವಸ್ತಯೇ ವಾಜಿಭಿಶ್ಚ ಪ್ರಣೀತಃ । ಆ. ೩–೭ । ಇತಿ ॥ ದೇವಸುವಾಂ ಹವಿಷೀಂದ್ರಸ್ಯೇಯಮೇವಾನುವಾಕ್ಯಾ। ಸೂತ್ರಿತಂ ಚ । ಪ್ರ ಸಸಾಹಿಷೇ ಪುರುಹೂತ ಶತ್ರೂನ್ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್ । ಆ. ೪-೧೧ । ಇತಿ ॥**

ಅನುವಾದವು—**ಪ್ರ ಸಸಾಹಿಷೇ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಇಪ್ಪತ್ತೊಂಭತ್ತನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಇಂದ್ರಪುತ್ರನಾದ ಜಯನೆಂಬುವನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರ ಸಸಾಹಿಷೇ ಜಯ ಐಂದ್ರಃ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ದರ್ಶೇಷ್ಟಿಯಲ್ಲಿ ಇಂದ್ರನನ್ನುದ್ದೇಶಿಸಿ ಹವಿಸ್ಸನ್ನು ಹೋಮಮಾಡುವಾಗ **ಪ್ರ ಸಸಾಹಿಷೇ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರ ಸಸಾಹಿಷೇ ಪುರುಹೂತ ಶತ್ರೂನ್ ಮಹಾँ ಇಂದ್ರೋ ಯ ಓಜಸಾ** ಎಂಬ ಸೂತ್ರದಿಂದ (ಆ. ೧-೬) ವಿವೃತವಾಗಿರುವುದು. ಏಕಾದಶಿನ್ ಎಂಬ ಇಷ್ಟಿಯಲ್ಲಿಯೂ ಇಂದ್ರನನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ಪುರೋಡಾಶವನ್ನು ಹೋಮಮಾಡುವಾಗ ಈ ಋಕ್ಕನ್ನೇ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರ ಸಸಾಹಿಷೇ ಪುರುಹೂತ ಶತ್ರೂನ್ ಸ್ವಸ್ತಯೇ ವಾಜಿಭಿಶ್ಚ ಪ್ರಣೀತಃ** ಎಂಬ ಸೂತ್ರದಿಂದ (ಆ. ೩–೭) ವಿವೃತವಾಗಿರುವುದು. ದೇವಸುವ ಎಂಬ ಎಂಟು ಹವಿಸ್ಸುಗಳಲ್ಲಿ ಇಂದ್ರನನ್ನುದ್ದೇಶಿಸಿ ಮಾಡುವ ಹೋಮದಲ್ಲಿ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರ ಸಸಾಹಿಷೇ ಪುರುಹೂತ ಶತ್ರೂನ್ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್** ಎಂಬ ಸೂತ್ರದಿಂದ (ಆ. ೪-೧೧) ವಿವೃತವಾಗಿರುವುದು.

## ಸೂಕ್ತ—೧೮೦

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೮೦ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೩೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೩ ॥
॥ ಋಷಿಃ—ಜಯ ಐಂದ್ರಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಪ್ರ ಸಸಾಹಿಷೇ ಪುರುಹೂತ ಶತ್ರೂಞ್ಜ್ಯೇಷ್ಠಸ್ತೇ ಶುಷ್ಮ ಇಹ ರಾತಿರಸ್ತು ।**
**ಇಂದ್ರಾ ಭರ ದಕ್ಷಿಣೇನಾ ವಸೂನಿ ಪತಿಃ ಸಿಂಧೂನಾಮಸಿ ರೇವತೀನಾಂ ॥೧॥**

॥ ಪದಪಾಠಃ ॥

ಪ್ರ । ಸಸಹಿಷೇ । ಪುರುಽಹೂತ । ಶತ್ರೂನ್ । ಜ್ಯೇಷ್ಠಃ । ತೇ । ಶುಷ್ಮಃ । ಇಹ । ರಾತಿಃ । ಅಸ್ತು ।

ಇಂದ್ರ । ಆ । ಭರ । ದಕ್ಷಿಣೇನ । ವಸೂನಿ । ಪತಿಃ । ಸಿಂಧೂನಾಂ । ಅಸಿ । ರೇವತೀನಾಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಪುರುಹೂತ ಬಹುಭಿರಾಹೂತೇಂದ್ರ ಶತ್ರೂನ್ವೈರಿಣಃ ಪ್ರ ಸಸಾಹಿಷೇ । ಪ್ರಕರ್ಷೇಣಾಭಿಭವಸಿ । ತೇ ತವ ಶುಷ್ಮಃ ಶೋಷಕಂ ಬಲಂ ಜ್ಯೇಷ್ಠಃ ಪ್ರಶಸ್ಯತಮಂ ವೃದ್ಧತಮಂ ವಾ ಭವತಿ । ಇಹಾಸ್ಮಿನ್ಕರ್ಮಣಿ ರಾತಿಸ್ತವ ದಾನಮಸ್ತು । ಅಸ್ಮಭ್ಯಂ ಭವತು । ತದರ್ಥಂ ಹೇ ಇಂದ್ರ ದಕ್ಷಿಣೇನ ಹಸ್ತೇನ ವಸೂನಿ ಧನಾನ್ಯಾ ಭರ । ಆಹರ । ಆನಯ । ತ್ವಂ ರೇವತೀನಾಂ ರಯಿಮತೀನಾಂ ಬಹುಧನಾನಾಂ ಸಿಂಧೂನಾಂ ಸ್ಯಂದನಶೀಲಾನಾಂ ನದೀನಾಂ ಪತಿರಸಿ । ಸ್ವಾಮೀ ಭವಸಿ ॥ ರಯಿಶಬ್ದಾನ್ಮತುಪಿ ರಯೇರ್ಮತೌ ಬಹುಲಮಿತಿ ಸಂಪ್ರಸಾರಣಂ । ಛಂದಸೀರ ಇತಿ ಮತುಪೋ ವತ್ವಂ । ರೈಶಬ್ದಾಚ್ಚೇತಿ ತಸ್ಯೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಪುರುಹೂತ** – ಅನೇಕರಿಂದ ಪ್ರಾರ್ಥಿತನಾಗಿ ಕರೆಯಲ್ಪಡುವ ಎಲೈ ಇಂದ್ರನೇ ನೀನು । **ಶತ್ರೂನ್**— ಶತ್ರುಗಳನ್ನು । **ಪ ಸಸಾಹಿಷೇ**—ಚೆನ್ನಾಗಿ ಸೋಲಿಸುತ್ತೀಯೆ । **ತೇ**—ನಿನ್ನ । **ಶುಷ್ಮಃ**—ಶತ್ರುನಾಶಕವಾದ ಬಲವು । **ಜ್ಯೇಷ್ಠಃ**—ಪ್ರಶಸ್ತವಾಗಿದೆ । **ಇಹ** –ಈ ಕರ್ಮದಲ್ಲಿ । **ರಾತಿಃ**—ನಿನ್ನ ದಾನವು । **ಅಸ್ತು**— ನಮಗೆ ದೊರೆಯಲಿ । **ಇಂದ್ರ**—ಎಲೈ ಇಂದ್ರನೇ । **ದಕ್ಷಿಣೇನ**—ನಿನ್ನ ಬಲಗೈಯಿನಿಂದ । **ವಸೂನಿ**—ಧನಗಳನ್ನು । **ಆ ಭರ**—ನಮಗೆ ತಂದೊದಗಿಸು (ನೀನು) । **ರೇವತೀನಾಂ**—ಧನಾನ್ವಿತಗಳಾದ । **ಸಿಂಧೂನಾಂ**—ನದಿಗಳಿಗೆ । **ಪತಿಃ**— ಸ್ವಾಮಿಯಾಗಿದ್ದೀಯೆ.

॥ ಭಾವಾರ್ಥ ॥

ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೆ, ನೀನು ಶತ್ರುಗಳನ್ನು ಚೆನ್ನಾಗಿ ಪರಾಭವಗೊಳಿಸುತ್ತೀಯೆ. ನಿನ್ನ ಶತ್ರುನಾಶಕವಾದ ಬಲವು ಅತ್ಯಂತ ಪ್ರಶಸ್ತವಾಗಿದೆ. ಈ ಕರ್ಮದಲ್ಲಿ ನಿನ್ನ (ಧನ) ದಾನವು ನಮಗೆ ದೊರೆಯಲಿ. ಎಲೈ ಇಂದ್ರನೇ, ನಿನ್ನ ದಕ್ಷಿಣಹಸ್ತದಿಂದ ನಮಗೆ ಧನಗಳನ್ನು ತಂದು ಕೊಡು. ಧನವುಳ್ಳ ಈ ನದಿಗಳಿಗೆ ನೀನು ಒಡೆಯನಾಗಿದ್ದೀಯೆ

## English Translation.

Indra, invoked of many, you triumph over your enemies; per-eminent is your strength, may your generosity be shown on this occasion; bring treasures with your right hand; you are the lord of the wealth-conveying rivers,

**ವಿಶೇಷ ವಿಷಯಗಳು**

**ಪತಿಃ ಸಿಂಧೂನಾಂ ಅಸಿ ರೇವತೀನಾಂ**—ನದಿಗಳಿಗೆ ಇಂದ್ರನು ಹೇಗೆ ಸ್ವಾಮಿಯು, ಎಂದರೆ ವೃತ್ರವಧಾದಿಗಳಿಂದ ಮೇಘದಲ್ಲಿ ಸಂಗೃಹೀತವಾಗಿದ್ದ ಉದಕಗಳನ್ನು ವಜ್ರಾಯುಧದ ಪ್ರಹಾರದಿಂದ ಮೇಘಗಳಿಂದ ಹೊರಡಿಸಿ ವೃಷ್ಟಿರೂಪದಿಂದ ಭೂಮಿಯ ಮೇಲೆ ಬಿದ್ದು ನದಿಗಳಲ್ಲಿ ಹರಿಯುವಂತೆ ಮಾಡುತ್ತಾನೆ. ಈ ರೀತಿ ಇಂದ್ರನು ನದಿಗಳಿಗೆ ನೀರನ್ನು ಯಥೇಚ್ಛವಾಗಿ ಒದಗಿಸುವುದರಿಂದ ನದಿಗಳು ಉದಕಪೂರ್ಣವಾಗಿ ಪ್ರವಹಿಸಲು ಸಾಧ್ಯವಾಗುತ್ತದೆ. ಆದ್ದರಿಂದ ನದಿಗಳಿಗೆ ಇಂದ್ರನು ಒಡೆಯನು ಎಂದು ಹೇಳುವುದು ಸಮಂಜಸವಾಗಿದೆ. ಇನ್ನು **ರೇವತೀನಾಂ** — **ಬಹುಧನಾನಾಂ** ಎಂದರೆ ಧನಸಂಪತ್ತುಳ್ಳ ಎಂದರ್ಥವು. ನದಿಗಳು ಧನವನ್ನು ಹೊಂದಿರುವುದೆಂದರೇನು ಎಂದರೆ ನದಿಗಳು ತಮ್ಮ ಉದಕಗಳಿಂದ ಕ್ಷೇತ್ರಗಳಿಗೆ (ಹೊಲಗದ್ದೆಗಳಿಗೆ) ನೀರನ್ನು ಒದಗಿಸಿ ಅವು ಸಸ್ಯಸಮೃದ್ಧಿಯಿಂದ ಕೂಡಿರುವಂತೆ ಮಾಡುತ್ತವೆ. ಆ ಸಸ್ಯಸಮೃದ್ಧಿಯಿಂದ ಧಾನ್ಯಾದಿಗಳು ಲಭಿಸುವವು. ಧಾನ್ಯಗಳೂ ಧನಗಳಂತೆ ಸಂಪತ್ತಾಗಿ ಇರುವುದರಿಂದಲೂ ಇವುಗಳಿಗೆ ನದಿಗಳೇ ಕಾರಣವಾಗಿರುವುದರಿಂದಲೂ **ರೇವತೀನಾಂ** ಎಂದು ನದಿಗಳನ್ನು ವರ್ಣಿಸುವುದು ಸಹಜವಾಗಿದೆ

|| ಸಂಹಿತಾಪಾಠಃ ||

**ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ಪರಾವತ ಆ ಜಗಂಥಾ ಪರಸ್ಯಾಃ।**
**ಸೃಕಂ ಸಂಶಾಯ ಪವಿಮಿಂದ್ರ ತಿಗ್ಮಂ ವಿ ಶತ್ರೂನ್ತಾಳ್ಹಿ ವಿ ಮೃಧೋ ನುದಸ್ವ ॥ ೨ ॥**

|| ಪದಪಾಠಃ ||

**ಮೃಗಃ । ನ । ಭೀಮಃ । ಕುಚರಃ । ಗಿರಿಽಸ್ಥಾಃ । ಪರಾಽವತಃ । ಆ । ಜಗಂಥ । ಪರಸ್ಯಾಃ ।**
**ಸೃಕಂ । ಸಂಽಶಾಯ । ಪವಿಂ । ಇಂದ್ರ । ತಿಗ್ಮಂ । ವಿ । ಶತ್ರೂನ್ । ತಾಳ್ಹಿ । ವಿ । ಮೃಧಃ । ನುದಸ್ವ ॥ ೨ ॥**

|| ಸಾಯಣಭಾಷ್ಯಂ ||

ವೈಮೃಧಸ್ಯ ಹವಿಷೋ ಮೃಗೋ ನೇತ್ಯೇಷಾ ಯಾಜ್ಯಾ । ಸೂತ್ರಿತಂ ಚ । ವಿ ನ ಇಂದ್ರ ಮೃಧೋ ಜಹಿ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ । ಆ. ೨-೧೦ । ಇತಿ ॥

ಕುಚರಃ ಕುತ್ಸಿತಚರಣೋ ಗಿರಿಷ್ಠಾಃ ಪರ್ವತನಿವಾಸೀ ಮೃಗೋ ನ ಸಿಂಹ ಇವ ಹೇ ಇಂದ್ರ ತ್ವಂ ಭೀಮೋ ಭಯಂಕರೋಽಸಿ । ಸ ತ್ವಂ ಪರಸ್ಯಾಃ ಪರಾವತೋಽತಿಶಯೇನ ದೂರಾದ್ದ್ಯುಲೋಕಾದಾ ಜಗಂಥ । ಆಗಚ್ಛ ॥ ಗಮೇಶ್ಛಾಂದಸೇ ಲಿಟಿ ಕ್ರಾದಿನಿಯಮಪ್ರಾಪ್ತಸ್ಯೇಟ ಉಪದೇಶೇಽತ್ವತಃ । ಪಾ. ೭-೨-೬೨ । ಇತಿ ಪ್ರತಿಷೇಧಃ ॥ ಆಗತ್ಯ ಚ ಸೃಕಂ ಸರಣಶೀಲಂ ತಿಗ್ಮಂ ತೀಕ್ಷ್ಣಂ ಪವಿಂ ವಜ್ರಂ ಸಂಶಾಯ ಸಮ್ಯಕ್ ತೀಕ್ಷ್ಣೀಕೃತ್ಯ ಶತ್ರೂನಸ್ಮದೀಯಾನ್ವೈರಿಣೋ ಹೇ ಇಂದ್ರ ತೇನ ವಜ್ರೇಣ ವಿ ತಾಳ್ಹಿ । ವಿಶೇಷೇಣ

**ಶಾಡಯ । ವಿನಾಶಯೇತ್ಯರ್ಥಃ ॥ ತೆಡ ಆಘಾತೇ । ಅಸ್ಮಾಲ್ಲೋಟಿ ಣ್ಯಂತಾದ್ರೂಪಮೇತತ್ ॥ ತಥಾ ಮೃಧಃ ಸಂಗ್ರಾಮೋದ್ಯುಕ್ತಾನ್ಯುಯುತ್ಸೂನನ್ಯಾನಪಿ ವಿ ನುದಸ್ವ । ವಿಶೇಷೇಣ ತಿರಸ್ಕುರು ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಕುಚರಃ**—ಹೊಂಚು ಹಾಕುತ್ತಾ ಸಂಚರಿಸುವುದೂ | **ಗಿರಿಷ್ಠಾಃ**—ಪರ್ವತಗುಹೆಯಲ್ಲಿ ವಾಸಿಸುವುದೂ ಆದ | **ಮೃಗೋ ನ**—ಸಿಂಹದಂತೆ (ನೀನು) | **ಭೀಮಃ**—ಭಯಂಕರನಾಗಿದ್ದೀಯೆ (ಇಂತಹ ನೀನು) | **ಪರಾವತಃ**—ಅತ್ಯಂತ ದೂರಪ್ರದೇಶವಾದ| **ಪರಸ್ಯಾಃ**—ಸ್ವರ್ಗಲೋಕದಿಂದ| **ಆ ಜಗಂಥ**—ಇಲ್ಲಿಗೆ ದಯಮಾಡು | **ಇಂದ್ರ**—ಎಲೈ ಇಂದ್ರನೇ | **ಸೃಕಂ**—ಶತ್ರುಗಳಮೇಲೆ ಉಪಯೋಗಿಸಲ್ಪಡುವುದೂ | **ತಿಗ್ಮಂ**—ಹರಿತವಾದುದೂ ಆದ | **ಪವಿಂ**—ನಿನ್ನ ವಜ್ರಾಯುಧವನ್ನು | **ಸಂಶಾಯ**—ಚೆನ್ನಾಗಿ ಹರಿತಮಾಡಿ | **ಶತ್ರೂನ್**—ನಮ ಶತ್ರುಗಳನ್ನು (ಆ ವಜ್ರಾಯುಧದಿಂದ) | **ವಿ ತಾಳ್ಹಿ**—ವಿಶೇಷವಾಗಿ ಪ್ರಹರಿಸು (ನಾಶಮಾಡು) | **ಮೃಧಃ**—ಯುದ್ಧದಲ್ಲಿ ಹೋರಾಡುತ್ತಿರುವ ಶತ್ರುಗಳನ್ನು ಸಹ | **ವಿ ನುದಸ್ವ**—ಓಡಿಸು (ಅಥವಾ ನಾಶಮಾಡು).

॥ ಭಾವಾರ್ಥ ॥

ಎಲೈ ಇಂದ್ರನೇ, ಪರ್ವತಗುಹೆಯಲ್ಲಿ ವಾಸಿಸುವುದೂ ಆಹಾರಕ್ಕಾಗಿ ಹೊಂಚುಹಾಕುತ್ತಾ ಸಂಚರಿಸುತ್ತಿರುವುದೂ ಆದ ಸಿಂಹದಂತೆ ನೀನು ಭಯಂಕರನಾಗಿದ್ದೀಯೆ. ಇಂತಹ ನೀನು ಅತ್ಯಂತದೂರಪ್ರದೇಶವಾದ ದ್ಯುಲೋಕದಿಂದ ಇಲ್ಲಿಗೆ ದಯಮಾಡು. ಎಲೈ ಇಂದ್ರನೇ, ಯುದ್ಧಾದಿಗಳಲ್ಲಿ ಉಪಯೋಗಿಸುವುದೂ ಹರಿತವೂ ಆದ ನಿನ್ನ ವಜ್ರಾಯುಧವನ್ನು ಚೆನ್ನಾಗಿ ಹರಿತಮಾಡಿ ಆ ಆಯುಧದಿಂದ ನಮ್ಮ ಶತ್ರುಗಳನ್ನು ವಿಶೇಷವಾಗಿ ಪ್ರಹರಿಸು (ನಾಶಮಾಡು) ಮತ್ತುಯುದ್ಧದಲ್ಲಿ ಹೋರಾಡುತ್ತಿರುವ ಶತ್ರುಗಳನ್ನು ಹೊಡೆದೋಡಿಸು.

## English Translation

Terrible are you as a wandering lion who dwells in the mountains; come from a far-off distant (world); having whetted your repid and sharp bolt, destroy our enemies, Indra, put to flight our opponents.

॥ ವಿಶೇಷ ವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ । ಮೃಗ ಇವ ಭೀಮಃ ಕುಚರೋ ಗಿರಿಷ್ಠಾಃ । ಮೃಗೋ ಮಾರ್ಷ್ಟೇರ್ಗತಿಕರ್ಮಣಃ । ಭೀಮೋ ಬಿಭ್ಯತ್ಯಸ್ಮಾತ್ । ಭೀಷ್ಮೋಽಪ್ಯೇತಸ್ಮಾದೇವ । ಕುಚರ ಇತಿ ಚರತಿಕರ್ಮ ಕುತ್ಸಿತಂ । ಅಥ ಚೇದ್ದೇವತಾಭಿಧಾನಂ, ಕ್ವಾಯಂ ನ ಚರತೀತಿ । ಗಿರಿಷ್ಠಾ ಗಿರಿಸ್ಥಾಯೀ । ಗಿರಿಃ ಪರ್ವತಃ ಸಮುದ್ಗೀರ್ಣೋ ಭವತಿ । ಪರ್ವವಾನ್ ಪರ್ವತಃ । ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ । ಅರ್ಧಮಾಸಪರ್ವ ದೇವಾನಸ್ಮಿನ್ ಪ್ರೀಣಂತೀತಿ । ತತ್ ಪ್ರಕೃತೀತರತ್ಸಂಧಿಸಾಮಾನ್ಯಾತ್ । ಮೇಘಸ್ಥಾಯೀ । ಮೇಘೋಽಪಿ ಗಿರಿರೇತಸ್ಮಾದೇವ ॥**

(ನಿ· ೧-೨೦)

ಇಲ್ಲಿ ಉದಾಹರಿಸಸುವ **ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ** ಎಂಬ ಪಾದವು ಋ. ಸಂ. ೧-೧೫೪-೨ ನೇ ಋಕ್ಕಿನಲ್ಲಿ ಎರಡನೆಯ ಪಾದವಾಗಿಯೂ ಪ್ರಕೃತ ಋಕ್ಕಿನಲ್ಲಿ ಎಂದರೆ ಋ ಸಂ. ೧೦-೧೮೦-೨ನೇ ಋಕ್ಕಿನಲ್ಲಿ ಮೊದ ಲನೆಯ ಪಾದವಾಗಿಯೂ ಪಠಿತವಾಗಿದೆ. ಅರ್ಥದಲ್ಲಿ ವ್ಯತ್ಯಾಸವೇನೂ ಇಲ್ಲ.

**ಮೃಗೋ ನ ಭೀಮಃ—ಮೃಗ ಇವ ಭೀಮಃ । ಮೃಗೋ ಮಾರ್ಷ್ಟೇರ್ಗತಿಕರ್ಮಣಃ । ಭೀಮೋ ಬಿಭ್ಯತ್ಯಸ್ಮಾತ್ । ಭೀಷ್ಮೋಽಪ್ಯೇತಸ್ಮಾದೇವ ॥** ಮೃಗ ಎಂದರೆ ಮೃಗದಂತೆ ಭಯಂಕರನಾದವನು. ಮೃಗ ಶಬ್ದವು ಗತ್ಯರ್ಥವನ್ನು ಸೂಚಿಸುವ ಮೃಜ್ ಧಾತುವಿನಿಂದ ನಿಷ್ಪನ್ನವಾಗಿದೆ. ಮೃಗವು ಯಾವಾಗಲೂ ಆಹಾರಾರ್ಥ ವಾಗಿ ಸಂಚರಿಸುತ್ತಿರುವುದರಿಂದ ಇದಕ್ಕೆ ಮೃಗವೆಂಬ ಹೆಸರು ಬಂದಿದೆ. ಇದನ್ನು ಅಥವಾ ಇವನನ್ನು ಕಂಡು ಇತರರು ಹೆದರುವುದರಿಂದ (ಬಿಭ್ಯತಿಧಾತುವಿನಿಂದ) ಭೀಮಶಬ್ದವು ನಿಷ್ಪನ್ನವಾಗಿದೆ ಭೀಷ್ಮಶಬ್ದವೂ ಈ ಬಿಭ್ಯತಿಧಾತು ವಿನಿಂದಲೇ ನಿಷ್ಪನ್ನವಾಗಿದೆ ಭೀಷ್ಮಶಬ್ದದ ಅರ್ಥವೂ ಭೀಮಶಬ್ದದಂತೆಯೇ ಇರುವುದು.

**ಕುಚರೋ ಗಿರಿಷ್ಠಾಃ—ಕುಚರ ಇತಿ ಚರತಿಕರ್ಮ ಕುತ್ಸಿತಂ । ಅಥ ಚೇದ್ದೇವತಾಭಿಧಾನಂ, ಕ್ವಾಯಂ ನ ಚರತೀತಿ । ಗಿರಿಷ್ಠಾ ಗಿರಿಸ್ಥಾಯೀ ॥** ಕುಚರವೆಂದರೆ ಕುತ್ಸಿತಗಮನ ಅಥವಾ ಸಂಚಾರ. ಪ್ರಾಣಿ ವಧಾರ್ಥವಾಗಿ ಎಂದರೆ ತನಗೆ ಆಹಾರವನ್ನು ಪಡೆಯುವುದಕ್ಕಾಗಿ ಸಿಂಹ ಅಥವಾ ವ್ಯಾಘ್ರವು ಕುತ್ಸಿತಗಮನದಿಂದ ಎಂದರೆ ನೇರವಾಗಿ ಎದುರಿಗೆ ಹೋಗದೆ ಪೊದೆಗಳಲ್ಲಿ ಕಾಣದಂತೆ ಅಡಗಿದ್ದು ಹೊಂಚುಹಾಕುತ್ತಾ ಸಂಚರಿಸುವುದೆಂದ ರ್ಥವು. ಇದೇ ಕುತ್ಸಿತಸಂಚಾರವು. ದೇವತೆಯ (ಇಂದ್ರನ) ವಿಷಯದಲ್ಲಿ ಈ ಶಬ್ದಕ್ಕೆ ಅರ್ಥವೇನೆಂದರೆ **ಕ್ವ ಅಯಂ ನ ಚರತೀತಿ**—ಈ ಇಂದ್ರನು ಎಲ್ಲಿತಾನೆ ಸಂಚರಿಸುವುದಿಲ್ಲ ? ಎಲ್ಲಾ ಕಡೆಯಲ್ಲಿಯೂ ಸಂಚರಿಸುವವನು ಎಂದರ್ಥವು ಆದ್ದರಿಂದ **ಕ್ವ ಅಯಂ ಚರತೀತಿ ಕುಚರಃ** ಎಂದು ಇಲ್ಲಿ ವಿಗ್ರಹವು. ಗಿರಿಷ್ಠಾಃ ಎಂದರೆ ಸಿಂಹವು ಗಿರಿಯಲ್ಲಿ ಅಥವಾ ಪರ್ವತದಲ್ಲಿ ಸಂಚರಿಸುವುದು ಅಥವಾ ವಾಸಮಾಡುವುದು. ಸಿಂಹ, ವ್ಯಾಘ್ರ ಮೊದಲಾದ ಹಿಂಸ್ರ ಜಂತುಗಳು ಸಾಧಾರಣವಾಗಿ ಪರ್ವತಗುಹೆಗಳಲ್ಲಿ ವಾಸಮಾಡುವವು. ಆದ್ದರಿಂದ ಇಲ್ಲಿ ಮೃಗ ಶಬ್ದಕ್ಕೆ ಗಿರಿಷ್ಠಾಃ ಎಂಬ ವಿಶೇಷಣ ವಿದೆ. ದೇವತಾಪರವಾದ ಅರ್ಥದಲ್ಲಿ ಗಿರಿಷ್ಠಾಃ ಎಂದರೆ, **ಮೇಘಸ್ಥಾಯೀ** ಗಿರಿ ಶಬ್ದಕ್ಕೆ ಮೇಘವೆಂದೂ ಅರ್ಥವು. ಮೇಘಸ್ಥನಾಗಿರುವನು ಎಂದರೆ ಅಂತರಿಕ್ಷದಲ್ಲಿರುವವನು ಎಂದರ್ಥವು.

**ಗಿರಿಃ ಪರ್ವತಃ ಸಮುದ್ಗೀರ್ಣೋ ಭವತಿ । ಪರ್ವವಾನ್ ಪರ್ವತಃ । ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ।** ಗಿರಿ ಎಂದರೆ ಪರ್ವತವು ಇದು ಸುತ್ತುಮುತ್ತಲ ಪ್ರದೇಶಗಳಿಗಿಂತಲೂ ಎತ್ತರ (ಸಮುದ್ಗೀರ್ಣ) ವಾಗಿರುವುದರಿಂದ ಪರ್ವತಕ್ಕೆ ಗಿರಿಯೆಂದು ಹೆಸರು. ಪರ್ವತವೆಂದರೆ—**ಪರ್ವವಾನ್ ಪರ್ವತಃ** ಗುಂಪು ಅಥವಾ ರಾಶಿಗಳಿಂದ ಕೂಡಿರುವುದು ಎಂದರ್ಥವು. ಪರ್ವತದಲ್ಲಿ ಕಲ್ಲುಗಳೂ ಬಂಡೆಗಳೂ ಅನೇಕರಾಶಿಗಳಾಗಿ ಒಂದು ಕಡೆ ಸೇರಿರುವುದರಿಂದ ಇದಕ್ಕೆ ಪರ್ವತವೆಂದು ಹೆಸರು. ಪರ್ವತಶಬ್ದಕ್ಕೆ ಮೇಘವೆಂಬ ಅರ್ಥದಲ್ಲಿಯೂ ಇದೇರೀತಿ ಅರ್ಥವಿರುವುದು. ಮೇಘಗಳು ಅಂತರಿಕ್ಷದಲ್ಲಿ ಗುಂಪುಗುಂಪಾಗಿರುವುದರಿಂದ ಮೇಘಕ್ಕೆ ಪರ್ವತವೆಂದು ಹೆಸರು.

**ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ಅರ್ಧಮಾಸಪರ್ವ—ದೇವಾನಸ್ಮಿನ್ ಪ್ರೀಣಂತೀತಿ ತತ್ ಪ್ರಕೃತೀತರತ್ಸಂಧಿಸಾಮಾನ್ಯಾತ್ । ಮೇಘಸ್ಥಾಯೀ । ಮೇಘೋಽಪಿ ಗಿರಿರೇತಸ್ಮಾದೇವ ॥** ಪರ್ವ ಶಬ್ದವು ತುಂಬು ಎಂಬರ್ಥವುಳ್ಳ ಪೃಣಾತಿಧಾತುವಿನಿಂದಾಗಲಿ ಸಂತೋಷಪಡಿಸು ಎಂಬರ್ಥವುಳ್ಳ ಪ್ರೀಣಾತಿಧಾತುವಿನಿಂ

ದಾಗಲಿ ನಿಷ್ಪನ್ನವಾಗಿದೆ. ಪರ್ವತಗಳಲ್ಲಿ ಬಂಡೆಗಳು ತುಂಬಿರುತ್ತವೆ. ಮೇಘಗಗಳಲ್ಲಿ ಉದಕಗಳು ತುಂಬಿರುತ್ತವೆ. ಆದ್ದರಿಂದ ಇಂತಹ ಪರ್ವಗಳನ್ನುಳ್ಳ ಪರ್ವತವು ಪೃಣಾತಿಧಾವಿನಿಂದ ನಿಷ್ಪನ್ನವಾಗಿದೆ ಎಂದರ್ಥವು. ಪ್ರೀಣಾತಿಧಾತುವಿನಿಂದ ನಿಷ್ಪನ್ನವಾದ ಪರ್ವಶಬ್ದಕ್ಕೆ ಅರ್ಧಮಾಸ (ಹದಿನೈದು ದಿವಸಗಳು) ಎಂದರ್ಥವು. ಹದಿನೈದು ದಿವಸಗಳಿಗೊಂದಾವರ್ತಿ ಪೌರ್ಣಮಾಸೀ ಅಥವಾ ಅಮಾವಾಸ್ಯೆಯು ಬರುವುದು ಈ ಸಂಧಿಕಾಲವನ್ನು ಪರ್ವವೆಂದು ಕರೆಯುವರು ಈ ಕಾಲದಲ್ಲಿ ದರ್ಶಪೂರ್ಣಮಾಸ ಮೊದಲಾದ ಇಷ್ಟಿಗಳಿಂದ ದೇವತೆಗಳನ್ನು ತೃಪ್ತಿಪಡಿಸುವುದರಿಂದ ಈ ಅರ್ಥವಿರುವ ಪ್ರೀಣಾತಿಧಾತುವಿನಿಂದ ಪರ್ವಶಬ್ದವು ನಿಷ್ಪನ್ನವಾಗಿದೆ ಎಂದು ಹೇಳಬಹುದು. ಇವೆರಡು ಅರ್ಥಗಳಲ್ಲಿಯೂ ಸಂಧಿಯು (ಪರ್ವವು) ಸಾಮಾನ್ಯವಾಗಿದೆ ಎಂದರೆ ಒಂದರಲ್ಲಿ ಶಿಲೆಗಳ (ಬಂಡೆಗಳ) ಸಂಧಿಯೂ, ಇನ್ನೊಂದರಲ್ಲಿ ಕಾಲಸಂಧಿಯೂ (೧೫ ದಿನಗಳ ಪರಿಮಿತಿ) ಇರುವುದರಿಂದ ಈ ಸಂಧಿಸೂಚಕವಾದ ಪರ್ವಶಬ್ದವು ಎರಡು ಅರ್ಥಗಳಿಗೂ ಸಾಮಾನ್ಯ ಪದವಾಗಿದೆ. ಮೇಘವೂ ಗಿರಿಶಬ್ದದಿಂದ ವ್ಯವಹರಿಸಲ್ಪಡುವುದು. ಏಕೆಂದರೆ ಗಿರಿ (ಬೆಟ್ಟವು) ಅಂತರಿಕ್ಷದಲ್ಲಿ ಎತ್ತರ.ವಾಗಿ ಹಬ್ಬಿರುವಂತೆ ಮೇಘವೂ ಅಂತರಿಕ್ಷದಲ್ಲಿ ಬಹು ಎತ್ತರದಲ್ಲಿ ವ್ಯಾಪಿಸಿರುವುದು ಎಂದು ನಿರ್ವಚನಾಭಿಪ್ರಾಯವು.

ವೈಮೃಧವೆಂಬ ಹವಿಸ್ಸನ್ನು ಹೋಮಮಾಡುವಾಗ **ಮೃಗೋ ನ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ವಿ ನ್ಯಇಂದ್ರ ಮೃಧೋ ಜಹಿ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ** ಎಂಬ ಸೂತ್ರದಿಂದ (ಅ. ೨-೧೦) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಇಂದ್ರ ಕ್ಷತ್ರಮಭಿ ವಾಮಮೋಜೋಽಜಾಯಥಾ ವೃಷಭ ಚರ್ಷಣೀನಾಂ ।**
**ಅಪಾನುದೋ ಜನಮಮಿತ್ರಯಂತಮುರುಂ ದೇವೇಭ್ಯೋ ಅಕೃಣೋರು- ಲೋಕಂ ॥ ೩ ॥**

॥ ಪದಪಾಠಃ ॥

**ಇಂದ್ರ । ಕ್ಷತ್ರಂ । ಅಭಿ । ವಾಮಂ । ಓಜಃ । ಅಜಾಯಥಾಃ । ವೃಷಭ । ಚರ್ಷಣೀನಾಂ ।**
**ಅಪ । ಅನುದಃ । ಜನಂ । ಅಮಿತ್ರಽಯಂತಂ । ಉರುಂ । ದೇವೇಭ್ಯಃ । ಅಕೃಣೋಃ । ಊಂ ಇತಿ । ಲೋಕಂ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ಕ್ಷತ್ರಂ ಕ್ಷತಾತ್ತ್ರಾಯಕಂ ವಾಮಂ ವನನೀಯಮೋಜೋ ಬಲಮಭಿಲಕ್ಷ್ಯಾಜಾಯಥಾಃ । ಉತ್ಪನ್ನೋಽಸಿ । ಹೇ ವೃಷಭ ಕಾಮಾನಾಂ ವರ್ಷಿತಃ ಚರ್ಷಣೀನಾಂ ಮನುಷ್ಯಾಣಾಮಸ್ಮಾಕಂ॥ ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ ॥ ಅಮಿತ್ರಯಂತಂ । ಅಮಿತ್ರಃ ಶತ್ರುಃ । ಸ ಇವಾಚರಂತಂ ಜನಮಪಾನುದಃ । ಅಪಾಗಮಯಃ । ದೇವೇಭ್ಯಶ್ಚೋರುಂ ವಿಸ್ತೀರ್ಣಂ ಲೋಕಂ ಸ್ವರ್ಗಾಖ್ಯಮಕೃಣೋಃ । ಅಕಾರ್ಷೀಃ । ಉಶಬ್ದಃ ಸಮುಚ್ಚಯೇ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ | **ಕ್ಷತ್ರಂ**—ಸರ್ವರನ್ನೂ ಕಾಪಾಡುವುದೂ | **ವಾಮಂ**—ಅಪೇಕ್ಷಿತವಾದುದೂ ಆದ | **ಓಜಃ**—ಬಲವನ್ನು ಪಡೆದುಕೊಂಡೇ | **ಅಜಾಯಥಾಃ**—ನೀನು ಉತ್ಪನ್ನನಾಗಿದ್ದೀಯೆ | **ಚರ್ಷಣೀನಾಂ**—ಮನುಷ್ಯರಾದ ನಮಗೆ | **ವೃಷಭ**—ಇಷ್ಟಾರ್ಥಪ್ರದನಾದ ಎಲೈ ಇಂದ್ರನೇ (ನೀನು) | **ಅಮಿತ್ರಯಂತಂ**—ನಮಗೆ ಶತ್ರುವಂತಿರುವ | **ಜನಂ**—ಜನರನ್ನು | **ಅಪ ಅನುದಃ**—ಓಡಿಸಿದ್ದೀಯೆ | **ದೇವೇಭ್ಯಃ**—ದೇವತೆಗಳಿಗಾಗಿ | **ಉರು**—ವಿಸ್ತಾರವಾದ | **ಲೋಕಂ**—ಸ್ವರ್ಗಲೋಕವನ್ನು | **ಅಕೃಣೋಃ**—ನಿರ್ಮಿಸಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸರ್ವರನ್ನೂ ಕಾಪಾಡುವ ಸಾಮರ್ಥ್ಯವುಳ್ಳದ್ದೂ, ಎಲ್ಲರಿಗೂ ಬೇಕಾದುದೂ ಆದ ಬಲಸಹಿತನಾಗಿಯೇ ನೀನು ಉತ್ಪನ್ನನಾಗಿದ್ದೀಯೆ ಮನುಷ್ಯರಾದ ನಮಗೆ ಸಮಸ್ತ ಇಷ್ಟಾರ್ಥಗಳನ್ನು ಒದಗಿಸಿಕೊಡುವ ಎಲೈ ಇಂದ್ರನೇ, ನೀನು ನಮ್ಮ ವಿಷಯದಲ್ಲಿ ಶತ್ರುಗಳಂತಿರುವ ಜನರನ್ನು ಓಡಿಸಿದ್ದೀಯೆ. ಮತ್ತು ದೇವತೆಗಳು ವಾಸಮಾಡುವುದಕ್ಕಾಗಿ ಸ್ವರ್ಗಲೋಕವನ್ನು ನಿರ್ಮಿಸಿದ್ದೀಯೆ.

English Translation.

You have been born, Indra, endowed with protecting and desirable vigour; benefactor of mankind, you drove away the man who was unfriendly (to us), you prepared a spacious region for the gods.

## ನೂರ ಎಂಭತ್ತೊಂದನೆಯ ಸೂಕ್ತ

॥ ಸಾಯಣಭಾಷ್ಯಂ ॥

**ಪ್ರಥ ಇತಿ ತೃಚಂ ತ್ರಿಂಶಂ ಸೂಕ್ತಂ ವೈಶ್ವದೇವಂ ತ್ರೈಷ್ಟುಭಂ | ವಾಸಿಷ್ಠಃ ಪ್ರಥಸಂಜ್ಞ ಋಷಿಃ ಪ್ರಥಮಾಯಾಃ | ಭಾರದ್ವಾಜಃ ಸಪ್ರಥಾಖ್ಯ ಋಷಿರ್ದ್ವಿತೀಯಾಯಾಃ | ಸೂರ್ಯಪುತ್ರೋ ಘರ್ಮ ಋಷಿಸ್ತೃತೀಯಾಯಾಃ | ತಥಾ ಚಾನುಕ್ರಾಂತಂ | ಪ್ರಥಶ್ಚೈಕರ್ಚಾಃ ಪ್ರಥೋ ವಾಸಿಷ್ಠಃ ಸಪ್ರಥೋ ಭಾರದ್ವಾಜೋ ಘರ್ಮಃ ಸೌರ್ಯೋ ವೈಶ್ವದೇವಮಿತಿ ॥ ಪ್ರವರ್ಗ್ಯೇಽಭಿಷ್ಟವ ಏತತ್ಸೂಕ್ತಂ | ಸೂತ್ರಿತಂ ಚ | ಗಣಾನಾಂ ತ್ವಾ ಪ್ರಥಶ್ಚ ಯಸ್ಯ | ಆ. ೪-೬ | ಇತಿ ॥**

ಅನುವಾದವು—**ಪ್ರಥಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತದ ಮೊದಲನೆಯ ಋಕ್ಕಿಗೆ ವಸಿಷ್ಠಗೋತ್ರದ ಪ್ರಥನೆಂಬುವನು ಋಷಿಯು; ಎರಡನೆಯ ಋಕ್ಕಿಗೆ ಭರದ್ವಾಜಗೋತ್ರದ ಸಪ್ರಥನೆಂಬುವನು ಋಷಿಯು; ಮೂರನೆಯ ಋಕ್ಕಿಗೆ ಸೂರ್ಯಪುತ್ರನಾದ ಘರ್ಮನೆಂಬುವನು ಋಷಿಯು; ವಿಶ್ವದೇವತೆಗಳು ದೇವತೆಯು, ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರಥಶ್ಚೈಕರ್ಚಾಃ ಪ್ರಥೋ ವಾಸಿಷ್ಠಃ ಸಪ್ರಥೋ ಭಾರದ್ವಾಜೋ ಘರ್ಮಃ ಸೌರ್ಯೋ ವೈಶ್ವದೇವಂ** ಎಂದು ಹೇಳಿರುವುದು. ಪ್ರವರ್ಗ್ಯೇಷ್ಟಿಯ ಅಭಿಷ್ಟವದಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಗಣಾನಾಂ ತ್ವಾ ಪ್ರಥಶ್ಚ ಯಸ್ಯ** ಎಂಬ ಸೂತ್ರದಿಂದ (ಆ. ೪-೬) ವಿವೃತವಾಗಿರುವುದು.

## ಸೂಕ್ತ —೧೮೧

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೮೧ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೩೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—೧. ಪ್ರಥೋ ವಾಸಿಷ್ಠಃ । ೨ ಸಪ್ರಥೋ ಭಾರದ್ವಾಜಃ । ೩. ಘರ್ಮಃ ಸೌರ್ಯಃ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರಥಶ್ಚ ಯಸ್ಯ ಸಪ್ರಥಶ್ಚ ನಾಮಾನುಷ್ಟುಭಸ್ಯ ಹವಿಷೋ ಹವಿರ್ಯತ್ ।
ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋ ರಥಂತರಮಾ ಜಭಾರಾ ವಸಿಷ್ಠಃ ॥೧॥

॥ ಪದಪಾಠಃ ॥

ಪ್ರಥಃ । ಚ । ಯಸ್ಯ । ಸಽಪ್ರಥಃ । ಚ । ನಾಮ । ಆನುಽಸ್ತುಭಸ್ಯ । ಹವಿಷಃ । ಹವಿಃ । ಯತ್ ।
ಧಾತುಃ । ದ್ಯುತಾನಾತ್ । ಸವಿತುಃ । ಚ । ವಿಷ್ಣೋಃ । ರಥಂಽತರಂ । ಆ । ಜಭಾರ । ವಸಿಷ್ಠಃ ॥ ೧ ॥

॥ ಸಾಯಣಭಾಷ್ಯಂ ॥

ಯಸ್ಯ ವಸಿಷ್ಠಸ್ಯ ಪ್ರಥೋ ನಾಮ ಪುತ್ರೋ ಯಸ್ಯ ಭರದ್ವಾಜಸ್ಯ ಸಪ್ರಥೋ ನಾಮ ಪುತ್ರಃ ತ-ಯೋರ್ಮಧ್ಯೇ ವಸಿಷ್ಠ ಆನುಷ್ಟುಭಸ್ಯಾನುಷ್ಟುಪ್ಛಂದಸಾ ಯುಕ್ತಸ್ಯ ಹವಿಷೋ ಘರ್ಮಾಖ್ಯಸ್ಯ ಯದ್ಧ-ವಿರ್ಹವಿಷ್ಪ್ರತಿಪಾದಕಂ ರಥಂತರಂ । ರಥರಂಹಃಸಾಧನಂ ಸಾಮ ತದ್ರಥಂತರಂ । ಧಾತುರ್ಧಾತೃಸಂ-ಜ್ಞಾದ್ದೇವಾದ್ದ್ಯುತಾನಾದ್ದ್ಯೋತಮಾನಾತ್ಸವಿತುಶ್ಚ ವಿಷ್ಣೋಶ್ಚಾ ಜಭಾರ । ಆಜಹಾರ । ಹೃತವಾನ್ ॥ ಹೃಗ್ರಹೋರ್ಭ ಇತಿ ಭತ್ವಂ । ರಥಶಬ್ದೋಪಪದಾತ್ತರತೇಃ ಸಂಜ್ಞಾಯಾಂ ಭೃತೃವೃಜೀತಿ ಖಚ್ । ಅರುರ್ದ್ವಿಷದಜಂತಸ್ಯೇತಿ ಮುಮಾಗಮಃ ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ವಸಿಷ್ಠಋಷಿಯ । **ಪ್ರಥಃ ನಾಮ**—ಪ್ರಥನೆಂಬ ಹೆಸರಿನ ಪುತ್ರನಿರುವನೋ ಅವನೂ । **ಸಪ್ರಥಃ**—ಭರದ್ವಾಜಪುತ್ರನಾದ ಸಪ್ರಥನೆಂಬುವನೂ । **ವಸಿಷ್ಠಃ**—ವಸಿಷ್ಠಋಷಿಯೂ ಸಹ । **ಆನುಷ್ಟುಭಸ್ಯ**—ಅನುಷ್ಟುಪ್‌ಛಂದಸ್ಸಿನಿಂದ ಯುಕ್ತವಾದ । **ಹವಿಷಃ**—ಘರ್ಮವೆಂಬ ಹವಿಸ್ಸಿನ । **ರಥಂತರಂ**—ರಥಂತರವೆಂಬ ಹೆಸರಿನಿಂದ ಪ್ರಸಿದ್ಧವಾದ । **ಯತ್ ಹವಿಃ**—ಯಾವ ಹವಿರ್ಭಾಗವಿದೆಯೋ ಅದನ್ನು । **ಧಾತುಃ**—ಧಾತೃವೆಂಬ ದೇವನಿಂದಲೂ । **ದ್ಯುತಾನಾತ್**—ಪ್ರಕಾಶಮಾನನಾದ । **ಸವಿತುಃ ಚ**—ಸವಿತೃದೇವನಿಂದಲೂ । **ವಿಷ್ಣೋಃ**—ವಿಷ್ಣುವಿನಿಂದಲೂ । **ಆ ಜಭಾರ**—ಪಡೆದು ತಂದರು.

|| ಭಾವಾರ್ಥ ||

ವಸಿಷ್ಠಪುತ್ರನಾದ ಪ್ರಥನೆಂಬುವನೂ, ಭರದ್ವಾಜಪುತ್ರನಾದ ಸಪ್ರಥನೆಂಬುವನೂ, ವಸಿಷ್ಠಋಷಿಯೂ ಸಹ ಅನುಷ್ಟುಪ್‌ಛಂದಸ್ಸಿನಿಂದ ಸಹಿತವಾದುದೂ, ರಥಂತರವೆಂಬ ಹೆಸರಿನಿಂದ ಪ್ರಸಿದ್ಧವಾದುದೂ ಆದ ಹವಿಸ್ಸಿನ ಯಾವ ಭಾಗವಿದೆಯೋ, ಅದನ್ನು ಧಾತೃವೆಂಬ ದೇವನಿಂದಲೂ, ಪ್ರಕಾಶಮಾನನಾದ ಸವಿತೃದೇವನಿಂದಲೂ, ವಿಷ್ಣುವಿನಿಂದಲೂ ಪಡೆದು ತಂದರು.

## English Translation.

Vasishtha, whose (son) is Pratha by name, and whose (son) is Sapratha, has (with them) borne away from Dhatri, and from the radiant Savitri, and from Vishnu, the rathanatara portion of the oblation which if offered with the Anushatubh verse.

|| ಸಂಹಿತಾಪಾಠಃ ||

ಅವಿಂದನ್ತೇ ಅತಿಹಿತಂ ಯದಾಸೀದ್ಯಜ್ಞಸ್ಯ ಧಾಮ ಪರಮಂ ಗುಹಾ ಯತ್ ।
ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋರ್ಭರದ್ವಾಜೋ ಬೃಹದಾ ಚಕ್ರೇ
ಅಗ್ನೇಃ ॥ ೨ ॥

|| ಪದಪಾಠಃ ||

ಅವಿಂದನ್ । ತೇ । ಅತಿऽಹಿತಂ । ಯತ್ । ಆಸೀತ್ । ಯಜ್ಞಸ್ಯ । ಧಾಮ । ಪರಮಂ । ಗುಹಾ । ಯತ್ ।
ಧಾತುಃ । ದ್ಯುತಾನಾತ್ । ಸವಿತುಃ । ಚ । ವಿಷ್ಣೋಃ । ಭರತ್ऽವಾಜಃ । ಬೃಹತ್ । ಆ । ಚಕ್ರೇ । ಅಗ್ನೇಃ ॥

|| ಸಾಯಣಭಾಷ್ಯಂ ||

ಹೇ ಧಾತ್ರಾದಯಸ್ತದವಿಂದನ್ ಅಲಭಂತ ಯದ್ಬೃಹತ್ಸಾಮಾಖ್ಯಂ ಘರ್ಮಸ್ಯ ಹವಿಷಃ ಸಂಸ್ಕಾರಕಮತಿಹಿತಂ ತಿರೋಹಿತಮಾಸೀತ್ । ಯಚ್ಚ ಬೃಹತ್ಸಾಮ ಯಜ್ಞಸ್ಯ ಜ್ಯೋತಿಷ್ಟೋಮಾದೇಃ ಪರಮಮುತ್ಕೃಷ್ಟಂ ಧಾಮ ಧಾರಕಂ ಶರೀರಭೂತಂ ವಾ ಗುಹಾ ಗುಹಾಯಾಮಸ್ಮದಾದಿವಿಷಯೇ ನಿಹಿತಮಾಸೀತ್ ತತ್ತೇ ಧಾತ್ರಾದಯೋऽಲಭಂತ । ತೇಭ್ಯೋಽಗ್ನೇಶ್ಚ ಸಕಾಶಾತ್ತದ್ಬೃಹತ್ಸಾಮ ಭರದ್ವಾಜ ಋಷಿರಾ ಚಕ್ರೇ । ಅಭಿಮುಖ್ಯೇನ ಕೃತವಾನ್ । ಆಹೃತವಾನಿತ್ಯರ್ಥಃ ॥

|| ಪ್ರತಿಪದಾರ್ಥ ||

**ಯತ್**—ಯಾವ ಹವಿರ್ಭಾಗವು । **ಅತಿಹಿತಂ**—ಯಾರಿಗೂ ತಿಳಿಯದಂತೆ ತಿರೋಹಿತವಾಗಿ । **ಆಸೀತ್**—ಇದ್ದಿತೋ । **ಯತ್**—ಯಾವ ಹವಿರ್ಭಾಗವು । **ಯಜ್ಞಸ್ಯ**—ಜ್ಯೋತಿಷ್ಟೋಮಾದಿಯಜ್ಞಕ್ಕೆ । **ಪರಮಂ**—ಉತ್ಕೃಷ್ಟವಾದ । **ಧಾಮ**—ಧಾರಕವಾಗಿರುವುದೋ ಅಂತಹ ಬೃಹತ್ಸಾಮವೆಂಬ ಘರ್ಮಾಖ್ಯ ಹವಿ

ಭಾಗವು | ಗುಹಾ—ಬಚ್ಚಿಡಲಾಗಿದ್ದಿತು. ಅದನ್ನು | ತೇ—ಆ ಧಾತ್ರಾದಿ ದೇವತೆಗಳು | ಅವಿಂದನ್—ಕಂಡುಹಿಡಿದರು. | ಧಾತುಃ—ಧಾತೃ ಎಂಬ ದೇವನಿಂದಲೂ | ದ್ಯುತಾನಾತ್—ಪ್ರಕಾಶಮಾನನಾದ | ಸವಿತುಃ—ಸವಿತೃದೇವನಿಂದಲೂ | ವಿಷ್ಣೋಃ—ವಿಷ್ಣುವಿನಿಂದಲೂ | ಅಗ್ನೇಃ ಚ—ಅಗ್ನಿಯಿಂದಲೂ ಸಹ | ಬೃಹತ್—ಬೃಹತ್ಸಾಮವೆಂಬ ಆ ಹವಿರ್ಭಾಗವನ್ನು | ಭರದ್ವಾಜಃ—ಭರದ್ವಾಜ ಋಷಿಯು | ಆ ಚಕ್ರೇ—ಪಡೆದು ತಂದನು.

|| ಭಾವಾರ್ಥ ||

ಜ್ಯೋತಿಷ್ಟೋಮಾದಿ ಯಜ್ಞಗಳಿಗೆ ಧಾರಕವಾದುದೂ, ಅತ್ಯವಶ್ಯಕವಾದುದೂ ಆದ ಬೃಹತ್ಸಾಮವೆಂಬ ಘರ್ಮಹವಿಸ್ಸಿನ ಭಾಗವು ಯಾರಿಗೂ ತಿಳಿಯದಂತೆ ರಹಸ್ಯ ಪ್ರದೇಶದಲ್ಲಿ ಬಚ್ಚಿಡಲಾಗಿದ್ದಿತು ಅದನ್ನು ಧಾತ್ರಾದಿ ದೇವತೆಗಳು ಕಂಡುಹಿಡಿದರು. ಅನಂತರ ಭರದ್ವಾಜ ಋಷಿಯು ಧಾತೃ, ಪ್ರಕಾಶಮಾನನಾದ ಸವಿತೃ, ವಿಷ್ಣು, ಅಗ್ನಿ ಇವರಲ್ಲಿದ್ದ ಆ ಬೃಹತ್ಸಾಮವೆಂಬ ಹವಿರ್ಭಾಗವನ್ನು ಅವರಿಂದ ಪಡೆದುಕೊಂಡು ಬಂದನು.

English Translation

They discovered (the Brihat) which had been put away, the most excellent substance of the sacrifice which was hidden , Bharadwaja took the Brihat from Dhatri› the radiant Shvitri, Vishnu, and Agni.

|| ಸಂಹಿತಾಪಾಠಃ ||

ತೇಽವಿಂದನ್ಮನಸಾ ದೀಧ್ಯಾನಾ ಯಜುಃ ಷ್ಕನ್ನಂ ಪ್ರಥಮಂ ದೇವಯಾನಂ |

ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋರಾ ಸೂರ್ಯಾದಭರನ್ಘರ್ಮಮೇತೇ ||

|| ಪದಪಾಠಃ ||

ತೇ | ಅವಿಂದನ್ | ಮನಸಾ | ದೀಧ್ಯಾನಾಃ | ಯಜುಃ | ಸ್ಕನ್ನಂ | ಪ್ರಥಮಂ | ದೇವಽಯಾನಂ |

ಧಾತುಃ | ದ್ಯುತಾನಾತ್ | ಸವಿತುಃ | ಚ | ವಿಷ್ಣೋಃ | ಆ | ಸೂರ್ಯಾತ್ | ಅಭರನ್ | ಘರ್ಮಂ | ಏತೇ ||

|| ಸಾಯಣಭಾಷ್ಯಂ ||

ತೇ ಧಾತ್ರಾದಯೋ ದೀಧ್ಯಾನಾ ದೀಪ್ಯಮಾನಾಃ ಸಂತೋ ಮನಸಾ ಬುದ್ಧ್ಯಾವಿಂದನ್ | ಅಲಭಂತ | ಕಿಂ ತತ್ | ಯಜುರ್ಯಾಗಸಾಧನಂ ಸ್ಕನ್ನಂ ಸ್ಕಂದನೀಯಮಾಸೇಚನೀಯಂ ಪ್ರವೃಂಜನಸಾಧನಂ ಪ್ರಥಮಂ ಮುಖ್ಯಂ ದೇವಯಾನಂ ದೇವಾನಾಂ ಪ್ರಾಪ್ತಿಸಾಧನಂ ಘರ್ಮಂ | ಏವಂ ಧಾತ್ರಾದಿಭಿಃ ಪ್ರಥಮಮುಪಲಬ್ಧಂ ತಂ ಘರ್ಮಂ ಧಾತುರ್ದ್ಯೋತಮಾನಾತ್ಸವಿತುರ್ವಿಷ್ಣೋಃ ಸೂರ್ಯಾಚ್ಚೈತ ಋತ್ವಿಜ ಅಭರನ್ | ಅಹರನ್ | ಆನೀತವಂತ ಇತ್ಯರ್ಥಃ ||

|| ಪ್ರತಿಪದಾರ್ಥ ||

**ತೇ**—ಆ ಧಾತ್ರಾದಿದೇವತೆಗಳು | **ದೀಧ್ಯಾನಾಃ**—ಪ್ರಕಾಶಮಾನರಾಗಿ ಬೆಳಗುತ್ತಾ | **ಯಜುಃ**—ಯಾಗಸಾಧನವಾದುದೂ | **ಸ್ಕನ್ನಂ**—ದ್ರವ್ಯರೂಪದಲ್ಲಿರುವುದೂ | **ಪ್ರಥಮಂ**—ಮುಖ್ಯವಾದುದೂ | **ದೇವಯಾನಂ**—ದೇವತೆಗಳ ಬಳಿಗೆ ಹೋಗಲು ಸಾಧನಭೂತವಾದುದೂ ಆದ ಆಘರ್ಮಹವಿಸ್ಸನ್ನು | **ಮನಸಾ**—ತಮ್ಮ ಬುದ್ಧಿಶಕ್ತಿಯಿಂದ | **ಅವಿಂದನ್**—ಪಡೆದರು (ಅನಂತರ) | **ಏತೇ**—ಈ ಋತ್ವಿಕ್ಕುಗಳು | **ಘರ್ಮಂ**—ಆ ಘರ್ಮಾಖ್ಯ ಹವಿಸ್ಸನ್ನು | **ಧಾತುಃ**—ಧಾತೃದೇವನಿಂದಲೂ | **ದ್ಯುತಾನಾತ್**—ಪ್ರಕಾಶಮಾನನಾದ | **ಸವಿತುಃ**—ಸವಿತೃದೇವನಿಂದಲೂ | **ವಿಷ್ಣೋಃ**—ವಿಷ್ಣುವಿನಿಂದಲೂ | **ಸೂರ್ಯಾತ್ ಚ**—ಸೂರ್ಯನಿಂದಲೂ ಸಹ | **ಆ ಅಭರನ್**—ಪಡೆದು ತಂದರು.

|| ಭಾವಾರ್ಥ ||

ಪ್ರಕಾಶಮಾನರಾಗಿ ಬೆಳಗುತ್ತಿದ್ದ ಆ ಧಾತ್ರಾದಿದೇವತೆಗಳು ಯಾಗಸಾಧನವಾದುದೂ ದ್ರವರೂಪದಿಂದಿರುವುದೂ, ಅತಿಮುಖ್ಯವಾದುದೂ ದೇವತೆಗಳ ಪ್ರಾಪ್ತಿಗೆ ಹೇತುಭೂತವಾದುದೂ ಆದ ಆ ಘರ್ಮಹವಿಸ್ಸನ್ನು ತಮ್ಮ ಬುದ್ಧಿಶಕ್ತಿಯಿಂದ ಪಡೆದರು. ಅನಂತರ ಋತ್ವಿಕ್ಕುಗಳು ಆಘರ್ಮಹವಿಸ್ಸನ್ನು ಎಂದರೆ ಧಾತೃ, ಪ್ರಕಾಶಮಾನನಾದ ಸವಿತೃ, ವಿಷ್ಣು, ಸೂರ್ಯ ಎಂಬ ದೇವತೆಗಳಿಂದ ಪಡೆದು ತಂದರು

English Translation.

Those brilliant deities discovered by their intelligence the principle means of sacrifice which has to be effused, which leads to the gods ; these (priests) have taken the Gharma from Dhatri, the radiant Savitri and Vishnu.



## ನೂರ ಎಂಭತ್ತೆರಡನೆಯ ಸೂಕ್ತ

|| ಸಾಯಣಭಾಷ್ಯಂ ||

**ಬೃಹಸ್ಪತಿರಿತಿ ತೃಚಮೇಕತ್ರಿಂಶಂ ಸೂಕ್ತಂ ಬೃಹಸ್ಪತಿದೇವತ್ಯಂ ತ್ರೈಷ್ಟುಭಂ | ಬೃಹಸ್ಪತಿಪುತ್ರಸ್ತಪುರ್ಮೂರ್ಧಾ ನಾಮರ್ಷಿಃ | ತಥಾ ಚಾನುಕ್ರಾಂತಂ | ಬೃಹಸ್ಪತಿಸ್ತಪುರ್ಮೂರ್ಧಾ ಬಾರ್ಹಸ್ಪತ್ಯೋ ಬಾರ್ಹಸ್ಪತ್ಯಮಿತಿ || ಗತೋ ವಿನಿಯೋಗಃ ||**

ಅನುವಾದವು—**ಬೃಹಸ್ಪತಿಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತೊಂದನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಬೃಹಸ್ಪತಿಪುತ್ರನಾದ ತಪುರ್ಮೂರ್ಧಾ ಎಂಬುವನು ಋಷಿಯು, ಬೃಹಸ್ಪತಿಯು ದೇವತೆಯು; ತ್ರಿಷ್ಟುಪ್‌ಛಂದಸ್ಸು ಅನುಕ್ರಮಣಿಕೆಯಲ್ಲಿ **ಬೃಹಸ್ಪತಿಸ್ತಪುರ್ಮೂರ್ಧಾ ಬಾರ್ಹಸ್ಪತ್ಯೋ ಬಾರ್ಹಸ್ಪತ್ಯಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ - ೧೮೨

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೮೨ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೪೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—ತಪುರ್ಮೂರ್ಧಾ ಬಾರ್ಹಸ್ಪತ್ಯಃ ॥
॥ ದೇವತಾ—ಬೃಹಸ್ಪತಿಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಬೃಹಸ್ಪತಿರ್ನಯತು ದುರ್ಗಹಾ ತಿರಃ ಪುನರ್ನೇಷದಘಶಂಸಾಯ ಮನ್ಮ ।
ಕ್ಷಿಪದಶಸ್ತಿಮಪ ದುರ್ಮತಿಂ ಹನ್ನಥಾ ಕರದ್ಯಜಮಾನಾಯ ಶಂ ಯೋಃ॥೧॥

॥ ಪದಪಾಠಃ ॥

ಬೃಹಸ್ಪತಿಃ । ನಯತು । ದುಃऽಗಹಾ । ತಿರಃ । ಪುನಃ । ನೇಷತ್ । ಅಘऽಶಂಸಾಯ । ಮನ್ಮ ।
ಕ್ಷಿಪತ್ । ಅಶಸ್ತಿಂ । ಅಪ । ದುಃऽಮತಿಂ । ಹನ್ । ಅಥ । ಕರತ್ । ಯಜಮಾನಾಯ । ಶಂ । ಯೋಃ ॥

॥ ಸಾಯಣಭಾಷ್ಯಂ ॥

ಬೃಹಸ್ಪತಿರ್ಬೃಹತಾಂ ದೇವಾನಾಂ ಪತಿಃ ಪಾಲಯಿತಾ ॥ ತದ್ಬೃಹತೋಃ ಕರಪತ್ಯೋಶ್ಚೋರದೇವತಯೋಃ ಸುಟ್ ತಲೋಪಶ್ಚ । ಪಾ. ೬-೧-೧೫೭ । ಇತಿ ಸುಡಾಗಮಸ್ತಲೋಪಶ್ಚ । ಉಭೇ ವನಸ್ಪತ್ಯಾದಿಷ್ವಿತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ ॥ ದುರ್ಗಹಾ ದುರ್ಗಮನಾನಾಂ ಹಂತಾ ಸ ದೇವಸ್ತಿರೋ ನಯತು ತಿರಸ್ಕರ್ತವ್ಯಾನಿ ಪಾಪಾನ್ಯಪಸಾರಯತು । ಅಘಶಂಸಾಯಾಸ್ಮಾಕಮನರ್ಥಮಾಶಂಸಮಾನಾಯ ಪುರುಷಾಯ ಮನ್ಮ । ಮನ್ಯತೇರ್ದೀಪ್ತಿಕರ್ಮಣೋ ಮನ್ಮ । ದೀಪ್ತಮಾಯುಧಂ ಪುನರ್ನೇಷತ್ । ನಯತು ॥ ನಯತೇರ್ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ಅಪಿ ಚಾಶಸ್ತಿಮಯಶಸ್ವಿನಂ ಶತ್ರುಂ ಕ್ಷಿಪತು । ಅಸ್ಮತ್ತಃ ಪ್ರೇರಯತು । ದುರ್ಮತಿಂ ದುರ್ಬುದ್ಧಿಂ ಚಾಪ ಹನ್ । ಅಪಹಂತು । ಅಥಾನಂತರಂ ಶಂ ರೋಗಾಣಾಂ ಶಮನಂ ಯೋರ್ಭಯಾನಾಂ ಯಾವನಂ ಚ ಕರತ್ ॥

॥ ಪ್ರತಿಪದಾರ್ಥ ॥

ಬೃಹಸ್ಪತಿಃ—ದೊಡ್ಡದೊಡ್ಡದೇವತೆಗಳಿಗೆ ಪಾಲಕನಾದ ಬೃಹಸ್ಪತಿಯು । ದುರ್ಗಹಾ—ಕಷ್ಟಗಳನ್ನು ಪರಿಹರಿಸುವವನು. ಆ ದೇವನು । ತಿರಃ ನಯತು—ಪಾಪಗಳನ್ನು ನಿವಾರಣೆಮಾಡಲಿ । ಅಘಶಂಸಾಯ—ನಮ್ಮ ವಿಷಯದಲ್ಲಿ ಅನರ್ಥ ಅಥವಾ ಪಾಪಕರವಾದ ಮಾತನ್ನಾಡುವ ಪುರುಷನಿಗಾಗಿ । ಮನ್ಮ—ಪ್ರಕಾಶಮಾನವಾದ

ಆಯುಧವನ್ನು । **ಪುನಃ ನೇಷತ್**- ಮತ್ತೆ ಒಯ್ಯಲಿ ಮತ್ತೂ । **ಅಶಸ್ತಿಂ**—ಅಯಶಸ್ವಿಯಾದ (ದುಷ್ಟನಾದ) ಶತ್ರುವನ್ನು । **ಕ್ಷಿಪತ್**--ನಮ್ಮ ಬಳಿಯಿಂದ ಹೊರಟುಹೋಗುವಂತೆ ಪ್ರೇರಿಸಲಿ । **ದುರ್ಮತಿಂ**—ದುರ್ಬುದ್ಧಿಯನ್ನು । **ಅಪ ಹನ್**- ನಾಶಮಾಡಲಿ । **ಅಥ**—ಅನಂತರ । **ಶಂ**—ರೋಗಶಮನವನ್ನೂ । **ಯೋಃ**—ಭಯನಿವಾರಣೆಯನ್ನೂ । **ಕರತ್**—ಉಂಟುಮಾಡಲಿ.

॥ ಭಾವಾರ್ಥ ॥

ದೇವತೆಗಳ ಪಾಲಕನಾದ ಬೃಹಸ್ಪತಿಯು ಕಷ್ಟಗಳನ್ನು ಪರಿಹರಿಸುತ್ತಾನೆ. ಆ ದೇವನು ನಮ್ಮ ಪಾಪಗಳನ್ನು ನಿವಾರಣೆಮಾಡಲಿ. ನಮ್ಮ ವಿಷಯದಲ್ಲಿ ಕೆಟ್ಟಮಾತನ್ನಾಡುವ ಪುರುಷನ ಶಿಕ್ಷಾರ್ಥವಾಗಿ ಪ್ರಕಾಶಮಾನವಾಗಿ ಆಯುಧವನ್ನು ವಹಿಸಿ ತರಲಿ. ದುಷ್ಟನಾದ ಶತ್ರುವನ್ನು ನಮ್ಮ ಸಮೀಪದಿಂದ ಹೊರಟುಹೋಗುವಂತೆ ಪ್ರೇರಿಸಲಿ. ಕೆಟ್ಟಬುದ್ಧಿಯನ್ನು ನಾಶಮಾಡಲಿ, ರೋಗಶಮನವನ್ನೂ ಭಯನಿವಾರಣೆಯನ್ನೂ ಉಂಟುಮಾಡಲಿ.

## English Translation

Let Brihaspati, the overcomer of difficulties, put aside (all sins), let him thrust aside the weapon of the calumniator, may he hurl down the inglorious (enemy), may he baffle the malevolent, and bestow upon the sacrificer health and prosperity.

॥ ಸಂಹಿತಾಪಾಠಃ ॥

ನರಾಶಂಸೋ ನೋಽವತು ಪ್ರಯಾಜೇ ಶಂ ನೋ ಅಸ್ತ್ವನುಯಾಜೋ ಹವೇಷು ।
ಕ್ಷಿಪದಶಸ್ತಿಮಪ ದುರ್ಮತಿಂ ಹನ್ನಥಾ ಕರದ್ಯಜಮಾನಾಯ ಶಂ ಯೋಃ ॥೨॥

॥ ಪದಪಾಠಃ ॥

ನರಾಶಂಸಃ । ನಃ । ಅವತು । ಪ್ರಽಯಾಜೇ । ಶಂ । ನಃ । ಅಸ್ತು । ಅನುಽಯಾಜಃ । ಹವೇಷು ।
ಕ್ಷಿಪತ್ । ಅಶಸ್ತಿಂ । ಅಪ । ದುಃಽಮತಿಂ । ಹನ್ । ಅಥ । ಕರತ್ । ಯಜಮಾನಾಯ । ಶಂ । ಯೋಃ ॥೨॥

॥ ಸಾಯಣಭಾಷ್ಯಂ ॥

ಪಂಚಸು ಪ್ರಯಾಜೇಷು ದ್ವಿತೀಯಃ ಪ್ರಯಾಜೋ ನರಾಶಂಸದೇವತಾಕಃ । ತಸ್ಮಿನ್ಪ್ರಯಾಜೇ ದೇವತಾಭೂತೋ ನರಾಶಂಸೋ ನರೈಃ ಶಂಸನೀಯೋಽಗ್ನಿರ್ನೋಽಸ್ಮಾನವತು । ರಕ್ಷತು । ಹವೇಷ್ವಾ-ಹ್ವಾನೇಷು ಸತ್ಸ್ವನುಯಾಜಃ । ತ್ರಯೋಽನುಯಾಜಾಃ । ದ್ವಿತೀಯೋಽನುಯಾಜೋ ನರಾಶಂಸಃ ।

ತಸ್ಯಾನುಯಾಜಸ್ಯ ದೇವತಾಭೂತೋ ನರಾಶಂಸೋಽಗ್ನಿಶ್ಚ ನೋಽಸ್ಮಾಕಂ ಶಂ ಸುಖಕರೋಽಸ್ತು । ಬೃಹಸ್ಪತಿಶ್ಚಾಶಸ್ತಿಂ ಕ್ಷಿಪದಿತ್ಯಾದಿ ಪೂರ್ವವತ್ ॥

॥ ಪ್ರತಿಪದಾರ್ಥ ॥

**ಪ್ರಯಾಜೇ**— ಐದು ಪ್ರಯಾಜಹೋಮಗಳಲ್ಲಿ ಎರಡನೆಯ ಪ್ರಯಾಜಹೋಮಕ್ಕೆ ದೇವತೆಯಾದ । **ನರಾಶಂಸಃ**— ಮನುಷ್ಯರಿಂದ ಪ್ರಶಂಸಿಸಲ್ಪಡುವ ನರಾಶಂಸನಾಮಕನಾದ ಅಗ್ನಿಯು । **ನಃ**— ನಮ್ಮನ್ನು । **ಅವತು**— ರಕ್ಷಿಸಲಿ. । **ಹವೇಷು**— ದೇವತೆಗಳನ್ನು ಆಹ್ವಾನಮಾಡಿದನಂತರ । **ಅನುಯಾಜಃ**— ಮೂರು ಅನುಯಾಜ ಹೋಮಗಳಲ್ಲಿ ಎರಡನೇ ಅನುಯಾಜ ಹೋಮಕ್ಕೆ ದೇವತೆಯಾದ ನರಾಶಂಸನಾಮಕ ಅಗ್ನಿಯು । **ನಃ**— ನಮಗೆ । **ಶಂ ಅಸ್ತು**— ಸುಖವನ್ನುಂಟುಮಾಡಲಿ । **ಅಶಸ್ತಿಂ**— ಅಯಶಸ್ವಿಯಾದ ಶತ್ರುವನ್ನು । **ಕ್ಷಿಪತ್**— ನಮ್ಮ ಬಳಿಯಿಂದ ಹೊರಟುಹೋಗುವಂತೆ ಪ್ರೇರಿಸಲಿ । **ದುರ್ಮತಿಂ**— ದುರ್ಬುದ್ಧಿಯನ್ನು । **ಅಪ ಹನ್**— ನಾಶಮಾಡಲಿ । **ಅಥ**— ಅನಂತರ । **ಶಂ**— ರೋಗಶಮನವನ್ನೂ । **ಯೋಃ**— ಭಯನಿವಾರಣೆಯನ್ನೂ । **ಕರತ್**— ಉಂಟುಮಾಡಲಿ.

॥ ಭಾವಾರ್ಥ ॥

ಐದು ಪ್ರಯಾಜ ಹೋಮಗಳಲ್ಲಿ ಎರಡನೆಯ ಪ್ರಯಾಜ ಹೋಮಕ್ಕೆ ದೇವತೆಯಾದ ಮನುಷ್ಯರಿಂದ ಪ್ರಶಂಸಿಸಲ್ಪಡುವ ನರಾಶಂಸನಾಮಕನಾದ ಅಗ್ನಿಯು ನಮ್ಮನ್ನು ರಕ್ಷಿಸಲಿ. ದೇವತೆಗಳನ್ನು ಆಹ್ವಾನಮಾಡಿದನಂತರ ಅನುಯಾಜ ಎಂಬ ಮೂರು ಹೋಮಗಳಲ್ಲಿ ಎರಡನೆಯ ಹೋಮಕ್ಕೆ ದೇವತೆಯಾದ ನರಾಶಂಸನಾಮಕ ಅಗ್ನಿಯು ನಮಗೆ ಸುಖವನ್ನುಂಟುಮಾಡಲಿ. ದುಷ್ಟನಾದ ಶತ್ರುವನ್ನು ನಮ್ಮ ಸಮೀಪದಿಂದ ಹೊರಟುಹೋಗುವಂತೆ ಪ್ರೇರಿಸಲಿ. ಕೆಟ್ಟಬುದ್ಧಿಯನ್ನು ನಾಶಮಾಡಲಿ. ರೋಗಶಮನವನ್ನೂ, ಭಯನಿವಾರಣೆಯನ್ನೂ ಮಾಡಲಿ.

## English Translation.

May Narashamsa protect us at the Prayaja rite, may he be (the giver of) felicity to us as the Anuyaja (divinity) at oblations, may Brihaspati hurl down the inglorious (enemy), may he baffle the malevolent, and bestow upon the sacrsficer health and prosperity.

॥ ಸಂಹಿತಾಪಾಠಃ ॥

ತಪುರ್ಮೂರ್ಧಾ ತಪತು ರಕ್ಷಸೋ ಯೇ ಬ್ರಹ್ಮದ್ವಿಷಃ ಶರವೇ ಹಂತವಾ ಉ।
ಕ್ಷಿಪದಶಸ್ತಿಮಪ ದುರ್ಮತಿಂ ಹನ್ನಥಾ ಕರದ್ಯಜಮಾನಾಯ ಶಂ ಯೋಃ॥೩॥

॥ ಪದಪಾಠಃ ॥

ತಪುಃऽಮೂರ್ಧಾ । ತಪತು । ರಕ್ಷಸಃ । ಯೇ । ಬ್ರಹ್ಮऽದ್ವಿಷಃ । ಶರವೇ । ಹಂತವೈ । ಊಂ ಇತಿ ।
ಕ್ಷಿಪತ್ । ಅಶಸ್ತಿಂ । ಅಪ । ದುಃऽಮತಿಂ । ಹನ್ । ಅಥ । ಕರತ್ । ಯಜಮಾನಾಯ । ಶಂ । ಯೋಃ ॥

॥ ಸಾಯಣಭಾಷ್ಯಂ ॥

ತಪುಮೂರ್ಧಾ ತಾಪಕಶಿರಸ್ಕೋ ಬೃಹಸ್ಪತೀ ರಕ್ಷಸೋ ಯೇ ಬ್ರಹ್ಮದ್ವಿಷೋ ಬ್ರಾಹ್ಮಣದ್ವೇಷ್ಟಾರೋ ರಾಕ್ಷಸಾಃ ತಾನ್ರಾಕ್ಷಸಾಂಸ್ತಪತು । ತಾಪಯತು । ದಹತ್ವಿತ್ಯರ್ಥಃ । ಕಿಮರ್ಥಂ । ಶರವೇ ಶರುಂ ಹಿಂಸಕಂ ರಕ್ಷಸಾಮಧಿಪತಿಂ ಹಂತವೈ ಹಂತುಂ । ಅನುಚರಾನ್ಪೂರ್ವಂ ನಾಶಯತು ಪಶ್ಚಾದೇನಮಪಿ ನಾಶಯತ್ವಿತ್ಯರ್ಥಃ ॥ ಶೄ ಹಿಂಸಾಯಾಮಿತ್ಯಸ್ಮಾಚ್ಛೄಸ್ಪೃಸ್ನಿಹೀತ್ಯಾದಿನೋಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ । ಹಂತೇಸ್ತುಮರ್ಥೇ ಸೇಸೇನಿತಿ ತವೈಪ್ರತ್ಯಯಃ । ಅಂತಶ್ಚ ತವೈ ಯುಗಪದಿತ್ಯಾದ್ಯಂತಯೋರ್ಯುಗಪದುದಾತ್ತತ್ವಂ । ಉಶಬ್ದಃ ಪೂರಕಃ ॥

॥ ಪ್ರತಿಪದಾರ್ಥ ॥

**ತಪುಮೂರ್ಧಾ**— ತಪುಮೂರ್ಧಾ ಎಂಬ ಋಷಿಯ ತಂದೆಯಾದ ಬೃಹಸ್ಪತಿಯು । **ಬ್ರಹ್ಮದ್ವಿಷಃ**— ಬ್ರಾಹ್ಮಣದ್ವೇಷಿಗಳಾದ । **ಯೇ ರಕ್ಷಸಃ**— ಯಾವ ರಾಕ್ಷಸರಿರುವರೋ ಅವರನ್ನು । **ತಪತು**— ದಹಿಸಲಿ (ಸುಟ್ಟು ನಾಶವಾಡಲಿ) । **ಶರವೇ ಉ** – ಹಿಂಸಕನಾದ ರಾಕ್ಷಸರ ಮುಖ್ಯಸ್ಥನನ್ನೂ । **ಹಂತವೈ**—ಕೊಲ್ಲುವುದಕ್ಕಾಗಿ । (**ತಪತು**— ಅವನನ್ನು ದಹಿಸಲಿ) । **ಅಶಸ್ತಿಂ**— ದುಷ್ಟನಾದ ಶತ್ರುವನ್ನು । **ಕ್ಷಿಪತ್**— ನಮ್ಮ ಬಳಿಯಿಂದ ಹೊರಟುಹೋಗುವಂತೆ ಪ್ರೇರಿಸಲಿ । **ದುರ್ಮತಿಂ** – ದುರ್ಬುದ್ಧಿಯನ್ನು । **ಅಪ ಹನ್**— ನಾಶವಾಡಲಿ । **ಅಥ**— ಅನಂತರ । **ಶಂ**— ರೋಗಶಮನವನ್ನೂ । **ಯೋಃ**— ಭಯನಿವಾರಣೆಯನ್ನೂ । **ಕರತ್**— ಮಾಡಲಿ.

॥ ಭಾವಾರ್ಥ ॥

ತಪುಮೂರ್ಧನೆಂಬ ಋಷಿಗೆ ತಂದೆಯಾದ ಬೃಹಸ್ಪತಿಯು ಬ್ರಾಹ್ಮಣದ್ವೇಷಿಗಳಾದ ರಾಕ್ಷಸರನ್ನೂ, ಹಿಂಸಕನಾದ ಅವರ ಮುಖಂಡನನ್ನೂ ದಹಿಸಿ ನಾಶಮಾಡಲಿ. ದುಷ್ಟನಾದ ಶತ್ರುವನ್ನು ನಮ್ಮ ಬಳಿಯಿಂದ ಹೊರಟುಹೋಗುವಂತೆ ಪ್ರೇರಿಸಲಿ. ಕೆಟ್ಟಬುದ್ಧಿಯನ್ನು ನಾಶಮಾಡಲಿ. ರೋಗಶಮನವನ್ನೂ ಭಯನಿವಾರಣೆಯನ್ನೂ ಮಾಡಲಿ.

## English Translation.

May Tapurmurdhan consume the Rakshasas, who are the enemies of the Brahmanas, (and then proceed) to slay (their) malignant (chief); may Brihaspati hurl down the inglorious (enemy), may be baffle the malevolent, and bestow upon the sacrificer health and prosperity.

# ನೂರ ಎಂಭತ್ತಮೂರನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅಪಶ್ಯಮಿತಿ ತೃಚಂ ದ್ವಾತ್ರಿಂಶಂ ಸೂಕ್ತಂ ತ್ರೈಷ್ಟುಭಂ । ಪ್ರಜಾಪತಿಪುತ್ರಃ ಪ್ರಜಾವಾನ್ನಾಮರ್ಷಿಃ। ಋಚಃ ಕ್ರಮೇಣ ಯಜಮಾನಪತ್ನೀಹೋತೄಣಾಮಾಶಿಷಃ ಪ್ರತಿಪಾದಿಕಾಃ । ಅತಸ್ತದ್ದೇವತಾಕಾಃ । ತಥಾ ಚಾನುಕ್ರಾಂತಂ । ಅಪಶ್ಯಂ ಪ್ರಜಾವಾನ್ಪ್ರಾಜಾಪತ್ಯೋಽನ್ತ್ಯೃಚಂ ಯಜಮಾನಪತ್ನೀಹೋತ್ರಾಶಿಷ ಇತಿ || ಪ್ರವರ್ಗ್ಯೇಽಭಿಷ್ಟವ ಏತತ್ಸೂಕ್ತಂ । ಸೂತ್ರ್ಯತೇ ಹಿ । ಅಪಶ್ಯಂ ತ್ವೇತ್ಯೇತಸ್ಯಾದ್ಯಯಾ ಯಜಮಾನಮೀಕ್ಷತೇ ದ್ವಿತೀಯಯಾ ಪತ್ನೀಂ ತೃತೀಯಯಾತ್ಮಾನಂ || ಆ. ೪-೬ । ಇತಿ ||**

ಅನುವಾದವು—**ಅಪಶ್ಯಂ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತೆರಡನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ರಜಾಪತಿಪುತ್ರನಾದ ಪ್ರಜಾವಾನ್ ಎಂಬುವನು ಋಷಿಯು , ಈ ಸೂಕ್ತದ ಮೂರು ಋಕ್ಕುಗಳಲ್ಲಿ ಕ್ರಮವಾಗಿ ಯಜಮಾನ, ಅವನ ಪತ್ನಿ, ಹೋತೃವೆಂಬ ಋತ್ವಿಕ್ಕು ಇವರುಗಳ ಪ್ರಸ್ತಾಪವಿದೆ. ಆದ್ದರಿಂದ ಆಯಾ ಋಕ್ಕುಗಳಿಗೆ ಅವರುಗಳೇ ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ — **ಅಪಶ್ಯಂ ಪ್ರಜಾವಾನ್ ಪ್ರಾಜಾಪತ್ಯೋಽನ್ತ್ಯೃಚಂ ಯಜಮಾನಪತ್ನೀಹೋತ್ರಾಶಿಷಃ** ಎಂದು ಹೇಳಿದೆ. ಪ್ರವರ್ಗ್ಯ ಎಂಬ ಇಷ್ಟಿಯ ಅಭಿಷ್ಟವದಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ— **ಅಪಶ್ಯಂ ತ್ವೇತ್ಯೇತಸ್ಯಾದ್ಯಯಾ ಯಜಮಾನಮೀಕ್ಷತೇ ದ್ವಿತೀಯಯಾ ಪತ್ನೀಂ ತೃತೀಯಯಾತ್ಮಾನಂ** ಎಂಬ ಸೂತ್ರದಿಂದ (ಆ. ೪-೬) ವಿವೃತವಾಗಿರುವುದು.

## ಸೂಕ್ತ - ೧೮೩

ಮಂಡಲ—೧೦ || ಅನುವಾಕ—೧೨ || ಸೂಕ್ತ—೧೮೩ ||
ಅಷ್ಟಕ—೮ || ಅಧ್ಯಾಯ—೮ || ವರ್ಗ—೪೧ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ||
|| ಋಷಿಃ—ಪ್ರಜಾವಾನ್ ಪ್ರಾಜಾಪತ್ಯಃ ||
|| ದೇವತಾ—ಅನ್ತ್ಯೃಚಂ ಯಜಮಾನಪತ್ನೀಹೋತ್ರಾಶಿಷಃ ||
|| ಛಂದಃ—ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಅಪಶ್ಯಂ ತ್ವಾ ಮನಸಾ ಚೇಕಿತಾನಂ ತಪಸೋ ಜಾತಂ ತಪಸೋ ವಿಭೂತಂ ।
ಇಹ ಪ್ರಜಾಮಿಹ ರಯಿಂ ರರಾಣಃ ಪ್ರ ಜಾಯಸ್ವ ಪ್ರಜಯಾ ಪುತ್ರಕಾಮ ||

|| ಪದಪಾಠಃ ||

ಅಪಶ್ಯಂ । ತ್ವಾ । ಮನಸಾ । ಚೇಕಿತಾನಂ । ತಪಸಃ । ಜಾತಂ । ತಪಸಃ । ವಿಽಭೂತಂ ।
ಇಹ । ಪ್ರಽಜಾಂ । ಇಹ । ರಯಿಂ । ರರಾಣಃ । ಪ್ರ । ಜಾಯಸ್ವ । ಪ್ರಽಜಯಾ । ಪುತ್ರಽಕಾಮ || ೧ ||

|| ಸಾಯಣಭಾಷ್ಯಂ ||

**ಹೇ ಯಜಮಾನ ತ್ವಾ ತ್ವಾಂ ಮನಸಾ ಬುದ್ಧ್ಯಾಪಶ್ಯಂ । ಅದರ್ಶಂ । ಕೀದೃಶಂ । ಚೇಕಿತಾನಂ ಕರ್ಮಾಣಿ ಭೃಶಂ ಜಾನಂತಂ ತಪಸೋ ದೀಕ್ಷಾರೂಪಾದ್ವ್ರತಾಜ್ಜಾತಂ ಪುನರುತ್ಪನ್ನಂ ಯದ್ವಾ ಜನ್ಮಾಂತರಾನುಷ್ಠಿತಾತ್ಸುಕೃತಾದುತ್ಪನ್ನಂ ತಪಸೋಽನುಷ್ಠೀಯಮಾನಾದ್ಯಜ್ಞಾದ್ಧೇತೋರ್ವಿಭೂತಂ ವ್ಯಾಪ್ತಂ ಸರ್ವತ್ರ ಪ್ರಖ್ಯಾತಂ । ಹೇ ಪುತ್ರಕಾಮ ಪುತ್ರಾನ್ಕಾಮಯಮಾನ ಸ ತ್ವಮಿಹಾಸ್ಮಿಁಲ್ಲೋಕೇ ಪ್ರಜಾಂ ಪುತ್ರಪೌತ್ರಾದಿರೂಪಾಂ ರರಾಣೋ ರಮಯನ್ ರಯಿಂ ಧನಮಿಹಾಸ್ಮಿಁಲ್ಲೋಕೇ ರಮಯನ್ ಪ್ರಜಯಾ ಪ್ರಜನನೇನ ಪ್ರ ಜಾಯಸ್ವ । ಪುತ್ರಾದಿರೂಪೇಣೋತ್ಪದ್ಯಸ್ವ । ಪ್ರಜಾ ಉತ್ಪಾದಯೇತ್ಯರ್ಥಃ ||**

|| ಪ್ರತಿಪದಾರ್ಥ ||

(ಯಜಮಾನನನ್ನು ಕುರಿತ ಪತ್ನಿಯ ವಾಕ್ಯವು. ಎಲೈ ಯಜಮಾನನೇ) **ಚೇಕಿತಾನಂ**— ಯಜ್ಞಾದಿ ಕರ್ಮಗಳನ್ನು ಚೆನ್ನಾಗಿ ತಿಳಿದವನೂ | **ತಪಸಃ**— ದೀಕ್ಷಾರೂಪವಾದ ಕರ್ಮದಿಂದ | **ಜಾತಂ**— ಪುನಃ ಉತ್ಪನ್ನನಾದವನೂ ಅಥವಾ ಜನ್ಮಾಂತರದಲ್ಲಿ ಮಾಡಿದ ಸುಕೃತದಿಂದ ಉತ್ಪನ್ನನಾದವನೂ | **ತಪಸಃ**— ಮಾಡುವ ಯಜ್ಞಾದಿ ತಪಸ್ಸಿನಿಂದ | **ವಿಭೂತಂ** ಸರ್ವತ್ರ ಪ್ರಸಿದ್ಧನಾದವನೂ ಆದ | **ತ್ವಾ**— ನಿನ್ನನ್ನು | **ಮನಸಾ**– ಬುದ್ಧಿಯಿಂದ | **ಅಪಶ್ಯಂ**— ನೋಡಿ ತಿಳಿದೆನು | **ಪುತ್ರಕಾಮ**— ಪುತ್ರರನ್ನು ಬಯಸುವ ಎಲೈ ಯಜಮಾನನೇ ನೀನು | **ಇಹ**— ಈ ಲೋಕದಲ್ಲಿ | **ಪ್ರಜಾಂ**— ಪುತ್ರಪೌತ್ರಾದಿಸಂತತಿಯನ್ನು | **ರರಾಣಃ**— (ಪಡೆದು) ಸುಖಿಸುತ್ತಾ | **ರಯಿಂ**— ಧನವನ್ನೂ ಪಡೆದು | **ಇಹ** – ಈ ಲೋಕದಲ್ಲಿ | **ಪ್ರಜಯಾ**— ಪುತ್ರರೂಪದಿಂದ (ನೀನೇ) | **ಪ್ರ ಜಾಯಸ್ವ**— ಉತ್ಪನ್ನನಾಗು (ಪುತ್ರಾದಿಗಳನ್ನು ಉತ್ಪತ್ತಿಮಾಡು)

|| ಭಾವಾರ್ಥ ||

(ಯಜಮಾನನನ್ನುದ್ದೇಶಿಸಿ ಪತ್ನಿಯ ವಾಕ್ಯವು) ಎಲೈಯಜಮಾನನೇ, ಯಜ್ಞಾದಿಕರ್ಮಗಳನ್ನು ಚೆನ್ನಾಗಿ ತಿಳಿದವನೂ, ದೀಕ್ಷಾರೂಪಕರ್ಮದಿಂದ ಪುನರುತ್ಪನ್ನನಾದವನಂತೆ ಪರಿಗಣಿತನಾದವನೂ, ಅಥವಾ ಜನ್ಮಾಂತರಸುಕೃತ ವಿಶೇಷದಿಂದ ಉತ್ಪನ್ನನಾದವನೂ ಯಜ್ಞಾದಿಕರ್ಮಗಳನ್ನು ಮಾಡಿ ಪ್ರಸಿದ್ಧನಾದವನೂ ಆದ ನಿನ್ನನ್ನು ಬುದ್ಧಿಯಿಂದ ನೋಡಿ ತಿಳಿದೆನು. ಪುತ್ರರನ್ನು ಬಯಸುವ ಎಲೈ ಯಜಮಾನನೇ, ಈ ಲೋಕದಲ್ಲಿ ಪುತ್ರಪೌತ್ರಾದಿಸಂತತಿಯನ್ನೂ ಧನವನ್ನೂ ಪಡೆದು ನೀನೇ ಪುತ್ರರೂಪದಿಂದ ಈ ಲೋಕದಲ್ಲಿ ಉತ್ಪನ್ನನಾಗು ಎಂದರೆ ಪುತ್ರರನ್ನು ಉತ್ಪತ್ತಿಮಾಡು.

## English Translation

(The wife speaks :) I beheld you in my mind conversant (with sacred rites), born of penance, renowned for penance ; enjoying in this world progeny and riches, do you who are desirous of offspring beget offspring.

|| ವಿಶೇಷವಿಷಯಗಳು ||

**ಆತ್ಮಾ ವೈ ಪುತ್ರನಾಮಾಸಿ** ಎಂಬ ಶ್ರುತಿವಾಕ್ಯದಂತೆ ತಂದೆಯೇ ತನ್ನ ಅಂಶದಿಂದ ಪುತ್ರನಾಗಿ ಜನಿಸುವನೆಂದು ಹೇಳಿದೆ. ತಂದೆಯ ರೇತಸ್ಸಿನಿಂದಲೇ ಪುತ್ರರು ಜನಿಸುವುದರಿಂದ ತಂದೆಯೇ ಪುತ್ರನಾಗಿ ಜನಿಸುವನೆಂದು ಹೇಳಲಾಗಿದೆ.

|| ಸಂಹಿತಾಪಾಠಃ ||

ಅಪಶ್ಯಂ ತ್ವಾ ಮನಸಾ ದೀಧ್ಯಾನಾಂ ಸ್ವಾಯಾಂ ತನೂ ಋತ್ವ್ಯೇ ನಾಧಮಾನಾಂ ।
ಉಪ ಮಾಮುಚ್ಚಾ ಯುವತಿರ್ಬಭೂಯಾಃ ಪ್ರ ಜಾಯಸ್ವ ಪ್ರಜಯಾ ಪುತ್ರಕಾಮೇ || ೨ ||

|| ಪದಪಾಠಃ ||

ಅಪಶ್ಯಂ । ತ್ವಾ । ಮನಸಾ । ದೀಧ್ಯಾನಾಂ । ಸ್ವಾಯಾಂ । ತನೂ ಇತಿ । ಋತ್ವ್ಯೇ । ನಾಧಮಾನಾಂ ।

ಉಪ । ಮಾಂ । ಉಚ್ಚಾ । ಯುವತಿಃ । ಬಭೂಯಾಃ । ಪ್ರ । ಜಾಯಸ್ವ । ಪ್ರಜಯಾ । ಪುತ್ರ್ಽಕಾಮೇ ||

|| ಸಾಯಣಭಾಷ್ಯಂ ||

ಹೇ ಪತ್ನಿ ದೀಧ್ಯಾನಾಂ ದೀಪ್ಯಮಾನಾಂ ಸ್ವಾಯಾಮಾತ್ಮೀಯಾಯಾಂ ತನೂ ತನ್ವಾಂ ಶರೀರ ಋತ್ವ್ಯೇ। ಋತುಕಾಲೇ ಭವಂ ಗರ್ಭಧಾರಣರೂಪಂ ಕರ್ಮರ್ತ್ವ್ಯಂ । ತಸ್ಮಿನ್ನಿಮಿತ್ತಭೂತೇ ನಾಧಮಾನಾಂ ಭರ್ತುರುಪಗಮನಂ ಯಾಚಮಾನಾಂ ತ್ವಾ ತ್ವಾಂ ಮನಸಾಪಶ್ಯಂ । ಅದ್ರಾಕ್ಷಂ । ಹೇ ಪುತ್ರಕಾಮೇ ಪುತ್ರಾನ್ಕಾಮಯಮಾನೇ ಮಾಮುಪ ಮತ್ಸಮೀಪಂ ಪ್ರಾಪ್ಯ ಸಾ ತ್ವಮುಚ್ಚೋಚ್ಚೈರ್ಭೃಶಂ ಯುವತಿಸ್ತರುಣೀ ಬಭೂಯಾಃ । ಭೂಯಾಃ ॥ ಛಂದಸ್ಯುಭಯಥೇತ್ಯಾಶೀರ್ಲಿಜಃ ಸಾರ್ವಧಾತುಕತ್ವಾಚ್ಛಪ್ । ತಸ್ಯ ಛಾಂದಸಃ ಶ್ಲುಃ । ಅಲಿಟ್ಯಪಿ ವ್ಯತ್ಯಯೇನ ಭವತೇರಃ । ಪಾ. ೭-೪-೭೩ । ಇತ್ಯಭ್ಯಾಸಸ್ಯಾತ್ವಂ ॥ ಯುವತಿಭೂತ್ವಾ ಚ ಪ್ರಜಯಾ ಪ್ರಜನೇನ ಪ್ರ ಜಾಯಸ್ವ । ಪುತ್ರಾನ್ಪ್ರಸೂಷ್ವ ॥ ಜನೀ ಪ್ರಾದುರ್ಭಾವೇ । ಶ್ಯನಿ ಜ್ಞಾಜನೋರ್ಜೇತಿ ಜಾದೇಶಃ ॥

|| ಪ್ರತಿಪದಾರ್ಥ ||

(ಎಲೈ ಪತ್ನಿಯೇ) **ದೀಧ್ಯಾನಾಂ**—ಯೌವನದಿಂದ ಪ್ರಕಾಶಮಾನವಾದ) **ಸ್ವಾಯಾಂ**—ನಿನ್ನ । **ತನೂ**—ಶರೀರವು । **ಋತ್ವ್ಯೇ**—ಋತುಸ್ನಾನಾನಂತರ ಪತಿಯ ಸಮಾಗಮಕ್ಕೆ ಸಿದ್ಧವಾಗಿರುವಾಗ । **ನಾಧಮಾನಾಂ**—ಪತಿಯಸಂಗವನ್ನು ಪೇಕ್ಷಿಸುವ । **ತ್ವಾ**—ನಿನ್ನನ್ನು । **ಮನಸಾ**—ಮನಸ್ಸಿನಿಂದ ತಿಳಿದು । **ಅಪಶ್ಯಂ**—ನೋಡಿದೆನು । **ಪುತ್ರಕಾಮೇ**—ಪುತ್ರರಾಗಬೇಕೆಂದು ಬಯಸುವ ಎಲೈ ಪತ್ನಿಯೇ । **ಮಾಂ**—ನನ್ನನ್ನು । **ಉಪ**—ಸಮೀಪಿಸಿರುವ ನೀನು । **ಉಚ್ಚಾ ಯುವತಿಃ**—ಅತ್ಯಂತ ಯುವತಿ (ತರುಣಿ) ಯಾಗಿ । **ಬಭೂಯಾಃ**—ಇದ್ದೀಯೆ (ಆದ್ದರಿಂದ) । **ಪ್ರಜಯಾ**—ಉತ್ಪಾದನದಿಂದ (ಹೆರಿಗೆಯಿಂದ) । **ಪ್ರ ಜಾಯಸ್ವ**—ಪುತ್ರರನ್ನು ಪ್ರಸವಿಸು.

॥ ಭಾವಾರ್ಥ ॥

(ಯಜಮಾನನ ವಾಕ್ಯವು) ಎಲೈ ಪತ್ನಿಯೇ, ಯೌವನದಿಂದ ಬೆಳಗುತ್ತಿರುವ ಈ ನಿನ್ನ ಶರೀರವು ಋತುಸ್ನಾನಾನಂತರ ಪತಿಯ ಸಂಗವನ್ನು ಬಯಸುವುದು. ಇಂತಹ ನಿನ್ನನ್ನು ನಾನು ಮನಸ್ಸಿನಿಂದ ತಿಳಿದು ನೋಡಿದ್ದೇನೆ. ಪುತ್ರರಾಗಬೇಕೆಂದು ಬಯಸುವ ಎಲೈ ಪತ್ನಿಯೇ, ನನ್ನನ್ನು ಪುತ್ರಾಪೇಕ್ಷೆಯಿಂದ ಸಮೀಪಿಸಿರುವ ನೀನು ಅತ್ಯಂತ ಯುವತಿಯಾಗಿ ತಾರುಣ್ಯದಿಂದ ಬೆಳಗುತ್ತಿರುವೆ. ಆದ್ದರಿಂದ ನೀನು ಪುತ್ರರನ್ನು ಉತ್ಪನ್ನಮಾಡು (ಪ್ರಸವಿಸು).

English Translation

(The yajamana speaks:) I beheld you in my mind radiant (with beauty), beseeching (your husband's approach) to your body at due season; may you, who are youthful, come up to me; bear offspring, you who are desirous of offspring.

॥ ಸಂಹಿತಾಪಾಠಃ ॥

ಅಹಂ ಗರ್ಭಮದಧಾಮೋಷಧೀಷ್ವಹಂ ವಿಶ್ವೇಷು ಭುವನೇಷ್ವಂತಃ ।
ಅಹಂ ಪ್ರಜಾ ಅಜನಯಂ ಪೃಥಿವ್ಯಾಮಹಂ ಜನಿಭ್ಯೋ ಅಪರೀಷು ಪುತ್ರಾನ್॥

॥ ಪದಪಾಠಃ ॥

ಅಹಂ । ಗರ್ಭಂ । ಅದಧಾಂ । ಓಷಧೀಷು । ಅಹಂ । ವಿಶ್ವೇಷು । ಭುವನೇಷು । ಅಂತರಿತಿ ।
ಅಹಂ । ಪ್ರಽಜಾಃ । ಅಜನಯಂ । ಪೃಥಿವ್ಯಾಂ । ಅಹಂ । ಜನಿಽಭ್ಯಃ । ಅಪರೀಷು । ಪುತ್ರಾನ್ ॥ ೩ ॥

॥ ಸಾಯಣಭಾಷ್ಯಂ ॥

**ಅಹಂ ಹೋತೌಷಧೀಷು ಶಾಲ್ಯಾದಿಷು ಫಲಾರ್ಥಂ ಗರ್ಭಮದಧಾಂ । ಧಾರಯಾಮಿ । ವಿಶ್ವೇಷು ಸರ್ವೇಷ್ವನ್ಯೇಷ್ವಪಿ ಭುವನೇಷು ಭೂತಜಾತೇಷ್ವಂತರ್ಮಧ್ಯೇಽಹಮೇವ ಗರ್ಭಂ ಧಾರಯಾಮಿ । ತಥಾ ಪೃಥಿವ್ಯಾಂ ಭೂಮ್ಯಾಂ ಪ್ರಜಾಃ ಸರ್ವಾನ್ಮನುಷ್ಯಾನಹಮಜನಯಂ । ಜನಯಾಮಿ । ಜನಿಭ್ಯೋ ಜಾಯಾಭ್ಯೋಽಪರೀಷ್ವನ್ಯಾಸ್ವಪಿ ಸ್ತ್ರೀಷು ಪುತ್ರಾನಹಮಜನಯಂ । ಜನಯಾಮಿ । ಮತ್ಸಾಧ್ಯೇನ ಯಾಗೇನ ಸರ್ವಸ್ಯೋತ್ಪತ್ತೇರಹಂ ಸರ್ವಜನಹೇತುರ್ಭವಾಮೀತ್ಯರ್ಥಃ ॥**

॥ ಪ್ರತಿಪದಾರ್ಥ ॥

(ಹೋತೃವಿನ ವಾಕ್ಯವು) **ಅಹಂ**— ಹೋತೃವೆಂಬ ಋತ್ವಿಜನಾದ ನಾನು । **ಓಷಧೀಷು**— ವನಸ್ಪತಿಮೊದಲಾದ ಲತಾವೃಕ್ಷಾದಿಗಳಲ್ಲಿ ಫಲಾರ್ಥವಾಗಿ । **ಗರ್ಭಂ**— ಗರ್ಭವನ್ನು । **ಅದಧಾಂ**—ಧರಿಸುವಂತೆ ಮಾಡುತ್ತೇನೆ ।

**ವಿಶ್ವೇಷು**—ಸಮಸ್ತವಾದ | **ಭುವನೇಷು ಅಂತಃ**—ಪ್ರಾಣಿಗಳ ಶರೀರಗಳಲ್ಲಿಯೂ | **ಅಹಂ**—ನಾನೇ ಗರ್ಭ ಧಾರಣೆಯನ್ನುಂಟುಮಾಡುತ್ತೇನೆ (ಹಾಗೆಯೇ) | **ಪೃಥಿವ್ಯಾಂ**—ಭೂಮಿಯಲ್ಲಿ | **ಪ್ರಜಾಃ**—ಸಮಸ್ತ ಮನುಷ್ಯರನ್ನೂ | **ಅಹಂ**—ನಾನು | **ಅಜನಯಂ**—ಉತ್ಪತ್ತಿಯಾಗುವಂತೆ ಮಾಡುತ್ತೇನೆ | **ಜನಿಭ್ಯಃ**—ಪತ್ನಿಯರಲ್ಲದೆ | **ಅಪರೀಷು**—ಇತರ ಸ್ತ್ರೀಯರಲ್ಲಿಯೂ | **ಪುತ್ರಾನ್**—ಪುತ್ರರನ್ನು | **ಅಹಂ**—ನಾನು ಉತ್ಪನ್ನಮಾಡುತ್ತೇನೆ.

|| ಭಾವಾರ್ಥ ||

(ಹೋತೃವಿನ ವಾಕ್ಯವು) ಹೋತೃವೆಂಬ ಋತ್ವಿಜನಾದ ನಾನು ಓಷಧ್ಯಾದಿ ವನಸ್ಪತಿಗಳಲ್ಲಿ (ಲತಾ ವೃಕ್ಷಾದಿಗಳಲ್ಲಿ) ಫಲಬಿಡುವುದಕ್ಕಾಗಿ ಗರ್ಭವನ್ನು ಧರಿಸುವಂತೆ ಮಾಡುತ್ತೇನೆ. ಸಮಸ್ತ ಪ್ರಾಣಿಗಳ ಶರೀರಮಧ್ಯದಲ್ಲಿಯೂ ನಾನೇ ಗರ್ಭಧಾರಣೆಯಾಗುವಂತೆ ಮಾಡುತ್ತೇನೆ. ಭೂಮಿಯಲ್ಲಿ ಸಮಸ್ತಮನುಷ್ಯರನ್ನೂ ಉತ್ಪತ್ತಿಯಾಗುವಂತೆ ಮಾಡುತ್ತೇನೆ. ಪತ್ನಿಯರಲ್ಲದ ಇತರ ಸ್ತ್ರೀಯರಲ್ಲಿಯೂ ಸಹ ಪುತ್ರರು ಜನಿಸುವಂತೆ ಮಾಡುತ್ತೇನೆ.

English Translation

(The hotri speaks :) I implant the seed in vegetables, the germ in all living beings ; I engender progeny upon the earth ; I beget children on other women.

|| ವಿಶೇಷವಿಷಯಗಳು ||

ಹೋತೃವೆಂಬ ಋತ್ವಿಜನು ಈ ರೀತಿ ಹೇಳುತ್ತಾನೆ—ನಾನು ನನ್ನ ಮಂತ್ರಸಾಮರ್ಥ್ಯದಿಂದ ಸಸ್ಯವರ್ಗವೂ ವೃಕ್ಷಾದಿಗಳೂ ಫಲವನ್ನು ಬಿಡುವಂತೆ ಮಾಡುತ್ತೇನೆ. ಸಮಸ್ತ ಪ್ರಾಣಿಗಳ ಶರೀರಗಳ ಮಧ್ಯದಲ್ಲಿಯೂ ಗರ್ಭಧಾರಣೆಯಾಗುವಂತೆ ಮಾಡುತ್ತೇನೆ ಭೂಮಿಯಲ್ಲಿ ಮನುಷ್ಯರು ಉತ್ಪತ್ತಿಯಾಗುವುದಕ್ಕಾಗಿ ಪತ್ನಿಯರಲ್ಲಿಯೂ ಪತ್ನಿಯರಲ್ಲದ ಇತರ ಸ್ತ್ರೀಯರಲ್ಲಿಯೂ ಗರ್ಭಧಾರಣೆಯಾಗುವಂತೆ ಮಾಡುತ್ತೇನೆ



## ನೂರ ಎಂಭತ್ತನಾಲ್ಕನೆಯ ಸೂಕ್ತವು

|| ಸಾಯಣಭಾಷ್ಯಂ ||

**ವಿಷ್ಣುರಿತಿ ತೃಚಂ ತ್ರಯಸ್ತ್ರಿಂಶಂ ಸೂಕ್ತಮಾನುಷ್ಟುಭಂ | ಗರ್ಭಾಣಾಂ ತ್ವಷ್ಟಾ ನಾಮರ್ಷಿಃ ಪ್ರಜಾಪತಿಪುತ್ರೋ ವಿಷ್ಣುರ್ವಾ | ಲಿಂಗೋಕ್ತಾ ವಿಷ್ಣುತ್ವಷ್ಟೃಪ್ರಜಾಪತಿಸಿನೀವಾಲೀಸರಸ್ವತ್ಯಶ್ವಿನ ಇತಿ ದೇವತಾಃ | ತಥಾ ಚಾನುಕ್ರಾಂತಂ | ವಿಷ್ಣುಸ್ತ್ವಷ್ಟಾ ಗರ್ಭಕರ್ತಾ ವಿಷ್ಣುರ್ವಾ ಪ್ರಾಜಾಪತ್ಯೋ ಗರ್ಭಾರ್ಥಾಶೀರ್ಲಿಂಗೋಕ್ತದೈವತಮಾನುಷ್ಟುಭಮಿತಿ || ಲೈಂಗಿಕೋ ವಿನಿಯೋಗಃ ||**

ಅನುವಾದವು—**ವಿಷ್ಣುಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತಮೂರನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗರ್ಭಗಳ ನಿರ್ಮಾತೃವಾದ ತ್ವಷ್ಟಾ ಎಂಬ ದೇವನು

ಋಷಿಯು ಅಥವಾ ಪ್ರಜಾಪತಿಪುತ್ರನಾದ ವಿಷ್ಣುವು ಋಷಿಯು. ಋಕ್ಕುಗಳಲ್ಲಿ ಹೇಳಿರುವ ಲಿಂಗೋಕ್ತದೇವತೆಗಳು ಎಂದರೆ ವಿಷ್ಣು, ತ್ವಷ್ಟಾ, ಪ್ರಜಾಪತಿ, ಸಿನೀವಾಲಿ, ಸರಸ್ವತಿ, ಅಶ್ವಿನೀದೇವತೆಗಳು ಎಂಬುವರು ದೇವತೆಗಳು—ಅನುಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ವಿಷ್ಣುಸ್ತ್ವಷ್ಟಾ ಗರ್ಭಕರ್ತಾ ವಿಷ್ಣುರ್ವಾ ಪ್ರಾಜಾಪತ್ಯೋ ಗರ್ಭಾರ್ಥಾಶೀರ್ಲಿಂಗೋಕ್ತದೈವತಮಾನುಷ್ಟುಭಂ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು

## ಸೂಕ್ತ—೧೮೪

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೮೪ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೪೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—ತ್ವಷ್ಟಾ ಗರ್ಭಕರ್ತಾ ವಿಷ್ಣುರ್ವಾ ಪ್ರಾಜಾಪತ್ಯಃ ॥
॥ ದೇವತಾ—ಲಿಂಗೋಕ್ತದೇವತಾಃ (ವಿಷ್ಣುತ್ವಷ್ಟೃಪ್ರಜಾಪತಿಸಿನೀವಾಲೀಸರಸ್ವತ್ಯಶ್ವಿನಃ) ಗರ್ಭಾರ್ಥಾಶೀಃ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾ ರೂಪಾಣಿ ಪಿಂಶತು ।
ಆ ಸಿಂಚತು ಪ್ರಜಾಪತಿರ್ಧಾತಾ ಗರ್ಭಂ ದಧಾತು ತೇ ॥ ೧ ॥

॥ ಪದಪಾಠಃ ॥

ವಿಷ್ಣುಃ । ಯೋನಿಂ । ಕಲ್ಪಯತು । ತ್ವಷ್ಟಾ । ರೂಪಾಣಿ । ಪಿಂಶತು ।
ಆ । ಸಿಂಚತು । ಪ್ರಜಾಽಪತಿಃ । ಧಾತಾ । ಗರ್ಭಂ । ದಧಾತು । ತೇ ॥ ೧ ॥

॥ ಸಾಯಣಭಾಷ್ಯಂ ॥

ವಿಷ್ಣುರ್ವ್ಯಾಪಕೋ ದೇವೋ ಯೋನಿಂ ಗರ್ಭಾಧಾನಸ್ಥಾನಂ ಕಲ್ಪಯತು । ಕರೋತು । ತ್ವಷ್ಟಾ ತನುಕರ್ತೃತತ್ಸಂಜ್ಞಕೋ ದೇವಶ್ಚ ರೂಪಾಣಿ ನಿರೂಪಕಾಣಿ ಸ್ತ್ರೀತ್ವಪುಂಸ್ತ್ವಾಭಿವ್ಯಂಜಕಾನಿ ಚಿಹ್ನಾನಿ ಪಿಂಶತು । ಅವಯವೀಕರೋತು ॥ ಪಿಶ ಅವಯವೇ । ಮುಚಾದಿತ್ವಾನ್ನುಮ್ ॥ ಏವಂ ಪ್ರಕ್ಲೃಪ್ತಾಯಾಂ ಯೋನ್ಯಾಂ ಪ್ರಜಾಪತೀ ರೇತ ಆ ಸಿಂಚತು । ನಿಷಿಂಚತು । ಸೃಜತ್ವಿತ್ಯರ್ಥಃ । ಧಾತಾ ಧಾರಕೋ ದೇವೋ ಹೇ ಜಾಯೇ ತೇ ತವ ಗರ್ಭಂ ಗರ್ಭರೂಪೇಣ ಪರಿಣತಂ ತದ್ರೇತೋ ದಧಾತು । ತತ್ರೈವ ಧಾರಯತು । ಗರ್ಭಪಾತಾಪಪ್ರಸವಾ ಮಾ ಭೂವನ್ನಿತ್ಯರ್ಥಃ ॥

|| ಪ್ರತಿಪದಾರ್ಥ ||

**ವಿಷ್ಣುಃ**—ಸರ್ವತ್ರ ವ್ಯಾಪಕನಾದ ವಿಷ್ಣುವೆಂಬ ದೇವನು | **ಯೋನಿಂ**—ಗರ್ಭಾಧಾನಸ್ಥಾನವಾದ (ಸ್ತ್ರೀ) ಯೋನಿಪ್ರದೇಶವನ್ನು | **ಕಲ್ಪಯತು**—ಉಂಟುಮಾಡಲಿ (ನಿರ್ಮಿಸಲಿ) | **ತ್ವಷ್ಟಾ**—ತ್ವಷ್ಟೃವೆಂಬ ದೇವನು | **ರೂಪಾಣಿ**—ಸ್ತ್ರೀಪುಂಸ್ತ್ವರೂಪಗಳನ್ನು ವ್ಯಕ್ತಪಡಿಸುವ ಚಿಹ್ನೆಗಳನ್ನು | **ಪಿಂಶತು**—ಆಯಾ ಅವಯವಗಳಿಂದ ವ್ಯಕ್ತಪಡಿಸಲಿ ಇಂತಹ ಸ್ತ್ರೀಯೋನಿಯಲ್ಲಿ | **ಪ್ರಜಾಪತಿಃ**—ಪ್ರಜಾಪತಿದೇವನು (ಸೃಷ್ಟಿಕರ್ತನು) | **ಆ ಸಿಂಚತು**—ರೇತಸ್ಸನ್ನು (ವೀರ್ಯವನ್ನು) ಸೇಕಿಸಲಿ | (ಎಲೈ ಪತ್ನಿಯೇ) | **ಧಾತಾ**—ಸರ್ವವನ್ನು ಧರಿಸಿ ಪೋಷಿಸುವ ಧಾತೃವೆಂಬ ದೇವನು | **ತೇ**—ನಿನ್ನ | **ಗರ್ಭಂ**—ಗರ್ಭರೂಪವಾಗಿ ಪರಿಣಮಿಸಿದ ಆ ರೇತಸ್ಸನ್ನು | **ದಧಾತು**—ಅಲ್ಲಿಯೇ ನೆಲಸಿರುವಂತೆ ಮಾಡಲಿ.

|| ಭಾವಾರ್ಥ ||

ಸರ್ವವ್ಯಾಪಕನಾದ ವಿಷ್ಣುವು ಗರ್ಭಾಧಾನಸ್ಥಾನವಾದ ಸ್ತ್ರೀಯೋನಿಯನ್ನು ನಿರ್ಮಿಸಲಿ ತ್ವಷ್ಟೃದೇವನು ಸ್ತ್ರೀಪುರುಷಯೋಗ್ಯವಾದ ಚಿಹ್ನೆಗಳಿಂದ ಯುಕ್ತವಾದ ರೂಪಗಳನ್ನು ಎಂದರೆ ಸ್ತ್ರೀಪುರುಷಾವಯವಗಳನ್ನು ಉಂಟು ಮಾಡಲಿ. ಪ್ರಜಾಪತಿಯು ಆ ಸ್ತ್ರೀಯೋನಿಯಲ್ಲಿ ರೇತಸ್ಸನ್ನು ವಿಸೃಜಿಸಲಿ (ಸೇಕಿಸಲಿ). ಎಲೈ ಪತ್ನಿಯೇ, ಸರ್ವವನ್ನು ಧರಿಸಿ ಪೋಷಿಸುವ ಧಾತೃದೇವನು ನಿನ್ನ ಗರ್ಭರೂಪವಾಗಿ ಪರಿಣಮಿಸಿದ ಆ ರೇತಸ್ಸನ್ನು ಅಲ್ಲಿಯೇ ನೆಲಸಿರುವಂತೆ ಮಾಡಲಿ (ಧರಿಸಲಿ)

English Translation

May Vishnu construct the womb, may Twastri fabricate the members, may Prajapati sprinkle (the seed), may Dratri cherish your embryo.

|| ಸಂಹಿತಾಪಾಠಃ ||

ಗರ್ಭಂ ಧೇಹಿ ಸಿನೀವಾಲಿ ಗರ್ಭಂ ಧೇಹಿ ಸರಸ್ವತಿ |

ಗರ್ಭಂ ತೇ ಅಶ್ವಿನಾ ದೇವಾವಾ ಧತ್ತಾಂ ಪುಷ್ಕರಸ್ರಜಾ || ೨ ||

|| ಪದಪಾಠಃ ||

ಗರ್ಭಂ | ಧೇಹಿ | ಸಿನೀವಾಲಿ | ಗರ್ಭಂ | ಧೇಹಿ | ಸರಸ್ವತಿ |

ಗರ್ಭಂ | ತೇ | ಅಶ್ವಿನಾ | ದೇವಾ | ಆ | ಧತ್ತಾಂ | ಪುಷ್ಕರऽಸ್ರಜಾ || ೨ ||

|| ಸಾಯಣಭಾಷ್ಯಂ ||

**ಹೇ ಸಿನೀವಾಲ್ಯೇತತ್ಸಂಜ್ಞೇ ದೇವಿ ಗರ್ಭಂ ಧೇಹಿ | ನಿಷಿಕ್ತಂ ಗರ್ಭಂ ಧಾರಯ | ಹೇ ಸರಸ್ವತಿ ತ್ವಂ ಚ ನಿಷಿಕ್ತಂ ಗರ್ಭಂ ಧಾರಯ | ಹೇ ಜಾಯೇ ಪುಷ್ಕರಸ್ರಜಾ ಪುಷ್ಕರಮಾಲಿನೌ ಸ್ವರ್ಣಕಮಲಾಭರಣಾವಶ್ವಿನೌ ದೇವೌ ತೇ ತವ ಗರ್ಭಮಾ ಧತ್ತಾಂ | ಪ್ರಕ್ಷಿಪತಾಂ | ಕುರುತಾಮಿತ್ಯರ್ಥಃ ||**

|| ಪ್ರತಿಪದಾರ್ಥ ||

**ಸಿನೀವಾಲಿ**—ಎಲೈ ಸಿನೀವಾಲಿ ಎಂಬ ದೇವತೆಯೇ | **ಗರ್ಭಂ**—ಸ್ತ್ರೀಯೋನಿಯಲ್ಲಿರುವ ಗರ್ಭವನ್ನು | **ಧೇಹಿ**—ಧರಿಸು ಎಂದರೆ ಗರ್ಭಸ್ರಾವಾದಿಗಳಿಂದ ಸ್ತ್ರೀಯ ಗರ್ಭವು ಗರ್ಭಪಾತವಾಗದಂತೆ ಗರ್ಭವು ಸ್ತ್ರೀಯ ಉದರದಲ್ಲಿಯೇ ಬೆಳೆಯುತ್ತಾ ನೆಲೆಸಿರುವಂತೆ ಮಾಡು | **ಸರಸ್ವತಿ**—ಎಲೈ ಸರಸ್ವತಿಯೇ, ನೀನು ಸಹ | **ಗರ್ಭಂ**—ಸ್ತ್ರೀಯ ಗರ್ಭವನ್ನು | **ಧೇಹಿ**—ಧರಿಸುವಂತೆ ಮಾಡು (ಎಲೈ ಪತ್ನಿಯೇ) | **ಪುಷ್ಕರಸ್ರಜಾ**—ಸ್ವರ್ಣಕಮಲ ಹಾರಗಳಿಂದ ಅಲಂಕೃತರಾದ | **ಅಶ್ವಿನಾ ದೇವಾ**—ಅಶ್ವಿನೀದೇವತೆಗಳು | **ತೇ**—ನಿನ್ನ | **ಗರ್ಭಂ**—ಗರ್ಭವನ್ನು | **ಆ ಧತ್ತಾಂ**—ಧರಿಸಿರುವಂತೆ ಮಾಡಲಿ (ಗರ್ಭವನ್ನು ರಕ್ಷಿಸಲಿ)

|| ಭಾವಾರ್ಥ ||

ಎಲೈ ಸಿನೀವಾಲಿ ಎಂಬ ದೇವತೆಯೇ, ಎಲೈ ಸರಸ್ವತಿಯೇ, ನೀವು ಈ ಸ್ತ್ರೀಯ ಗರ್ಭವನ್ನು ಧರಿಸುವಂತೆ ಮಾಡಿ ಅದನ್ನು ರಕ್ಷಿಸಿರಿ. ಎಲೈ ಪತ್ನಿಯೇ, ಸ್ವರ್ಣಕಮಲಹಾರಗಳಿಂದ ಭೂಷಿತರಾದ ಅಶ್ವಿನೀದೇವತೆಗಳೂ ಸಹ ನಿನ್ನ ಗರ್ಭವನ್ನು ಧರಿಸಿ ರಕ್ಷಿಸಲಿ.

English Translation

Sustain the embryo, Sinivali, sustain the embryo, Saraswati, may the divine Aswins, garlanded with lotuses, sustain your embryo.

|| ಸಂಹಿತಾಪಾಠಃ ||

ಹಿರಣ್ಯಯೀ ಅರಣೀ ಯಂ ನಿರ್ಮಂಥತೋ ಅಶ್ವಿನಾ |
ತಂ ತೇ ಗರ್ಭಂ ಹವಾಮಹೇ ದಶಮೇ ಮಾಸಿ ಸೂತವೇ || ೩ ||

|| ಪದಪಾಠಃ ||

ಹಿರಣ್ಯಯೀ ಇತಿ | ಅರಣೀ ಇತಿ | ಯಂ | ನಿಃऽಮಂಥತಃ | ಅಶ್ವಿನಾ |
ತಂ | ತೇ | ಗರ್ಭಂ | ಹವಾಮಹೇ | ದಶಮೇ | ಮಾಸಿ | ಸೂತವೇ || ೩ ||

|| ಸಾಯಣಭಾಷ್ಯಂ ||

ಹಿರಣ್ಮಯೀ ಹಿರಣ್ಮಯ್ಯಾವರಣೀ ಯಂ ಗರ್ಭಮುದ್ದಿಶ್ಯಾಶ್ವಿನಾಶ್ವಿನೌ ದೇವೌ ನಿರ್ಮಂಥತಃ ನಿರ್ಮಥಿತವಂತೌ ಹೇ ಜಾಯೇ ತೇ ತುಭ್ಯಂ ತ್ವದರ್ಥಂ ತಂ ಗರ್ಭಂ ಹವಾಮಹೇ | ಆಹ್ವಯಾಮಹೇ | ದಶಮೇ ಮಾಸಿ ಸೂತವೇ ಪ್ರಸೋತುಂ || ಪದ್ದನ್ನಿತ್ಯಾದಿನಾ ಮಾಸಶಬ್ದಸ್ಯ ಮಾಸ್ಭಾವಃ | ಸೂತೇಸ್ತು-ಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ ||

॥ ಪ್ರತಿಪದಾರ್ಥ ॥

(ಎಲೈ ಸ್ತ್ರೀಯೆ) **ಅಶ್ವಿನಾ**— ಅಶ್ವಿನೀದೇವತೆಗಳು । **ಹಿರಣ್ಯಯೀ**— ಹಿರಣ್ಮಯವಾದ । **ಅರಣೀ**— ಅರಣಿಗಳನ್ನು । **ಯಂ**— ಯಾವ ಗರ್ಭವನ್ನು ದೇಶಿಸಿ । **ನಿರ್ಮಂಥತಃ**— ಕಡೆದರೋ । **ತಂ**— ಅಂತಹ । **ತೇ**— ನಿನ್ನ । **ಗರ್ಭಂ**— ಗರ್ಭವನ್ನು । **ದಶಮೇ ಮಾಸಿ**— ಹತ್ತನೆಯ ತಿಂಗಳಲ್ಲಿ । **ಸೂತವೇ**— ಪ್ರಸವಾರ್ಥವಾಗಿ । **ಹವಾಮಹೇ**— ಅಪೇಕ್ಷಿಸಿ ಆಹ್ವಾನಿಸುತ್ತೇವೆ.

॥ ಭಾವಾರ್ಥ ॥

ಎಲೈ ಸ್ತ್ರೀಯೆ, ಅಶ್ವಿನೀದೇವತೆಗಳು ಯಾವ ಗರ್ಭಾರ್ಥವಾಗಿ ಸುವರ್ಣಮಯವಾದ ಅರಣಿಗಳನ್ನು ಕಡೆದರೋ ಅಂತಹ ನಿನ್ನ ಗರ್ಭವನ್ನು ಹತ್ತನೆಯ ತಿಂಗಳಲ್ಲಿ ಪ್ರಸವಾರ್ಥವಾಗಿ ಅಪೇಕ್ಷಿಸಿ ಕರೆಯುತ್ತೇವೆ.

## English Translation.

We invoke your embryo which the Ashwins have churned with the golden pieces of touchwood, that you may bring it forth in the tenth month.

॥ ವಿಶೇಷವಿಷಯಗಳು ॥

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಖಿಲಮಂತ್ರಗಳು—

ತ್ವಷ್ಟಾ ರೂಪಕರ್ತಾ । ವಿಷ್ಣುಃ । ಅನುಷ್ಟುಪ್ ॥

**ನೇಜಮೇಷ ಪರಾಪತ ಸುಪುತ್ರಃ ಪುನರಾ ಪತ ।**
**ಅಸ್ಯೈ ಮೇ ಪುತ್ರಕಾಮಾಯೈ ಗರ್ಭಮಾ ಧೇಹಿ ಯಃ ಪುಮಾನ್** ॥ ೧ ॥

**ಯಥೇಯಂ ಪೃಥಿವೀ ಮಹ್ಯುತ್ತಾನಾ ಗರ್ಭಮಾದಧೇ ।**
**ಏವಂ ತಂ ಗರ್ಭಮಾ ಧೇಹಿ ದಶಮೇ ಮಾಸಿ ಸೂತವೇ** ॥ ೨ ॥

**ವಿಷ್ಣೋಃ ಶ್ರೇಷ್ಠೇನ ರೂಪೇಣಾಸ್ಯಾಂ ನಾರ್ಯಾಂ ಗವೀನ್ಯಾಂ ।**
**ಪುಮಾಂಸಂ ಪುತ್ರಾನಾ ಧೇಹಿ ದಶಮೇ ಮಾಸಿ ಸೂತವೇ** ॥ ೩ ॥

## ನೂರ ಎಂಭತ್ತೈದನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಮಹೀತಿ ತೃಚಂ ಚತುಸ್ತ್ರಿಂಶಂ ಸೂಕ್ತಂ ವರುಣಪುತ್ರಸ್ಯ ಸತ್ಯಧೃತೇರಾರ್ಷಂ ಗಾಯತ್ರಮಾದಿತ್ಯದೇವತಾಕಂ । ತಥಾ ಚಾನುಕ್ರಾಂತಂ । ಮಹಿ ಸತ್ಯಧೃತಿರ್ವಾರುಣಿರಾದಿತ್ಯಂ ಸ್ವಸ್ತ್ಯಯನಂ ಗಾಯತ್ರಂ ವಾ ಇತಿ ॥ ಧನಲಿಪ್ಸಯಾ ಪ್ರವಸಂತಂ ಶಿಷ್ಯಮಾಚಾರ್ಯೋಽನೇನ ಸೂಕ್ತೇನಾಭಿಮಂತ್ರಯತೇ ।

**ಸೂತ್ರ್ಯತೇ ಹಿ । ಮಹಿ ತ್ರೀಣಾಮಿತ್ಯನುಮಂತ್ರ್ಯೈವಮತಿಸೃಷ್ಟಸ್ಯ ನ ಕುತಶ್ಚಿದ್ಭಯಂ ಭವತೀತಿ ವಿಜ್ಞಾಯತೇ । ಆ. ಗೃ. ೧೦-೭-೮ । ಇತಿ ॥**

ಅನುವಾದವು— **ಮಹಿ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತನಾಲ್ಕನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು, ಈ ಸೂಕ್ತಕ್ಕೆ ವರುಣಪುತ್ರನಾದ ಸತ್ಯಧೃತಿ ಎಂಬುವನು ಋಷಿಯು; ಆದಿತ್ಯನು ದೇವತೆಯು, ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ಮಹಿ ಸತ್ಯಧೃತಿರ್ವಾರುಣಿರಾದಿತ್ಯಂ ಸ್ವಸ್ತ್ಯಯನಂ ಗಾಯತ್ರಂ ವಾ** ಎಂದು ಹೇಳಿರುವುದು. ಧನಾಭಿಲಾಷೆಯಿಂದ ಕೂಡಿರುವ ಶಿಷ್ಯನ ಸ್ವಸ್ತ್ಯರ್ಥವಾಗಿ ಗುರುವು ಶಿಷ್ಯನನ್ನು ಈ ಸೂಕ್ತದಿಂದ ಅಭಿಮಂತ್ರಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ— **ಮಹಿ ತ್ರೀಣಾಮಿತ್ರ ನುಮಂತ್ರ್ಯೈವಮತಿಸೃಷ್ಟಸ್ಯ ನ ಕುತಶ್ಚಿದ್ಭಯಂ ಭವತೀತಿ ವಿಜ್ಞಾಯತೇ** ಎಂಬ ಸೂತ್ರದಿಂದ (ಆ ಗೃ. ३-೧೦-೭, ೮) ವಿವೃತವಾಗಿರುವುದು.

## ಸೂಕ್ತ - ೧೮೫

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೮೫ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೪೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೩ ॥
॥ ಋಷಿಃ—ಸತ್ಯಧೃತಿರ್ವಾರುಣಿಃ ॥
॥ ದೇವತಾ—ಆದಿತ್ಯಃ (ಸ್ವಸ್ತ್ಯಯನಂ) ॥
॥ ಛಂದಃ— ಗಾಯತ್ರೀ ॥

॥ ಸಂಹಿತಾಪಾಠಃ ॥

ಮಹಿ ತ್ರೀಣಾಮವೋಽಸ್ತು ದ್ಯುಕ್ಷಂ ಮಿತ್ರಸ್ಯಾರ್ಯಮ್ಣಃ ।
ದುರಾಧರ್ಷಂ ವರುಣಸ್ಯ ॥ ೧ ॥

॥ ಪದಪಾಠಃ ॥

ಮಹಿ । ತ್ರೀಣಾಂ । ಅವಃ । ಅಸ್ತು । ದ್ಯುಕ್ಷಂ । ಮಿತ್ರಸ್ಯ । ಅರ್ಯಮ್ಣಃ ।
ದುಃಽಆಧರ್ಷಂ । ವರುಣಸ್ಯ ॥ ೧ ॥

॥ ಸಾಯಣಭಾಷ್ಯಂ ॥

**ತ್ರೀಣಾಂ ತ್ರಯಾಣಾಂ ಮಿತ್ರಸ್ಯಾರ್ಯಮ್ಣೋ ವರುಣಸ್ಯ ಚ ದ್ಯುಕ್ಷಂ ದೀಪ್ತಂ ಅತ ಏವ ದುರಾಧರ್ಷಮನ್ಯೈರ್ಧರ್ಷಿತುಂ ಬಾಧಿತುಮಶಕ್ಯಂ ಮಹಿ ಮಹದವೋ ರಕ್ಷಣಮಸ್ಮಾಕಮಸ್ತು । ತ್ರೀಣಾಮಿತ್ಯಪಿ ಛಂದಸಿ ದೃಶ್ಯತ ಇತಿ ವಚನಾತ್ । ಕಾ. ೭-೧-೫೩-೧ । ತ್ರಯಾದೇಶಾಭಾವಃ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಮಿತ್ರಸ್ಯ**—ಮಿತ್ರನ। **ಅರ್ಯಮ್ಣಃ**—ಅರ್ಯಮನೆಂಬ ದೇವನ। **ವರುಣಸ್ಯ**—ವರುಣನ। **ತ್ರೀಣಾಂ**—ಈ ಮೂವರು ದೇವತೆಗಳ। **ದ್ಯುಕ್ಷಂ**—ಬೆಳಗುತ್ತಿರುವ। **ದುರಾಧರ್ಷಂ**—ಇತರರಿಂದ ಬಾಧೆ ಪಡಿಸಲಶಕ್ಯವಾದ। **ಮಹಿ**—ಮಹತ್ತಾದ। **ಅವಃ**—ರಕ್ಷಣೆಯು। **ಅಸ್ತು**—ನಮಗೆ ಉಂಟಾಗಲಿ।

॥ ಭಾವಾರ್ಥ ॥

ಮಿತ್ರ, ಅರ್ಯಮಾ, ವರುಣ ಎಂಬ ಈ ಮೂವರು ದೇವತೆಗಳ ಪ್ರಕಾಶಮಾನವಾದುದೂ ಇತರರಿಂದ ಹಿಂಸಿಸಲಶಕ್ಯವಾದುದೂ, ಮಹತ್ತಾದುದೂ ಆದ ರಕ್ಷಣೆಯು ನಮಗಿರಲಿ.

English Translation

May the great, brilliant, unassailable protection of the three (deities), Mitra, Aryaman, and Varuna, be (granted to me).

॥ ಸಂಹಿತಾಪಾಠಃ ॥

ನಹಿ ತೇಷಾಮಮಾ ಚನ ನಾಧ್ವಸು ವಾರಣೇಷು।
ಈಶೇ ರಿಪುರಘಶಂಸಃ ॥ ೨ ॥

॥ ಪದಪಾಠಃ ॥

ನಹಿ। ತೇಷಾಂ। ಅಮಾ। ಚನ। ನ। ಅಧ್ವऽಸು। ವಾರಣೇಷು।
ಈಶೇ। ರಿಪುಃ। ಅಘऽಶಂಸಃ ॥ ೨ ॥

॥ ಸಾಯಣಭಾಷ್ಯಂ ॥

ಅಮೇತಿ ಗೃಹನಾಮ। ಅಮಾ ಚನ ಗೃಹೇಷ್ವಪಿ ತೇಷಾಂ ವರುಣಮಿತ್ರಾರ್ಯಮ್ಣಾಂ ತದನುಗೃಹೀತಾನಾಂ ಸ್ತೋತೄಣಾಂ ವಾಘಶಂಸೋऽಘಮನರ್ಥಮಾಶಂಸಮಾನೋ ರಿಪುಃ ಶತ್ರುರ್ನ ಹೀಶೇ। ನ ಖಲು ಹಿಂಸಿತುಮೀಷ್ಟೇ ॥ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ। ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ ಶಿಷ್ಯತೇ ॥ ತಥಾಧ್ವಸು ಮಾರ್ಗೇಷು ವಾರಣೇಷು ಯತ್ರ ಪುರುಷಾ ನಿವಾರ್ಯಂತೇ ತೇಷು ಚ ಸ್ಥಾನೇಷು ಶತ್ರುರ್ನಿವಾರಯಿತುಂ ನೇಷ್ಟೇ ॥

॥ ಪ್ರತಿಪದಾರ್ಥ ॥

**ಅಮಾ ಚನ**—ನಮ್ಮ ಗೃಹಗಳಲ್ಲಿಯೂ। **ತೇಷಾಂ**—ಆ ವರುಣಮಿತ್ರಾರ್ಯಮರ ಅಥವಾ ಅವರ ಸ್ತೋತೃಜನರ। **ಅಘಶಂಸಃ**—ತಮ್ಮ ದುಷ್ಕೃತ್ಯವನ್ನು ಹೊಗಳಿಕೊಳ್ಳುವ। **ರಿಪುಃ**—ಶತ್ರುವು। **ನಹಿ**

**ಈಶೇ**—ನಮ್ಮನ್ನು ಹಿಂಸಿಸಲು ಸಮರ್ಥನಾಗದಿರಲಿ | **ವಾರಣೇಷು**—ಇಕ್ಕಟ್ಟಾದ | **ಅಧ್ವಸು**—ಮಾರ್ಗಗಳಲ್ಲಿಯೂ | **ನ**—ನಮ್ಮನ್ನು ಹಿಂಸಿಸದಿರಲಿ |

॥ ಭಾವಾರ್ಥ ॥

ಆ ವರುಣಮಿತ್ರಾರ್ಯಮರ ಅಥವಾ ಅವರನ್ನು ಸ್ತೋತ್ರಮಾಡುವ ಜನರ ದ್ರೋಹಿಯಾದ ಶತ್ರುವು ನಮ್ಮನ್ನು ನಮ್ಮ ಮನೆಗಳಲ್ಲಿ ಬಾಧಿಸದಿರಲಿ. ಇಕ್ಕಟ್ಟಾದ ಮಾರ್ಗಗಳಲ್ಲಿಯೂ ಹಿಂಸಿಸದಿರಲಿ.

English Translation

Let not their malignant enemy have power over dwellings, or roads or enclosures.

॥ ಸಂಹಿತಾಪಾಠಃ ॥

**ಯಸ್ಮೈ ಪುತ್ರಾಸೋ ಅದಿತೇಃ ಪ್ರ ಜೀವಸೇ ಮರ್ತ್ಯಾಯ ।**

**ಜ್ಯೋತಿರ್ಯಚ್ಛಂತ್ಯಜಸ್ರಂ ॥ ೩ ॥**

॥ ಪದಪಾಠಃ ॥

**ಯಸ್ಮೈ । ಪುತ್ರಾಸಃ । ಅದಿತೇಃ । ಪ್ರ । ಜೀವಸೇ । ಮರ್ತ್ಯಾಯ ।**

**ಜ್ಯೋತಿಃ । ಯಚ್ಛಂತಿ । ಅಜಸ್ರಂ ॥ ೩ ॥**

॥ ಸಾಯಣಭಾಷ್ಯಂ ॥

**ಅದಿತೇರದೀನಾಯಾ ದೇವಮಾತುಃ ಪುತ್ರಾಸಃ ಪುತ್ರಾ ಮಿತ್ರಾದಯೋ ಯಸ್ಮೈ ಮರ್ತ್ಯಾಯ ಮನುಷ್ಯಾಯ ಸ್ತೋತ್ರೇಽಜಸ್ರಮವಿಚ್ಛಿನ್ನಂ ಜ್ಯೋತಿಸ್ತೇಜೋ ಜೀವಸೇ ಜೀವಿತುಂ ಪ್ರಯಚ್ಛಂತಿ ತಸ್ಯ ಶತ್ರುರ್ನೇಶ್ವರ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಅದಿತೇಃ**—ದೇವಮಾತೆಯಾದ ಅದಿತಿಯ | **ಪುತ್ರಾಸಃ**—ಪುತ್ರರಾದ ಮಿತ್ರಾದಿಗಳು | **ಯಸ್ಮೈ**—ಯಾವ | **ಮರ್ತ್ಯಾಯ**—ಸ್ತೋತ್ರಮಾಡುವ ಮಾನವನಿಗೋಸ್ಕರ | **ಅಜಸ್ರಂ**—ಅವಿಚ್ಛಿನ್ನವಾದ | **ಜ್ಯೋತಿಃ**—ತೇಜಸ್ಸನ್ನು (ಶಕ್ತಿಯನ್ನು) | **ಜೀವಸೇ**—ಜೀವಿಸಿರುವುದಕ್ಕಾಗಿ | **ಪ್ರಯಚ್ಛಂತಿ**—ಕೊಡುವರೋ ಅಂತಹ ಮನುಷ್ಯನನ್ನು ಶತ್ರುವು ಹಿಂಸಿಸದಿರಲಿ |

॥ ಭಾವಾರ್ಥ ॥

ಅದೀನಳೂ ದೇವಮಾತೆಯೂ ಆದ ಅದಿತಿದೇವಿಯ ಪುತ್ರರಾದ ಮಿತ್ರಾದಿದೇವತೆಗಳು ಸ್ತೋತ್ರಮಾಡುವ ಯಾವ ಮಾನವನಿಗಾಗಿ ಅವಿಚ್ಛಿನ್ನವಾದ ತೇಜಸ್ಸನ್ನು ಎಂದರೆ ಶಕ್ತಿಯನ್ನು ಅನುಗ್ರಹಿಸಿಕೊಡುವರೋ ಅಂತಹ ಪುರುಷನನ್ನು ಶತ್ರುವು ಹಿಂಸಿಸದಿರಲಿ.

## English Translation

(Nor the enemy of) the mortal upon whom the sons of Aditi bestow the eternal light (of life) that he may live.



# ನೂರ ಎಂಭತ್ತಾರನೆಯ ಸೂಕ್ತ

॥ ಸಾಯಣಭಾಷ್ಯಂ ॥

**ವಾತ ಇತಿ ತೃಚಂ ಪಂಚತ್ರಿಂಶಂ ಸೂಕ್ತಂ ವಾತಗೋತ್ರಸ್ಯೋಲಸ್ಯಾರ್ಷಂ ಗಾಯತ್ರಂ ವಾಯುದೇವತಾಕಂ । ತಥಾ ಚಾನುಕ್ರಾಂತಂ । ವಾತೋ ವಾತಾಯನ ಉಲೋ ವಾಯವ್ಯಮಿತಿ ॥ ಗತೋ ವಿನಿಯೋಗಃ ॥**

ಅನುವಾದವು— **ವಾತಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತೈದನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು ಈ ಸೂಕ್ತಕ್ಕೆ ವಾತಗೋತ್ರದ ಉಲನೆಂಬುವನು ಋಷಿಯು; ವಾಯುವು ದೇವತೆಯು, ಗಾಯತ್ರೀಛಂದಸ್ಸು ಅನುಕ್ರಮಣಿಕೆಯಲ್ಲಿ— **ವಾತೋ ವಾತಾಯನ ಉಲೋ ವಾಯವ್ಯಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೮೬

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೮೬ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೪೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—ಉಲೋ ವಾತಾಯನಃ ॥
॥ ದೇವತಾ—ವಾಯುಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ವಾತ ಆ ವಾತು ಭೇಷಜಂ ಶಂಭು ಮಯೋಭು ನೋ ಹೃದೇ ।**

**ಪ್ರ ಣ ಆಯೂಂಷಿ ತಾರಿಷತ್ ॥ ೧ ॥**

॥ ಪದಪಾಠಃ ॥

ವಾತಃ । ಆ । ವಾತು । ಭೇಷಜಂ । ಶಂऽಭು । ಮಯಃऽಭು । ನಃ । ಹೃದೇ ।

ಪ್ರ । ನಃ । ಆಯೂಂಷಿ । ತಾರಿಷತ್ ॥ ೧ ॥

|| ಸಾಯಣಭಾಷ್ಯಂ ||

**ವಾತೋ ವಾಯುರ್ನೋಽಸ್ಮಾಕಂ ಹೃದೇ ಹೃದಯಾಯ ಭೇಷಜಮೌಷಧಮುದಕಂ ವಾ ವಾತು | ಆಗಮಯತು | ಕೀದೃಗ್ಭೂತಂ | ಶಂಭು ರೋಗಶಮನಸ್ಯ ಭಾವಯಿತೃ ಮಯೋಭು ಸುಖಸ್ಯ ಚ ಭಾವಯಿತೃ | ಅಪಿ ಚ ನೋಽಸ್ಮಾಕಮಾಯೂಂಷಿ ಪ್ರ ತಾರಿಷತ್ | ಪ್ರವರ್ಧಯತು ||**

|| ಪ್ರತಿಪದಾರ್ಥ ||

**ವಾತಃ**—ವಾಯುವು | **ನಃ**—ನಮಗೆ | **ಹೃದೇ**—ಹೃದಯಕ್ಕೆ (ಮನಸ್ಸಿಗೆ) ಸುಖವನ್ನುಂಟುಮಾಡುವುದಕ್ಕಾಗಿ | **ಶಂಭು**—ರೋಗಶಮನಕರವಾದುದೂ | **ಮಯೋಭು**—ಮನಸ್ಸಿಗೆ ಹಿತಕರವಾದುದೂ ಆದ | **ಭೇಷಜಂ**—ಹಿತಕರವಾದ ಔಷಧಿಯನ್ನು | **ಆ ವಾತು**—ಬೀಸಿಕೊಂಡು ಬರಲಿ | **ನಃ**—ನಮ್ಮ | **ಆಯೂಂಷಿ**—ಜೀವಿತಕಾಲಪರಿಮಾಣವನ್ನು ಎಂದರೆ ಆಯುಃಪ್ರಮಾಣಗಳನ್ನು | **ಪ್ರ ತಾರಿಷತ್**—ಅಭಿವೃದ್ಧಿಪಡಿಸಲಿ.

|| ಭಾವಾರ್ಥ ||

ನಮ್ಮ ಮನಸ್ಸಿಗೆ ಸಂತೋಷವುಂಟಾಗುವುದಕ್ಕೋಸ್ಕರ ವಾಯುವು ರೋಗಶಮನಕರವಾದುದೂ ಮನಸ್ಸಿಗೆ ಸುಖವನ್ನುಂಟುಮಾಡುವುದೂ ಆದ, ಹಿತಕರವಾದ ಔಷಧಿಯನ್ನು ನಮ್ಮ ಬಳಿಗೆ ಬೀಸುತ್ತ ಬರಲಿ ಮತ್ತು ಆ ವಾಯುವು ನಮ್ಮ ಆಯುಸ್ಸನ್ನು ಹೆಚ್ಚಿಸಲಿ ಎಂದರೆ ನಾವು ಬಹುಕಾಲ ಜೀವಿಸಿರುವಂತೆ ಮಾಡಲಿ.

English Translation

May Vata breathe into our hearts a healing balm, bringing happiness, may he prolong our lives.

|| ವಿಶೇಷವಿಷಯಗಳು ||

ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದ್ದಾರೆ—

**ವಾತ ಆ ವಾತು ಭೈಷಜ್ಯಾನಿ ಶಂಭು ಮಯೋಭು ಚ ನೋ ಹೃದಯಾಯ ಪ್ರವರ್ಧಯತು ಚ ನ ಆಯುಃ ||** (ನಿ. ೧೦-೩೫)

**ಶಂಭು** ಎಂದರೆ ಶರೀರಕ್ಕೆ ಸುಖವನ್ನುಂಟುಮಾಡುವುದು ಎಂದರೆ ರೋಗಪರಿಹಾರಕವಾದುದು. **ಮಯೋಭು** ಎಂದರೆ ಮನಸ್ಸಿಗೆ ಹಿತವನ್ನು ಎಂದರೆ ಸಂತೋಷವನ್ನುಂಟುಮಾಡುವುದು ಈ ಎರಡುವಿಧವಾದ ಔಷಧಿಗಳನ್ನು ಎಂದರೆ ಸುಖಸಾಧನಗಳನ್ನು ವಾಯುವು ನಮ್ಮ ಮನಸ್ಸಿಗೆ ಸಂತೋಷವುಂಟಾಗುವುದಕ್ಕಾಗಿ ಬೀಸುತ್ತಾ ನಮ್ಮ ಬಳಿಗೆ ಬರಲಿ ಎಂದರೆ ನಮ್ಮ ಬಳಿಗೆ ಬೀಸಿತರಲಿ. ಮತ್ತು ನಮ್ಮ ಆಯುಃಪ್ರಮಾಣವನ್ನು ಹೆಚ್ಚಿಸಲಿ

|| ಸಂಹಿತಾಪಾಠಃ ||

**ಉತ ವಾತ ಪಿತಾಸಿ ನ ಉತ ಭ್ರಾತೋತ ನಃ ಸಖಾ |**

**ಸ ನೋ ಜೀವಾತವೇ ಕೃಧಿ || ೨ ||**

॥ ಪದಪಾಠಃ ॥

ಉತ । ವಾತ । ಪಿತಾ । ಅಸಿ । ನಃ । ಉತ । ಭ್ರಾತಾ । ಉತ । ನಃ । ಸಖಾ ।

ಸಃ । ನಃ । ಜೀವಾತವೇ । ಕೃಧಿ ॥ ೨ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ವಾತ ತ್ವಂ ನೋಽಸ್ಮಾಕಂ ಪಿತಾಸಿ । ಉತ್ಪಾದಕೋ ಭವಸಿ । ಉತಾಪಿ ಚ ಭ್ರಾತಾ ಭವಸಿ । ಉತಾಪಿ ಚ ನೋಽಸ್ಮಾಕಂ ಸಖಾ ಸಮಾನಖ್ಯಾನೋ ಪಿತೃಭೂತಶ್ಚ ಭವಸಿ । ಸ ತ್ವಂ ನೋಽಸ್ಮಾಞ್ಜೀವಾತವೇ ಜೀವನಹೇತವೇ ಯೋಗಾಯ ಕೃಧಿ । ಕುರು ॥ ಕರೋತೇಶ್ಛಾಂದಸೋ ವಿಕರಣಸ್ಯ ಲುಕ್ । ಶ್ರುಶೃಣುಪೃಕೃವೃಭ್ಯ ಇತಿ ಹೇರ್ಧಿಃ ॥

॥ ಪ್ರತಿಪದಾರ್ಥ ॥

ಉತ—ಮತ್ತು । ವಾತ—ಎಲೈ ವಾಯುವೇ, ನೀನು । ನಃ—ನಮಗೆ । ಪಿತಾ ಅಸಿ—ಉತ್ಪಾದಕನಾದ ತಂದೆಯಾಗಿದ್ದೀಯೆ । ಉತ—ಮತ್ತೂ । ಭ್ರಾತಾ—ಸಹೋದರನಾಗಿದ್ದೀಯೆ । ಉತ—ಮತ್ತು । ನಃ—ನಮಗೆ । ಸಖಾ—ಸ್ನೇಹಿತನೂ ಆಗಿದ್ದೀಯೆ । ಸಃ—ಅಂತಹ ನೀನು । ನಃ—ನಮ್ಮನ್ನು । ಜೀವಾತವೇ—(ಬಹುಕಾಲ) ಜೀವಿಸುವುದಕ್ಕೆ । ಕೃಧಿ—(ಅರ್ಹರನ್ನಾಗಿ) ಮಾಡು ।

॥ ಭಾವಾರ್ಥ ॥

ಮತ್ತು ಎಲೈ ವಾಯುವೇ, ನೀನು ನಮಗೆ ತಂದೆಯಾಗಿದ್ದೀಯೆ ಎಂದರೆ ಉತ್ಪಾದಕನಾದ ತಂದೆಯಂತೆ ಹಿತಕಾರಿಯಾಗಿದ್ದೀಯೆ. ಮತ್ತೂ ಸಹೋದರನೂ ಸ್ನೇಹಿತನೂ ಆಗಿದ್ದೀಯೆ. ಇಂತಹ ನೀನು ನಾವು ಬಹುಕಾಲ ಬದುಕಿರುವಂತೆ ಅನುಗ್ರಹಿಸು.

## English Translation.

You, Vata, are both our father and our brother and our friend; cause us to live.

॥ ಸಂಹಿತಾಪಾಠಃ ॥

ಯದದೋ ವಾತ ತೇ ಗೃಹೇ३ಽಮೃತಸ್ಯ ನಿಧಿರ್ಹಿತಃ ।

ತತೋ ನೋ ದೇಹಿ ಜೀವಸೇ ॥ ೩ ॥

॥ ಪದಪಾಠಃ ॥

ಯತ್ । ಅದಃ । ವಾತ । ತೇ । ಗೃಹೇ । ಅಮೃತಸ್ಯ । ನಿಽಧಿಃ । ಹಿತಃ ।

ತತಃ । ನಃ । ದೇಹಿ । ಜೀವಸೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ವಾತ ವಾಯೋ ತೇ ತವ ಗೃಹೇ ಸ್ಥಾನೇ ಯದಷೋ ಯೋಽಸಾವಮೃತಸ್ಯಾಮರಣಸ್ಯ ನಿಧಿರ್ನಿಕ್ಷೇಪೋ ಹಿತಃ ಸ್ಥಾಪಿತೋ ವರ್ತತೇ ತತಸ್ತಸ್ಮಾನ್ನಿಧೇರಾಹೃತ್ಯಾಮೃತತ್ವಂ ಜೀವಸೇ ನೋಽಸ್ಮಾಕಂ ಜೀವನಾಯ ದೇಹಿ । ಪ್ರಯಚ್ಛ ॥

॥ ಪ್ರತಿಪದಾರ್ಥ ॥

ವಾತ—ಎಲೈ ವಾಯುವೇ । ತೇ—ನಿನ್ನ । ಗೃಹೇ—ನಿವಾಸಸ್ಥಾನದಲ್ಲಿ । ಯತ್ ಅದಃ—ಯಾವ ಈ । ಅಮೃತಸ್ಯ—(ಮರಣವನ್ನು ತಡೆಗಟ್ಟುವ) ಅಮೃತದ । ನಿಧಿಃ—ನಿಕ್ಷೇಪವು । ಹಿತಃ—ಸ್ಥಾಪಿತವಾಗಿದೆಯೋ । ತತಃ—ಆ ಅಮೃತನಿಧಿಯಿಂದ ಸ್ವಲ್ಪ ಭಾಗವನ್ನು ತಂದು । ಜೀವಸೇ—ಬಹುಕಾಲ ಜೀವಿಸುವುದಕ್ಕಾಗಿ । ನಃ—ನಮಗೆ । ದೇಹಿ—ಕೊಡು.

॥ ಭಾವಾರ್ಥ ॥

ಎಲೈ ವಾಯುವೇ, ನಿನ್ನ ಗೃಹದಲ್ಲಿ ಎಂದರೆ ವಾಸಸ್ಥಾನವಾದ ಸ್ವರ್ಗಲೋಕದಲ್ಲಿ ಯಾವ ಅಮೃತದ ನಿಧಿಯು ಇರುವುದೋ ಆ ಅಮೃತದಿಂದ ಸ್ವಲ್ಪಭಾಗವನ್ನು ತಂದು ನಾವು ಬಹುಕಾಲ ಜೀವಿಸುವುದಕ್ಕಾಗಿ ನಮಗೆ ಕೊಡು.

English Translation.

That store of ambrosia, Vata, which is placed in your house, give us of it that we may live.



## ನೂರ ಎಂಭತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಪ್ರಾಗ್ನಯೆ ಇತಿ ಪಂಚರ್ಚಂ ಷಟ್ತ್ರಿಂಶಂ ಸೂಕ್ತಂ । ಅಗ್ನೇಃ ಪುತ್ರಸ್ಯ ವತ್ಸಸ್ಯಾರ್ಷಂ ಗಾಯತ್ರಮಾಗ್ನೇಯಂ । ತಥಾ ಚಾನುಕ್ರಾಂತಂ । ಪ್ರಾಗ್ನಯೇ ಪಂಚಾಗ್ನೇಯೋ ವತ್ಸ ಆಗ್ನೇಯಂ ತ್ವಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ಗಾಯತ್ರೇ ಛಂದಸೀದಮಾದಿಕೇ ದ್ವೇ ಸೂಕ್ತೇ । ಸೂತ್ರ್ಯತೇ ಹಿ । ಪ್ರಾಗ್ನಯೇ ವಾಚಮಿತಿ ಸೂಕ್ತೇ ಇಮಾಂ ಮೇ ಅಗ್ನೇ ಸಮಿಧಂ । ಆ. ೪-೧೩ । ಇತಿ ॥ ದಶರಾತ್ರಸ್ಯ ನವಮೇಽಹನ್ಯಾಗ್ನಿಮಾರುತ ಇದಂ ಜಾತವೇದಸಂ ನಿವಿದ್ಧಾನಂ । ಸೂತ್ರಿತಂ ಚ । ಮರುತೋ ಯಸ್ಯ ಹಿ ಪ್ರಾಗ್ನಯೇ ವಾಚಮಿತ್ಯಾಗ್ನಿಮಾರುತಂ । ಆ. ೮-೧೧ । ಇತಿ ॥

ಅನುವಾದವು—ಪ್ರಾಗ್ನಯೇ ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತಾರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗ್ನಿಪುತ್ರನಾದ ವತ್ಸನೆಂಬುವನು ಋಷಿಯು ;

ಅಗ್ನಿಯು ದೇವತೆಯು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ಪ್ರಾಗ್ನಯೇ ಪಂಚಾಗ್ನೇಯೋ ವತ್ಸ ಆಗ್ನೇಯಂ ತು** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕಾಲದಲ್ಲಿ ಗಾಯತ್ರೀಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ಮತ್ತು ಇದರ ಮುಂದಿನ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಪ್ರಾಗ್ನಯೇ ವಾಚಮಿತಿ ಸೂಕ್ತೇ ಇಮಾಂ ಮೇ ಅಗ್ನೇ ಸಮಿಧಂ** ಎಂಬ ಸೂತ್ರದಿಂದ (ಆ ೪-೧೫) ವಿವೃತವಾಗಿರುವುದು. ದಶರಾತ್ರವೆಂಬ ಯಾಗದ ಒಂಭತ್ತನೆಯ ದಿವಸದಲ್ಲಿ ಅಗ್ನಿಮಾರುತ ಶಸ್ತ್ರಮಂತ್ರಗಳ ಮಧ್ಯದಲ್ಲಿ ಈ ಸೂಕ್ತವನ್ನು ಜಾತವೇದಾಗ್ನಿಯನ್ನು ಸ್ತುತಿಸುವ ನಿವಿದ್ಧಾನಸೂಕ್ತವನ್ನಾಗಿ ಸೇರಿಸಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಮರುತೋ ಯಸ್ಯ ಹಿ ಪ್ರಾಗ್ನಯೇ ವಾಚಮಿತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ (ಆ. ೮-೧೧) ವಿವೃತವಾಗಿರುವುದು.

## ಸೂಕ್ತ—೧೮೭

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೮೭ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ— ೪೫॥

॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೫ ॥
॥ ಋಷಿಃ—ವತ್ಸ ಆಗ್ನೇಯಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಪ್ರಾಗ್ನಯೇ ವಾಚಮೀರಯ ವೃಷಭಾಯ ಕ್ಷಿತೀನಾಂ ।**
**ಸ ನಃ ಪರ್ಷದತಿ ದ್ವಿಷಃ ॥ ೧ ॥**

॥ ಪದಪಾಠಃ ॥

**ಪ್ರ । ಅಗ್ನಯೇ । ವಾಚಂ । ಈರಯ । ವೃಷಭಾಯ । ಕ್ಷಿತೀನಾಂ ।**
**ಸಃ । ನಃ । ಪರ್ಷತ್ । ಅತಿ । ದ್ವಿಷಃ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ಸ್ತೋತಃ ಅಗ್ನಯೇ ಸ್ತುತಿರೂಪಾಂ ವಾಚಂ ಪ್ರೇರಯ । ಉಚ್ಚಾರಯ । ಕಥಂಭೂತಾಯ । ಕ್ಷಿತೀನಾಂ ಮನುಷ್ಯಾಣಾಂ ಯಜಮಾನಾನಾಂ ವೃಷಭಾಯ ಕಾಮಾನಾಂ ವರ್ಷಿತ್ರೇ । ಕಿಂ ಪ್ರಯೋಜನಮಿತಿ ಚೇತ್ । ಸೋಽಗ್ನಿರ್ನೋಽಸ್ಮಾನ್ದ್ವಿಷೋ ದ್ವೇಷ್ಟ್ರೄನತಿ ಪರ್ಷತ್ । ಅತಿಪಾರಯೇತ್ ॥**

॥ ಪ್ರತಿಪದಾರ್ಥ ॥

(ಎಲೈ ಸ್ತೋತೃವೇ) **ಕ್ಷಿತೀನಾಂ**—ಮಾನವರಾದ ಯಜಮಾನರಿಗೆ । **ವೃಷಭಾಯ**—ಇಷ್ಟಾರ್ಥಗಳನ್ನು ಸುರಿಸುವ । **ಅಗ್ನಯೇ**—ಅಗ್ನಿಯನ್ನುದ್ದೇಶಿಸಿ । **ವಾಚಂ**—ಸ್ತುತಿರೂಪವಾದ ವಾಕ್ಯವನ್ನು । **ಪ್ರ ಈರಯ**-

ಉಚ್ಚರಿಸು । **ಸಃ**—ಆ ಅಗ್ನಿಯು । **ನಃ**—ನಮ್ಮನ್ನು । **ದ್ವಿಷಃ**—ನಮ್ಮ ಶತ್ರುಗಳಿಂದ (ಅಥವಾ ನಮ್ಮ ಶತ್ರುಗಳ ಬಾಧೆಯಿಂದ) **ಅತಿ ಪರ್ಷತ್**—ದಾಟಿಸಲಿ.

॥ ಭಾವಾರ್ಥ ॥

ಎಲೈ ಸ್ತೋತೃವೇ, ಮಾನವರಾದ ಯಜಮಾನರಿಗೆ ಇಷ್ಟಾರ್ಥಪ್ರದನಾದ ಅಗ್ನಿಗಾಗಿ ಸ್ತುತಿರೂಪವಾದ ವಾಕ್ಯವನ್ನುಚ್ಚರಿಸು. ಆ ಅಗ್ನಿಯು ನಮ್ಮ ಶತ್ರುಗಳಿಂದ ನಮ್ಮನ್ನು ದಾಟಿಸಿ ರಕ್ಷಿಸಲಿ.

## English Translation.

Raise the hymn to Agni, the benefactor of mankind; may he bear us (safe) beyond (the reach of) those who hate us.

॥ ಸಂಹಿತಾಪಾಠಃ ॥

ಯಃ ಪರಸ್ಯಾಃ ಪರಾವತಸ್ತಿರೋ ಧನ್ವಾತಿರೋಚತೇ ।

ಸ ನಃ ಪರ್ಷದತಿ ದ್ವಿಷಃ ॥ ೨ ॥

॥ ಪದಪಾಠಃ ॥

ಯಃ । ಪರಸ್ಯಾಃ । ಪರಾऽವತಃ । ತಿರಃ । ಧನ್ವ । ಅತಿऽರೋಚತೇ ।

ಸಃ । ನಃ । ಪರ್ಷತ್ । ಅತಿ । ದ್ವಿಷಃ ॥ ೨ ॥

॥ ಸಾಯಣಭಾಷ್ಯಂ ॥

**ಯೋऽಗ್ನಿಃ ಪರಸ್ಯಾಃ ಪರಾವತೋऽತಿಶಯಿತಾದ್ದೂರದೇಶಾತ್ತಿರಃ । ಪ್ರಾಪ್ತನಾಮೈತತ್ । ಪ್ರಾಪ್ತಸಂಬಂಧಂ ಧನ್ವ ಮರುಭೂಮಿಂ ಜಲವರ್ಜಿತಂ ದೇಶಮತಿರೋಚತೇ ಅತಿಕ್ರಮ್ಯ ಪ್ರಜ್ವಲತಿ । ಯದ್ವಾ । ಧನ್ವಾಂತರಿಕ್ಷಂ । ಧನ್ವಾಂತರಿಕ್ಷಂ ತಿರಸ್ತಿರ್ಯಗತಿರೋಚತೇ ಭೃಶಂ ಪ್ರಕಾಶಯತೇ । ಗತಮನ್ಯತ್ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಅಗ್ನಿಯು । **ಪರಸ್ಯಾಃ ಪರಾವತಃ**—ಅತ್ಯಂತ ದೂರಪ್ರದೇಶದಿಂದ । **ತಿರಃ**—ಪ್ರಸರಿಸಿರುವ । **ಧನ್ವ**—ಮರಭೂಮಿ ಪ್ರದೇಶವನ್ನು । **ಅತಿರೋಚತೇ**—ಅತಿಕ್ರಮಿಸಿ ಬೆಳಗುವನೋ । [**ಅಥವಾ ಧನ್ವ**—ಅಂತರಿಕ್ಷ ಪ್ರದೇಶದಲ್ಲಿ । **ತಿರಃ**—ವ್ಯಾಪ್ತನಾಗಿ । **ಅತಿರೋಚತೇ**—ಅತಿಶಯವಾಗಿ ಪ್ರಕಾಶಿಸುವನೋ] । **ಸಃ**—ಆ ಅಗ್ನಿಯು । **ನಃ**—ನಮ್ಮನ್ನು । **ದ್ವಿಷಃ**—ಶತ್ರುಗಳ ದೆಶೆಯಿಂದ । **ಅತಿ ಪರ್ಷತ್**—ದಾಟಿಸಲಿ.

॥ ಭಾವಾರ್ಥ ॥

ಯಾವ ಅಗ್ನಿಯು ಅತಿದೂರಪ್ರದೇಶದಲ್ಲಿ ವ್ಯಾಪಿಸಿರುವ ಮರಭೂಮಿಯನ್ನು ಅಥವಾ ಅಂತರಿಕ್ಷಪ್ರದೇಶವನ್ನು ವ್ಯಾಪಿಸಿ ಪ್ರಕಾಶಿಸುವನೋ ಆ ಅಗ್ನಿಯು ನಮ್ಮನ್ನು ಶತ್ರುಗಳದೆಶೆಯಿಂದ ಪಾರುಮಾಡಲಿ.

## English Translation.

May (Agni), who from a great distance shines fiercely upon the desert tract that he has attained, bear us (safe) beyond (the reach of) those who hate us.

|| ವಿಶೇಷ ವಿಷಯಗಳು ||

ಧನ್ವ ಶಬ್ದಕ್ಕೆ ಅಂತರಿಕ್ಷವೆಂದೂ ಹೆಸರು. ಯಾಸ್ಕರು— **ಧನ್ವಾಂತರಿಕ್ಷಂ ಧನ್ವಂತ್ಯಸ್ಮಾದಾಪಃ । ತಿರೋ ಧನ್ವಾನಿ ರೋಚತೇ ಇತ್ಯಪಿ ನಿಗಮೋ ಭವತಿ ।** (ನಿ. ೫-೫) ಎಂದು ಹೇಳಿದ್ದಾರೆ. ಅಂತರಿಕ್ಷದಿಂದ ಉದಕಗಳು ವೃಷ್ಟಿರೂಪದಲ್ಲಿ ಭೂಮಿಯಕಡೆಗೆ ಹರಿದು ಬರುವುದರಿಂದ ಧನ್ವಶಬ್ದಕ್ಕೆ ಅಂತರಿಕ್ಷವೆಂಬರ್ಥವಿರುವುದು. ಈ ವಿಷಯದಲ್ಲಿ **ತಿರೋ ಧನ್ವಾನಿ ರೋಚತೇ** ಎಂಬ ಶ್ರುತಿವಾಕ್ಯವು ಉದಾಹರಣೆಯಾಗಿರುವುದು.

|| ಸಂಹಿತಾಪಾಠಃ ||

ಯೋ ರಕ್ಷಾಂಸಿ ನಿಜೂರ್ವತಿ ವೃಷಾ ಶುಕ್ರೇಣ ಶೋಚಿಷಾ ।
ಸ ನಃ ಪರ್ಷದತಿ ದ್ವಿಷಃ ॥ ೩ ॥

|| ಪದಪಾಠಃ ||

ಯಃ । ರಕ್ಷಾಂಸಿ । ನಿಽಜೂರ್ವತಿ । ವೃಷಾ । ಶುಕ್ರೇಣ । ಶೋಚಿಷಾ ।
ಸಃ । ನಃ । ಪರ್ಷತ್ । ಅತಿ । ದ್ವಿಷಃ ॥ ೩ ॥

|| ಸಾಯಣಭಾಷ್ಯಂ ||

**ವೃಷಾ ವರ್ಷಿತಾ ಯೋಽಗ್ನಿಃ ಶುಕ್ರೇಣ ನಿರ್ಮಲೇನ ಶುಭ್ರವರ್ಣೇನ ವಾ ಶೋಚಿಷಾ ತೇಜಸಾ ರಕ್ಷಾಂಸಿ ಯಜ್ಞಸ್ಯ ಹಂತೄಣಿ ನಿಜೂರ್ವತಿ ನಿಹಿನಸ್ತಿ। ಜುರ್ವೀ ಹಿಂಸಾರ್ಥಃ । ಗತಮನ್ಯತ್ ॥**

|| ಪ್ರತಿಪದಾರ್ಥ ||

**ವೃಷಾ**—ಇಷ್ಟಾರ್ಥಪ್ರದನಾದ । **ಯಃ**—ಯಾವ ಅಗ್ನಿಯು । **ಶುಕ್ರೇಣ**—ಶುಭ್ರವರ್ಣವುಳ್ಳ । **ಶೋಚಿಷಾ**—ತೇಜಸ್ಸಿನಿಂದ। **ರಕ್ಷಾಂಸಿ**—ಯಜ್ಞಕ್ಕೆ ವಿಘ್ನಕಾರಿಗಳಾದ ರಾಕ್ಷಸರನ್ನು । **ನಿಜೂರ್ವತಿ**—ಹಿಂಸಿಸುವನೋ । **ಸಃ**—ಅಂತಹ ಅಗ್ನಿಯು । **ನಃ**—ನಮ್ಮನ್ನು । **ದ್ವಿಷಃ**—ನಮ್ಮ ಶತ್ರುಗಳವಶದಿಂದ । **ಅತಿ ಪರ್ಷತ್**—ಪಾರುಮಾಡಲಿ.

|| ಭಾವಾರ್ಥ ||

ಇಷ್ಟಾರ್ಥಪ್ರದನಾದ ಯಾವ ಅಗ್ನಿಯು ನಿರ್ಮಲವಾದ ತನ್ನ ತೇಜಸ್ಸಿನಿಂದ ಯಜ್ಞವಿಘ್ನಕಾರಿಗಳಾದ ರಾಕ್ಷಸರನ್ನು ಹಿಂಸಿಸುವನೋ ಅಂತಹ ಅಗ್ನಿಯು ನಮ್ಮನ್ನು ಶತ್ರುಗಳಿಂದ ಪಾರುಮಾಡಲಿ.

## English Translation

May (Agni), the showerer of benefits, who, with his pure radiance destroys the Rakshsas, bear us (safe) beyond (the reach of) those who hate us.

॥ ಸಂಹಿತಾಪಾಠಃ ॥

ಯೋ ವಿಶ್ವಾಭಿ ವಿಪಶ್ಯತಿ ಭುವನಾ ಸಂ ಚ ಪಶ್ಯತಿ ।

ಸ ನಃ ಪರ್ಷದತಿ ದ್ವಿಷಃ ॥ ೪ ॥

॥ ಪದಪಾಠಃ ॥

ಯಃ । ವಿಶ್ವಾ । ಅಭಿ । ವಿऽಪಶ್ಯತಿ । ಭುವನಾ । ಸಂ । ಚ । ಪಶ್ಯತಿ ।

ಸಃ । ನಃ । ಪರ್ಷತ್ । ಅತಿ । ದ್ವಿಷಃ ॥ ೪ ॥

॥ ಸಾಯಣಭಾಷ್ಯಂ ॥

ಯೋಽಗ್ನಿಃ ಸೂರ್ಯರೂಪೇಣ ವಿಶ್ವಾ ವಿಶ್ವಾನಿ ಸರ್ವಾಣಿ ಭೂತಜಾತಾನ್ಯಭಿಮುಖಂ ವಿಪಶ್ಯತಿ ವಿಶೇಷೇಣ ತೇಜಸಾ ಪ್ರೇಕ್ಷತೇ । ಪ್ರಕಾಶಯತೀತ್ಯರ್ಥಃ । ಭುವನಾ ಭುವನಾನಿ ಭೂತಜಾತಾನಿ ಸಂ ಪಶ್ಯತಿ ಚ ಸಮ್ಯಗ್ಜಾನಾತಿ ಚ । ಅನ್ಯತ್ಸಿದ್ಧಂ ॥

॥ ಪ್ರತಿಪದಾರ್ಥ ॥

ಯಃ—ಯಾವ ಅಗ್ನಿಯು (ಸೂರ್ಯರೂಪದಿಂದ) । ವಿಶ್ವಾನಿ—ಸಮಸ್ತವಾದ ಭೂತಜಾತಗಳನ್ನು (ಪ್ರಾಣಿಗಳನ್ನು) ತನ್ನ ಪ್ರಕಾಶದಿಂದ । ಅಭಿ—ಅಭಿಮುಖವಾಗಿ । ವಿಪಶ್ಯತಿ—ನೋಡುವನೋ ಎಂದರೆ ಬೆಳಗುವನೋ । ಭುವನಾ—ಪ್ರಾಣಿಗಳನ್ನು । ಸಂ ಪಶ್ಯತಿ ಚ—ಚೆನ್ನಾಗಿ ತಿಳಿಯುವನೋ । ಸಃ—ಅಂತಹ ಅಗ್ನಿಯು । ನಃ—ನಮ್ಮನ್ನು । ದ್ವಿಷಃ—ದ್ವೇಷಿಸುವ ಶತ್ರುಗಳಿಂದ । ಅತಿ ಪರ್ಷತ್—ಪಾರುಮಾಡಲಿ.

॥ ಭಾವಾರ್ಥ ॥

ಯಾವ ಅಗ್ನಿಯು ಸೂರ್ಯರೂಪದಿಂದ ಸಮಸ್ತಭೂತಜಾತಗಳನ್ನು ಎಂದರೆ ಪ್ರಾಣಿಗಳನ್ನು ನೋಡಬಲ್ಲನೋ ಮತ್ತು ತಿಳಿಯಬಲ್ಲನೋ ಅಂತಹ ಅಗ್ನಿಯು ನಮ್ಮನ್ನು ನಮ್ಮ ಶತ್ರುಗಳಿಂದ ಪಾರುಮಾಡಲಿ.

## English Translation.

That Agni who in the form of sun sees directly i.e. shines brightly and understands all the living beings bears us (safe) beyond (the reach of) those who hate us.

॥ ವಿಶೇಷ ವಿಷಯಗಳು ॥

ಅಗ್ನಿಯೇ, ಪೃಥಿವಿಯಲ್ಲಿ ಪಾರ್ಥಿವಾಗ್ನಿಯೆಂದೂ ಅಂತರಿಕ್ಷದಲ್ಲಿ ವೈದ್ಯುತಾಗ್ನಿ (ಮಿಂಚು) ಯೆಂದೂ, ಸ್ವರ್ಗದಲ್ಲಿ ಸೂರ್ಯನೆಂದೂ ಮೂರು ರೂಪಗಳಿಂದ ಪ್ರಸಿದ್ಧನಾಗಿರುವನೆಂದು ಹಿಂದೆಯೇ ತಿಳಿಸಿದೆ. ಈ ಸೂಕ್ತದ ಮೊದಲನೆ ಮೂರು ಋಕ್ಕುಗಳಲ್ಲಿ ಪಾರ್ಥಿವಾಗ್ನಿಯನ್ನೂ ಈ ಋಕ್ಕಿನಲ್ಲಿ ಆದಿತ್ಯನನ್ನೂ ಮುಂದಿನ ಋಕ್ಕಿನಲ್ಲಿ ವೈದ್ಯುತಾಗ್ನಿಯನ್ನೂ ಪ್ರಶಂಸಿಸಲಾಗಿದೆ.

॥ ಸಂಹಿತಾಪಾಠಃ ॥

ಯೋ ಅಸ್ಯ ಪಾರೇ ರಜಸಃ ಶುಕ್ರೋ ಅಗ್ನಿರಜಾಯತ ।

ಸ ನಃ ಪರ್ಷದತಿ ದ್ವಿಷಃ ॥ ೫ ॥

॥ ಪದಪಾಠಃ ॥

ಯಃ । ಅಸ್ಯ । ಪಾರೇ । ರಜಸಃ । ಶುಕ್ರಃ । ಅಗ್ನಿಃ । ಅಜಾಯತ ।

ಸಃ । ನಃ । ಪರ್ಷತ್ । ಅತಿ । ದ್ವಿಷಃ ॥ ೫ ॥

॥ ಸಾಯಣಭಾಷ್ಯಂ ॥

ಅಸ್ಯ ರಜಸೋ ಲೋಕಸ್ಯಾಂತರಿಕ್ಷಸ್ಯ ಪಾರ ಉಪರಿದೇಶೇ ಶುಕ್ರಃ ಶುಭ್ರವರ್ಣೋ ಯೋಽಗ್ನಿರ್ವಿದ್ಯುದಾತ್ಮನಾ ಸೂರ್ಯಾತ್ಮನಾ ವಾಜಾಯತ ಪ್ರಾದುರ್ಭವತಿ ಸ ನೋಽಸ್ಮಾನ್ದ್ವಿಷೋ ದ್ವೇಷ್ಟ್ರ್ವಾನತಿ ಪರ್ಷತ್ । ಅತಿಪಾರಯತು ॥

॥ ಪ್ರತಿಪದಾರ್ಥ ॥

**ಅಸ್ಯ ರಜಸಃ**—ಈ ಅಂತರಿಕ್ಷಲೋಕದ । **ಪಾರೇ**—ಅತಿ ಎತ್ತರಪ್ರದೇಶದಲ್ಲಿ । **ಶುಕ್ರಃ**—ಶುಭ್ರವರ್ಣವುಳ್ಳ । **ಯಃ ಅಗ್ನಿಃ**—ಯಾವ ವಿದ್ಯುದಗ್ನಿಯು । **ಅಜಾಯತ**—ಉತ್ಪನ್ನನಾಗುವನೋ । **ಸಃ**—ಆ ಅಗ್ನಿಯು । **ನಃ**—ನಮ್ಮನ್ನು । **ದ್ವಿಷಃ**—ಶತ್ರುಗಳ ದೆಸೆಯಿಂದ । **ಅತಿ ಪರ್ಷತ್**—ಪಾರುಮಾಡಲಿ.

॥ ಭಾವಾರ್ಥ ॥

ಈ ಅಂತರಿಕ್ಷಲೋಕದ ಅತಿ ಎತ್ತರವಾದ ಪ್ರದೇಶದಲ್ಲಿ ಶುಭ್ರವರ್ಣದಿಂದ ಯಾವ ವಿದ್ಯುದಗ್ನಿಯು ಆವಿರ್ಭವಿಸುವನೋ ಆ ಅಗ್ನಿಯು ನಮ್ಮ ಶತ್ರುಗಳಿಂದ ನಮ್ಮನ್ನು ಪಾರುಮಾಡಲಿ.

## English Translation.

That Agni who in the form of sun or lightening rises brightly in the far-off regions bears us (safe) beyond (the reach of) those who hate us.

॥ ವಿಶೇಷವಿಷಯಗಳು ॥

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರ—

ಅನೀಕವಂತಮೂತಯೇಽಗ್ನಿಂ ಗೀರ್ಭಿರ್ಹವಾಮಹೇ ।
ಸ ನಃ ಪರ್ಷದತಿ ದ್ವಿಷಃ ॥ ೧ ॥

## ನೂರ ಎಂಭತ್ತೆಂಟನೆಯ ಸೂಕ್ತ

॥ ಸಾಯಣಭಾಷ್ಯಂ ॥

**ಪ್ರ ನೂನಮಿತಿ ತೃಚಂ ಸಪ್ತತ್ರಿಂಶಂ ಸೂಕ್ತಂ । ಅಗ್ನಿಪುತ್ರಸ್ಯ ಶ್ಯೇನಸ್ಯಾರ್ಷಂ ಗಾಯತ್ರಂ ಜಾತವೇದೋಗುಣಕೋಽಗ್ನಿರ್ದೇವತಾ । ತಥಾ ಚಾನುಕ್ರಾಂತಂ । ಪ್ರ ನೂನಂ ತೃಚಮಾಗ್ನೇಯಃ ಶ್ಯೇನೋ ಜಾತವೇದಸ್ಯಮಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥**

ಅನುವಾದವು—**ಪ್ರ ನೂನಂ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತೇಳನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಗ್ನಿಪುತ್ರನಾದ ಶ್ಯೇನನೆಂಬುವನು ಋಷಿಯು; ಜಾತವೇದಾತ್ಮಕನಾದ ಅಗ್ನಿಯೇ ದೇವತೆಯು. ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರ ನೂನಂ ತೃಚಮಾಗ್ನೇಯಃ ಶ್ಯೇನೋ ಜಾತವೇದಸ್ಯಂ** ಎಂದು ಹೇಳಿರುವುದು ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಾಗಿ ಈ ಸೂಕ್ತದ ವಿನಿಯೋಗವಿರುವುದು.

### ಸೂಕ್ತ —೧೮೮

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೮೮ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೪೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—ಶ್ಯೇನ ಆಗ್ನೇಯಃ ॥
॥ ದೇವತಾ—ಅಗ್ನಿರ್ಜಾತವೇದಾಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಪ್ರ ನೂನಂ ಜಾತವೇದಸಮಶ್ವಂ ಹಿನೋತ ವಾಜಿನಂ ।
ಇದಂ ನೋ ಬರ್ಹಿರಾಸದೇ ॥ ೧ ॥

॥ ಪದಪಾಠಃ ॥

ಪ್ರ । ನೂನಂ । ಜಾತಽವೇದಸಂ । ಅಶ್ವಂ । ಹಿನೋತ । ವಾಜಿನಂ ।

ಇದಂ । ನಃ । ಬರ್ಹಿಃ । ಆ॒ऽಸದೇ ॥ ೧ ॥

॥ ಸಾಯಣಭಾಷ್ಯಂ ॥

**ಜಾತವೇದಸಂ ಜಾತಾನಾಂ ವೇದಿತಾರಂ ಜಾತಧನಾದಿಕಂ ವಾಜ್ಯಂ ಕರ್ಮಭಿರ್ವ್ಯಾಪ್ತುವಂತಂ ವಾಜಿನಮನ್ನವಂತಂ ಹೇ ಋತ್ವಿಗ್ಯಜಮಾನಾಃ ನೂನಮವಶ್ಯಂ ಪ್ರ ಹಿನೋತ । ಪ್ರವರ್ಧಯತ । ಯದ್ವಾ। ಅಶ್ವಮಿವ ಸ್ತುತಿಭಿಃ ಪ್ರೇರಯತ ॥ ಹಿ ಗತೌ ವೃದ್ಧೌ ಚ । ಅಸ್ಮಾಲ್ಲೋಟಿ ತಶಬ್ದಸ್ಯ ತಪ್ತನಪ್ತನಥನಾಶ್ಚೇತಿ ತಬಾದೇಶಃ ॥ ಕಿಮರ್ಥಂ । ಸೋಽಸ್ಮಾಕಮಿದಂ ಬರ್ಹಿರಾಸ್ತೀರ್ಣಮಾಸದ ಆಸತ್ತುಂ ಪ್ರಾಪ್ತುಂ । ಬರ್ಹಿರಾಸೀದತ್ವಿತ್ಯರ್ಥಃ ॥ ಸದೇಃ ಕೃತ್ಯಾರ್ಥೇ ತವೈಕೇನಿತಿ ಕೇನ್ಪ್ರತ್ಯಯಃ ॥**

॥ ಪ್ರತಿಪದಾರ್ಥ ॥

(ಎಲೈ ಋತ್ವಿಗ್ಯಜಮಾನರೇ), **ಜಾತವೇದಸಂ**—ಉತ್ಪನ್ನವಾಗುವ ಸಮಸ್ತವನ್ನೂ ತಿಳಿದವನೂ ಅಥವಾ ಧನವಂತನೂ । **ಅಶ್ವಂ**—ಸಮಸ್ತಯಜ್ಞಾದಿಕರ್ಮಗಳಲ್ಲಿ ಮುಖ್ಯಪಾತ್ರವಹಿಸಿ ವ್ಯಾಪಿಸಿರುವವನೂ । **ವಾಜಿನಂ**—ಅನ್ನವಂತನೂ ಆದ ಈ ಜಾತವೇದನೆಂಬ ಅಗ್ನಿಯನ್ನು । **ನಃ**—ನಮ್ಮ । **ಇದಂ ಬರ್ಹಿಃ**—ಈ ದರ್ಭಾಸನದ ಮೇಲೆ । **ಆಸದೇ**—ಬಂದು ಕುಳಿತುಕೊಳ್ಳುವುದಕ್ಕಾಗಿ । **ನೂನಂ**—ಅವಶ್ಯಕವಾಗಿ । **ಪ್ರ ಹಿನೋತ**—ಪ್ರೇರಿಸಿರಿ । [**ಅಥವಾ ಅಶ್ವಂ**—ಅಶ್ವವನ್ನು ಪ್ರೇರಿಸುವಂತೆ । **ಪ್ರ ಹಿನ್ವತ**—ಸ್ತುತಿಗಳಿಂದ ಪ್ರೇರಿಸಿರಿ].

॥ ಭಾವಾರ್ಥ ॥

ಎಲೈ ಋತ್ವಿಗ್ಯಜಮಾನರೇ, ಸರ್ವಜ್ಞನೂ, ಸಮಸ್ತ ಯಜ್ಞಾದಿ ಕರ್ಮಗಳಲ್ಲಿ ಮುಖ್ಯ ಪಾತ್ರ ವಹಿಸಿ ವ್ಯಾಪಿಸಿರುವನೂ ಅನ್ನವಂತನೂ ಆದ ಈ ಜಾತವೇದಾಖ್ಯ ಅಗ್ನಿಯನ್ನು ನಮ್ಮ ಈ ದರ್ಭಾಸನದ ಮೇಲೆ ಬಂದು ಕುಳಿತುಕೊಳ್ಳುವುದಕ್ಕಾಗಿ (ಅಶ್ವವನ್ನು ಪ್ರೇರಿಸುವಂತೆ ಸ್ತುತಿಗಳಿಂದ) ಅವಶ್ಯಕವಾಗಿ ಪ್ರೇರಿಸಿರಿ.

## English Translation.

Urge the food-giver, Jatavedas, (as) a horse, to sit down upon this our sacred grass.

॥ ವಿಶೇಷವಿಷಯಗಳು ॥

ಜಾತವೇದಾಖ್ಯ ಅಗ್ನಿಯನ್ನು ವಿವರಿಸುವ ಋಕ್ಕಿನ ಉದಾಹರಣೆಗಾಗಿ ಯಾಸ್ಕರು **ಜಾತವೇದಸೇ ಸುನವಾಮ ಸೋಮಂ** (ಋ. ಸಂ. ೧-೯೯-೧) ಎಂಬ ಋಕ್ಕನ್ನೂ ಪ್ರಕೃತ **ಪ್ರ ನೂನಂ** ಎಂಬ ಋಕ್ಕನ್ನೂ ತೆಗೆದುಕೊಂಡು ಈ ಋಕ್ಕುಗಳಿಗೆ ನಿರುಕ್ತವನ್ನು ಹೇಳಿದ್ದಾರೆ—

> **ಜಾತವೇದಾಃ । ಜಾತವೇದಾಃ ಕಸ್ಮಾತ್ । ಜಾತಾನಿ ವೇದ । ಜಾತಾನಿ ವೈನಂ ವಿದುಃ । ಜಾತೇ ಜಾತೇ ವಿದ್ಯತ ಇತಿ ವಾ । ಜಾತವಿತ್ತೋ ವಾ ಜಾತಧನಃ । ಜಾತವಿದ್ಯೋ ವಾ ಜಾತಪ್ರಜ್ಞಾನಃ । ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ ತಸ್ಮಾತ್ ಸರ್ವಾನೃತೂನ್ ಪಶವೋಽಗ್ನಿಮಭಿಸರ್ಪಂತೀತಿ ಚ ॥** (ನಿ. ೭-೧೯)

ಅಗ್ನಿಗೆ ಜಾತವೇದಾಃ ಎಂಬ ಹೆಸರು ಏತಕ್ಕೆ ಬಂದಿತು ಎಂದರೆ ಈ ಅಗ್ನಿಯು **ಜಾತಾನಿ ವೇದ**—ಉತ್ಪನ್ನವಾದ ಸಮಸ್ತ ವಸ್ತುಗಳನ್ನೂ ತಿಳಿದಿರುವವನು, **ಜಾತಾನಿ ವೈನಂ ವಿದುಃ**—ಉತ್ಪನ್ನವಾದ ಸಮಸ್ತ ಪ್ರಾಣಿಗಳೂ ಈ ಅಗ್ನಿಯನ್ನು ತಿಳಿದಿರುವವು, **ಜಾತೇ ಜಾತೇ ವಿದ್ಯತ ಇತಿ ವಾ**—ಉತ್ಪನ್ನವಾದ ಸಕಲ ಪ್ರಾಣಿಗಳಲ್ಲಿಯೂ ವ್ಯಾಪಿಸಿರುವನು; **ಜಾತವಿತ್ತೋ ವಾ ಜಾತಧನೋ ವಾ**—ಉತ್ಪನ್ನವಾದ ಸಮಸ್ತಧನವೂ ಇವನ ಬಳಿ ಇರುವುದು; **ಜಾತವಿದ್ಯೋ ವಾ ಜಾತಪ್ರಜ್ಞಾನಃ**— ಈ ಅಗ್ನಿಯು ಉತ್ಪನ್ನವಾಗುವಾಗಲೇ ಸಮಸ್ತ ವಿದ್ಯೆಗಳನ್ನು ಅಥವಾ ಜ್ಞಾನವನ್ನು ಹೊಂದಿರುವನೆಂದು ಅರ್ಥವು. ಇದಲ್ಲದೆ, **ಯತ್ತಜ್ಜಾತಃ ಪಶೂನವಿಂದತೇತಿ ತಜ್ಜಾತವೇದಸೋ ಜಾತವೇದಸ್ತ್ವಮಿತಿ ಬ್ರಾಹ್ಮಣಂ ತಸ್ಮಾತ್ ಸರ್ವಾನೃತೂನ್ ಪಶವೋಽಗ್ನಿಮಭಿಸರ್ಪಂತೀತಿ**—ಈ ಅಗ್ನಿಯು ಉತ್ಪನ್ನವಾದಕೂಡಲೆ ಇವನು ಪಶುಗಳನ್ನು ಪಡೆದನು ಎಂದರೆ ಅಗ್ನಿಯಲ್ಲಿ ಪಶುಗಳನ್ನು ಹೋಮಮಾಡುವರು. ಆದ್ದರಿಂದ ಈ ಕಾರಣಗಳಿಗಾಗಿ ಅಗ್ನಿಗೆ ಜಾತವೇದಾಃ ಎಂಬ ಹೆಸರು ಬಂದಿದೆ. ಈ ವಿಷಯದಲ್ಲಿ ಮೇಲಿನ ಬ್ರಾಹ್ಮಣ ವಾಕ್ಯವು ಇದನ್ನು ಸಮರ್ಥಿಸುವುದು. ಆದ್ದರಿಂದ ಸಮಸ್ತ ಋತುಗಳಲ್ಲಿಯೂ ಪಶುಗಳನ್ನು ಅಗ್ನಿಯಲ್ಲಿ ಹೋಮ ಮಾಡುವರು. ಈ ಜಾತವೇದಾಗ್ನಿಯನ್ನು ಸ್ತುತಿಸುವ ಋಕ್ಕು ಈ ರೀತಿ ಇದೆ—

> **ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ। ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ॥ ಜಾತವೇದಸ ಇತಿ ಜಾತವೇದಸ್ಯಾಂ ವೈವಂ ಜಾತವೇದಸೇಽರ್ಚಾಯ ಸುನವಾಮ ಸೋಮಮಿತಿ ಪ್ರಸವಾಯಾಭಿಷವಾಯ ಸೋಮಂ ರಾಜಾನಮಮೃತಮರಾತೀಯತೋ ಯಜ್ಞಾರ್ಥಮನಿಸ್ಯೋ ನಿದಹಾತಿ ನಿಶ್ಚಯೇನ ದಹತಿ ಭಸ್ಮೀ ಕರೋತಿ ಸೋಮೋ ದದದಿತ್ಯರ್ಥಃ। ಸ ನಃ ಪರ್ಷದತಿ ದುರ್ಗಾಣಿ ವಿಶ್ವಾನಿ ದುರ್ಗಮಾನಿ ಸ್ಥಾನಾನಿ ನಾವೇವ ಸಿಂಧುಂ ನಾವಾ ಸಿಂಧುಂ ಸಿಂಧುಂ ನಾವಾ ನದೀಂ ಜಲದುರ್ಗಾಂ ಮಹಾಕೂಲಾಂ ತಾರಯತಿ ದುರಿತಾತ್ಯಗ್ನಿರಿತಿ ದುರಿತಾನಿ ತಾರಯತಿ॥** (ನಿ. ೭-೨೦)

ಜಾತವೇದಾಗ್ನಿಗಾಗಿ ನಾವು ಸೋಮರಸವನ್ನು ಹಿಂಡುತ್ತೇವೆ. ಅಥವಾ ಈ ಜಾತವೇದಾಗ್ನಿಯು ಪೂಜಾರ್ಹನಾಗಿರುವುದರಿಂದ ಈ ಅಗ್ನಿಯ ಪ್ರೀತ್ಯರ್ಥವಾಗಿ ನಾವು ಸೋಮರಸವನ್ನು ಹಿಂಡುತ್ತೇವೆ. ನಾವು ಹಿಂಡಿ ಸಿದ್ಧಪಡಿಸುವ ಸೋಮರಸವನ್ನು ಅಥವಾ ರಾಜನಾದ ಈ ಸೋಮನನ್ನು ಅಗ್ನಿಯು ಯಜ್ಞಾರ್ಥವಾಗಿ ದಹಿಸುತ್ತಾನೆ ಎಂದರೆ ಸುಟ್ಟು ಭಸ್ಮಮಾಡುತ್ತಾನೆ. ಎಂದರೆ ಅಗ್ನಿಯು ಸೋಮಾಹುತಿಯನ್ನರ್ಪಿಸುವಂತೆ ಮಾಡುತ್ತಾನೆ. ನಾವೆಯು ಅಥವಾ ದೋಣಿಯು ನಮ್ಮನ್ನು ದಾಟಲಸಾಧ್ಯವಾದುದೂ, ಆಳವಾದುದೂ, ಅಗಲವಾದುದೂ, ಪ್ರವಾಹಗಳಿಂದ ಕೂಡಿರುವುದೂ ಆದ ನದಿಯನ್ನು ದಾಟಿಸುವಂತೆ ಈ ಜಾತವೇದಾಗ್ನಿಯು ನಮ್ಮನ್ನು ಅನೇಕ ಸಂಕಟಗಳಿಂದಲೂ ಪಾಪಗಳಿಂದಲೂ ದಾಟಿಸುತ್ತಾನೆ ಎಂದು ಮುಖ್ಯಾಭಿಪ್ರಾಯವು. ಈ ಜಾತವೇದಾಗ್ನಿಯನ್ನು ಪ್ರಶಂಸಿಸುವ ಇನ್ನೂ ಒಂದು ಋಕ್ಕನ್ನು ವಿವರಿಸಲಾಗುವುದು—

> **ಪ್ರ ನೂನಂ ಜಾತವೇದಸಮಶ್ವಂ ಹಿನೋತ ವಾಜಿನಂ। ಇದಂ ನೋ ಬರ್ಹಿರಾಸದೇ॥ ಪ್ರಹಿಣುತ ಜಾತವೇದಸಂ ಕರ್ಮಭಿಃ ಸಮಶ್ನುವಾನಮಪಿ ವೋಪಮಾರ್ಥೇ ಸ್ಯಾದಶ್ವಮಿವ ಜಾತವೇದಸಮಿತೀದಂ ನೋ ಬರ್ಹಿರಾಸೀದತ್ವಿತಿ॥** (ನಿ. ೭-೨೦)

ಎಲೈ ಋತ್ವಿಕ್ಕುಗಳೇ, ಸರ್ವವ್ಯಾಪ್ತನಾದ ಈ ಜಾತವೇದಾಗ್ನಿಯನ್ನು ನಿಮ್ಮ ಯಜ್ಞಾದಿ ಕರ್ಮಗಳಿಂದ ಸ್ತುತಿಸಿ ಪ್ರೇರಿಸಿರಿ ಅಥವಾ ಇಲ್ಲಿರುವ ಅಶ್ವಶಬ್ದವು ಉಪಮಾರ್ಥವಾಗಿಯೂ ಉಪಯೋಗಿಸಲ್ಪಟ್ಟಿರಬಹುದು. ಎಲೈ ಋತ್ವಿಕ್ಕುಗಳೇ, ಅಶ್ವವನ್ನು ಪ್ರೇರಿಸುವಂತೆ ಈ ಅಗ್ನಿಯನ್ನು ಸ್ತುತಿಗಳಿಂದ ಪ್ರೇರಿಸಿರಿ ಎಂದು ಇಲ್ಲಿ ಅರ್ಥವು. ಈ ಅಗ್ನಿಯು ನಾವು ಹರಡಿರುವ ಈ ದರ್ಭಾಸನದ ಮೇಲೆ ಕುಳಿತುಕೊಳ್ಳಲಿ ಎಂದಭಿಪ್ರಾಯವು

**ತದೇತದೇಕಮೇವ ಜಾತವೇದಸ್ಯಂ ಗಾಯತ್ರಂ ತೃಚಂ ದಶತತೀಷು ವಿದ್ಯತೇ ಯತ್ತು ಕಿಂಚಿ-ದಾಗ್ನೇಯಂ ತಜ್ಜಾತವೇದಸಾನಾಂ ಸ್ಥಾನೇ ಯುಜ್ಯತೇ ॥ (ನಿ. ೭-೨೦)**

ಋಗ್ವೇದದ ಹತ್ತು ಮಂಡಲಗಳಲ್ಲಿಯೂ ಜಾತವೇದಸ್ಸನ್ನು ಪ್ರತ್ಯಕ್ಷವಾಗಿ ಸ್ತುತಿಸುವ ಸೂಕ್ತವು ಇದೊಂದೇ, ಬೇರೆ ಇಲ್ಲ. ಇದು ಗಾಯತ್ರೀಛಂದಸ್ಕವಾಗಿರುವುದು. ಅಗ್ನಿಯಲ್ಲಿರುವ ಗುಣಗಳು ಜಾತವೇದಾಗ್ನಿಯಲ್ಲಿಯೂ ಇರುವುದರಿಂದ ಪಾರ್ಥಿವಾಗ್ನಿಯನ್ನೇ ಅನೇಕ ಸಂದರ್ಭಗಳಲ್ಲಿ ಜಾತವೇದಾಗ್ನಿಯೆಂದು ಸ್ತುತಿಸಲಾಗಿದೆ.

**ಸ ನ ಮನ್ಯೇತಾಯಮೇವಾಗ್ನಿರಿತ್ಯಪ್ಯೇತೇ ಉತ್ತರೇ ಜ್ಯೋತಿಷೀ ಜಾತವೇದಸೀ ಉಚ್ಯೇತೇ ತತೋ ನು ಮಧ್ಯಮಃ । ಅಭಿ ಪ್ರವಂತ ಸಮನೇವ ಯೋಷಾ ಇತಿ ತತ್ ಪುರಸ್ತಾದ್ವ್ಯಾಖ್ಯಾ-ತಮಥಾಸಾವಾದಿತ್ಯ ಉದುತ್ಯಂ ಜಾತವೇದಸಮಿತಿ ತದುಪರಿಷ್ಟಾದ್ವ್ಯಾಖ್ಯಾಸ್ಯಾಮಃ ॥**

**(ನಿ. ೭-೨೦)**

ಆದರೆ ಜಾತವೇದಾಗ್ನಿಯ ಗುಣಗಳೆಲ್ಲವೂ ಪಾರ್ಥಿವಾಗ್ನಿಗೆ ಮಾತ್ರ ಅನ್ವಯಿಸುವುದೆಂದು ತಿಳಿಯಬಾರದು. ಮೇಲಿರುವ ಎರಡು ಜ್ಯೋತಿಗಳೂ ಎಂದರೆ ವಿದ್ಯುದಗ್ನಿ ಮತ್ತು ಸೂರ್ಯ ಎಂಬ ಎರಡು ಜ್ಯೋತಿಗಳೂ ಜಾತವೇದಾಃ ಎಂದೇ ವ್ಯವಹರಿಸಲ್ಪಡುವವು **ಅಭಿ ಪ್ರವಂತ ಸಮನೇವ ಯೋಷಾ** ಎಂಬ ಶ್ರುತಿವಾಕ್ಯವು ಈ ವಿಷಯದಲ್ಲಿ ಮಧ್ಯಮಾಗ್ನಿ (ವೈದ್ಯುತಾಗ್ನಿ) ಯನ್ನು ಸೂಚಿಸುವುದಾಗಿದೆ. ಈ ವಾಕ್ಯವನ್ನು ನಾವು ಹಿಂದೆಯೇ ವಿವರಿಸಿದ್ದೇವೆ. ಈ ಜಾತವೇದಾಗ್ನಿಯು ಸೂರ್ಯನು ಎಂಬ ವಿಷಯದಲ್ಲಿ **ಉದುತ್ಯಂ ಜಾತವೇದಸಂ** ಎಂಬ (ಋ. ಸಂ. ೧–೫೦–೧) ಋಕ್ಕನ್ನು ಮುಂದೆ ವಿವರಿಸುತ್ತೇವೆ.

**ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ ಸೋಽಗ್ನಿರ್ಜಾತವೇದಾ ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ॥ (ನಿ. ೭–೨೦)**

ಅಗ್ನಿಯು ಮೂರು ಸ್ಥಾನಗಳಲ್ಲಿ ಪಾರ್ಥಿವಾಗ್ನಿ ವೈದ್ಯುತಾಗ್ನಿ ಸೂರ್ಯ ಎಂಬ ಹೆಸರುಗಳಿಂದ ಇದ್ದರೂ ಈ ಪಾರ್ಥಿವಾಗ್ನಿಯಲ್ಲಿಯೇ ಹವಿರಾದಿಗಳನ್ನು ಹೋಮಮಾಡುವರು. ಈ ಅಗ್ನಿಯೇ ಜಾತವೇದಾಃ ಎಂದು ಕರೆಯಲ್ಪಡುವುದು. ಉಳಿದ ಎರಡುವಿಧ ಅಗ್ನಿಗಳು ಎಂದರೆ ವೈದ್ಯುತಾಗ್ನಿ ಮತ್ತು ಸೂರ್ಯ ಇವರುಗಳಮೂಲಕ ಹೋಮ ಮಾಡುವುದಿಲ್ಲ. ಅವರನ್ನೂ ಪ್ರಸಂಗವಶದಿಂದ ಜಾತವೇದಶ್ಶಬ್ದದಿಂದ ಸ್ತುತಿಸಲಾಗಿರುವುದು. ಆದ್ದರಿಂದ ಜಾತ-ವೇದಾಗ್ನಿಯಲ್ಲಿ ಹವಿರಾದಿಗಳನ್ನು ಹೋಮಮಾಡುವುದು ಎಂದು ಹೇಳಿರುವ ಕಡೆಗಳಲ್ಲೆಲ್ಲಾ ಪಾರ್ಥಿವಾಗ್ನಿಯನ್ನೇ ನಿರ್ದೇಶಿಸಿರುವುದೆಂದು ತಿಳಿಯಬೇಕು.

॥ ಸಂಹಿತಾಪಾಠಃ ॥

ಅಸ್ಯ ಪ್ರ ಜಾತವೇದಸೋ ವಿಪ್ರವೀರಸ್ಯ ಮಿಾಳ್ಹುಷಃ ।
ಮಹೀಮಿಯರ್ಮಿ ಸುಷ್ಟುತಿಂ ॥ ೨ ॥

॥ ಪದಪಾಠಃ ॥

ಅಸ್ಯ । ಪ್ರ । ಜಾತऽವೇದಸಃ । ವಿಪ್ರऽವೀರಸ್ಯ । ಮಿಾಳ್ಹುಷಃ ।
ಮಹೀಂ । ಇಯರ್ಮಿ । ಸುऽಸ್ತುತಿಂ ॥ ೨ ॥

॥ ಸಾಯಣಭಾಷ್ಯಂ ॥

ಜಾತವೇದಸೋ ಜಾತಾನಾಂ ವೇದಿತುರ್ವಿಪ್ರವೀರಸ್ಯ । ವಿಪ್ರಾ ಮೇಧಾವಿನೋ ಯಜಮಾನಾ ವೀರಾಃ ಪುತ್ರಾ ಯಸ್ಯ । ತಾದೃಶಸ್ಯ ಮಿಾಳ್ಹುಷಃ ಸೇಕ್ತುರಸ್ಯಾಗ್ನೇರ್ಮಹೀಂ ಮಹತೀಂ ಸುಷ್ಟುತಿಂ ಶೋಭನಾಂ ಸ್ತುತಿಂ ಪ್ರೇಯರ್ಮಿ । ಪ್ರೇರಯಾಮಿ ॥ ಋ ಗತೌ ಜೌಹೋತ್ಯಾದಿಕಃ । ಅರ್ತಿಪಿಪರ್ತ್ಯೋರ್ಶ್ಚೇತ್ಯಭ್ಯಾಸಸ್ಯೇತ್ವಂ ॥

॥ ಪ್ರತಿಪದಾರ್ಥ ॥

**ವಿಪ್ರವೀರಸ್ಯ**—ಮೇಧಾವಿಗಳಾದ ಯಜಮಾನರೇ ಪುತ್ರರಾಗಿವುಳ್ಳ । **ಮೀಳ್ಹುಷಃ**—ಇಷ್ಟಾರ್ಥಗಳನ್ನು ಸುರಿಸುವ । **ಅಸ್ಯ ಜಾತವೇದಸಃ**—ಜಾದವೇದಾಖ್ಯನಾದ ಈ ಅಗ್ನಿಗೆ । **ಮಹೀಂ**—ಮಹತ್ತಾದ । **ಸುಷ್ಟುತಿಂ**—ಶೋಭನವಾದ ಸ್ತುತಿಯನ್ನು । **ಪ್ರ ಇಯರ್ಮಿ**—ಸ್ವಪ್ರೇರಣೆಯಿಂದ ಉಚ್ಚರಿಸುತ್ತೇನೆ.

॥ ಭಾವಾರ್ಥ ॥

ಮೇಧಾವಿಗಳಾದ ಯಜಮಾನರೇ ಪುತ್ರರಂತಿರುವ, ಇಷ್ಟಾರ್ಥಗಳನ್ನು ಸುರಿಸುವ ಈ ಜಾತವೇದನೆಂಬ ಅಗ್ನಿಗೆ ಮಹತ್ತಾದ ಮತ್ತು ಶೋಭನಕರವಾದ ಸ್ತುತಿಯನ್ನು ಪಠಿಸಿ ಅರ್ಪಿಸುತ್ತೇನೆ.

## English Translation.

I offer earnest and ample praise to this Jatavedas, the showerer (of benefits), whose sons are intelligent (worshippers).

॥ ಸಂಹಿತಾಪಾಠಃ ॥

ಯಾ ರುಚೋ ಜಾತವೇದಸೋ ದೇವತ್ರಾ ಹವ್ಯವಾಹನೀಃ ।
ತಾಭಿರ್ನೋ ಯಜ್ಞಮಿನ್ವತು ॥ ೩ ॥

॥ ಪದಪಾಠಃ ॥

ಯಾಃ । ರುಚಃ । ಜಾತಽವೇದಸಃ । ದೇವಽತ್ರಾ । ಹವ್ಯಽವಾಹನೀಃ ।

ತಾಭಿಃ । ನಃ । ಯಜ್ಞಂ । ಇನ್ವತು ॥ ೩ ॥

॥ ಸಾಯಣಭಾಷ್ಯಂ ॥

ಜಾತವೇದಸೋಽಗ್ನೇರ್ಯಾ ರುಚೋ ರೋಚಮಾನಾಃ ಕಾಲೀಕರಾಲೀಪ್ರಭೃತಯಃ ಸಪ್ತ ಜಿಹ್ವಾ ದೇವತ್ರಾ ದೇವಾನ್ಪ್ರತಿ ॥ ದೇವಮನುಷ್ಯಪುರುಷಪುರುಮರ್ತ್ಯೇಭ್ಯ ಇತ್ಯಾದಿನಾ ದ್ವಿತೀಯಾರ್ಥೇ ತ್ರಾಪ್ರತ್ಯಯಃ ॥ ಹವ್ಯವಾಹನೀರ್ಹವ್ಯಾನಾಂ ಹವಿಷಾಂ ವೋಢ್ರ್ಯಃ ಪ್ರಾಪಯಿತ್ರ್ಯೋ ಭವಂತಿ ॥ ವಾ ಛಂದಸೀತಿ ಜಸಿ ಪೂರ್ವಸವರ್ಣದೀರ್ಘಃ ॥ ತಾಭಿರ್ಜಿಹ್ವಾಭಿರ್ನೋಽಸ್ಮಾಕಂ ಯಜ್ಞಂ ಯಾಗಸಾಧನಂ ಹವಿರಿನ್ವತು । ದೇವಾನ್ಪ್ರಾಪಯತು ॥ ಇವಿ ವ್ಯಾಪ್ತೌ । ಇದಿತ್ತ್ವಾನ್ನುಮ್ ॥

॥ ಪ್ರತಿಪದಾರ್ಥ ॥

**ಜಾತವೇದಸಃ**—ಜಾತವೇದಾಖ್ಯನಾದ ಈ ಅಗ್ನಿಯ । **ಯಾಃ ರುಚಃ**—ಯಾವ ಪ್ರಕಾಶಮಾನವಾದ ಜ್ವಾಲೆಗಳು ಎಂದರೆ ಸಪ್ತಜಿಹ್ವೆಗಳು । **ದೇವತ್ರಾ**—ದೇವತೆಗಳನುದ್ದೇಶಿಸಿ । **ಹವ್ಯವಾಹನೀಃ**—ಹವಿಸ್ಸನ್ನು ವಹಿಸುವವೋ । **ತಾಭಿಃ**—ಆ ಜ್ವಾಲೆಗಳಿಂದ ಅಥವಾ ಜಿಹ್ವೆಗಳಿಂದ । **ನಃ**—ನಮ್ಮ । **ಯಜ್ಞಂ**—ಯಜ್ಞ ಸಾಧನವಾದ ಹವಿಸ್ಸನ್ನು । **ಇನ್ವತು**—ದೇವತೆಗಳ ಬಳಿಗೆ ಒಯ್ಯಲಿ.

॥ ಭಾವಾರ್ಥ ॥

ಜಾತವೇದಾಖ್ಯನಾದ ಈ ಅಗ್ನಿಯ ಪ್ರಕಾಶಮಾನವಾದ ಯಾವ ಜ್ವಾಲೆಗಳು ಅಥವಾ ಜಿಹ್ವೆಗಳು ದೇವತೆಗಳನ್ನು ಲಕ್ಷಿಸಿ ಹವಿಸ್ಸನ್ನು ವಹಿಸುವವೋ ಆ ಜ್ವಾಲೆಗಳಿಂದ ಅಥವಾ ಜಿಹ್ವೆಗಳಿಂದ ಅಗ್ನಿಯು ಯಾಗಸಾಧನವಾದ ನಮ್ಮ ಹವಿಸ್ಸನ್ನು ದೇವತೆಗಳ ಬಳಿಗೆ ಒಯ್ಯಲಿ.

## English Translation.

May he invest our sacrifice with those bright (flames) of Jatavedas, that are the bearers of the oblation to the gods.



## ನೂರ ಎಂಭತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಯಂ ಗೌರಿತಿ ತೃಚಮಷ್ಟಾತ್ರಿಂಶಂ ಸೂಕ್ತಂ ಗಾಯತ್ರಂ । ಸಾರ್ಪರಾಜ್ಞೀ ನಾಮರ್ಷಿಕಾ । ಸೈವ ದೇವತಾ ಸೂರ್ಯೋ ವೇತಿ । ತಥಾ ಚಾನುಕ್ರಾಂತಂ । ಅಯಂ ಗೌಃ ಸಾರ್ಪರಾಜ್ಞ್ಯಾತ್ಮದೈವತಂ

**ಸೌರ್ಯಂ ವೇತಿ॥ ಅವಿವಾಕ್ಯೇಽಹನಿ ಮಾನಸಗ್ರಹ ಏತತ್ಸೂಕ್ತಂ ಶಂಸನೀಯಂ। ಸೂತ್ರಿತಂ ಚ। ಆಯಂ ಗೌಃ ಪೃಶ್ನಿರಕ್ರಮೀದಿತ್ಯುಪಾಂಶು ತಿಸ್ರಃ ಪರಾಚೀಃ ಶಸ್ತ್ವಾ। ಆ. ೮-೧೩। ಇತಿ॥**

ಅನುವಾದವು— **ಆಯಂ ಗೌಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತೆಂಟನೆಯ ಸೂಕ್ತವು ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸಾರ್ಪರಾಜ್ಞೀ ಎಂಬ ಸ್ತ್ರೀಯು ಋಷಿಕೆಯು ; ಆ ಸ್ತ್ರೀಯೇ ದೇವತೆಯು ಅಥವಾ ಸೂರ್ಯನು ದೇವತೆಯು , ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ಆಯಂ ಗೌಃ ಸಾರ್ಪರಾಜ್ಞ್ಯಾತ್ಮ ದೈವತಂ ಸೌರ್ಯಂ ವಾ** ಎಂದು ಹೇಳಿರುವುದು. ಯೋಗದ **ಅವಿವಾಕ್ಯವೆಂಬ** ಹತ್ತನೆಯ ದಿವಸ ಮಾನಸಗ್ರಹಸ್ವೀಕಾರಕ್ಕಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಆಯಂ ಗೌಃ ಪೃಶ್ನಿರಕ್ರಮೀದ್ಯುಪಾಂಶು ತಿಸ್ರಃ ಪರಾಚೀಃ ಶಸ್ತ್ವಾ** ಎಂಬ ಸೂತ್ರದಿಂದ (ಆ. ೮-೧೨) ವಿವೃತವಾಗಿರುವುದು.

## ಸೂಕ್ತ—೧೮೯

ಮಂಡಲ-೧೦ ॥ ಅನುವಾಕ-೧೨ ॥ ಸೂಕ್ತ-೧೮೯ ॥
ಅಷ್ಟಕ-೮ ॥ ಅಧ್ಯಾಯ-೮ ॥ ವರ್ಗ-೪೭ ॥

**॥ ಸೂಕ್ತದಲ್ಲಿರುವ ಋಕ್ಸಂಖ್ಯೇ—೩ ॥**
**॥ ಋಷಿಃ—ಸಾರ್ಪರಾಜ್ಞೀ ॥**
**॥ ದೇವತಾಃ—ಸಾರ್ಪರಾಜ್ಞೀ ಸೂರ್ಯೋ ವಾ ॥**
**॥ ಛಂದಃ—ಗಾಯತ್ರೀ ॥**

**॥ ಸಂಹಿತಾಪಾಠಃ ॥**

ಆಯಂ ಗೌಃ ಪೃಶ್ನಿರಕ್ರಮೀದಸದನ್ಮಾತರಂ ಪುರಃ ।
ಪಿತರಂ ಚ ಪ್ರಯನ್ತ್ಸ್ವಃ ॥ ೧ ॥

**॥ ಪದಪಾಠಃ ॥**

**ಆ । ಅಯಂ । ಗೌಃ । ಪೃಶ್ನಿಃ । ಅಕ್ರಮೀತ್ । ಅಸದತ್ । ಮಾತರಂ । ಪುರಃ ।**
**ಪಿತರಂ । ಚ । ಪ್ರಯನ್ । ಸ್ವರಿತಿ ಸ್ವಃ ॥ ೧ ॥**

**॥ ಸಾಯಣಭಾಷ್ಯಂ ॥**

**ಗೌರ್ಗಮನಶೀಲಃ ಪೃಶ್ನಿಃ ಪ್ರಾಪ್ತವರ್ಣಃ ಪ್ರಾಪ್ತತೇಜಾ ಅಯಂ ಸೂರ್ಯ ಆಕ್ರಮೀತ್। ಆಕ್ರಾಂತವಾನ್। ಉದಯಾಚಲಂ ಪ್ರಾಪ್ತವಾನಿತ್ಯರ್ಥಃ। ಆಕ್ರಮ್ಯ ಚ ಪುರಃ ಪುರಸ್ತಾತ್ಪೂರ್ವಸ್ಯಾಂ ದಿಶಿ ಮಾತರಂ ಸರ್ವಭೂತಜಾತಸ್ಯ ನಿರ್ಮಾತ್ರೀಂ ಪೃಥಿವೀಮಸದತ್। ಆಸೀದತಿ। ಪ್ರಾಪ್ನೋತಿ॥ ಸದೇ-**

ಶ್ಯಾಂದಸೋ ಲುಙ್ । ಲೃದಿತ್ವಾಚ್ಚ್ಲೇರಙಾದೇಶಃ ॥ ತತಃ ಪಿತರಂ ಪಾಲಕಂ ದ್ಯುಲೋಕಂ । ಚಶಬ್ದಾದಂತರಿಕ್ಷಂ ಚ ಪ್ರಯನ್ ಪ್ರಕರ್ಷೇಣ ಶೀಘ್ರಂ ಗಚ್ಛನ್ ಸ್ವಃ ಸ್ವರಣಃ ಶೋಭನಗಮನೋ ಭವತಿ । ಯದ್ವಾ । ಪಿತರಂ ಸ್ವರ್ಗಲೋಕಂ ಪ್ರಯನ್ವರ್ತತೇ ॥

॥ ಪ್ರತಿಪದಾರ್ಥ ॥

**ಗೌಃ**—ಗಮನಶೀಲನಾದವನೂ । **ಪೃಶ್ನಿಃ**—ನಾನಾವಿಧ ಕಿರಣಗಳುಳ್ಳವನೂಆದ। **ಅಯಂ**—ಈ ಸೂರ್ಯನು । **ಆ ಅಕ್ರಮೀತ್**—ಪ್ರಾಪ್ತನಾಗಿದ್ದಾನೆ (ಮತ್ತು) । **ಪುರಃ**—ಪೂರ್ವದಿಕ್ಕಿನಲ್ಲಿ । **ಮಾತರಂ**—ಸರ್ವ ಪ್ರಾಣಿಗಳಿಗೂ ನಿರ್ಮಾತ್ರಿಯಾದ ಪೃಥಿವಿಯ ಬಳಿ। **ಅಸದತ್**—ಕುಳಿತಿದ್ದಾನೆ (ಅನಂತರ) । **ಪಿತರಂ**—ಪಾಲಕನಾದ ದ್ಯುಲೋಕವನ್ನು ಲಕ್ಷಿಸಿ । **ಪ್ರಯನ್**—ಶೀಘ್ರವಾಗಿ ಹೋಗುತ್ತಾ । **ಸ್ವಃ**—ಶೋಭನಗಮನವುಳ್ಳವನಾಗಿ ಸಂಚರಿಸುತ್ತಾನೆ.

॥ ಭಾವಾರ್ಥ ॥

ಗಮನಶೀಲನಾದವನೂ, ನಾನಾವಿಧ ತೇಜಸ್ಸಿನಿಂದ ಬೆಳಗುವವನೂ ಆದ ಈ ಸೂರ್ಯನು ಈಗ ಉದಯಿಸಿ ಪ್ರಾಪ್ತನಾಗಿದ್ದಾನೆ ಮತ್ತು ಮುಂಭಾಗದಲ್ಲಿ ಎಂದರೆ ಪೂರ್ವದಿಕ್ಕಿನಲ್ಲಿ ಸರ್ವಪ್ರಾಣಿಗಳಿಗೂ ನಿರ್ಮಾತೃವಾದ ಪೃಥಿವಿಯ ಬಳಿ ಕುಳಿತಿದ್ದಾನೆ. ಅನಂತರ ತನ್ನ ತಂದೆಯಾದ ದ್ಯು (ಸ್ವರ್ಗ) ಲೋಕವನ್ನು ಲಕ್ಷಿಸಿ ಉತ್ತಮಗತಿಯಿಂದ (ಪಶ್ಚಿಮಾಭಿಮುಖವಾಗಿ) ಶೀಘ್ರವಾಗಿ ಸಂಚರಿಸುತ್ತಾನೆ.

English Translation

This moving many-coloured (Sun) has arrived, he has sat down before his mother (earth) in the east, and advances to his father heaven.

॥ ಸಂಹಿತಾಪಾಠಃ ॥

ಅಂತಶ್ಚರತಿ ರೋಚನಾಸ್ಯ ಪ್ರಾಣಾದಪಾನತೀ ।

ವ್ಯಖ್ಯನ್ಮಹಿಷೋ ದಿವಂ ॥ ೨ ॥

॥ ಪದಪಾಠಃ ॥

ಅಂತರಿತಿ । ಚರತಿ । ರೋಚನಾ । ಅಸ್ಯ । ಪ್ರಾಣಾತ್ । ಅಪಽಅನತೀ ।

ವಿ । ಅಖ್ಯತ್ । ಮಹಿಷಃ । ದಿವಂ ॥ ೨ ॥

॥ ಸಾಯಣಭಾಷ್ಯಂ ॥

ಅಸ್ಯ ಸೂರ್ಯಸ್ಯ ರೋಚನಾ ರೋಚಮಾನಾ ದೀಪ್ತಿರಂತಃ ಶರೀರಮಧ್ಯೇ ಮುಖ್ಯಪ್ರಾಣಾತ್ಮನಾ ಚರತಿ । ವರ್ತತೇ । ಕಿಂ ಕುರ್ವತೀ । ಪ್ರಾಣಾದಪಾನತೀ । ಮುಖ್ಯಪ್ರಾಣಸ್ಯ ಪ್ರಾಣಾದ್ಯಾಃ ಪಂಚ

ವೃತ್ತಯಃ । ತತ್ರ ಪ್ರಾಣನಂ ನಾಡೀಭಿರೂರ್ಧ್ವಂ ವಾಯೋರ್ನಿರ್ಗಮನಂ । ತಥಾವಿಧಾತ್ಪ್ರಾಣಾತ್ಪ್ರಾಣನಾದನಂತರಮಪಾನತೀ । ಅಪಾನನಂ ನಾಡೀಭಿರವಾಙ್ಮುಖಂ ವಾಯೋರ್ನಯನಂ । ತತ್ಕುರ್ವತೀ ॥ ಅಪಪೂರ್ವಾದನಿತೇರ್ಲಟಃ ಶತೃ । ಅದಾದಿತ್ವಾಚ್ಛಪೋ ಲುಕ್ । ಉಗಿತಶ್ಚೇತಿ ಙೀಪ್ । ಶತುರನುಮ ಇತಿ ನದ್ಯಾ ಉದಾತ್ತತ್ವಂ ॥ ಯದ್ವಾ । ಅಂತರ್ದ್ಯಾವಾಪೃಥಿವ್ಯೋರ್ಮಧ್ಯೇಽಸ್ಯ ಸೂರ್ಯಸ್ಯ ರೋಚನಾ ರೋಚಮಾನಾ ದೀಪ್ತಿಶ್ಚರತಿ । ಗಚ್ಛತಿ ॥ ರುಚ ದೀಪ್ತೌ । ಅನುದಾತ್ತೇತಶ್ಚ ಹಲಾದೇರಿತಿ ಯುಚ್ ॥ ಕಿಂ ಕುರ್ವತೀ । ಪ್ರಾಣಾತ್ಪ್ರಾಣನಾದುದಯಾನಂತರಮಪಾನತೀ ಸಾಯಂಸಮಯೇಽಸ್ತಂ ಗಚ್ಛಂತೀ । ಈದೃಶ್ಯಾ ದೀಪ್ತ್ಯಾ ಯುಕ್ತಃ । ಅತ ಏವ ಮಹಿಷೋ ಮಹಾನ್ಸೂರ್ಯೋ ದಿವಮಂತರಿಕ್ಷಮುದಯಾಸ್ತಮಯಯೋರ್ಮಧ್ಯೇ ವ್ಯಖ್ಯತ್ । ವಿಚಷ್ಟೇ । ಪ್ರಕಾಶಯತಿ ॥ ಮಹೇರಟಿಮಹ್ಯೋಽಷ್ಟಿಷಚ್ । ಉ. ೧-೪೬ । ಇತ್ಯೌಣಾದಿಕಷ್ಟಿಷಚ್‌ಪ್ರತ್ಯಯಃ । ಚಕ್ಷಿಙಃ ಖ್ಯಾಞ್ । ಛಾಂದಸೇ ಲುಙ್ಯಸ್ಯತಿವಕ್ತೀತ್ಯಾದಿನಾ ಚ್ಲೇರಙಾದೇಶಃ ॥

॥ ಪ್ರತಿಪದಾರ್ಥ ॥

**ಅಸ್ಯ**—ಈ ಸೂರ್ಯನ । **ರೋಚನಾ**—ಪ್ರಕಾಶಿಸುತ್ತಿರುವ ದೀಪ್ತಿಯು । **ಅಂತಃ**—ಶರೀರಮಧ್ಯದಲ್ಲಿ । **ಪ್ರಾಣಾತ್**—ಊರ್ಧ್ವಗತಿಯುಳ್ಳ ಪ್ರಾಣವಾಯುವಿನಿಂದ । **ಅಪಾನತೀ** ಅಧೋಗಮನವುಳ್ಳ ಅಪಾನವಾಯುವನ್ನು ಸೇರಿಸುತ್ತಾ । **ಚರತಿ**—ಇರುತ್ತದೆ (ಅಥವಾ) । [**ಅಸ್ಯ**—ಈ ಸೂರ್ಯನ । **ರೋಚನಾ**—ಪ್ರಕಾಶಮಾನವಾದ ದೀಪ್ತಿಯು । **ಪ್ರಾಣಾತ್**—ಉದಯಕಾಲದಿಂದ । **ಅಪಾನತೀ**—ಸಾಯಂಕಾಲ ಪರ್ಯಂತರ । **ಚರತಿ**—ಇರುತ್ತದೆ ಅಥವಾ ಸಂಚರಿಸುತ್ತದೆ] । **ಮಹಿಷಃ**—ಮಹಾಮಹಿಮನಾದ ಈ ಸೂರ್ಯನು । **ದಿವಂ**—(ಉದಯಾಸ್ತಮಯಗಳ ಮಧ್ಯಕಾಲದಲ್ಲಿ) ಎತ್ತರವಾದ ಸ್ವರ್ಗದಲ್ಲಿ । **ವಿ ಅಖ್ಯನ್**—ವಿಶೇಷರೀತಿಯಿಂದ ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ಈ ಸೂರ್ಯನ ಪ್ರಕಾಶಮಾನವಾದ ತೇಜಸ್ಸು ಶರೀರಮಧ್ಯದಲ್ಲಿ ಊರ್ಧ್ವಗತಿಯುಳ್ಳ ಪ್ರಾಣವಾಯುವಿನಿಂದ ಅಧೋಗಮನವಿರುವ ಅಪಾನವಾಯುವನ್ನು ಒಂದಾಗಿಸೇರುತ್ತದೆ ಅಥವಾ ದ್ಯಾವಾಪೃಥಿವಿಗಳ ಮಧ್ಯದಲ್ಲಿ ಉದಯಕಾಲದಿಂದ ಅಸ್ತಮಯಕಾಲದವರೆಗೂ ಇರುತ್ತದೆ. ಮಹಾಮಹಿಮನಾದ ಈ ಸೂರ್ಯನು ಉದಯಾಸ್ತಮಯಕಾಲಗಳ ಮಧ್ಯದಲ್ಲಿ ಬಹು ಎತ್ತರವಾದ ಸ್ವರ್ಗದಲ್ಲಿ (ಅಂತರಿಕ್ಷದಲ್ಲಿ) ಬಹಳ ಪ್ರಕಾಶಮಾನವಾಗಿ ಬೆಳಗುತ್ತಾನೆ.

## English Translation

His radiance penetrates internally, drawing (the air) down (through the lungs) after having sent it up, the mighty one beholds the sky.

॥ ವಿಶೇಷವಿಷಯಗಳು ॥

ಶರೀರದಲ್ಲಿ ಮುಖ್ಯಪ್ರಾಣವು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂದು ಐದುವಿಧ ವಾಯುಗಳ ರೂಪದಲ್ಲಿರುವುದು. ಅವುಗಳಲ್ಲಿ ಪ್ರಾಣ ಅಪಾನ ಎಂಬ ವಾಯುಗಳೇ ಮುಖ್ಯವು ಪ್ರಾಣವಾಯುವು ನಾಡಿಗಳ

ಮೂಲಕ ಶರೀರದ ಊರ್ಧ್ವಭಾಗಕ್ಕೆ ಸಂಚರಿಸುವುದು. ಹಾಗೆಯೇ ಅಪಾನವಾಯು ಅಧೋಭಾಗಕ್ಕೆ ಹೋಗುವುದು. ಪ್ರಾಣವಾಯುವನ್ನು ಕೆಳಭಾಗಕ್ಕೂ ಅಪಾನವಾಯುವನ್ನು ಊರ್ಧ್ವಭಾಗಕ್ಕೂ ತಂದು ಮಧ್ಯದಲ್ಲಿ (ನಾಭಿಪ್ರದೇಶದಲ್ಲಿ) ಸೇರಿಸಿದರೆ ತೇಜಸ್ಸೂ ಆರೋಗ್ಯವೂ ಅಭಿವೃದ್ಧಿಯಾಗುವುವು ಎಂದು ಯೋಗಶಾಸ್ತ್ರದ ಸಿದ್ಧಾಂತವು. ಈ ಕಾರ್ಯವನ್ನು ಸೂರ್ಯನ ದೀಪ್ತಿಯು ಮಾಡುವುದೆಂದು ಇಲ್ಲಿ ಹೇಳಿದೆ. ಇದಲ್ಲದೆ ಪ್ರಾಣಾಪಾನಗಳಿಗೆ ಉದಯಾಸ್ತಮಯ ಸಂಜ್ಞೆ ಇರುವುದೆಂದು ವಿವರಿಸಿ ಅರ್ಥಮಾಡಿದೆ. ಏಕೆಂದರೆ ಸೂರ್ಯನು ಉದಯಿಸುವಾಗ ಸಮಸ್ತ ಪ್ರಾಣಿಗಳ ಪ್ರಾಣಗಳನ್ನು, ಎಂದರೆ ಚೇತನಾಶಕ್ತಿಯನ್ನು ತನ್ನ ಸಂಗಡಲೇ ತಂದು ಉದಯಿಸುವನೆಂದೂ ಅಸ್ತಮಯಕಾಲದಲ್ಲಿ ಆ ಪ್ರಾಣಿಗಳ ಪ್ರಾಣಗಳನ್ನು ತನ್ನ ಸಂಗಡಲೇ ತೆಗೆದುಕೊಂಡು ಹೋಗುವನೆಂದೂ ಶ್ರುತಿಯಲ್ಲಿ ಹೇಳಿದೆ—

**ಯೋಽಸೌ ತಪನ್ನುದೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ........।**
**ಅಸೌ ಯೋಽಸ್ತಮೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯಸ್ತಮೇತಿ ॥**

(ತೈ. ಆ. ೧-೧೪-೧)

ಸೂರ್ಯನು ಪ್ರತಿದಿನವೂ ಉದಯಿಸುವಾಗ ಸಮಸ್ತಪ್ರಾಣಿಗಳ ಪ್ರಾಣಗಳನ್ನು (ಚೇತನಾಶಕ್ತಿಯನ್ನು) ತನ್ನೊಡನೆ ತರುವನು ಮತ್ತು ಅಸ್ತಂಗತನಾಗುವಾಗ ಸಮಸ್ತ ಪ್ರಾಣಿಗಳ ಪ್ರಾಣಗಳನ್ನು ತನ್ನೊಡನೆಯೇ ತೆಗೆದುಕೊಂಡು ಹೋಗುವನು ಎಂದು ಇಲ್ಲಿ ಹೇಳಿದೆ.

॥ ಸಂಹಿತಾಪಾಠಃ ॥

ತ್ರಿಂಶದ್ಧಾಮ ವಿರಾಜತಿ ವಾಕ್ಪತಂಗಾಯ ಧೀಯತೇ ।
ಪ್ರತಿ ವಸ್ತೋರಹ ದ್ಯುಭಿಃ ॥ ೩ ॥

॥ ಪದಪಾಠಃ ॥

ತ್ರಿಂಶತ್ । ಧಾಮ । ವಿ । ರಾಜತಿ । ವಾಕ್ । ಪತಂಗಾಯ । ಧೀಯತೇ ।
ಪ್ರತಿ । ವಸ್ತೋಃ । ಅಹ । ದ್ಯುಽಭಿಃ ॥ ೩ ॥

॥ ಸಾಯಣಭಾಷ್ಯಂ ॥

ತ್ರಿಂಶದ್ಧಾಮ ಧಾಮಾನಿ ಸ್ಥಾನಾನಿ ॥ ವಚನವ್ಯತ್ಯಯಃ ॥ ವಸ್ತೋರ್ವಾಸರಸ್ಯಾಹೋರಾತ್ರಸ್ಯಾವಯವಭೂತಾನಿ । ಅಹಶಬ್ದೋಽವಧಾರಣೇ । ದ್ಯುಭಿಃ ಸೂರ್ಯಸ್ಯ ದೀಪ್ತಿಭಿರೇವ ವಿ ರಾಜತಿ । ವಿರಾಜಂತೇ । ವಿಶೇಷೇಣ ದೀಪ್ಯಂತೇ ॥ ವ್ಯತ್ಯಯೇನೈಕವಚನಂ ॥ ಮುಹೂರ್ತಾನ್ಯತ್ರ ಧಾಮಾನ್ಯುಚ್ಯಂತೇ । ಪಂಚದಶ ರಾತ್ರೇಃ ಪಂಚದಶಾಹ್ನಃ । ಪತಂಗಾಯ । ಪತತಿ ಗಚ್ಛತೀತಿ ಪತಂಗಃ ಸೂರ್ಯಃ । ತಸ್ಮೈ ಶ್ರುತಿರೂಪಾ ವಾಕ್ ಪ್ರತಿ ಧೀಯತೇ । ಪ್ರತಿಮುಖಂ ಸ್ತೋತೃಭ್ಯಃ ಕ್ರಿಯತೇ । ಯದ್ವಾ । ವಸ್ತೋರಹನಿ ತ್ರಿಂಶದ್ಧಾಮಾನಿ । ಘಟಿಕಾಭಿಪ್ರಾಯಮೇತತ್ । ತ್ರಿಂಶದ್ಘಟಿಕಾಃ ॥ ಅತ್ಯಂತಸಂಯೋಗೇ ದ್ವಿತೀಯಾ ॥

ಏತಾವಂತಂ ಕಾಲಂ ದ್ಯುಭಿರ್ದೀಪ್ತಿಭಿರಸೌ ಸೂರ್ಯೋ ವಿ ರಾಜತಿ । ವಿಶೇಷೇಣ ದೀಪ್ಯತೇ । ತಸ್ಮಿಂಶ್ಚ ಸಮಯೇ ವಾಕ್ ತ್ರಯೀರೂಪಾ ತಸ್ಮೈ ಸೂರ್ಯರೂಪಾಯ ಪತಂಗಾಯ ಪ್ರತಿ ಧೀಯತೇ । ಪ್ರತಿಮುಖಂ ಧಾರ್ಯತೇ । ಸ್ತೂಯತೇ ಸೂರ್ಯಃ ಸರ್ವತ ಇತ್ಯರ್ಥಃ । ಶ್ರೂಯತೇ ಹಿ । ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನ ಇತ್ಯಾದಿ । ತೈ. ಬ್ರಾ. ೩-೧೨-೯-೧ ॥ ಯದಾ ತ್ವಿದಂ ಸೂಕ್ತಂ ಸಾರ್ಪರಾಜ್ಞ್ಯಾ ಆತ್ಮಸ್ತುತಿಃ ತದಾ ಸೂರ್ಯಾತ್ಮನಾ ಸ್ತೂಯತ ಇತ್ಯೇವಗಂತವ್ಯಂ ॥

॥ ಪ್ರತಿಪದಾರ್ಥ ॥

**ವಸ್ತೋಃ** – ಅಹೋರಾತ್ರಿಗಳಿಂದ ಕೂಡಿದ ಒಂದು ದಿವಸದಲ್ಲಿರುವ । **ತ್ರಿಂಶದ್ಧಾಮ**—ಮೂವತ್ತು ಸ್ಥಾನಗಳು ಎಂದರೆ ಮೂವತ್ತು ಮುಹೂರ್ತಗಳು । **ದ್ಯುಭಿಃ**—ಸೂರ್ಯನ ಕಾಂತಿಗಳಿಂದ । **ವಿ ರಾಜತಿ**—ಬೆಳಗುತ್ತವೆ । (ಅಥವಾ । [**ವಸ್ತೋಃ**— ಒಂದು ಹಗಲಿನಲ್ಲಿರುವ । **ತ್ರಿಂಶದ್ಧಾಮ**--ಮೂವತ್ತು ಘಳಿಗೆಗಳು । **ದ್ಯುಭಿಃ**—ಸೂರ್ಯನ ಕಾಂತಿಗಳಿಂದ । **ವಿ ರಾಜತಿ**—ಬೆಳಗುತ್ತವೆ] (ಇಂತಹ ಮಹಿಮಾನ್ವಿತನಾದ) । **ಪತಂಗಾಯ**—ಸಂಚಾರಶೀಲನಾದ ಸೂರ್ಯನಿಗೋಸ್ಕರ । **ವಾಕ್** – (ವೇದಮಂತ್ರರೂಪವಾದ) ಸ್ತುತಿವಾಕ್ಯವು । **ಪ್ರತಿ ಧೀಯತೇ**—ಸ್ತೋತೃಜನರಿಂದ ಸೂರ್ಯಾಭಿಮುಖವಾಗಿ ಪರಿಸಲ್ಪಡುತ್ತದೆ.

॥ ಭಾವಾರ್ಥ ॥

ಒಂದು ದಿವಸದಲ್ಲಿರುವ (ಹಗಲು ಮತ್ತು ರಾತ್ರಿಸೇರಿ) ಮೂವತ್ತು ಮಹೂರ್ತಗಳು ಅಥವಾ ಒಂದು ಹಗಲಿನಲ್ಲಿರುವ ಮೂವತ್ತು ಘಳಿಗೆಗಳು ಸೂರ್ಯನ ಕಾಂತಿಯಿಂದ ಬೆಳಗುತ್ತವೆ. ಇಂತಹ ಸಂಚಾರಶೀಲನಾದ ಸೂರ್ಯನಿಗೋಸ್ಕರ ಸ್ತುತಿರೂಪವಾದ ವೇದವಾಕ್ಯವು ಸ್ತೋತೃಜನರಿಂದ ಸೂರ್ಯಾಭಿಮುಖವಾಗಿ ಪರಿಸಲ್ಪಡುತ್ತದೆ.

## English Translation

The thirty stations of the day and night shine with (the sun's) rays, the voice (of praise) is addressed to the Sun.



## ನೂರ ತೊಂಭತ್ತನೆಯ ಸೂಕ್ತ

## ಪೀಠಿಕೆ.

ಈ ಸೂಕ್ತವು ಅಘಮರ್ಷಣಋಷಿದೃಷ್ಟವಾದುದು. ಈ ಸೂಕ್ತದ ವಿಷಯದಲ್ಲಿ ಬೃಹದ್ದೇವತಾಕಾರರಾದ ಶೌನಕಮಹರ್ಷಿಗಳು ಈ ರೀತಿ ಹೇಳಿದ್ದಾರೆ—

ಭಾವವೃತ್ತಂ ಪರಂ ಸೂಕ್ತಂ ದದರ್ಶಾಥಾಘಮರ್ಷಣಃ ॥ ೯೧ ॥
ಪರಂ ನ ವಿದ್ಯತೇ ಯಸ್ಮಾಚ್ಛಾಂತ್ಯೈ ವಾ ಪಾವನಾಯ ವಾ ।
ಯಥಾಶ್ವಮೇಧಃ ಕ್ರತುರಾಟ್ ಸರ್ವಪಾಪಪ್ರಣೋದನಃ ॥ ೯೨ ॥

ತಥಾಘಮರ್ಷಣಂ ಬ್ರಹ್ಮ ಸರ್ವರಿಪ್ರಪ್ರಣೋದನಂ ।

(ಬೃ. ದೇ. ೮-೯೧, ೯೨)

ಅಘಮರ್ಷಣ ಎಂಬ ಋಷಿಯು ಭಾವವೃತ್ತದೇವತಾಕವಾದ ಈ ಸೂಕ್ತಕ್ಕೆ ದ್ರಷ್ಟೃವಾಗಿರುವನು. ಶಾಂತ್ಯರ್ಥವಾದುದೂ ಶುದ್ಧಿಕಾರಕವಾದುದೂ ಆದ ಮತ್ತೊಂದು ಸೂಕ್ತವಿರುವುದಿಲ್ಲ. ಯಾಗಗಳಲ್ಲೆಲ್ಲಾ ಅಶ್ವಮೇಧಯಾಗವು ಯಾವರೀತಿ ಶ್ರೇಷ್ಠವಾಗಿರುವುದೋ ಮತ್ತು ಸುಮಸ್ತ ಪಾಪಗಳನ್ನು ಪರಿಹಾರಮಾಡುವುದೋ ಅದರಂತೆ ಈ ಅಘಮರ್ಷಣಋಷಿ ದೃಷ್ಟವಾದ ಸೂಕ್ತವು ಸೂಕ್ತಗಳಲ್ಲೆಲ್ಲಾ ಶ್ರೇಷ್ಠವೆನಿಸಿರುವುದಲ್ಲದೆ ಮನಸ್ಸಿಗೆ ಶಾಂತಿಯನ್ನೂ ಶರೀರಕ್ಕೆ ಶುದ್ಧಿಯನ್ನೂ ಉಂಟುಮಾಡುವುದು. ಋಗ್ವಿಧಾನವೆಂಬಗ್ರಂಥದಲ್ಲಿಯೂ ಸಹ—

ಪವಿತ್ರಾಣಾಂ ಪವಿತ್ರಸ್ತು ಜಪೇದೇವಾಘಮರ್ಷಣಂ ।
ಅಪಃ ಪ್ರವಿಶ್ಯ ಯಶ್ಚೈತತ್ ತ್ರಿಃ ಪಠೇತ್ ಸುಸಮಾಹಿತಃ ॥ ೧೨೧ ॥
ಯಥಾಶ್ವಮೇಧಾವಭೃಥಸ್ತಾದೃಶಂ ಮನುರಬ್ರವೀತ್ ।
ಅಪ್ಸು ಚೈವ ನಿಮಜ್ಜಿತ್ವಾ ತ್ರಿಃ ಪಠೇದಘಮರ್ಷಣಂ ॥ ೧೨೨ ॥
ಯಥಾಶ್ವಮೇಧಾವಭೃಥ ಏವಂ ತದೃಷಿರಬ್ರವೀತ್ ।
ಯಥಾಶ್ವಮೇಧಃ ಕ್ರತುರಾಟ್ ಸರ್ವಪಾಪಾಪನೋದನಃ ॥ ೧೨೩ ॥
ತಥಾಘಮರ್ಷಣಂ ಸೂಕ್ತಂ ಸರ್ವಪಾಪಾಪನೋದನಂ ॥

(ಋಗ್ವಿಧಾನ. ಅಧ್ಯಾಯ. ೪. ಶ್ಲೋ. ೧೨೧-೧೨೩)

ಎಂದು ಹೇಳಿದೆ. ಪವಿತ್ರವಾದ ಸೂಕ್ತಗಳೆಲ್ಲೆಲ್ಲಾ ಅತ್ಯಂತಪವಿತ್ರವಾದ ಈ ಅಘಮರ್ಷಣಋಷಿದೃಷ್ಟವಾದ ಸೂಕ ವನ್ನು ಜಪಿಸಬೇಕು. ಜಪಮಾಡಬೇಕಾದರೆ ಶುಚಿರ್ಭೂತನಾಗಿ ನಿಯಮದಿಂದ ನೀರಿನಲ್ಲಿ ನಿಂತುಕೊಂಡು ಮೂರಾ ವರ್ತಿ ಈ ಸೂಕ್ತವನ್ನು ಜಪಮಾಡಬೇಕು. ನೀರಿನಲ್ಲಿ ನಿಂತುಕೊಂಡು ಈ ಸೂಕ್ತವನ್ನು ಜಪಮಾಡಿದರೆ ಅಶ್ವಮೇಧ ಯಾಗಮಾಡಿ ಅವಭೃಥಸ್ನಾನಮಾಡಿದ ಫಲವು ಬರುವುದು ಎಂದು ಮನುವೇ ಹೇಳಿರುವನು. ಅಶ್ವಮೇಧಯಜ್ಞವು ಯಾವರೀತಿ ಸಮಸ್ತಯಾಗಗಳಲ್ಲಿಯೂ ಶ್ರೇಷ್ಠವೆನಿಸಿ ಸಮಸ್ತಪಾಪಗಳನ್ನು ನಾಶಮಾಡುವುದೋ ಅದರಂತೆ ಈ ಅಘಮರ್ಷಣಋಷಿದೃಷ್ಟವಾದ ಈ ಸೂಕ್ತಜಪವು ಸಮಸ್ತಪಾಪಗಳನ್ನು ಪರಿಹರಿಸುವುದು.

॥ ಸಾಯಣಭಾಷ್ಯಂ ॥

**ಋತಮಿತಿ ತೃಚಮೇಕೋನಚತ್ವಾರಿಂಶಂ ಸೂಕ್ತಂ ಮಧುಚ್ಛಂದಸಃ ಪುತ್ರಸ್ಯಾಘಮರ್ಷಣಸ್ಯಾರ್ಷಮಾನುಷ್ಟುಭಂ । ರಾತ್ರ್ಯಾದೀನಾಂ ಭಾವಾನಾಂ ಸೃಷ್ಟ್ಯಾದಿಪ್ರತಿಪಾದಕತ್ವಾತ್ತಾದೃಗ್ರೂಪ ಏವಾರ್ಥೋ ದೇವತಾ । ತಥಾ ಚಾನುಕ್ರಾಂತಂ । ಋತಂ ಮಾಧುಚ್ಛಂದಸೋಽಘಮರ್ಷಣೋ ಭಾವವೃತ್ತಮಾನುಷ್ಟುಭಂ ತ್ವಿತಿ । ಲಿಂಗಾದ್ವಿನಿಯೋಗೋಽವಗಂತವ್ಯಃ ॥**

ಅನುವಾದವು— **ಋತಂ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂವತ್ತೊಂಭತ್ತನೆಯ ಸೂಕ್ತವು. ಇದರಲ್ಲಿ ಮೂರುಋಕ್ಕುಗಳಿರುವವು. ಈ ಸೂಕ್ತಕ್ಕೆ ಮಧುಚ್ಛಂದಾಃ ಎಂಬ ಋಷಿಯ ಪುತ್ರನಾದ ಅಘಮರ್ಷಣನೆಂಬುವನು ಋಷಿಯು; ಈ ಸೂಕ್ತದಲ್ಲಿ ರಾತ್ರ್ಯಾದಿ ಭಾವಗಳ ಸೃಷ್ಟಿಕ್ರಮವನ್ನು ಪ್ರತಿಪಾದಿಸಿರುವುದ

ರಿಂದ ಈ ವಿಧವಾದ ಸೃಷ್ಟಿರೂಪವಾದ ಅರ್ಥವೇ ಈ ಸೂಕ್ತಕ್ಕೆ ದೇವತೆಯು; ಅನುಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಋತಂ ಮಾಧುಚ್ಛಂದಸೋಽಘಮರ್ಷಣೋ ಭಾವವೃತ್ತಮಾನುಷ್ಟುಭಂ ತು** ಎಂದು ಹೇಳಿರುವುದು. ವಿನಿಯೋಗವನ್ನು ಅರ್ಥಾನುಸಾರವಾಗಿ ತಿಳಿದುಕೊಳ್ಳಬೇಕು

## ಸೂಕ್ತ—೧೯೦

ಮಂಡಲ—೧೦ ॥ ಅನುವಾಕ—೧೨ ॥ ಸೂಕ್ತ—೧೯೦ ॥
ಅಷ್ಟಕ—೮ ॥ ಅಧ್ಯಾಯ—೮ ॥ ವರ್ಗ—೪೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥
॥ ಋಷಿಃ—ಅಘಮರ್ಷಣೋ ಮಾಧುಚ್ಛಂದಸಃ ॥
॥ ದೇವತಾ - ಭಾವವೃತ್ತಂ ॥
॥ ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಋತಂ ಚ ಸತ್ಯಂ ಚಾಭೀದ್ಧಾತ್ತಪಸೋಽಧ್ಯಜಾಯತ ।
ತತೋ ರಾತ್ರ್ಯಜಾಯತ ತತಃ ಸಮುದ್ರೋ ಅರ್ಣವಃ ॥ ೧ ॥

॥ ಪದಪಾಠಃ ॥

ಋತಂ ಚ ಸತ್ಯಂ ಚಾಭೀದ್ಧಾತ್ತಪಸೋಽಧ್ಯಜಾಯತ ।
ತತೋ ರಾತ್ರ್ಯಜಾಯತ ತತಃ ಸಮುದ್ರೋ ಅರ್ಣವಃ ॥ ೧ ॥

॥ ಸಾಯಣಭಾಷ್ಯಂ ॥

ಋತಮಿತಿ ಸತ್ಯನಾಮ । ಋತಂ ಮಾನಸಂ ಯಥಾರ್ಥಸಂಕಲ್ಪನಂ ಸತ್ಯಂ ವಾಚಿಕಂ ಯಥಾರ್ಥಭಾಷಣಂ । ಚಕಾರಾಭ್ಯಾಮನ್ಯದಪಿ ಶಾಸ್ತ್ರೀಯಂ ಧರ್ಮಜಾತಂ ಸಮುಚ್ಚೀಯತೇ । ತತ್ಸರ್ವಮಭೀದ್ಧಾದಭಿತಸ್ಪಾದ್ಪ್ರ್ರಹ್ಮಣಾ ಪುರಾ ಸೃಷ್ಟ್ಯರ್ಥಂ ಕೃತಾತ್ತಪಸೋಽಧಿ । ಅಧ್ಯುಪರ್ಯರ್ಥೇ । ಉಪರ್ಯಜಾಯತ । ಉದಪದ್ಯತ । ತಪಸ್ತಪ್ತ್ವೇದಂ ಸರ್ವಮಸೃಜತ । ತೈ. ಆ. ೮-೬ । ಇತಿ ಶ್ರುತೇಃ । ತಪಶ್ಚಾತ್ರ ಸ್ರಷ್ಟವ್ಯಪರ್ಯಾಲೋಚನಲಕ್ಷಣಂ । ಯಸ್ಯ ಜ್ಞಾನಮಯಂ ತಪ । ಮುಂ. ೧-೧-೯ । ಇತಿ ಶ್ರುತ್ಯಂತರಾತ್ ॥ ಅಭಿಪೂರ್ವಾದಿಂಧೇಃ ಕರ್ಮಣಿ ನಿಷ್ಠಾ । ಶ್ವೀದಿತೋ ನಿಷ್ಠಾಯಾಮಿತೀಟ್‌ಪ್ರತಿಷೇಧಃ। ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ। ಸ್ವರಿತೋ ವಾನುದಾತ್ತೇ ಪದಾದಾವಿತ್ಯೇಕಾದೇಶಃ ಸ್ವರ್ಯತೇ॥ ಯದ್ವಾ। ಅಭೀದ್ಧಾದಭಿತಃ ಪ್ರಕಾಶಮಾನಾತ್ಪರಮಾತ್ಮನೋ ಮಾಯಾಧಿಷ್ಠಾನರೂಪಾಪಾದಾನಭೂತಾದೃತಂ ಸತ್ಯಂ ಚಾಜಾಯತ ॥ ಜನಿಕರ್ತುಃ ಪ್ರಕೃತಿಃ । ಪಾ. ೧-೪-೩೦ । ಇತಿ ಪ್ರಕೃತೇಂಪಾದಾನಸಂಜ್ಞಾ ।' ತತಸ್ತಸ್ಮಾದೇವೇಶ್ವರಾದ್ರಾತ್ರೀ । ಉಪಲಕ್ಷಣಮೇತದಹ್ನೋಽಪಿ । ಅಹಶ್ಚ ರಾತ್ರಿಶ್ಚಾಜಾಯತ ॥ ರಾತ್ರೇ-

ಶ್ಚಾಜಸಾವಿತಿ ಜುಃಪ್ ॥ ತತಸ್ತಸ್ಮಾದೇವೇಶ್ವರಾದರ್ಣವೋಽರ್ಣಸೋದಕೇನ ಯುಕ್ತಃ ಸಮುದ್ರಶ್ಚಾ-ಜಾಯತ । ಸಮುದ್ರಶಬ್ದೋಽಂತರಿಕ್ಷೋದಧ್ಯೋಃ ಸಾಧಾರಣ ಇತ್ಯಭಿಮತಾರ್ಥಸ್ಯ ಪ್ರಕಾಶನಾಯಾ-ರ್ಣವಶಬ್ದೇನ ವಿಶೇಷ್ಯತೇ ॥ ಅರ್ಣಸಃ ಸಲೋಪಶ್ಚ ॥ ಕಾ. ೫-೨-೧೦೯-೩ । ಇತಿ ಮತ್ವರ್ಥೀಯೋ ವಪ್ರತ್ಯಯಃ ಸಲೋಪಶ್ಚ ॥

॥ ಪ್ರತಿಪದಾರ್ಥ ॥

**ಅಭೀದ್ಧಾತ್**—ಸೃಷ್ಟಿಮಾಡಬೇಕೆಂದು ತಪಸ್ಸನ್ನು ಮಾಡಿದ್ದ ಬ್ರಹ್ಮನಿಂದ । **ಋತಂ**—ಮಾನಸಸಂಕಲ್ಪ ರೂಪವಾದ ಸತ್ಯವೂ । **ಚ**—ಮತ್ತು । **ಸತ್ಯಂ**—ಭಾಷಣರೂಪವಾದ ಸತ್ಯವೂ । **ಅಧ್ಯಜಾಯತ**—ಉತ್ಪತ್ತಿ ಯಾದವು [ಅಥವಾ । **ಅಭೀದ್ಧಾತ್**—ಸರ್ವತ್ರ ಪ್ರಕಾಶಮಾನನಾಗಿ ಬೆಳಗುತ್ತಿರುವ ಪರಮಾತ್ಮನಿಂದ । **ಋತಂ**—ಮಾಯಾಧಿಷ್ಠಾನರೂಪದಿಂದ ಋತವೂ । **ಸತ್ಯಂ**—ಉಪಾದಾನಭೂತರೂಪದಿಂದ ಸತ್ಯವೂ । **ಅಧ್ಯಜಾಯತ**—ಉತ್ಪತ್ತಿಯಾದವು । **ತತಃ**—ಆ ಬ್ರಹ್ಮನಿಂದಲೇ ಅಥವಾ ಪರಮಾತ್ಮನಿಂದಲೇ । **ರಾತ್ರಿಃ**—ಹಗಲು ರಾತ್ರಿಗಳು । **ಅಜಾಯತ**—ಉಂಟಾದವು । **ತತಃ**—ಆ ಬ್ರಹ್ಮನಿಂದಲೇ । **ಅರ್ಣವಃ**—ಉದಕಪೂರಿತವಾದ । **ಸಮುದ್ರಃ**—ಸಮುದ್ರವು ಉಂಟಾಯಿತು.

॥ ಭಾವಾರ್ಥ ॥

ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ ತಪಸ್ಸನ್ನು ಮಾಡುತ್ತಿದ್ದ ಬ್ರಹ್ಮನಿಂದ ಮಾನಸಸಂಕಲ್ಪರೂಪವಾದ ಸತ್ಯವೂ (ಋತಂ) ಭಾಷಣರೂಪವಾದ ಸತ್ಯವೂ (ಸತ್ಯಂ) ಉತ್ಪತ್ತಿಯಾದವು. ಅಥವಾ ಅವ್ಯಕ್ತಸ್ವರೂಪದಿಂದಿದ್ದ ಪರಮಾತ್ಮನಿಂದ ಸಂಕಲ್ಪರೂಪವಾದ ಋತವೂ, ವ್ಯಕ್ತಸ್ವರೂಪದಿಂದಿರುವ ಪರಮಾತ್ಮನಿಂದ ಭಾಷಣರೂಪವಾದ ಸತ್ಯವೂ ಉತ್ಪನ್ನವಾದವು. ಅನಂತರ ಆ ಬ್ರಹ್ಮದಿಂದಲೇ ಹಗಲುರಾತ್ರಿಗಳೂ, ಉದಕಪೂರ್ಣವಾದ ಸಮುದ್ರವೂ ಉಂಟಾದವು.

## English Translation

Truth (of thought) and truthfulness (of speech) were born of arduous penance, thence was night generated, thence also the watery ocean.

॥ ಸಂಹಿತಾಪಾಠಃ ॥

**ಸಮುದ್ರಾದರ್ಣವಾದಧಿ ಸಂವತ್ಸರೋ ಅಜಾಯತ ।**

**ಅಹೋರಾತ್ರಾಣಿ ವಿದಧದ್ವಿಶ್ವಸ್ಯ ಮಿಷತೋ ವಶೀ ॥ ೨ ॥**

॥ ಪದಪಾಠಃ ॥

ಸಮುದ್ರಾದರ್ಣವಾದಧಿ ಸಂವತ್ಸರೋ ಅಜಾಯತ ।

ಅಹೋರಾತ್ರಾಣಿ ವಿದಧದ್ವಿಶ್ವಸ್ಯ ಮಿಷತೋ ವಶೀ ॥ ೨ ॥

॥ ಸಾಯಣಭಾಷ್ಯಂ ॥

ಅರ್ಣವಾತ್ಸಮುದ್ರಾತ್ಸ್ಯಾಷ್ಟಾದಧ್ಯೂರ್ಧ್ವಂ ಸಂವತ್ಸರಃ ಸಂವತ್ಸರೋಪಲಕ್ಷಿತಃ ಸರ್ವಃ ಕಾಲೋಽಜಾಯತ । ಶ್ರೂಯತೇ ಹಿ । ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ಕಲಾ ಮುಹೂರ್ತಾಃ ಕಾಷ್ಠಾಶ್ಚ । ತೈ. ಆ. ೧೦-೧-೨ । ಇತಿ । ಸ ಚೇಶ್ವರೋಽಹೋರಾತ್ರಾಣ್ಯೇತದುಪಲಕ್ಷಿತಾನಿ ಸರ್ವಾಣಿ ಭೂತಾನಿ ವಿದಧತ್ ಕುರ್ವನ್ ಸೃಜನ್ ॥ ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ತತಃ ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ ॥ ಮಿಷತೋ ನಿಮಿಷಾದಿಯುಕ್ತಸ್ಯ ವಿಶ್ವಸ್ಯ ಸರ್ವಸ್ಯ ಪ್ರಾಣಿಜಾತಸ್ಯ ವಶೀ ಸ್ವಾಮೀ ಭೂತ್ವಾ ವರ್ತತೇ ॥

॥ ಪ್ರತಿಪದಾರ್ಥ ॥

**ಅರ್ಣವಾತ್**—ಉದಕ ಪೂರ್ಣವಾದ | **ಸಮುದ್ರಾತ್**—ಸಮುದ್ರದಿಂದ | **ಸಂವತ್ಸರಃ**--ಸಂವತ್ಸರವೇ ಮೊದಲಾದ ಕಾಲವಿಭಾಗಗಳು । **ಅಧಿ ಅಜಾಯತ**—ಉತ್ಪನ್ನವಾದವು (ಅನಂತರ ಪರಮಾತ್ಮನು) | **ಅಹೋರಾತ್ರಾಣಿ**—ಹಗಲು ರಾತ್ರಿ ಮೊದಲಾದ ಕಾಲವಿಭಾಗಗಳನ್ನೂ (ಸಮಸ್ತಪ್ರಾಣಿಗಳನ್ನು) | **ವಿದಧತ್**—ಸೃಷ್ಟಿಸುತ್ತಾ | **ವಿಶ್ವಸ್ಯ**—ಸಮಸ್ತವಾದ | **ಮಿಷತಃ**—ಕಾಲಕ್ಕೂ | **ವಶೀ**—ಸ್ವಾಮಿಯಾಗಿ ಇರುತ್ತಾನೆ.

॥ ಭಾವಾರ್ಥ ॥

ಉದಕಪೂರ್ಣವಾದ ಸಮುದ್ರದಿಂದ ಸಂವತ್ಸರವೇ ಮೊದಲಾದ ಕಾಲವಿಭಾಗಗಳು ಉತ್ಪನ್ನವಾದವು. ಬಳಿಕ ಅಹೋರಾತ್ರಗಳನ್ನೂ (ಸಮಸ್ತ ಪ್ರಾಣಿಗಳನ್ನೂ) ಸೃಷ್ಟಿಸುತ್ತಾ ಆ ಪರಮೇಶ್ವರನು ಸಮಸ್ತ ಕಾಲಕ್ಕೆ ಅಧಿಪತಿಯಾಗಿರುತ್ತಾನೆ.

## English Translation

From the watery ocean was the year afterwards produced, ordaining nights and days, the ruler of every moment.

### ವಿಶೇಷ ವಿಷಯಗಳು

ಈ ಸೂಕ್ತದ ಮೂರು ಋಕ್ಕುಗಳಲ್ಲಿಯೂ ಸೃಷ್ಟಿಕರ್ತನು ಆದಿಯಲ್ಲಿ ಈ ಜಗದಾದಿಗಳಿಲ್ಲದಿರುವಾಗ ಯಾವ ಯಾವ ವಸ್ತುಗಳನ್ನು ಸೃಷ್ಟಿಸಿದನು ಎಂಬುದನ್ನು ಹೇಳಿದೆ ಆದರೆ ಇಲ್ಲಿ ಹೇಳಿರುವ ಕ್ರಮವನ್ನು ಗಮನಿಸಬೇಕಾಗಿಲ್ಲ. ಏಕೆಂದರೆ ಮೊದಲನೆಯ ಋಕ್ಕಿನ ಉತ್ತರಾರ್ಧದಲ್ಲಿ ಹಗಲು ರಾತ್ರಿಗಳು ಉತ್ಪನ್ನವಾದವೆಂದು ಹೇಳಿದೆ ಎರಡನೆಯ ಋಕ್ಕಿನ ಉತ್ತರಾರ್ಧದಲ್ಲಿಯೂ ಅದೇರೀತಿ ಹೇಳಿದೆ. ಅನಂತರ ಮೂರನೆಯ ಋಕ್ಕಿನ ಪೂರ್ವಾರ್ಧದಲ್ಲಿಯೂ ಸೂರ್ಯ ಚಂದ್ರರನ್ನು ಸೃಷ್ಟಿಮಾಡಿದನೆಂದೂ ಹೇಳಿದೆ. ಸೂರ್ಯಚಂದ್ರರನ್ನು ಸೃಷ್ಟಿಸುವುದಕ್ಕಿಂತ ಮೊದಲು ಅಹೋರಾತ್ರಿಗಳಾಗುವುದು ಹೇಗೆ? ಅಹೋರಾತ್ರಿಗಳಾಗಲಿ ಇತರ ಕಾಲವಿಭಾಗಗಳಾಗಲಿ ಸೂರ್ಯಚಂದ್ರರ ಗತಿಯನ್ನೇ ಅನುಸರಿಸಿರು

ವವು. ಆದ್ದರಿಂದ ಈ ಮೂರು ಋಕ್ಕುಗಳಲ್ಲಿ ಹೇಳಿರುವ ಸೂರ್ಯ ಚಂದ್ರರು,ಅಹೋರಾತ್ರಿಗಳು, ಸಮುದ್ರ ಮೊದಲಾದ ವಸ್ತುಗಳನ್ನು ಇಲ್ಲಿ ವಿವರಿಸಿರುವ ಕ್ರಮದಂತೆ ಸೃಷ್ಟಿಮಾಡಿದನೆಂದು ಹೇಳಬೇಕಾಗಿಲ್ಲ. ಸೃಷ್ಟಿಕರ್ಮವು ಉಪನಿಷದಾದಿ ವೇದಾಂತಗ್ರಂಥಗಳಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿರುವುದು. ಈ ಸೂಕ್ತದಲ್ಲಿ ವಿವರಿಸಲಾಗಿರುವ ಸೃಷ್ಟಿಕರ್ಮವನ್ನೂ ಎಂದರೆ ಅಹೋರಾತ್ರಿ ಮೊದಲಾದ ಕಾಲವಿಭಾಗವನ್ನು ಪೃಥಿವ್ಯಾದಿ ಮೂರುಲೋಕಗಳ ಸೃಷ್ಟಿಯನ್ನೂ ತೈತ್ತಿರೀಯೋಪನಿಷತ್ತಿನಲ್ಲಿ ಈರೀತಿ ವರ್ಣಿಸಿದೆ—

ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ।
ಕಲಾ ಮುಹೂರ್ತಾಃ ಕಾಷ್ಠಾಶ್ಚಾಹೋರಾತ್ರಾಶ್ಚ ಸರ್ವಶಃ ॥
ಅರ್ಧಮಾಸಾ ಮಾಸಾ ಋತವಃ ಸಂವತ್ಸರಶ್ಚ ಕಲ್ಪಂತಾಂ ॥
ಸ ಆಪಃ ಪ್ರದುಘೇ ಉಭೇ ಇಮೇ ಅಂತರಿಕ್ಷಮಥೋ ಸುವಃ ॥

(ತೈ. ಉ. ೪-೧)

ಸ್ವಯಂಪ್ರಕಾಶಮಾನವಾದ ಆ ಬ್ರಹ್ಮನಿಂದಲೇ ಕಾಲವಿಭಾಗಗಳು ಎಂದರೆ ನಿಮೇಷ (ಕಣ್ಣುರೆಪ್ಪೆ ಮುಚ್ಚಿ ತೆಗೆಯುವಷ್ಟುಕಾಲ) ಕಾಷ್ಠ, ಕಲಾ, ಮುಹೂರ್ತ, ಹಗಲು, ರಾತ್ರೆ, ಪಕ್ಷ (ಹದಿನೈದು ದಿವಸ ಅಥವಾ ಅರ್ಧಮಾಸ) ಮಾಸ, ಋತುಗಳು, ಸಂವತ್ಸರ ಎಂಬ ಕಾಲವಿಭಾಗಗಳೆಲ್ಲವೂ ಈ ಪರಬ್ರಹ್ಮನಿಂದಲೇ ಆಗಿರುವವು. ಈ ಕಾಲಾತ್ಮಕವಾದ ಬ್ರಹ್ಮನು ಜಲಾದಿಪಂಚಭೂತಗಳಿಂದ ಕೂಡಿದ ಪೃಥಿವಿಯನ್ನೂ ಅಂತರಿಕ್ಷವನ್ನೂ, ಸ್ವರ್ಗವನ್ನೂ ಸೃಷ್ಟಿಸಿದನು ಎಂದಿದೆ

॥ ಸಂಹಿತಾಪಾಠಃ ॥

ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ ।
ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸ್ವಃ ॥ ೩ ॥

॥ ಪದಪಾಠಃ ॥

ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ ।
ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸ್ವಃ ॥ ೩ ॥

॥ ಸಾಯಣಭಾಷ್ಯಂ ॥

ಸೂರ್ಯಾಚಂದ್ರಮಸೌ ಕಾಲಸ್ಯ ಧ್ವಜಭೂತೌ ದಿವಂ ಚ ಪೃಥಿವೀಂ ಚಾಂತರಿಕ್ಷಂ ಚ ಇತ್ಥಂ ತ್ರಿಭುವನಂ ಸ್ವಃ । ಸ್ವಃಶಬ್ದಃ ಸುಖವಾಚೀ । ದಿವೋ ವಿಶೇಷಣಂ । ಸುಖರೂಪಾಂ ದಿವಂ । ತದೇತತ್ಸರ್ವಂ ಧಾತಾ ವಿಧಾತಾ ಯಥಾ ಪೂರ್ವಂ ಪೂರ್ವಸ್ಮಿನ್ಕಾಲೇಽಕಲ್ಪಯತ್ ಸೃಷ್ಟವಾನ್ ತಥೈವಾಗಾಮಿನ್ಯಪಿ ಕಲ್ಪೇ ಕಲ್ಪಯಿಷ್ಯತೀತ್ಯರ್ಥಃ ॥

|| ಪ್ರತಿಪದಾರ್ಥ ||

**ಧಾತಾ**—ಸೃಷ್ಟಿಕರ್ತನಾದ ಪರಮೇಶ್ವರನು | **ಯಥಾಪೂರ್ವಂ**—ಹಿಂದಿನಕಲ್ಪದಲ್ಲಿ ಸೃಷ್ಟಿಸಿದ್ದಂತೆಯೇ ಈಗಲೂ | **ಸೂರ್ಯಾಚಂದ್ರಮಸೌ**—ಕಾಲಕ್ಕೆ ಅಲಂಕಾರಪ್ರಾಯರಾದ ಸೂರ್ಯ ಚಂದ್ರರನ್ನೂ | **ಸ್ವಃ**—ಸುಖಪ್ರದವಾದ | **ದಿವಂ ಚ**—ಸ್ವರ್ಗಲೋಕವನ್ನೂ | **ಪೃಥಿವೀಂ**—ಭೂಲೋಕವನ್ನೂ | **ಅಂತರಿಕ್ಷಂ ಚ**—ಮಧ್ಯಮಲೋಕವಾದ ಅಂತರಿಕ್ಷವನ್ನೂ (ಈ ರೀತಿ ಮೂರುಲೋಕಗಳನ್ನು) | **ಅಕಲ್ಪಯತ್**—ಸೃಷ್ಟಿಸಿದನು |.

|| ಭಾವಾರ್ಥ ||

ಸೃಷ್ಟಿಕರ್ತನಾದ ಪರಮಾತ್ಮನು ಹಿಂದಿನ ಕಲ್ಪದಲ್ಲಿ ಸೃಷ್ಟಿಸಿದ್ದಂತೆಯೇ ಈಗಲೂ ಸಹ ಕಾಲಕ್ಕೆ ಭೂಷಣಪ್ರಾಯರಾದ ಸೂರ್ಯಚಂದ್ರರನ್ನೂ ಸುಖಕರವಾದ ಸ್ವರ್ಗ, ಭೂಮಿ, ಅಂತರಿಕ್ಷಗಳೆಂಬ ಮೂರುಲೋಕಗಳನ್ನೂ ಸೃಷ್ಟಿಸಿದನು (ಮುಂದಿನ ಕಲ್ಪದಲ್ಲಿಯೂ ಇದೇ ರೀತಿ ಸೃಷ್ಟಿಸುತ್ತಾನೆ.)

English Translation

Dhatri in the begining created the sun and moon, the heaven, the earth, the firmament, and the happy (sky).



## ನೂರ ತೊಂಭತ್ತಒಂದನೆಯ ಸೂಕ್ತವು

### ಪೀಠಿಕೆ

ಇದು ಋಗ್ವೇದಸಂಹಿತೆಯ ಕೊನೆಯ ಸೂಕ್ತ. ಸಂಹಿತೆಯ ಮೊದಲನೆಯ ಸೂಕ್ತದಲ್ಲಿ ಅಗ್ನಿಯನ್ನು ಸ್ತುತಿಸಿರುವಂತೆಯೇ ಈ ಸೂಕ್ತದಲ್ಲಿಯೂ ಅಗ್ನಿಯನ್ನು ಸ್ತುತಿಸಲಾಗಿದೆ. ಮತ್ತು ಶಾಂತಿಪಾಠರೂಪವಾದ ಸಂಜ್ಞಾನವನ್ನು ಸ್ತುತಿಸಲಾಗಿದೆ. ಋಗ್ವಿಧಾನದಲ್ಲಿ ಈ ಸೂಕ್ತದ ವಿಷಯಲ್ಲಿ ಈ ರೀತಿ ಹೇಳಿದೆ—

**ಸಂಸಮಿದ್ಯುವಸೇ ವೃಷನ್ನಾಸಿಭ್ರಾತೃಕರಣಂ ಮಹತ್ || ೧೨೫ ||**
**ಜ್ಞಾತಿಭೇದೇ ಪ್ರಯುಂಜೀತ ನ ಭಿದ್ಯಂತೇ ಕದಾಚನ |**
**ಕೃತೇ ಭೇದೇ ತು ಸಂಜ್ಞಾನ ಏತತ್ಸಂಧಿಕರಂ ಜಪೇತ್ || ೧೨೬ ||**
**ನ ತತ್ರ ಭೇದೋ ಭೂಯಃ ಸ್ಯಾದ್ಯತ್ರೈತತ್ಸತತಂ ಜಪೇತ್ |**
**ತಚ್ಛಂಯೋರಾವೃಣೀಮಹ ಇತಿ ಸ್ವಸ್ತ್ಯಯನಂ ಜಪೇತ್ || ೧೨೭ ||**
**ಮಹಾನಾಮ್ನ್ಯಃ ಪರಂ ಬ್ರಹ್ಮ ಶುಕ್ರಂ ಜ್ಯೋತಿಃ ಸನಾತನಂ |**
**ಸಪತ್ನ್ಯಘ್ನ್ಯಶ್ಚ ಪುಣ್ಯಾಶ್ಚ ಪಾವಮಾನ್ಯಃ ಪರಾಃ ಸ್ಮೃತಾಃ || ೧೨೮ ||**
**ವೃಷ್ಟಿಕಾಮೋ ಜಪೇಚ್ಛೈತಾ ಆಪೋ ಹಿ ಷ್ಠಾಃ ಸನಾತನಾಃ |**
**ಓಂಕಾರಪೂರ್ವಾ ವ್ಯಾಹೃತಯೋ ಮಧುಛಂದಸ ಆದಿತಃ || ೧೨೯ ||**

ಸೂಕ್ತಾನ್ಯಂತೇ ಮಹಾನಾಮ್ನ್ಯಃ ಸಂಹಿತಾ ಸಾಮೃತಾ ಸ್ಮೃತಾ ।
ಅಮೃತತ್ವಂ ಯಯುರ್ದೇವಾಃ ಪೂರ್ವಂ ಸಂಹಿತಯಾನಯಾ ॥ ೧೩೦ ॥

ಜಪನ್ನೇತಾಂ ಶುಚಿರ್ನಿತ್ಯಮಮೃತತ್ವಂ ಸ ಗಚ್ಛತಿ ।
ಅತ್ರೈವ ತ್ವಾವಸೇನ್ಮಧ್ಯೇ ಪಿತೃಸೂಕ್ತಾನ್ಯನೇಕಶಃ ॥ ೧೩೧ ॥

ಪಿತ್ರ್ಯಾಂ ತಾಂ ಸಂಹಿತಾಂ ವಿದ್ಯಾತ್ ಪಿತೄನ್ ಪ್ರೀಣಾತಿ ಚೈತಯಾ ।
ಏವಮೇವ ಸಮಾಹೃತ್ಯ ವಾಸವೀ ಸಂಹಿತಾ ಭವೇತ್ ॥ ೧೩೨ ॥

ರೌದ್ರಾದಿತ್ಯಾ ವೈಶ್ವದೇವೀ ಯದ್ದೇವತ್ಯಾಂ ಚ ಕಾಮಯೇತ್ ।
ಕುರ್ವೀತ ವಾಸ್ತುಶಮನಂ ಮಧ್ಯೇ ಗೋಷ್ಠಸ್ಯ ಧರ್ಮವಿತ್ ॥ ೧೩೩ ॥

ಪುಷ್ಪೈರ್ಗಂಧೈಶ್ಚ ಮಾಲ್ಯೈಶ್ಚ ವಾನಸ್ಪತ್ಯೈಸ್ತಥೌಷಧೈಃ ।
ವಾಸ್ತು ಸರ್ವಂ ಪ್ರತಿಕಿರೇತ್ಸಪ್ತ ಧಾನ್ಯೈಸ್ತಥೈವ ಚ ॥ ೧೩೪ ॥

ವಾಸ್ತೋಷ್ಪತಿಂ ಯಜೇಚ್ಚಾತ್ರ ಪಾಯಸೇನ ಬೃಹಸ್ಪತಿಂ ।
ಔದುಂಬರ ಪಲಾಶೈಸ್ತು ಬಲಿಂ ಪ್ರತಿದಿಶಂ ಹರೇತ್ ॥ ೧೩೫ ॥

ಸೂರ್ಯೋ ವಾಯುರ್ಯಮಃ ಪಿತರೋ ವರುಣೋ ನಿರ್ಋತಿಸ್ತಥಾ ।
ಸೋಮೋ ಮಹೇಂದ್ರ ಇತ್ಯೇತೇ ದಿಕ್ಷು ವೈ ದೇವತಾಃ ಸ್ಮೃತಾಃ ॥ ೧೩೬ ॥

ದದ್ಯಾದ್ದಾನಂ ಬ್ರಾಹ್ಮಣೇಭ್ಯಃ ಶಿವಂ ಭವತಿ ವಾಸ್ತುನಿ ।
ಪ್ರತಿಸಂವತ್ಸರಂ ಕಾರ್ಯಂ ಗೃಹೇ ವೈ ಗೃಹಮೇಧಿನಾ ॥ ೧೩೭ ॥

ಯದ್ಯೇವಂ ಸವಿಧಂ ಚಾನ್ಯದನುಕ್ತಮಪಿ ಕಿಂಚನ ।
ಅಗ್ನಿಮಿಂದ್ರಮಥೋ ವಾಯುಂ ಸೂರ್ಯಮನ್ಯಾಶ್ಚ ದೇವತಾಃ ॥ ೧೩೮ ॥

ಆರಿರಾಧಯಿಷುರ್ಯಾಂ ಯಾಮಭಿಧ್ಯಾಯೇತ ತಾಂ ಚ ತಾಂ ।
ಅಭಿರೂಪೇಣ ಸೂಕ್ತೇನ ಯಥಾದಿಷ್ಟಂ ಪ್ರಯೋಜನಂ ॥ ೧೩೯ ॥

ಋಷೀಣಾಂ ಮಂತ್ರದೃಷ್ಟೇನ ಪ್ರತ್ಯಕ್ಷಾ ಸಿದ್ಧಿರಿಷ್ಯತೇ ।
ಸರ್ವತ್ರ ದಕ್ಷಿಣಾಂ ದದ್ಯಾದ್ಧನಂ ವಾ ಕರ್ಮಸಿದ್ಧಯೇ ॥ ೧೪೦ ॥

ನ ತ್ವೇವಾದಕ್ಷಿಣಂ ಕರ್ಮ ಕಿಂಚಿದಸ್ತೀತಿ ಶೌನಕಃ ।
ಶಕ್ತ್ಯಾ ಹಿ ಪೂರ್ಣಪಾತ್ರೇಣ ಸಂಮಿತಾಪ್ಯಂತತೋ ಭವೇತ್ ॥ ೧೪೧ ॥

ತಸ್ಮಾತ್ಸ್ವಲ್ಪಾಪಿ ದಾತವ್ಯಾ ದಕ್ಷಿಣಾ ಕರ್ಮಸಿದ್ಧಯೇ ।
ಋಷಭೈಕಾದಶಾ ದದ್ಯಾದ್ಯೇನ ವಾ ತುಷ್ಯತೇ ಗುರುಃ ॥ ೧೪೨ ॥

ಧರ್ಮಜ್ಞೇ ಸತ್ಯವಾದಿನಿ ಬ್ರಹ್ಮದಾನಂ ಚ ದೀಯತೇ ।
ತದಿದಂ ಪರಮಂ ಬ್ರಹ್ಮ ಗುಹ್ಯಂ ಪಾವನಮುದ್ಧೃತಂ ॥ ೧೪೩ ॥

**ನಾಪ್ರಶಾಂತಾಯ ದಾತವ್ಯಂ ನಾಪುತ್ರಾಯಾತಪಸ್ವಿನೇ ।**
**ನಾಸಂವತ್ಸರೋಷಿತಾಯ ನಾಶಿಷ್ಯಾಯಾಹಿತಾಯ ಚ ॥೧೪೪॥**

(ಋಗ್ವಿಧಾನ. ಅಧ್ಯಾಯ ೪-ಶ್ಲೋ ೧೩೫-೧೪೪)

**ಸಂಸಮಿದ್ಯವಸೇ ವೃಷನ್** ಎಂಬ ಈ ಸೂಕ್ತವು ಭಿನ್ನಾಭಿಪ್ರಾಯವನ್ನು ಹೋಗಲಾಡಿಸಿ ಸ್ನೇಹಭಾವವನ್ನು ಉಂಟು ಮಾಡುವುದು. ಈ ಸೂಕ್ತಜಪದಿಂದ ಜ್ಞಾತಿಗಳಲ್ಲಿ ಎಂದರೆ ಬಂಧುಬಾಂಧವರಲ್ಲಿ ಇರಬಹುದಾದ ಮನಸ್ತಾಪವು ಪರಿಹಾರವಾಗಿ ಅವರಲ್ಲಿ ಮಧುರಬಾಂಧವ್ಯವು ಉಂಟಾಗುವುದು. ಮುಂದೆಯೂ ಅವರಲ್ಲಿ ಯಾವ ಭೇದಭಾವವೂ ಉದ್ಭವಿಸುವುದಿಲ್ಲ. ಈ ಸೂಕ್ತಜಪಾನಂತರದಲ್ಲಿ **ತಚ್ಛಂಯೋರಾವೃಣೀಮಹೇ** ಎಂಬ ಸ್ವಸ್ತಿ ಮಂತ್ರವನ್ನು ಪಠಿಸಬೇಕು. ಸನಾತನನೂ, ಜ್ಯೋತಿಸ್ಸ್ವರೂಪನೂ ಆದ ಪರಬ್ರಹ್ಮನನ್ನು ಧ್ಯಾನಿಸುತ್ತಾ ಮಹಾನಾಮ್ನೀಮಂತ್ರಗಳನ್ನೂ, ಶತ್ರುನಾಶಕರವೂ, ಪುಣ್ಯಪ್ರದವೂ ಆದ ಪಾವಮಾನೀಮಂತ್ರಗಳನ್ನೂ ಪಠಿಸಬೇಕು. ವೃಷ್ಟಿಯನ್ನಪೇಕ್ಷಿಸುವವನು **ಆಪೋ ಹಿ ಷ್ಠಾ** ಎಂಬ ಸೂಕ್ತವನ್ನು ಜಪಿಸಬೇಕು. ಈ ಋಗ್ವೇದಸಂಹಿತೆಯನ್ನು ಓಂಕಾರಪೂರ್ವಕವಾಗಿಯೂ ವ್ಯಾಹೃತಿಪೂರ್ವಕವಾಗಿಯೂ ಮಧುಚ್ಛಂದಋಷಿದೃಷ್ಟವಾದ **ಅಗ್ನಿಮೀಳೇ** ಎಂಬ ಸೂಕ್ತದಿಂದ ಪ್ರಾರಂಭಿಸಿ ಈ ಸೂಕ್ತದ ಅಂತ್ಯದವರೆಗೂ ಪಠಿಸಿ ಕೊನೆಯಲ್ಲಿ ಮಹಾನಾಮ್ನಾ ಮಂತ್ರಗಳನ್ನು ಪಠಿಸಬೇಕು. ಇದೇ ಋಗ್ವೇದವನ್ನು ಪಠಿಸುವ ಕ್ರಮವು ಈ ರೀತಿ ಋಗ್ವೇದಸಂಹಿತೆಯ ಪಠನದಿಂದ ದೇವತೆಗಳು ಅಮೃತತ್ವವನ್ನು (ಮರಣರಾಹಿತ್ಯವನ್ನು) ಪಡೆದರು. ಆದ್ದರಿಂದ ಪ್ರತಿದಿನವೂ ಶುಚಿರ್ಭೂತನಾಗಿ ಈ ಋಗ್ವೇದಸಂಹಿತೆಯನ್ನು ಪಾರಾಯಣಮಾಡುವ ಪೂರುಷನು ಶ್ರೇಯೋಭಿವೃದ್ಧಿಯನ್ನು ಪಡೆದು ಬಹುಕಾಲ ಜೀವಿಸುವನು. ಈ ಸಂದರ್ಭದಲ್ಲಿಯೇ ಪಿತೃಗಳ ಪ್ರೀತ್ಯರ್ಥವಾಗಿ ಪಿತೃಸೂಕ್ತಗಳನ್ನು ಪಠಿಸಬೇಕು. ಈ ಸೂಕ್ತಪಠನದಿಂದ ಪಿತೃಗಳೂ ಆ ಸೂಕ್ತದ ದೇವತೆಗಳಾದ ವಸುರುದ್ರಾದಿತ್ಯರೂ ವಿಶ್ವೇದೇವತೆಗಳೂ ತುಷ್ಟರಾಗುವರು ಅನಂತರ ಧರ್ಮಜ್ಞನಾದ ಪುರುಷನು ಶಾಂತ್ಯರ್ಥವಾಗಿ ವಾಸ್ತುಹೋಮವನ್ನು ಮಾಡಬೇಕು ಪುಷ್ಪಗಂಧಮಾಲ್ಯಾದಿಗಳಿಂದಲೂ ಔಷಧಿವನಸ್ಪತಿಗಳಿಂದಲೂ ಧಾನ್ಯಾದಿಗಳಿಂದಲೂ ವಾಸ್ತುದೇವತೆಯನ್ನು ವಿಧಿವತ್ತಾಗಿ ಪೂಜಿಸಿ ಅನಂತರ ಅಗ್ನಿಯಲ್ಲಿ ವಾಸ್ತೋಷ್ಪತಿ ದೇವತೆಯನ್ನುದ್ದೇಶಿಸಿ ಪಾಯಸದಿಂದಲೂ, ಬೃಹಸ್ಪತಿಯನ್ನು ಔದುಂಬರಪಲಾಶವೃಕ್ಷಗಳ ಸಮಿತ್ತುಗಳಿಂದಲೂ ಹೋಮಮಾಡಿ ಪ್ರತಿದಿಕ್ಕಿನಲ್ಲಿಯೂ ಬಲಿಪ್ರದಾನವನ್ನು ಮಾಡಬೇಕು. ಸೂರ್ಯ, ವಾಯು, ಯಮ, ಪಿತೃಗಳು, ವರುಣ, ನಿರ್ಋತಿ, ಸೋಮ, ಮಹೇಂದ್ರ ಎಂಬ ಈ ಎಂಟುಮಂದಿ ದೇವತೆಗಳು ಪ್ರಾಚ್ಯಾದಿ ಎಂಟು ದಿಕ್ಕುವಿದಿಕ್ಕುಗಳಿಗೆ ಅಧಿಪತಿಯಾದ ದೇವತೆಗಳು. ಅನಂತರ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು ಇದರಿಂದ ವಾಸ್ತುದೇವತೆಯು ಸುಪ್ರಸನ್ನನಾಗುವನು. ಪ್ರತಿವರ್ಷವೂ ಈ ರೀತಿ ತನ್ನ ಮನೆಯಲ್ಲಿ ಮನೆಯ ಯಜಮಾನನು ಮಾಡಬೇಕು. ಮೇಲೆ ಹೇಳಿದ ವಿಧಾನದಿಂದಲೂ ಇಲ್ಲಿ ಹೇಳಿಲ್ಲದಿರುವ ಇತರ ವಿಧಾನಗಳಿಂದಲೂ ಅಗ್ನಿ, ಇಂದ್ರ ವಾಯು, ಸೂರ್ಯ, ಮೊದಲಾದ ಇತರ ದೇವತೆಗಳನ್ನು ಆರಾಧಿಸಬೇಕೆಂದು ಇಚ್ಛಿಸುವ ಪುರುಷನು ಆಯಾದೇವತಾಕರವಾದ ಸೂಕ್ತ ಪ್ರಯೋಗದಿಂದ ಆಯಾ ದೇವತೆಯನ್ನು ಆರಾಧಿಸಬೇಕು. ಋಷಿದೃಷ್ಟವಾದ ಮಂತ್ರಗಳಿಂದ ದೇವತೆಗಳನ್ನು ಆರಾಧಿಸಿದರೆ ಇಷ್ಟಸಿದ್ಧಿಯಾಗುವುದು. ಕರ್ಮಸಾದ್ಗುಣ್ಯಾರ್ಥವಾಗಿ ಸರ್ವರಿಗೂ ದಕ್ಷಿಣೆಯನ್ನು ಕೊಡಬೇಕು. ದಕ್ಷಿಣೆಯಿಲ್ಲದೆ ಯಾವಕರ್ಮವನ್ನೂ ಮಾಡಬಾರದೆಂದು ಶೌನಕಮಹರ್ಷಿಗಳು ಹೇಳಿರುವರು. ಆದ್ದರಿಂದ ಸರ್ವಕರ್ಮಗಳಲ್ಲಿಯೂ ಯಥಾಶಕ್ತಿ ಸ್ವಲ್ಪವಾದರೂ ದಕ್ಷಿಣೆಯನ್ನು ಕೊಡಬೇಕು ಈ ರೀತಿ ಮಾಡಿದರೆ ಕರ್ಮವು

ಸಮಾಪ್ತಿಯಾಗುವುದು. ಅನಂತರ ಈ ಕರ್ಮದಲ್ಲಿ ಪೌರೋಹಿತ್ಯವನ್ನು ವಹಿಸಿ ನೇರವೇರಿಸಿದ ತನ್ನ ಗುರುವಿಗೆ ಹನ್ನೊಂದು ಗೋದಾನಗಳನ್ನುಮಾಡಬೇಕು ಅದರಿಂದ ಗುರುವಿಗೆ ಸಂತೋಷವುಂಟಾಗುವುದು. ದಾನಗಳನ್ನು ಕೊಡಬೇಕಾದರೆ ಬ್ರಹ್ಮಜ್ಞಾನಿಯಾದವನೂ, ಸತ್ಯವನ್ನೇ ನುಡಿಯುವವನೂ ಆದ ಬ್ರಾಹ್ಮಣನಿಗೇ ಕೊಡಬೇಕು ಇಂತಹ ದಾನದಿಂದ ಪೂರ್ಣಫಲಪ್ರಾಪ್ತಿಯಾಗುವುದು. ಈವಿಧವಾಗಿ ಮಾಡಬೇಕಾದ ಕರ್ಮವಿಧಾನವು ಪರಬ್ರಹ್ಮಸ್ವರೂಪ ವಾಗಿಯೂ, ಶುದ್ಧಿಯನ್ನುಂಟುಮಾಡುವುದಾಗಿಯೂ, ಅತ್ಯಾಶ್ಚರ್ಯಕರವಾಗಿಯೂ ಅತಿರಹಸ್ಯವಾಗಿಯೂ ಇರುವುದು. ಈ ಕರ್ಮೋಪದೇಶವನ್ನು ಶಾಂತಮನಸ್ಕನಲ್ಲದವನಿಗೂ ಪುತ್ರರಹಿತನಿಗೂ, ತಪಸ್ಸನ್ನು ಮಾಡದವನಿಗೂ ಒಂದ ಸಂವತ್ಸರದವರೆಗಾದರೂ ಗುರುಸಮೀಪದಲ್ಲಿ ವಾಸಿಸುತ್ತಾ ಗುರುಶುಶ್ರೂಷೆಯನ್ನು ಮಾಡದ ಶಿಷ್ಯನಿಗೂ ತನಗೆ ಬೇಡದವ ನಿಗೂ ಈ ಕರ್ಮವಿಧಾನವನ್ನು ಹೇಳಕೂಡದು.

|| ಸಾಯಣಭಾಷ್ಯಂ ||

**ಸಂಸಮಿತಿ ಚತುರ್ಋಚಂ ಚತ್ವಾರಿಂಶಂ ಸೂಕ್ತಂ ಸಂವನನಸ್ಯಾರ್ಷಂ । ಸಮಾನೋ ಮಂತ್ರ ಇತಿ ತೃತೀಯಾ ತ್ರಿಷ್ಟುಪ್ ಶಿಷ್ಟಾಸ್ತಿಸ್ರೋಽನುಷ್ಟುಭಃ । ಪ್ರಥಮಾಯಾ ಅಗ್ನಿರ್ದೇವತಾ । ಶಿಷ್ಟಾನಾಂ ಸಂಜ್ಞಾನಂ । ಅನುಕ್ರಮ್ಯತೇ ಚ । ಸಂಸಂ ಚತುಷ್ಕಂ ಸಂವನನಃ ಸಂಜ್ಞಾನಮಾದ್ಯಾಗ್ನೇಯೀ ತೃತೀಯಾ ತ್ರಿಷ್ಟುಪ್ ತೃತೀಯಾ ತ್ರಿಷ್ಟುಬಿತಿ । ಅನುಷ್ಟುಭಂ ತ್ವಿತಿ ಪೂರ್ವಮುಕ್ತತ್ವಾದವಶಿಷ್ಟಾನಾಮನುಷ್ಟುಪ್ತ್ವಂ ॥ ಸೂಕ್ತವಿನಿಯೋಗೋ ಲೈಂಗಿಕಃ ॥**

ಅನುವಾದವು—**ಸಂಸಂ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ನಲವತ್ತನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು ಈ ಸೂಕ್ತಕ್ಕೆ ಸಂವನನೆಂಬುವನು ಋಷಿಯು , ಈ ಸೂಕ್ತದ ಮೊದಲನೆಯ ಋಕ್ಕಿಗೆ ಅಗ್ನಿಯು ದೇವತೆಯು , ಉಳಿದ ಋಕ್ಕುಗಳಿಗೆ ಸಂಜ್ಞಾನವು ದೇವತೆಯು , ಈ ಸೂಕ್ತದ **ಸಮಾನೋ ಮಂತ್ರಃ** ಎಂಬ ಮೂರನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಮೂರು ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಸಂಸಂ ಚತುಷ್ಕಂ ಸಂವನನಃ ಸಂಜ್ಞಾನಮಾದ್ಯಾಗ್ನೇಯೀ ತೃತೀಯಾ ತ್ರಿಷ್ಟುಪ್** ಎಂದು ಹೇಳಿರುವುದು **ಅನುಷ್ಟುಭಂ ತು** ಎಂದು ಹಿಂದೆಯೇ (ಹಿಂದಿನ ಸೂಕ್ತದ ಪೀಠಿಕೆಯಲ್ಲಿ) ಹೇಳಿರು ವುದರಿಂದ ಈ ಸೂಕ್ತದ ಮೂರನೆಯ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಕವೆಂದು ತಿಳಿಯಬೇಕು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ - ೧೯೧

ಮಂಡಲ—೧೦ || ಅನುವಾಕ—೧೨ || ಸೂಕ್ತ—೧೯೧ ||
ಅಷ್ಟಕ—೮ || ಅಧ್ಯಾಯ—೮ || ವರ್ಗ—೪೯ ||

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
॥ ಋಷಿಃ—ಸಂವನನಃ ॥
॥ ದೇವತಾ—೧. ಅಗ್ನಿಃ । ೨-೪. ಸಂಜ್ಞಾನಂ ॥
॥ ಛಂದಃ—೧,೨,೪. ಅನುಷ್ಟುಪ್ । ೩. ತ್ರಿಷ್ಟುಪ್ ॥

|| ಸಂಹಿತಾಪಾಠಃ ||

ಸಂಸಮಿದ್ಯುವಸೇ ವೃಷನ್ನಗ್ನೇ ವಿಶ್ವಾನ್ಯರ್ಯ ಆ |
ಇಳಸ್ಪದೇ ಸಮಿಧ್ಯಸೇ ಸ ನೋ ವಸೂನ್ಯಾ ಭರ || ೧ ||

|| ಪದಪಾಠಃ ||

ಸಂಽಸಂ | ಇತ್ | ಯುವಸೇ | ವೃಷನ್ | ಅಗ್ನೇ | ವಿಶ್ವಾನಿ | ಅರ್ಯಃ | ಆ |
ಇಳಃ | ಪದೇ | ಸಂ | ಇಧ್ಯಸೇ | ಸಃ | ನಃ | ವಸೂನಿ | ಆ | ಭರ || ೧ ||

|| ಸಾಯಣಭಾಷ್ಯಂ ||

ಹೇ ವೃಷನ್ಕಾಮಾನಾಂ ವರ್ಷಿತರಗ್ನೇ ಅರ್ಯ ಈಶ್ವರಸ್ತ್ವಂ || ಅರ್ಯಃ ಸ್ವಾಮಿವೈಶ್ಯಯೋಃ | ಪಾ. ೩-೧-೧೦೩ | ಇತಿ ಯತ್ಪ್ರತ್ಯಯಾಂತೋ ನಿಪಾತಿತಃ | ಅರ್ಯಃ ಸ್ವಾಮ್ಯಾಖ್ಯಾಯಾಂ | ಫಿ. ೧-೧೮ | ಇತ್ಯಂತೋದಾತ್ತತ್ವಂ || ಸ ತ್ವಂ ವಿಶ್ವಾನಿ ಸರ್ವಾಣಿ ಭೂತಜಾತಾನಿ ಸಂಸಂ || ಪ್ರಸಮುಪೋದಃ ಪಾದಪೂರಣೇ | ಪಾ. ೮-೧-೬ | ಇತಿ ಸಮೋ ದ್ವಿರ್ವಚನಂ || ಇಚ್ಛಬ್ದೋಽವಧಾರಣೇ | ಆ ಸಮಂತಾತ್ತ್ವಂ ಯುವಸೇ | ಮಿಶ್ರಯಸಿ | ದೇವೇಷು ಮಧ್ಯೇ ತ್ವಮೇವ ಸರ್ವಾಣಿ ಭೂತಜಾತಾನಿ ವೈಶ್ವಾನರಾತ್ಮನಾ ವ್ಯಾಪ್ನೋಷಿ | ನಾನ್ಯ ಇತ್ಯರ್ಥಃ | ಕಿಂ ಚೇಳ ಇಡಾಯಾಃ ಪೃಥಿವ್ಯಾಃ ಪದೇ ಸ್ಥಾನ ಉತ್ತರವೇದಿಲಕ್ಷಣೇ| ಏತದ್ವಾ ಇಳಾಯಾಸ್ಪದಂ ಯದುತ್ತರವೇದೀನಾಭಿಃ | ಐ. ಬ್ರಾ. ೧-೨೮ | ಇತಿ ಬ್ರಾಹ್ಮಣಂ | ತತ್ರ ತ್ವಂ ಸಮಿಧ್ಯಸೇ | ಋತ್ವಿಗ್ಭಿಃ ಸಂದೀಪ್ಯಸೇ | ಸ ತಾದೃಶಸ್ತ್ವಂ ನೋಽಸ್ಮಾಕಂ ವಸೂನಿ ಧನಾನ್ಯಾ ಭರ | ಆಹರ ||

|| ಪ್ರತಿಪದಾರ್ಥ ||

**ವೃಷನ್**—ಇಷ್ಟಾರ್ಥಗಳನ್ನು ಸುರಿಸುವ | **ಅಗ್ನೇ**—ಎಲೈ ಅಗ್ನಿಯೇ | **ಅರ್ಯಃ**—ಸಕಲರಿಗೂ ಸ್ವಾಮಿಯಾದ ನೀನು | **ವಿಶ್ವಾನಿ**—ಸಮಸ್ತ ಪ್ರಾಣಿಗಳನ್ನೂ | **ಸಂಸಂ**—ಒಂದಾಗಿರುವಂತೆ ಎಂದರೆ ಸುಹೃದ್ಭಾವದಿಂದ ಒಂದೇ ಮನಸ್ಸುಳ್ಳವರಾಗಿರುವಂತೆ | **ಆ**—ಸರ್ವಪ್ರಕಾರದಿಂದಲೂ | **ಯುವಸೇ**—ಕೂಡಿಸುತ್ತೀಯೆ | **ಇಳಃ**—ಪೃಥಿವಿಯ | **ಪದೇ**—ಸ್ಥಾನವಾದ ಉತ್ತರವೇದಿಯಲ್ಲಿ (ನೀನು) | **ಸಂ ಇಧ್ಯಸೇ**—ಋತ್ವಿಗ್ಜನರಿಂದ ಹೊತ್ತಿಸಲ್ಪಟ್ಟು ಬೆಳಗುತ್ತಿದ್ದೀಯೆ | **ಸಃ**—ಅಂತಹ ನೀನು | **ನಃ**—ನಮಗೆ | **ವಸೂನಿ**—ಧನಗಳನ್ನು | **ಆ ಭರ**—ತಂದೊಗಿಸು.

| ಭಾವಾರ್ಥ |

ಇಷ್ಟಾರ್ಥಪ್ರದನಾದ ಎಲೈ ಅಗ್ನಿಯೇ, ಸಕಲರಿಗೂ ಸ್ವಾಮಿಯಾದ ನೀನು ಸಮಸ್ತಪ್ರಾಣಿಗಳ ಶರೀರಗಳಲ್ಲಿ ವೈಶ್ವಾನರರೂಪದಿಂದ ಇದ್ದುಕೊಂಡು ಅವರು ಒಂದಾಗಿರುವಂತೆ ಸರ್ವಪ್ರಕಾರದಿಂದಲೂ ಕೂಡಿಸುತ್ತೀಯೆ. ಯಜ್ಞದ

ಉತ್ತರವೇದಿಯಲ್ಲಿ ಋತ್ವಿಗ್ಜನರಿಂದ ಹೊತ್ತಿಸಲ್ಪಟ್ಟು ಅತಿಪ್ರಕಾಶಮಾನವಾಗಿ ಬೆಳಗುತ್ತಿದ್ದೀಯೆ. ಇಂತಹ ನೀನು ನಮಗೆ ಧನಗಳನ್ನು ತಂದೊಗಿಸು.

English Translation

Agni, showerer (of benefits), you who are the lord, you verily combine with all creatures, you are kindled upon the footmark of Ila, (the altar); bring unto us riches.

|| ಸಂಹಿತಾಪಾಠಃ ||

ಸಂ ಗಚ್ಛಧ್ವಂ ಸಂ ವದಧ್ವಂ ಸಂ ವೋ ಮನಾಂಸಿ ಜಾನತಾಂ ।

ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ || ೨ ||

|| ಪದಪಾಠಃ ||

ಸಂ । ಗಚ್ಛಧ್ವಂ । ಸಂ । ವದಧ್ವಂ । ಸಂ । ವಃ । ಮನಾಂಸಿ । ಜಾನತಾಂ ।

ದೇವಾಃ । ಭಾಗಂ । ಯಥಾ । ಪೂರ್ವೇ । ಸಂಽಜಾನಾನಾಃ । ಉಪಽಆಸತೇ || ೨ ||

|| ಸಾಯಣಭಾಷ್ಯಂ ||

**ಹೇ ಸ್ತೋತಾರಃ ಯೂಯಂ ಸಂ ಗಚ್ಛಧ್ವಂ । ಸಂಗತಾಃ ಸಂಭೂತಾ ಭವತ ॥ ಸಮೋ ಗಮ್ಯೃಚ್ಛೀತ್ಯಾದಿನಾ ಗಮೇರಾತ್ಮನೇಪದಂ ॥ ತಥಾ ಸಂ ವದಧ್ವಂ । ಸಹ ವದತ । ಪರಸ್ಪರಂ ವಿರೋಧಂ ಪರಿತ್ಯಜ್ಯೈಕವಿಧಮೇವ ವಾಕ್ಯಂ ಬ್ರೂತೇತಿ ಯಾವತ್॥ ವ್ಯಕ್ತವಾಚಾಂ ಸಮುಚ್ಚಾರಣೇ । ಪಾ. ೧-೩-೪೮। ಇತಿ ವದೇರಾತ್ಮನೇಪದಂ ॥ ವೋ ಯುಷ್ಮಾಕಂ ಮನಾಂಸಿ ಸಂ ಜಾನತಾಂ । ಸಮಾನಮೇಕರೂಪಮೇವಾರ್ಥಮವಗಚ್ಛಂತು ॥ ಸಂಪ್ರತಿಭ್ಯಾಮನಾಧ್ಯಾನೇ । ಪಾ. ೧-೩-೪೬ । ಇತಿ ಜಾನಾತೇರಾತ್ಮನೇಪದಂ ॥ ಯಥಾ ಪೂರ್ವೇ ಪುರಾತನಾ ದೇವಾಃ ಸಂಜಾನಾನಾ ಐಕಮತ್ಯಂ ಪ್ರಾಪ್ತಾ ಹವಿರ್ಭಾಗಮುಪಾಸತೇ ಯಥಾಸ್ವಂ ಸ್ವೀಕುರ್ವಂತಿ ತಥಾ ಯೂಯಮಪಿ ವೈಮತ್ಯಂ ಪರಿತ್ಯಜ್ಯ ಧನಂ ಸ್ವೀಕುರುತೇತಿ ಶೇಷಃ ॥**

|| ಪ್ರತಿಪದಾರ್ಥ ||

(ಎಲೈ ಸ್ತೋತೃಜನರೇ) **ಸಂ ಗಚ್ಛಧ್ವಂ**— ನೀವು ಯಾವಾಗಲೂ ಜತೆಯಲ್ಲಿಯೇ ಇರಿ ಮತ್ತು ಜತೆಯಲ್ಲಿಯೇ ಹೋಗಿರಿ । **ಸಂ ವದಧ್ವಂ**— ಪರಸ್ಪರವಿರೋಧಭಾವವನ್ನು ಬಿಟ್ಟು ಒಂದೇ ವಿಧವಾಗಿ ಮಾತನಾಡಿರಿ । **ವಃ**— ನಿಮ್ಮ । **ಮನಾಂಸಿ**— ಮನಸ್ಸುಗಳು । **ಸಂ ಜಾನತಾಂ**— ಭಿನ್ನಾಭಿಪ್ರಾಯಗಳನ್ನು ತ್ಯಜಿಸಿ ಒಂದೇ ವಿಧವಾದ ಮಾರ್ಗಗಳಲ್ಲಿ ಪ್ರವೃತ್ತವಾಗಲಿ । **ಪೂರ್ವೇ**— ಪುರಾತನರಾದ । **ದೇವಾಃ**— ದೇವತೆಗಳು । **ಯಥಾ**— ಯಾವ ಪ್ರಕಾರ । **ಸಂಜಾನಾನಾಃ**— ಐಕ್ಯಮತ್ಯದಿಂದ ಕೂಡಿ । **ಭಾಗಂ**— ತಮ್ಮ ಹವಿರ್ಭಾಗವನ್ನು । **ಉಪಾಸತೇ**— ಸ್ವೀಕರಿಸುತ್ತಾರೆಯೋ ಅದರಂತೆ ನೀವೂ ಐಕ್ಯಮತ್ಯದಿಂದ ಧನಾದಿಗಳನ್ನು ಸ್ವೀಕರಿಸಿ.

|| ಭಾವಾರ್ಥ ||

ಎಲೈ ಸ್ತೋತೃಜನರೇ. ನೀವು ಯಾವಾಗಲೂ ಐಕಮತ್ಯದಿಂದಿರುತ್ತಾ ಎಲ್ಲಿ ಹೋಗಬೇಕಾದರೂ ಜತೆಯಲ್ಲಿಯೇ ಹೋಗಿರಿ ಮಾತನಾಡುವಾಗಲೂ ಪರಸ್ಪರ ವಿರೋಧವನ್ನು ಬಿಟ್ಟು ಒಂದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಮಾತನಾಡಿರಿ. ಭಿನ್ನಾಭಿಪ್ರಾಯಗಳಿಗೆ ಎಡೆಗೊಡದೆ ನಿಮ್ಮ ಮನಸ್ಸುಗಳು ಒಂದಾಗಿರಲಿ. ಪುರಾತನರಾದ ದೇವತೆಗಳು ಯಾವರೀತಿ ತಮ್ಮ ಹವಿರ್ಭಾಗವನ್ನು ಐಕಮತ್ಯದಿಂದ ಕೂಡಿ ಸ್ವೀಕರಿಸುವರೋ ನೀವೂ ಅದರಂತೆ ದೇವತಾನುಗ್ರಹದಿಂದ ಪ್ರಾಪ್ತವಾದ ಧನಾದಿಗಳನ್ನು ಸ್ವೀಕರಿಸಿ.

English Translation.

Meet together, talk together, let your minds apprehend alike; in like manner as the ancient gods concurring accepted their portion of the sacrifice.

|| ಸಂಹಿತಾಪಾಠಃ ||

ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ಸಹ ಚಿತ್ತಮೇಷಾಂ ।
ಸಮಾನಂ ಮಂತ್ರಮಭಿ ಮಂತ್ರಯೇ ವಃ ಸಮಾನೇನ ವೋ ಹವಿಷಾ ಜುಹೋಮಿ || ೩ ||

|| ಪದಪಾಠಃ ||

ಸಮಾನಃ । ಮಂತ್ರಃ । ಸಂऽಇತಿಃ । ಸಮಾನೀ । ಸಮಾನಂ । ಮನಃ । ಸಹ । ಚಿತ್ತಂ । ಏಷಾಂ ।
ಸಮಾನಂ । ಮಂತ್ರಂ । ಅಭಿ । ಮಂತ್ರಯೇ । ವಃ । ಸಮಾನೇನ । ವಃ । ಹವಿಷಾ । ಜುಹೋಮಿ || ೩ ||

|| ಸಾಯಣಭಾಷ್ಯಂ ||

ಪೂರ್ವೋಽರ್ಧರ್ಚಃ ಪರೋಕ್ಷಕೃತಃ ಉತ್ತರಃ ಪ್ರತ್ಯಕ್ಷಕೃತಃ । ಏಷಾಮೇಕಸ್ಮಿನ್ಕರ್ಮಣಿ ಸಹ ಪ್ರವೃತ್ತಾನಾಮೃತ್ವಿಜಾಂ ಸ್ತೋತೄಣಾಂ ವಾ ಮಂತ್ರಃ ಸ್ತುತಿಃ ಶಸ್ತ್ರಾದ್ಯಾತ್ಮಿಕಾ ಗುಪ್ತಭಾಷಣಂ ವಾ ಸಮಾನ ಏಕವಿಧೋಽಸ್ತು । ತಥಾ ಸಮಿತಿಃ ಪ್ರಾಪ್ತಿರಪಿ ಸಮಾನ್ಯೇಕರೂಪಾಸ್ತು ॥ ಕೇವಲಮಾಮಕೇ–ತ್ಯಾದಿನಾ ಸಮಾನಶಬ್ದಾಙ್ಙೀಷ್ । ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವಂ ॥ ತಥಾ ಮನೋ ಮನನಸಾಧನಮಂತಃಕರಣಂ ಚೈಷಾಂ ಸಮಾನಮೇಕವಿಧಮಪ್ಯಸ್ತು । ಚಿತ್ತಂ ವಿಚಾರಜಂ ಜ್ಞಾನಂ ತಥಾ ಸಹ ಸಹಿತಂ ಪರಸ್ಪರಸ್ಯೈಕಾರ್ಥೇನೈಕೀಭೂತಮಸ್ತು । ಅಹಂ ಚ ವೋ ಯುಷ್ಮಾಕಂ ಸಮಾನಮೇಕವಿಧಂ ಮಂತ್ರಮಭಿ ಮಂತ್ರಯೇ । ಏಕವಿಧ್ಯಾಯ ಸಂಸ್ಕರೋಮಿ । ತಥಾ ವೋ ಯುಷ್ಮಾಕಂ ಸ್ವ-

**ಭೂತೇನ ಸಮಾನೇನ ಸಾಧಾರಣೇನ ಹವಿಷಾ ಚರುಪುರೋಡಾಶಾದಿನಾಹಂ ಜುಹೋಮಿ ॥ ತೃತೀಯಾ ಚ ಹೋಶ್ಛಂದಸಿ । ಪಾ. ೨-೩-೩ । ಇತಿ ಕರ್ಮಣಿ ಕಾರಕೇ ತೃತೀಯಾ ॥ ವಷಟ್ಕಾರೇಣ ಹವಿಃ ಪ್ರಕ್ಷೇಪಯಾಮೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಏಷಾಂ**—ಒಂದೇ ಕರ್ಮದಲ್ಲಿ ಪ್ರವೃತ್ತರಾಗಿರುವ ಈ ಋತ್ವಿಗ್ಯಜಮಾನರ ಮತ್ತು ಸ್ತೋತೃಜನರ । **ಮಂತ್ರಃ**—ಮಂತ್ರೋಚ್ಚಾರಣವು ಅಥವಾ ಸ್ತುತಿಯು । **ಸಮಾನಃ**—ಒಂದೇವಿಧವಾಗಿರಲಿ (ಹಾಗೆಯೇ) **ಸಮಿತಿಃ**—ಅದರಿಂದ ಲಭಿಸುವ ಫಲವೂ । **ಸಮಾನೀ**—ಒಂದೇವಿಧವಾಗಿರಲಿ ಎಂದರೆ ಒಬ್ಬರಿಗೆ ಹೆಚ್ಚು ಮತ್ತೊಬ್ಬರಿಗೆ ಕಮ್ಮಿ ಇಲ್ಲದಂತೆ ಸಮಾನವಾಗಿರಲಿ । **ಮನಃ**—ಅವರ ಮನಃ ಪ್ರವೃತ್ತಿಯೂ । **ಸಮಾನಂ**—ಒಂದೇವಿಧವಾಗಿರಲಿ **ಚಿತ್ತಂ**—ವಿವೇಕಜ್ಞಾನವು । **ಸಹ**—ಐಕಮತ್ಯದಿಂದ ಒಂದೇವಿಧವಾಗಿರಲಿ ಎಲೈ ದೇವತೆಗಳೇ (ನಾನು) ।**ವಃ**—ನಿಮಗೋಸ್ಕರ । **ಸಮಾನಂ**—ಒಂದೇವಿಧವಾದ । **ಮಂತ್ರಂ** ಮಂತ್ರವನ್ನು । **ಅಭಿ ಮಂತ್ರಯೇ**—ಪಠಿಸಿ ಸಂಸ್ಕಾರಮಾಡುತ್ತೇನೆ (ಹಾಗೆಯೇ) । **ವಃ**—ನಿಮಗೆ । **ಸಮಾನೇನ**—ಒಂದೇವಿಧವಾದ । **ಹವಿಷಾ**—ಚರು ಪುರೋಡಾಶಾದಿಹವಿಸ್ಸಿನಿಂದ । **ಜುಹೋಮಿ**—ಹೋಮಮಾಡುತ್ತೇನೆ.

॥ ಭಾವಾರ್ಥ ॥

ಒಂದೇಕರ್ಮದಲ್ಲಿ ಪ್ರವೃತ್ತರಾಗಿರುವ ಈ ಋತ್ವಿಗ್ಯಜಮಾನರ ಮತ್ತು ಸ್ತೋತೃಜನರ ಮಂತ್ರೋಚ್ಚಾರಣವು ಅಥವಾ ಸ್ತುತಿಯು ಒಂದೇವಿಧವಾಗಿರಲಿ. ಅದರಿಂದ ಲಭಿಸುವ ಫಲವೂ ಹೆಚ್ಚುಕಮ್ಮಿ ಇಲ್ಲದೆ ಎಲ್ಲರಿಗೂ ಸಮನಾಗಿ ಲಭಿಸಲಿ. ಅವರ ಮನಃಪ್ರವೃತ್ತಿಯೂ, ವಿವೇಕಜ್ಞಾನವೂ ವ್ಯತ್ಯಸ್ತವಾಗಿರದೆ ಐಕಮತ್ಯದಿಂದ ಒಂದೇ ವಿಧವಾಗಿರಲಿ. ಎಲೈ ದೇವತೆಗಳೇ, ನಾನು ನಿಮಗೋಸ್ಕರ ಒಂದೇವಿಧವಾದ ಮಂತ್ರವನ್ನು (ಎಂದರೆ ಒಬ್ಬೊಬ್ಬದೇವತೆಗೆ ಒಂದೊಂದು ವಿಧವಾದ ಮಂತ್ರವನ್ನು ಪಠಿಸದೆ ಎಲ್ಲರಿಗೂ ಸಮಾನವಾದ ಒಂದೇಮಂತ್ರವನ್ನು) ಪಠಿಸಿ ಹವಿರಾದಿಗಳನ್ನು ಸಂಸ್ಕಾರ ಮಾಡುತ್ತೇನೆ. ಮತ್ತು ಒಂದೇ ವಿಧವಾದ ಚರುಪುರೋಡಾಶಾದಿಹವಿಸ್ಸಿನಿಂದಲೇ ನಿಮಗೆ ಆಹುತಿಯನ್ನರ್ಪಿಸುತ್ತೇನೆ.

## English Translation

Common be the prayer of these (assembled worshippers), common be the acquirement, common the purpose, associated be the desire. I repeat for you a common prayer, I offer for you with a common oblation.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧವು ಪರೋಕ್ಷಕೃತವರ್ಣನೆಯೆಂದೂ, ಉತ್ತರಾರ್ಧವು ಪ್ರತ್ಯಕ್ಷಕೃತವರ್ಣನೆಯೆಂದೂ ಭಾಷ್ಯದಲ್ಲಿ ವಿವರಿಸಲಾಗಿದೆ ಪರೋಕ್ಷಕೃತವೆಂದರೇನು, ಪ್ರತ್ಯಕ್ಷಕೃತವೆಂದರೇನು ಎಂಬ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುವೆವು ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ವಿಷಯವಾಗಿ—

**ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ದೇವತಾನಾಂ ತದ್ದೈವತಮಿತ್ಯಾಚಕ್ಷತೇ । ಯತ್ಕಾಮ ಋಷಿರ್ಯಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ**

**ಮಂತ್ರೋ ಭವತಿ । ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾಃ ಪ್ರತ್ಯಕ್ಷಕೃತಾ ಆಧ್ಯಾತ್ಮಿಕ್ಯಶ್ಚ । ತತ್ರಪರೋಕ್ಷಕೃತಾಃ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ ಪ್ರಥಮಪುರುಷೈಶ್ಚಾಖ್ಯಾತಸ್ಯ । ಅಥ ಪ್ರತ್ಯಕ್ಷಕೃತಾ ಮಧ್ಯಮಪುರುಷಯೋಗಾಸ್ತ್ವಮಿತಿ ಚೈತೇನ ಸರ್ವನಾಮ್ನಾ ।ಅಥಾ-ಧ್ಯಾತ್ಮಿಕ್ಯ ಉತ್ತಮಪುರುಷಯೋಗಾ ಅಹಮಿತಿ ಚೈತೇನ ಸರ್ವನಾಮ್ನಾ । ಪರೋಕ್ಷಕೃತಾಃ ಪ್ರತ್ಯಕ್ಷಕೃತಾಶ್ಚ ಮಂತ್ರಾ ಭೂಯಿಷ್ಠಾ ಅಲ್ಪಶ ಆಧ್ಯಾತ್ಮಿಕಾಃ ॥**

(ನಿ. ೭–೧ರಿಂದ ೩)

ಎಂದರೆ ಮಂತ್ರಗಳಲ್ಲಿ ದೈವತಮಂತ್ರ, ಸ್ತುತಿಮಂತ್ರ, ಆಶೀರ್ಮಂತ್ರ, ಶಪಥ, ಅಭಿಶಾಪ, ಕಶ್ಚಿದ್ಭಾವ, ಪರಿದೇವನಾ, ನಿಂದಾ ಪ್ರಶಂಸಾ ಎಂದು ಅನೇಕವಿಧವಾಗಿರುವುದು. ದೈವತಮಂತ್ರವೆಂದರೆ ದೇವತೆಗಳ ಮಹಿಮೆಯನ್ನು ವರ್ಣಿಸುವ ಮಂತ್ರ ; ಸ್ತುತಿಯೆಂದರೆ ಸ್ತೋತ್ರ, ಪ್ರಾರ್ಥನೆಗಳನ್ನೊಳಗೊಂಡಿರುವ ಮಂತ್ರ ; ಆಶೀರ್ಮಂತ್ರವೆಂದರೆ—ಆಶೀರ್ವಾದ, ಒಳ್ಳೆಯದನ್ನು ಹಾರೈಸುವ ಮಂತ್ರ ; ಶಪಥ ಎಂದರೆ ಪ್ರತಿಜ್ಞೆ ; ಅಭಿಶಾಪ ಎಂದರೆ ಕೆಟ್ಟಹಾರೈಕೆ ; ಕಶ್ಚಿದ್ಭಾವ ಎಂದರೆ ಒಂದು ವಿಷಯ ಅಥವಾ ತತ್ತ್ವದ ವಿವರಣೆ ಪರಿದೇವನಾ ಎಂದರೆ ವ್ಯಸನ, ಸಂತಾಪ, ನಿಂದಾ ಎಂದರೆ ನಿಂದೆಯು ; ಪ್ರಶಂಸಾ ಎಂದರೆ ಹೊಗಳುವಿಕೆ, ದಾನಸ್ತುತಿ ಇತ್ಯಾದಿ.

ಮೇಲೆ ಹೇಳಿದ ಅನೇಕ ವಿಧಗಳಲ್ಲಿ ದೈವತವೆಂಬ ಋಕ್ಕುಗಳು—ಪರೋಕ್ಷಕೃತ, ಪ್ರತ್ಯಕ್ಷಕೃತ, ಆಧ್ಯಾತ್ಮಿಕ ಎಂದು ಮೂರು ವಿಧವಾಗಿರುವವು. ಪರೋಕ್ಷಕೃತವೆಂದರೆ—ಸ್ತುತಿಸಲ್ಪಡುವ ದೇವತೆಯು ಎದುರಿಗಿಲ್ಲದಿರುವುದರಿಂದ ಆ ದೇವತೆಯ ವಿಷಯದಲ್ಲಿ ಪ್ರಥಮಪುರುಷನಾಮಪದಗಳನ್ನೂ, ಕ್ರಿಯಾಪದಗಳನ್ನೂ (Third person both in subject and predicate) ಉಪಯೋಗಿಸಿರುವ ಮಂತ್ರಗಳು ; ಪ್ರತ್ಯಕ್ಷಕೃತವೆಂದರೆ—ಸ್ತುತಿಸಲ್ಪಡುವ ದೇವತೆಯ ಎದುರಿಗೆ ಇದ್ದಂತೆ ಭಾವಿಸಿ ಅದನ್ನು ನೀನು. ನಿನ್ನ ಮೊದಲಾದ ಮಧ್ಯಮಪುರುಷಶಬ್ದಗಳಿಂದ (second person) ಸಂಬೋಧನೆಮಾಡಿ ಸ್ತುತಿಸುವ ಋಕ್ಕುಗಳು ; ಆಧ್ಯಾತ್ಮಿಕವೆಂದರೆ—ಉತ್ತಮಪುರುಷ (first person) ಪ್ರಯೋಗವನ್ನು ಮಾಡಿ ಸ್ತುತಿಸಿರುವ ಮಂತ್ರಗಳು. ಈ ಮೂರುವಿಧ ಮಂತ್ರಗಳಲ್ಲಿ ಪರೋಕ್ಷಕೃತ ಮತ್ತು ಪ್ರತ್ಯಕ್ಷಕೃತವೆಂಬ ಎರಡುವಿಧ ಮಂತ್ರಗಳೇ ಹೆಚ್ಚಾಗಿರುವವು. ಆಧ್ಯಾತ್ಮಿಕಮಂತ್ರಗಳು ಕೇವಲ ಸ್ವಲ್ಪ ಮಾತ್ರವಿರುವವು.

ಋಗ್ವೇದದ ಋಕ್ಕುಗಳನ್ನು ಅರ್ಥಾನುಸಾರವಾಗಿ ವಿಭಜಿಸುವಾಗ ಯಾಸ್ಕರು ಪರೋಕ್ಷಕೃತ, ಪ್ರತ್ಯಕ್ಷಕೃತ, ಪರೋಕ್ಷಕೃತಃ ಪ್ರತ್ಯಕ್ಷಕೃತಶ್ಚ, ಆಧ್ಯಾತ್ಮಿಕಾ, ಸ್ತುತಿ ಆಶೀರ್ವಾದ, ಶಪಥ, ಅಭಿಶಾಪ, ಕಸ್ಯಚಿದ್ಭಾವ, ಪರಿದೇವನಾ ನಿಂದಾ ಇತ್ಯಾದಿ ವಿಷಯಗಳನ್ನೊಳಗೊಂಡ ನಾನಾ ಪ್ರಭೇದಗಳಿರುವುದೆಂದು ಹೇಳಿ ಅವುಗಳನ್ನು ಉದಾಹರಣೆ ಮೂಲಕವಾಗಿ ವಿವರಿಸಿದ್ದಾರೆ. ಹೇಗೆಂದರೆ—

(೧) **ಪರೋಕ್ಷಕೃತ**—ಈ ಋಕ್ಕಿನಲ್ಲಿ ದೇವತೆಯು ತನ್ನ ಎದುರಿಗೆ ಇಲ್ಲದಂತೆ ತನಗೆ ಕಾಣಿಸದಂತೆ ಪರೋಕ್ಷದಲ್ಲಿರುವನೆಂದು ಭಾವಿಸಿ ಆ ದೇವತೆಯನ್ನು ಸ್ತುತಿಸುವುದು. ಈ ಸಂದರ್ಭದಲ್ಲಿ ಸರ್ವನಾಮ ವಿಭಕ್ತಿಗಳಲ್ಲಿ ಯಾವ ವಿಭಕ್ತಿಯನ್ನಾದರೂ ಉಪಯೋಗಿಸಬಹುದು. ಆದರೆ ಕ್ರಿಯಾಪದವು ಮಾತ್ರ ಪ್ರಥಮಪುರುಷದಲ್ಲಿರಬೇಕು.

